**ತಿಳಿನುಡಿ** (ನಾ). ಸ್ವಚ್ಛವಾದ ಭಾಷೆ ; ಸರಳವಾದ ನುಡಿ : ಕನ್ನಡ ಶಬ್ದಸಂಪತ್ತನ್ನುಳಿಸಿ ಕನ್ನಡಿಗರ ತಿಳಿನುಡಿಯಾಗಿ ಬೆಳೆಯಿಸಲು ಈ ಕೃತಿಯು ಸಹಾಯಕವಾಗಬಹುದು (ಕಾಂಶಿ. ೧೦ ಮುನ್ನುಡಿ). [ ತಿಳಿ$_2$+ನುಡಿ$_8$ ]

**ತಿಳಿಪು$_1$, ತಿಳಿಹು, ತಿಳುಪು$_1$, ತಿಳುಹು$_1$** (ಕ್ರಿ). ೧. ಶುಭ್ರವಾಗು ; ತಿಳಿಯಾಗು : ತಿಳಿಪುವೊಡೆ ವೊಗ್ಗೆ ಮುದ್ದಂ ಕಳಂಕಮುಂ ತಿಳಿಯದಿರ್ಪ ದೆಸೆಗಳುಮಂ ನೀರ್ಗಳುಮಂ ತಿಳಿಪಿದ ಸರಮುಂ ತಿಳಿಪಿದುದೆ ಕಳಂಕಗತಿಯ ನವ್ಯುತದ್ಯುತಿಯಂ (ಲೀಲಾವ. ೧೪-೫೧). ೨. ಸಮಾಧಾನ ಪಡಿಸು ; ಸಾಂತ್ವನಗೊಳಿಸು ; ಶಾಂತಗೊಳಿಸು : "ತಿಳಿಪು–ಕ್ರೋಧೋತ್ಸರ್ಜನೇ (ಕೋಪವನ್ನು ಬಿಡಿಸು)" (ಕಮಧಾ) ; ತಿಳಿಪಲಡಿಗೆಱಗಿದೋಪನ ತಳಂಗಳಾ ತೀಟದಿಂ ಪದಂಗಳೊಳೊಗೆದಾ ಪುಳಕಚಯಂಗಳ್ ಕಳೆದುವು ಮುಳಿಸಂ (ಕವಿರಾ. ೩-೧೧೯) : ಪುರಾಡಿಸಿ ಮುಳಿದಿರ್ದ ಮಹಾದೇವಿಯುಂ ತಿಳಿಪಲೆಂದು ಕಾಲ್ಗೆಱಗೆ (ಪಾವುಂಪು. ೮೫-೦೩); ವನಿತೆಯರೊಲವಿನ ಕಲಹದ ಮುನಿಸುಗಳಂ ತಿಳಿಪುವೆಡೆಯೊಳತಿಚತುರಂ (ಕಾದಂಪೂ. ೫೬) : ಇಂತಪ್ಪವಸ್ಥೆಯಿಂದಿವಳಂ ತಿರೆಯುಂ ದುರ್ವಿದಗ್ಧವೆನ್ನ ಮನಂ ಮತ್ತೆಂತುಂ ನಂಬಿದುದಿಲ್ಲಾನಿಂ ತಿಳಿವೆಂ [ ಪೆಂ ] ನಿಪುಣವಚನದಿಂ ಕಾಮಿನಿಯುಂ (ಕಾದಂಉ. ೨೪೨) ; ಮುಕುಂದಂ ತದಿಂದುವದನೆಯಂ ಪೆಱವೊಳ್ನುಡಿಗಳಿಂ ತಿಳಿಪಿ (ನೇಮಿಪು. ೮-೩೮೪) ; ಬಱಿದೆ ಮುಳಿದು ತಿಳಿಪೆ ತಿಳಿದು ನೆರೆವ ಬೇಡವೆಂಡಿರಿಂ (ಕಬ್ಬಿಕಾ. ೨೦೮) : ನುಡಿಯುಲಿಲ್ಲದಹಂಗೆ ಹದುಳಿಸಿ ಕಡೆಯೊಳಾಂ ತಿಳಿಪಿ [ಪಾಠಾಂ. ತಿಳುಹಿ]ದಪೆನೆಲೆ ನೀ ನಿದ್ರೆಗೆಯ್ಯುತಿರು (ಲಕಪು. ೪೬-೨೨) : ಮುನಿದೊಡೆ ಕಡುತವಕದಿಂ ತಿಳಿಪುವಂ (ಚಬಪು. ೧೦-೨೯). ೩. ಸಂತುಷ್ಟಿಪಡಿಸು ; ತೃಪ್ತಿಗೊಳಿಸು ; ಮುದಗೊಳಿಸು : "ಪ್ರಸಾದಃ, ಪ್ರಣಯಃ– ಈ ೨ ತಿಳಿ(ಪು)ಹುವುದು" (ಹಲಾಯು. ೧೨೬-೮೮) : ಜಲನಿಧಿಯಂ ಮುಗಿಲ್ವನಿಗಳಿಂದಮಾಗುರ್ವಿಸುವಂತೆ ನಿಮ್ಮ ನಾಂ ತಿಳಿಪಿದಪೆ ಗಡ (ಕಾದಂಉ. ೪೨೬) ; ಅಗಜೆಯುಂ ತಿಳಿಪಿದಮರಗುಂಡದ ಮಲ್ಲಿನಾಥ ಶರಣು (ಭಾವಚಿಂ. ೨-೧). ೪. ತಿಳಿಸು ; ಸ್ಪಷ್ಟಪಡಿಸು ; ವಿಶದೀಕರಿಸು : ಅವರಂ ತಿಳಿಪಲಾಱದೆ ಮತ್ತೆ ಪೂರ್ವವಿದೇಹಕ್ಕೆ ಪೋಗಿ ... ಭಟಾರರ್ಗೆ ಪೇೞ್ದು (ವಡ್ಡಾರಾ. ೦೦೪-೨೦) ; ಉಳ್ಳೊಡುಗಳೊಳಗೆನಿತಱಿವುಳ್ಳರ್ಗಂ ತಿಳಿವಲರಿಯದೆನಿಪೆಡೆಗಳುಮಂ ತೆಳ್ಳಗಿರೆ ತಿಳಿಪುಗುಂ (ಹಂಶಥಾ. ೨-೩೫): ಸ್ಥಾವರಾದ್ಯನ್ಯಲಿಂಗದ ಭಜನೆಯ ಮುನ್ನಮೇ ಬಿಡಿಸಿ ಷಟ್ಸ್ಥಳಮಾರ್ಗಮಂ ತಿಳಿಪಿ (ಚಬಪು.೧-೦೩). ೫. ಕಲಿಸು ; ಹೇಳಿಕೊಡು ; ಶಿಕ್ಷಣಕ್ಕೊಳಪಡಿಸು : ಇವರಂ ನೀತಿವಿದರಪ್ಪಂತು ತಿಳಿಪುವಂದು ಮುದುಗುದುರೆಯಂ ತಿರ್ದುವಂತಕ್ಕುಂ (ಪಂಚಶಂ. ೧೬-೧೦); ಇದು ಶಬ್ದಾಗಮನಿರ್ಣಯಂ . . . ಇಂತಿದು ಮರ್ಮಂ ಕಲೆಗಾಗಮಾನ್ವಯಮಿದೆಂಬಾಮ್ನಾಯದಿಂ ದಾರಕ ತ್ರಿದಶ ಪ್ರಶ್ನಕರಾಗೆ ತಾಂ ತಿಳಿಪುವಂ ತ್ರಿಜ್ಞಾನರತ್ನಾಕರಂ (ಅನಂಪು. ೬-೦೦) : ಮತ್ಸ್ಯಭೂವರ ಕುಮಾರಿಗಂ ತಿಳಿಪುತಿರ್ದನು ನೃತ್ಯಮನಾ ಕಿರೀಟಿ (ಪಂಚಶ. ೬೮-೦೮). ೬. ಜ್ಞಾಪಕಮಾಡು ; ನೆನಪಿಗೆ ತರು : "ಜ್ಞಾಪಯತಿ=ತಿಳಿಪಿದಪಂ" (ಕಾಶಕ್ಕ. ೦೪೨). ತಿಳಿಹು : ೪. ಮಂಗಳೋದಯಲಿಂಗಕರತಳಸಂಗತ ಸ್ಥಿತಿಯಂ ತಿಳಿಹಿಯಾಸಂಗದುಃಪ್ರಾಪಂಚಿಕಾಶಾಬಂಧವಂ ಪಱಿದು (ಬಸಪು. ೪೯-೩೩). ತಿಳುಪು$_1$ : ೨. ಕಿನಿಸಿ ಕಡುಪಿನಿಂದಂ ನದುಗಿದಪುದು ತಿಳಿಯದೆಂತುಮಾರ್ತಿಳು [ ಪಾಠಾಂ. ೪ ] ಪಿದೊಡಂ ( ಕಾ ದ ಂ ಉ. ೬೬) ; ಅಂಗಜಾತನ ಮಡುಹಿದನೆಂದು ಪಾರ್ವತಿ ಸಂಗಕೇಱದಿರಲು ತಿಳುಪಿ ಹೊಂಗೊಡದೊಳು ನೀರ ಹೊತ್ತ ಧೂರ್ಜಟಿಯಂತೆ ತೆಂಗಾಯ ಮರಗಳೊಪ್ಪಿದುವು (ಮೋಹತ. ೨೪-೪೨). ೪. ನಿರ್ಮಳದ ಧರ್ಮಸ್ಥಿತಿರಹಸ್ಯವ ತಿಳುಪಿದವರಾರೆನುತ ತಲೆದೂಗಿದನು ಮುರವೈರಿ (ಕುಮ್ಯಾಕ. ೦೬-೦೨). ತಿಳುಹು$_1$ : ೨. ದೇವಪ್ರಸರವನು ತಿಳುಹಿದನು ಕಾರುಣ್ಯದಲಿ ಕಾಮಾರಿ (ಕುಮ್ಯಾಳ. ೬-೩೦) : ಕುಳಿರುವಟ್ಟಿನ ಕುವರಿಯ ಶ್ರೀಪದಯುಗನಳಿನ ಸುಗಂಧವಿದ್ದೆಡೆಗೆ ಅಳಿ ಬಂದೆಱಗುವಂತೆಱಗಲ್ಕೆ ತೆಗೆದಪ್ಪಿ ತಿಳುಹಿದಳವಳ ದುಕ್ಖವನು (ಮೋಹತ. ೮-೪೬). ೩. ಲಲನೆಯಂ ... ತಿಳುಹಿ ಮಱಹಾದಲ್ಲಿ ಜಾಣ್ಮೆಯನಲರಿಸುತ್ತೊಯ್ಯಾರದಲಿ ಸುಳಿಸುಳಿದು (ಬಸಪು. ೪೨-೦೬) ; ವೇದವ್ಯಾಸದೇವರು ... ಕಾಲಜ್ಞಾನವಾದುದನು ತಿಳುಹಲೋಸುಗ ತಮ್ಮಯಾಶ್ರಮ ನೆಲೆಯ ಠಾವಿಂದಾಗ ಬಂದರು (ಸಂಭಪ. ೩-೨) : ತಿಳುಹಿ ಹೋದರು ಮುನಿಗಳೀತನ ತಿಳಿವು ತೊಟ್ಟುದು ಪಾಱವೆಯನು (ಕುಮ್ಯಾದ್ರೋ. ೧೮-೬೪).

[ ತಿಳಿ$_1$ + – ಪು$_1$ ]

**ತಿಳಿಪು$_2$, ತಿಳುಪು$_2$, ತಿಳುಹು$_2$** (ನಾ). ೧. ಗಟ್ಟಿಯಲ್ಲದುದು ; ನೀರಾದುದು : ತಿಳಿ [ಪಾಠಾಂ. ಳು] ಪಿನಂಬಿಲಕುಪ್ಪು ನೀರುಳ್ಳಿ ಹಸಿಯಲ್ಲಗಳನು ಸೋದಿಸಿ ಹಾಕಿ (ಸೂಪಶಾ. ೩-೩೩). ತಿಳುಪು$_2$ : ೨. ತೆಳುವು ; ತೆಳುವಾದುದು. 'ತಿಳಂಪೇಱು' ಪರಾ. ತಿಳುಹು$_2$ : ೩. ಸ್ವಚ್ಛತೆ ; ಶುಚಿತ್ವ : ನೀರ ದಾರಿಯಲ್ಲಿ ನೀರ ತಿಳುಹ ನೋಡಿ (ಶಿವಗೀ. ೧೪೬-೬೪೮). ೪. ಜ್ಞಾನ ; ತಿಳಿವಳಿಕೆ : ನಡವಳಿಯುಲಧಮನೆ ನೀನು ಶಿವಪೂಜಾಪ್ರಸಿದ್ಧನಲ ತಿಳುಹಿ [ಪಾಠಾಂ. ತಿಳಿವಿ]ನಲಿ ಬಱಡನೆ ಬಹುಶ್ರುತಿಗಳು ಮುಖೋದ್ಗತ ನಿನಗೆ (ತೊರರಾ. ೬-೨-೨೪). [ <ತಿಳಿಪು$_1$ ]

**ತಿಳಿಬಗೆ** (ನಾ). ಶುದ್ಧವಾದ ಅಂತಃಕರಣ ; ನಿಷ್ಕಪಟವಾದ ಮನಸ್ಸು : ಕಾವ ತಿಳಿಬಗೆಯುರ್ವ ನಾಡ ಹೆಣ್ಣಲ್ಲಿ (ಕಾಂಶಿ. ೨೬-೦೫).

[ ತಿಳಿ$_2$ + ಬಗೆ$_3$ ]

**ತಿಳಿಬಣ್ಣ** (ನಾ). ತೆಳುವಾದ ಬಣ್ಣ ; ನಸುಬಣ್ಣ : "ಹೂಬಣ್ಣತಿಳಿಬಣ್ಣ" (ಗಂಗಾಮ. ೩೫೧). [ ತಿಳಿ$_2$ + ಬಣ್ಣ ]

**ತಿಳಿಬೆಳಕು** 'ತಿಳಿವೆಳಗು' ನೋ.

**ತಿಳಿಬೆಳಗು** 'ತಿಳಿವೆಳಗು' ನೋ.

**ತಿಳಿಬೆಳುದಿಂಗಳು** (ನಾ). ಶುಭ್ರವಾದ ಬೆಳುದಿಂಗಳು ; ಶುಭ್ರಜ್ಯೋತ್ಸ್ನೆ : ನೀನು ಚೆಲುವೆಯರರಸಿ ತಿಳಿಬೆಳುದಿಂಗಳ ತಿರುಳ ಪುತ್ಥಳಿ ! (ತುಂಗಭ. ೮೫). [ ತಿಳಿ$_2$ + ಬೆಳುದಿಂಗಳು (<ಬೆಳ್ದಿಂಗಳ್) ]

**ತಿಳಿಮಜ್ಜಿಗೆ** (ನಾ). ನೀರಾದ ಮಜ್ಜಿಗೆ : ಪಾತ್ರೆಯಲ್ಲಿ ತಿಳಿಮಜ್ಜಿಗೆ ಇದೆ (ರೂಢಿ). [ ತಿಳಿ$_2$ + ಮಜ್ಜಿಗೆ ]

**ತಿಳಿಮಣ್ಣು** (ನಾ). ಸೂಸಂಮಣ್ಣು ; ರೇವೆಮಣ್ಣು ; ವೆಂಕ್ಕಲು : ಜಗವೆಲ್ಲ ತೊಯ್ದು ಹೋಗಿದೆ, ತಿಳಿಮಣ್ಣು ತೇಲಿಹೋಗಿದೆ (ನಲಮು. ೦೬-೨೨).

[ ತಿಳಿ$_2$ + ಮಣ್ಣು (< ಮಣ್) ]

**ತಿಳಿಮುತ್ತು** (ನಾ). ಶುಭ್ರವಾದ ಮುತ್ತು ; ಚೊಕ್ಕವಾದ ಮುತ್ತು ತಳತಳಿಪ ವಜ್ರಗಳ ಗಣಿಗಳಿಂದೆಸೆವ ತಿಳಿಮುತ್ತುಗಳ ನಗೆಯ ಬೆಳಕಿಂದ ಹೊಳೆವ (ಕಎಪು. ೪೬-೫). [ ತಿಳಿ$_2$ + ಮುತ್ತು$_5$ ]

**ತಿಳಿಮೆ** (ನಾ). ೧. ಸ್ವಚ್ಛವಾಗಿರುವಿಕೆ ; ಶುದ್ಧವಾಗಿರುವಿಕೆ : ಮಣಿಗೆಯೊಳು ಮಾದವಳಿದು ಋಣಗಳಿಲ್ಲವ ನೆನೆದು ತಿಳಿಮೆಯೊಳು ಹರಿವೆನ್ನ ಚೇತನದ ಜತೆಗೆ (ಮುಳಿದೇ. ೨೧-೪). ೨. ತಿಳಿವಳಿಕೆ ; ಅರಿವು ; ಜ್ಞಾನ : ಕ್ಲಾಂತಿಯೋಂ ನಿನ್ನ ಕಡುಸಂತಸದ ತಿಳಿಮೆಗಿನ್ನೆಂತು ನಿನ್ನಯ ಬಳಿಗೆ ತನ್ನ ನೆಳಲಂ ಚಿಂತೆ ಸಾರ್ಚಿತು (ಗೀವಿಂ. ೬-೯೨). [ ತಿಳಿ$_2$ + – ಮೆ$_1$ ]

**ತಿಳಿಮೆಗೊಳ್ಳು** (ಕ್ರಿ). ಸ್ವಚ್ಛವಾಗು ; ಶುದ್ಧವಾಗು : ಆ ಕಾರಣದಿಂದಲೇ ವಿಷಯೋದ್ಭವವಾದ ಜುಗುಪ್ಸೆಯೂ ಕಾವ್ಯದಲ್ಲಿ ತಿಳಿಮೆಗೊಂಡು ಭೋಗ್ಯರಸ ಪದವಿಗೇರುತ್ತದೆ (ಕಾವ್ಯಕು. ೩).

[ ತಿಳಿಮೆ + ಕೊಳ್ಳು$_1$ (< ಕೊಳ್$_1$) ]

**ತಿಳಿಮೆಯಡಿಕೆ** (ನಾ). ಜ್ಞಾನದ ದಾಹ ; ಅರಿವಿನ ಆಸೆ : ಆ ಕ್ವಚಿದ್ದರ್ಶನದೊಳಹುದೆಲ್ಲ ಚೇತನಕು ರಸದ ನೀರಡಿಕೆ ಅದರಿನೀ ದುಃಖಿಸಮುದ್ಯೆವ ನಮನಂ, ಅದರಿನೀ ತಿಳಿಮೆಯಡಿಕೆ (ಮುಳಿದೇ. ೨೩-೧೦). 'ನೀರಡಿಕೆ$_1$' ಪರಾ. [ < ತಿಳಿಮೆ ]

**ತಿಳಿಯಿಡು** (ಕ್ರಿ). ಶುದ್ಧಗೊಳಿಸು ; ಹಸನುಗೊಳಿಸು : ಪೂಗೊಳನಂ ತಿಳಿಯಿಟ್ಟು ನೀರ್ವಕ್ಕಿಗಳಂ ನೆಲೆವೆರ್ಚಿಸುತ್ತುಂ (ಗಿರಿಜಾ. ೬-೪೨ ವ).
[ ತಿಳಿ$_2$ + ಇಡು$_1$ ]

**ತಿಳಿಯೆಣ್ಣೆ** (ನಾ). ಅಪ್ಪಟವಾದ ಎಣ್ಣೆ ; ಶುದ್ಧವಾದ ಎಣ್ಣೆ : ನೇಜೀಲ ವಣ್ಣಂ ತಿಳಿಯೆಣ್ಣೆಯೊಳ್ ಬಯಸಿ ತೊಯ್ದಂತಪ್ಪ ನುಣ್ಪುರ್ಪು (ಕಾವ್ಯಾವ. ೨೦೬). [ ತಿಳಿ$_2$ + ಎಣ್ಣೆ ]

**ತಿಳಿರಕುತ** (ನಾ). ಶುದ್ಧವಾದ ರಕ್ತ ; ಹೊಸರಕ್ತ : ಎಲೆ ಮರುಳೆ ನಿನ್ನೊಡಲ ಸೀಳಿಯೆ ತಿಳಿರಕುತದಲಿ ತಾಯ ತುಱುಬನು ನಾದಿಸುವೆನೆಂದ (ಕುಮಾರವ್ಯಾ. ೫-೪೪). [ತಿಳಿ$_2$ + ರಕುತ]

**ತಿಳಿರಸ** (ನಾ). ಶುದ್ಧವಾದ ದ್ರವ ; ನಿರ್ಮಲವಾದ ರಸ : ಎಳನೀರ್ಗಳ ತನಿಗಬ್ಬಿನ ತಿಳಿರಸದ ... ಬಹುವಿಧದ ಪಾನಂಗಳನಲ್ಲಲ್ಲೆಱೆವರಾ ಪ್ರಪಾಪಾಲಿಕೆಯರ್ (ವೃಷವಿ. ೪-೨೫). [ ತಿಳಿ$_2$ + ರಸ ]

**ತಿಳಿಲು** ' ತಿರುಳ್ ' ನೋ.

**ತಿಳಿಲುಮಾತು** (ನಾ). ಸಾರವತ್ತಾದ ನುಡಿ ; ತಿರುಳುನುಡಿ : ತಿಳಿಲು ಮಾತಿಲಿ ಬಳಿಗರದು ... ತಕ್ಕೈಸಿ (ವಿಜ್ಞಾನೇಶ್ವ. ೧೯-೫).
[ ತಿಳಿಲು (< ತಿರುಳ್) + ಮಾತು$_1$ ]

**ತಿಳಿವಟ್ಟಲ್** (ನಾ). ಮದ್ಯವನ್ನು ಕುಡಿಯಲು ಬಳಸುವ ಬಟ್ಟಲು ; ಪಾನಪಾತ್ರೆ ; ಚಷಕ : " ಗರ್ಹಕಃ, ಅನುತರ್ಷಃ, ಚಷಕಃ, ಸರಕಃ—ಈ ೪ ತಿಳಿವಟ್ಟಲ್ " (ಹಲಾಯು. ೫೪-೧೬೩) ; ಸೊಗಯಿಪ ಫಂಟೆಯಿನ್ದ ಣೆಗೆ ಯಾರುತಿ...ತಿಳಿವಟ್ಟಲೆಸಪ್ಪ ಚಂದನಂ (ಸೌಇಇ. IV. ೨೮೦-೬೫ ; 1199) ; ಕಡುವುಱಿಗಳ್ಳನೊಂದು ತಿಳಿವಟ್ಟಲನಿಟ್ಟೆಱೆಯಲ್ಕೆ (ದಶಕು. ೮-೨೦೪).
[ತಿಳಿ$_2$ + ಬಟ್ಟಲ್]

**ತಿಳಿವಡೆ** (ಕ್ರಿ). ಶುಭ್ರತೆಯನ್ನು ಹೊಂದು ; ಶುದ್ಧವಾಗು : ಮುಂದೆ, ಲೌಕಿಕರಸದಿಂದತ್ತ ಸರಿದು ಅಲೌಕಿಕವೆನ್ನಿಸುವ ಮಹಾಬಲನಕ್ಕೆ ಸ್ಥಾಯಿಯೇ ಕ್ರಮೇಣ ತಿಳಿವಡೆಯುತ್ತಾ ಹೋಗಿ ಕಡೆಗೆ ತೀರ್ಥಂಕರಭವದಲ್ಲಿ ಅಲೌಕಿಕ ರಸವೆನ್ನಿಸುವುದು (ನಾಡೋಜ. ೩೬೮). [ ತಿಳಿ$_2$ + ಪಡೆ$_1$ ]

**ತಿಳಿವಳಿಕಸ್ತ, ತಿಳುವಳಿಕಸ್ತ** (ನಾ). ವ್ಯವಹಾರಜ್ಞಾನವನ್ನು ಹೊಂದಿರುವವನು ; ಬುದ್ಧಿವಂತ : ಅವನೇನು ಅಂಥ ತಿಳಿವಳಿಕಸ್ತನಲ್ಲ (ರೂಢಿ). **ತಿಳುವಳಿಕಸ್ತ** : ವೆನಿಸ್‌ನಗರದ ಮರ್ಯಾದಸ್ತರೂ, ತಿಳುವಳಿಕಸ್ತರೂ ಆದ ನಿಕೊಲೊಪೋಲೊ ... ಕಾನಸ್ಟಾಂಟಿನೋಪಲಿಗೆ ಹೋದರು (ಪ್ರವಾಇ. II. ೪) ; ಓದುಬರಹ ಕಲಿತು ತಿಳುವಳಿಕಸ್ತನಾದರೆ, ನಿನ್ನ ಬಾಳು ಎಷ್ಟು ಚೆನ್ನಾಗಿ ಆಗ್ತದೋ ನೀನೇ ನೋಡುವಂತೆ (ನಮ್ಮಳ್ಳಿ. ೩೫).
[ತಿಳಿವಳಿಕೆ + _ ಸ್ತ]

**ತಿಳಿವಳಿಕೆ, ತಿಳುವಳಿಕೆ** (ನಾ). ೧. ಅರಿವು ; ಜ್ಞಾನ : ಆಱುತದ = ತಿಳಿವಳಿಕೆಯ (ಶಮದ. ೧೯೬ ಟೀಕೆ) ; ಚಲೋ ತಿಳಿವಳಿಕೆ ಇರಬೇಕು (ಮುಂಬಯಿ. ೪-೬೪) ; ಎಲ್ಲಿಹುದು ತಿಳಿವಳಿಕೆ ಜೀವನದ ಸಲುವಳಿಕೆ (ನಾದಲೀ. ೬೩-೬). ೨. ವಿವೇಕ ; ವಿವೇಚನಾಜ್ಞಾನ : ಆ ತಿಳಿವಳಿಕೆ ಅವರಿಗೆಲ್ಲಿಯದು (ಅಶ್ವಮ. ೩೮). ೩. ತಿಳಿಯಬೇಕಾದುದು; ಸೂಚನೆ : ವಿದ್ಯಾರ್ಥಿಗಳ ತಿಳಿವಳಿಕೆಗಾಗಿ ಇದನ್ನು ಪ್ರಕಟಿಸಲಾಗಿದೆ (ರೂಢಿ). **ತಿಳುವಳಿಕೆ** : ೧. ತಿಳುವಳಿಕೆಗೆ ಸಹಾದೇವ ಸತ್ಯಕ್ಕೆ ಹರಿಶ್ಚಂದ್ರ ಚೆಲ್ವಿಗೆ ಮನ್ಮಥ (ಮ್ಯಾಆರಿ. ೧೯೩೫, ೨೮-೬ ; 1751) ; ಹಳೆಯ ದೇವಾಲಯಗಳೂ ಶಿಲ್ಪಗಳೂ ... ಅಜ್ಞಜನರ ತಿಳುವಳಿಕೆಯ ಅಭಾವದ ಮೂಲಕವಾಗಿಯೂ ನಾಶವಾಗುತ್ತ ಬಂದಿವೆ (ಮಯೂರುಆ. ೩ ಮುನ್ನುಡಿ). [ ತಿಳಿ$_2$ + _ ವಳಿ$_1$+ _ ಕೆ ]

**ತಿಳಿವಳ್ಳಿ** (ನಾ). ಒಂದಂ ಊರಿನ ಹೆಸರಂ ; P ಧಾರವಾಡ ಜಿಲ್ಲೆಯ ಹಾನಗಲ್ ತಾಲ್ಲೂಕಿನ ಈಗಿನ ತಿಳವಳ್ಳಿ : ಶ್ರೀಮದಗ್ರಹಾರಂ ತಿಳಿವಳ್ಳಿಯ ಸಕಲ ಸಾಸಿರ್ವ್ವರ ಬೆಸದಿ... ಪಣವಂ ಬಿಟ್ಟರ್ (ಕಇ. II. ೮-೧೦ ; 1072) : ತಿಳಿವಳ್ಳಿಯುತ್ತ್ರವಸೆಟ್ಟಿ ಕಂಚಯನ ಮಲ್ಲಿಸೆಟ್ಟಿ ... ಇಂತಿನಿಬರು ವಿದ್ದರ್ು ಮೂಲಸ್ಥಾನದೇವಗ್ಗೆ ಬಿಟ್ಟ ಧರ್ಮ್ಮ (ಕಇ. I. ೧೯-೦೨; 1108).
[ ? + ಪಳ್ಳಿ$_1$ ]

**ತಿಳಿವಿಕೆ, ತಿಳುವಿಕೆ** (ನಾ). ಜ್ಞಾನ ; ಅರಿವು : ತತ್ವವಿದ್ಯೆಯ ತಿಳಿವಿಕೆಯ ಹುಸಿಯೆಂದು ಕಂಡಡೆ ಹಾನಿಯೇ ತನಗೆ (ನಿಜಾಗ. ೫-೧-೦೨೫). **ತಿಳುವಿಕೆ** : ತಿಳುವಿಕೆಲ್ಲದೆ ನೆಲೆಯುಯಿಲ್ಲದೆ ತಿರುಗುವವರು (ಜ್ಞಾನಸಿಂ. ೨೨-೩೦).
[ ತಿಳಿವು + _ ಇಕೆ]

**ತಿಳಿವಿಗ** (ನಾ). ಅರಿವಿರುವವನು ; ತಿಳಿವಳಿಕೆಯುಳ್ಳವನು ; ಜ್ಞಾನಿ : ಪಾದರಸ ಕರತಳದಲಿರುತದನಂಟದಂದದಿ ತಿಳಿವಿಗರು ಸಂಸ್ಕೃತಿಯಲಿರೆ ನಿರ್ಲೇಪರು (ಗಗಚಾ. ೧೩-೨೫). [ ತಿಳಿವು + _ ಇಗ ]

**ತಿಳಿವು, ತಿಳುವು** (ನಾ). ೧. ಸಮಾಧಾನಗೊಳ್ಳುವಿಕೆ ; ಸಾಂತ್ವನ ಪಡೆಯುವಿಕೆ ; ಮುಳಿಸು ತಿಳಿಯುವಿಕೆ ; ಕೋಪ ಕಡಿಮೆಯಾಗುವಿಕೆ : " ಪ್ರಣಯಂ ಪ್ರಸಾದವನೆ ತಿಳಿವಕ್ಕು " (ಶಬ್ದಮಣಿ. ೦೩೪-೩೩) ; ಆಕೆಯ ತಿಳಿವಾಕೆಯ ಮುಳಿಸಾಕೆಯ ಕೂಟಮೆ ದಲಿರ್ದುದರಸನ ಮನದೊಳ್ (ಕಾದಂಅ. ೬೬೨). ೨. ಅರಿವು ; ಬುದ್ಧಿ ; ಜ್ಞಾನ ; ತಿಳಿವಳಿಕೆ : ತಿಳಿವಿಲ್ಲದೆ ಶಶಿಕಾಂತದ ಕಳಶಮನೇಕಾಂತೆ ಕಾಂತೆ ನಿನ್ನ ಮುಖೇಂದೂಜ್ವಳ ಕೌಮುದಿಯಿಂದೊಸರ್ದಪುದೀಪಳಿಪಂದೊರ್ವ ಮುಗ್ಧೆಯಂ ಸಖಿ ನುಡಿದಳ್ (ಗಿರಿಜಾ. ೪-೦೨೪) ; ಮುಸುಡ ತಿರುಹಿತು ತಿಳಿವು (ಕುಮಾವ್ಯಾಸ. ೦೩-೪೪) ; ತಿಳಿವೆ ಶರೀರ ತಿಳಿವೆ ರೂಪು ಬೆಳಗೆ ಮೈಯೊಳಗೆ ತಾನಾಗಿರುತಿಹುದು (ಭರತೇಶ. ೦-೧೧೯) ; ಚೇರೆ ಏತಕು ಮಣಿಯ ನಾ ಇಗೊ ಬಂತು ತಿಳಿವಿನ ಗಳಿಗೆ (ಅರಳು. ೧೯-೩) ; ಜೀವನದಲ್ಲಿ ನಮ್ಮ ತಿಳಿವನ್ನು ಮರೆಯಿಸಿ ಸರಿಯುವ ಗಳಿಗೆಗಳಿಗೂ ಕಡಿಮೆಯಿಲ್ಲ (ಚಾಕ್ಷಿ. ೧೨). **ತಿಳುವು** : ೨. "ಮಾನು — ಅವಬೋಧನೇ, ತಿಳುವಿನೊಳ್" (ಶಾಶಕ್ಕೆ. ೨೪೧) ; ದೇವ ಬೆಳಗಿನ ಬೆಳಗೆ ದೇವ ತಿಳುವಿನ ತಿಳುವೆ (ಕಲಿಕಾ. ದೇ. ೨೯೮-೦೮). [ ತಿಳಿ$_1$ + _ ವು ]

**ತಿಳಿವುಟ್ಟು** (ಕ್ರಿ). ಅರಿವುಂಟಾಗು ; ಬುದ್ಧಿಬರಂ ; ಜ್ಞಾನೋದಯವಾಗು : ನಯದಿಂದಂ ತಿಳಿವುಟ್ಟಲೆನ್ನೆನಗೆ ಪೇೞಲ್ಕೇಳ್ದು ಚಂಡಾಲಜಾತಿಯೊಳೀ ವಾಕ್ಯಮುಮಿದಾ ವಿವೇಕಮುಮದೆಂತಾದತ್ತೊ ಪೇೞೆಂದು (ಕಾದಂಅ. ೭೫೬). [ ತಿಳಿ$_2$ + ಪುಟ್ಟು$_1$ ]

**ತಿಳಿವೆಳಕು** 'ತಿಳಿವೆಳಗು' ನೋ.

**ತಿಳಿವೆಳಗು, ತಿಳಿಬೆಳಕು, ತಿಳಿಬೆಳಗು, ತಿಳಿವೆಳಕು** (ನಾ). ನಿರ್ಮಲವಾದ ಪ್ರಕಾಶ ; ಸ್ವಚ್ಛವಾದ ಹೊಳಪು : ಅಕ್ಕ ನೀನೇಳೆಳು ನೇಸಱ ತಿಳಿವೆಳಗುಕ್ಕುತಲಿದೆ ಮೂಡಲಾಗಿ (ಶ್ರೀಪಾಲ. ೨-೨೫) ; ಎಳಿಮಿಂಚಿನಂದದ ಬೊಂಬೆಯೊ ತಿಂಗಳ ತಿಳಿವೆಳಗಿನೋಳಾದ ರೂಪೋ (ಭರತೇ.೩-೭೭); ತಿಳಿವೆಳಗಿನ ತಳ್ಪೆಳಗಿನ ... ಬೆಳಸಿನ ಸಿರಿಯೆನೆ ತೊಳತೊಳ ತೊಳಗಿದುದು ಮೂರ್ತಿ ಚಂದ್ರಪ್ರಭನಾ (ಶಬ್ದಾನು. ೦೪೦ ವ್ಯಾಖ್ಯಾ). **ತಿಳಿಬೆಳಕು** : ಅಶಾಂತಿಯೆಲ್ಲಾ ಅಳಿದು ಶಾಂತಿಯ ತಿಳಿಬೆಳಕು ದೇಶವನ್ನೆಲ್ಲಾ ತುಂಬಲಿ (ಅಮಗಾಂ. ೮). **ತಿಳಿಬೆಳಗು** : ತನುವಿನಲ್ಲಿ ಹುಸಿ ತುಂಬಿದ ಕತ್ತಲೆಯ ಕಣ್ಣಿಗೆ ಸತ್ಯದ ತಿಳಿಬೆಳಗು ಕಾಣುವುದು ಅಸಾಧ್ಯವೆಂದೇ ಹೇಳಬೇಕು(ಮೋಹವಿಜ. ೦ ಪ್ರಸ್ತಾವನೆ). **ತಿಳಿವೆಳಕು** : ತಿಳಿವೆಳಕು ರೂಪಾನ ಮುಖವರಿ ಒಂದು ಅಭೂತಪೂರ್ವ ಶೋಭೆಯನ್ನು ತಂದಿದೆ (ಜಯಂತ. ೩೦). [ ತಿಳಿ$_2$ + ಬೆಳಗು$_1$ ]

**ತಿಳಿವೊನಲ್** (ನಾ). ನಿರ್ಮಲವಾದ ಹೊಳೆ : ಅಪ್ ತೇಜಗಳು ಬೆರೆದ ತಿಳಿವೊನಲನನುಕರಿಸಿ ನೆನ್ನೊಳಗು ಬಾಹ್ಯಾಂತರ್ಯಭೇದವಳಿಯ (ಮಲೆದೇ. ೨೭-೫). [ ತಿಳಿ$_2$ + ಪೊನಲ್ ]

**ತಿಳಿಸಾರು** (ನಾ). ತೆಳ್ಳಗಿರುವ ಸಾರು : ನಮ್ಮ ಯಜಮಾನ್ರಿಗೆ ಅದರ ತಿಳಿಸಾರು ಮಾಡಿದ್ರೆ ತುಂಬ ಹಿಡಿಸುತ್ತೆ (ರೂಪಸಂ. ೧೨).
[ ತಿಳಿ$_2$ + ಸಾರು$_3$ (<ಸಾಱು$_2$) ]

**ತಿಳಿಸು** (ಕ್ರಿ). ಸ್ಪಷ್ಟಪಡಿಸು ; ಅರಿಯುವಂತೆ ಮಾಡು : ಶಿಕ್ಷಕನು ಹುಡುಗರಿಗೆ ಚೆನ್ನಾಗಿ ತಿಳಿಸಿಕೊಡಬೇಕು (ಮುಂಬಯಿ. ೪-೮೪); ದಯವಿಟ್ಟು ತಿಳಿಸೋಣವಾಗಲಿ (ಚಂಗಾಳ್ವ. ೦೪೧).

**ತಿಳಿಸಿಕೊಳ್ಳು** = ಶುದ್ಧಮಾಡಿಕೊಳ್ಳು ; ಹಸನುಮಾಡಿಕೊಳ್ಳು : ಕಟ್ಟಣೆಸದಿನ್ನು ಮನವಂ ತಿಳಿಸಿಕೊಳ್ಳಯ್ಯ (ಹರ್ಷ್ಕರ. ೨೦-೦೨).

[ ತಿಳಿ$_1$ + – ಇಸು$_3$ ]

**ತಿಳಿಸುಣ್ಣ** (ನಾ). ೧. ಸುಣ್ಣ ಅರಳಿದ ಬಳಿಕ ಅದರ ಮೇಲೆ ನಿಲ್ಲುವ ನೀರು ; ಸುಣ್ಣದ ನೀರು : (೬). ೨. ಕೆನೆಸುಣ್ಣ : (೬).

[ ತಿಳಿ$_2$ + ಸುಣ್ಣ ]

**ತಿಳಿಹು** 'ತಿಳಿಪು$_1$' ನೋ.

**ತಿಳಿಹೇಳು** (ಕ್ರಿ). ಸ್ಪಷ್ಟವಾಗುವಂತೆ ಹೇಳು; ತಿಳಿಸಿ ಹೇಳು : ಬೇರೆ ಬೇರೆ ವಿಷಯಗಳ ಮೇಲೆಯೂ ವಿವರವಾಗಿ ತಿಳಿಹೇಳಿ ಅವರೆಲ್ಲರಲ್ಲಿಯೂ ಆ ವಿಷಯಗಳನ್ನು ತಿಳಿದುಕೊಳ್ಳುವ ಲವಲವಿಕೆ ಹುಟ್ಟಿಸಿದ್ದರು (ಪ್ರಬಂಧ. ೯೪).

[ ತಿಳಿ$_1$ + ಹೇಳು (<ಪೇೞ್) ]

**ತಿಳಿಹೊಳೆ** (ನಾ). = ತಿಳಿವೊನಲ್ : ಪರಮಶಾಂತಿಯ ಪಡೆದಿಹೆ ; ಪಡೆಯುದಿರಲಿಂತಂತು ಹರಿವುದು ರಾಗ ತಿಳಿಹೊಳೆಯಂದದೆ? (ಇಂಗೀತ. ೦೪-೦೫). [ ತಿಳಿ$_2$ + ಹೊಳೆ$_4$ (<ಪೊೞೆ$_1$) ]

**ತಿಳುಪು$_1$** 'ತಿಳಿಪು$_1$' ನೋ.

**ತಿಳುಪು$_2$** 'ತಿಳಿಪು$_2$' ನೋ.

**ತಿಳುಪೇಱು** (ಕ್ರಿ). ತೆಳುವಾಗು; ತೆಳ್ಳಗಾಗು; ಕೃಶವಾಗು : ಬಿಳುಪೇಱಿತು ಮೊಗ ತಿಳುಪೇಱಿತು ಕೆನ್ನೆ ಹೊಳಪೇಱಿತು ಕಾಡಿನೋಟ (ಜೀವಂಸಾಂ. ೪-೭೦). 'ತೆಳುಪೇಱು' ಪರಾ.

[ ತಿಳುಪು$_2$ (<ತಿಳಿಪು$_2$) + ಏಱು$_1$ (<ಏಱ್$_1$) ]

**ತಿಳುವಳಿಕಸ್ತ** 'ತಿಳಿವಳಿಕಸ್ತ' ನೋ.

**ತಿಳುವಳಿಕೆ** 'ತಿಳಿವಳಿಕೆ' ನೋ.

**ತಿಳುವಿಕೆ** 'ತಿಳಿವಿಕೆ' ನೋ.

**ತಿಳುವು** 'ತಿಳಿವು' ನೋ.

**ತಿಳುಹಿಸು** (ಕ್ರಿ). ೧. ಶಮನಗೊಳಿಸು ; ಶಾಂತಗೊಳಿಸು; ಸಾಂತ್ವನಗೊಳಿಸು; ಸಮಾಧಾನಗೊಳಿಸು : ಈ ಗಿಣಿಯು ಸಂಗೀತ ಸಾಹಿತ್ಯವ ಬಲ್ಲುದು . . . ಅಂತಃಪುರಸ್ತ್ರೀಯರುಗಳ ಕೋಪವ ತಿಳುಹಿಸಿ ಅನುಗೊಳಿಸಬಲ್ಲುದು (ವಚಕಾ. ೦). ೨. ತಿಳಿಸು ; ಅರುಹು.

[ ತಿಳುಹು$_1$ (<ತಿಳಿಪು$_1$) + – ಇಸು$_3$ ]

**ತಿಳುಹು$_1$** 'ತಿಳಿಪು$_1$' ನೋ.

**ತಿಳುಹು$_2$** 'ತಿಳಿಪು$_2$' ನೋ.

**ತಿಳ್ಳಿ** (ನಾ). (ಉಕ) ಒಂದು ಬಗೆಯ ಆಟ ; ಉಪ್ಪಾರಪಟ್ಟೆ : ಪ್ರಳಯ ಜಯಿ:ಸಿ ತಾನೀಸಿಯೋ ಬರಲೀ ಆಡುತಿರಲು ತಿಳ್ಳೀ ಇಗೋ ಓಡಿ ಬಂದಿತಿಲ್ಲಿ (ಅಕಲು. ೦೫೩-೪) ; ಸಂಜೆಯಲ್ಲಿ ಮಾಡುವ ವ್ಯಾಯಾಮದಲ್ಲಿ ತಿಳ್ಳಿ, ಓಡುವುದು, ಖೋಖೋ ಮೊದಲಾದವುಗಳೂ ಬರುತ್ತವೆ (ಬ್ರಹ್ಮಜೀ. ೨೦೦) ; "ಹುಡುತುತ್ತು" "ತಿಳ್ಳಿ" ಮುಂತಾದ ಆಟಗಳನ್ನು ಆಡುತ್ತಿರುವವರು (ವಿರಾಧ. ೯೫).

**ತಿಳ್ಳಿಯಾಡು** = ಉಪ್ಪಾರಪಟ್ಟೆಯಾಟ ಆಡು : ಅವನ ಅಂತರ್ಯಾದ ಭೋರ್ಗರವ ಕಡಲಿನ ಭಾವನೆಗಳ ಅಲೆಗಳ ಮೇಲೂ ಆಕೆಯ ಮಂಗಲಮೂರ್ತಿ 'ತಿಳ್ಳಿ'ಯಾಡುತ್ತಿದೆ (ಬನಸಿ. ೨) ; ಗಾಳಿಯೊಡನೆ ತಿಳ್ಳಿಯಾಡುತಾಡುಂತದರ ಓಟಾ (ನಾದಲೀ. ೮೫-೦). **ತಿಳ್ಳಿಹಾದಾಡು**=ತಿಳ್ಳಿಯಾಡು : ಖೋ ಆಡಲಿಕ್ಕೂ ತಿಳ್ಳಿ ಹಾದಾಡಲಿಕ್ಕೂ ಹೆಚ್ಚು ಮಂದಿ ಬೇಕು (ಮುಂಬಯಿ. ೦-೨೭). [ ? ]

**ತಿಱಿ$_1$, ತಿರಿ$_2$** (ಕ್ರಿ). ೧. (ಹೂವು, ಹಣ್ಣು ಮೊದಲಾದುವನ್ನು) ಕೊಯ್ಯು; ಬಿಡಿಸು ; ಆರಿಸು ; ಎತ್ತು : "ತಿಱಿದುದನಲ್ ತಾಂ ಕೊಯ್ದುದು" (ಚಕುನಿ. ೦೦೬) ; ಮಾಳಿದು ತನಗರ್ಭ್ಯಮೆತ್ತಿದ ತಳಿಗೆಯೊಳಿಡೆ ತಿಱಿದ ತೆಱದೆ ತಲೆ ಪಱಿದಾಗಳ್ (ಹಂಪಭಾ. ೬-೬೪) ; ಬದರಿಯ ಬನ್ನಿಯ ರಥಚಕ್ರದೆಲೆಗಳಂ ತಿಱಿದು ತಲೆಯೊಳಿಟ್ಟಾತಂಗಭ್ಯುದಯಮುಂ...ಸುಖಮುಂ ಕೂಡಿಬಕ್ಕುಮೆಂಬರ್ ಮೂಢರ್ (ಸಮುಪ. ೦೨-೬); ಕುಸುಮನಿಕಾಯಮಂ ತಿಱಿವ ಕೈತವದಿಂದೆ (ಉದ್ಯಟ. ೭-೨೨); ಪಣ್ಣಂ ತಿಱಿದಿಚ್ಛೆಯಿಂದೆ ಕುಡುತುಂ (ಕಬ್ಬಿಗಕಾ. ೦೩೬) : ಕುಸುಮತತಿಯಂ ತಿಱಿದುಕೊಂಡು ತಾಂ ಬರುತ್ತಿರೆ (ಬಸಪು. ೦೦-೯); ಕುಸುಮಮಾಳಿಯಂ ತಿಱಿದು ತನ್ನಮನೆ (ಪದ್ಮರಾ. ೮-೫೩); ನಳನಳಿಪ ಗಜಪುಷ್ಪಮಾಲಿಕೆಯ ತಿಱಿದು ತುಳಸಿಯ ದಳವನಘಶತಹರವ ನಡೆಗೆಡೆಗಿಱುಕಿ ವೈರಿಯ ಧುರವ ಜಯಿಸೆಂದಿಕ್ಕಿದನು ಕೊರಳಲಿ (ತೊರರಾ. ೪-೪-೨) ; ತಿಱಿದ ಚೆಂದಳಿರ್ಗಳಂತೊಪ್ಪುವಧರಂಗಳಿಂ...ಸುರವನಿತೆಯರ್ ಕಂಗೆಸೆದರ್ (ಚಬಪು. ೦೯-೪೪). 'ಪೂದಿಱಿ' ಪರಾ. ೨. ಎಸೆ ; ಬಿಸಾಡು. 'ತಿಱಿಕಲ್'ಪರಾ. **ತಿರಿ$_2$** : ೧. ಹಲವಾರು ತೋಟದೊಳಸವಸದೊಳು ಸುಗ್ಗಿ ಹೂಗಳ ತಿರಿದನು ಹಿಗ್ಗಿ (ಇಂಕಾಪ. ೮೦-೮೮). ೨. 'ತಿರಿಕಲ್ಲು' ಪರಾ.

[ ದೇ. ೧ ತಮಿ. ಮಲ. ತಿಱಿ ; ತೆಲು. ತೆಗು, ತ್ರೆಗು, ತ್ರೆಯ್ಯು ]

**ತಿಱಿಕಲ್, ತಿರಿಕಲ್ಲು, ತಿಱಿಕಲ್ಲು** (ನಾ). (ಆಟವಾಡುವಾಗ) ಮೇಲಕ್ಕೆ ಹಾರಿಸಿ ಕೈಯೊಡ್ಡಿ ಹಿಡಿದುಕೊಳ್ಳುವ ಸಣ್ಣಕಲ್ಲು ; ಅಣ್ಣೆಕಲ್ಲು : "ತಿಱಿಕಲ್ಲೆಂದು ಅಣ್ಣೆಕಲ್" (ಕಶಸಾ. ೨೭-೫೫೨) ; "ತಿಱಿಕಲ್ [ಪಾಠಾಂ. ತಿಱಗಲ್, ತಿಱುಕಲ್] ಎನಲ್ಕೆ ಕಾಸಣ್ಣೆಕಲ್ಲಕ್ಕು" (ಕಬ್ಬಿಕ್ಕೆ.೫೯); ವಾಮೇತರಾಯತಹಸ್ತಾಗ್ರದೊಳಾಂತು ತಾಳ್ದಿದುದಱಿಂ ಬಾಳತ್ವದೊಳ್ ಕೋಟಿಕಾಂತಿತಮಾ ಕಲ್ ತಿಱಿಕಲ್ ತ್ರಿವೃಷ್ಟಮಹಿಪಂಗಕ್ಕುಂ ಪೆಱಗತ್ತುಮೋ (ಶಾಂತಿಪು. ೫-೨೬) ; ಮಿಱುಗುವ ನೀಲದ ಬಟ್ಟಂ ತಿಱಿಕಲ್ಗಳನಾಡುವಂತೆ ಕಣ್ಗೆಸೆದಿರ್ದಳ್ (ಕಾದಂಅು. ೨೬); ತದ್ಗೃಹದೇವತಾಜನಂ ಸೊಗಯಿಸುವಿಂದ್ರನೀಲಮಣಿಯಿಂ ತಿಱಿಕಲ್ಗಳನಾಡುವಂತೆವೋಲ್ (ಸಂರಾಚೂ. ೩-೭೭) ; ತಿಱಿಕಲ್ಲಾದುವು ವಿಷ್ಣುಭೂಭುಜಭುಜಶ್ರೀಗಾವಗಂ ಪೆಂಪಿನೊಳ್ನೆಱಿದಾಸಹ್ಯನಗೇಂದ್ರ ನೀಳ ××× ಗಳ್ ಪೆಱತೇನಾ ಭುಜಲಕ್ಷ್ಮಿಗೀ ನೆಗಳ್ದ ಪಾನುಂಗಲ್ (ಎಕ. ೫, ಬೇಲೂರು. ೦೭-೭; 1180). **ತಿರಿಕಲ್ಲು**: 'ತಿರಿಕಲ್ಲಾಟ' ಪರಾ. **ತಿಱಿಕಲ್ಲು**: ಕುಳಿಲ್ಸೆಂಡು ಬಟ್ಟು ತಿಱಿಕಲ್ಲಟ್ಟುಂಗರೆ ಹೊಣೆಗುಂಡೆಂಬಿವನಾ ಮುರಹರನಲ್ಲಲ್ಲಿಗಾಡುತುಂ ಬರಲಿದಿರೊಳ್ (ಜಗವಿ. ೪-೪೪) : ಸಪ್ತಕುಲಪರ್ವತಂಗಳನೊರ್ವ ಬಾಚಿಯುಂಗೈಯೊಳಾಂತು ಓರಂತೆ ತಿಱಿಕಲ್ಲನಾಡುತ (ವೀಕ್ಕಪು. ೩-೨೦-೪೪) : ಚಂಡಪ್ರತಾಪಿಯ ಜಯವಧು ತಿಱಿಕಲ್ಲ ಕೊಂಡಾಡುವಂತೆ ಚಿಮ್ಮಿದನು (ಮೋಹತ. ೩೪-೯) ; ಅಖಿಳ ಕುಲಗಿರಿಗಳಂ ತಿಱಿಕಲ್ಲನಾಡಿ ಸಾರಿಪ ವಸುಂಧರೆಯನಾಕಾಶಮಂ ಪಿಡಿದು ತಾಳವ ಪೊಯ್ಯು ...ಮಹಾಪ್ರಮಥವರರೊಪ್ಪುತಿರ್ದರು (ಸಿದ್ಧೇಪು. ೦-೩೪). 'ಅಣ್ಣೆಕಲ್$_1$' ಪರಾ. [ತಿಱಿ + ಕಲ್$_3$]

**ತಿಱಿಕಲ್ಲಾಟ, ತಿರಿಕಲ್ಲಾಟ** (ನಾ). ಕಲ್ಲುಗಳನ್ನು ಎಸೆದು ಹಿಡಿಯುವ ಆಟ ; ಅಣ್ಣೆಕಲ್ಲಾಟ : ಮತ್ತಮವರ ಪಸುಳೆಗಳ್ ಪಕ್ಕಿಯ ಸಿಡಿದಲೆಯೊಳ್ ತಿಱಿಕಲ್ಲಾಟಮಂ . . . ಕಲ್ತರ್ (ಚಳವಂ. ೮-೦೨) ; ಪಂದಲೆಯ ತಿಱಿಕಲ್ಲಾಟದಿಂ ಮರುಳ್ಪಡೆಗೆ ನಲವೇರ್ಚಿಸುತುಂ (ರಾಮಾಶ್ವ. ೪೯-೦೯). **ತಿರಿಕಲ್ಲಾಟ**: ಕವಣೆ ತಿರಿಕಲ್ಲಾಟ ಹಗ್ಗಕೆ ಸೆಳೆದರೋ ಹೆಬ್ಬಾವನು (ಕಪಪು. ೬-೦೫೨). [ ತಿಱಿಕಲ್ + ಆಟ ]

**ತಿಱಿಕಲ್ಲಾಡು** (ಕ್ರಿ). ಕಲ್ಲುಗಳನ್ನು ಮೇಲೆ ಎಸೆದು ಹಿಡಿ ; ಅಣ್ಣೆಕಲ್ಲಾಡು : ತಿಱಿಕಲ್ಲಾಡುವ ಬೊಟ್ಟುವೋರಿಸುವ ಸೆಂಡಂ ಪೊಯ್ವ ... ನಾನಾಕ್ರೀಡೆಯಿಂದಿರ್ಪರುಂ ತಱಿಸಂದು (ಸುಕುಮಾ. ೨-೬) ; ತಿಱಿಕಲ್ಲಾಡುವೆನೋ ಕುಲಾದ್ರಿಚಯಮಂ (ಜಗವಿ. ೭-೩೫); ಕೋಡೆರೊಳ್ಕೋಡೆರೊತ್ತುತುಂ

ದಂತಿಗಳನೆ ತಿಱುಕಲ್ಲಾಡುವಂತೆಬರಕ್ಕೀಡಾಡುತ್ತುಂ ತುಂಗಶೈಳಂಗಳನೆ ... ಎಯ್ದೆಂದುದು ಪವನಜವಂ ರುಂದ್ರಗಂಧದ್ವಿಪೇಂದ್ರಂ (ಪಾರ್ಶ್ವಪು. ೯-೦೩೬): ಆಲಿವರಲಂ ಪೊಯ್ದುಣ್ಣಕಲ್ಲಾಡಲುಂ ತಿಱುಕಲ್ಲಾಡಲದೇಂ ತಗುಳ್ದವೊ ಮನಸ್ಸಂಪ್ರೀತಿಯಿಂ ಚಾತಕಂ (ಅನಂಪು. ೯-೯) ; ತಲೆಗಳ ತಱಿದು ತಿಱುಕಲ್ಲಾಡುತಿರ್ದನು ವೀರವಿಹಗೇಂದ್ರ (ತೊರರಾ.೩.೧೦-೦೫); ಗಿರಿಗಳಂ ಕಿತ್ತು ತಿಱುಕಲ್ಲಾಡುವ ಕಾಲಮೇಘದ ಸಿಡಿಲ ತೊಡಿಗೆಯಂ ಸಲೆ ತೊಡುವ ... ಕಾಲರಾಕ್ಷಸರೈದಿ ಸಂದಣಿಸಿ ನಿಂದಿರ್ದರ್ (ಚಲಪು. ೨೩-೦೫).

[ ತಿಱುಕಲ್ + ಆಡು$_1$ ]

**ತಿಱುಕಲ್ಲು** ‘ತಿಱುಕಲ್’ ನೋ.

**ತಿಱುಕುಳಿ** (ನಾ). = ತಿಱುಕೊಱೆ$^3$ : “ ತಿಱುಕುಳಿ [ ಪಾಠಾಂ. ತಿಱಕೊಱೆ$^3$ ] ಯೆನಲ್ಕೆಯಾಯ್ಕುಳಿಯಕ್ಕು ” (ಕಬ್ಬಿಗಂ. ೫೪). ‘ತಿರಿಕಂಳಿ’ ಪರಾ.

[ ತಿಱು + – ಕುಳಿ$_3$ ]

**ತಿಱುಕೊಱೆ$^3$** (ನಾ). (ಗದ್ದೆ ಮುಂತಾದ ಕಡೆ ಕಾಳನ್ನು) ಆಯ್ದು ಕೊಂಡು ಜೀವಿಸುವವನು ; ಆಯ್ಕುಳಿ : “ ತಿಱುಕೊಱೆ$^3$ = ಆಯ್ಕುಳಿ ” (ಕರ್ನಾಟ. ಶಬ್ದ. ೨). [ ತಿಱು + ಕೊಱೆ$_4$ ]

**ತಿಱುಕೊಱೆಗೊಳ್** (ಕ್ರಿ). ಆಯ್ದು ಕೊಳ್ಳು ; ಆರಿಸಿಕೊಳ್ಳು : ಕೊಲ್ಗಂ ಕಱುಯಂ ಕೊಲ್ವಂತಿರೆ ತಿಱುಕೊಱೆಗೊಂಡು ಜಗಜ್ಜನಂಗಳಂ ಯಮರಾಜಂ (ಅಜಿಪು. ೧೦-೨೮). [ತಿಱುಕೊಱೆ$^3$ + ಕೊಳ್$_1$]

**ತಿಱುಗದಿರ್** (ನಾ). ಆಯ್ದಕಿರಣ,—ರಶ್ಮಿ : ತಿಱುಗದಿರಂ ಮಱುವಕ್ಕಿಗೆ ನೂಂಕಿ ತನಿಗದಿರನಿನಿಯಂಗೆ ನೀಡಿ (ಅನಂಪು. ೭-೮೦ ವ). [ತಿಱು+ಕದಿರ್$_2$]

**ತಿಱುಚು** (ಕ್ರಿ). ವಿಭಾಗಿಸು ; ಭಾಗವಮಾಡು (?) : ಮೂಱುವೊಳದಸವಂದದ ಮರ್ಯಾದೆಯಲೂ ಕಟುಗೊಡಗೆಯನೂ ತಿಱುಚಿ ಆ ಕಟುಗೊಡಗೆಯು ಗದೆಗೆ ಉತ್ತಮ ಮಧ್ಯಮ ಕನಿಷ್ಠವಾಗಿ ತ್ರಿಸ್ಥಾನದಲೂ ಸಿಲಾಸ್ಥಾಪನವನು ಮಾಡಿಸಿ ಕೊಡುವವು (ಎಕ. X, ಮುಳಬಾ. ೦೬೨-೧೦ : 1496). [ ತಿಱು + —ಚು$_1$ ]

**ತಿಱುತರ್**, ತಿರಿತರ್$_2$ (ಕ್ರಿ). (ಹೂವು, ಹಣ್ಣು, ಕಾಯಿ ಮುಂತಾದುವನ್ನು) ಕೊಯ್ದು ತರು ; ಕಿತ್ತು ತರು : ಕಂಪುಳ್ಳ ಸಂಪಗೆಯ ಪೂಗಳಂ ತಿಱುತಂದು ಹಂಪಿನಿಂ ಶಶಿಧರನ ಸಿರಿಮುಡಿಗೆ ಬೇಕೆಂದು (ಬಸವ. ೦-೨೭) ; ತಳಿರ ತಿಱುತಂದಂದು ಮನೆ ಮಾಡಿದರು ಭೂಸುರತತಿಗೆ (ಕುಮಾವ್ಯಾ. ೦೭೩. ೪-೫). ತಿರಿತರ್$_2$. ‘ತಿರಿತರಿಸು’ ಪರಾ. [ ತಿಱು + ತರ್ ]

**ತಿಱುತರಿಸು**, ತಿರಿತರಿಸು (ಕ್ರಿ). ಕೊಯ್ದು ತರಿಸು; ಕಿತ್ತು ತರಿಸು : ಎಳವುಲ್ಲಗಳಂ ತಿಱುತರಿಸಿ ಮುಂದಿಟ್ಟನು (ಕೃಮಿಲಾ. ೨೯-೪೭). **ತಿರಿತರಿಸು** : ತಣ್ಣೆಳಲಿನ ತರುವಮೂಲಕ್ಕೆ ತುರಂಗವನ್ನು ನೀರು ಕುಡಿಸಿ ಕಟ್ಟಿ, ಎಳಹುಲ್ಲನ್ನು ತಿರಿತರಿಸಿ ಅದರ ಮುಂದಿಟ್ಟು (ಬಿರುರಿ. ೦೬೮).

[ ತಿಱುತರ್ + – ಇಸು$_1$ ]

**ತಿಱುಸೇವಗೆ** (ನಾ). ಒಂದು ಬಗೆಯ ಸೇವಗೆ; “ಕತ್ತರಿಸಿ ಚೂರುಮಾಡಿದ ಸೇವಗೆ” (ಸಿದ್ಧರಾ. ಕೋಶ): ಬಳ್ಳಿಯಲ್ಲಿ ತಿಱುಸೇವಗೆಯ ರಾಶಿಗಳ ಮಾಡಿ ಹಳ್ಳಿಕಾರ್ತಿಯರಲ್ಲದರಸುಮಕ್ಕಳು ಮಾಡಿದರು ವರಡಿ ಸರವಳಿಗೆಯ (ಸಿದ್ಧರಾ. ೮-೫೦). [ ತಿಱು + ಸೇವಗೆ (< ಸೇವಿಗೆ ) ]

**ತಿಱು** (ಕ್ರಿ). ೧. ಕೊಡು ; ನೀಡು : ಮಾನ್ಯಕಾಱುಮೂಱು ಶ್ರಾಹೆಗೆ ಪರಿಯರ ಗದ್ಯಾಣವನ್ನಿಱುವರ್ (ಸೌಇಇ. IX – 1, ೭೭-೨೯; ೯೯೨): ಹೊಲಗೇರಿಯ ಪಡುವಣ ಕರುವಗೆಯ್ಯಿಂದಂ ತೆಂಕಲಾಱುಮತ್ತರು ಕೆಯಿಂಗವಱಿವಣಮಯ್ದು ಗದ್ಯಾಣವಂ ತಿಱುವರು (ಸೌಇಇ. XI-i, ೫೦-೨೦ : 1005). ೨. ಸಲ್ಲಿಸು ; ಸಂದಾಯಮಾಡು : “ ತಿಱು – (ದ್ರವ್ಯ) ವಿನಿಮಯೇ ” (ಶಮದಧಾ). ‘ತೆಱು$_1$’ ಪರಾ.

[ ದೇ. ೬ ತಮಿ. ಇಱು ; ಮಲ. ಇಱ = ಕಾಣಿಕೆ ]

**ತಿಱುಕೆ** (ನಾ). ಕೊಡುಂವಿಕೆ ; ತೆರುವಿಕೆ : ಕಿಱುಕೆ, ತಿಱುಕೆ, ಪೊಱುಕೆ (ಶಬ್ದಾನು. ೫೩೭ ಪ್ರಯೋ). [ತಿಱು + – ಕೆ]

**ತಿಱುಗೆ** (ನಾ). ಒಂದು ಬಗೆಯ ತೆರಿಗೆ (?) : ಉಂಬರವಾಣೆಯ ತಿಱುಗೆಯ ಹಿರಿಯ ಕೋಲಲು ಹನೆರಡು ಮತ್ತರು (ಕಇ. II, ೨೩-೭೪ ; 1174) : ಹಾರಣೆದಂಳ ದೋಷದಿಂ ಪಾದ ತಿಱುಗೆಯಂ ಕೊಂಬುದಿಲ್ಲೆಂದು ಒಂದು ಹೊಂನ ಪಾದಪೂಜೆಯಂ ಕೊಂಡು (ಕಕುಲ. ೬-೭೪ : 1218).

[ತಿಱು + – ಗೆ]

**ತಿಱುನಂದೀಶ್ವರ** (ನಾ). [ಜೈನ] ಒಂದು ಹಬ್ಬ ; ನಂದೀಶ್ವರದಷ್ಟಮಿ ; P ಜ್ಯೇಷ್ಠ, ಆಷಾಢ ಮತ್ತು ಫಾಲ್ಗುಣ ಮಾಸಗಳಲ್ಲಿ ಅಷ್ಟಮಿಯಿಂದ ಹುಣ್ಣಿಮೆಯವರೆಗೆ ಎಂಟು ದಿನಗಳು ಜೈನರು ಆಚರಿಸುವ ಒಂದು ವ್ರತ,—ಹಬ್ಬ. ಇದನ್ನು ‘ಅಷ್ಟಾಹ್ನಿಕ’ ಎಂದೂ ಕರೆಯುತ್ತಾರೆ : ತಿಱುನಂದೀಶ್ವರದಂದು ದಾನಮಾಡಿಯುಂ ಪೊಯ್ಸಳನ ಗುರುಗಳ್‌ಮುಳ್ಳೂರ ಶ್ರೀಗುಣಸೇನಪಂಡಿತದೇವರ್ಗ್ಗೆ ಧಾರಾಪೂರ್ವಕದಿಂ ಸ್ಥಾನಮಂ ಕೊಟ್ಟರ್ (ಎಕ. VI, ಮೂಡಿಗೆ. ೦೩-೨೮; 1063). ‘ನಂದೀಶ್ವರ’ ಪರಾ. [P ಇದು ‘ ತಿರುನಕ್ಷತ್ರ ’ ‘ ತಿರುನಾಮ ’ ಮುಂತಾದ ಶಬ್ದಗಳಂತೆ, ತಮಿಳು ಪದಗಳ ಹೋಲಿಕೆಯ ಮೇಲೆ ರೂಪಿಸಿಕೊಂಡಿರುವ ಒಂದು ಶಬ್ದ ವಿರಬಹುದು.]

**ತಿಱುನೀರಿಕ್ಕು** (ಕ್ರಿ). (?) : ಮಂಡಲವಿನ್ನುಂ ತಿಱುನೀರಿಕ್ಕು [ ಪಾಠಾಂ. ಕಿಱುನೀರುಕ್ಕು ] ವುದೆನಿಸಿದ ತಱುಸಲವಿನ ಚಲದ ಬಲದ ಕಲಿನರಸಿಂಹಂ (ಪಂಪಭಾ. ೧-೩೩) ; “ತರ್ಪಣೋದಕವನ್ನು ಕೊಡಂ” (ಪಂಪದೀ. ೧೭).

[P ಇಲ್ಲಿ ಪಾಠಾಂತರವೇ ಹೆಚ್ಚು ಗ್ರಾಹ್ಯವೆಂದು ತೋರುತ್ತದೆ]

**ತಿಱುವಂಗಡಿ** (ನಾ). = ತಿರುಮಾಳಿಗೆ : ವಿದ್ಯಾರ್ಥಿತಪೋಧನರಾಹಾರದಾನಕ್ಕಮೆನ್ದು ಕಾಲಂ ಕರ್ಚ್ಚಿ ಧಾರಾಪೂರ್ವ್ವಕಂ ಮಾಡಿ ಉತ್ತವುದ ಬಳಕ್ಕೆ ತಿಱುವಂಗಡಿ ೧ ಮತ್ತಮಂಗಡಿಗಳೊಳ್ಪಣ ೧ . . . ಕೊಟ್ಟರ್ (ಎಇ. V, ೩೪೩-೩೦ : 1093). [ < ತಿರು$_2$ + ಅಂಗಡಿ (< ಅಂಗಾಡಿ) ]

**ತಿಱುವಂತ** (ನಾ). ಒಬ್ಬಾತನ ಹೆಸರು : ವತ್ತುಗದ್ಯಾಣ ಪೊನ್ನುಂ ಇಟ್ಟಾಱು ಭತ್ತವುಂ ತಿಱುವನ್ತಗೆ ಕಾದಿಯಣ್ಣಂ ಕೊಟ್ಟಂ (ಎಕ. IX, ದುಕಬಾ. ೨೦೮-೩೪ ; 1000). [ <ತಿರು$_2$ + – ವಂತ ]

**ತಿಬ್ಬಂದಿರಿ** (ಕ್ರಿ). ವೇಗವಾಗಿ ತಿರುಗು ; ಭರದಿಂದ ಸುತ್ತು : ಜಳಧಿಯ ನೀರ್ತುಳುಂಕಿದವು ಧಾತ್ರಿ ತಿಬ್ಬಂದಿರಿದತ್ತು ದಿಗ್ಗಜಂ ಮದವೆತ್ತಿ ಕಟ್ಟದುದು (ಮಹಾನೇ. ೧೦-೦೫೯). [ < ತಿಬ್ಬನೆ + ತಿರಿ$_1$ ]

**ತಿಬ್ಬಗೆ** (ಅ). ತಿರುಗುವುದನ್ನು ಸೂಚಿಸುವ ಒಂದು ಅನುಕರಣಾವ್ಯಯ : ಅಸುರಂ ಗದೆಯಿಂ ತಿಬ್ಬಗೆ ತಿರುಪಿದೊಡೊಡನೆ ತಿರುಗುಗುಂ ಭೂಚಕ್ರಂ (ಜಗವಿ. ೯-೬೩). [ ತಿಬ್$_0$ + – ಅಗೆ$_2$ ]

**ತಿಬ್ಬನೆ**, ತಿರ್ರನೆ (ಅ). ೧. = ತಿಬ್ಬಗೆ : ಬಾಣಗಳ್ಪಂದರಿಗಳನೆತ್ತಿ ತಿಬ್ಬನುದ್ದದೊಳು ತಿರುಗಿಸಿ (ಜಂಪ್ರಸಾಂ. ೮-೫೨). **ತಿರ್ರನೆ** : ೨. ಶೀಘ್ರವಾಗಿ; ವೇಗವಾಗಿ : “ ತಿರ್ರನೆನೆ ತಿಬ್ಬನೆನೆ ಶೀಘ್ರವಾಚಿಯಕ್ಕು ” (ಕಕರ. ೪೩).

ತಿಬ್ಬನೆತಿರಿ=ಗಿರ್ರನೆ ಸುತ್ತು,—ಅಲೆ: ಆ ಗಾಲಿಯುಂ ಪದಿನಯ್ದುದಿವಸಂ ಬರೆಗಂ ತನಗೆ ತಾನೆಯಂತರಿಕ್ಷದೊಳ್ ನೆಲನಂ ಮುಟ್ಟದೆ ತಿಬ್ಬನೆ ತಿರಿಯುತ್ತಿರ್ದುದಂ ಕಂಡು (ವಡ್ಡಾರಾ. ೦೪೭-೦೫) ; ತಿರಿಪಿದೊಡದನೆಳೆ ತಿಬ್ಬನೆ ತಿರಿದುದು ತಿರುವಾಯೊಳಿಡೆ ಸುರರ್ ಮೊಱೆಯಿಟ್ಟರ್ (ಪಂಪಭಾ. ೧೩-೦೯೨) ; ಕುಧರ್ಮೋಪದೇಶದಿಂ ಸಂಸಾರಚಕ್ರದೊಳ್ ತಿಬ್ಬನೆ ತಿರಿದು (ಜಾಪುಂಪು. ೫೦-೨೮) ; ಸಂಸಾರದೊಳಗೆ ತಿಬ್ಬನೆ ತಿರಿವಯ್ (ಅಜಿಪು. ೨-೬೦) ; ಕರಟದ ಕದಿರಂತೆ ತಿರ್ಯಗ್ಗಾತಿಯೊಳ್ ತಿಬ್ಬನೆ ತಿರಿದುಂ (ಧರ್ಮಾಮೃ. ೭-೦೭೫). **ತಿಬ್ಬನೆ ತಿರಿಪು, ತಿಬ್ಬನೆ ತಿರುಹು** = ಗಿರ್ರನೆ ಸುತ್ತುವಂತೆ ಮಾಡು ; ಅಲೆಯುವಂತೆ ಮಾಡು : ಕೌಂತೇಯರಂ ಮಚ್ಚರದಿಂ ಕಾಂತಾರದೊಳ್ತಿಬ್ಬನೆ

ತಿರಿಪಿದ ಸೊರ್ಕಿಂಗಳೇನಾದುದು (ಗದಾಯು. ೬-೧೪) : ತಿಟ್ಟನೆ ತಿರಿಪಿದವಂ ಸುತ್ತಿವಂ ಪಮುತ್ತಿವಂ ಸಂಗರದೊಳ್ (ಎಕ. VIII, ಸಾಗರ. ೧೧೯-೫೫: 1042): ಗಜ್ಜನೆ ಪರಿತಂದು ಮಾಣದಚ್ಚುಳಕೋಲಿಂ ತಿಟ್ಟನೆ ತಿರಿಪಿ ದುರಾತ್ಮರ್ ...ಬಡಿದರ್ (ಧರ್ಮಾಮೃ. ೩-೧೪೦) : ಸಟ್ಟನೆ ಸೀಳ್ವ ದಿಗ್ಗಜದ ಮಂಡೆಯ ಮೆಟ್ಟಿ ಸುಟ್ಟನೆ ಸುರಿವೆನೇಳ್ಗಡಲ ತಿಟ್ಟನೆ ತಿರುಹುವೆ ಧರಣಿಯ (ಪಂಪಭಾ. ೧೨-೧೦). ತಿಟ್ಟನೆ ತಿರುಗು, ತಿರ್ರನೆ ತಿರುಗು=ತಿಟ್ಟನೆ ತಿರಿ: ಆನುಂ ತೊಡೆಯಡೆಯೊಳಿರ್ದೊಡಸಂದು ಸುಟ್ಟುರಿಯ ತಪಗೆಲೆಯಂತೆ ತಿಟ್ಟನೆ ತಿರುಗಿ ಬೀಳ್ವಲ್ಲಿ (ಕಾದಂಪೂ. ೧೮೫) ; ಕರಟದ ಕದಿರಂತೆ ತಿಟ್ಟನೆ ತಿರುಗುತ್ತುಂ (ಧರ್ಮಾಮೃ. ೨-೧೦೨): ವಿಸುಗುವ ಡಮರುಗ ಢಂ ಢುಂ ಡಣಲೆನೆ ತಿಸುಳದಿ ಹರಿಯುವ ತಾರಂ ತಿಟ್ಟನೆ ತಿರುಗುತ್ತಿರೆ (ಕಂಬರ. ಹ. ೨೫೪-೬); ಕರಹತಿಗೆ ಧಡಧಡಿಸಿ ತಿಟ್ಟನೆ ತಿರುಗಿ ಬೀಳುತ (ಶಬ್ದಾರ್ಥ. ೬-೫೯) ; ನಭೋಗ್ರದಲಿ ರಥದ ಗಾಲಿ ತಿಟ್ಟನೆ ತಿರುಗುತಿರ್ದವು (ತೊರರಾ. ೩-೬-೦೩) ; ದೈತ್ಯ ಪೀತಾಂಬರನ ವೊಮ್ಮನನೆಚ್ಚು ಕೆಡಹಿದ ಭೂತಲ ತಿಟ್ಟನೆ ತಿರುಗೆ (ಪಂಪಭಾ. ೩೫-೯೬) ; ಶನಿಗ್ರಹಕ್ಕೆ...ತನ್ನ ಅಕ್ಷದ ಮೇಲೆ ತಾನೊಂದು ಬಾರಿ ತಿರ್ರನೆ ತಿರುಗುವುದಕ್ಕೆ ಕೇವಲ ೧೦ ಗಂಟೆಗಳಾದರೆ ಸಾಕು (ಆಕಾಶ. ೨೪). ತಿಟ್ಟನೆಯ್ದುರ್=ವೇಗವಾಗಿ ಬರು : ಚತುರಂಗಂ ಚತುರಂಗಸೈನ್ಯದೊಳಡು [ರ್ತು೦] ತಿಟ್ಟನೆಯ್ದುಂದು ತಾಗಿ ತಡಂಮೆಟ್ಟದೆ ಕಾದೆ (ಪಂಪಭಾ. ೧೧-೬) : ಮಿಂಚಂ ತಟ್ಟೈಸಿದ ಕಾರ ಕಾರ್ಮುಗಿಲಂತೆ ತಿಟ್ಟನೆಯ್ದುರ್ಪ ದಮಿತಾರಿಯಂ ನೋಡಿ (ಶಾಂತಿಪು. ೪-೫೨ವ). [ತಿಟ್ $_{0}$ + – ಅನೆ $_{1}$]

ತಿಟ್ಟಿಲೂರ್ (ನಾ). ಒಂದು ಊರಿನ ಹೆಸರು : ಬಿನಯಾದಿತ್ಯರಸರ್ ಕೊಚೆಕುನ್ನಾಳ್ಕೆ ಮೂನೂಱು ಆಳುತ್ತಿಟ್ದು ತಿಟ್ಟಿಲೂರ ತಾಯನ್ದೆಯರ ಪೂರ್ವ್ವಜರಾ ಪಡದೊದು ಉತ್ತಮಮೆಣ್ಣೆ ಎಮ್ಮಾ ಕಟನಿ (ಎಕ. XI (೩). ಹೊಳಲ್ಕೆ. ೧೯೦-೪ : 800). [ ? + ಊರ್]

ತಿಟ್ಟಮ್ಮ (ನಾ). ಒಬ್ಬಾತನ ಹೆಸರು : ಸಡಗರರ ತಿಟ್ಟಮ್ಮಂ ವಿಕ್ರಮಮೆಂಬ ವರ್ಷದೊ[ಳ್] ಗೋಶಹಶ್ರಮಿಟ್ಟೊ[೦] ಪೂದಾರುಂ ಬೆಳೆವತ್ರರುಂಗೊಟ್ಟೊ[ನ್] (ಸೌಇಇ. XX, ೧೬-೩ : 930). [ ? + ಅಮ್ಮ $_{1}$ ]

Δ ತಿಟ್ಟು 'ತಿರ್ದು $_{1}$' ನೋ.

ತೀಂಗಿಡಿಸು (ಕ್ರಿ). ನವೆಯನ್ನು ನಿವಾರಿಸು, – ಕಳೆ : ಕೋಡನಿಟ್ಟು ತೀಂಗಿಡಿವುವ ಕರ್ಣತಾಳದಲರಿಂ ಬೆಮರಾಱಿಪ ಕೆಯ್ಯುಮೊಪ್ಪೆ ಬಳ್ಳಿಡಿಪಿಡಿದಿರ್ದುದಂಗಜನ ಕಯ್ಪಿಡಿಯಂ ಪಿಡಿಯಂ ಮತಂಗಜಂ (ಪುಷ್ಪಪು. ೫-೮೦).

[ ತೀನ್ + ಕಿಡಿಸು (<ಕಿಡಿಸು $_{1}$) ]

ತೀಂಟು, ತೀಟು, ತೀಡು $_{1}$ (ಕ್ರಿ). ೧. ಮುಟ್ಟು ; ತಾಕು ; ತಗಲು : ಉಚ್ಚಳಚ್ಚೀಕರತತಿ ನಭವಂ ತೀಂಟುವನ್ನಂ . . . ಶೋಭಿಸುವುದು ಮಣಿಮಾಲಾಂಶುಭದ್ರಂ ಸಮುದ್ರಂ (ಕುಸುಮಾ. ೧-೨೨). ತೀಟು : ೧. ಆರು ಮಿಾಟುವರನ್ನ ತೋಟಿಯನಿಂತು ಕಾಣದ ಕೈಯಲಿ ? ಆರು ತೀಟುವರನ್ನ ಬಾಗಿಲನಿಂತು ಕೀಳದ ಕರೆಯಲಿ ? (ಕವಿಕ. ೮೫-೬). ತೀಡು $_{1}$ : ೧. ಗಾಡಿ ಒಂದು ಸಾರಿ ಬಲವಾಗಿ 'ಜಟಕ' ಹಾಕಿದಾಗ ನಾಗವೇಣಿಯ ಮೂಗು ಶಂಕರನ ಹೆಗಲಿಗೆ ತೀಡಿತು (೧೦ಕಾ. ೨೩). ೨. (ಗಾಳಿಯಂತೆ) ಬೀಸು; ಸುಳಿ: "ತೀಡು– ವಾಯು ಸ್ಪರ್ಶನೇ" (ಶಮದ) ; ಹರಿಚಂದನ ಕಾಳಾಗರು ಮಲಯಜ ತು ರು ಷ್ಕಾ ದಿ ಗ ಳ ಕಂಪು ಬಂದು ತೀಡಿದೊಡೆ (ವಡ್ಡಾರಾ. ೫೫-೩) ; ನೀಂ ಮೆಲ್ಲಮೆಲ್ಲನೆ ಮಂದಾನಿಳ ತೀಡು ಕೋಗಿಲೆ ಸರಂದೋಱು (ಆದಿಪು. ೧೨-೪೪) ; ಭ್ರಮರರವಂಗಳೊಳ್ ಬೆರಸಿ ಮಾರುತನೊಯ್ಯನೆ ಬಂದು ತೀಡಿದತ್ತು (ಕಾದಂಪೂ. ೬೩೩) ; ತೀಡಿತ್ತು ಬಂದು ಮಂದಸಮಿಾರಂ (ಪಂಚಾಮಾ. ೦೬-೮೩) ; ಲೋಭದ ಗಾಳಿ ತೀಡದು ಮೋಹಕೆ ತೆಱಹಿಲ್ಲ (ಬಸವ. ೮-೫೩) : ತಾವರೆಯ ತನಿಪರಿಮಳದ ವಿಸರದ ಹೆಸರದಲಿ ತೀಡಿದುದು ತಂಗಾಳಿ (ತೊರರಾ. ೨-೬-೩);

ಪರಿಪರಿ ಕ ಜ್ಞಾ ಯ ಗ ಳ ಪರಿಮಳದಿಂಪು ಬೀದಿಯೊಳೆಡೆಯಾಡುತಿಪ್ಪರ ಮುಖಾಬ್ಜಕೆ ತೀಡುತಿಹುದು (ಕಂಸವಿ. ೬-೩೦).

[ ದೇ.೩ ತಮಿ. ತೀಣ್ಡು ; ಮಲ. ತೀಣ್ಡು ; ಕೊಡ. ತೀಂಡ್ ]

ತೀಂಟೆ $_{1}$, ತಿಂತಿ, ತಿಂತೆ, ತೀಂತೆ, ತೀಟ್ಟ, ತೀಟೆ (ನಾ). ೧. ನವೆ ; ಕಡಿತ; ತಿಮಿರು; ತುರಿಕೆ : "ಕಂಡೂಃ–ತೀಂಟೆ" (ಕಾಶಕ. ೨೫); ಮದಕರಿ ತೀಂಟೆಗೊಲ್ದೊರಸೆ ಭೂರುಹಕಂಧರದೊಳ್ ಜಗಿಲ್ತು ಪತ್ತಿದ ಮದಸೌರಭಕ್ಕೆ ಸುಳಿಗೊಳ್ಳಳಿಮಾಲೆ (ಕುಸುಮಾ. ೦೪-೦೨೦); ಸುರಾಸುರಾವಳಿಗಳ ಮಹಾಗರ್ವವೆಂಬ ತೀಂಟೆಯ ತೀರ್ಚುವಾ . . . ನೆವದೊಳ್ (ವೀರಶೈಪು. ೨-೩-೫): ಪುಲ್ಲಂ ಮೇಯಲೆಳಸಿ ಬಂದು ಮೆಯ್ಯ ತೀಂಟೆ [ಪಾಠಾಂ. ತಿಂಟೆ, ತಿಂತಿ ]ಗೆ ಪುಲಿ ಪೊರಳ್ದು ಪೋದ ತಾಣದೊಳ್ ನಿಂದು . . . ಹಮ್ಮದಂಬೋದ ಹರಿಣಂಗಳಂ (ರಾಜಶೇ. ೫-೩೩ವ). ೨. ಚಾಪಲ್ಯ; ತೀವ್ರವಾದ ಆಸೆ, —ಅಪೇಕ್ಷೆ : ಪುಲಿಯಂ ತೊಟ್ಟನೆ ಕಂಡು . . . ಪಾಯ್ದು ಪೊಯ್ದು ಕೋಡಿಟ್ಟು ಜಳ್ಳಿಸಿ ಬಿಸುಟ್ಟು ಸೊಸಲ ತೀಂಟೆ ತೀರದೆ ಕೊಣಕಿಟ್ಟು (೧೧೪. ೦-೦೨೮ವ) ; ಖಡ್ಗಪಾಯ್ದಣೆಯ ನಿಜಭುಜದ ತೀಂಟೆ ಹರೆಯೆ ಹಗೆಗಳ ಕೊಂದು (ಹಹಕಾ. ೧೧-೧೪). 'ನಾಲಗೆದೀಂಟೆ' ಪರಾ. ತಿಂತಿ: ೧. ಮೆಯ್ಯೊಳೋರಂತಮರ್ದ ಕುಷ್ಠಾಮಯದ ತಿಂತಿಯಂ ತುಱಿಸುತ (ಶಬ್ದರಾ. ೪-೬೪). ತಿಂತೆ : ೩. (ಅಲಂ) ನಾಲಗೆಯ ತುರಿಕೆ ; ಬೇರೆಯವರನ್ನು ನಿಂದಿಸಬೇಕೆಂಬ ಲವಲವಿಕೆ, – ಆತುರ : ಜಗಳವ ಹತ್ತಿಸುವೆನೆಂದು ಚಿಂತಿಸುವ ಮನ ಕೊ ೦ ಡ ಯ ಕೈ ಳ ಸಿ ಗದಗದನೆ ತಿಂತೆ [ಪಾಠಾಂ. ತಿ] ಮಸಗುವ ಬಾಯಿ (ಸೋಮಕ. ೦-೨೯) ; ಬಾಯಿ ತಿಂತೆ [ಪಾಠಾಂ. ತಿ] ಪರೆವಂತೆ ಪೊಗಳುತ ನೇಹದಿಂ ನೋಡುತಿರ್ಪಾಗಳ್ (ಶಬ್ದರಾ. ೩-೬೨). ತೀಂತೆ : ೨. 'ನಾಲಗೆತೀಂತೆ' ಪರಾ. ತೀಟ್ಟ : ೧. ಆ ಕುಣಿಕೆಯ ತೀಟದಿಂದೊಮ್ಮೆ ಅಶ್ವಮಂದ ಪಂಸರದಲ್ಲಿ ಅಲೆಯುತ್ತಿದ್ದನು (ನಾಡೋಜ. ೪). ತೀಟೆ : ೧. ಮೇಣೊಂದನೊಂದೊದೆದು ಹೊಂದಣ ಮಿರಂಗಳಂ ಮಾಣದಡಿಗಡಿಗೆ ಕಂದದ ತೀಟೆಗಳ ತೀಡಿ . . . ಬಿಱುಗೊಂಡವು (ಪ್ರಮಿಳಾ. ೨೫-೮) : ಪೀಠ ಮೂಢಗೆ ಹೊಲ್ಲ ತೀಟ ನಿದ್ದೆಗೆ ಹೊಲ್ಲ ತೀಟೆಯದು ಹೊಲ್ಲ ಕಜ್ಜಿಯ (ಸರ್ವಜ್ಞ. ೬೨೦): ಕೂರ್ಮಾವತಾರ ಮಾಡಿದ ಸ್ವಾಮಿಯು ಬೆನ್ನಿನ ತೀಟೆಯ ನಿವಾರಿಸುವನ: (ಕೀಚಕ. ೨೫-೩೨); ಮಂಡೆಯ ತೀಟೆ, ಸೀನು . . . ಇವು ಜ್ವರ ಬಡುವವನ ಲಕ್ಷಣ (ವೃದ್ಧಸಾ. I, ೪೯). ೨. ಭಕ್ತರಿಗೆನ್ನ ಕೈಗಳ ತೀಟೆ ಹೋಗಲ್ಕೆ ತೊತ್ತಾಗಿಲಸಂಗೆಯ್ಯಲನುವಾಯಿತ್ತೆನುತ (ಬಸಪು. ೨೦-೬) ; ತೋಳ ತೀಟೆಯನವನ ನೆತ್ತಿಯ ಮೇಲೆ ಕಳೆವೆನು (ಶಬ್ದಾರ್ಥ. ೦-೬೦) ; ನಿನ್ನ ಯುದ್ಧದ ತೀಟೆಯನ್ನು ತೀರಿಸಿಬಿಡುತ್ತೇನೆ (ನಟಧಾ. ೩೦೬). ೪. ಬೆದೆ ; ನಸೆ : ಆ ತೀಟೆ ತೀರಿಸಿಕೊಳ್ಳುವ ಅಭಿಲಾಷೆಯಿಂದ ಅವನು ಪಾತರ ಪಾರಿಯನ್ನು ಸಂಧಿಸಬಹುದಾಗಿತ್ತು (ದೀಪಹ. II, ೧೯೨) : ತೀಟೆಗೆ ಮಕ್ಕಳ ಹೆತ್ತು ತಿರುಮಲದೇವರ ಹೆಸರಿಟ್ಟ ಹಾಗೆ (ಗಾದೆ). ೫. ಕೀಟಲೆ ; ಚೇಷ್ಟೆ ; ತಂಟತನ: ನನ್ನ ತಮ್ಮ ತೀಟೆಯವ (ಚಂಗೂರಿ. ೧೯೦). ೬. ಕೋಟಲೆ; ತೊಂದರೆ ; ಪೀಡೆ : ಇನ್ನೊಂದು ವರ್ಷದ ತನಕ ತೀಟೆ . . . ತಪ್ಪಿತು (ನನ್ನೂರು. ೦೪೮). ೭. ಅಗತ್ಯ ; ಆವಶ್ಯಕತೆ : ಅಲ್ಲಿಗೆ ಬರೋಕೆ ನನಗೇನು ತೀಟೇನೆ ? (ಮುನಿಮಾ. ೮೦) : ತೀಟೆಯಾದರೆ ತಾನೇ ಬರುತ್ತಾನೆ (ರೂಢಿ).

[ ದೇ.೩ ತೆಲು. ತೀಟ, ತೀಂಟ್ರ ]

ತೀಂಟೆ $_{2}$ 'ತಿಟ್ಟು' ನೋ.

ತೀಂಟೆತ್ತು (ಕ್ರಿ). ನವೆಯುಂಟಾಗು ; ತುರಿಕೆಯಾಗು : ಏರಿದುಂ ತೀಂಟೆತ್ತಿ ಗಂಡಸ್ಥಳಮನನುದಿನಂ ಕಾಡ ಸೊಕ್ಕಾನೆಗಳ್ಪಂದೊರಸಲ್ (ಕಾದಂಪೂ. ೨೨೨).

[ ತೀಂಟೆ $_{1}$ + ಎತ್ತು $_{1}$ ]

ತೀಂತೆ 'ತೀಂಟೆ $_{1}$' ನೋ.

**ತೀಂತೇರಾ** 'ತೀನತೇರ' ನೋ.

**ತೀಕು** 'ದೇಕು' ನೋ.

**ತೀಕ್ಷ್ಣ** (ಗು). ೧. ಚೂಪಾದ; ಹರಿತವಾದ: ಸುರಶರಾಸನದಂತೆ ನಿರ್ಗುಣರುಂ ತೀಕ್ಷ್ಣಕೌಕ್ಷೇಯದಂತೆ ನಿಸ್ತ್ರಿಂಶಭಾವರುಂ (ಸುಕುಮಾ. ೨-೩೭); ಉತ್ಪಾತ ತೀಕ್ಷ್ಣಕೌಕ್ಷೇಯಕಸನಾಥಶಯನ ಪಾರ್ಶ್ವಭಿತ್ತಿಭಾಗಮುಂ (ಚಂದ್ರಪ್ರ. ೩-೯೭ ವ). ೨. ಬಿಸುಪಾದ; ಉಷ್ಣವಾದ. 'ತೀಕ್ಷ್ಣಾಂಶು' ಪರಾ. ೩. ಕ್ರೂರವಾದ; ನಿರ್ದಯವಾದ: ಅನ್ನೆಗಮಿತ್ತ ವಿಭೀಷಣಾ ದೇಶದಿಂಬಂದ ತೀಕ್ಷ್ಣಪುರುಷರ್ ಪುರಮಂ ಪೊಕ್ಕು (ಹಂಪಾಮಾ. ೩-೩೭ವ); ತನ್ನಂ ಕೊಲಲರಸನಟ್ಟಿದ ತೀಕ್ಷ್ಣಪುರುಷಂ ಬಂದು (ಹಂಪಾಮಾ. ೧೧-೯೩ ವ). ೪. ಕಟುವಾದ; ಖಾರವಾದ. ೫. ಬಲವುಳ್ಳ; ಶಕ್ತಿಯುಳ್ಳ. ೬. ತವಕಿಸುವ; ಆತುರವುಳ್ಳ. (ನಾ). ೭. ಹರಿತವಾದುದು; ಚುರುಕು: "ತಿಕ್ಕೆನೆ ತೀಕ್ಷ್ಣಂ" (ಕವಿಶಂ. ೩೪); ಅವನ ಕಣ್ಣು ಹದ್ದಿನ ಕಣ್ಣಿನ ಹಾಗೆ ಬಲು ತೀಕ್ಷ್ಣ (ಮುಂಬಯಿ. ೪-೯೩); ಅವಳ ಬುದ್ಧಿ ತೀಕ್ಷ್ಣ (ಮುಕಿನಾ. ೧೫). ೮. ಉಷ್ಣತೆ; ಬಿಸಿ: "ತಿಗ್ಮಂ, ತೀಕ್ಷ್ಣಂ, ಖರಂ–ಈ ೩ ಬಿಸಿಯ ಹೆಸರು" (ಸಿದ್ಧಾಂತಿ. ೩೩) ೯. ಕಠಿನವಾದುದು; ನಿಷ್ಠುರವಾದುದು: "ತೀಕ್ಷ್ಣಂ ಪರುಷಾಹ್ವಯಂ" (ನಾನಾರ. ೧೨೦). ೧೦. ತೀವ್ರತೆ. ೧೧. ಉಗ್ರತೆ. ೧೨. ಆಯುಧ. ೧೩. ವಿಷ; ನಂಜು: "ಬ್ರಹ್ಮಪುತ್ರಃ ... ತೀಕ್ಷ್ಣಃ–ಈ ೭ ವಿಷಂ" (ಹಲಾಯು. ೦೦೭-೨೪); "ರಸಂ ತೀಕ್ಷ್ಣಪ್ರದೀಪನ ಮದೋರಂತೆ ವಿಷಮಕ್ಕು" (ಮಂಗರಾ. ೦೨೯-೩). ೧೪. ಕಬ್ಬಿಣ; ಉಕ್ಕು: "ಶಸ್ತ್ರಂ, ತೀಕ್ಷ್ಣಂ, ಅಯಃ, ಪಾರಸವಂ–ಈ ೪ ಉಕ್ಕು" (ಹಲಾಯು. ೨೪-೦೭). ೧೫. ಕಾಳಗ; ಯುದ್ಧ. [ಸಂ.]

**ತೀಕ್ಷ್ಣಗಂಧಕ** (ನಾ). ಒಂದು ಬಗೆಯ ಮರ; ನುಗ್ಗೆ: "ಶೋಭಾಂಜನಃ, ಶಿಗ್ರುಃ, ತೀಕ್ಷ್ಣಗಂಧಕಃ...ನುಗ್ಗೆಮರದ ಹೆಸರು" (ಸಿದ್ಧಾಂತಿ. ೦೦೫). [ಸಂ.]

**ತೀಕ್ಷ್ಣಗು** (ನಾ). ಬಿಸುಪಾದ ಕಿರಣಗಳುಳ್ಳವನು; ಸೂರ್ಯ: ವಿಟನೆಯ ಗೇಹಂ ಕನ್ನೆಯಾದಂಶು... ತೀಕ್ಷ್ಣಗು ಲಗ್ನಸ್ಥಿತನಾಗೆ ಪಣ್ಣ ಕತದಿಂ ಸಾಯ್ಗುಂ ನಿದಾಘಾಸದೊಳ್ (ಜಾತತಿ. ೨೩-೮). 'ತೀಕ್ಷ್ಣಗುಜ' ಪರಾ. [ಸಂ. (ತೀಕ್ಷ್ಣ + ಗೋ + –)]

**ತೀಕ್ಷ್ಣಗುಜ** (ನಾ). ಸೂರ್ಯನ ಮಗ; ಶನಿ: ಪಗಲೊಳ್ ತಂದೆ ದಿವಾಕರಂ ಜನನಿ ಶುಕ್ರಂ ರಾತ್ರಿಯೊಳ್ ತಂದೆ ತೀಕ್ಷ್ಣಗುಜಂ ಮಾತ್ರ ಸುಧಾಮರೀಚಿ (ಜಾತತಿ. ೩-೬). [ಸಂ.]

**ತೀಕ್ಷ್ಣಗೊಳಿಸು** (ಕ್ರಿ). ಉಜ್ವಲವಾಗುವಂತೆ ಮಾಡು; ಹರಿತಗೊಳಿಸು: ಯಾವುದರ ಮೇಲೆ ಗಮನವಿಡಬೇಕೋ ಅದರ ಹೊಳಪು, ಬಣ್ಣ, ಆಕಾರ, ಶಬ್ದ ಮುಂತಾದ ಗುಣಗಳನ್ನು ತೀಕ್ಷ್ಣಗೊಳಿಸುವುದರಿಂದ ಮಕ್ಕಳ ಅವಧಾನ ಅದರ ಕಡೆ ಚೆನ್ನಾಗಿ ಬೀಳುತ್ತದೆ (ಶಿಕ್ಷಣ. ೪೭೮).

[ತೀಕ್ಷ್ಣ + ಕೊಳ್$_1$ + – ಇಸು$_1$]

**ತೀಕ್ಷ್ಣತೆ** (ನಾ). ಚುರುಕು: ಗಮನ ವಿಸ್ತರಿಸುವ ಪರಿಮಾಣಕ್ಕೆ ವಿಲೋಮವಾಗಿ ಅದರ ತೀವ್ರತೆ ತೀಕ್ಷ್ಣತೆಗಳು ಕಡಿಮೆಯಾಗುತ್ತವೆ (ಶಿಕ್ಷಣ. ೩೧೪); ಸಹಜವಾದ ದೃಷ್ಟಿಯ ತೀಕ್ಷ್ಣತೆ ಎಂದರೆ... ಓದುವ ಚಾರ್ಟಿನ ಸಾಲನ್ನು ಗುರುತಿಸುವ ಶಕ್ತಿ (ನಿಮ್ಮದೃ. ೬೩). [ಸಂ. ತೀಕ್ಷ್ಣತಾ]

**ತೀಕ್ಷ್ಣಧಾರೆ** (ನಾ). ಹರಿತವಾದ ಅಲಗುಳ್ಳ ಕತ್ತಿ: ಸಾಲದೀವಿಗೆಗಳನು ಶಸ್ತ್ರಜ್ವಾಲೆ ಮಿಕ್ಕವು ತೀಕ್ಷ್ಣಧಾರಾಭೀಳವಿಕ್ರಮವಿಸ್ಫುಲಿಂಗಿತ ವಾದವಡಿಗಡಿಗೆ (ಕುಮಾ್ಯ. ೮-೬). [ಸಂ. ತೀಕ್ಷ್ಣಧಾರಾ]

**ತೀಕ್ಷ್ಣಬುದ್ಧಿ** (ನಾ). ೧. ಚುರುಕಾದ ಬುದ್ಧಿ; ಹರಿತವಾದ ಬುದ್ಧಿ: ವಿಜ್ಞಾನಿಗಳಲ್ಲಿ ವಿಚಾರಪರತೆ, ತೀಕ್ಷ್ಣಬುದ್ಧಿ ... ಇಂತಹ ಹಲವು ಉತ್ತಮಗುಣಗಳಿದ್ದರೂ (ಹುಕ್ಕಾರಿ. ೨೭ ಹಿಂಡಿ). ೨. ಚುರಂಕಾದ ಬುದ್ಧಿಯುಳ್ಳವನು. [ತೀಕ್ಷ್ಣ + ಬುದ್ಧಿ]

**ತೀಕ್ಷ್ಣಮತಿ** (ನಾ). ೧. ಚುರುಕಾದ ಬುದ್ಧಿ: ಈ ಸಣ್ಣ ವಿಷಯ ನಿನ್ನ ತೀಕ್ಷ್ಣಮತಿಗೆ ಹೊಳೆಯಲಿಲ್ಲವೆ? (ಉಂ). ೨. ಚುರುಕಾದ ಬುದ್ಧಿಯುಳ್ಳವನು: ನೆಕ್ಕಿದೋವ್ ತೀಕ್ಷ್ಣಮತಿಯೆಂದು ಗಣ್ಯನಾಗಿದ್ದುದರಿಂದ ... ಅವಳ ಆಪ್ತವರ್ಗದಲ್ಲೊಬ್ಬನಾಗಿದ್ದನು (ಪುನರು. ೧೩೦): ಪ್ರತಿಯೊಂದು ಹೊಸಗ್ರಂಥವನ್ನು ತೀಕ್ಷ್ಣಮತಿಯಾಗಿ ತೀವ್ರಗತಿಯಿಂದ ಅವಲೋಕಿಸಬೇಕು (ಗ್ರಂಥಾಲ ೬೯). [ತೀಕ್ಷ್ಣ + ಮತಿ]

**ತೀಕ್ಷ್ಣಾಂಶು** (ನಾ). = ತೀಕ್ಷ್ಣಗು: ತೀಕ್ಷ್ಣಾಂಶುವಿಂ ಸೌಮ್ಯನಿಂ ತ್ವರಿತಂ ಶುಕ್ರನೆ ಮಿಕ್ಕು ಪೋಗೆ ಮುಜುಗಳ್ ಕೊಳ್ಗುಂ ಧರಾಚಕ್ರದೊಳ್ (ಅಟ್ಟದು. ೭-೦೨೪). [ತೀಕ್ಷ್ಣ + ಅಂಶು]

**ತೀಕ್ಷ್ಣಾಗ್ನಿ** (ನಾ). ಜಠರಾಗ್ನಿಯ ನಾಲ್ಕು ಸ್ಥಿತಿಗಳಲ್ಲಿ ಒಂದು; ಪಿತ್ತಾಗ್ನಿಯಿಂದ ಉಂಟಾಗುವ ಉಷ್ಣ: ತೀವ್ರವಾದ ಜಠರಾಗ್ನಿ ವಿಷಮಾಗ್ನಿಯಲ್ಲಿ ವಾತಹರ ಚಿಕಿತ್ಸೆಯನ್ನೂ, ತೀಕ್ಷ್ಣಾಗ್ನಿಯಲ್ಲಿ ಪಿತ್ತಶಮನ ಕ್ರಿಯೆಯನ್ನೂ ಮಾಡುವುದು (ಸಕವ್ಯ. ೦೬). [ತೀಕ್ಷ್ಣ + ಅಗ್ನಿ]

**ತೀಕ್ಷ್ಣಾಪಾಂಗ** (ನಾ). ಮೊನಚಾದ ಕಟಾಕ್ಷ: ತಿಮಿರರುಚಿಕುರಂ ತೀಕ್ಷ್ಣಾಪಾಂಗಂ ಘನಂ ಜಘನಸ್ಥಳಂ ಕಮಳಚರಣಂ ಕಣ್ಗೊಪ್ಪಿತ್ತಾ ಧರಾಧಿಪಕಾಂತೆಯಾ (ರಾಜಶೇ. ೩-೧೮). [ತೀಕ್ಷ್ಣ + ಅಪಾಂಗ]

**ತೀಕ್ಷ್ಣೀಕರಣ** (ನಾ). ಹರಿತಗೊಳಿಸುವಿಕೆ: "ತಿತಿಕ್ಷ–ಶಾತನೇ, ಕ್ರಮವಾಯಾಂಚ, ತೀಕ್ಷ್ಣೀಕರಣದೊಳಂ, ತಾಳ್ಮೆಯೊಳಂ, ದೀಪ್ತಿಯೊಳಂ" (ಶಾಶಕ್ಕ. ೯೭). [ಸಂ.]

**ತೀಕ್ಷ್ಣೀಕರಿಸು** (ಕ್ರಿ). ತೀಕ್ಷ್ಣಗೊಳ್ಳುವಂತೆ ಮಾಡು: "ತಿತಿಕ್ಷತೇ–ತೀಕ್ಷ್ಣೀಕರಿಸಿದಪಂ" (ಶಾಶಕ್ಕ. ೯೭). [ತೀಕ್ಷ್ಣೀಕರಣ + – ಇಸು$_1$]

**ತೀಕ್ಷ್ಣೋಪಾಯ** (ನಾ). ಪ್ರಬಲವಾದ ಉಪಾಯ; ಉಗ್ರವಾದ ಉಪಾಯ; ಕಟುವಾದ ಉಪಾಯ: (೬).

[ತೀಕ್ಷ್ಣ + ಉಪಾಯ]

**ತೀಕ್ಷ್ಣೌಷಧ** (ನಾ). ಕಟುವಾದ ಔಷಧ; ಕಹಿಯಾದ ಮದ್ದು: ಕೊಲು ತಿರ್ವಯ್ಯಗಳೋದು ಬೇನೆಯಳಿವಾ ತೀಕ್ಷ್ಣೌಷಧಂ...ಮುಂ ಪಲಕಷ್ಟಂ ಕಡೆಗೊಳ್ಳಿತ್ತೆ (ಸೋಮೇಶ.೯೭). [ತೀಕ್ಷ್ಣ + ಔಷಧ]

**ತೀಗ** 'ತಿಕ' ನೋ.

**ತೀಟ$_1$** (ನಾ). ೧. ಮೃದುವಾದ ಸ್ಪರ್ಶ,—ಸೋಂಕು: ತಿಳಿಪಲಡಿಗೆಬಗಿದೋವನ ತಳಂಗಳಾ ತೀಟದಿಂ ಪದಂಗಳೊಳೂಗಿದಾ ಪುಳಕಚಯಂಗಳ್ ಕಳಿದುವು ಮುಳಿಸಂ ನಲ್ಲಳ್ಗೆ (ಕವಿರಾ. ೩-೦೦೮); ಅಲರ್ದಲರ್ಗಣ್ಗಳ್ ನೋಟದೆ ಸುಲಲಿತ ತನು ಶಿಶುವ ಮೈಯ್ಯ ತೀಟದೆ ತನಗಗ್ಗಲಿಸಿದಲಂಪಂ ಕುಡೆ (ಆದಿಪು. ೭-೪೭). ೨. (ಗಾಳಿ) ತೀಡುವಿಕೆ; ಬೀಸುವಿಕೆ: "ತೀಟವೆಂದುಂ ತೀಡೆಂದುಂ ತೀಡುವುದೆಂದುಂ ಊದುವುದೆಂದುಂ ವಾಯುಸಂಚಾರಂ" (ಕಶಸಾ. ೩೧-೬೩೦); ಒದವಿ ಬಸಂತದೊಳ್ಪಯಸಿದಂದದ ತೆಂಬೆಲರೊಂದು ತೀಟವಿಲ್ಲದ ಸಹಕಾರವಲ್ಲರಿಯ ತೋರ್ಕೆಗವೊಪ್ಪುವ ಭೃಂಗಸಂಗವಿಲ್ಲದ ನವಪದ್ಮಿನೀಮುಕುಳದಿಕ್ಕೆಗವೆನೆ ನೆಱೆಯಾಗಿ ಶೋಭೆವೆತ್ತುದೊ ಪರಿಶೋಭೆವೆತ್ತಿರೆ ವಿಲಾಸದ ವಿಭ್ರಮದೇಟಗ್ಗೆ ಕನ್ನೆಯಾ (ಸುಕುಮಾ. ೫-೬೦); ದಿನಕರನ ಹಯಂ ಗಗನಾಧ್ವಖೇದಮಂ ಪಟಯಿಗೆಗಳ ತಣ್ಣೆಲರ ತೀಟದಿಂ ತೊಲಗಿಸುಗುಂ (ಹಂಪಾಮಾ. ೧-೦೦೬): ತೆಂಕಣಗಾಳಿಯ ತೀಟದಿ ವನತರುಸಂಕುಳ ಚಿಗುರೇಱುವಂತೆ (ಭರತ. ೫೫-೮೦); ಮರಗಳ ದಟ್ಟೈಸುವಿಕೆಯಿಂದ ತಂಗಾಳಿಯ ತೀಟಕ್ಕೆ ಅಡಚಣೆಯಾಗಿದ್ದರೂ ಅದರ ಕುಳಿರ್ಪು ಎಲ್ಲ ಕಡೆಯೂ ಹಸರಿಸಿತ್ತು (ಕಾನೂರು. ೪೨). ೩. ಚೇಷ್ಟೆ; ವಿನೋದ: ನಾಟಕಸತಿಯರಲ್ಲವೆ ನೀನು ತಾನೆಂದು ಚಾಟಾಗಿ ನುಡಿದರೆ ನೃಪಗೆ ತೀಟವೇಳುತಿದೆ ಸುಮ್ಮನೆ ನೋಡುತಿಹವಿವರಾಟವನೆಂದೆಣಿಸಿದರು (ಭರತ. ೦೪-೯೦). [<ತೀಡು$_1$]

**ತೀಟ್ಟ್₂** 'ತೀಂಟ್ಟೆ₁' ನೋ.

**ತೀಟಕಸಂದಿ** 'ತೀಟಕಸಿಂಧ' ನೋ.

**ತೀಟಕಸಂಧಿ** 'ತೀಟಕಸಿಂಧ' ನೋ.

**ತೀಟಕಸಿಂಧ, ತೀಟಕಸಂದಿ, ತೀಟಕಸಂಧಿ** (ನಾ). ತುರುಬೆಯ ಬಳ್ಳಿ; ನಸುಗುನ್ನಿಗಿಡ: ತೀಟಕಸಿಂಧ ಬೇರಿನ ನಾರು ಒಂದು ಹಿಡಿ...ಕುಡಿಯಲು ಬಹುಮೂತ್ರ ನಿಲ್ಲುವುದು (ಸಕವೈ. ಪರಿ. ೫೦೦). ತೀಟಕಸಂಧಿ: ತೀಟಕ ಸಂದಿಬೇರು, ದೆಲ್ಲವತ್ತದ ಬೇರು ಇವುಗಳನ್ನು ಸಮಭಾಗವಾಗಿ ಕಷಾಯವಿಕ್ಕಿ ಕೊಡಲು ಸನ್ನದಲ್ಲಿ ಬರುವ ಜ್ವರಂ ಗುಣಮಕ್ಕುಂ (ಸಕವೈ. ೦೦೦). ತೀಟಕಸಂಧಿ : "ಯಾಸಃ, ಯಾವಾಸಃ...೧೦ ತೀಟಕಸಂಧಿ ಹೆಸರುಗಳು" (ಸಿದ್ಧಾಂತಿ. ೦೦೬) ; ತೀಟಕಸಂಧಿಬೇರು, ಕಕ್ಕೇಪಟ್ಟೆ ಇವುಗಳ ಕಷಾಯವನ್ನು ಹಾಕಿ ತೆಗದುಕೊಳ್ಳಲು ವಾತಶ್ಲೇಷ್ಮ ಜ್ವರಪರಿಹಾರವಾಗುವುದು (ಸಕವೈ.೯೩). [← ತೆಲು. ತೀಟಕಸಿಂದ]

**ತೀಟಕೋಗಿಲ** (ನಾ). = ತೀಟಕಸಿಂಧ : ತೀಟಕೋಗಿಲಬೇರು, ತಳಸಿಂಗ ... ಧಾನ್ಯ ಪುಟವಿಟ್ಟು ಪ್ರಾತಃಕಾಲದಲ್ಲಿ ಒಂದು ದುಡ್ಡು ತೂಕ ಸೇವಿಸಿದರೆ (ಸಕವೈ. ಪರಿ. ೯೩೫). [← ತೆಲು. ತೀಟಕೋವಿಲ]

**ತೀಟು** 'ತೀಂಟು' ನೋ.

**ತೀಟೆ** 'ತೀಂಟ್ಟೆ₁' ನೋ.

**ತೀಟೆಗಾರ** (ನಾ). ೧. ಚಾಪಲ್ಯವುಳ್ಳವನು. 'ಬಾಯಿತೀಟೆಗಾರ' ಪರಾ. ೨. ಕುಚೇಷ್ಟೆ ಮಾಡುವವನು ; ಕೀಟಲೆ ಮಾಡುವವನು. [ತೀಟೆ (< ತೀಂಟ್ಟೆ₁) + – ಗಾರ (< – ಕಾಱ)]

**ತೀಟೆಜಗಳ** (ನಾ). ೧. ಕೀಟಲೆ ಜಗಳ. ೨. ಕೆಲಸಕ್ಕೆ ಬಾರದ ಜಗಳ ; ವ್ಯರ್ಥವಾದ ಜಗಳ : (ಆ). [ತೀಟೆ (< ತೀಂಟ್ಟೆ₁) + ಜಗಳ (< ಜಗಱ)]

**ತೀಡಿಸು** (ಕ್ರಿ). ಉಜ್ಜಿಸು ; ತಿಕ್ಕಿಸು ; ನೀವಿಸು : ನೋವು ಹೊರಟು ಹೋದ ನಂತರ ಕೈಕಾಲುಗಳನ್ನು ಚಲಿಸಬೇಕು. ಮಾಂಸಖಂಡಗಳನ್ನು ತೀಡಿಸಬೇಕು (ಕೆಪರಿಶೋ. ೪೮). [ತೀಡು₂ + – ಇಸು₃]

**ತೀಡು₁** 'ತೀಂಟು' ನೋ.

**ತೀಡ್ಡು₂, ತಿವುಡು₁** (ಕ್ರಿ). ೧. ಮಸೆ ; ಉಜ್ಜು ; ತಿಕ್ಕು ; ಹರಿತಮಾಡು : "ಧಾವನಂ ತೀಡುವುದೆನಿಕ್ಕುಂ" (ಮಂಗರಾ. ೧೦೦೦–೨೩) ; ದಾಡೆಗಳನಜು ಯೊಳಿಂಬಿಂ ತೀಡುತ್ತುಂ ತೀವ್ರವಾಗೆ ಬಂಡಿಯ ಬರವಂ ನೋಡುತ್ತಿರ್ದಾ ಬಕನಂ ... ಕಂಡು ಮುಳಿದಂ ಭೀಮಂ (ಪಂಪಭಾ. ೩–೨೮) : ತೀಡುತ್ತೆ ಕಲ್ಲಿಂದುರುದಂಷ್ಟ್ರಾಗ್ರಂಗಳಂ ಭೂಮಿಯನಿರದೆ ಬೆರಂಟುತ್ತೆ ಮುಂಗಾಲ್ಗ ಳಿಂದಂ (ಗಿರಿಕ. ೦.೦೦೫) ; ಕುಸುಮಶರಾಸ್ತ್ರಮಂ ಸಸಿಯ ಸಾಣೆಯೊಳೀ ಮಧುವೆಂಬ ಕಮ್ಮಟಂ ಮಸೆಯಲಿವೇಡಿ ತೀಡಿದನೋ (ಪಾರ್ಶ್ವಪು. ೯–೯೮) ; ಮುವ್ವೊನೆಯ ಸೂನಗೆಯ ಹೊಗರುಗಳ ತೀಡಿದರು (ಕುಮಾರ್ರಾಭೀ. ೪–೯೧) ; ಗಂಡ ಹೆಂಡಿರ ಜಗಳಾ ಗಂಧ ತೀಡಿಧಾಂಗ (ಗರತಿ. ೭೬) : ಚೌಕಟ್ಟಿನ ಮೇಲೆ ನೀರು ಹಚ್ಚಿ ಸಣ್ಣ ಹಲಗೆಯ ತುಂಡಿನಿಂದ ಅದನ್ನು ತೀಡುತ್ತಿದ್ದನು (ಕಪಪು. ೪–೦೬). ೨. ಅನುಲೇಪನಮಾಡು ; ಲೇಪಿಸು ; ಸವರು ; ಬಳಿ : ನಲ್ಲರ ಶಿವೆಗಾಗ ಪೂಮಾಲೆಗಳ ಸುತ್ತಿ ಮೆಲ್ಲದೆಗನುಲೇಪನವ ಸೆಳ್ಳು ಗುರೊಳು ತೀಡಿ (ಕಂನವಿ. ೨೫–೦೩೫) ; ಸವುತಿಯನು ಮೆಲುವ ನಾಲಗೆಗೆ ಸುಣ್ಣವನು ತೀಡಿ (ಕವಪು. ೮೨–೫). ೩. ರೇಖಿಸು; ಬರೆ : ವಿಶಾಲಫಾಲದಲ್ಲಿ ಗೀರುಚಂದನರೇಖೆ ತೀಡಿಕೊಂಡು (ದೀಪಕ. II, ೬೯). ೪. ನೇವರಿಸು; ನೀವು: ಆತನ ಸರಳ ಸಾರವಂ ನಾಲ್ಕೆಂಟು ಕೂರಂಬಿನಿಂ ಕಡಿದು ನಾರಿಯಂ ತೀಡುತೆ (ಜಬಪು. ೫೨–೩೪) ; ತೀಡಿದಂ ತಿರುವನೇಟಿಸಿ ಮಿಡಿದು ಚಾಪಮಂ ತಾಗಿದಂ (ಜೈಮಿಭಾ. ೦೨–೪೬) ; ಪಿಡಿದೆತ್ತಿ ತಲೆಯ ಕೊರಲ ತೀಡಿ ಕೈಗಳಂ (ಕಾಲೂರ. ೦೭೩–೩೦೭). ೫. ಒತ್ತು; ಅದುಮು : (ಆ). ೬. ಹೊಡೆ ; ಬಡಿ ; ಥಳಿಸು : ಕುದುರೆ ಲಗಾಮು ಜಗ್ಗಿಸಿ, ಚಾಪಟಿ ಯಿಂದ ತೀಡಿ ... ಕುಳಿತುಕೊಂಡನು (ಪುನರು. ೫೫೪); ಕೆನ್ನೆಗೆ ತೀಡಿ ಕೊಡ ದಿದ್ದರೆ ಹೇಗೆ (ಹುಚ್ಚುಹು. ೧೮) : ಅವನಿಗೆ ನಾಲ್ಕು ತೀಡು, ಆಗ ತಾನೇ ದಾರಿಗೆ ಬರುತ್ತಾನೆ (ರೂಢಿ). ೭. ಆರಿಸು ; ನಂದಿಸು : ಅಂತು ನೋಡೆ ನೋಡೆ ಗಾಳಿ ತೀಡಿದ ದೀಪ ರೂಪದಂದದಿಂ ಶಾರದನೀರದಾಕಾರದಂದ ದಿಂದದೃಶ್ಯಾಕಾರನಾಗಿ(ಸುಕುಮಾ. ೧೧–೮೭) ; ಸಿಡಿಲಂ ದುರ್ಗುವ ಶೇಷ ನಂ ತುಡುವ ಕಲ್ಪಾಂತಾಗ್ನಿಯಂ ತೀಡಿ ಬೊಟ್ಟಿಡುವ...ಗಣಾಧಿನಾಥರೊಡ ನೇಳ್ವೆಂದರ್ (ಕಬಕಂ. ೩–೦೯). ೮. ಉಂಟಾಗು ; ವ್ಯಕ್ತವಾಗು ; ಪ್ರಕಟ ವಾಗು : ಎಮಗೀಗ ಕೂಸಂ ಕಾಣಲೊಡವುತಿಸ್ನೇಹಂ ಮನಕ್ಕೆ ತೀಡಿದಪುದು (ಸುಕುಮಾ. ೬–೪) ; ಪದಾರ್ಥನಿಶ್ಚಯಂ ತನ್ನ ಮನಕ್ಕೆ ತೀಡೆ ಖಳಸಂಸರಣಕ್ಕೆ ವಿರಕ್ತಯಾಗಿ ... ತಾಳ್ದಿದಳಂದು ದೀಕ್ಷೆಯಂ (ಸುಕುಮಾ. ೮–೯೦). ೯. (ಉಕ) ಬರೆದುದರ ಮೇಲೆ ಬರೆ ; ತಿದ್ದು : ಮರುದಿನದಿಂದರಮಾ ಬಾಯರು ಕಾಗದದ ಮೇಲೆ ಎ.ಬಿ.ಸಿ.ಡಿ. ತೀಡ ಹತ್ತಿದರು (ಸಮಟೀ. ೨೨೪) ; ಅ ದಿಂದ ಜ್ಞದ ವರೆಗಿನ ಅಕ್ಷರಗಳನ್ನು ತೀಡ ಹಚ್ಚಿದರು (ಸ್ಮೃತಿಚಿ. ೦೨೦). ೧೦. ಸರಿಪಡಿಸು ; ಪರಿಷ್ಕರಿಸು : ಆಗಾಗ ಇದನ್ನು ತಿದ್ದಿ, ತೀಡಿ ... ಆಶೀರ್ವದಿಸಿದ್ದಾರೆ (ಸೌಂದಸ. ii, ಮೊದಲ ಮಾತು). ೧೧. ಉಂಟು ಮಾಡು ; ಉಂಟಾಗಿಸು : ಕೂಡಿ ವಿಟನದ ಬಟ್ಟೆ ಸುಖವನೆ ತೀಡುತಿರಲ್ (ಪ್ರಭುಲೀ. ೦೪–೩) ; ಸೂಡುವರ್ ಜಂತ್ರಮಂ ನೀರ್ ಸೂಸಲಾಡುವರ್ ತೀಡುವರ್ ನಗೆಯನಗಜೆಗೆ (ಜಬಪು. ೪೫–೫೯). ೧೨. ಹೊರಹೊಮ್ಮು ; ಹೊರಸೂಸು : ವಿಭೂಷಣಂಗಳೊಳ್ ತೀಡುವ ರಶ್ಮಿಗಳ್ ಮುಸುಳ್ದುವು (ಅದಿಪು. ೩–೩) ; ಮಣಿಮಯದ ಕಳಶದ ಝಾಡಿಪೆಳಗಿನ ಹೇಮರಸದಲಿ ತೀಡಿ ತೊಳಗುವ ಸುಧೆಯ ಸೊಂಪಿನ ಸೂಸಕಂಗಳಲಿ (ಕೊರಿರಾ. ೫–೨–೨೫) ; ರಸೋಕ್ತಿಗಳನಾಡುತ್ತ ತೀಡುತ್ತ ಬೆಳ್ನಗೆಯ ಬೆಡಗುಗಳನು (ಜೈಮಿಭಾ. ೩೦–೦೮) ; ಕಂಗೊಳಿಸುವ ದಿವ್ಯಕಾಂತಿಯ ತೀಡುತ ಬಂಗಾರಚೌಕಿಯೊಪ್ಪಿ ದುದು (ಕಂನವಿ. ೭–೩೮). ೧೩. ಇಚ್ಛಿಸು; ಬಯಸು : ಆಡುವರಂ ಕಂಡಾ ಡುವ ಪಾಡುವರಂ ಕಂಡು ಪಾಡುವಂದಾನಂದಕ್ರೀಡೆಗೆ ಮಘವನ ಬಗೆಯುಂ ತೀಡಿದುದೇಂ ಪಿರಿದೊ ಜನನ ಪುಣ್ಯಾತಿಶಯಂ (ಪುಷ್ಪಪು. ೧೨–೨೩). ೧೪. ಘರ್ಷಿಸು ; ತಾಕು : ಒಂದು ನುಡಿ, ಒಂದು ಕಿಡಿ–ಕೊನೆಗೆ ಕಾಟ್ಕಿಚ್ಚುರ್ : ಬೀರರಿರ್ವರ್ ತೀಡೆ, ಬಿದಿರ ಮೆಳೆಗಿಚ್ಚುರ್ (ಅಶ್ವತ್ಥಾ. ೯೩–೬೫೫). **ತಿವುಡು₁:** ೪. ಚಿಂದಿಯ ಮುರುಹಿಟ್ಟು ಧೋತ್ರವ ತಿವುಡುತ ಕುಂಡು ಪೆಚ್ಚರಿದು ಬಯಿವುತಲಿ ಸಂದ ಜಗಳ ಕಾಳಗದಂತೆ ಕೈಮುಟ್ಟಿ ಕೊಂಡಾಡುವರು ದಿಂಡಿ ಯರು (ತರ್ಕಳಾ. ೦–೯೭).

**ತೀಡಿ ತಿದ್ದು** = ರೂಪುಕೊಡು ; ನಯಗೊಳಿಸು: ಸಾಣೆಗಾಳಿಯು ಸುಳಿದು ಹೊಗರಿಂಬನೊಡನೆ ತೀಡಿ ತಿದ್ದುವುದು (ಕನ್ನಡಾ. ೦೪೦).

[ದೇ. ೫ ತಮಿ. ತೀಟ್ಟು, ತೀಜ್ಜು ; ತುಳು. ತೀಂಟು, ತೀಡು; ತೆಲು. ತೀಡು ; ನಾಯ್ಕಿ. ಧೀಟ್]

**ತೀಡ್ಡು₃** (ನಾ). = ತೀಂಟ್ಟೆ₁ ೧ : ಎನ್ನ ದೋರ್ದ್ವಯದ ತೀಡಂ ರೂಢಿಪೆಂ ಸಂಗರಾವನಿಯೊಳ್ ಬೇಗದೋಳೀಗಳೆಂದು ಬಗೆದಂ (ಕುಸುಮಾ. ೧೧–೦೬). [< ತೀಡು₁]

**ತೀದ** 'ತೀರ್' ಪರಾ.

**ತೀದು** 'ತೀರ್' ಪರಾ.

**ತೀನ್** (ನಾ). ೧. ತಿನಿಸು; ಆಹಾರ : ಈತನಂ ವಾಸುಗಿ ಗರುಡನ ತೀಂಗೊಡ್ಡಿದಂ (ಕಾವ್ಯಾವ. ೮೧೪). ೨. ಕೆರೆತ ; ನವೆ : ಆಂತುಮಿಮಾ ತ್ತೋಳ ತೀನ್ ಕರಗಲ್ಕಾರ್ತಪುದಿಲ್ಲ (ಪಂಪಭಾ.೦೨–೦೫೩); ತೀನೆರ್ದೊಡರ್ದ ಕರಟಮನಾನೆಗಳೊಜೆದುಗುವ ಪಾಲ್ ಜಗಿಲ್ತಿರೆ (ಲೀಲಾವ. ೮–೪೫) ; ಸೊರ್ಕಿದಾನೆಯ ಕಟಿಯೊಳ್ ನೆಲೆಸಿದ ತೀನಂ [ಪಾಠಾಂ. ತಿಮಿರಂ]

ತಾರಿಸಿಯೆ ತೊಲಗಿಸಿದವು ನಖಮುಖಂಗಳಿಂ ಸಿಂಹಂಗಳ್ (ಪಾರ್ಶ್ವಪು. ೧೩-೯೯). ೩. ನಸೆ ; ಬೆದೆ. 'ತೀನ್ಮಸಗು' ಪರಾ. [< ತಿನ್]

**ತೀನತೇರ**, ತೀಂತೇರಾ, ತೀನುತೇರಾ (ನಾ). ಚಲ್ಲಾಪಿಲ್ಲಿ; ದಿಕ್ಕಾಪಾಲು; ಮೂರಾಬಟ್ಟೆ : ಈ ಕಾಲದಲ್ಲಿ ಚೀಣಾರಾಜ್ಯದ ಸ್ಥಿತಿಯು ಬಹಳ ಗಲಭೆಯಾಗಿ ತೀನತೇರವಾಗಿತ್ತು (ಕಾಂಪೂಜ. ೮). ತೀಂತೇರಾ :(೬). ತೀನುತೇರಾ : ಅಲ್ಲಿ ರೈತರು ಹಲಾಕಾಗಿ ತೀನುತೇರಾ ಆಗಿಹೋದರು. ಗ್ರಾಮಗಳಲ್ಲಿ ದೀಪ ಉರಿಯಲಿಲ್ಲ. ಹಾಳುಬಿದ್ದು ಹೋಯಿತು (ರಾಜೇಂದ್ರ. ೨೨೯). [ ← ಮರಾ. ತೀನ್‌ತೇರಾ ; ಹಿಂ. ತೀನ್‌ತೇರಹ್ ]

**ತೀನಾಳಿ** 'ತಿನ್ನಾಳಿ' ನೋ.

**ತೀನಿ** 'ತಿನ್ನಿ$_1$' ನೋ.

**ತೀನಿಗ** (ನಾ). = ತಿನ್ನಾಳಿ: "ಗ್ರಸಕಃ, ಗ್ರಸಮಾನಃ – ಈ ೨ ತೀನಿಗಂ" (ಕಾಶಶ್ಮ.೧೨೨). [ತೀನಿ (<ತಿನ್ನಿ$_1$) +–ಗ$_2$]

**ತೀನು** (ನಾ). ಬೇಲಿ ಅಥವಾ ತಡಿಕೆಗೆ ಆಧಾರವಾಗಿ ಕೊಡುವ ಕಂಬ, — ದಸಿ : ಆಳು ಬೇಲಿ ಕಟ್ಟಲು ತೀನು ನೆಡುತ್ತಿದ್ದಾನೆ (ರೂಢಿ). [?]

**ತೀನುತೇರಾ** 'ತೀನತೇರ' ನೋ.

**ತೀನೆ** 'ತಿನ್ನಿ$_1$' ನೋ.

**ತೀನ್ಮಸಗು** (ಕ್ರಿ). ನಸೆ ಹೆಚ್ಚು ; ಕಾಮಾತುರ ಹೆಚ್ಚು : ವ್ಯೆ ಮಜು ಮಜುಯಾಗಿ ತೀನ್ಮಸಗಿ ಸೋಲಮಾಗುಂದಲೆಯಾಗಿ ಕೂಡುವಟ್ಕಟಂ ಮಿಂಗೆ (ಸೂಕ್ತಿಸು. ೦೪-೩೩). [ ತೀನ್ + ಮಸಗು$_1$ ]

**ತೀನ್ಮಸೆ**, ತೀಮ್ಮಸೆ (ಕ್ರಿ). ನವೆ ಹೆಚ್ಚಾಗು ; ತಂರಿಕೆ ಉಂಟಾಗು : ಮೆಯ್ಯು ತೀನ್ಮಸೆದೊಡೆ ಕೋಡೊಳಿಟ್ಟೊರಸಿ ನೀರ್ಗಳಸಿದೊಡೆ ತಂದು ನೀರನೂಡಿಸಿ (ಚಂದ್ರಪ್ರ. ೫-೬೪). ತೀಮ್ಮಸೆ : ತೀಮ್ಮಸಪ ರಸನೆ ಯಸಕಮುದಮ್ಮೊಡನೇಕನಿತು ಬಿಡಿಮಿದೇತಱ ಬಿಂಕಂ (ವೃಷವಿ. ४೦-४४). [ ತೀನ್ + ಮಸೆ$_1$ ]

**ತೀಬನು** (ನಾ). ಒಂದು ಬಗೆಯ ಔಷಧಿದ್ರವ್ಯ : ಅಜಮೋದ, ತೀಬನು, ಕೊಡಸಿಗನ ತಿಗಡು...ಇಷ್ಟನ್ನೂ ಸಮಾನವಾಗಿ ಚೂರ್ಣವ ಮಾಡಿ (ವಿಷ್ಮವಿ. ೩೩). [?]

**ತೀಬು** (ನಾ). ಲವಂಗ : "ಲವಿ ಲವಂಗಂ ದೇವಕುಸುಮಮೆನೆ ತೀಬು" (ಮಂಗರಾ. ४೩-४೦). 'ತಿಬ್ಬು$_2$' ಪರಾ. [ ? ]

**ತೀಬ್ರಕರ** (ನಾ). ೧. ಅಧಿಕವಾದ ಕಾಂತಿಯುಳ್ಳವನು. ೨. ಸೂರ್ಯ. ೧, ೨ : ಜಿತಪಂಚೇಷುತ್ವದಿಂದೀಶ್ವರನೆನಿಸಿಯುಮುದ್ಧತ್ಪಧಾಕಾಂತನತ್ಯೂರ್ಜಿತತೇಜೋಲಕ್ಷ್ಮಿಯಿಂ ತೀಬ್ರಕರನೆನಿಸಿಯುಂ ದೃಶ್ಯರೂಪಂ (ಎಕ. V, ಹಾಸನ. ೦೩೦–೮ ; 1147). [< ಸಂ. ತೀವ್ರಕರ]

**ತೀಬ್ರಕಿರಣ** (ನಾ). = ತೀಬ್ರಕರ ೨ : ವಿಜಯಲಕ್ಷ್ಮೀಕಾಂತನಹಿತಕೃತಾಂತ ರಿಪುಸುದತೀವದನಕುವಳಯ ತೀಬ್ರಕಿರಣಂ (ಎಕ. XI, ಚಿತ್ರದು.೦೩–೧೪ ; 1224?). [< ಸಂ. ತೀವ್ರಕಿರಣ]

**ತೀಬ್ರತೇಜ** (ನಾ). ಅಧಿಕವಾದ ತೇಜಸ್ಸುಳ್ಳವನು : ಆ ಬ್ರಹ್ಮನೊತ್ತಿನರ್ ಭಸಿತಸಂಪತ್ತಿಗರ್ ತೀಬ್ರತೇಜರ್ (ಚಬಪು.೨೯–೨೦). [<ಸಂ. ತೀವ್ರತೇಜಸ್]

**ತೀಬ್ರಪಾತ** (ನಾ). ಉಗ್ರವಾದ ದಾಳಿ : ತನ್ನಯ ತೀಬ್ರಪಾತದಿಂದ ಟ್ಠೊರಸಲ್ಕೆ ಬರ್ಪನಿನನೆಂಬಿನಿತುಮ್ಮಳಮಾಗೆ (ಶಾಂತೀಶ್ವ. ೦೦–೯೦). [< ಸಂ. ತೀವ್ರಪಾತ]

**ತೀಬ್ರಪ್ರತಾಪ** (ನಾ). ಉಗ್ರವಾದ ಪರಾಕ್ರಮ ; ಅತಿಯಾದ ಶೌರ್ಯ : ಮೆಯ್ಗುಲಿ ಬಲ್ಲಾಳನೃಪಂಗಂ ಅಂಗಜಜಯೋತ್ತುಂಗ ಧ್ವಜಾಕಾರ ಪದ್ಮಲ ಮಾದೇವಿಗಂ ಅಗ್ರಸೂನು ನರಸಿಂಹೋರ್ವ್ವೀಶ್ವರಂ ಪುಟ್ಟಿದಂ ದೆಸೆಯಂ ತಳ್ಪೊಯ್ಯೆ ಕೀರ್ತ್ತಿಪ್ರಸರದೊಡನೆ ಕಾಲ್ಗೂಡಿ ತೀಬ್ರಪ್ರತಾಪಂ (ಎಕ. V, (ಚನ್ನರಾ. ೨೦೩ ; 1228). [ < ಸಂ. ತೀವ್ರಪ್ರತಾಪ ]

**ತೀಬ್ರರುಗ್ಮಂಡಳ** (ನಾ). ಸೂರ್ಯಮಂಡಲ; ರವಿಮಂಡಲ: ಉದ್ಧತರ ನೆತ್ತಿಯುಬತ್ತಿಪೊಲಾಯ್ತು ತೀಬ್ರರುಗ್ಮಂಡಳಮಂ ದಿಟಂ ಮಿಗುವ ತೇಜದ ದಳ್ಳುರಿ (ಎಕ. V, ಅರಸೀ. ೧೨೭–೨೫ ; 1192). [ < ಸಂ. ತೀವ್ರರುಙ್ಮಂಡಲ ]

**ತೀಮ್ಮಸೆ** 'ತೀನ್ಮಸೆ' ನೋ.

**ತೀಯ** (ನಾ). ಬಯಕೆ ; ಬೆದೆ. 'ತೀಯಕಾರ್ತಿ' ಪರಾ. [ ← ತೆಲು. ತೀಯ ]

**ತೀಯಕಾರ್ತಿ** (ನಾ). ತೀಟೆಯುಳ್ಳವಳು ; ಬೆದೆಕಾರ್ತಿ: ತೀಯ [ಪಾಠಾಂ. ಅತಿಯ, ತಿಯ, ತಿಯ್ಯ]ಕಾರ್ತಿಯತರ್ಾಯಿಲ್ಲದ ಕೂಸಿನಂತೆ ಬಾಯಂ ಬಿಡೆಯುಂ (ಅರ್ಧನೇ. ೫-೨ ವ). [ ತೀಯ + – ಕಾಱ + – ತಿ$_1$ (< – ಇತ್ತಿ ]

**ತೀಯಾಟ** (ನಾ). ತಿಕ್ಕಾಟ ; ಎಳೆದಾಟ ; ಜಗಳ : ತೀಯಾಟವೂ ಇದ್ದೇ ಇರುವುದು (ಶಾಳಿಗಾ. ೨೩) ; ಬದೋಡೆ ಸರ್ಕಾರಕ್ಕೂ ನಮ್ಮ ಅಂಗಡಿಗೂ ಮೊದಲಿನಿಂದಲೂ ಇರತಕ್ಕ ತೀಯಾಟ ತಿಳಿದೇ ಇದೆಯಷ್ಟೆ (ಅದೂಟ. ೬). [ ತೀಯು$_0$ (← P ತೆಲು. ತೀಯು) + ಆಟ ]

**ತೀರ್**, ತೀರು$_1$ (ಕ್ರಿ). ತೀದ, ತೀರ್ದ (ಭೂತಕೃ), ತೀದು, ತೀರ್ದು (ಭೂತನ್ಯೂ). ೧. ಮುಗಿ ; ಪೂರೈಕೆಯಾಗು : ಪರಮ ಜಿನಾಭಿಷೇಕ ವಿಧಿ ತೀರದು ಕೂಪಜಲಂಗಳಿಂ . . . ಇಲ್ಲಿಗೆ ಮೇಟ್ಬುದಗಾಧ ದುಗ್ಧ ಸಾಗರಜಲಂ (ಅಜಪು. ४–४೫) : ಎನ್ನ ಯಜ್ಞಂ ತೀರ್ವನ್ನೆಗಂ ಮುಟಿಯರೀ ಪೊಬಲೊಳಿರವೇಡಮೆಂದು ಘೋಷಣೆ ನೆಗಟ್ಬುದುಂ (ಧರ್ಮಾಮೃ. ೯–೧೩४) : ಚಿತ್ರವನಿತ್ಯನಾಟಕದ ಜೋಹಂ ತೀರ್ದುದಿಂ ಸಾಲದೇ (ಅನಂಪು. ೩–೬೬) : ಹೋದುದೊಂದಪಮೃತ್ಯು ಲೋಕಕೆ ತೀದುದಿಲ್ಲಾಯುಷ್ಯ (ಕುವ್ಯಾಭೀ. ೬–४೭). ೨. ನಿಶ್ಶೇಷವಾಗು ; ಉಳಿಯದಂತಾಗು : ಎನಿತು ಭುಜಂಗಳಂ ತಳೆದನಿಂದ್ರನನಿತ್ತು ಘಟಂಗಳಂ ಸಮಂತನಿಮಿಷಕೋಟಿ ನೀಡಿದುದನಿತ್ತಮೃತಾಬ್ಧಿಯ ವಾರಿ ತೀರ್ದುವೆಂದನುಮಿಸಲಾವನುಂ ನೆಱಯನೆಂಬಿನಮದ್ಭುತಮಾದ ಜನ್ಮಮಜ್ಜನದೊಳೆ (ವರ್ಧಪು. ೦४–೩೫). ಬಂದು ಬಂದು ಮಿಗೆ ಪೀರುತಮಿರ್ಪ ಚಕೋರಪಕ್ಷಿಜಾಲಂಗಳಿನೊಮೆ; ತೀರ್ಗುಮಿರದೀ ಶಶಿಚಂದ್ರಿಕೆಯೆಂದು (ಕುಸುಮಾ. ೦೦–೭) ; ಸಂಚಿತಸಲಿಲು ತೀರ್ದುದು (ಉದ್ಭಟ. ४–೩೨) ; ಮತ್ಕಾವ್ಯರಚನೆ ಸ್ವಾದು ರಸಾಯನ ತವ ಕರ್ಣಯುಗಳಕ್ಕೆ ತೀದರೆ ಮಗುಳೆ ತುಂಬಿಸದೆ (ಪೋಷಕ. ೩೦–೨) : ಆದಡೇನಾ ಸರಳು ಹೋದರೆ ತೀದುದೆ ತನ್ನಧಟು (ಕೋಗಯು. ೦೦–೬೩). ೩. ಕೊರೆಯಾಗು ; ಕ್ಷೀಣವಾಗು ; ಕ್ಷಯಿಸು : "ತೀರ್ದುದು ಬೀತುದು ಸವೆದುದೆನಲ್ ಕ್ಷಯಮನ್ನೆದಿತೆಂದಱಿಗೆ ಬುಧರ್" (ಧಾರನಿ ४೨) : ವನರುಹಗರ್ಭನೆಂಬವನ ಮುನ್ನಿನ ಗೆಯ್ದ ತಪಂ ಶಿರೋತ್ತಮಾಂಗನೆ ಯಿನದಂತುಟಾದುದೆನೆ ಮತ್ತಿನ ಬೂತು ತಪಂಗಳೆಮ್ಮ ಪೂರ್ವಿನ ಕಡೆಯೊಂದು ಜರ್ವಿನೊಳೆ ತೀರ್ವುವು (ಶಂಶಧಾ. ೭–೮೧); ತೀದುದೆಮ್ಮಯ ಸೇನೆ ನಸುಸೊಪ್ಪಾದುದಿಲ್ಲರಿಸೇನೆ (ಕುವ್ಯಾಭೀ. ೭–೨೨); ಓದಿದರೆ ವಾಕ್ಯದವು ಸಾರವನಾದರಿಸೆ ಮತಸಿದ್ಧಿ ಕೇಳಲು ತೀದುದಾತನ ಕರ್ಮಬಂಧನ ಕಾವ ಭವಭಯವು (ಕೌಶಿರಾ. ೦–೧೨) : ತೋದುದಂಬರತಳಂ ವಿಷದ ಲೋಳೆ ಗಳಿಂದೆ ತೀದುದಮರರ ಹರುಷ (ಚಬಪು. ४೨–೨೩). ४. ಸಾಯು ; ಮರಣವನ್ನು ಹೊಂದು : ದಶರಥನ ಬಸ್ಸೆ ಕೇಳಿ ಪೂರ್ವದಲ್ಲಿ ತೀದನಾತನು ಬಳಿಕ ಭರತಂಗಾದುದೀ ಧರೆ ವನಪರಿಭ್ರಮಣೋದಯವು ನಮಗಾಯ್ತು (ತೊರರಾ. ೩–೧–೬೭) : ಶಿವಯೋಗನಿಜಸಮಾಧಿಯಲಿ ನಿಂದು ಲೀಲೆಯಿಂದಿರಲಾಗಲಲ್ಲಿರ್ಪ ಭಕ್ತಜನಜಾಲಮಾತಂ ತೀರ್ದನೆಂದು ತೆಗೆಯಲ್ಕೆ (ಚಬಪು. ೬೩–೬೭). ೫. ನಿವಾರಣೆಯಾಗು ; ಕಳೆ : ಕಿಬ್ಬಿ ನೊಳಾದ ವೇದನೆಯುಂ ಮನದೊಳಾದ ಸಂಕ್ಲೇಶಮುಂ ತೀರ್ದರ್ತಿದು

(ಧರ್ಮಾಮೃ. ೧೨-೫೭) ; ಮೋಹಮುಂ ಗರ್ವಮುಂ ತಲ್ಲಣಮುಂ ತೀರ್ಗುಂ (ಪಂಪಾಶ. ೪೫) ; ತೀರ್ದುದು ಹೃದಯಕಲಂಕಂ ಸಾರ್ದುದು ಪುಣ್ಯಾನುಬಂಧಂ (ಅನಂಪು. ೩-೬೪) ; ತೀದುದೆಮಗೆ ವನವ್ರವಾಸದ ಖೇದ (ಶುಚ್ಯಾಲ. ೧೦-೫೫). ೬. (ಕಾಯಿಲೆ, ಬೇನೆ, ಹುಣ್ಣು ಮೊದಲಾದುವು) ವಾಸಿಯಾಗು ; ಗುಣವಾಗು : ಬೆಜ್ಜೆಯಿಲ್ಲದ ಬೇನೆಯಂತೆ ತೀರಲರಿಯದು (ಪಂಚತಂ. ೮೭-೨) ; ಶುಂಠಿ, ಹಿಪ್ಪಲಿಮೂಲ, ಅಮರದವಳ್ಳಿ ಇವಂ ಕಷಾಯಮಿಟ್ಟು ಕುಡಿಯೆ ವಾತಜ್ವರಂ ತೀರ್ಗುಂ (ಖಗೇಂ. ೬೭) ; ತೀರದು ದಿಲ್ಲವು ಬೇನೆ (ಜ್ಞಾನಸಿಂ. ೦-೨). ೭. ಸಾಧ್ಯವಾಗು ; ಶಕ್ಯವಾಗು : ಜವಂಗಿದಿರೆ ಮುಟ್ಟಿ ಬರ್ಪ ಜವನಂ ಜವಂಗುಂದಿಸಲ್ ಜವಂಗೆ ಜವನಾಗಲಿಂ ಪೆರ್ಗೆ ತೀರ್ಗುಮೇ (ಆದಿಪು. ೦೩-೮೮) ; ಅಂಕವರಾಗಿ ಪುಟ್ಟಲೇನಾಗಿಯುಮೇನೊ ತೀರ್ದಪು [ದೆ] ತೀರದೊಡಂ ಮಾಜಿದುಂಬಿಯಾಗಿ ...ಪುಟ್ಟುವುದು (ಶಂಪಶಾ. ೪-೨೮) ; ತ್ರಿದಶನದೀಸುತನಿಂ ತೀರದ ಕಜ್ಜಂ ...ದ್ರೋಣಪುತ್ರನಿಂ ತೀರ್ದಪುದೇ (ಗದಾಯು. ೩-೬೦) ; ಅಪ್ರತಿಮಪರಾಕ್ರಮನಪ್ಪ ನಿಮಗೆ ತೀರದ ಕಜ್ಜಮಾವುದಾನುಮಿಲ್ಲ (ಪಂಚತಂ. ೩೪-೦೧) ; ಶರ್ವಾಣಿಯ ಸೌಂದರ್ಯಮನೊರ್ವಂ ಬಣ್ಣಸುವೆನೆಂಬವಂಗಾಂಪಂ ... ಸಾಸಿರ್ವರ್ ಫಣಿರಾಜರಾದೊಡಂ ತೀರ್ದಪುದೇ(೧೧೪. ೪-೦೦) ; ಜಿನಗುಣಮೆಲ್ಲಮಂ ಕೊಱತೆಯಿಲ್ಲದೆ ಪೇಟ್ವೆಪೆನೆಂಬಿದುದ್ದ ವಾಗ್ವನಿತೆಗೆ ತೀರದು (ಶಾಂತಪು. ೧-೫೪) ; ನಿರ್ಮಲ ಶಿವನವನ ನಿರ್ಮಾಲ್ಯಮಿಕ್ಕಿಸಲ್...ನಿರ್ಮಲರ್ಗಲ್ಲದುಳಿದರ್ಗೆ ತೀರ್ಗುಮೆ (ಹರಿಶ್ಚಾ. ೧೦-೦೨೮). ೮. ಕೈಗೂಡು ; ಫಲಿಸು ; ಈಡೇರು : ಬಯಕೆ ತೀರದ ಕಾರಣದಿಂ (ಕವಿರಾ. ೦-೦೪೫) ; ಪಗೆ ತೀರ್ಗುಂ ಬಗೆ ತೀರ್ಗುಮಾ ಕುರುಕುಳ ಪ್ರಖ್ಯಾತನಂ ಕಾದಿ (ಪಂಪಭಾ. ೮-೦೦೩) ; ತನ್ನ ಬಯಕೆ ತೀರ್ದುದೆಂದು ಪೆರ್ಚ (ಧರ್ಮಾಮೃ. ೬-೪೭); ಕಡುಗಟ್ಟಲೆಯೊಳ್ ... ಪೊಱವಟ್ಟಡಿಯಿಡಲಣ್ಮದೆ ಮಱುಗುವ ಮಡದಿಗೆ ಬಗೆ ತೀರೆ ಮಿಂಚು ಮಿಂಚಿದುದಾಗಳ್(ರಶರ. ೦-೯೦). ೯. ಸಾಕಾಗು ; ತೃಪ್ತಿಯಾಗು ; ಸಮಾಧಾನವಾಗು: ನುಡಿಯಲ್ ಬಾರದು ತೀರದು ನುಡಿಯದೊಡೆ (ಅನಂಪು. ೧೦-೩೦). ೧೦. (ಕಾಲದಂತೆ) ಕಳೆದುಹೋಗು ; ಮುಗಿದು ಹೋಗು : ವೇದಮಾರ್ಗದೊಳೊಂದು ದಿನ ಪರಿ ತೀರದು ಹೋದುದು (ಸಂಭಪ. ೪-೯). ೧೧. (ಜಗಳ, ವಾಗ್ವಾದ, ಸಮಸ್ಯೆ ಮೊದಲಾದುವುಗಳು) ತೀರ್ಮಾನವಾಗು ; ಬಗೆಹರಿ : ನಿನತೊಂದೋಲೆಗೆ ತೀರ್ವುದೊಂದು ಮನೆವಾರ್ತೆಗಿದೇನರಸ ಬಳಿಯ ನುಡಿದಪೆ (ಆದಿಪು. ೧೪-೩೦) ; ನಮ್ಮ ಜಗಳ ತೀರಿತು (ಗಾದೆ). ೧೨. ಹೊಳೆವಾಗು ; ನಯಗೊಳ್ಳು (?). 'ತೀರಿಸು' ಪರಾ.

ತೀರು$_1$ : ೧. ಸಮಸಪ್ತಕರ ಬಲ ನಿಜಪಾಳಿಯಕೆ ತಿರುಗಿದುದು ತೀರಿತು ತರಣಿಯಾಟೋಪ (ಕುಮ್ಮಾರದ್ಯಾ. ೮-೧) ; ಮಿಂಡಗಾಜಿಕೆಯಲ್ಲಿ ಗಳಿಸಿದ ಸೌಖ್ಯವನುಂಡಲ್ಲದೆ ತೀರದೆಂದ (ಚೋಹಶ. ೩೫-೬೮) ; ರಾಜಪುತ್ರಿಗೆ ತನಗೆ ಸೆರೆ ತೀರುವುದೆಂದು ಎಷ್ಟೋ ಸಂತೋಷವಾದರೂ (ಪಂಚಾಮೃ.೬) : ಊರು ಸೇರಿದ ಮೇಲೆ ದಾರಿ ತೀರಿತು(ಗಾದೆ). ೨. ತೀರಿತಾತನ ಶಕ್ತಿ (ಕುಮ್ಮಾರದ್ಯಾ. ೩-೬೩) : ತೀರೆ ಕೈದುಗಳಳಿದು ಬೊಬ್ಬೆಯ ತೋಳ ಕಡಿಗೊರಳಿನಲಿ ಕೋಪಿಸಿ ತೇರಿನಗ್ರವ ಪಿಡಿದು ತಿರುಹಿಟ್ಟುದು ಕಬಾಧಕವು (ತೊರರಾ. ೩-೬-೨೫) ; ತೀರಿದ ಅಡಿಗೆ ತಿರುಗಿ ಬಯಸಿದರೆ ಬಂದೀತೇ ? (ಗಾದೆ). ೩. ತೀರಿದುದು ತಮದೊಬ್ಬುಳಿತ ಚಂದ್ರನ ತಾರಕಿಯ ಮೈವೆಳಗು ಮಸುಳಿದವು (ತೊರರಾ. ೧-೦೪.೧). ೪. ಮಾರಹರ ನಿಮಗುಚಿತವೇ ಮತ್ತಾರಿಗಾಱದ ಕುಂಟವೇಷವೆ ಸೇರಿ ಮನೆಯವರ್ಗಾಪನೆನ್ನದೆ ಸೂನುತೀರಿದಡೆ (ಬಸಪು. ೪೮-೦೮) : ತಂದೆ ತೀರ್ದ ಬಳಿಕ ನೀನೆ ತಂದೆ (ತೊರರಾ. ೨-೩-೨೮). ೫. ಕ್ರೂರಮಂತ ಶ್ರಿತಯಮೂಜಲು ಭಾರವದು ಪಲ್ಲಾಲ್ಯು ನಟ್ಟಡೆ ತೀರಗೆಂತಾ ಮಂತ್ರತಂತ್ರೌಷಧವಿಧಿಗಳಿಂದ (ಬಸಪು. ೪೬-೩೨) ; ವಿಶ್ವಾಸವುಳ್ಳೊಡೆ ಸಕಲ ಪಾತಕವು ತೀರುವುದಲೆ (ಸಂಭಪ. ೩-೩೭) ; ತೀರಿತು ಹೃದಯದ ತಾಪ (ಬೋಹಶ. ೨೮-೩) : ತನ್ನ ಕೊರಗು ತೀರುವುದು ಕಷ್ಟವೇ ? (ಬಿತಂದಾ. ೦೬). ೮. ತನ್ನ ಆಕಾಂಕ್ಷೆ ತೀರುವುದಕ್ಕೊಂದು ದಾರಿಯಿದೆ (ಬಿತಂದಾ. ೩೫). ೧೦. ಆಯುಷ್ಯ ತೀರಿದಲ್ಲದೆ ಮರಣವಿಲ್ಲ (ಬಸಪ. ೬೮೪). ೧೧. ಸಂದೇಹ ತೀರಿತು (ಬಿತಂದಾ. ೩೪). ೧೨. (ಋಣ, ಹಂಗು, ಸಾಲ, ಮುಂತಾದುವು) ಸಂದಾಯವಾಗು ; ಸಲ್ಲು : ಮುಯ್ಯಕ್ಕೆ ಮುಯ್ಯಿ ತೀರಿತು (ಪುರಂದ. ೧-೬೫ ಪಲ್ಲವಿ) ; ಅವರ ಹಂಗೂ ತೀರದು (ಮೂರುಊ. ೭, ಮುನ್ನುಡಿ).

ತೀರಿಕೊಳ್ಳು=ಸಾಯು ; ಮರಣವನ್ನು ಹೊಂದು : ಒಬ್ಬ ಬಡ ರೈತ . . . ಅರ್ಬುದರೋಗದಿಂದ ತೀರಿಕೊಂಡ (ಚಿತ್ರ. ೫೦) ; ಅವರು ತೀರಿಕೊಂಡಾಗಿನಿಂದ ಇಂಥ ಕೆಲಸ-ಕಾರ್ಯಗಳ ಬಗ್ಗೆ ಜನರು ನಿನ್ನನ್ನೇ ಕೇಳುತ್ತಿರುವುದು ತಪ್ಪಲ್ಲ (ಧಾರಕಿ.೦).

[ದೇ.೩ ತಮಿ. ತೀರ್ ; ಮಲ. ತುಳು. ತೆಲು. ತೀರು./ಸಂ. ತೀರ್ ]

ತೀರ$_1$, ತೀರಾ (ಗು). ಬಹಳ ; ತುಂಬ ; ಸಂಪೂರ್ಣ : ಈಗ ಅವನು ಹಾಗೆಲ್ಲ ಮಾಡುವುದಿಲ್ಲ. ಆಗ ತೀರ ಚಿಕ್ಕವನಿದ್ದ (ಧಾರಕಿ. ೩) ; ಆಂಡಯ್ಯನು ನುತಿಸಿದ ಕವಿಗಳಲ್ಲಿ ಅವನಿಗೆ ತೀರ ಸಮೀಪದವನಾದ ಜನ್ನ (ಸಾಹಿಸ. ೦೫೦) : ಈ ಎರಡು ತೆರನಾದ ಕಂಪನಗಳ ಸ್ವಭಾವವು ಪರಸ್ಪರ ತೀರ ಭಿನ್ನವಾಗಿರುತ್ತದೆ (ಜೀವಾತ್ಮ. ೦೦೦).ತೀರಾ : ಹೊಸವಿ ಒಳಸವಿ ತೀರಾ ಸವಿ ... ತೀರಾ ಸವಿಯಿಂದ ರುದ್ರಸತ್ತ್ವ (ವಚಶಾ. II. ೨೫೦) : ಪ್ರಾಚೀನ ಕನ್ನಡ ಗ್ರಂಥಗಳಿಂದ ಆಯ್ದುಕೊಂಡ ಪದ್ಯಗಳು ತೀರಾಕಡಿಮೆ (ಕವಿಪು. I. ಮೀ೬೪). [ < ತೀರ್ ]

ತೀರ$_2$ (ಅ). ಬಹಳವಾಗಿ ; ಅತಿಯಾಗಿ ; ಸಂಪೂರ್ಣವಾಗಿ : ಕೊಳುಗುಳದೊಳಗ್ಗನೊಱಕ್ಕೊಱೆಣಿ ಬಲವನೊಬ್ಬನೇ ತೀರ [ಪಾಠಾಂ. ತಿರಿ] ಕೊಂದ (ಕುರಾಸಾಂ. ೬-೩೩); ತೀರ ಜಗ್ಗಿದರೆ ಅಧಿಕಾರದ ತಗ್ಗವೇ ಹರಿವುದೆಂದು ಅದಕ್ಕೆ ಗೊತ್ತಿತ್ತು (ಎಕ್ಕಸಾ. ೩೬). [ < ತೀರ$_1$./ತಮಿ. ತೀರ ]

ತೀರ$_3$ (ನಾ). ದಡ ; ದಂಡೆ ; ಕರೆ : "ತೀರಮೊಂದು ತಟಂ" (ಕಶಸಾ.೮-೦೪೫): ತಣ್ಣುವೆತ್ತಿರ್ಪ ತೀರ ಜಲಂಗಳೊಳಮೆಡವಿಡದಿಡಿದ ತಮಾಲವೀಧಿಯೊಳೊಗೆವ ಕತ್ತಲೆಯಿಂ (ಕಾರಂಪೂ. ೦೦೭); ತೊಱೆಗಳ ತೀರದೊಳ್ಗರಿಯ ತಪ್ಪಲೊಳಗ್ಗಳಮಪ್ಪ ಕೊಳ್ಳದೊಳ್... ಮಱುಗಿ ತೊಜಲ್ದು (ಧರ್ಮಾಮೃ. ೮-೨೦); ಎಱಗದ ತೀರಭೂರುಹಮನೆಯ್ದೆ ಮೊದಲ್ಗಿಡೆ ಕೀಟ್ಟು ಬೆಂಗೆ ಬಿಟ್ಟೆಱಗಿದ ಮಂಜುಳಪ್ರಕರಮಂ ಪರಿವರ್ಧಿಪ ಸಿಂಧುತೋಯದಂತೆ (ಪುಷ್ಪಪು. ೦೩-೬); ನಗುತನಿಲತರದಿಂದಂದಿದನು ಜಲನಿಧಿಯ ತೆಂಕಣತೀರಕಾಖಳನ (ತೊರರಾ. ೧-೧೦-೨೦): ತೀರಕ್ಕೆ ಬಂದ ಮೇಲೆ ತೆರೆಯ ಭಯವೆ ? (ಗಾದೆ). [ ಸಂ. ]

ತೀರಂಬಿಡಿ (ಕ್ರಿ). ದಡವನ್ನು ಹೊಂದಿಕೊಳ್ಳು ; ತೀರವನ್ನು ಅನುಸರಿಸು : ಅಂತಾ ಪ್ರಭಾಸಾಮರಸಂ ನಿಜವಿಜಯಯಶಃಪ್ರಭಾಸಮೂಹದಿಂದಂ ಪುದಿದು ಸಿಂಧುನದೀತೀರಂಬಿಡಿದು ಬರ್ಪಲ್ಲಿ (ಆದಿಪು. ೧೩-೪೫); ದೂತಂ ಜೀಮೂತನಾದನೆಂಬಂ ಕೂಪಾರ ತೀರಂಬಿಡಿದು ನಡೆತರ್ಪ ಕಾಳಿಯಸರ್ಪದರ್ಪದಳನನದಿರದಿದಿರೊಳ್ ಕಂಡು (ಜಗವಿ. ೯-೩೩೪).

[ತೀರ$_3$ + ಪಿಡಿ$_1$]

ತೀರದಾಣ (ನಾ). ತಪ್ಪಲು ಪ್ರದೇಶ (?): ಗಿನಿತಲದಾ ನೇಲತಿ ××× ಸ್ಥಲಮಾನ್ ತೀರದಾಣಮಾ ಕೆಳಗೆ ನೆಲದಿ ವಾನದಾ ಸದ್ದಮದಾಗೇಟಿ ಸಸಾನದಿ ಪತಾನ್ (ಎಕ. II, ೨೯-೩; 700). [ತೀರ$_3$ + ತಾಣ]

ತೀರವೆ (ನಾ). ೧. ತೀರದೆ ಇರುವಿಕೆ : ಅಪೂರ್ಣತೆ ; ಕೊರತೆ : ಅಮೆಗ—ತೀರವೆ, ಅಚ್ಚಿಮೆ (ಶಮದ. ೨೧೦ ಪ್ರಯೋ). ೨. (ಪ್ರಯಾಣದಲ್ಲಿ) ತಡೆದಿರುವಿಕೆ ; ಮುಂದುವರೆಯದಿರುವಿಕೆ : ಆಲೋಚನಾ

ಪಮಾತ್ರದಿಂ ಮಱಿದು ಪಾಂಥಶ್ರೇಣಿ ನೀರಟ್ಟಿಯುಂ ಶ್ರಮಮುಮಂ ತೀರಮೆಯುಂ ಪ್ರಪಾಂಗನೆಯರಂ ಕಣ್ಣಾವುದಾ ದೇಶದೊಳ್ (ಹರಿಚಮಾ. ೦-೧೦೪); ಜಾನಪದಾಂಗನಾಜನದ ಗಾಡಿಗೆ ಸೋಲ್ಮ್ತೆನೀನಿನಾದಮುಂ ಜಾನಿಸಿ ಕೇಳ್ದು . . . ಉದ್ಯಾನದೊಳಾಡೆ ತೀರಮೆಯುಮಂ ಪಥಿಕರ್ ಮಱಿದಿಲ್ಲೆನಲ್ ಪರಿಪಪ್ಲಾನತೆ ಸೈತು ಬಟ್ಟೆ ನಡೆಯಲ್ಪಡೆಯುರ್ ವಿಷಯಾಂತರಾಳದೊಳ್ (ಮಲ್ಲಿಪು. ೨-೨೮): ಬಾಟೆಯಿಳೆಯರನೇಱಲ ಮಾವಿನಪಣ್ಗಳಿಂ ಮನಂ ನಿಲೆ ಸವಿದಲ್ಲಿ ತೀರಮೆಯುಮಂ ಮಱಿದಿರ್ಪುದು ಪಾಂಥಸಂಕುಳಂ (ಪುಷ್ಪದಂ. ೨-೪೭). [ ತೀರ್ + – ಅವೆ$_2$ ]

**ತೀರರುಹ** (ಗು). ದಡದಲ್ಲಿ ಬೆಳೆದಿರುವ ; ದಂಡೆಯ ಮೇಲಿರುವ: ತೀರರುಹ ಫಲಪುಷ್ಪನವ್ಯಕಿಸಲಯದಮ್ಯಗುಲ್ಮತರುಪಂಕ್ತಿಮಾಲಾಸಹಸ್ರ ಜಾತೆಯಂ ದರ್ಶಿಸಿದೊಡನೆ (ಶ್ರೀರಾಮಾ. ೯೬-೫೨೩). [ಸಂ.]

**ತೀರಸ್ಥ** (ಗು). ದಡದಲ್ಲಿರುವ: ತೀರಸ್ಥಲವಂಗಚೂತಲವಲೀಪುಷ್ಪಾಸವಾಸ್ವಾದಿತೋದಯುತೋನ್ಮದಯ . . . ಪೋಲ್ವೆಗಿಲ್ಲ ತೊಱೆಗಳ್ ವಿಶ್ವಂಭರಾಭಾಗದೊಳ್ (ಆದಿಪು. ೦-೫೪). [ ಸಂ. ]

**ತೀರಾ** 'ತೀರ್$_1$' ನೋ.

**ತೀರಿ** (ನಾ). ೧. ಅಂಬು ; ಸರಳು , ಬಾಣ : "ತೀರೀ, ತದ್ವಳ, ದಂಡಾಸನಃ –ಇವು ಮೊದಲಾದುವು ಅಂಬಿನ ಭೇದಂಗಳ್" (ಹರಾಯು. ೬೬-೩೦೩). ೨. ಒಂದು ಬಗೆಯ ಬಿಲ್ಲು : "ದಂಡಾಸನಂ ತೀರಿ ತದ್ವಳಮೆಂದು ಬಿಲ್ಲಭೇದಂಗಳಕ್ಕು" (ಮುಂಗರಾ. ೮೭-೩೩): P ಮಂಗರಾಜನು 'ಬಾಣ' ಎಂಬುದಕ್ಕೆ 'ಬಿಲ್ಲು' ಎಂದು ಹೇಳಿರುವಂತೆ ಕಾಣುತ್ತದೆ. [ ಸಂ. ]

**ತೀರಿಕೆ** (ನಾ). ತೀರಿಸುವಿಕೆ : " ತೀರಂ, ತೀರಣಂ, ತೀರಣೀಯಂ—ಈ ೩ ತೀರಿಕೆ " (ಕಾಶಕ್ಕ. ೨೦೮). [ ತೀರ್ + – ಇಕೆ ]

**ತೀರಿಕ್ಕೆ**, ತೀರಿಗೆ (ನಾ). ಒಂದು ಬಗೆಯ ಬಾಣ : ಕ ದುರೆಯ ಮೇಲೆ ಬಿಲ್ವರಸು ಸೂಲಿಗೆ ತೀರಿಕೆ ಭಿಣ್ಡವಾಳವೆತ್ತಿದ ಕರವಾಳಿಮಾಟಡುವ ಕರ್ಕ್ಕಡೆ . . . ಎಂತು ಲಕ್ಷ್ಮಣನೊಳಾಂತು ಬರ್ದುಂಕುವರನ್ನಭೂಭುಜರ್ (ಎಪಿ. VII, ಶಿಕಾರಿ. ೦೩೭–೨೮ ; 1068). **ತೀರಿಗೆ:** ಕುದುರೆಯ ಮೇಲೆ ಬಿಲ್ಬರಶು ತೀರಿಗೆ ಸೂಲಿಗೆ ಬಿಂಡಿವಾಳವೆತ್ತಿದ ಕರವಾಳ (ಎಪಿ. XV, ೩೧೦–೦೨ ; 1071). [ < ತೀರಿ./ಸಂ. ತೀರಿಕಾ ]

**ತೀರಿಗೆ** 'ತೀರಿಕ್ಕೆ' ನೋ.

**ತೀರಿಚು** 'ತೀರ್ಚು' ನೋ.

**ತೀರಿತ** (ಗು). ತೀರ್ಮಾನವಾದ; ಮುಗಿದ; ನಿರ್ಣಯಿತವಾದ. [ ಸಂ. ]

**ತೀರಿಸು** (ಕ್ರಿ). ೧. ಮುಗಿಸು ; ಪೂರ್ಣಮಾಡು : ದಣಿ ವ್ಯಾಗ ಸೇದು ತೀರಿಸಿಕೊಣ್ಣಾಕ ನಿನಗೊಂದು ಅಪರೂಪ ಪರಸಂಗ ಒದಗಿ ಬಂದರ ಹ್ಯಾಗರೇ (ಮೇಳಿದಡು. ೦೩) ; ಅರಿ ದೂರಕೆ ಅರಿದ ಕಡಲಿನ ನೀರೆ ಕಡಲನೆ ಕೂಡಿತು, ಬೇರೆ ! ಹಾ ! ಹಾ ! ಎಂದು ಡೊಂಬನು ತೀರಿಸದೆ ಕಣ್ಮುಚ್ಚಿದ (ಕವಿಪು. ೪೦-೩೭) : ತನ್ನ ಕೆಲಸವನ್ನು ಮಾಡಿ ತೀರಿಸಿದ್ದನು(ರೂಢಿ). ೨. ನಾಶಮಾಡು ; ಕೊನೆಗಾಣಿಸು: ತೀರಿಸುವೆನೀ ರಕ್ಕಸರ ರಣ ಹೋರಟೆಯನೆನುತ...ತಿರುಹಿಟ್ಟನು ನಭಸ್ಥಳಕೆ (ತೊರವೆ. ೬-೩೦-೦೭). ೩. ಕೊಲ್ಲು ; ಸಾಯಿಸು : ಕೌರವನ ಋಣ ಹಿಂಗೆ ಸುಭಟಕೋಟಿಯನು ತೀರಿಸಿಯೆ ಪತಿಯವಸರಕ್ಕೆ ಶರೀರವನು ನೂಕುವೆನು (ಕುಮಾರವ್ಯಾ. ೧೧-೨೦): ಈಗಲೆ ಇವರನ್ನೂ ನಿನ್ನನ್ನೂ ತೀರಿಸಿಬಿಡುತ್ತೇನೆ (ವಚರಾ. ೩೮). ೪. ನಿವಾರಿಸು ; ಪರಿಹರಿಸು : ತಾರಕನಿಂದೆ ನೊಂದಮರರು ತಮ್ಮ ಸಂಸಾರದುಃಖವ ತನಗುಸಿರೆ ತೀರಿಸಲಱಿಯದಾನ್ನೆತಂದೆ ಶ್ರೀ ವೀರ ನಾರಾಯಣ ಪೊರೆಯೆಂದ (ಪೋಚಿಕ. ೫-೦೫) ; ಹೆತ್ತ ತಾಯಿಯ ಸಂಕಟವನ್ನು ತೀರಿಸುವವರ್ಯಾರು (ಮನೋನಂ. ೦೪೨). ೫. ಈಡೇರಿಸು ; ಕೈಗೂಡಿಸು : ಬಂದು ಕಾದಿಹ ದ್ವಿಜರನುಮತವ ತೀರಿಸದೆ ನಿಜಲೋಭ ಕತವೆಂಬಂದದಿ ಸಾಲ್ಗಟ್ಟಿ ಕುಜವಿರ್ದುದಾ ಬನಬನದಿ (ಪೋಚಿಕ. ೨೪-೪೮). ೬. ಬಗೆಹರಿಸು ; ತೀರ್ಮಾನಮಾಡು : ಅವರಿಬ್ಬರೂ ಬಂದು ನಮ್ಮ ದಿಪ್ಪು ವ್ಯಾಜ್ಯ ತೀರಿಸು ಎಂದು ನನ್ನ ಬೇಡಿಕೊಂಡರು (ಮುಂಬಯಿ. ೪-೩೪). ೭. (ಋಣ, ಉಪಕಾರ ಮೊದಲಾದುವನ್ನು) ಕೊಟ್ಟು ಮುಟ್ಟಿಸು ; ಮರಳಿ ಸಲ್ಲಿಸು ; ಸಂದಾಯಮಾಡು : ಉಂಡು ತೀರಿಸಬೇಕು ತಾ ಮುಂಕೊಂಡು ಮಾಡಿದ ಪುಣ್ಯ ಪಾಪದ ತಂಡವನು ತೆರಹರಣವಿಲ್ಲದೆ (ಕುಮಾರವ್ಯಾ. ೩-೦೨೦) ; ಎನ್ನ ಪೀಡಿಸಿ ಪರಮಭಂಡನ ಮಾಡಿ ನಿನ್ನ ಮುಯ್ಯಿಕೆ ಮುಯ್ಯಿ ತೀರಿಸಿಕೊಂಡೆಯ್ಯ (ಪುರಂದ ೦-೬೫-೨). ೮. ದಾಟು ; ಕ್ರಮಿಸು : ದೂರೀಕೃತ ಮಾರ್ಗವನಂತರಿಕ್ಷದ ತೀರಿಸಿಯಾಕ್ಷಣದಲ್ಲಿ ದ್ವಾರಕೆ ಬಹಿರ್ಭಾಗದೊಳೀದಾಗ (ಪೋಚಿಕ. ೩೦-೦೩). ೯. ಮೆರುಗುಕೊಡು ; ನಯಗೊಳಿಸು (?) : ಕಾರ್ಗಾಲದ ಕುಡುಮಿಂಚಿನ ಕಿರುಳಂ ತೀರಿಸಿ ಕಿರ್ದ ರೂಪಿನ ಪೊಸಮುತ್ತಿಂ ಕಡೆದಾ ಪರಿಜೆನೆ .... ಕರಮೆಸೆದಂ ಭೂಪತಿ ಪುರಸತಿಯರ ಕಣ್ಗಳ ಕದಿರಿಂದ (ಜಯನೃ. ೧೦-೫೬). [ತೀರ್ + – ಇಸು$_3$]

**ತೀರು$_1$** 'ತೀರ್' ನೋ.

**ತೀರು$_2$** (ನಾ). ೧. ತೀರ್ಮಾನ; ತೀರ್ಪು : (✱). ೨. ಅಂತ್ಯ; ಸಮಾಪ್ತಿ; ಮುಕ್ತಾಯ : ಆ ಮಹಾನಾಟ್ಯದೇರಂ ತೀರಂ . . . ಭಾವಿಸಿ (ಗಚೀಚ. ೨೩-೬೦೦). ೩. ರೀತಿ ; ಕ್ರಮ : ಮಾರುತ ಸುತನ ಶರೀರವ ಕಾಣದ ತೀರಿ ನೊಳಸ್ತದ ಕೂರಲಗುಗಳಂ ಭೋರನೆ ಸುರಿಯಲು (ಹನುಮ. ೬೨) ; ನಳಿ ನಾಳಿಗಳಿಗೆ ಪೋಣಿಸಿ ಪೇಳ್ವ ತೀರಿನಿಂ ಪಟ್ಟರಣನೀಕ ಜೇಂಕರಿಸುತ್ತೆ ಜಲಜಾತಗಳಿಗೆರಗಲು (ನವರೋ.೧೧-೪೨); ದೊಡ್ಡ ಮಳೆ ಬಂದರೆ ಹಾಗಲ್ಲ ; ಅದರ ರೀತಿ ಬೇರೆ ... ಎಷ್ಟಾದರೂ ಅದರದು ದೊಡ್ಡ ತೀರು (ಕಾಲಕ್ಷ. II, ೧೧೬೫). ೪. ಹಿಂತಿರುಗಿಸುವಿಕೆ ; ಸಂದಾಯಮಾಡುವಿಕೆ. ' ತೀರುವಳಿ ' ಪರಾ. ೫. ಒಪ್ಪ ; ಮೆರುಗು : (✱). [ < ತೀರ್ ]

**ತೀರು$_3$** (ನಾ). ೧. ಅಂಬು ; ಸರಳು ; ಬಾಣ : ಸಾಣೆಯೊಳ್ ತೀಡಿದ ಮಾರನ ತೀರಿನಂತಿರುವ ಕೊರೆನೋಟ (ಶಾಗಂಧಿ. ೨೨೪-೬) : ಬೆಳ್ಳಿ ಮೇಲೆ ಚಿನದ ಮುಲಾಮು ಕಮಾನು ೧ ತೀರು ೧ (ಎಪಿ. XIV, ನಂಜನ. ೨೯೨- ಪುಟ. ೦೪೦ ; 1847). ೨. ತೊಲೆ ; ಅನಿಕೆ : ಛಾವಣಿಗೆ ಹಾಕಿರುವುದು ತೆಂಗಿನ ತೀರು (ರೂಢಿ). ೩. ಗುಡಿಸಲು ; ಚಪ್ಪರ : ತೀರಿಲ್ಲ ಕಿಟುವಟವಿಲ್ಲ ಜಾಭ ಮಾತ್ರಕೊಂಬೆಯಪ್ಪು (ಗಾದೆ). [ < ಸಂ. ತೀರ ]

**ತೀರುಕಣೆ** 'ತೀರ್ಕಣೆ' ನೋ.

**ತೀರುಗಡೆ** 'ತೀರ್ಗಡೆ' ನೋ.

**ತೀರುಗಾಲ** (ನಾ). ಅಂತ್ಯಕಾಲ ; ಸಾಯುವ ಹೊತ್ತು ; ಕೊನೆಗಾಲ : ಬಲ ಬಿಟ್ಟು ಹೊಡೆದು ಕರ್ಣನನ್ನು ಕೊಲ್ಲು . . . ಅವನಿಗೆ ತೀರುಗಾಲ ಬಂದಿದೆ (ಪತಥಾ. ೨೪೮). [ತೀರು$_1$ (< ತೀರ್) + ಕಾಲ]

**ತೀರುತ**, ತೀಟ್ಟ (ನಾ). ೧. = ತೀರ್ಥ ೧ : ಅಲ್ಲ ಜಲಮಯವಿದುವೆ ತೀರು [ಪಾಶಾಂ. ೦]ತ (ನಿಘಾಗ. ೧೧-೬೫-೦೪). Δ **ತೀಟ್ಟ :** ೨. = ತೀರ್ಥ ೩: ಸ್ವಸ್ತಿಶ್ರೀ ಜಮ್ಬು ನಾಯ್ಗರ್ ತೀಟ್ಟದೊಳ್ನೋನ್ತು ಮುಡಿಪ್ಪಿದರ್ (ಎಪಿ. II, ೧೮ ; 700) : ಶ್ರೀಮದ್ ಬೆಟ್ಟದ×ಪೊ×ನ ಮಗ್ಗ ವೃಜಬ್ಬೆ [ರ]ಬ್ಬಿಷ್ಟು ತೀಟ್ಟದೊಳ ನೊನ್ತು ಸನ್ಯಸನಂ (ಎಪಿ. II, ೬೮-೩ ; 10ನೆಯ ಶತ ?). [< ಸಂ. ತೀರ್ಥ ]

**ತೀರುಪಡಿ** 'ತೀರ್ಪಡಿ' ನೋ.

**ತೀರುವಳಿ** (ನಾ). ೧. ತೀರಿಸುವಿಕೆ ; ಸಂದಾಯಮಾಡುವಿಕೆ : ವೇದರೂಪವಾದ ಸಾಲದ ತೀರುವಳಿಯ ಕ್ರಮವು ಹೀಗೆ (ನೀಟ್ಯು. ೬೭) ೨. ಇತ್ಯರ್ಥಪಡಿಸುವಿಕೆ : " ತೀರುವಳಿ ; ತೀರ್ವೆ " Settlement (ಪತ್ರಿಸಿ. ೭೪). [ ತೀರು$_2$ + – ವಳಿ$_1$ ]

**ತೀರುವೆ** 'ತೀರ್ವೆ' ನೋ.

ಮಾತಂಗ ನೀರ್ಗೈದುವುವು (ಕಂಸವಿ. ೨-೩೭). ತುಂಬೆವಿಂಡು : ಝೇಂಕರಿಸಿ ತುಂಬಿವಿಂಡೆಯ್ದೆ ಮುಸುಱಲು (ವೀಕ್ಷ್ಮ ಪು. ೩-೧೭-೭).
[ತುಂಬಿ$_1$ + ಪಿಂಡು$_2$]

**ತುಂಬಿವೆಣ್** (ನಾ). ಹೆಣ್ಣುದುಂಬಿ ; ಭ್ರಮರಿ : (೩).
[ತುಂಬಿ$_1$ + ಪೆಣ್]

**ತುಂಬಿವೆದೆ** (ನಾ). ದಂಬಿಗಳಿಂದಾದ ಹೆದೆ ; (ಮನ್ಮಥನ ಬಿಲ್ಲಿನ) ಹೆದೆ ; P ಮನ್ಮಥನಿಗೆ ಕಬ್ಬಿನ ಬಿಲ್ಲು, ಅದಕ್ಕೆ ದಂಬಿಗಳ ಸಾಲೇ ಹೆದೆ ಎಂಬುದುಂ ಕವಿಸಮಯ : ಕಬ್ಬುವಿಲ್ಲುಂಬಿವೆದೆ ಪೂಸರ ಲ್ಲಾಗ್ದೆಸಲ್ ನಿಬ್ಬರವಿಂದೆಂದು ಮದನಂ...ಸಾಹಸದೊಳಳವಡಿಸಿಕೊಂಡು (ಕ್ಷಮಿಥಾ. ೩-೧೭). [ತುಂಬಿ$_1$ + ಪೆದೆ]

**ತುಂಬಿಸು** (ಕ್ರಿ). ೧. ತುಂಬುವಂತೆ ಮಾಡು ; ಭರ್ತಿಮಾಡು : ಭಕ್ತಪ್ರತತಿಗಳ ಚರಣಂಗಳಂ ತೊಳೆದು ಅವರ ತತ್ಪಾದಾಂಬುಗಳನಭಿನವಕಳಶವಿಸರದೊಳು ತುಂಬಿಸಿ (ಬಸಪು. ೪೬-೩೩); ಸುಗುಣೆ ಕೇಳ್ ಕಾಟಂಕ ಸೂಡಿದ ತವ ಕಿವಿಗೊಳನ ಕೋಡಿಬೀಳ್ವಂತೆ ತುಂಬಿಸುವೆನು ಕಡುರುಚಿವಾಡಿ ಮೋಹನ ತರಂಗಿಣಿಯು (ಮೋಹತ. ೬-೨); ಅಂಬರವನಂಬಿನಿಂ ತುಂಬಿಸಿದರು (ಕ್ಷಮಿಥಾ. ೪-೨೦); ಮುಖದ ಮೇಲೆ ದೀಪದ ಬೆಳಕು ಬಿದ್ದು ಕಾಂತಿಯಿಂದ ತುಂಬಿಸಿತ್ತು (ಹಂಗಾಳ್ತ. ೧೪೭). ೨. ಪರಿಪೂರ್ಣವಾಗುವಂತೆ ಮಾಡು ; ಸಫಲಗೊಳಿಸು : ಕೃಪೆಯನು ಬಿಂದಿಸಿ, ಬಾಳನು ತುಂಬಿಸಿ, ತೋಟದೊಳರಳಿದ ಹೂ ತಾನಾದುದು ಶ್ರೀಮದ್ಭಗವದ್ಗೀತೆ (ಅನೀಕೇ. ೩೨-೧೫). ೩. ಹೋದುದನ್ನು ಸರಿಪಡಿಸಿಕೊಳ್ಳು ; ನಷ್ಟವನ್ನು ಸರಿಗಟ್ಟು : ಅದರೇನು ? ನಾವು ವೆಚ್ಚ ತುಂಬಿಸಿಕೊಳ್ಳುತ್ತೇವೆ (ಸ್ವ.ತೀ. ೨೦೫). ೪. ಹಸು, ಎಮ್ಮೆ ಮೊದಲಾದ ಹೆಣ್ಣುಪ್ರಾಣಿಗಳಿಗೆ ಗರ್ಭಧಾರಣೆ ಮಾಡಿಸು ; ಹೋರಿಕೊಡಿಸು ; ಗೂಳಿಹಾರಿಸು ; ಕಟ್ಟಿಸು ; ಜೋಡಿಯಾಗಿಸು (ಕರಾ) : ಈ ಹಿಂಡಿಯು ಬಹಳ ಉಷ್ಣವಿರುವುದರಿಂದ ಗಬ್ಬದ್ದ ದನಗಳಿಗೆ ಮತ್ತು ಅದೇ ತುಂಬಿಸಿದ ದನಗಳಿಗೆ ಕೊಡುವುದು ಒಳ್ಳೆಯದಲ್ಲ (ಗೋಶಾಸ್ತ್ರ. ೮೦). ೫. (ಆಲಂ) ಹೋಗಲಾಡಿಸು ; ಕಳೆ ; ನಿವಾರಿಸು : ಸತಿಯ ದುಗುಡವನಿಪ್ಪ ಕತ್ತಲೆಯಾ ತುಂಬಿಸುವ ಮಣಿಜ್ಯೋತಿ ಬಂದಪುದೆಂಬವೊಲು ಮಣಿಭೂಷಣದ್ಯುತಿ ಮುಂಬರಿವುತಿರೆ ಬಂದನಾಳಿಯ ಹರಣ ಬಂದಂತೆ (ಸಾಳ್ವಭಾ. ೩-೧೭). [ತುಂಬು$_1$ + – ಇಸು$_1$]

**ತುಂಬೀಫಲ** (ನಾ). = ತುಂಬಿ$_1$ ೧ : ಮಣ್ಣೊಳ್ ಮೆತ್ತಿದ ತುಂಬೀಫಲಂ ನೀರೊಳಿಕ್ಕಿದಾಗಳಟ್ಟು ಅಡಿಯೊಳಿರ್ದ ಮಣ್ ಕರಗೆ (ಜೀವಸಂ. ೦೫೮-೯ ವ).
[ಸಂ.]

**ತುಂಬು**$_1$ (ಕ್ರಿ). ೧. ಭರ್ತಿಯಾಗು ; ಪೂರ್ಣವಾಗು : "ತುಂಬು-ಪೂರಣೇ, ವೃಂತ (ಹೂವಿನ ಕಾವು), ಜಲಪ್ರಣಾಲ್ಯೋಃ (ತೂಬು)" (ಶಮಧಾ) ; ಗಗನದ ಮೇಘಂಗಳು ಸುರಿದಲ್ಲಿ ಒಂದು ಹಿರಿಯ ಕೆಱೆ ತುಂಬಿತ್ತು (ಅವತಂ. ೦೦೯-೪೯೪) ; ಎಲ್ಲ ಪುರಾತನರು ಕರೆದು ಭಕ್ಷಿಭಿಕ್ಷೆಯನಿಕ್ಕಿದಡೆ ಎನ್ನ ಪಾತ್ರ ತುಂಬಿತ್ತು (ಬಸವ. ೩೪೯) : ಭಾಂಡ ತುಂಬಿತು ಮತ್ತೆ (ಕುಮಾ.ಅ. ೦೨೩, ೧೭-೪೦) ; ಮಂಜು ಸುರಿಯಲೊಡನೆ ಕೆಱೆ ತುಂಬುವುದೆ (ನಳಚ. ೨-೦೯). ೨. ಆವರಿಸಲ್ಪಡು ; ಆವೃತವಾಗು : ಎಳಮಾವು ಕೆಂದಳಿರ ಪೂವಿನ ಬಿಳ್ದೊಱೆಯಿಂ ಬಟಲ್ದು ತುಂಬಿಗಳಿನೆ ತುಂಬಿ ಕೋಗಿಲೆಯ ಬಗ್ಗಿಸೆ ಸುಗ್ಗಿಯೊಳೊಪ್ಪುವಂತೆವೋಲ್ (ಪಂಪಭಾ. ೦-೮) ; ಮನೆಯೊಳಗೆ ರಜ ತುಂಬಿ ತನುವಿನೊಳಗೆ ಹುಸಿ ತುಂಬಿ (ಬಸವ. ೯೭). ೩. ಹರಡು ; ವ್ಯಾಪಿಸು : ವರಕಪೀಂದ್ರನ ರಭಸವೇ ತುಂಬಿತು ಜಗತ್ರಯವ (ಕುಮಾ.ರಾ.ೇ. ೦೩-೪) ; ಸವೆಯದ ಕರ್ಗತ್ತಲೆಯ ತುಂಬಿದಳು ಹುಣ್ಣಿಮೆಯ ಬೆಳ್ದಿಂಗಳ ಕಿಡಿಸಿ (ಮೋಹತ. ೫೯-೮). ೪. ಕಾಲ ಕಳೆದುಹೋಗು ; ಅವಧಿಯು ಮುಗಿ ; ಗಡುವು ಪೂರ್ಣವಾಗು,—ಪೂರೈಸು : ಪಾಂಡವರು ಬಂಧು ದ್ರೋಹಿಗಳು ತಮ್ಮವಧಿ ತುಂಬಲು ಕೇಡ ತಹರು (ಕುಮಾ.ಅ. ೦೭-೦೭) ತುಂಬಿದವು ನವಮಾಸ (ತೊರವೆರಾ. ೦-೮-೪); ತುಂಬಲು ನವಮಾಸ ಶುಭವಾದ ನರಸಿಂಹಗಿಂಬಾದ ವರಜಯಂತಿಯಲಿ ಕುಂಭಿನಿಗಧಿಕ ಶೂರನ ಕುವರನ ಗುರುವಂಬೆ ಪಡೆದಳು (ಕಂಸವಿ. ೪-೬೨). ೫. ಸೂಸು ; ತುಳುಕು : ಅಂಟೆ ಕಣ್ಣ ನೀರಂ ತುಂಬೆ (ಪಂಪಭಾ. ೦-೭೭ ವ) ; ಕಂಗಳು ತುಂಬಿದ ಬಳಿಕ ನೋಡಲಿಲ್ಲ (ಬಸವ. ೮೩೨); ಕೊಂಡು ಕೊನೆವುಕ್ಕಿರ್ವ ತಾಯ್ಪಂದೆಗಳಂ ಕಂಡು ಕಂಡ ನೆರವಿಯೆಲ್ಲಂ ಘುಳುಘುಳನೆ ಕಣ್ಣ ನೀರಂ ತುಂಬುತ್ತಿರಲ್ (ಸಂಶಿಕ. ೨-೬೧); ತುಂಬಿದನು ಕಂಬನಿಯನಾತ್ಮನಿತಂಬಿನಿಯ ಮೊಗ ನೋಡಿ (ತೊರವೆರಾ. ೨-೪-೦೫). ೬. ಒದಗಿಸು ; ಉಂಟುಮಾಡು : ಅಂಬುಜನೇತ್ರೆಯ ಪೊಂಬಾಳೆದೊಡೆಗಳು ತುಂಬಿದುವು ಕಣ್ಗೆ ಕೌತುಕವ (ಕಂಸವಿ. ೯-೨೦). ೭. ದಪ್ಪವಾಗು ; ಪುಷ್ಟವಾಗು : ಮಗು ಮೈಕೈ ತುಂಬಿಕೊಂಡು ಚೆನ್ನಾಗಿದೆ (ರೂಢಿ). ೮. ಗರ್ಭ ಕೂಡು ; ಗರ್ಭ ನಿಲ್ಲು : ಪುಳುಂಬಮವನೆಸೆತಾಗೆ ಗಬ್ಬವು ತುಂಬಿದರಲೆಯನೊಡಲ ಶಿಶು ಪುಚ್ಚೆ ೪ ಸಿ ಬಿರ್ದು ನಿಲೆ (ಸಾಳ್ವಭಾ. ೩-೨೮). ೯. (ದೈವ, ಭೂತಗಳ ವಿಷಯದಲ್ಲಿ) ಆವೇಶ ಉಂಟಾಗು : ಅವನ ಮೇಲೆ ದೇವರು ತುಂಬಿ ಬಾದಿದೆ (ರೂಢಿ). ೧೦. ರಚಿಸು ; ಮಾಡು ; ಹಾಕು : ಕಂಭಕ್ಕದಿರಾಗಿ ತುಂಬಿರಿ ಹಸೆಗೊಳ ಕಂಭದಲ್ಲಾವೆ ಅರಗಿಣಿ (ಹಳ್ಳಿಪಾ. ೩೦). ೧೧. ಹಣ ಪಾವತಿ ಮಾಡು ; ಹಣ ಕಟ್ಟು : ಸಾಲದ ಹಣ ತುಂಬಬೇಕೆಂದು ನೋಟೀಸು ಬಂದಿದೆ (ರೂಢಿ). ೧೨. (ಆಲಂ) ನಂದಿಸು ; ಆರಿಸು ; ನಿವಾರಿಸು : ಚಾವೇಯ ಹಾಸೀತೆ ದೀಪವ ತುಂಬೈತೆ ನೀಲವೆ ತೋಳಾಗೆ ಮಲಗೈತೆ (ನಾಪದ. ೯೩) : ಒಬ್ಬರ ಕೊರತೆಯನೊಬ್ಬರು ತುಂಬಿದರಿಬ್ಬರಿಗೂ ಸುಖವುಂಟು (ಇಂಚರಾ. ೨೦೦-೯೪). ೧೩. (ಆಲಂ) ಮುಗಿದುಹೋಗು : ಕುಂಕುಮ ತುಂಬಿದೆ. ಅಂಗಡಿಯಿಂದ ತರಬೇಕು (ರೂಢಿ). 'ಹೆಚ್ಚು$_1$' ಪರಾ.

ತುಂಬಿಕೊಡು=ಕೊರತೆಯನ್ನು ಹೋಗಲಾಡಿಸು : ತಮ್ಮಿಂದಾದ ನಷ್ಟವನ್ನು ತುಂಬಿಕೊಡಲು ಅವರು ತಯಾರಿದ್ದರು (ರೂಢಿ). ತುಂಬಿಗರೆ= (ತುಂಬಿಯಂತೆ ಇಂಪಾಗಿ)ಧ್ವನಿಮಾಡು : ಪಂಬಲಿಸುತ ಪಾಲ್ಗೊಲಿವೂಡು ತೆಳೆವಟ್ಟು ಚುಂಬಿಸುತವೆ ಮೊಗ ನೋಡಿ ತುಂಬಿಗರೆವ ತೊಟ್ಟಿಲ ಹಸುಳೆಯ ನೆತ್ತದಂಬುಜಮುಖಿಯು ಬಾಳೇನೊ (ಶ್ರೀಪಾಲ. ೨-೩೩) ; ಭರದಿಂದಂಬೆ ಗಾಳಿಡುತ್ತೊಯ್ಯನೆ ತುಂಬಿಗರೆವುತ ದಾದಿಯ ಕೈಯ ಬೆರಳ ಪಿಡಿದು ತರ್ಳನಡೆಯನು ನಡೆವೆನ್ನ ತರುಣನನೆಂದಿಗೀಕ್ಷಿಪೆನೊ (ಪಂಪ್ರಶಾಂ. ೩-೦೦೬). ತುಂಬಿಡು=೧. ಭರ್ತಿಮಾಡಿ ಇಡು : ಮೊನ್ನೆ ಬೇಸಿಗೆಯಲ್ಲಿ ಲಟ್ಟಿಸಿದ ಹಪ್ಪಳ, ಇಟ್ಟ ಸಂಡಿಗೆ, ತುಂಬಿಟ್ಟ ಉಪ್ಪಿನಕಾಯಿ ಭರಣಿ ಎಲ್ಲ ತೆರೆದಿಡು (ನಂಮು. ೦೭-೮) ; ಹಾಲ್ಜೇನನ್ನೇ ತನ್ನ ಮೈಯಲ್ಲಿ ತುಂಬಿಟ್ಟುಕೊಂಡು ಬೆಳೆದಳು ಅವಳು (ಹೊಸಕ್ಷ. ೩).೨. ಮೀಸಲಾಗಿಡು : ಹೊರಗೆ ಹೋಗಿದ್ದ ಮಗನಿಗೆಂದು ತಿಂಡಿಯನ್ನು ತುಂಬಿಟ್ಟಿದ್ದರು (ರೂಢಿ). ತುಂಬಿ ತುಳುಕು = ಭರ್ತಿಯಾಗಿ ಹೊರಚೆಲ್ಲುವಂತಿರು ; ಸಂಪೂರ್ಣವಾಗಿ ತುಂಬಿರು : ದೇವ ಸಂಗನಬಸವ ತುಂಬಿ ತುಳುಕದ ಬಸವ (ಬಸರ. ೯-೦೮); ನಿಮಗೆಲ್ಲ ರಕ್ತ ತುಂಬಿ ತುಳುಕುತ್ತದೆ (ಕಾರೂರ. ೦೩ ಕಥಾಸಾರ). ತುಂಬಿದ ಕೊಡ = ೧. ಭರ್ತಿಯಾದ ಕೊಡ : ಎದುರಿನಿಂದ ಹೆಂಗಸೊಬ್ಬಳು ತುಂಬಿದ ಕೊಡವನ್ನು ಹೊತ್ತು ತರುತ್ತಿದ್ದುದನ್ನು ಕಂಡು ಸಂತುಷ್ಟರಾದರು (ರೂಢಿ). ೨. ಸದ್ಗುಣ, ಧನ ಮೊದಲಾದಂವುಗಳಿಂದ ತುಂಬಿದ ವ್ಯಕ್ತಿ ; ಗಂಭೀರತೆಯಿಂದ ಕೂಡಿದ ವ್ಯಕ್ತಿ : ತುಂಬಿದ ಕೊಡ ತುಳುಕುವುದಿಲ್ಲ (ಗಾದೆ) ; ಅವರು ತುಂಬಿದ ಕೊಡ (ರೂಢಿ). ತುಂಬಿದ ಸಂಸಾರ = ಹೆಚ್ಚು ಮಕ್ಕಳಿಂದ ಕೂಡಿದ ಕುಟುಂಬ ; ಸಮೃದ್ಧ ಸಂಸಾರ : ಅವರದು ತುಂಬಿದ ಸಂಸಾರ (ರೂಢಿ). ತುಂಬಿ ಬರು=೧. ಕೂಡಿಕೊಳ್ಳು : ಮೊಘಲ್ ಕಲೆಯಲ್ಲಿ ಅಷ್ಟೊಂದು ಸೊಬಗು, ವೈಭವ ತುಂಬಿ ಬರಲು ಇವರುಗಳು ಬಹುಮಟ್ಟಿಗೆ

ಕಾರಣರಾದರು (ಛಾಂದ. ೩೨೮). ೨. ನಷ್ಟ ಪರಿಹಾರವಾಗು ; ಸರಿದೂಗು : ನುಡಿಯಂತೆ ನಡೆಯದಿದ್ದರೆ ನಡೆಯಂತೆ ನುಡಿಯದಿದ್ದರೆ ದಿವ್ಯ ಜೀವನದಲ್ಲಿ ಅದೊಂದು ದೊಡ್ಡ ಕುಂದು, ತುಂಬಿಬಾರದ ಕೊರತೆ (ಮೋಕಮೂ. ೬ ಪ್ರಸ್ತಾವನೆ) ; ಅವನ ಕಾಲಿನ ಕುಂಟುತನದ ಊನವು ಅವನ ಪ್ರಸಂಗಾವಧಾನದ ಚತುರತೆಯಲ್ಲಿ ತುಂಬಿ ಬಂದಿತ್ತು (ಕಂಬಹು. ೧೩). ತುಂಬಿರು = ಭರ್ತಿಯಾಗಿರು ; ಹರಡಿರು : ವಂದಿತಾವುಳವುಕುಟ ವರ್ಧನರಿಂದ ತುಂಬಿಹುದೆಂಟುಯೋಜನದಂದವದು (ಸುಕುಶ. ೩-೮೬) ; ಅದಱಿನಾ ತಱುವಾಯ ಮನೆಯೊಳು ಗದೆ ಶರಾಸನ ಖಡ್ಗ ಮುದ್ಗರವಧಟು ಚಕ್ರ ತ್ರಿಶೂಲ ತುಂಬಿರೆ (ಕುವ್ಯಾಅ. ೭೧೩. ೩೨-೩೨).

[ದೇ. ಕ ತುಳು. ತುಂಬು ; ಕೊಡ. ದುಂಬ್]

**ತುಂಬು₂** (ನಾ). ಸಂಪೂರ್ಣವಾಗಿರುವಿಕೆ ; ಪೂರ್ಣತೆ ; ಅತಿಶಯಂ ; ಬಾಹುಳ್ಯ : ಅವ ತುಂಬಿಹುದಿಲ್ಲಿ ಎರೆವವರಿಗೆರೆವಷ್ಟನೀವ ಮನ ತುಂಬು ವಷ್ಟರಿವ ಎದೆ ತುಂಬುವಷ್ಟೊಲವ ಪಡೆಯೆ ಜೀವ ? (ಮುರದೀ. ೩೦-೯).

[ <ತುಂಬು₁ ]

**ತುಂಬು₃** 'ತೂಂಬು' ನೋ.

**ತುಂಬು₄**, **ತಂಬ್ಬೆ** (ನಾ). ೧. ಹಣ್ಣು, ಕಾಯಿ, ಹೂವು ಮೊದಲಾದಂವುಗಳ ತೊಟ್ಟು,—ನಾಳ ; ವೃಂತ ; ತೊಡಂಬೆ : "ತುಂಬು— ಪೂರಣೇ, ವೃಂತ (ಹೂವಿನ ಕಾವು), ಜಲಪ್ರಣಾಲ್ಯೋಃ (ತೂಬು)" (ಶಮದಾ) ; "ತೊಟ್ಟು ತುಂಬೆನೆ ವೃಂತನಾಮವೆಂದೇ ತಿಳಿವುದು" (ಶಬ್ದಮಂ. ೨೩); ಉದುರಿಹೋದ ಹೂವಿನ ತುಂಬಿನತ್ತ ಲಲಿತಾ ತದೇಕ ಚಿತ್ತದಿಂದ ನಿಟ್ಟಿಸತೊಡಗಿದಳು (ಕನಸಿ. ೧); ಕಿತ್ತಳೇಹಣ್ಣು ಬುಡದಲ್ಲಿಯೂ ತುಂಬಿನಲ್ಲಿಯೂ ತುಸು ಕುಗ್ಗಿರುವಂತೆ ಪೃಥ್ವಿಯಾದರೂ ಉತ್ತರ ದಕ್ಷಿಣ ಧ್ರುವಗಳೆಡೆಗೆ ಸ್ವಲ್ಪ ಕುಗ್ಗಿಯದೆ (ಮುಂಬಯಿ. ೪-೩೪); ಮೆಣಸಿನಕಾಯಿಯ ತುಂಬು ಮುರಿದು ಅವನ್ನಾದರೂ ತಾಟನ ಬದಿಗಿರಿಸಿದಳು (ಕಳ್ಳಕೃ. ೨೨೦). ೨. ಒಂದು ಬಗೆಯ ಆಭರಣ. 'ಚಳತುಂಬು' ಪರಾ. ತುಂಬ್ಬೆ : ೧. "ತುಂಬಿಯೆನೆ ತೊಟ್ಟು" (ಕಕರ. ೪೬).

[ ದೇ. ಕ ತಮಿ. ಮಲ. ತುಮ್ಬು = ತುದಿ, ಅಂಚು ]

**ತುಂಬುಕಣ್ಣು** 'ತುಂಬುಗಣ್ಣು' ನೋ.

**ತುಂಬುಗ** (ನಾ). ಭರ್ತಿಮಾಡುವವನು ; ತುಂಬುವವನು ; "ಪ್ರಾಯುನ್, ಪ್ರಾಪಕಃ, ಪ್ರಾತಾ ಈ ಮೂರು ತುಂಬುಗಂ" (ಕಾಶಕ್ಕ. ೦೬೬).

[ ತುಂಬು₂ + – ಗ₃ ]

**ತುಂಬುಗಣ** (ನಾ). (ಧಾನ್ಯಗಳನ್ನು) ರಾಶಿ ಹಾಕಿರುವ ಕಣ : ಇವೊತ್ತು ತುಂಬುಗಣದ ಪೂಜೆ ಇದೆ (ರೂಢಿ). [ ತುಂಬು₂ + ಕಣ₁ (<ಕಳ₃)]

**ತುಂಬುಗಣ್ಣು**, **ತುಂಬುಕಣ್ಣು** (ನಾ). ೧. ಅಗಲವಾದ ಕಣ್ಣು ; ದೊಡ್ಡಕಣ್ಣು : ತುಂಬುಗಣ್ಣಲ್ಲಿ ನೋಡಿದಳು (ಕೃದ್ಮವಿ. ೦೨೫) ; ತನ್ನ ತುಂಬುಗಣ್ಣುಗಳನ್ನು ಹೊರಹೊರಳಿಸಿ ನೋಡುತ್ತ ಮರವಣಿಗೆಯ ಹಿಂದೆ ಸಾಗಿದಳು (ಫಲಸಂ. ೮೫). ತುಂಬುಕಣ್ಣು : ೨. (ಕಣ್ಣೀರು) ತುಂಬಿದ ಕಣ್ಣು : ಪಾಳುರಾಜಧಾನಿಯನ್ನು ತುಂಬುಕಣ್ಣಿನಿಂದ ನೋಡಿ ... ನಿಟ್ಟುಸಿರಿಟ್ಟು ಪಂಡಿತನನ್ನು ಹಿಂಬಾಲಿಸಿದ (ಚಿರಂಜ. ೩).

[ ತುಂಬು₂ + ಕಣ್ಣು (< ಕಣ್) ]

**ತುಂಬುಗಲ್ಲ** (ನಾ). ತುಂಬಿಕೊಂಡಿರುವ ಗಲ್ಲ ; ದುಂಡನೆಯ ಕೆನ್ನೆ : ಮೊದಲಿನ ತುಂಬುಗಲ್ಲದ ನಗುಮುಖದ ರಮಾ ಎಲ್ಲಿ, ಒಣಗಿದ ಕೃಶಳಾದ ಅಳುಮುಖದ ನೀನೆಲ್ಲಿ ? (ಕುಂಕುಮ. ೫೫). [ ತುಂಬು₂ + ಗಲ್ಲ₁ ]

**ತುಂಬುಗಾಂಭೀರ್ಯ** (ನಾ). ಅಧಿಕವಾದ ಹಿರಿಮೆ ; ದೊಡ್ಡತನ : ತುಂಬುಗಾಂಭೀರ್ಯದಲಿ ಸತ್ಯವನೆ ಎತ್ತಿ ನಿಲಿಸುವನು ಪ್ರಜೆಯ ತಂದೆ (ಹೊಂಗನು. ೬-೮). [ ತುಂಬು₂ + ಗಾಂಭೀರ್ಯ ]

**ತುಂಬುಗಾಯಿ** (ನಾ). ಬದನೆಕಾಯಿ ಮೊದಲಾದ ಇಡಿಕಾಯಿಯೊಳಗೆ ಸಂಭಾರವನ್ನು ತುಂಬಿ ಬೇಯಿಸಿ ಮಾಡಿದ ಪಲ್ಯ : "ತುಂಬುಗಾಯಿ— ಇಡಿಗಾಯಿಪಲ್ಲೆ ; ಬದನೇಕಾಯಿಯ ಪಲ್ಲೆ" (ಕಾನಕೋ. ೬೬); ಅವಳು ಬದನೆಯ ತುಂಬುಗಾಯಿ ಮಾಡುವುದರಲ್ಲಿ ಎತ್ತಿದ ಕೈ (ರೂಢಿ).

[ ತುಂಬು₂ + ಕಾಯಿ₄ (< ಕಾಯ್₄) ]

**ತುಂಬುಗುಂಕುಮ** (ನಾ). ಹಣೆಯಲ್ಲಿ ಇಟ್ಟುಕೊಂಡಿರುವ ಅಗಲವಾದ ಕುಂಕುಮ: ಮುಂಬಯಸಿ ಕೈಗೈದ ಸೊಬಗಿನ ಕಂಬಲರ ಮೈವಚ್ಚ ಕಂಬಲು ತುಂಬುಗುಂಕುಮ ತಿವಿರು ಚೆಂದುಟಿಯುಟ್ಟರುಣವಸನ (ಸಾಳ್ವಭಾ. ೩-೩೪).

[ ತುಂಬು₂ + ಕುಂಕುಮ ]

**ತುಂಬುಗೂದಲು** (ನಾ.) ದಟ್ಟವಾದ ಕೂದಲು; ಇವನು ತುಂಬುಗೂದಲಿನ ಕುಮಾರನಂತೆ ಕಣ್ಣಿಗೆ ಮುದ್ದಾಗಿ ... ಸುಳಿಯುತ್ತಾನೆ (ಛಾಂದ. ೨೮).

[ತುಂಬು₂ + ಕೂದಲು (<ಕೂಂದಲ್)]

**ತುಂಬುಗೆ** (ನಾ). ತುಂಬುವಿಕೆ ; ಭರ್ತಿಯಾಗುವಿಕೆ : "ಪೂರ್ತಿಃ, ಪೂರ್ತಂ ... ಈ ೧೦ ತುಂಬುಗೆ" (ಕಾಶಕ್ಕ. ೦೮೬). [ತುಂಬು₂ + –ಗೆ]

**ತುಂಬುಗೆಡು** (ಕ್ರಿ). ತುಂಬದೆ ಇರು ; ಪೂರ್ಣತೆಯಿಲ್ಲದಿರು : ತುಂಬು ಗೆಟ್ಟ ಅರೆಯಾದ ಬರಿದುಹೋದ ಬಟ್ಟಲ್ಗಳನ್ನು ... ಭರಿಸುತ್ತಿರುವರು (ಚಿಟ್ಟೆಅ. ೮೩-೧೦). [ತುಂಬು₂ + ಕೆಡು₁]

**ತುಂಬುಗೆನ್ನೆ** (ನಾ). = ತುಂಬುಗಲ್ಲ : ತುಂಬುಗೆನ್ನೆ ; ನೀಳವಾದ ಮಾಟವಾದ ಮೂಗು (ಕಳಹು. ೨). [ತುಂಬು₂ + ಕೆನ್ನೆ]

**ತುಂಬುಗೆಯ್** (ನಾ). ಪುಷ್ಟವಾದ ತೋಳು, – ಬಾಹು, – ಭುಜ : ತನ್ನುಳ್ಳ ಬಲ್ಪನಿತಱೊಳಂ ಮುಂತಣ್ಗೆ ನಿಂತಂ ತುಂಬುಗೆಯ್ಯುಕ್ಕುವಿನಂ (ಚಿಕವಂ. ೦೩೪-೦೪). [ತುಂಬು₂ + ಕೆಯ್₂]

**ತುಂಬುಗೊಳ್ಳು** (ಕ್ರಿ). ಭರ್ತಿಯಾಗು; ಅಧಿಕಗೊಳ್ಳು; ಅತಿಶಯವಾಗು: ಮನುಜ ಮನವು ಹರುಷಪಡಲಿ ಎಂಬ ಬಯಕೆ ತುಂಬುಗೊಂಡು ಆಸೆ ಬಲಿತು ಕನಸ ಕಲಿತು (ಮೂತ್ತಿಕಾ. ೦೩-೦೩). [ತುಂಬು₂ + ಕೊಳ್ಳು₁ (<ಕೊಳ್₁)]

**ತುಂಬುಗೋಡಿ** (ನಾ.) ೧. ತುಂಬಿ ಹರಿಯುವ ಕೋಡಿ: ಕೆರೆಯಲ್ಲಿ ತುಂಬು ಗೋಡಿ ಹರಿಯುತ್ತಿದೆ (ರೂಢಿ). ೨. (ಅಲಂ) ಅತ್ಯಧಿಕ ; ಅತಿಶಯ : ಬೊಕ್ಕಸ ಭಂಡಾರಗಳ ತುಂಬುಗೋಡಿಯ ಮಹಾನಿಧಿಯದನ್ನು ಪರಿಪಾಲಿಸಿ ಕೊಳ್ಳಬೇಕೆಂಬ ಆ ಬೆಳ್ಪಳಿಯ ಅರಿವು ನಿನಗೆ ನಿಶ್ಚಯವಾಗಿ ಇಲ್ಲ (ಮಂತ್ರಕ. ೦೦೨-೨೫). [ತುಂಬು₂ + ಕೋಡಿ₁]

**ತುಂಬುಚೀಲ** (ನಾ). ತುಂಬಿರುವ ಚೀಲ ; ಭರ್ತಿಯಾಗಿರುವ ಚೀಲ : ಎದ್ದುಹೋಗಿ ಪೆಟ್ಟಿಗೆದೆರೆದು ನಾಲ್ಕು ತುಂಬುಚೀಲಗಳನ್ನು ಅವರತ್ತಣ್ಗೆ ... ಬಿಸಾಡುವನು (ಚಿಟ್ಟೆಅ. ೫೪-೧೮). [ತುಂಬು₂ + ಚೀಲ]

**ತುಂಬುಚ್ಚು** 'ತೂಂಬುಚುರ್' ನೋ.

**ತುಂಬುಜವ್ವನ** (ನಾ). ತುಂಬಿದ ಹರಯ ; ಪೂರ್ಣವಾದ ಯೌವನ,– ತಾರುಣ್ಯ : ತುಂಬುಜವ್ವನದ ನಿತಂಬಿನಿಯರ ಕುಂಭಕುಚದಿಱುಂಬಿ ನೋಳಿಂಬುವಡೆದು (ರಾಜಶೇ. ೨-೮೪) ; ಅವನು ತುಂಬುಜವ್ವನವನ್ನು ಧರಿಸಿದನು (ಮಹಶ. ೬೪). [ತುಂಬು₂ + ಜವ್ವನ]

**ತುಂಬುಜವ್ವನೆ** (ನಾ). ೧. ತುಂಬು ಹರೆಯದ ಹೆಂಗಸು; ನವತರುಣಿ ; ಯುವತಿ : ನನೆಯುಂಬುವಿಡಿದಂಜಿಸುವ ಬೆಡಗಿನ ತುಂಬುಜವ್ವನೆ ನಾಲ್ಕು ನೀರನು ಮಿಂದಳೊಲವಿಂದ (ಸಾಳ್ವಭಾ. ೦೩-೩೪). ೨. ತುಂಬಿದ ಎದೆಯುಳ್ಳವಳು. 'ಕಕ್ಕಸಜವ್ವನೆ' ಹೋ. [ತುಂಬುಜವ್ವನ + – ಎ₃]

**ತುಂಬುಜೀವನ** (ನಾ). ಪರಿಪೂರ್ಣವಾದ ಜೀವನ ; ತೃಪ್ತಿಯ ಬಾಳು: ತುಂಬುಜೀವನದ ತುಂಬನುಭಾವದ ಬಿಂಬಾಧರ ಶಿವಶಾಂಭವಿಯ ಮಗಳು (ಸಿದ್ಧಪು. ೨-೯೮) ; ಇದು ತುಂಬುಜೀವನದ ಭಾವಾನುಭಾವಗಳ ಪರಿಪಕ್ವತೆಯ ಫಲ (ಸಾಹಿಸ. ೩೪) : ವೇದಕಾಲದ ತುಂಬುಜೀವನದಲ್ಲಿ ಬ್ರಹ್ಮ

ವಾದಿನಿಯರಾದ ಮಹಿಳೆಯರು ತಮ್ಮ ಭಾವನೆಗಳನ್ನು ಸಾಹಿತ್ಯದ ಮೂಲಕ ವ್ಯಕ್ತಗೊಳಿಸಿದರು (ಕರ್ನಾಕ. ೩೯). [ತುಂಬು$_2$ + ಜೀವನ]

**ತುಂಬುಣ್ಣು** (ಕ್ರಿ). ಚೆನ್ನಾಗಿ ಊಟಮಾಡು ; ಹೊಟ್ಟೆತುಂಬ ತಿನ್ನು : ಉಂಬ ಬಾಯ್ ಕಾನಾಗಿ ಉಂಡೆಲ್ಲರಂ ತಣಿಪಿ ತುಂಬುಂಡು [ಪಾಠಾಂ. ಬಲದು] ಪಲವು ಕದಳಿಗಳೆಲ್ಲ ದಣಿದವೆಂದೆಂಬುದಂ ಮಾಡಿ ತೋಱಿದ ಮಹಾಪ್ರಭುವರನ (ಲಶಿಚಂ. ೩೨-೩೩). [ತುಂಬು$_2$ + ಉಣ್ಣು (<ಉಣ್)]

**ತುಂಬುದಣ್ಗದಿರ** (ನಾ). ಪೂರ್ಣಚಂದ್ರ; ಹುಣ್ಣಿಮೆಚಂದ್ರ: ನುಣ್ಗುರುಳ ನೀಱಿಗೆ ಬೆಡಂಗವುರ್ದೆಸೆವ ತುಂಬುದಣ್ಗದಿರನಂದದ ಮೊಗದ ಚೆಲ್ವಿಗೆ ... ಪೆಣ್ಗಳರಸಿಗೆ ಗರ್ಭಚಿಹ್ನಮಂಕುರಿಸಿದುದದಂ ಪೊಗಳ್ವ ಕವಿ ಯಾವನೋ (ಶಬ್ದ್ಯಕಾ. ೨-೩೮). [ತುಂಬು$_2$ + ತಣ್ಗದಿರ]

**ತುಂಬುದಿಂಗಳು** (ನಾ). =ತುಂಬುದಣ್ಗದಿರ: ತುಂಬುದಿಂಗಳ ಮೊಗ ತುಱು ಗೆಮೆಯಲರ್ಗಣ್ ತುಂಬಿಗುರುಳು (ಶ್ರೀಪಾಲ. ೩-೨೯) ; ತುಂಬುದಿಂಗಳು ಮೊಗದ ನಸುನಗೆಯೆಂಬ ಬಾಂದೊಱೆದೆರೆವೊಯಿದು ... ಅಂಬುಮೆಱೆ ವರು ಪಥಿಕರಿಗೆ (ಸಾಳ್ವಭಾ. ೧-೬೨) ; ತುಂಬುದಿಂಗಳ ಕನಕಬಿಂಬಕ್ಕೆ ಪೊನ್ ತನಂ ಬಾಡಿ, ಮೂಡಿದುದು ಬೆಳ್ಪಿಯತನಂ (ಶ್ರೀರಾಮಾ. ೯೮೦-೧೬೩). [ತುಂಬು$_2$ + ತಿಂಗಳು (<ತಿಂಗಳ್)]

**ತುಂಬುದೆರೆ** (ನಾ). ಸಂಪೂರ್ಣವಾಗಿ ಮುಚ್ಚಿರುವ ತೆರೆ, – ಪರದೆ: ಚಂದ್ರಗಾವಿಯ ಮೇಲ್ಕಟ್ಟನೊಳುವಣ್ಣದ ತುಂಬುದೆರೆಯ... ಮುಚ್ಚದೆ ಸೆಳೆದಪ್ಪೊ ಮೋಹನರೂಪ (ಕಂಸವಿ. ೯-೦೮೮). [ತುಂಬು$_2$ + ತೆರೆ$_4$]

**ತುಂಬುನಂಬಿಗೆ** (ನಾ). ಪೂರ್ತಿನಂಬಿಕೆ ; ಸಂಪೂರ್ಣವಿಶ್ವಾಸ : ತಂದೆ ಬಂದೆವಿದೊ ತುಂಬುನಂಬಿಗೆಯಾ ಹಡಗದಲ್ಲಿ ಕುಳಿತು (ನೆಲಮು. ೩೬-೦೩). [ತುಂಬು$_2$ + ನಂಬಿಗೆ (<ನಂಬುಗೆ)]

**ತುಂಬುನಗೆ** (ನಾ). ಪೂರ್ಣವಾದ ನಗೆ : ಆಗಸದ ಗಂಟುಮೋರೆಯಲಿ ಹೊಂಬಿಸಿಲ ತುಂಬುನಗೆ ಹರಿಸಿ ಹರಿದಿಹುದು ನೀರು (ನೆಲಮು. ೦೩-೦೩) : ಸವಿಹಸಿವೆ ಕಂಬನಿಯು ತುಂಬುನಗೆಯೊಮ್ಮೆ (ಕಾಲೂಕ. ೩೦-೨೬). [ತುಂಬು$_2$ + ನಗೆ]

**ತುಂಬುನೀರು** (ನಾ). ಅಣೆಕಟ್ಟು ಮೊದಲಾದ ಜಲಾಶಯಗಳು ಭರ್ತಿಯಾದಾಗ ಇರುವ ನೀರು : ಮುಂದುಗಡೆಯ ಕೊಳದ (Forebay) ತುಂಬುನೀರಿನ ಮಟ್ಟ ೧೬೪೦ ಅಡಿ (ಶಿಲ್ಪನಾ. ೨೯೬). [ತುಂಬು$_2$ + ನೀರು$_1$ (<ನೀರ್$_1$)]

**ತುಂಬುನೊಸಲ್** (ನಾ). ವಿಸ್ತಾರವಾದ ಹಣೆ ; ವಿಶಾಲವಾದ ಹಣೆ : ಸುಱಿಗುರುಳ ತುಂಬುನೊಸಲ ಅಸಿಯ ಬೊಟ್ಟಿನ ನೀಳ್ದ ಪುರ್ವಿನ ... ವಿದ್ಯಾಧರವಾರನಾರೀಕದಂಬಂ (ಧರ್ಮಾಮೃ. ೮-೦೯೬). [ತುಂಬು$_2$ + ನೊಸಲ್]

**ತುಂಬುಪಾಂಡಿತ್ಯ** (ನಾ). ಸಂಪೂರ್ಣವಾದ ವಿದ್ವತ್ತು : ತುಂಬುಪಾಂಡಿತ್ಯ, ಕವಿಸಹಜವಾದ ಕೋಮಲಹೃದಯ (ಕನ್ನಡು. I, ೦೨) ; ಉಪನ್ಯಾಸಕರ ತುಂಬುಪಾಂಡಿತ್ಯವು ಕೇಳುವವರನ್ನು ಆಶ್ಚರ್ಯಪಡಿಸಿತು (ರೂಢಿ). [ತುಂಬು$_2$ + ಪಾಂಡಿತ್ಯ]

**ತುಂಬುಪೆರೆ** 'ತುಂಬುಮೆಱೆ' ನೋ.

**ತುಂಬುಬಸಿರ್** (ನಾ). ಹೆರಿಗೆಕಾಲ ಸಮಿಾಪಿಸಿರುವ ಗರ್ಭ ; ಪೂರ್ಣಗರ್ಭ : ದಶರಥಸತಿಯರಿಂತು ತುಂಬುಬಸಿರಿಂದೆಸೆಯೆ ನಲಿದತ್ತಯೋಧ್ಯೆ (ಶ್ರೀರಾಮಾ. ೦೩-೩೯೨). [ತುಂಬು$_2$ + ಬಸಿರ್ (<ಬಸಿಱ್)]

**ತುಂಬುಬಸಿರಿ** (ನಾ). ಹೆರಿಗೆಯ ಕಾಲ ಸಮಿಾಪಿಸಿರುವ ಗರ್ಭಿಣಿ ; ನವಮಾಸ ತುಂಬಿರುವ ಬಸಿರಿ ; ಪೂರ್ಣಗರ್ಭಿಣಿ : ತುಂಬುಬಸಿರಿಯರು, ಹಾಲುಮಕ್ಕಳು ಸತ್ತ ಲೆಕ್ಕವ ದೇವರೆ ಬಲ್ಲ (ಜಂಗೀಕ.೩೩-೨೦). [ತುಂಬುಬಸಿರ್ + – ಇ$_3$]

**ತುಂಬುಬಾಳ್** (ನಾ). = ತುಂಬುಜೀವನ : ನೆಗೆಯುತಿದೆ ಮತ್ತೊಮ್ಮೆ ನಮಗದೋ ತುಂಬುಬಾಳ್ ಬೇರಿ ಹಿರಿಯ ಬೆಳಕೊಂದು ಸಿರಿ ಸಾರಿ (ಹೊಂಗಳು. ೩೩-೧೧). [ತುಂಬು$_2$ + ಬಾಳ್$_2$ (< ಬಾೞ್$_2$)]

**ತುಂಬುಬಿಂಬ** (ನಾ). ಸಂಪೂರ್ಣವಾಗಿರುವ ಮಂಡಲ, – ಆಕಾರ, – ಸ್ವರೂಪ : ತುಂಬುಬಿಂಬಂ ತೋರಿದುದು ಪಾಡಿವದ ಮೆರೆಗೆ (ಶ್ರೀರಾಮಾ. ೬೩೯-೨೬೬). [ತುಂಬು$_2$ + ಬಿಂಬ]

**ತುಂಬುಬೆಳೆ** (ನಾ). ಅಧಿಕವಾದ ಬೆಳೆ ; ಹೆಚ್ಚಾದ ಬೆಳಸು : ಬಯಲಲಿ ಪಚ್ಚೆಯ ಪಯಿರಿನ ತುಂಬುಬೆಳೆ (ಹೊಂಗಳು. ೦೦-೦೧). [ತುಂಬು$_2$ + ಬೆಳೆ$_2$]

**ತುಂಬುಮೊಲೆ** (ನಾ). (ಹಾಲಿನಿಂದ) ತುಂಬಿಕೊಂಡಿರುವ ಕುಚ, – ಸ್ತನ: ತಾಯಿ ಚೊಚ್ಚಲಮಗುವ ನಲ್ಮೆಯಲಿ ಹೆತ್ತು, ತುಂಬುಮೊಲೆಯನು ಕೊಟ್ಟು, ಕೆನ್ನೆಯಲಿ ಮುತ್ತಿಟ್ಟು (ಪಾಂಚಜ. ೨೯-೯). [ತುಂಬು$_2$ + ಮೊಲೆ$_1$]

**ತುಂಬುಯೌವನ** (ನಾ). = ತುಂಬುಜವ್ವನ : ಕೆಲವರು ತುಂಬುಯೌವನದಲ್ಲಿ ಸಾಯುತ್ತಾರೆ (ಪಚಧಾ. ೩೪೩). [ತುಂಬು$_2$ + ಯೌವನ]

**ತುಂಬುರ್, ತುಂಮರಿ, ತುಮ್ರಿ$_1$** (ನಾ). = ತುಂಬುರು$_2$ : ಅರನೇಱಿಲ್ ತಾಱಿ ತುಂಬುರ್ ತದುಕಳಿಲೆ ಲವಂ ನಲ್ಲಿ ಧಿಲ್ವಾರ್ಜನಂ ... ತಱಿಯದಿಂದೊಪ್ಪುತಿರ್ದತ್ತರಣ್ಯಂ (ಗಿರಿಕ. ೧-೬೨). **ತುಮರಿ** : ತುಮರಿಯ ಕೊಳ್ಳಿಯಂತೆ ಉರಿವಾತ ಭಕ್ತನೆ (ಸರ್ವವ. ೧೮೩-೮೫೦). **ತುಮ್ರಿ$_1$** : ಕಣ್ಣುಮ್ರಿ, ತುಮ್ರಿ (ವ್ಯಾಚಿಗಿ. ೩೦-೫೯೮). 'ಕಣ್ಣುಮ್ರಿ' ಪರಾ. [< ಸಂ. ತುಂಬುರು./ತಮಿ. ತುಮ್ಪಿ, ತುಮ್ಪಿಲಿ ; ತೆಲು. ತುಬಿಕಿ. ತುಮಿಕಿ, ತುಮ್ಮಿಕಿ ; ಕೊಲಾ. ನಾಯ್ಕಿ. ತುಮ್ಕಿ ; ಪರ್ಜಿ. ತುಂದ್ರಿ]

**ತುಂಬುರ$_1$, ತುಂಬುರಿ** (ನಾ). [ಸಂಗೀತ] ಒಂದು ಬಗೆಯ ವೀಣೆ : ತುಂಬುರವಿಡಿದು ಗಾನಾಮೃತವನು ಕಿವಿಗಿಂಬಾಗಿ ಸವಿದೋಱಿಸುತ (ಕಂಸವಿ. ೮-೩೩) ; ಬಾಲಶಾರದೆಗಳೆನಲು ತುಂಬುರವನಾಂತು ಲೋಲಾಕ್ಷಿಯರಿರ್ವರಾಗ ... ಪಾಡಿದರೊಲಿದು (ಕಂಸವಿ. ೮-೬೩). **ತುಂಬುರಿ** : ಸುರಮುನಿಯ ತುಂಬುರಿಯೊ, ನಂದಿಯ ಮೃದಂಗವೊ (ದುಂಬಿನಾ. ೧). [< ಸಂ. ತುಂಬರೀ]

**ತುಂಬುರ$_2$** (ನಾ). = ತುಂಬುರು$_3$ : ತೌಂಬುರವೀಣೆಯ ತುಂಬುರರಿಂ ಕಿನ್ನರವೀಣೆಯ ಕಿಂಪುರುಷರಿಂದಂ ... ಒಪ್ಪಿದತ್ತಾ ಮಹಾಲಿಂಗದಾಸ್ಥಾನಂ (ಹಮ್ಮಿರ. ೮-೪೦ವ); ವಿಷ್ಣುದೂತರಾ ತುಂಬುರನಂ ಕಯ್ವಿಡಿದು ಕರದುಯ್ಯೆ (ಅದ್ಭುತ. ೨೦-೦೦). [ಸಂ.]

**ತುಂಬುರ$_3$** (ನಾ). = ತುಂಬುರು$_3$: "ತಿಂದುಕಃ, ಸ್ಫೂರ್ಜಕಃ, ಕಾಲಸ್ಕಂಧಃ, ಸಿತಸಾರಕಃ – ಈ ೪ ತುಂಬುರ" (ನಾಚಿರಾ. ೦೦೬) ; ಮಾಳಿಕಬ್ಬರಸಿ ತುಂಬುರ ಬೆಳದ ಬೋಗಿನಲು ಎಡೆಯೂರ ಪೊಲದೊಳ್ ಬಿಟ್ಟ ಮತ್ತ ಪ್ಪನ್ನೆರಡು (ಎಕ. XI, ಮೊಳಕಾ. ೪೦-೬ ; 987) ; ತಾಳಫಲಂಗಳೊಂದು ರುಚಿ ತುಂಬುರವಣ್ಗೊಳಗುಂಟೆ ಲೋಕದೊಳ್ (ಧರ್ಮಾಮೃ. ೪-೦೨೬) : ಬಸುರಿ ಬಿಳುನೆತ್ತಿ ತುಂಬುರ ಬಿಕ್ಕೆ ನೆಲ್ಲ ಚಂದಣವತ್ತಿ ... ಕಣ್ಗೆಸೆದುದು (ಸಿಂಗಿರಾ. ೩೦-೯). [ಸಂ.]

**ತುಂಬುರಕಾಯಿ** (ನಾ.) ತುಂಬುರುಮರದ ಕಾಯಿ : "ತಿಂದುಫಲಃ– ತುಂಬುರಕಾಯಿ" (ಒಷಧಿ. ೬೯). [ತುಂಬುರ$_3$ + ಕಾಯಿ$_4$ (<ಕಾಯ್$_4$)]

**ತುಂಬುರಕೊಳ್ಳಿ** 'ತುಂಬುರಗೊಳ್ಳಿ' ನೋ.

**ತುಂಬುರಗುತ್ತಿ** (ನಾ). ತುಂಬುರಗಿಡದ ಪೊದರು, — ಮೆಳೆ : ಹಡಿಲ ಬೆಂಚೆಯ ಮುಂದಣ ಕೆಱೆಯ ತೆವರ ತುಂಬುರಗುತ್ತಿ ಮೇಳೆಗಳೊಳಗಣ ತೆಂಕಣದಿಕ್ಕಿನ ಕಲ್ಲವೊಂದು (ಎಕ. XII, ತುಮಕೂ. ೧೧-೬೨ ; 1426). [ತುಂಬುರ$_3$ + ಗುತ್ತಿ$_1$]

**ತುಂಬುರಗೊಳ್ಳಿ, ತುಂಬುರಕೊಳ್ಳಿ** (ನಾ). = ತುಂಬುರುಗೊಳ್ಳಿ : ತುಂಬುರಗೊಳ್ಳಿಯಂದದಿ ಛಟಛಟಲೆಂದು ಕಣ್ಗಳ ಸೋಗೆಯೊಳು ಒಂದಿದ

ಕೆಂಪಿನಿಂದಾ ಚಕ್ರವರ್ತಿಯಿಂತೆಂದು ಬೆಟ್ಟೆಯನಾಡಿದನು (ನೇಮಿಸಂ. ೨೬-೨೦) : ಹಲ್ಲ ಕಡಿದು ಕಣ್ಣು ಕೆಂಪೇಱಿ ತುಂಬುರಗೊಳ್ಳಿಯಂತುರಿ ಛಿಟಿಛಿಟಿಱ (ಭರತ. ೨೪-೪೫). ತುಂಬುರಕೊಳ್ಳಿ : ಚರವಚನಮನಾಲಿಸಿ ತುಂಬುರ ಕೊಳ್ಳಿಯ ತೆಱದಿನಂಬರಕ್ಕೆ ಸಿಡಿಲ್ದು (ಶಂಶಾಮಾ. ४-೩೯) ; ಕೋಪಾಗ್ನಿ ಭೋಂಕೆನುತ್ತೆ ತುಂಬುರಕೊಳ್ಳಿಯ ತೆಱದಿಂದಂಬರವಂ ಮುಟ್ಟೆ (ನೇಮಿಷ. ೧೧-೧೯) ; ರಜಕನಂಬರಂಬರಂ ತುಂಬುರಕೊಳ್ಳಿಯಂತೆ ಸಿಡಿದಿಂತಪ್ಪ ಸಿತಗನನೆಲ್ಲಿಯುಂ ಕಾಣೆಂ . . . ಅತ್ತ ಸಾರೆಂದು ಮುಂದೀಡಾಡಿ (ಅರ್ಜನೇ. ೬-೭೭೪). [ತುಂಬುರ್ಯ+ಕೊಳ್ಳಿ$_1$]

ತುಂಬುರವೀಣೆ (ನಾ). ಒಂದು ಬಗೆಯ ವೀಣೆ : ರುದ್ರವೀಣೆ ತುಂಬುರ ವೀಣೆ . . . ಮೊದಲಾದ ತಂತಿ ಕಟ್ಟಿ ನುಡಿವ ವಾದ್ಯವನಱುವುದು ಪ್ರಸಾದ ಲಿಂಗದಲ್ಲಿಯ ಗುರುಲಿಂಗ (ಅದವ. ೬-೦೨) : ಕೋಣನಿದಿರಲಿ ಪಾಡಿ ತುಂಬುರವೀಣೆಯಂ ಝೇಗೈದ ಪರಿ (ಗಗಣಾ. ೦೨-೮೪); ವಾಸುಗಿಯು ನಾಗಸರವೀಣೆ ತುಂಬುರವೀಣೆಯಾ ಸುನಾರದವೀಣೆ (ಸವಮೋ. ೧೭-೪೨). [ತುಂಬುರು$_3$ + ವೀಣೆ]

ತುಂಬುರಿ 'ತಂಬುರು$_1$' ನೋ.

ತುಂಬುರು$_1$ (ನಾ). ಒಂದು ಬಗೆಯ ಧಾನ್ಯ ; ಲವಣ ಪಂಚಕಮಿಂಗು ಒಪ್ಪಲಿ ಶುಂಠಿ ತುಂಬುರುಧಾನ್ಯಕಂ ಶಿವೆ ದುರಾಲಭೆ ಪಾಥೆ ಚಿತ್ರಕಮೋವ ಮೆಂಬಿವನೆಲ್ಲಮಂ ಸವನೆ ಕೊಂಡು (ರೋಕೋಶ. ೯-೨೨೯) ; ತುಂಬುರು ಪೆರ್ಚಲ್ ಜೋಳವಳಂಬಂ (ಆಟ್ಟಮ. ೪-೦೨). [ <ಸಂ. ತುಂಬುರೀ ]

ತುಂಬುರು$_2$ (ನಾ). ಬಿಗಿಯಾದ ಅಂಟುಳ್ಳ ಹಣ್ಣುಗಳನ್ನೂ ಬೀಡಿ ಕಟ್ಟಲು ಉಪಯೋಗಿಸುವ ಎಲೆಗಳನ್ನೂ ಬಿಡುವ ಮರ ; ತಿಂದುಕ; P ಕೆಲವು ಕೋಶಗಳಲ್ಲಿ ತಿಂದುಕ ಮತ್ತು ತಂಬುರು ಬೇರೆ ಬೇರೆ ಎಂದು ಹೇಳಿದೆ : "ತುಂಬುರು ತಿಂದುಕಮೆನಿಪ್ಪುದಕ್ಕುಂ ಪೆಸರಿಂ" (ವಸ್ತುಕೋ. ೩೯-೦೦) : ಗುಳವತ್ತಿ ತುಂಬುರು ನಗರೆ ಮುಂತಾದ ಪಣ್ಗಳ ತಂದರಾಳ್ದನ ಬಳಿಗೆ (ಮೋಹತ. ೦೯-೫೬). 'ತುಂಬುರುಗೊಳ್ಳಿ' ಪರಾ. [ಸಂ.]

ತುಂಬುರು$_3$ (ನಾ). ಒಬ್ಬ ಗಂಧರ್ವನ ಹೆಸರು : ಪುಷ್ಪಕೇತುಪರ್ವತ ದಲ್ಲಿ ನಾರದ ತುಂಬುರು ... ದೇವಮುನಿಗಳ ದಿವ್ಯಾಲಯಂಗಳುಂ (ವಿವೇಕ. ೨೦೭); ತುಂಬುರು ನಾರದರು ಪಾಡುತಿಹರೋ ದೇವ (ಪುರಂದ. ೨-೬೬-೦). [ಸಂ.]

ತುಂಬುರುಕೊಳ್ಳಿ 'ತುಂಬುರುಗೊಳ್ಳಿ' ನೋ.

ತುಂಬುರುಗೊಳ್ಳಿ, ತುಂಬುರಂಕೊಳ್ಳಿ (ನಾ). ತೂಪರೆಗಿಡದ ಸೆಳ್ಳಿನಿಂದಾದ ಕೊಳ್ಳಿ ; P ತೂಬರದ ಮರ ಚೆನ್ನಾಗಿ ಉರಿಯುವುದಿಲ್ಲ. ಒಲೆಗೆ ಹಾಕಿದರೆ ಸಶಬ್ದವಾಗಿ ಕಿಡಿ ಹಾರುತ್ತದೆ : ಬಲಿ ತನ್ನನೀಂದ್ರರ ವಚನಕ್ಕೆ ತುಂಬುರುಗೊಳ್ಳಿಯಂತೆ ಸಿಡಿಲ್ದು (ಧರ್ಮಾಮೃ. ೯-೭೩); ಒಮ್ಮೆ ತುಂಬುರುಗೊಳ್ಳಿಯನೆ ಚಿಮ್ಮಿ ... ಹರಿತಂದುದಾ ಗಾಳಿ (ಶ್ರೀಕಾಮಾ. ೨೪೨-೪೦೦). ತುಂಬುರುಕೊಳ್ಳಿ: ಹಿಡಿಂಬನಾಡಂಬರಂಗೆಯ್ದು ತುಂಬುರು ಕೊಳ್ಳಿಯಂತಂಬರಂಬರಂ ಸಿಡಿಲ್ದು (ಪಂಪಭಾ. ೩-೦೭ ಪ). [ತುಂಬುರು$_2$ + ಕೊಳ್ಳಿ$_1$]

ತುಂಬುರುಸು (ನಾ). ಒಂದು ಬಗೆಯ ಮರ : ಮಲ್ಲಾಳಿ. ಅ ಬ ನಾ ಸಿ. ತುಂಬುರುಸು (ಮೃಔಗಿ. ೩೦-೬೦೦). [?]

ತುಂಬುವರಯ (ನಾ). = ತುಂಬುಜವ್ವನ : ನಿನ್ನ ತುಂಬುವರಯದ ಗಂಡ ದೋಳ್ಗಳ ತಳ್ತಪ್ಪುಗೆಯಲ್ಲಿ ... ಕರ್ಮಶಾಹಂಕಾರವನ್ನೊಡೆದು ಮಣ್ಣಾಗಿ ಗಿಳಿಬಾಗಿಸಿಕೊ ! (ಚಟ್ಟಳ. ೭೭-೨). [ತುಂಬು$_2$ + ಹರಯ (< ಪರಯ)]

ತುಂಬುವರಿಯಿಸು (ಕ್ರಿ). ಭರ್ತಿಯಾಗಿ ಹರಿಯುವಂತೆ ಮಾಡು : ಚಂದ್ರ ಕಾಂತದ ನೆಗೆದ ಮಾಗಿಲಟ್ಟಣೆಗಳಂ ಮೆಟ್ಟಿ ಬಡಹಮನೊಡರ್ಚೆ ಬಳಸಿದ ಗಟನೊಗುಮಿಗೆ ಕಿಂಬಿ ತುಂಬುವರಿಯಿಸಿಯುಂ (ಚಂದ್ರಪು. ೮-೪೩ವ). [ತುಂಬು$_2$ + ಪರಿಯಿಸು]

ತುಂಬುವಾಳೆಗಾಯ್ (ನಾ). ಬಾಳೆಯಕಾಯಿಯಿಂದ ಮಾಡುವ ಒಂದು ಬಗೆಯ ಪಲ್ಯ ; ಪಿರಿದಾಗಿ ಬಲಿದ ಬಾಳೆಯಕಾಯಿಗಳನು ತಂದು . . . ಪೊಗ್ಗರಣೆಮಾಡಿ ಹೂವಿಂದ ಪೊರೆಯುಟ್ಟು ಮಡಕೆಯೊಳಿರಿಸಲದು ತುಂಬು ವಾಳೆಗಾಯ್ಯೆಸರಾದವು [ ಪಾಠಾಂ. ಬಾಳೆಯಕಾಯಿವೆಸರಾದುದು ] (ಸೂಪಶಾ. ೪-೭೪). [ತುಂಬು$_2$ + ಬಾಳೆ$_1$ (<ಬಾಟೆ) + ಕಾಯ್$_4$]

ತುಂಬುವೆರೆ 'ತುಂಬುವೆಱ' ನೋ.

ತುಂಬುವೆಱ, ತುಂಬುಪೆರೆ, ತುಂಬುವೆರೆ, ತುಂಬುಹೆರೆ (ನಾ). ತುಂಬಿದ ಚಂದ್ರ ; ಪೂರ್ಣಚಂದ್ರ : ಆ ತುಂಬುವೆಱೆಯ ತಿಳಿವೆಳಗು ವಿರಹಿವ್ರಜಕೆ ಮಾತೇನವಸ್ಥೆಯಂ ಮಾಡುತಿರಲು (ಸಪ್ತಕಾ. ೦-೪೧); ಕಱೆಯೆಂಬ ನುಡಿ ತುಱುಗಾರ್ತಿಯರೊಳು ತು ೦ ಬು ವೆ ಱೆ ಯೊ ಳು (ಶಂತಾಸಾಂ. ೨-೬೪): ತುಂಬುವೆಱೆಯಂ ಪೊಱಪೊಣ್ಮುವ ಜೊನ್ನದಂತೆ (ರಾಜಶೇ. ೧-೮೪): ಬೆಳ್ದಿಕ್ಕದ ತುಂಬುವೆಱೆಗಳನೊಟ್ಟಿಸಿ ... ಸಮೆದುದೆಂಬಂತಿರೆ (ಹಮ್ಮೂಕ್ಕ. ೫೨-೦೭). ತುಂಬುಪೆರೆ: ತುಂಬುಪೆರೆಯನು ಕಂಡು ಕಡಲುಬ್ಬಿ ಹರಿವಂತೆ (ಮಲದೇ. ೪೫-೦): ಸುಗ್ಗಿಯಲಿ ತುಂಬುವೆರೆ ತಂಗಾಳಿ ಹೊಗಣೆಯರೊಡ್ಡಿ ದುರಾಳಿಗೆ ಸಿಲುಕಿ ಅಳುಕದೆ ಇಹರು ಉಂಟೇ ? (ಚಂದ್ರಸ. ೮೬-೦೭). ತುಂಬುವೆರೆ: ತುಂಬುವೆರೆ ಮೋರೆಯಂ ಮೆಟ್ಟಿ ಬಂದಿಹ ಕೆಚ್ಚು ಕುಂಬಿಡುವುದೆನೆ (ಕಾಂಬರ. ೦೮೯-೩೨೫) ; ಕಡಲಾಳವನುಗಿದುಬಂದ ತುಂಬುವರೆ ತಾಸು ! (ಚಿಂತನ ೨-೫).ತುಂಬುಹೆರೆ : ಎಳೆಯ ಹೆರೆಯೊಳ್ ತೊಳಗಿ ತುಂಬುಹೆರೆಯಾಗಿ ... ಒಂದು ದಿವ್ಯ ಮಣಿ ಬೆಳಕು, ಮೂಡಿ (ಹೊಂಗಳು. ೩೪-೨೦). [ತುಂಬು$_2$ + ಪೆಱ]

ತುಂಬುವೇಱು (ನಾ). (ಬಂಡಿಯಲ್ಲಿ) ತುಂಬಿರುವ ಹೇರು,– ಹೊರೆ : ಸಂಬುಕ ಪಡಗು ಜೋಗುಗಳಿಗೆ ಸುಂಕವು ಕೊಂಬ ರಾಜೇಂದ್ರನಿದಿರೊಳು ತುಂಬುವೇಱಿಗೆ ಸುಂಕವ ಕೊಂಬ ನೃಪರಾಡಂಬರ ನೆರೆಯಲಾರ್ತಪುದೆ (ಶಂತಾಸಾಂ. ೦೦-೨೦). [ತುಂಬು$_2$ + ಪೇಱು$_3$]

ತುಂಬುಸಭೆ (ನಾ). ಜನರಿಂದ ತುಂಬಿರುವ ಸಭೆ : ನಿನ್ನ ಮೇಲೊಂದು ಪದ್ಯವ ಬರೆದು, ಕನ್ನಡಿ ಕಟ್ಟುಹಾಕಿ ತುಂಬುಸಭೆಯೊಳು ಮಾನಪತ್ರ ಸಲಿಸುವವು (ಕಲಕು. ೨೭-೦೯). [ತುಂಬು$_2$ + ಸಭೆ]

ತುಂಬುಹೆರೆ 'ತುಂಬುವೆಱ' ನೋ.

ತುಂಬುಟು (ನಾ). ಒಂದು ಬಗೆಯ ಹುಳು : ಸ್ಪರ್ಶರಸಗಂಧಂಗಳೆಂಬೀ ಮೂಱನಱಿವ ... ಬೆದವುಟು ತುಂಬುಟು ಮೊದಲಾದವಱೊಳಂ (ಪಶಾರ. ೯೫-೦೮). [ತುಂಬು$_2$ + ಪುಟು]

ತುಂಬೆ$_1$ 'ತುಂಬಿ$_1$' ನೋ.

ತುಂಬೆ$_2$, ತುಂಬಿ$_2$ (ನಾ). ಬಿಳಿಯ ಸಣ್ಣಹೂವುಗಳನ್ನು ಬಿಡುವ ಒಂದು ಬಗೆಯ ಗಿಡ ಮತ್ತು ಅದರ ಹೂವು : "ಅತಿಚ್ಛತ್ರ = ತುಂಬೆಯ ಗಿಡ" (ಅಕಾನಿ. ೦-೨೭); ತಿಲತೈಲಮಂಬಿಲಂ ತುಂಬೆ ಲೊಕ್ಕಿ ಸೊರೆ ಸುಣ್ಣಮೆರ್ಕೆ ಯೆಲೆ ಸಾಸಿವೆ ತಂಬುಲದೆಲೆಯಿವನಿಕ್ಕುಗೆ ಗೋಕುಲಕ್ಕೆ ರುಜೆ ತೀರ್ಗುಂ (ರೋಕೋಶ. ೯-೨೦೫) ; ತುಂಬೆ ಲೊಕ್ಕಿ ಸಹ (ಸೌಇಎ. ೦೯೨೯, ಮಂಗಳೂರು, ೪೬೯-೦೭ : 1870) ; ಜಾಜಿ ಬಕುಳಂ ತುಂಬೆ ... ಇವು ಶುಭ್ರಪುಷ್ಪಂಗಳೊಳು ಫಲಾಧಿಕಮಪ್ಪವು (ವೀಶೈಪು. ೭-೦೦-೦೬) : ಭ್ರಮರ ನೆರೆದೊಂದಾಗಿ ತುಂಬೆ [ಪಾಠಾಂ.ಬಿ]ಯ ಹೂವ ನೆಱೆ ಬಟ್ಟು ನಿವಿರ್ದ ಪಾದರಿಪೂಗೆಱಗಿದಂತೆ (ಸಾಳ್ವಭಾ. ४-೦೮) ; ತುಂಬೆ ಹೂವಿನ ಪೂಜೆ (ಮೈಆರಿ. ೦೯೩೯, ೩೩-೦೨ ; 1660). ತುಂಬಿ$_2$ : ಪಲ್ಲವಿಪ ಕಕ್ಕೆ ಬಿಳಿಯೆಕ್ಕೆಗಳ ಮೊತ್ತಮಂ ರುದ್ರ

ಜಟೆಯಂ ತುಂಬಿ [ಪಾಠಾಂ.ಬೆ] ಯಂ ಕಂಚಿವಾಳಮುಂ ಭದ್ರಮುಖಿ ವೊದಲಾದ ನವಪತ್ರಜಾಲಮಂ ಕಂಡು (ಪುಷ್ಪರ. ಹ. ೫೨೩-೫) ; ಲೋಲತರ ಕಿರುಕಸಾಲೆಯ ಪುಂಡಿ ತುಂಬಿ ಬಸಳೆಯ ಭಂಗಿಸೊಪ್ಪುಗಳನು (ಪುಹಾವಿ. ೧೧-೩೫). [ದೇ.೫ ತಮಿ. ತುಮ್ಪೈ ; ಮಲ. ತುಮ್ಪ ; ತುಳು. ತುಂಬೆ. ತುಂಬಿ ; ತೆಲು. ತುಮ್ಮಿ]

**ತುಂಬೆ₉** 'ತುಂಬು₄' ನೋ.

**ತುಂಬೆಗಿಡ** (ನಾ). = ತುಂಬೆ₈ : "ದ್ರೋಣಃ – ಕರೀಕಾಗಿ, ನಾಗಳೆ, ತುಂಬೇಗಿಡ" (ಸಿದ್ಧಾಂತಿ. ೩೩೨) ; ಯಾವ ಕೈಗಳ ಸ್ಪರ್ಶದಿಂದ ತುಂಬೆಗಿಡವೂ ತಾಳೆಯಂತೆ ಬಾನಿನೆತ್ತರ ಬೆಳೆಯಬಹುದೋ (ಅರರೋ.೨).

[ತುಂಬೆ₈ + ಗಿಡ (< ಗಿಡು)]

**ತುಂಬೆದೆ** (ನಾ). ತುಂಬಿದ ಎದೆ : ಹರಿಯುತ್ತಿರುವಳು ಕನ್ನಡತಾಯಿಯ ತುಂಬೆದೆ ಸೂಸಿದ ಸುಕುಮಾರಿ ! (ಅಗ್ನಿಹಂ. ೩೨-೨).

[ತುಂಬು₂ + ಎದೆ (<ಎರ್ದೆ)]

**ತುಂಬೆಪಾದಿ** (ನಾ). ಒಂದು ಊರಿನ ಹೆಸರು : ತುಮ್ಬೆಪಾದಿಯೊಳ್ಮಾದಿ ಕಾಳೆಗವಿಮ್ಮಟ್ಟಿದೊಡೆ ಆನೆಯೊಳಾನ್ನಿಱಿದು ಸತ್ತೊಡೆ (ಎಕ. IX, ಬೆಂಗಳೂ. ೮೩-೪ : ಸು. ೬೨೦). 'ತುಂಬೆವಾಡಿ' ಪರಾ. [ ? ]

**ತುಂಬೆಮರ** (ನಾ). ಒಂದು ಬಗೆಯ ಮರ : ಬೀಳೀಜಾಲಿ, ತೊಪ್ಪಾಲೆ, ಸಾರಾಯಿಬೇಲ, ತುಂಬೆಮರ (ಪ್ರಮಿಗಿ. ೧-೧೬). [ತುಂಬೆ₀ + ಮರ₁]

**ತುಂಬೆವಾಡಿ** (ನಾ). ಒಂದು ಊರಿನ ಹೆಸರು : ಬಿದಿರೂರಲು ಬೂತುಗನು ತುಮ್ಬೆವಾಡಿಯ ಗಡ್ಡಯ್ಯನ ಮಗಂ ಪೊನ್ನಿಗಂ ಕಾದಿ ಸತ್ತು ಸ್ವರ್ಗ್ಗದಲಿಟ್ಟಂ (ಎಕ. XII, ಮದ್ದಗಿ. ೨೭-೧೮ : ಸು. ೯೬೦). [ತುಂಬೆ₀ + ಪಾಡಿ₁]

**ತುಂಬೆವಿಂಡು** 'ತುಂಬಿವಿಂಡು' ನೋ.

**ತುಂಬೆಹುಳ** (ನಾ). ಅಳಿ ; ತುಂಬಿ : " ಮಧುವ್ರತಃ ... ರೋಲಂಬಃ, ಬಂಭರಃ ಈ ೧೫ ತುಂಬಿಯ ಹೆಸರುಗಳಂ. ತುಂಬೆಹುಳ" (ಸಿದ್ಧಾಂತಿ. ೦೧೨).

[ತುಂಬೆ₁ (<ತುಂಬಿ₁) + ಹುಳ (<ಪುೞು)]

**ತುಂಬೊಲುಮೆ** (ನಾ). ಹೆಚ್ಚಾದ ಪ್ರೀತಿ ; ಅಧಿಕವಾದ ಅಕ್ಕರೆ : ಮರದೊಳೆಂತೋ ಅಂತೆ ತುಂಬೊಲುಮೆ ಸಂತನೆಡೆ ನಿಶ್ಯಂಕೆಯೊಳು ನೆರೆವ ಹಕ್ಕಿಗಳ ತೆರದಿ (ಮಣಿದೀ. ೯೫-೧). [ತುಂಬು₂ + ಒಲುಮೆ (<ಒಲ್ಮೆ)]

**ತುಕಡಾ** 'ತುಕಡಿ₂' ನೋ.

**ತುಕಡಿ₁** (ನಾ). (ಕರಾ) ಗೋದಿಯ ಹಿಟ್ಟಿನಿಂದ ಕರಿದು ಮಾಡುವ ಒಂದು ಬಗೆಯ ತಿಂಡಿ ; ಶಂಕರಪೋಳಿ. [← ತುಳು. ತುಕುಡಿ]

**ತುಕಡಿ₂**, ತುಕಡಾ, ತುಕ್ಕಡ, ತುಕ್ಕಡಿ (ನಾ). ೧. ತುಂಡು ; ಚೂರು ; ತುಣುಕು : ಅವನ ಮೈಮೇಲಿನ ಅರಿವೆಯ ತುಕಡಿಯನ್ನು ಹರಿದು ಕೊಂಡು ಅದರಿಂದ ಅವನ ಮುಖವನ್ನು ಒರೆಸಿದನು (ಬಂಗಾಹೆ. ೬೪) : ಆ ಕೋಳಿಯ ಕೊಂದು ತುಕಡಿಯ ಮಾಡಿ ರಾಚಿಯನು ನೋಡಿ (ತುಕಹದ. ೫೩). ೨. ರೊಟ್ಟಿ. ಚಪಾತಿ : 'ತುಕಡಿಮುರಕ' ಪರಾ. ೩. ಸೈನ್ಯದ ಒಂದು ಭಾಗ ; ಒಬ್ಬ ಅಧಿಕಾರಿಯ ಹತೋಟಿಗೆ ಒಳಪಟ್ಟ ಸೇನಾ ವಿಭಾಗ : ಭಾರಿಯಾದ ಒಂದು ದಂಡಿನ ತುಕಡಿಯು ಈ ಊರಲ್ಲಿ ಠಾಣ್ಯ ಹಾಕಿಕೊಂಡು ಇರುತ್ತಿತ್ತು (ಮುಕುಗ. ೯); ನಿಯಾರ್ಕಸನು ಅಲೆಕ್ಸಾಂಡರನ ಒಂದು ತುಕಡಿ ಸೈನ್ಯವನ್ನು ತೆಗೆದುಕೊಂಡು ... ಕಾರ್ಮೇನಿಯ ಮುಟ್ಟಿದನು (ಪ್ರವಾಇ. I. ೭೩). ೪. ದೇಶದ ಒಂದು ಭಾಗ: ಪ್ರಾಂತ; ಜಿಲ್ಲೆ: ಪ್ರತಿ ತಾಲ್ಲೂಕಿಗೂ ಒಬ್ಬೊಬ್ಬ ಆಮಿಲರನ್ನು ನೇಮಿಸಿದರು. ಅವರೆಲ್ಲಾ ಆಯಾ ತುಕಡಿ (ಡಿಸ್ಟ್ರಿಕ್ಟು) ಸುಬೇದಾರರುಗಳ ಅಧಿಕಾರಕ್ಕೆ ಒಳಪಟ್ಟಿದ್ದರು (ಮುಹಾವಂ. II. ೩೨). **ತುಕಡಾ** : ೧. ಇದ್ದಲಿನ ತುಕಡಾಗಳು, ಒಂದು ಬೆಂಕಿಕಡ್ಡಿಯ ಪೆಟ್ಟಿಗೆ ಎಲ್ಲಾ ಹೊರಗೆ ಬರುತ್ತವೆ (ಸಾಹೇಬ್. ೨೦). **ತುಕ್ಕಡ** : ೧. ಮುಸಲ್ಮಾನರು ರಾಜಧಾನಿಗೆ ಮುತ್ತಿಗೆ ಹಾಕಿ ತಮ್ಮೆಲ್ಲರನ್ನೂ ತುಕ್ಕಡ ತುಕ್ಕಡ ಮಾಡಿಬಿಡುವರೆಂದುಕೊಂಡಳು (ಬಂಕಿಮು. ೩೦೪). **ತುಕ್ಕಡಿ** : ೩. ಅದು ಹೆಚ್ಚುಕಡಿಮೆ ಯುದ್ಧಕಾಲದ ತಮ್ಮದೊಂದು ತುಕ್ಕಡಿಯನ್ನೇ ಹೋಲುತ್ತದೆ (ಹೇಮುಕೊ.೦೬): ಕಾಮನಾಯಕ ಎಂಬಾತನು...ಹದಿನಾರು ಮದದ ಆನೆಗಳ ತುಕ್ಕಡಿಗೂ ಅಧಿಪತಿಯಾಗಿದ್ದನು (ಕಾವಿಜ. ೦೫೩). ೫. ಊರು, ಪಟ್ಟಣ ಮೊದಲಾದುವುಗಳ ಒಳವಿಭಾಗ ; ಮೊಹಲ್ಲ ; ಹರವು : ಯಾವ ಗ್ರಾಮವನ್ನಾದರೂ ತುಕ್ಕಡಿಗಳನ್ನಾಗಿ ವಿಭಾಗಿಸಿ ಅಂಥ ಪ್ರತಿ ಒಂದು ತುಕ್ಕಡಿಗೂ ಬೇರೆಬೇರೆ ಗ್ರಾಮಕೋರ್ಟನ್ನು ಸ್ಥಾಪಿಸಬಹುದು (ಗ್ರಾಮೂಕ. ೦೫). ೬. ಗುಂಪು ; ವಿಭಾಗ ; ಬಣ : ನಮ್ಮಲ್ಲಿಯ ನಾಲ್ವತ್ತು ಆಳುಗಳು ನಾಲ್ಕು ತುಕ್ಕಡಿಗಳಾಗಿ ಕೆಲವರು ಸಾಮಾನು ಚೊಕ್ಕಟವಾಗಿಸಿದರು (ರಕ್ತಧ್ವ. ೨೬೦).

[← ಮರಾ. ತುಕಡಾ ; ಹಿಂ. ಟುಕಡೀ, ಟುಕಡಾ]

**ತುಕಡಿಮುರಕ** (ನಾ). ೧. ಬರೀ ಚಪಾತಿ ತಿನ್ನುವವನಂ ; ಉಂಡಾಡಿ ಭಟ್ಟ. ೨. (ಆಲಂ) ಶಕ್ತಿಹೀನ : ಇವರೇನು ತುಕಡಿಮುರಕ ಹಾರವರೆಂದು ಯಾವನರು ತಿಳಿದಿರಬಹುದು (ಮೂರವ. ೫).

[ ತುಕಡಿ₂ + ಮುರಕ (< ಮುರಿಕ) ]

**ತುಕಲಿ** (ನಾ). ಒಂದು ಬಗೆಯ ಗಿಡ : (೬). [ ? ]

**ತುಕ್ಕಡ** ' ತುಕಡಿ₂' ನೋ.

**ತುಕ್ಕಡಿ** ' ತುಕಡಿ₂' ನೋ.

**ತುಕ್ಕಡಿದಾರ** (ನಾ). ಜಿಲ್ಲೆಯ ಅಧಿಕಾರಿ ; ಜಿಲ್ಲೆಯ ಆಡಳಿತ ನಡಸುವವನು: ತುಕ್ಕಡಿಯಲ್ಲಿ ತುಕ್ಕಡಿದಾರ ಸೇರಿ ತುಕ್ಕಡಿಯಲ್ಲ ಸುಡಿಸಿದ (ಗಾದೆ).

[ ತುಕ್ಕಡಿ (<ತುಕಡಿ₂) + – ದಾರ₄ ]

**ತುಕ್ಕಡಿಸು** (ಕ್ರಿ). ತುಂಡರಿಸಂ ; ಚೂರಂಚೂರಂ ಮಾಡಂ ; ಭಾಗ ಮಾಡು : ಅವಟಿಡಂಗುಗಳ ತುಕ್ಕಡಿಸಿ ಬಗೆಯಟಿದು ಭಾಗೆಯಂ ಮಾಳ್ಪ ದೀವದ ಖಗಮೃಗಾವಳಿಯನು ಹಕ್ಕೆಗೆಯ್ದಿಸುವ...ಬೇಡರ ಬಂದವೊಟ್ಟಿತು (ಸಮ್ಮುಕಾ. ೧೦-೨೬). [ ತುಕ್ಕಡ (< ತುಕಡಿ₂) + – ಇಸು₃ ]

**ತುಕ್ಕಿಡಿ** (ನಾ). ( ? ) : ಎಚ್ಚಡ್ಡಾಯುಧಮಂ ಕಿಟ್ಟಿಚ್ಚರಿಯನೆ ನೂಂಕೆ ತುರಗಮಂ ತುಕ್ಕಿಡಿಗಳ್ ಪಚ್ಚವಳದಡೆಗಳಂ ಮುನ್ನೆಚ್ಚ ಸರಲ್ ತಾಗೆ ಪಱಿದುಪೞಿ ಚೆಚ್ಚಱಿದಂ (ಚಂದ್ರಪ್ರ. ೧೦-೭೯). [ ? ]

**ತುಕ್ಕಿಸು** (ಕ್ರಿ). ತಿರುಗಿಸು ; ಅಲೆದಾಡಿಸಂ ; ಅಲೆಯುವಂತೆ ಮಾಡು : ಸರ್ವಜೀವಿಗಳೊಳೀತಕ್ಕೆ ಎನ್ನೊಬ್ಬನ ತುಕ್ಕಿಸುವಿಯೊ ಬಕ್ಕದಾಸನೊ ನಾನು (ವಿದಾಕ್ಕ. ೦೫೬). [ ತುಕ್ಕು₁ + – ಇಸು₃ ]

**ತುಕ್ಕು₁** (ಕ್ರಿ). ೧. ಗುಂಪುಗೂಡು ; ಕಿಕ್ಕಿರಿ ; ಒಟ್ಟುಸೇರಂ : (೬). ೨. ಮೇಲೆ ಬೀಳಂ ; ಆವರಿಸಂ ; ಮುತ್ತು : ಅಕ್ಕಱಿಂದವರ ವರತನು ಪರಿಮಳಂಗಳ್ಗೆ ತುಕ್ಕುವೆಳದುಂಬಿಗಳ ಬಳಗಂಗಳೆಂಬಂತೆ (ಕೃಮಿಭಾ. ೨೮-೪೩) ; ಅಡವಿಗಿಡವ ತುಕ್ಕಿ ಅಗಳ ತರುವವಲ್ಲ (ವಿಕ್ರಾ.ಸು. ೫೫-೨) ; ಎಕ್ಕಲಗಳಂ ತುಕ್ಕಿ ಮುಕ್ಕುಳಿಸಿ (ಹರಕು. ೩೦-೫). ೩. ಸಂತ್ತು ; ತಿರುಗು ; ಅಲೆದಾಡು ; ಎಡೆತಾಕಂ : ವ್ಯಥಾ ಭವಂಗಳ ತುಕ್ಕುತಿನ್ನ ಮಹತ್ವವೆಲ್ಲವ ಮುಕ್ಕುಗಳದೆನಲಾ (ಸದ್ಗುರು. ೬-೩೦) ; ಅಕ್ಕ ನೀನೆನ ಗೋಸುಗ ಮೂಜಗವನು ತುಕ್ಕಬೇಹುದು ರಾತ್ರಿಯಲಿ (ವೋಹಕ. ೨೮-೩೪) ; ಪಾಂಡವರ ಕಾಣೆ ರಾಜ್ಯಮಂ ತುಕ್ಕಿದವು ಭೂಪತಿಯ ಕುರುಹಿಲ್ಲ (ಕುರಂಗ. ೩೭-೪) ; ಲೆಕ್ಕವಿಲ್ಲದೆ ದೇಶ ತುಕ್ಕಿದರೆ ಫಲವೇನು (ಜಗದಾ. ೩೦೫).

**ತುಕ್ಕು₂** (ನಾ). ಕಬ್ಬಿಣಕ್ಕೆ ಹತ್ತುವ ಕಿಟ್ಟ ; ಜಂಗು : ಧಾತುಗಳ ಆಮ್ಲಜ ವಿಕಾರಗಳಿಗೆ ಕನ್ನಡದಲ್ಲಿ ಭಸ್ಮ, ಜಂಗು, ಖತಿ, ತುಕ್ಕು ಎಂಬ ಹೆಸರುಗಳನ್ನು ಕೊಡುವರು (ಮುಂಬಯಿ. ೬-೩೨) : ಅಗ ಕಬ್ಬಿಣವಾಗಿ ಉಳಿಯುವ ಬದಲು, ಕಬ್ಬಿಣದ ತುಕ್ಕು ಉಂಟಾಗುವುದು (ಬಾಲಪ್ರ. I. ೯೫೩).

[ದೇ. ೩ ತಮಿ. ತುಕ್ಕು, ತುಪ್ಪು ; ಮಲ. ತುರುಮ್ಪು, ತುರುಮ್ಪು ; ತುಳು. ತುಕ್ಕ್ ; ತೆಲು. ತುಪ್ಪು, ತ್ರುಪ್ಪು ]

**ತುಕ್ಕುಗೊಳ್** (ಕ್ರಿ). ಜಂಗು ತಿನ್ನು ; ತುಕ್ಕುಹಿಡಿ : ಮಸೆದ ಕೆಯ್ದುಗಳ್ ತುಕ್ಕು(ಳ್ಕು)ಗೊಳ್ಳೊಡಂ (ಅಟ್ಟಮ. ೨-೧). [ ತುಕ್ಕು$_2$ + ಕೊಳ್$_1$ ]

**ತುಕ್ಕುಹಿಡಿ** (ಕ್ರಿ). ೧. = ತುಕ್ಕುಗೊಳ್ : ಕಬ್ಬಿಣಕ್ಕೆ ತುಕ್ಕುಹಿಡಿಯುವುದು (ಮುಂಬಯಿ. ೪-೧೪೯) ; ಅಲ್ಯುಮಿನಿಯಮ್ಮಿನ ಪ್ರಯೋಜನಗಳು ಹಲವು. ಅದು ಹಗುರವಾಗಿರುತ್ತದೆ. ತುಕ್ಕುಹಿಡಿಯುವುದಿಲ್ಲ (ಅಡುಶಾ. ೪೨) : ತುಕ್ಕುಹಿಡಿದ ಖಡ್ಗ ಮಿಕ್ಕಿದವನಿಗೂ ಆಗದು (ಗಾದೆ). ೨. (ಆಲಂ) ದೋಷಗ್ರಸ್ತವಾಗು ; ಮಂಕಾಗು ; ಹೀನವಾಗು ; ಹಿರಿಯರ ತುಕ್ಕು ಹಿಡಿದ ದೃಷ್ಟಿಗೆ ಕಿರಿಯರ ಪ್ರೇಮವು ಅರ್ಥವಾಗುವುದಿಲ್ಲ (ದೂರಸ. ೧೬೮) ; ಮೇಧಾಶಕ್ತಿಗೆ ತುಕ್ಕುಹಿಡಿಯುವ ಸ್ಥಿತಿ ಒದಗಿತು (ಕಾಮಿಕಾಂ. ೩) : ಈ ರೀತಿಯಲ್ಲಿ ಮಕ್ಕಳ ಶಿಕ್ಷಣದ ಅಮೂಲ್ಯಸಾಧನವೊಂದು ತುಕ್ಕುಹಿಡಿದು ನಶಿಸಿ ಹೋಗುತ್ತಿರುವುದು (ಸಮಾಕೋ. ೧೦೯).

[ ತುಕ್ಕು$_2$ + ಹಿಡಿ$_1$ (< ಪಿಡಿ$_1$) ]

**ತುಗಟು** (ಕ್ರಿ). ಪೀಡಿಸುವವರನ್ನು ತೊಲಗಿಸಲು, ಇಷ್ಟವಿಲ್ಲದಿದ್ದರೂ ಕೊಡು : ಒಂದು ಎಳನೀರು ಬುರುಡೆ. ಒಂದು ಪಾವಲಿ ತುಗಟಿದ (ಅದೂಟ. ೪೪). [ ? ]

**ತುಗಿ** (ನಾ). ಒಂದು ಬಗೆಯ ಮರ : ಸುಜ್ಜಲು . . . ಬೀಳ್ಕಂಬಿ, ತುಗಿ (ಮೃಶಿಗಿ. ೪-೬೨). [ ? ]

**ತುಗಿಲ** 'ತುಗ್ಗಿಲ್' ನೋ.

**ತುಗ್ಗಲಿ** 'ತುಗ್ಗಿಲ್' ನೋ.

**ತುಗ್ಗಿಲ್, ತಗ್ಗಿಲು, ತುಗಿಲ, ತುಗ್ಗಲಿ, ತುಗ್ಗಿಲು** (ನಾ). ಒಂದು ಬಗೆಯ ಮರ : "ಅಗ್ನಿಯೆನೆ ತುಗ್ಗಿಲಕ್ಕುಂ" (ಮಂಗರಾ. ೩೬-೧೮) : ಕೊಗ್ಗಿ ವರಲಕ್ಷ್ಮಿ ಪುನರ್ನವಿಯೆಂಬ ಮೂಲಿಕಾಮಂ ಬೆರಸಿರೆ ಕಲ್ಲೊಳಿ ಟ್ಟರೆದು ತುಗ್ಗಿಲಣಂಬೆಯುಮಂ . . . ಈಂಟೆ ವಿಷಂ ಕಿಡುಗುಂ (ಖಪದ. ೦೩-೦೮). **ತಗ್ಗಿಲು** : ತಂಡಸ ತಡಸ ತ[ ಪಾಠಾಂ. ತು ]ಗ್ಗಿಲು ತದಿಕು ತಪಸಿಗಳ . . . ವನಭೂಜಾಳಿಯಲಿ ಹೊಳಿದರಕಂಪನನಸಮರಣರಥವ (ಕೊರಟಾ. ೬-೧೮-೦೮). **ತುಗಿಲ** : ಮೂಡಲು ತುಗಿಲಮರದ ಮೇಲು ಗಡೆಯ ಬೆಟ್ಟದ ಬಂಡೆ ಮೇರೆ (ಸೌಇಇ. IX – ii, ೩೩೩-೨೯ ; 1631). **ತುಗ್ಗಲಿ** : ಜಾಲೆ ಜಾನೆಯು ಬೋರೆ ತರೆಯು ತುಗ್ಗಲಿಯುಯಂ ಕೋಲೆಯುಂ (ನವರೋ. ೮-೯). **ತುಗ್ಗಿಲು** : ಬಡಗಣ ತೆವರ ಮೇಲಣ ತುಗ್ಗಿಲ ಮರದಲ್ಲಿ ನಟ್ಟ ಕಲ್ಲು (ಮೃಅರಿ. ೦೯೪೦, ೪೮-೦೬೮ ; 1356) : ಯೀಶಾನ್ಯದಲ್ಲು ಮಾತ್ರವೇ ತುಗ್ಗಿಲು ಹುತ್ತಹಾರೆ ಗ್ರಾಮಕೆ ಮೂಡಲು (ಎಕ. XI, ಹೊಳಲ್ಕೆ. ೯೪-೧೦೬ ; 1511). [ ? ]

**ತುಗ್ಗಿಲು** ' ತುಗ್ಗಿಲ್ ' ನೋ.

**ತುಚ್ಚ** (ಗು). = ತುಚ್ಛ : ತಾಥ್ಯ – ತುಚ್ಚ (ಶಮದ. ೨೫೬ ಪ್ರಯೋ).

[ <ಸಂ. ತುಚ್ಛ ]

**ತುಚ್ಚತನ** (ನಾ). ನೀಚತನ ; ಅಲ್ಪತನ : ಎನಗೆ ನಟವೃತ್ತಿ ಕರಂ ತುಚ್ಚ ತನವೆನ್ನದಾಡಿದನಚ್ಚರಿಯೆನೆ ವಚ್ರಿ (ಕುಶ್ವತು. ೦೨-೫೨).

[ತುಚ್ಚ + – ತನ]

**ತುಚ್ಚಂಗೆಱೆ** (ನಾ). ಒಂದು ಊರಿನ ಹೆಸರು : ತುಚ್ಚಂಗೆಱೆಯ ಹೊಲ್ಲಿ ಸೆಟ್ಟಿ . . . ಚವಣ್ಣಯ್ಯಸೆಟ್ಟಿಯಿನ್ತಿನಿಬರುಂ ತಂಬುಲಿಗಸಾಸಿರ್ವ್ವರುಂ (ಸೌಇಇ. XI – ii, ೧೪೮-೧೯ ; 1099). [ ? + ಕೆಱೆ ]

**ತುಚ್ಛ** (ಗು). ೧. ಜೊಳ್ಳಾದ ; ಬರಿದಾದ ; ಶೂನ್ಯವಾದ. ೨. ಅಲ್ಪವಾದ ; ಸಣ್ಣ ; ಚಿಕ್ಕ. ೩. ಕೆಳದರ್ಜೆಯ ; ತಿರಸ್ಕಾರಕ್ಕೆ ಯೋಗ್ಯವಾದ ; ನೀಚವಾದ ; ಕ್ಷುಲ್ಲಕವಾದ : ತುಚ್ಛಮಾತು ಆಡು ವವನು ಹುಚ್ಚನಿಂದ ಕಡೆ (ಗಾದೆ). (ನಾ). ೪. ಬರಿದಾದುದು ; ಖಾಲಿ ; ಶೂನ್ಯ : ವಂಧ್ಯಾಪುತ್ರ ಶಶವಿಷಾಣಾದಿಗಳೇ ಅಸತ್ತಾದ ತುಚ್ಛ ವೆಂದು ತಿಳಿಯಲಪ್ಪುದು (ವಿವೇಕ. ೨೦) : ತುಚ್ಛ (ಶೂನ್ಯ) ದಿಂದ ಮುಚ್ಚಿದ ಅದು ತಪಸ್ಸಿನ ಮಹಿಮೆಯಿಂದ ಆವಿರ್ಭಾವವಾಯಿತು (ಭಾರದ. ೨೬). ೫. ಕಡಮೆಯಾದುದು ; ಕೀಳು ; ಹೀನ : ವ್ಯೋಮಯಾನಂ ತುಚ್ಛ ಮೆನೆಯಲುಂ ಗ್ರಾಮಯಾನಮತುಚ್ಛಮೆನೆಯುಂ (ಶಾಂತಿಪು. ೧೨-೨೩ವ) ; ಹಿಂದೆ ಲಂಕೆಯ ಸುಟ್ಟ ಕೋಡಗ ಬಂದ ಕಪಿಭಟರೊಳಗೆ ತುಚ್ಛವು (ಕಾಶಿರಾ. ೦೫-೨೮) : ಎಷ್ಟು ಹೇಳಲಿ ಬಹಳ ತುಚ್ಛವನೆ ಮಾಡುವರು (ಪುರಂದ. ೦-೦೪೮-೩). ೬. ಅಲ್ಪವ್ಯಕ್ತಿ ; ಕೀಳುಮನುಷ್ಯ : ತುಚ್ಛನ ಸಂಗಡ ಬಾಳೋದಕ್ಕಿಂತ ಹುಚ್ಚನ ಸಂಗಡ ಬಾಳೋದು ವಾಸಿ (ಗಾದೆ). [ ಸಂ. ]

**ತುಚ್ಛಾಜಿ** (ನಾ). ಕೀಳಂಮಟ್ಟದ ಕಾಳಗ ; ಹುಲುಗಾಳಗ : ತುಚ್ಛಾಜಿ ಲಬ್ಧಸ್ಮಿತನಾಂತಂ ಚೋಳಗೌಳಾಸುರಸಮರಜಯಶ್ರೀಸಮಾಲಿಂಗಿತಾಂಗಂ (ಎಕ. V, ಬೇಲೂರು. ೦೬-೪ ; 1136 ). [ ತುಚ್ಛ + ಆಜಿ$_1$ ]

**ತುಚ್ಛಿಸು** (ಕ್ರಿ). ಕಡೆಗಣಿಸು ; ತಿರಸ್ಕರಿಸು : ವಂಶಕೆ ಈತನೊಬ್ಬನಾದರು ನಮಗೆ ಶಿಷ್ಟನಾಗಿರಲೆಂದು ಪೇಳೆ ಗಂಗಾದೇವಿ ತುಚ್ಛಿಸಿದ ಮಾತನೆಂದು ಮೀರಿದನು ತಾನುಯಿನ್ನಿಹುದಿಲ್ಲವೆಂದಾಡಿ ಸಾರಿದಳು (ತುರಂಗ. ೯-೩೨).

[ ತುಚ್ಛ + – ಇಸು$_3$ ]

**ತುಚ್ಛೀಕರಿಸು** (ಕ್ರಿ). = ತುಚ್ಛಿಸು : ನೀನು ಚೌಡಪ್ಪನವರನ್ನು ಹಾಗೆ ತುಚ್ಛೀಕರಿಸಬಾರದು (ಹಳ್ಳಿಹಾ. ೦೦೫). [ ತುಚ್ಛೀಕರಣ$_0$ + – ಇಸು$_3$ ]

**ತುಜಾವಂತು** (ನಾ). [ಸಂಗೀತ] ಒಂದು ರಾಗದ ಹೆಸರು : ರಾಗ ತುಜಾವಂತು ಅಷ್ಟತಾಳ (ದೇವೀಕ್ಷ. ೧೮). [ ? ]

**ತುಟಾಗ್ರತೆ** (ನಾ). ಕೊರತೆ ; ಅಭಾವ : ಕೆಲವು ಹಳ್ಳಿಗಳಲ್ಲಿ ನೀರಿನ ತುಟಾಗ್ರತೆ ವಿಪರೀತವಾಗುತ್ತಿತ್ತು (ಮುತ್ತುಮ. ೦೦೩) ; ಎಲ್ಲೆಲ್ಲಿಯೂ ಕಾಳಿನ ತುಟಾಗ್ರತೆ (ಗಾಳಿಗು. ೨೨) : ಅಲ್ಲಿ ನೀರಿನ ತುಟಾಗ್ರತೆ ಎನಿಸ ತೊಡಗಿತು (ಸ್ವಚ್ಛತಿಟಿ. ೨೬೮). [ <ತುಟ್ಟಾಗ್ರ ]

**ತುಟಾಯಿಸು** (ಕ್ರಿ). ಬೇರೆಯಾಗು ; ಭಾಗವಾಗು ; ಪಾಲಾಗು : ಅಲ್ಲಿ ಜೀವನಕ್ಕೆ ಸಾಲದೆ ತುಟಾಯಿಸಿ ಕೋಲಾರಕ್ಕೆ ಬಂದನು (ಮಹಾಪಂ. I, ೦೬೬) ; ಕೆಲವು ದಿವಸದ ಮ್ಯಾಲೆ ಯಾ ವಂಶದ ಜನರ ಪೈಕಿ ತುಟಾಯಿಸಿ ಅಲ್ಲಿಂದಾ ಹೊರಟು (ಹೃದಕ. ೨೯).

[ ತುಟಾ$_0$ (ಪ ← ಮರಾ. ತುಟಣೇ) + – ಇಸು$_3$ ]

**ತುಟಾರ, ತುಠಾರ** (ನಾ). ೧. ವಿಚಾರಮಾಡದಿರುವಿಕೆ ; ದುಡುಕು ; ಅವಿವೇಕ ; ಉದ್ಧಟತನ : ತುಟಮೀರಿದ ಹಲ್ಲು, ತುಟಾರದ ಮಾತ್ರು ಸರಿಮಾಡಲಾಗದು (ಗಾದೆ). ೨. ದಂಡಂಕಿ ಕೆಲಸ ಮಾಡುವವನು ; ಅವಿವೇಕಿ ; ಉದ್ಧಟ : ಆ ತುಟಾರ [ಪಾಠಾಂ. ತುಠಾರ, ತವಕಿಗ]ನ ಕಂಡು ನಿಮ್ಮಯ ತಾತ ಸೈರಿಸುವನೆ (ತೊರರಾ. ೩೦--೯). 'ದೊಠಾರ' ಪರಾ. **ತುಠಾರ** : ೧. ಎಲವೊ ರಕ್ಕಸ ನಾವು ರಣಕತಿಬಲರೊ ದುರ್ಬಲರೋ ತುಠಾರದನಿಳಿಕೆಗಂಡೆಯಲಾ ಮೃಗಾಧಮ (ತೊರರಾ. ೬-೨೨-೦೩).

[← ತೆಲು. ತುಟಾರ]

**ತುಟಾರಿಸು, ತುಠಾರಿಸು** (ಕ್ರಿ). ದುಡುಕಿ ಮಾತನಾಡು ; ವಿಚಾರ ಮಾಡದೆ ಹರಟು : ಎಲವೊ ಫಡ ಮಾವನ ತುಟಾರಿಸಿ [ಪಾಠಾಂ. ತುಠಾರಿಸಿ, ದೊಠಾರಿಸಿ, ವಿಭಾಡಿಸಿ] ಗಳಹುವೀ ನಾಲಗೆಯ ಕೀಳುವೆ (ಕುಮ್ವ್ಯಾದ್ರೋ. ೦೫-೦೦) : ಪಾಂಡವರ ತೊಡಕಿನ್ನು ಲೇಸಲ್ಲ ಸಂಧಿಯ ಮಾಡಿಕೊಳಿ ಎಂದರೆನ್ನನು ತುಟಾರಿಸಿದನ್ಯೆ ಪಾಪಿ (ತುರಂಗ. ೪೮-೬). **ತುಠಾರಿಸು** : ಸಹಜವೇನ್ನುಡಿದಡೆ ತುಠಾರಿಸಿಯಹಿತರಾ ಕೌರವರು ನಿನಗೆ (ಗಿರಿಮಿಂ. ೯೯-೦೬). ' ದೊಠಾರಿಸು ' ಪರಾ.

[ತುಟಾರ + – ಇಸು$_3$./ತೆಲು. ತುಟಾರಿಂಚು]

**ತುಟಿ** (ನಾ). ಬಾಯ್ದೆರೆ; ಅಧರ; ಓಷ್ಠ: "ಅಧರಃ, ದಂತಚ್ಛದಃ, ಓಷ್ಠಃ, ದಂತವಾಸಃ—ಈ ೪ ತುಟಿ" (ಹಲಾಯು. ೮೬-೩೭೦); ಪಶ್ಚಿಮ ಪದ್ಮಾಸನದಲ್ಲಿ ಕುಳಿತು ನೆಟ್ಟಲುವ ಮುಖದು ತುಟಿ ಮಿಡುಕದ ಅಟ್ಟಿ ಯಾಡಿತ್ತಲ್ಲಾ (ಬಸವ. ೫೦೪); ತುಟಿ ವಿದ್ರುಮಮಂ ಸುಧಾಂಶುವಂ ನಿರ್ಮಳವಕ್ತ್ರಬಿಂಬಮಿರದೇಳಿಸೆ (ಉದ್ಭಟ. ೨-೦೦೫); ಶಶಿಕಳೆಗೆ ಸದರವೆ ರಾಹು ರಟಿಸಿದ ತುಟಿಯ ತೋಟಿಯದು (ಕುಮ್ಮಾಸ. ೧೪-೧೧೦); ಕೊಡೆ ಕದಪು ತುಟಿ ನಿಟಿಲವ ಚುಂಬಿಸಿ (ಕಂನವಿ. ೯-೦೯೨); ನಗೆಯ ಚೆಲುವ ತುಟಿಯ ಚಾಚಿ (ಅನಿಳೀ. ೧೮-೨); ತುಟಿಗೆ ತುಪ್ಪವಿಲ್ಲ, ಕಟಿಗೆ ಪಂಚಾರ್ತಿ ಬಯಸಿದ ಹಾಗೆ (ಗಾದೆ).

ತುಟಿ ಎರಡು ಮಾಡು=ಬಾಯಿಬಿಡು; ಮಾತನಾಡು: ಧರ್ಮಪತ್ನಿ ತುಟಿ ಎರಡು ಮಾಡದೆ ಪಣತಿಯಲ್ಲಿ ತುಪ್ಪ ಸುರುವಿದಳು (ಹಳ್ಳಿಬ. ೬೬); ಇನ್ನು ಯಾವ ವಿಷಯದಲ್ಲೂ ತುಟಿ ಎರಡು ಮಾಡುವ ಹಾಗಿಲ್ಲ (ಸುವಸಂ. ೦೫). **ತುಟಿಗಟ್ಟ**=ತುದಿಯವರೆಗೆ: ವಿಷಯ ತುಟಿಗಟ್ಟಕ್ಕೆ ಬಂದು ವಿಷಮಾವಸ್ಥೆಗೆ ಇಳಿಯುವಂತಿದ್ದಾಗ ಹಣವನ್ನು ಹಿಂದಿರುಗಿಸುವುದು ಮೊದಲಾಯಿತು (ರಂಗನಾ. ೨೪). **ತುಟಿಪಿಟಕ್ಕೆನ್ನು**=ತಂಟಿ ಎರಡುಮಾಡಂ: ನೀನು ಇದೆಲ್ಲವನ್ನೂ ಕಣ್ಣಾರ ನೋಡುತ್ತಿದ್ದರೂ ತುಟಿಪಿಟಕ್ಕೆನ್ನದೆ ಕುಳಿತಿದ್ದೀಯೆ? (ವಚಭಾ. ೭೦); ಯಾರೂ ತುಟಿಪಿಟಕ್ಕೆನ್ನುವುದಿಲ್ಲ (ಶ್ರವಾಆ. II, ೨೯೬). **ತುಟಿಮೀರಿದ ಹಲ್ಲು, ತುಟಿಮೀಜಿದ್ದಲ್ಲು** = ತಂಟಿಯನ್ನು ಮೀರಿ ಮುಂದಕ್ಕೆ ಚಾಚಿಕೊಂಡಿರುವ ಹಲ್ಲು; ಉಬ್ಬುಹಲ್ಲು: ನುಂಗಲಾಗದ ತುತ್ತೂ, ತುಟಿಮೀರಿದ ಹಲ್ಲೂ ಒಂದೇ ಸಮ (ಗಾದೆ); ತುಟಿ ಮೀಜಿದ್ದಲ್ಲಿನಂತ ದೂತ ಎಂದಿಗು ಬೇಡ (ಕನಕ. ೧೯೦-೪). **ತುಟಿಯ ಭಾಷೆ** = (ಮೂಕರಿಗೆ) ತಮ್ಮ ಆಶಯವನ್ನು ತಿಳಿಸುವಾಗ ಮಾಡುವ ತುಟಿಯ ಅಲುಗಾಟದ ಪ್ರಯೋಗ: "ತುಟಿಗಳ ನಿಶ್ಶಬ್ದ ಚಲನೆಯಿಂದ, ಮೂಕರು ಮಾತನಾಡುವ, ಮೂಕರೊಂದಿಗೆ ಮಾತನಾಡುವ, ಮಾತನಾಡಿದ್ದನ್ನು ಅರ್ಥಮಾಡಿಕೊಳ್ಳುವ ಭಾಷೆ: ತುಟಿಯ ಭಾಷೆ; ಮೂಕರ ಭಾಷೆ" (Lip_Language. ಇಂಕವಿ). **ತುಟಿಹೊಲಿದುಕೊಳ್ಳು** = ಮಾತನಾಡದೆ ಇರು: ಮಾತಿಗೆ ಬೆಲೆಯಿಲ್ಲವಾದಾಗ ತುಟಿಹೊಲಿದು ಕೊಂಡಿರುವುದೇ ವಾಸಿ (ರೂಢಿ).

[ ದೇ.॥ ತಮಿ. ತುಟಿ; ಮಲ. ಚೊಡಿ; ತುಳು. ತುಡಿ, ದುಡಿ; ಗೊಂಡಿ. ಟೊಟಿ ]

**ತುಟಿಕಚ್ಚು** 'ತಂಟಿಗಚ್ಚು' ನೋ.

**ತುಟಿಕಡಿ** (ಕ್ರಿ). ೧. ತುಟಿಯನ್ನು ಹಲ್ಲಿನಿಂದ ಕಚ್ಚು. ೨. ತುಟಿಯನ್ನು ಕಚ್ಚಿಕೊಳ್ಳುವುದರ ಮೂಲಕ ದುಃಖ, ನಾಚಿಕೆ ಮೊದಲಾದ ಭಾವವನ್ನು ಸೂಚಿಸು: ತುಟಿಕಡಿದು ಅಧೋಮುಖಿಯಾದಳು (ಜಯಂತ. ೧೨೨).

[ ತುಟಿ + ಕಡಿ$_1$ ]

**ತುಟಿಗಚ್ಚು**, ತುಟಿಕಚ್ಚು (ಕ್ರಿ). = ತುಟಿಕಡಿ ೨: "ಏನೂ ಇಲ್ಲ ಸುಮ್ಮನೆ" ಎಂದು ತುಟಿಗಚ್ಚಿದಳು ಪ್ರಮೀಲ (ಮರಳಿ. ೮೧). ತುಟಿ ಕಚ್ಚು: ಎವೆ ಬಡಿಸಿ ಕಿಡಿಪು, ಬಿರಿಗಣ್ಣು ಬ್ಯಾಡ, ತುಟಿಕಚ್ಚಿ ಹಿಡಿಯದಿರು ಬಿಕ್ಕ (ನಾದಲೀ. ೫೬-೨೨); ಕಣ್ಮುಚ್ಚಿ ತುಟಿಕಚ್ಚಿ ಶೋಕವನದುಮಿಟ್ಟು ಹೋದೆನು (ಇಂಚಾಪ. ೩೦-೩೮). [ತುಟಿ + ಕಚ್ಚು$_1$ (<ಕರ್ಚು$_1$)]

**ತುಟಿಗೊಂಕು** (ನಾ). ತುಟಿಯನ್ನು ಕೊಂಕಿಸುವುದು: ಆಗಾಗ್ಗೆ ಒಂದು ಕಣ್ಣಿನ ಮಿಂಚೊ, ಒಂದು ಮುಗುಳುನಗೆಯ ತುಟಿಗೊಂಕಿನ ಹೊಂಚೊ ... ಇನಿಕೆ (ಮಲೆಮ. ೨೫೯). [ ತುಟಿ + ಕೊಂಕು$_2$ ]

**ತುಟಿತ** (ನಾ). [ಜೈನ] ಒಂದು ಬಹು ದೊಡ್ಡ ಕಾಲಪರಿಮಾಣ: ಆತನಿಂ ಬಳಿಯಿಮೆನಿತಾನುಂ ಕಾಲದಿಂ ... ತುಟಿತಾ [ ಪಾಠಾಂ. ಶಾ ] ಬ್ದಪ್ರಮಿತಜೀವಿತನುಮಾಗಿ (ಆದಿಪು. ೭-೫೭ ವ). [ <ಸಂ. ತ್ರುಟಿತ ]

**ತುಟಿತೆರೆ** 'ತಂಟಿದೆರೆ' ನೋ.

**ತುಟಿದೆರೆ**, ತಂಟಿತೆರೆ (ಕ್ರಿ). ೧. ತುಟಿಯನ್ನು ಬಿಚ್ಚು; ಬಾಯಿಬಿಡು. ೨. ಮಾತನಾಡು: ಇಬ್ಬರೂ ಮೈಯೆಲ್ಲ ಕಿವಿಯಾಗಿ ಕೇಳುತ್ತಿದ್ದರೂ ತುಟಿದೆರೆಯಲಿಲ್ಲ (ಪುನರು. ೩೦೦). **ತುಟಿತೆರೆ:** ೨. ಈವರೆಗೆ ತುಟಿತೆರೆಯದಿದ್ದ ವೀರಣ್ಣ ಈಗ ನಡುವೆ ಬಾಯಿ ಹಾಕಿದ (ಹಾಹುತ್ತ. ೯೫); ಪೂವಮ್ಮನೂ ತುಟಿತೆರೆಯಲಿಲ್ಲ (ನತದಾ. II. ೦೦೨೪).

[ತುಟಿ + ತೆರೆ$_1$ (<ತೆಱ$^1_1$)]

**ತುಟಿಬಿಚ್ಚು** (ಕ್ರಿ). = ತಂಟಿದೆರೆ ೧: ತುಟಿಬಿಚ್ಚಿ ಪೇಳು ಮೇಲ್ಗತೆಯ (ಕೋಹಿತ. ೨೨-೧); ಮಾಸ್ಲೋವ ತುಟಿಬಿಚ್ಚಲಿಲ್ಲ (ಪುನರು. ೪೦).

[ ತುಟಿ + ಬಿಚ್ಚು$_1$ ]

**ತುಟಿಬೆರಳು** 'ತಂಟಿವೆರಳು' ನೋ.

**ತುಟಿಮುತ್ತು** (ನಾ). ೧. ತಂಟಿಗೆ ಕೊಡುವ ಮುತ್ತು; ಅಧರಚುಂಬನ. ೨. (ಆಲಂ) ಪ್ರೀತಿಗೆ ಪಾತ್ರ: ನಿರ್ಭಯದ ನಿಃಸೀಮದಲಿ ನೀ ನಮ್ಮ ತುಟಿಮುತ್ತಾದವ (ಹಾಡುಪಾ. ೩೬-೦೧). [ ತುಟಿ + ಮುತ್ತು$_4$ ]

**ತುಟಿರಂಗು** (ನಾ). ಅಲಂಕಾರಕ್ಕಾಗಿ ತುಟಿಗೆ ಬಳಿದಂಕೊಳ್ಳುವ ಬಣ್ಣ: ಕಾಂತಿಯಿಂದ ಚೆನ್ನಾಗಿ ಕಾಣಿಸಲು ಹುಡಿ, ತುಟಿರಂಗು (ಲಿಪ್‌ಸ್ಟಿಕ್), ಕುಸುಂಬೆ (ರೂಜ್), ಉಗುರುಮೆರುಗುಗಳು (ಕವಿಕೋ. I, ೩೩).

[ ತುಟಿ + ರಂಗು ]

**ತುಟಿವೆರಳು**, ತಂಟಿಬೆರಳು (ನಾ). ಎಚ್ಚರಿಕೆಯನ್ನು ಸೂಚಿಸಲು ತಂಟಿಯ ಮೇಲಿಟ್ಟ ಬೆರಳು; ಮೌನವಾಗಿರಲು ಸೂಚಿಸುವ ಬೆರಳು: ತೋಳ್ವೊಯ್ಯು ತುಟಿವೆರಳ ಬೊಬ್ಬೆಗಳ ... ಸಂಭ್ರಮವಾರದ ಪಡೆಯೆರಡೀಕ್ಷಿಸುತ್ತಿರ್ದುವು (ಕಬಪು. ೨೬-೦೬). **ತುಟಿಬೆರಳು:** ಸದ್ದಿರದೆ ತುಟಿಬೆರಳಿನೊಳು ಸುಳಿವ ಮಾರುತದ (ಮಲೆದೇ. ೩೪-೩).

[ ತುಟಿ + ಬೆರಳು (< ಬೆರಲ್) ]

**ತುಟಿಸನ್ನೆ** (ನಾ). ತಂಟಿಯ ಅಲುಗಾಟದಿಂದಲೇ ಇಂಗಿತವನ್ನು ತಿಳಿಯಪಡಿಸುವುದು: ಮನ್ನಗೆ ತುಟಿಸನ್ನೆ ಕಿವ್ಡಗೆ ಕೈಸನ್ನೆ ಹಡ್ಡಗೆ ಬಡಿಗೆಯ ಸನ್ನೆ (ಇಂಚಾಪ. ೯೦-೩೬). [ ತುಟಿ + ಸನ್ನೆ$_2$ ]

**ತುಟಿಸು** (ಕ್ರಿ). ನುಡಿ; ಹೇಳು: ಜಗದೊಳಗೆ ಕೌತುಕ ವಿಚಿತ್ರವೇನೆಂಬೆನುಟಿ ತುಟಿಸಬಾರದು ಸೂಂಟಸಲು ಬಾರದಮ್ಮಮ್ಮ (ನಾಜಿರ. ೦೬೬-೦೯).

[ ತುಟಿ + – ಇಸು$_3$ ]

**ತುಟುಕರಿಸು** (ಕ್ರಿ). ೧. ಹಾತೊರೆ; ಅಪೇಕ್ಷಿಸು; ಕಾತರಿಸು: ನಟಣೆಯೊಳಗೈದುವರನೀಕ್ಷಿಸಿ ತುಟುಕರಿಸುತಿಹವಕ್ಷಿಯುಗವಮಿಪರಿಗೊಲವಿಂದ (ಜನಥಾ. ೦೯-೨೪). ೨. ತಳಮಳಿಸು; ಕ್ಷೋಭೆಗೊಳ್ಳು: ಆರುಹನೇ ಗತಿಯೆಂದು ಮನ ತುಟುಕರಿಸುತ್ತಿದಿದರಾ ವಿರಾಟನ ಚರರು (ಜನಥಾ. ೫೫-೨೮). [ <ತುಡಿ + – ಇಸು$_3$ ]

**ತುಟುಕು$_1$** 'ತಟಕು$_1$' ನೋ.

**ತುಟುಕು$_2$** 'ತಟಕು$_2$' ನೋ.

**ತುಟುಕುಹನಿ** 'ತಟಕುವನಿ' ನೋ.

**ತುಟ್ಟ** (ನಾ). ಒಂದು ಬಗೆಯ ಗಿಡ ಮತ್ತು ಅದರ ಹೂವು: ಬಲ್ಲಿಗಿ, ಬಿಂದಿಗಿ, (ದೊಡ್ಡ, ಸಣ್ಣ) ತುಟ್ಟ, ದಾಸಾಲ (ನಮ್ಮುಸು. ೨೩೪).

[ ← ತಮಿ. ತುಟ್ಟಲಿ ]

**ತುಟ್ಟಗ್ರು** (ನಾ). ತೊಂದರೆಯ ಕಾಲ; ದುರ್ಭಿಕ್ಷ: "ತುಟ್ಟಗ್ರು–ಅಡಚಣೆ ಕಾಲ" (ಜಾನಕೋ. ೬೬). 'ತಂಟಾಗ್ರುತೆ' ಪರಾ. [ <ತುಟ್ಟಿ$_1$ ]

**ತುಟ್ಟಿ$_1$** (ನಾ). ೧. ಧಾರಣೆ ಹೆಚ್ಚಾಗಿರುವಿಕೆ; ದುಬಾರಿ: ನೂರಿಪ್ಪತ್ತು ರೂಪಾಯಿಗಳಲ್ಲಿ ಈ ಎಲ್ಲ ಖರ್ಚುಗಳೂ ನಡೆಯಬೇಕು ... ತುಟ್ಟಿಯ ಕಾಲ. ಕಾಳು, ಕಡ್ಡಿ, ಸೌದೆ, ಹಾಲು, ಬಟ್ಟೆ ಎಲ್ಲವೂ ತುಟ್ಟಿ (ಜನಿಪಾ. ೬);

ಹೂವುಗಳನ್ನು ತುಟ್ಟಿ ಮಾಡಿದ ಹಿಮಂತರುತುವಿಗೆ ದೋಷ ಕೊಡಿರಿ (ಕೋಹಿನೀ. ೨೦). ೨. ಅಭಾವ : ಗೋವಿಂದಭಟ್ಟನ ಉತಾವಳತನ ಅವನಲ್ಲಿ ಔಷಧಕ್ಕೂ ತುಟ್ಟಿ (ದೀಪಹ. II, ೧೬೯). ೩. (?) : ತುಟ್ಟಿಯು ದಿನಮಂ ಪಣದಿಂದೊಟ್ಟೈಡೆಯಿಂದಿಱಿದು ದ್ವಿಗುಣಿಸಿ (ವ್ಯವಹಾ. ಉಪಮಾನ).

ತುಟ್ಟಿಯಾಗು = ೧. (ಮಾರಾಟದ ಸರಕಂ) ಹೆಚ್ಚು ಬೆಲೆಯುಳ್ಳುದಾಗಂ ; ಅಧಿಕಮೌಲ್ಯವುಳ್ಳುದಾಗು ; ದಂಬಾರಿಯಾಗಂ : ದೇಶದೊಳಗೆ ದುರ್ಭಿಕ್ಷ ಬಿದ್ದು ಕಾಳು ಬಹಳ ತುಟ್ಟಿಯಾದವು (ಮುಂಬಯಿ. ೪-೬೫); ಚಹವು ಆಗಿನ್ನೂ ತುಟ್ಟಿಯಾಗಿದ್ದಿತು (ಹಕ್ರಿಕಾ. ೧೩). ೨. ಹೀನವಾಗು ; ಬೆಲೆಯಿಲ್ಲವಾಗು : ನಾನಿಂದು ಒಂದು ತುಪ್ಪದ ಬಟ್ಟಲಿನಷ್ಟು ಅನ್ನಕ್ಕೆ ತುಟ್ಟಿಯಾದೆನಲ್ಲವೆ ? (ಸ್ವ್ಯತಿಜ. ೧೩೦).

ತುಟ್ಟಿ$_2$ (ನಾ). ತೃಪ್ತಿ ; ಸಂತೋಷ ; ಆನಂದ ; ತಣಿವು : ಶರಣಸಂಗಂ ತನಗೆ ಪರಮತುಟ್ಟಿಯನೀಯೆ (ಜೊಮ್ಮರ. ೧೧೦-೧೨); ತುಟ್ಟಿ ಸಮ್ಮೋಹ ಸಮುದ್ರಕೆ ಹೊಂಬೆಟ್ಟದೊಟ್ಟು ಸೇತುವೆಗಟ್ಟಿದಂತೆ (ಭರಹ. ೧೩-೪೨). 'ತುಂಟ್ಟಿವಡೆ' ಪರಾ. [ < ಪ್ರಾ. ತುಟಿ. /ಸಂ. ತುಷ್ಟಿ ]

ತುಟ್ಟಿ$_3$ (ನಾ). ಒಂದು ಬಗೆಯ ತರಕಾರಿ ಸೊಪ್ಪು : ಸೊಪ್ಪುಗಳು : ಅಗಸೆ . . . ನಾರೋಬೇಡ, ತುಟ್ಟಿ, ಕೊತ್ತನಗೊರಜಿ, ಕೊತ್ತುಂಬರಿ (ನಮ್ಮನು. ೨೩೭). [ ? ]

ತುಟ್ಟಿಭತ್ತೆ 'ತುಟ್ಟಿಭತ್ಯ' ನೋ.

ತುಟ್ಟಿಭತ್ಯ, ತುಂಟ್ಟಿಭತ್ತೆ (ನಾ). ಪದಾರ್ಥಗಳ ಬೆಲೆ ಏರಿಕೆಯನ್ನು ಸರಿಗಟ್ಟಲು ನೌಕರರಿಗೆ ಸಂಬಳದ ಮೇಲೆ ಕೊಡುವ ಹೆಚ್ಚಿಗೆ ಮೊಬಲಗು, —ಹಣ : ರೈಲ್ವೆಯಲ್ಲಿ ಹದಿನೈದುರೂಪಾಯಿ ತುಟ್ಟಿ ಭತ್ಯ ಕೊಡುತ್ತಿದ್ದರು (ಸರ್ವಮಂ. ೨೬೮). ತುಟ್ಟಿಭತ್ತೆ : ಆ ಕಾರಕೂನರಿಬ್ಬರೂ ತುಟ್ಟಿಭತ್ತೆಯ ಆಸೆಗಾಗಿ ಭೂಲೋಕಕ್ಕೆ ಓಡಿಹೋದರು (ಹನ್ನೊಂದ. ೧೪೩). [ ತುಟ್ಟಿ + ಭತ್ಯ ( < ಭತ್ಯಾದಾಯ) ]

ತುಟ್ಟಿವಡೆ (ಕ್ರಿ). ತೃಪ್ತಿಯನ್ನು ಹೊಂದಂ ; ಸಂತೋಷವನ್ನು ಪಡೆ : ಜಟ್ಟಿಗರ ಡೊಕ್ಕರಂ ಗಳಹತ್ತಂ ಮೊದಲೆನಿಸಿದ ಪಲವುಂ ಪಟ್ಟುಗಳಂ ಕಿರಿದು ಪೊಳ್ತು ನಿಟ್ಟಿಸಿ ತುಟ್ಟಿವಡೆದು (ಮಹಾಪ. ೧೦-೯೯ ವ).

[ ತುಟ್ಟಿ$_2$ + ಪಡೆ ]

ತುಟ್ಟಿಸು (ಕ್ರಿ). ೧. ಶಕ್ತಿಗುಂದಂ ; ಬಲಹೀನವಾಗು ; ಕಂಗು : "ತುಟ್ಟಿಸು—ಶಕ್ತಿಕ್ಷಯೇ" (ಕಮುಧಾ); ಪೊಯ್ಯುತುಂ ತುಡುಕಿ ತುಟ್ಟಿಸಿ ಕತ್ತರಿವಾಣಿಯಲ್ಲಿ ಕೆಯ್ದುಡುಕಿದವೊಲ್ ಬೆರಲ್ಪಱಿದುವು (ಅರ್ಧನೇ. ೮-೧೦೯); ತುಟ್ಟಿಸಿದ ಹರುಷದಲಿ (ತೊರರಾ. ೩-೧೫-೩); ಕಿಸುಕುಳದ ಹುಳುವಾಗಿ ಮತಿ ತುಟ್ಟಿಸಿ ವಿನಿರ್ಗಮಸವಾಗಿ . . . ಮೂರ್ಛಿತನಹನು (ನಿಘಾಗ. ೩-೦೪-೨೮); ನಮಗೆ ತ್ರಾಣಗಳ್ ತುಟ್ಟಿಸಿತು ನಾಳೆ ಮಧ್ಯಾಹ್ನಕ್ಕೆ ಜೀವವಂ ಬಿಟ್ಟಪೆನು (ತುರಂಗ. ೭೯-೧೫). ೨. ಕಡಮೆಯಾಗು ; ಕುಂದು : ನಿಜಹರುಷ ತುಟ್ಟಿಸಲ್ಕೆದಿ ನೋಡಿದನಾಗ ಕೆಲಬಲನ (ತ್ರುರಾಕಾ. ೨-೩೪). ೩. ನಾಶವಾಗು : ತುಟ್ಟಿಸಲಿ ಧನ ಮಾನಗರ್ವದ ಬೆಟ್ಟ ಮುಱಿಯಲಿ (ಕುವ್ಯಾಸ. ೦೪-೮೫); ಕೆಟ್ಟು ನುಡಿದರೆ ತನ್ನನೇನೆಂದಟ್ಟಿದರು ನಿನ್ನುವನು ತನುವಿದು ತುಟ್ಟಿಸದ ಮುನ್ನಿದ್ದುದನು ಹೇಳಯ್ಯ ತನಗೆ (ತೊರರಾ. ೨-೫-೪). ೪. ಅವಹೇಳನ ಮಾಡು ; ಕಡೆಗಣಿಸು : ಎಲ್ಲವರು ತುಟ್ಟಿಸುತಲಿಹರಿ ನಾವೆಂದುದಂ (ತುರಂಗ. ೪೦-೧೫); ಕುರುನೃಪತಿ ಮಾತೆಯಂ ತುಟ್ಟಿಸಲ್ ಗಾಂಧಾರಿ ತೆರಳಿದಳ್ (ತುರಂಗ. ೪೦-೨೪). ೫. ತಗ್ಗಿಸು ; ಶಾಂತಗೊಳಿಸು; ಸಮಾಧಾನಮಾಡು: ದುಷ್ಟದುರ್ಜನನಿವಂಗಳಲದಿರಿ ಬಹಳ ಪಾಪಿಷ್ಠ ಗುರುಗೋತ್ರಘಾತಕನೆಂದು ಶೋಕವಂ ತುಟ್ಟಿಸಿಯೆ ಮುಂದಕಂ ತೆರಳಿದರು (ತುರಂಗ. ೯೫-೦೫). ೬. ಸಿಲುಕಂ ; ಬೀಳು : ತೋಹಿನಲಿ ತುಟ್ಟಿಸಿದ ಮೃಗದವೊಲೂಹೆಯಳಿದುದು (ಕುವ್ಯಾಸ. ೦೪-೨೩). ೭. ಬಳುಕು ; ಕಂಪಿಸು : ಮಣಿಮುದ್ರಿಕೆಯು ನೂಪುರದ ತುಟ್ಟಿಸುವ ಬಡನಡುವಿನ ... ದೃಷ್ಟಿಮೋಹನಮೂರ್ತಿಯೆಸೆದಳು ಮೊಸರ ಕಡೆವುತ್ತ (ನಿಘಾಗ. ೧೦-೯-೦೬). ೮. ಬೀಳಂ ; ಕುಸಿ : ದುಷ್ಟನೃಪಕುಲಭಾರದಲಿ ಕಂಗೆಟ್ಟು ಕುಸಿದು ರಸಾತಳಕೆ ಧರೆ ತುಟ್ಟಿಸುತ (ನಿಘಾಗ. ೧೦-೩೧-೦೦).

[ ತುಟ್ಟಿ$_1$ ? + – ಇಸು$_3$ ]

ತುಟ್ಟು (ಕ್ರಿ). ೧. ನಿರ್ದೇಶಿಸು ; ಗುರಿಯಿಂಡು : ಬಟ್ಟಲ್ಲಿ ಬೀಡ ಬಿಡದ ಬೇಗದೊಳು ತಾವು ತುಟ್ಟಿದ ಪೊಳಲ ಗಡಿಯಲಿ ಬಿಟ್ಟರಲಾ ವಾರ್ತೆ ಗಡಿಯ ನಾಯಕರಿಂದ ಮುಟ್ಟಿದುದಾ ನೃಪವರಗೆ (ರಾಮವಿ. ೯-೩೦). ೨. ಪಣತೊಡಂ ; ಪ್ರತಿಜ್ಞೆಮಾಡಂ : ಕಟ್ಟುವೆ ಲಂಕೆಯ ಪಟ್ಟವ ನಿನಗೆಂದು ತುಟ್ಟಿ ನುಡಿದ ಮನವುಂಟ್ಟಿ (ರಾಮವಿ. ೦೬-೬೩). [< ತೊಡು$_1$]

ತುಟ್ಟೈಸು (ಕ್ರಿ). ತುದಿಗೆ ಬರಂ : ನಿಟ್ಟುಸುಸರ್ಗಸೆ ಕಂಗಳು ಪೈಸರಿಸೆ ಜೀವ ತುಟ್ಟೈಸಿ (ಲಕ್ಷ್ಮಭಾ. ೨೭-೦೪). [ < ತುಟಿ + – ಇಸು$_3$ ]

ತುಟ್ಯಂಗ (ನಾ). [ಜೈನ] ಒಂದು ದೊಡ್ಡ ಕಾಲಪರಿಮಾಣ : ಕಮಲಾಂಗಂ ಕಮಲಂ ತುಟ್ಯಂಗಂ ತುಟಿಕಂ ಅಟಟಾಂಗಂ ಅಟಟಂ ಅಮಮಾಂಗಂ ಅಮಮಂ (ಹಸಾರ. ೦೩೮-೫). [< ಸಂ. ತ್ರುಟಿತಾಂಗ]

ತುಠಾರ 'ತುಟಾರ' ನೋ.

ತುಠಾರಿ (ನಾ). ದುಡಂಕುಸ್ವಭಾವದ ಹೆಂಗಸು : ಘೋರಕರ್ಮಚಾರಿ ವಂಶಕುಠಾರಿ ಬಹಳ ತುಠಾರಿ ದಿವಿಜರ ಮಾರಿ ಜನಿಸಿದಳಾ ಬಳಿಕ ಶೂರ್ಪನಖೀ (ಅನಂರಾ. ೦-೬-೧೨). [ ತುಠಾರ ( < ತುಟಾರ) + – ಇ$_3$ ]

ತುಠಾರಿಸು 'ತುಟಾರಿಸು' ನೋ.

ತುಡಕೆ 'ತುಡಿಕೆ' ನೋ.

ತುಡರು 'ತೊಡರ್$_1$' ನೋ.

ತುಡಿ, ದುಡಿ$_2$ (ಕ್ರಿ). ೧. ಮಿಡಿ ; ಸ್ಪಂದಿಸಂ : ಸಾವಿತ್ರಿಗೆ . . . ನಾರದನು ಹೇಳಿದ್ದ ಮಾತೇ ಮನಸ್ಸಿನಲ್ಲಿ ತುಡಿಯುತ್ತಿತ್ತು (ವಕಥಾ. ೦೬೯) : ಯಾವುದೋ ಆಶಂಕೆ ತುಡಿಯುತ್ತಲೇ ಇತ್ತು (ಮಣ್ಣುಹ. ೦೬೮) : ಕನ್ನಡಸಂಸ್ಕೃತಿಯ ಪ್ರತೀಕ ಒಂದೇ ! ಇಲ್ಲಿ ತುಡಿಯುತ್ತಿರುವ ಹೃದಯ ಒಂದೇ ! (ಕರ್ನಾಕ. ೩೫೭). ೨. ತವಕಿಸು ; ಹಾತೊರೆ ; ಆತುರಪಡು : ನಾರಣಪ್ಪನ ಮನಸ್ಸು ಆ ಹತಭಾಗ್ಯಳಿಗೆ ನೆರವಾಗಲು ಸದಾ ತುಡಿಯುತ್ತಿರುವುದು (ಅನಾಥ. ೩೭) : ಇಡೀ ಮಾನವಪ್ರಕೃತಿಯೇ ಸೌಂದರ್ಯದತ್ತ ತುಡಿಯುತ್ತಿದೆ (ಕಾವ್ಯಕು. ೧೩೩). ೩. ನೋಯಂ ; ವ್ಯಥೆಪಡು ; ತಳಮಳಿಸಂ : ನಿಸರ್ಗದ ಪಶುಪಕ್ಷಿಗಳಿಗೆ ಇರುವ ಸ್ವಾತಂತ್ರ್ಯ ತಮಗೆ ಇಲ್ಲವಲ್ಲಾ ಎಂದು ಮನಸ್ಸು ತುಡಿಯುತ್ತಿತ್ತು (ರಾಜ್ಯೋದ. ೦೬೨) : ಮುದವಾರಲು, ಅಳಲೇರಲು, ಭಯ ಮಸಗಲು —ತುಡಿದು, ಮನ ದೇವಗೆ ಮೊರೆಯಿಡುವುದು (ಮೊಂದಳ. ೨೦-೨). ೪. ಅಲ್ಲೋಲಕಲ್ಲೋಲವಾಗು; ಹೊಯ್ದಾಡು ; ಕ್ಷೋಭೆಗೊಳ್ಳು: ಆವ ತವಕದಲೇನೊ ಬಾನಂಚುಗಳ ತಬ್ಬಿ ತುಡಿವೀ ಅಧೀರಜಲ (ಸಮೃಧ್ಯ. ೦-೫). ೫. ಮಿಂನುಗು ; ಹೊಳೆ : ಶಿವಜಟೆಯ ತುಳುಕಿ ತುಡಿವ ತಾರೆಯ ಬೆಳಕಿಗೀ ಬೆಳಕೆ ಚರಿತಾರ್ಥ (ಮಕದೀ. ೨೩-೫). ದುಡಿ$_2$ : ೧. ಇನಿಯಂ ಬಂದು ನಿಂದು ರಾಧೇ ಎನಲೇಪರಿ ದುಮುದಾಮು ದುಡಿಯುವ ಹೃದಯವ ತಡೆವೆನೆ (ಗೋಕುನಿ. ೨೩-೪).

ತುಡಿದುಕೊಳ್ಳು = ಆತುರಪಡಂ ; ಕುತೂಹಲಗೊಳ್ಳು : ಅವನೊಂದಿಗೆ ಮಾತನಾಡತೊಡಗಿದಂತೆಲ್ಲ ನನ್ನ ಹೃದಯವು ತುಡಿದುಕೊಳ್ಳ ತೊಡಗಿತು (ಎಳೆ. ೮೩); ದೂರದಲ್ಲಿ ಅವನನ್ನು ಕಂಡೊಡನೆಯೇ ಮನಸ್ಸು ತುಡಿದುಕೊಳ್ಳುತ್ತಿತ್ತು (ಅಲಹೂ. ೫೭).

[ ದೇ.೩ ತಮಿ. ತುಟಿ ; ಮಲ. ತುಡಿ ]

ತುಡಿಕಿ 'ತುಡಿಕೆ' ನೋ.

**ತುಡಿಕೆ,** ತಂಡಕೆ, ತಂಡಿಕಿ, ತುಡುಕೆ, ತೊಡಿಕೆ (ನಾ). ೧. ತೋಟದ ಒಂದು ಭಾಗ : ದೇವರ್ಗ್ಗೆ ಮಾನ್ಯಂ ತುಡಿಕೆ ೧ (ಸೌಇಇ.IX-i, ೧೫೮-೫೬: 1092); ತೆಂಕಲು ತುಡಿಕೆಯು ಮುನ್ನಣ ಬಟ್ಟೆ ನೀರೊತ್ತಿಂಗೆ ದೇವಣ ಭಟ್ಟರು ಕೊಟ್ಟ ಬೆದ್ದಲೆ (ಎಕ. V, ಹಾಸನ. ೧೦೬-೪೯; 1123) ; ತೋಟ ತುಡಿಕೆ ಮುಂತಾಗಿ ಅಗಾಮಿಯಾಗಿ . . . ಸರ್ವಸ್ವಾಮ್ಯವನು ಆಗುಮಾಡಿ ಕೊಂಡು (ಎಕ. IX, ಬೆಂಗಳೂ. ೦೨೬-೫೨ ; 1431) ; ಅವರ ತೋಟ ತುಡಿಕೆಗಳು ಹಣ್ಣು ಹಂಪಲುಗಳಿಂದ ತುಂಬಿ ತುಳುಕಲಿ (ಹುಟ್ಟಿಹ. ೧೬೦). ೨. ಹಣ್ಣುಗಳನ್ನು ಸಂಗ್ರಹಿಸಿ ಇಡುವ ಮನೆ ; ಫಲಸಂಗ್ರಹಾಲಯ : (೩). ೩. ಅಡಕೆಯ ಫಸಲನ್ನು ಸುಲಿದು ಬೇಯಿಸಿ ರೇಪೆ ಮಾಡುವ ಸ್ಥಳ. ತುಡಕೆ : ೧. ಗದೆ ಬೆದಲು ತೋಟ ತುಡಕೆ (ಮ್ಯಆ. ೦೯೩೦, ೩೮-೦೩ : 1512). ತುಡಿಕಿ : ೧. ಗ್ರಾಮಕ್ಕೆ ಸಲುವ ಗದ್ದೆ ಬೆದ್ದಲು ತೋಟ ತುಡಿಕಿ ಅಡುಮನೆವಣ (ಎಕ. XIV, ಚಾಮರಾ. ೨೬೬.೮ ; ?). ತುಡುಕೆ : ೧. ಊರಿಂ ತೆಂಕದೆಸವಂದದ ತುಡುಕೆ ಯೊಳಗಣ ತುಡುಕೆ ಒಂದು (ಹೈಆಸ. ೮-೩೩; 1088) ; ಊರಡೆದಡದ ಬಡಗಣ ಮೂಡಣ ಗೋಟನಲ್ಲಿ ಬ್ರಹ್ಮದೇವಪಟ್ಟವರ್ದ್ಧನರು ಕೊಟ್ಟ ತೆಂಕವಾಗಿಲ ತುಡುಕೆಯೊಂದು (ಸೌಇಇ. IX-i. ೩೩೩-೫೨ : 1225). ತೊಡಿಕೆ : ೧. ಅಯ್ಯದೇವಪರವಿಟ್ಟ ತೊಡಿಕೆ ಅಬವಿಟ್ಟೊರ್ (ಮ್ಯಆ. ೦೯೩೯, ೪೨-೫ : 10ನೆಯ ಶತ?). [←ತಮಿ. ತುಟವ್ವೆ=ತೋಟ ]

**ತುಡಿಗೆ** 'ತೊಡುಗೆ' ನೋ.

**ತುಡಿತ,** ದುಡಿತ$_2$ (ನಾ). ೧. ಮಿಡಿತ; ಸ್ಪಂದನ : ಪ್ರಭುಗಳ ಉಕ್ತಿ ಯನ್ನು ಕೇಳಿದಾಗ ಚೆಂಗುಮಣಿಯ ಎದೆಯ ತುಡಿತ ನಿಧಾನವಾಯಿತು (ಹುಲಿಹಾ. ೧೫೯). ೨. ಆತ್ಮಾಸಕ್ತಿ ; ಆತುರ; ಲವಲವಿಕೆ; ತವಕ : ಶ್ರೀವಿರೂಪಾಕ್ಷನ ಪಂಪಾಪುರಕ್ಕೆ ಹೋಗಬೇಕೆಂಬ ತುಡಿತ ದಿನದಿನಕ್ಕೂ ಬಲಿಯುತ್ತಿದೆ (ತುಂಗಳ. ೦೩): ಎದೆಭಾರ ಎಷ್ಟೋ ಇಳಿಯುತ್ತದೆ; ತನ್ನೊಳಗಿನ ತುಡಿತ ಹಿಡಿತಕ್ಕೆ ಬರುತ್ತದೆ (ಬನಸಿ. ೦೬೦) ; ನವೋದಯ ಕವಿಗಳಲ್ಲಿ ನೂತನಚೈತನ್ಯವನ್ನು ತುಂಬಿದುದು ಬಂಧನದಲ್ಲಿ ಸಿಲುಕಿದ ಭರತಮಾತೆಯ ಬಿಡುಗಡೆಯ ತುಡಿತ (ಸಾಂದಶ. ೩೬೩). ದುಡಿತ$_2$: ೩. ಬೊಕ್ಕೆಯಿಂದುಂಟಾಗುವ ನೋವು : "ಅಯಾಮ = ನೋವು, ಆಕ್ಷೇಪಕ = ದುಡು[ಡಿ]ತ, ಸ್ತಂಭಾ = ಬಿಗಿಯೂದು" (ಬಾಹಟೀ. ೨-೪).

[ ತುಡಿ + – ತ$_2$ ]

**ತುಡಿಸು** 'ತೊಡಿಸು' ನೋ.

**ತುಡು$_1$** 'ತೊಡು$_1$' ನೋ.

**ತುಡು$_2$** 'ತೊಡಂ$_2$' ನೋ.

**ತುಡು$_3$** (ನಾ). ಒಂದು ಬಗೆಯ ಮರ : ಅರುಟಾಳಂ ಹಾರಿವಾಳಂ ತುಡು ತಡಸೊಡವಂ ಲೊಕ್ಕಿ (೧೧೮೪. ೦-೬೨). [ ? ]

**ತುಡುಂಕು$_1$** 'ತೊಡುಂಕು$_1$' ನೋ.

**ತುಡುಂಕು$_2$** 'ತುಡುಕು$_3$' ನೋ.

△ **ತುಡುಂಗುಣಿ** 'ತುಡಂಗುಣಿ' ನೋ.

**ತುಡುಕಿಸು** (ಕ್ರಿ). ಧರಿಸುವಂತೆ ಮಾಡು ; ಹಿಡಿಯುವಂತೆ ಮಾಡು: ಹರಿಯ ಚಕ್ರವ ತುಡುಕಿಸುವೆ ವಾನರಪತಾಕನ ರಥವ ಹಿಂದಕೆ ಮುರಿಯಲಿಸುವೆನು (ಕುವ್ಯಾಭೀ. ೦-೪೦).

[ ತುಡುಕು$_1$ (<ತೊಡಂಕು$_1$) + –ಇಸು$_3$ ]

**ತುಡುಕು$_1$** 'ತೊಡಂಕು$_1$' ನೋ.

**ತುಡುಕು$_2$** 'ತೊಡಂಕು$_3$' ನೋ.

**ತುಡುಕು$_3$,** ತುಡುಂಕು$_2$ (ನಾ). ವಾದ್ಯವಾದನದಲ್ಲಿ ಒಂದು ಪ್ರಕಾರ: ಜತಿ ಜೋಕೆ ತುಡುಕು . . . ಬೆಡಂಗಿನಿತುಂ ಸಂಗತಿವಡೆಯೆ ವಾದನ ಕಳಾವತಿ ಬಾಜಿಸುತಿರ್ದರ್ (ಶಾಂತೀಶ್ವ. ೦೩-೨೨೬) : ಆ ಸಮಯದೊಳ್: ಮದ್ದಳೆಗಂ ಮದ್ದಳೆಯುಂ . . . ಚಮತ್ಕಾರ ತುಡುಕು ರಿಗ್ಗವಣೆ ಪಹರಣೆ ಗಳೆಂಬ ನಾನಾಶಬ್ದಂಗಳಂ ಬಾಜಿಸಿ (ಧರ್ಮಪ. ೨-೩೩ ವ) : ಪಲತೆಱದ ತಾಳಗಳ ಜತಿಗಳನೆಳವಡಿಸಿ ತುಡುಕ[ಕು]ಗಳ ಕತ್ತರಗಳನು ಮೂದೆಱ ನಾದ ಲಯದಲಿ ಕುಡುಪದರೆ ನುಡಿಸೆ (ಸಾಕ್ಯಧಾ. ೦೮-೫೬): ತುಡುಕು ಪಹರಣೆ . . . ತೋಱಿ ನುಡಿಸಿದ ಮಾರ್ದಂಗಿಕನು (ಗೋಮಟೇ. ೬-೦೬). ತುಡುಂಕು$_2$ : ಕವುತಂದೆಂಕಾರಂ ಮಲಪವದೆ ತುಡುಂಕೊತ್ತು ಜೋಕೆ ಯಂತರಿ ಜತಿ ರಿಗ್ಗವಣೆ ಪಹರಣೆಯೆನಿಪ್ಪೀ ಪ್ರಬಂಧಮಂ (?) ಶ್ರೋತ್ರ ಬಂಧವೆನೆ ಬಾಜಿಸಿದರ್ (ಪಾರ್ಶ್ವಪು. ೦೨-೨೦). [ಭರತಕೋಶದಲ್ಲಿ 'ತುಡುಕಾ' ಎಂಬ ಶಬ್ದಕ್ಕೆ 'ವಾದ್ಯಪ್ರಬಂಧ' ಎಂದು ಹೇಳಿದೆ.]

**ತುಡುಕುಗಾಯ** (ನಾ). ಬಿಗಿಯಾದ ಹಿಡಿತದಿಂದ ಉಂಟಾಗುವ ಗಾಯ : ಜಾಡಿಸುವ ಮಣಿಮಯದ ಗದೆಯಲಿ ತೋಡುವೊಯ್ಯನ ತುಡುಕುಗಾಯದ ನೀಡುಮೊನೆಗಳ ವಿಗಡನಿಕ್ಕಿದನದಟರಕ್ಕಸರ (ಕುವ್ಯಾಅ. ೦೦-೫೨). [ ತುಡುಕು$_1$ (<ತೊಡಂಕು$_1$) + ಗಾಯ ]

**ತುಡುಕುಗುದುರೆ** (ನಾ). ಮುನ್ನುಗ್ಗುವ ಕುದುರೆ : ಕಡಿದು ಬಿಸುಟನು ತಲೆವರಿಗೆಗಳಲಡಿಸಿದಾ ಪಯದಳವನೊಗ್ಗಿನ ತುಡುಕುಗುದುರೆಯ ಖುರವ ತಱಿದನು (ಕುವ್ಯಾಕ. ೨-೪೫). [ತುಡುಕು$_1$ (<ತೊಡಂಕು$_1$) + ಕುದುರೆ]

**ತುಡುಕುವೆಳಗು** (ನಾ). ಬೆರೆತುಕೊಂಡ ಬೆಳಕು ; ಅಧಿಕವಾದ ಪ್ರಕಾಶ : ಜಡಿವ ಕೈದೀವಿಗೆಯ ಸಾಲಿನ ತುಡುಕುವೆಳಗಿನ ವಂದಿಜನದುಗ್ಗಡದ ರಾಜಕುಮಾರಕರು ನಡೆತಂದರೊಲವಿನಲಿ (ಕೊರರಾ. ೧-೦೬-೪೦).

[ ತುಡುಕು$_1$ (<ತೊಡಂಕು$_1$) + ಬೆಳಗು$_2$ ]

**ತುಡುಕೆ** 'ತುಡಿಕೆ' ನೋ.

**ತುಡುಕೆವಟ್ಟು,** ತುಳುಕೆವಟ್ಟು (ನಾ). ಒಂದು ಪ್ರದೇಶದ ಹೆಸರು : ದೇವರ ಮೂಡಣದೆಸೆಯಲ್ ಪಳಕೆಯ ಮತ್ತರು ೪ ತುಡುಕೆವಟ್ಟನಲ್ಲಿ ಅಱುವಣದೇ ತುಣ್ಬದು ಮಣಲಕೆಯ ಮತ್ತ ೬ (ಸೌಇಇ. IX-i, ೦೨೦-೦೫ : 1058). ತುಳುಕೆವಟ್ಟು : ದುದ್ದಿಮಯ್ಯನ ಮಗಂ ಪದ್ಮನಾಭನ್ನೊಱೆಯ ಹತ್ತಿರಲೀಶ್ವರಯ್ಯನ ಮರ್ಕ್ಕೆಯಿಂ ಪಡುವಲು ಕೊಟ್ಟ ತುಳುಕೆವಟ್ಟನ ಮರ್ಕ್ಕೆ ಕಮ್ಮ ೪೫ (ಸೌಇಇ. IX-i, ೦೬೫-೫೯ : 1099). [ ? ]

**ತುಡುಗ** (ನಾ). ಕಳ್ಳ ; ಚೋರ; ತಸ್ಕರ : ಕೂಗಿಯಾಡುವಾನು ಬರಿದೆ ತುಡುಗನು (ಚಿದಾರ. ೦೪೮-೯) : ಯಾರಿಗೂ ಕಾಣದಂತೆ ಕಳವು ಮಾಡುವ ಚತುರ ತುಡುಗನಂತೆ (ಗಾಳಿಗು. ೨೭) ; ನಿಮ್ಮ ಹುಡುಗರು ಕೆಲವರು ತುಡುಗರು ಅಷ್ಟೆ (ಬೆಟ್ಟಮು. ೨೦೨). [ತುಡುಗು + – ಅ$_7$]

**ತುಡುಗತನ** (ನಾ). ಕಳ್ಳತನ ; ಚೌರ್ಯ : ಆಗ ತುಡುಗತನ ತನ್ನ ತಾನೇ ಹೊರಬೀಳುತ್ತದೆ (ರಂಗರೊ. ೦೨). [ <ತುಡುಗು + – ತನ ]

**ತುಡುಗದನ** (ನಾ). = ತುಡುಗುಣಿದನ : ಬೇಸಿಗೆಯಲ್ಲಿ ತುಡುಗದನಗಳು ತೋಟಕ್ಕೆ ಬಾರದಂತೆ ಮಾಡುವುದೇ ಕಷ್ಟ (ರೂಢಿ).

[ <ತುಡುಗು+ದನ ]

**ತುಡುಗಾಡು** (ಕ್ರಿ).ಕಳ್ಳತನ ಮಾಡು ; ಕದಿ : ತುಡುಗಾಡುವ ಬಸವನಾರಂಬಿಗನ ಕಯ್ಯೊಳ್ . . . ಸಿಕ್ಕುವಂತೆ (ಧರ್ಮಾಮ್ಮ. ೦೩-೦೮೫).

[ ತುಡುಗು + ಆಡು$_1$ ]

**ತುಡುಗಿ** (ನಾ). ಕಳ್ಳಿ : ಅವಳೇನು ಬೀದಿಯ ಮೇಲಿನ ತುಡುಗಿಯೆ (ಸ್ವ$_1$ತಿಚಿ. ೨೯೬). [ ತುಡುಗ + –ಇ$_2$ ]

**ತುಡುಗು** (ನಾ). ಕಳ್ಳತನ ; ಚೌರ್ಯ : ಮೊನ್ನಿನ ದಿನ ನಮ್ಮ ಗಣಿಯಲ್ಲಿ ಇಂಥದೇ ಒಂದು ತುಡುಗು ಸಂಭವಿಸಿತ್ತು (ರಂಗರೊ. ೦೦) ; ತುಡುಗಿನಿಂದ . . . ಕಳ್ಳಗಂಟು ಮಾಡಿಕೊಂಡಿದ್ದಳು (ಹೊಸಕ್ಕ. ೧೮೪) ; ವಿಸ್ಮಯಕಾರಕ ತುಡುಗುಗಳಲ್ಲಿ ಪ್ಯಾತ್ಯಾನ ಕೈಚಳಕವಿದ್ದೇ ಇದೆ (ದೋರಾಳ. ೧೧).

**ತುಡುಗುಮಾಡು** = ಕಳವು ಮಾಡು ; ಕದಿ : ತುಡುಗುಮಾಡಬಾರದೆಂದು ಸಾಲೆಯ ಅಯ್ಯನವರು ಹೇಳಿದ್ದನ್ನು ಮರೆತೆಯೇ ? (ಮುಂಬಯಿ. ೨-೬೬) : ಅವುಗಳು ಸಿಕ್ಕ ಪದಾರ್ಥಗಳನ್ನು ತಿಂದು ಹಾಕುತ್ತಿದ್ದವು. ತುಡುಗುಮಾಡಿ ಒಯ್ಯುತ್ತಿದ್ದವು (ಕೊಪಾಸಾ. ೨೫) : ತುಡುಗುಮಾಡಿ ಗಂಡಸು ಕೆಟ್ಟ, ಹಾದರಮಾಡಿ ಹೆಂಗಸು ಕೆಟ್ಟಳು (ಗಾದೆ).

[ದೇ.॥ ತಮಿ. ತಿರುಟು, ತಿರುಟ್ಟು ; ಮಲ. ತಿರಿಡ=ಕಳ್ಳ]

**ತುಡುಗುಗೊಳ್** (ಕ್ರಿ). = ತಂಡುಗಾಡು : ಮಹಾಮಾಯಾವಿಯು ತುಡುಗುಗೊಂಡ ತೊಟ್ಟಿನಂತೆ (ಧರ್ಮಾಮೃ. ೬-೧೧೫) : ತುಡುಗುಗೊಂಡು ಕುಡಿಯದಿರ್ (ಅದ್ಭುತ. ೩೦-೧೮). [ ತುಡುಗು + ಕೊಳ್$_1$ ]

**ತುಡುಗುಣ್** (ಕ್ರಿ). ಕದ್ದು ತಿನ್ನು : ತುಡುಗುಣ್ಬ ತೊಟ್ಟಿನಂತೆ ಕೊಲ್ಲದ ವ್ರತಕ್ಕಲಸಿ ಸಡುಗದೆ (ಧರ್ಮಾಮೃ. ೦೪-೮೪). [ ತುಡುಗು+ಉಣ್ ]

**ತುಡುಗುಣಿ**, ತಂಡುಂಗಂಣಿ (ನಾ) ೧. ಕಳವಿನಿಂದಲೇ ಜೀವಿಸುವ ವ್ಯಕ್ತಿ ; ಕಳ್ಳತನದಿಂದ ಹೊಟ್ಟೆ ಹೊರೆಯುವ ವ್ಯಕ್ತಿ : ತುಡುಗುಣಿ ಗೊರವರ ಮೆಚ್ಚಂ ಪೊಡವಿಗೆ ಶಿವಸಕ್ತಿ ತಾನೆ ನೈಷ್ಟಿಕವುನಿವಾ (ಎಕ. XII, ಚಿಕ್ಕನಾ. ೩೦-೨೮: 1149); ಮನೆಮನೆದಪ್ಪದೆ ತಿರುಗುವ ತುಡುಗುಣಿಯಂತೆ ಕಾಡಲಾಗದು ಭಕ್ತನ (ಅವಚಂ. ೧೧೩-೪೬೮) : ತುಡುಗುಣಿಯು ನಿನಗುಂಟು ವೀರ್ಯದ ಕಡುಹು (ನಿಘಾಗ. ೯-೧೦-೪೬); ಊರೂರುಗಳ ಹೊಕ್ಕ ತುಡುಗುಣಿ ತುರುಕಮಾರ್ಬಲವ ಕಡುತವಕದೆ ಮುತ್ತಿಕೊಂಡು (ಕಂಸವಿ. ೧೩-೫೨). △ **ತುಡುಂಗುಣಿ** : ಅನೆ ತುಡುಂಗುಣಿಯಾದೊಡೆ ಭೂನಾಥಂ ಜಾರನಾದೊಡಂ...ಏನೆಂದೆನ ಬಹುದು ನೀತಿ ತಾಂ ಭೂತಳದೊಳ್ (ನೀತಿಸಾಂ. ೫೪೯). : ೨. ಕದ್ದು ತಿನ್ನುವ ನಾಯಿ : "ತುಡುಂ ಗುಣಿಯ ಹಾಟ್ಕನೆಯ ಹಾಟನಕ್ಕುಂ" (ಸಂಜೀವ. ೬).

**ತುಡುಗುಣಿಯಾಗು**= ಕಳ್ಳಬುದ್ಧಿಯಿಂದ ಕೂಡಿರಂ : ಸಾರಮೇಯ ಶಿಶುವಂ ಕಂಡು ಪ್ರೀತಿವಟ್ಟು ನಡವುತ್ತಿರ್ಪುದುಮದು ಗಂಡು ನೆರೆದುಕೊಂಡು ತುಡುಗುಣಿಯಾಗಿ ಭಾಂಡಸಂಕರಂಗೆಯ್ಯುತ್ತಿರ್ಪುದುಂ (ಪಂಚತಂ. ೨೬೦-೧೯). [ ತುಡುಗು + –ಉಣಿ ]

**ತುಡುಗುಣಿಕ** (ನಾ). = ತುಡುಗುಣಿ ೧ : ಕೊಡಗೂಸು ತೊತ್ತು ಸಯ್ಯುವಿ ತುಡುಗುಣಿಕ ಕುಷ್ಮಾಂಗಿ ರಂಡೆ (ಶಾಸ್ತ್ರಟೀ. ೫೧-೩೬).

[ ತುಡುಗುಣಿ + – ಕ$_3$ ]

**ತುಡುಗುಣಿಗೆಯ್ತ** (ನಾ). ೧. ಕಳ್ಳತನದ ಕೆಲಸ. ೨. ಕಳ್ಳತನದಲ್ಲಿ ಕೂಡುವುದು ; ಚೋರಸುರತ : ನಾಣಿಲಿ ಮಾಣಲಾಗದೇ ತುಡುಗುಣಿಗೆಯ್ತಮಂ (ರಸರ. ೩-೦೬೨). [ ತುಡುಗುಣಿ + ಕೆಯ್ತ$_1$ ]

**ತುಡುಗುಣಿತನ** (ನಾ). ೧. ಕಳ್ಳತನ : ಕದ್ದು ತಿಂದರೆ ಕೈಹಿಡಿದೊಮ್ಮೆ ಬಡಿದು ತುಡುಗುಣಿತನವ ಬಿಡಿಸಯ್ಯಾ (ಬಸವ. ೪೩೩). ೨. ಕಪಟವೃತ್ತಿ ; ಮೋಸ ; ವಂಚನೆ : ಎನ್ನ ಸೀಮೆಯಂ ತುಡುಗುಣಿತನದಿ ಹೊಕ್ಕ ತುಂಟ ಬಂಟಿಕೆಯುವಂ ಬಿಡಿಸಿದೊಡೆ (ಸಮ್ಯಕ್. ೨-೬) : ಸಾಂಬಳ್ಳಿಯ ಭೂಪ ತುಡುಗುಣಿತನದಲಾಲಂಬಾಡಿಯ ಕೊಂಡ ಕಡೆಗೆ ಠಾಣೆಯವಿಕ್ಕಿದನು (ಕಂಸವಿ. ೦೬-೨೨). [ ತುಡುಗುಣಿ + – ತನ ]

**ತುಡುಗುಣಿತೊಟ್ತು** (ನಾ). ಕಳ್ಳತನ ಮಾಡುವ ತೊತ್ತು : ಗರ್ದಭನೆರ್ದೆಯುಮಂ ಕಿವಿಯುಮಂ ತಿಂದು ತುಡುಗುಣಿತೊಟ್ಟಿನಂತೆ ಬಾಯುಂ ತೊಡೆದುಕೊಂಡು ತಾನಲ್ಲದಂತಿರ್ಪುದುಂ (ಪಂಚತಂ. ೨೮೪-೨೨).

[ ತುಡುಗುಣಿ + ತೊಟ್ತು ]

**ತುಡುಗುಣಿದನ** (ನಾ). ಹೊಲ, ಗದ್ದೆ, ತೋಟಗಳಿಗೆ ನುಗ್ಗಿ, ಕದ್ದು ಮೇಯುವ ಸ್ವಭಾವವುಳ್ಳ ಪಶು ; ಕಳ್ಳಹಸು ; ತೊಂಡುದನ : ಹಂದಿ ಹರಿದಾಡುವಂತೆ ತುಡುಗುಣಿದನ ತಿರುಗುವಂತೆ (ಉದ್ಯೋಪ್ರ. ೧೦-೨೯-೦೯). [ ತುಡುಗುಣಿ + ದನ ]

**ತುಡುಗುಣಿನಾಯ್**, ತಂಡುಗುಣಿನಾಯಿ (ನಾ). ಕದ್ದು ತಿನ್ನುವ ನಾಯಿ : "ಹಾಟ್ಕನೆಹಾಟಂ=ತುಡುಗುಣಿನಾಯ್" (ಶಮದ. ೫೦. ೦) ; ತುಡುಗುಣಿನಾಯ್ ಮನೆಯಾವರ ಕಯ್ಯೊಳ್ ... ಸಿಕ್ಕುವಂತೆ (ಧರ್ಮಾಮೃ. ೧೩-೦೮೫): ಒಡೆಯರ ಕಣ್ತಪ್ಪುವುದನೆ ತುಡುಗುಣಿನಾಯಳಿಪಿ ನೋಡುವಂತೆ (ಶಾಶ್ವಪು. ೩-೫೯); ತುಡುಗುಣಿನಾಯನು ಹಿಡಿತಂದು ಸಾಕಿದರೆ ತನ್ನೊಡೆಯಂಗೆ ಬಗುಳುವಂತೆ (ಬಸವ. ೫೬೬). **ತುಡುಗುಣಿನಾಯಿ** : ತುಡುಗುಣಿ ನಾಯಿಗೆ ಮಡಕೇ ಮೇಲೆ ಕಣ್ಣು (ಲೋಕ). [ ತುಡುಗುಣಿ + ನಾಯ್ ]

**ತುಡುಗುಣಿನಾಯಿ** 'ತುಡುಗುಣಿನಾಯ್ ' ನೋ.

**ತುಡುಗುತಿನ್**, ತುಡುಂಗುತಿನ್ನು (ಕ್ರಿ). ಕದ್ದು ತಿನ್ನು : ನನ್ನದೊಂದಾಕಳು ಒಕ್ಕಲಿಗನ ಹೊಲದಲ್ಲಿ ತುಡುಗುತಿಂಬುವದಕ್ಕೆ ಹೋಗಲದ ಮನೆಗೆ ಹೊಡತರುವಲ್ಲಿ (ಕೈರಸೂ. ೧೮೯). **ತುಡುಗುತಿನ್ನು** : ಲಕ್ಷ್ಮೀ ತುಡುಗು ತಿನ್ನುತ್ತಾಳೆ (ಸ್ತ್ರೀಶಿಕ್ಷ. ೫೯). [ ತುಡುಗು + ತಿನ್ನು (<ತಿನ್) ]

**ತುಡುಗುತಿನ್ನು** 'ತಂಡುಗುತಿನ್ ' ನೋ.

**ತುಡುಗುತೀನಿ** (ನಾ). ಕದ್ದ ತಿನಿಸಂ : ಅಡಕವಿಲ್ಲದ ಹೆಣ್ಣ ನಡತೆ ತಪ್ಪಿದ ಹೆಣ್ಣ ತುಡುಗುತೀನಿಯ ತಿಂಬ ಹೆಣ್ಣ (ಪೂಜ್ಯಚ. ೮-೪೦).

[ ತುಡುಗು + ತೀನಿ (<ತಿನ್ನಿ$_1$) ]

**ತುಡುಗುನಾಯ್** (ನಾ). ಕಳ್ಳತನ ಮಾಡುವ ನಾಯಿ : ಒಡೆಯರಿಲ್ಲದ ಮನೆಯ ಹೊಕ್ಕು ತುಡುಗುನಾಯ್ ತುಡುಗೊಳಲು ವೀರವೆ (ಕೌಶಿಕಾ. ೧೦-೬೯). 'ತುಡುಗುಣಿನಾಯ್' ಪರ್ಯಾ. [ ತುಡುಗು + ನಾಯ್ ]

**ತುಡುಗುಪಶು** (ನಾ). = ತಂಡುಗಣಿದನ : ಸಡಿಲು ಬಿಟ್ಟಡೆ ಮನಂ ಮನುಜನಾ ಮೂಜಗದೆ ತುಡುಗುಪಶುವಿನ ಕೊರಳ ಗುದ್ದಿಯಂತೆಳದಾಡಿ ಕೆಡಿಸುವದು (ಮಲ್ಲಚ. ೧೩-೯). [ತುಡುಗು + ಪಶು]

**ತುಡುಗುಮೇಯಿಸು** (ಕ್ರಿ). ಕದ್ದು ಮೇಯಿಸು : ಊರ ತುಂಟ ತರುಣರು ತಮ್ಮ ದನಕರುಗಳನ್ನು ಇನ್ನೊಬ್ಬರ ಬಣಬೆಗೆ ನೂಕಿ ತುಡುಗುಮೇಯಿಸಲು ಮರೆಯಲಿಲ್ಲ (ಜಯಂತ. ೨೬೩). [ತುಡುಗು + ಮೇಯಿಸು]

**ತುಡುಗುವ್ಯಾಪಾರ** (ನಾ). ಕಳ್ಳವ್ಯಾಪಾರ : ಅರ್ಥದಾಸೆಗಾಗಿ ಬಡ್ಡಿಯ ತೆಗೆದುಕೊಂಡು ಬಡವರ ಬಂಧನಕಿಕ್ಕಿ ತುಡುಗುವ್ಯಾಪಾರವ ಮಾಡಿ (ವಚಸಂ. ೩೨೨-೦೦೦). [ತುಡುಗು + ವ್ಯಾಪಾರ]

**ತುಡುಗೆ** 'ತೊಡಂಗೆ' ನೋ.

**ತುಡುಗೊಳ್** (ಕ್ರಿ). ಕಳ್ಳತನ ಮಾಡು : ಒಡೆಯರಿಲ್ಲದ ಮನೆಯ ಹೊಕ್ಕು ತುಡುಗುನಾಯ್ ತುಡುಗೊಳಲು ವೀರವೆ (ಕೌಶಿಕಾ. ೧೦-೬೯).

[ <ತುಡುಗು + ಕೊಳ್$_1$ ]

**ತುಡುಜೊಡರ್** (ನಾ). ಹತ್ತಿಸಿರಂಪ ಸೊಡರು ; ಉರಿಯಂತ್ತಿರಂಪ ದೀಪ : ತುಡುಜೊಡರಜುಗೆಱಯೆಂಬಿವು ಪಡೆಯವು ಬಿಂದುವನುದಂತ ವೃತ್ತಿಯನಾಳ್ದುಂ (ಶಮದ. ೧೬೦). [ತುಡು$_1$ (<ತೊಡು$_1$) + ಸೊಡರ್]

**ತುಡುತಿನ್** (ಕ್ರಿ). ಕದ್ದು ತಿನ್ನು : ಬಿಡದೆ ಕಳವಿಂದೆ ಲೋಗರ ಮನೆಗಳಂ ಪೊಕ್ಕು ತುಡು[ಪಾಠಾಂ. ಡಿ] ತಿಂದವನ ಭೋಜನಕ್ಕೆ ಮೃಷ್ಟಾನ್ನವಾದೊಡೆ ಕೆಲಬಲಂಗಳಂ ನೋಡುವನೆ (ಕ್ರಮಿಥಾ. ೬-೫೩); ತುಡುತಿಂದವಳಿವಳೆನುತ ದೂಟಿಕ್ಕುವರು (ಕೃಷ್ಣಗೋ. ೨-೫); ಕೆನೆಕೆನೆವೊಸರನು ದಿನ ತುಡುತಿಂಬನು (ಪ್ರಸಭಾ. ೦೬-೨೧). [ < ತುಡುಗು + ತಿನ್ ]

**ತುಡುತಿನಿ** (ಗು). ಕದ್ದು ತಿನ್ನುವ : ಯಾವನ ಭಟರು ತುಡುತಿನಿ ನಾಯ ಬಡಿವುದಕೆ ಕೋಟಿಮಡಿಯೆನೆ ಬಡಿವರು (ವೀಶೈಪು. ೬-೧೩-೪೬).

[ <ತುಡುಗು + – ತಿನಿ$_2$ ]

**ತುಡುಪು** (ನಾ). ೧. ದೋಣಿ, ಹಡಗು ಮೊದಲಾದುವನ್ನು ನಡೆಸಲು ಉಪಯೋಗಿಸುವ ಹುಟ್ಟು : (ಕ್ರಿ). ೨. ಮರದ ಸವುಟು : (ಕ್ರಿ).

[ ದೇ.॥ ತಮಿ. ತುಟುಪ್ಪು ; ಮಲ. ತುಡುಪ್ಪು ]

**ತುಡುಬು** 'ತುಡಂಬು' ನೋ.

**ತುಡುಬೆ**, ತುಡುಂಬೆ (ನಾ). ಒಂದು ಬಗೆಯ ಜೇನುಹುಳು : ನಿನ್ನ ಈ ರೂಪವು ಹೆಜ್ಜೇನು ಕಣ್ಣಿಗೆ ದನಿ ತುಡುಬೆಯ ಜೇನು ಕಿವಿಗೆ (ಚಂದ್ರವೀ. ೧೭೪-೯೩); ಮಲೆನಾಡಿನಲ್ಲಿ ತುಡುಬೇಯ ಜೇನುತುಪ್ಪ ನನಗೆಂದು ತಾಯಿ ಕಳುಹೀದ (ಹಳ್ಳಿಯ. ೯೭). **ತುಡುವೆ** : ಅವಳು ಕಟ್ಟಿಸಿಕೊಂಡೂ ಹೆದರದೆ ಹುತ್ತದಲ್ಲಿದ್ದ ತುಡುವೆ ಜೇನನ್ನು ಕಿತ್ತುಕೊಟ್ಟಿದ್ದಳು (ಮಲೆಮ. ೧೬೭); ದುಂಬಿ, ಹೆಸುರುದುಂಬಿ, ತುಡುವೆ, ತೊರಿಗ (ನಮ್ಮನು. ೨೪೦). [ ? ]

**ತುಡುಮು**, ತುಡುಂಬು (ನಾ). ಒಂದು ಬಗೆಯ ವಾದ್ಯ : ಗಿಡಬಿಡ ನುಡಿಯಲೊಡಚಿ ಕಾಳೆ ರಣಭೇರಿ ಬಿಡದೆ ಮೊಳಗೆ ತುಡುಮುಗಳ ಗಡಣದ ಗರ್ಜಿತ ಮಸಗೆ ನಿಂದನು ರಾಮ ಪಡೆಗಿದಿರಾಗಿ (ಕುಂರಾಸಾಂ. ೪೩-೫೯); ಢಕ್ಕೆ ನಾಟ್ಯಾನಕ ಚಂಪೆ ಕಿಂಕಿಣಿ ಡೌಡೆ ಕುಕ್ಕುರು ತುಡುಮು ರಿಂಚೆಯವ . . . ಕೇಳಿಸಿದರು (ಭರತ. ೦೨-೪೦) ; ಎಲ್ಲಿ ನೋಡಲು ವಾದ್ಯಗಳ ಘಲ್ಲಣೆ ತುಡುಮುಗಳಬ್ಬರ ಮೊಳೆದುವಲ್ಲಲ್ಲಿ (ಕಂಸವಿ. ೦೭-೪೩) ; ತುಡುಮುಗಳ್ ದುಂದುಭಿಯು ತೂರ್ಯತ್ರಯಂಗಳಿಂದ್ಯತಂದು (ಪರಕು. ೮-೨೧). **ತುಡುಬು** : ತುಡುಬು ಬಡಿಯದೆ ದನಿಯ ಕೊಡುವುದೇನೊ (ದಾಸಪ. ೬). [ ದೇ.॥ ತಮಿ. ತುಟುಮ್ಮೈ ; ತೆಲು. ತುಡುಮು ]

**ತುಡುರು** 'ತೊಡರ್$_1$' ನೋ.

**ತುಡುವೆ** 'ತುಡುಂಬೆ' ನೋ.

**ತುಡುವೊಗು** (ಕ್ರಿ). ತುಡುಂಗಿನಿಂದ ಹೊಗು ; ಕಳ್ಳತನದಿಂದ ಪ್ರವೇಶಿಸು : ಕೊಂಕಣದಂತೆಯಲ್ಲಿ ತುಡುವೊಕ್ಕು ತುರುಂಕರ ನೂಂಕಿ . . . ನೀನವರಶಂಕರನಂತೆಡೆಗೊಂಡೆ ಮಾಧವಾ (ಗೀವಿಂ. ೫೨-೬).

[ <ತುಡುಗು + ಪೊಗು (<ಪುಗು)]

**ತುಡುಸೆಂಡು** (ನಾ). ಹಿಡಿದುಕೊಳ್ಳುವ ಚೆಂಡು : ತುಡುಸೆಂಡೆಂದು ಮಾರ್ತಂಡಮಂಡಳಕ್ಕೆ ಶುಂಡಾದಂಡಮನೆತ್ತಿ . . . ಆಕಾಶಮಂ ಬೆರಂಟುವುದು (ಪುಣ್ಯಾಸ್ರ. ೬-೫೦ ವ). [ < ತುಡುಂಕು$_1$ + ಸೆಂಡು ]

**ತುಡೆಚುಳ್ಳಿ** (ನಾ). ಒಂದು ಬಗೆಯ ಮರ ; "ರಬ್ಬರವೃಕ್ಷ" (ಶಂಡಿತ. ೨೨೭) : ಹೊಳೆಚುಳ್ಳಿ, ಮುಳ್ಳಿಚುಳ್ಳಿ, ಹರಿಕುಶ, ತುಡೆಚುಳ್ಳಿ (ಮೃಡಿಗಿ. ೩-೨೧). [ತುಡ್ಡೆ$_0$ + ಚುಳ್ಳಿ$_1$]

**ತುಡೆಮದರಂಗಿ** (ನಾ). ಒಂದು ಬಗೆಯ ಗಿಡ ; "ವರಂಣ" (ಶಂಡಿತ. ೨೪೪) : ಆದಿರಾಜ . . . ತುಡೆಮದರಂಗಿ, ಹೊಡ್ಡೆಲೆನಗೆ (ಮೃಡಿಗಿ. ೨೩-೪೭೭). [ತುಡ್ಡೆ$_0$ + ಮದರಂಗಿ]

**ತುಡ್ಡಿಲ** (ನಾ). (?) : ಅಮ್ಮಗೌಡ ಎಬ್ಬಾಗಿಲ ಸ್ಥಾನೀಕತನ ಮುಖ್ಯವಾಗಿ ನಡ್ಡಿ ತುಡ್ಡಿಲ ಸಮುಟ ತುಪ್ಪಿ ಏನಾದಡೆ ಅಲ್ಲಿ (ಎಕ. XIV, ತಿರುಮ. ೦೪೫-೩ ; 1090). [ ? ]

**ತುಣಗೆಣಸು** (ನಾ). ಒಂದು ಬಗೆಯ ಗೆಣಸು : ತೂನಗೆಣಸು, ಮುಡಿಗೆಣಸು, ನೂರೆಲೆಗೆಣಸು, ತುಣಗೆಣಸು, ದಂಡಾಲು (ಮೃಡಿಗಿ. ೩೦-೫೯೨).

[ ತುಣ್ಣ$_0$ + ಗೆಣಸು (<ಗೆಬಸು) ]

**ತುಣವ** (ನಾ). ಒಂದು ಬಗೆಯ ವಾದ್ಯ : ಪಟುಪಟಹತುಣವಭಂಭಾಮರ್ದಳೆ ಝಲ್ಲರಿಮುಕುಂದತಾಳಕಾಹಳಶಂಖವಂಶವೀಣಾಸ್ವರಂಗಳೆಸೆಯ (ವರ್ಧಮಾ. ೮೩-೨೮). [ < ಪ್ರಾ. ತುಣಯ ]

**ತುಣಿ** (ನಾ). ಒಂದು ಬಗೆಯ ಮರ; ನಂದಿಮರ. [ ಸಂ. ]

**ತುಣುಕು**, ತುನಕು, ತುನುಕು (ನಾ). ತುಂಡು ; ಚೂರು; ಖಂಡ ; ಶಕಲ : ರೊಟ್ಟಿಯ ತುಣುಕೊಂದು ಕೈಯೊಳಗಿದ್ದರೆ ನಾಯಿಗಳಾರೇಳು ಬಹವು (ಅಂಚಾಪ. ೦೯೬-೬೮); ಬೆರಳು ಮೂಡಿಸುವಾಗ ಅಲ್ಲಿ ಒಂದು ದಾರದ ತುಣುಕು ಬಿದ್ದಿರಬೇಕು (ಕೃಕಳ್ಳಿ. ೦೭೮) ; ಕನ್ನದ ಕಾಲದಲ್ಲಿ ನಾಯಿಯು ಬೊಗಳಬಾರದೆಂದು ಅದಕ್ಕೊಂದು ರೊಟ್ಟಿಯ ತುಣುಕನ್ನು ಚೆಲ್ಲಿ (ಯಕ್ಷಪ್ರ. ೩೭). **ತುನಕು** : ಮುನಿಸಿನಿಂ ಪರಶುವಂ ಬೀಸಲ್ಕೆ ಬಾಹುಗಳ್ ತುನಕಾಗಿ ನೆಲಕುದುರ್ದವು (ಪರಕು. ೨೮-೪). **ತುನುಕು** : ಕನಕವನು ಪಂಚಾಳಗೆ ಕೊಡೆ ತುನುಕು ತುನುಕನು ಮಾಡಿ ಕಡಿದೇ ಜನಿಸುಜನಿಸಿನ ವಡವೆ ಮಾಡಿದ (ಜ್ಞಾನಸಿಂ. ೬-೬).

**ತುಣುಕುಬಿಣುಕು**=(ಹಾಡಿನಲ್ಲಿ)ಕೆಲವೊಂದು ಭಾಗ: ಭತ್ತಕುಟ್ಟುವಾಗ, ಹೆಣ್ಣುಮಕ್ಕಳು, ಕಲಹುಂಕಾರಸಹಿತವಾಗಿ ಗಮಕದ ತುಣುಕುಬಿಣುಕಿನಿಂದ ಹಿತವಾಗಿ ... ಪದ್ಯ ಹೇಳುತ್ತಿದ್ದರಂತೆ (ಮಹಾಹಿ. ೦೨). **ತುಣುಕುಮಿಣುಕು** = ಅತ್ಯಲ್ಪ ; ಅಲ್ಪಸ್ವಲ್ಪ : ಅವನ ವಿಷಯವಾಗಿ ಪ್ರಸಿದ್ಧವಾಡಿದ ತುಣುಕು ಮಿಣುಕು ಮಾಹಿತಿಯಿಂದಲೇ ನಮ್ಮ ದಾಹ ವನ್ನು ಹಿಂಗಿಸಿಕೊಳ್ಳ ಬೇಕಾಗುವುದು (ಪ್ರಬಂಧ. ೧೧೧).

[ ದೇ.॥ ತಮಿ. ತುಣುಕ್ಕು, ತುಣುಕ್ಕೈ, ತುಣಿಕ್ಕೈ ; ತೆಲು. ತುನುಕ, ತುನಕ, ತುನ್ಕ ; ನಾಯ್ಕಿ. ತುನ್ಕ ]

**ತುಣ್ಣೆ** 'ತುಣ್ಣೆ' ನೋ.

**ತುಣ್ಣೆ**, ತುಣ್ಣೆ (ನಾ). ಗಂಡಸಿನ ಜನನೇಂದ್ರಿಯ ; ಶಿಶ್ನ : ಅವನ ಬಾಯಿಗೆ ಸುರಾಪಾನ ಕತ್ತೆ ತುಂಣೆ (ಸೌಇಇ. IX-ii, ೫೦೩-೫೫ ; 1521). **ತುಣ್ಣೆ** : ಕತ್ತೆ ತುಂಣೆಯ ತಾನು ತಂನ ಹೆಂಡತಿಯುಂ ತಾಯಿ ತಂದೆಯು ತಿಂದವರು (ಸೌಇಇ. IX-i, ೩೬೬-೨೩ ; 1226) ; ಇದಕೆ ಅಣಿಪಿದವನು ಕತ್ತೆಯ ತುಂಣೆಯನು ಕಲುಪ್ಪನು ತಿಂದ ನಾಯಿಯದರ ಕಸಿಗೆ ಆಸೆ ಮಾಡಿದವ (ಮೈಆರಿ. ೦೯೩೦, ೨೩-೦೩ ; 1519).

[ದೇ. ॥ ತಮಿ. ಚುಣ್ಣಿ ; ಮಲ. ಕುಣ್ಣಿ, ಚುಣ್ಣಿ ; ತುಳು. ತುಣ್ಣೆ ; ತೆಲು. ಚುಲ್ಲಿ, ಚುಲ್ಲ]

**ತುಣ್ಣಣಿ** 'ತುಂತುಣಿ' ನೋ.

**ತುತಿ** (ನಾ). ಹೊಗಳಿಕೆ ; ಪ್ರಶಂಸೆ ; ಸ್ತೋತ್ರ : ಸ್ತುತಿ – ತುತಿ (ಶಮದ. ೨೬೨ ಪ್ರಯೋ) : ಪುಷ್ಪಸರನ ರಾಣಿಗೆ ಮೆಯ್ಯೊಡವನುವೊಪ್ಪಿಸಿ ತುತಿಯ ಮಾಡಿದರು ( ಮೋಹತ. ೦೭-೪೩) ; ಮುರಹರನ ಸನಿಯದಲಿ ಪಾರ್ಥನು . . . ಉರುತರದ ತುತಿಯಿಂದ ಪೊಗಳುತ (ಕೋಗಯ. ೨೭-೯೦).

[ <ಸಂ. ಸ್ತುತಿ ]

**ತುತಿಗೆಯ್ಯು** (ಕ್ರಿ). = ತುತಿಸಂ : ತ್ರಿಣಯನ ಸಭಾಂಗಣದೊಳು ಭಕ್ತಿ ರಕ್ತಿಯಿಂ ತುತಿಗೆಯ್ಯುತ್ತಿಯಿಂದ (ನಂದಿಮಾ. ೫-೩೭).

[ ತುತಿ + ಗೆಯ್ಯು (<ಕೆಯ್$_1$) ]

**ತುತಿಯಿಸು** 'ತುತಿಸು' ನೋ.

**ತುತಿಸು**, ತುತಿಯಿಸು (ಕ್ರಿ). ಹೊಗಳು ; ಸ್ತೋತ್ರಮಾಡು ; ಪ್ರಶಂಸಿಸು : ತುತಿಸುವ ಪುಣ್ಯಪಾತಕರೊಳೆವೊಪ್ಪುತಂ (ನಂಜಿರ. ೩-೬೬) ; ತ್ರಿಕರಣಂಗಳಿಂ ನಂಬಿ ದೃಢಭಕ್ತಿಯಿಂ ತಾಂ ತುತಿಸುತ (ಪದ್ಮರಾ. ೧೦-೬೪) ; ಮುನಿಪನ ಚರಣಗಳನು ತುತಿಸಿದನು (ತಂಪ್ರಸಾಂ. ೬-೪೭) ; ಬಗೆವಗೆಯೊಳ್ ತುತಿಸುತುಮಡಿಗೆಬಗಿದಂ (ರಾಮಾಶ್ವ. ೬೨-೦೪). **ತುತಿಯಿಸು** : ತುತಿಯಿಸಿ ಪೊಡೆವಟ್ಟು (ಶಂಕಶಂ. ೨೬೨-೨೨) ; ದುರ್ಜನರಂ ದೂಷಿಸಿ ನೀತಿನಿಪುಣರೆನಿಸುವ ಸಜ್ಜನರಂ ಪ್ರೀತಿ ಮಿಗಲು ತುತಿಯಿಸಿ (ಜಯುಕಾ. ೧-೨೩).

[ ತುತಿ + – ಇಸು$_3$ ]

**ತುತೂರಿ** 'ತಿತ್ತಿರಿ$_1$' ನೋ.

**ತುತ್ತ**, ತುತ್ಥ, ತುತ್ತು$_3$, ತುತ್ಥೆ (ನಾ). ಒಂದು ಬಗೆಯ ರಾಸಾಯನಿಕ ವಸ್ತು ; ಮೈಲುತುತ್ತ ; ಗಂಧಕಾಮ್ಲ : "ತುತ್ತಂ–ಪಾಷಾಣಭೇದಂ" (ಕಾಕಳ್ಳ. ೨೦೨) ; "ಮಯೂರಗ್ರೀವಃ-ತುತ್ಥ" (ಒಷಧಿ. ೦೨೨) : ತುತ್ತವನ್ನು ಕರಿಹುರಳಿಯ ರಸದಿಂದ ಕುಡಿಯಲು ಗರ್ಭನಾಶ (ವಿವ್ಯವಿ. ೦೦೯). **ತುತ್ಥ** : "ಕೂಪಾರೋದಿತಂ ತುತ್ಥ [ಪಾಷಾಂ. ರ್ತ]" (ಮುಂಗರಾ ೪೩-೪೨). **ತುತ್ತು$_3$** : (೬). **ತುತ್ಥೆ** : (೬). [ < ಸಂ. ತುತ್ಥ ]

**ತುಹಿನಾಂಶುಮಂಡಳ** (ನಾ). ಚಂದ್ರಮಂಡಲ; ಚಂದ್ರಬಿಂಬ : ನಭೋವಧು ಸೂಡಿ ಬಿಸುಟ್ಟ ಮಾಲ್ಯಮಂಡಳದವೊಲಿರ್ದುದಸ್ತಗಿರಿಮಸ್ತಕದೊಳ್ ತುಹಿನಾಂಶುಮಂಡಳಂ (ಆದಿಪು. ೧೭-೦೩೩). [ ತುಹಿನಾಂಶು + ಮಂಡಳ ( = ಮಂಡಲ) ]

**ತುಹಿನಾಂಸು** (ನಾ). = ತುಹಿನಕರ : ಗುಣಾರ್ಣ[ವ]ತುಹಿನಾಂಸು ಶೋಭನನುದಾರದ ತಾಯ್ಮನೆ (ಸೌಇಇ. XX, ೭೭-೨೪ ; 1118). [ P ಇದು 'ತುಹಿನಾಂಶು' ಎಂಬುದರ ಅಪಲಿಖಿತ ]

**ತುಹಿನಾಗಜೆ** (ನಾ). ಹಿಮವಂತನ ಮಗಳು ; ಪಾರ್ವತಿ: ತುಹಿನಾಗಜಾರ್ಧಾಂಗ ... ಎಮ್ಮಯ ಕೃತಿಯ ಭೂಗಗನದಿಗ್ವಿರಿತವಾಗಿ ಪಸರಿಸುವಿನಂ ಸಾಗಿಸುವುದಕ್ಕೞಿಂದೆ (ಭಾವಚಂ. ೧-೧). [ ಸಂ. ತುಹಿನಾಗಜಾ ]

**ತುಹಿನಾಚಲ, ತುಹಿನಾಚಳ** (ನಾ). = ತುಷಾರಾದ್ರಿ : ಕನಕನಿಭಪ್ರಭಾಂಘ್ರಿಯುಗನಂ ತುಹಿನಾಚಲವರ್ಣಮಧ್ಯದೇಹನಂ . . . ಕಂಡು (ಪಂಪಚಂ. ೦೬೧-೮); ನಿಜಶರೀರಮಂ ಕೆಡಹಿ ತುಹಿನಾಚಲದೊಳು ಸಜ್ಜನರ ಗತಿವಡೆವೆಂ (ಕೃಮಿಘಾ. ೨೪-೭೬). ತುಹಿನಾಚಳ : ಇತ್ತ ಸೇನಾನಿಯುತ್ತರಭರತದ ಪಶ್ಚಿಮಖಂಡಮಂ ಬಾಯ್ಕೇಳಿಸಿ ಬಂದು ವಿಜಯಕಟಕಂ ಬಿಡಿದು ತುಹಿನಾಚಳ ಸಿಂಧೂಪಾಂತದೊಳ್ ಬಿಟ್ಟಿರೆ (ಶಾಂತಿಪು. ೧೦-೫೭ ವ) ; ಸುಂದರ ತುಹಿನಾಚಳ ಸಂಕ್ರಂದನಗಜ ... ಯಶೋಭಾಸುರನೆಂದು ಮನಂಗೊಂಡು (ಸುಕುಮಾ. ೧-೫೬). [ತುಹಿನ + ಅಚಲ]

**ತುಹಿನಾಚಳ** 'ತುಹಿನಾಚಲ' ನೋ.

**ತುಹಿನಾದ್ರಿ** (ನಾ). = ತುಷಾರಾದ್ರಿ : ಭದ್ರಾಸನವಂ ಭುಜವಿಜಯದ್ರವಿಣಂಗವನಿಪತಿಗೆ ಕೊಟ್ಟಿಱಗೆ ಯಶೋಭದ್ರ್ಯಕತಿರಸ್ಕೃತ ತುಹಿನಾದ್ರಿ ಜಗದ್ಬಂಧುಸಿಂಧುದೇವಿಯನರಸಂ ಪೋಗವೇಟ್ಟು (ಶಾಂತಿಪು. ೧೦-೫೭). [ತುಹಿನ + ಅದ್ರಿ ]

**ತುಹಿನಾದ್ರೀಂದ್ರ** (ನಾ).ಶ್ರೇಷ್ಠವಾದ ಹಿಮಾದ್ರಿ: ಬಹುತಾಪಕ್ಕೆ ಬಿಗುರ್ತು ವಿಷ್ಣುಪದವಂ ಮತ್ತಾಕ್ಕವತಾರಕ್ಕಿನಂ ತುಹಿನಾದ್ರೀಂದ್ರಮನೊತ್ತಾಗೊಂಡು ನಡೆವಂ (ಶಂಖಾಮಾ. ೭-೮೯). [ ತುಹಿನ + ಅದ್ರಿ + ಇಂದ್ರ ]

**ತುಹಿನೋದ್ಗತಿ** (ನಾ). ತಂಪಿನ ಏಳಿಗೆ ; ಹೆಚ್ಚು ತಂಪು; ಶೈತ್ಯಾತಿಶಯ : ಸುತರಿಲ್ಲದ ಸಿರಿ ತುಹಿನೋದ್ಗತಿಯಿಲ್ಲದ ವಾರಿ...ಮೆಱೆದಪುದೇ (ಚಂದ್ರಪು. ೩-೪೩). [ ತುಹಿನ + ಉದ್ಗತಿ ]

**ತುಳ** 'ತುಲ' ನೋ.

**ತುಳಕಲು** 'ತುಱಿಕಲ್' ನೋ.

**ತುಳವೇಂದ್ರ** (ನಾ). ತುಳುವದೇಶದ ರಾಜ—ಒಡೆಯ: ತದ್ವಂಶೇ ದೇವಕೀ ಜಾನಿರ್ದಿದೀಪೇ ಶಿಂಮಧೂಪತಿಃ ಯಶಸ್ವೀತುಳವೇಂದ್ರೇಷು ಯದೋಃ ಕೃಷ್ಣ ಇವಾನ್ವಯೇ (ಎಕ. VII, ಶಿವಮೊ. ೧-೧೩ ; 1518). [ತುಳವ$_0$ (< ತುಳು) + ಇಂದ್ರ]

**ತುಳಸಿ** 'ತುಲಸಿ' ನೋ.

**ತುಳಸಿಕಟ್ಟೆ** 'ತುಲಸಿಕಟ್ಟೆ' ನೋ.

**ತುಳಸಿದಳ** (ನಾ). ತುಳಸಿಯ ಕಂಡಿ,— ಎಲೆ : ಹಸೆಯ ಮಗುವನು ಮೊನ್ನೆ ಬಂದವರು ನೋಡಿ...ಹಸಿ ತುಳಸಿದಳ ನೀರ ಒಣಬಾಯೊಳೂಡಿ (ಕಎಪು. ೪೪-೨). [ ತುಳಸಿ ( = ತುಲಸಿ) + ದಳ$_2$ ( = ದಲ) ]

**ತುಳಸಿಪೂಜೆ** 'ತುಲಸಿಪೂಜೆ' ನೋ.

**ತುಳಸಿಮಾಲೆ** 'ತುಲಸಿಮಾಲೆ' ನೋ.

**ತುಳಸೀಪತ್ರ** (ನಾ). ತುಳಸಿಯ ದಳ, - ಎಲೆ: ತುಳಸೀಪತ್ರ ಸಂದೋಹದಿಂ ಮಾಧವಪಾದಾಂಭೋಜಮಂ ಪೂಜಿಸಿ (ಹೂದಚಂ. ೧೩-೨೯); ತುಳಸೀಪತ್ರ-ಧಾರ್ಮಿಕ ದೃಷ್ಟಿಯಿಂದ ಬಹಳ ಮಹತ್ತ್ವವುಳ್ಳದಾಗಿದೆ (ಭಾಹಬ್ಯ. ೦೫೬). [ ಸಂ. ತುಲಸೀಪತ್ರ ]

**ತುಳಸೀಮಣಿ** 'ತುಲಸೀಮಣಿ' ನೋ.

**ತುಳಸೀಮಾಲೆ** (ನಾ). = ತುಲಸಿಮಾಲೆ : ಸಾಲ ಕೆಂಜೆಡೆ ವೀಣೆ ತುಳಸೀಮಾಲೆಯೊಪ್ಪುವ ಮುನಿವರೇಣ್ಯನು ಶೂಲಿ ಕಳುಹಲು ಬಂದ ನಾರದ (ಕೌಶಿಕಾ. ೨೪-೮). [ ಸಂ. ತುಲಸೀಮಾಲಾ ]

**ತುಳಸೀವಿವಾಹ** 'ತುಲಸೀ ವಿವಾಹ' ನೋ.

**ತುಳಾಡಿ** (ನಾ). ಜಟ್ಟಿಕಾಳಗದ ಒಂದು ವರಸೆ:ಅಡಕಿ ಕಕ್ಷವಡಂ ಮುಹಡಂ ತುಳಾಡಿ [ಪಾಠಾಂ. ಡೆ] ಸಂದಸುವಿಡಿವಟ್ಟಸಂ ಗುಣವಳಂಬುಗೆ ... ಎನಿಪ್ಪ ಜಟ್ಟಿಗನ ನಚ್ಚಿನ ಬಿನ್ನಣಮೊಪ್ಪೆ ಕಾದಿದರ್ (ಚಂದ್ರಪು. ೫-೭೮) ; ಅಡಿಕೆ ತುಳಾಡಿ ಪೊಟ್ಟಮುಡುಹಂ ಮುಹಡಂ ದಣಾವಟ್ಟ ಪಟ್ಟಸಂ ಎಂದು ಮಲ್ಲಘಾತಂ ಮಾಡಿ (ಅನಂಪು. ೨-೨೬). [ ? ]

**ತುಳಾಧರ** (ನಾ). ೧. ತಕ್ಕಡಿಯನ್ನು ಹಿಡಿದುಕೊಂಡಿರುವವನು : ಬಂಡಂಗಳ ಬೆಲೆಯಂ ಚಿಂತಿಸುವಂ ತುಳಾಧರಂ ತೌಳಿನಿಳಯದಾದಿತ್ಯಾಂಶಂ (ಜಾತಕಿ. ೦೯-೦೯). ೨. ವ್ಯಾಪಾರಿ ; ಬಣಜಿಗ. [ ಸಂ. ತುಲಾಧರ ]

**ತುಳಾಪುರುಷ** 'ತುಲಾಪುರುಷ' ನೋ.

**ತುಳಾಮಾನವಿಶುದ್ಧಿ** 'ತುಲಾಮಾನವಿಶುದ್ಧಿ' ನೋ.

**ತುಳಿ$_1$** 'ತುಱಿ$_1$' ನೋ.

**ತುಳಿ$_2$** 'ತುಱಿ$_2$' ನೋ.

**ತುಳಿ$_3$** (ನಾ). ತುಪ್ಪಟ (?) : ಹಂಸೆಯ ತುಳಿಯ ಮೇಲ್ವಾಸಿನಲಿ ಪವಡಿಸುವೀಕೆ ಇಂದೀಗ ... ಕಲುನೆಲದೊಳೊಱಗಿದಳು (ಕುಪ್ಪಾಅ. ೯-೩೦). [ < ಸಂ. ತೂಲ ?]

**ತುಳಿತ** (ನಾ). ಕಾಲಿನಿಂದ ಮೆಟ್ಟುವಿಕೆ: ಆ ಭಸ್ಮವು ಪರಮೇಶ್ವರನ ಪಾದಗಳ ತುಳಿತದಿಂದ ಎದ್ದು ... ಆ ಪರಶಿವನ ಶರೀರವಂ ವ್ಯಾಪಿಸಿ (ಸೌಗಂಧಿ. ೩೮೦-೦೮). [ ತುಳಿ$_1$ (< ತುಱಿ$_1$) + - ತ$_2$ ]

**ತುಳಿಯಾಳು** (ನಾ). ಶೂರನಾದ ಯೋಧ : ಕಾದುತಲಿಹ ತು [ಪಾಠಾಂ. ಕ] ಳಿಯಾಳು ದೊರೆಕುಮಾರಕರ ಚಲವನಱಿತು ದಳಪತಿ ನಂಜರಾಜೇಂದ್ರ ಸಲೆ ಮನ್ನೆಯರೊಳಿಂತೆಂದ (ಕಂಸವಿ. ೧೮-೦೪೯). [P ಇದು 'ತುಳಿಲಾಳು' ಎಂಬುದರ ಅಪಲಿಖಿತವಿರಬಹುದು.]

**ತುಳಿಯಿಸು** 'ತುಱಿಯಿಸು' ನೋ.

**ತುಳಿಲ್$_1$** 'ತುಱಿಲ್$_1$' ನೋ.

**ತುಳಿಲ್$_2$** 'ತುಱಿಲ್$_2$' ನೋ.

**ತುಳಿಲಾಳ್** 'ತುಱಿಲಾಳ್$_2$' ನೋ.

**ತುಳಿಲಾಳು$_1$** 'ತುಱಿಲಾಳ್$_1$' ನೋ.

**ತುಳಿಲಾಳು$_2$** 'ತುಱಿಲಾಳ್$_2$' ನೋ.

**ತುಳಿಲು$_1$** 'ತುಱಿಲ್$_1$' ನೋ.

**ತುಳಿಲು$_2$** 'ತುಱಿಲ್$_2$' ನೋ.

**ತುಳಿಲುಗೆಯ್** 'ತುಱಿಲ್ಗೆಯ್' ನೋ.

**ತುಳಿಲುಗೆಯಿ** 'ತುಱಿಲ್ಗೆಯ್' ನೋ.

**ತುಳಿಲ್ಗಾಣ್ಕೆ** (ನಾ). ಪ್ರಣಾಮಪೂರ್ವಕವಾಗಿ ಒಪ್ಪಿಸುವ ಕಾಣಿಕೆ ; ಭಕ್ತಿಯಿಂದ ಕೊಡುವ ಕಾಣಿಕೆ : ಮರದ ತುದಿಹರೆಯ ಮೇಲಿರ್ದು ಕಿವಿಯಾದನ್, ಕುಟೀರದಿಂ ಪೊಣ್ಮುತಿರ್ದೊಂದೊಂದು ರವಕ ರೋಮಾಂಚನವೆ ತನ್ನ ಭಕ್ತಿಯ ತುಳಿಲ್ಗಾಣ್ಕೆಯಪ್ಪಂತೆವೋಲ್ (ಶ್ರೀರಾಮಾ. ೪೭೮-೦೦೨). [ ತುಳಿಲ್$_1$ (< ತುಱಿಲ್$_1$) + ಕಾಣ್ಕೆ ]

**ತುಳಿಲ್ಗುಂದು** (ಕ್ರಿ). ಶಕ್ತಿಗುಂದು; ಬಲಹೀನವಾಗು : ಕಣ್ಗೆಟ್ಟು ಕಾಲ್ಗಾಣದಾದನಾ ಕಾಳ್ಗೆಯ್ದಿ ಕಳ್ಳುತೆ ತುಳಿಲ್ಗುಂದಿ ನಾಲ್ಕೊಗಾ (ಭಾವಚಂ. ೩-೨೬). [ ತುಳಿಲ್$_2$ (< ತುಱಿಲ್$_2$) + ಕುಂದು$_1$ ]

**ತುಳಿಲ್ಗೆಯ್** 'ತುಱಿಲ್ಗೆಯ್' ನೋ.

**ತುಳಿಲ್ಗೆ₁** 'ತುಟಿಲ್ಗೆಯ್' ನೋ.

**ತುಳಿಲ್ಗೊಳ್** 'ತುಟಿಲ್ಗೊಳಂ' ನೋ.

**ತುಳಿವೆಡೆ** (ನಾ). ಒಂದು ಬಗೆಯ ವಸ್ತ್ರ (?) : ಪಟ್ಟುಪೆಡೆಗಳೊಳಿಲ್ಲಂ ಪಾಸಿ ಕಾರೋಹಣದ ಕಕ್ಕರವಟಯಿಗೆಯು ಚಿತ್ರಾವಟಿಯ ಪಳಿವೆಡೆಯ ತುಳಿವ [ಪಾಠಾಂ. ಲೆ] ಡೆಯ ನೆಳಲಪಾಣಿಯ ಬಣ್ಣದ ಕಣದ ಬಣ್ಣ ವಣ್ಣಿಗೆಯ ಜವಳಿಗಳನೆ ಮೊಗಂ ನೋಡದೆ ಸೂಸಿದಾಗಳ್ (ಆದಿಪು. ೪-೩೪ ವ). [?]

**ತುಳಿಸು** 'ತುಟಿಯಿಸು' ನೋ.

**ತುಳು, ತುಲು, ತುಳುವ₁, ತುಟುವ** (ನಾ). ೧. ಕನ್ನಡನಾಡಿನ ಪಶ್ಚಿಮಕರಾವಳಿಯ ಒಂದು ಪ್ರದೇಶ : ಆಂಧ್ರ ದ್ರಾವಿಡ ಹೈವ ತುಳು ಮಲೆಯ ಕಲರ ಕಲಾಮೂಲ (ಎಕ. VII, ಶಿವಮೊ. ೭೯-೨೦ ; ಸು. 1154 ?). ೨. ತುಳು ದೇಶದ ಭಾಷೆ ; ದ್ರಾವಿಡಭಾಷೆಗಳಲ್ಲಿ ಒಂದು : ತುಳು ಭಾಷೆಯನ್ನು ಆಡುವ ಪ್ರದೇಶ ಮೊದಲು ಮದರಾಸು ಪ್ರಾಂತ್ಯಕ್ಕೆ ಸೇರಿತ್ತು (ದ್ರಾವಿವಿ. ೧೪೦). △ **ತುಲು :** ೩. ತುಳು ದೇಶದವನು : ತೆಲುಗರು ತೆರುವ ಗ ೩.೨ ಪ ೫ ತುಲು ಮಳಿಯಾಲರು ತೆರುವ ಗ ೩.೨ ಪ ೫ (ಎಕ. XV, ಬೇಲೂರು. ೨೪೮-೭೩ ; 1278). **ತುಳುವ₁ :** ೧. ದ್ವಾರಾವತೀ ಪುರವರಾಧೀಸ್ವರಂ ತುಳುವಬಳಜಳಧಿ ಬಡಬಾನಳಂ (ಮೈಆರಿ. ೧೯೨೮, ೯-೨೦ ; 1133) ; ಉಲಿವ ಗೆಜ್ಜೆಯ ಚೆಲ್ಲಣದ ಹೊಂಬಳಿದ ಹರಿಗೆಯ ಹೊಳೆವ ಕಡಿತಲೆಗಳ ವಿಲಾಸದೊಳಂದು ಹೊಕ್ಕುದು ತುಳುವಪಡೆ ಕಡುಗಿ (ಕುವ್ಯಾಭೀ. ೪-೩೩) ; ಈ ಗ್ರೀಕ್‌ಪ್ರಹಸನದ ದೃಶ್ಯ ತುಳುಪ್ರದೇಶದ ಸಮುದ್ರತೀರದ್ದೇ ಇರಬೇಕೆಂದೂ . . . ವಿದ್ವಾಂಸರೂ ಊಹಿಸಿದ್ದಾರೆ (ದ್ರಾವಿವಿ. ೭೮). ೩. "ತುಳುವಂ ತುಳುವನಕ್ಕು" (ಮಂಗರಾ. ೦೦೨-೭) ; ಅಯ್ಯಯ್ಯ ಎಂಚ ಪೊರ್ಲಾಂಡೆಂದು ತುಳುವರು ಮಯ್ಯುಬ್ಬಿ ಕೇಳ ಬೇಕಣ್ಣ (ಭರತ. ೦-೭). △ **ತುಟುವ :** ೩. ಬಟಾಕೀಶ್ವರನರಸಮುಖರ್ ತುಬಿಲಾಳ್ಗಳ್ ದೊರೆಗಳೆನಿಸಿ ತೊಲಗಿದರ್ಕೈವರ್ ತುಟುವರ್ (ಚಿಕವಿ. ೨-೦೪).

[ದೇ.॥ ತಮಿ. ತುಳು. ತುಳು, ತುಳುವ ; ಮಲ. ತೆಲು. ತುಳು]

**ತುಳುಂಕಾಡು, ತುಳಂಕಾಡು, ತುಳ್ಕಾಡು** (ಕ್ರಿ). ೧. (ನೀರು ಮೊದಲಾದುವು) ಹೊರಹೊಮ್ಮು, – ಉಕ್ಕಿ ಹರಿ, – ಹೊರಸೂಸು : ವಜ್ರವೈಡೂರ್ಯಶಿಲಾಪಟ್ಟಕಂಗಳವಿರಳದೀಧಿತಿಯ ಕೊಳಂಗಟ್ಟಿ ತುಳುಂಕಾಡುವಂತೆ ತಿಳಿದೊಪ್ಪುವ ಸರೋವರದ ತಡಿಗಳೊಳ್ (ಜಗವಿ. ೦೭-೩೪ ವ); ನೆರೆದ ಪುರಜನದ ಸಂಭ್ರಮಂಗಳಿನಾ ಪುರದ ಕ್ಷೋಭಂ . . . ತಕ್ಕನೆ ತೀವಿ ತುಳುಂಕಾಡುತಿರ್ದುದು (ಅನಂಪು. ೯-೩೯ ವ). ೨. ಕದಡು ; ಕ್ಷೋಭೆಗೊಳ್ಳು ; ಅಲ್ಲೋಲಕಲ್ಲೋಲವಾಗು : ಮರುತ್ತರಂಗಿಣಿ ಮಟಲ್ದೋಜಲ್ ತುಳುಂಕಾಡೆ (ದಶಕು. ೩-೩). ೩. (ನೀರನ್ನು) ಚಿಮುಕಿಸು,– ಎರಚು : ಅನಂತರಂ ತುಮುಲಕೇಳಿಯಿಂದೋರೊರ್ವರಂ ತುಳುಂಕಾಡುವಾಗಳ್ (ಚಂದ್ರಪು. ೭-೦೪೨ ವ). ೪. ಮುಳುಗಿ ಏಳು ; ಓಲಾಡು : ಕೊಳಂಗಳೊಳ್ ತುಳುಂಕಾಡುವ ಬಾಳೆ . . . ನೋಡುವರಟ್ಟಿಯನುಂಟು ಮಾಡುಗುಂ (ಶಬ್ದಾನು. ೯೭ ಪ್ರಯೋ). **ತುಳುಕಾಡು :** ೧. ನಿಜ ತುಂಬಿದ ಭಕ್ತಿ ತುಳುಕಾಡದವರ ಸಂಗವೇನು ಬಾತೆ (ಬಸವ. ೬೩೪) ; ದರಹಸಿತ ಸಿತಕಾಂತಿ ಮುಖಪಂಕೇರುಹದೊಳು ತುಳುಕಾಡೆ (ಬಸಪು. ೫೨-೩೯) ; ಕರುಣಾರಸ ತುಳುಕಾಡೆ ಕಪಿಕುಂಜರನ ಕಂಜದಳಾಯತಾಕ್ಷನು ಬರಸೆಳೆದು ಬಿಗಿಯಪ್ಪಿದನು (ತೊರರಾ. ೪-೭-೪) ; ತುಳುಕಾಡಿತಾ ನಾಡ ಸಿರಿ (ಕೃಮಿಥಾ. ೨೯-೦೨) ; ತುಳುಕ್ಕಾಡತಾವ ತೂಕಡಿಕೆ (ಗಂಗಾತ. ೭೦-೩) ; ಆವೇಶ ತುಳುಕಾಡುತ್ತದೆ (ಶಿಕ್ಷದ. ೦೦೩). ೨. ಅಬುಜಭವಾಂಡಘಟ ಬಿರಿಯೆ ವನಧಿಗಳು ತುಳುಕಾಡೆ . . . ಬೊಬ್ಬಿಱಿದುಬ್ಬಿದನು ರಘುಜ (ತೊರರಾ. ೩-೬-೭). ೪. ಯಶೋದೆ - ರಾಗರಸಾಬ್ಧಿಯೊಳ್ತುಳುಕಾಡೆ . . . ಮುರಾರಿ ಕೃಪಜ ಗಾಡಿದಂ (ಜಗವಿ. ೩-೫೭). **ತುಳ್ಕಾಡು :** ೨. ಮೌರ್ವೀಲತಾಸ್ಫಾಲನಂಗೆಯ್ಯೆ . . . ವ್ಯೋಮಗಂಗಾಸಲಿಲಂ ತುಳ್ಕಾಡೆ (ಜಗವಿ. ೮-೩೦) ; ಬಹು ಚರಣದಾಟಕೆ ನೆಲ ನಡುಗುತಿರೆ ವಾರಿನಿಧಿ ಬೆಂಬಳಿಯಲಂಜಿ ತುಳ್ಕಾಡಿ ತಾಂಡವವಾಡಿದನು ಸುರಪ (ಸಾಕ್ಷಭಾ. ೩೩-೧೦೪). ೩. ನವನಾಳಿಕೇರರಸಪೂರಮಂ ತುಳ್ಕಾಡಿ . . . ಪೊಟ್ಟುಗಳೆವುದು ನೃಪನ ಪೆಂಡವಾಸು (ಪುಷ್ಪಪು. ೨-೪೪). [ತುಳುಂಕು₁ + ಆಡು₁]

**ತುಳುಂಕು₁, ತುಳುಕು, ತುಳ್ಕು** (ಕ್ರಿ). ೧. ತುಂಬಿ ಹೊರಸೂಸು – ಹೊರಹೊಮ್ಮು : ತಮ್ಮಣ್ಣನ ಬಿನ್ನನಾದ ಮೊಗಮುಮಂ ಕಂಡು ಕಣ್ಗಳಿಂ ನೆತ್ತರ್ ತುಳುಂಕೆ (ಪಂಪಭಾ. ೬-೫ ವ) ; ಸ್ಮರರಾಗಾಮೃತಮಂ ತುಳುಂಕಿ (ಅರ್ಧನೇ. ೨-೭೮) ; ದರಹಾಸಂ ಮುಖದಿಂ ತುಳುಂಕುತಿರೆ (ಕುಸುಮಾ. ೧೨-೬೯) ; ಗಾನರಸವಾರ್ಧಿಯನ್ನೆದೆ ತುಳುಂಕುವಾ ಲಸದ್ವೀಣಾ ಎಂಚರಗಳನೆ ಪೊಣ್ಮಿಪ ಮೋಹನರೂಪದಂಗನಾಶ್ರೇಣಿ ವಿರಾಜಿಕುಂ (ಉದ್ಯಟ. ೦-೭೮) ; ಪೊಣ್ಮುವ ಸುಖಬಾಷ್ಪಂ ತುಳುಂಕೆ ಪೇಳ್ವುದು ಕೃತಿಯಂ (ರಾಜಶೇ. ೦-೫೨). ೨. ಕದಡು ; ಕ್ಷೋಭೆಗೊಳ್ಳು : ಜಳಧಿಯ ನೀರ್ ತುಳುಂಕಿದವು ಧಾತ್ರಿ ತಿಱ್ಱಂದಿಱಿದತ್ತು (ಮಹಾನೀ. ೧೦-೦೨೯). ೩. ಕ್ಷೋಭೆಗೊಳಿಸು ; ಕದಡುವಂತೆ ಮಾಡು : ಗಂಗೆಯ ನೀರಂ ತೋಳೊಳ್ ತುಳುಂಕಿ ಮಗುಟ್ಟು ಬಂದಂಗೆ ವಿಷದ ಲಡ್ಡುಗೆಯನಿಕ್ಕಿಯುಂ (ಪಂಪಭಾ. ೨-೩೨ ವ). ೪. ಚಿಮುಕಿಸು ; ಎರಚು ; ಸಿಂಪಡಿಸು : "ತುಳುಕು, ತುಳುಂಕು – ಸೇಚನೇ" (ಶಮಧಾ) : ಪಾರಸ್ತ್ರೀಜನವಿಂದಿರೊಳ್ ತುಳುಂಕಿ ನೀರಂ ನೀರಧ್ರುಸ್ತನತಟದೊಳ್ ಕೃತೋಪಹಾರಂ ಹಾರಶ್ರೀಗೆಣೆಯೆನಿಸಿತ್ತು ವಾಃಕಣೌಘಂ (ಕಾವ್ಯಾವ. ೫-೪೮) ; ನಾಡೆ ಮುಳುಂಗಿ ಮೂಡಿದರಬಂಬಿ ತುಳುಂಕಿದರಂಬುವಂ (ಹಮ್ಮಿರ. ೪-೨೭). ೫. ಚೆಲ್ಲು; ಒಗೆ ; ಬಿಸುಡು ; ಹೊರಹಾಕು : ಮುಗಿಲ ನೀರಂ ನಚ್ಚಿ ಡೊಣೆಯ ನೀರಂ ತುಳುಂಕಿದ ಕೋಡಗದಂದಂ ನಿನಗಕ್ಕುಂ (ಪಂಚತಂ. ೭೮-೮). **ತುಳುಕು :** ೧. ಅನುರಾಗ ರಸಂ ಕಟಾಕ್ಷದಿಂ ತುಳ್ಕೆ ಕುಚಾಗ್ರದಿಂ ತುಳುಕೆ ಹಾರಮರೀಚಿ (ಜಗವಿ. ೦೪-೦೦೩); ವೀರಭಕ್ತನ ಪದನಿಹತಿಗೆ ಶಿರೋರುಗಂಗಾವಾರಿ ತುಳುಕಿಯಪಾರ ಪಾದೋದಕವೆನಿಸಿ (ಬಸಪು. ೦೮-೪೮); ಹೃದಯಶಿಖಿಯುಱ ತಳಿತು ಲೋಚನ ವಾರಿ ತುಳುಕಿತು ಪವನಜಾದಿಗಳ (ಕುವ್ಯಾದ್ರೋ. ೭-೮) ; ಸರಿ ಮೋಹರಸ ವಧಿಕ ಭಕ್ತಿರಸವೊಡವೆರದು ತುಳುಕಲ್ (ಚಬಪು. ೬-೪) ; ಅಶ್ರು ನಯನದೊಳ್ತುಳುಕೆ (ಕೃಮಿಥಾ ೦೮-೫೨) : ಲಾಲಾಜಲಂ ತುಳುಕಲ್ ಬರ್ಪ ತೊದಲ್ ಮನಂಗೊಳಿಸಲ್ (ಶಾಕುಂತ. ೧೦೫-೧೮೦) ; ತುಂಬಿದ ಕೊಡ ತುಳುಕುವುದಿಲ್ಲ (ಗಾದೆ). ೨. ಧರೆಯೊರ್ಗುಡಿಸಲಿ ಶರನಿಧಿ ತುಳುಕಲಿ (ದೀಕ್ಷಾಬೋ. ೯೦-೦೫) ; ವಿಕಲ್ಪಬಿಂದುಗೆ . . . ತುಳುಂಕಿದಂ, ತುಳುಕಿದಂ (ಶಮಿದ. ೩೬ ಪ್ರಯೋ) : ನೆಳಲು ಸುಳಿಯಲು ದೂತಿಯೆಂದಪ್ಪಳಿಸ ವಾಸುಕಿ ನೊಂದನಟಬುಧಿ ತುಳುಕಿದವು (ಕುವ್ಯಾದ್ರೋ. ೩-೦೪) ; ಜಲಚರಗಳಟ್ಟುಳಿಗೆ ತುಳುಕಿ ಮೇಲಕೆಳ್ದ ಬಲುಸೀರ್ವನಿಗಳ ಮೊತ್ತದಿಂದಂಬುಧಿ ಯಳವಟ್ಟು ಮೆಱೆದುದೆಲ್ಲಿಯಲಿ (ಕಂಸವಿ. ೪-೨೩). ೪. ಭರದಿಂದು ತುಳುಕಿದ ನೀರುರದೊಳ್ ಹಾರಾಂಕುರರುಚಿಯನಿರ್ಕುಟಿಗೊಳಿ (ಆದಿಪು. ೦೪-೦೦೪) ; ಕರತಳವಾರಿ ತಳ್ತು . . . ತನೂದರಿಯರಲಂಪಿನಿಂ ತುಳುಕೆ ಕೃಷ್ಣನ ಮೇಲೆ (ಜಗವಿ. ೦೪-೯೮). ೫. ನಿನ್ನ ರಕುತವ ತುಳುಕುವೆನು ಹಿಂದಿಕ್ಕಿಕೊಂಬನ ತೋಱು ತೋಱೆನುತ . . . ಕೈಮಾಡಿದನು (ಕುವ್ಯಾಕ. ೧೨-೨೪) ; ಮಳೆಯ ಮುಗಿಲ ನೋಡಿ ಮನೆಯೊಳಗಿರ್ದಉದಕವ ತುಳುಕುವ ಕಡು ಹೆಡ್ಡರಂತೆ (ಶೀಮಿಸಂ. ೩೪-೩೨). ೬. (ಬಾಣ ಮೊದಲಾದ ಆಯುಧಗಳನ್ನು ಎದುರಾಳಿಯ ಮೇಲೆ) ಎಸೆ,—ಪ್ರಯೋಗಿಸು : ಶರಾಳಿಯ ತುಳುಕಿ ಹೊಕ್ಕನು ಸತ್ಯಜಿತು (ಕುವ್ಯಾದ್ರೋ. ೨-೪೩) ; ತುಳುಕಿ

ದನೂನ ಶರಜಾಲಮಂ ಕರಿತುರಗರಥ ಪದಾತಿಗಳ ಸಂದಣಿ ದಣಿಯಲು (ಕೃಮಿಭಾ. ೯-೪೩); ಬಿಲ್ಗೊಂಡು ದಿವ್ಯಾಸ್ತ್ರಮಂ ತುಳುಂಕಿದನು ಝೇಂಕರಿಸುತ (ತುರಂಗ. ೩೩-೨೨). ೭. ಸೇರಿಸು ; ಹೂಡಂ ; ಸಂಧಾನಮಾಡಂ : ಸೆಳೆದನಿಷುಧಿಯಲಂಬ ತಿರುವಿಗೆ ತುಳುಂಕಿ ಕೋಲಂನು ಕೋಡಕೈಯಿಂದಳವಿಗೊಯ್ಯನೆ ನಿಲುಂಕಿದನು ನಿಗುರಿದ ಶರೀರದಲಿ (ಕೊರಾ. ೩-೮_೭). ತುಳ್ಕು : ೧. "ಸೂಸಿದುದೆನೆ ತುಳ್ಕಿತೆಂಬುದು" (ರನ್ನಕಂ. ೭) ; ಚಾರುವೀರಭಟಕೋಟಿಗೆ ರಾಗರಸಂ ಪೊದಟ್ಟು ತುಳ್ಕುತ್ತಿರೆ ಬಂದು ಮುತ್ತಿ ಮೊಗೆದಂ ವಿಭು ಗೋಕುಲವಮಂ ವಿರಾಟನಾ (ಹಂಪಭಾ. ೮-೯೨) ; ತುಳ್ಕೆ ದರಸ್ಮಿತಂ ವದನದಿಂದನುರಾಗರಸಂ ಕಟಾಕ್ಷದಿಂ ತುಳ್ಕೆ (ಜಗವಿ. ೦೪-೦೦೩); ಕಂಗೊಳಿಸಿತ್ತಾ ತುಂಗಭದ್ರೆ ತುಳ್ಕುತೆ ಸೊಗಸಂ (ಉದ್ಭಟ. ೩-೮೨). ೨. ನೆಲನಂ ನುಂಗಲುವಂಬುಧಿ ಜಲವಮಂ ತವೆ ತುಳ್ಕಲುಂ . . . ಒಡರ್ಚಿದುಚಕ್ರಧರಂ (ಕಾವ್ಯಾವ. ೦೦೮) : ಕಡಲೇಳುಂ ಕದಡೆಳ್ದು ತುಳ್ಕೆ (ರಾಜಶೇ. ೬-೧೦). ೪. ಸವತಿಯ ಮೇಲೆ ಮುಂ ತುಳುಂಕಿ ತನ್ನಯ ಮೇಲಧಿಪಂ ಬಟಿಕ್ಕೆ ತುಳ್ಕುವ ವಿಮಲಾಂಬುಗಳ್ ತನಗೆ ಮನ್ಮಥನಂಬುಗಳಂತಿರೆ (ಜಗವಿ. ೦೪-೦೦೦) ; ಕೊಳ್ಕೊಳ್ಳೆಂದೊಡನೊಡನೆಯೆ ತುಳ್ಕುವ ಯುವತಿಯರ ಕರಪರಿಚ್ಯುತ ಸಲಿಲಂಗಳ್ಕೊಳೆ (ಶಬರ. ೩೩೦ ಪ್ರಯೋ). ೫. ಸರೋವರಾಂಬುವನಿತಂ ತವೆ ತುಳ್ಕೆ ರಸಾತಳಂಬರಂ ಬೆದಕಿಯುಮೆಂತು ಮಪ್ಪಳಿಸಿ ಕೊಂದವೆಂ (ಹಂಪಭಾ. ೦೩-೮೦) ; ಬೇಸಱಿಂಳ್ ತುಳ್ಕಿದ ಳೊರ್ಮೆಯ ಕಣ್ಣಾನೀರ್ಗಳಂ (ಕೃಂಗಾರ. ೩-೫೮) ; ತುಳ್ಕುತಿರ್ಪುದಂ ನೆತ್ತರೆಲ್ಲರಂ ಕರೆಗೆ (ಕಾಲೂರ. ೦೭೦-೩೫೩). ೬. ಇಂತಿರದೆ ಮೂದಲಿಸಿ ಸಮ್ಮುಖವಾಗಿ ತುಳ್ಕಿದರ್ ಶರವರುಷಮಂ (ಜಲಪು. ೨೪-೦೭). ೮. ಹುಟ್ಟು ; ಮೂಡು ; ಉಂಟಾಗು : ಮದಕರಿಕುಳಮೋವದೆ ಬಳ್ಳಿವಾಯ್ದುಗಟ್ ತುಳ್ಕಿದ ಗಿರಿ ಪರಿವಂತೆ ಪರಿದು ಮರವಾಯ್ದಿರ್ಕುಂ (ಶಾಂತಿಪು. ೯-೦೪೦) ; ವಸುಮತಿಗೆ ಕೆನ್ನೀರ್ತುಳ್ಕೆ ತುಳ್ಕಿದಂ ಕೈಗೆಡದೆ ಸಾಯಕ ಸಮುದ್ರಮಂ ಶಾರ್ಙ್ಗಿ ಬಳಿಕ (ಜಲಪು. ೪೯-೪೦).

[ದೇ. ॥ ತಮಿ. ತುಳಙ್ಕು, ತುಳಕ್ಕು, ತುಳುಮ್ಬು ; ಮಲ. ತುಳುಮ್ಬು; ತೆಲು. ತೊಲುಕು, ತೊನಕು ; ಪರ್ಜಿ. ತೊಲ್ಕ್]

ತುಳುಂಕು₂. ತುಳುಕು₂ (ನಾ). ಹೊರಸೂಸುವಿಕೆ ; ಹೊರಹೊಮ್ಮುವಿಕೆ. 'ತುಳುಂಕಂಗಂಟ್ಟು' ಪರಾ. ತುಳುಕು₂. 'ದೊಂಬಿದಂಳಂಕು' ಪರಾ.

[ <ತುಳುಂಕು₁. / ತಮಿ. ತುಳಕ್ಕು : ಮಲ. ತುಳಣ್ಣು ]

ತುಳುಂಕುಗುಟ್ಟು (ಕ್ರಿ). ಅತಿಶಯವಾಗಿ ತುಳುಂಕು ; ಹೆಚ್ಚಾಗಿ ಹೊರಸೂಸು : ಅಕಗಳಂಗೋಪಾಂಗದೊಳಿಂತು ನಾಟ್ಯರಸಮ ತೀವಿ ತುಳುಂಕುಗುಟ್ಟ ... ಅತ್ಯಾಶ್ಚರ್ಯಮಂ ಮಾಡಿದಾಗಳ್ (ಅದಿಪು. ೭-೦೨೩ ವ).

[ ತುಳುಂಕು₂ + ಕುಟ್ಟು₁ ]

ತುಳುಂಕುದುಂಬು (ಕ್ರಿ). ಹೊರಚೆಲ್ಲುವಂತೆ ಭರ್ತಿಮಾಡು ; ತುಳುಂಕುವಷ್ಟು ತುಂಬು : ನಿನ್ನ ಬಟ್ಟಲನ್ನು ತುಳುಂಕುದುಂಬಿ ಜನ್ಮ ಸಾರ್ಥಕ ಮಾಡಿಕೊಳ್ಳುವೆನು (ಬಟ್ಟಳ. ೯೮-೦). [ ತುಳುಂಕು₁ + ತುಂಬು₁ ]

ತುಳುಕಾಡು 'ತುಳುಂಕಾಡು' ನೋ.

ತುಳುಕಿಸು (ಕ್ರಿ). ಹೊರಸೂಸು; ಹೊರಚೆಲ್ಲು : ಮುಗುಳುನಗೆ ತುಳುಕಿಸುತ್ತ ಕುಳಿತಿದ್ದಳು ಬಾಲಿ (ಬುದ್ಧ್ಯ.ಹ. ೯೩).

[ ತುಳುಕು₁ ( <ತುಳುಂಕು₁ ) + – ಇಸು₂ ]

ತುಳುಕು₁ 'ತುಳುಂಕು₁' ನೋ.

ತುಳುಕು₂ 'ತುಳುಂಕು₂' ನೋ.

ತುಳುಕುನೀರಾಡು (ಕ್ರಿ). ನೀರನ್ನು ಚಿಮುಕಿಸಿ ಆಟವಾಡು,–ಕ್ರೀಡಿಸು: ಧೊಮ್ಮಳಿಸಿ ತುಳುಕುನೀರಾಡಿದಂ (ಕುಳುವಾ. ೯-೪೩).

[ ತುಳುಕು₁ ( <ತುಳುಂಕು₁) + ನೀರ್₁ + ಆಡು₁ ]

ತುಳುಕುವರಿಗೆ (ನಾ). ಒಂದು ಬಗೆಯ ಗುರಾಣಿ (?) : ತುಳುಕುವರಿಗೆಯು ಗುಳವ ವಜ್ರದ [ದಿ] ನೆಲಗ ಮುಱಿಯೊಡೆಯಚ್ಚು ಜೋದರ ತಲೆಗಳನು ತುಂಡಿಸಿದನಿಭವನು ಹೊಕ್ಕು ಬೀದಿಯಲಿ (ಕುಮಾ.ರಾ. ೦೭೮. ಸಂ. ೨೪೯).

[ ತುಳುಕು ? + ವರಿಗೆ₃ ]

ತುಳುಕೆವಟ್ಟು 'ತುಡುಕೆವಟ್ಟು' ನೋ.

ತುಳುಗತ್ತಿ, ತುಳುವಕತ್ತಿ (ನಾ). ಈಳಿಗೆ ; ಮೆಟ್ಟುಗತ್ತಿ ; "ಈಲಿ, ಕರವಾಲಿಕೆ" (ನಾಚಿರಾ. ೬). ತುಳುವಕತ್ತಿ : "ಈಳೀ, ಕರವಾಳಿಕಾ, ೨ ತುಳುವಕತ್ತಿ ... ಈಳಿಗೆಕತ್ತಿ" (ಸಿದ್ಧಾಂತಿ. ೩೩೮). [ ತುಳು ? + ಕತ್ತಿ ]

ತುಳುನಾಡು (ನಾ). = ತುಳು ೧ : ತುಳುನಾಡ ಸತ್ಯ ಮನೆಯಂತೆ ಪಟಯಿಸುವರ್ ...ಪಾವಿನಂತೆ ಪೊರಳ್ವರ್ (ಧರ್ಮಾಮೃ. ೩-೮೦) ; ಈ ತುರವರನಾಡೇ ನಮ್ಮ ತುಳುನಾಡೆಂದು ನಿರ್ಧರಿಸಲು ಅನೇಕ ಕಾರಣಗಳುಂಟು (ತುಳುನಾ. ೧೩). [ತುಳು+ನಾಡು]

ತುಳುವ₁ 'ತುಳು' ನೋ.

ತುಳುವ₂ (ನಾ). (ಕರಾ) ೧. ಮೃದುವಾದುದು; ಮೆದುವಾದಂದು. 'ತುಳುವಗಾಯ್' ಪರಾ. ೨. ಒಂದು ಬಗೆಯ ಹಲಸಿನ ಹಣ್ಣು ; ಬಹಳ ಮೃದುವಾದ ಹಲಸು. [←ತುಳು. ತುಳುವೆ]

ತುಳುವಕತ್ತಿ 'ತುಳುಗತ್ತಿ' ನೋ.

ತುಳುವಗಾಯ್ (ನಾ). (ಹೀರೆಯ ಕಾಯಿಯಿಂದ ಮಾಡುವ) ಒಂದು ಬಗೆಯ ಖಾದ್ಯ : ಕೆಲವ ನವಜಹ್ನಯ ಸೊದೆಯ ಕೆಲವ ತುಳುವಗಾಯಂ ಕೆಲವ ಶೂಲ್ಯಕವನು ... ಮಾಡಿ ಹಲವು ಚಂದದೊಳು ಹೀರೆಯ ಕಾಯ ಪಾಕಮಂ ಹಿರಿದಾಗಿ ಹಸಮಾಳ್ಪುದು (ಸೂಪಶಾ. ೫-೭).

[ ತುಳುವ₂ + ಕಾಯ್₄ ]

ತುಳುವಬದನೆಕಾಯ್ (ನಾ). ಬದನೆಕಾಯಿಯಿಂದ ಮಾಡುವ ಒಂದು ಬಗೆಯ ಖಾದ್ಯ : ಹದನಾದ ಬದನೆಯ ಕಾಯ ಹೊದಟ ವಗ್ಗರಣೆಯಂ ಮಾಡಿ ಪರಿಮಳವಿಕ್ಕಲದು ತುಳುವಬದನೆಕಾಯ್ಸರಾದುದು (ಸೂಪಶಾ. ೪-೭). [ ತುಳುವ₂ + ಬದನೆಕಾಯ್ ]

ತುಳ್ಕಾಡು 'ತುಳುಂಕಾಡು' ನೋ.

ತುಳ್ಕು 'ತುಳುಂಕು₁' ನೋ.

ತುಳ್ಕುಪೊಳೆ (ನಾ). ತುಂಬಿ ತುಳುಕಾಡುತ್ತಿರುವ ಹೊಳೆ,–ನದಿ : ಮಸಗಿತು ತುಂದಿ ತುಳ್ಕುಪೊಳೆ ಕಾರ್ವಗಲವ್ವಳಿವಂತೆ (ಚಳವಿ. ೨-೦೦೬).

[ ತುಳ್ಕು ( <ತುಳುಂಕು₁) + ಪೊಳೆ₃ ( <ಪೊಟ್₁) ]

ತುಳ್ದಿಲ್ಲಾಲ್ 'ತುಟ್ದಿಲ್ಲಾಲ್' ನೋ.

ತುಳ್ಳಾಡು (ಕ್ರಿ). ೧. ಹೊರಳಾಡು ; ಉರುಳಾಡು. ೨. ಜಿಗಿದಾಡು ; ನೆಗೆದಾಡು ; ಕುಣಿದಾಡು : ತುಳ್ಳಾಡಿ ತುಳ್ಳಾಡಿ ಮುಳ್ಳಿನ ಮೇಲೆ ಬಿದ್ದ (ಗಾದೆ). [ ತುಳ್ಳು + ಆಡು₁ ]

ತುಳ್ಳು (ಕ್ರಿ). ೧. ಉರುಳು ; ಹೊರಳು. ೨. ಜಿಗಿ ; ನೆಗೆ ; ಹಾರು ; ಕುಣಿ. 'ತುಳ್ಳಾಡು' ಪರಾ.

[ದೇ. ॥ ತಮಿ. ಮಲ. ತುಳು. ತೆಲು. ತುಳ್ಳು ; ಕೊಡ. ತುಳ್ಳ್]

ತುಱಿ, ತುರ್ಚಿ (ನಾ). ೧. ಕಡಿತ ; ಕೆರೆತ ; ನವೆ ; ತಿಂಡಿ (ಉಕ). 'ತುಱಿಸು' ಪರಾ. ೨. ಒಂದು ಬಗೆಯ ಚರ್ಮರೋಗ: " ಕಂಡೂಃ, ಖಜೂರ್ಃ, ಕಂಡೂಯಾ ಈ ೩ ತುಱಿ" (ನಾಚಿರಾ. ೧೨೦) ; ಕೆರಕಂ ತುಱಿಯಂ ತೀವಿದ ಕರಚರಣಂ ಬೋಟಮುಂಡೆ ಕುಗ್ಗಿದ ದೇಹಂ (ಧರ್ಮಾಮೃ. ೭-೨೨೪) ; ತುಱಿಯ ಮೇಲೆ ಉಗುರನಿಕ್ಕಿದರೆ ಹಿತವಾಗಿಹುದು (ಸಿದ್ಧೇಶ. ೪೧-೦೦೨) ; ಆ ರೂಪಂ ಪಲ್ಲಟಿಸಿ ಕೆರಕುಂ ತುಱಿಯುಂ... ಗುಂಡವೇಷಂ ತನಗಮರೆ (ಬಂಜರಿ.೯-೩೦ ವ). ೩. ಕಾಮಾಸಕ್ತಿ ; ವಿಷಯಾಭಿಲಾಷೆ ; ಕಾಮಲಂಪಟತೆ. 'ತುಱಿಪ' ಪರಾ. ತುರ್ಚಿ :

೨. ಮೈಯೆಲ್ಲಾ ತುರಿ, ಕಜ್ಜಿ ತುಂಬಿತ್ತು (ನೀತಿಚಿಂ. I, ೨೮) ; ತುರಿಯಿದ್ದವಗೆ ನಾಚಿಕೆಯಿಲ್ಲ, ಮರೆಯಾದ್ದವಗೆ ಮಂದತ್ವವಿಲ್ಲ (ಗಾದೆ).

[ ದೇ. ೪ ತಮಿ. ತುರುತ್ತೈ, ಚೊಱಿ; ಮಲ. ಚೊಱಿ ; ತೆಲು. ದುರದ]

**ತುಱಿಕೆ, ತುರಿಕೆ** (ನಾ). ೧. = ತುಱಿ ೨ : (+). **ತುರಿಕೆ** : ೧. ತುರಿಕೆಯಾದವನೆಯೆ ತುರಿಸಿಕೊಳ್ಳುವನಲ್ತೆ ತುರಿಯಿಲ್ಲದವಗೇಕೆ ಚಿಂತೆ (ಇಂಚಾಪ. ೧೮೬-೨೩). ೨. ಒಂದು ಬಗೆಯಾ ಗಿಡ : ತುರಿಕೆ, ಸುರುಸುರಿಕೆ (ವೃಕ್ಷಗ. ೪೯-೬೬೦). 'ತುಱುಚೆ' ಪರಾ. [ ತುಱಿ + -ಕೆ ]

**ತುಱಿಗ** (ನಾ). ತುರಿರೋಗದಿಂದ ಪೀಡಿತನಾದ ವ್ಯಕ್ತಿ : ತುಱಿಗರ ತೊನ್ನರ . . . ಮುಟ್ಟಲಕ್ಕುಮೆ ಸೂಳೆಯರಂ (ಜ್ಞಾವಶಾ. ೧೨೨-೫). [ ತುಱಿ + – ಗ$_2$ ]

**ತುಱಿಚ** 'ತುಱುಚೆ' ನೋ.

**ತುಱಿಚೆ** 'ತುಱುಚೆ' ನೋ.

**ತುಱಿಪ** (ನಾ). ಕಾಮಾತುರತೆ; ಬೆದೆ. 'ತುಱಿಪಗಾಱ' ಪರಾ. [ ತುಱಿ + – ಪ$_2$ ]

**ತುಱಿಪಗಾರ್ತಿ** (ನಾ). ಕಾಮಾತುರೆ; ಕಾಮುಕಿ : ಮಾನವಮದನನಂ ಕಂಡು ಕೈಗಱಿಯೆ ಕಣ್ಸೋಲ್ತು ಕಾಮಕಾತರೆಯಾಗಿ ತುಱಿಪಗಾರ್ತಿ ಕೂರ್ತು ನಿತ್ತರಿಸಲಾಱದೆ...ಮೇಲ್ವಾಯ್ದು (ಲೀಲಾವ. ೦೪-೦೦೪ ವ). [ ತುಱಿಪಗಾಱ + – ತಿ$_1$ (< – ಇತ್ತಿ) ]

**ತುಱಿಪಗಾಱ** (ನಾ). ಕಾಮಾಸಕ್ತನಾದವನು ; ವಿಷಯಲಂಪಟ. 'ತುಱಿಪಗಾರ್ತಿ' ಪರಾ. [ ತುಱಿಪ + –ಗಾಱ ]

**ತುಱಿಸು, ತುರಿಸು** (ಕ್ರಿ). ೧. ಮೈಯಲ್ಲಿ ಕಡಿತ ಹೋಗುವಂತೆ ಕೆರೆ : "ತುಱಿಸು–ಕಂಡೂತಿಕರ್ಷಣೇ" (ಶಮದ) : ಪಲ್ಲಂ ಸುಲಿವೊಡಂ ಕಿವಿ ಕೀಂಟೊಡೆ ತುಱಿಸುವೊಡಂ ಪುಲ್ಲಿಂದೆನಿತುಂ ಪ್ರಯೋಜನಮುಂಟು (ಪಂಚತಂ. ೩೪-೦೪) : ಹಾವಿನ ಹೆಡೆಗಳ ಕೊಂಡು ಕೆನ್ನೆಯ ತುಱಿಸುವಂತೆ (ಬಸವ. ೬೬೦); ಹೆಡತಲೆಯ ತುಱಿಸುವರೆ ಹಾವಿನ ಹೆಡೆಯೊಳಕಟಾ(ಉಮ್ಯಾಸ. ೧೪-೩೬); ಇನಿಸು ತಲೆಯ ತುಱಿಸುವೊಡೆ ಹೊತ್ತಂ ಕನಸಿನಲ್ಲಿ ಕಾಣೆ (ಸಮ್ಯಕೌ. ೫-೧೯). ೨. ಕಿವಿ; ಚುಚ್ಚು : ಅಪ್ಪೋಪಳೆನರಸಂ ಮಕರಂದನಂ ತುಱಿಸಿ ತೋಱುತ್ತಂ ಪೋಪಾಗಳ್ (ಲೀಲಾವ. ೨-೩೬ ವ). **ತುರಿಸು** : ೧. ಕುಸುಮೆಯನ್ನು ಕಾಣದೆ ತಲೆ ತುರಿಸುತ್ತ ಬಾಗಿಲಲ್ಲಿ ನಿಂತಿದ್ದಾರೆ (ಪಹಾರ.೨೩ ).

**ತುಱಿಸಿಕೊಳ್, ತುರಿಸಿಕೊಳ್ಳು** = ಕೆರೆದುಕೊಳ್ಳು : ಇಱಿಸಿಕೊಳುತಂ ತುಱಿಸಿಕೊಳುತ . ಕೊಱಿಯಿಸಿಕೊಳುತ...ತೆರಳುತುರುಳುತುಂ (ಸಾನಂದ. ೪-೨೦೦); ತುಱಿಸಿಕೊಳುತಿದ್ದೆಸೆಯ ಬದಿಗಳ ಹೊಱಗನಾಲಿಸುತ...ಇರ್ದನಾ ಹನುಮ (ತೊರರಾ. ೫-೫-೨); ತುರಿಕೆಯಾದವನೆಯೆ ತುರಿಸಿಕೊಳ್ಳುವನಲ್ತೆ ತುರಿಯಿಲ್ಲದವಗೇಕೆ ಚಿಂತೆ (ಇಂಚಾಪ. ೧೮೬-೨೩) : ಕೊಳ್ಳಿಯಿಂದ ತಲೆ ತುರಿಸಿಕೊಂಡ ಹಾಗೆ (ಗಾದೆ). [ತುಱಿ + – ಸು$_1$]

**ತುಱಿಹಿಡಿ** (ಕ್ರಿ). ತುರಿಯುಂಟಾಗು; ತುರಿಯೆಂಬ ಚರ್ಮರೋಗ ಅಂಟು : "ಪ್ರಸರ, ವಿಸರ್ಪಣ—ಚಿಬ್ಬು. ತುಱಿಹಿಡಿವುದು" (ನಾಚಿರಾ. ಕಿ. [ತುಱಿ + ಹಿಡಿ$_1$ (< ಪಿಡಿ$_1$)]

**ತುಱು, ತುರು, ತೊಱು** (ನಾ). ೧. ಹಸು; ದನ; ಆವು; ಗೋವು : "ತುಱುಗಳೆನಲ್ಕಾಕಳೆಂದು ತಿಳಿಗೆ" (ಛಾರನಿ. ೪೬). 'ತುಱುಗಾಱ' ಪರಾ. ೨. ದನಗಳ ಗುಂಪು ; ದನಗಳ ಮಂದೆ ; ಗೋಸಂಪತ್ತು : "ಗೋಧನಂ ತುಱುವೆನಿಕ್ಕು" (ಮಂಗರಾ. ೫೬-೦೦); ಕೊತ್ತಮಬ್ಗಲಮಾನಿಱಿದು ತುಱುವಂ ಕೊಂಡು ಪೋಗುತ್ತಿರೆ (ಎಕ. IV. ಹೆಗ್ಗ. ೦೦೩-೬ : ಸು. 910) ; ಗೋಗ್ರಹಣದೊಳ್ ತನಗಾಗಿ ಕಾದಿ ತುಱುವಂ ಮಗುಟ್ಚಿದುದುಮಂ ನೆನೆದು (ಪಂಪಭಾ. ೧೨-೦೬ ವ); ಪಾದಿರಾಜನತಿಕೋಪದಿನ[ನ್ತ]ರ[ದೆ] ಬೆನತೂರ ತುಱುವಂ [ತಱ್ಪಿ]ಸಿದನನ್ನಣ್ಣಿಗೆಱಿಗೆ ತ[ಱಿ]ಸಲನಿನ್ನಂ (ಸೌಇಇ. XI-i, ೮೦-೦೧ ; 1049) ; ಗೋವರ್ಧನಗಿರಿಯೆತ್ತಿ ತುಱುವ ಕಾದಂತೆ (ಮೋಹತ. ೪೦-೫೦); ಗೋವಳಂ ತುಱುಗಳಂ ಮನೆಯಂ ಪುಗಿಸಿದಂ (ಶಬ್ದಾನು. ೨೦೫ ಪ್ರಯೋ). **ತುರು** : ೧. ಕಟ್ಟಲಿ ಕರುವನು ನೆಕ್ಕುವ ತುರುವೋ (ಅನಿಕೇ. ೩೦-೦೨) : ಹಟ್ಟಿಯಲ್ಲಿ ತುಂಬಿದ ತುರುಗಳ ಆರೈಕೆಯನ್ನೂ ಅವಳೇ ನೋಡಿಕೊಳ್ಳುತ್ತಿದ್ದಳು (ಹಾಹುತ್ತ. ೬೬). ೨. ಶತ್ರುಗಳು ಮುಂದೋಡಿದರು ತುರು ಮರಳಿತು (ಕಸಾಪ. ೬೬). **ತೊಱು** : ೨. ಕೇಸರಿ ತೊಱುವಾಳ್ಯನಾ ಮಗನ್ ಆಲನ ತೊಱು ಇಕ್ಕಿಸಿ ಬಿಟ್ಟಾನ್ (ಎಕ.X (೩), ಮಾಲೂರು. ೦೫೬-೩; 8ನೆಯ ಶತ); ಶ್ರೀ [ಮಾ]ವಲಿಪಣರಸರ್ × × ಮಗ ಗ × × × ಮುಣ್ಡನು ತೊಱುವ ಕೊಳ್ವಾ ... ಅಯಿಕುಳ ಗ ಟಾನಿ ಕೊಟ್ಟದು (ಸೌಇಇ. IX-i, ೦೦-೫: 9ನೆಯ ಶತ); ತೊಱುಗೊಳೆ ತೊಱುವಂ ಪರಿಯಲೀಯದೆ (ಮ್ಯಎರಿ. ೧೯೩೨, ೧೯೬-೭; 9ನೆಯ ಶತ).

**ತುರುವಿನ ಮಾಳ**=ದನಗಳು ಮೇಯುವ ಮೈದಾನ; ಹುಲ್ಲುಗಾವಲು ; ಗೋಮಾಳ: ವಾಯುವ್ಯದಲ್ಲಿ ಒಂದು ಮೈಲಿ ದೂರದಲ್ಲಿ ಗಿರಿಜಾಪುರದ ಕಡೆಗೆ "ತುರುವಿನ ಮಾಳ" ಇದೆ (ಹೊಳ್ಳಾವಾ. ೨೩೪). **ತುಱುಕಱು, ತುರುಕರು**=ದನಕರು : ತುಱುಕಱು ಕಱಿದರೆ ಉಣಬಹುದಣ್ಣ ತುಱುಕಱು ಕಱಿದರೆ ಅತಿ ಪುಣ್ಯವಯ್ಯ (ಪುರಂದ. ೧-೦೬೯ ಪಲ್ಲವಿ); ತುಱುಕಱುವು ಇರದೂರು ನರಕಭಾಜನಮಕ್ಕು ತುಱುಕಱುಂಟಾದರುಣಲುಂಟು ಜಗಕೆಲ್ಲ ತುಱುಕಱುವೆ ದೈವ (ಸರ್ವಜ್ಞ. ೦೩೬೫) ; ಒಯ್ಯ ಹುಲಿಯಂ ಕಂಡು ತುರುಕರುಗಳೋಡುತಿವೆ (ಕಾಂಬರ. ೯೦-೦೬೪). **ತುಱುವನಿಕ್ಕಿಸು, ತೊಱುವನಿಕ್ಕಿಸು** = ಅಪಹಾರವಾದ ಗೋವುಗಳನ್ನು ಮರಳಿಸು : ಮಾಚಿಯರ ಬೂವಯ್ಯನ ಮಗಂ ಬದಿಯಾಯ್ತು ತುಱುವನಿಕ್ಕಿಸಿ ಕಾದಿ ಸತ್ತಂ (ಎಕ. II, ೩೯೪-೯ : ಸು. 854) ; ಕುಸುಮ್ಪುರಿ ತುಱುವನಿಕ್ಕಿಸಿ ಸತ್ತ (ಎಕ. XVI, ಚಿಕ್ಕನಾ. ೬೨-೫ ; ?) : ಅಣೆರೆಯರ ಮಗ ನೆಲ್ಲಲ್ಲ ಅಣ್ಣಮ್ಮರ್ನಱಾಯ ತೊಱುವನಿಕ್ಕಿಸಿ ಸಗ್ಗಿಯಾದಂ (ಎಕ. IX, ಹೊಸಕೋ. ೧೦೦-೬ ; ಸು. 906). **ತುಱುವನಿಕ್ಕು**=ತುಱುವನಿಕ್ಕಿಸು : ಗೋತ್ರಪವಿತ್ರ ಬಮ್ಮಿಸೆಟ್ಟಿಯ ಸ × × × ಗೆಱಿಯ ತುಱುವನಿಕ್ಕಿ (ಎಕ. XVI, ಚಿಕ್ಕನಾ. ೬೫-೩೨ ; ?). **ತುಱುವಿಗೆ ಹೋಗು** = ತುಱುವನಿಕ್ಕಿಸು : ರಾಮುಗಉಡನ ಮಗ ಬೊಂಮಣ್ಣನು ತುಱುವಿಗೆ ಹೋದಗ (ಎಕ. IX (೩), ಚನ್ನಪ. ೨೯೪-೩ : 16ನೆಯ ಶತ). **ತುಱುವಿನ ಮಂದೆ** = ದನಗಳ ಹಿಂಡಿ,—ಗುಂಪು : "ವ್ರಜಃ, ಗೋಕುಲಂ, ಗೋಷ್ಠಂ—ಈ ೩ ತುಱುವಿನ ಮಂದೆ" (ಹಲಾಯು. ೪೪-೦೦೭).

[ದೇ.॥ ತಮಿ. ತುಱು, ತೊಱು ಮಲ; ತುಱು ; ತೆಲು. ತೊರ್ರು]

△ **ತುಱುಂಕು** 'ತುಱುಕು$_1$' ನೋ.

**ತುಱುಂಗಲ್, ತುರಂಗಲು, ತುಱುಗಲ್, ತುಱುಗಲು** (ನಾ). ಗುಂಪು; ಸಂದಣಿ ; ಸಮೂಹ : ಅತಂಗೆ ತುಱುಂಗಲುಂ ಬಂಬಲುಮಪ್ಪಾಗೆ ಬೀಸುವ ಚಾಮರದ ಪೊಳೆವುಗಳ್ ದೆಸೆದೆಸೆಗೆಸೆವಂತೆ ಪಸರಿಸಿ (ಆದಿಪು. ೦೦-೫ ವ ); ವಿದ್ಯಾಧರವಧೂಜನದ ಸೋಪರ್ಮಡಿಯಿಂ ಸೂಸಿದ ಪೊಂಗೇದಗೆಯ ಕುತ್ತುಂಗಱಿಯ ತುಱುಂಗಲುಮಂ...ನೋಡುತ್ತೆ (ಪಂಪಾಮಾ. ೨-೧೩ ವ); ಪರಾಗಮಂ ಪಸರಿಸುವ ಸರಸೀರುಹದೆಸಳ ತುಱುಂಗಲ ಸಿಂಹಾಸನದೊಳ್ ಸುರತರುಮಂ ಮಲಂಗಿ (ಗಿರಿಕ. ೬-೦೦ ವ) ; ಎಳನೀರ್ಗಾಯ ತುಱುಂಗಲಿಂ ತೊನೆವ ತೆಂಗಿಂ ತೋರಪಣ್ಣೊಂಗಲಿಂ .... ಪೂತಿರ್ದ ನಾನಾಲತಾನಿಳಯಾನೀಕದಿನಾತನೊಳ್ ಪಡೆದುದತ್ಯಾನಂದಮಂ ನಂದನಂ (ಮಹಾನೇ. ೪-೨೩). **ತುರುಗಲು** : ಒಗೆಮುಗಿಲ ತುರುಗಲನು ಕಳೆದು ತನ್ನೆಳನಗೆಯ ಮೊಗ ವಾಡವನು ತೊಡಿಪನಾವ ಭಾಸು ? (ಭಾರಂಗ. ೦೨-೫); ಎನ್ನ ಬಗೆ ... ಮಾಮರದೆಲೆಯ ತುರುಗಲೊಳು ತಂಗುವುದು ತವರ ಕಂಡಂತೆ (ಮಲೆದೇ. ೪೨-೬). **ತುಱುಗಲ್** : ಗುಡಿಯ ತೋರಣಂಗಳುಮಂ ತುಱುಗಲುಂ

ಬಂಬಲುವಾಗಿ ಕಟ್ಟಿಸಿ (ಶಂಕಪಥಾ. ೮-೫೫) : ತಂಬೆಲರ ಪೊಯ್ಲಿನಿಂ ತಣ್ಪು ವಡೆಯಲೆಂದು ನೆಟ್ಟಿಪಿದಂತಿರ್ದ ನೀಗಿರ್ಗಾಯ ತುಱುಗಲಿಂದೆಱಗಿದ ನಾಳಿಕೇರಭೂರುಹಂಗಳುಂ (ಚಂದ್ರಪು. ೧-೧೦೫ ಪ) ; ಎಱಪ ಶರಧರದ ತುಱುಗಲ್ಕಱಿವ ಘನೋಪಳಕದಂಬಮುಡುಗಣಮೆನೆ (ರಾಜಶೇ. ೦-೧೨೦). 'ಎಪೆದುಱುಂಗಲ್' ಪರಾ. ತುಱುಗಲು : "ಬಂಬಲ್ ತುಱುಗಲು ವೊತ್ತಂ ಗಡಣವೊಟ್ಟಲೊಟ್ಟಜೆ ... ಸಂದಣಿ ಜಾಳಿಗೆಯುಮೆನೆ ಶ್ರೇಣಿಕಾಖ್ಯಂ" (ಅಭ್ಯಿಕ್ಕ. ೦೬) ; ಕರಗಿದಳು ಗಾಂಧಾರಿ ಕಂಬನಿದುಱುಗಲಲಿ (ಕುಮ್ಯಾಸ. ೧೨-೫೫) : ಅಱಸಿದೆವಮ್ಮ ಲತಾಮಂಟಪಗಳ ಮಱೆಯೊಳು ನಾಗವಲ್ಲಿಗಳ ತುಱುಗಲೊಳು (ಕುರಾಸಾಂ. ೩೨-೩೩).

[ತುಱುಂಗು (< ತುಱುಕು$_1$) + – ಅಲ್$_2$]

△ ತುಱುಂಗು 'ತುಱುಕು$_1$' ನೋ.

**ತುಱುಂಗೊಳ್** 'ತಂಬುಂಗೋಳ್' ನೋ.

**ತುಱುಂದವೊಟಲ್** (ನಾ). ಒಂದು ಊರಿನ ಹೆಸರು : ವಾಚಿಗಂ ಗುತ್ತಿಯ ಗಂಗನ ಬಸದಿಯೊಳ್ ತುಱುನ್ದವೊಟಲು ಕಾಳೆಗದೊಳ್ ನೊಳಂಬಾಧಿರಾಜ ರಾಜನೊಳ್ ಕಾದಿ ಸತ್ತಂ (ಎಕ. ೧೪, ಹೆಗ್ಗಡ. ೧೧೭-೧೨; ಸು. ೯೦೦).

[ತುಱುಂದ$_0$ + ಪೊಟಲ್$_8$]

**ತುಱುಂಬು$_1$, ತುರುಂಬು$_1$, ತುಱುಬು$_1$** (ಕ್ರಿ). ೧. ಹೂವನ್ನು ಮುಂಡಿ– ಸೂಡು : ರತಿಗೆ ಮುಡಿಯಲ್ಕೆ ಮದನಂಗೆ ತುಱುಂಬಲ್ಕಿರ್ದುದೆಂದು ... ಇರುವಂತಿಯಂತೆ ನೋಂತಬರೊಳವೇ (ಆದಿಪು. ೧೧-೧೧೧) ; ತುಱುಂಬಿದ ನವಮಾಲಿಕಾಕುಸುಮವಿಕ್ಕಿದ ಮುತ್ತಿನ ಲಂಬಣಂ ... ಅಮರಲ್ಕೆಸೆದಂ ನೃಪರೂಪಚಂದ್ರಮಂ (ಕಾದಂಪೂ. ೫೮೨); ಜಾದಿಯ ಪೂವಂ ಬಿಟ್ಟು ಬೇವಿನ ಪೂವಂ ತುಱುಂಬುವಂತೆ (ಧರ್ಮಾಮೃ. ೧೧-೧೬೨) ; ಸಜ್ಜಕಮಂ ತುಱುಂಬಿ ಮೊಲೆಗಳ್ಗೆ ಕರಂಟವುನಿಕ್ಕಿ ... ವೃದ್ಧವಾರಯೋಷಿಜ್ಜನವೊಪ್ಪಿತಲ್ಲಿ (ಉದ್ಭಟ. ೧೧-೭೧). ೨. ಮುಡಿಸು : ಸಹಚರಿಯರ್ಬಂದು ಸೇವಂತಿಗೆಯ ಪನಿನೀರಂ ಮಜ್ಜನಕ್ಕಿಱಿದು ಪರಾಗದಂಗರಾಗವುನಮರ್ಚಿ ತಾವರೆಯ ನೂಲ ದುಕೂಲುವನುಡಿಸಿ ಕದಂಬಕುಸುಮವಂ ಸಿರಿಮುಡಿಯೊಳ್ ತುಱುಂಬಿ (ಗಿರಿಕ. ೫-೭೬ ಪ). ೩. ತುಂಬು; ಸಂದಣಿಸು; ಕೂಡು: ಹೊಂಬಾಟೆ ತುಱುಂಬಿದೀಳ ಬನದೊಳ್ ಪೆಣ್ಣಂಬಿನಿಂದಂಬುಜಾ ... ರಮ್ಯಂ ಪುರೋದ್ಯಾನದೊಳ್ (ಅನಂಪು. ೦-೯೩) ; ಕುಂಭಿಣಿ ಬೆಸಲಾದುದೆಂಬಂತೆ ಜನರು ತುಱುಂಬಿತು ಹೊನ್ನಗಸೆಯೊಳು (ತೋಱಹತ. ೧೧-೩೮). **ತುರುಬು$_1$**: ೨. ಪ್ರಸೂನಮಂ ತಿರಿತಂದು...ರುಕ್ಮಿಣಿ ಸತ್ಯಭಾಮೆಯರಿಗಂ ಮುಡಿಸಿ ವುಳಿದ ಗೋಪಾಲವಧೂಗಳಿಗೆ ಕರೆಕರೆದಿತ್ತು...ಮಸ್ತಕದಿ ತುರುಬಿ (ನವಪೋ. ೦೦-೭೧). **ತುಱುಬು$_1$** : ೧. ನವಪ್ರಸೂನವಂ ಮಗಮಗಿಪಂದದಿಂ ತುಱುಬಿ ಬಂದಳ್ (ಶಕಿಹಂ. ೭೪೪) ; ಅವಿರಳಾವೋದ ಜಾತಿಯ ನಲ್ಲದುಳಿದ ಕುಸುಮವನು ತುಱುಬದ ... ಲತಾಂಗಿಯರು (ಸೌಂದಪು. ೭-೨೬). ೨. ಇರವಂತಿಯಂ ತಂದು ಸಿರಿಮುಡಿಯೊಳಗೆ ತುಱುಬಿ ಬೆರಸಿ ಯುವತಿಜಿಗೆಡೆಗೆ ಸೇವಂತಿಗಳ ತುಱುಬಿ (ಪುಷ್ಪರ.ಹ. ೫೨೬-೦೬): ಪೊಸ ಕುಸುಮಂಗಳಂ ತುಱುಬಿದರು ಸತಿಗಾ ಪುಣ್ಯವನಿತೆಯರು (ಬಸಪು. ೪-೩೪). ೪. ಮುಡಿಗಟ್ಟು ; ಕೂದಲನ್ನು ಗಂಟುಕಟ್ಟು ; ತುರುಬು ಕಟ್ಟು; ಹೆಳಲು ಕಟ್ಟು : ಮತ್ತವೊರ್ವಳಟ್ಟಸದ ಜಗದಿಟ್ಟ ಸೋರ್ಮುಡಿಯಂ ತುಱುಬಿ ಕಟಲಂ ಕಟಲ್ಚಿ ... ನೀರನಿಟ್ಟಿದಳ್ (ರಾಮಾಶ್ವ. ೧೨೩-೦೬).

[ದೇ.೫ ತಮಿ. ತುಱುಮ್ಪು, ತುಱುಮು ; ಮಲ. ತುಱು ; ತೆಲು. ತುಱುಮು, ತುರುಮು]

**ತುಱುಂಬು$_2$, ತುರುಬು$_2$, ತುಱುಬು$_2$** (ನಾ). ೧. ಕೂದಲಿನ ಮುಡಿ,– ಗಂಟು : ತೋರಪೂಲ್ಲಿಗೆಯ ತುಱುಂಬು ರಾಹು ತವೆ ನುಂಗಿದ ಚಂದ್ರನ ನೊಯ್ಯನೊಯ್ಯನುದುಗುಟ್ಟುವೊಲೊಪ್ಪಿರಲ್ (ಶಂಕಪಥಾ. ೭-೯೬) ; ನಱು ಗಂಪುವೊಱೆದ ಜಾದಿಯ ತುಱುಂಬು ಕಣ್ಗೊಳಿಸೆ ಶೂದ್ರಕಂ ಕರಮೆಸೆದಂ (ಕಾದಂಪೂ. ೩೨); ಭಯದಿಂದೋಡುತ್ತಿರೆ ಕಾಡೊಳೊಂದು ಮರದ ಕೊಂಕು ಗೊಂಬಾತನ ತುಱುಂಬಂ ಪಿಡಿದು ತಡೆಯೆ (ಧರ್ಮಾಮೃ. ೨-೫೭) ; ಬಂಬಳ ಬಾಡಿದ ದೇಹ ಕಟ್ಟಳಿದ ತುಱುಂಬು ಕಂದಿದ ಮೊಗ (ಭರತೇ. ೭೧-೭೯). ೨. ಗುಂಪು ; ಸಮೂಹ : ಪರ್ವಿ ಪಸರಿಸಿದ ಪೊಂಬಾಟೆಯ ಕಂಬಂಗಳ ತು [ಪಾಠಾಂ. ತ]ಱುಂಬಿನೊಳ್ ಬಳ್ಳ ಬೆಳೆದ ಮೃದ್ವೀಕಾಲತೆಯ ಕಾಯ ಮಾಸಂ (ಅನಂಪು. ೭-೧೧ಪ). **ತುರುಬು$_2$** : ೧. ಹುರುಮಂಜಿಮುತ್ತುಗಳ ತುರುಬಿಂಗೆ ಕೊರಲಿಂಗೆ ಮೆರೆವ ಹಾರಂಗೈದು (ವಂಕಾಂಗ. ೫-೬-೦೭) ; ತುರುಬಿನ ಸುತ್ತಲೂ ಮಲ್ಲಿಗೆಯ ದಂಡೆ ಕಟ್ಟಿಕೊಂಡಿದ್ದಳು (ಅಪನಾ. ೨೪೮); ಅತ್ತೆ ತುರುಬು ಮಾವಗೆ ದಾನ (ಗಾದೆ). **ತುಱುಬು$_2$** : ೧. "ತುಱುಬು ಹಿಣಿಲು ಪಾಶಂ" (ಮಂಗರಾ. ೯೪.೬); ತಳ್ಪತಳದೊಳ್ ಬಳಿಕಾತನ ತುಱುಬಂ ತಿರ್ದುತ್ತಂ ಮೊನಸಿದ ಪಳಿತಮಂ ಕಂಡು (ಪುಣ್ಯಾಸ್ರ. ೧೧-೧೦) ; ವಾಮ ಹಸ್ತವ ತುಱುಬಿನೊಳಿಟ್ಟು (ತೋಱಹತ. ೦೬-೩೭) ; ಮುಡಿದ ಪೂವಿನ ತುಱುಬು ಮೃಡಗಂಧಗಜದಿಱುಬು (ಚೆಲಪು. ೩೭-೨೨).

ತುತ್ತುಱುಂಬು, ತುತ್ತುಱುಬು (ದ್ವಿರುಕ್ತಿ) : ತುತ್ತುಱುಂಬಾಗಿಯಾಗಳಿಗೆ ಬಳ್ದು ಕೋಟೆಯಂ ಹತ್ತಲೆಂದಂಗವಿಸುವಾ ಹರಿಗೆಯಾಳ್ಗಳ್ (ಸಮ್ಯಕ್ತಾ. ೮-೩೭) : ಕಾಳೋರಗನ ಹುತ್ತನೊಳಹೊಕ್ಕ ಮಾಳ್ಕೆಯೊಳ್ಯಾಳಗತ್ತಲೆ ತುತ್ತುಱುಂಬಾಗಿ ತುಂಬಿದಾಭೀಳಮಪ್ಪಾರಣ್ಯಮಧ್ಯದೊಳ್ದಬ್ಬುದಲೆಗೊಂಡು ದಾರಿಯ ತಪ್ಪಿದ (ಸಮ್ಯಕ್ತಾ. ೦೦-೩೭) : ಅಳಿಯಂದಿರಿಂದಾಪ್ತರಿಂದ . . . ತುಳಿಲಾಳ್ಗಳ ತುತ್ತುಱುಬಿಂ ಸಭೆ ಕಣ್ಗೆ ತೆಳೆದುದು ಗಾಡಿಗಮಕವ (ರಾಮವಿ. ೦೦-೭೭): ಕುತ್ತುಱು ಮೆಳವಱೆಗಳೊಳು ತುತ್ತುಱುಬಾಗಿ ನಿಂದರು ಬೆಟ್ಟಬೆಟ್ಟಗಳೊತ್ತಿನೊಳಗೆ ಕಾಲವರು (ಕುರಾಸಾಂ. ೩೯-೮).

[ < ತುಱುಂಬು$_1$. /ತುಳು. ತುರುಟು ]

**ತುಱುಂಬುಗೊಳಿಸು** (ಕ್ರಿ). ತುಂಬುವಂತೆ ಮಾಡು ; ಭರ್ತಿ ಮಾಡು : ಅಂಬಳಪ್ರಹರಣನಿವಾರಂಗಳಪ್ಪಾಳ್ವಱಿಯ ತುಱುಗಲಂ ತುಱುಂಬುಗೊಳಿಸಿಯುಂ (ಪುಷ್ಪಪು.೭-೩೯ ಪ). [ ತುಱುಂಬು$_2$ + ಕೊಳ್$_1$ + –ಇಸು$_3$ ]

**ತುಱುಕಾರ್ತಿ** 'ತುಱುಗಾರ್ತಿ' ನೋ.

**ತುಱುಕಾಱ** 'ತಂಱುಗಾಱ' ನೋ.

**ತುಱುಕು$_1$, ತುರುಕು$_1$, ತುರುಗು$_1$, ತುಱುಂಕಂ, ತುಱುಂಗು, ತಂಱುಗು** ೧. (ಕ್ರಿ.) ಒತ್ತಿ ತಂರಬು; ಗಿಡಿ; ಅಡಕು; ಬಲವಂತದಿಂದ ಒಳಕ್ಕೆ ಸೇರಿಸು: "ತಱುಕು–ಗಾಢಪ್ರವೇಶೇ" (ಶಮದ) ; ಪೊಱಗೊಂದು ಹಡಗೆ ಮಣ್ಣಂ ನೆಟ್ಟಿ ಶೌಚಂಗೆಯ್ದುರೊಳಗೆ ಪಲತೆಱದಡಗಂ ತುಱುಕುವರ್ (ಸಮಶ.೧೪-೧೫೦). **ತುರುಕು$_1$**: ೧. ಕೋಣೆಯಲ್ಲಿ ಬಾಗಿಲ ಸಂದಿನಿಂದ ನನಗೊಂದು ಕಾಗದ ತುರುಕಿತ್ತು (ಅಂಹೂ. ೧೫೨); ಕೆಲವರು ಓದಿದರೂ ಅವುಗಳನ್ನು ಎಲ್ಲಿಯೋ ಪೆಟ್ಟಿಗೆಯಲ್ಲಿ ತುರುಕಿಬಿಡುತ್ತಿದ್ದರು (ರಂಗಕ. ೯೭). **ತುರುಗು$_1$** : ೨. ದಟ್ಟೈಸು ; ಸಂದಣಿಸು; ಇಟ್ಟಣಿಸು : ತಾರಕೆ ವಿರುಗೆ ಆಗಸ ತುರುಗೆ ಹುಲ್ಲಲ್ಲೊರಗುವಳು (ಹಾಡುಪಾ. ೧೯-೦೭). ೩. ಹೆಚ್ಚಾಗು ; ಅಧಿಕವಾಗು ; ಅತಿಶಯವಾಗು ; ತಂಬಿರು : ವೃಕೋದರನಿಗೆ ಸಹೋದರನ ಮರಣದಿಂದ ಒಡಲೊಳಗೆ ಅಳಲು ತುರುಗಿತು (ಬಿದುಕೆ. ೧೧೧). ೪. ಸಂಗ್ರಹಿಸು ; ಒಟ್ಟುಮಾಡು : ತಂದನೊಬ್ಬಂ ಪೇಳ್ದ ಬೆಲೆಗೊಟ್ಟು ನವಿರುಡೆಯನೆಂದಿನಂತುರಲ ಬಡವಂ ತುರುಗಿ ತಂದಂ (ಕಾಲೂರ. ೭೮-೦೪೪). ೫. ಎದುರಿಸು ; ಕಾದು ; ಇದಿರಿಸುವ ಗಂಡರು... ತಾನೊಬ್ಬನೇ ತುರುಗುವೆನೆಂದು ಮುಂಬರಿದು ಬರುವ ವೀರರನ್ನು ... ದಿಂಡುಗೆಡವಿದನು (ಕವೀರ.೩೦). △ **ತುಱುಂಕು** : ೧. ಮಯ್ಯಂ ಕಿಱುಕಿಱಿದಾಗಿ ಕತ್ತರಿಸಿ ಬಾಯೊಳ್ತುಱುಂಕಿಯುಂ (ಧರ್ಮಾಮೃ. ೩-೭೩). △ **ತುಱುಂಗು** : ೨. ಪರಿವ ಕರೆಕರೆವ ಸೂಱುಯ್ಯರ ಸೂಱುಗಳೊಳ್ತುಱುಂಗಿದಚ್ಚುಳಾ

ಯ್ತುರ ಕಳಕಳರವದಿಂ ಭೋರ್ಗರೆದುಲಿವಂಬುಧಿಯನಂತದೇಂ ಮಗುಳಿ ಸಿತೋ (ಸುಕುಮಾ. ೧೦-೨೩). ೩. ತನಿವಣ್ಣಿಗಳ ಸಂತತಿಯಿಂ ತುಱುಂಗಿ ನೆಱೆ ಕಣ್ಗೆತಿಶಯವಾಗಿರ್ದುದಲ್ಲಿ ನಾರಂಗಕುಜಂ (ಶಾಂತೀಶ್ವ. ೧೦-೯೮).

**ತುಱುಗು$_1$**: ೧. ಕಂಪುಳ್ಳ ಸೇವಂತಿಯುಂ ತಂದು ತುಱುಗೆಂಬ ಜಾದಿಯುಂ ಮೊಲ್ಲೆಯುಂ ಬೆರಸಿ ನೀಡೆಮಗೆಂಬ...ಶರಣರಂ ನೋಡುತಂ (ಬಸವ. ೬-೪೦); ಮುಱಿದು ಮರನನು ಭೀಮಸಹಿತರ ತುಱುಬಿದನು ಹೊಕ್ಕೆಱಗಿದನು ತುಱುಗಿದನು ಭಟರ ಭದ್ರವಿಮಾನದಲಿ (ಕುಮ್ವ್ಯಾ.ಅ. ೨೨-೨೯); ಕಿಱಿದಿನೊಳಗೆ ನೋಡೆ ನಿಯಮಸಾರಂದೊಲು ತಿಱಿಗೆ ಪ್ರಾಭೃತದಂತೆ ತುಱುಗಿ ಭೂಪತಿ ಹೇಳಿದಧ್ಯಾತ್ಮಸಾರದ ತಿಱಿದೊಳಧ್ಯಯನ ಮಾಡಿದರು (ಭರತ. ೧೯-೦೨೩). ೨. ತಾಪಸಕನ್ಯೆಯರ್ ನಡಪಿದೆಳಲತೆಗಳೊಳೆಱಗಿ ತುಱುಗಿ ಪಾಮವೇದಧ್ವನಿಯೊಳ್ ಮೊರೆವ ದುಂಬಿಗಳುಮಂ (ಶಂಪಥಾ. ೦-೦೦೩ ಪ); ಆಗಸಂ ಹೂತಂತೆ ಪುಷ್ಪಕಂಗಳು ತುಱುಗೆ (ಇಹರ.ದೇ.೪೬-೦೬); ದಂತಿಘಟೆಗಳು ತುಱುಗಿದವು ... ಚೂಣಿಯ ನೃಪರ ಜೋಕೆಯಲಿ (ಕುಮ್ವ್ಯಾ.ದ್ರೋ.೯.೦-೪೬); ನಱುಗಂಪ ಸವಿಯಲೆಂದೆಲರ ಬೆಂಬಳಿವಿಡಿದು ತುಱುಗಿ ಬಂಬಲು ಪಾಱೆಗೊಂಡು...ಎಱಪಳಿಗಳೋಲೈಪ ಪರಿವಾರವನೆ (ಛಿಕ್ಕ ಶ. ೧-೨೪); ಸಿಂಹಾಸನದ ಸುತ್ತಲುಂ ತುಱುಗಿದ ಸುರವ್ರಜದ ಮಧ್ಯದೊಳ್ ಮೆಱೆವಮಂ ಕುಱಿಯೊ...ನೀಂ ಪೇಳೆಂದನು (ಜಬಪು. ೦೬-೩). ೩. ಮೊದಲೊಳ್ ಮಾಡುಪಳದ ಕಾಯ್ ತುಱುಗಿರ್ಕುಂ (ಲೋಕೋಪ. ೬-೩೪); ಸುಲಲಿತವಾಗಿ ನೀಳ್ದ ತುಱುಗಿರ್ದಮೆಗಳ್ ತಮಮಂ ಬೆಳರ್ಪ ಕಣ್ಮಲರ್ಗಣಿಯಂದಮಂ ನೆಱೆಯೆ ಪೋಲ್ತಿರೆ (ಧರ್ಮಾಮೃ. ೬-೧೯೭); ಅಂತು ನಿಧಾನ ಕೈಱಗುವ ದೀಪವರ್ತಿಯಂತೆಱಗಿ ತುಱುಗಿದರ್ಚನೆಗಳಿಂದರ್ಚಿಸಿ ಗುರುಭಕ್ತಿ ಪೂರ್ವಕಂ ಬಂದಿಸಿ (ಆರ್ಧನೇ. ೧-೧೪೦); ತುಱುಗಿದ ಕಾಯಿ ಪಣ್ಣಿಗಳ ಸಾಲ ವೃಕ್ಷವ ಮುಱಿದು (ಪೋಹಶ. ೪-೩೭); ಫಲವೃಕ್ಷಂಗಳೆತ್ತಂ ತುಱುಗಿ ಬೆಳೆದಿರೆ (ರಾಮಾಶ್ವ. ೪೩-೦೩). ೪. ತುಂಬಿಕೊಳ್ಳು; ಅಡಕಿಕೊಳ್ಳು: ಬಾಯೊಳು ತುಱುಗಿದೆಲೆ ಬಾಯೊಳಗೆ ಮಡಿದೆಲೆ ಕೈಯೊಳಂಗನೆಯ ಸ್ಥಿರದೊಳೆಮೆಯಿಕ್ಕದೆ ನಿರೀಕ್ಷಿಸುತರಸನೊರ್ವನು ... ಇರ್ದನು ಲಲಿತಭಿತ್ತಿಯ ಚಿತ್ರದಂದದಲಿ (ಜೀವಂಧ. ೮-೩೩). ೫. ಮುಚ್ಚು; ಕವಿ; ಆಚ್ಛಾದಿಸಂ: "ತುಱುಗು-ಸಂಛನ್ನೇ (ಕವಿದುಕೊಳ್ಳು)" (ಶಮಧಾ); ತುಱುಗಿದ ಮುಗಿಲಾ ಮುಗಿಲಿಂದೆಱಗುವ ಮಱೆ (ಅಧಿಪು. ೬-೬೨); ಎಱಗುವ ನರೇಂದ್ರನಿಕರದ ಮಿಱುಗುವ ಮಣಿಮೌಳಿ ಮಂಜುಳ ಪ್ರಭೆ ತನ್ನೊಳೆ ತುಱುಗೆ (ಕಾದಂಪೂ. ೪೬೯); ತುಱುಗಿರ್ದ ನೀಲ ಮೇಘದ ತುಱುಗಲ್ ನೆಱೆ ಪಿಂಗಿ ಪೋಗೆ (ಜಗವಿ. ೪-೫೯); ಕೆಱುವೊನೆಯ ಮುಗುಳಂಬುಗಳ ಸೈಗಱೆದನಭಿಮನ್ಯುವಿನ ಮೆಯ್ಯಲಿ ತುಱುಗಿದವು ಮಱಿದುಂಬಿ ಕೆಂದಾವರೆಗೆ ಕವಿವಂತೆ (ಕುಮ್ವ್ಯಾ.ದ್ರೋ.೬. ೩-೩೪); ಧುರದೊಳು ತುಱುಗಿರ್ದ ಕೃತಕಾಂಧಕಾರವಿಸ್ತರವ ನಿರ್ಮೂಲನಗೆಯ್ವುದಕೆ ವರವಮೂಡಿಗೆಯಿಂದೆ ತೆಗೆದೆಚ್ಚ ಕೃಷ್ಣ (ಪೋಹಶ. ೪೦-೪೩). ೬. ಹರಡು; ವ್ಯಾಪಿಸು: ಪೊಸ ಮಸೆಯಂಬಸದಳಮೊಡನೆಱಗಿ ತುಱುಗಿ ಪಾಯ್ವುವು ಕೆಲವುಂ (ಶಾಂತಿಪು. ೩-೬೦); ತುಱುಗಿದ ತನುತಾಪದಿಂದೆ ಪಕ್ಕಿಯ ತಳಿರ್ ತಱಗೆಲೆಯಾಗಿ ತೋಱಿಸಲು (ಪೋಹಶ. ೨೮-೦೩); ಮಣಿಕೋಟಿರಾಂಶು ವೆತ್ತಂ ತುಱುಗೆ...ಕನಕಲಸತ್ಸಿಂಹಪೀಠದೊಳ್ ಭೂಪನಿರ್ದಂ (ಧಾಪಿಕೀ. ೩-೦೬). ೭. ಜೋಡಿಸು; ಹೊಂದಿಸು; ಕುಂದಣಗೊಳಿಸು: ತರತರದಿಂ ತುಱುಗಿದ ವಿವಿಧ ರತ್ನಮಯಮಪ್ಪ ಪೊನ್ನ ಕುಱಿವಟ್ಟುಗಳಿಂ ನಿರುಪಮ ಕನಕಸರೋಜಾಕರಮಲರ್ದಂತಿರ್ದುದನ್ನವಾಸವಿಲಾಸಂ (ಸು ಕು ಮಾ. ೧೦-೨೭). ೧೦. ತಾಗು; ತಗುಲು; ಅಂಟು: ತುರಗದ ವ್ಯಾಧಿನಿದಾನ ವನಱಿಯದ ವೈದ್ಯನನೆ ಶಿಕ್ಷಿಗೆಯ್ಯದ ನೃಪಗಂ ತುಱುಗುವುದಶ್ವೇತಿ ಪಾತಕಮಱಿದವನಂ ತಡೆಯಲಶ್ವಮೇಧದ ಫಲಮುಂ (ಅಶ್ವಶಾ. ೦೦-೩).

ತುರುತುರುಗು (ದ್ವಿರುಕ್ತಿ): ನೀನುಳಿವೆ ಎಂದಿನೊಲು ಎಲ್ಲೆಡೆಗೆ ತುರುತುರುಗಿ ಗಾಳಿಯೊಲು ಜನಗಾಗಿ ಜೀವನಕೆ ಉಸಿರಾಗಿ (ಬಾಸಿಗ. ೨೬-೯). [ದೇ. ॥ ತಮಿ. ಮಲ. ತುಱು; ತೆಲು. ತುರುಗು, ತುಱುಗು]

**ತುಱುಕು$_2$** (ನಾ). (?): ಇಱಿದುದಕದಂತೆ ಹಾಲಿನ ನಱುಸೋನೆಯ ಲುಂಡ ಬಣ್ಣದರಲ್ಗಳ ಸೊನೆಯಿಂ ತುಱುಕಿನ ಜೋಲುವ ಶಿಳಿಗಳ ನೆಱಗಿದರಾ ಜನಮನಳುರೆ ಹೊಸ ರಸವಣಿಗರ್ (?) (ಸೂಕ್ತಿಸು. ೦೩-೦೯).

[ ? ]

**ತುಱುಗಲ್** 'ತಂಱುಂಗಲ್' ನೋ.

**ತುಱುಗಲು** 'ತಂಱುಂಗಲ್' ನೋ.

**ತುಱುಗಲೂರ್** (ನಾ). ಒಂದು ಊರಿನ ಹೆಸರು: ಈಶ್ವರಶರ್ಮ ನಾಮಧೇಯ ತುಱುಗಲೂರ್ ವಸ್ತವ್ಯಾ (ಮೈಅರಿ. ೧೯೧೪, ೧೦.೮:728).

[ ? + ಊರ್ ]

**ತುಱುಗಲ್ಗೊನೆ** (ನಾ). ದಟ್ಟವಾಗಿ ಕಾಯಿ ಅಥವಾ ಹಣ್ಣುಗಳನ್ನು ಒಳಗೊಂಡಿರುವ ಗೊನೆ. 'ತುಱುಗಲ್ಗೊನೆವಣ್' ಪರಾ.

[ ತುಱುಗಲ್ ( < ತುಱುಂಗಲ್) + ಕೊನೆ$_3$ ( < ಗೊಲ್$_2$) ]

**ತುಱುಗಲ್ಗೊನೆವಣ್** (ಕ್ರಿ). ದಟ್ಟವಾದ ಕಾಯಿ, ಹಣ್ಣುಗಳಿಂದ ತುಂಬಿದ ಗೊನೆಯನ್ನು ಬಿಡು; ಫಲಿಸು: ಕೊರೆದುದೂ ಕಾವು ಧೇನು ತುಱುಗಲ್ಗೊನೆವಣ್ವುದೂ ಕಲ್ಪವೃಕ್ಷಂ (ಗದಾಯು. ೦೦-೨೨ ಅಧಿ).

[ ತುಱುಗಲ್ಗೊನೆ + ಪಣ್$_2$ ]

**ತುಱುಗಲ್ಗೊಳ್** (ಕ್ರಿ). ಗುಂಪುಗೂಡು; ಒಟ್ಟಾಗು: ಪೊಕ್ಕು ಕೇದಗೆಯ ಪೂಗೊಯ್ಯಲ್ಕೆ ಘರ್ಮಾಂಬುಗಳ್ ತುಱುಗಲ್ಗೊಂಡವು ತಂಗೆ ಬಲ್ಲಿತೆ ಬಿಸಿಲ್ ಪೂದೋಂಟದೊಳ್ (ಸೂಕ್ತಿಸು. ೦೦-೬೦).

[ ತುಱುಗಲ್ ( < ತುಱುಂಗಲ್ ) + ಕೊಳ್$_1$ ]

**ತುಱುಗಳವು** (ನಾ). ಹಸುಗಳ ಅಪಹಾರ; ಗೋಗ್ರಹಣ: ತುಱುಗಳವೊ[ ಪಾಠ. ಗೊಳಿ ]ಳ್ ಪೆಣ್ಬುಯ್ಯಲೊಳ್...ತಱಿಸಂದು ಗಂಡು ತನಮುನೆ ನೆಱಪದವಂ ಗಂಡನಲ್ಲನೆಂತುಂ ಪಂಡಂ (ಗದಾಯು.೨-೨೪).

[ತುಱು + ಕಳವು]

**ತುಱುಗಾ, ತುಂಱುಗಾಯ್** (ಕ್ರಿ). ದನಕರುಗಳನ್ನು ಕಾಯು,—ಮೇಯಿಸು: ತುಱುಗಾವ ಗೋಪವರಂ ಮಾತ್ರಱಿಕೆಯ ಕಬ್ಬಿಲರನೆಯ್ದೆ ಬೆಸಗೊಳುತಂ (ಧರ್ಮಾಮೃ.೮-೨೩). ತುಱುಗಾವ ಕಿಱುಕುಳದ ಕೆಳೆಯರುಮಂ ನೋಡುತ್ತುಂ (ಕಬ್ಬಿಗಕಾ.೨೩೪); ಆರ ಬಸುಱಲಿ ಬಂದು ... ಆರ ಹೆಂಡಿರ ಕೊಂಡು ಕಱು ತುಱುಗಾದು ಕಳವಿನಲಿ ವೀರದೈತ್ಯನ ಸದೆಬಡಿದು ಕುರು ವೀರವಂಶದ ರಾಯರೆಮ್ಮೊಳು ವೈರಬಂಧವ ಬಿತ್ತಿ ಕೊಂಡವ ಕೃಷ್ಣ ನೀನೆಂದ (ಕುಮ್ವ್ಯಾ.ಗ.೮-೩೮); ತುಱುಗಾವ ಪಳ್ಳಿಯಂ ಬಿಟ್ಟು ಬಳಿಕರವಿಲ್ಲದೆ ಹೊದ್ದಿ ಪಾಂಡವರನು (ಕೃಮಿಥಾ. ೬-೯೭). **ತುಱುಗಾಯ್**: ಮಾಯದೀ ಮಗ ಹೊಲದೊಳಗೆ ತುಱುಗಾವುತಿರಲೊಂದು ಬಾಯ ಬಿಡುತಿದಿರಾದ ಕತ್ತೆಯ ಸಾಯ ಬಡಿದನು (ಹಾಕ್ರಿಥಾ.೨೨-೦೩).

ತುಱುಗಾವ = ದನಕಾಯುವವನು; ದನಗಾಹಿ: ತುಱುಗಳು ತುಱುಗಾವರನು ನೆಱೆದಾಡುವರ್ಭಕರ ಎಱಗಿ ನೋಡುವ ತನ್ನನು ... ಕಾಣುತವೆ ಮೈಮಱೆದಳಂಗನೆ (ನಿಥಾಗ. ೦೦-೮-೫೮). [ತುಱು+ಕಾ$_1$]

**ತುಱುಗಾಡು, ತುರುಗಾಡು** (ನಾ). ದನಕರುಗಳು ಮೇಯುವ ಕಾಡು; ಹುಲ್ಲುಗಾವಲು; ಗೋಮಾಳ: ತುಱುಗಾಡು, ಕುಱುಗಂಟು, ಕುಡುಗೋಲ್ (ಶಬ್ದಾನು. ೮೭ ಪ್ರಯೋ). **ತುರುಗಾಡು**: "ಆಶಿತಂ [ ಗವೀನಂ ] – ತುರುಗಾಡು" (ಅಶಾನಿ. ೩-೭). [ತುಱು + ಕಾಡು$_1$]

**ತುಱುಗಾಯ್** 'ತಂಱುಗಾ' ನೋ.

**ತುಱುಗಾಯಿ** 'ತಂಱುಗಾಹಿ' ನೋ.

**ತುಱುಗಾರ್ತಿ**, ತಂಱುಕಾರ್ತಿ (ನಾ). ಗೊಲ್ಲರವಳಂ ; ಗೊಲ್ತಿತಿ ; ಗೋಪಿ : "ತುಱುಗಾರ್ತಿ [ಪಾಠಾಂ. ವಳ್ತಿ] ಯೆಂದು ಗೋಪಿ" (ಶಬಸಾ. ೭-೧೨೭) ; "ತುಱುಗಾರ್ತಿಯರೆನಲು ಗೋಪಿಯರ್" (ಕವಿಕಂ. ೮೩) ; ಮನೆ ನಿನಗೆ ನಂದಗೋಪಾಲನ ಮನೆ ತುಱುಗಾರ್ತಿ ನಿನಗೆ ಮನೆವೆಂಡತಿ (ಹಂಪಭಾ. ೬-೩೨) ; ತನ್ನ ಪೆಂಡತಿಯಪ್ಪ ನಂದೆಯೆಂಬ ತುಱುಗಾರ್ತಿಯಂ ಕರೆದು... ಪಟ್ಟಣಂ ಕೊಟ್ಟು (ಧರ್ಮಾಮೃ. ೧೦-೧೫೦) ; ಕಱುವಂ ಬಿಡು... ಮುಱುವಂ ಸುರಿಯೆಂಬ ಸವಿವು ತುಱುಗಾರ್ತಿಯರೊಳ್ (ಲೀಲಾವ. ೫-೧೨೦) ; ಕಱೆಯೆಂಬ ನುಡಿ ತುಱುಗಾರ್ತಿಯರೊಳು (ಶಂರಾಸಾಂ. ೨-೬೮). **ತುಱುಕಾರ್ತಿ** : ತುಱುಕಾರ್ತಿಯರ್ ತಿಱಿದು ತಂದು ಪಾಱುತನಕ್ಕೆ ಪರಪೆ ಪರೆದು ಕೊರಗಿರ್ದ ಕಱಿಯ ನೆಯ್ದಿಲ್ಗಳಿಂ ... ಮನೋಹರಮಾದ ಮಾಧವೀಮಂಟಪದ ಮೊಗಸಾಲೆಯೊಳ್ ಕುಳ್ಳಿರ್ದು (ಲೀಲಾವ. ೫-೫೯ವ).

[ತುಱುಗಾಱ + – ತಿ$_1$ (< – ಇತ್ತಿ) ]

**ತುಱುಗಾಹಿ**, ತುಱುಗಾಯಿ (ನಾ). ದನಕರುಗಳನ್ನು ಕಾಯುವವನು : ಗೊಲ್ಲ : ತುಱುಗಾಹಿ ಕಾಜಿನ ಮಣಿಯ ಬಲ್ಲನು ಗಡ (ಕುಮಾ. ಭಾ. ೯-೧೪) ; ತುಱುಗಳ ತಿರುಹಿಕೊಂಡಯ್ದುವ ಬೇಡರ ತುಱುಗಾಹಿಗಳು ಕಂಡು ನಡುಗಿ (ಜೀವಂಸಾಂ. ೮-೨೩) ; ಈತನೇ ತುಱುಗಾಹಿ ಪಮಾರಣ್ಣನೆಂಬಾತನು (ಚಬಸು. ೫೭-೬೦) : ಸಲಹುವನೆ ಮಸೆಯ ತುಱುಗಾಹಿ ಸ್ತ್ರೀಯರಿಗೆ ಒಲಿಯುವನೆ ಯೋಗಿ (ಸರ್ವಜ್ಞ. ೫೦೯). **ತುಱುಗಾಯಿ** : ಇಂದು ತುಱುಗಾಯಿ[ಪಾಠಾಂ. ಹಿ]ಯಂ ಬಂದಿಱಿಯದವನೆಸಗೆ ಸಂದ ಪಗೆ (ಜೈಮಿಭಾ. ೭-೩೦). [ ತುಱು + ಕಾಹಿ ]

**ತುಱುಗಾಱ**, ತುರುಕಾರ, ತುಱುಕಾಱ (ನಾ). ದನಕರುಗಳನ್ನು ಕಾಯುವವನು : ಗೊಲ್ಲ ; ಗೋಪಾಲ : ಒರ್ವರಿನೊರ್ವರ್ ಮಿಕ್ಕು ಪಾರ್ದು ಸಾರ್ದಿಸೆ ತುಱುಗಾಱರಂದಿನಿಸು ಬಲ್ಲುಲನಾದುದದೆಂದು ಕಾಳೆಗಂ (ಪಂಪಭಾ. ೮-೯೩); ಆ ಶಿಶುವನೆತ್ತಿಕೊಂಡು ಬಂದು ಗೋವಿಂದನೆಂಬ ತುಱುಗಾಱಂಗೆ ಕುಡುವುದುಂ (ಧರ್ಮಾಮೃ. ೧೦-೧೫೦) : ಏಱಿದರು ಭಂಡಿಗಳನಾ ತುಱುಗಾಱರಾ ಸ್ತ್ರೀಬಾಲವೃದ್ಧರು (ನಿಘಾಗ. ೧೦-೧೦-೧೧). **ತುರುಕಾರ** : ಹಿಂದೆ ಕುಳಿತು ತೇರಿಸಗು ಎಂದು ಅಪ್ಪಣೆಮಾಡುವವನು ಅಂಬಿಗ, ಯುದ್ಧರಂಗದಲ್ಲಿ ಮುಂದೆ ಸವಾರನಾಗಿ ಬಂದಿರುವವನು ತುರುಕಾರ (ಭಾಷುಚಿ. ೨೪). **ತುಱುಕಾಱ** : "ಗೋಪಾಲ್, ಗೋವಿಂ, ಗೋಸ್ವಾಮಿ—ಈ ೩ ತುಱುಕಾಱರ್" (ಚಲಾಯು. ೪೪-೧೦೭) ; ಪೆಚ್ಚ ಪಸಿಯ ತುಱುಕಾಱಗೆಗ್ಗಳಿಕೆಯನೆ ಮಾಡಿ ನೀನುಂ ಪಟ್ಟಯಂ ಕಟ್ಟಿದೆಯೊ ಭೂಪರನಿಬರ ಕೊರಲೊಳ್ (ಪಂಪಭಾ. ೭-೯೬). [ ತುಱು + – ಕಾಱ ]

**ತುಱುಗಾಱಪಳ್ಳಿ** (ನಾ). ಗೋವಳರ ಗ್ರಾಮಂ ; ಗೊಲ್ಲರ ಹಳ್ಳಿ : ಪಕ್ಕಣಗಳಲಿ ತುಱುಗಾಱ[ಪಾಠಾಂ. ವ] ಪಳ್ಳಿಯಲಿ . . . ಅಱಸಿದರಾ ನಿಶಾಚರನ (ತೊರವೆ. ೪-೧೧-೦೫). [ ತುಱುಗಾಱ + ಪಳ್ಳಿ$_1$ ]

**ತುಱುಗು$_1$** 'ತುಱುಕು$_1$' ನೋ.

**ತುಱುಗು$_2$**, ತುರುಗು$_2$ (ನಾ). ಸಂದಣಿ ; ದಟ್ಟಣೆ : ಸಪ್ತಮುಖದಿಂದೆ ವಿಷೋನ್ನತಿಯಿಂದೆ ಭೋಗದೊಳ್ ತುಱುಗಿರವಿಂದೆ ಪೋಲ್ತುದು ಮಹಾನದಿ ರುಂದ್ರಫಣೀಂದ್ರರಾಜನಂ (ಕಾವ್ಯಸಾ. ೭೪೭ ತೊಪ್ರ೪): ಮೆಱೆವ ದೇಹಪ್ರಭೆಗಳಲಿ ಮಿಱುಮಿಱುಪ ದಿವ್ಯಾಭರಣಕಿರಣದ ತುಱುಗಿನಲಿ ಒಪ್ಪಿದರಿಂದ್ರತೇಜದಲಿ (ಸಂಭಚ. ೩೩-೫೭). **ತುರುಗು$_2$** : "ತಿಂತಿಣಿ, ಕಿಕ್ಕಿರಿ, ತುರುಗು, ಬಂಬಲು, ಜಂಗುಳಿ, ಹಿಂಡು, ಗುಂಪು...ಮುಂದಿ" (ಕಂನುಹು. ೮೩). [ <ತುಱುಕು$_1$/ಮಲ. ತುಱುಕು ]

**ತುಱುಗುಗೊಂದಲ್**, ತಂರಂಗುಂಗೊದಲು (ನಾ). ದಟ್ಟವಾಗಿರುವ ಕೂದಲು; ತುಂಬುಗೂದಲು : ತುಱುಗುಗೊಂದಲ್ ಕೊಕ್ಕರಿಸೆ ಕೊನೆವಾಲಮಿನಿಸುಂ ನಿಮಿರ್ದು ಸಂಚಳಿಸೆ (ರಾಮಾಶ್ವ. ೧೪೨-೯). **ತುರುಗುಂಗೊದಲು** : ಇದೀ ಶ್ಮಶ್ರುಸಂಕಟವಾದರೋ, ವಿಪರೀತವಾಗಿ, ಕರಿಯ ಚಾಮರದ ಚವುರಿಯ ತುರುಗುಂಗೊದಲಂತೆ...ರೂಕ್ಷತೆಯ ಕಡು ಗಪ್ಪಾಗಿ ಗೋಳಾಡುತ್ತಿರುವುದು (ಮುಂತ್ರಿಶ. ೯೨-೦೮).

[ತುಱುಗು$_1$ (<ತುಱುಕು$_1$) + ಕೊಂದಲ್]

**ತುಱುಗೆವೆ**, ತುರುಗೆವೆ, ತಂಱುಗೆವೆ (ನಾ). ದಟ್ಟವಾದ ಕೂದಲುಳ್ಳ ರೆಪ್ಪೆ ; ಒತ್ತಾದ ಕೂದಲುಳ್ಳ ರೆಪ್ಪೆ: ತುಱುಗೆವೆ ನೀಳ್ದ ಪುರ್ವು ನಿಡು ಗಣ್ (ಪಂಪಭಾ. ೧-೧೨೮) ; ಘನಸ್ತನಂ ತುಱುಗೆವೆ ಕೋಮಲಾಂಗಮೞ ವಟ್ಟ ಕುರುಳ್...ರಮಣೀಯಮಾಗೆ (ಧರ್ಮಾಮೃ. ೪-೦೪೨); ತುಱು ಗೆವೆಯ ಕೆರ್ಗೆಯೊಳ್ ಬಂಬಲಿಪ ಕಣ್ಮಿನಿಗಳೊಸರೆ (ವರ್ಧಪು. ೪-೬೧ವ). **ತುರುಗೆವೆ** : ತುರುಗೆವೆ ನಿಡುಹುಬ್ಬು ಡಾಳಿಪ ಕದಪು...ಅಂಚೆಯ ನಡೆ ನುಡಿಯ ಜಾಣೆಯರು (ಸೌಂದಕಾ. ೩-೭೬). **ತುಱುಗೆವೆ** : ತುಱುಗೆವೆ ನಿಂದು ನೋಡೆ ಕಡೆಗಣ್ಣದಿರ್ಗೊಳ್ಪಳಿವಾಡೆ ಪೊಕ್ಕು ಸೈವೞಗಿದಿರ್ಗೊಳ್ಪ ಸೋಂಕು. . . ಬಲ್ಲೆಯದಿರ್ಗೊಂಡುದು ಕೂಟದ ಕಾಯ್ಪುವೋಪರಾ (ಅರ್ದನೇ. ೨-೩೬): ತುಱುಗೆವೆಯ ನಿಟ್ಟೆಸಳುಗಂಗಳ . . . ನೀಱೆ ಮುಖ್ಯೆದಿ ತೊಗ್ಗಿನಲಿ (ಕುಮಾ.ಭಾ. ೧೩-೩೦); ತುಱುಗೆವೆಯ ನಿಡುಗಂಗಳಿನ ಕಡೆಸೆಳಗಿನ ಮಱಿಸುತ...ಬಂದಳು ರಾಮನಿದ್ದೆಡೆಗೆ (ತೊರವೆ.೩-೪-೮): ಪಾಮರಿಯರ ಕುಡುಪುರ್ವಿನ ಕೊನೆಮುಟ್ಟದ ತುಱುಗೆವೆಗಳ ನಡುವೆ ಕರಿಯಾಲಿಗಳೆಸೆದುವು (ಜಯುಕಾ. ೧-೪೦). [ತುಱುಗು$_1$ (<ತುಱುಕು$_1$) + ಎವೆ]

**ತುಱುಗೆವೆಗಣ್**, ತುಱುಂಗೆವೆಗಣ್, ತುಱುಗೆವೆಗಣ್ಣು (ನಾ). ದಟ್ಟವಾದ ಕೂದಲುಳ್ಳ ರೆಪ್ಪೆಯಿಂದ ಕೂಡಿದ ಕಣ್ಣು : ಭವನಾಂತರಮಂ ನೆಱೆ ಧವಳಿಸುತಿರ್ದಪುದೀ ತುಱುಗೆವೆಗಣ್ಗಳಗು ಪುಂಡರೀಕೇಕ್ಷಣನಾ (ಕಾದಂಪೂ. ೪೫೦): ಪುಂಡರೀಕದಳಧವಳವಿಲೋಚನೆಯರಾ . . . ತಮ್ಮ ನಿಡಿಯ ಬಿಳಿಯ ತುಱುಗೆವೆಗಣ್ಗಳಿಂ ಕಣ್ಬೇಟಗೊಳಿಸಿಯುಂ (ಸುಕುಮಾ. ೧೦-೦೨೭ವ) ; ನಳಿನದೆಸಱೊಳ್ ಮುಸುಱಿ ಮುತ್ತಿದ ಮತ್ತಮಧುಕರಕುಳಮಂ ಕೆಲಕ್ಕೆ ತೊಲಗಿಸುವಂತೆ ತಳ್ತ ತುಱುಗೆವೆಗಣ್ಗಳಿಂ ತೆಗೆದು (ಲೀಲಾವ. ೩-೬೫): ಕಾವನ ತೋಳಂ ಬಿಡದಪ್ಪಿದುದುಮದಾಕೆಯ ಕೊಡಕೆವರಂ ನಿಮಿರ್ದು ಪೊಳೆವ ತುಱುಗೆವೆಗಣ್ಗಳ್ (ಕಬ್ಬಿಗಕಾ. ೩೨೮). **ತುಱುಗೆವೆಗಣ್** : ನಿಡಿಯ ಬಳ್ಳಿಯ ತುಱುಗೆವೆಗಣ್ಗಳಂ ಕಿನ್ನೆಯನೆಯ್ದಿದ ಪುರ್ವುಗಳಂ . . . ಪಡೆದ ಕಾಮದೇವತ್ವಮನವಗಯಿಸುವಂತಿರ್ದ ರೂಪಿನ ಬಾಲಕನಂ . . . ಎತ್ತಿ ಕೊಂಡಿಂದ್ರುನ ದೇವಿ ಬಂದಳ್ (ಶಾಂತಿಪು. ೧೦-೯); ತುಱುಗೆವೆಗಣ್ಣ ಕಾಂತಿ ಮರಗಟ್ಟಲೆಯಂ ಬೆರಟಟ್ಟೆ (ಜಗವಿ. ೧೭-೨೫): ತುಱುಗೆವೆಗ [ಪಾಠಾಂ. ನಿಡಿಯಲರ್ಗ]ಣ್ಣೊಣರು . . . ಕಡುಚೆಲ್ವಂ ನೆನೆಯಿಸುತೊಪ್ಪಿದುವು (ಜಯುಕಾ. ೨-೪೩). **ತುಱುಗೆವೆಗಣ್ಣು** : ತುಱುಗೆವೆಗಣ್ಣ ಕಟಾಕ್ಷ ಕಂಬಲ್ಗಳ ಮಿಱುಗುವ ತೊಂಡೆವಣ್ದುಟಿಯ ಬೆಱಗಿಂದೆ ಮಾತನಾಡಿದಳು (ಸೋಮಚ. ೧೭-೨೪) ; ತುಱುಗೆವೆಗಣ್ಣ ನೋಟಮೆಸೆದುದು (ಕಬಪು. ೪-೧೧)

[ತುಱುಗೆವೆ+ಕಣ್]

**ತುಱುಗೆವೆ** 'ತುಱುಗೆವೆ' ನೋ.

**ತುಱುಗೆವೆಗಣ್** 'ತುಱುಗೆವೆಗಣ್' ನೋ.

**ತುಱುಗೆವೆಗಣ್ಣು** 'ತುಱುಗೆವೆಂಗಣ್' ನೋ.

**ತುಱುಗೊಳ್$_1$**, ತೊಱುಗೊಳ್$_1$ (ಕ್ರಿ). ದನಕರುಗಳನ್ನು ಅಪಹರಿಸು; ಹಸುಗಳನ್ನು ಹಿಡಿ; ಗೋಗ್ರಹಣಮಾಡು; ದನಗಳನ್ನು ಅಪಹರಿಸಲು ಯುದ್ಧಮಾಡು : ನೆಲ್ಲಿಗೆಱೆಯ ತುಱುಗೊಣ್ಡಲ್ಲಿ ತುಱುವನಿಕ್ಕಿಸಿ ರೊಸಗರಲಯನ್ ಪೊಸವೆಣ್ಣ ಸಗವೇಱಿದನ್ (ಎಕ. IX (೬), ಹೊಸಕೋ. ೯-೩; 875); ಚಿಃ ತುಱುಗೊಳೆ ಬಾಱೆವೆಂದು ತುಱುಗೋ ಳೊಳೆ ಸಾವುದು ಸೈಪಿದೆಂದು ಪಾಯ್ದುಱುಕೆಯ ಗೋವರಣ್ಮ ಬರೆ (ಪಂಪಭಾ. ೮-೯೫): ಮಾರವ್ವರ ಪರಿವಂಪರಿದಿಱಿಯಲಾಱದೆ ಕಳ್ದು

ತುಱುಗೊಣ್ಡು (ಎಕ. IV. ಹುಣಸೂ. ೧೧-೬; 1020?): ಸುಶರ್ಮನೃಪಂ ವೀತಾಂಕುಶಂ ತುಱುಗೊಳಲ್ ಪೊಱಮಟ್ಟಂ (ಶಾಭ್ಯಾ.ಪ. ೧೩೨); ಪಱಿಯೆ ಧರೆ ತುಱುಗೊಳಲ್ ಬಂದಱಿವುದೆ ರಣದೊಳ್ ಕನಿಷ್ಠವಿದೆ ಚಿ ಕಷ್ಟಂ (ನೇಮಿಪು. ೧೦-೦೫೭). **ತೊಱುಗೊಳ್₁** : ಸೋವಣವೃೋಂಕ್ರಮವಿ ಕುಣಮ್ಮನ್ನು ತೊಱುಗೊಳ್ಳಲ್ಲಿ ಪಲರುಮನೋಡಿಸಿ (ಎಕ. X. ಕೋಲಾರ. ೨೩೨-೩; ಸು. 750). [ತುಱು + ಕೊಳ್₁]

**ತುಱುಗೊಳ್₂** 'ತಂಜುಗೋಳ್' ನೋ.

**ತುಱುಗೋಳ್**, ತುರಂಗೋಳಂ, ತಂಜುಂಗೊಳ್, ತಂಜುಗೊಳ್₂, ತೊಱುಕೊಲ್, ತೊಱುಕೊಳ, ತೊಱುಕ್ಕೊಳ್, ತೊಱುಗೊಳ್₂, ತೊಱುಂಗೊಳ, ತೊಱುಗೊಳ್ಳ, ತೊಱುಗೋಳ್ (ನಾ). ಶತ್ರುಗಳು ದನಗಳನ್ನು ಹಿಡಿದುಕೊಂಡಾಗ ಅವುಗಳ ರಕ್ಷಣಾರ್ಥವಾಗಿ ಮಾಡುವ ಕದನ; ಗೋಗ್ರಹಣಕಾಲದಲ್ಲಿ ಅವುಗಳನ್ನು ರಕ್ಷಿಸಲು ಮಾಡುವ ಯುದ್ಧ : ತುಱುಗೋಳೊಳ್ ಸಾವುದು ಸ್ಪೆಪಿದೆಂದು ಪಾಯ್ದುಱಿಕೆಯ ಗೋವರಣ್ಣ ಬರೆ (ಪಂಪಭಾ. ೮-೯೫); ತುಱುಗೋಳೊಳ್ ಸತ್ತೊಡೆ ಪುಣ್ಯಮಕ್ಕು (ಜಾವುಂಪು. ೨೬೫). 'ತುಱುವರಿಗಾಳಗ' ಪರಾ. **ತುರುಗೋಳು** : ಈ ವೀರಗಲ್ಲಿನಲ್ಲಿ . . . ಕನ್ನಯನು ಕಾತಿಕವಳ್ಳಿಯ ತುರುಗೋಳಿನಲ್ಲಿ ಕಾದಿ ಸತ್ತನೆಂದು ಹೇಳಿದೆ (ಶಾಸಮಂ. ೫೧೨ ಸೂಕಪ). **ತುಱುಂಗೊಳ್** : ಸಿನ್ದಮ್ಮನಾಚ ಬವರದೊಳು ಕೆಲ್ಲಂಗೆಱೆಯ ತುಱುಂಗೊಳೊಳೆ ××× ಸತ್ತ (ಎಕ. V. ಅರಸೀ. ೯೯-೭ : ಸು. 900). **ತುಱುಗೊಳ್₂** : ಗಂಗವಾಹಾನಾಗರಾ ಮಗನ್ವಾದೆಯನ್ನಿರಟ್ಟ ತುಱು ಗೊಳೊಳ್ ಕಾದಿ ತುಱುವನಿಕ್ಕಿಸಿ ಸುರಲೋಕದ ಭೋಗಿ ಆದನ್ (ಎಕ. IX. ಹೊಸಕೋ. ೮೪-೩ : 720) ; ಕುಗ್ಗಲ್ಲಗಾವುಣ್ಡ ತಮುತ್ತಿದ್ಬೊರ್ ತುಱುಗೊಳೋಲ್ವಾದಿ ಸತ್ತರ್ (ಎಕ. IV. ಹುಣಸೂ. ೧೨-೮ : ಸು. 920); ಕಾಡಿಗಾವುಣ್ಡ ತನ್ನೂರ ತುಱುಗೊಳೊಳ್ ತುಱುವ × ಕ್ಕಿಸಿ ಕಾದಿ ಸತ್ತ (ಎಕ. IV. ಗುಂಡ್ಲುಪೇ. ೦೪-೪ : 996 ?). **ತೊಱುಕೊಲ್** : ತೊಱು ಕೊಲ್ವಳಿ ಪೆರಿಯವನ್ ಕೋಲ್ವಲಾಂ[ತು] ಭಿಲ್ದನ್ (ಸೌಇಇ. IX-i. ೨-೮ : 9ನೆಯ ಶತ). **ತೊಱುಕೊಳ** : ಸ್ವಸ್ತಿಶ್ರೀ ಕೊನ್ದಗೊರೆ ಉಕ ×× ತೊಱು ಕೊಳ × ಸತ್ತೋನ್ (ಎಕ. X. ಚಿಂತಾಮ. ೧೦೫-೩; ?). **ತೊಱುಕ್ಕೊಳ್** : ತೊಱುಕ್ಕೊಳುಳ್ಪಟಾನ್ (ಎಕ. X(8). ಮಾಲೂರು. ೧೧೯-೧; 8ನೆಯ ಶತ). **ತೊಱುಗೊಳ್₂** : ಎಱೆಯಮ್ಮಂ[ನಿ]ವುದಿ ತೊಱುಗೊಳೊಳ್ಬಾದಿ ಸತ್ತೋನ್ (ಸೌಇಇ. XI-i. ೧೯-೩ : 983) ; ಮದಲೂರ ಕುಪ್ಪ ನ್ನೊಱುಗೊಳೊಳೆಱಿದು ಸತ್ತ ಸಗ್ಗಿಯಾದನ್ (ಎಕ. X. ಕೋಲಾರ. ೦೪೨-೨ ; 1000 ?). **ತೊಱುಂಗೊಳ** : ××× ಮೇರು ತೊಱುಗೊಳ ಕಟ್ಟಿತ್ತೊಡೆ ವೆಚ್ಚಿ ಕಲ್ನಾಡೊಂದು ಕೊಟ್ಟಂ (ಸೌಇಇ. IX-ii. ೬೦೭-೧; ಸು. 8ನೆಯ ಶತ). **ತೊಱುಗೊಳ್ಳ** : ಸಿಂಗಪ್ಪ ದುಗ್ಗಯ್ಯ ಸಾನ್ತನೊರ ತೊಱು ಗೊಳ್ಳ ಧಾಳಿ ಕಳ್ಳರೊಳ್ಳೆಱಿದು ಅಟ್ಟು ಸತ್ತಂ (ಎಕ. IX (8). ಶಾನಕಾ. ೪೮-೦೩ ; 900). **ತೊಱುಗೋಳ್** : ಶ್ರೀ ಹೆಮ್ಮಯನ ಮಗ ಸಾನ್ತಂ ತೊಱುಗೋಳೊ ಕಾದಿ ಸತ್ತು ಸಗ್ಗಿಯದಂ (ಎಕ. IX (8). ಹೊಸಕೋ. ೦೯೫-೪ ; ಸು. 1000). [ತುಱು + ಕೋಳ್]

**ತುಱುಘಟಿ** (ನಾ). ಒಂದು ಪ್ರದೇಶದ ಹೆಸರು (?) : ಆ ದೇವರ ಅಂಗರಂಗಭೋಗಕ್ಕಂ...ನೈವೇದ್ಯಕ್ಕಂ ತಂಪು ಪ್ರವಿಷ್ಟದ ತುಱುಘಟಿಯ ಮೂಡಣ ಬಂಚಿ ಯಿಶಾನ್ಯದಲ್ಲಿ ... ಧಾರಾಪೂರ್ಬ್ಬಕಮ್ಮಾಡಿಕೊಟ್ಟ ಮತ್ತರಾಱು (ಸೌಇಇ. IX-i. ೨೯೩-೧೮ ; 1172). [?]

**ತುಱುಚ₁** 'ತುಱುಚಿ' ನೋ.

**ತುಱುಚ₂** (ನಾ). ತುರಿಯೆಂಬ ಚರ್ಮರೋಗವುಳ್ಳವನು : ಸಾವಂ ಬಯಸುವ ತೊನ್ನರುಂ ತುಱುಚರುಂ ಮಹಾರೋಗಾವಿಳರುಂ ಬಂದಾ ಮರನ ಫಲಮಂ ಮೆಲೆ ನಿರೋಗಿಗಳಾಗಿ (ಧರ್ಮಾಪ. ೭-೪ ಪ).

[ತುಱುಚಿ + -ಅ₇]

**ತುಱುಚಿ** 'ತುಱುಚಿ' ನೋ.

**ತುಱುಚಿ**, ಚುಱುಚಿ, ತುರಚಿ, ತುರಚೆ, ತುರಿಚೆ, ತುರಂಚ, ತುರುಚಿ, ತುರಂಚಿ, ತುಱಿಚ, ತುಱಿಚೆ, ತುಱುಚ₁, ತುಱುಂಚಿ, ತುಱುಜೆ (ನಾ). ೧. ಶರೀರಕ್ಕೆ ತಗುಲಿದರೆ ನವೆಯುಂಟುಮಾಡುವ ಒಂದು ಬಗೆಯ ಗಿಡ; ತುರಿಕೆಗಿಡ ; ಉರಿಸಣಿಕೆ (ಕರಾ) : "ದುಸ್ಪರ್ಶಮೆನೆ ತುಱುಚಿಯಕ್ಕುಂ" (ಮಂಗರಾ. ೪೪-೪೪) ; ಹೆಗ್ಗುಱುಟಗೆಯಂ ತುಱುಚಿಯ ನೊಗ್ಗಿರೆ ತಾಂ ಕೈಪಸೋರೆಯು ಬೇರ್ಗಳೊಳೆಲ್ಲಂತಗ್ಗಳ ಮೂರ್ಸೊಟ್ಟ ರೆಗಂ ತಗ್ಗಿಲ್ಲದೆ ರಚಿಸಿ (ಜಮುಚ. ೦೭-೦೯೫); ವನಜವನದಲಿ ತುಱುಚಿ ಕಬ್ಬಿನ ಬನದಿ ಕಡಸಿಗೆ ಚೂತವಂಯ ಕಾನನದಿ ಬೊಬ್ಬುಲಿ ಭೀಮಸೇನನ ಇರವು ತಮ್ಮೊಳಗೆ (ಕುವ್ಯಾಭ. ೮-೫) : ತೊಳಟಿದೋಂಟದೊಳ್ ತುಱುಚಿ ಪುಟ್ಟುವಂತಿರೆ (ರಾಜಾಕ್ಕ. ೨೭-೭). **ಚುಱುಚಿ** : ೧. ಹಾಳೂರ ಚುಱುಚಿ ನಸುಗುನ್ನಿ ತಿಗುಳರ ಗಾಳಿ ಬೇಡೆಂದ (ಸರ್ವಜ್ಞ. ೦೩೭೫). **ತುರಚಿ** : ೧. 'ತುರಚಿಬಳ್ಳಿ' ಪರಾ. **ತುರಚೆ** : ೧. ತುರಚೆಯ ಜಾತಿಯ ಗಿಡ (Archangel. ಇಂಕನಿ). **ತುರಿಚೆ** : ೧. ಧರಣಿಪತಿಯುಹ ನಳನ ಸಭೆ ಯಲಿ ತುರಿಚೆ ಮಕ್ಕಣದಂತೆ ದುರ್ವಾರ್ತಿ ದುರುಳ ಪುಷ್ಕರನೆಂಬ ದಾಯಿಗ ... ಇರುತಿಹಂ (ಅಂಬಿಕಾ. ೩-೫೯) ; ಅವನ ಸಹವಾಸ ಅಂದರೆ ತುರಿಚೆ ಮುಟ್ಟಿದ ಹಾಗೆ (ರೂಢಿ). **ತುರುಚ** : ೧. ತುರುಚನ ಬೇರು, ನೀಲಿಬೇರು ಇವು ಪ್ರತ್ಯೇಕ ಹತ್ತು ಹಲಗಳನ್ನಿಡಿದು (ಸಕಪ್ಪ. ೭೦). **ತುರುಚಿ** : ೧. ಬಂಜರು ನೆಲದಲ್ಲಿ ಯಥೇಚ್ಛವಾಗಿ ಬೆಳೆಯುವ ಕುಟುಕುಗೂದಲು ಗಳಿಂದ ಕೂಡಿದ, ಕೆಲವು ಜಾತಿಯ ತುರುಚಿಯ, ಚುರುಚುರುಕನ, –ಗಿಡ (Nettle. ಇಂಕನಿ) ; ತೋಟಕ್ಕೆ ಕರೆದುಕೊಂಡು ಹೋಗುವುದು ಅಲ್ಲಿ ಬೇಕೆಂದು ನೆಪ ತೆಗೆದು ಜಗಳವಾಡಿ ತುರುಚಿ ಮುಟ್ಟಿಸುವುದು (ಕಳಹು. ೦೦). **ತುರುಚೆ** : ೧. ಮಳೆಗಾಲದಲ್ಲಿ ಆ ಪ್ರದೇಶ ಜಿಗಣೆ, ಚೆತ್ತದ ಬೀಳಲು, ತುರುಚೆಗಿಡಗಳಿಂದ ಪ್ರವೇಶಕ್ಕೆ ಅಸಾಧ್ಯವಾಗುತ್ತಿತ್ತು (ಕುಡಿಕೊ. ೧೦೪); ಆ ನೋಟದಿಂದಾಗಿ ತುರುಚೆಯನ್ನೊರಸಿದಂತಾಯಿತು (ಸಾವೀಊ. ೦೯೭) ; ರಾಣಿ...ಅಸೂಯೆ ಸಂಶಯವೆಂಬ ತುರುಚೆಯ ಗಿಡಕ್ಕೆ ನೀರೆರೆದು ಪೋಷಿಸಿರಬೇಕು (ಹಾಹುತ್ತ. ೦೯). **ತುಱಿಚ** : ೧. ತಳವಲು ತುಂಬೆ ನೆಲ್ಲಿ ತುಱಿಚ ಕಿಱುನೆಲ್ಲಿ (ಐಮುದ. ೫-೮೯). **ತುಱಿಚೆ** : ೧. "ಮರ್ಕಟಯೆನಿಕು ಕಪಿಕಚ್ಛು ದುರಾಲಭೆ ತುಱಿಚೆ" (ಪಸುಕೋ. ೬೬-೨೦). ೨. ಒಂದು ಬಗೆಯ ಚರ್ಮರೋಗ ; ತುರಿ ರೋಗ : ಹೞುವಾಯ ತುಱಿ[ಪಾಠಾಂ. ಱು]ಚೆಗಳ ಬತ್ತಲೆಯ ಬಾಳ್ದಿಣಂ ಗಳು ಸುತ್ತ ಮುತ್ತಿರಲು (ಪಾಗೀರ. ದೀ. ೨೫೪-೭೬). **ತುಱುಚ₁** : ೧. "ಮರ್ಕಟಿ –ಎಕ್ಕೆ, ತುಱುಚ, ಹಿಪ್ಪಲಿ, ಕೋಡಗ" (೭ಷಧಿ. ೦೦೫); ಮೆಣಸು ... ಆಷಾಢಿ, ಸಹದೇವಿ, ತುಱುಚ, ನೀಲಿ, ರುದ್ರಜಡೆ, ಇವ ಸಮಾನಂ ಗೊಂಡು ಸಹದೇವಿರಸದಲ್ಲಿ ಲೇಪವಂ ಮಾಡಿದುದು ಜ್ವರ ಹರ (ವಿಶ್ವವಿ. ೦೫೩) : ಹಂಬಿನ ತುಱುಚನಾ ಬೇರು ಸಸಿಗುಪ್ಪೆ . . . ಹತ್ತಿ ಹರಳ ರಸವಂ ಪೂರೈಸಿ ಕಾಸಿ (ಸೂಪಶಾ. ೨-೦೯) ; ತುಱುಚನ ಬೇರು, ವರ್ಪಾಟಕ, ಅಮರ ದವಳ್ಳಿ, ಶುಂಠಿ ಇವಿಷ್ಟನು ... ಕಷಾಯವ ಕಾಸಿ (ವೈದ್ಯಶಾ. I. ೩೬೩) : ತುಱುಚನ ಗಿಡು ಸೋಂಕಿದಂತೆ ಬಿಱುಬುಗೊಂಬಳು ಬೆದಱುವಳು (ಹರಿಬ. ೭-೨೬). **ತುಱುಚಿ** : ೧. "ದುರಾಲಭಾ – ತುಱುಚಿ" (ಶಾಹಟೀ. ೨-೨-೮೮) ; ಹಸಿದಡುಣಬಹುದೇ ನಸುಗುನ್ನಿ ತುಱುಚಿ [ಪಾಠಾಂ. ಱುಚಿ] ಯನು (ಅವಚಂ. ೭೦-೩೦೫); ಹಿತ್ತಲ ತುಱುಚಿಯ ತಂದು ಪನ್ನೀರನೆಱೆದರೆ ಒತ್ತಿದವರ ಹಱಿಕೊಂಡು ತಿಂಬೋದು ಬಿಡಬಲ್ಲುದೆ (ಪುರಂದ. ೫-೫೬-೩). **ತುಱುಜೆ** : ೧. "ಕಚ್ಛಭಃ –ತು(ಱು)ರುಜೆ" (೭ಷಧಿ. ೨೦); ಕಬ್ಬುನದ

ಬಡಿಗೆಗಳ ನಸುಗುನ್ನಿದುಱುಜೆ [ಪಾಠಾಂ. ತುಱುಚೆ]ಯ ಪುಡಿಯ ತೀವಿದ ತಿತ್ತಿಗಳ ... ಹರಹಿನಲೆಸೆದುದಾ ದುರ್ಗ (ತೊರಠಾ. ೬-೭-೧೧).

[<ತುಱು./ತೆಲು. ತ:ರುಜೆ = ಮಂಗರವಳ್ಳಿ]

**ತುಱುಜೆ** 'ತುಱುಚೆ' ನೋ.

**ತುಱುತುಱು** (ನಾ). ಒಂದು ಅನುಕರಣ ಶಬ್ದ. 'ತುಱುತುಱುತಿನ್' ಪರಾ.

**ತುಱುತುಱುತಿನ್**, ದುಱುದುಱುದಿನ್ (ಕ್ರಿ). ಬಹಳ ನವೆಯುಂಟಾಗು,–ಕಡಿತವುಂಟಾಗು ; "ಚುರುಚುರುಂ ಉರಿ" (ಪ್ರಥ.) : ಏಱುವ ದಾಡೆಯಿಂದಣೆದು ಪೆರ್ದರಿಯಂ ಕರದಿಂದಮೆತ್ತುತಂ ತುಱುತುಱುತಿಂಬ ಕಂದರವುನೊತ್ತರಗೊಂಡು ಮ ಹಾ ಮ ಹೀ ಜ ದೊ ಳ್ ತ ಱ ತ ಱ ನಾಗಿ ಮಾಱಿಗೊರಸ:ತುಂ ... ಬರುತಿರ್ದುದು ಭೀ ಕ ರ ನೊಂ ದು ಸೂ ಕ ರಂ (ಕಾವ್ಯಸಾ. ೧೧೧೨). **ದುಱುದುಱುದಿನ್** : ಉದಯಿಸುಗುಂ ಶೂಲಂ ವಾತದಿನುಂ ಪಿತ್ತದೇಟಗ್ಗಿಯಿಂ ದುಱುದುಱುದಿಂಬುದು ಕಫದಿನಾ ತ್ರಿದೋಷದ ಪುದುವಿಂದಾಮಿಶ್ರಮಾಗಿ ತೋ ಕ್ಕ ರ್ಣ೦ ತ ವ್ಮೊ ಳ್ (ರೋಗೋಪ. ೯-೬). [ತುಱುತುಱು + ತಿನ್]

**ತುಱುನೆಲೆ** (ನಾ). ದನಕರುಗಳನ್ನು ಕಟ್ಟುವ ಅಥವಾ ಕೂಡುವ ಸ್ಥಳ ; ಕೊಟ್ಟಿಗೆ : ಮಾನವಮದನನುಂ ಮಕರಂದನುಮಾ ತುಱುಪಟ್ಟಿಯ ತುಱುನೆಲೆಯೊಳ್ ನಿಂದು ನೋಡುತ್ತುಮಿರೆ (ಲೀಲಾವ. ೩-೧೧೧).

[ತುಱು + ನೆಲೆ]

**ತುಱುಪಟ್ಟಿ**, ತುರಂಪಟ್ಟಿ, ತುರುಹಟ್ಟಿ, ತುಱುವಟ್ಟಿ, ತುಱುಹಟ್ಟಿ (ನಾ). ೧. ದನಕರುಗಳ ಹಟ್ಟಿ ; ದನಕರುಗಳನ್ನು ಕಟ್ಟಿಹಾಕುವ ಸ್ಥಳ ; ಕೊಟ್ಟಿಗೆ ; ಗೋಸ್ಥಾನ : "ಗೋಷ್ಠಂ, ಗೋಸ್ಥಾನಕಂ, ಈ ೨ ತುಱುಪಟ್ಟಿಯ ಹೆಸರು" (ನಾಚಿರಾ. ೧೦೩) ; ಗೋಟ್ಟೀ–ತುಱುಪಟ್ಟಿ [ಪಾಠಾಂ. ಳ್ಳಿ] ಯೊಳ್ (ವಡ್ಡಾರಾ. ೦೮೦-೫) ; ತುಱುಗಿದ ತುರಗಗಳೆಂದೆಂಬ ಪಶುಗಳ ಮುಱಿದಿಕ್ಕಿ ರಣಮೆಂದೆಂಬ ತುಱುಪಟ್ಟಿ[ಪಾಠಾಂ. ಟ್ಟಿ]ಯೊಳು ರಾಮನೆಂದೆಂಬ ಪೆರ್ಬುಲಿ ಬಿಱುವರಿದುದು (ಕುಠಾಸಾಂ. ೨೦-೬೫). ೨. ಗೊಲ್ಲರು ವಾಸಿಸುವ ಹಳ್ಳಿ ; ಗೊಲ್ಲರ ದೊಡ್ಡಿ : ತುಱುಗಾರ್ತಿಯಂ ಕರೆದು ಪುತ್ರಲಾಭಮಾದುದೆಂದು ಮಗನಂ ಕೊಟ್ಟು ತುಱುಪಟ್ಟಿಯೊಳೊ ಸಗೆಯಂ ಮಾಡಿ (ಧರ್ಮಾಮೃ. ೧೧-೦೫೦) ; ಅಲ್ಲಿಗೆ ಸಮೀಪದೊಳೊಂದು ತುಱುಪಟ್ಟಿಗೆಲ್ಲಂ ಪ್ರಧಾನ ನಂದಗೋವನೆಂಬಂ (ಬಂಹರಿ. ೬-೫೭) ; ಗಂಗಾ ತೀರದ ತುಱುಪಟ್ಟಿ[ಟ್ಟಿ]ಯೊಳಗೆ ವೃಷಭಭಂಗಳಾಗಿ ಸಂಜನಿಸಿ (ನೇಮಿಸಂ. ೬-೨೨) ; ಸಂತಠಾಶ್ರಮ ತಪೋವನಗಳು ತುಱುಪಟ್ಟಿ ಮುಂತಾದುವು ಘೋಷಾಕರವು (ಶಾಂತೀಶ. ೮-೬೨); ಸಲೆ ಪೆಂಪೂಗೆದ ಡಂಗುರ ಸಾಱಿಸಲು ತುಱುಪಟ್ಟಿಯಲಿ (ಸಾಳ್ವಭಾ. ೨೨-೨೫). ೩. (ಅಲಂ) ಹಳ್ಳಿಯ ಜನ : ಅನ್ನೆಗಮಾ ತುಱುಪಟ್ಟಿಯುಮಲ್ಲಿಂದೆರ್ದು ನಾಡೆ ಗೆಂಟುಪೋದತ್ತು (ವಡ್ಡಾರಾ. ೧೦೩-೨೩). **ತುರುಪಟ್ಟಿ** : ೧. ಅಮೃತಶಿಲೆಯ ಗೋಶಾಲೆ ತಂತುಕಾರಸಹಸ್ರಜಾಲವ್ಯರೂಪ್ಪದಿಂ . . . ಖಿನ್ನವಿದೆ ಪಾಳೂರ ತುರು ಪಟ್ಟಿಯೋಲ್ (ಶ್ರೀರಾಮಾ. ೮೫೦-೧೧). **ತುರುಹಟ್ಟಿ**. ೧. ಒಮ್ಮೆ ನಮ್ಮ ತುರುಹಟ್ಟಿಗೆ ಹುಲಿ ನುಗ್ಗಿತ್ತು (ರೂಢಿ). **ತುಱುವಟ್ಟಿ** : ೧. ಸುರಧೇನುಸಂಚಯಂ ಸರ್ಪಭೂಷಣನ ತುಱುವಟ್ಟಿಯನೆ ಚೆನ್ನಾದುದರಸು ತನಮಂದೀಶನ (ಚಬಪು. ೨೯-೯೨) ; ತುಱುವಟ್ಟಿಯಿಂದ ತೊಪ್ಪಿಂದ ತಣ್ಣೆಳಲಿಂದ ಕೆಱೆ ಕಟ್ಟೆಯಿಂದ (ನಂದಿಮಾ. ೦೫-೦೬). **ತುಱುಹಟ್ಟಿ** : ೧. ಗೋಷ್ಠಾಧ್ಯಕ್ಷ, ಗೋವಿಂದ–ತುಱುಹಟ್ಟಿಯ ಅದ್ಧಿಕದವನು(ನಾಚಿರಾ.೩). ೨. ನಾಡೊಳಗೆ ತುಱುಹಟ್ಟಿಯಲಿ ಹೊಲನಾಡಿ ಹಟ್ಟಿದ ಗೋಕದಂಬವ ನೋಡುವುದು ನೆವ (ಕುಮ್ಯಾ.ಅ. ೦೭-೨೦). 'ಕಱುಹಟ್ಟಿ' ಪರಾ.

[ತುಱು + ಪಟ್ಟಿ$_1$]

**ತುಱುಪರಿ** 'ತುಱುವರಿ' ನೋ.

**ತುಱುಪರಿಗ** (ನಾ). = ತುಱುಗೋಳ್(?) : ಅಂತಾತನನುಜ ದೇಕರಸ ತುಱುಪರಿಗವೆಂಬ ಪುಯ್ಯಲ ನೆಱೆಯಾಲಿಸಿ ಕೇಳ್ದು (ಎಕ. XII, ಚಿಕ್ಕನಾ. ೧೫-೨೬ ; 1216 ?). [P ಇದು 'ತುಱುಪರಿಗಂ' ಎಂಬುದರ ಅಪಲಿಖಿತ ವಿರಬಹುದು]

**ತುಱುಪಳ್ಳಿ** 'ತುಱುವಳ್ಳಿ' ನೋ.

**ತುಱುಪಳ್ಳಿಕಾಱ** (ನಾ). ಗೊಲ್ಲರ ಹಳ್ಳಿಯವನು ; ಗೊಲ್ಲ; ಗೋವಳಿಗ : ಧರಣಿಪಾಲರ ಮಧ್ಯದಲಿ ಭಾಸ್ಕರನು ಗಡ ತುಱುಪಳ್ಳಿಕಾಱರ ಪುರದ ಭಾಸ್ಕರನೀತನಲ್ಲಾ (ಕುಮ್ಯಾಸ. ೮-೧೬).

[ತುಱುಪಳ್ಳಿ (<ತುಱುವಳ್ಳಿ) + – ಕಾಱ]

**ತುಱುಬಿಕ್ಕು**, ತುರುಬಿಕ್ಕು (ಕ್ರಿ). ತುರುಬನ್ನು ಹಾಕು ; ಕೂದಲನ್ನು ಗಂಟುಕಟ್ಟು : ತುಂಬಿಗುರುಳ ತುಱುಬಿಕ್ಕಿ ದಾದಿಯರು ನಿತಂಬಿನಿ ಯೊಡನೆ ಪೇಳಿದರು (ಪೋಹಚ. ೯-೧೬). **ತುರುಬಿಕ್ಕು** : ಉಳ್ಳಲರ ಹೂವೀಡ ತುರುಬಿಕ್ಕಿ ಮುಡಿಸಿ (ಕಾಲೂರ. ೦೯೩-೯೦೪).

[ತುಱುಬು$_2$ (<ತುಱುಂಬು$_2$) + ಇಕ್ಕು]

**ತುಱುಬು$_1$** 'ತುಱುಂಬು$_1$' ನೋ.

**ತುಱುಬು$_2$** 'ತುಱುಂಬು$_2$' ನೋ.

**ತುಱುಮಂದೆ**, ತುರುಮಂದೆ (ನಾ). ೧. ದನಗಳ ಹಿಂಡು, – ಗುಂಪು : "ತುಱುಮುದೆಯಕ್ಕೂತಿ ಗೋವೃಷಂ" (ಮಂಗರಾ. ೫೭-೧೧) ; "ತುಱು ವಿಂಡು ತುಱುಮಂದೆಯುಕ್ಕು ಗೋಸಮುದಾಯವು" (ಕಬ್ಬಮಂ. ೩೪) : ನಾನಾರೆಂಬುದ ತಾನಱಿತು ತಿಳಿದಲ್ಲಿ ತುಱುಮಂದೆಯೊಳಗಾಯಿತ್ತು (ತುಱುಗಾ. ೪-೬) ; ಈಗಳೊ ನೀನ್, ನಿನ್ನಯ್ಯನವೆ ತುಱುಮಂದೆಗಳ್ ವೇಣ್ ತುಱುಪಟ್ಟಿಗಳ ಬಟಿಯ ... ಪುಲ್ಗಾವಲೆಡೆಗೊರ್ವಳೀ ಚೆಚ್ಚರಂ ಬೋಗು (ಬದ್ಧಪ್ರ. ೩೪-೭೪೨). ೨. ಗೋವುಗಳಂ ಇರುವ ನೆಲೆ ; ಕೊಟ್ಟಿಗೆ ; ಗೋಸ್ಥಾನ ; ಗೋಕುಲ : (ಕ). **ತುರುಮಂದೆ** : ೧. "ತುರುವಿಂಡೆನಲು ತುರುಮಂದೆಯೆನಲು ಗೋಸಮುದಾಯವುಕ್ಕು" (ಕಕರ. ೪೭) ; ತುರುಮಂದೆಯಲ್ಲಿ ಇರುವ ಪದ್ಧತಿಯಾಗಿದ್ದುದರಿಂದ (ನಮ್ಮೂರ. ೩೬). [ತುಱು + ಮಂದೆ]

**ತುಱುವಿಂಡಿ**, ತರಿವಿಂಡಿ, ತಱಿವಿಂಡಿ, ತಱುವಿಂಡಿ, ತುರುವಿಂಡಿ (ನಾ). ೧. ಹೊಸಪ್ರಾಯದವಳು ; ಪ್ರೈನೆರೆದ ಹೆಣ್ಣು ; ನವ ಯೌವತಿ : "ತುಱುವಿಂಡಿಯೆನೆ ನೆಱೆದ ಪೆಣ್ಣಕ್ಕು" (ಕಬ್ಬಮಂ. ೭೪) ; ಪಾ ಡಿ ದ ರ್ ತುಱುವಿಂಡಿಯರವ್ಯತೋಪಮಾನಗಾನಮನೊಲವಿಂ (ಉದ್ಭಟ. ೨-೧೦೪). ೨. ಮುಟ್ಟಾದವಳು : "ತುಱುವಿಂಡಿಯಾರಯ್ಯೆ ಪುಷ್ಪವತಿಯಾದವಳ್" (ಕನ್ನಕೈ. ೨೬). **ತರಿವಿಂಡಿ** : ೧. ತರಿವಿಂಡಿ ಯರ್ನಡೆದರೊಡಲಳವಿನಿಂ ಮಲೆಯ ಬೆರವ ಪೊರೆಯಂ ಪೊತ್ತು (ಕಾಲೂರ ೦೨೪-೨೬೧). **ತಱಿವಿಂಡಿ** : ೧. ತುಱುಗಿದಾಭರಣಗಳೋರೆಕೋರೆಯ ತಿದ್ದಿ ತ [ಪಾಠಾಂ. ಸ]ಱಿವಿಂಡಿಯಯನುವಾದಳಾಗ (ಭರತ. ೦೦-೬೬) ; ರಣಕೆ ಪೋಪವಸರದೊಳ್ ತಱಿವಿಂಡಿಯವ್ವೆ ತನ್ನಯ ಮಡದಿಯನಿಕ್ಷುವ:ತಿಯಂ ಕಂಡು (ರಾಮಾಶ್ವ. ೧೫೦-೨೬). ೨. "ತಱಿ[ಪಾಠಾಂ. ತುಱು]ವಿಂಡಿ ಯೆಂದು ಪುಷ್ಪಿತೆಯಾದ ಕಾಂತೆ" (ಕಕಸಾ. ೬೨-೬೭೨) ; "ತಱಿ[ಪಾಠಾಂ. ತುಱು]ವಿಂಡಿಯೆನಲು ಪುಷ್ಪಿತೆ" (ಕವಿಕಂ. ೦೬೪). **ತಱುವಿಂಡಿ** : ೨. "ತಱುವಿಂಡಿ–ರಜಸ್ವಲೆ, ಮುಟ್ಟಾದ ಹೆಂಗಸು, ಪುಷ್ಪಿತೆ" (ಪ್ರಥ.). ತುರುವಿಂಡಿ:೧."ತುರುವಿಂಡಿಯೆಂದೆನಲ್ ಪ್ರಥಮಋತುವಾದ ಕಾಮಿನಿ" (ಕಕರ. ೪೭): "ತಱುವಿಂಡಿ–ತುರುವಿಂಡಿ=ಬೆಳೆದ ಹುಡಿಗೆ, ಹೆಣ್ಣಾದವಳು" (ಜಾನಕೋ. ೩೭). 'ಸಱಿವಿಂಡಿ' ಪರಾ. [<ತುಱುಗು$_1$ + ವಿಂಡಿ]

**ತುಱುಯ್ಯಲು** 'ತುಱುಹಾಯಲು' ನೋ.

**ತುಱುವಟ್ಟಿ** 'ತುಱುಪಟ್ಟಿ' ನೋ.

**ತುಱುವರಿ**, ತುಱುಪರಿ, ತುಱುಹಱ್₂ (ನಾ). = ತುಱುಂಗೋಳ್ : ಮಾಡೆಯ ಹರಿಹರಂಗಳು ಸಂಕರಸೆಟ್ಟಿಯ ಹಳ್ಳಿಯ ತುಱುವರಿಯಲು ಹರಿದು ಸ್ವರ್ಗಸ್ತನಾದನು (ಮ್ಮ.ಆರಿ. ೧೯೪೮, ೪-೪; 1291). **ತುಱುಪರಿ** : ಬೆಳ್ಳತ್ತ್ಥದ ಗಾವುಣ್ಣಂ ತುಱುಪರಿಯಲಿ ಸತ್ತಂ (ಎಕ. XII, ತಿಪಟೂ. ೧೧-೩;ಸು. ೩೩೦); ಗೆನಪಳ್ಳಿಯ ಎಱಿ×ಸಂದಂ ಶಾಸನರ ಭೀಮಂ ಉರಟಿವಿನೊಳ್ ತುಱುಪರಿಯಿ ಮಾಣ್ದಿ...ಸುರಲೋಕಕ್ಕೆ ಸಂದನ್ (ಎಕ. VIII(s), ಸೊರಬ. ೫೭೩-೩; 981). **ತುಱುಹಱ್₂** : ಶ್ರೀಮತ್ಕದಂಬರ ಸಾಸ್ತ್ರ ಯ ದೇವ ಗುಡುವೆಯನಿಱಿದು ತುಱುಹರಿಯ ಕಾದಿಸಿ ತುಱುವಿಂಗಡ್ಡಂ ಬನ್ದು (ಎಕ. VIII, ಸೊರಬ. ೬೦-೧೭; 1032) ; ತುಱುಹರಿಯಲು ಕಾದಿಸಿದವರು ...ಸುರಲೋಕಪ್ರಾಪ್ತವಾದರು (ಎಕ. XVI, ಚಿಕ್ಕನಾ. ೬೦-೩; 1123) ; ಮತ್ತಿಗಟ್ಟದ ಮುದ್ದಗ × × × ಗಜಕ್ಕಗವುಣ್ಣಂಗಂ ಪುಟ್ಟ × ಮಾರಗವುಡ ತುಱುಹರಿಯಲು...ಸುರಲೋಕಪ್ರಾಪ್ತನಾದಂ (ಎಕ. XII, ತಿಪಟೂ. ೩೯-೮: 1291). [ ತುಱು + ಪಱ್₃ ]

**ತುಱುವರಿಗಾಳಗ** (ನಾ). ಹಸುಗಳನ್ನು ಅಪಹರಿಸಿಂವಾಗ ಮಾಡುವ ಯಂದ್ಧ; ಗೋಗ್ರಹಣನಿಮಿತ್ತವಾದ ಕಾಳಗ,-ಯುದ್ಧ : ತುಱುವರಿ [ಪಾಠಾಂ. ಬರಿ, ಹರಿ] ಗಾಳಗದೊಳೊಡೆಮುರಿದು ಗೋವರು ಧೂಳಿಗೋಟೆಯ ಕೊಂಡರಮಾರರ ರಾಜಧಾನಿಗಳ (ಕುಮ್ಮಾವಿ. ೫-೩). 'ತುಱುಗೋಳ್' ಪರಾ. [ ತುಱುವರಿ + ಕಾಳಗ ( <ಕಾಳೆಗ) ]

**ತುಱುವಳ** 'ತುಱುವಾಳ' ನೋ.

**ತುಱುವಳ್ತಿ**, ತುರುವಳ್ತಿ (ನಾ). ಗೊಲ್ಲರ ಹೆಂಗಸು; ಗೊಲ್ಲಿತಿ; ಗೋಪಿ: "ತುಱುವಳ್ತಿಯರು ಗೊಲ್ಲತಿಯರೆನಲ್ ಗೋಪಿಯರು" (ಕಬ್ಬಮಂ. ೩೪). **ತುರುವಳ್ತಿ** : "ತುರುವಳ್ತಿಯೆನೆ ಗೋಪತರುಣಿ" (ಕಕರ. ೯೭). [ ತುಱುವಳ (<ತುಱುವಾಳ) + -ತಿ₁ (< - ಇತ್ತಿ) ]

**ತುಱುವಳ್ಳಿ**, ತುಱುಪಳ್ಳಿ (ನಾ). = ತುಱುಪಟ್ಟಿ ೨ : "ಘೋಷ ತುಱುವಳ್ಳಿಯು ತಾಂ" (ಕವಿಕಂ. ೬೫). **ತುಱುಪಳ್ಳಿ**: ತುಱುಪಳ್ಳಿಯ ಗೋವುಳಿಗರೊಳ್ಪೋಟಗೆಯ್ದು ಱಾಡುವ ಬೀಡಿನೆರ್ಮೆಗಳಂ ಪಿಡಿದಂತರಸ ಗೋಟ್ಟಿಸುವುದುಂ (ಸುಕುಮಾ. ೬-೩೫ ವ) ; ತುಱುಪಳ್ಳಿಗಳ ನೋಡಿ ವನಾಳಿದಪ್ಪದೆ ಬೇಟೆಯಾಡಿ ಸಮಸ್ತದಳಸಹಿತ ... ನೃಪ ಬಿಡಿಸಿದನು ಪಾಳೆಯವ (ಕುಮ್ಮಾಅ. ೬೨೩. ೧೯-೧). [ತುಱು + ಪಳ್ಳಿ₁]

**ತುಱುವಟ್ಟಿ** (ನಾ). (?) : ಕರಪುರನ್ ಬನ್ದು ಬಲ್ಲದಾ ತೊಱುಗೊಳೆ ಊರಾ ತೊಱುವಳ್ಳ ಉವಟನ್ ತುಱುವಟ್ಟಿ ಇದಿರೆ ನಡದಿಱಿದು ಬಿಟ್ಟೋನ್ (ಎಕ. X, ಮುಳಬಾ. ೯೨-೭; ಸು. 780). [ ? ]

**ತುಱುವಾಳ**, ತುರುವಳ, ತುಱುವಳ, ತೊಱುವಳ್ಳ, ತೊಱುವಾಳ (ನಾ). ದನವನ್ನು ಕಾಯುವವನು; ಗೊಲ್ಲ; ಗೋವಳ: "ಗೋಪತಿ ಗೋವಿಯೆನಲು ತುಱುವಾಳನಕ್ಕು" (ಮಂಗರಾ. ೫೬-೧೦). **ತುರುವಳ**: "ತುರುವಳರೆನಲ್ಕೆ ಗೋಪರಂ" (ಕಕರ.೯೭). **ತುಱುವಳ**: "ತುಱುವಳನೆಂದು ಗೋಪಾಳಂ" (ಕಶಸಾ. ೬-೦೨೬) : "ತುಱುವಳರೆನೆ ಗೋಪಾಲರ್" (ಕವಿಕಂ. ೬೫) ; ನರಸಿಂಹಸೆಟ್ಟಿ ಕೊಟ್ಟ ಗ ೨ ತುಱುವಳ ಮಾಳಗತಿ ಕೊಟ್ಟ ಗ ೧ (ಎಕ. VI. ಕಡೂರ್. ೮೭-೧೦; 1239) ; ಪಳ್ಳಿಯ ತುಱುವಳನಂತಿರೆ ಹಸುವ ನೇನೆಂದು ಕಟ್ಟಿದಯ್ (ರಾಮಾಕ್ಕ. ೧೫೩-೨೧). **ತೊಱುವಳ್ಳ** : ಕರಪುರನ್ ಬನ್ದು ಬತದಾ ತೊಱುಗೊಳೆ ಊರಾ ತೊಱುವಳ್ಳ ಉವಟನ್ ತುಱುವಟ್ಟಿ ಇದಿರೆ ನಡದಿಱಿದು ಬಿಟ್ಟೋನ್ (ಎಕ. X, ಮುಳಬಾ. ೯೨-೬; ಸು. 780). **ತೊಱುವಾಳ್ಳ** : ಸೆಬ್ಬೆಣ್ಣಾಡ ಮಾಜನ ಮೂವತ್ತಿರ್ಚ್ಛರ ಅಳ್ವೊಡುಗೆಯನ್ ಕೇಸರಿ ತೊಱುವಾಳ್ಳನಾ ಮಗನ್ ಆಲನ ತೊಱು ಇಕ್ಕಿಸಿ ಬಿಬ್ಬಿದನ್ (ಎಕ. X (s), ಮಾಲೂರು. ೧೫೭-೬ : ೩ನೆಯ ಶತ). [ತುಱು + - ವಾಳ₁]

**ತುಱುವಿಂಡು**, ತುರುವಿಂಡು (ನಾ). ದನಗಳ ಮಂದೆ; ದನಕರುಗಳ ಸಮೂಹ : ವೇವ ತುಱುವಿಂಡಿನೊಳು ದಾರಿಯೊಳು ಸುತ್ತಿ ಸುಳಿದಬಿಸಿದಂ ಸಿದ್ಧರಾಮನಾ ಪರ್ವತಾಗ್ರಣಿ ಮಲ್ಲಿಕಾರ್ಜುನನನು (ಸಿದ್ಧರಾ. ೨-೩೬) ; ತುಱುವಿಂಡನೊತ್ತಟ್ಟನೊಳ್ಪಟ್ಟು ... ಐತಂದರ್ (ಶ್ರೀರಾಮ. ೪-೧೪). **ತುರುವಿಂಡು** : "ತುರುವಿಂಡೆನಲು ತುರುಮಂದೆಯೆನಲು ಗೋಸಮುದಾಯವಕ್ಕು" (ಕಕರ. ೪೭) ; ವರುಣನು ಒಂದು ಹೋರಿಯನ್ನು ಕಳುಹಿಸಿದನು ... ಅದರ ಸಾಧು ಸ್ವಭಾವವನ್ನು ನೋಡಿ ಚಕ್ರವರ್ತಿಯು ಅದನ್ನು ತನ್ನ ತುರುವಿಂಡಿನಲ್ಲಿ ಸೇರಿಸಿಕೊಂಡನು (ಮಹಿಸ. ೯೫). [ತುಱು + ಹಿಂಡು₂]

**ತುಱುವಿಡು** (ಕ್ರಿ). (ಅಪಹಾರವಾದ) ದನಗಳನ್ನು ಮರಳಿಸು,- ಕಾಪಾಡು (?) : ತುಱುಕೊಳೆ ಪಳ್ಳಿ ಅರಕ್ಕಮನ್ ತುಱುವಿಟ್ಟು ವಿಟ್ಟಂ (ಎಕ. X, ಮುಳಬಾ. ೨೬೫-೨ : ಸು. ೮೧೦). [ತುಱು + ಬಿಡು₁]

**ತುಱುವೆ**, ತುರುಬಿ, ತುರುಬೆ, ತುರುಮೆ, ತುರುವೆ₂ (ನಾ). ೧. ಒಂದು ಬಗೆಯ ಹೂವಿನ ಗಿಡ : ತುಱುವೆಯ ಬೇರನಿಕ್ಕಿ ... ಘೃತಮಂ ಬೆರಸಿಟ್ಟು (ಲೋಕೋಪ. ೮-೧೧) ; ಪೊಂಗಳನೆ ಗೋಪಿಯರ್ ಕೆದಱಿದವೋಲ್ ತುಱುವೆಯ ನೆಗ್ಗಿಲ ಪೂಗಳ್ ತುಱುವಟ್ಟಿಯ ಪೊಱಗೆ ತುಱುಗಿ ಕರಮೆಸೆದಿರ್ಕುಂ (ಲೀಲಾವ. ೫-೧೧೫) ; ತುಱುವೆಯ ಕಾಯ್ಗಳುಮಂ ಮಂಗುಱುವಳ್ಳಿಯನಿಡಿದ ಚೂರ್ಣಮಂ ಶರ್ಕರೆಯಿಂ ನೆಱೆ ತಿಂದು ಬಿಸಿಯ ನೀರಂ ಕಿಱುದುಗೊಳಲ್ಕಟಿಯದುಱುಗುಮೇ ಕೆಯ್ಮುಸಕಂ (ಖಮರ. ೦೪-೪೨); ತುಱುವೆಯ ಬೇರು ಮಾದಲದ ಕಡ್ಡಿಗಳನು ಇಟ್ಟು ತೊಳಸಿದೊಡೆ (ಸೂಪಶಾ. ೨-೩). ತುಱುವೆ :— ಈ ಬೇರಂ ನರಮೂತ್ರದಿಂದ ಅರೆದು ತೆಗೆದುಕೊಳ್ಳೆ ಬಾಣಂತಿಸನ್ನಿ ಹರ (ವಿಶ್ವವಿ. ೪). ೨. ಒಂದು ಬಗೆಯ ಹಕ್ಕಿ : ಲಾವುಗೆ ಹರಡೆ ಗೌಜು ಟಿಟ್ಟಿಭ ಕುಕಿಲ ತುಱುವೆ ಕಳ[ ಪಾಠಾಂ. ತುರುವೆಗಣ್ಣಂ ] ಹಂಸೆ ಶುಕ ಪಾರಿವದ ದನಿಗಳಿಂದೊದಟಿ ತಾವ್ ಕರೆವುತಿರಲು (ಸೋಮಶ. ಹರಿ. ೨೦೪) ; (ಹಕಾ. ೫-೪೨ ನೋ). **ತುರುಬಿ** : ೧. ಶ್ರೀಮುದ್ರೆಗಿಡ... ತುರುಬೀಗಿಡ, ಗಿಡುತಿಂಗಿ (ಮೈಶಿಸಿ. ೦-೬). **ತುರುಬೆ** : ೧. ಬೇವಿನ ಸೊಪ್ಪಿನ ಕಿಚ್ಚುಮಾಡಿ ಅದರಲ್ಲಿ ತುರುಬೆ, ತುಂಬೆ, ಗಣಜಲಿ, ಹೆಬ್ಬೇವು ಮೊದಲಾದ ತಪ್ಪಲುಗಳನ್ನು ಚೆಲ್ಲಿ (ಕನ್ನಜಾ. ೦೬೬); ನಮ್ಮ ಹುಡುಗಿ ಮಾಘಗೌರೀಪೂಜೆಗೆ ತುರುಬೆ ಹೂವು ಕೊಯ್ದುಕೊಂಡು ಬರಲು ಹೋಗಿದ್ದಾಳೆ (ಬೂಂ). **ತುರುಮೆ** : ೧. "ತುತ್ತ-ತುತ್ತಿ, ತುರುಮೆ" (ಓಷಧಿ. ೬೦). **ತುರುವೆ₂** : ೧. "ಭೂಂಬಲಾ-ತುರುವೆ" (ಓಷಧಿ. ೦೦೨) ; ಮೂಲಿಕಾ ಪ್ರಯೋಗ . . . ತುರುವೆಯ ಬಡಗ ಹರಿದ ಬೇರಂ ತಂದು ಕಿವಿಗೆ ಕಟ್ಟಲು ಛಳಿ ಬಿಡುವುದು (ಸಕವ್ವ. ೭೫).

**ತುಱುಸೆಱೆ** (ನಾ). ಹಸುಗಳನ್ನು ಸೆರೆ ಹಿಡಿಯುವುದು ; ಗೋಗ್ರಹಣ : ಅರಿ ವಿರಾಟನ ಪುರಕೆ ಹಾಯಿದು ತುಱುಸೆಱೆಯ ತೆಗೆಸುವೆವು (ಕುಮ್ಮಾವಿ. ೪-೦೯) ; ಸಂಗಣ್ಣನು ಮೂಗೂರಿಂಗೆ ಹಳ್ಳಿಹಿರಿಯುರ ಸಮಸ್ತ ಪ್ರಜೆಗಳುಡುಗಳ ತುಱುಸೆಱೆಯನಿಱಿದು ಕೊಂಡು ಹೋದಲ್ಲಿ (ಎಕ. XIV, ತಿರುಮ. ೨೨೩-೪ : ?). [ತುಱು+ಸೆಱೆ₃]

**ತುಱುಸೆಱೆಗೊಳ್** (ಕ್ರಿ). ಹಸುಗಳನ್ನು ಸೆರೆಹಿಡಿ : ಅರವುನೆಯ ಸೀಮೆಯೊಳ್ ದಾಟಿಟ್ಟು ತುಱುಸೆಱೆಗೊಂಡುದಜಿಂದುದಂದಿಗೆವರ್ಪ ಧನ ಧಾನ್ಯಂಗಳಡಂಗಿ (ಜಕಪಂ. ೪೫-೧೦). [ತುಱುಸೆಱೆ + ಕೊಳ್₁]

**ತುಱುಸೆಱೆವಿಡಿ** (ಕ್ರಿ). ಹಸುಗಳನ್ನು ಸೆರೆಹಿಡಿಯುವ ಹಾಗೆ ಗುಂಪುಗುಂಪಾಗಿ ಹಿಡಿ : ಒಱಲ್ದೆಱಗುವ ಪಱಮೆವಱಗಳಂ ತುಱುಸೆಱೆವಿಡಿವ ನಱುಗಂಪಿನ ಸೊಂಪುಗಳ್ಗಿಂಬಾದ ಪೊಂಬಾಱೆಗಳಿಂ ಬಳ್ಕುವಡಕೆಯ ಸಾಲಲೊಳಂ (ಅದ್ಭಿಕಾ. ೬೦). [ತುಱುಸೆಱೆ + ಪಿಡಿ₁]

**ತುಱುಹಟ್ಟಿ** 'ತುಱುಪಟ್ಟಿ' ನೋ.

**ತುಱುಹತಿ** (ನಾ). = ತುಱುಗೋಳ್(?) : ಕಲೋಜ ಹಗಡೆ ಕೀರ್ತಿಯ [೦] ಗಳಾ...ತುಱುವ ಕೊಂಡು ಹೋಹಂದು ಅವರ ಕೂಡೆ ಕಾದಿ ತುಱುಹತಿಯ ಸತ್ತು ಸ್ವರ್ಗಬಡದರು (ಕಿಇ. IV, ೩೫-೬; ?). [P ಇದು 'ತುಱುಹರಿ' ಎಂಬುದರ ಅಪಲಿಖಿತವಿರಬಹುದು]

**ತುಱುಹರಗೋಳು** (ನಾ). = ತುಱುಗೋಳ್ : ಶ್ರೀಮಾದಿ ಅಬಲದಲ ಸ್ಥಲದ ಚಿಕಾನ್ನಾ ತುಱುಹರಗೋಳುಗಳಲ್ಲಾದಿ ಸತ್ತಂ (ಮೈಆರಿ. ೧೯೩೨, ೫೯-೯ ; ೨ನೆಯ ೩೩). [<ತುಱುಹರಿ + ಕೋಳ್ಳ₂ (<ಕೋಲ್)]

**ತುಱುಹರಿ₁**, ತರುಹರಿ (ಕ್ರಿ). ಗೋವುಗಳನ್ನು ಹಿಡಿದುಕೊಂಡು ಹೋಗು : ಖೂಟೆಯ ಕಿಟಿಯ ತುಱುಹರಿವಲ್ಲಿ ಕಾದಿ ತುಱುವಂ ಮಗುರ್ಚಿ ತಾಂ ಸುರಲೋಕಪ್ರಾಪ್ತನಾದ (ಎಕ. V, ಹಾಸನ. ೧೦೮-೯ ; 1147). **ತುರುಹರಿ**: ರಾಕ್ಷಸರ್ತುರುಹರಿದು ತಮ್ಮ ಹಗೆಯರ ಗುರುವಿನಾ ಮಗನಿಲ್ಲಿ ಗೈತರಲುಬಹುದೇ ದುರುಳನಿವನೆಂದಾತನಂ ಕೊಂದುಹಾಕಿರಲ್ (ತುರಂಗ. ೮-೧೨). [ ತುಱು + ಹರಿ₂ (<ಪರಿ₂)]

**ತುಱುಹರಿ₂** ' ತುಱುಂಪರಿ ' ನೋ.

**ತುಱುಹುಯಲು**, ತುಱುಯ್ಯಲು (ನಾ). ೧ = ತುರುಗಾಳಿಗ : ರಾಮಯನು ತುಱುಹುಯಲಲಿ ಸುರಲೋಕವ ಸಂದೊಡೆ (ಮೈಆರಿ. ೧೯೩೮, ೧೨-೩ : ?). **ತುಱುಯ್ಯಲು** : ೨. ಹಸುಗಳ ಕೂಗು : ಅವರ ಮಗನ ಮಗಂ ಜಕ್ಕ ಪೆರ್ಗಡೆಯುಬ್ಬುವ ಪುಯ್ಯಲು ತುಱುಯ್ಯಲುವ ಕೇಳ್ದು ತಾಗಿ ಕಾದಿ ... ಸತ್ತಂ (ಎಕ. XII, ತಿಪ. ೪೩-೩ : ಸು. 1000).

[ ತುಱು + ಹುಯಲು (<ಪೊಯ್ಯಲು )]

**ತುಳಿ₁**, ತುಳಿ₁ (ಕ್ರಿ). ೧. ಕಾಲಿನಿಂದ ಮೆಟ್ಟು,-ಅಮುಕು,-ಘಟ್ಟಿಸು : "ತುಳ್ತ-ಪಾದಸಂಘಟ್ಟನೇ" (ಶಮದ) ; ತುಱು ಪರಿವಾಗಳೆಮ್ಮ ಪೆಣನಂ ತುಳಿದುಂ ಪರಿಗುಂ ದಲ್ (ಪಂಪಭಾ. ೭-೯೫) ; ಈ ಧೂರ್ತನೆನಾ ಗಜಂ ತುಳಿವುದಕ್ಕೇ ಪಚ್ಚದೇ ಮಂತಣಂ (ಧರ್ಮಾಮೃ. ೧೩-೭೪) ; ಗಂಧಗಜೋತ್ತಮಂ ತುಳಿದು ಕಿಟ್ಟೀಡಾಡುಗಾನಂದಚಂದ್ರವಿರುದ್ಧಸ್ಥಿತಿಯಂ ವಿಶುದ್ಧಜನಧರ್ಮದ್ರೋಹಪಂಕೇಜಮಂ (ಅಧರ್ನೇ. ೦-೮). ೨. ನಾಶ ಮಾಡಂ ; ಸೋಲಿಸು ; ಹಾಳುಮಾಡು : ರಿಪುಸೇನೆಯಂ ತುಳಿದು ತೊಟ್ಟುಳಿಪಾಡುವಂ (ಪಂಪಭಾ. ೧೩-೪೪) : ಬಡವಂ ಬಾಟ್ಗಿಂಗುವೊ ...ಪೆಣ್ಬಡೆಯೆಂಗುವೊ ತುಳಿದು ಪರಿಗುವುಂತಕರಾಜಂ (ಅಜಿಪು. ೧೦-೨೩) ; ಮಾನವಂ ಕಟ್ಟ ಗುಣಂಗಳಿಂ ತುಳಿದು ಪಂಚಾಚಾರದಿಂ ಪಂಚ ಬಾಣನ ಬಾಹಾಬಲವಂ (ಪಂಪಾಮಾ. ೦-೩). ೩. ಹತ್ತಿಕ್ಕು ; ಅದು ಮಿಡು ; ತಲೆ ಎತ್ತದಂತೆ ಮಾಡು : ತೊಲಗಿಸು ಕಾಮವಂ ತುಳಿದು ಕೋಪವಮಂ...ಎಮ್ಮನಾಳ್ಗೆ ನೆಲಿನಾಕ್ಷಚರಿತ್ರದ ಚೈತ್ರಭೇರಿಗಳ್ (ಚಿಳವಿ. ೦-೯). ೪. ನೋಯಿಸು ; ಪೀಡಿಸು ; ಕಾಡಿಸು : " ತುಳಿದಂ...ಘಾಸಿ ಮಾಡಿದಂ " (ಶಮದ. ಪರಿ. ೦) ; "ಘಾಸಿಯೊಳ್ ಪದದೆ ಮರ್ದಿಸು ವಲ್ಲಿಯುಂ ತುಳಿವೆಸರ್" (ಸಂಜೀವ. ೦೨) ; ಗಂಡರಳ್ಳೆರ್ದೆಗಳಂ ತುಳಿ ಪೋಜೆಯನುಂಟುಮಾಡುವುದದೆ...ಸೂಸಿದುದು ಸೇಸೆಯನಾ ಪುರಾಂಗನಾ ಜನಂ (ಪಂಪಭಾ. ೪-೩೫). ೫. ಕಿವುಚು ; ಜಜ್ಜು ; ಹಿಂಡು ; ಅರೆ : "ಕಿಮುಟಿನಲ್ ತುಳಿವುದು" (ಸಂಜೀವ. ೩) ; ಗುರುಗುಂಜಿಯೆಲೆಯೊಳ್ಳಲ್ಲದೊಡರಪಿಚ್ಚ ಗೆಯುರಲೊಳಿಳ್ಕುವಂ ಬೆಲ್ಲಮುಮಂ ಬೆರಸಿ ತುಳಿದಿಟ್ಟದಂ ತಿನೆ ಮರಾಂಗಿ ಲತೆಯಂತೆ ಪುಷ್ಪವತಿಯಾಗಿರ್ಕುಂ (ಲೋಕೋಪ. ೯-೧೭೪) ; ತಿಲತೈಲ ಸೈಂಧವಂ ಪಿಪ್ಪಲಿ ಮರಿಚಂ ವಿಶ್ವಮೆಂಬಿವಂ ಸಮನಾಗಲ್ತುಳಿದು ಮೆಲುತ್ತಿರೆ ತೊಲಗುಗುಮಲಸಂದೆಯ ಸೊರ್ಕು (ಖಮದ. ೨-೦೭೫) ; ಒರ್ಪಲಮುಪ್ಪಂ ತ್ರಿಕಟುಕಮೊರ್ಪಲಮುಂ ಬೇವಿನೆಲೆ ಯುಮಂ...ತುಳಿದು ಸಮರ್ಪಿಸುವುದು (ಅಶ್ವಶಾ. ೭-೩೪). **ತುಳಿ₁** : ೧. ಭಾಳಲೋಚನಾಗ್ನಿಯಿಂ ಪಂಚಶರನುರಿದು ನಿಲೆ ಪರಿತಂದು ಪದತಳದಿಂ ತುಳಿದು ಸ್ಮರಭಸ್ಮಾಮಯವನಾಗಿ (ಗಿರಿಕ. ೨ ಕಥಾಗರ್ಭ) : ಕೊಂಡು ಬಂದಾ ದೈತ್ಯಗಣವನು ದಿಂಡುಗೆಡಹಿಯು ತುಳಿಯೆ (ಸಂಭವ. ೭-೩೮) ; ದಿಕ್ಕರಿ ನಡುಗೆ ಚೌಕದ ಕಳನ ತುಳಿದುದು ಸುಪ್ರತೀಕಗಜ (ಕುಮಾವ್ಯಾದ್ರೋ. ೩-೧೦); ವೈಂದನ ಸದೆದ ನೀಲನ ತುಳಿದ . . . ಗದೆಯುಲಪ್ಪಳಿಸಿದ ಗವಾಕ್ಷನ (ತೊರಿರಾ. ೨೫-೨೨); ಹಾವಿನ ಹೆಡೆಯಂ ತುಳಿವರೇನೆ ಅಂಜಿಕ್ಕಿಲ್ಲವೆ (ಪುರಂದ. ೨-೭೩-೮); ತ್ರಿವಿಕ್ರಮನು ಬಲಿಯ ತಲೆಯ ಮೇಲೆ ಪಾದ ವನ್ನಿಟ್ಟು ಅವನನ್ನು ಪಾತಾಳಕ್ಕೆ ತುಳಿದು ಅಲ್ಲಿಯೇ ಆಳಿಕೊಂಡಿರುವಂತೆ ಅಪ್ಪಣೆ ಮಾಡಿದನು (ನೀತಿಚಂ. XV, ೨೯). ೨. ಕೌರವಸೇನೆಯಂ ತುಳಿದು ಗೆಲ್ದಾ ಗಣ್ಣರುಂ . . . ವೀತಮತ್ಸರದಿಂ ಭಾವಿಸುವಾಗಳೇ ಸಮರ ಕೊಳ್ಗಣ್ಣಂಬರಂ ಗಣ್ಣರೇ (ಸೌಇಇ. XI – i, ೫೨-೦೨; 1008); ಕದನ ದೊಳಂತರಂ ತುಳಿದು ಕೊಳ್ವೆಡೆಯೊಳು ಲಯಕಾಲಕಾಲನೆಂಬುದು (ಎಇ. XVI, ೩೩-೧೭; 1102). ೩. ಆಗ ಇತರರ ಹಕ್ಕುಬಾಧ್ಯತೆಗಳನ್ನು ತುಳಿಯಲೂ ಹಿಂಜರಿಯರು (ತಿಕ್ಕದ. ೦೦೦). ೪. ಸುಲಿದು ವಿಪ್ರನಿಕಾಯ ವಾದ ತುಳಿದು ದೇಶಾಂತರವ ಮಾಡಿಯೆ . . . ಬಂದು ಕಂಡನಾ ಜಗದ ವಲ್ಲಭನ (ಸಂಭವ. ೨೬-೬೦). ೫. ಕಗ್ಗಲಿಯ ತೊಪ್ಪಲನು ತುಳಿದು ರಸವ ಹಿಂಡಿಕೊಂಡು ಅದಂ ಮೈಗೆ ತೊಡೆವುದು (ಅಶ್ವಟೀ.೬೯-೦). ೬. ಹಾದಿಯಲ್ಲಿ ನಡೆ,-ಸಾಗು : ಎಷ್ಟು ತುಳಿದರೂ ದಾರಿ ಮುಗಿಯಲೊಲ್ಲದು (ರೂಢಿ).

**ತುಳಿತುಳಿ** (ದ್ವಿರುಕ್ತಿ) : ಮದವಲರ್ದ ತನುವಂ ಕುಸುರಿದಱಿದುಱಿ ಕಲ್ಲೊರಳೊಳಿಕ್ಕಿ ತುಳಿತುಳಿದು ತಾಂ ಹರಿವ ತೊಱೆಯಲಿ ಕಲಸ ಬಗೆವನು (ಬಸವಪು. ೪೫-೨೮): ರಣವ ಶೋಧಿಸಲೆಂದು ಕಳನೊಳು ಹೆಣನ ತುಳಿತುಳಿ ದಱಸೆ ಕುರುಧಾರುಣಿಯ ಪತಿಯನು ಕಂಡು ನೆಱೆ ಮಱುಗಿದಳು ಗಾಂಧಾರಿ (ಕುಮಾವ್ಯಾಗ. ೦೨ ಸೂಚನೆ): ಸಲೆ ಸೇರಿಸಿದೇಣಿಗಳ ಮೇಲೆ ಸುಭಟರು . . . ಅಲಗಿನ ಗಾಯುವನೆಣಿಸದೆ ಹೆಣಗಳ ತುಳಿತುಳಿದೊಡನೇಱಿದರು (ಕಂಸವಿ. ೦೪-೪೭). ತುಳಿದ ಹಾದಿ=೧. ಜನರಂ ನಡೆದಾಡಿರುವ ದಾರಿ ; ಸಿದ್ಧವಾದ ಮಾರ್ಗ. ೨. ಸಂಪ್ರದಾಯ ; ಪರಿಚಿತವಾದ ಕ್ರಮಂ; ಪದ್ಧತಿ : ಮಾಡಿರುವ ಪ್ರಯತ್ನವು ಮುಂದೆ ಸತ್ಯಾನ್ವೇಷಣ ಮಾಡುವವರಿಗೆ ತಳಹದಿ ಅಥವಾ ತುಳಿದ ಹಾದಿ ಆಗದೆ? (ಸಂಶೋಧ. IV, ಅರಿಳ). **ತುಳಿದಾಡು**=ತುಳಿ; ಮೆಟ್ಟು : ವಿಗಡಕರಿ ತುಳಿದಾಡಿತಿರಿದಿರಿದಾದ ಪಟುಭಟರ (ಕುಮಾವ್ಯಾದ್ರೋ. ೩-೦೩). **ತುಳಿಮಣ್ಣು**= (ಗೋಡೆ ಮೊದಲಾದುವನ್ನು ಕಟ್ಟಲು) ಚೆನ್ನಾಗಿ ತುಳಿದಂ ಹದ ಮಾಡಿದ ಮಣ್ಣು : ತುಳಿಮಣ್ಣು ಚೆನ್ನಾಗಿದ್ದಷ್ಟೂ ಗೋಡೆ ಬಿಗಿಯಾಗು ತ್ತದೆ (ರೂಢಿ). ತುಳಿದಿಕ್ಕು = ಅದುಮು ; ಹತ್ತಿಕ್ಕು : ಸ್ಮೂಸ್ ದೇವನೆಂದುಂ, ಎನ್ನೆರ್ದೆಯ ಬಯಕೆಯನ್ ತುಳಿದಿಕ್ಕಲೆಂದು, ತನ್ನಯಾ ಬಲ್ಮೆಯನ್ ಒತ್ತದಿರ್ಕೆಂದುಂ (ಬರ್ನ್ನಪ್ರ. ೨೮-೫೯೬).

[ದೇ.॥ ತಮಿ. ತೊಟ್ಟು ; ಮಲ. ತೊಳಿ]

**ತುಳಿ₂**, ತುಳಿ₂ (ನಾ). ಮೆಟ್ಟುವಿಕೆ ; ತುಳಿತ : ಆ ಖಳನ ತುಳಿಯ [ಹಾಕಾಂ. ವು] ಮಂ ಸೋಂಕುಮನಾರವಧರಿಪರ್ (ಆದಿಪು. ೪-೬೭). **ತುಳಿ₂** : ಸುಮಮುಕರಂದದಿಂದೆ ಕಪಿ ಕೈದೊಳೆದಾ ದ್ರುಮಪತ್ರಪಾತ್ರೆಯುಂ ಸಮೆದದ ಅಲ್ಲಿ ತುಂಬಿ ತುಳಿಪೊಂದದ ಪೂಗಳನ್ನೆದೆ ತುಂಬಿಕೊಂಡು..ಬಂದು ಸಂಯಮಿಗಳ ಮುಂದೆ ನಿಂದೆಱಗಿ ಕಾಣ್ಕೆಯನಿತ್ತುದು (ರಾಜಶೇ.೧-೧೨೭). 'ಕಾಲ್ದುಳಿ₂' ಪರಾ. [< ತುಳಿ₁]

**ತುಳಿಕಲ್**, ತುಳಕಲು, ತುಳಿಕಲ (ನಾ). ೧. ತುಳಿತಕ್ಕೆ ಸಿಕ್ಕಿದುದಂ. ೨. ಬಾಡಿದುದು ; ಸೊಪ್ಪಾದುದು ; ರಸಹೀನವಾದುದಂ : "ತುಳಿಕಲ್ (ತಳಿಕಲ್, ತಱಿಕಲ್) = ಸೊಪ್ಪಾದುದು'' (ಶಮದ. ಪರಿ.೧); ತುಳಿಕಲದುಗಗಳೊಳೇಂ ಪಱಗಟಪೆಯ ಕೂಟ್ ತಿವುದುಗಳೆವ ತೊಮರಿಯ

ತೊವೆ ಕಾಯ್ದುಱಿಪಿದ ತುಪ್ಪಂ ಕೋಡುವ ಕಟಲಲ್ಲದೆ ದಿವ್ಯಭೋಜನಂ ಪೆಱತುಂಟೇ (ಕಾವ್ಯಾವ. ೨೪೦). ತುಳಕಲು : ೩. ತುಳಿತ; ಮೆಟ್ಟುವಿಕೆ : ಕುದುರೆ, ಎತ್ತು, ಮನುಷ್ಯರು ಇವರ ತುಳಕಲಿನಿಂದ ತಮಗೆ ತಾವೇ ಬಿದ್ದ ಮಾರ್ಗಗಳಿಂದಲೇ ಯಾವತ್ತು ವ್ಯವಹಾರ ನಡಿಯುತ್ತಿತ್ತು (ಕಥಾಗ. ೨೯೪). ತುಱಿಕಲ : ೨. "ತುಱಿಕಲಮನೆ ಸೊಪ್ಪಾದುದು" (ಕರ್ಣಾನಿ. ೬೨).

[ತುಱ್$_1$ + – ಕಲ್$_4$]

ತುಱಿಕಲ 'ತುಱಿಕಲ್' ನೋ.

ತುಱಿಯಿಸು, ತುೞಿಯಿಸು, ತುೞಿಸಂ, ತುಱಿಸು (ಕ್ರಿ). ೧. ಕಾಲಿನಿಂದ ತುೞಿಯಂವಂತೆ ಮಾಡಂ; ಮೆಟ್ಟಿಸು : ಲೀಲಾಕಮಲಾಕರಾನೀಕರಕ್ತ ಕಮಳಂಗಳನಾಸ್ಯಾನುಶೋಣಿತಶೋಣಾರಿನೃಪಶಿರಂಗಳಿಂದೆ ತುಱಿಯಿಸಿ ಯುಂ (ಆದಿಪು. ೮-೪೦೨). ೨. (ಅರೆದು) ಕೂಡಿಸು ; ಮಿಶ್ರಮಾಡು : ಕ್ರಿಯೆಯಿಂ ಬೀಜಂಗಳನಲ್ಲಿಯೇ ಮಣ್ಣೊಳ್ ಬಿತ್ತಿ ತಳಿಗೆ ತುಱಿಯಿಸಿ ಪಾಲ್ ಪಂದಿಯ ನೆಣಗಳುಮೆಂಬಿವನನುನಯದೆ ಮೊದಲ್ಗೆಱೆಯೆ ಸದ್ಯಫಲದೊಳ್ ನೆಱೆಗುಂ (ಲೋಕೋಪ. ೬-೨೪). ತುೞಿಯಿಸು : ೧. ಎತ್ತುಗಳಿಂದ ರಾಗಿಯನ್ನು ತುೞಿಯಿಸಿದರು (ಶೂಧ್ರ). ೩. ನಾಶಪಡಿಸು : ಸಿದ್ಧಪದಮಂ ಕೆಯ್ಕೊಳ್ಳುದರ್ಕಡ್ಡಮೊಡ್ಡಣಮೊಡ್ಡಿದರ್ಘ ಸೈನ್ಯಮಂ ತುಱಿಯಿಸಲ್ (ಶಾಂತಿಪು.೧-೬). ತುೞಿಸು : ೧. ಎಲವೊ ಸಂಶಯ ಬೇಡ ಗಜದಲ್ಲಿ ತುೞಿಸು ತಂಗಿಯ ಮಕ್ಕಳನು (ನಿಥಾಗ. ೧೦-೩೦-೩೨); ರಾಗಿ ತುೞಿಸುವುದಕ್ಕೆ ನಿಮ್ಮ ಎತ್ತುಗಳನ್ನೂ ಸ್ವಲ್ಪ ಕೊಟ್ಟರಿ (ಶೂಧ್ರ). ತುಱಿಸು: ೧. ಸಿಂಧುರದಿಂ ನುಗ್ಗಾಗೆ ಕಾಲ್ಕೆಯ್ ಮುಱಿಯೆ ತುಱಿಸಿ... ದಂಡಿಸುವ ನರಕಜಗರ್ಜೀವೋ ಮೆಯ್ಕೊಡ್ಡಲಾಟಿಂ (ಧರ್ಮಾಮೃ. ೧೩-೧೫೬).

[ ತುಱ್$_1$ +– ಇಸು$_3$ ]

ತುಱಿಲ್$_1$, ತುೞಿಲ್$_1$, ತುೞಿಲು$_1$ (ನಾ). ೧. ಎರಗುವಿಕೆ ; ಮಣಿಯುವುದು ; ನಮಸ್ಕಾರ; ಪ್ರಣಾಮ : "ತುಱಿಲ್ ಪ್ರಣಾಮದೊಳ್" (ಕರ್ಣಾನಿ. ೩೬): "ತುಱಿಲೆಂದು ಮೊಱಗೆಂದು ಕುಂಬೆಂದು ಮಱಗೆಂದು ಬಱಿಕ ಮಣಿಯನೆ ನಮಸ್ಕಾರಕ್ಕೆ ಪೆಸರಕ್ಕುಂ" (ಕಬ್ಬಿಗ. ೩೩) ; ಬ್ರಹ್ಮಋಷಿಯರೆಲ್ಲರುಮಂ ತುಱಿಲ ಪರಕೆಯ ಸಮಾನ ಪ್ರತಿಪತ್ತಿಯಿಂ ಕಿಱಿವಿರಿಯರಱಿದು ಪೊಡೆವಟ್ಟು (ಶಂಪಭಾ. ೬-೩೩೪) ; ಉಮಾಂಘ್ರಿಗೊಳ್ಪಿನಿಂ ತುಱಿಲನೊಡರ್ಚಲ್ (ವೀರವಿ. ೦-೬೦); ಬೀಗುತ್ತುಂ ಶರಣೆಂದು ಮಾಱ್ಪ ತುಱಿಲೇಂ ಬೇರೋರ್ವರಂ ಸೇರ್ವುದೇ (ಬ್ಯಾಸೂಡು. ೦-೧). ೨. ಆಳಂತನ; ದಾಸ್ಯ; ಸೇವೆ. 'ತುಱಿಲ$_1$' ಪರಾ. ತುೞಿಲ್$_1$ : ೧. "ನತಿಃ—ತುೞಿಲ್" (ಕಾಕಕ್ಕ. ೪೦): ತು [ಹಾಕಾಂ. ತ್]ೞಿಲಾಂತು ಬಂದು ನಿರ್ಮಳನದ್ವಿತೀಯನಚಳಪರಂಜ್ಯೋತಿರಾಕಾರ ನ ೞ ನ ಜಾ ೦ ಡ ಗಳ ತನ್ನೊಳು ಪೆತ್ತಮೂರ್ತಿ ಕಂಗೊಳಿಪ ಸೋಮೇಶನಾಲಯಕೆ (ಭೈರವೇ. ೪-೦೦) ; ನಾಗನಾಥಂಗೆ ಸಲುಗೆಯಿಂ ತುೞಿಲೆಸಗಿ (ಸಿದ್ಧೇಶು. ೬-೪೯) : ಬೆನ್ನ ಬಿಸಿಲೇ ಕಾಣ್ಕೆ ಗೆಯ್ಮೆಯೊಡೆಯನ ತುೞಿಲ್ (ಕಾಲಜ್ಞಾ. ೨೯-೨೦). ತುೞಿಲು$_1$ : ೧. ಮನೆಯ ಮೂಲೆಮೂಲೆಗೂ ತುೞಿಲೆಂದು, ಮಗಳನ್ನು ಕಾಪಾಡಿರೆಂದು ಕೋರಿ ಪತಿಯೊಡನೆ ತವರಿಗೆ ಹೋಗುತ್ತಾಳೆ (ಕರಜ. ೨೧). ೨. 'ತುೞಿಲಾಳು$_1$' ಪರಾ.

[ದೇ.೩ ತಮಿ. ತೊೞು=ಪೂಜಿಸು ; ಮಲ. ತೊೞು = ನಮಸ್ಕರಿಸು; ತುಳು. ತುರ್ಲಿ; ತೆಲು. ದೋಯಿಲಿ]

ತುಱಿಲ್$_2$, ತುೞಿಲ್$_2$, ತುೞಿಲು$_2$ (ನಾ). ಶಕ್ತಿ ; ಸಾಹಸ; ಪರಾಕ್ರಮ: "ತುಱಿಲ್=ಪೊಡವಡಿಕೆ : ವೀರಂ" (ಶಮದ. ಶಠಿ. ೧): "ತುಱಿಲೊದು ಶೌರ್ಯದೊಳ್" (ಕರ್ಣಾನಿ.೩೬); "ತುಱಿಲೆನಲ್ ಪೊಡವಡಿಕೆಗಂ ವೀರಕಂ ಪೆಸರ್" (ಸಂಜೀವ. ೦೦). 'ತುಱಿಲಾಳ್$_2$' ಪರಾ. ತುೞಿಲ್$_2$ : ತುೞಿಲಾಂತರಳಿದರುೞಿಯದೆ ಬೞಿಯಂ ನೆಱೆ ಕಾಣದಲ್ಲಿ ದಳದುೞದಿಂದಂ (ಹಮ್ಮೀರ. ೩-೫೩). ತುೞಿಲು$_2$: ಕರಚಮತ್ಕಾರಕ್ಕೆ ಚಮತ್ಕಾರಮಾರ್ಬಟೆಗೆ ಯರ್ಭಟೆ ತುೞಿಲ್ಗೆ ತುೞಿಲು ... ಸರಿಯಾಗೆ ನಂದೀಶ ಶುಂಭಾಸುರರ್ ಮಹಾಧುರದೊಳಿರ್ಬ್ಬಡಿದರ್ (ಚಿಬಕ್ಕು. ೨೬-೨೫).

ತುಱಿಲ್ಗೆ ಪಸಂತ=ಒಂದೆಂ ಬಿರುದಂ: ಮಾನಸೂರರಳಿ ಕಯ್ಪೆ ಮಗನನ್ನ ಭುಕಯ್ಪ ತುಱಿಲ್ಗೆ ಪಸನ್ತನ್ ಗಣ್ಡಪದಿಚನ್ದನ್ ... ಕುದುರೆಇನ್ದಿಱಿದು ನಡದಿಱಿದೊಟ್ಟಿಕೆಯ್ದು ಬಿಟ್ಟರ್ (ಎಕ. X, ಶ್ರೀನಿವಾ. ೫-೫; ಸು. 780).

[ದೇ.೩ ತಮಿ. ತುಣಿವು; ಮಲ. ತುನಿ=ಸಾಹಸಮಾಡು]

ತುಱಿಲ$_1$ (ನಾ). ೧. ಸೇವೆಯಿಂದ ಜೀವಿಸುವವನು ; ಭೃತ್ಯ ; ದಾಸ : ಅಱಿಪಿ ಕಿಱಿದಕ್ಕೆ ಕೆಮ್ಮನೆ ಗಳಗಳಿಸುತ್ತೇಳಿದರ್ಕಳೊಳ್ ಬಿಡದೆ ತಗುಳ್ದಱಿ ಪಱಿಯೂಡುವ[ನೆಂತುಂ] ತುಱಿಯ[ಲ]ಕ್ಕುಂ ತುಱಿಲಸಂದನಕ್ಕುಮೆ ಧರೆಯೊಳ್ (ಬಂಹರಿ. ೦೦-೦೦೫). ೨. ಪಂಚಮವರ್ಗಕ್ಕೆ ಸೇರಿದವನಂ ; ಅಂತ್ಯಜ : "ತುಱಿಲನೆನಲ್ಕೆ ಪಂಚಮನೊಳ್" (ಕರ್ಣಾನಿ. ೮೩).

[ ತುಱಿಲ್$_1$ + – ಅ$_7$ ]

ತುಱಿಲ$_2$ (ನಾ). ವೀರ; ಶೂರ; ಪರಾಕ್ರಮಶಾಲಿ : "ಕರಮೊಲ್ದನೊಳಂ ಸುವೀರನೊಳ್ ತುಱಿಲನೆನಲ್ಕೆ" (ಕರ್ಣಾನಿ. ೮೩). [ ತುಱಿಲ್$_2$ + – ಅ$_7$ ]

ತುಱಿಲಸಂದ$_1$ 'ತುಱಿಲ್ಸಲ್$_1$' ಪರಾ.

ತುಱಿಲಸಂದ$_2$ 'ತುಱಿಲ್ಸಲ್$_2$' ಪರಾ.

ತುಱಿಲಾಳ್$_1$, ತುೞಿಲಾಳಂ$_1$ (ನಾ). ಆಳು; ಸೇವಕ; ದಾಸ : ಆದೊಡೆ ಪೆಣ್ಗಳ್ ಮೇಣ್ ತುಱಿಲಾಳ್ಗಳ್ ಅವನ ಜಸಮಂ ಪಾಡುವೆಡೆಯೊಳ್ ನಿರ್ಬಂಧಮಿಲ್ಲಂ (ಅದ್ಭುತ. ೨೨-೨೨). ತುೞಿಲಾಳು$_1$ : ದಳಪತಿ ಮನ್ನೆಯ ಮಾಂಡಲಿಕರು ನೆಱೆ ತುೞಿಲಾಳು ರಾಯರಾವುತರು...ಒಪ್ಪಿದರು (ಕಂಸವಿ. ೮-೨೮) ; ರಾಷ್ಟ್ರಕೂಟಸಿಂಹಾಸನಕ್ಕೆ ತುೞಿಲಾಳಾಗಿ ಬದ್ದೆಗನು ಚಾಳುಕ್ಯ ಭೀಮನನ್ನು ಗೆದ್ದನೆಂಬುದರಿಂದ (ಸಾಹಿತ್ಯೋಇ. ೩೨೬). [ತುಱಿಲ್$_1$+ಆಳ್$_3$]

ತುಱಿಲಾಳ್$_2$, ತುೞಿಲಾಳ್, ತುೞಿಲಾಳು$_2$ (ನಾ). ಪರಾಕ್ರಮ ಉಳ್ಳವನು ; ಶೂರ ; ವೀರ : "ತುಱಿಲಾಳ್ ಪರಾಕ್ರಮಮುಳ್ಳಂ" (ಕಶಸಾ. ೧೪-೨೬೪); "ತುಱಿಲಾಳಿ ಧೀರನೊಳ್" (ಕರ್ಣಾನಿ.೩೦); ಬದ್ದೆಗನ ಕೋಣೆಯ ಗಂಗನ ಮೊತ್ತಮೆಲ್ಲಮಂ ಬೆದಱುವಿನಂ ತೆರಳ್ಚಿ ಪಲರುಂ ತುಱಿಲಾಳ್ಗಳನಿಕ್ಕಿ (ಎಕ. II, ೧೩೪-೦೨ ; 940) ; ಪಸಾಯ್ತರ ಬಱಿಸಲ್ದ ತುಱಿಲಾಳ್ಗಳಡ್ಡಣದೊಳಿಡ್ಡಮಾಗೆ (ಕಬ್ಬಿಕಾ. ೪೪) ; ಕೊಳನಂ ನಿಸ್ಸಾರಮೆಂದು ಪುರುಳ್ಗುಂದಿದಾಣ್ಮನಂ ತೊಱೆದು ಪೋಪ ತುಱಿಲಾಳ್ಗಳಂತಿರೆ ನೀರ್ವಕ್ಕಿಗಳ್ ದೆಸೆದೆಸೆಗೆ ಪೋದುವು (ರಾಜಶೇಖ. ೫೦-೨೩). ತುೞಿಲಾಳ್: "ತುೞಿಲಾಳಿನೆ ಪರಾಕ್ರಮಿಗೆ ...ಅಭಿಧಾನವು" (ಕತರ. ೪೬); ತುೞಿಲಾಳ್ಗಳು ತನ್ನಾ ನೂರ್ವರು ಸುತರೆಳಸಿ ಬಳಸಿ ಬಂದನಾಗ (ನೇಮಿಸಂ. ೨೫-೦೬೪) ; ತಳುವದೆ ಜೀವಿತಗೊಂಬ ತುೞಿಲಾಳ್ಗಳಲ್ಲದೆ ರಾಮನ ಮೆಯ್ಗಾವಲೊಳಗಿಲ್ಲ ಲೆಕ್ಕದಾಳುಗಳು (ಕುಮಾರಾಮಾ. ೯-೧೮) ; ಬಿರುದಿನ ಬೆನ್ನ ಝಲ್ಲಿಯ ತುೞಿಲಾಳ್ಗಳ ನೆರವಿ ಮಧ್ಯದೆ ಬಹನಾರೆ (ಕಂಸವಿ. ೨೫-೪೬). ತುೞಿಲಾಳು$_2$: ತುೞಿಲಾಳಿಗೆ ಕೈವಶವಾದ ಸುದತಿಯರಳಿವಿಟರಿಗೆ ಮೋಹಿಸುವರೆ (ನೇಮಿಸಂ. ೦೦-೦೯೪) ; ನಳಿನನಾಭನ ಸುತನಂತೆ ತುೞಿಲಾಳಿನಂತೆ ... ಸಲೆ ಭೂಜವೆಸೆಯೆ (ಭೈರವೇ. ೧-೫೩) : ಹೈದರಸು ಮತ್ತೆ ಒಂದು ಲಕ್ಷ ತುೞಿಲಾಳುಗಳನ್ನು ಕೂಡಿಕೊಂಡು ದುರ್ಗದ ಮೇಲೆ ಧಾಳಿಮಾಡಿದನು (ಕವೀರ. ೦೨೫).

[ ತುಱಿಲ್$_2$ + ಆಳ್$_3$ ]

ತುಱಿಲಾಳಾಯ್ತ (ನಾ). ವೀರರ ಧರ್ಮ ; ವೀರವೃತ್ತಿ ( ? ) : ಅಂತು ಮೂದಲಿಸದೆ ಇಱಿವುದು ತುಱಿಲಾಳಾಯ್ತಮಲ್ಲೆಂದು ಮುಟ್ಟೆ ಮೂದಲಿಸಿ (ಗದಾಯು. ೮-೨೫ ವ).

[ ? ಇದು 'ತುೞಿಲಾಳ + ಆಯತ' ಎಂದು ಭಿನ್ನಪದವಾಗಿರಬಹುದೆ ? ]

**ತುಱಿಲಾಳ್ತನ** (ನಾ). ಶೌರ್ಯ ; ಪರಾಕ್ರಮಂ : ಪೆಣ್ಣುಡೆಯುಟ್ಟರೆ ಪುತ್ತ್ರ ನೇಱ ಕೊಲ್ಲದ ತುಱಿಲಾಳ್ತನಕ್ಕೆ ಸಮನಾವನೊ ಸಾಹಸಭೀಮಭೂಪನೊಳ್ (ಗದಾಯು. ೧-೨೨) ; ಚಾಳುಕ್ಯರಾಜ್ಯಕ್ಕೆ ಕಾರಣಮಾದಳ್ ತುಱಿಲಾಳ್ತನಕ್ಕೆ ನೆಱದಾಳ್ (ಎಇ. XV, ೩೪೦-೯ ; 1071): ತುಱಿಲಾಳ್ತನಕ್ಕವಂ ನೀರಿಱಿವಂತಳವಱಿದು ಸೂಸೆ ಕಣ್ಣೀರ್ತೇರಿಂದಿೞಿದಂ (ಶಂರಾಮಾ. ೪-೭೦).

[ ತುಱಿಲಾಳ್$_2$ + – ತನ ]

**ತುಱಿಲ್ಗೆಯ್, ತುಳಿಲುಗೆಯ್, ತುಳಿಲುಗೆಯಿ, ತುಳಿಲ್ಗೆಯ್, ತುಳಿಲ್ಗೈ** (ಕ್ರಿ). ವಂದಿಸು ; ನಮಸ್ಕರಿಸು : "ತುಱಿಲ್ಗೆಯ್ – ನಮಸ್ಕಾರೇ" (ಶಮುಧಾ) : "ಬಾಗೆಱಗು ಮೊಟ್ಗು ತುಱಿಲ್ಗೆಯ್ಕನ್ನರ್ ಬಿಡದದುವೆ ವಂದನಾರ್ಥದಿ ತೊಡರ್ಗುಂ" (ಕವಿಶಂ. ೧೮೯) ; ತಾಯುಂ ಕಂಡು ತುಱಿಲ್ಗೆಯ್ದು ಪಂಡಿತರಾಗಿ ಬಂದುದಂ ಪೇೞ್ದು (ವಡ್ಡಾರಾ. ೪-೨೨) ; ಜನಕನುಂ ವಿದೇಹಿಯುಂ ದಶರಥಂಗಮಪರಾಜಿತಾಮಹಾದೇವಿಗಂ ತುಱಿಲ್ಗೆಯ್ವುದುಂ (ಶಂರಾಮಾ. ೬-೪೮ವ): ನಂಜುಗೊರಲನ ಗಾಡಿಯುಂ ನೋಡಿ ಬಗೆಯೊಳಚ್ಚರಿವಡುತಂ ಬಂದು ತುಱಿಲ್ಗೆಯ್ದು ಕೈಗಳಂ ಮುಗಿದು (ಕಬ್ಬಿಕಾ. ೧೬೮) ; ನಿಜರಾಜಮಂದಿರಮಂ ಪೊಕ್ಕು ತಾಯ್ಗೆ ತುಱಿಲ್ಗೆಯ್ದು ತನ್ನ ಬಱಯೊಳ್ಬಂದ ವಿದ್ಯಾಧರರ್ಗೆಲ್ಲಮುಡಲುಂ ತೊಡಲುಂ ಕೊಡಿಸಿ (ಪುಣ್ಯಾಸ್ರ. ೧-೮೮ವ); ಎನ್ನ ಬಿನ್ನಪಂ ಪಾಪೆಯಂ ತುಱಿಲ್ಗೆಯ್ದಂತಿರೆ ಪೊಚ್ಚಱದಾಯ್ತು (ರಾಮಾಶ್ವ. ೩೭-೨೮). **ತುಳಿಲುಗೆಯ್** : ಬಳಿಕ ತುಳಿಲುಗೆಯ್ದಂತೆಂದನು (ನೇಮಿಸಂ. ೭-೦೦) ; **ತುಳಿಲುಗೆಯಿ** : ವಸುದೇವ ... ಮುನಿಪಗೆ ತುಳಿಲುಗೆಯಿದೆಯಿ[ಪಾಠಾಂ. ಗೈದೈ]ತಂದು ನಿಜಮಂದಿರದೊಳಿರೆ (ಸಾಳ್ವಭಾ. ೦೯-೫೩). **ತುಳಿಲ್ಗೆಯ್** : ಸಗ್ಗಿಗರೆಱಯಗೆ ತುಳಿಲ್ಗೆಯ್ವ (ತ್ರಿಭುತಿ. ೨೪-೦); ಬಾಗಿಲ್ಕಾಪಿನ ಪಡಿಯರತಿಯರು ಬಾಗಿ ತುಳಿಲ್ಗೆಯ್ಯಾಗ ಒಡತಿಯ ಮುಖವನ್ನು ನೋಡುತ್ತಿದ್ದರು (ಸವತಿ. ೨೦೧). **ತುಳಿಲ್ಗೈ** : ಯತಿ ನಿಶ್ಚಳಾನಂದಮಾಯನಡಿದಾವರೆಗೆ ತುಳಿಲ್ಗೈದು ಕೃಪೆಯಿಂದೆ ಬಿಜಯಂಗೈವುದೆಂದು ಬಿನ್ನವಿಸೆ (ಸಿದ್ಧೇಪು. ೧೭-೩೦) ; ಕಾಲನಂ ಕಂಡು...ತುಳಿಲ್ಗೈದನು (ರುಕ್ಮಾಂಗ. ೮-೪). [ತುಱಿಲ್$_1$ + ಕೆಯ್$_1$]

**ತುಱಿಲ್ಗೊಳು, ತುಳಿಲ್ಗೊಳ್** (ಕ್ರಿ). ೧. ನಮಸ್ಕರಿಸು ; ವಂದಿಸು : ಕಾಣ್ಕೆಯನಿಕ್ಕು ಚೋಳ ಮಲೆಯಾಳ ತುಱಿಲ್ಗೊಳು (ಉದ್ಭಟ. ೨-೨೦). **ತುಳಿಲ್ಗೊಳ್** : ೨. ನಮಸ್ಕಾರವನ್ನು ಕೈಗೊಳ್ಳು ; ವಂದನೆಯನ್ನು ಸ್ವೀಕರಿಸು : ಪಲಗಣ್ಣಮುಖದಮಾರ್ದನುಂಬರಿಂ ತುಳಿಲ್ಗೊಂಬ ಗೊಂದೆಮಳವಿಗ ಗೊರವನೇ (ಸವಪೋ. ೩೨-೦).

[ ತುಱಿಲ್$_1$ + ಕೊಳು (<ಕೊಳ್$_1$) ]

**ತುಱಿಲ್ಪಾಡು** (ನಾ). ಶೌರ್ಯವನ್ನು ಕುರಿತು ಹಾಡುವ ಹಾಡು; ವೀರಗೀತೆ : ಶ್ರೀರಘುಪ್ರವರನಡಿಯ ತುಱಿಲ್ಪಾಡಿನ ಬೀಣೆಯ ಜವಳಿ ಮದ್ದಳೆಯ ... ಮೇಳದವರ್ (ರಾಮಾಶ್ವ. ೭೮-೧೫).

[ತುಱಿಲ್$_2$ + ಪಾಡು$_3$ ]

**ತುಱಿಲ್ಸಂದ$_1$** 'ತುಱಿಲ್ಸಲ್$_1$' ಪರಾ.

**ತುಱಿಲ್ಸಂದ$_2$** 'ತುಱಿಲ್ಸಲ್$_2$' ಪರಾ.

**ತುಱಿಲ್ಸಲ್$_1$** (ಕ್ರಿ). ಸೇವೆಗೆ ಸೇರು ; ಊಳಿಗದಲ್ಲಿ ಪ್ರವರ್ತಿಸು ; ದಾಸನಾಗು.

**ತುಱಿಲ್ಸಂದ$_1$, ತುಱಿಲಸಂದ$_1$** = ೧. ಸೇವಕ ; ದಾಸ. ೨. ಪಂಚಮವರ್ಗಕ್ಕೆ ಸೇರಿದವನು ; ಅಂತ್ಯಜ. "ತುಱಿಲ್ಸಂದಂ = ವೀರಂ ; ಪಂಚಮಂ" (ಶಮದ. ಪರಿ. ೦) : "ತುಱಿಲಸಂದಂ ಪಂಚಮಂಗೆ ವೀರಂಗೆ ಪೆಸರ್" (ಸಂಜೀವ. ೧೧). [ತುಱಿಲ್$_1$ + ಸಲ್$_1$]

**ತುಱಿಲ್ಸಲ್$_2$** (ಕ್ರಿ). ಪರಾಕ್ರಮದಿಂದ ಪ್ರಸಿದ್ಧನಾಗು ; ಬಲದಿಂದ ಹೆಸರುವಾಸಿಯಾಗು ; ಶೂರನೆನಿಸು.

**ತುಱಿಲ್ಸಂದ$_2$, ತುಱಿಲಸಂದ$_2$**=ಶೂರ; ಪರಾಕ್ರಮಿ; ಶೂರನಾದ ಯೋಧ : "ತುಱಿಲ್ಸಂದಂ = ವೀರಂ ; ಪಂಚಮಂ" (ಶಮದ. ಪರಿ. ೧) ; ನೀಮುವಿಂತಿನಿತೆರ್ದೆಗೆಟ್ಟರಿಂ ತುಱಿಲಸಂದರನಾರುಮನೆಂತು ನಂಬುವರ್ (ಪಂಪಭಾ. ೧೦-೧೧೯); ಕೆಲರ್ ತುಱಿಲಸಂದರಱಿಯೆ ನೊಂದರ್ (ಪಂಪಶಂ. ೨೦೬-೦೯) ; ಕೆಲಬರಂ ಕಡೆವಾಯೊಳವ್ವಂಕಿ ಕೊಂದುದುಳ್ಕಱಿಯದೆ ನಿಂದರಂ ತುಱಿಲಸಂದರನಾ ವನಕೇಳಿವಾರಣಂ (ಚಂದ್ರಪು. ೧೦-೯೭) ; ಪರಧನಮಂ ಕರವೊಪ್ಪುವ ಪರವನಿತಾಜನಮನಳಿಪಿ ಕಳಲುಂ ಕೊಳಲುಂ ದೊರೆಗಾಗದೆಂಬ ಶೌಚದಭರಮುಂ ತಾಳ್ದಿದನೆ ತುಱಿಲಸಂದಂ ಜಗದೊಳ್ (ಬಂಹರಿ. ೧೦-೧೦೦). **ತುಱಲ ಸಂದಿಕೆ** = ಯುದ್ಧದಲ್ಲಿ ತೋರುವ ಪರಾಕ್ರಮ, – ಶೌರ್ಯ : ಸೇಸಱನೊಳದಂದೆನ್ನಂ ಸಾಸಿಸುವಂ ಸುರಪಸೂನುವಲ್ಲದೊಡಱವಂ ಭಾಸುರ ವಸುವೊಕ್ಕಂತಿದೆ ಲೇಸೆಂದುಱಿದಿರೆಲೆ ತುಱಿಲಸಂದಿಕೆಯಱಿಗುಂ (ನೇಮಿಪು. ೧೨-೭೩) ; ಕೆಲರ್ ತುಱಿಲಸಂದಿಕೆಯ ಪಸುಗೆಗಳಂ ಮುನ್ನಱಿಯದೆ ನೆಗೞ್ದು (ಬಂಹರಿ. ೧೧-೮೦ವ). [ ತುಱಿಲ್$_2$ + ಸಲ್$_1$ ]

**ತುಱಿವು** (ನಾ) ತುಳಿತ ; ಪೆಟ್ಟುವಿಕೆ : ಆ ಖಳನ ತುಱಿವು [ಪಾಠಾಂ. ಯು] ಮಂ ಸೋಂಕುಮನಾರವಧರಿಪರ್ (ಆದಿಪು. ೪-೭೭).

[ತುಱಿ$_1$ + – ವು]

**ತುಱಿಸು** 'ತುಱಿಯಿಸು' ನೋ.

**ತುಱಿಹ** (ನಾ). ಹಿಂಡುವುದು ; ರಸ ತೆಗೆಯುವುದಂ ; ಅರೆಯುವುದು : "ಸುತ್ಯಾ, ಅಭಿಷವಃ, ಸವನಂ–ಯಜ್ಞಾರ್ಥವಾಗಿ ಸೋಮವ ತುಱಿಹ" (ನಾಚಿರಾ. ೬). [ತುಱಿ$_1$ + – ಹ$_2$]

△ **ತುಟುವ** 'ತುಳಂ' ನೋ.

**ತುೞ್ವಿಲ್** (ನಾ). ಒಂದು ಬಗೆಯ ಮರ ; ಚುಜ್ಜಲುಮರ ( ? ) : ತಸ್ಯ ಸೀಮಾನ್ತರಂ ಕೊಳ್ತಿನಿ ತೊಱಪ್ಪೆ ಪೆರಿಪ್ಪೆ ಪಾಣ್ಡೆಕುರ್ಱ ತುೞ್ವಿಲುಂ ದೇವಸಾಲೆಯುಂ (ಎಕ. XVI, ಗುಬ್ಬಿ. ೭೫-೫೦ ; 733) : ದಕ್ಷಿಣಸ್ಯಾನ್ದಿಶಿ ಪಡುವ ನೋಡಿ ಪೋದ ಪೇಱರ್‌ಱಪ್ಪೆಯ ಅನ್ತೆ ತುೞ್ವಿಲ ಪೇಱರ್‌ಱಪ್ಪೆಯ (ಎಕ. XVI, ತಿಪಟೂ. ೧೪೦-೬೮ ; 900). [ ? ]

**ತುೞ್ವಿಲ್ಗಾಲ್, ತುಳ್ವಿಲ್ಕಾಲ್** (ನಾ). ಒಂದು ಸ್ಥಳದ ಹೆಸರು : ತಸ್ಯ ಸೀಮಾನ್ತರಂ ಪೂರ್ವ್ವಸ್ಯಾನ್ದಿಶಿ ತುೞ್ವಿಲ್ಗಾಲೆ ಅನ್ತೆ ಬನ್ದು ಕಳರಾ ಬಾಯ್ಕಾಲುಳ್ ಕೂಡಿ ... ಅನ್ತೆ ಬನ್ದು ತೊಱಯುಳ್ ಕೂಡಿತ್ತು ... ಅನ್ತೆ ಬನ್ದು ಬೆಟ್ಟದಾ ಮೂಡಾಯ್ ಪೊರೆವ ಬನ್ದು ತುೞ್ವಿಲ್ಗಾಲೊಳ್ಕೂಡಿತ್ತು (ಮೈಆರಿ. ೦೯೩೭, ೫೩-೨೪ ; 700 ?). **ತುಳ್ವಿಲ್ಕಾಲ್** : ಅರಸರಾನನುಮತಪ್ಪಡಿಸಿ ಪೊಯ್ದುದು ತುಳ್ವಿಲ್ಕಾಲ್ಕಿಲ್ಲಿಪುಸೂರ್ ಂಡಿಯಕ್ಕ (ಮೈಆರಿ. ೦೯೨೫, ೦೦೬-೨೮ ; ?). [ತುೞ್ವಿಲ್ ? + ಕಾಲ್$_2$]

**ತೂ** (ನಾ). (ಅವಹೇಳನ, ಅಸಹ್ಯಗಳನ್ನು ಸೂಚಿಸುವ) ಒಂದು ಅನುಕರಣ ಶಬ್ದ : ತೂ ನಿನ್ನ ಯೋಗ್ಯತೆಗೆ ಇಷ್ಟು ಬೆಂಕಿ ಹಾಕು (ರೂಢಿ).

**ತೂತೂ** (ದ್ವಿರುಕ್ತಿ) : ಶಿವನ ತನುವಂ ನೋಡಿ ತೂತೂ ಎಂದು ತೂಱದ ಯುವತಿಯಂ ಕಂಡು (ಬಸವು. ೦೩-೨೦). 'ಥೂ' ಪರಾ.

**ತೂಂಕಂಗೊಳ್** (ಕ್ರಿ). ತೂಗಿಬೀಳು; ಮಂೂರ್ಛೆಹೋಗು : ವಿಪವಿಪಮ ಕನತ್ಕಿಂಜಲ್ಕಮನುತ್ಪಲಮೊಂದಂ ಜನಪತಿ ಕಂಪುಗೊಂಡು ತೂಂಕಂಗೊಂಡಂ (ಶಾಂತಿಪು. ೬-೯೨). [< ತೂಂಕು$_2$ + ಕೊಳ್$_1$]

**ತೂಂಕಡ** 'ತೂಂಕಡು' ನೋ.

**ತೂಂಕಡಂಗಾಣ್** (ಕ್ರಿ). ತೂಕಡಿಸು ; ಜೂಗರಿಸು : ಹಂಸೆಗಳೆರಡುಮ ಯೊಂದಾಗಲೀಯಳ್ ನವಿಲ್ವಾಣತಿಯಂ ಕಣ್ಮುಚ್ಚಲೀಯಳ್ ಗಱವುವ ಗಿಳಿಯಂ ತೂಂಕಡಂಗಾ [ಪಾಠಾಂ. ಕಾ]ಣ ಲೀಯಳ್ (ಅರ್ಧನೇ. ೩-೦೦೬).

[< ತೂಂಕಡು + ಕಾಣ್]

**ತೂಂಕಡಿಕೆ,** ತೂಕಡಿಕೆ, ತೂಗಡಿಕೆ (ನಾ). = ತೂಂಕಡು ೧ : ಜೃಂಭ ಮಂತಿ ಜಡಶ್ವಾಸಂ ದೃವಿನಾಳನಂ ತೂಂಕಡಿಕೆಯುವನುಭಾವಂಗಳ್ (ರಸರ. ೪-೧೨೦). **ತೂಕಡಿಕೆ :** ಬರಬರ ಭಕ್ತಿಯರೆಯಾಯಿತ್ತು ಕಾಣಿರಣ್ಣಾ ಮೊದಲ ದಿನ ಹಣೆ ಮುಟ್ಟಿ ಮಱುದಿನ ಕೈಯ ಮುಟ್ಟಿ ಮೂಱನೆಯ ದಿನಕ್ಕೆ ತೂ[ಪಾಠಾಂ. ಮಾ]ಕಡಿಕೆ ಕಾಣಿರಣ್ಣಾ (ಬಸವ. ೨೨೦) ; ಸೆಜ್ಜೆವನೆ ಯೊಳಗೆ ಮೃದುವೆನಿಪ ತಳ್ಪದ ಮೇಲೆ ಸಜ್ಜನಂ ನೆಲಸಿ ತೂಕಡಿಕೆ ಮನವಂ ಜೋರೆ (ಬಸರ. ೯-೧೩೦) ; ಕಣ್ಣೆವೆಗಳಲಿ ನಸು ತೂಕಡಿಕೆ ತೋಱಿದೊಡೆ ವೈಗೆದಱುವನು (ಕುಮ್ಮಾ.ಅ. ೯-೮); ತುಳುಕ್ಕಾಡತಾವ ತೂಕಡಿಕೆ (ಗಂಗಾತ. ೬೦-೩) ; ತನಗೆ ತೂಕಡಿಕೆ ಬಂದಾಗ ಅಲ್ಲಿ ಕೊಂಚ ಹೊತ್ತು ಕುಳಿತುಕೊಂಡ (ಪಕ್ಷಿ. ೧೨೦). **ತೂಗಡಿಕೆ :** "ಜೃಂಭಣಂ–ತೂಗಡಿಕೆ" (ಕಾಶಕ್ಕ. ೭೭) ; ಸುಂದರಿಯರೇ ನಿಮಗೆ ತೂಗಡಿಕೆಯೇ (ಮುಲಿನಾ. ೬೦).

[ತೂಂಕಡು + – ಇಕೆ]

**ತೂಂಕಡಿಕೆಗಣ್** (ನಾ). ತೂಕಡಿಸುವ ಕಣ್ಣು ; ನಿದ್ದೆಗಣ್ಣು : ಕಳ್ಳನೆಂದು ತೂಂಕಡಿಕೆಗಣ್ಣಿಂದಾಕೆಯ ಮುಂದಲೆಯನೆಡಸಿ ಓಡಿದು (ಧರ್ಮಾಮೃ.೨-೪೭).

[ತೂಂಕಡಿಕೆ + ಕಣ್]

**ತೂಂಕಡಿಸು,** ತೂಕಡಿಸು (ಕ್ರಿ). ೧. ನಿದ್ರೆಯ ಭಾರದಿಂದ ತಲೆಯನ್ನು ತೂಗಾಡಿಸು ; ನಿದ್ರೆಯಿಂದ ಜೋಲು ; ಜೂಗರಿಸು : ತೂಂಕಡಿಸಿಯು ಮಲಸಿಯುಮಿಾಗಳು ಜಡತ್ವಮಾಯ್ತೆಂದು ಮನಮನಱುಗಬಲೆಯರ(೦) (ಮದನ. ೧೦-೫೭) ; ಬಡವಪ್ಪೊಡೆ ... ತೂಂಕಡಿಪೊಡೆ ಪಶುಗಳ್ಗೆಲ್ಲಂ ಕೊಡು ವುದು ಬೇವಿನ ಕಷಾಯಮಂ (ಲೋಕೋಪ. ೯-೨೦೭) ; ತೂಂಕಡಿಪ್ಪವರ ನೊಪ್ಪುವ ಪಾಸಿನ ಮೇಲೆ ನೂಂಕಿದಂತಾದುದು (ಪಾರ್ಶ್ವಪು. ೩-೧೦೩) ; ತನು ಬಡವಪ್ಪ ತೂಂಕಡಿಸುವಾಗುಳಿ ಪುಟ್ಟ ... ಪೊಂಗಿ ಬಸಿಱ್ ಬಿಗಿದನ್ನೆಗರ್ಭಿಣೀಜನದ ವಿಕಾರಮಾ ಸತಿಯೊಳಾಗವೆ (ಪುಷ್ಪಪು. ೯-೧೧೭) : ನಿದ್ದೆಯ ಬಿಣ್ಪಿಂ ತೂಂಕಡಿಪ ನಿನತೊಂದು ಗುಣಂ ಹೀನಂ (ರಾಮಾಶ್ವ. ೯೩-೧೧). ೨. ನಿದ್ರೆಮಾಡು : ಲೋಕಪಾಲನಿರುಳ್ ತೂಂಕಡಿಸುವಾಗಳ್ (ಶಾಂತಿಪು. ೮೫-೬) ; ತೂಂಕಡಿಪ ವನ್ಯಮೃಗಂಗಳ ಮಗ್ಗುಲೊಳ್ ತೆಱಂದಿರಿದು ಹಿಮಾಂಶುರಶ್ಮಿಗಳನುಜ್ವಳಿಸಿದುಟಜಾಂಗಣಗಳೊಳ್ ಪರೆದೆಸ ಗಿತ್ತತಿಪ್ರಮುದಕಾರಣನಂದು ನಿಶಾಸಮಿಾರಣಂ (ಕಾದಂಪೂ ೨೮೩) ; ಚೇರಮ ನಲ್ಲಿ ತೂಂಕಡಿಸೆ ಕನಸಿನೊಳಗೆಲ್ಲವಂ ಪುರಹರನೊಡಂಬಡಿಸೆ (ನಂಬಿರ. ೧೭-೧೧) ; ಆತನೊಂದು ಲತಾಭವನದೊಳ್ ಮಱಿದು ತೂಂಕಡಿಸೆ (ಪುಣ್ಯಾಸ್ರ. ೦-೯೦೭). ೩. (ಅಲಂ) ಕಾರ್ಯಗತವಾಗದಿರು ; ಆಚರಣೆಗೆ ಬಾರದಿರು : ನಿಯಮ ನಿಬಂಧನೆಗಳ ಕಟ್ಟುಪಾಡು ನಿಶ್ಚಯ ವಾಗಿ ತೂಂಕಡಿಸುತ್ತಿರುವುವು (ಚಿಟ್ಟೆಅ. ೩೪-೧೭). **ತೂಕಡಿಸು :** ೧. ಕೋಕನದಷಂಡತಟದೊಳ್ ತೂಕಡಿಸುವ ಹಂಸನಂತಿರೆ (ದಶಕು. ೦೪-೧೩) ; ಕೃತವರ್ಮನೊರೆದಾಗುಳಿಸಿ ತೂಕಡಿಸಿದನು ತೆಗೆದುದು ನಿದ್ರೆ ತನುಮನವ (ಕುಮ್ಮಾಗ. ೯-೩): ಭಂಗಿಯ ತಿಂದಂತೆ ತೂಕಡಿಸುತ ಮತ್ತೆ ಕಂಗಳ ಮುಚ್ಚಿ ತೆಱೆವುತ ಬಿಂಗಿಯಂತಾಡುವ ಕಂಥೆಯ ಜೋಗಿಣಿಯಂಗದಾಟವೆ ನಮ್ಮ ನೃತ್ಯ (ಭರಕ. ೦೪-೩೨); ಕಿರಣಸಿಂಗ ತೂಕಡಿಸುತ್ತಿದ್ದ (ದೇವಸಾ. ೩೦): ತೂಕಡಿಸುತ್ತಿದ್ದವನಿಗೆ ಹಾಸಿಗೆ ಹಾಸಿ ಕೊಟ್ಟಂತೆ (ಗಾದೆ). ೪. (ಅಲಂ) (ಹೂವನ್ನು) ಬಾಡಿಸು ; ಮುಂಚ್ಚಿಕೊಳ್ಳುವಂತೆ ಮಾಡು: ನಗಿಸಿಯೆ ಕುಮುದಿನಿಯ ತೂಕಡಿಸಿ ಕಮಲಿನಿಯ ... ಸಂಧ್ಯಾಮಡದಿಯೊಪ್ಪಿದಳು (ಜೀವಂಕ. ೪-೦೭). [ತೂಂಕಡು + – ಇಸು$_3$]

**ತೂಂಕಡು,** ತೂಂಕಡ, ತೂಕಡು (ನಾ). ೧. ನಿದ್ರೆಯ ಜೊಂಪು ; ತೂಕ ಡಿಕೆ; ಮಂಪರಂ : ತುಂಗಭದ್ರನೆಂಬ ಪೊಡಂಗಾಱಿ ಸೊರ್ಕಿ ತೂಂಕಡಿಂ ದಿರುಳ್ ಕಟ್ಟಿಂಗಳ್ ಕಡುಗತ್ತಲೆಯೊಳ್ ಬಂದು (ವಡ್ಡಾರಾ. ೦೪೭-೨೨). ೨. ನಿದ್ರೆ: ಆ ತೂಂಕಡಿನೊಳ್ ಪರವಶತೆ ಬೆರಸಿತರಸನೊಳಾಗಳ್ (ಲೀಲಾವ. ೩-೫೩): ಪದೆದಿರ್ದ ವನವಿಹಂಗಂಗಳಂ ಕೊಂಬುವೆರಸಿ ತೂಗಿ ತೂಂಕಡನೊಡರ್ಚಿಯುಂ (ಚಂದ್ರಪು. ೮-೪೭) ; ಪತತ್ರಿಗಳೊಳಿರ್ಪಾ ತೂಂಕಡಂ ನೂಂಕುತುಂ ತಣ್ಣನೆ ತೀಡಿತ್ತೆನಸುಂ ಪ್ರಭಾತಸಮಯ ಪ್ರೋದ್ಭೂತಶೀತಾನಿಲಂ (ಕುಸುಮಾ. ೧-೫೨). **ತೂಂಕಡ :** ೨. ತೂಂಕಡದ ಮಯ್ಯಲಸಿನಿಂದೇಳಲೊಲ್ಲದೆ (ಮಂತ್ರಕ. ೦೨೯-೪). **ತೂಕಡು :** ೨. ಪುರ್ಬಿನ ಕುಡಿವೆರಸು ತೂಕಡನೊಳಕೊಂಡ ಜಾಡ್ಯಮುಂ ಸೊಕ್ಕು ಮುಕ್ಕು ಳಿಸಿದಂತಿರ್ದಿರವುಂ ... ದೊರೆಕೊಳ್ಳುಮೆಂದು ಭಾವಿಸಿ (ಕಾದಂಪೂ. ೭೫೯).

[ದೇ. II ತಮಿ. ತೂಙ್ಕಲ್ ; ಮಲ. ತೂಙ್ಙಲ್ ; ತುಳು. ತೂಗಡಿ]

**ತೂಂಕಡುಗೆಡು** (ಕ್ರಿ). ನಿದ್ರೆ ತಿಳಿ ; ಎಚ್ಚರವಾಗು : ಅಗಳಾತನುಂ ನೇಸರ್ಮೂಡುವಾಗಳ್ ತೂಂಕಡುಗೆಟ್ಟು ದೆಸೆಗಳಂ ನೋಟ್ಟುಂ (ವಡ್ಡಾರಾ. ೫೪-೦೯). [ತೂಂಕಡು + ಕೆಡು$_1$]

**ತೂಂಕಿಡು** (ಕ್ರಿ). ಇಡಿ ; ತುಂಬು ; ತುರುಕು (?) : ಧರೆಗಂ ವ್ಯೋಮಕ್ಕ ಮೆಂಟುಂ ದೆಸೆಗಮಡಸಿ ತೂಂಕಿಟ್ಟವೋಲ್ ಭೂತಸೈನ್ಯಂ ಬರೆ (ಜಗವಿ. ೧೪-೦೯). [P ಇದು 'ತೂಂತಿಡು' ಎಂಬುದರ ಅಪಲಿಖಿತವಿರಬಹುದು]

**ತೂಂಕು$_1$,** ಜೂಗು, ತೂಕು$_1$, ತೂಗು$_1$ (ಕ್ರಿ). ತೂಂಪ, ತೂಂಬ, ತೂಪ (ಭವಿಕೃ). ೧. ತಕ್ಕಡಿ ಮೊದಲಾದ ಸಾಧನಗಳಿಂದ ಭಾರವನ್ನು ಕಂಡು ಹಿಡಿ, –ತೂಕಮಾಡು, –ತೋಲನವಾಡು: ತೂಂಕಿ ನೋಡಿದರ್ ದಿಟ್ಟ ದೊಲೆಯೊಳೊರ್ವರನೊರ್ವರ್ (ಜಗವಿ. ೯-೬೧); ನಿತ್ಯಬಿಂದುಗೆ–ಬೆಡಂಗು, ಕಡಂಗು ... ಕೂಂಕಿದಂ, ತೂಂಕಿದಂ (ಶಮದ. ೩೭ ಪ್ರಯೋ). ೨. ತೂಗಾ ಡಿಸಂ ; ಅಲ್ಲಾಡಿಸಂ ; ಅಲುಗಾಡುವಂತೆ ಮಾಡು : ತಮ್ಮ ಗದೆಗಳ ನಾಗಳ್ ಕಿಱಿಕಿಱಿದೆ ತಿರುಪಿ ಮಾಣದೆ ಕಿಱಿಕಿಱಿದನೆ ತೂಂಕಿ ತೂಂಕಿ ನೂಂಕಿದರೆನಸುಂ (ಗದಾಯು. ೮-೭): ಅವಷ್ಟಂಭದಿಂ ತೂಗಿದ ಬಾಳ್ಪಾ ಳ್ದತ್ತು ಬಾಳ್ಪಗ್ಗಡದ ಬಿರುದರಂ ತೂಗಿ ತುತ್ತಿಟ್ಟುದೇಂ ತಾಳ್ದಿದನೋ ವಿಕ್ರಾನ್ತಮಂ ಯಾದವಕುಳತಿಳಕಂ ವೀರಬಲ್ಲಾಳದೇವಂ (ಎಕ. IV, ಕಿಕ್ಕೇ. ೯೫-೪೦; 1196). ೩.ನೇತಾಡು; ಜೋಲು; ಇಳಿಬೀಳು : ಫಲದ ಬಿಣ್ಪಿಂ ತೂಂಬವೋಲ್ ಜೋಲ್ದಿಳಾಂತರವಂ ತಳ್ತು ವಿರಾಜಿಸಿತ್ತಭಿನ ತೋದ್ಯನ್ನಾಮ್ರತುಳುಂಗವ್ರಜಂ (ಕುಸುಮಾ. ೯-೩೦) : ತೂಂ [ಪಾಠಾಂ. ತೂ] ಪೆಳಿಗಾಯ್ಗಳೆಂಬ ಕುಂಡಲವುಮಾರ್ದಾಡೆ ನಂದನಮೆ ನಂದನಮಾದುದು ಚೈತ್ರರಾಜನಾ (ವೃಷವಿ. ೪-೫೭). **ಜೂಗು :** ೪. ತೊನೆ ; ಓಲೆ ; ತೂಗಾಡು : ಬಳಲುತ್ತ ತೊಳಲುತ್ತಿರ್ಪ ಭವರೋಗದಲ್ಲಿ ಜೂಗುತ್ತಿರ್ಪ ಬಂಧನದ ಈ ದುಂದುಗವಿನ್ನೆಂದಿಗೆ ಪೋಪುದು (ವಚನಾ. 11, ೦೫೩). **ತೂಕು$_1$:** ೪. ಬೀಳುವಂಬಿನ ಹೊಯ್ಲು ಖಿದ್ಗದ ತೂಳುವಾನೆಯ ತೂಕಿ ಕಾಗುವ ಶೂಲಿಗೆಯ ... ಧಾಳಾಧೂಳಿ ಮಸಗಿತು (ಕುಮ್ಮಾಕ. ೧೦-೯). **೫. ತೂಕ** ವನ್ನು ತೋರು : ಏನದಕೆ ಸುರಪತಿಯ ದಂತಿ ಸಮಾನವೆಂಬರದಷ್ಟದಿಕ್ಕು ಗಳಾನೆಗಳ ಪಡಿಕಟ್ಟು ತೂಗಲು ತೂಕುವವು [ಪಾಠಾಂ. ತೂಕಕವು] ಕಿಱಿದು (ಕೊರರಾ. ೬-೩೨-೦೪). **೬.** ಸಮಾನವಾಗೆಣಿಸು : ಮಂದರಾಚಲದಿಂದ ತೂಕಿಯೆ ವರಪಿನಾಕವ ಕೊಟ್ಟನಾ ಶಿವನು (ಸಂಭಪ. ೨೪-೧೭). **ತೂಗು$_1$ :** ೧. ಧರೆಯಱಿಯಲೊಡಂ ತೂಗಲ್ ಧರೆಗೆ ತುಲಾದಂಡಮಲ್ತೆ ಮದ್ಭುಜ ದಂಡಂ (ಆದಿಪು. ೦೪-೬೧): ಮೇಲೆ ತೂಗುವ ತ್ರಾಸು ಕಟ್ಟಳೆ ನಿಮ್ಮ ಕೈಯಲ್ಲಿ (ಬಸವ. ೪೪೦) ; ದೇವದ್ರುಮವಂ ಲಕ್ಷ್ಮಾದೇವಿಯುಮಂ ಕಮಳ ಸಂಭವಂ ತೂಗಿದೊಡಾ ದೇವದ್ರುಮಕ್ಕೆ ಲಕ್ಷ್ಮಾದೇವಿ ದಶಾಫಲದ ಬಿಣ್ಪಿನಿಂ ಘನವಾದಳು (ಶಾಸಂಇ. IX–1, ೨೭೩-೫೭; 1179) ; ಓರಂತೆ ಮರಕಾಲರು ಹಡಗಿನ ವ್ಯವಹಾರದಿ ಗಳಿಸಿದ ಹಣವ ಭಾರಸಂಖ್ಯೆಯಲಿ ತೂಗುವರು (ಪ್ರೋಹಚ. ೩-೨೯) ; ವರುಣಗಿರಿ ಪೂರ್ವಾದ್ರಿಗಳ ಹೆಚ್ಚು ಕುಂದುಮಂ ಸರಸಿಜಭವಂ ನೋಳ್ಪೆನೆಂದು ತೂಗಲ್ (ಚಬಪು. ೯-೦೭) ; ಶಶಿ ರವಿ ತ್ರಾಸಲೀ ಪುರವ ಸಗ್ಗವನೊಲ್ದು ಬಿಸರುಹಾಸನ ತೂಗುತಿರಲು

(ಶಂಸವಿ. ೩-೪). ೨. ಮೆಯ್ಯಂ ತೂಗುತ್ತುಂ ಉನ್ಮತ್ತ ಚೇಷ್ಟೆಯಿಂದೆರೆಯಂ ತಿಂದ ಮೀನಂತೆ ಪೊಳೆಯುತ್ತುಂ (ಧರ್ಮಾಮೃ. ೫-೦೩೬) ; ನಿಮ್ಮನ್ವಯವ ಸಂಹರಿಸಿದಿರಿ ಸಾಕೆಂದು ಸಂಜಯ ತೂಗಿದನು ಶಿರವ (ಕುಮಾ.ಕ. ೧-೦೫). ೪. "ತೊನೆ, ಒಲೆ, ತೂಗು, ಸೆಡವು, ಅಲ್ಲಾಡು, ನಡುಕಂ– ಈ ೬ ಕಂಪನಂ" (ಕಕಸಾ. ೩೧-೬೩೦) : ತೂಗಿ ಪಣ್ಗೊಲೆಯಿಂ ಬಳ್ಕುವ ಕೌಂಗು (ಆದಿಪು. ೦-೬೭) ; ತನು ಪುಳಕಾಳಿಭಾರದೊಳೆ ತಾಂ ತೂಗುತ್ತಿರಲ್ (ಕುಸುಮ. ೬-೮೪) ; ತಿಂದು ತೇಗಿ ತೂಗಿ ಕೆಲೆಕೆಲೆದು . . . ನಲಿದಾಡುವ ಭಲ್ಲೂಕ ನಿಕಾಯದಿಂ (ಗಿರಿಕ. ೦-೦೨೫ ವ) : ನಸುಗೆಂಪಿನಿಂ ಬೀಗಿ ಬಾಗಿ ತೂಗುವ . . . ತೆನೆಗಳಂ ತಿಱಿತಿಱಿದು ತಂದು ತಂದು (ಸಿದ್ಧರಾ. ೨-೨೫) ; ಬಾರಿಗಳು ಬಲವೆರಡಱೊಳಗೊಯ್ಯಾರದಲಿ ತೂಗಿದವು (ಕುಮಾರವ್ಯಾ. ೧-೫೦) : ಎಡಗೆಯ್ಯ ಮುಷ್ಟಿಯಂ ತಾಣದೊಳಗೆ ಕೆಯ್ಯಡಗಿ ತೂಗುವ ಪಾದದ್ವಯದಿ ಪೊಡವಿ ತಲ್ಲಣವಂತೆ ಖಳರಾಯ ಗರ್ಜಿಸಿ ವ್ಯಾಡತವದ್ಧಂಸಿಯ ತಿವಿದ (ಮೋಹತ. ೦೨-೮೭) : ನೆಲಲ ಚಪ್ಪರದಲ್ಲಿ ಹಣ್ಣುಗಳೂ ಅಡಕೆಯ ಗೊಂಚಲುಗಳೂ ತೂಗುತ್ತಿದ್ದುವು (ಕಾಂ೩ಕ. ೦೩ ಕಥಾಸಾರ). ೭. ನೇತು ಹಾಕು ; ಇಳಿಬಿಡಂ : ಭಾಳಾಕ್ಷನ ರೂಹು ನಿನಗೇಕೆನುತ ನಾರಿಕೇಳಫಲವ ಕಟ್ಟಿ ತೂಗಿ . . . ಹೋಳ ಮಾಡಿದರು ಜೂದಿನಲಿ (ಪ್ರಭುಲಿ. ೨೦-೨೨). ೮. ತೊಟ್ಟಿಲು, ಉಯ್ಯಾಲೆ ಮೊದಲಾದಂವುಗಳನ್ನು ಆ ಕಡೆಯಿಂದ ಈ ಕಡೆಗೆ ಚಲಿಸುವಂತೆ ಮಾಡಂ ; ಜೀಕು : ಇದು ಲೀಲಾಂದೋಳ ವಿಂದೋಳದ ದನಿ ನೆಱೆಗೊಳ್ವನ್ನೆಗಂ ಪಾಡಲೆಂದೇಱಿದಳಂ ತೂಗುತ್ತು ವಿವರ್ತನ್ನಯ ಪರಿಜು (ಆದಿಪು. ೪-೯) ; ಉನ್ಮದದಂತಿದಂತಯುಗದೊಳ್ತಂ ನರ್ತ್ತಿಯಿಂ ಕಟ್ಟಿದುಯ್ಯಲನಾನಂದದೊಳೇಱಿ ದಿಗ್ವನಿತೆಯತ್ತೂಗಲ್ಕೆ (ಎಕ. VIII. ಸಾಗರ. ೦೦೯-೪೦; 1042) ; ಪಾಡುತೆ ತೂಗಿದರಖಿಳಪ್ರಪಂಚ ವಾಡಿವ ಶಿಶುವಂ (ಗಿರಿಕ. ೩-೬೭); ಮಣಿಲೀಜಿ ಸುತವಮಾಲೆಯಾರಿಗೆ ಪುಟ್ಟಿದ ಕಂದನ ತೂಪಲ್ಲಿ (ಜೀರಮು. ೮-೨೦) ; ತೂಗಿರೆ ರಂಗನ ತೂಗಿರೆ ಕೃಷ್ಣನ ತೂಗಿರೆ ಅಚ್ಯುತಾನಂತನ (ಪುರಂದ. ೨-೦೩೬ ಪಲ್ಲವಿ). ೯. ಉಯ್ಯಲಾಡು ; ಜೀಕಿಕೊಳ್ಳು : ಬಾಗಿಲ ಮುಂದಣ ನವಿಲುಯ್ಯಲನೇಱಿ ತೂಗುತಿರ್ಪೆಳ ವೆಣ್ಣುಗಳ ಸೋಗೆಗಣ್ಣಱಮಿನು ಸುಳಿದಾಡುವ ಜನಸಾಗರದೊಳಗೊಪ್ಪು ತಿಹುವು (ಶಂಸವಿ. ೬-೯). ೧೦. ಜಗ್ಗು ; ಸೆಳೆ : ತೂಗಿ ಕಿವಿವರೆಗುಗಿದು ಯಂತ್ರವ ತಾಗಿಸಿದನಂಬಿನಲಿ (ಕುಮಾರವ್ಯಾ.ಆ. ೧೫-೨೯) : ಪಾರ್ಥ ಸಾಕಿನ್ನೇಳು ಬಾಣವ ತೂಗು ಮಾತಾಡಿಸು ಮಹಾಧನುವ (ಕುಮಾರವ್ಯಾ.ಭೀ. ೩-೨೪). ೧೧. ಎಸೆ; ಬೀಸಂ; ಹೊಡೆ: ತರಳಾಪಾಂಗಂಗಳೊಳ್ ಮಚ್ಚರಿಪಲರ್ಗಣೆಯಂ ಕಟ್ಟಿ ತೂಪಂದದಿಂ ಚಾಮರಮಂ ವಕ್ಷೋಜಪೀಠಸ್ಥಿತ ಮದನನ್ನಪಂಗೆತ್ತು ವಂತೆ (ಲೀಲಾವ ೬-೦೪). ೧೨. ಹೋಲಿಸಂ ; ತಾಳೆನೋಡು : ಪಾವಿನ ನಂಜುಮುನವರುಮನೋವಿನಿಸಂ ತೂಗಿ ನೋಡೆ (ಧರ್ಮಾಮೃ. ೨-೦೦೬) ; ನಿಮ್ಮಾರುಭಟೆಯನು ನಮ್ಮ ಬಾಹುವಿಕಾರ ಬಲವನು ತೂಗಿ ಯೆನುತೆಚ್ಚನು ಧನಂಜಯನ (ಕುಮಾರವ್ಯಾ.ಕ. ೨೦-೫೭) ; ಭೂಗಗನಪಾತಾಳ ದರಮನೆಗಳೆದಱೊಡನೆ ತೂಗೆ ಸರಿಬಾರವು (ಜೈಮಿ. ೫-೫೨) ; ರಾಘವಾನು ಜಂಗೆ ಕೆಲಬಲನ ವನಂಗಳಂ ತೋಱಿ ಅಂದಿನ ದಂಡಕೆಗೊರೆಯಾಗದೆಂದು ತೂಗಿ ಬಣ್ಣಿಪರ್ (ರಾಮಾಶ್ವ. ೩೩-೦೨). ೧೩. ಪರೀಕ್ಷಿಸಂ ; ವಿಮರ್ಶಿಸಂ ; ಯೋಗ್ಯತೆಯನ್ನು ನಿಷ್ಕರ್ಷಿಸಂ : ಕರದಿಂ ಸರಲಂ ಕಣ್ಣಿಂದ ರಾಶಿಯಂ ತೂಗಿದೂಗಿ (ಶಾಂತಿಪು. ೪-೫) ; ದಂಡುವೇಟ್ಟರಸಿನಂತೆ ತೂಗಿ ಬಿಡುವ ನಾಯಕನಂತೆ ಕಲಹಂ ಮಾಟ್ಟ ಕೊಂಡೆಯನಂತೆ ಲೇಸಲ್ಲದ ಸುಖಕ್ಕೆ ಪಾಯಿಸಿ ನೋಯಿಸುವಿಂದ್ರಿಯಂಗಳುಮಂ (ಧರ್ಮಾಮೃ. ೯-೨೩) ; ದೂರಕೆ ದಿಟ್ಟಿಯ ಪಸರಿಸಿ ಕೊರಲೆತ್ತಿ ದಾರಿದಾರಿಯ ತೂಗಿ ನೋಳ್ಪ (ಭರತೇ. ೩-೩೬) : ತೂಗಬೇಕು ಮನದೊಳಗೆ ತೂಕವುಳ್ಳವರ ಮಾತು ಹಿಡಿದು (ನಿಂಮು. ೪೯-೯) : ಗದ್ಯವನ್ನೋ ಪದ್ಯವನ್ನೋ ಓದಿ, ಆನಂದಿಸಿ ಅದರ ಬೆಲೆಯನ್ನು ತೂಗಿದ ಮೇಲೆ ಅದರಲ್ಲಿರುವ ಉದಾತ್ತ ಧ್ಯೇಯಗಳನ್ನೂ ಕೌಶಲ್ಯವನ್ನೂ ಅನುಭವಿಸುವ ಶಕ್ತಿಯುಂಟುಮಾಡುವುದು (ಶಿಕ್ಷಣ. ೨೬೯). ೧೪. ಸಾಧ್ಯವಾಗು : ಕಾಳೆಗಂ ತೂಗದಿವರೊಡನೆಮ್ಮ ವರ್ಗನುತ ನೋಟಕರ್ ನುಡಿವುತಿರೆ (ಜಬಪು. ೪೨-೦೬). ೧೫. ನಿಲುಕಂ ; ಮುಟ್ಟು ; ಹಿಡಿತಕ್ಕೆ ಬರಂ : ನಮ್ಮ ಸಾಮಾನ್ಯ ವ್ಯವಹಾರದಲ್ಲಿಯೇ ಎಷ್ಟೋ ಮಾತು ತಲೆಗೆ ತೂಗದೆ ಹೋಗುವಾಗ, ಶಾಂತಿಯ ನೆಲೆಯು...ಅಳತೆಗೆ ಸಿಕ್ಕದಿರುವುದು ಆಶ್ಚರ್ಯವಲ್ಲ (ಸಾಹಿವಿ. ೦೩೭). ೧೬. ಸಾಟಿಯಾಗು ; ಸಮಾನವಾಗಂ : ರಮಾದಿ ಸಮಸ್ತ ಪ್ರಪಂಚದ ಸುಖವು ಒಟ್ಟುಗೂಡಿದರೂ ಪರಮಾತ್ಮನ ಸ್ವರೂಪಾನಂದದ ಒಂದಂಶಕ್ಕೂ ತೂಗಲಾರದು (ಜಗದಾ. ೨೦೪). ೧೭. ತೇಲಿಸು : ಸಾಗರದ ತೆರೆಗಳಲಿ ಗಿರಿಗಳ ತೂಗಿ ಸೇನೆಯ ನಡೆಸಿ (ಕುಮಾರವ್ಯಾ.ಆ. ೨೨-೫೨).

ತೂಗ ಕಟ್ಟು = ನೇತುಹಾಕು : (ಕ). ತೂಗಿಕೊಳ್ = ನೇಗೆ; ಹಾರು ; ಬೀಳಂ : ತಾಗುವ ತಗರು ಬರಲೋಡಿ ಬಾವಿಯ ತೂಗು[ಗಿ] ಕೊಂಡಂತೆ (ಸರ್ವಜ್ಞ. ೦೦೦೦). ತೂಗಿ ತೊನೆ = ತೂಗಾಡಂ ; ಒಲೆ : ಅಂತಾಕೆಗಳ್ ತೂಗಿ ತೊನೆವ ತೊನೆಪಂಗಳುಮಂ ... ನೋಡಿ (ಪಂಪಭಾ. ೪-೯೦ವ). ತೂಗಿ ನೋಡು = ೧. ತೂಕಮಾಡಿ ನೋಡು ; ಭಾರ ಕಂಡಂಹಿಡಿ : ಹರಿಯ ಭಕ್ತರ ಕೆರಹನೊಂದೆಸೆಗಿರಿಸಿವೊಂದೆಸೆಯಲಿ ಮಹೀಸುರವರರ ನೇಱಿಸಿ ತೊಲೆಯನೆಲ್ಲರು ತೂಗಿ ನೋಡಲ್ಕೆ (ಬಸವಪು. ೫೫-೫೭). ೨. ವಿಮರ್ಶಿಸು ; ಪರೀಕ್ಷಿಸಂ : ಗೋವಿಂದನ ಮತದಲಿ ತೂಗಿ ನೋಡುವೆನಿದಱ ತೂಕವನೆಂದನಾ ಭೂಪ (ಕುಮಾರವ್ಯಾ.ಸ. ೨-೫). ತೂಗಿಬಿಡು = ಸೆಳೆದು ಬಿಡು; ಜಗ್ಗಿಬಿಡು : ಹೂಡಿ ಮಂಡಿಯ ಕಿವಿವರೆಗೆ ಕರಾಂಗುಲಿಗೂಡಿ ಬಾಣವ ತೂಗಿಬಿಡುತ ಕೂಡೆ ವೈರಿಗಳ ಕೆದಹಿ ಪತಿರುಣವ ನೀಗಾಡಿದರು (ಶಂಸವಿ. ೦೯-೬೫). ತೂಗುಹಾಕು, ತೂಗಹಾಕು, ತೂಗಂಹಾಕು = ನೇತುಹಾಕಂ ; ಇಳಿಬಿಡು : ಮನೆಯ ಗೋಡೆಯ ಮೇಲೆ ದೇವರ ಪಟಗಳನ್ನು ತೂಗುಹಾಕಿದ್ದಾರೆ (ರೂಢಿ); ತೂಗಾಸರೆಯಿಂದ, ಜೋಲಿಯಲ್ಲಿ,–ತೂಗಹಾಕು: ಜೋಲಹಾಕು (Sling. ಇಂಕನಿ) ; ತನಿಗಂಪು ಹೂವುಗಳ ಪೊರೆಯೊತ್ತಿ ತಂಗರಗಕನುವಾಗಿ ತುಂಬಿ ತೂಗಂಹಾಕಿ ಬಿಜ್ಜಣಿಗೆಯಾನಿಲನಿಂ ಬೀಸಿ ಮಾಡಿದುದು ಹಂಸೋದಕಂ (ಸೂಪಶಾ. ೨-೪೦).

[ ದೇ.೩ ತಮಿ. ತೂಙ್ಕು, ತೂಕ್ಕು ; ಮಲ. ತೂಕ್ಕು, ತೂಙ್ಙು ; ಕೊಡ. ತುಂಗ್ ; ತುಳು. ತೂಂಕು, ತೂಂಗು, ತೊಕು, ತೂಗು ; ತೆಲು. ತೂಂಗು, ತೂಗು ; ಕುವಿ. ತೂಂಗಲಿ, ತೂಖಲಿ ]

**ತೂಂಕು$_2$, ತೊಕು$_2$, ತೂಗು$_2$** (ನಾ). ೧. ತೂಗಾಡಂವಿಕೆ ; ಒಲೆದಾಟ ; ತೊನೆತ. 'ತೂಂಕಂಗೊಳ್' ಪರಾ. **ತೂಕು$_2$** : ೨. ತೂಕ ; ಭಾರ : ನಗದ ತೂಕೇರಬೇಕೆಂದು ... ಮೊಟ್ಟತನದಿಂದ ತುಂಬಿದ್ದಾದರೆ ಆವಾಗಲೆ ತಿಳಿದು ಬರುವುದು (ಮುಂಬಬ್ಬಾ. ೪೨). **ತೂಗು$_2$** : ೧. ಶಿರದ ತೂಗಿನ ತಳ್ಪವಾಱಿಸಲಳಲಿದಳು ಕಾಂತೆ (ತೊರಕಾ. ೨-೩-೪೦). (ಗು). ೩. ತೂಗಾಡುವ ; ಒಲೆದಾಡುವ. 'ತೂಗುಗುಂಡು' ಪರಾ.

[ <ತೂಂಕು$_1$./ತುಳು. ತೂಂಕು, ತೂಕು ; ತೆಲು. ತೂಕು ]

**ತೂಂತಿದ್ದು$_1$, ತೂತಿದು** (ಕ್ರಿ). ೧. ತಂಬು; ತುರುಕು; ಇಡಿ; ಗಿಡಿ (?) : ಆತನ ಕೆಲದೊಳ್ ಬಾಳಬಟ್ಟಂ ತೂಂತಿಟ್ಟಂತೆ ಸಂದಣಿಸಿ ನಿಂದ ಗೋಪ ಕುಮಾರರಣಿಯ ನಡುವೆ...ನಿಂದಾತನೆನ್ನ ತಮ್ಮಂ (ಪಂಪಭಾ. ೦೦-೫೭ವ). ೨. ಉಕ್ಕು ; ತುಂಬಿ ಬರು : ಎನಸುಂ ಭಿನ್ನಘಟಕ್ಕೆ ತೂಂತಿದುವುವೇ ನದ್ಯಾದಿಗಳ್ (ಅರ್ಥನೀ. ೪-೫೭) ; ತುಂತುಱು ತೆರೆ ನೊರೆ ಘುಳುಘುಳುರವ ತೂಂತಿಟ್ಟು ಹೊಳೆವ ವಾರಿಧಿಯ ಕಾಂತೆಯರೆಲ್ಲರೀಕ್ಷಿಸುತಿರೆ (ಭರತೇ. ೨೩-೯೭). **ತೂತಿದು** : ೧. ಕಿವಿಯೊಳ್ ಬೆರಳಂ ತೂತಿಟ್ಟು (ಶಬ್ದಶಾ. ೦೩೬-೧೫). [ ತೂಂತು$_1$ + ಇದು$_1$ ]

**ತೂಂತಿಡು$_2$** (ಕ್ರಿ). ಕಂಡಿಮಾಡು ; ರಂಧ್ರಮಾಡು ; ವೆಜ್ಜಮಾಡು ; ಚುಚ್ಚು : ಗಾತ್ರಂ ಏಯನ್ಮಂಡಲಕೆ ತಡೆಯೆ ತೂಂತಿಟ್ಟನೆಂಬಂತೆ ನಿಂದಂ (ಧರ್ಮಾಮೃ. ೯-೨೩೦) ; ಬಾಂಗೆ ತೂಂತಿಟ್ಟವೊಲವ್ಪ ವೆಯ್‌ (ಚಂದ್ರಪ್ರ. ೫-೬೦); ವಿದ್ಯಾಧರಬಲಂ ನೆಲಕಮಂಬರಕಂ ತೂಂತಿಟ್ಟಂತೊಡ್ಡಿ ನಿಲ್ವುದುಂ (ವರ್ಧಪು. ೮-೪೦ವ) ; ಅಲ್ಲಿ ತೂಂತಿಟ್ಟಂತೆ ನಿರುತರಂ ಸುೞಿವ ನಾನಾದೇಶ ಪ್ರಸಿದ್ಧರಾಜಪುತ್ರ ವಣಿಗ್ವಲ್ಲಭವಾರನಾರೀಭಾರತಿಕನಿಕರದ ... ಪರಿಮಳ ಪ್ರವಾಹಸಮೂಹದಿಂ (ಅನಂಪು. ೦-೧೦೫ವ). [ ತೂಂತು$_3$ + ಇಡು$_1$ ]

**ತೂಂತಿೞ್** (ಕ್ರಿ).೧. ತುಂತುರುಹನಿಯನ್ನು ಹೊರತಳ್ಳು,-ಹೊರಹಾಕಂ: ಹರಿ ಹರಿದದ್ರಿಕುಂಭದಿನೊೞಲ್ದೊಗೆದಿಂದುಮವಿಷ್ಪಗಸ್ತ್ಯನಚ್ಛರಿ ವಿಗೆ ನೀಳ್ದ ತನ್ನ ಕರದಿಂ ಮೊಗೆದಂಥತಮಸ್ಸಮುದ್ರಮಂ ತುರಿಪದಿನೀಂಟು ತಾಗಳೆಡೆ ಸಿಲ್ಕಿದ ಮುತ್ತುಗಳಂ ತೆರಳ್ಚಿ ಪುಷ್ಕರದೆಡೆಯಲ್ಲಿ ತೂಂತಿೞಿದ ಪೋಲ್ತುಱಗಿರ್ದುದು ತಾರಕೋತ್ಕರಂ (ವೃಷವಿ. ೮-೫೦). ೨. ಬಾಯಿಂದ ಗಾಳಿಬಿಡು ; ಊದು : ತಲ್ಲಿಂಗಾಗ್ರದೊಳ್ಪತ್ತಿ ಮೇಣ್ಬರಂತರ್ಪೊಂದು ಸೆಲಂದಿಯಂ ಜವದಿನಾಗಳ್ಕಂಡು ತತ್ಕ್ಷಾಂತೆ ಬಾಯೆರಲಿಂ ತೂಂತಿೞಿದರ್ (ವೃಷವಿ. ೯-೫೬) ; ಬಾಯುಗುಳ್ಪಡಿಯ ತೂಂತಿೞಿದಪ್ಪೆ (ವೃಷವಿ. ೯-೫೭). [ ತೂಂತು$_4$ + ಇೞ್$_1$ ]

**ತೂಂತು$_1$** (ಕ್ರಿ). ಇಡಿ; ತುಂಬು; ಗಿಡಿ ; ತುಱುಂಕು; ತೂರಿಸಂ: ಉಗ್ರಗಜೇಂದ್ರಂ ಬೆರಸೋವದಂತಕನ ಬಾಯೊಳ್ ತೂನ್ತಿ (ಎಕ. XIII, ೩೨೯-೪ ; ೨೩೦) ; ಅವನಂ ಮಾರುತಿ ನಿವಿಷಕ್ಕೆ ತೂಂತಿದಂ ಯಮಮುಖ ದೊಳ್ (ಪಂಪಾಭಾ. ೧೦-೬೦) : ಕರಮಂ ತೂಂತಿ ಶದಾಸ್ಯದೊಳ್ ಬಳೆಯಿ ಸಲ್ (ಜಗವಿ. ೫-೪೬) : ತನ್ನ ಗೋತ್ರಾವಳಿಯುಕ್ತಮಾಗಿ ನೆೞ್ ತೂಂತುವೆನಂತಕನಾಸ್ಯರಂಧ್ರದೊಳ್ (ಶಾಂತೀಶ್ವ. ೬-೧೦೭); ಅವನ ಮೈ ಯನು ಕೊಱೆಕೊಱೆದು ತೂಂತುವರು ಬಾಯೊಳಗೆ (ವರ್ಧಚ. ೮-೮೯); ಬೀರ್ವಗ್ಗಮಂ ಹಾಯ್ಕಿ ಸೇದಿದರ್ ಮರುಳ್ಗಳ್ಗಳಿಂ ತೂಂತರು (ಚಿಬಪು. ೪೨-೩೬); ದೇವಿಯರನೇವೊಟ್ಟುಂ ಸೇವಿಸಿಯುಮಿಂದೀಗಳ್ ಪುಲಿ ಕರಡಿ ಸಿಂಗಂಗಳ ಬಾಯೊಳ್ ತೂಂತಲೆಂದೆ ಕೊಂಡುಯ್ದಪೆಂ (ರಾಮಾಶ್ವ. ೨೯-೧೦). [ ದೇ.೫ ಕುವಿ. ತೂಥಲಿ ]

**ತೂಂತು$_2$** 'ತೂನ್' ಪರಾ.

**ತೂಂತು$_3$**, ತೂತಂ$_1$ (ನಾ). ಕಂಡಿ; ರಂಧ್ರ; ಬಿಲ : ಮಣಿಕುಟ್ಟಿಮಮಪ್ಪ ಬಾವಿಯಂ ಪೊಕ್ಕು... ಛಿದ್ರಕದ್ವಾರದ ತೂಂತನುರ್ಚಿ ನೀರಂ ಕಳೆದಾಗಳ್ (ವರ್ಧ್ಮಾರಾ. ೨೬-೨೦) : ಪೆಡತಲೆಯ ತೂಂತಿಂದುಱ್ವಾರಿಕ್ಕಾಱಿಸಿ ನಾರಕರ್ ನಾಲಗೆಯಂ (ಸುಕುಮಾ. ೧೦-೪೪); ಕವಲಂಬಿಂ ಕಡಿವೋದ ಕೂರಲಗಿನಂಬಿಂ ಕೂಡೆ ತೂಂತಾದ ತಾಗುವ ನಾನಾಯುದ್ಧದಿಂದನೇಕವಿಧಂ (ಮುದ್ರಾನೇ. ೧೨-೪೫). **ತೂತು$_1$**: ಷಡಾಧಾರ ಬಳಿವಿಡಿದು ನೆತ್ತಿಯಿಂದುತ್ತರಕ್ಕೆ ಉಚ್ಚಳಿಸಿ ಹಾಯ್ದು ನಡುನೆತ್ತಿ ತೂತಾದರೂ ಲಿಂಗಸಾಹಿತ್ಯವಿಲ್ಲ (ಅದವ. ೧೦-೨೦); ಚಲಿಸಿ ಮೂತ್ರವೊಸರ್ವ ತೂತುಗಳೆಳಪಿದವದಿರು (ಬಸಪು. ೪೦-೩೯); ಎಲ್ಲರ ಮನೆಯ ದೋಸೆಯೂ ತೂತು (ಗಾದ): ಮಾತು ಮನೆ ಕೆಡಿಸಿತು ತೂತು ಒಲೆ ಕೆಡಿಸಿತಂ (ಗಾದ).

**ತಾತಾತೂತು, ತಾತತೂತು, ತಾತುತೂತು** (ದ್ವಿರುಕ್ತಿ) : ಕಂದರ್ಪ ನೊಡಲು ನಿಶಾಚರನಾಥನ ಕೂರ್ಗಣೆಯಿಂದ ತಾತಾತೂತಾದುದು(ತೋಪತ. ೩೫-೩೩) : ತಾತಾತೂತಾಗೆ ವಜ್ರಾಂಗಿ (ಕುಮಾರಾಂ. ೩೪೯) : ಕೂರಂಬಂ ವನ್ನಸೆಯೆ ಸಚಿವನ ಮೈಯುಂ ತಾತತೂತಾಗಲೊಡನೆ (ನವಮೋ. ೨೮-೩೯); ದಾನವನ ವಜ್ರಕವಚವನೊಡೆದು ಸರ್ವಾಂಗ ತಾತುತೂತಂ ಗೈಯಲು (ನವಮೋ. ೦೨-೬೮). **ತೂಂತನಿಡು** = ೧. (ಯಾವುದಾದರೂ ವಸ್ತು ವನ್ನು) ಗಿಡಿ,-ತುಱುಕು: ಬಸದಿಯೊಳ್ ಧನ್ವಂತರಿ ವಿಶ್ವಾನು ಲೋಮನ ಮುನ್ನಿನ ಸೂರುಳಂ ನೆನೆದು ಕಿವಿಯೊಳ್ ತೂಂತನಿಟ್ಟು ಪಟ್ಟಿರ್ದಂ (ಧರ್ಮಾಮೃ. ೨-೧೬೨). ೨. ರಾಶಿಹಾಕು ; ತುಂಬು : ರೋದೋಂತಂ ಕೂಡೆ ರತ್ನೋಜ್ಜ್ವಳಗಿರಿಕುಳದಿಂ ತೂಂತನಿಟ್ಟಂತೆ ನೀಲಾಂಭೋದಂಗಳ್ ಕೂಡೆ (ಆದಿಪು. ೧೪-೯೬). **ತೂತಾಗು** = ರಂಧ್ರಬೀಳಂ ; ಕಂಡಿಬೀಳು : "ವ್ಯಣತಿ = ತೂತಾದಪುದು" (ಶಾಶಬ್ದ. ೨೨೦) : ಮಾತಿನಾ ಬೊಮ್ಮಪ್ಪ ತೂತಾದ ಮಡಿಕೆಯು ಪಾತಕನ ನೆರೆಯು ಇವು ಮೂಱು ಲೋಕದೊಳಗೇ ತಕ್ಕ ಬೇಡ (ಸರ್ವಜ್ಞ. ೪೩೦). **ತೂತುಬೀಳು** = ತೂತಾಗು ; ರಂಧ್ರ ವಾಗಂ : "ವಿದ್ಧ=ತೂತುಬಿದ್ದದ್ದು" (ಗಂಗಾಮು. ೨೯೦): ಮಾತ ತಾನಱ ಯದಧಮಂಗೆ ಮಾಣಿಕವು ತೂತುಬಿದ್ದಂತೆ (ಸರ್ವಜ್ಞ. ೧೩೫೩) ; ಓಲೆಗರಿ ತೆಂಡಾಗುವ - ತೂತುಬೀಳುವ ಸುಭವವುಂಟು (ದ್ರಾವಿವಿ. ೫೯). **ತೂತುಮಾಡು** = ರಂಧ್ರವನ್ನು ಮಾಡಂ,-ಕೊರೆ : ಆಸ್ಫೋಟನೀ = ರತ್ನಗಳನ್ನು ತೂತುಮಾಡುವ ಶಸ್ತ್ರ (ಗಂಗಾಮು. ೩೦) ; ಬೆಲೂನಿಗೆ ತೂತು ಮಾಡಿದೆ. ಒಡೆದಂಹೋಯಿತು (ರೂಢಿ).

[ <ತೂಂತಂ$_1$./ ತೆಲು. ತೂಟಂ ; ಮಲ್ಯಾ. ತೂತ್ರು ]

**ತೂಂತು$_4$** (ನಾ). ೧. ಹೊರಸೂಸುವಿಕೆ. ೨. ಊದುವಿಕೆ. 'ತೂಂತಿೞ್' ಪರಾ. [ ? ]

**ತೂಂತುಗೊೞ್**, ತೂತಂಕೊರೆ, ತೂತಂಗೊೞ್ (ಕ್ರಿ). ತೂತನ್ನು ಕೊರೆ; ತೂತುಮಾಡಂ ; ರಂಧ್ರವನ್ನು ಮಾಡು : ಲೋಹದೊಂದು ಧಾರ ಗುಂಡನಿಳಿಯಬಿಟ್ಟು ಮರ್ಮವೆರಡೞೊಳುಮವೆರಡನೊತ್ತಿ ತೂಂತು ಗೊೞಿದು ಕಯ್ಯೊಳಮರ್ಚಿ (ಸಾನಂಚ. ೬-೧೫೪ ರಗಳೆ). **ತೂತುಕೊರೆ** : ಮುಖದಲ್ಲಿ ಹೇಗೆ ತೂತುಕೊರೆಯಬೇಕೆಂಬುದನ್ನು ಹೆಣ್ಣಲ್ಲದೆ ಇನ್ನಾರು ಹೇಳಬೇಕು ? (ಗಾಳಿಪ. ೧೫೨). **ತೂತುಗೊೞ್** : ದುಟ್ಟ ಕಡಂದುಱು ಗಳಿಂದೆ ತನುವನೆಯ್ದೆ ತೂತುಗೊೞಿದು ಒಡಲನೆಯ್ದೆ ತೀವುವಂತೆ ಕ್ಷಾರರಸವನೆೞಿದುಮೆೞಿದು (ಸಾನಂಚ.೬-೯೮ ರಗಳೆ).

[ ತೂಂತು$_3$ + ಕೊೞ್$_1$ ]

**ತೂಂತುವೋಗು**, ತೂತುವೋಗು (ಕ್ರಿ). ೧. ತೂತಾಗಂ ; ರಂಧ್ರಬೀಳು: ಧರಣಿಯಂ ಪೊಯ್ವನೋ ತೂಂತುವೋಗರ್ (ಧರ್ಮಾಮೃ. ೯-೦೮೩) : ಪೊಸಬಸದಿಯಂ ಮಾಡಿ ತೂಂತುವೋದ ಕಳಶಮನಿಡುವಂತೆ (ಧರ್ಮಾಮೃ. ೯-೦೮೭). **ತೂತುವೋಗು** : ೨. ಇಳಿ ; ಕುಸಿ : ಪೃಥ್ವೀತಳಂ ಪಾತಾಳಕ್ಕೆ ತೂತುವೋಗೆ (ಅರ್ಧನೇ. ೮-೨೨೫). [ತೂಂತು$_2$ + ಪೋಗು$_1$]

**ತೂಂಪ** 'ತೂಂಕಂ$_1$' ಪರಾ.

**ತೂಂಬ** 'ತೂಂಕು$_1$' ಪರಾ.

**ತೂಂಬು**, ತುಂಬು$_3$, ತೂಪ್ಪು, ತೂಬು (ನಾ). ೧. ಕಂಡಿ ; ರಂಧ್ರ. ೨. ಕೊಳವೆ; ಕೊಳಾಯಿ; ನಳಿಕೆ. ೩. ಕೆರೆ, ಕಟ್ಟೆ ಮೊದಲಾದ ಜಲಾಶಯ ಗಳಲ್ಲಿ ನೀರು ಬಿಡಲಂ ಮಾಡಿರುವ ಕಂಡಿ,-ದ್ವಾರ ; ನೀರುಗಂಡಿ : ಮೊಱಗಲೂರ ಮಟ್ಟಿಯುಳ್ಳೆಯ್ದುಬು ಇನ್ತು ತಾಗೆ ಮೂಱಡಿ ತೂಂಬುಂ ದೇವಭೋಗಂ (ಎಕ. X, ಗೋಲಾರ. ೦೦-೯; ಸು. 753); ಜಲ ಗರಂ ಬಿಡೆ ಪರಿಗುಮೆಗುವರ್ಗಿ ತೂಂಬನುರ್ಚಿದ ಕೆಱದಿಂ (ಲೋಕೋಪ. ೯-೦೧೬);ಈ ಕೆಱೆಯ ನೀರಂ ತೂಂಬನುರ್ಚಿ ಕಳೆದು ಕಿೞಿದಾನುಮುೞಿದ ನೀರಂ ತುಳುಂಕಿ ಕಳೆದೊಡೆ ನಿನ್ನಱಸುವುದಂ ಕಾಣಲಕ್ಕುಂ (ಜೀವಸಂ. ೧೬೩-೦೫) : ವಾಪೀಕೂಪದೀರ್ಘಿಕಾಘಟೀಯಂತ್ರಪ್ರವಾಹಂ ಪುಗುವ ಬಚ್ಚಲ್ಗಳ ಪೊಱಮಡುವ ತೂಂಬುಗಳ ಬೆಡಂಗು ... ಮೆಱೆದಿರ್ದುದು (ಅಜಿಪು. ೬-೨೪ವ) ; ಇಳೆಯಾಣ್ಮನ ಕರುಣರಸಂ ತೀವಿದ ಲಲಿತತಟಾಕಮದಾಗಲ್ಕರ ಮನೆ ಕೊಳಗುವ ಬಾಗಿಲ್ವಾಡಮೞಿ ತೂಂಬೆಂಬವೊಲೊಪ್ಪಿದುದು (ಜಯುಕಾ. ೧-೬೫). ೪. ಭೂಮಿಯ ಒಂದು ಅಳತೆ. 'ಅಯ್ದುಂಬು' ಪರಾ. ೫. ಒಂದು ಊರಿನ ಹೆಸರು : ಕರಿವೊಡವಿಷಯೇ ತೂಂಬು ವರವು ಪ್ರವರ್ತತೇ ಮಾರಿವೊೞ್ ತೂಂಬುನಾಮಗ್ರಾಮಯೋ

(ಮೃಚ್ಛ. ೦೯೦೯, ೨-೦೯ ; 749). ತುಂಬು₃ : ೩. ತುಂಬಿನ ನೀರನುರ್ಚಿದಾಗಳಡೆ ಪರಿದು (ಹಂಪಶಾ. ೫-೯೬ಪ) ; ಹಿರಿಯ ಕೆಱೆಯ ಕೆಳಗೆ ಎರಡು ತುಂಬಿನ ನಡುವೆ ಬಿಟ್ಟ ಗದ್ದೆ (ಎಕ. XII, ಚಿಕ್ಕನಾ. ೦೩-೩೭ : 1181) ; ಮಹಾಜನಂಗಳು ಬಸವಯ್ಯನ ಕೆಱೆಯ ನೀರ ತುಂಬನತ್ತಿ ಹರಿಸಿಕೊಳ್ಳದೆ ಅಱುವತ್ತೊಂದು ಪ್ರಿತ್ತಿಗೆ ನಿಲ್ವರು (ಎಕ. VI, ತರೀಕೆ. ೫೫-೮ ; 1291 ?). ೬. ಚಕ್ರದ ಮಧ್ಯಭಾಗ ; ಗುಂಬ ; ಚಕ್ರನಾಭಿ ; ಪಿಂಡಿಕೆ: "ನಾಭಿಃ, ಪಿಂಡಿಕಾ – ಈ ೨ ತುಂಬು" (ಹಲಾಯು. ೭೩-೨೯೩). ತೂಪು : ೪. ಮಂದುವೂರ ತೊಱುಕೊಳ್ವಲ್ಲಿ ಏಟ್ಟೋರ್ ಪೆರಾಣ್ಕೋವರ್ ಅವಂಗೆ ಪದಿ ತೂವು ಕಟಸಿ ನೆತ್ತಪಡಿ (ಎಕ. X, ಶ್ರೀನಿವಾ. ೨೦-೭ ; ಸು. 750). ತೊಱು : ೩. ನೈರುತ್ಯದೊಳ್ ಕಟ್ಟಿಯ ಕಡೆಯ ತೂಱು ಪಶ್ಚಿಮದೊಳ್ಪಪ್ಪರಣಿ (ಎಕ. VIII, ಸಾಗರ. ೦೦೯-೬೦ : 1042) ; ತೂಬಿಲ್ಲದ ಕೆಱೆಯಂ ಕಟ್ಟುವೆನೆಂಬ ಕಾಲಿಲ್ಲದೆ ಪರಿವೆನೆಂಬ ... ಪಚ್ಚಪಸಿಯೆಗ್ಗನಂ ಪೋಲ್ಕುಂ (ಧರ್ಮಾಮೃ. ೦-೬೭) ; ಅರ್ದಿಱಿದು ಕಾಲನ ಬನಕೆ ರಕುತದ ಕೆಱೆಯ ತೂಬೆತ್ತಿದರು ಸೇವಣರಾಯರಾವುತರು (ಕುಮಾರ್ವ್ಯಾಭಿ. ೪-೬೬); ತೂಬು ಉಳ್ಳ ಕೆರೆಯ ತುಳುಕಿದರೆ ಬತ್ತೀತೆ? (ಗಾದೆ). ೬. "ಪಿಂಡಿಕೆ, ನಾಭಿ–ಬಂಡಿಯ ತೂಬು" (ನಾಚಿರಾ.೩). ೭. ಕೊಡಲಿ, ಗುದ್ದಲಿ ಮೊದಲಾದ ಸಾಧನಗಳಲ್ಲಿ, ಕಾವನ್ನು ಒಳಗೆ ಸೇರಿಸಲು ಮಾಡಿರುವ ಕಣ್ಣು,–ತೂತಂ,–ರಂಧ್ರ: (೩). ೮. ಕಿವಿಯೋಲೆಯ ಕೊಳವೆ: (೩). ೯. (ಆಲಂ) ಹಾಳುಮಾಡುವವನು: ಅಪ್ಪನ ಖಜಾನೆಗೆ ಮಗ ತೂಬಾಗಿದ್ದಾನೆ (ರೂಢಿ).

ತೂಬನಿಕ್ಕು=ಕೆರೆ ಮೊದಲಾದುವುಗಳಿಗೆ ತೂಬನ್ನು ಮಾಡಿಸು,–ಕಂಡಿಯನ್ನು ಇಡು : ಸಿರಿಯಮಯ್ಯನೆರಡು ಕೆಱೆಯಂ ತೂಬನಿಕ್ಕಿ... ಮೂಱು ಕೆಱೆಯ ಬಿತ್ತುವಟ್ಟವಂ ಪಡೆದಂ (ಎಕ. IX, ಬೆಂಗಳೂ. ೭೯-೬ ; ಸು. 870).

[ ದೇ.॥ ತಮಿ. ತೂಮ್ಪು ; ಮಲ. ತೂಮ್ಪು ; ತುಳು. ತೂಂಬು, ತೂಂಬೆ, ಸೂಂಬು ; ತೆಲು. ತೂಮು ]

ತೂಂಬುರ್ಚು, ತುಂಬುಚ್ಚು (ಕ್ರಿ). ತೂಬಿನ ಬಾಗಿಲನ್ನು ಎತ್ತು, —ತೆಗೆ : ಪಿಸಾಂಬೊಲಸು ನಾರ್ಪ ಮಯ್ಗಮಳುಂಬಂ ತೂಂಬುರ್ಚಿದಂತೆ ಸುರಿವರುಣಜಳಕ್ಕಂ ಬಿಡದೆ ಕಾಗೆಯುಂ ಪರ್ದುಂ ಬಳಸುವವು (ಸುಕುಮಾ. ೪-೨೯) ; ಅರದಚಯಂ ... ಪತ್ರಿಚಯಮದೆತ್ತಂ ಗಗನೋದರಮಂ ತೀವಿ ಮುದಲಕಾವುದರಿಂ ತೂಂಬುರ್ಚಿದಂತೆ ಕವಿದವಿರಳಿತಂ (ಪರ್ಶಪು. ೮-೪೦). ತುಂಬುಚ್ಚು: ಒಂಭತ್ತುದ್ವಾರದಿ ಮಲವು ತುಂಬುಚ್ಚಿದಂದದಲಿಳಿವ (ಜಿದಾಕೋ. ೪೧-೫). [ ತೂಂಬು + ಉರ್ಚು ]

ತೂಕ (ನಾ). ೧. ತೂಗುವುದು; ತೂಕಮಾಡುವುದು : (೩). ೨. ಯಾವುದಾದರೂ ವಸ್ತುವನ್ನು ತಕ್ಕಡಿಯಲ್ಲಿಟ್ಟು ತೂಗುವುದರಿಂದ ಗೊತ್ತಾಗುವ ಪದಾರ್ಥದ ಭಾರ,—ಗುರುತ್ವ: ಅಂತೆಗೆ ತೂಕಕ್ಕಿನಿಕೆಗ ಮೊಳಗಾದುವು ಸಕಳವಸ್ತುಗಳ್ ಭುವನಜನಕ್ಕೆಳೆಯಲ್ ತೂಗಲ್ಕಿನಿಸಲ್ಕಳೆಯಂಬಮೆನಿಸಿದುದು ನಿನ್ನ ಗುಣಗಣಮರ್ಹಾ (ಅದಿಪು. ೦೦-೫೫) ; ಬಲ್ಲವರೊಡಗೂಡಿ ಬಣ್ಣದಿಂದೊರೆಯಿಂ ತೂಕದಿಂ ಮರ್ಚಿಯಿಂದಂ ಪೊನ್ನಿಂ ತೊಪ್ಪುಗುಂ ... ಅಂತೆ ಸ ಮ್ಯ ಕ್ತ್ವದೊ ಳ್ ಕೂಡಿ...ಶ್ರಾವಕನು ಮೊಪ್ಪುವುದು (ಧರ್ಮಾಮೃ. ೦೩-೫) ; ಸೌರಾಷ್ಟ್ರಸೋಮನಾಥಂಗತಿಭಕ್ತಿಯಿಂ ತನ್ನ ತೂಕದ ಧೂಪವಂ ... ಓಹಿಲದೇವನರ್ಪಿಸುತಿರ್ದಂ (ಉದ್ಭಟ. ೦೦-೯೯ ಪ); ತಲೆವೊರೆಯ ತೂಕದಲಿ ಫಣಪತಿ ಬಳುಕತೊಡಗಿದ (ಕುಮಾರ್ವ್ಯಾಉ. ೦೦-೦೫) : ಗುರುಕುಚದಲಘುನಿತಂಬದ ತೂಕದ ಸರಿಮಿಗಿಲಂ ಪಿಡಿದೆತ್ತಿ ನಿರೀಕ್ಷಿಪರಿಯಿಂ ಪ್ರಾಣೇಶ್ವರನಂಗೈಯಂ ತನುಮಧ್ಯದೊಳಿಡಲು (ಜಯಾಕಾ. ೦೦-೪೪); ತೂಕಕ್ಕೆ ದಯವಿಲ್ಲ ಪಾಕಕ್ಕೆ ಹಸಿಯಿಲ್ಲ (ಗಾದೆ). ೩. ಒಂದು ವರಹದಷ್ಟು ಭಾರ : ಸಿಕ್ಕಿಸಲ್ವೆಳೆಯರಡುಮನೊಂದು ಪಾಗಮವು ನಾಲ್ಕಾಗೆ ಪಣಮೆನಿಕ್ಕವು ದಶಂ ತೂಕಕ್ಕೆ (ಮಂಗರಾ. ೦೦೪-೦೦) ; ಹೊಸಸುಣ್ಣದ ನೀರನ್ನೂ ಬೆಲ್ಲದ ಪಾಕವನ್ನೂ ಒಲೆ ಮೇಲಿಕ್ಕಿ, ಎರಡು ತೂಕ ಬಿಳೀ ಪಾಷಾಣವನ್ನು ಹಾಕಿ ಕುದಿಸಿ ... ಕೊಡಲು ಥಳಿಜ್ವರಂ ನಿಲ್ಗುಂ (ಶಿಳತ್ತಿ ೭೪). ೪. ಎರಡು ಕೈಯಲ್ಲಿ ತೂಗಿ ತರುವಷ್ಟು (ನೀರಿನ) ಅಳತೆ : ಎಷ್ಟು ತೂಕ ನೀರು ಹಾಕಿದ್ದೀರಿ ? (ರೂಢಿ). ೫. ಸಮತೋಲ ; ಸಮಚಿತ್ತ : ಕೆಳಗು ಮೇಲಾಗದೊಲು ತೂಕವಿರಲಿ !! (ಅಯ್ಯಾಳಿ. ೭೯-೦೬). ೬. ಸಮಾನವಾದುದು ; ಸದೃಶವಾದುದು : ಋಷಿಪ್ರತಿಪನ್ನ ಮಂತ್ರವರೋಘವರದಱಿಂದೆನ್ನ ತೂಕದ ಮಗನಹನು (ಕುಮಾರ್ವ್ಯಾಆ. ೩-೦೯); ಸರೋಜಜಗೆ ಸಂಭವಿಸಿದಗ್ಗದ ತನ್ನ ತೂಕದ ಬವರಿಗರ ತೋಱಿಸಿದನನಿಲಜನು (ತೊರಾರಾ. ೪-೭-೨೪). ೭. ಗೌರವ ; ಘನತೆ ; ಮಹತ್ವ : ಬರಿಸಿದನು ತೂಕದ ಮಹಾಮಂಡಳಿಕಮನ್ನೆಯರ (ಕುಮಾರ್ವ್ಯಾಉ. ೮-೨೯) : ಏಕೆ ನುಡಿಯನೋ ಇನ್ನೊಮ್ಮೆಯೆಂಬಂತೊಂದು ತೂಕದೊಳೆಸೆದನಾ ರಾಯ (ಭರತೇ. ೦-೩೮) : ತೂಗಬೇಕು ಮನದೊಳಗೆ ತೂಕವುಳ್ಳವರ ಮಾತು ಹಿಡಿದು (ನಿಜಮು. ೪೯-೯) ; ತಾನು ಈ ಪ್ರೊಫೆಸರರ ಬಾಲವನ್ನು ಹಿಡಿದು ಹೋದರೆ, ತನ್ನ ತೂಕ ಸ್ವಲ್ಪ ಹೆಚ್ಚೀತು (ಒಂಟಿದ. ೮). ೮. ಒಂದು ಬಗೆಯ ತೆರಿಗೆ : ಕಿಱುಕುಳ ತೂಕ ನೋಟವಣ ಅಭ್ಯಾಗತವಳ . . . ಯೆಲ್ಲವನೂ ಕಾರುಣ್ಯಂಮಾಡಿ ಧಾರಾಪೂರ್ಬ್ಬಕಂ ಮಾಡಿಕೊಟ್ಟರು (ಎಕ. VI, ಕಡೂರು. ೪೯-೪೦ : 1291). ೯. ಒಲೆತ; ತೂಗುವಿಕೆ ; ತೂಗಾಟ; ತೊನೆದಾಟ : ಗೋಪೀನಟಿ ತೋಱಿದಳ್ ಮಿಸುಗುವೋಲೆಯ ತೂಕಮ ತೋಱೆ³ ನೃತ್ಯಮಂ (ಆಗವಿ. ೫-೦೪) ; ತೊಟ್ಟಲ ತೂಕದೊಳ್ ಪೊಣರ ಕಂಕಣಝಂಕೃತಿ (ಸೂಕ್ತಿ.ಸು. ೭-೬೨). 'ತೂಕವಣೆ' ಪರಾ.

ತೂಕತೂಗು=ಘನತೆಯನ್ನು ಹೊಂದು ; ಗೌರವವನ್ನು ಗಳಿಸು : ಭಾರತದ, ಲೋಕದಾ ಮಕ್ಕಳಲಿ ಹಿಂದಾಗಿ ತೂಕತೂಗುವಿರಾ ? (ಹೊಂಗಳು. ೨೦-೨). ತೂಕದ ಕೋಲ ತೂಳೆ = ತಕ್ಕಡಿಯ ಕೋಲು ; ತುಲಾದಂಡ : ವನಿತೆ ... ಚಿಂತಿಸುತ ತೂಕದ ಕೋಲ ತೊಳೆಯಾದಳು (ಹರಿಕಾ. ೦೨-೪೭). ತೂಕದ ಗುಂಡು = ಗೋಡೆಯನ್ನು ಕಟ್ಟುವಾಗ ನೇರಸ್ಥಿತಿಯನ್ನು ಕಂಡುಹಿಡಿಯಲು ಬಳಸುವ ಸಾಧನ : ತೂಕದ ಗುಂಡನ್ನು ಹಿಡಿಯದೆ ಗಾರೆ ಬಳಿದರೆ ಗೋಡೆ ಸಮನಾಗುವುದಿಲ್ಲ (ರೂಢಿ). ತೂಕದ ಮಾತು = ಬೆಲೆಯುಳ್ಳ ಮಾತು ; ಗೌರವದ ಮಾತಂ ; ನ್ಯಾಯವಾದ ಮಾತು ; ನಿಷ್ಪಕ್ಷಪಾತವಾದ ನುಡಿ: ಅವರದು ಒಳ್ಳೆಯ ತೂಕದ ಮಾತು (ರೂಢಿ). ತೂಕದಾಳ್ = ಘನತೆಯನ್ನು ಹೊಂದಿರುವವನು : ಬಾಣಸ್ಥಾಪನಕೆ ಮೆಚ್ಚಿದನು ಮೇಲಣ ತೂಕದಾಳವನು ಈ ಪರಿಯಲೆಂದಱಿಯೆನಹುದೈ ಚಾಪವಿದ್ಯಾಪಾತ್ರವಿಂದ ವನೀಪತಿಯಲಾ ಪೂತು ಮಝು ಎಂದೆಚ್ಚನಾ ಕರ್ಣ (ಕುಮಾರ್ವ್ಯಾಕ. ೧೧-೪೪). ತೂಕಮಾಡು = ೧. ತಕ್ಕಡಿ ಮೊದಲಾದುವುಗಳ ಸಹಾಯದಿಂದ ಭಾರವನ್ನು ಕಂಡುಹಿಡಿ : ಈ ಹುರುಳೀಕಾಯನ್ನು ಬೇಗ ತೂಕಮಾಡು (ರೂಢಿ). ೨. ವಿಮರ್ಶಿಸು ; ಬೆಲೆಕಟ್ಟು : ನಮ್ಮಿಬ್ಬರ ಹೇಳಿಕೆಯನ್ನೂ ತೂಕಮಾಡು. ಯಾವುದು ಸರಿ ಎಂದು ನಿನಗೇ ಗೊತ್ತಾಗುತ್ತದೆ (ರೂಢಿ). ೩. ತೂಕಡಿಸು : ಅವನೆಲ್ಲೋ ತೂಕಮಾಡುತ್ತಾ ಕುಳಿತಿರಬೇಕು (ರೂಢಿ).

[ ದೇ.॥ ತಮಿ. ಮಲ. ತುಳು. ತೆಲು. ತೂಕ ]

ತೂಕಗಾಣ್ (ಕ್ರಿ). ಗಾಂಭೀರ್ಯವನ್ನು ಗಮನಿಸು ; ಘನತೆಯನ್ನು ತಿಳಿ : ಆಕೆಯಿಚ್ಛಾದೇವಿಯಿನುಱೆ . . . ತೂಕಗಾಣದೆ ನುಡಿದಳು (ಭರತೇ. ೫೦-೫೦). [ ತೂಕ + ಕಾಣ್ ]

ತೂಕಗುಂದು (ಕ್ರಿ). ವಿಮರ್ಶೆ ಇಲ್ಲದಾಗು,–ತಪ್ಪು : ತೂಕಗುಂದದ ನೋಟವ ನೋಡುವೆನಯ್ಯ (ಅದವ. ೨೭-೬೭). [ ತೂಕ + ಕುಂದು₁ ]

**ತೂಕಡಿಕೆ** 'ತೂಂಕಡಿಕೆ' ನೋ.

**ತೂಕಡಿಸು** 'ತೂಂಕಡಿಸಂ' ನೋ.

**ತೂಕಡು** 'ತೂಂಕಡಂ' ನೋ.

**ತೂಕರಿಸು** (ಕ್ರಿ). ೧. ದೃಷ್ಟಿದೋಷ ಪರಿಹಾರಕ್ಕಾಗಿ ಹಾಗು ರಕ್ಷೆಗಾಗಿ ನೆತ್ತಿಯಂ ಮೇಲೆ ಊದಂ; ತೂಪಿರಿ: ತೂಕರಿಸಿ ಪರಸಲೆಂದು ಶಚೀಕಾಂತೆಯೊರ್ದೆ ನಾಣ್ಚಿ ತಲೆವಾಗಿ (ಚಂದ್ರಪು. ೦೨-೧೫೮). ೨. ತಿರಸ್ಕರಿಸು ; ಅವಹೇಳನ ಮಾಡು : ನಿಮ್ಮನೆಮ್ಮಗ್ಗಲುವೆಂದು ಮೂದಲಿಸಿ ತೂಕರಿಸಿ ದಿವ್ವಿದಿರಗೊಡುತಲೊರೆದಕ್ಕಿತ್ತ (ಜಿನಮು. ೧೩-೬೪).

[ <ತೂತ್ಕಾರ + – ಇಸು₃ ]

**ತೂಕವಣೆ** (ನಾ). [ನಾಟ್ಯ] ನೃತ್ಯದಲ್ಲಿ ಒಂದು ಗತಿ, ಚಲನೆ: ಧಾಳದ ಮೇಲೆ ತೂಕವಣೆ ರೇಖೆಯನಾಳ್ದರೆ ಪಾದದೊಳ್ಪಯಂ ಮೇಳಿಸಿ ಝುಂಕೆ ಬಿಂಗದೊಳೊಡಂಬಡೆ ... ಸಿಂಹಸೇನಭೂಪಾಳನ ಚಿತ್ತವಲ್ಲಭೆಗೆ ಸಂದುದು ರಂಭೆಯ ಲಾಸ್ಯವಿಭ್ರಮಂ (ಅನಂಪು. ೪-೯೦) ; ರೂಪು ರೇಖೆ ಧಾವಣೆ ತೂಕವಣೆಯಂಕೆ ಝುಂಕೆ... ಉಲ್ಲಾಸದಚ್ಚರಿವಡೆಯ ನರ್ತಿಸುತ್ತು ವಿಂರೆಯುಂ (ಶಾಂತೀಶ್ವ. ೦೬-೬೭೪). [ ತೂಕ + – ಅಣೆ₄ ]

**ತೂಕು₁** 'ತೂಂಕು₁' ನೋ.

**ತೂಕು₂** 'ತೂಂಕು₂' ನೋ.

**ತೂಗಡಿಕೆ** 'ತೂಂಕಡಿಕೆ' ನೋ.

**ತೂಗಾಟ** (ನಾ). ೧. ತೂಗಾಡುವಿಕೆ ; ಒಲೆದಾಡಂವಿಕೆ : ಸಾಲುರುಳ್ಗಲಿರಿ ಗಳ ಪತಾಕಾಜಾಲದಲಿ ಸಬಳದ ಹೊದಜ ಗೋವಳಿಗೋಲ ತೂಗಾಟದಲಿ ಸಮರಕೆ ದ್ರೋಣ ನಡೆತಂದ (ಕುಮಾವ್ಯದ್ರೋ. ೯-೧೬). ೨. ಡೋಲಾಯಮಾನವಾದ ಮನಸ್ಸಿನ ಸ್ಥಿತಿ ; ನಿರ್ಣಯಕ್ಕೆ ಬಾರದಿರಂವ ಸ್ಥಿತಿ: ಬಾಬಣ್ಣ ತೂಗಾಟದಲ್ಲಿ ಬಿದ್ದ. ಹೆಂಡತಿಯು ಮುಂದೆ ಸಾಲದ ವಿಷಯ ಹೇಳಬೇಕೋ ಬೇಡವೋ ಎಂದು ಯೋಚಿಸತೊಡಗಿದ (ಅಕೋಳ. ೩೩).

[ ತೂಗು₁ (<ತೂಂಕು₁) + ಆಟ ]

**ತೂಗಾಡಿಸು** (ಕ್ರಿ). ೧. ನೇತುಹಾಕು ; ತೂಗಂಬಿಡು : ಕಪ್ಪು ಮತ್ತು ಭರಣಿಗಳನ್ನು ಕೊಂಡಿಗಳಲ್ಲಿ ತೂಗಾಡಿಸಿದರೆ ವ್ಯವಸ್ಥೆ ಚೆನ್ನಾಗಿ ಕಾಣುವುದು (ಅಡುಗಾ. ೪೫). ೨. ಬಾಗಿಸು ; ಮಣಿಸು : ಯೋಗಿಕೆ ಮುಖವಿಕ್ಕಿದಾಗ ಮಾಲೋಕವ ತೂಗಾಡಿಸದೆ ಸುಮ್ಮನಿಹನೆ (ಭರತ. ೭೬-೫೬).

[ತೂಗಾಡು + – ಇಸು₂]

**ತೂಗಾಡು,** ಜೂಗಾಡಂ (ಕ್ರಿ). ೧. ಒಲೆದಾಡಂ ; ತೊನೆ: ಮೇಲಿಂಗೆ ತೂಗಾಡುವ ಯಮಾನೇಕವಂ ವಿಳ್ಳಿಳಿಸಿ ಸೂಪಡನಾರಯ್ದುದು (ಪರ್ಥಪು. ೮-೩೯) ; ತಾಯನಪ್ಪುತ್ತ ಮೊಲೆಗೆ ಲಲ್ಲೈಸಿ ನಿಜಾವಿಡಿದು ಮೊಗವಂ ನೋಡುವ ತೂಗಾಡುವ ಮಗನ ಮುದ್ದುತನವಂ ಬಸವರಾಜಂ ಕಂಡು (ಬಸವ. ೦೦-೨೫೦) ; ಸೆಳೆಗೊಂಬೆಲರಿಂ ತೊನೆದೆಲ್ದು ತಳ್ಗಿ ತೂಗಾಡಿದೊಡಂತದಂ ಪಿಡಿದುಕೊಂಡಲಕಂ ನೆಜೆ ಕೊಯ್ದು ಕಾಂತೆ . . . ಪರ್ಚಿದಳ್ (ಕುಸುಮಾ. ೫-೦೦೦);ತೀಡುವ ಕೆಂಬೆಲರ್ಗೆ ಚಲಿಪಚ್ಚತಿರ್ಗಳ್ ಘಾತದಿಂದೆ ತೂಗಾಡುವ ಪಣ್ಗಳ್ಗೆದೆ ಮಸೆದಂದೊಡೆಯುತ್ತೊಗುತಿರ್ಪಿನಂ ರಸಂ (ಅಚ್ಯುಟ. ೬-೦೨) ; ಬೆಳಗಿನ ತುಳುಗಲಲಿ ತೂಗಾಡುತಿದ್ದುದು ಕೈದು ತೊಡವಾಗಿ (ಕುಮಾವ್ಯದ್ರೋ. ೩-೬೦) ; ಮುಂದೆ ಸಾಗುವಾಗ ಅವಳ ಎಡತೋಳು . . . ಚುರುಕಾಗಿ ತೂಗಾಡುತ್ತಿತ್ತು (ಪುನರು. ೨೬೫). ೨. ಅಲ್ಲಾಡಿಸು ; ಅಲುಗುವಂತೆ ಮಾಡಂ: ನೆಳಲುಗಂಡವ್ವಳಿಸುವುದು ಸುಂಡಿಲನು ತೂಗಾಡುವುದು . . . ಹಿಡಿಹಂಗೆ ಲಾಗಿಸುತಿರ್ದುದಾ ದಂತಿ (ಕುಮಾವ್ಯದ್ರೋ. ೩-೩೭) ; ಮೈಯೆಲ್ಲ ತೂಗಾಡದೊಂದಿನಿಸು ... ಸಲ್ಲಲ್ಲಿತದೊಳು ಹಾಡಿದರು (ಭರತ. ೦-೬೦) ; ಪೂಡಿದರ್ ಪೂದೊಟ್ಟಿಲಂ ಸಖಿಯರೊಡನೆ ತೂಗಾಡಿದರ್ (ತಿಲಪು. ೯೭-೬). ೩. ತೂಕಡಿಸು : ಈ ಕಾರಣದಿಂದ ಗೌರೀದೇವಿಯು ಮಲಗಿಕೊಳ್ಳುವುದಕ್ಕೆ ಹಾಸಿಗೆಯಾದರೂ ದೊರೆಯದೆ ಒಂದು ಗೋಡೆಯನ್ನೊರಗಿಕೊಂಡು ಹಾಗೆಯೆ ತೂಗಾಡಬೇಕಾಯಿತು (ಕವಿಳ. ೫೩). ೪. ಹೊಯ್ದಾಡುತ್ತ ನಡೆ : (ಕ). ೫. ಡೋಲಾಯಮಾನವಾಗು ; ನಿರ್ಣಯಕ್ಕೆ ಬಾರದಿರು ; ಅನಿಶ್ಚಿತ ಪರಿಸ್ಥಿತಿಯನ್ನು ಪಡೆ: ಈ ಜಂಜಾಟದಲ್ಲಿ ತೀರ್ಮಾನವು ತೂಗಾಡುತಿತ್ತು (ಜಿಜೀವ. ೯೬) ; ವಾದ ವಿವಾದಗಳ ತಕ್ಕಡಿಯಲ್ಲಿ ತೂಗಾಡುವ ಈ ವಿಷಯದ ವಿಮರ್ಶೆ ಮುಂದೆ ಬರುತ್ತದೆ (ದ್ರಾವಿಪಿ. ೪೫). ೬. (ಆಲಂ) ಓಲಾಡು; ನಲಿದಾಡು: ಲಲ್ಲೆಯಿಂ ತೊನೆಯುತ್ತಿರ್ದ ನಿಜಾಂಗದಿಂದವೊಲೆಯುತ್ತುಂ ತೊಟ್ಟಿಲಂ ತೆತ್ತುಮಾರನಿಳಾಧೀಶನ ಚಿತ್ತಮುತ್ತವದೊಳಂ ತೂಗಾಡೆ ತೂಗಾಡುವಂ (ಕುಸುಮಾ. ೬-೦೪೩). **ಜೂಗಾಡು :** ೧. " ಜೂಗಾಡು = ತೂಗಾಡು " (ಶಾಸಕೋ. ೬೦). [ ತೂಗು₁ (<ತೂಂಕು₁) + ಆಡು₁ ]

**ತೂಗಿಸು** (ಕ್ರಿ). ೧. ತೂಕ ಮಾಡಿಸು : ತೂಗಿಸಿ ತೂಲೆಯೊಳ್ ಬಾಯಂ ಮೂಗುಮನೊಡೆಯೊತ್ತಿ ಕೊಂದ ಕಳ್ಳನ ದೇಹಂ ತೂಗಿದೊಡೆ ಕುಂದದಾತ್ಮವಿಭಾಗಂ ಬೇಜಾಲ್ಲ ಜೀವನೆಂತುಂ ದೇಹಂ (ಜಾಕೋಶ. ೪-೨೦). ೨. (ವೆಂಚ್ಚುಗೆಯಿಂದ ತಲೆಯನ್ನು) ತೂಗುವಂತೆ ಮಾಡು: ಶಿರವ ತೂಗಿಸುವುದೀ ವಚನದ ರಚನೆ (ವೋಶಹ. ೦-೨೫). ೩. ನೇತಂ ಹಾಕಂ ; ಇಳಿಬಿಡಂ: ಲಿಂಗವ ಎದೆಗೆ ಕಟ್ಟನ್ನಾಗ ಬಳಿದನು ಭಸಿತ ವದನಕೆಯಂಗಸಂಗದಲಿ ತೂಗಿಸಿದ ರುದ್ರಾಕ್ಷಿಸರಗಳನು (ಬಿಜ್ಜಪು. ೯೦-೨). ೪. ತೊಟ್ಟಿಲನ್ನು ತೂಗಂ : ಹೆಸರನಿಕ್ಕಿದರನಿರುದ್ಧನೆಂದೆನುತಿ ತೂಗಿಸಲೊರ್ಚಿದರಾ ಜೋಗುಳವ (ಮೋಹಶ. ೦೬-೫೦). ೫. ನಿಭಾಯಿಸು ; ನಿರ್ವಹಿಸಂ ; ಸಂಭಾಳಿಸಂ : ಈ ಕೆಲಸವನ್ನು ನೀನು ತೂಗಿಸಬಲ್ಲೆಯಾ? (ರೂಢಿ).

**ತೂಗಿಸಿಕೊಂಡು ಹೋಗು**=ನಿಭಾಯಿಸು; ಸಾಗಿಸಂ ; ಸಂಭಾಳಿಸು : ಪಾತ್ರರಚನೆಯ ದೃಷ್ಟಿಯಿಂದ ಎಡ್ವಿನ್‌ನ ವ್ಯಕ್ತಿತ್ವದಲ್ಲಿ ಕತೆಯು ಬೌದ್ಧಿಕತೆಯನ್ನು ತೂಗಿಸಿಕೊಂಡು ಹೋಗುವ ನಿರ್ಲಿಪ್ತತೆಯಿಲ್ಲ (ಜೊಸಕ್ಕ. ೨೯೦) : ಅಷ್ಟು ತಾಪತ್ರಯದಲ್ಲೂ ಅವನು ಹೇಗೋ ಸಂಸಾರವನ್ನು ತೂಗಿಸಿಕೊಂಡು ಹೋಗುತ್ತಿದ್ದಾನೆ (ರೂಢಿ).

[ ತೂಗು₁ (<ತೂಂಕು₁) + –ಇಸು₂ ]

**ತೂಗು₁** 'ತೂಂಕಂ₁' ನೋ.

**ತೂಗು₂** 'ತೂಂಕು₂' ನೋ.

**ತೂಗುಂಗೊಂಬು** (ನಾ). ನೇತಾಡುತ್ತಿರುವ ಕೊಂಬೆ : ತುಜಾಗಿರ್ದ ಬಲ್ಪಿಡಿಯ ತೂಗುಂಗೊಂಬಿನೊಳ್ಪಾಯ್ದು ಮಂಡಳಿಸುತ್ತಿರ್ಪ ಶಾಖಿ (ಅದಿಪು. ೧೧-೯೬). [ ತೂಗು₁ (<ತೂಂಕು₁) + ಕೊಂಬು₁ ]

**ತೂಗುಂಜೊಡರ್,** ತೂಗುಂಜೊಡರಂ (ನಾ). ನೇತುಹಾಕಿರುವ ದೀಪ ; ತೂಗುದೀಪ : ಜಕಾರಕ್ಕೆ—ತೂಗುಂಜೊಡರ್, ಅಟ್ಟುಂಜಗಳಂ (ಶಮದ. ೧೬೦ಪ್ರಯೋ) ; ವಾಲವವೆಸರ ವಿಷ್ಣುಭಕ್ತಂ ಆ ಕ್ಷೇತ್ರದ ದೇಗುಲದೊಳ್ ತೂಗುಂಜೊಡರನುರಿಯಿಸುವಂ (ಅದ್ಯುತ. ೦೬-೨೪). **ತೂಗುಂಜೊಡರು:** ಹಸಿರ ಬಸಿರೊಳೊಗೆದಲರಿನ ತೂಗುಂಜೊಡರಾಡಿಸುತಿವೆ ಇಲ್ಲಿ ಕೆಂಡಸಂಪಿಗೆ (ಜೋಜಾರಿ. ೯-೫).

[ ತೂಗು₁ (< ತೂಂಕು₁) + ಸೊಡರ್ ]

**ತೂಗುಂಜೊಡರು** ' ತೂಗುಂಜೊಡರ್ ' ನೋ.

**ತೂಗುಂದಲೆ** (ನಾ). ೧. ನೇತಾಡಂತ್ತಿರುವ ತಲೆ : ಪೊಸ ದೂವೆ ದೂ [ಪಾಠಾಂ. ದಂಬೆತೂ]ವ ತೂಗುಂದಲೆ ಬಾಚ್ಚಿನಂ ಪೊಡರೆ ಬಳ್ಕುವ ಸಮ್ಮನ ಸೂಲವಾಲದೊಳ್ ಸಂದಣಿಯಾಗಿ ನೇಲ್ವ ಪೆಣನೊಂದಿರೆ (ಕಾವ್ಯಾವ. ೫೬); ದಕಾರಕ್ಕೆ–ಕಡುಕುಂದಜ ... ಆಡುಂದೊಲೆ. ತೂಗುಂದಲೆ (ಶಮದ. ೦೭೦ ಪ್ರಯೋ). ೨. (ಒಪ್ಪಿಗೆ, ಮೆಚ್ಚುಗೆ ಮಂಂತಾದುವನ್ನು ಸೂಚಿಸುವ

ದಕ್ಕಾಗಿ) ತೂಗಂವ ತಲೆ: (ತೂಗುಂದಲೆಯಿಂದ ಪ್ರೋತ್ಸಾಹಿಸಿ ಎರ್ದೆಗುಡುವನು) (ಚಟ್ಟಅ. ೦೦೩-೯). [ತೂಗು$_1$ (< ತೂಂಕು$_1$) + ತಲೆ$_1$]

**ತೂಗುಂದೆನೆ** (ನಾ). ಅತ್ತಿಂದಿತ್ತ ಆಡುತ್ತಿರುವ ತೆನೆ,–ಹೊಡೆ: ಅನಿಲಾಯತ್ತೋಚ್ಚಲಚ್ಛಾಳಿಯೊಳವಯುವದಿಂ ಪಾಯ್ದು ಕಾಲ್ ದಾಟೆ ತೂಗುಂದೆನೆಯಂ ತಟ್ಟೈಸಿ (ಲೀಲಾವ. ೫-೫೯) : ತೂಗುಂದೆನೆಯ ಕಳವುಮಲ್ಲಲ್ಲಿ ಕಾಸಾರವಲ್ಲಲ್ಲಿ . . . ಮೆಱೆವುದೆನೆ ಸುಖಾವಾಸವಾ ದೇಶವಲ್ತೇ (ವೃಷವಿ. ೪-೪). [ತೂಗು$_1$ (< ತೂಂಕು$_1$) + ತೆನೆ$_1$]

**ತೂಗುಂದೊಟ್ಟಿಲ್, ತೂಗುತೊಟ್ಟಿಲು** (ನಾ). ಅತ್ತಿಂದಿತ್ತ ಆಡುತ್ತಿರುವ ತೊಟ್ಟಿಲು; ಜೀಕುತ್ತಿರುವ ತೊಟ್ಟಿಲು: ಎಸೆವ ತೂಗುಂದೊಟ್ಟಿಲೊಳ್ ಪಟ್ಟ ಪುತ್ರನ ವಕ್ತ್ರೇಂದುವನಂಜನಾಂಕಿತವುನಾನಿನ್ನೆಂದು ಪೇೞ್ ಕಾಣ್ಬೆನೋ (ಕಾದಂಪೂ.೩೫೫); ದಕಾರಕ್ಕೆ–ಕಡುಕುಂದಱ್, ಉಕುರ್ಂದೊಱ್, ತೂಗುಂದೊಟ್ಟಿಲ್, ಅಡುಂಬೊಲೆ (ಶಮದ. ೦೭೦ ಪ್ರಯೋ); ತೂಗುಂದೊಟ್ಟಿಲೊಂದು ಪಾಂಗಿನಿಂ ಬಗೆ ಮನಮಾಱಕದ ಗಂಡೆಗರ್ವದಿರ್ದೆಸೆಮೂಲೆಗಳೊಳಮುಯ್ಯಲಾಡೆ (ರಾಮಾಶ್ವ. ೯೩-೨೪) **ತೂಗುತೊಟ್ಟಿಲು**: ಮಂಡೋದರಿಯ ಸೊಸೆಯು ಶಿಶು ಕೂಗಿದನು ತೂಗುತೊಟ್ಟಿಲೊಳಿದ್ದು ಕೂಳಿತು (ಶ್ರೀರಾಮಾ. ೪೫೦-೭); ತೂಗುತೊಟ್ಟಿಲಿನ 'ಕಿರೀಂ', 'ಕಿರೀಂ' ಸದ್ದು (ವಾಕ್ಯಾ. ೨).

[ತೂಗು$_1$ (< ತೂಂಕು$_1$) + ತೊಟ್ಟಿಲ್$_1$]

**ತೂಗುಂಮಂಚ, ತೂಗುಮಂಚ** (ನಾ). ತೂಗಲು ಅನುಕೂಲವಾಗುವಂತೆ ಕಟ್ಟಿರುವ ಮಂಚ; ಉಯ್ಯಾಲೆ ಮಂಚ: ತೂಗುಂಮಂಚದೊಳ್ ಶಶಿಪ್ರಭಾಮಹಾದೇವಿಯುಂ ತಾನುಂ ಕುಳ್ಳಿರ್ದು (ಚಂದ್ರಪ್ರ. ೬-೯೫೮) : ಸೀತೆಯೊರ್ವಳ್... ತೂಗುಂಮಂಚಮನೇಱೆ ಚೆಲ್ವದಿಂ ಕುಳ್ಳಿರ್ದು (ರಾಮಾಶ್ವ. ೦೭-೩೦). **ತೂಗುಮಂಚ**: "ಆಂದೋಳ ಪರಿಯಂಕಮೆನೆ ತೂಗುಮಂಚಮಕ್ಕುಂ" (ಮುಂಗರಾ. ೬೦-೦೭); ಮಂಚಕ್ಕೆ—ಕಾಂಚನಮಂಚ. ತೂಗುಮಂಚ, ರತ್ನಮಂಚ (ಶಮದ. ೨೯೮ ಪ್ರಯೋ): ಅರಸು ಪವಡಿಪ ತೂಗುಮಂಚದ ಸರಪಳಿಯ ಬಳಿವಿಡಿದು ಪಟುಭೀಕರವಿಷೋರಗವಾಗಳೊಂದು ರವಣಿಸಿ ಹರಿತಂದು (ಲಕಪು. ೪೬-೨೦) : ತೂಗುಮಂಚದಿ ಹಂಸತೂಲದ ಹಾಸಿಗೆ (ಪುರಂದ. ೩-೦೩೦-೨) : ಆಗಳಾ ದಮಯಂತಿ ಚಿತ್ರದ ಬಾಗಿಲುಪ್ಪರಿಗೆಯಲಿ ರತ್ನದ ತೂಗುಮಂಚದ ಹಾಸಿನಲಿ ಕುಳ್ಳಿರಲು (ನಳಚ. ೩-೨೮) : ತೂಗುಮಂಚದ ಮೇಲೆ ಪೊಱಗುಮೂಡೆಗೆ ವಾಮಭಾಗವನಿಟ್ಟು ಕುಳಿತನು (ಭರತ. ೪-೦೦೭) : ನಂದಗೋಪನ ಮನೆಯ ತೂಗುಮಂಚದ ಮೇಲೆ ನಿದ್ದೆ ಮೇಲುದುವಾತ್ಮ ಹೊದೆಯಲಿರೆ (ಗೋಕಾವಿ. ೯-೦೯).

[ತೂಗು$_1$ (< ತೂಂಕು$_1$) + ಮಂಚ]

**ತೂಗುಕುದುರೆ** (ನಾ). ಹಿಂದಕ್ಕೂ ಮುಂದಕ್ಕೂ ಆಡುವ, ಮಕ್ಕಳ ಆಟದ ಕುದುರೆ: ಮಗು ಸವಾರಿ ಮಾಡುವ ಮರದ ತೂಗುಕುದುರೆ (cock-horse. ಇಂಕನಿ). [ತೂಗು$_1$ (< ತೂಂಕು$_1$) + ಕುದುರೆ]

**ತೂಗುಕೋಲು** (ನಾ). (ವಿಶೇಷವಾಗಿ ಹಳ್ಳಿಗಳಲ್ಲಿ) ಬೆಣ್ಣೆ ಮೊದಲಾದುವನ್ನು ತೂಕಮಾಡಲು ಬಳಸುವ, ಒಂದೇ ಪರಡಿ ಅಥವಾ ತಟ್ಟೆಯಿರುವ ಮರದ ಕೋಲು: ಚಿಂತಾಲು, ತಕ್ಕಡಿ, ತೂಗುಕೋಲು ...ಖಂಡಿ ಮುಂತಾದವುಗಳಿಂದಲೂ ಮೂರು ಬಗೆಯಾಗಿದೆ (ಸಿದ್ಧಾಂತಿ. ೩೦೦); ತೂಗುಕೋಲು ತಂದಿದ್ದೀಯಲ್ಲ, ತಕ್ಕಡಿ ಬಟ್ಟು ಎಲ್ಲಿ? (ಕೂಡಿ).

[ತೂಗು$_1$ (< ತೂಂಕು$_1$) + ಕೋಲು$_1$ (< ಕೋಲ್$_1$)]

**ತೂಗುಗುಂಡು** (ನಾ). (ಗಡಿಯಾರದ) ಲೋಲಕ; ತೂಗಾಡುವ ಗುಂಡು: ಕವಿಯ ಮನಸ್ಸು . . . ಹೀಗಿಂದ ಹಾಗೆ ಗಡಿಯಾರದ ತೂಗುಗುಂಡಿನಂತೆ ತೋರುತ್ತಿತ್ತು (ಅಂಹೂ. ೦೨೧).

[ತೂಗು$_1$ (< ತೂಂಕು$_1$) + ಗುಂಡು]

**ತೂಗುಜೋಕಾಲಿ** (ನಾ). ತೂಗಾಡುವ ಉಯ್ಯಾಲೆ: ಬಾಳುವೆಯು ಹೊಸದೊಂದು ಒಗಟವಾಗಿಹುದು. ನೆಲೆಯರಿಯದೇ, ತೂಗುಜೋಕಾಲಿಯಾಗಿ ತಲೆಕಿರುಗಿಸುವದೊಮ್ಮೆ, ಕೆಳಗೆ ಮೇಲಾಗಿ (ಉಯ್ಯಾಲೆ. ೭೭-೭).

[ತೂಗು$_1$ (< ತೂಂಕು$_1$) + ಜೋಕಾಲಿ]

**ತೂಗುತೊಟ್ಟಿಲು** 'ತೂಗುಂದೊಟ್ಟಿಲ್' ನೋ.

**ತೂಗುತೊಲೆ** 'ತೂಗುದೊಲೆ' ನೋ.

**ತೂಗುದೀಪ** (ನಾ). =ತೂಗುಂಜೊಡರ್: ಭವ್ಯವಾದ ದೇವಮಂದಿರ. ಬೆಳ್ಳಿಯ ತೂಗುದೀಪಗಳು (ಶ್ರೀರಾಯ. ೨೩೦).

[ತೂಗು$_1$ (< ತೂಂಕು$_1$) + ದೀಪ$_2$]

**ತೂಗುದೀವಿಗೆ** (ನಾ). =ತೂಗುಂಜೊಡರ್: ಜೋಲುವ ತೂಗುದೀವಿಗೆಯ ಸಾಲುಗಳೊಳು [ಪಾಠಾಂ. ಜೋಲುವ ದೀಪಸಾಲುಗಳೊಳು ಕೇರಿ] ದೀಪಾಳಿಯ ಹಬ್ಬದಂತಿಹುದು (ಭರತ. ೧೫-೨೩).

[ತೂಗು$_1$ (< ತೂಂಕು$_1$) + ದೀವಿಗೆ]

**ತೂಗುದೊಲೆ, ತೂಗುತೊಲೆ** (ನಾ.) ೧. ಒಂದು ಬಗೆಯ ಯುದ್ಧ ಸಾಧನ; ಲಗ್ಗೆಯಲ್ಲಿ ಶತ್ರುಗಳ ಮೇಲೆ ತೂಗಿ ಎಸೆಯುವ ಮರದ ದಿಮ್ಮಿ: ಸಾಲ ಮುಗಿಲಟ್ಟಣೆಯ ಡೆಂಕಣಿಯ ಪಂದಿದಲೆಯೋಳಿಗಳ ಮರುಳ ಕೈಗಳ ತೂಗ[ಗು]ದೊಲೆಯ . . . ವಿಶಾಲಶಾಲಮನಿರದೆ ದಿವಿಜಪತಿ ಕಂಡು (ಚಲಪು. ೪೨-೨೨). **ತೂಗುತೊಲೆ**: ೨. ಇಳಿಬಿಟ್ಟಿರುವ ತೊಲೆ; ನೇತುಹಾಕಿರುವ ಮರದ ದಿಮ್ಮಿ: ಎಂಥ ಭಾರಕು ಜೋಲಿ ಹೊಡೆಯದಿಹ ತೂಗು–ತೊಲೆ (ನಂಮು. ೫೦-೬).

[ತೂಗು$_1$ (< ತೂಂಕು$_1$) + ತೊಲೆ$_2$]

**ತೂಗುನೀರು** (ನಾ). ೧. ಎರಡು ಕೈಗಳಲ್ಲೂ ಕೊಡಗಳನ್ನು ಹಿಡಿದುಕೊಂಡು ಗಿಡ, ಮರ, ಬಳ್ಳಿ ಮೊದಲಾದುವುಗಳಿಗೆ ಒದಗಿಸುವ ನೀರು: ಅರಮನೆಯಲ್ಲಿ ಪ್ರತಿದಿನದಲ್ಲಿಯೂ ನಡೆಯುವಂತೆ ಕಟ್ಟುಮಾಡಿದ ಊಳಿಗಗಳ ವಿವರ...ಕರಗದ ಊಳಿಗ, ತೂಗುನೀರಿನ ಊಳಿಗ (ಶಾಮುವಂ. ೪೫). ೨. ನೇತುಹಾಕಿದ ಪಾತ್ರೆಯಲ್ಲಿಟ್ಟ ನೀರು: ತೂಗುನೀರಿನಲ್ಲಿ ಲವಂಗ, ಏಲಕ್ಕಿ, ಸಬ್ಬಸಿಗೆಬೀಜ, ತಾಳೀಶಪತ್ರೆ ಸಹ ಅರೆದು...ಸೇವಿಸೆ ಪೈತ್ಯರೋಗಂ ಗುಣಮಕ್ಕುಂ (ಶಳವ್ಯ. ೦೩೪).

[ತೂಗು$_1$ (< ತೂಂಕು$_1$) + ನೀರು$_1$ (< ನೀರ್$_1$)]

**ತೂಗುಪಾತ್ರೆ** (ನಾ). ೧. ನೇತುಹಾಕಿರುವ ಪಾತ್ರೆ: ಆಗಾಗ ದೈವಿಕ ಪರಿಮಳದ ತೂಗುಪಾತ್ರೆಗಳು ಗಾಳಿಯಲ್ಲಿ ಓಲಾಡಿದ ಶಬ್ದ ನನಗೆ ಕೇಳುತ್ತಿತ್ತು (ಯೋಧಪು. ೪೮). ೨. ನೇತುಹಾಕಲು ಅನುಕೂಲವಾಗುವಂತೆ ಹಿಡಿ ಇರುವ ಪಾತ್ರೆ. [ತೂಗು$_1$ (< ತೂಂಕು$_1$) + ಪಾತ್ರೆ]

**ತೂಗುಬಿಡು** (ಕ್ರಿ). ಜೋಲಾಡುವಂತೆ ಮಾಡು; ನೇತುಬಿಡು; ಇಳಿಬಿಡು: ಅವರ ಖಗೋಳಸಿದ್ಧಾಂತದ ಪ್ರಕಾರ ಭೂಮಿಯು ಗೋಳಾಕಾರವಾಗಿದ್ದು ಅಂತರಿಕ್ಷದಲ್ಲಿ ತೂಗುಬಿಟ್ಟ ಹಾಗಿದೆ (ಶಿಲ್ಪಶಾ. ೯೫).

[ತೂಗು$_1$ (< ತೂಂಕು$_1$) + ಬಿಡು$_1$]

**ತೂಗುಮಂಚ** 'ತೂಗುಂಮಂಚ' ನೋ.

**ತೂಗುಮಣಿ** (ನಾ). ಜೋಲಾಡುವಂತೆ ಹರಳನ್ನಿಟ್ಟು ಮಾಡಿರುವ ಒಂದು ಬಗೆಯ ಆಭರಣ: ಕೈಗಡಿಯಾರದ ಜೊತೆಗೆ ಚಿನ್ನದ ಬಳೆಗಳು. ಕಿವಿಗೆ ತೂಗುಮಣಿಗಳನ್ನು ಇಳಿಬಿಟ್ಟು ಹಣೆಗೆ ತಿಲಕವನ್ನಿಟ್ಟಿದ್ದಳು (ದೂರಕಿ. ೮೬). [ತೂಗು$_1$ (< ತೂಂಕು$_1$) + ಮಣಿ$_3$]

**ತೂಗುಮಣೆ** 'ತೂಗುವಣೆ' ನೋ.

**ತೂಗುಮರ** 'ತೂಗುವರ' ನೋ.

**ತೂಗುಯ್ಯಾಲೆ, ತೂಗುಯ್ಯಾಲೆ** (ನಾ). ೧. ತೂಗಾಡುತ್ತಿರುವ ಉಯ್ಯಾಲೆ: ಲಕ್ಷ್ಮಣಂ ... ಎಂದುಮುಗಲದಣ್ಣನ ಕಡೆಗೆ ದೂಳ್ಯಾಯ

ದೊಳ್ಪತ್ತಿ ಪೊರಳ್ವ ಸೀತೆಯ ಕಡೆಗೆ ತೂಗುಯ್ಯಲೆವೊಲಾದನು (ಕೃಮಿಕಾ. ೦೯-೫೯): ಕೊಂಬೆಯಂ ತೂಗುಯ್ಯಲೆಯಲಿ ಹಕ್ಕಿ ಸುರಗಾನದ ಹೊಳೆಹರಿಸಿತು ಸೊಕ್ಕಿ (ಶಾಂಚಜ. ೩೭-೩). ೨. (ಅಲಂ) ಡೋಲಾಯಮಾನವಾದ ಸ್ಥಿತಿ; ಸಂದಿಗ್ಧಪರಿಸ್ಥಿತಿ: ಅವಳ ಪ್ರೇಮ ತೂಗುಯ್ಯಲೆಯಾಗಿತ್ತು (ಪ್ರಪಕು. ೩೩೦). **ತೂಗುಯ್ಯಾಲೆ**: ೨. ಹಳಿಯದನ್ನು ಬಿಡಬೇಕೋ ಕಟ್ಟಿ ಕೊಳ್ಳಬೇಕೋ ಎಂಬ ತೂಗುಯ್ಯಾಲೆಯಲ್ಲಿದೆ ನನ್ನೂರು (ನನ್ನೂರು. ೩೦೯).

[ ತೂಗು₁ (<ತೂಂಕು₁) + ಉಯ್ಯಲೆ (<ಉಯ್ಯಲ್) ]

**ತೂಗುಯ್ಯಾಲೆ** 'ತೂಗುಯ್ಯಲೆ' ನೋ.

**ತೂಗುವಣೆ**, ತೂಗುವಂಣೆ (ನಾ). ಉಯ್ಯಾಲೆ; ಜೋಕಾಲಿ: ತಳಿರ ತೊಂಗಲ ತೂಗುವಣೆಯಲ್ಲಿ . . . ಸುಳಿದಾಡುವ ಮಂದಮಾರುತ ಮತ್ಯಾಂತನ ಬಳಿಗೆನ್ನ ಸಾರ್ಚಿಂದಳಲುತ (ಮೋಹತ. ೯-೨೦). **ತೂಗುಮಣೆ**: ತೂಗುವಮಣೆ ಇರೋದೆ ಮಕ್ಕಳಾಟಕ್ಕೆ, ಅಡವೇಡ ಅನ್ನಬೇಡ (ದೂಧಿ). [ ತೂಗು₁ (< ತೂಂಕು₁) + ವಣೆ ]

**ತೂಗುವರ**, ತೂಗುಮರ (ನಾ). ೧. = ತೂಗುದೊಲೆ ೧: ತಳವರ ನೂಲ ಹರಿಗೆ ಕಬ್ಬುನದ ಬಲ್ಲಲಗೆ ಬದ್ದರ ಸಾರವಾರಿ ತೊಲೆ ತೂಗುವರ ಬರೆ ಹಗ್ಗ ಮುಸರದಿಬ್ಬ ಸಲೆ ಮೆಟ್ಟಿದವು ದುರ್ಗದೊಳಗೆ (ಕುಮಾರಾ. ೩೭-೫೬). **ತೂಗುಮರ**: ೨. ನೇಣುಮರ; ಗಲ್ಲುಗಂಬ: ನಾನು ಈಗಲೆ ಹೇಳಿದ್ದೇನೆ. ಇವನು ಒಂದು ದಿನ ತೂಗುಮರ ಏರುತ್ತಾನೆ (ದೂಧಿ).

[ ತೂಗು₁ (< ತೂಂಕು₁) + ಮರ₁ ]

**ತೂಗುವೆರಳು** (ನಾ). (ಮೆಚ್ಚುಗೆಯಿಂದ) ಅಲ್ಲಾಡಿಸುತ್ತಿರುವ ಬೆರಳು: ಮರ್ಥು ಪೂತು ಭಾವನುತ ತೂಗುವೆರಳಿನ ಮಕುಟದೊಲಹಿನೊಳಾಗರುವಧಟರುಲಿಯ (ಕುಮಾರವ್ಯಾ. ೦-೩೬).

[ ತೂಗು₁ (< ತೂಂಕು₁) + ಬೆರಳು (<ಬೆರಲ್) ]

**ತೂಗುವೊಡಲು** (ನಾ). ಜೋಲುತ್ತಿರುವ ಶರೀರ; ನಿಲ್ಲಲಾರದೆ ತತ್ತರಿಸುತ್ತಿರುವ ದೇಹ: ತೂಗುವೊ[ಡಾಂ. ಗಿದೊ]ಡಲರೆಮುಚ್ಚು ಗಂಗಳ...ಮೂರ್ಛೆಯಲಿ ರವಿಸೂನು ಮೈಮುಚಿದ (ಕುಮಾರ. ೧೧-೩೦).

[ತೂಗು₁ (< ತೂಂಕು₁) + ಒಡಲು (< ಒಡಲ್)]

**ತೂಗುಸೇತುವೆ** (ನಾ). "ತಳದಲ್ಲಿ ಆಧಾರವಿಲ್ಲದೆ ಎರಡಂ ಕೊನೆಗಳಲ್ಲೂ ಸ್ತಂಭ, ಮೊ.ಕ್ಕೆ ಬಿಗಿದು ಕಟ್ಟಿ, ಹೊಳೆ, ಮೊ. ಗಳಿಗೆ ಅಡ್ಡವಾಗಿ ತಂತಿ ಹೊರಜಗಳಿಂದ ಜೋಲ ಹಾಕಿರುವ ಸೇತುವೆ" (Suspension-bridge. ಇಂಕಿ); ೧೮೫೦ರಲ್ಲಿ ಮೊದಲ ಬಾರಿ ಪರೇಡಿಯೊ ಕಬ್ಬಿಣದ ತೂಗುಸೇತುವೆಯನ್ನು ಕಟ್ಟಿದನು (ಶಿಲ್ಪಾ. ೦೫೪).

[ತೂಗು₁ (<ತೂಂಕು₁) + ಸೇತುವೆ]

**ತೂಗುಹಲಗೆ** (ನಾ). (ಅಂಗಡಿ ಮೊದಲಾದುವುಗಳ ಮುಂದೆ ಅದರ ಹೆಸರನ್ನು ಬರೆದು) ತೂಗುಹಾಕಿರುವ ಹಲಗೆ; ನಾಮಫಲಕ: ಆಮೇಲೆ ಬರುವಿ ನೀ ದತ್ತಕಾಯಾಗಿ ಕರ್ತವ್ಯಗಳ ತೂಗುಹಲಗೆಯನೆತೂಗಿ (ನವ್ಯಕ. ೭-೦೫): ಬಾಂಬೇ ಸೈಕಲ್ ಸ್ಟೋರ್ಸ್ ಎಂಬ ತೂಗುಹಲಗೆ ಅದರ ಮುಂದೆ ನೇತಾಡುತ್ತಿತ್ತು (ನಿಮುಕ. ೦).

[ ತೂಗು₁ (< ತೂಂಕು₁) + ಹಲಗೆ (< ವಲಗೆ) ]

**ತೂಗೋಲೆ** (ನಾ). ತೂಗಾಡುತ್ತಿರುವ ಓಲೆ; ಲೋಲಕ: ಕತ್ತಿನಲ್ಲಿ ವಜ್ರದ ಹಾರ. ಕಿವಿಗಳಿಗೆ ವಜ್ರದ ತೂಗೋಲೆ (ಪ್ರಕಾಶ. ೨).

[ತೂಗು₁ (<ತೂಂಕು₁) + ಓಲೆ]

**ತೂಟಿಸು** (ಕ್ರಿ). ನಾಶಮಾಡು; ಪರಾಭವಗೊಳಿಸು: ನಿನ್ನಿನ ರಣವನ್ನೆಯ ತಾ ತೂಟಿಸಿದುದೇನಾಯ್ತೆನುತ್ತ ಹೆಂಗಳ ನೋಟದಿಂದುತ್ತರಂ ನುಡಿದನು (ಕುರಂಗ. ೩೭-೨೬). 'ತುಟ್ಟಿಸು' ಪರಾ.

[ < ತುಟ್ಟಿಸು ]

**ತೂಟೆದಾರ** (ನಾ). (ಕರಾ) ಉತ್ಸವಾದಿಗಳಲ್ಲಿ ತೆಂಗಿನ ಗರಿಗಳ ಕೊಳ್ಳಿಗಳನ್ನು ಹಿಡಿದು ಮಾಡುವ ಒಂದು ಬಗೆಯ ಹುಸಿಕಾಳಗ: ತೂಟೆದಾರ . . . ಬೇಂಟೆ (Hunting) ಇತ್ಯಾದಿಗಳು ತುಳುವರ ಧೈರ್ಯ, ಸ್ಥೈರ್ಯ, ವೀರತ್ವದ ಕುರುಹುಗಳೆಂಬುದಾಗಿ ಸೂಚಿಸಿದ್ದಾರೆ (ತುಳುವಾ. ೨೦). [ ← ತುಳು. ತೂಟೆದರ ]

**ತೂಡಿಲ್** (ನಾ). ಒಂದು ಸ್ಥಳದ ಹೆಸರು: ಅಸ್ಕ ಸೀಮಾನ್ತರಂ ಪೆರ್ವಟ್ಟಿಯೂರ ಸೀಮೆ ಮೂಡಯ್ಯೂಡಿಲ ಪೆರ್ವ್ವಳ್ಳವೇ . . . ಬಡಗಾಯ್ ಪೆರ್ವ್ವಳ್ಳವೆ ಸೀಮೆ (ಎಕ. IV, ಹೆಗ್ಗಡ. ೪-೨೫ ; ಕ್ರಿ. 750). [ ? ]

**ತೂಣ₁** 'ತೂಳ₁' ನೋ.

**ತೂಣ₂**, ತೂನ (ನಾ). ಕಂಭ ; ಸ್ತಂಭ: "ತೂಣ(ನ) – ಸ್ಥೂಣ = ಗೂಟ, ಕಂಬ" (ಶಬ್ದಕೋ. ೧೮) ; ಮುಡದಿಯ ನುಣ್ಗೊಡೆಗಳನ್ನು ಕಡೆಗೆ ಬಣ್ಣಸಲಾನೆಯಿಯ ಮೋಹನವೆಂಬ ಗುಡಿಗಟ್ಟಿ ತೂಣದಂತಿಹುದು (ಅಂಜಿಚ. ೫-೦೨೪) ; ಸುರರ ಸಂದಣಿ ಭರದಿಂದ ಮರನಾಶವಿಳಿದು ಕೂಡದೊಲಜ ತೂಣವನಿರಿಸಿದಂತಿಹುದಲ್ಲಿ ಮೇರು (ವರ್ಧಮ. ೦-೪೮).

**ತೂನ್**: (ಕ). 'ತೂನಗೆಣಸು' ಪರಾ. [ < ಸಂ. ಸ್ಥೂಣಾ ]

**ತೂಣ₃** (ನಾ). = ತೂಣೀರ: ಚಾಪಬಾಣಂಗಳ ತೂಣವೆಂದೆನಿಸಿ ರಂಜಿಸಿ ತೊಂದು ಮನೋಜ್ಞಮಂಟಪಂ (ಉದ್ಭಟ. ೫-೦೭) ; ತೂಣದಿಂ ಸರಳ್ಗಳ ನುರ್ಚಿ ತೊಟ್ಟು ತಿರುವಂ ತೆಗೆದೆಚ್ಚಂ (ತ್ರಿಪುವಿ. ೨೪-೩೫೨). [ ಸಂ. ]

**ತೂಣ₄** (ನಾ). ಯಮಂ: ತೂಣನ ತೋಳಂ ತುಂಡಿಸಿ ಪೂಷನ ಕೋಣೆಯ ಹಲ್ಲೆಲ್ಲ ಘಲ್ಲಿಸಿ . . . ತಿರುಗಿದನಧ್ವರದೆಡೆಗೆ (ವೀರಶೀಚ. ೨-೪೩) ; ಓಹೋ ಹೋಯೆನ್ನಸುವಿಗ ತೂಣನ ಕೋಣಿಗೆ ಸಿಲ್ಕದು (ಉದ್ಭದೇ. ೩-೪೩) : ತೂಣನಂ ತುಳಿದ ಪೆಬ್ಬುವಿನೆಂಜಲುಂಡಾ ... ಕಣಿಗೊರಲ ಶಿವ ರಕ್ಷಿಸೈ ನಿಶ್ಚಲದೊಳು (ನಂದಿಮೂ. ೨೦-೩೩). 'ತೂಣಕೋಡು', 'ತೂಣಕೋಣ' ಪರಾ. [ ? ]

**ತೂಣಕೋಡು** (ನಾ). ಯಮನ ವಾಹನದ ಕೋಡು: ಮನಂಜವತಿ ಜವಹರಂಬುಗುವವನೆನುತಂ ಬಿನ್ನೈಸುತಿರ್ಪ ಸಮಯದೊಳಗೆ ಪಡಿಹಾರಿ ಯೊರ್ವನೆಯ್ತಂದು ತಚ್ಛೋಳನೆಡೆವಿಡದಡರಿದಂ ತೂಣಕೋಡುಗಳನೆನು ಕೊಡನೆ ಬಿನ್ನೈಸಿದಂ ತದ್ವೃಕ್ತಸಂದೋಹಕಣಿಯುರಂ ಮುಂದದೊಳು (ಅರಾಚ. ೪-೭೪). [ ತೂಣ₄ + ಕೋಡು₁ ]

**ತೂಣಕೋಣ** (ನಾ). ಯಮನ ವಾಹನವಾದ ಕೋಣ,– ಮಹಿಷ: ಸುರರಹಕರಿದಂತಮಂ ತೂಣಕೋಣನ ಕೊಂಬನಿರದೆ ಕಿಳ್ತಿರದನುಚಿ ಪಿಡಿದು ತಾಳಂಗುಟ್ಟುತ (ಅರಾಚ. ೦೭-೮). [ ತೂಣ₄ + ಕೋಣ₁ ]

**ತೂಣಗೊಳ್ಳು** (ಕ್ರಿ). ಪರವಶವಾಗು ; ಆವೇಶ ಹೊಂದು: ವನದೇವಿಯೋಲಗದೊಳುತ್ಸವದಿಂದಮಡಿಗಡಿಗೆ ತೂಣಗೊಂಡವನಂತೆಸೆವ ಮಂದಮಾರುತನ ನೋಡೆಂದೆನು (ಕ್ರಮಿಕಾ. ೩-೩೨) : ನವಿಲ ನಾಟ್ಯವನ್ನು ನೋಡಿ ನೆನಸಿ ನೆನಸಿ ತೂಣಗೊಂಡೆ (ಹಯೂಮ. ೭೭-೭) ; ತೂಣಗೊಂಡಿಹೆನಿಂತು ಮಹಾದ್ಭುತಪವಾಡಸಂದರ್ಶನಕ್ಕೆ (ಅನಿಕೇ. ೩೯-೯).

[ ತೂಣ₁ (< ತೂಳ₁) + ಕೊಳ್ಳು₁ (< ಕೊಳ್₁) ]

**ತೂಣಮನ** (ನಾ). (ಕಂಬದಂತೆ) ಸ್ಥಿರವಾಗಿರುವ ಮನಸ್ಸು: ತೂಣಮನಗೈದಡವಿಯುಂ ಸಾದೊರ್ಡಂ (ಶ್ರೀಚಾಮ. ೪-೩೬).

[ ತೂಣ₂ + ಮನ₁ ]

**ತೂಣಿ** (ನಾ). = ತೂಣೀರ: "ಮೂಡಿಗೆ, ತೂಣಿ; ಬತ್ತಳಿಕೆ – ಈ ೩ ದೆನ್ನ ಹೊದೆ" (ಶಕಸಾ. ೫೨-೦೦೭); ನವಿಸಿ ಮುನಿಗಳಿಗಾಗಿ ಧನುವನಂ ಬಾಣ ತೂಣಿಗಳಂ ಸಮರಜಯಕಾಂಕ್ಷೆಯಲಿ ಧರಿಸುತ (ಜಾತ್ರಾ. ೫೨-೭೬): ಪತಿ ಭಕ್ತಿಜಾಣೆಯುಂ ಸುಲಭಪ್ರವೀಣೆಯುಂ ಚಿದ್ಬಾಣತೂಣಿಯುಂ . . . ಪಶುಪತಿಯ ರಾಣಿಯುಂ ವಿಗೆ ಪೊಗಳುವೆ (ಗುರುಚ. ೦-೭). [ ಸಂ. ]

**ತೂಣಕಾರ** (ನಾ). ಬತ್ತಳಿಕೆಯನ್ನು ಹಿಡಿದಿರುವ ವೀರ (?) : ಕಾಣಸಿಳ ದೇವಕೂಟದ ತೂಣಕಾರ × × × ದ್ದಲ್ಲಿ (ಶಾ. I, ೪೭-೧೦; 1425).

[ ತೂಣ + - ಕಾರ$_1$ ( < - ಕಾಱ ) ]

**ತೂಣೀರ** (ನಾ). ಬಾಣವನ್ನು ತುಂಬುವ ಚರ್ಮದ ಚೀಲ; ಬತ್ತಳಿಕೆ : "ತೂಣೀರಂ . . . ಕಳಾಪಃ-ಈ ೮ ಮೂಡಿಗೆ" (ಹಲಾಯು. ೭೭-೩೧೧) ; ಸನ್ನಹತೂಣೀರಚಾಪಕಂಬಳಸಹಿತಂ ರನ್ನದ ಚಿತ್ರಿತ ಘಟಮಂ ತನ್ನಯ ಭುಜದೆ ತಳೆವಂ ಮೃಗಾಂತ್ಯತ್ರ್ಯಂಶಂ (ಜಾತಿ. ೧೯-೩೦) ; ಕವಚಂದೊಟ್ಟು ಶ ರಾ ಸ ನ ಂ ಬಿ ಡಿ ದು. ತೂಣೀರಂಗಳಂ ತಾಳ್ದಿ (ಪಂರಾಮಾ. ೯-೪೭) : ತೂಣೀರದೊಳ್ ಶರಂ ಪೋಗುವಂತೆ ತಲೆಯೊಳಗೆ ಮಾಣದೆ ಪೋಗಲು ಮೂರ್ಧೆಯೊಳಾಳ್ದು ಬೀಳೆ (ಕಥಾಕು. ೩-೮.೯.೪): ಪಾರ್ಥಕಂಗೆಯ್ದೆ ನನ್ನಿ ಕೊಟ್ಟು ಧನುರ್ಬಾಣಮುಂ ದಿವ್ಯತೂಣೀರಮಂ (ಶ್ರೀರಾಮಾ: ೧೯೩-೪೭೯) [ ಸಂ. ]

**ತೂತ** (ನಾ). ೧. ಹುರುಳಿಲ್ಲದವನು; ಪೊಳ್ಳಾದವನು: ಆಶೆಗೆ ಸಿಲುಕಿ ಸಾವ ತೂತರಿಗೆಲ್ಲಿಯದೋ ಲಿಂಗ (ಪ್ರೋಲಿಮಾ: ೪೮-೨೦೦) ; ನಾಡಿ ಸೂತ್ರಗಳ ಭೇದವನರಿದೆವೆಂದು ದೀಪನ ಪಚನ ವೈತ್ಯಕ್ಕೆ ಶ್ಲೇಷ್ಮವಿದೆಯೆಂದು ಆತ್ಮನ ಹಿತವನರಿಯದ ತೂತ ವೈದ್ಯನಲ್ಲ (ಸರ್ವಾಪ. ೨೨-೮೦೨). (ಗು). ೨. ಹುರುಳಿಲ್ಲದ; ಪೊಳ್ಳಾದ. 'ತೂತಜ್ಞಾನಿ' ಪರಾ.

[ ತೂತು$_1$ ( < ತೂಂತು$_3$ ) + - ಅ$_7$ ] ೭।

**ತೂತಜ್ಞಾನಿ** (ನಾ). ಪೊಳ್ಳುಜ್ಞಾನಿ ; ಅಜ್ಞಾನಿ : ಮಾತಿನ ಮಾಲೆಯ ಕಲಿತು ಸಂತೆಯ ಹೋತಿನಂತೆ ಹೋರುವ ತೂತಜ್ಞಾನಿಗಳಿಗಿನ್ನೆಂತಹ ವಿರಕ್ತಿಯೋ (ಮೋಲಿಮಾ. ೧೭೦-೬೩೫); ಮಾತಿನ ಮಾಲೆಯ ಬೋಧೆ ತೂತ ಜ್ಞಾನಿಗಳ ಸಂಸರ್ಗ (ಅಪರೀ. ೪೭). [ ತೂತ + ಜ್ಞಾನಿ ]

**ತೂತಪ್ಪಚ್ಚಿ** (ನಾ). ೧. ಮಧ್ಯೆ ತೂತಂ ಮಾಡಿರುವ ರೊಟ್ಟಿ ಮೊದಲಾದ ತಿನಿಸು ; ತಪ್ಪಲೆರೊಟ್ಟಿ ಇತ್ಯಾದಿ. ೨. ಸ್ತ್ರೀಯ ಗುಹ್ಯಾಂಗ ; ಯೋನಿ : (೬). [ ತೂತು$_1$ ( < ತೂಂತು$_3$ ) + ಅಪ್ಪಚ್ಚಿ ]

**ತೂತಾಲಂಬ** (ನಾ). ತಪ್ಪನ್ನೇ ಹಿಡಿದಂ ಹೋರಾಡಂವವನು ; ದೋಷಗ್ರಾಹಿ (?) : ಮಾತಿಗೆ ಮಾತ ಗಂಟನಿಕ್ಕಿ ನಿಹಿತವರ್ತನವಿಲ್ಲದ ಸರ್ವ ತೂತಾಲಂಬರ ಮಾತು ಸಾಕಂತಿರಲಿ (ಅಪರೀ. ೮೦).

[ ತೂತು$_1$ ( < ತೂಂತು$_3$ ) + ಆಲಂಬ ]

**ತೂತಿಡು** 'ತೂಂತಿಡು$_1$' ನೋ.

**ತೂತು$_1$** 'ತೂಂತು$_3$' ನೋ.

**ತೂತು$_2$** (ನಾ). ಒಂದಂ ಬಗೆಯ ವಿಮಾನ : ತೂತು ತೆಂತಲು ಸಿಸಿಲು . . . ಆನೆವೊಗನೆಂಬ ಪರಿಪರಿಯ ವಿಮಾನ್ಗಳಂ ಗುದಿಗೆಯ್ದರು (ಹಕಾ. ೫-೪೫). [ ? ]

**ತೂತುಕೆಡವು** (ಕ್ರಿ). ರಂಧ್ರವನ್ನುಂಟುಮಾಡಂ ; ತೂತಂಮಾಡು : "ಅವಿಧ-ತೂತುಕೆಡವತಕ್ಕದು" (ಗಂಗಾಪು. ೨೮).

[ ತೂತು$_1$ ( < ತೂಂತು$_3$ ) + ಕೆಡವು ( < ಕೆಡಪು ) ]

**ತೂತುಕೊರೆ** 'ತೂಂತುಗೊಱೆ$^3$' ನೋ.

**ತೂತುಗೆಯ್** (ಕ್ರಿ). = ತೂತಂಕೆಡವು : ಕಪೋತನೊಂದು ಕಾಂ ಠಕ್ಕಿಸಿ ಕಲ್ಲಿಯಂ ಕಡಿದು ಕನ್ನದೊಳೋಡಿದುದಂತೆ ಕಲ್ಲಿಯಂ ಚಿಕ್ಕನೆ ತೂತುಗೆಯ್ದು ಗಿಳಿಗಳ್ ಕರೆತಂದವು ತಮ್ಮ ಪೋತವಂ (ಚಿಮ್ಮರ. ೪-೬೨).

[ ತೂತು$_1$ ( < ತೂಂತು$_3$ ) + ಕೆಯ್$_1$ ]

**ತೂತುಗೊಱೆ** 'ತೂಂತುಗೊಱೆ$^3$' ನೋ.

**ತೂತುತೆಗೆ** (ಕ್ರಿ). = ತೂಂತುಗೊಱೆ : ಗೋಡೆಯಲ್ಲಿ ಮೊದಲು ತೂತು ತೆಗೆದು ಆಮೇಲೆ ಮೊಳೆ ಹೊಡೆ (ರೂಢಿ).

[ ತೂತು$_1$ ( < ತೂಂತು$_3$ ) + ತೆಗೆ$_1$ ]

**ತೂತುಬಾಯ್**, **ತೂತುಬಾಯಿ** (ನಾ). ಯಾವ ವಿಷಯಂವನ್ನಾದರೂ ಗುಟ್ಟಾಗಿಡದೆ ಬಹಿರಂಗ ಪಡಿಸುವ ಬಾಯಿ ; ಒಡಕುಬಾಯಿ : ಮಾರ್ತ್ಯದ ಮನುಜರು ಸತ್ತರೆನುತ್ತ ಕತ್ತಲೆಯೊಳು ಮುಳುಗಿ ಈ ಮಾತು ಕಲಿತುಕೊಂಡು ತೂತುಬಾಯೊಳಗೆ ನುಡಿದು ... ಹುಚ್ಚುಗೊಂಡು ತಿರುಗುವ ಕತ್ತೆಮನುಜರ ಮೆಚ್ಚರು ನಮ್ಮ ಅಪ್ಪಣ್ಣಪ್ರಿಯಚನ್ನಬಸವಣ್ಣ (ಲಿಂಗವ. ೬೭-೫೯). **ತೂತುಬಾಯಿ** : ಅವಳದು ತೂತುಬಾಯಿ, ಯಾವುದನ್ನೂ ಗುಟ್ಟಾಗಿ ಉಳಿಯುವುದಿಲ್ಲ (ರೂಢಿ).

[ ತೂತು$_1$ ( < ತೂಂತು$_3$ ) + ಬಾಯ್ ]

**ತೂತುಬಾಯಿ** 'ತೂತುಬಾಯ್' ನೋ.

**ತೂತುವೋಗು** 'ತೂಂತುವೋಗು' ನೋ.

**ತೂತೇಳು** (ಕ್ರಿ). ರಂಧ್ರವುಂಟಾಗು : ಮಾತುಗಾರಿಕೆ ಬೇಡ ಹಿಡಿಯೆಂದು ಭಾಳದೆ ತೂತೇಳಲೆಚ್ಚು ಬೊಬ್ಬಿರಿದ (ಮೋಹತ. ೧೨-೫೯).

[ ತೂತು$_1$ ( < ತೂಂತು$_3$ ) + ಏಳು$_1$ ( < ಏೞ್$_1$ ) ]

**ತೂತ್ಕಾರ** (ನಾ). ಒಂದು ಅನುಕರಣ ಶಬ್ದ : ಗೋವಳರೂತ್ತುವ ತಿತ್ತಿರಿಗಾಳಿಯ ತೂತ್ಕಾರವುಮಂ (ಅರ್ಧನೇ. ೮-೬೫೪).

**ತೂದ** (ನಾ). ಒಂದು ಬಗೆಯ ಮರ ; ಹೂವರಸಿ ; ಬ್ರಹ್ಮದಾರಂ : ತೂದಃ, ಪೂಗಃ, ಯೂಪಃ . . . ತೂಲಂ-೬ ಹುವ್ವರಿಸೆ ಗಿಡ . . . ಕಾಡಡಿಕೇಮರವೆಂದು ಕೆಲವರನ್ನುವರು (ಸಿದ್ಧಾಂತಿ. ೧೨೧). [ ಸಂ. ]

**ತೂದು** 'ತುಯ್$_2$' ಪರಾ.

**ತೂನ್**, **ತೂನು** (ಕ್ರಿ). ತೂಂತು$_2$ (ಭೂತನ್ಯೂ). ೧. ಜಗ್ಗು ; ಮುಂದಕ್ಕೆ ಎಳೆ : ಬಳ್ಳಿ ಎತ್ತಿನುವರದಿಂ ಪೊಱಮಟ್ಟು ಓಡುವುದಂ ಶ್ವಾನಂಗಳ್ ಕಂಡು ತೂನುತ್ತಿರಲ್ (ಪಂಚತಂ. ೨೦-೬) ; ಆ ಧನುವನು ತೂನಲ್ಕಾಱದೆಯಂಗಾಧೀಶ ತಿರುಗೆ ಲಜ್ಜೆಯೊಳು (ನೇಮಿಸಂ. ೨೩-೨೬೬) ; ಕೆಲರಲ್ಲಿ ತಲೆಗೂಡಲಂ ಕಟ್ಟಿ ಬಿಡದೆ ಅಲೆದು ತೂನುತ್ತೊಯ್ದರು (ವೀಕ್ಕೃಪು. ೪-೧೮-೨೭); ಸಸಿ ಸಾಣೆಯನು ತೆಂಕಣೆಲರ್ವರ್ಗದೊಳು ತೂಂತು ಮಸೆಯೆ (ನಾಗಕು. ೩೦-೨೭). **ತೂನು** : ೨. ಕಿತ್ತುಕೊಳ್ಳು ; ಸೆಳೆದುಕೊಳ್ಳು ; ವಸೂಲುಮಾಡು : ಇಂದು ಗೌರಿಯ ಹಬ್ಬವಿಂದು ದೀಪಾವಲಿ ಇಂದು ಕೇತಾರನ ದಿನವು ಇಂದು ಯುಗಾದಿ ಮತ್ತಿಂದು ಸಂಕ್ರಾಂತಿಯೆಂದೆಂದು ಧನವ ತೊನುತಿಹರು (ಅಂಜಿ. ೫-೧೨೮).

**ತೂನ** 'ತೂಣ$_2$' ನೋ.

**ತೂನಗೆಣಸು** (ನಾ). ಒಂದಂ ಬಗೆಯ ಗೆಣಸು ; ಮರಗೆಣಸು : ತೂನ ಗೆಣಸು, ಮುಡಿಗೆಣಸು, ನೂರೆಲೆಗೆಣಸು, ತುಣಗೆಣಸು, ದಂಡಾಲು (ಮೃಜಿಗಿ. ೩೧-೫೯೨).

[ ತೂನ ( < ತೂಣ$_2$ ) + ಗೆಣಸು ( < ಗೆಣಸು ) ]

**ತೂನಿಹುಳ** (ನಾ). ಒಂದು ಬಗೆಯ ಹುಳು : ತೂನಿಹುಳ, ಗದ್ದಲು (ನಮ್ಮನು. ೨೪೦). [ ತೂನಿ$_3$ + ಹುಳ ( < ಪುೞು ) ]

**ತೂನು** 'ತೂನ್' ನೋ.

**ತೂಪ** 'ತೂಂಕು$_1$' ಪರಾ.

**ತೂಪರ**, **ತುಪರ**, **ತೂಪರೆ$_2$**, **ತೂಪುರ**, **ತೂಪ್ರ**, **ತೂಬರ$_1$**, **ತೂಬರೆ** (ನಾ). = ತುಂಬುರು$_2$ : ಮಾತ್ಗಂಟ ಮಗಳಲ್ಲ ತಾಟಗಿತ್ತಿ ಸೊಸೆಯಲ್ಲ ತೂಪರದ ಚಕ್ಕೆ ಒಲೆಗಲ್ಲ (ಹಳ್ಳಿಹಾ. ೮೭). **ತುಪರ** : ಮರಗಳು :— ಹೆಸವ ... ಹಸರಗಣ್ಣೆ, ತುಪರ (ನಮ್ಮನು. ೨೩೭). **ತೂಪರೆ$_2$** : (೬). **ತೂಪುರ** : ತೂಪುರದ ಕೊಳ್ಳಿಯೋಪಾದಿಯಲ್ಲಿ ಛಟಛಟಗುಟ್ಟುವಂಥ ಕಟ್ಟುಗ್ರದ ಕಡುಗೋಪವೇ ರೋಷವು (ವಚಶಾ. II, ೧೦೫). **ತೂಪ್ರ** : ಕಂಬಳಿಕರೀಮರ, ಬೀಡಿಎಲೆಮರ, ತೂಪ್ರ, ತೂಬರೆ (ಮೃಜಿಗಿ. ೩೧-೬೦೪). **ತೂಬರ$_1$** : ತೂಬರದ ಬೀಜ, ಕೊಡಸಿಗನ ಬೀಜ...ಇವಱ

ಕಷಾಯವ ಜೇನುತುಪ್ಪವೆರಸಿ ಸೇವಿಸಲು ರಕ್ತಪಿತ್ತಾತಿಸಾರ ಪರಿಹರ (ವೈದ್ಯಸಾ. I, ೨೦೦) : ಇಂಗು, ತೂಬರದ ಬೇರು, ಶುಂಠಿ ಈ ಮೂಱನು ಸಾಸುವೆಯ ಎಣ್ಣೆಯಲ್ಲಿ ಕಾಸಿ ಕಿವಿ ತುಂಬ ಬಿಡಲು ಕರ್ಣಶೂಲೆ, ಕರ್ಣದೋಷಗಳು ಶಮನವಹವು (ವೈದ್ಯಸಾ. II, ೯೬). **ತೂಬರೆ** : "ತಿಂದುಕಃ, ಸ್ಫೂರ್ಜಕಃ, ಕಾಲಸ್ಕಂಧಃ, ಶಿತಸಾರಕಃ – ೪ ತುಂಬರಗಿಡ, ತೂಬರೇಗಿಡ" (ಸಿದ್ಧಾಂತಿ. ೧೦೬). [ < ಸಂ. ತುಂಬುರು ]

**ತೂಪರಿಡು** (ಕ್ರಿ). = ತೂಪಿಱು ೨ (?): ಕಟ್ಟ ವಿಾಸಲ ತೂಪರಿಟ್ಟು ನೆಟುಕನು ಮುರಿವಳು (ಜಿನಮು. ೯೨-೭). [ < ತೂಪಿಡು ]

**ತೂಪರು, ಜುಬ್ಬುರ$_1$, ಜೂಪರ, ತೂಪರೆ$_1$, ದೂಮರ** (ನಾ). ತುಂತುರು ಹನಿಗಳಿಂದ ಕೂಡಿದ ಮಳೆ ; ಜಿನುಗುಮಳೆ : ಈ ತೂಪರು ಸಾಕಾಗಿ ಹೋಗಿದೆಯಪ್ಪ (ರೂಢಿ). **ಜುಬ್ಬುರ$_1$** : ಇಷ್ಟೇ ಜುಬ್ಬುರ ಬಂದು ನಿಂತೀ ತೆಂಬುವ ಹಾಗಿಲ್ಲ. ಇದಕ್ಕೂ ದೊಡ್ಡಮಳೆ ಬರುವ ಹಾಗೆ ಕಾಣುತ್ತದ (ಮುಂಬಯಿ. ೫-೫೦). **ಜೂಪರ** ; "ಜೂಪರ = ಜಿನಗುಡುವ ಮಳೆ, ಜುಬರುಮಳೆ" (ಜಾನಕೋ. ೬೦). **ತೂಪರೆ$_1$** : "ತೂಪರೆ = ಜಿಟಜಿಟ, ಸಣ್ಣ ; (ತೂಪರೆಮಳೆ ; ತೂಪರೆ ಕಾಳು)" (ಜಾನಕೋ. ೬೭). **ದೂಮರ** : "ದೂಮರ = ಜಿಟಿಜಿಟ ಮಳೆ" (ಜಾನಕೋ. ೬).

[ ದೇ.೩ ತಮಿ. ತೂವಲ್, ತುವಲೈ ; ಮಲ. ತೂವಲ್ ; ತೆಲು. ತುಪ್ಪುರ. ತುಂಪರ, ತುವ್ವರ ]

**ತೂಪರೆ$_1$** 'ತೂಪರು' ನೋ.

**ತೂಪರೆ$_2$** 'ತೂಪರ' ನೋ.

**ತೂಪಿಡು** (ಕ್ರಿ). = ತೂಪಿಱು ೨ : ಭಸಿತದ ತಿಲಕಮನಿಟ್ಟು...ಪ್ರಸಾದದ ತುಂತುಱಿಂ ತೂಪಿಟ್ಟು (ಬಸವ. ೧೦-೧೦೦೦) ; ರಾಕಾಚಂದ್ರುಮಾನಂದವಮಂ ಶರಧಿ ಕಂಠಿ ಮರ್ತ್ಯರಿಂ ದೃಷ್ಟಿದೋಷಾಕೌಟಲ್ಯತೆಯಕ್ಕುಮೆಂದಿರದೆ ... ತೂಪಿಟ್ಟಂತೆವೋಲ್ ತೋರ್ಕುಂ (ಕಮಮಾ. ೨-೨೮). [ < ತುಪ್ಪು + ಇಡು$_1$ ]

**ತೂಪಿರಿ** 'ತೂಪಿಱು' ನೋ.

**ತೂಪಿಱು, ತೂಪಿರಿ** (ಕ್ರಿ). ೧. ಬಾಯಿಯಿಂದ ಉರುಂಬು,– ಊದಂ : ಶಿವನ ತನುವಂ ನೋಡಿ ತೂತೂ ಎಂದು ತೂಪಿಱಿದ ಯುವತಿಯಂ ಕಂಡು (ಬಸಪು. ೧೩-೨೦) ; ಲಿಂಗದೆಡದಂಗದೊಳ್ ಸಲದಿ ತತ್ರಿಯನಿಕ್ಕಿ... ಲಿಂಗದದ ತೂಪಿಱಿಯ (ಲಶಿಚಂ. ೩೫-೨೬) ; ಜೇಡವುಳು ತಾಂ ಪರಿಯ ಲಿಂಗದಗ್ರದೊಳು ತೂಪಿಱಿದ ಸತಿಯಂ ವಾಪಿಯೆಂದಟ್ಟಿ (ರಾಘಕ. ೬-೨೪). ೨. (ಮಕ್ಕಳಿಗೆ) ದೃಷ್ಟಿದೋಷ ಪರಿಹಾರಕ್ಕಾಗಿ ಹಾಗು ರಕ್ಷೆಗಾಗಿ ನೆತ್ತಿಯಂ ಮೇಲೆ ಊದಂ : ನಿಜಾಯ ಸೆಱಂಗನೋಸರಿಸಿ ಕೆಂದಳದಿಂದಮ ಕರ್ಚಿಕೊಂಡು ತೂಪಿಱಿದೊಗೆದಟ್ಟುಱಿಂದ...ಕಣ್ದೆಱೆಯದ ಕಂದನೆಂದೆನಗೆ ಕಣ್ದೆಱೆಯಪ್ಪನೊ ಮಂದಹಾಸಮಂ (ಅರ್ಧನೇ. ೦-೧೦೦೦); ಸೊಡರ್ವಕ್ಕಿನ ಬೊಟ್ಟನಿಟ್ಟು ತೂಪಿಱಿದು ಪಲರ್ವೆಯುಂ ಮರಸಿ (ಚಂದ್ರಪು. ೬-೪೫) : ಪರಾಗದ ತಿಲಕಮನಿಕ್ಕಿ ಸೌರಭದ ತುಂತುಱಿಂ ತೂಪಿಱಿದು (ಗಿರಿಜ. ೨-೭೦೫) ; ತನ್ನ ಮಗಳಿಗೆ ಸಮವಹ ರೂಪಜೀವೆಯರಿಲ್ಲೆಂದು ಚಾಪಳ ... ವೇಱು ತೂಪಿಱಿದುಪ್ಪ ಸೊಸುವಳು (ಅಂಜಿಚ. ೩-೦೪೫) ; ತರಳಂಗೆ ಕಣ್ಣೀಜಲೆಂದು ತೂಪಿಱಿದು (ಮೋಹತ. ೧೭-೬೩); ಕನ್ನೆಗೆ ಕಣ್ಣೀರಾದು ದಕ್ಕಟಯೆಂದು ಚೆನ್ನೆಯರೆತ್ತಿ ತೂಪಿಱಿದು . . . ಬೀಸಿದರಾಲವಟ್ಟದಿಂ (ನಾಗಕು. ೨೫-೬೩). ೩. ಎಸೆ ; ಚೆಲ್ಲು : ಸಭೆಯಲಿ ಸುಲಿದು ಬಿಸುಡುವ ಸೀರೆಗಳ ತೂಪಿಱಿದು ಸುಳಿವುಪ್ಪಾರತಿಯ ತನಿಹರಕೆ ತಳಿತುದು ತಾಯ ನೇಮದಲಿ (ಕುಮ್ಮಾಳ. ೬-೫೦). ೪. **ಹೊರಹೊಮ್ಮು** : ಧಾರಾವಿಭಿನ್ನ ಘ್ರಾಣಮುಖ ಬಳಿಕ ಹಾಯಿದಳು ಹೊಱವಡುವ ನೆತ್ತರ ಬಾಯ ತೂಪಿಱು ವಶ್ರುಜಲಪೂರಾಯದಭಿವಾನಚ್ಯುತಿಯ ರೋದನನಿನಾದದಲಿ (ತೊರಣ. ೩ ೫-೧) : ಉಱುಬಿನುಸುರಳ್ಳೆಗಳ ಮಿಗೆ ತೂಪಿಱುವ ರಕುತದ ರಣದ ನಾಟಕದಱಿಕೆಕಾಱರು ತಾವೊರಿಯರೊದಗಿದರು ಸರಿಸದಲಿ (ತೊರಣ. ೬-೦೪-೨೨). ೫. ಉಗಿ ; ಉಗುಳು ; ತುಪ್ಪು: ದಾಸಿಮಯ್ಯಂ ಮುದದಿ ತೂಪಿಱಿಯಾಲೆಂ[ಪಾಠಾಂ. ವೀಳ್ಯೆಯಾವನಾಗುಳ್ವೆನೆಂ]ದು ಕೆಲನಂ ನೋಡೆ (ಶಂಕರಾ. ೧೯-೭೦). ೬. ಶಾಂತಪಡಿಸು ; ಸಮಾಧಾನಮಾಡು : ಅನುವುಳ್ಳ ಬುದ್ಧಿಯಂ ಕಂಡೆನೆಂದತಿ ಮೆಚ್ಚಿ ತನಗೆ ತಾ ತೂಪಿಱಿದುಕೊಂಡು (ಹರಿಕಾ. ೬-೧೨); ಅಂಜದಿರೆನುತ ತೂಪಿಱಿದು ಹರಸಿದರ್ಕೈದೆಯಾಗೆಂದವನಿ ನಂದನೆಯ (ತೊರಣ. ೬-೦೩-೩೪). **ತೂಪಿರಿ** : ೨. ಚಂಡಭುಜಬಲನೆಂದು ಶಾರದೆ ಗಂಡನುಮಚರಿಸಿದಳು ತೂಪಿರಿದಧಿಕಹರುಷದಲಿ (ಅಂಬಿಕಾ. ೩೭-೯೦): ನಾಲ್ದೆಸೆಯ ಸುತನಿಗುಂ ಕ್ರಿಮದಿ ತೂಪಿರಿಯಲುದುರಿದ ಕಣಂಗಳ ತೆರದಿ ನಕ್ಷತ್ರಗಣಮೆಸೆದುವು (ವಂಕಾಶಾ. ೫-೬-೦೬); ತಾಯಿಯ ದೃಷ್ಟಿ ನಾಯಿಯ ದೃಷ್ಟಿ ಎಂದು ತೂಪಿರಿಯುತ್ತ (ಸಂಚಿತ್ರ. ೦೬). ೫. ಗೊಳ್ಳನೆ ನಕ್ಕು ಮೂದಲಿಸಿ, ಮೊಗದಿ ತೂಪಿರಿದು (ಗೊಲಿಪ್ಪಧಾ. ೯-೨೪೭). ೭. (ಆಲಂ) ಧ್ವನಿಮಾಡು; ಮೊಳಗು : ಹವ್ವಿನಿಂ ಕಹಳೆಗಳ್ ತೂಪಿರಿಯೆ ನಿಸ್ಸಾಳ ಬಿಮ್ಮಗಂ ಒದಗಿದುವು (ತುರಂಗ. ೬೨-೨೦). [ < ತುಪ್ಪು ? + ಇಱು$_1$ ]

**ತೂಪು** 'ತೂಂಬು' ನೋ.

**ತೂಪುರ** 'ತೂಪರ' ನೋ.

**ತೂಪುರಗೊಳ್ಳಿ** (ನಾ). = ತುಂಬುರುಗೊಳ್ಳಿ : ತೂಪುರಗೊಳ್ಳಿಯಿಂದದಿ ಛಿಟಛಿಟಲೆಂದು ಕೋಪವ ಮನಕೆ ತಾ ತಂದು (ಜ್ಞಾನಸ. ೫-೮೫).

[ ತೂಪುರ ( < ತೂಪರ) + ಕೊಳ್ಳಿ$_1$ ]

**ತೂಪ್ರ** 'ತೂಪರ' ನೋ.

**ತೂಫಾನು** 'ತುಫಾನು' ನೋ.

**ತೂಬರ$_1$** 'ತೂಪರ' ನೋ.

**ತೂಬರ$_2$** (ನಾ). ೧. ಗಡ್ಡ, ಮೀಸೆ ಹುಟ್ಟದಿರುವ ಪುರುಷ. ೨. ನಪುಂಸಕ ; ಷಂಡ : ಭೀಮಸೇನನನ್ನು ನೋಡಿ–ಗಡ್ಡ ಮೀಸೆಗಳಿಲ್ಲದ ತೂಬರ, ತೂಬರ ಎಂದು ಬಾರಿಬಾರಿಗೆ ಹಂಗಿಸಿ (ಕೃಪಾಪು. ೨೫೨). ೩. ಕೊಂಬಿಲ್ಲದ ಪಶು : "ಕೊಂಬಿಲ್ಲದುವು ತೂಬರಾಖ್ಯಂ" (ಮಂಗರಾ. ೫೫-೯) ; "ಕೊಂಬಿಲ್ಲದ ಪಶುವುಮಂ; ಗಡ್ಡ ಮೀಸೆಯಿಲ್ಲದ ಗಂಡಗೂಸುಮಂ ತೂಬರಮೆಂಬುದು" (ಹಲಾಯು. ೯೬-೦೨೩). [ ಸಂ. ]

**ತೂಬರಕ** (ನಾ). ಷಂಡ ; ನಪುಂಸಕ : ನಿಜಾಂಗನೆಯನನ್ಯರಿಗೆ ಕೊಟ್ಟವನ ಹೆಸು ತೂಬರಕ (ನಿಧಾಗ. ೫-೦೨-೦೦). [ ಸಂ. ]

**ತೂಬರೆ** 'ತೂಪರ' ನೋ.

**ತೂಬಾಕ** (ನಾ). (?) : ಸಣ್ಣದ ಬೊಟ್ಟನಿಟ್ಟಂತೆ ಕಿಱುಗಣ್ಣಲಿ ತೂಬಾಕ ನೊಣ ನೋಡಿದಂತ ನಿನ್ನೊಳು ಪರಿಲಕ್ಷನಿಂತೆ ತೇಜನಂತಾಗಿ ಬೆಳಗೋದು ಬಿರಿಸುಕ್ಕಿದಂತೆ (ಚಿದಾಕೋ. ೫೬-೫). [ ? ]

**ತೂಬು** 'ತೂಂಬು' ನೋ.

**ತೂಯ್** 'ತುಯ್$_2$' ನೋ.

**ತೂರಣಿಗೆ** (ನಾ). "ತೂರುವ ಸಾಧನ: ತೂರಣಿಗೆ" (Fanner. ೩೯೫). [ ತೂರು$_1$ ( < ತೂಱು$_1$) + – ಅಣಿಗೆ ]

**ತೂರಲ್** 'ತೂಱಲ್' ನೋ.

**ತೂರಲು** (ನಾ). ತುಂತುರುಮಳೆ : ಬೆಳಗ್ಗೆಯಿಂದ ಹಿಡಿದಿರುವ ಈ ತೂರಲಿನಿಂದ ಎಲ್ಲಿಗೂ ಹೋಗಲಾಗಲಿಲ್ಲ (ರೂಢಿ).

[ < ತೂಱು$_2$ + – ಅಲ್./ತಮಿ. ತೂಱಲ್, ತೂಱ್ಱಲ್; ಮಲ. ತೂಱ್ಱಲ್; ತೆಲು. ತೂರ ]

**ತೂರಲ್ಗೊಂಬು** 'ತೂಱಲ್ಗೊಂಬು' ನೋ.

**ತೂರಾಡು** (ಕ್ರಿ). ೧. ತೂಗಾಡು; ಜೋಲಾಡು : ನೀನು ಕಮರಿಯ ತುದಿಯಲ್ಲಿ ತೂರಾಡುತ್ತಿರುವುದು ತಿಳಿಯುತ್ತಿಲ್ಲವಲ್ಲ ! (ವಠಧಾ. ೯೬೪)

(ಎಕ. X (8), ಚಿಕ್ಕಬ. ೧೦೬-೬೬; 850); ಮೂಡಾಯೆನ್ರಾಜ ತೆಂಕಾಯ್ಯಾಟಾರನ ಮಾಡವು ... ಸನ್ದು ವೆಗ್ಗೊರ್ಲ್ಲಿಯುಳ್ಕ್ಕೊಡಿತ್ತು (ಎಕ. IV, ಎಡತೊ. ೬೦-೬೩; ಸು. 890). ತೆಂಕ್ಕೆ: ಪ್ರಥಮಂ ದುಗ್ಗನ್ಕಜ ... ಕೆಱೆಯ ನ್ತೆಂಕ್ಕೆ ನಟ್ಟ ಕಲ್ಲ್ (ಎಕ. X (8), ಚಿಕ್ಕಬ. ೬೬-೦೬; ಸು. 850).

[ತೆಂಕು + - ಆಯ್ $_2$./ತುಳು. ತೆಂಕಾಯಿ, ತೆನ್ಕಾಯಿ]

**ತೆಂಕು, ಟೆಂಕ್ $_1$**, ತೆಂಕ (ನಾ). ದಕ್ಷಿಣದಿಕ್ಕು, — ದೆಸೆ: ತೆಂಕು, ಬಡಗು, ಪಡುದಿಕ್ಕುಗಳಲ್ಲಿಯೂ ಬೆಳಕು ಹರಡುವುದನ್ನು ಕಂಡಿದ್ದೇವೆ (ನಿಬಂಧ. I, ೪೯೪); ಗಿರಿಜ ಸತ್ತು ಪ್ರೇತವಾಗಿ ಸರೋವರದ ತೆಂಕಿನ ಹೊನ್ನೆಮರವನ್ನು ಆಶ್ರಯಿಸಿದ್ದಾಳೆ (ಶದ್ಯಸ. ೧೦). **ಟೆಂಕ್ $_1$**: ಕನಕಶೈಲಕೆ ಟೆಂ[ಪಾಠಾಂ. ತೆಂ]ಕವೆನಿಸಿ ರಾರಾಜಿಪುದು...ಅಯೋಧ್ಯಾಭಿಧಾನ ಪಟ್ಟಣಂ (ಶಂಕಾರಾ. ೦-೪-೦). 'ಟೆಂಕದೆಸೆ' ಪರಾ. **ತೆಂಕ**: ತೆಂಕ ಪೇರೂರ ಪಳ್ಳಂ (ಎಕ. X, ಮುಳಬಾ. ೨೭-೬; 962); ತೆಂಕ ಪಾಲ್ಪಳ್ಳಂ ... ಮೂಡಲೆರಡು ಪಳ್ಳದ ಕೂಡಲೆ ಮೇರೆಯಾಗೆ (ಸೌಇಇ. XI–1, ೩೨-೩೬; 1007); ಸುತರೆಲ್ಲಂ ಬಡಗಲು ನೆರೆದಿರೆಯಾ ದೆಸೆ ಕುಸಿದು ತೆಂಕ ನೆಗೆದೊಡೆ (ಸಮುಪ. ೧೦-೦೧೪): ಅದಱಿಂದೆ ತೆಂಕ ಕಿಂಪುರುಷವರ್ಷ ತೆಂಕ ಹರಿವರ್ಷ (ಕಇ. IV, ೦-೦೩; 1204); ತೆಂಕ ಮುಂತಾಗಿ ನಡೆದನವನಿಪ ಸಮರಾಂಕಣಕಂದು ಲೀಲೆಯೊಳು (ಕುರಾಸಾಂ. ೦೦-೮೦).

**ತೆಂಕಣ್** = ದಕ್ಷಿಣದಿಕ್ಕು: ಮಂದಾನಿಲಂ ತೆಂಕಣಿಂ ಬರೆ ಚೈತ್ರಂ ಕುಡುವಘ್ರ್ಯಲಾಜತತಿಯೋ (ಕಾದಂಪೂ. ೭೪೦): ಮೇರು ಪಡುವಣ್ಗೆ ಕ್ಷೀರಾಶೀರಂ ತೆಂಕಣ್ಗೆ . . . ತನಗೆ ಸೀಮೆಯೆನಿಕ್ಕುಂ (ಮಲ್ಲಿಪು. ೨-೧೨): ತೆಂಕಣ್ಗಾ ನಿರುಪಮ ದಿವ್ಯವಾಜಿ ನಡೆದತ್ತಾಗಳ್ (ಕುಸುಮಾ. ೦೦-೦೩೪): ಕಂಪಿನೊಳೊಂದಿ ತೆಂಕಣಿಂ ಗಾಳಿ ಮೆಲ್ಲನೆ ಕೀಡುತಿದೆ (ಕಬ್ಯಕಾ. ೬೩). **ತೆಂಕಣ, ಟೆಂಕಣ, ತೆಂಕಳ** = ೧. ದಕ್ಷಿಣ ದಿಕ್ಕಿನ; ದಕ್ಷಿಣಕ್ಕೆ ಇರುವ: ಪುಲಿಪದಿಯ ತೆಙ್ಕಣ ಪೇರೊಟ್ಟಿಯೆ ಪೇರ್ಬಿಳಿಕೆ ಎಟಗಲ ಕಱಣ್ಡಲೋ ಮುಕಊಡಲ್ (ಇಆ. XII, ೦೬-೦೭; 785); ಮೂಡಣ ದೆಸೆಯ ವ[ರಾಹ] ಕೆಱೆಯಂ ಮೂಡಣ ಪಳ್ಳ ಅದಱ ತೆಙ್ಕಣ ದೆಸೆ [ಮಣ್ಣಗೆಱೆ] (ಸೌಇಇ. XI–1, ೯-೨೮; 862); ತೆಂಕಣೆಲರಲೆಪದಿಂದಂಕುರಿಸಿದ ಚೂತದಂತೆ ರೋಮಾಂಚಕಂಚುಕಿತಶರೀರನಾಗಿ (ಆದಿಪು. ೪-೨೦ ವ); ತೆಂಕಣ ಗಾಳಿ ಸೋಂಕಿದೊಡಂ . . . ನೆನೆವುದೆನ್ನ ಮನಂ ವನವಾಸಿದೇಶಮಂ (ಪಂಪಭಾ. ೪-೩೦); ತೆಂಕಣ ಭೂಪಾಲಕರಂ ಭೋಂಕನೆ ಪರಿದೆಯ್ದಿ ದರ್ಪಮಂ ಕಿಡಿಸಿ (ಧರ್ಮಾಮೃ. ೦-೧೦೨೨); ಅನಿಲಶರದಿಂದಊದಿದನು ಜಲನಿಧಿಯ ತೆಂಕಣ ತೀರಕಾ ಖಳನ (ತೊರರಾ. ೦-೦೦-೨೦); ಗಣನೆಯಿಲ್ಲದ ಕಪಿಗಳಂ ಕೂಡಿಕೊಂಡು ತೆಂಕಣ ಕಡಲ ತೀರದೊಳ್ಬಿಟ್ಟು ಬಂದೊಡೆ (ಕೃಮಿಭಾ. ೦೮-೬): ತೆಂಕಣ ಗಾಳಿಯು ಕೊಂಕಣ ಸೀಮೆಗೆ ಬಂತೈ! (ಕಎಶು. ೨೯-೬); ಪೂಗೊಳನ ತೆಂಕಳ ಗಾಳಿ ಸಂಚರಿಸಿತುಱ ಬನದೊಳು (ಒಕೋಶು. ೩-೮೦). ೨. ದಕ್ಷಿಣ ದಿಕ್ಕು: ಕರೆನಾಡು ಎಂಬುದು ... ತೆಂಕಣದ ಸೀಮೆಯನ್ನು ನಿರ್ದೇಶಿಸುವ ಹೆಸರು (ದ್ರಾವಿವಿ. ೮೨); ಬರುತ ಕರ್ನಾಟಕವನು ಕಳಿದುತ್ತರದಿಶಾಮುಖದಿಂದ ಟೆಂಕಣದೆಸೆಯ ಕೊಂಕಣಕೆ ಪರಮಪಾವನಮೂರ್ತಿ ಬಂದನು (ವಿಭಾಗ. ೩-೪ -೩೯): ವಿಜಯಾದ್ರಿ ಟೆಂಕಣ ಶ್ರೇಣಿಯೊಳು ... ಪದ್ಮ ವರೂಥಖಚರವಿನೋದದೊಳು ತೆರಳಿದನು ದೇಶಭ್ರಮಣೆಗೆ (ಜಿನಭಾ. ೩೦-೦೮). **ತೆಂಕಣಂ**=ದಕ್ಷಿಣದೇಶಕ್ಕೆ ಸೇರಿದವನು: ಆಕಾರಕ್ಕೆ–ಮೂಡಣಂ, ತೆಂಕಣಂ, ಬಡಗಣಂ (ಶಮದ. ೧೦೧ ಪ್ರಯೋ); ತೆಂಕಲ್ ಪುಟ್ಟಿದಂ, ತೆಂಕಣಂ (ಶಬ್ದಾನು. ೨೯೨ ಪ್ರಯೋ). **ತೆಂಕಣರ್**=ಪಿತೃದೇವತೆಗಳು: ತೆಂಕಣರ್ ದೈವಂ ಬಿರ್ದೊಕ್ಕಲ್ ತಾನೆಂಬಿವ್ಯದೆಡೆ ನಿಱಿಯೋವುದು ತಲೆ (ಕುಜಳ್. ೦-೩-೩). **ತೆಂಕಣರಾಯ**=ದಕ್ಷಿಣದೇಶದ ಅಧಿಪತಿ: ರಣದೊಳ್ ತೆಂಕಣ ರಾಯನಂಕದ ಚತುಃಸ್ಸೈನ್ಯೋತ್ಕರಂ ದಂಡೆಯಡ್ಡಣವೀತಂ (ಎಕ. XI, ದಾವಣ. ೨೩-೩೬: 1224); ಹಣದಂಬೊಯ್ಯಲ್ ಜವಂ ರಾಯರನೆ ಬಯಸಿ ಬರ್ಪಂತೆ ಸೋಮೇಶ್ವರಂ ತೆಂಕಣರಾಯಂ ಬಂದಂ (ಸೂಕ್ತಿಸು. ೦-೨೧). **ತೆಂಕಣಾದಿತ್ಯ** = ಹೊಯ್ಸಳರಾಜನಾದ ವಿಷ್ಣುವರ್ಧನನ ಒಂದು ಬಿರುದು: ವಿಷ್ಣುವರ್ಧನ ತೆಂಕಣಾದಿತ್ಯ ತೆಂಕಣಚಕ್ರವರ್ತ್ತಿ (ಎಕ. VII, ಶಿಪಪೊ. ೬೯-೯: 1320). **ತೆಂಕಣಾಸೀಮೆ** = ದಕ್ಷಿಣದ ಸೀಮೆ: ಪಡುವಣ್ಣಾ ಸೀಮೆ ತಣ್ಣಳ್ಳಿಗಾರ ಪಾಟಿ ತೆಙ್ಕಣ್ಣಾಸೀಮೆ ನೆಯ್ಪಲ್ಗೆಱೆ (ಎಇ. XXI, ೦೬೮-೧೨೦; 8ನೆಯ ಶತ). **ತೆಂಕಲ್, ತೆಂಕಲು**=ದಕ್ಷಿಣದಿಕ್ಕು: "ಅವಾಚೀನಂ, ಅವಾಕ್—ಈ ೨ ತೆಂಕಲಾದುದಱ ಪೆಸರ್" (ಕರಾಯು. ೧೬-೦೨೩); ತೆಂಕಲಾವುದೆನುತಂ ನೋಡುತ್ತಮಿಂ ಪೋಗವೇಟ್ಟುದಿದಂ ತಲ್ಲದೆ ಬೇಱುಪಾಯಮಣಮಿಲ್ಲ (ಕಾದಂಪೂ. ೬೨೮); ತದ್ದಾಡಿಗೆ ತೆಂಕಲ್ ತೊಱಗಲೆಗೆ ಬಡಗಲಿರ್ದುದು ನೆಱೆಯ ಸುಬೋಧ್ದೀಪಮೆನಿಸಿ ಬೆಳುಗಲಿ ದೇಶಂ (ಅಜಿಪು. ೧೨-೪೪): ಆ ಕನಕಾದ್ರಿಯ ತೆಂಕಲ್ ಭೂಕಾಂತಾ ಕುಂತಳೋಪಮಂ ಕುಂತಳಮಂತಾ ಕಾಂತವಿಷಯರಕ್ಷಕರೀ ಕಲಿಯುಗದಲ್ಲಿ ಪುಟ್ಟಿದಬ್ಜಾಲಂಕ್ಕರ್ (ಎಇ. XX, ೦೨-೩; 1167): ಉದ್ಭಟ ಭೂಮಿಪನುತ್ತರದಿಂ ಕೂರ್ತು ತೆಂಕಲಭಿಮುಖನಾದಂ (ಉದ್ಭಟ. ೨-೩೩); ಅದಱೊಪ್ಪುವ ತೆಂಕಲ್ ಪೆರ್ಚಿದ ಹಿಮವಾನ್ ಹೇಮಕೂಟನಿಷಧಂ ಬಡಗಲ್ ಸದಮಳನೀಲಶ್ವೇತಂ ಪದೆಪಿಂ ಶೃಂಗಿಗಳೆನಲ್ಕೆ ವರ್ಷಗಿರೀಂದ್ರಂ (ದಶಕು. ೭-೧೧); ಮೇರುಗೆ ತೆಂಕಲು ಸದಮಲ ಭರತಾವನಿ (ಇಆ. IX, ೯೭-೬: 1169); ಅತ್ತಲಿಹುದಾ ವರುಪ ಕಿಂಪುರುಷೋತ್ತಮ ಮದಱಿಂದ ತೆಂಕಲು ವರ ಹಿಮಾಚಲವು (ಸಂಭಪ. ೦೧-೩೦): ಮರಳಿ ಬಂದವರು ತೆಂಕಲು ಪಡುವಲು ಮೇವ ತುಱುವಿಂಡನು ಕೊಂಡು ಪೋಗಿ . . . ಒಟ್ಟಿಸಲು (ಜೀವಂಸಾಂ. ೮-೨೨).

[ದೇ.॥ ತಮಿ. ತೆಱ್ಕು, ತೆಕ್ಕು; ಮಲ. ತೆಕ್ಕು, ತೆಕ್ಕನ್; ಕೊಡ. ತೆಕ್ಕಿ, ತೆಕ್ಕ್ಯ]

**ತೆಂಕುದಿಕ್ಕು** (ನಾ). ದಕ್ಷಿಣದಿಕ್ಕು: ತೆಂಕುದಿಕ್ಕಿನಲ್ಲಿರುವ ಐದಂಕಣದ ಮನೆಯನ್ನು ಅವರಿಗೆ ಕೊಟ್ಟು, ತಾವು ಮಲೆನಾಡಿಗೆ ಹೊರಟು ಹೋಗಿದ್ದರು (ದೇವಹಿಂ. ೩೦). [ತೆಂಕು + ದಿಕ್ಕು]

**ತೆಂಕ್ಕೆ** 'ತೆಂಕಾಯ್' ನೋ.

**ತೆಂಗಡೆ** (ನಾ). = ತೆಂಕಕಡೆ: ತೆಂಗಡೆಯಿಂ ಸುಳಿವ ಸುರಭಿವಾಯುವ ಕಾಟನದಿಂ ತಳುವದೊಲೆವ ಲತೆಯಂತೆ (ಜಯುಕಾ. ೮-೫೯); ನಡೆತಂದಾ ಬಿಜ್ಜಾಧರ ಪೊಳಲ ತೆಂಗಡೆಯ ಶಬಾಲಯಕಾಗಿ ಕಡುನೀರರತಿ ಮುದದಿಂ ಪೋಗುತಿರೆ (ಶ್ರೀಪಾಲ. ೭-೧೩೨). [ತೆಂ + ಕಡೆ $_3$]

**ತೆಂಗಲೆ, ತೆಂಕಲೈ** (ನಾ). [ವಿಶಿಷ್ಟಾ] ವಿಶಿಷ್ಟಾದ್ವೈತಿಗಳಲ್ಲಿ ಹಣೆಯ ನಾಮದ ಕೆಳಗೆ ಪೀಠವನ್ನು ಹಚ್ಚುವ ಪಂಗಡ; ರಾಮಾನುಜ ಭಕ್ತರ ಒಂದು ಪಂಥ: (ಸ). 'ಬಡಗಲೆ' ಪರಾ. **ತೆಂಕಲೈ**: ಶ್ರೀವೈಷ್ಣವಮತದ ಈ ತತ್ವ ಕ್ರಮೇಣ ಬಡಗಲೈ ತೆಂಕಲೈ (ಉತ್ತರ ದಕ್ಷಿಣ) ಭಾಗಗಳಾಗಿ ಒಡೆದವು (ಭಾರದ. ೨೯೭). [← ತಮಿ. ತೆನ್ಕಲೈ]

**ತೆಂಗಾಯ್, ತೆಂಗಾಯಿ, ತೆಂಗುಗಾಯ್, ತೇಂಗಾಯ್** (ನಾ). ತೆಂಗಿನ ಕಾಯಿ; ತೆಂಗು; ನಾರಿಕೇಳ: ತೆಂಗಾಯ ಪಾಸಟಿಯ ಕರ್ಕಶಕುಚಂಗಳ್ (ಸೌಂದಪು. ೭-೩೩): ತೆಂಗಾಯನು ಪೆರೆದದರ ಮೇಲಿಕ್ಕಿ (ಸೂಪಶಾ. ೩-೪); ಒಟ್ಟಿದ ಕಬ್ಬು ತೆಂಗಾಯಿಂದ ಮೆಱೆವುತ್ತಿದ್ದುದು ಖಡ್ಗಪೂಜೆ (ಭರತ. ೨೦-೦೨೯); ತಟ್ಟೆಯ ತೆಂಗಾಯನು ಒಡೆದಲ್ಲಿಡು ಕೊಡು ಹಣ್ಣಳನಿಲ್ಲಿ (ಕೋಗಿಲೆ. ೮೦-೩೭). 'ಬೆಂದೆಂಗಾಯ್', 'ತೆಂಗಾಯ್ಗೊನೆ' ಪರಾ. **ತೆಂಗಾಯಿ**: ಸಣ್ಣಿಸಿದ ತೆಂಗಾಯಿ ತನಿವಾಲುಗಳ ಬೆರಸಿ . . . ಗಾರಿಗೆಯುಡುವುದು (ಸೂಪಶಾ. ೦-೨೪); ತೆಂಗಾಯಿ ಪಲಸು ... ಬಹುಫಲಾದಿಗಳ ತೋಟಿಗರು ಸಾರಂಗಪಾಣಿಗೆ ಸಾರ್ಚಿದರು (ಬೋಚಕ. ೪-೬೨): ತೆಂಗಾಯಿ

ಯೊಳಗೆ ಪರಿಪೂರ್ಣಜಲ ಬಲಿದು ಓಂಗಿದಪ್ಪಂದ (ಶಬರಶ. ೧೭೪). **ತೆಂಗುಗಾಯ್** : ಮುಡಿಪು ಕಟ್ಟುವರವರೆ ತೆಂಗುಗಾಯ್ ಬಾಳೆಗಾಯ್ . . . ನೈವೇದ್ಯನಿವಹಂಗಳಂ (ಶ್ರೀರಾಮಪ. ೭೦೩-೧೨೮). **ತೇಂಗಾಯ್** : ಹೊಂಗೊಡದೊಳು ನೀರ ಹೊತ್ತ ಧೂರ್ಜಟಿಯಂತೆ ತೇಂಗಾಯ್‌ಮರಗಳೊಪ್ಪಿದುವು (ಮೋಹತ. ೨೪-೧೨) : ಅವಲುಂ ಪುರಿಗಡಲೆಯು ಮುದ್ದಣಂಗೆ ; ಕಬ್ಬು ಕಬ್ಬಿಗಂಗೆ ; ತೇಂಗಾಯೆನಗೈಸೆ (ರಾಮಾಶ್ವ. ೮೯-೫).

[ ತೆಂಗು$_3$ + ಕಾಯ್$_4$ ; ತಮಿ. ತೇಙ್ಕಾಯ್ ; ಮಲ. ತೆನ್ನನ್ ಕಾಯಿ ; ತೆಲು. ತೆಂಕಾಯ, ಟೆಂಕಾಯ ]

ತೆಂಗಾಯಿ 'ತೆಂಗಾಯ್' ನೋ.

**ತೆಂಗಾಯ್ಗೊನೆ** (ನಾ). ತೆಂಗಿನ ಕಾಯಿಗಳ ಗೊನೆ,-ಗೊಂಚಲು: ಕಕ್ಕಸದೆ ಬೆಳೆದ ತೆಂಗಾಯ್ಗೊನೆಗಳಂ ... ವನಪಾಲಕಂ ಪೊಱಸಿಕೊಂಡೈತಂದನು (ಚಬಪು. ೪೩-೨೯). [ ತೆಂಗಾಯ್ + ಗೊನೆ$_3$ (<ಗೊಲೆ$_2$) ]

**ತೆಂಗಾಯ್ಮೊಲೆ, ತೇಂಗಾಯ್ಮೊಲೆ** (ನಾ). ತೆಂಗಿನಕಾಯಿಯಂತಹ ಮೊಲೆ: ತೆಂಗಾಯ್ಮೊಲೆಯ ನುಣ್ಮೊಲೆಯ... ಮಹಾಪ್ರೌಢವನಿತೆಯರ್ ಕಣ್ಗೆಸೆದರಲ್ಲಿಗಲ್ಲಿ (ಚಬಪು. ೦೦-೨೧). **ತೇಂಗಾಯ್ಮೊಲೆ** : ನವೀನಲತಾಂಗದ ತೇಂಗಾಯ್ಮೊಲೆಯ...ತರಳಾಕ್ಷಿಯರೆಯ್ದುಂದೀಕ್ಷಿಸಿದರ್ ನೃಪನ (ಅದುಕಾ. ೧೦-೪೯). [ ತೆಂಗಾಯ್ + ಮೊಲೆ$_1$ ]

**ತೆಂಗಾಳಿ, ತೆಣ್ಗಾಳಿ** (ನಾ). ದಕ್ಷಿಣ ದಿಕ್ಕಿನಿಂದ ಬೀಸುವ ಗಾಳಿ : ಮದನೇಭಕ್ಕಾವಪ್ರಮೊಂದಂಬುಜವೆರಡು ಕೊಳಂ ಮೂಱು ತೆಂಗಾಳಿ ನಾಲ್ಕು . . . ಅಳಿ ಪದಿಮೂಱಲ್ತೆ ಮತ್ತೋಪಚಾರಂ (ಶಾಂತಿಪು. ೯-೮೯) : ತೆಂ[ಪಾಠಾಂ. ಕಂ]ಗಾಳಿ ಪೇೞ್ ಒಱದೊಂದುತ್ಸವವಾಯ್ತು (ಕಾದಂಪೂ. ೯೦೦) : ತನುಲತೆಯನ್ನೈದೆ ತೆಂಗಾಳಿಗೊಡ್ಡುವ ಕೋಮಲಾಂಗಿಯರು (ಹಜಕಾ. ೪-೩೯) ; ಈ ತೆಂಗಾಳಿ ತನ್ನಿಚ್ಚೆಯಿಂ ನಡೆತಂದಪ್ಪುದು (ಕಬ್ಬಿಕಾ. ೫೫) : ಆಗರದೊಳು ರಸದಾಳಿ ತೆಂಗಾಳಿಯಂ ಕಾಗಲೊಂದಱೊಳೊಂದು ಹಳಚಿ ಮೇಗೋಲ್ಗಳೊಡೆದಿನಿರಸದ ಪರಿಯೊಳಿಕ್ಷುಸಾಗರ ತುಂಬಿದಂತಾಯ್ತು (ಮೋಹತ. ೨-೪೮). **ತೆಣ್ಗಾಳಿ** : ತೆಣ್ಗಾಳಿಯಲೆಪದಿಂದೊಲೆದು ಪುಣ್ಯಪಣ್ಯಾರ್ಥಿಭವ್ಯಸಾರ್ಥಮನಿತ್ತಲೆಟ್ಟುವೂರ್ದಂದು ಕೈಸನ್ನೆಯಿಂ ಕರೆವಂತೆ ಕರಮೆ ಸೊಗಯಿಸುವ ತಳಿರ್ಗೊಂಬುಗಳುಂ (ಚಂದ್ರಪು. ೨-೦೧೫).

[ ತೆಂ + ಗಾಳಿ$_1$ ]

ತೆಂಗು$_1$ 'ತೇಂಗು$_2$' ನೋ.

**ತೆಂಗು$_2$** (ಕ್ರಿ). (?) : ಕರಂ ಬಿಂಕಂ ತೆಂಗುವ ಗೋಢಜತ್ರು ಸುದೃಢಾಯದ್ವಾಹುಕಾಂಡಂ (ಚಕಿವಿ. ೩-೨೦). [ ? ]

**ತೆಂಗು$_3$, ಟೆಂಗು** (ನಾ). ಒಂದು ಬಗೆಯ ಮರ ಮತ್ತು ಅದರ ಕಾಯಿ; ನಾರಿಕೇಳ : "ನಾಳಿಕೇರಃ, ಲಾಂಗಲೀ; ಈ ೨ ತೆಂಗು" (ನಾಚಿರಾ. ೧೧೩); "ನಾರಿಯಳಿ ನಾಳಿಕೇರಂ ತೆಂಗೆನಿಕ್ಕು" (ಮಂಗರಾ. ೩೪-೦೦) : ಎಲೆಯಡಕೆಯುಮಂ ತೆಂಗಿನೆಳನೀರುಮಂ ಕೊಳಲಿಂಬಪ್ಪಂತಿರೆ ಮಾಡಿ ನಟ್ಟ ಕೌಂಗಿನ ತೆಂಗಿನ ಮರಂಗಳುಮಂ (ಪಂಪಭಾ. ೫-೪೭ ವ); ಶೀತಳಮಪ್ಪ ತೆಂಗಿನೆಳನೀರೊಳ್ . . . ಪುಂಡ್ರೇಕ್ಷು ಪಾನೀಯದೊಳ್ ಬೆಳೆದೋರಂತೊಱಗಿರ್ದು ತೋರ್ಪ ವಿಲಸತ್ಕರ್ಪೂರಶಾಲೀವನಾವಳಿಯಿಂದಂ ಕರಮೊಪ್ಪ ತೋರ್ಪುದು ಬನಂ (ಸುಕುಮಾ. ೧೦-೭೦) : ತೆಂಗಿನ ಪೊಸನೇಱಂದಱು ದಿಂಗಳ್ವರಮಡಸಿ ಕಂದಿಯಂ ಕಟ್ಟಿದೊಡಂ ತಾಂ ಗಡ ಬಿಟ್ಟೊಡೆ ಮತ್ತಂ ಪಿಂಗದು ಡೊಂಕೆಂಬ ನಾಯ ಬಾಲದ ತೆಱದಿಂ (ಧರ್ಮಾಮೃ. ೨-೯೨) : ನಾಯ್ಗೆ ತೆಂಗೇವುದೊ ಕಾಗಗೇವುದೊ ರಸಾಯನಯುಕ್ತದ ಸಾರಭೋಜನಂ (ಲೀಲಾವ. ೨-೧೦೦) ; ಗಂಜೆಯನಾಗಳ್ ತೆಂಗಿನ ಕಿಳಿವಟ್ಟಲೊಳಾ ತಂಗೆಱೆದಳ್ (ದಶಕು. ೦೨-೧೨೫) ; ತೆಂಗಿಗೆ ನೀರನೆಱೆದರೆ ಅಂಗೈಯಲ್ಲಿ ಫಲವು ಕಾಣುವಂತೆ (ಅಹಂಡೇ. ೭೦-೦೧) ; ತೆಂಗನು ಲಾಗಿಸಿ, ಅಡಕೆಯ ಬಾಗಿಸಿ . . . ಬಂತೈ ! ಬಂತೈ ! (ಕವಿಪ್ರ. ೨೮-೫) : ಸಿಂಹಲದ್ವೀಪದಲ್ಲಿ . . . ತೆಂಗು ಮೊದಲಾದ ಫಲಗಳೂ ಬಹಳ ಆಗುತ್ತವೆ (ಮುಂಬಯಿ. ೪-೨೦೧); ತಲೆದೂಗೆ ತೆಂಗುಗಳ್ ಮೆರೆವ ಕಾಲೂರು (ಕಾಯೂರ. ೪೭-೭೭). **ಟೆಂಗು** : ಟೆಂಗು ಬಾಳೆಹಣ್ಣು ... ದ್ರಾಕ್ಷಿ ತಂದಿಹರು (ಸಿದ್ಧಪು. ೦೯-೮) ; ದೂರದ ದ್ವೀಪದ ಮೇಲಿನ ಟೆಂಗಿನಗಿಡಗಳು ... ಗೊಂಬೆಗಳಂತೆ ನಿಂತಿದ್ದವು (ಭೂಮಿಕಾ. ೮೧).

**ತೆಂಗಿನಕಾಯ್, ಟೆಂಗಿನಕಾಯಿ, ತೆಂಗಿನಕಾಯಿ** = ತೆಂಗಾಯ್ : ತೆಂಗಿನಕಾಯದೊಂದು ಕಠಿನತ್ವಮನೊರ್ಮೆಯೆ ಕಂಡು ಪೊಲ್ಲದೆಂದೇಂ ಗಳ ಬೆಚ್ಚಿ ಭೀರುತನದಿಂ ಬಿಡದೊಯ್ಕನೆ ಮೂಸಿ ನೋಡಿ ನಾಯ್ಪಂಗಿದುದು (ಧರ್ಮಾಮೃ. ೧೦-೪೩) : ಅಕ್ಕಿಯಡಕೆ ಓಲೆ ತೆಂಗಿನಕಾಯಿ ಕಂಡೆ (ಮಹಾದೇ. ಬ. ೪೦-೮೭) : ಈಚೆಗೆ ಟೆಂಗಿನಕಾಯಿ ಬಹಳ ತುಟ್ಟಿ ಆಗಿವೆ (ರೂಢಿ) : ತೆಂಗಿನ ಕಾಯಿ ಹೋಳ ಮಾಡಿದರು ಜೂದಿನಲಿ (ಮೋಹತ. ೨೦-೨೨) ; ಆಡಿ ಬಾ ಎನ ಕಂದ ಅಂಗಾಲ ತೊಳದೇನ ತೆಂಗೀನ ಕಾಯಿ ತಿಳಿನೀರ ತಕ್ಕೊಂಡು ಭಂಗಾರ ಮಾರಿ ತೊಳದೇನ (ಗರತಿ. ೮೭) : ಉಪ್ಪಿನವ ಕೆಟ್ಟೆನೆಂದರೆ ತೆಂಗಿನಕಾಯವ ಹೂರಳಿ ಹೂರಳಿ ಅತ್ತ (ಗಾದೆ). **ತೆಂಗಿನ ತಿರುಳೋಲೆ** = ತೆಂಗಿನ ಎಳೆಯ ಗರಿಯಿಂದ ಮಾಡಿದ ಓಲೆ : ಮಂಗಳಪ್ರಸಾಧನಮೆಸೆದತ್ತು ಕಪ್ಪುರದ ಕಂಠಿಕೆ ಬಣ್ಣದ ಸಣ್ಣ ಮಾಲೆ ತೆಂಗಿನ ತಿರುಳೋಲೆ ತಾವರೆಯ ನೂಲುಡೆನೂಲ್ (ಪಂಪರಾಮಾ. ೩-೧೦೭) ; ಪೂವಿನ ಕಂಕಣ ತೆಂಗಿನ ತಿರುಳೋಲೆ ತಾವರೆನೂಲುಡೆನೂಲು ... ಭೂಷಾವಳಿಯಾದುದವಳಿಗೆ (ಕುರಾಸಾಂ. ೮-೫೪). **ತೆಂಗಿನ ಮರ** = ಒಂದು ಬಗೆಯ ಮರ ; ತೆಂಗು : ಎಲೆಯಡಕೆಯುಮಂ ತೆಂಗಿನೆಳನೀರುಮಂ ಕೊಳಲಿಂಬಪ್ಪಂತಿರೆ ಮಾಡಿ ನಟ್ಟ ಕೌಂಗಿನ ತೆಂಗಿನ ಮರಂಗಳುಮಂ (ಪಂಪಭಾ. ೫-೪೭ ವ) ; ತೆಂಗಿನ ಮರ ಯಾಕೆ ಹತ್ತುತ್ತಿ ಎಂದರೆ ಚಕ್ಕಿಗೆ ಹುಲ್ಲು ಕುಯ್ಯೋದಕ್ಕೆ ಅಂದ (ಗಾದೆ) ; ತೆಂಗಿನ ಮರಕ್ಕೂ ಅಡಿಕೆ ಮರಕ್ಕೂ ಒಂದೇ ತಳಿಯೇ ? (ಗಾದೆ). **ತೆಂಗಿನ ಹಣ್ಣು** = ಬಲಿತ ತೆಂಗಿನಕಾಯಿ ; ತಳಲು : ಅಕ್ಕ ಕರಿಯವ್ವ ತಂಗೀಯು ಭದ್ರಕಾಳಿ ತೆಂಗಿನ ಹಣ್ಣಾ ಒಲೆ ಹೂಡಿ ಅಟ್ಟಲ್ಲೊ ... ಅಡಿಗೇಯಾ (ಹುಟ್ಟಿಹ. ೪೫). **ತೆಂಗಿನೋಲೆ** = ತೆಂಗಿನ ತಿರುಳೋಲೆ : ಮುಡಿದ ಪಾದರಿ ತೊಟ್ಟೆಳಮುತ್ತು ಸುತ್ತಿನೊಳ್ ಮಾಸದ ತೆಂಗಿನೋಲೆ ... ಸಂದ ಭೋಗಿಗೆ ವಿಲಾಸದ ದೇಸೆಯ ನಂಟುಮಾಡುಗುಂ (ಸೂಕ್ತಿಸು. ೦೦-೦೩೯).

[ ದೇ.೫ ತಮಿ. ತೆಙ್ಕು, ತೆಙ್ಕ ; ಮಲ. ತೆಙ್ಙು ; ತುಳು. ತೆಂಗ್ ; ಕೊಡ. ತೆಂಗೆ ]

**ತೆಂಗುಗಱಿ** (ನಾ.) ತೆಂಗಿನ ಗರಿ, - ಸೋಗೆ ತೆಂಗುಗಱಿ ಕೊಡೆಯಿರ್ದ ಕಡಲುಲಿಯ ಮನೆಯೇ (ಅಕ್ಕಿಕ್ಕಾ. ೩೫-೭೭೦). [ ತೆಂಗು$_3$ + ಗಱಿ ]

ತೆಂಗುಗಾಯ್ 'ತೆಂಗಾಯ್' ನೋ.

**ತೆಂಗುದಿ** (ನಾ). ಕೆಂಪು ಬಣ್ಣದ ಪ್ರಾಣಿ : ಹರಿಣ-ಎರಳೆ, ಶಶ-ಮೊಲ, ಲೋಹಿತ-ತೆಂಗುದಿ (ಶಾಹಟೀ. ೨-೨-೬೨ ಧ).

[ P ಇದು 'ಕೆಂಗುಱಿ' ಇರಬಹುದೆ ? ]

ತೆಂಗುಹ 'ತೇಂಗುಹ' ನೋ.

**ತೆಂಟು, ತೆಮಟು** (ಕ್ರಿ). ಮೊರದಿಂದ ಕೇರು : "ತೆಂಟು-ಶೂರ್ಪಕರಣೇ (ಕೇರು)" (ಶಮಧಾ). **ತೆಮಟು** : (ಕ).

[ ದೇ.೫ ತಮಿ. ಮಲ. ತೆಳ್ಳು ; ಕುರುಖ್. ತೆಲ್ಕಾ ; ಮಲ್ತೊ. ತೇಲೆ ]

**ತೆಂಟೆ** (ನಾ). ಜೂಜುಕಟ್ಟೆ: ಕಂಡನವಂ ತೆಂ[ಪಾಠಾಂ. ತೇಂ, ದೀಂ] ಟೆಯೊಳಿನಿಂದು ಜೂಜಾಡುವವನಂ (ಪಾರ್ಶ್ವಪು. ೪-೨೦). 'ತಿಂಟೆ' ಪರಾ.

[ < ಪ್ರಾ. ಟಂಟಾ ]

ತೆಂಡೆ 'ತೆಟ್ಟೆ' ನೋ.

**ತೆಂಡೆಸುತ್ತು** (ಕ್ರಿ). ಬೆಳೆಯುತ್ತಿರಂವ ಕಬ್ಬಿನ ಜಲ್ಲೆಗಳು ಕೆಳಗೆ ಬೀಳದಂತೆ ಗರಿಗಳಿಂದ ಸುತ್ತಿಕಟ್ಟು : (ಶ).

[ ತೆಂಡೆ (< ತೆಟ್ಟಿ) + ಸುತ್ತು₁ ]

**ತೆಂಡೆಸೆ** (ನಾ). = ತೆಂಕದೆಸೆ: ಬಲಿತನವನು ಜಡವಾಗಲ್ ಸಲೆ ತನ್ನಯ ನೆಳಲು ತೆಂಡೆಸೆಗೆ ಪೋಗುವದಂ ಭಳಿಲನೆ ಕಾಣಲ್ ಪ್ರಾಣಂ ಅಳಿವುದು ತಾ ಸತ್ಯವೈದುದಿನದೊಳಗೆ (ಶಂಡಶ. ೧೮-೩೨). [ ತೆಂ + ದೆಸ್ಶೆ ]

**ತೆಂಪು** (ನಾ). ಶೌರ್ಯ ; ಸಾಹಸ : ತೆಂಪಿನಿಂದ್ಯೆತರಃವಕಂಪನನ ಭರಕೆ ಭೂಕಂಪವಮಾಗಲ್ವವನತನಯ ಕೋಪದಲಾ ನಿಲಿಂಪತತಿ ಸಂತಸಂಗೊಳುವಂತೆ ದೈತ್ಯನಂ ಸಂಹರಿಸಿದಂ ರಣದೊಳು (ವಂಕಾರಾ.. ೬-೨೦ ಸೂಕಶ). [ ದೇ.೩ ತಮಿ. ತೆವ್ವು ; ತೆಲು. ತೆಂಪು ]

**ತೆಂಪುಗಾರ** (ನಾ). ದುಂದುಗಾರ (?) : ಅಂಥ ತೆಂಪುಗಾರನಾದ ನೀನು ನಮ್ಮ ಸಾಲವನ್ನು ಹೇಗೆ ತೀರಿಸುವಿ (ಕಥಾಮಂ. IV. ೪).

[ ತೆಂಪು? + – ಗಾರ (< – ಕಾಱ) ]

**ತೆಂಬ** (ನಾ). ಕಿಟ್ಟು ; ದಿಣ್ಣೆ ; ತೆವರು : ಬೆಟ್ಟಕ್ಕಿಂತಲೂ ಚಿಕ್ಕದಾದರೆ ಗುಡ್ಡ, ದಿಣ್ಣೆ, ಬೋರೆ, ತೆಂಬ, ತೆವರು ಎಂಬ ಹೆಸರುಗಳು ಬರುತ್ತವೆ (ಭೂಗೋ೪. ೧೧) ; ಇಂಬು ಮಾಡ್ಯಾರ ಅಣೆಗೇರಿ ತೆಂಬೊಳ್ಗೇದೆಂದೂ ಇಳಿದಾರ (ಕಜಾಗೀ. ೪೯) : ಆ ಎತ್ತುಗಳು . . . ತಿಪಟೂರು ಕುಣಿಗಲುಗಳಿಗೆ ಕಾಯಿ ಕೊಬರಿ ಬೆಲ್ಲ ತುಂಬಿದರೆ ಎಂಥ ತೆಂಬದಲ್ಲಿಯಾದರೂ ಸಲೀಸಾಗಿ ಎಳೆಯುತ್ತಿದ್ದುವು (ಪನ್ನೂರು. ೩೩). [ ? ]

**ತೆಂಬಾಲ** (ನಾ). ಒಂದು ಪ್ರದೇಶದ ಹೆಸರು (?): ಬಸದಿಯ ಪೂಜಿಗಣ ಪಿತ್ತಿರೋದ್ಧಣ್ಣವುಮುಂ ತೆಂಬಾಲದೊಳು . . . ಕೊಟ್ಟ ಮಣ್ಣು (ಎಕ. X. ಕೋಲಾರ. ೯೦-೯೦ ; ೫೦೩). [ ? ]

**ತೆಂಬುಟಿ** (ನಾ). (?) : ತೆಂಬುಟಿ [ ಪಾಠಾಂ. ವೆಂಪುಳಿ ] ಯೋಪಗ್ಗದನೇಕ ಭಂಗಿಯ ನವೀನಸ್ವಾದುವೆತ್ತುಪೂರ್ಗಾಯ್ಗಳನಾಳಿೞೀಕಿಸಿ ತಂದು ಬಡ್ಡಿಸಿದರ್ (ಶಾಂತೀಶ್ವ. ೦೫-೬೦). [ ? ]

**ತೆಂಬೆರಲ್** 'ತೆಂಬೆಲರ್' ನೋ.

**ತೆಂಬೆಲತ್ತಪಳ್ಳ** (ನಾ). ಒಂದು ಪ್ರದೇಶದ ಹೆಸರು (?) : ಕೆಱೆಯ ಕೆಱೆಗೆ ತೆಂಬೆಲತ್ತಪಳ್ಳ ಕಟನಿ ಮೂಗಣ್ಣುಗವೆಡೆ (ಎಕ. X ಕೋಲಾರ. ೯೦-೮೮ ; ೫೦೩). [ ? + ಪಳ್ಳ ]

**ತೆಂಬೆಲರ್**, **ತೆಂಬೆರಲ್**, **ತೆಂಬೆಲರು** (ನಾ). = ತೆಂಗಾಳಿ : ಊದುವ ತೆಂಬೆಲರಿಂ ಬೆಡಂಗುವೆತ್ತು (ಎಕ. XIII, ೩೩೦-೨೮ ; ೫೭೦) : ಬೀಸಿದುದು ತೆಂಬೆಲರಪ್ಪಿಕೊಳ್ವವೊಲ್ (ಆದಿಪು. ೨-೬೫) : ತೆಂಬೆಲರಲೆಪದ ಪೂಲತೆಯಂಬಿನಮಂಕುರಿಸೆ ಪುಳಕವೊರ್ಮೆದಲೊಳೆ ಬಿಲ್ಲಂಬೆಜಗುಮಾಗಿ ಸತಿ ಚೋದ್ಯಂಬಟ್ಟಳ್ (ಶಾಂತಿಪು. ೧೧-೭) : ಮೆಲ್ಲಗೆ ನಡೆದಪ್ಪುದು . . . ತೆಂಬೆಲರ್ (ವರ್ಧಪು. ೧-೬೬) ; ಪೂಗಳ ಪೊಸಗಂಪಿನೊಳ್ ಪೂರೆದು ಕೀಡುವ ತೆಂಬೆಲರಂತೆ . . . ಸೋಲಿಸದೆ ಕಾವನ ಕಬ್ಬುಮದಾರನಾದೊಡಂ (ಕಬ್ಬಿಗ. ೦೯): ತೆಂಬೆಲರ್ ತೀಡೆ ತುಂಬಿಗಳಾಡೆ (ಶ್ರೀಚಾಮು. ೪೯೬-೨೯೭)

**ತೆಂಬೆರಲ್** : ಬಂದಾಡುವ ತೊಂಡುವೆಣ್ಬುರುಳಿ ಕೀಡುವ ತೆಂಬೆರಲ್ (ಪಂಪಭಾ. ೩-೬೭) ; ತೆಂಬೆರಲ್ ಪೊರೆಪೊರೆಯ ಸಡಿಲ್ಚೆ ಸಡು ಪೊಂಗಿರೆ ಮಲ್ಲಿಗೆಗಳ್ ಬಸಂತಮೊಳ್ ಬಿರಿದೊಡೆ (ಪಂಪಭಾ. ೫-೩೩) ; ಪಾರದೆ ವಸಂತಮಂ ಕೈವಾರದೆ ತೆಂಬೆರಲ[ ಪಾಠಾಂ. ತೆಂಬೆಲರ]ನಾ ಮುನೀಶನ ಬರವಿಂ ಪಾರೈಸಿದಂದದಿಂ ಸಹಕಾರಂ ತಳ್ದಿತ್ತು ಪುಳಕಮನೆ ಕಳಿಕೆಗಳಂ (ಚಂದ್ರಪು. ೨-೯೦). **ತೆಂಬೆಲರು** : ತೆಂಬೆಲರೊಯ್ಯನೆ ತೀಡೆ ನಿದ್ರಾಂಗನೆ ಗಿಂಬುಗೆಯ್ವನು ತನ್ನೊಡಲ (ಕರ್ಣವ್ಯ. ೪-೫). [ತೆಂ + ಎಲರ್]

**ತೆಂಬೆಲರು** 'ತೆಂಬೆಲರ್' ನೋ.

**ತೆಕಿಮುಕ್ಕಿ** 'ತಕ್ಕಿಮುಕ್ಕಿ' ನೋ.

**ತೆಕಿಮುಕ್ಕಿಬೀಳು** 'ತೆಕ್ಕಿಮುಕ್ಕಿಬೀಳು' ನೋ.

**ತೆಕ್ಕನೆ** (ಅ). ೧. ತಕ್ಷಣ; ಕೂಡಲೆ; ಒಡನೆ: ಆತನ ಭಾವ ಭಣಿತೆದುನಜೀವವೊಲು ನಾನೊಂದುಪಾಯವನು ತೀವಿ ತೆಕ್ಕನೆ ಸಿಕ್ಕಿಸುವೆನು (ಪ್ರಭುಲೀ. ೨೦-೮) ; ಅಸುರರ ಸಂತತಿಯುಂ ಮುಂ ತೀವಿದ ಕೃತಕಧ್ವಾಂತಮುಮಾ ಜಯಭೂಪತಿ ದಿನಕರಶರಮಂ ಬಿಡಲೊಡನೆ ತಾಂ ತೆಕ್ಕನೆ ಪರೆದತ್ತು (ಜಯಿಕಾ. ೬-೩೩): ಏನು ತೆಕ್ಕನೆ ಚಿಂತಾಗ್ರಸ್ತರಾದಿರಿ? (ಚಂದ್ರಸ. ೦೨): ದಾಳಿಂಬೆಹಣ್ಣನು ತಿನ್ನುವ ಕವಿ ಅದನ್ನು ತಿನ್ನುತ್ತಾ ತೆಕ್ಕನೆಯೇ ಆ ಸವಿಯ ಮೂಲಕ್ಕೆ ಹೊರಟಿರುವುದು ಇದರ ವಿಶೇಷ (ಶಾಂಚಕ. ೩೩). ೨. ಹೆಚ್ಚಾಗಿ; ಅತಿಶಯವಾಗಿ; ಅಧಿಕವಾಗಿ; ಬಹಳವಾಗಿ : ಆ ಶಿಶುವಿನಟ್ಟಿ ತೆಕ್ಕನೆ ತೀವಿತ್ತನಿತುಂ ದಿಕ್ತಟಮಂ (ಜಗವಿ. ೩-೧೨): ಜನನಿಯ ಶರೀರದೊಳ್ ತೆಕ್ಕ[ಪಾಠಾಂ. ಕ್ಕೆ]ನೆ ತೀವಿದ ರಾಗರಸದೊಳೋಲಾಡಿಯು . . . ಬಳೆವಂತೆ (ಚಂದ್ರಪು. ೩-೯೯): ಆ ರವಮೊಣ್ಗೆಸೆಯಲ್ಲಮಂ ತೆಕ್ಕನೊತ್ತರಿಸಿ ತೀವಿರೆ (ಧರ್ಮಾಪ. ೩-೩).

**ತೆಕ್ಕತೆಕ್ಕನೆ** (ದ್ವಿರುಕ್ತಿ) : ಕಾಳೋರಗನಿಶ್ವಾಸಾನಿಳನಿಂ ಜಗುನೆಯ ಮಡು ತೆಕ್ಕತೆಕ್ಕನುಕ್ಕುತಿರ್ಕುಂ (ಅರ್ಧನೇ. ೪-೪೧) ; ಕಮಂಡಲಜಲಂ ತೆಕ್ಕತೆಕ್ಕನೆ ಕುದಿಯೆ (ಜಹಕಾ. ೨-೩೩) : ಪವಪದಾರ್ಥಂಗಳು ಪಚನಕಾಲದೊಳೊಡನೊಡನೆ ತೆಕ್ಕ[ಪಾಠಾಂ. ಕ್ಕ]ತೆಕ್ಕನೆ ಕುದಿಯೆ (ಬಸವು. ೩೬-೪೬): ಜಲಕ್ಕನಾದಾನಂದರಸಭರಿತನೇತ್ರದಿಂ ತೆಕ್ಕತೆಕ್ಕನೆ ನೆಗೆವುತಿರ್ಪ ಬೆಮರ್ವನಿಗಳಿಂದಿರದೆ ಸೆರೆ ಬಿಗಿವ ಕೊರಲಿಂ...ಮೆಯ್ಯಿಕ್ಕಿ (ಪದ್ಮರಾ. ೫-೨೫). **ತೆಕ್ಕನೆ** ತೀವು=ಜಡಿದು ತುಂಬು; ಅಂಚು ಮುಟ್ಟ ತುಂಬು: ಕರಿಯ ಕರಗಮಂ ತೆಕ್ಕನೆ ತೀವಿ (ಪದ್ಮಾರಾ. ೦೦೩-೨೭): ತೆಕ್ಕನೆ ತೀವಿದ ಕಣ್ಣ ನೀರೊಳ್ ದೆಸೆಗಾಣದೆ ನಿಂದಿರ್ದ ಸುಯೋಧನನಂ ಸಂಜಯನಿಂತೆಂದಂ (ಪಂಪಭಾ. ೦೩-೫೭ ವ); ಮನದೊಳ್ ತೆಕ್ಕನೆ ತೀವಿದೊಂದು ವರವುಸ್ನೇಹಾಮೃತಂ ಕಣ್ಗಳಿಂದೆನಸುಂ ಪೊಣ್ಮಿದುದೆಂಬಿನಂ ಸುರಿವಿನಂ ಹರ್ಷಾಶ್ರು (ಜಗವಿ. ೬-೦೫): ಹೊಕ್ಕಳು ಗುಣ್ಣುಗಟ್ಟುದು ಪೊಡಲೊಳು ಶಿಶು ತೆಕ್ಕನೆ ತೀವಿ ಜೀವಿಸಲು (ಮೋಹತ. ೦೭-೭). [ ? + – ಅನೆ₁ ]

**ತೆಕ್ಕನೆಪೋಗು** (ಕ್ರಿ). ೧. ವಿಸ್ಮಯಪಡು; ಅಚ್ಚರಿಗೊಳ್ಳು : ಆ ಭವದೊಳ್ ನೀಂ ವನಚರನ ಎನಲೊಡಂ ತೆಕ್ಕನೆಪೋದು ಜನ್ನನಾಟಕಕ್ಕವನೀಶಂ (ಅರ್ಧನೇ. ೪-೫). ೨. ಗಾಬರಿಯಾಗು : ಇತ್ತ ಲೀಲಾವತಿ ನಿಜವಲ್ಲಭಂ ಮಲ್ಲಿಕಾಮಂಡಪದೊಳಿಲ್ಲದುದಂ ಕಂಡು ತೆಕ್ಕನೆಪೋಗಿ (ಲೀಲಾವ. ೦೪-೦೦೬ ವ). [ < ತೆಕ್ಕು₃ + ಪೋಗು₁ ]

**ತೆಕ್ಕಾಡು** 'ತೇಂಕಾಡು' ನೋ.

**ತೆಕ್ಕಾಮುಕ್ಕಿ** 'ತಕ್ಕಿಮುಕ್ಕಿ' ನೋ.

**ತೆಕ್ಕಾಮುಕ್ಕಿಬೀಳು** 'ತೆಕ್ಕಿಮುಕ್ಕಿ ಬೀಳು' ನೋ.

**ತೆಕ್ಕಿಮುಕ್ಕಿ** 'ತಕ್ಕಿಮುಕ್ಕಿ' ನೋ.

**ತೆಕ್ಕಿಮುಕ್ಕಿಬೀಳು**, **ತೆಕಿಮುಕ್ಕಿಬೀಳು**, **ತೆಕ್ಕಾಮುಕ್ಕಿಬೀಳು** (ಕ್ರಿ). ೧. ಬಲವಾಗಿ ತಬ್ಬು; ಗಟ್ಟಿಯಾಗಿ ಅಪ್ಪಿಕೊಳ್ಳು: ನಿಮ್ಮ ತಾಯಿ ಪುನರ್ಜನ್ಮವನ್ನು ಹೊಂದಿದ್ದಾಳೆ ಬಹಳ ಹೊತ್ತು ತೆಕ್ಕಿಮುಕ್ಕಿಬೀಳಬನ್ನಿರಿ (ಉಗಾಹ. ೦೩೦) : ಮುಳುಗುವವನು ಬೆಂಡಿಗೆ ತೆಕ್ಕಿಮುಕ್ಕಿಬಿದ್ದಂತೆ ಏನನ್ನಾದರೂ ಹಿಡಿಯ ಹೋಗುವನು (ಬಾಳಬು. ೨೬). ೨. (ಆಲಂ) ಕೂಡಿಕೊಂಡು ಬರು ; ಜೊತೆಯಲ್ಲಿ ಬರು ; ಇತ್ತೀಚಿನ ಆರು ವರ್ಷಗಳಲ್ಲಿ ಮತ್ತೆ ಸುಖ ದುಃಖ ತೆಕ್ಕಿಮುಕ್ಕಿಬಿದ್ದು ಬಂದಿವೆ (ಕಂನಾಸಾ. ೦೦೮). **ತೆಕಿಮುಕ್ಕಿಬೀಳು** : ೧. ಮುಳುಗಾಂವ ಬೆಂಡಿಗೆ ತೆಕಿಮುಕ್ಕಿಬಿದ್ದಾಂಗ (ಗಾದೆ. ೦೦೦-೪). **ತೆಕ್ಕಾಮುಕ್ಕಿಬೀಳು** : ೧. ವೆಂಕಣ್ಣಶಾಸ್ತ್ರಿರನ್ನು ಮತ್ತೆ ಕುಂತಿ ಗಾಂಧಾರಿಯರು ತೆಕ್ಕಾಮುಕ್ಕಿ ಬಿದ್ದಿದ್ದರು (ದೀಪಹ. I, ೪೯).

[ತೆಕ್ಕಿಮುಕ್ಕಿ ( <ತಕ್ಕಿಮುಕ್ಕಿ) + ಬೀಳು₁ (< ಬೀೞ್₁)]

**ತೆಕ್ಕಿಸು** 'ತಟ್ಕಿಸಂ' ನೋ.

**ತೆಕ್ಕು**₁ 'ತೇಗು₁' ನೋ.

**ತೆಕ್ಕು**₂ (ಕ್ರಿ). ೧. ಅಂಜಂ; ಹೆದರು; ಭಯಂಪಡು : ಮುನಿದೊಡಂ ಮುಟ್ಟಿ ನೋಯಿಸಿದಡಂ ತೆಕ್ಕನೀತನನೆಂತು ಹುಸಿಯ ನುಡಿಸುವೆನೆಂದು ಚಿಂತಿಸಿಸುತ (ಜಗಚ್ಚ. ೮-೯೩); ಕಾದುವಂ ಶಿವನೆಂತರ್ದೆ ತೆಕ್ಕದೆ ಭಕ್ತ ರಾಡಿದುಕ್ರಿಯನೆ ಮನ್ನಿಸುತೆ (ಚನ್ನರಾ. ೩-೯); ಮನೋಜನ ಸಡಗರಕ್ಕೆ ತೆಕ್ಕದಳು...ಬೆಚ್ಚದಳಂಗಜಾಸ್ತ್ರದಲಿ (ಕುಮಾ.ಆ. ೮-೨೦); ತೆರಳದೆ ತೆಕ್ಕದೆ ತೆಲಹುಗೊ ವದೆ ರಾಮನಿರೆ ಮೆಚ್ಚಿದರು ದೇವತೆಗಳು (ಕುಮಾ.ರಾಮ. ೨೦-೨೪). ೨. ಹಿಮ್ಮೆಟ್ಟು; ಸೋಲಲಂ : ಎನಿತಪ್ಪ ವಿದ್ವಾಂಸರುಂ ತನಗೆ ತೆಕ್ಕುವರ್ (ಶಾಂತಿಪು.ಹ. ೨೩೪-೧); ಒಡಿ ಗುಡಿಗಾಲ್ಗಳಂ ಕಟ್ಟಿ ಗೋತವಂ ತೆಗೆ ತೆಕ್ಕದೊಡೆ ಕುತ್ತಿ ಕೆಡಹು (ಸಿಂಗಿರಾ. ೩-೧೮); ಸಿಡಿಲ ಪೊಡರ್ಪು ತೆಕ್ಕುವಂತು ಗುಡುಗುಡಿಸಿ ಗುಡುಗಿ ಬೊಬ್ಬಿಱಿದಂ ಕಲಿಯುಣಾವಂ (ರಾ.ಮಾ.ಕ. ೧೩೦-೩೦). ೩. (?): ನಿಱ ತೆಕ್ಕದ[ದ]ರೆ ತೆರೆಗಳ್ ಪೊಱವಾಱಂ ಭೋಂಕನಪ್ಪ ಘನನುಣ್ಕೊಡೆಯಂ ನಿಱ ಸೋಂಕಿ ಸೋಂಕಿ ಕೊಳನಂ ತುಱುಗೆವೆಗಳ್ ತುಱುಗೆ ಪೊಕ್ಕುದಬಲಾನೀಕಂ (ಸೂಕ್ತಿಸು. ೧೨-೨೩).

**ತೆಕ್ಕು**₃ (ಕ್ರಿ). (ಪ್ರಾಣಿಗಳಂತೆ) ನವೆಗೆ ಮೈ ನೆಕ್ಕಿಕೊಳ್ಳು: "ತೆಕ್ಕು-ತಿರ್ಯಕ್ಕಂಡೂತಿ ಲೇಹನೇ (ನವೆಗೆ ನೆಕ್ಕು)" (ಶಮದಾ).

[ಈ ಇದು 'ಶಿಕ್ಕು' ಎಂಬುದರ ಅಪಲಿಖಿತವಿರಬಹುದು]

**ತೆಕ್ಕೆ**₁ 'ತಟ್ಕೆ' ನೋ.

**ತೆಕ್ಕೆ**₂ 'ತೆಕ್ಕು₃' ನೋ.

**ತೆಕ್ಕೆಗಟ್ಟು, ತೆಕ್ಕೆಗಟ್ಟು**₁ (ಕ್ರಿ). ೧. ಸುರುಳಿಗಟ್ಟು; ಸುರುಳಿ ಸುತ್ತು; ಸಿಂಬೆ ಸುತ್ತು : ಕುಂಡಲೀ. ಜಿಹ್ಮಗಃ—ಈ ೨ ತೆಕ್ಕೆಗಟ್ಟಿದ ಹಾವು (ಹಲಾಯು. ೦೦೩-೦೯): ತಲೆಸುತ್ತ ತೆಗೆದೊಡನೀಡಾಡಲಾ ಕೇಶ ನೆಲದೊ ಳಿರ್ದುದು ತೆಕ್ಕೆಗಟ್ಟಿ (ಭರತೇ. ೬೦-೯೨). ೨. ರಾಶಿಯಾಗು; ದಟ್ಟೈಸಂ; ಸಂದಣಿಸು : ಪರಿಖೆಯ ತೆರೆಪೊಯ್ಲಿಂದಂ ತೆರಳ್ದು ತಡಿವಿಡಿದು ತೆಕ್ಕೆಗಟ್ಟಿದ ಪೊಂದಾವರೆಯ ರಜದಂತೆ (ಮಲ್ಲಿನಾ. ೨-೬೪) : ಹೊಡಕರಿಸಿ ಹೊದೆಱಿದ್ದು ಮುಂದಕ್ಕೆ ನಡೆನಡೆದು ಕೈ ಮಾಡಿ ಕಾಯದ ತೊಡಕನೊಲ್ಲದೆ ತೆಕ್ಕೆ ಗ[ಪಾಠಾಂ. ಗೆ]ಟ್ಟಿತು ಭಟರು ನಾಕದಲಿ (ಕುಮಾ.ಭೀ. ೯-೧೮). ೩. ಒಂದ ರೊಡನೊಂದಂ ಬೆರೆ; ಕೂಡಂ; ತೊಡಕಂಹಾಕಿಕೊಂಡಿರು : ತೆಕ್ಕೆಗಟ್ಟಿರ್ದ ಫಣಿಪತಿಯ ಭಾವದಿಂದೆಸೆವ ಬಜ್ಜರವರಲ ಬಾಹುಪೂರಕ (ಸೌಂದರ್ಯ. ೬-೨೭). **ತೆಕ್ಕೆಗಟ್ಟು**₁ : ೪. ಒಟ್ಟಿಗೆ ಸೇರಿಸಿ ಕಟ್ಟು; ಪಿಂಡಿ ಮಾಡು : ಆ ಹುಲ್ಲೆಲ್ಲವನ್ನೂ ತೆಕ್ಕೆಗಟ್ಟು (ರೂಢಿ).

[ತೆಕ್ಕೆ₁ (<ತಟ್ಕೆ) + ಕಟ್ಟು₁]

**ತೆಕ್ಕೆಗೆಡಿಸು** (ಕ್ರಿ). ಗುಂಪುಗೆಡಿಸು; ಚೆದರಿಸು : ಕಕ್ಕಸದೊಳೆಕ್ಕತುಳಕ್ಕೆತಂದ ವೀರರಂ ಮುಕ್ಕುರಿಕಿ ತೆಕ್ಕೆಗೆಡಿಸಿದಂ (ಜೈಮಿಭಾ. ೦೯-೬).

[ತೆಕ್ಕೆ₁ (<ತಟ್ಕೆ) + ಕೆಡಿಸು₁]

**ತೆಕ್ಕೆಗೆಡೆ** (ಕ್ರಿ). ಗುಂಪಾಗಿ ಬೀಳು; ರಾಶಿಯಾಗಿ ಬೀಳಂ : ಮಿಕ್ಕು ನೂಕುವ ಕುದುರೆಕಾಱರು ತೆಕ್ಕೆಗೆಡೆದರು ಸಂದಣಿಸಿ ಕೈಯಿಕ್ಕಿದಾನೆಯ ನೇಣನೆಂಬೆನು ಕಾಣೆನೆಳವಿಯಲಿ (ಕುಮಾ.ದ್ರೋ. ೫-೩).

[ತೆಕ್ಕೆ₁ (<ತಟ್ಕೆ) + ಕೆಡೆ₁]

**ತೆಕ್ಕೆಗೆಯ್** 'ತಟ್ಕೆಗೆಯ್' ನೋ.

**ತೆಕ್ಕೆಗೈ** 'ತಟ್ಕೆಗೆಯ್' ನೋ.

**ತೆಕ್ಕೆಗೈಸು** (ಕ್ರಿ). ಅಪ್ಪುವಂತೆ ಮಾಡು; ತಬ್ಬಿಸು: ನಿನ್ನ ಉರಿವ ಗಾಜಿನ ಕಂಭಕೆ ತೆಕ್ಕೆಗೈಸಿ ಪರಿಭವದೊಳು ಬಳಲುವಾಗ ಹರಿಪುರುಷೋತ್ತಮನ ನಾಮ ನೆನೆಗೊಡದೆಲೆ ಮನ (ಪುರಂದ. ೧-೧೯೨-೬).

[ತೆಕ್ಕೆಗೈ (< ತಟ್ಕೆಗೆಯ್) + – ಸು₁]

**ತೆಕ್ಕೆಗೊಳ್** ತಟ್ಕೆಗೊಳ್' ನೋ.

**ತೆಕ್ಕೆಗೊಳ್ಳು** 'ತಟ್ಕೆಗೊಳ್' ನೋ.

**ತೆಕ್ಕೆಗೋಲ್** (ನಾ). ಗುಂಪಾಗಿ ಬರುವ ಬಾಣ : ಪೊಕ್ಕವಾನೆಗಳೆರಡು ಸೇನೆಯೊಳೊಕ್ಕಲಿಕ್ಕಿದವೆಸುವ ಜೋದರ ತೆಕ್ಕೆಗೋಲಿನ ಮಾಲೆ ಮುಕ್ಕುಳಿಸಿ ದವು ದಿಗುತಟವ (ಕುಮಾ.ಭೀ. ೪-೭೫). [ತೆಕ್ಕೆ₁ (<ತಟ್ಕೆ) + ಕೋಲ್₁]

**ತೆಕ್ಕೆತುರುಬು** 'ತೆಕ್ಕೆದುಱುಂಬು' ನೋ.

**ತೆಕ್ಕೆದುಱುಂಬು, ತೆಕ್ಕೆತುರುಬು, ತೆಕ್ಕೆದುಱುಬು** (ನಾ). ಸುರುಳಿ ಸುತ್ತಿ ಕಟ್ಟಿದ ಮುಡಿ : ತೆಕ್ಕೆದುಱುಂಬಿನ ತೊಂಡಿಲು ಮಣಿಬಲೆ ಚೊಕ್ಕ ಬೊಟ್ಟಕ್ಕಿದ ರವಕೆ ಇಕ್ಕಿ ಲೆಕ್ಕಿಸಿ ತಿದ್ದಿ ನಿಱವಿಡಿದುಡಿಸಿದ ಸುಕ್ಕಿನಂಬರದೊಳೆಸೆದರು (ಭರತೇ. ೩೦-೪೧). **ತೆಕ್ಕೆತುರುಬು** : ಅಡ್ಡ ಮುಡಿ, ಸೋರುಮುಡಿ, ದೊಡ್ಡಮುಡಿ, ತೆಕ್ಕೆತುರುಬು ಮುಂತಾದ ಶೃಂಗಾರದ ತುರುಬುಗಳನ್ನು ತೋರದೆ ಬೇಸರುಮುಡಿಗಟ್ಟಿ ಬಂದರು (ಮೂರುಲ್ಲಿ. ೧೨೫). **ತೆಕ್ಕೆದುಱುಬು** : ಅಡ್ಡಮುಡಿಯ ಸೋರುಮುಡಿಯ ಸೊನ್ನಾರದ ದೊಡ್ಡಮುಡಿಯ ತೆಕ್ಕೆದುಱುಬ ಒಡ್ಡುದೋಱದೆ ಬಿಟ್ಟು ಬೇಸಱುಮುಡಿಗಟ್ಟಿ...ಐತಂದರು (ಭರತೇ. ೧೬-೨೪).

[ತೆಕ್ಕೆ₁ (<ತಟ್ಕೆ) + ತುಱುಂಬು₂]

**ತೆಕ್ಕೆದುಱುಬು** 'ತೆಕ್ಕೆದುಱುಂಬು' ನೋ.

**ತೆಕ್ಕೆಬಡಿ** (ಕ್ರಿ). ಗುಂಪಾಗಿ ಬೀಳಿಸಂ; ರಾಶಿಯಾಗಿ ಕೆಡವು : ಅಡ್ಡ ಮಳೆ, ಸಡ್ಡು ಹೊಡೆಯುವ ಸಿಡಿಲು, ಸಿಕ್ಕುದನು ತೆಕ್ಕೆಬಡಿಯುವ ಗಾಳಿ (ನಿಂಮಸು. ೬೦-೦೦). [ತೆಕ್ಕೆ₁ (<ತಟ್ಕೆ) + ಬಡಿ₁]

**ತೆಕ್ಕೆಬೀಳು** 'ತೆಕ್ಕೆಬೀಳಂ' ನೋ.

**ತೆಕ್ಕೆಯಾಡು** (ಕ್ರಿ). ಗುಂಪುಗುಂಪಾಗಿ ಚೆಲ್ಲಾಪಿಲ್ಲಿಮಾಡು; ಗುಂಪು ಗುಂಪಾಗಿ ನಾಶಗೊಳಿಸು,-ಚೆದರಿಸು : ಮಿಕ್ಕುಟಿದ ನಿಮ್ಮ ಸೊಕ್ಕಿರ್ದ ಜವ್ವನಿಗರಂ ತಿಕ್ಕಿ ತೆಕ್ಕೆಯಾಡುವೆನಿಂತಿದು ದಿಟ್ಟಮೆಂದಂ (ರಾಮಾಶ್ವ. ೧೯೨-೨೪). [ತೆಕ್ಕೆ₁ (<ತಟ್ಕೆ) + ಆಡು₁]

**ತೆಕ್ಕೆಯಿಸು** 'ತಟ್ಕೈಸು' ನೋ.

**ತೆಕ್ಕೆಯ್ಸು** 'ತಟ್ಕೈಸಂ' ನೋ.

**ತೆಕ್ಕೆವರಿ** (ಕ್ರಿ). ರಾಶಿಯಾಗಂ; ಗುಂಪಾಗಂ : ತೆಕ್ಕೆವರಿದೆಲ್ಲ ಕರ್ಬೊಗೆಯ ಹೊರಳಿಗಳ ದಶದಿಕ್ಕುಗಳನಮ್ಮಳಿಪ ಕೇಸುರಿಯ ಚೂಣಿಗಳ . . . ಪೆರ್ಗಿಚ್ಚುಗಳ ಮಂಕೆ ಮೇಲಿಕ್ಕಿದುದು ಹಂಸಧ್ವಜನ ಸೇನೆ ಬೆಂದು ಬೇಗುದಿ ಗೊಂಡುದು (ಜೈಮಿಭಾ. ೧೩-೦೨); ಫಣಿನಿಕರ ಫೂತ್ಕೃತಿಯಿಂದಮ ತೆಕ್ಕೆವರಿ ದಿಂಗಳದ ಮೇಲ್ಪಿದ್ದು ಸುಡುತಿರಲ್ (ತುರಂಗ. ೬-೩೫).

[ತೆಕ್ಕೆ₁ (<ತಟ್ಕೆ) + ಪರಿ₂]

**ತೆಕ್ಕೆವರಿಗೆ** (ನಾ). ಒಂದಂ ಬಗೆಯ ಗುರಾಣಿ (?); ಗುರಾಣಿಗಳ ಸಾಲು (?) : ನಡೆಗೋಟೆಯನೆ ಮಂಡಳಿಸಿ ಬಲಿದರು ತೆಕ್ಕೆವರಿಗೆಗಳ (ಕುಮಾ.ಭೀ. ೪-೨೫); ಬಲುವಾಸಿಸದ ಬಂಡಿಗಳನೊಡ್ಡಿದರಾ ನಿರಂತರ ಶರವ ತಡೆದರು ತೆಕ್ಕೆವರಿಗೆಯಲಿ (ಕುಮಾ.ಶ. ೧೧-೩೦) : ಲಗ್ಗೆವರಿಗೆ ತೆ[ಪಾಠಾಂ. ತ]ಕ್ಕೆವರಿಗೆಗಳಂ ಬಂದು ಮುಗ್ಗಿ ಕವಿದು (ಶಂಕರಸಂ. ೧೦-೩೨) : ಸಾಲು ಕೆಂಪಿನ ತೆಕ್ಕೆವರಿಗೆಯೊಳರಿಕುಲಕಾಲಾಂತಕಬಲಬಲನು ಶೂಲ ಧರ ನು ಖಗರಾಜಗೆ ಪಕ್ಷದಮೋಲೆಸೆದಳು ಜೀವದೊಡತಿ (ಪರ್ವತ. ೬-೭೭).

[ತೆಕ್ಕೆ₁ (<ತಟ್ಕೆ) + ಪರಿಗೆ₃]

**ತೆಕ್ಕೆವೆಳಗು** (ನಾ). ಅಧಿಕವಾದ ಬೆಳಕಂ; ಹೆಚ್ಚಾದ ಕಾಂತಿ : ಹತ್ತು ಸಾವಿರ ಕೈಪ್ರಮಾಣದ ಸುತ್ತುವಳಯದ ಮಣಿಯ ಶಿಲೆಗಳ ತತ್ತವಣೆಗಳ ತೆಕ್ಕೆವೆಳಗಿನ . . . ವೈಡೂರ್ಯ ಶಿಲೆಗಳ ಮತ್ತವಾರಣ ವರವಿಧಾನ ದಲೆಸೆದುದಾಸ್ಥಾನ (ಕುಮಾ.ಸ. ೦-೦೪).

[ತೆಕ್ಕೆ₁ (<ತಟ್ಕೆ) + ಬೆಳಗು₂ (<ಬೆಳಕು₂)]

**ತೆಕ್ಕೈವೆಱು** (ಕ್ರಿ). ರಾಶಿಯಾಗು ; ದಟ್ಟೈಸು : ಸಂದಣಿಗೊಳ್ಳು : ತದೀಯತನುವಂ ಪ್ರಾಳೇಯಸಂಸ್ತೋಮವಿಶ್ರಮವುಮಂದಿಕ್ಕಿದ ತೆಕ್ಕೈವೆತ್ತರಲೆ ಪೋಲ್ ಪತ್ರಿರ್ಪಿನಂ ನಿಂದನಶ್ರಮದಿಂದಂ ತಟನೀತಟಾಕತಟದೊಳ್ ಯೋಗೀಂದ್ರಂ (ನೇಮಿಪು. ೨-೬೪) : ತನಯಂ ಬಂದಾ ವಾರ್ತೆಗೆ ತನುಪುಳಕದ ತೆಕ್ಕೈವೆತ್ತು ಶಿಶಿರದ ಸೋಂಕಿಂ ನನೆವೆತ್ತೊಪ್ಪುವ ಮಾಲತಿ ಯನೆ ವಿಜಯಾವತಿ ಸಮಂತು ಪೋಲ್ತೆಸೆದಿರ್ದಳ್ (ಕುಸುಮಾ. ೧೫-೯೮).

[ ತೆಕ್ಕೈ$_1$ (<ತಟ್ಕೈ) + ವೆಱು$_1$ ]

**ತೆಕ್ಕೈಹಾಯ್**, ತೆಕ್ಕೈಹಾಯಿಂ (ಕ್ರಿ). ೧. ಅಪ್ಪಿಕೊಳ್ಳು ; ತಬ್ಬು : ಕಮಲೆಯು ಅಳುತ್ತ ... ಅವನಿಗೆ ತೆಕ್ಕೈಹಾಯ್ದಳು (ರಕ್ತ್ರ. ೧೫೬). **ತೆಕ್ಕೈಹಾಯು** : ೨. = ತೆಕ್ಕೆಬಡಿ : ದಿಕ್ಕುದಿಕ್ಕಿಗೆ ಮೋಡ ಪಕ್ಕ ಬೀಸು ವುದು. ಎದುರು ಬಂದುದನವರಿ ತೆಕ್ಕೈಹಾಯುವುದು ! (ನಲವು. ೧೫-೨೩).

[ ತೆಕ್ಕೈ$_1$ (<ತಟ್ಕೈ) + ಹಾಯ್$_1$ (<ಪಾಯ್$_1$) ]

**ತೆಕ್ಕೈಹಾಯು** 'ತೆಕ್ಕೈಹಾಯ್' ನೋ.

**ತೆಗಪು**, ತೆಗೆಪು$_1$ (ಕ್ರಿ). ೧. ಹೋಗುವಂತೆ ಮಾಡು; ಹೊರಡಿಸು; ತೆರಳಿಸು. ೨. ಕಂದಿಸಂ ; ಬೇಯಿಸಂ : ಕುದಿವ ಕಬ್ಬೊಂನ್ನ ಕಾಯ್ಗೋಡೆಣ್ಣೆಯೊಳ್ ಬಳಲೆ ತೆಗಪು[ಪಾಠಾಂ. ತೆಗೆ]ವರುಂ(ಆದಿಪು. ೫-೮೫ವ): ಕುದಿಯಿಸುಗೆ ಸುಣ್ಣದಿಂ ಕಯ್ಬೆದೊಂಡೆಯುಂ ಕೋಕಿಲಾಕ್ಷಿವೆರಸು ಸಿತೇ ರಂಡದ ತೊಟ್ಟಿಯಲೆಗಳಂ ಪಡಲದ ಕಾಯಂ ತೆಗಪುಗವೞ ಕೈಪೆಗಳಟಿಗುಂ (ಲೋಕೋಪ. ೮-೩೦) : ತಳಿರ್ಗಳ್ ಮೆಯ್ಯೊಂಕೆಯಿಂದಂ ತೆಗಪಿದ ತಳಿರಂತಾದುವಾದಂ ಮೃಣಾಳೀವಳಯಂ ಕೆಯ್ಯೊಂಕೆಯಿಂದಂ ಕರಿಯು ಬಳೆಗಳಂತಾದುವು (ಲೀಲಾವ. ೧೧-೪೪) : ತುಲಸಿಯು ನುಗ್ಗಿಯು ತಗ್ಗಿಯ . . . ಪತ್ರಂಗಳನೊಡನೆ ತೆಗಪಿಕೊಂಡದಱೊಳೆ ಸೇಕಂಗೆಯ್ಯ (ಅಶ್ವಶಾ. ೦೦-೨೦). **ತೆಗೆಪು$_1$** : ೧. ಜಲನಿಧಿಯಂ ಪೀರ್ದಲ್ಲಿಯ ಜಲಚರಮಂ ಕೂಡೆ ತೆಗೆಪಿದಂ ತೆಗೆಪುವೆನಿಂ ಸ್ಥಲಚರಮನೆಂದು ವಡಬಾನಲನೇಟ್ಟಿಪೊಲೊಗೆ ದುದರ್ಕಮಂಡಳಂ (ಕಾದಂಬ. ೪೬೩). ೨. ತೆಗೆಪಿ ಕುಡಿಯಿಸುಗೆ ಶಿವ ಕಳವಿಗೆ ಬಾಳಂ ... ಎಂಬಿನಿತುವಂ (ಲೋಕೋಪ. ೯-೦೮).

[ ತೆಗ್$_1$ + – ಪು$_1$ ]

**ತೆಗಲಮುಗು** (ನಾ). ಒಂದು ಬಗೆಯ ಸಸ್ಯ : (ಮೃಶಿಗಿ. ೪೨-೮೩೦). [ ? ]

**ತೆಗಲೆ** (ನಾ). ೧. ಎದೆ ; ವಕ್ಷಸ್ಥಳ : ಪುಲಿ ಬಂದು ಪಾಯ್ದು ಬಸಿಱಂ ಪೋಟ್ದು ನೆತ್ತರಂ ಕುಡಿದು ತೆಗಲೆಯಂ ಪೋಟ್ದು ತಿಂಬಾಗಳ್ (ವಡ್ಡಾರಾ. ೪೮-೧೯); ಅಡಿ ತೊಡೆ ಪೊರ್ಕುಳುಂ ತೆಗಲೆ ಕೈ ಕಣಕಾಲ್ ಕೊರಲೆಂಬಿವುಂ . . . ಸೀಳ್ದುವು ಪಾರ್ಥನಂಬುಗಳ್ (ಪಂಪಭಾ. ೧೧-೧೩೬); "ಹೆಕ್ಕತ್ತು ; ಹೆಗಲು" (ಪಂಪಭಾ. ಕೋಶ); ದೇಸಿಯಾದ ತೆಗಲೆ ಪದಕ್ಕೆ ವಕ್ಷಸ್ಥಳದ ಮೇಲ್ಗಡೆ ಎಂಬ ಅರ್ಥ ಮಾತ್ರವಲ್ಲದೆ ಒಳಗಡೆ ಎಂಬರ್ಥವಿಲ್ಲ (ನಾಡೋಜ. ೨೪೬) ; ತೆಗಲೆ ಎಂಬುದು ಉರಸ್ಥಳಕ್ಕೆ ನಮ್ಮ ಕನ್ನಡನಾಡಿನಲ್ಲಿ ಮಾತ್ರ ರೂಢವಾದ ಹೆಸರು . . . 'ತಗಲೆ' ಎಂದರೆ ತೆಗಲೆಯ ಮೇಲೆ ಬಿಗಿದು ಕಟ್ಟುವ ಬಟ್ಟಲಿನಾಕಾರದ ಒಂದು ಪದಾರ್ಥ (ಪಾಠೀಸು. ೪೬). ೨. ಹೆಗಲಂ ; ಭುಜ : "ತೆಗಲೆ[ಪಾಠಾಂ. ಳ್]ಯೆಂದು ಪೆಗಲ್" (ಶಮದ. ಸ. ೩೪೩ ಪ್ರಯೋ). ೩. (ಕರಾ) ಸೊಕ್ಕು ; ಮದ ; ಅಹಂಕಾರ : ಯಾವ ಇನ್ಸ್‌ಪೆಕ್ಟರರೇ ಬರಲಿ ವರದಿಪುಸ್ತಕದಲ್ಲಿ 'ಲಾಯ್ಕು' ಎಂದು ಬರೆದು ಹೋಗುತ್ತಾರೆ. ಅದರಿಂದ ಇವರಿಗೆಲ್ಲ ತಿಂದ ತೆಗಲೆ (ಸ್ವಪ್ನಹೊ.೩೪).

[ದೇ.॥ ತಮಿ. ಚುವಲ್, ಚಕಲ್ ; ತುಳು. ತಿಗಲೆ]

**ತೆಗವು**, ತೆಗುವು (ನಾ). ೧. ಭಾರವಾದುದಂ; ಜಡವಾದುದು. ೨. ಕಠಿನ ವಾದುದು ; ಕಷ್ಟಕರವಾದುದು : ಅವನ್ನ ಹೊರಗೆ ಹಾಕೂದುಂದ್ರ ಓಟು ತೆಗವ ಹರೀತೇತಿ (ಗ್ರಾಮಾಯ. ೪೮). **ತೆಗುವು$_2$** : ೨. ಅವಳಿಗೆ ಅಡುಗೆ ಮಾಡುವುದು ತೆಗುವೆನಿಸಹತ್ತಿತು (ಜವಿಸಾನ್ಯಾ.೬೩). [ ? ]

**ತೆಗಸು** 'ತೆಗೆಯಿಸು' ನೋ.

**ತೆಗಹು** (ನಾ). ೧. ಹಿಂದಕ್ಕೆ ತೆಗೆಯುವಿಕೆ,– ಎಳೆಯುವಿಕೆ ; ಸೆಳೆಯು ವಿಕೆ : ಆಳು ವಿಗೆ ಕುರುಭೂಪಾಲಕನ ಹಿಂದಿಕ್ಕಿ ಕಿವಿಗಡಿಗೋಲ ತೆಗಹಿ ನೊಳೊದಗಿದರು ದುಶ್ಶಾಸನಾದಿಗಳು (ಕುಮಾ್ರದ್ಯ.ಗ. ೨-೬೪) : ಭರಿತ ವಿಷ ದಹಿವರನ ತೆಗಹಿನ ತೆರಳಿಕೆಯುಲುದಿಸಿದ ತವೋನಿರ್ಭರಶರೀರದ ಸುಭಟರದೆ ನರನಾಥ ನೋಡೆಂದ (ತೊರಣಾ. ೬-೨೦-೬೪). ೨. ಹಿಂದೆಗೆ ಯುವಿಕೆ ; ನಿರ್ಗಮನ. 'ಬಿಸಿಲುದೆಗಹು' ಪರಾ. ೩. ತೆರವು ; ಬಿಡುವು ; ಅವಕಾಶ : ಹಗಲಿರುಳಿಡಿವಿಡದೀ ಮಳೆ ಕಱೆದುದು ತೆಗಹಿಲ್ಲ ಮುಂದೆ ಹೆಚ್ಚುತಿದೆ (ಭರಹ. ೩೪-೬೨). ೪. ದೃಢತೆ ; ಕೆಚ್ಚು ; ಸತ್ವ : ಬಾಹುಸತ್ವದ ಹೊಗರು ಹೋಗದು ಮನದ ಖಾತಿಯು ತೆಗಹು ತಗ್ಗದು ಹೊಕ್ಕು ತಿವಿದಾಡಿದರು ಬೇಸಱದೆ (ಕುಮಾ್ರ.ಸ. ೨-೦೦೦) : ಕ್ಷತ್ರಧರ್ಮದ ತೆ[ಪಾಠಾಂ. ತ]ಗಹು ಸಾಯದು ನಿನಗೆನುತ ಗಹಗಹಿಸಿದನು ಶಕುನಿ (ಕುಮಾ್ರ.ಸ. ೦೪-೨). [ ತೆಗ್$_1$ + – ಹು$_8$ ]

**ತೆಗಳ್**$_1$ 'ತೆಗಟ್$_1$' ನೋ.

**ತೆಗಳ್**$_2$ 'ತೆಗಟ್$_2$' ನೋ.

**ತೆಗಳಿ**$_1$ 'ತೇಮಳು' ನೋ.

**ತೆಗಳಿ$_2$** (ನಾ). = ತೆಗಳಿಕೆ$_2$. 'ತೆಗಳಿಗೊಳ್', 'ಸೆಗಳಿ' ಪರಾ. [ ? ]

**ತೆಗಳಿಕೆ$_1$** (ನಾ). = ತೆಗಟ್ಕೆ೧ : ಪೊಗಳಿಕೆಗೆ ಹಿಗ್ಗಲೊಲ್ಲದ, ತೆಗಳಿಕೆಗೆ ಕುಗ್ಗಲಾರದ, ಲತೆ ಫಲಕೆ ಸಿಗ್ಗಲೇಕೆ ? (ಗೀವಿಂ. ೦೦೪-೪೪) : ಹೊಗಳಿಕೆ ತೆಗಳಿಕೆಗಳ ಕಡೆಗೆ ಲಕ್ಷ್ಯಕೊಡಬಾರದು (ಗೀತಾಸಂ. ೨೬).

[ ತೆಗಳ್$_1$ (<ತೆಗಟ್$_1$) + – ಇಕೆ ]

**ತೆಗಳಿಕೆ$_2$** (ನಾ). ಹೆಕ್ಕಳೆ; ಪದರ : ಸುರಿತಂದಶ್ರುಪ್ರವಾಹಂ ಬಱಿಕೊಣಗಿದ ಬಾಸುಟಿಶ್ರೋಗಂ ಪೊಸಯುಂ ಕಾಯ್ದಿರದೆಟ್ಟಾ ಚಂದನಾಲೇಪದ ತೆಗಳಿಕೆ ಗಳ್ . . . ಬೆಸಲರ್ವಸೆಯೊಳ್ ಕಾಂತೆಯಂತಿರ್ದಳ್ (ಕುಸುಮಾ. ೧೩-೭೯). 'ಸೆಗಳಿಕೆ' ಪರಾ. [ ತೆಗಳಿ$_2$ + – ಕೆ ]

**ತೆಗಳಿಗೆ** (ನಾ). ಪದರ ; ಹೆಕ್ಕಳೆ ; ನಿರಿಗೆ : ಮುಗಿಲ ತೆಗಳಿಗೆಯು ನೆಗೆದ ಪೊರೆಗಳೊಳದೃಶ್ಯನಾದಂ ನಭದೊಳ್ (ಶಾಂತಿಪು. ೯-೯೪) : ಮುಗಿಲ ತೆಗಳಿಗೆಯ ಪೊರೆಯೊಳಗೊಗೆದ ಶರಚ್ಚಂದ್ರನಂದದಿಂದುದಯಿಸಿದಂ (ವರ್ಧಮಾ. ೬-೩೬) ; ಶರದದ ಮುಗಿಲ ತೆಗಳಿಗೆಯುದೆನಿಪ ಮೇಲ್ಕಟ್ಟನ ಬೆಳ್ಪುಂಬಟ್ಟೆಯುಂ (ಚಂದ್ರಪ್ರ. ೦೨-೦೦೪). 'ಸೆಗಳಿಗೆ' ಪರಾ.

[ತೆಗಳಿ$_2$ + – ಗೆ]

**ತೆಗಳಿಗೆಬೀೞ್** 'ತೆಗಳಿಗೆವೀೞ್' ನೋ.

**ತೆಗಳಿಗೆವೀೞ್**, ತೆಗಳಿಗೆಬೀೞ್ (ಕ್ರಿ). ಹೆಕ್ಕಳೆ ಉಂಟಾಗು ; ಪದರ ವಾಗು : ತೆಗಳಿಗೆವಿದ್ದೊ[ಪಾಠಾಂ. ಬ್ದೊ]ದಲುಂ ನಾಲಗೆಗಿತ್ತರೆ ಬಱತ ಬಾಯುಂ ... ತಾಱುವ ತಾಳ್ಗಳುಮುಗುರ್ವಿಸಲ್ ಕಾಡ ಕೋಣನೆಯ್ದು ದುದಱಲಂ (ಜಗವಿ. ೧೭-೬೬). **ತೆಗಳಿಗೆಬೀೞ್** : ಮೃಗಕುಲಂ ... ಬೆಂದೊವಲ್ ತೆಗಳಿಗೆಬೀೞ್ ಬಾಯ್ಗೆ ಕರಿಸಂ ಬರೆ ನಾಲಗೆಗಿಟ್ಟು ನಟ್ಟ ದಿಟ್ಟಗಳೊಡನಳ್ಕಿ ಪೊಯ್ಯೆ ನಡೆಗೆಟ್ಟುವು ತೃಷ್ಣೆಯಿಂ (ಪಂಪರಾಮಾ. ೬-೯೩).

[ತೆಗಳಿಗೆ + ಬೀೞ್$_1$]

**ತೆಗಳಿಗೊಳ್** (ಕ್ರಿ). ಸುಕ್ಕಾಗು ; ಪದರವಾಗು : ಅಂಗಜತಾಪದಿಂ ಕೊಱಗಿದಬ್ಜಮುಖಿಂ ಪರೆದಿರ್ದ ನುಣ್ದೊರಲ್ ತುಂಗಕುಚಂಗಳೊಳ್ ತೆಗಳಿಗೊಂಡ ಲಸನ್ಮಳಯೋದ್ಭವಂ ... ರಂಜಿಸಿರ್ಪಂಗನೆ ಕಾಮದೇವ ನೆಡೆಯಾಡಿಪ ಪುತ್ರಿಕೆಯಂತಿರೆಯ್ದಿದೆಳ್ (ದಶಕು. ೬-೧೨೫).

[ತೆಗಳಿ$_2$ + ಕೊಳ್$_1$]

**ತೆಗಳಿಸು** 'ತೆಗಟಿಸು' ನೋ.

**ತೆಗಳು$_1$** 'ತೆಗಟ್$_1$' ನೋ.

**ತೆಗಳು₂** (ಕ್ರಿ). ತಳ್ಳು; ನೂಕು : ಬಂಗಾರದ ಅಲದೀರ ಬಾಯ್ಮೇಲೆ ಪೊಯ್ದೀರ ಬಾಗ್ಲಿಂದಾಚೆಗೆ ತೆಗಳೀರ ಅಪ್ಪಾಜಿ ಹುಟ್ಟಿದಾ ಮನೆ ತಿರುವೀರಾ (ಹಳ್ಳಿಪಾ. ೩೩). [ ? ]

**ತೆಗಳು₃** 'ತೆಗಟ್₂' ನೋ.

**ತೆಗಳುಗಾರ** (ನಾ). ತೆಗಳುವವನು; ನಿಂದಿಸುವವನು; ಅವಹೇಳನ ಮಾಡುವವನು : ಕನ್ನಡಕದ ತೆಗಳುಗಾರ ನಡುವೆ ಮಾತು ಹಾಕಿದ (ಯೋಧಪು. ೫೭). [ತೆಗಳು₁ (<ತೆಗಟ್₁)+-ಗಾರ (< -ಕಾಱ)]

**ತೆಗಳುನಗೆ** (ನಾ). ತಿರಸ್ಕಾರದಿಂದ ಕೂಡಿದ ನಗೆ : ಸುಲೋಚನ ಧರಿಸಿದ್ದವನು ತನ್ನ ಮುಖದ ಮೇಲೆ ನೆಲಸಿದ್ದ ತೆಗಳುನಗೆಯನ್ನು ಎಲ್ಲರ ಮೇಲೆಯೂ ಚೆಲ್ಲಿ ಹೇಳಿದನು (ಯೋಧಪು. ೫೭).
[ತೆಗಳು₃ (<ತೆಗಟ್₂) + ನಗೆ]

**ತೆಗಳ್ಕೆ** (ನಾ). ತೆಗಳಿಕೆ; ನಿಂದೆ : ಇಲಿಗಂ ಮರಕುಟಿಗವಕ್ಕಿಗಮುಲಸದೆ ಕರ್ದುಕುತ್ತೆ ಕಡಿಯುತ್ತಿರ್ಪುದೆ ಸಹಜಂ ಸಲೆ ಚಪಲಂಗಂ ಕುಕವಿಗಮುಲಸದೆ ತೆಗಳ್ಪುದುವೆ ಸಹಜವುದುಂತೆ ಕರಂ (ಧರ್ಮಾಮೃ. ೧-೪೬).
[ತೆಗಳ್₁ (<ತೆಗಟ್₁) + -ಕೆ₂]

**ತೆಗಟ್₁**. ತೆಗಳ್₁, ತೆಗಳು₁ (ಕ್ರಿ). ೧. ಹೀಯಾಳಿಸು; ನಿಂದಿಸು; ಅವಹೇಳನ ಮಾಡು; ತಿರಸ್ಕರಿಸು : "ತೆಗಟ್=ನಿಂದಾಯಾಂ" (ಶಮದ): ಕಂಜನಾಭನ ಸಮುಂಜಸಿಕೆಯೊಳ್ಪನ್ನಂ ತೆಗಟ್ಟಿ ನುಡಿದು ದರ್ಕೀವೈಸಿ (ಗದಾಯು. ೭-೯೨೫); ಅಂತಾ ದುರಾತ್ಮಂ ... ಜಗು ತೆಗಟಿ ಜೀವಿಸುತ್ತುಂ (ವರ್ಧಪು. ೩-೧೩೮). ೨. ವಿನೋದವಾಡು; ಹಾಸ್ಯ ಮಾಡು : ನೀಂ ಮಹಾದೇವಿಯು ಮುಂಚಮುಂಜದೇಜ್ ಆಕೆಯೊಡನೆ ನಗುತ್ತುಂ ತೆಗಟುತ್ತವಿರೆಂದು ಕಲ್ಪಿಸಿದಂ (ವಡ್ಡಾರಾ. ೧೭೭-೦೯); ಇಚ್ಛೆಯಱಿದು ತೆಗಟ್ಟಿ ತೆಗಟ್ಕೆಗಂ ಪದನೞಿದು ಪತ್ತುವ ಪತ್ತುಗೆಗಂ ... ಮನಂಬೆಚ್ಚು ಪತ್ತೆ ಪೊಯ್ದಂತಾಗಿರೆ (ಶಾಂತಿಪು. ೩-೫೯೮). **ತೆಗಳ್₁**: ೧. ಭಗವತಿಯೀಜು ಶೌಚಗುಣಮತ್ತಿಯ ಪಣ್ಣಿನಿವೇಳವುಣ್ಣಾರಂ ತೆಗಳ್ದುದುದಾರ ಚಾರುಚರಿತಪ್ರಭೆಯಿಂ ಪಡೆವಳ್ಕೃತ್ರೈಲನ (ಸೌಇಇ. XI-i, ೩೨-೩೪; 1007 ?): ಉರಗ ನರ ಕಿಂಪುರುಷ ಕಿನ್ನರತರುಣಿಯರ ವ್ರತಗೆಡಿಸಿ ಭೋಗಿಸಿ ನರಳಿಸುವ ರ್ಕೈದಿದರೆ ಕೊಲುವರು ತೆಗಳ್ದು ವಲ್ಲಭರ (ಅಂಬಿಕಾ. ೩೪-೩೭). **ತೆಗಳು₁**: ೧. ಅಗಿದು ವ್ಯುದೆಗೆದು ಸಿಗ್ಗಾಗಿ ತಮ್ಮಿಂ ತಾವೆ ತೆಗಳಿ ಬೈಬೈದು ಬಾಯಳಿದು ಶೋಕಿಸಿ ತಾವೆ (ಸಾನಂಚ. ೪-೩೫೭ರಗಳೆ); ರಗಳೆಯ ಕವಿಯೆಂದು ತೆಗಳಿ ವಾದಿಗಳೆಲ್ಲ ಹರಿಯಣ್ಣನ ಪದಯುಗಳಕೆಱಗುವೆನೆಲ್ಲಿಯೊಳು (ಶಂರಾಸಾಂ. ೧-೩೫); ಕಂಡವರ ತೆಗಳುವನೆ ... ಕಂಡಿಹರೆ ತೊಲಗು (ಸರ್ವಜ್ಞ. ೧೫೭೩): ಪೊಡವಿಯೊಳಗಡಗಿರುವ ತಳಹದಿಯ ತೆಗಳುವರೆ ? (ಪಾಂಚಜ. ೫-೧೪).
[ದೇ.೫ ತುಳು. ತೆಗು; ತೆಲು. ತೆಗಡು, ತೆವಡು]

**ತೆಗಟ್₂**, ತೆಗಳ್₂, ತೆಗಳು₃ (ನಾ). ೧. ನಿಂದೆ; ತಿರಸ್ಕಾರ; ಅವಹೇಳನ : "ತೆಗಟ್ ... ಅಣಕಂ-ಈ ೭ ನಿಂದೆ" (ಕಶಶಾ. ೧೭-೩೫೭); "ತೆಗಟಿನ್ನಲದು ತಾಂ...ನಿಂದಾಖ್ಯಂ" (ಕವಿಕಂ. ೧೨೨); ತಮ್ಮೊಡನಾಡಿಗಳಪ್ಪ ಮೇಳದ ಸಬ್ಬವದ ನಗೆಯ ತೆಗಟಿನವರನೆಮ್ಮ ಬಱಿಯಟ್ಟಿದಂದು ಬನ್ನಿಮೆಂದು ಪ್ರಿಯಂ ನುಡಿದಿರಿಸಿ (ಪಂಪಭಾ. ೨-೯೫೫). ೨. ಕುಂದು; ಕಳಂಕ; ದೋಷ : ಮಾಷಮುಖದಂತೆ ದೋಷಗವೇಷಣರಪ್ಪರಂ ದೊಡದು ತೆಗಟಲ್ತೆ (ಆದಿಪು. ೧-೨೦); ಅರೋಚಿಗಳಿದಂ ತೆಗಟಿಂದಾ ಗದ್ಯ ಪದ್ಯ ಕಾವ್ಯದೊಳಿಕ್ಕರ್ (ಕಮುದ. ೬೦). ೩. ವಿನೋದ; ಚೆಲ್ಲಾಟ : ರಮಿಯಿಪುದಮರಿಯರೊಳ್ ತೆಗಟುಮರಿಯರೊಳ್ ತವದ ಮೇಳಮರಿಯರೊಳ್ (ಶಾಂತಿಪು. ೭-೭೬); ನಗೆ ತೆಗಟ್ ಪಾಟಂ ಬಿಯಂ ಜವ್ವನಂ . . . ಇಂತಿವಂ ಬೇಟಕ್ಕಾಗರಮೆಂಬೆಂ (ಕಾವ್ಯಾವ. ೭೩೩). **ತೆಗಳ್₂**: ೧. ವಿಕ್ರಮಾದಿತ್ಯನೃಪಂ ಜ್ಯಾಯಂ ತನಗೆನೆ ಜಗದೊಳಗಾ ಯುವತಿಯ ಸತ್ಯುಲೀನತೆಗೆ ತೆಗಳಂಟೇ (ಎಕ. XI, ದಾವರ. ೪೧-೩೯; 1148).

**ತೆಗಳು₃**: ೧. "ತೆಗಳು ನಿಂದೆಗೆ" (ಕಶರ. ೪೮): ದಕ್ಷನಾತ್ಮಜೆ ಗೌರಿ ಏಗೆ ತನ್ನ ಜನಕನೀಶ್ವರನನೇಳಿಸೆ ಬಹಳ ತೆಗಳನಾಲಿಸಿ ತನ್ನ ದೇಹವುಂ ಜ್ಞಾನಾಗ್ನಿಯೊಳ್ದಹಿಸಿ (ಜಾಸೋಕಪು. ೮-೨೨): ಇದು ಹೊಗಳೋ ತೆಗಳೋ ? (ಶಾಂತಲಾ. ೫೪). [<ತೆಗಟ್₁]

**ತೆಗಟಿಸು**, ತೆಗಳಿಸು (ಕ್ರಿ). ೧. ತೆಗಳುವಂತೆ ಮಾಡು; ನಿಂದಿಸುವಂತೆ ಮಾಡು: "ತೆಗಟಿಸು–ನಿಂದಾಯಾಂ (ನಿಂದಿಸುವಂತೆ ಮಾಡು)" (ಶಮಧಾ). **ತೆಗಳಿಸು** : ೧. ಮುೞಿದುಂ ಪುಸಿದು ನುಡಿವ ಹುಸಿ ಸಿರಿಯುಂ ಪೞಿಪಡಿಪುದು ಸಂತಾನಂ ಕೆಡಿಸುವುದಱಿನಂ ತೆಗಳಿಸುವುದು ಪೞಿಯುಂ ಪುಟ್ಟಿಸುವುದು (ಜಯಶಾ. ೧೦-೧೨). ೨. ಮೀರು; ಸೋಲಿಸು : ೊಳಪ ಹಸುಳೆಲತೆಯುಂ ಸಲೆ ತೆಗಳಿಪ ನೆಳತೋಳ್ಗಳ ಸಿಂಗದ ಶಿಶುವಂ ತಾನಿಳಿಕೆಯ್ವೊಳ್ನಡುವಿನ ಸ್ಯಪತನುಜೆಯ ತರುಣಿಮುಮೊಪ್ಪಿದುದುದು (ಜಯಶಾ. ೩-೨೨).
[ತೆಗಟ್₁ + – ಇಸು₃]

**ತೆಗಟ್ಕೆ** (ನಾ). ೧. ನಿಂದೆ; ಅವಹೇಳನ. ೨. ವಿನೋದ; ಹಾಸ್ಯ : ಇಚ್ಛೆಯಱಿದು ತೆಗಟ್ಟಿ ತೆಗಟ್ಕೆಗಂ ಪದನೞಿದು ಪತ್ತುವ ಪತ್ತುಗೆಗಂ ... ಮನಂಬೆಚ್ಚು ಪತ್ತೆಪೊಯ್ದಂತಾಗಿರೆ (ಶಾಂತಿಪು. ೩-೫೯೮).
[ತೆಗಟ್₁ + – ಕೆ]

**ತೆಗಟ್ತೆ** (ನಾ). ವಿನೋದ; ಸರಸ; ಲಲ್ಲೆ (?) : ಲಾಲಿಸುವ ಲಲ್ಲೆ ಮರಲ್ಚುವ ಮಾತು ಚಿತ್ರಮುಂ ತೆಗೆವ ತೆಗಟ್ತೆ (ಚಂದ್ರಪು. ೪-೭೧).
[ ತೆಗಟ್₁ + – ತೆ₂ ]

**ತೆಗಿಸು** 'ತೆಗೆಯಿಸು' ನೋ.

**ತೆಗುವು** 'ತೆಗವು' ನೋ.

**ತೆಗೆ₁** (ಕ್ರಿ). ೧. ಈಚೆಗೆ ತರು; ಹೊರ ತರು; ಬೇರೆ ಮಾಡು : ಸಿಂಧುರಾಜನ ಬಸಿಱಿಂ ಪೋಟ್ಡಿನ್ನ ಮಗನನಾಂ ತೆಗೆಯದಿರೆಂ (ಪಂಪಭಾ. ೧೧-೧೨೦): ಕೋಮಳಕುಸುಮಶಾಬಕಪ್ರಕರಮುಂ ತೆಗೆದಂ ದಯೆಗೆಟ್ಟು ಲುಬ್ಧಕಂ (ಕಾದಂಪೂ. ೧೭೮): ದೋಣಿಯಿಂದಂ ತೆಗೆವಾಗಳೊಂದು ತುಡುವಾಗಳ್ಪತ್ತು ಬಾಣಂ (ಗದಾಯು. ೩-೩): ಬೆಳ್ಮುಗಿಲ ತೆಳ್ಪೊರೆಯಿಂದ್ರಚಾಪರೇಖೆಯುಂ ತೆಗೆವ ಶರಲ್ಲಕ್ಷ್ಮಿಯುಂ ಪೋಲ್ತು ನಿಜೋತ್ತರೀಯ ಪಲ್ಲವದ ಪೊರೆಯಿಂ ತೆಗೆದು ... ಮದನದೊಡವನೊರ್ವಳಂಗನೆಗಿತ್ತಳ್ (ಮಲ್ಲಿಪು. ೪-೭೧): ನವ್ಯದುಕೂಲವುಂ ತೆಗೆದುಟ್ಟು ದಿವ್ಯವಸ್ತ್ರವುಂ ಪೊದೆದು (ಬಸವ. ೨-೪೩): ಅಂಬಿಲದೊಳಗೆ ಹೊಸ ಬೆಣ್ಣೆಯಂ ತೆಗೆಯಲು (ಬಸಪು. ೪೨-೩): ಹೊಟ್ಟುಗರ ತೆಗೆ ಹೋಗಹೇಳೆಂದೆಚ್ಚನತಿರಥರ (ಕುವ್ಯಾದ್ರೌ. ೨-೭೧); ತೆಗೆ ಹಯ ತೇರುಗಳ ತಳ್ಪಂಕ ಬೇಡೆಂಬಾರುಭಟೆ ಬಲುಹಾಯ್ತು (ತೊರರಾ. ೫-೮-೭೩): ಇದ್ದವಳು ತೆಗೆದು ಉಟ್ಟರೆ ಇಲ್ಲದವಳು ಕೊಡವಿ ಉಟ್ಟಳು (ಗಾದೆ). ೨. ಎತ್ತಿಕೊಳ್ಳು; ತೆಗೆದುಕೊಳ್ಳು : ತಾರಗೆಯಂ ವಿದ್ಯಾಧರಿಯರ್ ಮುತ್ತೆಂದು ತೆಗೆದು ತುಡಲ ವೃಳಿಪರ್ (ಗಿರಿಕ. ೦-೫೪); ಕೆಲಬಲದ ಮಾಮರದೊಳಿಪ್ಪ ನಿರ್ಯಾಸವಂ ತೆಗೆದು ಕಿಱುವೆರಳುಗುರ್ಗೊನೆಯಿಂದೆ ತಿದ್ದಿ ಬರೆದು (ಕೃಮಿಥಾ. ೬೦-೨೯); ಅನರ್ಘ್ಯಮಣಿಯುಂ ಬಾಲದಿನಮಣಿಯುಂ ತುಡುಂಕುವ ರಾಹುವನಿಸಿ ನಿಜ ಕರಮೆಸೆಯೆ ತುಡುಂಕಿ ತೆಗೆದು ತತ್ಪಾದಪೀಠದೊಳಿಳಿಪಿದಾಗಳ್ (ರಾಜಶೇ. ೫-೨೫೮). ೩. ಏಳುವಂತೆ ಮಾಡು; ಎಬ್ಬಿಸು; ಮೇಲಕ್ಕೆತ್ತು : ಅಲ್ಲಿರ್ಪುದೊಂದು ಕಪಿ ಬೇಗವಿದಿರಂ ಬಂದು ಅಂಜದಿರೆಂದು ಕೈಯಂಪಿಡಿದು ತೆಗೆವುದುಂ (ಪಂಚತಂ. ೧೧೭-೨೨); ಸುರಿವ ರಕುತದ ಸರಿಯ ಸೆಱಗಿನೊಳೊರಸಿ ರಥದಚ್ಚುಗಳನೊದೆದನು ತಿರುಹಿ ಗಾಲಿಯ ತೆಗೆದು ಮುಂಗೈಗೊಂಡು ನಡೆನಡೆದು ಅರಿಬಲವನಿಡೆ (ಕುವ್ಯಾದ್ರೌ. ೭-೫೫). ೪. ಉದ್ಧಾರ ಮಾಡು; ಉದ್ಧರಿಸು : ಧಗಧಗಿಸಿದಱುವತ್ತುಸಾವಿರ ಸಗರರನು

ಸಂಸ್ಕಾರವಮುಖದಲಿ ತೆಗೆಯಲೋಸುಗ ತಪದಲಿದ್ದನು ಕಮಲಗರ್ಭಂಗೆ (ತೊರೆರಾ. ೧-೧೨-೧೩). ೫. ಆಕರ್ಷಿಸು ; ಎಳೆ ; ಜಗ್ಗು ; ಎಳೆದು ಕೊಳ್ಳು : "ತೆಗೆ-ಆಕರ್ಷಣೇ" (ಶಬ್ದಾರ್ಥ) : ಕೃಷ್ಣೆಯ ಕಚಪ್ರಾರಂಭವಮಂ ಬಾಹುವಿಕ್ರಮಿ ದುಶ್ಶಾಸನ ಮುಂದೆ ತೆಗೆವಂದಲ್ಲಿರ್ದ (ಗದಾಯು. ೭-೩೨) ; ಪೊ ಸ ನ ನೆ ಯ ಬಿರಿಮುಗುಳ ಕುಸುಮ ಬಾಣಂಗಳಂ ... ಕಿವಿವರಂ ತೆಗೆದು ನೇರನಱಿದೆಸೆವುದುಂ (ಧರ್ಮಾಮೃ. ೧೦-೩೦) : ಧರಾಧೀಶ್ವರನಾಶೀರ್ವಾಕ್ಷವೋತಂ ತೆಗೆದು ಬಗಿದು ತಕ್ಕೈಸಿದಂ (ವರ್ಧಪು. ೧-೪೦) : ಶರಣ ಇನ್ನೇಳೇಳೆನುತ...ಕರಕಮಲದಿಂ ತೆಗೆದು ಬಿಗಿಯಪ್ಪಿ (ಬಸಪು. ೨೦-೬) ; ಅತಿಶಯಪ್ರೀತಿಯಿಂ ತೆಗೆದು ಬಿಗಿಯಪ್ಪಿ (ಕೃಮಿಥಾ. ೪-೭೦). ೬. (ಗಾಳಿಯನ್ನು) ಎಳೆದುಕೊಳ್ಳು : ಆತ್ಮನಂ ಭೇದಿಸಿ ಪ್ರಾಣವಾಯು ನಾಡಿಗಳನಱಿತು ಹಿಡಿವ ಭೇದವಮಂ ತಿಳಿದು ತೆಗೆವ ಬಿಗಿವ ಸಂಚಮಂ ಕಂಡು (ಅದವ. ೨೯-೮೭). ೭. ಬಿಲ್ಲಿನ ಹೆದೆಯನ್ನು ಸೆಳೆ ; ಶರಸಂಧಾನ ಮಾಡು : ತೆಗೆದೆಚ್ಚನರ್ಜುನನಂಬು ತೀವೆ ತುದಿಯಿಂ ಬಾಲಂಬರಂ ಪಂದಿ ಸೌಳಗೆವೋಪಂತಿರೆ (ಪಂಪಭಾ. ೮-೧೭) ; ಮುಂದಿರ್ದ ಪಾಪೇಭಕಂಠೀರವನುವಮಂ ಬಗೆದು ತೆಗೆದಿಸುವುದುಂ (ಶಾಂತಿಪು. ೪-೧೦೭) : ಬಗೆಯದೆ ವಿರಹಿಗಳಂ ವಿಗೆ ತೆಗೆದೆಚ್ಚ ಬಟಲ್ದ ಮಧುಸಖನ ಸುಯ್ಯೆಲರ್ ವೆರ್ಗೇಲ್ ... ತಣ್ಣೆಲರದಿನಿಸು ಶೀಡಿತ್ತಾಗಳ್ (ಕಾದಂಬ. ೧೬೫) ; ತೆಗೆದೆಚ್ಚನಾ ಪಾರ್ಥ (ಕುಮಾರವ್ಯಾ. ದ್ರೋ. ೩-೪೯). ೮. ಕೀಳಂ; ಕಿತ್ತು ಹಾಕು : ನಡುವಂ ಕೊಱೆ ಕುತ್ತಿ ಕರುಳ್ಗಳಂ ತೆಗೆ ಮೊಗವಮಂ ಸುಡು (ವಡ್ಡಾರಾ. ೧೨೭-೧೧) : ಮಾದೆಗನಂತೆ ಬಾರತ್ತುವರ್ ನಾಯಂತೆ ಕಚ್ಚಿ ತೆಗೆವರ್ (ಧರ್ಮಾಮೃ. ೩-೭೩) : ಆಸೆಯಾಮಿಷ...ಕ್ರೋಧ ಕ್ಷುದ್ರ ಮಿಥ್ಯೆ ಇವನೆನ್ನ ನಾಲಗೆಯ ಮೇಲಿಂದತ್ತ ತೆಗೆದು ಕಳೆಯಯ್ಯಾ (ಬಸವ. ೪೬) : ಪಂದಿಯ ಬಳಿಯೊಳ್ ನೊಪ್ಪು ನೆಗೆದುರ್ಬಿ ಪಾಯುತೆ ಚಪ್ಪರಿಸುತ್ತುಗಿದು ಬಗಿದು ತೆಗೆದುವು ನಾಯ್ಗಳ್ (ಗಿರಿಜೆ. ೧-೧೦೩) ; ನಿನ್ನ ಕಣ್ಣಂಗೆನ್ನ ಕಣ್ಣೇ ಮದ್ದೆನುತ ಚಿತ್ತಂ ನಲಿದು ತನ್ನೇತ್ರವ ತನ್ನಂಬಿನಲಿ ತೆಗೆದು (ಬಸಪು. ೧೮-೭೦) : ಅಗೆವೊಯ್ದು ಕಳೆಗೀಳ್ದ...ಸಸಿಯ ತೆಗೆವ ನಡುವ ನಗೆಮೊಗದ ಪಾಮರಿಯರ ಬಗೆ ಬೆಡಗಾಗಿಹುದಲ್ಲಿ (ಕುಠಾಸಾಂ. ೨-೩೩). ೯. ಕಿತ್ತುಕೊಳ್ಳು ; ದೋಚು ; ಕಸಿದುಕೊಳ್ಳು : ಮ್ಲೇಚ್ಛವರ್ಗವ ತಱಿದು ಶೋಧಿಸಿ ತೆಗೆದನಲ್ಲಿಯ ಸಾರವಸ್ತುಗಳ (ಕುಮಾವ್ಯಾ. ಸ. ೪-೧೨) ; ಕುಳಿಂದನಂ ದಂಡಿಸಿದನಾ ದುಷ್ಟಬುದ್ಧಿ...ಹಿಂಡಿ ಹಿಳಿದರ್ಥವಮಂ ತೆಗೆದಂ ಸೆಱೆವಮನೆಗಿಕ್ಕಿ ನಿಗಳವಮಂ ಕಾಲ್ಗೆ ಮಾಡಿ (ಕೃಮಿಥಾ. ೨೧-೨೬) : ಮುಂದ್ದುಮಾತಿನಲಿ ಮೋಹವ ಬೀಱಿಯಾವನೊಳಗಿದ್ದ ಹಣವ ತೆಗೆ ಮಗಳೆ (ಕಂಸವಿ. ೬-೧೫೦). ೧೦. ಕದಿ ; ಕಳವು ಮಾಡು; ಅಪಹರಿಸು: "ಅಪಹಾರ, ಅಪಚಯ = ಬಹಳದ ಒಳ್ಪುವಮಂ ತೆಗೆವುದು" (ನಾಚಿರಾ. ೬) : ಅಜ್ಞಾನಿಗಳಿರಾ ಕಣ್ಣ ಕಾಣರೆ ಈ ನುಡಿಗಳೇಕಿಂತು ತೆಗೆದವೆ ನಿಮ್ಮ ಸಾಮ್ಯವನು (ಬಸಪು. ೫೮-೩೩); ಧೇನುವನು ತೆಗೆಯಲಿಕೆ ತನ್ನಯ ಸೇನೆಯಧಿಪನ ಕಳುಹಿ (ಸಂಭವ. ೨೬-೨೦) ; ಕರುಣದೊಳಾತ ಕೊಟ್ಟ ಸೌಭಾಗ್ಯವ ತೆಗೆಯಲೋರ್ವರಿಗಳವಲ್ಲ (ಮೋಹತ. ೩೦-೧೬). ೧೧. ಕಳಚು ; ಬಿಚ್ಚು ; ತೆರೆ : ಬಲ್ಲಿದನ ಹಗೆಯ ತೆಗೆವನ್ನಬರ ಬಡವನ ಹರಣ ಹೋದ ತೆಱನಂತಾಯಿತ್ತು (ಮಹಾದೇ. ಬ. ೩೩-೭೦): ಉತ್ತರದ್ವಾರದ ಬಾಗಿಲ ಬಿಯಗವ ತೆಗೆದಲ್ಲಿ ನಾದಮೂರುತಿ ಯಪ್ಪ ಪ್ರಸಾದವ ಕಂಡೆ (ಅದವ. ೨೪-೭೯) : ಕಾಲ ಕೆರಹುಗಳಂ ತೆಗೆಯದಿಂತಿರ್ದಡೆಲೊ ನಿನ್ನ ಬೀಳ ಹೊಡೆವೆನು (ಬಸಪು. ೪೬-೧೧) : ಕೆತ್ತ ಕದ ತೆಗೆಯದು (ಕುಮಾವ್ಯಾ. ಆ. ೧೨-೭): ಅರುಣಾಬ್ಜನಿಳಯಕವಾಟ ಕೌಸ್ತುಭಮಣಿ ಕಿರಣದಿ ತೆಗೆದೊಳಪೊಕ್ಕು (ಮೋಹತ. ೧-೬). ೧೨. ಪ್ರಕಟವಾಗು ; ಕಾಣಿಸಿಕೊಳ್ಳು ; ತೋರಂ ; ಹೊಳೆ : ರತ್ನಾಭರಣಂಗಳ ರುಚಿ ... ತೆಱಂ ಬೊಳೆಯಲ್ಕಿಂದ್ರಾಯುಧಮೆಂ ಪೊಳೆದುದೋ ನೃಪಸುತನ ಮುಂದೆ ತೆಗೆದು ಬರುತ್ತುಂ (ಕಾದಂಪೂ. ೫೯೮) : ತೆಗೆಯಬಹುದೆ ಕಡವರವು ದರಿದ್ರಂಗೆ (ಬಸವ. ೨೬೭) : ಧರ್ಮಮುಖವರಲ್ಲಂತೆ ಮುಕ್ತಿಯ ಸಜ್ಜೆ ತೆ[ ಪಾಠಾಂ. ದೆ ]ಗೆವಂತೆ ವೃಷಭನಮುಖಂ ವಿಕಾಸಮನೆಯ್ದಿ (ಬಸರ. ೪-೮೦) . ೧೩. ತೋರ್ಪಡಿಸು; ಕಾಣುವಂತೆ ಮಾಡು : ತೆಗೆದಯ್ ಮೋಕ್ಷದ ಬಟ್ಟೆಯಂ (ಶಮುದ. ೨೧೭ ಪ್ರಹೋ). ೧೪. ಹೊರಬರಂ ; ಹೊರಸೂಸು : ಮೆಯ್ಯನೀರ್ತೆಗೆವನ್ನಂ ಜವಜವಜವನಂಜಿಸಿದುವು ಜವನಾಳ್ಗಳ ತೆಱದಿನೆನ್ನ ಕಿನ್ನಯ ನರೆಗಳ್ (ಅಜಿಪು. ೨-೭೯). ೧೫. ಸಂಹರಿಸು ; ನಾಶಮಾಡು ; ಧ್ವಂಸಮಾಡು : ನಿನ್ನ ಧೈರ್ಯಾವಲೇಪಮಂ ಪ್ರಾಣಂಬೆರಸು ತೆಗೆಯದೆ ಮಾಣೆನೆಂದು ಮನೋಭವನಿಂ ನಿರ್ಭರ್ತ್ಸಿತೆಯಾದಂತೆಯುಂ (ಕಾದಂಬ. ೮೩) : ಈ ಪುಸಿವನಂ ಕುಸಿಯೊತ್ತಿ ಬಟ್ಟೆಯೊಳ್ ಪೆಟ್ಟುಮೆಟ್ಟಿದು ಬಳಸಿದ ದಸಿಯೊಳ್ತೆಗೆಯಿಮೆಂದು . . . ಪೇಟೆ (ಸುಕುಮಾ. ೭-೫೪) ; ನೈಷಧಭೂಮಿಪನ ಕೈಹಿಡಿದು ಬಾಳುವ ನೇಮವನು ತೆಗೆದ [ ಪಾಠಾಂ. ಬಿಸುಟ ] ಡವಿಗಟ್ಟಿತೆ ಕಠಿನವಹ ವಿಧಿಯು (ನಳಚ. ೭-೧೩). ೧೬. ನಾಶವಾಗು; ಹಾಳಾಗು : ಒಬ್ಬ ಜಂಗಮದಭಿಮಾನದಿಂದ ಚಾಳುಕ್ಯರಾಯನ ಆಳಿಕೆ ತೆಗೆಯಿತ್ತು (ಬಸವ. ೬೨೬). ೧೭. ಆಕ್ರಮಿಸು ; ಆವರಿಸು ; ಮೇಲೆ ಬೀಳು : ಕಾಳಿಯೆಂಬ ಜಲದೇವತೆ ಪೂ ರ್ವ ಭ ವ ಬ ದ್ಧ ವೈ ರ ದೊ ಳು ಗ್ರ ಗ್ರಾಹಾಕಾರದಿಂ ತೆಗೆಯೆ (ಚಾವುಂಪು. ೫೭) ; ಮ ಹಾ ರ ಣ್ಯ ದೊ ಳ ಗೆ ಬ ರ್ಪ ನ ನೊ ರ್ವ ಬೊಮ್ಮರಕ್ಕಸಂ ಕಂ ಡು ಪಿ ಡಿ ದು ತಿನಲೆಂದು ತೆ ಗೆ ವು ದು ಂ (ಪಂಚತಂ. ೦೫೨-೯) ; ತಾರೆಗಳು ನೆ ಣ ಗೊ ಬ್ಬಿ ನ ಲಿ ರಾಹುವ ತೆಗೆದು ಬ ದು ಕ ಲು ಬಲ್ಲವೇ (ಕುಮಾವ್ಯಾ. ದ್ರೋ. ೫-೬೩). ೧೮. ತಡೆ ; ಅಡ್ಡಿಪಡಿಸು : ಪೋಗದಿರೀಶ್ವರನಾಣೆಯೆಂದು ಪುಲ್ಮರುಳಿನ ಸಾನುಮಂ ತೆಗೆದು ಕಾಡಿದುದಲ್ಲಿ ಫಣೇಂದ್ರಕೇತುವಂ (ಪಂಪಭಾ. ೧೩-೫೫): ಕಾಲಮೇಲೆ ಮುಟ್ಟಿದ ವಿನಯಾಭರಾಮನಂ ತೆಗೆದು ತಟ್ಟೈಸಿ (ಕಾದಂಬ. ೨೭೫) ; ಇಂದು ಪೋಗಲಾಗೆನ್ನನವಜ್ಞೆಗೆಯ್ದು ಬಿಸಿಲಾದುದು ನಿಮ್ಮಡಿ ನಾಳೆ ಪೋಪುದೆಂದುನ್ನತಶೀಲರಂ ತೆಗೆವುದುಂ (ಧರ್ಮಾಮೃ. ೦೨-೭೬) : ದಂಡಾಗ್ರದೊಳ್ ರಂಜಿಪ ಬಿರುದ ಪಟಪ್ರಾತಮೋರಂದದಿಂ ವಾಯುಗವ ವ್ಯಾಪಾರವಮಂ ನೆಟ್ಟಗೆ ತೆಗೆಯೆ ... ಬರುತುಮಿರ್ದಂ ಪುರಕ್ಕುರ್ವರೇಶಂ (ಕುಸುಮಾ. ೪-೧೧೪). ೧೯. ನಿ ವಾ ರಿ ಸು ; ಹೋಗಲಾಡಿಸು ; ಕಳೆ : ಬಯ್ವ ಜನರು ಜರಿವ ಜನರು ಅ ವ ರಿ ಗೇ ನು, ಬಾಯಿ ಕೊಬ್ಬು ನೋವು ತೆಗೆವರೆ ? (ಕವಿಶೋ. ೬೦-೨೦) ; ಬಿಸುರು ಕೆಗೆದರೂ ಪಿಶಾಚಿ ಬಿಡುವುದಿಲ್ಲ (ಗಾದೆ). ೨೦. ತೊಡಗು ; ಉಪಕ್ರಮಿಸು; ಆರಂಭಿಸು : ಮೆಲ್ಲನೆ ಮಾತ ತೆಗೆದನು (ಕುಮಾವ್ಯಾ. ಕ. ೫-೫) ; ಸಿಂಹಳಕ್ಕಾಳ್ದನ ಬಂಟರುರ್ವಿ ವಿಗೆ ಕಾಳೆಗಮಂ ತೆಗೆದರ್ (ರಾಜಶೇ. ೫-೦೨೪). ೨೧. ಉಂಟುಮಾಡು ; ಆಗಿಸು : ಬಗಸೆಗಣ್ ಕುಡಿನೋಟವಮವು ಪೊಸ ಗಾಡಿಯಂ ತೆಗೆಯೆ ... ದಿಟ್ಟಗೇನೆಸದಳೋ (ಪದ್ಮರಾ. ೩-೩೦) : ಸುಮನ ಸುಗಂಧ ಕದಂಬದ ಕಂಪನು ತಿಮಿರಿ ತೆಗೆಯಲಾಗಿ (ಭರತ. ೦-೩೬). ೨೨. ಮಾಡು ; ರಚಿಸು ; ನಿರ್ಮಿಸು : ಕಡೆದರೊ ಶಂಖದಿಂ ತೆಗೆದರೋ ನವ ಮೌಕ್ತಿಕದಿಂ ... ಪೇಟೆನಲ್ಕರವೆ ಕಣ್ಗೆಸೆದಿರ್ದುದು ರೂಪು ಕಾಂತೆಯಾ (ಕಾದಂಪೂ. ೬೭೭); ಗಗನಗಂಗಾನದಿಯ ಕಾಲುವೆ ತೆಗೆದರೆನೆ ಠಕ್ಕೆಯದ ಪಲ್ಲವ ಪಗಿಯೆ ಮೆಱೆದುದು ಬಿಗಿದ ಮೊಗರಂಬದ ವಿಳಾಸದಲಿ (ಕುಮಾವ್ಯಾ. ದ್ರೋ. ೩-೪) ; ತೆಗೆದ ತೊಱೆ ಕಾಲುವೆಗಳುದ್ಯಾನಗಳ . . . ಈಕ್ಷಿಸುತರಸನೈತಂದ (ತೊರೆರಾ. ೦-೬-೧೦). ೨೩. ಬರೆ ; ರೇಖಿಸು ; ಚಿತ್ರಿಸು : ಎರಡು ಬರೆಯಂ ತೆಗೆದು[ಪಾಠಾಂ. ತೀವ್ರ]ದನರಸಂ ಕಂಡು ಕಡು ಮುಳಿದು (ವಡ್ಡಾರಾ. ೧೦೮-೨೮) ; ಗಾಡಿವೆತ್ತಡರ್ದ ಕತ್ತುರಿಯೊಳ್ ಮದ ಪಟ್ಟೆಯಂ ವಿಳಾಸದೆ ತೆಗೆದಂತೆ ಕಣ್ಗೆಸೆದು ತೋಱಿದುದಾ ಕದನತ್ರಿಣೇತ್ರನಾ (ಪಂಪಭಾ. ೩-೭೬) ; ಹೊಗರುಮೊಗಕೆ ಕಣ್ಗಳ ದಿಟ್ಟತಾಕದೊಲ್ತೆಗೆದ

ಕತ್ತುರಿರೇಖೆಯಂತೆ (ಕಂಸವಿ. ೯-೧೧೪) : ಖಲೀಲ ಜಿಬ್ರಾನನು ಮಹಾ ಕವಿಯೂ, ತತ್ವಜ್ಞಾನಿಯೂ, ಹಾಗು ಚಿತ್ರಕಾರನೂ ಆಗಿದ್ದನು ... ಅವನು ತೆಗೆದ ಚಿತ್ರಗಳು ಪಾಶ್ಚಾತ್ಯದೇಶದೊಳಗಿನ ಬಹುಶಃ ಎಲ್ಲಾ ಪ್ರಮುಖಪಟ್ಟಣಗಳಲ್ಲಿಯೂ ಪ್ರದರ್ಶಿತವಾಗಿವೆ (ಪ್ರಬಂಧ. ೧೧೨). **೨೪.** ಸರಿಸು ; ತಳ್ಳು : ಅಡಿಯಿಂ ಮೇಗಣ್ಗೆತ್ತುವ ಕಡುಗಾಳಿಯ ಪೊಯ್ಲೋಳದೆ ನೀರೊಗೆದಪುದಾರ್ದಡಿಗೆ ಬರೆ ತೆಗೆವ ಗಾಳಿಯನಡಿಗಿಟ್ಟದ ಪುದಿದೆ ನೀರಿದೊಂದಚ್ಚರಿಯೇ (ಆದಿಪು. ೦೩-೫೨) : ಎಲೆಎಲೆ ಹಿಡಿ ಭೀಮನನು ತೆಗೆ ಕಲಿಕೆ ದುರ್ಯೋಧನನ (ಕುಮಾವ್ಯಾಸ. ೭-೩೭) : ಪಾಂಡವರ ಮಾತ ತೆಗೆಯಾಡದಿರಿ (ತುರಂಗ. ೪೬-೧೨). **೨೫.** ಓರೆಯಾಗು ; ಆರುಗಾಗು ; ಪಕ್ಕಕ್ಕೆ ಸರಿ: ಒತ್ತೊತ್ತಿನಿಂ ನಿತ್ತರಿಸಲ್ಕಾರದೇನೊಂದೆಡೆಗೆ ತೆಗೆದುದೋ ವಿಶ್ವದಿಕ್ಚಕ್ರಂ (ಕಾದಂಬ. ೪೩೨) ; ಇದು ಹರಿಯ ಸಮರಲಕ್ಷ್ಮಿಯ ಮದುವೆಯೊಳೆಡೆವಿಡಿದ ಕಾಂಡಪಟಮೆನಿಸಿದ ಕೌಮುದಿ ತೆಗೆವಿನಂ ಮಗುಟ್ಟಿದೆನಿಸಿದತ್ತು ಮುನ್ನೀರೊಳಿಂದುಘಟಕಾಪಾತ್ರಂ (ವರ್ಧಪು. ೮-೩೫). **೨೬.** ಒಯ್ಯು; ಸಾಗಿಸು : ಕೀರಂಗೆ ಕುಟುಕನಿಕ್ಕೆಂಬ ಚಕೋರಿಗಳಂ ಚಂದ್ರಕಾಂತದ ನೆಳಲ್ಗೆ ತೆಗೆಯೆಂಬ ... ಕೆಲಸದ ನೆವದಿಂ (ನಂಚಿರ. ೦೯-೩೭). **೨೭.** ತೆರಳಿಸು; ಹಿಂತಿರುಗಿಸು : ಇಚ್ಛೆಯುಣಿಲ್ಲದೊಡಂ ತೆಗೆದಳ್ ಕರು ಮನಂ ಕಿಡೆ ಪೊಸತಪ್ಪುದೊಂದು ಪಿಡಿಗಂಕುಶಮಿಟ್ಟು ಮರಳ್ಚು ಮಂದದಿಂ (ಕಾದಂಪೂ. ೭೭೨); ಪಡೆಯ ತೆಗೆ ತರುವಲಿಯ ಕೊಲ್ಲದೆ ಹಿಡಿ (ಕುಮಾವ್ಯಾದ್ರೋ. ೬-೭); ಬಗೆವೆತ್ತ ಬಾಗಿಲ ಕದ ವಜ್ರಲಾಳವಿಂಡಿಗೆಗಳ ಬಂಧನಗೊಳಿಸಿ ಮಿಗೆ ವಿಶ್ವಾಸಿ ಕಠೋರ ರಾಕ್ಷಸಿಯರ ತೆಗೆಯದೆ ಕಾಪನಿಕ್ಕಿದಳು (ತೋರಹಿತ. ೩೩-೩೭). **೨೮.** ಹಿಂತೆಗೆದುಕೊಳ್ಳು ; ವಾಪಸ್ಸು ತೆಗೆದುಕೊಳ್ಳು : ಪದಪಿಂ ನಟ್ಟರೆ ದಿಟ್ಟಿಯುಂ ತೆಗೆದನೇಕೆಂತಾನುಮುದ್ವೇಗದಿಂ (ಕಾದಂಪೂ. ೭೭೪): ಹಗೆಯರಿಗೆ ವರವೀವರಬ್ಬರು ತೆಗೆಯಲರಿಯರು ಕೊಟ್ಟ ವರಗಳ (ಹರಿಶ್ಚ. ೨೮). **೨೯.** ಹೋಗು; ತೆರಳು : ಇತ್ತಲೀ ಪ್ರಾಣೇಶನಿದ್ದ ನಿಮಿತ್ತದಲಿ ಪಶುಗಳು ಬೆಳೆದ ಹೊಲದತ್ತ ತೆಗೆಯಲು (ಬಸಪು. ೬೦-೨೩). **೩೦.** ಹಿಮ್ಮೆಟ್ಟು; ಹಿಂದೆಗೆ : ಆಹವಧರೆಯೊಳ್ ಪತಿತಂ ಪ್ರಸ್ಕನ್ನಂ ಕಾದಿ ತಟ್ಟುಗಿದು (ರಣದೆ) ತೆಗೆದನಕ್ಕುಂ ನಷ್ಟಂ (ವಸ್ತುಕೋ. ೮೨-೫); ಕೈಕೊಳ್ಳದಗ್ಗದ ಬೀರರ್ ತೆಗೆದೋಡೆ (ಕಬ್ಬಿಗಕಾ. ೩೦೪); ತೆಗೆಯೆ ರಿಪುಬಲ ಕೊಲುತ ಬಂದುದು ದಿಗಿಭವು (ಕುಮಾವ್ಯಾದ್ರೋ. ೩-೪೨) ; ಹಗಲು ಸವೆದುದು ಹೊಂಬಿಸಿಲು ನೆಟ್ಟ ತೆಗೆದುದತಿ ವೇಗದಲಿ (ನಳಚ. ೫-೪೩). **೩೧.** ಮುಚ್ಚು ; ರದ್ದುಪಡಿಸು : ಬಜಾರದ ಅಂಗಡಿಯು ಈಗ ತೆಗೆದು ಇರುತ್ತೇವೆ (ಮುಂಬಯಿ. ೨೩ ಪ್ರಶ್ನ ಪನ). **೩೨.** ಹಿಡಿದುಕೊಳ್ಳು; ಹಿಡಿ: ಚೇಟ್ ಚಿಕ್ಕದಂದಟ್ಕಟಿಂ ತೆಗೆಯಲ್ ಕಚ್ಚದೆ (ಸೋಮೇಶ. ೪೧). **೩೩.** ಆಯ್ದುಡು; ಆರಿಸಿಡು; ವಿಂಗಡಿಸು: ಸರ್ವಸ್ವಮುಮಂ ಕುಡದಿರಲಾರ್ವೀಪತಿ ಬಂದೊಡಾಗದೆಂದತಿಭಕ್ತರ್ ಖರ್ವಡನಿವಾಸಿಗಳ್ ಕೆಲರುರ್ವೀಶರ್ ತೆಗೆದರಾನೆಯಂ ಕುದುರೆಯುಮಂ (ಆದಿಪು. ೯-೩೨೮). **೩೪.** ಬಳಸು; ಉಪಯೋಗಿಸು : ನಿತ್ಯವು ತೆಗೆಯುತಲಿರಬೇಕು ಹುಟ್ಟನು ತಾನೆಯೆ ತೊರೆಯೊಳಂಬಿಗನು (ಇಂಚಾಪ. ೨೦೦-೩೭). **೩೫.** ಕ್ರಯ ಕೊಟ್ಟು ಪಡೆ; ಕೊಂಡುಕೊಳ್ಳು: ಇದನ್ನು ಎಷ್ಟು ದುಡ್ಡು ಕೊಟ್ಟು ತೆಗೆದಿರಿ ? (ರೂಢಿ). **೩೬.** ಉಚ್ಚರಿಸು; ಹೇಳು: ಮಾತು ಕೇಳದ ಮಕ್ಕಳ ಹೆಸರು ತೆಗೆಯಬಾರದು (ಪುರಂದ. ೨-೫೮-೧). **೩೭.** ತೋರಿಬಿಡು : ತೆಗೆಯೆ ಬೀರರವ [ದೆ] ಮೇಲೆ ಪರಿವ ಮದಗಜಂಗಳಿಂ ಚಳತ್ತುರಂಗಮಂಗಳಿಂ (ಪಂಪಭಾ. ೧-೫೮ ರಗಳೆ). **೩೮.** ನಿಲ್ಲಿಸು; ಸುಮ್ಮನಿರು : ಪಿಂತುಂ ತೆಗೆ ಮೇಘನಾದ ಸಹಿತಂ ತತ್ಪಾದಪದ್ಮೋಪಜೀವಿಗಳಾಗಿರ್ದ(?) ಮಕ್ಕಳೆಲ್ಲವಿದೆ ನಮ್ಮಂ ಕಾಣಲೆಂದೀಗಳಲ್ಲಿಗೆ ಮುಂತೀ ಬರುತಿರ್ಪರ್ (ಕಾದಂಬ. ೭೭೪): ಧರೆಯೊಳಗೆ ತಾರಕಂಗೆನಗರಿಮೇಘ ಮಹಾಬಲಂಗೆ ಸಮರಾಂಗಣದೊಳ್ . . . ಸುರಪತಿಗಿರಪತಿಯಜಂಗಿಜಂ ತೆಗೆ ಸರಿಯೇ (ಗಿರಿಜಾ. ೬-೩೮); ಫಡ ಫಡುರವಣೆ ಬೇಡ ತೆಗೆ ಬಾಯ್ಬಡಿಕತನವಿದು (ಕುಮಾವ್ಯಾದ್ರೋ. ೨-೩೯). **೩೯.** ಸುಡು; ಮರಳಿಸು: ಕುದಿಸು: ನೇಜಿಲ ಬೀಜಂ ಕಡಸಿಗೆಯುನ ಬೇರಂ ಸುಣ್ಣಂ ಜಲವಿಮಿಶ್ರಂ ತೆಗೆಯಲ್ ವಿಷಮಂಟಾಗುಂ (ಲೋಕೋಪ. ೮-೨೩). 'ತೆಗೆಪು₁' ಪರಾ. **೪೦.** ತೇಯು; ಅರೆ : (೬). **೪೧.** [ಗಣಿತ] ಭಾಗಿಸು: "ತೆಗೆಯೆನಲು ಭಾಗಿಸುಹವುಕ್ಕು" (ಮಂಗರಾ. ೧೧೪-೧೦೨).

**ತಕ್ಕೊ, ತಗೊ, ತಕ್ಕೊ**=ತೆಗೆದುಕೊಳ್ಳು; ಸ್ವೀಕರಿಸು : ತಕ್ಕೋ ಗಂಟ ನಿನ್ನಾಟವ ತಿಳಿಸುವೆ (ವಿದಾಕ್ಷ. ೩೫ ಪಲ್ಲವಿ): ನಿನ್ನ ಹಣವನ್ನು ನೀನೇ ತಗೋ (ರೂಢಿ); ತಕ್ಕೋ ನೀ ಮುನ್ನ ಕೊಟ್ಟ ಹೊನ್ನ (ಶರಲೀ. ೩೫೯-೪). **ತೆಗೆದಿಕ್ಕು** = ಧರಿಸು: ಕಾಸೆಯನುಟ್ಟು ಜನ್ನವಿರಮಂ ಪೆಗಲೊಳ್ ತೆಗೆದಿಕ್ಕಿ ವೇದದಭ್ಯಾಸಮನುಂಟುಮಾಡಿ ಪೊಲಸಂ ಪಸುತಿರ್ಪ ನಿಶಾಚರರ್ಕಳಂ ಗ್ರಾಸಮನುಣ್ಬುದೆಂದೊಡೆ (ಕಾವ್ಯಸಾ. ೫೩೫). **ತೆಗೆದಿಡು** = ಜೋಪಾನ ಮಾಡು; ಎತ್ತಿಡು: ಹೊಸಬಟ್ಟೆಯನ್ನು ಪೆಟ್ಟಿಗೆಯಲ್ಲಿ ತೆಗೆದಿಡು (ರೂಢಿ). **ತೆಗೆದಿರಿಸು** = ಬೇರೆಯಾಗಿರಿಸು ; ಮೀಸಲಾಗಿರಿಸು : ಸಕಲ ದೇವಾನ್ನವ ಒಡೆಯನಿಂದಲೂ ಮಿಗಿಲಾಗಿಕ್ಕಲು ತೆಗೆದಿರಿಸಿದನು (ಬಸವ. ೪೩೯) ; ನೊಣವನೆ ಬೇಯಿಸಿ ಬಡಿಸುವುದಾದರು ರೆಕ್ಕೆಯನೊಂದನು ಅಡುಗೆಯ ಭಟ್ಟರು ತಮಗಾಗಿ ತೆಗೆದಿರಿಸುವರು (ಇಂಚಾಪ. ೨೨೧-೯೪). **ತೆಗೆದುಕೊಳ್, ತಕೊಳ್, ತಕ್ಕೊಳ್, ತಕ್ಕೊಳ್ಳು, ತೆಕೊಳ್, ತಕ್ಕೊಳ್, ತಕ್ಕೊಳ್ಳು, ತೆಗಕೊಳ್, ತೆಗೆಕೊಳ್** = **೧.** ಸ್ವೀಕರಿಸು: ಸಮ್ಯಗ್ವ್ರತಂಗಳುಮಂ ತೆಗೆದುಕೊಳ್ವಂತೆ ವಿಚಿತ್ರವಸ್ತ್ರಂಗಳಂ ತೆಗೆದುಕೊಂಡು ... ಬನಮಂ ಪೊಕ್ಕು (ಸುಕುಮಾ. ೧೧-೮೩ ವ); ಆ ವಿಭೂತಿಯಂ ಸುಕೃತದಿಂ ತೆಗೆದುಕೊಂಡು . . . ಧರಿಸಿ ಲಿಂಗಾರ್ಚನೆಯ ಮಾಡುವ ಶರಣನಾತನೆ ವೇದವಿತ್ತು (ಅರವ. ೦೮-೪೩) ; ಆ ಜಂಗಮವೇ ಸಾಕ್ಷಿಯಾಗಿರ್ದು ವಿಭೂತಿ ವೀಳೆಯವ ತಕ್ಕೊಂಡು (ಚನ್ನವ. ೦೨-೯) ; ಲಿಂಗ ಕೆಲದೊಳಿರೆ ಕರದಲ್ಲಿ ತಕ್ಕೊಂಡು (ಗುರುಚಾ. ೫-೭೪) ; ಬೆಣ್ಣೆ ತಕ್ಕೊಂಡ ಬಳಿಕ ಉಳಿಯುವುದೇನು ಮಜ್ಜಿಗೆ (ಮುಂಬಯಿ. ೦-೨೫) ; ತೋಟ ಮಠ ಕೆರೆಯ ಅಪಹರಿಸಿ ತೆಕೊಂಡಂಥಾ ಪಾಪಿಗಳು ದೇವಲೋಕ ಮರ್ತ್ಯಲೋಕಕೆ ಹೊರಗು (ಎಕ. XVI, ಚಿಕ್ಕನಾ. ೦-೦೯ : 1622) ; ತಾಂಮ್ರಶಾಸನ ಸಹವಾಗಿ ಕ್ರಯವನೂ ತಕ್ಕೊಂಡು (ಸೌಇಇ. IX–II, ೫೦೭-೨೪: 1538) ; ಖಂಡಪರಶುವಿನ ಕೈಯಿಂದಲಾ ಹೊನ್ನ ತಕ್ಕೊಂಡು (ಚಲಪು. ೬೨-೬೨) ; ದುಡ್ಡುಗಳನ್ನೆಲ್ಲಾ ತಕ್ಕೊಂಡು ಪೇಟೆಗೆ ಹೋಗಿ (ಕಥಾಮಂ. IV, ೧೪) ; ವಿವಿಧವಾದಕರೊಳಗದೊರ್ವನ ಹೆಗಲ ಹಟಿವೊಂದ ತವಕಿಸದೆ ತೆಗಕೊಂಡು ತನ್ನೊಪ್ಪುವ ಹೆಗಲಿನೊಳು ಕೋದು (ಸಾಳ್ವಭಾ. ೦೮-೫೫) ; ಪೂವಸೆಗೆಲದೊಳವ ಮುನ್ನಿರಿಸಿ ದಸಿ ಖೇಡಯವಿರಲು ತೆಗೆಕೊಂಡು ನೋಡುತಿರೆ (ಸಾಳ್ವಭಾ. ೦೭-೦೫). **೨.** ಪಡೆ ; ಹೊಂದು : ತಮ್ಮ ಆಪ್ತರು ಇಷ್ಟರು ಸ್ನೇಹಿತರು ಮುಂತಾದವರ ಭೆಟ್ಟಿಯನ್ನು ತಕೊಳ್ಳಬೇಕು (ಮುಂಬಯಿ. ೪-೩೪). **೩.** ವಹಿಸು : ಇನ್ನು ಮುಂದೆ ಹೆಚ್ಚು ಶ್ರಮ ತಕ್ಕೊಂಡು ಕಲಿಯಬೇಕಾಗುವುದು (ಮುಂಬಯಿ. ೪-೦). **೪.** ದೋಚು; ಕಸಿ; ಕೀಳು : ಬಿಕ್ಕು ಬಿಕ್ಕನೆ ತೋಡಿ ಇಕ್ಕುವಳು ಕಣ್ಣೀರ ಸಿಕ್ಕಿದಳು ಸೂಳೆಯೆನಬೇಡ ಅದು ರೊಕ್ಕ ತಕ್ಕೊಂಬುವುದಕೆ (ಸರ್ವಜ್ಞ. ೧೯೨೪). **ತೆಗೆದುನೋಡು**=ನೋಡಿಯೂ ನೋಡದ ಹಾಗೆ ಈಕ್ಷಿಸು,–ನೋಡು : ಪರೆದ ಕುರುಳಲಾಗೆ ಘಟ್ಟಿಯನರೆಯುತ್ತುಂ ಸಾಣ್ಣೆ ತೆಗೆದು ನೋಟ್ಪುದುಮೆನ್ನಂ (ಪಂಪಭಾ. ೮-೬೫). **ತೆಗೆದು ಹಾಕು** = **೧.** ಹೊಡೆದು ಹಾಕು : ಇಲ್ಲಿ ಬಂದಿರುವ ಅನಾವಶ್ಯಕ ವಾಕ್ಯವನ್ನು ತೆಗೆದುಹಾಕಬಹುದೆ ? (ರೂಢಿ). **೨.** ವಜಾಮಾಡು : ಅವನನ್ನು ಕೆಲಸದಿಂದ ತೆಗೆದು

ಹಾಕಿದರು (ಜೂತಿ). ೩. ನಿರಾಕರಿಸು ; ಅಲ್ಲಗಳೆ : ಆ ಮಾತನ್ನು ತೆಗೆದುಹಾಕುವಂತಿಲ್ಲ (ಜೂತಿ). **ತೆಗೆದು ಹೋಗು** = ಕೃಶವಾಗು ; ದುರ್ಬಲವಾಗು : ದಿನೇ ದಿನೇ ಮೊದಲಿಗಿಂತ ಹೆಚ್ಚಾಗಿ ತೆಗೆದು ಹೋಗುತ್ತಾ ಬಂದರು (ಚಿಕ್ಕದೇ. ೨೬೯) : ನೀವು ಬಹಳ ತೆಗೆದು ಹೋಗಿದ್ದೀರಿ (ಮುರುಳು. ೯೯). **ತೆಗೆಬೀಯು** = ಕೊಡುಗೈಯವನು ; ವಂಕ್ರ ಹಸ್ತ ; ಉದಾರಿ ; ಒಂದು ಬಿರುದು (?) : ಅನ್ನಾತನ ಕಾಳೆಯ ಬಿರುದೆನ್ತೆಂದಡೆ ಅಳಿಂ ಮುಂಂನಿಜೀವಂ ಸಿತಗರ ಗಂಡಂ ತೆಗೆಬೀಯು ಚಲದಂಕರಾಮನ ಗಂಧವಾರಣಂ ವಾಲಿವರ ಮಾರಿ (ಶಾಇಇ. XX, ೦೨೫-೮ ; 1186). P ಈ ಧಾತು ಅನೇಕ ಶಬ್ದಗಳ ಮುಂದೆ ಸೇರಿ ಸಂಯುಕ್ತ ಧಾತುವಾಗಿ ಬೇರೆ ಬೇರೆ ಅರ್ಥಗಳನ್ನು ಕೊಡುತ್ತದೆ. ಉದಾ:— ಕಾಲ್ತೆಗೆ, ಚಿತ್ರತೆಗೆ, ಪ್ರಾಣತೆಗೆ, ಬಾವಿತೆಗೆ, ಮೈದೆಗೆ, ಹೊರತೆಗೆ ಇತ್ಯಾದಿ.

[ ದೇ.॥ ತಮಿ. ತೆಕ್ಕು ; ತೆವ್ವು : ತುಳು. ದೆವ್ವು ; ತೆಲು. ತಿಗಿಯು, ತಿಗುಚು ; ತಿಗುವು, ತಿವ್ವು ; ಕೊಲಾ. ತಿಕ್, ತಿವ್ ; ನಾಯ್ಕಿ. ತಿಕ್, ತಿವ್]

**ತೆಗೆ$_2$** (ನಾ). ೧. ತೆಗೆದುಕೊಳ್ಳುವಿಕೆ : (೬). ೨. ಆಕರ್ಷಣೆ ; ಸೆಳೆತ : "ಆಕರ್ಷಣ ಪಲಾಯನಗಳೊಳ್ ತೆಗೆ" (ಶಲ್ಯಮಂ. ೯೦). ೩. ಹಿಮ್ಮೆಟ್ಟುವಿಕೆ ; ಹಿಂದೆಗೆಯುವಿಕೆ ; ಪಲಾಯನ : ಅಮರ್ಚುವ ನಿಲ್ವೆಡೆಯಂ ಬಗೆವುಂ ತೆಗೆಯನಲ್ಲಾಟವುಂ ಕಾಟವುಂ ನೋವುದಂ ಸಾವುದನಲ್ಲಂದದಿಂ ಬಗೆದಾಗಳ್ (ಶಂಖಭಾ. ೩-೪೩). ೪. ಇಳಿತ ; ಇಳಿಯುವಿಕೆ : ತೆರೆ ನೊರೆ ಬುದ್ಬುದಂ ಸುಬೀಜಲಂ ತೆಗೆ ಪೆರ್ಚುಗೆ ಗುಣ್ಪು ಘೋಷಣಂ ವರುಣ ನಗಂ ವಧೂಜನನಂ . . . ನೀರ್ವೊಗೆ ವಭ್ರಮುರ್ವರಾಪರಿವೃತಿ ನಾಗರಿಕ್ಕ ಬಗೆದಾಡೊಡೆ ಸೈತು ಸಮುದ್ರ ವರ್ಣನಂ (ಸೂಕ್ತಿಸು. ೨-೦). [ <ತೆಗೆ$_1$ ]

**ತೆಗೆತ** (ನಾ). ತೆಗೆದು ಕೊಡುವಿಕೆ ; ದಾನ : "ದಯ—ದಾನ, ಗತಿ ಹಿಂಸಾದಾನೇಷು ಈವಿಯೊಳಂ, ನಡೆಯೊಳಂ, ಝುಂಕಣೆಯೊಳಂ, ತೆಗೆತದೊಳಂ" (ಶಾಶಕ್ಕಿ. ೦೦೦). [ತೆಗೆ$_1$ + – ತ$_2$]

**ತೆಗೆತರ್** (ಕ್ರಿ) ೧. ತೆಗೆದುಕೊಂಡು ಬರು. 'ತೆಗೆತರಿಸು' ಪರಾ. ೨. ಸೆಳೆದುಕೊಂಡು ಬರು : ಹೆಣ್ಣಾಳ್ಗಳಿನ್ನದೆ ತಟಿದಿಕ್ಕಿ ತೆಗೆತಂದು ಚಿಣ್ಣನನೆಮಗೊಪ್ಪಿಸೆಂದ (ಮೋಹತ. ೩೩-೩೦). [ತೆಗೆ$_1$ + ತರ್]

**ತೆಗೆತರಿಸು** (ಕ್ರಿ). ತೆಗೆದುಕೊಂಡು ಬರುವಂತೆ ಮಾಡು : ಪೆಟ್ಟಿಗೆಗಳಂ ತೆಗೆ [ಪಾಠಾಂ. ಗ] ತರಿಸಿ ಮುಂದಿಟ್ಟು (ಬಸವು. ೦೦-೦೫). [ತೆಗೆತರ್+–ಇಸು$_3$]

**ತೆಗೆನೆಟ್** (ಕ್ರಿ). (ಬಾಣ ಬಿಡಲು ಸಿದ್ಧವಾಗಿ) ಪೂರ್ತಿಬಾಣವನ್ನು ಎಳೆ : "ತೆಗೆನೆಟ್ – ಆಕರ್ಣಾಂತೇ (ಪೂರಾ ಎಳೆ)" (ಕಮಧಾ) : ಗಟ್ ಸನ್ನೆಗೆಯ್ದು ತೆಗೆನೆಟ್ಟದೆಬಿಗಿ ಪರಂಕಲಿಸಿ ಪರ್ವಿ ಕೂಕಿಟ್ಟಿಸೆ (ಶಂಖಭಾ. ೦೦-೭೩) : ಅಗಳಂಬರಚರಬಲದ ಧನುರ್ವಲಂ ತೆಗೆನೆಟ್ಟು ಪೊಕ್ಕು (ಶಾಂತಿಪು. ೪-೮೭); ಕಡೆಗಣ್ಣಿಂ ಕಯ್ಯುಮಿಂದಾಗಿರೆ ತೆಗೆನೆಟ್ಟವ್ಯಗ್ರನೇಕಾಗ್ರಚಿತ್ರಂಬಡೆದಿರ್ದಂ (ಶಂರಾಮು. ೦೪-೧೭೭); ತೆಗೆನೆಟ್ಟಬ್ಬಾಭನಿಸೆ (ಜಗವಿ. ೭-೮೩); ಸಂಚಳಿಸದ ಶಂಕರನ ಮನಂ ಚಳಿಯಿಪುದುಂ ಸಾರ್ದು ಪಾರ್ದು ತೆಗೆನೆಟ್ಟಿರ್ದಂ (ಗಿರಿಕ. ೮-೪೪); ಓಸರಿಸದೆ ತೊಡರ್ಚಿ ಸಾರ್ಚಿ ತೆಗೆನೆಟ್ಟು ನಿಂದು (ರಾಜಶೇ. ೬-೯೭೫). [ತೆಗೆ$_1$ + ನೆಟ್$_1$]

**ತೆಗೆನೇಣು** (ನಾ). ಎಳೆಯುವ ಹಗ್ಗ ; ಕಡೆಗೋಲಿನ ಹಗ್ಗ : ಮಂದರದ ಕಡೆಗೋಲ ಮೇಳವಿಸಿ ವಾಸುಗಿಯ ತೆಗೆನೇಣನಿಂದಸುರರೋಳಿಯಿಂ ನೀವು ಸಹಿತೆರಡು ಕಡೆಯಂ ಪಿಡಿದು ಮಥಿಸಲು (ಐಶಿಷಂ. ೦೨-೩); ನಳನಳಿಪ ತೋಳುಗಳ ನಿಜಕರತಳದ ತೆಗೆನೇಣುಗಳ ಮುಖದಲಿ ಹೊಳೆವ ಹೊನ್ನೋಲೆಗಳ . . . ಮೋಹನಗಾತ್ರೆಯೆಸೆದಳು ಮೊಸರ ಕಡೆವುತ್ತ (ನಿಭಾಗ. ೦೦-೯-೦೫); ಹರಿಗೆ ತಲ್ಪವಾಗಿರ್ದನು ಸಮುದ್ರಮಥನದಲ್ಲಿ ತೆಗೆನೇಣಾಗಿ ನೊಂದನು (ಭೃರಸೂ. ೩೦). [ತೆಗೆ$_1$ + ನೇಣು (<ನೇಣ್$_1$) ]

**ತೆಗೆಪು$_1$** 'ತೆಗಪು' ನೋ.

**ತೆಗೆಪು$_2$** (ನಾ). ನೆನೆಸುವಿಕೆ : ಅಳಿಯೊಳ್ ತೆಗೆಪಾದರಳಿಯ ತಳಿರಂ ಮಾರುತದ ಪತ್ತಿಯೆಳಗಾಯುಮನಾ ಜಳದೊಳ್ ಗೋಕ್ಷೀರಾನ್ವಿತಮಾ ಮಳಕಾವುರ್ಫಳಂಗಳಾವಗಂ ಮೃದುವಕ್ಕುಂ (ಲೋಕೋಪ. ೮-೨೦). [?]

**ತೆಗೆಬಗೆ, ತೆಗೆಬಿಗಿ** (ನಾ). ೧. ತೊಂದರೆ ; ಕಷ್ಟ : ಭೂಪತಿ ಕೆಗಡು ಗೊಳುತ್ತೆತಂದು ಕೇಳಲು ತೆಗೆಬಗೆಯಲುಸುರುತ್ತ ತಂದೆಯ ನೆರೆಯ ತಿಳುಹಿದನು (ಶಾತಿರಾ. ೦-೩೦); ಮಸೆದು ಕರಗಳನೊರ್ವರೊರ್ವರು ಮಸಗಿದರು ಮುಷ್ಟಿಪ್ರಹಾರದಲುಸಿರ ತೆಗೆಬೆ[ ಬ ]ಗೆಯಿಂದ ಮಂಡಿಯ ನೂಡ್ಡಿ ಸಮವಾಗಿ (ಕೋಗಯ. ೨೪-೦೯). ೨. ಪ್ರಾಣ ಹೋಗುವ ಸ್ಥಿತಿ; ಉತ್ಕಟಾವಸ್ಥೆ : ಬಾಯ ಮೀಡುತಿನ ಬಳಲುಗಂಗಳಿನಾಯುವಿನ ತೆಗೆಬಗೆಯ ರಕ್ಕಸರಾಯನನು ಕೊಂಡೊಯ್ದು ಬೀಸಿದರಾಲವಟ್ಟದಲಿ (ಕೊರಠಾ. ೧-೦೫-೨೭). ೩. ಅತಿಶಯ; ಆಧಿಕ್ಯ; ಹೆಚ್ಚಳ: ವಿಕ್ರಮದ ತೆಗೆಬಗೆಯಿಂದಲರಿನೃಪರುಗಳ ಬಗೆಗೆಡಿಸುತ ನಡೆದಳು (ಕುರಾಸಾಂ. ೪೦-೮೪). 'ತಗೆಬಗೆ' ಪರಾ. **ತೆಗೆಬಿಗಿ** : ೧. ಸೊಗಸಿ ಬೆಳೆಯ ಕೊಯ್ದು ಪೂಜುವ ಜನಕೆ ತೆಗೆಬಿಗಿಯಿಲ್ಲವಾವ ಕಾಲದೊಳು (ರಾಮವಿ. ೨-೩೭). ೪. ಬಿಂಕ ; ಬಿಗುಮಾನ : ಸೊಗಯಿಪ ಸತ್ಕಾರದಿಂದ ತೆಗೆಬಿಗಿಯಿಲ್ಲದ ಸಮರತಿಯಿಂದವಳಗಣಿತಸುಖವಿತ್ತಳವಗೆ (ನೇಮಿಸಂ. ೦೦-೯೦): ಮೊಗವ ಕಾಣುತ ನಮ್ಮೊತ್ತಿಗೆ ಬಹನಲ್ಲದೆ ತೆಗೆಬಿಗಿಯವನಲ್ಲ ನಿಮ್ಮ ಮಗ (ಕುರಾಸಾಂ. ೩೭-೦೨೪). 'ತಗಿಬಗಿ' ಪರಾ.

**ತೆಗೆಬಗೆಮಾಡು** = ತೊಂದರೆಯಂನ್ನುಂಟುಮಾಡು; ಇಕ್ಕಟ್ಟನ್ನುಂಟು ಮಾಡು : ಶಿಶುವೆ ನೋಡಭಿಮನ್ಯು ಸುಭಟಪ್ರಸರದಿನಿಬರ ನೊಂದು ಘಾಯದೊಳುಸಿರ ತೆಗೆಬಗೆ ಮಾಡಿದನು (ಕುಮ್ಮಾರವ್ಯಾ. ೩-೨೩). **ತೆಗೆಬಗೆಯಾಗು** = ೧. ಹೊಯ್ದಾಡು ; ಅನಿಶ್ಚಯವಾಗು : ಮುಗಿದ ಸರೋಜಮಾಲೆಗಮರಲ್ವಸಿತೋತ್ಪಲಮಾಲೆಗಂ ಮನಂ ತೆಗೆಬಗೆಯಾಗಿ ಸೈರಿಸದೆ ಷಟ್ಪದಸಂತತಿ ... ಎಡೆಯಾಡಿದುವಂಬುರುಹಾಕರಂಗಳೊಳ್ (ಅನಂಪು. ೭-೬೯). ೨. ಸಂಕಟವಾಗು ; ಕಷ್ಟವಾಗು : ಉಸುರು ತೆಗೆಬಗೆಯಾಯ್ತು ಜೀವರಿಗೆ (ಶಾಶಿರಾ. ೨೭-೩೪); ಇಳೆಯ ಭಾರಕರುಸುರು ತೆಗೆಬಗೆಯಾಗೆ ತೆರಳಿತು ಸೇನೆ ಪಶ್ಚಿಮಕೆ (ಕೊರಠಾ. ೪-೯-೦).

[ತೆಗೆ$_1$ + ಬಗೆ$_3$]

**ತೆಗೆಬಿಗಿ** 'ತೆಗೆಬಗೆ' ನೋ.

**ತೆಗೆಮಿಳಿ** (ನಾ). ಪ್ರಾಣ ತೆಗೆಯುವ ಹಗ್ಗ ; ನೇಣು (?) : ಚಕೋರಿಗಳ್ ನಲಿಯೆ ಪಾಣ್ಬರಿಯರ್ಕಳ ಚಿತ್ತದಲ್ಲಿ ಪೆಂಪೊಗೆಯೆ ವಿಯೋಗಿಗಳ್ ಮುನಿಯೆ ಕತ್ತಲೆವತ್ತಲೆಯಾಗಿ ಸಂಜೆಯೊಳ್ ತೆಗೆಮಿಳಿಯಾಡೆ [ಪಾಠಾಂ. ತೆಗೆಯ ಮುಳಿಯಾಡೆ] ಸೂರ್ಯನಪರಾಬ್ಧಿಯೊಳೊಯ್ಯನೆ ಮಯ್ಯನಿಕ್ಕಿದಂ (ಪುಣ್ಯಾಸ್ರ. ೩-೬೮). [ತೆಗೆ$_1$ + ಮಿಳಿ$_2$ ]

**ತೆಗೆಮೆಟ್ಟು** (ನಾ). (ಕಾಳಗದಲ್ಲಿ ವಂಂನ್ನುಗ್ಗಲು) ಹಿಂದಕ್ಕೆ ತೆಗೆದು ಇಟ್ಟ ಹೆಜ್ಜೆ : ಬೆದರುಗಾಗೆಯ ನೋಟ ಸಾಳೆವನೊದವು ಮಿಾಂಗಳ ಝಳಕೆ ಕೇಸರಿಯಧಟು ಶಾಖಾಮೃಗದ ಲಂಘನ ತಗರ ತೆಗೆಮೆಟ್ಟು . . . ಸೊಕ್ಕಿದ ರದನಿಗಳ ಧೂಳಾಟ ಒಪ್ಪಿದವವರ ಯುದ್ಧದಲಿ (ಸಾಳ್ವಭಾ. ೨೨-೭೦).

[ತೆಗೆ$_1$ + ಮೆಟ್ಟು$_2$ ]

**ತೆಗೆಯಾಳ್** (ನಾ). ಆಕ್ರಮಿಸುವ ಯೋಧ ; ಧಾಳಿಯಿಡುವ ವೀರ : ದಿವ್ಯವಾಗ್ವಿದಿತ ಸುಧರ್ಮಮಾ ಸಭೆಯೊಳಿಂದು ವಿರಕ್ತನೃಪಾಳಜಾಳ ವಿಂರ್ದುದು ತೆಗೆಯಾಳನಾಯ್ತುತೆಗೆದಂತೆ ಕೊಳಲ್ಕಪವರ್ಗದುರ್ಗಮಂ (ಅನಂಪು. ೯-೪೯). [ ತೆಗೆ$_1$ + ಆಳ್$_3$ ]

**ತೆಗೆಯಿಸು, ತೆಗಸು, ತೆಗಿಸು, ತೆಗೆಸು** (ಕ್ರಿ). ೧. ಹೊರಕ್ಕೆ ತರು ; ಹೊರ ಬರುವಂತೆ ಮಾಡು : ಸುಬಂಧುವಂ ನೆಲಮನೆಯಿಂ ತೆಗೆಯಿಸಿ ಸನ್ಮಾನ ದಾನಂಗಳಿಂದಾತನಂ ಸತ್ಕರಿಸಿ (ವಡ್ಡಾರಾ. ೧೮೨-೨೩) ; ಎಲ್ಲಂ ನಟ್ಟುಡಿದ ಬಾಳ ಕಕ್ಕಡೆಯುಡಿಗಳುಮನಯಸ್ಕಾಂತಮಂ ತೋಱಿ ತೆಗೆಯಿಸುತ್ತುಂ (ಪಂಪಭಾ. ೧೧-೨೭) ; ನಾನಿಂದಧರ್ಮದೊಳಿದ್ದರೆ ತೆಗೆಯಿಸು ಅಲ್ಲಿಯು ನೆಲೆನಿಲ್ಲದಂತೆ (ಜಂಬಾಪ. ೩೦೭-೬೯). ೨. ಬರುವಂತೆ ಮಾಡು ; ಆಕರ್ಷಿಸು : ಆ ಸ್ಥಿರಪ್ರಕೃತಿಯು ಸತ್ಯ ಪ್ರಕೃತಿಯು ತೆಗೆಯಿಸಿದವುದಾ ದಕ್ಷಿಣಹೃದಯೆಯು ದಕ್ಷಿಣತ್ವಮೆ ಗಮಿಯಿಸಿದವುದಾ . . . ಮ ಹೋ ದಾ ರೆ ಯು ದಾ ರ ತೆ ಯೆ ಮನಂಗೊಳಿಸಿದವ್ವುದು (ಕಾದಂಉ. ೪೦೪). ೩. ಇಳಿಸು ; ಕೆಳಕ್ಕೆ ತರಿಸು : ಅಡವಿಯೊಳ್ ನಡಿಯ ಮರದ ತುತ್ತತುದಿಯೊಳಿರ್ದಟಲ್ವ ಗುಂಡಿಗೆಯುಂ ಕಂಡು ತೆಗೆಯಿಸಿ ಕೊಂಡು ಪೋಗಿ (ವಡ್ಡಾರಾ. ೯೦-೧೭). ೪. ಸಾಗಿಸು ; ಕಳುಹಿಸು : ಕನಕರತ್ನಾಭರಣಜಾಳಮನೊಪ್ಪುಗೊಂಡು ಭಂಡಾರಕ್ಕೆ ತೆಗೆಯಿಸುತ್ತಂ (ಅಸಕ. ೬-೩೩). ೫. ಹೊರ ಹಾಕು ; ಬಹಿಷ್ಕರಿಸು : ನಾಳೆ ಒಬ್ಬನನ್ನು ಜಾತಿಯಿಂದ ತೆಗೆಯಿಸುವ ವಿಷಯ . . . ಅಲ್ಲಿ ಬರುತ್ತದೆ (ಉದಿಕೂ. ೦೩೭). ೬. ಕೊಂಡುಕೊಳ್ಳು ; ಕ್ರಯಕೊಟ್ಟು ಪಡೆ : ಗಡನೂರಿನಲ್ಲಿ ಏನಾದರೂ ತಿಂಡಿ ತೆಗೆಯಿಸಿಕೊಂಡು ತಿನ್ನೋಣವೆಂದಂದು ಕೊಂಡೆ (ಹಂಗಾಳ್. ೪೯). ೭. ಬಿಡು ; ತೊರೆ ; ತ್ಯಜಿಸು : ಕುಮ್ಮಟವನು ತೆಗೆಯಿಸಿದರೆ ಕಾರ್ಯವನುಗೆಡುವುದು . . . ಆದಱಿಂದದ ಬಿಡುವುದು ಮನುದೇಶ್ವರ ನೀತಿಯಲ್ಲ (ಕುರಾಸಾಂ. ೩೭-೪೮). ೮. ಕಳಚುವಂತೆ ಮಾಡು ; ಬಿಚ್ಚುವಂತೆ ಮಾಡು : ವೇಷವನ್ನು ತೆಗೆಯಿಸಿ, ಬಣ್ಣವನ್ನು ತೊಳಸಿ ಕಳಿಸಿದಾಗ ಬೆಳಗಾಗಿತ್ತು (ಲೂ). ೯. ಕೊಲ್ಲಿಸು ; ಸಂಹರಿಸು ವಂತೆ ಮಾಡು : ಬಾಟರಂ ಕೊಂಡಾಡುವರ ಗಂಟಲೊಳ್ ನೇಣನಿಕ್ಕಿ ತೆಗೆಯಿಸುವಂ (ಧರ್ಮಾಮೃ. ೨-೭೭). **ತೆಗಸು** : ೪. ಹಿರಿಯ ಕಣಜದ ದವಸವೇನುವನಿರಿಸದೀಗಳ್ ತೆಗ[ ಪಾಠಾಂ. ಗೆ ]ಸು (ಬಸಪು. ೩೩-೦೮); ತೆಗ[ಪಾಠಾಂ. ಗೆ]ಸಿದನು ಬಳಿಕುತ್ತಮದ ತೊಡವುಗಳ ದಿವ್ಯದುಕೂಲರತ್ನಾಳಿ ಗಳಿನನುಪಮ ಗಜಹಯಾದಿ ಸಮಸ್ತವಸ್ತುಗಳ (ಕೊರರಾ. ೦-೬-೨). ೯. ಲೋಹಶೂಲದೊಳಿನಿಬರಂ ತೆಗ[ಪಾಠಾಂ. ಗೆ]ಸುವೆನು ತಲೆಕೆಳಕಾಗಿ ನಿಮ್ಮು ವನು (ಬಸಪು. ೫೦-೫೦). ೧೦. ಹೊಳು, ಕಸ ಮೊದಲಾದುವನ್ನು ಹೊರಗೆ ಹಾಕು, ಎತ್ತಿಹಾಕು : ಪ್ರತಿ ವರುಷಲು ಕೆಱೆಯು ತೆಗಸುವ ಹಾಗೆ ಕೊಟ್ಟ ಸ್ವಾಸ್ತಿ (ಎಕ. VII(8), ಶಿಕಾರಿ. ೨೩೪-೦೦; 1526). ೧೧. ಕೀಳುವಂತೆ ಮಾಡು ; ಕೀಳಿಸು : ಅವರಂ ಕರೆಸಿ ಕಣ್ಣಂ ತೆಗ[ಪಾಠಾಂ. ಗೆ]ಸಿದನು (ಬಸಪು. ೬೦-೪). ೧೨. ನಿವಾರಿಸು ; ಹೋಗಲಾಡಿಸು : ಒಱಲುವಮರರ ಬಾಯಿ ಕೈಗಳ ಮೊರೆಯೆ ತೆಗಸಿ ಮಹಾಗಣಂಗಳೊಳಿರುವ ನಂದೀಶ್ವರನು ಹೊಕ್ಕನು ಹೊಯ್ದು ದಾನವರ (ಕುಮ್ಮಾಕ. ೬-೨೯). ೧೩. ಹಿಂದಕ್ಕೆ ತೆಗೆದುಕೊಳ್ಳು ; ವಾಪಸ್ಸು ತೆಗೆದುಕೊಳ್ಳು : ಬಲುಕಾಳೆಗವನೊಯ್ಯಾರಿಸುತ ರಾಯರು ತೆ ಗ ಸಿ ದ ರು ಸೇನೆಯನು (ಕುಮ್ಮಾಭೀ. ೪-೦೦). ೧೪. ಹಿಂದಕ್ಕೆಬರುವಂತೆ ಮಾಡು; ಹಿಮ್ಮೆಟ್ಟಿಸು : ತೆಗಸಿದನು ಸಾತ್ಯಕಿಯನೀತನ ಬಿಗಿದನಂಬನಲವನ ಬಾಣಾಳಿಗಳ ಕಡಿದನು ಘಾಸಿಮಾಡಿದನವನ ರ ಥ ಹ ಯ ವ (ಕುಮ್ಮಾಕ. ೪-೩) : ಪ್ರವೀರನಂ ತೆಗ[ಪಾಠಾಂ. ಗೆ]ಸಿದರ್ಜುನ್ನಲೆಗೆ (ಜೈಮಿಭಾ. ೮-೩೦). ೧೫. ತೆರೆಯುವಂತೆ ಮಾಡು ; ತೆರೆಯಿಸು : ಬಂದನಿತಱಿಂದಿಂದುಶೇಖರನಿಂದೆ ಕದಹುಗಳಂ ತೆಗ[ಪಾಠಾಂ. ಗೆ]ಸಿ (ಬಸಪು. ೪೪-೦೮). **ತೆಗಿಸು** : ೧೦. ಎಂಜಲ ತೆಗಿ [ಪಾಠಾಂ. ಗೆ]ಸಿ ಸಾರಿಸಿದನು (ಕುಮ್ಮಾಸ. ೭-೧೬). ೧೫. ಸೌರಾಷ್ಟ್ರೇಶ ಸೋಮೇಶ ನೀಂ ತೆಗಿಸೀ ಬಾಗಿಲ ಪೊಂಗದಂಗಳನೆನುತ್ತಂ (ಉದ್ಭಟ. ೧೧-೬೦). **ತೆಗೆಸು** : ೧. ಫಲುಗುಣ ಹೊಕ್ಕನಾಯುಧಶಾಲೆಯನು ತೆಗೆಸಿದನು ಧನು ಮೊದಲಾದ ಕೈದುಗಳ (ಕುಮ್ಮಾದ್ರೋ. ೯-೦) ; ತೆಗೆಸಿದನು ಬಳಿಕಿನಕುಲದ ಹೀಳಿಗೆಯ ನೃಪರಾರ್ಜಿಸಿದ . . . ಅಖಿಳ ವಸ್ತುಗಳ (ಕೊರರಾ. ೦-೬-೪). ೭. ಹೊಸಮಲೆಯನು ಬಲಿಯಿಸು ಕುಮ್ಮಟವನಸಮಸದಿಂದ ತೆಗೆಸು (ಕುರಾಸಾಂ. ೩೭-೪೭). ೮. ಬ್ರಾಹ್ಮಣ ನಿಯೋಗಿಗಳು ಪರಶ್ರೇಷ್ಠರಾಗಿ ಬಂದರಮನೆವಾಗಿಲ ಕದಬೀಯಗವ ತೆಗೆಸಿದರು (ಚೋಹಚ. ೧೯-೪). ೧೪. ಸೂಳವಿಸಿದವು ಸನ್ನೆಯಲಿ ನಿಸ್ಸಾಳ ಸೇನೆಯು ತೆಗೆಸಿದವು ಹೆಗ್ಗಾಳೆ ಮೊಳಗಿದವಾನೆವಱ ಗಜಱಿದವು ಡೌಡೆಗಳು (ಕುಮ್ಮಾಭೀ. ೫-೨೮). ೧೫. ಬಾಗಿಲ ತೆಗೆಸೆಂಬನಿಷ್ಠುರದ ವಾಕ್ಯಗಳ ಮುಂಬರಿತಂದೊರ್ವಳುಸಿರಲ್ಕೆ (ಚೋಹಚ. ೩೪-೩). ೧೬. ನಿಲ್ಲಿಸು ; ಸ್ಥಗಿತಗೊಳಿಸು ; ಅಡ್ಡಗಟ್ಟು : ಸಮಸಪ್ತಕರ ಬಲ ನಿಜಪಾಳಯಕೆ ತಿರುಗಿದುದು ತೀರಿತು ತರಣಿಯಾಟೋಪ ಕಾಳೆಗವ ತೆಗೆಸಿದರು ಕೌರವರು (ಕುಮ್ಮಾದ್ರೋ. ೮-೧). ೧೭. ತೋಡಿಸು ; ಅಗೆಯುವಂತೆ ಮಾಡು : ಅವನು ಬಾವಿ ತೆಗೆಸಲು ಸಾಲ ಮಾಡಿದ್ದಾನೆ (ಲೂ). ೧೮. ಕಂದಿಸು ; ಬೇಯಿಸು : ಗರಗಸದಿಂದಂ ಮಿಗೆ ನಿಷ್ಕರುಣೆಗಳೊಡನಿಕ್ಕಿ ನೆತ್ತಿಯಿಂದಂ ಪಾದಂಬರೆಗಂ ಸೀಳ್ದಾಭಾಗಮನುರಿವೆಣ್ಣೆಯೊಳಿಕ್ಕಿ ತೆಗೆಸುವರ್ಪಱುಗುಮಿನಂ (ಧರ್ಮಾಮೃ. ೩-೭೦). [ ತೆಗ್$_1$ + – ಇಸು$_3$ ]

**ತೆಗೆಸು** ‘ತೆಗೆಯಿಸು’ ನೋ.

**ತೆಗೆಹ** (ನಾ). ತೆಗೆಯುವಿಕೆ ; ಬೇರ್ಪಡಿಸುವಿಕೆ : ಉಪ್ಪು ಮಿಗಿಲಾದವಱ ಉಪ್ಪು ತೆಗೆ(ಹ)ಯೋಣ. ಕಹಿ ಮಿಗಿಲಾದವಱ ಕಹಿ ತೆಗೆ(ಹ)ಯೋಣ (ಭೀಮಸೂ. ೨). [ ತೆಗ್$_1$ + – ಹ$_2$ ]

**ತೆಗ್ಗು$_1$** ‘ತಟ್ಗು’ ನೋ.

**ತೆಗ್ಗು$_2$** ‘ತಗ್ಗು$_3$’ ನೋ.

**ತೆಗ್ಗುಬೀಳು** ‘ತಗ್ಗುಬೀಳು’ ನೋ.

**ತೆಜಿಸು** (ಕ್ರಿ). ಬಿಟ್ಟುಬಿಡು ; ತೊರೆ ; ತ್ಯಜಿಸು : ತೆಜಿಸಿದಂ ಮಗುಳೆತ್ತಲೆಸೆ ವಂಗದೇಶಮಂ ಪೊಕ್ಕೊಡನೆ ಬಾಚಿದಂ ಬಹುನಾಣ್ಯಮಾ (ಪರಶು. ೧೧-೦೩); ನಿನ್ನ ಸುತನನೀಕ್ಷಣ ತೆ[ಪಾಠಾಂ. ತ್ಯ]ಜಿಸೆ ರಾಮಂಗಂ ಪಟ್ಟಗಟ್ಟೆ . . . ಸು ಖ ಮಿ ರ್ಪ ನು (ವೆಂಕಾರಾ. ೨-೬-೧೫) : ಭೂರಿದಾರಿದ್ರ್ಯದಲಿಯಾ ಸಂಸಾರವನು ಮಾಡುವುದಕಿಂತಲೂ . . . ಈ ಶರೀರವನೆ ತೆಜಿಸುವುದು ಲೇಸು (ಸುದಾಮ. ೫-೮). [ < ತ್ಯಜಿಸು ]

**ತೆಟ್ಟುಂದೆಱ** ‘ತೆಱ$_1$’ ಪರಾ.

**ತೆಟ್ಟುಂತೆಱ** ‘ತೆಱ$_1$’ ಪರಾ.

**ತೆಟ್ಟುಂದೆಱ** ‘ತೆಱ$_1$’ ಪರಾ.

**ತೆಟ್ಟೆ, ತೆಂಡೆ, ತೆವಟೆ, ತೆವಡೆ** (ನಾ). ೧. ಗುಂಪು ; ಸಮೂಹ ; ಸಂದಣಿ. **ತೆಂಡೆ** : ೨. (ಹುಲ್ಲು ಮುಂತಾದುವುಗಳ) ಕಟ್ಟು; ಪಿಂಡಿ ; ಕಂತೆ : ಈ ನಾರಿಯನ್ನು ಮೆಯ್ಯೊಳಗೆ ಹುಲ್ಲು ತೆಂಡೆಯಿಂ ನೀನಿಂತು ಬಿಗಿಸಿದೊಡಿಸೆ ಮಾಳ್ಪ ಪಾಪವೇನಯ್ಯಾ (ಸಾನಂಗ. ೪೩). ೩. ಮರ ಗಿಡಗಳ ಬುಡ ; ಬೇರುಗಳು ಹೊರಡುವ ಭಾಗ : ತೆಂಗಿನ ತೆಂಡೆ ಮುರಿದು ತಳಕೆಳಕಾಗಿ ಗಂಗಾಧರನ ಪೂಜಕನ ಹಿಂಗದೆ ನೆನೆಯೆ ರಾಯಗೆ ಮಣಿದೊರತಾ ಅಂಗೈಗಳಲಾಂತ ಬಸವ (ಬಸಪು. ೨-೩೪). ೪. ಮೂಲ ; ವಂಶ ; ಬುಡಕಟ್ಟು : ಉಳಿದವರೆಲ್ಲ ಅಣ್ಣತಮ್ಮದಿರಾಗಿ ಒಂದೇ ತೆಂಡೆಗೆ ಸೇರಿದವರು (ಸನ್ಮೂರು. ೨೦೯) : ಒಬ್ಬ ಪ್ರಸಿದ್ಧ ಪುರುಷನಿಂದ ಅವರ ಮಕ್ಕಳು ಮೊಮ್ಮಕ್ಕಳುಗಳನ್ನು ಇಂತಹವರ ತೆಂಡೆ, ವಟಾರ, ಪಟ್ಟಿಡೆ ಎಂಬುದಾಗಿ ಕರೆಯುವ ವಾಡಿಕೆ (ಹುಟ್ಟುಹ. ೧೮). ೫. ತೊಡರಿಕೊಂಡಿರು ವಿಕೆ ; ಸುತ್ತಿಕೊಂಡಿರುವಿಕೆ : (ಪ್ರ). **ತೆವಟೆ** : ೬. ಹೊಲ ಉಳುವಾಗ ಕುಂಟೆಯ ಕುಳಕ್ಕೆ ತೆಕ್ಕೆತೆಕ್ಕೆಯಾಗಿ ಸುತ್ತಿಕೊಳ್ಳುವ ಮಣ್ಣು, – ಕೆಸರು : ಎರಡು ಸಾರಿ ಕುಂಟೆಯನ್ನು ಎತ್ತಿ ಕುಡಕ್ಕೆ ಸುತ್ತಿಕೊಂಡಿದ್ದ

ತೆವಾಟೆಯನ್ನು ಕುರುಚಿಗೆಯಿಂದ ತೆಗೆಯುವುದಕ್ಕೇ ಇವನ ರಟ್ಟೆ ಬಿದ್ದು ಹೋಗಿದ್ದುವು (ಬೆಳುಮ. ೨೬೯). **ತೆವಡೆ :** ೭. ಹೊಲ, ಗದ್ದೆಗಳಲ್ಲಿ ಪಾತಿ ಅಥವಾ ಮಡಿಗಳ ಮಧ್ಯೆ ಕಟ್ಟುವ ಸಣ್ಣ ಬದು : (ಕ).

**ತೆಟ್ಟೆತೆಟ್ಟೆ** (ದ್ವಿರುಕ್ತಿ) : ತಟ್ಟೆತೆಟ್ಟೆಯೊಳೋಡುವ ಕುರುಸೈನಿಕ ಕೆಟ್ಟುದ ನೋಡಿ ಗೊಳ್ಳೆಂದು ದಿಟ್ಟರವರು ನಗುತವೆ ತುಟಿಗಳನು ಹಿಮ್ಮೆಟ್ಟಿಸಿದರು (ಸೀಮಿಸಂ. ೨೩-೦೫೩); ಬಟ್ಟಜವ್ವನೆಯರಾರತಿವಿಡಿದವನಿಗೆ ತೆಟ್ಟೆತೆಟ್ಟೆಯೊಳೆತ್ತಿದರು (ರಾಮವಿ. ೦೯-೮೦) : ಬೆರೆಯದೆ ತೆಟ್ಟೆತೆಟ್ಟೆಯೊಳು ಸಂಗ್ರಾಮಕೆಂಡೆರಡು ಪಡೆಗಳೊಪ್ಪಿದವು (ಶಂಪ್ರಸಾಂ. ೨೦-೦೨೦) ; ಕಟ್ಟೆತೋ ಪಲವಣ್ಣ ಮೇಘ ಬಾನದೊಳಿನೆ ತೆಟ್ಟೆತೆಟ್ಟೆಯೊಳು ತೋರ್ದುದು (ಜ್ಞಾನಸ. ೦೪-೭೦). **ತೆಂಡೆತೇಲು =** ೧. ಮರದ ಬೇರಿನ ಭಾಗ ಮೇಲೆ ಬರು ; ಮರ ಒಣಗತೊಡಗು. ೨. ವಂಶವು ನಿರ್ನಾಮವಾಗು ; ವಂಶದಲ್ಲಿ ಯಾರೂ ಇಲ್ಲದಂತಾಗು : ಆ ದೊಡ್ಡ ಬರದಲ್ಲಿ ತೆಂಡೆತೇಲದೇ ಇದ್ದದ್ದೇ ಹೆಚ್ಚು (ಜಾ). [ದೇ. ೫ ತೆಲು. ತೆಟ್ಟ, ಕೆಟ್ಟು]

**ತೆಡಾಯ** (ನಾ). ಒಂದು ಬಗೆಯ ಆಯುಧ (?) : ಕತ್ತಿ ತೆಡಾಯ ಖಡಲ್ಲಿ ತೆಯುಲ್ಲಿ ಬಿಲ್ಲು ನಾರಾಚ ಗದೆ ಸೂಲ್ಲಿ ... ಮೊದಲಾದಾ ಬತ್ತೀಶಾಯುಧಾ ಶಕ್ತ ಸಮರ್ಥಕರಾದಾ (ಎಕ. XVI, ಗುಬ್ಬಿ. ೭೪-೨೦ ; 1776).

[ ☞ ಇದು 'ಹಡೆಯ' ಎಂಬುದರ ಅಪಲಿಖಿತವಿರಬಹುದೇ ? ]

**ತೆಣರು** 'ತೆಣಚು' ನೋ.

**ತೆಣಚು, ತೆಣರು, ತೆಳಚು** (ಕ್ರಿ). ಭಾರದಿಂದ ಉಸಿರು ಕಟ್ಟು,–ತಿಣುಕು,–ನರಳು : ನೆಲನಂ ಪೊತ್ತ ಫಣಿ ತೆಣಚು [ಪಾಠಾಂ. ಪೊಣಿಲು] ತಿರೆ ನಡೆದತ್ತಾಗಳ್ ಸಗರ ಚಕ್ರವರ್ತಿಯ ಕಟಕಂ (ಅಜಿಪು. ೯-೦೬) ; ಕ್ಷಿತಿಚಕ್ರಂ ನಿಜಭಾರದಿಂ ತೆಣಚಿದತ್ತೆಂಬನ್ನೆಗಂ (ಪಂಪಾಶೂ. ೦೩-೭೭). **ತೆಣರು :** ಕುದಿವೊಡಲ ಮದುಮಗಳ್ ತೆಣರುತಿಹಳೆಲ್ಲಿ ? (ಶಾಲೂಕ. ೦೫೩-೩೩೬). **ತೆಳಚು :** ನಾಗರಾಜಂ ತೆಳಚಿ ಪೆಳಚಿ ದಿಗುದನ್ತಿಗಳಿಂ (ಬೊಂಕಶಾ. ೦೯೨೯, ನವಿಲುಗುಂದ. ೨೦೭-೦೦ ; 1184). 'ತಿಣಂಚು' ಪರಾ. [ದೇ. ೫ ತಮಿ. ತಿಣಚು]

**ತೆಣೆ** 'ದಿಣ್ಣೆ' ನೋ.

**ತೆಣ್ಗಾಳಿ** 'ತೆಂಗಾಳಿ' ನೋ.

**ತೆತಾವು** (ನಾ). ಒಂದು ಪ್ರದೇಶದ ಹೆಸರು (?) : ಮೂಡಾಯ್ಕೋಡಿ ನೀಂಟಿಪೆ ತಾಟಿ ಎ ತೆತಾವಿನ್ಕೊಲ್ಲಿ ಎ ಪೋಗಿ ಕುಣ್ಣು ಸೋಮೆ ಎ ಕರ್ಗಲ್ಲಾಬಿದ ಆನೆಗಲ್ಲ ಕಮ್ಮಾರ್ ಕೊಟ್ಟಲೆಯ ಮುದುವುಣಸೆ ಮಾಳ್ದಯಾಳ್ ಕೂಡಿತ್ತು ಸೀಮೆ (ಎಕ. XVI, ಗುಬ್ಬಿ. ೭೩-೫೨ ; 733). [ ? ]

**ತೆತ್ತ$_1$** 'ತೆಟು$_1$' ಪರಾ.

**ತೆತ್ತ$_2$** (ನಾ). ಮಾಲುಗಣ್ಣುಳ್ಳವನು ; ಮೆಳ್ಳೆಗಣ್ಣಿರುವವನು : ಅವನನ್ನು ತೆತ್ತಹನುಮ ಎಂದೇ ನಮ್ಮ ಹುಡುಗರು ಹಾಸ್ಯಮಾಡುತ್ತಾರೆ (ಗರುಡಾ. ೦೪೭). [ ತೆತ್ತ$_1$ + – ಅ$_7$ ]

**ತೆತ್ತಕಣ್ಣು** 'ತೆತ್ತಗಣ್ಣು' ನೋ.

**ತೆತ್ತಗಣ್ಣು, ತೆತ್ತಕಣ್ಣು** (ನಾ). ಮಾಲುಗಣ್ಣು ; ಮೆಳ್ಳೆಗಣ್ಣು ; ಓರೆಗಣ್ಣು : ಇನ್ನುಮೇಲೆ ನಿನ್ನ ತೆತ್ತಗಣ್ಣಿನ ಹಂಗೇ ನನಗೆ ಬೇಡ (ಗರುಡಾ. ೦೪೯). **ತೆತ್ತಕಣ್ಣು :** ನಮ್ಮೂರ ಕ್ಷೌರಿಕ ಹನುಮನಿಗೆ ಸ್ವಲ್ಪ ತೆತ್ತಕಣ್ಣು, ಎಡಗಡೆ ಅವನು ನೋಡಬೇಕಾದರೆ ಬಲಗಡೆ ನೋಡುವಂತೆ ತೋರುತ್ತದೆ (ಗರುಡಾ. ೦೪೭). [ <ತೆತ್ತ$_1$ + ಕಣ್ಣು (< ಕಣ್) ]

**ತೆತ್ತವಣೆ** (ನಾ). ಜೋಡಣೆ (?) : ಇತ್ತಲೀ ಮಹದೇವಿ ಮಿಗೆ ಜಳವುತ್ತಲಿದ್ದಳು . . . ಉತ್ತಮದ ಮೈಲುಳಿಯ ಕಾಂತಿಯ ಮತ್ತಗಜಗಮನದ ವಿಳಾಸದ ತೆತ್ತವಣೆಯ ನವೀನರೀತಿಯ ಜಾತಿಭಾವದಲಿ (ಪ್ರಭುಲೀ. ೧೦-೨). [ ತೆತ್ತಿಸು$_1$ + – ಅಣೆ$_4$ ]

**ತೆತ್ತಿಗ** (ನಾ). ೧. ಬಂಧು ; ನಂಟ : ಮತ್ತಮಲ್ಲಿ ಬೇಟದ ತೆತ್ತಿಗನುಂ ಮೊತ್ತಮೊದಲಿಗನುಮಪ್ಪನೋರ್ವಂ . . . ಇಂತೆಂದಂ (ಶಾಂತಿಪು. ೮-೯೪ವ) ; ಸ್ವಬಂಧುನಿಕಾಯಕ್ಕುಪಕಾರಿ ತೆತ್ತಿಗನೆನಿಕ್ಕುಂ ಕೌಟಗೇಹೋದ್ಭವಂ (ಜಾತಕ. ೦೭-೭) ; ಗುರುವೆ ತೆತ್ತಿಗನಾದ ಲಿಂಗವೆ ಮದವಳಿಗನಾದ (ಮಹಾದೇ. ಬ. ೧೧೩-೨೩೮) ; ಪನ್ನಗಾಭರಣನಾತನ ಭಕ್ತಿಯೋಗವುಂ ತಾಂ ನೋಡಿ ತಲೆದೂಗಿ ಮಾಂಡಾಡಿಯೆನ್ನಣ್ಣ ಎನ್ನ ತೆತ್ತಿಗಯೆನ್ನ ಭದ್ರಗಜವೇ . . . ಎಂದೊರೆದು (ಪದ್ಮರಾ. ೭-೪೩) ; ತಾವರೆಯ ತೆತ್ತಿಗನ ಕುಮುದದ ಜೀವಿಗನ ಮಿಗೆ ಮೇಲುನೋಟದೊಳಾವಿಗಡರುಗಳಡು ತಿವಿದಾಡಿದರು (ಕುಮಾವ್ಯಾ. ೨-೧೦೯) ; ಬಾಗಿಲ ಬೀಗ ಮುದ್ರೆಯ ಮಾಡಿಸಿಕೊಂಡು ಪೋಗಿ ತೆತ್ತಿಗರ ಬೀಳ್ಕೊಂಡು (ಮೋಹತ. ೧೮-೯೮) ; ಮೃತ್ಯು ಬೆನ್ನಿನೊಳಿಹುದು ತಾವಿನ್ನತ್ತು ಮಾಡುವುದೇನು ಪೂರ್ವದ ತೆತ್ತಿಗನು ನೀನೀಗ ರಕ್ಷಿಸು (ಹರಿಸಾ. ೯೨). ೨. ಸೇವಕ ; ಆಳು : ನಿಮ್ಮ ತೆತ್ತಿಗನು ಬೊಮ್ಮಯ್ಯನ ಕೀರ್ತಿ ಮಹತ್ತು ಘನವಂದೊಮ್ಮೆ ರಾಗಂಬೆತ್ತು ಕೈಲಾಸಕ್ಕೆ ಹೋಗಿ ಮರಳ್ದುದನುವಾಯ್ತು (ಬಸಪು. ೨೯-೨೯) ; ತಿಲಕವನು ತೆತ್ತಿಗರಲಂಕರಿಸಿದರು ಹೊಳೆಹಿನ ಹೊಗರ ಹೊಸಜವ್ವನದ ಜೋಡಿಯ ಜಾಡಿಯಿಮ್ಮಡಿಸೆ (ಕುಮಾವ್ಯಾಆ. ೮-೩) ; ಹನುಮ ನೀನು ನರನ ತೆತ್ತಿಗನಾಗಿ ಸಾಯದಿರು (ಕೌಶಿರಾ. ೦೯-೧೩) ; ದೆಂಬತ್ತಿ ಬಾರದೆ ಮೂಣರಭವನ ತೆತ್ತಿಗರು (ನಿಭಾಗ. ೪-೩-೨) ; ತನ್ನ ತೆತ್ತಿಗರಹ ನಂದೀಶ್ವರಾದಿ ಪ್ರಮಥರ ಕಳುಹು (ಪ್ರಭುಪು. ೪-೦೦). ೩. ಹೊಣೆಗಾರ ; ರಕ್ಷಕ : ಗುತ್ತಿಯ ಗಂಗಮಹೀಪ × × × ರಾಜ್ಯಕ್ಕೀತಂ ತೆತ್ತಿಗಂ (ಎಕ. IV, ನಾಗಮಂ. ೩೦-೧೪ ; 972) ; ಅಂಕ ಓಡಿದರೆ ತೆತ್ತಿಗಂಗೆ ಭಂಗವಯ್ಯಾ ಕಾದಿ ಗೆಲಿಸಯ್ಯಾ ಎನ್ನನು (ಬಸವ. ೨೯೯) ; ಸೂನಗೆಯನೆತ್ತಿ ಪರಿವ ತೆತ್ತಿಗವೀರರುಮಂ (ಲೀಲಾವ. ೫-೦೩೪) ; ಈ ಖಳ್ಗವನೊಲವಿಂ ಸಾಧಿಸುತಿರ್ದಾಖೇಚರತನುಜನ ಮಾತಾಪಿತೃಮಾಕೆಯು ತೆತ್ತಿಗರಾಗಲ್ವೇಳ್ಕುಂ (ಕುಮುಂಶಾ. ೮-೩೮) ; ನಿಮ್ಮ ವಿಪತ್ತು ತನ್ನದು ನಿಜಪದಾಶ್ರಿತ ಭಕ್ತರಸುಗಳಿಗೆ ತೆತ್ತಿಗನಲಾ ತಾನು (ನಿಭಾಗ. ೭-೯-೩೩) ; ನೀಂ ಪಸುಳೆ ನಿನಗೆ ತೆತ್ತಿಗರದಾರಕಟ (ಕೃಮಿಥಾ. ೨೦-೧೪) ; ಚಿತ್ತೈಸೆಲೆ ಸ್ವಾಮಿ ಭೃತ್ಯನ ಬಿನ್ನಪ ತೆತ್ತಿಗರಾರು ನಿನ್ನಂದ (ಕೋಣಪ. ೧-೪೩). [ ತೆತ್ತು$_1$ + – ಇಗ ]

**ತೆತ್ತಿಸು$_1$** (ಕ್ರಿ). ೧. ಹೊಂದಿಸು ; ಜೋಡಿಸು ; ಅಳವಡಿಸು; ಹೂಡು: ಹರನೊಳೆ ಪತ್ತಿ ತೆತ್ತಿಸಿದ ಚಿತ್ರಮನಿರ್ಜಗಿಯಾಗೆ ಮೋಹವೊತ್ತರಿಸೆ . . . ಅತ್ತಣ ಪಂಬಲ ಬಂಬಲೊಳ್ ತಿಳಿಂದಿರಿದುದು ಚಿತ್ತಂ (ಪಂಪಭಾ. ೧೩-೬೩); ತೋರಣಸ್ತಂಭಂಗಳೊಳ್ ತೆತ್ತಿಸಿದ ಜಂತ್ರದ ಹಂಸ ಕೀರ ಮಯೂರ ಪಾರಾವತ ವಾರಣಂಗಳಿಂ (ಗಿರಿಕ. ೦೦-೭೪ ವ) ; ತೆತ್ತಿಸಿದ ಪುತ್ತಳಿಗಳಾಭರಣಕಿರಣದಿಂ ಸೇಸೆಯಂ ಸೂಸುವಂತೆ ದೇಸೆವಡೆದೆಸೆವ ಸಿವಿಗೆಯಂ (ಪುಷ್ಪಪು. ೦೩-೮೪ ವ) ; ಪಿರಿದುಂ ಬಿನ್ನಣದಿಂದೆ ನಿರ್ಮಿಸಿದ ನಾನಾ ಚಿತ್ರ ಸತ್ಕೃತ್ರಿಕೋತ್ಕರಮಂ ತೆತ್ತಿಸಿ ಸುತ್ತಲುಂ (ಕಾದಪು. ೯-೩೩) ; ಶರವನು ತೂಗಿ ಬಿಲ್ಲಿಗೆ ತೆತ್ತಿಸಿದನು (ಕುಮಾವ್ಯಾದ್ರೋ. ೦೯-೩೨) ; ಸುತ್ತಿನಂಗುರ ಮುದ್ದುಮಣಿಯಂತ್ರಗಳ ತಂದು ತೆತ್ತಿಸಿದರು ಕಾಲ್ದೆಸೆಯ (ಮೋಹತ. ೦೭-೦೩) ; ಜಲಕಾಂತ ಶಿಲೆಯಿಂದ ನಿರ್ಮಿಸಿದ ತೊಟ್ಟಲಿಕ್ಕೆಲದಲ್ಲಿ ತೆತ್ತಿಸಿದ ವಿವಿಧಮಣಿದೀಪ್ತಿಯಿಂ (ಜ್ಞಾನಸಂ. ೦-೪೭). ೨. ತೊಡಿಸು ; ಧರಿಸುವಂತೆ ಮಾಡು : ಎತ್ತಲುಂ ಕೇಳ್ದರಿಯೆವೀ ರುದ್ರಾಕ್ಷಿ ಮೂಗಿನಲಿ ತೆತ್ತಿಸುವುದಾವುದು ವಿಶೇಷವೊ (ಬಸಪು. ೦೨-೨೦); ಪಟಿನೇಸಲಂ ಮುಂಗುರುಳ ಮೇಲೆ ತೆತ್ತಿಸಿ (ಸೌಂದಪು. ೭-೨೪) ; ಕಾಯುವಿರಹಿತನೆಂದು ಧರೆಗಱುವುವಂತೆ ಮಾಗಾಯನಾ ಕರ್ಣಯುಗಳದೊಳೆಂದು ತೆತ್ತಿಸಿದರು (ಲಶಿಚಂ. ೩೦-೩೩). ೩. ಮುಂಡಿಯುವಂತೆ ಮಾಡು ; ಮುಡಿಸು : ಸೋಮರ್ಮಡಿಯೊಳೆಡೆಗೆಡೆಗೆ ಭಾವಕಿಯರರೆವಿರಿದ ಮಲ್ಲಿಗೆ ಜಾಜಿಯರಲ ತೆತ್ತಿಸಿದರತಿಸೊಬಗಿ

ನಿಂದ (ಸೌಂದಪು. ೬-೨೩) ; ಪುಂಡ್ರೇಕ್ಷುದಂಡಗಳನವರ್ಚಿ ಬಾಳವೇರ್ಗಳಂ ಜಗಿದೆಡೆದೆಡೆಯೊಳ್ ಸಂಪಗೆಯ ಬಿರಿವುಂಗುರ್ಗಳಂ ತೆತ್ತಿಸೆ (ರಾಜಶೇ. ೧೦-೩೦ ವ). ೪. ಒಳಹೊಗು ; ನಾಟಿಕೊಳ್ಳು ; ಚುಚ್ಚಿಕೊಳ್ಳು : ಬಾಳಂ ಕೊಂಡೆತ್ತಿ ಪೊಯ್ಯುದುಮಾ ಬಾಳ್ ನಾಗವೇದಿಕೆಯಂ ತಾಂಗಿ ತೆತ್ತಿಸೆ [ಪಾಠಾಂ. ಕೀಲಿಸೆ] ಮೇಗಂ ನೋಡಿ (ಪಂಪಶಂ. ೧೯೩-೧೦) ; ಶರಾವಳಿಯೆಡಬಿಗಿದವು ತುಡುಗಿದವು ತೆತ್ತಿಸಿದವು ರಥಾಂಗದಲಿ (ಕುಮಾ.ಳ. ೧೦-೯೬) ; ತೆತ್ತಿಸಿದುವುಭಯವೀರರ ಮೆಯ್ಯೊಳಂಬುಗಳ್ (ಕೃಮಿಥಾ. ೨೩-೯೦). ೫. ಚುಚ್ಚು ; ತಿವಿ ; ತುರುಕು : ರಿಪುವರ್ಗ್ಗದ ಬಾಯ ಬಾಗಿಲೊಳು ತೆತ್ತಿಸಿದಂ ಪಲರ್ಬ್ಬಿದಱ ಕೂರಲಗಂ (ಎಕ. VIII, ಸೊರಬ. ೩೯೩-೩೪ : 1171) ; ಕಕ್ಷದೊಳ್ ಬಱಯೊಳ್ ನೇತ್ರದೊಳೆಯ್ದೆ ತೆತ್ತಿಸಿದ ನತ್ಯಾಭೀಳಬಾಣಂಗಳಂ (ಜಗವಿ. ೧೮-೧೦೩) ; ತೆತ್ತಿಸಿದಂಬಿನ ಗಱ ಮಿಱುಗುತ್ತಿರೆ (ವರ್ಧಪು. ೮-೫೩) ; ಪರವ ಕಣ್ಗಳೊಳಾಲಿಪ ಕರ್ಣಗಳೊಳ್ತ ಗುಳ್ದುರಿಪುವಯಶ್ಶಲಾಕೆಯನೆ ತೆತ್ತಿಸುವರ್ ಪರವೆಣ್ಗ ಕೂರ್ಪರಂ (ಅನಂಪು. ೯-೩೬) ; ಒತ್ತಿನಂಗಡಿಯ ಕಜ್ಜಾಯವಮಂ ಬಲ್ಲೆಹದಿ ತೆತ್ತಿಸುತ ಬಸವ ಕೋಯೆನಲ್ (ಅಶಿಜಂ. ೩೨-೨೩) ; ಗಜವ ಒತ್ತಿ ಕಿವಿಗಳನೊದೆದು ಶಿರದಲಿ ತೆತ್ತಿಸಿದರಂಕುಶವನು (ಕುಮಾ.ದ್ರೋ. ೩-೬) ; ನರನವನ ರೋಮ ರೋಮಂಗಳಂ ಭೇದಿಪವೊಲು ತೆತ್ತಿಸಿದನಂಬುಗಳನು (ಕೃಮಿಥಾ. ೨೫-೯೬). ೬. ಕೊರೆಯಿಸು ; ಕೆತ್ತಿಸು ; ಕಂಡರಿಸು : ದಿಙ್ಮುಖ ದಂತಿದಂತದೊಳ್ ತೆತ್ತಿಸಿದಂ ನಿಜಾಂಕ ಮಹಿಮಾಕ್ಷರಮಾಲಿಕೆಯಂ (ಜಾಪಮಂ. ೩೯೦) ; ಕಂಬಳ ಬತ್ತಿನಂದದಿ ಕೊಱಕೊಱದು ತೆತ್ತಿಸಿದಂತೆ (ಭರಪ. ೬-೫೩). ೭. (ಹರಳಿನಂತೆ) ಕೂಡಿಸು ; ಕುಂದಣಿಸು ; ಮೆಟ್ಟು : ಮುತ್ತು ಮಾಣಿಕ ನವರತ್ನ ತೆತ್ತಿಸಿದಂತಿಹ ಉಪ್ಪರಿಗೆ ಮೇಗಳ ಶಿವಾಲಯವ ಕಂಡು (ಲಿಂಗಪು. ೬೭-೮೦) ; ಸುತ್ತುವಳಿಯುವ ತೊಳಗಿ ಬೆಳಗುವ ಮುತ್ತು ವಜ್ರದ ನಡುವೆ ಮಾಣಿಕ ತೆತ್ತಿಸಿದ ಬೊಟ್ಟೊಂದು (ಪ್ರಭುಲೀ. ೯-೧೬) ; ತೆತ್ತಿಸಿದ ನವರತುನದಿಂದಲಿ ಮುತ್ತಿನುಂಡೆಯ ಜೂಳೆಯಂಗಳ ಪತ್ತಿ ಪಚ್ಚೆಯ ಹಲಗೆ ಪವಳದ ಕಡೆದ ಬೋದಿಗೆಯ . . . ರಥ ಕಳಶ ಮೇಲೆಸೆಯೆ (ಕುಮಾ.ದ್ರೋ. ೭ರಿಇ. ಪರಿ. ೨೬೮) ; ಅಮಲವಜ್ರಂಗಳ ತೀವಿ ತೆತ್ತಿಸಿದ ಪೊನ್ನುಡೆ ನೂಲ್ಗಳಂ ತಳೆದು (ಸೌಂದಪು. ೧೦-೨೩) ; ಅಗಣಿತ ಕನಕದಂಡದ ಪಲ್ಲವಛತ್ರ ನೆಗಹಿರೆ ರತ್ನ ತೆತ್ತಿಸಿದ ಸೊಗಯಿಪ ಮಣಿ ಸೊಡರ್ವೆಳಗಿನೊಳ್ ಮೆಱೆದುವು (ಮೋಹತ. ೦೫-೩೦) ; ಬಳಸಿರೆ ಕಟ್ಟಿ ಬಟ್ಟ ಪೊಸಮಲ್ಲಿಗೆಮಾಲೆ . . . ಮೌಕ್ತಿಕ ಪ್ರಸರಮಂ ಹರಿನೀಲಮಣಿ ಪ್ರತಾನದೊಳ್ಕೆಳೆಗೊಳಿಸುತ್ತ ತೆತ್ತಿಸಿದವೋಲ್ಮೆಱೆದಿರ್ದುದು ಮಂಟಪಾಗ್ರದೊಳ್ (ರಾಜಶೇ. ೮-೩). ೮. ಹೊಂದು ; ಸೇರು ; ಅಂಟು : ಬಸಿಱೆತ್ತಿ ಕಟ್ಟಿ ಮೆಯ್ ಕೀಲಿಸಿದಂತಿರೆ . . . ಕಿವಿ ತೆತ್ತಿಸಿದಂತಿರೆ . . . ಹರಿಣ ರೋಗಂ ತಡೆಯದೆ ಮಡಿಗುಂ (ಅಶ್ವಶಾ. ೦೩-೯೧) ; ಹತ್ತೆ ಬಂದಿರೆ ಸೂಜಿಗಲ್ಲನು ಹತ್ತಿ ಮೋಹಿಪ ಸೂಜಿಯಂತಿರೆ ತೆತ್ತಿಸಿದುದಾ ಸಚ್ಚಿದಾನಂದ ಸ್ವರೂಪನಿಪ ನಿತ್ಯಮಲ್ಲಮನಂಶವಾದ ನಿಮಿತ್ತವಾಕ್ಷಣ ಕಾಣುತಮೆ ಮೈಯೆತ್ತಿತೊಯ್ಯನೆಯನಿಮಿಷಯ್ಯನ ಕೈಯ ಶಿವಲಿಂಗ (ಪ್ರಭುಲೀ. ೦೦-೨೬). ೯. ನಿರ್ಮಿಸು ; ರಚಿಸು : ಅಸುರನ ಗದೆ ಭೂತ ಪಿಶಾಚ ಸಮಿತಿಗೆಱೆಯಿಸುವ ನೆತ್ತರಱವಟ್ಟಿಗೆ ತೆತ್ತಿಸಿದಲ್ಲಿನ ಸೊದೆವನೆ (ಜಗವಿ. ೯-೩೦) ; ವಸುಧಾಮಂಡಳಮೆಯ್ದೆ ತೆತ್ತಿಸುವ ಚೈತ್ಯಂಗಳ್ಗೆ ದಾನಕ್ಕೆ ಪಾತ್ರ ಸಮೂಹಂ ದಿಟಮೆಯ್ದೆದೆಯ್ದದು ದಿಶಾಚಕ್ರಂ (ಅನಂಪು. ೯-೨) ; ಉರಿಯ ಜಾಳಿಗೆ ತೆತ್ತಿಸಿತು ಹರಿದಶ್ವಶತವನು (ಕುಮಾ.ದ್ರೋ. ೧೯-೩೨). ೧೦. ಬಳಿ ; ಹಚ್ಚು ; ಲೇಪಿಸು : ಚಿತ್ತಜಂಗೆತ್ತಿದ ತಳಿರ್ಗಳ ಸತ್ತಿಗೆಯೊ ದಿವಿಜೇಭಕುಂಭದಿ ತೆತ್ತಿಸಿದ ಸಿಂದೂರವೋ . . . ಎನಲೆಸೆಯಿತ್ತು ರಾಗದಲಿಂದುಮಂಡಲ (ಜೀವಂಚ. ೦೬-೨೩). [ ತೆತ್ತು$_1$ + – ಇಸು$_3$ ]

**ತೆತ್ತಿಸು$_2$** (ಕ್ರಿ). ಕೊಡುವಂತೆ ಮಾಡು ; ಕೊಡಿಸು ; ತೆರಿಸು : ದಾಪಿತಃ – ಸಾಧಿತಃ – ೨ ತರಿಗೆ ತೆತ್ತಿಸಲ್ಪಟ್ಟವನು, ಕೊಡಿಸಲ್ಪಟ್ಟವನು, ಕೊಡುವ ಹಾಗೆ ಮಾಡಲ್ಪಟ್ಟವನು (ಸಿದ್ಧಾಂತಿ. ೨೮೮). [ ತೆತ್ತು$_2$ + – ಇಸು$_3$ ]

**ತೆತ್ತೀಸ, ತೆತ್ತೀಸು** (ನಾ). ಒಂದು ಸಂಖ್ಯಾವಾಚಕ ; ಮೂವತ್ಮೂರು : ಹರಿಬ್ರಹ್ಮಾದಿಗಳು ಮೊದಲಾದ ತೆತ್ತೀಸಾದಿ ದೇವರ್ಕಳಂ ಉಘೆ ಉಘೆ ಎನುತಿರಲು (ಬಸವ. ೮೪೪) ; ಖಳಪಳದ ಕಟ್ಟುಲುಹು ಮೂರ್ಛಾಕುಳ ವನಿತ್ತವು ತರುಣ ಕೇಳ್ ತೆತ್ತೀಸ ದೇವರಿಗೆ (ಕೊರರಾ. ೬-೫೦-೬) ; ತೆತ್ತೀಸವೆಂದೆನಿಪ ಸ್ಥಲವಿವು (ಸಿದ್ಧೇಪು. ೨೪-೩೩). ತೆತ್ತೀಸು.

**ತೆತ್ತೀಸಕೋಟಿ, ತೆತ್ತೀಸುಕೋಟಿ** = ಮೂವತ್ಮೂರಂ ಕೋಟಿ : ಮಱೆಯಲಾಗದು ತೆತ್ತೀಸಕೋಟಿ ದೇವರ್ಕಳ (ಬಸವ. ೫೫೦) ; ದಕ್ಷನೊಬ್ಬ ಯಾಗವನಿಕ್ಕಲು ತೆತ್ತೀಸಕೋಟಿ ದೇವರ್ಕಳೆಲ್ಲಾ ತೊತ್ತಳದುಳಿಸಿಕೊಂಡು ನುಚ್ಚುನುಱಯಾಗಿ ಹೋದರು (ಸರ್ವವ. ೯೦-೫೦೨) ; ನರ್ತಿಪ ನವಿಲ ನಾಟ್ಯಕೆ ಮೆಚ್ಚಿ ಪುರುಹೂತ ತೆತ್ತೀಸಕೋಟಿ ನಿರ್ಜರರು ಮುತ್ತಿನ ತ್ಯಾಗವ ಕೊಟ್ಟಂತೆಯಾಲಿಕಲ್ ಬತ್ತಿಕ್ಕಿ ಬಿದ್ದುದುರ್ವಿಯಲಿ (ಮೋಹತ. ೯-೩೮) ; ಉರಿನಾಲಿಗೆಯ ಗರವೊಟ್ಟೆಗೆಯ ತೊಳಲಿಕೆ ತರಳಿಚಿತು ತೆತ್ತೀಸುಕೋಟಿಗಳ (ಕುಮಾ.ಅ. ೨೦-೫೬). [ <ಪ್ರಾ. ತೇತೀಸ, ತೇತ್ತೀಸ./ಹಿಂ. ತ್ಯಂತಿಸ್, ತ್ಯಂತೀಸ್, ತೇತೀಸ್ ; ಮರಾ. ತೇತೀಸ್. / ಸಂ. ತ್ರಯಸ್ತ್ರಿಂಶತ್ ]

**ತೆತ್ತೀಸು** 'ತೆತ್ತೀಸ' ನೋ.

**ತೆತ್ತು$_1$** (ಕ್ರಿ). ೧. ಸಂಬಂಧಿಸಿರು ; ಹೊಂದಿಕೊಂಡಿರು : ಚಿತ್ತಜಂ ಕತ್ತಿಯಂ ಕಿತ್ತುಕೊಂಡೆತ್ತಿ ಹೊಯ್ಯುತ್ತೆ ಬರಲುತ್ತುಂಗವೃತ್ತಕುಚೆಯರ್ತಮಗೆ ತೆತ್ತಿರ್ದ ತೆತ್ತಿಗರನೊತ್ತಿಗರ ಸುತ್ತಿರ್ದರಾಗಳನುರಾಗದಿಂದೆ (ಕೃಮಿಥಾ. ೨೬-೬). 'ತೆತ್ತಿಗ' ಪರಾ. ೨. ಹೆಣೆದುಕೊಂಡಿರು ; ತೊಡಕಿಕೊಂಡಿರು : (ಟಿ). ೩. ತಿರಿಚು ; ಸಂತ್ತು. 'ತೆತ್ತಗಣ್ಣು' ಪರಾ. ೪. ಒಳಸೇರು ; ಅಡಗು : ಕಿರಣ ತೆತ್ತಿದವಭ್ರದಲಿ ತಾರಕೆಯ ತೇರುಗಳು ಹರಿವ ಮಂಜಿನ ನದಿಯ ಹೊಳ್ಳೆವು (ಕುಮಾ.ದ್ರೋ. ೪-೦೨). ೫. ಕೇವಣಿಸು ; ಕುಂದಣಿಸು ; ಮೆಂಟ್ಸು ; ಕೂಡಿಸು : ಮುತ್ತಿನ ಸೇಸೆಯೊಳೆಸೆವ ರತ್ನಂಗಳ ತೆತ್ತಿರ್ದ ಹಸೆಯ ವಿಷ್ಟರದಿ ಹತ್ತಿದ ದಂಪತಿಗಳ ವಿಗ್ರಹಂಗಳು ತೆತ್ತಿಸಿದಂತೆ ಶೋಭಿಸಿತು (ಮೋಹತ. ೧೩-೬೨). [ ದೇ॥. ತಮಿ. ತೆತ್ತು. ತೆಱು ]

**ತೆತ್ತು$_2$** (ಕ್ರಿ). ತೆರು ; ಕೊಡು : ಶಚಿಪತಿಯು . . . ಕೃತ್ತಿವಾಸನ ತೋತ್ರರವ ಮಾಡುತ್ತ ಮಾನವ ತೆತ್ತಿ ಮಸ್ತಕವನ್ನು ಪಾದಕೆ ಸತತ ಮಣಿಯುವನು (ಪಾರ್ವಪ. ೨೦-೮೧) ; ಕೈತುಂಬ ವರದಕ್ಷಿಣೆ ತೆತ್ತಬೇಕು (ಸುಂದರಿ. ೦೦೩) ; ಹಲ ಜನುಮ ಕಳೆದರೂ ನೀ ತೆತ್ತಲಾರೆ ಬರಿ ಅಂಚಿ ಮೆಚ್ಚ (ಉಯ್ಯಾಲಿ. ೪೧-೪) ; ಆತ ವಿಧಿಸಿದ ದಂಡವನ್ನೂ ತೆತ್ತಲು ಸಿದ್ಧರಿದ್ದರು (ಸಮಜೀ. ೫೧೬). 'ತೆತ್ತು$_1$' ಪರಾ. [ <ತೆಱು$_1$ ]

**ತೆತ್ತು$_3$** 'ತೆಱು$_1$' ಪರಾ.

**ತೆತ್ತು$_4$** (ನಾ). ಮೋಸ ; ವಂಚನೆ. 'ತೆತ್ತುತನ' ಪರಾ.

[ ದೇ.॥ ತಮಿ. ತೆತ್ತು ]

**ತೆತ್ತುತನ** (ನಾ). ಮೋಸಮಾಡುವಿಕೆ; ವಂಚನೆ ಮಾಡುವಿಕೆ: ತೆತ್ತುತನಕ್ಕೆ ತೆತ್ತುತನಮಂ ಪುಸಿನಲ್ಮೆಗೆ ಮೋದಿ ನಲ್ಮೆಯಂ ಜತ್ತುಕಱಂಗೆ ಜತ್ತುಕಱ ನಾಸೆಗಮಾಸೆಯನಾದಲಂಪಿನಿಂ ಪತ್ತಿದ ಮೆಯ್ಗೆ ಪತ್ತುಗೆಯನುಕ್ಕಿವ ಕುಕ್ಕವಗೆಯ್ತಮಂ ಪೊಣರ್ಚುತ್ತುಮುಪಾಯದಿಂ ಕಳಿಯೆ ಕೂಡುವನಂ ವಿಭು ಕಂಡು ಮೆಚ್ಚಿದಂ (ಕಾವ್ಯಸಾ. ೯೮೫ ಚೂಡ್ರಳ).

[ ತೆತ್ತು$_4$ + – ತನ ]

**ತೆನಂದಾಕ** 'ತೆನ್ನಂದಾರ್ಕ' ನೋ.

**ತೆನಂದಾಕಕೆಱೆ, ತೇನಂದಾಕಗೆಱೆ** (ನಾ). ಒಂದು ಕೆರೆಯ ಹೆಸರು : ತೆನನ್ದಾಕಕೆಱೆ ಎ ಪೆಂಮ್ಮರ್ಗಗೆಱೆ ಎ ಪಡಗಾಯ್ ಸನ್ದು ಕಿಱುಮಾವಿ

ಪಂಳ್ಳಿಮೆ (ಎಕ. IV, ಎಡತೊ. ೬೦-೬೮ ; ಸು. ೫೫೦): ತೇನಂದಾಕಗೆಬೆ³ : ತೇನನ್ದಾಕಗೆಬೆ³ ದಕ್ಷಿಣಾನ್ನ ಭಾಗತತಃ (ಮ್ಯಅರಿ. ೦೯೯೨,೬೫-೦೦೬ ; 816).
[ ತೆನಂದಾಕ (<ತೆನ್ನಂದಾರ್ಕ) + ಕೆಬ³ ]

**ತೆನುಂಗು** 'ತೆಲುಂಗು' ನೋ.

**ತೆನುಗು** 'ತೆಲುಂಗು' ನೋ.

**ತೆನೆ₁** (ನಾ). ೧. ಧಾನ್ಯದ ಹೊಡೆ ; ಕಾಳಿನ ಕದಿರಂ : "ಕಣಿಶಂ, ಧಾನ್ಯ ಶೀರ್ಷಕಂ – ಈ ೨ ತೆನೆ" (ಜಲಾಯು. ೯೫-೪೨೫) : "ತೆನೆಯೊಳು ಕದಿರು" (ಕಬ್ಬಿಗಂ. ೧೧೬) ; ಪ್ರಬಳ ಫಳಭಾರದಿಂ ಕೂಡಿ ಬಳ್ಕಿ ತೆನೆ ನೆಲನನಲೆಯೆ ಪವನಹತಿಯಿಂದೆ (ಸುಕುಮಾ. ೯-೫೨) ; ಪಿಂಗಳವಾದ ನೆಲ್ಲ ತೆನೆಯಂ ನಸುಗರ್ಚಿದ ರಕ್ತಚಂಚು ಪಕ್ಷಂಗಳ ಶಾದ್ವಲಚ್ಛವಿ ಮನಂಗೊಳೆ ಪಾಱುವ ಕೀರಮಾಲೆ (ಜಗವಿ. ೪-೬೭) ; ಪೊಸಕಮ್ಮಂಗಳವೆಯ ತೆನೆಯ ತುದಿಯ ತನಿಗಂಪಂ ಭುಂಜಿಸಲ್ (ಜಯುಕಾ. ೦-೬೯); ದನಗಳ ಜೋಳದ ತೆನೆಯನ್ನು ಬಿಡಿಸಿದರೆ ಹೇಗೆ? (ಮಹಾತ್ಮಾ. ೬). ೨. ಕೋಟೆಯ ಗೋಡೆಯ ಮೇಲ್ಭಾಗದ ರಚನೆ; ಕೋಟೆಯ ಪ್ರಾಕಾರದ ತುದಿಯ ಗಾಲಿ ಯಾಕಾರದ ರಚನೆ: "ಕೋಟೆಯ ತೆನೆಯಲ್ಲಿಯುಂ ಕಪಿಶೀರ್ಷಮೆಂಬುದು" (ಜಲಾಯು. ೦೩೧-೨) ; ನಿರಾಳದಲ್ಲಿ ನೀರಕೋಟೆಯನಿಕ್ಕಿ ಬಯಲ ಅಗಳ ತೆಗೆದು ಪಾಯುವ ತೆನೆ ಹೂಡಿ (ಅಣ³ಮಾ. ೧೬೭-೫೦೯) ; ರಥಾಂಗವೆ ಗೆತ್ತರುಣಂ ತೆನೆಯನೆತ್ತಿ ನಗಿಸುವನಿನನಂ (ಅನಂಪು. ೦-೦೦೦) ; ತುಱುಗಿತ ಮರರು ಖಳನ ದುರ್ಗದ ತುದಿಯ ತೆನೆಗಳಲಿ (ಕುಮಾರ.ಅ. ೦೨-೩೩) : ಕೆಡಹಿದರು ಕೋಟೆಗಳ ತೆನೆಗಳನೊಡೆದಬಡಿದರಟ್ಟಳೆಗಳನು (ಕೊ ರ ರಾ. ೬-೦೭-೬) : ಕೋಟೆಯ ನೂತನ ತೆನೆಗಳೊಪ್ಪಿದುವು (ಕಂಹವಿ. ೨-೬೦). 'ಕೋಟೆದೆನೆ' ಪರಾ. [ ದೇ. ೫ ತಮಿ. ತಿನ್ನೆ ; ಮಲ. ತಿನ ]

**ತೆನೆ₂** 'ತನೆ' ನೋ.

**ತೆನೆಂದಕ** 'ತೆನ್ನಂದಾರ್ಕ ನೋ.

**ತೆನೆಂಧಕ** 'ತೆನ್ನಂದಾರ್ಕ' ನೋ.

**ತೆನೆಗಟ್ಟು₁** (ಕ್ರಿ). ತೆನೆ ಬಿಡಂ ; ಕಾಳಿನ ಹೊಡೆ ಕಟ್ಟು ; ಕಾಳಾಗು : ಅದೆ ಕಾಣ್ ಅದೊ, ಈ ನಾಡಿನ ನಡೆಜಾಡಿನ ಹಿಂಜಾಣ್‌ನ ತೆನೆಗಟ್ಟಿದ ಬೆಳಸು (ದ್ರಾಕ್ಷಿದಾ. ೨-೨೦). [ ತೆನೆ₁ + ಕಟ್ಟು₁ ]

**ತೆನೆಗರ್ಚು** (ಕ್ರಿ). ಧಾನ್ಯದ ಗೊಂಚಲನ್ನು ಕಚ್ಚು,–ಕಡಿ : ತಮ್ಮ ಕೆಯ್ಪುಱ³ಗೆ ಬೆರ್ಚಿ ಶುಕಂ ತೆನೆಗರ್ಚಿ ಬೇಗದಿಂ ಪಾಱ³ . . . ಪಾಮರಿಯ ರೀಕ್ಷಿಪರಾದರ್ ನಭೋವಿಭಾಗವಂ (ಧರ್ಮಣಾ. ೨-೨೮).
[ ತೆನೆ₁ + ಕರ್ಚು₁ ]

**ತೆನೆಗಾಯಿ** (ನಾ). ವರ್ಷದ ಮೊದಲ ಫಲ : ಗೌರೀ ಹಬ್ಬಕ್ಕೆ ಸರಿಯಾಗಿ ತೆನೆಗಾಯಿ (ಜೂಡಿ). [ ತೆನೆ₂ (<ತನೆ) + ಕಾಯಿ₄ (< ಕಾಯ್₄) ]

**ತೆನೆಗೊನೆ** (ನಾ). ಕೋಟೆಯ ಬುರುಜಿನ ತುಂದಿ : ತಾರಗೆಗಳ್ ತೆನಗೊನೆ ಗಳೊಳೋರಂದದೆ ಬೆಳವ ಸೊಡರ್ಗಳೆಂತಿರೆ (ಹಂದ್ರಪು. ೧-೦೦೯) ; ಹೊಂಗೋಂಟೆದೆನೆಗೊನೆಗಳಿಂದೇಳ್ವ ದೂಳಿಗ್ಗಲ್ಲಿಗೆ ಸ್ಥೂಲದಂಡಾಕೃತಿಯ ನಾಂತಪೋಲ್ . . . ದೆಂಕಣೆಯ ಕೈಗಳಾಲಿಗಚ್ಚರಿಯಾಗಿ ತೋಱುತಿವೆ (ಕ್ಷಮಿಥಾ. ೩-೨೦). [ ತೆನೆ₁ + ಕೊನೆ₂ ]

**ತೆನೆಗೋಳ್** (ಕ್ರಿ). ೧. = ತೆನೆಗಟ್ಟು. 'ತೆನೆಗೋಳಿಸು' ಪರಾ. ೨. ಕೋಟೆಯ ತುಂದಿಗೆ ತಾಗು : ಮುಂತ್ತಿನೋಳ್ ತೆನೆಗೊಂಡು ಪಱಿದ ಮುಗಿಲಿಂ ಸುರಿಗುಂ (ಮಲ್ಲಪು. ೨-೫೬). [ ತೆನೆ₁ + ಕೊಳ್₁ ]

**ತೆನೆಗೋಳಿಸು** (ಕ್ರಿ). ಹೊಡೆ ಮೂಡುವಂತೆ ಮಾಡು ; ತೆನೆಯಾಗುವಂತೆ ಮಾಡು : ಬಿತ್ತಿ ಬೆಳೆಯಿಸಿ ಪರಾಂಬರಿಸುವುದು ಒಕ್ಕಲಿಗನಾದರೆ, ಕೈಯನ್ನು ತೆನೆಗೋಳಿಸಿ ಮಾಗಿಸುವುದು ಕಾಲದ ಕೈವಾಡ (ವೀರಬಂ. ೪೮).
[ ತೆನೆಗೊಳ್ + – ಇಸು₃ ]

**ತೆನೆತೀವು** (ಕ್ರಿ). ಬಸಿರು ತುಂಬು : ಅಲ್ಲಿಯೆ ಪೋಂತಪ್ಪುದುವದು ಮೆಲ್ಲನೆ ತೆನೆತೀವಿ ಸುಟೆ³ಯೆ (ಹುಕೋಜ. ೩-೫೫).
[ ತೆನೆ₂ (< ತನೆ) + ತೀವು₁ ]

**ತೆನೆತುಂಬು₁** (ಕ್ರಿ). = ತೆನೆಗಟ್ಟು : ಕನ್ನಡ ನುಡಿ ಪಯಿರ್ ಮುನ್ನಡೆ ತನೆ ತುಂಬಿ ಪೊನ್ನಡಕಿಲ್ಗಂ ಪೊನ್ನಕ್ಕೆ (ಹೊಂಗಳು. ೪೫ ಹಾಕ್ರಿ೪).
[ ತೆನೆ₁ + ತುಂಬು₁ ]

**ತೆನೆತುಂಬು₂** 'ತನೆತುಂಬು' ನೋ.

**ತೆನೆದರ್ಭೆ** (ನಾ). ತೆನೆ ಬಿಡುವ ಒಂದು ಬಗೆಯ ದರ್ಭೆ : "ಚಾಮರ ಪುಷ್ಪಃ – ತೆನೆದರ್ಭೆ" (ಓಷಧಿ. ೫೬). [ ತೆನೆ₁ + ದರ್ಭೆ ]

**ತೆನೆದುಱುಗಲ್** (ನಾ) ಕಾಳಿನ ಗೊಂಚಲಿನ ಗುಂಪು; ಕಣಿಶಗಳ ಸಮೂಹ: ಅನಿಲಾಹತಿಯಿಂ ಕಟಮೆಯ ತೆನೆದುಱುಗಲೊಳೊಱ³ತುಪರಿವ ಪಾಲಂ ಕಳ ಹಂಸ ನಿಕಾಯಮಿಮಾಂಟ ಪಾಳಿಯನನವರತಂ ಬಿಡದು ಪಾಳಿಯಂ ಪಾಳಿವ ಪೋಲ್ (ಶಾಂತೀಶ್ವ. ೧-೯೪). [ ತೆನೆ₁ + ತುಱುಗಲ್ (< ತುಱುಂಗಲ್) ]

**ತೆನೆನಿಲ್ಲು** 'ತನೆನಿಲ್' ನೋ.

**ತೆನೆಬಲಿ** 'ತನೆಬಲಿ' ನೋ.

**ತೆನೆಬಿಡು** (ಕ್ರಿ). ಕಾಳಿನ ಗೊಂಚಲನ್ನು ಬಿಡು ; ಹೊಡೆಯಾಗಂ : ಹೊಲದಲ್ಲಿ ಜೋಳ ತೆನೆಬಿಟ್ಟಿದೆ (ಜೂಡಿ). [ ತೆನೆ₁ + ಬಿಡು₁ ]

**ತೆನೆಬಿದಿರು** (ನಾ). ಪೊದರಾಗಿ ಬೆಳೆಯುವ ಒಂದು ಬಗೆಯ ಬಿದಿರಂ : (ಮ್ಯಕಿರಿ. ೫೯-೦೦೬೦) [ ತೆನೆ₁ + ಬಿದಿರು₂ (< ಬಿದಿರ್₂) ]

**ತೆನೆಮಗುಟು** (ಕ್ರಿ). ಗರ್ಭಸ್ರಾವವಾಗು; ವ್ಯಯಿಳಿ: "ತನೆಮಗುಚ್ಚುದು ವೇಹತ್ತು" (ವಸ್ತುಕೋ. ೯೦-೮). [ ತೆನೆ₂ (< ತನೆ) + ಮಗುಟ್ ]

**ತೆನೆಯಾವು** 'ತನೆಯಾವು' ನೋ.

**ತೆನೆವಳಿ** (ನಾ). ಕೋಟೆಯ ತುದಿ; ದುರ್ಗದ ಉನ್ನತಭಾಗ: ಕಲುವಳಿಯ ಕೋಲಾಹಲಕ್ಕಿಮರಳಂಕದಿಱ³ದರು ಸುರಗಿಯಲಿ ತೆನವಳಿಯ ಹಿಡಿದರು ಹೊಯ್ದು ಕೇಶಾಕೇಶಿಯುದ್ಧದಲಿ (ಕುಮಾರ.ಸ. ೩-೫೦).
[ ತೆನೆ₁ + ಬಳಿ₃ ]

**ತೆನೆವಾಲ್, ತೆನೆಹಾಲು** (ನಾ). ಹೊಡೆಯಲ್ಲಿ ಕಾಳು ಗಟ್ಟಿಯಾಗುವುದಕ್ಕೆ ಮುಂಚಿನ ಹಾಲು ; ಎಳೆಯ ತೆನೆಯೊಳಗಿನ ರಸ : ಫಳರಸದ ಬೆಳವ ನವಶಾಳೀವನಂಗಳಿಂ ತೆನೆ[ಪಾಠಾಂ. ತನ]ವಾಲನುಂಡು ಬೆಳೆವರಗಿಳಿ ಗಳಂಕಿಣಿಂ (ತಿರುಕ. ದೀ. ೨-೦೦) ; ತೆನೆವಾಲನುಂಡು ಬಳೆದುವು ಗಿಳಿಗಳು (ಸಂಚಿಕ. ೯-೦೬). **ತೆನೆಹಾಲು** : ತೆನೆಹಾಲು ದಕ್ಕಲಿ ಕಕ್ಕಿಸಬೇಡದನು ನಿನ್ನ ನಂಜಿನ ಸೆರಗ ಬೀಸಾಡಿ (ಗರಿ. ೦೦೬-೦೬) ; ಜನಕೆ ನಿನ್ನೀ ಹಾಡು ಕೆನೆಹಾಲು ಇದ್ದಂತೆ ತೆನೆಹಾಲು ನಿನಗೆ ಒಕ್ಕಲಿಗ ಇಂಪಾಗಿ ಮನಸೋತು ಮಲಗೆ ಶಿವಲೋಕ (ಕನ್ನಡಾ. ೨೦೬). [ ತೆನೆ₁ + ಪಾಲ್₁ ]

**ತೆನೆವೆರಸು** (ಕ್ರಿ). ತೆನೆಗಳಿಂದ ಕೂಡಿರು: ತನವೆರಸಿದಿಕ್ಷುಗಳ ಹೊರೆಗಳಗೊನೆ ವೆರಸಿ ಶೋಭಿಸುವ ಕದಳಿಯ (ನಿಕಾಗ. ೪-೮-೫೪). [ ತೆನೆ₁ + ಬೆರಸು₁ ]

**ತೆನೆಪೊಱು** (ಕ್ರಿ). ಕಾಳಿನ ಗೊಂಚಲನ್ನು ಹೊತ್ತುಕೊಳ್ಳು ; ಹೊಡೆ ಯಾಗು: ಕಿಳಿದ ತಡವಿಡಿದ ಮುಡಿಗಳ ಜಳದೊಳ್ ರಂಜಿಸುವ ಧಾನ್ಯ ಮಂಜರಿಯ ನೆಟಲ್ ಪೊಳೆಯೆ ತೆನವೊತ್ತು[ಪಾಠಾಂ. ಪೋದು]ವಿವು ಬೇರ್ಗಳೆನಿಪುದು ಬೆಳೆದ ಕಟಮೆ ಭೂಸಾರತೆಯಿಂ (ಹಂದ್ರಪು. ೦-೯೨) ; (ಕಾವ್ಯಸಾ. ೦೦೦ ಸೂ೬). [ ತೆನೆ₁ + ಪೊಱು ]

**ತೆನೆಪೋಗು** (ಕ್ರಿ). ೧.= ತೆನೆಬಿಡು: ತೃಣಮುಂ ತನೆಪೋದ ಬಱ³ಕ್ಕೊಣಗು ವುದು (ಅನಂಪು. ೩-೬೦). ೨. (ಕೋಟೆಯ) ತೆನೆಯಾಕಾರವಾಗು. ೧, ೨: ವಸುಧೆಯ ಮಿಸುನಿ ಬೆಳೆದು ತೆನೆಪೋದಂದೆಂಬೆಸಕವನೀಕ್ಷಿಸುವರಿಗೆ ಪೊಸಯಿಸುತಾ ಪುರವರದ ಪೊಂಗೋಂಟೆ ಕಣ್ಗೆಸೆದುದು (ಕುರಾಸಾಂ. ೩-೬೬). [ ತೆನೆ₁ + ಪೋಗು₁ ]

**ತೆನೆಹಾಲು** 'ತೆನೆವಾಲ್' ನೋ.

**ತೆನೆಹುಲ್ಲು** (ನಾ). ೧. ತೆನೆಬಿಡುವ ಹುಲ್ಲು: ಕೈತೋಟದಲ್ಲೆಲ್ಲಾ ತೆನೆಹುಲ್ಲು ಬೆಳೆದಿದೆ (ರೂಢಿ). ೨. ತೆನೆಸಹಿತವಾದ ಹುಲ್ಲು.
[ ತೆನೆ$_1$ + ಹುಲ್ಲು (< ಪುಲ್) ]

**ತೆನ್ನಂದಾರ್ಕ, ತೆನಂದಾಕ, ತೆನೆಂದಕ, ತೆನೇಧಕ** (ನಾ). ಒಂದು ವಂಶದ ಹೆಸರು ಮತ್ತು ಆ ವಂಶಕ್ಕೆ ಸೇರಿದವನು (?) : ವಾಣಿಗ ಕೋಟ್ಟಮ್ ತೆನ್ನಣ್ಣವುಂ ವಡಕಣ್ಣವುಂ ವಿನೀತೇಶ್ವರಕ್ಕಮ್ ಪೊಯ್ದರ್ ಮಾನ್ದ ತೆಂನನ್ದಾರ್ಕರುಂ ಮಾರಾಟ್ಟ ತೆಂನನ್ದಾರ್ಕರುಂ ಅವರ ಕುಂಬು ಪೊಯ್ದಾರ್ (ಎಕ. IV, ಹಾಮ. ೬೩-೮ ; ಸು. 750). **ತೆನಂದಾಕ** : ಪೆರ್ವ್ವಯಲ ಕಿಟರುಂ ತೆನನ್ದಾಕರುಂ ಕೊಳನೆಲ್ಲೂರ ಸಾಲತ್ತರುಂ ವಾರ ದರುಂ ಎನೆವ್ವರುಂ ನರಸಾಕ್ಷಿ (ಎಕ. IV, ಎಡತೊ. ೬೦-೭೩ ; ಸು. 890) ; ತೆನಂದಾಕಗಾದೆಯಂ ಕಣ್ಣವುಂಗಲದೊಳ್ಬಸದಿ ಮಾಡಿಸಿ ಆ ಬಸದಿಗೆ ಕೊಟ್ಟ ಮಣ್ಣು (ಎಕ. X, ಕೋಲಾರ. ೯೦-೯೫ ; 903). **ತೆನೆಂದಕ** : ನೊಕ್ಕಿ ಊರೊಳೆ ಅಗ್ಗಡಿ ಕಳೆಸಿ ಕೊಟ್ಟ ನೆಲ ತೆನೆನ್ದಕ ಕಾಡೆಯುಂ ಸಾಕ್ಷಿ (ಮೈಆರಿ. ೦೯೧೬, ೧೩-೮ ; 726). **ತೆನೇಧಕ** : ಕೊಟ್ಟ ನೆಲ ತೆನೆನ್ಧಕ ಕಾಳಿಯುಂ ಸಾಕ್ಷಿ (ಎಕ. III, ಮೈಸೂರು. ೨೫-೨ ; 750). [ ? ]

**ತೆನ್ನಮರ** (ನಾ). ೧. ತೆಂಗಿನ ಮರ. ೨. ತೆಂಗಿನ ಮರದ ಮೇಲೆ ಹಾಕುವ ಒಂದು ಬಗೆಯ ತೆರಿಗೆ: ತೆನ್ನಮರಂ (ಎಇ. XVIII, ೦೪೨-೪೮ ; 1434). [ ← ತಮಿ. ತೆನ್ನಮರ ]

**ತೆನ್ನೆಲೆಹುಳಿಗ** (ನಾ). ಒಂದು ಬಗೆಯ ಮಂಲಿಕೆ ; ಅಗಳುಶುಂಠಿ : "ಅರಣ್ಯಮಾಸಿನಿ – ತೆನ್ನೆಲೆಹುಳಿಗ" (ಒಷಧಿ. ೯): "ವಲ್ಲೀಕಾ–ತೆನ್ನೆಲೆಹುಳಿಗ, ಹಿಡಿಹಿಡಿಕೆ, ಶ್ರೀವಲ್ಲಿ, ಅಗಳುಶುಂಠಿ" (ಒಷಧಿ. ೦೪೫). 'ತನ್ನೆಲೆಹುಳಿಗ' ಪರಾ. [ ? ]

**ತೆನ್ನೊಟ್ಟಿ** (ನಾ). ದಕ್ಷಿಣಕ್ಕಿರುವ ಬೇಲಿ : ದಕ್ಷಿಣಸ್ಯಾನ್ದಿಸಿ(ಶಿ) ಕ (?) ಬು ಪೊಟಿಕ್ಕಾಲ್ ತೆನ್ನೆ(ನ್ನೊ)ಟ್ಟಿ . . . ಎಕಿಟುವ ದಿಕ್ಕಾಲ್ ತೆನ್ನೊಟ್ಟಿ ಎಕಟ್ಟಿಕ್ಕಾಲ್ ತೆನ್ನೊಟ್ಟಿ (ಇಇ. XVIII, ೩೬೭-೨೩ ; 8ನೆಯ ಶತ).
[ತೆಂ + ಒಟ್ಟಿ (<ಒಟ್ಟಿ )]

**ತೆಪರ** (ನಾ). ಬುದ್ಧಿಯಿಲ್ಲದವನು ; ದಡ್ಡ : ಸೈಕೋಲ್ ಕೊಟ್ಟು ಬುಡೋ ವಸ್ಟು ತೆಪರಾ ಅಂತ ತಿಳಕೊಂಡಿಯೇನೋ ? (ಇತಿಮೋ. ೨೨). [ ? ]

**ತೆಪ್ಪ, ತೆಪ್ಪೆ** (ನಾ). ೧. ನದಿ ಅಥವಾ ಹೊಳೆಯನ್ನು ದಾಟಲು ಬಳಸುವ ಸಾಧನ ; ಹರಿಗೋಲು ; ನಾವೆ : "ತಳ್ಪಂ, ಉಡುಪಂ, ಪ್ಲವಂ – ಈ ೩ ತೆಪ್ಪಂ" (ನಚಂಯು. ೧೦೦–೯೯) ; "ಉಡುಪ ಪ್ಲವ ಕೋಲ" (ನಾಕರಾ. ೬) ; ಪರಿವರ್ತ ಪರ್ವಗಳ್ಳದೊಳ್ ಪಿರಿದಪ್ಪ ತೆಪ್ಪದ ಮೇಲೆ ತೇಂಕುತ್ತುಂ (ಶಾಂತಿಕಂ. ೨೯೬-೦೮) ; ತೋಟಿಯೊಳ್ ಪೋಪವಂಗೆ ತೆಪ್ಪವನಿಕ್ಕಿದಂತೆ (ಧರ್ಮಾಮೃ. ೧-೦೪೪) ; ಬಾಲಮರಾಳಂಗಳಂ ಪದ್ಮಪತ್ರದಿನೊಪ್ಪುವ ತೆಪ್ಪದೊಳಿಟ್ಟು ದಾಂಟಿಸುತಿರ್ಪ ರಾಜಹಂಸರಾಜಿಗಳಂ (ನಿರಿಕ. ೨-೬೦ ವ) ; ತೆರೆಯ ಮೇಲಣ ತೆಪ್ಪದಂತಿರೆ ಧರಣಿಯೊಲಿದುದು ಗಾಲಿಗಳ ಹಾವರದ ಭಾರಿಗೆ (ಕುವ್ಯಾವಿ. ೬.೩೩. ೬-೫೯) ; ಉರುಳುತಿರ್ದವು ರಣದೊಳಗೆ ಹೆಣನೆರಡು ಸೇನೆಯುಲರುಣಜಲವುಬ್ಬರಿಸುತಿರ್ದುದು ನೆಗಹಿ ನಾಲುಕು ಬಲದ ತೆಪ್ಪಗಳ (ತೊರಭಾ. ೬-೦೩-೪೦) : ನದಿಯ ದಂಡೆಯಲ್ಲಿ ಒಂದು ತೆಪ್ಪವು ಕಟ್ಟಿ ಹಾಕಲ್ಪಟ್ಟಿದ್ದಿತು (ಶ್ರೀಕಾಯು. ೧). ೨. ಬಿದಿರು, ಹಲಗೆಗಳಿಂದ ನಿರ್ಮಿಸಿದ ಚಪ್ಪಟೆಯಾದ ತೇಲುಸಾಧನ. 'ತೆಪ್ಪೋತ್ಸವ' ಪರಾ. **ತೆಪ್ಪೆ** : ೧. ಉದಕದಲ್ಲಿ ತೇಲಾಡುವ ತೆಪ್ಪೆಯು ವಿಧದಿಂದ ಮಹಾತ್ಮರು ಲೋಕ ಸಮುದ್ರದಲ್ಲಿ ಮುಳುಗದೆ ದಡವನ್ನು ಸೇರುವರು (ಮುಕ್ತಿಕ್ಕಾ. I, ೨೨೦) [ ದೇ.೫ ತಮಿ. ತೆಪ್ಪ, ತೆಪ್ಪಲ್, ತೀಪ್ಪೈ ; ತುಳು. ತೆಪ್ಪ, ಚೆಪ್ಪೊ, ತೆಪ್ಪೊ ; ತೆಲು. ತೆಪ್ಪ, ತೇಪ./ಅರ. ತಾಇಫಾ ; ಮರಾ. ತಾಪಾ,ತಾಫಾ ]

**ತೆಪ್ಪಗೆ** (ಅ). ೧. ಸುಮ್ಮನೆ ; ನಿಶ್ಚಲವಾಗಿ ; ಮೌನವಾಗಿ : ಮೊಳೆವು ದೊಮ್ಮೊಮ್ಮೆ ಚಿತ್ತದೊಳು ವಿಕಲ್ಪ ಕೂಡಲಿವುದೆಂತೆನೆ ಘಾಳಿಯಿಂದ ಜಲದಲ್ಲಿ ತೆರೆಯೇಳುವಂತೆ ಮತ್ತಾ ಘಾಳಿ ನಿಲೆ ಜಲ ತೆಪ್ಪಗಿಹಂತೆ (ಭಕಚ. ೧೮-೪೯); ಅಜ್ಞೆ ಕೊಡಲಾರದೆ ತೆಪ್ಪಗೆ ನಿಂತುಕೊಂಡರು (ನಾಪೂಲೀ. ೮೦) ; ತೆಪ್ಪಗೆ ಕುಳಿತುಕೋ (ರಂಗಕ. ೦೦೯). ೨. ಪೆಚ್ಚಾಗಿ ; ಬೆಪ್ಪಾಗಿ : ನಾನೂ ತೆಪ್ಪಗೆ ಅವನ ಮುಖವನ್ನೇ ನೋಡುತ್ತಾ ನಿಂತಿದ್ದೆ (ಅಂಹೂ. ೪೯). ೩. ಆರಾಮವಾಗಿ ; ಸುಖವಾಗಿ ; ಹಾಯಾಗಿ : ತೆಪ್ಪಗೆ ಮದುವೆಯಾಗಿ ಸಂಸಾರಿಯಾಗು (ವಿದ್ಯಾಕಿ. ೩೬).

**ತೆಪ್ಪಗಾಗು** = ಸುಮ್ಮನಾಗು ; ಮಾತನಾಡದಿರು ; ಮೌನವಾಗಿರು : ಹೈದಿಗಳೆಲ್ಲ ಸದ್ದು ನಿಲ್ಲಿಸಿ ತೆಪ್ಪಗಾದರು (ಪುನರು. ೩೬೫); ಈ ಮಾತುಗಳನ್ನು ಕೇಳಿ ಕುಡುಕನು ತೆಪ್ಪಗಾದನು (ಹಮ್ಮಿಲ. ೨೦೦) ; ಇಬ್ಬರೂ ತೆಪ್ಪಗಾದರು (ಮುರುಳು. ೬). **ತೆಪ್ಪಗಿರು**=೧. ಸುಮ್ಮನೆ ಇರು; ಮೌನದಿಂದಿರು: ಟಪ್ಪು ತನ್ನ ಹಗೆತನವನ್ನೂ ಹಿರಿಯಾಸೆಯನ್ನೂ ತೊರೆದು ತೆಪ್ಪಗಿರಲಿಲ್ಲ (ಭಾಕರ. ೯೨೫) ; ಅವನು ಹೆದರಿ ತೆಪ್ಪಗಿದ್ದರೆ ಅವನ ಸಹೋದ್ಯೋಗಿಗಳು ಹೇಡಿಯೆಂದು ಭಂಗಿಸಿ, ಅವನನ್ನು ಸೈನ್ಯದಿಂದ ಹೊರಹಾಕುತ್ತಿದ್ದರೆಂದೂ ವಾದಿಸಿದನು (ಪುನರು. ೩೪೪). ೨. ಹಾಯಾಗಿರು; ನೆಮ್ಮದಿಯಿಂದಿರು: ನಾನೆ ಪೋಪೆನಮ್ಮಾಜಿ ತೆಪ್ಪಗಿರಿ ನೀವೆಂದ (ಭರಚ. ೩೬-೫೫) ; ಕೆಲವರು ರಾಜಕಾರಣವನ್ನು ಬಿಟ್ಟು ತೆಪ್ಪಗಿರಬೇಕೆಂದು ಯೋಚಿಸುತ್ತಿದ್ದರು (ಶಂಚಪಂ. ೦೮೦). 'ಸಪ್ಪಗೆ' ಪರಾ.

**ತೆಪ್ಪತೇರು** (ನಾ). ತೆಪ್ಪೋತ್ಸವದ ತೇರು ; ತೆಪ್ಪದ ರಥ : ಅವನ ತೆಪ್ಪತೇರಿನ ಮೇಲೆ . . . ನವಿಲುಹಿಂಡು ಕುಳಿತುಕೊಂಡು ಕಳಸಕ್ಕೆ ಕಪ್ಪು ತುಂಬುತ್ತವೆ (ಹಳ್ಳಿಬಾ. ೧೭). [ ತೆಪ್ಪ + ತೇರು$_2$ (<ತೇರ್$_2$) ]

**ತೆಪ್ಪತ್ತ** 'ತೆಪ್ಪಟು' ಪರಾ.

**ತೆಪ್ಪತ್ತು** 'ತೆಪ್ಪಟು' ಪರಾ.

**ತೆಪ್ಪನೆ** (ಅ). ೧. ಸುಮ್ಮನೆ ; ತೆಪ್ಪಗೆ : ಎಲೆ ಮರುಳೆ ! ನೀಂ ಭಯಂಬಡಬೇಡ, ತೆಪ್ಪನೆ ಸಡೆ (ಮಿತ್ರಗೋ. ೨೩) ; ಇಬ್ಬರೂ ತೆಪ್ಪನೆ ನಡೆದು ಬರುತ್ತಿದ್ದವು (ಮಗಮಾಂ. ೩೯). ೨. ಒಮ್ಮೆಲೆ ; ಇದ್ದಕ್ಕಿದ್ದಂತೆ ; ನಿಷ್ಕಾರಣವಾಗಿ : ಮುಂಪ್ಪಾಗ ಬೆಣ್ಣೆಯನ್ನು ತಪ್ಪದೆ ನಾ ಹಾಕಿ ಸಾಕಿದೆ ಒಪ್ಪದಿಂದ ಗಿಳಿಯು ಈಗ ತೆಪ್ಪನೆ ಹಾರಿ ಹೋಯಿತಯ್ಯೊ (ಪುಕಂಪ. ೦-೦೦೨-೪). ೩. ಹಾಯಾಗಿ; ಸುಖವಾಗಿ : ತೆಪ್ಪನೆ ಬೀಣೆವಾಡದೊಳಗಾಡುವ ವಾಣಿಯ ನೂಪುರಸ್ವರಂ (ಚಿಕವಿ. ೪-೧೧೪).

**ತೆಪ್ಪತೆಪ್ಪನೆ** (ದ್ವಿರುಕ್ತಿ) : ಅವ್ಯಯ ಪದಾಂತ ಲೋಪಕ್ಕೆ . . . ತೊಪ್ಪತೊಪ್ಪನೆ, ತೆಪ್ಪತೆಪ್ಪನೆ ಪುರುಳ್ (ಶಮದ. ೦೯೩ ಪ್ರಯೋ). **ತೆಪ್ಪನಾಗು** = ತೆಪ್ಪಗಾಗು ; ಸುಮ್ಮನಾಗು : ಸುಮ್ಮನಿರುವುದರಲ್ಲಿ ಪುರುಷಾರ್ಥವಿದೆಯೆಂದು ಭಾವಿಸಿ ಬಸಗೋಂಡ ತೆಪ್ಪನಾಗುತ್ತಿದ್ದ (ದೀಪಹ. II, ೧೪೩). **ತೆಪ್ಪನಿರು** = ತೆಪ್ಪಗಿರು ; ಸುಮ್ಮನಿರು : ಹುಟ್ಟುಗುಣಗಳ ಮನಶ್ಶಕ್ತಿ . . . ಗುಪ್ತಮನಸ್ಸಿನಲ್ಲಿ ಅಡಗಿಬಿಡುತ್ತದೆ. ಅಡಗಿದರೆ ಅಡಗಿರಲಿ, ಎಂದು ತೆಪ್ಪನಿರುವಂತಿಲ್ಲ (ಶಿಕ್ಷರ. ೬೪೯).

**ತೆಪ್ಪರಿಗೆ** (ನಾ). (ಕರಾ) ತೆಂಗಿನ ಗರಿಯ ಬುಡದಲ್ಲಿರುವ ಎಳೆಎಳೆಯಾದ ಹೊದಿಕೆ ; ತೆಂಗಿನ ಸೀರೆ ; ಸೀಬಿ : ನಾವು ಗವಿಯೊಳಗೆ ಹೋಗುವಾಗ ತೆಂಗಿನ ಗಿಡದ 'ತೆಪ್ಪರಿಗೆ'ಯ ಸೂಟಿಗಳನ್ನು ಬೆಳಕಿಗೆಂದು ಒಯ್ದಿದ್ದೆವು (ಗಂಗಾವ. ೬೩). [←ತುಳು. ತೆಪ್ಪರಿಗೆ, ಚಿಪ್ಪರಿಗೆ ]

**ತೆಪ್ಪರಿಸು** (ಕ್ರಿ). ಚೇತರಿಸು ; ಎಚ್ಚೆತ್ತುಕೊಳ್ಳು : ಶ್ರೀರಾಜ ಒಡೆಯ ಮಹಾಸ್ವಾಮಿಯವರು ಆ ಮಹಾಸಭೆಯ ವಿಕಾರ ವಿಲಾಸಗಳ ಉಮ್ಮಹವದನ್ನು ತರೆಗಿಡಿಸಿ ತೆಪ್ಪರಿಸಿ ನೇರ್ಪಡಿಸಿಕೊಂಡರು (ಮುಂತ್ರಿಕ. ೦೫೫-೨೨). [ತೆಪ್ಪರು (< ತೆಪ್ಪಟು ) + – ಇಸು$_3$ ]

**ತೆಪ್ಪರು** 'ತೆಪ್ಪಱು' ನೋ.

**ತೆಪ್ಪಸ** (ನಾ). = ತೆಪ್ಪ ೧ : ನರರ ತುರಂಗಂಗಳ . . . ಶರಹತಿಯಿನಾದ ಪಲ್ಲಟಗಡಿಗಳ್ ಪರಿವರಣಜಲದ ತೊಱೆಯೊಳ್ ತೆರಳ್ದು ತೆಪ್ಪಸದ ತೆಱದೆ ಪೆಂದವು ಧುರದೊಳ್ (ಮಹಾನೇ. ೫-೯೮). [< ತೆಪ್ಪ ]

**ತೆಪ್ಪಹಾಂಸೆ** (ನಾ). ನೀರಿರುವ ಪ್ರದೇಶದಲ್ಲಿ, ಬೇರು ಆಳಕ್ಕಿಳಿಯದೆ ನೀರಿನ ಮೇಲೆ ತೇಲಿ ಬೆಳೆಯುವ ಒಂದು ಬಗೆಯ ಸಸ್ಯ ; ಅಂತರ ಗಂಗೆ : ಅಂತರಗಂಗೆ ಅಥವಾ ತೆಪ್ಪಹಾಂಸೆ (ಮುಂಬಯಿ. ೬-೨೬೫).
[ತೆಪ್ಪ + ಹಾಂಸೆ (<ಪಾವಸೆ ) ]

**ತೆಪ್ಪಱು, ತೆಪ್ಪರು, ತೆರ್ಪಱು** (ಕ್ರಿ). ತೆಪ್ಪತ್ತ (ಭೂತಕೃ), ತೆಪ್ಪತ್ತು, ತೆರ್ಪತ್ತು (ಭೂತನ್ಯೂ). ಎಚ್ಚರಗೊಳ್ಳು ; ಚೇತರಿಸಿಕೊಳ್ಳು : "ತೆಪ್ಪಱು—ಚೇತನಕರಣೇ" (ಶಮದಾ) ; ಆಗಳ್ ತೆ[ಪ್ಪ]ತ್ತುಮೆಲ್ಲಿದನೆತ್ತಣ ನೆಂದು ಕರ್ಣನ ಕಳೇವರಮಂ ನೋಡಿ ನೋಡಲಾಱದೆ ಕಣ್ಗಳಂ ಮುಚ್ಚಿ (ಪಂಪಭಾ. ೧೩-೫೮ ವ) ; ಕೂಸು ಕಾಣದೆ ಬೆರ್ಚಿ . . . ಪೊಡರ್ವುಗೆಟ್ಟು ಮರವಟ್ಟಂತಂತೆ ತೆಪ್ಪತ್ತು . . . ಕಾಂತೆ ಪುಯ್ಯಲ್ಚಿದಳ್ (ಬಂಹರಿ. ೮-೫); ಮೂರ್ಛೆಗೆ ಸಂದ ರಾಯಂ . . . ಶೈತ್ಯೋಪಚಾರದತ್ತಣಿಂ ತೆಪ್ಪತ್ತನಾಗೆ (ರಾಮಾಶ್ವ. ೧೩-೨೨). **ತೆಪ್ಪರು** : ಕರೆಕರೆಯೂಂಪೆಳೊರ್ವೆ ನಿಜದೈವಮ ನೊರ್ವೆ ಕಡಂಗಿ ಬಯ್ದು ತೆಪ್ಪರುವವಳದೊರ್ವೆ ಚಿಂತೆ ತಲೆದೋರೆ ಪಲುಂಬುವಳೊರ್ವೆ (ಚಂದ್ರಪ್ರಭ. ೬-೨೬). △ **ತೆರ್ಪಱು**: "ತೆರ್ಪತ್ತಂ—ಮೂರ್ಛೆತಿಳಿದಂ" (ಶಮದ. ಪರಿ. ೨) ; ತೆರ್ಪತ್ತು ಬಿಟ್ಟು ನಮೆಯು ತ್ತಿರ್ಪರ್ ನಾರಕರ್ (ಶಾಂತಿಪು. ೭-೯೯) ; ಎಚ್ಚಱಬೆರ್ದೆಯಿಂದುರ್ಚಲ್ . . . ತೆರ್ಪತ್ತಾಗಳ್ (ವೀರವಿ. ೧೨-೩೬).

**ತೆಪ್ಪತ್ತುಕೊಳ್ಳು**=ಚೇತರಿಸಿಕೊಳ್ಳು; ಎಚ್ಚತ್ತುಗೊಳ್ಳು : ಸ್ವಲ್ಪಕಾಲ ದಲ್ಲಿಯೇ ಮೊಗಲನು ತೆಪ್ಪತ್ತುಕೊಂಡು . . . ರಂಗಸ್ಥಳದಿಂದ ಹೊರಕ್ಕೆ ಹೋದನು (ಭಾರವೀ. ೧೩೩); ಅಂದಿನಿಂದ ಅವರು ಸ್ವಲ್ಪ ತೆಪ್ಪತ್ತುಕೊಂಡು ಎದ್ದು ಊಟ ಮಾಡಲೂ ಅಲ್ಲಲ್ಲಿ ತಿರುಗಲೂ ಅನುವಾದರು (ನಗಿಗ. ೬೬).
[ ದೇ.॥ ತೆಲು. ತೆಪ್ಪಱು, ತೆಪ್ಪರು, ತೆಪ್ಪಿರು, ತೆಪ್ಪಿಱಿಲು, ತೆಪ್ಪಿಱು ]

**ತೆಪ್ಪೆ** 'ತೆಪ್ಪ' ನೋ.

**ತೆಪ್ಪೋತ್ಸವ** (ನಾ). ತೆಪ್ಪದಲ್ಲಿ ದೇವರನ್ನು ಕೂರಿಸಿ ಮಾಡುವ ಉತ್ಸವ,—ಮೆರವಣಿಗೆ: ನಮ್ಮ ದೇವಾಲಯಗಳ ಲಕ್ಷದೀಪ ತೆಪ್ಪೋತ್ಸವ, ದೀಪಾರಾಧನೆಗಳಲ್ಲಿ ಅಸಂಖ್ಯಾತ ದೀಪಗಳನ್ನು ಹಣತೆಯಲ್ಲಿ ಉರಿಸುತ್ತೇವೆ (ದಾಲಪ್ರ. III, ೧೩೬೯). **P** ಈ ರೂಪ ವ್ಯಾಕರಣ ಶುದ್ಧವಲ್ಲ.

**ತೆಬ್ಬಱಿಸು** (ಕ್ರಿ). ೧. ಹಾರು ; ನೆಗೆ ; ಚಿಮ್ಮು ; ಪುಟನೆಗೆ : ಎತ್ತಂ ತೆಬ್ಬಱಿಸಿಯಾಡುವಟ್ಟೆಗಳುಬ್ಬರದಿಂದೊಱೆದು ಪರಿವ ರುಧಿರಸ್ರೋತಂ (ನೇಮಿಪು ೧೧-೦೪೪). 'ಟೆಪ್ಪರಿಸು' ಪರಾ. ೨. ಉತ್ಸಾಹಗೊಳ್ಳು ; ಹುರುಪನ್ನು ಪಡೆ : ಇರ್ವರುಂ ಪರಸಿ ತಡವರಿಸಿಯುಂ ತೆಬ್ಬಱಿಸಿ ಯುಮಮಟ್ಟಱೊಳಪ್ಪಿಕೊಂಡು (ಪಂಪಭಾ. ೧೩-೮ ವ) ; ಆನಂದಿತಚಿತ್ತರಾಗಿ ತಡವರಿಸಿಯುಂ ತೆಬ್ಬಱಿಸಿಯುಂ ತೆಗೆದಪ್ಪಿಯುಂ (ಗದಾಯು. ೩-೦೪ವ) : "ಚೇತರಿಸಿಕೊಳ್ಳುವಂತೆ ಮಾಡು" (ಗದಾಸಂ. ಟಿಪ್ಪ ಣಿ) ;ಕರವಾಳ ಘಾತದಿಂ ಪರಿದುರುಳ್ವ ತಲೆಗಳೆನವುಂಕಿ ಒಡಿದರಬರ್ ತೆ[ಪಾಠಾಂ. ಟೆ]ಬ್ಬಱಿಸಿ ಮಗುಟ್ವಟ್ಟೆಯೊಳ್ ಬತ್ತರದಿಂ ಬೀರಕ್ಕೆ ಕಳಶವಿಡುವಂತಿಟ್ಟರ್ (ಚಂದ್ರಪು. ೧೧-೭೩). [ <ತೆಬ್ಬು$_1$ + – ಇಸು$_3$ ]

**ತೆಬ್ಬು$_1$** 'ತುಬ್ಬು$_1$' ನೋ.

**ತೆಬ್ಬು$_2$** 'ತಿರುವು$_3$' ನೋ.

**ತೆಮಟೆ** 'ತೆಟ್ಟೆ' ನೋ.

**ತೆಮರ್$_1$, ತೆಮರು$_1$, ತೆಮಱು, ತೆವರು$_1$** (ಕ್ರಿ). ೧. ಅಟ್ಟು; ಓಡಿಸು; ನಿವಾರಿಸು : ತಿಮಿರಭ್ರಮರವ್ರಜಮಾಕ್ರಮಿಸಿರೆ ಭಗಣಪ್ರಸೂನಕುಲಕಿಂದ್ರ ದಿಶಾರಮಣಿ ತೆಮರಲ್ಕೆ ಚಂಪಕಸುಮಕಂತುಕಮಿಟ್ಟಳೆನಿಕುಮಾ ವಿಧು ಬಿಂಬಂ (ರಾಜಶೇ. ೧೧-೯೬) ; ಪರಿತಂದು ತಿಮಿರ ಮಧುಪೋತ್ಕರಮುಡು ಸುಮಚಯಕೆ ಬಳಸಿ[ ಸೆ] ತೆಮರಲ್ ಭರದಿಂ ಹರಿದಿಗ್ವಧುವಿಟ್ಟತಿಭಾಸುರ ಚಂಪಕದಿಂಡೆಯೆನೆ ನಿಶಾಕರನೆಸಗುಂ (ವಿಷ್ಣುಪು. ೫-೩-೧೧೧) ; ನೋಡಿದನ ವಿಳಾಘಮಂ ತೆಮರ್ವ ಕಣ್ಗಳಿಂ (ಶಬರಂ. ೫-೪೦) ; ಐದು ಕೋಶಗಳ ಹೊಕ್ಕೈದು ಯೋಗಗಳ ಮಿಕ್ಕೈದು ಲಕ್ಷಣವ ತೆಮರ್ದೈದು ವಿಷಯಗಳ ನೆಮರ್ದು (ಕೈಶವ. ೧-೩೧-೩). ೨. ಹೆದರು ; ಬೆದರು ; ಹಿಮ್ಮೆಟ್ಟು : ಸೆಡೆದನೆಂದುಂ, ನಡುಕಂಗೊಂಡನೆಂದುಂ . . . ತೆಮರ್ದನೆಂದುಂ – ಈ ರ ಭಯಂಗೊಂಡವಂ (ಶಶಸಾ. ೧೩-೨೨೫) ; ಜನ್ಮಾರ್ಜಿತಾಘಂಗಳುಂ ತೆಮರ್ಗುಂ (ಶಮಗೂ. ೩-೩೯೭). ೩. ಹೀಯಾಳಿಸು ; ತಿರಸ್ಕರಿಸು : ಏಮೆದುಱುಗಲ್ಮವಲ್ತು ಕುಡಿಗೊಂಡಪೊಲಾಗಿರೆ ಸೋಗೆ ಸೋಗೆಯಂ ತೆಮರ್ವಪೊಲೊಪ್ಪೆ ಸೋಮರ್ಮಡಿ . . . ಕಂಗೆಸೆದುದಗ್ಗದ ಪೂರ್ವವಿಳಾಸಿನೀಜನಂ (ರಾಜಶೇ. ೧೨-೫೫) **ತೆಮರು$_1$** : ೧. ವಿಭ್ರಮ ಮಟೆದಿರ್ಪುಗುಂದಿ ಬಸಿಱಂ ಪೊಸೆದೆತ್ತಿನೊಳೊಂದಿ ನಿಂದರಂ ತೆಮರಿ ತೆರಳ್ಕೆ ಕಾರ್ಯಮಣವಿಲ್ಲದ ಬಿಣ್ಪಟಿದೂರ್ವಳೊಪ್ಪಿದಳ್ (ರಸರ. ಪರಿ. ೦೦೯). △ **ತೆಮಱು** : ೧. ನಡೆದುಚ್ಚಂಗಿಗೆ ಬಂದ ರಾಯದಳವಂ ಕಯಿ ಕೊಳ್ಳದೊಂದಂಗದಿಂ ಬಿಡದೆಚ್ಚಾಡಿ ಸರಂಗಳಿಂ ತೆಮಱಿಯಂತಾ ಸೇನೆ ಪಿಂಗಲ್ಕೆ ತಾಂ ಪಡೆದಂ ವೀರದ ಪೆರ್ಮೆಯಂ (ಎಕ. V, ಅರಸೀ.೦೦೬—೨೧ ; 1255). **ತೆವರು$_1$** : ೧. ತುಂಬಿ ತುಂಬಿಯನಟ್ಟುವಂತಳಕವಳಕವರಲಂಬಱು ತೆವ[ಪಾಠಾಂ. ಮ]ರುವಂತೆ . . . ಚಿಟ್ಟುಮುಂರಿಯಾಡುತಿರ್ದರು ಸತಿಯರು (ಹಕಳಾ. ೪-೦೧) : ಮಕ್ಕಳನು ತಱಿದಿವರ ತೆವರಿಯೆ ರಾಜ್ಯಮಾಡುತಲಿ (ಕುಮಾ.ಆ. ಓರಿ೩. ೨೬-೦೦೫) ; ಭವಾಂತರದೋಷತಮವ ತೆವರುವ ನೇಸಱಿಂದೆನಿಪುದು (ಸೌಂದಪು. ೬-೪೫) ; ಗಿಳಿಗಳಂ ತೆವರುವ ಪಾಮರ ಸ್ತ್ರೀಯರ್ (ರೇವಣ. ೨೩-೯) ; ವಿಷಮನಮ್ಮುತಂ ಪುಣ್ಯಮಾ ಪಾಪವ ಸಲೆ ತೆವರುವಂತೆ ಪರವಾದಮಂ ಗೆಲ್ದು (ಚಬಸು. ೩-೨೮) : ಅಪ್ಪಳಿಸಿ ಹೊಯ್ದೆ ಳದು ಸದೆದಿಟ್ಟೊರಸಿ ಮೆಟ್ಟಿ ಸೊಪ್ಪಿಸಿ ಪೊರಳ್ದರದು ತೆವರಿ ಪರಿದರೆಯಟ್ಟಿ ಚಿಪ್ಪುಚೀರಾಗಿಸಿತು ಸಕಲ ಪರಿವಾರವಂ (ಪ್ರಮಿಭಾ. ೦೩-೫೦). ೨. ಇವನ ಕಾಣುತ ಸಕಲಸುರಮುನಿನಿವಹಮಾಚರಿಸಿತು ದೆಸೆದೆಸೆಗವಯವದ ಭೀತಿ ಯೊಳಗೋಡಿತು ಬ್ರಹ್ಮಮಟುನಿವಹ ತೆವರುತಿರ್ದವು ಖಗ ಮೃಗಾವಳಿ (ಅಂಬಿಕಾ. ೭-೪೪). ೩. ಅರೆನಗೆಯ ಬಿಱುನಗೆಯ ನಗೆಗಳ ಹೊರಳಿಗಳ ಲಡಬಿದ್ದು ಕೈದಾವರೆಯ ಕಮಲಂಗಳಲಿ ತೆವರಿದರಿಟ್ಟು ಭೂಭುಜರ (ತೊರವಾ ೧-೦೫-೮).

**ತೆಮರ್$_2$, ತೆಮರು$_2$, ತೆವರ್, ತೆವರ, ತೆವರಿ, ತೆವರು$_2$** (ನಾ). ೧. ದಿಣ್ಣೆ ; ಬೋರೆ ; ದಿಬ್ಬ ; ತಿಟ್ಟು : ಅಡವಿ ಬಯಲಾಗೆ ನದ ಮೊಟ್ಟುಮಡುಗೆ ತೆಮರ್ಸರಿಸವಾಗೆ (ಕಾವ್ಯಾವ. ೨೯೪) ; ತೆವರೆಲ್ಲಂ ಜೈನ ರಾಜಾಯತನಮೆ ಕುಱಿಯೆಲ್ಲಂ ನವಾಂಭೋಜಿನೀಷಂಡಮೆ ಪೌರೋದ್ಯಾನ ಮೆಲ್ಲಂ ಸುರಕುಜಮೆ (ಅನಂತಪು. ೩-೭) ; ಮುಂಡಿಗೆಯ ತುದಿಗಳಂ ಕುಟಿ ತೆಮರಂ ಪಸರಿಸಿ ತೆಳ್ಗಲ್ಗೊಳ್ ಘಟಿಯಿಸುವುದು ಸುಸ್ಥಾನಶಯನನಪ್ಪಂತ ನೆಲಂ (ಅಶ್ವಶಾ. ೭-೫). **ತೆಮರು$_2$** : ೧. ಪಳ್ಳದ ಬಡಗಣ ತೆಮರು (ಮೈಅರಿ. ೦೯೩೯, ೩೮-೯ ; 8 ನೆಯ ಶತ). **ತೆವರ್** : ೧."ದ್ವೀಪಃ, ಅಂತರೀಪಂ ಈ ೨ ನೀರ ನಡುವಣ ಕುರುವದ ಪೆಸರು. ಉದಕದ ತೆವರೆಂದು ಎಂಬರು" (ನಾಚಿರಾ. ೯೯) ; "ತೆವರಾರಯಲುದ್ದನೆಲಂ" (ಚತುನಿ. ೩೫) ; ಮೂಗಿಲಿಂದೆ ಜಿಗುವ ಮಟೆ ಕದಡಿ ಬರ್ಪ ತೊಱೆ ಬೆಟ್ಟು ತೆವರ್ ಮೊರಡುಪ ಜಲಧಿಗಳೆನೆ (ಆದಿಪು. ೬-೬೨) ; ತೆವರೆಲ್ಲಂ ದೇವತಾಮಂದಿರನಿವಹಮೆ (ಎಕ. XVI, ೩೮-೨೪ : 1152) ; ಕಲ್ಲಾಗಿ ಮಣ್ಣಾಗಿ ಕುಳಿಯಾಗಿ ತೆವರಾಗಿ (ಬಿಂದೋರೆ.ಹ. ೫೦೦-೭) ; ಕುಱುಯುಂ ತೆವರುಂ ಸಮನಾಯ್ತುದೆತ್ತಲುಂ

(ಪುಷ್ಪಪು. ೫-೪೬) : ಭೂಮಿಯ ಕುಳಿ ತೆವರ್ವೊದಲಾದುದಂ ನೋಡಿ (ಶ್ರಾವಕಾ. ೯೩-೨೨) ; ತೊರಳೆಗುಪ್ಪೆ ಮಜ್ಜೆಯ ತೆವರ್ ಸುಂಟಗೆಯ ಸಾಲ್ (ಚಿಬಪು. ೪೮-೫೬). **ತೆವರ** : ೧. ಆ ತೆವರದ ಶಿಲೆಯ ಕಂಬ (ಎಕ. XII, ತುಮಕೂ. ೩-೧೨ ; 1516) : ತಿಟ್ಟೆಯೊಳು ತೆವರದೊಳು ಹುಟ್ಟಿಹನೆ ಪರಶಿವನು ಹುಟ್ಟು ಸಾವುಗಳು ಅವಗಿಲ್ಲ ಜಗವನ್ನು ಬಿಟ್ಟಿಹನು ನೋಡ (ಸರ್ವಜ್ಞ. ೩೩೩). **ತೆವರಿ** : ೧. ತನೆ ತಿಂದ ಎತ್ತು ತೆವರಿಯನ್ನು ಏರಿತು (ಗಾದೆ). ೨. ಹೊಲ ಗದೆ ಮೊದಲಾದುವುಗಳ ಬದು,-ಏರಿ,-ಅಂಚು : ಗದ್ದೆಯ ತೆವರಿಯಲ್ಲಿ ಬರುತ್ತಿದ್ದ ದೊಡ್ಡನನ್ನು ದೂರದಿಂದಲೇ ಬೆಳ್ಳಿ ನೋಡಿದಳು (ಕಾಲಚಕ್ರ. ೪ ಕಥಾಸಾರ). **ತೆವರು₂** : ೧. ತಜ್ಞಾಣ ತೆವರು ಪಡುವ ಪಳ ಮೇರೆ (ಎಕ. V, ಅರಕ ೨೪-೧೩ ; ಕ್ರಿ. ೯೦೦) : ಉಗುಳ ನುಂಗಿ ಹಸಿವ ಕಳೆದು ತೆವರ ಮಲಗಿ ನಿದ್ರೆಗೆಯ್ದನಲ್ಲಾ (ಅವಚಂ. ೮೨-೩೬೮) ; ಕಡೆಯ ಹೊಲದ ತೆವರಿನಲ್ಲಿ ಮರ ತಾಗಿ ನೇಗಿಲು ಮುಱಿಯಿತ್ತು (ಮೋಳಿಮಾ. ೧೩೮-೩೧); ಗುರುಸೇವೆ ಕೈಕೊಂಡು ಹಿರಿದಾಗಿ ಮಾಡದರೆ ಹವಿದೇಱಿ ಮುಕ್ತಿ ಪಡೆಯುವಡೆ ಅದು ತಾನು ಹಿರಿದಾದ ತೆವರೆ (ಸರ್ವಜ್ಞ. ೫೬) ; ಸಂದಿಗೊಂದಿಯೊಳೆ ಹಿಡಿಸದೆ ತುಂಬಿದೆ ತಗ್ಗಿಲ್ಲ ತೆವರಿಲ್ಲ (ಸಹೀಗೀ. ೨೪-೪೧೯) ೨. ಗದ್ದೆಗೆ ತೆವರು ಗಟ್ಟಿಯಿರಬೇಕು (ಸಂಸ್ಕಾರ. ೨೬) ; ನಮ್ಮ ಎರೆಹೊಲದ ತೆವರಿನಲ್ಲಿ ಒಂದು ಒಳ್ಳೆ ಹಲಸಿನ ಮರವಿದೆ (ಚಂಗಾಳಿ. ೬೫). [ ? ]

**ತೆಮರು₁** 'ತೆಮರ್₁' ನೋ.

**ತೆಮರು₂** 'ತೆಮರ್₂' ನೋ.

**ತೆಮಲಿಸು** (ಕ್ರಿ). ನೂಕು; ತಳ್ಳು; ಕದಲಿಸು : ಮಱಿಯಂದದಿ ನಿಂದಿಹನ ಮತ್ತಾರು ತೆಮಲಿಪರೆಂದು ಬಳಲಿಕೆ ಸಾರಿದರು ಮೊದಲಿಂದ ಸೆಣಸಿದ ಖಚರಸಂತತಿಯೂ (ಜಿನಭಾ. ೫೨-೩೬).

[ತೆಮಲು (<ತೆಮಟ್) + – ಇಸು₃ ]

**ತೆಮಲು** 'ತೆಮಟ್' ನೋ.

**ತೆಮಳ್** 'ತೆಮಟ್' ನೋ.

**ತೆಮಳು** 'ತೆಮಟ್' ನೋ.

**ತೆಮಳ್ಚು, ತೆವರ್ಚು** (ಕ್ರಿ). = ತೆಮಲಿಸು : ಮೇಲುದಂ ತೆಮಳ್ಚಿ ಕುಚ ಮಂಡಳಂ ಕುಣಿಯೆ . . . ಘಟ್ಟಿವಳ್ತಿಯರದೇಂ ಮನಂಗೊಂಡರೋ (ಧರ್ಮನಾ. ೨-೮೪). **ತೆವರ್ಚು** : ಮೇಲುದಂ ತೆವರ್ಚುತ ಸುಯ್ದು ಬಿನ್ನಣದಿಂ ಬೇಟವಂ ಬೀರಿ ಮುಂಬರಿವವಳ (ರುಕ್ಮಾಂಗ. ೬-೬೧).

[ ತೆಮಳ್ (<ತೆಮಟ್) + – ಚು₁ ]

**ತೆಮಳ್ದು** 'ತೆಮಟ್ದು' ನೋ.

△ **ತೆಮಱು** 'ತೆಮರ್₁' ನೋ.

**ತೆಮಟ್, ತೆಮಲು, ತೆಮಳ್, ತೆಮಳಂ, ತೆವಳ್, ತೆವಳು** (ಕ್ರಿ). ೧. ಸೇರು ; ಕೂಡು ; ಬೆಂಬಲಿಸು : ಅಮಳರುಮೀ ಬೇಳ್ವೆಯ ಮಾತಂ ತೆಮಟ್ [ಪಾಠಾಂ. ತಮಗೆ] ನುಡಿದೊಡಮ್ಮ ಗಂಡಮಾತುಮಳುಂಬಂ ಭೃತಮಕ್ಕುಮೆಂದು (ಪಂಪಭಾ. ೬-೨೬ ವ). ೨. ತಿರುಗು ; ಹೊರಳು : ತೆಮಟ್ವನ್ನೆಗಂ ನುಣ್ಪಂ ತಿಣ್ಪುಮನೊಳಕೊಂಡು (ಶಾಂತಿಪು. ೯-೧೪೩ ವ). ೩. ಹೊಟ್ಟೆ ಮೇಲೆ ಭಾರ ಹಾಕಿ ಮುಂದೆ ಸರಿ ; ದೇಕು : ಏಱು ದಿವಸದೊಳ್ ತೆಮಟ್ದು ಪೆಱವೇಱುದಿವಸಕ್ಕೆ ತಳರ್ನಡೆ ನಡೆದಂ (ಆದಿಪು. ೫-೪೦ ವ) : ತಡೆಯದೆ ಕುಳ್ಳಿರಲ್ ತುರಿಪದಿಂ ತೆಮಟಲ್ ತದನಂತರಂ ತಳರ್ನಡೆ ನಡೆಯಲ್ (ಶಾಂತಿಪು. ೬-೦೦೬). ೪. ಮಾಸು : ಮಂಕಾಗು; ಮಸುಳು: ಮುಟ್ಟೆ ಮಾಡೆ ಸುಕರತ್ವಂ ತೆಮಟ್ದುಪ್ಪುದೆಂದು ಮನೋಜಾತ ನನಂಗನಾಗಿ ಮನದಿಂದಂ ಮಾಡಿದಂ ಪೆಣ್ಣ ಏದ್ದಮಂ (ಅನಂಪು. ೨-೦೩). ೫. ಸಮನಾಗಿರು; ಮಟ್ಟಸವಾಗಿರು: ತೆಮಟ್ದೆ ಕುಱಿಯಿಲ್ಲದೆಯುಂ ಸುಮನೋಹರಮಪ್ಪ ಕಕ್ಷಮತಿಶುಭದಂಗಳ್ (ಲೋಕೋಪ. ೧೧-೦೦). **ತೆಮಲು** : ೬. ಅಲುಗು; ಕದಲು; ಜರುಗಂ: ಜೈನರು ಬಸದಿಗಂ ಪೋಗಿ ಹೇಮಗದಗಳ ಬೀಗಮಂ ತೆಗೆದು ನೂಂಕಲುದ್ದಾಮದಿಂ ತೆಮಲದಿರಲವರು ವಾದಯ್ಕನಿಂದಾದ ವಿಘ್ನವಿದೆನ್ನಲು (ಪ್ರಭುಪು. ೮-೫೦) **ತೆಮಳ್** : ೩. ಮರಳಿ ಕೆಲಬರ್ ಕಾಲ್ಗಳೊಡೆದು ಮುಂದಣ್ಗಡಿಯನಿರದಿಡಲ್ಕಾಱ ದಂಬಳ್ಗೆಗಳಿಂ ತೆಮಳ್ದು ಭರದೆ ಬರ್ಪರ್ ಕೆಲರ್ (ಅರಾಜ. ೪-೩೩). ೬ 'ತೆಮಳ್ಚು' ಪರಾ. ೭. ಹಿಮ್ಮೆಟ್ಟು ; ದೂರವಾಗು : ಮದಂಭ್ರಿಯಂ ಸಮರ್ಚಿಪುದದಱಿಂ ತೆಮಳ್ಗಂ ದ್ವಿಜಘ್ನದೋಷಂ (ಹಸ್ತಿಮಾ. ೯-೨೪) **ತೆಮಳು** : ೮. ನಡೆಸು ; ಚಲಿಸುವಂತೆ ಮಾಡು : ಸುಮತಿಸಾಗರ ಮುಂದೆ ಭರದಿ ವಿಮಾನವ ತೆಮಳಿಕೊಂಡೆಯ್ದಿ ವಾರ್ತೆ ಯನು ನಮಿರಾಜಗಱುಹೆ (ಭರತೇ. ೩೮-೮). **ತೆವಳ್** : ೩. ಕೋಲ್ಗಳಿಂ ತೊಡೆಗಳಂ ಕತ್ತರಿಸೆ ನಾದಿದುವು ದೂಳ್ಗಳರುಣಾಂಬುವಿಂದೆದೆಯೊಳ್ತೆವಳ್ದು ಹಿಯಮೋಲ್ಗಂಡುಗಲಿ ಧನಂಜಯನ ಸಮ್ಮುಖಕೆ ಮೇಲ್ವಾಯ್ದನು (ಕೃಮಿಭಾ. ೧೪-೦೬) : ಗಱಿಗೆಯನಿತು ತೆವಳಲಿರ್ಪ ಉಸಿರಿಗಳಾ ಸಾಹಸಮ್ (ಬದ್ಕಪ್ರ. ೨೯-೬೧೯). **ತೆವಳು** : ೩. ಕರಯುಗದೊಳಿರಡು ಕೈಮಣೆವಿಡಿದುಕೊಂಡು ಪುರವರದ ಬೀದಿಯೊಳೊರ್ವ ಕುಂಭಕಾರಂ ತೆವ[ಪಾಠಾಂ. ಮ]ಳಿ ಬರುತಿರಲ್ಕೆ (ಸಮ್ಯಕ್ತಾ. ೨-೪೨) ; ಮೆಲ್ಲನೆ ತೆವಳಿ ಆಡುವ ಕಿಱುವರೆಯದಂದಂಗಳದೊಳಾಡುತಲು ಹರಿಯಿರಲು (ಸಾಳ್ವಭಾ. ೨೧-೪೩) ; ಕಾಲೊಡೆದು ಕೆಲವು ದೂರ ತೆವಳುತ್ತ ಪೊರಳುತ್ತ ರಕ್ತಂ ಸುರಿವುತಾ ರಮಣಿ ಬರುತ್ತಿರಲ್ (ಪಾಸೋಪು. ೪-೧೪೮) : ಇರದಮೃತ ಕಾಂತೆಯಂ ಕೈವೀಸಿ ಕರೆವಂತೆ ಕರವ ಮುಂದಿಟ್ಟಲ್ಲಿ ತೆವಳುವಳು ಬಳಲುವಳು (ಸಿದ್ಧಕಾ. ೫-೩೦); ಕೊನೆಯ ನಾಲ್ಕೈದು ಮೈಲಿಗಳನ್ನಂತೂ ತೆವಳಿಕೊಂಡು ಬಂದ ಹಾಗೇ ಬಂದಿದ್ದ (ಅನಾಥ. ೨೬೩) ; ಉತ್ತು ಬರುವ ಮಗ ತೆವಳಿ ಬಂದರೆ ಹೆತ್ತ ತಾಯಿಯ ಪುಣ್ಯ (ಗಾದೆ). ೯. ನಿಧಾನವಾಗು; ಮಂದಗತಿಯಾಗಂ : ದೈಹಿಕ ಶಿಕ್ಷಣಕ್ಕೆ ನೆರವಾಗುವ ಚಟುವಟಿಕೆ ತೆವಳುವುದು (ಶಿಕ್ಷರ. ೭೮).

[ ದೇ.೩ ತಮಿ. ತವಟ್, ತಿವಳ್; ಮಲ. ತವಿಟು; ತೆಲು. ತೆಮಲು ]

**ತೆಮಟ್ದು, ತೆಮಳ್ದು** (ಕ್ರಿ). ೧. ಒಟ್ಟುಮಾಡು ; ಒಂದುಗೂಡಿಸು ; ಕೂಡಿಸು ; ಸಂಗ್ರಹಿಸು : ತುಮುಳಯುದ್ಧದೊಳಿಂತೆ ನಿರಂತರಂ ತೆಮಟ್ದಿ ಕಾದಲೆ ನಮ್ಮಯ ಸತ್ಪರಾಕ್ರಮಮನೆಂತಱಿಗುಂ ಜಗಮಂತಱಿಂ ಕ್ರಮದಿನೊರ್ವರೊಳೊರ್ವರೆ ಕಾದುವಂ (ನೇಮಿಪು. ೦೨-೨); ವಿರಹಾನಲನಾಳಿಯರೊಂದಹರ್ನಿಶಂ ತಳಿಯೆ ತೆಮಟ್ದು [ಪಾಠಾಂ. ದರ್] ಪೀರ್ದ ಪಱನೀರ್ಗಳನಟ್ಟಿಸಲಾಱದೆಯ್ದೆ ಕಂಟಳಿಸಿ ಮಗುಳ್ಚಿದಪ್ಪು ದೆನಲುಮ್ಮನೆ ಕಾಮಿನಿಯೋಂ ಬೆಮರ್ತಳೋ (ಲೀಲಾವ. ೦೨-೩೮) : ಮೂಲೋಕಮುಮಂ ತನ್ನೊಂದು ಜೋಗದ ಜಾಣ್ಮೆಯ ಮೈಮೆಯ ಬಲ್ಮೆಯಿನೊರ್ಮೊದಲೊಳೆ ತೆಮಟ್ದಿ ಬಿಚ್ಚಟಿಸಿ ನೋಡಲ್ (ರಾಮಾಶ್ವ. ೬೯-೦೬). ೨. ಬಳಿದುಕೊಳ್ಳು ; ಪೂಸು ; ಹಚ್ಚಿಕೊಳ್ಳು : ಕುಮುದದ ಕೇಸರರಜಮಂ ತೆಮಳ್ದಿ ತಟ್ಟೈಸಿ (ಲೀಲಾವ. ೫-೮೫). **ತೆಮಳ್ದು** : ೧. "ತೆಮಳ್ದು – ಚಯನೇ (ಕೂಡಿ ಹಾಕು) (ಶಮಧಾ)". ೩. ಒಟ್ಟಾಗು ; ಒಂದುಗೂಡಂ : ತಾಳ್ದನಸುರಾರಿ ಭೀತಿಯನೆಳ್ದೋಡಿದನಿಂದ್ರನಖಿಳದೇವ ಪ್ರತತಿ ತೆಮಳ್ದುದು (ವೀರವಿ. ೦೦-೮).

**ತೆಮಟ್ದಿಕೊಳ್** = ೧. ಒಟ್ಟುಮಾಡಂ ; ಒಂದುಗೂಡಿಸಂ : ಜಾತ ರೂಪಧರನಾಗಿ ತನ್ನ ಪಱಿದು ಬಿಸುಟ ಸಹಸ್ರಕುಂತಳಂಗಳಂ ತನ್ನ ತಳದೊಳ್ ತೆಮಟ್ದಿಕೊಂಡು ತುಂಬಿಯ ಬಂಬಲ್ಗಳಂ ಕೆಂದಾವರೆಯರಲ್ಗಳೊಳ್ ಪುದಿದುಯ್ವಂತುಯ್ದು (ಆದಿಪು. ೨-೩೯ ವ) : ತಾನುಗುಱುತ್ತು ಮಿರ್ಪ ಪೊಸಗಂಪುಮನಿತ್ತೆ ತೆಮಟ್ದಿಕೊಂಡು ಮಂದಾನಿಳನುಯ್ಯುತಿರ್ಪ

ತನಿಗಂಪುವುನಿತ್ತು . . . ಗಡಂ ಪ್ರಫುಲ್ಲವಲ್ಲೀನವಪುಷ್ಪಮೋಗರದ ಕಂಪು ಗಳಾಗರವಾಯ್ತು ಸುಗ್ಗಿಯೊಳ್ (ಚಂದ್ರಪ್ರ. ೭-೪೯). ೨. ಬಳಿದು ಕೊಳ್ಳು; ಪೂಸು; ಲೇಪಿಸಿಕೊಳ್ಳು : ಕದಂಬೋತ್ಕರಂ ಮಣಲಂ ತೆಮಟ್ಟಿ ಕೊಳುತಂ ಭೂರೇಣುವಂ . . . ಪೊಕ್ಕುದು ಬೀಡಂ ಲಯಕಾಲಕಾಲ ವಿಚಲದ್ವೀಮಾರುತಂ ಮಾರುತಂ (ಕಾವ್ಯಾವ. ೪೦೯). [ <ತೆಮಟ್ ]

**ತೆಮ್ಮ** 'ತೊಂಬೆ$_1$' ನೋ.

**ತೆಮ್ಮಲ್, ತೆಮ್ಮಲಂ** (ನಾ). ಗುಂಪು; ಸಮೂಹ : "ಬಂಬಲ್, ತುಱುಗಲ್ . . . ತೆಮ್ಮಲ್, ಗುಪ್ಪೆ, ಗೊಂದಣ (ಉಂದಲ್) ಈ ೪೦ ಸಮೂಹಂ" (ಕಶಸಾ. ೫೯-೨೨೨); "ತಂಡಂ ತೆರಳ್ಕೆ . . . ತೆಮ್ಮಲ್ . . . ಪಂಡಿತರಿಂ ಗಡಣ ವಂಗಡಂ ಕಿಕ್ಕಿಂದಂ" (ಕವಿಕಂ. ೦೦೬). **ತೆಮ್ಮಲು** : ತೆಮ್ಮಲಿನ ತಿಂಡಿಗಳ್ ಹಸುರಲೆಯು ತಟ್ಟೆ (ಕಾದಂಬ. ೬೩-೦೦೯). "ಸಂಗ್ರಹ" (ಕಾಲಂಬ. ಕೋಶ). [ ತೆಮ್ಮ (<ತೊಂಬೆ$_1$) + – ಅಲ್$_2$ ]

**ತೆಮ್ಮಲು** 'ತೆಮ್ಮಲ್' ನೋ.

**ತೆಮ್ಮೂಡಲು** 'ತೆಂ' ಪರಾ.

**ತೆಮ್ಮೂಡು** 'ತೆಂ' ಪರಾ.

**ತೆಮ್ಮೆ** 'ತೊಂಬೆ$_1$' ನೋ.

**ತೆಮ್ಪೊಲ** (ನಾ). ದಕ್ಷಿಣ ದಿಕ್ಕಿನಲ್ಲಿರುವ ಹೊಲ : ಬಸದಿಗೆ ಪಡುವಣ ಕೆಱ್ಱತೋಣ್ಬಮುಂ ತೆಮ್ಪೊಲದೊಳ್ಮಾಲ್ಗೊಳೆವೆಡೆ ಪಳ್ಳ ಕಳನಿ (ಎಕ. X, ಕೋಲಾರ. ೯೦-೯೩ : ೨೦೩). 'ತೆಂಬಾಲ' ಪರಾ. [ ತೆಂ + ಪೊಲ ]

**ತೆಯ್** 'ತೇ$_1$' ನೋ.

**ತೆಯಲಯ್ಯಜೂಬು** (ನಾ). ಒಬ್ಬಾತನ ಹೆಸರು : ತೆಯಲಯ್ಯಜೂಬು ಕಾಲಂ ಕಟ್ಟಿ . . . ಎಱೆಯ[ರ]ಸಂಗೆ ಬಿಟ್ಟಗ್ರಹಾರ (ಎಕ. I, ೯೦-೦ ; 10ನೆಯ ಶತ). . [ ? ]

**ತೆಯಲ್ಲಿ** (ನಾ). ಒಂದು ಬಗೆಯ ಆಯುಧ (?) : ಖಡಲ್ಲಿ ತೆಯಲ್ಲಿ ಬಿಲ್ಲು ನಾರಾಚ ಗದೆ . . . ಚಲುತಲಿ ಮೊದಲಾದ ಬತ್ತೀಶಾಯುಧಾ ಶಕ್ತಿಸಮರ್ಥಕರಾದಾ (ಎಕ. XVI, ಗುಬ್ಬಿ. ೭೯-೨೦ ; 1776). [ ? ]

**ತೆರ$_1$** 'ತೆಱ$_1$' ನೋ.

**ತೆರ$_2$** 'ತೆಱ$_2$' ನೋ.

**ತೆರಂ** 'ತೆಱಂ' ನೋ.

**ತೆರಂಗುಣಿ** (ಕ್ರಿ). ಚೆನ್ನಾಗಿ ಕುಣಿ ; ಅತಿಶಯವಾಗಿ ನರ್ತಿಸು : ಎನಗಿದ ಎಂತೆ ಮೆಯ್ಯನ್ನುಡುಕವೋಪೂ ನವಿರ್ಗುಡಿಗಟ್ಟುತಂ ಚಿಳಿಲ್ಲನೆ ಬೆಮರಶ್ರು ಮಾಲೆ ಬಗೆದೇಂಕು ತೆರಂಗುಣಿವಾಸೆ ಪೊಂಕಮೇಕೆನಿತೊ (ಸಂಕಪ. ೨೦-೩೩). [ ತೆರಂ (<ತೆಱಂ) + ಕುಣಿ$_1$ ]

**ತೆರಂಟು, ತೆರಟು$_1$** (ಕ್ರಿ). ವಧೂವರರಿಗೆ ಉಡುಗೊರೆಯನ್ನು ಕೊಡು; ಮುಯ್ಯಿಕೊಡು: "ತೆರಂಟುನಿವಸನೋದ್ವಹನೇ (ಮುಯ್ಯ ಸೀರೆ ಕೊಡು) (ಕಮುಧಾ); ನಿತ್ಯ ಬಿಂದುಗೆ–ಬಿಡಂಗು ... ತೆರಂಟು, ಸೀಂಟು (ಕಮುದ. ೩೬ ಪ್ರಯೋ). **ತೆರಟು$_1$**: "ತೆರಟು–ನಿವಸನೋದ್ವಹನೇ" (ಕಮುಧಾ. ಪ). 'ತೆಲ್ಲಂಟ್' ಪರಾ. [ <ತೆಱು$_1$ ]

**ತೆರಂಬಿಡು** (ಕ್ರಿ) ತೆರವಾಗಿ ಬಿಡು ; ಖಾಲಿ ಮಾಡು : ಅವು ಮುನ್ನ ತಮಗಿರ್ದ ಗೌರವಕ್ಕೆಳ್ಳು ನೀರ್ ಕೊಟ್ಟು ದಿಕ್ಕುಗೆಟ್ಟೋಡುವುವು. ಬಾಳ್ ಭೂಮಿ ಸರ್ವಮಂ ವೈರಿಗೆ ತೆರಂಬಿಟ್ಟು (ಶ್ರೀರಾಮಾ. ೬೬೩-೧೧೪). [ ತೆರ$_2$ (<ತೆಱ$_2$) + ಬಿಡು$_1$ ]

**ತೆರಕೊಡು** 'ತೆಱಕೊಡು' ನೋ.

**ತೆರಗಾಲ** (ನಾ). ಒಂದು ಪ್ರದೇಶದ ಹೆಸರು (?): ಪೆರ್ಮ್ಮಾಡಿಗಾವುಣ್ಣನ ಪೆಣ್ಣತಿ ಚಾವುಣ್ಣಬ್ಬೆ ಇ ದೇಗುಲವ ಮಾಡಿಸಿ ತೆರಗಾಲಂ ದೇವಟ್ಟ ಬಿಟ್ಟಳ್ (ಮೈಆರಿ. ೦೯೩೦, ೦೪-೯ ; ಸು. 870). [ ? ]

**ತೆರಟು$_1$** 'ತೆರಂಟು' ನೋ.

**ತೆರಟು$_2$** (ಕ್ರಿ). ೧. ದುಂಡಗೆ ಮಾಡು ; ಸಂತ್ರು ; ಸಂರಂಳಿ ಮಾಡು. ೨. ಸೇರಿಸು : ಕೂಡಿಸು ; ಹೊಂದಿಸು : (ಕ).

[ ದೇ.ಕ ತಮಿ. ಮಲ. ತಿರಟ್ಟು ]

**ತೆರಟು$_3$** (ನಾ). ಹಿಂದಕ್ಕೆ ಬೀಳುವಿಕೆ ; ಹಿಂದಿರುಗುವಿಕೆ ; ಕೆಳಗೆ ಬೀಳುವಿಕೆ (?) : ಮುಗ್ಗಿಗಳ ಮಿಗೆ ಕೂಡಿ ಕಳೆದರೆ ಸಗ್ಗವಹುದೇ ಮುಂದೆ ಭಾಗಿಸಿಯುಂಗ್ಗಡದ ಘನವರ್ಗಮೂಲವನಱಿದೊಡೀ ಭವದ ಹಗ್ಗ ಹರಿದೇಱುವನೆ ಮುಕ್ತಿಯ ದುಗ್ಗವನು ಕೇಳಯ್ಯ ತೆರಟಿನ ಬುಗ್ಗಿಯಲ್ಲದೆ ಬರೆದೊಡಂತ್ಯದೊಳಿಲ್ಲ ಸುಖವೆಂದ (ಪ್ರಭ್ವಾಚ. ೭-೦೯) : "ಕಷ್ಟ" (ಪ್ರಭ್ವಾಚ. ಕೋಶ). [ ? ]

**ತೆರಟುವಾಲ್** (ನಾ). ಕುದಿಸಿ ಗಟ್ಟಿಗೊಳಿಸಿದ ಹಾಲು : ಬಟ್ಟವಾಲ್ ತೆರಟು[ಪಾಠಾಂ. ಡು]ವಾಲ್ ಚಿಲುವಾಲುಮೆಸರನದಕಟ್ಟು ಹಸಮಾಡು ವುದು (ಸೂಪಶಾ. ೨-೩). [ ←ತಮಿ. ತಿರಟ್ಟುಪ್ಪಾಲ್ ]

**ತೆರಣಿ$_1$** 'ತೆರಳಿ' ನೋ.

**ತೆರಣಿ$_2$** 'ತೆರಳೆ$_2$' ನೋ.

**ತೆರಣಿ$_3$** (ನಾ). ಒಂದು ಬಗೆಯ ಸಸ್ಯ : ಹತ್ತಿರಾಣಿಕೆ, ಸಲ್ಲ, ಹದ್ದರಣೆ, ಬಿಳಚಿ, ತೆರಣಿ, ಕಕೋರ್ಲ (ಮ್ಯಾಕಿಆ. ೬೩-೦೨೬೯). [ ? ]

**ತೆರಣೆಗಟ್ಟು** (ಕ್ರಿ). ಒಟ್ಟುಗೂಡಿಸಿ ಕಟ್ಟು ; ಉಂಡೆಗಟ್ಟು : ಕಂಚಿನ ಕರಡಗೆಯೊಳಗೆ ಕಂಬಿಯ ತೆರಣೆಗಟ್ಟಿ ನಿಂತಾಳು (ಅವಕಂ. ೨೯೭-೦೩೦೦).

[ ತೆರಣಿ$_2$ (< ತೆರಳೆ$_2$) + ಕಟ್ಟು$_1$ ]

**ತೆರಣೆ** 'ತೆರಳಿ' ನೋ.

**ತೆರತವಳಿ** (ನಾ). ಒಂದು ಬಗೆಯ ಸೀರೆ : ಕುಂಬಳಗಂಟಿ ತೆರತ [ಪಾಠಾಂ. ಥ] ವಳಿ ತೆಳುಗಾವಿಯುಂ ಬಿಳಿದಿನ ಸೀರೆ ಬರಹ ನಿಂಬೆಯ ಕಾಯ ಪೊಪ್ಪಳಿ ಕರ್ಕವಾಡಗಳೆಂಬ ಸೀರೆಗಳೊಪ್ಪೆ ಮೆರೆಯೆ (ಅಮುಸಾಂ. ೪-೦೯).

[ ? + ಪಳಿ$_6$ (< ಪಟ್ಟೆ) ]

**ತೆರಪಿಚು** (ಕ್ರಿ). ತೆರವುಮಾಡು (?) : [ ಕೊ ] ಡಕುಣಿಯ ಸ್ಥಳದ ಸೇನ ಬೋವನೂ ಕರಸಿ ಆತನ ಮಹಿಪ್ರಮಾಣಿನಲೂ ನೇಮಿಚಂದ್ರದೇವರೂ ಮಾಡಿಕೊಂಡ ಬಾಳ ತೆರಪಿಚಿ ಪಾಲಿಸಿದ ವಿವರ (ಕಇ. III, ೦೦-೦೯; 1542).

[ ತೆರಪು (<ತೆಱಪು) + – ಚು$_1$ ]

**ತೆರಪು** 'ತೆಱಪು' ನೋ.

**ತೆರಪುಕೊಡು** 'ತೆಱಪುಗೊಡು' ನೋ.

**ತೆರಪುಗಾಣಿಸು** 'ತೆಱಪುಗಾಣಿಸು' ನೋ.

**ತೆರಪುಗೆಯ್** (ಕ್ರಿ). ಹೋಗಲಾಡಿಸು ; ಕಳೆ ; ನಿವಾರಿಸು : ಭಾಸ್ಕರ ಬಾಣಮಂ ತೆಗೆದು ಪೂಡೆಚ್ಚು ಖಳನ ಕೃತತಿಮಿರಮಂ ತೆರಪುಗೆಯ್ಯ ಹರಿದುದು ಕತ್ತಲೆಯು (ನವಮೋ. ೬೨-೨೦).

[ ತೆರಪು (< ತೆಱಪು ) + ಕೆಯ್$_1$ ]

**ತೆರಪುಗೊಡು** 'ತೆಱಪುಗೊಡು' ನೋ.

**ತೆರಪುಮೊಳೆ** (ನಾ). ಅಕ್ಷರದ ಮೊಳೆಗಳನ್ನು ಜೋಡಿಸುವಾಗ ಜಿಡುವಿ ನಲ್ಲಿ ಸೇರಿಸುವ ತಗ್ಗು ಮೊಳೆ : ಸೂಚೀ ಚಿಹ್ನೆಗಳು . . . ತೆರಪು ಮೊಳೆ ಗಳು . . . ಮತ್ತು ಸಂಯುಕ್ತಾಕ್ಷರಗಳೂ ಇರುತ್ತವೆ (ಮುದ್ರಕ. ೦೯).

[ ತೆರಪು ( <ತೆಱಪು) + ಮೊಳೆ$_2$ ]

**ತೆರವು$_1$** 'ತೆಱವು$_1$' ನೋ.

**ತೆರವು$_2$** 'ತೆಱವು$_2$' ನೋ.

**ತೆರವೆ** 'ತೆಱವೆ' ನೋ.

**ತೆರಸ** 'ತೇರಸ' ನೋ.

**ತೆರಸಿ** 'ತೇರಸಿ' ನೋ.

**ತೆರಸು** (ನಾ). ತೆರೆಯುವಿಕೆ ; ವಿಕಾಸ : ಕಣ್ದೆರೆಯ, ನಿನ್ನ ಕಣ್ಣಿಂದುವಿನ ದೆರಸಂ ಮರಸದೆನ್ನಲಿ ಎನ್ನ ! (ಗಿರಿಪಿಂ. ೫೦-೧೩).

[ ತೆರ್$_1$ (< ತೆಱ$^1_1$) + – ಸು$_2$ ]

**ತೆರಹು$_1$** (ಕ್ರಿ). ಬಿಚ್ಚು ; ತೆರೆ : ಸರಸಿಗೆ ತೆರಹಿ ತೋರುವದು ಜಗವು ಹೃದಯವ (ಉಯ್ಯಾ.ಕ. ೨೨-೬). [ ತೆರ್$_1$ ( < ತೆಱ$^1_1$ ) + – ಹು$_1$ ]

**ತೆರಹು$_2$** 'ತೆಱಪು' ನೋ.

**ತೆರಹು$_3$** (ನಾ). ಕಾಣಿಕೆ ; ಕಪ್ಪ ; ತೆರಿಗೆ : ತೆರಹುಗಳ ತತ್ತು ವರಹದ ಭಂಡಾರ ಅಂತು (ಎಕ. IX(S), ಶಾಸನಕಾ. ೩೩-೬ : 17ನೆಯ ಶತ).

[ ತೆರ್$_2$ (< ತೆಱ$^1_2$) + – ಹು$_2$ ]

**ತೆರಹುಗುಡು** 'ತೆಱಪುಗೊಡು' ನೋ.

**ತೆರಳ್, ತೆರಳು** (ಕ್ರಿ). ೧. ಹೋಗು ; ಚಲಿಸು ; ಸರಿ ; ನಡೆ : ದಿಗ್ಗಜಂ ದೆಸೆಯಿನತ್ತ ತೆರಳ್ದುವು (ಪಂಪಭಾ. ೧೦-೭೧) : ಎಸೆವ ನಭಸ್ಸರೋವರದೊಳುಣ್ಮಿ ಕೆಲಕ್ಕೆ ತೆರಳ್ದ ನೀಲಿಕಾಪ್ರಸರವೊ . . . ಎಂದೆನಿಸಿತಂದು ಪುರಂದರಚಾಪವಿಭ್ರಮಂ (ಚಂದ್ರಪ್ರ. ೪-೫೦) : ಮಹಾಸಂಗರದೊಳೊಬ್ಬರನೊಬ್ಬರೊಪ್ಪಿಸಿ ತೆರಳರಾಗದು (ಕುವ್ಯಾ.ದ್ರೋ. ೨-೭) : ಹಸಿವು ನೀರಡಿಕೆ ಸಂತಾಪವ ನೆಱೆ ವಾರಿಸಿಕೊಂಡು ಬಲಗೂಡಿ ತೆರಳ್ದು (ಮೋಹತ. ೧೯-೬೦): ತೆರಳು, ತೆರಳುವೊಡಿನಿಯ ; ಪಥದಲಿ ನಿನಗೆ ಮಂಗಳವೊದಗಲಿ (ಭಾರವಿಜ. ೬೯೧). ೨. ಹರಿ ; ಪ್ರವಹಿಸು : ಕಡಲ್ ಕಡಲಂ ಮುಟ್ಟೆ ತೆರಳ್ವ ನೆತ್ತರ ಪೊನಲ್ ಕಣ್ಗೊಂಡುದುಗ್ರಾಜಿಯೊಳ್ (ಪಂಪಭಾ. ೧೦-೯೦) ; ಕುರವದಿಂ ಕೂಡೆ ನೆತ್ತರ್ತೆರಳ್ದುಮ್ಮವಿನಂ ಮೆಯ್ಕಲ್ಲಮಂ ಜರ್ಜರಿಸಿ (ಸುಕುಮಾ. ೭-೩೫): ನೆಲಸನಿತುಂ ತೆರಳ್ದಡಸಿ ಬಿಟ್ಟೊಣೆಯಂ ತವದೊಂದ ಮಾಟ್ಕೆಯಿಂ ನೆರೆನೆರೆವರ್ಚಿ ಮುಂಪರಿವ ಪೆರ್ದೊಱೆಗಳ್ (ಕಾವ್ಯಸಾ. ೪೬೩). ೩. ವ್ಯಾಪಿಸು; ಆವರಿಸು : ದಿನಕರಕರನಿಕರಂಗಳ್ ಘನವಿವರಪ್ರಸರಮಾಗಿಯುಂ ತಮ್ಮಂ ಕಂಡನಿತಱೊಳೆ ತೆರಳ್ದೆನ್ನಾ ಮನೋಗತಧ್ವಾಂತಬಂಧಮಳಱಿತ್ತಿಲ್ಲಂ (ಕವಿರಾ ೨-೬೭): ನಟ್ಟ ಕೋಲ ಬಟ್ಟೆವಿಡಿದೆತ್ತಂ ಸುರಿದುವವಂದಿರ ಮುಳಿಸಿನ ತೆರಳ್ದ ದಳ್ಳುರಿಯನಿಱಿಸಿ ನವರುಧಿರಂಗಳ್ (ಪಂಪಭಾ. ೦೨-೦೪೮). ೪. ಎಬ್ಬಿಸು ; ಹೊಮ್ಮಿಸು : ತೆರಳ್ದ ಸುರಭೂರುಹಪ್ರಸವಧೂಳಿಯಂ ...ನಯದಿನಾಡಿಸಿತ್ತಾಗಳಪ್ಸರಃಪ್ರಕರದೊಳ್ಗುರುಳ್ಗಳನೆದೋದು ಮಂದಾನಿಳಂ (ಆದಿಪು. ೭-೬೬). ೫. ಮೇಲೇಳು; ಚಿಮ್ಮು ; ನೆಗೆ: ಕಂಕರಶೀಕರಮದಜಳತುರಂಗಲಾಲಾಂಬುಸೇಕದಿಂದಱದುಱದಿರ್ದ ರಜಂ ನರೇಂದ್ರಚಾಮರಮರುದಭಿಹತಿಯಿಂ ತೆರಳ್ದು ತೂಳ್ದತ್ತಾಗಳ್ (ಆದಿಪು. ೧೦-೩೮). ೬. ಒಟ್ಟುಗೂಡು ; ಒಂದಾಗು : ಅಡಿಯೊಳ್ ಪಾಸಿದ ಚರ್ಮರತ್ನಪಟಮುಂ ತಚ್ಛತ್ರರತ್ನಂ ಬೆಡಂಗಿಡಿದೋರಂತಿರೆ ಮುಟ್ಟೆ ಪೊಲ್ದ ತೆಱದಿಂದಿಂಬಾಗೆ ತನ್ಮಧ್ಯದೊಳ್ಸೊಡರಿರ್ಪಂತಿರೆ ಚಕ್ರರತ್ನಮದಱೊಳ್ನಿರ್ಬಾಧಮಿರ್ದತ್ತು ಪೆರ್ವಡೆ ವಾರಾಶಿಯೊಳಿರ್ದ ಭೈತ್ರದೊಳಗಂದೆತ್ತಂ ತೆರಳ್ದಿರ್ದವೊಲ್ (ಆದಿಪು. ೦೩-೬೦): ತೆಳ್ದರ್ ಕುಳಾಯದಿಂ ಬಿದಿರ್ದೆಱಂಕೆಯ ನೀರ್ವನಿಯಂ ತೆರಳ್ದ ತುಪ್ಪುಟನೊನೆದಂಟ ಚಂಚುಪುಟದಿಂ . . . ಪಕ್ಕಿಗಳ್ ಮರಂಗಳ ತುದಿಗೋಡ ಮೇಲೆ ದನಿಗೆಯ್ಯುತುಮಿರ್ದುವು (ಅಗಪಿ ೦೪-೧೦). ೭. ಅಲುಗು ; ಅಲ್ಲಾಡು ; ಮಲಯಾನಿಲನೂಡೆ ತೆರಳ್ವ ಚೂತಪಲ್ಲವದ ತೆರಳ್ಕೆ (ಪಂಪಭಾ. ೨-೧೪). ೮. ಹಿಮ್ಮೆಟ್ಟು ; ಹಿಂಜರಿ ; ಹೆದರು : ಬಿಸಿಲಂ ಬೆಳ್ದಿಂಗಳುಮಂ ಪಸರಿಸ ಕಟ್ಟಿಲೆ ತೆರಳ್ದು ತೂಳ್ದೊಡೆ (ಆದಿಪು. ೧೩-೫೦) : ಸಂತಾಪಭೀತಿಯಿಂ ತನುಕಾಂತಿ ತೆರಳ್ದೋಡಿದಪುದೆನಲ್ (ಕಾದಂಬ. ೨೨೫) ; ನಿದಾಘದ ದೀಪ್ತಿವರ್ತಿಯೊಳ್ ಕಾಸೆ ತೆರಳ್ದ ಪಂಜರಿಯವೋಲ್ ಕಿಸುಸಂಜೆ ತೆರಳ್ದಿನಂ ಪಟಂಗಾಸಿನ ಪೊನ್ನಗಂಟೆಯವೋಲೊಪ್ಪಿದುದ್ಧಭಾನುಮಂಡಲಂ (ಅಜಪು. ೭-೭೦) ; ಕರಿ ಕೆಡೆಯೆ ಕಾಲಿನಲಿ ಜೋದರು ತೆರಳದೆಚ್ಚಾಡಿದರು (ಕುವ್ಯಾ.ಕ. ೦೫-೨೮). ೯. ಮುರಂಟು ; ಸುಕ್ಕುಗಟ್ಟು : ಮುಸು ಮುತ್ತಂತೆ ತೆರಳ್ದ ತನ್ನ ಮೊಗಮಂ ಕಂಡಳ್ಕಸೋ ಕೂಡೆ ಜೋಲ್ದು ಸಡಿಲ್ದಿರ್ದೊಡಲಳ್ಳೆಜೊಳ್ಳೆತನಮಂ ಮೇಣ್ಕಾಣನೋ (ಆದಿಪು. ೨-೪೫) ; ಭೀಮಸೇನನ ಗದಾಘಾತದೊಳೂರುಭಂಗಮುಂ ಪದಘಾತದೊಳ್ ಮಕುಟಭಂಗಮುಮಾಗೆ ಸುರುಳ್ದು ತೆರಳ್ದ ಸುಯೋಧನನಿರೆ (ಗದಾಯು. ೯-೦೬ ವ). **ತೆರಳು** : ೧. ಹೈಮವತಿ ಕೈಲಾಸಗಿರಿಗೆ ತೆರಳಿದಳು (ಸಿದ್ಧರಾ. ೦-೬೦) ; ಸರ್ವಾಭಿಸಾರ, ಸರ್ವೌಘ, ಸರ್ವಸನ್ನಹನ–ಎಲ್ಲಾ ಸೇನೆಯೂ ತೆರಳುವುದು (ನಾಚಂಂ. ೬); ತೆರಳಿ ಮುಂದಕೆ ಹೋಗಬಾರದು ಮರಳಿ ಹಿಂದಕೆ ಬರಲು ಬಾರದು (ಬಸವು. ೪೦-೮) ; ಧನಂಜಯು ತೆರಳಿದನು ಪಾಳೆಯದ ಪಥವಿಡಿದು (ಕುವ್ಯಾ.ಕ. ೦೪-೩೨) ; ಸರಸಿಜಗಂಧಿಯ ದಿವ್ಯಾಂಗ ಲಾವಣ್ಯಶರಧಿಯೊಳ್ನೆರವಿಗರಕ್ಷ ವರ ವಿಮಾನಗಳು ನೆಱೆ ಪೊರಳುತ ತೆರಳುತ ಮರಳಿ ಮುಳುಗುತೊಪ್ಪಿದುವು (ಕಂಜವಿ. ೯-೪೫). ೨. ಕಣ್ಗಳಿಂ ಶೋಕಜಲಬಿಂದು ತೆರಳೆ . . . ಗದುಗದಿಸಿ ಬಿಕ್ಕುತ ಬಿದ್ದು (ಬಸರ. ೫-೦೯). ೮. ಅರಸನಂ ಕೆಡಿಸಿ ಹೊಸಿ ತೋಱಿಂದಡೆನಗವಂ ತೆರಳುವವನೇ (ಹರಕಾ. ೯-೦೭) ; ರವಿಯ ಕೈ ಕತ್ತಲೆಯ ಹೊರಳಿಯ ತಿವಿಗುಳಿಗೆ ತೆರಳುವುದೆ (ಕುವ್ಯಾ.ಕ. ೧೦-೪೬). ೯. ಒಳಗೆ ಮಂಚದ ಮೇಲೆ ನಡುಗುವ ತಲೆಯ ತೆರಳಿದ ಮೈಯ . . . ಚಲಿತ ವಚನದ ವೃದ್ಧರನು ತೋಱಿದನು (ಕುವ್ಯಾ.ಅ. ೦೫-೧೦). ೧೦. ಅಳಿಸಿ ಹೋಗು; ಇಲ್ಲವಾಗು: ಪೂರೆದ ದುಕೂಲವೊಂದಿನಿಸು ಮಾಸದೆ ಭಾಳದೊಳಿಟ್ಟ ಚಂದನಂ ತೆರಳದೆ (ದಶಕು. ೦೧-೨೦). ೧೧. ತೆಗೆ; ಕಳೆ; ಬಿಡಿಸು: ಹಿರಿದು ಹೊರಗಳನೊಂದನೊಂದಂ ತೆರಳಿ ಸುಲಿಯಲು ಬಾಳೆಯದು ತಾನೊರೆಯುಲಿಲ್ಲದೆ ಮುನ್ನಿನಾಕೃತಿಯಿಲ್ಲದಿಪ್ಪವೊಲು (ಬಸವು. ೩೫-೩೮).

[ ದೇ. ▮ ತಮಿ. ತಿರಳ್ ; ತೆಲು. ತೆರಲು. ತೆರ್ಲು ]

**ತೆರಳಿ, ತಿರುಳಿ$_2$, ತೆರಣಿ$_1$, ತೆರಣೆ, ತೆರಳ್ಕೆ$_1$** (ನಾ). ೧. ಮಣ್ಣು, ಮಲ ಮೊದಲಾದುವುಗಳನ್ನು ಉಂಡೆಗಟ್ಟಿ ಸಾಗಿಸುವ ಒಂದು ಬಗೆಯ ಹುಳು : ಸ್ಪರ್ಶ ರಸ ಗಂಧ ರೂಪುಗಳೆಂಬೀ ನಾಲ್ಕುಮಸಜೀವ . . . ಮಿಡುತ ತೆರಳಿ ಕೊಟ್ಟಾರಿಗಂ ಯೆಡೆವುಟುಮೆಂದಿತ್ಯೇವಮಾದಿಗಳೊಳಂ (ಪಸಾರ. ೪೯). ೨. ತನ್ನ ಶ್ಲೇಷ್ಮದಿಂದ ತನ್ನ ಸುತ್ತಲೂ ಎಳೆಯನ್ನು ನೆಯ್ದು ಸುತ್ತಿಕೊಳ್ಳುವ ಒಂದು ಬಗೆಯ ಹುಳು ; ರೇಷ್ಮೆಹುಳು : ನಿಷ್ಕಾರಣಂ ತೆರಳಿಯ ಪುಟುವಿನಂತೆ ನಿನ್ನಂ ನೀನೆ ದುಷ್ಪರಿಣಾಮದಿಂ ಸುತ್ತಿಕೊಂಡು (ಧರ್ಮಾಮೃ. ೦೯-೮೪): ತೆರಳಿ[ಪಾಠಾಂ. ತೆರಣೆ, ತೋರಣೆ]ಯ ಪುಟುವಂ ತನಗೆ ಮನೆ ಮಾಡಿಪ್ಪೆನೆಂದು ತನ್ನೊಳ್ ಪುಟ್ಟಿದ ನೂಲಿಂ ತನ್ನನೆ ಸುತ್ತಿಕೊಂಡು ಪೊಱಮಡಲಱಿಯದೆ ಸಾವಂತೆ (ಜೀವಸಂ. ೧೪೦-೦೦ ವ) ; ಹಲವು ಮಾಯಾಮೋಹಪಾಶದ ಬಲೆಯೊಳಗೆ ನೆಱೆ ಸಿಲುಕಿ ತೆರಳಿಯ ಹುಳುವಿನಂತೊಳಗಿರ್ದ ತಾಪತ್ರಯದ ದುಃಖದಲಿ (ನಿಘಾಗ. ೭-೭-೦೩). **ತಿರುಳಿ$_2$** : ೨. ಹಲವು ಮಾಯಾಮೋಹಪಾಶದ ಬಲೆಯೊಳಗೆ ತನು ಸಿಲುಕಿ ತಿರುಳಿಯ ಹುಳುವಿನಂತಳವಳಿದು ತಾಪತ್ರಯದ ಬೇಗೆಯಲಿ (ನಿಘಾಗ. ೩-೦೯-೪). **ತೆರಣಿ$_1$** : ೨. ತೆರಣಿಯ ಹುಳು ತನ್ನ ಸ್ನೇಹದಿಂದ ಮನೆಯ ಮಾಡಿ ತನ್ನ ನೂಲು ತನ್ನನೇ ಸುತ್ತಿ ಸುತ್ತಿ ಸಾವ ತೆಱನಂತೆ (ಮಹಾದೇ. ಬ. ೦೫-೦೭). **ತೆರಣೆ** : ೨. ಮೇಲಿನ 'ತೆರಳಿ' ಉಲ್ಲೇಖದ 'ಜೀವಸಂ' ಪ್ರಯೋಗದ ಪಾಠಾಂತರವನ್ನು ನೋಡಿ. **ತೆರಳ್ಕೆ$_1$** : ೨. ಕೌಶೇಯ–ತೆರಳಿಯ ಹುಟು ಮುಕುಳಾಕಾರದಿಂದ ಮಾಡಿದುದ ಬಿಡಿಸಿ ನೆಯ್ದ ಸೀರೆ (ನಾಚಿರಾ. ೬) ; ಪರಿಪರಿಯ ಸಂಸಾರವಿಷಯದಿ ಹಿರಿದು ಬಿಗಿವಡೆದಿರ್ಪ ಮನುಜಗೆ ದೊರಕುವುದೆ ಪರತತ್ವ ತೆರಳಿಯ ಹುಳುವಿನಂತಿಹಗೆ (ಅಮೃತ. ೧-೩೭). [ < ತೆರಳ್ ]

**ತೆರಳಿಕೆ** 'ತೆರಳ್ಕೆ' ನೋ.

**ತೆರಳಿಚು** 'ತೆರಳ್ಚು' ನೋ.

**ತೆರಳಿಸು** (ಕ್ರಿ). ೧. ಹೋಗುವಂತೆ ಮಾಡಂ; ಹೊರಡಿಸು; ಕಳುಹಿಸು: ಬೆಸವೇಳ್ದು ತೆರಳಿಸಿದನನುಜನನು (ತೊರಠಾ. ೮-೫-೨೬) ; ಆತನನಲ್ಲಿಂದ ತೆರಳಿಸಿ ಬಿಟ್ಟಳು (ಕಂನವಿ. ೬-೦೬೪). ೨. ಹೊಗಿಸು ; ಪ್ರವೇಶ ಮಾಡಿಸು : ಇಂತು ಸಿಂಗರವಾದ ಸ್ವಯಂವರವಂಟಪಕಂ ತೆರಳಿಸಲು ಸುವತಿಯು ಮಂತಣದಿಂದ ಸಿಂಗರಿಸಿದರಾ ದೇವಕಾಂತೆಯ ಶೃಂಗಾರ ದಂತೆ (ಶಾಂತೀಶ. ೩-೬೩). ೩. ಕೆದರು ; ಚೆಲ್ಲಾಪಿಲ್ಲಿ ಮಾಡು : ತೆರಳಿಸಿತು ಬಿಱುಗಾಳಿ ತಾರೆಯ ನೆರವಿಯನು (ಸಾಳ್ವಭಾ. ೧೬-೩೪).

[ ತೆರಳ್ + – ಇಸು$_3$ ]

**ತೆರಳು** 'ತೆರಳ್' ನೋ.

**ತೆರಳ್$_1$** 'ತೆರಳಿ' ನೋ.

**ತೆರಳ್$_2$, ತೆರಣ್$_2$** (ನಾ). ತುತ್ತು; ಮುದ್ದೆ ; ಉಂಡೆ : ತೆರಳೆ ಕೈಯೊಳಗಿದ ಬಾಯೆವ್ಮ ತಂದೆ ಕುಳ್ಳಿರುಯೆಂದು ಕರೆದರಚ್ಯುತನಾ (ಕೃಷ್ಣಗೋ. ೨-೮೨) ; ಭಕ್ತನು ಒಂದು ಹೊತ್ತು ಅಡಿಗೆ ಮಾಡಿಕೊಟ್ಟ ಊಟದ ತೆರಳೆಯನ್ನು ಮಧ್ಯಾಹ್ನ ದೇವರೆದುರಿಗೆ ಭಿಕ್ಷವಾಗಿ ಸ್ವೀಕರಿಸಿ ಉಂಡು (ಸಪ್ತ.ಶ. VI, ೨೬). **ತೆರಣ್$_2$** : 'ತೆರಣೆಗಟ್ಟು' ಪರಾ.

[ ದೇ.॥ ತಮಿ. ತಿರಳೈ, ತಿರಣ್ಣೈ ; ತೆಲು. ತೆರಲ ]

**ತೆರಳ್ಕೆ, ತೆರಳಿಕೆ** (ನಾ). ೧. ಚಲನೆ ; ಅಲುಗಾಟ ; ಸ್ಪಂದನ : ಮಲಯಾ ನಿಲನೂಡೆ ತೆರಳ್ವ ಚೂತಪಲ್ಲವದ ತೆರಳ್ಕೆ ತದ್ವನವಿಳಾಸಿನಿಯುಟ್ಟ ದುಕೂಲ ದೋಂದು ಪಲ್ಲವದ ತೆರಳ್ಕೆಯಂತೆಸೆಯೆ (ಶಂಪಭಾ. ೨-೧೪); ಕಲಶಮ ನೆತ್ತಿ ನೀರೆಱೆವ ಕಾಂತೆಯ ತೋಳ ತೆರಳ್ಕೆ ಮೇಲುದಂ ತೊಲಗಿಸೆ (ಚಂದ್ರಪ್ರ. ೧-೯೮) ; ಚರಣನ್ಯಾಸದ ತುಱುಗಲ ತೆರಳ್ಕೆಯಭಿನಯ ದೊಳಭಿನವಂಬೆತ್ತು ಮನೋಹರಮಾಗೆ (ಮಹಾನೇ. ೯-೦೦) ; ಉರಿಯುಂ ಮೇಣ್ ಕಣ್ಗಳ ತೆರಳ್ಕೆಯುಂ ಪೋಲ್ವ ರಶ್ಮಿ ತುರಗಂ ಕಿಳಿಱುತ್ತಿರೆ (ಅಶ್ವಶಾ. ೪-೭೨). ೨. ಓಡುವಿಕೆ ; ಓಟ : ಪೂಡಿದ ವಾರುವಂಗಳ ತೆರಳ್ಕೆಗೆ ನೇಸಱ ತೇರ ತೇಜಿಗಳಂ ಪಾಡಱಿದಿರ್ದನಂ . . . ಪರಿತಂದುವು ತೋರ್ಕೆಯ ತೇಗರ್ಗಳೋಳಿಯಿಂ (ಅಭಿ.ಕಾ. ೨೦೫). ೩. ವ್ಯಾಪಿಸುವಿಕೆ ; ಹರಡುವಿಕೆ : ರಾಜ್ಯಸಂಪದದ ಪೂದಳ್ಕೆ ತೇಜದ ತೆರಳ್ಕೆ ವಿರೋಧಿಯ ಬಾಳ್ಕೆ ತನ್ನದೆಂಬು ದನೆನೆ ಪೆರ್ಮೆಯುಂ ತಳೆದನೋ ನೃಪರೊಳು ನೃಪಶೈಲಶಾಸ್ತ್ರರಂ (ಎಕ. VIII, ಸಾಗರ. ೦೫೯-೧೩ : 1159). ೪. ಹೆಚ್ಚಳ ; ಆಧಿಕ್ಯ ; ಅತಿಶಯ : ಸೋರ್ವ ಕಂಬನಿಯ ತೆರಳ್ಕೆ ಗದ್ಗದಿಕೆಗೊಳ್ವ ಸರಂ (ಆದಿಪು. ೯-೭೬); ಸಿರಿಯ ತೆರಳ್ಕೆ ಜವ್ವನದ ಪೆರ್ಚುಗೆ ರೂಪವಿಳಾಸದೇಳ್ಗೆ . . . ಮೂರ್ತಿವೆತ್ತುದು (ವರ್ಧಪು. ೨-೩೪). ೫. ಸಮೂಹ ; ಗುಂಪು ; ನೆರವಿ : " ತಂಡಂ ತೆರಳ್ಕೆ . . . ಪಂಡಿತರಿಂ ಗಡಣವಂಗಡಂ ಕಿಕ್ಕಿಂದಂ " (ಕವಿಕಂ. ೧೦೬) ; ಈಳೆ ಯಿಟ್ಟೆಡೆಯುಂ ತಿಲಕದ ತೆರಳ್ಕೆಯುಂ ಅಸುಗೆಯ ಕುತ್ತುಱುಂ . . . ಎನಿಸಿದ ದೇವರಮಣೋದ್ಯಾನಮಂ . . . ಪುಗುತರ್ಪಾಗಳ್ (ಶಾಂತೀಶ್ವ. ೧೦-೭೮ ವ) : ಸುವಿಲಾಸದಿಂದಪ್ಪವಸುಗಳ ತೆರಳ್ಕೆ ಘನಜವದಿಂದ ಸಪ್ತ ಋಷಿಗಳ ನೆರವಿ . . . ಓಲಗಕೆ ಬಂದುದು (ಜಲಪು. ೨-೧೬) ; ಸುಯ್ದಿಟ್ಟ ಪೊರೆಗಳಂ ಬಿಟ್ಟು ಪೈಗರೆದು . . . ಪೆಣ್ ತೆರಳ್ಕೆಯುಂ ತೆರಳೆ (ಕಾಲಹ. ೧೩೦-೨೭೯). ೬. ಮಡಿಕೆ ; ನಿರಿಗೆ. 'ತೆರಳ್ಕೆವೆಱು' ಪರಾ. ೭. ರೀತಿ ; ಒಯ್ಯಾರ; ಬೆಡಗು: ಸ್ಮರಶರವುಂ ತದೀಯಮ್ಮದುಗೋಯಮುಮುರ್ಚಿದ ಪುಣ್ಣನೊಕ್ಕ ನತ್ತರನಱಸಲ್ಕೆವೇಡ . . . ಬರ್ಬರೆಯ ಕಿರಾತೆಯೊಟ್ಟಜೆಗೆ ಕಿನ್ನರರೊಟ್ಟಜೆಯುಂ ತೆರಳ್ಕೆಯುಂ (ಶಾಂತಿಪು. ೨-೨೨) ; ಮಾತಿನ ತೆರಳ್ಕೆಗಳಂ ರಸಗೇಯವಂತಿರೀ ಕೃತಿ ಪೊಸದೇಸಿಯಿಂದಸೆದು ಸೋಲಿಪುದಚ್ಚರಿಯೇ ರಸಜ್ಞರಂ (ಲೀಲಾವ. ೪-೭೩) ; ಧರೆಗೆಸೆದತ್ತು ತಾರಕನಾಜ್ಞೆ ತಾರಕಾಸುರನ ತೆರಳ್ಕೆ ತಾರಕನ ತೀವ್ರತೆ ತಾರಕನುರ್ಬು (ಗಿರಿಕ. ೬-೦೦) ; ವಳಿಯ ತೆರಳ್ಕೆಯಂ ವಹಣ ಯೊಟ್ಟಜೆಯಂ ಪಸರಂಗಳಿಂಪನುಜ್ವಳಿಸುವ ಡಾಳಮಂ . . . ಅಱಿವನ್ನರಾರ್ (ಅನಂತಪು. ೪-೮೮). **ತೆರಳಿಕೆ** : ೫. ನೆರದರಬರೆಯ ರಂಗವಟ್ಟದ ಪರಿಮಳದ ಮುತ್ತಿಗೆಯ ತುಂಬಿಯ ತೆರಳಿಕೆಯ ಕತ್ತಲೆಯ ಕೆದಱುವ ಕಣ್ಣ ಬೆಳಗುಗಳ (ಕುಮ್ಯಾ.ಅ. ೮-೬) ; ತೇರುಗಳ ತೇಜಿಗಳ ಬಲುಮದವಾರಣಂಗಳ ತೆರಳಿಕೆಯ ರಣಚೋರಗಂಡಿಯ . . . ವೀರ ವಱಿಗಳ ರಭಸದಲಿ ರಂಜಿಸಿದುದಾ ದುರ್ಗ (ತೊರಠಾ. ೬-೭-೧೫) ; ಶಿಖಿಬಿಂದಶಸದ್ಯುತಿಯ ಬೆಳ್ನೆಗೆಯ ಸೂಸಲೆನೆ ನಖರುಚಿಯ ತೆರಳಿಕೆಯ ಹೊರಳಿಯೆನೆ . . . ತಿಳಿನೀರ ತುಂತುರ್ವನಿಗಳೆಸೆದಿರ್ದುವು (ಜೈಮಿಭಾ. ೩೦-೦೦). ೮. ತೆರಳಿಸುವಿಕೆ ; ಸಾಗಿಸುವಿಕೆ : ಪುರವರವನಲ್ಲಿಂದ ಮೌಲ್ಯದ ತೆರಳಿಕೆಯ ಮಾಡಿದನು ಮೊದಲು ಹರಿದು ಮುರಿದು ಸಮುದ್ರಸೇನನ ಸರ್ವಗವತೆಯಲಿ ತೆರಳಿಯಲ್ಲಿಂದಿಂದ್ರಸೇನನನೊರಿಸಿ ಭಂಡಾರವನು ಹೇರಿಸಿ ಮರಳಿ ವಂಗನನಪ್ಪಳಿಸಿದನು (ಕುಮ್ಯಾ.ಸ. ೪-೯). ೯. ಆಕ್ರಮಣ ; ಮುನ್ನುಗ್ಗುವಿಕೆ ; ರಭಸ : ಸರಳ ತೆರಳಿಕೆಗೆ ಮರಳಿತು ಕರುಳ ಸುರುಳಿ ಯೊಳು ಹೊರಳುತ್ತ ಬೀಳುತ್ತಲು . . . ಹಾಂದಿ ಮರಳಿ ಕಾನನಕಯ್ದಿತು (ಹಡಪ. ೬-೩೦) ; ಇಂದಿನೀ ಬಲವೀ ಸಮರಜಯದಂದವೀ ಸೌರಂಭವೀ ಸರಳಂದವೀ ತೆರಳಿಕೆಯದಃವಂಗೆಂದನವನೀಶ (ಕುಮ್ಯಾದ್ರೋ. ೫-೧೭).

[ ತೆರಳ್ + – ಕೆ ]

**ತೆರಳ್ಕೆಯಿಡು** (ಕ್ರಿ). ಅಧಿಕಗೊಳಿಸು ; ಒತ್ತುಗೊಳಿಸು : ಇತ್ತಲೆಳ್ದ ಮಳೆಯ ರಾಜನುತ್ಸವಕ್ಕೆ ಹೆಚ್ಚುಗೊಟ್ಟು ಚಿತ್ರದೊಳ್ಸಮಸ್ತಸಂತಸಂಗಳಂ ತೆರಳ್ಕೆಯಿಟ್ಟು ರಂಗಮಂಟಪಕ್ಕೆ ಬಂದು (ಮಳಿರ.ಹ. ೨೩೦-೦೦).

[ ತೆರಳ್ಕೆ + ಇಡು$_1$ ]

**ತೆರಳ್ಕೆವೆಱು** (ಕ್ರಿ). ಪದರವಾಗು ; ನಿರಿಗೆಯಾಗು : ಕರೆವೆರಸಿದ ಪೊಸ ದುಗುಲದ ತೆರಳ್ಕೆವೆತ್ತುಡೆ ಹಟತ್ಕಟೀಸೂತ್ರಪರಿಸ್ಫುರಿತದೊಳಂ . . . ಜನಮನೇಂ ಮನಂಗೊಳಿಸಿದುದೋ (ಆದಿಪು. ೪-೩೬).

[ ತೆರಳ್ಕೆ + ಪೆಱು$_1$ ]

**ತೆರಳ್ಚು, ತೆರಳಿಚು** (ಕ್ರಿ). ೧. ಚಲಿಸುವಂತೆ ಮಾಡಂ; ಚಲನಗೊಳಿಸು ; ಸರಿಸು ; ತಳ್ಳು : " ತೆರಳ್ಚು–ಚಲನೇ, ಚಯನೇ ಚ " (ಶಮದ) ; ಅಂತೀತನ ಕಟಕಕ್ಕೆ ನಿತ್ಯಕ್ಷಯಮವ್ಯಯಮಪ್ರತ್ಯವಾಯಂಗಳಂ ಮಾಡಿ ಬೇಸಱಿಸಿ ನೆಲದಿಂ ತೆರಳ್ಚುವಂ (ಆದಿಪು. ೧೩-೫೮ ವ) ; ಉಪವನದ ತರುಲತಾಗುಲ್ಮಜಾಲಮಂ ಸೋಂಕಿ ಬಂದು ತಿಳಿಗೊಳಂಗಳೊಳ್ ತೆರೆಯ ನೆರವಿಯಂ ತೆರಳ್ಚಿ . . . ಸಾಯಂತನಸಮಯ ಸಮೀರಣಂ ಸೌಖ್ಯಸಾರ ಸರ್ವಸ್ವಮೆನಿಸಿದಾಗಳ್ (ಚಂದ್ರಪ್ರ. ೮-೪ ವ) ; ವಾಯುವು (ನಸ್ನ) ಹಟ್ಟಿಯ ಬಾಗಿಲ ರಜಗಳಂ ತೆರಳ್ಚುವನು (ಸುಳಸ. ೦೪೪). ೨. ಅಲುಗಾಡಿಸು ; ಕಲಕು ; ಕ್ಷೋಭೆಗೊಳಿಸು ; ಕದಲಿಸು : ಮಿಡಿಯುಂ ತೆರಳ್ಚಿ ತೆಗೆದೋವದೆ ಕಾಯದೆ ಕೂರಕರ್ವುದಿಂ ಸೊನೆ ಸುರಿವನ್ನೆಗಂ ಪಱಿದು ನೋಯಿಸಿ ಕಾಡಿದೆವು (ಆದಿಪು. ೧೧-೧೩೨) ; ಅಸುಂ ಕುಲಗಿರಿಗಳ ಸಪ್ಪೊಡೆಂತುಂ ತೆರಳ್ಚಲಾಱನದಱಿಂದೆನಗಂ ಸಗಂಗಳ್ ಏರಿಯವೆನೆ (ಪಂಚತಂ ೨೫೯-೬); ಸಾಗರಮಂ ಕೂಡೆ ತೆರಳ್ಚಿದಂ ತೊಱಸಿದಂ ತುಳ್ಕಾಡಿದಂ (ಅಗವಿ. ೭-೦೪); ತೆರಳ್ಚಿ ತರಂಗನೀವಿಯಂ... ಭುಜಂಗನಪೋಲ್ ಸುಳಿಗುಂ ಸಮೀರಣಂ (ಕಬಕಂ. ೨-೭೦). ೩. ಅಲುಂಗಾಡು ; ಕದಲು : ಇಡು ಮೊಲಸಂ ತೆರಳ್ಚದಿಸು ಪುಲ್ಲೆಗಳಂ (ಗಿರಿಕ. ೧-೮೩). ೪. ಕಳುಹಿಸು ; ಸಾಗಿಸು: ಗೋವ್ರಜಂಗಳುಮನಿಂದ್ರಪ್ರಸ್ಥಕ್ಕೆ ತೆರಳ್ಚಿ (ಶಂಪಭಾ. ೬-೩೩ ವ). ೫. ಸುತ್ತಿಸಂ ; ತಿರುಗಿಸು : ವಿರಹಿಗಳಂ ತೆರಳ್ಚಿ ತುಱುವಲ್ಲಿಗೆ ನೀಂ ನೆರ ಮಯ್ಯೊಳ್ಕೆ (ಆದಿಪು. ೧೧-೦೦೦ ಅಡಿ.); ಇರದೊಯ್ಯುದು ತನ್ನಿಚ್ಛೆಗೆ ವರ ಯುವ್ವನದಂದು ಪುರುಷನಂ ಪ್ರಕೃತಿರಜಂಬೊರೆದು ತಿರುಪುತ್ತೆ ಸುಟ್ಟುಱಿ ತೆರಳ್ಚಿ ತಱಿಗೆಲೆಯನುಯ್ವ ತೆಱದಿಂದೆತ್ತಂ (ಕಾರಂಪೂ. ೫೩೩) ; ಕೆಂದಳದಿಂ ಸಣ್ಣಗೆಯುಂ ತೆರಳ್ಚಿ ತಿರುಪುತ್ತುಂ (ಕುಸುಮಾ. ೨-೧೦೬). ೬. ಒಂದ

ಗೂಡಿಸಂ ; ಸೇರಿಸು ; ಕೂಡಿಸು : ಮೂಜಬುಲೋಕದ ಚೆಲ್ವೆಲ್ಲಮಂ ವಿಧಾತ್ರನೊಂದೆಡೆಗೆ ತೆರಳ್ಚಿದಂತೆ (ಶಂಪಥಾ. ೧-೩೮ ವ) ; ಮಾಂಸ ಪ್ರಾತಮಂ ಪೊತ್ತು ಕೇಸರಿಚಮರೀವಾಲಂಗಳಂ ತಾಳ್ದು ಬಂದರನೇಕರ್ (ಕಾದಂಪೂ. ೧೬೯) ; ತಂತವಮ್ಮ ಭಂಡರರ್ಥಮಂ ತೆರಳ್ಚಿ ಕಟ್ಟಿಕೊಂಡು ಪೊಟಲ್ಗೆವಂದು (ಧರ್ಮಾಮೃ. ೩-೧೯೩). ೭. ಹರಡಂ ; ಪಸರಿಸು : ಪುಷ್ಪಕೇಸರಂ ತರಳೆ ತೆರಳ್ಚಿ ಬೀಸಿದುದು ತಂಬೆಲರ್ (ಆದಿಪು. ೩-೬೩) ; ಒಡೆಯರ್ ತೊಡೆದಂಗಾನುಲೇಪನದ ಸೌರಭ್ಯಮಂ ತೆರಳ್ಚಿ ವಿಟಜನ ಘ್ರಾಣಕೆ ಪಾರಣೆಯನೊಡರ್ಚೆಯುಂ (ಕುಸುಮಾ. ೪-೨೯ ವ) ; ಇಂಬುವೆತ್ತ ತಣ್ಪುಟಿಲೊಳಗೊಲ್ದು ಕೂಡುವಿನಿಯರ್ಗೆ ತೆರಳ್ಚಿದ ಕಂಪು ತಣ್ಪು ಪೊಂಪುಟಿಯನಲರ್ಚಿ ಕೀಡುವುದು ತತ್ಪುರಬಾಹಿರ ಮಂದಮಾರುತಂ (ಅನಂಪು. ೩-೧೬) ; ಸರ್ಬದಳಮಂ ತಗುಳ್ದು ಬೇಸಗೆಯ ಬಿಜುವ ಲರ್ಬೀಸಿ ರಜಮಂ ತೆರಳ್ಚುವಂತಾಗ ವೀರರ್ಬಿಂಕದಿಂದಾಂತು ನಿಂದರ್ (ಕೃಮಿಥಾ. ೨೫-೨೬). ೮. ಅಧಿಕವಾಗಿಸು ; ಅತಿಶಯವಾಗಿಸು : ಗುರು ಗಳುಮಂ ಸುತರಂ ಸೋದರರಂ ಕೊಲಲಾಜಿನೆಂದ ಪಾರ್ಥನನಾಗಳ್ ಹರಿ ರಥಮಂ ಹರಿಯಿಸುತುಂ ತೆರಳ್ಚಿ ತತ್ವಮನೆ ಪೇಳ್ದು ಗಡ ಕಾದಿಸಿದಂ (ಸಮುಪ. ೧೧-೧೬೨). ೯. ಉಂಟುಮಾಡು ; ಹೊಂದಿಸು : ಕಳೆಯಂ ಪತ್ತಿಸಿ ರಾಗವಂ ನಿಲಿಸಿ ನುಣ್ಪಂ ನಣ್ಪುಗೆಯ್ದೊಂಪನಿರ್ಕೆಳಗೊಂಡು . . . ತೆರಳ್ಚಿ ಜತಿಯಂ ಸ್ಫೈತೋಜೆಯಂ ತಾಳ್ದಿ ಗೋವಳರಾಯಂ ಕೊಬಲೂದಿದಂ ನೆಗಟ್ಬಿನಂ ಮಾಧುರ್ಯ ಶೌರ್ಯಸ್ವನಂ (ಜಗವಿ. ೫-೨) ; ಕವಿಕಂದರ್ಪನ ಬಾಳಚಂದ್ರುನ ಲಸದ್ವಾಣೋತ್ಕರಂ ಕೂರ್ತವಂದವರ್ಗಂ ನೆಟ್ಟನೆ ಕೂರ್ತು ಕೂಡಿದವರ್ಗಂ ರಾಗಾದಿ ಕಲ್ಲೋಲಮಂ ಕಿವಿಯಂ ತಾಗಲೊಡಂ ತೆರಳ್ಚುವುದು (ಅನಂಪು. ೧-೩೩). ೧೦. ಹಿಮ್ಮೆಟ್ಟಿಸು ; ಓಡಿಸು ; ಅಟ್ಟು : ಪುಂಖಾನುಪುಂಖಮಿಸುತ್ತಿರ್ಪೆಡೆಯೊಳ್ ತೆರಳ್ಚಿದುವಗುರ್ವಿಂ ಪರ್ವಿ ಬಾದಿರ್ದ ಮೇಘಮುಂ ಖಾಹೀಂದ್ರುರ ಪೊಂಕಮಂ ಜಯಕುಮಾರೋನ್ಮುಕ್ತ ಬಾಣಾಳಿಗಳ್ (ಆದಿಪು. ೧೩-೬೦) ; ಗಂಗನ ಮೊತ್ತಮೆಲ್ಲಮಂ ಬೆದಱುವಿನಂ ತೆರಳ್ಚಿ ಪಲರುಂ ತುಱುಟಿಲಾಳ್ಗಳನಿಕ್ಕಿ (ಎಕ. II, ೧೩೮-೧೨ ; ಕು. ೯೪೦). ೧೧. ಹೋಗಲಾಡಿಸು ; ನಿವಾರಿಸು ; ಕಳೆ : ಭುಜಕಂಡುಮಂ ತೆರಳ್ಚುವುದರ್ಕೆದುವೆ ಪದನೆಂದು ಕದನೋದ್ಯುಕ್ತನಾಗಿ (ಜಗವಿ. ೬-೬೦ ವ).

ತೆರಳಿಚು : ೪. ಅಲ್ಲಿಗಲ್ಲಿಗೆ ನಡೆದು ಸಾಧಿಸಿ ಕೆಲ್ಲೆ ಕುಹರದ ಕೋಣೆ ಬಾಗುಗಳೆಲ್ಲವನು ಹೊಕ್ಕಱಸಿ ತೆರಳಿಚಿದನು ಮಹಾಧನವ (ಕುವ್ಯಾ.ಸ. ೩-೪೭) ; ಸುಧಾಮನ ವರಶತಾನಂದನನ ತೆರಳಿಚಿ[ಪಾಠಾಂ. ಸಿ]ದನು ಮಹೀಪಾಲ (ತೊರರಾ. ೦-೧೬-೧). ೭. ಅಲಿಗಳನರಳಿಚುತ ನಗೆಗಳ ಮಾಲೆಗಳ ತೆ[ಪಾಠಾಂ. ಕೆ]ರಳಿಚುತ ಕರೆ ಕಟ್ಟೊಳಿಗದ ಕಾತರರನೆಂದನು ಹರಿ ಸುಪರ್ಣಂಗೆ (ತೊರರಾ. ೧-೪-೫೪). ೧೦. ಕರ್ಣನ ತೆರಳಿಚಿದನೈನೂಱು ಹಜ್ಜೆಯಲಿಂದ್ರಸುತಸೂನು (ಕುವ್ಯಾ.ದ್ರೋ. ೬-೫೧) ; ನೀನಿಂದು ಮುರವೈರಿಯಂ ತೆರಳಿಚಿದೆ . . . ಕರ್ಣಜನೆ ನಿಲ್ಲೆನುತ ತೆಗೆದೆಚ್ಚು ಬೊಬ್ಬಿಱಿದನು (ಕೃಮಿಥಾ. ೬-೫೬). ೧೧. ಶಂಕರನ ಪರಮಮೂರ್ತಿಯ ಹೃದಯಕಮಲದೊಳಿರಿಸಿ ಸಂಧಾನದಲಿ ಜೀವನ ತೆರಳಿಚಿದನು (ತೊರೆರಾ. ೨-೫-೧೯). ೧೨. ಅಧಿಕವಾಗು ; ಹೆಚ್ಚಾಗು : ಕರಿಯ ಬರಿಕೈಗೆಣೆಯೆನಿಪ ನಿಷ್ಠುರದ ಧಾರಾಸಾರ ತೆರಳಿಚಿ ಸುರಿದುದು (ಕುವ್ಯಾ.ಅ. ೨೦-೩೩). [ ತೆರಳ್ + – ಚು$_1$ ]

ತೆರಾಣೆ (ನಾ). ಕೊಡುವ ಹಣ ; ಸುಂಕ ; ತೆರಿಗೆ : ಸರಕಾರಕ್ಕೆ ತೆರ ಬೇಕಾದ್ದೆಷ್ಟು ? ಹೊರಗಿನ ತೆರಾಣೆ ಎಷ್ಟು ? . . . ನೇರವಾಗಿ ತೆರುವ ಅಥವಾ ಸಾಲ ಸಿಟ್ಟಂದಿಗಳ ರೂಪದಲ್ಲಿ ತೆರುವ ತೆರಾಣೆ ಎಷ್ಟು ? (ಹಂಪ್ರ. ೨೬೩). [ ತೆರು$_1$ (< ತೆಱು$_1$) + ಆಣೆ$_5$ ]

ತೆರಿಗಲು (ನಾ). ಗಡಿಯ ಗುರುತಿಗಾಗಿ ನೆಟ್ಟ ಕಲ್ಲು : ಅಲಿಂದಂ ಪಡುವ ನಡುದು ನಟ ಗುಡುಕಲು ಅಲಿಂದಂ ಪಡವ ನಡದು ನಟ ತೆರಿಗಲು ಅಲಿಂದಂ ಪಡುವ ನಡದು ನಟ ಹಲಗೆಗಲು (ಎಕ. XII, ತಿಪಟೂ. ೧೩೯-೬೮ : ?). P ಇದು 'ಕರಿಗಲ್ಲು' ಇರಬಹುದೇ ?

[ ತೆರಿ? + ಕಲು$_1$ (< ಕಲ್$_3$) ]

ತೆರಿಗೆ 'ತೆಱಿಗೆ' ನೋ.

ತೆರಿಗೆದಾರ (ನಾ). ತೆರಿಗೆಯನ್ನು ಕೊಡುವವನು: (Rate payer. ಪತ್ರಿನಿ. ೬೬). [ ತೆರಿಗೆ (< ತೆಱಿಗೆ) + – ದಾರ$_4$ ]

ತೆರಿಮೆದ್ದು (ನಾ). ಒಂದು ಬಗೆಯ ಸಸ್ಯ : (ಕ). [ ? ]

ತೆರಿವಿಳಾಸ (ನಾ). ಒಂದು ಬಿರುದು : ಮಹಾರಾಜಾಧಿರಾಜಪರಮೇಶ್ವರ ನೆಲ್ಲರ ಮರುಳಂ ತೆರಿವಿಳಾಸಂ ಮದಗಜಮಲ್ಲ . . . ಮಾಡಿದ ಮರ್ಯ್ಯಾದೆ (ಸೌಇಇ. IX-1, ೬೬-೫ ; ೭೨೧). [ ತೆರಿ? + ವಿಳಾಸ ( = ವಿಲಾಸ) ]

ತೆರಿಸು 'ತೆಱಿಸು' ನೋ.

ತೆರು$_1$ 'ತೆಱು$_1$' ನೋ.

ತೆರು$_2$ 'ತೆಱು$_2$' ನೋ.

ತೆರುಗಡೆ 'ತೆಱುಗಡೆ' ನೋ.

ತೆರುವಣ (ನಾ). ಸುಂಕ ; ತೆರಿಗೆ : ಶಾಸನಗಳಲ್ಲಿ ಬರುವ ತೆರುವಣಗಳು :- ತೆರು, ಮುಂಡಗಡಿ, ಅರುಗಡಿ (ತುಳುನಾ. ೨೬೦).

[ತೆರು$_2$ (< ತೆಱು$_3$) + ವಣ$_3$ ]

ತೆರೆ$_1$ 'ತೆಱು$_1$' ನೋ.

ತೆರೆ$_2$ 'ತೆಱೆ$_2$' ನೋ.

ತೆರೆ$_3$ 'ತೆಱೆ$_3$' ನೋ.

ತೆರೆ$_4$ (ನಾ). ೧. ಅಲೆ ; ತರಂಗ : "ವೀಚೀ, ಭಂಗಃ, ತರಂಗಃ – ಈ ೩ ತೆರೆ" (ಹಲಾಯು. ೧೧೮-೩೦) ; ಪಾಲ್ಗಡಲ ತೆರೆಯ ನೊರೆಯ ದೊರೆಯ ದುಕೂಲಾಂಬರಮನುಟ್ಟು (ಆದಿಪು. ೪-೪೦ ವ) ; ಗಂಗಾದೇವಿಯುಮಾ ಕೂಸಂ ಮುಟುಗಲೀಯದೆ ತನ್ನ ತೆರೆಗಳೆಂಬ ನಳಿತೋಳ್ಗಳಿನೊಯ್ಯ ನೊಯ್ಯನೆ ತಟ್ಟೈಸಿ ತರೆ (ಪಂಪಭಾ. ೧-೯೫ ವ) ; ಕುಳಿರ್ವಚ್ಯೋದದ ತೆರೆಯೊಲರೊಳೆ ಪುಳಕಂ ಪೊಣ್ಮಿದಂತೆ ತಣ್ಣದಿರ್ಗಳ್ ಕಣ್ಗೊಳಿಸಿರೆ ಶಶಿಕಾಂತ ಶಿಲಾತಳವೊಂದುಜ್ವಳಿಸಿತಾ ಲತಾಮಂಟಪದೊಳ್ (ಕಾದಂಪೂ. ೪೪೨) ; ಸಮುದ್ರದ ತಡಿಯಲೊಂದು ಮನೆಯ ಮಾಡಿ ನೊರೆ ತೆರೆಗಳಿಗಂಜಿದೊಡೆಂತಯ್ಯ (ಮಹಾದೇ. ೪. ೫೦-೧೩೪) ; ತುಂತುಱುಂ ತೆರೆಯಿಂ ಪೆರ್ದೆರೆಯಿಂ . . . ಒಪ್ಪಿತ್ತು ನೀರಾಕರಂ (ಗಿಳಿ. ೧-೪೬) ; ವಾರ್ಧಿಯೊಗ್ಗಿನ ತೆರೆಯಂತೆ ಗಾಳಿಗಿದಿರೊಡ್ಡಿದ ಕಂಡೊಡರಂತೆ (ದಕಳು. ೦೪-೨೬) ; ತೆರೆಯ ಮೇಲಣ ತೆಪ್ಪದಂತಿರೆ ಧರಣಿಯೊಲೆದುದು (ಕುವ್ಯಾವಿ. ೬೦೩. ೬-೫೯) ; ತೇಜಿಯ ಸಾಲೋ ಶರಧಿಯ ತೆರೆಗಳ ರಾಜಿಯೊ . . . ಎನೆ ತಿರುಮಲರಾಜನೈತಂದನುಬ್ಬಿನಲಿ (ಕಂಸವಿ. ೩-೩೩) ; ತೀರಕ್ಕೆ ಬಂದ ಮೇಲೆ ತೆರೆಯ ಭಯವೇನು ? (ಗಾದೆ). ೨. ಸುಕ್ಕು ; ವಂಡಿಕೆ ; ಜರೆಯಿಂದಂ ಪುರ್ಬು ಜೋಲಲ್ತೆರೆ ತರತರದಿಂದುಣ್ಮಿ ಪೊಣ್ಮಲ್ಕೆ (ಕಾದಂಪೂ. ೦೬೫) ; ನರೆ ಕೆನ್ನೆಗೆ ತೆರೆ ಗಲ್ಲಕೆ ಶರೀರ ಗೂಡುವೋಗದ ಮುನ್ನ . . . ಪೂಜಿಸು ನಮ್ಮ ಕೂಡಲಸಂಗಮದೇವನ (ಬಸವ. ೧೬೧) ; ಕಯ್ಯ ಕೊಡೆಯಿಂ ಮಯ್ಯ ತೆರೆಯಿಂ ಜೋಲ್ವ ಪುರ್ಬಿಂ . . . ಮೆಲ್ಲಮೆಲ್ಲನೆ ಚಪ್ಪರದ ಬಾಗಿಲ್ಗೆ ಬಂದೊಡೆ (ಸಂಬಿರ. ೬-೨೩) ; ನರೆ ತೆರೆಗಳಿಡಿದಡರಿ ತನು ಜರ್ಜರಿತವಾಗಿಯನೇಕ ದಿನದಲಿ ಹಿರಿಯರೆಂದೆನಿಸಿದರೆ ಹಿರಿಯರೆ (ಪ್ರಭುಲೀ. ೧೬.೦೮). ೩. ಪರದೆ; ಜವನಿಕೆ; ಮುಸುಕು: "ಅಪಟೀ, ಕಾಂಡಪಟಃ, ಪ್ರತಿಸೀರಾ, ಯವನಿಕಾ, ತಿರಸ್ಕರಿಣೀ – ಈ (೫) ತೆರೆ" (ಹಲಾಯು. ೫೨-೦೫೪) ; ಕಿಮ್ಮುಗಿಲ ತೆರೆಯ ಪೊರೆಯೊಳ್ ಸೆಗೆದು ಪೊಱಮಡುವ ವಿದ್ಯಾಧರಿಯಂತೆ . . . ಚೌಪಳಿಗೆಯ ಬಾಗಿಲೊಳ್ ನಿಂದು (ಪಂಪಭಾ. ೪-೩೯ ವ) : ಅಸುರೇಂದ್ರಂ . . . ಅಂಬರದ ನಿಱುಮುಗಿಲ ತೆರೆಗಳ ಪೊರೆಯೊಳಗಣ ನಿಜ

ವಿಮಾನದೊಳಗಂ ಪೊಕ್ಕಂ (ಶಾಂತಿಪು. ೮-೫೩) : ರವಿ ಬಂದನಸ್ತಾಚಲಕ್ಕು ದಯಕಾಲಕ್ಕೆ ಸುತ್ತಿದ ಕರಿಯ ತೆರೆಯೊ ಎನಿಸಿ (ಸಿದ್ಧರಾ. ೧-೫೪) : ಗುರು ಕಾರುಣ್ಯಮುಹೂರ್ತಕ್ಕೆ ಜನನಮರಣಂಗಳೆಂಬ ತೆರೆಯಾರ್ ಒಡಿದ ಸಂಸಾರದ ತೆರೆ ಸರಿಯೆ (ಬಸರ. ೪-೧೦೩) ; ತೆರೆಯ ಹಿಡಿದುದು ಮಱವೆ ಸಮ್ಯಜ್ಞಾನ ದೀಧಿತಿಗೆ (ಕುಮಾರದಶ್ಯೆ. ೦೮-೬೧) ; ತೆರೆಯ ಹಿಂದೆ ನಾನು ಅವಳ ಅಪೂರ್ವ ನೃತ್ಯವನ್ನು ನೋಡುತ್ತಿದ್ದೆ (ದಾಡಅ. ೮೯); ಅತಿಪ್ರಚ್ಛನ್ನ ಪಟ ದೇಹ ಸುಕರ್ಮ ತೆರೆಯು (ಕಲ್ಯಮಂ. ೧೦೬). 'ತೆರೆವಿಡಿ' ಪರಾ. ೪. (ಪ್ರಕಾಶಗ್ರಾಹಿಯಾದ) ಕಣ್ಣಿನ ಪೊರೆ ; ದೃಷ್ಟಿಪಟಲ : ತೆರೆಯ ಮೇಲೆ ಬಿಂಬವು ಬೀಳಲು, ಆ ಅನುಭವವನ್ನು ಅಲ್ಲಿರುವ ಸೂಕ್ಷ್ಮ ನರಗಳು ಮಿದುಳಿಗೆ ತಿಳಿಸುವುವು (ದಾಲಪ್ರ. I, ೪೮೪). ೫. ಒಂದು ಬಗೆಯ ಕಣ್ಣಿನ ರೋಗ ; ಕಣ್ಣಿನ ಪೊರೆ : ಪೂವರಸೆ ತೆರೆಯೆಂಬ ಪಲ ವಕ್ಷಿರೋಗವುಂ ಕಳೆಗುಂ (ಅಶ್ವಶಾ. ೧೫-೦೫) ೬. ಬೇಟೆಗಾರರು ಉಪ ಯೋಗಿಸುವ ಒಂದು ಬಗೆಯ ಸಾಧನ ; ಮುಸುಕಿನ ಆಕಾರದಲ್ಲಿ ಮಾಡಿರುವ ಬಲೆ : "ಪಟಹಂ = ಬೇಂಟೆಯ ತೆರೆ" (ಶಮದ. ಪರಿ. ೧): ತೆರೆಯ ಸರಳಿಸುವೆರಳೆ ಬಲುನಾಯ ಬಾಯಿಂದ ಮುರುಚಿ ಕೊಂಡೋಡುವ ಮೊಲಂ (ಸೋಮಚ. ೩-೭) ; ತೆರೆಯ ತೋಹಿನ ಮೋಹಿನ ನೀರ ಬೇಂಟೆಯುರ್ವರೆಗಳಸೀಕ್ಷಿಸುತವರು (ಅನಂತ. ೦೬-೦೫). 'ತೆರೆವೇಂಟೆ' ಪರಾ. ೭. ಛಾಯಾಚಿತ್ರಪ್ರದರ್ಶನಕ್ಕಾಗಿ ಬಳಸುವ ಬಿಳಿಯ ಪರದೆ ; ಸಿನಿಮಾದಲ್ಲಿ ಚಿತ್ರವನ್ನು ಮೂಡಿಸುವ ಪಟ ; ರಜತಪರದೆ : ಹೆಚ್ಚು ಮಂದಿ ನಟನಟಿಯರನ್ನು ಏಕಕಾಲದಲ್ಲಿ ತೆರೆಯ ಮೇಲೆ ಅವರಿಗೆ ತರುವುದು ಸಾಧ್ಯವೇ ಇಲ್ಲ (ನಾಡಿಗೇ. ೬೧).

**ತೆರೆಯ ಊಳಿಗ** = ಪರದೆಯನ್ನು ಹಿಡಿಯುವ ಸೇವೆ : ಅರಮನೆ ಯಲ್ಲಿ ಪ್ರತಿದಿನದಲ್ಲಿಯೂ ನಡೆಯುವಂತೆ ಕಟ್ಟು ಮಾಡಿದ ಊಳಿಗಗಳ ವಿವರ . . . ಬೀಸಣಿಗೆಯ ಊಳಿಗ, ತೆರೆಯ ಊಳಿಗ . . . ಚಾವಡಿ ಕಾವಲು ಊಳಿಗ (ಚಾಮವಂ. ೪೫). **ತೆರೆಯ ಸೀರೆ** = ಅಂತಃಪಟ : ತೆರೆಯ ಸೀರೆ ಚನ್ನೆಯರೊಲಿದು ಕಟ್ಟಿದರು (ಅಂಜಚ. ೪-೪೦) : ವೇದಿಕಾಗ್ರದೊಳ್ ತೆರೆಯ ಸೀರೆಯುಂ ಪಿಡಿದು ವರನಂ ಕನ್ನಿಕೆಯುಂ ಇಕ್ಕೆಲದೊಳಿರಿಸಿ (ಧರ್ಮಪ ೬-೫ ವ). 'ತೆರೆಸೀರೆ' ಪರಾ.

[ ದೇ.॥ ತಮಿ. ತಿರೈ ; ಮಲ. ತಿರ ; ತುಳು. ಸೆರೆ ; ತೆಲು. ತೆರ ]

**ತೆರೆಗಟ್ಟು** (ಕ್ರಿ). ನಿರಿಗೆಗಳಿಂದ ಕೂಡಿರು ; ಪದರ ಪದರವಾಗಿರು : ಮಿಱುಮಿಱುನಾದ ಮೈ ಹೊಳಹಿಂದ ತೆರೆಗಟ್ಟಿ ನಿಱಿದೇಳ್ವ ಹೊಂಗಾಸೆ ಯಿಂದ . . . ಬಯಲ್ಗೊಡ್ಡಿ ಹೊಳೆವಂತೆ ಹೊಳೆವರು (ಭರತ. ೧೩-೧೦೧).

[ ತೆರೆ$_4$ + ಕಟ್ಟು$_1$ ]

**ತೆರೆಗಣ್ಣು** (ನಾ). ಬಿಟ್ಟಿರುವ ಕಣ್ಣು ; ಬಿಡುಗಣ್ಣು : ತೆರೆಗಣ್ಣಾಗಿ ನೋಡು ತಿರೆ, ಗುರುತಿಸಿದೆನಯ್ ಪಿತನನು (ಶ್ರೀರಾಮಾ. ೦೦೪-೧೦೬) ; ಅವನ್ನೆಲ್ಲ ತೆರೆಗಣ್ಣಿನಿಂದ ನೋಡಲು ಕಲಿತಿದ್ದಾನೆ (ಸ್ವಪ್ನಹೂ. ೩೦೩).

[ ತೆರೆ$_1$ (< ತೆಱೆ$^{3}_{1}$) + ಕಣ್ಣು (< ಕಣ್) ]

**ತೆರೆಗಯ್** 'ತೆಱೆ$^{3}$ಗಯ್' ನೋ.

**ತೆರೆಗೂಡು$_1$** (ಕ್ರಿ). ಅಲೆಗಳಿಂದ ಕೂಡಿರು,-ತುಂಬಿರು : ದೇವಗಂಗಾನದಿ ಗಗನಗಾಮಿನಿಯಾದ ಭಾವವ ನೋಡಬೇಕೆನುತ ಭಾವಿಸಿ ತೆರೆಗೂಡಿ ಕಾವೇರಿ ನೆಱೆ ಗಗನಾವಲಂಬಿತೆಯಾಗಿಹಳು (ಕಂನವಿ. ೫-೪೪).

[ ತೆರೆ$_4$ + ಕೂಡು$_1$ ]

**ತೆರೆಗೂಡು$_2$** (ನಾ). ಒಳಗಿರುವುದು ಕಾಣುವಂತಿರುವ ಗೂಡು,-ಕೋಶ : ದಿಂಡುಗಳು ಆವರಿಸಿದ್ದರೆ ಆವರಣಗಳು (Closed Cells) ; ಗೂಡು ರೆಕ್ಕೆ ಅಂಚಿನವರೆಗೂ ಇದ್ದರೆ ತೆರೆಗೂಡುಗಳು (Open Cells) (ಕೀಟಬಿ. ೧೯). [ ತೆರೆ$_1$ (< ತೆಱೆ$^{3}_{1}$) + ಗೂಡು ]

**ತೆರೆಗೆಯ್ಸು** (ಕ್ರಿ). ಪರದೆಯಂನ್ನು ಹಾಕಿಸು ; ಮರೆಮಾಡಿಸು : ವೃಷ ಭೇಂದ್ರನಂ ಕರೆಯಲ್ಕೆಂದದೆಳಸಿ ತೆರೆಗೆಯ್ಸಿ ಬಸವಂ . . . ಅದಱ ಮಱೆ ಯೊಳಗಿರ್ದಂ (ವೃಷವಿ. ೪೧-೫). [ ತೆರೆ$_4$ + ಕೆಯ್ಸು ]

**ತೆರೆಗೈ** 'ತೆಱೆ$^{3}$ಗಯ್' ನೋ.

**ತೆರೆಗೊನೆ** (ನಾ). ಅಲೆಯಮೇಲ್ಭಾಗ,-ನೆತ್ತಿ,-ತುದಿ: ಎಲರಲೆಪದಿನೊಗೆದ ತೆರೆಗೊನೆ[ಪಾಠಾಂ. ಮೇಗೊನೆ]ಯ ತೂರ್ಪನಿಯ ತುಂತುಱುಗಳಿಂ ಮಸಗುವ ಮಂಜಿನೊಳಂ ಅಂಜದೆ ಪೊಕ್ಕು (ಕಾದಂಪೂ. ೧೧೬) ; ನೀರ್ವಾನಸಂ ಮೆಲ್ಲು ಬಿಸುಡೆ ಪಸರಿಸುವ ತೆರೆಗೊನೆಯೊಳ್ ತೇಂಕಿ ಬರ್ಪ ಜಳಮೃಣಾಳನಾಳಮಂ ಜಳವ್ಯಾಳಮೆಂದು ಕೆಲದ ಬಿಲದಿಂ ಒಡಿಯಲೆಂದು ಧೀಂಕಿಡುವ ವಿಷಾಪಹಾರಶಾಲೂರಜಾಲಂಗಳ್ (ಚಂದ್ರಪ್ರ. ೫-೪೦ ವ) ; ತೆರೆಗೊನೆಯೊಳ್ ತೆರಳ್ದು ನಿಱಿಗಟ್ಟಿದ ಕತ್ತುರಿಯೊಳ್ಗೆಸಱ್ . . . ಮನಕ್ಕೆ ಬಂದಿರೆ (ವರ್ಧಪು. ೪-೬೩). [ ತೆರೆ$_4$ + ಕೊನೆ$_2$ ]

**ತೆರೆಗೊರಳು** (ನಾ). ತೆರೆದ ಕೊರಳು ; ಮುಕ್ತಕಂಠ: ಈ ಗೀತಪದ್ಧತಿ ಶಕ್ತಿಯುತವಾದದ್ದು, ಹಾಗೆಯೇ ಗಟ್ಟಿಯಾಗಿ . . . ತೆರೆಗೊರಳಿನಿಂದ ಹಾಡ ಬೇಕಾದುದು (ಯಕ್ಷಲ. ೬೬). [ತೆರೆ$_1$ (< ತೆಱೆ$^{3}_{1}$)+ಕೊರಳು (< ಕೊರಲ್)]

**ತೆರೆಗೊಳ್** (ಕ್ರಿ). ೧. ತರಂಗಗಳಿಂದ ಕೂಡಿರು ; ಅಲೆಅಲೆಯಾಗು : ಪರಿಕಲಿಸಿ ಕಲಸಿ ಕಪ್ಪುರದ ರಜಂ ಕುಂಕುಮದ ರಜಂ ಮೃಗೋದ್ಭವರಜ ಮೇಂ ತೆರೆಗೊಂಡುವೊ ಸಿತಚಾಮರಮರುದಭಿಹತಿಯಿಂದಮಾ ಸಭಾ ಕುಟ್ಟಿಮದೊಳ್ (ಜಗವಿ. ೦೦-೬೫). ೨. ಮಡಿಕೆಯಾಗು; ನಿರಿಗೆಗಟ್ಟು; ಸುಕ್ಕುಗಟ್ಟು : ತೆರೆಗೊಂಡ ಮೊಗಂ ನಡುಗುತ್ತುಮಿರ್ಪ ಕೈ . . . ಸೆರೆ ಗೊಂಡ ಕಾಲ್ಗಳಿಂ ಮನಕೆ ವಿರಕ್ತಿಯುಂ ಪಡೆವ ಮುಪ್ಪಿನ ಪಾರ್ವನ ದೊರ್ಬನೊಪ್ಪಿದಂ (ಪುಣ್ಯಾಸ ೩-೮೧) ; ನೆರೆದರೆಗೆ ಮುಸಿದೊಡೆದು ತೆರೆಗೊಂಡೊಡಲನು ಕತ್ತಲೆಯ ಮಱೆಗೆಯ್ದು (ಚಿಬಪು. ೧೦-೬೬).

[ ತೆರೆ$_4$ + ಕೊಳ್$_1$ ]

**ತೆರೆಚಿಮ್ಮಿಸು** (ಕ್ರಿ). ಅಲೆಯನ್ನು ಹೊಮ್ಮಿಸು,-ಉಂಟುಮಾಡು : ಈಗ ಚಕಾರ ಎತ್ತದ ಈ 'ಮಹಾಪ್ರಾಣ' ಆಮೇಲೆ ಒಂಟಿಯಾಗಿ ತೆರೆಚಿಮ್ಮಿಸುವ ಅಳಲ ಮೊರೆ (ಬದ್ಧಪ್ರ. IV, ೬೮೪). [ ತೆರೆ$_4$ + ಚಿಮ್ಮಿಸು ]

**ತೆರೆದುಱುಗಲ್** (ನಾ). ಅಲೆಗಳ ಸಮೂಹ,-ಗುಂಪು : ಜಲಚರಂಗಳ ಪೊಳಪಿನೆಸಕದಿಂ ಮಸಗಿ ಮೊಱೆವ ತೆರೆದುಱುಗಲ್ (ಕಾದಂಪೂ. ೧೦೭) ; ಮಿಥ್ಯಾತ್ವವಿಷಜಳಧಿಯ ತೆರೆದುಱುಗಲೆನಿಸಿ ಪೊಱಪೊಣ್ಮಿದಸಂಖ್ಯಾತ ಲೋಕಮಾತ್ರ ದುಃಪರಿಣಾಮಂಗಳುಂ (ವರ್ಧಪು. ೦೦-೫೯ ವ) ; ಪೊಳೆಪು ವಡೆದ ಪಾಲ್ಗಡಲ ತೆರೆದುಱುಗಲೊಳ್ ಪವಡಿಸುವ ಸಿರಿಯಂ ಪೋಲ್ತಿರ್ಪಳ್ (ಕಬ್ಬಿಗಕಾ. ೩೦೫). [ ತೆರೆ$_4$ + ತುಱುಗಲ್ ( < ತುಱುಂಗಲ್) ]

**ತೆರೆದೆಗೆ** (ಕ್ರಿ). ೧. ಪರದೆಯನ್ನು ಓಸರಿಸು,-ಸರಿಸು : ನಾಂದಿಯನೋದಿ ಸೂತ್ರಧಾರಕಂ ಭೋಂಕನೆ ತೆರೆದೆಗೆಯೆ (ರಾಜಶೇ. ೫-೦೯ ವ) ; ತೆರೆದೆಗೆಯ ಲಲರಿಚಂ ಬೇಡೆಂಬ ಬಗೆಗೆ ಪೊರೆಯಲ್ಲಿ ? (ಕಾಲೂರ. ೧೮೮-೪೩೮). ೨. ಅಂತಃಪಟವನ್ನು ಎತ್ತು : ಅಂತು ತೆರೆದೆಗೆಯಲೊರ್ಬರೊರ್ಬರ ಮೊಗವಂ ನೋಟ್ಪ ಸಮಯದೊಳ್ ಹೇಮದತ್ತಂ ಕೈನೀರೆಱೆಯೆ (ದಶಕು. ೪-೦೩೪ ವ). [ ತೆರೆ$_4$ + ತೆಗೆ$_1$ ]

**ತೆರೆದೆಗೆಸು** (ಕ್ರಿ). ೧. ಪರದೆಯನ್ನು ಓಸರಿಸು,-ಸರಿಸು: ೨.=ತೆರೆದೆಗೆ ೨ ಸುಮುಹೂರ್ತಮಂ ಕೇಳ್ದು ತೆರೆದೆಗೆಸಿ ಭೂದಿವಿಜರ ನಲ್ದರಕೆವೆತ್ತು . . . ಧಾರೆಯನೆಱೆದನು (ಜೈಮಿಭಾ. ೩೦-೧೬).

[ ತೆರೆ$_4$ + ತೆಗೆಸು ( < ತೆಗೆಯಿಸು ) ]

**ತೆರೆದೊಂಗಲ್** (ನಾ). = ತೆರೆದುಱುಗಲ್ : ತೆರೆದೊಂಗಲ್ಪೊರೆದಿರ್ದ ತಣ್ಣೆಲರ್ಗಳಿಂ . . . ಮೆಲ್ಲುಣ್ಣುರಂಗೆಯ್ದ ಹಂಸ ರಥಾಂಗಂಗಳಿಂ (ಕಾದಂಉ. ೩೫೬). [ ತೆರೆ$_4$ + ತೊಂಗಲ್ ]

**ತೆರೆದೊಗಲು** (ನಾ). ಸುಕ್ಕುಗಟ್ಟಿದ ಚರ್ಮ,–ತೊಗಲು: ಬಟ್ಟಹೊಟ್ಟೆಯ ತೆರೆದೊಗಲ ಜೀರ್ಣಾಂಗದ ಗಡವ ಗರುಡಿಯ ನಿನ್ನ ಜಗಜಟ್ಟಿತನವನ್ನು ಏಕ್ಕತುಳದಿಂದ ಸವಿಗೊಳ್ಳಬೇಕೆಂಬ ರಣರಣಿಕೆಯೂ ನನ್ನನ್ನೀ ವೀರತಾಣ್ಡವದಿಂದಾಡಿಸುತ್ತಿದೆ (ಮುಂತ್ರಶ. ೬೩-೧೨).

[ ತೆರೆ$_4$ + ತೊಗಲು (<ತೋಲ್$_1$ ) ]

**ತೆರೆದೋಱು** (ಕ್ರಿ). ಅಲೆಗಳನ್ನು ಕಾಣಿಸು,–ತೋರು; ಚಂಚಲವಾಗು: ಕಲೆ ಇಲ್ಲದ ಮೌಕ್ತಿಕದಂತೆ ಜರವಿಲ್ಲದ ರತ್ನದಂತೆ ತೆರೆದೋಱದ ಅಂಬುಧಿಯಂತೆ ಒಡಲಳಿದವಂಗೆ ನೆಱೆ ಅಱಿದವಂಗೆ . . . ಬೇಱೊಂದೆಡೆ ಇಲ್ಲ (ಮೋಳಿಮಾ. ೧೧೧-೪೩೮). [ ತೆರೆ$_4$ + ತೋಱು ]

**ತೆರೆಪೊಡೆ** (ನಾ). ಮಡಿಲು; ಉಡಿ: "ತೆರೆಪೊಡೆಯೆಂದುಂ ಸೋಗಿಲೆಂದುಂ ಮಡಿಲ್" (ಕಶಸಾ. ೬೩-೩೯೬); "ತೆರೆಪೂಡೆಯೆನೆ ಮಡಿಲ್" (ಕನ್ನಿಕ್ಕ. ೭೩).

[ ತೆರೆ$_4$ + ಪೊಡೆ$_3$ ]

**ತೆರೆಬಟ್ಟೆ** (ನಾ). ಜವನಿಕೆ; ಪರದೆ: "ಪ್ರತಿಸೀರಾ, ಯವನಿಕಾ, ತಿರಸ್ಕರಣೀ–ಳಿ ತೆರೆಬಟ್ಟೆ, ಫರದ" (ಸಿದ್ಧಾಂತಿ. ೧೭೪).

[ ತೆರೆ$_4$ + ಬಟ್ಟೆ$_2$ ]

**ತೆರೆಬಾಯಿ** 'ತೆಱೆವಾಯ್' ನೋ.

**ತೆರೆಬೀಳು** (ಕ್ರಿ). ೧. ಪರದೆ ಕೆಳಕ್ಕೆ ಬರು: ದೃಶ್ಯ ಮುಗಿಯುವ ಮೊದಲೇ ತೆರೆಬಿತ್ತು (ಬೂಧಿ). ೨. (ಆಲಂ) ಮುಗಿ; ಪೂರೈಸು: ಅಲ್ಲಿಗೆ ಆ ಕೆಲಸಕ್ಕೆ ತೆರೆಬಿದ್ದ ಹಾಗೆಯೇ (ಬೂಧಿ).

[ ತೆರೆ$_4$ + ಬೀಳು$_1$ (<ಬೀೞ್$_1$) ]

**ತೆರೆಮಗುಳ್ಚು** (ಕ್ರಿ). ಅಲೆಯನ್ನು ಹೊಮ್ಮಿಸು,–ಅಪ್ಪಳಿಸು: ಕಾಳಜಲಶರಧಿ, ಮೆಯ್ಯ ಮುರಿಯುವ ತೆರದಿ ತೆರೆಮಗುಳ್ಚುತೆ, ಭರದಿ ಮಲೆತುದು, ಮಹೇಂದ್ರ ಶಿಖರಂಗಳುಂ ನಾಣ್ಚದರಿ ಗೋಣ್ಣಾಳ್ಗುವೋಲ್ (ಶ್ರೀರಾಮಾ. ೫೮೭-೭೩). [ ತೆರೆ$_4$ + ಮಗುಳ್ಚು (<ಮಗುಟ್ಚು) ]

**ತೆರೆಮರೆ** 'ತೆರೆಮಱೆ' ನೋ.

**ತೆರೆಮಸಗು** (ಕ್ರಿ). ೧. ಅಲೆಯು ಉಂಟಾಗು,–ಏಳು,–ಉಕ್ಕೇರು: ಎಸೆವುದು ವಳಿತ್ರಯಂಗಳಿನೆಸೆವಸಿಯಳ ತನ್ವಸಿಱ್ . . . ತೆರೆಮಸಗಿದ ಲಾವಣ್ಯರಸದ ಪೊಸಲೆಂಬಿನೆಗಂ (ಮಲ್ಲಿಪು. ೩-೬೬); ಕವಲಿಱದ ಕುಂತಳಂ ಗಂಗಾಧರನೊಳ್ ಪುರುಡಿಸಿ ತೆರೆಮಸಗಿದ ಕಾಳಿಂದೀನದಿಯಂ ಶಿ[ ರೋ ]ಗ್ರುದೊಳ್ ಧರಿಸಿದಾತಿರ್ಪುದು (ನಂಬಿರ. ೪-೨೪); ಸಾಂದ್ರಚಂದ್ರಿಕೆಯಿಂದಾನಂದಸುಧಾಬ್ಧಿ ತೆರೆಮಸಗಿದಂತೆ ಪಲ್ಸೆಳಗು ಪಸರಿಸೆ (ರಾಜಶೇ. ೩-೫೦ ವ). ೨. (ಆಲಂ) ಹೆಚ್ಚಾಗು; ಅಧಿಕವಾಗು; ಅತಿಶಯವಾಗು: ಆತ್ಮಜಮುಖಸರೋಜವಮಂ ಮೋಹರಸಂ ತೆರೆಮಸಗೆ ನೋಳ್ಪ ಜನನಿಯ ಕರಿಯಾಲಿಗಳೆಂಬ ತುಂಬಿಗಳ್ ಧನ್ಯಂಗಳ್ (ಮಲ್ಲಿಪು. ೩-೧೨೦); ತೆರೆಮಸಗೆ ಕಾಂತಿ ನಾಭೀಸರೋಜಮಲ್ಲಾಡೆ (ಗಿರಿಶ. ೩-೪೪); ದಳ್ಳುರಿದುಱುಗಲನು ತನಬಿಗಿದು ಭೀಮನ ರಥದ ಸುತ್ತಲು ಸೂಸಿ ತೆರೆಮಸಗೆ . . . ಉರವಣಿಸಿತಮಳಾಸ್ತ್ರ (ಕುವ್ಯಾದ್ಯೋ. ೦೯-೪೬); ಸಿರಿವೆತ್ತ ಮೆಲ್ಲಡಿಯ ಚೆಲ್ವಿಕೆಗೆ ಮಂಗಳಂ ತೆರೆಮಸಗುವುಗುರ ಕಾಂತಿಗೆ ಮಂಗಳಂ (ಗೀತಗೋ. ೩೪-೪); ಮರುಳ್ಗೆ ಧೂಪಂದೋಱುತಾ ಮನಃಕ್ಷೋಭಂ ತೆರೆಮಸಗೆ ಊದಿದೆನ್ (ಅಶ್ವತ್ಥಾ. ೩-೪೮). [ ತೆರೆ$_4$ + ಮಸಗು$_1$ ]

**ತೆರೆಮಱೆ,ತೆರೆಮರೆ** (ನಾ). ೧. ಪರದೆಯ ಹಿಂಭಾಗ: ತೆರೆಮಱೆಯೊಳಿರ್ದವಂ ನುಡಿಯ ಹಾಹೆಗಳುಲಿದೊಲಱುಸುವುದು ಜಗದೊಳು (ನಂದಿಮಾ. ೧-೧೮). ೨. ಮುಚ್ಚುಮರೆ; ಗುಟ್ಟು; ರಹಸ್ಯ: ಪ್ರಾಣಕ್ಕೆ ಪ್ರಾಣ ಸಮದರುಶನವಾಗಿದ್ದವರಲ್ಲಿ ತೆರೆಮಱೆ ಎಂಬುದಿಲ್ಲ ನೋಡಯ್ಯ (ಶೂನ್ಯಸಂ. ೯೨-೩). **ತೆರೆಮರೆ**: ೧. ಅಮಲಾಂಗೆ ತೆರೆಮರೆಯಲ್ಲಿ ತಾಂ ಕುಳಿತು (ಸೌಗಂಧಿ. ೮೨-೪). 'ಕಱೆಮಱೆ' ಪರಾ. ತೆರೆಮರೆಯ ಪದ್ಧತಿ = ಬುರಕಿಯನ್ನು ಧರಿಸುವ ಪದ್ಧತಿ; ಘೋಷಾ ಪದ್ಧತಿ: ಈ ಕಾಲದಲ್ಲಿ ತೆರೆಮರೆಯ ಪದ್ಧತಿ ಪ್ರಚಾರದಲ್ಲಿ ಬರುತ್ತಿರುವುದು . . . ತಿಳಿದು ಬರುತ್ತದೆ (ಕರ್ನಾಕ. ೧೩).

[ ತೆರೆ$_4$ + ಮಱೆ$_2$ ]

**ತೆರೆಮಾಲೆ** (ನಾ). ಅಲೆಗಳ ಮಾಲೆ,–ಸಾಲು: ಕೂಡೆ ಮಸಗಿತು ರಿಪುಚತುರ್ಬಲ ಜೋಡು ಮಾಡಿತು ಕಡಹದವರರು ಹೂಡಿದದ್ರಿಯ ನಂಬುಧಿಯ ತೆರೆಮಾಲೆ ಕವಿದಂತೆ (ಕುವ್ಯಾದ್ಯೋ. ೧೦-೨೯); ಶರಧಿಯ ತೆರೆಮಾಲೆಗಳಂತೆ ವಾನರ ತುರಗದ ಫೌಜೇಱಿದುದು (ಕುಲಾಸಾಂ. ೨೦-೨೪). [ ತೆರೆ$_4$ + ಮಾಲೆ ]

**ತೆರೆಮುಗಿಲ್, ತೆರೆಮುಗಿಲು** (ನಾ). ಅಲೆಅಲೆಯಾದ ಮೋಡ: ತೆರೆಮುಗಿಲ ಮಱೆಗೆ ನಲ್ಲಂ ಬರೆ ತೆಗೆದೆಳಸುವುದುಮೊಗೆವ ಸುಯ್ಯೊಳ್ಗಳ್ವಿನಾನೆರೆದ ಮುಗಿಲ್ ಕರಗೆ ವಿಯಚ್ಚರಿಗೇಂ ಕಲಿಸಿದುದೊ ಲಜ್ಜೆಯೊಳ್ ಕರಗುವುದಂ (ವರ್ಧಪು. ೩-೨೬); ತೆರೆಮುಗಿಲ ಬಱಿವಿಡಿದು ಭಾಸ್ಕರರಥ ಪರಿಪರಿವ ತೆಜದೆ (ಪಾರ್ಶ್ವಪು. ೧೧-೧೧೨); ತೆರೆಮುಗಿಲನಡರ್ದ ವಿದ್ಯಾಧರಿ (ಯಶೋಚ. ೪-೯). **ತೆರೆಮುಗಿಲು**: ದೊರೆಮುಗಿಲು ತೆರೆಮುಗಿಲು ನಿಡುಮೋಹರದ ಮುಗಿಲು (ತೂರಿರಾ. ೪-೬-೫). [ ತೆರೆ$_4$ + ಮುಗಿಲ್ ]

**ತೆರೆಮುಗಿಲು** 'ತೆರೆಮುಗಿಲ್' ನೋ.

**ತೆರೆಮುಳುಗು** (ಕ್ರಿ). ಅಲೆಯಲ್ಲಿ ಮುಳುಗು: ನೆತ್ತಿಯುಮಿದುಳೊಡೆದುಣ್ಣುವ ನೆತ್ತರ ಧಾರೆಗಳ ತೀವೆ ತನ್ನಯ ಮುಖದೊಳ್ನೆತ್ತರನೆ ಕಾಱಿ ಕುರುಪತಿ ನೆತ್ತರ ಕಡಲೊಳಗೆ ತೇಂಕಿ ತೆರೆಮುಳುಗಿರ್ದಂ (ಗದಾಯು. ೯-೧೭). [ ತೆರೆ$_4$ + ಮುಳುಗು$_1$ (< ಮುೞುಂಗು) ]

**ತೆರೆಯ** (ನಾ). ಪರದೆಯನ್ನು ಹಿಡಿಯುವವನು: ಜನನ ಮರಣಂಗಳೆಂಬ ತೆರೆಯರ್ ಪಿಡಿದ ಸಂಸಾರದ ತೆರೆ ಸರಿಯೆ (ಬಸರ. ೪-೧೧೨).

[ ತೆರೆ$_4$ + – ಅ$_7$ ]

**ತೆರೆಯಾಡು** (ಕ್ರಿ). ಅಲೆಗಳ ಚಲನೆಯನ್ನು ಹೊಂದು: ಇರವಿನಲ್ಲಿ ಆ ತೆರವು ತುಂಬಿ ತೆರೆಯಾಡುವಂತೆ ಕಡಲು ಅರಿವಿನೊಂದು ಹೊಸಬರವಿಗಾಗಿ ಹಾತೊರೆಯುತಿಹುದು ಒಡಲು (ನಲಮು. ೬೬-೩). [ ತೆರೆ$_4$ + ಆಡು$_1$ ]

**ತೆರೆಯಿಸು** 'ತೆಱೆಯಿಸು' ನೋ.

**ತೆರೆಯುಲಿಪು** (ನಾ). ಅಲೆಗಳ ಧ್ವನಿ,–ಮೊರೆತ: ಪಲತೆಱದ ಪಱೆಯ ದನಿ ತೆರೆಯುಲಿಪೆನೆ ಪೊಕ್ಕತ್ತು ಕಟಕಮಂ ನೋೞ್ಪರ ಕಣ್ಗಳಸೆ ವಿಭೀಷಣವಾಹಿನಿ ಜಲನಿಧಿಯಂ ಬಂದು ಪುಗುವ ಕುಲವಾಹಿನಿವೋಲ್ (ಪಂಪರಾಮಾ. ೧೨-೮೦). [ ತೆರೆ$_4$ + ಉಲಿಪು ]

**ತೆರೆಯೇೞ್** (ಕ್ರಿ). ಅಲೆಯೇಳು; ಉಬ್ಬರ ಹೊಂದು: ಸಾಗರಮಂ ಕೂಡೆ ತರಳ್ಚಿದಂ ತೊಟಿಸಿದಂ . . . ತೆರೆಯೇೞಲ್ ಕಡಲ್ ಕೆಸರ್ಮಸಗಲಂತಾ ದೇವಕೀನಂದನಂ (ಜಗಪಿ. ೭-೧೮). [ ತೆರೆ$_4$ + ಏೞ್$_1$ ]

**ತೆರೆಯೊಟ್ಟಿಲ್** (ನಾ).=ತೆರೆದುಱುಗಲ್: ತರುಣಿಯರಂಬುಕೇಳಿಗೆ ಲಸಜ್ಜಳಮಂ ಪುಗುವಾಗಳೊರ್ಬರೊರ್ಬರ ನೆಬಲೊಂದನೇಕವಿಧದಿಂ ತೆರೆಯೊಟ್ಟಿಲೊಳಿಯ್ದೆ ತೋಱಲ್ (ಧಕಳ. ೧೧-೮೭). [ ತೆರೆ$_4$ + ಒಟ್ಟಿಲ್ ]

**ತೆರೆವಂಕು** (ನಾ). ಅಲೆಯ ಡೊಂಕು,–ವಕ್ರತೆ: ಆಗಸದ ಬಾಗು, ಚಂದ್ರಮನ ಗುಂಡಿನ ಸುಣ್ಪು, ಸಾಗರದ ತೆರೆವಂಕು ... ಈ ಸೃಷ್ಟಿಯಿಂ ನಮ್ಮೊಳಾಗಿಹುದು ರೂಪರುಚಿ (ಮಂಕುಕ. ೨೧೭). [ ತೆರೆ$_4$ + ವಂಕು$_2$ ]

**ತೆರೆವಳಿಗೆ** (ನಾ). ಗೌಸು; ಅವಕುಂಠನ: ಆ ಸಮರಸಂಭ್ರಮದೊಳ್ ಹೊರಜೆಯೊಳ್ ಕಾಲ್ಗೋದು ನಿಂದ ಮಂದರಾಚಲಧರನಗಲದೆಗೆದ ಮೊಗದ ಹರಿಗೆಯಿಂ ಮುಗಿಲ ತೆರೆವಳಿಗದ [ಪಾಠಾಂ. ತೆರವಳಿಗೆದೆ, ತೆರೆಯೊಳೊ]ಗೆದ ಬಱಸಿಡಿಲಂತೆಯುಂ (ಅನಂಪು. ೦೪-೬ ವ).

[ ತೆರೆ$_4$ + ವಳಿಗೆ$_2$ ]

**ತೆರೆವಾಯ್** 'ತೆಱೆವಾಯ್' ನೋ.

**ತೆರೆವಾಯಿ** 'ತೆಱೆವಾಯ್' ನೋ.

**ತೆರೆವಿಡಿ** (ಕ್ರಿ). ೧. ಅಲೆಗಳನ್ನು ಅನುಸರಿಸು,_ಹಿಂಬಾಲಿಸು : ಕಲುಷರ ಹಿತಂಗಳಿನಿಸುವ ಕೊಳದೊಳಗೆ . . . ಕಣ್ಗೊಳಿಪುವು ತೆರೆವಿಡಿದು ಪೊಳೆವ ರವಿಬಿಂಬಂಗಳ್ (ಕಾದಂಪೂ. ೩೧೯) ; ನಡುನೀರೊಳೊಗೆದ ನಳಿನವಂ ಮುಱಿಯಲೆಳಸಿ ಮಗುಳ್ದು ತೆರೆವಿಡಿದೀಸುವೆಳವೇಡಿತಿ (ರಾಜಶೇ. ೬-೩೪ ವ). ೨. ಅಂತಃಪಟವನ್ನು ಹಿಡಿ : ಜೋಯಿಸರ್ . . . ಅಚ್ಚ ದುಗುಲ ದಿಂದೆರೆವಿಡಿದರ್ (ಉದ್ಭಟ. ೮-೫೭) ; ಮೃದುಶುಭ್ರತೆಯಿಂ ಮೆಱೆದಿರ್ಪ ಸೀರೆಯಂ ತೆರೆವಿಡಿದರ್ (ದಶಕು. ೪-೧೩೩) ; ನೆಟ್ಟನೆ ತೆರೆವಿಡಿದರು ಕ್ಷತ್ರ ವಿಧಿಯಿಂದೆ ಮೆಟ್ಟಕ್ಕಿಯ ಮೇಲೆ ನಿಲಿಸಿ (ಮೋಹತ. ೧೩-೬೮). ೩. ಮರೆ ಮಾಡು ; ಮುಚ್ಚು : ನಾರಿಯರು ಕಂಡರು ಸಲಜ್ಜಾಭಾರದಲಿ ತಡಿಗಡಿಗೆ ಹಾಯಿದು ಸೀರೆಗಳ ತೆರೆವಿಡಿದರಂಗೋಪಾಂಗಲತೆಗಳಿಗೆ (ಕುಮ್ವಾ.ಆ.೧೧-೩೦).

[ ತೆರೆ$_4$ + ಪಿಡಿ$_1$ ]

**ತೆರೆವಿಡು** (ಕ್ರಿ). ಪರದೆಯನ್ನು ಬಿಡು : ದೆಶೆಗೆ ತೆರೆವಿಡಲ್ವೇಡಮದರೆ ಯಕ್ಕುಂ (ಮಂಗರಾ. ೬೦-೧೭). [ ತೆರೆ$_4$ + ಬಿಡು$_1$ ]

**ತೆರೆವೇಂಟೆ** (ನಾ). ಮುಸುಕಿನ ಆಕಾರದ ಬಲೆಯನ್ನು ಹಾಕಿ ಬೇಟೆ ಯಾಡುವಿಕೆ : ಕಂತು ವಸಂತರ್ ತೆರೆವೇಂಟೆಗಟ್ಟುದುಗುಲಂ ಪರ್ವಿತ್ತು ಚಂದ್ರಾತಪಂ (ಅನಂಪು. ೭-೫೭). 'ಪಟವೇಂಟೆ' ಪರಾ.

[ ತೆರೆ$_4$ + ವೇಂಟೆ ]

**ತೆರೆವೊಯ್ಲು, ತೆರೆಹೊಯ್ಲು** (ನಾ). ಅಲೆಗಳ ಹೊಡೆತ : ಪರಿಖೆಯ ತೆರೆವೊಯ್ಲಿಂದಂ ತೆರಳ್ದು ತಡಿವಿಡಿದು ತಕ್ಕೆಗಟ್ಟದ ಪೊಂದಾವರೆಯ ರಜದಂತೆ (ಮಲ್ಲಿಪು. ೨-೬೪) ; ತೆರೆವೊಯ್ಲಿಂದಾದ ತುಂತುರ್ವನಿ ನಿಜತನುವಂ ತೀವಿ ನಿದ್ರಾಂಗನಾನಿರ್ಭರ ಸಂಭೋಗಾಂತ್ಯದೊಳ್ಪೊಣ್ಮಿದ ಬೆಮರ್ವನಿಯುಂ ಪೋಲೆ (ಜಗಪಿ. ೧-೫೩) ; ಮರದುಱುಗಳ್ಗಿರದೆಡೆಗಿ ಮುಱಿವ ಕರಿಕರಕಂಜ ನೀರ್ವೊರ್ಕ್ಮು ನಡುಗುವಂತೆ ತೆರೆವೊಯ್ಲಿಂ ಕಂಪಿಪದಟ ಪಡಿನೆಳಲ್ ಪರಿರಂಜಿಸದುದುಂ (ರಾಜಶೇ. ೬-೩೪ ವ) ; ಲಾವಣ್ಯಜಲದಿಂ ತೀವಿದ ಬಾಲೆಯ ಬೆಳರ್ಗಂಪನಾಂತ ಬಾಯ್ ಕಂಗೊಳಿಸಿತ್ತು ಲೋಕಿಸೆ ತೆರೆವೊಯ್ಲೆಳಕಾಱದೆ ಬಾಯ್ದೆರೆದ ಸಜಲ ಶುಕ್ತಿಪುಟಂಬೊಲ್ (ದಮಸ್ಕ. ೧-೪೨). **ತೆರೆಹೊಯ್ಲು** : ಲವಣಾಬ್ಧಿ . . . ಬಡವರಿಗೆ ಬದುಕಿಲ್ಲವೆಂದಳ್ಳಿ ಹೊಯ್ವಂತೆ ತೆರೆಹೊಯ್ಲಿನಿಂ ಮೆರೆದುದು (ನವಮೋ. ೨-೯).

[ ತೆರೆ$_4$ + ಪೊಯ್ಲು ]

**ತೆರೆಸೀರೆ** (ನಾ). ೧. ಪರದೆಯಾಗಿ ಉಪಯೋಗಿಸುವ ವಸ್ತ್ರ ; ಕಾಂಡಪಟ ; ಜವನಿಕೆ : "ಕಂಡವಡಂ ತೆರೆಸೀರೆ" (ಕರ್ಣಾನಿ. ೪) ; ಅರುಣ ಮಣಿಭೂಷಣಂಗಳ ಕಿರಣಂಗಳ್ ಪಸರಿಸಲ್ಕೆ ಮಣಿಭಿತ್ತಿಗಳಾಧರಿಸು ತ್ತಿರ್ದವು ಕೆಂಪಿನ ತೆರೆಸೀರೆಗಳೆಂಬ ಶಂಕೆಯಂ ಭರದಿಂದಂ (ಧಾರಪು. ೫-೯೫); ತೊಂಬಳಿಯ ತೆರೆಸೀರೆಗಳ . . . ಸುವರ್ಣಾವಳಿಯ ದಿಂಡುಗಳೊಟ್ಟದವು ಬಂಡಿಗಳ ಜವ ಜಡಿಯೆ (ಕುಮ್ವಾಗ. ೪-೦೪) ; ಸುತ್ತುವಳಸಿನ ತೆರೆಸೀರೆ ಕಣ್ಗೆ ರಂಜಿಸಿತು (ಮೋಹತ. ೩೭-೬೯) ; ಹೊಳೆವ ದೀಪಂ ಸೋಂಕಿ ತೆರೆಸೀರೆ ಬೇವುತಿರಲು (ಚಬಪು. ೬೨-೫೩); "ತೆರೆ" ಯಾಗಿ ಉಪಯೋಗಿಸುವ ಸೀರೆ ( = ವಸ್ತ್ರ) ಇದು, ಬಯಲಾಟಗಳಲ್ಲಿ ವೇಷವು ಮೊದಲ ಬಾರಿ ರಂಗಸ್ಥಳಕ್ಕೆ ಬರುವಾಗ ಕೆಲವು ವೇಷಗಳಿಗೆ " ತೆರೆಸೀರೆ " ಹಿಡಿವ ಕ್ರಮವಿದೆ (ಸರಬೋಧ. ೧೬೮). ೨. ಬೇಟೆಯಲ್ಲಿ ಪ್ರಾಣಿಗಳನ್ನು ಹಿಡಿಯಲು ಉಪಯೋಗಿಸುವ ಒಂದು ಬಗೆಯ ಬಟ್ಟೆ : ಹೆಬ್ಬುಲೆ ತೆರೆಸೀರೆ ಕಾಲ್ಕಣ್ಣೆ ಬೆಳ್ವಾರ ಹಬ್ಬುಗೆವಲೆಗಳ . . . ಹೊತ್ತು ನಡೆದರಂದಬ್ಬರ ಮಸಗೆ ಶಬರರು (ಕುರಾಸಾಂ. ೨೭-೪೩). [ ತೆರೆ$_4$ + ಸೀರೆ$_2$ ]

**ತೆರೆಸು** 'ತೆಱೆಯಿಸು' ನೋ.

**ತೆರೆಸುತ್ತು$_1$** (ಕ್ರಿ). ಪರದೆಯಿಂದ ಸುತ್ತುಗಟ್ಟು,_ಆವರಿಸು : ತನ್ನ ಕೇಸಡಿಯ ಕೆಂಪಿನೊಳಂಜ್ವಲಚಿತ್ರಭಿತ್ತಿನಿಸ್ತುಳ ನಿಜವೌಕ್ತಿಕಾಭರಣ ದೀಧಿತಿಯಿಂ ತೆರೆಸುತ್ತಿದಂತೆ ಕಣ್ಗೊಳಿಸೆ (ಮಲ್ಲಿಪು. ೩-೯೭) ; ತುರ ಗಾವಳಿಯಂ ತೆರೆಸುತ್ತಿದಂತೆ ಕಾಯಾರವ ಬೀಸಿದಂತೆ (ಎಕ. XI, ಚಿತ್ರದು. ೧-೩೨ ; 1319). [ ತೆರೆ$_4$ + ಸುತ್ತು$_1$ ]

**ತೆರೆಸುತ್ತು$_2$** (ನಾ). ಅಲೆ ಅಲೆಯಾಗಿ ಸುತ್ತಿಕೊಂಡಿರುವುದು : ಎಳವಾಱೆಯ ತಿರುಳೆಲೆಯ ತೆರೆಸುತ್ತಿನೊಳಮೆಸೆವ ಪಸುರ್ವಂದರೊಳಗೆ (ಲೀಲಾವ. ೧೦-೫೦ ವ) ; ಅದಿಮೂರ್ತಿಯ ಸುತ್ತುಗಳೆ ತೆರೆಸುತ್ತುಗಳಾಗೆ ಯುಂ (ಅಂದ್ರಪು. ೬-೫೭ ವ). [ ತೆರೆ$_4$ + ಸುತ್ತು$_2$ ]

**ತೆರೆಸೇಲೆ** (ನಾ). = ತೆರೆಸೀರೆ ೧ : ತೆರೆಸೇಲೆ ಮಱೆಯೊಳಾ ತೆಱೆದ ಗವಾಕ್ಷ ದೊಳೊರೆದು ನೋಡುತ ಬಾಹ್ಯಜನವ ಅರಸಿಯರಿದ್ದರು . . . ಸಾಲಾಗಿ (ಭರತ. ೧೨-೩೨). [ ತೆರೆ$_4$ + ಸೇಲೆ ]

**ತೆರೆಹೊಯ್ಲು** 'ತೆರೆವೊಯ್ಲು' ನೋ.

**ತೆರ್ಕೈಸು** 'ತಟ್ಕೈಸು' ನೋ.

**ತೆರ್ಕೆ** 'ತಟ್ಕೆ' ನೋ.

**ತೆರ್ಕೆಗಡಲ್** (ನಾ). ಇನ್ನೊಂದು ಸಮುದ್ರದೊಡನೆ ಸೇರಿದ ಸಮುದ್ರ; ಒಟ್ಟುಗೂಡಿದ ಬೇರೆಬೇರೆ ಕಡಲುಗಳು : ಅದಟ ಕರ್ಣಾಚಮರದ ಝಲ್ಲಿಯಂತೆ ಜಲ್ಲನೊಳ್ಕಿ ಧಾರೆಗೆದಱೆ ಪೇರೈಸಿ ಸೂಸುವುಭಯಕಟತಟದ ಸೊರ್ಕರ್ಕದಡಿನ ತೆರ್ಕೆಗಡಲ್ಗಳೊಕ್ಕೈಸಿ ಜಗಮನಿಕ್ಕಲೆಂದು ಮಹಾವ್ರತಮ ನೆತ್ತಿಕೊಂಡ ಕಲ್ಪಾಂತಕಾಲನ ಕರ್ಚಿಜಾಲಂ ಪರ್ಚಿ ಬೇಱೆ ಬೆರ್ಚಿ ದಂತಿರ್ದಪುದು (ಅನಂಪು. ೧೩-೨೦ ವ). [ ತೆರ್ಕೆ (<ತಟ್ಕೆ) + ಕಡಲ್$_2$ ]

**ತೆರ್ಕೆಗೊಳ್** 'ತಟ್ಕೆಗೊಳ್' ನೋ.

**ತೆರ್ಪಂಬಡೆ** 'ತೆಱಪುವಡೆ' ನೋ.

**ತೆರ್ಪತ್ತು** 'ತೆಪ್ಪಱು' ಪರಾ.

△ **ತೆರ್ಪಱು** 'ತೆಪ್ಪಱು' ನೋ.

**ತೆರ್ಪು** 'ತೆಱಪು' ನೋ.

**ತೆರ್ಪುಱು** (ಕ್ರಿ). ಅವಕಾಶವನ್ನು ಹೊಂದು : ಇನಿತಂ ಕೋಪಾವಳೇಪ ಭ್ರುಕುಟಿನಿಟಲದೊಳ್ ಪುಟ್ಟೆ ತೆರ್ಪುರ್ತ್ತಿವಂ ತೊಪ್ಪನೆ ಮಾರ್ಪ್ಪರ್ಯಯುಂ ದಿಶಾಧೀಶರನಿದರ ದಿಶಾಧೀಶರೊಳ್ ತಾಗಿಕಂ (ಎಕ. VI, ಚಿಕ್ಕಮ. ೧೬೦-೨೦ ; 1103 ?). [ ತೆರ್ಪು (<ತೆಱಪು) + ಉಱು ]

**ತೆರ್ಬು** 'ತಿರುವು$_3$' ನೋ.

**ತೆಲಂಬಯು** (ನಾ). ಒಬ್ಬಾತನ ಹೆಸರು : ಇದಕ್ಕೆ ಸಾಕ್ಷಿ ಅಮಚ್ಚಾರ್ ತೆಲಮ್ಬಯರ್ ಕರಾಸರ್ (ಎಕ. IV, ಗುಂಡ್ಲುಪೇ. ೫೭-೫ ; ಸು. 750).

[ ? + ಅಯ್$_1$ (<ಅಯ್ಯ$_1$) ]

**ತೆಲವಿ** 'ತೆಲಿವಿ' ನೋ.

**ತೆಲಸಂಗ** (ನಾ). ಒಂದು ಊರಿನ ಹೆಸರು ; P ಈಗಿನ ಬೆಳಗಾವಿ ಜಿಲ್ಲೆಯ ಅಥಣಿ ತಾಲೂಕಿನಲ್ಲಿರುವ ಊರು: ಅಯ್ನೂರ್ವರ್ವಿದ್ಯಾ ಕುಶಳಧರಾಮರರಿಂ ಲೋಕೋತ್ತರಮೆಸೆವುದಸದಳಂ ತೆಲಸಂಗ (ಕಇ. II, ೧೯-೧೧ ; ?). [ ? ]

**ತೆಲಿಗ** 'ತೆಲ್ಲಿಗ' ನೋ.

**ತೆಲಿಗೆ, ತೆಲುಗೆ** (ನಾ). ಒಂದು ಬಗೆಯ ಮರ ; ತಿಲಕವೃಕ್ಷ : "ತಿಲಕಃ = ತಲಿಗೆಯ ಮರಂ " (ಕಾಶಕ್ಕ. ೪೭). **ತೆಲುಗೆ** : " ತಿಲಕಃ – ತಲುಗೆಯ ಮರನುಂ, ಹಣೆಯ ಬೊಟ್ಟುಂ " (ಕಾಶಕ್ಕ. ೨೨೬). [ <ಸಂ. ತಿಲಕ ]

**ತೆಲಿವಿ, ತೆಲವಿ, ತೆಲುಮೆ, ತೆಲ್ಮೆ** (ನಾ). ಜಾಣತನ ; ಬುದ್ಧಿವಂತಿಕೆ ; ತಿಳಿವು : ತೆಲಿವಿಯ ತಪ್ಪಿಸಿ ಬಲವನ್ನು ಹೋಗಾಡಿ ಅಲೆಯಪಡಿಸಿದನಾಗ ಚಲದೊಳು ಶನಿಯು (ಯನಳ. ೯೭). **ತೆಲವಿ** : ತೆಲವಿಗೆ ತಾನು

ತಲವಿಯಾಗಿಯುಂ ಯಿಾ ಭೇದಭಾವಗಳನ್ನೆಲ್ಲ ಗುರು ಅನುಗ್ರಹದಿಂದ ತಿಳಿದು (ತತ್ವಬಿಂ. ೨೮-೨). **ತೆಲುವೆ :** ವಿಶೇಷವಾಗಿ ತೆಲುವೆಯುಳ್ಳ ಮಹಾಪುರುಷರು ತಮ್ಮ ತರುವಾಯ ಹೆಸರು ನಿಲ್ಲುವ ಹಾಗೆ ಮಾಡಿಕೊಳ್ಳಬೇಕು (ಕಾಂಪೂಜ. ೫೩). **ತೆಲ್ಮೆ :** ಯುಕ್ತಿಗಳೊಳ್ ತಲ್ಮೆಯುಂ (ಸೌಗಂಧಿ. ೨೨೦-೪). 'ತಿಳಿ$_2$' ಪರಾ.

[ ದೇ.॥ ತಮಿ. ಮಲ. ತೆಳಿವು. ತುಳು. ತೆರಿವು ; ತೆಲು. ತೆಲಿವಿ ]

**ತೆಲುಂಗ, ತೆಲುಗ, ತೇಲುಂಗ, ತೈಲಂಗ** (ನಾ). ೧. ತೆಲುಗು ಭಾಷೆಯನ್ನಾಡುವ ಜನರ ದೇಶ ; ಆಂಧ್ರ : ಕೊಂಗು ಕಳಿಂಗ ಸಿಂಗಳ ಸುಲಾಟ ವರಾಟ ತೆಲುಂಗ ಮಾಗಧೌತ್ತುಂಗ ನೃಪಾಳರಾರುಮಿದಿರಾಂಪವರಿಲ್ಲೆನಗೆ (ಎಕ. VI, ಕಡೂರು. ೧೪೬-೪ ; ಸು. 1180) ; ಪಾಂಚಾಳ ಚೋಳ ತೆಲುಂಗ ಭೂಭುಜರವನೆಸುಗೆಯು ತಾಳಲಾಜದೆ ತೊಲಗಿದರು (ನೇಮಿಸಂ. ೧೨-೮೩). ೨. ಆಂಧ್ರ ದೇಶಕ್ಕೆ ಸೇರಿದವನು : ಕಿಕ್ಕಿಜಿಗಿಜಿದು ಕುಳ್ಳಿರ್ದ ಲಾಳ ಗೌಳ . . . ತೆಲುಂಗ ಗುರ್ಜರ ಹಮ್ಮೀರ ನೇಪಾಳವರ್ಗದಲಾದ ರಾಜಪುತ್ರರ ಪಂಙ್ತಿಗಳೊಳಂ (ಗಿರಿಕ. ೨-೦೦೫ ವ). **ತೆಲುಗ ;** ೨. "ತೆಲುಗನಾಂಧ್ರನೆನಿಕ್ಕು" (ಮಂಗರಾ. ೦೧೨-೭) ; ನಡುಭವಗಾ[ವು]ಣ್ಡಂಗೆ ತೆಲುಗರ ಮಾರಿಗಾವುಣ್ಡನೊಳ್ಪಟಬ್ಬಗಟ (ಎಕ. IV, ಹೆಗ್ಗಡ. ೧೦೪-೧೮ ; 1037) ; ತೆಲುಗರ ಮಾಗೆಯು ಕ್ರಮಿತರ ಮನೆ (ಎಇ. XIII, ೪೮-೭೯ ; 1112) ; ಇವನು ತೆಲುಗನಿವ ಮಗಧ ಇವನು ಕನ್ನಡಿಗ (ನೇಮಿಸಂ. ೩೩-೨೫೩) ; ಅಯ್ಯಯ್ಯ ಚೆನ್ನಾದುದೆನೆ ಕನ್ನಡಿಗರು ರಯ್ಯಾ ಮಂಚಿದಿಯನೆ ತೆಲುಗ ಅಯ್ಯಯ್ಯ ಎಂಚಪೊರ್ಲಾಂಡೆಂದು ತುಳುವರು ಮೆಯ್ಯುಬ್ಬಿ ಕೇಳಬೇಕಣ್ಣ (ಭರತ. ೧-೭). **ತೇಲುಂಗ:** ೧. ದೊರೆಕೊಳ್ಗೇ ಬಲುಪಿಂತದಲ್ಲದಡೆಯಾ ತೇಲುಂಗ ರಾಜ್ಯಂಗಳಂ ಪುರ ಮೂಲಿಕ್ಕೆಣೆಯಾಗಿ ಮಾಡಿ ಕಳದಾ ತೇಜೋಗ್ರಮೆಂತಾದುದೋ (ಎಕ. XI, ದಾವಣ. ೩೯-೩೮; 1290). **ತೈಲಂಗ :** ೨. ತೆಲಗು ಬ್ರಾಹ್ಮಣರು (ತೈಲಂಗರು) (ಕಥಾಗ. ೮೩).

**ತೆಲ್ಗರ ಮಾರಿ** = ಒಂದು ಬಿರುದು : ಆಚರಸನ ಪುತ್ರಂ ಸರ್ವಾಧಿಕಾರಿ ತೆಲ್ಗರಮಾರಿ ಪತಿಕಾರ್ಯ್ಯದುರಂಧರಂ (ಎಇ. XIV, ೨೬೨-೩೪ ; 1103). **ತೆಲ್ಲಂಗರಾಯಸ್ಥಾಪನಾಚಾರ್ಯ** = ಒಂದು ಬಿರುದು : ತೆಲ್ಲಂಗರಾಯಸ್ಥಾಪನಾಚಾರ್ಯ . . . ಕರ್ನಾಟರಾಯ ದಿಸಾಪಟ್ಟ ದ್ವಾರಾವತೀ ಪುರವರಾಧೀಶ್ವರ ವಿಷ್ಣುವಂಸೋದ್ಭವ (ಕೊಲ್ಹಾಪುಶಾ. ೧೯-೩ ; 1261).

[ ತೆಲುಂಗು + – ಅ$_7$ ]

**ತೆಲುಂಗಿತಿ, ತೆಲುಗಿತಿ** (ನಾ). ತೆಲುಗು ಭಾಷೆಯನ್ನಾಡುವವಳು ; ತೆಲುಗಿನವಳು ; ಆಂಧ್ರಸ್ತ್ರೀ : ಕುಟುಂಬಿತಿ, ತೆಲುಂಗಿತಿ, ತೆಲ್ಲಿಗಿತಿ (ಶಮುದ. ೨೦೮ ಪ್ರಯೋ). **ತೆಲುಗಿತಿ :** (೬).

[ ತೆಲುಂಗ + – ಇತಿ$_1$ (< – ಇತ್ತಿ) ]

**ತೆಲುಂಗು, ತೆನುಂಗು, ತೆನುಗು, ತೆಲುಗು** (ನಾ). ೧. ದ್ರಾವಿಡ ಭಾಷಾ ವರ್ಗಕ್ಕೆ ಸೇರಿದ ಒಂದು ಭಾಷೆ; ಆಂಧ್ರಭಾಷೆ. 'ತೆಲುಂಗ' ಪರಾ. **ತೆನುಂಗು :** ೧. ತೆಲುಂಗು, ತೆನುಗು, ತೆನುಂಗು ಎಂಬುದಾಗಿ ತೆಲುಗು ಭಾಷೆಗೆ ರೂಪಗಳನ್ನು ಕೊಡುವುದು (ನೀತಿಸಾ. ೬ ಟೀಕೆ). **ತೆನುಗು :** ೧. ಮೇಲಿನ 'ನೀತಿಸಾ' ಪ್ರಯೋಗವನ್ನು ನೋಡಿ. **ತೆಲುಗು ;** ೨. ತೆಲುಗುದೇಶ ; ಆಂಧ್ರ : ಒಡೆಯಗೆ ಕೈಮುಗಿದೊಯ್ಯನೆ ತೆಲುಗು ನಾಡೊಡೆಯು ಸಾಗಿದನೊಂದು ಬಳಿಗೆ (ಭರತ. ೨೨-೨೦); ಭುಜಬಲಾನ್ವಿತರಾದ ತೆಲುಗು ಭೂಪಾಲರ ತ್ರಿಜಗ ಮೆಚ್ಚಲು ಗೆದ್ದು ತಂದ ಗಜಘಟೆಗಳ ಶಾಲೆಗಳೊಪ್ಪಿದುವಾಗ (ಕಂಠವಿ. ೬-೩೦).

[ ದೇ.॥ ತಮಿ. ತೆಲುಕು, ತೆಲುಙ್ಕು ; ಮಲ. ತೆಲುಙ್ಗು ; ತುಳು. ತೆಲುಂಗು, ತೆಲುಗು ; ತೆಲು. ತೆಲುಂಗು. ತೆನುಂಗು ]

**ತೆಲುಗ** 'ತೆಲುಂಗ' ನೋ.

**ತೆಲುಗಕಾಂಬೋದಿ** (ನಾ). [ಸಂಗೀತ] ಒಂದು ರಾಗದ ಹೆಸರು: ಗುಮ್ಮಕಾಂಬೋದಿ ತೆಲುಗಕಾಂಬೋದಿ ಎಂಬಿವೇ ಕಾಂಬೋದಿಯ ಮಿಶ್ರರಾಗಂಗಳು (ವಿವೇಕ. ೨೩೫). [ ತೆಲುಗ (<ತೆಲುಂಗ) + ಕಾಂಬೋದಿ ]

**ತೆಲುಗಾಣೆಯ** (ನಾ). ಆಂಧ್ರ ಪ್ರದೇಶ : ತೆಲುಗಾಣೆ [ಪಾಠಾ. ತಿಗುಳಾಣ]ಯ ತೇರಬೀದಿ ತಿಗುಳನಾಡು ತಿರಿದೆಡೆಯಾಡುವ ದಾರಿ (ಶುರಾಸಾಂ. ೫-೪೭). 'ತುರುಂಕಾಣ್ಯ' ಪರಾ.

[ ತೆಲುಗು + ಆಣ್ಯಂ (P ← ತೆಲು. ಆಣೆ = ದೇಶ) ]

**ತೆಲುಗಿತಿ** 'ತೆಲುಂಗಿತಿ' ನೋ.

**ತೆಲುಗು** 'ತೆಲುಂಗು' ನೋ.

**ತೆಲುಗೆ** 'ತೆಲಿಗೆ' ನೋ.

**ತೆಲುವೆ** 'ತೆಲಿವಿ' ನೋ.

**ತೆಲ್ಮೆ** 'ತೆಲಿವಿ' ನೋ.

**ತೆಲ್ಲ$_1$** (ನಾ). ಶುಭ್ರವಾದುದು ; ಹೊಳಪುಳ್ಳದು. 'ತೆಲ್ಲವಣ್ಣ' ಪರಾ.

[ ←ತೆಲು. ತೆಲ್ಲ ]

**ತೆಲ್ಲ$_2$** (ನಾ). ಎಳ್ಳೆಣ್ಣೆ : ತೈಲ . 'ತೆಲ್ಲಿಗ' ಪರಾ.

[ ←ಪ್ರಾ. ತೇಲ್ಲ. / ಸಂ. ತೈಲ ]

**ತೆಲ್ಲಂಟಿ, ತೆಲ್ಲಂಟೆ, ತೆಲ್ಲಟಿ, ತೆಲ್ಲಟೆ, ತೆಲ್ಲಟ್ಟು, ತೆಲ್ಲಟ್ಟು** (ನಾ). ೧. ಉಡುಗೊರೆ ; ಬಹುಮಾನ : ಎನಗೆನ್ನೊಪನ ಬಂದುದರ್ಕೆದುವೆ ದಲಾ ತೆಲ್ಲಂಟಿ (ಆದಿಪು. ೧೨-೪೪) ; ಈಶ್ವರಂ ಕೊಟ್ಟುದರ್ಕೆ ತೆಲ್ಲಂಟಿಯೆಂದು ಗೌರಿದೇವಿಯುಮಂಜಲಿಕಾಸ್ತ್ರಮೆಂಬಮೋಘಾಸ್ತ್ರಮಂ ವಿಕ್ರಮಾರ್ಜುನಂಗೆ ಕುಡೆ (ಪಂಪಭಾ. ೮-೨೬ ವ) ; ಲೆಕ್ಕವಿಲ್ಲದೆ ತೆಲ್ಲಂಟಿಯನಾತ್ರ್ಮ ಕೊಟ್ಟು ನೆಗಳ್ದಂ (ಎಇ. XIII, ೩೦೩-೨೪ ; 1125) ; ಆದಂ ಕಂದರ್ಹದ್ದಾಸದೇವಂ ಕಾಮದೇವಂಗೆ ಪಟ್ಟಂಗಟ್ಟಿ ಕೊಟ್ಟ ರಾಗರಾಜ್ಯಕ್ಕೆ ತೆಲ್ಲಂಟಿಯಾಗಿ (ಅರ್ಧನೇ. ೨-೩೮ ವ) ; ನಾನು ಹೋಗಿದ್ದೆ ಪಾಪಿ. ನನ್ನ ಸಿರಿಗೌರಿಗೆ ತೇರು ಹಬ್ಬದ ತೆಲ್ಲಂಟಿ ತರಲೆಂದು (ಕುಂಗಳ. ೫೩). ೨. ಮದುವೆಯ ಕಾಲಕ್ಕೆ ವಧೂವರರಿಗೆ ಕೊಡುವ ಬಳುವಳಿ ; ಮುಯ್ಯಿ : "ತೆಲ್ಲಂಟಿ – ನಿಬ್ಬಣಂ" (ಶಮುದ. ಪರಿ. ೨) ; ಕರಮೊಸೆದಾ ದ್ರುಪದಜೆಯೊಳ್ ನೆರೆದೊಸಗೆಗೆ ತಮ್ಮ ಬೀರಮುಂ ಬಾಕಮುಮಂ ತೆಜವೂಂ ತೆಲ್ಲಂಟಿಯುಮೆಂದರಿಕೇಸರಿಗಾಗಳೀವವೋಲ್ ಬೆನ್ನಿತ್ತರ್ (ಪಂಪಭಾ. ೩-೬೨). **ತೆಲ್ಲಂಟೆ :** ೨. ಪ್ರಣತೇಂದ್ರಂ ವರನೆಂದು ಬಂದೆಸೆವ ಸೌಧರ್ಮಾದಿಗಳ್ ಬಂದ ನಿಬ್ಬಣಗರ್ ಕಲ್ಪದನಲ್ಪವಸ್ತುನಿವಹಂ ತೆಲ್ಲಂಟೆ (ಪುಷ್ಪಪು. ೦೨-೧೦೯). **ತೆಲ್ಲಟಿ :** ೧. ತೆಲ್ಲಟಿಯೆಂದು ಗಿರಿಜೆಯು ಮೆಚ್ಚಿ ಕೊಟ್ಟ ನಿಶಿತಾಸ್ತ್ರಮಂ . . . ಕೊಂಡು (ಪಂಪಭಾ. ೧೨-೨೧೧ ವ) ; ಮುಡಿಗೆ ಜೋಳಿಯ ತೆಲ್ಲಟಿಯೆಂಬ ನಾಟ್ಕುಡಿಯಂತೆ (ಧರ್ಮಾಮೃ. ೬-೦೭೫) ; ಈ ಧರ್ಮಕ್ಕೆ ತೆಲ್ಲಟಿಯಾಗೆ . . . ಕರಂಬಂ ಮತ್ತರು ಹತ್ತುಮನಿತ್ತ (ಕಇಅ. ೮೨-೬೮-೮೮ ; 1117) ; ಚಲ್ಲಿದವು ರಥ ಗಾಲಿ ಮುರಿದವು . . . ಎಲ್ಲಿಯವು ರಥವಾಜಿ ವಾಜಿಗೆ ತೆಲ್ಲಟಿಯಲೇ ರಥಿಕ ಸೂತರು (ಕುವ್ಯಾಗ. ೧-೩೦) ; ಮೆಲ್ಗೆಲ್ಲ ಕಾಳಿರ ತೆರೆ ಚೆಲ್ಲಾಡುತ್ತಿರಲು ತೆಲ್ಲಟಿಯ ನಗೆನುಡಿಯ ದೊಡ್ಡನೆಂದಂ ಪೋಪೆ (ಕಾಲೂರ. ೬೧-೧೨೮). **ತೆಲ್ಲಟೆ :** ೨. "ತೆಲ್ಲಟೆ[ಪಾಠಾಂ. ಟ್ಟು]ಯೆನಲ್ಕೆ ಮುಯಿ" (ಚಟುನಿ. ೬೦) . **ತೆಲ್ಲಟ್ಟು :** ೧. ರಸದಂಬುಲದನಿಗುಟಿಕಿಂದೆಸೆದರ್ಪಮೃದಯೊಳೊಪ್ಪುವನುರಾಗವನೇ ರಸನೆಯೊಳುಟಿ ತೆಲ್ಲಟ್ಟಿಯ ನೊಸೆದೊರ್ವಗೊರ್ವರೀವವೋಲ್ (ವೀರವಿ. ೬-೭೫). **ತೆಲ್ಲಟ್ಟು :** ೨. 'ತೆಲ್ಲಟೆ' ಪ್ರಯೋಗದ ಪಾಠಾಂತರವನ್ನು ನೋಡಿ.

[ ←ತೆಲು. ತೆಲ್ಲಂಟಿ, ತೆಲ್ಲಟಿ ]

**ತೆಲ್ಲಂಟಿಗೆ, ತೆಲ್ಲಟಿಗೆ** (ನಾ). ೧. ಬಹುಮಾನ ; ಉಡುಗೊರೆ. ೨. ಬಳುವಳಿ; ಮುಯ್ಯಿ: 'ತೆಲ್ಲಂಟಿಗೆಗೊಡು' ಪರಾ. **ತೆಲ್ಲಟಿಗೆ :** ೧. "ತೆಲ್ಲಟಿಗೆ

ಯೆನಲ್ ಮರ್ಯಾದೆಯುಕ್ಕು" (ಕಶಕ. ೪೮); ಮತ್ತವಿಖಾ ಧರ್ಮಕ್ಕೆ ತೆಲ್ಲಟಗೆಯಾಗೆ (ಎಇ. IX, ೨೬೪-೮೮; 1117). ೨. "ತೆಲ್ಲಟಗೆವೆಸರು ಮುಯ್ಯೆಂದಕ್ಕು" (ಕಬ್ಬಮಂ. ೬೩). P ಇಲ್ಲಿ 'ತೆಲ್ಲಟ' ಎಂಬ ಶಬ್ದದ ಚತುರ್ಥೀವಿಭಕ್ತಿಯ ರೂಪವಾದ 'ತೆಲ್ಲಟಗೆ' ಎಂಬುದನ್ನು ಸ್ವತಂತ್ರ ರೂಪವನ್ನಾಗಿ ಕೆಲವರು ಸ್ವೀಕರಿಸಿರುವಂತಿದೆ. [ <ತೆಲ್ಲಂಟ ]

**ತೆಲ್ಲಂಟಗೆಗೊಡು**, ತೆಲ್ಲಟಗೆಗುಡು (ಕ್ರಿ). ೧. = ತೆಲ್ಲಂಟಗೊಡು: ಪುರವೆಂಬ ನಲ್ಲನೊಡನೆ ಸಿರಿ ಕೂಡಲು ಶರಧಿ ತನ್ನಯ ವಸ್ತುಗಳನೂ ತರಿಸಿ ತೆಲ್ಲಂಟಗೆಗೊಟ್ಟಪೋಲ್ (ವರ್ಧಕ. ೧-೧೧೪). **ತೆಲ್ಲಟಗೆಗುಡು**: ೨. ಉಡುಗೊರೆಯಾಗಿ ಕೊಡು: ತನ್ನಸುವಂ ತೆಲ್ಲಟಗೆಗುಡುವ ತೆಜದೊಳ್ಕೊಟ್ಟಂ (ಗದಾಯು. ೨-೧೩). [ ತೆಲ್ಲಂಟಗೆ + ಕೊಡು$_1$ ]

**ತೆಲ್ಲಂಟಗೊಡು** (ಕ್ರಿ). ಬಳುವಳಿ ಕೊಡು: ವಸ್ತುವಾಹನಸಂದೋಹಮಂ ತೆಲ್ಲಂಟಗೊಟ್ಟು ವಧೂವರರಂ ತದೀಯಾಗಾರಕ್ಕೆ ಕಳಿಪಿ (ನೇಮಿಪು. ೧-೬೬ ವ). [ ತೆಲ್ಲಂಟ + ಕೊಡು$_1$ ]

**ತೆಲ್ಲಂಟದರ್**, ತೆಲ್ಲಟದರ್ (ಕ್ರಿ). ಕಾಣಿಕೆಯನ್ನು ತರು; ಉಡುಗೊರೆಯನ್ನು ತರು: ತೆಲ್ಲಂಟದರ್ಪ ಸಾಮಂತಸಂದೋಹದಿಂ . . . ಕರಮೆ ಕಣ್ಗೆಸೆದುದು ನರೇಂದ್ರಭವನಾಂಗಣಂ (ಅಜಿಪು. ೪-೭ ಗಳ). **ತೆಲ್ಲಟದರ್**: ಚೆಲ್ವಾದರಾ ಕಾಮನುತ್ಸವದಿಂ ತೆಲ್ಲಟದಂದ ಮಾಧವಪುರ ಶ್ರೀಲೀಲೆಯಂ ಬಾಲೆಯರ್ (ಶಾಂತಿಪು. ೮-೧೩). [ ತೆಲ್ಲಂಟ + ತರ್ ]

**ತೆಲ್ಲಂಟೆ** 'ತೆಲ್ಲಂಟ' ನೋ.

**ತೆಲ್ಲಕಾಕಮುಷ್ಟಿ** (ನಾ). ಒಂದು ಬಗೆಯ ಸಸ್ಯ: ಬಿಳೀಕಾಕಮುಷ್ಟಿ, ಪಲ್ಲೆ, ತೆಲ್ಲಕಾಕಮುಷ್ಟಿ (ಮೃಜಿಗಿ. ೧೯-೩೩೪). [ ? ]

**ತೆಲ್ಲಟ** 'ತೆಲ್ಲಂಟ' ನೋ.

**ತೆಲ್ಲಟಗ** (ಗು). ಹೊಳಪುಳ್ಳ; ಪ್ರಕಾಶಮಾನವಾದ: ಅಲ್ಲಿ ರಂಜಿಪು [ ವ ] . . . ಪಲ್ಲವಿತವಾದ ಮರಕತ ನೀಲವಜ್ರದಿಂ ತೆಲ್ಲಟಗ ಮಣಿಗಳಿಂದ (ಲಿಂಗಪು. ೩-೨೭). [ <ತೆಲ್ಲ$_1$ ]

**ತೆಲ್ಲಟಗೆ** 'ತೆಲ್ಲಂಟಗೆ' ನೋ.

**ತೆಲ್ಲಟಗೆಗುಡು** 'ತೆಲ್ಲಂಟಗೆಗೊಡು' ನೋ.

**ತೆಲ್ಲಟಗೊಳ್** (ಕ್ರಿ). ೧. ಬಹುಮಾನವಾಗಿ ಪಡೆ. ೨. ಬಳುವಳಿಯನ್ನು ಸೆಳೆ; ಮುಯ್ಯಿಯನ್ನು ತೆಗೆದುಕೊಳ್ಳು: ಅವನಿಪ ಕಂತುವೆಚ್ಚ ಭವಬಾಣಮದೋವದೆ ಕೊಂಡು ಚಂಡವಿಕ್ರಮನ ಶಿರಕ್ಕೆ ತನ್ನ ಶಿರಮಂ ತವೆ ತೆಲ್ಲಟ [ಪಾಠಾಂ. ತಲೆ]ಗೊಳ್ಗುಮೆಂದು . . . ಓಡಿದಂ ನಿಜಪುರಕ್ಕೆ (ಕುಸುಮಾ. ೧೧-೫೮). [ ತೆಲ್ಲಟ (<ತೆಲ್ಲಂಟ) + ಕೊಳ್$_1$ ]

**ತೆಲ್ಲಟದರ್** 'ತೆಲ್ಲಂಟದರ್' ನೋ.

**ತೆಲ್ಲಟೆ** 'ತೆಲ್ಲಂಟ' ನೋ.

**ತೆಲ್ಲಟ್ಟೆ** 'ತೆಲ್ಲಂಟ' ನೋ.

**ತೆಲ್ಲಟ್ಟು** 'ತೆಲ್ಲಂಟ' ನೋ.

**ತೆಲ್ಲಪುನಿ** (ನಾ). ಒಂದು ಬಗೆಯ ಸಸ್ಯ; ಬಿಳಿಯ ತಾಳೆ: ಬಿಳಿಪೂಳಿಕು . . . ಬಿಳಿತಾಳೆ, ತೆಲ್ಲಪುನಿ (ಮೃಜಿಗಿ. ೩೯-೭೭೩). [ ? ]

**ತೆಲ್ಲಯಿಸು**, ತೆಲ್ಲಯ್ಸು, ತೆಲ್ಲೈಸು (ಕ್ರಿ). ೧. ದಪ್ಪವಾಗು; ಮಂದವಾಗು: (+). ೨. ಗಟ್ಟಿಯಾಗು; ಬಲಗೊಳ್ಳು; ಶಕ್ತಿಯುತವಾಗು: (+). ೩. ಹೆಚ್ಚಾಗು; ಅಧಿಕವಾಗು: (+). ೪. ಒಟ್ಟಾಗು; ಗುಂಪಾಗು: ಕಲ್ಲದಾಡುವ ತೆಲ್ಲಯಿಸಿದ ಮಲ್ಲಗೀಳಿಯ ಸವಿನುಡಿಗೆ . . . ತೆಲ್ಲಣಂಗೊಂಡು (ರಾಮಾಶ್ವ. ೭೬-೪). ೫. ಜಿಡ್ಡಿನಿಂದ ಕೂಡಿರು; ಸ್ನಿಗ್ಧವಾಗು; ಅಂಟಂಟಾಗು: (+). ೬. ಬೆಳಗಿಸು; ಪ್ರಜ್ವಲಗೊಳಿಸು: ತೆಲ್ಲಯಿಸಿ ಮಂಗಳಾರತಿಯ ವನಿತೆಯರೆಲ್ಲ ಭುಲ್ಲಯಿಸಿ ಹಾಡಿ ಹರಸುವ ಹೊತ್ತು (ಸಿದ್ಧರಾ. ೮-೮೮); ತೆಲ್ಲಯಿಸಿದಂ ಮೇಳಯಿಸಿದಂ (ಕಮಕ. ೩೪ ಪ್ರಯೋ); ಪೊಲ್ಲಮೆಯುಂ ನಿರ್ಗುಣಮುಂ ತೆಲ್ಲಯಿಸುತೆ ತಮಗೆ ತಮಗೆ ಪುದುವಲ್ಲದೊಡಂ ನಿಲ್ಲದೆ ಜಗದೊಳ್ಪಾಳ್ವರೆ ಸಲ್ಲಲಿತರ್ (ಚಂದ್ರಪ್ರು. ೧೨-೨೭). **ತೆಲ್ಲಯ್ಸು**: ೬. ಅಲ್ಲಲ್ಲಿ ಕೈದೀವಿಗೆಗಳು ತೆಲ್ಲಯ್ಸೆ [ಪಾಠಾಂ. ತೆತ್ತೈಸೆ, ಬೆಳಗೆ]ಪಲ್ಲವಿಸೆ ಪಲ್ಲವಸತ್ತಿಗೆ ಮೇಲ್ಮಸಗೆ (ನಂದಿಶ. ೧೦-೪೯). **ತೆಲ್ಲೈಸು**: ೧. "ತೆಲ್ಲೈಸಿತೆಂದು ಮಂದೈಸಿದಕ್ಕೆ ನಾಮವದು" (ಕಬ್ಬಮಂ. ೫೦); "ತೆಲ್ಲೈಸಿತೆನೆ ಬುಧರಿನದು ಮಂದೈಸಿಯ ನಿಂದರ್ಥಮಪ್ಪುದು" (ಕವಿಕಂ. ೨೦೨). ೩. ತಂಪಿನಿಂ ತೆಲ್ಲೈಸಿ ಕೋಡುಗುಟ್ಟುವ ಗಾಳಿ (ಕಾಲಂಕ. ೭೫-೧೩೪). ೬. ಭರದಿಂ ತೆಲ್ಲೈಸಿದ ಬಹು ಕರದೀಪಿಕೆಗಳ ಮರೀಚಿಮಾರ್ಗಮಾನಂತಾ ಪುರಲಕ್ಷ್ಮಿಯ ಸೀಮಂತದ ಸುರುಚಿರಕುಂಕುಮದ ರೇಖೆಯೆನಿಸಿತ್ತಾಗಳ್ (ಮಹಾನೀ. ೦೪-೪೭). ೭. ಅಳವಡಿಸು (?): ಅಂತು ದೇವತೆ ಕೊಟ್ಟ ಗದಾದಂಡಮನುರ್ಚಿದಮರಿಯಂ ನಿವಿರ್ಚಿ ಪುಲ್ಲಿಯುಂ ತೆಲ್ಲೈಸಿ ಗೊಂಡೆಯಮಂ ದಂಡೆಗೊಳಿಸಿ ಚಾರುಶಾಕ್ಯತಿಯುಂ ಪಿಡಿದಾಗಳ್ (ದಶಕು. ೨-೨೫ ವ). [ ತೆಲ್ಲ? + -ಇಸು$_3$ ]

**ತೆಲ್ಲಯ್ಸು** 'ತೆಲ್ಲಯಿಸು' ನೋ.

**ತೆಲ್ಲವಣ್ಣ** (ನಾ). ಶುಭ್ರವಾದ ಬಣ್ಣ; ನುಣುಪಾಗಿ ಹೊಳೆಯುವ ಬಣ್ಣ: ಚೊಲ್ಲಣಿಗೆವಡೆದ ಚಿಂತಾರತ್ನಂಗಳಶದಿಂ ತೆಲ್ಲವಣ್ಣದ ಬಾಗಿಲಿಂ ಕನಕವಲಗೆಯಿಂ (ಲಿಂಗಪು. ೩-೨೦); ಪಲ್ಲವಿತಮಾದ ಹಲಸವರೆ ಪಕ್ಕರೆಯವರೆ ತಲ್ಲಣಿವ ಸವಿಗೊಡುವ ಸಾಲವರೆ ಸರಳವರೆ . . . ತೆಲ್ಲವಣ್ಣದ ಸೊಂಪಿನವರೆ (ಲಿಂಗಪು. ೮-೪೫). [ ತೆಲ್ಲ$_1$ + ಬಣ್ಣ$_1$ ]

**ತೆಲ್ಲಿಗ**, ತೆಲಿಗ, ತೇಲಿಗ$_2$ (ನಾ). ಎಣ್ಣೆಯನ್ನು ತೆಗೆದು ಮಾರಿ ಜೀವಿಸುವವನು; ಗಾಣಿಗ: "ತೆಲ್ಲಿಗ=ತೈಲಿಕ=ಎಣ್ಣೆವ್ಯಾಪಾರಿ" (ಕರ್ನಕೋ. ೧೯); ತೆಲ್ಲಿಗ ಸೇಣಿಗ ಮನೆವೀಡಿಲ್ಲಾದದು ತೆಱೆಯುಂ (ಎಇ. XIV, ೧೯೧-೨೯; 726); ಅಲ್ಲಿಯ ತೆಲ್ಲಿಗರು ಬಿಟ್ಟ ಧರ್ಮವೆಂತೆಂದಡೆ . . . ಸೋಟಿಗೆ ಯೆಣ್ಣೆಯಂ ಬಿಟ್ಟರು (ಎಕ. VII (S), ಶಿಕಾರಿ. ೩೩೪-೨೭; ಸು. 1100); ಹಿಂಡಿಯಂ ನಂಬಿಯೆಣ್ಣೆಯನುಗುವ ತೆಲ್ಲಿಗನುಮಂ (ಧರ್ಮಾಮೃ. ೮-೫೦); ಪಡವಂದಿಗಂ, ಪತ್ರಳಿಗಂ, ತೆಲ್ಲಿಗಂ (ಭಾಷಾಭೂ. ೦೬೩ ಪ್ರಯೋ); ಹೇಱಿ ಬಂದೆಳ್ಳ ರಾಸಿಗಳ ತೆಲ್ಲಿಗರೊಯ್ದು ಗಾಣವಾಡೊಳ್ಕಿತೆನಿಸಿದ ತೈಲಕುಂಭ ಕೋಟಿಗಳ ತಂದರು (ಸಿದ್ಧರಾ. ೮-೫೦); ಖಲಪ್ರವರ್ತನಂ ತೆಲ್ಲಿಗರೊಳ್ . . . ಅಲ್ಲದೆ ತನ್ನೊಳಿಲ್ಲೆನಿಸಿರ್ಪುದು (ದಶಕು. ೦-೨೨ ವ); ತೆಲ್ಲಿಗಂಗೆಳ್ಳನುದಿನಂ ಬೆಳೆದುದವಾಯ್ತು (ಬಸವು. ೪೩-೬೦). **ತೆಲಿಗ**: ತೆಲಿಗರು ಸೇಡೆಯಂ ಬಿಟ್ಟರು ಸಖರ ಸೇಡೆಯಂ ಬಿಟ್ಟರು (ಎಕ. V, ಬೇಲೂರು. ೦೭೭-೨೮; 1162). **ತೇಲಿಗ$_2$**: ಪಟ್ಟಣಸಾಮಿ ಸೋವಿಸೆಟ್ಟಿಯರು ಮುಖ್ಯವಾದ ಸಮಸ್ತ ನಗರಂಗಳುಂ ತೇಲಿಗರುಮಿರ್ದ್ದು ಬಿಟ್ಟ ದತ್ತಿ (ಎಕ. VIII, ಸೊರಬ.೦೪೦-೮೫; 1193); ದೂಸಿಗರುಂ ಮುಖ್ಯವಾಗುಳಿದ ಪರದರುಂ ತೇಲಿಗರುಂ (ಎಇ. XIII, ೨೦-೫೦; 1204); ತೇಲಿಗರ ಗಾಣವೊಳಗಾಗಿ ಅರಮನೆಯ ನ್ಯಾಯವನ್ಯಾಯ ಮಳ ಬ್ರಯ ಏನು ಬಂದಡಂ ಆ ಸ್ಥಳದಾಚಾರ್ಯ್ಯರು ತಾವೇ ತೆತ್ತು ನಿರ್ನ್ನಯಿಸುವರು (ಎಕ. II, ೩೩೩-೦೭; 1206 ?); ತೇಲಿಗ ಹಿರಿಯ ತಂಮನ ಮಗ ರಾಮಗೆ ಪೊಂದು ಗ ೧ (ಎಕ. III, ತಿರುಮ. ೨-೭; 1367). [ ತೆಲ್ಲ$_2$ + -ಇಗ./ಸಂ. ತೈಲಿಕ ]

**ತೆಲ್ಲಿಗಗೆಱೆ** (ನಾ). ಒಂದು ಕೆರೆಯ ಹೆಸರು: ಹಿರಿಯ ಕೆಱೆಯ ಕೆಳಗೆ ಗದ್ದೆ ಮ ೧ ತೆಲ್ಲಿಗಗೆಱೆಯ ಕೆಳಗೆ ಗದ್ದೆ ಮತ್ತರ್ ೧ ಕ ೪೫೦ (ಎಕ. XI, ದಾವಣ. ೨೦-೧೯; 1045). [ ತೆಲ್ಲಿಗ + ಕೆಱೆ ]

**ತೆಲ್ಲಿಗಗೇರಿ** (ನಾ). ಗಾಣಿಗರ ಬೀದಿ,–ಕೇರಿ: ಮಂತ್ರವಾದಿಯಂ ಕಂಡ ಗ್ರಹದಂತೆ ತೆಲ್ಲಿಗರ್ ತಲ್ಲಣಿಸೆ ತೆಲ್ಲಿಗಗೇರಿಯಂ ಪೊಕ್ಕು (ಧರ್ಮಾಮೃ. ೨-೨೧). [ ತೆಲ್ಲಿಗ + ಕೇರಿ ]

**ತೆಲ್ಲಿಗವನೆ** (ನಾ). ಗಾಣಿಗನ ಮನೆ: ಮೂಡಣ ತ[ಳ]ದ ಮೂಱು ಹ[ತ್ತಿ]ಯ ತೆಲ್ಲಿಗವನೆಯುಮನಾ ಶತದೊಳಗೆ . . . ಸರ್ವ್ವಬಾಧಾಪರಿಹಾರವಾಗಿ ಬಿಟ್ಟರು (ಕಇ. II, ೧೦-೩೦ ; 1090) ; ದೇವರ ನಂದಾದೀ[ವಿ]ಗೆಗೆ ಬಿಟ್ಟ ××× ತೆಲ್ಲಿಗವನೆ (ಸೌಇಇ. XI-II, ೧೨೯-೩೪ ; 1083). [ ತೆಲ್ಲಿಗ + ಮನೆ ]

**ತೆಲ್ಲಿಗಿತಿ** (ನಾ). ಗಾಣಿಗರ ಹೆಂಗಸು ; ಗಾಣಿಗಿತ್ತಿ : ತಲುಗಿತಿ, ತೆಲ್ಲಿಗಿತಿ, ಚಿಪ್ಪಿಗಿತಿ (ಶಮದ. ೨೦೮ ಪ್ರಯೋ). [ ತೆಲ್ಲಿಗ + – ಇತಿ$_1$ (< – ಇತ್ತಿ) ]

**ತೆಲ್ಲ್ಯಿಸು** 'ತೆಲ್ಲಯಿಸು' ನೋ.

**ತೆವಟಿಗೆ** 'ತಿವದಿಗೆ' ನೋ.

**ತೆವಟಿಗೆಬುಲ್ಲು** 'ತಿವಟಿಗೆ ಬುಲ್ಲು' ನೋ.

**ತೆವಟು** 'ತೆಂಟು' ನೋ.

**ತೆವಡೆ** 'ತೆಟ್ಟೆ' ನೋ.

**ತೆವಡೆಗಟ್ಟು** (ಕ್ರಿ). ಕಂತೆಕಟ್ಟು ; ಸಿವುಡುಗಟ್ಟು : ಹೊಲದಲ್ಲಿ ಆಳುಗಳು ಜೋಳದ ತೆನೆಗಳನ್ನು ತೆವಡೆಗಟ್ಟುತ್ತಿದ್ದಾರೆ (ರೂಢಿ). [ ತೆವಡೆ (< ತೆಟ್ಟೆ) + ಕಟ್ಟು$_1$ ]

**ತೆವರ್** 'ತೆವಂರ್$_2$' ನೋ.

**ತೆವರ** 'ತೆವಱ್$_2$' ನೋ.

**ತೆವರಿ** 'ತೆವಱ್$_2$' ನೋ.

**ತೆವರಿಕೆ** (ನಾ). ಹೀಯಾಳಿಕೆ : ಆಗವೋಡಲ್ಕವರು ಪಿಡಿತಂದು ನಮ್ಮ ತೆವರಿಕೆಗುಮ್ಮಟಲಿಲ್ಲಲೆ ಈಗ ದಂಡಂ ಮಣಿಯೆನುತ್ತ ಬಗ್ಗಿಸಿ ಕೆಡಹೆ (ಚಕುಇ. ೭-೩-೩೭). [ ತೆವರು$_1$ (< ತೆವಱ್$_1$) + – ಇಕೆ ]

**ತೆವರಿಸು** (ಕ್ರಿ). ೧. ಅಟ್ಟು ; ಓಡಿಸಂ : ಇಲ್ಲಿಗಾತಂ ಬರಲು ಕದಹುದೆಱೆಯದೆ ಕಟಕಿಗಳನಾಡಿಸಿ ಕೆಳದಿಯರ ಕಯ್ಯಿಂದ ತೆವರಿವುದೆನುತೆ ಬುದ್ಧಿಗಲಿಸಿ (ಸೌಂದಪು. ೧೩-೨೧) ; ತವಕದಲಿ ತತ್ಕ್ಷಣದಿನಭ್ರಕೆ ನವರುಧಿರ ಮುಬ್ಬೆದ್ದು ಸುರಸೈನ್ಯವನು ತೆವ[ಪಾಠಾಂ. ಬೆದ]ರಿಸಿತೇನನೆಂಬೆನು ಸಮರ ಸಂಭ್ರಮವ (ತೊರರಾ. ೭-೩೩-೪) ; ಬವರಕೈದು ವಸಿದ್ಧಸಾಧ್ಯರ ತೆವರಿಸುತೆ ರಣವಿಜಯ ರಭಸದ ರವಳಿಯಿಂ ಸಂಚರಿಪ ಸಾಲ್ವನ ಕಂಡ ವಿಹಗೇಂದ್ರ (ಅಂಬಿಕಾ. ೨೭-೧೪). ೨. ಧ್ವಂಸ ಮಾಡು; ನಾಶಗೊಳಿಸು: ತೆವರಿಸಿದನನಿಬರ. [ ಪಾಠಾಂ. ಸವರಿದನು ಮತ್ತಾ ] ಚತುರ್ಬಲನಿವಹವನು ನಿಮಿಷಾರ್ಧದಲಿ (ಕುವ್ಯಾಗ. ೨-೩೨) . ೩. ಕಳೆ ; ನಿವಾರಿಸಂ ; ಪರಿಹರಿಸು : ಲಿಂಗವಿದು ತಾಪತ್ರಯಂಗಳಂ ತೆವರಿವುದು (ಸಿದ್ಧೇಪು. ೨೨-೧೦೭) ; ತಂದೆ ಪಂಚಾಕ್ಷರಿಯ ಮಂತ್ರಲಸದುಪದೇಶವಂ ದಯದೊಳಿತ್ತೆನ್ನ ಪಾಪಕುಲಮಂ ತೆವರಿಸು (ರಾಘಶ. ೧೦-೧೯). ೪. ಜರೆ; ಹೀಯಾಳಿಸು : ಇರುಳರಸನಂ ಜಱೆವ ವದನವನಜವಯೆಸಳ ತೆಱನಂ ತೆವರಿಸುತಿರದೆ ತೊಳಗುವ ನಯನವೆಳಹರಿಯಿರವ ನೆಱೆ ನಗುವ ನಡು . . . ನೆಲವರೆಗಿಳಿದ ನಿಡುಜಡೆಯ ತರುಣಿಯರು (ನಂದಿಮಾ. ೯-೩೪). [ ತೆವರು$_1$ (< ತೆವಱ್$_1$) + – ಇಸು$_3$ ]

**ತೆವರು$_1$** 'ತೆವಱ್$_1$' ನೋ.

**ತೆವರು$_2$** 'ತೆವಂರ್$_2$' ನೋ.

**ತೆವರೇರು** 'ತೆವರೇಱು' ನೋ.

**ತೆವರೇಱು, ತೆವರೇರು** (ಕ್ರಿ). ದಿಣ್ಣೆಯನ್ನು ಹತ್ತು ; ಗುಡ್ಡವನ್ನು ಏರು: ಕಾಲುವೆಯುಗಳು ಕುಳಿತೆವರೇಱಲಱಿದೆನಲು ಗಾಲಿವೊಗೆದುವು ಕೀಲು ಮುಱಿದುವು ಗೋಳುಗುಟ್ಟಿತು ಪುರಜನಂಗಳು (ಕೌಶಿರಾ. ೧೧-೪೪) ; **ತೆವರೇರು** : ತವರುಮನೆಯಾ ದೀಪ ತೆವರೇರಿ ನೋಡೇನು (ಹಳ್ಳಿಯು. ೯೩). [ ತೆವರು$_2$ (< ತೆವಱ್$_2$) + ಏಱು$_1$ (< ಏಱ್$_1$) ]

**ತೆವರ್ಚು** 'ತೆವುಳ್ಚು' ನೋ.

**ತೆವಲು, ತೆವುಲು** (ನಾ). ೧. ಉತ್ಕಟವಾದ ಇಚ್ಛೆ ; ಗೀಳಂ; ಚಟ : ಈ ಮಾತುಗಳಿಂದ ಮಾಸ್ತೋವಳಿಗೆ ಹೆಂಡದ ತೆವಲು ಹತ್ತಿತು (ಪುನರು. ೧೪೭) ; ಆ ಕೊಟಕ್ಕೆ ಹೊಗೇಸೊಪ್ಪು ಎಲೆ ಅಡಿಕೆ ನಶ್ಯ ಸುಣ್ಣ ಮುಂತಾದ ತೆವಲು ಸಾಮಾನುಗಳನ್ನೊದಗಿಸಿ (ಹುಲ್ಯಹ. ೨೦). ೨. ಬೇನೆ ; ವ್ಯಾಧಿ : ನಿನಗೇನು ಬಂತು ತೆವಲು (ಸಮ್ಮಸು. ೧೧೨) ; ಸುಳ್ಳು ಹೇಳಲಿಕ್ಕೆ ನನಗೆ ಏನು ತೆವಲು (ಮರಮು. ೫೯೨). **ತೆವುಲು** : ೧. ಅವಳಿಗೆ ಅಡಕಲೆ ತೆವುಲು ಜಾಸ್ತಿ (ರೂಢಿ). ೩. ತೀಟೆ ; ಬೆದೆ ; ನಸೆ: ತೆವುಲು ತೀರಿದ ಮೇಲೆ ಲೌಡಿಯ ಸಂಗವೇಕೆ ? (ಗಾದ).
[ದೇ.೩ ತುಳು. ತೆವಲ್ ; ತೆಲು. ತೆವುಲು, ತೆಗುಲು ]

**ತೆವಲುಗಾರ** (ನಾ). ಗೀಳಂ ಹಿಡಿದವನು ; ಚಟವುಳ್ಳವನಂ :(+). [ ತೆವಲು + – ಗಾರ (< – ಕಾಱ) ]

**ತೆವಳ್** 'ತೆವುೞ್' ನೋ.

**ತೆವಳಾಟ** (ನಾ). ತೆವಳುವಿಕೆ ; ದೇಕುವಿಕೆ : ಎಳೆಯ ಮಕ್ಕಳ ತೆವಳಾಟವೂ ಹಾವಿನ ಹರಿದಾಟವೂ ಒಂದು ದೃಷ್ಟಿಯಲ್ಲಿ ಇದೇ ರೀತಿಯದು (ಮನೋನಂ. ೧೭೭). [ ತೆವಳು (< ತೆವುೞ್) + ಆಟ ]

**ತೆವಳು** 'ತೆವುೞ್' ನೋ.

**ತೆವಳೆ** (ನಾ). ಅಲಕ್ಷ್ಯ ; ಉದಾಸೀನ. 'ತೆವಳೆಗಾಣ್' ಪರಾ. [ ? ]

**ತೆವಳೆಗಾಣ್** (ಕ್ರಿ). ಉದಾಸೀನಮಾಡು; ಕಡೆಗಣಿಸು: ಸತಿ ಪುಟ್ಟಿಲ್ಲಿದಪಳ್ ರಘೂದ್ವಹ ಕುಲಸ್ತ್ರೀ ಸೀತೆ ಪೆಣ್ಬುಯ್ಯಲಂ ಶ್ರುತಿ ಕಯ್ಕೊಂಡುದು ಕೇಳ್ದದಂ ತೆವಳೆಗಂಡಾದೆನ್ನ ವಿಖ್ಯಾತಿ ದೂಷಿತಮಕ್ಕುಂ (ಪಂಠಾಮಾ. ೯-೧೪೪). [ ತೆವಳೆ + ಕಾಣ್ ]

**ತೆವುಲು** 'ತೆವಲು' ನೋ.

**ತೆಳ್, ತೆಳಂ** (ಗು). ತೆಳ್ಳಿತು, ತೆಳ್ಳಿತ್ತು ಎಂಬುದಕ್ಕೆ ಸಮಾಸದ ಪೂರ್ವಪದವಾಗಿದ್ದಾಗ ಬರುವ ಆದೇಶ ರೂಪ. 'ತೆಳ್ಗನ್ನಡ', 'ತೆಣ್ಣಡಂ', 'ತೆಳ್ವರಿಜು' ಪರಾ. ತೆಳು. 'ತೆಳುಗದಪು', 'ತೆಳುವಸಿಱ್' ಪರಾ. 'ತಿಳಿ$_2$' ಹೋ.

**ತೆಳ್ಳನೆಯ** = ತೆಳ್ಳಗಿರುವ: ತಳ್ಳನೆಯ ಕೋಟು ಧರಿಸಿದುದರಿಂದ ನೆಕ್ಲದೋವನ ಮೈಯಲ್ಲಿ ನಡುಕ ತಲೆದೋರಿತ್ತು (ಪುನರು. ೩೦೯); ದೃಷ್ಟಿಪಾಟವುಳ್ಳವರ ಬರಿಯ ಕಣ್ಣುಗಳಿಗೆ, ಮಬ್ಬಿನಲ್ಲಾಗಲಿ ತೆಳ್ಳನೆಯ ಮೋಡ ಮುಚ್ಚಿಕೊಂಡಿರುವಾಗಾಗಲಿ, ಶುಕ್ರನ ಕಲೆಗಳು ಅನೇಕ ವೇಳೆ ಕಾಣುವುದುಂಟು (ಜ್ಯೋತಿರ್ವಿ. ೧೧೭). [ < ತೆಳ್ಳಿತು ]

**ತೆಳಗು** (ನಾ). ಕೆಳಭಾಗ; ಅಡಿಭಾಗ: ಆ ಪುಸ್ತಕ ಪೆಟ್ಟಿಗೆಯ ತಳಗಿದೆ (ರೂಢಿ).

**ತೆಳಗಣ** = ಕೆಳಗಿರುವ ; ತಳದ : ನಾಲು ಆಳುವ ರಾಜ್ಯಘಟ್ಟದ ಮೇಲಣ ಠಾಣೆಯ ಘಟ್ಟತ್ತೆಳಗಣ ಠಾಣೆಯಗಳಲ್ಲಿ (ಮೈಆರಿ. ೧೯೪೩, ೩೭-೦೭ ; 1642). [ < ಕೆೞಗು ]

**ತೆಳಗೆ** (ಅ). ಕೆಳಗೆ ; ಅಡಿಯಲ್ಲಿ : ಇದೊ ತಗ್ಗು, ಅದೊ ಗುಡ್ಡ, ಅಗೊ ಮಲೆಯ ಬೆಟ್ಟ ನೆಲ ತೆಳಗೆ ಬಿಟ್ಟ (ಗಂಗಾತ. ೪೦-೦೨). [ < ಕೆೞಗೆ ]

**ತೆಳಱು** 'ತೆಣಱು' ನೋ.

**ತೆಳು** 'ತೆಳ್' ನೋ.

△ **ತೆಳುಂಪು** 'ತೆಳ್ಪು' ನೋ.

**ತೆಳುಕಾಗದ** (ನಾ). ದಪ್ಪವಲ್ಲದ ಕಾಗದ : ತೆಳುಕಾಗದದ ಮೇಲೆ ಊರಿ ಬರೆಯಬಾರದು (ರೂಢಿ). [ತೆಳು (< ತೆಳ್) + ಕಾಗದ ]

**ತೆಳುಗದಪು** 'ತೆಳ್ಗದಂಪು' ನೋ.

**ತೆಳುಗನ್ನಡ** 'ತೆಳ್ಗನ್ನಡ' ನೋ.

**ತೆಳುಗಲ್ಲ** 'ತೆಳ್ಗಲ್ಲ' ನೋ.

**ತೆಳುಗಟಿ** 'ತೆಳ್ಗಟಿ' ನೋ.

**ತೆಳುಗಾವಿ** (ನಾ). ತಿಳಿಯಾದ ಕಾವಿಬಣ್ಣದ ಸೀರೆ : ಸಾರಂಗವಟ್ಟ ಪಳಿ ಸಂಧ್ಯಾರಾಗಂ ತ್ರಿವಳಿ ಮಂಚಿಟಿಗೆ ಪಲ್ಲಕ ನೆಲ್ಲೂರ ತೆಳು[ಪಾಠಾಂ. ಳ] ಗಾವಿಯೆಂಬಾ ಸೀರೆಗಳಂ ಸತಿಯರೊಲೆಯೊಳುರುಪಿದರಾಗಳ್ (ಕೃಷುವಿ. ೧೦-೨೪) ; ಕುಂಬಳಗಂಟ ತೆರತವಳಿ ತೆಳುಗಾವಿಯುಂ ಬಿಳಿದಿನ ಸೀರೆ (ಅಮುಸಾಂ. ೪-೧೯). [ ತೆಳು ( < ತೆಳ್ ) + ಕಾವಿ ]

**ತೆಳುಗಾಳಿ** (ನಾ). ಮೆಲ್ಲನೆ ಬೀಸುವ ಗಾಳಿ ; ಮೆಲುಂಗಾಳಿ ; ಮಂದ ಮಾರುತ : ತೆಳುಗಾಳಿಯುಂ ಬಯಸಿ ಭದ್ರದೊಳು ಚರಿಸುವ ರತಾಂತ ಸತಿಯರ ಕಂಡನು (ಹಠಕಾ. ೪-೩೩); ಬಳಲಿಕೆಯಿಲ್ಲ ಮಗಣ್ಣಾ ಜನಿನ್ನಯ ನಿಳಯಕ್ಕೆನ್ನೆಯ್ದು ಬಹಾಗ ತೆಳುಗಾಳಿಯಲ್ಲದೆ ಬಿಱುಗಾಳಿಯಿಲ್ಲ (ಭರತ. ೩೯-೧೮) ; ತೆಳುಗಾಳಿಗೊಯ್ಯನೆಯೆ ನಿರಿನಿರಿ ವಿಕಂಪಿಸುವ ಪಟಿಕನಿರ್ಮಲ ನದಿಯ ಪುಲಕಿತಮುಕುರದಲ್ಲಿ ಮಜ್ಜನಕ್ಕುಜ್ಜುಗಿಸಿ (ಶ್ರೀರಾಮಾ. ೧-೯). [ ತೆಳು ( < ತೆಳ್ ) + ಗಾಳಿ$_1$ ]

**ತೆಳುಗೊರಳು** (ನಾ). ತೆಳ್ಳನೆಯ ಕೊರಳು : ನೀಳವಾದ ತೆಳುಗೊರಳಿನ . . . ಎಂಟು ವರ್ಷದ ಹುಡುಗನೊಬ್ಬ . . . ನಾವಿಕ ಟೋಪಿಯನ್ನು ಧರಿಸಿಕೊಂಡಿದ್ದನು (ಪುನರು. ೪೪೦).
[ ತೆಳು ( < ತೆಳ್ ) + ಕೊರಳು ( < ಕೊರಲ್ ) ]

**ತೆಳುತೆರೆ** 'ತೆಳ್ದೆರೆ' ನೋ.

**ತೆಳುದಗಡು** (ನಾ). ತೆಳುವಾದ ಲೋಹದ ಹಲಗೆ,-ಫಲಕ : ಝಗ ಝಗಿಪ ಬೆಳುದಿಂಗಳಿನ ತೆಳುದಗಡನೆಲು ತೊಳಗುವ ದುಕೂಲವ ಬಿಗಿದು (ಕುಮ್ಯಾ.ಗ. ೩-೪೦). [ ತೆಳು ( < ತೆಳ್ ) + ತಗಡು ]

**ತೆಳುದುಗುಲ** (ನಾ). ಶುಭ್ರವಾದ ಬಟ್ಟೆ : ಮಳಯಜದ ಮಲ್ಲಿಗೆಯ ಮುತ್ತಿನ ತೆಳುದುಗುಲ ಸುಲಿಪಲ್ಲ ನಿಡುಗಂಗಳ ಬೆಳಗು ದೆಸೆ ಮುಸುಕು ತಿರೆ (ಸಾಳ್ವಭಾ. ೩-೩೩). [ ತೆಳು ( < ತೆಳ್ ) + ದುಗುಲ ]

**ತೆಳುದೊಗಲು** (ನಾ). ಸೂಕ್ಷ್ಮವಾದ ಚರ್ಮ ; ನವುರಾದ ಚರ್ಮ : ತೆಳುದೊಗಲ ನಿಡುಸೋಗೆಯುಡುಗೆಯುನೆಳಗರುಳ ಸಿಂಗಾರದುಱುಬಿನ . . . ಕಾಳಿಜದಟ್ಟುಗುಳಿಗಳ ಕೆಳೆಗಳೊಳು ಕೊಡಗೂಸು ಪೂತನಿನಿಕರವೊಪ್ಪಿದವು (ಕುಮ್ಯಾಭೀ. ೩-೩೪). [ ತೆಳು ( < ತೆಳ್ ) + ತೊಗಲ್ ( < ತೋಲ್$_1$ ) ]

**ತೆಳುನಿದ್ರೆ** (ನಾ). ಸಣ್ಣ ನಿದ್ರೆ ; ಮಂಪರು : ಸಿರಿಮಂಚಮಂ ಸುತ್ತಿ ಮುತ್ತಿ ಕುಳ್ಳಿರ್ದ ಸತಿಯರು ಕೂಡೆ ಮಾತಾಡುತಿರುತಿರಲು ತೆಳುನಿದ್ರೆ ಕವಿದುದೇಂ ವರ್ಣಿಸುವೆನು (ಸೋಮಚ. ೧-೮೪). [ತೆಳು (<ತೆಳ್)+ನಿದ್ರೆ]

**ತೆಳುನೀರು** (ನಾ). ತಿಳಿಯಾದ ನೀರು ; ಶುಭ್ರವಾದ ನೀರು : (ಶ).
[ ತೆಳು (<ತೆಳ್) + ನೀರು$_1$ (<ನೀರ್$_1$) ]

**ತೆಳುನೋಟ** (ನಾ). ಸ್ವಚ್ಛವಾದ ನೋಟ ; ನಿರ್ಮಲವಾದ ನೋಟ : ಸನ್ನೆಯ ನೋಟ ಸನ್ಮಾನದ ಸವಿನೋಟ . . . ಭಿನ್ನದೋಱದ ತೆಳು ನೋಟದ ಲಲಿತಾಂಗಿ [ಪಾಠಾಂ.ಬಿನ್ನಣದ ತೇಲ್ಪ ನೋಟವ ನೋಡುತಲಾಗ] ಚೆನ್ನೆಯರಿರ್ದರೊಂದೆಸೆಯ (ಅಬ್ಬಲೂ. ೩-೦೦೭).
[ತೆಳು (< ತೆಳ್) + ನೋಟ ]

**ತೆಳುಪು** 'ತೆಳ್ಪು' ನೋ.

**ತೆಳುಬಣ್ಣ** 'ತೆಳ್ವಣ್ಣ' ನೋ.

**ತೆಳುಮಜ್ಜಿಗೆ** (ನಾ). ತಿಳಿಯಾದ ಮಜ್ಜಿಗೆ ; ನೀರುಮಜ್ಜಿಗೆ : ಪನಸ ಮಾವು ಕಜ್ಜುರದ ಪಣ್ಗಳ ರಸಾಯನಮನೀಂಟ ತೆಳುಮಜ್ಜಿಗೆಯ ಕೊಂಡು ನೀರ್ಗುಡಿದು ಹೊಟ್ಟೆಯ ತಡಹುತಳ್ದು ಕಯ್ದೊಳೆದರು (ಸಮ್ಯಕ್ತ್. ೭-೨೦). [ ತೆಳು (<ತೆಳ್) + ಮಜ್ಜಿಗೆ ]

**ತೆಳುಮೆಯ್**, **ತೆಳುಮೈ** (ನಾ). ಸ್ಥೂಲವಲ್ಲದ ದೇಹ ; ಕೃಶ ಶರೀರ : ಕಚ್ಚುಕನ್ನಡಕದ ತೆಳುಮೆಯ್ಯ ಬಾಲೆಯೊಬ್ಬಳು ಆ ಭಾಷಣವನ್ನು . . . ತರ್ಜುಮೆ ಮಾಡುತ್ತಿದ್ದಳು (ಪುನರು. ೩೪೩). **ತೆಳುಮೈ** : ಅತ್ತಿಂದಿತ್ತ ತಿರುಗಾಡುತ್ತಿದ್ದ ತೆಳುಮೈಯ ಗುಜ್ಜಾರಿಯನ್ನು ಕಂಡು ಅವನು ಬಳಿ ಸಾರಿದನು (ಪುನರು. ೧೪೭). [ತೆಳು (< ತೆಳ್) + ಮೆಯ್ ]

**ತೆಳುಮೈ** 'ತೆಳುಮೆಯ್' ನೋ.

**ತೆಳುಮೊಗ** (ನಾ). ತೆಳುವಾದ ಮುಖ ; ಕೃಶವಾದ ಮುಖ : ಅವರಲ್ಲೊಬ್ಬಳ ವಯಸ್ಸು ಸುಮಾರು ನಲವತ್ತು. ಅವಳ ತೆಳುಮೊಗ ಬಿಳಿಚಿಕೊಂಡಿತ್ತು (ಪುನರು. ೧೪೦). [ ತೆಳು (< ತೆಳ್) + ಮೊಗ ]

**ತೆಳುವಸಿಱ್** 'ತೆಳ್ವಸಿಱ್' ನೋ.

**ತೆಳುವಸಿಱು** 'ತೆಳ್ವಸಿಱ್' ನೋ.

**ತೆಳುವಸುಱು** 'ತೆಳ್ವಸಿಱ್' ನೋ.

**ತೆಳುವಳುಕು** 'ತೆಳ್ವಳಿಕು' ನೋ.

**ತೆಳುವಾಸೆ** 'ತೆಳ್ವಾಸೆ' ನೋ.

**ತೆಳುವು** 'ತೆಳ್ವು' ನೋ.

**ತೆಳುವುಡಿ** (ನಾ). ಸಣ್ಣ ಪುಡಿ ; ನವುರಾದ ಹುಡಿ : ತೆಳುವುಡಿಯು ಮಳಲಿಡಿಯಲಿತ್ತಡಿಯ ತಳಗಡಿಯು ಪೊಳೆ ನೆಱೆಯಲುಱೆ . . . ಸಲೆ ಕಣ್ಗಿಸೆದಳಂದು ದಿವಿಜಸಿಂಧು (ಕ್ಷಮಿಥಾ. ೯-೨೪).
[ ತೆಳು (<ತೆಳ್) + ಪುಡಿ$_2$ ]

**ತೆಳುವೆಣ್ಣು** (ನಾ). ತೆಳುವಾದ ಶರೀರವನ್ನುಳ್ಳ ಹೆಣ್ಣು ; ಕೋಮಲೆ : " ತೆಳುವೆಣ್ಣು, ಲತಾಂಗಿ " (Sylph. ೩೦೯೩).
[ ತೆಳು (<ತೆಳ್) + ಪೆಣ್ಣು (<ಪೆಣ್) ]

**ತೆಳುವೆಲರ್** 'ತೆಳ್ವೆಲರು' ನೋ.

**ತೆಳುವೆಳಗು** 'ತೆಳ್ವೆಳಗು' ನೋ.

**ತೆಳ್ಗದಂಪು**, **ತೆಳಂಗದಪು**, **ತೆಳ್ಗದಪು** (ನಾ). ಸುಂದರವಾಗಿರುವ ಕೆನ್ನೆ ; ನುಣುಪಾದ ಕೆನ್ನೆ ; ಕೋಮಲವಾದ ಕಪೋಲ: ದೇವಿಯ ತಾಂಬೂಲ ಚ್ಛಾಯಾವಿಷ್ಕೃತವಾದ ತೆಳ್ಗದಂಪುಗಳೆಸೆಗುಂ (ಪುಷ್ಪಪು. ೩-೪೮) ; ಕರ್ಮಧಾರಯಕ್ಕೆ – ತೆಳ್ಗದಂಪು, ಒಳ್ಗನ್ನಡಂ (ಶಮದ. ೧೬೪ ಪ್ರಯೋ); ಸೊಗಸುವ ತೊಳಪಗಣ್ಗಳ ತೆಳ್ಗದಂಪುಗಳ ಸಂಪಗೆಯ ಪಳಿವ ಮೂಗಿನ . . . ಪೆಣ್ಗಳಿರ್ದರು (ಜಿಬಪು. ೭-೧೨). **ತೆಳಂಗದಪು** : ಅವನ ಕುಳ್ಳಿರಿಸಿ ತೆಳಂಗದಪವಾಳಾಧರವ ಚುಂಬಿಸಿ ಸುಖದಳೆದಳು (ಕಂನವಿ. ೧೦-೩೦). **ತೆಳ್ಗದಪು** : ಭುಜಂಗಳ ತಣ್ಪನೊತ್ತು ಬಿಂಕಂಬಡೆದಿರ್ದ ತೆಳ್ಗದಪಿನೊತ್ತು (ಸೊಕ್ಕಸು. ೦೦-೨೬೧) ; ಪಸರಿಪೆಳನಗೆಯ ತೆಳ್ಗದಪಿನಂ . . . ಕಾಂತೆ ಕಣ್ಗೆಸೆದಿರ್ದಳು (ಕ್ಷಮಿಥಾ. ೦೮-೨೯) ; ಮೆಲ್ಲಡಿ, ಒಳ್ನಾಳ್, ತೆಳ್ಗದಪು (ಕಬ್ಬಾಸು. ೩೦ ಪ್ರಯೋ) ; ಪೆರೆನೊಸಲ ಚೆಂದುಟಿಯ ನುಣ್ದನಿಯ ತೆಳ್ಗದಪಿನ . . . ಮುಗ್ದೆ (ವಂಕಾಠಾ. ೩-೭-೩೪). [ ತೆಳ್ + ಕದಂಪು ]

**ತೆಳ್ಗದಪು** 'ತೆಳ್ಗದಂಪು' ನೋ.

**ತೆಳ್ಗನ್ನಡ**, **ತೆಳಂಗನ್ನಡ** (ನಾ). ತಿಳಿಯಾದ ಕನ್ನಡ ; ಶುದ್ಧವಾದ ಕನ್ನಡ : (ಶ). **ತೆಳುಗನ್ನಡ** : ಒಳುಗನ್ನಡವಚ್ಚಗನ್ನಡಂ ಪೊಸತೆಂಬುದು ತೆಳುಗನ್ನಡ ಮಿಶ್ರದಿನಿದನಿಳೆಯೊಳ್ ಸತ್ಪುರುಷರೋದಿ ಕೇಳ್ಪುದು ಸತತಂ (ಕವಿಚ. III, ೦೪೯. ರಾಜಾವಳೀ ಕಥೆ). [ ತೆಳ್ + ಕನ್ನಡ$_1$ ]

**ತೆಳ್ಗಪ್ಪುರ** (ನಾ). ಶುಭ್ರವಾದ ಕರ್ಪೂರ : ನೋಡಿದ ಕಣ್ಗಳಿಟ್ಟ ತೆಳ್ಗಪ್ಪುರದ ಸಲಗೆಯಂತಟ್ಟರಿಂ ಕೂಡೆ ಕೊಂಡಾಡಿದ ಬಾಯ್ಗೊರಂದದಿಂ ತೀವಿದ ತನಿಗೆನೆವಾಲಂತೆ ನೇರ್ಪಟ್ಟ ನಿನ್ನಗ್ಗದ ದೇಹಚ್ಛಾಯೆಯಿಂ ತಣ್ಣನೆ ತಣಿಯದೆ ಲೋಕತ್ರಯಂ ಚಂದ್ರನಾಥ (ಧರ್ಮನಾ. ೩-೬೩).
[ ತೆಳ್ + ಕಪ್ಪುರ ]

**ತೆಳ್ಗಲ್** (ನಾ). ನವುರಾದ ಕಲ್ಲು, ಚಪ್ಪಡಿ : ಕುಟೀ ತಮರಂ ಪಸರಿಸಿ ತೆಳ್ಗಲ್ಲೊಳ್ ಘಟಿಯಿಸುವುದು ಸುಸ್ಥಾನಶಯನನ[ ಮ ]ಪ್ಪಂತೆ ನೆಲಂ (ಅಶ್ವಶಾ. ೭-೩). [ ತೆಳ್ + ಕಲ್$_3$ ]

ತೆಳ್ಗಲ್ಲ, ತೆಳಂಗಲ್ಲ (ನಾ). = ತೆಳ್ಗದಂಪು : ಗಲ್ಲಕ್ಕೆ – ಗಲ್ಲಗಿವ . . . ಗಲ್ಲಸ್ಥಳಂ, ತೆಳ್ಗಲ್ಲ (ಶಬ್ದ. ೨೪೮ ಪ್ರಯೋ) ; ತೆಳ್ಗಲ್ಲ ಪೂಸರನ ತೋಳ್ಗಲ್ಲ ವಟ್ಟಡಿಗಳೊಳ್ಗಾಡಿ ಜೋಗಿಗಳ ಬಾಳ್ಗೇಡಿ ನಳಿಸುಳಿಗುರುಳ್ಗಳಿನೊಳ್ಪಿನೊಂದೇಳ್ಗಿ ವಿಟರೆರ್ದೆವಾವುಗಳ್ಗಿಟ್ಟ ಪೇಳ್ಗಿ (ಉದ್ಭಟ. ೫-೨೦). ತೆಳುಗಲ್ಲ : ತನುರುಚಿ ನಗುವುದು ರನ್ನದ ತೊಡವ ವಿಗೆ ಪಚ್ಚೆಗೆಂಪಲತಗೆಯ ಹುರುಡಿಪ್ಪವು ತೆಳುಗಲ್ಲವಾ ಸ್ವಯಂಪ್ರಭೆಗೆ (ವರ್ಧಚ. ೪-೮೦).

[ ತೆಳ್ + ಗಲ್ಲ$_1$ ]

ತೆಳ್ಗಟಿ, ತೆಳಂಗಟಿ (ನಾ). ತಿಳಿಯಾದ ಗಂಜಿ,_ಅಂಬಲಿ : ಎರಡುಂ ಬಾಳಕ ಪದ್ಮಕವೆರಡುಂ ಚಂದನವೆನಿಪ್ಪುವಂ ತೆಳ್ಗಟಿಯಿಂದರೆದು ನಡುನೆತ್ತಿಯೊಳ್ ಪೂಸೆ ರುಜಾರ್ತನ ತೃಷೆಯ ದಾಹದೊದವಂ ಕಳೆಗುಂ (ಕರ್ಣಾಟಕ. ೯_೨೮). ತೆಳುಗಟಿ : " ಗಂಜ . . . ಕಾಂಜಿಕವೆನೆ ತೆಳುಗಟಿ " (ವಸ್ತುಕೋ. ೮೨-೪). [ ತೆಳ್ + ಕಟ್$_4$ (<ಕಳ್$_6$) ]

ತೆಳ್ಗೂದಲು (ನಾ). ನವುರಾದ ಕೂದಲು ; ತೆಳ್ಳಗಿರುವ ಕೂದಲು : ನೀಟಾಗಿ ಬಾಚಿಕೊಂಡಿದ್ದ ತೆಳ್ಗೂದಲಿನ ಬಿಳಿಚುವರೋರೆಯ ತರುಣ ಕಲಾವಿದ (ಪುನರು. ೩೩೩). [ ತೆಳ್ + ಕೂದಲು (< ಕೂಂದಲ್) ]

ತೆಳ್ತುಟಿ (ನಾ). ತೆಳುವಾದ ತುಟಿ ; ತೆಳ್ಳಗಿರುವ ತುಟಿ : ಕಿವರ್ದ ತಲೆನವಿರದಮೆ ಮುಗಿದ ಕಣ್ಗಳ್ ಜೋಲ್ದ ವದನದಿಂ ಭುಜದೊಳೊಱಗಿದ ಕೊರಲ್ ತೆಳ್ತುಟಿಯ ತುದಿ (ಚಬಪು. ೧೦-೭೩). [ ತೆಳ್ + ತುಟಿ$_2$ ]

ತೆಳ್ದೆರೆ, ತೆಳಂತೆರೆ (ನಾ). ೧. ಸಣ್ಣ ಅಲೆ,_ತರಂಗ : ಶರದೊಳ್ಮುಳುಂಗಿ ನೆಗಪಿದ ಕರಿಕುಂಭಂ ಫೇನ ಪಿಹಿತಮಿಂಬಾದುದು ತೆಳ್ದೆರೆ ಮೇಲುದಱಿಂ ಪೊಣ್ಮಿದ ಸರಸಿಯ ಮಲಯಜ ವಿಲಿಪ್ತ ಕುಚಕುಂಭದವೋಲ್ (ಶಬಶಂ. ೨-೫೭). ತೆಳುತೆರೆ : ೧. ತಳುತೆರೆಯಿಲ್ಲದಿಂಗಡಲೊಳು ತೇಲುವ ಪೊಳೆವ ಚಂದಿರನೊಲು . . . ಬೆಳ್ಳಿಯ ಥಳಿಗೆವಟ್ಟಲು ರಂಜಿಸುದುದು (ವರ್ಧಚ. ೫-೪೦). ೨. ತೆಳುವಾದ ಮುಸುಕು,_ಪರದೆ : ತೆಳುತೆರೆಯ ಮರೆಯಲ್ಲಿ ಅವಳ ಸುಂದರವಾದ ಮುಖ ಕಾಣಿಸುತ್ತಿತ್ತು (ರೂ೧). [ ತೆಳ್+ತೆರೆ$_4$]

ತೆಳ್ದೇಹ (ನಾ). = ತೆಳಂಮೆಯ್ : ಇಂತಪ್ಪ ಶೂರೆಯುರೆನುತಿರ್ದು ತೆಳ್ದೇಹವಮಂ ತಾಳ್ದಿರೇಕೆಂದಳವಳು (ಮೋಹತ. ೪-೩೪).

[ ತೆಳ್ + ದೇಹ ]

ತೆಳ್ನಡು (ನಾ). ಕೃಶವಾಗಿರುವ ಸೊಂಟ; ಸಣ್ಣ ನಡು : ಬಂದರ್ ಗಡಣದ ತೆಳ್ನಡುವಿನ ಸೆಳೆನಡುವಿನ ಬಡನಡುವಿನಸಿಯನಡುವಿನ ಸತಿಯರ್ (ಆಪವಿ. ೪-೦೨೦) ; ತೆಳ್ನಡು ಬಳ್ಕೆ ಸಖೀಕದಂಬಕಂ ನಲಿದೊಡನೀಱೆ ನೀಱೆ ಬಿಡದೇಱಿದಳೊಯ್ಯನೆ ರಮ್ಯಹರ್ಮ್ಯಮಂ (ರಾಜಶೇ. ೭-೦೭).

[ ತೆಳ್ + ನಡು$_2$ ]

ತೆಳ್ಪಟಿ (ಕ್ರಿ). ಕೃಶತೆ ಅಳಿದಂಹೋಗು ; ದಪ್ಪವಾಗು : ಪೆತ್ತುಂ ತೆಳ್ಪಟಿಯದ ನಡು . . . ಮುನಿದುಂ ಚಿರ್ಲ್ವೊತ್ತರಿವ ನಗೆವೊಗಂ ಮೆಯ್ವೆತ್ತಿರೆ ಕರವೊಪ್ಪಿದಪ್ಪರಲ್ಲಿಯ ಪೆಂಡಿರ್ (ಕಾವ್ಯಾವ. ೭೪೪).

[ ತೆಳ್ಪು + ಅಟಿ$_1$ ]

ತೆಳ್ಪು, ತೆಳಂಪು, ತೆಳಂಪು (ನಾ). ೧. ಪರಿಶುದ್ಧತೆ ; ನಿರ್ಮಲತೆ ; ಶುಭ್ರತೆ : ನೀರ ತೆಳ್ಪು ದುಗ್ಧಾಬ್ಧಿಗೆ ದೊರೆ ಸರಿ ಪೋಲ್ವೆಯೆಂಬಿನಱಿಯೆಂ ಪೊಗಟಲ್ (ಶಾಂತಿಪು. ೩-೫) ; ದಯೆಯಿಂದೊಳ್ಪಿನ ತೆಳ್ಪಿನ ಗುಣಗಣಾಳಂಕಾರದಿಂ ಮಾರ್ಗ್ಗನಿರ್ಣ್ಣಯದಿಂ ತತ್ತ್ವವಿಚಾರದಿಂ . . . ಅಧಿಕನೆಂದು (ಸೌಇಇ. XX, ೧೮-೧೯ ; ೨೮೦) ; ಕಲಿಕಾಲದೇಳ್ಗೆಯುಂ ದೆಸೆಗೆಡೆ ತೂಳ್ದಿ ತಾಳ್ದಿ ಕೃತಲಕ್ಷ್ಮಿಯನೊಳ್ಪಿನ ತೆಳ್ಪುಗಳ್ ಜಗಕ್ಕೆಸೆದಿರೆ (ಎಕ. VII, ಶಿಕಾರಿ. ೧೨೫-೧೩ ; 1019) ; ಪೂತ ಪೂಗೊಳಗಳ ತೆಳ್ಪು [ಪಾಠಾಂ. ತಣ್ಪು] ತೆಂಕಣೆಲರೊಳ್ಪು ಲತಾಳಿಯ ತಳ್ಪು (ಲಂಹರಿ. ೨-೫) ; ನಿಳ್ಪುಂ ಬೆಳ್ಪುಂ ತೆಳ್ಪುಂ ತಳ್ಪೊಪ್ಪಿದ್ದಿರೆ . . . ಒಳ್ಪಂ ಗೆಡೆಗೊಂಡು ಸೊಗಯಿಸುವ ಮುಂಡಗೆಯುಂ . . . ಇಟ್ಟರ್ (ಪಾರ್ಶ್ವಪು. ೮-೫೦) ; ಶೋಭಿಸಿ ತೆಳ್ಪಂ ತಾಳ್ದ ಚಂದ್ರೋಪಳಮಮಳ ಶರತ್ಪೂರ್ಣ ಶುಭ್ರಾಂಶುವಂ (ಪುಷ್ಪಪು. ೩-೭೬). 'ಕಡುದೆಳ್ಪು' ಪರಾ. ೨. ತೆಳುವಾಗಿರುವುದು ; ಸಣ್ಣಗಿರುವುದು ; ಕೃಶವಾಗಿರುವುದು : ನುಣ್ಪು ಸಿಱಿನೊಳ್ ತೆಳ್ಪು ಬಾಳೆದೊಡೆಯೊಳ್ ನುಂಪು ನುಡಿಯೊಳ್ ಸೊಗಸಿನಿಪ್ಪ ಸಂಜನಿಸಿ ಮೆಱೆಯೆ (ಚಬಪು. ೩೪-೬). △ ತೆಳುಂಪು : ೨. ಬಸಿಱ ತೆಳುಂಪು ಕುಂದದೆ . . . ನುತ ತ್ರಿವಳಿ ಕೆಟ್ಟರದೆ (ನೇಮಿಪು. ೮-೦೦೨). ತೆಳುಪು : ೨. "ತೆಳುಪಾದುದು–ಪೇಲವ, ವಿರಲತನು" (ನಾಚಿರಾ. ೩) ; ಲೋಲಲೋಚನಂಗಳ ಪೊಳೆಪುವಂ ತೆಳ್ವಸಿಱ ತೆಳುಪುವಂ (ಮಹಾನೀ. ೧೪-೭೦ ವ).

[ ತೆಳ್ + – ಪು$_2$./ತಮಿ. ತೆಳಿವು ; ತೆಲು. ತಿಲ್ಪು, ತೆಲುಪು ]

ತೆಳ್ಪುಗೆಡು (ಕ್ರಿ). ಶುಭ್ರತೆಯನ್ನು ಕಳೆದುಕೊಳ್ಳು ; ಮಲಿನವಾಗು : ಮದವದ್ದಂತಿ ವರೂಥವಾಜಿಭಟ ಸಂಘಾತಂಗಳ್ . . . ತೆಳ್ಪುರ್ವಿ ಪರ್ವಿದೊಡಾ ಮುನ್ನಿನ ತೆಳ್ಪುಗೆಟ್ಟು ಕೆಸಱಾಯ್ತಾಕಾಶಗಂಗಾಜಲಂ (ಶಂಪಥಾ. ೦೦-೨೯).

[ ತೆಳ್ಪು + ಕೆಡು$_1$ ]

ತೆಳ್ಪುವೆಱು (ಕ್ರಿ). ಶೋಭೆಯನ್ನು ಪಡೆ,_ಹೊಂದು ; ಶೋಭಿಸು : ಶರೀರಮುಬ್ಬಜನ್ಮನೆ ಸಮೆದಿಂದುಕಾಂತವನಕಾಂತೆವೊಲೇಂ ತನೆ ತೆಳ್ಪುವೆತ್ತುದೋ (ಶಾಂತಿಪು. ೯-೦೪೮). [ ತೆಳ್ಪು + ಪೆಱು$_1$ ]

ತೆಳ್ಪೊಡೆ 'ತೆಳ್ವೊಡೆ' ನೋ.

ತೆಳ್ಪೊರೆ 'ತೆಳ್ವೊರೆ' ನೋ.

ತೆಳ್ಪೊಟಲ್ (ನಾ). ಕಿರಿದಾದ ಪೊಟರೆ,_ಡೊಗರು : ಪರ್ಮರನ ಪಾಱುಗೊಂಬಿನೊಳ್ ಪೊಡೆಯ ತೆಳ್ಪೊಟಲೊಳೊತ್ತುಗೆಟ್ಟದ ಕಿಱುನೊಱನ ಸವಿಜೇನ ಸಜ್ಜನೀಬಸಿಯುನಱಿದು (ರಾಮಾಶ್ವ. ೦೦೦-೨೯).

[ ತೆಳ್ + ಪೊಟಲ್$_1$ (< ಪೋಟಲ್) ]

ತೆಳ್ಮಡಿ (ನಾ). ಶುಭ್ರವಾದ ವಸ್ತ್ರ ; ಸ್ವಚ್ಛವಾದ ಬಟ್ಟೆ : ಬೆಳ್ದೆರೆಯ ಮುಗಿಲ ಹತ್ತಿಯ ತೆಳ್ಮಡಿಯನುಟ್ಟು ಪೂರ್ಣಮಾರಜನಿಯಂತಿಸದಳಾ ಕೌಸಲ್ಯೆ (ಶ್ರೀರಾಮಾ. ೧೪-೩೮೦). [ ತೆಳ್ + ಮಡಿ$_6$ ]

ತೆಳ್ವಣ್ಣ, ತೆಳಂಬಣ್ಣ (ನಾ). ೧. ತಿಳಿಯಾಗಿ ಬಳಿಯುವ ಬಣ್ಣ : ತೊಡವ ಬೆರಸುವ ತೆರಳ್ಚುವಿಡುವರ್ಣದ ತೆಳ್ವಣ್ಣ[ಪಾಠಾ. ರ್ಣ]ವರ್ಧೋದಕದ ಬಹುವಿಧದ ವರ್ಣಕ್ರಮಮುಂ (ವರ್ಧಪು. ೭-೩ ವ). ತೆಳುಬಣ್ಣ : ೨. ತಿಳಿಯಾದ ಬಣ್ಣ : ಗಂಡ ಮಾಟವಾಗಿ ಹೊಲಿದ ತೆಳುಬಣ್ಣದ ದೊಳು ಕೋಟನ್ನೂ ದೋರೆಟೋಪಿಯನ್ನು ಧರಿಸಿದ್ದನು (ಪುನರು. ೪೩೯).

[ ತೆಳ್ + ಬಣ್ಣ$_2$ ]

ತೆಳ್ವದ (ನಾ). ಮನ್ಮಥದ್ರವ ; ಕಾಮರಸ : ತುಳ್ಕಿದವು ತೆಳ್ವದದಂತೆ ನವದ್ರವಾಂಬುಗಳ್ (ಲೀಲಾವ. ೨-೪) ; ಪೊಜಪಾಱೊಳಬ್ಬೆಳಿಪ ತೆಳ್ವದಮಿರ್ವರೊಳೊಪ್ಪೆ (ಕಲ್ಯಾಕಾ. ೩೩೨) ; ತಳ್ವಿಲ್ಲದೆ ತೆಳ್ವದಂ ಸುರಿಯೆ (ಸೂಕ್ತಿಸು. ೦೪-೫೭) ; ಮಾನಿತ ವರಾಂಗದೊಳ್ ತೆಳ್ವದಂ ಸೂಸೆ (ಚಬಪು. ೨೦-೨೦).

[ ತೆಳ್ + ಪದ$_1$ ]

ತೆಳ್ವರಿಜು (ನಾ). ನವುರಾದ ಉಡುಪು,–ಉಡುಗೆ : ತೊಟಲ್ವ ಕಣ್ಮಲರು ಮನಾಕುಳಂ ತಳೆದ ತೆಳ್ವರಿಜುಂ . . . ಅಪೂರ್ವಭಾವಮಂ ಲಲನೆಗೆ ತಂದುವಂದನುದಿನಂ ಬಳೆಯುತ್ತಿರೆ ಗರ್ಭದರ್ಭಕಂ (ಪುಷ್ಪಪು. ೪-೦೫).

[ ತೆಳ್ + ಪರಿಜು ]

ತೆಳ್ವಸಿರು 'ತೆಳ್ವಸಿಱ್' ನೋ.

ತೆಳ್ವಸಿಱ್, ತೆಳಂಪಸಿಱ್ ; ತೆಳಂವಸಿಱು, ತೆಳಂಪಸುಱು, ತೆಳ್ವಸಿರು, ತೆಳ್ವಸಿಱು, ತೆಳ್ವಸುರು, ತೆಳ್ವಸುಱು (ನಾ). ಕೃಶವಾದ ಹೊಟ್ಟೆ,–ಉದರ : ತನುರೇಖೆಗೊಂಡ ಕೊರಲೊಡ್ಡಿದ ಪರ್ಮೊಲೆ ತೆಳ್ವಸಿಱ್ (ಶಂಪಥಾ. ೧-೦೦೪) ; ಸುದತಿಯ ತೆಳ್ವಸಿರ್ನಿಱಿ ಪೊದಟ್ದುದು ವಕ್ತ್ರ

ಸರೋರುಹಂ ಬೆಳರ್ತುದು (ಸುಕುಮಾ. ೧೦-೧೪) : ಎಸೆವುದು ವಳಿತ್ರಯಂ ಗಳಿಸಿಸೆವಸಿಯಳ ತೆಳ್ವಸಿಱ್ (ಮಲ್ಲಿಪು. ೩-೬೬) ; ಅವಳ ತೆಳ್ವಸಿಱ್ಗೆಂ (ಜಗವಿ. ೧೦-೩೬) ; ತೆಳ್ವಸಿಱೊಳಿಸೆವ ಸೊಂಪಿನಿಂ ತಾನುಂ ನೆಗೆತರೆ (ಕುಸುಮಾ. ೫-೮). **ತೆಳುವಸಿಱ್** : ಸಿದ್ಧರಾಮನರಿಷಡ್ವರ್ಗಮಂ ಗೆಲಲು ನಡೆವಡಜನಿಟ್ಟ ಗೂಡಾರವಮಾ ಕಂಗೊಳಿಸಿತೆನೆ ತೆಳುವಸಿಱ್ ವೆರ್ಚಿತು (ಸಿದ್ಧರಾ. ೧-೪೯). **ತೆಳುವಸಿಱು** : ಹೊಳೆವ ಕಂಗಳ ದೀರ್ಘ ಕೇಶದ ತೆಳುವಸಿಱ . . . ಶಂಕಿನಿಯರ ನೃಪಾಲನೀಕ್ಷಿಸಿದ (ಜೀವಂಚ. ೧೬-೪೩). **ತೆಳುವಸುಱು** : ತೆಳುವಸುಱ ಬಱುವೊಯ್ಲ . . . ಹಾಹಾರವದ ಕಾಯದಲಿ ಲಲನೆ ಬರೆ (ಶಬ್ದಾರತ್ನಾ. ೭-೧೩) ; ಸೂಳವೊಯ್ಲಿನ ತೆಳುವಸುಱ ಕರತಾಳದಲಿ ಹಾಹಾವಿರಾವದ ಮೇಳವದ ಗೀತದಲಿ ಬಂದಳು ದ್ರೌಪದೀದೇವಿ (ಕುಮಾ.ಗ. ೧೦-೧೪) ; ತ್ರಿದಶರ ಹೊಟ್ಟೆ ತೆಳುವ ಸುಱುವಾಯ್ತು ಬೀತುದು ದೈವಗುರುಭೀತಿ (ನಿಜಾಗ. ೪-೦೦-೧೬). **ತೆಳ್ವಸಿರು** : ಸುಳಿಗುರುಳು ತೆಳ್ವಸಿರು ಬಡನಡುವು ನಡುಗೆ (ಪಂಪಾರಾ. ೫-೬-೩೯). **ತೆಳ್ವಸಿಱು** : ಕಂಪಿಸುವ ನುಣ್ದೊಡೆಗಳ ಬಿದಿರುವ ಜಘನ ತೆಳ್ವಸಿಱ (ಮೋಹತ. ೦೯-೬೩). **ತೆಳ್ವಸುರು**: ಅಡಿ ಜಘನ ನಡು ತೆಳ್ವಸುರು . . . ಮುಡಿಗಡಣದಿ ಸಲೆ ಸೊಗಸುತಿರಲ್ಕು (ನವಮೋ. ೨೪-೦೯). **ತೆಳ್ವಸುಱು** : ನಗೆಮೊಗದಲರ್ಗಣ್ಣ ಬಡವಾಸೆ ತೆಳ್ವಸುಱ ತೊಂಗಲ್ಗುರುಳ ವಿಮಲ ಪದ್ಮಾವತಿಯು ನಿಟ್ಟಿಸಿದನು (ರಾಘಶ. ೦೩-೨೪).

[ ತೆಳ್ + ಬಸಿಱ್ ]

**ತೆಳ್ವಸಿಱು** 'ತೆಳ್ವಸಿಱ್' ನೋ.

**ತೆಳ್ವಸುರು** 'ತೆಳ್ವಸಿಱ್' ನೋ.

**ತೆಳ್ವಸುಱು** 'ತೆಳ್ವಸಿಱ್' ನೋ.

**ತೆಳ್ವಳಿಕು, ತೆಳುವಳಿಕಂ** (ನಾ). ಶುಭ್ರವಾದ ಸ್ಫಟಿಕ ; ನಿರ್ಮಲವಾದ ಪಟಿಕ : ಪಗಲನುದಂಶುವಿಂದುಗುಟ್ಟ ದೀವಿಗೆ ತೆಳ್ವಳಿಕಿಂದವಮಾದ ನುಣ್ಣಗಲಿಯೊಳ್ . . . ಸಜ್ಜೆಯೋವರಿಯಿದೋವರಿ ಮಾಡಿತು ಕಂತುಗೆಮ್ಮಾಮಂ (ಚಂದ್ರಪು. ೮-೬೦). **ತೆಳುವಳುಕು** : ಕಡೆಗಣ್ಣೆಳೆಸೆದುವು ತತ್ಕಳವೆಗಬ ಲೆನುತಾಗಸದೊಳ್ಳಂದ ಗಿಳಿಯಂ ಸೆಳೆಯಲೆನುತ್ತವರತ್ತಿದ ತೆಳುವಳುಕಿನ ಸೆಳೆಯೋ ಪಸುರ್ವಟ್ಟೆಯ ತೊಳಗುವ ಗಾಳಿಪಟಕೆ ಕಟ್ಟಿದ ರಜ್ಜುವಿದೋ ಎಂಬಂತೆ (ಜಯಿಕಾ. ೧-೪೦) ; ತೆಳುವಳುಕಿನ ಬಟ್ಟಬಟ್ಟಲೊಳಗೆ ಕಣ್ಗೊಳಿಸುವ ಕತ್ತುರಿಗೆಸಱು ಎಳಸಿದುದಿಂದುಮಂಡಲದ ನಡುವೆ ನಳನಳಿಪ ಕಳಂಕವಿದೆನಲು (ಕುರಾಸಾಂ. ೮-೧೩). [ತೆಳ್ + ಪಳಿಕು₂ (<ಪಟಿಕ₁)]

**ತೆಳ್ವಳ್ಳಿ** (ನಾ). ತೆಳ್ಳಗಿರುವ ಅಳ್ಳೆ ; ತೆಳುವಾದ ಪಕ್ಕೆ : ಅಱದ ಚವರ್ ನಿಟ್ಟುಸುರ್ಗಳಿಂ ಪೊಯ್ವು ತೆಳ್ವಳ್ಳಿ[ಪಾಠಾಂ. ತೆಳ್ವಳಿಯ]ಬಳಲ್ದ ಕೈ ವ್ಯಯ ಪೊಸಗಂಪು ಕೆದಱಿದ ನಿಱಿಯ ಸುರತಾಂತೆಯರ್ ದೇವಕಾಂತೆಯರ್ ಬರುತಿರ್ದರು (ಜಬಪು. ೦೯-೨೩). [ ತೆಳ್ಪು + ಅಳ್ಳೆ₁ ]

**ತೆಳ್ವಾಸೆ, ತೆಳುವಾಸೆ** (ನಾ). ನವುರಾದ ಬಾಸೆ: ಸಣ್ಣನಡು ಬಳೆಯ ತಿವಳಿಗೆಳತಗೆ ತೆಳ್ವಾ[ಪಾಠಾ. ಳುವಾ]ಸೆ ನುಣ್ಣನೆ ಪೊಗರ್ವಡೆಯೆ (ಶ್ರಮಿಥ್ಯಾ. ೧೯-೩೪). **ತೆಳುವಾಸೆ** : ಮೇಲಿನ ಪ್ರಯೋಗದ ಪಾಠಾಂತರವನು. ನೋಡಿ. [ ತೆಳ್ + ಬಾಸೆ₁ ]

**ತೆಳ್ವು, ತೆಳುವು** (ನಾ). ೧. = ತೆಳ್ಪು ೨ : ನಿಱಿಯ ಸಿಂಗರದುಡೆ ತೆಳ್ವು ದಸಿಯ ಪೊಡೆಯ . . . ಸೌಂದರಿಯದರಸಿ (ಶ್ರಮಿಥಾ. ೧೦-೯).**ತೆಳುವು** : ೨=ತೆಳ್ಪು ೧ : "ಸ್ಫಟಿಕ - ತೆಳುವು, ವಿಕಾಸವುಂ" (ಕಾಶಿಕ. ೨). ೩. ಅಸ್ಥಿರವಾದುದು ; ಬೇಗ ಮರೆತುಹೋಗುವಂಥದು : ಜನತೆಯ ನೆನಪು ತೆಳುವಾದುದು ; ತಾತ್ಕಾಲಿ ಪ್ರಮೇಯ ಪ್ರಸಂಗಗಳಲ್ಲಿ ಅದಕ್ಕೆ ಹೆಚ್ಚು ಆದರ (ಚರೀವ. ೦೫೬). [ ತೆಳ್ + -ವು ]

**ತೆಳ್ವುಸುರು** 'ತೆಳ್ಪುಸಿರು' ನೋ.

**ತೆಳ್ವೆಮರ್** (ನಾ). ಕಿರಿಯವರ ; ಸಣ್ಣನೆಯ ಬೆವರಂಪನಿ : ವಿಭೂಷಣಾಂಶುಲತೆ ತಂದಲ ಬಿಂದುವೊಲುಣ್ಮೆ ತೆಳ್ವೆಮರ್ಗಳಿಯಿಸೆ ಮೇಘಮಾಲೆವೊಲದೇನೆಸೆದತ್ತೊ ಸಭಾಪ್ರಯಾಣದೊಳ್ . . . ಖಚರಾಂಗನಾಜನಂ (ವರ್ಧಪು. ೫-೨೭). [ ತೆಳ್ + ಬೆವರ್₂ ]

**ತೆಳ್ವೆಳಗ** (ನಾ). ಶುಭ್ರವಾದ ಬೆಳಕನ್ನುಳ್ಳವನು ; ಚಂದ್ರ : ವಿಂಗಲ ಚ್ಛಣಂ ತೆಳ್ವೆ[ಪಾಠಾಂ. ತಣ್ಣೆ]ಳಗನಮರ್ದುಕಳೆವೆಳಗ . . . ಶಶಿಯ ನಾಮಂ (ಅಭಿನ. ೪೩). [ ತೆಳ್ವೆಳಗು + -ಅ₇ ]

**ತೆಳ್ವೆಳಗು, ತೆಳುವೆಳಗು** (ನಾ). ಬೆಳ್ಳನೆಯ ಬೆಳಕು ; ಶುಭ್ರವಾದ ಬೆಳಕು : ತಿಳಿವೆಳಗಿನ ತೆಳ್ವೆಳಗಿನ ಬಳಿವೆಳಗಿನ ಬಳ್ಳಿವೆಳಗಿನೊಳ್ಳೆಳಗಿನ ಬೆಳ್ವೆಳಗಿನ ಬೆಳಸಿನ ಸಿರಿಯೆನೆ ತೊಳತೊಳ ತೊಳಗಿದುದು ಮೂರ್ತಿ ಚಂದ್ರಪ್ರಭನಾ (ಶಬ್ದಾನು. ೧೪೦ ವ್ಯಾಖ್ಯಾ). **ತೆಳುವೆಳಗು** : ಪಳಿಕಿನ ಕಲಶದ ತೆಳುವೆಳಗಿನೆಳಕದಿನೆಳನೀರ ಪೊನಲೊಳ್ ಮುಱುಗಿಸುವಂತೆಯುಂ (ಅನಂಪು. ೫-೭೦ ವ). [ ತೆಳ್ + ಬೆಳಗು₂ ]

**ತೆಳ್ವೆಱ** (ನಾ). ಗೆರೆಯಾಗಿರುವ ಚಂದ್ರ ; ಬಾಲಚಂದ್ರ : ಜಡಗಳ ಬಾಬರೇ ತಲೆದಳಿರ್ ಫಣಿ ಸುತ್ತಿದ ಬಳ್ಳಿ ತಾಳ್ದ ಬಾಳ್ಗಡಲದು ಪುಷ್ಪ ಮಾಲೆ ಗಱಿವೂ ಗಱಿ ತೆಳ್ವೆಱ (ಶಬಶಂ. ೩-೩). [ ತೆಳ್ + ಪೆಱ ]

**ತೆಳ್ವೊಗೆ** (ನಾ). (ಹಿತವಾದ ಪರಿಮಳದ) ತೆಳುವಾದ ಹೊಗೆ,-ಧೂಪ: ಚೌಮೂಲೆಗಳಲ್ಲಿಯೂ ಸೋಂಬಿನಿಂದ ಪಲವಾಕೃತಿಗಳಿಂದ ತೆಳ್ವೊಗೆಯ ಸಂಪದವನ್ನೊಯ್ಯನೆ ಏರಿಸಿ ಕುಡುತ್ತಿರುವ ಅಗುರು (ಜಬ್ಬಿಅ. ೮೨-೧೪).

[ ತೆಳ್ + ಪೊಗೆ₂ ]

**ತೆಳ್ವೊಡೆ, ತೆಳ್ಪೊಡೆ** (ನಾ). = ತೆಳ್ವಸಿಱ್ : ತೆಳ್ವೊಡೆ ಕಡುಜವ್ವಡೆದುದು (ಅನಂಪು. ೬-೫). **ತೆಳ್ಪೊಡೆ** : ಕಡು ಬಣ್ಣು ಪೆತ್ತ ಪೊಜ... ರ್ದುಗಿರ್ದವೆ ಸಣ್ಣ ಪುರ್ಬು ತೆಳ್ಪೊಡೆ ಸುಳಿವಲ್ಗುಳಿಂದದ ಕದಂಪಿರದೊಪ್ಪಿ ಕಣ್ಣ ತೋಱಿದಲ್ (ರಾಜಶೇ. ೧೦-೮೫). [ ತೆಳ್ + ಪೊಡೆ₃ ]

**ತೆಳ್ವೊರೆ, ತೆಳ್ಪೊರೆ** (ನಾ). ನವುರಾದ ಪೊರೆ,-ಪದರ: ಬೆಳ್ಮುಗಿಲ ತೆಳ್ವೊರೆಯನಿಂದ್ರಚಾಪಲೇಖೆಯುಂ ತೆಗೆವ ಶರಲ್ಲಕ್ಷ್ಮಿಯುಂ ಪೋಲ್ತು ನಿಜೋತ್ತರೀಯ ಪಲ್ಲವದ ಪೊರೆಯಿಂ ತೆಗೆದು . . . ಮಣಿದೊಡವನೊರ್ವಳಂಗನೆಗಿತ್ತಳ್ (ಮಲ್ಲಿಪು. ೪-೬೦ ವ) ; ಕೆಮ್ಮುಗಿಲ ತೆಳ್ವೊರೆಯ ಮಱಿಯೊಳ್ ವಿಱುವ ಸಂಜೆವೆಱಿಯ ಮುಱುಕಮಂ ಮೆಱಿದುಂ (ವರ್ಧಪು. ೧೦-೫ ವ). **ತೆಳ್ಪೊರೆ** : ಕರಗಿಸೆ ಬೆಳ್ಳಿಯವ್ವಡಿದು ತೆಳ್ಪೊರೆಯೆತ್ತ ದುಕೂಲವಪ್ಪ ಕಂಡರಿಸೆ ಮರಾಳವಪ್ಪ ... ಅಗುರ್ವನೊಳಕೊಂಡುದು ಚಂದ್ರಿಕೆ ಸಾಂದ್ರ ಭಾವದಿಂ (ಜಗವಿ. ೦೬-೦೦೯) ; ಪಿಡಿದ ಜವನಿಕೆಯ ಮಱಿಯೊಳ್ ಕುಡುಮಿಂಚಿನ ಬಳ್ಳಿ ಮುಗಿಲ ತೆಳ್ಪೊರೆ[ಪಾಠಾಂ. ತೆಣ್ಪೊರೆ]ಯೊಳ್ ಕಣ್ಗೆಸರಂ ಪೊಲಡರೆ ತೋರ್ದುವು ತೊಡವಿನ ಬಿಡುವುಂ ಬಿಡೌಜನಂಗಚ್ಛವಿಯುಂ (ಅನಂಪು. ೫-೯೪). [ ತೆಳ್ + ಪೊರೆ₆ ]

**ತೆಳ್ಸರಿ** (ನಾ). ಸಣ್ಣನೆಯ ಮಳೆ ; ಹನಿಮಳೆ : ಮೆಲ್ಸರಿ ಸೂಳ್ಸರಿ ದುಂಗುರೊಳ್ಗಲ್ಸರಿ ತೆಳ್ಸರಿ ಕರಂ ಪೊನಲ್ವರಿಯಿವ ಬಂಬಲ್ಸರಿ (ರಾಜಶೇ. ೮-೧೦.) ; ಮಲ್ಸರಿ ತೆಳ್ಸರಿ ಸಾಲ್ಸರಿ ಸೂಳ್ಸರಿ ಕಾಲ್ಸರಿ ಸುರಿದವು ಉಧೋ ಉಧೋ (ಕ್ರಾಂತಕಥ. ೫೩-೨೦). [ ತೆಳ್ + ಸರಿ₆ ]

**ತೆಳ್ಳ** (ನಾ). ೧. ಒಬ್ಬಾತನ ಹೆಸರು : ತೊರೆ ಕಾವಗದನುಂ ಬೀಜಗವನ್... ವಾರಬದಿಗದಾಲನುಂ ತೆಳ್ಳನುಂ ತಾಟಲಿಯುನುಂ (ಎಕ. III, ನಂಜನ. ೦೩೯-೬; 916 ?). ೨. ಒಂದು ಕುಲದ ಹೆಸರು: ಶ್ರೀತಿಪ್ಪೂರುತೀರ್ಥದ ಹಳ್ಳಿ ಹಾದಿಲವಾಗಿಲ ಭೂವಿಗಾರಂ ತೆಳ್ಳರ ಕುಲದ ...ಱಿಯಂಗ ಗಾಉಂಡನ ಮಗಂ (ಎಕ. III, ಮಳವ. ೪೮-೦೦ ; 1690). [ ? ]

**ತೆಳ್ಳಗೆ** (ಅ). ೧. ಸ್ಪಷ್ಟವಾಗಿ ; ನಿಷ್ಪಷ್ಟವಾಗಿ ; ತಿಳಿಯುವಂತೆ : ಉಳ್ಳೊಡುಗಳೊಳಗೆನಿತಱಿವುಳ್ಳರ್ಗಂ ತಿಳಿಪಲಱಿಯದೆನಿಪೆಡೆಗಳುಮಂ

ತೆಳ್ಳಗಿರೆ ತಿಳಿವುಗುಂ (ಶಂಪಭಾ. ೨-೩೩). ೨. ತಿಳಿಯಾಗಿ ; ನೀರಾಗಿ ; ಅಳ್ಳಕವಾಗಿ : ಒತ್ತರಿಸಿಯದನು ತೆಳ್ಳಗೆ [ಪಾಠಾಂ. ನೆ]ಮಾಡಿ (ಸೂಪಶಾ. ೧-೨೩) ; ಜೀರಿಗೆ, ಮೆಂತ್ಯ, ನುಚ್ಚು ಈ ಮೂರನ್ನೂ ಮಜ್ಜಿಗೆಯೊಡನೆ ಅರೆದು ತೆಳ್ಳಗೆ ಕಲಸಿ . . . ಕೊಡಲು ಮತ್ತೊಂದು ಸಲ ವಾಂತಿಯಾಗುವುದು (ಸಕಪ್ಪ. ಪಠಿ. ೪೪೮). ೩. ತೆಳುವಾಗಿ; ಸಪುರವಾಗಿ; ಕೃಶವಾಗಿ: ಒಂಟಿಯ ಶರೀರವು ತೆಳ್ಳಗೆ ಇರುತ್ತದೆ (ಮುಂಬಯಿ. ೩-೬೪); ಗೆಡ್ಡೆಗಳನ್ನು ತೊಳೆದು ಸಿಪ್ಪೆ ತೆಗೆದು, ತೆಳ್ಳಗೆ ಕೊಯಿದು . . . ನೀರಿನಲ್ಲಿ ಬೇಯಿಸಬೇಕು (ಅಡುಸಾ. ೦೦೩).

ತೆಳ್ಳಗಾಗು = ೧. ನೀರಾಗು : ಅಂಬಲಿ ತೀರ ತೆಳ್ಳಗಾಗಿದೆ (ರೂಢಿ). ೨. ತೆಳುವಾಗು ; ವಿರಳವಾಗು ; ಹಗುರವಾಗು : ಹವೆಯು . . . ಮೇಲಕ್ಕೆ ಹೋದ ಹಾಗೆ ತೆಳ್ಳಗಾಗಿರುತ್ತದೆ (ಮುಂಬಯಿ. ೪-೬೦). ೩. ಸಣ್ಣಗಾಗು ; ಸೊರಗು : ಪ್ರೇಮಿಯಾದವನು ಯೋಚಿಸಿ ಯೋಚಿಸಿ ಸಣ್ಣಗಾಗಬೇಕು, ತೆಳ್ಳಗಾಗಬೇಕು (ಅಲಹೂ. ೩೩). [ ತೆಳ್ + – ಅಗ್₃ ]

ತೆಳ್ಳನೆ (ಅ). ೧. ಸ್ಪಷ್ಟವಾಗಿ ; ಚೆನ್ನಾಗಿ : ಮುನಿವಚನದೊಳಂ ನಂದನರೊಳವಾಗಳ್ ಯಶೋಮತಿ ಕ್ಷಿತಿಪಂ ತೆಳ್ಳನೆ ತಿಳಿದು (ಯಶೋಚ. ೪-೬೨); ಬಂದ ಕಾರ್ಯವ ನೀವು ತೆಳ್ಳನೆ ತಿಳಿವೊಲು ಪೇಳಿ (ವರ್ಧಚ. ೬-೦೪). ೨. ತೆಳುವಾಗಿ : ಕಳ್ಳಿಯುಮೆಕ್ಕೆಯುಮಂ ಸುಟ್ಟೆಳ್ಳಂ ಮಸಿಯಾಗಿ ಪುರಿದು ಚೂರ್ಣಸಮೇತಂ ತೆಳ್ಳನೆ ಪೂಸುಗೆ (ಅಶ್ವಶಾ. ೦೩-೨೦).

ತೆಳ್ಳತೆಳ್ಳನೆ, ತೆಳ್ತೆಳ್ಳನೆ (ದ್ವಿರುಕ್ತಿ) : ಅದಂ ಬಾರಿಸಲು ತೆಳ್ಳತೆಳ್ಳನೆ ಮಡಕೆಯಡಿಯೊಳಗೆ ಬಿಳ್ದು ಹಳಿಯುಂತೆ ಹಾಲಹುದು (ಸೂಪಶಾ. ೨-೩); ತೆಳ್ದೆಳ್ಳನಾ[ಪಾಠಾಂ. ತೆಳ್ದೆಳ್ಳಮಾ]ದ ಪಾಲ್ಗಡಲಲ್ದೆರೆಯೊಳ್ ಮಸುಳಮಸುಳನೆಸೆದುವು ಮಣಿಗಳ್ (ಅನಂಪು. ೩-೬೩) ; ತೆಳ್ದೆಳ್ಳನಾದ ಪಾಲ್ಗಡಲೊಳು ತಳತಳಿಸುವ ಮಣಿನಿಚಯು (ಅನಂಚ. ೭-೦೨೬). [ತೆಳ್ + –ಅನೆ₁]

ತೆಳ್ಳಿತು, ತೆಳ್ಳಿತ್ತು (ಗು). ೧. ತೆಳ್ಳಗಿರುವ ; ಕೃಶವಾದ ; ತೆಳುವಾದ : ಬೆಟ್ಟಿತು ತೆಳ್ಳಿತು . . . ನಿಡಿದಿನಿದೆಂಬಂತುಳ್ಳುವು ತುದುಕಡೆಯನೆ ಕೈಕೊಳ್ಳಿಂ ಗುಣವಾಚಿ ಮೇಣ್ ತುಕಾರಂ ದ್ವಿತ್ವಂ (ಶಮದ. ೬೬ ಪ್ರಯೋ). 'ತೆಳ್ಳುದಲು' ಪರಾ. ೨. ಸುಂದರವಾದ ; ಕೋಮಲವಾದ. 'ತೆಳ್ಗದಂಪು' ಪರಾ. ೩. ಶುಭ್ರವಾದ ; ಬೆಳ್ಳಗಿರುವ. 'ತೆಳುದುಗುಲ', 'ತೆಳ್ಮಡಿ' ಪರಾ. ತೆಳ್ಳಿತ್ತು : ೧. "ಕೃಷ್ಟಂ, ಕೃಷ್ಟಿ: ... ಕರ್ಶಿತವ್ಯಂ– ಈ ೭ ತೆಳ್ಳಿತ್ತು" (ಕಾಕಸ್ಕ. ೦೯೪) ; ತೆಳ್ಳಿತ್ತು ಕೆಂಪಸಿದೆನಿಪ್ಪ ನಾಲಗೆ ಲೇಸು ಕಕ್ಕು ಕವಲಾಗೆ ಪೊಲ್ಲಂ (ಮಂಗರಾ. ೮೨-೦೬).

ತೆಳ್ಳಿದ = ತೆಳ್ಳಗಿರುವವನು ; ಸಣ್ಣಗಿರುವವನು : "ಕೃಶಾನುಃ – ಬೆಂಕಿಯುಂ, ತೆಳ್ಳಿದನುಂ" (ಕಾಕಸ್ಕ., ೦೯೪) ; ದಕಾರಾದೇಶಕ್ಕೆ – ಒಳ್ಳಿದಂ, ತೆಳ್ಳಿದಂ, ಮೆಲ್ಲಿದಂ (ಶಮದ. ೦೩೨ ಪ್ರಯೋ). ತೆಳ್ಳಿದುವು (ಬಹುವ): ನಡ ನೋಟಿಸ್ಕೊಡಮುಂತುಮಿಂತು ಮೂಱಿಸಿಯವು ಮೂಱು ದೊಡ್ಡಿದುವು ಮೂಱಿಡೆ ತೆಳ್ಳಿದುವಂಬುಜಾಕ್ಷಿಯಾ (ಶಂಪಭಾ. ೪-೬೨) ; ಒಳ್ಳಿದುವು ಮೆಲ್ಲಿದುವು, ತೆಳ್ಳಿದುವು (ಶಬ್ದಾನು. ೨೩೬ ಪ್ರಯೋ).

[ ದೇಶ್ಯ ತಮಿ. ಮಲ. ತೆಳಿ, ತೆಳಿವು; ತುಳು. ತೆಳಿ, ತೆಲಿ, ಸೆಲಿ ]

ತೆಳ್ಳಿತ್ತು 'ತೆಳ್ಳಿತು' ನೋ.

ತೆಳ್ಳುಸುರು, ತೆಳ್ಸುಸಿರಂ (ನಾ). ನಿಧಾನವಾದ ಉಸಿರು ; ಮಂದ ನಿಶ್ವಾಸ : ಸಂಭೋಗಿಸುವಾಗ ಬೊಟ್ಟು ಕಲಕಿ ತುಱುಬಳಿದು ತೆಳ್ಳುಸುರುಬ್ಬಿ ಪುಟ್ಟದಿಹುದೆ ಮೈಗೆ ಬೆಮರು (ಭರಚ. ೦೩-೬೪). ತೆಳ್ಸುಸುರು: ಎಂದೆಂದು ದನಿಗೆ ತೆಳ್ಸುಸುರಿಗೆ ಸರಿಯಿಲ್ಲವೆಂದು ಜಱಿವರೆಮ್ಮನೊಂದು ಅಂದು ವೇಳೆಯ ಕಂಡು ಕೊಂದರಾ ಕಳಕಂಠ ಮಂದ ಮಾರುತರು ನೀಱಿಯರ (ಭರಚ. ೪೮-೮೨). [ ತೆಳ್ + ಉಸುರು₂ (<ಉಸಿರ್₃) ]

ತೆಳ್ಳೆ (ನಾ). ೧. (ಕೆಸರು) ನೀರಾಗಿರುವಂತೆ ಮಾಡಿರುವುದು : ಎರಡು ಸಾಲಾಗಿದ್ದ ಗದ್ದೆಗಳನ್ನು 'ತೆಳ್ಳೆ' ಮಾಡಿ ಸಸಿಹಾಕಿ, ಹೆಂಗಸರು ಬರುವ ನಿರೀಕ್ಷಣೆಯಲ್ಲಿ . . . ಕಾದರು (ಗಂಗಾಳ. ೦೩೨). ೨. ಆಳವಿಲ್ಲದ ನೀರಿನ ಜಾಗ, ಸ್ಥಳ : ದಡದೆಡೆಯ ತೆಳ್ಳೆಯೊಳಿರದು ಕೆಲಕೆಲರ್ ಎಂದರೆದೆಯಾಳದಾ ನೀರೊಳಗೆ (ಶ್ರೀರಾಮಾ. ೩೪೪-೦೨೦). ೩. (ಆಲಂ) ಹಗುರ; ಲಘು : ಅವರದೆಲ್ಲ ಅದೇ ಬಾಳಿಯಲ್ಲವೆ ? ನಾನಂತು ಪೊಳ್ಳಾಗಬಾರದು; ತೆಳ್ಳೆಯಾಗಬಾರದು ; ಹಾಗಾಗುವುದಾದರೆ ನನ್ನ ಗತಿ ಮುಗಿದಂತೆಯೆ (ಪುನರು. ೦೬೪). [ <ತೆಳ್ಳಿತು ]

ತೆಳ್ಳೆಗಂಪು (ನಾ). ತೆಳುವಾದ ಕಂಪು ; ಹಿತವಾದ ಸುವಾಸನೆ : ತನೆವಾಲೇಱಿದ ಶಾಲಿಗಂಪುಗಡಲೊಳ್ ಮುಳ್ಗಾಡಿ ಮುಳ್ಗಾಡಿ ಕೌಂಗಿನ ಪೊಂಬಾಳೆಯ ನಟ್ಟಗಂಪುಗಡಲೊಳ್ ಜುಳ್ಕಾಡಿ ಜುಳ್ಕಾಡಿ ಮಾವಿನ ರಲ್ಗೊಂಚಲ ತೆಳ್ಳೆಗಂಪುಗಡಲೊಳ್ ತೇಂಕಾಡಿ ತೇಂಕಾಡಿ ಪದ್ಮಿನಿಯೊಳ್ ತುಂಬಿ ಮಲಂಗಿ ಸೇದೆಗಟಾಗುಂ ಕಾಸಾರತೀರಂಗಳೊಳ್ (ಅನಂಪು. ೩-೧೧).

[ ತೆಳ್ಳೆ + ಕಂಪು ]

ತೆಳ್ಳೆನೀರು (ನಾ). ಆಳವಿಲ್ಲದ ನೀರು; ದಡದಲ್ಲಿರುವ ನೀರು : ಧರ್ಮಹೊಳೆಯ ಅಂಚಿನ ತೆಳ್ಳೆನೀರಿಗಿಳಿದನು (ಮಾಲಿಮು. ೩೦೩).

[ ತೆಳ್ಳೆ + ನೀರು₁ (<ನೀರ್₁) ]

ತೆಳ್ಳೆಲರು, ತೆಳುವೆಲರ್ (ನಾ). ತೆಳುವಾಗಿ ಬೀಸುವ ಗಾಳಿ; ಸುಳಿಗಾಳಿ; ಮಂದ ಮಾರುತ : ಸಕ್ಕರೆ ಕೀವಿದ ತನಿವಾಲೂದುವ ತಂಕಣ ತೆಳ್ಳೆಲರು (ಜಯಕಾ. ೧-೨೪). ತೆಳುವೆಲರ್ : ನವ್ಯಪರಿಮಳದಿಂದೆ ಸೊಗಸು ತೀಡುವ ತೆಳುವೆಲರ್ಗೆ ಮೈಯೊಡ್ಡಿ ಮಾರ್ಗಶ್ರಮವನು ಕಳೆದರು (ಕ್ಷಮಿಭಾ. ೮-೩). [ ತೆಳ್ + ಎಲರು (<ಎಲರ್) ]

ತೆಱ₁, ತಱ, ತೆರ₁ (ನಾ). ೧. ರೀತಿ ; ಕ್ರಮ; ಬಗೆ: ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆಱಪೋಲ್ಕಂಜಪೋಲ್ಕೋಜ್ ಬೇಗಂ ಪರಿಗುಂ ಶ್ರೀರೂಪ ಲೀಲಾಧನವಿಭವಮುಹಾರಾಶಿಗಳ್ಳಿಲ್ಲಮಾಗ್ಗ್ (ಎಕ. II, ೮೮-೦ ; ಸು. 700) ; ಮುನಿ ವೀತರಾಗನೆಂದುಂ ಬನಮಂ ಸಾರ್ತಕ್ಕುಮಾವ ತೆಱದಿಂ ಪೋಪಂ (ಕವಿರಾ. ೧-೬೮) ; ಪದಿನೆಂಟುಂ ತೆಱದ ಭಕ್ಷ್ಯರೂಪಂಗಳುಮಂ ನಾನಾಪ್ರಕಾರದ ಪಾನಂಗಳುಮಂ ಭಟ್ಟಾರರ್ಗೆ . . . ಬಡ್ಡಿಸಿದೊಡೆ (ವಡ್ಡಾರಾ. ೬೮-೦೬) ; ಪುಂಡ್ರೇಕ್ಷುದುಡಂಗಳಂ ಕಡಿಕಡಿದು ಯಂತ್ರ ಪೀಡನೆಯಿಂ ರಸಂಗೊಳ್ವ ತೆಱನುಮಱಿಯೆ ಪೇೞ್ದು (ಆದಿಪು. ೬-೭೭ ವ); ಮುನಿವಧದೋಷಮಾವ ತೆಱದಿಂ ಕಳೆಗುಂ (ಕಾದಂಪೂ. ೮೭೬) ; ತೆರಣಿಯ ಹುಳು ತನ್ನ ಸ್ನೇಹದಿಂದ ಮನೆಯ ಮಾಡಿ ತನ್ನ ನೂಲು ತನ್ನನೇ ಸುತ್ತಿ ಸುತ್ತಿ ಸಾವ ತೆಱನಂತೆ (ಮಹಾದೇ. ಬ. ೦೩-೦೬) ; ತೆಱನಂ ಕಾಣದ ತಾಣದಲ್ಲಿ ಕಪಟಂಗಳ್ ಮಾಳ್ಪುರಿರ್ಪಲ್ಲಿ . . . ಇರ್ದೊಡೆ ಹಾನಿಯೈ (ಸೋಮೇಶ. ೨೩) ; ಸುಮುಹೂರ್ತವೇ ಗಂಡುರೂಪಾದ ತೆಱನಾಗೆ ಅಮುಮ ಕಾರಣಿಕ ಶಿಶು ಜನಿಯಿಸಿದನನುವಾಗೆ (ಬಸರ. ೦-೦೩೦) ; ತೆಱನಱಿದೀವ ಕಾರ್ಯ ಮಱಿದಂಜುವ . . . ಊರ್ಜಿತ ಬುದ್ಧಿಯುಳ್ಳದಿಂಬಱಿಯದ ಗಾವಿಲಂಗೆ ದೊರೆಕೊಳ್ವರೆ ಸೂಳೆಯರೆಂಬ ಡಾಳಿಯರ್ (ಸೂಕ್ತಿಸು. ೮-೪೦೨) ; ಭರತ ಸಂತತಿ ಫಲಿತ ಕದಳಿಯ ತೆಱದೊಳಾಯಿತಲಾ (ಕುಮಾ.ಅ. ೨-೨೦); ದೂಱು ಬರುವ ತೆಱ ನಂಬಿಕೆ ಕೊಟ್ಟರೆ ದುರ್ಜನ ಬರುವುದು ತಪ್ಪೇತೆ (ಪುರಂದ. ೧-೦೩೬-೧). ೨. ಅಂದ; ಮನೋಹರತೆ: ತಂದನೆ ಜಗಂ ಸಂಪ್ರೀತಿಯಿಂ ಬಣ್ಣಿಸುತ್ತಿನೆ ತಾನುಂ ತೆಱದಿಂ ಜಸಕ್ಕೆ ನೆರೆಯಾದಂ ನಾಚಿದಕ್ಷಾಧಿಪಂ (ಎಇ. XXVIII, ೩-೨೩ ; 1082). ೩. ಸಂಗತಿ ; ವಿಷಯಂ : ಪೆಱರಂ ದೂಱುವರೊಳ್ ತೆಱನಱಿಯದೆ ನುಡಿವವರೊಳ್ . . . ಬಱುದಲೆ ಯೆಂದೆಳಸಿ ಕೇಳಲಾಗದು ಪುರುಷಂ (ಧರ್ಮಾಮೃ. ೬-೨೦೩) ; ಅಱಿವಿನೊಳಗಣ ಅಱಿವ ತೆಱದೊಳಗಣ ತೆಱವ ಕುಱುಹಿಟ್ಟು ಕುಱುಹ ಕುಱುಹು

ಅವಗವಿಸಿ ಭಿನ್ನವಿಲ್ಲದೆ ನಿರ್ವಾಹ ನಿರ್ಲೇಪವಾದುದು (ಮುದೀಪ. ೨೭೪-೧೬); ಆ ನೃಪ ಸುವ್ರತಾಖ್ಯಮುನಿ ಬರಲೆಱಗಿ ತನಗುದಯಿಸಿದ ಪುತ್ರರು ನಿರಾಯುಷರೇಕೆ ತನಗೇ ತೆಱನ ಹೇಳೆನೆ ಕರ್ಮವಶ ತಾನೆಂದನಾ ಮಾನಿಪ (ಜೀವಂಚ. ೭-೩೩). ೪. ಮಾರ್ಗ; ಹಾದಿ; ಉಪಾಯ: ಚಿಂತಿಸಿದಳೊಂದು ತೆಱನಂ ಶಿವಂ ಮೆಚ್ಚುತಿರೆ . . . ಪನ್ನಗಾಭರಣನ ಪಸಿವನಾಱಿಸುವುದೆಂದು (ಇಳರ. ದೀ. ೫೩-೨೦). ೫. ಸ್ಪಷ್ಟವಾದಂದಂ; ವ್ಯಕ್ತವಾದಂದು. 'ತೆಱದರುಶನ' ಪರಾ. ತೆಱ: ೧. ನಿಜಪರಿಭವದ ನೆಲ್ಲವನು ಹರಿಪದಸರಸಿಜಕೆ ತೆಱವಾಗಿ ಬಿನ್ನಹ ಮಾಡಿದನು (ನಿಭಾಗ. ೧೦-೬೯-೨). ತೆರ₁: ೧. ಶ್ರುತಿಯೊಳಗಾಡುವ ಹಾಡಿನ ತೆರದಿ ಸ್ವತಂತ್ರ ನೀನೀ ಪಾರತಂತ್ರ್ಯದಿ (ಗಜೇಶ. ೪-೮೩); ಶುದ್ಧ ನೀಲಿ ಬಣ್ಣಕ್ಕೂ ಶುದ್ಧ ಬಿಳಿಯ ಬಣ್ಣಕ್ಕೂ ಮಧ್ಯೆ ಒಂದು ತೆರನಾದ ಬಣ್ಣವಿರುತ್ತದೆ (ಜೀವಾತ್ಮ. ೦೩೩); ಭಕ್ತಿಯಲ್ಲಿ ನಾನಾ ತರ (ಜಗದಾ. ೧೮).

ತೆಱತೆಱ, ತೆಱಂತೆಱ, ತೆಱತೆಱ (ದ್ವಿರುಕ್ತಿ): ದಿವಕ್ಕೆ ಪೋಪ ಬಟ್ಟೆಗೆ ಸೋಪಾನಸಂಗಟ್ಟಿದಂತೆ ತೆಱತೆಱದಿಂ ನೆಗೆದೊಗೆದ ಪೊಗೆಯಂ ಕಂಡು (ಶಂಕಚಂ. ೧೧೬-೬); ತೆಱತೆಱದ ಕಲ್ಲೋಲಮಾಲೆಗಳ ಲೀಲೆಗಳ ಬೆರೆಬೆರೆವ ರಾಜಹಂಸಾಳಿಗಳ ಕೇಳಿಗಳ . . . ಮುನಿಜನಂ ಸೇವಿಸುವ ಭಾವಿಸುವ ಗಂಗೆಗವನಿಜೆ ಬಂದಳು (ಜೈಮಿಭಾ. ೧೯-೫); ತೆಱಂತೆಱದಿಂ ಶಿರೋಜಮಂ ನೆಗಪುವ ಭಂಗಿ (ಜಗವಿ. ೧೦-೯೯); ತೆಱತೆಱ ಮೆಟ್ಟಿ ರಾಗದೊಡಗೂಡಿ ಬೆಡಂಗು ಪರಿಶ್ರಮಂಗಳೊಳ್ ನೆಱೆದಿರೆ . . . ನರ್ತಿಸಿದಾಕೆಯರೊಪ್ಪಿ ತೋಱಿದರ್ (?) (ಸೂಕ್ತಿಸು. ೦೩-೧೮). ತೆಱತ್ತು = ಹೀಗೆ; ಈ ರೀತಿಯಲ್ಲಿ: ನೀತಿನಿರಂತರಾನುಗತವೃತ್ತಿವಿಕಲ್ಪಿತಮಂ ತದೀಯ ನಿರ್ಣೀತಿಯನೀ ತೆಱತ್ತು ತಱಿಸಲ್ಗೆ ಬುಧೋತ್ತಮರುಕ್ತಿಪೂರ್ವಕಂ (ಕವಿರಾ. ೨-೧೦೦). [ದೇ.॥ ತಮಿ. ತಿಱ; ಮಲ. ತಿಱ, ತಿಱವು; ತೆಲು. ತೆಱಂಗು, ತೆಱವು]

ತೆಱು₂ 'ತೆಱು₃' ನೋ.

ತೆಱಂ, ತೆರಂ (ಅ). ಚೆನ್ನಾಗಿ: ಅಧಿಕವಾಗಿ. 'ತೆಱಂಬೊಳೆ' ಪರಾ. ತೆರಂ. 'ತೆರಂಗುಣಿ' ಪರಾ. [ <ತೆಱು₁ ]

ತೆಱಂದಿರಿ (ಕ್ರಿ). ೧. ಬಹುವಾಗಿ ಅಲೆದಾಡಂ,_ಸುತ್ತಂ: ಅದೇಂ ತೆಱಂದಿರಿದು ಪಾಯ್ದುಪೋ ಕೇತಕಿಯೊಳ್ ಮವಾಳಿಗಳ್ (ಆದಿಪು. ೧೧-೦೨೦): ಅತ್ತಣ ಪಂಬಲ ಬಂಬಲೊಳ್ ತೆಱಂದಿರಿರುದು ಚಿತ್ತಮಾದೊರೆಯ ಯೋಗಿಗಮಿಂತುಟೆ ಮೋಹಮಾಗದೇ (ಶಂಕಚಾ. ೧೩-೬೩); ಅಲರ್ವಂಡನುಂಡು ತನಿಸೊರ್ಕಿಂ ಸೊರ್ಕಿ ತೆಱಂದಿರಿದು ಪಾಱುವ ಪೊಂಬಿಗಳ ಬಳಗಮನೊಳಕೊಂಡ ಲತಾಮಂಟಪಂಗಳೊಳಂ (ಕಾದಂಉ. ೩೨೬). ೨. ಒಮ್ಮೆಲೇ ಹೊರಳು; ರಭಸದಿಂದ ತಿರುಗು: ಮೆಯ್ಯುಸಮೊಂದ ಪೂವಿನೊಳೆ ಪೋಗಿ ತೆಱಂದಿರಿದಳ್ಳಿಗೆ ನಂಬಿನೊಳ್ ಪಾಯ್ವುದುಂ (ಶಾಂತಿಪು. ೮-೩೩); ತೆಱಂದಿರಿದಾಂತ ಮೆಯ್ವೆಸಂ ಸುತ್ತುವ ಬಲ್ಪು . . . ತವ್ಯೊಳೆಯ್ದೆ ಮೆಯ್ವೆತ್ತಿರೆ ಬಿಚ್ಚತಂ ಪೊಣರ್ದುಪಂದೆರಡುಂ ಬಲದಂಕದಾನೆಗಳ್ (ಚಂದ್ರಪು. ೧೦-೮೪); ಬಿದಿರ್ಚಿ ದಳಂಗಳಂ ತೆಱಂದಿರಿದುದು ಚಕ್ರವಕ್ಕಿ (ಅನಂಪು. ೬-೭೧): ಭರದಿ ತೆಱಂದಿರಿವಾ ತಿಹುರಿಯ ಮೇಲೆ ಇರದಿಟ್ಟು ಕುಂಬಟಿಗೋಲಾ ಪರಿಯೆನೆ ಗಜವಡೆಯಾದಶ್ವನ ಮೇಲೆ ಪಿರಿದೊಪ್ಪಿದನು ವಾಹಕನು (ಶ್ರೀಪಾಲ. ೪-೧೨). ೩. ಮನೋಹರವಾಗಿ ತಿರುಗು; ಸುಂದರವಾಗಿ ಸುತ್ತು: ಒಲವಿನೊಳಾದ ಕಾಯ್ಪು ಮಿಗೆ ಕಾದಲನಂ ಬಿಸುಟಂತೆ ಪೋಪ ಕಾದಲಳಟುತುಂ ತೆಱಂದಿರಿದು ನೋಡಿದ ನೋಟದೊಳ್ (ಶಂಕಚಾ. ೪-೧೦೦). [ ತೆಱು₁ + ತಿರಿ₁ ]

ತೆಱಂದಿರಿಪು (ಕ್ರಿ). ಬಗೆ ಬಗೆಯಾಗಿ ತಿರುವು, –ಹೊರಳಿಸಂ: ಬಿಡದೊಯ್ಯನೆ ನೀವಿಯಂ ತೆಱಂದಿರಿಪುತುಮಲ್ಲಿ ತೀಡುವುದು ಕಾಮುಕನಂದದೆ ಸಾರವಾರುತಂ (ಕುಸುಮಾ. ೨-೧೦೧). [ ತೆಱು₁ + ತಿರಿಪು₁ ]

△ ತೆಱಂಪು 'ತೆಱತ್ತು' ನೋ.

ತೆಱಂಬಾಯ್ (ಕ್ರಿ). ಚೆನ್ನಾಗಿ ಓಡಾಡು: ಪೊರೆವುನ್ನತಸ್ತನಾಧರಾಬ್ರಜಂಸುಟಾವ ಕಾದಂ[ಬಂ] ತೆಱಂಬೊ[ಬಾ]ಯ್ದು ಭೋರ್ಗರೆದೆತ್ತಂ ಪುಗಲೆಂಬ ಕೋಕಿಲೆ (ಸುಕುಮಾ. ೧-೭೩). [ ತೆಱಂ + ಪಾಯ್₁ ]

△ ತೆಱಂಬು 'ತೆಱಪು' ನೋ.

ತೆಱಂಬೊಯ್ (ಕ್ರಿ). ಚೆನ್ನಾಗಿ ಹೊಡೆ: ಕಾಲ್ಗಳ್ಗಳಿಂ ಪಿಡಿದೀಡಾಡಿ ಯುಮುರ್ದಿಯುಂ ತಿರಿಪಿಯುಂ ತೇದುಂ ತೆಱಂಬೊಯ್ದುಮಾ ದಡಿಗಂ ದಾನವನೆಂದಿಂ ಕೆಡಪಿದಂ ಸಂಗ್ರಾಮರಂಗಾಗ್ರದೊಳ್ (ಸುಕಾಸೇ. ೧೨ ೨೦೪). [ ತೆಱಂ + ಪೊಯ್₁ ]

ತೆಱಂಬೊಳೆ (ಕ್ರಿ). ಚೆನ್ನಾಗಿ ಪ್ರಕಾಶಿಸಂ; ಅಧಿಕವಾಗಿ ಹೊಳೆ: "ತೆಱಂಬೊಳೆದುದೆಂದು ತೋರ್ಕೆವಡೆದ ಕಾಂತಿ" (ಕಕಶಾ. ೫೬-೨೦೬): ಪೊಱಪೊಣ್ಮುವ ಕಣ್ಣ ಬಳ್ಳುಮೋಪರ ಮನದೊಳ್ ತೆಱಂಬೊಳೆವ ಬಾಳಿಗಳಂತಿರೆ (ಆದಿಪು. ೧೧-೯೩): ತೆಱಂಬೊಳೆವ ವಿಮಾಂಗಳನಾಳ್ಕುವ ಕೈದುಗಳ್ ನಿರಾಕರಿಸಿರೆ ಮೇರೆದಪ್ಪಿ ಕವಿದತ್ತು ನರಾಧಿಪ ಸೈನ್ಯಸಾಗರಂ (ಶಂಕಚಾ. ೩-೬೮): ಪುಷ್ಪಶರಪನ್ನಾಗಘಟಿಯು ಕಟದಿನು ತೈಟವಾದ ಮದವೃಷ್ಟಿಯಿಂ ತೆಱಂಬೊಳೆವ ಮಱಿದುಂಬಿಯ ಬಂಬಲಿಂ . . . ಅತಿ ರಮಣೀಯವಾಗಿ (ಮಲ್ಲಿಪು. ೨-೩೩): ಒಪ್ಪಂಬೂಸಿದ ಪೋಲ್ ತೆಱಂಬೊಳೆವ ಕೊಂಕುಂ (ಕಬ್ಬಿಕಾ. ೫): ಕೆಂಬಟ್ಟೆಯ ಮೃದುತಲ್ಪದೊಳೊಱಗಿ ತಱಂಬೊಳೆದೊಪ್ಪುವ ರತಿಯನೆ (ಅಯುಕಾ. ೩-೮). [ ತೆಱಂ + ಪೊಳೆ₁ ]

ತೆಱಂಬೊಳೆಯಿಸು (ಕ್ರಿ). ಚೆನ್ನಾಗಿ ಪ್ರಕಾಶಿಸಂವಂತೆ ಮಾಡಂ; ಹೆಚ್ಚು ಶೋಭೆಯುಂಟಾಗುವಂತೆ ಮಾಡಂ: ಪನಪದ್ಮಮದೇಂ ದೇವನ ವನಮಾಲೆಯಂ ತೆಱಂಬೊಳೆಯಿಸಿತೋ (ಜಗವಿ. ೦೦-೫೬).

[ ತೆಱಂಬೊಳೆ + –ಇಸು₃ ]

ತೆಱಕಾಱ (ನಾ). ತೆರಿಗೆಯನ್ನು ವಸೂಲು ಮಾಡಂವವನು: ನೀನಿತ್ತಪಧಿ ಕಿಱಿದೀವರಿಲ್ಲ ಧನವಂ ಗಳಿಸಿ ತಂದೀವೆನೆನಲು ದಿನವಿಲ್ಲೊಬ್ಬ ತೆಱಕಾಱನಂ ಕೊಟ್ಟೊಡಾತಂಗೆ ನಿರ್ಣಯಿಸಿ ಕೊಡುವೆನೆನಲು (ಹಡಕಾ. ೮-೫೬): ಸುರಿದನರ್ಥವನು ಕೌಶಿಕಮುನಿಯ ತೆಱಕಾಱ ತಲೆದೂಗಲು (ಹಡಕಾ. ೧೦-೨೬). [ ತೆಱ₂ (<ತೆಱು₃) + –ಕಾಱ ]

ತೆಱಕೈ (ನಾ). (ಹಣವನ್ನು) ಸೆಳೆದಂಕೊಳ್ಳುವ ಕೈ; (ಸಿರಿಯನ್ನು) ದೋಚುವ ಕೈ: ಕೌಶಿಕಾಜತನ ತೆಱಕೈ ಬಱುಚೋಸರಣೆ ಹೇಪ ಹಳವು ಬೆಳ್ಳುಕ್ಕೆ ಬೆಳ್ಳುನಿಸು ಕೈತವವಂ ಕನಸಿನೊಳ್ ನೆನೆಯದೆ ಮದನಾಗವ ವೆಂಬ ಮಹಾನಾಟಕಮನಭಿನೈಸುತೆ (ವಿರೂಪಾ. ೬೮).

[ ತೆಱ₂ (<ತೆಱು₃) + ಕೈ₂ (<ಕೆಯ್₂) ]

ತೆಱಕೊಡು, ತೆರಕೊಡು (ಕ್ರಿ). ೧. ತೆರಿಗೆಯನ್ನು ತೆರು,–ಕೊಡು: ಬಾಳ ಬಡವರು ತೆಱಕೊಟ್ಟು ಬಾಹರು (ಕಶಾ. I, ೫೦-೨೮: 1432?). ತೆರಕೊಡು: ೨. ತಪ್ಪುಕಾಣಿಕೆಯನ್ನು ಕೊಡು; ದಂಡ ತೆರು: ಬಿಡುಗಡೆಯಾಗಬೇಕಾದರೆ ತೆರಕೊಡಬೇಕು (ಉಡುಗ೨. ೬). ೩. ಕನ್ಯಾಶುಲ್ಕವನ್ನು ಕೊಡು,_ತೆರು: ಬಟ್ಟೆಯೇ ಸಿಕ್ಕುವುದಾದರೆ ಹೆಣ್ಣೊಂದು ನನಗೊಂದು ನಮ್ಮಪ್ಪಗೊಂದು ತೆರಕೊಟ್ಟು ತರುವ ಹಾಗಿದ್ದರೆ ಮುದುಕನು ನಮ್ಮಪ್ಪ, ಹುಡುಗನು ನಾನು (ಇಂಚಾಪ. ೧೦೦-೮೭).

[ ತೆಱ₂ (<ತೆಱು₃) + ಕೊಡು₁ ]

ತೆಱಗೊಳ್ (ಕ್ರಿ). ಸುಂಕವನ್ನು ಕೊಳ್ಳು; ತೆರಿಗೆಯನ್ನು ವಸೂಲು ಮಾಡು: ಪೋಪಾಕರಸಂಗ್ರಾಹಕರ ಗೋವ್ರಜಂಗಳುಮಂ ಅವನಾಳ್ವ ತೆಱ[ಪಾಠಾಂ. ಟ]ಗೊಳ್ವ ಬಿಟ್ಟಬೆಸಕಯಿಸಿಕೊಳ್ವ ಭೋಗಿಪ ನಿಯೋಗಂಗಳುಮಂ ಮಾಡಿದಂ (ಆದಿಪು. ೮-೩೩ ವ). [ ತೆಱ₂ (<ತೆಱು₃) + ಕೊಳ್₁ ]

ತೆಱತ್ತು 'ತೆಱು₁' ಪರಾ.

ಒಂದಂ: ಒಂದೊಂದು ನಾಳದಲ್ಲಿ ಪೃಥ್ವೀಸ್ವರ ಅಪ್ಪುಸ್ವರ ತೇಜಸ್ಸಿನ ಸ್ವರ ವಾಯುವಿನ ಸ್ವರ ಆಕಾಶಸ್ವರ ಇಂತೀ ಪಂಚಸ್ವರಸಂಜ್ಞೆಯಂ ತಾಳಿ (ವಿವೇಳ. ೧೮೭). [ ಸಂ. ತೇಜಸ್ ]

**ತೇಜಿ$_1$** (ನಾ). ಕುದುರೆ ; ಅಶ್ವ : ಕಾಯವೆಂಬ ಪಟ್ಟಣದೊಳಗೆ . . . ವಶೀಕರಣವೆಂಬ ಸೇನಬೋವ ಸಂಚಲವೆಂಬ ತೇಜಿ ಅಷ್ಟಮದವೆಂಬ ಆನೆ (ಚನ್ನವ. ೪. ೪೪೪-೯೪೩) ; ತೇಜಿಯ ತಿರುಹಿದನು ಶಲ್ಯ (ಕುವ್ಯಾಕ. ೧೩-೪೮) ; ಬಿಳಿಯ ತೇಜಿಯ ಹೇಮರಥವನು ಸುಳಿಸಿದನು (ಕೌಶಿರಾ. ೨೭-೨) ; ಊರ್ಗೆ ಮರಳುವ ತೇಜಿಗಳ ಸಾಲ್ಗಳಾ ಮಧ್ಯಮಾರ್ಗದೊಳ್ತವೆ ತೀವಿ ಸಂದಣಿಸುತಿವೆ (ಕೃಮಿಥಾ. ೩-೪೦) ; ಪಲಾಯನ ತೇಜಿಯನ್ನೇರಲ್ಕೆ ತವಕಿಸಿತು ಜೀವವಮಾ ಜಾನಕಿಜೀವಿತೇಶ್ವರಗೆ ! (ಶ್ರೀಕೃಮಾ. ೨೬೩-೩೨) ; ಕಪಿಲವರ್ಣದ ಮೂರು ತೇಜಿಗಳನ್ನು ಸಂಪಾದಿಸಿದ್ದಾನೆ (ಪುನರು. ೨೬೩). [ ←ಮರಾ. ತೇಜೀ, ತೇಜಿಕಾ ; ಪಾರ. ಹಿಂ. ತಾಜೀ ]

**ತೇಜಿ$_2$** 'ತೇಜ$_2$' ನೋ.

**ತೇಜಿತ** (ಗು). ೧. ಹರಿತ ಮಾಡಿದ ; ಮಸೆದ ; ಮೆರುಗು ಕೊಟ್ಟ. (ನಾ). ೨. ಮಸೆದಂದಂ ; ಹರಿತವಾದಂದಂ : "ನಿಶಾತಂ, ನಿಶಿತಂ, ಧೌತಂ, ತೇಜಿತಂ – ಈ ೪ ಮಸೆದುದು" (ಹಲಾಯು. ೬೮-೩೨೦). [ ಸಂ. ]

**ತೇಜಿಮಂದಿ** 'ತೇಜೀಮಂದಿ' ನೋ.

**ತೇಜಿವಾರು** (ನಾ). ಕುದುರೆಗೆ ಕಟ್ಟುವ ಚರ್ಮದ ಬಾರಂ,–ಪಟ್ಟಿ : ಪೊನ್ನ ಪಲ್ಲಣಂ ಪಕ್ಕರೆ ತೇಜಿವಾರು ಕಟಿಂದಿರ್ಕಡಿಯಾದುವು (ಕಬ್ಬಿಕಾ. ೨೮೦). [ ತೇಜಿ$_1$ + ಬಾರು$_1$ (<ಬಾರ್$_4$) ]

**ತೇಜಿವಿಂಡು** (ನಾ). ಕುದುರೆಗಳ ಸಮೂಹ ; ಅಶ್ವಸೈನ್ಯ : ಇತ್ತರವಲಿ ತಳಿರ್ವಡೆದಿರ್ದ ಮಾಮರ ಮತ್ತೇಭ ಗಿಳಿ ತೇಜಿವಿಂಡು ವೃತ್ತ ವಿಹಂಗಂ ಚಕೋರ ಕಾಲಾಳ ಳ ವೊತ್ತಿದಿ ನಡೆದನಳ್ತಿಯಲಿ (ಮೋಹತ. ೩-೦೯). [ ತೇಜಿ$_1$ + ಪಿಂಡು$_2$ ]

**ತೇಜಿಷ್ಠ** (ನಾ). ೧. ಕಾಂತಿಯಂತನಾದವನು ; ತೇಜಸ್ವಿ : ಬಹಳ ಮನ್ನಣೆಯ ತೇಜಿಷ್ಠಗುಣವಿರ್ದುದೇವೊಗಳ್ವೆನು (ಸಿದ್ಧರಾ. ೧-೧೮). ೨. ಅಧಿಕನಾದವನು ; ಶ್ರೇಷ್ಠ : ಶೌರ್ಯನಿಕುರುಂಬದೋಳ್ ತೇಜಿಷ್ಠನರ್ಜುನಂ (ಕುರಂಗ. ೮೦-೭). ೩. ಕೋಪಿಷ್ಠ ; ದಂಡುಕಂಪವನು: ಮಳಯಕೇತುವೆಂಬ ರಾಜತನೂಜನತಿತೇಜಿಷ್ಠನಾಗಿ ತನ್ನ ಮಂತ್ರಿ ಮುದ್ರಾರಾಕ್ಷಸಂಗೆ ತಥ್ಯಾಭಿಯೋಗಮಾದೊಡು ಮಿಥ್ಯಾಭಿಯೋಗಮೆಂದು ನಿಶ್ಚೈಸಿ (ಹಂಡಕಂ. ೨೪೮-೦೭). [ ಸಂ. ]

**ತೇಜೀಮಂದಿ, ತೇಜಿಮಂದಿ** (ನಾ). ೧. ಮಾರುಕಟ್ಟೆಯಲ್ಲಿ ಸರಕಿನ ಬೆಲೆ ಹೆಚ್ಚು ಅಥವಾ ಕಡಮೆಯಾಗುವುದಂ ; ಬೆಲೆಗಳ ಏರಿಳಿತ : ವಿಶ್ವಾಸನಿಗೆ ತೇಜೀಮಂದಿಯ ಅರ್ಥವಾಗಲಿಲ್ಲ (೭ಃಹಹ. I. ೮೭). ೨. ವಾಣಿಜ್ಯೋದ್ಯಮಗಳಲ್ಲಿ ಶೇರುಗಳನ್ನು ಕೊಂಡು ಮಾರುವುದು. ೩. ತುರಂಫನ್ನು ಕೊಂಡು ಆಡುವ ಒಂದು ಬಗೆಯ ಜೂಜಂ : ಅವನು ತೇಜೀಮಂದಿಯಲ್ಲಿ ಆಡುತ್ತಿದ್ದನೆಂದು ಹಲವರು ಊಹಿಸಿದ್ದರು. ಆದರೆ ಆ ಆಟಗಾರರಲ್ಲಿ ಇವನು ಅಪರಿಚಿತನಾಗಿದ್ದನು (ರಕ್ತಧ್ವ. ೮೪). **ತೇಜಿಮಂದಿ:** ೧. ಇಂಗ್ರಜಿ ಪತ್ರವ್ಯವಹಾರವನ್ನಿಟ್ಟು ತೇಜಿಮಂದಿಯ ತಾರುಗಳನ್ನು ಮಾಡುವುದು (ಮುಂಬಯಾ. ೨೭೯). [ ← ಮರಾ. ತೇಜೀಮಂದೀ ]

**ತೇಜೋಜೀವಿ** (ನಾ). ೧. ಕಾಂತಿಯುಳ್ಳವನು. ೨. ಆಧ್ಯಾತ್ಮಿಕ ಕಾಂತಿಯುಳ್ಳವನು : ಋಷಿಯೂ ಭಕ್ತನಂತೆ ತೇಜೋಜೀವಿ (ಸಾಹಿವಿ. ೩೪) ; ಇಂದ್ರಿಯಜೀವಿಯದು ಪ್ರಾಣಾನುಭವ ; ಭಾವಜೀವಿಯದು ಕಾವ್ಯಾನುಭವ ; ತೇಜೋಜೀವಿಯದು ಶಿವಾನುಭವ (ಸಾಸಮಾ. ೩೯). [ ಸಂ. ತೇಜೋಜೀವಿನ್ ]

**ತೇಜೋತಿಶಯ** (ನಾ). ಅಧಿಕವಾದ ತೇಜಸ್ಸು,– ಕಾಂತಿ : ಜಾತಪ್ರಿಯನಾತಂ ತನುಜಾತನೆ ತಾನಾಗೆ ತನ್ನ ಕಣ್ಗಂ ಮನಕಂ ಜಾತಕುತೂಹಲನಾ ತೇಜೋತಿಶಯಮನರಸನಚಲದಂತಿರೆ ನೋಟ್ಟಿಂ (ಅಜಿಪು. ೩-೩೩). [ ಸಂ. ]

**ತೇಜೋದ್ವಯ** (ನಾ). (ಬ್ರಾಹ್ಮತೇಜ ಮತ್ತು ಕ್ಷಾತ್ರತೇಜಗಳೆಂಬ) ಎರಡು ಬಗೆಯ ಶಕ್ತಿ,– ಸಾಮರ್ಥ್ಯ : ನೀವಿರಲು ಕೃಪನಿರಲು ದಳವಾಯ್ ನಾಪಹೆವೆ ನೀವಿಂದು ತೇಜೋದ್ವಯದಲಧಿಕರಲೆ ನಾವು ತಿಜುವಾಯವರು (ಕುವ್ಯಾಕ. ೦-೨೦). [ ಸಂ. ]

**ತೇಜೋನಿಧಿ** (ನಾ). ೧. ಕಾಂತಿಯ ನಿಧಿ,–ಆಗರ. ೨. ಸಾಮರ್ಥ್ಯದ ನಿಧಿ. ೧, ೨ : ತೇಜೋನಿಧಿ ಕರಹತ ಪರರಾಜಕ ನವನೋಷದಿಗ್ವಯಂ . . . ಉಪಮಿತ ತೇಜಸ್ಪತಿ ಖಚರರಾಜಂ (ಶಾಂತಿಪು. ೩-೩೩) ; ವೀರ ವೈರಾಗ್ಯದ ತೇಜೋನಿಧಿ ಅಕ್ಕ (ಕನಾಳ. ೭೩). [ ಸಂ. ]

**ತೇಜೋನಿಳಯ** (ನಾ). ಕಾಂತಿಗೆ ನೆಲೆಯಾದವನು ; ತೇಜಸ್ವಿ : ಅಮರೇಜ್ಯಂ ಕುಜಗೇಹದೊಳ್ ನಿಲೆ . . . ಕ್ಷಮಿ ತೇಜೋನಿಳಯಂ . . . ಗುಣಾತ್ಮನೆನಿಕುಂ (ಜಾತಕ. ೦೭-೨೭). [ ಸಂ. ತೇಜೋನಿಲಯ ]

**ತೇಜೋಪಾರ್ಜನೆ** (ನಾ). ಒಡೆತನದ ಭೂಮಿಯಿಂದಾದ ಗಳಿಕೆ : ಈ ಗ್ರಾಮದ ಸ್ಥಳ ಸುಂಕಕೆ ಸಲುವ ಏನುಂಟಾದ ತೇಜೋಪಾರ್ಜನೆಯನು ನಾನು ಶ್ರೀವಿಟಲದೇವರಿಗೆ ಸರ್ವಮಾ(ಂ)ನ್ಯವಾಗಿ ಸಮರ್ಪಿಸ್ತೆನು (ಸೌಇಇ. IX–II, ೬೦೭-೨; 1545). [ ಸಂ. ತೇಜೋಪಾರ್ಜನ ]

**ತೇಜೋಭಂಗ** (ನಾ). ಗೌರವದ ಹಾನಿ; ಅಭಿಮಾನಕ್ಕೆ ಬೀಳುವ ಪೆಟ್ಟು; ಅವಮಾನ : ಹೊಗೆ ಬಿಡುತ್ತಿರುವ ಜ್ವಾಲಾಮುಖಿಯಂತೆ ವಿಷ್ಣು ತೇಜೋಭಂಗವನ್ನು ಸಹಿಸುತ್ತ ಕುಳಿತ (ಸಮಜೀ. ೭೦೭). [ ಸಂ. ]

**ತೇಜೋಭಿಮಾನ** (ನಾ). ಆತ್ಮಗೌರವದಲ್ಲಿ ವಿಶ್ವಾಸ : ಆನತರ ತೇಜೋಭಿಮಾನವ ನೀನೊಲಿದು ಸಲಹೆಂದು ಪುದದಲಿ ಭಾನುಮತಿ ಮೈಯಿಕ್ಕಿದಳು ಪುರಹರನ ಚರಣದಲಿ (ಕುವ್ಯಾಉ. ೨-೦೭). [ ಸಂ. ]

**ತೇಜೋಭಿರಾಮ** (ನಾ). ಪರಾಕ್ರಮದಿಂದ ಶೋಭಿಸುವವನು : ಒಲ್ದೀಕ್ಷಿಸಿದು ನಿಜಾಗ್ರಭವನಂ ದೈತ್ಯಾರಿ ತೇಜೋಭಿರಾಮನನುಗ್ರಾರಿವಿರಾಮನಂ (ಜಗವಿ. ೪-೩೮). [ ಸಂ. ]

**ತೇಜೋಮಂಡಳ** (ನಾ). ಬೆಳಕಿನ ಮಂಡಲ ; ಕಾಂತಿಯ ವಲಯ : ಬಳೆವಾ ನೃಪತೇಜೋಮಂಡಳಕ್ಕೆ ಕಣ್ಣಾಳ್ಕೆ ವಿನಯವಿನಮಿತನವನೀತಳದೊಳೆ ಮೆಯ್ಯಿಕ್ಕೆ (ಶಾಂತಿಪು. ೩-೩೧). [ ಸಂ. ತೇಜೋಮಂಡಲ ]

**ತೇಜೋರಾಶಿ** (ನಾ). ತೇಜಸ್ಸಿನ ರಾಶಿ ; ಬೆಳಕಿನ ಪುಂಜ : ಮತ್ತಮಾ ಪರಮಾಕ್ಷತ್ರ ತೇಜೋರಾಶಿಗೆ (ಶಾಂತಿಪು. ೯-೧೩೨ ವ); ವಿಪರೀತವಾದ ನಕ್ಷತ್ರರಾಶಿ ಒಂದೆಡೆ ಸೇರಿಸಿ ಸುಳಿ ಸುತ್ತುವಂತೆ ಸುತ್ತುತ್ತಿದ್ದರೆ ನಾವು "ತೇಜೋರಾಶಿ" ಎನ್ನುತ್ತೇವೆ (ಆಕಾಶ. ೬೩) ; ವ್ಯಾಧಖಡ್ಗದ ಮಧ್ಯತಾರೆಯನ್ನು ದೂರದರ್ಶನಿಯಿಂದ ನೋಡಿದರೆ ಅದು ಒಂದು ವಿಶಾಲಾಕಾರದ ತೇಜೋರಾಶಿಯಾಗಿ ಹರಡುವುದು ಕಾಣುತ್ತದೆ (ನಕ್ಷತ್ರ. ೩). [ ಸಂ. ]

**ತೇಜೋಲಿಂಗ** (ನಾ). ಈಶ್ವರನ ಐದು ಲಿಂಗಸ್ವರೂಪಗಳಲ್ಲಿ ಒಂದು ; ಅಗ್ನಿಸ್ವರೂಪವಾದ ಲಿಂಗ : ಕಾಂಚೀಪುರದಲ್ಲಿ ಪಾರ್ಥಿವಲಿಂಗ, ಜಂಬೂಕ್ಷೇತ್ರದಲ್ಲಿ ಅಪ್ಪುಲಿಂಗ, ತಿರುವಣ್ಣಾಮಲೆಯಲ್ಲಿ ತೇಜೋಲಿಂಗ, ಕಾಳಹಸ್ತಿಯಲ್ಲಿ ವಾಯುಲಿಂಗ, ಚಿದಂಬರದಲ್ಲಿ ಆಕಾಶಲಿಂಗ – ಹೀಗೆ ವಿಶ್ವದಲ್ಲಿ ಕಾಣುವ ಪಂಚಭೂತಗಳ ರೂಪದಲ್ಲಿಯೂ ಪರಮಾತ್ಮನು ಸಾದಾಖ್ಯಗಳೆನಿಸಿ ವಿರಾಜಿಸುತ್ತಿರುವುದನ್ನು ನಾವು ಸ್ಪಷ್ಟವಾಗಿ ಕಾಣುತ್ತೇವೆ (ಶಿಕ್ತವಿ. ೨೭) : ತೇಜೋಲಿಂಗವೆಂದರೆ ಪ್ರಕಾಶವೇ ಲಿಂಗವಾಗಿಯೂ . . . ಆಕಾಶಲಿಂಗವೆಂದರೆ ಬಯಲೇ ಲಿಂಗವಾಗಿಯೂ ಹಿಂದೆ ತಿಳಿಸಿದ ಕ್ಷೇತ್ರಗಳಲ್ಲಿ ಈಗಲೂ ಕಾಣುತ್ತಿವೆ (ಶಿಕ್ತವಿ. ೩೦). 'ಜ್ಯೋತಿರ್ಲಿಂಗ' ಪರಾ. [ ಸಂ. ]

**ತೇಜೋವಧೆ** (ನಾ). ಅವಮಾನ ; ಮಾನಹಾನಿ: ಆದೊಡಾ ಕರ್ಣಂಗೆ ಸಾರಥಿಯಾದಿರ್ದೊಡೆ ಸಮರಮುಖದಲಿ ವಾದ ತೇಜೋವಧೆಯ ಮಾಡುವುದವಸನವಗಡಿಸಿ (ಕುಮಾ.ಉ. ೨-೦೭) ; ದ್ರುಪದನಿಗೆ ತೇಜೋವಧೆಯಾಯಿತು (ವಚಭಾ. ೪೯) ; ವೀರಾಜಯ್ಯನಿಗೆ ತೇಜೋವಧೆಯಾಯಿತು (ಒಡೆಳ. ೦೩). [ ಸಂ. ತೇಜೋವಧ ]

**ತೇಜೋವೃತ್ತಿ** (ನಾ). ಹೊಳಪುಂಟಾಗುವಿಕೆ ; ಕಾಂತಿಗೂಡುವಿಕೆ : ಖರಶಾಣಕಷಣದಿಂ ಮಣಿಗುರುತೇಜೋವೃತ್ತಿ ನೆಗಳ್ವವೊಲಕ್ಕುಂ ನಿಷ್ಠುರವಾಕ್ಸ್ಪಾಣ ಪರಿಸ್ಫುರಿತಂ ಕೃತಿರತ್ನದೊಳ್ ಸಮುಜ್ವಲಭಾವಂ (ಚಂದ್ರಪ್ರ. ೧-೪೪). [ ಸಂ. ]

**ತೇಟ್** 'ಥೇಟ್' ನೋ.

**ತೇಟಗೀತೆ** (ನಾ). [ಛಂದ] ಒಂದು ಬಗೆಯ ದೇಶೀಯ ಛಂದೋರಚನೆ ; ಅಂಶಗಣದಿಂದಾಗುವ ಪದ್ಯ: ತೇಟಗೀತೆ ಒಂದು ಬ್ರಹ್ಮ, ಎರಡು ವಿಷ್ಣು, ಎರಡು ಬ್ರಹ್ಮ–ನಾಲ್ಕು ಸಲ (ಛಂಪಿಡಿ. ೦೩೨).

[ ← ತೆಲು. ತೇಟಗೀತಿ ]

**ತೇಟಗ** (ನಾ). (ಸಾಣೆ ಹಿಡಿದು) ಹೊಳಪುಗೊಳಿಸುವವನು ; ಒಪ್ಪಹಾಕುವವನು : ಸಾಣೆಯ ಮೇಲೆ ರತ್ನಗಳಿಟ್ಟು ಮಸೆದೊಪ್ಪಗಾಣಿಸಿ ಕುಡುವ ತೇಟಗರು (ವೀರೇಹಿತ. ೩-೨೬). [ ತೇಟು (<ಥೇಟ್) + – ಇಗ ]

**ತೇಟು,** 'ಥೇಟ್' ನೋ.

**ತೇಡಿಸು** (ಕ್ರಿ). (ಶಿವಿದು) ಹೀಯಾಳಿಸು ; ರೇಗಿಸು ; ಚುಡಾಯಿಸು : ಸ್ವರ್‌ಸ್ಪುವವ ಮುಟ್ಟದರು ಧೌತಾಂಶುಕದೊಳಗೆ ತಂಬುಲವ ಕಟ್ಟದ ರಕಟು ಪಾಧ್ಯರ ಮೋಟಿಯನು ತೇಡಿಸುತ ಬೆರಳಿನಲಿ (ಕುಮಾ.ಉ. ೦೮-೮). 'ಏಡಿಸು' ಪರಾ. [ < ಥೇಡಿಸು ]

**ತೇದಿ** (ನಾ). (ಸೌರಮಾನದ) ದಿನಾಂಕ ; ತಾರೀಖು : ಪ್ರಜೋತ್ಪತ್ತಿ ಸಂವತ್ಸರದ ತುಲಾಮಾಸ ೨೬ನೇ ತೇದಿ ಷಷ್ಠಿಯೂ ಸೋಮವಾರ (ಮೈಆರಿ. ೧೯೩೫, ೨೮-೦೨ ; 1751) ; ಕಾಂಗ್ರೆಸ್ ಅಧಿವೇಶನವು ಜನವರಿ ಇಪ್ಪತ್ತಾರನೇ ತೇದಿಯನ್ನು ಸ್ವಾತಂತ್ರ್ಯದಿನವಾಗಿ ಆಚರಿಸಬೇಕೆಂದು ದೇಶಕ್ಕೆ ಕರೆ ನೀಡಿತ್ತು (ಆತ್ಮಾಕ. ೦೩೬) ; ಅಥರ್ವವೇದ ಪರಿಷ್ಕರಣದಲ್ಲಿ ಮುಹೂರ್ತಗಳು ಚಂದ್ರನ ತೇದಿಗಳು, ಕರಣಗಳು ಮತ್ತು ಯೋಗಗಳು ಇದ್ದು ವಾರದ ದಿವಸಗಳು ತಿಳಿಸಲ್ಪಟ್ಟವೆ (ತತ್ತ್ವಪ್ರಾ. ೪೮೩).

[ದೇ.॥ ತಮಿ. ತೇತಿ; ತುಳು. ತೆಲು. ತೇದಿ ]

**ತೇದಿರೇಖೆ** (ನಾ). ದಿನದ ಗೊತ್ತುಪಾಡಿಗೆ ಸಂಬಂಧಿಸಿದ ಒಂದು ಸಂಕೇತ,-ಗುರುತು ; P ಶಾಂತಸಾಗರದಲ್ಲಿರುವುದೆಂದು ಭಾವಿಸಲಾಗಿರುವ ಗ್ರಿನಿಚ್ ಪಟ್ಟಣದಿಂದ ೧೮೦ನೆಯ ಡಿಗ್ರಿಯ ಮಧ್ಯಾಹ್ನರೇಖೆ ; ಈ ಗುರಿರೇಖೆಯಲ್ಲೂ ಇತರ ಎಲ್ಲಾ ಪ್ರದೇಶಗಳಲ್ಲೂ ಪಂಚಾಂಗದ ದಿನದ ಆರಂಭಾಂತ್ಯಗಳು ಮಧ್ಯರಾತ್ರಿಯಿಂದ ಮಧ್ಯರಾತ್ರಿಯವರೆಗೆಂದು ಎಣಿಸಲಾಗಿದೆ. ದಿನದ ಆರಂಭಾಂತ್ಯಗಳ ಸಮಯ ವ್ಯತ್ಯಾಸ ಹೊಂದುವುದರಿಂದ ಈ ರೇಖೆಯ ಪೂರ್ವಕ್ಕೂ ಮತ್ತು ಪಶ್ಚಿಮಕ್ಕೂ ಒಂದು ದಿನದ ಅಂತರವುಂಟಾಗುತ್ತದೆ. ಈ ಸಂಕೇತಕ್ಕೆ ಎಲ್ಲಾ ರಾಷ್ಟ್ರಗಳೂ ಸಮ್ಮತಿಸಿವೆ: "ತೇದಿಗಳಿಗೆ ಸಂಬಂಧಪಟ್ಟ ರೇಖೆ: ತೇದಿರೇಖೆ" (Date-Line. ಇಂಕನಿ). [ ತೇದಿ + ರೇಖೆ ]

**ತೇದಿಸು** (ಕ್ರಿ). ಕಾಲಕ್ರಮವನ್ನು ನಿರ್ಧರಿಸು ; ತಾರೀಖನ್ನು ನಿರ್ಣಯಿಸು : ಕಳಚುರ್ಯ ಬಿಜ್ಜಳನೇ ಬಸವೇಶ್ವರನ ಬಿಜ್ಜಳನೆಂದು ನಿಷ್ಪನ್ನವಾಗುವುದರಿಂದ, ಇನ್ನು ಬಸವೇಶ್ವರನ ಜೀವಮಾನದಲ್ಲಿಯ ವಿಶೇಷ ಘಟನೆಗಳನ್ನು ಹೀಗೆ ತೇದಿಸಬಹುದು (ಮೂರುಉ. ೮೭).

[ ತೇದಿ + – ಸು$_1$ ]

**ತೇನಂದಾಳಗೆಬ**[3] 'ತೆನಂದಾಳಕೆಬ[3]' ನೋ.

**ತೇನತೇನ** 'ತೇನತೇನಂ' ನೋ.

**ತೇನತೇನಂ, ತೇನತೇನ** (ಅ). ಹೆಚ್ಚು ಹೆಚ್ಚಾಗಿ : ಮೇಲಿಂದ ಮೇಲೆ : "ತೇನತೇನಂ = ಮೇಲೆವೇಲೆ" (ಕಮುದ. ಶಬ್ದ. ೨) ; ತರವೇಟಗೊಡಂ ಸುರರೊರ್ವರೊರ್ವರಂ ಕಟಿಯೆ ತೇನತೇನಂ ತಳರ್ದುಂ ಭರದಿಂ ನೀರಂ ಮೊಗೆದುಂ ಪರಿತಂದರ್ ಕನಕಕಳಶವಿಶದೋದಕಮಂ (ಶಾಂತಿಪು. ೧೧-೩೯) ; ಇದು ಚಿತ್ರಂ ತೇನತೇನಂ ನೆಗೆದುದು (ಜಗವಿ. ೮-೬೦) ; ಅಂತು ಕೈಕೊಳ್ಳದೆ ಬೆಂಬತ್ತಿ ತೇನತೇನಂ ಮುಸಗಿ ಸಂದಣಿಸಿ ಬರ್ಪ ಸೊರ್ಕಾನೆಗಳ್ (ಕಬ್ಬಿಗಕಾ. ೨೮೪) : ತೇನತೇನ : "ತೇನತೇನವೆಂದು ಮೇಲೆವೇಲೆಂ ಬರ್ಥಂ" (ಕಕಸಾ. ೭೦-೬೦೯) ; "ಮೇಲೆವೇಲೆಂಬರ್ಥಮುಂ ತೇನತೇನವೆನಲ್" (ಅಭ್ಯಿಕೈ. ೮೯) ; ನವೀನ ನಾಟಕಶಾಲೆಯಲ್ಲಿ ತೇನತೇನದೊಳು ಲೀಲೆಯ ತೋಜ[3] (ಭರಪ. ೩೬-೩೨). [ ? ]

**ತೇನು** 'ಜೇನ್$_1$' ನೋ.

**ತೇನೆ** (ನಾ). ಒಂದು ಬಗೆಯ ಪಕ್ಷಿ: ಪಾರಿಜಾತದ ರೆಂಬೆಯೊಂದರ ಮೇಲೆ ಕುಳಿತ ತೇನೆ ಹಾಡೊಂದ ಹಾಡುತ್ತಿತ್ತು (ಹೇಮುಕೊ. ೩೧) ; ಆಗಾಗ ತೇನೆ, ಕಾಜಾಣ, ಗಿಳಿ . . . ಮಲೆವಕ್ಕಿಗಳ ಉಲ್ಲೇಖ ಬರುತ್ತಿದೆ (ಸಾಹಮೂ. ೯೮). [ ದೇ.॥ ತೆಲು. ತೇನೆಪಿಟ್ಟ ]

**ತೇನೆಹಕ್ಕಿ** (ನಾ). = ತೇನೆ : ತೇನೆಹಕ್ಕಿಗಳ ಹಾಡನ್ನೂ ಕಪ್ಪೆಗಳ ವಟವಟ ಧ್ವನಿಯನ್ನೂ ಕೇಳಿದಾಗ . . . ಮಂಗಳ ಸಂಗೀತದ ನೆನಪಾಯಿತು (ಪುನರು. ೨೬೭); ತೇನೆಹಕ್ಕಿಯೊಂದು ವಾಣಿ ಕೇಳುತ್ತಿತ್ತು (ಅನಿಕೇ. ೯೩-೩).

[ ತೇನೆ + ಹಕ್ಕಿ$_1$ (<ಪಕ್ಕಿ$_1$) ]

**ತೇಪಾಡು** (ಕ್ರಿ). ತುಂಬಿ ಸೂಸು ; ತುಳುಕು : ದೊಡ್ಡದೊಂದು ಕರೆ . . . ತುಂಬಿ ತೇಪಾಡುತ್ತಿರುತ್ತದೆ (ನನ್ನೂರು. ೩). [ ತೇಪು + ಆಡು$_1$ ]

**ತೇಪು, ಚೇಪು$_1$** (ಕ್ರಿ). ೧. ಎರಚು; ಚೆಲ್ಲು: ಆ ಬಟ್ಟಲು ಹಿಡಿದುಕೊಂಡು ತೋಡಿನಲ್ಲಿ ನಿಂತು ತೇಪಿದಿರಿ (ಜಾಗಿ. ೦೦೯). ೨. ಉಜ್ಜು ; ಕಿಕ್ಕು : ಮುಂದೆ ಅದರ ಮೈಯ ಬಾಗುವಿಕೆಯು ಅತಿ ಶುದ್ಧವಾಗುವಂತೆ ತೇಪುತ್ತಾರೆ (ದಾಲಕ್ಷ್ಯ. III, ೦೯೨೮). **ಚೇಪು$_1$** : ೧. ಪರ್ವವೆಲ್ಲ ದಂಬೆ ನೀರಿದ್ದರೂ ನೀರಿನ ಹನಿಯನ್ನು ಅದಕ್ಕೆ ಚೇಪಿದವರಿಲ್ಲ. ಮರಗಳೆಲ್ಲ ಬಾಡಿದ್ದುವು (ಜಿದಾಉ. ೩೬೦). [ ←ತುಳು. ತೇಪು, ಚೇಪು ]

**ತೇಪೆ$_1$** (ನಾ). ೧. ಹರಿದುದನ್ನು ಕೂಡಿಸುವುದಕ್ಕಾಗಿ ಸೇರಿಸಿ ಹೊಲಿದ ತುಂಡು : ಉಟ್ಟ ಧೋತರ ಹಲವಾರು ತೇಪೆಗಳಿಂದ ಕೂಡಿದ್ದಿತು (ಅನಹೀ. ೦೨೭). ೨. ಹರಿದುದನ್ನು ಸರಿಪಡಿಸಿದ ಸ್ಥಿತಿ. ೩. ಬಟ್ಟೆ ಮುಂತಾದುವುಗಳ ಹರಿದ ಭಾಗಕ್ಕೆ ಬೇರೊಂದು ತುಂಡನ್ನು ಹೊಂದಿಸುವುದು. ೪. ಅಲ್ಲಲ್ಲಿ ಬಿಟ್ಟುಹೋದುದು : ಕಲಿತ ಗಿಳಿಯ ಪಾಠ ತಲೆಕೆಳಗಾಗಿ, ಸೊಟ್ಟಾಗಿ, ಚೂರಾಗಿ, ತೇಪೆಯಾಗಿ ಏನೇನೋ ಆಗಿ ಹೋಗಿ ತನ್ನ ಆಕಾರವನ್ನೇ ಕಳೆದುಕೊಂಡಿತ್ತು (ರಂಗನಾ. ೦೩).

**ತೇಪೆಹಚ್ಚು** = ೧. ಹರಿದಿರುವುದರ ಮೇಲೆ ಚೂರುಬಟ್ಟೆ ಕೂಡಿಸಿ ಹೊಲಿಗೆ ಹಾಕು : ಒಬ್ಬ ಹೆಂಗಸು, ತನ್ನ ಮತ್ತು ತನ್ನ ಮಕ್ಕಳ ಬಟ್ಟೆಗಳಿಗೆ ತೇಪೆಹಚ್ಚುವುದು ನೋಡುವುದಾಗುತ್ತಿರಲಿಲ್ಲ (ಮುಹಾತ್ಮಾ. ೨೦). ೨. ತಾತ್ಕಾಲಿಕ ದುರಸ್ತಿಮಾಡು : ಅದರ ಹರಕಮುರಕ ಛಿದ್ರಕ್ಕೆ ತೇಪೆ ಹಚ್ಚುವ ಕಾಲವಿನ್ನೂ ಸಂಪೂರ್ಣ ಕೈವಿವಾರಿ ಹೋಗಿಲ್ಲ (ಆಪ್ತಕ. ೪೭೯). **ತೇಪೆಹಾಕು** = ೧. ತೇಪೆಹಚ್ಚು ೧ : ಅವಳು ಬಹಳ ಒರಟಾದ ತೇಪೆ ಹಾಕಿದ್ದ ಒಂದು ಹಳೆಯ ಲಂಗವನ್ನು ಧರಿಸಿದ್ದಳು (ಮಲಿನಾ. ೯೪) ; ಹರುಕಿಗೆ ತೇಪೆಹಾಕುವುದೇ ಹೊರತು ಅದು ಬೇರೆ ಸರಿಯಾಗುವುದಿಲ್ಲ (ಬಂಕಿಮು. ೦೬೭). ೨. = ತೇಪೆಹಚ್ಚು ೨ : ಈ ಮುರುಕಲು ಮನೆಗೆ ವೃಥಾ ತೇಪೆಹಾಕಿದರೆ ಏನು ಪ್ರಯೋಜನ (ಯೋಧಪು. ೨೮).

[ ದೇ.॥ ಮಲ. ತ್ರೈಪ್ಪ = ಹೊಲಿಗೆಕೆಲಸ ]

**ತೇಪೆ$_2$** (ನಾ). ೧. ವೇಶ್ಯೆ ; ಗಣಿಕೆ: ಪತ್ತಿದರಾರೊ ಧೂರ್ತವಿಟಹೃತ್ಪಂ ತಾವೆಯುಂ ತೇಪೆಯುಂ (ಲೀಲಾವ. ೨-೯೭) ; ಆತ್ಮಸಾರಸರ್ವಸ್ವಮುಮಂ ನೆಱೆಗೊಂಡು ತೇಪೆ ಬರೆ ಮುಂತ್ಯುರುದಂಡಂ ಕೊಂಡೊಡಲ್ಲದಂತುಂ ನಡಸಲ್ (ಪುಷ್ಪಪು. ೧೩-೩೭) ; ಕಥೆವೇಳ್ವ ತೇಪೆಯೊಡನಾಡಿದ ಪೆಂಡಿತಿಗುಂಟೆ ಸಜ್ಜನಂ (ಮಲ್ಲಿವಿ. ೧೫-೭); ತೇಪೆಯೊಡನಿರ್ದ ಗರುವನ ಪಾಪದ ಫಲವೆಂತೋ (ನೀತಿಸಾ. ೦೦೩೦). ೨. ಚೆಲ್ಲಾಟವಾಡುವವಳು; ಆಟಗಾತಿ; ವಿನೋದಗಾತಿ: ಗಣಿಕಾಸಂದೋಹದೊಳ್ತೇಪೆಯೆ ಪುರುಷಗುಣಶ್ರೀ ಗಳಗ್ರಾಹಿಯಲ್ತೇ (ಲೀಲಾವ. ೨-೯೭). 'ತಾಪು', ತಾಪು$_1$' ಪರಾ. [ ? ]

**ತೇಪೆಕೆಲಸ** (ನಾ). ೧. "(ಬೇರೆ ಬೇರೆ ಬಗೆಯ ವಂತ್ತು ಬೇರೆ ಬೇರೆ ಬಣ್ಣದ ತುಂಡುಗಳನ್ನು ಸೇರಿಸಿ ಮಾಡಿದ) ತೇಪೆಕೆಲಸ" (Patch Work. ಇಂಗಿ). ೨. ಅರ್ಧಂಬರ್ಧ ಮಾಡುವ ಕೆಲಸ ; ಪೂರ್ಣವಾಗಿ ಮಾಡದ ಕೆಲಸ: ಅವನದೆಲ್ಲಾ ತೇಪೆಕೆಲಸವೇ (ರೂಢಿ).

[ ತೇಪೆ$_1$ + ಕೆಲಸ ]

**ತೇಮ** (ನಾ). ನೆನೆದಿರುವಿಕೆ ; ಹಸಿ ; ಒದ್ದೆ ; ತೇವ: ಕಟಿತ್ರಕುಜದಿಂದ ತಂಕದಿಸೆಯೊಳ್ ಕರಂ ಸಾರ್ಕವೆತ್ತ ಪುತ್ತು ದೊರೆಕೊಂಡೊಡೆ . . . ಪಂಚಪುರುಷ ಪ್ರಮಾಣದೊಳೆ ತೇಟು [ ಮಂ ] ಮಕ್ಕುಂ (ಲೋಕೋಪ. ೫-೩೦) ; "ಉದಕ" (ಲೋಕೋಪ. ಟೀಕೆ). [ ಸಂ. ]

**ತೇಮಗೊಳು** (ಕ್ರಿ). ಒದ್ದೆಯಾಗು ; ಹಸಿಯಾಗು ; ತೇವಗೊಳ್ಳು: ಗಗನದಮೃತದ ಮೊಲೆಯ ಸೀಪುವಲೆಗಳ ನಡುವೆ ಮುದದಿ ಹನಿಯಾರಿಸುತ ತೇಮಗೊಳುವಂತೆ (ಮಲೆದೇ. ೩೪-೮).

[ ತೇಮ + ಕೊಳು (<ಕೊಳ್$_1$) ]

**ತೇಮನ** (ನಾ). ೧. ಒದ್ದೆಮಾಡುವಿಕೆ. ೨. ಒದ್ದೆ ; ಹಸಿ ; ತೇವ. ೩. ಒಂದು ಬಗೆಯ ವ್ಯಂಜನ,-ಪದಾರ್ಥ: "ತೇಮನಂ, ನಿಷ್ಠಾನಂ-೨ ತೇವನವೆಂಬ ಮಜ್ಜಿಗೆಪಳದ್ಯ, ಹಸೀಮಜ್ಜಿಗೆ, ಪಳದ್ಯ, ಮೊಸರುಚಟ್ನಿ" (ಸಿದ್ಧಾಂಶಿ. ೨೪೬) ; "ತೇಮನ=ಪಳದೆ" (ಗಂಗಾಪು. ೦೫೭). [ ಸಂ. ]

**ತೇಮಳು**, ತಿಗಳಿ, ತೆಗಳಿ$_1$, ತೇಗಳಿ, ತೇವುಳ್, ತೇವುಳಿ, ತೇವ್ವುಳು (ನಾ). ಕೂದಲು ಉದುರುವ ಒಂದು ಬಗೆಯ ರೋಗ: "ಕೇಶಘ್ನ ಮೆನಲು ತೇಮ[ಪಾಠಾಂ. ಉ]ಳು" (ಮಂಗರಾ. ೦೦೪-೩). **ತಿಗಳಿ**: ಏನು ತಲೆ ಬಣ್ಣಸಲಿ ತಿಗಳಿ ಮೇಯುವ ಹೊಲವ ? (ನಾಡಲೀ. ೫೩-೩) ; ತಿಗಳಿ ತಿಂದು ಮರುಳುಗಾಡಾದ ಅವಶೇಷಗಳನ್ನೂ ಕುಹಕಿಗಳ ಕಣ್ಣಿಗೆ ಬೀಳದಂತೆ ತನ್ನ ಎದೆಯಲ್ಲಿ ಅಡಗಿಸಿಟ್ಟು ಟೊಪ್ಪಿಗೆ ಒಡೆಯನ ಮಾನ ಕಾಯುತ್ತದೆ (ಗಾಳಿಪ. ೦೩೪). **ತೆಗಳಿ$_1$**: ಇಂದ್ರಲುಪ್ತಕ = ತಲೆಯ ಮೇಲಿನ ಕೂದಲು ಇಲ್ಲದ ಹಾಗಾಗುವ ಬೇನೆ; ತಗಳಿ ನೆಕ್ಕೋಣ (ಗಂಗಾಮು. ೩೨). **ತೇಗಳಿ**: ಇಂದ್ರಲುಪ್ತ ಅಥವಾ ತೇಗಳಿ ಅಂದರೆ ತಲೆಯ ಇಲ್ಲವೆ ಮೋರೆಯ ಮೇಲಿನ ಕೂದಲು ಉದುರುವುದು (ಗೃಹವೈ. ೭೭). **ತೇವುಳ್**: ಗುಳ್ಳದ ಪಣ್ಣಂ ಗುರುಗುಂಜೆಯೆಂಬವಂ . . . ಪೂಸಿದಂದು ತೇವುಳ್ [ಪಾಠಾಂ. ತೆಗುಳು] ಕಿಡುಗುಂ (ಲೋಕೋಪ. ೯-೫೫). **ತೇವುಳಿ**: "ಕೇಶಘ್ನಂ, ಇಂದ್ರಲುಪ್ತಂ - ಈ ೨ ತೇವುಳು [= ತೇವುಳಿ]" (ಹಲಾಯು. ೯೯-೪೫೦). **ತೇವ್ವುಳು**: ಮೇಲಿನ 'ಹಲಾಯುಧ' ಪ್ರಯೋಗವನ್ನು ನೋಡಿ.

[ ದೇ.॥ ತಮಿ. ತೇಮಲ್ = ಮಚ್ಚೆ, ಹುಳುಕಡ್ಡಿ, ಒಂದು ಬಗೆಯ ಚರ್ಮರೋಗ ]

**ತೇಮಾನ** (ನಾ). ೧. (ಲೋಹಗಳು) ತಿಕ್ಕುವಿಕೆಗೆ ಒಳಪಟ್ಟು ಸವೆಯುವಿಕೆ ; ತಿಕ್ಕುವುದರಿಂದಾಗುವ ನಷ್ಟ ; ತೇಯುವುದರಿಂದ ಆಗುವ ನಷ್ಟ: ಘರ್ಷಣಕ್ಷಯ ; ತೇಮಾನ (Attrition. ಇಂಗಿ) ; ಚಿನ್ನದ ಒಡವೆಗೆ ತೇಮಾನ ತಗೆದು ನಯ ಮಾಡಿದಂತೆ (ಕನ್ನಪು. II, ೦೩೩). ೨. ನಷ್ಟ ; ಹಾನಿ: ಮಾಡಬೇಕಾಗಿದ್ದ ಎಷ್ಟೋ ಕೆಲಸ ಮಾಡದೆ ಹೋಯಿತು ಇಲ್ಲವೆ ತೇಮಾನವಾಯಿತು (ಕಂಠಾಸಾ. ೮೩). ೩. ಯಂತ್ರ ಮೊದಲಾದುವುಗಳ ಸವೆತದಿಂದಾದ ನಷ್ಟ ಎಂದು ವರ್ಷಾಂತ್ಯದಲ್ಲಿ ತೆಗೆದಿಡುವ ಹಣ : ಈ ವರ್ಷದ ಉಳಿಕೆಯ ಕಾಲುಭಾಗದ ಹಣವನ್ನು ತೇಮಾನವೆಂದು ತೆಗೆದಿರಿಸಲಾಯಿತು (ರೂಢಿ).

[ದೇ.॥ ತಮಿ. ತೇಯ್ಮಾನ; ಮಲ. ತೇಮಾನ; ತುಳು. ತೇಮಾನ, ತೇಮಾನೊ, ತೇಮನ ; ತೆಲು. ತೇಮಾನ = ಹಣದ ಮೇಲಿನ ಬಡ್ಡಿ]

**ತೇಮೋಷ್ಣ** (ಗು). ತೇವವೂ ಉಷ್ಣವೂ ಕೂಡಿರುವ : ಸಮಭಾಜಕವೃತ್ತದ ತೇಮೋಷ್ಣ ವಾಯುಗುಣ (ಭೂವಿಜ. ೦೪೨). [ ತೇಮ + ಉಷ್ಣ ]

**ತೇಯ್** 'ತೇ$_1$' ನೋ.

**ತೇಯಿಸು** (ಕ್ರಿ). ಸವೆಯುವಂತೆ ಮಾಡು: ಈಯಿಸಿದು, ತೇಯಿಸಿದು (ಶಮದ. ೫೩೧ ಪ್ರಯೋ). [ ತೇ$_1$ + – ಇಸು$_3$ ]

**ತೇಯು** 'ತೇ$_1$' ನೋ.

**ತೇಯೆಲೆ** (ನಾ). ಚಹದ ಎಲೆ ; ಟೀಸೊಪ್ಪು : ತೇಯೆಲೆ, ಟೀಸೊಪ್ಪು (Tea-leaf. ಇಂಗಿ) ; ಹತ್ತಿ, ತೇಯೆಲೆ, ಕರ್ಪೂರ, ದಾಲ್ಚಿನ್ನಿ . . . ಈ ಪದಾರ್ಥಗಳಲ್ಲಿ ಚೀಣಾದೇಶದೊಡನೆ ವ್ಯಾಪಾರ ನಡೆಸುತ್ತಿದ್ದರು (ಭಾಗ್ಯಶಿ. ೮). [ ತೇ$_2$ (<ಟೀ) + ಎಲೆ$_1$ ]

**ತೇರ್$_1$** 'ತೇರು$_1$' ನೋ.

**ತೇರ್$_2$**, ತೇರು$_2$(ನಾ). ೧. ಒಂದು ಬಗೆಯ ವಾಹನ,-ಬಂಡಿ ; ರಥ ; ಸ್ಯಂದನ: ಸಾರಥಿ ಕಣ್ಣಱಿದೊಯ್ಯನೆ ತೇರಂ ಕೊಸಗೊಂಡು ಚಕ್ರಿಯುಂ ಬಿನ್ನವಿಕುಂ (ಆದಿಪು. ೧೦-೫೭) ; ಪೆಱಗೆಱೀಕೆ ತೇರನೆಸವಂ ಧರ್ಮಾನುಜಂಗೇಕೆ ಕಿಂಕರನಾದಂ . . . ಆದಿದೇವನೆನಿಸಲ್ ಕೃಷ್ಣಂಗದೆಂತೊಪ್ಪುಗುಂ (ಗದಾಯು. ೩-೪೩) ; ತೇರ್ಗಳುಮನೋಜೆಯಿಂ ಪಣ್ಣಿದರ್ (ಹಲಪು. ೨೩-೨೫). **ತೇರು$_2$**: ೧. ನವಿಪಕೆ ಹೂಡಿದುವು ತೇರುಗಳು (ಶಂಕ್ಯಾದ್ರೋ. ೨-೦೪) : ದಾರಿದೆಗೆದುವು ಮುಂದೆ ಹೂಡಿದ ತೇರುಗಳು (ತೊರಲಾ. ೨-೩-೩೦) ; ಧರೆಯು ತೇರನು ಮಾಡಿ ಅಜನ ಸಾರಥಿ ಮಾಡಿ ಹರಿಯು ಶರವಾಡಿ ತ್ರಿಪುರವನು ಅಳಿದಂಗೆ ಸರಿ ಯಾರು (ಸರ್ವಜ್ಞ. ೨೩೦). ೨. ದೇವರ ವಿಗ್ರಹವನ್ನಿಟ್ಟು ಮೆರೆಯಿಸುವ ಅಲಂಕಾರದ ಬಂಡಿ: ಬಾರೊ ಸಾಧನಕೇರಿಗೆ . . . ಮಳೆಯು ಎಳೆಯುವ ತೇರಿಗೆ (ಗಂಗಾಕ. ೧೨-೩). ೩. ರಥದಲ್ಲಿ ದೇವರ ವಿಗ್ರಹವನ್ನಿಟ್ಟು ಮಾಡುವ ಉತ್ಸವ; ರಥೋತ್ಸವ ; ಜಾತ್ರೆ: ರೈತರಿಗೆ ತೇರಿಗಿಂತ ದೊಡ್ಡ ಹಬ್ಬ ಯಾವುದೂ ಇಲ್ಲ (ಹಳ್ಳಿಪಾ. ೦೯) ; ತೇರು ನುಂಗುವವನಿಗೆ ಪರಿಸೆ ಹಪ್ಪಳ ಸಂಡಿಗೆ (ಗಾದೆ).

**ತೇರ ಕಾಣಿಕೆ** = ರಥೋತ್ಸವ ನಡೆಸಲು ಕೊಡುವ ಕಾಣಿಕೆ : ಯಿ ತೇರ ಕಾಣಿಕೆಯ ಹೊನ್ನ×ತೆರಕಣಾಂಬೆಯ ಚಾವಡಿಗೆ . . . ಕೊಟ್ಟು (ಎಕ. XIV, ಗುಂಡ್ಲುಪೇ. ೮-೦೪ ; 1620). **ತೇರ ಬೀದಿ** = ತೇರು ಹರಿದು ಬರುವ ಮಾರ್ಗ ; ರಥಬೀದಿ: ಇಳೆಯ ಮೇಲಣ ಸರ್ವಜನರು ನಳಿನಾಕ್ಷ ರಂಗಧಾಮನ ತೇರ ಬೀದಿಯೊಳಳವಟ್ಟು ಮೆಱೆದರತಿಯಲಿ (ಕಂಸವಿ. ೨೪-೦). **ತೇರಾಗು** = ರಥೋತ್ಸವವಾಗು ; ಜಾತ್ರೆಯಾಗು ; ಮೆರವಣಿಗೆಯಾಗು : ಸೋಮೆಯದೇವರಿಗೂ ರಾಮಚಂದ್ರದೇವರಿಗೂ ಪರದೇಗಿನ ತೇರಾಗಿ . . . ರತೋತ್ಸವ ನಡೆಯಬೇಕೆಂದು ಮಾಡಿಸಿದನು (ಎಕ. X(8), ಮಾಲೂರು. ೦೪೭-೦೪ ; 1498) ; ತೇರಾದ ಮೇಲೆ ಜಾತ್ರೆ ನೆರೆಯಿತು (ಗಾದೆ).

[ ದೇ.॥ ತಮಿ. ಮಲ. ತುಳು. ತೇರ್ ; ತೆಲು. ತೇರು ]

**ತೇರ** 'ಥೇರ' ನೋ.

**ತೇರಂಜಿಸು** (ಕ್ರಿ). ಸಾಣೆ ಹಿಡಿದಂ ಹೊಳೆಯುವಂತೆ ಮಾಡಂ,-ಹೊಳಪು ಕೊಡಂ : ಮಣಿಯಂ ತೇರಂಜಿಪಂತೊಪ್ಪುಮನೆಸಗುಗೆ ಕೆಯ್ಕೊಂಡು . . . ಅನುಪಮ ಮತ್ಕಾವ್ಯಮಂ ಸತ್ಕವೀಂದ್ರರ್ (ಪುಷ್ಪಪು. ೧-೩೭).

[ P ಇದು 'ನೀರಂಜಿಸು' ಎಂಬುದರ ಅಪಲಿಖಿತವಿರಬಹುದೇ ? ]

**ತೇರಂಟಿ** 'ತೇರಂಟೆ' ನೋ.

**ತೇರಂಟೆ, ಚೇರಟೆ, ತೇರಂಟಿ** (ನಾ). ಸಾವಿರಕಾಲಿನ ಹುಳು ; ಕಪ್ಪುರ ಚಟ್ಟೆ ; ಒನಕೆಮಂಡಿ ; ಬೆಟ್ಟಬೆನಕ (ಉಕ) : ಬೆಸದಪರಂತೆ ಮುಯ್ಯುಂ ನೋಡದೆ ತೇರಂಟೆಯಂತೆ ಕುಮತಕ್ಕೆ ಸೂರುಳದೆ . . . ಧರ್ಮದೊಳ್ ನಿಶ್ಶಂಕನುಮಪ್ಪುದು (ಧರ್ಮಾಮೃ. ೪-೪೬). **ಚೇರಟೆ :** ಚಳಿಯು ಹಿಡಿತ ಕ್ಕೊಳಗಾಗಿ ಬೆರಳು ಮುಟ್ಟಿದ ಚೇರಟೆ(ಶತಪದಿ)ಯಂತೆ ಎಂಟುಗೇಣಿನ ಮೈ ಎರಡುಗೇಣಾಗಿ ಜನಸಂದಣಿಗೆ ಸಂದಣಿ ಸುತ್ತಿ ಸುರುಟಿಹೋಗಿತ್ತು (ವೀರಲಿಂ. ೪೮). **ತೇರಂಟಿ :** ಸ್ಪರ್ಶರಸಗಂಧಂಗಳೆಂಬೀ ಮೂಱನಱಿವ ಇಱುವೆ . . . ಇಂದ್ರಗೋಪ ತೇರಂಟಿ (ಜಸಾರ. ೪೯).

[ ←ತುಳು. ತೇರಂಟೆ, ಚೇರಟೆ, ಚೋರಟೆ, ಶೇರಂಟೆ, ಶೇರಟೆ ]

**ತೇರಜೆ** (ನಾ). ಒಂದು ಬಗೆಯ ಪ್ರಾಣಿ : ಶ್ರೀಮದಮುಳ್ಳಂ ಮೊಸಳೆಯಾಗಿಯುಂ ರೂಪಮದಮುಳ್ಳಂ ಕಟ್ಟೆಯಾಗಿಯುಂ ಆಜ್ಞಾಮದಮುಳ್ಳಂ ತೇರಜೆಯಾಗಿಯುಂ ಪುಸಿಯುಳ್ಳಂ ಕರಡಿಯಾಗಿಯುಂ ... ನರಕದೊಳ್ ಪುಟ್ಟಿ (ಧರ್ಮಾಮೃ. ೬-೧೮೮).

[ ?./ಮರಾ. ತರಸ್=ಕತ್ತೆಕಿರುಬ./ಪ್ರಾ. ತರಚ್ಛ=ವ್ಯಾಘ್ರ./ಸಂ. ತರಕ್ಷು ]

**ತೇರಣ$_1$, ತೇರಣೆ, ತ್ಯಾರಣ** (ನಾ). ೧. ಒಂದು ಬಗೆಯ ಸಸ್ಯ ; ಕುರವಕ ; ಗೋರಂಟಿ : "ತೇರಣಂ ಪ್ರಣಯಕ್ಕ" (ಮಂಗರಾ. ೩೫-೧೫) ; ತೇರಣದ ಬೀಜವಂ ಮೊಸರ ನೀರಿಂದ ಕೇದು (ವಿಷ್ಯವಿ. ೩೩) ; ತೇರಣದ ಹೂವನ್ನು (ಕುರವಕ) ಧರಿಸುವುದರಿಂದ—ವ್ಯಾಪ್ತವಾದ ಪರಿಮಳ ಉಂಟಾಗಿ (ಸಳವ್ಯ. ೪೪). 'ಗಿಡಂದೇರಣ' ಪರಾ. **ತೇರಣೆ :** ೨. ಒಂದು ಬಗೆಯ ಮರ : ಂಬಟೆ, ಅತ್ತಿ, ಅರಳೆ, ತೆಂಗು. ತೇರಣೆ (ಶಿವದ. ೭-೧೬). **ತ್ಯಾರಣ :** ೧. ಕೆಂಪಿನ ತ್ಯಾರಣದ ಹೂವಿನಂತೆ ಶುದ್ಧರಕ್ತದಂತೆಯೂ ಹೊಳವುವುಳ್ಳ ರತ್ನವು (ಸೌಗಂಧಿ. ೩೩೬-೨೦). ೨. ಹೆದ್ದರಣ ತ್ಯಾರಣ ಗೊರವಿ . . . ಮೊದಲಾದ ಗಗನವಂ ತುಡುಕುವ ವೃಕ್ಷಂಗಳ್ (ಸೌಗಂಧಿ. ೫೪-೫). [ ? ]

**ತೇರಣ$_2$** (ನಾ). ಗೆದ್ದಲುಹುಳು (?) : ಪೇನಂತೆ ತಲೆಯಂ ಪತ್ತಿ ಪಲ್ಕಡಿವರ್ ತೇರಣದಂತೆ ತಳವಂ ಪತ್ತಿ ಕತ್ತರಿಸುವರ್ ಕಂಕಣದಂತೆ ಮುಂಗೈಯಂ ಪತ್ತಿ ಕೊಱೆವರ್ (ಧರ್ಮಾಮೃ. ३-೭३). [ ? ]

**ತೇರಣೆ** 'ತೇರಣ$_1$' ನೋ.

**ತೇರಯ್** (ಕ್ರಿ). ೧. ಆಕ್ರಮಣ ಮಾಡು ; ಮೇಲೆ ಬೀಳು : ಕಡುಪಿಂದಾ ಕಾಕನಂ ಕುಪ್ಪಳಿಸಿದೆಡೆಯಿಂದಾ ಪೂತನಿ ರಕ್ತಮಂ ಪೀರ್ದೆಡೆಯಾ ತೇರಯ್ದು ತೇರಂ ಪರಪಿದೆಡೆಯಿಂದಂ (ಅರ್ಧನೇ. ೮-೨೩). ೨. ತವಕಪಡು; ತವಕಿಸು : ಆಡಿಸುವ ತೋಳ್ ತೇರಯ್ದುಬಾಯ್ ತಪ್ಪಿ ಬರ್ಪರೆವಾತುಣ್ಮುವ ಕಿತ್ತುಸಿರ್ (ವರ್ಧಪು. ४-६०). [ ? ]

**ತೇರಯಿಸು, ತೇರಯ್ಸು, ತೇರೈಸು** (ಕ್ರಿ). ೧. ಆಕ್ರಮಿಸು ; ಮೇಲೇರಿ ಹೋಗು : ಅಂತು ರಕ್ಕಸವಡೆ ತನ್ನ ಪಡೆಯೆಲ್ಲಮಂ ತರಳ್ಚಿ ತೇರಯಿಸಿ ನುಂಗಿದೊಡೆ (ಪಂಪಭಾ. ೧೨-೮ ವ). ೨. ಅಧಿಕವಾಗಿರು ; ಹೆಚ್ಚಾಗು ; ಮಿಗು : ಬೆಳ್ಮುಗಿಲ್ದುಱುಗಲಂ ತರತರದಿಂ ತೇರಯಿಸುವ ತೆರೆಗಳಿಂ (ದಶಕು. ४-३५ ವ). ೩. ಆತುರಪಡು ; ತವಕಿಸು ; ಲವಲವಿಸು : ಒಡನುಡಿಯಲ್ಕೆ ತೇರಯಿಸೆ ನಾಲಗೆ (ಜಗವಿ. ೦೭-೦೨೦) ; ತೇರಯಿಸ [ಪಾಠಾಂ. ತೇರೈಸ]ದಿರ್ದನವನತಿಸತ್ವದಿಂದೆ (ಜೈಮಿಭಾ. ೮-೨೮). **ತೇರಯ್ಸು :** ೧. ತುಂಬಿಗಳುಮೊಡನೊಡನೆ ತೇರಯ್ಸುತಿರೆ ಪಾಡಿ (ಪುಷ್ಪಪು. ೨-೪೪) ; ಮರ್ಧರ ಗ್ರೀಷ್ಮರಾಜನ ನೆಗಳ್ದ ಚತುರಂಗಮೆನಲು ರವಿಯ ಕಡುಗಾಯ್ಪು ಗಳ್ತೇರಯ್ಸು[ಪಾಠಾಂ. ರೈಸ]ಲೊತ್ತರಿಸಿ ಕವಿದವು (ಜೈಮಿಭಾ. ೧೫-೪) ; ಥಟ್ಟುವರಿಯುವ ತೇರಯ್ಸು [ಪಾಠಾಂ. ತೇರೈಪ] ಬೋಳೈಪ ಬೋಹರ ದೊಳ್ಸಱಿಗೆಯ್ದು ಚೌಪಟದೇಱಾಟದೊಳ್ (ರಾಜಶೇ.೬-೧೧ ವ). **ತೇರೈಸು :** ೧. ವೃಕೋದರಂ ಚತುರ್ದಶಭುವನಂಗಳೆಲ್ಲಮಂ ತರಳ್ಚಿ ತೇರೈಸಿ ನುಂಗುವಂತು ಮುಸಕದಿಂ ಭಗದತ್ತನಂ ಮಾರ್ಕೊಂಡು (ಪಂಪಭಾ. ೧೧-೮ ವ) ; ಸುರಪಸುಱುಬೆಗೆ ಸೀವರಿಸೆ ಮೋಹರಿಸಿ ಮುರಿದೆಱಗುವ ಮಹೀಧರದುರ ಪಣೆಯ ತೆಱನಂತೆ ತೇರೈ[ಪಾಠಾಂ. ರಯಿ]ಸಿದವು ಗಗನದಲಿ (ತೊರವೆ. ४-४-०६). ೨. ಬುದ್ಧಿಯೊಳಗಂ ಸಾರ್ಚಿಸಿ ಅಹಂಕಾರಮಂ ತೇರೈಸಿ ಚಿತ್ತದೊಳು ಪೂರೈಸಿ (ಬಸರ. ४-६೧) ; ನೀರಾಟಕ್ಕೆಳಸಿದೈರಾವತವಾರಣ ಶರೀರ ಗೌರವರ್ಣಂ ತೇರೈಸಿದಂತೆಯುಂ . . . ನೈರ್ಮಲ್ಯದಿಂ ನೂರ್ಮಡಿಸಿರ್ದ ಅಮರನದಿಯಂ ಕಂಡು (ದಶಕು. ೯-೯ ವ) ; ಅಂಧಕಾರವನು ತೆಮರಿ ತೇರೈಸುತಿಹ ತೇಜದೇಳ್ಗೆ (ಸೌಂದಪು. ೦-೨೬) ; ನೀಡಿಡುವಾ ಮೊಗ ನಿಡುಸುಯ್ದು ನಾಸಿಕ ತೇರೈಸುವಾ ತಳ್ಪಂಕ (ಶ್ರೀಪಾಲ. ४-९३). ೩. ದುಶ್ಶಾಸನೋರಸ್ಥಳೋತ್ಪನ್ನಸ್ವತಾಸೃಗ್ಜಲಪಾನಮಂ ಬಯಸಿ ಬಾಯ್ ತೇರೈಸೆ ಸೈತಿರ್ಪನೇ (ಪಂಪಭಾ. ೬-೫೮); ಹಬ್ಬಿ ಹಾರೈಸಿ ತೇರೈಸಿ . . . ಪರಿಪರಿದಾಡಿ (ಬಸರ. ೯-೨೬) ; ಚುಂಬನಕೆ ಬಾಯ್ತೇರೈಸಿಯಾಲಿಂಗನಕ್ಕೆ ನಿಜೋದ್ಯದ್ಭುಜ ಶಾಖೆಗಳ್ ನಿಮಿರೆ ಮೇಲಪ್ಪಯ್ದಂ ಪಟಾಲೇಖದಂಗನೆಗಾಗಳ್ (ಕುಸುಮಾ.೯-೭೦) ತನುರೋಮೋದ್ಗಮ ಘರ್ಮದೊಳ್ಪುದಿಯೆ ಬಾಯ್ ತೇರೈಸೆ (ಶಾಂತೀಶ್ವ. ೫-೩೩). ४. ಗುಂಪಾಗು; ಒಟ್ಟಾಗು : ಮೇಲೆ ಮೇಲುಬ್ಬೇಳ್ವ ರಿಪುಶರಜಾಲಧಾರಾಧೂಮವಹ್ನಿಜ್ವಾಲೆಗುಱಿ ತೇರೈಸಿ ಕೋರೈಸಿತು ಕುರುಸ್ತೋಮ (ಕುಮಾ.ಕ. ೦೯-೦) ; ತೇರೈಸಿ ಮಾಗಧ ಹಿಮವಂತರೊಳಗಾದ ಭೂರಿವ್ಯಂತರರಿಗೆ ಕೂಡೆ ಚಾರು ರತ್ನಾಂಬರಗಳನಿತ್ತು ನೊಲ್ದು (ಭರತೇ. ೭३-೨೦೬):ತೇರೈಸಿ ಬರ್ಪ ತುಂಬಿಗಳ ಮೈಗಪ್ಪು ಮುಂಗಾರ ಮುಗಿಲ್ (ಚಿಬಪು. ९५-೨೨). ೫. ನಿಧಾನವಾಗು; ಮಂದವಾಗು : ಒಳಗೆ ಗರ್ಭಂ ಬೆಳೆಯೆ ಪೊಱಗೆ ತನು ಸಳನಳಿಸಿ ತಿಳಿದು ಮೆಲ್ನಡೆ ಜಘನಭಾರದಿಂ ತೇರೈಸಿತ್ರಿವಳಿ ಮೈಗರೆಯೆ (ಕಲ್ಲರ. ೨೨೯-४). [ ತೇರಯ್ + – ಇಸು$_3$ ]

**ತೇರಯ್ಕೆ** (ನಾ). ೧. ತವಕ ; ತಂಡಿತ ; ಲವಲವಿಕೆ : ಅಚ್ಚಮಣ್ಬೇಱಿದ ದಾಳಿಂಬಂ ತದುದ್ಯಾನದೊಳೊದವಿಸುಗುಂ ಬಾಯ್ಗೆ ತೇರಯ್ಕೆಯುಮಂ (ಚಂದ್ರಪು. ೧೧-೫४). ೨. ಕಾಳಗದ ಒಂದು ಪಟ್ಟು ; ಯಂದ್ವದ ಒಂದು ರೀತಿ : ತೞಪು ಪಸರಮಾರ್ಕೆ ತೇರಯ್ಕೆ ಕೂರ್ಪಂ ಕಿತವಾಕಾರಂ ತಡಂ ಕಿತ್ತಡಮೆನಿಪ ಭೃಗು ಪ್ರೌಢಿಯಿಂ ಕೊಲ್ವನುಗ್ರಾಹಿತನಂ (ಎಕ. VIII, ಸೊರಬ. ೧४೦-३४ ; 1198). [ ತೇರಯ್ + – ಕೆ ]

**ತೇರಯ್ಸು** 'ತೇರಯಿಸು' ನೋ.

**ತೇರವಾದ** (ನಾ). [ಬೌದ್ಧ] ಮಹಾತ್ಮರ ಉಪದೇಶ ; ಸ್ಥವಿರವಾದ : ತೇರವಾದವೆಂದರೆ ಮಹಾತ್ಮರ ಉಪದೇಶವೆಂದರ್ಥ (ಧಾತತ್ತ್ವ. ೧೯೦).

[ ತೇರ (< ಥೇರ) + ವಾದ$_3$./ಪಾಲಿ. ಥೇರವಾದ ]

**ತೇರಸ, ತೆರಸ** (ನಾ). ೧. ಒಂದು ಸಂಖ್ಯಾವಾಚಕ ; ಹದಿಮೂರು : "ತೇರಸ – ತ್ರಯೋದಶ" (ತದ್ಭತೋ. ೧೮); ಕರೆಯಬಹೆನಾ ನಿನ್ನನಾಯ ವಸರಕೆ ತೇರಸವೀರಷೋಡಶವರ ಗಣಾರ್ಚನೆಗೆ (ಬಸಪು. ೧४-೧३) ; ದಶಗಣ ತೇರಸ ಷೋಡಶ ದ್ವಾದಶ ಮಿಸುಪೇಕಾದಶ ರುದ್ರರುಗಳು . . . ಬಂದರು (ಬಸಪ. ೧-೨३). ೨. = ತೇರಸಿ : ಮಾಘಶುದ್ಧ ತೇರಸದೊಳ್ ಗುರುಯೋಗದೊಳ್ ಪುಟ್ಟೆ (ಚಾವುಂಪು. ४४-೧४) : ಎಸೆವಾಶ್ವಯುಜದ ತೇರಸದಿಂ ತೊಟ್ಟಯದ್ದಿದೆವಸ (ಮು)ಂ ಮಟೆ ಕಱೆಯಲ್ (ಅಟ್ಟಮ. ೮-೦೭४). **ತೆರಸ :** ೨. ಫಾಲ್ಗುಣ ಶುದ್ಧ ತೆರಸ[ಮುಂ] ಆದಿತ್ಯವಾರ ಮುಮಾದನ್ದು (ಸೌಇಇ. XX-i, ३೦-೨ ; 10ನೆಯ ಶತ).

**ತೇರಸರ್** = ಪ್ರಸಿದ್ಧರಾದ ಹದಿಮೂರು ಜನ ಶಿವಶರಣರು ; P (ಪಾಲ್ಕುರಿಕೆ ಸೋಮನಾಥನು ಹೇಳಿರುವಂತೆ) ಕಲ್ಯಾಣಪಟ್ಟಣದಲ್ಲಿ ಪ್ರಸಿದ್ಧರಾಗಿದ್ದ ಬಸವರಾಜ, ಸಂಗಯ್ಯ, ಬೊಮ್ಮಿಸೆಟ್ಟಿ, ಸಾತ್ವಿಕ ಸಂಗಯ್ಯ, ಮೋಳಿಗೆ ನಿಜಸಂಗವ್ವೆ, ದೇವರಸ, ಕನ್ನಮರಸಿ, ಪಡಿಹಾರಿ ಬಸವಯ್ಯ, ಹೂವಿನ ಬಾಚಿದೇವಯ್ಯ, ದೇವಯ್ಯ, ಓಹಿಲದೇವಯ್ಯ, ಬೊಪ್ಪಿದೇವ ಮತ್ತು ಕಾಮಲದೇವಿ ಎಂಬ ಹದಿಮೂರು ಮಂದಿ ಶರಣರು: ಸರರು ಕೇಳಲು ಕೂಡೆ ಸಾಚಿಸಿ ಭರದೊಳವರೊಳು ತೇರಸರುಮೆನೆ ಬರಿ[ರು]ದೆಸವ ಪದಿಮೂವರು (ಬಸಪು. ೫೧-೭೦) ; ಹರುಷದಿಂ ಪ್ರಮಥರಂ ರುದ್ರರಂ ತೇರಸರನುರುದಶ ಗಣಂಗಳಂ . . . ಭಕ್ತಿಯಿಂದೊರೆದು (ಅಶಿಚಂ. ೩೪-೩೫); ಕಾಣುತೊಲವಿಂ ಸಂತವಿಸಿ ತೇರಸಗರ್ೂಡಿ . . . ಲಿಂಗವುಂ ಪೂಜೆಗೈದು (ಸಿದ್ಧೇಪು. ೭-೭೦)·

[ < ಪ್ರಾ. ತೇರಸ./ಸಂ. ತ್ರಯೋದಶ ]

**ತೇರಸಿ, ತಿರಸೆ, ತೆರಸಿ, ತೇರಸೆ** (ನಾ). ಚಾಂದ್ರಮಾನಮಾಸದ ಪಕ್ಷಗಳ ಹದಿಮೂರನೆಯ ದಿನ,-ತ್ರಯೋದಶಿ: "ತೇರಸಿಯೆ ತ್ರಯೋದಶಿ" (ಚತುನಿ. ೬೪); ವೈಶಾಖಶುದ್ಧತೇರಸಿಯ ಬೆಳಗಪ್ಪ ಜಾವದೊಳು (ಚಾವುಂಪು. ೪೪-೯); ಕದನಾ ಮಾರ್ಗಶಿರದ ಶುದ್ಧದಿನಂ ತೇರಸಿ . . . ಅಮಾವಸೆಯ ದಿವಸದೊಳಂ ನಿರ್ಮೂಲವಾಯ್ತು ಕೌರವವಂಶಂ (ಗದಾಯು. ೯-೩೭). **ತಿರಸೆ:** "ತ್ರಯೋದಶಿ-ತಿರಸೆ" (ಹೊಸಗ. ೧೦೯). **ತೆರಸಿ :** "ತೆರಸಿ ತ್ರಯೋದಶಿ" (ಕವಿಕಂ. ೨೬೦). **ತೇರಸೆ:** ಸಿತಪಂಚಮಿ ಸಪ್ತಮಿ ದಶಮಿ ತೇರಸೆ ಬಿದಿಗೆ ತದಿಗೆಯೇಕಾದಶಿಯೆಂಬತಿಶಯದಿನಂಗಳೊಳ್ . . . ಯಾತ್ರೆಗೆ ಶುಭದಂ (ಲೋಕೋಪ. ೨-೪೫) ; ತ್ರಯೋದಶಿ, ತೇರಸೆ (ಶಬ್ದಾನು. ೧೬೦ ಪ್ರಯೋ).

[ <ಪ್ರಾ. ತೇರಸೀ./ಸಂ. ತ್ರಯೋದಶೀ ]

**ತೇರಸೆ** 'ತೇರಸಿ' ನೋ.

**ತೇರಹಪಂಥ** (ನಾ). [ಜೈನ] ಒಂದು ಪಂಥದ ಹೆಸರು : ಹದಿಮೂರು ತರದ ಚಾರಿತ್ರವುಳ್ಳವರಾದುದರಿಂದ ತೇರಹಪಂಥದವರೆಂದೂ ಹದಿಮೂರು ಜನರು ಕೂಡಿ ಈ ಪಂಥದ ಸ್ಥಾಪನೆ ಮಾಡಿದುದರಿಂದ ಇದಕ್ಕೆ ಈ ಹೆಸರು ಬಂದಿತೆಂದೂ ಕೆಲವರು ಹೇಳುತ್ತಾರೆ (ಜೈನಪ. ೭೬).

[ ತೇರಹ$_0$ (P ←ಪ್ರಾ. ತೇರಹ) + ಪಂಥ$_2$ (<ಪಂತ$_3$) ]

**ತೇರಾಳ್** (ನಾ). ಬಂಡಿಯನ್ನು ನಡೆಸುವವನು ; ರಥಿಕ ; ಸಾರಥಿ : ತೇರಾಳ್ಗಳ ಚಪ್ಪರಣೆಯೊಳ್ . . . ಕಿಡುಗಿಡುವ ಪೊಂದೇರೋರಣಮಿಂ ಬಡಿದಿರೆ (ರಾಮಾಶ್ವ. ೫೦-೫) ; ಕುದುರೆಯಾಳಕ್ಕೆ, ತೇರಾಳಕ್ಕೆ, ಕಾಲಾಳಕ್ಕೆ, ಮೇಣಾನೆಯಾಳಕ್ಕೆ, ನಿಮ್ಮೊಳೋರ್ವನುಂ ಕಾಳೆಗಂಗುಡುವಸು (ಶ್ರೀರಾಮಾ. ೭೫೧-೭೧). [ ತೇರ್$_2$ + ಆಳ್$_3$ ]

**ತೇರಿಸು** (ಕ್ರಿ). ಮುಂಟ್ಟಿಸು ; ತಲುಪಿಸು : ಕನ್ನಡ ಸಂಸ್ಕೃತ ವಾದವನ್ನು ಆಂಡಯ್ಯನು ಒಂದು ಘಟ್ಟಕ್ಕೆ ತೇರಿಸಿದನೆಂದು ಹೇಳಬಹುದು (ಕನ್ನಸು. I, ೧೫೨). [ ತೇರು$_1$ + – ಇಸು$_3$ ]

**ತೇರೀಜು** (ನಾ). ೧. ಒಟ್ಟು ಮೊತ್ತ: ಕಲಿತು ದಿನದಿನದಿಯತಿ ಚಮತ್ಕಾರದಿಂ ಗುಣಿತಗಳ ಭಾಗಿಸಿ ಲೆಖ್ಖ ತೇರೀಜುಬೇರೀಜುಮಂ (ನವಮೋ. ೧೫-೬೨). ೨. ಕೂಡುವಿಕೆ ; ಸಂಕಲನ.

[ ← ಮರಾ. ತೇರೀಜ್ ; ಹಿಂ. ತೇರಿಜ್ ]

**ತೇರು$_1$, ತೇರ್$_1$** (ಕ್ರಿ). ೧. ಬಲವಾಗು ; ಅಭಿವೃದ್ಧಿಹೊಂದು ; ಅಧಿಕವಾಗು : ಕುವರಂ ನವಯೌವನದೊದವಿಂಗೆ ನೆಚಿವೆಚಿಯಂತಿರೆ ತುಂಬಿ ತೇರಿದೊಂದು ಮೆಯ್ಸಿರಿಯಿಂ ಸೊಗಯಿಸಿದನಪ್ಪುದುಂ (ರಾಮಾಶ್ವ. ೦೦೪-೮) ; ವಯಸ್ಸೇರಿದಂತೆ ಜೀವದಾಸೆಯೂ ಲೋಭವೂ ತೇರಿ ಬೆಳೆಯುತ್ತಿರುವುವು (ಮಂತ್ರಶ. ೬೨-೧೬) ; ಅವುಗಳ ವರ್ಣನೆಯನ್ನು ನನಗಿಂತ ಬರವಣಿಗೆಯಲ್ಲಿ ತೇರಿದವರಿಗೆ ಬಿಟ್ಟುಕೊಟ್ಟಿದ್ದೇನೆ (ಭಾರವೀ. ೧೫೨). ೨. ಉತ್ತೀರ್ಣವಾಗು : ಶಿಕ್ಷಕನಾಗಬೇಕೆಂಬ ಹುರುಪಿನಿಂದ ಬಿ. ಟಿ. ಪರೀಕ್ಷೆಯಲ್ಲಿ ತೇರಿ . . . ಸಂಸಾರವೂ ಕಾವ್ಯಸಂಸಾರವೂ ಹೊಸ ಹುಮ್ಮಸ್ಸಿನಿಂದ ಮೊದಲಾದುವು (ಕಂಪಾಸಾ. ೪೬). ೩. ತಿಳಿಯಾಗು ; ಸ್ವಚ್ಛವಾಗು : ನೀರು ತೇರಿತು (ರೂಢಿ). ೪. ನಿರ್ಣಯವಾಗು ; ತೀರು ; ಫಲಿತಾಂಶಕ್ಕೆ ಬರು : ಲೆಕ್ಕ ಇಷ್ಟಕ್ಕೆ ತೇರಿತು (ರೂಢಿ). ೫. ಸೇರು ; ತಲುಪು. 'ತೇರಿಸು' ಪರಾ. ತೇರ್$_1$ : ೨. 'ತೇರ್ಗಡೆ' ಪರಾ.

[ ದೇ.II ತಮಿ. ತೇಱು, ತೇಱ್ಱು ; ಮಲ. ತೇಱು; ತೆಲು. ತೇರು, ಶೇಱು ]

**ತೇರು$_2$** 'ತೇರ್$_2$' ನೋ.

**ತೇರು$_3$** (ನಾ). ಒಂದು ಬಗೆಯ ಔಷಧಿ ಸಸ್ಯ,-ಮಯೂಲಿಕೆ: "ಕರ್ಕಶಚ್ಛದಃ-ಸುರಸುರಲಿಕೆ, ತೇರು, ಮಿಟ್ಟುಲಿ, ಸೌತೆ" (ಔಷಧಿ. ೨೬). [ ? ]

**ತೇರುಕಟ್ಟು** (ಕ್ರಿ). ೧. ರಥೋತ್ಸವಕ್ಕಾಗಿ ರಥವನ್ನು ಸಿದ್ಧಪಡಿಸು,-ಅಲಂಕರಿಸು : ರಥಸಪ್ತಮಿಗಾಗಿ ದೇವಾಲಯದಲ್ಲಿ ತೇರುಕಟ್ಟುತ್ತಿದ್ದಾರೆ (ರೂಢಿ). ೨. ಶವವನ್ನು ಸಾಗಿಸುವುದಕ್ಕಾಗಿ ವಿಮಾನವನ್ನು ರಚಿಸು ; ಚಟ್ಟ ಕಟ್ಟು : ಆ ತಮ್ಮನ ಹೆಣಾ ಕೆಡವಿ, ಶೇರುಕಟ್ಟ ಎಳ್ಯೋ ಮಟ ನನಗಂತೂ ಸಮಾಧಾನ ಇಲ್ಲ (ಹೊಸಂಸಾ. ೨).

[ ತೇರು$_2$ (<ತೇರ್$_2$) + ಕಟ್ಟು$_1$ ]

**ತೇರುತಕ್ಕೆ** (ನಾ). ಕೈವಾಡ ; ಕುತಂತ್ರ : ತಂತಮ್ಮಿನಿಯರಂ ನೆನೆದು ಪುರಜನಂ ಮಂತಣಂಗೊಂಡು ಮಱುಗುತ್ತಿರಲ್ಕಾಣುತಾ ಕೇಶು ಮಾಡುವ ತೇರುತಕ್ಕೆಯಿಂದಾ . . . ಕೆಟ್ಟೆವಿನ್ನೇವೆವೆನುತಿರ್ದರು (ಸಮ್ಯಕೌ. ೩-೧೯) : ಇದು ನಿಮ್ಮ ಮಗಳು ಕಮಲೆಯ ತೇರುತಕ್ಕೆಯಿಂತಿದ ನೀವು ಬಲ್ಲಿರೋ (ಸಮ್ಯಕೌ. ೦೦-೨೩). [ ? ]

**ತೇರುಬೀದಿ** (ನಾ). ದೇವರ ವಿಗ್ರಹವನ್ನಿಟ್ಟ ರಥವನ್ನು (ಮಾಮೂಲಾಗಿ) ಎಳೆಯುವ ದೊಡ್ಡರಸ್ತೆ ; ರಥಬೀದಿ : ನಮ್ಮೂರಿನಲ್ಲಿ ತೇರುಬೀದಿಯೊಂದು ಬಿಟ್ಟರೆ ಉಳಿದವುಗಳೆಲ್ಲಾ ಚಿಕ್ಕ ರಸ್ತೆಗಳೇ (ರೂಢಿ).

[ ತೇರು$_2$ (< ತೇರ್$_2$) + ಬೀದಿ ]

**ತೇರುಹಬ್ಬ** (ನಾ). ರಥೋತ್ಸವ ; ಜಾತ್ರೆ : ಕೆಸರೂರಿನಲ್ಲಿ ತೇರುಹಬ್ಬದ ಸಂದರ್ಭದಲ್ಲಿ ಇನ್ನೊಂದು ವಿಶೇಷಸಮಾರಂಭ ನಡೆಯಲು ಏರ್ಪಾಡಾಗಿದ್ದಿತು (ಬೆಳುಮ. ೦೬೬). [ ತೇರು$_2$ (< ತೇರ್$_2$) + ಹಬ್ಬ (<ಪರ್ಬ) ]

**ತೇರೆಸಗು** (ಕ್ರಿ). ರಥವನ್ನು ನಡೆಸು; ಸಾರಥಿಯಾಗು: ಮಿಳಿರ್ವ ಪೊಸದಳಿರೆ ಪಟಿಯಂಗೆ ಗಿಳಿಗಳೆ ಪೂಡಿರ್ದ ಕುದುರೆ ತೆಂಗಾಳಿಯೆ ಕಣ್ಗೊಳಿ ತೇರೆಸಗುವನೆನೆ ಬಂದೆಳೆಮಾವಿನ ತೇರನೇಱಿ ನಡೆದಂ ಕಾಮಂ (ಕಬ್ಬಿಗಕಾ. ೨೦೯).

[ ತೇರ್$_2$ + ಎಸಗು$_1$ ]

**ತೇರೆಳೆ** (ಕ್ರಿ). ದೇವರ ವಿಗ್ರಹವನ್ನು ಕೂರಿಸಿದ ರಥವನ್ನು ಎಳೆ: ಜಾತ್ರೆಯಲ್ಲಿ ತೇರೆಳೆಯುವಾಗ ಉಂಟಾದ ನೂಕುನುಗ್ಗಲಿನಿಂದ ಜನ ಕಂಗೆಟ್ಟರು (ರೂಢಿ). [ ತೇರು$_2$ (< ತೇರ್$_2$) + ಎಳೆ$_1$ ]

**ತೇರೈಸು** 'ತೇರಯಿಸು' ನೋ.

**ತೇರೊಡ್ಡು** (ನಾ). ರಥಗಳ ಗುಂಪು ; ರಥಗಳ ಸೈನ್ಯ : ತೇರೊಡ್ಡು ಗಾಳಿಗೊಡ್ಡಿದ ನೀರದದೊಡ್ಡಿನವೊಲಾಗೆ (ಪಂರಾಮಾ. ೧೬-೭೩) ; ತೆಱಪು ಪಡೆದಿದಿರೊಡ್ಡಿನ ತೇರೊಡ್ಡುಗಳ ಶೂರಸಾರಥಿ ಪ್ರೇರಣದಿನೋರೊಂದು ಪತ್ತೆಸಾರ್ಚಿದಾಗಳ್ (ಚಂದ್ರಪು. ೧೦-೬೪ ವ).

[ ತೇರ್$_2$ + ಒಡ್ಡು$_2$ ]

**ತೇರೋಟ** (ನಾ). ೧. ರಥದ ಒಟ. ೨. (ಆಲಂ) ರಥವನ್ನು ವೇಗವಾಗಿ ಓಡಿಸುವ ಕೌಶಲ್ಯ : ಬಿಲ್ಲ ಜಾಣನ್ ಈಮಿಡಾಯುಸ್ . . . ತೇರೋಟದ ಸೊಸ್ಟ್ರನೀಸ್ (ಪಾರಸಿ. ೩-೬೦). [ ತೇರ್$_2$ + ಓಟ ]

**ತೇರ್ಗಡೆ** (ನಾ). ಜಯ ; ಗೆಲುವು ; ಉತ್ತೀರ್ಣತೆ ; ಸಫಲತೆ : ತೇರ್ಗಡೆಯಾಯಿತು ನನಗೆಂಬ ಗೆಲುವಿನ ಸುದ್ದಿಯು ಬರುವಷ್ಟರೊಳಗೆ

ಸ್ವರ್ಗಸ್ಥರಾದರು ತಂದೆ (ಇಂಜಾಪ. ೨೦-೯೩) ; ವರ್ಷದಲ್ಲಿ ಕೆಲವು ವಾರ ದುಡಿದಿದ್ದರೆ ಒಂದೆರಡು ವಿದ್ಯಾರ್ಥಿಗಳಾದರೂ ತೇರ್ಗಡೆ ಹೊಂದುತ್ತಿದ್ದರು (ಸ್ವಾಲಮಿ. ೬೧).

[ ತೇರ್$_{1}$ (< ತೇರು$_{1}$) + ಕಡೆ$_{3}$./ತುಳು. ತೇರ್ಗಡೆ ; ತೆಲು. ತೇರುಗಡ ]

**ತೇಗುರ್ದುರೆ** (ನಾ). ರಥಕ್ಕೆ ಹೂಡಿದ ಕುದುರೆ ; ರಥಾಶ್ವ : ಒಯ್ಯನೆ ನಡೆವ ತೇಗುರ್ದುರೆಯುಂ ಕಂಡು (ಕೃಮಿಥಾ. ೩-೪೦). [ ತೇರ್$_{2}$+ ಕುದುರೆ ]

**ತೇರ್ದೆಗೆ** (ಕ್ರಿ). ರಥವನ್ನು ಎಳೆ : ಆ ಸುಧನ್ವನಿಪ್ಪತ್ತುನಾಲ್ಕುಂಬಿನಿಂ ತೇರ್ದೆಗೆವ ಕುದುರೆಗಳ ಕಾಲ್ಗಳಂ ಗಾಲಿಗಳ ಕೀಲ್ಗಳಂ ಮೂಡಿಗೆಯುನು ಮಿರ್ದಿಸುವ ಚಾಪವಮಂ . . . ಕ್ಷಣಾರ್ಧದೊಳ್ ಕಡಿಯೆ (ಕೃಮಿಥಾ. ೧೨-೩೩). [ ತೇರ್$_{2}$ + ತೆಗೆ$_{1}$ ]

**ತೇರ್ನೊಗ** (ನಾ). ರಥದ ನೊಗ : ವಿಗಡ ತೇಜಿಗಳುಮನ್ ತೇರ್ನೊಗಕೆ ತಂದೆನ್ (ಲದ್ಮಪ್ರ. ೨೩-೩೩೨). [ ತೇರ್$_{2}$ + ನೊಗ ]

**ತೇರ್ಮನೆ** (ನಾ). ೧. ರಥವನ್ನಿಡುವ ಮನೆ. ೨. ರಥದ ಹಾಗೆ ಅಂತಸ್ತುಗಳಿಂದ ಕೂಡಿರುವ ಭವನ,-ಸೌಧ : ವಿಭೀಷಣಂ . . . ತೇರ್ಕೈಸಿದನು ನೇರವುಲ್ಲಿಂ ತನ್ನ ತೇರ್ಮನೆಗೆ (ಶ್ರೀರಾಮೂ. ೫೬೪-೬೦೮).

[ ತೇರ್$_{2}$ + ಮನೆ ]

**ತೇರ್ಮರ** (ನಾ). ರಥವನ್ನು ಮಾಡಲು ಬಳಸುವ ಮರ : ತೇರ್ಗೆ ಮರಂ ತೇರ್ಮರಂ . . . ಮರಂ ತೇರ್ಗೆ, ಬಣ್ಣಂ ಮನೆಗೆ (ಶಬ್ದಾನು. ೨೯೨ ಪ್ರಯೋ). [ ತೇರ್$_{2}$ + ಮರ$_{1}$ ]

**ತೇರ್ವಾಯ್** (ಕ್ರಿ). ರಭಸದಿಂದ ಮುನ್ನುಗ್ಗು,-ಹಾಯು : ತನ್ನುವ ಚಮೂಪತಿಗಳಂ ಕಡಿದು ತನ್ನುರುವ ಕಡಿತಲೆಗೆ ಬಲಿಗೊಟ್ಟುದಂ ಕಂಡು ನವ್ಮ ಕಲಿ, ನಿಮ್ಮಾನೆ, ತೇರ್ವಾಯ್ದನೈ ಪ್ರಹಸ್ತಂ (ಶ್ರೀರಾಮೂ. ೬೫೫-೩೬೪). [ ತೇರ್$_{1}$ (<ತೇರು$_{1}$) + ಪಾಯ್$_{1}$ ]

**ತೇಲ್, ತೇಲು$_{1}$** (ಕ್ರಿ). ನೀರಿನಲ್ಲಿ ಮುಳುಗದೆ ಬೆಂಡಿನಂತೆ ಮೇಲೆ ಇರು; ನೀರಿನ ಮೇಲೆ ಚಲಿಸು : "ಬೆಂಡೇಟ್ಟುದೆಂದೊಡೆ ತೇಲ್ಬುದಕ್ಕು" (ಅದ್ವಿಕೃ. ೬೬); ಪೊಸತರೆಗಳೊಳ್ಸಲ್ಕಿ ತೇಲ್ತ ಹಂಸಂಗಳಿಂ (ಉದ್ಭಟ. ೩-೮೬) : ಶಾರ್ಙ್ಗಭೃತ್ಸುಧಾಸರಸಿಯೊಳಟ್ಟು ತೇಲ್ದು ತಣಿದಾಂ ಕಳೆವೆಂ ಭವದಾವತಾಪವಮಂ (ಚಕವಿ. ೦-೪). ೨. (ಗಾಳಿಯಲ್ಲಿ) ಹಾರು ; ಹಗುರವಾಗಿ ಚಲಿಸು : ಗಾಳಿಗೆ ತೇಲ್ವ ಮುಗಿಲುಗಳಂದದಿಂದೋಡಿದವು (ಸಾಳ್ವಭಾ. ೦೬-೦೨); ನಱುಸುಯ್ಯ ಗಾಳಿಗೆ ತೇಲ್ವ ದುಕೂಲದ ಸೆಱಗು (ಭರಚ. ೦-೩೩); ಕೈವಱಗುಟ್ಟುವಂಡಲೆಗೆ ತೇಲ್ದು ಮೇಲುದು ಜಾಱಿ (ಕೃಮಿಥಾ. ೩-೭). ೩. ಪಕ್ಕಕ್ಕೆ ಸರಿ ; ನುಣುಚಿಕೊಳ್ಳು ; ಜಾರು ; ತಪ್ಪಿಸಿಕೊಳ್ಳು : ತೇಲ್ವುದು ರಣಾಗ್ರದಿಂದಲ್ಲದೊಡುಳುಹೆನೆಸುತೆ ಕೋಲ್ವಳಿಗಱಿದನವಂ (ಕೃಮಿಥಾ. ೦೨-೩೬). ೪. ಸ್ಥಿರತೆಯಿಲ್ಲದಿರು ; ತಾರಾಡು ; ಹೊಯ್ದಾಡು : ಮದಿರಾಪಾನವಂ ಮಾಡಿಯುರ್ಕಿ ಸೊರ್ಕಿ . . . ಜೋಲುತುಂ ತೇಲುತುಂ ಮಲೆಯುತುಂ ಮನಂಗೊಳಿಪ ಶದ್ಧನಿತಾಜನ ಮಧ್ಯದಲ್ಲಿ . . . ಇರ್ದಂ (ಉದ್ಭಟ. ೫-೯೦ ವ) : ಪುಸಿಲಜ್ಜೆಯಿಂದೆ ತೇಲ್ದವಳ ಕೆಱದಿಂದೆ ನಸುನಗೆಯು ಪಸರಿಸುತೆ (ಕೃಮಿಥಾ. ೫-೬೦). ೫. ಮೂರ್ಛೆಯುಂಟಾಗು ; ಮೈಮರೆ : ಅಳವಳಿದು ಪವನಜಂ ತೇಲ್ವನಿತಱ್ಳೊಳ್ಕಂಡು . . . ಅಚ್ಯುತಂ ತಾನೆ ಕೋಪದಿಂದಾಹವಕೆ ನಡೆತಂದನು (ಕೃಮಿಥಾ. ೬-೪೯). ತೇಲು$_{1}$ : ೧. ಗುರುಕರುಣವಾರ್ಧಿಯೊಳಗೋಲಾಡುತಂ ಸಂಭ್ರಮಾನಂದದೊಳಗಕ್ಕಾಡಿ ತೇಲು[ಪಾಠಾಂ. ಗಂ]ತಂ (ದೀಕ್ಷಾಬೋ. ೩೪-೧೮); ನೀತಿಯೆಂಬುದು ನೀರ ಮೇಲೆ ತೇಲುವ ತೆಪ್ಪ ಮಾತ ಬಲ್ಲವರತ್ತ ತೆಗೆದಂತೆ ಬಹುದು (ಸಮ್ಯಕ್. ೮-೦೮) ; ವನಚರಶ್ರೇಣಿ ಬೆಂಡೆದ್ದು ತೇಲಿದುವು (ಪಂಪಾಶ. ೦೯-೪೫) ; ಕಪ್ಪುರ ನೀರಿಗಿಂತ ಹಗುರವಾಗಿರುವುದರಿಂದ ನೀರ ಮೇಲೆ ತೇಲುತ್ತದೆ (ಮುಂಬಯಿ. ೪-೬೦) : ಬಾಳಿನ ಹೊಳೆಯೊಳು ಕಸದಂತೆ ತೇಲಿದರಾಗದು ಗುರಿ ಬೇಕು ಕಂದ (ಇಂಜಾಪ. ೦೦೬-೬೧). ೨. ಬಿಳಿಯ ಮೋಡ ಬೆಳಕಿನಲ್ಲಿ ತೇಲುವಂತೆ ಬಂದಳೋ (ಗಂಗಾತ. ೯೬-೦೧). ೬. ಲಾಭವಾಗಿ ಬರು ; ಒದಗು : ತೊಡಗಿಸಿದ ಹಣದ ಮೇಲೆ ಸ್ವಲ್ಪವಾದರೂ ಬಡ್ಡಿ ತೇಲಬೇಡವೆ ? (ರೂಢಿ). ೭. (ಎಳೆಯ ಸಸ್ಯಗಳಂತೆ) ಬೇರು ಬಿಡದೆ ಮೇಲೆ ಬರು : ತೆಂಡೆ ತೇಲಿದೆ (ರೂಢಿ). ೮. ಭೂಮಿಯ ಮೇಲೆ ಕಾಣಿಸು : ಹುಲು ಬೇರ್ಕರಿಕೆ ಕಣ್ಣಗ ತೇಲುವಂದದಿಂದಲಿ ಹೊಡೆ ಹಣವಿನ ಹೊಲನ (ಅಮುಸಾಂ. ೩-೦೨೨).

**ತೇಲಕಟ್ಟು** = ಜೋಲುಬಿಡು ; ತೂಗುಹಾಕು : ತೇಲಕಟ್ಟಿದ ಕಂಠಮಾಲೆಗಳ ಗಳಿತಮುಕ್ತಾಳಿಗಳಗಲಕೆ ಪಂದೆಸೆಯೆ ಮುತ್ತಿನ ರಂಗವಾಲಿಗಳನಿಕ್ಕಿದರು ದರುಶನೋತ್ಸವಕೆಂಬ ತೆಱನಾದುದು (ಕೃಮಿಥಾ. ೦೬-೨೮). **ತೇಲಬಿಡು, ತೇಲಿಬಿಡು** = (ನೀರಿನಲ್ಲಿ) ಮುಳುಗದ ಹಾಗೆ ಮುಂದುವರಿಯಲು ಬಿಡು : ಆ ಹುಡುಗನ ಕೈಗೆ ಸಿಗುವ ಹಾಗೆ ಹೊಳೆಯಲ್ಲಿ ತೇಲಬಿಟ್ಟನು (ಮುಂಬಯಿ. ೪-೩೮) ; ನನ್ನವೀ ನುಡಿಗಳಿರ ! ಕಾಲದಲೆಗಳಲಿ ನಿಮ್ಮನುರಿಹಣತೆಯಂತಿದೊ ತೇಲಬಿತುವೆ (ಗೀವಿಂ. XIII) ; ಸಾನುರಾಗದಿಂದ ಇಂದು ದೀಪ ತೇಲಿಬಿಟ್ಟೆವೇ – ದೀಪ ತೇಲಿಬಿಟ್ಟೆವು (ನಾದಲೀ. ೬೨-೨೦) : ವಿಶ್ವದಂಚಿನವರೆಗು ತೇಲಿಬಿಡು ನೌಕೆಗಳ (ನಂಜು. ೦೮-೫). **ತೇಲಿಬರು** = ನಿಧಾನವಾಗಿ ಬರು : ಗಾಳಿಗಡಲಿನಲ್ಲಿ ತೇಲಿಬರುತಲಿಹವು ನಾದಾ (ಗಂಗಾತ. ೦೦೩-೦). **ತೇಲಿಹಾಕು** = ಮೇಲಿರುವಂತೆ ನೆಡು ; ಆಳವಾಗಿ ನೆಡದಿರು : ತೆಂಗು ತೇಲಿಹಾಕು, ಬಾಳೆ ಬಗೆದು ಹಾಕು (ಗಾದೆ). **ತೇಲಿಹೋಗು** = ೧. ನೀರಿನಲ್ಲಿ ಮುಳುಗದಂತೆ ಮುಂದುವರಿ. ೨. ಕೊಚ್ಚಿಹೋಗು : ಪ್ರವಾಹದಲ್ಲಿ ಈಜಿ ಈಜಿ ಶಕ್ತಿಗುಂದಿ ತೇಲಿಹೋಗುತ್ತಿದ್ದೆ (ರಾಮಾನಿ. ೦೦೦) ; ಜಗವೆಲ್ಲ ತೊಯ್ದು ಹೋಗಿದೆ, ತಿಳಿಮಣ್ಣು ತೇಲಿಹೋಗಿದೆ (ನಂಜು. ೦೬-೨೨).

[ ದೇ.೫ ತುಳು. ತೇಲ್, ತೇಲು ; ತೆಲು. ತೇಲು ; ಪರ್ಜಿ. ಗಡಬ. ತೇಲ್; ಕುವಿ. ತೇಲಲಿ ]

**ತೇಲಾಡಿಸು** (ಕ್ರಿ). ನೀರಿನ ಮೇಲೆ ಚಲಿಸುವಂತೆ ಮಾಡು,-ಓಲಾಡಿಸು : ಚಿಕ್ಕಹುಡುಗರಿದ್ದಾಗ ಕಾಗದದ ದೋಣಿಯನ್ನು ಮಾಡಿ ನೀರಿನಲ್ಲಿ ತೇಲಾಡಿಸುವುದೂ ಒಂದು ಆಟ (ರೂಢಿ).

[ ತೇಲಾಡು + – ಇಸು$_{3}$ ]

**ತೇಲಾಡು** (ಕ್ರಿ). ೧. ನೀರಿನ ಮೇಲೆ ಚಲಿಸು ; ನೀರಿನಲ್ಲಿ ಮುಳುಗದ ಹಾಗೆ ಇರು : ಕುಲಪರ್ವತಗಳು ಸಮುದ್ರದಲ್ಲಿ ತೇಲಾಡಿದರೂ . . . ಅರ್ಜುನನು ಕರ್ಣನನ್ನು ಜಯಿಸಲು ಸಮರ್ಥನಾದಾನೆ (ಕೃಪಾಕ. ೦೬೮). ೨. (ಅಲಂ) ಉತ್ಸಾಹದಿಂದ ಕೂಡಿರು ; ಸಂತೋಷಿಸು : ತೇಲಾಡುವಾಗ ಮನಸು ಮೇಲಾಡತಾವ ಕನಸು (ಗಂಗಾತ. ೦೮-೧).

[ ತೇಲು$_{1}$ (<ತೇಲ್) + ಆಡು$_{1}$ ]

**ತೇಲಿ** (ನಾ). ಗಾಣಿಗ : ಉಜ್ಜನಿಪುರದಾ ತೇಲಿ ತಾಮಲಿಂದಾಪುರಕೆ ತನ್ನ ಮಗಳನು ಕೊಟ್ಟು ಲಗ್ನ ಮಾಡಿರಲು (ಶವಿಮೂ. ೦೬). 'ತೆಲ್ಲಿಗ' ಪರಾ.

[ <ಸಂ. ತೈಲಿನ್ ]

**ತೇಲಿಕೆ** (ನಾ). ೧. ನೀರಿನಲ್ಲಿ ಮುಳುಗದಂತೆ ಇರುವುದು: "ತೇಲುವುದು, ತೇಲಿಕೆ, ಪ್ಲವನ" (Floatation. ಇಂಕವಿ). ೨. ಹಗುರವಾದುದು : ಸಮುದ್ರವು ಉಪ್ಪಾಗಿಯಿರುವುದರಿಂದ ಅನೇಕ ಗುಣಗಳು ಉಂಟು . . . ಅದರ ನೀರು ಸೀನೀರಿಗಿಂತಲೂ ತೇಲಿಕೆಯಾಗಿ ಇರುತ್ತದೆ (ಅನಂಶ. ೫೪).

[ ತೇಲು$_{1}$ (<ತೇಲ್) + – ಇಕೆ./ತಮಿ. ತೇಲಿಕ್ಕೈ; ತೆಲು. ತೇಲಿಕೆ ]

**ತೇಲಿಗ$_{1}$** (ನಾ). ತೇಲುವವನು : ನೀಲಾಕಾಶದ ತೇಲಿಗನಾಗಿ ಓಲಾಡಿ ಪುಣ್ಯರ ನಾಡಿಗೆ ಹೋದೆ (ಹಂಸದ. ೧೬೨-೦೮). [ ತೇಲು$_{1}$(<ತೇಲ್) + – ಇಗ]

**ತೇಲಿಗ$_2$** 'ತೆಲ್ಲಿಗ' ನೋ.

**ತೇಲಿಸು** (ಕ್ರಿ). ೧. ನೀರಿನಲ್ಲಿ ಮುಳುಗದಂತೆ ಮಾಡು; ತೇಲಾಡಿಸು: ರಾಯರ ಉತ್ಸಾಹವು ನನ್ನನ್ನೂ ಸಂತೋಷದ ಕೆರೆಯಲ್ಲಿ ಮುಳುಗಿಸಿ ತೇಲಿಸಿತು (ರಾಯುಳ. ೯೦); ಸಾವಿನಲಿ ದಂದೋಡಿ ಆತ್ಮಜಯವಾದಾಗ ನೆಲ ಮುಗಿಲ ತೇಲಿಸುವ ಬೆಳಕಿನುಬ್ಬು (ನವಿಲ. ೬೩-೭). ೨. ಅಮುಖ್ಯವೆಂದು ಪರಿಗಣಿಸು; ಗೌಣವಾಗಿಸು: ನಾನು ಆ ಮಾತನ್ನು ತೇಲಿಸಲು ಯತ್ನಿಸಿದೆ (ಆಂಹೂ. ೬೨); ಮಾತುಗಳನ್ನು ಲಘುವಾಗಿ ತೇಲಿಸಬೇಡಿ (ಬದುಜ. ೦೦೫). ೩. ಶಿಥಿಲವಾಗಿ ಉಚ್ಚರಿಸು; ಹಗುರವಾಗಿ ಉಚ್ಚರಿಸು: ಉಚ್ಚಾರಣೆಯಲ್ಲಿ ಒಮ್ಮೆ ಒತ್ತಿ ಹೇಳುತ್ತೇವೆ. ಇನ್ನೊಮ್ಮೆ ತೇಲಿಸಿ ಹೇಳುತ್ತೇವೆ (ದ್ರಾವಿ. ೩೨೪). ೪. ಚಾಚು; ನೀಡು: ಬೆನ್ನನು ಕೋದು, ಕೈಕಾಲ್ಗಳನು ತೇಲಿಸಿ, ಹೊಳೆದಳು ಮಳೆಯ ಬಿಲ್ಲಿನ ಹಾಗೆ ಸ್ಥಾಣುವಿನೆಳೆಯ ಚಂದ್ರನ ಚಂದದಿ (ಕಿಷು. ೩೮-೦೩). ೫. (ಆಲಂ) ಪಾರುಮಾಡು; ರಕ್ಷಿಸು: ತೇಲಿಸೋ ಇಲ್ಲ ಮುಳುಗಿಸೋ ನಿನ್ನ ಪಾಲಿಗೆ ಬಿದ್ದನೊ ಪರಮಕೃಪಾಳೋ (ಪುರಂದ. ೨-೦೮೪ ಪಲ್ಲವಿ). ೬. (ಆಲಂ) ನಿವಾರಿಸು; ಪರಿಹರಿಸು: ಪೆಱರುಪದ್ರಂಗಳಂ ತೇಲಿಸುವವರ್ ತಾವೆ ಲೋಕಕಂಟಕರಾದರಿದ ಪರಿಹರಿಸದಿರ್ಪುದು ಬಾಲೇಂದುಮೌಳಿಗೇಂ ಸ್ಮರಣೆಯೇ (ಚಬಸು. ೦೬-೨೬). [ತೇಲು$_1$ (<ತೇಲ್) + – ಇಸು$_3$]

**ತೇಲೀಜು** (ನಾ). ನೀರಿನ ಮೇಲೆ ಹೊಟ್ಟೆ ಮೇಲಾಗಿ ಮಲಗಿರುವಂತೆ ಈಜುವುದು: ಅವರು ತೇಲೀಜನಲ್ಲಿ ಗಟ್ಟಿಗರು. (ರೂಢಿ).

[ತೇಲು$_1$ (<ತೇಲ್) + ಈಜು$_2$ (< ಈಸು$_4$)]

**ತೇಲು$_1$** 'ತೇಲ್' ನೋ.

**ತೇಲು$_2$** (ನಾ). ೧. ನೀರಿನ ಮೇಲೆ ಚಲಿಸುವಿಕೆ: (ಕ). ೨. (ಉಕ) ಕೋಡಿ; ಹೆಚ್ಚಿನ ನೀರು: ನಿನ್ನಿನ ಮಳೆಯಿಂದಲೇ ಹಿರಿಕೆರೆಯು ತೇಲು ಬಿದ್ದು, ಇನ್ನೂ ತೇಲು ಹರಿಯುತ್ತಿದೆ (ರೂಢಿ). [< ತೇಲ್]

**ತೇಲುಂಗ** 'ತೆಲುಂಗ' ನೋ.

**ತೇಲುಗಣ್ಣ** (ನಾ). ಬಸವಳಿದ ಕಣ್ಣುಗಳನ್ನು ಉಳ್ಳವನು: ನಿನ್ನ ಕಣಕೆ ಶ್ವಾಸಪಿತ್ತ ತೇಲುಗಣ್ಣರಾಗಿ ಚಿತ್ತವ್ಯಾಕುಲವಿರೆ ಹಗಲಿರುಳೂ ನಿದ್ದೆಯಿಲ್ಲ (ಜಂಕನ. ೨೨-೨೦). [ತೇಲುಗಣ್ಣು + – ಅ$_7$]

**ತೇಲುಗಣ್ಣು** (ನಾ). ೧. ಸ್ಥಿರತೆ ತಪ್ಪಿದ ಕಣ್ಣು; ಬಸವಳಿದ ಕಣ್ಣು: ತೇಲುಗಣ್ಣು ಹಾಕುತ್ತ ನಡೆದ ಅವನಿಗೆ ನವಚೈತನ್ಯ ಬಂದಂತಾಯಿತು (ಕಂದುಟ. ೫೯); ಆ ಭಯಂಕರದೃಶ್ಯದಿಂದ ತನಗೆ ತೇಲುಗಣ್ಣಾದುದಾಗಿಯೂ ಹೇಳಿ . . . ತನ್ನ ಕಥೆ ಮುಗಿಸಿದಳು (ಪುನರು. ೨೦೯). ೨. ಚಂಚಲವಾದ ಕಣ್ಣು: ಆ ಪಾಂಡಿತ್ಯವನ್ನು ಗೌರವಿಸುತ್ತ ಮೂರ್ತಿಯ ತೇಲುಗಣ್ಣುಗಳನ್ನೆ ನೋಡುತ್ತಿರುವ ಚಪಲ ಯಾಕೆ? (ಪಾತ್ರಲ್ಯ. ೨೨೪).

ತೇಲುಗಣ್ಣು ಮೇಲುಗಣ್ಣು=೧. ಆಯಾಸಗೊಂಡ ಸ್ಥಿತಿ; ಬಳಲಿರುವಿಕೆ: ಏಕಾದಶೀಭಕ್ತಮಂಡಳಿ ಅನಶನಸ್ಥಿತಿಯಲ್ಲಿ ಕುಳಿತು, ಮಲಗಿ ತೇಲುಗಣ್ಣುಮೇಲುಗಣ್ಣು ಹಾಕತೊಡಗಿತ್ತು (ದೀಪಹ. II, ೩). ೨. ಸಾಯುವ ಸ್ಥಿತಿ: ಸ್ವಲ್ಪ ಹೊತ್ತಿಗೆ ಮುಂಚೆ ಅವರ ಸ್ಥಿತಿ ತೇಲುಗಣ್ಣು ಮೇಲುಗಣ್ಣು ಆಗಿತ್ತು (ರೂಢಿ).

[ತೇಲು$_1$ (< ತೇಲ್) + ಕಣ್ಣು (< ಕಣ್)]

**ತೇಲುನೋಟ** 'ತೇಲ್ನೋಟ' ನೋ.

**ತೇಲುನೋಟಕ** (ನಾ). ಮೇಲುಮೇಲಿನದನ್ನು ಮಾತ್ರ ನೋಡುವವನು; ಆಳವಾಗಿ ಅಭ್ಯಾಸ ಮಾಡದವನು: ಕವಿ ಶೃಂಗಾರವನ್ನು ಹೆಚ್ಚು ಬಳಸಿರುವುದಾಗಿ ತೇಲುನೋಟಕರಿಗೂ ಅನಿಸದಿರದು (ನಂಜುಂಡ. ೧೦೦). [ತೇಲು$_1$ (<ತೇಲ್) + ನೋಟಕ]

**ತೇಲುಪಟ್ಟಿ** (ನಾ). ಸಮುದ್ರಪ್ರಯಾಣದಲ್ಲಿ ಹಡಗಿನಲ್ಲಿಟ್ಟಿರುವ ಪ್ರಾಣರಕ್ಷಣೆಯ ಸಾಧನಗಳಲ್ಲಿ ಒಂದು; ತೇಲುವುದಕ್ಕೆ ಸಹಾಯವಾಗುವಂಥ ಸಾಧನ: ಪ್ರತಿಯೊಬ್ಬರಿಗೂ ಒಂದೊಂದು ತೇಲುಪಟ್ಟಿಯನ್ನು ಒದಗಿಸಿರುವರು (ಕಪಶು. ೫-೦೨೬).

[ತೇಲು$_1$ (< ತೇಲ್) + ಪಟ್ಟಿ$_3$ (< ಪಟ್ಟೆ$_2$)]

**ತೇಲುಮನೆ** (ನಾ). ನೀರಿನ ಮೇಲೆ ಚಲಿಸುವ ಮನೆ; ದೋಣಿ; ತೆಪ್ಪ: ಸುತ್ತಲೆಲ್ಲ ತನ್ನವರ 'ತೇಲುಮನೆ'ಗಳು, ಕೆಳಗೆ ಅನ್ನವನ್ನು ನೀಡುವ ತಾಯಿಕಡಲು (ಪುಂಗಾಮು. ೭೪).

[ತೇಲು$_1$ (< ತೇಲ್) + ಮನೆ]

**ತೇಲುಮಾತು** (ನಾ). ಅಮುಖ್ಯವಾದ ಮಾತು; ಗೌಣವಾದ ಮಾತು; ಹಾರಿಕೆಯ ಮಾತು: ಛೆ, ಛೆ, ಇದೆಲ್ಲ ಬರೀ ತೇಲುಮಾತು! (ಹೊಸಕ್ಷ. ೫೬). [ತೇಲು$_1$ (< ತೇಲ್) + ಮಾತು$_1$]

**ತೇಲ್ನೋಟ, ತೇಲುನೋಟ** (ನಾ). ಅಸ್ಥಿರವಾದ ನೋಟ: ವಿಂದು ತೇಲ್ನೋಟದಿಂದಾಸ್ಯವ ನಿರೀಕ್ಷಿಸಲು ಕಂದರ್ಪ ಕಂಡು (ಸವಪೋ. ೫-೨೦). ತೇಲುನೋಟ: ಅವಳತ್ತ ತೇಲುನೋಟದಿಂದ ನೋಡಿದನು (ರೂಢಿ). [ತೇಲ್ + ನೋಟ]

**ತೇಲ್ಮುಗಿ** (ಕ್ರಿ). ನಿಧಾನವಾಗಿ ಮುಚ್ಚು: ಕರಣದಿಂ ಬೆರಸಿ ಬೋಸರಿಸಿ ದೈನ್ಯದಿ ನಾಮೋಚ್ಚರಣೆಗೈವುತ ನೇಮಂಗಳಿಗೆ ಕರವಿಡೆ ತೇಲ್ಮುಗಿವರೆ ಗಣ್ಬುಮ್ಮಳಿಸಿದು ತಂಪೊರೆದೊಗುವರಲುಬುಜಲವು (ಭೃರಸೂ. ೨೯೭). [ತೇಲ್ + ಮುಗಿ]

**ತೇಲ್ಮೆ** (ನಾ). ನೀರಿನ ಮೇಲೆ ಚಲಿಸುವಿಕೆ: "ತೇಲುವುದು: ತೇಲ್ಮೆ" (Floatage. ಇಂಕವಿ). [ತೇಲ್ + – ಮೆ$_1$]

**ತೇವ** (ನಾ). ಹಸಿ; ಒದ್ದೆ; ಆರ್ದ್ರತೆ: "ತೇವಂ = ಆರ್ದ್ರಂ" (ಕಾಕಕ್ಕ. ೦೦೫): ದ್ರಾಕ್ಷೆ, ಖರ್ಜೂರ . . . ತೇವ ತಾಗಿದರೆ ಹಾಳಾಗಬಹುದು (ಅಡುಸಾ. ೫೪); ಕೆಸರುಗದ್ದೆಯ ವಿನಾ ಭೂಮಿಗಳನ್ನು ಉಳುವಾಗ ಭೂಮಿಯಲ್ಲಿ ತೇವ ಹೆಚ್ಚಾಗಿರಬಾರದು (ವ್ಯವಸು. ೦೪): ದೀದಿಯ ಕಣ್ಣುಗಳು ತೇವವಾಗಿರುವುದು ನನ್ನ ಕಣ್ಣಿಗೆ ಬಿದ್ದಿತು (ಬಾಣಿಆ. ೫).

[<ಸಂ. ತೇಮ]

**ತೇವಗೊಳ್ಳು** (ಕ್ರಿ). ಒದ್ದೆಯಾಗು; ಹಸಿಯಾಗು: ಬಡಬ್ರಾಹ್ಮಣನ ಒಣಗಿದ ನಾಲಗೆ ಆಗಲೇ ತೇವಗೊಂಡಿತ್ತು (ಪದ್ಯಸ. ೦೩೬): ಭಟ್ಟನಿಯ ಕಣ್ಣುಗಳು ತೇವಗೊಂಡವು (ಬಾಣಿಆ. ೦೪೨); ಕಣ್ಣುಗಳತ್ತರೆ ಬಹು ಬೇಗ ಮೂಗುವೆ ತಾನಾಗಿ ತೇವಗೊಳ್ಳುವುದು (ಇಂದಾಪ. ೨೩೭-೭೦).

[ತೇವ + ಕೊಳ್ಳು$_1$ (<ಕೊಳ್$_1$)]

**ತೇವಟಿಗೆ** 'ತಿವದಿಗೆ' ನೋ.

**ತೇವನ** (ನಾ). ಒಂದು ಬಗೆಯ ಮೇಲೋಗರ: "ತೇವನ – ತೇಮನ = ಒಂದು ಬಗೆ ಮಜ್ಜಿಗೆ, ತೇವ" (ತದ್ಭಕೋ. ೧೮); "ತೇಮನಂ, ನಿಷ್ಠಾನಂ– ೨ ತೇವನವೆಂಬ ಮಜ್ಜಿಗೆಪಳಿದ್ಯ, ಹಸೀಮಜ್ಜಿಗೆ . . . ಚಟ್ನಿ" (ಸಿದ್ಧಾಂತಿ. ೨೪೭). [<ಸಂ. ತೇಮನ]

**ತೇವಾರ** (ನಾ). ತಮಿಳುನಾಡಿನ ಪ್ರಾಚೀನ ಶಿವಶರಣರು ಶಿವನನ್ನು ಕುರಿತು ರಚಿಸಿದ ಭಕ್ತಿಗೀತೆಗಳ ಸಂಗ್ರಹ: ಕನ್ನಡಗೀತಾಸಾಹಿತ್ಯದ ಮೇಲೆ ತಮಿಳುನಾಡಿನ ಶಿವಶರಣರ ತೇವಾರಗಳ ಪ್ರಭಾವ ಅಪರಿಮಿತವಾಗಿ ಆಗಿರುವುದು (ಅವಕಂ. ೧೪ ಓದಿಕೆ); ವೀರಶೈವರು ಶಿವಶರಣರ ವಚನಗಳನ್ನೂ ತಮಿಳು ಶೈವಸಿದ್ಧಾಂತದವರು ತೇವಾರಗಳನ್ನೂ ಪ್ರಮಾಣಗಳಾಗಿ ಅಂಗೀಕರಿಸಿದ್ದಾರೆ (ಭಾರದ. ೨೦೦). [←ತಮಿ. ತೇವಾರ]

**ತೇವಿಸು** (ಕ್ರಿ). ತೇವಮಾಡು; ಒದ್ದೆಯಾಗುವಂತೆ ಮಾಡು: ಜಲತಿ = ತೇವಿಸಿದಪಂ (ಕಾಕಕ್ಕ. ೦೪೬). [ತೇವ + – ಇಸು$_3$]

**ತೇವುಳ್** 'ತೇವಂಳಂ' ನೋ.

**ತೇವುಳಿ** 'ತೇವಂಳಂ' ನೋ.

**ತೇವುಳು** 'ತೇವಂಳಂ' ನೋ.

**ತೇಹ** 'ತೇಗ$_2$' ನೋ.

**ತೇಳ್** 'ತೇಟ್$_2$' ನೋ.

**ತೇಳು** 'ತೇಟ್$_2$' ನೋ.

**ತೇಳ್ದೇರ** 'ತೇಟ್ದೇರ' ನೋ.

**ತೇಜಿತು** (ನಾ). ಪುಷ್ಟಿಯಾದುದು; ಬಲವಾದಂದು; ಗಟ್ಟಿಯಾದುದು: ಘನಮಪ್ಪುದು ಗಂಭೀರಸ್ವನಮಪ್ಪುದು ತೇಜಿತವಪ್ಪುದುತ್ಸಾಹೋನ್ನೀಲನ ಮಪ್ಪುದು ಹೇಷಿತಮದು ಧನಕನಕಸಮೃದ್ಧಿ ಮಾಡಲಾರ್ಕುಂ ಜಯಮಂ (ಅಶ್ವಶಾ. ೩-೨೫).

**ತೇಜಿದಂ** = ಪುಷ್ಟನಾದವನಂ ; ಬಲಿಷ್ಠ : "ತೇಜಿದನೆನೆ ಪುಷ್ಟಿಯಾದಂ" (ಕರ್ಣಾನಿ. ೭೦).

[ ದೇ.II ತಮಿ. ಮಲ. ತೇಜ್ಜು = ಉತ್ಕರ್ಷ, ಬೆಳವಣಿಗೆ ]

**ತೇಟ್$_1$** (ಕ್ರಿ). ನಾಶವಾಗು ; ಅಳಿ (?): ಬೀಟುವಿನಂ ಕಣ್ಣಾಳ್ಕೆ ನಿರಾಳಂ ಬನಮಾಗೆ ಮನದ ಮೋಹಸ್ತಂಭಂ ಬೀಟೆ ವಿಷಯಾನುರಾಗಂ ತೇಟೆ ನಭಸ್ಥಲದೊಳಾದುದುಲ್ಕಾಪಾತಂ (ಅಜಿಪು. ೬-೯೬).

[ P ಇದು 'ತೀಟ್' ಎಂಬುದರ ಅಪಲಿಖಿತವಿರಬಹುದು ]

**ತೇಟ್$_2$, ಚೇಳಂ$_1$, ಚೇಟ್, ಚೋಳಂ, ತೇಳ್, ತೇಳು, ತೇಟು** (ನಾ). ಬಾಲದಲ್ಲಿ ಕೊಂಡಿಯನ್ನು ಉಳ್ಳ ಒಂದು ಬಗೆಯ ವಿಷಜಂತು ; ವೃಶ್ಚಿಕ : "ದ್ರುತಃ, ಅಳಿಃ, ವೃಶ್ಚಿಕಃ – ಈ ೩ ತೇಟ್ (ಚೇಳು)" (ಹಲಾಯು. ೦೦೬-೨೩) ; "ತೇಟೆಂದೆನೆ ವೃಶ್ಚಿಕದೊಳ್" (ಕರ್ಣಾನಿ. ೮೦): ಪುಟ್ಟಿದ ತಾಣಕ್ಕಟಿವಂ ಪುಟ್ಟಿಸಲೊಡರಿಸುವ ಕಿಚ್ಚು ತೇಟ್ ಕ್ರಿಮಿ ಕುತ್ತಂ ಪುಟ್ಟುವವೋಲ್ ದುಷ್ಕೃತದಿಂ ಪುಟ್ಟಿದನೀ ಪಾಪಕರ್ಮನೆನ್ನಯ ಬಸುಱಿಂ (ಕಾದಂಬ. ೪೮೫) ; ಪರ್ದಿನಂತೆ ಕೀಟ್ಬರ್ ತೇಟಿನಂತೆ ನೋಯಿಸುವರ್ (ಧರ್ಮಾಮೃ. ೩-೭೩) ; ತಿಂದ ತೇಟಿನಂತೆಯುಂ ಪೊಡೆದ ಸಿಡಿಲಂತೆಯುಂ . . . ಪೋದರ್ (ಲೀಲಾವ. ೦೪-೦೦೬ ವ); ಕೇಡುಗಾಲಕ್ಕೆ ತಾಮೊಗೆವರ್ತೇಟಿಂಗೆವಂತಿವರ್ವಿನಗೆ (ಅನಂಪು. ೦೩-೪೯) ; ಮಾಡಿದ ನೇಕೆಯೊ ಮೇಲಂ ನೋಡದೆ ಬಿದಿ ವಿಷಮಾಘಣಿಗಣಂಗಳ ವಲ್ಲಂ ರೂಢಿಸಿದ ತೇಟ್ಗೆ ಮುಳ್ಳಂ ನಾಡಱಿಕೆಯ ದುರ್ಜನಂಗೆ ನಿಡುನಾಲಗೆಯಂ (ಧರ್ಮಪಾ. ೦-೬೨) ;ಪುದಿದಿರ್ಪುದು ತೇಟ್ಗೆ ವಿಷಂ ತುದಿವಾಲದೊಳ್ (ಚಕವಿ. ೦-೩೩). **ಚೇಳು$_1$** : ಊಜದ ಚೇಳಿನ ಏಜದ ಬೇನೆಯಲ್ಲಿ ಮೂಱುಲೋಕವೆಲ್ಲಾ ನರಳಿತ್ತು (ಅವಚಂ. ೦೪-೩೭೫) ; ಚೇಳಿಂಗೆ ಬಸುಱಾಯಿತ್ತೆ ಕಡೆ ಬಾಳೆಗೆ ಫಲವಾಯಿತ್ತೆ ಕಡೆ (ಬಸವ. ೬೬೪); ಚೇಳ ಬೆನ್ನಿನೊಳೊಡೆದು ಮೂಡುವ ಬಾಲ ವೃಶ್ಚಿಕದಂತೆ (ಕುಮಾ.ಭಿ. ೦೦-೯) ; ಚೇಳಿನ ಮಂತ್ರ ಬಾರದವನು ಹಾವಿನ ಗುದ್ದಿಗೆ ಕೈ ಹಾಕಿದನಂತೆ (ಗಾದೆ) ; ಹಾವಿಗೆ ಹಲ್ಲು, ಚೇಳಿಗೆ ಬಾಲ (ಗಾದೆ). **ಚೇಟ್** : "ದ್ರುತವಮಾಲಿ ವೃಶ್ಚಿಕಂ ಕ್ರೂರಚೇಟಿನಿಕುಂ" (ಮಂಗರಾ. ೦೦೯-೫); ಚೇಟ್ ಚಿಕ್ಕದೆಂದಟ್ಟಱಿಂ ತೆಗೆಯಲ್ ಕಚ್ಚದೆ (ಸೋಮೇಶ. ೪೦). **ಚೋಳು** : ಚೋಳಿಗೆ ಪಾರುವತ್ಯ ಕೊಟ್ಟ ಹಾಗೆ (ಗಾದೆ). **ತೇಳ್** : ಅಹಿ ಕೊಣ್ಡಡೆ ತೇಳ್ ತಿನ್ದಡೆ (ಎಕ. XII, ೨೮೨-೦೯೩ ; 1077). **ತೇಳು** : ವೇಣು ಕದಳಿ ತೇಳು ಕರ್ಕಟಗಳು ಕೇಡು ಮಾಣದ ತಮಗಾಗುವಲ್ಲಿ ಹುಣಿಸೆ ಫಲವಾಗುವಂತೆ ನೀ ಮಕ್ಕಳ ಬಾಣ ಪಡೆದೆ ಕೆಡುವುದಕೆ (ಅನಂಚ. ೨೦-೧೨೬) : ನಾನೊಂದು ತೇಳಾಗಿ, ಆವೆಯಾಗಿ, ಅಂತಹ ಇನ್ನೇನಾದರೂ ಆಗಿ ಹುಟ್ಟಬಾರದಾಗಿದ್ದಿತೇನು (ಸುಗುಣಂ. ೦೦೪-೬). **ತೇಟು**: ಸ್ಪರ್ಶ ರಸ ಗಂಧಂಗಳೆಂಬೀ ಮೂಱಿನಜೀವ . . . ವೇನು ಸೀರು ತೇಟು ಇಂದ್ರಗೋಪ ತೇರಂಟಿ (ಪಶಾರ. ೪೯).

**ತೇಟ ಬಾಲ** = ೧. ಚೇಳಿನ ಬಾಲ : "ಅಳಂ, ವೃಶ್ಚಿಕಲಾಂಗೂಳಂ – ಈ ೨ ತೇಟ (ಚೇಳ) ಬಾಲಂ" (ಹಲಾಯು. ೦೦೬-೨೩). ೨. ಒಂದು ಬಗೆಯ ಸಸ್ಯ ; "ಕತ್ತರಿ" (ಚಕನಿ. ಕ. I. ೬೩).

[ ದೇ.II ತಮಿ. ಮಲ. ತೇಳ್ ; ತುಳು. ತೇಳ್, ತೇಲ್, ಚೇಳ್ ; ಕೊಡ. ತೇಳೀ ; ತೆಲು. ತೇಲು ; ಮಲ್ತೊ. ತೇಲಿ ]

**ತೇಟು** 'ತೇಟ್$_2$' ನೋ.

**ತೇಟ್ಕುಟಿಗ** (ನಾ). ಚೇಳಿನ ವಿಷವನ್ನು ನಿವಾರಿಸುವ ಒಂದು ಬಗೆಯ ಮೂಲಿಕೆ: ಜಲದಿಂದಂ ತೇಟ್ಕುಟ (ಡಿ) [ಟ] ಗನ ನೆಲಗುಂಬಳವೆಂಬಿವಂ ಸಮಂಗೊಂಡರದಿಂ ಪಲವಱೊಳೀಂ ಕುಡಿಸಲ್ಕಂ ಖಲ ವೃಶ್ಚಿಕ ವಿಷಮದಾಕ್ಷಣಂ ಪಱಿವಡುಗುಂ (ಖಮದ. ೦೧-೨೬).

[ ತೇಟ್$_2$ + – ಕುಟಿಗ$_1$ ]

**ತೇಟ್ದೇರ, ತೇಳ್ದೇರ** (ನಾ). ಚೇಳನ್ನು ವಾಹನವಾಗಿ ಉಳ್ಳವನು; ಭೈರವ: "ತೇಟ್ದೇರಂ ಬಿಗುರ್ವರಿಜಂ – ಈ ೨ ಭೈರವಂಗೆ ಪೆಸರ್" (ಕಶಸಾ. ೦-೮) ; "ಬಿಗುರ್ವರಿಜಂ ತೇಟ್ದೇರಂ ಬಗೆಯಲ್ಕಾಂ ಭೈರವಂಗೆ" (ಕವಿಕಂ. ೨೩) ; ಪೊದರ್ದಲೆಯ ಕರ್ಪೊಗದ ತೇಟ್ದೇರನೊಂದು ಪೊಡರ್ಪಿನ . . . ಜವನ ದೂಱುಗಾಱರ ಜಂಗುಳಿ (ಲಾಮಾಮೃ. ೬೪-೦೯). **ತೇಳ್ದೇರ** : "ಭೈರವಂಗೆ ತೇಳ್ದೇರನೆಂಬ.ವ ಪೆಸರ್" (ಕಶರ. ೪೪).

[ ತೇಟ್$_2$ + ತೇರ್$_2$ + – ಅ$_7$ ]

**ತೈ** (ನಾ). ಕುಣಿತದ ತಾಳವನ್ನು ಸೂಚಿಸುವ ಒಂದು ಅನುಕರಣ ಶಬ್ದ : (ಕ).

**ತೈಜಸ** (ಗು). ೧. ಹೊಳಪುಳ್ಳ; ಪ್ರಕಾಶಮಾನವಾದ. (ನಾ). ೨. ಕಾಂತಿ ; ಹೊಳಪು ; ಪ್ರಕಾಶ : ತೀಡುವೆಲರಿನ ಗುಂಪು ತೀವ್ರಾಪ್ಪುಗಳ ಗುಂಪು ಮೂಡಿ ಬಹ ಚಪಲಾತಿಶಯದಿಂಪು ತೈಜಸದಿ ಕೂಡಿರುವ ವೈಭವದ ಲಂಪು . . . ಚಿರವೆಸುತ ಲಾಲಿಸುವ ಮೂಢರಿಂಗೇನೆಂಬೆನು (ವೆಂಕಟಾ. ೨-೯-೨೩) ; ಮಿಂಚಿ ರೋವಾಂಚನಿಸಿತೆಂಬವೋಲ್ ಮೊಗಕೆ ತುಳ್ಕಿದುದು ತೈಜಸಂ (ಶ್ರೀರಾಮಾ. ೩೯೯-೯೯೬). ೩. ತೇಜಸ್ಸಿಗೆ ಸಂಬಂಧಿಸಿದ ಇಂದ್ರಿಯ ; ನಯನೇಂದ್ರಿಯ ; ಕಣ್ಣು : ರೂಪವುಳ್ಳ ನಯನವು ತೈಜಸ (ಛಾತತ್ತ್ವ. ೬೬೩); P ಶಾಸ್ತ್ರಗಳಲ್ಲಿ ಘ್ರಾಣಕ್ಕೆ ಭೂಮಿ, ರಸನಕ್ಕೆ ಜಲ, ನಯನಕ್ಕೆ ತೇಜಸ್ಸು, ಸ್ಪರ್ಶಕ್ಕೆ ವಾಯು, ಶ್ರವಣಕ್ಕೆ ಆಕಾಶ –ಹೀಗೆ ಪಂಚೇಂದ್ರಿಯಂಗಳಿಗೂ ಪಂಚಭೂತಗಳಿಗೂ ಸಂಬಂಧವನ್ನು ಹೇಳಿದೆ. ೪. ಲೋಹ : "ಎಲ್ಲ ಲೋಹಂ ತೈಜಸಂ" (ಮಂಗರಾ. ೩೦-೫). ೫. [ತತ್ತ್ವಶಾ] ಮೂರು ವಿಧವಾದ ಅಹಂಕಾರತತ್ತ್ವಗಳಲ್ಲಿ ಒಂದು ; ರಜೋಗುಣಪ್ರಧಾನವಾದ ಅಹಂಕಾರ : ಮತ್ತೆ ಅದಹಂಕಾರವದಱಿಂ ಸತ್ತ್ವದಿಂ ವೈಕಾರಿಕವು ತಿಳಿ ಮತ್ತೆ ತೈಜಸ ರಜದಿ ತಾಮಸದಿಂದ ಭೂತಾದಿ (ಅಮೃತ. ೪-೦೦) ; ವೈಕಾರಿಕ, ತೈಜಸ, ತಾಮಸವೆಂದು ಮೂರು ವಿಧ ಅಹಂಕಾರತತ್ತ್ವಗಳಿರುವುವು (ಹಸಾರ. ೦೪-೦ ತಾತ್ಪರ್ಯ) ; ಸಾತ್ವಿಕಾಹಂಕಾರಕ್ಕೆ ವೈಕಾರಿಕವೆಂದೂ ರಾಜಸಾಹಂಕಾರಕ್ಕೆ ತೈಜಸವೆಂದೂ ತಾಮಸಾಹಂಕಾರಕ್ಕೆ ಭೂತಾದಿಯೆಂದೂ ನಾಮಾಂತರಗಳು ಶಾಸ್ತ್ರದಲ್ಲಿ ಹೇಳಿವೆ (ತತ್ತ್ವಸು. ೬). ೬. (ಸಂಖ್ಯಾದರ್ಶನದ ಮೇರೆಗೆ) ಸತ್ತ್ವಗುಣಪ್ರಧಾನವಾದ ಅಹಂಕಾರ : ತೈಜಸಂ ವೈಕಾರಿಕಾಯತ್ತ ಭೂತಾದಿಯುಂದಹಂಕಾರದಿಂತೀಯವನಿಯಲ್ಲಿ ಮೂದೆಜನಾದುದಾ ತೈಜಸವೆ ಸಾತ್ವಿಕದ ಗುಣವು (ವೀಕೃಪು. ೬-೫-೦೦) ; ತೈಜಸದಲ್ಲಿ ಸತ್ತ್ವಗುಣವು ಪ್ರಧಾನವಾಗಿಯೂ ವೈಕೃತದಲ್ಲಿ ರಾಜಸಗುಣವೇ ಪ್ರಧಾನವಾಗಿ ಇರುವುವು (ಛಾತತ್ತ್ವ. ೬೬೪). ೭. ಸ್ವಪ್ನಾವಸ್ಥೆಯನ್ನು ಅನುಭವಿಸುವ ಜೀವ ; ಆತ್ಮನ ಒಂದು ಅವಸ್ಥೆ : ಸೂಕ್ಷ್ಮಶರೀರದಲ್ಲಿರುವ ಜೀವನಿಗೆ ತೈಜಸನೆಂದೂ ಅಂತರಾತ್ಮನೆಂದೂ . . . ಹೇಳುವರು (ಶಿವಾಸೂ. ೪೯) ; ಈ ವಿಧದವಸ್ಥೆ

ಯಲಿ ಹೊಳೆಯುವ ಜೀವನೆನಿಸುತ ವಿಶ್ವ ತೈಜಸನೋವಿ ಪ್ರಾಜ್ಞನೆನಿಪ್ಪ ಪೆಸರನು ತಿಳಿದು ತೋಱುವನು (ಅಮೃತ. ೯-೦೩) : ಸೂತ್ರವೈಶ್ವಾನರರಧಿಗತವಿಶ್ವಾತ್ಮನುಂ ತೈಜಸಂ ಪ್ರಾಜ್ಞಕನಾದಾ ನೀನೆ (ಶಬಶಂ. ೩-೩೩); ಈ ರೀತಿಯಾದ ಪ್ರಾಜ್ಞ, ತೈಜಸ ವಿಶ್ವರೆಂಬ ಹಂತಗಳನ್ನು ಹತ್ತಿ ಶಿವನೇ ಆಗುವವನು (ಭಾರತ. ೫೦೭) : ೨ ಶಾಸ್ತ್ರಗಳಲ್ಲಿ ಸ್ಥೂಲ ಶರೀರದಲ್ಲಿರುವ ಜೀವನಿಗೆ ವಿಶ್ವನೆಂದೂ ಸೂಕ್ಷ್ಮ ಶರೀರದಲ್ಲಿರುವ ಜೀವನಿಗೆ ತೈಜಸನೆಂದೂ ಕಾರಣಶರೀರದಲ್ಲಿರುವ ಜೀವನಿಗೆ ಪ್ರಾಜ್ಞನೆಂದೂ ಹೇಳಿದೆ ೪. [ಜೈನ] ಔದಾರಿಕ, ವೈಕ್ರೀಯಕ, ಆಹಾರಕ, ತೈಜಸ ಮತ್ತು ಕಾರ್ಮಣಗಳೆಂಬ ಐದು ಬಗೆಯ ಶರೀರಗಳಲ್ಲಿ ಒಂದು : ಸ್ಥೂಲ ಶರೀರದಲ್ಲಿ ದೀಪ್ತಿಯನ್ನುಂಟುಮಾಡುವಂಥ ಸೂಕ್ಷ್ಮ ಶರೀರ : ಅನುಕ್ರಮದಿನಯ್ದು ಭೇದದಿನೌದಾರಿಕ ವೈಕ್ರೀಯಕ(ಮಾ)ಹಾರಕ ತೈಜಸ ಕಾರ್ಮಣಂಗಳವು ತನು ವೆ ನಿ ಕು ೦ (ಸುಕುಮಾ. ೮-೦೦) : ಔದಾರಿಕ, ವೈಕ್ರೀಯಕ, ಆಹಾರಕ, ತೈಜಸ, ಕಾರ್ಮಣ ಎಂಬ ಐದು ತರದ ಶರೀರಗಳುಂಟು . . . ತೇಜಸ್ಸು ಹುಟ್ಟುವ ಯೋಗ್ಯತೆಯುಳ್ಳ ಶರೀರವು ತೈಜಸವು (ಜೈನಧ. ೩೨). [ ಸಂ. ]

**ತೈಜಸಾವರ್ತನಿ** (ನಾ). ಲೋಹವನ್ನು ಕರಗಿಸುವ ಮೂಸೆ: "ತೈಜಸಾವರ್ತನೀ, ಮೂಷಾ – ೨ ಚಿನ್ನ ಮೊದಲಾದ್ದು ಕರಗಿಸುವ ಮೂಸೆಯ ಪೆಸರು" (ಸಿದ್ಧಾಂತಿ. ೫೭೦). [ ಸಂ. ತೈಜಸಾವರ್ತನೀ ]

**ತೈತಿಕ್ಕು** (ಕ್ರಿ). (?) : ಸಂಕಲಿನಾಚಿಯರ ನೋಟದೊಡನೆ ತನ್ನ ನೋಟಂ ಘಳಲನೆ ಸಂದಿಸೆ . . . ನಡೆಗೆಟ್ಟು ಕಂಪಿಸಿ ನಸುಬೆಮರ್ತುರ್ ಹೊಸ ನೋಟಂ ಹೊರಟೆಗುಟ್ಟ ತೈತಿಕ್ಕಿ[ಪಾಠಾಂ. ಕೈತಿಕ್ಕಿ]ತಿಳಿರದೆ ತಂತಮ್ಮೊಳ ಪೊಕ್ಕ ರೂಪು ಮಗುಳಲಾಱದೆ ನಟ್ಟು ನೋಡುತ್ತಿರಲ್ (ಸಂಬಿರ. ೦೨-೫೪).

[ ೨ಇದು 'ಸೈತಿಕ್ಕು' ಎಂಬುದರ ಅಪಲಿಖಿತವಿರಬಹುದು ]

**ತೈತಿಕ್ಷೆ** (ನಾ). ಸಹನೆ; ತಾಳ್ಮೆ: ಮಿತಿಯನರಿತಾಶೆ, ಸಮುಚಿತವ ಮರೆಯದ ಯತ್ನ ತೈತಿಕ್ಷೆ ಕಷ್ಟಾಂಶದಪರಿಹಾರ್ಯತೆಗೆ (ಮಂಕುತಿ. ೮೮೦).

[ ಸಂ. ತೈತಿಕ್ಷ ]

**ತೈತಿಲ** (ನಾ). ೧. ಖಡ್ಗಮೃಗ ; ಘೇಂಡಾಮೃಗ. ೨. ಒಬ್ಬ ದೇವತೆ. ೩. ಒಂದು ದೇಶದ ಹೆಸರು: ಬಿಸಕಾಂಭೋಜಕ ಬಾಹ್ಲೀಕ ಸೈಂಧ ವಾರಟ್ಟ ತೈತಿಲಂ ವಾನೇಯಂ ಮೊದಲ ಕ್ಷೇತ್ರದ ಹಯಕಾ ಪೆಸರೆ ಪೆಸರ್ ಜಾತಿಗಳ್ ಗಂಧಾರಂಗಳ್ (ಅಶ್ವಶಾ. ೬-೭೬). ೪. [ಜ್ಯೋತಿ] ಹನ್ನೊಂದು ಕರಣಗಳಲ್ಲಿ ನಾಲ್ಕನೆಯದು. [ ಸಂ. ]

**ತೈತ್ತಿರ** (ನಾ). ೧. ಖಡ್ಗಮೃಗ ; ಘೇಂಡಾಮೃಗ. ೨. ಗೌಜಲುಹಕ್ಕಿ ; ತಿತ್ತಿರಿ. ೩. ಗೌಜಲುಹಕ್ಕಿಗಳ ಸಮೂಹ,-ಗುಂಪು. [ ಸಂ. ]

**ತೈತ್ತಿರೀಯ** (ಗು). ೧. ತಿತ್ತಿರಿಶಾಖೆಗೆ ಸೇರಿದ: ತೈತ್ತಿರೀಯ ಆರಣ್ಯಕವಂತೂ ಪ್ರತಿಮಾಶಿಲ್ಪಿಗಳಾದ ತ್ವಷ್ಟಾ, ವಿಶ್ವಕರ್ಮ ಮತ್ತು ತಕ್ಷಪರ ಹೆಸರುಗಳನ್ನು ಸ್ಪಷ್ಟವಾಗಿ ಹೇಳುವುದು (ಭಾರತ. ೫೦೦). (ನಾ). ೨. ಈಶ, ಕೇನ, ಕಠ, ಪ್ರಶ್ನೆ, ಮುಂಡಕ, ಮಾಂಡೂಕ್ಯ, ತೈತ್ತಿರೀಯ, ಐತರೇಯ, ಛಾಂದೋಗ್ಯ, ಬೃಹದಾರಣ್ಯಕಗಳೆಂಬ ದಶೋಪನಿಷತ್ತುಗಳಲ್ಲಿ ಒಂದು; ತಿತ್ತಿರಿ ಶಾಖೆಗೆ ಸೇರಿದ ಉಪನಿಷತ್ತು. [ಸಂ.]

**ತೈನಾತಿ** (ಗು). ೧. ನಿಯುಕ್ತ ಮಾಡಿದ ; ನೇಮಿಸಿರುವ : ಮಣಿಗಾರನ ತಾಬೆಯಲ್ಲಿ ತೈನಾತಿ ಜವಾನರು ಕುಳವಾಡಿಗಳು . . . ಮುಂತಾದ ಚಾಕರರು ಉಂಟು (ಕಥಾಮಂ. IV, ೩೦) : ತಾಲ್ಲೂಕಿನ ತೈನಾತಿ ಜವಾನನೊಬ್ಬ ಅವನನ್ನು ಎದುರುಗೊಂಡನು (ಸಂ.ಕ. VI, ೫೯) ; ಟಿಳಕರ ತೈನಾತಿ ನೌಕರರಲ್ಲಿ ಭಿಸ್ತಿ ಎಂ ಪಕಾಲಿಯಮನಿದ್ದ (ಸ್ವಾತಿಚಿ. ೩೦೩). (ನಾ). ೨. ಪರಿಚರ್ಯೆ ; ಸೇವೆ ; ಚಾಕರಿ ; ಊಳಿಗ : ಕತ್ತಿ ಗೋಪಾಲಯ್ಯ ಅರಸಿನವರ ತೈನಾತಿಯಲ್ಲಿಯಿದ್ದರು (ಹೈದರ. ೩೦); ಮುಂದೆ ಇವಳನ್ನು ಬಾದಶಹ ಬೇಗಮಳು ತನ್ನ ಖಾಸ ತೈನಾತಿಗೆಂದು ಕರೆಸಿಕೊಂಡಳು (ಹಂಸಾ. ೦೩೨) ; ತೈನಾತಿಗೊಂದು ಮನೆಯ ಆಳೂ ಹೋಗಲಿತ್ತು (ದೀಪಹ. I, ೬೦) ; ನನ್ನ ತೈನಾತಿಯಲ್ಲಿ ಷೇಕ್ ಮೊಹದಿನ್ ಎಂಬ ಕಾನ್‌ಸ್ಟೇಬಲ್ ಇದ್ದ (ಕಲಿಕೆ. ೧೦೯). ೩. ಊಳಿಗಕ್ಕೆ ಇರುವವನು; ಚಾಕರ ; ಕೈಯಾಳು : ಕಿಗ್ಗಟ್ಟನಾಡ ಮೋದೀಖಾನೆಯಲ್ಲಿ ಜೋಪಾನದಿಂದ ಮಡಗಿಸಿ ಅದಕ್ಕೆ ಒಬ್ಬ ತೈನಾತಿ ಮಾಡಿ (ರಾಜೇಂದ್ರ. ೭೭) : ಜತೆಗೆ ತೈನಾತಿಯೊಬ್ಬ (ಕುವಿಕೊ. ೩೪) ; ಅವರಿಬ್ಬರ ಬೆನ್ನ ಹಿಂದೆ ತೈನಾತಿಗಳು ಹೊರಡುವಂತೆ ಹಿಂದಿನಿಂದ ಹಿಂಬಾಲಿಸುವ ಜನರು ಇದ್ದೇ ಇದ್ದಾರೆ (ಜಾರುದಾ. ೪೪).

[ ←ಹಿಂ. ಮರಾ. ತೈನಾತ್, ತೈನಾತೀ ; ಅರ. ತಇನಾತ್ ]

**ತೈಮಾಸ, ತಯಿಂಮಾಸ** (ನಾ). ಸೌರಮಾನ ವರ್ಷದ ಒಂಭತ್ತನೆಯ ತಿಂಗಳು : ಸಂಕ್ರಾಂತಿ ಬಂದು ತೈ(ಮಾಘ–ಫಾಲ್ಗುಣ)ಮಾಸ ಹುಟ್ಟಿ ಬಿಟ್ಟಿತು (ಕೊನಕ್ಕ. ೩೭). ತಯಿಮಾಸ : ಸಾಧಾ[ರಣ]ಸಂವತ್ಸರದ ತಯಿಮಾಸ ೫ ದಿಯಲೂ . . . ಆ ಸ್ಥಾನಿಕರಿಗೆ ಕೊಟ್ಟ ಸಂಸ್ಥೆ (ಸೌಇಇ. IX-ii, ೪೦೩-೪ ; 1870). [ ←ತಮಿ. ತೈಮಾಚ ]

**ತೈರು** (ನಾ). ಮೊಸರು. 'ತೈರುವಡೆ' ನೋ.

[ ದೇ.೨ ತಮಿ. ಮಲ. ತಯಿರ್; ತೆಲು. ತೈರು ]

**ತೈರುವಡೆ** (ನಾ). ಮೊಸರಲ್ಲಿ ನೆನೆಸಿದ ವಡೆ ; ಮೊಸರುವಡೆ : ಹೈಡ್ರೊಜನ್ ಬಾಂಬಿನಿಂದ ಹಿಡಿದು ರಾಜಭವನದ ಪೂರಿ, ತೈರುವಡೆಗಳ ವಿಸ್ತಾರಕ್ಕೂ ನಮ್ಮ ಹರಟೆ ಹಬ್ಬಿತ್ತು (ಇತಿನೋ. ೪೬). [ ತೈರು + ವಡೆ ]

**ತೈರೂರ್** (ನಾ). ಒಂದು ಊರಿನ ಹೆಸರು : ತೈರೂರ ಕೌಣ್ಡಿಲ್ಯಗೋತ್ರದ ಗಾವುಂಡ ಸಾಮಿಗಳ ಮಗನ್ (ಎಕ. XIV, ಮುಂಡ್ಯ. ೦೩-೬ : 895).

[ ? + ಊರ್ ]

**ತೈಲ$_1$** (ನಾ). ೧. ಎಳ್ಳಿನಿಂದ ತೆಗೆದ ಎಣ್ಣೆ ; ಎಳ್ಳೆಣ್ಣೆ: "ತಿಲಮೆನಲ್ಕೆಳ್ಳು ತೈಲವಮದೆಣ್ಣೆ ತೈಲಕಂ ಹಿಂಡಿ" (ಮುಂಗರಾ. ೧೧೦-೫). ೨. ಎಣ್ಣೆ : ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ (ಧರ್ಮಾಮೃ. ೦-೪೨) ; ತಿಲದ ಮಱೆಯ ತೈಲದಂತೆ . . . ಚೆನ್ನಮಲ್ಲಿಕಾರ್ಜುನನ ನಿಲವನಾರೂ ಅಱಿಯಬಾರದು (ಮಹಾದೇ. ಬ. ೯-೨) ; ಮಳಲೊಳ್ ತೈಲಂಗಳಂ ಹಿಂಡಲಕ್ಕು . . . ಕಡುಮೂರ್ಖಂ ಹಿತ ಕೇಳ್ವನೇ (ಸೋಮೇಶ. ೪೯) ; ಕಮಲಾಕ್ಷಿಯರು ಪೂರಿತ ಪರಿಮಳದ ತೈಲವನು ಮೊಗದು . . . ನೇವರಿಸಿದರು ಸೆಳ್ಳುಗುರ್ಗಳಲಿ ಶಶಿಮುಖಿಯ ಸಿರಿಮುಡಿಯ (ತೊರವೆ. ೦-೦೪-೦೩) ; ರಘುರಾಮಚಂದ್ರನಿನಿಯಳ ಜೀವದೀವಿಗೆಗೆ ತೈಲಮುಂ ಕಾಂತಿಯುಂ ತಾನಾಗಿ ರಸವಾಹದೊಳ್ ತೇಲುತಿರ್ದನು (ಶ್ರೀರಾಮಾ. ೫೫-೨೭) ; ಇಂದು 'ಎಣ್ಣೆ' ಎಲ್ಲಾ ತರದ ತೈಲಕ್ಕೂ ಅನ್ವಯಿಸುತ್ತದೆ (ಸಂಕೋಲ.೮೮). ೩. ಕೆಲವು ಔಷಧಗಳನ್ನು ಸೇರಿಸಿ ತಯಾರಿಸಿದ ಎಣ್ಣೆ.

[ ಸಂ. ]

**ತೈಲ$_2$, ತೈಳ** (ನಾ). = ತೈಲಪ : ಮೊಲೆವೊತ್ತ ತೈಲಜನನಿಯ ಕೆಲದೊಳ್ ರಂಜಿಪರೆ ವಿಹಾಸಿಪೊತ್ತಣ್ಣಂಗಳ್ (ಆದಿಪು. ೦-೬೫) : ಶ್ರೀತೈಲಭೂಪಾಳ (ಸೌಇಇ. XI-ii, ೦೩೭-೨೯ ; 1091). ತೈಳ : ತೈಳಭೂಪ(ಃ)ಸ್ತತೋ ಜಾತೋ ವಿಕ್ರಮಾದಿತ್ಯಭೂಪತಿಃ (ಸೌಇಇ. XI-ii, ೦೩೭-೨೨ : 1091).

**ತೈಲನ ಸಿಂಘ** = ಒಂದು ಬಿರುದು : ವೈರಿನಿಃಕಂಟಂ ತೈಲನ ಸಿಂಘಂ ಸಾಹಸೋತ್ತುಂಗಂ (ಸೌಇಇ. XX, ೪೦-೧೧ ; 1068). [ ? ]

**ತೈಲಂಗ** 'ತೆಲಂಗ' ನೋ.

**ತೈಲಕ** (ನಾ). ಎಣ್ಣೆಯನ್ನು ತೆಗೆದ ನಂತರ ಉಳಿಯುವ ಸಾರವಿಲ್ಲದ ವಸ್ತು ; ಹಿಂಡಿ : "ತಿಲಮೆನಲ್ಕೆಳ್ಳು ತೈಲವಮದೆಣ್ಣೆ ತೈಲ[ಪಾಠಾಂ. ಲಿ]ಕಂ ಹಿಂಡಿ" (ಮುಂಗರಾ. ೧೧೦-೫). [ ಸಂ. ]

**ತೈಲಕಾರ** (ನಾ). ಎಣ್ಣೆಯನ್ನು ತೆಗೆಯುವವನು ; ಗಾಣಿಗ : ಸುವರ್ಣಕಾರ . . . ತೈಲಕಾರಾದಿ ಅನಾಥಪ್ರೇಷ್ಯ ದಾಸೀದಾಸಪ್ರಭೃತಿ ಕಪಶ್ಚರಣಕ್ಕೆ ಅಯೋಗ್ಯಂಗಳಪ್ಪ ಹೀನಜಾತಿಗಳ್ (ಚಾರ. ೫೦). [ಸಂ.]

**ತೈಲಚಿತ್ರ** (ನಾ). ತೈಲವರ್ಣದ ಚಿತ್ರ; ತೈಲವರ್ಣವನ್ನು ಉಪಯೋಗಿಸಿ ಬರೆದ ಚಿತ್ರ : ಛಾಯಾಚಿತ್ರಗಳು, ತೈಲಚಿತ್ರಗಳು, ನೀರು ಬಣ್ಣದಿಂದ ಬರೆದ ಚಿತ್ರಗಳು, ಇವೆಲ್ಲವೂ ಹಾಫ್‌ಟೋನ್ ಪಡಿಯಚ್ಚಿಗೆ ಯೋಗ್ಯವಾದ ಮೂಲಪ್ರತಿಗಳು (ಮುದ್ರಣ. ೭೦) ; ಅರಸರ ತೈಲಚಿತ್ರಕ್ಕೆ ನಂದಾದೀವಿಗೆ ತಗುಲಿ, ಅದು ಉರಿದುಹೋಗುತ್ತದೆ (ಸಂಕಳ. ೯೯).

[ ತೈಲ$_1$ + ಚಿತ್ರ ]

**ತೈಲಧಾರೆ** (ನಾ). ಎಣ್ಣೆಯ ಸುರಿತ,–ಸುರಿಯುವಿಕೆ : ಕಾಲವಕ್ಷಯ ದೀಪವದರ ಪಾತ್ರಯಪಾರ ಬಾಳ್ ಅದರಿನಾದೊಂದು ಕಿರುಹಣತೆ ಮಿಣುಕು ಗಾಳಿಯಾರಿಪುದೊಂದನಿನ್ನೊಂದ ಹೊತ್ತಿಪುದು ತೈಲಧಾರೆ ಯಖಂಡ (ಮಂಕುಳ. ೦೦೪). [ ತೈಲ$_1$ + ಧಾರೆ ]

**ತೈಲನಿಕ್ಷೇಪ** (ನಾ). ಭೂಮಿಯೊಳಗಿರುವ ಎಣ್ಣೆಯ ದಾಸ್ತಾನು,–ನಿಕ್ಷೇಪ : (Oil Reserve. ಪತ್ರಿನಿ. ೫೯). [ ತೈಲ$_1$ + ನಿಕ್ಷೇಪ ]

**ತೈಲಪ** (ನಾ). ಚಾಳುಕ್ಯವಂಶದ ಒಬ್ಬ ಪ್ರಸಿದ್ಧ ದೊರೆಯ ಹೆಸರು : ಚಕ್ರವರ್ತಿಯೊಳ್ತೈಲಪನೊಳ್ ಪಡೆದಂ ಮಹಿಮೋನ್ನತಿಯಂ . . . ರನ್ನಂ (ಗದಾಯು. ೦–೩೭) : ಶ್ರೀಮಚ್ಚಾಳುಕ್ಯಚಕ್ರೇಶ್ವರನತುಳಬಳಂ ತೈಲಪಂ (ಇಐ. IV, ೨೦೮–೨ ; 1076) ; ಕಾಲಾಗ್ನಿರುದ್ರನೆನಿಸಿದುದು ತೋಳ ಬಾಳ್ ತೈಲಪನಾ (ಶಮುದ. ೦೦೭ ಪ್ರಯೋ). [ ? ]

**ತೈಲಪಕ್ವ** (ನಾ). ಎಣ್ಣೆಯ ಸ್ವರೂಪಕ್ಕೆ ಬರುವಂತೆ ಪಾಕವಾಗುವುದು : ಅರಗಿನ ಪುಡಿ ೧ ಪಡಿಯನ್ನು . . . ತೈಲಪಕ್ವವಾಗಿ ಅಟ್ಟು, ಶೋಧಿಸಿ ಕೊಂಡು, ಈತೈಲದಿಂ ಶರೀರಕ್ಕೆ ಲೇಪ ಅಭ್ಯಂಗನಾದಿಗಳಂ ನಡೆಸಲು . . . ಶೋಭೆ ಮುಂತಾದ ರೋಗಗಳು ಗುಣವಕ್ಕುಂ (ಸಕಲ್ಯ. ೦೨೮).

[ ತೈಲ$_1$ + ಪಕ್ವ ]

**ತೈಲಪರ್ಣಿ** (ನಾ). ೧. ಗಂಧ; ಚಂದನ : "ತೈಲಪರ್ಣಿ – ರಕ್ತ ಚಂದನ" (ಗಂಗಾಮು. ೦೫೭). ೨. ಸಾಂಬ್ರಾಣಿ ; ಹಾಲುಮಂಡ್ಡಿ ; ಲೋಬಾನ. ೩. ದೇವದಾರುವೃಕ್ಷದಿಂದ ತೆಗೆದ ಎಣ್ಣೆ : (*).

[ ಸಂ. ತೈಲಪರ್ಣೀ ]

**ತೈಲಪರ್ಣಿಕ** (ನಾ). ಒಂದು ಬಗೆಯ ಗಂಧದ ಮರ : "ತೈಲಪರ್ಣಿಕಂ, ೧ ಬಹಳ ತಣ್ಣಗಿರುವ ಚಂದನವು" (ಸಿದ್ಧೌಷಧಿ. ೨೦೮).

[ ಸಂ. ತೈಲಪರ್ಣಿಕಾ ]

**ತೈಲಪಾಕ** (ನಾ). ೧. ಎಣ್ಣೆಯಲ್ಲಿ ಹುರಿದ ಅಥವಾ ಕರಿದ ಪದಾರ್ಥ. ೨. ಎಣ್ಣೆಯನ್ನು ಉಪಯೋಗಿಸಿ ಒಂದು ಹದದಲ್ಲಿ ಕಾಯಿಸಿ ತಯಾರಿಸಿದ ಔಷಧಿಯ ವಸ್ತು : ತೈಲಪಾಕವನ್ನು ಮಾಡಲು ಎಣ್ಣೆ ಯನ್ನು ಹೇಳದಿರುವಲ್ಲಿ ಅಚ್ಚೆಳ್ಳೆಣ್ಣೆಯೆಂದು ತಿಳಿಯಬೇಕು (ಸಕಲ್ಯ. XII). ೩. (?) : ಅನವರತ ಪ್ರಮುಚ್ಯಮಾನಪ್ರಚುರನಿಜನಾರಾಚ ರಾಜಿಯಿಂದಮವಿರಳ ಮದಜಳ ತೈಲಪಾಕ ದುರಾಲೋಕಂಗಳಪ್ಪ ತದ್ಬಲ ಕರಟಿಘಟಂಗಳನಲ್ಪತುಚ್ಛಚ್ಛಿದ್ರಂಗಳ್ಮಾಡಲ್ಪಡೆಯದೆಯುಂ (ಆ ಧಿ ಪು. ೧೪–೦೦೩ ವ). [ ತೈಲ$_2$ + ಪಾಕ$_1$ ]

**ತೈಲಪಾಯಿಕೆ** (ನಾ). ೧. ಜಿರಳೆ ; ತೊಂಡಂಗಿ. ೨. ಒಂದು ಬಗೆಯ ಕೀಟ ; ಜೀರುಂಡೆ. ೩. ತೊಗಲಬಾವಲಿ : "ತೈಲಪಾಯಿಕೆ–ತೊಗಲ ಬಾವುಲಿ" (ಗಂಗಾಮು. ೧೫೭). [ ಸಂ. ತೈಲಪಾಯಿಕಾ ]

**ತೈಲಯ** (ನಾ). ಒಬ್ಬಾತನ ಹೆಸರು : ಬಾಗಿಗಳ ಬಲ್ಲಹಂ ಮಾರಹೂರ ತೈಲಯ (ಎಕ. VIII, ಸಾಗರ. ೭–೧೪ ; 1026).

[ ತೈಲ$_2$ + ಅಯ$_1$ (<ಅಯ್ಯ$_{31}$) ]

**ತೈಲಯಂತ್ರ** (ನಾ). ೧. ಎಣ್ಣೆಯನ್ನು ತೆಗೆಯುವ ಯಂತ್ರ ; ಗಾಣ. ೨. ಎಣ್ಣೆಯ ಹಬೆಯ ಸ್ಫೋಟನದಿಂದ ನಡೆಯುವ ಯಂತ್ರ,–ಎಂಜಿನು : ತೈಲಯಂತ್ರ (Oil-Engine)–ಇದರಲ್ಲಿ ಡೀಸಲ್‌ಎಣ್ಣೆಯಂಥ ಭಾರವಾದ ಎಣ್ಣೆಗಳನ್ನು ಇಂಧನವಾಗಿ ಬಳಸುತ್ತಾರೆ (ಶಿಲ್ಪಸಾ. ೨೦೩).

[ ತೈಲ$_1$ + ಯಂತ್ರ ]

**ತೈಲರಂಧ್ರ** (ನಾ). "ಯಂತ್ರಗಳಲ್ಲಿ ತಿಕ್ಕಾಟ, ಮಸೆದಾಟ, ಕಡಮೆ ಮಾಡಲು ಘರ್ಷಣಾಪಹರಣಕ್ಕಾಗಿ ಎಣ್ಣೆ ಒಳಹೊಸರುವಂತೆ ಮಾಡಿರುವ ರಂಧ್ರ" (Oil-Hole. ಇಂಕನಿ). [ ತೈಲ$_1$ + ರಂಧ್ರ ]

**ತೈಲವರ್ಣ** (ನಾ). "ವರ್ಣದ್ರವ್ಯಕ್ಕೆ ಎಣ್ಣೆಹಾಕಿ ಅರೆದು ಮಾಡಿದ ಬಣ್ಣ" (Oil-Colour. ಇಂಕನಿ) : ಅನಂತರ ಈ ಕೆಲಸಗಳಿಗೆ ತೈಲವರ್ಣ (Oil-Colours) ವನ್ನು ಉಪಯೋಗಿಸತೊಡಗಿದರು (ಕಾಂಕ್ರ. I, ೫೯೩).

[ ತೈಲ$_1$ + ವರ್ಣ ]

**ತೈಲವರ್ತಿ** (ನಾ). ೧. ಎಣ್ಣೆಯಲ್ಲಿ ಅದ್ದಿದ ಬತ್ತಿ. ೨. ಎಣ್ಣೆಯ ಬತ್ತಿಯಿಂದ ಕೂಡಿದ ದೀಪ : ತೈಲವರ್ತಿ, ಘೃತವರ್ತಿ, ಕರ್ಪೂರವೆಂಬ ತ್ರಿವಿಧದೀಪಂಗಳಂ (ವಿವೇಕ. ೧೧೨). [ ತೈಲ$_1$ + ವರ್ತಿ ]

**ತೈಲವಾಯು** (ನಾ). ಇಂಗಾಲ ಮಿಶ್ರವಾದ ವಾಯು : ಕಾರ್ಬನ್ನು, ಜಲವಾಯುಗಳ ಮಿಶ್ರಣದಿಂದ ಹುಟ್ಟುವ ಅಪಕಾರಕ ವಾಯುಗಳು–ಇವು ಕರ್ದಮೋತ್ಥವಾಯುವೆಂತಲೂ ತೈಲವಾಯುವೆಂತಲೂ ಎರಡು ಇರುತ್ತವೆ (ಮುಂಬಯಿ. ೭–೪೦). [ ತೈಲ$_1$ + ವಾಯು ]

**ತೈಲಶೋಧನಾಗಾರ** (ನಾ). ಎಣ್ಣೆಯನ್ನು ಶುದ್ಧೀಕರಣಗೊಳಿಸುವ ಕಾರ್ಖಾನೆ : (Oil-Refinery. ಪತ್ರಿನಿ. ೫೯).

[ ತೈಲ$_1$ + ಶೋಧನ + ಆಗಾರ ]

**ತೈಲಸಿಕ್ತ** (ನಾ). ಎಣ್ಣೆಯನ್ನು ಲೇಪಿಸಿಕೊಂಡಿರುವವನು : ತೈಲಸಿಕ್ತಂ ವಿರೋಧಿಪನೊರ್ವಂ ದ್ವಿಜ ಮುಕ್ತಕೇಶಿ . . . ಧೂಮಮಂ ನಿಪುಣರ್ ಕಂಡರೆ ಪೋಗರ್ಪ್ಪೆ (ಸೂಕ್ತಿಸು. ೭೮). [ ತೈಲ$_1$ + ಸಿಕ್ತ ]

**ತೈಲಸ್ಫಟಿಕ** (ನಾ). ಒಂದು ಬಗೆಯ ಹವಳ ; ಶಿಲಾರಾಳ ; ಕರೋಬಾ ಮಣಿ : ಕಾರೂಬಾಮಣಿ, ಶಿಲಾರಾಳ, ತೃಣಮಣಿ, ತೈಲಸ್ಫಟಿಕ, ಅಂಬರ್ (Amber. ಇಂಕನಿ). [ ತೈಲ$_1$ + ಸ್ಫಟಿಕ ]

**ತೈಲಾಭ್ಯಂಗನ** (ನಾ). ತಲೆ ಮತ್ತು ಮೈಗೆ ಎಣ್ಣೆಯನ್ನು ಹಚ್ಚಿಕೊಂಡು ಮಾಡುವ ಸ್ನಾನ ; ಎಣ್ಣೆ ಸ್ನಾನ : ಅಂಗನೆಗೆ ಸೌರಭ್ಯ ತೈಲಾಭ್ಯಂಗನ ಮನಾಚರಿಸಿ . . . ತಂದುಡಿಸಿದರು ನವದುಕೂಲವನು (ಬಸವು. ೪–೩೪).

[ ತೈಲ$_1$ + ಅಭ್ಯಂಗನ ]

**ತೈಲಾಭ್ಯಂಜನ** (ನಾ). = ತೈಲಾಭ್ಯಂಗನ : ಅಂದು ಎಲ್ಲರೂ ತೈಲಾಭ್ಯಂಜನ ಮಾಡಿ . . . ಕಣ್ತುಂಬ ನಿದ್ರೆಮಾಡಬೇಕೆಂದು ರಾಜನ ಅಜ್ಞೆ (ನಟಸಾ. ೭೪೦). [ ತೈಲ$_1$ + ಅಭ್ಯಂಜನ ]

**ತೈಲಾರಿ** (ನಾ). ಎಣ್ಣೆಯ ಶತ್ರು ; ಎಣ್ಣೆಯನ್ನು ಹೋಗಲಾಡಿಸು ವುದು ; ಸೀಗೆ : "ತೈಲಾರಿಯೆನಲಾ ಸೀಗೆಯಕ್ಕು" (ಮಂಗರಾ. ೪೫–೪೮).

[ ತೈಲ$_1$ + ಅರಿ$_6$ ]

**ತೈಲಾರ್ಚಿ** (ನಾ). ಎಣ್ಣೆಯ ದೀಪ : ಒಂದಾದ ಮೇಲೊಂದು ನಿರ್ವಾಣ ಪೊಂದಲಾ ತೈಲಾರ್ಚಿತತಿ ಮಂಜುಮಂಜಾಗಿ ತೋರ್ದಪುದು, ಕೈಗಣ್ಣ ದೋರಾಯ್ತು ಶೈಶಿರಜ್ಯೋತ್ಸ್ನೆ (ಶ್ರೀರಾಮಾ. ೪೪೮–೧೦೪).

[ ತೈಲ$_1$ + ಅರ್ಚಿ ]

**ತೈಲಿ** 'ಥೈಲಿ' ನೋ.

**ತೈಲಿಕ** (ನಾ). ಎಣ್ಣೆ ತೆಗೆಯುವವನು ; ಗಾಣಿಗ. [ ಸಂ. ]

**ತೈಲಿಗ** (ನಾ). = ತೈಲಿಕ : ಮಿಗೆ ತೈಲಿಗಂಗೆಳ್ಳು ಬೆಳೆದಂದವಾಯ್ತು (ಅರಾಜ. ೮–೪೯). [ ತೈಲ$_1$ + – ಇಗ ]

**ತೈಲೀನ₁, ತೈಲೀನ** (ನಾ). ಎಳ್ಳು ಬೆಳೆಯುವ ಹೊಲ; ಎಳ್ಳಿನ ಹೊಲ: "ತಿಲ್ಯಂ, ತೈಲೀನಂ–ಈ ೨ ಎಳ್ಳ ಕೆಯ್" (ಹಲಾಯು. ೨೬-೮) ; "ಎಳ್ಳ ಬೆಳೆವ ಕೆಯ್ ತೈಲೀನವೆನಿಸಿಕ್ಕು" (ಪಂಗನಾ. ೨೯-೪) ; ಲೀಲೆಯಿನದಟ ನೆಲಂ ಪರಿಪಾಲಿಸಿದುವು ಕಣ್ಗೆ ನಾಡೆ ಪವೌದ್ಗ್ರ . . . ತೈಲೀನಂ ಕೌದ್ರವೀಣಮೌಮ್ಯಂ ಯವ್ಯಂ (ಹಂದ್ರಪು. ೧-೯೧). ತೈಲೀನ : ಏನೆಸವುವೊ ಕೌದ್ರವೀಣವೌವಾನದ ತೈಲೀನದ ಮಾಷೀಣದ ವಹೌದ್ಗೀನದ ಬಹುಸಾರ ಸಸ್ಯಸಕಳಫಳಂಗಳ್ (ಪುಷ್ಪಪು. ೨-೦೨). [ ಸಂ. ]

**ತೈಲೋಕಪೊಟಲ್** (ನಾ). ಒಂದು ಸ್ಥಳದ ಹೆಸರು : ತೈಲೋಕಪೊಟಲಂ ದೊಮ್ಬಬ್ಬೆ ಆಳುತ್ತಿರೆ ಅಲ್ಲಿ ಕೊಟ್ಟದು ಆಟುಗಣ್ಣಾಗ ಮಣ್ಣು (ಎಕ. XII, ಶಿರಾ. ೨೪-೪೩; ಸು. ೯೦೦). [ ತೈಲೋಕ₀ + ಪೊಟಲ್₂ ]

**ತೈಳ** 'ತೈಲ₂' ನೋ.

**ತೈಳೀನ** 'ತೈಲೀನ' ನೋ.

**ತೊಂಗಲ್, ತೊಂಗಲು** (ನಾ). ೧. (ತೂಗಾಡುವ) ಗೊಂಚಲು ; ಗಂಚ್ಛ ; ಕಂಚ್ಚು ; ಗೊಂಡೆ : "ತೊಂಗಲ್ ತೊಂಬೆ ಗೊಂಚಲ್ ತೊಡಂಬೆ ನುಣ್ಪೊದೆದ ಜೊಂಪಂ ತೊಂಗೆ ಗುಚ್ಛಮೆಂದಿರದೊಪ್ಪಿ ಪಡೆದ ನಾಮಂ" (ಅಭಿಕ್ಕ. ೦೯); ಪೊಂದಳರ ತೊಂಗಲ್ಗಳ ಸುತ್ತುಗೊಂಡ ಸುರಿಗೆಯ ಮುತ್ತಿನ ಬುಂಭುಕಂಗಳ ನಡುವೆ ಕಡೆಯಿಕ್ಕಿದ ಬಿಡುಮುತ್ತಿನ ಪೊಡರ್ದುಣ್ಣುವ ಬೆಳಗು (ಆದಿಪು. ೮-೦೫ ವ) : ಘನನಿತಂಬಬಿಂಬಮಂ ಬಳಸಿದ ನೂಲ ತೊಂಗಲ ಮಧುರಧ್ವನಿ . . . ಪೊಣ್ಮೆಯುಂ (ಮಲ್ಲಿಪು. ೪-೯೭) ; ತಳಿರ ತೊಂಗಲ ಗದ್ದುಗೆಯೊಳೋಲಗಂಗೊಟ್ಟು . . . ಮುನಿನಾಥ ಕಣ್ಗೆಸೆದಿರ್ದನು (ಹರಿಶ್ಚ. ೩-೬೬); ತಳಿರ ತೊಂಗಲ್ ಕೆಂಜೆಡೆಯ ಬಿಂಕವಮಂ ಬೀಱ್ . . . ನೇಱಿಲ್ವರಂ ಚೆಲ್ವಾದುದು (ಪದ್ಮಾ. ೮-೩೦). ೨. ಹೂವಿನ ಗೊಂಚಲು: "ತೊಡಂಬೆ . . . ತೊಂಗಲ್, ಜೊಂಪಂ, ಗೊಂಚಲ್, ಗುಚ್ಛಂ–ಈ ೭ ಪುಷ್ಪಮಂಜರಿ" (ಕಕಶಾ. ೦೮-೦೯೬). ೩. ಗುಂಪು; ರಾಶಿ; ಸಮೂಹ: ಸಂಗಡಿಸಿದ ಕಿಱುಜಡೆಗಳ ತೊಂಗಲ್ಗಳನೊಪ್ಪೆ ಜಾನು ಚಂಕ್ರಮಣಂ . . . ಸಿಂಗದ ಮಱಿಯಂತಿರೆಸೆದು ತೋರ್ಪ ಕುಮಾರಂ (ಕಾದಂಪೂ. ೩೩೭) ; ಧರಿತ್ರಿಯೊಳ್ ಕೆದಱುತುಮಿರ್ಪ ತಣ್ಗದಿರ ತೊಂಗಲ ಡಂಗೆ . . . ಮಾಸಿದ ಮುಕುರಂಬೊಲಂತೆ ವಿಗತಪ್ರಭನಾಯ್ತು ಮೃತಾಂಶು ಮಂಡಲಂ (ಕುಸುಮಾ. ೪-೬೭) ; ನೆಣವಸೆಯ ತೊರಳೆಯ ತೊಂಗಲಿ ನೊಂದೆಸೆವ ಚಕ್ರವ ನೋಡಿದನು ದೈತ್ಯಾರಿ (ಕುಮಾಭಿ. ೬-೩೨). ೪. ತಲೆಯಲ್ಲಿ ಧರಿಸುವ ಒಂದು ಬಗೆಯ ಆಭರಣ: ಒಪ್ಪುವ ವೀರಪಟ್ಟ ಮುದಯಂಗೆಯ್ವುಂದುವಂ ತೋರ್ಪ ತೊಂಗಲೆ ಜಂಬೂವಿಟಪಪ್ರಹಾರ ರುಚಿಯಂ ವಕ್ಷಾರುಣಂ ಸಂಜೆಯಂ ಗೆಲೆ ಪೋಲ್ವತ್ತು (ಕಾವ್ಯಾ. ೩೨೫ ಕೊಡ್ಗ) ; ಹರನರಸಂ ಸುರನ್ರ್ಡರದ ಗುಣ್ಣು ಜಟಾವಳಿ ತೊಂಗಲಿನ್ದ್ರ ದುರ್ಧರ ಗಿರಿಸೇತು ಧರ್ಮ್ಮಗಳೆಯಂಕದ ಮದ್ದಳೆ (ಎಕ. XII, ಶಿರಾ. ೨೯-೬೭ ; ೧೪೩) ; ಆದಿತ್ಯನ ಎಲವೆ ಮಾಬಲಮಾಗೆ ಚನ್ದ್ರನೆ ಚನ್ದ್ರಬಲ ಮಾಗೆ ನಕ್ಷತ್ರ ತಾರಾಗಣಗಳೆ ತೊಂಗಲಾಗೆ (ಎಕ. X, ಕೋಲಾರ. ೦೭೦-೦೩; ಸು. 1180 ?). ೫. ತೂಗಾಟ ; ನೇತಾಡುವಿಕೆ. 'ತೊಂಗಲಿಸು' ಪರಾ. ೬. ಒಂದು ಬಗೆಯ ಆಯುಧ (?) : ರಾಹುವೇ ತೊಂಗಲಾಗಿ ಕೇತುವೇ ಸುರಿಗೆಯಾಗಿ ಕುಳಿಕನೇ ಮೊನೆಯಾಗಿ (ಎಕ. VII, ಶಿಕಾರಿ. ೦೦೮-೪೩ ; 1056). ೭. ಜುಟ್ಟು (?) : ಪ್ರಗದಡೆಮಾಡು ಚಪ್ಪರಿಸು ರೂಪಿಡು ಕೂಪಿಡು ಕೂರ್ಪುರದೋಱು ವಾಱಗಿಯುದೆ ಕೂರ್ಮೆ ಮಿಕ್ಕು ತೆಗೆ ತೋಂಗಲನಿಂಬೆನೆ ನೂಂಕು ಯುದ್ಧಮಂ (ಕಾವ್ಯಾವ. ೪೦೬).

**ತೊಂಗಲು** : ೧. "ತೊಂಗಲನೆ ಕೊಡಂಬೆಯನಲ್ಕೆ ಗುಚ್ಛಂ" (ಕಕಶ. ೪೪); ತೊಡಕುಗುರುಳಿನ ತೊಂಗಲಿನ ಹೊಱಪಡುವ ನೆತ್ತರ ಬಾದಣದ . . . ಹೊರಳುವ ಹೆಣನ ರಾಶಿಯಲಿಡಿದುದಿಳೆ ಕಲಿಕುಂಭಕರ್ಣನ ಕರದ ಕದನದಲಿ (ತೊರೆರಾ. ೬-೨೮-೩೦) ; ಹೊಂಗೇದಗೆಯದಿರ್ಗಂಚಿ ಕಮ್ಮಲರ್ಗಳ ತೊಂಗಲು ಮೆಱೆದುವಪ್ಪುದಲಿ (ಮೋಹತ. ೦೬-೦೯). ೬. ತುಱುಲಸಂದಂಗನುವರಂ ಮುಟ್ಟದೊಡಂ ಶ್ರಾವಕಂಗೆ ಬೋಧಿ ಪುಟ್ಟದೊಡಂ ಆತಂ ತೊಂಗಲ[ಪಾಠಾಂ. ತೊವಲ]ನೇಱಿಸಿ ಕೊಂಡು ನಡೆವುದು ಈತಂ ಮಹಾವ್ರತಂಗಳನೇಱಿಸಿಕೊಂಡು ತಪೋವನಕ್ಕೆ ನಡೆವುದು (ಜೀವಸಂ. ೨೦೨-೩).

**ತೊಂಗಲಾಡು** = ತೂಗಾಡು ; ಅಲುಗಾಡು : ಉರಿಗಣ್ಣಾ ಜಾಲ ದಳ್ಳಿಸೆ ನಿಚ್ಚವಚ್ಚದ ಪಂದರೆ ತೊಂಗಲಾಡೆ . . . ಮಾರುತಿಗೈ ವೋಗಂ ಮುಪ್ಪೊಗನಾಗೆ ಜಡಿದಂ (ರಾಮಾಶ್ವ. ೦೩೨-೮).

[ ದೇ. ೬ ತಮಿ. ತೊಙ್ಗಲ್ ; ಮಲ. ತೊಙ್ಗಲ್ ; ತುಳು. ತೊಂಗೆಲ್, ದೊಂಕೆಲ್ ; ತೆಲು. ತೊಂಗಲಿ ]

**ತೊಂಗಲಿಸು** (ಕ್ರಿ). ತೂಗಾಡು ; ನೇತಾಡು : ಚೆಲ್ವ ದಶಾಂಗವುಃಖದ ನಱುಪೊಗೆಗಳಂ ತೊಂಗಲಿಪ ಸರಘಂಟೆಯಂ ಮೆಱೆವುದನರಸ ಕಂಡ (ಸಾಳ್ವಭಾ. ೪-೪೦). [ ತೊಂಗಲ್ + – ಇಸು₃ ]

**ತೊಂಗಲು** 'ತೊಂಗಲ್' ನೋ.

**ತೊಂಗಲುಗುರುಳ್** 'ತೊಂಗಲ್ಗುರುಳ್' ನೋ.

**ತೊಂಗಲ್ಗಂಟೆ** (ನಾ). ಗಂಟೆಗಳ ಗುಚ್ಛ ; ಗಂಟೆಸರ : ತೋಳ ಕಚ್ಚಳಿಯ ತೊಂಗಲ್ಗಂಟೆಯ ಜೋಡುಶಂಖದ ಜಗಜಂಪಿನ ಸತ್ತಿಗೆಯ ಪಲಬಿರುದು ಗಳ್ಗಳ್ತೆವಡೆಯ (ರಾಜಶೇ. ೬-೦೦ ವ). [ ತೊಂಗಲ್ + ಗಂಟೆ₂ ]

**ತೊಂಗಲ್ಗುರುಳ್, ತೊಂಗಲುಗುರುಳ್** (ನಾ). ದಟ್ಟವಾದ ಕೂದಲು; ಒತ್ತೊತ್ತಾಗಿರುವ ಮುಂಗುರುಳು : ನೊಸಲಂ ತೊಂಗಲ್ಗುರುಳ್ ಮೇಲುದನೊಗೆವ ಕುಚಂ ಬೆನ್ನನಾ ನೀಳಕೇಶಪ್ರಸರಂ . . . ಓರಂತಲೆಯ ಭರತನಂ ನೋಡಲ್ಕೆತಂದಲರೊರ್ವಳ್ (ಆದಿಪು. ೧೧-೦೬); ರವಿ ಹಿಮಕಿರಣಂ ಕುಂಡಲಂ ನೀಲವೋಘಪ್ರಕರಂ ತೊಂಗಲ್ಗುರುಳ್ಗಳ್ (ಧರ್ಮಾಮೃ. ೯-೨೩೦) : ನಗೆಮೊಗಂ ತೊಂಗಲ್ಗುರುಳ್ ಕೆಂದಳಂ . . . ಚೆಲ್ವಾಗಿರೆ ನಿಂದ ಬೇಡಿತಿಯರುಂ ಕಂಡಂ ಮಹೀವಲ್ಲಭಂ (ಕಾವ್ಯಾವ. ೨೦೬); ತೆಳ್ವಸುಟಿ ತೊಂಗಲ್ಗುರುಳ ವಿಮಲ ಪದ್ಮಾವತಿಯ ನಿಟ್ಟಿಸಿದನು (ರಾಘಶ. ೦೩-೨೪).

**ತೊಂಗಲುಗುರುಳ್** : ತೊಳಪಗಂಗಳ ನಗೆಮೊಗದ ತೊಂಗಲುಗುರುಳ ಸುಲಿಪಲ್ಲ . . . ಕಡು ಚೆಲುಶಬರಿಯರು ಕಾಳರಾತ್ರಿಯ ಸಿರಿಗಳೆನಿಸಿದರು (ಸಾಳ್ವಭಾ. ೦೬-೭). [ ತೊಂಗಲ್ + ಕುರುಳ್₁ ]

**ತೊಂಗಲ್ಗೊಳ್** (ಕ್ರಿ). ೧. ಗೊಂಚಲಾಗು ; ಜೊಂಪೆಯಾಗು : ತೊಂಗಲ್ಗೊಂಡುರು ಕರ್ಣಿಕಾರದಲರಂ ನಲ್ವಾಟವಣ್ಣಂ ಮಹೀಶಾಗಿತ್ರಳ್ (ಅದ್ಭಟ. ೯-೦೨) ; ತೊಂಗಲ್ಗೊಂಡಿರ್ದ ಕೆಂಪಾದಸುಗೆಯ ತಳಿರಂ . . . ಕೊಟ್ಟನೊರ್ವಂ (ಅಭಿಕ್ಕ. ೮೮). ೨. ರಾಶಿಯಾಗು ; ಒಟ್ಟಾಗು : ಸದ್ವಕ್ರೋಕ್ತಿ ತೊಂಗಲ್ಗೊಂಡಿರ್ಪಿನವೊಲ್ದು ನಿಟ್ಟಿಸಿ ಸಮಂತಾ ನಂದದಮಂ ತಾಳ್ದು (ಅದ್ಭಟ. ೧೧-೬೪). [ ತೊಂಗಲ್ + ಕೊಳ್₁ ]

**ತೊಂಗಲ್ದೊಂಗು** (ಕ್ರಿ). ಗೊಂಚಲಾಗಿ ತೂಗಾಡು : ಬಳ್ಳಿಯೊಳೆ ಪಣ್ಣು ತೊಂಗಲ್ದೊಂಗುವ ತೊಂಡೆಯ ಕಟಾವಣ್ (ರಾಮಾಶ್ವ. ೬೦-೧೧).

[ ತೊಂಗಲ್ + ತೊಂಗು₁ ]

**ತೊಂಗಲ್ವರಜಿ** (ನಾ). (ಅಲಂಕಾರದ) ಗೊಂಡೆಗಳಿಂದ ಕೂಡಿದ ಹಗ್ಗ : ಕನಕಘಂಟೆಗಳ್ಗಳಿರ್ವ ಕೊರಲ ಮಿಸುನಿಯ ತೊಂಗಲ್ವರಜಿಯ ಚಿನ್ನಮಣಿ ಪುದಿದ ಪಕ್ಕಗಂಟೆಯ . . . ಗಂಧಸಿಂಧುರಸಂದೋಹದಿಂ (ರಾಜಶೇ. ೬-೦೦ ವ). [ Pಇದು 'ತೊಂಗಲ್ವರಜೆ' ಎಂಬುದರ ಅಪಲಿಖಿತ ]

**ತೊಂಗಳೆ** (ನಾ). (?) : ತೊರಳೆ ತೊಂಗಳೆ ಮಜ್ಜೆ ಮಾಂಸಗಳನು ಸವಿದುರು ಭೂತದಂಜಲು ಕೈಗೆ ಎಟಿವ ಘಟದ ವಾರಿಗಳೆನೆ ರಕ್ತವ ಕಱೆದುವು ಭಟರ ಖಡ್ಗಗಳು (ಕಂನವಿ. ೦೫-೩೩). [ ? ]

**ತೊಂಗಿಸು** (ಕ್ರಿ). ಒದಗಿಸು ; ಒಡ್ಡು : ಅಂಗಜ ಹಂಗಳ ಸಿಂಗರ ವನದೊಳು ತೊಂಗಿಸಿ ಮುನಿವ್ಯಗಾವಳಿಯ ಜಂಗುಳಿಗೊಡ್ಡಿದ ಬೆಳ್ಳಾರ ವಲೆಯೆನೆ ಕಂಗೊಳಿಸಿತು ಸೂಳೆಗೇರಿ (ಕಂಪಿವಿ. ೬-೯೧).

[ ತೊಂಗು$_1$ + – ಇಸು$_3$ ]

**ತೊಂಗು$_1$** (ಕ್ರಿ). ೧. ತೂಗಾಡು ; ಜೋಲಾಡು ; ತೊನೆದಾಡು : ತೊಂಗುವ ಫಲಾವಳಿಯ ಭಾರಂಗಳಾವಗಂ ಪಿಂಗವು (ಕೃಮಿಥಾ. ೦೯-೬) ; ಕಮ್ಮಲರ್ಜೊಂಪವೆ ಜಲ್ಲರಿಯಾಗೆ ಪಣ್ತು ತೊಂಗುವ ಪಣ್ ಫಲಾವಳಿ ಯಾಗೆ (ರಾಮಾಶ್ವ. ೩೬-೨೬). ೨. ಬಾಗು ; ಬಗ್ಗು : ತೊಲಗು ಚಿಂತೆಯ ವಿಕಟಗುಹೆಯೊಂದು ನಿನಗಿರಲಿ . . . ತೊಂಗಿದರೆಗಲ್ಲುಗಳ ಮರೆಗೆ ಬೇಗನೆ ಹಾರು (ಭಾವಗೀ. ೨೨೬). ೩. ಹೊರಟುಹೋಗು; ಸರಿ : ಅವಳ ಪೊತ್ತ ಮನದ ತಲೆಗೆ ನೋವು ತೊಂಗಿದಾ ನೋಟಕಜನದ (ಕುರಾಸಾಂ. ೨೦-೬೨) ; ತೊಂಗಿದ ಹಲ್ಲು ಬಹವೆ (ಭರತ. ೩೯-೯೦). ೪. ಒದಗಂ ; ಉಂಟಾಗು ; ದೊರಕು : ಅಲಘುರುಚಿಗಳ್ತೊಂಗೆ ನಾರುಬೇರ್ವಣಿ ಮಂತ್ರಗಳನೊಲ್ಲದಿಹುದು ಮೂವತ್ತಂಟನೆಯ ಶೀಲ (ಹಾಸೋಳು. ೨-೬೬); ಲಿಂಗದ ಹಾರ ಜಂಗಮದರ್ಥದಾಗರ ತೊಂಗುವ ಭವಕೆ ನೀ ದೂರ (ಅಮುಸಾಂ. ೫-೯೩); ವೈಭವಂ ಪಿಂಗಿ ತೊಂಗಿದ ದರಿದ್ರದುಃಖದೊಳಾರ್ಯ ಚೂಡಾಮಣಿಯ ಬಳಿಗೆ ಬಂದು (ಕೊಟ್ಯೂರು. ೦೩-೩೪). ೫. ಬಯಸಂ ; ಆಸೆಪಡಂ : ಹೊಂಗುವ ಮನ ಶಿವಪೂಜೆಗೆ ತೊಂಗುವ ಮನ (ಶಂಕರಸಂ. ೨೬). [ ದೇ.೫ ತಮಿ. ಮಲ. ತೊಙ್ಙು ; ತೆಲು. ತೊಂಗು ]

**ತೊಂಗು$_2$** (ನಾ). ೧. ಜೋಲು ಬಿದ್ದಿರುವುದಂ ; ನೇತಾಡುವಿಕೆ : (ಶ). ೨. ಆಧಾರವಿಲ್ಲದಿರುವಿಕೆ : ಹಂಗು ಹರಿದ ಮೇಲೆ ತೊಂಗೇನು ತೊಡರೇನು? (ಗಾದೆ).

**ತೊಂಗುತೊಸಗು** = ತಪ್ಪನ್ನು ಹಂಡಂಕುವಾಗ ಆಡುವ ಮಾತು : ಎಂಥ ಪದಾರ್ಥವನ್ನು ತಂದುಕೊಟ್ಟರೂ ತೊಂಗುತೊಸಗು ಎಂದು ಹೇಳುತ್ತೀರಿ (ಪಂಚುತ್ರ. ೫೫). [ <ತೊಂಗು$_1$ ]

**ತೊಂಗೆ**, ಜೊಂಗೆ (ನಾ). ೧. ಗೊಂಚಲು ; ಗುಚ್ಛ : "ತೊಂಗಲ್ ತೊಂಚೆ . . . ತೊಂಗೆ ಗುಚ್ಛಮೆಂದಿರದೊಟ್ಟಿ ಪದೆದ ನಾಮಂ" (ಕಬ್ಬಿಗ. ೦೯) : "ತೊಡಬೆ . . . ಗುಚ್ಛಂ ಸೊಗಯಿಪ ತೊಂಗೆಯ ತೊಂಗಲ್ ಬಗೆಯಲ್ ಬುಧರಿಂದೆ ಗುಚ್ಛಕಕ್ಕಂ ನಾಮಂ" (ಕವಿಕಂ. ೬೫). ೨. ಹೂವಿನ ಗೊಂಚಲು : "ತೊಡಂಬೆ, ತೊಡಬೆ, ತೊಂಗೆ . . . ಗುಚ್ಛಂ–ಈ ೭ ಪುಷ್ಪಮಂಜರಿ" (ಕಶಸಾ. ೫೩-೦೯೬). **ಜೊಂಗೆ** : ೧. ತ್ರಿಕೂಟವೆಂದೆಂಬ ತ್ರಿವಿಧಮೂಲೆಯ ಜೊಂಗೆ (ಆಜಾರ. ೫೮-೬).

[ ದೇ.೫ ತುಳು. ತೊಂಗೆ, ಜೊಂಕೆ, ದೊಂಕೆ ]

**ತೊಂಚವಂಚ**, ತಂಚಾವಂಚ, ತೊಂಚಾವಂಚ (ನಾ). ಹಿಂದುಂ ಮುಂದು ನೋಡುವಿಕೆ ; ಅನುಮಾನ ; ವಿನಾನಾವೇಶ : ಎಣಿಸುವುದಂ : ಏನು ಹೇಳಬೇಕೋ ತಿಳಿಯದೆ ತೊಂಚವಂಚವಡುತ್ತ ಇದ್ದ ಆನಂದ (ಮರಳಿ. ೩೬). **ತಂಚಾವಂಚ** : ಈ ತಂಚಾವಂಚದಲ್ಲಿಯೇ ಕಾಲ ಕಳೆದು ಹೋಗಿತ್ತು (ಕೂಪಸ. ೦೬). **ತೊಂಚಾವಂಚ** : ವಿಷಯವನ್ನೇ ಆಯ್ಕೆ ಮಾಡಿ ಎಂದರೆ ಕೊಂಚ ತೊಂಚಾವಂಚ (ಮನಸೋಸಂ. ೦೦೪). [?]

**ತೊಂಚಾವಂಚ** 'ತೊಂಚವಂಚ' ನೋ.

**ತೊಂಟತನ** (ನಾ). ತೊಂಡಂತನ (?) : ಏಳನೆ ಗುಣ ಜಟಿಬಿದು ಎಂಟನೆ ಗುಣದ ತೊಂಟತನವ ಬಂಧಿಸಿ ತೋಟುವದಕ್ಕೆ ಮುನ್ನವೇಮನ ಜಾಜಿ ನಿಂದ ಮತ್ತೆ ವಿಜಾಲಿಲ್ಲವಾಗಿ (ಷೋಳಶಮೂ. ೦೯೩-೬೨೬).

[ ತೊಂಟ$_0$ + – ತನ ]

**ತೊಂಡ$_1$**, ತಂಡು$_3$ (ನಾ). ೧. ಸೇವಕ ; ಗುಲಾಮ : ತೊತ್ತು ತೊಂಡರ ಕಾಲ ತೊಳೆದು ಸೇವೆಯ ಮಾಡಿ ಒದುಕುವವನ ಪಡಿದೊತ್ತಿನ ಮಕ್ಕಳೆಂದು ಎಂಬರಲ್ಲದೆ ರಾಜಕುಮಾರನೆಂದೆನ್ನರು (ಜನ್ನವ. ಶ. ೦೮೫-೪೦೫) ; ಮಡದಿ ತೊಂಡನೆನುತ್ತ ನೀರೆರೆಯದಿರೆ ಕೈಯ ಕಡಿದು ಹಾಯ್ಕುಯ ಮೆಚ್ಚಿದ ಕಲಿಕಂಬರು (ಅಶಿಕಂ. ೩೩-೪೩) : ತೊತ್ತುಗೈವುದು ಲೋಕವೀತಗೆ ವ್ಯತ್ತು ಗಿತ್ತುಗಳಿವನ ತೊಂಡರು (ಶಾಶಿರಾ. ೫೩-೬) : ಚಾಮುಂಡಿಯನೊಲಿಸಿ ಕೊಂಡವನ ತೊಂಡನ ಮಾಡಿಕೊಡುವೆನು ನಿನಗೆ (ಕುರಾಸಾಂ. ೨೯-೩೬). ೨. ಭಕ್ತ ; ಆರಾಧಕ : ಮಾಡುವವರೆಲ್ಲರೂ ಮಹಾಲಕ್ಷ್ಮಿಯ ತೊಂಡಂದಿರು (ಸರ್ವಜ್ಞ. ೬೩-೩೩೯) ; ಪುರಂದರವಿಠಲನು ತೊಂಡರಿಗೆ ತೊಂಡನಾಗಿ ಸಂಚರಿಸುತಿಹನು (ಪುರಂದ. ೦-೦೯೬-೩) : ತಿರುಕುರುಂಬೆಯ ತೊಂಡ ರಂದು ಕಂಥೆಯನೊಗೆದು . . . ಕೈಲಾಸವಂ ಪೊಕ್ಕರು (ಚಬಪು. ೫೫-೩೬). ೩.ವಯದಂಕ ; ವಯಸ್ಸಾದವನು ; ವೃದ್ಧ. 'ತೊಂಡಜ್ಜ' ಪರಾ. **ತಂಡು$_3$** : ೧. ನೀನಾಡಿಸಿದಂತೆ ನಾನಾಡುತ್ತಿದ್ದೆ ಸಂಜ್ಞೆಯನಱಿದ ತಂಡಿ ನಂತೆ ವೇದಿಸಿದುದ ನಾ ಸಾಗಿಸಿದೆ (ಸಗಕೊ. ೮೫).

**ತೊಂಡಮಂಡಳಿಕ** = ಮಲೆತ ಸಾಮಂತ ; ಸೊಕ್ಕಿದ ಮಾಂಡಳಿಕ : ಅಹಿತಮಂಡಳಿಕ ಕಾ ಳಾ ನ ಳ ತೊಂಡಮಂಡಳಿಕ ಮಂಡಳಪ್ರಚಂಡ ದೌವ್ವಾರ್ನಳ (ಎಕ. II, ೦೯೩-೨೫ : 1131); ತೊಣ್ಡಮಣ್ಡಳಿಕ ಕುಳಾಚಳ ವಜ್ರದಣ್ಡ ಬಿರುದ ಭೇರುಂಡ್ಡ ಕಂದುಕಾಚಾರ್ಯ್ಯಂ (ಮ್ಯಆರಿ. ೦೯೩೦, ೬೯-೫ : 1191). **ತೊಂಡರ ತೊಂಡ** = ಸೇವಕರ ಸೇವಕ ; ತೊತ್ತಿನ ತೊತ್ತು ; ದಾಸಾನುದಾಸ : ನಮ್ಮ ನೀಲವರ್ಣ ತೊಂಡರ ತೊಂಡ (ವಾದಿಕೀ. ೦೩೬-೦೪). [ ದೇ.೫ ತಮಿ. ಕೊಣ್ಡ ; ಮಲ. ತೊಣ್ಡ ]

**ತೊಂಡ$_2$**, ತುಂಡ$_1$ (ನಾ). ೧. ಮಲೆತವನು ; ತುಂಟ ; ಸ್ವೇಚ್ಛಾವೃತ್ತಿ ಯವನಂ ; ಉದ್ಧಟ : ತೊಂಡ ಬೇಡನು ಇಂತು ಮಾಡುವನೆ (ಕಣ್ವ.ಕ. ದೇ. ೦೯೫-೪) : ತೊಡರ್ದರನೊತ್ತಿ ತೊಂಡರನವುಂಕಿ ಕಡಂಗುವರಂ ಕಳಲ್ಚಿ (ಎಕ. VII, ಸಾಗರ. ೦೫-೬೨ ; 1218) : ದಯಾವಿಹೀನನಧರ್ಮಂ ತೊಂಡ ನತಿಕಲುಷಿತಪಾಪದ ಪಿಂಡನೆನಿಪ್ಪವನೆ ಕೃಷ್ಣಲೇಶ್ಯೆಯ ಜೀವಂ (ಜ್ಞಾನಕಾ. ೭೦-೯); ತೊಂಡ ಕೇಳ್ಕೆ ನಿನಗೆ ಸತಿಯರು ಹೆಂಡಿರಾಗಿಯು ಮಕ್ಕಳಾಗಿಯು ಹಿಂದು ಗೋಧನವಿದ್ದು ನೀವೇ ಮತ್ತೆ ಬೇಱಿಲ್ಲ (ಶಾಶಿರಾ. ೩೩-೨೬) : ಪಡಿಮಾತೇನಾ ಪಾತಕ ತೊಂಡನ ಕೆಡಹಿ ಕೊರಲ ಕೊಯಿಸುವೆನು (ಕುರಾಸಾಂ. ೪೯-೦೫೬); ಬಡಿ ಬಡಿ ತೊಂಡರ ಬಾಯನೆಂದನು ಚಕ್ರಿ (ಭರತ. ೩೬-೮೪). ೨. ಕಳವು ಮಾಡುವವನು; ಕಳ್ಳ ; ಚೋರ : (ಶ). **ತುಂಡ$_1$** : ೧. ದ್ರವ್ಯಾಪಹಾರರಿಗೆ ತುಂಡರಿಗೆ . . . ಇದು ತಾ ಯೋಗ್ಯವಲ್ಲೆಂದ (ಜ್ಞಾಸಿಂ. ೩೦-೪೬) : ಜಗಳಗಂಟರೂ ತುಂಡರೂ ಅಪ್ರಮಾಣಿಕರೂ ಇರುತ್ತಾರೆ (ಕಥಾಗ. ೨೨೫). ೩. ನಿಷ್ಕರುಣಿ; ಕಠೋರಮನಸ್ಸಿನವನಂ: ತುಂಡನಾದ ಯಮನು ಬಂದು ಮಂಡೆ ಮೇಲೆ ಹೊಯ್ಯುವಾಗ ಹೆಂಡಿರು ಮಕ್ಕಳು . . . ಬಿಡಿಸೋದಿಲ್ಲ (ಪುರಂದ. ೩-೮೦-೫). 'ತುಂಟ' ಪರಾ.

**ತೊಂಡರ ಗಂಡ** = ದುಷ್ಟರನ್ನು ನಾಶಮಾಡುವವನು ; ಒಂದು ಬಿರುದು : ತೊಣ್ಡರ ಗಂಡನುದ್ಧತರ ಗಂಡನೋಱಂಟರ ಗಂಡನುಕ್ಕಿ ದುದ್ದಂಡರ ಗಂಡನೀ ಬೇಡರ ಗಂಡ (ಸೌಇಇ. IX-i, ೨೫೬-೨೦ ; 1150).

[ ತೊಂಡು$_1$ + – ಅ$_7$./ಮಲ. ತೊಣ್ಡ ]

**ತೊಂಡ$_3$** (ನಾ). ೧. ಬಾಯಿ; ಮುಖ: ನೀಲ್ದ ನಿಡುಗಣ್ ಬೆಳಗೆ ತೊಂಡಂ ಬೆಳಗೆ ತೊಂಡರದ [ಪಾಠಾಂ. ಚೆಂಬುದರ]ಮಾಟ್ಕೆ[ಯಿನೊಡಂಬಡುತ ಲಾಡಿದಳು ಚೆಂಬಟಿಯ ಸಂಭ್ರಮದಲೊರ್ವಳ್] (ಸೂತ್ರಸು. ೦೩-೦೦). ೨. ಕೊಕ್ಕು; ಚಂಚು: ಬಂಡಲೆವೃತ ವಿಹಗರಾಜ ತೊಂಡದಿಂದಲೀ ತುಂಡಿಸಲ್ಕೆ (ದೇವೀಪ್ರ. ೬೬). ೩. (ಆನೆಯ) ಸೊಂಡಿಲು : ಬಂಧು ಜನರೆಲ್ಲರನ್ನೂ ಖಡ್ಗಪ್ರಹಾರದಿಂದ . . . ಗಜತೊಂಡಕ್ಕೆ ಸಿಕ್ಕಿದ ಬಾಳೆಯ ಗಿಡದಂತೆ ಛಿನ್ನಭಿನ್ನವಾಗಿ ಖಂಡಿಸಿದರು (ಪುರಾವಿ. ೬೫).

[ <ಸಂ. ತುಂಡ ]

**ತೊಂಡ$_4$** (ನಾ). ಒಬ್ಬಾತನ ಹೆಸರು: ಆತನಿಂ ಬಳಿಕಂ ಗಾವುಣ್ಡಗೆ ನಿನ್ದನಾಹವಶೌಣ್ಡಂ ತೊಣ್ಡಂ (ಸೌಇಇ. XI-1, ೪೩-೦೩; ೯೮೦). [ ? ]

**ತೊಂಡಂಗಿ, ಜೊಂಡಿಂಗ, ಜೊಂಡಿಗ,** ತಂಡಂಗ್ಳಿ, ತೊಣ್ಣಂಗಿ (ನಾ). ಒಂದು ಬಗೆಯ ಹುಳು; ಜಿರಲೆ: "ಮುಖಲೋಮಿ ತೊಂ [ ಪಾಠಾಂ. ತುಂ]ಡಂಗಿಯಕ್ಕುಂ" (ಮಂಗರಾ. ೪೯-೦೩). **ಜೊಂಡಿಂಗ :** ಸಣ್ಣ ಸಣ್ಣ ಇಲಿಗಳೂ ಜೊಂಡಿಂಗಗಳೂ ಪರಸ್ಪರ ಅಹಿಂಸಾಭಾವದಿಂದ ಸ್ವಚ್ಛಂದವಾಗಿ ಅತ್ತಿತ್ತ ಓಡಾಡುತ್ತಿವೆ (ಕುರಿಹಿಂ. ೦೧೮). **ಜೊಂಡಿಗ :** ರಾಜ್ಯದ ಹೆಗ್ಗಣಗಳ ತಾನೊಕ್ಕಿ ಜೊಂಡಿಗದಾ ಹುಲುಗಡಣವ ಮುಕ್ಕಿ . . . ಬೆಕ್ಕು ಹಾರುತಿದೆ ನೋಡಿದಿರಾ (ಗಠಿ. ೮೩-೦೭): ಬಡಪಾಯಿ ಜೊಂಡಿಗದ ಜೀವ ತಕ್ಕೊಳ್ಳುವದು ನನ್ನ ಬೆಕ್ಕು (ಸ್ಮೃತಿಚಿ. ೩೮೯). **ತುಂಡಂಗ್ಳಿ :** ಮೇಲಿನ 'ಮಂಗರಾ' ಪ್ರಯೋಗದ ಪಾಠಾಂತರವನ್ನು ನೋಡಿ. **ತೊಣ್ಣಂಗಿ :** ತೇವವಿರುವ ಜಾಗದಲ್ಲಿ ತೊಣ್ಣಂಗಿಗಳು ಬಹಳವಾಗಿ ಇರುತ್ತವೆ (ಕೂ೨).

**ತೊಂಡಜ್ಜ** (ನಾ). (ಕರಾ) ಅಜ್ಜನ ತಂದೆ; ಮುತ್ತಾತ.
[ ತೊಂಡ$_1$ + ಅಜ್ಜ$_2$ ]

**ತೊಂಡತನ,** ತಂಡತನ (ನಾ). ಔದ್ಧತ್ಯ; ಉದ್ಧಟತನ: ವೀರವಳದುದು ತೊಂಡತನಗಳು ಹೋಗಿ ಕೈಕಾಲೊಡೆದು ನಾಚುತ್ತ . . . ತರೆದ (ಖಾಶಿರಾ. ೦೯-೩೩). **ತಂಡತನ :** ತಂಡತಂಡಾಗಿ ತಿರುಗುವ ನಾರಿಯರ ತುಂಡತನವನು ನೋಡು (ಕಾಲಸಂ. ೩೩): ಚಂಡವಿಕ್ರಮಭೀಮನಡಿಗೆಜಿಗಿ ಕೀಚಕನ ತುಂಡತನವಂ ಪೇಳ್ದಳು ಭಾವೆ (ಪಾಂಡಚರಿ. ೩೭-೨).
[ ತೊಂಡ$_2$ + - ತನ ]

**ತೊಂಡನೂರ್** (ನಾ). ಒಂದು ಊರಿನ ಹೆಸರು: ತೊಣ್ಡನೂರ್ ಬೋಯಸ್ಕ ಕೌಶಿಕಗೋತ್ರ ರೇವಶರ್ಮ್ಮಣ (ಇಆ. VII, ೪೩-೩೭; ೬೦೮).
[ ? + ಊರ್ ]

**ತೊಂಡಬಡಿಗೆ** (ನಾ). ಒಂದು ಬಗೆಯ ಆಯುಧ: ಬೇಟೆ‌ವೇಟೆ‌ತ್ತಿ ತತ್ತ್ರಿಸಿದ ತೋಮರದ ತೋರದೊಂಗಲ ತೊಂಡಬಡಿಗೆಯ ಗಂಡರ ದಾವಣಿಯ ... ಸುಭಟಪೇಟಕಂ . . . ಅಜಾಂಡವೊಡೆಯೆ ಗಜಜಿ ಗರ್ಜಿಸುತ್ತುಂ (ಮಹಾಸೀ. ೦೩-೧೯ ಆ). [ ತೊಂಡ$_2$ + ಬಡಿಗೆ ]

**ತೊಂಡಬ್ಬೆ** (ನಾ). ಒಬ್ಬಾಕೆಯ ಹೆಸರು: ನಾಗತ್ತರನ ಮಗಳ್ತೊಂಡಬ್ಬೆಯು (ಎಕ. IX, ಚೆಂಗಳೂ. ೮೮-೨; ಸು. ೧೧). [ ತೊಂಡ$_4$ + ಅಬ್ಬೆ$_1$ ]

**ತೊಂಡಮಂಡಲ** (ನಾ). ಚೋಳಮಂಡಲ; ಪ್ರಾಚೀನ ತಮಿಳುರಾಜ್ಯದ ಒಂದು ಭಾಗ; ಈ ಕಾಂಚಿಯನ್ನು ರಾಜಧಾನಿಯಾಗಿ ಹೊಂದಿದ್ದ ಆರ್ಕಾಟಂ, ಚೆಂಗಲ್ಪಟ್ಟು ಮತ್ತು ನೆಲ್ಲೂರುಗಳನ್ನೊಳಗೊಂಡ ಭಾಗ: ತೊಂಡಮಂಡಲದಲ್ಲಿ ಶೋಭಿಪ ಶಕ್ಕರಣ್ಯಮೆನಿಪ್ಪ ನಿಪ್ಪಿಂಡ ತೋತ್ಸವವೊಂದು ಪಟ್ಟಣವಿರ್ಪುದು (ಉದ್ಭಟ. ೦೩-೦೯).
[ ← ತಮಿ. ತೊಣ್ಡೈಮಣ್ಡಲ ]

**ತೊಂಡಲ್,** ತೊಂಡಲ, ತೊಂಡಲು$_1$, ತೊಂಡಿಲ್, ತೊಂಡಿಲು$_1$ (ನಾ). ೧. ತಲೆಯಲ್ಲಿ ಧರಿಸುವ ಒಂದು ಬಗೆಯ ಮುತ್ತಿನ ಆಭರಣ,- ಶಿರೋಭೂಷಣ: ದಂಡೆಯುಂ ತೊಂಡ[ಪಾಠಾಂ. ಡಿ]ಲಂ ನೂಂಕುತಂ ಧಂದದಿಂ ಚೆಂಡಿಕೆವಿಡಿದು ಮಗಳನುದ್ಧರಿಸುವಂದದಿಂ (ಮಾಹರ. ರೇ. ೦೬೯-೩); ಪಾಂಡ್ಯಸತಿಯರ ತೊಂಡಲ್ದೀವಿದ ಘನರತ್ನಂಗಳ್ ಪಾವುಗೆಗಳ ಬಳಸು ದೊಂಗಲೆಡೆಯೊಳ್ ತೋರ್ಕುಂ (ಚಳವಿ. ೩-೩೬); ತೊಂಡಲವು ಶಿವಗಣಕೆ ಗುಂಡಯ್ಯ ನೀನಾದಿ (ಚನ್ನಬಾ. ೩೦೨). ೨. ಸಾಲು; ಶ್ರೇಣಿ: ಅಲ್ಲಲ್ಲಿಗೆ ಪರಿಯುತಿರ್ಪಜಿಉಂಬೆಯ ತೊಂಡಲ್ (ಧರ್ಮಾಮೃ. ೩-೭೯). ೩. ಹೂವಿನ ಹಾರ, - ದಿಂಡು, - ದಂಡೆ: ರೂಢಿಸಿತ್ತು ಕೆಂಪಿಡಿದ ಬೆಡಂಗಿನಿಂದಮ . . . ವಿಳಾಸದಿಂ ಮುಡಿದ ಮಹೇಂದ್ರದಿಗ್ವಧುವ ಬಣ್ಣದ ತೊಂಡಲ ನಿಂದುಮಂಡಲಂ (ಲೀಲಾವ. ೨-೩): ತೊಂಡ[ ಪಾಠಾಂ. ಡಿ ]ಲ ಮುಡಿದು ಕೊಂಡು ತಮ್ಮ ತಮ್ಮ ಗಂಡರ ಹಿಂದುಗೊಂಡು ನಾಡುವಿಂದರ ನೋಡುತ್ತಲಿ ಇಂದು ನಮ್ಮ ಹುಲಿ ಹೋಯಿತ್ತು (ಬಸಹಿ. ೬೦-೦೬೭); ವಿಯಚ್ಚರಿಯರ ವೇಣಿಯಿಂ ಜಗುಳ್ದ ತೊಂಡಲ ದಂಡೆಯೊ (ದಶಕು. ೯-೪೦); ಪೊಸತೊರಳೆಗಳ ದಂಡೆದೊಂಡಲ್ಗಳಂ ಮುಡಿದುಮೆಲ್ಲಗಳ ತೊಡಂಗಳನೆ ತೊಟ್ಟು . . . ಮರುಳ ಮದವರ್ಕಳೆಸೆಯಲ್ (ಹಲಾಯು. ೩೨-೨೦); ವಿಂವರಿಯ ಚಂದು ತೊಂಡಲ ಮಾಲೆಗಳ ಕೊಂಡು ತೆರಳ್ದು ಸೊಗಸಿಂ ಸೂಳೆಗೇರಿಗೈತರಲು (ನವಮೋ. ೦೭-೩೩). **ತೊಂಡಲ :** ೧. ದಂಡ್ಯಾಗ ಒರಗಿರುವ ಮಂಡಲದ ಗಿಣಿರಾಮು ತೊಂಡಲವು ತೂಗಿದಳವೆಲ್ಲಿ (ಕೋಳಗಿ. ೪೦). ೩. ಖಂಡೆಯಕೆ ಪೊಂದಿರ್ದ ತೊಂಡಲವ ಕೂಡೆ ತೆಗೆದುಕೊಂಡು ಮುದದಿಂದ ಬರೆ (ಪ್ರಾಭಲಾ. ೦೩-೨೭). **ತೊಂಡಲು$_1$ :** ೧. ದುಂಡುಮುತ್ತಿನ ರತ್ನ ಕೀವಣಿಸಿದ ಹೊನ್ನ ತೊಂಡಲ ಸೂಡಿದು ಮುದದಿ (ಕೋಚಕ. ೦೩-೩೩); ಕರುಳ ತೊಂಡಲು ಖಂಡದ ಬಣ್ಣಬಾಸಿಗ ನರದ ಹಂಜರ ಚಪ್ಪರದಲಿ ನೆರೆದು (ಕಂಸವಿ. ೧೩-೬೩); ೩. ಅಂಗಜ ವಿಭಂಗನವರಡಿದಾವರೆಗಳುತ್ತಮಾಂಗಕವರಿದ ದಂಡೆ ತೊಂಡಲುಗಳನ್ನೇಕೆ (ಮುಡೀಪು. ೨೩-೫); ಕಾಂತೆಯರುಯತಿಕುಶಲದಿಂ ಮಾಲೆ ಕಂಕಣಂ ಚೆಂಡು ತೊಂಡಲುಗಳಿರದೇ ಸಾತಿಶಯದಿಂ ಕಟ್ಟಿ (ನವಮೋ. ೦೦-೬೦); ತೊಂಡಲ ಮೇಗಣ್ಗೆ ಸೆರಗನ್ನೆಳೆದುಕೊಳ್ಳುತ್ತ ಕೊರಲ್ವಾಗಿ ಹೊರಡುವಳು (ಬಿರುಗಂ. ೨೮-೦೩). **ತೊಂಡಿಲ್ :** ೧. ದಂಡೆ ತೊಂಡಿಲ ಮುಡಿಸಿ ಶಂಡಾಲ ಗಾಮಿನಿಯ ಮಂಡೆಯೊಳು (ಜ್ಞಾನಚಂ. ೭-೨೪); ನರಮೌಕ್ತಿಕದ ತೊಂಡಿಲನು ಸಿರಿಮುಡಿಯೊಳಗಳವಡಿಸಿ (ಜ್ಞಾನಚ. ೩೬-೯೨); ಇಳೆಯೊಳ್ಪೆಂಡಿರ ತೊಂಡಿ ಲೊಳ್ನಣಿಯನೀ ಚಂದ್ರಾಸ್ಯೆಯುಂ ಸೃಷ್ಟಿಗೈದು(ಮಿತ್ರಗೋ. ೫೦). ೩. ನಿರಾಳ ಬೋಳಿಂಗೆ ತೊಂಡಿಲ ಮುಡಿಸುವಂತೆ (ಅಪಹಂ. ೦೩೩-೬೦೭). ೪. ಮದುವೆ ಯಲ್ಲಿ ಹೆಣ್ಣಿನ ತಲೆಗೆ ತೊಡಿಸುವ ಬಾಸಿಗ: ಶರಣರ ಪಾದಂಗಳೇ ತೊಂಡಿಲ ಬಾಸಿಗವೆನಗೆ (ಮಹಾದೇ. ಬ. ೩೭-೭೮) **ತೊಂಡಿಲು$_1$ :** ೧. "ತೊಂಡಿಲು ಶಿರೋಗ್ರಂಥಿಯೆನಿಸಿಕ್ಕು" (ಮಂಗರಾ. ೯೯-೨೦); ಮುಡಿಗೆ ಮಂಗಳಮಪ್ಪ ಮಣಿದೊಂಡಿಲಿಟ್ಟು (ಹೀರಮ. ೫-೪೧); ತೊಂಡಿಲುಂಗುರ ತಾಳಿ ಬಂದಿ ಭೂಷಣದ ಕರಂಡಗೆಗೊಟ್ಟು ಕಳುಹಿದ (ಭರಚ. ೩೭-೦೨೭); ಮಣಿವ್ರಜಮಂಡಿತವೊಂದಿ ತೊಂಡಿಲಾ ಸೋಮ್ಮುಡಿಯಲ್ಲಿ . . . ಇಟ್ಟು ಸಿಂಗರಿಸಿ (ರಾಜಶೇ. ೮-೩೮): ಮೆರೆವ ತೊಂಡಿಲ ಧರಿಸಿ (ಯಜನಳ. ೫೪). ೩. ಮಲ್ಲಿಗೆಯಲರ್ಗಳಿಂ ಸಮೆದ ತೊಂಡಿಲಿನಿಂದ ಮೊಲ್ಲೆಯ ದಂಡೆಗಳಿಂದ (ಚಂಪ್ರಸಾಂ. ೦೨-೦೦೩). ೪. ತೊಂಡಿಲು ಬಾಸಿಗವನು ಸೂಡಿದರು ಚಂದ್ರ ಮಂಡಲ ರತಿಮನ್ಮಥರ್ಗೆ (ಪಕೋಚಕ. ೧೩-೨೩).

**ತೊಂಡಲ** 'ತೊಂಡಲ್' ನೋ.

**ತೊಂಡಲಿಪಿ** (ನಾ). ಉದ್ಧತರ ಬರವಣಿಗೆ; ಉದ್ಧತರಾಜರ ಶಾಸನ: ತೊಡೆ ತೊಂಡಲಿಪಿಯನೆಂದನು ಧೂಳಿಲಿಪಿಗಳ ತೊಡೆವಂತೆ ತೊಡೆದನಾ ಭೃತ್ಯ (ಭರಚ. ೩೭-೯೮). [ ತೊಂಡ$_2$ + ಲಿಪಿ ]

**ತೊಂಡಲು$_1$** 'ತೊಂಡಲ್' ನೋ.

**ತೊಂಡಲು$_2$** (ನಾ). ಒಂದು ಬಗೆಯ ಹಕ್ಕಿ: ಗರುಡ ಕೊಣಕನು ಪೋಣು ಟೀವನು ಗರಗೆ ತೊಂಡಲು ಗಜಗ . . . ಪೆರುವರ್ದವಟ್ಟೊಳೊಪ್ಪಿದವು (ಸಾಳ್ವಭಾ. ೫-೨೩). [ ? ]

**ತೊಂಡಲ್ವಚ್ಚ** (ನಾ). ತಲೆಯಲ್ಲಿ ಧರಿಸುವ ಒಂದು ಬಗೆಯ ಆಭರಣ; ಬೈತಲೆಮಣಿ: ಬೆಳ್ಳಿಗರಡಿಗೆಯೊಳ್ ತಳತಳಿಪ ಪಟನುಡಿವೆಂಡಿರ ಪಚ್ಚೆಯ ತೊಂಡಲ್ವಚ್ಚದಂತೆಯುಂ (ಚಳವಂ. ೮೬-೬೦). [ ತೊಂಡಲ್ + ಪಚ್ಚ$_2$ ]

**ತೊಂಡಲ್ಹೂವು** (ನಾ). ಗೊಂಚಲಾಗಿರುವ ಹೂವು: ತೊಂಡಲ್ಹೂವಿನ ಗಾಳಿ ನನೆಯ ನಿಡುದಂಡೆ ಮನೋಹರವಾದಚ್ಚು (ಜಯುಕಾ. ೫-೩).
[ ತೊಂಡಲ್ + ಪೂವು (< ಪೂ$_1$) ]

**ತೊಂಡವಾಡಿ** (ನಾ). ಒಂದಂ ಸ್ಥಳದ ಹೆಸರಂ : ತೊಣ್ಡವಾಡಿಯ ಪಳ್ಳಿಯ ಮಳೆಯುತ್ತಯ್ಯನ ಮಗ ಅಯ್ಯಪಯ್ಯ (ಎಕ. IV, ಗುಂಡ್ಲುಪೇ. ೦-೯೩ ; 975). [ ತೊಂಡ + ಪಾಡಿ$_2$ ]

**ತೊಂಡಾಣೆ** (ನಾ). ಭಕ್ತನ ಆಣೆ : ಕೇಳಿನ್ನು ನಿನ್ನಾಣೆ ತೊಂಡಾಣೆ ಹೋಗೆಂದು ಕರುಣೆ ಕೇಳುವಲ್ಲಿ (ಸಿದ್ಧರಾ. ೬-೫೦).

[ ತೊಂಡ$_1$ + ಆಣೆ$_3$ ]

**ತೊಂಡಾಲ** (ನಾ). ಒಂದಂ ಸ್ಥಳದ ಹೆಸರಂ : ಅಲ್ಲಿಂದ ತಂಕ ಪಡುವಲು ಉತ್ತನೂರ ತೊಂಡಾಲದ ಮುಕ್ಕೂಟಲ ಮಣ್ಣೊಬಡಿ (ಮೈಆರಿ. ೦೯೨೫, ೧೦೫-೯೩ ; 934). [ ? ]

**ತೊಂಡಿ$_1$** (ನಾ). ದಾಸಿ ; ಸೇವಕಿ : ಬಸುರಿಳಿಯ . . . ಮಾಂಸದ ಚೀಲದಿಂ ಬೀಳಿಯೊಡನೆ ಗಾಂಧಾರಿಯುಂ ಮುಳಿಸಿಯದನೂ ಕಂಡಿದಕ್ಕಾಗಿ ತಾನೆರಡುವರುಷಂ ಧರಿಸಿಕೊಂಡೆನೆ ಗರ್ಭಮಂ ಬಿಸುಡು ಬಿಸುಡೆಂದಾಗ ತೊಂಡಿಯರಿಗುಸುರುತಿರಲು (ಲಕ್ಷ್ಮೀಭಾ. ೨೫-೩೭).

[ ತೊಂಡ$_1$ + – ಇ$_3$ ]

**ತೊಂಡಿ$_2$** 'ತೊಂಡೆ$_3$' ನೋ.

**ತೊಂಡಿಕೆ** (ನಾ). ತುಂಟತನ ; ತಂಟಾಟ : ಕರುಮಾಡದ ಪೊಱಗನೆ ಪೋಪಳಂ ವಸುದೇವಂ ಕಂಡವಳ ಕೈಯಿಂದವಾ ಕರಂಡಕಮಂ ಕೊಂಡೊಡ ವಳಿಂತೆಂಬಳ್ ತೊಂಡಿಕೆಯನೊಪ್ಪೆ ನಿನ್ನೊಳ್ ಕಂಡುದೞಿನುಪಾಯದಿಂ ವನಾಂತರದೊಳ್ ಭೂಮಂಡಳಪತಿ ಸೆಱೆಯಿಟ್ಟಂ ಕೊಂಡಾಟದೊಳಿರ್ದೆ ನೆಂದು ಬಗೆಯದೆ ಕಂಡಾ (ಬಂಹರಿ. ೨-೬). 'ತೊಂಡಿಕೆಗೆಯ್' ಪರಾ.

[ ತೊಂಡು$_1$ + – ಇಕೆ ]

**ತೊಂಡಿಕೆಗೆಯ್** (ಕ್ರಿ). ತಂಟಾಟವಾಡಂ : ನಿಚ್ಚನಿಚ್ಚಂ ತೊಂಡಿಕೆಗೆಯ್ದು ಪುಯ್ಯಲ ಮಾಡುತ್ತಿರೆ (ಬಂಹರಿ. ೫-೩೦ ವ). [ ತೊಂಡಿಕೆ + ಗೆಯ್$_1$ ]

**ತೊಂಡಿಗ$_1$** (ನಾ). ಒಂದಂ ಬಗೆಯಂ ಪಕ್ಷಿ : ಶಕುನಿ ಕಂಕಂ ತೊಂಡಿಗಂ . . . ರತ್ನಖಗಮಿರ್ಕುಂ ತದ್ವನಾಗೌಘದೊಳ್ (ರಾಜಶೇ. ೫-೫೯) ; "ರಣಹದ್ದು" (ರಾಜಶೇ. ಕೋಶ) : ಟಿಟ್ಟಿಭಂ ತೊಂಡಿಗನುರುಳಿಗನಿರ್ಬಾ ಯನುಂ ಚಾತಕಂ . . . ಶಿಖಿ ಶುಕಂ ತದ್ವನಾಂತಸ್ಥವಿರ್ಕುಂ (ಕಬಿಕಂ. ೩-೩೩). [ ? ]

**ತೊಂಡಿಗ$_2$** (ನಾ). ಒಬ್ಬಾತನ ಹೆಸರು : ಓರಿಯ ಮಗಂ ಕಾಳಿಧುರಂಧರ ನಾತಂ ತೊಣ್ಡಿಗ[ಂ]ಗೆ ಮೆಚ್ಚಿಸಿದೋಂ (ಸೌಇಇ. XI-1, ೪೫-೦೪ : 980).

[ ? ]

**ತೊಂಡಿಲ್** 'ತೊಂಡಲ್' ನೋ.

**ತೊಂಡಿಲು$_1$** 'ತೊಂಡಲ್' ನೋ.

**ತೊಂಡಿಲು$_2$** (ನಾ). =ತೊಂಡೆ$_1$ : ಯಾಕವ್ವಾ ತೆರೆದು ತೊಂಡಿಲ ಬಾಯಿ ಸಾಕವ್ವಾ ಮನವು ಮಾವಿನಕಾಯಿ (ಸೋಗಿ. ೯೦-೧೭) : ಸಂಜೆ ಬಂಡೆತನವ ಹಂಸಿ ಮೆರೆಯ ತುಟಿಯ ತೊಂಡಿಲ (ಸೂರ್ಯಪಾ. ೧೦೮-೪).

[ <ತೊಂಡೆ$_1$ ]

**ತೊಂಡು$_1$**, ತಂಡಂ$_2$ (ನಾ). ೧. ಉದ್ಧಟತನ ; ದಂಪ್ಪತನ ; ಸ್ವೇಚ್ಛಾ ವೃತ್ತಿ ; ಪುಂಡಾಟ : ತೊಂಡಿನೊಳರ್ಕೆ ಕೆಟ್ಟ ದಶಕಂಠನನಕ್ಕಟ ಕೊಂಡ ಪೆರ್ಮರುಳ್ ಕೊಂಡುದೆ ತನ್ನುಮಂ (ಜಂಪಭಾ. ೬-೩೩): ತೊಂಡಿನೊಳಮ್ಮ ಪೇರಡವಿಯುಂ ಪುಗುತಂದಪರೆಂದು ಲುಬ್ಧಕರ್ ತಂಡದೆ ಸುತ್ತಿಮುತ್ತ (ಜಂರಾಮಾ. ೭-೧೦೫) : ಕೊಂಡು ಕಮಂಡಳಜಳದೊಳ್ ದಂಡಿತರಿಪು ತೀವೆ ಕಂಡು ಗುಂಡುಲಿಯ ಕರಂ ಕೊಂಡಿಂದಾ ಪುರವರದೊಳ್ ಗುಂಡಿಗೆಯಂ ನೆಗಪಿ ಸುರಿಯೆ ಪರಿದುದು ನದಿಪೋಲ್ (ನೇಮಿಪು. ೭-೦೮೨) ; ತೊಂಡಿನ ಕೊಟ್ಟಿರ್ ಪಾಪದ ಪಿಂಡಮೆನಿಪ್ಪಂಗನಾಜನಂ ಬೆರಸಲ್ (ಖಮುದ. ೧೪-೬೨) : ಕೊಂಡಿನ ತವರುಮನೆ ಬಾಹಿರರಿಗಾಶ್ರಯಭವನ ಖಳರಧಿದೇವ ಭೀಷ್ಮನ ಕೊಲುವರಿಲ್ಲೆಂದ (ಕುಮ್ಯಾಸ. ೦೦-೦೨). ೨. ಸೊಕ್ಕಿನ ನಂಡಿ ; ಉದ್ಧಟತನದ ಮಾತಂ : ಕಂಡುಳಿದಡುಳಿದರಲ್ಲದ ತೊಂಡಂ ನುಡಿದೆಡೆ ತೊಡರ್ವರುರವಣೆಯಂ ಕಂಡಿದಿರಲೆಟ್ಟು ಮುಳಿಸಿಂ ಖಂಡಿಪನೆನೆ ಹಬ್ಬಣಂಗಿದಿರ್ಚುವನಾವಂ (ಮುಂಬಕಾ. ೨೪೩-೨೯ ; 1219). ೩. ಉದ್ಧಟ ವ್ಯಕ್ತಿ ; ಸ್ವೇಚ್ಛಾಚಾರಿ : ತೊಂಡೆನಿಸಿ ಬದುಕಿದವ ಪೆಣ ನಂತೆ ನಿಷ್ಫಲವು (ನಿಭಾಗ. ೦೧-೨೮-೧೭). ೪. ವಾಕ್ಪಟುತ್ವ : ಜನ್ನನ ದೇಸೆ ಪಂಪನ ಗುಣಂ ಗುಣನಂದಿಯ ತೊಂಡು ಪೊನ್ನನೊಳ್ ಸನ್ನಿದಮಾದ ಜಾಣ್ನುಡಿ . . . ನೆಲಸಿರ್ಪುವೀ ಸುಕವಿಮಲ್ಲನ ಕಾವ್ಯವಿಲಾಸಗೇಹದೊಳ್ (ಸೂಕ್ತಿಸು. ೦-೨೬). ೫. ಪರಾಕ್ರಮ ; ಶೌರ್ಯ : ಪೇಟೀವುದೂ ಕುಟಿಯಿಲ್ಲದವನ ಗಂಡುಂ ತೊಂಡುಂ (ಜಂಪಭಾ. ೮-೮೨) ; ಗಂಡಿನ ತೊಂಡಿನಂಕದಧಟಲ್ ಪೊಂಕಾಳ್ತನಂ (ಹೈಆಸಿ. ೦೩-೭-೭೩ : 1090) : ತೊಂಡಿನೊಳೆ ಮಲೆಮಹೀಪರ ಮಂಡಳಮಂ ಸೂರೆಗೊಂಡು (ಎಕ. V, ಅರಸೀ. ೦೦೨-೬೫ : 1100 ?) : ಭೇರುಂಡಪರಾಕ್ರಮಂಗೆ ಸಹದೇವ ಚಮೂಪತಿಗೆಂತು ಗಂಡಿನೊಳು ತೊಂಡವಿದಿರ್ಚೆ ಬಾಳ್ವದಟನಾಗ್ಗಳ ಮೈಳುಗಿಯಂಕ[ಕಾ]ರನೊಳು (ಸೌಇಇ. XV, ೧೫೫-೨೫ : 1206) : ಬಲಂ ಗೊಂಡಂ ತೊಂಡಂ ಬಿಡದೆ ಗಜಕರ್ಣಾವನಿಭುಜಂ (ಪುಷ್ಪಪು. ೭-೮೦) : ತೋಱಿಸಿದೆ ನೀ ತೊಂಡಿನೋಲೆಯಕಾಱತನವನು (ಕುಮ್ಯಾಕ. ೦೬-೦೩). ೬. ಮದ ; ಸೊಕ್ಕು : ಬಲವಂ ನಚ್ಚಿ ವಿರೋಧಮಂ ಪಡೆವುದೇ ತೊಂಡಿಂದೆ ಸಾಮಂತರಂ ಕಲಹಂ ಬೇಡೆನೆ (ಎಕ. VI, ಕಡೂರು. ೩೫-೫೨ : 1136) : ಕೀರ್ತನಂ ತೊಂಡಿನಿಂ ಕುಂಟಣಿ ಮಾಡ್ಬೆಳ್ಕೆಣದಿ ನಾಣೊಡೆಯ ನನೆಡೆಯೊಳ್ನಿರ್ಧನಂ ಮಾಡ್ಪೆಳ್ (ಧೀರಾಪ. ೨-೯೭) ; ಬಾದೂರ್ವ ಭವಿ ಯೆನಿಪ ವಿಪ್ರಂಗೆ ತೊತ್ತಾಗಿ . . . ಅರಮನೆಯ ಕೆಲಸಮಂ ಮಾಡುತುಂ ತೊಂಡು ಮಿಕ್ಕುದು (ನಿಂಬಶ. ೧೨೫-೦೬) ; ಜನಪನಾಱಡಿಯನಾನೆಯ ದೊಂದು ತೊಂಡ ಗುರುವಿನ ದುರಾಚಾರಮಂ ಮಾಣಿಸಲ್ಬಲ್ಲರೇ (ಸಮ್ಯಕೌ. ೨-೭೫). 'ತೊಂಡುಗೆಡೆ$_1$' ಪರಾ. ತುಂಡು$_2$ : ೩. ಬಂಡು ಹೆಂಡತಿಯಾಗಿ ತುಂಡೊಬ್ಬ ಸೊಸೆಯಾಗಿ ಕಂಡಲ್ಲಿ ಹರಿವ ಮಗನಾದರಾ ಮನೆಗೆ ದಂಡ ತಪ್ಪುವದೆ (ಸರ್ವಜ್ಞ. ೦೭೫೫).

**ತೊಂಡನಿಕ್ಕು** = ದಂಪ್ಪತನದಿಂದ ವರ್ತಿಸು : ಕೊಂಡನಿಕ್ಕಿ ಠವಾಳ ತನದಲ್ಲಿ ಭಂಡುಗೆಲವೃತ ಮಲುಹಣಿಯ ತಾಯ್ ಮಿಂಡನಂ ಹೊಱವಡಿಸಿ ತಾ ತನ್ನಾತ್ಮಜೆಯನೊಬ್ಬ ಮಂಡಳೀಶನ ಪೊರೆಗೆ ಕಳುಹಲು (ಬಸಪು. ೪೨-೧೯). **ತೊಂಡಿನ ದನ** = ತೊಂಡುದನ : ಮನಕ್ಕೆ ಲಿಂಗ ಬಾಹಾಗ ತೊಂಡಿನ ದನವೇ (ಮೋಳಿಷಾ. ೧೦೯-೪೭೭).

**ತೊಂಡು$_2$** (ನಾ). ಅಂಕೆ ; ಹತೋಟಿ : ಮದವೆದ್ದಾನೆಗಲ್ಲಿಯ ತೊಂಡು (ಅನಂರಾ. ೬-೨೩-೨೭). [ ದೇ.? ತಮಿ. ತೊಣ್ಣು ]

**ತೊಂಡು$_3$** (ನಾ). ಗುಂಪು ; ಸಮೂಹ : ಇಡೀ ಜಗತ್ತೆಲ್ಲ ಮೋಹವಿಭ್ರಾಂತ ರಾದ ಜನರ ತೊಂಡಿನಂತೆಯೂ . . . ಅವಳಿಗೆ ಕಂಡಿತು (ಪುನರು. ೧೯೪).

[ < ತಂಡ ]

**ತೊಂಡು$_4$** (ನಾ). (ಕರಾ) ಮಂಸಂರೆಯಂನ್ನು ಹಾಕುವ ಬಾನಿ.– ಕೂನಿ.

[ ? ]

**ತೊಂಡುಗಿಳಿ** (ನಾ). ಧ್ವನಿಮಾಡುವ ಗಿಳಿ ; ಗಳಪುವ ಗಿಳಿ : ಗಂಡು ಗೋಗಿಲೆಯ ತಂಡಮುಂ ತೊಂಡುಗಿಳಿಯ ಪಿಂಡುಂ ಮುಂ ಪಯಣಮಾಗೆ (ಶಾಂತಿಪು. ೭-೧೨೯ ವ) ; ಪರಿವಿಡಿಗೆಯ್ಯೆ ತೊಂಡುಗಿಳಿ ತಂದೆಯ ತಾಯ ಸವಿಾಪದೊಳ್ (ರಸರ. ೪-೦೭೭). [ ತೊಂಡು$_1$ + ಗಿಳಿ ]

**ತೊಂಡುಗೂಳಿ** (ನಾ). ಸ್ವೇಚ್ಛೆಯಾದ ಬಸವ ; ದೇವರಿಗೆ ಬಿಟ್ಟ ಗೂಳಿ; ಪುಂಡಂಗೂಳಿ: ತೊಂಡುಗೂಳಿ ಬೆಳೆದ ಹಾಗೆ ಬೆಳೆದಿದ್ದೆ (ಸಂಧ್ಯಾರಾ. ೧೨).

[ ತೊಂಡು$_1$ + ಗೂಳಿ$_1$ ]

**ತೊಂಡುಗೆಡೆ$_1$** (ಕ್ರಿ). ೧. (ಗಿಳಿಯು) ಧ್ವನಿಮಾಡಂ,-ಗಳಹಂ: "ತೊಂಡುಗೆಡೆವುದೆಂದು ಶುಕವಿಲಾಸಂ" (ಶಕಸಾ. ೫೫-೨೦೪); "ತೊಂಡು ಗೆಡೆದುದೆನೆ ಗಿಳಿಯವಾತು" (ಕಬ್ಬಿಕೈ. ೨೩); ತೊಂಡುಗೆಡೆದು ವಸಂತ ರಾಜನ ಪಡಿಯಱರಂತೆ ವಿರಹಿಗಳಂ ಚಪ್ಪರಿಪ ರಾಜಕೀರಂಗಳ್ (ಗಿರಿಶ. ೩-೦೦೩ ವ); ಕಂಗೊಳಿಸಿದುದೆಂದು ತೊಂಡುಗೆಡೆಯುತ್ತುಮತೀವ ವಿಲಾಸ ದಿಂ ಶುಕಾವಳಿ (ಅದ್ಭುಟ. ೦೦-೯); ತೊಂಡುಗೆಡೆಯಿತ್ತುಪದೇಶಿಕನಂತೆ ಕಾಮ ತಂತ್ರದ ತಿರುಳಂ ಕನತ್ಕನಕಪಂಜರಪಿಂಜರಿತಾಂಶುಕಂ ಶುಕಂ (ಸೂಕ್ತಿಸು. ೦೪-೩); ಗಿಳಿಗಳೆಮ್ಮನೆ ಕಂಡು ಮೂಗ ಕಿಚ್ಚನೆ ಮಾಡಿ ತೊಂಡುಗೆಡೆದವ ವೆಂದಳೊರ್ವ ವನಿತೆ (ಭಾವಚಂ. ೬-೨೬); ಬಗ್ಗಿಪ ಕಳಕಂಠಂ ತೊಂಡು ಗೆಡೆವ ಗಿಳಿ ಪೂತಸೆದಿರ್ವಲಚರ್ಹಿಂವಂ (ರಾಜಶೇ. ೨-೩೮). ೨. (ಸ್ವಚ್ಛಂದ ವಾಗಿ) ಕೂಗು,-ಕಂಕಿಲಂ: ತೊಂಡುಗೆಡೆಯುತ್ತೆ ಪಿಕಾಳಿ ಶುಕಾಳಿ ಯೊಪ್ಪುಗುಂ (ಗಿರಿಶ. ೨-೩೬); ಪುಗಲ್ ಪುಗಲೆಂದು ಬಂಡಳಿಸಿ ತೊಂಡು ಗೆಡೆವ ಗಂಡುಗೋಗಿಲೆಗಳುಂ (ಪುಷ್ಪಪು. ೨-೩೯ ವ); ಶುಕಪಿಕಂ ತೊಂಡು ಗೆಡೆದುಱೆ ಕೂಗಲ್ (ಧಾವಚಂ. ೪-೦೬). ೩. (ಆಲಂ) ಕೂಗಾಡು; ಜರುಚು: ಬಾಣದ ಮೊನೆಯೊಳು ಲೇಖೆಯಿಂ ಕಟ್ಟಿ ತೊಟ್ಟನೆಸೆವುದದಂ ಮಾಗಧಂ ಕಂಡು ತೊಂಡುಗೆ[ಪಾಠಾಂ. ಕೆ]ಡೆವುದುಂ ಮಂತ್ರಿಗಳು ಮಾಣಿಸಲ್ (ಪುಣ್ಯಾಸ್ರ. ೦೦-೨೮ ವ); ಭಂಡ ನೀ ಬಾಯ್ಬಿಡಿಕತನದಲಿ ತೊಂಡುಗೆಡೆವರೆ (ಛಾರಿಶಾ. ೨೦-೫೦); ಅಲ್ಲಿಗೆ ಪೋಗಿ ತೊಂಡುಗೆಡೆದು ನಿಂದಿಸಿ ನಮ್ಮ ಕಾಡಿದ ದಿಂಡೆಯದೇನ ಮಾಡುವೆನೆಂದ (ಕೃಭುತಿ. ೯-೪೨).

[ ತೊಂಡು$_1$ + ಕೆಡೆ$_2$ ]

**ತೊಂಡುಗೆಡೆ$_2$** (ಕ್ರಿ). ರಾಶಿಯಾಗಿ ಬೀಳಂ; ಗುಂಪಾಗಿ ಕೆಡೆ: ಕರಚಂಡ ಘಾತದೊಳ್ ತೊಡುಗೆಡೆದ ತುರಗದಳಂಗಳುಂ (ಅಜಿಂಪು. ೦೪-೬ ವ) ಕಡಿದು ಖಗಚಯ ತೊಂಡುಗೆಡೆದ ಕಾಯಿಪಣ್ಗಳೊಳು (ನಳಚೂ. ೨೪-೫೬). [ ತೊಂಡು$_3$ + ಕೆಡೆ$_1$ ]

**ತೊಂಡುಗೆಡೆತ** (ನಾ). ಮಧುರವಾದ ಧ್ವನಿ,-ಕೂಗಂ: ಇಂದಿನ ಕನ್ನಡ ಕಾವ್ಯಪ್ರಪಂಚವು ಈ ಗಿಳಿವಿಂಡಿನ ತೊಂಡುಗೆಡೆತಕ್ಕೆ ಕಿವಿಗೊಟ್ಟೀತೆ? (ಗಿಳಿವಿಂ. XI, ಮುನ್ನುಡಿ). [ ತೊಂಡುಗೆಡೆ$_1$ + – ತ$_2$ ]

**ತೊಂಡುಗೆಡೆಪ** (ನಾ). ಮಧುರವಾಗಿ ಮಾತನಾಡುವುದುಂ: ತಂಬೆಲರ ತನಿಸೋಂಕು ನಾಂ ಪುಗಲ್ಪುಗಲಂತೆ ತೊಣ್ಡುಗೆಡೆಪಂ ಪುಷ್ಪವಿಕಸನವ ಮುದ್ದಿಪಲರ್ವಕ್ಕಿಯಾಮೋದಮುಂ (ಸಂಚಿಹ. ೩೦-೦೬೨).

[ ತೊಂಡುಗೆಡೆ$_1$ + – ಪ$_2$ ]

**ತೊಂಡುಗೆಯ್** (ಕ್ರಿ). (ಗಿಳಿಯು) ಧ್ವನಿಮಾಡಂ,-ಗಳಹು: ಇನಿ ವಣ್ಣುಂಡು ಗಿಳಿವಿಂಡು ತೊಂಡುಗೆಯುಲೆಳಸಿತು (ಚಲುಪು. ೪೫-೦೦).

[ ತೊಂಡು$_1$ + ಕೆಯ್$_1$ ]

**ತೊಂಡುಗೇಡು** (ನಾ). ಸೊಕ್ಕು; ಇಳಿಯಯಿಕೆ; ಅಹಂಕಾರದ ಕೇಡುಂ: ಗಂಡುಗುಂದಿನ ಬೀತ ಬಿರುದಿನ ತೊಂಡುಗೇಡಿನ ಜಯದ ಜಾಱುನ ಖಂಡಶೌರ್ಯದ ಧೀರರಿದ್ದುದು ನೃಪನ ಬಳಸಿನಲಿ (ಕುಮ್ವಾಭಾ. ೦೩-೪೬).

[ ತೊಂಡು$_1$ + ಕೇಡು ]

**ತೊಂಡುಗೊಳ್** (ಕ್ರಿ). ಸ್ವೇಚ್ಛೆಯಾಗಿ ಓಡಾಡು: ಭಂಡಿಯುಂ ನಲವಿಂದ ನೂಂಕೆ ತದುಲ್ಲಸತ್ಪುರವೀಥಿಯೊಳ್ ತೊಂಡುಗೊಂಡಿರಲೊಂದು ತರ್ಣಕಂ . . . ಬಿರ್ದಟಿಯಲ್ (ಅದ್ಭುಟ. ೦೩-೬೬). [ ತೊಂಡು$_1$ + ಕೊಳ್$_1$ ]

**ತೊಂಡುತನ, ತುಂಡುತನ** (ನಾ). ೧. ಸ್ವೇಚ್ಛಾವೃತ್ತಿ: (ಕ). ತುಂಡುತನ: ೨. ತುಂಟತನ: (ಕ). [ ತೊಂಡು$_1$ + – ತನ ]

**ತೊಂಡುತೆರೆ** (ನಾ). ಪ್ರಕ್ಷುಬ್ಧವಾದ ಅಲೆ: ತೊಂಡುತೆರೆಗಳ ಮುಸುಕಿನಲ್ಲಿ ಕಂಡು ಮಗಳ ಕರಗಿಹೋದ (ಕಂಗೀತ. ೬೬-೨೦).

[ ತೊಂಡು$_1$ + ತೆರೆ$_4$ ]

**ತೊಂಡುತೊಳಸು$_1$** (ಕ್ರಿ). ಮನಬಂದಂತೆ ಸುತ್ತು,-ತಿರುಗಂ: ತೊಂಡು ತೊಳಸುವ ದೋಣಿಯನ್ನ ನಂಬಿ ಬಂದೆನೆ? (ಗಿಳಿವಿಂ. ೫೫-೨೪).

[ ತೊಂಡು$_1$ + ತೊಳಸು$_2$ (<ತೊಟಸು$_1$) ]

**ತೊಂಡುತೊಳಸು$_2$** (ನಾ). ಸ್ವೇಚ್ಛಾವೃತ್ತಿ; ಉದ್ಧಟತನ: ತೊಂಡು ತೊಳಸೆಕ್ಕಸಿಕ್ಕ ವಂಚನೆ ಕುಹಕ ಜೂದು ಕುತ್ಸಿತ ಲಂಡು ಭಂಡು ದುರ್ಜನ ವೆಂಬಿವೆಲ್ಲ ದುಷ್ಟಸ್ವಭಾವಂ (ಸಪ್ಪುಳಾ. ೬-೩೩); ಈ ನರದೇಹ ಕ್ರಿಮಿಗಳ ಮೊತ್ತದಾಗರ . . . ಇದು ಮುರಾರಿಯು ಶಕ್ತಿಯನಿಸುವ ಮಾಯೆ ಮಾಡುವ ತೊಂಡುತೊಳಸೆಂದ (ನಿಭಾಗ. ೦೦-೫೨-೨೦); ಉದ್ದಾಲಕಂ ಸಂತಸಗೊಂಡು . . . ಸಂಪ್ರೀತಿಯಿಂ ವಿಪರೀತದ ತೊಂಡು ತೊಳಸಂ ಮಱೆದು (ಕ್ರಮಿಥಾ. ೦೭-೩೦); ಕಂಡಿರಾ ಗುರುಗಳಿರ ತನಯನ ತೊಂಡುತೊಳಸಿನ ಮಾತ (ಕೃಷ್ಣಾಲ. ೬-೩೬).

[ ತೊಂಡು$_2$ + ತೊಳಸು$_4$ ( < ತೊಟಸು$_2$) ]

**ತೊಂಡುತೊಳಸುಗ** (ನಾ). ಮನಬಂದಂತೆ ವರ್ತಿಸುವವನು; ತೊಂಡು ತೊಳಸುಗರನವನಿಯೊಳಂಡಲೆದಗಲಕ್ಕೆ ಪರಿದು (ಧರ್ಮನಾ. ೫-೯೦).

[ ತೊಂಡುತೊಳಸು$_1$ + – ಗ$_2$ ]

**ತೊಂಡುದನ** (ನಾ). ಅಗಡುದನ; ಸ್ವೇಚ್ಛೆಯಾಗಿ ಅಲೆಯುವ ದನ; ತುಡುಗುಂದನ: ಕಂಡವರ ಹೊಲಕಿಳಿವ ತೊಂಡುದನವಲ್ಲು (ಕಾಲೂರ. ೬೦-೦೫೨); ನಾಲ್ಕುದಿಕ್ಕುಗಳಿಂದಲೂ ತೊಂಡುದನಗಳು ನುಗ್ಗಿ, ಮೇದು ತುಳಿದು ಹಾಳುಮಾಡಿದ ತೋಟವಾಯಿತು (ಕನ್ನಸು. II, ೫); ಜಗತ್ತಿಗೆ ಶಾಂತಿ ಸಂತೋಷಗಳನ್ನು ಕೊಡುವ ಹೂವೇ ಧನ್ಯ, ಮಾನ್ಯ. ಮುಳ್ಳು ಉಪಯೋಗಕ್ಕೆ ಬಂದರೆ ತೊಂಡುದನಗಳಿಗೆ ಅಡ್ಡಿಯಾಗುವಂತೆ ಬೇಲಿಹಾಕು ವುದಕ್ಕೆ (ಬಂಕಿಮ. ೦೬೦). [ ತೊಂಡು$_1$ + ದನ ]

**ತೊಂಡುನಗೆ** (ನಾ). ತುಂಟನಗೆ; ಚೇಷ್ಟೆಯ ನಗೆ: ತೊಂಡುನಗೆಯು ತೊಂಡೆಬಾಯು ಕಂಡು ಕಂಡು ಮುತ್ತನಿಟ್ಟು (ನಾದಲೀ. ೬೬-೦೯).

[ ತೊಂಡು$_1$ + ನಗೆ ]

**ತೊಂಡುನಡೆ** (ನಾ). ಸ್ವೇಚ್ಛಾವೃತ್ತಿ; ಉದ್ಧಟತನ: ವಿರಸವನು ಬಿತ್ತುತ್ತ ತೊಂಡುನಡೆ ನಡೆದು ಕೊಲೆಗೆ ಕೊಲೆ ಸಂತತಿಯನಿಡುವವರ ಬೇಡಿದಿರಿ (ಅಮೃತಂ. ೨೩-೯). [ ತೊಂಡು$_1$ + ನಡೆ$_2$ ]

**ತೊಂಡುನುಡಿ** (ನಾ). ಚೇಷ್ಟೆಯ ಮಾತು; ತುಂಟತನದ ನುಡಿ: ನಗೆವೆರಸಿರ್ದ ತೊಂಡುನುಡಿಯಿಂ ತಗುಳ್ದಳ್ ಸಲೆ ಧೀರೆ (ಚಿತರ. ೩-೯೦ ಸೂತ್ರ). [ ತೊಂಡು$_1$ + ನುಡಿ$_2$ ]

**ತೊಂಡುಪಾಳೆಯಗಾರ** (ನಾ). ಉದ್ಧಟನಾದ ಪಾಳೆಯಗಾರ; ಸೊಕ್ಕಿದ ಪಾಳೆಯಗಾರ: ಚೆನ್ನರಾಜನು ಇದಿರುಬಿದ್ದು, ಉದ್ಧುರುಟು ತನದಿಂದ ತೊಣ್ಡುಪಾಳೆಯಗಾರರೊಡನೆ ಸೇರಿಕೊಂಡು . . . ಸ್ವತಂತ್ರನಾಗಲು ಸಾಹಸಪಡುತ್ತಿರುವನು (ಐತ್ಯಚ. ೪೪-೦೬).

[ ತೊಂಡು$_1$ + ಪಾಳೆಯಗಾರ ]

**ತೊಂಡುಬಂಡು** (ನಾ). (ಗಿಳಿಯು) ಧ್ವನಿಮಾಡುವ ಗದ್ದಲ,-ಗಳಹುವ ಕೋಲಾಹಲ: ತುಂಬಿಗಳ ಪಲ್ಕೊರೆಪದಿಂ ಗಿಳಿಯ ತೊಂಡುಬಂಡಿಂ ಬೆಟ್ಟಿತಾದ ನುಡಿಯಿಂ . . . ಮೆಱೆದುದಾ ವನಂ (ಪದ್ಮರಾ. ೮-೨೫).

[ ತೊಂಡು$_1$ + ಬಂಡು$_3$ ]

**ತೊಂಡುಬೀಳು** (ಕ್ರಿ). ಸ್ವೇಚ್ಛಾವೃತ್ತಿಗೆ ಬೀಳು; ತುಂಟಾಗು: ಸಾಧು ಕುದುರೆಯಾಗಿ ಮನೆಗೆ ಬಂದರಂತೂ ಸರಿಹೋಯಿತು; ಇಲ್ಲದೆ, ತೊಂಡುಬಿದ್ದರೆ? (ಬಂಕಿಮ. ೬೯). [ತೊಂಡು$_1$+ಬೀಳು$_1$ (<ಬೀೞ್$_1$]

**ತೊಂಡುಮರುಳ್** (ನಾ). ದುಷ್ಟಪಿಶಾಚಿ: ಸುಭಟರಟ್ಟೆಗಳನೆಟ್ಟಿಟ್ಟಿ ಕುಟ್ಟುವ ತೊಂಡುಮರುಳ್ಗಳುಂ (ಪಂಚತಾ. ೦೦-೦೦೯ ವ).

[ ತೊಂಡು$_1$ + ಮರುಳ್$_3$ ]

**ತೊಂಡುಮೇ,** ತೊಂಡುಮೇಯಿಂ (ಕ್ರಿ). ಸ್ವೇಚ್ಛೆಯಿಯಾಗಿ ತಿನ್ನು, ಮೇಯಿಯು; ತುಡುಗುಮೇಯಿಯು: ತೊಂಡುಮೇವ ಪಸುವಿಂಡಿನ ತಪ್ಪೋ ಕಂಡು ಕಾ ಮು ದ ತು ಬು ಗಾ ವ ನ ತಪ್ಪೋ (ಗೀತಗೋ. ೬೦). **ತೊಂಡುಮೇಯು:** ಅಲ್ಲಿ ಯಾವ ಕಾಲದಲ್ಲಾದರೂ ಬರುವ ಮೂರು ವರ್ಷದ ಕೋಣಗಳು ತೊಂಡುಮೇಯುತ್ತಿರುತ್ತವೆ (ಸಾ.ಕ. VI, ೩); ಹಳ್ಳ ಅಡಗಿ ಹರಿದಲ್ಲಿ, ತುಡುಗುದನ ತೊಂಡುಮೇಯುವಲ್ಲಿ ದಿಕ್ಕು ತಪ್ಪತಾರ ತಪ್ಪಿ ಹೊಕ್ಕರ ಕಕ್ಕಾವಿಕ್ಕಿಯಾಗಿ (ಗಂಗಾತ. ೭೬-೨).
[ ತೊಂಡು$_1$ + ಮೇ ]

**ತೊಂಡುಮೇಯು** 'ತೊಂಡುಮೇ' ನೋ.

**ತೊಂಡುವಾಡೆ** (ನಾ). ಪುಂಡುದನಗಳನ್ನು ಹಿಡಿದು ಹಾಕುವ ಸ್ಥಳ; ದೊಡ್ಡಿ; ಪೌಂಡಿಮನೆ; **ಕೊಂಡವಾಡೆ:** ಯಾವ ರಾಸುಗಳಾಗಲಿ . . . ಮೇಯುತ್ತಿರುವ ಕಾಲದಲ್ಲಿ ಹಿಡಿದು ಅಥವ ಹಿಡಿಸಿ ಸಾವಕಾಶ ಮಾಡದೆ ಸಮೀಪವಾದ ತೊಂಡುವಾಡೆ ದೊಡ್ಡಿಗೆ ದಾಖಲ್ಮಾಡಬೇಕು (ಗ್ರಾಮಠ. ೧೦೭).'ಕೊಂಡವಾಡೆ' ಪರಾ. [ ತೊಂಡು$_1$ + ವಾಡ$_3$ ]

**ತೊಂಡುವೆಣ್** (ನಾ). ಸ್ವೈರಿಣಿಯಾದ ಹೆಣ್ಣು; ಜಾರೆ: ತೊಂಡುವೆಣ್ಗಳ ನೇ ಹ ದೊ ಡ ಕಿ ಗೆ ಸಿಲುಕದೆ . . . . ನಲ್ಲಿಂದಿರೊಡನ ಬೆರಸುವುದು (ಹರಿಬ. ೮-೪೬). [ ತೊಂಡು$_1$ + ಪೆಣ್ ]

**ತೊಂಡುವೆಣ್ಬುರುಳಿ** (ನಾ). ಗಳಹುವ ಹೆಣ್ಣುಗಿಳಿ; ಹರಟುವ ಹೆಣ್ಣು ಗಿಳಿ: ನಡಪಾಡುವ ರಾಜಹಂಸೆ ಬಂದಾಡುವ ತೊಂಡುವೆಣ್ಬುರುಳಿ (ಪಂಪಭಾ. ೩-೩೭). [ ತೊಂಡು$_1$ + ಪೆಣ್ಬುರುಳಿ ]

**ತೊಂಡುವೆಸರ್** (ನಾ). ಹೆಮ್ಮೆಗಾಗಿ ಪಡೆದ ಬಿರುದಂ: ನೀಚಂಗೆ . . . ಗಾವಿಲನೊರ್ವಂ ಕುಡೆ ಕೊಂಡ ತೊಂ[ಪಾಠಾಂ. ಕೊಂ]ಡುವೆಸರಿಂದೇಂ ಸಲ್ವುದೇ ನಿಲ್ವುದೇ (ಧರ್ಮಾಮೃ. ೦-೪೪). [ ತೊಂಡು$_1$ + ಪೆಸರ್ ]

**ತೊಂಡುಸಲಗ** (ನಾ). ಪಂದಿಸಿದ ಸಲಗ; ಮದ್ದಾನೆ: ತೊಂಡುಸಲಗ ನನ್ನು ಹಳ್ಳಕ್ಕೆ ಕೆಡವಿದ ಬೇಟೆಗಾರನ ಹೆಮ್ಮೆಯಿತ್ತು ಆ ಧ್ವನಿಯಲ್ಲಿ (ರಾಗಿಡ. ೬). [ ತೊಂಡು$_1$ + ಸಲಗ ]

**ತೊಂಡುಹೋಗು** (ಕ್ರಿ). ಸ್ವೇಚ್ಛೆಯಾಗಿ ತಿರುಗು: ಎಮ್ಮೆ ಕೋಣ ಕುಲವ ನಾ ಕಾಯಲಿಲ್ಲ ಅವು ಎನ್ನ ತುಬುವಿಗೆ ಹೊಟಗು ತೊಂಡುಹೋಗದಂತೆ ಕಾದೊಪ್ಪಿಸುವೆ (ತುಬುಗಾ. ೦): ಹಸುವಿಂಗೆ ಒಂದು ಕಚ್ಚು . . . ಕಬು ವಿಂಗೆ ಮೂಬು ಕಚ್ಚು ಇಂತಿವ ನೋಡಿ ಮೇಯಿಸಿಕೊಂಡು ತೊಂಡು ಹೋಗದಂತೆ ನಾ ಕಾದೊಪ್ಪಿಸಬೇಕು (ತುಬುಗಾ. ೨).
[ ತೊಂಡು$_1$ + ಹೋಗು$_1$ (< ಪೋಗು$_1$) ]

**ತೊಂಡುಜಿಸು** (ಕ್ರಿ). (?): ಹರಿಣನಾ ಹಿಂಡ ಸನಬುತಲೆಸುತ ಖಂಡಿಸುತ ಶಬರಕುಳ ತೊಂಡುಜಿಸಿ ಬೇಂಟೆಯಿಂ ಪೆಚ್ಚುತಿರಲು (ಶಂಗಪು. ೬-೨೫): ಸುರುಚಿರಾಭರಣದಿಂ ಖಂಡಶಶಿನೊಸಲ್ಗಲಿಂದಾ ತೊಂಡುಜಿಸಿ ಏಟರ ಮೇಲ್ವಾಯ್ದು ಪಿಡಿದಪ್ಪುತಂ (ಶಂಗಪು. ೨೫-೪೬). [ ? ]

**ತೊಂಡೂರ್** (ನಾ). ಒಂದುಂ ಊರಿನ ಹೆಸರಂ: ಮದಂಕಲ್ಲೂ ತೊಣ್ಣೂರು ಮಲ್ಲರ್ವೃನ್ನೆರಡು ಅಮ್ಮ ವ ಳ್ಳಿ ಪನ್ನೆರಡು (ಎಕ. XI, ಹಳ್ಳ. ೩೪-೦೬; ಸು. ೨೧೬). [ ? + ಊರ್ ]

**ತೊಂಡೆ$_1$** (ನಾ). ಒಂದುಂ ಬಗೆಯ ಬಳ್ಳಿ ಮತ್ತು ಅದರ ಹಣ್ಣು: "ಓಷ್ಠೀ, ಬಿಂಬೀ, ತುಂಡಿಕಾ-ಈ ೩ ತೊಂಡೆ" (ಹಲಾಯು. ೩೪-೫೦): "ತುಂಡಿಕೇರೀ, ರಕ್ತಫಲಾ, ಬಿಂಬಿಕಾ, ಪೀಲುಪರ್ಣೀ ಈ ೪ ತೊಂಡೆ" (ನಾಚಿರಾ. ೧೧೧): ಗಾಣರ್ಗೆ ಬುಧರ್ಗೆ ಕವಿಶ್ರೇಣಿಗೆ ಪಗೆಯಾದವೆಂದು ತೊಂ ಡೆ ಯ ಪಣ್ಗಳ್ ನಾಣುಂ ಬೆಳರ್ತು ತೋರ್ಪವೊಲೀಣಾಕ್ಷಿಯರಧರಮಂದು ಬೆಳ್ಪ ಮರ್ದಿಸಗುಂ (ಉದ್ಭಟ. ೯-೦೨೬): ಮದಕರಿ ಮತ್ತ್ರೆ ಮೆಟ್ಟಿದ ಹಿರಿಯ ತೊಂಡೆಯ ಹಣ್ಣನಂದದಿ ಕರುಳನೋಕರಿಸಿದನು (ಭಾಶಿರಾ. ೨೨-೨೨): ಚಿಲುಪಾಲುವೆಸರನದಕಟ್ಟು . . . ಹಸಿಯ ತೊಂಡೆಯ ಬೇರ ಕಟ್ಟಿ ತೊಳಸಿದೊಡೆ ಬಿಳುಪಹುದು (ಸೂಪಶಾ. ೨-೩): ತರುಣಿಯೊರ್ವಳ ತುಟಿಯ ತೊಂಡೆಯ ಪಣ್ಣಿಂದರಗಿಣಿಯೆಬಗಲು (ಶಂಶಪ. ೫-೦೦೬).
[ ದೇ.॥ ತಮಿ. ತೊಣ್ಡೈ; ಮಲ. ತೊಣ್ಡ; ತೆಲು. ದೊಂಡ ]

**ತೊಂಡೆ$_2$,** ಡೊಣ್ಣೆ$_2$, ದೊಣ್ಣೆ$_2$ (ನಾ). ಓತಿಕೇತ; ಗೋಸಂಂಬೆ; ಊಸರವಳ್ಳಿ: "ಸರಟಃ, ಕೃಕಲಾಸಃ–೨ ಕೊಂಡೆ ಹೆಸರು" (ಸಿದ್ಧಾಂತ. ೦೩೬). 'ತೊಂಡೆಕೇತ' ಪರಾ. **ಡೊಣ್ಣೆ$_2$:** 'ಡೊಣ್ಣೆಕೇತ' ಪರಾ. **ದೊಣ್ಣೆ$_2$:** 'ದೊಣ್ಣೆಕಾಟ' ಪರಾ. [ ← ತೆಲು. ತೊಂಡ ]

**ತೊಂಡೆ$_3$,** ತೊಂಡಿ$_2$, ದೊಂಡೆ$_2$ (ನಾ). ೧. [ಸಂಗೀತ] ಒಂದು ರಾಗದ ಹೆಸರು: ಆ ವಧು ಲಾಗು ಬಾಗು ವೋಹ ಚಾಳಿಯಿಂ ನೆಜ ವಾಡಿ ತೊಂಡೆ ವೇಳಾವಾಳಿ ದೇಶಿ ಗುರ್ಜರಿ ವರಾಳಿಗಳಿಂದಮ ನಾಡೆ ಪಾಡುತಂ (ಧರ್ಮಾಮೃ. ೩-೯೦). **ತೊಂಡಿ$_2$:** ೨. ಮಧುರವಾದ ಸ್ವರ; ಇಂಪಾದ ಧ್ವನಿ: ಶರೀರದ ಬಾಗು ಲಾಗಿನೊಳ್ ನೆಲಸಿದ ರೂಪು ರೂಪಿನೊಳ ಗುರ್ವಿಸುವುನ್ನತ ದೇಸಿ ದೇಸಿಯೊಳ್ ನೆಲಸಿದ ಗಾಡಿ ಗಾಡಿಯೊಳನಾರತ ಮೊಪ್ಪುವ ತೊಂಡಿ ತೊಂಡಿನೊಳ್ಗೆಲೆ ಬಳಸಿರ್ಪ ಭಾವವಳವಟ್ಟಿರೆ ನರ್ತಕಿ ನಾಡೆ ರಂಜಿಪಳ್ (ಧರ್ಮಾಮೃ. ೨-೨೪). **ದೊಂಡೆ$_2$:** ೩. ಗಂಟಲು; ಕಂಠ: "ಅಯ್ಯೊ" ಎಂದು ಕಂಪಿತ ಚೀರ್ದನಿ ಮುನಿಯನ ದೊಂಡೆ ಯಿಂದ ಹೊರಟಿತು (ಕಾಬಬ್ರೂ. ೬೭).
[ ದೇ.॥ ತಮಿ. ತೊಣ್ಡೈ; ಮಲ. ತೊಣ್ಡ; ತುಳು. ದೊಂಡೆ; ಕೊಡ. ತೊಂಡೆ ]

**ತೊಂಡೆ$_4$** 'ದೊಂಡೆ$_1$' ನೋ.

**ತೊಂಡೆ$_5$** (ನಾ). ಕಬ್ಬಿನ ಜಲ್ಲೆಯ ನಿಸ್ಸಾರವಾದ ಮೇಲುಭಾಗ; ಕಬ್ಬಿನ ಸೋಗೆ: ತೊಂಡೆ ಹೊಯ್ದು ಒಂದೇ ಅಳತೆಗೆ ಕಬ್ಬುಗಳನ್ನು ಕತ್ತರಿಸಿ ರಾಶಿ ಹಾಕಬೇಕು (ಪನ್ನೂರು. ೨೦೫). [ ? ]

**ತೊಂಡೆಕಾಯಿ** (ನಾ). ತರಕಾರಿಯಾಗಿ ಬಳಸುವ ಒಂದುಂ ಬಗೆಯ ಕಾಯಿ: ತೊಂಡೆಕಾಯಿ, ನೆಲ್ಲಿಕಾಯಿ . . . ಬೆಣ್ಣೆ, ದ್ರಾಕ್ಷಿಹಣ್ಣು, ಇವಿಷ್ಟು ಪಾಂಡುರೋಗ, ಕಾಮಿಲೆ, ಹಲೀಮಕಂಗಳಲ್ಲಿ ಪಥ್ಯವರ್ಗಂಗಳು (ವೈದ್ಯಸಾ. I, ೩೪೯): ಕಾಗೆದೊಂಡೆ, ಸಿಹಿತೊಂಡೆ, ತೊಂಡೆಕಾಯಿ (ಮ್ಯಾಶಿಗಿ. ೨೩-೪೨೩). [ ತೊಂಡೆ$_1$ + ಕಾಯಿ$_4$ (< ಕಾಯ್$_4$) ]

**ತೊಂಡೆಕೇತ,** ಡೊಣ್ಣೆಕಾಟ, ಡೊಣ್ಣೆಕೇತ, ದೊಣ್ಣೆಕಾಟ (ನಾ). ಹಲ್ಲಿಯ ಜಾತಿಗೆ ಸೇರಿದ ಒಂದುಂ ಬಗೆಯ ಪ್ರಾಣಿ; ಹೆಂಟೆಗೊದ್ದ: ಗಿಡದ ಮೇಲಿದ್ದ ತೊಂಡೆಕೇತವನ್ನು ನೋಡಿ ಮಗು ಹೆದರಿಕೊಂಡಿತು (ಬೂಡಿ). **ಡೊಣ್ಣೆಕಾಟ:** ಅವುಗಳಿಗೆ ಸರ್ಪಜಾತಿಗಳಿಂದರೂ ಸರಟ (ಡೊಣ್ಣೇಕಾಟ) ಜಾತಿಗಳಿಂದರೂ ಸಲ್ಲುವುದು (ಮುಂಬಯಿ. ೬-೨೫೯). **ಡೊಣ್ಣೆಕೇತ:** ಡೊಣ್ಣೆಕೇತವನ್ನು ಕಂಡರೆ ಮಕ್ಕಳು ಅದರ ಮೇಲೆ ಕಲ್ಲೆಸೆಯುತ್ತಾರೆ (ಬೂಡಿ). **ದೊಣ್ಣೆಕಾಟ:** ವೆಂಕಟನ ಮೊಗ ತಮ್ಮನ ಕಲ್ಲಿನೇಟಿಗೆ ಬಿದ್ದ ಆ 'ದೊಣ್ಣೆಕಾಟ'ದ ಮೃತಶರೀರವನ್ನು ನೋಡುತ್ತಿರು ವಂತೆ ವಿವರ್ಣವಾಯಿತು (ಬಸಿ. ೦೦೪). [ ತೊಂಡೆ$_2$ + ಕೇತ$_2$ ]

**ತೊಂಡೆಗರುಳು** 'ದೊಂಡೆಗರುಳ್' ನೋ.

**ತೊಂಡೆದಾಳಿದ** (ನಾ). ತೊಂಡೆಕಾಯಿಯಿಂದ ಮಾಡಿದ ಪಲ್ಯ: ತೊಂಡೆದಾಳಿದ ಪಟಲದಾಳಿದವ ಸವಿವುತಂ (ಶಂಗಪು. ೧೬-೦೬).
[ ತೊಂಡೆ$_1$ + ತಾಳಿದ ]

**ತೊಂಡೆಬಾಯ್** 'ತೊಂಡೆವಾಯ್' ನೋ.

**ತೊಂಡೆವಣ್,** ತೊಂಡೆವಣ್ಣು, ತೊಂಡೆಹಣ್ಣು (ನಾ). ತೊಂಡೆಯ ಬಳ್ಳಿ ಯಲ್ಲಿ ಬಿಡುವ ಹಣ್ಣು; ಬಿಂಬಫಲ: ಅವಳ ಚೆಂದುಟಿಯಂ ಪೊಸ ತೊಂಡೆವಣ್ಣದೊಂದಚ್ಚರಿಯಲ್ಲಿ ಪ್ರಟ್ಟತೆನುತಲ್ಪ್ರಾಯಿನೊಲ್ದು ಕರ್ದುಂಕಲ್

(ಉದ್ಭಟ. ೬-೭೪) ; ತಳಿರಡಿಗೆ ತೊಂಡೆವಣ್ಣಾಟಿಗೆ ತಾವರೆ ಮೊಗಕೆ . . . ಕೋಗಿಲೆ ಗಿಳಿಗಳಿಂಚರಕೆ ಸೋಲ್ದವಯವಂಗಳೊಳ್ನಿಲಸಿದುವು (ಕೃಮಿಥು. ೩೦-೪). **ತೊಂಡೆವಣ್ಣು :** ಮುದದಿಂದ ಗಿಳಿ ತೊಂಡೆವಣ್ಣಿನ ರಸವನು ಕರ್ದುಕಿ ಪೀರ್ವಂತೆ (ಕಂಷವಿ. ೯-೧೨೦) ; ನಾರಿಯರಧರಂಗಳಂ ಕಂಡು ತೊಂಡೆವಣ್ಣುಗಳೆಂದು ತಿಳಿದು ಎಳೆಗಿಣಿಗಳೆಲ್ಲ ಒಟ್ಟುಗೂಡಿ ಬರುತ (ಸೌಗಂಧಿ. ೪೭೪-೬). **ತೊಂಡೆಹಣ್ಣು :** ಬಿಂಬ, ಬಿಂಬಿಕೆ – ತೊಂಡೆಹಣ್ಣು (ನಾಚರಾ. ೬. ೭೯) ; ತೊಂಡೆಹಣ್ಣು ವಣಿಯೆ ನಾಚಿ ನಗೆಯು ಚೆಲುವ ತುಟಿಯು ಚಾಚಿ (ಅನಿಕೀ. ೦೮-೦). [ ತೊಂಡೆ$_1$ + ಪಣ್$_3$ ]

**ತೊಂಡೆವಣ್ಣು** 'ತೊಂಡೆವಣ್' ನೋ.

**ತೊಂಡೆವಣ್ದುಟಿ** (ನಾ). ಬಿಂಬಫಲದಂತಿರುವ ತುಟಿ ; ಬಿಂಬಾಧರ : ಬಂದುಗೆದುಟಿ ತೊಂಡೆವಣ್ದುಟಿಯುವರು ಮಂದಗಮನೆಯೊಳ್ಳಿದಿದರು (ಜೀವಂಸಾಂ. ೦೦-೪೭) ; ತುಱುಗೆವೆಗಣ್ಣ ಕಟಾಕ್ಷ ಕೆಂಬಲ್ಗಳ ಮಿಱುಗುವ ತೊಂಡೆವಣ್ದುಟಿಯ ಬೆಱಗಿಂದೆ ಮಾತನಾಡಿದಳು (ಕೋಪಶ. ೦೬-೨೪) ; ಕಣ್ದಿಱಿದಾಕ್ಷಣ ಬರೆಸೆಳದಾ ತೊಂಡೆವಣ್ದುಟಿಯುಬಲೆಯನಪ್ಪಿ . . . ತೋಱಿದನು ಸ್ವರ್ಗಸುಖವ (ಭರಕ. ೦೩-೬೨).

[ ತೊಂಡೆವಣ್ + ತುಟಿ ]

**ತೊಂಡೆವಾಯ್, ತೊಂಡೆಬಾಯ್, ತೊಂಡೆವಾಯಿ** (ನಾ). ತೊಂಡೆಯ ಹಣ್ಣಿನಂತೆ ಕೆಂಪಾಗಿರುವ ಬಾಯಿ,-ತುಟಿ : ಬಂದರ್ ಪವಳವಾಯ ತಳಿರ್ವಾಯ ತೊಂಡೆವಾಯೊಳ್ಕೆಂಡಿರ್ (ಜಗವಿ. ೪-೦೨೨) ; ನಿಡುಸುಯ್ಯುಂ ತನ್ನನೊತ್ತಂಬರಿಸೆ ನಿಲುವುತುಂ ನೀಳ್ದ ನಳ್ಕೇಶದಿಂದಂ ತೊಡೆಯುತ್ತುಂ ತೊಂಡೆವಾಯುಂ ಶ್ರಮಜಲಕಣಮಂ ಮೇಲುದಿಂ ವಾರಿಸುತ್ತುಂ . . . ಬಂದು ನಿಂದಳ್ (ಸೂಕ್ತಿಸು. ೮-೦೭೬) ; ಎನಗುಳಿದ ಗಂಡುಗಳೆಲ್ಲ ಸಹೋದರರೆಂದೀ ತೊಂಡೆವಾಯಬಲೆ ನುಡಿದಳು (ಶ್ರೀಪಾಂ. ೫-೮೬) ; ರಾಯ ಪರಾಕೆಂದು ಕೈವಾರಿಪ ತೊಂಡೆವಾಯ ಪಾಠಕಿಯರೊಪ್ಪಿದರು (ಪೋಹಕ. ೪-೬). **ತೊಂಡೆಬಾಯ್ :** ತೊಂಡುನಗೆಯ ತೊಂಡೆಬಾಯ ಕಂಡು ಕಂಡು ಮುತ್ತನಿಟ್ಟು (ನಾದಲೀ. ೭೬-೦೯). **ತೊಂಡೆವಾಯಿ :** ತುಱುಗೆವೆಯಲರ್ಗಣ್ಣು ತುಂಬಿಗುರುಳ ತೊಂಡೆವಾಯಿ . . . ಇಂಬಾದವಾಬಾಲಕಿಗೆ (ಶ್ರೀಪಾಂ. ೩-೨೪). [ ತೊಂಡೆ$_1$ + ಬಾಯ್ ]

**ತೊಂಡೆವಾಯಿ** 'ತೊಂಡೆವಾಯ್' ನೋ.

**ತೊಂಡೆವಾಯ್ದೆರೆ** 'ತೊಂಡೆವಾಯ್ದೆಱೆ' ನೋ.

**ತೊಂಡೆವಾಯ್ದೆಱೆ, ತೊಂಡೆವಾಯ್ದೆರೆ** (ನಾ). = ತೊಂಡೆವಣ್ದುಟಿ : ತುಱುಗೆವೆಗಣ್ಣ ಕಾಂತಿ ಮರಗಟ್ಟಲೆಯಂ ಬೆದಱಿಪ್ಪ ತೊಂಡೆವಾಯ್ದೆಱೆ ಕಿಸುಸಂಜೆಮೀಱೆ (ಜಗವಿ. ೦೬-೨೫) ; ಸಕ್ಕರೆಸವಿಯ ತೊಂಡೆವಾಯ್ದೆಱೆಯ ಸೊಗಸನುಗುಳ್ವಕ್ಕಜದ ಮುದ್ದುಮಾತಿನ . . . ಪೆಣ್ಮಕ್ಕಳಿಯ್ಯಂದರೊಸದು (ಶದ್ಧಕಾ. ೩-೭೭) ; ತೊಂಡೆವಾಯ್ದೆಱೆಯ ಕಂಬು ಕಂಠದ . . . ನಿತಂಬಿನಿಗೆಣೆಯಾದರುಂಟೆ (ಜೀವಂಸಾಂ. ೦೦-೨೩) ; ಬೆಳರ್ವಣ್ಣಮಂ ತಳೆದ ತೊಂಡೆವಾಯ್ದೆಱೆಯ ಕೆಂಬೊಳಪಡರ್ದ ನಿಡುಗಣ್ಣ . . . ಎಳವೆಣ್ಣು (ಉದ್ಭಟೀ. ೪-೩೪). **ತೊಂಡೆವಾಯ್ದೆರೆ :** ತೊಳಗುವ ತೊಂಡೆವಾಯ್ದೆರೆಯ ಮುದ್ದು (ಯಾದಕಂ. ೨-೭೦).

[ ತೊಂಡೆ$_1$ + ಬಾಯ್ದೆಱೆ$_2$ ]

**ತೊಂಡೆಹಣ್ಣು** 'ತೊಂಡೆವಣ್' ನೋ.

**ತೊಂಡೇಳ್** (ಕ್ರಿ). = ತೊಂಡುಬೀಳು : ತೊಂಡೆದ್ದ ದಿಂಡಿಗತನದ ಪುಂಡ ಹೆಣ್ಣು (ಮುಂತ್ರಕ. ೨೪-೧೬). [ ತೊಂಡು$_1$ + ಏಳು$_1$ (< ಏೞ್$_1$) ]

**ತೊಂತಗವಿತೆ** (ನಾ). ವ್ಯರ್ಥಪದಪೂರಿತವಾದ ಕವಿತೆ ; ಹುರುಳಿಲ್ಲದ ಕಾವ್ಯ : ಮುಂತೆ ಸರಿಯಿಲ್ಲೆಂದು ಪೊಗಳ್ದವರು ಪೊಱಮಟ್ಟ ಪಿಂತವನ ಕವಿತೆಯೇನೆಂದು ನಿಂದಿಸಿ ತಮ್ಮ ತೊಂತ[ಪಾಠಾಂ. ಕೊಂತ, ತೂಂತ] ಗವಿತೆಯ ತೊಂಬನುರ್ಚಿ (ಹಕೀಶ. ೦-೨೯) ; (ಸೋಮಕ. ೦-೦೬ ಸೂ) ; ತೊಂತಗವಿತೆಯ ಗುಣ್ಪಿಂ . . . ಸುಪ್ರಬಂಧದೊಳ್ಪಿಂಗಣೆಯೇ (ಹಮ್ಮಿರ. ೦-೨೫).

[ ☞ ಇದು 'ತೂಂತಗವಿತೆ (<ತೂಂತು$_2$ + ಕವಿತೆ)' ಎಂದೇ ಇರಬಹುದು]

**ತೊಂತು$_1$** (ಕ್ರಿ). ೧. ಮೇಲೇರು ; ಆಕ್ರಮಿಸು ; ಮುತ್ತು : ಮನ್ಮಥ ಕುಮಾರಕ ತನ್ನ ತೊಂತಿದ ಖಳರನುತ್ತರಿಸಿ ಹಂತಿಯೊಳ್ ಕೆಡಹಲ್ಕೆ (ಪೋಹಕ. ೩೪-೩೬) ; ಮಂತ್ರೀಶ್ವರನ ಮೆಯಾಗ್ಗವಲ ರಥರಾಜಿ ದಂತಿಗಳಾ ಹವದೊಳಗೆ ತಿಂತಿಣಿ ಭರವಸದಿಂದಾಗ ಪರಿತಂದು ತೊಂತಿತು ನೀಲಾಂಬರನ (ಪೋಹಕ. ೪೦-೬೩). ೨. ಸಂತಸ್ತುಹಾಕು ; ಬಳಸು : ನೀನೀತನ ವರೂಥಮಂ ತೊಂತಿ ವಾಲಾಗ್ರದಿಂ ಗಗನದೊಳ್ತಿರಿಪಿಡು (ಕೃಮಿಥು. ೨೭-೪೩) ; ಕಾಲು ತೊಂತಿದ ಹಾವು ಕಚ್ಚದೆ ಬಿಡದು(ಗಾದೆ). ೩. ಪ್ರೇರಣೆ ಮಾಡು ; ಎತ್ತಿಕಟ್ಟು ; ಪ್ರಚೋದಿಸು : (ಕ).

**ತೊಂತಿಕೊಳ್** = ೧. ಸಂತ್ಸುಗಟ್ಟು : ಬಸವಣ್ಣನ ತೊಂತಿಕೊಂಡು ಬಸವಣ್ಣನ ಧರಿಸಿಕೊಂಡು ....ನಾವು ಬಸವ ಬಸವಾ ಎನುತಿರ್ದೆನಯ್ಯಾ (ಅಜಂದೀ. ೩೦೪-೮೩). ೨. ಹಬ್ಬು ; ವ್ಯಾಪಿಸು ; ತುಂಬಿಕೊಂಡಿರು : ಮೂವತ್ತಾರುತತ್ತ್ವದೊಳನಂತ ಜನ ದೇವ ದಾನವರಾದಿಯಾಗಿಹರು ತೊಂತಿಕೊಂಡಿಹರು (ಲಕ್ಷ್ಮಣ. ೩-೦೯-೬೨) : ಈ ಮದನಕಾಂತ ಮನದೊಳ ಹೊರಗೆ ತೊಂತಿಕೊಂಡಿರ್ದತುಳಚಿಂತಾಗ್ನಿ ಶಾಂತರಸದೊಳ್ನುಳುಗಲು (ನವಮೋ. ೯-೪೬). ೩. ಸಿಕ್ಕಿಕೊಳ್ಳು : ತೊಂತಿಕೊಂಡಿರೆ ಶೋಕಸಾಗರದಿ ತೊಳಲುತಿರೆ ಪ್ರಾಣಂಗಳುಳಿಯವೆನಗೆ (ಬಂಕಾರಾ. ೨-೨೨-೩೬).

[ ← ತಮಿ. ತೊತ್ತು ]

**ತೊಂತು$_2$** (ನಾ). ದಟ್ಟಣೆ ; ನಿಬಿಡತೆ : ಅಂತರಾತ್ಮಕನ್ಯದುವವ ನಿಶ್ಚಿಂತನ್ನೆ ಸಂಸಾರಸಾಗರ ತೊಂತಿನಿಂ ಕೆಡೆದಿಹರು ನೃಪ ನಿಶ್ಚಿಂತರಲ್ಲೆಂದ (ಅಂಬಿಕಾ. ೩೭-೨೩) ; ಮರಗಳ ತೊಂತು ಬಹಳ ಜಾಸ್ತಿಯಾದ್ದರಿಂದಲೂ . . . ಕತ್ತಲೆಯಾದ ಮೇಲೆ ಜನರು ಆ ದಾರಿಯನ್ನು ಉಪಯೋಗಿಸುತ್ತಿರಲಿಲ್ಲ (ಕಂಗಾಳ್ಮ. ೪೩೩). [ < ತೊಂತು$_1$./ತಮಿ. ತೊತ್ತು ]

**ತೊಂತುಳಿ** (ನಾ). ಅಜಿಗಿಜಿಯಾದ ಸ್ಥಿತಿ ; ಅಸ್ತವ್ಯಸ್ತವಾದ ಸ್ಥಿತಿ: ನೆಲೆ ಪೊಲಮಚ್ಚು ತಮ್ಮ ಮನದೊಳ್ ಸಲೆ ಕಬ್ಬಸು ಪರ್ವಿದುರ್ವಿಯೊಳ್ ಚಲದಿಱಿದಾಂತು ಬಿಟ್ಟ ಭಟರಂತ್ರದ ತೊಂತುಳಿಯೊಳ್ ಸಿಲುಂಕಿ (ನೇಮಿಪು. ೦೦-೦೫೩).

[ ☞ ಇದು 'ತೊಟ್ಟುಟಿ' ಶಬ್ದದ ಅಪಲಿಖಿತವಿರಬಹುದು ]

**ತೊಂದರೆ** (ನಾ). ೧. ಕಷ್ಟ ; ಪೇಚಾಟ : ಇಲ್ಲದ ಸಲ್ಲದ ಹೆಚ್ಚಿನ ತೊಂದರೆಗಳೂ,ಕಾರ್ಯಭಾರವೂ . . . ಸಹನಿಗೆ ಬಂದೊದಗಿತು (ಸಸ್ಯಕ. ೦೩೦) : ಮನೆಮನೆಗಳಲ್ಲಿಯ ಜನಗಳಲ್ಲಿ ಒಮ್ಮನಸಿಲ್ಲದಾಗಿ, ತೊಂದರೆಗಳು ತಾಂಡವವಾಡುತ್ತವೆ (ಗಾಳಿಗು. ೩೦). ೨. ತೊಡಕು ; ತಡೆ ; ಅಡ್ಡಿ ; ಅನನುಕೂಲ : ಮುಂದಡಿಯಿಡಬೇಕೆನ್ನುವವರಿಗೆ ಇನ್ನೂ ಕೆಲವು ತೊಂದರೆಗಳಿವೆ (ಯುಕ್ಷಪ್ರ. ೦೮೨) ; ಅವನ ಈ ಒಡನಾಟದಿಂದ ನನಗಾದ ಒಂದು ತೊಂದರೆಯೆಂದರೆ ಸಂಜೆ ಯಮುನಾ, ಲಲಿತೆಯರನ್ನು ನೋಡಲು ಸಮಯ ಸಿಗದುದು ! (ಆಂಹೂ. ೬೬). ೩. ಕಿರುಕುಳ ; ಕಾಟ ; ಹಿಂಸೆ : ರಾಮಪ್ಪನವರು ಒಂದು ಪಿಳ್ಳೆಗೂ ಯಾವ ತೊಂದರೆಯನ್ನೂ ಕೊಡಲಿಲ್ಲ (ಕಂಬಹು. ೦೨೦).

[ ದೇ.೫ ತಮಿ. ತೊನ್ತರವು, ತೊನ್ತರೈ ; ಮಲ. ತೊನ್ದರ ; ತುಳು. ತೊಂದರೆ ; ತೆಲು. ತೊಂದರ ]

**ತೊಂದರೆಗೊಳಿಸು** (ಕ್ರಿ). ಅಡ್ಡಿಪಡಿಸು ; ತೊಡಕಿಗೆ ಈಡುಮಾಡು : ಇತರರನ್ನು ಕಾರಣವಿಲ್ಲದೆ ತೊಂದರೆಗೊಳಿಸುವುದೇ ಕೆಲವರ ಸ್ವಭಾವ (ರೂಢಿ). [ ತೊಂದರೆ + ಕೊಳ್$_1$ + – ಇಸು$_3$ ]

**ತೊಂದರೆಪಡು** (ಕ್ರಿ). ಕಷ್ಟಪಡು: ಕುಡಿವ ನೀರಿಲ್ಲದೆ . . . ಇಲ್ಲದಿದ್ದಾಗ ಅನೇಕ ಕೀಟಗಳು ನಿಸ್ಸಹಾಯ, ತೊಂದರೆಪಡುತ್ತವೆ (ಕೀಟಬಿ. ೦೪); ನನ ಗೋಸ್ಕರ ನೀನು ತೊಂದರೆಪಡಬೇಡ (ಚೂಠಿ). [ ತೊಂದರೆ + ಪಡು₁ ]

**ತೊಂದಿರ** (ನಾ). (?): ನಾಲುವಿರುದ್ರವು ಮುಖ್ಯವಾದ ಕೊದಲುಂ ತೊನ್ದಿರರುವ್ವೆ ಸೂರ್ವ್ವರುಮಿರ್ದ್ದು ವಿಟ್ಟ ಧರ್ಮ್ಮವೆನ್ದೆಂಪಡೆ (ಇಇ. XI. ೫೬೪-೫೬ : 1168). [ ? ]

**ತೊಂಪೆ** 'ತೊಂಬೆ₁' ನೋ.

**ತೊಂಬತು** 'ತೊಂಬತ್ತು' ನೋ.

**ತೊಂಬತ್ತು, ತೊಂಬತಂ, ತೊಂಭತಂ, ತೊಂಭತ್ತು** (ನಾ). ಒಂದಂ ಸಂಖ್ಯಾವಾಚಕ; ಒಂಬತ್ತನ್ನು ಹತ್ತರಿಂದ ಗುಣಿಸಿದರೆ ಬರುವ ಗುಣಲಬ್ಧ; ಹತ್ತುಕಡಮೆನೂರು: ಅರಕೆಸಿಗಳ ತೊಂಬತ್ತು ಅಗವಳ್ಳಿಟ್ಟು ಪ್ರಸಾದಂಗೆಯ್ದಾರಿದರ್ಕ್ಕೆ ತೊಂಬತ್ತುಱಸಾಸಿರದಾ ಪ್ರಕೃತಿಗಳೆಲ್ಲಾರುಂ (ಎಕ. III. ತಿರುಮ. ೦-೯ : 726); ತೊಂಬತ್ತೊಂಬಯ್ ಸಾಸಿರದ ಇನ್ನೂಱೆಣ್ಬತ್ತು ನಾಲ್ಕು ವ್ಯಾಧಿಗಳುಂ (ವಡ್ಡಾರಾ. ೯೯-೪); ಮುಂದೆ ಲಕ್ಷದ ಮೇಲೆ ತೊಂಬತ್ತಾಱುಸಾವಿರ ಶಿವಾಲಯಂಗಳಂ ಮಾಡುತಿಪ್ಪರಂ ಕಂಡು (ಚೆನ್ನಸಂ. ೩೩-೩). **ತೊಂಬತು**: ಲಕ್ಷದ ಮೇಲೆ ತೊಂಬತಾರ್ಸಾಸಿರ ಮಹಾಜಂಗಮಕ್ಕೆ ವೃಷ್ಟಾನ್ನಮಂ ದಾಸೋಹಮಂ ಮಾಡುತ (ಬಬಪು. ೩-೩೨). **ತೊಂಭತು**: ಬರಿಸಮಾಱಾಗೆ ಮತ್ತಂ ಶಕಾಬ್ದಂ ವಿಸ್ತಾರಂ ತೊಂಭತೆಟ್ಟೊಂಭತುವೆನೆ (ಎಇ. VI. ೫೦೫-೭ : 1067); **ತೊಂಭತೊಂಬತ್ತು** [ ಪಾಠಾಂ. ತೊಂಬತ್ತೊಂಬತ್ತು ] ಸಹಸ್ರಯೋಜನ ಗಳಿಂದಂಬರವನು ಮುಟ್ಟುತ್ತ . . . ಮೇರುವಿಂಬಾಗೆ ಲಕ್ಷಯೋಜನದಿ (ಜೀವಂಧಾಂ. ೧-೨೪). **ತೊಂಭತ್ತು**: ಪ್ರಿಥುವೀರಾಜ್ಯಕೆಯ್ ಕಂಭರಸರ್ ತೊಂಭತ್ತಱುಸಾಯಿ × × × (ಎಕ. IV. ಹೆಗ್ಗಡ. ೯೩-೫; ಹು. 780); ತೊಮ್ಬತ್ತಱುಸಾಸಿರ್ವ್ವರುಮಯ್ನೂರ್ವರು . . . ಇದಕ್ಕೆ ಸಾಕ್ಷಿ (ಎಕ. I. ೫-೯; 887); ತನ್ನೊಡನಾಡಿಗಳಪ್ಪ ತೊಂಭ[ ಪಾಠಾಂ. ಬ]ತ್ತಾಱು ಸಾಸಿರ ಗೋಪಕುಮಾರರೊಡನೆ ಕೂಡಿ (ಹಂಪಪಾ. ೯-೦೨ ವ); ಎಳೆಯೊಳಟ್ಟುದು ಸಾಸಿರಯೋಜನಂ ಗಗನಕ್ಕೆ ತೊಂಭತ್ತೊಂಭಯ್ಸಾಸಿರಂ ಬಳೆದುದು . . . ಮೇರುಮಹೀಧರೇಂದ್ರಂ (ಶಾಂತಿಪು. ೧೦-೬೩); ಅಂತು ತೊಂಭತ್ತ[ ಪಾಠಾಂ. ತ್ತಾ ]ಱುಸಾಸಿರಮಂತಃಪುರಂಗಳಂ . . . ನೆಱೆದ ಸಾಮ್ರಾಜ್ಯಲಕ್ಷ್ಮಿಗಧಿಪತಿಯಾಗಿ (ಅಜಿಪು. ೧೧-೦ ವ).

**ತೊಂಬದಿಂಬರ್** = ತೊಂಬತ್ತು ಮಂದಿ; ತೊಂಬತ್ತು ಜನ: ಸಿಂಹಸೇನಂ ಮೊದಲಾಗೆ ತೊಂಬದಿಂಬರ್ ಗಣಧರರುಂ (ಅಜಿಪು. ೮-೨೫ ವ). **ತೊಂಬಯ್ಸಾಸಿರ** = ತೊಂಬತ್ತುಸಾವಿರ: ತೊಂ[ ಪಾಠಾಂ. ಒಂ, ಎಂ] ಬಯ್ಸಾಸಿರ್ವರ್ ನಿಮ್ಮಂಬಿನ ಬಂಬಲೊಳೆ ಮಕುಟಬದ್ಧರ್ ಮಡಿದರ್ (ಹಂಪಭಾ. ೧೦-೨೯); ಕೇಶಿರಾಜನ ಮೇರೆಗೆ 'ಒಂಬತ್ತು + ಪತ್ತು' ಎನ್ನುವುದಂ ಈ ಶಬ್ದದ ವ್ಯುತ್ಪತ್ತಿ.

[ ದೇ.॥ ತಮಿ. ಮಲ. ತೊಣ್ಣೂಱು ; ಕೊಡ. ತೊಂಬದೀ ;
ತೆಲು. ತೊಂಬದಿ, ತೊಂಭೈ ]

**ತೊಂಬರೆ** (ನಾ). ಒಂದೆಡೆ ನಿಲ್ಲದವನು; ಅಲೆದಾಡುವವನು; ಅಲೆಮಾರಿ: ಅಂಬಲಿಯಿಲ್ಲದೆ ಉಂಬರೆ ಕೂಳಿಲ್ಲ ಕಂಬಳಿಗಳ ಹೊದ್ದಿಹವು . . . ತೊಂಬರೆ ಬದುಕು ಕೇಳ್ ನಮಗೆ (ಕವಿಕ. II. ೩೪೯ ಪ್ರಸಾದಕಾಂಡಿಕೆ).

[ ದೇ.॥ ತಮಿ. ತೊಮ್ಬರೈ ]

**ತೊಂಬಲ₁** 'ತಂಬುಲ' ನೋ.

**ತೊಂಬಲ₂** (ನಾ). (ಉಕ) ತೇವ: ಮಳೆಗಾಲದಲ್ಲಿ ಹವೆಯು ತೊಂಬಲ ವಾಗಿರುತ್ತಿದ್ದರೂ ನೆಲದ ಮೇಲಿನ ನೀರು ಸ್ವಲ್ಪ ಸ್ವಲ್ಪ ಬಾಷ್ಪವಾಗಿ ಹೋಗುತ್ತಿರುತ್ತದೆ (ಮುಂಬಯಿ. ೩-೦೩೪). [ <ತಂಬಲ ]

**ತೊಂಬಲು** 'ತಂಬುಲ' ನೋ.

**ತೊಂಬಾರ₁, ತೊಂಭಾರ** (ನಾ). ೧. (ಧಾನ್ಯದ) ರಾಶಿ.-ಗುಂಪು.-ಸಮೂಹ: (?). ೨. ಗುಂಪಿನ ಜನರಿಗಾಗಿ ಮಾಡಿದ ಅಡುಗೆ; ಸಾಮೂಹಿಕ ಭೋಜನ: ತಂಡದ ಊಟ: ಅವುದೊಂದು ಸಿಂಗರ ಹೊಡೆದಲ್ಲಿ ಪಾಕಭೇದವಾಗಿ ತೊಂಬಾ[ ಪಾಠಾಂ. ಬ]ರಕ್ಕೆ ಬೇಱೆ ಮಾಡಿದುದು ರಾಜಾನ್ನವು (ಬಸವ. ೦೦೮-೩೩೩); ತನ್ನ ಜೊತೆಯಲ್ಲಿಯೇ ಕೂತ ಉಳಿದವರಿಗೆ ತೊಂಬಾರದ ಅಡಿಗೆಯನ್ನು ಮಾಡಿಸಿ . . . ಹಾಕಿಸುತ್ತಿದ್ದನು (ನೀತಿಚಿಂ. X. ೦೫); ಗುಂಪಿನ ಅಡಿಗೆ, ಅಷ್ಟೇನೂ ಅಚ್ಚುಕಟ್ಟಲ್ಲದ್ದು . . . ತೊಂಬವಾರ, ತೊಂಬಾರ (ಸಮ್ಮನು. ೧೦೬). **ತೊಂಭಾರ**: ೩. ಅಧಿಕ್ಯ; ಅತಿಶಯ: ಬಸವೇಶ್ವರದೇವರು . . . ಸರ್ವಾಲಂಕಾರಶೃಂಗಾರದ ತೊಂಭಾರದಿಂದಲಂಕಾರಂಗೊಂಡು (ಯಡಿಹೂರ. ೫೦).

[ ದೇ.॥ ತಮಿ. ತೊಮ್ಬರ, ತೊಪ್ಪರ ; ತುಳು. ತೊಂಬರ ;
ತೆಲು. ತೂಮ್ಮರ ]

**ತೊಂಬಾರ₂** (ನಾ). ಭವನ; ಸೌಧ: ಅಪ್ಪಾಜಯ್ಯನು ತನ್ನ ಸಂಗಡ ಚನ್ನವೀರನನ್ನು ಕರದುಕೊಂಡು, ಹಿತ್ತಲ ಬಾಗಿಲಿಗಾಗಿ, ತೊಂಬಾರದ ಹಿಂದಟ್ಟಗಾಗಿ . . . ಕೆರೆಬಾಗಿಲಿಗಾಗಿ ನುಗ್ಗಿ (ರಾಜೇಂದ್ರ. ೨೬೬).

[ ← ತಮಿ. ತೊವಪ್ಪಾರ, ತೂಪ್ಪರ, ತೊಪ್ಪಾರ ]

**ತೊಂಬುವ್ವೋಯ** (ನಾ). ಒಬ್ಬಾತನ ಹೆಸರು: ತೂಮ್ಬುವ್ವೋಯನ ಮಕ್ಕಳ್ ನಾಗಯ್ಯನು ಕೊಣ್ಣಯ್ಯನು (ಎಕ. X. ಕೋಲಾರ. ೯-೪ : ಹು. 925). [ ? ]

**ತೊಂಬೆ₁, ತೆಮ್ಮ, ತೆಮ್ಮೆ, ತೊಂಪೆ, ತೊಮ್ಮೆ₂, ತೋಮೆ** (ನಾ). ೧. ಗೊಂಚಲು; ಗುಚ್ಛ: "ಮಂಜರಿಯೊಳ್ತೊಂಬೆ ತೊಡಂಬೆ ಜೊಂಪ ಗೊಂಚಲ್ ತಿಳಿಗುಂ" (ಕಕಾಠನಿ. ೦೨); "ಜೊಂಪವೆನಲ್ ತೊಂಬೆ" (ಕಪುನಿ. ೯); ತಳ್ತ ಬಣ್ಣವಣ್ಣದ ಗುಡಿ ತೊಂ[ ಪಾಠಾಂ. ಕೊಂ]ಬೆ ಗೊಂಚ [ಲೆಲೆ]ಯಿಕ್ಕಿದ ತಾವಣಮೆಲ್ಲಿಯುಂ ಪೊದಟ್ದೊದವಿರೆ (ಹಂಪಭಾ. ೩-೩೪); ತಳಿರ ತೊಂಬೆಯ ನಲ್ಲಾಡಿ ಹೂಗೊಂಚಲೊಳ್ ಸುಟಾದು (ಅಂಬಿಜ. ೨-೫೦); ನನೆಗಳಿಂ . . . ತೊಂಬೆಗಳ ತಾಯ್ಗಳಿಂ (ಜ್ಞಾನಜಂ. ೧-೬೩); ಹೀರಬಟತದ ಬೊಂಬೆ ಚಾರು ಪೂವಿನ ತೊಂಬೆ ತೋರಮುಡಿಯ ವಧೂಟಿ (ಪಂಚಾರಾ. ೫-೬-೫೭). ೨. ಗುಂಪು; ಸಮೂಹ; ಸಂದಣಿ; "ಬಂಬಲ್" (ಕಪುನಿ. ಕ. I. ೨೫): "ದೊಂದಣ ತೆರಳ್ಕೆ ಸಾಲೊಟ್ಟಿಳ್ . . . ಗಡಣಂ ಜಾಳಿಗೆಯುಂ ತೊಂಬೆಯೆನೆ ಶ್ರೇಣಿಕಾಖ್ಯಂ" (ಕಬ್ಬಮಂ. ೫೫). ೩. ಸಾಲು; ಶ್ರೇಣಿ; ಪಂಕ್ತಿ: "ತೊಂದೆಯೆನಲಕ್ಕದು ಶ್ರೇಣಿಗೆ" (ಕಕಠ. ೪೯). **ತೆಮ್ಮ**: ೪. ಹೆಚ್ಚಳ; ಅಧಿಕ್ಯ; ಮೇಲ್ಮೆ. "ತೆಮ್ಮಂ ಶ್ರೇಣಿಯೊಳ್ ಪೆರ್ಚುಗೆಯೊಳಪ್ಪುದು" (ಕಕಠ. ೯೮). **ತೆಮ್ಮೆ**; ೨. ತೆಮ್ಮೆತೆಮ್ಮೆಯೊಳಯ್ದು ಸರ್ವರು ಮಾಡಿದ ಸಮ್ಮತಾರ್ಥವನೊಪ್ಪ ಗೊಂಡು (ಚಕಚ. ೬೦-೬೪). **ತೊಂಪೆ**: ೧. ಎದೆಯ ಮೇಲೆ ಬಹುಮಾನಗಳ ತೊಂಪೆಯನ್ನು ನೇತುಹಾಕಿಕೊಂಡಿದ್ದ ಎಸ್ಸೆ ಪೋಲೀಸಿನವನ ಕಡೆಗೆ ತಿರುಗಿ . . . ಆಜ್ಞಾಪಿಸಿದನು (ಪುನರು. ೦೪೮). **ತೊಮ್ಮೆ**: ೪. 'ತೊಮ್ಮೆವಡೆ' ಪರಾ. **ತೋಮೆ**: ೨. ಪಂದಿಯ ಗೊಂದಳದಂತೆಯುಂ ಅಮ್ಮಾವಿನ ತೋಮೆಯುಂತೆಯುಂ . . . ಎತ್ತಲುಂ ಎಡುಂಕಲ್ಪಡೆಯದ ಸಿಡಿಮಿಡಿಗೊಂಡು (ಪುಷ್ಪಪು. ೩-೧೨೬ ವ).

[ ದೇ.॥ ತಮಿ. ತುಮ್ಪೈ; ತೆಲು. ತೊಂಬ, ತೊಪ್ಪ ]

**ತೊಂಬೆ₂, ಟೊಮ್ಮೆ, ತಂಪ್ಪೆ** (ನಾ). ೧. ಧಾನ್ಯಗಳನ್ನು ಶೇಖರಿಸಿಡುವ ಬಿದಿರಿನಿಂದ ಹೆಣೆದ ದೊಡ್ಡ ಬುಟ್ಟಿ.-ಗೂಡೆ; ಗಳಗೆ: "ಗೊಂಚಲು ಗಳಿಗೆ ತೊಂಬೆಯೆನಿಕ್ಕು" (ಕಬ್ಬಮಂ. ೦೦೨): ಸೀರೆಯನ್ನು ಹೊರ

ತೆಗೆದು ಹತ್ತಿರದಲ್ಲಿದ್ದ ಅರೆ ತುಂಬಿದ ಭತ್ತದ ತೊಂಬೆಯೊಳಕ್ಕೆ ಹಾಕಿದ (ನಿಕಥಾ. ೨೩೪); ತೀರಿಲ್ಲ ಕಿಟುವಟವಿಲ್ಲ ಜಂಭ ಮಾತ್ರ ತೊಂಬೇ ಅಷ್ಟು (ಗಾದೆ). ೨. ಹೊಟ್ಟೆ; ಉದರ: ತೋಕಿನ ನಳಿಗೆಯಿಂದ ಹಾರಿದ ಬಿಡಿ ಕಿರುಬನ ಪಕ್ಕೆಗೆ ತಗಲಿ ಅದರ ತೊಂಬೆಯನ್ನು ಸೀಳಿತು (ಹುಲಿಶಾ. ೧೦೦). 'ತೊಪ್ಪೆ$_1$' ಪರಾ. ಟೊಮ್ಮೆ: ೧. ವಿಟ್ಟವಿಟ್ಟನೆ ವಿಡುಕೆ ಟೊಮ್ಮೆಯ ಹೊಟ್ಟು ತವುಡಂ ಕಚ್ಚಿ (ಮಡೀಶ. ೫-೩೪). ತುಪ್ಪೆ: ೩. ಧಾನ್ಯದ ರಾಶಿ,-ಸಂಗ್ರಹ; ಕಾಳಿನ ಗುಂಡ್ಡೆ: ನೂರು ಮುಡಿ ಭತ್ತ ಆ ಬಾಕಿ ಪರಾರಿಂದ ಪ್ರತಿವರುಷ ಭಟ್ಟರ ಮನೆಯ 'ತುಪ್ಪೆ'ಯಲ್ಲಿ ಬಿದ್ದೇ ತೀರುತ್ತದೆಂದರೆ ಆಶ್ಚರ್ಯವೇನಾಗಿಲ್ಲ (ದಂಬಲಾ. ೧೨).

[ದೇ.॥ ತಮಿ. ತೊಮ್ಪ್ಪೈ, ತೊಮ್ಪೈ; ತುಳು. ತುಪ್ಪೆ]

**ತೊಂಬೆಗಡುಕು** (ನಾ). ಗೊಂಚಲಿನಂತಿರುವ, ಕಿವಿಯಲ್ಲಿ ಧರಿಸುವ ಒಂದು ಬಗೆಯ ಆಭರಣ: ಹಸ್ತಕಡಗದ ನೀಲಮುತ್ತಿನ ತೊಂಬೆಗಡುಕಿನ ಕೊರಳ ದಾರಗಳ...ಧರಿಸಿ (ಬಸಪು. ೬೧-೩೭); ಒಡನೆ ಕಿವಿಯೊಳೊಪ್ಪುವ ತೊಂಬೆಗಡುಕಿನ ಕಡುಚೆಲ್ವ . . . ಕೊಡಗಿತಿಯರು ರಾಜಿಸಿದರು (ಕಾಸವಿ. ೨೦-೮೬). [ತೊಂಬೆ$_1$ + ಕಡುಕು$_3$]

**ತೊಂಭತು** 'ತೊಂಬತ್ತು' ನೋ.

**ತೊಂಭತ್ತು** 'ತೊಂಬತ್ತು' ನೋ.

**ತೊಂಭಾರ** 'ತೊಂಬಾರ$_1$' ನೋ.

**ತೊಕಡಕನ ಮರ** (ನಾ). ಒಂದು ಬಗೆಯ ಮರ: ಪೇನಾರಿಮರ, ಪೀನಾರಿ, ಪಾತಾಳಮರ, ಭೇತಾಳ, ತೊಕಡಕನ ಮರ, ಭಾಕಾಳ (ವೃಕ್ಷಿಗಿ. ೬೨-೦೪೬೨). [? + ಮರ$_1$]

**ತೊಕ್ಕಡ** (ನಾ). (?): ಚೊಕ್ಕವಲ್ಲಗಳು ದಟ್ಟ ಸಣ್ಣವು ವೃಕ್ಕ ನವರಸ ಲಗ್ಗೆಯೆಂಬುದು ತೊಕ್ಕಡವು ಶಾನಾದ ದಂತವು ಕ್ಷತಕೆ ಅದು ಹಿತವು (ಕಶಸ್ತ್ರೀಶ. ೧೦-೦೭). [?]

**ತೊಕ್ಕಲು** (ನಾ). ಒಂದು ಬಗೆಯ ವ್ಯಂಜನಪದಾರ್ಥ: ಅವನಿಗೆ ಮಜ್ಜಿಗಂಬರ . . . ಮಸೊಪ್ಪು, ತೊಕ್ಕಲು, ಒಂದೆಸರು – ಇವು ಸುತರಾಂ ಬೇಕಿಲ್ಲ (ನನ್ನಮ್ಮರು. ೫೭). [< ತೊಕ್ಕು$_1$]

**ತೊಕ್ಕಸ** (ನಾ). ವಲ್ಲಯುಂದ್ಧದ ಒಂದು ವರಸೆ (?): ಸಂದ ತೊ[ಪಾಠಾಂ. ಕೊ]ಕ್ಕಸ ಗುಂಡು ಗೋಣಿಯ ಎಂದೆಪಟ್ಟುಸು ಚೇಣಪಟ್ಟುಸು ಪೆಂದೆನಿಪ ವಿಂದಾಣದಲಿ ಕಾದಿದರು ಜಟ್ಟಿಗಳು (ಶುಕ್ಲಭಾ. ೨೨-೬೨).

[?]

**ತೊಕ್ಕು$_1$** (ನಾ). ಹುಣಸೆಕಾಯಿ, ನೆಲ್ಲಿಕಾಯಿ, ಮಾವಿನಕಾಯಿ ಮೊದಲಾದವುಗಳು ಬಲಿತ ಮೇಲೆ ಹದಗೊಳಿಸಿ ಮಾಡುವ (ಚಟ್ನಿಯಂಥ) ಒಂದು ಬಗೆಯ ವ್ಯಂಜನಪದಾರ್ಥ: ಹುಣಸೆಕಾಯಿ ತೊಕ್ಕು ರುಚಿಯಾಗಿರುತ್ತದೆ (ಜೂ೨). [ದೇ.॥ ತಮಿ. ತೆಲು. ತೊಕ್ಕು]

**ತೊಕ್ಕು$_2$** (ನಾ). ೧. ತೊಗಲು; ಚರ್ಮ: "ತೊಕ್ಕು (ತೊಗ)–ತ್ವಕ್ (–ಚ್)" (ತದ್ಭಕೋ. ೧೮); ನಯನ ಕರ್ಣ ನಾಸಾ ರಸನೆ ತೊಕ್ಕು ಮನವೆಂಬ ಕರಗಳೊಳು ಬಿಡದರ್ಚಿಪಂ (ಸಿದ್ದೇಶು. ೨೩-೫೦); ತ್ವಕ್ಕಿಂಗೆ ತೊಕ್ಕು ನೇತ್ರಕೆ ನೇತ್ರವು . . . ಆಗಿಹುದು ಲಿಂಗಮುಖವು (ಚಲಪು. ೬೦-೪೫): ಪ್ರತಿನಿತ್ಯವೂ ಮೈ ತಿಕ್ಕಿಸಿ ಅಥವಾ ಹಿಸಿಕಿಸಿಕೊಂಡಲ್ಲಿ . . . ತೊಕ್ಕು ಬಲಿತು, ಸಂದುಗಳಲ್ಲಿ ತ್ರಾಣವು ಹುಟ್ಟಿ (ಕಳಪ್ಯ. ೩೦). ೨. ತೊಗಟೆ; ಸಿಪ್ಪೆ: ನೀರುಳ್ಳಿ ಹಸಿಯಲ್ಲವಮಂ ತೊಕ್ಕ ತೆಗೆದಗುಳ ತೋರದೊಳು ಕತ್ತರಿಸಿ (ಸೂಪಶಾ. ೩-೨೫); ಪರಿಶುದ್ಧವಾಗಿರ್ಪ ವಾಲ್ಮರಗಳ ತೊಕ್ಕನಿರದೆತ್ತಿ ಕಾಸಿದ ಜಲವ (ಹಂಪ್ರಸಾಂ. ೦೪-೪೨); ಅಂಬಟೆಯ ತೊಕ್ಕು . . . ಹುಣಿಸೇಮೂಲದ ತೊಕ್ಕು . . . ಇವಿಜ ಕಷಾಯ ಶ್ಲೇಷ್ಮಾತಿಸಾರ ಮೊದಲಾದ ಹೊಟ್ಟೆಯ ಬೇನೆಯ ಪರಿಹರಿಸುವುದು (ವೃದ್ಧಸಾ. I, ೨೦೨). ೩. ಚೆಕ್ಕೆ: ಗಂಧ ಲವಂಗದ ತೊಕ್ಕು (ಅಕಾನಿ. ೮-೬). ೪. ಚರ್ಮದ ಹೊದಿಕೆ: ಇಕ್ಕಿದ ಪಕ್ಕರಕ್ಕೆ ನಿಡುರುಳ್ಳಿ . . . ದಿಟ್ಟಸರ ಪೊಂಬಲೆಗಳ್ ಮೊಗರಂಬಮೊಂದು ಪೊಂಬಕ್ಕಿಯ ತೊಕ್ಕು ಮಯ್ಯಗ್ಗರಿಯ ಬಾಸಿಗದಿಂ ಮೆಚಿದತ್ತು ಸಪ್ತಿಗಳ್ (ಚಳವಿ. ೨-೯೬). ೫. ಸೋಂಕು; ಸಂಸರ್ಗ: ಮೂತ್ರ ಮಲ ಮಾಂಸ ರಕ್ತಂಗಳೊಳಗಿಕ್ಕುಮೇ ಶಿವಮೂರ್ತಿಯೆನ್ನು ದರದೊಳಗವಜ ತೊಕ್ಕಿಲ್ಲವೆನೆ (ಚಬಪು. ೮-೨೭). 'ತ್ವಕ್ಕು' ಪರಾ.

[ಸಂ. ತ್ವಚ್]

**ತೊಗಟು**, ತೊಗಟೆ, ತೊಗಡು, ತೊಪ್ಪಟೆ, ತೊಪ್ಪಡೆ, ತೊಬಟೆ, ತೊವಟೆ, ತೊವಡು, ತೋಟೆ$_1$ (ನಾ). ಹಣ್ಣು, ಕಾಯಿ, ದ್ವಿದಳ ಧಾನ್ಯ ಇತ್ಯಾದಿಗಳ ಗಟ್ಟಿಯಾದ ಮೇಲುಹೊದಿಕೆ,–ಸಿಪ್ಪೆ: ತೊಗಟ ನೊಳಗಣ ಬೀಜ ಬೀಜದೊಳಗಣ ಅಂಕುರ (ಸರ್ವವ. ೦೧೯-೫೦೪); ತಜಿದರೆಯು ಪರ್ಣಗಳ ಕಾಷ್ಟಕೆ ಮುಚಿದರಾ ಶಾಖೆಗಳ ರೋಗಕೆ ಕೊಜಿದರೆಯು ಬೇರುಗಳ ನಾರಿಗೆ ಸುಗಿದರೆಯು ತೊಗಟ ತರು ತನುವ ತೆಜುವಂತೆ (ನಿಧಾಗ. ೧೦-೦೩-೨೪); ಹಣ್ಣಿನ ಒಳಗೆ ನಾಲ್ಕು ರಸವು ಐದು ದೊಡ್ಡಹರೆ ಕಾಣಪ್ಪ ಆಜು ಬಗೆಯ ಸ್ವರೂಪ ಕೇಳು ಏಳು ಬಗೆಯ ತೊಗಟುಂಟಣ್ಣ (ಪುರಂದ. ೧-೧೫೦-೫). ತೊಗಟೆ: ಕಮಲಮುಖಿ ನಾರಿನಾ ತೊಗಟೆಯನು ಕೊಳ್ವೆ (ಶರಲೀ. ೨೦೯-೧೪); ಮಾದಾಳದ ತೊಗಟೆ (ಟ) ಯು ಕಹಿ, ಒಗರು (ಅಷ್ಟಾಂಗ. ೧೪೮); ತೊಗಲುಬಾವಲಿ ಮರದ ಚೋಲು ತೊಗಟೆ (ಸವ್ಯಧ್ಯ. ೮೬-೩). ತೊಗಡು: ತೊಗಡುಗಳೆದೆಳ್ಳುಗಳ ಕೇದಗೆಯಿಂ ವಾಸಿಸಿ (ಶೋಶೋಪ. ೬-೨೩). ತೊಪ್ಪಟೆ: ಆವರಿಕೆಬೇರಿನ ತೊಪ್ಪಟೆಯನು ೧ ಮೊರದಷ್ಟು ಹರವಿಯಲ್ಲಿ ಹಾಕಿ ನೀರ ಹೊಯ್ದು . . . ಇಂಗಿಸಿಕೊಂಡಿರಲು ಆ ನೀರು ಮುಂದವಾಗುವುದು (ಸಕಪ್ಯ. ೩೮೩). ತೊಪ್ಪಡೆ: ಉಲಗನ ಬೇರಿನ ತೊಪ್ಪಡೆ, ಬೇವಿನ ಬೇರಿನ ತೊಪ್ಪಡೆ ... ಮೊಳಗದ ಬೇರಿನ ತಿಗಡು ಇವಂ ಸಮಾನಂಗೊಂಡು ಚೂರ್ಣವಂ ಮಾಡಿ (ವಿಪ್ರವಿ. ೯೯). ತೊಬಟೆ: ಸುಟ್ಟ ಬಾಳೆಯ ಕಾಯ ಸೀದ ತೊಬಟೆಯ ತಗೆದು ಒಳಗಣ ತಿರುಳ ತೆಗೆದು (ಭೀಮಸೂ. ೪೨). ತೊವಟೆ: ಚೆಕ್ಕು = ತೊವಟೆ (ಕಾಶಕ್ಕ. ೯೦). ತೊವಡು: ಗಿಡುಕಳ್ಳಿಯ ತೊವಡು ಕಟ್ಟಿ ನಿರ್ವಿಷಮಕ್ಕುಂ (ಖಜುದ. ೧೬-೭೯). ತೋಟೆ$_1$: ಬಾಳೆಯ ಹಣ್ಣಿನ ತೋಟೆಯ ಸುಲಿದು ನೋಡಿದರೆಯೂ ಮೃದುವಾಗಿ ತೋಜುವುದಲ್ಲದೆ ಕಠಿಣವಾಗಿ ತೋಜಿದಂಬ ಹಾಗೆ (ಪಡಶಾ. I, ೦೯೩); ಕೆಲವು ಗಿಡಗಳ ತೋಟೆಗಳಿಂದ ಸಹ ಕಾಗದ ಮಾಡುವುದುಂಟು (ಮುಂಬಯಿ. ೦-೨೪). 'ತಿಗಡು$_1$' ಪರಾ.

**ತೊಗಟೆ** 'ತೊಗಟು' ನೋ.

**ತೊಗಡು** 'ತೊಗಟು' ನೋ.

**ತೊಗರ್** 'ತೊವರ್$_2$' ನೋ.

**ತೊಗರ$_1$** (ನಾ). ಕೆಂಬಣ್ಣದ ಒಂದು ಬಗೆಯ ಬೇಟೆಯ ನಾಯಿ: ಏಣಕುಲಕ್ಕೆ ಚಂಚುವಾಲಂ ದಣಿದಿರ್ದ ಕೊಂಡಗುಂಚಿಗೀ ತೊಗರಂ ರುರು ಸಂಕುಳಕ್ಕೆ ಜೂಗಂ ದಿಟಮಲ್ತು ಮಾರಿ (ದಶಕು. ೨-೦೦೯); ತರವೇಟ್ ಸಾಳುವವೇಗನಂ ತೊಗರನಂ ಹಗ್ಗಾಳನಂ ಜೂಗನಂ (ಸಳಹಂ. ೬೬).

[ತೊಗರು$_1$ + –ಅ$_7$]

**ತೊಗರ$_2$** (ನಾ). ಒಂದು ವಂಶದ ಹೆಸರು (?): ಮಣಿಗಾಜ ನಾಗಿಸಟ್ಟಿಯುಂ ತೊಗರ ಮಾಚಿಸಟ್ಟಿಯುಂ ವಿಂದಗುದ್ದಲಿ ನಾವಿಸಟ್ಟಿಯುಂ ... ಕೊಟ್ಟ ಕೆಯ ಕಂಮ್ಮವಯ್ವತ್ತು (ಎಕ. VII, ಶಿಕಾರಿ. ೦೧೬-೩೭ :1099).

[?]

**ತೊಗರತ್ತಿ** (ನಾ). ಒಂದು ಬಗೆಯ ಸಸ್ಯ: ತೊಗರತ್ತಿ, ಸಿಡಿಸಾಲೆ (ವೃಕ್ಷಿಗಿ. ೫-೭೪). [?]

**ತೊಗರಿ$_1$** ‘ತೊವರಿ’ ನೋ.

**ತೊಗರಿ$_2$** ‘ತೊವರ್$_2$’ ನೋ.

**ತೊಗರು$_1$**, ಚೊಗರಂ$_2$ (ನಾ). ೧. ಕೆಂಪುಬಣ್ಣ ; ಅರುಣವರ್ಣ: ತೊಗರು ವಿಗಿಲಪ್ಪ ಬಣ್ಣಮಂ ಸಮನಿಪ ಗಂಧವಸ್ತುಗಳನಾದರದಿಂ ಒಡಿದು (ಅಭ್ಯಪು. ೬-೪೦). **ಚೊಗರು$_2$**: ೨. ಹಸಿಅಡಕೆಯನ್ನು ಬೇಯಿಸುವಾಗ ಅದಕ್ಕೆ ಬಣ್ಣ ಬರಲು ಬೆರಸುವ ಒಂದು ಬಗೆಯ ಕೆಂಪುದ್ರವ; P ಇದನ್ನು ನೇರಿಲೆಚಕ್ಕೆ, ರತ್ನಹೊನ್ನೆಗಿಡದ ಚಕ್ಕೆ ಮುಂತಾದುವುಗಳಿಂದ ತಯಾರಿಸುತ್ತಾರೆ: ನಾನೇ ತ್ವಾಟದಾಗೆ ಕದರಡಿಕೆ ಹೆರಕಿ, ಸುಲಿದು, ಚೊಗರು ಹಾಕಿ ಬೇಯಿಸಿ ಮಾಡಿದ್ದು (ಮಲೆಮ. ೪೩೮). ‘ತೊಗರು ಕಷಾಯ’ ಪರಾ. [ ದೇ.೫ ತೆಲು. ತೊಗರು, ತೊವರು ]

**ತೊಗರು$_2$** ‘ತೊವರ್$_2$’ ನೋ.

**ತೊಗರುಕಷಾಯ** (ನಾ). ಹಸಿ ಅಡಕೆಯನ್ನು ಬೇಯಿಸುವಾಗ ಅದಕ್ಕೆ ಬಣ್ಣ ಬರಲು ಬೆರಸುವ ಒಂದು ಬಗೆಯ ಕೆಂಪುದ್ರವ,-ಕಷಾಯ: ಮೊದಲೇ ಸಿದ್ಧಮಾಡಿ ಇಟ್ಟುಕೊಂಡಿದ್ದ ಅಡಿಕೆ ತೊಗರುಕಷಾಯವನ್ನು ಸೀಸೆಯಲ್ಲಿ ತುಂಬಿಕೊಂಡು ನಡೆದುಕೊಂಡೇ ಹೋದರು (ಕೊನಷ್ಟ. ೧೧೬). [ ತೊಗರು$_1$ + ಕಷಾಯ ]

**ತೊಗರೆಳೆ** (ನಾ). ಕೆಂಪುಬಣ್ಣದ ಎಳೆ: ಕಾಂತೆಯುಟ್ಟುದು ಬಿಳಿದು ತೊಗರೆಳೆಯದು (ವೀಕ್ಯಪು. ೪-೨೧-೫). [ತೊಗರು$_1$+ಎಳೆ$_2$ (<ಎಟ$^3_2$)]

**ತೊಗಲ್** ‘ತೋಲ್$_1$’ ನೋ.

**ತೊಗಲು** ‘ತೋಲ್$_1$’ ನೋ.

**ತೊಗಲುಗೊಂಬೆ** (ನಾ). ಚರ್ಮದಿಂದ ಮಾಡಿದ ಬೊಂಬೆ ; ಚಕ್ಕಳ ಗೊಂಬೆ: ಈ ಅವಧಿಯಲ್ಲಿ ಯಕ್ಷಗಾನ ಆಟಕ್ಕೆ ಸಂಬಂಧಿಸಿದ ದೊಂಬೆ, ತೊಗಲುಗೊಂಬೆಗಳ ಚಿತ್ರವೂ ಬೇಕೆನಿಸಿತು (ಯಕ್ಷಲ. IV, ಮುನ್ನುಡಿ) ; ನೆರೆಕೆರೆಯ ಕೇರಳ, ಆಂಧ್ರದೇಶಗಳಲ್ಲೂ ಇದೇ ಬಗೆಯಲ್ಲಿ ತೊಗಲು ಗೊಂಬೆ ಆಡಿಸುವವರಿದ್ದಾರೆ (ಯಕ್ಷಲ. ೧೫೦).

**ತೊಗಲುಗೊಂಬೆ ಆಟ** = ಚರ್ಮದಿಂದ ಮಾಡಿದ ಬೊಂಬೆಗಳ ಸಹಾಯದಿಂದ ತೋರಿಸುವ ಆಟ,-ಮನರಂಜನೆ: ಜಾನಪದಕಲಾ ಮೇಳದಲ್ಲಿ ತೊಗಲುಗೊಂಬೆ ಆಟ ಬಹಳ ಆಕರ್ಷಕವಾಗಿತ್ತು (ರೂಢಿ).
[ ತೊಗಲು (<ತೋಲ್$_1$) + ಗೊಂಬೆ$_1$ ]

**ತೊಗಲುಡೆ** ‘ತೋಲುಡೆ’ ನೋ.

**ತೊಗಲುಪಟ್ಟಿ** (ನಾ). ಚರ್ಮದ ಪಟ್ಟಿ: ನಾಯಿಯ ಕೊರಳಿಗೆ ತೊಗಲು ಪಟ್ಟಿ ಕಟ್ಟಿದ್ದಾರೆ (ರೂಢಿ). [ ತೊಗಲು (<ತೋಲ್$_1$) + ಪಟ್ಟಿ$_2$ ]

**ತೊಗಲುಪೆಟ್ಟಿಗೆ** (ನಾ). ಚರ್ಮದಿಂದ ತಯಾರಿಸಿದ ಪೆಟ್ಟಿಗೆ: ಕನ್ನಡಿ ಯಿದ್ದ ಮೇಜಿನ ಮೇಲೆ ತೆರೆದಿದ್ದ ತೊಗಲುಪೆಟ್ಟಿಗೆಯಿತ್ತು (ಪುಣಚ. ೨೮೬). [ ತೊಗಲು (<ತೋಲ್$_1$) + ಪೆಟ್ಟಿಗೆ ]

**ತೊಗಲುಬಾವಲಿ** ‘ತೋಲ್ವಾವಲ್’ ನೋ.

**ತೊಗಲುಬೊಂಬೆ** (ನಾ). = ತೊಗಲುಗೊಂಬೆ: ತೊಗಲುಬೊಂಬೆಗಳಂತೆ ನಾಲುಕುಬಗೆಯ ನಿರ್ಮಾಣದಲಿ . . . ಬಗೆಬಗೆಯ ನಾಮಾಂಕಿತದ ಜೀವಿಗಳಿವೆಲ್ಲವು ನಿನ್ನ ನಾಮದಿ ಜಗಕೆ ತೋಟುತ್ತಿಹುದು (ಹರಿಸಾ. ೮೪).
[ ತೊಗಲು (<ತೋಲ್$_1$) + ಬೊಂಬೆ ]

**ತೊಗಲುಹಕ್ಕಿ** (ನಾ). ಒಂದು ಬಗೆಯ ಪಕ್ಷಿ ; ತೊಗಲುಬಾವಲಿ : ಲಿಂಗ ಯೋನಿಗಳ ತಂಡ, ತೊಗಲುಹಕ್ಕಿಗಳ ಹಿಂಡದಿನ್ನು, ಸುತ್ತುಗಟ್ಟಿರಲು (ಜಂಕನ. ೫೪-೨೨). [ ತೊಗಲು (<ತೋಲ್$_1$) + ಹಕ್ಕಿ$_1$ (<ಪಕ್ಕಿ$_1$) ]

**ತೊಗಲ್ವೇಟು** (ನಾ). ಚರ್ಮದ ಚೀಲ: ಕಿತ್ತಿ ಸಿದ್ಧಿಗೆ ತೊಗ [ಪಾಠಾಂ. ವ]ಲ್ವೇಟಿನೊಳಗೆ ಬಂದತ್ತು ಗಂಗಾಸಾಗರವು (ಕುಮಾರಾಂ. ೧೯-೦೦). [ ತೊಗಲ್ (< ತೋಲ್$_1$) + ವೇಟು$_3$ ]

**ತೊಗೆ$_1$** ‘ತೊವ್ವೆ’ ನೋ.

**ತೊಗೆ$_2$**(ನಾ). (?): ಸ್ವಯಂಬುವದೇವರ್ಗ್ಗೆ ದತ್ತಿದೆಗಾಗಂಡ ಹಡುವಕ್ಕೆ ಬಿತೊಗೆ (ಮೈಆರಿ. ೦೯೪೬, ೧೦-೦೫ ; ಸು. 15 ನೆಯ ಶತ). [ ? ]

**ತೊಟ್** (ನಾ). ಒಂದು ಅನುಕರಣಶಬ್ದ : ಖಲನಾಕಾಶಕ್ಕೆ ತೊಟ್ಟೆಂದೊಗೆದಂ (ಜಗವಿ. ೦೫-೨).

**ತೊಟ್ಟೆನಲ್** = ಇದ್ದಕ್ಕಿದಂತೆ ; ತಟ್ಟನೆ: ಈ ಮಹಾತ್ಮನಂ ತೊಟ್ಟೆನಲಿಂತು ದೇವ ಯುವರಾಜನನೀ ತೆಱದಿ ಪೆಸರ್ವುದೇ (ಕಾದಂಅಾ. ೪೬೯) ; ವಸುಧಾರಮಣೀರಮಣಂಗೆ ತೊಟ್ಟೆನಲ್ ಪುಟ್ಟಿಸಿದತ್ತು ಮೆಯ್ ವಿರ್ಗಳಂ ರಘುವೀರವಚಸ್ಸುಧಾರಸಂ (ಪಂರಾಮಾ. ೬-೭೦).

**ತೊಟ** (ನಾ). ಒಂದು ಅನುಕರಣ ಶಬ್ದ. ‘ತೊಟಗುಟ್ಟು’ ಪರಾ.

**ತೊಟಕಿಕ್ಕು** (ಕ್ರಿ). ಹನಿಹನಿಯಾಗಿ ಬೀಳಂ ; ಒಸರಂ ; ತೊಟ್ಟಿಕ್ಕು : ಕಾವ್ಯಸುಧೆಯು ತೊಟಕಿಕ್ಕುತಿಹುದು ರಸಪಾನಕಾಗಿ ರಸಿಕ (ಚಂದ್ರಮಾ. ೧೬-೦೩). [ ತೊಟಕಂ$_1$ ( < ತಟಕು$_1$) + ಇಕ್ಕು ]

**ತೊಟಕು$_1$** ‘ತಟಕಂ$_1$’ ನೋ.

**ತೊಟಕು$_2$** ‘ತಟಕು$_2$’ ನೋ.

**ತೊಟಕುಹನಿ** ‘ತಟಕುವನಿ’ ನೋ.

**ತೊಟಗುಟ್ಟು** (ಕ್ರಿ). ಹನಿಹನಿಯಾಗಿಬೀಳಂ ; ತೊಟ್ಟಿಕ್ಕು : ಎದ್ದವರು ಗದ್ದವರು ಬಾಂದುಂಬ ಕಾಣುವರು ಚುಕ್ಕೆ ತೊಟಗುಟ್ಟುತಿಹ ಬೆಳಕು, ಜೇನು (ಸೂರ್ಯಪಾ. ೨೬-೮). [ ತೊಟ + ಕುಟ್ಟು$_1$ ]

**ತೊಟ್ಟು** ‘ತೊಡಂ$_1$’ ಪರಾ.

**ತೊಟ್ಟಗೆ** (ಅ). ೧. ಕೂಡಲೆ ; ಬೇಗನೆ ; ತಟ್ಟನೆ ; ಶೀಘ್ರವಾಗಿ : ಕುರುಕುಳಪ್ರಖ್ಯಾತನಂ ಕಾದಿ ತೊಟ್ಟಗೆ ಗೋವೃಂದಮನಾಂ ಮಗುಟ್ಚಿದಪೆಂ (ಪಂಪಭಾ. ೮-೦೦೩) ; ಮಚ್ಚಿ ಮತ್ಸರಿಚಯಕ್ಕಾದಂ ಮಹಾಶ್ವೇತೆ ತೊಟ್ಟಗೆ ತನ್ನಂ ತಸುವಿಂದೆ ಪತ್ತುವಿಡಲಲ್ತೇ ಬಂದೆ (ಕಾದಂಅಾ. ೩೬೮) ; ತೊಟ್ಟಗೆ ಕೊಳೆ ಮೇಲೆವಾಯ್ದು ಮಹಿಷಾಸುರನಂ ತವೆ ಕೊಂದಳ್ (ಛಂದೋಂಬು. ೧-೪) ; ತನ್ನಯ ಸೂಚಿಯಾನೆ ತೊಟ್ಟಗೆ ಸಮರಾಗ್ರದೊಳ್ಬರಿಯೆ (ಗದಾಯು. ೧-೧೬); ತೊಟ್ಟಗೆ ತದ್ವಾ [ಪಾಠಾಂ. ದ್ವಾ] ಹಮುಮಂ ಗಜೇಂದ್ರಮುಮನೋರ್ವತ್ತೆಂಬಿನಂ ತುತ್ತಿ . . . . ಪಾಟಿ ಸುರರಾಜಾವಾಸಮಂ ಮುಟ್ಟಿದಂ (ಕಾವ್ಯಾವ. ೫೯). ೨. ಒಮ್ಮಿಂದೊಮ್ಮೆ ; ಇದ್ದಕ್ಕಿದ್ದಂತೆ; ಹಠಾತ್ತಾಗಿ: ಸಿಂಧುದೇಶಾಧೀಶ್ವರಂ . . . ಮೃಗಯಾಕ್ರೀಡೆಗೆ ಪಾಂಡುರಾಜತನಯರ್ ಪೋಪನ್ನೆಗಂ ಬಂದು ತೊಟ್ಟಗೆ ಪಾಂಚಾಳಿಯನೆತ್ತಿ ತನ್ನ ರಥದೊಳ್ ತಂದಿಟ್ಟುಕೊಂಡುಯ್ದಂ (ಪಂಪಭಾ. ೭-೩೧) ; ಒರ್ವ ವನಚರಂ ಮಹಾವನದೊಳ್ ವನದಂತಿಯಂ ಕಂಡ ನಿಮಿತ್ತಂ ಕೊಂದು ನಿಂದಿರ್ಪನಮೊಂದು ಮಹಾಹಿ ತೊಟ್ಟಗೆ ಬರೆ (ಪಂಚತಂ. ೩೦೦-೦೯) ; ಜನಪದದೊಳ್ ತೊಟ್ಟಗೆ ಕಿಚ್ಚು ನಂದೆ ಮೇಣ್ ಪುಳ್ಳಿಯಿಲ್ಲದಾರಿಯಾತ್ರಿರೆ. . . ದೇಶಂ ಕಿಡುಗುಂ (ಲೋಕೋಪ. ೪-೪೪) ; ನಾಯ್ಗಳಗದೆಯಲ್ಲಮಂ ಪುಗಿಸಿ ಬಯ್ಕದ ಭಾಜನಮಾಗೆ ಮಾಡಿ ತೊಟ್ಟಗೆ ವಿಘಸಾಯೆ (ಸುಕುಮಾ. ೨-೬೩). [ ತೊಟ್ + - ಅಗೆ$_3$ ]

**ತೊಟ್ಟನೆ** (ಅ). ೧. ಕೂಡಲೇ ; ಬೇಗನೆ : ತೊಟ್ಟನೆ ಸರ್ವಾಂಗಮಲಧಾರಿಗಳೊಂದು ಶಿಲಾತಳದ ಮೇಗಿರ್ದು . . . ಸ್ವಾಧ್ಯಾಯದೊಳ್ ತಗುಳ್ದಿರ್ದೊರಂ . . . ಕಂಡು (ವಡ್ಡಾರಾ. ೯೬-೨) ; ಭವಪ್ರತ್ಯಯಜ್ಞಾನ ತೊಟ್ಟನೆ ಪುಟ್ಟೆ (ಆದಿಪು. ೨-೬೬) ; ಶಿವಭೂತಿಗೆ ತೊಟ್ಟನೆ ಬಗೆದನಹಿತವಾಂತದ್ವನಚರಂ (ಪಂಚತಂ. ೧೧೨-೧೦) : ಭವಸ್ಮರಣೆ ತೊಟ್ಟನೆ ಪುಟ್ಟೆ (ಮಲ್ಲಿಪು. ೪-೨೩) ; ನೆಗಳ್ದ ನೇತ್ರಜ್ವಾಲೆಯಿಂ ತೊಟ್ಟನೋವದೆ ಸುಟ್ಟಂ ಮದನಾರಿ (ಪಂಪಾಶ. ೪೦). ೨. ಇದ್ದಕ್ಕಿದ್ದಂತೆ ; ಹಠಾತ್ತಾಗಿ : ಆ ನರಕಾಂತಕನೀಕೆಗಂಡು ತೊಟ್ಟನೆ ನಿಜಲಕ್ಷ್ಮಿಯಂ ಮಱೆದಂ (ಪಂಪಭಾ. ೪-೮೫) ;

ರಸೆಯಿಂ ಕಾಲಾಗ್ನಿರುದ್ರಂ ಪೊಱಮಡುವವೊಲಂತಾ ಸರೋವರಮಧ್ಯದಿಂ ಸಾಹಸಗರ್ವಾಲಂಕೃತಂ ತೊಟ್ಟನೆ ಕೊಳೆ ಪೊಱಮಟ್ಟು (ಗದಾಯು.೭-೩೦); ಮರಣಭ್ರಾಂತಿಯಂ ಚಿಂತಿಸಿ ಬರುತ್ತುಂ ತೊಟ್ಟನೆ ಮುಂದಿರ್ದ ಪುರಾಣ ಕೂಪಮಂ ಕಂಡು (ಶಂಕರಂ. ೫೫-೨೦); ಒಂದು ದಿವಸಂ ವಿಶ್ವಂಧರ ಮಹಾರಾಜಂ . . . ಪೊನ್ನುಯ್ಯಲನಾಡುವ ಸುಬಂಧುಶ್ರೀಯಂ ತೊಟ್ಟನೆ ಕಾಣ್ಬುದುಂ (ಧರ್ಮಾಮೃ. ೦೦-೨೮); ತೊಟ್ಟನೆ ಸಾವುದೊಳ್ಳಿತು ತೊಡಂಕದೆ ಕಾಮನ ಡಾಮರಂಗಳೊಳ್ (ಚಂದ್ರಪ್ರ. ೮-೬೬); ತೊಟ್ಟ ನಿಂತು ಕಣ್ ನೋಡದೆ ಹುಣ್ಣ ನೋಡದೆ ಹೋಗೆಂಬರೆ (ಬಸವ. ೪-೨೮): ಒಟ್ಟಿ ಲುಲಾಯ ಗರ್ದಭ ರಥಂಗಳನೇಱಿದವಂ . . . ನಟ್ಟ ವಿಲೋಚನಂಗಳೊಳೆ ಮೇಗನೆ ನೋಡುತುಮಿರ್ಪ ಮಾನಿಸಂ ತೊಟ್ಟನೆ ಬಂದು ಪೇೞಲ ಶುಭಂ (ಜಗುದ. ೩-೫೭). ೩. ಸಂಮ್ಮನೆ ; ವ್ಯರ್ಥವಾಗಿ : ನಿನಗೆ ಪತಿ ಪಾಶುಪತಿ ಇರೆ ತೊಟ್ಟನೆ ಪಶುಗಳಂ ಕೊಲುವ ಮಲುವ ಕುಮನದ ಪಶುಕರ್ಮಿಗಳ ದುಃಕರ್ಮಂಗಳೊಳಗಿರಲು(ಬಸವು. ೬೦-೪೦) ; ರಾಜಬೀದಿಯೊಳಗಟ್ಟಹಾಸದ ಬಟ್ಟಬಯಲ ತೊಟ್ಟನೆ ನಿಟ್ಟಿಪಂ (ಕೊಟ್ಟೂರು. ೭-೫೭).

**ತೊಟ್ಟನೆ ತೊಳಲು** = ಸಂಮ್ಮನೆ ಅಲೆದಾಡು,-ಸಂತಾಪ್ಪಡು,-ತಿರುಗಾಡು : ಸದ್ವಕ್ತ್ರರಿಗೆ ಉಳ್ಳುದೆಲ್ಲವ ಕೊಟ್ಟು ಐದರೇ ಎಂದು ಮಱುಗುವ ಏಕೋಗ್ರಾಹಿ ಶರಣನ ತೊಟ್ಟನೆ ತೊಳಲಿ ಅಱಸಿ ಕಾಣೆನು (ಸಮಾದ. ೬-೨೦) ; ಅಱುವತ್ತುದಿವ್ಯಸಹಸ್ರಾಬ್ದಂಬರವಿಾ ತ ಱ ದಿ ೦ ತೊಟ್ಟನೆ ತೊಳಲ್ದು (ಸಾನಂತ. ಶಿಖಾಗರ್ಭಸಂಧಿ ೨೩ ಪ) ; ಬೆಟ್ಟಂಗೆ ಬೆಟ್ಟಿತ್ತ್ರನೆಸಗೆ ವೃಥುಲಶ್ರೋಣಿ ತೊಟ್ಟನೆ ತೊಳಲ್ವಂತೆ ಮಾಡೆ (ಪದ್ಮರಾ. ೩-೨೮) ; ಕಾನನದೊಳಗೆ ತೊಟ್ಟನೆ ತೊಳಲಿ ಹದಿಮೂಱಬುದ ಬಂದಾಪತ್ತನನು ಭವಿಸಿ (ಕುಮಾ.ಭೀ. ೩-೩೮). [ತೊಟ್ + -ಅನೆ]

**ತೊಟ್ಟಲ್** (ನಾ). ಒಂದು ಸ್ಥಳದ ಹೆಸರು : ಸ್ವಸ್ತಿಶ್ರೀವಲ್ಲಭ ಪೃಥವೀರಾಜ್ಯಂಕೆಯ . . . ಗುಣ್ಣಗವಾಟಕ್ಕ ಕೊಟ್ಟಲಾಳುತ್ತುಮ್ ಕಾಡವಟ್ಟ ದೋಳದುಳ್ಳ ಪೆಬ್ಬೀಳನಲ್ಲಕ್ಕಳ್ ಎಱಿದುವಿಟ್ಟಾರ್ (ಎಳ. XVI, ತುರುಕ೨. ೯೬-೦ ; 780 ?). 'ತೊಟ್ಟಿಲ್$_1$' ಪರಾ. [ ? ]

**ತೊಟ್ಟಲ** 'ತೊಟ್ಟಿಲ್$_1$' ನೋ.

**ತೊಟ್ಟಲಿ** 'ತೊಟ್ಟಿಲ್$_2$' ನೋ.

**ತೊಟ್ಟಲು** 'ತೊಟ್ಟಿಲ್$_1$' ನೋ.

**ತೊಟ್ಟಲ್ಲ** 'ತೊಟ್ಟಿಲ್$_2$' ನೋ.

**ತೊಟ್ಟಿ$_1$, ದೊಡ್ಡಿ$_1$** (ನಾ). ೧. ಮನೆಯ ಹಜಾರದ ಮಧ್ಯದಲ್ಲಿರುವ ಚಾವಣಿಯಿಲ್ಲದ ಚಚ್ಚೌಕವಾದ ಸ್ಥಳ : "ಗೃಹಭೇದ ಲತೆಯೊಳು ತೊಟ್ಟಿ" (ಕಬ್ಬಮಂ. ೯೦) ; ತೊಟ್ಟಿಯ ಸುತ್ತುವೆತ್ತ [ಪಾಠಾಂ. ಕಟ್ಟಿಯ ಸುತ್ತುವೆತ್ತ, ತಟ್ಟಿಯ ಸುತ್ತುವೆತ್ತ] ಪಸುರ್ವಂದಲ ಮುತ್ತಿನ ಮಂಟಪಂಗಳೊಳ್ ಕಟ್ಟಿದ ಪಚ್ಚೆದೋರಣದ ಬಾಜಿಪ ತೂರ್ಯದ ಸಂಭ್ರಮಂಗಳಿಂ . . . ನೇರ್ಪ ಟ್ಟು ದು ನೋಟಕರ್ಗೊಸಗೆಯುಬ್ಬಣಮಪ್ಪಿನಮಾ ವಿವಾಹದೊಳ್ (ಸುಕುಮಾ. ೬-೨೨); ತೊಟ್ಟಿಗಳುಪ್ಪರಿಕೆ ಹೊಂಗಳಸಗಳು ಮೆಱೆವ ಮೇಲುಕಟ್ಟನ ಚಿತ್ರಗಳ . . . ತಾಯ್ಮನೆಯಿದೆಂಬಂತೆಸೆದುದೊಗ್ಗಿನಲಿ (ಪ್ರಭು. ೪-೬೨) ; ರಂಗುವಡದ ನವರಂಗದ ತೊಟ್ಟಿಯ ಸಾಲು (ಸೌಂದರಾ. ೯-೩೨) ; ಊರಿನ ಗಂಡಸರೆಲ್ಲಾ ಆಗಲೇ ಆ ತೊಟ್ಟಿಯಲ್ಲಿ ಸೇರಿದ್ದರು (ಕಳಹು. ೯) ;ಹಟ್ಟಿ ಗುಡಿಸೀರಿ ತೊಟ್ಟೀಯ ಗುಡಿಸೀರಿ ಪುಟ್ಟ ಮಲ್ಲಿಗೆಯ ಹರಡೀರಿ (ಸಖ್ಯೂರು. ೪೮). ೨. ಅಂತಃಪುರ ; ರಾಣೀವಾಸ : ತದ್ದರಣೀಸತಿಯ ಕಾಂತಿಕಿರಸಭರಿತನಾಭಿಯೋ ಎನೆ ತೊಟ್ಟಿ ಕಣ್ಗೆಸದುದು (ಪದ್ಮರಾ. ೬ ೭೨) ; ದಿಟ್ಟಗೆ ನೂತನವಾದವರಂಜಿಯ ಕಟ್ಟರಕದ ಭಿತ್ತಿಯಿಂದ ಸೃಷ್ಟೀಶನ ರಾಣಿಯರ ನವರತ್ನದ ಕೊಟ್ಟಿಗಳಿಹುವರ್ತಿಯಲಿ (ಕಂಸವಿ. ೭-೯೨) ; ಚಾಮರಾಜನಗರದಲ್ಲಿ ಮದನವಿಲಾಸತೊಟ್ಟೀ ವುಟ್ಟಸ್ವಾಮಿಯಾಯವರ ಹೆಸರಿನಿಂದ ಪ್ರತಿಷ್ಠಿತರಾದ . . . ದೇವಸ್ಥಾನಕ್ಕೆ . . . ಪಪ್ಪಿಸಿದ ನಿಲುವಿನ ಸೇವಾರ್ಥ (ಎಳ. XIV, ಚಾಮರಾ. ೨೦೮-೧ ; 1868) ; ಆ ರಾಜಕುಮಾರರಿಬ್ಬರನ್ನೂ ತಮ್ಮ ಅರಮನೆಯಲ್ಲಿ ಪೂರ್ವದಲ್ಲಿ ಇಳಿದಿದ್ದ ತೊಟ್ಟಿಯಲ್ಲಿಯೇ ಇರುವಂತೆ ನಿಯಮಿಸಿದಳು (ಧಾಮವಂ. ೦೩) ; ಶಾಂತಲಾದೇವಿ ತೊಟ್ಟಿಯಿಂದ ಹೊರಟಳು (ಸಪತಿ. ೩೦) ; ದೊರೆ ಇವಳ ತೊಟ್ಟಿಗೆ ಕೊಡುತಾ ಇದ್ದ ಖಾಸಾ ಸೋಬಸ್ಕರವನ್ನು ದಿನಕ್ರಮೇಣ ಕಡಿಮೆ ಮಾಡುತ್ತಾ ಕಡೆಗೆ ಕಗ್ಗಲ ರಾಗಿ ಮುಗ್ಗಲ ಹುರುಳಿಗೆ ಇಳಿಸಿದನು (ಕೀಚಕಾ. ೦೬). ೩. ದರ್ಬಾರು ನಡೆಯುವ ಸ್ಥಳ ; ಓಲಗಶಾಲೆ; ಆಸ್ಥಾನಮಂಟಪ : ಶ್ರೀರಂಗಪಟ್ಟಣದ ಅರಮನೆಯಲ್ಲಿ ಸಂಜೆಯ ಸನ್ನಿಧಾನದ ತೊಟ್ಟಿ (ಸಂಶಳ. ೦೨೦). ೪. ಹಸು, ಕುದುರೆ ಮುಂತಾದವನ್ನು ಕೂಡುವ ಸ್ಥಳ ; ಕೊಟ್ಟಿಗೆ : ಕುರಿಗಳೆಲ್ಲಾ ರೊಪ್ಪದಲ್ಲಿ, ದನಗಳೆಲ್ಲಾ ತೊಟ್ಟಿಯಲ್ಲಿ, ಜನಗಳೆಲ್ಲಾ ಹಟ್ಟಿಯಲ್ಲಿ ಬಳಲಿ ಕೆಡೆದರು ತಪ್ಪಗೆ (ಇಂಗೀತ. ೩೨-೧). **ದೊಡ್ಡಿ$_1$** : ೪. ಗುಡ್ಡ ಬೆರಳೊಳಿತ್ತಿ ದೊಡ್ಡಿ ಗೋವ್ಗಳ ಕಾಯ್ದು ಒಡ್ಡಿ ಜಗನ್ನಾಥ ಗಿಡ್ಡಾಗಿದ್ದನೆ (ಪುರಂದ. ೨-೩೨-೩) ; ನರಪಶುಗಳಿಹ ದೊಡ್ಡಿ ನರಕದ ದಿಡ್ಡಿ ಸಕಲರಿಂಗಿಕ್ಕಿದಡ್ಡಿ (ಪತಿಂ. ೨-೬೧) ; ಅಲ್ಲಲ್ಲಿ ದೊಡ್ಡಿಗಳಲ್ಲಿರುವ ಸಂತೋಷಕರಗಳಾದ ಗೋವುಗಳ ಹಿಂಡುಗಳನ್ನೂ ನೋಡುತ್ತ (ಕೃಷ್ಣಾಲು.೦೯೨); ಗಿರಿಗಳೆಡೆಯೊಳು ಅಡವಿ ಮಧ್ಯದಿ ತುರುವ ದೊಡ್ಡಿಯ ಮಾಡಿಕೊಂಡು ಇರುವ ಕಾಳಿಂಗನೆಂಬ ಗೊಲ್ಲನ ಪರಿಯ ನಾನೆಂತು ಪೇಳ್ವೆನು (ಗೋಹಾಡು. ೨೦) ; ಆ ಎರಡು ತರಗತಿಯೂ ದೊಡ್ಡಿಯಂತಾಗಿದೆ (ಕಾಡಿ. ೯೬). ೫. ಜನರು ವಾಸಿಸುವ ಸ್ಥಳ; ಹಟ್ಟಿ: ಅವನು ತನ್ನ ದೊಡ್ಡಿಯನ್ನು ತಲುಪಿ ಕಾರ್ಯ ನಿರತನಾದ ನಂತರ ಮನಸ್ಸಿನ ಮುರುಸು ಬೇಸರಗಳೆಲ್ಲ ಮಾಯವಾದುವು (ಪುಸರು. ೨೬೪). ೬. ಕೆಲವುಹಳ್ಳಿಗಳ ಹೆಸರಿನ ಕೊನೆಯಲ್ಲಿ ಸೇರುವ ಶಬ್ದ. ೭. ಪೌಂಡಿಮನೆ; ಕೊಂಡವಾಡ(ಉಕ). ೮. ಕಾಡಾನೆಗಳನ್ನು ಪಳಗಿಸುವ ಸ್ಥಳ ; ಖೆಡ್ಡಾ : (ಕ).

[ದೇ.॥ ತಮಿ. ತೊಟ್ಟಿ ; ಮಲ. ದೊಟ್ಟಿ ; ತೆಲು. ದೊಡ್ಡಿ ]

**ತೊಟ್ಟಿ$_2$** (ನಾ). ೧. ನೀರು ತುಂಬುವುದಕ್ಕಾಗಿ ಕಲ್ಲು, ಮಣ್ಣು, ಸಿಮೆಂಟು ಮುತ್ತು, ಮರ ಮೊದಲಾದುವುಗಳಿಂದ ಮಾಡಿದ ಬಾನೆ; ಹೌದು ; ಟ್ಯಾಂಕು : ತೊಟ್ಟಿಯ ನೀರು ಕಾಲುವೆಯಲ್ಲಿ ಹರಿಯುತ್ತಿತ್ತು (ಕಪತು. ೩-೦೩). ೨. ವಾಯುಹಡಗಿನ ತಳಕ್ಕೆ ಕಟ್ಟಿರುವ ಒಂದು ಬಗೆಯ ತೂಗುದೊಟ್ಟಿಲು,-ದೋಣಿ : ಇದರ ಕೆಳಭಾಗ್ಗುಲಲ್ಲಿ ಒಂದು ತೊಟ್ಟಿಯನ್ನು (Gondala) ನಿರ್ಮಿಸುವರು. ಈ ತೊಟ್ಟಿಯಲ್ಲಿ ಜನರು ಕುಳಿತುಕೊಳ್ಳುವ ಅನುಕೂಲತೆಯಿದೆ (ಜ್ಞಾಲಪ್ರ. II, ೦೦೨೬). ೩. ಕಸ, ಕುಪ್ಪೆಗಳನ್ನು ಹಾಕುವ ಗುಂಡಿ : ಕಸವನ್ನು ತೊಟ್ಟಿಗೆ ಹಾಕು (ರೂಢಿ). ೪. (ಆಲಂ)ವ್ಯಭಿಚಾರಿಣಿ ; ವೇಶ್ಯೆ ; ಜಾರೆ.

[ದೇ.॥ ತಮಿ. ಮಲ. ತುಳು. ತೆಲು. ತೊಟ್ಟಿ ]

**ತೊಟ್ಟಿ$_3$** 'ತೋಟ್ಟಿ$_2$' ನೋ.

**ತೊಟ್ಟಿ$_4$** (ನಾ). ಒಂದು ಬಗೆಯ ಬಳ್ಳಿ : "ತೊಟ್ಟಿ[ಪಾಠಾಂ. ಟ್ಟಿ] ತುಷ್ಟೆಯಕ್ಕುಂ" (ಕುಂಗರಾ. ೪೨-೬೭) ; "ಗೃಹಭೇದ ಲತೆಯೊಳು ತೊಟ್ಟಿ" (ಕಬ್ಬಮಂ. ೯೦) ; ಕುದಿಯಿಸುಗೆ ಸುಣ್ಣದಿಂ ಕೈವೆದೊಂದೆಯಂ ಕೋಕಿಲಾಕ್ಷಿವೆರಸು ಸಿತೇರಂಡದ ತೊಟ್ಟಿಯೆಲೆಗಳಿಂ ಪಡಲದ ಕಾಯುಂ ತೆಗವುಗವಱ ಕೈಪೆಗಳಱಿಗುಂ (ಕೋಕಿಲೋಪ. ೮-೩೦); ತೊಟ್ಟಿಯೆಲೆಯ ಕಷಾಯುಮಟ್ಕಮೆಯುಂ ಕಳೆವುದು (ಧರ್ಮಾಮೃ. ೯-೧೦೦೮) ; ಬಸವೇಶ್ವರದೇವರ ಬಲದ ಕರ್ಣದಲ್ಲಿ ತೊಟ್ಟಿಗಿಡ ಹುಟ್ಟುವುದೇ ಕುಱುಹು (ಕಾಲಸಂ. ೦೪-೪) ; ನೆಲದಾಳ್ ದಾಗುಡಿ ಹೇರೀಚಲು ಪಾಳಂ ತರಣಿ ತೊಟ್ಟಿ... ಸತಕ್ರಿಪಾನಂ ವಿಷಹಂ (ಜಗುದ. ೩-೯೬); ಸೀಗೆ ಗದಾಂಗು ಕೀಚಕ ತೊ[ಪಾಠಾಂ. ದೊ]ಟ್ಟಿ

. . . ಗಡಣದಿಂದಾ ಕಾಡು ಕಡುಗುರ್ವುವಡೆದು ರಾಜಿಪುದು (ರಾಹುವಿ. ೧೫-೬೦); ತೊಂಡೆ ತೊಟ್ಟಿಯು ಸೊಂಡೆಗಿಡ ಭೂಮಂಡಲಾದೊಳು ಬೆಳವ ತೊಳಸಿಯು . . . ತಂಡತಂಡದಿ ಮೆರೆದುವು (ಗೋಹಾಡು. ೭).

[ ದೇ.೫ ತಮಿ. ತೊಟ್ಟ ]

**ತೊಟ್ಟಿಕ್ಕು** (ಕ್ರಿ). ಹನಿಹನಿಯಾಗಿ ಬೀಳು : ಕಡದ ತೊಟ್ಟಿಕ್ಕುವ ವಿಭೂತಿಗಳ ದೆಮರಿನಿಂ (ಚಬಪು. ೩೫-೦೫) ; ತೊಟ್ಟಿಕ್ಕೆ ಕಂಬನಿಯು ಜೇನೆದೆಯ ಹೂವಿಂದ (ಕಾಲೂರ. ೦೬೫-೩೬೭); ಸುಮತಿಯು ಕಂಗಳಲ್ಲಿ ಕಂಬನಿ ತುಂಬಿಕೊಂಡು, ಮುತ್ತುದುರಿದಂತೆ ಅವಳ ಗಲ್ಲಗಳ ಮೇಲೆ ತೊಟ್ಟಿಕ್ಕುತ್ತಿದೆ (ಈಮೋಡ. ೬೫) : ಎಲೆ, ಕೊಂಬೆ ಮತ್ತು ಹುಲ್ಲುಗಳಿಂದ ನೀರು ತೊಟ್ಟಿಕ್ಕುತ್ತಿತ್ತು (ಪುಸರು. ೨೬೮). [ ತೊಟ್ಟು₂ + ಇಕ್ಕು ]

**ತೊಟ್ಟಿಗ** (ನಾ). (?) : ಅಘಹರನು ಕಾವನ ತಗೆದಟ್ಟ ಬಾಣದ ಮಗನ ಹಿಡಿದು ತೊಟ್ಟಿಗರು ಪಗೆಗೆ ಮಾರಲ್ಕಂಜ ಪಿಗಿದು ಪರ್ವರ ಕಂಡು ಸುಗಿದು ಸೊರಗಿದವೆಂಬ ಪಸರಾ (ಕೋಡಚ. ೧-೬೦). [ ? ]

**ತೊಟ್ಟಿಗಾಲ್** (ನಾ). ಒಂದು ಕಾಲುವೆಯ ಹೆಸರು : ಅನ್ತೆ ಬನ್ದು ತೊಟ್ಟಿಗಾಲ ತಜ್ಜಣಮೇರೊಟ್ಟಿಯಿಂ ಅನ್ತೆ ಬನ್ದು ಬಾಣಗಳಿಯ ಏರಿಯ ಮೇಗಣಂ (ಎಕ. III, ನಂಜನ. ೧೬೯-೩೦; 916 ?).

[ ತೊಟ್ಟಿ ? + ಕಾಲ್₂ ]

**ತೊಟ್ಟಿಡು** (ಕ್ರಿ). = ತೊಟ್ಟಿಕ್ಕು : ಸಡಿಲಿದ ಮುಡಿ ಬೆಮರ್ವನಿಗಳು ತೀವಿ ತೊಟ್ಟಿಡುವಾಸ್ಯದ . . . ಹೆಂಗಳಡಸಿದಂಗಡಿಗಳೊಪ್ಪಿದವು (ಮೋಹಚ. ೩-೧೪) : ತನಿಸುಧೆಯೊಸರ್ದು ತೊಟ್ಟಿಡುವ ಬಿಂದುಗಳ ಸಾಲಿದೆನಲು . . . ಮುತ್ತುಗಳ ಮಣಿಗಳೆಡೆವಿಡದೆ ಸೂಸುತಿರೆ (ಕೃಮಿಖಾ. ೦೦-೦೭): ತೊಟ್ಟಿಡುವ ಬೆವರುಗಳ ಮಸ್ತಕದಿ ರೋಷದಿಂದೊಗುವಾ (ದೇವೀಕು. ೩-೪೪); ನಿರ್ಮಳಾಂತಃಕರಣದಾನಂದಾಶ್ರುಗಳು ಕಂಗಳಲಿ ತೊಟ್ಟಿಡಲು (ಅನಂರಾ. ೦-೨-೩೦): ಮುಖದಲ್ಲಿ ಬೆವರು ತೊಟ್ಟಿಡುತ್ತಿದ್ದಿತು (ನಿರಾತ. ೨೦). [ ತೊಟ್ಟು₂ + ಇಡು₁ ]

**ತೊಟ್ಟಿಮನೆ** (ನಾ). ಹಜಾರದ ಮಧ್ಯದಲ್ಲಿ ಚಾವಣಿಯಿಲ್ಲದ ಚಚ್ಚೌಕವಾದ ಸ್ಥಳವನ್ನುಳ್ಳ ಮನೆ: ಇದ್ದಿರಬಹುದು ನಮ್ಮೂರಲ್ಲೂ ಕೋಟೆ, ಪೇಟೆ, ಅರಮನೆ . . . ಹನ್ನೆರಡು ಕಂಬದ ತೊಟ್ಟಿಮನೆ (ಹಂಗೂರಿ. ೮) : ನಾನು ಈಗಲೇ ಹೋಗಿ ತೊಟ್ಟೀಮನೆ ಕೃಷ್ಣಪ್ಪನೋರನ್ನು ಕಾಣುತ್ತೀನೆ (ಹೂಂಗಲ್ಯ. ೪). [ ತೊಟ್ಟಿ₁ + ಮನೆ ]

**ತೊಟ್ಟಿಲ್₁, ತೊಟ್ಟಿಲ, ತೊಟ್ಟಿಲು, ತೊಟ್ಟಿಲಂ₁** (ನಾ). ೧. ಮಗುವನ್ನು ಮಲಗಿಸಿ ತೂಗಲು ಮರ, ಬೆತ್ತ ಅಥವಾ ಲೋಹದಿಂದ ಮಾಡಿದ ಒಂದು ಬಗೆಯ ಸಾಧನ ; ತೂಗುಹಾಸಿಗೆ : "ಶೈಶವಿ ಬಾಲಶಯ್ಯೆಯನೆ ತೊಟ್ಟಿಲಕ್ಕುಂ" (ಮಂಗರಾ. ೬೦-೦೭) : ನಿನ್ನ ತಂದೆವಿರ್ ಸಿದ್ಧಾರ್ಥರೆಂಬೊರ್ ನೀನ್ ತೊಟ್ಟಿಲೊಳಿರ್ದಂತೆ ನಿನಗೆ ಸಟ್ಟವಟ್ಟಂಗಟ್ಟಿ . . . ತಪಂಬಟ್ಟು (ವಡ್ಡಾರಾ. ೪೬-೨೭): ಮದದಂತಿದಂತದೊಳ್ ಕಟ್ಟಿದ ತೊಟ್ಟಿಲಂ ನಯದಿಂದಮೇಱ[ಸ] ಬಾಳಕಾಲದೊಳೆ ತೊಟ್ಟಿಲಿಗಂ ಗಜಪ್ರಿಯನಪ್ಪುದಂ ಸಲೆ ತೋಱದಂ (ಶಂಖಕಾ. ೧-೪೩) ; ದೇಹಿವರ್ಗದ ಕೃತಪಾಪಪುಣ್ಯಫಲಮಂ ಸಲೆ ತೂಗುವ ಕರ್ಮಸಾಕ್ಷಿಯಂ ಪದುಳದೆ ತೊಟ್ಟಿಲೊಳ್ ಪಡಿಸಿ ತೂಗಿದರ್ (ಜಗವಿ. ೩-೨೮) ; ಕೂಸಂ ಚಿಮ್ಮುಟುವ್ವೆ ತೊಟ್ಟಿಲಂ ತೂಗುವ್ವೆ (ನಂಬಿರ. ೧೫-೧೪೧) ; ಎಳನೇಸಱ ತೊಟ್ಟಿಲುದಗ್ರದಾನವರೆಱವಟ್ಟು ಲಕ್ಷ್ಮಿಯ ತಪರ್ವನೆ . . . ಮಹಾರ್ಣವಂ (ಸೂಕ್ತಿಸು. ೨-೩೮). ೨. ಒಂದು ಊರಿನ ಹೆಸರು : ಪಚಯ್ಯನುಂ ತೊಟ್ಟಿಲ ಪಟ್ಟಗಾವುಣ್ಣನುಂ ಎಚಱಯಣ್ಣ ಪೆರ್ಮ್ಮಾಡಿ ಕೆಱಯ ಕಟ್ಟ ಕಲ್ಲ ತುಂಬನಿಕಿಸಿದ (ಮೈಆರಿ. ೧೯೩೨, ೧೧-೪ ; 886 ?). 'ತೊಟ್ಟಿಲ್' ಪರಾ. **ತೊಟ್ಟಿಲ** : ೧. ತನುವೆಂಬ ತೊಟ್ಟಿಲಕೆ ಮನವ ಸರಪಳ ಮಾಡಿ (ಅಜಂಡೀ. ೩೪೯-೧೩).

**ತೊಟ್ಟಿಲು** : ೧. ಭಕ್ತನ ಹಸ್ತವೆ ತೊಟ್ಟಿ[ಪಾಠಾಂ. ಟ್ಟಿ]ಲು ತನಗಂ ಭಕ್ತ್ಯಮೃತಂ ಮೊಲೆವಾಲದು ತನಗಂ (ದೀಕ್ಷಬೋ. ೬೪-೫) : ಅಲ್ಲಿನ ಮಕ್ಕಳು ತಮ್ಮ ತೊಟ್ಟಿಲುಗಳಲ್ಲಿ ಸುಖವಾಗಿ ಮಲಗಿ ನಿದ್ರಿಸಲಿ (ಹುಟ್ಟಿಹ. ೦೪೦). **ತೊಟ್ಟಿಲು₁** : ೧. ತೊಟ್ಟಿ ೧ ಶಿಶುವಿಂಗೆ ಜೋಗುಳವಲ್ಲದೆ ಹೊಟ್ಟೆಯ ಶಿಶುವಿಂಗೆ ಜೋಗುಳವುಂಟೇ (ವಚನ. ೪೦೬-೫೪) ; ಶರಣರ ಚರಣದ ತೊಟ್ಟಿಲೊಳು ಪಟ್ಟಿರಿಸಿ ಪುರಾತನರ ಗೀತದಿಂ ಜೋಗುಳಂಬಾಡಿ (ಬಸವ. ೦೦-೦೦೦) : ಭೀಷ್ಮನ ತೋಳ ತೊಟ್ಟಿಲಿನೊಳಗೆ ಬೆಳೆದವು (ಕುಮ್ಯಾಭೀ. ೭-೨೮) ; ಅಂಗದನ ತೊಟ್ಟಿಲಲಿ ವೀರೋತ್ತುಂಗ ದಶಕಂಧರನ ಕಟ್ಟಿದ ತುಂಗವಿಕ್ರಮವೆತ್ತ ಸರಿದುದು (ತೊರರಾ. ೪-೩-೯) ; ಬೆಟ್ಟಬೆಟ್ಟಕೆ ಕಟ್ಟಿ ಜೋಗುಳದ ತೊಟ್ಟಿಲನು ತೂಗಿದತ್ತು! (ಅನೀಕ. ೩೩-೫) ; ತೊಟ್ಟಿಲ ಹೊತ್ತುಕೊಂಡು ತೌರುಬಣ್ಣ ಉಟ್ಟುಕೊಂಡು . . . ತೌರೂರ ತಿಟ್ಟತ್ತಿ ತಿರುಗಿ ನೋಡ್ಯಾಳು (ಜಗೀತ. ೩೦). ೩. ಬಂಡಿಯಲ್ಲಿ ಜನ ಕೂರಲು ಅಥವಾ ಸಾಮಾನು ತುಂಬಲು ಇರುವ ಜಾಗ,-ಸ್ಥಳ.

**ತೊಟ್ಟಿಲುಗಾಯಿ** = ಒಡೆದಾಗ ಉದ್ದುದ್ದವಾಗಿ ವಿಭಾಗವಾಗುವ ತೆಂಗಿನಕಾಯಿ : ತೊಟ್ಟಿಲುಗಾಯಿ ಒಡದರೆ ಮನೆಯಲ್ಲಿ ಮಗುವಾಗುವ ಸೂಚನೆಯೆಂದು ನಂಬಿಕೆಯಿದೆ (ಸೂಪ). **ತೊಟ್ಟಿಲ ಕಾರ್ಯ** = ಮಗುವನ್ನು ಮೊದಲ ಬಾರಿ ತೊಟ್ಟಿಲಿಗೆ ಹಾಕುವ ಶಾಸ್ತ್ರ,-ಸಮಾರಂಭ : ಪರಮಹರುಷದಿಂದ ಪುರಜನರೆಲ್ಲರು ನೆರೆದು ತೊಟ್ಟೀಲ ಕಾರ್ಯಕ್ಕೆ (ಸಿದ್ಧಪು. ೩-೨೫). **ತೊಟ್ಟಿಲ ಕೂಸು** = ಚಿಕ್ಕಮಗು ; ಎಳಗೂಸಂ : ಎರಡು ಸಪ್ತಕ ಜಗವ ಮಾಡಿದ ಸರಸಿರುಹಸಂಭವನೆ ನಾಭಿಯ ನಿರುತ ತೊಟ್ಟಿಲ ಕೂಸು (ಸಂಭಭ. ೭-೨). **ತೊಟ್ಟಿಲ ಚಪ್ಪರ** = ಅಂಬಾರಿ: ಆನೆಯ ಮೇಲೆ ತೊಟ್ಟಿಲ ಚಪ್ಪರದಲಿ . . . ಬರುವ ವಾನರರುಗಳು (ಕಂಜವಿ. ೦೦-೩೦). **ತೊಟ್ಟಿಲ ಜೀಕ, ತೊಟ್ಟಿಲು ಜೀಕ** = ತೊಟ್ಟಿಲನ್ನೊಳಗೊಂಡ ತಿರುಗುಯಂತ್ರ ; ರಾಟಣದುಯ್ಯಾಲೆ : ತೊಟ್ಟಿಲಜೀಕವ ತೂಗಿ ಕೈಬಿಟ್ಟರೆ ಗಾಳಿಯ ರಾಟಾಳದೊಳು ಪ್ರಾಣವು (ಸಹೀಗೀ. ೩೦-೦೦) ; 'ರಾಟಣದುಯ್ಯಾಲೆ' ಎಂದರೆ ನಮ್ಮಲ್ಲಿ ಈಗಲೂ ಪ್ರಚಾರದಲ್ಲಿದ್ದ ತೊಟ್ಟಿಲು ಜೀಕ (ಕರ್ಹಾಜ. ೮೩). **ತೊಟ್ಟಿಲನಿಕ್ಕು** = ಮಗುವನ್ನು ಮೊದಲ ಬಾರಿ ತೊಟ್ಟಿಲಿಗೆ ಹಾಕುವ ಶಾಸ್ತ್ರ ಮಾಡಂ ; ತೊಟ್ಟಿಲಿಡಂ : ಕುಮಾರನಿಗೆ ತೊಟ್ಟಿಲನಿಕ್ಕುವ ಉತ್ಸವವಂ ಬೆಳೆಯಿಸಬೇಕು (ಪಾಗಂಧಿ. ೪೨-೮). **ತೊಟ್ಟಿಲ ಮಗ** = ತೊಟ್ಟಿಲ ಕೂಸು : ತೊಟ್ಟಿಲ ಮಗಂಗೆ ಪಟ್ಟಂಗಟ್ಟಿ . . . ಜಿನದೀಕ್ಷೆಗೊಂಡಂ (ಹಂಚಾಮಾ. ೨-೩೭). **ತೊಟ್ಟಿಲ ಹಬ್ಬ** = ತೊಟ್ಟಿಲ ಕಾರ್ಯ : ಕುಸುಮಾಸ್ತ್ರನಂಗನೆಯು ಪಡೆದ ಶಿಶುವಂ ನೋಡಿ . . . ಸಸಿನೆ ತೊಟ್ಟಿಲ ಹಬ್ಬ ರಚಿಸುತ್ತ ನಾಮಕರಣಂಗೈಯೆ (ನಪಮೋ. ೦೫ ಸೂಚನ). **ತೊಟ್ಟಿಲಿಗೆ ಹಾಕು** = ತೊಟ್ಟಿಲಿಕ್ಕು : ಎಂತಿದ್ದರೂ ಅಕ್ಕಯ್ಯನ ಬಾಲೆ ತೊಟ್ಟಿಲಿಗೆ ಹಾಕೋ ಮನೆಗೆ ನಾನು ಬಂದೇ ಬರ್ತೀನಲ್ಲಾ? (ಹುಳಿಮು. ೨೨೭). **ತೊಟ್ಟಿಲು ಗಾಡಿ** = ಕಮಾನಿಲ್ಲದ ಎತ್ತಿನ ಗಾಡಿ. **ತೊಟ್ಟಿಲು ಮುಂದಾಗಿ ಬರು** = ಬಾಣಂತನವನ್ನು ಪೂರೈಸಿಕೊಂಡು ಗಂಡನ ಮನೆಗೆ ಮಗುವಿನೊಡನೆ ಬರಂ.

[ ದೇ.೫ ತಮಿ. ಮಲ. ತುಳು. ತೊಟ್ಟಿಲ್; ತೆಲು. ತೊಟ್ಟಿಲ, ತೊಟ್ಲ, ತೊಟ್ಲಯ, ತೊಟ್ಲಿ ]

**ತೊಟ್ಟಿಲ್₂, ತೊಟ್ಟಿಲಿ, ತೊಟ್ಟಿಲ್ಲ, ತೊಟ್ಟಿಲ, ತೊಟ್ಟಿಲಂ₂, ತೂಟ್ಟಿಲಿ** (ನಾ). (ಮಂಳಗ್ಯಗಳಂಳ್ಳ) ಒಂದಂ ಬಗೆಯಂ ಸಸ್ಯ : ತಗರಂ ಕೊಳ್ಕುಳಿ ಸುಗಿ ಕಗ್ಗೂಱಲೆ ತೊಟ್ಟಿಲ್ ಸೂರಣಂ . . . ಪುತ್ತಿನ ಮಣ್ಣುಮಂ ಕಡಿದು ಕಾಸಿಟ್ಟೆಯ್ದೆ ಪೊಯ್ಯುವ ಬಾವುಗಳಂ ಕೀರ್ಚುಗುಂ (ಲೋಕೋಪ. ೯-೨೧೦). **ತೊಟ್ಟಿಲಿ**: ಕಾಯಿಗಳು: ಅಗಸೆ, ಹಲಸು, ತೊಂಡೆ, ತೊಟ್ಟಿಲಿ (ನಮ್ಮಮು. ೨೩೭). **ತೊಟ್ಟಿಲ್ಲ** : ರಪ್ಪೆ, ತೊಟ್ಟಿಲ್ಲ (ಮೃಶಿಗ. ೧೭-೩೦೫).

**ತೊಟ್ಟಿಲ**: ತೊಟ್ಟಿಲ (ವಾಭಾಂಟಿ).–ಮುಳ್ಳುಗಳುಳ್ಳ ಬಹು ಸಾಧಾರಣವಾದ ಬಳ್ಳಿಯು (ಕಧಾಗಿ. ೯೦). **ತೊಟ್ಟಿಲು$_2$**: ಕಂಪುನೊಳ, ತೊಟ್ಟಿಲು, ಪ್ರಿಯಂಗು (ಮೃಶಿಗಿ. ೪-೩೬). **ತೊಟ್ಟಿಲೆ**: ಹೊಟ್ಟೆನೊಳ, ತೊಟ್ಟಿಲೆ (ಮೃಶಿಗಿ. ೬-೯೯). [ದೇ.॥ ತೆಲು. ತೊಟ್ಲ]

**ತೊಟ್ಟಿಲ** 'ತೊಟ್ಟಿಲ್$_2$' ನೋ.

**ತೊಟ್ಟಿಲಿಕ್ಕು** (ಕ್ರಿ). ಮಗುವನ್ನು ಮೊದಲ ಬಾರಿ ತೊಟ್ಟಿಲಿಗೆ ಹಾಕುವ ಶಾಸ್ತ್ರವನ್ನು ಮಾಡು: ತೊಟ್ಟಿಲಿಕ್ಕುವೆವೆಂದು ಹನ್ನೆರಡಿರುಳಿಂಗೆ ನೆಟ್ಟನೆ ಕೈಕೊಂಡರೊಲಿದು (ಪೋಶಕ. ೧೬-೪೦).

[ತೊಟ್ಟಿಲು$_1$ (<ತೊಟ್ಟಿಲ್$_1$) + ಇಕ್ಕು]

**ತೊಟ್ಟಿಲಿಗ** (ನಾ). ತೊಟ್ಟಿಲ ಮಗಂ; ಎಳಗೂಸು: ಬಾಳಕಾಲದೊಳೆ ತೊಟ್ಟಿಲಿಗಂ ಗಜಪ್ರಿಯನಪ್ಪುದಂ ಸಲೆ ತೋಱುದಂ (ಪಂಪಭಾ. ೧-೯೩).

[ತೊಟ್ಟಿಲ್$_1$ + – ಇಗ]

**ತೊಟ್ಟಿಲಿಡು** (ಕ್ರಿ). = ತೊಟ್ಟಿಲಿಕ್ಕು: ತೊಟ್ಟಿಲಿಡುವ ದಿವಸ ಎಲ್ಲಿದ್ದರೂ ಬಂದೇವು (ಸವತಿ. ೨೬). [ತೊಟ್ಟಿಲು$_1$ (< ತೊಟ್ಟಿಲ್$_1$) + ಇಡು$_1$]

**ತೊಟ್ಟಿಲು$_1$** 'ತೊಟ್ಟಿಲ್$_1$' ನೋ.

**ತೊಟ್ಟಿಲು$_2$** 'ತೊಟ್ಟಿಲ್$_2$' ನೋ.

**ತೊಟ್ಟಿಲುಹಬ್ಬ** (ನಾ). ಮಗುವನ್ನು ಮೊದಲ ಸಲ ತೊಟ್ಟಿಲಿಗೆ ಹಾಕುವ ಉತ್ಸವ,–ಸಮಾರಂಭ; ತೊಟ್ಟಿಲ ಕಾರ್ಯ: ಗೌಡರ ಮೊಮ್ಮಗನ ತೊಟ್ಟಿಲುಹಬ್ಬ ನಿನ್ನೆ (ಪ್ರಜಾಶ. ೦೦).

[ತೊಟ್ಟಿಲು$_1$ (< ತೊಟ್ಟಿಲ್$_1$) + ಹಬ್ಬ (< ಪರ್ಬ)]

**ತೊಟ್ಟಿಲೆ** 'ತೊಟ್ಟಿಲ್$_2$' ನೋ.

**ತೊಟ್ಟಿಲ್ದುಂಬಿಸು** (ಕ್ರಿ). = ತೊಟ್ಟಿಲಿಕ್ಕು: ಧಾರಿಣಿ ಪೊಗಳ್ವಂತೆ ವೊಲುತ್ಸಾಹದಿ ತೊಟ್ಟಿಲ್ದುಂಬಿಸಿದಂ (ಜಯುಕಾ. ೨-೬೦).

[ತೊಟ್ಟಿಲ್$_1$ + ತುಂಬಿಸು]

**ತೊಟ್ಟಿಸು** (ಕ್ರಿ). ಹನಿಸು; ಚಿಮುಕಿಸು: ಒಕ್ಕಲಿಗರ ಮನೆಯ ಸುಣ್ಣದ ಮೇಲೆ, ಮಜ್ಜಿಗೆಯನ್ನು ತೊಟ್ಟಿಸಿದರೆ . . . ಅದರ ದೋಷನಿವಾರಣೆಯಾಯಿತೆಂದು ಹೇಳಿ ಉಪಯೋಗಿಸುತ್ತಿದ್ದರಲ್ಲಾ ? (ಬ್ರಸರ್ವ. ೧೨೨).

[ತೊಟ್ಟು$_2$ + – ಇಸು$_2$]

**ತೊಟ್ಟು$_1$** 'ತೊಡು$_1$' ಪರಾ.

**ತೊಟ್ಟು$_2$** (ಕ್ರಿ). ತೊಟ್ಟಿಡು; ಹನಿಹನಿಯಾಗಿ ಬೀಳು: ಮೋಟಾರ್ ವಾಹನಗಳಿಂದ ತೊಟ್ಟಿದ ಎಣ್ಣೆಯು ತೆಳುವಾಗಿ ಹರಡಿ ಎಣ್ಣೆಯ ಪೊರೆಯು ಉಂಟಾಗಿರುತ್ತದೆ (ಭೌತವಿ. ೩೦೬); ಅವಳ ಕಣ್ಣಿನಿಂದ ಒಂದೆರಡು ಬೊಟ್ಟು ನೀರು ತೊಟ್ಟಿತು (ದೇವೀಕಾ. ೧೬೩).

[ದೇ.॥ ತಮಿ. ಚೊಟ್ಟು; ತೆಲು. ತೊಟ್ಟು]

**ತೊಟ್ಟು$_3$** (ನಾ). ೧. ಹನಿ; ಬಿಂದು: "ವೃಷಂತಿ, ಬಿಂದುಃ, ಪೃಷತಃ, ವಿಪ್ರುಷಃ, ೪ ಜಲಬಿಂದುಗಳ ಹೆಸರುಗಳು ಅಂದರೆ ನೀರಿನ ತುಂತುರುಗಳು; ಉದಕ ತೊಟ್ಟುಗಳು" (ಸಿದ್ಧಾಂತಿ. ೬೯): ತೊಟ್ಟು ಕೂಡ ಬಿಡದಂತೆ ಸವರಿ ಹಿಗ್ಗನ್ನು ಹುಡುಕಿ ಕುಡಿವೆ (ಅರಳು. ೨೦೯-೦೩). 'ತೊಟ್ಟಿಡು' ಪರಾ. ೨. ಕೊಂಚ; ಸ್ವಲ್ಪ: ನೀವು ಇನ್ನೂ ಚಿಕ್ಕವರು . . . ಇಲ್ಲವಾದರೆ ಒಂದುತೊಟ್ಟು ಬೈದು ಮುಂದೆ ಸಾಗುತ್ತಿದ್ದೆ (ಕಾಬಲ. ೬೯).

[< ತೊಟ್ಟು$_2$./ತಮಿ. ಚೊಟ್ಟು]

**ತೊಟ್ಟು$_4$** (ನಾ). ೧. ಹಣ್ಣು, ಹೂವು, ಎಲೆ ಮೊದಲಾದುವುಗಳ ತುಂಬು,–ಕಾವು; ದೇಟು: "ವೃಂತಂ, ಪ್ರಸವಬಂಧನಂ ಈ ೨ ಪುಷ್ಪ ಪತ್ರಂಗಳ ತೊಟ್ಟು" (ನಾಚಿರಾ. ೦೦೬); "ತೊಟ್ಟು ತುಂಬೆನೆ ವೃಂತನಾಮವೆಂದೇ ತಿಳಿವುದು" (ಕಬ್ಬಿಮಂ. ೨೩); ತೊಟ್ಟ ಬಿಟ್ಟ ಹಣ್ಣು ಮತ್ತೆ ಹತ್ತುವುದೇ (ಸರ್ವಜ. ೨೬-೦೨೦); ತೊಟ್ಟು ಪಿಂಡಿಗೆಯಾಗೆ ಫಲವು ಲಿಂಗಮದಾಗೆ (ಬಸವ. ೯-೩೭): ಫಲದಲ್ಲಿ ತೊಟ್ಟುಪೊಣಗದ ವೇಳೆಯಲ್ಲಿ ದಿಂಟ್ಟು ಹಣ್ಣನು [ಹಾಶಾಂ. ಫಲವನು ತೊಟ್ಟ ಸರಿಸಕೆ ಕಾಲದಲ್ಲಿ ತಂದಿರಿಸಿ] ನಿಮ್ಮನುಕೂಲಧರ್ಮಂಗಳನು ಬೇಗದಿ ಹೇಳಿ (ಕುಮಾವ್ಯಾ. ೩-೨೪): ಕೀಟಕವು ಕಡುಕಿ ಕಡಿಯದ ತೊಟ್ಟುಗಳು ಪತ್ರಿದ ಸುಪುಷ್ಪವ . . . ಶಿವಲಿಂಗಕರ್ಪಿಸಿದಂ (ಕಂಕೆದಾ. ೩-೩೦); ತೊಟ್ಟ ಕಳಚಿದ ತೆರದಿ ಜೀವವ ಬಿಟ್ಟನ್ನೆ (ದೇವೀಪು. ೪-೨೦). ೨. ಮೊಲೆಯ ತಂದಿ; ಚೂಚುಕ: "ತೊಟ್ಟು ಚೂಚಕಮೆನಿಕ್ಕುಂ" (ಪುಂಗರಾ. ೯೩-೬): ಬಟ್ಟದುವಪ್ಪ ಮೊಲೆಗಳ ತೊಟ್ಟು ಕರಂಗುವುದುಮೊಡನೆ ಸರ್ವಸ್ವಮುಮಂ ಕೊಟ್ಟು ಕರಂಗಿದರಹಿತರ್ ಕೆಟ್ಟುವು ಮೇಳೆಯೊಡನೆ ವೈರಿವಂಶಾವಳಿಗಳ್ (ಪಂಚಾಮೂ. ೩-೯೬); ಬಟ್ಟಮೊಲೆಗಳ ತೊಟ್ಟೊಳು ಕಪ್ಪು ರಂಜಿಸಿತು (ಅಂಜನ. ೯-೬): ತೊಟ್ಟು ಹಿಡಿದು ಎನ್ನ ತೊಟ್ಟ ಕುಪ್ಪಸಗಂಟು ಬಿಟ್ಟು ಬೇಗ ಮುದ್ದಿಟ್ಟು . . . ನೆಟ್ಟನೆ ನಡೆದ ಶ್ರೀಕೃಷ್ಣನೆಂಬವನು (ಪುರಂದ. ೧-೭೩-೧).

**ತೊಟ್ಟಡೆ** = ದೇಟಿನ ಭಾಗ: ನೆಟ್ಟನೆ ಬಳೆದು ನೆಗಟ್ಟು ಕೊಟ್ಟಡೆಯೋರೆವಟ್ಟಲದಾವರೆಯಂತೆ ಬಟ್ಟಮೊಗವನೋರೆಗೋಳಿಸಿಯವನ ಮೊಗವಿಟ್ಟ ದಿಟ್ಟಿಯೊಳು ನಟ್ಟವುದು (ಚಳವಿ. ೬-೦೩೭ ಸಾಂಗತ್ಯ).

[ದೇ.॥ ಮಲ. ತೊತ್ತು; ತುಳು. ತೊಟ್ಟು]

**ತೊಟ್ಟು$_5$** (ನಾ). (ಕರಾ) ತೆಕ್ಕೆ; ಕಂತೆ: ಈ ಹುಲ್ಲು ಎರಡು ತೊಟ್ಟು ಆಗುತ್ತದೆ (ರೂಢಿ).

[ದೇ.॥ ತುಳು. ತೊಟ್ಟು = ತೆಕ್ಕೆಯಲ್ಲಿ ಹಿಡಿ, ತಬ್ಬು]

**ತೊಟ್ಟು$_6$** (ಅ). ಮೊದಲಾಗಿ; ಹಿಡಿದು; ಆರಂಭವಾಗಿ: ಪುಟ್ಟಿದಂದಿಂ ತೊಟ್ಟಂತಪ್ಪುಣಸಂ ಕನಸಿನೊಳಪ್ಪೊಡಂ ಕಂಡಱಿಯದುದಮಗಂ ಚೋದ್ಯಂ ಬಟ್ಟು . . . ಅಕಂತಪ್ರಮಾಣಂ ಬರೆಗಂ ತಣಿಯುಂಡು (ವಡ್ಡಾರಾ. ೭೮-೨೦); ಕೊರಲೊಳ್ ಕಟ್ಟಿದ ದೇವಿಯುಂತಿರುರದೊಳ್ ಶ್ರೀ ತೊಟ್ಟಲೊಳ್ ತೊಟ್ಟನಂತರಮೆನ್ನೊಳ್ ನೆಲಸಿತ್ತು (ಪಂಪಭಾ. ೧೦-೯): ಬಾಲಕಾಲದಿಂ ತೊಟ್ಟು . . . ಖಲಜನಸಂಗತನುಮಾಗಿಯುಂ ನಡೆಯುತ್ತುಮಿರೆ (ಪಂಚತಂ. ೨೬-೨೦); ಆ ಬಾಲಕರ್ ಬಾಲ್ಯದಿಂ ತೊಟ್ಟು ಗೋಳಾಂಗೂಳರಂತೆ ಸಹಜಚಾಪಲ್ಯರುಂ . . . ಎನಿಸಿ (ಸುಕುಮಾ. ೨-೩ ವ); ಅಂಗುಷ್ಠ ತೊಟ್ಟು ವಾಣಾಗ್ರ ಪರಿಯಂತರದಲ್ಲಿ ಸ್ನಾನವ ಮುಟ್ಟ ನೋಡಿ (ಸರ್ವಪ. ೨೨-೦೦೦); ಕೆಱೆಯಂ ಕಟ್ಟಿಸು ಭಾವಿಯಂ ಸವಸು . . . ಶಿಷ್ಟರಂ ಪೊರೆಯನುತ್ತಿಂತಿಲ್ಲವಂ ಪಿಂದೆ ತಾಂ ಯಬದಳ್ವಾಲೆಬವಂದು ತೊಟ್ಟು ಕಿವಿಯೊಳ್ (ಶಾಇಇ. IV, ೨೬೬-೪೩; ಸು. 1411): ನೀವು ಆ ಊರಿಗೆ ಹೋದಾಗಿನ ತೊಟ್ಟು ಎಷ್ಟು ಸುಧಾರಿಸೀರಿ (ಸುಳವು. ೪೨).

[<ತೊಡು$_1$./ತಮಿ. ತೊಟ್ಟು]

**ತೊಟ್ಟುಕಳಚು** (ಕ್ರಿ). = ತೊಟ್ಟುಬಿಡು: ಮರದಲ್ಲಿದ್ದ ಹಣ್ಣು ತೊಟ್ಟು ಕಳಚಿ ಉದುರಿದೆ (ರೂಢಿ). [ತೊಟ್ಟು$_4$ + ಕಳಚು (<ಕಟಲ್ಚು$_1$)]

**ತೊಟ್ಟುಕಟಲ್** (ಕ್ರಿ). = ತೊಟ್ಟುಬಿಡು: ನಿಂದು ಕೀಲಿಸಿದೊಡುರ್ವರೆಯೊರ್ಗುಡಿಸಿತ್ತು ಸಾಗರಂ ವೇಳೆಯನುರ್ಕಿ ಸೂಸಿದುದು ತೊಟ್ಟುಕಟಲ್ದುವು ತಾರಕಾಳಿಗಳ್ (ಅನಂಪು. ೧೦-೩೮). [ತೊಟ್ಟು$_4$ + ಕಟಲ್$_1$]

**ತೊಟ್ಟುಬಿಡು** (ಕ್ರಿ). ತೊಟ್ಟಿನಿಂದ ಕಳಚಿಕೊಳ್ಳು,–ಬೇರೆಯಾಗು: ತೊಟ್ಟು ಬಿಡದನ್ನಕ್ಕರ ಮುತ್ತಾ ಬುಡದಾಸೆ ಬೇಕು (ಚೂಸ್ಸಸಂ. ೨೨೪-೮): ತೊಟ್ಟು ಬಿಟ್ಟ ಹಣ್ಣಿನಂತೆ ದ್ರುವ ತಟ್ಟಾಱದ ಫಲದಂತೆ (ಮೋಳಿದೂ. ೧೨-೪೨). [ತೊಟ್ಟು$_4$ + ಬಿಡು$_1$]

**ತೊಟ್ಟುವಾಯ್** 'ತೊಡು$_1$' ಪರಾ.

**ತೊಟ್ಟುಳಿಕೆ** 'ತೊಟ್ಟುಟೀಕೆ' ನೋ.

**ತೊಟ್ಟುಟೀಕೆ, ತೊಟ್ಟುಳಿಕೆ** (ನಾ). ರುಂಡ ಮುಂಡಗಳು ಒಟ್ಟು ಸೇರಿರುವ ಭಾಗ; ಕಂಠ; ಕೊರಳು: ತುಡುಂಕಲವ್ವಳಿಸುವ ಚಂಚು

ಘಾತಿಯಿಟ್ದಾರ್ದೊಡೆ ವಾರಿ ವಿಡುಂಕುತಿರ್ಪ ತೊಟ್ಟುಟಿಕೆ (ದಶಕು. ೧೧-೫೦). **ತೊಟ್ಟುಳಿಕೆ:** ಇಟ್ಟಣಸುವೀ ರಣವಾಡಾಂಧನ ತೊಟ್ಟುಳಿಕೆ ಯನು ಕೀಳ್ವ ರಾಯಘರಟ್ಟಸಿಲ್ಲಾ (ಕುಮ್ಮಾ.ಳ. ೨೦-೨) ; ರಾಮನನೊಟ್ಟ ವಿಸಿ ಮುಂಬರಿದು ಮುನಿಪನ ತೊಟ್ಟು [ಪ್ರಾಕಾ೦. ತುಟ್ಟ, ತೊಟ್ಟ]ಳಿಕೆ ಯಲಿ ಚಾಚಿದಳು ಚಾಪಳಚಪೇಟಕವ (ತೊರೆರಾ. ೮-೧೧-೦೨) ; ಅರುಭಟ ಗಂಬುಗಳಳಿದವು ಮೇರೆಯನು ಸುರನಿಕರದಸುಗಳು ಸೇರಿದವು ತೊಟ್ಟುಳಿಕೆ ಗಿಟ್ಟಣಸಿತ್ತು ಸಂಗ್ರಾಮ (ನಿಘಾಗ. ೬-೬-೪೪). [ <ತೊಟ್ಟು₄ + ? ]

**ತೊಟ್ಟೂರಮ್ಮಳಿ** (ನಾ). ಒಂದು ಊರಿನ ಹೆಸರು : ಶ್ರೀ ಶಿವಮಾರ ಭಟಾರರ್ ಜಗವೆಲ್ಲವನ್ ಆಳುತ್ತಿರೆ ತೊಟ್ಟೂರಮ್ಮಳಿಯುಳ್ ಇಱಿದು ಪಿಡಿವಲ್ಲಿ (ಮ್ಯಅರಿ. ೦೯೨೪, ೪೬-೧ : ?). [ ? ]

**ತೊಟ್ಟೆ** (ನಾ). ೧. (ಕರಾ) ತೆಂಗಿನ ಗರಿಗಳಿಂದ ಮಾಡಿದ ಕುಕ್ಕೆ,- ಬುಟ್ಟಿ : ತೊಟ್ಟೆ ಕಟ್ಟಕೊಂಡು ಮೊಟ್ಟೆ ಹೊತ್ತ (ಗಾದೆ). ೨. ಪೊಟ್ಟಣ : ಸಾವುಕಾರ ಕಾಗದದ ತೊಟ್ಟೆ ಮಾಡಿ ಒಂದೊಂದಾಗಿ ಎಣಿಸಿ ರೆಕ್ಕ ಗುಣಿಸಿದ (ಕಾಳಿಗ. ೫೦). 'ಚೊಟ್ಟೆ' ಪರಾ. [ ←ತುಳು. ತೊಟ್ಟೆ ]

**ತೊಟ್ಯಾನದಿ** (ನಾ). ಒಂದು ನದಿಯ ಹೆಸರು : ತೊಟ್ಯಾನದೀ ಪಶ್ಚಿಮ ತೋ ಪೇರೂರಾತ್ಪೂರ್ವಸ್ಥಿತಮ್ (ಮ್ಯಅರಿ. ೦೯೫೦, ೮೮-೦೨ : ಶು. 476). [ ತೊಟ್ಯಾ₀ + ನದಿ ]

**ತೊಡ** (ನಾ). ೧. ಆಭರಣ; ಒಡವೆ : "ಪಸದನಂ, ಪಚ್ಚಂ, ತೊಡಂ – ಈ ೩ ಆಭರಣಂ" (ಕಶಸಾ. ೬೩-೪೦೯) ; "ಪಚ್ಚ೦ ತೊಡಂ ಪಸದನಮೆನಲ್ ತೊಡಿಗೆಯೆಂದಿಳಿಗೆ ನಾಮಮಕ್ಕುಂ" (ಕಲ್ಪಿ.ಕೃ. ೨೫) ; ವಿನುತ ಮುತ್ತಿನ ತೊಡಗಳಂ ತೊಟ್ಟು (ಚಬಪು. ೧೦-೬೫) : ಮೋಕ್ಷವೇ ಮಣಿಯಾದ ವರ ರುದ್ರಾಕ್ಷದೊಡಗಳ ತೊಡಿಸಿ (ಶಂಕರಾ. ೪-೮).೨.ಉಡಂಪು ; ವಸ್ತ್ರ : (?). [ ತೊಡು₁ + – ಅ₆ ]

**ತೊಡಾಂಕಿಕ್ಕು** (ಕ್ರಿ). ಕಷ್ಟಕ್ಕೆ ಗುರಿಮಾಡು; ತೊಂದರೆಗೀಡುಮಾಡು : ನೀಮಾರ್ಗಳೆ ನಿಮ್ಮನಾವಱಿಯೆವೆಂದೆಮ್ಮಂ ತೊಡಂಕಿಕ್ಕುವಂದಿನ . . . ಸೊರ್ಕಕ್ಕಟ ಮುಕ್ಕುವೋಗಿ (ಸುಕುಮಾ. ೪-೨೬). [ ತೊಡಂಕು₁ + ಇಕ್ಕು ]

**ತೊಡಂಕು₁**, ತಂಡಂಕಂ₁,ತುಡಂಕು₁, ತೊಡಕಂ₁, ತೊಡಗು₁ (ಕ್ರಿ). ೧. ಸಿಲುಕಿಕೊಳ್ಳು; ಸಿಕ್ಕಿಕೊಳ್ಳು : ಅದಟರ ಚೆನ್ನಪೊಂಗರ ಸಬಂಗಳ ತೊಟ್ಟುಟ್ಯೊಳ್ ತೊಡಂಕಿ ನಿಲ್ಲದ ಪೊ[ಱಮಟ್ಟ] ತಮ್ಮ ಮನದೊಳ್ ಮಿಗೆ ಬೆಚ್ಚಿಸಿದಂತೆ ತೋಱುವ . . . ಕರ್ಬಸುಗಳ್ ಪಱಿಗೊಂಡುವಾಜಿ ಯೊಳ್ (ಪಂಪಭಾ. ೮-೧೦೪) ; ತೊಟ್ಟನೆ ಸಾವುದೊಳ್ಪಿತು ತೊಡಂಕದೆ ಕಾಮನ ದಾಮರಂಗಳೊಳ್ (ಚಂದ್ರಪ್ರ. ೮-೬೬) ; ನೇಣ್ಪಲೆಯ ತೊಡರೊಳ್ ತೊಡಂಕಿ ನಡುಗುವ ಕುರಂಗಿಯೊಳ್ಪೊರೆಯಪ್ಪಳ್ (ವರ್ಧಪು. ೪-೫೮ ವ) ; ದಿಟ್ಟಿ ತೊಡಂಕೆ ರೂಪಿನ ಬೆಡಂಗಿನೊಳ್ (ಲಂಚರಿ. ೮-೫೩) : ಅರುಮಸತ್ತ ದೊಳ್ . . . ಪರಸ್ತ್ರೀರತಿಯೊಳ್ ತೊಡಂಕದಿರಲೆಂಬುದು ನಿನ್ನ ಮತಂ (ಪುಷ್ಪಪು. ೬-೧೨) ; ಮೃದುಮೃಣಾಳನಾಳ ತಂತುಜಾಲಕದೋಳೊಯ್ಯ ನೊಯ್ಯನೆರಯ್ಯಮನೆ ನಡೆವಡೆಯೊಳಡಿ ತೊಡಂಕಿ ತಡೆಗೆಡೆವ ತರುಣ ಮರಾಳಂಗಳಂ ಕಂಡು (ರಾಜಶೇ. ೬-೨೪ ವ). ೨. ಸಿಕ್ಕಾಗು ; ಗೋಜಾಗು ; ಗಂಟುಗಂಟಾಗು ; ಹೆಣೆದುಕೊಳ್ಳು ; ತಿರಂಚಿಕೊಳ್ಳು : ತೊಡಂಕಿ ಪೀಱಿದ ಕುರುಳ್ಗಳ ಚಿತ್ರದೊಳಾದ ಬೇಸಱಂ ನುಡಿವವೊಲಾಗೆ (ಪಂಪಭಾ. ೧೩-೯೯) ; ಪೊರೆದು ಸರೋಜರೇಣುಗಳನೊಂದಱಿೊಳೊಂದು ತೊಡಂಕಿ ವಾಃಕಣೋತ್ಕರದೊಡಗೂಡಿ ಕಣ್ಗೆ ಕವಿತರ್ಪ ಜಟಾಳಿ (ಕಾದಂಬ. ೩೦೬); ಬಿಡದೆ ತೊಡಂಕಿ ತೋರ್ಪ ಜಡೆ (ಉಮಾಶ. ೦೪). ೩. ಅನುಮಾನದಿಂದ ಹಿಂದುಮುಂದು ನೋಡು ; ತಡವರಿಸು : ಇವನಱಿವರೆ ಕನ್ನಡಗಬ್ಬ ದೊಳ್ ತೊಡಂಕದ ಸಲ್ಪರ್ (ಕಮುದ. ೪೦). ೪. ಹೋರಾಡು ; ಸೆಣಸು : ಜಯದ್ರಥನನಿಕ್ಕುಟಿದಾರೊಳವಿಂ ತೊಡಂಕವೇಡೆನುತುಂ (ಪಂಪಭಾ. ೧೦-೦೪೩) : ಎಮ್ಮದಿರ್ ಮಣಿಯೆನುತ್ತಿರದೆಯ್ದಿ ತೊಡಂಕಿ . . . ಕಾಳೆಗಮಂ ತೆಗೆದರ್ (ರಾಜಶೇ. ೫-೦೨೪). ೫. ಅಡ್ಡಿಮಾಡು ; ಅಡಚಣೆಯೊಡ್ಡು ; ನಿರೋಧಿಸು : "ತೊಡಕು (ತೊಡಂಕು) – ವಿಪರ್ಯಾಸೇ (ಅಡ್ಡಿಮಾಡು)" (ಶಮಧಾ). ೬. ತೊಡರು ; ತೊಡರಿ ಕೊಳ್ಳು : ಕರುಳ ಪಿಣಿಲು ಕಾಲಂ ತೊಡಂಕೆಯುಂ ಮುಂದೆಗರು ಳ್ಗಳಿಂದೆ ದಾಡೆ × × ಯುಂ . . . ಕೊಂಗೆಯ ಸಾಹಣಿ ಸುರಲೋಕ ಪ್ರಾಪ್ತನಾದ (ಎಳ. VIII, ಸೊರಬ. ೦೫೯-೦೪ : 1173). ೭. ಕೂಡು ; ಸೇರು : ತೊಡೆ ತೊಡಂಕಿದ ನುಣ್ಪೊಡೆಯಂ ಮನಂ ನಿರಂತರ ಸುರತ ಪ್ರಪಂಚಸುಖದಿಂ ಪೆಱಪಿಂಗದೆ (ಚಂದ್ರಪ್ರ. ೪-೬೦). **ತುಡುಂಕು₁** : ೮. ಮುಂಟ್ಟು ; ತಾಗು ; ಸೋಕು : ಇಂತು ಭೂಮಿ ಆಕಾಶಮಂಡಲಮಂ ತುಡುಂಕುತುಂ (ಶಬ್ದಸ. ೫೯-೨೦) ; ಇರ್ದುದೊಂದು ಕುಧರಂ ಗಗನ ಸ್ಥಳಮಂ ತುಡುಂಕುತುಂ (ದಶಕು. ೧೧-೬೨) ; ನಿರುಪಮಮಪ್ಪ ರತ್ನ ಶಿಖರಂಗಳಿನಗಸಮಂ ತುಡುಂಕುತಿರ್ದ . . . ಪೊನ್ನಕೋಂಟೆಯಂ ತರಣಿಹಯಂಗಳೀಕ್ಷಿಸಿ (ಜಾಧಪು. ೧-೧೧೯). ೯. ಬೇಗನೆ ಹಿಡಿ ; ಚುರು ಕಾಗಿ ಹಿಡಿ ; ಥಟ್ಟನೆ ಹಿಡಿ : "ತುಡುಕು, ತುಡುಂಕು – ಸತ್ವರ ಗ್ರಹಣೇ (ಥಟ್ಟನೆ ಹಿಡಿ)" (ಶಮಧಾ) ; ತಾಳವಟ್ಟಮಂ ಸೆಳೆದು ತುಡುಂಕಿ (ಚಂದ್ರಪ್ರ. ೫-೬೫) ; ಪರಿವ ಪಾವುಗಳಂ ತುಡುಂಕಿ (ಸುಕುಮಾ. ೦೪-೨೯ ವ) ; ನವಿರ ದ್ಯುತಿಯಂ ಮಲ್ಲಿಕುಟ್ಮಲಮೆಂದಾ ನಲ್ಲಳ್ಪಯಲಂ ತುಡುಂಕಿ ಕೌತುಕ ಮಾಂತಳ್ (ಉದ್ಭಟ. ೯-೬೨) ; ಆ ನೃಪಂ . . . ದಿವ್ಯಗದಾಯುಧಮಂ ತುಡುಂಕಿದಂ (ದಶಕು. ೨-೨೫) ; ಅಳಿಕುಳಮಂ ಹರಿನೀಲಮೆಂದು ತಿಱಿಯಲ್ ಸುರತರುಣಿ ತುಡುಂಕಿ ಸಖಿಯನೇಂ ನಗಿಸಿದಳೋ (ರಾಜಶೇ. ೩-೩೮) ; ಕಂಡರಿಸಿದ ಶುಕಕೋಲ್ಮೆಸಿ ತುಡುಂಕೆ ನೋಡಿ ಯಾರುಂ ನಗುವರ್ (ಮೃಸೂಮ. ೫-೨೦). ೧೦. (ಕಾಮಾತುರದಿಂದ) ಆಕ್ರಮಣ ಮಾಡು : ಮದುವೆಯಾದ ಮೂಱುದಿವಸವೊದವಿ ಮುಟ್ಟಲಾಗದ ವಳನದಱ ಮೇಲೆ ಬಲ್ಮೆಯಿಂ ತುಡುಂಕಲಾಗದು (ಜನವ. ೧೦-೫೦) ; ನೇಹಂದಲೆದು ಮೇಲ್ವರಿದು ಬರೆ ತುಡುಂಕುವ ಬರ್ದಿನಿನಿಯನ ವಿಲಾಸ ದಂತೆ (ಧಾಪಚಂ. ೬-೧೭). ೧೧. ಹರಡು ; ವಿಸ್ತರಿಸು : ಸೋಗೆಯಂ ನೆಗಪಿ ತುಡುಂಕಿ ಮೆಟ್ಟುವ ಸವಿಲ್ . . . ನಗುವ ಶುಕಾಳಿ (ಸೂಕ್ತಿಸು. ೧೦-೬೪). **ತುಡುಕು₁** : ೪. ಘನಸಂಗರದೊಳಗೆ ನನ್ನೊಡನೆ ತುಡುಕಿದಡ ಱಿಯಬಹುದು (ಕುಮ್ಮಾದ್ರೌ. ೪-೪೩) ; ತುಡುಕಲಮ್ಮುವರಿಲ್ಲ ಬಲದಲಿ ವಿಡುಕಲಮ್ಮುವರಿಲ್ಲ (ಕುಮ್ಮಾದ್ರೌ. ೬-೪೮) ; ಎರಡೂ ಮಹಾಸೈನ್ಯಗಳು ಒಂದನ್ನೊಂದು ತುಡುಕಿ, ಕಡಂಗಿ ಕಾದಿದವು (ಕಶಕ್ಷ. ೫೮). ೮. ಪೊನ್ನ ಕೋಂಟೆ ಮುಗಿಲಂ ತುಡುಕುತ್ತಿರೆ (ಪಂರಾಮಾ. ೩-೬೫) ; ವಿಷದ ಕೊಡನ ತುಡುಕಲೆ ಬಾರದು (ಚನ್ನಪ. ೪. ೩೩-೬೨) ; ತೆರೆಗೈಯಿಂ ತುಡುಕುತ್ತು ಮೊಳ್ಪೊಡೆಯನಾದಂ . . . ಕಾಮುಕನವೊಲ್ ನೀರೇಱುತಿರ್ದತ್ತು . . . ಪದ್ಮಾಕರಂ (ಚಂದ್ರಪ್ರ. ೬-೧೨೬) ; ತುಡುಕಿದ ಜಲಂ ಸಿದ್ಧಾಂಬು ನುಡಿದ ನುಡಿಗಳು ಮೂಲಮಂತ್ರವು (ಸಿದ್ಧರಾ. ೨-೨೦) ; ಪ್ರಸಾದವ ಬೆಕ್ಕು ತುಡುಕುತಿಪ್ಪ ದಾಯುಮಂ ಪೇಳ್ದಂದು (ವೀಶ್ಯಪು. ೮-೦-೫೨) ; ಕಡಗ ಕಂಕಣ ಬಳೆಗೈ ಝಣರೆನೆ ನಾರಿ ಬಿಡದಾಗ ಕಲೆಯ ತಾಣಗಳ ತುಡುಕಿ ತಾಡನಗೈದು (ಕೂಸವಿ. ೧೧-೪೩). ೯. ಕರಿಪೋತಂ . . . ಕೇಸರಿಣಿಯ ಕೆಚ್ಚಲಂ ತುಡುಕುತುಂ ಪರಿದತ್ತು (ಪಂಪಭಾ. ೬-೫೦) ; ಘಟಸರ್ಪನ ತುಡುಕಿ (ಬಸವ. ೬೨೫) ; ಮಿಱುಗುವ ಬೆಳತಿಗೆಗಣ್ಣೊಣರೋಱ ತೆಯ ಜಲದೊಳಗೆ ಪೊಳೆಯೆ . . . ಎಳವಿಾನ್ಗಳ್ಗೆತ್ತೀಂ ಕಿಱುವೇದಿಶಿ ತುಡುಕಿ ಶಬರನಂ ನಗಿಸಿದಳೊ (ಲೀಲಾವ. ೬-೪೩) ; ಒಡನೆ ಧಾಳಿಯನಿಕ್ಕಿ ಶುಕ್ರನ ತುಡುಕಿ ತೇಜವ ಕೊಂಡು (ತೊರೆರಾ. ೦-೮-೩೪) ; ಸೆಜಗುವಿಡಿಯೆ ಸಾರ್ಸಾರೆಂಬ ಕರವನು ಭರದೆ ತುಡುಕಲೊಡೆಮುರಿವ . . . ತರಳೆಮಾಣ್ಣು

ಗಳೊಪ್ಪಿದರು (ಕಂನವಿ. ೬-೧೭೩) ; ಮುತ್ತುಗಳ್ . . . ಪಾರೆ ಪನಿಗೆತ್ತು ನವಿಲ್ ತುಡುಕೆ (ರಾಜಶೇ. ೩-೪೦) : ಕೊಡನ ಮಱಿಯ ಪಡೆಯಂ ತುಡುಕುವೆಗ್ಗನಂತೆ (ರಾಮಾಶ್ವ. ೬೪-೨೬) ; ಯುವಕನೆ ತುಡುಕು ಕಠಾರಿಯನು ! (ಪಾಂಡವ. ೦೪-೧೪). ೧೦. ಮಹದೇವಿಯನು ಕಂಡರಸನೇಕಾಂತದಲಿ ತುಡುಕಿದೊಡೆ (ಶ್ರೀಭುಲೀ. ೦೦-೨೧) ; ಕಾಮಾತುರದಿ . . . ಬಂದವ ಭರದಿ ತುಡುಕಲು ಪುಷ್ಪವತಿ ತಾನೆಂದಳೆದೆ ಬೆದರಿ (ಅಂಬಿಕಾ. ೮-೬೨) : ದ್ರೌಪದಿಯನ್ನು ಕೀಚಕನು ಬಲಾತ್ಕಾರದಿಂದ ತುಡುಕಿದನು (ನೀಗಟ್ಟು. ೧೩೬).೧೨. ಎರಗು ; ಮುತ್ತು : ಪುಷ್ಪದೊಳು ಗ ಂ ಧ ವಿ ರ ಲಾ ಅ ಡಿ ತುಡುಕುವುದೆಂದು ನೆಲದೆ ನಿಡುಬೇರಿನೊಳ್ ಪರಿಮಳವೆತ್ತು ರಂಜಪ ಮುಡಿವಾಳ (ಶರೀಹತ. ೩-೦೬); ಕಮ್ಮಲರ್ಗಂಧಗಂಧಿಯರು ತಮ್ಮ ನಾಳುವ ಕೃಷ್ಣರಾಯನ ತುಡುಕಿದ ವೆರ್ಮೆಯನೇನ ಬಣ್ಣಿಪೆನು (ಮೋಹತ. ೦೪-೬೮). ೧೩. ಮುನ್ನುಗ್ಗು ; ಆಕ್ರಮಿಸು : ತುಡುಕಿದವು ತೇಜಿಗಳು ವಾಘೆಯ ಗಡಣದಲಿ (ಕುವ್ಯಾದ್ರೋ. ೬-೩೯). ತುಡುಕುವಾನೆಯನೀಸಿನಲಿ ಖುರವಿಡುವ ಕುದುರೆಯನೊತ್ತಿಹಾಯ್ಸುವ (ಕುವ್ಯಾಕ. ೦೩-೨೩) . ೧೪. ಆವರಿಸು ; ತಂಬು ; ವ್ಯಾಪಿಸು : ತುಡುಕಿದವು ತಂಬಟದ ದನಿ ಜಗದಡಕಿಲನು (ಕುವ್ಯಾದ್ರೋ. ೧-೪೬) ; ಪಿಡಿವ ಕಾಳೆಗಳ ಬಾಜಿಪ ಢಕ್ಕೆಗಳ ದನಿ ತುಡುಕಿತಜಾಂಡಮಂಡಲವ (ವರ್ಧಪ. ೬-೮೪). ೧೫. ತೆಗೆದುಕೊಳ್ಳು ; ಹಿಡಿ ; ಎತ್ತಿಕೊಳ್ಳು : ಪರವಧುವ ನೆರೆಯದೆ ಪರಧನವ ತುಡುಕದೆ (ದೇವಾವ. ೩೩ ೬೦) ; ನಾರಿಯಂ ತುಡುಕಿ ಕರ್ಣದ ಕಡೆಗೆ ಸೆಳೆಯೆ (ಹರಿಶಾ. ೬-೩೬): ತುಡುಕುವಂಕುಶದಿಂದ ಮುನ್ನಿಳಿಯೊಡೆಯ ಗಜ ಗಾಢಿಸಿದವು (ಕುವ್ಯಾಭೀ. ೨-೨); ತು ಡು ಕಿ ದ ರೆ ಕೈ ಬೇವುದು (ಕುವ್ಯಾದ್ರೋ. ೪-೬೦) ; ತುಡುಕಿ ತೂಳುವ ಸೂತ್ರಯಂತ್ರದ ಗಡಣದಲಿ ಗತಿಗೊಂಡು ಬೇಡಿತ ಕೊಡುವ ಮಣಿಪುತ್ರಿಕೆಗಳೆಸೆದವು ವಿವಿಧ ರಚನೆಯಲಿ (ತೊರರಾ. ೦-೦೩-೦೦) ; ರಾಹು ತುಡುಕಿದ ಚಂದ್ರಮಂಡಲವೋ (ಜೈಮಿಭಾ. ೪-೧೩). ೧೬. ಧರಿಸು ; ಹೊಂದು ; ತಳೆ : ಬಿಸಿಲಂ ಕಳೆದು ಬೆಳುದಿಂಗಳಂ ತುಡುಕುವ ಗಗನಲಕ್ಷ್ಮಿಯಂತೆ ಕೆಂಪಿನ ಪ ಸ ದ ನ ಮ ಂ ಕಳೆದು . . . ಬೆ ಳ್ಪ ಸ ದ ನ ಂ ಗೈ ದು (ಅರ್ಧನೇ. ೨-೧೩ ವ)

**ತೊಡಕು₁** : ೧. ಕಡುಭವದ ಬಾಧೆಗೆ ತೊಡಕಿ ಮೊಱೆಯಿಡುವ ಭವಿಗಳ ನಾಲಿಸುವವೊಲು (ಬಸಪು. ೩-೩೮); ಮಿಡುಕುವುದು ಬಾಯ್ ಚಿತ್ರವವಳಲಿ ತೊಡಕಿಹುದು (ಕುವ್ಯಾಆ. ೦೯-೩೬) ; ಮಡದಿ ಮದನನ ಬಲೆಯ ಬಾಯಲಿ ತೊಡಕಿ ಬಿರ್ದುವನಱಿದರಾಗಳೆ (ಶ್ರೀಭುಲೀ. ೫-೨೩) ;ಒಡನೆನ್ನ ನಿಟ್ಟಿಸಿದರಾ ಮೋಹವಲೆಯೊಳು ತೊಡಕದರಿಲ್ಲ ನಿನ್ನಾಣೆ (ಕಂನವಿ. ೦೦-೩೪) : ಕಾಮುಕರೆ . . . ಕಡೆಗಂಗಳ ಸರಳಿಯೊಳು ತೊಡಕಿ ಹಮ್ಮಯಿಸುವರು (ಕೊಂಡ್ಲಿಡ. ೨೯). ೨. ತೊಡಕಿದ ಗಳದ ಹಾರದ ಕೆಂಪುಗದಡಿದಧರದ . . . ಕೋಮಲೆಯರು (ಜೈಮಿಭಾ. ೦೦-೫೦). ೩. ಬೆದಱುಗಂಗಳ ಬಿಟ್ಟ ಮಂಡೆಯ ಹುದಿದ ಹಾಹಾರವದ ತೊಡಕಿದ ಪದಯುಗದ . . . ವರಸುದತಿ ಬಂದಳು ರಾಜಸಭೆಗೆ (ಕುವ್ಯಾಸ. ೦೪-೬೧). ೪. ಮುನ್ನ ತೊಡಕಿ ತನಗಾದ ಭಂಗಂಗಳಂ ಹೇಳನೇ ನಿನಗೆ ಕಮಲಜಕಂದನು (ಹರಿಶಾ. ೮-೧೫) ; ತೊಡಕಲಱಿಯದವಂ ತೊಡಕಿದವನಂ ತೊಡಕುವವನು (ಬಸಪು. ೫೦-೪೮) : ಅಧಿಕರೊಳಿರದೆ ತೊಡಕುವುದಾಗದೆಂಬುದನಱಿಯಯಾ ನೀನು (ಕುವ್ಯಾಉ. ೭ರಿಇ. ೯-೫೩) ; ಕಡಗಿದಡೆ ಕೋದಂಡರುದ್ರನ ತೊಡಕಿ ಬದುಕುವವರಾರು (ಕುವ್ಯಾದ್ರೋ. ೦-೫೬) ; ತೊಡಕಿದವರ ಗಂಡನೆಂದೆಂಬೆಡದ ಕಾಲ ತೊಡರೆಸೆದುದು ರಾಮನಿಗೆ (ಕುರಾಸಾಂ. ೦೯-೩೦) : ವಿಚಾರಿಸೆ ನೀನೆನ್ನೊಳೋರಂತೆ ತೊ ಡ ಕಿ ದೆ ಮಹಾರಣಾಂಕಣದೊಳು (ಜಬಪು. ೫೦-೩೪); ಫಣಿಲೋಕಮಂ ಸುಡುವೆನು ಕಂಜಜ ಕಪರ್ದಿಗಳೊತ್ತೊಡಕಿದೊಡೊರಲ್ಚುವೆಂ (ಜೈಮಿಭಾ. ೨೪-೩).

೫. "ತೊಡಕು (ತೊಡಂಕು)–ವಿಪರ್ಯಾಸೇ (ಅಡ್ಡಿಮಾಡು) " (ಶಮಧಾ). ೬. ಬುದ್ಧಿಗೆ ಸಂಶಯಾಳಾಪ ತೊಡಕಿಕೊಂಡುದು (ತೊರರಾ. ೩-೯-೪). ೮. ನುಡಿಸಿಯಱಿಯೆವು ಕಂಡು ಕೇಳ್ದುಂ ತೊಡಕಲಱಿಯೆವು ನಿನ್ನನೆಂದುಂ ಗಡಬಡಿಸಿ ನೀನೆನ್ನುವಂ ರ್ಝಂಕಿಸಲಿಹಗೆ ಬಹುದು (ಬಸಪು. ೪೦-೩೮). ೧೬. ಅಡಗಿರಂ ; ಮರೆಯಾಗಿರು : ತಳ್ತ ಕಲ್ಪಭೂವಿರುಹನಿಕುಂಜಮಂಜರಿಗಳೊಳ್ ತೊಡಕಿರ್ಪನೋ (ವರ್ಧಪು. ೧೦-೫೬). **ತೊಡಗು₁** : ೪. ಇತ್ತಲೆನ್ನಯ ಹಸಿವು ಹೆಚ್ಚಿದೆ ತುತ್ತು ಹೊಗದೊಳಗಿವನ ತೊಡಗಲದೆತ್ತಲಕಟಾ ವಿಧಿಯೆನುತ ಮುರಿದೆದ್ದನಮರಾರಿ (ಕುವ್ಯಾಅ. ೧೦ ೩೨).

**ತೊಡಂಕುಸೊನ್ನೆನೂಲ್** = ಹೆಣೆಗೆಗೊಂಡ ಬಂಗಾರದ ಉಡಿದಾರ: ಬಜ್ಜರಮಕಿ ತೊಡಂಕುಸೊನ್ನೆನೂಲ್ ತಳತಳನಿಪ್ಪ ಸಣ್ಣ ಪೊಸಪೊನ್ನುಡೆ (ಚಿಕವಿ. ೩-೯೦).

[ ದೇ.॥ ತಮಿ. ತೊಟಕ್ಕು, ತುಟಕ್ಕು ; ತೆಲು. ತೊಡಗು, ತೊಡುಗು ]

**ತೊಡಂಕು₂, ತೊಡಂಗು, ತೊಡಕು₂, ತೊಡಗು₂** (ಕ್ರಿ). ೧. ಪ್ರಾರಂಭಿಸು ; ಮೊದಲುಮಾಡು ; (ಕೆಲಸದಲ್ಲಿ)ಪ್ರವರ್ತಿಸು : ಸರ್ವಜ್ಞಭೂಪನೋಲಗದೊಳ್ನಿಂದಿರೆ ದಂಡಾಧೀಶಂ ಕುಳ್ಳಿರೆ ಮಂತ್ರಿ ತೊಡಂಕೆ ಕವಿ ಜನಾರ್ದನದೇವಂ (ಅನಂಪು. ೧-೫೬). **ತೊಡಂಗು**: ೧. ಮತ್ತಮೆಂಟು ದಿವಸಂ ಮಹಾಮಹಿಮೆಯಂ ಮಾಡಲ್ ತೊಡಂಗಿದೊಡೆ (ವಡ್ಡಾರಾ. ೧೦೭-೦೫) ; ಚಿರಕಾಲಂ ತೊ ಡ ಂ ಗಿ ಪರಿಗೃಹೀತಬ್ರಹ್ಮಚರ್ಯವ್ರತ ಪರಿಣತನಾದಂ (ಗದಾಯು. ೫-೪೪ ವ). **ತೊಡಕು₂** : ೧. ಅವನಿಜೆಯ ಕಾಬೆಣಿಕೆ ಕಡೆಗೆ ನಿಲಲಱಿಯದು ನಿರರ್ಥಕೆ ತೊಡಕಬಹುದೆ (ತೊರರಾ. ೪-೦೨-೩೧); ವೀರಚಿಕದೇವಂ . . . ಸೀಸಂ ಕರಂ ಕೊಂಕಸು ಮಗುಚ್ಚಿಂತೀ ಗತಿಭೇದದಿಂ ತೊಡಕಿ ತೋರ್ಕುಂ ಸಾಧಕಪ್ರೌಢಿಯಂ (ಚಿಕವಿ. ೪-೦೪೬) : ಮೇಲಱಿಯದಧಿಕರೊಳು ಕಾಳಗವ ತೊಡಕಿ[ಪಾಕಾಂ. ೧]ದರೆ ಬಾಳುವೆಯು ಕೆಟ್ಟು ಬಡವಕ್ಕು (ಸರ್ವಜ್ಞ. ೭೪೧). ೨. ಪ್ರಾಪ್ತವಾಗು ; ಒದಗು ; ಉಂಟಾಗು : ಒಡಲ ಜಡಿದವು ರೋಮರೋಮದೊಳಡಸಿದಂಬುಗಳಂಗ ವೇದನೆ ತೊಡಕಿತು (ಕುವ್ಯಾಭೀ. ೦೦-೨೪). **ತೊಡಗು₂** : ೧. "ತೊಡಗು – ಪ್ರಾರಂಭೇ" (ಶಮಧಾ) : ಸುರಿವುದು ತಡೆಯದಯೋಧ್ಯಾಪುರದೊಳ್ ನೀನಿಂದೆ ತೊಡಗಿ ವಸುಧಾರೆಯನಾದರದಿನೆನೆ (ಆದಿಪು. ೭-೩) ; ಕರಂ ಸಂಪ್ರೀತಿಯಿಂ ನೂತನಂ ತಾನಿಂತೆಂದು ನಿವೇದಿಸಲ್ತೊಡಗಿದಂ (ವರ್ಧಪು. ೩-೫೬) : ಸುರಪತಿಯ ಕೆಟ್ಟ ಸಂಪದಮಂ ತರಲ್ಕೆಂದು ಉರವಣಿಸಿ ತೊಡಗಿದರು ಕಡಲ ಕಡೆಯಲ್ಕೆಂದು (ನಂಚಿಶ. ೦-೪): ಹೊಸ ತವಸಿ ತೊಡಗಿದನು ಬಲುತಪವ (ಕುವ್ಯಾಅ. ೪-೪೩) ; ಯಜ್ಞಮಂ ತೊಡಗೆ ದಕ್ಷಂ (ಭಾವಚಿಂ. ೩-೦೩). ೨. ಇದು ದಲ್ ವಿಸ್ಮಯಮಾಗಿ ತೋಱದಪುದೇನಿಂತೀಗಳೆಂದಮಾದುದೋ ಮೇಣಲ್ಲದೊಡಾಳ್ದನಿಂ ತೊಡಗಿತೋ (ಸುಕುಮಾ. ೨-೩೧) ; ತೊಡಗಿತ್ತು ಕಿರಾತಭೀಕರಧ್ವನಿ ವನದೊಳ್ (ಗಿರಿಕ. ೧-೮೧) ; ನಾರಿ ತೊಡಗಿದ ಕೋಟಿದುಃಖದಿಂ ನುಡಿದ ನುಡಿ ಕೂರಂಬಿನಂದದಿಂ ಹೃದಯಮಂ ತಟ್ಟಿಗಿಯಲು (ಭಾವಚಿಂ. ೮-೩೩) ; ಮಕ್ಕಳಿರ ನಿಮಗೆ ರಘುವರನ ಸೇನೆಯೊಳಾಯ್ತು ಗಡ ಕಲಹಮೇಕೆ ತೊಡಗಿತು (ಜೈಮಿಭಾ. ೨೧-೪೪) : ಅರಸುಗಳಿಗಾದರೋ ಇಷ್ಟಾರ್ಥಸಿದ್ಧಿಯ ಸಂಗಡಲೇ ದುಃಖ ತೊಡಗಿರುವುದು (ಶಾಕುಂತ. ೬೨-೨೪).

**ತೊಡಗಿ** = ಮೊದಲುಮಾಡಿ ; ಆರಂಭಿಸಿ ; ಮೊದಲ್ಗೊಂಡು : ಅಲ್ಲಿಂ ತೊಡಗಿ ದಕ್ಷಿಣಾಪಥದೊಳದು ತೀರ್ಥಮಾಯ್ತು (ವಡ್ಡಾರಾ. ೧೧೭-೫) : ಉಡೆವಣಿ [ಪ]ಱಿಯದ ಮುನ್ನಮೆ ತೊಡಗಿ ಚಲಂ ನೆಗೞ್ದು (ಪಂಪಭಾ. ೦-೪೬) ; ಮಗನಂ ಕಿಱಿಯಂದಿಂ ತೊಡಗಿ ಶಿಕ್ಷಿಸದಿರ್ದುದಱಿ ನಿಂತಾಯ್ತು (ಧರ್ಮಾಮೃ. ೨-೮೩) ; ಹಲವು ಕಾಲಂ ತೊಡಗಿಯಾಲದ ನೆಲೆಯೊಳಿದ್ದನ್ನಿರವಳಿದು ನಿಃಫಲವೆನಿಸಿತಲ್ಲಾ (ಬಸಪು. ೫೭-೧೫) :

ಹಿಮಗಿರಿ ತೊಡಗಿ ಸಾಗರ ವೇಲೆ ಪರಿಯಂತವಿಳನಗರಗ್ರಾಮಪುರವರದ . . . ಸಮಸ್ತಭೂಜನಜಾಲ ಹಸ್ತಿನಪುರಿಗೆ ಬಂದುದು (ಕುವ್ಯಾ.ಗ. ೧೩-೧) ; ಕೃತಿಯ ಪಲ್ಲವಿ ತೊಡಗಿ ಪೂರ್ಣಮಪ್ಪನ್ನವಿಾ ಕೃತಿಯೊಳುತ್ಪ್ರೇಕ್ಷೆಯಿಲ್ಲದುದೊಂದು ಪದವಿಲ್ಲ (ಭಾವಚಂ. ೧-೧೬).

[ ದೇ.॥ ತಮಿ. ತೊಟಙ್ಕು, ತುಟಙ್ಕು ; ಮಲ. ತುಡಙ್ಙು ; ತುಳು. ತೊಡಗು ; ತೆಲು. ತೊಡಂಗು ]

**ತೊಡಂಕು₃**, ತುಡುಕು₂, ತೊಡಕು₃, ತೊಡಗು₃, (ನಾ). ೧. ಸಿಕ್ಕು ; ಗೋಜು ; ಗೊಂದಲ : ಮದಿರಾಮದದೊಳಮಳವಿಗಱಿಯ ಸೊರ್ಕಿ . . . ಕುಕಿಡುವ ಕುಕಿಲ್ವ ಬಿಕ್ಕುಳಿವ ತೇಗುವ ತನ್ನ ತೊಡಂಕದೆಯ್ದೆ ನೊರ್ಮಡಿ ಮನದೊಳ್ ವಳಂಚಲೆಯ ದಕ್ಕೆಯೊಳಟ್ಟುಜವಾಗೆಯಾಡಿದಳ್ (ಪಂಪಭಾ. ೪-೯೦) ; ಕರುಳ ತೊಡಂಕಂ ಬಿಡಿಸಿ ನಡೆ ನೋೞ್ಪ ನೊಳಗೆಲುವಡಗಿರ್ಪುದು ಜೀವನಿರ್ಪೂಡಲ್ಲಿಗೆಪೋದಂ (ಜಗನ್ನಾಥ. ೪-೦೯) ; ಜಡಿವ ಹಾರವಲಯಗಳ ತೊಡಂಕ ತಪ್ಪಿಸದೆ . . . ತಲ್ಲಣಿಸಿ ಸೊಪ್ಪಡಗಿ ಕೆಡೆಯಲು (ನವಮೋ. ೬-೬). ೨. ತೊಡಕಿಕೊಳ್ಳುವಿಕೆ ; ಸಿಕ್ಕಿಹಾಕಿಕೊಳ್ಳುವಿಕೆ; ಕೂಟ: ನಳಿತೋಳಿದಿರ್ಗೊಳ್ವ ತೊಡಂಕಿನಪ್ಪು ಬಾಯ್ದೆಱೆಯಿದಿರ್ಗೊಳ್ವ ಚುಂಬನಂ (ಅರ್ಜನೀ. ೨-೩೬) ; ಸೋಂಕು ಯುವತಿ ಬ ರೊಳಲ್ಲದೆ ಬಿಡದ ತೊಡಂಕುಂ ಬೇಟದ ತೋಟಿಯೊಳಲ್ಲದೆ ಕೋಟಲೆಗಳು [ತಾಂ] ಬೇಱಿಲ್ಲ (ಕುಸುಮಾ. ಚಿತ್ರಾಸಂಧಿ. ೩೯) ; ಸೋಂಕಿ ಚೆಂದುಟಿ ಗಚ್ಚಿದಿನಿಯಗೆ ಮುಗ್ಧೆ ತೊಡಂಕು ಸಾಕೆಂದು ಕೈದೊದರ್ವ ಕಂಕಣದುಲು ಹೊಯೆಂಬಂತೆ (ಭರತ. ೧೧-೧೬). ೩. ಅಡ್ಡಿ ; ಅಡಚಣೆ : ಉಡಿಗೆ ತೊಡಿಗೆಯ ತೊಡಂಕಿಲ್ಲ[ಪಾಠಾಂ. ತೊಡಕಿಲ್ಲ, ಹಂಗಿಲ್ಲ]ದೆ ರನ್ನಗನ್ನಡಿಯ ಜಿನೇಂದ್ರನಾದಂತೆ (ಭರತ. ೬೭-೩೬) ; ಕಾರ್ಯಸಿದ್ಧಿಗೆ ತೊಡಂಕು ತೋರ್ಪುದೆ (ರಾಜಶೇ. ೦೪-೪೪). ೪. ಕಷ್ಟ ; ತೊಂದರೆ ; ಕ್ಲೇಶ : ಪಟು ನುಡಿಯ ತೊಡಂಕನಡಿಗಡಿಗೆಡವದಂತಿರೆಡೆವಿಡದೆ ಬಿಚ್ಚಟಿಸಿ ಶಿಷ್ಯರ್ಗೆ ನಿರವಿಪ ಕುಲಪತಿಯಿಂ (ರಾಮಾಶ್ವ. ೦೩೬-೨೯). **ತುಡುಕು₂** : ೫. ಬೇಗನೆ ಹಿಡಿಯುವುದಂ ; ಸತ್ವರಗ್ರಹಣ. 'ಕೈದುಡುಕು₂' ಪರಾ.

**ತೊಡಕು₃** : ೧. ನಿನ್ನಂ ನುಡಿಯ ತೊಡಕಿನ ಬೆಡಂಗಿನಿಂ ಸೋಲಿಸಿ . . . ತಗುಳ್ಚುದಿದು ದೈವಿಕಂ (ಹರಿಕಾ. ೧೧-೦೩). ೨. ವಿಶ್ವಾಮಿತ್ರಮುನಿಯನಗೆ ಮತ್ತೆ ಮಾಡಿದ ತೊಡಕಿದಾಗದಿರದು (ಹರಿಕಾ. ೦೩-೪೦); ನಿನ್ನವೃತ್ತಾಂತವ ಖಳರಾಯಗಱುಹಿ ಮುಂದಾವ ತೊಡಕಿಲ್ಲದಂತೆ ಮಾಡುವೆ (ಮೋಹತ. ೧೧-೩೨); ಬಾಳ್ಕೆಯಲಿ ನೂರೆಂಟು ತೊಡಕು ತಿಣುಕುಗಳುಂಟು (ಮಂಕುತ. ೬೪೩); ನಮ್ಮ ಹಾದಿಯಲ್ಲಿ ತೊಡಕುಗಳು ವಿಪರೀತ (ಮುರುಳಿ. ೧೮). ೪. ಬಿಡಿಸಿದಿರೆನ್ನಂ ರಾಜ್ಯದ ತೊಡಕಂ [ಪಾಠಾಂ. ರಂ] ಕೈಕೊಂಡು ನೀಮೆ (ವರ್ಧಮಾ. ೯-೧೧) ; ಕೌರವ ಜೀವಿಸಲಿ ಮೇಣಳಿಯಲಿಮಗಿನ್ನಾ ತೊಡಕಿಲ್ಲ (ಕುವ್ಯಾ.ಕ. ೧-೦೩) ; ಕಕುಸ್ಥಜನೊಪ್ಪದಿರ್ದಡೆ ತೊಡಕು ನಿನಗಹುದು (ತೊರರಾ. ೪-೯-೩೪). ೧, ೪ : ನದಿಯೊಳ್ಮೃಗತತಿ ಕೇಶತತಿಯೊಳ್ ತೊಡಕಬ್ಬದೊಳಾಱಿಡಿ ವರಕುಚಯುಗ್ಮದೊಳಲ್ಲದೆ ಕಠಿನವೃತ್ತಿಯಿಲ್ಲಾ ನಾಡೊಳ್ (ಧರ್ಮಾಮೃ. ೦-೩೮). ೬. ಸಂಬಂಧ ; ಸಹವಾಸ : ಕಾಯದ ತೊಡಕನೊಲ್ಲದೆ ತಕ್ಕೆಗಟ್ಟಿತು ಭಟರು ನಾಕದಲಿ (ಕುವ್ಯಾ.ಭೀ. ೯-೦೮) ; ಮೇಳದೊಳು ತೊಡಕ ಬಿಡದವನ ಜಪವದುವೆ ಹಾಳುಮನೆಯಂತೆ (ಸರ್ವಜ್ಞ. ೧೬೩) ; ಕೋಪಭಾವದಿಂ ತೊಡವುಗಳ ತೊಡಕುಗಳನುಳಿದು ರಾಜೀವಾಕ್ಷ ತಿರೆಬೊಳೊರಗಿರ್ಪಳು (ವಂಕಾರಾ. ೨-೬-೩) ; ತನುಕಾಂತಿ ಮೋಹವಿಕೃತಿಗಳುಮಾ ತೊಡಕಿನವು ಕೊನೆಯಿರದ ಬಲೆಯೊ ಅದು (ಮಂಕುತ. ೧೬೮) ; ಒಲವು ಹಾಕಿದ ತೊಡಕನೆಂತು ಬಿಡಿಸಲು ಬಹುದು (ಸ್ವದರ್ಶಿ. ೬). ೭. ಗೊಡವೆ ; ಉಸಾಬರಿ : ತರಣಿಯೋಲಗಕೆ ಸೊಡರಂ ಪಿಡಿವ ತೊಡಕೇಕೆ (ಸಿದ್ಧರಾ. ೧-೪) ; ಒಡೆಯ ಚಿತ್ತೈಸಭಿಮತಂ ಗಳತೊಡಕವೇತಕೆ ನಿಧಿಯಿದಿರೊಳಿರೆ ಕಡೆಗೆ ಜಲಗಂ ತೊಳೆಯ ಹೋದಹೆವೆಂಬ ಮರುಳುಂಟೆ (ಬಸವಪು. ೫೭-೬೨) ; ನಮಗಿದೇಕರವಿಂದವದನೆಯ ತೊಡಕು (ಕುವ್ಯಾ.ಅ. ೧೫-೩) : ಗೊಡವೆ ತಪ್ಪಿತು ಹೋಗಲಿನ್ನೆನಗದಱ ತೊಡಕೇಕೆ (ಕೌಶಿಕಾ. ೧೯-೩). ೮. ಜಟಿಲವಾದುದು ; ಇಕ್ಕಟ್ಟು : ಸಾಂಖ್ಯದರ್ಶನದಲ್ಲಿರುವ ಬಹುದೊಡ್ಡ ತೊಡಕೆಂದರೆ : ಪ್ರಕೃತಿ ಪುರುಷರ ಸಂಬಂಧದ ಸಾಧ್ಯತೆ (ತತ್ತ್ವಪ್ರಾ. ೨೬೬). ೯. ಸಂಶಯ ; ಅನುಮಾನ : ಎಂತುಟು ಮೇಘನಾದ ತೊಡಕಿಲ್ಲದೆ ಪೇೞ್ ಮಗನಿರ್ದದೊಂದು ವೃತ್ತಾಂತಮಂ (ಶಾಂತಿಪು. ೬೬೮). ೧೦. ಸಂದಿಗ್ಧಪ್ರಶ್ನೆ ; ಸಮಸ್ಯೆ ; ಒಗಟು : ರಾಯರಾಜಗುರು ಜಗದ ಬಿನ್ನಾಣಿಯ ತೊಡಕ ಬಿಡಿಸಬಾರದು (ಬಸವ. ೭೨೪) ; ಕೊಡುವಡಿದು ವರವಲ್ಲದಿದ್ದರೆ ನುಡಿಗೆ ಮೊಳೆ ಹೊಮ್ಮುವರೆ ನಿಮ್ಮಯ ತೊಡಕನೊಲ್ಲುವವನಲ್ಲ (ಕುವ್ಯಾ.ದ್ರೋ.೬. ೦-೪೫) ; ಅಜಗಣ್ಣನು . . . ಕಡೆಯಲೀ ಪರಿ ಕಾಣಬಾರದ ತೊಡಕನೊಡ್ಡಿದನು (ಪ್ರಭುಲೀ. ೦೨-೮). ೧೧. ಜಗಳ ; ಕದನ : ಎನ್ನ ನೀ ಮೊದಲು ನೂಂಕಿದ ಕಾರಣದಿಂದೆ ನಿನ್ನನಾ ನೂಂಕಿದೆನ್ನೆಸೆ ಇನ್ನಾವ ತೊಡಕು ಬೇಡ (ಮೋಹತ. ೧೪-೮೦) : ಅವನೊಳು ತೊಡಕು ಸಲ್ಲದು ನಿಮಗೆಂದ (ಕಂಸವಿ. ೧೩-೬). **ತೊಡಗು₃** : ೩. 'ಇಡುಗುತೊಡಗು' ಪರಾ.

**ತೊಡಕುಬೀಳು** = ಗೋಜಾಗು ; ಸಿಕ್ಕಾಗು : ಭೂಮಿಯನ್ನು ಅಳೆಯುವುದಕ್ಕೆ ಮೊದಲಿಟ್ಟ ಮೇಲೆ ಸರಪಣಿಯು ತೊಡಕುಬಿದ್ದಿರುವುದನ್ನು ನೋಡಬೇಕು (ಭೂಮಿಅ. ೪). [ < ತೊಡಂಕು₁ ]

**ತೊಡಂಕುವಲೆ, ತೊಡಕುವಲೆ** (ನಾ). (ಕಾಲಿಗೆ) ತೊಡರುವ ಒಂದು ಬಗೆಯ ಬಲೆ : ಮಿಳಿರ್ವ ಬಂಬಲ್ಗುರುಳ್ಗಳೆಂಬ ತೊಡಂಕುವಲೆ ಬಸಂತನ ಕೆಳೆಯನಂಬೆರಲೆಯುಂ ಸಿಲ್ಕಿಸೆಯುಂ (ಆದಿಪು. ೦೩೩) ; ಪೆರ್ವಲೆ ತೊಡಂಕುವಲೆ ಕೊಲ್ವಲೆ... ಬಿಡುವಲೆಗಳನಿಪ್ಪುವೆಸದಿರಾ ಬೇಂಟೆಗರೊಳ್ (ಕಬಿಕಂ. ೩-೨೪). **ತೊಡಕುವಲೆ** : ಬಳ್ಳಿವಲೆ ತೊಡಕುವಲೆ . . . ಮಡಿಕೆವಲೆ ಮೊಂದುಸಿನವಲೆಯ ಹೊಱಗಳ ಬೇಡವಡೆ ನೆರೆದುದು (ಹರಿಕಾ. ೫-೮) ; ದಂಡಿವಲೆಗಳ ತೊಡಕುವಲೆಗಳ . . . ಕಿರಾತರು ಕೆದಱಿತಗಲದಲಿ (ಕುವ್ಯಾ.ಅ. ೦೩-೨೩) ; ಪುತ್ರಮೋಹದ ತೊಡಕುವಲೆಯಲಿ ತಂದೆ ನೀ ಕಾಲಿಡದಿರು (ನಿಭಾಗ. ೩-೧-೬) : ತಡಿಕೆವಲೆ ಚಟ್ಟವಲೆ ಸಾಲುವಲೆ ಕೋಲುವಲೆ ತೊಡಕುವಲೆ . . . ಮರವಲೆಗಳಿರ್ದುವಾ ಶಬರರಲ್ಲಿ (ಸಿದ್ಧೇಶಪು. ೮-೬) ; ಉರುಲುವಲೆ ತೊಡಕುವಲೆ ಸಿಕ್ಕುವಲೆ ಸಿಡಿಲುವಲೆ . . . ಮೊದಲಾದ ಪರಿಪರಿಯ ವಲೆ ಸಮೂಹವ ನೋಡುತ (ನವಮೋ. ೧೬-೨೦). [ ತೊಡಂಕು₃ + ಬಲೆ₁ ]

**ತೊಡಂಗ** (ನಾ). ಒಂದು ಬಗೆಯ ಆಯುಧ : ಆ ಬೀರೆಗೌಡನ ಕೈಲಿದ್ದ ಚಿನ್ನದ ಬಳೆ ಎರಡು, ತೊಡಂಗದ ಸರಪಣಿ, ಬೆಳ್ಳಿಕಟ್ಟಿದ ಚೂರಿ, ವರಚೂರಿ, ಇದನ್ನು ಅವನ ಮೈಯಿಂದಾ ತೆಗೆದು . . . ಮುಟ್ಟಿ ಮಡಗಿ ಬಂದರು (ರಾಜೇಂದ್ರ. ೨೮೬). [ ? ]

**ತೊಡಂಗಟ್ಟು** (ಕ್ರಿ). ಅಲಂಕಾರಮಾಡು : ಅಬ್ಬವಂ ಮಾಣ್ದು ದುತ್ತುರದ ಕುಸುಮದ ತೊಡಂ[ಪಾಠಾಂ. ತೊಡವು]ಗಟ್ಟುವಂತೆ ಉತ್ತಮವಿದೆಂದು ಕೃಷ್ಣಾರ್ಜುನರ ಬಿಟ್ಟು ತಂದಿತ್ತ ತುರಂಗಂಗಳಂ (ಕೃಮಿಛಾ. ೨೫-೬೧). [ ತೊಡ + ಕಟ್ಟು₁ ]

**ತೊಡಂಗು** 'ತೊಡಂಕು₃' ನೋ.

**ತೊಡಂದುಡಿಸು** (ಕ್ರಿ). ಒಡವೆಯನ್ನು ಹಾಕು ; ಆಭರಣವನ್ನು ತೊಡಿಸು : ಅಡಿಮಾಡುವ ಮುಡಿಯಿಕ್ಕುವ ತಿಲಕವಿಡುವ ತೊಡಂದುಡಿಸುವ ನಿಱಿವಿಡಿದು ನೀಡುವ ನೆಲನನಗ್ಗಡಿಸುವ ಮುಕುರಮಂ ತೋಱುವ ಮಕರಿಕಾಪತ್ರಮಂ ಚಿತ್ರಿಸುವ . . . ನಿಖಿಳಪರಿಚಾರಿಣೀಜನಂ (ಕುಸುಮಾ. ೬-೬ ವ). [ ತೊಡ + ತುಡಿಸು (<ತೊಡಿಸು) ]

**ತೊಡಂದೊಡು** (ಕ್ರಿ). ಆಭರಣವನ್ನು ತೊಡು,-ಧರಿಸು: ಒಡನಂ ಟ್ಟೊಡನೆ ತೊಡಂದೊಟ್ಟೊಡನಿರದಾಡಿಯೊಡನೆ ಹೊಸ ಹರೆಯಂಬಡೆದ ಕೆಳೆಯರಿಂ . . . ಸುಕುಮಾರಂ ಸಡಗರದಿಂ ಸಲೆ ಸಂಪದದೊಳ್ ದಿನಮಂ ನೂಂಕುತ್ತಿಹನು (ಜಯುಕಾ. ೨-೭೬). [ ತೊಡ + ತೊಡು$_1$ ]

**ತೊಡಂಬೆ$_1$**, ತೊಡಬೆ$_1$ (ನಾ). ೧. (ಹಣ್ಣು, ಹೂವು, ಕಾಯಿ ಮೊದಲಾದಂವುಗಳ) ತೊಟ್ಟು; ತುಂಬು: "ಪ್ರತಾನಮುಳಪಂ ತೊಡಂಬೆಯಂತದು ವೃಂತಂ" (ವಸ್ತುಕೋ. ೩೧-೮); "ವೃಂತಂ ಪ್ರಸವಬಂಧನಂ ಈ ೨ ಹೂವಿನ ತೊಡಂಬೆ" (ಹಲಾಯು. ೩೧-೩೦); ಲತಾಳಿಯ ತಳ್ಪು ಬಿರ್ಚಿದಂತೆಲೆಯ ತೊಡಂಬೆಗಳ್ ಪಱಿಯದಂತು . . . ಎಲರೊಲವುಣ್ಮೆ ತೀಡಿದುದು (ಚಂದ್ರಪು. ೨-೧೦೦); ಅಗ್ಗದ ಗಾಳಿಯಿಂದೊಡನೊಡನೆ ಬೀತು ತೊಡಂಬೆಗಳು ಕಡು ಸಡಲಿ ತಮತಮಗವನಿಯಲಿ ಬಿದ್ದರಳು ಗಳನುಳಿದು (ಬಸವು. ೨೨-೮); ಬಿಟ್ಟ ತೊಡಂಬೆಯನೆಂದು ಮುಟ್ಟುವು ಪಣ್ (ಪರಮಾ. ೨೮-೮೩). ೨. ಮೂಲ; ಬುಡ: ನೋಟದ ಸೋಲಂ . . . ಸುಯ್ಯ ಕಂಪಾಟಿಸಲಲ್ಲೆ ಮೆಯ್ಯುಟಲೆ ಸಂದಪುವೆ ಮಲರ್ದಯ್ದು ವಿಂದ್ರಿಯಂ ಬೇಟದ ಗೊಂಚಲಂತೆ ಮನಮೆಂಬ ತೊಡಂಬೆಯೊಳೊ ಪ್ಪೊದಲ್ ಸುಖಾಸ್ಫೋಟಮನೀಯವೆನ್ನವು ಮನಃಪ್ರವಿಚಾರದ ಕಾಮ ಕೇಳಿಗಳ್ (ಅನಂಪು. ೪-೪೬). **ತೊಡಬೆ$_1$**: ೨. ಉಲುಕಿದರೆ ನಾಲಗೆಯ ತೊಡಬೆಯು ಕಳಚುವೆನು (ಕುಮಾ.ಳ. ೧೧-೨೫).

[ ದೇ.ಶ ತೆಲು. ತೊಡಿಮೆ, ತೊಡಿಮ ]

**ತೊಡಂಬೆ$_2$**, ತೊಡಬೆ$_2$ (ನಾ). ೧. ಗೊಂಚಲು; ಗುಚ್ಛ: "ತೊಡಂಬೆ ನುಣ್ಪೊದೆದ ಜೊಂಪಂ ತೊಂಗೆ ಗುಚ್ಛಮೆಂದಿರದೊಪ್ಪಿ ಪಡೆದ ನಾಮಂ" (ಕಬ್ಬಿಕ. ೦೯); ಮುಂಗುಳ ತೊಡಂಬೆ ಗಂಟೊಡೆಯೆ ಮೊಲ್ಲೆಗೆ ಬೆಳ್ಪುಟು ವುಟ್ಟೆ . . . ತೀಡಿದುದು ತಣ್ಣನೆ ಪಣ್ಣನೆ ಪಶ್ಚಿಮಾನಿಲಂ (ಶಂರಾಮಾ. ೭-೧೪೯); ತಳಿರ ತೊಡಂಬೆಯಂ ಕಳೆದೆ ಮಾಮರಂ (ದಕಕು. ೧-೨೬); ಮಲ್ಲಿಗೆಯಲರ ತೊಡಂಬೆಯ ಮಧ್ಯದೊಳುಲ್ಲಸದಿಂದೆ ಕುಳಿತ ಮಧುಕರನಂ . . . ಗೆಲ್ಲಂಗೊಂಡೆಸೆದುದು ಚಿಹ್ನಂ ಸಂಪೂರ್ಣ ಸುಧಾಕರನ (ಜಯುಕಾ. ೦೯-೦೩); ಒಳಪೊಱಗಾಗಿರ್ದ ಗದುಗಿನ ಕಾಯಂತೆ ಕೆಳಮೊಗವಾದ ಯೋನಿಗಳು ಬಿಲದಗ್ರದ ಕಟು ಗಳೊಳಗಿರ್ಪವವು ಪಾ ಪ ಫ ಲ ದ ತೊಡಂಬೆಗಳಂತೆ (ವರ್ಧಕ. ೮-೭೬). ೨. ಹೂವಿನ ಗೊಂಚಲು: "ತೊಡಂಬೆ, ತೊಡಬೆ . . . ಗುಚ್ಛ – ಈ ೭ ಪುಷ್ಪಮಂಜರಿ" (ಕಕಸಾ. ೫೫-೦೯೬): ಬಿಟ್ಟುಳಿಯ ಕಕ್ಕುಂಬ ತೊಡಂಬೆಯ ಮುಡಿಗೆಯ ಕದಳಿಕೆಯ ಕಂಡಪಟಂಗಳುಮಂ (ಶಂಪಥಾ. ೫-೪೭ ವ); ತೊ[ಡಂಬೆ]ಯಂತಪ್ಪಳಿಸುವ ಪೆಣ್ದುಂಬಿಗಳಂತೆ ಲಲಾಟರಂಗದೊಳುಂಗುರಿಸಿ ಕುಣಿವ ನೀಲಾಳಕಂಗಳ . . . ಸೌಂದರಿಯದಿಂ ದೇಸೆವಡೆದ ಹದಿನಾಱಱ ಹರೆಯದ ಹರಂ (ಬಸರ. ೧೨-೮೦); ಬಂಡುಣಿವಿಂಡುಗಳುಂಡಾಡಲೆಗಳುವೊಡೆದ ತೊಡಂಬೆಗಳಿಂದೆ ನದಿಯ ದಡಂಗಳಲಸುಗೆಯ ಮರಗಳು ಬೋಳಾದುವಹ ಕಾಲವಶದೆ (ಗಾಥಾಸ. ೦೦೩-೨೨). ೩. ಗುಂಪು; ರಾಶಿ; ಸಮೂಹ: ಅಂಬರದೊಳು ಬಹುವರ್ಣದ ಮುಗಿಲ ತೊಡಂಬೆಗಳೆಡೆಯಾಡುವಂತ (ಧರಕ. ೦೮-೩೯). **ತೊಡಬೆ$_2$**: ೧."ತೊಡಬೆ, ತೊಡಂಬೆ . . . ಗುಚ್ಛಕಕ್ಕುಂ ನಾಮಂ" (ಕವಿಕಂ. ೭೮); ಕಳಿತ ಹೂವಿನ ತೊಡಬೆಗಳೊ ರಿಪುಬಲವೊ ಬಿಱುಗಾಳಿಯೊ ವೃಕೋದರನಳವ ಬಲ್ಲವನಾವನೈ (ಕುಮಾ.ದ್ರೋ. ೨-೮೦). ೨. "ತೊಡಂಬೆ, ತೊಡಬೆ, ತೊಂಗೆ, ತೊಂಗಲ್, ಜೊಂಪಂ, ಗೊಂಚಲ್ ಗುಚ್ಛಂ–ಈ ೭ ಪುಷ್ಪಮಂಜರಿ" (ಕಕಸಾ. ೫೫-೦೯೬). ೩. ಸೀಗುರಿಸುವುರಿ ವಿಷದ ಲೋಳೆಯ ಲಾಗಿಸುವ ನಾಲಗೆಯ ಸುಯ್ಲಿನ ಬೇಗುದಿಯ ತೊಡಬೆಗಳ ಹಾವ್ ತುಡುಕಿದವು ಘಟ್ಟನಲಿ (ಕುಮಾ.ಳ. ೨೩-೩೯).

[ ದೇ.ಶ ತುಳು. ತೊಡುಂಬೆ, ತೊಲುಂಬೆ ]

**ತೊಡಂಬೆಪಱ್** (ಕ್ರಿ). ತೊಟ್ಟು ಕತ್ತರಿಸಿಹೋಗು: ಬಿಡಿ ಕೊಳೆ ಕಾಯುಂ ಪಣ್ಣುಂ ತೊಡಂಬೆಪಱಿದುದಿರ್ವ ಮಾಟ್ಕೆಯಿಂ ಕಱಿವಿರಿಯರ್ ಮಡಿವರ್ (ಶಂರಾಮಾ. ೧-೮೩). [ ತೊಡಂಬೆ$_1$ + ಪಱ್$_1$ ]

**ತೊಡಂಬೆವಿಡು** (ಕ್ರಿ). ತೊಟ್ಟನ್ನು ಕಳಚಿಕೊಳ್ಳು,-ಬಿಡು: ತನಿತು ತೊಡಂಬೆವಿಟ್ಟುದಿರ್ದ ಪಣ್ಗಳನಟ್ಟಿಯ ಮೆಲ್ದು ಸೋರ್ವ ತೆಂಗಿನ ತಿಳಿನೀರನೀಂಟಿ . . . ಪೌರನಂದನದೊಳಗಿಂತಯತ್ನಸುಖಮಂ ಪಥಿಕರ್ ಪಡೆವರ್ (ಚಂದ್ರಪು. ೩-೦೫). [ ತೊಡಂಬೆ$_1$ + ಬಿಡು$_1$ ]

**ತೊಡಕಂಬು** (ನಾ). ಒಂದು ಬಗೆಯ ಬಾಣ,-ಸರಳು: ಸಿಲುಕಂಬು ತುದಿವೊನೆಯ ಬೋಳೆ ತೊಡಕಂಬು . . . ದಡಿಮುಖ್ಯವಾದ ಕೈದುಗಳ ಪಿಡಿದು (ಸೌಂದಪು. ೧೮-೩೭). [ತೊಡಕು$_3$ (<ತೊಡಂಕು$_3$)+ಅಂಬು$_2$]

**ತೊಡಕಾಲು** 'ತೊಡಕುಗಾಲು' ನೋ.

**ತೊಡಕಿಸು** 'ತೊಡಗಿಸು$_1$' ನೋ.

**ತೊಡಕು$_1$** 'ತೊಡಂಕು$_1$' ನೋ.

**ತೊಡಕು$_2$** 'ತೊಡಂಕು$_2$' ನೋ.

**ತೊಡಕು$_3$** 'ತೊಡಂಕು$_3$' ನೋ.

**ತೊಡಕುಗಾಲು**, ತೊಡಕಾಲು (ನಾ). ೧.=ತೊಡರುಗಾಲು. ೨. (ಅಲಂ) ಅಡಚಣೆ; ಅಡ್ಡಿ: ಪೂಜ್ಯ ಪೂಜಕ ಸಂಬಂಧದಲ್ಲಿ ವ್ಯತ್ಯಾಸವಾಗಿ . . . ಈ ಅಹಿಂಸಾಮತಗಳು ವೈದಿಕಪದ್ಧತಿಗೆ ತೊಡಕುಗಾಲಾಗಿ ನಿಂತಿತು (ಭಾರಕ. ೨೮೯). **ತೊಡಕಾಲು**: ೨. ಆ ವೇದವ್ಯಾಸಾಚಾರಿ ಹಾಕಿದ್ದ ತೊಡಕಾಲು (ಹರಿಜ. ೨೬).

[ ತೊಡಕು$_3$ (<ತೊಡಂಕು$_3$) + ಕಾಲು$_1$ (<ಕಾಲ್$_1$) ]

**ತೊಡಕುನೇಣು** (ನಾ). (ಕಡೆಗೋಲಿಗೆ) ಸಂತ್ತುವ ಹಗ್ಗ; ಕಡೆಯುವ ಹಗ್ಗ: ಕಡಲನು ಕಡೆವುದಾ ಮಂದರಮಹಾದ್ರಿಯನಿಟ್ಟು ವಾಸುಗಿಯ ತೊಡಕುನೇಣಲಿ ಕಡದೊಡಮೃತವ ಪಡೆವಿರಹಿತರು ಬಱದೆ ದುಃಖಂಬಡುವರು (ನಿಘಾಗ. ೮-೬-೦೫).

[ ತೊಡಕು$_3$ (<ತೊಡಂಕು$_3$) + ನೇಣು (<ನೇಣ್$_1$) ]

**ತೊಡಕುಬೇರು** (ನಾ). ಹೆಣೆದುಕೊಂಡ ಬೇರು; ಜಡೆಗಟ್ಟಿದ ಬೇರು: ಕಾಂಡದ ಕೆಳಭಾಗದಿಂದ ಹೊಸಹೊಸ ಬೇರುಗಳು ಬೆಳೆಯುತ್ತವೆ. ಈ ಬೇರುಗಳು ಭೂಮಿಯ ಮೇಲ್ಪದರುಗಳಲ್ಲಿಯೇ ಪಸರಿಸುತ್ತವೆ. ಇವುಗಳ ಗಾತ್ರ ಒಂದೇ. ಇಂತಹ ಬೇರುಗಳಿಗೆ ತೊಡಕುಬೇರಿನ ಸಮೂಹವೆಂದು ಹೆಸರು (ಸಸ್ಯಶಾ. ೦೩).

[ ತೊಡಕು$_3$ (<ತೊಡಂಕು$_3$) + ಬೇರು (<ಬೇರ್) ]

**ತೊಡಕುಮೆಳೆ** (ನಾ). ದಟ್ಟವಾಗಿ ಹೆಣೆದುಕೊಂಡಿರುವ ಪೊದೆ,-ಪೊದರು: ಕುಹರದ ತೊಡಕುಮೆಳೆಗಳಲದ್ರಿಕೂಟದಲೆಡಬಲದ ತಪ್ಪಲಲಿ . . . ಅಡಗಿ ತೋಱುತೆ (ತೊರರಾ. ೩-೮-೪೭).

[ ತೊಡಕು$_3$ (<ತೊಡಂಕು$_3$) + ಮೆಳೆ ]

**ತೊಡಕುವಲೆ** 'ತೊಡಂಕುವಲೆ' ನೋ.

**ತೊಡಕುವಳೆ** (ನಾ). ಸರಪಳಿಯ ಆಕಾರದ ಬಳೆ: ಕೊಡಲಿ ಮಾರಗತ್ತಿ ಬಲ್ಲೆಯಂ ಚಕ್ರ ಗಿರುಗಟೆ ತೊಡಕುವಳೆ ವಂಕಿ ಕಲ್ಲವಣಿ ಪದ್ಮವಣಿ ಪುತ್ರಜೀವಿಯ ಹುಲ್ಲುಮಣಿ ಪಟಿಕವಣಿಭೂಷಣಂ (ಗುರುಬಾ. ೩-೩೦).

[ ತೊಡಕು$_3$ (<ತೊಡಂಕು$_3$) + ಬಳೆ$_3$ ]

**ತೊಡಕುವೀಥಿ** (ನಾ). ಅಡ್ಡಲಾಗಿ ಹಾಯುವ ಬೀದಿ; ಅಡ್ಡಬೀದಿ: ಸಿಡಿದು ನೋಡಿದ ನಿಳಯನಿಳಯಂಗಳಲಿ ನಿವಿಷದಲಿ ತೊಡಕುವೀಥಿಯ ಕೇರಿಕೇರಿಗಳೆಡೆಯೆಡೆಯ ಮನೆಮನೆಯ . . . ಕೋಟೆಯ ಸುತ್ತು ವಳಯದಲಿ (ತೊರರಾ. ೫-೨-೦೫).

[ ತೊಡಕು$_3$ (<ತೊಡಂಕು$_3$) + ವೀಥಿ ]

**ತೊಡಕೆ** (ನಾ). ಗಾಡಿಯಂ ತೊಟ್ಟಿಲಂ; ಬಂಡಿಯ ಒಳಗಿನ ಖಾಲಿಜಾಗ: ಎಲವೋ ಕುನ್ನಿ ಕೂಳದೆ ತಿನ್ನು ಬಾಯೆನುತ ತೊಡಕೆಯಲಿ ಕಲು ಮುಳ್ಳು ತುಂಬಿಯೆ ಬಿಡದೆ ಬುತ್ತಿಯನೊಂದು ಕೈಯಲಿ ಹಿಡಿದು ಬಂದನು ದೈತ್ಯನಲ್ಲಿಗೆ ಭೀಮ ಬೇಗದಲಿ (ಕುವ್ಯಾ‌ಆ. ೬೦೩. ೨೩-೬೬). [ ? ]

**ತೊಡಗಿಸು$_1$**, ತೊಡಕಿಸಂ (ಕ್ರಿ). ೧. ತಗುಲಿಸು; ಸಿಕ್ಕಿಸು: ತಮ್ಮ ಜೀರ್ಣ ವಿಚಾರದ ಶೃಂಖಲೆಯನ್ನು ಅವರ ಕಾಲುಗಳಲ್ಲಿ ತೊಡಗಿಸುವ ಪಾಪವನ್ನು ಮಾಡಕೂಡದು (ಪ್ರಬಂಧ. ೧೧೬). ೨. ಹೂಡು; ಬಳಸು; ವಿನಿಯೋಗಿಸು: ನನ್ನ ಹತ್ತಿರ ಹೇರಳವಾಗಿ ಹಣವಿದೆ. ಅದನ್ನು ಯಾವ ಕಾರ್ಯದಲ್ಲಿಯೂ ತೊಡಗಿಸಿಲ್ಲ (ಹರಿಶ್ಚ. ೩೦); ಒಮ್ಮೆ ಕರಗತವಾದ ಧನವನ್ನು ಸಂರಕ್ಷಿಸಿ, ವೃದ್ಧಿಗೊಳಿಸಿ, ಉದ್ದಿಮೆಯಲ್ಲಿ ತೊಡಗಿಸತಕ್ಕದ್ದು (ಮಿತವ್ಯ. ೧೦): ಇಷ್ಟೊಂದು ಹಣವನ್ನು ಇಂಥ ರತ್ನದಲ್ಲಿ ತೊಡಗಿಸುವುದು ರಾಯರಿಗೇನೂ ಕಷ್ಟದ ಕೆಲಸವಲ್ಲ (ರತ್ನಗೊ. ೨೮). **ತೊಡಕಿಸು**: ೧. ಆ ಕಂಬಗಳಿಗೆ ನಾಲ್ಕು ಬಂಗಾರದ ಸರ್ಪಳಿಗಳನ್ನು ತೊಡಕಿಸಿ ... ಜೋಲೆ ಬಿಟ್ಟಿದ್ದರು (ಮುಂಬಯಿ. ೫-೨೯೯); ರೈತನು ಆ ಹಲಿಗೆಯನ್ನು ಆ ದನದ ಕಣ್ಣಿಯಲ್ಲಿ ತೊಡಕಿಸದರಾಯಿತು, ಆ ದನ ಇದ್ದಲ್ಲಿಂದ ಓಡಿ ಬರುತ್ತಿತ್ತು (ಹಳ್ಳಿ. ೨೪). ೩. ಪ್ರತಿಭಟಿಸುವಂತೆ ಮಾಡು: ಮುಳಿವೇನೇ ಮುನಿದಿವರು ನೂರ್ವರು ಕೊಳಿವರೆನ್ನನು ತೊಡಕಿಸುವೆನೇ ತಱಿದು ಬಿಸುಡುವರವರು ಕೌರವಶತಕವನು (ಕುವ್ಯಾಸ. ೦೨-೬೯).

[ ತೊಡಗು$_1$ (< ತೊಡಂಕು$_1$) + – ಇಸು$_3$ ]

**ತೊಡಗಿಸು$_2$** (ಕ್ರಿ). ೧. ಆರಂಭಿಸು; ಮೊದಲುಮಾಡು: ಒಳ್ಳಿತಪ್ಪ ದಿವಸವಾರನಕ್ಷತ್ರಮುಹೂರ್ತದೊಳ್ ಸಿದ್ಧಾಂತಮಂ ತೊಡಗಿಸೆ (ವಡ್ಡಾರಾ. ೬-೧೫); ಸಕಲವಿದ್ಯಾಬೀಜಪುಂಜಂಗಳಂ ಮೊದಲ್ ತೊಡಗಿಸಿ ನಿರ್ಬಂಧದಿಂದಮೋದಿಸುತ್ತುಂ (ಸುಕುಮಾ. ೨-೫೬ ವ); ಕುಮಾರರ್ಗೆ ಮುನಿಪತಿ ಚೌಲಕರ್ಮಂಗಳಂ ಮಾಡಿಸಿ ತೊಡಗಿಸಿದನಕ್ಷರಾಭ್ಯಾಸಮಂ (ಜೈಮಿಥಾ. ೦೯-೫೦). ೨. ಉಂಟುಮಾಡು; ಆಗಿಸು: ಕೆಡುಕು ತೊಡಗಿಸಲೆಯನುಡುಗಿಸಲಡಗಿ ನಡುಗಿಸಿ ನಗುವೆನು (ಕವಿಪು. ೨೯-೮).

[ ತೊಡಗು$_2$ (< ತೊಡಂಕು$_2$) + – ಇಸು$_3$ ]

**ತೊಡಗು$_1$** 'ತೊಡಂಕು$_1$' ನೋ.

**ತೊಡಗು$_2$** 'ತೊಡಂಕು$_2$' ನೋ.

**ತೊಡಗು$_3$** 'ತೊಡಂಕು$_3$' ನೋ.

**ತೊಡಗುಹ** (ನಾ). ಆರಂಭ; ಕೈಕೊಳ್ಳುವಿಕೆ: "ಪ್ರಕ್ರಮಂ, ಆರಂಭ" (ನಾಚಿರಾ. ೪). [ ತೊಡಗು$_2$ (< ತೊಡಂಕು$_2$) + – ಹ$_2$ ]

**ತೊಡಚು** 'ತೊಡರ್ಚು' ನೋ.

**ತೊಡಪ** (ನಾ). ಪೊರಕೆ; ಕಸಬರಿಗೆ: "ತೇವವಾದ ಹಡಗಿನ ಅಟ್ಟವನ್ನು ಅಥವಾ ಬೀದಿಯನ್ನು ಗುಡಿಸಲು ಉಪಯೋಗಿಸುವ, ರಬ್ಬರಿನ ಅಲಗನ್ನು ಉದ್ದವಾದ ಹಿಡಿಗೆ ಅಳವಡಿಸಿ ಮಾಡಿದ ಸಲಕರಣೆ: ರಬ್ಬರು-ಪೊರಕೆ, ತೊಡಪ" (Squeegee. ಇಂಕನ್ನ). 'ತೊಡೆಪ' ಪಠಾ.

[ ದೇ.೫ ತಮಿ. ತುಟಪ್ಪ, ತುಟೈಪ್ಪ; ಮಲ. ತುಡೆಪ್ಪ ]

**ತೊಡಪು$_1$**, ತೊಡಹು$_1$ (ಕ್ರಿ). ೧. ನಿವಾರಿಸು; ಕಳೆ: ಮೊಗದೊಳ್ ಮೊಗವಿಟ್ಟೊಡನೌಂಕಿ ಶಂಕೆಯಂ ತೊಡಪಿ (ಚಳವಿ. ೬-೨೧೨). **ತೊಡಹು$_1$**: ೨. ಹಚ್ಚಿಕೊಳ್ಳು; ಅಂಟಿಕೊಳ್ಳು: ಇವ ಸಂಸಾರಧರ್ಮವ ತೊಡಹಿದವನಲ್ಲ (ಪೋಣಿಮಾ. ೧೮೮-೬೦೮). [ ತೊಡೆ$_1$ + – ಪು$_1$ ]

**ತೊಡಪು$_2$**, ತಡಪು$_3$. ತಡುಪು, ತೊಡಹು$_2$, ತೊಡುಪು (ನಾ). ೧. ಆಭರಣ; ತೊಡಿಗೆ: ತೊಡಪಿನ ಸವಗ ಬಟ್ಟಲ ಕೌಳಿ ಮೈದೋಡು ಓಡಿದ ಖಂಡೆಯ ... ರಂಜಿಸೆ ಬಂದರೊಡನೊಡ್ಡಿಯ ರಾವುತರು (ಕುರಂಸಾಂ. ೧೧-೨೩); ಭರದಾ ಉಡಿಗೆ ತೊಡಪುವುಲಿವಾ ಬಾವಲಿ ಧೀರಾ ಪುರುಷಹರಾಕ್ರಮನ ಕಂಡೆ (ಶೀಘ್ರಸು. ೨೨೦-೩): ಯುಧಿಷ್ಠಿರನು ಮೊದಲಾದ ಕೌರವಕುಮಾರಕರು ... ಕೈಗಳಿಗೆ ತೊಡಪುಗಳನ್ನು ತೊಟ್ಟು (ಕೃವಾಳ. ೨೫೦). ೨. ಒಂದು ಬಗೆಯ ಆಯುಧ: ದುಷ್ಟವಾದ ಮೃಗಗಳನ್ನು ಕೆಣಕಿ ಬೇಟೆಯಾಡುತ ... ತೊಡಪು, ಕಟ್ಟಿಣದೊಣ್ಣೆ, ಪಟ್ಟಾಕತ್ತಿ, ಒನಿಕೆ, ಭರಜಿ ಮೊದಲಾದ ನಾನಾವಿಧ ಆಯುಧಗಳಿಂದ ... ಕೊಲ್ಲುತ (ಕೃವಾಳ. ೦೫೦). **ತಡಪು$_3$**: ೩. ದಟ್ಟಿ; ಲುಂಗಿ: ತ[ಪಾಠಾಂ. ಉ]ಡ[ಪಾಠಾಂ. ಡು]ಪನೊಂದಂ ನೆಯಿದುಕೊಟ್ಟಪಡೆ ಮೃಡನ ಕೈಯಿಂದಲಿನ್ನುಂ ಪಡೆಯದೇಂ ದವಸವನು (ಬಸವು. ೨೩-೩೬); ನಡೆದನಲ್ಲಿಂ ಏವ್ರ ಹೆಗಲಿನ ಹಡಪ ಸುತ್ತಿದ ತಡಪು ನೊಸಲಲಿ ಬಡಿದ ಮಟ್ಟೆಯ (ಜೂದಪ. ೦೦-೨೦). **ತಡುಪು**: ೨. ತಡುಪು ಡೊಂಕಣಿ ಭಂಡಿವಾಳುಗ್ಗಡದ ಭೋಜವು ಚಕ್ರ ನಾನಾಘಡಬಡೆಯ ಕೈದುಗಳ ತಳವಳವೆಸದುದಗಲದಲಿ (ಅಂದಿಕಾ. ೦೯-೪೮). ೩. ತಲೆಗೆ ಬಟ್ಟೆ ಕಟ್ಟಿಕೊಂಡಿದ್ದ ಬಟ್ಟೆಯ ತರಹದ್ದೇ ಒಂದು ತಡುಪು ಸುತ್ತಿದ್ದ (ಹಂಗಾಳ್ಯ. ೩೫೩). **ತೊಡಹು$_2$**: ೧. ಆತನ ಕರುಳವಮಾಲೆಯು ಎಡದ ಕೈಯಲಿ ಹಿಡಿದು ಕಂಠಕೆ ತೊಡಹು ಮಾಡ್ದ ನೃಸಿಂಹ (ಗಗಹಾ. ೦೯-೨೮). **ತೊಡುಪು**: ೨. ಜಯಬಾಡಿ ಶೃಂಗಾರ ತೊಡುಪೂ ಸಂಣ ಚಂದ್ರಾಯುಧಾ ಚಲುತಲಿ ಮೊದಲಾದಾ ಬತ್ತೀಶಾಯುಧಾ ಶಸ್ತ್ರಸಮರ್ತಕರಾದಾ (ಎಕ. XVI, ಗುಬ್ಬಿ: ೬೪-೨೦; ಕು. 1672). ೪. (?): ಬಿಲ್ಲ ಹೆದೆ ಹಱಿದು ಬಿಲ್ಲಿನ ಹೆದೆಯಃಕೊಪ್ಪು ಅಲ್ಲಲ್ಲಿಗೆ ತೊಡುಪು ಮೆಲ್ಲಗೆ ಇರಿಸಿದಡೆ ಅದಱಲ್ಲಿಯೆ ಸಿಕ್ಕಿತ್ತು (ಪೋಣಿಮಾ. ೦೮೩-೬೯೯).

[ < ತೊಡು$_1$ + – ಪು$_2$./ತೆಲು. ತೊಡುಪು ]

**ತೊಡಪು$_3$** 'ತೊಡರ್ಪು' ನೋ.

**ತೊಡಬೆ$_1$** 'ತೊಡಂಬೆ$_1$' ನೋ.

**ತೊಡಬೆ$_2$** 'ತೊಡಂಬೆ$_2$' ನೋ.

**ತೊಡಬೆಗಳಚು** (ಕ್ರಿ). ೧. ತೊಟ್ಟನ್ನು ಕತ್ತರಿಸು,-ಬೇರೆಮಾಡು: ನುಡಿಗೆ ಮುಂಚುವ ಬಾಣ ಮಾರುತನಡಸಿ ಬೀಸುವ ಲಾಗ ತಲೆಗಳ ತೊಡಬೆಗಳಚುವ ಬೇಗವನು ಬಣ್ಣಿಸುವರೆನ್ನಳವೆ (ಕುವ್ಯಾದ್ರೋ. ೦೮-೪೯). ೨. (ಆಲಂ) ಸಾಯು; ದೇಹತ್ಯಾಗ ಮಾಡು: ಛಾಯವಡೆದನು ಭೀಷ್ಮ ಬಳಿಕಿನೊಳಾಯುಧದ ಗುರು ತೊಡಬೆಗಳಚಿದನೀಯವಸ್ಥೆಗೆ ನಮ್ಮ ತಂದನು ಭಾನುನಂದನನು (ಕುವ್ಯಾಕ. ೧-೦೩).

[ ತೊಡಬೆ$_1$ (< ತೊಡಂಬೆ$_1$) ಕಳಚು (< ಕಟಿಲ್ಚು$_1$) ]

**ತೊಡಮೆ** 'ತಡಮೆ' ನೋ.

**ತೊಡರ್$_1$**, ತುಡರು, ತಂಡಂರು, ತೊಡರು$_1$ (ಕ್ರಿ). ೧. ಸಿಲುಕು; ಸಿಕ್ಕಿಕೊಳ್ಳು; ತೊಡಕಿಕೊಳ್ಳು: ಏಕಟಾಕ್ಷರಂಗಳೊಳ್ ತೊಡರದೆ ಸಕ್ಕದಂಗಳ ಪದಂ ಪವಣಾಗಿರೆ ... ಪೇಟ್ಟುದು ನೀತಿ ನಿರಂತರ ಕ್ರಮಂ (ಕವಿರಾ. ೦-೧೪೯): ತೊಡರ್ದೀ ಪುತ್ರಕಲತ್ರಮೋಹದೊಳಿದೇ ಕಟ್ಟಿರ್ದಪ್ಪೆ (ಆದಿಪು. ೦-೬೯): ಉಡೆನೂಲ್ ಸಡಿಲ್ದು ಮೇಗಾಲ್ಪಡಿಗೆಯ ಕುಸುರಿಯೊಳ್ ತೊಡರೆ (ಕಾದಂಬ. ೦೩೪); ನರಿ ತೊಡರ್ವಂತಿರಲೇಂ ಕೇಸರಿ ತೊಡರ್ಗುಮೆ ಬಲೆಯೊಳ್ (ಗದುಪ. ೧೨-೪೨): ತೊಡರ್ವೀ ಗಾಣದ ಗೂಳಿಯಂತೆ ತಿರಿಯುತ್ತಿಂತಿರ್ಪರೇ (ಅರ್ಥನೀ. ೩-೫); ತೊಡರ್ವ ನಿನ್ನಾವನರಿಪಡ್ವರ್ಗತತಿಗೆ (ಸಿದ್ಧರಾ. ೨-೪೦). ೨. ಸಿಕ್ಕಿಬೀಳುವಂತೆ ಮಾಡು; ಸಿಕ್ಕಿಸು; ತೊಡಕಿಸು: ನಾಗರಖಂಡಗಳನಾ ನಾಗರಖಂಡದೊಳ್ ತೊಡರೆ ನರನಿಸುವುದುಂ (ಹಂಪಥಾ. ೫-೮೯); ಓಡಿದು ದಧಿಯಂಬಾಸೆದೋಱಿಸಿ ಕೊಡುತ ಪುಷ್ಕರಣಕೆ ತಳುವನು ತೊಡರ್ದ ನಿಗ್ಗವದೆಡೆಯಲಂಘ್ರಿಗಳೆಡೆಯಲೆಲರಂತೆ ಒದಲೆಡೆಯಲೊಲೆದಾಡೆ (ಸಾಳ್ವಭಾ. ೦೬-೧೪). ೩. ಹೊಂದಿಕೊಳ್ಳು; ಕೂಡಿ

ಕೊಳ್ಳು ; ಸೇರು : ತಂಕಣಗಾಳಿಯೊಳಾದ ಸೋಂಕಿನೊಳ್ ನಡುಗುವ ಶೋಕವಲ್ಲರಿಯ ಪಲ್ಲವದೊಳ್ ನವಚೂತಪಲ್ಲವಂ ತೊಡರ್ದವೊಲಾಗೆ (ಪಂಪಭಾ. ೩-೬೫) ; ನುಡಿಯಂ ಕೇಳ್ದಾಯತ್ತ್ರದೊಳೊಡಂಬಡದು ನುಡಿವ ಪೊಳ್ನುಡಿಯ ಯರ್ದೆಯೊಳ್ ಮಾರ್ನುಡಿವ ನುಡಿಗಳೊಳಮೆಂತುಂ ತೊಡರ್ದುತ್ತರಿಸಿದ ನುಡಿಯ ಕರಂ ಬಲವಂತಂ (ಲೋಕೋಪ. ೦೩-೫೬) ; ಸಿರಿಸರ ಮಾಲೆಯೊಳ್ ತೊಡರ್ದ ನೆಯ್ದಿಲ ಮಾಲೆಯೊ (ಮಲ್ಲಿಪು. ೮-೦೦೬); ಮನದಿಂ ಜಾಣ್ನುಡೆಗೊಳೆ ತೊಡರ್ದರಿನಿಯಕೂಟದೊಳಿನಿಯರ್ (ಚಂದ್ರಪ್ರ. ೮-೬೯) ; ಘನಪಾಂಸುಪಟಲದೊಳ್ ತೊಡರ್ದನಿಲಂ ಸುಟಿವಂತೆ (ಉದ್ಭಟ. ೧೦-೮೬); ಸರ್ವಾರ್ಥದ ಸಿದ್ಧಿಯೊಳ್ ತೊಡರ್ದು ಬೋಧಂ ಭವ್ಯಸಂಸೇವ್ಯಮಾಯ್ತು (ಪುಷ್ಪಪು. ೧-೨೪) : ಕೋಪಾಟೋಪದಿ ನಿಂತೆಂದನೆನಗೆ ತೊಡರ್ದ ಕನ್ಯಾರತ್ನಮನೊಯ್ದು ಮನುಜಂ ಧರಿತ್ರಿಯೊಳಿಲ್ಲಿರ್ದಪನೆಂದು (ಕಾಮುಕ. ೧-೪೪ ವ). ೪. ಅಂಟಿಕೊಳ್ಳು ; ಹತ್ತಿಕೊಳ್ಳು : ತೊಡರ್ದುವು ಸಮುದ್ರದಿಂ ಪೊಱಮಡುವವಸರದಲ್ಲಿ ಮೌಕ್ತಿಕಪ್ರಕರ ಮೆನಲ್ ಕಡುಪಿಂದೆ ರೋಮರೋಮದೆ ಬಡದೆಸೆದುವು ಹಂಗೆ ಚಿಮರ ಬಿಂದುಗಳಾಗಳ್ (ಕಾದಂಪೂ. ೪೫೫) ; ತದುಕಿನ ಮರದ ಮುಱಿ ಗಣ್ಗೊಳೊಗೆದ ಪಗಿನೊಳಗ್ಗಿವೆಗಡಿಂ ಕಾಲ್ತೊಡರ್ದು ಮಿಡುಕಿ ಕಳವಳವ ಕಳವಿಂಕಸಂಕುಳಂಗಳುಂ (ಚಂದ್ರಪ್ರ. ೫-೬೫ ವ). ೫. ಸುತ್ತಿಕೊಳ್ಳು ; ಬಳಸು : ನಿಗಳಂದೋಲ್ ತೊಡರ್ದುದು (ಧಾಪಾಭೂ. ೧೬೫ ಉದಾ); ಕುಡಿದೊಡೆ ಪೊಟ್ಟೆಯಿಂದೆ ಬಱಿನೀರ್ ಪೊಱಪಾಯ್ದುವೆ ಸುತ್ತಿ ಕಾಲನೇಂ ತೊಡರ್ವುವೆ ದಾಂಟುವಲ್ಲಿ ನಿಱಿ (ಚಂದ್ರಪ್ರ. ೮-೬೦) : ಬೆಳ್ಪಿಡಮಿಡಿದಿರ್ದ ರೂಪ್ಯಮಯಶ್ರುಂಖಲೆ ರಾಜಕುಮಾರನಂಘ್ರಿದೊಳ್ ತೊಡರ್ದಿರೆ (ದಶಕು. ೭-೩೬) ; ತೊಡರ್ದಡರ್ದಲವಳ್ಳಿಗಳ ಮಂಟಪಂಗಳಿಂ . . . ತದ್ರಾಜಕೇಳೀವನಂ ಕಣ್ಗೆಸೆದುದು (ಕೃಮಿಭಾ. ೨೯-೪೫). ೬. ಬಂಧಿಸು ; ಕಟ್ಟು : "ತೊಡರ್-ಬಂಧನೇ" (ಶಮದ) : ತನಯವಿಮೋಹಮೆಂಬ ನಿಗಳಂ ತೊಡರ್ದಿರ್ದಪುದು (ಸುಕುಮಾ. ೧೦-೩೨) ; ತದೀಯ ಶುಕದಿರವನು . . . ನೋಡಿ ತೊಡರ್ದ ಬಲೆಯಂ ಕಟಲ್ಚಿ ಕಡೆಗೆದೆಗೆದು ಮೆಲ್ಲನೆತ್ತಿ ತಂದು (ಉದ್ಭಟ. ೯-೦೨೬ ವ) ; ತಮ್ಮನಿಯರ ತೊಡರ್ದ ತೆಕ್ಕೆಯನೊದ್ದು ನೂಂಕುತ (ಚಬಪು. ೧೯-೮). ೭. ಹೋರಾಡಲು ಬಿಡು ; ಕಾದಾಡಲು ತೊಡಗಿಸು ; ಎದುರಿಸುವಂತೆ ಮಾಡು : ತೊಡರ್ದು ಬಿಡಿಂ ಸುಯೋಧನನೆನ್ನುಮಂ (ಪಂಪಭಾ. ೦೩-೯೧) : ಇವರಂ ಕೌರವರ್ಗೆ ತೊಡರ್ದು ಬಿಡು (ಪಂಚತಂ. ೨೦೫-೧೬). ೮. ಎದುರಿಸು; ಪ್ರತಿಭಟಿಸು: "ತಳ್ಪೊಯ್, ತಡಂಬರೆ, ಪೋರ್ಕುಳಿ, ತೊಡರ್ದುದು . . . ತಡಂಬೊಯ್-ಈ ೨೫ ಪ್ರತಿಹತಕ್ಕೆ ಪೆಸರ್" (ಕಶಸಾ. ೫೯-೨೯೬) : ತೊಡರದೆ ನೀಮುಮಾ ನೆಗಟ್ದ ಪಾಂಡುವೊಂದಿಯ ಬಟ್ದಿರೋದೊಡಂಬಡು ನಿಮಗಿಲ್ಲ (ಪಂಪಭಾ. ೦೩-೦೮) ; ತವ್ವ ತಕ್ಕಿನ ಮಾಱುಂ ತಕ್ಕುಗಳುಮನದರಿಯುಂ ತೊಡರಿಯುಂ ನುಡಿದಂತೆ ತಂಕವ್ಯಾನೆಯೊಳ್ಪನಮುಮಂ ಬಿನ್ನಣಮುಮಂ ಮೆಱೆದು (ಶಾಂತಿಪು. ೩-೨೬ ವ) ; ಅರಸುಗೆಯ್ಯಾತಂ ಶರಣೆನೆ ಕಾವುದು ಬೇಡಿದೊಡಿರದೀವುದು ತೊಡರೆ ಸೆಡೆಯದಿಱಿವುದು (ಪಂಚತಂ. ೨೫೪-೨) ; ಮೃಗಲಕ್ಷ್ಮನದೇನೆಂದೀ ನಗೆಮೊಗದೊಳ್ತೊಡರ್ದನೆಂದು ಹಾರಾಂಶುಗಳಿಂ ನಗುವಂತೆ (ಮಲ್ಲಿಪು. ೩-೬೬) ; ತೊಡರ್ದರಿಯಂ ಕೇಸರಿಯೊಳ್ ತೊಡರ್ದಿಭಮೆಂತಂತೆ ಮಾಡುವಂ ಭುಜಬಳದಿಂ (ಅರ್ಧನೇ. ೪-೦೦೦) : ತೊಡರ್ದ ರಾಯರನೊರಸಿದಪೆನೆಂದು ನುಡಿನುಡಿದು (ಹರಿಶ್ಚ. ೧-೪೫) ; ಈರೇಳು ಲೋಕದಲಿ ತೊಡರ್ವರಾರ್ ನಿಮ್ಮಡಿಗಳೊಳು (ಬಸವಪು. ೨೨-೪೧); ಹರಿಯ ಬಳಗಂ ತೊಡರೆ ಗರುಡನಿರದೋಡುವವನೆ (ಚಬಪು. ೫೩-೪೬). ೯. ಅಡ್ಡಿ ಹೊಂದು; ನಿಲ್ಲು; ತಡೆ ಹೊಂದು: ರಜತಗಿರಿಗುಹಾದ್ವಯದೆಡೆಯೊಳ್ ಪೋಪಂದುಮಣಮು ತೊಡರದುದೀ ಪುರಗೋಪುರದೊಳೇಕೆ ತೊಡರ್ದುದೋ ಚಕ್ರಂ (ಆದಿಪು. ೦೪-೮). ೧೦. ಮುಟ್ಟು ; ಹಿಡಿ : ಗಾಳಿ ಸೋಂಕಿದತ್ತು ಪಿಶಾಚಂ ತೊಡರ್ದುದು ಭೂತಂ ಬನ್ನಂಬಡಿಸಿದುದೆನೆ ಸಿರಿಯೊಳರಸುಗಳ್ಮೆಯ್ಮಱಿಯರ್ (ಕಾದಂಪೂ. ೫೬೩). ೧೧. ಆವರಿಸು ; ವ್ಯಾಪಿಸು : ನೀಂ ತಡೆಯೆ ತೊಡರೆ ಮನದೊಳ್ ಚಿಂತೆ ಸಮಂತಿಂತು ಬಂದೆವೆನೆ (ನೇಮಿಪು. ೯-೦೦೨); ಕಾಲ್ ತಡತಡವರೆ ತೊಡರ್ದಳಿಪಿಂದೆಳಸಿ ನೋಟ್ಪ ಮೃಗಲೋಚನೆಯಂ (ಕಾವ್ಯಾವ. ೬೨) : ಚಿಂತಾತುರಂ ತೊಡರ್ದಿರ್ಪಾ ವಿಜಯಾವತೀಸತಿಯ ದೀನಮ್ಲಾನವಕ್ತ್ರಾಬ್ಜಮಂ ಪೊಡಮೀಶಂ ಪುಗುತಂ ನಿರೀಕ್ಷಿಸಿ (ಸುಕುಮಾ. ೩-೩೬). ೧೨. ತೊಡಗು ; ನಿರತವಾಗು : ಮನಮನದೆ ಬಹುಪರಿಗ್ರಹವಿನೋದದೊಳ್ ತೊಡರ್ದ ಜಡರ್ಗೆ ಸಯ್ತಿರ್ದಪುದೆ (ಅಜಿಪು. ೨-೮೯) ; ಈ ಕಜ್ಜದೊಳ್ ನೀಂ ತೊಡರ್ದು ಮರುಳೆ ಬೆಂಡಾಗದಿರ್ಪೋಗು (ಗರಾಯು. ೯-೦೫) ; ಬಿಡದಾಡುವನಿತು ಪೊತ್ತುಂ ತೊಡರ್ದು ವಿಭಾವದೊಳೆ ಬಸನಿ ತನ್ನುಮನಱಿಯಂ (ಸಮುಪ. ೬-೫೨) ; ನೀನಾದಿಕೂರ್ಮನಾದಂದಾನಱಿದೊಡೆ ಪಿಡಿದು ತಂದದಂ ಮತ್ಕ್ರೀಡೋದ್ಯಾನಸರೋವರಸಲಿಲಸ್ಥಾನದೊಳಿರಿಸುವ ವಿನೋದದೊಳ್ ತೊಡರ್ದಿರೆನೇ (ಜಗವಿ. ೦೬-೩೫). ೧೩. ಉಂಟಾಗು ; ಪ್ರಾಪ್ತವಾಗು : ನೀನೆನ್ನಂ ಕಾಡವೇಡಾಂ ತೊಡರ್ದವಸರದೊಳ್ ಪ್ರತ್ಯಯಂಗೆಯ್ದನೊರ್ವಂಗೇನುಂ ತಳ್ವಿಲ್ಲದಾನೀಗಳೆ ಚಟುಲತೆಯಿಂ ನಿನ್ನನೆಯ್ತರ್ಪೆಂ (ಸುಕುಮಾ. ೭-೨೧) ; ಮರಣದ ದಂದುಗಂ ತೊಡರದನ್ನೆಗಮರ್ಚಿಪುದರ್ಥಿಯಿಂ ಜಿನೇಶ್ವರನಂ (ಸಮುಪ. ೧-೧೦೫) : ಅಸ್ತ್ರಮಂ ತಿರಿಪಿದನುಗ್ರವೈರಿಗೆ ಭಯಂ ತೊಡರ್ವನ್ನೆವರಂ (ಜಗವಿ. ೦೨-೩೨) : ಇನಿತಾನುಮಱಿಪಿದರ್ ತೊಟ್ಟನೆ ಕುಸುಮಾವಳಿಗೆ ತೊಡರ್ದ ಮೂರ್ಛೆಯ ತೆಱನಂ (ಕುಸುಮಾ. ೦೨-೦೦೬) ; ಶಿವನಿಂ ಕಲ್ಯಾಯೋಗಭೋಗ ತೊಡರ್ದ ಕರ್ಮಕ್ಷಯಂ ಮಲದ ಪರಿಪಾಕಮಂ ಪಡೆದು (ಪಾಸೋಪು. ೧೦-೦೪೦). ೧೪. ತತ್ತರಿಸು ; ತಡಮರಿಸು : ನಡುಗಲ್ಕರ್ದೆ ಬೆಮರಲ್ ತನು ತೊಡರಲ್ ನಾಲಗೆ ತಗುಳ್ದುದಾ ಮಾರ್ಗಣದಿಂ (ಪಂಪಭಾ. ೦೨-೬೨) ; ತೊಡರೆ ಕೊದಳ್ ಪೊದಟ್ದು ತುದಿನಾಲಗೆಯೊಳ್ . . . ತಡತಡಮಟ್ಟ ಪಾಡಿ ಪೊಸ ಕಳ್ಗಳನೀಂಟಿದುದಂಗನಾಜನಂ (ಸೂಕ್ತಿಸು. ೧೩-೭). ೧೫. ತಾಕು ; ಗೀರು ; ಗೀಚು : ಉಗುರ್ ತೊಡರ್ದಾಯೆಡೆ ರೇಖೆ ಪತ್ತಿ ಚೆಲ್ವಂ ತಳೆದಿರ್ಪುದು (ಚಂದ್ರಪ್ರ. ೮-೬೧). ೧೬. ತಂಗು ; ನಿಲ್ಲು : ಗಗನಗತಿಶ್ರಮಮಂ ನೆಟ್ಟಗೆ ಕಳೆವರ್ ಖಚರರದಱ[ರನ್ನದ]ನೆಗಳೋಳಿಗಳೊಳ್ ತೊಡರ್ದಿರ್ದು (ಕುಸುಮಾ. ೨-೭೭). ೧೭. ವಾದಿಸು; ವಿವಾದ ಮಾಡು: ವೇದಾಂತ ಸಿದ್ಧಾಂತ ಪ್ರಮಾಣ ಶಾಸ್ತ್ರಂಗಳನೋದಿ ತರ್ಕಿಸುವ ಪಂಡಿತರ್ಕಳೊಡನೆ ತೊಡರ್ದು ನುಡಿದು ಸದುತ್ತರಂಗುಡುತಿರ್ಪ ಶುಕಶಾರಿಕಾನಿಕಾಯಂಗಳುಮಂ (ಪಂಚತಂ. ೧೦೮-೭). **ತುಡರು** : ೧೮. ಆಕ್ಷೇಪಿಸು ; ತರಾಟೆಗೆ ತೆಗೆದುಕೊಳ್ಳು; ಜರಿ : ಅಣ್ಣ ಗಂಗಾಧರನನ್ನು ತುಡರಿ ಇದರ ಇತ್ಯರ್ಥಮಾಡಿಕೊಳ್ಳಬೇಕೆಂದು ಹಂಬಲಿಸಿದಳು(ಚಿಪರಿ. ೦೪೨); ನಾನು ಯಾವ ದೃಷ್ಟಿಯಿಂದ ಕಡಿಮೆಯೆಂದು ಈ ಅನಾಚಾರಕ್ಕೆದಿರಿ ಎಂದು ತುಡರುತ್ತೇನೆ (ಮುಕ್ತ್ಯಧಿ. ೨೬). **ತುಡುರು** : ೧೯. ಈಗೀಗ ಅವನು ಅವರನ್ನು ಒಮ್ಮೊಮ್ಮೆ ತುಡುರುತ್ತಿದ್ದನು (ಕಪಲು. ೫೭): 'ದೇವರ ಗುಡಿಗಪ್ಪೇನು ಕಾಯಿಪಲ್ಲಾ ಕೊಡು ಹಾಂಗಿಲ್ಲೇನು' ಅಂತ ತುಡುರಿದ (ಮಿಂಚಹು. ೯೧): ಅವರನ್ನೆಲ್ಲ ತುಡುರಿ, ಅಸ್ತವ್ಯಸ್ತವಾಗಿ ಬಿದ್ದ ಸಾಮಾನುಗಳೆಲ್ಲವನ್ನು ಜೋಕೆಯಿಂದ ಒಳಗೆ ಇಡಿಸಿದನು (ಗ್ರಾಮಾಯ. ೫೦೬). **ತೊಡರು$_1$** : ೧. ಕರ್ಮವೆಂಬ ಅಂಕದೊಡನೆ ತೊಡರಿದೆ (ಬಸವ. ೬೯೯) : ಆ ತೆಲುಗ ಬೊಮ್ಮಯನ ಶರನಿರ್ಘಾತಪಾತಕೆ ತೊಡರ್ದು ಮಡಿಯಲು (ಬಸವಪು. ೫೪-೨೫) : ತೇಜಿಯ ದಾಂಟಿಸಿದನಾಹ ತೊಡರರಭವನ ಶರಣರಾ ಚತುರ್ವಿಧ ಪದಕ್ಕೆಂಬಂದದಿಂ ತಪ್ಪುಕೆ (ಭಾವಚಿಂ. ೮-೧೮) : ನರದೊಳ್

ತೊಡರಿ ರಕ್ತದೊಳ್ ನನೆದು ಪೇರೆಲುಗಳುಮನೊದೆದು . . . ದೈತ್ಯ ಸೇನಾಭಟರ್ ತಲೆದಡವುತೋಡಿದರ್ (ಚಲಪು. ೪೪-೪೪). ೨. ಕೈದುಗಳೊಳಿಟಿ ದೊಡೀಯತ್ತು ಗಡಣೆಗೊಳ್ಳದು ಬಹಳ ಪಾಶಂಗಳ ಬೀಸಿ ತೊಡರಿ ಕೆಡಪಲ್ ವೇಳ್ಕುಂ (ಚಲಪು. ೪೪-೧೫) ; ಭುಜಯು ಗ್ಮವಂ ತೊಡರಿಕೊಂಡುಪ್ಪರಿಸಿ ನರಕೃಷ್ಣರಿರ್ವರಂ ಪಿಡುಕಲೀಯದೆ ಬಿಗಿದು (ಜ್ಞಮಿಥಾ. ೨೫-೫೪). ೩. ಮಹಾರಿಯ ಸ್ಥಿರಪರದೈವದೊಳ್ ತೊಡರದಿಂತು ಬರ್ದುಂಕಿದೆನ್ಯೆ(ಹಂಪಾಶ. ೨೩). ೫. ಬಿಡದೆಯಡಿಸುವ ಬಳ್ಳಿ ಕಾಲನು ತೊಡರಿತು (ಕೃಷಲೀ. ೧೦-೨೪) ; ಪಲ್ಲವಿಸಿದ ನಿರ್ಜರವೃಕ್ಷವ ಕಲ್ಪವಲ್ಲಿಯು ತೊಡರಿಕೊಂಬಂತೆ (ಮೋಹತ. ೦೪-೮೩) ; ಬಿಡದಡಿಸಿ ತೊಳಲುತಿಹ ಬಳ್ಳಿ ತಾನೇ ಕಾಲ್ಗೆ ತೊಡರಲೇನೊಳ್ಳಿತಲ್ಲವೆ (ಚಲಪು. ೪೩-೧೪). ೬. ಕೊಡಹುವಂ ನರವ್ಯಾಗ ಶರೀರಿ ಚರಣಂಗಳಿಂ ತೊಡರುವಂ ಶರಭಾವತಾರಿ (ಚಲಪು. ೩೩-೨೧). ೮. ಐಯಾವೊಳೆಯ ಪುರಪರಮೇಶ್ವರರ್ ಕುಹ ಸಂಪುಂನರಾಚಾರಗಲಿಗಳ್ ತೊಡರೆ ಬಲುಗಂಡರ್(ಕಇ. IV, ೫೫-೯; 1000?) ;ಕಣನೊಳಗೆ ತೊಡರಿದ ವರಿಗೆ ಬೆಂಗೊಡುವನಲ್ಲೆಂದುದುಗ್ಗಡವ ಕೇಳ್ಬೈ (ತ್ರಿಪುಶಾಂ. ೧೬೩) : ರಾವು ತರು ರಾವುತರನ್ನೂ ಕಾಲ್ಮಂದಿಯು ಕಾಲ್ಮಂದಿಯನ್ನೂ ತೊಡರಿಕೊಂಡು ...ಯುದ್ಧವನ್ನು ಮಾಡಿದರು (ಕೃಪಾವಿ. ೫೬). ೯. ತೊಡರಿಯುದ್ಧಂಪಾರ್ವ ಜೀವಿಗಳೆಡೆಗುಪದ್ರವದಹುದೊ ತಾ ಪೋಪೆಡೆಯೊಳೆನುತಂ ಕೈಗಳಂ ತವೆ ಬೀಸದಿಹನಂತೆ (ಬಸಪು. ೩೮-೯) . ೧೧. ಹರಿಪದದಿಂದೊಗೆದ ರಜಂ [ಹರಿ] ಪದವಂ ತೊಡರೆ ನಡೆದುದಾ ನೃಪಸೈನ್ಯಂ (ಕುಸುಮಾ. ೦೫-೮೫) ; ಗುಹೆ ಯೊಳ್ ಪ್ರತಿಧ್ವನಿಗುಡುತ್ತುಂ ನಿಮ್ನಗಾಸ್ಥಾನದೊಳ್ ತೊಡರುತ್ತುಂ . . . ಕೀಡಿದುದೊಂದು ಘೋರಪವನಂ (ದಶಕು. ೫-೬೧); ಮಿಡಿವ ಮರುತನ ತಂಪು ತೊಡರುವಳಿಗಳ ಪೆಂಪು (ಕಂಕಾರಾ. ೩-೧೮-೧೧). ೧೨. ನಿಂದೆಯೊಳ್ ತೊಡರದೆ ಸರ್ವರುಂ ತನಗೆ ಕೆಯ್ಮುಗಿದಿರ್ಪತಿಭಾಗ್ಯದೊಳ್ಪುವಂ ಪಡೆದವಳಾವಳೀಕೆಯುವ್ವೊಲ್ (ದಶಕು. ೦೨-೮೫); ರಾಜ್ಯಕಾರ್ಯ ಗಳಲ್ಲಿ ತೊಡರುವುದರಿಂದ ಧರ್ಮವನ್ನು ಮಾತ್ರವೇ ಅಲ್ಲ ಅಧರ್ಮವನ್ನು ಕೂಡ ಮಾಡಬೇಕಾಗುವುದು (ಶೀಷ್ಮಕ. ೨೨೬). ೧೩. ಮನಕೆ ಲವಾಲಸು ತೊಡರದಂತೆ ವಿಚಿತ್ರವಿನೋದಕೋಟಿಯಂ ವಿನಯದಿನೊರ್ಮೆಯಿಂ ನೆಗಱುತುಂ (ಕುಸುಮಾ. ೬-೫) : ಅನುಲೇಪನಂಗುಡುವ ವೀಳೆಯಮಂ ಕೆಗೆದೀವ ದಂದುಗಂ ತೊಡರೆ ಮನಂಗೊಳಲ್ ನೆರೆದರಿಂದ್ರಲತಾಂಗಿಯ ರನ್ನವಾಸದೊಳ್ (ಕೃಷ್ಣಪು. ೯-೮೬); ಎನಗೆ ಮತ್ತೀ ರೂಪು ತೊಡರಿದುದು ದೈವಯೋಗಾನುಗತಿಯಿಂದಕಟ (ಕೇಕಾರಾ. ೦-೦೮-೦೩). ೧೯. ಹಾಕಿ ಕೊಳ್ಳು; ಧರಿಸು ; ತೊಡು : ಬಿಡದುಟ್ಟ ಪಟ್ಟೆಯ ದಟ್ಟ ಕುಂಕುಮ ಗಾಸೆ ತೊಡರಿದ ದಿವ್ಯಭೂಷಣದ . . . ಸುಭಟರ ಗಡಣವೈತಂದುದರ್ತಿ ಯಲಿ (ಕಂನವಿ. ೨೩-೮೬).

**ತೊಡಂತೊಡರ್** = ಒಟ್ಟುಗೂಡು; ಸೇರು : ನಡುಕಮುಮಟ್ಟಿಯುಂ ಬೆರಸಗಲ್ಕೆಯೊಳಿಂದಿನಿತೆಂಬವೊಲ್ತೊಡಂ[ಪಾಕಾಂ. ಲ್ತರಂ]ತೊಡರೆ (ಅದಿಪು. ೧೨-೨೬). **ತೊಡರ್ದರ ಗಾಣ, ತೊಡರ್ದರ ಗಾಳ** = ಪ್ರತಿಭಟಿಸುವವರಿಗೆ ಗಂಟಲ ಗಾಳದಂತಿರುವವನು; ಒಂದು ಬಿರುದು : ತೊಡರ್ದ್ದರ ಗಾಣ ಮಱಿಹೊಕ್ಕರೆ ಕಾವ ಕೊಟದ ನಾಯಕರ ಗಂಡ ಕಾಡನೂರ ಮಡಯು ನಾಯಕನ ಮಗ (ಎಕ. XII, ಗುಬ್ಬಿ. ೧೮-೩ ; 1366) : ಕೊಡಗರ ಕೇತಂ ಪಡವಳರೆರೆಯುಮ್ಮಂ ವಿಕ್ಕದಾನಿ ಗಡಿಯರ ಸಿಂಗಂ ತೊಡರ್ದ್ದರ ಗಾಳಂ ಕೆಂಚಂ (ಸೌಇಇ. XI-ii, ೦೩೩-೩೪ ; 1087). **ತೊಡರ್ದರ ಜವ** = ಪ್ರತಿಭಟಿಸುವವರ ಪಾಲಿಗೆ ಯಮನಂತಿರುವವನು ; ಎದುರಿಸಿದವರನ್ನು ನಾಶಮಾಡುವವನು ; ಒಂದು ಬಿರುದು : ಗಡಿಯಂಕಮಲ್ಲನೆನಿಪ್ಪ ತೊರ್ಡರ್ದರ ಜವನೆನಿಪರಾಶ್ರಿತರ್ಬ್ಬೇಡಿದಡಂ ಕುಡುವರ್ತ್ಥಿಗಂತರನೆ ಪೆಸರ್ವ್ವಡೆದರ್ (ಕಇ. I, ೨೪-೧೨ ; 1149). **ತೊಡರ್ದರ ಡೊಂಕಿ**, **ತೊಡರ್ವರ ಡೊಂಕಿ** = ಪ್ರತಿಭಟಿಸುವವರಿಗೆ ಡೊಂಕಿಯಾಂತಿರುವವನು; ಒಂದು ಬಿರುದು : ಮಾನ್ಯಖೇಡಪುರವರಾಧೀಶ್ವರಂ ಚತುರ್ಮುಖ ದಾಯಿಗಗೊಂದಳಂ ಬಡಿವಂ ತೊಡರ್ದರ ಡೊಂಕಿಯುದಳರಾದಿತ್ಯಂ (ಎಕ. XII, ತುಮಕೂ. ೯-೦೦ ; 1161) ; ಮಾದಿರಾಜವಿಭು ತೊಡರ್ವರ ಡೊಂಕಿ ಯೆನಿಪ್ಪ ಬಿರುದನಿರದೆತ್ತಿಸಿದಂ (ಮುಂಲಡಾ. X, ೨೬೪-೨೬ ; 1229).

[ ದೇ.॥ ತಮಿ. ತೊಟರ್, ತುಟರ್; ಮಲ. ತುಡರು; ತೆಲು. ತೊಡರು ]

**ತೊಡರ್2**, ತೊಡರು3 (ನಾ). ೧. ಹೊಂದಿಕೆ ; ಸಂಬಂಧ ; ಸೇರುವುದು : (ಕ). ೨. ಕಟ್ಟು ; ಬಂಧನ : ಮೊದಲೊಳ್ಪಱಿದ್ದ ಸಂಸಾರದ ತೊಡರಂ ನಿಂದೆ ಮುಕ್ತಿಪದದೊಳ್ (ಕಾದಂಬ. ೬೦೯) ; ತೊಡರ್ದಿರ್ದ ಮೋಹಪಾಶದ ತೊಡರಂ ಪಱಿಪಡಿಸಿ ಬಿಡಿಸಿ (ಸುಕುಮಾ. ೮-೫೨): ತೀರ್ಥಕರರ್ ನಿಮ್ರ್ಗಕುಳಮೊಲ್ಲರ್ ಮೋಹೋದ್ರೇಕವಿಹೀನರ್ಕಳಿಲ್ಲಿ ರಾಜ್ಯದ ತೊಡರಂ (ನೇಮಿಪು. ೧೩-೪೬); ಮುಂಗಡೆಯೊಳ್ ಪೊರಳ್ವ ಪೆಂಡಿರ ಕುರುಳೋಳಿಯೆಂಬ ತೊಡರೊಳ್ ತಡವಾಗದೆ . . . ಸಂತತಂ ವನಾಂತರಮನೆ ಗೊತ್ತುಮಾಡಿ ಭರದಿಂ ತಳರ್ದತ್ತಧಿರಾಜಕುಂಜರಂ (ಅನಂಪು. ೩-೧೦೪) ; ತೊಡರದಿರು ಮೋಹಪಾಶದ ತೊಡರಂ (ಜೀವಸಂ. ೨೬-೫೦). ೩. ಬೇಡಿ ; ಸಂಕೋಲೆ : ತೊಡರಂ ಪೊಸೆದು ಪಱಿವ ಮದ ಕರಿಯಂತೆ (ಶಾಂತಿಪು. ೮-೫೦ ವ): ತೊಡರ್ಪಱಿವ ವನ್ಯವಾರಣದ ಮಾಟ್ಕೆಯಿಂ (ಪಂಪರಾಮಾ. ೨-೨೦); ಪಡೆಯೆ ನವೀನಯೌವನಮನಾ ಸತಿ ತಾಳ್ದಳಿ ಚಿತ್ರಜಾತನುಂ ತೊಡರನತರ್ಕ್ಯನೀ ಜಗತಿಗಿಕ್ಕಿದನಾಕೆಯ ರೂಪಿನೇಲ್ಗೆ ಗಂಡೆಡರಿದನುರ್ಕಿನಿಂ ಹರಿಹರಾಂಬುಜವಿಷ್ಟರರ್ಗೆಂಬಿನಂ ಕರಂ ಗೆಡೆಗೊಳಿ ರೂವು ತನ್ನ ಸುತೆಗೆ (ನೇಮಿಪು. ೯-೬೦): ತೊಡರ ಬಗಿ ಮದನಂಗೆ ಮದವನು ತೊಡೆ ವಸಂತನ ಮಾರುತಗೆ ಮಱುವಿಡಿಯನಿಕ್ಕು (ತೊರರಾ. ೩-೪-೧೮) : ಆವ ಕೆಯ್ಮುಂ ಬಿಡಿಸಲ್ಕೆ ಬಾರದ ಬಱುಬೆಸೆದ ತೊಡರಿಂದೆ . . . ಬಿಗಿದವೆನ್ ನಿನ್ನನ್ (ಬದ್ಧಪ್ರ. ೨-೨). ೪. ತೊಡಕು; ಗೊಂದಲ; ಗೋಜು : ಮನದೊಳ್ತೊಡರಿಲ್ಲದಾಗಳುಂ ಪರಮಜಿನೇಂದ್ರಪಾದದೊಳ್ ಕಾಂಕ್ಷಿತನಪ್ಪುದು(ಧರ್ಮಾಮೃ. ೩-೨೮೦);ದುಗುಗದ ತೊಡರಟುವ ಮನವನು ತಂದು ವೈರಾಗ್ಯದೊಳು ಶ್ರೀಜಿನಮಂದಿರದೊಳು (ಆದಿಪ. ೪೧-೧). ೫. ಕಟ್ಟುವ ಸಾಧನ; ಹಗ್ಗ, ಸರಪಳಿ ಮುಂತಾದುವು: ವಸಂತಗೃಹ ಮಂಪೊಕ್ಕು ನಡುವಣೆಳಗೌಂಗಿನ ಬಾಳ್ಗಂಬದೊಳ್ ತೊಡರ್ಚಿದ ಲತೆಯ ತೊಡರ ತೂಗುಂಮಂಚದೊಳ್ . . . ಕುಳ್ಳಿರ್ದು (ಚಂದ್ರಪು. ೬-೯೫ ವ): ತಳಸಂಕಲೆಯ ತೊಡರಂಕಣಿಯ ಕೊಂಡೆಯ . . . ಬಲುಪೊರಜೆಗಳ ಬಾರಸಂಕಲೆಗಳನು ಬಿಗಿದರು ಜೋಡಿಸಿದರುಬ್ಬರದ ಮದಗಜವ (ಕುಮಾರರಾ. ೩-೨). ೬. ಸ್ಪರ್ಧೆ; ಹುರುಡು; ಸವಾಲು ಹಾಕುವುದು: ಅತಿಕಾಮಿ ಚನ್ನಮಲ್ಲಿಕಾರ್ಜುನಯ್ಯಂಗೆ ತೊಡರನಿಕ್ಕಿ ಎರಡಱಿಯದೆ ಕೂಡಿದೆನು (ಮಹಾದೇ. ೫. ೬೦-೧೬೪). ೭. ಒಡವೆ ; ಆಭರಣ ; ಭೂಷಣ : ಸುರಯಿಯ ಚೊಲ್ಲೆಯುಮುಂ . . . ಪೊಂಬಾದರಿಯ ಕಿಱುಮುಗುಳ ತೊಡರುಂ ಪರಿವಡೆದಿರೆ ಬಂದನಟ್ಟಿಯಿಂದೆ ಬಸಂತಂ (ಕಬ್ಬಿಗಾ. ೩೨೫). ೮. ಬಿರುದಿನ ಸಂಕೇತವಾಗಿ ಧರಿಸುವ ಕಾಲ ಬಳೆ ; ಬಿರುದಿನ ಪೆಂಡೆಯ : "ತೊಡರ್_ಬಂಧನೇ, ಬಿರುದ ಶೃಂಖಲಾಯಾಂ ಚ (ಬಿರುದಿನ ಸರಪಣಿ) " (ಕಮಧಾ): "ತೊಡರೆಂದೊಡಕ್ಕು ಬಿರಿದಿನ ಪಾಹೆ" (ಕಬ್ಬಿಕೈ. ೬೬) ; ಬಿರುದಿನ ಅಂಕಮಾಲೆ ತೊಡರಿಕ್ಕಿದ ಕಾಲಲು ಗಂಡಪೆಂಡರಂ (ಸೌಇಇ. IX-i, ೨೬೬-೩೨ ; 1183) ; ಪೊಳೆಪೊಳೆವುತಿಪ್ಪ ಪೊಂಬಟ್ಟೆಯಂ ಬಿಗಿದುಟ್ಟು ಘುಳುಘುಳಿಪ ಹೊಸ ತೊಡರನೆಡಗಾಲೊಳೂಲಿದಿಟ್ಟು (ಇಹರ. ದೇ. ೪೦-೧೦): ಬಾವುಲಿಯ ಕಾಲ ತೊಡರ ಮಹಾವೀರರ್ ಜೋಣಿ ಬವರಮಂ ಕೆಣಕಲ್ (ದಶಕು. ೨-೧೬) ; ನಿಮ್ಮ ನೂರ್ವರ ಬಣಗುಗಳಿಗೆಡಗಾಲ ತೊಡರಿದೆ ಬನ್ನಿ ನೀವೆನುತ

(ಕುವ್ಯಾ.ಆ. ೬-೪); ಕಡುಸಡಗರಂ ಮಿಕ್ಕು . . . ಬಿರುದಿನ ತೊಡರ್ ಝುಣ ಝುಣಿಸಲೇಳ್ದು (ರಾಜಶೇ. ೬-೨೦ ವ). 'ಕಾಲ್ತೊಡರ್' ಪರಾ. ೯. ಅಡ್ಡಿ ; ಅಡಚಣೆ ; ತೊಂದರೆ : "ಪ್ರತಿಬಂಧದೊಳು ತೊಡರನಿಕ್ಕು" (ಕಶಠ. ೧೨೪) ; ಜಯಕೇಶಿದೇವಮ[ಹಿ]ಪಂ ತಳದಂ ಮಾ[ನ]ನಿಧಿ ಸಕಳ ಧಾತ್ರಿಯನೇನುಂ ತೊಡರಿಲ್ಲ ತಂನ ದಕ್ಷಿಣಭುಜದೊಳು (ಕಇ. V. ೩೨-೧೦; 1215) ; ಈ ಮುಖವನ್ನೆದೆ ನಡೆಸುವುದನ್ನಯಕ್ಕೆ ತೊಡರಪ್ಪುದು ವಿಚಾರದೊಳ್ಕೈಕೊಂಬುದು (ಕ್ಷಮಿಧಾ. ೨-೬೨) ; ತೊಡರ್ಗಳನೆಲ್ಲ ಮುಂದೆ ಸರಿಗಯ್ಯುವುದು (ಕಾಲಜ್ಞಾ. ೧೬೮-೩೬೬). ೧೦. ವ್ಯಾಜ್ಯ ; ವಿವಾದ : ಸೀಮಾವಿವಾದದಿಂ ತದ್ಗ್ರಾಮಿಜರೋರೊರ್ವರಂ ಪಳಂಚಲೆವೆಡೆಯೊಳ್ ಸೀಮೆಗಳ ತೊಡರನುಡುಗಿಸಿ ಸೀಮಂಕರನೆಂಬುದೊಂದು ಪೆಸರಂ ಪಡೆದಂ (ಅರಿಪು. ೬-೫೭). ೧೧. ಯುದ್ಧ ; ಜಗಳ ; ಕದನ : "ತೊಡರೆಂದೊಡೆ ತೋಟಿಯುಕ್ಕುಂ" (ಛಾರಸಿ. ೨೨). ೧೨. ವ್ಯವಹಾರ ; ಕೆಲಸ ; ಉದ್ಯೋಗ : ಅರ್ಥಿಸಂತತಿಗೀಯಲ್ ಬಿಡುವೊನ್ನುಮನಾಳ್ಗಟ್ಟುವ ತೊಡರೊಳ್ ತೊಡರ್ದಿರ್ದರರಸುಮಕ್ಕಳ್ಕೆಲಬರ್ (ಜಂಪಥಾ. ೧೦-೩೮).

**ತೊಡರು₂**: ೩. ಪಟ್ಟಮಾಧಿಯನೊಂದಿರಲಿ ವಾಚಿಸಲಿ . . . ಕರ್ಮದ ತೊಡರ ಬಿಡಿಸುವುದು (ಗಗಕಾ. ೧೮-೫೩) ; ಎಳೆಹರೆಯದಲ್ಲೇ ಸಂಸಾರದ ತೊಡರನ್ನು ಹರಿದು . . . ಹೊರಟ ಈ ತೇಜಸ್ವಿನಿಯ ಏಕನಿಷ್ಠೆ ಹರಿಯ ಅನುಭಾವಿಗಳನ್ನೇ ಬೆರಗುಗೊಳಿಸಿತು (ಕಾವ್ಯಕ. ೧೧೨). ೪. ಭೀಮಫಲು ಗುಣರಿಟ್ಟ ತೊಡರಿನೊಳಾರು ಸಿಲುಕರು ದಿವಿಜದನುಜರಲಿ (ಕುವ್ಯಾದ್ರೋ. ೧೮-೨೮); ೫. ಪ್ರದಕ್ಷಿಣಂಗೈದು ತೊಡರು ಕಾಡಣೆಯಂ ತೆಗೆಸಿ ಇಮ್ಮಡಿ ಘಂಟೇಂದ್ರ ನರೇಂದ್ರಂ ಹನುಮಗತಿಯಿಂದೇರಿದನು (ಬೀಳಕಂ. ೦-೪೫ವ). 'ಕಾಡಣೆ' ಪರಾ. ೬. ಅನುಪಮಪ್ರಣವಮಂದುಗೆ ದಯೆಯ ತೊಡರು . . . ಚಿತ್ರಿನ ನೊಸಲುಗನ್ನಡಿಯೊಳೆಸೆದನು (ಸಿದ್ಧರಾ. ೩-೪೬); ಸಿರಿಯ ಸಡಗರದ ತೊಡರ ಝುಣಝುಣರವದ ಮಲ್ಲಡಿಯಿಡುವ ಗಮನದ ಭರದಿ ಕಿಱುಬೆಮರಿಡುತ ಬಂದಳು (ನಳಚ. ೩-೫೭); ಚಾಮಿಸಾಕರದ ತೊಡರಿ ನೊಳ್ಪೆಳಗು ಪೊಂಬಿಸಿಲೆಸಕಮಾಗೆ (ನಂದಿದಾ. ೯-೪). ೮. ಕಲಿಯ ಕಾಲ ತೊಡರು ಛಲದಾಳಿಗಲ್ಲದೆ ಇಕ್ಕಬಾರದು (ಬಸವ. ೭೬೫); ಬಾವುಲಿಯ ತೊಡರುಗಳ ವೀರಗಣಾವತಾರದ ವೀರಭಕ್ತರು (ಬಸಪು. ೫-೪೦) ; ತೊಡರ ತೆಗೆದರು ಕೈಯಡಾಯ್ದವ ಜಡಿಯಲಮ್ಮರು...ಕೈದೀವಿಗೆಯ ಮಱಿಯಲಿ ಮಿಡುಕದಿರ್ದುದು ರಾಯನೋಲಗದೊಳಗೆ ಪರಿವಾರ (ಕುವ್ಯಾಕ. ೦-೧೮); ತೊಡರ ಝುಣಝುಣರವದ ಸುರರುಪ್ಪುಡಣದ ಬಿರುದಿನ ಬಾವುಲಿಯ . . . ರಾಯರಕ್ಕಸನೈದಿದನು ಧನುವ (ತೊರರಾ. ೦-೫೫-೦೦) ; ಸೀಸಕದ ಪುಸ್ತಂಗ ತೊಡರಗಾವಳಿಯಿಂದ ಭೂಪೋತ್ತಮನು ನಡೆದನುಬ್ಬಿನಲಿ (ಕಂಠವಿ. ೦೫-೦೨). ೯. ಪಾಶ್ಚಾತ್ಯ ದರ್ಶನಕಾರರೂ ಎಷ್ಟೋ ತೊಡರು ಗಳಿಗೆ ಗುರಿಯಾಗಿರುತ್ತಾರೆ (ಜೀವಾತ್ಮ. ೪೫). ೧೪. ಹೊಡೆತ ; ಪೆಟ್ಟು (?) : ಬಾಳ ಹೊಯ್ಲೋ ಸಿಡಿಲ ತೊಡರಿನ ಸೂಳುಗಳೋ ಸಿಡಿದಲೆಯ ಗಿರಿಗಳ ಬೀಳುಗಳೊ (ಕುವ್ಯಾಸ. ೨-೦೦೪).

ತೊಡರ ಬಾವುಲಿ = ಬಿರುದಿನ ಪೆಂಡೆಯ: ತೊಡರ ಬಾವುಲಿಯೊಳಗೆ ಜವಿ ಹಲವು ದಂಡೆಯಿಂ ಗುರುಗಂಜಯಿಂ ಸವೆದ ದಂಡೆ ಮಂಡೆ ಯೊಳೊಪ್ಪೆ (ಬಸರ. ೯-೯೮).

[ <ತೊಡರ್₁./ತಮಿ. ತೊಟರ್, ತುಟರ್ ; ಮಲ. ತುಡರ್ ; ತುಳು. ತೊಡರ್, ತೊಡರು ]

**ತೊಡರಿಕ್ಕು** (ಕ್ರಿ). ೧. ತೊಡಕಿಸು ; ತೊಂದರೆಯನ್ನುಂಟುಮಾಡು : ಎನಿತಾನುಮುಪದ್ರವಂಗಳೊಳ್ ತೊಡರಿಕ್ಕೆಯುಂ ಗೆಲಲಾಱದೆ (ಜಂಪಥಾ. ೨-೩೨ವ) ; ಅನ್ಯಮಂತ್ರಿನಿಕರಕ್ಕದಟಂ ತೊಡರಿಕ್ಕಿದಂ (ಎಕ. VIII, ಸೊರಬ. ೧೪೦-೫೪; 1193). ೨. ಹುರುಡಿಸು ; ಸವಾಲು ಹಾಕು ; ಸ್ಪರ್ಧಿಸು : ಸಾಯಿಸುವ ಸಾವಂಜಿತನಗೆ ಚಿರಾಯು ತೊಡರಿಕ್ಕಿದನು ಮಾರ್ಕಂಡೇಯಮುನಿಗೆಂದರಸ ದೊಪ್ಪನೆ ಕೆಡೆದನವನಿಯಲಿ (ಕುವ್ಯಾಕ. ೦-೩). ೩. ಸಂಕೋಲೆ ಹಾಕು ; ಬಂಧಿಸು. [ ತೊಡರ್₂ + ಇಕ್ಕು ]

**ತೊಡರಿಚು** 'ತೊಡರ್ಚು' ನೋ.

**ತೊಡರಿಸು** (ಕ್ರಿ). ೧. ಸಿಕ್ಕಿಸು ; ತೊಡಕಿಸು : ಬಲದ ಕಡೆಯ ಮಿಣಿವಲೆ ಯನೊಡ್ಡಿ ತೊಡರಿಸಿ ಹಿಂದಣ ಬೇಟೆಯ ನಾಯ್ಗಳ ಕೆಡಹುವ ಮುಂದಣ ಬೇಡನು (ಶಿಕಗೀ. ೬೫೩) ; ಕೊಟಿದ ತೋಟಿಯೊಳ್ ತೊಡರಿಸಿಯುಂ ಅಗಲ್ದ ಮನಮಂ ಮಣಿಯಿಸಿಯುಂ . . . ಸುಪ್ರಭಾತ ಸಮೀರಣಂ ಕೀಡುತ್ತಿರೆ (ಲೀಲಾವ. ೩-೨೦) ; ಕಡೆಗಣ್ಣ ಪಾಶಮಂ ತೊಡರಿಸುತ (ಪಂಕಾರಾ. ೫-೬-೫೨). ೨. ಕೂಡಿಕೊಳ್ಳು ; ಸೇರು : ತೊಡರಿಸುತ ಕೊಡಹಿ ಕಳುಹುವ ಸೂಳೆಯನು ಸೊಡಚುವವನೆಗ್ಗ (ಸರ್ವಜ್ಞ. ೦೯೩೬). ೩. ಸೇರಿಸು ; ಕೂಡಿಸು : ತೊಡರ್ಪಂ ತೊಡರಿಸುವ ನರಕಗತಿಯೊಳ್ ತೊಡರ್ವುದೆ (ಅಜಿಪು. ೨-೬೦) ; ನಿನಗೆ ಅಪಯಶಸ್ಸಿನ ಮೇಲೆ ಆಸೆಯಿದ್ದರೆ ನಮ್ಮ ಹೆಸರನ್ನೇಕೆ ಇದರಲ್ಲಿ ತೊಡರಿಸಿದೆ(ಮಧ್ಯಮ. ೨೦೦). ೪. ನಿಯಮಿಸು; ನಿಯೋಜಿಸು : ಅತಿ ಭಟರಂ ತೊಡರಿಸಲವರತಿವೇಗದೆ ನಡೆತಂದಾ ಕಡಬ ದುರ್ಗ್ಗವನವಂ ಪೊಕ್ಕರ್ (ಹಾರಾಸ್ಕ. ೦-೪-೬೩). ೫. ಪ್ರವರ್ತಿಸು ; ಉದ್ಯೋಗಿಸು : ಬಿಡದೆ ಸೋಂಕುವ ಕೈಗಳಾದಡೆ ತೊಡರಿಸು [ಪಾಕಾಂ. ಚು]ವ ಸತ್ಕ್ರಿಯೆಗಳೊಡನೊಡನುಡುಗೆ ಗದ್ಗದಕಂಠಸಂಗತಿಯಿಂದೆ ದನಿ ಗೊಡುವ (ಬಸಪು. ೩೫-೫). ೬. ಬಂಧಿಸು ; ಕಟ್ಟು.

[ ತೊಡರ್₁ + – ಇಸು₃ ]

**ತೊಡರು₁** 'ತೊಡರ್₁' ನೋ.

**ತೊಡರು₂** 'ತೊಡರ್₂' ನೋ.

**ತೊಡರು₃**, ತೊದುರು (ನಾ). ಒಂದು ಬಗೆಯ ತೆರಿಗೆ : ಆನೆಯ ಸೇಸೆ ಗ ೨ ಪ ೬ ತೊಡರು ಹಾ ೧ ಖಾಣ ನಿಬಂಧ ವ ೯ (ಎಕ. VI, ಕಡೂರು. ೬೮-೩೫ ; ?). **ತೊದುರು**: ಕಲುಕು ಹಾ ೨ ತೊದುರು ಗ ೪ ಆನೆಯ ಸೆ ಗ ೬ ಅ ೧ ವ ೨ (ಎಕ. V, ಹಾಸನ. ೦೪-೬೪ ; ಸು. 1230). [ ? ]

**ತೊಡರುಗಟ್ಟು** (ಕ್ರಿ). ಹುರುಡಿಸು ; ಸ್ಪರ್ಧಿಸು : ತೊಡರುಗಟ್ಟುವ ಜೈವ ಭಟ್ಟರ ಬಿಡುವ ಕಾದುವ ವೀರಭಟರಿಂದಿಡಿದುದಮರಾವತಿಯ ಸೊಂಪಿನ ಸೂಳೆಗೇರಿಗಳು (ಕುವ್ಯಾಭೀ.೫-೨೦).[ತೊಡರು₂(<ತೊಡರ್₂) + ಕಟ್ಟು₁ ]

**ತೊಡರುಗಾಲು** (ನಾ). ೧. ಅಡ್ಡಲಾಗಿ ಒಡ್ಡುವ ಕಾಲು ; ಅಡ್ಡಗಾಲು: ಅವರು ನೂರೊಂದು ಜನವಿದ್ದರೂ ಅವನೊಬ್ಬನೇ ಎಲ್ಲರನ್ನೂ ಮರ್ದನ ಮಾಡಿಬಿಡುವನು. ತೊಡರುಗಾಲು ಕೊಟ್ಟು ಬೀಳಿಸುವನು (ವಚಥಾ. ೧೬). ೨. ನಡೆಯುವಾಗ ಹರಡುಗಳು ಪರಸ್ಪರ ತಗುಲುವ ಕಾಲು. ೩. (ಆಲಂ) ಅಡ್ಡಿ ; ಅಡಚಣೆ. 'ತೊಡಕುಗಾಲು' ಪರಾ.

[ ತೊಡರು₁ (< ತೊಡರ್₁) + ಕಾಲು₁ (< ಕಾಲ್₁) ]

**ತೊಡರುಗೊಳ್ಳು** (ಕ್ರಿ). ಬಿಗಿಯಾಗು ; ಬಿಗಿದುಕೊಳ್ಳು : ಅವಯವದ ಸಂದುಗಳೆಲ್ಲವೂ ತೊಡರುಗೊಂಡು . . . ಮಧ್ಯಮವಾದ ಜ್ವರವೇಗ ವುಂಟಾಗಿರುವುದೇ ವಾತಶ್ಲೇಷ್ಮಜ್ವರವೆನಿಸಿಕೊಳ್ಳುವುದು (ಸಕಲವೈ. ೯೫).

[ ತೊಡರು₂ (< ತೊಡರ್₂) + ಕೊಳ್ಳು₁ (< ಕೊಳ್₁) ]

**ತೊಡರುಮುಳ್ಳು** (ನಾ). ತೊಡಕಿ ಹಿಡಿದಂ ಕೊಳ್ಳುವ ಕೊಕ್ಕೆ ಯಾಗಿರುವ ಮುಳ್ಳು : ತೊಡರುಮುಳ್ಳಿಗೆ ತಗುಲಿ ಬಟ್ಟೆಯೆಲ್ಲಾ ಹರಿದುಹೋಯಿತು (ರೂಢಿ).

[ ತೊಡರು₁ (< ತೊಡರ್₁) + ಮುಳ್ಳು (< ಮುಳ್) ]

**ತೊಡರುಲಿ** (ನಾ). ಆಭರಣದ ಧ್ವನಿ ; ಒಡವೆಯ ಸದ್ದು : ಮಾತೆಯ ಬಳಿಗೆ ಪರಿದೈದಿ ತೊಡರುಲಿಯೊಳು ಮಾಡುತ್ತೆ ಮುದ್ದ (ಸವಮೋ. ೦೫-೫೫). [ ತೊಡರು₂ (<ತೊಡರ್₂) + ಉಲಿ₂ ]

**ತೊಡರ್ಚು, ತೊಡಚು, ತೊಡರಿಚು** (ಕ್ರಿ). ೧. ಕಟ್ಟು; ಬಂಧಿಸು: "ತೊಡರ್ಚು – ಬಂಧನೇ" (ಶಮುಧಾ); ತನ್ನ ನಿರ್ಭರಪ್ರಣಯಿನಿಗಳ ದೊಳೆ ತೊಡರ್ಚೆ ತಾಗಿದಳ್ (ಆದಿಪು. ೧೨-೩೬ ವ); ದಾಮೋದರನಾಂ ಮತ್ತಿಯನೀ ಮುಱಿದಪೆನೆಂದದೊಂದು ಕುಜಮಂ ಕಾಂಚೀದಾಮದೆ ತೊಡರ್ಚಿ . . . ಮುಱಿದಳ್ (ಜಗವಿ. ೩-೨೦); ತೊಡರ್ಚಿದ ತೊಡಕ ಬಿಡಿಸ ಪೋಗಿ ಕಟ್ಟಿನೊಳ್ಕಿಡದೊಲಾಯ್ತು (ಸೊಬಗಿನ. ೨೦-೬೯); ಪಿಂಗಾಲ್ಗೆ ತೊಡರ್ಚಿದಗ್ಗರಣೆಯಂ ಛಟಛಟನೆ ಕೀಳ್ತು (ರಾಜಶೇ. ೬-೦೦ ವ). ೨. ಸಿಕ್ಕಿಸು; ತೊಡಕಿಸು: ದೇವರನ್ನಂ ಧರಾಧರದೊಳ್ ತಂದು ತೊಡರ್ಚೆ ಪೂಣ್ದು ತಲೆಗೋದಿರ್ದಂ (ಆದಿಪು. ೪-೮೧); ನಿಱಿಯ ಸೆಱಂಗನೆತ್ತಿ ನಿಜನೀವಿಯೊಳುಯ್ದು ತೊಡರ್ಚೆ (ಕುಸುಮಾ. ೬-೭೮). ೩. ಸೇರಿಸು; ಹೊಂದಿಸು; ಕೂಡಿಸು; ಜೋಡಿಸು: ತಡವಡಿಸಿ ಯತಿಯನಿಂತಿರೆ ತೊಡರ್ಚೆ ಕಿಡೆವೇಟ್ಟೊಡಕ್ಕುಮದು ಯತಿಭಂಗಂ (ಕವಿರಾ. ೧-೭೩); ತಡೆಯದೆ ಭವ್ಯರನದಿದೊಳ್ ತೊಡರ್ಚೆ ಕಯ್ಗೊಳಿಪ ಸರ್ವಯಶರಂ ನೀಂ ಕಂಡು (ಶಾಂತಿಪು. ೪-೬೬); ಮಾಂಗಾಯ ಫಲಾವಳಿಗಳೊಳಂ ತೊಡರ್ಚಿದ ಪುನ್ನಾಗದ ಸೂಸಕಂಗಳೊಳಂ . . . ಪೊಂಬಾಟಿಯ ಚಾಮರಂಗಳೊಳಮೆಸೆವ ಮಂಟಪಂಗಳ್ (ಕಾದಂಬ. ೭೮೩); ದೇವಾಂಗವಿತಾನಮಂ ತೊಡರ್ಚುವ ನವಮುಕ್ತಾವಳಿಯಂ ಕಟ್ಟುವ ದಿಗ್ದೇವಿಯರೇಂ ರಾಗರಸದೊಳೋಲಾಡಿದರೋ (ಮಲ್ಲಿಪು. ೧೪-೨೩೦); ತದೀಯ ಪಾಣಿಪಲ್ಲವಮನನುರೂಪ ಕನ್ಯಾಕರಕಿಸಲಯದೊಳ್ ತೊಡರ್ಚಲ್ ಬಗೆದು (ಅರ್ಧನೇ. ೩-೩೪ ವ). ೪. ಧರಿಸುವಂತೆ ಮಾಡು; ತೊಡಿಸು: ಬೇಡವೇಡನೆಯುಂ ಕಿವಿಯೊಳ್ತೊಡರ್ಚೆ ಪೋದಳೀ ಕುಸುಮಮಂಜರಿಯಂ (ಕಾದಂಪೂ. ೭೭೮); ಒಲವಿಂ ಮಣಿನೂಪುರಮಂ ತೊಡರ್ಚಿದಳ್ (ಉದ್ಭಟ. ೮-೩೯); ಮೆಚ್ಚಿ ವಸುದೇವನ ಕೊರಳ್ಗೆ ತೊಡರ್ಚಿದಳು ನವರತ್ನಮಾಲೆಯ (ಸಾಳ್ವಭಾ. ೦೮-೩೩); ಫುಲ್ಲಶರನ ವಲ್ಲವಶರಕ್ಕೆ ಕಂಗಱಿಗಟ್ಟದಂತೆ ಕಿಂಬೆಳಗಂ ಕಱೆವ ಕೆಂಬೆರಲುಂಗುರಮನಂಗುಲಿಯೊಳ್ತೊಡರ್ಚಿಯುಂ (ರಾಜಶೇ. ೦೩-೫೯ ವ). ೫. ಮುಡಿಯುವಂತೆ ಮಾಡಂ; ಮುಡಿಸು: ಲಳನೆಯ ಕೇಶದಲ್ಲಿಯಲರುಂ ತಳಿರುಂ ಪೊಳೆವಂದದಿಂದೆ . . . ದೇಸಿಯ ಪೂಮುಡಿಯಂ ತೊಡರ್ಚಿದರ್ (ಚಂದ್ರಪು. ೬-೩೪). ೬. ಪೋಣಿಸು; ಸರಕಟ್ಟು: ಧಾತ್ರೀಶನ ಸಾಂದ್ರಮನಸ್ಸೂತ್ರದೊಳಾ ಸತಿಯ ಗುಣಗಣೋದ್ಗಮತತಿಯಂ ಚಿತ್ರವಿಧದಿಂ ತೊಡರ್ಚಿದ ಧಾತ್ರಂ ಮುಂ ಮಾಲೆಗಾಱಿರೊಡನಾಡಿದನೋ (ಚಂದ್ರಪು. ೩-೨೮); ನಳಿನಗುಣದೊಳ್ ತೊಡರ್ಚುತುಂ ಮೆಲ್ಲಮೆಲ್ಲನಿರವಂತಿಯ ಪೂದೊಡಗೆಗಳಂ ವಿರಚಿಸಿದರ್ (ನಾಕ. ೫-೭೨); ಮಲ್ಲಿಗೆ ಮುಗುಳ ಸೂಸಕಂಗಳಂ ತೊಡರ್ಚಿ ನಿವಿರ್ಚಿದ ಚೂತಪಲ್ಲವದ ಚುಂಚುಲೋವೆಯಂ (ರಾಜಶೇ. ೧೧-೫೧ ವ). ೭. ತೊಡಗಿಸು; ನಿಯೋಜಿಸು: ಕರ್ಣನಂ ದ್ವಂದ್ವಕಲಹದಿಂ ದೇವಾಂಗನಾ ರತಿಕಲಹದೊಳ್ ತೊಡರ್ಚಿ (ಜಗವಿ. ೦೩-೫ ವ). ೮. ಉಂಟುಮಾಡು; ಆಗಿಸು: ಅಳೀಕ ಲಜ್ಜೆಯಿನೇಂ ನಿನಗೆ ಗಮನಾಯಾಸಮನೆ ತೊಡರ್ಚಿದಪ್ಪೆಂ (ಕಾದಂಬ. ೩೯೯); ಮತಿ ಸಮ್ಮೋಹಮನಿದಿರವರ್ಗೆ ತೊಡರ್ಚಲ್ಕೇಟ್ಟೊಡಲ್ಲಿಗಲ್ಲದು ದೋಷಂ (ಕಾವ್ಯಾವ. ೪೩೬); ವಿರಹಾತುರಾಗ್ನಿ ತಾಪವನಿದನೆಂತು ನಂದಿಸುವೆನೇನನೊಡರ್ಚುವೆನಾವುದಂ ತೊಡರ್ಚುವೆಂ (ಕುಸುಮಾ. ೧೧-೨೩). ೯. ಆರಂಭಿಸು; ತೊಡಗು; ಪ್ರಾರಂಭಮಾಡು: ಮಯ್ಗಲಿತನದಿಂ ತೊಡರ್ಚಿದವು ಕಾಳೆಗಮಂ ಕಡುಕೆಯ್ದು ಕೋಟಿಗಳ್ (ದಶಕು. ೧೧-೫೦); ಕಳಲೆನಾಡೊಳೊಡರ್ಚಿ ತೊಡರ್ಚಿ ತೋಟಿಯಂ . . . ಬಂದ ಮಲೆನಾಡಿನ ಸಿಂಗಳರಾಯ (ಚಿಕವಿ. ೨-೭೮). ೧೦. (ಬಿಲ್ಲಿಗೆ ಬಾಣವನ್ನು) ಹೂಡಂ,–ಸಂಧಾನ ಮಾಡು.–ತೊಡು: ಮೆಲ್ಲನೆ ಬಿಲ್ಲೊಳಂಬಂ ತೊಡರ್ಚೆ (ನೇಮಿಪು. ೧-೭೫ವ); ಬಿಲ್ಗೀಸುವ ಬಾಣಮಂ ತಿರುಪಿ ತಿರ್ದುವ ಮಾರ್ಕಿರುವಂ ತೊಡರ್ಚಿ ನೋಟ್ಟಾ ಸಹಜ ಕ್ರಿಯಾವನ ವನೇಚರರಿಂ ಬಗೆಗೊಂಡುದಾ ವನಂ (ಜಗವಿ. ೧೬-೦೩); ಹೊಸವುಸೆಯ ಬಾಣಂಗಳಂ ತೊಡರ್ಚಿ ಹಱಿದಲೆಯನಾತ್ಮಜನನೆಚ್ಚು ಮರಳೆಚ್ಚು ಬೊಬ್ಬಿಱಿದು ಕೈಯೊಡನೆಸೆಯ (ಆದಿಪು. ೧೦-೦೨). **ತೊಡಚು**: ೧. ಸಿದ್ಧಪತಿಯೊಂದು ದಿನ . . . ಪದ್ಮಾಸನಂಗೆಯ್ದು ಶಶಿರವಿಗಳಂ ಬಲಿದು ಕರಣಂಗಳ ತೊಡಚಿ ಕುಂಡಲಿಗೊತ್ತಿ (ಸಿದ್ಧರಾ. ೪-೨೭); ಝಾಡಿಸುವ ತೆಗವ ತೊಡಚುವ ಪಿಡಿವ . . . ವಿರೋಧಿಯಿಂಗಿತವಱಿವ ಭಿನ್ನಣಾ ಹರನರರೊಳೆಸೆದಿರ್ದುದು (ಜಿಂಪು. ೩೩-೫೦). ೨. ಬಲಿದಂತಃಕುಂಡಲಿಯೊಳ್ ಪ್ರಾಣವ ತೊಡಚಿ . . . ನೆಗೆದಳ್ ಗಗನಾಂಗಣಕೆ (ವೀರೇಶ. ೦-೬೮); ವರಮಂದಿರದ ಮೇಲ್ವಲಗೆಯ ಕೊಂಡಿಗೆ ಸರಪಳಿಯನು ತೊಡಚಿದರು (ಮೋಹತ. ೧೭-೪೯). ೩. ಕಡಿಗಳ ಹದಿನೆಂಟನೊಡಗೂಡಿ ಸಂಧಿಸಿ ತೊಡಚಿ ಕಟ್ಟದೆ ನರರ ಬಂಧನದಲ್ಲಿ (ದೇದಾಪ. ೩೭-೭೨); ನೇಹದ ನಲ್ಲರ ತೋಳೊಳ್ ತೊಡಚಿದ ಬಾಹುಲತಿಕೆದೆಗೆದೊಯ್ಯನೆ ಕುಲಟಾವ್ಯೂಹಂ ನಡೆತಂದುದು (ಜಯಸ. ೦೪-೨). ೪. ಮಾಲೆ ತೊಡಚುವ ಕಜ್ಜಮಂ ಮಱಿದು ನಿಬ್ಬೆಱಗುವಡೆದು ಲೆಪ್ಪದ ಪೆಣ್ಣನಂತಿರ್ದಳು (ಸೌಂದಪು. ೦೨-೪೦). ೫. ಖಗರಾಜನೊಳು ಹಿಂದೆ ಕಾದಿ ನುಗ್ಗಿದ್ದವರ್ ಜಗಳವ ತೊಡಚಲುಬಹುದೆ (ಮೋಹತ. ೩೯-೨೦). ೧೦. ಕಡೆಗಾಗಳೆನಿಪ ಬಾಣವನು ಭೂಚಾಪದಿಂ ತೊಡಚಿ ಎಸುವುದು (೨೦ಜಾಡ. ೩-೦೫೫); ಒಂದನಲ್ಲದೆ ನಿನ್ನ ತಲೆಗೆರಡಂಬ ತೊಡಚಿದರೆ ಇಂದು ನಿನ್ನಯ ಬಾಯ ತಂಬುಲ ತಿಂದವನು ನೋಡು (ಕುವ್ಯಾದ್ರೋ. ೧೭-೩೮); ಎಜ್ಜ ಬಾಣವ ತಱಿದು ತೊಡಚಿದನುಚ್ಚಿ ತೋಮರದಂಬನು (ತೊರರಾ. ೩-೬-೫೫); ಸದ್ಭಾವವೆಂಬ ಬಿಲ್ಲಿಂಗೆ ಸುಮನವೆಂಬ ನಾರಿಯ ಹೂಡಿ ಸುಜ್ಞಾನವೆಂಬ ಅಂಬ ತೊಡಚಿ (ಮೋಳಿಮಾ. ೨೪೫-೭೯೬ ೬೮೪). ೧೧. ಸೇರು; ಕೂಡು; ಹೊಂದು: ನಿಮ್ಮ ಗರ್ಭದೊಳು ತೊಡಚಿ ಎಳೇ ತಿಂಗಳಿಗೆ . . . ಉದಯಿಸುವನು (ಸಾಳ್ವಭಾ. ೨೦-೯೩); ತೊಡರಿಸುತ ಕೊಡಹಿ ಕಳಹುವ ಸೂಳೆಯನು ತೊಡಚುವವನೆಗ್ಗ (ಸರ್ವಜ್ಞ. ೦೯೩೭). ೧೨. ಎದುರಿಸಂ; ವಿರೋಧಿಸು: ಕರ್ಣನ ನಾವು ತೊಡಚುವರಲ್ಲ ತೆರಳಿಚು ಪಾಳಯಕೆ ರಥವ (ಕುವ್ಯಾಕ. ೦೪-೩೭) ತೊಡಚಬೇಡ ಕುರುವಂಶದ ಹೊದಟಿನು ಕಡಿವ ಕಠೋರವಿಕ್ರಮನ ಒಡನಳಗಲಿಗಳೆನುತ ಕೌಂತೇಯರ ಕಡೆಯ ಕಾಳೆಗಳೊದಱಿದುವು (ನೇಮಿಸಂ. ೨೯-೪೪). ೧೩. ಪ್ರಾಪ್ತವಾಗು; ಉಂಟಾಗು: ಆಗಲೀ ವೈಷ್ಣವಕೆ ನಮ್ಮಯ ತಾಗುಥಟ್ಟನ ರಕ್ಷೆ ತೊಡಚಿದುದಾಗಳದ್ದುದು ಪಾಶುಪತ ಶರವದಱ ಬಳಿವಿಡಿದು (ಕುವ್ಯಾಅ. ೦೪-೧೦). **ತೊಡರಿಚು**: ೧೨. ಒಡನೆ ಬೊಬ್ಬಿಡುವನು ಮಹಾಹವ ತೊಡರಿಚುವರಿಲ್ಲಾ ಎನಂತ (ಕುವ್ಯಾವಿ. ೬೦೪. ೪-೦೦).

**ತೊಡರ್ಚಿಕೊಳ್, ತೊಡಚಿಕೊಳ್** = ೧. ಕಟ್ಟಿಕೊಳ್ಳು; ಬಂಧಿಸಿಕೊಳ್ಳು: ಆ ಕುನ್ನಿಗಳಂ ತಮ್ಮ ಶ್ರೋತ್ರನಾಳದೊಳ್ ತೊಡರ್ಚಿಕೊಂಬುದುಂ (ಪಂಚತಂ. ೨೦-೫). ೨. ಸಿಲುಕಿಸಿಕೊಳ್ಳು; ಸಿಕ್ಕಿಸಿಕೊಳ್ಳು: ಮಾಯಾ ಮೋಹನಂಗಳಲಿ ತೊಡಚಿಕೊಂಬ ಸಮಸ್ತವಸ್ತುವನಡಕಿಕೊಂಬ ವಿದಗ್ಧಮುಗ್ಧೆಯರು . . . ಎಸೆದರು (ತೊರರಾ. ೦-೫-೬೦). ೩. ಧರಿಸಿಕೊಳ್ಳು; ತೊಟ್ಟುಕೊಳ್ಳು: ಮನಿಯ ವೇಷವ ತೊಡಚಿಕೊಂಡಿಹ ಕಾಲನೇಮಿಪ್ಪಂತೆ ರಂಜಿಸಿದ (ತೊರರಾ. ೬-೩೩-೬೮).

[ ತೊಡರ್$_1$ + –ಚು$_1$ ]

**ತೊಡರ್ಚುವಲೆ** (ನಾ). ಒಂದು ಬಗೆಯ ಬಲೆ: ತೊಡರ್ಚುವಲೆ ತೋಳುವಲೆ ಮರೆವಲೆ ಸಗಾಥವಲೆಗಳ ಹೊರೆಗಳೋಳಿಯಂ ಪೊತ್ತು ನಡೆತಂದುದು . . . ಭೂತಗಣಂಗಳು (ಸೌಂದಪು. ೧೮-೩೯). [ ತೊಡರ್ಚು + ಬಲೆ$_1$ ]

**ತೊಡರ್ಪು, ತೊಡಪ್ಪು$_3$** (ನಾ). ೧. ಕಟ್ಟು ; ಬಂಧನ : ಕಿಡುಗುವೆ ರಾಜ್ಯಂ ರಾಜ್ಯದ ತೊಡರ್ಪದೇವಾಟಿಸ್ತಿ (ಪಂಪಭಾ. ೧-೮೨) ; ದಯಿತಾಸಂಬಂಧ ಬಂಧಂ ಭವಪರಿಣತಿ ತನ್ಮೂಲವಿಶಾ ಬೇವಸಂ ನಿಶ್ಚಯಮೆಂದರಿತಂ ತೊಡರ್ಪಂ ಬಿಡಿಸಿ ಕಿಡಿಸಿ ದುರ್ವ್ಯಾಮೋಹಮಂ (ಶಾಂತಿಪು. ೯-೧೪) ; ಪರಿಜನಕ್ಕೆ ಡಬ್ಬಾದೊಡೆ ಪೊರೆವುದುಂ ಪಡೆದುದಂ ಪಚ್ಚುಕುದುವುದುಂ ತೊಡರ್ಪಾಗೆ ಬಿಡಿಸುವುದುಂ . . . ಉತ್ತಮಗುಣಂಗಳೊಳವು (ಶಂಕರಕಂ. ೨೪೪-೨) ; ಸುಕುಮಾರನ ಮೋಹಬಂಧದ ಬಳ್ಳಿವಳ್ಳಿಯ ತೊಡರ್ಪಂ ಪಱಿವಡೆ ಬಿಡಿಸುವಂತೆ (ಸುಕುಮಾ. ೧೧-೩೮ ವ) ; ಮನದೊಳ್ಳನ್ನಮ ರಾಜ್ಯವಲ್ಲಿಯ ತೊಡರ್ಪಂ ನಾಡೆಯುಂ ಬಟ್ಟು (ಶಾಂತೀಶ್ವ. ೧೩-೭೯). ೨. ಗೋಜು ; ತೊಡಕು ; ಗೋಂದಲ; ಸಿಕ್ಕು : ಮೋಹಬನ್ಧನದ ತೊಡರ್ಪಿನೊಳ್ತೊದಟ್ಟು ಮೋಹಿಸಿ (ಎಕ. VII, ಶಿಕಾರಿ. ೨೦೨-೨೪ ; 913) ; ಗಾಂಗೇಯಂ ದಾಶರಾಜನಲ್ಲಿಗೆ ಮಂದಾತನ ಮನದ ತೊಡರ್ಪಂ ಪಿಂಗೆ ನುಡಿದು (ಪಂಪಭಾ. ೧-೭೨ ವ); ಪಾಪ ಬಂಧನದ ತೊಡರ್ಪಿದಂತು ಪಱಿಗುಂ ದಯೆಯಿಂ ಬೆಸಸಿಂ (ವರ್ಧಪು. ೧೨-೪). ೩. ಸಂಬಂಧ ; ಹೊಂದಿಕೆ : ಒಡಹುಟ್ಟಿಯುಮೊಡವಳೆದುಂ ಕಡೆಯೊಳ್ ನೀನೆನ್ನನಿಂತು ಕಂಡುಂ ಬಂದಿದರ್ದೊಡೆಯುಡಿದೀ ನಮ್ಮಿರ್ವರ ತೊಡರ್ಪಿಂದಂ ನೀಂ ಪುನರ್ನವಂ ಮಾಡಿನ್ನುಂ (ಶಾಂತಿಪು. ೭-೧೦೪) ; ಇಂತು ಚಿಂತಿಸುವಂಗೆ ಬಾಹ್ಯವಸ್ತುಗಳೊಳ್ ತೊಡರ್ಪಿಲ್ಲ (ತತ್ತ್ವಾರ್ಥ. ೩.೨೬). ೪. ಅಡ್ಡಿ ; ವಿರೋಧ : ಅರಸುಮಕ್ಕಳೆಲ್ಲರ್ ಬರೆ ನೀಂ ನಡುವೆಸೆದು ಬಾರದಾವುದು ತೊಡರ್ಪಿನಿಂ ಪೆಱಗೆ ನಿಂದೆಯೊರ್ವನೆ ಕಂಡಾ (ಕಾದಂಬರಿ. ೬೬೬) ; ತೊಳ್ದೆನ್ನ ತೊಡರ್ಪುದೋಱದಿನಿಸಂ ಮುನಿಸಂ ಮುನಿಸಾನದಂತೆ ಬಟ್ಟನ್ನರೆ ಕೀರ್ತಿಲಕ್ಷ್ಮಿ ಬಿಡುಗುಂ ಕಿಡುಗುಂ ಕಡುಪೆಂಪಿನೆಟ್ಟರಂ (ಪುಷ್ಪಪು. ೭-೬೮). ೫. ಆಭರಣ ; ತೊಡವು : ತೋಳ ತೊಡರ್ಪು ಕಣ್ಗೆಸೆಯೆ . . . ಬಾಜಿಸಿದಲ್ ಸುವಿಲಾಸೆ ವೀಣೆಯಂ (ಸೂಕ್ತಿಸು. ೫-೦೯); ಅಲಸುವ ಮೆಯ್ಯುಂ . . . ಬಿಗು [ ಬಿಗು ] ರೇಙುತಿರ್ಪ ಮೇಖಳೆಯ ತೊಡರ್ಪು ಕಣ್ಗೊಳಿಪ ಯಾನದ ಮಲ್ಪುಮಪೂರ್ವಭಾವಮಂ ಲಲನೆಗೆ ತಂದುವಂದನುದಿನಂ ಬಳೆಯುತ್ತಿರೆ ಗರ್ಭದರ್ಭಕಂ (ಪುಷ್ಪಪು. ೪-೦೫). ೬. (ಆಲಂ) ಅಪ್ಪುಗೆ; ಆಲಿಂಗನ : ಅಡಿಮುಡಿ ಸಂಚು ವಂಚನೆ ವಿಡಾಯಮುಡರ್ಪು ತೊಡರ್ಪು ತೋಟ . . . ನುಸುಳ್ ಗಣಿಕಾಂಗನೆಯರ್ಗೆ ಶಾಶ್ವತಂ (ವ್ಯಪವಿ. ೨೮-೬೩). **ತೊಡಪ್ಪು$_3$** : ೩. ಆ ಮರದ ಶಾಖೆಯ ತೊಡಪಿಂದ ಆ ಮರದ ಫಲವ ಕೈಗೆ ತಾಹಂತೆ (ಶಬರಿಗಾ. ೩೭).

[ ತೊಡರ್$_1$ + – ಪ್ಪು$_2$/ತಮಿ. ತೊಟರ್ಪು ]

**ತೊಡವ** 'ತೋಡಪ್ಪ$_2$' ನೋ.

**ತೊಡವಣಿಕ** (ನಾ). (ಕರಾ) ಚೊಚ್ಚಲು ಕರುವನ್ನು ಈದ ಎಮ್ಮೆ, -ಹಸು : ತೊಡವಣಿಕ=ಮೊದಲ ಬಾರಿ ಕರು ಹಾಕಿರುವ ಹಸು ಅಥವಾ ಎಮ್ಮೆ (ಸಂಕೋಧ. ೧೭೮). [ <ತೊಡಂಕು$_1$ + ಮಣಿಕ (<ಮಣಕ) ]

**ತೊಡವು** (ನಾ). ೧. ಆಭರಣ ; ತೊಡಿಗೆ : "ಪ್ರತಿಕರ್ಮಂ ನೇಪಥ್ಯಂ ... ವಿಭೂಷಾಪ್ರಸಾಧನಮಾಭರಣಮೆಂಬವವು ತೊಡವಕ್ಕುಂ" (ವಸ್ತುಕೋ. ೭೫-೧) ; "ಪಚ್ಚಂ ತೊಡವುಂ ಪಸದನಮೆನಲಾಭರಣಂ" (ಕವಿಕಂ. ೧೭೮); ಈ ತೊಡವೇವುದೊ ರೂಪೆ ಸಾಲದೇ (ಪಂಪಭಾ. ೩-೪೬) ; ತೊಡವಿಂಗೆ ತೊಡವು ನಿರತಂ ತೊಡವೇಂ ಪೆಱತುಂಟೆ ಜನನ ತೊಡವೆನೆ ಮತ್ತಾ ತೊಡವಪ್ಪಮಪ್ಪ ರೂಪಿನ ಬೆಡಂಗು ಭೂಷಣವಿಶೇಷಮಂ ಬಾರಿಸದೇ (ಶಾಂತಿಪು. ೧೦-೫೭); ಕುಂತಳ ಭೂತಳಕ್ಕೆ ತೊಡವಾದುದು ತಾಂ ವನವಾಸಿ ದೇಶಂ (ಎಕ. VIII, ಸೊರಬ. ೨೬೨-೪ ; 1077) ; ಪೊಸಸುಗ್ಗಿಯ ತೊಡವು ಪೆಱತೆ ಮಲ್ಲಿಗೆಯ ಪೊಲಂ (ಮಲ್ಲಿಪು. ೫-೧೫) ; [ಉ]ಡೆವಣಿಯ ತೊಡವು ಫಲಫಲಿಸುವಂದುಗೆ (ಬಸವ. ೧-೧೫೫) ; ಚಂದ್ರಾನನೆ ತೊಡವಿನ ಪೆಟ್ಟಿಯ ನಾನಂದದಿನೀಯಲು (ದಶಕು. ೮-೯೫); ತೊಡವುಗಳ ತೊಡಕಿಲ್ಲದವಯವಂ (ಕ್ರಮಿಘಾ. ೧೮-೨೫). ೨. ಅಲಂಕಾರಪ್ರಾಯನಾದವನು ; ಶ್ರೇಷ್ಠನಾದವನು: ಎಲೆ ಭೂಪಾಲ ವಂಶದ ತೊಡವೆ ಮೆಚ್ಚಿದೆ ನಾನು (ನಿಘಂಗ. ೪-೯-೪೧). ೩. ಉಡುಪು : (ಕ).

**ತೊಡವುಮಾಡು** = ಆಭರಣವನ್ನಾಗಿ ಮಾಡು ; ಒಡವೆಯಾಗಿಸು: ಜನ್ಮನಿಗಿನಿಯನಿತ್ತ ನಖರದಕ್ಷತಂಗಳನೆ ತೊಡವುಮಾಡಿ ಮೆಱೆವುದನವಳೊಡನಾಡಿ ನೋಡಿ (ಚಂದ್ರಪು. ೮-೩೫ ವ).

[ ತೊಡು$_1$ + – ವು./ತೆಲು. ತೊಡವು ]

**ತೊಡವುಲಿ** (ನಾ). ಆಭರಣಗಳಿಂದ ಉಂಟಾಗುವ ಧ್ವನಿ; ಒಡವೆಗಳ ಶಬ್ದ : ಕಡೆಗಣ್ಗಳ ಹೊಳಹಿನ ಬಳ್ಳಿಮಿಂಚಿನ ತೊಡವುಲಿಗಳ ಘನರವದ ಮುಡಿಯ ಮುಂಗಾರ ಮೇಘದ ಸೋಗೆನವಿಲಾಟದಡವ ತೋಱಿದ ರಂಗನೆಯರು (ಕಂಶವಿ. ೮-೬೫). [ ತೊಡ + ಉಲಿ$_2$ ]

**ತೊಡವೆ** (ನಾ). ಹೊಂದಿಕೊಂಡಿರುವವಳಂ ; ಸಹಚರಿ : ನಂಬಿದ ತೊಡವೆಯು ತಿಂಬರ್ಗೆ ನಡುವಪ್ಪಂ ಬಡಿಯೊಳಗಟ್ಟೊವವಗೆ ಇಂಬಿನ ನಂಟನ ಸತಿಗಳುಪಿದರ್ಗೆ ಕುಂಭನಿನರಕವಾದಪುದು (ತರ್ಕಗಾ. ೧೩-೫೭).

[ ← ತಮಿ. ತೊಟುವೈ ]

**ತೊಡವೆಳಗು** (ನಾ). ಆಭರಣದ ಕಾಂತಿ,-ಬೆಳಗು : ತೋಳಪ ಮಾಣಿಕದ ಮುತ್ತಿನ ನೀಲದ ತೊಡವೆಳಗೆನಲೊಪ್ಪಿದವಾಗ (ಶ್ರೀಪಾಲ. ೪-೧೨೫) ; ಕತ್ತಿವೆಳಗು ತೊಡವೆಳಗುಗಳ್ ಮಾಡೆ ಬೆಳಗಂ (ಜಬಪು. ೫೦-೨೬) ; ತೊಡವೆಳಗಿಂದ್ರಚಾಪಲತೆ ಸೋರ್ಮುಡಿ ಕಾರ್ಮುಗಿಲು (ರಾಜಶೇ. ೧೩-೯೩).

[ ತೊಡ + ಬೆಳಗು$_2$ ]

**ತೊಡಹ$_1$** 'ತೊಡೆಪ' ನೋ.

**ತೊಡಹ$_2$** (ನಾ). ೧. ತೊಡುವಿಕೆ ; ಧರಿಸುವಿಕೆ. ೨. ಉಡುಪು ; ಉಡುಗೆ : ಧೂರ್ತವೇಷದ ತೊಡಹವನು ತೊಟ್ಟಲ್ಲಮಪ್ರಭು ಬಂದು ನಿಂದಿರ್ದ (ಪ್ರಭುಲೀ. ೫-೭). ೩. ವೇಷ : ತೊಡು ಮಹಾಸ್ತ್ರವನಿಸಗೆ ಕಪಟದ ತೊಡಹದವನಿಪ ವಿಪ್ರನಲ್ಲಿವ (ತೊರಭಾ. ೧-೧೧-೨೦).

[ ತೊಡು$_1$ + – ಹ$_2$ ]

**ತೊಡಹಗಾಱಿಕೆ** (ನಾ). ನಯಗಾರಿಕೆ : ತೊಡಹಗಾಱಿಕೆಯೊಳಾ ಮಂತ್ರಿ ಯಾಡಿದ ಮಾತಿಗೊಡನಹುದಹುದೆಂದ ನಗುತ (ಭರತ. ೨೦-೧೨೩).

[ ತೊಡಹ$_1$ (<ತೊಡೆಪ) + – ಕಾಱ + – ಇಕೆ ]

**ತೊಡಹತರ್** (ಕ್ರಿ). ಸಮಾಧಾನಗೊಳ್ಳು ; ಅಂಕೆಯಲ್ಲಿಟ್ಟುಕೊಳ್ಳು : ತನ್ನೊಳು ತಾನೆ ತೊಡಹತಂದುಕೊಂಡನು ಮನವ (ತೊರಭಾ. ೬-೨೬-೧೩).

[ ತೊಡಹ$_1$ (<ತೊಡೆಪ) + ತರ್ ]

**ತೊಡಹು$_1$** 'ತೊಡಪ್ಪು$_1$' ನೋ.

**ತೊಡಹು$_2$** 'ತೊಡಪ್ಪು$_2$' ನೋ.

**ತೊಡಹು$_3$** (ನಾ). ಲೇಪನ : ಮೃಡಪಿತಾಮಹಪೂಜೆಗಾ ಸತಿ ಹಿಡಿಹಿನಲಿ ಮನವರಳೆ ಮುದ್ರೆಯ ತೊಡಹು ಹೋಱಿಗೊಳಗಿಂದುಮುಖಿಯರ ನ್ಯಾಸ ಮುದ್ರೆಯಾಲಿ (ಕುಮಾರ. ಓಶಿ. ೩೬-೮೪). [ <ತೊಡಪ್ಪು$_1$ ]

**ತೊಡಾಯ** (ನಾ). (?) : ಚಿಕದೇವರಾಜ ಒಡೆಯರು ತಮ್ಮ ಸಾಮಾಜಿಕರೊಡನೆ ಆಲೋಚನೆಮಾಡಿ ೧೮ ಕಛೇರಿ ಎಂಬುದಾಗಿ ನಿಬಂಧನೆ ಮಾಡಿದರು ಯಾವವೆಂದರೆ ೧. ನಿರೂಪದ ಚಾವಡಿ , . . ೯. ತೊಡಾಯದ ಚಾವಡಿ (ಚಾಮವಂ. ೧೪೦) ; ತೊಡಾಯದ ಚಾವಡಿ–ಇದರಲ್ಲಿ ಪೂರ್ಮಿನ ಐವಜನಲ್ಲಿ ಶ್ರೀರಂಗಪಟ್ಟಣದಲ್ಲಿ ಮಾತ್ರ ಅರ್ಧ ಐವಜು ತೆಗೆದುಕೊಳ್ಳುವಂತೆ ಕಟ್ಟು ಮಾಡಿದರು (ಮಹಾವಂ. I, ೧೪೮). [ ? ]

**ತೊಡಿ** (ನಾ). ಕೈತೋಟ ; ಮನೆಯ ಮುಂದಿನ ಅಥವಾ ಹಿಂದಿನ ತೋಟ : ಕಾಯಿ ಮತ್ತು ಮಗ ಅನ್ನರ ಗದ್ದೆ ಮತ್ತು ತೊಡಿಗಳಲ್ಲಿ

ಗೇಯಬೇಕಾಯಿತು (ಹುಲಿಹಾ. ೪) ; ಅಂದಿನಿಂದ ಕೊಳಂಬನು ಪಾಪನ ತೊಡಿಯಲ್ಲಿ ಕೆಲಸ ಮಾಡಲು ಬರಲಿಲ್ಲ (ಧೂಮಪ. ೪೦).

[ ದೇ.॥ ತಮಿ. ತೊಟು ; ಮಲ. ತೊಟ್ಟಿ ; ಕೊಡ. ತೊಡಿಯ ]

**ತೊಡಿಕೆ** 'ತುಡಿಕೆ' ನೋ.

**ತೊಡಿಗೆ** 'ತೊಡುಗೆ' ನೋ.

**ತೊಡಿಲಿ.** (?). (?) : ನಾವದಕ್ಕರಲ್ಲಿ ಅಳ ಅಳ ತೊಡಿಲಿ ಮು[ೞ]ಅಲ್ಲಳದ ಬೆಟಲಿ (ಸೌಇಎ. ೧೯೩೦, ಉಡುಟಿ. ೫೭೫-೨೭ ; ?). [ ? ]

**ತೊಡಿಸು**, ತುಡಿಸು (ಕ್ರಿ). ೧. (ಆಭರಣ, ವಸ್ತ್ರ ಮೊದಲಾದುವನ್ನು) ಧರಿಸುವಂತೆ ಮಾಡು,–ಇಕ್ಕು : ತೊಡಿಸಿದನಾವನೀ ಕುಸುಮಂಜರಿಯಂ ನಿನಗೆ (ಕಾದಂಪೂ. ೭೯೨); ತರಿಸಿ ಬೊಂಬೆಯಸೊಂದಂ . . . ಪೊನ್ನೋಲೆಯಂ ತೊಡಿಸಿ ಚೆಲ್ವನಪ್ಪ ಪೂಮಾಲೆಯಂ ಮುಡಿಯಿಸುತ್ತುಮರ್ತಿಯಿಂ (ಧರ್ಮಾಮೃ. ೩-೯) ; ಸೌಂದರಿಗೆ . . . ತೊಡವಂ ತತ್ತರುಣೀಮಣಿಯರೊಲ್ದು ತೊಡಿಸಿದರೊಲವಿಂ (ಉದ್ಭಟ. ೮-೬೫); ಶೋಭನಾರ್ಥಕ್ಕಾದಡಂ ಕೆಲವಾಭರಣಮಂ ತೊಡಿಸವೇಳ್ಕು ಮದೇಭಗಮನೆಗೆನುತ್ತ (ಬಸಪು. ೪-೩೬) ; ಸುರೇಶ್ವರನಿತ್ತ ಭೂಷಣವ . . . ನಕುಲಾದಿಗಳ ಮೈಯಲಿ ತೊಡಿಸಿದನು ಕೈಯಾರೆ ಕಲಿಪಾರ್ಥ (ಕುವ್ಯಾಅ. ೧೧-೨೪) ; ಚೈತ್ರದ ಚೆಂಗದಿರನು ಚೆಂಬಿಸಿಲ ಚೆಂದುಡುಗೆಯನು ವಿಂಧ್ಯೆಯ ಗಿರಿಶಿಖರಗಳಿಗೆ ತೊಡಿಸುತ್ತಿದ್ದಾನೆ (ಮುಕಸ. ೧). ೨. ಅಳವಡಿಸು; ಜೋಡಿಸು : ಬಿಲ್ಲನು ಕೊಂಡು ಕಿರುವನು ತೊಡಿಸಿ ತಳೆದನು ಒಲಿದು ಮಂಡಿಯಲಿ (ಸಂಥಪ. ೧೯-೩೧) ; ಪಾವಕಮಹಾಬಾಣಮಂ ತಿರುವಿನೊಳ್ತೊ [ಪಾಠಾಂ. ಳ್ತು]ಡಿಸಿ ಕಿವಿವರೆಗೆ ತಗೆದೆಚ್ಚೊಡೆ (ಜೈಮಿಭಾ. ೪-೩೭) ; ತುಡುಕಿ ಚಾಪವ ನೆಗಪಿ ಬಾಗಿಸಿ ತೊಡಿಸಿ ನಾರಿಯ ಠಂಕರಿಸಿ ಮುರಿದಿಡಲು (ಅನಂರಾ. ೧-೨೩-೩೨). ೩. ಹದಿ ; ಹೊಂದಿಸು ; ಕೂಡಿಸು : ಗಿಳಿ ಸೋಂಕದ ಮಾವಿನ ಪಣ್ಣನಂತೆ ಪೊನ್ ತೊಡಿಸದ ರತ್ನದಂತೆ (ಮಲ್ಲಿಕಾ. ೬-೬೦) ; ಒಡಲು . . . ತೊಗಲನು ತೊಡಿಸಿದೆಲುವಿನ ಜಂತ್ರ (ನಿಭಾಗ. ೭-೯-೪೪). ೪. ತೊಡಕಿಸು ; ತಗಲುಹಾಕು : ಕಡುಗಿ ಕೊರಳಲದಾರೊ ಪಾಶವ ತೊಡಿಸಿ ಕೆಳಯಿಂಕೆಳದ ದಾಡೆಯದಡಿಗರಾರೋ ಮರಳಿಬಿಡಿಸಿದ ಪುಣ್ಯತರರ್ (ನಿಭಾಗ. ೬-೨-೨೭) ; ಕೊರಳಿಗೆ ಕೋಳವನು ಬಲವಾಗಿ ತೊಡಿಸುವ ಪೋಲು (ಅಮೃತ. ೦-೩೫). **ತುಡಿಸು** : ೧. ತುಡಿಸಿದನೆನಗೆಱೆಕೆಯಪ್ಪ ಮಣಿಭೂಷಣಮಂ (ಕವಿರಾ. ೩-೨೩೪) ; ಸುರಾಸುರೇಂದ್ರವಂದಿತಪಾದಂಗೆ ಮೃದುಪದಂಗಳೊಳ್ ಕಳರವರಣಿತ ನೂಪುರಂಗಳಂ ತುಡಿಸಿ (ಆದಿಪು. ೭-೧೦೫ ವ) ; ಆ ಲಾವಣ್ಯವತಿಯ ಪದನಖಮಯೂಖಂಗಳಂ ಜಲಧಾರೆಗೆತ್ತುತ್ತ್ಯಂಠಂಗಳಾದ ಸೋಗೆಗಳ ಕೇಗುಗಳ್ಗಿದವಱ ಕೊರಲಂ ಬಿಗಿವಂತೆ ಕಯ್ಯಿಂದಮುರ್ಚುವ ಮಣಿಕಂಕಣಂಗಳಂ ತುಡಿಸುತ್ತಂ (ಕಾದಂಉ. ೨೦೨); ಕಡಗ ಕಂಕಣ ಹಾರ ನೂಪುರಮಾದಿ ಭೂಷಣರಾಜಿಯಂ ತುಡಿಸಿ (ಧರ್ಮಾಮೃ. ೮-೧೩೪); ತುಡಿಸಿದ ಬೇಗದೊಳಾ ಪೂದೊಡವನಿತುಂ ಕೊರಗಿ ಕಾಡೆಯುಂ ಶಿಖಿಮುಖವಂ ತೊಡರ್ದಂತಾಯ್ತು (ಕುಸುಮಾ. ೧೦-೨೭) ; ಜನ್ಮಾಭಿಷೇಕಂ ಮಾಡಿ ತದನಂತರಮನೇಕ ಬಾಲದುಡಿಗೆಗಳಂ ತುಡಿಸಿ (ಪುಣ್ಯಾಸ್ರ. ೧೦-೧೭ ವ) ; ರನ್ನದಾಭರಣಮಂ ತುಡಿಸಿ (ಸೌಂದಪು. ೩-೪೯). ೨. ಕೂರ್ಗಣೆಗಳಾಱಂ ಮತ್ತ ವಕ್ಷದೊಳ್ತುಡಿಸಿದಂ (ಜೈಮಿಭಾ. ೨೦-೩೦).

[ ತೊಡು₁ + –ಇಸು₃ ]

**ತೊಡು₁**, ತುಡು₁ (ಕ್ರಿ). ತೊಟ್ಟ (ಭೂತಕೃ). ತೊಟ್ಟು₁ (ಭೂತನ್ಯೂ). ೧. (ಆಭರಣ, ವಸ್ತ್ರ ಮೊದಲಾದುವನ್ನು) ಧರಿಸು,–ಹಾಕಿಕೊಳ್ಳು : ಶೀತಕ್ಕಾಱದಕ್ಕ ತೊಟ್ಟರ್ದ ಧರಾತಳಮಂಬ ಪೆಣ್ಣ ಪೊಸ ಕಂಚುಳಿಕೆಯ ಸೀಮರ್ಮುತ್ತಿನಂದಮಾದುವು ಪನಿಗಳ್ (ಕಾವ್ಯಸಾ. ೭೯೪ ಕೊದ್ರಳ) : ಪಿಂಡುಗಂಕಣಮಂ ತೊಟ್ಟ ಕೈಯಿಂದಂ ಪೊನ್ನ ಸಟ್ಟುಗಮಂ ತೀವಿ (ವಡ್ಡಾರಾ. ೮೯-೭) ; ತೊಟ್ಟಕೃವಡಂ . . . ತೊಟ್ಟಂಗಿಗೆ ತನ್ನೊಳಮರೆ ಬೇಂಟೆಯನೊರ್ವಂ ಬಂದು (ಪಂಪಭಾ. ೫-೩೭) ; ಜವ್ವನಿಗ ತವಸಿ ತೊಟ್ಟಪರ್ಣಕರ್ಣಾವತಂಸಂ ಪೊಸತೀ ಲೋಕಕ್ಕೆ (ಕಾದಂಪೂ. ೭೬೦) ; ತೊಟ್ಟು ತೀವಿ ಬಳೆಯುಂ ನಿಡುದೋಳ್ಗಳೊಳ್ (ಕಾವ್ಯಾವ. ೩೭೨) ; ನೀರ ಬೊಂಬೆಯ ಚೋಹವ ತೊಟ್ಟು ಅಗ್ನಿಯ ಬಣ್ಣದ ಹೊದಿಕೆಯ ಹೊದ್ದು (ಅರಹಂ. ೨೦೭-೯೩೧) ; ಪೊಸ ಮುತ್ತಂ ತೊಟ್ಟವೋಲ್ ಪೊಣ್ಮುವ ಬೆಮರ್ವನಿಯಿಂ (ರೀಲಾವ. ೧೦-೪೭) ; ತೊಡುವಲ್ಲಿ ಪೊದೆವಲ್ಲಿ ಸಂಗ ಶರಣೆಂದೆನುತೆ (ಬಸರ. ೩-೧೩೭) ; ಇಟ್ಟರೆ ತೊಟ್ಟರೆ ಪುಟ್ಟಕ್ಕ ಚಂದ (ಗಾದೆ). ೨. ಪಡೆ ; ಹೊಂದು ; ತಳೆ : ಕಾಮದ ಕಳವಳದಲ್ಲಿ ಹುಟ್ಟಿ ಸಂಸಾರವ ತೊಟ್ಟು ಲಿಂಗಮುಖ ಭವನಱಿಯದವರೆಲ್ಲರು ಅಂತಿರಲಂತಿರಲಿ (ಸಮೂವ. ೫-೧೭); ತಿಳುಹಿ ಹೋದರು ಮುನಿಗಳೀತನ ತಿಳಿವು ತೊಟ್ಟುದು ಮಱವೆಯನು (ಕುವ್ಯಾದ್ರೋ. ೦೮-೬೪) ; ಕೊಂದೆನು ನಿನ್ನ ತಮ್ಮನ ದಹಿಸಿ ಲಂಕೆಯ ಬಳಿಕ ಮೌನವ ತೊಟ್ಟೆ ತಾನೆಂದ (ತೊರೆರಾ. ೨೮-೬೦) ; ತೆಗೆದ ಚಿತ್ರದ ನಟ್ಟ ನೋಟದ ಮೊಗದ ಭಾವದ ಭಕ್ತಿಯಂಗವ ತೊಟ್ಟನಲ್ಲಮನು (ಪ್ರಭುಲೀ. ೧೧-೩೪) ; ಮೆಟ್ಟಪ್ಪುದಾಸೆಯನು ಕಟ್ಟಿಪ್ಪುದಿಂದ್ರಿಯವ ತೊಟ್ಟಿಪ್ಪುದುಳ್ಳ ಸಮತೆಯನು (ಸರ್ವಜ್ಞ. ೩೦೬) ; ದೀಕ್ಷೆ ತೊಟ್ಟೆ ; ತಪದ ಕಠಿಣಕೆದೆಯ ಕೊಟ್ಟೆ (ಅನೀಕೇ. ೧೭-೧೯). ೩. ಮೊದಲಾಗು ; ಆರಂಭವಾಗು : ಪೂರ್ವಭವದೊಳ್ತೊಟ್ಟೊಂದು ವೃತ್ತಾಂತಮಂ ನೆಱೆಯಱಿದು (ಆದಿಪು. ೨-೬೬) ; ಎಮ್ಮೊಳಾದ ಕಲಹಕ್ಕೆಂತಾದೊಡಂ ಕೇಳ ನೂರ್ವರ ದಲ್ ಕೌರವರಾಮುಮಯ್ವರ ವಲಂ ಮತ್ತೂರ್ವರೊಳ್ ತೊಟ್ಟ ಸಂಗರರಂಗಕ್ಕೆ ಜಸಕ್ಕೆ ಕೂಡುವೆಡೆಯೊಳ್ ನೂಱಯ್ವರಾವಲ್ಲವೇ (ಪಂಪಭಾ. ೭-೩೬). ೪. ಮೊದಲು ಮಾಡು ; ಆರಂಭಿಸು : ಕ್ರಮಗಣನೆಗೆ ತಾನುಂ ಮಧ್ಯಮಪಾಂಡವನಾದನಹಿತನೊಳ್ತೊಟ್ಟ ಮಹಾಸಮರಕ್ಕೆ ನರಾಗ್ರಜನಗ್ರಿಮಪಾಂಡವನಲ್ತೆ ಪಗೆಗೆ ಮೊದಲಪ್ಪುದಱಿಂ (ಗದಾಯು. ೭-೬೩) ; ಬಿಲ್ಲ ಪಡೆ ಕಾಗಿದುದು ಬೇಗದಿ ಚೆಲ್ಲಿದೊಡೆ ತನ್ನಡ್ಡಣಾಯ್ತರು ಕಾಳಗವ ತೊಡಲು (ಸಾಳ್ವಭಾ. ೧೯-೧೩). ೫. ಬಿಲ್ಲಿಗೆ ಬಾಣವನ್ನು ಹೂಡು ; ಶರಸಂಧಾನ ಮಾಡು : "ಕಣೆಯ ಸಂಧಾನದೊಳ್ ಪಚ್ಚದೊಳ್ ತೊಡು [ಪಾಠಾಂ. ತುಡು]ವದು" (ಕಬ್ಬಮಂ.೯೩) ; ಮುಂ ತೊಟ್ಟಂಬನದನುಗಿದು ಕುಂದಿಸಿದಂ ಭಯದಿಂ ಕರ್ಣನೆಂದು ಲೋಕಂ ನಗದೇ (ಪಂಪಭಾ. ೧೨-೧೯೯); "ತೊಟ್ಟಗುರಿಯಿಟ್ಟು ಹೂಡಿದ" (ಪಂಪರೀ. ೫೦೦) ; ತೊ [ಪಾಠಾಂ. ತು]ಡುವಾಗಳೊಂದು ಬಿಲ್ಲಿಂ ಬಿಡುವಾಗಳ್ ಲಕ್ಕ ವೈರಿಸೇನೆಯ ಮೆಯ್ಯೊಳ್ ನಡುವಾಗಳ್ ಕೋಟಿಯಪ್ಪುದು ಗಡ ಪಾರ್ಥನ ಬಾಣಂ (ಸಮುಪ. ೧೦-೧೬೬) ; ತೊಟ್ಟನಿದಂ ನಿಟ್ಟಿಸಿದಂ ಬಿಟ್ಟನಿದೆಂಬೊಂದು ಬಿಲ್ಲ ಬಲ್ಮೆಯನಾರ್ಗಂ ದಿಟ್ಟಿಸುವುದರಿದು (ಕಬ್ಬಿಗಕಾ. ೧೭೧); ತೊಡು ಕೋಲಂ ಹರಿಣಂಗೆ ಹಾಸು ಬಲೆಯಂ ಕೋಕಂಗೆ (ಮಲ್ಲಿಕಾ. ೩-೨೭೩) ; ಆದೊಡೈವರ ಮಕ್ಕಳನು ತಲೆಗಾಯ್ದು ತೋಱು ಕಂದ . . . ಹೋದ ಬಾಣವ ಮರಳಿ ತೊಡದಿರು (ಕುವ್ಯಾಉ. ೦೦-೩೫) ; ತೊಡು ಮಹಾಸ್ತ್ರವನಿವಗೆ (ತೊರೆರಾ. ೧-೧೧-೨೦). ೬. ಉಂಟಾಗು ; ಹುಟ್ಟು : ನಿನ್ನೊಳ್ ತೊಟ್ಟೊಂದು ಭಕ್ತಿಯನಾದರಂಬೆರಸು ಪೆಱತೊಂ ದೇವುಟ್ಟಾಮೊಲ್ಲೆಂ (ಶಾಂತಿಪು. ೧೦-೨೦) ; ಬಗೆಯೊಳ್ಪೇಟದ ಬೀಜಮಂ ತಳೆದು ನೀರ್ವೊಯ್ಯುಂದದಿಂ . . . ನೀರ್ವೊಯ್ಯುದುಂ ಪಾಂಥರಾಕೆಗಳೊಳ್ತೊಟ್ಟೊಲವಿಂಗಲ್ತೆ ಬಟಿನೀರಂಬಂದದಿಂದೀಂಟಿ ದಿಟ್ಟಿಗಳಿಂ ದೀಂಟುವರಾ ಪ್ರಪಾಪ್ರಣಯಿನೀಲಾವಣ್ಯನೀರಂಗಳಂ (ಮಲ್ಲಿಪು. ೨-೨೯) ; ಹೊದಱಿನಲಿ ಮಿಗೆ ತೊಟ್ಟ ಕಬ್ಬೊಗೆ ಝಗೆಯ ಹೊರಳಿಯ ಕಿಡಿಯ ಗಡಣದಲೆ ಹುಟ್ಟಿದುರಿ ಹೆಮ್ಮರನ ಸುತ್ತಲು ಕಟ್ಟಿತು (ಕುವ್ಯಾಆ. ೨೦-೫೫). ೭. ಪಡೆ ; ಹೊಂದು : ಈತನೊಳ್ ತೊಟ್ಟ ಕಿಂಕರ

ಭಾವಂ ನಮಗಕ್ಕಿಗೊಟ್ಟು ಮಡಗೂಟುಣ್ಬಂದಮಂ ಪೋ೯ಲದೇ (ಆದಿಪು. ೧೪-೩೨) ; ೮. ಸೇರು ; ಕೂಡಂ: ನಿಟ್ಟೆಯ್ದಿಯಾಗು ಪತಿಯೊಳ್ ತೊಟ್ಟನುವಶಯಾಗು ಶೀಲವತಿಯಾಗು ಚಿರಂ ನಿಟ್ಟಾಯುವಾಗು ನೀನೆಂದಿಟ್ಟರ್ ಸೇಸೆಯಂ (ಶಾಬ್ದಾ.ಕ. ೨೨೩). ತುಡು₁: ೧. "ತುಡು – ಶರಸಂಧಾನೇ, ಭೂಷಣಾವರಣೇಚ (ಒಡವೆಯನ್ನು ಇಟ್ಟುಕೊ)" (ಕವಿಮ) ; ಅನರ್ಘ್ಯಮಪ್ಪ ಮಾಣಿಕ್ಯದುಂಗುರವಂ ಕಳೆದು ತನಗೆ ತುಡಲ್ಕೆಂದು ಕೊಟ್ಟೊಡೆ (ವಡ್ಡಾರಾ. ೫-೨) ; ಇವು ರತ್ನಕುಂಡಲಂ ಜಿತರವಿಮಂಡಳಮಿವು ತುಡಲ್ಕೆ ಯೋಗ್ಯಮೆ ನಿನಗೆ (ಆದಿಪು. ೧೨-೧೦೮) ; ತುಡನೆ ಕವಚವಂ ರಾಧೇಯಂ (ಪಂಪಭಾ. ೧೨-೧೦೯) ; ನಿಮ್ಮ ತುಡುವಾಭರಣಂಗಳಂ ಪಲವಮೂಲ್ಯ ವಸ್ತುಗಳಂ ತಂದು (ಪಂಚತಂ. ೧೦೨-೧೪) ; ಉಟ್ಟ ನವಾಂಬರಕ್ಕಮರೆ ಪೂದೊಡವಂ ತುಡುವೊಂದು ಕೌತುಕಂ ಪುಟ್ಟೆ (ಜಗವಿ. ೬-೧೨) ; ತಾರಗೆಯಂ ವಿದ್ಯಾಧರಿಯರ್ ಮುತ್ತೆಂದು ತೆಗೆದು ತುಡಲವ್ವಳಿಪರ್ (ಗಿರಿಕ. ೦-೫೪). ೪. "ತುಡು–ಶರಸಂಧಾನೇ, ಭೂಷಣಾವರಣೇಚ (ಒಡವೆಯನ್ನು ಇಟ್ಟುಕೊ)" (ಕವಿಮ) ; ಮತ್ತಮೈಂದ್ರ ವಾರುಣ ವಾಯವ್ಯಾಗ್ನೇಯ ಪಾರ್ವತಾದಿ ಬಾಣಂಗಳಂ ತುಡೆ (ಪಂಪಭಾ. ೨-೬೬ ವ) ; ಸೀಳ್ನಾಯ್ಗಳಂ ಬಿಡು ಕೋಲಂ ತುಡು (ಶಾರಂಪೂ. ೧೫೯) ; ದೊಣೆಯಿಂದಂ ತೆಗೆವಾಗಳೊಂದು ತುಡುವಾಗಳ್ಪತ್ತುಬಾಣಂ (ಗದಾಯು. ೩-೩) ; ನೆನೆದು ನಿಜಜನನಿಗಿತ್ತುದನನುವರದೊಳ್ ದಿವ್ಯಬಾಣಮಂ ತುಡದುದನಾ ದಿನಪಸುತಂ ತುಡನೆ ಅದಂ (ನೇಮಿಪು. ೦೨-೦೬೨) ; ಕರುಣಿಸಲೆ ಶಬರ ತುಡದಿರು ಸರಲಂ ನೀಂ (ಕುಸುಮಾ. ೦೪-೪೨); ಬತ್ತಳಿಕೆಯಿಂದುಗಿವ ಸಮಯದೊಳಗೊಂದು ತುಡೆ ಪತ್ತು (ಹರಿಪು. ೪೩-೦೭) ; ಒಡಿವಾಗಳೊಂದು; ಒಡಿಯಂ ತುಡುವಾಗಳೆರಡು . . . ಪಂಚಾಯುಧನ ಪೊಸಮಸೆಯ ವಿಶಿಖಂಗಳ್ (ರಾಮಾಶ್ವ. ೫೮-೨೭).

**ತೊಟ್ಟುವಾಯ್** = ಗುರಿಯಿಟ್ಟು ಮೇಲೆ ಬೀಳು: ಸ್ಫುರಿತ ಕೃಪಾಣಪಾಣಿಗಿದಿರಂ ನಡೆದಳ್ಕುಟ³ ತೊಟ್ಟುವಾಯ್ದು . . . ನೆಲಕಿಕ್ಕಿ ಪತ್ತಿ (ಪಂಪಭಾ. ೧೧-೧೦೪).

[ ದೇ.॥ ತಮಿ. ತೊಟು ; ಮಲ. ತೊಡು ; ತೆಲು. ತೊಡು, ತೊಡುಗು ]

**ತೊಡು₂**, ತಡ್ಡು₂ (ನಾ). ಬಾಯಿಚಪಲ : ಮಗುವಿಗೆ ಮಳೆಗಾಲಕ್ಕೆ ತೊಡುವಿಗೇನಾದರೂ ಮಾಡು (ಮರಮ. ೩೪೯) ; ಸಂಜೆ ಮಕ್ಕಳಿಗೆ ತೊಡುವಾಗಿಯೇ ಆಗುತ್ತದೆ (ಸ್ವಪ್ನಜೊ. ೧೧೩) ; ದೋಸೆ ತಿನ್ನುವ ಆಸೆಯಿಂದ ಇದ್ದ ಸೊಸೆಗೆ ದ್ರೋಹವಮಾಡಿದ ಪಾಪ ನನ್ನದು . . . ಎಷ್ಟು ತೊಡುವಾಗಿತ್ತೋ ಅವಳಿಗೆ (ಪದ್ಮಸ. ೬೧). ತುಡು₂: ತುಡುವಾಗತ್ತೆ ಎಂದರೆ 'ತುಡುವಾಗತ್ತೆ ತುಡುವಾಗತ್ತೆ ತುಳಸಿನಾರಾಯಣ' ಎಂದು . . . ಕೋಡುಬಳೆ ರವೆವುಂಡೆಯನ್ನು . . . ಕೊಟ್ಟು ಕಳಿಸುತ್ತಿದ್ದಳು (ಪ್ರಶ್ನೆ. ೯೩) ; ಬೇಕು ಬೇಕಾದಾಗ, ತುಡು ಬಂದ ಕೂಡಲೆ, ಸಿಹಿ ತರಿಸಿ (ಚಂದ್ರಸ. ೪). [ ದೇ.॥ ತಮಿ. ತೊಟು = ತಿನ್ನು ; ತುಳು. ತೊಡು ]

**ತೊಡುಗೆ**, ತುಡಿಗೆ, ತುಡುಗೆ, ತೊಡಿಗೆ (ನಾ). ೧. ಒಡವೆ ; ಆಭರಣ ; ಅಲಂಕಾರ : "ನೇಪಥ್ಯಮಾ ಭೂಷಣಮಲಂಕಾರಮಾಭರಣಮೆಂದೆನಲು ತೊಡು [ಪಾಠಾಂ. ಡಿ]ಗೆಗಭಿಧಾನಮಕ್ಕುಂ" (ಮಂಗರಾ. ೯೮-೧೦) ; "ಮಂಡನಂ, ಮಂಡನೀಯಂ, ಈ ೨ ತೊಡುಗೆ" (ಕಾಶಕ್ಯ. ೩೬೯). ೨. ಉಡುಪು: (ಹ). 'ಉಡುಗೆ' ವರಾ. ತುಡಿಗೆ : ೧. ಪೊಸಮುತ್ತಿನ ತುಡಿಗೆ ಪೊದಟ್ಪಿಸಯೆ (ಪಂಪಭಾ. ೨-೬೮) ; ಬಳೆ ತುಡಿಗೆಯಾಗಿಯುಂ ಸರಿಗೆಯಲ್ಲದಂತೆ . . . ದೂರಭವ್ಯರುಮಭವ್ಯರುಂ ಶ್ರಾವಕರಾಗಿಯುಂ . . . ಮೋಕ್ಷಗಾಮಿಗಳಲ್ಲರ್ (ಧರ್ಮಾಮೃ. ೧೧-೦೫೭); ವಾಸಂತಋತುಕಾಲ ಸಮಯ ಕುಸುಮವನಾ ವಿಲಾಸಿನೀಜನ ತು [ಪಾಠಾಂ. ತೊ]ಡಿಗೆಯಂ ಮಾಡಿ ತಂದೊಲ್ದು ಭೂಸುದತಿವಲ್ಲಭಂಗೀಯಲು (ಹರಿಶ್ಚ. ೩-೪೮) ; ತುಡಿ [ಪಾಠಾಂ. ಡ, ಡು] ಗೆಯಂ ತೊಟ್ಟಂ ; ಪೂವಂ ಮುಡಿದಂ (ಕಮಲ. ೧೨೭ ಪ್ರಯೋ). 'ಕಿವಿದುಡಿಗೆ' ವರಾ. ತುಡುಗೆ : ೧. "ಭೂಷಣಃ, ಅಳಂಕಾರಃ, ನೇಪಥ್ಯಂ, ಆಭರಣಂ–ಈ ೪ ತುಡುಗೆ" (ಹಲಾಯು. ೪೯-೩೦೫) ; ಅನರ್ಘ್ಯಮಪ್ಪ ತುಡುಗೆಗಳುಮಂ ಬಟ್ಟವಟ್ಟ ಗೊಟ್ಟು (ವಡ್ಡಾರಾ. ೦೫೦-೨) ; ತುಡಲ್ಕೆ ತುಡುಗೆಯನುಡಲ್ಕೆ ದಿವ್ಯಾಂಬರಮಂ . . . ಕುಡುವಮರಿ ಕಲ್ಪಲತೆಯನೆ ಪೋಲ್ತರ್ (ಆದಿಪು. ೭-೧೧); ರತ್ನದ ತುಡು [ಪಾಠಾಂ. ತೊಡಿ] ಗೆಯನಿತ್ತುಂ ಯತ್ನದೆ ರಕ್ಷಿಸುವನೆಂಬ ನುತ್ತಮಾಜ್ಞೆನಂ (ಸಮುಪ. ೫-೦೫೦) : ಮೊದಲ ಯುಗಳದೊಳೆ ಸುದತಿಯರುದಯಿಪರ್ . . . ಮಹಿಗೆ ತುಡುಗೆಯೆನಿಸುವ ತೆಱದಿಂ (ಪಾರ್ಶ್ವಪು. ೫-೮೧) ; ತುಡು [ಪಾಠಾಂ. ಡಿ] ಗೆಯ ತೊಟ್ಟು ಪಟ್ಟಾವಳಿಯ ಮುಂಜೆಱ ಗುಟ್ಟು ಕುಳಿತಿರೆ (ಕೌಶಿಲ. ೨೪-೦೩). ೨. ತೊಡರ್ದಮರ್ದ ಬಾಳವಣ್ಣದ ತುಡುಗೆ ಪಳಂಚಲೆವ ಪಂಚಜಡೆ . . . ಚೆಲ್ವಿದಿದಿರ್ದುದು (ಪಂಪಭಾ. ೨-೪)

**ತೊಡಿಗೆ** : ೧. "ತೊಡಿಗೆ–ಅಲಂಕಾರ, ಆಭರಣ, ಪರಿಷ್ಕಾರ, ವಿಭೂಷಣ, ಮಂಡನ" (ನಾಚಿರಾ. ೬) ; ಮುತ್ತಿನ ತೊಡಿಗೆಗಳಂ ತೊಟ್ಟು ದರ್ಪಣಶಯನ ದೊಳಿರ್ದು (ಪಂಪಭಾ. ೦-೧೦೪ ವ) ; ತನ್ನ ತೊಟ್ಟ ತೊಡಿಗೆಗಳೆಲ್ಲವುನ ನೆಗಂಗಟಿತ್ರಮನಿತ್ತಂತಾನುಂ ಬೀಟ್ಕೊಳಿಸಿ ಕಟಿಸಿ (ಶಾರಂಪೂ. ೩೨೪) ; ಅಂತು ತೊಡಿಗೆಗಳಂ ಪುಲಿಯಿಂ ಪಡೆದು (ಪಂಚತಂ. ೦೧೧-೧೧) ; ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹು (ಬಸವ. ೨೫೦) ; ಹಳದಿಯ ಉಡುಗೆ ಸವೆಯದೂಡುವ ಕೊಳಲು ಮೈಯ ತವರದ ತೊಡಿಗೆ ಎಸೆವುತಿರೆ (ಬಸರ. ೯-೦೦೨) ; ಕೆಂಡದ ತೊಡಿಗೆಗೆ ಮನವಿಟ್ಟರಗಿನ ಪುತ್ಥಳಿಯೆಂತಂತೆ (ವೀರೇಚ. ೦-೨೦) ; ತೊಡಿಗೆಗಳೆಲ್ಲವಂ ತೊಡುವರ್ (ಸೂಕ್ತಿಸು. ೦೫-೨೯) ; ತೊಡಿಗೆಗಳು ಥಳಥಳಿಸೆ ಕಡೆಗಂಗಳ ಬೆಳಗು ಹೊಳೆಯೆ (ಬಸಪು. ೫-೨೮).

[ ತೊಡು₁ + –ಗೆ ]

**ತೊಡುಗೊರೆ** (ನಾ). ಉಡುಗೊರೆ; ಬಳುವಳಿ: (ಹ). ℙ ಸಾಮಾನ್ಯವಾಗಿ ಈ ಪದ 'ಉಡುಗೊರೆ, ಎಂಬ ಪದದೊಡನೆ ಬರುತ್ತದೆ.

[ ತೊಡು₁ + ಕೊರೆ₇ ( < ಕೊಟ³ ]

**ತೊಡುಪು** 'ತೊಡಪು₂' ನೋ.

**ತೊಡುವಡ್ಡಿ** (ನಾ). ೧. ಹಣವನ್ನು ತೊಡಗಿಸುವುದರಿಂದ ಬರುವ ಬಡ್ಡಿ. ೨. ಚಕ್ರಬಡ್ಡಿ : ಧನುಮಾಸದ ತಿಂಗಳವೊಂದರ ನಿತ್ಯೋತ್ಸವದ ರಂಗಪೂಜೆ ಬೀಜವೊಂನ ತೊಡುವಡ್ಡಿಇಂದ ನಡಮಂತಾಗಿ (ಎಕ. XV, ಬೇಲೂರು. ೨೪೭-೪ ; 1297).

[<ತೊಡಗು₁ + ಬಡ್ಡಿ₁. / ತಮಿ. ತೊಟರ್ವಟ್ಟಿ]

**ತೊಡುವಿಲ್**(ನಾ). ಒಂದು ಬಗೆಯ ಬಿಲ್ಲು: ತೊಡುವಿ[ಪಾಠಾಂ. ತೊಡುಬಿ, ತೋಡುವಿ]ಲ್ಲಂಬು ತರಕಸ ಬಲ್ಲೆಯ ಜೋಡಚೀಡೆಯ ಸವಗ ಸೀಸಕದ ಗಾಡಿ ಕೈಮಿಗೆ ಪೊಱಮಂಟರು ರಾವುತರು (ಕುಮಾರಾ. ೦೧-೦೭).

[ ತೊಡು₁ + ಬಿಲ್₁ ]

**ತೊಡೆ₁** (ಕ್ರಿ). ೧. ಲೇಪಿಸು ; ಬಳಿ ; ಪೂಸು ; ಸವರು ; ಹಚ್ಚು : ಮನ್ಮಥೋತ್ಸವಾಭಿಮುಖ ಮುಖಚಂದ್ರನಂ ಚಂದ್ರಕವಳದಿಂ ತೊಡೆದು (ಆದಿಪು. ೪-೧೪ ವ) ; ಕುಡಿ ಮುಜಿದಿರ್ದೊಡಂ . . . ಆಯದೆಡೆಯೊಳ್ ಬಿಸಿಯಪ್ಪ ತುಪ್ಪಮಂ ತೊಡೆದು (ಲೋಕೋಪ. ೬-೦೩) ; ಒಪ್ಪವ ನುಡಿವರಯ್ಯಾ ತುಪ್ಪವ ತೊಡೆದಂತೆ (ಬಸವ. ೭೭೫) ; ತೊಡೆದ ಭಸಿತಂ ಧೂಮವಿಡೆ ಮೈಯ ರೋಮ ಕೌಜಿಡೆ . . . ಕೌಶಿಕಂ ಮುನಿದನು ವಸಿಷ್ಠಮುನಿಗೆ (ಹರಿಶ್ಚ. ೨-೩೩); ಮಂತ್ರಿಸಿದ ಸುರುಚಿರಭಸಿತವಂ ತಳೆದು ತಾಂ ತೊಡೆಯಲ್ಕೆ (ಬಸಪು. ೪೯-೨೯) ; ಆದ ಮೈಗಂಡಿಯೊಳು ರಕುತವ ಶೋಧಿಸುತ ಹಳದುಪ್ಪವನು ತೊಡೆದಾದರಿಸಿದುದು ವೈದ್ಯಸಂತತಿ ವೀರ ಭಟರುಗಳ (ಕುಮಾರ್ಥ. ೫-೪೦); ಕಡುಮೂರ್ಖನಾದರೇನು ದುಷ್ಕರ್ಮದಿಂ

ತೊಡೆದಾತನಾದರೇನು (ಪುರಂದ. ೧-೧೪೩-೧). ೨. ತೀಡು ; ಸೋಕು : ಪರಿತಂದಾಗಳ್ ಚಂಚುವಿಂ ತೊಡೆದು ಮೆಯ್ಯುಂ (ಕುಸುಮಾ. ೧-೩೩) ; ಪುಗಿಲುಪುಗಿಲೆಂದುಡಯ ತೊಡೆಯುತಿರೆ ತಂಗಾಳಿ (ಕಾಂಭೋ. ೬೦-೯೯). ೩. ಒರಸು : ತದೀಯಪಾದಪಲ್ಲವಂಗಳನಾನಂದಾಶ್ರುಮಿಶ್ರಿತಜಳಂಗಳೊಳ್ ತೊಳೆದುಂ ನಿಜೋತ್ತರೀಯ ಪಲ್ಲವಂಗಳೊಳ್ ತೊಡೆದುಂ (ಆದಿಪು. ೫-೪೬ ವ) ; ಜಳದಿಂದೆ ಕರ್ಚಿ ವಸ್ತ್ರಾಂಚಲದಿಂ ನಿಜವದನದಿಂಬಮಂ ಸತಿ ತೊಡೆದಳ್ (ಶಾಂತಪು. ೬೦೩) ; ಅಂಬರಣಪಾಂಸು ಪತ್ತಿರೆ ಶರೀರವಮಂ ತೊಡೆದು ಕಳೆದೆ ವಸ್ತ್ರಾಂಚಲದಿಂ (ಗದಾಯು. ೯-೨೭); ನನೆದುಂಬಂ ತಾವರೆಪೂವಿನ ಕೈಪೊಡೆಯಿಂ ಮನೋಭವಂ ತೊಡವಪೊಲಾ ವನಿತೆಯ ಸಬಾಷ್ಪಲೋಚನಮನವನಿಪತಿ ಶೋಣಪಾಣಿತಳದಿಂ ತೊಡೆದಂ (ಮಲ್ಲಿಪು. ೮-೧೬) ; ಕಣ್ಣನಿಯಂ ತನ್ನ ಕರಾಗ್ರದಿಂದೆ ತೊಡೆದಂ ವಿಶ್ವಂಭರೋರ್ವೀಶ್ವರಂ (ಕುಸುಮಾ. ೩-೪೯) ; ಬಾಷ್ಪೋದಕಬಿಂದುಸಂದೋಹಮಂ ತೊಡೆದು ನಿನ್ನ ದುಃಖಕ್ಕೆ ಕಾರಣವೇನೆನುತ್ತ ಮತ್ತಿಂತೆಂದಂ (ಪುಣ್ಯಾಸ್ರ. ೧-೬೨ ವ) ; ದುರ್ವ್ರಣವ ತೊಡೆದು ಕಟ್ಟುವ ಹಸ್ತವೈದ್ಯರ ಗಡಣ (ಕುಮಾ.ಭಾ. ೫-೪೦). 'ಕಂಬನಿದೊಡೆ' ಪರಾ. ೪. ಅಳಿಸು ; ಉಜ್ಜು ತೆಗೆ : ಮನಸಿಜನ ತಲೆಯು ಬರೆಹವ ತೊಡೆದೆನು (ಮಹಾದೇ. ಬ. ೬೧-೧೭೩); ತೊಡೆವೆಂ ಶಕ್ರನ ನಾಮಮಂ ತುಡುಕಿ ನೀರೊಳ್ ಮೆಟ್ಟುವೆಂ ವಜ್ರಿಯಂ (ಜಗವಿ. ೩-೨೦); ತೆಕ್ಕನೆ ತೀವಿರೆ ತಾವಕ್ಕಿಕ್ಕಿದ ಸಿರಿಗಂಪು ಪಣೆಯೊಳೆಸೆದುದು ಕೋಪಂ ವಿಕ್ಕತನು ಬೆಸಸಿದೊಡೆ ನೊಸಲಕ್ಕರಮಂ ತೊಡೆಯಲೆಂದು ಬಂದಿಂದುಪೊಲ್ (ಚಂದ್ರಪ್ರ. ೮-೮೬); ಎಡಬಿದನೋ ಅವನ ನೊಸಲಕ್ಕರವಂ ತೊಡೆದುದಕ್ಕುಂ(ಶಮದ.೫೭ ಪ್ರಯೋ); ಸರಸಿಜಾಸನನಂದು ನೊಸಲಲಿ ಬರೆದ ಲಿಪಿ ಹಡತಲೆಗೆ ಹೋಹುದೆ . . . ಮರಳಿ ತೊಡೆಯಲು ಕಾಯಲುಂ ಪಂಕರುಹಗರ್ಭಂಗಾಗದು (ಬಸವಪು. ೪೭-೧೩) ; ತೊಡೆದನಾಗಳೆ ನೊಸಲ ಕಣ್ಣಿನ ಕಿಡಿಯನೆಲ್ಲರನುಳುಹಿದನು (ಪ್ರಭುಲಿಂ. ೧೩-೬೨) ; ಲೀಲೆಯಿಂದೀ ಭೀಮ ದೈತ್ಯರ ಭಾಳಲಿಪಿಯನು ತೊಡೆದ (ಕುಮಾ.ಭಾ. ೭-೩೫) ; ಶರದ ಘನರಾಜೇಂದ್ರಪದವಿಯ ಬರಹ ತೊಡೆದುದು (ತೊರರಾ. ೩-೨-೨); ಬರೆಬರೆದಂತದಂ ತೊಡೆದು ತೊಟ್ಟನೆ ನಿಟ್ಟಿಸಿ . . . ತೋರ್ಪ ದುಷ್ಕವಿ ಮಹಾಕವಿಮಧ್ಯದೊಳೊಪ್ಪಲಾರ್ಪನೇ (ರಾ ಜ ಶೇ. ೧-೨೩); ತೊಡೆಯಲಪ್ಪುದೆ ನೊಸಲ ಬರೆಹಗಳ ಕುಂದಂ (ಕಾಲೂಕ. ೧೦೦೦-೨೨೮). ೫. ಗುಡಿಸು; ಉಡುಗು: "ತೊಡೆ-ಸಂಮಾರ್ಜನೇ, ಅಂಗೇಚ" (ಶಮದಾ); ಉತ್ಪಲಿಕೆಯಂ ಕದಳೀಗೃಹಮರಕತವೇದಿಯಂ ಕಮಲದಳಂಗಳಿಂ ತೊಡೆಯಲುಂ . . . ಪೆಸರ್ವೆಸರೊಳೆ ಕರೆದು ಪೇಟ್ಟ (ಶಾಂತಪು. ೧೦೦೭); ಊರ ಚೌವಟ್ಟದೊಳಂ ತೊಡೆದು ಬರೆದಲ್ಲಿ ರಂಗಮನಡುಗೆಗಳಂ ಸುರಿದು ಸೂಸಿ ಕಿಡುವವರ್ಮೋಳಧರ್ (ಸಮುಚ. ೯-೧೩೦) ; ಕಡುಸೊಗಯಿಪ ಮಣಮನೆಯಂಗಣಮಂ ತೊಡೆವ . . . ಮಡದಿಯರ ಮೊತ್ತಂ ಕಣ್ಗೊಪ್ಪಿದುದು (ಜಯುಕಾ. ೧೨-೧೩). ೬. ಶಂದ್ಧಿಮಾಡು ; ಶುಭ್ರಮಾಡು : ವರಮುಕುರವಂ ತೊಡವ[ಕಾಶಾಂ. ಬೆಳಪ]ರಾರ್ (ಹರಿಕಾ. ೧-೨೨). ೭. ನಿರ್ಮೂಲಮಾಡು; ನಾಶಮಾಡು: ನರಜನ್ಮವ ತೊಡೆದು ಹರಜನ್ಮವ ಮಾಡಿದ ಗುರುವೇ (ಮಹಾದೇ. ಬ. ೨೩-೪೩) ; ಜಿನಬುದ್ಧಸಮಯವಿದೆಂದುಲಿವ ಪೆಸರಿಲ್ಲದಂತಾತನು ತೊಡೆದು ಕಳೆದು (ಬಸವಪು. ೫೦-೫೦) ; ಜಯವಿಜಯರಾ ದೈತ್ಯಜನ್ಮವನು ಈತ ತೊಡೆದನು (ಕುಮಾ.ಭಾ. ೭-೧೦-೨೪) ; ಮೇಘಪ್ರಸರಕೊಳಗಹನೊಮ್ಮೆ ರವಿ ತೋರುವನು ಮತ್ತೊಮ್ಮೆ ಅಸಮಸಮರದೋಳೀತನಾ ಪರಿಮಸುಳುವನು ತೋರುವವರಿ ತೊಡೆವನು ದೆಸೆಗೆಡಿಸುವನು ಬಳಿಕ ಮುಳಿಸಿ ನೊಳಾ ಮಹಾರಥರ (ಕುಮಾ.ಭಾ. ೧೧-೩೭) ೮. ನಾಶವಾಗು; ಇಲ್ಲವಾಗು: ತಪ್ಪಿತ ತೊಡೆಯಿತ್ತು ಭವಬಂಧನ ಹಿಂಗಿತ್ತು (ಶರಗೋ. ೨) ; ಪಾಂಡವರೂ, ಕುಂತಿಯೂ ಬದುಕಿಕೊಂಡು, ದ್ರೌಪದಿಯನ್ನು ಪಡೆದಿದ್ದಾರೆ . . . ದುಃಖ ತೊಡೆದಿದೆ ! (ವಚಭಾ. ೬೬) ; ಎಂದಾದರೊಮ್ಮೆ ತುಸು ಕದನ ಸುಳಿದರೆ . . . ಹೇಗೋ ತೊಡೆದು ಬಿಡುತ್ತಿತ್ತು (ಚಟ್ಟಹೊ. ೪). ೯. ಪರಿಹರಿಸು; ನಿವಾರಿಸು: ಸಯ್ತುಡವಡಿಕೆಗಳಂ ತೊಡೆದತ್ತೆಡವಟೆಯುದೆ ಪೊಳೆವ ಮಿಂಚು (ಕವಿರಾ. ೩-೧೨೫) ; ಕೋಪಪಮಂಗಜರಸಪೂರದೊಳ್ ತೊಡೆದವೋಲ್ ತಳರ್ದತ್ತು (ಶಾಂತಿಪು. ೮-೧೧೦);ಎನ್ನ ಕಾಯದ ಕರ್ಮವ ತೊಡೆದು . . . ಕಾರುಣ್ಯವ ಮಾಡು (ಅವಕಂ. ೧೬೬-೬೫೩).

**ತೊಡೆದುಕೊಳ್, ತೊಡೆದುಕೊಳ್ಳು** = ೧. ಲೇಪಿಸಿಕೊಳ್ಳು ; ಬಳಿದುಕೊಳ್ಳು : ಎದುರಿಗೇ ಇದ್ದ ತವ್ಮ ದೃಷ್ಟಿಯ ಸುಪ್ರಭೆಯನ್ನು ತೊಡೆದುಕೊಂಡಿದ್ದ (ಸುವಸಂ. ೧೬). ೨. ಒರೆಸಿಕೊಳ್ಳು: ತುಡುಗಣೆ ತೊಟ್ಟನಂತ ಬಾಯಂ ತೊಡೆದುಕೊಂಡು (ಪಂಚತಂ. ೨೮೪-೨೩). **ತೊಡೆದುಹಾಕು** = ೧. ಅಳಿಸಿಹಾಕಂ ; ಅಳಿಸು : ನಿನ್ನ ಹಣೆಯ ಬರಹವನ್ನು ತೊಡೆದು ಹಾಕುತ್ತೇನೆ (ರಾಜಸೂ. ೩೧). ೨. ನಾಶಮಾಡು; ನಿರ್ಮೂಲಮಾಡು: ರಾಜರ ದುಷ್ಟಸಹವಾಸಗುಣ ಅವರ ವಿವೇಕವನ್ನು ತೊಡೆದುಹಾಕಿತ್ತು (ಮರಳಿ. ೧೬೩) ; ಗ್ರಹಗಳು ರೂಪುಗೊಳ್ಳುವ ಕ್ರಿಯೆ ಅತ್ಯಂತ ಅಪೂರ್ವ ಸಂಭವವಾದುದು ಎಂಬುದು-ಮತಾಭಿಪ್ರಾಯವನ್ನು ತೊಡೆದುಹಾಕಲು ಇಚ್ಛಿಸದಿದ್ದ ಜನಸಾಮಾನ್ಯರ ದೃಷ್ಟಿಯಲ್ಲಿ ಒಂದು ಪ್ರಧಾನಗುಣವಾಗಿ ಪರಿಣಮಿಸಿತು (ಭೂಹುಟ್ಟು. ೨೯). **ತೊಡೆದು ಹೋಗು** = ಇಲ್ಲವಾಗು : ಅವರಿಗೆ ಉಂಟಾದ ಅಂತಹ ವಿಷಮವಿಪತ್ತಿನಲ್ಲಿ ಸಮಯಸ್ಫೂರ್ತಿಯು ತೊಡೆದುಹೋಯಿತು (ರಾವಿಜ. ೨೩).

[ ದೇ. ೫ ತಮಿ. ತೊಟ್ಟೈ, ತುಟ್ಟೈ ; ಮಲ. ತುಡೆ ; ತುಳು. ತೊಡೆ, ತುಡೆ ; ತೆಲು. ತೊಡೆಯು. ತುಡ್ಚು ]

**ತೊಡೆ₂** (ನಾ). ಸೊಂಟದಿಂದ ಮಂಡಿಯವರೆಗಿನ ಭಾಗ ; ಊರು : "ಪ್ರಸೃತಾಪ್ಯೆ ಜಂಘೆ ತೊಡೆಯೂರು" (ವಸ್ತು.ಕೋ. ೬೬-೩); ವೀರಶ್ರೀ ಮಹಾದೇವಿಯರರಸನ ತಲೆಯಂ ತನ್ನ ತೊಡೆಯ ಮೇಲಿಟ್ಟು (ವಡ್ಡಾರಾ. ೧೦೭-೧೧) ; ವದನಂ ತೋಳ್ ತೊಡೆ ಪಾದಮೆಂಬಿವನಿವಂ ಶುಶ್ರೂಷೆಗೆಯ್ವಳ್ಕೆ (ಆದಿಪು. ೮-೭೩); ಕುರುರಾಜನ ತೊಡೆಯನುಡಿವೆನೆಂದಂ ಭೀಮಂ (ಗದಾಯು. ೨-೨೮); ತೊಡೆಯ ಮೇಲಿರ್ದೊಡಂ ಸ್ತ್ರೀಯನಾರೈದುಕೊಂಡಿರಬೇಕು (ಪಂಚತಂ. ೧೩೩-೧೬) ; ಸುರಪತಿಯ ಬೇಳಂಬವನು ವಿಸ್ತರಿಸಲೇತಕೆ ವಜ್ರಕೀಟೋತ್ಕರವ ಕಳುಹಿದರೆನ್ನ ತೊಡೆಗಳನುಗಿದವವು ಬಳಿಕ (ಕುಮಾ.ಭಾ. ೯-೩೧).

[ ದೇ. ೫ ತಮಿ. ತೊಟ್ಟೈ, ತುಟ್ಟೈ ; ಮಲ. ತುಡ ; ತುಳು. ತೊಡೆ, ತುಡೆ ; ಕೊಡ. ತೊಡೆ ; ತೆಲು. ತೊಡ ]

**ತೊಡೆಗಟ್ಟ** (ನಾ). ಒಂದು ಬಗೆಯ ಸಸ್ಯ : ಬೀಟೆ, ತೊಡೆಗಟ್ಟ, ಕರೇವ್ಯಾಡಿ (ಮೈ.ಕಿಗ. ೨೮-೫೯೮). [ ? ]

**ತೊಡೆಚಲ್ಲಣ** (ನಾ). ಒಂದು ಬಗೆಯ ಚಲ್ಲಣ ; ಮೊಳಕಾಲಿನವರೆಗೆ ಬರುವ ಉಡುಪು ; ಅರ್ಧೋರುಕ : ತೊಡೆಚಲ್ಲಣ ತೊಟ್ಟ ಜೋಡು ಬಿಡದೆ ಮೆಟಿಯೆ ಬಿಲ್ಲವರು ನಡೆತಂದರು (ಕುಕಾಸಾಂ. ೧೧-೩೫) ; ಹೆಜ್ಜೆ ಹೆಜ್ಜೆಗೆ ತೊಡೆಚಲ್ಲಣವಡಸಿರ್ದ ಗೆಜ್ಜೆಯು ಗಲಿರೆಂಬ ರವದಿ. . . ಬಂದನು (ಪ್ರೋಹಚ. ೧೨-೪೯). [ ತೊಡೆ₂ + ಚಲ್ಲಣ ]

**ತೊಡೆಚಾಟುಗೊಳ್** (ಕ್ರಿ). ತೊಡೆಗೆ ಮರೆಮಾಡಿಕೊಳ್ಳು,-ರಕ್ಷಣೆಯಾಗಿಟ್ಟುಕೊಳ್ಳು : ಬೆಳ್ಳಿಪೊಂಗುಬ್ಬಿವರಿಗೆಯಂ ತೊಡೆಚಾಟುಗೊಳುತೊಡನೆ ಖಡ್ಗಂಗಳ ಝಳಪಿಸುತೆ . . . ಪೊಯ್ದಾಡುತಿರ್ದರಾ ಹರಿಗೆಯವರು (ಚಿಲಪು. ೪೮-೫೦); ಕಾಳೆಯಿಂದೆ ಬೆದಬಿದಿರಿ ನೇಜಯಂಗಳನೂದು ಹರಿಗೆಯಂ ಕದಲಿಸು ವರೂಥಮಂ ತೊಡೆಚಾಟುಗೊಳ್ಳೆನುತೆ ಕದನವಿಕ್ರಮರೆಲ್ಲರುಂ ಬಿದಱ ಕಂಡ ಕಡೆಗೋಡಿದರು (ಚಿಲಪು. ೫೦-೧೬).

[ ತೊಡೆ₂ + ಚಾಟು₃ + ಕೊಳ್₁ ]

**ತೊಡೆತ** (ನಾ). ೧. ಲೇಪನ ; ಬಳಿಯುವಿಕೆ : "ಲೇಪನಂ ತೊಡೆತಂ" (ರಾಜಶು. ೨-೧-೮೭) ; (ಬಣ್ಣ, ಸುಣ್ಣ ಬಳಿಯುವುದರಲ್ಲಿ) ಮೊದಲನೆಯ ತೊಡೆತ (First Coat. ಇಂಕನ್ನ.). ೨. ನಾಶ: ಗಡ್ಡೆ ಇರ್ಪುದು, ಕಿರಿದು, ಸಲಿಮಿಸಿನ ಮುಂದುಗಡೆ, ನಾವೆಗಳ ತೊಡೆತ (ಶಾರಪ. ೧೭-೪೯೩).
[ ತೊಡೆ$_1$ + – ತ$_2$ ]

**ತೊಡೆತಟ್ಟು** 'ತೊಡೆದಟ್ಟು' ನೋ.

**ತೊಡೆದಟ್ಟು**, ತೊಡೆತಟ್ಟು (ಕ್ರಿ). ೧. ಚುಂಕ್ಕುತಟ್ಟು : ಚಂಡವಿಕ್ರಮ ನೊಳಗಿದನು ನಾರಿಯರ್ ನಿಖಿಲೋಪಚಾರವ ಮಾಡಿ ಕೈವಾರಿಸಿ ತೊಡೆ ದಟ್ಟಲೊಡನೆ ಪಾರಿಯ ವಾದ್ಯ ಘೋಷಣಸಲ್ಕೆ ದಿವ್ಯವಿಭೇರಿಯ ಹೊಡೆದರ್ರೂರೊಳಗೆ (ಮೋಹತ. ೧೮-೧೦೦). **ತೊಡೆತಟ್ಟು** : ೨. ಮಲ್ಲ ಯುದ್ಧಕ್ಕೆ ಸಿದ್ಧವಾಗು ; ಸಡ್ಡುಹೊಡೆ : ಜಟ್ಟಿಗಳು ತೊಡೆತಟ್ಟಿ ಮಲ್ಲಯುದ್ಧಕ್ಕೆ ಸಿದ್ಧವಾದರು (ಕೂಶಿ). [ ತೊಡೆ$_2$ + ತಟ್ಟು$_1$ ]

**ತೊಡೆಪ**, ತೊಡಹ$_1$, ತೊಡೆಹ (ನಾ). ೧. ಬಳಿಯುವಿಕೆ ; ಲೇಪನ : ತೊಡೆಪಂ, ನಡೆಪಂ, ಮೊಗೆಪಂ (ಶಬ್ದಾನು. ೫೭೧ ಪ್ರಯೋ). **ತೊಡಹ$_1$** : ೧. ಜಡೆದಲೆಯ ತೊಡಹದ ವಿಭೂತಿಯ ಮುಡಿವೆರಳ ಜಪಸರದ . . . ಮುನಿಯ ವೇಷವ ತೊಡಚಿಕೊಂಡಿಹ ಕಾಲನೇಮಿಪ್ಪಂತೆ ರಂಜಿಸಿದ (ತೊರರಾ. ೬-೪೭-೬೮) ; ಹೇಮದ ತೊಡಹದುರುನಿಸ್ಸಾಳತತಿಯಲಿ ನುಡಿ ವಡಚ್ಚರಿಯೆನಲು ಮಿಗೆ ಸಂಭ್ರಮಿಸಿತಾ ನಗರ (ತೊರರಾ. ೬-೫೩-೧೭). ೨. ಗಿಲೀಟು ; ಲೇಪ : ತೊಡಹದ ಕೆಲಸದ ಬಣ್ಣದಂತೆ ಕಡಿಹಕ್ಕೆ ಒರೆಗೆ ಬಾರದು ನೋಡಾ (ಬಸವ. ೨೮೯) ; ಚಿಗಿವ ಚಲನೆಯ ಚಂಗುವಾಚಿನ ಮೃಗ . . . ತರುಕದಂಬದಲಿ ಅಡಗಿ ತೋಱುತ ನಿಲುತ ನಿಗುರುತ ತೊಡಹದಳಿಮನದಧಮಪುರುಷನ ನುಡಿಯುಪೊಲು ವಂಚಿಸುತ ಹಾಯ್ದುದು ವಿಪಿನದಲಿ ಸ್ವಪನ (ತೊರರಾ. ೪-೮-೪೭). ೩. ಕಪಟ ; ಠಕ್ಕು ; ನಟನೆ : ಕಡಿಗಳ ಹದಿನೆಂಟನೊಡಗೂಡಿ ಸಂದಿಸಿ ತೊಡಚಿ ಕಟ್ಟಿದೆ ನರರ ಬಂಧನದಲ್ಲಿ ಈ ತೊಡಹದ ನಾಯ ನಿಚ್ಚ ನೀನಿಕ್ಕಿ ಕಡಿಸಿದೆಯಯ್ಯ (ದೇದಾವ. ೪೭-೬೨) ; ತೊಡಹದಧಟನೆ ತಳೆದು ಯುದ್ಧಕೆ ತಡಹುಸಿ ಸಮಸತ್ತ್ವದಲಿ ಫಣಿಶಯನು ಕಾದಿದನು (ಸಾಳ್ವಭಾ. ೨೨-೬೮). **ತೊಡೆಹ** : ೨. ಕನಕದ ತೊಡೆಹದೊಳಾ ಸರಪಣಿಯಂತೆ ಜನಪನಿನ್ನೊಬ್ಬ ಮಾಡುವನೆ (ಭರತ. ೪೯-೧೪೦) ; ಹೊಸ ಹೊನ್ನ ತೊಡಹದಂತೆಸೆವ ಮೈಬಣ್ಣ (ಭರತ. ೭೭-೧೯). ೪. ತೋರಿಕೆ: ವೀರ ರೆಂದೆನಿಸುವರು ತೊಡೆಹದ ಶೌರಿಯದ ಸಿರಿವಂತರರಸುಕುಮಾರಕರು ನಿನ್ನವರು (ಕುಮಾರವ್ಯಾ. ೧೩-೪೭) : ಹೊಳೆಹೊಳೆದು ತಂಬುಲದ ರಸದಲಿ ಮುಳುಗಿ ಮೂಡುವ ಧಗೆಯ ತೊಡೆಹದ ಮಲುನಗೆಯ . . . ಭೂಪಾಲನಿರವನು ಕಂಡು (ಕುಮಾರವ್ಯಾ. ೧೮-೯). [ ತೊಡೆ$_1$ + – ಪ$_2$ ]

**ತೊಡೆಮಡ** (ನಾ). ೧. ಆನೆ ಅಥವಾ ಕುದುರೆಯನ್ನು ಏರುವ ಒಂದು ಬಗೆಯ ವಿದ್ಯೆ,–ವರಸೆ : ಸರಸನ್ನ ತೊಡೆ[ಪಾಠಾಂ. ಡ]ಮಡಂ ಕಸೆಕಟ್ಟು ಕಡಿಯಾಣ ಸರಸಮುಂ ಸ್ಯೆರಿಸದ ಚಳಬಳಿಕೆಗಳ ಚಾರು ತುರಗಕುಲ (ಸೋಮಚ. ೫-೨೮) ; ಬಳಿಕೆಯೊಳು ತೊಡೆಮಡ ಕಿಸಿ[ಕಸೆ]ಕಂಬಿಯ ಸರಸನ್ನೆಗಳಾಟದ ತೊಡಕಂ ಹೊದ್ದದೆ (ವೀರೇಶ. ೨-೨೯) ; ತೊಡೆಮಡ ದನಿ ಚಮ್ಮಟಿಗೆಗಳನೊಯ್ಯನೊಯ್ಯನೆ ಮೈವಳಿಗೆ ತಂದೊಡಂಬಡಿಸಿ (ರಾಜಶೇ. ೬-೧೧ ವ). ೨. ಸವಾರಿ : ಎನ್ನ ತೊಡೆಮಡದ ಮದಕರಿಯು ಭಕ್ತರ ಸಿರಿಯು ದುರಿತಗಜ ಹರಿಯು ಸಾಮರ್ಥ್ಯಗಿರಿಯು (ಸಿದ್ಧೇಶ. ೮-೪೩); ೩. ಸವಾರಿಯ ಒಂದು ಕ್ರಮ : ಥಾಪನೆ ಬಯ್ಸಿಕೆ ತೊಡೆಮಡಕಯ್ದನಿ ಯೆಂಬ ಚಡಾಯತಿಕೆಗಾಯತಿಕೆಪಡೆದಾರೂಢ ವಿದ್ಯಾವಿಳಾಸ (ಸೌಇಇ IX-I, ೩೪೩-೨೦ ; 1226). ೪. (ಅಲಂ) ಸಲಿಗೆ; ಆತ್ಮೀಯತೆ : ಪೊಱಮಡಿಸಿದಂ ಪುರಹರನ ತೊಡೆಮಡದ ಸುಕುಮಾರನು (ಸೋಮಚ. ೫-೨೨). [ ತೊಡೆ$_2$ + ಮಡ$_1$ ]

**ತೊಡೆಯಿಸು** (ಕ್ರಿ). ೧. ಬಳಿಯುವಂತೆ ಮಾಡು ; ಲೇಪಿಸು : "ತೊಡೆಯಿಸು – ಲೇಪ್ಯಕರಣೇ" (ಶಮುಧಾ). ೨. ಅಳಿಸು ; ಉಜ್ಜಿ ತೆಗೆ ; ಇಲ್ಲದಂತೆ ಮಾಡು : ಪುರಾತನ ಚಕ್ರವರ್ತಿಗಳ ದಿಗ್ವಿಜಯ ಕೀರ್ತಿಗಳಂ . . . ದಂಡರತ್ನದಿಂ ತೊಡೆಯಿಸಿ ಕಳೆದು (ಅಜಿಪು. ೯-೩೪ ವ); ಆಂ ಬಂದು ಪೋದ ಪದ್ಚೆಯನಂಬುಜಮುಖಿ ಪೆಱನದೂರ್ಬನಱಿಯದ ತೆಱದಿಂ . . . ತೊಡೆಯಿಸುವುದೆನುತುಮಾಂ ಪೊಱಮಟ್ಟೆಂ (ದಶಕು. ೧೦-೯೦); ತನ್ನರೇಂದ್ರನ ನೊಸಲ ಬರೆಹವ ಮುನ್ನೊರೆಸಿ ಬಿಜ್ಜಳನ ಸಾಮ್ರಾಜ್ಯೋನ್ನತಿಯನೀಶನ ಕವಳಿಗೆಯೊಳಂತು ತೊಡೆ[ಪಾಠಾಂ. ಡ]ಯಿಸುತ (ಬಸಪು. ೬೧-೭). [ ತೊಡೆ$_1$ + – ಇಸು$_3$ ]

**ತೊಡೆಯೇಱಿಸು** (ಕ್ರಿ). ತೊಡೆಯ ಮೇಲೆ ಕೂರಿಸಿಕೊಳ್ಳು : ಬಯಸಿ ಪಡೆದು ತೊಡೆಯೇಱಿಸಿ ಮುದ್ದನೊಱಲ್ದು ನೋಡಿ ನಡೆಪಿದ ಜನನೀ ಜನಕರ್ಗದೆನಿತಱಲ್ ಜನಿಯಿಕುಮೋ (ಕಾದಂಉ. ೪೭೫) ; ಅರಸನೆಂಬ ಪಾತಕನೆನ್ನಂ ತೊಡೆಯೇಱಿಸಿ ಕೇಳಿಕೆಯಾದೊಡೆ ನೋಡುತಿರ್ದೆಂ (ಯಶೋಚ. ೨-೫೧). [ ತೊಡೆ$_2$ + ಏಱಿಸು ]

**ತೊಡೆವಾಳ** 'ತೊಡೆವಾಳೆ' ನೋ.

**ತೊಡೆವಾಳೆ**, ತೊಡೆವಾಳ (ನಾ). ತೊಡೆಯ ಸಂದಿಯಲ್ಲಿ ಬಾಳೆಯ ಕಾಯಂತೆ ಏಳುವ ಬಾವು ; ಉಡುಚು ; ಒಂದು ಬಗೆಯ ಗುಹ್ಯ ರೋಗ : "ಜಾಂಗಃ = ತೊಡೆವಾಳೆ" (ಕಾಶಕೃ. ೧೦); ರಕ್ತಧಾತು, ಮಾಂಸ ಧಾತು ... ಇವಱಿಂದ ತೊಡೆಗಳ ಸಂದಿನಲ್ಲಿ ಆ ಗ್ರಂಥಿ ಉಂಟಾಗುವುದು. ಅದನ್ನೇ ತೊಡೆವಾಳೆ ಎಂದೆಂಬರು (ವೈದ್ಯಸಾ. II, ೧೭೪). **ತೊಡೆವಾಳ** : ಈ ಬೇರಂ ನಿಂಬೇಹುಳಿಯಲ್ಲಿ ತೇದು ಕೊಡೆಯಲು ೩ ದಿನಕ್ಕೆ ತೊಡೆವಾಳ ಗುಣ (ವಿಷ್ಯವಿ. ೪) : ದೇಹದ ಗ್ರಂಥಿಗಳಿರುವ ಪ್ರದೇಶದಲ್ಲಿ (ಮು. ಕಂಕುಳಲ್ಲಿಯೂ ತೊಡೆಯ ಸಂದಿಯಲ್ಲಿಯೂ) ಏಳುವ ಗೆಡ್ಡೆ; ತೊಡೆವಾಳ; ಉಡುಚು (Bubo. ಇಂಕನ್ನ.).

[ ತೊಡೆ$_2$ + ಬಾಳೆ$_1$ (< ಬಾಟಿ³)./ತಮಿ. ತೊಟ್ಟವಾಟಿ³, ತುಟ್ಟವಾಟ್ಟೈ; ಮಲ. ತುಡವಾಟ್ಟ; ತುಳು. ತೊಡೆವಾಳ್, ತೊಡೆವಾಳೊ ]

**ತೊಡೆವೇನೆ** (ನಾ). ತೊಡೆಯ ನೋವು,–ವೇದನೆ : ಕುರುರಾಜಂ ತೊಡೆ ವೇನೆಗೆ ನರಳನೆ (ಗದಾಯು. ೯-೧೯). [ ತೊಡೆ$_2$ + ಬೇನೆ ]

**ತೊಡೆವೊಯ್** (ಕ್ರಿ). ತೊಡೆಯನ್ನು ಮೃದುವಾಗಿ ಬಡಿ,–ಮೆಲ್ಲನೆ ತಟ್ಟು : ಹೊತ್ತು ಹೋಯಿತ್ತೇಳಿರೇ ಶಿವಾರ್ಚನೆಗೆಂದು ತೊಡೆವೊಯ್ದು ಮೆಲ್ಲನೆಬ್ಬಿಸೆ (ಬಸರ. ೯-೧೪೯). [ ತೊಡೆ$_2$ + ಪೊಯ್$_1$ ]

**ತೊಡೆಸಂಕಲೆ** (ನಾ). ೧. ತೊಡೆಗೆ ಹಾಕುವ ಸಂಕೋಲೆ,–ಸರಪಣಿ : ತೊಡೆಸಂಕಲೆಯಿಕ್ಕಿದಪೊಲ್ಕುಡಿಯಳ್ಳಿಗಳಿಂದೆ ಸುರಿದುವಿರ್ಕೆಲಕೆ ಕರುಳ್ (ಶಮುದ. ೧೦೭ ಪ್ರಯೋ). ೨. ಬಿರುದಿನ ಬಳೆ : ಮೊಕ್ಕಳಮನೆ ಬಸಿಱೀ ಱಿಂದೊಕ್ಕ ಕರುಳ್ ತೊಡೆಯೊಳಾವಗಂ ತೊಡರ್ದನಸುಂ ಮಿಕ್ಕುವು ಬಿರುದರ ಬಿರುದಿಂಗಿಕ್ಕಿದ ಸುಟ್ಟಿಸದ ಮಿಸುಪ ತೊಡೆಸಂಕಲೆಯುಂ (ಚಂದ್ರಪು. ೧೦-೭೪). ೩. (?) : ಬಿರುದಿನುಬ್ಬಟೆಯ ತಳವಟದೊಳೌಕಿದರು ತೊಡೆಸಂಕಲೆಯ ತೊಲಗದ ಕಂಭದಪ್ರತಿಬಲರು ಹಾಣಾಹಾಣಿಯಲಿ ಹೊಯಿದಾಡಿದರು ಕಡುಗಿ (ಕುಮಾರಭೀ. ೪-೨೭). [ ತೊಡೆ$_2$ + ಸಂಕಲೆ ]

**ತೊಡೆಸಕ್ಕಿ**, ತೊಡೆಸಕ್ಕೆ (ನಾ). ೧. ಪ್ರತ್ಯಕ್ಷ ಸಾಕ್ಷಿ : ವಿಕ್ರಮಾಕ್ರಾಂತದಿಂ ದಿಗಧೀಶತತ್ತ್ರೀರ್ಡೆಸಕ್ಕಿಯಾಗೆ ಧರೆಯಂ ನಿಃಕಂಟಕಂ ಮಾಡಿದಂ (ಸೌಇಇ. IX-I, ೧೫೩-೨೩ : 1083); ನನೆಯಂಬುಗಳಂ ತೊಡೆಸಕ್ಕಿ ಮಾಡಿ ಕಾಂತೆಯ ತೊಡೆ ತೊಡೆದವು ಕನಕಕದಳಿಕಾವಿಲಸನಮಂ (ಮಲ್ಲಿಪು. ೩-೬೦) ; ಈವ ಗುಣಕ್ಕೆ ತಂನ ತೊಡೆಸಕ್ಕಿ ನಿಜಾಶ್ರಿತ ಪಂಡಿತಕ್ಕರ್ಗಳೊಳ್ ತೀವಿದುದಗ್ರ ಲಕ್ಷ್ಮಿ ನಿಜದೋರ್ಬ್ಬಳದೇಳ್ಗೆಗೆ ಸಕ್ಕಿ (ಎಕ. VII, ಶಿಕಾರಿ. ೧೨೩-೧೫ ; 1149). ೨. ತೊಡೆ ತಟ್ಟಿ ಮಾಡುವ ಪ್ರತಿಜ್ಞೆ (?) : ವಜ್ರವೇದಿಕೆಯಂ

ತಾಂ ತೊಡೆಸಕ್ಕಿ[ಪಾಠಾಂ. ಸಾಕ್ಷಿ]ವೊಯ್ವವೋಲ್ ವೊಯ್ದೊಡನೊಡನುಚ್ಚಳಿ ವುವಿದಲ ತುಂಗತರಂಗಂ (ಆದಿಪು. ೧೨-೧೨೪). **ತೊಡೆಸಕ್ಕಿ₂:** ೧. ತೊಡೆಗಳ ನುಡಿಯಲ್ಲುಗ್ರರುಗಳ್ ತೊಡೆಸಕ್ಕಿಗಳಾಗೆ (ಗದಾಯು. ೧-೭೮);"ಪ್ರತಿಬಂಧಕ" (ಪ್ರಶ್ನ) ; ಪರ್ಚುವ ಬಿರ್ದ ಪೆರ್ದೊಡೆ ತೊಡೆಸ[ಸ]ಕ್ಕಿಯಾಗಿದು ಕೆತ್ತುವ ವುಣ್ಗಳ ಬಾಯ್ಗಳೀಬನುವೃಡಿಸುವ ಬಾಯ್ಗಳಾಗಿರೆ ಕಱುತ್ತಿಱುವಂ ನೃಪ ಸೈನ್ಯವಂ (ಶೃಂಗಾರ. ೧-೮೩) ; ನಖಂ ಮುಡುಪನವುಂಕೆ ಕಂಡು ಸತಿ ಕಂಟಱು ಕಾಡುವಳೆಂದು ತನ್ನೊಡನೆಯ ಬೇಂಟೆಕಾಱವಡೆಯಂ ತೊಡೆಸಕ್ಕಿಯನುಂಟುವಮಾಡಿದಂ (ಸೂಕ್ತಿಸು. ೩-೧೪೦); ತೊಡೆಯ ಸ[ಪಾಠಾಂ. ಸೆ]ಕ್ಕಿ= ತೊಡೆಸ[ಪಾಠಾಂ. ಸ]ಕ್ಕಿ (ಶಮದ. ೧೭೨ ಪ್ರಯೋ).

[ ತೊಡೆ₂ + ಸಕ್ಕಿ ]

**ತೊಡೆಸಕ್ಕೆ** 'ತೊಡೆಸಕ್ಕಿ' ನೋ.

**ತೊಡೆಸನ್ನೆ** (ನಾ). (ಕಂದುರೆಸವಾರಿ ಮಾಡುವಾಗ) ತೊಡೆಯ ಅವುಕು ವಿಕೆಯಿಂದ ಮಾಡುವ ಸನ್ನೆ.-ಸೂಚನೆ : ಆನೆಗೆ ಅಡಿಸನ್ನೆ ಕುದುರೆಗೆ ತೊಡೆಸನ್ನೆ ಹೆಣ್ಣಿಗೆ ಕಣ್ಣಿನ ಸನ್ನೆ (ಇಂಬಾಪ. ೯೦-೩೭).

[ ತೊಡೆ₂ + ಸನ್ನೆ₂ ]

**ತೊಡೆಸೋಂಕು** (ನಾ). ೧. ತೊಡೆಯು ಸ್ಪರ್ಶವಾಗುವಷ್ಟು ಹತ್ತಿರ,- ಸನಿಹ: ವಾಸವನ ತೊಡೆಸೋಂಕಿನಲಿ ಕುಳ್ಳಿಹರೀ ಮಹೇಶ್ವರರು (ಕುಮ್ಮಾಸ. ೮-೧೮). ೨. (ಆಲಂ) ಸಲಿಗೆ ; ಆತ್ಮೀಯತೆ : ಎನಗೆ ನಿಮ್ಮಡಿಗಳಲಿ ಸಮಸೇವನೆಯ ದೇವ ಮುರಾರಿಯಂಜುವವನಲು ತೊಡೆಸೋಂಕಿನಲಿ ಸಾರಿದು ಶೌರಿಯಿಂತೆಂದ (ಕುಮ್ಮಾಉ. ೧೦-೨). [ ತೊಡೆ₂ + ಸೋಂಕು₂ ]

**ತೊಡೆಹ** 'ತೊಡೆಪ' ನೋ.

**ತೊಣಚಿ** 'ತೊಣಸೆ' ನೋ.

**ತೊಣಚೆ** 'ತೊಣಸೆ' ನೋ.

**ತೊಣಸಿ** 'ತೊಣಸೆ' ನೋ.

**ತೊಣಸೆ₁** 'ತೊಣಸೆ' ನೋ.

**ತೊಣಸೆ₂** (ನಾ). ಒಂದು ಬಗೆಯ ಸಸ್ಯ,-ಸೊಪ್ಪು: (ಕ).

[ ? ]

**ತೊಣೆ₁**, ತೊಣ್ಣೆ₂ (ನಾ). ೧. ಸರಿ ; ಸಮಾನ ; ಎಣೆ ; ಸಾಟಿ : "ಸರಿ ದೊರೆ . . . ಎಣೆ ತೊಣೆ . . . ಸಂಗಡಂ-ಈ ೧೮ ಸಮಾನಕೆ ಪೆಸರ್" (ಕಶಬ್ದಾ. ೧೫-೨೯೧) ; ಕರ್ಣನೆಣೆಗಂ ತೊಣೆಗಂ ನೃಪರಾರುಮಿಲ್ಲ (ಪಂಪಭಾ. ೧೨-೧೦೦) ; ಶಶಭೃತ್ಕಾಂತಿಗೆ ಮಿಂಚುಂಬಾಱು ಸಮನೆಂತಕ್ಕುಮೊ ದೊರೆಗವೊರೆಗಮೆಣೆಗಂ ತೊಣೆಗಂ (ಶಾಂತಿಪು. ೧೨-೭೭) ; ವಿದ್ಯಾವಿಭವವಂಶಸಂಪತ್ತಿಯೊಳಿಂದೀ ಪರಸೀಕಗೆ ತೊಣೆಯೆನೆ (ವರ್ಧಪು. ೯-೪೩) ; ತೊಣೆಯಾಂಡಿಗಿಳೆಯೊಳಾರ್ತೊಣೆ (ಭೈರವೇ. ೧-೨೨೫) ; ಸಹದೇವಂಗೆ ಸತ್ಕವಂತಂ ತೊಣೆ (ರಾಜಾಶ್ಚ. ೧೪೪-೨). ೨. ಜೊತೆ ; ಒಡನಾಟ; ಸಹವಾಸ: ಅವಳ ತೊಣೆ ವುವಿಗೂ ಹರ್ಷವನ್ನೊದಗಿಸುತ್ತಿದೆ (ಹುಲಿಹಾ. ೨೬೭). ೩. ಸಂಗಡಿಗ ; ಒಡನಾಡಿ : ರಕ್ಷಿಸು ನಮಃಶಿವಾಯ ನೀನೆ ತೊಣೆ ನೀನೆ ಹೊಣೆ ಎಂದು ಕಱೆಗೊರಲಂಗೆ ಮೊಱೆಯಿಡೆ (ಹಾಗೀರ. ದೇ. ೭೨೭-೯). 'ಎಣೆತೊಣೆ' ಪರಾ. **ತೊಣ್ಣೆ₂** : ೧. ನಿರುಪಮ ಧರ್ಮ್ಮಕಾರ್ಯ್ಯಂದೆಡೆಯೊಳು(ಳ್)ಸಲೆ ಶೋಭನಸಟ್ಟಿಯೊಳು(ಳ್) ದಿಟಂ ಸರಿ ದೊರೆ ಪಾಟಿ ಪಾಸಟಿ ಸಮಂ ತೊಣೆಯೆಂದಡೆ ದೋಸವಾಗದೇ (ಕಇ IV, ೧೦-೪೯; 1121).

**ತೊಣೆ ನಡೆಯರ್**=ಜೊತೆಗೂಡಿ ನಡೆಯುವವರು; ಒಡನಾಡಿಗಳು: ಬಿಲ್ಲೆವಾಮಾವ್ ತೊಣೆನಡೆಯರ್ ; ಇರ್ವರುಮಾವ್ ನೋಡುತ್ತುಮೊರ್ವನಾ ಕಣ್ಗಳನ್ (ಅಂತಿಗೂ. ೪೪-೯೦೨).

[ ದೇ.ಶ ತಮಿ. ತುಣೈ ; ಮಲ. ತುಣ ; ಕೊಡ. ತೊಣೆ ]

**ತೊಣೆ₂**, ಡೊಣ್ಣೆ₂, ದೊಣೆ₂ (ನಾ). ಬಾಣದ ಕೋಶ ; ಬತ್ತಳಿಕೆ ; ತೂಣೀರ : "ಮೂಡಿಗೆ ತೊಣೆ ಬತ್ತಳಿಕೆಯು" (ಕವಿಕಂ. ೮೧) ; ನಿನ್ನ ಶರಕೊಂದೆ ವಾಹನಕಮೆರಡು ಆರ್ವೊಗಕೆ ಮೂರ್ಬಿಲ್ಗೆ ನಾಲ್ಕು ತೊ[ಪಾಠಾಂ. ಡೊ]ಣೆಗ್ಗೆದೆನುತೆ ಕೂರ್ವೊಣೆಯ ಸರಳ್ಗಳಿಂದೆಸೆಯಲ್ಕೆ (ಹಬಪು. ೪೩-೧೯). **ಡೊಣ್ಣೆ₂** : "ತೂಣೀರವುಂಪಾಸಂಗಂ ಬಾಣಧಿ ಬಾಣಾಶ್ರಯಂ ನಿಪಂಗಂ ಡೊಣೆಗಳ್" (ವಸ್ತುಕೋ. ೭೫-೧೯); ಅಂತುಮಾ ರೂಪವನೆ ಚಿಂತಿಸಿ ಚಿಂತಿಸಿ ಕಾಂತೆಯರ್ ಪತಿಗೆ ರತಿ ಸೋಲ್ತು ಕಿಂದೆಳೆ ರಂತಲರ್ಗಣೆಗೆ ಡೊಣೆಯಾದರ್ (ಶಾಂತಿಪು. ೧೦-೯೨) ; ಮಸೆವೆತ್ತ ಕೂರ್ಗಣೆಗಳಂ ಡೊಣೆಗಳಿಂದುಗಿದುಗಿದು ತೆಗೆದೆಸೆಯಲು (ಹಬಪು. ೩೯-೧೯); ಡೊಣೆಯಿಂ ಕಣೆಯಂ ತೆಗೆದಾರ್ದು ಬಿಲ್ಗದಂ ಪೂಡಿ (ಕಬಕಂ. ೩-೫೨). **ದೊಣೆ₂** : ತನುತ್ರವಿಾ ಭಯಂಕರಧನು ಖಟ್ಗಮತ್ತಪರವಿಂತೆರಡುಂ ದೊಣೆ ಕೀವಿದಂಬುವೊಂದಿರವು ತಪಕ್ಕಿದೆಂತುಟೊ (ಪಂಪಭಾ. ೮-೧೭) ; ದೊಣೆಯಿಂದಂ ತೆಗೆವಾಗಳೊಂದು ತುಡುವಾಗಳ್ಪತ್ತು ಬಾಣಂ (ಗದಾಯು. ೩-೩) ; ಕಾಮನ ದೊಣೆಗೆ ತೊಣೆಯೆನಿಪ್ಪ ಕಿಱುದೊಡೆ (ಶಾಂತಿ.ದೇ. ೨೮೯-೭); ಇಂತೀ ನುಡಿಗೆ ವುಷ್ಕಲಾ ಕರಂ ಕನಲ್ದು ದೊಣೆಯಿಂ ನಂಜನುಗುಳ್ವ ಕವಲಂಬುಗಳನುರ್ಚಿ ಮೊಗೆದಿಸುತಂವಿರಿಯಿರೆ (ಕಮಾಶ್ವ. ೯೩-೩) ; ಗುರಿ ಸಿಕ್ಕಿತನುವಾಗ ದೊಣೆ ಬರಿದಾಗಿತ್ತು (ಚಂದ್ರವೀ. ೪೦-೭೦).

[ <ಪ್ರಾ. ತೋಣ./ಸಂ. ತೂಣ ]

**ತೊಣೆಗಾಣು** (ಕ್ರಿ). ಸಮಾನತೆಯನ್ನು ಕಾಣು : ಭೂಚಕ್ರದೊಳಗೀತಂಗೆ ತೊಣೆಗಾಣೆವೆಂದು ಸಜ್ಜನಸಮಿತಿ ಪೊಗಳುತಿರಲು (ಗುರುಚಾ. ೧೨-೩೨).

[ ತೊಣೆ₁ + ಕಾಣು (<ಕಾಣ್) ]

**ತೊಣೆವಕ್ಕಿ** (ನಾ). ಜೊತೆಯಾಗಿರುವ ಪಕ್ಷಿ ; ಅವಳ್ವಕ್ಕಿ ; ಚಕ್ರವಾಕ: "ಕೋಕಮೆನಲ್ ತೊಣೆವಕ್ಕಿ [ಪಾಠಾಂ. ಪೊಣರ್ವಕ್ಕಿ]" (ಚಕುನಿ. ೧೧೮) ; ಪಾರಿವವಂಚೆ ಕೊಂಚೆ ಗಿಳಿ ಸೋಗೆ ಕುಕಿಲ್ ತೊಣೆವಕ್ಕಿ . . . ದನಿಗೆಯ್ದುವುವು (ಸೂಕ್ತಿಸು. ೧೪-೩೦) ; ಪಾಡುತಿಹಾಱಿದ ನೆಱೆ ಹೆಱಿಸಾರುವ ತೊಣೆವಕ್ಕಿ (ಉದ್ಭರೇ. ೪-೧೦). 'ಎಣೆವಕ್ಕಿ' ಪರಾ.

[ ತೊಣೆ₁ + ಪಕ್ಕಿ₁ ]

**ತೊಣೆವರ್** (ಕ್ರಿ). ಜೊತೆಯಲ್ಲಿ ಬರು : ಸೋಮಂ ಸೌಮ್ಯದೆ ಸಾನ್ತನುಂ ತೊಣೆವರಲ್ . . . ಜ್ಞಾನಕ್ಕೆ ಮೋಕ್ಷೊಬ್ದನುಂ ತಾಮಾರ್ಗಣಡವೆಂದು ತೋರ್ಪ ನಲವಿಂ ಗೆಲ್ಲಂವನಾ ಗುಮ್ಮಟಂ (ಪ್ರುಸೂಮ. ೨-೭೮).

[ ತೊಣೆ₁ + ಬರ್ ]

**ತೊಣೆವೆಱು** (ಕ್ರಿ). ಜೊತೆಯಾಗು ; ಸರಿಸಾಟಿಯಾಗು ; ಸರಿಸಮಾನತೆಯನ್ನು ಹೊಂದು : ಪೊಣರ್ದೊಡಮನುಪರವಿವನೊಳ್ [ತೊಣೆ] [ಪಾಠಾಂ. ದೊರೆ]ವೆತ್ತವುದೆನಗೆ ನರನೊಳ್ (ಪಂಪಭಾ. ೧೨-೧೭೪).

[ ತೊಣೆ₁ + ಪೆಱು₁ ]

**ತೊಣೆಹೋಗು** (ಕ್ರಿ). ಜೊತೆಯಲ್ಲಿ ಹೋಗು : ಚಲುವೈಯನು ಹೊಂಗನೂರಿಂಗೆ ಚಿಕ್ಕಕೇತಯ್ಯ ದಣ್ಣಾಯ್ಕರು ತೊಣೆಹೋಹುತವಿದ್ದಲ್ಲಿ (ಎಕ. IX, ಚನ್ನಪ. ೧೩-೬ ; 1338).

[ ತೊಣೆ₁ + ಹೋಗು₁ (<ಪೋಗು₁) ]

**ತೊಣ್ಣಂಗಿ** 'ತೊಂಡಂಗಿ' ನೋ.

**ತೊಣ್ಣಂದ** (ನಾ). ಒಬ್ಬಾತನ ಹೆಸರು : ಬಿನಎಕಿಅಬ್ಬೆ ಊರಾಳೆ ಮುದುಗಾರೆ ತೊಣ್ಣಂದರ ಮಗನುಂ ಪೊರಿಗೊಣ್ಣನ್ದಮ್ಮಗನುಂ ಶ್ರೀಯಮ್ಮನೆ[ಮ್ಮೊ] × × ಯ್ಯಸರ್ ಅರಿಧೀರನೆ[ಮ್ಮೊ]ದ × × × (ಸೌಇಇ. XX, ೧೦-೨ ; ?). 'ಕೊಣ್ಣಂದ' ಪರಾ. [ ? ]

**ತೊಣ್ಕೆ** (ನಾ). ಪ್ರಾಚೀನ ; ಮೂಲ (?) : ಭೂಮಿಗೆ ಕುಱುಂಪೆಂಬ ಕಿಂಕರರ ತೊಣ್ಕೆಯಿದೆಂಬ ಎಲಾಸಮೆಂಬ ದೇಸಿಗೆ ದಶಲಕ್ಷಲೆಕ್ಕದಸಿಪೇಟಕ

ಕೋಟಿಯ ಮಿಂಚುಬಳ್ಳಿದೀವಿಗೆಯುನೆಲರ್ಚಿ ದೇವಸಭೆಯೊಳ್ ಮೆಱೆವರ್ ದಿವಿಜಾಂಗರಕ್ಷಕರ್ (ಅನಂಪು. ೪-೩೨). [ ←ತಮಿ. ತೊನ್ನೈ ? ]

**ತೊತ್ತಳ** 'ತೊಟ್ಟುಳಿ' ನೋ.

**ತೊತ್ತಳಂತುಳಿ** 'ತೊಟ್ಟುಳಿದುಳಿ' ನೋ.

**ತೊತ್ತಳಂದುಳಿ** 'ತೊಟ್ಟುಳಿದುಳಿ' ನೋ.

**ತೊತ್ತಳಂದುಳಿಯಿಸು** (ಕ್ರಿ). ಅಜಿಗಿಜಿಯಾಗುವಂತೆ ತುಳಿಸು; ನುಗ್ಗುನುರಿಯಾಗುವಂತೆ ತುಳಿಯಿಸು: ಅನೆಗಳಿಂ ತೊತ್ತಳಂದುಳಿಯಿಸಲು ಬಗೆದು (ಹಾಗೀರ. ದೇ. ೨೬೬-೧).
[ ತೊತ್ತಳಂದುಳಿ (<ತೊಟ್ಟುಳಿದುಳಿ) + – ಇಸು$_3$ ]

**ತೊತ್ತಳತುಳಿ** 'ತೊಟ್ಟುಳಿದುಳಿ' ನೋ.

**ತೊತ್ತಳದುಳಿ** 'ತೊಟ್ಟುಳಿದುಳಿ' ನೋ.

**ತೊತ್ತಳದುಳಿತ, ತೊತ್ತಳಿದುಳಿತ** (ನಾ). ನುಗ್ಗುನುರಿ ಮಾಡುವಿಕೆ; ಉಗ್ರವಾದ ಆಕ್ರಮಣ: ಅವರ ತೊತ್ತಳದುಳಿತದಿಂದ ತಮ್ಮ ಕಾವಲ ಹುರಿಗಡಲೆಯ ರಾಶಿಯನ್ನೂ ಚೀಲಗಳನ್ನೂ ರಕ್ಷಿಸಿಕೊಳ್ಳುತ್ತಿರುವರು (ಚಿರಂಗು. ೧೩-೧೨); ಉರ್ಲೋಲ ಕಲ್ಲೋಲ ಜೀವನಾಂಭೋನಿಧಿಯ ರುದ್ರತಾಂಡವದ ತೊತ್ತಳ ದುಳಿತಕಾಗಿ (ಜಡಬಿಂ. ೫೨-೭); ಪರಕೀಯರ ತೊತ್ತಳದುಳಿತವನ್ನು ಆಮಂತ್ರಿಸಿದ ಭಾರತೀಯರಿದ್ದಾರೆ (ಕರ್ನಾಟ. XV ಮುನ್ನುಡಿ). **ತೊತ್ತಳಿದುಳಿತ:** ಈ ಭೈರವಿಯ ತೊತ್ತಳಿದುಳಿತಕ್ಕೆ ಪರಕೀಯ ಸೊತ್ತಿನ ನೊಗ ಜಬ್ಬೆಜಬ್ಬೆಯಾಯಿತು (ಸುವರ್ಣ. ೨೨೬).
[ ತೊತ್ತಳ (<ತೊಟ್ಟುಳಿ) + ತುಳಿತ ]

**ತೊತ್ತಳಿ** 'ತೊಟ್ಟುಳಿ' ನೋ.

**ತೊತ್ತಳಿಗೊಳ್** (ಕ್ರಿ). ನಜ್ಜುಗುಜ್ಜಾಗು; ಅಜಿಗಿಜಿಯಾಗು: ಹಿಂಬರಿಕೆಯಡಿಯಲ್ಲಿ ಸಿಕ್ಕು ತೊತ್ತಳಿಗೊಂಡು ಸಾವವರ ನರಳಿಕೆಯ ಕಿವುಡುಗೇಳಿ, ಇಲ್ಲಿಯೂ ಅಲ್ಲಿಯೂ ಕೊನೆಗಾಣದಾಸೆಗಳ ಅಂತರ ಪಿಶಾಚಿಯೇ! (ಉಯ್ಯಾಲೆ. ೪೫-೩). [ ತೊತ್ತಳಿ (<ತೊಟ್ಟುಳಿ) + ಕೊಳ್$_1$ ]

**ತೊತ್ತಳಿದುಳಿತ** 'ತೊತ್ತಳದುಳಿತ' ನೋ.

**ತೊತ್ತಟ** 'ತೊಟ್ಟುಳಿ' ನೋ.

**ತೊತ್ತಟಂದುಳಿ** 'ತೊಟ್ಟುಳಿದುಳಿ' ನೋ.

**ತೊತ್ತಟದುಳಿ** 'ತೊಟ್ಟುಳಿದುಳಿ' ನೋ.

**ತೊತ್ತಿ** (ನಾ). ಊಳಿಗದವಳು; ದಾಸಿ: ಮತ್ತೊಂದು ಕಾರ್ಯಮೇನುಂ ಬತ್ತರಿಪೊಡಮಿಲ್ಲ ನಿನ್ನ ವಲ್ಲಭೆಗೆ ಕರಂ ತೊತ್ತಿಯರಾಗಿಯೆ ಬೆಸನಂ ನೆತ್ತಿಯೊಳಾಂತಯ್ದೆ ಮಾಡುವುದಲ್ಲದೆ ನಮಗಂ (ಜಾಧಪು. ೬-೪೦); ರಾಮನಿನ್ನೀ ಹತ್ತುತಲೆಗಳ ಕಡಿಯ ಬಳಿಕವರೆನ್ನ ತೊತ್ತಿಯರು (ತಾಶಿರಾ. ೧೦-೬೦); ಇವರು ತೊತ್ತಿಯರಂದದಿಂದೀ ದಿವಿಜಲೋಕದ ನಾರಿಯರು ನಾವಿವರ ನೋಡುವರಲ್ಲವೆನೆ (ನಿಭಾಗ. ೧೧-೮-೩೩).
[ ತೊತ್ತು (<ತೊಟ್ಟು) + – ಇ$_2$ ]

**ತೊತ್ತಿಗ** (ನಾ). ಊಳಿಗದವನು; ಸೇವಕ: ದಿನುಗು ಕೋಡಗಿಗಳರ ನೀವೀತನಿಗೆ ತೊತ್ತಿಗರಾಗಿ ಸಾಯದಿರೆಂದು ಬೊಬ್ಬಿಱಿದ (ತಾಶಿರಾ. ೧೯-೪೦); ಸಾಲವಿರುವವನು ತೊತ್ತಿಗನು ಲೋಕದೊಳ್ ಸಾಲವೇ ಶೂಲ (ನೀತಿಚಿಂ. XI, ೧೯). 'ಗಂಡುತೊತ್ತಿಗ' ಪರಾ.
[ ತೊತ್ತು (< ತೊಟ್ಟು) + – ಇಗ ]

**ತೊತ್ತು** 'ತೊಟ್ಟು' ನೋ.

**ತೊತ್ತುಗೆಯ್ಸು, ತೊತ್ತುಗೈಸು** (ಕ್ರಿ). ಊಳಿಗವನ್ನು ಮಾಡಿಸು: ಸುರರ ನೆಱೆ ಗೋಳುಂಡೆಗೊಳಿಸಿದ ತೊತ್ತುಗೆಯ್ಸದೆ ನೆರೆದ ಮರ್ಕಟರ (ತಾಶಿರಾ. ೨೦-೫೨). **ತೊತ್ತುಗೈಸು:** ಎನ್ನಯ ಹೆಂಡಿರೆಲ್ಲರನು ತೊತ್ತುಗೈಸುವೆ (ತಾಶಿರಾ. ೧೦-೬೦). [ ತೊತ್ತು (< ತೊಟ್ಟು) + ಕೆಯ್ಸು ]

**ತೊತ್ತುಗೆಲಸ** 'ತೊಟ್ಟುಗೆಲಸ' ನೋ.

**ತೊತ್ತುಗೆಲಸಂಗೆಯ್** (ಕ್ರಿ). ಆಳಿನ ಕೆಲಸವನ್ನು ಮಾಡು; ಊಳಿಗವನ್ನು ಮಾಡು; ಸೇವೆಯನ್ನು ಸಲ್ಲಿಸು: ತೊತ್ತುಗೆಲಸಂಗೆಯ್ದುವೇಳ್ವ[ಪಾಠಾಂ. ಲಿತ್ತು]ದ್ದರಿಸು (ಬಸಪು. ೨೩-೨೯).
[ ತೊತ್ತುಗೆಲಸ (<ತೊಟ್ಟುಗೆಲಸ) + ಕೆಯ್$_1$ ]

**ತೊತ್ತುಗೈ** 'ತೊಳ್ತುಗೆಯ್' ನೋ.

**ತೊತ್ತುಗೈಸು** 'ತೊತ್ತುಗೆಯ್ಸು' ನೋ.

**ತೊತ್ತುಗೊಡು** 'ತೊಟ್ಟುಗೊಡಂ' ನೋ.

**ತೊತ್ತುಗೊಳ್** 'ತೊಟ್ಟುಗೊಳ್' ನೋ.

**ತೊತ್ತುತನ** 'ತೊಟ್ಟುತನ' ನೋ.

**ತೊತ್ತುಬಡಕ** 'ತೊತ್ತುಬಡಿಕ' ನೋ.

**ತೊತ್ತುಬಡಿಕ, ತೊತ್ತುಬಡಕ** (ನಾ). ಜಾರ; ವಿಷಯಲಂಪಟ: ತೊತ್ತುಬಡಿಕಂಗೇಕೆ ತತ್ತ್ವವಿಚಾರ (ಅಮೃತ. ೧-೪೩). **ತೊತ್ತುಬಡಕ:** ತೊತ್ತುಬಡಕನಿಗೆ ಪರತತ್ತ್ವದ ವಿಚಾರವೇಕೆ (ಪುರಂದ. ೦-೩೧-೧); ತೊತ್ತುಬಡಕರಿಗೆ ತತ್ತ್ವ ಉಸುರದಿರು (ವಿಶಾಸು. ೭೮-೩); ತೊತ್ತುಬಡಕಗೆ ಬಹು ತತ್ತ್ವ ವಿಚಾರವ್ಯಾತಕೆ (ಪ್ರಸಕೀ. ೫೦-೧). [ ತೊತ್ತು (<ತೊಟ್ಟು) + – ಬಡಿಕ ]

**ತೊತ್ತುಬುದ್ಧಿ** (ನಾ). ವೇಶ್ಯಾಬುದ್ಧಿ: ಉಪರತಿಗೆ ಪರಪುರುಷನ ಬಯಸುವ ತೊತ್ತುಬುದ್ಧಿಯನೆಲ್ಲ ಬಿಡು ಕಂಡ್ಯ ಮನವೆ (ವಿದಾಶ್ಯ. ೫೦-೩).
[ ತೊತ್ತು (< ತೊಟ್ಟು) + ಬುದ್ಧಿ ]

**ತೊತ್ತುಮಗ** 'ತೊತ್ತುವಗ' ನೋ.

**ತೊತ್ತುವಗ, ತೊತ್ತುಮಗ** (ನಾ). ತೊತ್ತಿನ ಮಗ; ದಾಸೀಪುತ್ರ: "ದಾಸಂ ತೊತ್ತುವಗನಕ್ಕು" (ಮಂಗರಾ. ೭೦-೧೭). **ತೊತ್ತುಮಗ:** (ಟ).
[ ತೊತ್ತು (< ತೊಟ್ಟು) + ಮಗ ]

**ತೊತ್ತುವೆಗ್ಗಡೆ** (ನಾ). ರಾಣೀವಾಸದ ಮೇಲ್ವಿಚಾರಕ; ಅಂತಃಪುರದ ಅಧಿಕಾರಿ: "ತೊತ್ತುವೆಗ್ಗಡೆಗಳಂತರ್ವಂಶಿಕರಕ್ಕು" (ಮಂಗರಾ. ೭೯-೭). 'ಅಂತರ್ವಂಶಿಕ' ಪರಾ.
[ ತೊತ್ತು (< ತೊಟ್ಟು) + ವೆಗ್ಗಡೆ (< ಪೆರ್ಗಡೆ$_1$) ]

**ತೊತ್ತುವೆಸ** 'ತೊಟ್ಟುವೆಸ' ನೋ.

**ತೊತ್ತುವೇಟ** (ನಾ). ವೇಶ್ಯೆಯ ಪ್ರಣಯ: ಕಡಿದರೋ ಸುರತಕರುವನೆಲವದ ಮಿಡಿಯ ಬಯಕೆಗೆ ತೊತ್ತುವೇಟಕೆ ಹಡೆದ ತಾಯನು ತೊಱಿಸಿದರೋ (ತೊರರಾ. ೪-೫-೧೧).
[ ತೊತ್ತು (< ತೊಟ್ಟು) + ಬೇಟ (< ಬೇಂಟ) ]

**ತೊತ್ತುವೊಗು** (ಕ್ರಿ). ಕಿಂಕರನಾಗು; ದಾಸನಾಗು: ಲಿಂಗಜಂಗಮಕ್ಕೆ ತೊತ್ತುವೊಕ್ಕು ಲಿಂಗಜಂಗಮವುಪ್ರಸಾದಿಯಾದ (ಚನ್ನವ. ಕ. ೩೮೮-೮೩೦); ತೊತ್ತುವೊಕ್ಕಂ ಮಹೇಶ್ವರ ನೀಂ ರಕ್ಷಿಪುದೆನ್ನನು (ಶಂಕಶ. X, ಏಂಕಶ).
[ ತೊತ್ತು (< ತೊಟ್ಟು) + ಪೊಗು (< ಪುಗು) ]

**ತೊತ್ತುವೋಗು** (ಕ್ರಿ). ದಾಸಿಯಾಗು; ಸೇವಕಿಯಾಗು: ಜೀಯ ತೊತ್ತುವೋದಳು ನಮಗೆ ಜಯವನಿತ (ಶ್ರೀರಾಮಾ. ೬೫೫-೩೪೮).
[ ತೊತ್ತು ( < ತೊಟ್ಟು) + ಹೋಗು$_1$ (<ಪೋಗು$_1$) ]

**ತೊತ್ತುಳಿ** (ಕ್ರಿ). ಅಜಿಗಿಜಿಯಾಗುವಂತೆ ತುಳಿ; ಧ್ವಂಸಮಾಡು: ತೊತ್ತುಳಿದರೂನೂ ಥಥ್ಥಳಿಸಿ ಹೊಳೆವೆ ಸಂಜೀವಭ್ರಮರನಂತೆ (ಅಕಳು. ೨೦೫-೮); ಈ ದಿಬ್ಬವು . . . ಪುಣೆಯನ್ನೆಲ್ಲ ಒಂದು ದಿನ ತೊತ್ತುಳಿದು ಹಾಳುಮಾಡುವಂತೆ ಇದು ನನ್ನನ್ನು ಅಂಜಿಸಿದೆ (ಸಮಜೀ. ೧೦೯).
[< ತೊಟ್ಟುಳಿದುಳಿ ]

**ತೊತ್ತುಳಿ** 'ತೊಟ್ಟುಳಿ' ನೋ.

**ತೊದ** 'ತೋದ$_2$' ನೋ.

**ತೊದನಾಡು** (ನಾ). ತೊದವರ ನಾಡು: ಹದಿನಾಡ ಹಲಸೀನ ತೊದನಾಡ ಬಾಳೇಯು . . . ನನಗೆಂದು ತಂದೆ ಅಣ್ಣಯ್ಯ (ಜಗೀತ. ೫೮).

[ ತೊದ (< ತೋಡ$_2$) + ನಾಡು ]

**ತೊದಭಾಷೆ** (ನಾ). ನೀಲಗಿರಿಯ ತೋಡಜನಾಂಗದವರು ಆಡುವ ಭಾಷೆ : ೧೯೬೧ರ ಜನಗಣತಿಯಲ್ಲಿ ೭೬೫ ಜನ ತೊದಭಾಷೆಯನ್ನು ಆಡುವವರಿದ್ದಾರೆಂದು ಹೇಳಿದೆ (ದ್ರಾವಿವಿ. ೧೫೫).

[ ತೊದ (< ತೋಡ$_2$) + ಭಾಷೆ ]

**ತೊದರ್$_1$** 'ತೊದಳ್$_1$' ನೋ.

**ತೊದರ್$_2$** 'ತೊದಳ್$_2$' ನೋ,

**ತೊದಲ** 'ತೊದಳ' ನೋ.

**ತೊದಲಾಟ** (ನಾ). ಮಕ್ಕಳ ಅಸ್ಪಷ್ಟವಾದ ಮಾತು : ತಪ್ಪಡಿ ತಪ್ಪೀಸಿ ತೊದಲಾಟ ಬಿಟ್ರೊ (ಮ್ಯೂತಿಗಶಾ. ೪೧-೫).

[ ತೊದಲು$_2$ (< ತೊದಳ್$_2$) + ಆಟ ]

**ತೊದಲಿಸು** 'ತೊದಳಿಸು' ನೋ.

**ತೊದಲು$_1$** 'ತೊದಳ್$_1$' ನೋ.

**ತೊದಲು$_2$** 'ತೊದಳ್$_2$' ನೋ.

**ತೊದಲುನಾಲಗೆ** (ನಾ). ತಡವರಿಸುವ ಜಿಹ್ವೆ ; ತೊದಲುವ ನಾಲಗೆ : ಮೊದಲು ಭಜಿಸಿದೆನು ಈಶನನು ಸ್ತುತಿಗೈದು ತೊದಲುನಾಲಗೆಯಲ್ಲಿ ತಾಯ್ನುಡಿಯ ಹಿಡಿದು (ಶಎಪು. ೧೦-೭).

[ ತೊದಲು$_2$ (< ತೊದಳ್$_2$) + ನಾಲಗೆ ]

**ತೊದಲುನುಡಿ** 'ತೊದಳ್ನುಡಿ$_2$' ನೋ.

**ತೊದಲುಮಾಡು** 'ತೊದಳ್ಮಾಡು' ನೋ.

**ತೊದಲುಮಾತು** 'ತೊದಳ್ಮಾತು' ನೋ.

**ತೊದಲುಲಿ$_1$** (ಕ್ರಿ). ತೊದಲುಮಾತನಾಡು: ಮಗು ತೊದಲುಲಿವೊಲು ತಾಯನು ಕರೆಯೆ, ಉಲಿವೆನು ಮುಗುಳ್ನುಲಿವೆನು ಶ್ರೀಹರಿಯೆ ನಿನ್ನ ನಾಮವನು (೧೯ವಿಂ. ೨೬-೭). [ ತೊದರ್$_2$ (<ತೊದಳ್$_2$) + ಉಲಿ$_1$]

**ತೊದಲುಲಿ$_2$** 'ತೊದಳುಲಿ' ನೋ.

**ತೊದಲ್ನುಡಿ$_1$** 'ತೊದಳ್ನುಡಿ$_1$' ನೋ.

**ತೊದಲ್ನುಡಿ$_2$** 'ತೊದಳ್ನುಡಿ$_2$' ನೋ.

**ತೊದಲ್ಮಾತು** 'ತೊದಳ್ಮಾತು' ನೋ.

**ತೊದಲ್ಸೊಲ್ಲಿಸು** (ಕ್ರಿ). =ತೊದಲುಲಿ$_1$: ತಲ್ಲಣಿಸುತ್ತೈದಿಯವ್ವಳ್ಪೆಬೇಯೆಂಬ ತೊದಲ್ಸೊಲ್ಲಿಸುತೆ . . . ಬಂದು ತೊಡೆಯಡರೆ (ನವಚೂ. ೧೫-೫೪).

[ ತೊದರ್$_2$ (< ತೊದಳ್$_2$) + ಸೊಲ್ಲಿಸು ]

**ತೊದಳ್$_1$**, ತೊದರ್$_1$, ತೊದಲು$_1$, ತೊದಟ್ (ಕ್ರಿ). ೧. ಮಾತಿನಲ್ಲಿ ತಡವರಿಸು : ನಿಮ್ಮನರ್ಚಿಪಾ ಬಾಯ್ಗೆ ನಮೋನಮೋ ತೊದಳದುನ್ನತ [ಪಾಠಾಂ. ದುಣ್ಮುತ]ಭಕ್ತಿಯೊಳೆಯ್ದೆ ಪಾಡುವಾ (ಹಂಪಾಶ. ೧೯). ೨. ಎದುರಿಸು; ಪ್ರತಿಭಟಿಸು : ಮಯಂಚಯನ್ ತುರಗಗೊಳ್ವಾಗಿ ದುಗ. ದರಸನುಂ ತೊದಳ್ದು ಮೇಳೆಯವನಾಳು × ಪಟುಯುತ್ತಂ ಬಪ್ಪುದ ನನ್ನಗನ್ಮಾದೆ (ಸೌಇಇ. IX-I, ೨೨-೫; 923); ಸಂಗರಾಗ್ರದೊಳು ತೊದಳ್ದ ಪರಾರುದಾತ್ತಕಲಿತೇಜಚಮೂಪನೊಟುಗ್ರಕೋಪನೊಳು (ಎಕ. XI, ದಾವಡ. ೪೪-೪೬: ಸು. 1180). P ಇದು ಬಹುಶಃ 'ತೊಡರ್' ಎಂಬುದರ ಅಪಲಿಖಿತವಿರಬಹುದು. **ತೊದರ್$_1$** : ೩. ಮಕ್ಕಳು ಮುದ್ದಾಗಿ ಮಾತನಾಡು: ಸುರಿವ ಸುರಯಿಯರಲ ಮುಗುಳ್ಗೆ ಮೊಗಸಿದಳಿಕುಳಂಗಳಿಂ ತೊದ[ಲ್ವ][ಪಾಠಾಂ. ಳ್ವ] ಶಿಶುಶುಕಂಗಳಿಂ(ಹಂಪಭಾ. ೧-೫೮). **ತೊದಲು$_1$**: ೧. ಅವಳ ಮಾತ ಕಲಿಯಲೆಂದು ತೊದಲುತಿಹುದು ಬಾಯಿಯು (ಅರಳು. ೪೯೪-೨೨) ; ನನಗೆ ಭಯವಾಗಿತ್ತು ಎಂದು ತೊದಲಿದ ಕೋಷವ್ವ (ಶಾಲಿಮು. ೧೭೦). ೩. ತೊದಲುತ ಮುದ್ದುಮುದ್ದಾಗಿ ರಸವೊಗಲು ಮಾತಾಡಿ (ಅಸಂಠಾ. ೧-೧೮-೧೦). △ **ತೊದಟ್** : ೨. ನುಡಿದಡೆ ಕರ್ಣ್ಣ ನಾಹವದೊಳಿನ್ದ್ರಸುತಂ ಪಗೆಗೊಣ್ಡ ದರ್ಪ್ಪ[ದಿಂ] ತೊದಟ್ಪನಾಟಂಗೆ ವಾಯುತನಯಂ (ಸೌಇಇ. XX, ೪೧-೧೪; 1044). ೪. ಸುಳ್ಳು ಹೇಳು: ಮೋಹಬನ್ದನದ ತೊಡರ್ಪ್ಪನೊಳ್ತೊದಟ್ದು ಮೋಹಿಸಿ (ಎಕ. VII, ಶಿಕಾರಿ. ೨೧೯-೨೪ ; 918) ; ಪರನಾರೀಪುತ್ರಕ ನಣ್ಪರ ತೊಟ್ತು . . . ತೊದಟ್ದರ ಬೀವ (ಎಕ. II, ೪೧೭ ; ಸು. 950) ; ಖಣ್ಡಳಿ ವಾಸುದೇವ ಮೂಳ ಭದ್ರೋದ್ಧವನ್ನುಡಿದು ಪುಸಿಯತೊರ್ದದಟ್ದು ಕುಸಿಯಂ (ಎಕ. IV, ಹೆಗ್ಗಡ. ೧೭-೧೩ ; 1033). 'ತೊದಲು$_1$' ಪರಾ.

[ ದೇ. ೩ ಹರ್ಜ. ತೊತ್ರ್ ; ಕುವಿ. ತೊಥಲಿ./ ಹಿಂ. ತುತಲಾನಾ : ಪಂಜಾ. ತೊತ್ಲಾವುಣಾ ; ಒರಿ. ತೊತಳಾ, ತೊತಲಾ ; ಗುಜ. ತೊತ್ಲೂ, ತೊತ್ಲೂ, ತೊತ್ರೂ ]

**ತೊದಳ್$_2$**, ತೊದರ್$_2$, ತೊದಲು$_2$, ತೊದಳು (ನಾ). ೧. ತಡವರಿಸುತ್ತ ಮಾತನಾಡುವಿಕೆ : ಉಣ್ಮದ ಬೆಮರೋಳವಟ್ಟ ನಿಡುಸುಯ್ ತೊದಳಿಂಗೆಡೆಗೊಂಡ ಮಾತು (ಹಂಪಭಾ. ೪-೬೦) : ರಸನಾಗ್ರದೊಳ್ ತೊದಳ್ಪೆರಸಿದ ಮಾತಿನಿಂದೆಸೆದರಂಗನೆಯರ್ ಮಧುಪಾನಕೇಳಿಯೊಳ್ (ಕುಸುಮಾ. ೧೧-೧೬೦) ; ತೊದಳಂ ಮಾಟ್ಪ ಕೊ [ದಳ್] ವಿಕಾರವಶಮಂ ಕೈಕೊಂಡ ಮೆಯ್ (ಬಂಹರಿ. ೪-೫೭). ತೊದಳನಿತಿಲ್ಲದೊಳ್ಪೆಸವ ವಾಣಿಯ ಹಾಣ್ನುಡಿ ಕೇಳಲಾಯ್ತು (ದಶಕು. ೧೨-೫). ೨. ಮಕ್ಕಳ ತೊದಲು ಮಾತು, – ಅಸ್ಪಷ್ಟವಾದ ಮಾತು : "ತೊದಳ್ ಶಿಶುವಚಂ" (ಶಹಾನಿ. ೪೯): ಶಿವಿಗಿಂಪಂ ತೊ[ಪಾಠಾಂ. ಕೊ]ದಳೊಳ್ ಪೊದಟ್ದ ನುಡಿಗಳ್ ಕಣ್ಗಾಟ್ಪುದಂ ರಾಗದಾಡುವ ಕೂಸಾಟದ ಚೆಲ್ವುಗಳ್ ಕುಡೆ . . . ಬಾಲನಿಂತೊದವಿದಂ(ಆದಿಪು. ೭-೧೨೮); ಶಿಶುನಗೆ ಲೋಳೆವಾಯ್ ತೊದಳೊಂದಿದ ನಾಲಗೆ . . . ನೆಟಿ ತನಗೊಪ್ಪುವರ್ಭಕನನೂರ್ವನನಾಂ ಪಡೆವಂದ ಮಾವುದೋ (ಸುಕುಮಾ. ೯-೯೯) ; ತೊದಳಿಸದ ತೊದಳ್ ಕೊಂಕಿಲ್ಲದ ದಟ್ಪಡಿ . . . ಭಾಲಭಾವಮುಚ್ಚರಿ ಜಿನನಾ (ಅನಂಪು. ೭-೮) ; ತೊದಳಿಂ [ಪಾಠಾಂ. ಲಿಂ]ದೆ ನುಡಿಯೆ ಶಿಶುವದಜಿಲ್ಲಿ ತಪ್ಪನಾ ಚದುರನಾರ್ಯೆಯ ದಂತೆ (ಅನುಸಾ. ೧-೨೧೩). ೩. ಸುಳ್ಳು ; ಹುಸಿ : "ತೊದಳ್=ಪುಸಿ" (ಶಮದ. ೫ರಿ. ೨) ; "ತೊದಳೆಂದುಂ ಸುಳ್ಳೆಂದುಂ ಅನೃತಂ" (ಶಕಸಾ. ೨೬-೫೫೧) ; ಪರ್ವುವುದು ಕೀರ್ತಿ ಪುರಾಕೃತಪುಣ್ಯದಿಂದೆ ಸಂಗಳಿಸುವು ವೆಂದೊಡೀ ಮುಖದೊಳೇಂ ತೊದಳುಂಟೆ (ಹಂಪಭಾ. ೭-೧೯) ; ಮನ್ನಿಸಿ ಪಿರಿದೀವಂ ತೊದಳಂನ್ನುಡಿಯನೊತ್ತಡರ್ದ ಮಾಣನ್ (ಎಕ. II, ೧೩೩-೫೮; 982); ಇಱುವಬೆಡಂಗನ ಕೊರಲೊಳ್ಕೊಂಕುಂಟೆ ನುಡಿಯೊಳೇಂ ತೊದಳುಂಟೆ (ಗದಾಯು. ೨-೭) ; ತನ್ನುನಿ ಪೇಟ್ದಣುವ್ರತಮನಾನೀಗಳ್ ಬಿಸುಟಪ್ಪೆಗಳೇಂ ತೊದಳಿಲ್ಲಂ ನುಡಿವಂದವಿಂತೆ (ಸುಕುಮಾ. ೬-೫೦) ; ತೊದಳಲ್ತು ನಾರದಂ ಪೇಟ್ದುದು (ಜಗವಿ. ೨-೪೭). ೪. ಅನುಮಾನ ; ಸಂಶಯಂ ; ಶಂಕೆ : ಮೊದಲೊಳ್ ಸಮಾಸಪದಮುಮನೊದವಿಸಿ ಪೇಟ್ದುದಱ ತುದಿಯೊಳಸಮಾಸಪದಾಸ್ಪದಮಾಗಿ ನಿಱಿಸೆ ಕಬ್ಬಿನ ತುದಿಯಂತಿರೆ ವಿರಸಮಕ್ಕುಮದು ತೊದಳುಂಟೇ (ಕವಿರಾ. ೨-೮೭) : ಧರಣಿತಳಂ ಕೀರ್ತಿಸೆ ಕೇಳ್ದು ರಾಗಿಸುತ್ತಿರ್ಪವಿನ್ನುಮೇಂ ತೊದಳುಂಟೇ (ಆದಿಪು. ೦೪-೪೯) : ಇಂತಾದ ಗಣದ ಮಾತ್ರಾಸಂತತಿ ನಾಲ್ಕಕ್ಕು ಮಂತಮಕೋರ್ರೀರೊಂದರ್ಕಂತಯ್ದುಗಣಂಗಳ್ ಬರ್ಕುಂ ತೊದಳೇಂ ಸ್ಕಂಧ ಜಾತಿಯೊಳ್ (ಛಂದೋಂಬು. ೪-೨೨೯) ; ಎನ್ನ ಚಿತ್ರದೊಳೊಂದುಂ ತೊದಳಿಲ್ಲ[ಪಾಠಾ. ತಡವಿಲ್ಲ]ವೆನ್ನ ಸುಗುಣಕ್ಕುತ್ಕ್ರಾಂತಿಯಂ ಮಾಡುವಂ (ಗದಾಯು. ೯-೨೯); ಪರಮಜಿನಚರಣಯುಗಮುಂ ಸ್ಮರಿಯಿಸಿ ತೊದಳಿಲ್ಲದೆರಡುಗೇಳದೆ ಮನದೊಳ್ ಜಱಿಯದೆ (ಧರ್ಮಾಮೃ. ೦೩-೭೨) ; ಚಂದ್ರ

ಸೂರ್ಯರ ಮನುಷ್ಯಕುಮಾರಕರಾಗಿ ಬಂದರೇನುಂ ತೊದಳಲ್ತು (ಜಗವಿ. ೭-೧೩). ೫. ವಂಚನೆ ; ಮೋಸ ; ಕಪಟ : ಏನಭಿಮತಮವರ್ಗ ವರ್ಗದನೇನುಂ ತೊದಳಿಲ್ಲದಿತ್ತು ಮನ್ನಿಸಿದಂ ಸನ್ಮಾನಪುರಸ್ಸರಂ (ಆದಿಪು. ೧೫-೧೨) ; ಮನದೊಳ್ ತೊದಳಿಲ್ಲದ ನಲ್ಮೆ (ಪಂಪಭಾ. ೪-೧೦೨) ; ನೀನುಂ ಪಾಂಡುತನೂಜರುಮೇನುಂ ತೊದಳಿಲ್ಲದೊಂದಿ ನಡೆವುದು ಮಗನೆ (ನೇಮಿಪು. ೧೦-೩) ; ದೂಷ್ಕರುಗಳ ವಸ್ತ್ರಗ್ರಹಣ ನಿಂದಿತರ್ಗನ್ನದಾನಂ ಬಳಿಕ್ಕ ಬಗೆಯೆ ತೊದಳಿಂ ಮಾಳ್ಪ ಬೆವಹಾರ ದೀಕ್ಷೆಯಾದು (ಶಾಸೋಪು. ೩-೭೩). ತೊದಲ್$_2$: ೨. ವಶ್ಯಮಂತ್ರಾಕ್ಷರದಂತೆಪೊರೆಲ್ಲರುಮಂ ಸೋಲಿಸಿದವು ತೊದಲಿ ನುಡಿವ[ಪಾಠಾಂ. ತೊದಳೊಳ್ಪುದಿದ] ರಾಮ ಚಂದ್ರನ ನುಡಿಗಳ್ (ಪಂರಾಮಾ. ೩-೧೨೭); ಕಂದನಾಡುವ ಬಾಲಲೀಲೆಯಂ ನೋಡಿ ತೊದಲೊಂದಿದಿನಿಮಾತನುಚ್ ಕೇಳ್ದು (ಕೃಮಿಭಾ. ೧೮-೨೦) ; ಲಾಲಾಜಲಂ ತುಳುಕಲ್ ಬರ್ಪ ತೊದಲ್ ಮನಂಗೊಳಿಸಲ್ (ಶಾಕುಂತ. ೧೦೫-೧೮೦). ೩. "ತೊದಲ್[ಪಾಠಾಂ. ತೊದಳ್, ತೊವಲ್] ನೂಳೆಂದು ನೆಜ್ ಪುಸಿಯೆನಲ್ಕನೃತವುಕ್ಕು" (ಕಬ್ಬಿಕ. ೫೯) ; ದೊರೆಯ ಸಹವಾಸ ಮದರಿಂ ದೊರೆವುದು ಗುಣವೆರಡುಮೆಂದು ನುಡಿವುದು ತೊದಲೇಂ (ನರಪ. ೮೭-೨೩೦) ; ಕಳ್ಳರಿಕ್ಕೆಗಳಂ ಬಿಗಿಸಿ ತೊದಲಂ ನುಡಿಸಿ ಸುಳ್ಳು ನಾಲಗೆಯ ನಡುಗಿಸುತರವನೆರೆಗುಂ (ಶಾಭೂರ. ೭೭-೧೪೧). ತೊದಲು$_2$: ೧. ವಿಷಮಾರಣಭೀತಿಯಲಿ ಕಂದಿದ ಮುಸುಡ ತೊದಲಿನ ನುಡಿಯ ಮರಣದ ದೆಸೆಯ ಕೈಸನ್ನೆಗಳ ಕಾತರರ್ಕ್ಕದಿದರು ಪುರದ (ಕುವ್ಯಾವಿ. ೪-೩೮). ೨. ಮೊದಲಿವೆಗಳವು ಮುಕುಳಿಸನ್ನ ಸಿರಿಯೇ ತೊದಲನ್ನು ನಿಲ್ಲಿಸನ್ನಯ ಹೊಸ್ನ ಮರಿಯೇ (ಕಎಪು. ೨೪-೨) ; ಮೊಳೆವಲ್ಲು, ಉಗುವ ಜೊಲ್ಲು, ದಟ್ಟತಡಿ, ತೊದಲ ನುಡಿ (ಚಂದ್ರಸ. ೧೭-೧೯). ೩. ಬದಲು ಮಾತಾಡಿದರೂ ತೊದಲು ಹೋಗಲಿಲ್ಲ (ಗಾದ). ತೊದಳು: ೧. ಪೊಳೆವ ನಿಡಿಯಲರ್ಗಣ್ಗಳ್ಗೆ ಮಳಮಳಿಪ ನೋಟಮುಮನುಂತೆ ತೊದಳಿಸುವ ನುಡಿವ ನುಡಿಗಳ್ಗೆ ತೊದಳುಮನೆಕ್ಕೆಯುಂ ತಳೆಯೆ (ಪಂಪಭಾ. ೭-೮೧ ವ); ತೊದಳಿನಿಂದೊರ್ಮೆ ಗದುಗದುಕೆಯಿಂದೊವ್ಮೊಮ್ಮೆ . . . ಬೊಬ್ಬಿಡುತೆ (ತಿರುಕ. ದೇ. ೫-೩). ೩. "ತೊದಳು,ಸುಳ್ಳು... ಸಟಿ, ತಗಲು" (ಕಂನುಹು. ೮೬). ೬. ಗದ್ಗದ : ನೋಡಿ ಪರಮಾನಂದ ಮೂಡಿ ಸಂತಸದೊಳೊಲಾಡಿ ಪುಳಕ ಸ್ವೇದ ತೊದಳು ಕಂಪನ ಮಬಿವೆಗೂಡಿ (ಹಳಶಾ. ೫-೮೨). 'ಕೊದಲು$_2$' ಪರಾ.

ತೊದಲುತೊದಲು (ದ್ವಿರ-ಕ್ರಿ) : ಮಕ್ಕಳಕ್ಕರೆಯಿಂದೆ ತೊದಲು ತೊದಲಕ್ಕರಂ ನುಡಿದು ಕೈಮುಗಿದು ಕಂಬನಿಗರೆವನಂ ನೋಡಿ (ಶ್ರೀರಾಮಾ. ೩೦-೬೭) ; ನಾವು ಮಾತನಾಡಲು ಪ್ರಾರಂಭಿಸಿದಂದಿನಿಂದ ಈ ನಾನು, ನನ್ನ ಎಂಬ ಪದಗಳನ್ನು ತೊದಲುತೊದಲಾಗಿ ಉಚ್ಚರಿಸು ತ್ತೇವೆ (ಕೀಪಾತ್ರ. ೯). ತೊದಳಾಗು, ತೊದಲಾಗು = ೧. ಸುಳ್ಳಾಗು ; ಹುಸಿಯಾಗು : ಪಾವಕನುರ್ಕಗೆಟ್ಟದೆಂತುಮೊ ತೊದಳಾಯ್ತು ದಾನಂ (ಪಂಪಭಾ. ೫-೯೭) ; ತೊದಳಾಯ್ತೆನ್ನಯ ಪೂಣ್ಡ ಪೂಣ್ಕೆ (ಗದಾಯು. ೬-೧೭) ; ನುಡಿ ತೊದಳಾದೊಡೊಂದು . . . ಅಧಿಪಂಗೆ ತಪ್ಪಿ ಬರ್ದ್ದಡೆ ಗಡಿವೇಳುವೇಳು ನರಕಂಗಳವೆಂದಪನಲ್ತೆ ಗಂಗಣಂ (ಎಕ, V. ಬೇಲೂರು. ೧೨೪-೪೨: 1133); ತೊದಳಾಗದಾನೆಂದ ನುಡಿ, ದಿಟಂ ! (ನಚರಾ. I, ೪೫೦); ನಿನ್ನ ಶಾಪವು ತೊದಲಾಗದು (ನಚರಾ. I, ೫೫೧). ೨. ಏರುಪೇರಾಗು : ತೋಹಿಸಲಿ ತೊದಳಾಗಿ ಗೋರಿಯು ಗಾಹಿನಲಿ ಗುಜ್ ಗಡಬಡಿಸೆ ಬಲು ಸಾಹಸಕಾಡುವವೆ (ಕುವ್ಯಾಅ. ೧೩-೧೭).

[ <ತೊದಳ್$_1$./ತುಳು. ತೊವಳ./ಹಿಂ. ತುತಲೀ, ತುತಲಾ ; ನೇಪಾ. ತೊತೆ ; ಬಂಗಾಲಿ. ತೊತ್ಲಾ ]

ತೊದಳ, ತೊದಲ (ನಾ). ತೊದಲು ಮಾತನಾಡುವವನು ; ಉಗ್ಗ ; ಗುಕ್ಕ (ಉಕ): ವೃಷಭದೊಳ್ ಚಂದ್ರನೊಂದಿ ನಿಲೆ ಮೂಗನೆನಿಕ್ಕುವನಂತಾ ಶಶಿಯಂ ನೋಡುವೊಡೆ ಶುಭಪ್ರಕರಮಾತನನಿಕುಂ ತೊದಳಂ (ಜಾತಕ. ೪-೩೯). ತೊದಲ : ರಾಶಿಯ ಕೊನೆಯಲ್ಲಿ ಪಾಪಗ್ರಹಗಳಿದ್ದು . . . ಆ ಚಂದ್ರನನ್ನು ಶುಭಗ್ರಹಗಳು ನೋಡಿದರೆ ಆತ ತೊದಲನಾಗುತ್ತಾನೆ (ಜಾತಕ. ೪-೩೯ ಟೀಕ).

[ ತೊದಳ್$_1$ + – ಅ$_7$./ತುಳು. ತೊದಲೆ./ಹಿಂ. ತೋತಲಾ; ಮರಾ. ತೋಂತ್ಯಾ, ತೋತ್ರಾ, ತೋಂತ್ರಾ ]

ತೊದಳಿಲಿ (ನಾ). ೧. ಸುಳ್ಳಿಲ್ಲದುದು;ನಿಜವಾದಂದು. (ಗು). ೨. ಸಂಳ್ಳಿನಿಂದ ಕೂಡಿರದ ; ನಿಜವಾದ: ತಾಂ ಪದನರಿದು ಲೋಕಕ್ಕೆ ಪುಟವಹ ಬಾಯ್ಗಿನಿದಪ್ಪವು ತೊದಳಿಲಿ ನಾಣ್ಣುಡಿಗಳಂ ಕಲ್ಪಿಪ್ಪನಿತ್ತೆ ದಲ್ (ಸಂಸಪ. ೩೮-೩). [ ತೊದಳ್$_2$+ – ಇಲಿ$_3$ ]

ತೊದಳಿಸು, ತೊದಲಿಸು (ಕ್ರಿ). ೧. ಮಾತಿನಲ್ಲಿ ತಡವರಿಸು : ಉಂತೆ ಪೊಳೆವ ನಿಡಿಯಲರ್ಗಣ್ಗಳ್ಗೆ ಮಳಮಳಿಪ ನೋಟಮುಮನುಂತೆ ತೊದಳಿಸುವ ನುಡಿವ ನುಡಿಗಳ್ಗೆ ತೊದಳುಮನೆಕ್ಕೆಯುಂ ತಳೆಯೆ (ಪಂಪಭಾ. ೭-೮೧ ವ) ; ಸುಯ್ಯು ಬಹಳದ ಭಟರು ತೊದಳಿಸುತೊಯ್ಯನೆಂದರು (ಕುವ್ಯಾಅ. ೧೯-೬). ೨. ಮಕ್ಕಳಂತೆ ತೊದಲು ಮಾತನಾಡು: ತೊದಳಿಸದ ತೊದಳ್ ಕೊಂಕಿಲ್ಲದ ದಟ್ಟಡಿ . . . ಮುಳಿಸಿಲ್ಲದ ಕಾಟಂ ಬಾಲಭಾವಮಚ್ಚರಿ ಜಿನನಾ (ಅನಂಪು. ೬-೮) ; ನಸುನಗೆಯ ತೋಜಿದನು ಮಿಗೆ ತೊದಳಿಸಿದನಿಂತುಟನೇಕ ಬಾಲ್ಯವಿನೋದವನು ತೋಜ್ (ಶಾಕ್ಯಭಾ. ೩೦-೪೬) ; ತೊದಳಿಸಿ ನುಡಿವ ದಟ್ಟಡಿಯಿಡುವ . . . ಕುಣಿವ ಲೀಲೆಯಂ ನೆಟ್ಟನೆ ಕುಮಾರಕತರ್ೋಜಿದರ್ಜನಕಿಗೆ (ಕೃಮಿಭಾ. ೧೯-೫೦). ತೊದಲಿಸು : ೧. ನಾನು . . . ತೊದಲಿಸಹತ್ತಿದೆ (ಚಂದುಟ. ೧೦೮) : ಈ ಮಾತುಗಳನ್ನಾಡುವಾಗ ಅವರ ನಾಲಿಗೆಯು ಸ್ವಲ್ಪ ತೊದಲಿಸಿತು (ಚಂಗಾಳ್ಯ. ೧೬೬). ೨. ಮನದಲ್ಲಿ ಕೇಳ್ವನು ನಸು ತೊದಲಿಸುವ ಸೊಲ್ಲುಗಳ ನೋರಂತ ಪಂಚಾಕ್ಷರಿಯನೋದಿಸುವ (ಬಸಪು. ೪೭-೩೨).

[ ತೊದಳ್$_1$ + – ಇಸು$_8$ ]

ತೊದಳು 'ತೊದಳ್$_2$' ನೋ.

ತೊದಳುನುಡಿ 'ತೊದಳ್ನುಡಿ$_2$' ನೋ.

ತೊದಳುಲಿ. ತೊದಲುಲಿ$_2$ (ನಾ). ಮಕ್ಕಳ ತೊದಲುಮಾತು : ಹಕ್ಕಿಯಿಂಚರದಲ್ಲಿ ಮಗುವ ತೊದಳುಲಿಯಲ್ಲಿ . . . ನಲಿವ ಮೂರುತಿಯೆ (ವಿಸೀಗೀ. ೪೫-೨). ತೊದಲುಲಿ : ತೊದಲುಲಿಯ ಚುರುಕಿಂದ ಚಪ್ಪರಿಸಿ ಚೀರಿ, ಕುದುರೆ ಆಟವ ಗೈದ ನೆನಪು (ಕಎಪು. ೨೫-೨); ಪುಟ್ಟ ಕಂದಮ್ಮನ ...ತೊದಲುಲಿ ಕೇಳಿತು ಮೆಚ್ಚಿತು ಕೊಳಲಿನ ಸವಿಯ (ಇಂಚಾಪ. ೪೧-೯೫).

[ ತೊದಳ್$_1$ + ಉಲಿ$_8$ ]

ತೊದಳ್ನುಡಿ$_1$, ತೊದಲ್ನುಡಿ$_1$ (ಕ್ರಿ). ೧. ಅಸ್ಪಷ್ಟವಾಗಿ ಮಾತನಾಡು ; ಮಾತಿನಲ್ಲಿ ತಡವರಿಸು : ಲೋಹಲಃ, ಅಸ್ಫುಟವಾಕ್ = ತೊದಳ್ನುಡಿವವನು (ನಾಚಿರಾ. ೬). ೨. ಮಕ್ಕಳಂತೆ ತೊದಲುಮಾತನಾಡಂ : ಚಂಬಾಯ್ಯುದಿನಿರಸದಂತೆ ನಸುಜೊಲ್ಲು ಸುರಿಯೆ ತೊದಳ್ನುಡಿವ ಸೊಗಸಂ (ಚಳವಿ. ೪-೮೯). ೩. ಸುಳ್ಳು ಹೇಳಂ ; ಸುಳ್ಳಾಡು : ತೊದಳ್ನುಡಿಯದೆ ಪೋಗು (ಪಂಪಭಾ. ೮-೨೯) ; ನೆರೆದರ್ತ್ಥಿಗರ್ತ್ಥಮಂ ಕುಡುವ ಚಲಂ ತೊದಳ್ನುಡಿಯದಿರ್ಪ್ಪ ಚಲಂ (ಎಕ. II, ೧೩೩-೨೨; 982) ; ಆ ಧರ್ಮ ಪುತ್ರಂ ದಯಾಪರನೆಂದಲ್ಲರೆ ಪೇಟ್ದ ಮಾತು ಪುಸಿಯಾಯ್ತಿ ಕಾರ್ಮುಕಾ ಚಾರ್ಯನಂ ಗುರುವಂ ಬ್ರಾಹ್ಮಣನಂ ತೊದಳ್ನುಡಿದು ಕೊಂದಾಗಳ್ (ಗದಾಯು. ೩-೨೩). ತೊದಲ್ನುಡಿ$_1$ : (೬). [ ತೊದಳ್$_2$ + ನುಡಿ$_1$ ]

ತೊದಳ್ನುಡಿ$_2$, ತೊದಲುನಂಡಿ, ತೊದಲ್ನುಡಿ$_2$, ತೊದಳಂನಂಡಿ (ನಾ). ೧. ಮಕ್ಕಳ ತೊದಲುಮಾತು : ಮುಖಸರಸಿಜದೊಳ್ ದರಹಸಿತಂ ನೆಗಟ್ಚನಂ ತೊದಳ್ನುಡಿ ನುಡಿದು (ಆದಿಪು. ೮-೩); ಜಿನೋಕ್ತಿ ಮೊದಲಲ್ತು

ಮದಂಗದೊಳಿಂಬವೊಲ್ ತೊದಳ್ನುಡಿ ನುಡಿ ? ಪು. ೧೦-೮೨) : ನುಡಿಗಲ್ವಂತೆ ತೊದಳ್ನುಡಿ ನುಡಿಯಿಸಿದಂ ತನಗೆ ಪೋಲ್ತ ವಾಕ್ಕನ್ನಿಕೆಯಂ (ಅರ್ಧನೇ. ೨-೩೧): ಇಡಿದ ಲಾಲಾಜಲಂ ಶಿವಪ್ರಸಾದಂ ತೊದಳ್ನುಡಿಯೆಲ್ಲ ಶಿವಕೀರ್ತನೆಯು (ಸೌಂದಪು. ೩-೧೦) ; ಜೊಲ್ಲು ಸುರಿವ ಮುದ್ದು ಮೊಗದಲ್ಲಿ ನಗೆಯಾಂತು ಸೊಲ್ಲಿಸುವನು ತೊದಳ್ನುಡಿಯು (ಪ್ರೋಹತ. ೧೭-೬೯). ೨. ಸುಳ್ಳುಮಾತು : ಮನುಕುಲದೊಳ್ ತೊದಳ್ನುಡಿ ಪೊದಟ್ಟುಮೆ (ಶಂರಾಮಾ. ೬-೯೫). ೩. ಮೆಲುದನಿಯಲ್ಲಿ ಆಡುವ ಗಂಭೀರವಾದ ಮಾತು : ನೆಗಟ್ದ ಮರಾಂಗನಾಜನದ ರೂಪುಗಳಿಲ್ಲಮದೀಕೆಯೊಂದು ದೇಸೆಗೆ... ನೆಗೆಟ್ಟೊಂದು ಮೆಲ್ಪಿನ ತೊದಳ್ನುಡಿಗಪ್ಪೊಡಮೆಯ್ದೆ ವಾರವೇಂ (ಆದಿಪು. ೨-೬೫) ; ಆಕೆಯ ಮುದ್ದುವೆರಸಿದ ತೊದಳ್ನುಡಿಗಂ ಪೂಮಾಲೆವೆರಸಿದ ಬಬಲ್ನುಡಿಗಮಲಂಪುವೆರಸಿದ ನೋಟಕ್ಕಂ . . . ನಾಣ್ವೆರಸಿದ ಭಾವಕ್ಕಮೊಲ್ದುಮೊಜಲ್ದುಮಿರೆಯರೆ (ಶಂಪಭಾ. ೪-೧೭ ವ) ; ತೊದಳ್ನುಡಿಗಳೊಪ್ಪ ಪುಷ್ಪಚಯಮಂ ಸುಗಂಧಂಗಳಂ . . . ವಿದಗ್ಧೆ ಮಡಗಿಟ್ಟು ತಂದು ತಸಗೀವೊಡೆ (ಮದಪಿ.೧೧- ೫೦). ೪. ಇಂಪಾದ ಧ್ವನಿ,-ಕುಕಿಲು : ಒಲವಿಂದೋಲಗಿಸುವೆನೀ ನೆಲದಳಿಯನನೆಂದು ಬರ್ಪವೋಲ್ ಬಗ್ಗಿಪ ಕೋಗಿಲೆಯ ತೊದಳ್ನುಡಿ ಬಿರಯಿಯನಲೆಯುತ್ತಿರೆ ಬಡದೆ ಬಂದು ನಂದು ಬಸಂತಂ (ಕಬ್ಬಿಗಾ. ೫೨). **ತೊದಲುನುಡಿ** : ೧. ತೊದಲುನುಡಿಗಲಿತು ಮುದ್ದಾಗಿ ಬಾಳ್ವವನಯ್ಯೋ ಪದೆದು ದಟ್ಟಡಿಯಿಟ್ಟು ನಡೆದು ಬಾಳ್ವವನಯ್ಯೋ (ಸಾನಂಚ. ೪-೯೧ ರಗಳೆ): ಪರಮತತ್ವಾಮೃತವೆ ಮೊಲೆವಾಲ್ . . . ಮೃದುಸೂಕ್ತಿಗಳೆ ತೊದಲುನುಡಿ (ಬಸಪು. ೨-೦೦) ; ತೊದಲುನುಡಿಗಳಂಬೆಗಾಲು ದಟ್ಟಡಿ ಮುದವೊದವಿದ ಧೂಳಾಟದಿಂದ... ಕುಮಾರರೊಪ್ಪಿದರು (ಕಂಸವಿ ೪-೬೧). ೨. ಶಿಷ್ಪಂಗೆ [ಪಾಠಾಂ. ಸೆಟ್ಟಿಗೆ] ತೊದಲುನುಡಿಯೇಕೆ (ಸರ್ವಜ್ಞ. ೧೯೬೪). **ತೊದಲ್ನುಡಿ₂** : ೧. ನುಡಿಗಲಿಸಿದಂ ತೊದಲ್ನುಡಿ ಪಡೆವಿನೆಗಂ ಪಿತ್ರಯುಗಕ್ಕೆ ಕರ್ಣಾಮೃತಮಂ (ಶಂರಾಮಾ. ೧-೭೯) ; ತೊದಲ್ನು [ಪಾಠಾಂ. ಳ್ನು]ಡಿಗೇಳ್ದಲಂಪಿನಿಂ . . . ಸಲೆ ನುಡಿಸುತ್ತುಮಿರ್ಪ ನೆವದಿಂ ನುಡಿಗಲ್ತನಿಳೇಶನಂದನಂ (ಕುಸುಮಾ. ೬-೧೫೧) ; ಪರಮಶಿವಭಕ್ತತತಿ ತಮ್ಮ ಕಂದನ ತೊದಲ್ನುಡಿಗಳೆಂದು ಮೆಯ್ಯುರ್ಬಿ ಪುಳಕಂದಾಳ್ದು ಲಾಲಿಸುತಿರೆ (ಪದ್ಮರಾ. ೧-೩೩) ; ಪಾಡುವಿಂಚರಕೆ ಕೋಗಿಲೆ ತೊದಲ್ನುಡಿಯು ಮಾತಾಡುವುದಕೆ ರಾಜಕೀರ . . . ಜೋಡಿಸಿಕೊಟ್ಟರು ತ್ಸವದಿ (ಪ್ರೋಹತ. ೧೯-೭೭). ೨. ಓತರಂ ಪುತ್ರನಂ ತೊದಲ್ನುಡಿಯಂ ನುಡಿಸಿದಂ[ಪಾಠಾಂ. ತೊದಲ್ನುಡಿಯನೆನಿಸಿದಂ] (ಕಬ್ಬಾಸು. ೨೦೫ ಪ್ರಯೋ). ೩. ಆ ಹುಡುಗನು ತೊದಲ್ನುಡಿಯಲ್ಲಿ . . . ತಮ್ಮ ಬಳಿ ವಿದ್ಯಾದಾನವನ್ನಪೇಕ್ಷಿಸಿ ಬಂದಿರುವೆನು ಎಂದು ಹೇಳಿ (ಮುಹಸ. ೬೦). **ತೊದಳುನುಡಿ** : ೧. ಬಾಲರ ತೊದಳುನುಡಿಯ ತಂದೆತಾಯಿಗಳಾಲಿಸಿ ಕೇಳ್ದು ತಪ್ಪಿರಲು ಆಲೋಚಿಸರಂತೆ ಕೃತಿದೋಷಮಿರೆ ತಿದ್ದಿ ಬಾಲನಹೆನು ನಾ ನಿಮಗೆ (ಅಂಜಚ. ೧-೧೦೪). ೩. ನಡೆತಂದರ್ ಚೆಲ್ವಿಂದೊಳ್ನುಡಿಯು ತಡಂನುಡಿಯು ತೊದಳು[ಪಾಠಾಂ. ಳ]ನುಡಿಯೊಳ್ಪೆಂಡಿರ್ (ಜಗವಿ. ೪-೧೨೬) ; ಗದುಗದಗಂಠದಿಂ ತೊದಳುನುಡಿಗಳಿಂದ ಹೃದಯ ಸಖನೊಳಂತೆಂದು . . . ಕೇಳಿದೆನು (ಅಂಜಚ. ೫-೧೧೧) ; ರಂಜಿಸುವ ಯುವರಾಜನೋಲಗ ಕಂಜನಾಭಮುಕುಂದಗಾಯ್ತು ... ಎಂಬೀ ತೊದಳು ನುಡಿಗೇಳ್ದು (ನಿಭಾಗ. ೬-೩-೪). [ ತೊದಲ್₂ + ನುಡಿ₂ ]

**ತೊದಳ್ಮಾಡು**, ತೊದಲುಮಾಡು (ಕ್ರಿ). ೧. ತಡವರಿಸುವಂತೆ ಮಾಡು: ಬಾದಿನೊಳಪೋದಿನೊಳಂ ವಿಬುಧರ್ಕಳಂ ತೊದಳ್ಮಾಡುವ ರಾಜಕೀರತತಿ (ಸೌಇಇ. IX-I, ೨೭೭-೨೩ ; 1160). **ತೊದಲುಮಾಡು** : ೨. ಹುಸಿಯಾಗುವಂತೆ ಮಾಡಂ : ಒಮ್ಮೆ ಆಡಿದ ಮಾತನ್ನು ತೊದಲುಮಾಡುವುದಕ್ಕೆ ಬಲಿಯು ಒಪ್ಪಲಿಲ್ಲ (ನೀಗಟ್ಟು. ೦೭೮). [ ತೊದಲ್₃ + ಮಾಡು₁ ]

**ತೊದಳ್ಮಾತು**, ತೊದಲುಮಾತಂ, ತೊದಲ್ಮಾತು (ನಾ). ೧. ಮಕ್ಕಳ ತೊದಲುನುಡಿ : ತೊದಲ್ಮಾತ ಮಾತನಾಡುವ ಮುದ್ದುಗೆಯ್ವ ಭೂತಳದೊಳಗಂಬೆಗಾಲಿಟ್ಟು ನಡೆವಂತೆ ಚೇತನವಾದುದಂಗಜಗೆ (ಮೋಹತ. ೧೧-೫೯) : ಶಿಪ್ಪೋಕ್ತಿಗಳಂ ತಾಂ ಪೇಳ್ದು ಪೇಳ್ವಂತಿರೆ ಕಲಿಸಿ ತೊದಳ್ಮಾತು ಚೆಲ್ವಾಗೆ ವಾಮಾಕ್ಷಿಗೆ ಪುರ್ಬಿಂ ಜರ್ಬಿನಿಂ ನೋಡೆನುತಳೆಪಿ ನೃಪಂ (ರಾಜಶೇ. ೪-೭೦). ೨. ವ್ಯರ್ಥವಾದ ಮಾತು: ತೊದಲ್ಮಾತಿನೊಳೇನೋ ಪಾಂಡವರ ಕೈಯೊಳೆ ನಿನ್ನ ನಿಸೇಕವಾಗದೇ (ಶಂಪಭಾ. ೯-೪೯). **ತೊದಲು ಮಾತು** : ೩. ಅಸ್ಪಷ್ಟವಾದ ಮಾತು: ಕೆಲಂಬರು ತೊದಲುಮಾತುಗಳನಾಡುತ ಕಣ್ಣುಗಳಂ ಮುಚ್ಚಿ ಕೈಸನ್ನೆಗಳಂ ಮಾಡುವರು (ಸೌಗಂಧಿ. ೧೪೨-೧೧); ಲೋಹಲಃ, ಅಸ್ಫುಟವಾಕ್-೨ ವ್ಯಕ್ತವಾಗದೆ ತೊದಲು ಮಾತನಾಡುವವನ ಹೆಸರುಗಳು (ಸಿದ್ಧಾಂತಿ. ೨೮೭). **ತೊದಲ್ಮಾತು** : ೧. ಪಸುಳೆತನದೊಳ್ ಪುಣಮಮಂ ಶರಣಗಣಕೆ ಬೋಧಿಸುವನೀ ಕುವರ ನೆಂಬೊಲ್ ತೊದಲ್ಮಾತು ರಂಜಿಸಿದುವು (ಚಬಪು. ೫-೪೧). ೪. ಮುದು ಮಾತು : ಮಾತೆಯ ಪಕ್ಷಪುಟವ ಸೇರುವ ತೊದಲ್ಮಾತ ನುಡಿದು ಬಿನದಿಸುವ . . . ಗಿಳಿವಱಿಗಳ ರೀತಿಯ ಕಂಡಳಾ ಸೀತೆ (ಕಂಸವಿ. ೪-೪೭). [ ತೊದಲ್₂ + ಮಾತು₁ ]

**ತೊದಳ್ಳಿ** (ನಾ). ಒಂದು ಸ್ಥಳದ ಹೆಸರು: ಬನವಸೆಯ ಚಟ್ಟನಾಗರಕಣ್ಡಕ್ಕೆ ಮುನಿದು ಪರಿಯನಟ್ಟಿದಡೆ ತೊದಳ್ಳಿಯನಿಱಿದು (ಎಕ. VIII, ಸೊರಬ. ೨೩೪-೮ ; ೯೯೯). [ ? ]

△ **ತೊದಟ್** 'ತೊದಳ್₁' ನೋ.

**ತೊದಟ್ಟು** (ಕ್ರಿ). ಎದುರಿಸು; ಪ್ರತಿಭಟಿಸು : ಕುಲದೀಪತಿಲಕ ಗೋಪಾಲರಾಜ . . . ಅಟ್ಟಿ ಪೊಯ್ದು ನುಗುಟ್ಟುಟ್ಟಿ ತೊದಟ್ಟಿ ಮಲ್ಲಮಾಟ್ಯೊನ್ನಾಸುರಮಪ್ಪಿನಂ ಪೆಣೆದು ಕಟ್ಟಿದಂ (ಎಕ. VI, ಚಿಕ್ಕಮ. ೭೭-೨೦ ; ಸು. 1060 ?). [ ತೊದಟ್ (<ತೊದಲ್₁) + -ಚು₁ ]

**ತೊದುರು** 'ತೊಡರು₃' ನೋ.

**ತೊನಗು** 'ತೊಲಗು' ನೋ.

**ತೊನಚಿ** 'ತೊನಸೆ' ನೋ.

**ತೊನಚೆ** 'ತೊನಸೆ' ನೋ.

**ತೊನಪೆ** (ನಾ). ಒಂದು ಬಗೆಯ ಮರ ; ಹೊಂಗೆ : "ಗುಚ್ಛಕರಂಜಃ- ತೊನಪೆ, ಹೊಂಗೆಮರ" (ಒಷಧಿ. ೫೦). [ ? ]

**ತೊನಸಿ** 'ತೊನಸೆ' ನೋ.

**ತೊನಸೆ**, ತೊಣಚಿ, ತೊಣಚೆ, ತೊಣಸಿ, ತೊಣಸೆ₁, ತೊನಚಿ, ತೊನಚೆ, ತೊನಸಿ (ನಾ). (ನಾಯಿ, ಕುದುರೆ ಮುಂತಾದುವುಗಳ ಮೈಯಲ್ಲಿ ಸೇರಿಕೊಳ್ಳುವ) ಒಂದು ಬಗೆಯ ನೊಣ : ಪಶುವಿನೊಳಲ್ಲಿರಲೀಂ ತಾನೆಂತೊ ತೊನಸೆಯೋ ನೊಣವುಗಳೋ (ಸಮುಹ. ೯-೬೧) : ಅಗಸೆಯ ಮರಕ್ಕೆ ತೊನಸೆ ಮುಱಿದುಂಬಿಯೆಂಬಂತೆ (ಧರ್ಮಾಮೃ. ೭-೨೨೯); ತುಂಬಿ ಪತಂಗ ನೊಣ . . . ತೊನಸೆ ಮೊದಲಾದುವಕ್ಕೆ ಸ್ಪರ್ಶನ ರಸನ ಘ್ರಾಣಮುಕ್ಕು (ಚಾಸ್ರಟೀ. ೧೧೭-೬); ನೀನು ತೊನಸೆಯ ಕೊಲೆಯ ಮಾಡಿದ ಮುಳ್ಳುಮೊನೆಯಲಿ (ಸಂಭಪ. ೧೪-೧೬). **ತೊಣಚಿ**: ತೊಣಚಿ; ಗೋಮಕ್ಷಿಕ (Breeze. ಇಂಕಿನಿ). **ತೊಣಚೆ** : (ಕ). **ತೊಣಸಿ**: ಹಾಲುಗೆಚ್ಚಲು ಬಳಿಯ ಕೊಣಸಿ ಹತ್ತಿಕೊಂಡು ಕಾಲವನು ಕಳೆವ ಬಗೆ ಬಲ್ಲಿರಲ್ಲ ವೇಳವೇಳೆಗೆ ಹಸುಪ ಕರೆದುಂಬ ನರನಂತೆ ಕೀಳು ತೊಣಸಿಯು ಉಂಡು ಹರುಷ ಪಡ ಬಲ್ಲುದೆ (ವಿದಾಳ್ಕ. ೧೮-೨). **ತೊಣಸೆ₁** : ಬೆನ್ನಟ್ಟುವ ಘೋರರೂಪಿ ಆರ್ಗಸ್, ಕಡಿದು ರೂಪುಗೆಡಿಸಲೆಂದು ಎಡೆಬಿಡದೆ ಹಾಯ್ದು ಬರುವ ತೊಣಸ . . . ಅವಳ ಪಾಲಿಗೆ ಬೆನ್ನಟ್ಟಿದ ಬೇತಾಳಗಳು (ಬದ್ಧಪ್ರ. LI, ನಾಟಕದ ಸಮುಕ್ಷಿ). **ತೊನಚಿ** : ತೊನಚಿಯಂ ಕೊಂದ ಪಾಪಸಮೇತ

ಪಾಂಡವ್ಯನಾ ಶೂಲದೊಳು ಬೀಳ್ದ (ವೀಶೈಪು. ೯-೫-೩೧). **ತೊನಚಿ :** ವಾನರಕೊದಗಿದ ತೊನಚಿಯು ಕಾಟ (ಅವಧೂ. ೧೧); ಜ್ಞಾನೋತ್ತರ ಮಾರ್ಗಕೆ ಜಂಜಾಟ ವಾನರಕೊರಲಿದ[ದಗಿದ]ತೊನಚಿ ಕಾಟ (ಅಡಪ. ೧-೧೦೭). **ತೊನಸಿ :** ಲಿಂಗದ ಚಿತ್ತದಲ್ಲಿ ಕರ್ಣದೊಳಗೆ ತೊನಸಿ ಹೊಕ್ಕು ಗೋಳಿಟ್ಟು ಬಾಧಿಸಿದಂತಾಯಿತ್ತಯ್ಯಾ (ವಚಸಂ. ೧೫೯-೭೪) ; ವರತಪವ ಕೆಡಿಸಬೇಕೆಂದು ತೊನಸಿಗಳಾಗಿಯಜಗೆಜಗಿ ಕರ್ಣಕ್ಕೆ (ಪ್ರಾಶಾಂ. ೯-೩೪) ; ತೊನಸಿ ಮುಂದಿ ಎತ್ತ ಹಜಿಂದು ಹುಳಗಳನು ಜನಿಸಿ ಬಿಟ್ಟಂತೆ (ಸರ್ವಜ್ಞ. ೧೮೫೭) ; ತೊನಸಿಯು ತನ್ನ ತತ್ತಿಗಳನ್ನು ದನಗಳ ತೊಗಲಿನೊಳಗೆ ಹಾಕುತ್ತದೆ (ಮುಂಬಯಿ. ೫-೧೪೫).

**ತೊನಹು** (ನಾ). ತೂಗಾಟ; ಓಲೆದಾಡುವಿಕೆ: ಕಂಚುಗೂಡಲ ನಿಟ್ಟೊಡಲ ನಿಡುದೋಳ ತೊನಹಿನ ಮುಟ್ಟದವೆಗಳ ನಟ್ಟನೋಟದ ... ಪೃಥುಲಿಂಗ (ಪ್ರಭುಲಿ. ೨೨-೩೩). [ ತೊನ್ೆ₁ + – ಹು₂ ]

**ತೊನೆ₁** (ಕ್ರಿ). ೧. ಅಲುಗಾಡು ; ಅಲ್ಲಾಡು : "ತೊನೆದುದು ತೂಗಿದು ದೊಲೆದುದುಮೆನುತಲಲ್ಲಾಡಿದುದು ನಡುಗಿತೆಂದೆನಲದು ಕಂಪನವಕ್ಕು" (ಕವಿಶಂ. ೨೩೪);ಮನಸಿಜನೃಪಲೀಲಾಲಾಂಛನಂ ಸ್ವಸ್ತಿಕಂ ಸ್ತ್ರೀಜನದೊಳಿಸಿದು ನಿಂದತ್ತುತ್ತರೀಯಾಂತರೀಯಂ ತೊನೆಯೆ (ಆದಿಪು. ೧೧-೧೫೩) ; ಅರಿವ ನಡುವುಡಿವ ನೇರ್ಗೋಲ್ವರಿದುರ್ಚುವ ನಟ್ಟು ತೊನೆವ ಕಣೆಗಳ್ಗೆ ಪೊಗಂದಿರಿಯದೆ (ಪಂಪಭಾ. ೧೧-೭೪) ; ತೊನೆಯೆ ಕುರುಳ್ ಕದಕ್ಕದಿಸೆ ತುಂಗಕುಚಂ (ಮಲ್ಲಿಪು. ೧೨-೩೦) ; ತೊನೆವ ಬಾಲಂ ಕುಸಿದ ತಲೆ . . . ದೈನ್ಯವಿಡಿದ ಕಿಱುದನಿವೆರಸು ಬಂದೊಂದು ಕೃಷ್ಣಶುನಕ ಬಿರ್ದುದು (ಸಿದ್ಧಣ. ೭-೪೩) ; ತೊನೆವುತಿಹ ಚಿತ್ರದ ಪತಾಕೆಗಳ ಜೋಕೆಗಳ ಕೋಟಾ ವಳಿಯುಮೆಸೆದುದು (ಜಲಪು. ೪೨-೨೧) ; ಮುತ್ತಿನ ಲಂಬಣಂ ತೊನೆವ ತೊಂಡಲ ಬಜ್ಜರಬೊಟ್ಟು (ಚಳಪಿ. ೩-೪೯). ೨. ತೂಗಾಡು ; ಓಲೆದಾಡಂ : "ತೊನೆ ಆಂದೋಲನೇ (ತೂಗಾಡು)" (ಶಮದ್ಪ); ಪಂಚಬಾಣ ಕೃಪಾಣ ಪಟ್ಟದೊಡನೆ ಕೊನೆಯ ಬಿಣ್ಪಂ ತೊನೆದು ತೂಗದ ಪೂಗವನವಿಲ್ಲ (ಪಂಪಾಶ. ೧-೧೦೭ ಪ) ; ತೊಗಿ ತೊನೆದು ಮೆಯ್ಯಱಿವ ಹಂದಿಯನು ಕೌಶಿಕ ಕಂಡನು (ಹರಿಶ್ಚಂ. ೬-೬೦) ; ಹರಿಸದಿಂ ತೂಗುತಂ ಬಾಗುತಂ ತೊನೆಯುತಂ ಭರವಸದಿ ನಲಿವುತಂ ... ಆದೇಂ ನೆಗಳ್ದರೋ (ಪದ್ಮಣಾ. ೬-೬೨) ; ಕೋಳ ಮೈಯಲಿ ತೊನೆದು ನೋಟದ ಧಾಳದಲಿ ಧವಳಿಸಿಯೆ . . . ಒಪ್ಪಿರ್ದಳಾ ವನಾಯೆ (ಪ್ರಭುಲಿ. ೪-೫೭) ; ತೂಗುತೆ ತೊನೆಯುತೆ ಬಳ್ಕುತೆ ಬಾಗುತೆ . . . ಸೊಂಪಾಗಿರ್ದುವು ಕಣ್ಗೆ ಗಂಧಶಾಲಿವನಂಗಳ್ (ರಾಜಶೇ. ೨-೧೧) ; ಗಿಡವೂ ಒಪ್ಪಿಕೊಂಡು ತಲೆಯಾಡಿಸುವಂತೆ ಗಾಳಿಗೆ ಅತ್ತಿತ್ತ ತೊನೆಯಿತು (ಹಳಕಥ. ೭೪); ಅಹನ ಮನಸ್ಸು ಒಮ್ಮೆ ತೊನೆಯಿತು (ನಡಮ. II, ೧೪೯೫). ೪. ಅಲುಗಾಡಿಸು ; ಅಲ್ಲಾಡಿಸು : ಪಲ್ಲಂ ಕುಱುಕುತ್ತುಂ ಮೆಯ್ಯಂ ತೊನೆಯುತ್ತುಂ ಭೋಗಂಗಳಂ ಚಿಂತಿಸುತ್ತುಂ (ಧರ್ಮಾಮೃ. ೫-೧೩೭) ; ಮೈಯಂ ತೊನೆದುದ್ದಂ ನೀಡಿ ಗೋಣಂ ನವದಿನ ಮುಖದೊಳ್ ಕುಕ್ಕುಟಂ ಕೂಗಿತಾಗಳ್ (ಕುಸುಮಾ. ೪-೭೨); ಘನಕೋಪಾ ಟೋಪದಿಂದಂ ಕುಲಕುಧರವಹಾಶೃಂಗಮಂ ಕೋಡ ಕೊಟ್ಟಿಂ ತೊನೆ ದೀಡಾಡುತ್ತೆ ಬಪ್ಪ ದ್ವಿರದಪತಿಯಂ . . . ನೋಡುತ್ತೆ (ಸೂಕ್ತಿಸು. ೩-೩೪) ; ನೆಣನ ತಿಂದು ತಣಿದು ತಲೆಗಳ ತೊನೆವ ಬೇತಾಳತತಿ (ಜಲಪು. ೪೦-೨೭); ನಗೆವೊಗದೊಳಂಗವಂ ತೊನೆಯುತ್ತೆ ಸಂತಸಂಬಡುತಿರ್ದರು (ಶೀಶರಾ. ೨೪-೩೫). ೫. ನಡಂಗು ; ಕಂಪಿಸು : "ತೊನೆ, ಒಲೆ, ತೂಗು, ಸೆಡೆವು, ಅಲ್ಲಾಡು, ನಡುಕಂ – ಈ ೭ ಕಂಪನಂ" (ಕಶಶಾ. ೩೧-೬೫೦) ; ಗ್ರಹಪೀಡಿತನಂತೆ ತೊನೆಯುತ್ತುಂ . . . ತಾಯ್ ಸತ್ತ ಶಿಶುವಿನಂತೆ ಬಾಯ್ಬಿಡುತ್ತುಂ (ಧರ್ಮಾಮೃ. ೧-೧೪೪); ಮುನಿಯುತ್ತುಂ ಮುದ್ದಿಸುತ್ತುಂ ತೊನೆದು ತವಕಿಸುತ್ತುರ್ವುತುಂ (ರಕ್ಷಾ ೭. ೬೫) ; ಸೆಳೆಗೊಂಬೆಲರಿಂ ತೊನೆದೆಲ್ದು ತಟ್ಗಿ ತೂಗಾಡಿದೊಡಂತದಂ ಪಿಡಿದುಕೊಂಡಲರಂ ನೆಟಿ ಕೊಯ್ದು (ಕುಸುಮಾ. ೫-೧೧೧) ; ಮೇಲೆ ಅಟ್ಟದ ನೆಲ ಅವನ ಓಡಾಟದ ರಭಸಕ್ಕೆ ತೊನೆಯುತ್ತಿದ್ದಿತು (ಕಾಗೆಳ. ೧೨೭). ೬. ಬೀಸು ; ತೀಡು : ಸಂಪಗೆಯ ಪಂಡದೊಳಾವ್ರುಮುಹೀಜವಾಲಿಯೊಳ್ ಫಲದ ತುಱುಂಗ ಲೊಳ್ ತೊನೆವುದೊರ್ಮೆಯುಮಲ್ಲಿಯ ಮಂದಪಾರುತಂ (ಮಹಾಪೇ. ೧೫-೪೪) ; ಗಾಳಿ ತೊನೆಯಿತು, ಗಂಧ ಹರಡಿತು (ಕರುಶ್ರಾ. ೨೭-೮). ೭. ಬಳುಕಂ ; ಒನಪುಮಾಡು: ರೂಹಿಲ್ಲದೊಡಂ ಕೆಲಬರ ಸಹಾಯದಿಂ ಬಱಿದೆ ತೊನೆದು ಕೆಮ್ಮನೆ ವಿಟಸಂದೋಹವನೊಲಿಸುವರ್ (ಧರ್ಮಾಮೃ. ೩-೧೩೦); ಪುಷ್ಪ "ನಾಚಿಸುತ್ತೀರಿ" ಎಂದು ತೊನೆದಳು (ಸುಬವಿ. ೬೯). ೮. ಒಲಿ; ಮನಸೋಲು; ಮೆಚ್ಚು: ಕಾಲೂರ ಸೂಳೆಯಂತೆ ಬಱಿದೆ ದುರ್ವಾ ತಕ್ಕೆ ತೊನೆಯದೆ . . . ಧರ್ಮದೊಳ್ ಕೂಡಿ ಜನವಾದಸೇವೆಯೊಳಿರ್ದು ಸ್ವರ್ಗಾಪವರ್ಗ[ಸುಖ]ಕ್ಕೆ ಭಾಜನನಾಗು (ಧರ್ಮಾಮೃ. ೧೪-೮೪) ; ಕರಂ ನನ್ನಿಗನೆನ್ನನೇ ತೊನೆವನೆನ್ನನೆ ಬೇಡುವನೆನ್ನೊಳಾಡುವಂ (ಚಳಪಿ. ೬-೧೭೦) ; ತಾಯಿಯ ಹೃದಯ ತೊನೆಯುತ್ತದೆ–ತನಯಳ ಮಾತುಗಳನ್ನು ಕೇಳಿ (ಕರಡ. ೨೦). ೯. ಮಿಸಾಟು; ಮಿಡಿ : ಕಂದಳಮಿಂದು ವೀಣೆಯಡೆಯಾಡು ವುದಲ್ಲಿದು ಹೃತ್ಸರೋಜದಾನಂದದ ನಾಡಿಯಂ ತೊನೆದು ಸೋಲಿಸಿ ಗಳ್ಕನೆ ಸೊರ್ಕನೇಱಿಸಿಂ (ಚಳಪಿ. ೪-೧೨೦). ೧೦. ತೂಗು ; ತೂಗಾಡಿಸು: ತೊನೆದು ಕತ್ತಿಯು ತಿರುಹುತಿರಲಿಕೆ ಸುತನ ನುಂಗೆನಲು (ಸಂಭವ. ೮-೪೪); ಸಿಂಹಮಧ್ಯದ ಕನ್ಯೆಯರು ತೋಳ್ಗಳಂ ತೊನೆಯಲು (ಭಾವಚಿಂ. ೯-೫೮) ; ತೊನೆದಿಡುವ ಹಸ್ತಬಲದಿಂದಂಬು ನಡೆದು ವೆರರನು ಕೊಂಬುದಲ್ತೆ (ವಂಕಾರಾ. ೫-೪-೪೨) ; ಜಡಿದು ಕೈದುವ ತೊನೆವುತೆಂದರು ತಮ್ಮೊಳೊಳ ಗೊಳಗೆ (ಅಂಬಿಕಾ. ೫-೨೧) ; ನೆತ್ತರ್ ತವಕಿಪ ಕೂರ್ವೊನೆ ಸಬಳಗಳನ್ ಕೊನೆದನವನ್ (ಅಂತಿಗೊ. ೭-೧೧೧). ೧೧. ತಲೆಯನ್ನು ಆಡಿಸು : ತೊನೆವವರ್ಮಾತಿಗೆ ಸೋಲ್ದು ತನ್ನ ತಲೆಯೊಳ್ ತಾನಿಟ್ಟು . . . ಲಜ್ಜೆಯಿಲ್ಲದನಿಬರ್ ಕಾಂ ಮಾನ್ಯನೆಂದೆನ್ನದಾ ಮನುಜಂ ಸದ್ಗತಿ ಕಾಣನ್ಯೆ (ಸೋಮೇಶ. ೫೦); ನುಡಿದ ನುಡಿಯಂ ಪರಿವಿಡಿಯಂ ನನ್ನಿ ಮಾಡಿದೆಯೆಂದು ತೊನೆಯುತ್ತೆ ಕಿಱಿದೆಡೆಯಂ ಪೋಗೆಪೋಗೆ (ಕಬ್ಬಿಗಾ. ೧೧೧). ೧೨. ಕೊಡಹು ; ನಿವಾರಿಸು : ಅನಿತರೊಳಗನಿತಾತ್ಮ ಶಿವಿಗುಳ ನೆನೆದು ಮರವೆಯ ತೊನೆದು ನಿಂದನು (ಕೃಷ್ಣಾಳ. ೨೧-೧೪). ೧೩. (ಆಲಂ) ಜಂಬವಡು ; ಗರ್ವಿಸು ; ಬೀಗು : ಕುಲಮುಂ ದಳಮುಂ ಜಳ ಬೊಟ್ಟುಳಿಕೆಯವೋಲ್ ಕಿಡುವುವೇಕೆ ತೊನೆವರ್ ಮೂಱರ್ ರ್ (ಧರ್ಮಾಮೃ. ೭-೧೬೦) ; ತಲೆಗೇಱಿ ಸೊಕ್ಕು ತೊನೆವರ್ (ಸೋಮೇಶ. ೪೮) ; ಪಾರ್ಥನಂ ರಕ್ಷಿಸುವೆ ನೀಂ ಕೃಪೆಯೊಳಾವು ಬಱಿದೆ ತೊನೆ ದೊಡೇನಹುದಿನ್ನು (ಕೃಮಿಥಾ. ೧೩-೩೪) ; ಅಂತರಿಸದಾವಗಂ ತುಳ್ಕುತಿಹ ರೌದ್ರರಸದಿಂ ತೊನೆವ ಚಂಡಾಖ್ಯಭೈರವ ಮಹಾತೇಜದಿಂ ತರಣಿಯಂ ಜಱಿಯುತ (ನಂದಿಪಾ. ೩-೭). 'ಒನೆ' ಪರಾ.

**ತೊನೆ₂** 'ತೊಣೆ' ನೋ.

**ತೊನೆಪ, ತೊನೆಹ** (ನಾ). ೧. ತೂಗಾಟ: ಸೊನೆಯಿಂ ದಾನಜಲೌಘಮುಂ ಕೊನೆಪದಿಂ ಕೊಂಬಾಟಮುಂ ಕೋಕಿಲಸ್ವನದಿಂ ಬೃಂಹಿತನಾದಮುಂ ... ಒಪ್ಪಲ್ (ಜಗವಿ. ೦೪-೭೪). ೨. ಒನಪು; ಒಲಪು : ಅಂತಾಕೆಗಳ್ ತೂಗಿ ತೊನೆವ ತೊನೆಪಗಳುಮಂ . . . ನೋಡಿ (ಪಂಪಭಾ. ೪-೯೦ ವ) ; ತೊನೆಪಂ ಲೇಸು ಸುಖಿಗೆಯರಿದೆಂಬಂತೆ . . . ಸಂಸಾರಸುಖಂ ಲೇಸು ಮೇಗಣ ನರಕದುಃಖಂಗಳರಿಯವು (ಧರ್ಮಾಮೃ. ೮-೮೦). **ತೊನೆಹ :** ೩. (ಆಲಂ) ಓಲಾಟ; ಮೆರೆತ: ಮನೆಮನೆವಾರ್ತೆಯು ಮುಡದಿ ಮಕ್ಕಳುಗಳ ತೊನೆಹದ ತೊಡಕಿನೊಳೊಡರಿ ಮನಗೆಟ್ಟು ಮತಿಯಲ್ಗಿ ಮಱುಗದವೊಲ್ ನಿನ್ನ ನೆನೆದೆನುಳುಹು (ಕಶಶಾಂ. ೦೬-೯೨). [ ತೊನೆ₁ + – ಪ₂ ]

**ತೊನೆಯಿಸು** (ಕ್ರಿ). ೧. ತೂಗು ; ಜೀಕು : ಲಲಿತಾಂಗಂ ಬಳ್ಳಲು ಉಯ್ಯಲಂ ತೊನೆಯಿಸಿದಳ್ (ಮರಾಚ. ೪-೪೭). ೨. ಪಲುಕನ್ನು ಮೂಡಿಸು: ನಾದಾನುಸಾರವಾಗಿ ಗವುಕದ ಗುಂಪು ಗುಂಗುಮಿಸುವಂತೆ ಹಾಡನ್ನೆತ್ತುವ, ಎತ್ತಿ ತೊನೆಯಿಸುವ ತೊನೆಯಿಸಿ ಕೊನೆಗಾಣಿಸುವ ಹಿಡಿತ (ಪಾರ್ತಿಸು. ೪೨). [ ತೊನೆ$_1$ + – ಇಸು$_3$ ]

**ತೊನೆಹ** 'ತೊನೆಪ' ನೋ.

**ತೊನ್ನ** (ನಾ). ತೊನ್ನುರೋಗವುಳ್ಳವನು : ತಾಂ ತೊನ್ನನಾಗಿ ಮುರುಂಟಿದ ಕೈಯುಂ ಕಾಲುಂ ಬೆರಸು . . . ಲೋಗರ ಮನೆಗಳೊಳ್ ಭೈಕ್ಷವಂ ಬೇಡಿ (ವಡ್ಡಾರಾ. ೧೨೨-೨೨) ; ಪಂಚಮಾ ನವ ಸ್ಥಾನಂಗಳೊಳ್ ಕರ್ಕಟಾಳಿ ವೃಗೋಕ್ಷೋದಯಮುಗ್ರರೊಂದಿದೊಡವರ್ ಮೇಣ್ ನೋಡೆ ತೊನ್ನಂ ನರಂ (ಜಾತಕ. ೨೧-೧೫) ; ತೊನ್ನಂಗೆ ತುಳಿಲುಂಗೆಯ್ದಂ ಗೆನ್ನಂತಾಗೆಂದಂ (ಸಮುಪ. ೯-೭೪) ; ಈ ತೊನ್ನಂಗೀ ಕಪ್ಪಂಗೀ ತೊಡವಿ ದೇಕೆ (ಧರ್ಮಾಮೃ. ೪-೭೦) ; ಒಡಲಂ ಪತ್ತಿದ ತೊನ್ನರ ತುಟಿಯಂತೆ (ಲೀಲಾವ. ೨-೧೧೭) ; ತೊನ್ನನ ಕೊಟದಿನಾದುದು ತೊನ್ನು (ಯಶೋಧ. ೩-೭೪) ; ಸಾವಂ ಬಯಸುವ ತೊನ್ನರುಂ ತುಱುಚರುಂ . . . ಬಂದಾ ಮರನ ಫಲವಂ ಮೆಲೆ ನಿರೋಗಿಗಳಾಗಿ (ಧರ್ಮಪ. ೭-೪ ವ).
[ ತೊನ್ನು + – ಅ$_7$ ]

**ತೊನ್ನಿ** (ನಾ). ತೊನ್ನುರೋಗವುಳ್ಳವಳು. [ ತೊನ್ನ + – ಇ$_3$ ]

**ತೊನ್ನು** (ನಾ). ಚರ್ಮವು ಬಿಳಿದಾಗುವ ಒಂದು ಬಗೆಯ ರೋಗ ; ಶ್ವಿತ್ರ : " ಕುಷ್ಠಮೆನೆ ತೊನ್ನು " (ಮಂಗರಾ. ೧೧೩-೨) ; ಆ ಮಯೂರನ ತೊನ್ನಾದೊಡಲುಂ ಸುವರ್ಣಮಾದುದು (ಸಮುಪ. ೯-೨೨) ; ತೊನ್ನಿನಂತೆ ರಸಿಗೆಯನುಳ್ಳುದು ಸೊಂಬನಂತೆ ಅಲಸಮಪ್ಪುದು (ಧರ್ಮಾಮೃ. ೪-೧೭೫) ; ಏರಿಯ ಬಿಳಿದಪ್ಪ ತೊನ್ನುಳ್ಳವನೆ ಪೂರ್ವದೊಳು ಬೆಳ್ಳಿಯ ಕದ್ದವಂ (ವೀಕ್ಷಪು. ೪-೨೨-೩೫) ; ತೊನ್ನುರೋಗಕ್ಕೆ:– ನೆಲದಾಳವ ಗೋಮೂತ್ರದಿಂ ಅರೆದು ಪೂಸಲು ತೊನ್ನು ಮಾಣ್ಗುಂ (ವಿದ್ಯಾವಿ. ೧೩೦) ; ಕುಷ್ಠಾಶ್ರಯಾ–ತೊನ್ನಿಗಾಲಯವಾಗಿರ್ಪುದು (ದಾಹಟೀ. ೨-೩-೮ ವ). [ ದೇ.॥ ತೆಲು. ತೆನ್ನು ]

**ತೊನ್ನುಗೊಳ್** (ಕ್ರಿ). = ತೊನ್ನುವಿಡಿ : ಮನೆಮನೆಯಂ ತೊಟಲ್ದು ತನ್ನ ತೊನ್ನುಗೊಂಡಿರ್ಪುದನಱಿಪುತ್ತುಂ (ವಡ್ಡಾರಾ. ೧೨೨-೨೪) ; ಮೆಯ್ಯೆಲ್ಲಂ ತೊನ್ನುಗೊಂಡು ದುಃಖಂಬಟ್ಟೋವೊಯ್ಯಂದೊಳಱುತ್ತಿರ್ಪರ್ ಚರ್ಯಾದಿ ಜಿನೇಂದ್ರಧರ್ಮವಂ ಪಟಿದವರ್ಗಳ್ (ಧರ್ಮಾಮೃ. ೭-೧೭೭).
[ ತೊನ್ನು + ಕೊಳ್$_1$ ]

**ತೊನ್ನುಬಡಕ** (ನಾ). ತೊನ್ನು ಹತ್ತಿದವನು : ತೊನ್ನುಬಡಕ ಮಾವ ಅನ್ಯಕಾರಿ ಅತ್ತೆ . . . ಎನ್ನ ಗೋಳು ತಾನೆ ನಾಶವೆಂದಿಗಹುದೊ (ಪುರಂದ. ೨-೮೪-೩). [ ತೊನ್ನು + – ಬಡಕ$_1$ (< – ಬಡಿಕ) ]

**ತೊನ್ನುವಿಡಿ, ತೊನ್ನುಹಿಡಿ** (ಕ್ರಿ). ತೊನ್ನುರೋಗ ಹತ್ತು : ತೊನ್ನು ವಿಡಿದಾವರಿಸಿ ರೂಪಳಿದಿಂತಿರುತ್ತಿರಲು (ಬಸವಪು. ೫೭-೫೬). **ತೊನ್ನುಹಿಡಿ** : ತೊನ್ನುಹಿಡಿದವರ ಹೆಣಗಳನ್ನು ಸುಟ್ಟುಬಿಡುತ್ತಿದ್ದರು (ಹುಚ್ಚುಹ. ೭೯).
[ ತೊನ್ನು + ಪಿಡಿ$_1$ ]

**ತೊನ್ನುಹಿಡಿ** 'ತೊನ್ನುವಿಡಿ' ನೋ.

**ತೊನ್ನೆ** (ನಾ). ತೊನ್ನು ಹತ್ತಿದವಳು: ಅರಸಿಯರ ಸೂಳೆಯರ ಕಣ್ಗಳೊಳ್ ಘಟಿಕಾಂಜನಂಗಳನೆಟ್ಟಿದೊಡನಿಬರುಂ ತೊನ್ನೆಯರಾಗಿರ್ಪನ್ನೆಗಂ(ವಡ್ಡಾರಾ. ೧೨೪-೧೭). [ ತೊನ್ನ + – ಎ$_3$ ]

**ತೊಪ್, ತೊಪ್ಪು** (ನಾ). ಒಂದು ಅನುಕರಣ ಶಬ್ದ. 'ತೊಪ್ಪನೆ' ಪರಾ. **ತೊಪು** : ಬೆನ್ನಟ್ಟಿ ತಗುಳ್ದಿಡುವುದುಂ ಖಿಳಿಲ್‌ಖಿಳಿಲ್ ತೊಪ್ಪು ತೊಪ್ಪು ಛಳಿಲ್ ಛಳಿಲೆಂದು ಕೊಳ್ವ ಬಡಿಗಂ ಚೆಳಿತು (ಧರ್ಮಾಮೃ. ೭-೮೪).

**ತೊಪತೊಪ** (ನಾ). ಒಂದು ಅನುಕರಣ ಶಬ್ದ. 'ತೊಪತೊಪನೆ' ಪರಾ.

**ತೊಪತೊಪನೆ** (ಅ). ತೊಪತೊಪ ಎಂದು ಸದ್ದಾಗುವಂತೆ ; ನೀರು ತೊಟ್ಟಿಕ್ಕುವಂತೆ: ಅವನು ಮಳೆಯಲ್ಲಿ ತೊಪತೊಪನೆ ತೊಯ್ದು ಬಂದನು (ರೂಢಿ). 'ತಪತಪನೆ' ಪರಾ. [ ತೊಪತೊಪ + – ಅನೆ$_1$ ]

**ತೊಪ್ಪಟೆ** 'ತೊಗಟು' ನೋ.

**ತೊಪ್ಪಡೆ** 'ತೊಗಟು' ನೋ.

**ತೊಪ್ಪನೆ** (ಅ). ತೊಪ್ ಎಂದು ಸದ್ದಾಗುವಂತೆ ; ತಲೆ ಪಱಿದು ಜೋಲ್ದು ತೊಪ್ಪ[ಪಾಠಾಂ. ಪ್ಪೆ]ನೆ ನೆಲದೊಳ್ ತನು ಬೀಟ್ (ಧರ್ಮಾಮೃ. ೧೩-೧೭೨) ; ಬಿಡೆ ಕೆಮ್ಮಿ ಕೇಕರಿಸಿ ತೊಪ್ಪನುಗುಳುತ (ಸಾಂಗಪು. ೮-೫೭) ; ಕುವರಿ . . . ತೊಪ್ಪನೆ ಬಿದ್ದಳುರ್ವಿಯಲಿ (ವಾಲ್ಮೀಕ. ೩೫-೫೧) ; ಚೀಲವನ್ನು ತೊಪ್ಪನೆ ಒಂದು ಮೂಲೆಗೆಸೆದ (ಕೂನೆಕ್. ೧೯೭).

**ತೊಪ್ಪತೊಪ್ಪನೆ** (ದ್ವಿರುಕ್ತಿ) : ಅವ್ಯಯಪದಾಂತಲೋಪಕ್ಕೆ–ಕಪ್ಪು ಕಪ್ಪನೆ . . . ತೊಪ್ಪತೊಪ್ಪನೆ, ತಪ್ಪತಪ್ಪನೆ (ಶಮದ. ೧೯೩ ಪ್ರಯೋ) ; ತಪ್ಪತಪ್ಪದೆ ಶರಶರಂಗಳಂ ತೆಗೆದೆಚ್ಚು ತೊಪ್ಪತೊಪ್ಪನೆ ಮೃಗಮೃಗಂಗಳಂ ಕೆಡಹಿದರ್ಜನನದೊಳು (ಕೃಮಿಭಾ. ೨೮-೪೧).

**ತೊಪ್ಪನೆ ತೊಯ್, ತೊಪ್ಪನೆ ತೋ** = ೧. ಸಂಪೂರ್ಣವಾಗಿ ಒದ್ದೆಯಾಗು ; ಪೂರ್ತಿಯಾಗಿ ನೆನೆದು ಹೋಗು : ತೊಪ್ಪನೆ ತೊಯ್ದು ಕಾಮುರಸದಿಂ ಲಲಿತಾಂಗಿಯೊಪ್ಪಿದಳ್ (ಲೀಲಾವ. ೧೩-೧೭); ನಿಪ್ಪೊಸತಪ್ಪ ರತ್ನಚಯವಂ ಪಿಡಿದಾಯ್ದು ಸುಧಾರಸಂಗಳಿಂ ತೊಪ್ಪನೆ ತೊಯ್ದವೊಲ್ ಪೊಳೆವ ಪಲ್ಗಳಂ (ಪಾರಪು. ೨-೫೦) ; ಹರಶರಣಕರುಣಾಮೃತದ ಮಳೆ ಸುರಿಯೆ ತೊಪ್ಪನೆ ತೋದು ತೋದೀಶ್ವರಗಣಾಂಘ್ರಿಜಲದ ಕಡಲೊಳೋಲಾಡಿವೋಲಾಡಿ (ಬಸವಪು. ೭-೨೫) ; ನೀರ ಧಾರೆಗಳಿಂದ ತೊಪ್ಪನೆ ತೋದುದೊಡಲು (ಬಸವಪು. ೧೮-೭೫) ; ೨. ಸಂಪೂರ್ಣವಾಗಿ ನೆನೆಯಿಸು,– ತೋಯಿಸು : ಇಪ್ಪತ್ತು ಕೂರ್ಗಣೆ ಕಣ್ಣೀರ ಮಳೆಯಿಂದ ತೊಪ್ಪನೆ ತೊಯ್ದನು ಖಳನ (ತೋರಹತ. ೩೪-೧೭). [ ತೊಪ್ + – ಅನೆ$_1$ ]

**ತೊಪ್ಪಲ** 'ತೊಪ್ಪಲು' ನೋ.

**ತೊಪ್ಪಲು, ತಪ್ಪಲ, ತಪ್ಪಲ್ಯು, ತೊಪ್ಪಲ, ತೊಪ್ಪಾಲೆ** (ನಾ). ೧. ಮರಗಿಡಗಳ ಎಲೆ, ಚಿಗುರು ಮೊದಲಾದವು ; ಸೊಪ್ಪು : ಹಸಿಯ ತೊಪ್ಪಲನೆ ತಂದು ಆ ದೇವರ ಮಸ್ತಕದ ಮೇಲೊಟ್ಟುವ ಆ ತೊಪ್ಪಲನೆ ತಂದು ಬಿಸಿಮಾಡಿ ಪಶುಪತಿ ಎಂಬ ಜಂಗಮಕ್ಕೆ ನೀಡಿದೊಡೆ (ವಚಸಂ. ೧೯೦-೩೦ ಅಂಬಿಗ) ; ಬಿಸಿಲಲ್ಲಿ ಕಟ್ಟ ಕಗ್ಗಲಿಯ ತೊಪ್ಪಲನು ತಱಿದು ರಸವ ಹಿಂಡಿಕೊಂಡು (ಅಶ್ವಶಾ. ೭೯-೧) ; ಅನ್ನನ ಬಿಟ್ಟು ತೊಪ್ಪಲ ತಿನ್ನುವನ ಕಂಡು ಕೊರಡುಯೆಂಬೆ (ಚಿದಾವ. ೨೩-೯) ; ಉಡುಗಿ ಮೈನಯದ ನೆಯ್ಗೆ ತೊಪ್ಪಲು ; ಹರೆಯ ಚಿಗುರಡಗಿ ನೆತ್ತರದ ನೆರೆಗೆಂಪು ಹಳಸುತಿದೆ ಭರದಲ್ಲಿ (ಅಯ್ಯಾಶ. ೧೨-೩). ೨. ಒಂದು ಬಗೆಯ ಸಸ್ಯ : ಈಶ್ವರೀಬೇರು, ತೊಪ್ಪಲು, ಗೋಪಾಲಪುಟ್ಟತೊಪ್ಪಲು (ಮೃಶಿಗಿ. ೯-೧೫೩) ; ಮರಗಳು : ಹೆಸವ, ಪೆಬ್ಬಲಸು . . . ಜಾಲಿ, ಕರೀಜಾಲಿ, ಗೊಬ್ಬಳಿ, ತೊಪ್ಪಲು, ಬಿಲಪತ್ರೆ (ನಮ್ಮುಸು. ೨೩೭). **ತಪ್ಪಲ**: ೧. ದಪ್ಪಗನಣಾಗನ ಬಲದ ಮಸ್ತಕದ ಮೇಲಪ್ಪಳಿಸಿದ ಬಿಸಿಲ್ಗಿಡಿಗೆ ಕುಪ್ಪಟಿಯಾದುದುರುವೀರುಹ ಕಳಿತಿರ್ದ ತಪ್ಪಲ ತಱಗೆಲೆಯಾಯ್ತು (ವಾಲ್ಮೀಕ. ೧೯-೪೪). 'ಮೊಷ್ಟಿತಪ್ಪಲ' ಪರಾ. **ತಪ್ಪಲ್ಯು**: ೧. ಮೇವಿನ ಸೊಪ್ಪಿಯ ಕಚ್ಚು ಮಾಡಿ ಅದರಲ್ಲಿ ತುರುಬಿ, ತುಂಬಿ, ಗಣಜಲಿ, ಹೆಬ್ಬೇವು ಮೊದಲಾದ ತಪ್ಪಲುಗಳನ್ನು ಚೆಲ್ಲಿ (ಕನ್ನಡಾ. ೧೭೭). **ತೊಪ್ಪಲ್$_1$** : ೧. ತೊಪ್ಪಲದ ಆಚ್ಛಾದನೆಯಿಂದ ಚಪ್ಪರವು ... ಶೋಭಿಸಿತು (ಹಳ್ಳಿಬ. ೪೭); ತಾಯಿಗೆ ಹೇಳಿ ಆಡನ್ನು ಬಿಚ್ಚಿಕೊಂಡು ತೊಪ್ಪಲ ತರಲು ಊರ ಹೊರಗೆ

ನಡೆದನು (ಜಯಂತ. ೩೨). **ತೊಪ್ಪಾಲೆ :** ೨. ಬಳೀಚಾಲಿ, ತೊಪ್ಪಾಲೆ, ಸಾರಾಯಿಬೇಲ, ತುಂಬೆಮರ (ವೃಕ್ಷಗಿ. ೧-೧೬). 'ಸೊಪ್ಪು₃' ಪರಾ.

**ತೊಪ್ಪಲು ಪಲ್ಲೆ** = ಸೊಪ್ಪಿನ ಪಲ್ಯ : ಸಾಧ್ಯವಿದ್ದಷ್ಟು ಮಟ್ಟಿಗೆ ತೊಪ್ಪಲು ಪಲ್ಲೆಯನ್ನೂ ಚಪ್ಪರಬದನೇಕಾಯಿಯನ್ನೂ ತಿನ್ನಲು ಶಿವರಾಮ ನಿಗೆ ಸೂಚನೆ ಕೊಟ್ಟರು (ಹಲುನಿ. ೨೮).

[ ದೇ.॥ ತಮಿ. ಚುಪ್ಪಲ್ = ಒಣಗಿದ ಕಡಿ ; ತುಳು. ತಪ್ಪು ; ಕೊಡ. ತೊಪ್ಪಿ, ಚಪ್ಪಲ ]

**ತೊಪ್ಪಾಲೆ** 'ತೊಪ್ಪಲು' ನೋ.

**ತೊಪ್ಪಿಗೆ** 'ಟೋಪಿ' ನೋ.

**ತೊಪ್ಪು** 'ತೊಪ್' ನೋ.

**ತೊಪ್ಪೆ₁** (ನಾ). ಬೊಜ್ಜು. 'ತೊಪ್ಪೆಮೈ' ಪರಾ.

[ ದೇ.॥ ತಮಿ. ತೊಪ್ಪೈ ]

**ತೊಪ್ಪೆ₂** (ನಾ). ಹಸಿಯಾದ ಸಗಣಿಯ ಮುದ್ದೆ : ಅಪ್ಪ ಉಳ್ಳನ್ನಕ್ಕ ತೊಪ್ಪೆ ಕಿಚ್ಚಿಗೊಳಗಪ್ಪುದೆ ಅಪ್ಪುವಾಜಿ ಕಿಚ್ಚು ಮುಟ್ಟಿದ ಮತ್ತ ತೊಪ್ಪೆಯೆಂಬ ನಾಮ ಎತ್ತ ಹೋಯಿತ್ತು (ಮೋದೂಳ. ೯೬೭-೫೮) ; ತೊಪ್ಪೆ ಮೇಲೆ ಹಜ್ಜೆ ಇಟ್ಟು ಮುಖಕ್ಕೆ ಸಿಡಿಸಿಕೊಂಡು, ಇದನ್ನ ಗ್ರಹಚಾರಾಂದರೆ ನಾವು ಮನುಷ್ಯರೇ ! (ಉಮಾಶಿ. ೧೨೪) ; ತೊಪ್ಪೆ ಬರುವುದೇ ಹಬ್ಬಿಗೆ ? (ಗಾದೆ).

**ತೊಪ್ಪೆ ತಟ್ಟು** = ಸಗಣಿಮುದ್ದೆಯನ್ನು ತಟ್ಟು ; ಬೆರಣಿ ತಟ್ಟು : ತೊಪ್ಪೆ ತಟ್ಟಬೇಡವ, ರಾಗಿ ಮಾಡಬೇಡವ . . . ಹೊಟ್ಟೆಗಿಲ್ಲದೆ ಇದೆಲ್ಲಾ ಮಾಡಾಕಾದೀತಾ (ಮುಸುಗ. ೧೫೦). **ತೊಪ್ಪೆ ಹಾಕು** = (ಹಸು, ಎಮ್ಮೆ ಮೊದಲಾದುವು) ಸಗಣಿ ಹಾಕು : ರಸ್ತೆಯ ಮಧ್ಯದಲ್ಲಿ ಹಸು ತೊಪ್ಪೆ ಹಾಕಿದೆ (ಊಂ).

**ತೊಪ್ಪೆ₃** (ನಾ). ತೊಗಟೆ ; ಚಕ್ಕೆ : ಆ ಮರನನೇಱ . . . ಕೊಂಬ ಕಡಿವುತ್ತಿರಲಾಗಿ ಒಂದು ಹೊಯಿಲಿಗೆ ಅದಱಂಗದ ತೊಪ್ಪೆ ಹಱಿದು (ಸರ್ವಚ. ೦೦೫-೫೬೬) ; ಇಸುಬಿನ ಹುಣ್ಣಿಗೆ :—ಹುಳಿಸೊಡಲಿಯ ತೊಪ್ಪೆಯಂ ನಿಂಬೆಯ ಹುಳಿಯಲ್ಲಿ ಅರೆದು ಪೂಸೆ ಮಾಣ್ಗುಂ (ವಿಷ್ಣುವಿ. ೭೫) ; ಇಂಗಳದ ತೊಪ್ಪೆಯನು ಹಿಟ್ಟುಮಾಡಿ (ಅಶ್ವಚಿ. ೯೮-೩).

**ತೊಪ್ಪೆಮೈ** (ನಾ). ಬೊಜ್ಜು ಬೆಳೆದ ಶರೀರ ; ನಿಸ್ಸಾರವಾದ ದಪ್ಪ ದೇಹ : ಈ ಪ್ರಕಾರದಲ್ಲಿ ಉದಯಕಾಲದಲ್ಲಿ ಸಂಚಾರಮಾಡುವುದು ಹೀಗೆ ಮಾಡಿದಲ್ಲಿ ಶರೀರವು ಲಘುವಾಗಿರುವುದು . . . ತಾಮಸವಾದ ತೊಪ್ಪೆಮೈ ಹೋಗುವುದು (ಸಕವೈ. ೨೯).

[ ತೊಪ್ಪೆ₁ + ಮೈ (<ಮೆಯ್) ]

**ತೊಬಟೆ** 'ತೊಗಟು' ನೋ.

**ತೊಬ್ಬು, ತುಬ್ಬು₂** (ಕ್ರಿ). (ಊಳಿಗದ) ಕೆಲಸಮಾಡು; ದುಡಿ: ಸೀಲವಂತ ರೆಲ್ಲರೂ ಮಹಾಲಕ್ಷ್ಮಿಯ ಮನೆಮನೆಯ ಎತ್ತಾಗಿ ಉತ್ತುತೊತ್ತಾಗಿ ತೊಬ್ಬಿ ಕತ್ತೆಯಾಗಿ ಹೊತ್ತು ಸಾವರೆಲ್ಲರೂ ಸದ್ಭಕ್ತರೆ (ಜಲೀಕ್ಕ. ೪೦). **ತುಬ್ಬು₂** : ಹೊಸ್ತು ಮೂಡಿ ಮುಳುಗುವನ್ನೆವರ ತೊತ್ತುಗೆಲಸವನೆ ತುಬ್ಬಿ ಬೆಂದೊಡಲ ಬೇಗೆಯವನೇತಱಿದಿ ತಂಬಿಸುವೆಂ (ಸಮ್ಯಕ್ತ್ವ. ೫-೨೨).

[ ? ]

**ತೊಮ್ಮೈ₁** (ನಾ). ಒಂಬತ್ತು ಸಲ ; ಒಂಬತ್ತು ಬಾರಿ : ತೊಂಬತ್ತು, ಒಂಬತ್ತುಪತ್ತು, ತೊಮ್ಮೈ, ತೊಂಬರ್ (ಶಬ್ದಾನು. ೩೬೦ ಪ್ರಯೋ); ತೊಮ್ಮೈ, ನವವಾರಾನ್ (ಶಬ್ದಾನು. ೩೬೦ ವ್ಯಾಖ್ಯಾ). [ <ಒಂಬತ್ತು + – ಮೈ₂ ]

**ತೊಮ್ಮೈ₂** 'ತೊಂಬೆ₁' ನೋ.

**ತೊಮ್ಮೈ₃** (ನಾ). (?) : ಬಾಗಿಲ ಗದೆ ತೊಂಮೆ ಉಪಾಧ್ಯಯನ ಗದ್ದೆ (ಸೌಇಎ. ೧೯೩೦, ಉಡುಪಿ. ೫೭೫-೨೨ : ?). [ ? ]

**ತೊಮ್ಮೈವಡೆ** (ಕ್ರಿ). ಅಧಿಕಗೊಳ್ಳು ; ಆಧಿಕ್ಯಹೊಂದು : ತಿಂಪು ತೊಮ್ಮೈ ವಡೆಯೆ ಗತಿ ಸಂಗತಿವಡೆಯೆ (ಶಾಂತೀಶ್ವ. ೧೬-೭೭ ವ).

[ ತೊಮ್ಮೈ₂ (< ತೊಂಬೆ₁) + ಪಡೆ₁ ]

**ತೊಯ್** 'ತೋ' ನೋ.

**ತೊಯಿ** 'ತೊವ್ವೆ' ನೋ.

**ತೊಯಿಸು** 'ತೋಯಿಸು' ನೋ.

**ತೊಯೆ** 'ತೊವ್ವೆ' ನೋ.

**ತೊಯ್ಪು** (ನಾ). ಹಸಿಯಾಗಿರುವಿಕೆ ; ತೇವ ; ಆರ್ದ್ರತೆ : ತೊಯ್ಪುಂ, ತೊಯ್ಪುಂಗಳ್ ; ಕಾಯ್ಪುಂ, ಕಾಯ್ಪುಂಗಳ್ (ಶಬ್ದಾನು. ೩೩೩ ಪ್ರಯೋ).

[ ತೊಯ್ (< ತೋ) + – ಪ₂ ]

**ತೊಯ್ಯಿಸು** 'ತೋಯಿಸು' ನೋ.

**ತೊಯ್ಯು** 'ತೋ' ನೋ.

**ತೊಯ್ಸು** 'ತೋಯಿಸು' ನೋ.

**ತೊರಂಗಲು** (ನಾ). ಒಂದು ಬಗೆಯ ಮರ ; ಹೊಂಗೆ ; ಹುಲಿಗಲು : ತೊರಂಗಲ ಎಣ್ಣೆ ಹಾಕಿದ್ದ ಹಣತೆಯ ಬತ್ತಿಯನ್ನು ಹೊತ್ತಿಸಿ ದೀಪ ಮಾಡಿದನು (ಮಳೆಮ. ೨೦೯). [ ? ]

**ತೊರಕೆ** (ನಾ). (ಕರಾ) ಒಂದು ಬಗೆಯ ಮೀನು. [ ←ತುಳು. ತೊರಕೆ]

**ತೊರಕೆಬಲೆ** (ನಾ). (ಕರಾ) ಒಂದು ಬಗೆಯ ಬಲೆ ; ತೊರಕೆಮೀನು ಹಿಡಿಯುವ ದೊಡ್ಡ ಕಣ್ಣಿನ ಬಲೆ. [ ತೊರಕೆ + ಬಲೆ₁ ]

**ತೊರಟೆ** (ನಾ). ಗಡ್ಡೆ ; ಮುದ್ದೆ ; ಗರಣೆ : ಕೇಕರಿಸಿ ಉಗುಳಿದರೆ ತೊರಟೆ ಯಾಗಿ ರಕ್ತ ಬಾಯಿಂದ ಬೀಳುವುದು (ವೈದ್ಯಸಾ. I, ೮೩). 'ಕೊರಟೆ' ಪರಾ. [ ? ]

**ತೊರತಿ** 'ತೋರತ್ತಿ' ನೋ.

**ತೊರತೆ** (ನಾ). ಜಿನುಗುವಿಕೆ; ಒಸರುವಿಕೆ; ಒರತೆ: ಮಳಮೂತ್ರಾಂಗಮನೇ ತನು ಕೊಳೆ ನೆತ್ತರ ಬಱಿಯ ತೊರತೆ[ಪಾಠಾಂ. ಬರಯ ತೊಱತೆ]ಯೋನಿಯ ತಾನೆಂದೆಳಸದೆ ಲಲನಾಸಂಗಮನುಜ್ಜಿದರ್ಪಂ ಬ್ರಹ್ಮಚಾರಿ ವಿಜಿತವಿರಾಜಂ (ಶಾಂತೀಶ್ವ. ೧೩-೭೩). [ ತೊರೆ₂ + – ತೆ₂ ]

**ತೊರತ್ತಿ** 'ತೋರತ್ತಿ' ನೋ.

**ತೊರನಿ** (ನಾ). ಒಂದು ಬಗೆಯ ಸಸ್ಯ : (ವೃಕ್ಷಗಿ. ೬೮-೧೬೦೬).

[ ? ]

**ತೊರಮರ** (ನಾ). ಒಂದು ಸ್ಥಳದ ಹೆಸರು : ತೊರಮರವಿಷಯೋ ಚಿತ್ರಸೇದುಗ್ರಾಮಮಧಿವಸತಿ (ಇಇ. XIX, ೧೫೦-೧೯ ; 692).

[ ? ]

**ತೊರಲೆ** (ನಾ). ಒಂದು ಬಗೆಯ ಮರ: ಸರಲೆಯಿಂ ಹಾಲೆಯಿಂ ಹೀಲೆಯಿಂ ನೀಲಿಯಿಂ ತೊರಲೆಯಿಂ ಹೊಂಗೆಯಿಂ . . . ಕಾಡೆಸೆದುದು (ಸಂದಿಮಾ. ೧೩-೧೨). [ ? ]

**ತೊರವಿ** 'ತೊಱವಿ' ನೋ.

**ತೊರಸು** 'ತೊಱಿಯಿಸು' ನೋ.

**ತೊರಳಿ** 'ತೊರಳೆ' ನೋ.

**ತೊರಳೆ, ತೊರಳಿ, ತೊಳಲೆ, ತೊಳ್ಳೆ** (ನಾ). ಗುಲ್ಮ ; ಪ್ಲೀಹ : ಸರಳುರ್ಚೆ ನರಳುತ್ತ ತೊರಳೆಯಡಸಲು ಮೂಗಿನರಳಿಸೆಟ್ಟಂಬ ಹೊತ್ತು ರುಳ್ವ ಕಂಬನಿಯಿಂದ ತರಳೆಚಿತ್ತದ ಹಂದಿ ಮರಳಿ ಕಾನನಕೆಯ್ದಿತು (ಹಜಕಾ. ೭-೩೦) ; ಕೊಳ್ಳಿಗಿಡಿ ತಾಗಲ್ಕೆವೊಯ್ದು ಬೀಟ್ಟ ಬೆಳ್ಳಿರಳೆಗಳಿಂ ಉರಿಯಟ್ಟ ಪರಿಪರಿದು ತೊರಳೆವಾಯ್ದುರುಳ್ವ ಮರೆವಿಂಡುಗಳಿಂದ . . . ಸರ್ವಾಂಗವಂ ಕರ್ಬೊಗೆ ಸುತ್ತಿ ಕೊರ್ಬಿದೊಡಲಂ ಬಿಡುವ ಪರ್ಬಾವುಗಳಿಂದ ಗುರ್ಬುವೆತ್ತುವು (ನಳಚಂ. ೫೪೮ ವ) ; ತೊರಳೆಯ ತೊಂಗಲಿನೊಳಂದೆಸವ

ಚಕ್ರುವ ನೋಡಿದನು ದೈತ್ಯಾರಿ ಕೋಪದಲಿ (ಕುಮಾ.ಭಾ. ೬-೩೨) ; ಪೊಸ ತೊರಳೆಗಳ ದಂಡೆದೊಂಡಲ್ಗಳಿಂ ಮುಡಿದುಮಲ್ಲಗಳ ತೊಡಂಗಳನೆ ತೊಟ್ಟು (ಚಂಪು. ೩೨-೨೦) ; ತೊರಳೆ ತೊಂಗಳೆ ಮಜ್ಜೆ ಮಾಂಸಗಳನು ಸವಿದು (ಕಂಸವಿ. ೧೫-೫೩) ; ಕಡಿದು ಬಡಿದು ಕುಂದರಿಯೊಟ್ಟುವೆನು . . . ಬಂದವರೊಡಲ ತೊರಳೆ ಮಾಂಸಂಗಳಂ (ಶ್ರೀರಾಮಾ. ೬೭೫-೩೮೭). 'ನಿಡುದೊರಳೆ' ಪರಾ. ತೊರಳೆ: ಹೊಂಡೆಯದ ತೊರಳೆಗಳ ಕೊರಳಿನ ತುಂಡುಗಳ ಕಾಲಾಂತಕನ ಹೆಚ್ಚಳಸು ಹುಲುಸಾಯ್ತು (ಕುಮಾ.ಭಾ. ೯-೧೩). ತೊಳಲೆ: ಕಣೆವೋದ ಕಣೆಕಾಲ್ಗಳುಂ ಕೊಬಿದು ಬೀಟ್ಟ ತೊ[ಹಾಕಾಂ. ಕೊ] ಳಲೆಗಳುಂ ಬಟ್ಟಲು ಕಟಲ್ದ ಮೊಣಕಾಲ್ಗಳುಂ . . ಮಹಾಭಯಂ ಕಾರಮಾಗೆ (ಮಹಾನೀ. ೧೨-೩೮ ವ). ತೊಳ್ಳೆ : ನನಗೇಕೋ ತೊಳ್ಳೆ ನಡುಗುತಿದೆ (ಚಂದ್ರಸ. ೨೮-೨೦) ; ನಾನೂ ಗಟ್ಟಿಯಾಗಿ ಕೂರಾಕೆ ಪರ್ಯತ್ನ ಮಾಡಿದೆ, ಆಗಲಿಲ್ಲ, ತೊಳ್ಳೆ ನಡುಗಾಕೆ ಸುರುವಾಯ್ತು (ಮಲೆಮು. ೩೦೩). [ ದೇ.॥ ತುಳು. ತೊಳ್ಳೆ = ಬೊಜ್ಜು ಹೊಟ್ಟೆ ]

**ತೊರಿಗ** (ನಾ). ಒಂದು ಬಗೆಯ ಕೀಟ: ದುಂಬಿ, ಹಸುರುದುಂಬಿ, ತುಡುವೆ, ತೊರಿಗ (ನಮ್ಮಸು. ೨೮೧). [ ? ]

**ತೊರೆ**$_1$ 'ತೊಱೆ$_1$' ನೋ.

**ತೊರೆ**$_2$ (ಕ್ರಿ). ೧. ಮೊಲೆಯಲ್ಲಿ ಹಾಲು ತುಂಬಿಕೊಳ್ಳು,_ಕೂಡಿಕೊಳ್ಳು: ಕಳಮಾಕ್ಷತಚೂರ್ಣಂ . . . ಏರ್ಮೆಯ ಪಾಲಿಂ ಕಲಸಿ ಕುಡಿಯಿಸುಗೆ ತೊರೆಗುಂ ಮೊಲೆಗಳ್ ಬಾಣ(ಳ)ಂತಿಗೆಚ್ಚು ಪಾಲ್ ಪಾಯ್ವನೆಗಂ (ಲೋಕೋಪ. ೯-೧೮೨). ೨. ಮೊಲೆಯಿಂದ ಹಾಲು ಸ್ರವಿಸು,-ಸುರಿಸು: "ತೊರೆ–ಸ್ತನ್ಯೇ (ಎದೆಹಾಲು ಸ್ರವಿಸು)"(ಶಮದ); ತೊರೆದುದು ಕಾಮಧೇನು ತುಱುಗಲ್ಗೊನೆವಣ್ಣಾದುದು ಕಲ್ಪವೃಕ್ಷಂ (ಹಂಪಭಾ. ೧೪-೨೦); ತೊರೆದ ಕುಚಕಲಶದಿಂದಂಬಿಱಿವಿಟ್ಟೊಗೆತಂದ ಪಾಲ ಧಾರೆಯಿಂ (ಆಪು. ೫-೫೭); ಬಱಿಯ ಕೈಯಲ್ಲಿ ಮಕ್ಕಳಿದ್ದಡೆ ತೊರೆವುದೆ ಮೊಲೆ (ವೋಶಿವಾ. ೨೫-೧೦೦) ; ಕುಮಾರನನಜಿತಸೇನಮಹಾದೇವಿ ನಲ್ಮೆರಕೆಯಿಂ ಪರಸಿ ಮೋಹರಸಪರವಶತೆಯಿಂ ತೊರೆದ ಮೊಲೆಗಲಕ್ಕೆ ತೆಗೆದು (ಚಂದ್ರಪು. ೬-೯೦ ವ); ತೊರೆದೆಚ್ಚು ಪಾಯ್ವ ಮೊಲೆವಾಲಿಂ ಮಗನಂ ಮಜ್ಜನಂಬುಗಿಸಿ (ಅರ್ಥನೀ. ೮-೨೦ ವ) ; ಹೆತ್ತ ತಾಯ ಮೊಲೆ ತೊರೆಯೆ (ನಂದಿರ. ೮-೩೭); ಧರಣಿಯೊಳು ಬಸವಂಗೆ ಸಲೆ ಮೊಲೆ ತೊ[ಹಾಕಾಂ. ಸೊ]ರೆದು ಕಱಿವಂತಾಯ್ತು (ಬಸಪು. ೫೭-೮೩) ; ದೊರೆಯಬಹುದೆ . . . ಎರೆದು, ಹೊಟ್ಟೆ ಎದೆಹಾಲು ತೊರೆವ ಪಾದೋದಕ ಪ್ರಸಾದ ? (ನಲಮು. ೩೭-೨). ೩. ಒಸರು ; ಜಿನುಗಂ; ತೊಟ್ಟಿಕ್ಕು: ಕಾಡ ಪಂದಿಗಳ ಬಲ್ಮೆಣದಿಂ ಪೊಲಸಂಟಿನಾರ್ವ ಜೇವಡೆಗಳ ಪುಣ್ಣಳಿಂ ತೊರೆವ ನೆತ್ತರ ಕೆಯ್ ನಡುಗಲ್ಕೆ ನೀಡಿ ಕೀಳಿಡೆಯಿಡೆ ಗಂಟಲಂ ಮುಱಿದನೊರ್ವಿಯ ನಿರ್ಘೃಣನೆನ್ನ ತಂದೆಯಂ (ಕಾದಂಪೂ. ೧೮೪) ; ಹಿಂಗದೆ ನೋಳ್ಪವರ ಕಂಗಳ್ ತೊರೆಯೆ (ನಂದಿರ. ೮-೩೭) ; ತೊರೆದುದು ಚಂದ್ರಕಾಂತಮಣಿ . . . ನೆಟ್ಟನೊಗೆಯಲ್ ಬಗೆದಂದೊಡೆ ಚಂದ್ರಮಂಡಲಂ (ಅನಂಪು. ೬-೭೭); ತೊರೆದುದು ಚಂದ್ರಕಾಂತಂ ಎಣೆವಕ್ಕಿಗಳಪ್ಪ ಸಡಿಲ್ದುವು (ಸೂಕ್ತಿಸು. ೮-೨೦೧) ; ತೊರೆದು ತೊಟ್ಟಿಡುವ ಪ್ರವಾಳಾಧರವ ಚುಂಬಿಸಿದ (ಮೋಹತ. ೧೮-೯೦). ೪. ಜಿನುಂಗಿಸು ; ಒಸರುವಂತೆ ಮಾಡು : ತೊರೆಯುತ ಮೊರೆಯುತ ಸುರಿಯುತ ರಕ್ತವ . . . ಅರಿಪೆಣಗಳು ಲೆಕ್ಕವಿಲ್ಲದೆ ನೋಟಕಚ್ಚರಿಯ ಪುಟ್ಟಿಸುತೊಪ್ಪಿದುವು (ಕಂಸವಿ. ೧೫-೭೦). ೫. ಹರಿ; ಪ್ರವಹಿಸು: ಬೆಟ್ಟ ಸುರಿವುದು ಕೊಳ್ಳಕ್ಕೆ, ಕೊಳ್ಳ ತೊರೆವುದು ನದಿಗೆ (ಹೃದಸ. ೫೮-೧೨). ೬. ವ್ಯಾಪಿಸು ; ಹರಡು : ಸರಸಿಜಾಕ್ಷಿಗೆ ತತ್ಸುರತಾಂತ್ಯದ ಕೆಂಪು ತೊರೆದ ಕಣ್ಗಡೆಗಳೊಪ್ಪಿದವು (ಶ್ರೀಪಾಲ. ೯-೩೮). ೭. ಪುಷ್ಟವಾಗು ; ದಪ್ಪವಾಗು : ಕಿಱುಗಾಯ್ಗಳಿಂ ತೊರೆದ ದೋರೆಗಳಿಂ ತನಿವಣ್ಣ ಪಂಕ್ತಿಯಿಂದಂ . . . ಚಪ್ಪರಿಪ ರಾಜಶುಕಾಳಿಯಿನಾಮ್ರುಮೊಪ್ಪುಗುಂ (ಗಿರಿಕ. ೨-೩೩). ೮. ಉಂಟಾಗು: ಪಾಂಡವಕ್ಕಿಯನರವಿಂದವಿಲೋಚನೆ ಕರವಿನಿಕ್ಷಿಸಿ ತೊರೆದ ಮಱವೆಯಿಂದವೆ ಮಣಿಗದ್ದುಗೆಯೊಳ್ ಮೆಯ್ಯಿಕ್ಕಿದಳು (ಅಭಿ ಕಾ. ೧೨-೨೫). 'ಸೊರೆ$_1$' ಪರಾ.

[ ದೇ.॥ ತಮಿ. ಚುರ ; ಮಲ ಚುರ, ಚೊರಿಯುಂ , ತೆಲು. ತೊರಗು, ತೊರುಗು ]

**ತೊರೆ**$_3$ 'ತೊಱೆ$_2$' ನೋ.

**ತೊರೆಇಂಗುಳ** 'ತೊಱೆಯಿಂಗುಳ' ನೋ.

**ತೊರೆಕರೆ** 'ತೊಱೆಗರೆ$_1$' ನೋ.

**ತೊರೆಗರೆ** (ಕ್ರಿ). (ಮೊಲೆ ತುಂಬಿ) ಹಾಲನ್ನು ಸುರಿಸು : ಕರುವಿನ ಕರೆ ಕೇಳಿ ತೊರೆಗರೆಯುದ ಹಸು ಇರಬಹುದೇನಲ್ಲಿ (ಸೂರ್ಯಪಾ. ೮೨-೧).

[ ತೊರೆ$_2$ + ಕರೆ$_2$ (<ಕಱೆ$_1$) ]

**ತೊರೆಗರೆಯಿಸು** (ಕ್ರಿ). ಹಾಲನ್ನು ಸುರಿಸುವಂತೆ ಮಾಡು : ಬಂಜೆಗೆ ತೊರೆಗರೆಯಿಸಿತ್ತು ಈ ಮುಖರಸ (ಉದ್ಭಾಕಿ. ೧೦೭-೯).

[ ತೊರೆಗರೆ + – ಇಸು$_3$ ]

**ತೊರೆದವನ** 'ತೊಱೆದವನ' ನೋ.

**ತೊರೆಬಿಡಿಸು** (ಕ್ರಿ). = ತೊರೆಗರೆಯಿಸು : ರಾಧಾಕಾಕೂ ಅವರೇ ಕಚ್ಚಲಿಗೆ ಕೈಹಾಕಿ ತೊರೆಬಿಡಿಸಬೇಕೆಂದಿಲ್ಲ (ರೀಪಹ. II, ೩೭೦).

[ ತೊರೆಬಿಡು + – ಇಸು$_3$ ]

**ತೊರೆಬಿಡು** (ಕ್ರಿ). ೧. = ತೊರೆಗರೆ : ಕಾಮಧೇನು ತೊರೆಬಿಟ್ಟಂತೆ ಅಂದು ಧರ್ಮಾಮೃತವನ್ನು ಹರಿಸಿದರು (ದಾನಚಿಂ. ೧೦೮). ೨. ಜಿನುಗು : ಒಸರು: ಮೃಗಶಿರದ ಮಂಚಿಕೆ ಚಂದಿರ ಬರುವಾಗ ಚಂದ್ರಿಕೆಯು ವಾತ್ಸಲ್ಯ ತೊರೆಬಿಟ್ಟಿತ್ತು (ಸಹೀಗೀ. ೨೨-೩೭೨) ; ಆತ್ಮಾನುಬಂಧ ಆನಂದದಿಂದ ತೊರೆಬಿಟ್ಟು ತುಟಿಗೆ ಚಿಮ್ಮಿ (ಮುಳ್ಕಂ. ೧೭-೫). 'ಸೊರುಬಿಡು' ಪರಾ. [ ತೊರೆ$_2$ + ಬಿಡು$_1$ ]

**ತೊರೆಮಾವು** 'ತೊಱೆಮಾವು' ನೋ.

**ತೊರೆಮೆಂತೆ** (ನಾ). ಹೊಳೆಯ ತಡಿಯಲ್ಲಿ ಬೆಳೆಯುವ ಒಂದು ಬಗೆಯ ಸಸ್ಯ : (೩). [ ತೊರೆ$_3$ (<ತೊಱೆ$_2$) + ಮೆಂತೆ (<ಮೆಂತೆಯ) ]

**ತೊರೆಯ** 'ತೊಱೆಯ' ನೋ.

**ತೊರೆಯಿಟುಪು** (ಕ್ರಿ). ಹಾಲು ಸುರಿಸು ; ತೊರೆಗರೆ ; ಸೊರುಬಿಡಂ : ಆ ತುಱು . . . ಮೊಲೆಯುಣವಂದ ಕಱುವಿನ ಮೆಯ್ಗಂಪಂ ಸವಿದು ತೊರೆಯಿಟುಪಲೊಡಂ (ಚೆಳಪಂ. ೭೮-೧೪).

[ ತೊರೆ$_2$ + ಇಟುಪು$_0$ (<ಇಟಿಪು) ]

**ತೊರೆಯೊಳ್ಕು** (ಕ್ರಿ). ನದಿಯಂತೆ ಹರಿ,-ಪ್ರವಹಿಸು : ಅಶ್ರು...ಅತ್ಯೀಕ್ಷ್ಣ ಸೋರ್ವ ಅನವರತ ರಸಧಾರೆಯೋಲ್, ತೊರೆಯೊಳ್ಕಿದುದು ಹನುಮ ನಕ್ಷಿಯ ಕೃತಜ್ಞತಾಶತಪತ್ರದಿಂ (ಶ್ರೀರಾಮಾ. ೮೭೮-೧೧೨).

[ ತೊರೆ$_3$ (<ತೊಱೆ$_2$) + ಒಳ್ಕು$_0$ (<ಒಟ್ಕು$_1$) ]

**ತೊರೆವಳ್ಳಿ** 'ತೊಱೆವಳಿ' ನೋ.

**ತೊರೆಹ** 'ತೊಱೆಹ' ನೋ.

**ತೊರೆಹಾಲು** (ನಾ). (ಮೊಲೆಯಿಂದ) ಹೊರಸೂಸುವ ಹಾಲು : ಕಂಬನಿ, ತೊರೆಹಾಲು, ಬೆವರು, ರಕ್ತ, ವೀರ್ಯ ಮೊದಲಾದ ರಸಭೇದಗಳು ಬೇರೊಂದು ರಸನೆಯ ಪ್ರವಾಹಗಳಾಗಿವೆ (ಸಾಹಿವಿ. ೧೧).

[ ತೊರೆ$_2$ + ಹಾಲು$_1$ (<ಪಾಲ್$_1$) ]

**ತೊರ್ತು** 'ತೊಱ್ತು' ನೋ.

**ತೊರ್ತುವೆಸ** 'ತೊಱ್ತುವೆಸ' ನೋ.

**ತೊರ್ತುವೆಸಗೆಯ್** 'ತೊಱ್ತುವೆಸಗೆಯ್' ನೋ.

**ತೊಲ** 'ತೊಲ್ಚೆ$_3$' ನೋ.

△ **ತೊಲಂಗಿಸು** 'ತೊಲಗಿಸಂ' ನೋ.

△ **ತೊಲಂಗು** 'ತೊಲಗು$_1$' ನೋ.

**ತೊಲಗಿಕೆ** (ನಾ). ೧. ಅಗಲುವಿಕೆ ; ದೂರವಾಗುವುದು ; ವಿಯೋಗ ; ವಿರಹ : ಆರಯೆ ರತಿಯಿಂದಂ ಶೃಂಗಾರಂ ಸ್ತ್ರೀಪುಂಸಯೋಗದಿಂ ತೊಲಗಿಕೆಯಿಂ ಸಾರಂ ಸಂಭೋಗಂ ಶೃಂಗಾರಂ ಸವಿಯೆನಿಪ ವಿಪ್ರಲಂಭ ಸಮಾಖ್ಯಂ (ರಸರ. ೧-೧೪ ಸೂತ್ರ). ೨. ನಾಶ ; ಅಳಿಯುವಿಕೆ : "ಧ್ವಂಸಃ, ಧ್ವಂಸಃ, ಧ್ವಂಸಾ, ಧ್ವಂಸನಂ, ಧ್ವಂಸನೀಯಂ, ಧ್ವಸ್ತಿಃ ಈ ೬ ತೊಲಗಿಕೆ" (ಶಾಶಕ್ಕ. ೧೬೩). [ತೊಲಗು$_1$ + – ಇಕೆ ]

**ತೊಲಗಿಸು, ತೊಲಂಗಿಸು** (ಕ್ರಿ). ೧. ದೂರ ಸರಿಸು; ಅಗಲಿಸು ; ದೂರ ಮಾಡು : ಪಲಕಾಲಂ ತಪದಿಂದಂ ಚಲದಿಂ ಸಂದಿರ್ದ ನಿನ್ನ ನಚ್ಚಿನ ಮುನಿಯಂ ತೊಲಗಿಸಿದೆನೊಂದು ವಚನದಿಂ (ಧರ್ಮಾಮೃ. ೩-೩೩೭); ನಿದ್ದೆಯಂ ತೊಲಗಿಸಿದಂಚೆವೆಣ್ಣೆಸೆವ ಗಾಂದವದಿಂ ದನಿದೊಂಗಲೊಳ್ ತಡಂಗಲಿಸಿ (ಚಂದ್ರಪ್ರ. ೮-೯೭) ; ಒಯ್ಯನೆ ನುಡಿಗಲಿಯಲೆಂದು ಬಂದ ಪುರುಳಗಳನಾಳಿಯರಿಂದೆ ತೊ ಲ ಗಿ ಸು ತ್ತೆ (ಚಬಪು. ೭-೧೪). ೨. ಇಲ್ಲದಂತೆ ಮಾಡು ; ನಿವಾರಿಸು ; ಕಳೆ ; ಪರಿಹರಿಸು : ಜಡಧಿ ಸಂಗತಿಯಿಂ ಜಡಬುದ್ಧಿ ಬುದ್ಧಿಯಂ ತೊಲಗಿಸಿತಕ್ಕುಂ (ಪಂಪಭಾ. ೯-೪೪); ಮನಕ್ಕೆ ಸಂಕೆಯನ್ನೊಲಗಿಸಿದಂ (ಶಾಸಕ. XI-I, ೪೦-೩೭; 969); ಕರದೀಪಿಕಾನಿಕಾಯಂ ತರದಿಂದಂ ಮುಂದೆ ತೊಲಗಿಸುತ್ತಿರೆ ಕಕ್ಷ್ಯಾಂತರ ತಿಮಿರಮಂ (ಕಾದಂಪೂ. ೩೯೩) ; ದಿನಕರನ ಹಯಂ ಗಗನಾಧ್ವಖೇದಮಂ ಪಟಯಿಗೆಗಳ ತಣ್ಣಲರ ತೀಟದಿಂ ತೊಲಗಿಸುಗುಂ (ಪಂಚಾಮೃ. ೧-೧೦೭) ; ಇಳೆಯೊಳೆಸೆವ ಭವ್ಯಜನಗಳ ಚಿತ್ತದ ಮಳವನಿರದೆ ತೊಲಗಿಸುವಾ . . . ಶ್ರುತಕೀರಿತಿಗಳಿಗೊಲಿದಾನೆಱಗುವೆನು (ಅಂಜಚ. ೧-೩೪); ಗಾರುಡಮಂತ್ರ ಸಂಸ್ಕಾರವಿವಶದಿಂದಾ ... ವಿಷ ತೊಲಗಿಸುವುದಾತಂಗೆ (ಬಸವು. ೪೭-೩೦); ಭಕ್ತರ್ಗೆ ಮನ್ಮನದ ಚಲನಮಂ ತೊಲಗಿಸಿ ಶಿವಾಂಘ್ರಿಯೊಳ್ ಬೆಚ್ಚಂತೆ ನಿಲಿಸುಗೆಂದಾಂ ವಂದಿಪೆಂ (ಪದ್ಮರಾ. ೧-೧೦); ಪಗೆಯಾದ ಪಗಲಂ ತೊಲಗಿ ಪಂಧಕಾರಮೆನಲು (ಜೈಮಿಭಾ. ೩೮-೪೦) ; ಒಳವಿರ್ದ ವಿಟರ ಸೋಕಿದ ಕಾಮುಗ್ರಹವನು ತೊಲಗಿಸುತಿಹರಂಗನೆಯರು (ಶಂಪವಿ. ೨-೧೦೦). ; ನಿಮ್ಮೊಳು ಭೇದವ ಗೈಯುವ ಬುದ್ಧಿಯ ತೊಲಗಿಸಿರಿ (ಪನಲ್ಲ. ೧೦೮). ೩. ಎಸೆ ; ತ್ಯಜಿಸು ; ಕಳಚು ; ತೆಗೆದಂಹಾಕು : ತ್ರಿಸಾಕ್ಷಿಕನಾಗಿ ವಸ್ತ್ರಾಭರಣಮಾಲ್ಯಾದಿಗಳಂ ಮೆಯ್ಯಿಂ ತೊಲಗಿಸಿ ಪೂರ್ವಾಭಿಮುಖನುಂ ನಿಬಿಡಬದ್ಧಪಲ್ಯಂಕಾಸನನುಮಾಗಿ (ಆದಿಪು. ೯-೭೭ ವ); ಬಾಹ್ಯಾಭ್ಯಂತರ ಪರಿಗ್ರಹಂಗಳಂ ತೊಱೆದು ವಸ್ತ್ರಾಭರಣಾದಿಗಳಂ ತೊಲಗಿಸಿ ... ದೀಕ್ಷೆಯಂ ಕೈಕೊಂಡಂ (ಜಾವುಂಪು. ೩೭); ನೆಲಸಿರ್ದ ವಾಸ್ತುಪುರುಷನ ತಲೆ ಹೃದಯಂ ನಾಭಿಪಾದಮೆಂಬಿವಱೆಡೆಯಂ ತೊಲಗಿಸಿ ಮುಂದಣ ಮೆಯ್ಯೊಳ್ ನಿಲಿಸುಗೆ ಕಂಭಮನಂ (ಲೋಕೋಪ. ೩-೨೫) ; ತೊಲಗಿಸಿ ಭೂಷಣಪ್ರತತಿಯಂ . . . ಬಟಲ್ವು ತೊಟಲ್ವು ಜಾನಿವಳ್ (ಜಗವಿ. ೧೧-೨೩) ;ತನುಗುಣಂಗಳ ನುಳಿದುಳಿದು ಧಿಕ್ಕನೆ ತೊಲಗಿಸುತ ಸಾನುರಾಗಂ ಕೊನರ್ದು ಕೊನರ್ದಾ ಶಿವಶರಣರಂ ಕಂಡು (ಬಸವು. ೩೫-೭). ೪. ತಳ್ಳು; ನೂಕು; ಸರಿಸು: ಮುಂದಣ ಮಾನಸರಂ ಪಡಿಯಱರ್ ತೊಲಗಿಸುತ್ತಂ ಬರೆ (ಪದ್ಮರಾ. ೮೦-೧೪) ; ತೊಲಗೆನೆ ಬಟ್ಟೆಯಿಂ ತೊಲಗಲಾಱನಶಕ್ತನೆನಾರ್ಪೊಡೆನ್ನನಿಂ ತೊಲಗಿಸಿ ಪೋಗು ನೀನೆನೆ (ಪಂಪಭಾ. ೮-೩೨) ; ಕಲಶಮನೆತ್ತಿ ನೀರೆಱೆವ ಕಾಂತೆಯ ತೋಳ ತೆರಳ್ಕೆ ಮೇಲುದಂ ತೊಲಗಿಸೆ (ಚಂದ್ರಪ್ರ. ೧-೯೮) ; ತೊಲಗಿಸಿ ಮೇಲುದಂ ಬೆಮರ ಬಿಂದುಗಳಂ ತವೆ ಪೀರ್ದು ... ಮನ್ಮಥ ಜಯಾದಿ ಪುನಃಪ್ರಿಯನಂತೆ ಸಾರ್ದಪೇಂ ತಳೆದುದೊ ಕಾಂತೆಗುಣ್ಮಿದ ರತಿಕ್ರಮಮಂ ನವಮಂದಮಾರುತಂ (ಮಲ್ಲಿಕಾ. ೪-೧೯೮) ; ನಿಳಯಮಂ ಪೊಱಮಟ್ಟು ಬರಲತಿಬಳವೃಷಭ ಕೆಲವುತ್ತ ಮಂದಿಯ ತೊಲಗಿಸುತ ಮುಂದೆಸೆಗೆ ದಾರಿಯ ತೋಱೆ ನಡೆವುತಿರೆ (ಬಸವು. ೬೧-೨೩). ೫. ಮರಳಿಸು ; ಹಿಂದಕ್ಕೆ ಸರಿಸು ; ಹಿಂದಿರುಗಿಸು ; ಹಿಮ್ಮೆಟ್ಟಿಸು : ರಾಯನನು ತೊಲಗಿಸಿದರಾ ಕರ್ಣಾಯತಾಸ್ತ್ರರು (ಕುಮಾವ್ಯದ್ರೋ. ೫-೨೪) ; ಕಂಗಳ ಬಳಿ ಮರಳಿ ಬಸವಳಿಯೆ ಸಾರಥಿ ತೊಲಗಿಸಿದನಾ ರಥವನು (ಕುಮಾವ್ಯದ್ರೋ. ೫-೩೩) ; ಸಂದಣಿಸಿ ದಳ ನೂಕಿಕೊಂಡೈತಂದುದಿದು ರವಿಸುತನ ತೊಲಗಿಸಿ ಮುಂದೆ ವೋಹರದೆಗೆದು ಮೂದಲಿಸಿತು ಮರುತಸ್ಸುತನ (ಕುಮಾಕ. ೦೩-೨೫). ೬. ಚೆದರಿಸು ; ಚಲ್ಲಾಪಿಲ್ಲಿ ಮಾಡಂ : ಹವ್ಯವಾಹನಸಖಂ ತೊಲಗಿಸುವ ಬಹಳ ಮೇಘವ್ಯೂಹಸಂಘಾತದೊಡ್ಡವಣೆ ಮುಱಿವುದೆ ಕೃತತ್ಯಜನವಾತದಿಂದ (ಜೈಮಿಭಾ. ೦೩-೯). ೭. ಕತ್ತರಿಸು ; ತುಂಡಂಮಾಡು : ಕಾಂಭೋಜಭೂಪನ ಮಕುಟಮಸ್ತಕವ ಕೊರಳ ತೊಲಗಿಸಿ ಮುಂದೆ ನೂಕುವ ವರಶ್ರುತಾಯುವಿನೊಡನೆ ಘನಸಂಗರಕೆ ತೆಗೆದನು (ಕುಮಾವ್ಯದ್ರೋ. ೧೧-೦೭). △ **ತೊಲಂಗಿಸು:** ೨. ನಿರಂತರ ಪಾರಮಾರ್ಥಸಚ್ಚಿಂತನೆಯಂ ತೊಲಂಗಿಸಿ (ಅಮಶ. ೫೫).

**ತೊಲತೊಲಗಿಸು** (ದ್ವಿರುಕ್ತಿ) : ವಿಲೋಚನೋತ್ಕೀರ್ಣಮುದಶ್ರು ಮಾಲೆಯಂ ಪಕ್ಷ್ಮಾಪಾಳೀಜಾಲದಿಂ ತೊಲತೊಲಗಿಸಿ (ಕುಸುಮಾ. ೦೫-೧೦೩ ವ). [ ತೊಲಗು$_1$ + – ಇಸು$_3$ ]

**ತೊಲಗು$_1$, ತೊಣಗು, ತೊಲಂಗು** (ಕ್ರಿ). ೧. ಸ್ಥಳವನ್ನು ಬಿಡು ; ಹೊರಟು ಹೋಗು : ನಿಲ್ಲದೆ ತೊಲಗಿದಿರೀಂದಂ (ಕವಿರಾ. ೩-೨೦೦) ; ತೊಲಗೆನೆ ಬಟ್ಟೆಯಿಂ ತೊಲಗಲಾಱನಶಕ್ತನೆನಾರ್ಪೊಡೆನ್ನನಿಂ ತೊಲಗಿಸಿ ಪೋಗು ನೀನೆನೆ (ಪಂಪಭಾ. ೮-೩೨) ; ಅಂತಃಪುರದ್ವಾರದೇಶದೊಳಿರ್ದ ರಾಜಲೋಕಮೆಲ್ಲಮುಂ ಸಂಭ್ರಮಂಬೆರಸು ತೊಲಗಲ್ (ಕಾದಂಪೂ. ೪೨೫); ಅಳಿಯನಂ ಕಂಡತ್ತೆಯಂತೆ ತೊಲಗುತ್ತುಂ (ಧರ್ಮಾಮೃ. ೪-೭೭); ಸಾರೆಂಬರಸಾಳ್ಗಳ ತೊಲಗೆಂಬ ಪಡಿಯಱರ ಮುಂಗುಡಿಯ ಕುರುಳ ಕೊಂತದ ವೀರವ್ಯಂದದ ಕೋಳಾಹಳಂ ಬೆರಸಿ ಬಂದು (ಬಸರ. ೬-೮) ; ಜಡರುಗಳಿರಾ ತೊಲಗಿ ಭೋ ಎನುತ (ಬಸವು. ೨೧-೧೧); ಮಂದಿ ತೊಲಗಲಿ ತೆಱಹುಗೊಡು (ಕುಮಾಆ. ೭-೮೬). ೨. ಅಗಲು ; ತೊರೆ ; ಬಿಟ್ಟು ಹೋಗು: "ತೊಲಗು – ವಿವಿಕ್ತೇ" (ಕಮುಧಾ) ; ಎಲವೊ ದೇವೇಶನನೇಂ ಸೞೆವಿಡಿದೆ ತೊಲಗು ದೇವನ ಮುಱಿಯಂ ಬೞಿಕಱಿಯಲಕ್ಕುಂ (ಪಂಪಭಾ. ೧೧-೦೩೦) ; ನಿಲೆ ನಿಜವಕ್ಷಸ್ಥಲವಪ್ರಲೇಪವಿಪುಲೋಪಲಪ್ರದೇಶದೊಳೆಂದುಂತೊಲಗದೆ ಸಾಮ್ರಾಜ್ಯಶ್ರೀಲಲನೆ ತಾಂ ನರೇಂದ್ರನಂ ಸುರೇಂದ್ರನಂ ಗೆಲೆವಂದಂ (ಮಲ್ಲಿಪು. ೩-೨೨) ; ಅಳಿಯನ ಕಂಡರೆ ನಾಚೆಂಬೆ ಮಗಳೆ ಅಳಿಯನ ಕಂಡರೆ ತೊಲಗೆಂಬೆ ಮಗಳೇ ನಾಚುವರೆ ಮೊಱೆಯಿಲ್ಲ ತೊಲಗುವರೆ ನೆಲನಿಲ್ಲ (ಬಸವ. ೯೦೨) ; ನಿನ್ನ ಕಣ್ಣೆಂಬಲಗಿನಲಿ ತನ್ನೆದೆಯ ನೋಯಿಸಿ ತೊಲಗಬಹುದೇ (ಕುಮಾವಿ. ೨-೨೦) ; ಸೋಲಿಸಿ ತೊಲಗಿ ಪೋದವನ ನಿಟ್ಟಿಸುವ ಸಲೀಲೆಯಿಂದಿದ್ದಳಾ ಕುವರಿ (ಮೋಹತ. ೨೮-೬) ; ಖಂಡಿತದಿ ಲಕ್ಷ್ಮಿ ತೊಲಗುವಳು ಶಿವನೊಲುಮೆ ಕಂಡುಕೊಳದಿರಲು (ಸರ್ವಜ್ಞ. ೨೪೮). ೩. ಅಗಲಿಸಂ ; ಬೇರೆಯಾಗಿಸು : (ಸ). ೪. ಜಾರು ; ಓರೆಯಾಗು: ಮನಸಿಜನ್ಮವಲೀಲಾಲಾಂಭನಂ ಸ್ವಸ್ತಿಕಂ ಸ್ತ್ರೀಜನದೊಳೆಸೆದು ನಿಂದತ್ತುತ್ತರೀಯಾಂತರೀಯಂ ತೊಣೆಯ ತೊಲಗಿ ನಿಂದಿರ್ದಲ್ಲಿ ತಂದಿತ್ತು ದುಚ್ಚಸ್ತನದೊಳಮರ್ದ ಹಸ್ತಸ್ವಸ್ತಿಕಂಗಳ್ ಬೆಡಂಗಂ (ಆದಿಪು. ೧೧-೧೫೨); ನಿಡುಸುಯ್ಯೆಲರಿಂ ಮೇಲುದು ತೊಲಗೆ (ಕಾದಂಕಾ. ೩೭) ; ಪೊದೆದ ಪೊಸದುಗುಲಂ ಕೆಲಕ್ಕೆ ತೊಲಗೆ (ವರ್ಧಪು. ೦೩-೬೩ ವ) : ಮೊಲೆಗಳ ಮುಸುಕು ತೊಲಗಿದುದೆಂದೊ ಸರಸದ ನುಡಿಗಳಿನಿದೊಂದಿನಿತು ತಪ್ಪಿದುದೆ (ಬಸವು. ೪೩-೧೪). ೫. ಪಕ್ಕಕ್ಕೆ ಸರಿ ; ದಾರಿಯಿಂದ ಕದಲು ; ಅರುಗಾಗು : ನಿಮ್ಮ ಪಟ್ಟಣದಲ್ಲಿ ಹೊಲ್ಲ ಹನಸಗನೊಬ್ಬನು ಬಲ್ಲ

ಭಕ್ತನೆನುತ್ತ ಗರ್ವಿಸಿ ತೊಲಗನಾರಿಗೆಯುಂ (ಬಸಪು. ೨೦-೧೪) ; ನೀ ಕೃಪೆ ಮಾಡಿ ತನ್ನನುಂ ಕಳುಹಬೇಹುದು ಸಮ್ಮೋದಿರೇ ರಣಕೆ ತಾನೆನುತ ಸೆಳೆದ ಬಾಣವನಿಳುಹಿದರೆ ಗುರು ತೊಲಗಿ ಕೊಟ್ಟನು ಪದವನಹಿತಾವಳಿಗೆ ಸಾತ್ಯಕಿ ಮೊಳಗಿದನು ಕಳಶಜನ ನೇಮದಲಿ (ಕುವ್ಯಾದ್ರೋ. ೧೧-೯). ೬. ಹಿಂದೆಗೆ ; ಹಿಂಜರಿ ; ಹಿಮ್ಮೆಟ್ಟು : ಗೆಲಲುಂ ಸಾಯಲುಮಾಱದೆ ತೊಲಗಿದೊಡೆ ನೆಗಟ್ಟೆ ತೋಱುಗುಮೆ ಸಿರಿಮೆಯ್ಯಂ (ಗದಾಯು. ೨-೩೧) ; ಕೆಚ್ಚನೊಳ್ತೊಲಗದೊರ್ಮೆಯೆ ಪಾಯಲಪ್ಪುದು (ಧರ್ಮಾಮೃ. ೦-೧೬೯) ; ಪುಲಿ ಬಂದು ಗರ್ಜಿಸುತ್ತಿರೆ ಕೆಲದೊಳ್ ಪಾವಡರ್ದು ಕೂಡೆ ಸುತ್ತಲ್ ಮೆಯ್ಯಂ ತೊಲಗದೆ ಕೆಯ್ಯಿಕ್ಕಿರ್ದಂ (ನೇಮಿಪು. ೧-೧೫) ; ಕಾವಿನ ಬೆದಱಿದಳು ... ತೊಲಗಿ ಹಿಂದಡಿಯಿಡಲು ಕೀಚಕನಳುಕದ್ಯೈತಂದಬುಜವದನೆಯ ಬಳಿಗೆ ಬಂದನು (ಕುವ್ಯಾವಿ. ೨-೧೬); ತೊಲಗದೆ ನಿಂದ ವೀರನಂ ತಲೆಗಡಿದುರುಳ್ಚುವ ಮೂದಲಿಪ ವೀರನಂ ತೌದಲೆಗಾಣಿಪ ... ಕಟ್ಟಾಳ್ಗಳನಂಬೆತ್ತಂತ ಮೆಱೆದು ನೆರೆದ ಪದಾತಿವ್ಯೂಹದಿಂ (ರಾಜಶೇ. ೬-೧೧೪). ೭. ಹಿಂತಿರುಗು ; ಮರಳು : ಯೋಗವೈದ್ಯರು ಬಂದು ಮಂತ್ರಿಸಿ ನಾಗವಿಷದಿಂ ಮಡಿದ ರಾಯನನಾಗದಯ್ಯೋತಮ್ಮ ಕೈಯಲೆನುತ್ತ ತೊಲಗಿದರು (ಬಸಪು. ೪೬-೨೩); ತೊಲಗಿರ್ದ್ದ ಕಾಲಾಳು ಮೇಲಾಳಳವಿಗೊಡಲಿ ಮಹಾರಥರು ಮುಂಕೊಳಲಿ (ಕುವ್ಯಾದ್ರೋ. ೫-೯) ; ಸಪ್ಪಳಾಗದ ತೆಱದೊಳಿದ್ದು ಮೆಲ್ಲನೆ ಮಂತ್ರಿಸುತ ತೊಲಗಿ ಬರುತಿರ್ದಳ್ (ಜೈಮಿಭಾ. ೩೦-೨೯). ೮. ದೂಡು ; ಅಟ್ಟು : ನಿಜಮೋಹರವನಂದ್ಯನೂಱು ಬಿಲ್ಲಂತರಕೆ ತೊಲಗಿ ಮಂತ್ರವ ಜಪಿಸಿದನು ಪಾರ್ಥ (ಕುವ್ಯಾದ್ರೋ. ೯-೨೪). ೯. ಕಣ್ಣಿಗೆ ಕಾಣಿಸದಿರು ; ಅದೃಶ್ಯವಾಗು : ದಿವಸಕರ ಚಂದ್ರತಾರಾನಿವಹಂ ತೊಲಗಿರ್ಪ ಗಗನವಿಸ್ತಾರದವೊಲ್ (ಕಾದಂಪೂ. ೬೮) . ೧೦. ಮುಳುಗು ; ಅಸ್ತವಾಗು : ನಾಳೆ ಪಡುವಣ ತರಣಿ ತೊಲಗದ ಮುನ್ನ ಕೊಲುವೆನು ವೈರಿ ಸೈಂಧವನ (ಕುವ್ಯಾದ್ರೋ. ೮-೩೫). ೧೧. ನಿವಾರಣೆಯಾಗು ; ಪರಿಹಾರವಾಗು : ತೊಲಗಿದವು ಜನಮನದ ಬಲುಗತ್ತಲೆ (ಕುವ್ಯಾಉ. ೮-೫). ೧೨. ತೀರಿಹೋಗು ; ಮುಗಿದು ಹೋಗು : ತೊಲಗದು ಪುಬ್ಬಕೋಟಿಪರಿಸಂಖ್ಯೆವರಂ ಪರಮಾಯು (ಆದಿಪು. ೦-೫೨) ; ಮಬ್ಬು ಕ್ರಮೇಣ ಬೆಳೆಯುತ್ತಿದೆ; ಸಂಜೆ ತೊಲಗಿ ಇರುಳಾಗುತ್ತಿದೆ (ಜ್ಯೋತಿರ್ವಿ. ೨). ೧೩. ನಾಶವಾಗು ; ಅಳಿ : ತೊಲಗದ ಜವ್ವನಂ ತವದ ಮೆಚ್ಚು ಮರಲ್ಚುವ ನೋಟಮುಟ್ಟಿಯಿಂ ಸಲಿಸುವ ಭೋಗಂ (ಆದಿಪು. ೫-೪೨) ; ತಳಮಳಗಾಗದ ತನು ಪೆಪ್ಪಳಿಸದ ನೆಲೆ ತೊಲಗದಱಿವು . . . ತಮಗವರೆ ಮಡಿಪಿದರ್ ಮಣಿಚೂಳರ್ (ಶಾಂತಿಪು. ೬-೮೧) ; ಅಕ್ಕಟೆಂದಡಿಗಡಿಗೆ ನಿನ್ನಂ ತಕ್ಕವಿಸಲೆಂದಾಶಿಸುವ ಕರ್ಮಕ್ಕೆ ತೊಲಗುವುಪಾಯವಾವುದೊ ಹೇಳೆಕಟ ತಾಯೆ (ಬಸಪು. ೪೫-೯); ಕೆಟ್ಟುದಪಮೃತ್ಯು . . . ನೆಲೆಗುಂದಿದಳ್ ಮಾರಿ ತೊಲಗಿತಘಚಯ (ಚಲಪು. ೪-೩೫). ೧೪. ಸೋತುಹೋಗು; ಸೋಲು: (ಶ). ೧೫. ಕಳಚು ; ಬಿಚ್ಚು : ಪರೆಯದ ಜವ್ವನಂ ತೊಲಗದಾಭರಣಂ ಸಲೆ ಮಾಸದಂಬರಂ . . . ಬಾಡಿರದ ಪೂಮುಡಿಯೊಪ್ಪುವ ದೇವಲೋಕಸುಂದರಿಯರನಿಂದ್ರಜಾಲಿಕ ನತೀವಮನೋಹರಮಾಗೆ ತೋಱಿದಂ (ದಶಕು. ೬-೧೩೮). ತೊನಗು : ೨. ಘನಭಕುತಿಯ ನೇಣನೆ ಮಾಡಿ ನಿನ್ನಾ ಚರಣಕೆನ್ನ ಕೊರಳಿಗೆ ಸನುರುಚಿಯಿಂದ ಗಂಟನೆ ಹಾಕಿಕೊಂಡು ತೊನಗದೆ ಬಿಡೆನೊ ನಿನ್ನನು ಎಂದೆಂದಿಗೆ (ಮೋಕ್ಷದೀ. ೨೧-೪). △ತೊಲಂಗು : ೧. ಮಂತ್ರಿಪುತ್ರನ ಕಣ್ಣಱಿದು ವಿಳಾಸಿನೀಜನಂ ಕಾಮಸಂಚಾರಚ್ಛಲದಿಂ ತೊಲಂಗೆಯುಂ (ಲೀಲಾವ. ೪-೩೪ ವ); ಕುಲವಿಹೀನರು ಕನಿಷ್ಠರು ಕುಲಜರುತ್ತಮಪುರುಷರೀ ನಾಲ್ವರು ತೊಲಂಗದೆ ಪೋಪ ಬಟ್ಟೆಗಳು (ಬಸಪು. ೪೦-೬೦). ೪. ಕೀಲು ತೊಲಂಗಿ ಡೊಂಕುಗಳೆಡೆಗೆಡೆಗೆ ನೆಲೆಗೊಂಡ ಕೈಕಾಲ . . . ಹೇಸಿಕೆಯು ನಾತವಧಿಕ ಭಯಂಕರವು (ಬಸಪು. ೪೬-೫೮); ಮೇಲುದಱ ಸೆಱಗಂ ತೊಲಂಗೆ ನೂಕುವ . . . ಭಾವೆಯರ್ ಬರುತಿರ್ದರು (ಚಬಪು. ೩೬-೪೩). ೫. ಸಮಸ್ತ ಭಕ್ಷ್ಯಾವಳಿಗಳಂ ನೃಪನೆಯ್ದೆ ಗಡಣಿಸಿ ಅಲಗನರ್ಚಿ ಕರದೊಳಮರ್ಚಿ ತೊಲಂಗಿ ನಿಂದಿರಲು (ಬಸಪು. ೩೩-೦೪). ೧೩. ನಯನಂಗಳಂ ಬಲುಹಿಂದ ತೆಱೆದುಱೆ ನೋಡಲಾ ಜಿನನ ಅಂಗವದು ಛಟಛಟ ಎನುತ್ತ ತೊಲಂಗಿ . . . ಕೆಡೆದಿರಲು (ಬಸಪು. ೫೧-೮೦) ; ಮಹಾಪುರುಷವರ್ಯನ ಕೃಪಾಪಾಂಗವು ಸಂಗಳಿಸೆ ಭವಭಾರಿಗಳ ದುರಾಚಾರಂ ತೊಲಂಗಿ ಸದ್ಗುಣವೊದಗುವುದು (ಕೊಟ್ಟೂಬ. ೩-೧೬) ; ವನಿತಾದಿ ವಿಷಯಮೋಹಂ ತೊಲಂಗುವದಿನ್ನು (ಮಲ್ಲಜ. ೧-೧೬).

ತೊಲ ತೊಲಗು (ದ್ವಿರುಕ್ತಿ) : ಪುಲಿ ಪುಲಿ ಪರಿ ಪರಿ ... ಮನಮನಂಜದಂಜದೆ ತೊಲ ತೊಲಗೀ ಪೆಳಗೆ ಪುಲಿಯೆಂಬುದು ಫ಼ಾರ್ಗಂ (ಕವಿರಾ. ೨-೨೬) ; ಇರದೀ ರಾವಿನಲಿ ತೊಲತೊಲಗೆನುತ ಸಿದಿಗೆಯನಿಳುಹವೇಳ್ದು (ಬಸಪು. ೩೨-೪೩) ; ತೊಲತೊಲಗು ಮನ್ಮಥನ ಹೊಗರಿಟ್ಟಲಗು ಬರುತಿದೆ (ಕುವ್ಯಾಆ. ೧೫-೩೩).

[ ದೇ.■ ತುಳು. ತೊಲಗು, ತಲವು, ತೆಲಾವು ; ತೆಲು. ತೊಲಗು, ತೊಲಂಗು, ತೊಲುಗು ]

ತೊಲಗು$_2$ (ನಾ). ೧. ಮಲ್ಲಯುದ್ಧದ ಒಂದು ವರಸೆ ; ಹಿಡಿತದಿಂದ ತಪ್ಪಿಸಿಕೊಳ್ಳುವುದು : ಎಡ ಬಲದಲ್ಲಿ ಕೈಕಾಲು ಸಿರಸುಗಳ ಯತ್ನದಿಂದ ತೊಲಗುವದು ಆವದು ಅದು ತೊಲಗುಯೆಂಬುದು (ಅಶ್ವಟೀ. ೪-೩೮). ೨. (ಬಾಣವನ್ನು) ನಿರೋಧಿಸುವ ಒಂದು ಬಗೆಯ ಸಾಧನ (?) : ಅಲಗಿನ ಮಟ್ಟೆ ಉಳ್ಳವಂಗೆ ಶಸ್ತ್ರದ ಭಯವೇತಕ್ಕೆ ಬಾಣದ ತೊಲಗುಳ್ಳವಂಗೆ ಅಂಬಿನ ಘಾಯವೇತಕ್ಕೆ (ಮದೇವ. ೨೮೦-೪೧). [ <ತೊಲಗು$_1$ ]

ತೊಲಗೆ (ನಾ). ಒಂದು ಬಗೆಯ ಸಸ್ಯ : (ಮೃಜಿಗ. ೨೪-೪೪೩). [ ? ]

ತೊಲಿ 'ಟೊಳ್ಳು' ನೋ.

ತೊಲೆ$_1$ (ಕ್ರಿ). ತೊಲಗು ; ದೂರ ಸರಿ : ಜಾತಿಗೆಟ್ಟು ಹುಡುಗಿಯು ತೊಲೆದು ಹೊರಟುಹೋದಳೊ ? (ದೇವೀಡಾ. ೧೬).

[ ದೇ.■ ತಮಿ. ತೊಲೈ, ತುಲೈ ; ಮಲ. ತುಲಯು ]

ತೊಲೆ$_2$ (ಕ್ರಿ). ೧. ತೂಗಾಡು ; ಜೋಲಾಡು ; ಒಲೆದಾಡು : ಅಲಘು ಕುಚದ್ವಯಂ ಕಚಭರಂ ತೊಲೆಯುತ್ತಿರೆ ಹಸ್ತಕಂಕಣಂ ಘಲಕೆನೆ . . . ಮೊಸರ್ಕಡೆದರ್ಲತಾಂಗಿಯರ್ (ಮಲ್ಲಕಾ. ೪-೫೫). ೨. ಅಲುಗಾಡಿಸು ; ಅಲ್ಲಾಡಿಸು : ಸಿಂಹಮಧ್ಯದ ಕನ್ನೆಯರು ತೋಳ್ಗಳಂ ತೊಲೆ[ಪಾಠಾಂ. ನೆ]ಯಲು (ಭಾವಚಿಂ. ೯-೫೮). [ <ತೊನೆ ]

ತೊಲೆ$_3$, ತೊಲ (ನಾ). ೧. ಮಾಳಿಗೆಗೆ ಅಥವಾ ಚಾವಣಿಗೆ ಆಧಾರವಾಗಿ ಗೋಡೆಗಳ ಮೇಲೆ ಅಡ್ಡಲಾಗಿ ಹಾಕುವ (ಮರದ) ದೂಲ: ಪವಳದ ಕಂಭಂ ಪಳಿಕಿನೆಸೆವ ತೊಲೆ ವಜ್ರದ ಮತ್ತವಾರಣಂ ಮುತ್ತಿನ ಮಂಡವಿಗೆ (ಸುಕುಮಾ. ೧೦-೪೫) ; ಆ ಮನೆಯ ನೋಡಲೆಂದು ಹೋದರೆ . . . ಅದಕ್ಕೆ ಕಂಭ ಒಂದು ತೊಲೆಯಾಱು (ಅವಚಂ. ೨೨೨-೧೦೦೮) ; ಮಱಿಹುಲ್ಲೆ ಸಿಂಹದ ಮುಸಕಕಿದಿರೇ ಲತೆಯ ಎಳಗುಡಿ ಮಾಳಿಗೆಗೆ ತೊಲೆಯೆ (ಕುವ್ಯಾಭೀ. ೩-೮೪) ; ಆ ಲಲಿತಪಟ್ಟಿಗಳ ತೊಲೆ ರನ್ನ ಬೋದುಗೆಗಳಾ ಪ್ರವಾಳಂಗಳಿಂದ ಮೇಲೆಸೆವ ಜಂತೆಗಳ್ (ಚಲಪು. ೫-೪೮), ಎಲುಬುಗಳ ತೊಲೆಗಳಲಿ ಮಾಂಸದಾ ಮಣ್ಣಿನಲಿ . . . ಬಿಡುಗಡೆಯ ಸಿರಿಗುಡಿಯ ಮಸಣದಲಿ ಕಟ್ಟು ! (ಪಾಂಚಜ. ೮-೬). 'ಅಡ್ಡತೊಲೆ' ಪರಾ. ೨. ಮರದ ದಿಮ್ಮಿ : ನೀರ್ಗೆ ಬಾಗುವೇತದ ತೊಲೆ ಕೊಳ್ಳ ಕೊಳ್ಳದೆರಡುಂ ಕಡೆಯಿಂದಱಿಪುತ್ತುವಿರ್ಪುದು (ಜೀವಸಂ. ೧೫೬-೧೪) ; ನೂರಾರು ತೊಲೆಗಳನು ತಂದಿಲ್ಲಿ ರಾಶಿಗೈಯೆಂದನಗೆ ಕಟ್ಟಾಣೆಯ ಬೆಸಸಿ ಪೋದನ್ (ಬಿಗಾಳಿ. ೫೫). ೩. ಯುದ್ಧದಲ್ಲಿ ಬಳಸುವ ಮರದ ದಿಮ್ಮಿಯಂಥ ಒಂದು ಬಗೆಯ ಸಾಧನ: ಹಾಯಿಕುವ ಗುಂಡು ಮೇಲುಱೆ

ಕೆಡಹುವ ತೊ[ಪಾಠಾಂ. ತ್]ಲೆ . . . ಎಸೆದವು ದುರ್ಗದೊಳು (ಕುಂರಾಸಾಂ. ೩೬-೫೩); ತೊಲೆಯುರುಳೆ ಕರಚರಣಮುಡಿದು ಕೆಡೆದರ್ (ಜಲಪು. ೬೨-೩೬); ತೊಲೆಗಳೊಳಗೆ ದಸಿಗಳ ಪೆಟ್ಟಿ ಲಂಭಿಪ ಬಲುಮೊಕಾಜಿರ ಮೇಲೆ ನೂಕೆ (ಕಂಸವಿ. ೧೪-೬೧). ೪. ಉಯ್ಯಾಲೆ: ಇತ್ತ ಹೊಂದೋರಣದ ತೊಲೆಯಲಿ ಅತ್ತಲಿತ್ತಲಾ ಹನುಮ ತಿರುಗಲಾ ಮುತ್ತಿತವರಾರಿಗಳು ಶಿಖಿಯನು ಶಲಭ ಕವಿವಂತೆ (ಛಾಶಿರಾ. ೧೧-೨೬). ೫. ಒಂದು ರೂಪಾಯಿ ನಾಣ್ಯದ ತೂಕ : " ಬೀಸಿಗೆ . . . ಐ ದಾ ಗೊ ಂ ದು ತೊಲೆ " (ಮಂಗರಾ. ೧೦೪-೧೧) ; ತೊಲೆ ಪದಿನಯ್ದುಱ ಬಿಣ್ಪೆಂದಿಲಾಧಿಪಂ ಪತ್ತು ತೊಲೆಯ ಬಿಣ್ಪಂ ಧನ್ಯಂ ತೊಲೆಯಯ್ದುಱ ಬಿಣ್ಪಂ ಸುಖ ಖಲನಿರ್ತೊಲೆವರೆಯ ಬಿಣ್ಪು ಸವನಿಸಿದಾತಂ (ಲೋಕೋಪ. ೧೧-೪೩) ; ವರ್ಷ ಸಿಬಂಧಿಯಾಗಿ ಹೂವಿನ ಪಡಿಗೆ ಜಾತಿಹವಳಕ್ಕೆ ತೊಲೆಗೆ ತಾ ೧ ಕರಿದಕ್ಕೆ ವೀಸ ೧ (ಎಕ. II, ೨೪೧-೫; ಸು. 1175); ಗುಗ್ಗುಳವೊಂದು ಕೊಲೆಯನವರ್ಚಿ ಕಂಬಿಯೊಳಂದ ಮಾಗಿರೆ ಪೊತ್ತುಕೊಂಡುರವಣಿಸಿ ಬರುತಿರಲು (ಬಸಪು. ೪೩-೮೩). ೬. ತಕ್ಕಡಿ : ರಿಪುಭೂಪದಂತಿದಂತದ ತೊಲೆಯೊಳ್ ಪರಾಕ್ರಮದಿನೆನ್ನನೆ ಭೂಪತಿ ತೂಗಿ ತೋಱಿನೇ (ಶಂಶಧಾ. ೧೦-೪೦); ಅವರ ದುರ್ಣಯಚೇಷ್ಟೆಗಳಿಂ ನೃಪನೈಶ್ವರ್ಯಂ ತೊಲೆಯಲ್ಲಿ ತೂಗಿಸಿಕೊಂಬುದು (ಶಂಚಕಂ. ೧೬೯-೧೧) ; ಕೈಲಾಸಮಂ ತೂಗಿದೀ ತೊಲೆಯೊಳ್ ದಕ್ಷಿಣಬಾಹುದಂಡ ದೂರ್ದಿರ್ಚಲ್ ಗಂಡನಾರೆಂದು ಮೆಯ್ಗುಲಿ ಪಾಯ್ದಂ (ಶಂ ರಾ ಮಾ. ೧೪-೧೮೮) ; ಇಂತು ಭಕ್ತಿಯನೆ ತೂಗುವ ತೊಲೆಯನಳವಡಿಸಿ (ಅನೀರ. ದೀ. ೯೬-೭) ; ಹಿರಿಯ ಭಕ್ತರ ಕಿರಹನೊಂದೆಸೆಗಿರಿಸಿವೊಂದೆಸೆಯಲಿ ಮಹೀಸುರವರರನೇಱಿಸಿ ತೊಲೆಯನೆಲ್ಲರು ತೂಗಿ ನೋಡಲ್ಕೆ (ಬಸಪು. ೫೫-೫೭); ಹರದನು ಲೆಕ್ಕ ತಿಕ್ಕಿ ಸಿ ಹೊಡೆವನಳತೆಯ ತೂಕ ತೊಲೆಗಳಲಿ (ಛಾಶಿರಾ. ೧೦-೨೪) ; ದೈವಂ ಕೆಡಿಸಿದುದು ಸರಿಯಾಗಿ ತೂಗದೆಯ ತೊಲೆಯನ್ (ಪಾರಿಸಿ. ೧೪-೩೨೯). ೭. ಸಮಾನತೆ; ಸಾದೃಶ್ಯ; ಸಾಮ್ಯ: ತನ್ನ ತೂ ಕ ದ ತೊಲೆಯ ಮಹಿಪಾಕ್ಷಿಪ್ರಮುಖಗುಗ್ಗುಳವನೀವನು (ಬಸಪು. ೪೩-೩೦) ; ಈ ಸುರ ನರೋರಗರೊಳಗೆ ದಾ ನ ವ ರೊ ಳ ಗೆ ಮಹಿಮನ ತೊಲೆಗೆ ಬಹ ತೂಕದ ಮಹಾತ್ಮರದಾರು ಭುವನದಲಿ (ನಿಭಾಗ. ೩-೫-೨೪) ; ಪುದಿ ತನಿಗೆಂಡದ ಬೂದಿಯ ಪಡಿ ನೆಲಮಟ್ಟೊಲೆಯ ತೊಲೆಯಲರ್ ಬಿರಯಿಯ ಬಾಯಡೆಯಲರ್ಗಣೆಯುರಿಗಿದು ಸರಿ ಕಡು ವಿಸಿಲೆನಿಸಿರೆ ನಿದಾಘವೇಂ ಪಸರಿಸಿತೋ (ಛಾಜಕೀ. ೫-೩೪) ;ಪಾರ್ಥನೀಕ್ಷಿಸಿದ ವಿಶ್ವಶರೀರಗೆ ಜೋಡೆಲೆ ತುಳಸಿಯನಿತೆ ತೊಲೆಯೆ ? (ಗಿಶವಿಂ. ೪೧-೭). ೮. [ಜ್ಯೋತಿ] ತುಲಾರಾಶಿ: ಭಾವಿಸೆ ಮೇಷದಿಂ ತೊಲೆಯನೆಯ್ದುವಿನಂ ತೊಲೆಯಿಂದೆ ವಿಮಾನವಂ ತಾಪೊಸೆದೆಯ್ದುವನ್ನಮವರುಣ್ಬ ವಿನಾಳ್ಗಳೆಂದು ಪೇಟ್ದಂ (ಜಟ್ಕವು. ೭-೩೪). ೬, ೮ : ಓವದ ವಿಮಾನ ಮೇಷ ವೃಷಭಾದಿಗಳಂ ಕ್ರಮದಿಂ ದಿನಾಧಿಪಂ ಸೇವಿಸಿ ಮತ್ತೆ ಕನ್ನೆಯೊಡಗೂಡಲೊಡಂ ಕಿಡೆ ತನ್ನ ತೇಜಮಿನ್ನಾವುದು ಕಜ್ಜಮೆಂದು ತೊಲೆಯುಂ ಜನರಂಜನೆಗೇಱಿ ರಾಗಮಂ ಭೂವಲಯಕ್ಕೆ ಬೀಱಿದಂ (ಶಂರಾಮಾ. ೭-೧೬೬); "ಕೃಶಮುಂ ವೇಶ್ಯಾಂಗವಸ್ತ್ರಂ ಸಮಂಜಸ ತೂಕಂ ತೊ[ಪಾಠಾಂ. ತು]ಲೆಯಕ್ಕು" (ನಾನಾರ. ೦೫೯). **ತೊಲ :** ೫. ೧೦ ಮಾಷ = ೧ಕರ್ಷ (ಒಂದು ತೊಲ ಅಥವಾ ೧೧.೬ ಗ್ರಾಂಗಳು) (ಸಕಕ್ಕ, XIII ಕ್ರಿ ಸ್ತಾ ವನ) ; ೫ ಅಂಗುಲ ಬಾಹುವಿರುವ ಕಡೆ ಎಂಟು ತೊಲ ತೂಕವನ್ನು ಹಾಕಿರಲಿ (ಛಾಶವಿ. ೪೦).

[ <ಸಂ. ತುಲಾ ]

**ತೊಲೆಗೋಲ್**, ತೊಲೆಗೋಲು(ನಾ). ೧. ತಕ್ಕಡಿಯ ಕೋಲು; ತೂಗು ಕೋಲು ; ದಂಡಿಗೆ ; ತಕ್ಕಡಿ : ಗೃಹಸ್ಥಾಶ್ರಮಮೇ ಒಂದು ತಟ್ಟುಂ ವಿಕ್ರಾಮದ ಮೂಱುಮಾಶ್ರಮಂಗಳುಮೊಂದು ತಟ್ಟುಂ ಆಗಿ ನಾಲ್ಕೂಗಂ ತೊಲೆಗೋಲಿಂ ತೂಗಿ ನೋಡಿದನೆಂದು ಬಲ್ಲವರ್ಪೇಳ್ವರು (ಧಾರಕಾಂ. ೧೩-೫೦). **ತೊಲೆಗೋಲು :** ಕೂರಲಗು ತೊಲೆಗೋಲಿನಲಿ ನಿಮ್ಮಾರು ಭಟೆಯನು ನಮ್ಮ ಬಾಹುವಿಕಾರಬಲವನು ತೂಗಿಯನುತಚ್ಚನು (ಕುವ್ಯಾಕ. ೨೦-೨೬). [ ತೊಲ್ತೆ + ಕೋಲ್$_1$ ]

**ತೊಲೆಗೋಲು** 'ತೊಲೆಗೋಲ್' ನೋ.

**ತೊಲ್ಯೊಜಿಡಿ** (ನಾ).ಒಂದು ದಿಣ್ಣೆಯ ಹೆಸರು: ಅನ್ನೆ ಬನ್ದು ತೊಲ್ಯೊಜಿಡಿ ಎ ಕಲ್ಕುಪ್ಪೆಎ ಅನ್ನೆ ಬನ್ದ ಕೊನ್ದವಡಿಎ ... ತುಬಬ್ಬಿಲ್ನಾಗ್ಗಿರೊಳ್ಕೂಡಿತ್ತು (ಮ್ಯಆರಿ. ೧೯೩೬, ೫೩-೨೮ ; ಸು. 560).

[ ತೊಲ್ ? + ಪೊಜಿಡಿ (<ಪೊರಡಿ) ]

**ತೊವಗೂರು** (ನಾ). ಒಂದು ಸ್ಥಳದ ಹೆಸರು : ಬೆಂಪೂರು ತೊವಗೂರು ಪೂವಿನ ಪುಲ್ಲಿಮಪ್ಪಲ ಕೂತನಿಡುನಲ್ಲೂರು (ಎಕ. IX, ಬೆಂಗಳೂ. ೮೩-೬ ; ಸು. 890) ; (ಎಇ. I, ೩೫೦-೬ ; 900 ನೋ.)

[ ? + ಊರು$_3$ (<ಊರ್) ]

**ತೊವಟೆ** 'ತೊಗಟು' ನೋ.

**ತೊವಡು** 'ತೊಗಟು' ನೋ.

**ತೊವರ್**$_1$ (ಕ್ರಿ). ಒಗರಾಗು ; ಒಗಚಾಗು : ಎಸಬ್ಬಸಗಿ ಮುಗುಳ್ಗೆ ನಕ್ಕು ತೋಱ ಮದಾಳಿಗಳ್ ನುಸುಳೆ ತೊವರ್ತಿರೆ ಕಂಪಲರ್ಚುವನಂಬುಜ ಪ್ರಸರಮನಾಳೆ ಬೆಳಪ್ಪನೀಗೆ ವರಂಗಳಂ (ಕಾವ್ಯಾವ.೯೧೭). 'ತೊವರ್ಚು' ಪರಾ. [ ದೇ.॥ ತಮಿ. ತುವರ್ ]

**ತೊವರ್**$_2$, **ಚೊಗರು**$_1$, **ತೊಗರ್**, **ತೊಗರಿ**$_3$, **ತೊಗರು**$_2$, **ತೊವರು**$_1$ (ನಾ). ರುಚಿಯಲ್ಲಿ ಒಂದು ಬಗೆ ; ಷಡ್ರಸಗಳಲ್ಲಿ ಒಂದು ; ಒಗರು ; ಒಗಚು : ಆವುದೊಂದು ಭೂಮಿಯನಗುಟಲ್ ಆ ಪುಟ್ಟಿದ ಮಣ್ ಕಪ್ಪಾಗಿರಲ್ ಅಲ್ಲಿ ಪುಟ್ಟಿದ ಉದಕಂ ತೊವರ[ಪಾಠಾಂ. ಒಗರ, ತೊಗರ] ಪ್ಪುದು (ಲೋಕೋಪ. ೫-೮ ಟೀಕು); ಉದಧಿಗಳೇಱುಮೆಯ್ದೆ ತೊವರಾದುವು ದಾನಜಲೌಘದಿಂ (ಸೂಕ್ತಿಸು. ೧-೪); ಪುಳಿ ಮಧುರಮುಪ್ಪು ತಿಕ್ತಂಗಳೆಂದು ತೊವರೆಂದು ಕಟುಕಮೆಂದಪ್ಪುವು . . . ಕುಡುಗೆ ಹರಿಗೆ ಪಾನಾದಿಗಳಂ (ಅಕ್ಕಶಾ. ೭-೮೦). **ಚೊಗರು**$_1$ : ಆರೋಗ್ಯದ ವಿವರಗಳಲ್ಲಿ :-ಇನಿದು, ಸಿಹಿ, ಕಹಿ, ಕೈಪೆ, ಪುಳಿ, ಉಪ್ಪು, ಚೊಗರು (ಛಾಷಾಶಾ. ೨೫೭) ; ವರ್ಜ್ಯ - ಮಲಬದ್ಧತೆಯಾಗುವ ಚೊಗರುಳ್ಳ ವಸ್ತುಗಳು (ಪುನಮು. ೯೪). **ತೊಗರ್**: ಅಣಲೆಗೆ ತೊಗರೆಂತು ಸಹಜಂ ಸುಂಟಿಗೆ ಕಾರಮೆಂತು ಸಹಜಂ ತಾನಂತೆ ... ದೂಷಣಮುಂ ಔದಾಸೀನ್ಯಮುಂ ನರಕದುಃಖದೆಡೆಗೆ ಸಲ್ವ ಪುರುಷಂಗೆ ಸಹಜಮಾಗಿರ್ಕುಂ (ಧರ್ಮಾಮೃ. ೪-೪೦); ಪುಳಿ ಮಧುರಮುಪ್ಪು ತಿಕ್ತಂಗಳು ತೊಗರೆಂದುಂ (ಅಕ್ಕಪ್ಪ. ೯-೯೩). **ತೊಗರಿ**$_3$ : "ಕಷಾಯ, ತುವರ = ತೊಗರಿ" (ನಾಚಿರಾ. ೬).**ತೊಗರು**$_2$: ವಾತದಿಂದ ಹುಟ್ಟಿದ ಅರೋಚಕದಲ್ಲಿ ಬಾಯಿ ತೊಗರಾಗಿ ಇಹುದು (ವೈದ್ಯಸಾ. I, ೧೬೭) ; ನೇರಿಲ ಚಿಗರು ಮಾವಿನ ಚಿಗರು ಅದರ ತೊಗರು (ಪಾಕ್ಷಾಚ. ೩೭-೬). **ತೊವರು**$_1$ : ಸಿಹಿಯುಂ ಕಾರಮುಮಾಮ್ಲಮುಂ ತೊವರುಮುಪ್ಪುಂ ಕೈಪೆಯುಂ ಬೇಱಿವೇಱ ಹಿತಂದೋಕರ್ಕುಂ (ರತ್ನಾಕ. ೫೦).

**ತೊವರ್ತೊವರ್** (ದ್ವಿರುಕ್ತಿ) : ಊದಿದುದು ತಣ್ಣಲರ್ ಕಳನಾದಂ ಸಾದರದೊಳೊಂದಿ ನೆಗಟ್ದುದು ಪದ್ಮಾಮೋದಮಿನಿಸುಂ ತೊವರ್ತೊವರಾದುದು ಕೂಗಿದುವು ತಾಮ್ರಚೂಡಕುಳಂಗಳ್ (ಕಾವ್ಯಾವ. ೩೯೨). 'ಒಗರ್' ಪರಾ.

[ ದೇ.॥ ತಮಿ. ತುವರ್ ; ತುಳು. ಚೊಗರ್ ; ತೆಲು. ತೊಗರ, ತೊವರ ; ಕೂ. ತೊರ್ಪ./ಸಂ. ತುವರ ]

**ತೊವರಮಣ್ಣು** 'ತುವರಮಣ್ಣು' ನೋ.

**ತೊವರಿ**, ತೊಗರಿ$_1$, ತೊವರು$_2$ (ನಾ). ೧. ಒಂದು ಬಗೆಯ ಸಸ್ಯ ಮತ್ತು ಅದರ ದ್ವಿದಳಧಾನ್ಯ : "ಆಢಕಿಯೆನಲ್ ತೊವ (ಗ) ರಿ"

(ಮಂಗರಾ. ೦೦೦-೫) ; "ತೊವರಿಯೆಂದು ತೊಗರಿ" (ಕಕಸಾ. ೨೮-೫೮೩) ; ತೊವರಿ ಗೋದುವೆ ಜೋಳಂ . . . ಎಂಬಿವಱೊಳೊಂದಱೊಳಾದ ತೈಲಮಂ. . . . ತಂದು ಪೂಸುವುದು (ಲೋಕೋ. ಪ. ೯-೧೦೬) ; ಪಟಗಟವೆಯು ಕೊಬ್ ತಿವ್ವಡುಗಳೆದ ತೊವರಿಯು ತೊಡೆ (ಕಾವ್ಯಾವ. ೨೧೧) ; (ಸೂಕ್ತಿಸು. ೧೧-೮೩ ನೋ) ; ಒಡಗೂಡಿ ಬಿಲ್ವಮೂಲಂ ಕಡಲೆ ತೊವರಿ ಶುಂಠಿ ಎಂಬಿವಂ ಗಂಜಿಗೆ ಮೇಣ್ ಕುಡಿವಾಗಳ್ (ಕಲ್ಯಾಕಾ. ೩-೨೬). ೨. ಸುಗಂಧಯುಕ್ತವಾದ ಭೂಮಿ : (೬). **ತೊಗರಿ$_1$** : ೧. "ಆಢಕೀ, ತುವರೀ . . . ಈ ೨ ತೊಗರಿ" (ಹಲಾಯು. ೯೬-೪೩೦); ದೇವರ್ಗೆ . . . . ಕಡಲೆ ತೊಗರಿಯಾದಿಯಾಗಿ ಸಲುವುದು (ಎಕ. VIII, ಸೊರಬ. ೩೨೮-೬೨ ; 1159) ; ಮೂವತ್ತೆತ್ತಿನೊಳು ತೊಗರಿ ಜೋಳದಕ್ಕಿ ಕಡಲೆಗಳನೊಡತೀವಿ ಕೊಡುವುದೆನುತ್ತಂದು ಶಿವ ಪ್ರೇರಣೆಯಿಂ ನುಡಿಯೆ (ಬಸವ. ೧೨-೪೮) ; ಸೂಪಕರ್ವರ್ಗೆ ತೊಗರಿ ಹೆಸಱು ಚಣಾಖ್ಯವಿನ್ನೀಲ್ವರ್ದಿನುತ್ತವಂ ಹೊಟ್ಟ ಕಳದಿರ್ದವಿನ್ನಾ ಪರಿಯ ಮಧ್ಯಮಂ (ವೀಕ್ರಪು. ೬-೧೦-೬೪) ; ವಿಸುನಿಯು ವಣ್ಣದ ತೊಗರಿಯ ಬೇಳೆ (ಕಂಠವಿ. ೮-೮೬) ; ತೊಗರಿ ಬಿತ್ತಿ ಅವರೆ ಕೊಯ್ದರು (ಗಾದೆ). **ತೊವರು$_2$** : ೧. ಬೀಜದ ಒಳಗಿನ ತಿರುಳಂ ಅರೆದು ಶ್ರೀಗಂಧದಲ್ಲಿ ಹುದುಗಿಸಿ ಅವರೇ ತೊವರಪ್ಪು ನುಂಗಲು ಛಳಿ, ತಾಪಜ್ವರ ಸಹ ಪರಾಙ್ಮುಖಂ (ವಿಶ್ವವಿ. ೦).
[ ದೇ.॥ ತಮಿ. ತುವರೈ ; ಮಲ. ತುವರ ; ತುಳು. ತೊಗರಿ, ತೊಗರೆ, ತೊಗೊರಿ ; ತೆಲು. ತೊವರಿ, ತೊಗರಿ ; ಕೊಲಾ. ತೊಗರ್ ; ನಾಯ್ಕಿ. ತೊಗರಿ./ಸಂ. ತುವರೀ ]

**ತೊವರು$_1$** 'ತೊವರ್$_2$' ನೋ.

**ತೊವರು$_2$** 'ತೊವರಿ' ನೋ.

**ತೊವರೇಱು** (ಕ್ರಿ). ಒಗರಾಗು : ಮಾಂಗೊನರಂ ನಸುಗರ್ಚಿ ಸೊರ್ಕಿನಿಂ ತನು ದಳವೇಱೆ ಕಂಠವಿವರಂ ತೊವರೇಱೆ ಪಟುತ್ವವೇಱೆ ಕಾಮನ ನನೆಯಂಬುಗಳ್ ಎರಹಿವೃಂದದ ಮಲ್ಲಿರ್ದಯಂ ಪುಗಲ್ . . . ಪುಗಲ್ ಪುಗಲೆಂದುದು ಕೋಕಿಲವ್ರಜಂ (ಆಗವಿ. ೧೪-೩೮).
[ ತೊವರ್$_2$ + ಏಱು$_1$ (<ಏಱ್$_1$) ]

**ತೊವರ್ಗಂಪು** (ನಾ). ಒಗರಾದ ಸುವಾಸನೆ,-ಸುಗಂಧ : ಅಲರ್ವೀ ವನಜವನಂಗಳ ತೊವರ್ಗಂಪನಾಂಪ ಬಗೆ ಬಳೆಯ ಮೊರೆವುವಳಿಗಳ ಬಳಗಂ (ಆದಿಪು. ೧೨-೫೦); ಕೊವರ್ಗಂಪಂ ತನಿಗಂಪನೇಕೆ ಕರ್ಗಂಪಂ ಪೊತ್ತುವೇ ಕೋರಕದ್ರವವುಂ ತನ್ನಲರ್ಗೊಂಚಲುಂ ಮಿಡಿಗಳುಂ ತಮ್ಮತ್ತಲೇಂ ಕೂಗಿ ನೋಡುವುವೇ ಕೋಗಿಲೆಯಿಂದು ಸೊಕ್ಕಿದಳಿಯಿಂದೋವೆಂದು ಪೋ ಬಂದಂ ಮೇವುವೊ ಮಾವಲ್ಲದವೆಂಬವೋಲ್ ಬಳೆದುದೆತ್ತಂ ಕೀರಕೋಳಾ ಹಳಂ (ಅಲಾಪ. ೧೩-೩೯). [ ತೊವರ್$_2$ + ಕಂಪು ]

**ತೊವರ್ಚು** (ಕ್ರಿ). ಒಗರಾಗು ; ಒಗಚಾಗು : ಅಸುಗೆಯ ನಾಗಕೇಸರದ ಬಲ್ಮುಗುಳಂ ಬಿರಿಯೊತ್ತಿ ತುಂಬಿ ಚುಂಬಿಸೆ ರಜದಿಂ ತೊವರ್ಚಿದ ಕೊರಳ್ ಸವಿಯಂ ತರೆ ಪಾಡಿ (ಶಾಂತಿಪು. ೬-೫೩). [ ತೊವರ್$_1$ + – ಚು$_1$ ]

**ತೊವಲ್$_1$** (ಕ್ರಿ). ೧. ಚಿಗುರು ; ಪಲ್ಲವಿಸು : ಪರಿವ ತೊಱೆಗಳುಮಂ ತೊವಲ್ತು ಸೊಗಯಿಸುವಡವಿಗಳುಮಂ . . . ಕಂಡು ತಮ್ಮ ಕಣ್ಣಂ ಮನಕಂ ಸೊಗಯಿಸೆ (ಪಂಪಭಾ. ೬-೨೫ ವ) ; ಎಲೆವಳ್ಳಿ ತೊವಲ್ತೆಲೆವಳ್ಳಿ ನಗಂ ಕೃತಕನಗಂ ಪಲಸು ಬಳ್ವಲಸಾ ಬನದೊಳ್ (ಆಗವಿ. ೩-೦೪). ೨. ತುಂಬು ; ಆವರಿಸು : ವಿಳಾಸಿನೀಘನಸ್ತನಶತಪತ್ರಪತ್ರಶತದಿಂದೆ ತೊವಲ್ತು . . . ಅಗರುಧೂಮಲತಾವಳಿಯಿಂ ಮಡಲ್ತು ಮೆಲ್ಲನೆ ಸುಟಿದತ್ತು ಸದ್ಮಸರಸೀಶರಶೀಕರಮಂದಮಾರುತಂ (ಮಲ್ಲಿಪು. ೭-೪೮).
[ ದೇ.॥ ತಮಿ. ತುವಲ್ ]

**ತೊವಲ್$_2$**, **ತೋಲ್$_2$** (ನಾ). ಎಳೆದಳಿರು; ಚಿಗುರು : "ಎಲೆದಳಿರ್ವಸರದು ತೊವಲೆ[ಪಾಠಾಂ. ರೆ]ನೆ (ಅಭಿಸಿ. ೧೧೪) ; ಸೋಮಶರ್ಮಭಟ್ಟಂ ಪಿರಿದೊಂದು ತೊವಲಂ ಪಿಡಿದಬ್ರಹ್ಮಣ್ಯಂ ಭೋ ಅಬ್ರಹ್ಮಣ್ಯಂ ಭೋಎಂದಬುತ್ತ . . . ಅರಮನೆಗೆ ಪೊಗಿ (ವಡ್ಡಾರಾ. ೨೩-೨); ಇದಂ ನೀನವಧಾರಿಸೆಂದು ತೊವಲಂ ಮುಂದಿಕ್ಕಿದಂ ಭೂಪನಾ (ಸುಕುಮಾ. ೬-೪೨) ; ಉಱೆ ಕಾವ ಸೂರ್ಯರಶ್ಮಿಗೆ ಪೊಱೆಯಿಡಲೆಂದೆತ್ತಿ ಒಡಿದ ತೊವಲೆಂಬಿನೆಗಂ ತುಱುಗಿ ದರ್ಪವರೆಗೊಂಬಂ ಪಂಱದು ನೆಟಲ್ಕಾಡಿಕೊಂಡು ನಡೆವರ್ ಪಥಿಕರ್ (ಆಗವಿ. ೧೬-೬೯) ; ತೆಗೆದು ನನೆಗೊಯ್ದು ಬಡೆ ಮೇಲೊಗೆವೆಳದಳಿ ಗೆರ್ಂಬು ಪೋಲ್ತುದಾ ಪೂವಿನ ಸೂಜಿಗೆ ತೊವಲಂ ಪಿಡಿದು ಮದಾಳಿಗಳಲಿಯಿಂ ಪುಯ್ಯಲಿಡುವಶೋಕೆಯ ಕೈಯಂ (ಚಂದ್ರಪು. ೬-೧೦೦) ; ತಪ್ಪ ಕರಾಗ್ರದೊಳ್ಕೊವಲನಾಂತು ನೆಟಲ್ದೆ ತೊಬಲ್ದವಾನೆಗಳ್ (ಜಾವಪು. ೪-೮೨) ; ಕಲಶದ ತೊವರಂ [ಲಂ] ರತ್ನಾವಲಿಯೊಳ್ ಸಮ್ಮಿಶ್ರ ಪುಷ್ಪಮಂ ಮಸ್ತಕದೊಳ್ ತಳೆದಲ್ಲಿ ಬಣ್ಣಪುರದೊಳ್ ಬಱದು ಬಱಕ್ಕಿ ಮೇಖಲಾಲಂಕೃತಿಯಂ . . . ಕಟ್ಟುಗೆ ಪಟ್ಟವ(೦) ಲಲಾಟಪಟ್ಟಾಂತರದೊಳ್ (ಅಜಿತಪು. ೮-೧೫). **ತೋಲ್$_2$**. 'ತೋಲ್ವಿಡಿ' ಪರಾ.

**ತೊವಲನಿಕ್ಕು** = ತೊವಲಿಕ್ಕು ೨ : ಬೇಂಟೆಯಾತಂಗೆ ಮೃಗ ವ್ಯಾಯಾಮಕಾರ್ತಿಕೇಯಂ ಮೆಚ್ಚಿ ಮೆಚ್ಚುಗೊಟ್ಟು ತೊವಲನಿಕ್ಕೆಂದು ಮುಂದೆ ಪೇಟ್ದಟ್ಟ . . . ಬೇಂಟೆಗೆ ಪೊಱಮಟ್ಟು (ಪಂಪಭಾ. ೫-೪೬ ವ).
[ <ತೊವರ್$_1$ ]

**ತೊವಲ್$_3$** 'ತೋಲ್$_1$' ನೋ.

**ತೊವಲಿಕ್ಕು** (ಕ್ರಿ). ೧. ಪಲ್ಲವಿಸು ; ಚಿಗುರು : ತೊವಲಿಕ್ಕಿದ ಪರ್ವಟು ಬೇಗೆಗಿರ್ಚನೊಳ್ ಬೇವಪೊಲಿರ್ದುವಿರ್ವಲದ ಬಿಲ್ಲಣೆಗಳ್ ರಣರಂಗ ಭೂಮಿಯೊಳ್ (ಪಂಪಾಮಾ. ೧೩-೪೮). ೨. ಹಳ್ಳ ಕಾಣದಂತೆ ಮೇಲೆ ಸೊಪ್ಪು ಮುಚ್ಚು : ಅಡಲಾಡಿಸಲ್ ಪಾಱಿಯುಂ ನಿಱಿಸಲುಂ ಪರಿಗೊಳಲ್ ತೊವಲಿಕ್ಕಲೊಳಗಂ ಬರಲ್ . . . ಪಾಣಂ ನೀರ್ದಾಣ ಮೆಂದೆಡೆಯುಱದುಂ ಮಾಡಲ್ ಮಾಡಿಸಲ್ ಪಡೆ ಮೆಚ್ಚೆ ನೀಂ ಬಲ್ಲೆ (ಪಂಪಭಾ. ೫-೪೧) ; "ಬಲೆ ಬೀಸು" (ನಾಡೋಜ. ೩೦೪).
[ ತೊವಲ್$_2$ + ಇಕ್ಕು ]

**ತೊವಲು** 'ತೋಲ್$_1$' ನೋ.

**ತೊವಲುಡಿಗೆ** 'ತೊವಲುಡುಗೆ' ನೋ.

**ತೊವಲುಡುಗೆ**, **ತೊವಲುಡಿಗೆ** (ನಾ). ಚರ್ಮದ ಉಡುಗೆ ; ತೊಗಲಿನಿಂದ ಮಾಡಿದ ವಸ್ತ್ರ : ಬರಿ ತೊವಲುಡುಗೆಯವರ ನಾಡೊಂದಿದ್ದಿತು (ಐದುರಿ. ೬೬). **ತೊವಲುಡಿಗೆ** : ನಲಿದು ಬಗಿದುಟ್ಟ ತೊವ [ಪಾಠಾಂ. ಗ] ಲುಡಿಗೆಯಲಗುಗಳೆಸೆಯೆ (ಕಡ್ಡಿರ. ದೇ. ೧೨೬-೧೨).
[ ತೊವರ್$_3$ (< ತೋಲ್$_1$) + ಉಡುಗೆ ]

**ತೊವಲುಡೆ** 'ತೋಲುಡೆ' ನೋ.

**ತೊವಲುಡೆಯ** (ನಾ). ಚರ್ಮವನ್ನು ಬಟ್ಟೆಯಾಗಿ ಧರಿಸಿದವನು ; ಚರ್ಮಾಂಬರಧಾರಿ ; ಶಿವ : "ಈಶ್ವರಂದೊವಲುಡಿ[ಡೆ]ಯನೆಂದೆನಲ್" (ಕಶಿರ. ೫೨) ; ನಡುವಿನೊಳುಟ್ಟ ವಲ್ಕಲಂ ತೊವಲುಡೆಯನ ಕೃತ್ತಿವಾಸಂಬೋಲ್ ಮನೋಜ್ಞಮಾಗಿರೆ (ರಾಜಶೇ. ೪೦-೨೯).
[ ತೊವಲುಡೆ (<ತೋಲುಡೆ) + – ಅ$_7$ ]

**ತೊವಲ್ಗೊಳ್** (ಕ್ರಿ). = ತೊವಲ್ವಿಡಿ : ಪೊಂಗಿ ಕಡಂಗಿ ಬೀರದೊಳೆ ಬೀಗುವ ನಿನ್ನಣುಗಾಳೆ ನೋಡ ನಿನ್ನಂಗನೆಯರ್ ತೊವಲ್ಗೊಳೆ ಭಯಂ ಗೊಳೆ ಕೋಡಗಗಟ್ಟುಗಟ್ಟಿ ಚಿತ್ರಾಂಗದನುಯ್ಯೆ (ಪಂಪಭಾ. ೯-೫೪) ; "ತೊವಲ್ಗೊಳೆ = ಕೈಯಲ್ಲಿ ಚಿಗುರನ್ನು ಹಿಡಿದಿರಲು" (ಪಂಪದೀ. ೩೨೩).
[ ತೊವಲ್$_2$ + ಕೊಳ್$_1$ ]

**ತೊವಲ್ವಲೆ** (ನಾ). ಚರ್ಮದಿಂದ ಮಾಡಿದ ಒಂದು ಬಗೆಯ ಬಲೆ: ಪುಲಿವಲೆ ಕೊಂಬು ಕಣ್ಣ ಮಿಡಿಗಣ್ಣು ತೊವಲ್ವಲೆ . . . ಎಂಬಿನಿತಂ ಪೊಱಗಟ್ಟಿ (ದಶಕು. ೨-೦೦೫). [ ತೊವಲ್₃ (< ತೋಲ್₁) + ಬಲೆ₁ ]

**ತೊವಲ್ವಿಡಿ, ತೋಲ್ವಿಡಿ** (ಕ್ರಿ). (ಶರಣಾಗತಿಯಾಗಿರುವುದನ್ನು ಸೂಚಿಸಲು) ಚಿಗುರುನ್ನು ಕೈಯಲ್ಲಿ ಹಿಡಿ; (ಸೋಲನ್ನೊಪ್ಪಿರುವುದರ ಸಂಕೇತವಾಗಿ) ತಳಿರನ್ನು ಕೈಯಲ್ಲಿ ಹಿಡಿ; ಮಂರೆಹೊಗು: ಕಾಯದೆ ಕಾಮನಾರ್ದಿಸೆ ತೊವಲ್ವಿಡಿವಂತೆಡಗಯ್ಯೊಳೊಪ್ಪೆ ತೋರ್ಪಾಯೆಲೆ (ಪಂಪಭಾ. ೪-೩೭); ಸರಿದ್ವಲ್ಲಭಂ ಹರಿನೀಳಚ್ಛವಿಯಂ ತೊವಲ್ವಿಡಿದು ವೀಚೀಹಸ್ತದೊಳ್ ಘೂರ್ಣಿತಾತುರನಿರ್ಘೋಷಮುಣ್ಮೆ ಪುಯ್ಯಲಿಡುವಂತಿರ್ದತ್ತು (ಮಲ್ಲಿಪು. ೧೨-೦೩೨). **ತೋಲ್ವಿಡಿ**: ತೋಲ್ವಿಡಿದು ಸಾಱ ಪೇಟ್ವವೆಂ . . . ನೀಂ ಬಲ್ವಿಡಿವಿಡಿ ಜನಪದಾಬ್ಧಯುಗವಂ ಬಗೆಯೊಳ್ (ಉಷಾರ. ೫೭). [ ತೊವಲ್₂ + ಪಿಡಿ₁ ]

**ತೊವಲ್ವೆರಸು** (ಅ). ಚಿಗುರು ಸಹಿತವಾಗಿ; ಎಲೆಗಳಿಂದ ಕೂಡಿ: ಪಣ್ವೆರಸು ನಟ್ಟ ಮ್ಯಂದವಾಟಿಗಳುಮಂ ತೊವಲ್ವೆರಸು ನಟ್ಟಾಲಂಗಳುಮಂ (ಪಂಪಭಾ. ೫-೪೭ ವ). [ ತೊವಲ್₂ + ಬೆರಸು₃ ]

**ತೊವಲ್ವೊದೆಯ** (ನಾ). ೧. ಚರ್ಮವನ್ನು ಹೊದೆದವನು. ೨. ಸಿಪ್ಪೆಯಿಂದ ಆವರಿಸಿರುವುದು. ೧, ೨: ತಿಸುಳಿಯಂತೆ ಮುಕ್ಕಣ್ಣನುಂ ತೊವಲ್ವೊದೆಯನುಂ ಮುಗಿಲಂತೆ ನೀರೊಡಲನುಮೆನಿಪ ತೇಂಗಾಯುಂ . . . ಪುರಂ ಕಣ್ಗೆಂಬಾದುದು (ರಾಮಾಶ್ವ. ೧೦೩-೦೬).

[ ತೊವಲ್₃ (< ತೋಲ್₁) + ಪೊದೆ₂ + - ಅ₇ ]

**ತೊವೆ** 'ತೊವ್ವೆ' ನೋ.

**ತೊವ್ವೆ, ತೊಗೆ₁, ತೊಯಿ, ತೊಯೆ, ತೊವೆ, ತೋಯ₁, ತೋಯಿ, ತೋಯೆ, ತೋವೆ** (ನಾ). ತೊಗರಿ, ಅವರೆ ಮುಂತಾದ ಬೇಳೆಗಳನ್ನು ಬೇಯಿಸಿ ತಯಾರು ಮಾಡುವ ಒಂದು ಬಗೆಯ ವೇಲೋಗರ: ಹುಲಿಗಿಲ ಬೇಳೆಗಳಂ ನೇಟಿಲ ಬೀಜಂ ... ತೊವ್ವೆಯಡೆ ಸವಿವಡೆಗುಂ (ಲೋಕೋಪ. ೮-೨೩); ಕೊಟುಂ ತೊವ್ವೆಯುಂ ಮೊದಲಾದುವ ನಟ್ಟವರೆಂಬುದು ವ್ಯವಹಾರದೊಳಪ್ಪ ಸತ್ಯಮೆಂಬುದು (ಪಸಾರ. ೫೯೧); ವರ ಸಣ್ಣಕ್ಕಿಯೋಗರ ತೊವ್ವೆ ಪಳಿದ್ಯವ ತಳತಳದಲಿ ಬಡಿಸಿದರು(ಮೋಹತ. ೩-೫೦). **ತೊಗೆ₁**: ತೊಗೆ ತೊಗೆಯ ರಸ ಪುಣುಗುರಾಜಾನ್ನಮಿಶ್ರಿತದ ... ನೈವೇದ್ಯಮಂ ಧಗಧಗಿಪ ಕಲಧೌತಕನಕಹರಿವಾಣದೊಳು ತಂದಿಡಲು (ಪ್ರಭುಪು. ೯-೫೭); ಜೋಳದ ಬೋನಕ್ಕೆ ಬೇಳೆಯ ತೊಗೆಯಾಗಿ ಕಾಳೆಮ್ಮೆ ಕಱೆದ ಹಯನಾಗಿ (ಸರ್ವಜ್ಞ. ೧೬೧೭); ಕಡುಬುಪ್ಪಿಯ್ಯ ಕಡಲೆ ತೊಗೆ ಮಾಡಿ ತುಪ್ಪ ಹಾಕಿ ಕೊಡದೋಳಿಗಿಕ್ಕೆ ಹದಿನಾರ (ನಾಪದ. ೬೭). **ತೊಯಿ**: ಅನ್ನ, ಉದ್ದಿನ ತೊಯಿ, ಕಡುಬು, ಹಾಲು, ತುಪ್ಪ, ಮೊಸರು ಸಹ ಬಲಿಯಂ ತುಂಬಿ (ಶಾಲಿಜ. ೧೨೬-೩); ತೊವರಿಯ ಹಳಚಗಿರುವ ತೊಯಿ ರಸ ಹುಣಿಸೆಪಳದ್ಯವ ಎಳೆವೆಣ್ಣುಗಳಿಕ್ಕಿದರು (ಜ್ಞಾನಚ. ೩೯-೦೩೭). **ತೊಯೆ**: ಮತದಲು ನಡೆವ ಛತ್ರ ಅಯಿದು ಪರಿ ಶಾಕ ತೊಯೆ ತುಪ್ಪ ವಿಳೆಯ ಸಹಿತ ಅಟ್ಟುವ ಬ್ರಾಹ್ಮಣ ೧ (ಸೌಇಇ. IX-ii, ೪೫೦-೯; 1447); ಸಣ್ಣಕ್ಕಿಯೋಗರಂ ಹೆಸಱ ತೊಯೆ ಹೊಚ್ಚಹೊಸ ಬೆಣ್ಣೆ ಕಾಸಿದ ತುಪ್ಪ (ಸಮ್ಯಕ್ತ್ವ. ೬-೨೪); **ತೊವೆ**: ಉಪಾಧ್ಯಾಯಂಗೆ ಕಟಿಮೆಯ ಕೂಟುಂ ತುಪ್ಪಮಂ ತೊವೆಯು [ಪಾಠಾಂ. ತೋಯು] ಮ ನು ಣ ಲ್ಕೊ ಟ್ಟು ಕುಮಾರನನೋದಿಸುಗೆಂದೋಲೆಯನಟ್ಟಿದೊಡೆ (ವಡ್ಡಾರಾ. ೭೫-೧೫); ಸಂದ ತಿರಿಕಂಗೆ ತೊವೆ ತುಪ್ಪಂ ದೊರೆಕೊಳಲುಣ್ಮೆ ನಲಿವ ತೆಱದಿಂ (ಧರ್ಮಾಮೃ. ೯-೩೧); ಶಿವುಡುಗಳೆದ ತೊವರಿಯ ತೊವೆ ಕಾಯ್ದಿಟಿದ ತುಪ್ಪಂ ಕೋಡುವ ಕಟಿಲಲ್ಲದೆ ದಿವ್ಯಭೋಜನಂ ಪೆಱತುಂಟೇ (ಕಾವ್ಯಾವ. ೨೯೧); ಸುವರ್ಣದ ಸಟ್ಟುಗದಿಂ ತೊವೆಯೊಳ್ ಕಲಸಿದ ಕಟಿಮೆಯ ಕೂಟುಂ ತುಪ್ಪಮುಂ ನೀಡಿರೆ (ಪುಣ್ಯಾಸ್ರ. ೯-೦೭ ವ); ಪ್ರಸಾದ ತೊವೆ ಮೂರು ವೇಲೋಗರ (ಎಕ. VIII, ತೀರ್ಥಹ. ೧೫೮-೧೮; ಸು. 1400). **ತೋಯ**: ಉಂಡಹೆನೆಂಬಲ್ಲಿ ಅನ್ನವನಿಕ್ಕದ ಸತ್ರ ಮತ್ತೆ ಅಕ್ಕಿಯು ಹೇಱ ಮಸ್ತಕದಲ್ಲಿರಿಸಿ ಘಟ್ಟಿತುಪ್ಪ ತೋಯುವ [ಪಾಠಾಂ. ತುಯ್ಯಲ]ನುಣ್ಣೆಂದು ಬಿಕ್ಕಿಬಿಕ್ಕಿಳುವವನಂತೆ (ಉರಿವ. ೩೩-೩೫); ಹೆಸಱ ತೋಯ ಪಳದ್ಯ (ಜೋಂಕಶಾ. ೦೯೧೦, ಕುಮಟ. ೦೦೩-೨೬; 1475). **ತೋಯಿ**: ಉದ್ದಿನ ತೋಯಿ, ಆಲಸಂದೆಯ ಗುಗ್ಗರಿ . . . ಇವಂ ಮಂತ್ರಸಮನ್ವಿತವಾಗಿ . . . ಬಲಿಯಂ ಕೊಡಲು (ಶಾಲಿಜ. ೧೩೦-೩); ತುಪ್ಪ ಕುಡುತೆ ೨ಕ್ಕೆ ತಾರ ೫ ತೋಯಿ ತಾ ೨ ಶಾಕ ೫ (ಸೌಇಇ. ಮಂಗಳೂರು, ೪೬೫-೩೩; 1312). **ತೋಯೆ**: ಸಣ್ಣಗಳವೆಯೋಗರ ತೊಗರಿಯ ತೋಯೆ ಬೆಣ್ಣೆಗಾಸಿದ ತುಪ್ಪವೆಱದು ಅಣ್ಣಂದಿರುಣಬನ್ನಿ ಯೆನಬೇಕಲ್ಲದ ಹೆಣ್ಣೆಗೆಂದವ್ವ ಕರೆವರೆ (ನೇಮಿಸಂ. ೨೩-೨೬೯); ಕೋಯೆ ಪಾಯಸ ತುಪ್ಪ ಕಲಸು ವೇಲೋಗರ ಶಾಳಿಲ ಮುಂತಾದ ಪಂಚಭಕ್ಷಕ್ಕೆ (ಎಇ. VIII, ೦೩೨-೨೯; 1586) **ತೋವೆ**: ಸಣ್ಣ ಛತ್ರದೋಗರವಂ ಕಟ್ಟಿಸರ ತೋವೆಯುಂ ದೆಸೆದೆಸೆಗೆ ಪಸರಿಸುತ್ತ ಪರಿಮಳದಿಂ ಪಂಗವಂಗಿಪ ಸದ್ಯ ಗಟ್ಟಿಮೊಸರು (ಧರ್ಮಪ. ೨-೫೭ ವ); ಹೆಸಱ ಕೋವೆ ತುಪ್ಪ ನಾಲ್ಕು ಪರಿಯ ಶಾಕ ವೀಳೆಯ ಸಹ ಪ್ರತಿದಿನ ಒಂದಕ್ಕಂ ಕಾಟಿಹಣ ಒಂದಱ ಲೆಕ್ಕದಲು (ಸೌಇಇ. IX-ii, ೪೧೭-೩೩; 1377); ತೋವೆಯಿಲ್ಲದ ಊಟ ಲೋವೆಯಿಲ್ಲದ ಮನೆಯು ನೋವನಱಿಯದಳ ಮನೆವಾರ್ತೆ ಸಿಹಿಯಱಿ ಬೇವು ತಿಂದಂತೆ (ಸರ್ವಜ್ಞ. ೦೭೧೯); ಮದುವೇ ಮನೇಲಿ ತೋವೆಗತ್ತರು ಗೌರೀಹಬ್ಬದಲ್ಲಿ ಕಾಯಿಗತ್ತರು (ಗಾದೆ).

[ ದೇ.॥ ತಮಿ. ತುವ್ವೆ; ತುಳು. ತೋವೆ ]

**ತೊಸಕ್** (ನಾ). ಒಂದು ಅನುಕರಣ ಶಬ್ದ: ಕೆಸರಿನಲ್ಲಿ ತೊಸಕ್ಕೆಂದು ಕಾಲು ಹೂತು ಹೋಯಿತು (ರೂಢಿ).

**ತೊಸಕ್ ತೊಸಕ್** (ದ್ವಿರುಕ್ತಿ): ದಾರಿಯ ಕೆಸರಿನಲ್ಲಿ ಗಾಡಿ ತೊಸಕ್ ತೊಸಕ್ ಎಂದು ಶಬ್ದಮಾಡುತ್ತಾ ಹೋಯಿತು (ರೂಢಿ).

**ತೊಳಂಕು, ತೊಳಕಂ, ಸೊಳಕ** (ನಾ). ೧. ದೇಹದ ಮಧ್ಯಭಾಗ: ಭ್ರೂವಕ್ಷಂ ತೋಳ್ ತೊಳಂಕು ತೊಡೆಯೆಂಬೆಡೆಯೊಳ್ ಕೀಲಿಡುವು ಭೀಮನಿಸೆ ಎಸಿಖಾವಲಿ ಮಾಱಂಕರಾತಿಸೇನೆಯ ಮೆಯ್ಯೊಳ್ (ಕಾವ್ಯಾವ. ೦೬೯); ಎಕಲ್ಪಬಿಂದುಗೆ – ಕದಂಪು, ಕದಪು . . . ತೊಳಂಕು, ತೊಳಕು (ಕಮಿದ. ೩೭ ಪ್ರಯೋ); "ಕೀಲಂ; ಸಂದು" (ಪ್ರಭಿನ್ನ). **ತೊಳಕು**: ೧. ಅಡಿ ತೊಡೆ ಪೊರ್ಕುಟುಂ ತೆಗಲೆ ಕೈಕಣಕಾಲ್ ಕೊರಲೆಂಬಿವುಂ ಬೆರಲ್ ನಡುವುರ ಬೆನ್ ಬಸಿಱ ತೊಳಕು ಕರ್ಚರೆ ಮುಯ್ಯು ಮುಸುಂಬು ಮೂಗು ಪೆರ್ದೊಡೆ ಕಟಿ ಮುಂಮುಡಂ ಪರಡು ಸಂದಿ ನೊಸಲ್ ಪಣೆ ಕಣ್ ಕದಂಪು ಮೆಂಬೆಡೆಯನೆ ನಟ್ಟುಪುರ್ಚಿದುವು ನೇರ್ದುವು ಸೀಳ್ದುವು ಪಾರ್ಥನಂಬುಗಳ್ (ಪಂಪಭಾ. ೧೧-೦೩೭). ೨. **ಸೊಳಕ**: ಸೊಂಟ; ನಡು: "ಸೊಳಕ = ಟೊಂಕ; ನಡು" (ಚಾನಕೋ. ೫೦). 'ಸೊಳಲಂ' ಪರಾ.

**ತೊಳಂಚಿ₁** 'ತೊಳಸಿ' ನೋ.

**ತೊಳಂಚಿ₂** 'ತೊಳಂಚೆ₂' ನೋ.

**ತೊಳಂಚೆ₁** 'ತೊಳಸಿ' ನೋ.

**ತೊಳಂಚೆ₂, ತೊಳಂಚಿ₂** (ನಾ). ಒಂದು ಸ್ಥಳದ ಹೆಸರು; P ಈಗಿನ ಮಂಡ್ಯ ಜಿಲ್ಲೆಯ ತೊಣಚಿ ಎಂಬ ಊರು: ತೊ ಳ ಂ ಚಿ ಯ ದ ಸೀಮೆಯೊಳ್ ತಾಗಿ ಅರಸಿಯು (ಎಕ. XII, ನಂಜನ. ೨೬೯-೯೨; 904). **ತೊಳಂಚೆ₂**: ಹದಿನೆಣ್ಟು ವಿಷಯದ ದೇಸಿಯು ಕರೆದು ತೊಳಞ್ಚೆಯ ಅಬ್ಬಿಕಾಱದೇವರು ನಗರೀಸ್ವರದೇವರ್ಗ್ಗೆ ಕೊಟ್ಟ ಧರ್ಮಂ (ಮೈಆರಿ. ೦೯೧೫, ೨೦-೧೧; 1047). [ ? ]

**ತೊಳಕಲು** (ನಾ). (ಉಕ) ಮುಸುರೆನೀರು ; ಕಲಗಚ್ಚು : ಈ ಹಸು ಕೊಡುವುದು ಒಂದು ಸಿದ್ದೆ ಹಾಲು, ಒಂದು ಉಸುರಿಗೆ ಮೂರು ಬಾನಿ ತೊಳಕಲನ್ನು ಕುಡಿಯುತ್ತದೆ (ರೂಢಿ).

[ ತೊಳೆ$_1$ + – ಕಲು$_2$ (< – ಕಲ್$_4$) ]

**ತೊಳಕು** 'ತೊಳಂಕು' ನೋ.

**ತೊಳಗು$_1$** (ಕ್ರಿ). ಹೊಳೆ ; ತಳತಳಿಸು ; ಪ್ರಕಾಶಿಸು ; "ತೊಳಗು–ಕಾಂತೌ (ಪ್ರಕಾಶಿಸು" (ಶಮ ಧಾ) ; ಅತಿಧವಳಜಳಧರವಥಮುಂ ತೊಳಪೆಳೆ ವಜೆಯಿಂ ಕಳೆದುವು ಮುಳಿಸಂ (ಶವಿರಾ. ೬-೧೬೭) ; ಶ್ರೀಗೆ ಕುಳಸದನ ಮನೆ ತೊ[ಪಾಠಾಂ. ಬೆ]ಳಪ ಮಣಿಭವನದೊಳ್ (ಅದಿಪು. ೬-೨೭ ರಗಳೆ) : ತೊಳಗುವ ಪಾರಿಜಾತದಲರ್ಗೊಂಚಲಿನೊಪ್ಪುವ ಕರ್ಣಪೂರಮಂ ಕಳೆದೊಡಂ (ಕಾಂಡಪೂ. ೮೩೩) ; ಭಾಸುರಮಾಯ್ತು ಜನೇಂದ್ರಾವಾಸಂ ತೊಳಗುವ ಸುವರ್ಣಕಳಶೋನ್ನತಿಯಿಂ (ಸೌಇಇ. XI-i, ೫೨-೪೫ ; 1007) ; ಮೃಗನೇತ್ರೆಯ ತೊಳಗುವ ಕಾಲುಗುರ್ಗಳ ನೂಪುರದ ಪೊಳೆವ ವಜ್ರಂಗಳ ಕಾಂತಿಗಳಡರೆ (ಜಗ್ದಪು. ೩-೯೫) ; ನಿಡುಗಣ್ ತೊಳಪ್ಪ ಕದಪುದ್ದ ನೊಸಲ್ . . . ಎಂಬಿವಜೊಪ್ಪಿದುದಿರ್ದ ವನೇಚರೀಜನಂ (ಪುಷ್ಪಪು. ೫-೯೦).

**ತೊಳತೊಳಗು** (ದ್ವಿರುಕ್ತಿ) : ರಕ್ತಾಶೋಕಪಲ್ಲವದಂತೆ ತೊಳತೊಳಗುವ . . . ಕರತಳಪಲ್ಲವಂಗಳ್ (ಪಂಪಭಾ. ೨-೩೯ ವ) : ಅಂದೇ ಮಣಮುಂದ ಪುತ್ರೂರ್ಗೆ ಕಳುಪುತ್ರವಿರೆ . . . ತೊಳತೊಳಪ ದಿವ್ಯಾಭರಣಮಣಿ ಪ್ರಕರಮಂ (ನಂಬಿರ. ೫-೨೨) ; ಶಕ್ರನ ನೊಜುವುಡಿ ತೇಜದಲಿ ತೊಳತೊಳಗಿದನು ಕಲಿಪಾರ್ಥ (ಕುವ್ಯಾಅ. ೬-೮೪). **ತೊಳಗಿ ಬೆಳಗು** = ಅತಿಶಯವಾಗಿ ಪ್ರಕಾಶಿಸು : ತಳತಳಿಸಿ ತೊಳಗಿ ಬೆಳಗುವ ಪಳಿಕಿನ ಸಜೆಯೊಂದು . . . ಒಪ್ಪಿ ತೋಜಿತ್ತಾಗಳ್ (ಶಬ್ದಾಸಾ. ೧೦೫೦ ಪೂರ್ವಕ) ; ಮದನನ ಸೋದರದೇವಿಗೆಯೆನೆ ತೊಳಗಿ ಬೆಳಗಿದಂ ತುಹಿನಕರಂ (ಪಂಪಭಾ. ೪–೫೨) ; ಇನಬಿಂಬಂ ಕಣ್ಗಳುಂಬಂ ತೊಳಗಿ ಬೆಳಗೆ (ಕಾದಂಪೂ. ೩೫೪) ; ಪುಳಂ ವನಬ್ಬಿಸುತೆಯ್ತಪ್ಪನೆ ಜಯ ತೊ ಳ ಗಿ ಬೆ ಳ ಗು ತ ನ್ನೊ ಳ ಗಿ ಪ್ಪ ನೆ ಜಯ (ಅಯುಕ. ೮–೧೪) ; ಹ ಬ್ಬು ಗೆ ಯ ಹದಿನಾಲ್ಕು ಲೋಕಂ ಮೊಬ್ಬುಗಳನೀಡಾಡಿ ನಭದೊಳಗೊಬ್ಬನೇ ರವಿ ತೊಳಗೆ ಬೆಳಗುವ ಪೋಲು (ಕುವ್ಯಾಅ. ೮-೯). **ತೊಳತೊಳತೊಳಗು** = ಉ ಜ್ವ ಲ ವಾ ಗಿ ಬೆಳಗು ; ಬಹಳ ಪ್ರಕಾಶಮಾನವಾಗಿ ಕಾಂತಿಯನ್ನು ಬೀರು : ದಿವ ತಳ್ತತಳದ ಪೊರೆಯೊಳಗೆ ತೊಳತೊಳತೊಳಗಿ ಪೊಜಮಡುವೆಳನೇಸಜ ಬಳಗದ ಬೆಳಗನೊಳಕೊಂಡು (ಅದಿಪು. ೨-೬೦ ವ) ; ತೇಜಂ ಪಜ್ಜಳಿಸ ತಟತಟಿಸಿ ತೊಳತೊಳತೊಳಗಿದನಸ್ತಮಯಸಮಯದೊಳ್ ದಿನಪಸುತಂ (ಪಂಪಭಾ. ೦೨-೨೦೦) ; ತೊಳತೊಳತೊಳಗುವ ಬೆಳ್ದಿಂಗಳ ಪಕ್ಕದ ಪೊಳೆವ ರಶ್ಮಿಜಾಲಮಿದೆನೆ . . . ಅದೇನೊಪ್ಪಿದುವೊ ಧವಳಚಮರರುಹಂಗಳ್ (ಕಾದಂಅ. ೯೬) ; ಹಂಸನ ಚೆಲ್ವಂ ತಳೆದೇನೆಸೆದುವೊ ತೊಳತೊಳ ತೊಳಗುವ ಶಶಿಕಾಂತಮಣಿಕಮಂಡಲಂ ಕೆಲದೊಳ್ (ಚಂದ್ರಪು. ೯-೨೭) ; ಮೂಲಪ್ರಕೃತಿಗಳನ್ನುತ್ತರಿಸಿ ತೊಳತೊಳತೊಳಗೆ ಬೆಳಗುವ ಪರಮಶಿವನಲಿ ಸೆಣಸಿದೆವಲಾ (ಕುವ್ಯಾಅ. ೬-೬೫).

[ ದೇ.॥ ತಮಿ. ಮಲ. ತುಳಙ್ಙು, ತುಳಕ್ಕು ; ತೆಲು. ತುಲಕಿಂಚು ]

**ತೊಳಗು$_2$** (ನಾ). ಬೆಳಕು ; ಕಾಂತಿ ; ಪ್ರಕಾಶ : "ಕಳೆಗದಿರು . . . ತೊಳಗು ಬೆಳಗುಂ ಚವಿಯು ತಿಳಿವೆಸರ್ ಕಾಂತಿಗೆ" (ಕಬ್ಬಿಗಮಂ. ೦೬) ; "ತೊಳಗೆನೆ ಮಿನುಗೆನೆ . . . ಕಾಂತಿಯೆನಿಕ್ಕುಂ" (ಕವಿಕಂ. ೦೦೦) ; "ತೊಳಗು ಕಾಂತಿ" (ಕಶರ. ೪೮). [ <ತೊಳಗು$_1$ ]

**ತೊಳಚಿ** 'ತೊಳಸಿ' ನೋ.

**ತೊಳಟಿ** 'ತೊಳಸಿ' ನೋ.

**ತೊಳಪ$_1$** (ನಾ). = ತೊಳಗು$_2$ : "ತೊಳಗು . . . ತೊ[ಪಾಠಾಂ. ತ]ಳಪಂ. ಮಸೆ–ಈ ೧೪ ಕಾಂತಿ" (ಕಶಸಾ ೧೦-೨೦೨) ; "ಮಸೆಯೆಂದು ತೊಳಪ [ಪಾಠಾಂ. ತಳಪ, ತೊಳೆಪ]" (ಕಬ್ಬಿಕೈ. ೫೩). [ ತೊಳಗು$_1$ + – ಪ$_2$ ]

**ತೊಳಪ$_2$, ತೊಳಹ$_3$** (ನಾ). ಒಂದು ಮನೆತನದ ಹೆಸರು ಮತ್ತು ಆ ಮನೆತನಕ್ಕೆ ಸೇರಿದವನು : ವಿನಯನಿಧಿ ರಾಜಗೌಡಿಗೆ ಮನುಚರಿತನೆನಿಪ್ಪ ತಿಪ್ಪಗೌಡಂಗಂ ಕೇತನು ಸಾತನೆಂಬ ಮಕ್ಕಳು ಜನಿಯಿಸಿದರು ತೊಳಪ ಕುಳಕೆ ತಿಳಕರೆನಲ್ಕಂ (ಕಇ. I, ೨೪-೩೦ ; 1148). **ತೊಳಹ$_2$** : ಶಿವನಂದಯೋಗಿ ನಿವೇದ್ಯಶಾಲೆಯಂ ಮಾಡಿ[ ಸೂ ]ರಲಲಂ ತೊಳಹನ ಕಯ್ಯಲೂ . . . ಬದಿರೆ ಗದ್ದೆಯ ಮೇಲಿಕ್ಕಿದ ವಾಣ್ಣ್ಯಗದ್ಯಾಣಂ (ಸೌಇಇ. VII. ೩೮೦–೦೩ ; 1140) ; ಶ್ರೀಶಂಖರನಾರಾಯಣದೇವರಿಂಗೆ ಮಾದಾಡಿ ತೊಳಹರು ಮಾಡಿ[ದ] ಧರ್ಮಪ್ರತಿಷ್ಠೆ (ಸೌಇಇ. IX-ii, ೪೨೫-೦೦ ; ಸು. 1401) ; ತುಳುವದ ತೊಳಹರ ಮೂಲವು ಬೆಳಗಾವಿಯ ತೊಳಹರ ಕುಟುಂಬವೆಂಬುದಾಗಿ ಅನುಮಾನಿಸಲಾಗಿದೆ (ತುಳುನಾ. ೨೬೨).

**ತೊಳಹರ ಬಳಿ** = ತೊಳಪರ ವಂಶ : ತೊಳಹರ ಬಳಿಯ ಅನತಕ ಸೆಟ್ಟಿತಿಯ ಮಗ ಆದಿಸೆಟ್ಟಿ (ಪ್ರಾಆರಿ. ೧೯೪೬, ೬-೨ ; 14ನೆಯ ಶಠ) : ತೊಳಹರ ಬಳಿಯ ಮಾಣಿಕ್ಯಸೆಟ್ಟಿಯ ಗಡಿಯಿಂದಂ ಬಡಗಲು (ಸೌಇಇ. IX-i., ೪೬೪–೦೭ ; 1472) ; ತೊಳಹರ ಬಳಿಯ ಹರಿಯ ದೇವ[ಕ] ನಾಯಿಕಿತಿಯ ಮೊಂಮಗ (ಕಇ. I, ೭೭-೯ ; 1494). [ ? ]

**ತೊಳಪ$_3$** (ನಾ). (?) : ಆ ಗ್ರಾಮದ ಸೀಮೆಯಂತೆ[ಂ]ದೊಡ ಅಲಿಗೊಂದದಿಂ . . . ತೊಳಪ ಬಳವ ಬಳಿಯಳಿಯಿಂ . . . ಒಳಗುಳ್ಳ ಭೂಮಿ (ಇಅ. XVIII, ೩೦೨-೦೮ ; 11ನೆಯ ಶಠ). [ ? ]

**ತೊಳಪು** (ನಾ). ಕಾಂತಿ; ಪ್ರಕಾಶ: "ತೊಳಪುಂ[ಪಾಠಾಂ. ತೊಳಪಂ, ತಳಪುಂ] ಮಿಜುಗು . . . ಡಾಳಂ ತಾವೆನಲ್ಕಾಂತಿಗೆ ಪೆಸರ್" (ಕಬ್ಬಿಕೈ. ೨೪) ; ತೊಳಪಿಂದೆ ರತ್ನವೊಪ್ಪೆ (ಸೌಇಇ. IX-i, ೨೪೮-೦೭ ; 1196) ; ಎಳವೆಣ್ಗಳ ಕಣ್ಗಳಗುಜ್ಜಳಭಟರ ಕೃಪಾಣಲತೆಯ ತೊಳಪುಂ . . . ಪರ್ವಿತಾ ಸಭಾಮಂದಿರಮಂ (ಉದ್ಭಟ. ೨-೦೭) ; ಬಲು ಬೊಬ್ಬೆ ಸಿಡಿಲು ಖಡ್ಗಗಳ ತೊಳಪು ಮಿಂಚು ಸಲೆ ತುರಗದ ದನಿ ಗುಡುಗು (ಕಂನವಿ. ೧೮-೦೦೦).

[ ತೊಳಗು$_1$ + – ಪು$_2$ ]

**ತೊಳಮಿ**(ನಾ). (?):ಪಿತೃಕಳತ್ರ ಮಿತ್ರಜನಮಂ ಕಾಯ್ವಾನ್ಯ ತಾಬ್ದಿಪೊಡೀ ನಂಡಿಯಲ್ಲೇಬ್ಬುವೇ ಪೆಂಪನೊಪ್ಪ ಗುಣತೆ ತೊಳಮಿ ಕಿಟ್ಟ ಗೋಪಯ್ಯನಂ (ಎಕ. III, ಮೈಸೂರು, ೬-೦೦ ; ಸು. 760). [ ? ]

**ತೊಳಲ್$_1$** 'ತೊಟಲ್$_1$' ನೋ.

**ತೊಳಲ್$_2$** 'ತೊಟಲ್$_2$' ನೋ.

**ತೊಳಲಾಟ** (ನಾ). ೧. ಸಂಕ್ಕಾಟ ; ಅಲೆದಾಟ ; ೨. ಕಷ್ಟ ; ಬವಣೆ ; ಗೋಳಂ : ಈ ತೊಳಲಾಟದೊಳಗೆ . . . ಬಾಳುವೆಗಾಗಿ ಚಿಂತಿಸುತ್ತಾ ತಾಪಕ್ಕೊಳಗಾಗಿ (ದಯಿರ. ೦೪೭) ; ಈ ಗೋಳಾಟವು ಅವಳ ಅಂತರಂಗದ ತೊಳಲಾಟವಾಗಿತ್ತು (ಭಾರತಿ. ೦೫೩) ; ಇನ್ನು ಈ ತೊಳಲಾಟ ಯಾಕೆ ? (ದೂಬಿಟ್ಟ. ೦೦೯) ; ಹೆಂಗಸರ ಈ ತೊಳಲಾಟ ಇದ್ದೇ ಇದೆ (ಸಮುಕೀ. ೯೩).

[ ತೊಳಲ್$_1$ (<ತೊಟಲ್$_1$) + ಆಟ ]

**ತೊಳಲಾಡು** (ಕ್ರಿ). ೧. ಸುತ್ತಾಡು ; ಅಲೆದಾಡು : ದಿನವೆಲ್ಲಾ ಕಾಡಿನಲ್ಲಿ ತೊಳಲಾಡಿ ಅವರೆಲ್ಲಾ ಬಹಳ ಆಯಾಸಗೊಂಡರು (ರೂಢಿ). ೨. ಕಷ್ಟಪಡು; ತೊಂದರೆಪಡು; ಗೋಳಾಡು: ನಮ್ಮ ಕೈಯಾರ ಬಂಧನವನ್ನು ತೊಡಗಿಸಿ ಅದರಲ್ಲಿ ಸಿಕ್ಕಿ ತೊಳಲಾಡುವುದು ನನಗೆ ಸರ್ವಥಾ ಇಷ್ಟವಿಲ್ಲ (ಅನಾಮಿ. ೦೯) : ಹಿಂದೂಸ್ಥಾನವೇ ದಾಸ್ಯದಲ್ಲಿ ತೊಳಲಾಡುವವರಿಗೆ ಚಟಗಳಿಗೆ ದಾಸನಾಗದ ಹಿಂದೀಯನು ಯಾರು (ಮುಂಗಾಪು. ೩೮).

[ ತೊಳಲ್$_1$ (<ತೊಟಲ್$_1$) + ಆಡು$_1$ ]

**ತೊಳಲಿಕಲ್ಲು** 'ತೊಟಲಿಕಲ್' ನೋ.

**ತೊಳಲಿಕೆ** 'ತೊಟಲ್ಕೆ' ನೋ.

**ತೊಳಲಿಚು** 'ತೊಟಲ್ಚು' ನೋ.

**ತೊಳಲಿಸು** (ಕ್ರಿ). ಸುತ್ತುವಂತೆ ಮಾಡು ; ತಿರುಗುವಂತೆ ಮಾಡು : ಬಂದುದೊಂದು ಸುಳಿಗಾಳಿ ಧರೆ ನಡಗುವಂತೆ . . . ತೊಳಲಿಸಿತಜಾಂಡ ಶತಕೋಟಿಗಳನು (ಜೈಮಿಭಾ. ೩೨-೩೯) ; ಅರ್ಜುನನನ್ನು ಸುಮ್ಮಸುಮ್ಮನೆ ಸೂಳೆಗೇರಿಯಲ್ಲಿ ತೊಳಲಿಸಿರುವುದೂ ಇದಕ್ಕೆ ನಿದರ್ಶನ (ಕಾವ್ಯಸ. ೮೧).
[ ತೊಳಲ್$_1$ (< ತೊಟಲ್$_1$) + – ಇಸು$_3$ ]

**ತೊಳಲು$_1$** 'ತೊಟಲ್$_1$' ನೋ.

**ತೊಳಲು$_2$** (ನಾ). ಚಿಗುರು ; ತಳಿರು : ಆ ಗಾಳಿ ತಾನೆ ಬೀಸಣಿಗೆಯಾಗಿ ತನ್ನನ್ನೆ ಬೀಸಿಕೊಳಲು ತಲೆಯಲ್ಲಿ ಹೂವು ಅರಳಿರಲು ಮುಡಿಸಿಕೊಳಲೇಕೆ ತಳಿರ ತೊಳಲು ? (ಅಕಲು. ೧೦೦-೧೯). 'ತೊವಲ್$_2$' ಪರಾ.
[ < ತಳಿಲ್$_2$ ]

**ತೊಳಲೆ** 'ತೊರಳೆ' ನೋ.

**ತೊಳಲ್ಕೆ** 'ತೊಟಲ್ಕೆ' ನೋ.

**ತೊಳಲ್ವಲೆ** (ನಾ). ಒಂದು ಬಗೆಯ ಬಲೆ : ಕೋಲುವಲೆ ಹಬ್ಬಲೆ ತೊಳಲ್ವಲೆ ಸಗಾಢವಲೆಗಳ ಹೊಟಿಗಳೊಳಿಯಂ ಪೊತ್ತು (ಸೌಂದಪು. ೧೮-೩೯). [ ತೊಳಲ್ ? + ಬಲೆ$_1$ ]

**ತೊಳವಿಗೆ** (ನಾ). ಸಮೂಹ ; ಗುಂಪು (?) : ವಾರಿಯೊಳರ್ದಿಕೊಳ್ವರಣ್ಯ ವಾರಣಂಗಳೊಡನೆ ಭರದಿಂ ಪೋರ್ಗಂ ಮೊಗಂಬುಗುವ ನೀರ ವೇರಾನೆಗಳ ತೊಳವಿಗೆಗಳೊಳಂ (ಚಂದ್ರಪು. ೫-೪೦ ವ). [ ? ]

**ತೊಳಸಂಬಟ್ಟೆ** (ನಾ). ಅಸ್ತವ್ಯಸ್ತತೆ; ಅವ್ಯವಸ್ಥೆ; ಗೊಂದಲ : ಪಲ್ಲದ ಸ್ವರ್ಗ ಅನುಭವಿಸುತ್ತಾ ಇರುವಾಗ ಆಧೀನಿನ ನರಕದ ತೊಳಸಂಬಟ್ಟೆ ಜ್ಞಾಪಿಸುತ್ತೀಯಲ್ಲೇ ! (ನಡದಾ. I. ೫೨೬) ; (ನೀತಿ, ಮೊ.ಗಳ ವಿಷಯದಲ್ಲಿ) ತೊಳಸಂಬಟ್ಟೆಯ, ಸೊಟ್ಟಪಟ್ಟ, ಸುತ್ತುಬಳಸಿನ; ವಕ್ರ, ಕುಟಿಲ (Tortuous. ಇಂಕನಿ). 'ಕಂಡಾಬಟ್ಟೆ' ಹೋ. [< ತೊಟಸು$_1$]

**ತೊಳಸಾಟ** (ನಾ). ಜಗಳ ; ಕಲಹ : ಆಚಾರ್ಯರಿಗೆ ಕವುಟಲ್ಯಬುದ್ಧಿಯಂ ಕಲಿಸಿ ಒಂದಕೊಂದ ನೆನೆದು ತೊಳಸಾಟವಂ ಮಾಡಿ (ಎಕ. II, ೩೩೩-೨೨ ; 1206 ?) ; ತೊಳಸಾಟವಿದು ಗೋಚರಿಸಲಜಿಯದು ಗೋಮಿನೀಧವ ನೊಡನೆ ನಿನಗೆಂದ (ತೊರೆರಾ. ೬-೨-೨೪) ; ಮರುಳೆ ಸುಮ್ಮಗಿರು ನಮ್ಮ ಕಣ್ಣಾರೆ ತೊಳಸಾಟವಂ ಮಾಡದಿರಿ (ತುರಂಗ. ೩೪-೪೫).
[ ತೊಳಸು$_4$ (< ತೊಟಸು$_2$) + ಆಟ ]

**ತೊಳಸಿ, ತೊಳೀಚಿ$_1$, ತೊಳಂಚಿ$_1$, ತೊಳಚಿ, ತೊಳಟಿ** (ನಾ). = ತುಲಸಿ : "ತುಳಸೀ – ತೊಳಸಿ" (ಒಷಧಿ. ೭೧) ; ರುದ್ರಾಕ್ಷಿಯ ಧರಿಸ ಲೊಲ್ಲದೆ ಪದ್ಮಾಕ್ಷಿ ತೊಳಸಿಯ ಮಣಿಯಂ ಕಟ್ಟಿಕೊಂಬಿರಿ (ಸರ್ವಜ್ಞ. ೧೬೮-೮೫) ; ನಾಗದೇವನು ಮಾಡಿಸಿದ ತೊಳಸಿಯ ವ್ರಿಂದಾವನಕೆ ಸರ್ವ್ವರೂ ಅನುಕೂಲರು (ಎಕ. III, ಮಳವ. ೧೫-೩ ; 1389 ?) ; ಇದ ವಿಚಾರಿಸೆ ಬಜಿಯ ತೊಳಸಿಯ ವುದಕದಂತಿರೆಯಲ್ಲಿ ನೋಳ್ಪುದು ಪದುಮನಾಭನ ಮಹಿಮೆ ಧರ್ಮವಿಚಾರ ಮಾತ್ರವನು (ಕುಮಾ್ಯ. ೧-೧೪) ; ಅಮ್ರುತಪಡಿಗೆ ಅಕ್ಕಿ . . . ತೊಳಸಿ ಹೂವಿನ ಮಾಲೆ (ಎಕ. VI, ಮೂಡಿಗೆ. ೫೯-೭ ; 1520) ; ಕೊರಲ ದಂಡೆಯ ತೊಳಸಿಯ ಪೊಸ ಚಿಗುರು (ಗೀತಗೋ. ೦೩-೨೦). **ತೊಳಂಚಿ$_1$** : ಬನ್ನಿಯೆಕ್ಕೆಯುತ್ತರ ಣೆಯ ಬೆಲ್ಲವತ್ತ್ರದ ತೊಳಂಚಿ [ಪಾಠಾಂ. ಚಿ] ಯ ಪತ್ರೆಯನೊಂದಿನಿತ್ತು ಬೆಚ್ಚರಮುಮರತ್ತವುಮಂ ಪಡೆಯಿಮೆಂಬರ್ (ಸಮುಪ. ೮-೧೨) ; ಒಪ್ಪುವ ಯಜ್ಞಸೂತ್ರಕಂ ಕಿವಿಯ ತೊಳಂಚಿಯುಟ್ಟುಡೆಯ . . . ವಿಲಾಸಮೊಪ್ಪೆ (ಮಹಾನೀ. ೧೧-೮೭). **ತೊಳಂಚಿ$_1$**: "ತೊಳಂಚಿ ತೊಳಚಿ" (ಚತುನಿ. ೭೧); ಸೂರಣಕ್ಕೆಲ ಕುವಾರಿ(ಗೆ)ಯ ಕಳ್ಳಿಯ ಬೂದಿ . . . ಲವಣಕ್ಕೆ ತೊಳಂಚಿ ವಿಷಾಪಹಾರಕಂ (ಲೋಕೋಪ. ೮-೨೭). **ತೊಳಚಿ** : "ತೊಳಚಿ ಯನೆ ತುಳಸಿ" (ಶಬ್ದಮಂ. ೨೮) ; ಪೊಸೆವ ಮರನಂ ಬಿಲಂ ತೊಳಚಿ [ಪಾಠಾಂ. ಲಿ] ಸಮಸ್ತಂ ದೆಯ್ವಮಿಂತಿವೆಂಬವರ್ಗೂರ್ಥರ್ (ಸಮುಪ. ೯-೮೨) ; ಬಹುಳದಿಂ ಸತ್ವಕ್ಕೆ ಚತ್ವಂ – ಅಪ್ಸರಸ್ – ಅಚ್ಚರಿಸಿ . . . ತುಳಸಿ – ತೊಳಚಿ (ಶಮದ. ೨೬೩ ಪ್ರಯೋ) ; ಅಣೆಯರದ ತೊಳಚಿ ಗೊರಟನ ಮಣಿದೊಡವಿನ . . . ಮಟ್ಟಿಗರೆಸೆದರ್ (ಹಮ್ಮಿರ. ೬-೧೯) ; ತೊಳಚಿಯ ಪಸುರ್ವೆಳಗು ದುಗುಲದ ಪೊಂಬೆಳಗು . . . ಎನ್ನ ತಿಳಿವು ಬೆಳ್ವೆಳಗಿನೊಳೆಡವಿದರ್ಕೆ (ಕರ್ಣಾವ್ನ. ೧-೩೪); ಎಂತೂ ತೊಳಚಿದೋಂಟ ದೊಳ್ ತುಟುಚಿ ಪುಟ್ಟುವಂತಿರ ನಿನ್ನೀ ಬಟಿಯೊಳ್ ಜಾಳಿನೆ ಪಂಚವನಾಂ ಪುಟ್ಟಿದೆಂ (ರಾಮಾಶ್ವ. ೨೭-೭). **ತೊಳಚಿ** : ಇತ್ವಕ್ಕೆತ್ವಂ – ಅತಸಿ – ಅಗಸೆ . . . ತುಲಸಿ – ತೊಳಚಿ (ಶಮದ. ೨೬೮ ಪ್ರಯೋ) ; ದೇವಿಯರು ಬ್ರಹ್ಮನ ಕೈಯಲ್ಲಿ ಒಂದು ಬೀಜವ ಕೊಡಲು, ಅದ ತಂದು ಬೂದಿಯ ಮೇಲೆ ಬಿತ್ತಲು, ತೊಳಚಿ ಪುಟ್ಟಿತ್ತಾಗ (ಭೈರಸೂ. ೧೧೬).
[ < ಸಂ. ತುಲಸೀ ]

**ತೊಳಸು$_1$** 'ತಳಿಸು$_1$' ನೋ.

**ತೊಳಸು$_2$** 'ತೊಟಿಸಂ$_1$' ನೋ.

**ತೊಳಸು$_3$** 'ತಳಿಸು$_2$' ನೋ.

**ತೊಳಸು$_4$** 'ತೊಟಿಸು$_2$' ನೋ.

**ತೊಳಸುಗ** (ನಾ). ಎದುರಿಸುವವನು ; ಪ್ರತಿಭಟಿಸುವವನು : ಸೆಳೆದು ಕೊಂಡನು ಖಡುಗವನು ಭುಜವಳಯದಿಂದವುಚಿದನು ತೋಟಿಯ ತೊಳ ಸುಗರ ಹೊಯ್ ಹೊಯ್ಯೆನುತ ಗರ್ಜಿಸಿದನಾ ಭೀಷ್ಮ (ಕುಮಾ್ಯಸ. ೧೧-೨೬).
[ ತೊಳಸು$_4$ (<ತೊಟಸು$_2$) + – ಗ$_2$ ]

**ತೊಳಸುಗೊಳ್ಳು** (ಕ್ರಿ). ಸಿಕ್ಕಿ ಬೀಳು ; ತೊಡಕಿಕೊಳ್ಳು : ತರ್ಕತಂತ್ರದ ತಟದ ಯುಕುತಿಗೆ ತೊಳಸುಗೊಳ್ಳದ ಠಾವಲಾಯೆಂದ (ಕುಮಾ್ಯಉ. ೧-೨೨).
[ತೊಳಸು$_4$ (<ತೊಟಸು$_2$)+ಕೊಳ್ಳು$_1$ (<ಕೊಳ್$_1$) ]

**ತೊಳಹ$_1$** (ನಾ). ತೊಳೆಯುವಿಕೆ; ಶುದ್ಧಿಮಾಡುವುದು: ಹಸ್ತಶುದ್ಧಿಂ–ಕೈ ತೊಳಹವಂ (ಪ್ರಕಟೀ. ೬-೧೫) ; ಪರಶುರಾಮನ . . . ಪರಶುವಿನ ನೆಣವಸೆಯ ತೊಳಹದ ಪರನದಿಯ. ವಿಸ್ಮರಣವನು ಕೀಳಿದನು ಯಮಸೂನು (ಕುಮಾ್ಯಅ. ೯-೧೫) ; ಎಲವೋ ಮಡಿವಳ ನಿನ್ನ ತೊಳಹವು ಚೆಲುವನಾದವು . . . ತೊಳೆದು ಕೊಡು ನಾವುಟ್ಟುದನು ನೀ (ಸಾಕ್ಯಥಾ ೨೨-೩೯). [ ತೊಳೆ$_1$ + – ಹ$_2$ ]

**ತೊಳಹ$_2$** 'ತೊಳವ$_2$' ನೋ.

**ತೊಳಿಸು** 'ತಳಿಸು$_1$' ನೋ.

**ತೊಳೆ$_1$** (ಕ್ರಿ). ೧. ಸ್ವಚ್ಛಮಾಡು ; ಶುದ್ಧಮಾಡು: "ತೊಳೆ–ಪ್ರಕ್ಷಾಲನೇ, ಫಲ ತೂಲಾಯಾಂ ಚ" (ಕಮುಧಾ) ; ನಿಮ್ಮ ಕಾಲಂ ತೊಳೆವೆ[ಪಾಠಾಂ. ಕರ್ಚುವೆ,ಕರ್ಚುವ]ಮೆಂದು ಮಹಾದೇವಿ ತಾನೆ ಕಾಲಂ ಕರ್ಚೆ (ವಡ್ಡಾರಾ. ೭೮-೧೧) ; ಪಳುಕಿನ ಪಾಪೆಯನವರ್ದಿಂ ತೊಳೆದಂತೆ (ಆದಿಪು. ೬-೩೯) ; ತೊಳೆವೊಡದು ಜನಪತಿಮತಸಳಿಳಂ ತೊಳೆಗುಂ ವಿಶೋಧಿ ತೊಳೆಗುಂ ನಿಯಮಮಂ ತೊಳೆಗುಂ (ಶಾಂತಿಪು. ४-೭೯) ; ಮುರಹರನಾಗಸಕಿತ್ತಿದ ಚರಣ ಮನಜನಲ್ಲಿ ತೊಳೆದನಾ ನೀರೆ ಗಡಂ ಸುರಸಿಂಧುವಾಗಿ ಬರುತಿರೆ (ಸಮುಪ. ೮-೫೫) ; ಕುದುರನೇಸು ತೊಳೆದರೆಯೂ ಕೆಸಟು ಮಾಣ್ಬುದೆ (ಬಸವ. ೨೬೦) ; ಗುರುಗಳಿಗೆ ಕಾಲ ತೊಳದು ಧಾರಾಪೂರ್ವ್ವಕವಾಗಿ ಕೊಟ್ಟರು (ಎಕ. VII, ಶಿವಮೊ. ೬೧-೧೭ ; 1287) ; ತನ್ನಡಿಗಳಿಗೆ ತಪ್ಪಗ್ರವಣೆಯುಂ ತಾನೆ ಕಳಕೊಂಡು ಅಡಿಗಳಂ ತೊಳಕೊಳುತ ಬಸವಂ ಸಡಗರಿಸಿ (ಬಸಪು. ೩೦-೯) ; ತೊಳೆದರೆ ಮಸಿಗೆ ಧವಳತೆಯುಂಟೆ (ಕೌಶಿರಾ. ೩೭-೪೭).

೨. ಅಳಿಸು ; ತೆಗೆದುಹಾಕು : ಅಜ ಬರೆದ ಬರಹವನು ತೊಳೆಯಬಲ್ಲನೆ ಬಾಣ (ಪುರಂದ. ೨-೪೪-೩). ೩. ನಿವಾರಿಸು ; ಪರಿಹರಿಸು : ಹಿಂದಿನವ ಮಾನಗಳ ತೊಳೆಯಿರೇಳಿ (ವಿಜೀಗೀ. ೪೩-೬) ; ಈ ಪುರೋಚನವೃತ್ತಾಂತದಿಂದ ಬಂದಿರುವ ಕಳಂಕವನ್ನು ತೊಳೆದುಕೊಂಡಂತಾಗುತ್ತದೆ (ಪಡಭಾ. ೬೩). ೪. ಇಲ್ಲವಾಗು : ತನಗಿಂದು ತೊತ್ತಿನ ಕೆಲಸ ಕೊಂಡಿಹುದ ನಿಲಿಸುವೊಡೆ ಕದ್ರುವಿಗೆ ಕೊಟ್ಟರೆಯೊಲಿದು ಸುಧೆಯನು ದಾಸಿತನವದು ತೊಳೆದುಹೋಹುದು (ಸಂಛಪ. ೫-೫೪). ೫. ಹಾಳುಮಾಡು ; ನಾಶಮಾಡು: 'ನೀ ಬಂದು ಈ ಮನೆ ತೊಳೆದೆ' ಎಂದು ಅವಳು ದಿನಾ ಸೊಸೆಯನ್ನು ಛೇಡಿಸ ಹತ್ತಿದಳು (ಹೂಸಕ್ಕ. ೨೧). 'ತೊಡೆ$_1$' ಪರಾ.

**ತೊಳೆದ ಕೆಂಡ** = ಆರಿಸಿದ ಕೆಂಡ ; ಇದ್ದಲು : ಅವನ ಕ್ರೂರವಾದ ಕಣ್ಣು, ತೊಳೆದ ಕೆಂಡದಂಥ ಮೈಬಣ್ಣ ನೋಡುವವರಿಗೆ ಹೆದರಿಕೆಯನ್ನು ಹುಟ್ಟಿಸುವಂತಿತ್ತು (ಲೂಕ). **ತೊಳೆದ ಮುತ್ತು** = ಶುಭ್ರಗೊಳಿಸಿದ ಮೌಕ್ತಿಕ ; ಶುದ್ಧವಾದ ಮುತ್ತು : ಆ ಮಗು ತೊಳೆದ ಮುತ್ತಿನಂತೆ ಬಹಳ ಮುದ್ದಾಗಿದೆ (ಲೂಕ). [ ದೇ.॥ ತೆಲು. ತೊಲಂಚು ]

**ತೊಳೆ$_2$, ಸೊಳೆ$_2$, ಸೋಳೆ** (ನಾ). ಕಿತ್ತಳೆ, ಹಲಸು ಮುಂತಾದ ಹಣ್ಣುಗಳ ಹಾಗು ಹತ್ತಿ ಮೊದಲಾದುವುಗಳ ಒಳಗಿನ ಒಂದೊಂದು ಭಾಗ,-ಖಂಡ : "ತೊಳೆ - ಪ್ರಕ್ಷಾಲನೇ, ಫಲತೂಲಾಯಾಂ ಚ" (ಕಮುಧಾ) ; ಪಲಸಿನ ತೊಳೆ(ಟ³)ಗಳನರಸೇಱಿಲ ಕೊನೆ ಕರ್ಪೂರಮಣ್ಣ ಯಂಬನಿತಿವಱಿಂ ಕಲಸಿ ಕಡುಎಸಿಲೊಳವನಿರಿಸಲೊಡಂ ದ್ರವಿಯಿಸುಗು ಮಚ್ಚರಸಮಪ್ಪನೆಗಂ (ಲೋಕೋಪ. ೮-೩೫) ; ಕಡಲೆಯಂದದೊಳು ಹಲಸಿನ ತೊಳೆಯನುತ್ತರಿಸಿ ಹುಡಿಮೆಣಸು ಶುಂಠಿ ಯಾಲಕ್ಕಿಯಂ ಮೊಸರ ಕೆನೆಯೊಡನಿಕ್ಕಿ (ಸೂಪಶಾ. ೫-೫೪) ; ನಾನೊಂದು ತರಲ ಮರುಕಾಂತಾರದಲ್ಲಿ ತೊಟ್ಟು ಕಳಚಿದ ಹತ್ತಿಯ ತೊಳೆಯಂತೆ ಇಳಿಯುತ್ತಿದ್ದೆ (ಬಾಪಳ. ೧೯೩) ; ತೊಗಲು ತೊಳೆ ಆದೀತೆ ? (ಗಾದೆ). **ಸೊಳೆ$_2$** : ಆಲೂಗಡ್ಡೆ . . . ಹಲಸಿನಕಾಯಿಯ ಸೊಳೆ ಇತ್ಯಾದಿಗಳನ್ನೂ ತುಂಡುಮಾಡಿ ಈ ರೀತಿ ಕರಿಯಬಹುದು (ಅಡುಸಾ. ೯೦) ; ಬಳಿಕ ಮೂವರೂ ಸೊಳೆಗಳನು ತಿಂದರು (ಕುಳಫ. ೧೦೩). **ಸೋಳೆ:** ರುಚಿ ನೋಡೋಣವೆಂದು ಒಂದೆರಡು ಸೋಳೆ ಬಾಯಿಗೆ ಹಾಕಿಕೊಂಡೆ (ಬಾಳಿಗಿ. ೧೧೯) ; ರಚ್ಚೆ ! ಹುಲ್ಲು ! ಯಾರಿಗದು ಸೋಳೆ ಇಲ್ಲದಿದ್ದರೆ ? (ಮೊದುಗು. ೬೪).
[ ದೇ.॥ ತಮಿ. ಚುಳೈ; ಮಲ. ಚುಳ; ತೆಲು. ತೊಲ, ತೊನ; ಕುವಿ. ತೋಲ ]

**ತೊಳೆ$_3$** 'ಸೊಳ್ಳೆ$_1$' ನೋ.

**ತೊಳೆ$_4$** (ನಾ). ದೋಣಿ ನಡೆಸುವ ಹುಟ್ಟು : ಆಗ ಸಾಲು ಸಾಲಾಗಿ ಜನರನ್ನು ಹಡಗಿನ ಬಾಣಗಳಲ್ಲಿ ಕುಳ್ಳಿರಿಸಿ ತೊಳೆ (oar)ಗಳಿಂದ ನೀರನ್ನು ತಳ್ಳಬೇಕಾಯಿತು (ಬಾಂಚ್ರ. II, ೬೪೩) ; ಆಗ ದೋಣಿಯ ತೊಳೆಗಳನ್ನು ಒಚ್ಚಬೇಕಾಗಿಲ್ಲ (ಒಂಟಿದ. ೧೩೬); ನೀನು ಒಂದು ತೊಳೆ ಹಿಡಿ, ನಾನೊಂದು ಹಿಡಿಯುತ್ತೇನೆ (ಕಿದಾಉ. ೧೬೧).

**ತೊಳೆಹಾಕು** = ಹುಟ್ಟುಹಾಕು : ರಾತ್ರಿ ಒಂದು ಹರದಾರಿ ತೊಳೆ ಹಾಕುವುದು ; ಅನಂತರ ಸ್ವಲ್ಪ ಹೊತ್ತು ತಣ್ಣಗೆ ಕುಳಿತಿರುವುದು (ಒಂಟಿದ. ೧೩೬). [ <ತೊಟಸು$_1$/ತಮಿ. ತುಟವೈ ; ಮಲ. ತುಟ ]

**ತೊಳೆತ** (ನಾ). ಶುದ್ಧಮಾಡುವಿಕೆ ; ತೊಳೆಯುವುದು : "ಕ್ಷಾಲನಂ = ತೊಳೆತಂ" (ಕಾಶಕ್ಕ. ೨೬೧). [ ತೊಳೆ$_1$ + -ತ$_2$ ]

**ತೊಳೆಯಿಸು** (ಕ್ರಿ). ಶುದ್ಧ ಮಾಡಿಸು ; ಸ್ವಚ್ಛ ಮಾಡಿಸು : ಭಕ್ತರ ಕೂಡ ಬಂದವನೀಗ ಕಾಲಂ ನೀಡಿ ತೊಳೆಯಿಸಿಕೊಂಡಹನು (ಬಸಪು. ೨೬-೪೦) ; ನಿಮಗೆ ಮುಖ ತೊಳೆಯಿಸಿ ಮಾತ್ರ ಕೊಡುವುದಕ್ಕೆ ಕಾಯ್ದುಕೊಂಡಿದೇವೆ (ಹಂಗಾಳ್ಕ. ೧೫೪). [ ತೊಳೆ$_1$ + -ಇಸು$_3$ ]

**ತೊಳ್ತಳ** 'ತೊಟ್ತುಟಿ' ನೋ.

**ತೊಳ್ತಳಂದುಳಿ** 'ತೊಟ್ತುಟಿದುಂಟಿ' ನೋ.

**ತೊಳ್ತಾಳ್** 'ತೊಟ್ತಾಳ್' ನೋ.

**ತೊಳ್ತು** 'ತೊಟ್ತು' ನೋ.

**ತೊಳ್ತುಗೆಯ್, ತೊತ್ತುಗೈ** (ಕ್ರಿ). ೧. ತೊತ್ತಾಗಿ ಮಾಡಿಕೊಳ್ಳು ; ಸೇವೆಮಾಡಿಸಿಕೊಳ್ಳು : ನಿಜಮೋಕ್ಷಲಕ್ಷ್ಮಿಯಂ ತ್ವರಿತದಿಂ ತೊಳ್ತುಗೆಯ್ದಾಳ್ವ ಬಲ್ಲಾಡಿಯಿಂ (ಪದ್ಮರಾ. ೫-೩೪). **ತೊತ್ತುಗೈ** : ೨. ಸೇವೆಮಾಡು : ತೊತ್ತುಗೈವುದು ಲೋಕವಿತಗೆ (ಶಾಶಿರಾ. ೨೫-೭).
[ ತೊಳ್ತು (<ತೊಟ್ತು) + ಕೆಯ್$_1$ ]

**ತೊಳ್ತುಗೆಯ್ಮೆ** (ನಾ). ತೊತ್ತಿನ ಕೆಲಸ ; ಸೇವೆ ; ಊಳಿಗ : ತೊಳ್ತುಗೆಯ್ಮೆಯ ಪೆರ್ಮೆಗೊಳ್ಳನೆಸಗುವೆನೆಂದು ಕಜ್ಜಮಂ ಕೈಕೊಂಡೊಡೇಂ ಸ್ವಾರ್ಥದೋಷಮಂ ಕಾಣ್ಬರಾರ್ (ಶ್ರೀರಾಮೂ. ೧೧೫-೯೬).
[ ತೊಳ್ತು (<ತೊಟ್ತು) + ಗೆಯ್ಮೆ (<ಕೈಮೆ$_1$ ]

**ತೊಳ್ತುಗೆಲಸ** 'ತೊಟ್ತುಗೆಲಸ' ನೋ.

**ತೊಳ್ತುಗೊಡು** 'ತೊಟ್ತುಗೊಡಂ' ನೋ.

**ತೊಳ್ತುಗೊಳ್** 'ತೊಟ್ತುಗೊಳ್' ನೋ.

**ತೊಳ್ತುಬಾಳ್** (ಕ್ರಿ). ತೊತ್ತಾಗಿ ಜೀವಿಸು ; ಗುಲಾಮನಾಗಿರು : ನಾ ತೊಳ್ತುಬಾಳೆನು ನಿನಗೆ (ಮೂರುನಾ. ೧೧೨-೪೬೦).
[ ತೊಳ್ತು (<ತೊಟ್ತು) + ಬಾಳ್$_1$ (<ಬಾಟ್$_1$) ]

**ತೊಳ್ಪಟ್ಟೆ** 'ತೊಟ್ಪಟ್ಟೆ' ನೋ.

**ತೊಳ್ಮಗ** (ನಾ). ತೊತ್ತುಮಗ ; ಆಳುಮಗ : ಅವ [ ನಾ ] ತೊಳ್ಮಗ ಗೊಣ್ಡೊವ್ (ಸೌಇಇ. ೧೯೩೨, ಪುಂಗನೂರು. ೧೯೬-೭ ; ೫ನೆಯ ಶತ). 'ತೊಟ್ಪಟ್ಟೆ' ಪರಾ. [ <ತೊಟ್ತು + ಮಗ ]

**ತೊಳ್ಳು** (ಕ್ರಿ). ಸ್ವಚ್ಛವಾಗು : ಮೂವರು ಮೂರು ಒಸಕೆಗಳನ್ನೆತ್ತಿ ಅನುಕ್ರಮವಾಗಿ ನೆಲಕುಳಿಗೆ (ಒರಳಿಗೆ) ಗುರಿತಪ್ಪದೆ ಕುಟ್ಟುವಾಗ ಹೊರಕ್ಕೆ ಹಾರುವ ಧಾನ್ಯವನ್ನು ತಂತಮ್ಮ ಒಂದೊಂದು ಪಾದದಿಂದ ಕೂಡುವರು. ಹೀಗೆ ಕೂಡದಿದ್ದರೆ ಅಕ್ಕಿ ಸರಿಯಾಗಿ ತೊಳ್ಳದು (ಸಂಕೋಧ. ೧೪೯). 'ತಳಿಸು$_1$' ಪರಾ. [ ದೇ.॥ ತುಳು. ತೊಳ್ಳು ]

**ತೊಳ್ಳುಗುಂಡು** (ನಾ). ಕೆಳಗೆ ತಳ್ಳುವ ಗುಂಡು (?) : ಬಹು ಜನರು ಹತರಾಗುವಂತೆ ಮಾಡಿರುವ ತೊಳ್ಳುಗುಂಡುಗಳನ್ನೂ ತುಪಾಕಿಗುಂಡುಗಳನ್ನೂ ಇರಿಸುವುದಕ್ಕೆ . . . ಉಗ್ರಾಣಗಳನ್ನು ಮಾಡಿಸಿದರು (ಹಾಮುಪಂ. ೮೯). [ < ತಳ್ಳು + ಗುಂಡು ]

**ತೊಳ್ಳೆ** 'ತೊರಳೆ' ನೋ.

**ತೊಳ್ಳೆಮಿಾನು** (ನಾ). ಒಂದು ಬಗೆಯ ಮಿಾನಂ: ಆ ಪೊಟ್ಟಣದಲ್ಲಿ ಕೆಲವು ಬೆಳ್ಳೇಡಿ, ಸೋಸಲು, ತೊಳ್ಳೆಮಿಾನುಗಳಿದ್ದು, ಒಂದು ತೊಳ್ಳೆಮಿಾನಿಗೆ ಇನ್ನೂ ಜೀವವಿದ್ದುದರಿಂದ ಚಿಮ್ಮಿ ಹಾರಿ ಒರೆಯ ಬಾದಿಗೇ ಬಿದ್ದಿತು (ಮಲಕು. ೫೮೮). [ ತೊಳ್ಳೆ ? + ಮಿಾನು$_2$ (<ಮಿಾನ್$_3$) ]

**ತೊಱಗಲೆ, ತೊಱಗೆಲೆ** (ನಾ). ಒಂದು ಊರಿನ ಹೆಸರು ; P ಈಗಿನ ಬೆಳಗಾವಿಜಿಲ್ಲೆಯ ತೊರಗಲ್ಲು : ತದ್ವಾಡಿಗೆ ತೆಂಕಲ್ ತೊಱಗಲೆಗೆ ಬಡಗಲಿರ್ದುದು ನೆಱೆಯ ಸುಪ್ತೋದ್ದೀಪಸಮೆನಿಸಿ ಬೆಳಗಲಿದೇಶಂ (ಅಜಿಪು. ೧೨-೪೪) ; ಕಿಸುಕಾಡೆಪ್ಪತ್ತುಮಂ ಬಾಗಡಗೆ ಯೆಪ್ಪತ್ತುಮಂ ತೊಱಗಲೆ ××× ಮಂ ಮೂಸೆಯವಾಡಿ ನೂಱ ನಾಲ್ವತ್ತುಮಾ . . . ರಾಜ್ಯಂಗೆಯ್ಯುತ್ತುಂ (ಸೌಇಇ. XI-i, ೮೬-೮ ; 1050). **ತೊಱಗೆಲೆ :** ತೊಱಗೆಲೆ ಅಱುಹಳ್ಳಿ ನೆಗಟ್ಟ್ಡಾಜರಗೋಳ ಮೊಸಿಪ್ಪಗುರ್ವುವೆತ್ತಱುಕೆಯ ಬೇಡವಟ್ಟುಗಳ . . . ಕಿಡಿಸಲಂಕದ ಮುನ್ನಿನ ಚಕ್ರವರ್ತಿಗಳ್ ಪೆಱರಳವಲ್ತು (ಶಾಪ್ಯಾವ. ೨೧೨). [ ? ]

**ತೊಱಗೆಲೆ** 'ತೊಱಗಲೆ' ನೋ.

**ತೊಱಡು** (ನಾ). ಮರದಿಂದ ಹಣ್ಣನ್ನು ಕೀಳಲು ಉಪಯೋಗಿಸುವ ಕೊಕ್ಕೆ; ದೋಟಿ: (ಕ).

[ದೇ.॥ ತಮಿ. ತುಱಟು, ತುಱಟ್ಟು; ಮಲ. ತುಱಡು]

**ತೊಱಹ, ತೊಱಹ** (ನಾ). ಒಂದು ವಂಶದ ಹೆಸರು ಮತ್ತು ಆ ವಂಶಕ್ಕೆ ಸೇರಿದವನು : ತೊಱಹರ ಬೂತಯ್ಯಂ ಪೂಲಿಯ ತುಱುವಂ ಕೊಂಡಡೆ (ಎಇ. XVIII, ೨೦೦-೩; 1107). **ತೊಱಹ** : ತಂಬುಲಿಗ ಸಾಸಿರ್ವರ್ಗರತ್ಥಂ ತೊಱಹರು ಕೊಣ್ಡಾಡಾಯತ್ಥಂ ಸಿಂಗಗಾವುಂಣ್ಡ ನಿಕ್ಕಿಸಿ ತಂದ[ಡೆ] (ಸೌಇಇ. XI-1, ೧೪೮-೨೩; 1099); ಆ ಗ್ರಾಮದ ತುಱುವಂ ತೊಱಹರ ಕಾಳಯ ಆ ಪುಯ್ಯಲಿಂಗೆಱಗಿ ಮೇಲಾಳಂ ನಿಱಿದು . . . ತುಱುವಂ ಮಗುೞ್ಚಿ (ಎಕ. VII, ಶಿಕಪು. ೩೭-೭; 1140); ಕಾವಗೌಡಂ ನೆಗರ್ದ ತೊಱಹರ ಕುಳಕ್ಕೆ ತಿಳಕಂ (ಕಇ. I, ೨೪-೧೫; 1148); ತೊಱಹನಂ ಬೆಂಕೊಂಡು ತೂಳ್ದಿಯ್ದು ಮುಟ್ಟಿ (ಎಇ. XIX, ೨೩೦-೩೩; 1179). 'ತೊಳಪ್ಪ' ಪರಾ.

**ತೊರಹರ ಮಾರಿ** = ಒಂದು ಬಿರುದು : ತೊರಹರ ಮಾರಿ ವೈರಿ ಸಂಹಾರಿ ದುಡಿಂ ಮುಂನಿಱಿವಂ ಶೌರ್ಯ್ಯವುಂ ಮೆಱೆವಂ (ಎಕ. VIII, ಸಾಗರ. ೧೦೯-೫ ; 1042). [ ? ]

**ತೊಱಬು** (ನಾ). ಅಣಕ ; ಹಾಸ್ಯ : "ತೊಱಬೆಂದಣಕಂ" (ಕರ್ಣಾನಿ. ೭೮).

[ P ಇದು 'ಕೊಱಬು' ಎಂಬುದರ ಅಪಲಿಖಿತವಿರಬಹುದು ]

**ತೊಱರಗಣೆಗಿಲು** (ನಾ). ಒಂದು ಬಗೆಯ ಸಸ್ಯ : "ಕಾಂತಃ – ತೊಱರ ಗಣೆಗಿಲು, ನಂದಿವೃಕ್ಷ . . . ಸೂಜಕಲ್ಲು" (ಓಷಧಿ. ೨೮). 'ತೊಱ್ ಗಣೆಗಿಲು' ಪರಾ. [ ? + ಗಣೆಗಿಲು (<ಕಣಗಿಲೆ$_1$) ]

**ತೊಱವಿ, ತೊರವಿ** (ನಾ). ೧. ತ್ಯಜಿಸುವಿಕೆ; ವರ್ಜಿಸುವುದು; ತ್ಯಾಗ: ಕ್ರೋಧದ ತೊಱವಿಯುಂ ಲೋಭದ ತೊಱವಿಯುಂ . . . ಎಂಬಿವಯ್ದುಂ ಪುಸಿಯರ ವ್ರತದ ಭಾವನೆಗಳು (ಚಾತ್ಸ್ರಟೀ. ೭೪-೭); ವಕಾರಕ್ಕೆ–ತೊಱವಿ, ಅಳವಿ, ಬಳವಿ (ಶಮದ. ಸ. ೨೨೦ ವೃತ್ತಿ). ೨. ಬಿಡುಗಡೆ; ವಿಮೋಚನೆ: ನೀವಲ್ಲಿಗೆ ಬಿಜಯಂಗೆಯ್ದು ತತ್ಪಣಿಗೆ ತೊಱವಿಯಂ ಕುಡುವು ದೆಂಬುದುಂ (ಧರ್ಮಾಮೃ. ೧೪-೯೩). **ತೊರವಿ:** ೧. ಅತಿಕಾಂಕ್ಷೆಗಳ ತೊರವಿ ಯಲ್ಲಿಲ್ಲವು ಪಾಪಗಳೆಂದು ಕೊಟ್ಟನು (ಶದಂಪು. ೯) ; ತೊರವಿಯ ರಸ ಪರಿತ್ಯಾಗವೆಂಬುದು ತಾನರಿವುದು ಭವ್ಯರಿಂತಿದನು (ಪೂಜ್ಯಕ. ೧೨-೬೯). ೩. ತ್ಯಜಿಸಲು ಯೋಗ್ಯವಾದುದು : ಅಂತಹ ಧರ್ಮಗೊಡ್ಡಿನ ಹುಚ್ಚಾಟವು ಈ ಸನ್ದರ್ಭದವಸರಕ್ಕೆ ತೊರವಿಯುದಹುದು (ಮುಂತ್ರಕ. ೧೫೩-೨೪). [ ತೊಱ್$_1$ + – ವಿ/ತಮಿ. ತುಱವಿ ]

**ತೊಱಸು** 'ತೊಱಿಯಿಸು' ನೋ.

**ತೊಱಹ** 'ತೊಱಪ' ನೋ.

**ತೊಱಿಸು** 'ತೊಱಿಯಿಸು' ನೋ.

**ತೊಱು** 'ತುಱು' ನೋ.

**ತೊಱುಕೊಲ್** 'ತುಱುಗೋಳ್' ನೋ.

**ತೊಱುಕೊಳ** 'ತುಱುಗೋಳ್' ನೋ.

**ತೊಱುಕ್ಕೊಳ್** 'ತುಱುಗೋಳ್' ನೋ.

**ತೊಱುಗರೆ** (ನಾ). ಒಂದು ಪ್ರದೇಶದ ಹೆಸರು : ಅಕ್ಕಾದೇವಿಯರ್ ಕ್ಕೆಸುಕಾಡಟ್ಟಿತ್ತುಮುಂ ತೊಱುಗರೆಯುಱುವತ್ತುಮುಂ . . . ಆಳುತ್ತಮಿರೆ (ಎಇ. XV, ೭೮-೭; 1050). 'ತೊಱಗಲೆ' ಪರಾ. [ ? ]

**ತೊಱುಗೊಳ್$_1$** 'ತುಱುಗೊಳ್$_1$' ನೋ.

**ತೊಱುಗೊಳ್$_2$** 'ತುಱುಗೋಳ್' ನೋ.

**ತೊಱುಗೊಳ** 'ತುಱುಗೋಳ್' ನೋ.

**ತೊಱುಗೊಳ್ಳ** 'ತುಱುಗೋಳ್' ನೋ.

**ತೊಱುಗೋಳ್** 'ತುಱುಗೋಳ್' ನೋ.

**ತೊಱುಮಣ್ಣು** (ನಾ). (?) : ಬೊಂಬಸಮುದ್ರದ ಹಿಂದೆ ಗದ್ದೆ ಸ ೨ ಕೊ ×××ಗರಿಯ ಕಟ್ಟದೊಳಗೆ ಗದ್ದೆ ಸ ೨ ಕೊ ೧೦ × ಮುಂದಣ ಕೆಱೆಯ ಹಿಂದೆ ಗದ್ದೆ ಕೊ ೧೦ . . . ಇವೆಲ್ಲ ತೊಱುಮಂಣಾ ಚತುಸೀಮೆಗೆ ನಟ್ಟ ಕಲ್ಲೆ ಮೇರೆ ಸಾಲು (ಎಕ. XVI, ಚಳ್ಳಕೆ. ೫೮-೨೮ ; 1260).

[ ತೊಱು ? + ಮಣ್ಣು (<ಮಣ್) ]

**ತೊಱುವಳ್ಳ** 'ತುಱುವಾಳ' ನೋ.

**ತೊಱುವಾಳ್ಳ** 'ತುಱುವಾಳ' ನೋ.

**ತೊಱ್$_1$, ತೊರೆ$_1$** (ಕ್ರಿ). ೧. ಬಿಟ್ಟು ಬಿಡು ; ಪರಿತ್ಯಾಗ ಮಾಡು ; ವರ್ಜಿಸು ; ತ್ಯಜಿಸು : "ತೊಱ್ –ವಿಸರ್ಜನೇ, ಸದ್ಯಾಂ ಚ" (ಕಮಧಾ) ; ಪರರ ದೋಷಂಗಳುಮಂ . . . ತೊಱುವುದು ತೊಱುವಂತಸಾಧುಜನ ಸಂಗತಿಯಂ (ಕವಿರಾ. ೧-೬೭) ; ಉತ್ತಮಕುಲದೊಳಪ್ಪಭಿಮಾನಮಂ ತೊಱಿದು ಬಾಟಾಸ್ಮಾರಣವಾಗಿ ಕುಲಜರಲ್ಲದವರ್ಗಾಳಾಗಿ ಬಾಳ್ವರ್ (ವಡ್ಡಾರಾ. ೮೬-೩೦) ; ಎಲ್ಲಮಂ ತೊಱೆದು . . . ದಿಗಂಬರವಿಳಾಸಮಂ ಬಯಸಿ ತೀರ್ವಿನಂ ತಾಳ್ದಿದಂ (ಆದಿಪು. ೩-೫೭); ಮಹಾಶ್ರೀಯಂ ಕೊಳದ ಪುಲ್ಲ ಕಡ್ಡಿಯಂ ತೊಱುವಂತೆ ತೊಱೆದು (ಧರ್ಮಾಮೃ. ೯-೩೨); ಪರನಾರಿ ಯರ ಸಂಗವ ತೊಱಿಯಿಂ ಭೋ (ಬಸವ. ೬೪೨); ಪರಾಂಗನೆಗೆ ಕೊರ್ತು ಒಸೆದು ತಾಯಂ ತೊಱುವ ಬೆಸನಿ ಜೋ (ಸಿದ್ಧರಾ. ೦-೫೮) ; ಭೀತಿಯಂ ತೊಱಿದು ಕಾಂತೆಯ ಕೂಡೆ ರಮಿಸಿದಂ (ಜೈಮಿಭಾ. ೧೦-೨೦). ೨. ಪ್ರಾಪಂಚಿಕಸುಖವನ್ನು ತ್ಯಾಗ ಮಾಡು ; ವಿರಕ್ತಿಹೊಂದು : ಸಸಿಮತಿಶ್ರೀಗನ್ತಿಯರ್ . . . ಕಟ್ವಪ್ಪಿನುರ್ ತೊಱದಾರಾಧನೆ ನೋನ್ತು ತೀರ್ತ್ಥಗಿರಿ ಮೇಲ್ಸ್ವರ್ಗ್ಗಾಲಯಕ್ಕೇಱಿದಾರ್ (ಎಕ. II, ೭೭-೪ ; ಸು. 700) ; ಪರ್ವತದೊಳಿರ್ದ ಶಾರ್ದೂಲಂ ಜಾತಿಸ್ಮರನಾಗಿ ತೊಱಿದಿರ್ದು ದೆಂಬುದನಾ ಮುನಿಪನವಧಿಯನಱಿದು (ಚಾಪುಂಪು. ೨೫) ; ನರರರೆಬರ್ ವೈರಾಗ್ಯಂ ದೊರಕೊಂಡಡೆ ತೊಱುವೆವೆಂಬರ್ (ಆದಿಪು. ೨-೮೫). **ತೊರೆ$_1$ :** ೧. ಮರೆಯರೊ ನೀ ಮಾಡಿದ ಅನಿಮಿತ್ತೋಪಕಾರ ತೊರೆಯರೊ ನಿನ್ನಂಘ್ರಿಸೇವೆ ಪ್ರತಿವಾಸರ (ಜಗದಾ. ೩೯-೧) ; ತರಿದು ಬಿಡು, ತೊರೆದು ಬಿಡು, ತೊಡೆದು ಬಿಡು ನೆನಹಿಂದ ಕರಕರೆಯ ಬೇರುಗಳ ಮನದ ಗಂಟುಗಳ (ಮಂಕುಕ. ೬೪೮) ; ನಂಬಿರುವ ಸುಚರಿತರ ತೊರೆಯಯೆಂಬಾ ಕೀರ್ತಿ ಎಂದಿನಂತೆಯೆ ನೆರೆದು ಪೂಜ್ಯವಾಗುವುದು (ವಿಟೀಗೀ. ೨೩-೧೧).

[ ದೇ.॥ ತಮಿ. ತುಱ ; ತುಳು. ತೊರೆವು ; ತೆಲು. ತೊಱಂಗು ]

**ತೊಱ್$_2$, ತೊರೆ$_2$** (ನಾ). ೧. ನದಿ ; ಹೊಳೆ : "ಸಿಂಧುಃ, ಸ್ರವಂತೀ . . . ಸರಿತ್, ರೋಧೋವಕ್ರಾ – ಈ ೨೧ ತೊಱ್" (ಹಲಾಯು. ೧೧೦-೪೩) ; ವಾರಿ ಮರಳ್ಪುಣಾಸ ಪೆರಿ ×× ತೊಱಿಯು ಅಲರ್ ಮೇರೆ (ಎಕ. II, ೩೫-೭ ; ಸು. 800) ; ತೊಱಿಯ ಪಳ್ಳದ ನೀರ್ಗಳಂ ಕುಡಿದು (ವಡ್ಡಾರಾ. ೯೦-೨೨); ಶಿರದೊಳ್ [ ತೊ ]ಱ್ ತೊಱಿಯ ಕೆಲದೊಳೆಸೆದಿರೆ ಪೆಱ್(ಹಂಪಭಾ. ೮-೨೪);ಹಾಲ ತೊಱೆಗೆ ಬೆಲ್ಲದ ಕೆಸಱು ಸಕ್ಕರೆಯ ಮಳಲು (ಬಸವ. ೨೯೦) ; ತೊಱೆಯ ಹೊನಲಲಿ ಹೋಹ ಕರಡಿಯನಱಿಯದದು ಕಂಬಳಿಯೆನುತ್ತಾಸಱಿದೆಯಂಬಿಗನೆಯ್ದು ಹಿಡಿಯಲು (ಬಸಪು. ೨೦-೨೨) ; ಮರೀಚಿಯ ತೊಱೆಗೆ ಹಱಿಗೋಲಿಡುವರುಂಟೇ (ಕುಮ್ಯಾದ್ರೌ. ೪-೩೮). ೨. ಪ್ರವಾಹ ; ನೆರೆ ; ಹರಿವು : ಎಱೆವ ತೊಱೆಯನಿದಿರಿಸುವುದೆಲ್ಲಿಯ ಗಾಂಪು (ಅದಿಪು. ೧೨-೧೦೮) ; ರಸದ ತೊಱ್ ಪರಿದುದು (ಸುಕುಮಾ. ೧೦-೨೩) ; ಹಣ ಸಾಲಿಟ್ಟ ತೊಱ್ [ಪಾಠಾ. ಟ್ಟುದುಱ್] ಯೆನಲರುಣಜಲ ನಗರೋಪಕಂಠದಲಿ (ಕುಮ್ಯಾಆ. ೧೨-೨೫) ; ಉದಕಪ್ರವಾಹಮಂ ತೊಱ್ ಯೆಂಬರು . . . ಉರು ಶಿಲೆಯನಱಿಯೆಂಬರಲ್ಲದಿವ ನುಡಿಯುರವನಾಳ್ವ

ಳಿಯೊಳು (ಶ್ರಮಿಥಾ. ೨-೯) ; ತೊಱೆಗೂಡಿದ ನದಿ ನದಿಯ ಕಾಲುವೆಗಳು . . . ರಂಜಿಸುತಿಹ ಪುರವಿಹುವಾ ದೇಶದೊಳಗೆ (ಕಂನವಿ. ೨-೧೧).

**ತೊಱೆ$_3$** : ೧. "ಹೊಳೆಗೆ ತೊಱೆಯೆಂದಕ್ಕು" (ಶಶಕ. ೪೯) ; ಏಱೆ ತೊಱೆ ಕಳವೃತ್ತಿ ಕಟ್ಟೊನ್ನಸ್ಯಾಮಹಾಪಾತಕನಕ್ಕುಮ್ (ಎಕ. XVI, ತುಮಕೂ. ೧೦೨-೩ ; 730) ; ನಿತ್ಯವು ತೆಗೆಯುತಲಿರಬೇಕು ಹುಟ್ಟನು ತಾನೆಯೆ ತೊಱೆಯೊಳಂಬಿಗನು (ಇಂಜಾಶ. ೨೦೧-೩೯) ; ಕುದಿವುದು ವೋಡವು ಕೊಟ್ಟಡದಿದೆ ವಳೆ ಬತ್ತಿತು ಹಳ್ಳವು ಅತ್ತಿತು ತೊಱೆ ಹೊಳೆ (ಉಮ್ಮಾಕ. ೬೪-೪) ; ಬಾಳ ಗುಬ್ಬಿಗೆ ಗುಟುಕಿವಾಗಲಿ ಬಾಳ ತೊಱೆಯಲಿ ಹರಿಯಲಿ (ಶರ್ಮ್ಮೀಲ. ೧-೦೨).

**ತೊಱೆತೊಱೆ, ತೊರೆತೊರೆ** (ದ್ವಿರುಕ್ತಿ) : ನಡುಗಿತಿಳೆ . . . ಹೆಮ್ಮರ ನುಡಿದು ಬಿದ್ದವು ಸಲಿಲವುಕ್ಕಿತು ಕೂಡೆ ತೊಱೆತೊಱೆ [ಪಾಠಾಂ. ಕೆಱೆ ತೊಱೆ]ಯ(ಕುಮ್ಮಾಸ.೧೫-೪೩); ತೊರೆತೊರೆಯಾಗಿ ಹೊಳೆಬಸಿಯುಂತಿಹುದು (ಇಂಗೀಶ. ೬೧-೧೧). **ತೊಱೆ ಬಸಿ** = ಪ್ರವಾಹದಂತೆ ಉಕ್ಕಿ ಹರಿ :ಕಣ್ಣೀರು ತೊರೆಬಸಿವರಡು ತೋಳ್ಗಳಂ ಮುನ್‌ಚಾಚಿ (ಶ್ರೀರಾಮಾ. ೬೯೩-೪೮೯).

**ತೊಱೆಗಳಾಣ್ಮ** = ನದಿಗಳ ಒಡೆಯ,-ಅಧಿಪತಿ ; ಸಮುದ್ರ : "ತೊಱೆಗಳಾಣ್ಮಂ ಮುನ್ನೀರ್, ನೀರೊಟ್ಟಿಲ್ (ಕಡಲ್) – ಈ ೪ ಸಮುದ್ರಂ" (ಕಕಸಾ. ೮-೧೪೧) ; "ಮುನ್ನೀರ್ ನೀರೊಟ್ಟಿಲುಮಂ ದೆನ್ನುತ್ತುಂ ತೊಱೆಗಳಾಣ್ಮ ಕಡಲೆನೆಯುಂ ತಾಂ . . . ಸಾಗರಮನಿಕುಂ" (ಕವಿಕಂ. ೮೯). **ತೊಱೆದಾಳ್ದ** = ಗಂಗೆಯನ್ನು ಧರಿಸಿದವನು ; ಶಿವ; ತೊಱೆದಾಳ್ದನ ಕಾರ್ಮುಕವ ಸಿಂಜನಿಯಿಂದೆ ನೆಱೆ ಬಾಗಿಸಿದರಂಬಂತೆ (ಪೋಹಕ. ೨-೩೬). [ದೇ.? ತಮಿ. ತುಱೈ; ಮಲ. ತುಱ; ತುಳು. ತುದೆ]

**ತೊಱೆಕಡವ** (ನಾ). ನದಿಯ ತೀರದಲ್ಲಿ ಬೆಳೆಯುವ ಕಡವ ವೃಕ್ಷ "ನದೀಕದಂಬಃ – ತೊಱೆಕಡವ" (ಓಷಧಿ. ೮೪).

[ ತೊಱೆ$_3$ + ಕಡವ$_1$ (<ಕಡಂಬ) ]

**ತೊಱೆಕಾರಾಟ್ಟಿ** 'ತೊಱೆಕ್ಕಾರಾಟ್ಟಿ' ನೋ.

**ತೊಱೆಕ್ಕಾರಾಟ್ಟಿ, ತೊಱೆಕಾರಾಟ್ಟಿ** (ನಾ). ಒಂದು ಸ್ಥಳದ ಹೆಸರು : ತೊಱೆಕ್ಕಾರಾಟ್ಟಿಯು ಪೆಕ್ಕ ವಿಯಮುಫೂಲ್ಗೊಗೆಯು ಕೂಡಲೂರು (ಎಕ. IV, ಗುಂಡ್ಲುಪೇ. ೮೮-೪ ; ಸು. 750). **ತೊಱೆಕಾರಾಟ್ಟಿ** : ಶ್ರೀಮತು ತೊಱೆಕಾರಾಟ್ಟಿಯ ಆಚಯ್ಯನ ಮಗಂ ಕೇಸವಭಟ್ಟಂ ದೇಗುಲವಂ ಮಾಡಿಸಿ . . . ಕೊಟ್ಟ ಭೂಮಿ (ಎಕ. IV, ಗುಂಡ್ಲುಪೇ. ೯೩-೨೦; 1049).

[ P ಇದು 'ತೊಱೆಕಾರರ ಹಟ್ಟಿ ಇರಬಹುದೆ' ? ]

**ತೊಱೆಗಟ್ಟು** (ಕ್ರಿ). ಪ್ರವಾಹವಾಗು ; ಪ್ರವಹಿಸು : ಕಾಳಮೇಘವೆಂಬ ಭೂಮಿಯಲ್ಲಿ ಕಾಳರಾತ್ರಿಯೆಂಬ ಏರಿಗಟ್ಟಿ ಮಂಜಿನ ನೀರು ತೊಱೆಗಟ್ಟಿ ಹಾಯ್ದು ತುಂಬಿತ್ತು (ವಡಸಂ. ೩೪೬-೧). [ ತೊಱೆ$_3$ + ಕಟ್ಟು$_1$ ]

**ತೊಱೆಗಣಗಿಲೆ, ತೊಱೆಗಣಗಿಲು, ತೊಱೆಗಣಗಿಲೆ** (ನಾ). (ತೇವದ ನೆಲದಲ್ಲಿ ಬೆಳೆಯುವ) ಒಂದು ಬಗೆಯ ಕಣಗಿಲೆ. "ನಿಚುಲ, ಅಂಬುಜ, ಹಿಜ್ಜಲ = ತೊಱೆಗಣಗಿಲೆ" (ನಾಚಿರಾ. ೬) ; "ತೊಱೆಗಣ [ಪಾಠಾಂ. ಣೆ]ಗಿಲಾ ಲೋಮಕಂ ಕಿಚುಳಮದು" (ಮುಂಗರಾ. ೩೪-೧೧).

**ತೊಱೆಗಣಗಿಲು** : "ರಕ್ತಕಾರ್ಮುಕಃ– ತೊಱೆಗಣಗಿಲು" (ಓಷಧಿ. ೧೩೩); ತೊಱೆಗಣಗಿಲ ಕತ್ತರಿಯೆಸೆವ ಮೂಲವಂ ಕತಕಕುಡಾವಳಿಯ ಪರಿಪಕ್ವ ಫಲರಸ ಜಳದಿಂದರೆದು (ಖಮುದ. ೭-೨೦). **ತೊಱೆಗಣಗಿಲೆ** : "ನಿಚುಲಃ, ಹಿಜ್ಜಲಃ, ಅಂಬುಜಃ ಈ ೩ ತೊಱೆಗಣಗಿಲ ಹೆಸರು" (ನಾಚಿರಾ. ೧೦೮).

[ ತೊಱೆ$_3$ + ಕಣಗಿಲೆ$_1$ ]

**ತೊಱೆಗಣಜಲು, ತೊಱೆಗಣಜಿಲು, ತೊಱೆಗಣಜಿಲೆ** (ನಾ). (ತೇವದ ನೆಲದಲ್ಲಿ ಬೆಳೆಯುವ) ಒಂದು ಬಗೆಯ ಸಸ್ಯ : "ದೀರ್ಘಪತ್ರಃ– ಕಮ್ಮತ್ತಿ, ತೊಱೆಗಣಜಲು, ನೀರಿಪ್ಪೆ, ಹಕ್ಕಿಯ ಭೇದ" (ಓಷಧಿ. ೭೭).

**ತೊಱೆಗಣಜಿಲು**: ನೆಱೆ ಕು(ದಿ)ಸಿ ಕಟ್ಟುಗಿಂ ತೊಱೆಗಣಜಿ[ಪಾಠಾಂ. ಗಿ]ಲ ದಳಮನಾದೊಡಂ ಬಾತ ವಿಷಕ್ಕುಱೆಸಲ್ಕುಪನಾಹದೆ ತೊಱೆಯುಱೆಗುಂ (ಖಮುದ. ೧೬-೭೨). **ತೊಱೆಗಣಜಿಲೆ**: ನಱುವಲ್ ಮಂಗ್ಗಾರೆಯ ಕಾಯ್ ತೊಱೆಗಣ(ಜ)ಗಿಲೆ ದೇವದಾಳಿ . . . ಇವನರೆಯಲ್ ಜಲದಿಂದೆ ಫಣಿಯ ವಿಷನಿರ್ಹರಣಂ (ಖಮುದ. ೫-೧೦೪).

[ ತೊಱೆ$_3$ + ಗಣಜಲು (< ಗಣಜಿಲ$_1$) ]

**ತೊಱೆಗಣಗಿಲು** 'ತೊಱೆಗಣಗಿಲೆ' ನೋ.

**ತೊಱೆಗಣಗಿಲೆ** 'ತೊಱೆಗಣಗಿಲೆ' ನೋ.

**ತೊಱೆಗಣಜಿಲು** 'ತೊಱೆಗಣಜಲು' ನೋ.

**ತೊಱೆಗಣಜಿಲೆ** 'ತೊಱೆಗಣಜಲು' ನೋ.

**ತೊಱೆಗರೆ$_1$, ತೊರೆಕರೆ** (ನಾ). ಹೊಳೆಯ ತಡಿ ; ನದೀತೀರ : ಕಡಲ ಕಡೆಯಲ್ಲಿ ಸಾರ್ಚಿರ್ಪುದೋ ಆತರ್ ವೋಡನದ ತೊಱೆಗರೆಯ ತೆಮಿಸಿರದೆ ಎಂದಾನುಮೊರ್ಮೆ ಮನೆ ಮಾಟ್ಟರನ್ (ಬದ್ಧಶ್ರ. ೩೮-೮೩೨). **ತೊರೆಕರೆ** : ಗೋವತ್ಸಲೀಲೆ ತೊರೆಕರೆಯ ಮೇಲೆ ವನವಾಟ ಸೆಜ್ಜೆಸಾಲೆ (ಸೂರ್ಯಗಾ. ೩೫-೧). [ ತೊಱೆ$_3$ + ಕರೆ$_4$ ]

**ತೊಱೆಗರೆ$_2$** (ನಾ). ಒಂದು ಸ್ಥಳದ ಹೆಸರು : ಲೋಕಾಪುರಂ ಪನ್ನೆರಡು ತೊಱೆಗರೆಯಱುವತ್ತು, ಇನ್ನು ಮೂವತ್ತೊರ್ಚ್ಚಾಸಿರದ ನಾಱೆರಡು ಬಾಡಮಂ ಲೋಕಟೆಯರಾಳೆ (ಎಕ. VII, (8), ಶಿಕಾರಿ. ೩೬೮-೭ ; 902). 'ತೊಱೆಗರೆ ಪರಾ'. [ ? ]

**ತೊಱೆದಡಿ** (ನಾ). = ತೊಱೆಗರೆ$_1$ : ಬಿಲ್ಲವಳ್ಳಿಗಳೆಲ್ಲಂ ತೊಱೆದುವು ತೊಱೆದಡಿಗಳನಾರ್ ತೊಱೆಯದರನುಕೂಲವೃತ್ತಿಗೆಟ್ಟಿಸಗುವರು (ಜಗವಿ. ೪-೧೧) ; ಅಂದು ನಮ್ಮನು ರಜತವಾಳುಕಿಯೆಂದೆನಿಪ ತೊಱೆದಡಿಯೊಳೀತನು ಬಂದು ಬಂಧುವೆಯಾಗಿ ರಕ್ಷಿಸಿದನು (ಸಾಳ್ವಭಾ. ೧೭-೯೦).

[ ತೊಱೆ$_3$ + ತಡಿ$_2$ ]

**ತೊಱೆದಲೆಯ** (ನಾ). ತಲೆಯಲ್ಲಿ ನದಿಯನ್ನು ಧರಿಸಿದವನು ; ಗಂಗಾಧರ ; ಶಿವ : ತೊಱೆದಲೆಯನ ಮುಂದಲೆಗೆ ಸೀಸಕವನಳವಡಿಸಿ, ಫಣಿಕುಂಡಲನ ಕರ್ಣಕ್ಕೆ ಮಕರಕುಂಡಲಮನಿಟ್ಟು (ರಾಜಶೇ. ೧೩೦-೯೦).

[ ತೊಱೆ$_3$ + ತಲೆ$_1$ + – ಅ$_7$ ]

**ತೊಱೆದವನ, ತೊರೆದವನ** (ನಾ). ನೀರಿರುವ ಜಾಗದಲ್ಲಿ ಬೆಳೆಯುವ ಒಂದು ಬಗೆಯ ದವನ : "ತಪೋಧನಃ – ಬೋಟತಟ, ತೊಱೆದವನ" (ಓಷಧಿ. ೬೬) ; ಗಿಣಿಮೂಗನ ಬೇರ್ ತೊಱೆದವನ ಕೊಟ್ಟ ಮುಸ್ತೆಯ ನುಱೆ ಚೂರ್ಣಿಪುದು (ಖಮುದ. ೫-೯೪). **ತೊರೆದವನ** : "ವನಾದೀ – ದವನ, ತೊರೆದವನ" (ಓಷಧಿ. ೦೪೯). [ ತೊಱೆ$_3$ + ದವನ ]

**ತೊಱೆನಾಡು** (ನಾ). ಒಂದು ಪ್ರದೇಶದ ಹೆಸರು : ವಿದಿಮರಸರ್ ತೊಱೆನಾಡಯ್‌ನೂಱುಂ . . . ಆಳೆ (ಎಕ. IV, ಹೆಗ್ಗಡ. ೯೩-೩ ; ಸು. 740) ; ಎಱೆಗಜ್ಜ ನಾಮಧೇಯಃ ತೊಱೆನಾಡು ಅಯನೂಱು[ಂ] . . . ಆಳೆ (ಇಕ. XIV, ೨೩೨-೪೯ ; ಸು. ೯ನೆಯ ಶತ).

[ ತೊಱೆ ? + ನಾಡು ]

**ತೊಱೆನಾಯ್** (ನಾ). ನೀರುನಾಯಿ: ತೊಱೆನಾಯ್ ಸತ್ತಡೆಯ ಮಾಸ್ ಶುಕಾಸ್ಯಂ ಮದ್ಯಂ ಮುಱೆದೊಂಡೆಯೆಬವಂ ಪೆಸರಱೆಯದ ಬಾಹುಗಳೊಳೊರಸೆ ಪೊಱಸಿ(ಸು)ಗೆ ಪೋಕುಂ (ಲೋಕೋಪ. ೯-೨೦೨).

[ ತೊಱೆ$_3$ + ನಾಯ್ ]

**ತೊಱೆಮತ್ತಿ** (ನಾ). ೧. ನದಿಯ ತೀರದಲ್ಲಿ ಬೆಳೆಯುವ ಒಂದು ಬಗೆಯ ಮತ್ತಿಗಿಡ : "ನದೀಸರ್ಜಃ, ವೀರತರುಃ ಈ ೨ ತೊಱೆಮತ್ತಿ" (ನಾಚಿರಾ. ೧೦೭) ; "ತೊಱೆಮತ್ತಿ ನೀತಿ ಕಕುಭಾಪ್ವಾನಂ" (ನಾನಾರ. ೦೨೯) ; "ನದೀಸರ್ಜಃ – ಮತ್ತಿ, ತೊಱೆಮತ್ತಿ" (ಓಷಧಿ. ೮೩).

೨. ಒಂದು ಬಗೆಯ ಸಸ್ಯ: "ಮುರುಕಿರಾ ತೊಱೆಮತ್ತಿ ಸಿಂಧುಕಿ ಯೆನಿಕ್ಕು" (ಮಂಗರಾ. ೩೩-೧೮). [ತೊಱೆ₂ + ಮತ್ತಿ₁]

**ತೊಱೆಮಲ್ಲಿಗೆ** (ನಾ). ನದಿಯ ತೀರದಲ್ಲಿ ಬೆಳೆಯುವ ಒಂದು ಬಗೆಯ ಮಲ್ಲಿಗೆ: ತೊಱೆಮಲ್ಲಿಗೆಯುಂ ಪ್ರವಿಲೀವನಮುಂ ಮಾಡುತ್ತವಿರಲ್ಕಚ್ಚರಿಯಿ ದೆಂಬಿನಂ ಕ್ರಿಮಿ ಕಿಡುಗುಂ (ಲೋಕೋಪ. ೯-೧೧೩); ತೊಱೆಮಲ್ಲಿಗೆ ಪುನ್ನಾಗಂ... ತೊಟ್ಟ ಮುಸ್ತೆಯನುಱೆ ಚೂರ್ಣವುದು (ಖವುದ. ೩-೯೪). [ತೊಱೆ₂ + ಮಲ್ಲಿಗೆ]

**ತೊಱೆಮಾವು, ತೊರೆಮಾವು** (ನಾ). ನದಿಯ ತೀರದಲ್ಲಿ ಬೆಳೆಯುವ ಒಂದು ಬಗೆಯ ಮಾವಿನ ಮರ: ತೊಱೆಯ ಮಾವು = ತೊಱೆಮಾವು (ಶಮದ. ೧೬೩ ಪ್ರಯೋ); ಹಲಸು ಕೊಡಸಿಗೆ ಮಾವು ಕೊ[ಪಾಠಾಂ. ತೊ] ಱೆಮಾವುಲಿಯ ಕಣಗಿಲು .... ಹಾದರಿಯುಮರ ಮೊದಲಾದುವುರ್ವಿಹವು (ಸಾಳ್ವಭಾ. ೫-೩). **ತೊರೆಮಾವು**: "ಅಮ್ರುಪತಾಕಾ – ತೊರೆಮಾವು" (ಒಷಧಿ. ೧೨). [ತೊಱೆ₂ + ಮಾವು]

**ತೊಱೆಯ, ತೊರೆಯ** (ನಾ). ೧. ಮೀನು ಹಿಡಿಯುವವನು; ಮೀನು ಗಾರ; ಬೆಸ್ತ: ಅರ್ಥವುಂಟೆಂದಹಂಕರಿಸಿ ಮಾಡುವನ ಭಕ್ತಿ ತೊತ್ತಿನ ಕೂಟ ತೊಱೆಯನ ಮೇಳದಂತೆ [ಪಾಠಾಂ. ತೊತ್ತಿನ ಕೂಟದ ತೂರ್ಯ ಮೇಳದಂತೆ](ಬೇದಾಪವ೩೦-೫೩).ಕಾಡತುಱುಕಾಱನೋ ಮೀನ್‌ಬಿಡಿವ ತೊಱೆ ಯನೊ(ಅಕ್ಕತ್ತಾ. ೩೬-೩೦೮). **ತೊರೆಯ**:೧."ಬಿಸ್ತ=ತೊರೆಯಂ"(ಕಾರಕ್ಕ. ೨೬೦); ಇಲ್ಲಿಯ ಬೆಸವಕ್ಕಳಾರೆನ್ನೊಡೆ ಕಾಱಗೊಡೆಯನುಂ . . . ತೊರೆಯರಾಳ ಪಡಿಯನುಂ (ಎಕ. III, ನಂಜನ. ೧೫೯-೯; 916 ?); ಸ್ವಸ್ತಿ ಶ್ರೀಮತ್ ಪಱಮೆಯರ ಕುಲದ ತೊರೆಯರ ಮಾರಣ್ಣಗಂ ಅನ್ನವ್ವೆಯಕ್ಕಂಗಂ ಪುಟ್ಟಿದ ವರ ತಾತಣ್ಣ (ಎಕ. IV, ಗುಂಡ್ಲುಪೇ. ೮೪-೨; 1000 ?); ೨. ದೋಣಿ ನಡೆಸುವವನು; ಅಂಬಿಗ: ಪಡುವ ದಿಬ್ಬದ ಗೌಡನೊಬ್ಬನು ಬಿಡದೆ ತೊರೆಯನ ಕೂಗಿಕೊಂಡನು (ಜಂಗೀತ. ೬೬-೨); ತೊರೆಯರೆರೆಯಾ ಏಕೆ ನಿನ್ನಹೊತ್ತಿಗಲ್ಲದೆ ಬಾರೆ ಮುನ್ನ? (ಗೀವಿಂ. ೫೫-೩೩). [ತೊಱೆ₂ + – ಅ₇ /ತಮಿ. ತುಱೈಯ]

**ತೊಱೆಯಣುಗ** (ನಾ). ನದಿಯ ಮಗ; ಗಾಂಗೇಯ; ಭೀಷ್ಮ: ತೊಱೆಯಣುಗನು ಪರಿತಂದು ಅಱಗುಲಿ ಕೌರವನಾಡುವ ಜೂದಿನ ತೆಱನನು ಧೃತರಾಷ್ಟ್ರಗುಸುರೆ (ನೇಮಿಶಂ. ೨೪-೩೬). [ತೊಱೆ₂ + ಅಣುಗ (<ಅಣಂಗ)]

**ತೊಱೆಯಿಂಗುಳ, ತೊರೆಇಂಗುಳ** (ನಾ). ನದಿಯ ತೀರದಲ್ಲಿ ಬೆಳೆಯುವ ಒಂದು ಬಗೆಯ ಇಂಗುಳದ ಗಿಡ: "ತೊಱೆಯಿಂಗುಳಂ ದುರಾಲಂಬ ಮೆನಿಸಿಕ್ಕು" (ಮಂಗರಾ. ೩೬-೧೬). **ತೊರೆಇಂಗುಳ**: ನೆಲಗುಳ್ಳ ತೊರೆ ಇಂಗ[ಗು]ಳ .... ಕಷಾಯ ಕಾಯಿಸಿ ಹಿಪ್ಪಲಿ ಪ್ರತಿವಾಪವಿಕ್ಕಿ ಸೇವಿಸೆ ಶ್ಲೇಷ್ಮಜ್ವರ ನಾಶವಾಗುವುದು (ಸಕವೈ. ೮೯). [ತೊಱೆ₂ + ಇಂಗುಳ]

**ತೊಱೆಯಿಸು, ತೊರಸು, ತೊಱಸು, ತೊಱಿಸು** (ಕ್ರಿ). ೧. ತ್ಯಜಿಸು ವಂತೆ ಮಾಡು: ತವರೂರ ಮಱೆಯಿಸಿ ನಿದ್ರೆಯ ತೊಱೆಯಿಸಿ ಸವಿಗಳ ನೆಱೆಯಿಸಿ . . . ಸುಖದೊಳೋಲಾಡಿಸುವವಗಡ ಯಾತಱಿಂದಾಯ್ತು (ಭರತ. ೬-೩೯). ೨. ವೈರಾಗ್ಯವನ್ನು ಹೊಂದುವಂತೆ ಮಾಡು; ವೈರಾಗ್ಯದೀಕ್ಷೆಯನ್ನು ಕೊಡು: ಪರಮಾಯುಪ್ಯಾಂತಂಬರಂ ನಿರಾಕುಳ ಮಾಗಿರ್ಪಾ ಯಿರವಿನ ಜೈನಾಭಿಪ್ರಾಯಂ ಪ್ರಾಯೋಪಗಮನದಿಂ ತೊಱೆ ಯಿಸಿದಂ (ಆದಿಪು. ೨-೫೩). **ತೊರಸು**: ೧. ಶರೀರದಭಿಲಾಷೆಯಂ ಕೆಡಿಸುವರೆ ನೆರೆ ಸ್ವಬಂಧುವನೆಲ್ಲ ಮರಸುವಡೆ ತೊರಸುವಡೆ ತಿರುತಿರುಗಿ (ತಿಕುಶ. ೧-೭೮). **ತೊಱಸು**: ೧. ತೊತ್ತುವೇಟಕೆ ಹಡದ ತಾಯನು ತೊಱಸಿದರೋ[ಪಾಠಾಂ. ತೋಱಿದರು] (ಕೊರರಾ. ೪-೫-೧೧). **ತೊಱಿಸು**: ೧. ಅವನ ಮಾತಾಪಿತರ ತೊಱಿಸಿ[ಪಾಠಾಂ. ತೊಲಗಿಸಿ] ಪ್ರೀತಿಪಡಿಸಿ ಹಣವ ಸೆಳೆದು ರೀತಿಗೆಡಿಸಿ (ಪುರಂದ. ೨-೧೬-೨). ೩. ಕಂಗ್ಗಿಸು; ಕಡಿಮೆಮಾಡು: ಕರ್ಪೂರಕನ್ನಳ್ಳ ಗುಣಂಗಳಂ ತೊಱಿಸಿ ಮಲ್ಲಿಗೆಯೊಳ್ ಸಮನಾಗಿ ತೋರ್ಪ ನೀರುಳ್ಳಿಯ ಗಡ್ಡೆಯಂ . . . ಮೆಲ್ಲದ ಮಾನವನೇನ ಬಲ್ಲವಂ (ಸೂಕ್ತಿಸು. ೧೦-೯೩). [ತೊಱೆ₁ + – ಇಸು₃]

**ತೊಱೆಯೆಱೆಯ** (ನಾ). ನದಿಯ ಒಡೆಯ,– ಪ್ರಭು; ಸಮುದ್ರ: "ಪಾರಾವಾರ ಶಬ್ದಂ ತೊಱೆಯೆಱೆಯನೆನಲ್" (ಕಕಾನಿ. ೯೦); ಎಱಗಿದ ನಿಱೆಮುಗಿಲೊಳ್ಳೆಱೆ ಮಿಱುಗುವ ಮಿಂಚುಗಳನುಡಿದು ಪಿಡಿದನೊ ಕಡುಪಿಂ ತೊಱೆಯೆಱೆಯಂ ತರೆಗ್ಗೆಗಳನುಱದನೆ ಕವಿನ್ನಾನ್ನಳೀಂ ಮನಂ ಗೊಳಿಸಿದವೋ (ರಾಜಶೇ. ೧-೯೯). [ತೊಱೆ₂ + ಎಱೆಯ]

**ತೊಱೆವನಿ** (ನಾ). ಪ್ರವಾಹವಾಗಿ ಹರಿಯುವ ಹನಿ: ಒಱೆವನಿಗಳಿದಿರ್ವನಿ ಮಸ್ತಕವನಿ ತೊಱೆವನಿಗಳನಾಂತು ಬಿಡದ ನೆಱೆ ವಿಶ್ವರೂಪಾದಂತೆ ಸಂತತಧಾರೆ ಸುರಿದುದೀಗಳೆಯಿಲೆಯೊಳಗೆ (ಪೋಹತ. ೪-೩೯). [ತೊಱೆ₂ + ಪನಿ₂]

**ತೊಱೆವರಿ** (ಕ್ರಿ). ತೊರೆಯಾಗಿ ಹರಿ; ನದಿಯಾಗಿ ಪ್ರವಹಿಸು: ಕೆಱೆಯು ಬಱುಗೆಱೆಯಾಗಲೀಕ್ಷಿಸಿ . . . ನೀರಿದೆ ಕೊಳ್ಳಿಯಿಂದು ಕಮಂಡಲವ ಮರುಗೆ ತೊಱೆವರಿದುದು (ಸಾಳ್ವಭಾ. ೩೦-೩೬). [ತೊಱೆ₂ + ಪರಿ₂]

**ತೊಱೆವಳಿ, ತೊರೆವಳ್ಳಿ** (ನಾ). ಒಂದು ಊರಿನ ಹೆಸರು: ತೊಱೆವಳಿಯ × × × ಗಟ್ಟಿ (ಎಕ. VI, ಚಿಕ್ಕಮ. ೬೦-೨೦; 1068 ?). **ತೊರೆವಳ್ಳಿ**: ಪಡುವಣ ತೊರೆವಳ್ಳಿಯ ಬಾಸಂಬಾಳ್ಳಿಯೂರ ಮುಂದಣ ಕೆಱೆಯೊಳ್ (ಎಕ. IV, ಮೈಸೂರು. ೩೬-೧೫; ಸು. 990?); (ಮೈಆರಿ. ೧೯೧೬, ೨-೧೫ ನೋ). [?]

**ತೊಱೆವಾಯ್** (ಕ್ರಿ). ನದಿಯನ್ನು ದಾಟು: ನಗುತ ತೊಱೆವಾಯ್ದುಂಬಿ ಗರ ಗಂಡನೆಂಬ ಕೀಳ್ಪೆಗೆ ನಿಮಗೆ ನೈಜ (ಸಿಂಗಿರಾ. ೪೪-೧೧). [ತೊಱೆ₂ + ಪಾಯ್₁]

**ತೊಱೆವು** (ನಾ). ಇಲ್ಲವಾಗುವಿಕೆ; ಬಿಟ್ಟುಹೋಗುವಿಕೆ: ವೀರನೆನಿಪಗ್ಗದ ಮಾತದು ದೂರವಾಯ್ತು ನಿಷ್ಠುರನೆನೆಂಬ ಮಾತು ಕೂಱೆವಾದುದು ಪೆಂಪಿನ ಮಾತು ಕೆಟ್ಟುದು (ಧರ್ಮಾಮೃ. ೧೩-೧೧೧). [ತೊಱೆ₁ + – ವು /ತಮಿ. ತುಱವು]

**ತೊಱೆವೇಂಟೆ** (ನಾ). ನೀರಿನಲ್ಲಿ ಆಡುವ ಬೇಟೆ; ಮೀನು ಹಿಡಿಯುವಿಕೆ: ಇಂತು ವನ್ಯಕೇಳಿಯಂ ಪಲವೇಂಟೆಯಾಡಿ ಕಾಡೊಡೆಯಂ ತೋಡಿಲ್ಲದ ತೊಱೆವೇಂಟೆಯಾಡಲು . . . ಪೆರ್ದೊಱೆಗೆಯ್ದೆ ಸಾರ್ದು (ರಾಜಶೇ. ೫-೧೧೪ ಪ). [ತೊಱೆ₂ + ಬೇಂಟೆ]

**ತೊಱೆಹ, ತೊರೆಹ** (ನಾ). ತ್ಯಜಿಸುವುದು; ಬಿಡುವಿಕೆ; ತ್ಯಾಗ: ಸಂಸಾ ಕೆಳಂ ಪುಲ್ಲೆಯೊಳ್ ತೊಱೆ[ಪಾಠಾಂ. ಱ]ಹಂ ಕ್ಷೀಣವಾದಂಗಳೊಳ್ ಬಡತನಂ ಸ್ತ್ರೀಮಧ್ಯದೊಳ್ . . . ಅಲ್ಲದಿಲ್ಲ ಪೆಱತೇನಾರಯ್ವಡಾ ದೇಶದೊಳ್ (ಪುಣ್ಯಾಸ್ರ. ೧-೧೧೧). **ತೊರೆಹ**: ತೊರೆಹ: (ಅಧಿಕಾರ, ಹಕ್ಕು, ಬಾಧ್ಯತೆ, ಮೊ.ಗಳ) ವಿಧಿಗನುಸಾರವಾದ ಪರಿತ್ಯಾಗ (Abdication. ಇಂಕನಿ). [ತೊಱೆ₁ + – ಹ₂]

**ತೊಱೊಗಂಗ** (ನಾ). (?) : ಸಂಸ ತೊಱೊಗಂಗಗೆ ಕಟ್ಟಿದ × ಡಿಯ . . . [ಯ]ದು (ಸಾಇಇ. XX, ೨೯-೨೨; 1044). [?]

**ತೊಱ್ತುಱಿದುಳಿ** 'ತೊಱ್ತುಱಿದಂಟು' ನೋ.

**ತೊಟಕಲ್** (ನಾ). ತಿರುಗುವಿಕೆ; ಸುತ್ತುವಿಕೆ: "ತೊಟಕಲ್ ತೊಟಲ್ವುದು" (ಶಮದ. ಪಾ. ೧). [<ತೊಟಲ್₁ + – ಕಲ್₄]

**ತೊಟಲ್₁, ತೊಳಲ್₁, ತೊಳಲು₁, ತೊಟಲು** (ಕ್ರಿ). ೧. ತಿರುಗಾಡು; ಸಂಚರಿಸು; ಅಲೆದಾಡು: ಚಂಗೆವೊಕ್ಕಡವಿಯಂ ತೊಟಲ್ವಲ್ಲಿಯೊಂದು ಮರದ ಪೊಟರೊಳಿರ್ದು (ವಡ್ಡಾರಾ. ೮೯-೬); ಅಂತು ಭರತೇಶ್ವರಂ

ಸಕಳಾಂತಃಪುರಸಹಿತಮಲ್ಲಿ ವಿಶ್ರಮಿಸಿ ವನಾಭ್ಯಂತರಮಂ ತೊಟಲೆ (ಆದಿಪು. ೧೧-೮೩); ಒಂದು ದಿವಸಂ ಯುವರಾಜನಿಂದಾಯುಧಮನೇಱಿ ಬೇಂಟೆಯ ವಿನೋದದಿಂ ತೊಟಲುತ್ತುಮಿರೆಯಿರೆ (ಕಾದಂಪೂ. ೬೧೬); ಈ ಕಾಂತಾರದೊಳ್ ವ್ಯಾಧರಾಗಡೆಯತ್ಯಾಗ್ರಹದಿಂ ತೊಟಲ್ವರ್ (ಪಂಚತಂ. ೯೬-೧೮); ಶಾಸ್ತ್ರದಪೇಕ್ಷೆಯಿಂದೆ ತೊಟಲುತಿರ್ದಂ ಧರಾಮಧ್ಯದೊಳ್ (ನೇಮಿಪು. ೩-೧೬೨); ನೀಂ ತೊಟಲದ ಪಟ್ಟಣಂ ಪುಗದ ನಂದನಂ . . . ಆವುದು (ಜಗವಿ. ೧೬-೦೨೩); ಗಗನದೊಳೂರ್ಮಿಯಿಂ ತೊಟಲುತಿರ್ಪ ವಿಯಚ್ಚರಸಂಕುಲಕ್ಕೆ . . . ಫಲಸಾರಮನಿತ್ತು (ಕುಸುಮಾ. ೯-೨೬). ೨. (ಸಂಸಾರಚಕ್ರದಲ್ಲಿ) ತಿರುಗಂ; ಸುತ್ತಿ ಬರಂ; ಭ್ರಮಣೆ ಹೊಂದಂ: "ತೊಟಲ್-ಭ್ರಮಣೇ" (ಶಮುಧಾ); ಬಗೆದೀಡಾಡೆ ದುರಂತ ದುಃಖತತಿಗಳ್ . . . ಇನ್ನೆಗಮೋರಂತೆ ತೊಟಲ್ದನಿಂ ತಿರಿಯಲಾಱೆಂ ಭವಾಂಭೋಧಿಯೊಳ್ (ಆದಿಪು. ೯-೬೦); ಅರ್ಧಚಕ್ರವರ್ತಿಯಾಗಿ ಭೋಗಂಗಳನುಂಡು ಮತ್ತಂ ಸಂಸಾರಚಕ್ರದೊಳ್ ತೊಟಲ್ದು ಕಡೆಯ ತೀರ್ಥಕರನಕ್ಕುಂ (ಚಾವುಂಪು. ೫೧); ಗಾಣದೆತ್ತಿನಂತೆ ನಿಯಮಂಗೆಟ್ಟು ತೊಟಲುತ್ತಿರದೆ ಆಲದ ಬಿಟಲಂತೆ ನೆಲಕ್ಕಿಳಿಗದೆ (ಧರ್ಮಾಮೃ. ೫-೯೯). ೩. ಸುಳಿದಾಡಂ; ಸಂಚಲಿಸು; ಹೊಳೆ: ಸುಭದ್ರೆಯ ರೂಪು ಕಣ್ಣ ಪಾಪೆಯಂತೆ ಕಣ್ಣೊಳೆ ತೊಟಲೆ (ಪಂಪಭಾ. ೪-೬೯ ವ); ಕಣ್ಣೊಳ್ ತೊಟಲ್ವಂದದಿಂದಾ ನಿದ್ರಾಂಗನೆ ಸೊಗಯಿಸಿಯಂದಳಿರುಳೊಳ್ ತತ್ಖೇಚರಾಧೀಶನಾ (ಶಾಂತಿಪು. ೫ ೮೦); ಪ್ರಿಯೆಯ ಭಂಗಿ ತೊಟಲ್ದಪುದೆನ್ನ ಚಿತ್ತದೊಳ್ (ಶೃಂಗಾರ. ೩-೩೮); ಎನ್ನ ಚಿತ್ತಮಂ ನೋಯಿಸೆ ಕಣ್ಗಳೊಳ್ ತೊಟಲುತಿರ್ದಪನಂಗಜಂ (ಬಂಹರಿ. ೮-೫೫); ಒಲಸುವ ಮೆಯ್ಯುಮಾಗುಳಿಸುವಾನನಮುಂ ನಯದಿಂ ತೊಟಲ್ವ ಕಣ್ಮಲರುಂ (ಪುಷ್ಪಪು. ೪-೧೫). ಪೆಣ್ಣ ಕಣ್ಣೊಳ್ ತೊಟಲೆ ಧೈರ್ಯಂಗೆಟ್ಟು ಬಾಯ್ಬಿಟ್ಟು ಕನ್ಯಾರತ್ನಂ ತನಗೆಂತು ಸಾಧ್ಯಮಪ್ಪುದೆಂದು ವಿಚಾರಿಸಿ (ಪುಣ್ಯಾಸ್ರ. ೩-೪೨ ವ); ೪. ಗಸ್ತು ತಿರುಗಂ; ಪಹರೆ ಮಾಡಂ: "ಗರವಟಿಗೆವಂದಂಗೆ ಪಾತಿಗೆಟ್ಟವಂಗಂ ತೊಟಲ್ದುದೆಂದೆಂಬ ನಾಮಂ" (ಸಂಜೀವ. ೧೪); ರವಿಕಿರಣನಿಕರದ ತೆಱದಿಂ ತೊಟಲುತ್ತುಮಿರ್ಪ ದಂಡಕನೆಂಬಾ ತಳಾಱಂ ಕಂಡು (ಧರ್ಮಾಮೃ. ೨-೧೨೬). ೫. ಹೋಗು; ಗಮಿಸು; ನಡೆ: ಇಡುವಂತೆ ಪುಯ್ಯಲಂ ತಮ್ಮ ಕರಾಗ್ರದೊಳ್ ತೊವಲನಾಂತು ನೆಟಲ್ಗೆ ತೊಟಲ್ದಪಾನೆಗಳ್ (ಬಾಧಪು. ೪-೮೨). ೬. ಸುತ್ತಾಡಿ ಪ್ರಚಾರ ಮಾಡು: ಆತಂಗೆಯಾತನ ಬೇಡುವುದೆಲ್ಲಮಂ ಕುಡುವೆನೆಂದು ತೊಟಲ್ವ ಗೋಸಣೆಯಂ . . . ಅರಸಂ ಕೇಳ್ದು (ಪದ್ಮಾರಾ. ೫೦-೨೨). ೭. ಹುಡುಕು; ಶೋಧಿಸು: ಕುರುಡರ್ಕುರುಡರ ಬಟ್ಟೆಯಂ ಪರಿಪರಿದುಂ ತೊಟಲ್ದತೆಱದೆ (ಸಮುಷ. ೧೦-೧೮೪); ಎಣ್ಬಟ್ಟೆಗಳೊಳ್ ನೃಪನಂ ಕಾಣ್ಬನ್ನಂ ತೊಟಲಿಮೆಂದು ... ಒಂದೊಂದು ದೆಸೆಗೆ ಪೊಱಮಟ್ಟಪ್ಪಗಳ್ (ದಶಕು. ೪-೧೯). ೮. ಕಷ್ಟಪಡು; ಹಿಂಸೆಪಡಂ; ಸಂಕಟಗೊಳ್ಳು: ಮನದೊಳ್ ತೊಟಲುತ್ತಂ ತಾಂ ಮನಪೊಲ್ಲದೆ ತನಗೆ ಸೇವಮೆಂದೆನುತೊರೆದಳ್ (ಕಾದಂಉ. ೫೦); ಮೂಱುಂ ಭುವನದೊಳಂ ತೊಟಲುತಿರ್ಪ ಜೀವಾವಳಿಯಂ ಭುವನಾಗ್ರಕ್ಕೆಯ್ದುಸುವರ್ತಪತವಗೆ ಪಿರಿಯರಾ ಮಹಾತ್ಮರ ಜೈನರ್ (ಸಮುಷ. ೪-೯೫); ಬೊಬ್ಬಲ್ ಪೆಱುವಳಂತೆ ತೊಟಲುತ್ತುಂ (ಧರ್ಮಾಮೃ. ೧-೧೬೦); ಮೃಗಾವಳಿ ತೃಷೆಯಿಂ ತೊಟಲ್ದು ಪರಿತಾಪಮನೈದೆ ವನಾಂತರಾಳಮಂ ಬಳಸಿ ದವಾನಳಂ ಬಳಸಿತ್ತುಷ ಮರೀಚಿಮರೀಚಿಸಂಚಯಂ (ಉದ್ಭಟ. ೯-೮೪); ಎರೆವರ್ ತಮ್ಮಯ ಬಡತನದಿರವಿಂಗೆ ತೊಟಲ್ವರ್ (ದಶಕು. ೬-೧೧೫); ಈ ಪರಿಯ ತೊಟಲುತ್ತುಮವಸರದೊಳಾನ್ ತಳ್ವಿ ಬಿಡುವಾಗಿ ಪರಿದೆನ್ (ಅಂಶಿಗೊ. ೧೧-೨೧೩). **ತೊಳಲ್$_1$**: ೧. ಆಱಿಸಿ ತೊಳಲಿದರಿಲ್ಲ . . . ತಪಸ್ಸು ಮಾಡಿದರಿಲ್ಲ ಅದು ತನ್ನ ತಾನಹ ಕಾಲಕ್ಕಲ್ಲದೆ ಸಾಧ್ಯವಾಗದು (ಮಹಾದೇ. ಬ. ೬೪-೧೫೬); ಕೂಡ ಹಡೆಯದೆ ತೊಳಲ್ವ ನವಿಲ ತಂಡಂಗಳಂ . . . ನೋಡುತುಂ ಕೊಂಡಾಡುತಿರ್ದನಾ ವನದೊಳಗೆ (ನಂಬಿರ. ೫-೧೦೫). ಸತತಮುಂ ಕಾಲು ನಿಲ್ಲದೆ ತೊಳಲ್ವ ಸೂರ್ಯನು ದೈವವೆಂತಹನು (ಬಸವು. ೫೪-೧೨); ಬನದೊಳು ಬೇರು ಬಿಕ್ಕೆಯನಱಸಿ ತೊಳಲ್ದುದು ಸಾಲದೇ (ಕುಮಾವಿ. ೯-೪೦); ಅಱಸಿ ಕಾಲ್ಗೆಱಗುವೆನೆನುತೆದ್ದು ತನು ತರಹರಿಸುತ ತೊಳಲ್ದಳಾಲಯುವ (ಪ್ರೋಹತ. ೨೬-೪೯). ೨. ತ್ರೇತೆಯಲಿ ರಘುರಾಮನಾಮದಿ ಸೀತೆಯಂ ಹೋಗಾಡಿ ದಶಶಿರದಾತನಿಂ ಬ್ರಹ್ಮತಿಗೆ ಸಿಕ್ಕಿ ತೊಳಲ್ದುಱಸುತಿರನೇ (ಬಸವು. ೫೪-೩೯); ಶಿವಪದವನಱಿಯದ ತೊರ್ಳಲ್ವರಿಂತು ಭವಾರ್ಣವದೊಳ್ (ಪದ್ಮರಾ. ೧೧-೧೬೭). ೩. ನೆಳಲ ನುಂಗಿದ ಮಾತ್ರದಿಂದ ಬಾನೆಡೆಯೊಳಂ ತೊಳಲಲಾಱದುದು ಪದಂ (ವೀರಶರ. ೫-೧-೫೬). **ತೊಳಲು$_1$**: ೧. ಬೆಳುದಿಂಗಳು ಬಿಸಿಲಾಯಿತ್ತು ಕೆಳದಿ ಹೊಳಲ ಸುಂಕಿಗನಂತೆ ತೊಳಲುತ್ತಿದ್ದೆನವ್ವ (ಮಹಾದೇ. ಬ. ೪೩-೧೦೦); ಆಗಮಂಗಳ ಹಿಂದೆ ತೊಳಲದಿರು ತೊಳಲದಿರು (ಅರವ. ೨೧-೫೫); ತೊಳಲಿದೆನು ಮಧ್ಯಾಹ್ನ ಮೊದಲಾಗಿ ಕಡೆಹಗಲ ತನಕ (ಹರಿಶ್ಚ. ೧೧-೧೪); ವನಿತೆ ನಿಮ್ಮೊಡನೆಂತು ತೊಳಲುವಳನವರತ (ಕುಮಾವ್ಯಾಸ. ೧೬-೬೨); ನಿಮ್ಮಾಜ್ಞೆಯೊಳು ಲೋಕಂಗಳ ತೊಳಲಿದೆಂ (ಚಬಸು. ೩-೭); ಬಹುದೇಶಂಗಳ ತೊಳಲಿ . . . ಮಣಿಪುರಕೆ ನಡೆತಂದನು (ಜೈಮಿಭಾ. ೧೬ ಸೂಚನೆ). ೨. ತಮ್ಮ ಮಾನಸಿಕ ಪಾಪದ ಫಲವಾಗಿ ಅವರಿಬ್ಬರೂ ತಿರ್ಯಗ್ಯೋನಿಯಲ್ಲಿ ಆರಾರು ಸಲ ತೊಳಲಬೇಕಾಗುವುದು (ಕಾವ್ಯಸ. ೬೩); ಆ ಮೀನ ನುಂಗಿದುದು ಬಳಿಕೊಂದು ಮೀನದಂ ಮತ್ತೊಂದು ಮೀನ್ನುಂಗಿತಾ ಮೀನ ನುಂಗಿತೊಂದು ತೊಳಲುತೊಂದೊಂದನೊಂದಿಂತು ನುಂಗಲ್ (ಜೈಮಿಭಾ. ೬-೮); ಯುವಮುಖಸರಸಿಜದೊಳ್ ನೃಪನ ಕಣ್ಗಳೇಂ ತೊಳಲಿ [ಪಾಠಾಂ. ೧]ದಮೋ (ರಾಜಶೇ. ೪-೧೧೫). ೩. ಅವನನಱಸಿದ ನಿರುತ ಮಾರುತತನಯ ಕಾಣದೆ ಹಳ್ಳವನು ತೊಳಲಿ (ಸಂಭಷ. ೨೩-೬೬); ಮದುಮಗಂ ಕಾಣದಿರಲು . . . ಕೆರೆ ಕುಂಟೆಗಳನೆಲ್ಲ ತೊಳಲಿ ಪೊನ್ನಂಗೆ ದೊರಕಿದುದಳಲ ಪಾಲು (ಕಾಲೂರ. ೧೬೯-೪೦೫). ೪. ಹಿರಿದಾಗಿ ಮನದಲಿ ತೊಳಲಿದಿರಿ (ನಳಚ. ೨-೪೭); ಕಾಲುಗಂಜಿಗಳಲಿ ತೊಳಲಿ ಕೂಲಿ ಮಾಡಿ ಉಂಬ ಹೆಣ್ಣು . . . ಬಂದಳು (ಕವಿಕೋ. ೪೧-೯); ಹಲವು ಯೋಜನೆಗಳ ಸುಳಿಯಲ್ಲಿ ಸಿಕ್ಕಿ ಅವಳು ತೊಳಲುತ್ತಿದ್ದಳು (ತ್ಯಾಗಮ. ೧೬೪); ಹೇಗಾದರೂ ಆಸೆ ಫಲಿಸೀತೋ ಏನೋ ಎಂಬ ಕನಸಿನಲ್ಲೇ ತೊಳಲುವರು (ಶಿಕ್ಷದ. ೬೬೭). **ತೊಟಲು**: ೨. ತ್ರಿಪಿಷ್ಟನರೇಂದ್ರಂ ಭವಮಾಲೆಯೊಳ್ ತೊಟಲಿಯುಂ ತಾನಂತ್ಯತೀರ್ಥೇಶನಪ್ಪನುಮೆಂದಾ ಭರತಂಗೆ ಪೇಟ್ದನೊಲವಿಂ (ಶಾಂತೀಶ. ೨-೬೫).

[ದೇ. ೫ ತಮಿ. ಚುಟಲ್; ಮಲ. ಚುಟಲು; ತುಳು. ತುಲಿಪು, ತುಲಿಯು, ಸುಲಿಪು; ತೆಲು. ಸುಡಿಯು]

**ತೊಟಲ್$_2$, ತೊಳಲ್$_2$** (ನಾ). ೧. ಸುತ್ತಾಟ; ತಿರುಗುವಿಕೆ: (ಕ). ೨. ದಿಗ್ಭ್ರಮೆಗೊಳ್ಳುವಿಕೆ; ತಬ್ಬಿಬ್ಬಾಗುವುದು: (ಕ). **ತೊಳಲ್$_2$**: ೨. 'ಕಣ್ದೊಳಲ್$_2$' ಪರಾ. ೩. ಬವಣೆ; ದುಃಖ; ಚಿಂತೆ: ಕಣ್ಣನೆನ್ನ ಕಣ್ಣಲಿ ನಟ್ಟು . . . ತೋಡಿದಳು ತೊಳಲ (ಹೊಂಗಳು. ೧೬-೧೭). [< ತೊಟಲ್$_1$]

**ತೊಟಲಿ** (ನಾ). ೧. ಸುತ್ತಲೂ ತಿರುಗುವಿಕೆ. 'ಕಣ್ಣಂದೊಟಲಿ' ಪರಾ. ೨. = ತೊಟಲಿಕಲ್ ೧. : ಕಾಯ್ದ ಶೃಂಖಲೆಗಳಿಂದವಳಿಸಿಯುಂ ತೊಟಲಿಯೊಳ್ಪೀಸಿಯುಂ ಎಣ್ಣೆಯೊಳ್ಕಾಸಿಯುಂ . . . ಇಂತನೇಕ ಪ್ರಕಾರಂಗಳಿಂ ಪೀಡಿಸಿ (ಪಸಾರ. ೧೪೯). [ತೊಟಲ್$_1$ + -ಇ$_3$]

**ತೊಟಲಿಕಲ್, ತೊಳಲಿಕಲ್ಲು, ತೊಟಲಿಕಲ್ಲು** (ನಾ). ೧. ಮರ ಅಥವಾ ಕಲ್ಲಿನಿಂದ ಮಾಡಿದ ಬತ್ತ ಒಡೆಯುವ ಕಲ್ಲು; ಬತ್ತ ಬೀಸುವ ಕಲ್ಲು;

ಒಡೆಗಲ್ಲು : "ತೊಟಲಿಕಲ್ಲಿನಲ್ ಸಂಘಟಿಗೆ ನಾವುಮಕ್ಕುಂ" (ಸಂಜೀವ. ೫) ; ಪಟಯಿಗೆ, ತೊಟಲಿಕಲ್ [ಪಾಠಾಂ. ತೊಟರಿಕಲ್] (ಶಬ್ದಾನು. ೧೪೦ ವ್ಯಾಖ್ಯಾ). ೨. "ತಿರುವುವ ಗುಂಡು" (ಶ್ರಭಂ). **ತೊಳಲಿಕಲ್ಲು :** "ತೊಳಲಿಕಲ್ಲು = ಭತ್ತ ಒಡೆಯುವ ಕಟ್ಟಿಗೆ ಕಲ್ಲು" (ಅನಕೋ. ೬೮). **ತೊಟಲಿಕಲ್ಲು :** ೧. ಕೊಡಲಿ ಕತ್ತಿ . . . ತೊಟಲಿಕಲ್ಲ ಅಸುವೆಕಲ್ಲು ಕಲ್ಲೊರಳು ಕಲ್ಲೊನಕೆಯಿಂದಿವು ಮೊದಗಾಗೊಡೆಯುವಂ ಮೊದಲನೆಯ ಅನರ್ಥದಂಡವಕ್ಕುಂ (ಪಶಾರ. ೩೧೩). [ ತೊಟಲಿ$_1$ + ಕಲ್$_3$ ]

**ತೊಟಲಿಕಲ್ಲು** 'ತೊಟಲಿಕಲ್' ನೋ.

**ತೊಟಲು** 'ತೊಟಲ್$_1$' ನೋ.

**ತೊಟಲ್ಕೆ, ತೊಳಲಿಕೆ, ತೊಳಲ್ಕೆ** (ನಾ). ೧. ಅಲೆದಾಡುವಿಕೆ ; ಸುತ್ತಾಟ : ಚತುರ್ಗತಿಭ್ರಮಣರೂಪದಿನನೇಕಕ್ಲೇಶಂಬಡುವ ಜೀವ ರಾಶಿಯ ತೊಳ[ಟ]ಲ್ಕೆಯುಂ ಸಂಸಾರಮೆಂಬುದು (ಪಶಾರ. ೫೩೬). **ತೊಳಲಿಕೆ :** ೧. ತಿಳಿಗೊಳನ ತಂಪಗಿವ ತಕ್ಕೆಯ ತೊಳಲಿಕೆಯ ತಾವರೆಯ ತನಿಪರಿಮಳದ ವಿಸರದ ಹಸರದಲಿ ತೀಡಿದುದು ತಂಗಾಳಿ (ತೊರರಾ. ೨-೬-೩). ೨. ಗಸ್ತು ತಿರುಗುವಿಕೆ ; ಪಹರೆ : ಗರವೊಟ್ಟಿಗೆಯ ತೊಳಲಿಕೆ ತೆರಳಚಿತು ತಿತ್ತೀಸು ಕೋಟಿಗಳ (ಕುಮ್ಯಾಭ. ೨೦-೫೬) ; ಪಾಳಯವು ಗಜಬಜಿಸೆ ತೊಳಲಿಕೆಯಾಳು ನೆರೆದುದು (ಕುಮ್ಯಾದ್ರೋ. ೮-೪೪). ೩. ತೊಳಲಾಟ; ಬವಣೆ: ಮಱುಗಿದನಂದಿನಿರುಳಲಿ ಕರುಳುಗಳ ತೊಳಲಿಕೆಯ ತಾಪದಲಿ (ತೊರರಾ. ೬-೨೯-೩). **ತೊಳಲ್ಕೆ:** ಹುರಿ ಮಣಲ ಭರವಸಮುಂ ತೊಳಲ್ಕೆಯುಂ ಬಳಲ್ಕೆಯುಂ ಕಾಳಗದೂಳಿಗಮುಂ ಕನಸಿನೊಳಮಿ ಲ್ಲೆನಿಸಿ (ಎಕ. XI, ಚೊಳಕಾ. ೨೦-೪೨; 1278 ?). [ತೊಟಲ್$_1$ + – ಕೆ]

**ತೊಟಲ್ಚು, ತೊಳಲಿಚು** (ಕ್ರಿ). ೧. ತಿರುಗುವಂತೆ ಮಾಡು ; ಸುತ್ತಾಡಿಸು ; ಅಂಗನೆ . . . ಎಟ್ಟರುತ್ತಿರೆ ಜನಂ ಕಂಡೆಯ್ದೆ ವಿಭ್ರಾಂತಿಗೊಂಡಿರಲಂತಂತೆ ತೊಟಲ್ಚಿ ವಿದ್ಯೆಗಳನಂಗಾಗಾರದತ್ತೊಯ್ಯೆ (ನೇಮಿಪು. ೮-೫೮) ; ವೇದೋದಯಮಮಘೆಕ್ಕತವಂದೇದೊರೆಯನುಮಂ ತೊಟಲ್ಚುಗುಂ ಸಂಸ್ಕೃತಿಯೊಳ್(ವರ್ಧಪು. ೧೩-೨೦); ಅಮಿತಶ್ರಮದಲ್ಲಿಯಳ್ಕಾಡೆ ತೊಟಲ್ಚಿ ತೂಳ್ದು ಕಡುಪಿಂ ಕೆದಱಿಟ್ಟ ಮಹಾಂಧಕಾರಮಂ ಕೂಡೆ ಗುಹಾಳಿಯಂ ಪುಗಿಸುತಿರ್ದುದು ಚಂದ್ರಿಕೆ (ಕುಸುಮಾ. ೧೦-೧೩). ೨. ಪ್ರಕಟಿಸು ; ಸಾರು : ಪೊಟರೊಳಗೆಲ್ಲಂ ಗೋಸನೆಯಂ ತೊಟಲ್ಚಿ [ಪಾಠಾಂ. ತಗುಲ್ಚಿ]ದೊಡೆ (ಪಡ್ಮಾಕಾ. ೭೮-೪). **ತೊಳಲಿಚು :** ೧. ಅಳಿಯನನು ಕಾಣದೆ ವಿದರ್ಭನು ತೊಳಲಿಚಿದನನುಚರರ ನಾನಾ ಹಳುವದಲಿ ಹಳ್ಳಿಯಲಿ (ತೊರರಾ. ೩-೨-೧೬). [ ತೊಟಲ್$_1$ + – ಚು$_1$ ]

**ತೊಟಲ್ತರ್** (ಕ್ರಿ). ಸುತ್ತಾಡಿ ಬರು ; ಅಡ್ಡಾಡು : ಮೃಗಯಾವ್ಯಾಜದಿನೊರ್ವ ಶಂತನು ತೊಟಲ್ತರ್ಪಂ ಪಳಂಚಲ್ಕೆ ತನ್ಮೃಗಶಾಬಾಕ್ಷಿಯ ಕಂಪು ತಟ್ಟೆ ಮಧುಪಂಬೋಲ್ ಸೋಲ್ತು (ಪಂಪಭಾ. ೧-೭೦) ; ಕುಂದದ ಮುಗುಳ್ಗಳುಮಸುಗೆಯ ಕೆಂದಳಿರ್ಗಳುಮಬ್ಜದಲರ್ಗಳುಂ ಬೆರಸು ತೊಟಲ್ತಂದವುವು ತಮಾಳಲತೆಗಳಿಂದಮರರ್ ನೋಡೆ ಚರಿಯಿಪರ್ ವನಚರಿಯರ್ (ವರ್ಧಪು. ೧೦-೧೯). [ ತೊಟಲ್$_1$ + ತರ್ ]

**ತೊಟಸು$_1$, ತೊಳಸು$_2$** (ಕ್ರಿ). ೧. (ನೀರನ್ನು) ಕದಡು ; ಅಲ್ಲಾಡಿಸು ; ಕಲಕು : ಆಟೋಪದಿಂ ಪೊಕ್ಕು ಸಾಗರವಂ ಕೂಡೆ ತೆರಳ್ಚಿದಂ ತೊಟಸಿದಂ ತುಳ್ಕಾಡಿದಂ (ಜಗವಿ. ೬-೧೮). ೨. (ಸೌಟನಿಂದ ಸಾರು ಮೊದಲಾದುವುಗಳನ್ನು) ತಿರುಗಿಸು ; ತಿರುವು ; ಗೊಟಾಯಿಸು : ಬ್ರಹ್ಮಾಂಡವೆಂಬ ಕೊಪ್ಪರಿಕೆಯ ಮಧ್ಯದಲ್ಲಿ . . . ಮಾಸಋತುಗಳೆಂಬ ಸಟ್ಟುಗದಿಂ ತೊಟಸುತ್ತುಂ ಭೂತಂಗಳಂ ಜವನಡುತಿರ್ದನಿಂತೆಂಬುದೆ ವಾರ್ತೆ (ಪಂಚತಂ. ೬೫-೫) ; ಮಸಣದ ಕಿಚ್ಚಿನಿಂ ನರಕಪಾಲದ ಭಾಂಡವನಿಟ್ಟು ಮಜ್ಜೆಯ ರಸವೆಸರಾಗೆ ಕೀಲಿಗನ ಹೆಂಡತಿ ತಾಂ ತೊಟಸುತ್ತ ಮೂಳೆಯೊಳ್ (ಧರ್ಮಾಮೃ. ೧೧-೧೮೩) ; ಆತಕ್ಕಿಯಂ ಪೊಯ್ದು ತೊಟಸಿ ಕುದಿ ಬರಲೊಯ್ಯನೆ ಮೇಲರ್ಬಿದ ನೊರೆಯಂ ತೆಗೆದು ಬಿಸುಟು (ದಶಕು. ೧೩-೧೩೧ ವ). ೩. ಹೊಟ್ಟೆ ಕಲಕು; ಓಕರಿಕೆ ಬರುವಂತಾಗು : (ಸ). ೪. ಕ್ಷೋಭೆಗೊಳ್ಳು ; ಕ್ಷೋಭೆಯುಂಟಾಗು : ಅಂಗನೆಯಂ ಪಿಡಿದೊಯ್ದರೆಂದು . . . ಪುಯ್ಯಲ ಗಾವಳಿ ಕೆಯ್ಯನಿಟ್ಟುದೀ ತೊಟಸಿದ ಪಾಂಗೆ ಕಿಟ್ಟಲೆ ಕಿಟಂದಲೆಯಾದುದು ಕೂಡೆ ಪಟ್ಟಣಂ (ಅನಂಪು. ೧೦-೭೩). ೫. ಹುಟ್ಟುಹಾಕು; ದೋಣಿ ನಡೆಸು: ನೆತ್ತರ ತೊಱೆಯಂ ಮರುಳ್ತೊಟಸಿ ಪಾಯಿಸುತಿರ್ದುವು (ಪಂರಾಮಾ. ೧೩-೬೬). **ತೊಳಸು$_2$ :** ೨. ಎಲ್ಲರ ಹೆಂಡಿರೂ ತೊಳಸಿಕ್ಕುವರು ಎನ್ನ ಗಂಡಂಗೆ ತೊಳಸುವುದಿಲ್ಲ (ಸರ್ವವ. ೬೪-೩೪೨) ; ಅಲಗನೊಡಲೊಳು ತೊಳಸಿದಂತಿರೆ ಬಳಲಿದನು ಭೂಪಾಲ (ಕುಮ್ಯಾದ್ರೋ. ಓದಿ. ಪರಿ. ೨೮೩) ; ಕುದಿ ಬಂದಾಗ ಒಮ್ಮಾನ ಹಾಲ ಹುಯಿದದನು ಸಟ್ಟುಗದಿ ತೊಳಸಿ (ಸೂಪಶಾ. ೧-೪೦) ; ೩. ವಾಂತಿ ಬರೋ ಹಾಗೆ ಆಗುಲ್ಲ, ಹೊಟ್ಟೆ ತೊಳಸುಲ್ಲ (ಮನೋನಂ. ೫೮); ಅವನಿಗೆ ಹೊಟ್ಟೆ ತೊಳಸಿ ಬಂತು (ರಾದಾನ. ೭೨). ೬. ಸುತ್ತಾಡು; ಅಲೆ : ತೊಳಸದಿರು ಬ್ರಾಹ್ಮ್ಯವನು ಭಕ್ತಿಸ್ಥಳವು ಬೇಱೆಯ ಮಾರ್ಗ ವಹುದಿದು ತಿಳಿದು ನೋಡಾ ದರ್ಶನಂಗಳನಲ್ಕೆ (ಬಸಪು. ೩-೭೧); ಆ ನೃಪ ತಿಳಕನ ವಾಗ್ವೈಭವಕ್ಕೆ ಮೂಱುಂ ಜಗವಂ ತೊಳಸಿದೊಡೊರ್ವನೆ ಸಮನಾಗುಳಿದುದಱಿಂ ಶೇಷನೆನಿಪನಿನ್ನುಂ ಶೇಷಂ (ಧರ್ಮನಾ. ೩-೨೮). ೭. ಬಳಸು ಮಾತಾಡು; ಸುತ್ತು ಮಾತಾಡು : ತೊಳಸಲೇನೂರ್ವಸಿಗೆ ಜನಿಸಿದ ಅಲಘುಮುನಿ ಮಾತಂಗನೆಂಬಗ್ಗಳಿಯನುದ್ಭವಿಸಿದನಲಾ ಮಾತಂಗಿಯುದರದಲಿ (ಬಸಪು. ೫೬-೭೨). ೮. ಕಾದಾಡು; ಎದುರಿಸು: ಅಱಿದೆನಱಿದೆನೆಂದು ಮಱಿವೆಯ ತೋಟಿಯ ತೊಳಸುತ್ತ (ಪೋಳಿವಾ. ೦೬೫-೬೬೦). ೯. ಕೀಳು ; ಕಳಚು (?) : ಕಾಳುಗೆಡೆದರೆಯಗ್ನಿಯಾದರು ಕೀಳುವರು ನಾಲಿಗೆಯ ಕೃತಕವ ಮೇಳಯಿಸಿದರೆ ಸುರಪನಾದರು ಕಣ್ಣ ತೊಳಸುವರು (ಶಂಕದಾ. ೯-೬೪) : "ಕುಟ್ಟು" (ಶಂಕದಾ. ಕೋಶ).

[ ದೇ.೫ ತಮಿ. ತುಟ, ತುಟ್ಟೈ, ತುಟುಪ್ಪು, ಚುಲವು ; ಮಲ. ತುಟಯು ; ತುಳು. ತುಳಾವು, ಸುಲಾವು ]

**ತೊಟಸು$_2$, ತೊಳಸು$_4$** (ನಾ). ೧. ಸುತ್ತಲೂ ತಿರುಗುವಿಕೆ ; ಪರಿಭ್ರಮಣ : (ಸ). ೨. (ಮನಸ್ಸಿನ) ಅಲೆದಾಟ ; ಚಂಚಲತೆ : (ಸ). **ತೊಳಸು$_4$ :** ೩. (ಕಣ್ಣು) ಹೊರಳುವುದು : ಮುಚ್ಚಿರ್ಪ ಕಣ್ಗಳಂ ತೆರೆದು ತೊಳಸಿನ ಬೆಳ್ಪು ಚುಚ್ಚಿ (ಕಾಲೂರ. ೧೬೩-೩೮೪). ೪. ಘರ್ಷಣೆ; ತಿಕ್ಕಾಟ : ಅಱಿಯದುದನಱಿದಲ್ಲಿ ಮಱೆದು ಮಱೆದುದನಱಿದಲ್ಲಿ ಕಂಡು ಉಭಯದ ತೋಟಿಯ ತೊಳಸು ನಿಂದಲ್ಲಿ ನಿಃಕಳಂಕ ಮಲ್ಲಿಕಾರ್ಜುನಲಿಂಗದ ಅಂಗ ಕರತಳಾಮಳಕವಾಯಿತ್ತು (ಪೋಳಿಮಾ. ೯೩-೩೬೯) ; ಬಳಿಕೆಮಗೆ ಬಲವದ್ವಿರೋಧದ ತೊಳಸು ಬಿದ್ದುದು ತೋಟಿಗಾಱದೆ ಜಲಧಿಮಧ್ಯದಲೂರ ಕಟ್ಟಿದೆವು (ಕುಮ್ಯಾಸ. ೨-೧೮). ೫. ತೊಡಕು ; ಸಿಲುಕಿಕೊಳ್ಳುವಿಕೆ ; 'ತೊಳಸುಗೊಳ್ಳು' ಪರಾ.

**ತೊಳಸಾಗು** = ಗೊಂದಲಗೊಳ್ಳು ; ಕೆಡು : ಯಮನಂದನನ ನುಡಿ ಸಂಧಾನದಲಿ ಸಂಜನಿಸಿತಾದೊಡೆ ಕಾಣೆನವನಿಯ ಹೊರೆಗೆ ಹರಿವುಗಳ ಮನದೊಳನುಸಂಧಾನವಂತಕತನುಜನಲಿ ತೊಳಸಾಯ್ತು ತೋಟಿಯ ನೆನಹು (ಕುಮ್ಯಾಉ. ೩-೭). **ತೊಳಸುಮೆಳಸು** = ಗೋಜು ; ಸಿಕ್ಕು : ತಿಳಿಯ ಬಾರದು ಖಳರ ಕುಟಿಲದ ತೊಳಸುಮೆಳಸು (ಅಂಬಿಕಾ. ೨೦-೧೭).

[ <ತೊಟಸು$_1$ ]

**ತೊಟ್ಟುಕುತ್ತು** (ನಾ). (?) : ಒಕ್ಕಲಾಳಿಮಣ್ಣು ಕಾದುವೊಂಗಿದು ಕಣ್ಗಟ್ಟು ತೊಟ್ಟುಕುತ್ತುವೆ [ಕ್ಕೆ] (ಪ್ರಾಅರಿ. ೧೯೩೦, ೫೭-೧೦ ; ಸು. 800).

[ ಇದು 'ತೋಳ್ಕುತ್ತು' ಎಂಬುದರ ಅಪಲಿಖಿತವಿರಬಹುದೆ ? ]

**ತೊಟ್ಟಾಳ್, ತೊಳ್ತಾಳ್** (ಕ್ರಿ). ತೊತ್ತು ಮಾಡಿ ಆಳು ; ಪ್ರಭುತ್ವ ನಡೆಸಂ : ಸಿರಿಯಂ ನೀನುಯ್ದು ತೊಟ್ಟಾಳ್ದು [ಪಾಠಾಂ. ಳ್ದು] ರಾಗದಿನೆನ್ನೊಳ್ ಸುಕಮಿರ್ಪುದು (ಪಂಪಭಾ. ೮-೬೬). **ತೊಳ್ತಾಳ್** : ನೀನೆ ಆಳ್ಮಾಡಿಕೊಳಲಲ್ಲೆನಲ್ ಬಪ್ಪುದೇ ನೀನೆ ತೊಳ್ತಾಳ್ವ [ಪಾಠಾಂ. ತ್ತಾಳ್ವ, ತ್ತಾಳ್ದ]ಡಿನ್ನಲ್ಲೆನಲ್ ಬಪ್ಪುದೇ (ನಂಬಿಕ. ೬-೧೫೦).

[ ತೊಟ್ಟು + ಆಳ್₁ ]

**ತೊಟ್ಟು, ತೊತ್ತು, ತೊರ್ತು, ತೊಳ್ತು** (ನಾ). ೧. ದಾಸಿ ; ಸೇವಕಿ : "ಪೋಟಾ, ಚೇಟಾ, ಚೇಟೀ, ದಾಸೀ, ಕುಟಹಾರಿಕಾ – ಈ ೫ ತೊಟ್ಟು" (ಹಲಾಯು. ೮೧-೩೩೫); ತೊಟ್ಟನುಟಿದಂತುಟಿದ ಮಹಾಪುರುಷರಱಿಯದುಟಿದರೆ ಸಿರಿಯಂ (ಕವಿರಾ. ೩-೧೭೫) ; ಧರೆಯಂ ಪಟಿಕೆಯ್ದು ತೊಟ್ಟನುಟಿವಂತುಟಿದಂ ಸಾಮ್ರಾಜ್ಯಲಕ್ಷ್ಮಿಯಂ ಚಕ್ರಧರಂ (ಆದಿಪು. ೪-೮೬) ; ನಿನ್ನ ತೊಟ್ಟಿರೊಳಿನಿತೇಕೆ ಭಕ್ತಜನವತ್ಸಲ ನಿರ್ದಯನಾದೆ (ಕಾದಂಪೂ. ೯೨೪) ; ಪೊಲೆಯರಾಡಿನ ಪೆಸರ್ ಮಾಣಿಕದೇವಿಯೆಂಬಂತೆ ತೊಟ್ಟಿನ ಪೆಸರ್ ಸಿರಿಯ ದೇವಿಯೆಂಬಂತೆ (ಧರ್ಮಾಮೃ. ೮-೧೬೬). ೨. ದಾಸ ; ಸೇವಕ : ತೊಟ್ಟೆಂದು ದಾಸನುಂ ದಾಸಿಯುಮಕ್ಕುಂ (ಶಮದ. ಸ. ೩೩ ಪ್ರಯೋ). ೩. ಹಾದರಗಿತ್ತಿ; ಜಾರೆ: ಮತ್ತಮೊಂದೆಡೆಯೊಳೊರ್ವರ ತೊಟ್ಟು ಲಲಿತಾಂಗಂ ಬಂದನಿನ್ನಾವಾತನ ತೋಟಿಸಿಂಗುವಿನಂ ನೆರೆವನೆಯೊಳಿರ್ದು ಬರ್ಪಮೇಟಿಮೆಂದು ತನ್ನಾಳ್ದಿಚ್ಛೆಯರಪ್ಪ ಬಧಿರೆಯರ್ಗಂ ಮೆಲ್ಲನೆ ಪೇಟ್ದುದುಂ (ಧರ್ಮಾಮೃ. ೨-೪೯). **ತೊತ್ತು** : ೧."ಕುಟಹಾರಿ ಚೈಟಂ ಚೇಟಿ ದಾಸಿಯೆನೆ ತೊತ್ತಕ್ಕು" (ಮಂಗರಾ. ೯೦-೪); ಎಲೆ ತೊತ್ತ ನಿನಗಿನಿತು ಸಾಮರ್ಥ್ಯವನಾವರ್ಮಾಡಿದರ್ (ಹಂಡತಂ. ೧೫೫-೩) ; ಪ್ರಭುದೇವರ ತೊತ್ತಿನ ತೊತ್ತಿನ ಮಱುದೊತ್ತಿನ ಮಗಳು (ಮುಹಾದೇ. ಬ. ೭೯-೧೯೮) ; ಹೆತ್ತ ತಾಯುಂ ಮಾಱೆ ತೊತ್ತ ಕೊಂಬರೆ (ಹಡಕಾ. ೮-೭೬). ೩. ತೊತ್ತೇರಿಗುಂಟು ತಾಟಕಿಗುಂಟು ಹೆತ್ತ ತಾಯಿಗಿಲ್ಲವೀ ಕಾಲ (ಪುರಂದ. ೦-೦೨೦-೩). 'ತೊತ್ತುಬಡಿಕ', 'ತೊತ್ತುಬುದ್ಧಿ' ಪರಾ. **ತೊರ್ತು** : ೧. ಆ ದೇವರ ತೊತ್ತುರ್ (ಎಇ. XIII, ೩೨೧-೩೦ ; 1126). **ತೊಳ್ತು** : ೧. ವ್ಯಡ ತಾಂ ಭಿಕ್ಷವ ಬೇಡನೇ ಮಱಿಱಿ ತಾಂ ತೊಳ್ತಾಗಳೆ . . . ನರರ್ ಪೂರ್ವದೊಳ್ ಪಡೆದಮ್ಮುಣ್ಣದೆ ಪೋಪರೇ (ಸೋಮೇಶ. ೩೨) ; ತೊಳ್ತಿಗೆ ಚಮ್ಮವಟ್ಟಗೆವಿಡಿದಂತೊಡ್ಡಿದೊಡ್ಡಣದ ಕಡುಗಲಿಗಳನು ಕೈದೆತ್ತದಂದದಿ ಹುಯ್ಯದೊಡೆ ಪಂಥವೆಲ್ಲಿಯದೆಮಗೆ (ನೇಮಿಸಂ. ೨೯-೬) ; ವರಮಿಳ್ತು ನಿಮಗೆ ತೊಳ್ತುವೆ ಬಿಡಿ ಮರುಳ್ತನಂ (ಮುಹಾವಿ. ೬-೩೬). ೨. 'ಗಂಡುದೊಳ್ತು' ಪರಾ.

**ತೊತ್ತಿನ ಕೂಸು** = ದಾಸಿಯ ಪುತ್ರ; ಸೂಳೆಯಂ ಮಗ : ಪುಷ್ಪಾಸವವನ್ನು ಕಳುವ ತೊತ್ತಿನ ಕೂಸಾದ ಈ ದುರುದುಂಬಿ ತುಂಬಿಯು ಪೂಜ್ಯಳಾದ ಈಕೆಯ ಮುಖಕ್ಕೆ ಎರಗುವುದು (ಶಾಕುಂತ. ೯೦-೧೬) **ತೊತ್ತಿನ ತೊತ್ತು** = ಸೇವಕನ ಸೇವಕ : ನಿಮ್ಮ ತೊತ್ತಿನ ತೊತ್ತು ನಾನು (ಜನ್ನವ. ೯. ೨೭-೩೦). **ತೊತ್ತಿನ ಮಗಳು** = ದಾಸಿಯ ಪುತ್ರಿ ; ಕೀಳು ಸೇವಕಿ : ಮನೆಯ ತೊತ್ತಿನ ಮಗಳ ಮಕ್ಕಳಿಗಿನಿತು ಪುಂ ಸರಿಯಾಗದೆನ್ನನವನಿಯೊಳುತ್ತಮ ಭಕ್ತ ನಾನೆಂದಾತ್ಮದೊಳು ನೆನೆದು (ಬಸಪು. ೪೮-೨೭) ; ಕೊಲಗು ತೊತ್ತಿನ ಮಗಳೆ ಮುಟ್ಟದಿರೆಳೆಯ (ತೊರರಾ. ೧-೦೦-೧೩). **ತೊತ್ತು ತೊಡಿಕೆ** = ಸೇವಕಿಯಂತೆ ಹೊಂದಿಕೊಂಡಿರುವವಳಂ : ಹೆತ್ತಯ್ಯನ ಮನೆಯಾ ತೆತ್ತಿಗಳು ನಾನಲ್ಲ ತುತ್ತಿನಾಸೆಗೆ ಬಂದಾ ತೊತ್ತು ತೊಡಿಕೆಯಲ್ಲಾ (ಶ್ರೀಕೃಪಾ. ೩೫). **ತೊಟ್ಟಿನ ಮಗ, ತೊತ್ತಿನ ಮಗ** = ದಾಸಿಯ ಮಗ : "ಗೋಪ್ಯ ೧ , ದಾಸೀಸುತ ೧–ಈ ೨ ತೊಟ್ಟಿನ ಮಗಂ" (ಹಲಾಯು. ೮೨-೩೪೬) ; ತೊಟ್ಟಿನ ಮಗನಧ್ಯಯನಮೆ ಬಾಟಿ ಮದಾತ್ಮಜರ ಬುದ್ಧಿಯುಂ ವೃದ್ಧಿಯುಮೇಂ ಬಾಟಿ ನಿನಗೆಂದಟಿಲ್ದರ್ (ಶಾಂತಿಪು. ೬-೬೪); ಗ್ರಾಸಕಿಲ್ಲದೆ ತೊತ್ತಿನ ಮಗನ ಮನೆಲುಂಡ (ಪುರಂದ. ೨-೧೧-೧). **ತೊಟ್ಟಿರ್, ತೊತ್ತಿರು** (ಬಹುವ) : ಎನ್ನ ಪರಿವಾರಮೊನ್ನ ತೊಟ್ಟಿರೆನ್ನ ಮಾಣಿಕಭಂಡಾರಂ . . . ಎಂದಿವಱೊಳ್ ಮೋಹಿಸಿದ ಬುದ್ಧಿಯನೊಡೆಯನಾಗಿಯಾರ್ತಧ್ಯಾನದಿಂ ಸತ್ತು (ವಡ್ಡಾರಾ. ೧೪೦-೨೧) ; ಸಗ್ಗಂಗಳೊಳಿರ್ಪ ದೇವಡಿತಿ ತೊಟ್ಟಿರೊಳಟ್ಟಿಯನಾಗಲೀವನೇ (ಪಂಪಭಾ. ೧೦-೪೫) ; ಕಾದಿದ್ದರಮ್ಮ ಷಡುವರ್ಗವೆಂಬ ತೊತ್ತಿರು ಮುಟ್ಟದಂತೆ (ಅವಚಂ. ೨೭೬-೧೨೭೦) ; ನಾವಿನ್ನು ನಿಮ್ಮ ಶ್ರೀಪದಾಂಬುಜನಿತ್ಯಸೇವೆಯೊಳೋಪ ತೊತ್ತಿರ ತೊತ್ತಿರಾಗಿರಲು (ಲಕಪು. ೩೨-೪೬) ; ರಂಭೆಯೂರ್ವಶಿ . . . ಮೊದಲಾದ ಸುರಸತಿಯರೆನ್ನರಮನೆಯ ತೊತ್ತಿರುಗಳಾದರು (ಕುಮ್ಯಾಅ. ೧೩-೬೫).

**ತೊಟ್ಟುಮಾಡು** = ಸೇವಕನನ್ನಾಗಿಸು : ಎನ್ನಾನೆಯಿಂದೆ ಪಗೆಗಳ ಬೆನ್ನೆಲ್ವಂ ಮೆಟ್ಟೆ ಮುಱಿಸಿ ಸಪ್ತಾಂಗದ ಸೊಂಪನ್ನಿನಗೆ ತಂದು ಕುಡದೊಡೆ ನಿನ್ನಹಿತನ ಮನೆಗೆ ತೊಟ್ಟುಮಾಡುವುದೆನ್ನಂ (ದಶಕು. ೬-೫೦).

[ ದೇ.॥ ತಮಿ. ತೊಟುತ್ತ್ಯಿ, ತೊತ್ತು; ಮಲ. ತೊಟಿಲ್ = ಕೆಲಸ ; ತುಳು. ತೋಳಿಲ್ = ಕೆಲಸ, ಉದ್ಯೋಗ ; ತೆಲು. ತೊತ್ತು ]

**ತೊಟ್ಟುಗೆಲಸ, ತೊತ್ತುಗೆಲಸ, ತೊಳ್ತುಗೆಲಸ** (ನಾ). ಸೇವೆ ; ಊಳಿಗ : ಓರ್ವ ಸೊರ್ಕಿದ ತೊಟ್ಟು ತೊಟ್ಟುಗೆಲಸಕ್ಕರಮನೆಯಂ ಪುಗುವ ಪೊಱಮಡುವ ಸೂಟಿಯೊಳ್ (ಹಂಡತಂ. ೧೭೯-೪). **ತೊತ್ತುಗೆಲಸ** : ತೊತ್ತಿಂಗೆ ತೊತ್ತುಗೆಲಸವಲ್ಲದೆ ಅರಸರ ಸುದ್ದಿ ಎನಗೇಕಯ್ಯಾ (ಬಸವ. ೪೦೧) ; ಎಂಬತ್ತು ವರುಷಂಗಳು ಶಿವೈಕ್ಯರ ತೊತ್ತುಗೆಲಸಂ ಮಾಡಲು (ಬಸಪು. ೨೭-೬೨) ; ಅರಸುಮಗಳನಾ ತೊತ್ತುಗೆಲಸಕ್ಕೆ ಪರಾತವಿಸಿದಿರೆ (ಕುಮ್ಯಾಅ. ೧೯-೩೩) ; ಹೊತ್ತು ಮೂಡಿ ಮುಳುಗುವನ್ನವರ ತೊತ್ತುಗೆಲಸವನೆ ತುಬ್ಬಿ (ಸಮ್ಯಕ್ತ್ವ. ೫-೨೨). **ತೊಳ್ತುಗೆಲಸ** : ಲೋಕವನಗಿವ ಕಾಲನೆಂಬ ದರ್ವೀಕರನ ದಾಡೆಯಂ ಕಿಳ್ತವಧಿವಿಧಿಗಳ್ವರ್ಗೆ ತೊಳ್ತು [ಪಾಠಾಂ. ತ್ತು] ಗೆಲಸವನಿತ್ತು (ಪದ್ಮರಾ. ೨-೧೭ .)

[ ತೊಟ್ಟು + ಕೆಲಸ ]

**ತೊಟ್ಟುಗೊಡು, ತೊತ್ತುಗೊಡು, ತೊಳ್ತುಗೊಡು** (ಕ್ರಿ). ಪರಿಚಾರಕನನ್ನಾಗಿಸು; ಸೇವೆಗೆ ತೊಡಗಿಸು,–ಇಡು: ರಾಗೋದಯಮೆನ್ನನೋವದಟಿದೊಯ್ದೆಂ ತೊಟ್ಟುಗೊಟ್ಟತ್ತೊ (ಕಾದಂಬ. ೮೧). **ತೊತ್ತುಗೊಡು** : ತನುವನೀಶ್ವರಂಗೆ ಹಿಂಗದೊಪ್ಪಿಸುತ್ತೆ ತೊತ್ತುಗೊಟ್ಟು (ನಮರ. ಜೀ. ೧೯೬-೧೨). **ತೊಳ್ತುಗೊಡು** : ಪುರಹರ ನಿಮಗೆನ್ನಂ ಸದಾ ತೊಳ್ತುಗೊಟ್ಟೆಂ (ರಕ್ಷಾಶ. ೭೮). [ ತೊಟ್ಟು + ಕೊಡು₁ ]

**ತೊಟ್ಟುಗೊಳ್, ತೊತ್ತುಗೊಳ್, ತೊಳ್ತುಗೊಳ್** (ಕ್ರಿ). ಊಳಿಗಕ್ಕೆ ಇಟ್ಟುಕೊಳ್ಳು ; ಸೇವಕನನ್ನಾಗಿ ಮಾಡಿಕೊಳ್ಳು : ದೆಸೆವೆಂಡಿರ್ಗೆ ಪಸದನಂಗೈದು ಬರ್ದಿಲವೆಣ್ಗಳಂ ತೊಟ್ಟುಗೊಂಡರ್ (ರಾಮಾಶ್ವ. ೧೪-೨೭). **ತೊತ್ತುಗೊಳ್** : ನಿನ್ನ ಕರುಣದ ಬಲವುಂಟೆನಗೆಂದು ಸಾಯಿದೇವನ್ನಂ ಬಲು ಸಲೆ ತೊತ್ತುಗೊಣ್ಡ ದಯಕೇಂ ಸಲೆವುಂಟೆ (ಸೌಇಇ. IX-i, ೨೯೭-೬೦; 1177) ; ದೇವ ಸಂಸಾರಂ ನೆಱೆ ಪುಗದ ಮುನ್ನ ನೀನೆಂದು ಬಂದೆನ್ನಂ ತೊತ್ತು[ಪಾಠಾಂ.ಳ್ತು]ಗೊಂಬೆಯೆಂಬುಮ್ಮಳಿಕೆಯಿಂದಳುವಂದದಿಂ (ನಂಬಿಕ. ೨-೧೦). **ತೊಳ್ತುಗೊಳ್** : ಕೃಪೆಯೊಳೆನ್ನಂ ತೊಳ್ತುಗೊಂಡಾಳ್ದನಂ . . . ಕಂಡೆಂ ವಿರೂಪಾಕ್ಷನಂ (ಪಂಪಾಶ. ೩೬). [ ತೊಟ್ಟು + ಕೊಳ್₁ ]

**ತೊಟ್ಟುತನ, ತೊತ್ತುತನ** (ನಾ). ಸೇವೆ ; ಊಳಿಗ ; ಪರಿಚರ್ಯೆ : ನಿಜಜೀವಿತಮುಮಂ ತನ್ನುಮನಿರದಿತ್ತು ತೊಟ್ಟುತನಮಂ ತಾಂ ಕೊಂಡುಂ (ಕಾದಂಬ. ೧೧೪). **ತೊತ್ತುತನ**: ಬೆಚ್ಚದೆ ಬೆದಱದೆ ತೊತ್ತುತನವ ಮಾಡಲು ತನ್ನನೀವ ಕೂಡಲಸಂಗಮದೇವ (ಬಸವ. ೧೪೮) ; ಕಂದ ನೀವಿರಲೆನಗೆ ಸವತಿಯ ತೊತ್ತುತನವಾಯ್ತು (ಸಂಭಷ. ೫-೪೬). [ ತೊಟ್ಟು + –ತನ ]

**ತೊಟ್ಟುತೊಡರ್** (ನಾ). ಗುಲಾಮಗಿರಿಯ ಬಂಧನ; ದಾಸ್ಯಶೃಂಖಲೆ : ತೊಟ್ಟುತೊಡರಿನಿಜುಕಿಯನ್ನನಿಙುಯುತಿರ್ಪವನ್ (ಬದ್ಧಪ್ರ. ೧೧-೨೦೬). [ ತೊಟ್ಟು + ತೊಡರ್೭ ]

**ತೊಟ್ಟುವೆಸ, ತೊತ್ತುವೆಸ, ತೊರ್ತುವೆಸ** (ನಾ). ಊಳಿಗ ಸೇವೆ : ನೀಮೆಸಗೆದೆಮಡಗದೆ ಬೆಸವ ತೊಟ್ಟುವೆಸನಂ ಬೆಸಸಿಂ (ಹಂಪಭಾ. ೯-೮೧); ಲವಣಾರ್ಣವದ ನಿಖಿಳ ವಸ್ತುಗಳಂ ಕಸ್ತೂರಿ(ಸಿ) ವಿಸ್ತಾರಿಸಿ ವೆಸರ್ವ ಸರಿಖಿಳ ಪೇಟ್ವವಟಯ್ಸಿ ವರತನು ತೊಟ್ಟುವೆಸನಂ ಪೂಣ್ದಾಳಾದಂ (ಶಾಂತಿಪು. ೧೧-೧೦೫); ಇನ್ನನ ಸುಸತ್ವಗುಣಸಂಪನ್ನನ ಸತಿಗೆನಗೆ ತಗದು ತೊಟ್ಟುವೆಸಂ (ನೇಮಿಪು. ೧೩-೬೮); ನಿನ್ನ ಈ ಕಡುಕಷ್ಟಂಗಳನ್ ನಿನ್ನ ಈ ತೊಟ್ಟು ವೆಸಕಾಗಿ ಮಾಜಾಡೆ ನಾನ್ (ಬದ್ಧಪ್ರ. ೫೦-೧೦೦೩). **ತೊತ್ತುವೆಸ**: ಆಂ ತೊತ್ತುವೆಸದೊಳಿರ್ಪೆಂ (ಬಂಹರಿ. ೯-೨). **ತೊರ್ತುವೆಸ.** 'ತೊರ್ತುವೆಸಗೆಯ್' ಪರಾ. [ ತೊಟ್ಟು + ಬೆಸ೧ ]

**ತೊಟ್ಟುವೆಸಗೆಯ್, ತೊರ್ತುವೆಸಗೆಯ್** (ಕ್ರಿ). ತೊತ್ತಿನ ಕೆಲಸವನ್ನು ಮಾಡು ; ಊಳಿಗಮಾಡು : ತೊಟಿಲ್ತಿ ತೊಟ್ಟುವೆಸಗೆ[ಪಾಠಾಂ. ಕೆ]ಯ್ ಪೋ ಪೋಗು ನೀನೆಂದು ಬಯ್ದು (ಹಂಪಭಾ. ೭-೫). **ತೊರ್ತುವೆಸಗೆಯ್**: ತೊರ್ತುವೆಸಗೆಯ್ದುದ ಮಂಡಲನೊಳ್ಪರಿಲ್ಲ (ಎಕ. XIII, ೪೪-೩೦; 1112). [ ತೊಟ್ಟುವೆಸ + ಕೆಯ್೧ ]

**ತೊಟ್ಟುಟು, ತೊತ್ತಳ, ತೊತ್ತಳಿ, ತೊತ್ತಟ, ತೊತ್ತುಟು, ತೊಳ್ತಳ** (ನಾ). ೧. ನುಗ್ಗುನುರಿ ; ಅಜಿಗಿಜಿ ; ಅಸ್ತವ್ಯಸ್ತವಾದ ಸ್ಥಿತಿ : "ತೊಟ್ಟುಟು (ತೊಟ್ಟಟು) = ಸೊಪ್ಪಾದುದು" (ಕಮ ದ. ಪರಿ. ೧); "ಸೊಪ್ಪಾದುದು ತೊಟ್ಟುಟು" (ಕರ್ಣಾನಿ. ೭೮). ೨. ತುಳಿತ; ತುಳಿಯುವಿಕೆ : ಅರಟರ ಚಿನ್ನಪೊಂಗರ ಸಬಂಗಳ ತೊಟ್ಟು[ಪಾಠಾಂ. ತ್ತು]ಟುಯೊಳ್ ತೊಡರಂಕೆ ನಿಲ್ಲದೆ (ಹಂಪಭಾ..೮-೧೦೪); ಪರ್ವಿದಾ ಪಡೆಯ ತೊಟ್ಟುಟುಯಿಂ ಗಿಡುಬಳ್ಳಿ ಭೂರುಹಾವಳಿ ಪೊದಱುಳ್ಳ ಬಲ್ಲಡವಿ ಪೆರ್ವಯಲಾಯ್ತು (ಪುಷ್ಪಪು. ೫-೪೬). ೩. (ಆಲಂ) ಸ್ವಾಧೀನಪಡಿಸಿಕೊಳ್ಳುವಿಕೆ ; ಆಕರ್ಷಿಸುವಿಕೆ : ತೊಟ್ಟುಟುಯುಮಂಗಿಯುಂ ಬಗಿಯುಂ ಮಾಡಿ ಮನಮನುಱ್ಟ ಸೆಱೆವಿಡಿದ ಸೀಯನಪ್ಪ ಗೇಯರಸಾಬ್ಧಿಪೂರದೊಳ್ ಮೂಡಿ ಮುಱುಗಾಡುತ್ತುಂ (ಶಾಂತಿಪು ೨-೨೨ ಪ). **ತೊತ್ತಳ** : ೧. 'ತೊತ್ತಳತುಳಿ' ಪರಾ. ೪. ರಭಸ; ವೇಗ : ಬಿರುಗಾಳಿಯ ತೊತ್ತಳದೊಳು ಬಂಡೆ ಬಂಡೆ ಬಡಿ ಬಡಿಯಲು (ನಡಬಂ. ೭೮-೭). **ತೊತ್ತಳಿ** : ೧. 'ತೊತ್ತಳಿಗೊಳ್' ಪರಾ. **ತೊತ್ತಟ**: ೧. 'ತೊತ್ತಟದುಳು' ಪರಾ. **ತೊತ್ತುಟು** : ೨. ನೋಡಿದಿರೆ ಕರ್ಣನಿತ್ತ ಕನಕೋತ್ತರರಾಶಿಯನಂದು ವಂದಿಗಳ್ ನಾಡೆಯುಮೆಯ್ದೆಪೊತ್ತಡಕಲಾಱದೆ ವಿಕ್ಕೆಡೆ ರಾಶಿಗೆಯ್ದಿರಲ್ ಕೂಡೆ ಮದೇಭರಾಜಿಘಟಕೋಟಿಯ ತೊತ್ತುಟುಪೊಲ್ಲದಲ್ಲಿ ಬಟ್ಟೋದೆ ನೆಲಂ ಸುವರ್ಣಮಯಮಾದುದು ತಚ್ಛಿಬಿರಾಂತರಾಳದೊಳ್ (ನೇಮಿಪು. ೧೧-೧೧೫). ೫. ಬಿಗಿತ; ಸವಿ ತಲೆಗಾದುದೀಯಧರದಿಂ ಪುಳಕಾಂಕುರ ಮಾಮ್ಪುಮಾಯ್ತು ಮೆಯ್ಗುವಳ ಕುಚಕ್ಕೆ ಕರ್ಕಶತೆ ಜೀವನಮಾಯ್ತುಟು ದಂತಿರೆನ್ನ ಬಾಯ್ಗವರದೊಳಿನ್ನ ತೋಳ್ದೋಣರ ತೊತ್ತುಟುಯೊಳ್ ಕಡಿಕೆಯ್ದುವಿಂತು ಬಟ್ಟುವೆ ಪೊಣರ್ವನ್ನುರೋಹಶಿಯೊಳಂಬಪೊಲೀಕ್ಷಿಸುತಿರ್ದ ನಲ್ಲನಾ (ಲೀಲಾವ. ೧೩-೩೧). **ತೊಳ್ತಳ** : ೧. 'ತೊಳ್ತಳಂದುಳಿ' ಪರಾ.

**ತೊಟ್ಟುಟುಮಾಡು** = ನುಗ್ಗುನುರಿ ಮಾಡು ; ಅಸ್ತವ್ಯಸ್ತಗೊಳ್ಳುವಂತೆ ಮಾಡು : ವಿಪುಸೇನೆಯುಂ ತುಱಿದು ತೊಟ್ಟುಟುಮಾಡುವಂ (ಹಂಪಭಾ. ೧೩-೪೪) ; ಜನರಾಜಾ ವನವಾರಿಕೇಳಿ ವಿಭವಂ . . . ಶ್ರೀಯುಂ ಮದೀಯ ಪ್ರಿಯಾಬ್ಜನಿಯಂ ತೊಟ್ಟುಟು ಮಾಡಿ ಕೀಟ್ಟಡಿಸಿದು (ಅನಂಪು. ೭-೫೬). [ <ತುಱು೧ ]

ತೊಟ್ಟುಟುದುಳು, ತತ್ತಟದುಳು, ತೊತ್ತಳಂತುಳಿ, ತೊತ್ತಳಂದುಳಿ, ತೊತ್ತಳತುಳಿ, ತೊತ್ತಳದುಳಿ, ತೊತ್ತಟಂದುಳು, ತೊತ್ತಟದುಳು, ತೊಳ್ತಳಂದುಳಿ, ತೊಡ್ತುಳಿದುಳಿ, ತೊರ್ತಳದುಳಿ (ಕ್ರಿ). ಪುಡಿಯಾಗುವಂತೆ ತುಳಿ ; ನುಗ್ಗುನುರಿಯಾಗುವಂತೆ ತುಳಿ ; ಸೊಪ್ಪಾಗುವಂತೆ ಮಾಡು; ಮುದ್ದೆಯಾಗುವಂತೆ ಮಾಡು: ಸುಪ್ರತೀಕ[ಂ]ಕೆಯ್ಕಾಲ ಕೋಡೇಱಿನೊಳ್ ಬಲಮನೆಲ್ಲಂ ಜವನ ಜವುಟುದುಟುವಂತೆ ತೊಟ್ಟುಟುದುಟುದು (ಹಂಪಭಾ. ೧೧-೬೨ ಪ) ; ರಾಗರಸದಾಗರಮಪ್ಪ ವಲ್ಲಭನ ಮನಮನಾಗಳಾಗಳೆ ತೊಟ್ಟುಟುದುಟುದು ಬಂದಳೆನಿಸಿ (ವರ್ಧಪು. ೭-೯ ಪ). **ತತ್ತಟದುಳು** : ನಾಡಂ ದಾಟುಟ್ಟು, ಒಳ್ಳಿದರಂ ಪೊರೆದು, ಕೊಟರಂ ತತ್ತಟದುಟುದುಂ, ಬರ್ಕುಮಾತನಡಿಯಾಣತಿಯೊಳ್ ಸೇನೆ (ರಾಮಾಶ್ವ. ೧೨೦-೭). **ತೊತ್ತಳಂತುಳಿ**: ಒತ್ತಿದ ಜಗಳಕ್ಕೆ ಸುತ್ತ ಮುತ್ತಿಗೆಯಾಗಿ ತೊತ್ತಳಂತುಳಿದು ಕೊಲುವಾಗ ಉಳುವೆಯ ಕರ್ತ ಬಂದಾನು (ಸರ್ವಜ್ಞ. ೧೦೫೩). **ತೊತ್ತಳಂದುಳಿ** : ಮುಂದಲೆವಿಡಿದು ಕೆಡಹಿ ಪಾದಂಗಳಿಂ ತೊತ್ತಳಂದುಳಿದು ತಾಂಡವರೂಪವಂ ಧರಿಸಿ ಕುಣಿವುತಿರೆ (ಚಬಪು. ೨೦-೬೨) ; ಧರೆಯೊಳಗುಳ್ಳ ಬಲ್ದೊರೆಗಳೆಲ್ಲ . . . ವರಿತರೆ ತೊತ್ತಳಂದುಳಿದನವ್ರತಿಮಂ (ಅಪ್ರತಿ. ೨೭-೨೦). **ತೊತ್ತಳತುಳಿ**: ಬುಧಜನಾಧಾರಂ ತೊತ್ತಳತುಳಿವಂ (ದಿಶಂಕರಾ. ೧೯೩೪, ಬಂಕಾಪುರ. ೩-೧೨ ; 954) ; ಅಧೈರ್ಯ, ಭಯ, ಹೆದರಿಕೆ ತೊತ್ತಳತುಳಿದವು (ಕಕಂಡ. ೧೩೮). **ತೊತ್ತಳದುಳಿ** : ಮಲೆವತ್ಕುದ್ವಿಷ್ಟತ್ರರಂ ತೊತ್ತಳದುಳಿದು ನಿಜ ಪ್ರಾಜ್ಯಸುಸಾಮ್ರಾಜ್ಯಮಂ ತೋಳ್ವಲದಿಂ ನಿಷ್ಕಂಟಕಂ ಮಾಡಿದನಧಿಕಬಳಂ (ಎಕ. II, ೧೩೨-೨೨ ; 1123) ; ಗೂಳಿಯಾಗಿ ಹೋಗಿ ಎಲ್ಲರ ತೊತ್ತಳದುಳಿದು ಒಕ್ಕಲಿಕ್ಕಿ (ಕೂನ್ನಸಂ. ೧೩೦-೨೧); ತೊತ್ತಳದುಳಿದನರಿನಳಿನವನಮಂ ಬಸವಕುಂಜರನು (ಬಸಪು. ೫೯-೩೪) ; ಕದಳಿಯನು ಮದಕರಿಯು ತೊತ್ತಳದುಳಿದವೊಲು (ಕುವ್ಯಾಲೀ. ೪-೬೩) ; ವರ ಜಿತೇಂದ್ರಿಯರ ತೊತ್ತಳದುಳಿದ ಧೀರೋದಾತ್ತ ಜಯಯೆಂದು ಚಿತ್ರಜನಸು ಹೊಗಳಿದರು (ಮೋಹತ. ೧೭-೮). **ತೊತ್ತಟಂದುಳು** : ಕೋಪಾಟೋಪದಿಂ ತೊತ್ತಟಂದುಟು ಯಲ್ಕೆಟ್ಟರೆ ರಾಸಭಾಕೃತಿಯಿನಾಗಳ್ ರೌದ್ರಮಂ ಬೀಱುತಂ (ಮಹಾನೀ ೬-೧೯) ; ಪಾರ್ವನಂ ತೊತ್ತಟಂದುಟುದರ್ (ಚಕವಿ. ೬-೧೧೯) ; ತುಱುಗೆಱೆಯುವನಂ ತೊತ್ತಟಂದುಟುದು ಬೆಂಗಳೂರವನಂ ಭಂಗಂಬಡಿಸಿ (ಚಿಕವಂ. ೫೭-೧೨). **ತೊತ್ತಟದುಳು** : ಹೀನಬಲನನಧಿಕಬಲಂ ತೊತ್ತಟದುಟುದನೆಂಬ ಲೋಕದ ಪಟು ಪೂರ್ದದೆ ಮಾಣೆ ಧರ್ಮಯುದ್ಧದೊಳೆಸಗಿಂ (ಆದಿಪು. ೧೪-೧೦೨) ; ಕೊತ್ತಾಗಾಲಮಂ ತೊತ್ತಟದುಟುದು (ಚಕವಿ. ೨-೨೯); ದುಱುದುಂದುಭಿಗುದುರೆ . . . ಪೊಕ್ಕು ಪೊಱದೋಂಟವಂ ತೊತ್ತಟದುಟುದು ಪಾಟಿಸಿಡಿಕುಂ (ರಾಮಾಶ್ವ. ೧೫೨-೧೩). **ತೊಳ್ತಳಂದುಳಿ**: ಅಖಿಳ ಜೀವರಂ ತೊಳ್ತಳಂದುಳಿದುಟ್ಟುತ ಮಾರಾಹನಿಂತು ಕೋಲಾಹಲಂ ಮಾಡಿ (ವೀಕ್ಕಿಪು. ೩-೧೧-೧೭). **ತೊಡ್ತುಳಿದುಳಿ**: ಕಲಿ ತೊಡ್ತುಳಿದುಳಿದಿಕ್ಕೆ ಪರೆಯ ಭಾನೂದಯದೊಳ್ಕರ್ತ್ತಲೆಯನ್ನಿರೆ ರಿಪುಗಳ್ಕರ್ತ್ತಲೆವೆಸರಾದು ದಾತನೊಕ್ಕಲ್ವೆಸರುಂ (ಸೌಇಇ. XI-1, ೪೫-೫; ೯೮೦). **ತೊರ್ತಳದುಳಿ**: ಕಾಲ್ದುಳಿಯೊಳಱಗೆ ತೊರ್ತಳದುಳಿವಂ ರಣರಂಗಭೈರವಂ ಗೋವಿನ್ದ (ಸೌಇಇ. XX, ೮೭-೨೪; ?). [ ತೊಟ್ಟುಟು + ತುಱು೧ ]

**ತೊಟ್ಟುಟ್ಟಿ, ತೊಳ್ಪುಟ್ಟಿ** (ನಾ). ದಾಸಿಯ ಪುತ್ರ ; ತೊತ್ತಿನ ಮಗ : ಎಱ್ಟೋಗು ದೂತನಪ್ಪನ ಬೆಟ್ಟನ ನುಡಿಗೇಳ್ದು ಮುಳಿಯಲಾಗದು ನೀನುಂ ಮೆಟ್ಟಿಟ್ಟು ವಿದುರನೆಂಬೀ ತೊಟ್ಟುಟ್ಟಿಯ ಮನೆಯ ಕೂಟು ನುಡಿಯಿಸೆ ನುಡಿದೈ (ಹಂಪಭಾ. ೯-೫೪). **ತೊಳ್ಪುಟ್ಟಿ** : ಮೂರು ತಲೆ ತೊಳ್ಪುಟ್ಟಿ ತಾಯ ಮಗನೆಂದು (ಮೂಱುನಾ. ೦೩೩-೧೦೦೬).

[ <ತೊಟ್ಟು + ಪುಟ್ಟು೧ + – ಇ೩ ]

**ತೊಟ್ಟುಟ್ಟು** (ನಾ). = ತೊಟ್ಟುಟ್ಟಿ : ನಾಲ್ಕುಂ ಗ್ರಹಂ ನೀಚ ಶತ್ರು ನಿವಾಸಂಗಳೊಳಕ್ಕೆ ನವಾಂಶಕದೊಳೊಂದಿರ್ದಂದು ತೊಟ್ಟು[ಪಾಠಾಂ. ವು]ಟ್ಟು (ಜಾತಕ. ೨೧-೨೧). [ <ತೊಟ್ಟು + ವುಟ್ಟು$_2$ ]

**ತೋ, ತೊಯ್, ತೊಯ್ಯು, ತೋಯು** (ಕ್ರಿ). ತೋದ$_1$ (ಭೂತಕೃ) ತೊಯ್ದು, ತೋದು, ತೋಯ್ದು (ಭೂತನ್ಯೂ). ೧. ತೇವವಾಗು; ನೆನೆ ; ಹಸಿಯಾಗು : ಏನೆಂಬೆಂ ಬಾಲ್ಯದೊಳ್ ಮೇಲಱಿಯದೆ ಮಲದಿಂ ಮೂತ್ರದಿಂ ಶ್ಲೇಷ್ಮದಿಂ ತೋದಾ [ಪಾಠಾಂ. ತೊಯ್ದಾ] ನಾರೆಂದೇನುಮಂ ಭಾವಿಸದೆ(ರತ್ನಾಕ. ೪) ; ತೋದುದು ತೇರು ರಕ್ತದಲಿ (ಕುಮಾ.ರಾ. ೫-೫೫) ; ತೋದುದಂಬರತಳಂ ವಿಷದ ಲೋಳೆಗಳಿಂದ ತೀದುದಮರರ ಹರುಷವು (ಜೈಮಿ. ೪೩-೨೩) ; ಮಳೆಗಱೆದುದಿದೇತರ್ಕೆವಳ್ ತೋದೊಡೇ ಕುದ್ಯವಿಸಿತ್ತೋ ಪ್ರೀತಿ (ದಿವ್ಯ. ೭-೪೯) ; ಪಾದಪಗಳಡಿಗೆರೆಯ ಸಲಿಲವ್ರ ತೋದು ಕೊಂಬೆಗಳುಬ್ಬಿ ಪುಷ್ಪ ಸ್ವಾದುಫಲವೀವಂದದಲಿ (ಹಸಾರ. ೩-೧೩). ೨. ನೆನೆಯಿಸು ; ಒದ್ದೆಮಾಡು : "ತೋ–ಆರ್ದ್ರೀಕರಣೇ (ನೆನೆಯಿಸು)" (ಶಮಧಾ) ; ಅರಗಿನರಮನೆಗುರಿಯುಬ್ಬಿಂತರಟಿ ದಾನವ ವನಚರಂಗಳ ಸರಳ ಮಳೆಯಲಿ ತೋದನದ್ದಿದನಮಮ ಮುಳುಗಿಸಿದ (ಕೌಶಿರಾ. ೩೨-೬೬). **ತೊಯ್ :** ೧. "ತೊಯ್ (ತುಯ್)=ಸಾರ್ದ್ರೀಕೃತ್ವೇ" (ಶಮಧಾ) ; ಹಾಯ್ದು ಕರುಳಿನ ವಿದುಳ ಜೋರಿನ ತೊಯ್ದು ರಕ್ತಾಂಬರದಿ ತಾನಿರಲ್ಕದಿ (ಕುಮಾ.ಕ. ೮-೪೧). ೨. ಹಳಮುಖನುಂ ಬೇಟೆಯನೆಣ್ಣೆಯೊಳ್ ತೊಯ್ದು [ಪಾಠಾಂ. ತೋದು]ನಖಾಗ್ರದಿಂ ತೊಟ್ಟು ನೆತ್ತಿವರೆಗಂ ಬಳಸಿಯುಂ . . . ಕಿಚ್ಚಂ ತಗುಳ್ಚಿ (ವರ್ಧ.ರಾ. ೧೫೪-೬); ಕನಲ್ದ ಕೆಂಡದ ಮೇಲೆ ಪಱಿಯ ಬೇವಿನೆಣ್ಣೆಯೊಳ್ ತೊಯ್ದಿಕ್ಕಿದ ಬೆಳ್ಳುಳ್ಳಿಯ ಕಂಪಿನಂತೆ (ಪಂಚಥಾ. ೩-೭೦ ವ) ; ನೀಲಿಯ ರಸದೊಳ್ ಕರಡಿಯ ತೋಲಂ ತೊಯ್ದಟ್ಟಿದ ಮಸಿಯೊಳದಱೊಳ್ ಪುದಿದತ್ತೀ ಲೋಕಮಕ್ಕುಮೆನಿಸಿತ್ತಾ . . . ತಮಸಂ (ಕಾವ್ಯಾವ. ೭೩೫) ; ಪೊಸ ಮುತ್ತನಾಯ್ದುಮರ್ದಿನೊಳ್ತೊಯ್ದಂತೆ ನೇರ್ಪಟ್ಟ ನಿರ್ಮಲದಂತಚ್ಛವಿ ಬೇಡಿದರ್ಗೆ ವರವೀವಂತಿರ್ಪುವು (ಅನಂಪು. ೨-೧೪). **ತೊಯ್ಯು :** ೧. "ನೆನೆ = ತೊಯ್ಯು" (ಗಂಗಾಮ. ೧೯೦). **ತೋಯು :** ೧. ಬಿಸಜಾಕ್ಷಿಯರು ತೋಯ್ದು ಪೊಱಮಟ್ಟು ಬಂದಾಗ . . . ದೇಹಲಾವಣ್ಯಪರಿಪೂರ್ಣರಸ ಸುರಿವಂತಾದುದು (ಪೋಹಕ. ೧೪-೫೭) ; ನೀನು ನೋಯೆ ಕಣ್ಣು ತೋಯೆ ರುದ್ರಭೂಮಿ ಈ ಜಗ (ಮಾನಸ. ೧೪-೧೫) ; ನೆಲವೆಲ್ಲಾ ಕಣ್ಣೀರಿನಿಂದ ತೋಯ್ದು ಹೋಗಿದೆ (ಮುಹಾಂ. ೧೦೪).

[ ದೇ. ॥ ತಮಿ. ತೋಯ್ ; ಮಲ. ತೋಯು ; ತೆಲು. ತೋಗು ]

**ತೋಂಟ, ತೋಟ$_1$** (ನಾ). ಹೂವು, ಹಣ್ಣು, ಕಾಯಿಪಲ್ಯೆಗಳು ಅಥವಾ ತೆಂಗು, ಅಡಿಕೆ ಮಾವು ಮೊದಲಾದುವುಗಳು ಬೆಳೆಯುವ ಭೂಮಿ ; ಬಾಗಾಯತ ಭೂಮಿ : ಶ್ರೀವುರದಾ ದಣ್ಣುಗಾವುಣ್ಡರಾ ತೋಣ್ಟದಾ ಪಡುವಾಯೊನ್ದು ತೋಣ್ಟ (ಎಕ. IV, ನಾಗಮಂ. ೮೫-೬೭ ; 776) ; ಕಬನಿ ವತ್ತಂ ಮಣ್ಣಿಯೆಲರ ಕೞಿಯ ಕೞಗಣ ತೋಣ್ಟಮುಂ (ಎಕ. IX, ನೆಲಮಂ. ೬೦-೧೨೫ ; 797); ಕಳ್ಳಿಯಂ ನಂಬಿ ಕೌಂಗಿನ ತೋಂಟಮಂ ಕಡಿವ ತೋಂಟಿಗನುಮಂ (ಧರ್ಮಾಮೃ. ೮-೫೧) ; ಕುಱಿವಿಂದು ಕಬ್ಬಿನ ಉಲಿವ ತೋಂಟ [ಪಾಠಾಂ. ಹೊಲ]ವ ಹೊಕ್ಕು ತಱಿನನಱಿಯದೆ . . . ಮೇದುವು (ಬಸವ. ೫೯೮) ; ಎಲರ್ವೊಯ್ಲಿಂದೆಸೆವಿಕ್ಷುಕಾಂಡರಸದಿಂ ತೋಂಟ [ಪಾಠಾಂ. ನಾಂದಿ]ಕ್ಕೆ ತವ್ವೊಳ್ ಪಳಂಚಲೆವೊಳ್ಗೊಂಚಲ ಕಾಯೊಳುರ್ಕಿವೆಳನೀರಿಂದಂ ಬನಂಗಳ್ಗಗುಂದಲೆ ನೀರೂಟವಿದೇಕೆ (ವರ್ಧಪು. ೧-೪೩) ; ಕಂಡವರ್ ಕಾವಿಸೆ ಮಾಲೆಗಾಱರೊಸೆದೋವಿದ ಪೂವಿನ ತೋಂಟವೊಪ್ಪುಗುಂ (ಗಿರಿಕ. ೨-೬೦). **ತೋಟ$_1$ :** ಗಳೆಯ ಮಂತ್ರರ್ ೩ ಬೆದ್ದಲೆ ಮತ್ತರ್ ೫ ಅಡಕೆಯ ತೋಟದಲು ಪರ್ಷಕ್ಕೆ ಮರದಲೊಂದಡಕೆ ಎಲೆಯು ಸುಂಕ (ಎಕ. VII, ಶಿಕಾರಿ. ೨೨-೧೫ ; 1032) ; ನಾಡಿಲ್ಲದರಸುಂ ಫಲಮಿಲ್ಲದ ತೋಟಮುಂ ... ಒಪ್ಪಲಾರ್ಕುಮೆ (ಧರ್ಮಾಮೃ. ೦-೬೫) ; ತನುವ ತೋಟವ ಮಾಡಿ ಮನವ ಗುದ್ದಲಿ ಮಾಡಿ ಅಗೆದು ಕಳೆದೆನಯ್ಯ ಭ್ರಾಂತಿನ ಬೇರೊಡೆದು(ಅವಕಂ.೧೮೦-೮೧೨);ಮುಳಿದು ಕಬ್ಬಿನ ತೋಟದಲಿ ನರಿ ಹುಲಿಯವೋಲ್ ಗರ್ಜಿಸಿತು (ಕುಮಾ.ಕ. ೧೩-೪೪); ಬನ್ನಿ ಓ ಬಾನಲೆವರೆ, ನಮ್ಮ ತೋಟಕೆ (ಅನಿಕೇ. ೨೦-೧) ; ತೋಟ ಮೂರು ಮೊಳ ಕಾಯಿ ಆರು ಮೊಳ (ಗಾದೆ).

[ ದೇ. ॥ ತಮಿ. ಮಲ. ತೋಟ್ಟ ; ತುಳು. ತೋಟ, ತೋಟೊ ; ಕೊಡ. ತೆಲು. ತೋಟ ; ಗದಬ. ತೋಂಟ ]

**ತೋಂಟಕಂಡ** (ನಾ). ತೋಟದ ಭಾಗ,–ತುಣುಕು : ಮೊಳವಡೆ ಪದಿಕ್ಕೊರ್ಕಳಂ ಆರಾತೋಣ್ಟದಿಂ ಮೂಡಣ ತೋಣ್ಟಕಣ್ಡಮುಂ ಮಾರಿ ಬೆಱತಿಯಿಂ ಒಡಗಣ ಮಣ್ಣು (ಎಕ. IV, ಎಳಂದೂ. ೨೫-೭; ಸು. 926 ?).

[ ತೋಂಟ + ಕಂಡ$_1$ ]

**ತೋಂಟಖಂಡ** (ನಾ). = ತೋಂಟಕಂಡ : ಶ್ರೀ ದೇಕಬ್ಬೆ ಮಹಾದೇವರ್ಗೆ ಬಿಟ್ಟ ಪೊಂಬೊಲಂ ತೋಂಟಖಂಡಮುಮಂ (ಎಕ. IV, ಹೆಗ್ಗಡ. ೧೮-೩೬ ; 1057). [ ತೋಂಟ + ಖಂಡ ]

**ತೋಂಟವಾಳ, ತೋಟವಳ, ತೋಟವಾಳ** (ನಾ). ತೋಟದಲ್ಲಿ ಕೆಲಸ ಮಾಡುವವನು ; ತೋಟಗಾರ. 'ತೋಂಟವಾಳತಿ' ಪರಾ. **ತೋಟವಳ :** ಬಿನ್ನಪಂಗೆಯ್ದು ತೋಟವ [ಪಾಠಾಂ. ವಾ]ಳಂಗೆ ಪಸಾಯನ ಮನಿತ್ತು (ರಾಜಶೇ. ೧೭-೫ ವ). **ತೋಟವಾಳ :** ಮೇಲಿನ 'ರಾಜಶೇ' ಪ್ರಯೋಗದ ಪಾಠಾಂತರವನ್ನು ನೋಡಿ. [ ತೋಂಟ + –ವಾಳ$_1$ ]

**ತೋಂಟವಾಳತಿ** (ನಾ). ತೋಟದಲ್ಲಿ ಕೆಲಸ ಮಾಡುವವಳು ; ತೋಟಗಾರ್ತಿ : ಇತ್ತಳರಸಗೊರ್ವ ತೋಂಟವಾಳತಿ ಹೊಂಗೇದಗೆ ಹೂವ (ಸೊಬಗಿ. ೩-೪೩). [ ತೋಂಟವಾಳ + –ತಿ$_1$ (<–ಇತ್ತಿ) ]

**ತೋಂಟವಾಳಿಗ, ತೋಟವಾಳಿಗ** (ನಾ). = ತೋಂಟವಾಳ : ಪುರವ ಪೊಗದ ಮುನ್ನ ತೋಂಟವಾಳಿಗನದನೊರೆಯಲು ಯುವರಾಜ ಮುಳಿದು (ವರ್ಧಕ. ೩-೬೩). **ತೋಟವಾಳಿಗ :** ತೋಟವಾಳಿಗ ಪೇಳಲಂದಾ ಬಸವಂದ ವನೇ ನೋಳ್ಪೆನೆಂದು . . . ಪೊಱಮಟ್ಟ (ಶ್ರೀಪಾಂ. ೩-೧೭).

[ ತೋಂಟವಾಳ + –ಇಗ ]

**ತೋಂಟವೆಸ** (ನಾ). ತೋಟದ ಕೆಲಸ,–ಕಾರ್ಯ. 'ತೋಂಟವೆಸಂಗೆಯ್' ಪರಾ. [ ತೋಂಟ + ಬೆಸ$_1$ ]

**ತೋಂಟವೆಸಂಗೆಯ್** (ಕ್ರಿ). ತೋಟದ ಗಿಡ, ಮರಗಳಿಗೆ ಆರೈಕೆ ಮಾಡು ; ತೋಟವನ್ನು ಕೃಷಿಮಾಡು : ಮಂದಾನಿಲಂ ತೋಂಟ ವೆ ಸ ಂ ಗೆ ಯ್ದು ಟ್ಟ ಱ ಂ ಪೆರ್ಚಿಸಿದ ಎಚಕಿಳಂ ರಯ್ಯಮಲ್ಲಿಗೆಲ್ಲಂ (ಚಂದ್ರಪು. ೧-೮೭). [ ತೋಂಟವೆಸ + ಕೆಯ್$_1$ ]

**ತೋಂಟ$_1$** 'ತೋಟ$_1$' ನೋ.

**ತೋಂಟ$_2$** 'ತೋಟ$_2$' ನೋ.

**ತೋಂಟಿಗ, ತೋಟಿಗ** (ನಾ). ತೋಟದ ಕೆಲಸ ಮಾಡುವವನು : ಅಂತಃಪುರಕಾಂತಾಸಂತತಿಲತಾಪ್ರತಾನಮಂ ಜಲಧರ ಧಾರಾಂತಾಭಿಷೇಕದಿಂ ತಳಿದಂ ತೋಂಟಿಗನಂತೆ ಸಂತತಂ ಯುವರಾಜಂ (ಶಾಂತಿಪು. ೮-೩೬) ; ಮದನಂ ಗಡ ಯೌವನವನಕ್ಕೆ ತೋಂಟಿಗನಾದಂ (ಅಜಿಪು. ೨-೩೧) ; ಕಳ್ಳಿಯಂ ನಂಬಿ ಕೌಂಗಿನ ತೋಂಟಮಂ ಕಡಿವ ತೋಂಟಿಗನುಮಂ (ಧರ್ಮಾಮೃ. ೮-೫೧) ; ಸೊಂಪಿನಿಂ ಬೆಳ್ಪುವೆತ್ತಿರ್ದಿಂಗೋಲಂ ಪಣ್ತ ದಾಳಿಂಬಗಳನೊಲವಿನಿಂ ತೋಂಟಿಗಂ ಕೊಟ್ಟನೋರ್ವಂ (ಕಬ್ಬಿಗ. ೮೮) ; ಲೋಗರ ಕಣ್ಣಂಜಲ್ ತಾಗದಂತು ಬೆರ್ಚನಿಟ್ಟು ಪಕ್ಕಿಗಳಂ ಬೆದರ್ಚಲೊಡ ರ್ಚಿದ ತೋಂಟಿಗನೊಂದಾಯತಿಯಂ ಕಂಡನಕ್ಕುಂ (ರಾಮಾಶ್ವ. ೮೫-೨೮).

**ತೋಟಿಗ :** ಸಮಸ್ತ ತೋಟಿಗರುಂ ಕೂನೆರಾಜರು ವೈಳಿಯ ಮೂನೂ ರ್ಬ್ಬರುಮಿರ್ದ್ದು . . . ಬಿಟ್ಟ ಧರ್ಮವಪ್ಪುದು (ಸೌಇಇ. IX-1, ೧೧೧೦-೩೩; 1136) ; ಬಾಳಿವಣ್ಣೊನೆಯ ಕಾಣಿಕೆಯಿತ್ತು ಭೂವರಗೂರ್ವ ತೋಟಿಗ ನೆಂದ (ಸೂಬಸೋ. ೩-೧೦) ; ಬಳಿಕಲಾ ತೋಟಿಗನ ಬುದ್ಧಿಗೆ ತಿಳಿವ ತೀಡುವೆನೆನುತ ಮಿಗೆ ಕಂಗಳಿಗೆ ಕಟ್ಟಿದಿರಾಗುತಲಿ ಶರಣಾರ್ಥಿಯೆಂದೆನಲು (ಪ್ರಭುಲೀ. ೦೧-೬) ; ತೋಟಿ ತೋಟಿಗಗಾಸೆ ಕೋಟಿ ಮನ್ನೆಯಗಾಸೆ (ಸರ್ವಜ್ಞ. ೧೯೦೩) ; ಅಗೆದು ಗೊಬ್ಬರವಿಕ್ಕಿ ನೀರೆರೆದು ತೋಟಿಗನು ಜಗಿವ ಮುಳ್ಳಿರಿತಗಳ ಸೈರಿಸೆ ಗುಲಾಬಿ ನಗುವುದೊಂದರನಿಮಿಷ (ಮುಂಕುಳ. ೪೭೮). [ ತೋಂಟ + – ಇಗ ]

**ತೋಂಟಿಗವೆಸ** (ನಾ). ತೋಟಗಾರನ ಕೆಲಸ,–ಕಾರ್ಯ. 'ತೋಂಟಿಗ ವೆಸಂಗೆಯ್' ಪರಾ. [ ತೋಂಟಗ + ಬೆಸ$_1$ ]

**ತೋಂಟಿಗವೆಸಂಗೆಯ್** (ಕ್ರಿ). ತೋಟಗಾರನ ಕೆಲಸ ಮಾಡಂ: ನನೆಯಂಬಂ ನನೆವಮಾಡಿ ಚಾಪಲತೆಯಂ ನೀಳೆಕ್ಷುಗಳ್ಗಿತ್ತು ಕೇತನವಂ ಖ್ಯಾತಿಯೊಳಿಕ್ಕಿ ತೋಂಟಿಗವೆಸಂಗೆಯ್ದಂಗಜಂ ತಿರ್ದೆ (ಅನಂಪು. ೧೦-೨೨). [ ತೋಂಟಿಗವೆಸ + ಕೆಯ್$_1$ ]

**ತೋಂಟಿಗಸಮಯ** (ನಾ). ತೋಟ ಮಾಡುವವನನ್ನು ನೇಮಿಸಂ ವುದಂ,–ಕರಾರಂ ಮಾಡಿಕೊಳ್ಳುವುದಂ : ಮೂಱು ಮತ್ತರ ತೋಂಟ ವೊಂದದಂ ಜೈನರ್ಪ್ರತಿಪಾಳಿಸುವರಾ ತೋಂಟಕ್ಕೆ ತೋಂಟಿಗಸಮಯ ಮಿಲ್ಲದನಾರೋರ್ವ್ವರ್ಮ್ಮಾರ್ಪ್ಪರವರ್ಬ್ಬರಸದಿಗೆ ಸಮಭಾಗಮಿಕ್ಕಿಯುಣ್ಬಾರ್ (ಸೌಇಇ. XI-1, ೫೨-೬೩ ; 1007). [ ತೋಂಟಿಗ + ಸಮಯ ]

**ತೋಂಟಿಗೊಳ್** (ಕ್ರಿ). ಯುದ್ಧಕ್ಕೆ ತೊಡಗು : ರಾಜನೃಪನೊಳ್ ತೋಂಟಿ ಗೊಳಲೆಂದು ಎಡದೊಟಿಯಂಬ ಗಡಿಗೋಂಟಿಯೊಳ್ ಕಟ್ಟಿರ್ದ ಮೇಘ ಪುಷ್ಪವೆಂಬ ಕೇಜಯಂ ಕಳವಿನಿಂದೆ ಕೊಂಡೊಯ್ದುದುಂ (ಚಕವಂ. ೫೦). [ ತೋಂಟ$_1$ (<ತೋಟ$_1$) + ಕೊಳ್$_1$ ]

**ತೋಂಡಿಗೆಟಿ** (ನಾ). ಒಂದು ಸ್ಥಳದ ಹೆಸರು : ಪಶ್ಚಿಮಾನ್ತ ಭಾಗ ತತಃ ತೋಣ್ಡಿಗೆಟಿ ದಕ್ಷಿಣಾನ್ತ ಭಾಗಃ (ಮೈಆರಿ. ೧೯೪೨, ೬೩-೧೧೫ ; ೩೧೨). [ ತೋಂಡಿ ? + ಕೆಟಿ ]

**ತೋಂಡಿ ಪರೀಕ್ಷೆ** (ನಾ). ಮೌಖಿಕ ಪರೀಕ್ಷೆ : ಮೌಖಿಕ ಪರೀಕ್ಷೆಗೆ ತೋಂಡಿ ಪರೀಕ್ಷೆ ಎಂದೂ ಹೆಸರಿದೆ (ರೂಢಿ). [ತೋಂಡಿ$_0$ ( P ←ಮರಾ. ತೋಂಡೀ) + ಪರೀಕ್ಷೆ ]

**ತೋಕ** (ನಾ). ಮಗ ಅಥವಾ ಮಗಳು; ಸಂತಾನ : "ಸೂನುಃ, ಸಂತತಿಃ . . . ತೋಕಂ, ತನಯಃ, ಸ್ತನಂಧಯಃ, ಅಪತ್ಯಂ – ಈ ೧೨ ಮಗವು" (ಹಲಾಯು. ೮೨-೩೪೩) ; ಬಿಬ್ಬಲೋರ್ವ್ವೀಶನ ತೋಕಂ ಸೋವಿದೇವಂ (ಸೌಇಇ. XV, ೧೪೨-೯ ; ?) ; ಘನಸಂಸಾರಸುಖಕ್ಕೆ ಸಾರಮಿದು . . . ಸುತಶಿರೋಜಾಘ್ರಾಣನಂ ಸೂನುಲೋಚನರೋಚಿಷ್ಪರಿಚರ್ಚೆ ತೋಕ ತನುಲಿಪ್ತಕ್ಷೋದ ಸಂದರ್ಶನಂ (ಕುಸುಮಾ. ೩-೫೮) ; 'ಜೀವತ್ತೋಕೆ' ಪರಾ. [ ಸಂ. ]

**ತೋಕಿಸು** (ಕ್ರಿ). ೧. ಹೊಡೆ ; ಪ್ರಯೋಗಿಸು ; ಬಿಡು : ಸಂಗರಕೆ ಬಿಲ್ಗೊಂಡು ಸರಳುಗಳ್ತೋಕಿಸುತಮತಿರಥರು ಪೊಕ್ಕು ಸೇನಾಜಲಧಿ ಯನ್ನೊರಸಿ (ತುರಂಗ. ೪೯-೪೧). ೨. ಬಾರಿಸು ; ಮೊಳಗು ; ಶಬ್ದ ವಾಗು : ಏಕಶಂಖಧ್ವನಿ ಭಡಾಳಿಸಲ್ಬರುತವಣೆಯಾ ಕ್ರತುವು ಮುಗಿದ ಪರಿಯಂತರಮ್ಮೇಳುದಿನ ತೋಕಿಸಿತು ಪಗಲಿರುಳು (ತುರಂಗ. ೨೨-೪೬). [ ತೋಕು$_1$ + – ಇಸು$_2$ ]

**ತೋಕು$_1$** (ಕ್ರಿ). ೧. ಹೊಡೆ ; ಪ್ರಹಾರ ಮಾಡು ; ಪ್ರಯೋಗಿಸು : ತೋಕುವಂಬಿನ ಜೋದರೊಗ್ಗಿನೊಳೌಕಿದುವು ಸಾವಿರಮದೇಭಾನೀಕ ಬೊಬ್ಬೆಯ ಲಳಿಯ ತಾಕಿತು ಲಕ್ಕ ವಾಯುದಳ (ಕುವ್ಯಾಗ. ೧-೨೮) ; ಒಡನೆ ನೂಕಿತು ತೋಕುವಂಬಿನ ತಡೆವ ಶೂಲದ ಹೊಯ್ವ ಖಡ್ಗದ ಬಿಡುವ ಚಕ್ರದ ಬೀಸುಗವಣೆಯ ಬಹಳ ಭಟನಿಕರ (ತೊರರಾ. ೩-೬-೧೧); ತೋಕುತಂಬನು ರಥದಿ ಕಲಿಬಲನಾಕರಿಸಿ ಮುಂದುಬ್ಬಿ ಬೊಬ್ಬಿಡೆ (ಅಂಲಿಕಾ. ೧೪-೪೨) ; ಪದ್ರಥರು ಸೊಕ್ಕಿ ಕೋಪಾಗ್ನಿಯಿಂ ತೋಕಿದರು ತನಿಸರಳ (ತುರಂಗ. ೫೨-೨೬). ೨. ಸಂದಿಸು ; ವರ್ಷಿಸು : ತೋಕಿದವು ನಾರಾಚ ದೆಸೆದೆಸೆಯೋಕರಿಸಿದವೊ ಸರಳನೆನೆ (ಕುವ್ಯಾಅ. ೦೯-೦೩) ; ಮಾನವಸೂರ್ಯ ಭಾವೆನುತ ತೋಕಿ ಪುಷ್ಪಾಂಜಲಿಯಲಮರಾನೀಕ ಕೈವಾರಿಸಲು (ನಿಭಾಗ. ೪-೦೦-೩೯) ; ಮರದ ಬುಡಕ್ಕೆ ನೀರು ತೋಕು ತ್ತಿದ್ದ ರಾಮನಾಥನನ್ನು ಕರೆದು . . . ಗುಡುಗಿದನು (ಮೂರುದಾ. ೩೩). ೩. ಹೊರಹಾಕು ; ಚೆಲ್ಲು ; ತುಳುಕು : ನೆಟಿ ತೋಕಿದನು ಗಂಧರ್ವ ಜಲಧಿಯನೊಂದು ನಿಮಿಷದಲಿ (ಕುವ್ಯಾಅ. ೦೯-೦೬) ; ಹೊದಬ ಹರಿಗಡಿ ದೌಕಿದನು ತೋಕಿದನು ಸುಭಟರ ಜೀವವನು (ಕುವ್ಯಾದ್ರೋ. ೦೬-೨೫) ; ಕುಹಕದಲಿ ಮಲೆತರ ತೋಕುವೆನು ತನಿಗರುಳ ರುಧಿರವ ಶಾಕಿನಿಯರಿಗೆ (ನಿಭಾಗ. ೩-೬-೪೦). ೪. ಅಲ್ಲಾಡು ; ಬೀಸು : ತೋಕಿದವು ಸೀಗುರಿ ಗಳೆಡಬಲದಾಕೆಯಲಿ (ಕುವ್ಯಾಸ. ೦೫-೬೬). ೫. ಓಡು ; ಚೆದರು : ಬಲಜಲಧಿ ತೋಕಿದುದು ದೆಸೆದೆಸೆಗೆ ರಿಪುಬಲದ ಸುಭಟರಂ ನಾಕಮಂ ಕಾಣಿಸಿತು (ತುರಂಗ. ೪೯-೩೮). [ ದೇ.II ತಮಿ. ತುಕ್ಕೈ, ತುವ್ವೈ ; ತುಳು. ತೊಯಿಪ್ಪು ; ಕುಯಿ. ತೋಗ ; ಕುರುಖ್. ತೋಕ್‌ನಾ ]

**ತೋಕು$_2$** (ನಾ). ಕೋವಿ ; ಬಂದೂಕು : ಮಾದಪ್ಪ ಹಗಲ ಮೇಲೆ ತೋಕನ್ನು ಏರಿಸಿ ಸೊಂಟಕ್ಕೆ ಪಡಿಕತ್ತಿಯನ್ನು ಸಿಕ್ಕಿಸಿ . . . ಸರಿಬೇಟೆಗೆ ಹೊರಟ (ಹುಲಿಹಾ. ೦೭). 'ತುಪಾಕಿ' ಪರಾ. [ದೇ.II ತಮಿ. ಮಲ. ತೋಕ್ಕು ]

**ತೋಕು$_3$** (ನಾ). ಉತ್ಸಾಹ (?) : ಜಂಝಾನಿಲ ಸುಳಿದೇಳ್ವ ರಭಸವೋ ಯೆನೆ ಕಾದಿದರ್ಕಲಿಗಳಿಗೆ ಪೊಸತೆನಲು ಹಾಹಾಹಣೆಯಿಂದಲುಚ್ಚಳಿಸಿದರ್ . . . ಗಜಗಳಿಂ ತುಳಿಸಿದರ್ ತೋಕಿನಿಂದ (ಲಕ್ಷ್ಮಭಾ. ೬-೩-೩೨). [ ←ಮರಾ. ತೋಕ್, ತೋಖ್ ; ಹಿಂ. ತೋಖ್ ; ಅರ. ತೌಕ್./ಸಂ. ತೋಷ ]

**ತೋಕುಳಿ** (ನಾ). ೧. ನೆನೆಸಂವಿಕೆ ; ಅದ್ದುವಿಕೆ : (೩). ೨. ತೊಗಲು ಹದ ಮಾಡುವುದಕ್ಕಾಗಿ ನೆನೆಯಿಡುವ ಗುಳಿ : ಹರಳಯ್ಯಗಳ ತೋಕುಳಿಯ ನೀರ ತಂದು . . . ತಂಬುಗೆಗಳೊಳು ಪೊಗೆದು ಹರುಷದಿ ಮಧುವರಸಗೆಟಿಯಲು (ಪ್ರಭುಪು. ೯-೦೦೩) ; ಪೊಲೆಯರ ತೋಕುಳಿಯ ಕೊಳದೊಳಂಬುಜಮಂ ನೀನೆಲಸದೆ ಪುಟ್ಟಿಸಿದಂತೆ (ವೃಷವಿ. ೩೪-೧೦೮). [ ತೋ + ಕುಳಿ$_3$ (<ಕುಟ್ಟಿ$_3$) ]

**ತೋಕೆ** 'ಸೋಗೆ' ನೋ.

**ತೋಕೆಗೋಧಿ** (ನಾ). ಉದ್ದವಾಗಿರುವ ಒಂದು ಬಗೆಯ ಗೋಧಿ : ಓಟ್ಸು, ತೋಕೆಗೋಧಿ (ವ್ಯಕಿಗಿ. ೦೦-೧೪೦) ; ತೋಕೆಗೋಧಿ, ಜವೆ ಗೋಧಿ, ರೈ ಎಂಬ ಚಿಕ್ಕ ಗೋಧಿ . . . ಇವು ಸಮಶೀತೋಷ್ಣ ವಲಯದ ಇತರ ಮುಖ್ಯ ಬೆಳೆಗಳು (ಭೂವಿವ. ೧೪೬). [ ತೋಕೆ (<ಸೋಗೆ) + ಗೋಧಿ$_1$ (<ಗೋದುವೆ) ]

**ತೋಚಿಕೆ** (ನಾ). ತೋರುವಿಕೆ ; ಗೋಚರವಾಗುವಿಕೆ; ಹೊಳೆಯುವಿಕೆ; ಭಾಸವಾಗುವಿಕೆ : ಆ ಕತೆ . . . ರಂಜನೀಯವಾಗಬಹುದೆಂದು ಮನಸ್ಸಿಗೆ ತೋಚಿತು. ಆ ತೋಚಿಕೆಯ ಫಲವೇ 'ಕಡುಗಲಿ ಕುಮಾರ ರಾಮ' ಗ್ರಂಥದ ಪ್ರಕಟಣೆ (ಸಂಜುಂಡ. 111, ಪ್ರಸ್ತಾವನೆ). [ ತೋಚು + – ಇಕೆ ]

**ತೋಚು**(ಕ್ರಿ). ೧. ಗೋಚರವಾಗು ; ಕಾಣು ; ತೋರು : ನವೋನವದ ಜಾಗೃತಿಯಲೆದ್ದ ಜೀವಾಗ್ನಿ ತೋಚುತಿಹುದು (ಜ್ಞಕ್ಷಾಂ. ೭-೧೪). ೨. (ಮನಸ್ಸಿಗೆ) ಹೊಳೆ ; ಭಾಸವಾಗು : ಕೀಚಕನಾಡಿದ ನೀಚನುಡಿ ಕೇಳಿ . . . ಮುಂದೆ ತೋಚದೆ ಖಳನ ವಿಚಾರಿಸಿಕೊಳ್ಳೊ ಶ್ರೀ ಚಕ್ರಪಾಣೀ . . . ಎಂದು ನುಡಿದಳು (ಪಾಂಡೀ. ೬೫-೯) ; ಎನಗೇನು ತೋಚುವ ಪರಿಯು ಕಾಣೆನು (ಜನಥಾ. ೬೩-೩೭).

**ತೋಚಿಕೊಳ್ಳು** = ಭಾವಿಸಂ ; ಯೋಚನೆ ಮಾಡು : ವಶಃ– ಕಾಂತಿಃ ೨ ಮನಸ್ಸಿನಲ್ಲಿ ನೆನವುಂಟಾಗುವಿಕೆ; ತನ್ನೊಳಗೆ ತೋಚಿಕೊಳ್ಳುವಿಕೆ, ಬುದ್ಧಿಯಲ್ಲಿ ಸ್ಫುರಿಸುವಿಕೆ (ಸಿದ್ಧಾಂತ. ೩೦೭); ವೀರರಾಜ ಅದೇನು ತೋಚಿಕೊಂಡನೊ ಯಾವ ಪ್ರತಿಯನ್ನೂ ಹೇಳದೆ . . . ಸಾಗಿದನು (ಚಿಕರಾ. ೧೩೩).
[ <ತೋಚು + – ಚು$_1$./ತುಳು. ತೋಜು, ಸೋಜು; ತೆಲು. ತೋಚು ]

**ತೋಟ$_1$** 'ತೋಂಟ' ನೋ.

**ತೋಟ$_2$** 'ತೋಟಾ$_1$' ನೋ.

**ತೋಟಕ** (ನಾ). [ಛಂದ] ಪ್ರತಿ ಪಾದದಲ್ಲಿ ಹನ್ನೆರಡು ಅಕ್ಷರಗಳುಳ್ಳ ವೃತ್ತ : : ಪವಮಾನ ಚತುಷ್ಕಯುತಂ ಯತಿಯುಂ ದಿವಸಾಧಿಪರೊಳ್ ನಿಲೆ ವಸ್ತು ಕವಿಪ್ರವರಸ್ತುತಮಪ್ಪುದು ತೋಟಕಮೆಂದವಧಾರಿಸು (ಛಂದೋಂಬು. ೨-೫೬). [ ಸಂ. ]

**ತೋಟಗಟ್ಟು** (ನಾ). ತೋಟದ ಪ್ರದೇಶ ಅಥವಾ ಸ್ಥಳ: ಬಟ್ಟ ಮೇಲು ಮಕ್ಕಿಯ ಗಡಿಯ ತೋಟಗಟ್ಟು ಕಮ್ಮ ೪೦೦ (ಸೌಇಇ. IX-1, ೯೫-೫೦; 1041); ಮನ್ನೆಯಗೆಱೆಯ ಕೋಡಿಯಿಂ ತೆಂಕ ತೋಟಗಟ್ಟು ಮತ್ತರೊಂದು ಆ ಕೆಱೆಯ ಕೆಳಗೆ ಗದ್ದೆ ಮತ್ತರೆರಡು (ಸೌಇಇ. IX-1; ೩೨೯-೫೩; 1200); ಮಂನೆಯಗೆಱೆಯ ಕೆಳಗೆ ಹಿರಿಯೂರಡೆಯರ ತೋಟಗಟ್ಟು ಮತ್ತರೆರಡು (ಸೌಇಇ. IX-1, ೩೩೩-೪೭ ; 1216).
[ ತೋಟ$_1$ (<ತೋಂಟ) + ಕಟ್ಟು$_2$ ]

**ತೋಟಗಾರ** (ನಾ). ೧. ತೋಟವಮಾಡುವವನು ; ತೋಟಿಗ : ಆಶಿಗೆ ತಕ್ಕ ಹಾಗೆ ಮುತುವರ್ಜಿಯಿಂದ ಕೆಲಸ ಮಾಡುವ ತೋಟಗಾರರಿರಬೇಕು (ತರಿಚಿ. ೧). ೨. ತೋಟದ ಮಾಲೀಕ್ನ–ಒಡೆಯ.
[ ತೋಟ$_1$ (<ತೋಂಟ) + – ಕಾರ$_1$ (<– ಕಾಱ ]

**ತೋಟಗಾರಿಕೆ** (ನಾ). ತೋಟವನ್ನು ಬೆಳೆಸುವುದು ; ತೋಟ ಮಾಡುವುದು ; ತೋಟದ ಬೇಸಾಯ : ಮೈಸೂರುಸಂಸ್ಥಾನದಲ್ಲಿ ತೋಟಗಾರಿಕೆಯನ್ನು ಕುಲಕಸಬನ್ನಾಗಿ ಪಡೆದಿರುವ ಅಲ್ಪಸಂಖ್ಯಾತ ಪಂಗಡ ಹೊಂದಿದೆ (ತರಿಚಿ. ೨). [ ತೋಟಗಾರ + – ಇಕೆ ]

**ತೋಟಗಾವಲ್** (ನಾ). ತೋಟವನ್ನು ಕಾಯುವುದು ; ತೋಟಕ್ಕೆ ಕಾವಲಾಗಿರುವಿಕೆ : ಪುಲ್ಗಳ ಪಸುರ್ಗಳಿಸಿ ಪೊಕ್ಕಡಾ ತೋಟಗಾವಲ್ಗೆ ತನ್ನೊಡನಾಡಿಗಳ ಕೂಡೆ ಲೀಲೆ ಮಿಗೆ ಬಿಲ್ಗೊಂಡು ನಡೆತಂದವಂ ಕಂಡ ನರ್ಚಿತ ಸುವಾಜಿಯಂ (ಜೈಮಿಭಾ. ೨೦-೫).
[ ತೋಟ$_1$ (<ತೋಂಟ) + ಕಾವಲ್$_1$ ]

**ತೋಟತುಡಿಕೆ** (ನಾ). ತೋಟ ಮತ್ತು ಅದಕ್ಕೆ ಸಂಬಂಧಿಸಿದ ಭಾಗ : ಯಿಂತೀ ಚತುಸ್ಸೀಮೆಯೊಳಗುಳ್ಳ ಗಡಿಗ್ರಾಮ . . . ಹಟ್ಟಿಹಕ್ಕಲು ತೋಟತುಡಿಕೆ (ಮೈಆರಿ. ೧೯೩೪, ೫೬-೧೮ ; 1406) ; ಆ ದಂಣ್ನಾಯಕ ಪುರಕ್ಕೆ ಸಲುವ ಚತುಸೀಮೆಯೊಳಗುಳ್ಳ ತೋಟತುಡಿಕೆ ಗದ್ದೆ ಬೆದ್ದಲು (ಎಕ. VII, ಶಿವಮೊ. ೭೧-೨೭ ; 1431).
[ ತೋಟ$_1$ (<ತೋಂಟ) + ತುಡಿಕೆ ]

**ತೋಟಪಟ್ಟಿ** (ನಾ). ತೋಟದ ಭೂಮಿ–ಪ್ರದೇಶ : ತೋಟಪಟ್ಟಿಗಳ ಮೇಲೆ ಪ್ರಾತಃಕಾಲೀನ ಪ್ರಕಾಶ ಬೀರುವ ಹೇ ಪರಮಾತ್ಮಾ . . . ನಿನ್ನ ಕೃಪೆಯನ್ನು ಸುರಿಸು (ಅಕ್ರಮು. ೨೩) ; ಬೆಲ್ಲದ ನಾಡವರು. ತೋಟಪಟ್ಟಿ ಇದ್ದವರು (ಅಶೋಕ. ೭) ; ಆನುವಂಶಿಕ ಹಕ್ಕುದಾರಿಯ ಕಾಲರಾ ತನ್ನ ತೋಟಪಟ್ಟಿಯ ಕೃಷಿಮಾಡಲು ಬಂದಿತು (ಸ್ವತಿಚಿ. ೨೦೭). 'ತೋಟ್ಟಿಪಟ್ಟು' ಪರಾ. [ ತೋಟ$_1$ (<ತೋಂಟ) + ಪಟ್ಟಿ$_2$ ]

**ತೋಟಮಲ್ಲಿಗೆ** (ನಾ). ತೋಟದಲ್ಲಿ ಬೆಳೆಯುವ ಮಲ್ಲಿಗೆ : ನಾಟರಾಗವು ಲೇಸು ತೋಟಮಲ್ಲಿಗೆ ಲೇಸು ಕೂಟವದು ಲೇಸು ಹಿರಿಯರೊಳು (ಸರ್ವಜ್ಞ. ೬೨೨). [ ತೋಟ$_1$ (<ತೋಂಟ) + ಮಲ್ಲಿಗೆ ]

**ತೋಟಮಾದಳ** (ನಾ). ತೋಟದಲ್ಲಿ ಬೆಳೆಯುವ ಮಾದಳ : ತೋಟ ಮಾದಳದ ಹಣ್ಣಿನ ರಸದಲ್ಲಿಯಾದರೂ ಹುಸಿಶುಂಠಿರಸದಲ್ಲಿಯಾದರೂ ಕೊಡಿಸಲು . . . ಸಕಲ ರೋಗಂಗಳೂ ಪರಿಹರ (ವೈದ್ಯಸಾ. I, ೨೯೮).
[ ತೋಟ$_1$ (<ತೋಂಟ) + ಮಾದಳ ]

**ತೋಟವಳ** 'ತೋಂಟವಾಳ' ನೋ.

**ತೋಟವಾಳ** 'ತೋಂಟವಾಳ' ನೋ.

**ತೋಟವಾಳಿಗ** 'ತೋಂಟವಾಳಿಗ' ನೋ.

**ತೋಟಾ$_1$**, ತೋಟ$_2$, ತೋಟೆ$_2$ (ನಾ). ಬಂದೂಕಿನಲ್ಲಿಟ್ಟು ಹಾರಿಸುವ ಕೊಳವೆಯಾಕಾರದ ಗುಂಡು ; ಕಾಡತೂಸು : ಮೊದಲನೆ ಈಡು ಕಡಕಿನ ತೋಟಾದ್ದಾದ್ದರಿಂದ ಒಡೆದೆರಡು ಕಡಕುಗಳು ಗಿಡಗಳಿಗೆ ತಗುಲಿದ್ದುದು ಕಂಡು ಬಂದಿತು (ಕಾನೂರು. ೧೧೪). **ತೋಟ$_2$** : ಸುಲ್ತಾನಿ ತೋಟ ತುಂಬಿದಂಥಾ ತೋಸ್ತಾನಿ ಒಂದು . . . ಈ ಮೇರೆ ಎರಡು ಜನಕ್ಕೂ ಜಂಗಿ ಸಾಮಾನು ಕೊಟ್ಟು (ರಾಜೇಂದ್ರ. ೦೦೫). **ತೋಟೆ$_2$**: ಆದರೆ ಪಿಸ್ತೂಲುಗಳನ್ನು ಇಟ್ಟುಕೊಳ್ಳುವುದು ಹೇಗೆ ? ಅದಕ್ಕೆ ಹತ್ತಾರು ರೂಪಾಯಿಗಳನ್ನು ಖರ್ಚುಮಾಡಿ ಮೇಲೆ ಮೇಲೆ ತೋಟೆಗಳನ್ನು ಕೊಳ್ಳುತ್ತಲೇ ಇರಬೇಕು (ಪಂಚಾಯತ್ರ. ೪೭).
[ ←ಮರಾ. ತೋಟಾ ; ಹಿಂ. ಟೋಟಾ ]

**ತೋಟಾ$_2$** 'ತೋಡಾ' ನೋ.

**ತೋಟಾವಳಿ** (ನಾ). ತೋಟಗಳ ಸಾಲು : ಹತ್ತಿರದಲ್ಲಿಯೇ ಕೆರೆ, ಅದರ ಕೆಳಗೆ ಅಂದವಾದ ತೋಟಾವಳಿಗಳು (ಜಂಗಾಳ್ಕ. ೩೦೯).
[ ತೋಟ$_1$ (<ತೋಂಟ) + ಆವಳಿ$_1$ (= ಅವಲಿ) ]

**ತೋಟಿ$_1$**, ತೋಂಟಿ$_1$ (ನಾ). ೧. ಕಲಹ ; ಜಗಳ ; ಕದನ : "ತೋಟಿಯೆಂದು ಜಗಳಂ" (ಕಶಾನಿ. ೦೪) ; ಎರಡು ರಥವೊಳವು ನೋಟಕ್ಕೆ ರಡಱೊಳವನೊಂದು ರಥಮೆ ತೋ[ಪಾಠಂ. ಕೋ]ಟಿಗೆ ಪಲವಾಗಿರೆ ಪರಿದು (ಪಂಪಭಾ. ೫-೯೫) ; ಸುರಕೋಟಿ ವಿನೋದದ ತೋಟಿಯೊಳ್ ಚರಾಚರಗುರುವಿಂಗೆ ಪೊಟ್ಟುಗಳೆಯುತ್ತಿರೆ (ಶಾಂತಿಪು. ೧೧-೯೦); ತೊಡಗಿದರು ತೋಟಿಯನು ತಮತಮಗೆ (ಪ್ರಭುಲಿಂ. ೦೩-೭) ; ತೋಳನ ತೋಟಿ ಸದರವ ಕುಱಿಯ ಜಂಗುಳಿಗೆ (ತೊರರಾ. ೬-೩೭-೫೫) ; ಭರತೇಶನೊಳು ತೋಟಿ ಬೇಡೆಂದು ಮೊದಲೆ ಪೇಳ್ದರೆ ಕೇಳದುಕ್ಕಿ ಕಾದಿದರು (ಭರತೇ. ೩೪-೯೯) ; ತೊಡರ್ಚಿ ತೋಟಿಯಂ ಪಡಿದಟವಾಂತು ಬಂದ ಮಲೆನಾಡಿನ ಸಿಂಗಳರಾಯನಂ ಮೊಗಂಗಿಡಿಸಿ (ಚಿಕವಿ. ೨-೬೮). ೨. ಹೊಯ್ದಾಟ; ತೊಳಲಾಟ ; ಭಾವನೆಗಳ ತಾಕಲಾಟ : ಕಣ್ಬೇಟದ ತೋಟಿಯೊಳ್ತೊಡರ್ದು ದುಸ್ಸಹ ವಿರಹತಾಪಕ್ಕಳ್ಕಿ ವನದುರ್ಗವಂ ಪುಗುವಂತೆ ಲತಾಗೃಹವನಂಗಳಂ ಪೊಕ್ಕು (ಮಲ್ಲಿಪು.೬-೩೨); ಅಱಿದೆನಱಿದೆನೆಂದು ಮಱವೆಯ ತೋಟಿಯ ತೊಳಸುತ್ತ (ಪ್ರಭುಲಿಂ. ೧೭೫-೬೬೦). ೩. ಹಾವಳಿ ; ತೊಂದರೆ : ಮತ್ತವೊಂದೆಡೆಯೊಳೊರ್ವರ ತೊಟ್ಟು ಲಲಿತಾಂಗಂ ಬಂದನಿನ್ನಾವಾತನ ತೋಟಿ ಪಿಂಗುವಿನಂ ನೆರೆವನೆಯೊಳಿರ್ದು ಬರ್ಪಮೇಟಿಮೆಂದು . . . ಪೇಟ್ದುದುಂ (ಧರ್ಮಾಮೃ. ೨-೪೯) ; ಬಿರುದ ಬಿಸುಟರೆ ತೋಟಿಯೇನೆಂದ (ತೊರರಾ. ೧-೯-೩೨). ೪. ತಂಟೆ; ಗೊಡವೆ; ಗೋಜು : ಚೆಲ್ಲಂ ಬೇಂಟದ ತೋ ಟಿ ಯೊ ಳ್ ತೊಡರೆ ಕಂಡು

(ಕಾವ್ಯಸಾ. ೫೫೧ ಓದ್ರಶ) ; ಅದಱಿಂ ನಿನಗಿದಱ ತೋಟಿ ಬೇಡ (ಪಂಪಭಾ. ೨೪೩-೨೩) ; ಬೇಟದ ಪದನೆಂದು ಕೂಟದ ಮದವೆಂದು ನೋಟ ದೊಳ್ಗಂಡರಱುವೊಡೆ ಹಡಹಿನ ತೋಟಿಯೇಕೆಲಗೆ ಬೆರೆವೆಣ್ಣೆ (ಲೀಲಾವ. ೨-೬೪) ; ಕಾಮದೇವನ ತೋಟಿ ಬೇಡೆಂದು ಬಿರುದೆತ್ತಿ ಕರೆವ ಕಂದರ್ಪನ ಕಹಳೆಗಳೆಂಬಂತೆ ತಂಡ ತಂಡದಿಂ ಕೂಗುವ ಗಂಡುಗೋಗಿಲೆಗಳಂ (ಗಿರಿಜೆ. ೩-೧೦೩ ವ) ; ಅಸುರಕುವರನ ತೋಟಿ ಬೇಡ (ಕೌಶಿರಾ. ೩೫-೦೮) ; ಈ ಕೊಡಲಿಕಾಱನ ತೋಟಿ ಬೇಡೆಂದ (ಕುಮಾ.ಸ. ೯-೪೮). ೩. ಸಾಮರ್ಥ್ಯ; ಪರಾಕ್ರಮ : ನಾನಾವ ಮಂತ್ರದ ತಂತ್ರ ತೊಡಕಿನ ತೋಟಿಯುಳ್ಳವಳು (ಕುಮಾ.ಅ. ೧೫-೨೩) ; ತೋಟಿಯಿಂದೊಳಪೊಕ್ಕು ಪುರಗಳೊಳಗೆ ಬಲು ಬೇಟೆಯ ನಾಯ ಹಿಡಿವರು (ಕುರಾಶಾಂ. ೧೦-೩). **ತೋಂಟಿ$_1$** : ೧. 'ತೋಂಟಿಗೊಳ್' ಪರಾ. ೬. ಮಾತ್ಸರ್ಯ ; ಹೊಟ್ಟೆಕಿಚ್ಚು : ಕವಿಶಿವನೆಸೆದಂ ತೋಂಟಿಯನುಳಿದ ಕವೀಶರ್ಗುಂಟೆನಿಸುತೆ ದಿವ್ಯ ಬೋಧೆಯಂ ದಕ್ಷಿಣೆಯಿಂ (ಹಾಲಾಸ್ಯ. ೪-೩-೭೦).

**ತೋಟಿ$_2$, ತೊಟ್ಟಿ$_3$, ತೋಂಟಿ$_2$** (ನಾ). ೧. ಗ್ರಾಮಸೇವಕರಲ್ಲಿ ಒಬ್ಬ ; ಕಸಗುಡಿಸುವವನು; ಜಾಡಮಾಲಿ: ತೋಟಿ-ತಳವಾರ, ವೆಟ್ಟಿ, ಬಾರೀಕ ಅಥವಾ ಕೋಲುಕಾರನೆಂದು ಹೆಸರುಂಟು (ಗ್ರಾಮಜೆ. ೧) ; ತೋಟಿ (Scavengers)ಗಳೇ ಅವಶ್ಯವಿಲ್ಲದ, ಬಾವಿ-ಪಾಯಿಖಾನೆ (Bore-hole Latrines)ಗಳನ್ನು ಯಾರೂ ಮಾಡಬಹುದು (ಬಾಂಪ್ರ. I, ೫೯೭) ; ಇವನ ಹೆಣವೂ ತೋಟಿಗ ಪಾಲಾಗಬೇಕೋ ಏನೋ (ದೀಪರ. ೫೦). ೨. (ಅಲಂ) ಕೀಳಾದವನು ; ಅಲ್ಪ ; ಕ್ಷುದ್ರ : ಭಂಡರ್ಗೆ . . . ತೋಟಿ ತೊನ್ನರಿಗೆ ಕೊಂಡೆಯರ್ಗೆಲೆ ರಂಗ ನಿನ್ನಯ ಪದಪದ್ಮಗಂಡಲ್ಲಿ ಮೋಕ್ಷ ಸಿದ್ಧಾಂತ (ನೀತಿಶಾಂ. ೪೭-೩೩). **ತೊಟ್ಟಿ$_3$** : ೨. ಇವನೆಂತಹ ತೊಟ್ಟಿ (ರೂಢಿ). **ತೋಂಟಿ$_2$**: ೩. ಸೇವಕ; ಪರಿಚಾರಕ: ಚಾವುಣ್ಡಯ್ಯಜ್ಗೆ ನಾಲ್ಕು ಮತ್ತರ್ತೋಣ್ಟಿಗಳ್ಗೆ ನಾಲ್ಕು ಮತ್ತರ್ನಿವೇದ್ಯಕ್ಕೆ ನೆಲ್ಲ ಮಡಿ ಎರಡು (ಸೌಇಇ. IX-i, ೭೦-೧೫ ; 931). P 'ತೋಂಟಿ' ಎಂಬುದೇ ಮೂಲ ರೂಪವಾಗಿರಬಹುದೇ ?

[ದೇ. ೫ ತಮಿ. ಮಲ. ತೋಟ್ಟಿ ; ತುಳು. ತೆಲು. ತೋಟಿ]

**ತೋಟಿ$_3$** (ನಾ). ೧. ಪಕ್ಷಿಯ ಚುಂಚು,-ಕೊಕ್ಕು. ೨. ಬಾಯಿ: ಇತ್ತಲು ಭೀಮ ಬಲುದುತ್ತುಗಳ ತೋಟಿಯಲಿ ಮರನ ಮುಱಿದಱಿಗಿದರೆ ಪುನರಪಿ ಮುಱಿದು ನೋಡಿದು ಬಹೆನು ನಿಲ್ಲೆನುತರಗೆಲಸ ಪೂರೈಸಲೆಂದನು (ಕುಮಾ.ಅ. ೧೧-೩೩). ೩. ಪಾತ್ರೆ ಮುಂತಾದವುಗಳ ಮೂತಿ : ನೀರು . . . ಪಾತ್ರೆಗೆ ಹಚ್ಚಿದ ತೋಟಿಯೊಳಗಿಂದ ಹೊರಗೆ ಬೀಳುತ್ತದೆ (ಮುಂಬಯಿ. ೫-೮೨). [<ಸಂ. ತ್ರೋಟೀ./ಮರಾ. ತೋಟೀ]

**ತೋಟಿಕಾಱ** 'ತೋಟಿಗಾಱ' ನೋ.

**ತೋಟಿಗ** 'ತೋಂಟಿಗ' ನೋ.

**ತೋಟಿಗಾಱ, ತೋಟಿಕಾಱ** (ನಾ). ಯುದ್ಧಾಸಕ್ತ ; ಯುದ್ಧ ಮಾಡುವವನು : ಬಲು ತೋಟಿಗಾಱರು ತೊಡಗಿದರು ರಣವ (ನಿಘಗಿ. ೪-೯-೧೨). **ತೋಟಿಕಾಱ** : ನೋಟದವರರ ನಯನಗಳಿಗಲ್ಲಾಟವೆನೆ ಪರಿಚಿತ್ರ ಗತಿಗಳ ತೋಟಿಕಾಱರು ಹೊಕ್ಕು ತಾಗಿದರುಭಯಸೇನೆಯಲಿ (ಕುಮಾ.ಭೀ. ೪-೨೫) ; ಜಯದ ತವಕದ ತನಿಮನದ ಕಡುತೋಟಿಕಾಱರು ಕಾದಿದರು ಕಡುಗಿ (ಕುಮಾ.ಗ. ೬-೨೯) ; ಶ್ರೀಮಂನಾಡಪ್ರಭು ಗಡಿಯಂಕ ಭೀಮಕಟಕ ತೋಟಿಕಾಱ (ಎಕ. XI, ಹೊಳಲ್ಕೆ. ೧೦೨-೩ ; 1691 ?).

[ತೋಟಿ$_1$ + - ಗಾಱ (< - ಕಾಱ)]

**ತೋಟಿಗಿತಿ** (ನಾ). ತೋಟದ ಕೆಲಸದವಳು : ಸುಂಕಿಗಿತಿ, ತೋಟಿಗಿತಿ (ಶಬ್ದಾಮ. ೦೯೧ ಪ್ರಯೋ).

[ತೋಟಿಗ$_1$ (<ತೋಂಟಿಗ) + - ಇತಿ$_1$(< - ಇತ್ತಿ)]

**ತೋಟಿಗೈ** (ಕ್ರಿ). ಯುದ್ಧಮಾಡು ; ಕದನಮಾಡು : ಪೊಯ್ವು ತೊಡಂಕುವ ತೋಟಿಗೈವ ಕೊಂಕುವ ನೆಟಿ ನೂಂಕುವೇಳ್ಗೆಯು ಬಲಂ ಬಗೆಗೊಂಡುದು (ರಾಜಶೇ. ೦೩-೮೪). [ತೋಟಿ$_1$ + ಗೈ (<ಕೆಯ್$_1$)]

**ತೋಟಿಗೊಳು** (ಕ್ರಿ). ಜಗಳವಾಡು ; ಕಲಹ ಮಾಡು : ತೋಟಿಗೊಳುವ ದುಷ್ಟ ದಂಪತಿಗಳು ಬೂಕಾಟಗಳಿಂದನುಗೆಟ್ಟು ಊಟ ನಿದ್ದೆಗಳೊಂದಱೊಳು ಸುಖವಿಲ್ಲದೆ ಕೋಟಲೆಗೊಂಡು ಕಂಗ್ಗುವರು (ಹದಿಬ. ೬-೭).

[ತೋಟಿ$_1$ + ಕೊಳು (<ಕೊಳ್$_1$)]

**ತೋಟಿಯ** (ನಾ). ಶೂರ; ಪರಾಕ್ರಮಿ (:) ತೋಟಿಯರ್ ತಱಿದಿಕ್ಕಿದಿರಾಂಪದ್ವೈತ್ಯವಧೂಟಿಯ ಕರೆದು ತನ್ನೊಡನೆ ಸೂಟಿಯೊಳ್ ಸಾವಂತೆ ಕೆಯ್ಯ ಖಡ್ಗವನಿಕ್ಕಿ ದಾಟಿಸಿಕೊಂಡಳೆಲ್ಲರನು (ಮೋಹತ. ೩೩-೩೮).

[ತೋಟಿ$_1$ + - ಅ$_7$]

**ತೋಟೆ** 'ತೊಗಟು' ನೋ.

**ತೋಟೆ$_2$** 'ತೋಟಾ$_1$' ನೋ.

**ತೋಟೆ$_3$** (ನಾ). ಒಂದು ಬಗೆಯ ಔಷಧಿ ಮೂಲಿಕೆ : ತೋಟೆಯ ಬಡಗ ಹರಿದ ಬೇರು ನೀರಲ್ಲಿ ಅರೆದು ಯೋನಿಯಿಂದಿಳಿದು ಪೂಸಲು ಪ್ರಸವ ಮಾಗುವುದು (ವಿವೈವಿ. ೧೧೭). [ ? ]

**ತೋಟ್ಟಪಟ್ಟು** (ನಾ). ತೋಟದ ಭೂಮಿ,-ಪ್ರದೇಶ: ಪುತ್ತ್ರಪೌತ್ರಾಣಿಗೆ ಅಯ್ದೂಂಬು ಕಟನಿಯುಂ ಅಯ್ದೂಂಬು ತೋಟ್ಟಪಟ್ಟುಂ ಕೊಟ್ಟರ್ (ಎಕ. X, ಕೋಲಾರ ೨೨೪-೫; ಸು. 760); ಅಯ್ದೂಂಬು ಮೊದಕಟನಿಯು ಎಟ್ಟೂಮತ್ತು ಬಾಳೆ ತೋಟ್ಟಪಟ್ಟು ಬ್ರಹ್ಮದೇಯಂ ಕೊಟ್ಟೋದು (ಎಕ. X, ಕೋಲಾರ. ೨೩೧-೫ ; ಸು. 800 ?). 'ತೋಟವಟ್ಟೆ' ಪರಾ.

[ತೋಟ$_1$ (<ತೋಂಟ) + ಪಟ್ಟು$_3$ (<ಪಟ್ಟೆ$_3$)]

**ತೋಡ$_1$** (ನಾ). ಬೆಳೆಯನ್ನು ನಾಶಪಡಿಸುವ ಬಿಳಿಯ ಇಲಿ : ಸುಂಡನ್ಗೆ ಶೂಲದ ಕತ್ತಿ ತೋಡನ್ಗೆ ಬಿಲ್ ಬಾಣ, ಮುಂದೋಗೋ ಹೆಣ್ಣಾನ್ಗೆ ನಾಗಸ್ವರದ ಕೊಳಲು (ಹುತ್ತಿಹ. ೧೪೫) ; ತೋಡ, ಹೆಗ್ಗಣ, ಗೋಲಂದಿ (ನಮ್ಮನು. ೨೪೯) ; ದೇವಸ್ಥಾನದ ಪ್ರಾಕಾರದ ಗೋಡೆಯ ಕೆಳಗೆ ಒಂದು ತೋಡ (ಬಿಳಿ ಇಲಿ) ಮನೆ ಮಾಡಿಕೊಂಡು ಸಂಸಾರ ಮಾಡಿಕೊಂಡಿದೆ (ಗರುಪಾ. ೧೮೧). [<ತೋಡು$_1$]

**ತೋಡ$_2$, ತೊಡವ, ತೊದ** (ನಾ). ಒಂದು ಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದವನು; ನೀಲಗಿರಿಯ ಆದಿವಾಸಿ: ನೀಲಗಿರಿಯ ತೋಡರು ಹೊರಗಿನ ಜನರೊಡನೆ ಈಗೀಗ ಬೆರೆಯತೊಡಗಿರುವರು (ಬಾಂಪ್ರ. I, ೪೯೯); ತೋಡರು ಹಾಲು, ಮೊಸರು, ಮಜ್ಜಿಗೆ ಮಾಡುವರು (ದ್ರಾವಿವಿ. ೧೫೭). **ತೊಡವ** : ತುಳುವರು ತೊಡವರು ಬಡಗರು (ಆರಕು. ೩೦೪-೭). **ತೊದ** : (೩). [ದೇ.೫ ತಮಿ. ತೋಟ, ತುಟವ]

**ತೋಡ$_3$** 'ತೋಡಾ' ನೋ.

**ತೋಡರ** (ನಾ). (?) : ನಂದಿಧ್ವಜನ ಚರಣಪಂಕೇಜಗಳು ಶೋಭಿಸಿದವಾಗ ದೃಕ್ಕಿರಣ ತೋಡರಗಳಿಂದ (ಮಲ್ಲಾಶಿ. ೫-೧೨). 'ತೋಡಾ' ಪರಾ. P ಇದು 'ತೊಡರು' ಎಂಬುದರ ಅಪಲಿಖಿತವಿರಬಹುದು.

**ತೋಡಾ, ತೋಟಾ$_2$, ತೋಡ$_3$, ತೋಡೆ$_1$** (ನಾ). ೧. ಮುಂಗೈಗೆ ತೊಡುವ ಒಂದು ಬಗೆಯ ಆಭರಣ ; ಹಸ್ತಾಭರಣಗಳಲ್ಲಿ ಒಂದು; ಕಂಕಣ ; ಕಡಗ : ತನಗೆ ಮಹಾರಾಜರು ಬಹುಮಾನವಾಗಿ ಕೊಟ್ಟ ತೋಡಾ, ಮಕರಕಂಠಿ ಮುಂತಾದ ಒಡವೆಗಳಿಂದ ಆತನನ್ನು ಅಲಂಕರಿಸಿ (ಗಾನಕ. ೭೮) ; ಮಹಾರಾಜರು ಅವರ ಎರಡು ಕೈಗಳಿಗೂ ರತ್ನಖಚಿತ ಚಿನ್ನದ ತೋಡಾ (ಬಳೆಗಳನ್ನು) ಹಾಕಿ ಬಹುಮಾನಿಸಿದರು (ಸಂಗೀತ. ೨೭). P ರಾಜ, ಮಹಾರಾಜರು ಕಲಾವಿದರು ಅಥವಾ ವಿದ್ವಾಂಸರಿಗೆ ಬಿರುದಿನೊಡನೆ ಬಹುಮಾನರೂಪವಾಗಿ ಕೊಡುವ ಅಲಂಕಾರ

ಸಾಧನ. ತೋಟ್ಯಾ₂ : ೨. ಹಣದ ಚೀಲ ; ಥೈಲಿ. ೩. ನಳಿಗೆಯಾಕಾರದಲ್ಲಿ ನಾಣ್ಯಗಳನ್ನು ಸುತ್ತಿದ್ದು ; ಒಂದೇ ಸಮನಾಗಿ ಜೋಡಿಸಿದ ನಾಣ್ಯಗಳ ಕಟ್ಟು : ಕಚೇರಿಯಾದ ಮೇಲೆ ಒಂದು ಬೆಳ್ಳಿಯ ತಟ್ಟೆಯಲ್ಲಿ ತಾಂಬೂಲಸಮೇತವಾಗಿ ಎರಡು ಹಣದ ತೋಟಾಗಳನ್ನಿಟ್ಟು ಕೃಷ್ಣಪ್ಪನವರಿಗೆ ಕೊಟ್ಟರು (ನಾಕಲಾ. ೫೮). ತೋಡ್ಯ₂: ೧. ಸಜ್ಜುಕ ಸರ ತೋಡ ಮುಕುರ ಬಾಚಣಿಗೆಯು ಕಜ್ಜದರೊಳಿಗಿರ್ದರು ಸುತ್ತ (ಶೂಬಸೋ. ೨೩-೨೬). ೪. (ಬಿರುದಿನ ಸಂಕೇತವಾಗಿ) ಕಾಲಿಗೆ ಹಾಕಿಕೊಳ್ಳುವ ಕಡಗ ; ಪೆಂಡೆಯಂ : ಪ್ರಭುಗಳು, ಮುತ್ತಿನ ಜೊಂಪೆಗಳಿಂದ ಕೂಡಿದ, ನವರತ್ನಖಚಿತವಾದ ಗಂಡಪೆಂಡೇರವೆಂಬ ಚಿನ್ನದ ತೋಡವನ್ನು ಕುವರನ ಬಲಗಾಲಿಗೆ ಬಹುಮಾನಿಸಿದರು (ಶಾಂತಲಾ. ೨೦೬). ತೋಡೆ₁: ೧. ಜಡೆಯ ಮಾದರಿ, ತೋಡೆಯ ಮಾದರಿ ಇತ್ಯಾದಿ ಕೆಲವು ಮಾದರಿಯ ಮಾಲೆಗಳನ್ನು ಹೆಣ್ಣುಮಕ್ಕಳು ಕಟ್ಟುತ್ತಾರೆ (ಜ್ಞಾಪುಚಿ. ೨೦). ೫. ಒಂದು ಬಗೆಯ ಆಭರಣ ; ಕಾಲ್ಗಡಗ : ಶ್ರೀಕೃಷ್ಣವಿಲಾಸದ ಲಿಂಗಾಜಮ್ಮಣ್ಣೀಯವರು ಮಾಡಿಸಿದ ಬೆಳ್ಳಿ ಬಸವನ ಆಭರಣದ ಲೆಖ್ಖ . . . ೧. ಕಾಲಿಗೆ ತೋಡೆ. ೨. ಮುಂಗಾಲಿಗೆ ಹೂವು (ಎಕ. XIV, ನಂಜನ. ೨೮೯-೨ನೇ ಕಾಲಂ ; 1940).

[ ←ಹಿಂ. ಮರಾ. ತೋಡಾ ]

**ತೋಡಿ** (ನಾ). [ಸಂಗೀತ] ಒಂದು ರಾಗದ ಹೆಸರು : ಮಲಹರಿ ಮೇಘರಂಜಿ ಫಳಮಂಜರಿ ತೋಡಿ ವಸಂತವೆಂಬ ಮಂಜುಳತರ ರಾಗ ರಂಜನದೆ . . . ಪಾಡಿ ಮುದಂ ಮಿಗೆ ಮೆಚ್ಚಿಸುತ್ತುಂ (ಬಾಧಪು. ೬-೧೪) ; ಮಲಹರಿ ದೇಸಿ ತೋಡಿಯನೆ ಪಾಡಿ ಮೊಸರ್ ಕಡೆದರ್ ಲತಾಂಗಿಯರ್ (ಮಲ್ಲಕಾ. ೪-೫೫) ತೋಡಿ ಮಕರಂದಿ ವಸಂತರಾಗಂ ಇತ್ಯಾದಿಯಾದ ರಾಗಂಗಳಂ ಪಾಡುತ್ತಿರೆ (ಹಮ್ಮೀರ. ೨-೯೦) ; ಆಹಿರಿಯಲ್ಲಿ ತೋಡಿಯೊಳು . . . ರಾಗಿಸಿ ಸಭೆಗೆ ಸಮ್ಮೋಹನರಸವ ಸೂಸಿದರು (ಭರತ. ೧೨-೪೩) ; ತೋಡಿ-೮ನೇ ಮೇಳಕರ್ತ ಹನುಮತೋಡಿಯ ರಾಗಾಂಗ ರಾಗ . . . ಈ ರಾಗ ಶುದ್ಧಕರ್ನಾಟಕವೆಂದೂ ಚಿತ್ತರೇಯವೆಂದೂ ಮತಭೇದವುಂಟು. ಸಾಯಂಕಾಲದಲ್ಲಿ ಹಾಡಬೇಕಾದ ರಾಗ. ಕರುಣಾರಸ ಪ್ರಧಾನರಾಗ (ಸಂಗೀಕಂ. ೧೪೫). [ ಸಂ. ತೋಡೀ./ಮರಾ. ತೋಡೀ ]

**ತೋಡಿಟ್ಟೆ** (ನಾ). ಎರಡಂ ತುದಿಗಳುಳ್ಳ ಒಂದು ವಿಧವಾದ ಈಟಿ: ಬಿಲುಸರಳು ತೋಡಿಟ್ಟೆ ಮುದ್ಗರ ಪಿಡಿವಾಳಚಯ (ಕುಮ್ಯಾಭೀ. ೩-೨೦) ; ಬಡಿಗೋಲೆನ್ನುಕ್ಕಿನ ಮುದ್ಗರ ಕೋಳ ಪದವಿಲ್ ತೋ[ ಪಾಠಾ. ಕೋ ]ಡಿಟ್ಟ ಕೈಗಲ್ಲುರುಳ್ ವಿಡಿಬಿಲ್ಪೆರ್ಬಲೆ ... ಖಡ್ಗಂ ಗಾಳವಿಂಬಾಗೆ ಕೊಂಡೊಡನಾ ಲುಬ್ಧಕಸಂಚಯಂ ನಡೆದುದಾಗಳ್ (ಯಶಚಂ. ೪-೫೧).

[ ತೋಡು₃ + ಇಟ್ಟೆ₂ ]

**ತೋಡಿಸು₁** (ಕ್ರಿ). ಅಗೆಯಿಸು ; ಹಳ್ಳ ತೆಗೆಸು ; ಗುಣಿ ಮಾಡು : ಕೊಂಡವ ತೋಡಿಸಬೇಡ ಕುಪ್ಪವ ಸುಟ್ಟು ಕೆಂಡವ ಮಾಡಿಸಬೇಡ ಖಂಡೇಂದುಶೇಖರ ಕಣ್ಗೆ ಚ್ಚಿನಿಂದೆನ್ನ ಗಂಡನನುರುಪಿದಂತುರುಹು (ಬೋಹತ. ೮-೩೬); ಒಂದು ಬಾವಿಯನ್ನು ತೋಡಿಸಯ್ಯಾ (ಕೃಕುಹ. ೪೬).

[ ತೋಡು₁ + – ಇಸು₃ ]

**ತೋಡಿಸು₂** (ಕ್ರಿ). ಸರಿಗಟ್ಟು ; ಸಮಂವೆಂದು ಎಣಿಸು : ಪಾಳಿದ ದುಷ್ಕರ ಲಂಕಾಪುರಮಂ ನಭೋಗಪುರಮಂ ಕ್ರೌಂಚಾದ್ರಿಯಂ ದ್ವಾರಕೀ ಪುರಮಂ . . . ಸುಸ್ಥಿರ ಹವಿಸ್ಮಾರಪುರಕ್ಕೆ ತೋಡಿಸಲೊಡಂ ಪಾಣಿಧೋಕ್ತಿ ಮಂಊಲೋಕದೊಳ್ (ಹಮ್ಮೀರ. ೧-೬೪). [ ತೋಡು₁ + – ಇಸು₃ ]

**ತೋಡು₁** (ಕ್ರಿ). ೧. ಅಗೆ ; ಬಗಿ ; ಹಳ್ಳವನ್ನು ಮಾಡು ; ಕೊರೆ : ತೋಡುವೆನೆಂಬುದಲ್ಲದಿಡಲಾಗದು ನಿಕ್ಕುವ ತೋಟ್ಪೆನೆಂಬುದಂ (ಕವಿರಾ. ೨-೧೧೧); ಕಾಯೋತ್ಸರ್ಗದಿಂ ನಿಂದೊಸೆ ಗೃಧ್ರು,ವಾಯುಸಾದಿಗಳ್ ಪುಣ್ಣಂ ತೋಡಿ ತಿನೆ ಮೇರುಪರ್ವತಂಬೊಲಚಳಿತಧೈರ್ಯನಾಗೊಂದು ತಿಂಗಳ್ವರೆಗಂ ಸೈರಿಸಿ (ವಡ್ಡಾರಾ. ೬೫-೧) ; ಪಥಿಕರಜಲೆಗ್ಗೊಂಡು ತೋಡಿದಬುಂಬನೀರ ಬಗರಗೆಗಳುಮನೊಳಕೆಯ್ದು ಬತ್ತಿದ ಪಳ್ಳಂಗಳೊಳಮತಿರೌದ್ರಮಾದ ಪೇರಡವಿಯೊಳಗೆ ಬರ್ಪಾಗಳ್ (ಕಾದಂಉ. ೨೬೬) ; ಇಲಿಗಳ್ ಮನೆಯೊಳ್ ಪುಟ್ಟಿಯುಮಲಸದೆ ತವೆ ತೋಡಿ ಮನೆಗಳಂ ಕಿಡಿಸುವವೊಲ್ (ಪಂಚತಂ. ೧೦೬-೧೮) ; ತವರಾಜದ ನೊರೆ ಕೆರೆಯಂಕೆ ಆದ್ಯರ ವಚನವಿರಲು ಬೇಱೆ ಬಾವಿಯ ತೋಡಿ ಉಪ್ಪ ನೀರನುಂಬವನ ವಿಧಿಯಂತೆ ಆಯಿತೆನ್ನ ಮತಿ (ಬಸವ. ೪೯೦) ; ಗೋಡೆಗನ್ನಮಂ ತೋಡಿ ಮನೆಯೊಳಪೊಕ್ಕು ಪರಿಕಿಸಿ ನೋಡುವಲ್ಲಿ (ಬಸಪು. ೬೧-೬) ; ಬೇಡುವುದು ಗಡೆ ನಿಮ್ಮ ವಕ್ಷವ ತೋಡಿ ನೆತ್ತರುಗೊಳದಲೋಕುಳಿಯಾಡುವುದನು (ಕುಮ್ಯಾಅ. ೧೦-೪೯) ; ಮಾಡಿದ ಪುಣ್ಯಕ್ಕೆ ಫಲವೇ ಸಾಕ್ಷಿ ತೋಡಿದ ಬಾವಿಗೆ ಜಲವೇ ಸಾಕ್ಷಿ (ಗಾದೆ). ೨. ಚುಚ್ಚು ; ತಿವಿ : ಐದುಬಾಣದೊಳುರವ ತೋಡಿದನು(ಕುಮ್ಯಾದ್ರೋ. ೫-೩೨); ದೈತ್ಯನ ಮೆಯ್ಯ ತೋಡಿದನೈದಂಬಿನಲಿ (ಬೋಹತ. ೩೪-೧೪); ತೋಡಿದು ಮೂವತ್ತು ಬಾಣದಿಂ ತಾಪವಂಕುರಿಸುವಂತವನೊಡಲೊಳು (ಕೃಮಿಭಾ. ೧೨-೪೬) ; ೩. ಹೊರ ತೆಗೆ ; ಹಿರಿ ; ಹಿರಿದುಕೊಳ್ಳು : ಧುರದೊಳು ಬಂದೊಡ್ಡಿ ವೈರಿವ್ರಕರವಿರಲ ವಷ್ಟಂಭದಿಂ ಬಿಟ್ಟದೇವಂ ಕರವಾಳಂ ತೋಡಿ ಕೊಂಡಿಂ ಬಳಿಕ (ಎಕ. IV, ನಾಗಮಂ. ೨೮-೧೩ ; ಕ್ರಿ. 1126) ; ಕರವಾಳಂ ತೋಡಿಕೊಂಡು (ಕವಿಚ. I, ೧೦೪). ೪. (ಅಡಿಗೆ, ನೀರು ಮುಂತಾದುವನ್ನು ಒಂದು ಪಾತ್ರೆಯಿಂದ ಮತ್ತೊಂದಕ್ಕೆ) ಮೊಗೆದು ಹಾಕು : ಎಡಗೈಯೊಳೆ ತೋಡಿ ಬೆಣ್ಣೆಯಂ ತಿನುತಿರೆ (ಜಗವಿ. ೩-೫೧) ; ತೋಡಿ ಬಡಿಸುವೆ ಕಿವಿ ಗರೋಚಕ ವಾಯ್ತು ತೆಗೆಯೆಂದ (ಕುಮ್ಯಾಸ. ೧೦-೨೦) ; ನೀರು ತೋಡಿ ಇಟ್ಟಿದ್ದೇನೆ ಜಳಕ ಮಾಡಿರಿ (ಮುಕ್ತ್ಯದ. ೨೩೦). ೫. ಹೊರಕ್ಕೆ ಹೋಗು ; ಆಚೆ ಹೋಗು : "ತೋಡು – ನಿಷ್ಕ್ರಮಣೇ (ಹೊರಟು ಹೋಗು). ಯುಗ್ಮೇ ಚ (ಜತೆ)" (ಶಮದ) ;" ನಿಷ್ಕ್ರಮಣಯುಗಸಾಮ್ಯಂಗಳೊಳ್ ತೋಡಲ್ಗಾ" (ಶಬ್ದಮಂ. ೯೨). ೬. (ಮನಸ್ಸನ್ನು ತೆರೆದು) ವ್ಯಕ್ತಪಡಿಸು ; ತಿಳಿಸು ; ಹೇಳಿಕೊಳ್ಳು : ದುಃಖವಂ ತೋಡುವೆನಾರ ಕೂಡೆ (ಕಾವ್ಯಸಾ. ೫೭೬); ಈ ಭವದ ಯೋಗಗಳ, ಭೋಗಗಳ, ರೋಗಗಳ ತೋಡ ಬಾ, ಹಾಡ ಬಾ (ನವ್ಯರ್ಗ. ೩-೬). ೭. ಎಳೆಯನ್ನು ಬಿಚ್ಚಿಹಾಕು, ತೆಗೆದುಹಾಕು : ನಾರಸಿಂಹನ ರೂಪಿಂ . . . ಪಟ್ಟಗಾಜನಪಾಸಂ ತವೆ ತೋಡುವಂತೆ ಕರುಳಂ ನೀಂ ತೋಡಿದ್ದೆ ದೈತ್ಯನಾ (ಕಾಮ್ಯಾಪ. ೩೫೫) ; ಅವ್ವ ರೇಶಿಮೆ ತೋಡುವ ಕೆಲಸ ನಿಲ್ಲಿಸಿ ಅಡುಗೆಗೆ ತೊಡಗುತ್ತಿದ್ದಳು (ಪಾಶರ. ೩೮).

**ತೋಡಿಕೊಳ್ಳು** = ಮನಸ್ಸಿನ ಅಳಲನ್ನು ಹೇಳಿಕೊಳ್ಳು : ಕಂಡವರೆದುರೊಳು ನಿನ್ನೆದೆಯೊಳಗನು ತೋಡಿಕೊಂಡಳಲಾಗ ನೋಡ (ನಾಕಾಶ. ೨೩೦-೩೬).

[ ದೇ.॥ ತಮಿ. ತೋಣ್ಡು ; ಮಲ. ತೋಣ್ಡು ; ತುಳು. ತೆಲು. ತೋಡು ; ಕೊಡ. ಪರ್ಜಿ. ತೋಡ್ ]

**ತೋಡು₂** (ನಾ). ೧. ಅಗೆದಿರುವ ಸ್ಥಳ ; ಗುಂಡಿ ; ಹಳ್ಳ, ಕಾಲುವೆ ಮೊದಲಾದುವು : ಉಂಡ ಹಾಳೆಗಳನ್ನು ಮಡಿಸಿ . . . ತೋಡಿಗೆ ಎಸೆದು ಕೈ ತೊಳೆದು ಬಂದಳು (ನಂಬಿನಾ. ೨೦೯) ; ಅಂಗಳದ ಕೆಳಗಿನಿಂದ ಒಂದು ನೀರಿನ ತೋಡು ಸದಾ ಹರಿಯುತ್ತದೆ (ಕಂಬಹು. ೬೮) ; ೨ ಇಳಿಜಾರಾದ ಮಾರ್ಗ, –ಜಾಡು : ಈ ತೋಡು ಕಣಾಂತರದಲ್ಲಿರುವ ಬಾಯಿ ಮೂಲಕ ಗಂಟಲನ್ನು ಪ್ರವೇಶಿಸುತ್ತದೆ (ಪ್ರಾಚಿಶಾ. ೫೬). ೩. ಝರಿ ; ಅಬ್ಬಿ ; ಪ್ರವಾಹ : ಬೆಟ್ಟದ ಗುಣ ತೋಡಿನಿಂದಳಿಯಿತ್ತು ಸಾಗರದ ಗುಣ ಕೋಡಿಯಿಂದಳಿಯಿತ್ತು (ಪೋಳಿಮ. ೦೦೩-೪೦೦) ; ಗಣಸಲೆ ನೀರ ತೋಡಿನಿಂದ ಪಡುವಲು (ಬೊಂಕಶಾ. ೧೯೩೦, ಮಂಗಳೂರು.

ಈಶಾನ್ಯ ಹೊಳೆ (೫೨೬-೨೯ ; 1376) ;ತೋಡಿಗೆ ತೆಂಕ ಒತ್ತು ಬದರು ತಾಳ ತೋಡಿ ತೆವರಿನ ಮಲಪಡುವ ಮುಖವಾಗಿ ನೆಟ್ಟ ಕಲ್ಲು(ಎಕ. III, ತಿರುಮ. ೬೩-೨೬೯ ; 1748); ಅಲ್ಲಲ್ಲಿ ತಡೆತಡೆವ ಕಾಡುಗಳ ತೋಡುಗಳ ಕಲ್ಲ ಬೆಲ್ಲಿದ ಪಸಲೆಗಳ ನೊಸಲ ತುಳಿದಂ (ಕಾಲೂಕ. ೧೦೮-೨೨೨); ಆ ದಾನವರಾದ ನಮ್ಮವರು, ಎಂಬವರ ಸ್ವಭಾವ ವರ್ತನೆಗಳು ಆ 'ಕಾಡ ಸೊಪ್ಪು ತೋಡ ನೀರಿನ' ಬಡಮುನಿಗಳ ಮೇಲೆ ಹೇಗೆ ಹೇಗೆ ತಾಂಡವವನ್ನಾಡಿದ್ದುವು? (ಪಾತೀಸು. ೫೮) ; 'ಕಾಡ ಸೊಪ್ಪ'ನ್ನು 'ತೋಡ ನೀರಿ'ನಲ್ಲರದು ಕುಡಿಸಿ ಗುಣಗೊಳಿಸುವ ಎಷ್ಟೋ ಮಂದಿ ಹಳ್ಳಿಗರೀಗಲೂ ಇದ್ದಾರೆ (ನಾಡೋಜ ೨೩೧).
[ <ತೋಡು$_{1}$./ಮಲ. ತುಳು. ತೋಡು; ಕೊಡ. ತೊಡಿ]

**ತೋಡು$_{3}$** (ನಾ). ೧. ಜೊತೆ ; ಯುಗಳ : "ತೋಡು – ನಿಷ್ಕ್ರಮಣೇ (ಹೊರಟು ಹೋಗು), ಯುಗ್ಮೇ ಚ (ಜತೆ)" (ಶಮಧಾ) ; "ತೋಡು ಜೋಡಿಯು" (ಶಬ್ದಮಂ. ೫೬) ; ಬಿಸುಸುಯ್ದತ್ತಗಲ್ದಿರ್ದ ನೀರ್ವಕ್ಕಿಗಳಾಗಳ್ ಕೂಡಿ ತೋಡಾದುವು (ಆದಿಪು. ೦೨-೯) ; ನೀರ್ವಕ್ಕಿಗಳ್ ಕೂಡಿ ತೋಡಾಗೆ ದಿಗಂತಂಗಳ್ ನಿತಾಂತಂ ತೊಳಗಿ ಬೆಳಗೆ . . . ಉದಯಂಗೆಯ್ದತ್ತು ಶೋಭಾರುಣಕಿರಣಗಣಾಳಂಬವಾದಿತ್ಯಬಿಂಬಂ (ಸುಕುಮಾ. ೦೨-೧೬) ; ತವಕದಿನಕ್ಕಿ ತಲ್ಲಣದೆ ಚುಂಬಿಸಿ ನಿಲ್ಲದೆ ಕೂಡಿ ತೋಡಗಲ್ಚುವ ದಿವಸಾವಸಾನಸಮಯಕ್ಕೆ . . . ಅಗಲಲಾರದಗಲ್ದುವು ಜಕ್ಕವಕ್ಕಿಗಳ್ ಕನಲ್ದು (ಅನಂಪು. ೭-೭೦) ; ಓಲೆಯ ತೋಡುಳಿಯಲ್ ಪೊಕ್ಕಳಬಲೆ ಜನಕಾಲಯಮಂ (ನೇಡಂ. ೫೭೮); ಬಿನ್ನಣದಿಂದ ಸಮೆದ ದಂಡೆ ತೊಂಡಿಲು ಹೊನ್ನೋಲೆಯ ತೋಡುಗಳನು (ಚಂಪ್ರಸಾಂ. ೦೨-೨೪೪). ೨. ಸಮಾನ ; ಸಾಟಿ: "ಸರಿ, ದೊರೆ, ಪಡಿ...ತೋಡು, ಓರಗೆ, ಜೋಳಿ, ಹೊಯ್ಕೆಯ್ ಹೋಟಿ, ಸಂಗಡಂ – ಈ ೧೮ ಸಮಾನಕ್ಕೆ ಪೆಸರ್" (ಕಕಸಾ. ೧೫-೨೯೧) ; ಪಾರ್ವ್ವತಿಗೆ ತೋಡು . . . ವಾಸವಾಂಗನೆಗೆ ಪಾಸಟಿ ಬಾಗಲ ದೇವಿ ಧಾತ್ರಿಯೊಳ್ (ಎಕ. VIII, ನಗರ. ೪೭-೦೦೩ ; 1062) ; ಕರಿವರಮಸ್ತಕದೊಳ್ ತೋಡಿಲ್ಲದೆ ಬಗೆಬಗೆದುತ್ಸುಕದೊಳ್ . . . ಒರಿದುತ್ಸುವದಿಂದೇಳ್ತಂದಾಗಳ್ (ರಾಜಶೇ. ೯-೪೧ ರಗಳೆ) ; ಇನ್ನೆಬರಂ ತಮಗೆ ಜಗಂ ತೋಡಾಗದೆಂದು ಸೊರ್ಕಿನುರ್ಕಿಂ ಬಱುಗೊಂದೆ ಪಂದೆ ರಾಯರಂ ಕಾಡಿ ಬೇಡಿ ಕೂಡಿದ ಜಾಳಿಗೆವೊನ್ನಂ ಕೋಳುಗೊಂಬೆಂ (ರಾಮಾಶ್ವ. ೧೨೭-೨೮) ; ನಾನಾ ಜಾತಿಯ ರಾಯರೊಕ್ಕು ಬನವಂ ಮೈಸೂರ ಕಾಡೊಳ್ಗಿನೊಳ್ ಮಾನಾತೀತಮನೋವಿಕಾಸವಡೆಯಲ್ಕೀ ಕಾಡ ತೋಡಾವುದೋ (ಮೈಸೂಕು. ೧-೩೫) ; ಅವನ್ನಿವಳ್ಗೆ ಬೆಳೆದ ಪತ್ತುಗೆಗೆ ತೋಡಿಲ್ಲಮ್ (ಅಂತಿಗೊ. ೨೬-೫೪೬). ೩. ಸಂದಣಿ; ಗುಂಪು: ಹೂಡಿದಂಬಿನ ಹೊದೆಯ ಬಂಡಿಯ ತೋಡ ಕಡಿದನು ಛತ್ರ ಚಮರದ ಝಾಡಿಗಳ ತಟಿದೊಟ್ಟಿದನು ಕಲಿಪಾರ್ಥ (ಕುವ್ಯಾಕ. ೨೬-೯). [ ದೇಶ. ತಮಿ. ತೆಲು. ತೋಡು ]

**ತೋಡು$_{4}$** (ನಾ). ಬಾಣವನ್ನು ತೊಡುವಿಕೆ ; ಶರಸಂಧಾನ : ತೋಡು ಬೀಡಂ ಕಾಣ್ಬುದು ನಾಡೆಯುಮರಿದೆನಿಸಿ ಕೃಷ್ಣನಾರ್ದಿಸೆ (ಪಂಭಾಮಾ. ೯-೬೩);ತೋಡುಡುಗದೆಸುತಮಿರೆ ಮಾರ್ಪಡೆಯ[ರುಮವ]ರವಯವಂಗಳೆ ನಿತನಿತಱಿೊಳಂ ಕೂಡೆ ನಡೆ ಮಯ್ಗಳಂಬಿನ ಮೂಡಿಗೆಯನೆ ಪೋಲ್ತುಕೆಡೆದರುಗ್ರಾಹವದೊಳ್ (ಬಂಹರಿ. ೧೧-೦೧೦); ತೋಡು[ವಂ]ಬಿಡುವಂದ ಲೀಕ್ಷಿಸಿ ನೋಡಿಯಱಿಯಲು ಬಾರದಂಬಿನ ಕೂಡೆ ಬಿಳ್ದಿಭ ತುರಗ ರಥ ಕಾಲಾಳ್ಗಳಿಂದಱಿಯೆ (ಕುಮುಕಾ. ೨-೫೩).

**ತೋಡುಂ ಬೀಡುಂ, ತೋಡು ಬೀಡು**=(ಬಾಣವನ್ನು) ತೊಡುವುದಂ ಮತ್ತು ಬಿಡುವುದಂ: ಎರಡುಂ ಕೆಯ್ಯೊಳ್ ತೋಡುಂ ಬೀಡುಂ ಕಾಣಲಾಗದಂತಿಸೆ (ಪಂಪಭಾ. ೫-೯೭ ವ); ತೋಡುಂ ಬೀಡುಮಿಲ್ಲೆಚ್ಚುತೆ ಪಣಮಯ ಮಾದಪ್ಪುದೋ...ಎಂಬಂತಿರೆಚ್ಚಂ (ಅನಂಪು.೧೪-೧೭);ಕೃತವರ್ಮನೆಸುಗೆಯ ತೋಡುಬೀಡಿನ ಭರವ ಬಲ್ಲವನಾರು (ಕುವ್ಯಾಗ. ೨-೬). [<ತೊಡು$_{1}$]

**ತೋಡು$_{5}$** (ನಾ). ೧. ಉಪಾಯ ; ಹಂಚಿಕೆ ; ತಂತ್ರ ; ಯುಕ್ತಿ: ಶ್ರಮವನ್ನೂ ತೊಡಕುಗಳನ್ನೂ ತಕ್ಕ ತೋಡುಗಳಿಂದ ನಿವಾರಣಮಾಡಿ ಕೆಲಸವನ್ನು ಕೊನೆಗಾಣಿಸಿ ತೋರಿಸುವ ವಿವೇಕವೇ ಜ್ಞಾನಾಂಜನವೆನ್ನಿಸಿಕೊಳ್ಳುವುದು (ಕಾಂಪೂಕ. ೩೯) ; ಇದು ಬಿಕ್ಕಟ್ಟಿನ ಪ್ರಶ್ನವು. ಇದಕ್ಕೆ ಏನಾದರೊಂದು ತೋಡು (ಉಪಾಯ) ತೆಗೆಯಲಾಬೇಕು (ಬೀರಬ. ೧೪೧). ೨. ಕಟ್ಟು ; ಪ್ರತಿಬಂಧಕ ಉಪಾಯ ಆದರ ತೋಡು ತಿಳಿದವರು ಮೂರುದಿನಗಳೊಳಗಾಗಿ ಬದುಕಿಸಿಕೊಳ್ಳಬಹುದು (ಚದೇವ. ೧೨೭) ; ನಾವು ಒಬ್ಬ ಮಾಂತ್ರಿಕನ ಕೈಯಲ್ಲಿ 'ತೋಡು' ಮಾಡಿಸಿದರೊ ? (ಕಬ್ಬಮು. ೭೮).
[ ತಮಿ. ತೋತು ; ಕೋತ. ತೋದ್./ಮರಾ. ತೋಡ್ ]

**ತೋಡುಂಗಿಱು** (ಕ್ರಿ). ಜೊತೆಯಾಗಿ ಎಣೆಸಂ; ಸಮಾನವೆಂದು ಭಾವಿಸಂ: ಆರಂ ತೋಡುಂಗಿಱದೆ ತನ್ನೊಂದು ಗರಗರಿಕೆಯ ಸೊಮ್ಮಿನಭ್ಯುದಯದ ಪದುಳಮರಸಾಳ್ವ ಬಸಂತರಾಯನುರ್ಕಿಂ ಸೊರ್ಕಿಂ ಸೋರ್ದು ಬಯಲಪ್ಪಿನೆಗಂ ದಾಟಿಗೆಯ್ದು (ರಾಮಾಶ್ವ. ೫೧-೧೮).
[ ತೋಡು$_{3}$ + ಗಿಱು ]

**ತೋಡುಕ್ಕೆ** 'ತೊಡಂಗ್ಯೆ' ನೋ.

**ತೋಡುಗವಣೆ** (ನಾ) ಜೋಡಿ ಕವಣೆ : ತೋಡುಗವಣೆಯ ತೂಱುಗಲ್ಲಿನ ಝಾಡಿ ಝುಮ್ಮಿಡಿಸಿದವು ಗಗನವ (ತೊರರಾ. ೬-೧೧-೬).
[ ತೋಡು$_{3}$ + ಕವಣೆ$_{1}$ ]

**ತೋಡುಗಾಲುವೆ** (ನಾ). (ಅಗೆದು ಮಾಡಿದ) ಸಣ್ಣ ಕಾಲುವೆ : ದೊಡ್ಡ ನಾಲೆಯಿಂದ ಕಬ್ಬಿನ ಗದ್ದೆಗೆ ತೋಡುಗಾಲುವೆ ಅಗೆಯಬೇಕು (ಜೂಡಿ).
[ ತೋಡು$_{2}$ + ಕಾಲುವೆ (<ಕಾಲ್ವಾಯ್) ]

**ತೋಡುಗೆಲಸ** (ನಾ). (ಭೂಮಿಯನ್ನು) ಅಗೆಯುವ ಕಾರ್ಯ : ಅಗೆತ : ನಾಲೆಯನ್ನು ಅಗೆಯಲು ೫೭ ಮಿಲಿಯ ಸಲೆ ಅಡಿ ತೋಡುಗೆಲಸವನ್ನು ೧೦೦೦ ಸಲೆ ಅಡಿಗೆ ೨೫ ರೂಪಾಯಿನ ದರದಲ್ಲಿ ಮಾಡಲಾಯಿತು (ಶಿಲ್ಪನಾ. ೨೪೬). [ ತೋಡು$_{2}$ + ಕೆಲಸ ]

**ತೋಡುಗೈ, ತೋಡುಕ್ಕೆ** (ನಾ). ೧. ಬಗಿಯಂತ್ತಿರುವ ಕೈ : ತೋಡುಗೈಗಳ ಮಿದುಳ ಬಾಯ್ಗಳ ಬಾಡುಗರುಳಿನ ಚೀತ್ಕೃತಿಯ ತಲೆಯೋಡುಗಳ ತನಿರಕುತಪಾನದ ಶಾಕಿನೀಜನವ . . . ಕಂಡೋಸರಿಸುವನದೊಂದು ದೆಸೆಗಾಗಿ (ಕುವ್ಯಾಗ. ೩-೧೧). **ತೋಡುಕ್ಕೆ**: ೨. ಮೊಗೆಯಲು ಉಪಯೋಗಿಸುವ, ಚಿಕ್ಕ ಹಿಡಿಯುಳ್ಳ ಕೈಯ ಆಕಾರದ ಒಂದು ಬಗೆಯ ಸಲಕರಣೆ: (ಧಾನ್ಯ, ಸಕ್ಕರೆ, ಇದ್ದಿಲು, ಮೊ.ನ್ನು ತೋಡಿ ಮತ್ತೊಂದಕ್ಕೆ ಹಾಕಿಕೊಳ್ಳಲು ಅನುಕೂಲಿಸುವ, ಮೋಟುಹಿಡಿಯ, ಆಳವಾದ ಪಾತ್ರವುಳ್ಳ) ತೋಡುಕ್ಕೆ, ಗೋರಿಗೆ. ಉದ್ದ ಹಿಡಿಯ, ಸೌಟನಾಕಾರದ, ಅದ್ದುಪಾತ್ರೆ (Scoop. ಇಂಕನಿ.). 'ಮಗುಚುಕ್ಕೆ' ಪರಾ.
[ ತೋಡು$_{1}$ + ಕೈ$_{2}$ (<ಕೆಯ್$_{2}$) ]

**ತೋಡುದಾರಿ** (ನಾ). ದಿಣ್ಣೆಯನ್ನು ಅಗೆದು ಮಾಡಿದ ಹಾದಿ,– ಮಾರ್ಗ: ತೋಡುದಾರಿಯ ಪಕ್ಕದಲ್ಲಿ . . . ನೆಲಗಟ್ಟಿನ ಕಡೆಗೆ ನೆಕ್ಕುದೋವನ ದೃಷ್ಟಿ ಹರಿಯಿತು (ಪುನರು. ೪೬೬).
[ ತೋಡು$_{1}$ + ದಾರಿ ]

**ತೋಡುದೋಣಿ** (ನಾ). ೧. ಮರದ ದಿಮ್ಮಿಯನ್ನು ಕೊರೆದು ಮಾಡಿದ ದೋಣಿ: ತೋಡುದೋಣಿಯಿಂದ ಹಿಡಿದು ಸಮುದ್ರಯಾನದಲ್ಲಿ ಹಡಗಿನ ನಿರ್ಮಾಣದ ಹಾಗೆ ಆಕಾಶಯಾನದ ಬೆಳವಣಿಗೆಯೂ ವೈಜ್ಞಾನಿಕ ಸಾಧನೆಯಾಗಿರಲಿಲ್ಲ (ಶಿಲ್ಪನಾ. ೧೪೪). ೨. ದನಕರುಗಳು ಕುಡಿಯಲು ನೀರನ್ನು ತುಂಬಿಡುವ ಕಲ್ಲಿನ ಅಥವಾ ಮರದ ದೋಣಿ,–ತೊಟ್ಟಿ.
[ ತೋಡು$_{1}$ + ದೋಣಿ$_{3}$ ]

**ತೋಡುವಡಿ** (ನಾ). ಸಮಾನವಾದ ಅಳತೆ,-ಪ್ರಮಾಣ : ತಿಂಗಳಿಗೆ ಸಲ್ವ ಮಾಱುವೀಸ ದೋಪಾದಿಯ ಬಡ್ಡಿಯಲು ತೋಡುವಡಿಯಾಗಿ ವರ್ಷಂ ಪ್ರತಿ ಬಂದ ಬಡ್ಡಿ ಇಂದ ಆ ಇಂದ್ರಧರ್ಮ್ಮ ನಡವಂತಾಗಿ (ಎಳ್. V. ಬೇಲೂರು. ೨೪೬-೬ ; 1293). [ ತೋಡು₃ + ವಡಿ₁ ]

**ತೋಡುವೊಯ್ಲು** (ನಾ). (ದೇಹದಲ್ಲಿ ರಕ್ತವನ್ನು ಚಿಮ್ಮಿಸುವ) ಹೊಡೆತ ; ಗಾಯಂ ಕೊರೆಯಂವ ಹೊಡೆತ: ಜಾಡಿಸುವ ಮಣಿವುಯುದ ಗದೆಯುಲಿ ತೋಡುವೊಯ್ಲಿನ ತುಡುಕುಗಾಯದ ನೀಡುಮೊನೆಗಳ ವಿಗಡನಿ ಕೃದನದಟರಕ್ಕಸರ (ಕುಮ್ಮಾಅ. ೧೦-೩೨). [ ತೋಡು₁ + ಪೊಯ್ಲು ]

**ತೋಡುಹಾವುಗೆ** (ನಾ). "ಒಂದೇ ಮರದ ತುಂಡನ್ನು ಕೆತ್ತಿ ಮಾಡಿದ ಪಾದರಕ್ಷೆ ; ಮರದ ಅರೆಜೋಡು ; ಪಾವುಕೊರಡು ; ತೋಡು ಹಾವುಗೆ ; ಮರದ ಅಟ್ಟೆಯ ಪಾದರಕ್ಷೆ" (Babot. ಇಂಕಿನಿ).
[ ತೋಡು₁ + ಪಾವುಗೆ ]

**ತೋಡೆ₁**, 'ತೋಡಾ' ನೋ.

**ತೋಡೆ₂**, ಥೋಡೆ, (ನಾ). ಸ್ವಲ್ಪ ; ಕಿಂಚಿತ್ತು ; ಅಲ್ಪ : ನಂಗೆ ಒಂದು ಹಂಚಿಕೆ ಹೋಳೀತಯ್ತು, ಮನೋಗ ಹೇಳು : ಧನೇರ ಕಡೇನೇ ಹೋಗಿ ಕೈಕಾಲು ಬೀಳ್ರಿ. ಅಲ್ಲಿ ನಾನೂ ತೋಡೆ ಹೇಳ್ತಿನು (ಕ್ರೀಮುಕ್ರ. ೧೩). ಥೋಡೆ: ಏನೋ ಥೋಡೇ ತುಸಾ ಯಾರರ ಧಾಂದಲೆ ಹಾಕತಾರ, ಅದನ್ನೆಲ್ಲ ಥಮ್ಮಣಿ ಮಾಡತೀವಿ (ಧನಂಜ. ೩೦).
[ ←ಹಿಂ. ಮರಾ. ಥೋಡಾ ]

**ತೋತಾಪುರಿ** (ನಾ). ಒಂದು ಬಗೆಯ ಮಾವಿನ ಮರ ಮತ್ತು ಅದರ ಕಾಯಿ ; ಗಿಣಿಮೂತಿಮಾವು : ನಮ್ಮ ತೋಟದಲ್ಲಿ ತೋತಾಪುರಿ ಮರ ಇದೆ (ರೂಢಿ). [ ←ಹಿಂ. ಮರಾ. ತೋತಾ = ಗಿಣಿ ]

**ತೋತಾಯ** (ನಾ). ೧. ಕೃತ್ರಿಮ ದಾಖಲೆ ಮೊದಲಾದುವನ್ನು ಹುಟ್ಟಿಸುವಿಕೆ. ೨. ಮೋಸಗಾರ ; ಡಾಂಭಿಕ. ೩. ಖೋಟಾ ವಾರಸುದಾರ : (ಶ). [ ←ಮರಾ. ತೋತಯಾ. / ಹಿಂ. ತೋತ ]

**ತೋತ್ತರ** (ನಾ). ಸ್ತೋತ್ರ ; ಸ್ತುತಿಸುವಿಕೆ : ಶಚಿಪತಿಯು ಎತ್ತು ಹತ್ತುವ ಕೃತ್ತಿವಾಸನ ತೋತ್ತರವ ಮಾಡುತ್ತ ಮಾನವ ತೆತ್ತಿ ಮಸ್ತಕವನ್ನು ಪಾದಕೆ ಸತತ ಮಣಿಸುವನು (ಪಾರ್ವತಿಶ. ೨-೮೦).
[ <ಸಂ. ಸ್ತೋತ್ರ. /ತಮಿ. ತೋತ್ತಿರ ; ತುಳು. ತೋತ್ರ ]

**ತೋತ್ರ** (ನಾ). ಆನೆ, ಕಂದಲೆ, ಎತ್ತು ಮೊದಲಾದ ಪ್ರಾಣಿಗಳನ್ನು ನಡೆಸಲು ತಿವಿಯುಂವ ಸಾಧನ ; ತಿವಿಗೋಲು : "ಪ್ರತೋದ, ಪ್ರಾಜನಂ, ತೋತ್ರಂ-೩ ಮುಳುಕುಗೋಲ್" (ಹಲಾಯು. ೯೪-೯೩೩) ; "ತೋತ್ರಂ, ವೈಣುಕಂ-ಆನೆಯನ್ನು ತಿವಿದು ಶಿಕ್ಷಿಸುವ ಬಿದುರಿನ ಕೋಲಿನ ಹೆಸರು" (ಸಿದ್ಧಾಂತಿ. ೨೦೩) ; ಧೈರ್ಯದ್ವೈರಾವತಂ ಹೋರಾಡುತಿರ್ಪುದಂ ಕಾಣುತೆ ಗುರು ವಸಿಷ್ಠನಾಡಿದನ್ ಮಾವುತಂ ತೋತ್ರದಿ ತಿವಿಯುವಂತೆ (ಶ್ರೀರಾಮಾ. ೧೬೦-೪೮೬). [ ಸಂ. ]

**ತೋದ₁** 'ತೋ' ಪರಾ.

**ತೋದ₂** (ನಾ). ೧. ದನ, ಕರು, ಕುದುರೆ ಮುಂತಾದುವುಗಳನ್ನು ಹೊಡೆದು ಕೊಂಡು ಹೋಗುವಿಕೆ,-ನಡೆಸಿಕೊಂಡು ಹೋಗುವಿಕೆ. ೨. ನೋವು ; ಯಾತನೆ : ಅಂಬುಧಿಸಂಗಸಂಜನಿತಶುಬರನಿರ್ಭರಗರ್ಭ ಬಾದು ಕಾದಂಬಿನಿ ತತ್ಪ್ರಸೂತಿಸಮಯಂ ಬರೆ...ನರಲ್ವ ರಾವದಂತೇಂ ಬಗೆಗೊಂಡುದೋ ಗುಡುಗು ಸೂತಿಮರುತ್ಕೃತತೋದದೇಳ್ಗೆಯಿಂ (ರಾಜಶೇ. ೮-೦೦೩). [ ಸಂ. ]

**ತೋದನ** (ನಾ). ೧. ಹೊಡೆತ ; ಬಡಿತ : (ಶ). ೨. = ತೋತ್ರ : "ಪ್ರಾಜನಂ, ತೋದನಂ, ತೋತ್ರಂ-೩ ತಿವಿಗೋಲು" (ಸಿದ್ಧಾಂತಿ. ೨೩೪). ೩. ತೀವ್ರವಾದ ನೋವು,-ಯಾತನೆ,-ವೇದನೆ. [ಸಂ.]

**ತೋದೆ** (ನಾ). ತೋರಿಕೆಯ ನೆಪ ; ಕುಂಟುನೆಪ : ಅವುಲ್ದಾರರು ಹೇಳಿದುದಕ್ಕೆಲ್ಲ ಅವನು ಒಂದು ತೋದೆ (ಕುಂಟುನೆಪ) ಹಾಕುತ್ತಿದ್ದನು (ಗರುಡಾ. ೧೦೭). [ ←ತಮಿ. ತೋತು ]

**ತೋದ್ಯ** (ನಾ). (ಹೊಡೆಯಬಹುದಾದ ಅಥವಾ ಬಾರಿಸಬಹುದಾದ) ಒಂದು ವಾದ್ಯವಿಶೇಷ : ಸುದತಿ ಘನತೋದ್ಯದೊಳಗೀತದ ವಾದ್ಯದ ಹೃದ್ಯದುಚಿತ ವತ್ರದ ರಸಚಿತ್ರದ ಮಾಳಾಕರ್ಮದ ನರ್ಮದ ಸಖಿಯರ ಬನದದಿಂದವಲಸಿಕೆಗಳಿವಳ್ (ಪುಷ್ಪಪು. ೪-೧೭). 'ಆತೋದ್ಯ' ಪರಾ.
[ ಸಂ. ]

**ತೋಪಡ₁**, ತೋಪರ, ತೋಬಡ (ನಾ). ೧. ಮರ ಅಥವಾ ಲೋಹ ವನ್ನು ಸಮಗೊಳಿಸಲು ಬಳಸುವ ಸಾಧನ ; ಉಜ್ಜುಗೊರಡು ; ಹತ್ತರಿ : ತೋಪಡ ಹೊಡೆಯಬೇಕಾದ ಲೋಹವನ್ನು ಒಂದು ಮೇಜಿನ ಮೇಲಿಟ್ಟು ಮೇಜೇ ಹಿಂದಕ್ಕೂ ಮುಂದಕ್ಕೂ ವಿದ್ಯುತ್ತಿನ ಬಲದಿಂದ ಓಡಾ ಡುವ ಹಾಗೆ ಮಾಡುತ್ತಾರೆ (ಶಿಲ್ಪನಾ. ೧೯೩). ೨. (ಆಲಂ) ಅನುತ್ತೀರ್ಣತೆ; ಸೋಲು : ಡ್ರಾಯಿಂಗ್ ಪರೀಕ್ಷೇಲಿ ನನಗೆ ತೋಪಡ ಆದರೆ ನಿಮಗೆ ತುಂಬಾ ಸಂತೋಷವೇನೋ (ಸ್ವಾಮಿಸ್ನೇ. ೩೦). **ತೋಪರ** : ೧. ಅವರು ತೋಪರ ಹಾಕಿ ಮರಗಳನ್ನು ನಯಮಾಡಿದರು (ಗಲಿಪ್ರ. ೯೯). **ತೋಬಡ**: ೧. ಬೈರಿಗೆಯ ಅಲಗು; ಕೋಬಡದ ಉಳಿಯಲಗು; ಪಟಕಾರು, ಮೊ.ಗಳ ಕೊನೆಗತ್ತರಿ. ಕಡಿವಾಣ (Bit. ಇಂಕಿನಿ).
[ ←ತೆಲು. ಕೋಪಡ, ತ್ರೋವು ]

**ತೋಪಡ₂** 'ತೋಬರಿ' ನೋ.

**ತೋಪರ** 'ತೋಪಡ₁' ನೋ.

**ತೋಪಿ** 'ಟೋಪಿ' ನೋ.

**ತೋಪು₁**, ತೋಹು₁ (ನಾ). ಮರಗಳ ಗುಂಪು,-ಸಮೂಹ : ಇಂತು ಮನಂಗೊಳಿಪ ಮಾವಿನ ತೋಪಂ ಕಂಡು ಪೊಂಗಿ ಪೊಱಯೇಱ ಮಲ್ಲ ನೆಟ್ಟಂದಾ ವನಮನಾಶ್ರಯಿಸಿಕೊಂಡಾನನಂತಕಾಲವಿರಲ್ (ಉದ್ಭಟ. ೬-೧೩ ವ) ; ಗಂಧರ್ವಸುಭಟರಿಗೆ ಕುರುಪತಿಯ ಸುಭಟರಿಗೆ ಕೊಡಕಿತು ಕೋಟಿ ತೋಪಿನಲಿ (ಕುಮ್ಮಾಅ. ೧೮-೨೯) ; ತಾಪವನು ಹಿಂಗಿಸುವಶೋಕೆಯ ತೋಪಿನಲಿ ಸರಮೆ ತ್ರಿಜಟೆಯರ ಕಾಪಿನಿಂದಿರಿಸಿದನು ಕೊರವೆಯ ರಾಯನಂಗನೆಯ (ತೊರರಾ. ೩-೧೦-೪೪) ; ನರಸರಾಜನೂ ಶ್ರೀ ಪರಮೇಶ್ವರ ಪ್ರೀತಿಯಾಗಿ . . . ಬಾವಿಯನೂ ಅಗುಸಿ ಮಾವಿನ ತೋಪನು ಯಿಕ್ಕಿಸ್ಸನು (ಶಾಶಿಇ. IX-ii, ೪೭೬-೨೩ ; 1509) ; ಆ ಪತಿವ್ರತೆಯಪ್ಪ ಖಗಿಯೂ ತೋಪಿನಲಿ ಪತಿಯೊಡನೆ ಸಂಗಿಸಿ . . . ಗರ್ಭ ಧರಿಸಿ (ನಿಘಾಗ. ೧೫-೧೩-೫೪) ; ಇಂದ್ರನ ತೋಳ್ಗಳಂದೊಪ್ಪಿದವುಗಳ ನೀರ್ವೊತ್ತ ತೆಂಗಿನ ತೋಪುಗಳ ತೆಱದಿ (ಸಾಳ್ವಭಾ. ೩೩-೬೦) ; ಮಾವಿನ ಮರಗಳಂ ಹಾಕಿ ತೋಪು ಮಾಡಿ ಯಾವ ಪುರುಷನು ಸಲಹುವನೊ ಆ ಪುರುಷನು . . . ಸದ್ಗತಿಯನೈದಿ ಸಂತೋಷಪಡುವನು (ಶಾಗಂಧಿ. ೪೩೪-೦೫) ; ಖಗಗಳುಲಿವ ವಿವಿಧ ಸ್ವನದ ಮೇಳ ತೋಪ ತುಂಬಿದ (ಮೂಂದಲೆ. ೯-೧೭). **ತೋಹು₁** : ಮನೆ ನೆರೆಯೊಳವ ತೋಹುಗಳು ವಿವಿಧವೃಕ್ಷಗಳು ಸ್ಥಿರ ಜೀವನಕೆ ಹಸುರುಗುಡಿಯನೆತ್ತಿ (ಭಾರಂಗ. ೬೩).
[ ದೇ. ॥ ತಮಿ. ಮಲ. ತೋಪ್ಪು ; ತುಳು. ತೆಲು. ತೋಪು ]

**ತೋಪು₂** 'ತೋಪ್ಪು' ನೋ.

**ತೋಪು₃**, ಟೋಪು₁, ತೋಪು (ನಾ). ೧. ಗುಂಡು ಇಟ್ಟು ಹೊಡೆ ಯುವ ಸಾಧನ ; ಫಿರಂಗಿ : ಕರಮೆಸೆವ ಕಾವಿ ಮಂಜಟಿಗೆ ತೋಪು ಗಳಿಂದೆ ಭರದಿ ಬಾಸಣಿಸಿಸವ ಬಲ್ಲಾಳದಟ್ಟಿಯೊಳಗುರುಮೋದದಿಂ ಬರ್ಪವರ್ ಕೆಲರ್ (ಅರಾಜ. ೪-೨೩) ; ತೋಪು ತುಪಾಕಿಗಳು ಇಲ್ಲದಾಗ ಕಾಳಗದಲ್ಲಿ ಆನೆಗಳನ್ನು ಉಪಯೋಗಿಸುತ್ತಿದ್ದರು (ದುುಂಬಯಿ. ೪-೨೩) ;

ತೋವು ತಂಬಾಕಿ, ಕುರುಳಿ ಪಿಸ್ತೂಲಬಾಕ ಸಹಿತ ನಡುವಿನಾಗ (ಕನ್ನಜಾ. ೫೮). **ಟೋಪು**$_1$**:** ೧. ಸವ್ಯೋಹದಿಂದೊಪ್ಪಿಸುತೆ ಗುರುವಾದಕಂ ಜನಪನಾಗಳ್ ಟೋಪುಗಳನುಡಾಪಿಸಿದ ಬಳಿಕನುನಯಂ ಚ ರ ಗ ಣ ದ ತಿಂಥಿಣಿಗೆ (ಮುಹಾವಿ. ೨೨-೮೨). **ತೋಪು:** ೧. ಕೆಲವು ಜಹಜಿನಲ್ಲಿ ಎಪ್ಪತ್ತೆರಡು ತೋಪು ಇತ್ತು, (ರಾಜೇಂದ್ರ. ೧೦೫); ನಾಡ ಸಂರಕ್ಷಣೆಗೆ ತೋಪು ಇರದಿರಲು ನಾಡಿಗೊಂದಿರಬೇಕು ಬಯ್ಯುವಾ ಮುದುಕಿ (ನಿರಾಕ. ೧೭೯-೨). ೨. ಗೌರವಕ್ಕೋಸ್ಕರವಾಗಿ ಫಿರಂಗಿಯನ್ನು ಹೊಡೆಯುವುದು,- ಹಾರಿಸುವುದು; ಫಿರಂಗಿ ಮರ್ಯಾದೆ: ಖಾವಂದರಿಗೆ ಕ್ರಮವಾಗಿ- ತೋಪು ಮುಂತಾದ ಮರ್ಯಾದೆಗಳು ನಡೆದುವು (ಮಹಾವಂ. II, ೪೩).

[ ←ಹಿಂ. ತೋಪ್; ತುರ್ಕೀ, ಮರಾ. ತೋಫ್ ]

**ತೋಪುಖಾನಿ** 'ತೋಫಖಾನೆ' ನೋ.

**ತೋಪೊಳೆ** (ಕ್ರಿ). ಚೆನ್ನಾಗಿ ಹೊಳೆ,-ಮಿರುಗು (?) : ತಾರಾಪತಿಯು [ಯು] ಸುತೆಯು ತನ್ನಣುಗಂಗೆ ಶ್ರೀಫಲಪಯೋಧರಂಗಳನು ಪಾನಂಗೈಸಿ ತೈಲವಂ ಪೂಸಿಯೆರದು ತೋಪೊಳೆವ ಪೊಂದೊಟ್ಟಿಲೊಳಗಿಟ್ಟು . . . ಸಲಹುತಿರ್ದಳು (ಸವಪೂ. ೦೫-೪೭). [ <ತೋಱು + ಪೊಳೆ$_1$ ]

**ತೋಫಖಾನೆ,** ತೋಪುಖಾನಿ (ನಾ). ಮದ್ದು ಗುಂಡುಗಳ ಸಂಗ್ರಹಾಲಯ,-ಗೋದಾಮು: ಜಪಾನಿಗಳಿಂದ ತೋಫಖಾನೆಯ ಗುಂಡುಗಳು ಹಾರಹತ್ತಿದ್ದುವು (ಪ್ರಅಸ. ೭೪). **ತೋಪುಖಾನಿ:** ತೋಪು ಖಾನಿ ಸನ್ನಾಹತಂತ್ರ ಪ್ರಯೋಗಮುಖದಿಂ ಫೌಜಂ ಮದೆಗೆಡಿಸಿ (ಕೆಳನೃ ೮-೧೦).

[ ←ಮರಾ. ತೋಫ್ ಖಾನಾ; ಹಿಂ. ತೋಪ್‌ಖಾನಾ; ಪಾರ. ತೋಪ್‌ಖಾನಹ್ ]

**ತೋಫು** 'ತೋಪು$_3$' ನೋ.

**ತೋಬಡ** 'ತೋಪಡ$_1$' ನೋ.

**ತೋಬರ** 'ತೋಬರಿ' ನೋ.

**ತೋಬರಿ,** ತೋಪಡ$_2$, ತೋಬರ (ನಾ). ಕುದುರೆಯ ಬಾಯಿಗೆ ಕಟ್ಟುವ ಕಡಲೆಯ ಅಥವಾ ಹುರುಳಿಯ ಚೀಲ; ಮುಖ ಚೀಲ: ಡೋರರು . . . ಕೊಗಲಿನ ಬುದ್ದಲಿ, ಕುದುರೆಯ ತೋಬರಿ, ಲಗಾಮು, ಜೀನು ಮುಂತಾದ ತೊಗಲಿನ ಸಾಮಾನುಗಳನ್ನು ಮಾಡುವರು (ಕಭಾಗೆ. ೨೧೯); ತೋಬರಿಯಲ್ಲಿ ಕಡಲೆಯನ್ನು ಹಾಕಿ ಆ ತೋಬರಿಯನ್ನು ಕುದುರೆಗೆ ತೋರಿಸಿ . . . ಅದನ್ನು ಹಿಡಕೊಂಡದ್ದು ಅವನಿಗೆ ನೆನಪಾಯಿತು (ಮುಂಬಯು. ೪-೫೦). **ತೋಪಡ$_2$:** ಕೊಸಪ್ಪ... ಹುರುಳಿ ಇಸುಗೊಂಡ. ತೋಪಡದ ಚೀಲಕ್ಕೆ ತುಂಬಿ ಇಟ್ಟುಗೊಂಡ (ದಿನಾಂ. ೩೭). **ತೋಬರ:** (೬).

[ ←ಪಾರ. ತೋಬರಾ, ತುಬರಾ; ಹಿಂ. ತೋಬಡಾ; ಮರಾ. ತೋಬ್ರಾ, ತೋಬರಾ ]

**ತೋಮ** (ನಾ). ಗುಂಪು; ಸಮೂಹ; ನೆರವಿ: "ಸ್ತೋಮ – ತೋಮ" (ಶಮದ. ೨೭೨ ಪ್ರಯೋ); "ಬಂಬಲ್, ತುಱುಗಲ್ . . . ತೋಮಂ, ತೆವ್ವಲ್, ಗುಪ್ಪೆ, ಗೊಂದಣ (ಉಂದಲ್) – ಈ ೪೦ ಸಮೂಹಂ" (ಕಶಾಸಾ. ೫೭-೨೨೨). [ <ಸಂ. ಸ್ತೋಮ ]

**ತೋಮರ** (ನಾ). ೧. ತುದಿಯಲ್ಲಿ ಮೊನಚಾಗಿರುವ ಈಟಿಯಂತಹ ಒಂದು ಬಗೆಯ ಆಯುಧ: "ತೋಮರ ಪಿಂಡಿವಾಳ ಪಟ್ಟಿಶ . . . ಕೈದುಗಳ ಭೇದವಕ್ಕುಂ" (ಮಂಗರಾ. ೮೮-೩೮); ಶಕ್ತಿ ತೋಮರ ಮುಸಲ . . . . ವಿವಿಧಾಯುಧಂಗಳೊಳಮತಿಪ್ರವೀಣನುಂ (ಪಂಪಭಾ. ೨-೩೪ ವ); ನಾಳಿಯ ಕೋಲ್ ಜವನಾಳಿವೆಂದಿನಂ ಕವಿದುವು ತೋಮರಂ ಜವನ ದಾಮರವಾದುವು (ಪಂಪರಾಮಾ. ೦೩-೬೦); ಶಶಿಕಾಂತದ ಶಿಲಾತಳದೊಳ್ ಪೊರಳುತಿರ್ಪ ಪರವೆಗೆ ಅಶೋಕೆ ಸಶೋಕೆ ಮಾಮರಂ ತೋಮರಂ ಬೆಳ್ದಿಂಗಳು ಬಳಿಯಿಂಗಳಂ (ನಂಬಿರ. ೧೭-೨೩); ಆ ಮಹಾಸಂಗ್ರಾಮ ಮುಖದಲಿ ತೋಮರದ ಕಾಣಿಕೆಗಳಲಿ ಸುಪ್ರೇಮವನು ಬೆಸಸುವುದು ದುರಿಯೋಧನನ ಮತವೆಂದ (ಕುವ್ಯಾಉ. ೧೧-೪); ಆ ಮರುತ್ತನ ಯಜ್ಞಕೃತಂದಾ ಮರುದ್ಗಣ ಮುನಿಗಣಂಗಳ ತೋಮರದ ತೋಟಿಯಲಿ ಕೆದರಿತು ಕದನಕೇಳಿಯಲಿ (ಕೊರಣ. ೧-೮-೩೮); ಕುಂತ ತೋಮರ ಖಡ್ಗ ಸುರಗಿ ಭಲ್ಲೆಹಗಳ ಕಾಂತಿ ಮುಸುಕೆ ಚೌದೆಸೆಯ (ಕಂನಪಿ. ೦೫-೨೦); ಹೆರರ ಕೊಲ್ಲಲು ಕತ್ತಿ ಪರಶು ತೋಮರ ಬೇಕು (ಖಾಂಕಜ. ೪೦-೫). ೨. ತುದಿಯಲ್ಲಿ ಅರ್ಧಚಂದ್ರಾಕೃತಿಯಲ್ಲಿರುವ ಒಂದು ಬಗೆಯ ಬಾಣ: ಕಿರಣತೋಮರದಕ್ಷೋರುಸ್ಫುರಣತಿಮಿರ ಮೃಗೀಕದಂಬಕ ತರಣಿ ನೋಕಿದನುದಯಶೈಲಕೆ ರತುನಮಯ ರಥವ (ಕುವ್ಯಾಕ. ೮-೦೫); ಮೂದಲಿಸಿ ಖಳನಿಟ್ಟನಿಷ್ಪತ್ತೈದು ತೋಮರಗಳಲಿ ಜೀವವಕಾಯ್ದುಕೊಳ್ಳೆನುತ (ನಿಭಾಗ. ೧೦-೭೯-೩೮). ೩. ಲೋಹದ ಗದೆ. P ಈ ಆಯುಧದ ಆಕಾರವಿಷಯದಲ್ಲಿ ಭಿನ್ನಾಭಿಪ್ರಾಯವಿದೆ ೪. [ಛಂದ] ಒಂದು ವಿಧವಾದ ರಗಳೆ: ವೃತ್ತಜಾತಿ ಸಮುಚ್ಚಯದಲ್ಲಿ ಅಸಿ, ಅಶನಿ, ತೋಮರ . . . ಕ್ಷುರಪ್ರ ಇತ್ಯಾದಿ ಆಯುಧಗಳ ಹೆಸರುಗಳು ಪಂಚಮಾತ್ರಾಗಣ ನಿರ್ದೇಶಕ್ಕಾಗಿ ಪ್ರಯೋಗವಾಗಿವೆ . . . ಆದ್ದರಿಂದ 'ತೋಮರ' ಎಂದರೆ ಪಂಚ ಮಾತ್ರಾಗಣವೆಂದು ಸ್ಪಷ್ಟ (ಛಂದೋವಿ. ಪು. ೨). 'ತೋಮರರಗಳೆ' ಪರಾ. [ ಸಂ. ]

**ತೋಮರರಗಳೆ** (ನಾ). [ಛಂದ] ರಗಳೆಯ ಭೇದಗಳಲ್ಲಿ ಒಂದು; ಲಲಿತ ಬರಗಳೆ ಪ್ರತಿಪಾದದಲ್ಲಿಯೂ ಐದು ಮಾತ್ರೆಯ ನಾಲ್ಕು ಗಣಗಳು ಇರುವ ರಗಳೆ: ತೋಮರರಗಳೆ-ಶ್ರೀ ಮದರುಹಚ್ಚರಣ ಸರಸಿರುಹಭೃಂಗನಂ ಭೂಮಿ ಕೀರ್ತಿಸೆ ನೆಗಳ್ದ ಗುಣಗಣೋತ್ತುಂಗನಂ (ಸೌಇಇ. IX-ii, ೧೦೭-೧೭; 1065); ತೋಮರರಗಳೆಯೆಂದರೆ ಪಂಚಕಲದ ಗಣಗಳಿಂದ ರಚಿತವಾದ ರಗಳೆಯೆಂದು ಅರ್ಥ . . . ಇಂದ್ರಕೀರ್ತಿಯನ್ನು ವರ್ಣಿಸುವ ಪದ್ಯಗಳು ಲಲಿತರಗಳೆಯಲ್ಲಿದ್ದು ಅಲ್ಲಿ ಅವುಗಳನ್ನು 'ತೋಮರರಗಳೆ' ಎಂದು ಹೆಸರಿಸಲಾಗಿದೆ (ಛಂದೋವಿ. ಪು. ೨). [ ತೋಮರ + ರಗಳೆ ]

**ತೋಮಾಲೆ** (ನಾ). ದೊಡ್ಡಹಾರ: ಆಜ್ಞಾಧಾರಕರಾಗಿರುವ ಮಠದ ಬ್ರಾಹ್ಮರುಗೆ ಮೊದಲು ತೀರ್ಥ ತೋಮಾಲೆ ಮೊದಲಾದ ಸಕಲ ಮರಿಯಾದೆಗಳನ್ನು ನಡಸುವದು (ಮ್ಯಆರಿ. ೦೯೩೮, ೦೯-೧೧; 1811); ಪಂಡಿತ ಪೆರುಮಲೆಯವರು ಅನಂತರ ಮಗಳ ಕೈಗೆ ನವಮಲ್ಲಿಕಾ ತೋಮಾಲೆಯನ್ನು ಕೊಟ್ಟರು (ಹಂತರಾ. ೧೦೯). [ <ತೋರ + ಮಾಲೆ ]

**ತೋಮೆ** 'ತೊಂಬೆ$_1$' ನೋ.

**ತೋಯ**$_1$ 'ತೊವ್ವೆ' ನೋ.

**ತೋಯ**$_2$ (ನಾ). ೧. ನೀರು; ಉದಕ; ಜಲ: "ಸಲಿಲಂ ಜೀವನಮಂಬು ತೋಯಮುಮುದಕಂ" (ವಸ್ತುಕೋ. ೨೨-೦); ಎನ್ನ ಮಾತಿಂಗೆಲೆ ಕೌಂತೇಯ ಮಱುಮಾತನಿತ್ತು ಮದೀಯ ಸರೋವರದ ತೋಯುಮಂ ಕುಡಿ (ಪಂಪಭಾ. ೮-೩೦); ಚತುಃಕೋಣಕಳಶಭರಿತತೋಯದಿನಭಿಷೇಕಂಗೆಯ್ದು (ಆಪು. ೪-೭೦ ವ); ಕಾಶಿಯ ನದೀತೋಯಂಗಳಂ ಮಂಗಳೋತ್ಸವದಿಂ ಭೂಮರ ವೃಂದಮಂ ನಿಲಿಸಿ ಸಾಲ್ಗೊಂಬಂತುಟೋರೋರ್ವಱಾದವನಂದ್ಯೆದಿಸಿದಂ ಸುವರ್ಣಘಟದಿಂ (ರಾಜಶೇ. ೩-೩೦); ಶೀತಲಸುಗಂಧಮಯ . . . ವಿಮಲತೋಯಮಿದು (ಶ್ರೀರಾಮಾ. ೧೬೭-೪೨೨). ೨. [ಛಂದ] ಒಂದು ಅಕ್ಷರಗಣ; ಯಗಣ (ᑌ - -): ಗುರು ಮೂಱಾಗಿರೆ ಧಾತ್ರಿ ಮುಂತೆರಡು ಬಿನ್ನಂ ತೋಯಂ (ಛಂದೋಂಬು. ೧-೩೮). [ ಸಂ. ]

**ತೋಯಕುಂಭ** (ನಾ). ನೀರಿನ ಕೊಡ,-ಕಳಶ: ದೇವಮಹೀರುಹವ್ರಜದೊಳಂ ದೇವಾಪಗಾತೋಯಕುಂಭದೊಳಂ ದೇವವರಂ ಸ್ನವಂಗೆಯೆ (ಅಗವಿ. ೩-೧೭). [ ತೋಯ$_2$ + ಕುಂಭ ]

**ತೋಯಜ** (ಗುಂ). ೧. ನೀರಿನಲ್ಲಿ ಹುಟ್ಟಿದ. (ನಾ). ೨. ಕಮಲ ; ತಾವರೆ : ಸುಭಟರ ಚರಣತೋಯಜದ ಘಾತದಿಂ ಕೆಂಧೂಳಿ ಮಸಗೆ (ಧಾವಚಂ. ೫-೧೮) ; ತೋಯಜವೆಂಬ ಪುಷ್ಪದ ಪೆಸರವರೊಳು . . . ಇರಿಸು ಕಂಡ್ಯ ಎನ್ನನು (ಕನಕ. ೦೫೦-೨). [ ಸಂ. ]

**ತೋಯಜಗರ್ಭ** (ನಾ). ೧. ಕಮಲದ ಒಳಭಾಗ : ಎಲೆ ಮಧುವ್ರತ ನೀನದ ಸೋಂಕೆ ನಿನ್ನ ಕೀಳ್ ತೋಯಜಗರ್ಭವೆಂದೆನಿಪ ಬಂಧನಮಂದಿರ ಕಿಂದು ಸೇರಿಪಂ (ಶಾಕುಂತ.೯೧-೧೫೧). ೨. ಕಮಲದಲ್ಲಿ ಜನ್ಮತಾಳಿದವನು; ಬ್ರಹ್ಮ : ತೋಯಜಗರ್ಭನಾದಿಮುನಿಮುಖ್ಯಮತಪ್ರಕಟೀಕೃತಾಖಿಳಾ ಮ್ನಾಯಂ . . . ಒಲ್ದು ದೀರ್ಘಾಯುಮನೀಗೆ (ಪಂಚತಂ. ೦-೯).
[ ತೋಯಜ + ಗರ್ಭ ]

**ತೋಯಜನಾಭ** (ನಾ). ಹೊಕ್ಕುಳಲ್ಲಿ ತಾವರೆಯನ್ನುಳ್ಳವನು; ವಿಷ್ಣು: ತೋಯಜನಾಭನನಂತಸಹಾಯಂ ನಲಿದಿಂತು ವತ್ಸಕುಲಮಂ ಕಾದಂ (ಜಗವಿ. ೩-೭೮). [ ಸಂ. (ತೋಯಜ + ನಾಭಿ + -) ]

**ತೋಯಜಪ್ರಭವ** (ನಾ). = ತೋಯಜಗರ್ಭ೨ : ಅಂಬುಜಾಂಬಕ ತೋಯಜಪ್ರಭವರು ಸುಧಾಶನನಾಯಕಾದಿ ದಿಶಾಧಿಪರು . . . ಬಂದರೀಶ ನನೋಲೈಸಲೆಂದು (ಬಸವು. ೧-೪೧). [ ತೋಯಜ + ಪ್ರಭವ ]

**ತೋಯಜಭವ** (ನಾ). = ತೋಯಜಗರ್ಭ ೨. [ ಸಂ. ]

**ತೋಯಜಮಿತ್ರ** (ನಾ). ತಾವರೆಯ ಸ್ನೇಹಿತ ; ಸೂರ್ಯ : ಮತ್ತಮಾ ಗ್ರೀಷ್ಮಕಾಲದೊಳ್ ತೋಯಜಮಿತ್ರನೇಟ್ಗೆವಡೆದೊಪ್ಪಿರೆ (ಉದ್ಭಟ. ೯-೮೭). [ ತೋಯಜ + ಮಿತ್ರ ]

**ತೋಯಜಷಂಡ** (ನಾ). ೧. ತಾವರೆಗಳ ಸಮೂಹ. ೨. ತಾವರೆಗಳ ಗುಂಪನ್ನುಳ್ಳುದು;ಸರೋವರ: ತೋಯಜಷಂಡಮನಿದನಾನಾಯತಿಯಿಂ ಕಾವೆನೆನ್ನ ಮಾತಿಂಗೆಲೆ ಕೌಂತೇಯ ಮಱುಮಾತನಿತ್ತು ಮದೀಯ ಸರೋವರದ ತೋಯಮಂ ಕುಡಿ (ಜಂಪಭಾ. ೮-೩೯). [ ತೋಯಜ + ಷಂಡ ]

**ತೋಯಜಾಕರ** (ನಾ). ಕಮಲಗಳಿರುವ ಸರೋವರ ; ಕಮಲಾಕರ : ತೋಯಜಾಕರದಂತೆ ಪದ್ಮಾಲಯಂ ಶಿವನ ಕಾಯದಂದದೆ ಸರ್ವಮಂಗಳಾಲಂಕೃತಂ ಕಾಯಜನ ಪಿತನಂತನಂತಮಣಿರಂಜಿತದೊಳರಮನೆ ವಿರಾಜಿಸಿದುದು (ಚಬಪು. ೫-೫೩). [ ತೋಯಜ + ಆಕರ$_3$ ]

**ತೋಯಜಾಕ್ಷ** (ನಾ). ಕಮಲದಂತೆ ಕಣ್ಣುಳ್ಳವನು : ವಿಷ್ಣು ; ಅಂತವರ ಮಾವಳ್ಗೆ ವನಮಾಲಿಕಾಲಂಕೃತಂ ತೋಯಜಾಕ್ಷವಕ್ಷಸ್ಥಲಂ . . . ಆ ಲಕ್ಷ್ಮೀದೇವಿ ಸಂತತಮುಮೆನ್ನೊಳ್ಸುಧಾದೃಷ್ಟಿಯಂತಿಹ ಕಟಾಕ್ಷವೃಷ್ಟಿಯ ಸುರಿಸಲಿ (ಶೀಪಚಾ. ೧-೬). [ ಸಂ. (ತೋಯಜ + ಅಕ್ಷಿ + -) ]

**ತೋಯಜಾನನೆ** (ನಾ). ಕಮಲದಂತೆ ಮುಖವುಳ್ಳವಳು; ಕಮಲಮುಖಿ: ಜೀಯ ನಿಮಗಂ ನಿನ್ನ ನಮಿಸಿದ ತೋಯಜಾನನೆ ಇಂದು ಮರಣಂಗೆಯ್ದಳ್ (ಬಸವು. ೩೨-೪೨). [ ಸಂ. ತೋಯಜಾನನಾ (ತೋಯಜ+ಆನನ + -)]

**ತೋಯಜಾರಿ** (ನಾ). ಕಮಲಕ್ಕೆ ಶತ್ರುವಾದವನು ; ಚಂದ್ರ.
[ ತೋಯಜ + ಅರಿ$_3$ ]

**ತೋಯದ** (ನಾ). ನೀರನ್ನು ನೀಡುವುದು ; ಮೋಡ ; ಮುಗಿಲು : ನಡೆದನಾ ದೈತ್ಯೇಶ್ವರಂ, ದಿವಂಗತ ಸುತನ ಸತಿಯ ಶೋಕಾಗ್ನಿಯಂ ತವಿಪ ಪೆರ್ಮಳೆಗಳಂ ಕರೆಯುವ ಮನೋನಿಶ್ಚಯದ ತೋಯದಂಗಳಂ ಪೊತ್ತುಯ್ವ ಕಾರ್ಗಾಳಿಯೋಲ್ (ಶ್ರೀರಾಮಾ. ೭೩೯-೧೫೧). [ ಸಂ. ]

**ತೋಯಧಿ** (ನಾ). ಕಡಲು; ಸಮುದ್ರ: “ರತ್ನಾಕರಃ . . . ತೋಯಧಿಃ . . . ಸಮುದ್ರಃ – ಈ ೧೨ ಸಮುದ್ರಂ” (ಹಲಾಯು. ೧೦೭-೩೦) ; ಆಯುಂ ಶ್ರೀಯುಂ . . . ನೃಪತಿ ನಿನಗೆ ನಿಜಸಂತತಿಯುಂ ನ್ಯಾಯದೆ ಪೆರ್ಚುವುದಕ್ಕೀ ತೋಯಧಿ ಧರ[ಣೀಧ]ರಾಧರ ಸ್ಥಿತಿವರೆಗಂ (ಕವಿರಾ. ೩-೨೦೭) ; ಶ್ರೀಯನರಾತಿಬಳಾಸ್ಯಕ್ತೋಯಧಿಯೊಳ್ ಪಡೆವ ವೀರನುದರಂಗಳನಾತ್ಮೀಯಪದಸ್ಫುರಿತನಖಚ್ಛಾಯೆಗಳೊಳ್ ನಿಱಿಸಿ ನಿಂದ ಗಂಡಂ ಹರಿಗಂ (ಪಂಪಭಾ. ೩-೧); ಶ್ರೀಯಂ ನಿಜಪಾದದ್ವಯ ತೋಯಧಿಯೊಳ್ ತಾಳ್ದು (ಅಟ್ಟಮ. ೦-೧). [ ಸಂ. ]

**ತೋಯನಿಧಾನ** (ನಾ). = ತೋಯಧಿ : ತೋಯನಿಧಾನಫೇನವಿಶದೋತ್ತಮವಸ್ತ್ರಮನುಟ್ಟು ಪುಷ್ಪಮಾಲಾಯುತೆಯಾಗಿ . . . ಪೊಱಮಟ್ಟಳ್ (ಪಂಚತಂ. ೭೪-೫). [ ತೋಯ$_3$ + ನಿಧಾನ ]

**ತೋಯನಿಧಿ** (ನಾ). = ತೋಯಧಿ : ಶ್ರೀಯ ಚಾಮರದ (ಸುಳಿಗಳಂ)–ತಿಳಿಗೊಳಂಗಳಂ ತೋಯನಿಧಿಯ (ಪೆರ್ಗಱೆಯ)–ಪಿರಿಯ ಸುಳಿಗಳಂ . . . ಪೋಲ್ವೆಯುಪ್ಪ ಮುಗಿಲಿಂದೆ ಮುಟ್ . . . ಕಱೆಗುಂ (ಅಟ್ಟಮ. ೮-೧೨). [ ತೋಯ$_3$ + ನಿಧಿ ]

**ತೋಯಪಾನ** (ನಾ). ನೀರನ್ನು ಕುಡಿಯುವಿಕೆ ; ಜಲಪಾನ : ಬಾಯಿಗೇಳಸುತಿರ್ದ ನಾವ್ ತತ್ತೋಯಪಾನಕೆ ತಿರುಗಿ ಕಂಡೆವು ರಾಯನಂಘ್ರಿಗಳಾಣೆಯೆಂದರು ಶಬರರನಿಲಜಗೆ (ಕುವ್ಯಾಗ. ೪-೫೨).
[ ತೋಯ$_3$ + ಪಾನ$_3$ ]

**ತೋಯಪಿಪ್ಪಲಿ** (ನಾ). ನೀರಂ ಹಿಪ್ಪಲಿ [ ತೋಯ$_3$ + ಪಿಪ್ಪಲಿ ]

**ತೋಯಭೃತ್ತು** (ನಾ). ನೀರನ್ನು ಧರಿಸಿರುವುದು ; ಮೋಡ : ಅಪೂರ್ವತೋಯಭೃದ್ವಿಸರದೆ ವಾಃಕಣಂಗಳುಗುತಂದವುವೆಂದೆ ಪೊಡರ್ಪುಗೆಯ್ದು ಪೂರಿಸುವಳಿಪಿಂದೆ ಪುಷ್ಕರಮನೆತ್ತಿದುದಂದು ನಭಕ್ಕದೊಂದಿಭಂ (ಚಂದ್ರಪು. ೯-೭೫). [ ಸಂ. ತೋಯಭೃತ್ ]

**ತೋಯರಾಶಿ** (ನಾ). ಜಲರಾಶಿ ; ಸಮುದ್ರ : ಮಂತ್ರಿವರ್ಗದುಜ್ಜ್ವಲನವರತ್ನಭೂಷಣಕಿರೀಟಹಟದ್ರುಚಿಯಿಂದದೇಂ ಪಳಂಚಲೆದುದೊ ರಾಜರಾಜಸಭೆ ಕುಂಭಜನೀಂಟಿದ ತೋಯರಾಶಿಯಂ (ಪಂಪರಾಮಾ. ೬-೭೪).
[ ತೋಯ$_3$ + ರಾಶಿ ]

**ತೋಯರುಹ** (ನಾ). = ತೋಯಜ ೨. ‘ತೋಯರುಹನಾಭ’ ಪರಾ.
[ ಸಂ. ]

**ತೋಯರುಹನಾಭ** (ನಾ). = ತೋಯಜನಾಭ : ತೋಯರುಹನಾಭನೈಂದ್ರಾಗ್ನೇಯಾಂತಕಕೌಣಪಾಸ್ತೃತತಿಯಿಂದಿಸೆ (ಜಗವಿ. ೦೨-೪೧).
[ ಸಂ. (ತೋಯರುಹ + ನಾಭಿ + - ) ]

**ತೋಯಾಕರ** (ನಾ). ನೀರಿಗೆ ಆವಾಸಸ್ಥಾನವಾದುದು; ಜಲಾಶಯಂ : ಸರೋವರ : ಪರಮಶ್ರೀಸಂತತಾವಾಸದೊಳಖಿಲಸುಖಸ್ವಚ್ಛಸಂಪನ್ನತೋಯಾಕರದೊಳ್ . . . ಸೌಂದರಕೇಲೀಹಂಸನಾದಂ (ಆದಿಪು. ೧೭-೭೫).
[ ತೋಯ$_3$ + ಆಕರ$_3$ ]

**ತೋಯಾಧೀಶ** (ನಾ). ನೀರಿಗೆ ಒಡೆಯನಾದವನಂ ; ಜಲಾಧಿಪತಿ ; ವರುಣ : ಪವಮಾನಂ ದಹನಂ ವಾಸವ ತೋಯಾಧೀಶರೆಂಬಿವರ್ ಸಲೆ ರಾತ್ರಿಂದಿವಗಳೊಳೊಂದೊಂ(ದರೆ ?)ದುಂ ಜಾವವನಾಳ್ವರ್ (ಶೋಕಚೂಡಾ. ೪-೭೮). [ ತೋಯ$_3$ + ಅಧೀಶ ]

**ತೋಯಾಶಯ** (ನಾ). ನೀರಿಗೆ ಆಶ್ರಯವಾದುದು ; ಜಲಾಶಯಂ ; ಕೆರೆ : “ಹ್ರದಃ, ತೋಯಾಶಯಃ – ಈ ೨ ಮಡು” (ಹಲಾಯು. ೦೧೦-೪೮); ಮಾರ್ಗಾನೇಕ ತೋಯಾಶಯಮನುರುರಜಂ ಪೀರೆ ದಾನಪ್ಲವಂ ಪೂರಿಸೆ ತೋಱೆತ್ತ್ರಮಾದಂ ಹರಣಭರಣಚಾತುರ್ಯಮಂ ಚಾತುರಂಗಂ (ಚಂದ್ರಪು. ೧೦-೩೦). [ ತೋಯ$_3$ + ಆಶಯ ]

**ತೋಯಿ** ‘ತೊವ್ವೆ’ ನೋ.

**ತೋಯಿಲ** (ನಾ). ಹೊಲಸಂನೀರು : ನಾಯುಡಗು ನರಕನಿಳಯಂ ಮಾಯೆಯ ಕಣಿ ಬಿಡದ ಜಿಗುಟು ಪಾಪದ ಪುಂಜಂ ತೋಯಿಲಕುಟಿಪೊಲಗೆಱೆಯೆಂದಾಯತಿಯಿಂ ಬಗೆವರುಱೆವರಾ ಸೂಳೆಯರಂ (ಶಸಾರ. ೨೯೯). ‘ತೋಕುಳಿ’ ಪರಾ. [ ? ]

**ತೋಯಿಸು, ತೊಯಿಸು, ತೊಯ್ಯಿಸು, ತೊಯ್ಸು** (ಕ್ರಿ). ನೆನಸು; ಒದ್ದೆಮಾಡು; ತೇವವಾಗಿಸು: ರಸವಿಶೇಷದೊಳತಿವಿಮಲಸಿತವಸನ ತೋಯಿಸಿ ಅಗ್ನಿಯೊಳಗಿಡೆ ಪಸರಿಸುವುದು ಪ್ರಕಾಶ ನಸುಗುಂದದಲೆ ಸರ್ವತ್ರ (ಜಗದಾ. ೨೨೪); ಒಂದೇ ಉಸುರಿನಲ್ಲಿ ಮಕ್ಕಳಂತೆ ಅಳುತ್ತಾ ಕಣ್ಣೀರಿನಿಂದ ನನ್ನ ಕಾಲು ತೋಯಿಸಿದ (ಶತಂಗ. ೧೮); ಅವನನ್ನು (ಆತ್ಮನನ್ನು) ಶಸ್ತ್ರಗಳು ಕತ್ತರಿಸಲಾಗುವುದಿಲ್ಲ . . . ಜಲವು ತೋಯಿಸಲಾಗುವುದಿಲ್ಲ (ಅನಾಸ. ೭); ಸಾರಕವೆಂದು ಈ ತೌಡು ಉಪಯೋಗಿಸುವದಾದಲ್ಲಿ, ತೋಯಿಸಿ ಹಾಕಬೇಕು (ಗೋಗ್ರಾಸ. ೭೮). **ತೊಯಿಸು**: ಓಕುಳಿಯ ನೀರನುಱೆ ಸೂಸುವ ಕೋವಿದಜನವಂ ನೂತ್ನಕಲಾಕೋವಿದೆಯತೊರ್ಯಿಸಿದರವರ್ದ ಪರಿಮಳಜಲದಿಂ (ಉದ್ಭಟ. ೮-೭೩); **ಜೊಲ್ಲು** ಆಹಾರವನ್ನು ತೊಯಿಸುತ್ತದೆ (ಮಬಂಬಯಿ. ೪-೮೫). **ತೊಯ್ಯಿಸು**: ಮೇಘಜಲ ತೊಯ್ಯಿಸಿರೆ ತಳಿರುಗಳ (ಧನ್ಯಾಲೋ. ೬೭). **ತೊಯ್ಸು**: ಹರಿದು ಬಂದು ನನ್ನ ಮೈ ತೊಯ್ಸಲೆಂದೇ ನೀನಲ್ಲಿರುವೆ! (ಕಲ್ಲೋಲ. ೧೪-೮). [ ತೋ + – ಇಸು₃ ]

**ತೋಯು** 'ತೋ' ನೋ.

**ತೋಯೆ** 'ತೊವ್ವೆ' ನೋ.

**ತೋಯೇಜ** (ನಾ). = ತೋಯಜ ೨. 'ತೋಯೇಜಾಸನ' ಪರಾ. [ ಸಂ. ]

**ತೋಯೇಜಾಸನ** (ನಾ). ಕಮಲವನ್ನು ಪೀಠವಾಗಿ ಉಳ್ಳವನು; ಬ್ರಹ್ಮ: ತೋಯೇಜಾಸನನಿಂದ್ರ ರುದ್ರ ಧನಧರ್ ಮುಂತಪ್ಪ ದೇವೇಶರುಂ ಶ್ರೀಯುಂ ಬೀರುವ ನಿನ್ನ ಪಾದರಜಮಂ ಶೀರ್ಷಾಗ್ರದೊಳ್ಪೊತ್ತು (ಮುಸೂಮು. ೨-೫೮). [ತೋಯೇಜ + ಆಸನ]

**ತೋಯೋದ್ದೇಶ** (ನಾ). = ತೋಯಾಶಯಂ: ಅಪ್ಪುದಿಪ್ಪಾಗರಾಜಗೆ ಮೆಯ್ಗುರ್ಚೆ ಕೊಳಲ್ಕಜಂ ಸಮೆದ ತೋಯೋದ್ದೇಶಮೋ ಸಂದೆಯಂಬಗೆಗಾದತ್ತೆನಿಸಿರ್ದುದೇಂ ಪಿರಿದೊ ವೈಶಂಪಾಯನಾಬ್ಜಾಕರಂ (ಗದಾಯು. ೭-೧೦). [ ತೋಯ₂ + ಉದ್ದೇಶ ]

**ತೋಯೋದ್ಭವ** (ನಾ). ನೀರಿನಲ್ಲಿ ಹುಟ್ಟಿದುದು; ಮುತ್ತು, ರತ್ನ ಮೊದಲಾದುವು: ಬುಧಂ . . . ಶಶಿಗೇಹದೊಳ್ ನೆಲಸೆ ಬಂಧುದ್ವೇಷಿ ತೋಯೋದ್ಭವದ್ರವಿಣಂ (ಜಾತಕ. ೧೭-೨೪). [ ತೋಯ₂ + ಉದ್ಭವ ]

**ತೋಯೌಕಸ** (ನಾ). ನೀರಿನಲ್ಲಿ ಬದುಕುವ ಪ್ರಾಣಿ; ಜಲಚರ: ಭೇಕ ಶುಕ್ತಿಕೆ . . . ಕಮಠ ಕಂಬು ಪ್ರಮುಖ ತೋಯೌಕಸಾಹ್ವಯದಿಂದೆ ರಾಜಿಸುತಿರ್ಪುದಂಬುನಿಧಿ (ಶಂಕರಾ. ೧-೩೦). [ಸಂ. ತೋಯೌಕಸ್]

**ತೋರ, ಥೋರ** (ನಾ). ೧. ಗಾತ್ರವಾದುದು; ದಪ್ಪವಾದುದು; ಸ್ಥೂಲವಾದುದು: ಕಾಯ್ದ ಕಬ್ಬಿಣ್ಣ ನಿಡಿಯವುಂ ತೋರಮುಮಪ್ಪ ಕೀಲ್ಗಳಿಂದಂ ಮೆಯ್ಯೆಲ್ಲಮಂ ನಿರಂತರಮುರ್ಚಿ ಪೋಗಿ ನೆಲನಂ ತಾಗಿನಂ ಕೀಲಿಸೆಯೆಪಟ್ಟ ಮೆಯ್ಯನೊಡೆಯನಾಗಿಯುಂ (ವಡ್ಡಾರಾ. ೫೦-೭); ಮಾನದ ತೋರಿಹ ಅವಿಂಗೆ ಕೊಳಗದ ತೋರಿಹ ಕಿಚ್ಚಲು (ಅಪದಂ. ೧೨-೪೮); ತೆಂಗಿನ ಕಾಯ ತೋರದ ಮೊಲೆವೊತ್ತ ಲತಾಂಗಿಯ . . . ಚೆಂದುಟಯನಿದನೆಮೋಹತರಂಗಿಣಿವೇಳ್ವೆ (ಮೋಹತ. ೧-೩೭; ತೋರವಾಗಿರುತಿಹುದು ಪರ್ವತ ಧಾರುಣಿಯನದು ಹರಹಿಕೊಂಡೇ ದೂರದೀದಲಿ ನೋಡಿದಡೆ ಅಣುವಾಗಿ ಕಾಣಿವುದು (ಜ್ಞಾನಸಿಂ. ೬-೨೦). ೨. ಗಾತ್ರ; ಆಕಾರ: ತೋರದಲಿ ಕುಲಗಿರಿಯ ಸತ್ವದ ಸಾರದಲಿ ವಜ್ರವನು ದನಿಯಲಿ ಕಾರ ಬಜಸಿಡಿಲಂದವಿದನುಗಿದೊಂದು ಮಾಡಿದನು (ಕುಮಾರಭೀ. ೩-೧೮); ಕಣಿಕವನು ನಿಂಬೆಯ ಹಣ್ಣ ತೋರದುಂಡೆಯ ಮಾಡಿ (ಸೂಪಶಾ. ೧-೨೫); ಪಿರಿದಪ್ಪ ಕುಂಬಳಕಾಯ ತೋರದ ಮುತ್ತಿನಿರವಾಂತು ಮೆಱೆವ ಕಾವ್ಯಗಳು ಇರಲು ನಾ ಪೇಳ್ವೆ ನೆಲ್ಲಿಯಕಾಯ ತೋರದ ವರಮುಕ್ತಿನಂತೀ ಕೃತಿಯ (ನಾಗಕು. ಪೀಠಿಕಾಸಂಧಿ. ೫೪); ೩. ಹೆಚ್ಚಳ; ಆಧಿಕ್ಯ: ಮುರಿದೆಱರತ್ತೆ ಮೆಯ್ದುರಿದು ತೋರಮನಾಳ್ದು ಪೊದಟ್ಟು ನೀಳ್ದ ಪಂಕರುಹ ಪರಾಗಮುಂ ಜವದೆ ಮಂದರಮಾಗೆ ಸರೋವರಾಬ್ಧಿಯಂ ಸ್ಮರಸುರವಲ್ಲಭಂ ಪೊಸೆದು ಪುಟ್ಟಿಸುವಿಂದುಗಳಂದದಿಂ (ಲೀಲಾವ. ೧೩-೧೨೩); (ಗ೦). ೪. ದಪ್ಪವಾದ; ಸ್ಥೂಲವಾದ; ಗಾತ್ರವಾದ: ಹೆಜ್ಜಾರ ಸಮರದೊಳ್ಮಾರಾರಿ ಮಾರನಾಗಿ . . . ರಾಣಿ ವಾಸಭಣ್ಡಾರಮಂ ಪೆಟಿದು ತೋರ ಪಳಯಿಗೆ ಭಾಗಿತ್ತಿ ತೊಱೆಬಡಗರೆನಾಡುವಿಷಯ ಅಪ್ಪೊಗಾಲ್ನಾಮಗ್ರಾಮ ಸರ್ವ್ವಬಾಧಾಪರಿಹಾರಮಪ್ಪ ಕಟ್ಟುಗೊಟ್ಟಂ (ಎಕ. III, ನಂಜನ ೧೨೨-೧೭; ೧೦೮೯); ಓವನಂ ಮಿಡುಕಲೀಯದೆ ಕಾಲ್ಮಿಡಿದಟ್ಟು ತೋರ ಕಣ್ಪನಿಗಳನಿಕ್ಕಿದಳ್ ತರಳಲೋಚನೆ ಸಂಕಲೆಯಿಕ್ಕಿದಂತೆವೋಲ್ (ಪಂಪಭಾ. ೪-೯೭); ಅನುಭವಿಸಿದ ಕೋಟಲೆಗಳನಿನಿಸಂದೆಣಿಸಲ್ಕೆ ಮೌಕ್ತಿಕಾಕ್ಷಾವಳಿಯಂ ವನಜದಳನಯನೆ ಸಮೆದವಳೆನೆ ಸುರಿದುವು ತಱಿದೆ ತೋರ ಕಣ್ಪನಿದುಱುಗಲ್ (ಕಾದಂಬ. ೨೬೨). ೫. ದೊಡ್ಡದಾದ; ಬೃಹತ್ತಾದ. 'ತೋರಗದ', 'ತೋರಗಲಂ' ಪರಾ. ೬. ಅತಿಶಯವಾದ; ಹೆಚ್ಚಾದ: ನೀರಧಿಯ ಪೀರುವವೊಲ್ಕೆತಪ್ಪ ಮಾರುತಿಯ ನಿಟ್ಟಿಸುತ ನಕ್ರ ಕೂರ್ಮಂಗಳೆಲ್ಲ ತೋರಭಯದಿಂದೊಂದನೊಂದೊರಸಿ ವಿತಳಮಂ ಸಾರುತಿರಲು (ಪಂಚಾರಾ. ೫-೧-೨೭). 'ತೋರತೋಟ' ಪರಾ. **ಥೋರ**: ೧.ನೂಲೆಳೆಯ ಗಾತ್ರದ ಮರದಲ್ಲಿ ಬೆಟ್ಟದ ಥೋರದ ಕಾಯಿ ಫಲವಾಯಿತು (ತೋರೆಮಾ. ೧೯೨-೭೨೨). ೫. ಥೋರ ಕುಲಗಿರಿನಿಚಯಕಂ ಕುಲಿಶ ಕವಿವವೋಲ್ (ತುರಂಗ. ೭೪-೨೪).

[ <ಪ್ರಾ. ಥೋರ./ಮರಾ. ಥೋರ./ತುಳು. ತೋರ, ತೋರೋ: ತೆಲು. ತೋರ./ಸಂ. ಸ್ಥೂಲ ]

**ತೋರಂಜಿ** 'ತುರಂಜಿ' ನೋ.

**ತೋರಂಬಟೆ** (ನಾ). ಒಂದು ಬಗೆಯ ದಪ್ಪವಾದ ಅವಂಟೆಕಾಯಿ: ಹರುಷದಿಂದಿಟ್ಟು ತೋರಂಬಟೆಕಾಯನು ಜಱೆವ ಮೌಕ್ತಿಕದ ಬಾವುಲಿಯ (ಜ್ಞಾನಚ. ೪-೭). [ ತೋರ + ಅಂಬಟೆ ]

**ತೋರಕಬರಿ** (ನಾ). ದಪ್ಪವಾಗಿರುವ ತುರುಬು; ತೋರಮುಡಿ: ತೋರಕಬರಿಯ ಕುಡಿತೆಗಂಗಳ ... ಭೂರಿಭೂಷಣದಮರಿಯರು ಮೆಱೆದಿರ್ದರೊಂದೆಸೆಯ (ತೊರವೆ. ೫-೨-೭೦). [ ತೋರ + ಕಬರಿ ]

**ತೋರಕಿಡಿ** 'ತೋರಗಿಡಿ' ನೋ.

**ತೋರಕಿವಿ** 'ತೋರಗಿವಿ' ನೋ.

**ತೋರಕುಚ, ಥೋರಕುಚ** (ನಾ). ದೊಡ್ಡಗಾತ್ರದ ಮೊಲೆ: ಬಿಗಿದಡರಿದ ತೋರಕುಚ ಸಣ್ಣ ನಡುವಿನ ಸೊಗಸಲಿ ಮೆಱೆವ ತೆಳ್ವಸಿಱ ... ಶಂಖಿನಿಯರು ವಿಗೆ ರಾಜಿಸಿದರು (ಶಂನವಿ. ೨೧-೭೯). **ಥೋರಕುಚ**: ಥೋರಕುಚದ ಮೇಲೆ ಚಾರುಗಂಧವ ಪೂಸಿ (ಶಾದಿಕೀ. ೪೭-೧೨). [ ತೋರ + ಕುಚ ]

**ತೋರಗಂಬ** 'ತೋರಗಂಭ' ನೋ.

**ತೋರಗಂಭ, ತೋರಗಂಬ** (ನಾ). (ಮಾಳಿಗೆ ಅಥವಾ ಚಪ್ಪರಕ್ಕೆ ಆಧಾರವಾಗಿ ನಿಲ್ಲಿಸುವ) ದಪ್ಪವಾದ ಕಂಬ: ಲೋಹದ ತೋರಗಂಭಂಗಳೊಳಗೆ ಮುರಿಗೇಶದಿನೆಸೆವ ಶಬರರ ತಲೆಗಳೋಳಿಯಂತೆ ರಕ್ತಚಾಮರಂಗಳನ್ನೊಳಕೆಯ್ದು ಕಬ್ಬಿಣ್ಣ ಕನ್ನಡಿಯ ತೋರಣಂಗಳೊಳಂ (ಕಾದಂಬ. ೨೬೯). **ತೋರಗಂಬ**: ಸರಸೀಪರಿಸರದೊಳ್ ನಟ್ಟು ಮುಗಿಲಂ ಮುಟ್ಟುವಂತೆ ಮುಂದಿರ್ದ ಕಲ್ಲ ತೋರಗಂಬಮಂ . . . ಕಿಟ್ಟು (ವರ್ಧಪು. ೨-೪೮ ವ); ಬೆಳೆದೆಳವಳ್ಳಿಯೊಳ್ ಪುದಿದು ತೋಱುವ ಮಾವಿನ ತೋರಗಂಬದಿಂ . . . ಸೊಗಯಿಪೋಲಗಸಾಲೆಯೊಳಿರ್ದರ್ (ಕಬ್ಬಿಗಕಾ. ೧೨೭). [ ತೋರ + ಕಂಭ ]

**ತೋರಗಣು** (ನಾ). ದೊಡ್ಡ ಕಣ್ಣು : ಕಾರೊಡಲು ದಾಡೆ ಮಣಿಮಕುಟ ಫಣಿಕುಂಡಲು ತೋರಗಣು ಕೆಮ್ಮೀಸೆ . . . ಎಸೆವ ಬಾವುಲಿ ತೊಡರಿನ ವೀರಭದ್ರಂ (ಸಿದ್ಧರಾ. ೪-೬). [ ತೋರ + ಕಣು (<ಕಣ್) ]

**ತೋರಗದ** (ನಾ). ದೊಡ್ಡ ಬಾಗಿಲು: ತ್ರಿಭುವನದಗ್ರದಲ್ಲಿ ಮೂವತ್ತಾಱು ಲೋಕ ಅದರ ಮಧ್ಯದಲ್ಲಿ ಇಪ್ಪತ್ತೈದು ಮಹಾಮೇರುವೆ ಹದಿನಾಱು ವರ್ತನದ ಕೊಂಡಿ ಗುರು ಲಘುವೆಂಬ ತೋರಗದ (ಶೂಲಿಮೂ. ೨೩೩-೭೮೪). [ ತೋರ + ಕದ (<ಕದವು₁) ]

**ತೋರಗರುಳು** (ನಾ). ದೊಡ್ಡ ಕರುಳು,-ಅಂತ್ರ : ಸಾರು ನೀ ಸಾರೆಲವೊ ಭೀಮನ ತೋರಗರುಳಿನ ದಂಡೆಯನು ಕೈಯಾರೆ ಮಾರಿಗೆ ಮುಡಿಸುವೆನು (ಕುವ್ಯಾಕ. ೩-೧೮). [ ತೋರ + ಕರುಳು (<ಕರುಳ್) ]

**ತೋರಗಲು** (ನಾ). ದೊಡ್ಡ ಶಿಲೆ,- ಬಂಡೆ : ಅಱ ಸಱ ತೋರಗಲು ಕವಣೆಗಲು ಕಣೆ ಭಂಡಿಯು ಗಾಲಿ ಕೆಲ್ಲೆ ಹೆಗ್ಗೊಱದುಱಯೆ[ಣ್ಣೆ] ಕಾಯ್ದು ಮಣಲಗ್ಗದ ಢೇಂಕಣೆ (ಸಾಇಇ. XX, ೧೨೬-೩ ; 1186). [ ತೋರ + ಕಲ್ಲು₁ (<ಕಲ್₃) ]

**ತೋರಗಾಯ್** (ನಾ). ದಪ್ಪವಾದ ಕಾಯಿ; ದೊಡ್ಡ ಕಾಯಿ : ಭಾರದಿಂ ತೂಗಿ ನೆಲನಂ ತಾಗುವ ತೋರಗಾಯ್ಗಳಿಂ ಜನನಿಯಪ್ಪವಸಿಯುಂ ಮುದ್ದಿಂ ಮುಂಡಾಡುವಂತಿರಿರ್ದ ಮಾತುಲುಂಗಸಂಘಾತಂಗಳುಂ (ಚಂದ್ರಪು. ೧-೧೦೫ ವ); ತೋರಗಾಯ್ಗಳ ಬಹುಭಾರಮಂ ತಳೆದು ಸಾರ್ವ ವಿಹಂಗಚಯಕ್ಕೆ ಬೇಸಱಂ ಬಳೆಯಿಪುದೆಂದು ತಾಳತರುವಂ ನಗುವಂತೆ ಪೊಲಾದ ಬೀಡೆವಣ್ಗಳೆನೆಸೆದಿರ್ಪ ದಾಡಿಮತರುವ್ರಜಮಾ ಬನದೊಳ್ ವಿರಾಜಿಕುಂ (ಕುಸುಮಾ. ೧-೯೦) ; ಸಾರವಿಲ್ಲದ ಚಂದ್ರಕಳೆಯನು ಸೇವಿಪ ಭೂರಿ ನಿರ್ಜರರು ಗಾಂಪರಿಗೆ ತೋರಗಾಯ್ಗಳ ರಸದೋಱಲೆನಿಸಿ ನಾಳಿಕೇರ ಮಾಂಬರವ ಚುಂಬಿಪವು (ವರ್ಧಚ. ೧-೭೦). [ ತೋರ + ಕಾಯ್₄ ]

**ತೋರಗಿಡಿ, ತೋರಕಿಡಿ** (ನಾ). ದಪ್ಪವಾದ ಕಿಡಿ; ದೊಡ್ಡ ಕೆಂಡದ ಚೂರಂ: ಎಚ್ಚೊಡಂಬುಂಬನಟ್ಟಿ ಪಳಂಚುತೆ ಸಿಡಿಲ್ದ ತೋರಗಿಡಿಯಿಂದೊಂದೊಂದಱೊಳ್ ಬೇವುದುಂ ತ್ರಿಪುರಂಬೊತ್ತಿಸಿದಂತೆ ಪೊತ್ತಿ ಪೊಗೆದತ್ತೆತ್ತಂ ವಿಯನ್ಮಂಡಳಂ (ಪಂಪಭಾ. ೧೧-೧೭) ; ಘಟೆಯೊಳ್ ಘಟೆ ಜೋಡಿಸಿ ದಂತ ಜಾಲದೊಳ್ ಭೋಂಕನೆ ಪೊಣ್ಮೆ ತೋರಗಿ[ಪಾಠಾಂ. ಕಿ]ಡಿ ಸೂಸೆ ಕಱುತ್ತಿಱ ತಾಗಿತಾಜಿಯೊಳ್ (ಗಿರಿಕ. ೬-೭೨) ; ತೋರಗಿಡಿಯನೆ ತೊಳಗಿದುವ ರುಚಾಂಶುರುಚಿರತಾರಾನಿಕರಂ (ಪಾರ್ಶ್ವಪು. ೧೬-೨೩). **ತೋರಕಿಡಿ :** ಪೊಣ್ಮದ ಮುನಿಸಿಂ ಭುಗಿಲನುರಿದೆಟ್ಟನಾ ದಿಟ್ಟಿಗಳೊರ್ಮೆಯೆ ತೋರ ಕಿಡಿಗಳಂ ಕೆದಱುವಿನಂ (ಕಬ್ಬಿಕಾ. ೧೫೧) ; ಹೊಸ ಮಸೆಯ ಧಾರೆಯ ತೋರಕಿಡಿಯಲಿ ಮುಸುಕಿತರಸನ ತೇರು (ಕುವ್ಯಾದ್ರೋ. ೫-೨೧). [ ತೋರ + ಕಿಡಿ ]

**ತೋರಗಿರಿ** (ನಾ). ದೊಡ್ಡ ಬೆಟ್ಟ ; ಮಹಾಪರ್ವತ : ತೋರಗಿರಿಗಳ ಮೆರಸಿದಿಳೆ ತಾ ನೀರೊಳದ್ದುವದೆಂದು ಸಲೆ ಮದವಾರಣಂಗಳು ಧರಿಸಿ ಕೊಂಡಿಹವೆಂಬುದಿಕ್ಕಿನಲಿ (ಕುವ್ಯಾಅ. ೬-೨೭). [ ತೋರ + ಗಿರಿ₁ ]

**ತೋರಗಿವಿ, ತೋರಕಿವಿ** (ನಾ). ದೊಡ್ಡ ಕಿವಿ ; ಅಗಲವಾದ ಕಿವಿ : ತೋರಗಿವಿ ಕೆಂಗಣ್ಣು ಬಿಡುವಾಯಿ ನಿಡುದಾಡೆ ನಿಡಿಯ ಕಾಳರಕ್ಕಸಿ (ಸಿದ್ಧರಾ. ೬-೧). **ತೋರಕಿವಿ:** ವಾರಿಧಿಯ ನೀರೊಳಗೆ . . . ವಾರಿಕರಿಗಳು ಧುಮುಕಿಯವುಗಳ ತೋರಕಿವಿಗಳಗಂಟಿ ಫೇನವು ಚಾರುಚಮರಗಳಂತೆ ಯಿರ್ಭಾಗಾಗಿ ತೋರುವದು (ರಘುವಂ. ೧೪೦-೧೧). [ ತೋರ + ಕಿವಿ₃ ]

**ತೋರಗುಂಡು** (ನಾ). = ತೋರಗಲು : ಒತ್ತಿ ಕಾಲಿಡಲೊಡನೆ ಗಿರಿ ತಲೆಗುತ್ತುತಿರ್ದುದು . . . ನೆತ್ತಿಯಗ್ರದ ತೋರಗುಂಡುರುಳುತ್ತಲಿರ್ದವು (ತೊರರಾ. ೪-೧೨-೨೪). [ ತೋರ + ಗುಂಡು ]

**ತೋರಗುರುಳ್** (ನಾ). ಅಧಿಕವಾದ ಕೂದಲು,- ಮುಂಗೂದಲು : ಪೆಱನೊಸಲಂ ಮೆಟ್ಟಿ ನಿಮಿರ್ದ ತೋರಗುರುಳ ತೊಂಗಲೆಳವೆಱಮನಂಧ ಕಾರಮಾವರಿಸಿದಂತೆ ತೋಱಯುಂ (ಪಂಪರಾಮಾ. ೩-೧೩೩ ವ); ಪಾವುಧೀ. ವಿತತಿ ಮಾರ್ಪೊಳೆವೀಕ್ಷಣದಿಂ ನಿಜಾಸ್ಯ[ಮಂ] ತೋರಗುರುಳ್ಗಳಿಂ ಪಡೆವು ದೊಪ್ಪುಮಸಲ್ಲಿಗೆ ಮುನ್ನಿನಂದದಿಂ (ವರ್ಧಪು. ೧-೪೦). [ ತೋರ + ಕುರುಳ್₁ ]

**ತೋರಗೆಂಡ** (ನಾ). ದಪ್ಪವಾದ ಕೆಂಡ: ಒದಱ ಸಾಕಿಲ್ದು ಬೆಟ್ಟುಗಳ ಕೆಯ್ದುಗಳುರ್ವಿದ ನೀರ ತೋರಗೆಂಡದ ಸರಿಯುಂ ಸಮಂತು ಸುರಿದು . . . ಬಾಧಿಸಿದತ್ತು ತದ್ಬಲಂ (ವರ್ಧಪು. ೧೫-೩೯). [ ತೋರ + ಕೆಂಡ ]

**ತೋರಗೊಂಡೆಯ** (ನಾ). ದೊಡ್ಡದಾದ ಕೊಂಡೆ,-ಕುಚ್ಚು : ಇಕ್ಕಿದ ಪಕ್ಕರಕ್ಕೆ ನಿಡುರಘುಲ್ಲಿ ತೊಡಂಕುವ ತೋರಗೊಂಡೆಯಂ ಸೆಕ್ಕಿದ ಖಂಡೆಯಂ ಬಗಿದ ಬಲ್ (ಚಕವಿ. ೩-೯೬). [ ತೋರ + ಗೊಂಡೆಯ ]

**ತೋರಗೊಂಬು** (ನಾ). ದೊಡ್ಡದಾದ ರೆಂಬೆ ; ದೊಡ್ಡ ಕೋಡು : ನನೆಯಂ ಪೇಱದ ತೋರಗೊಂಬು ನನೆಯಂ ಪೂಗೊಂಚಲಂ ಪೊತ್ತು ನೆಟ್ಟನೆ ಬಣ್ಣೇಱದ ಬಳ್ಳಿಗೊಂಬು (ಕಬ್ಬಿಕಾ. ೬೨). [ ತೋರ + ಕೊಂಬು₁ ]

**ತೋರಗೊನೆ** (ನಾ). ದಪ್ಪವಾಗಿರುವ ಗೊಂಚಲಂ; ಗಾತ್ರವಾದ ಗೊನೆ: ತೋರಗೊನೆವೇಱದ ಕಂಚಳವಾಱ ತೋರವಣ್ಪೇಱದ ಬಕ್ಕೆ (ಅನಂಪು. ೧-೭೮). [ ತೋರ + ಗೊನೆ₃ (<ಗೊಲೆ₂ ]

**ತೋರಡವು** (ನಾ). ತೋರಿಕೆಗಾಗಿ ಹಾಕುವ ಒತ್ತೆ; ನಂಬಿಕೆಗಾಗಿ ಇಡುವ ಒತ್ತೆ : "ತೋರಡವು-ಒತ್ತೆಹಾಕುವುದು" (ಚಾನಕೋ. ೬೮). [ ತೋರು (<ತೋಱು) + ಅಡವು₂ (<ಅಡರ್ಪು₂) ]

**ತೋರಣ** (ನಾ). ೧. ಹೆಬ್ಬಾಗಿಲಂ ; ಹೊರಬಾಗಿಲು : ತೋರಣಃ. ಬಹಿರ್ದ್ವಾರಂ – ಪುಷ್ಪಮಾಲಿಕೆ ತಳಿರು ತೋರಣ ಮಾವಿನ ಸೊಪ್ಪು ಮುಂತಾದವುಗಳನ್ನು ಕಟ್ಟುವದಕ್ಕೋಸ್ಕರ ಬಾಗಿಲ ಹೊರಗಡೆ ಕಾಣುವಂಥ ಕಂಭಗಳಿಂದ ಕಟ್ಟಲ್ಪಟ್ಟ ದ್ವಾರಬಂಧನದ ಚೌಕಟ್ಟು. ಮನೆಯ ಹೊರ ಬಾಗಿಲು, ತೋರಣಬಾಗಿಲು (ಸಿದ್ಧಾಂತಿ. ೯೨). 'ತೋರಣದ್ವಾರ' ಪರಾ. ೨. ಹಬ್ಬ, ಹರಿದಿನ ಇತ್ಯಾದಿ ವಿಶೇಷ ಸಂದರ್ಭಗಳಲ್ಲಿ ಅಲಂಕಾರಕ್ಕಾಗಿ ಬಾಗಿಲು, ಬೀದಿ ಮುಂತಾದೆಡೆಗಳಲ್ಲಿ ಕಟ್ಟುವ ತಳಿರು, ಹೂ, ಬಟ್ಟೆ ಮುಂತಾದಂವುಗಳ ಮಾಲೆ,-ದಂಡೆ; ವಂದನಮಾಲೆ: "ದ್ವಾರದ ಮುಂದೆ ಸಂಧಿಸಿರೆ ಕಟ್ಟಿದ ವಂದನಮಾಲೆ ತೋರಣಂ" (ವಸುಕೋ. ೪೮-೧೬) ; "ವಂದನಮಾಲಾ, ತೋರಣಂ- ಈ ೨ ತೋರಣಂ" (ಹಲಾಯು. ೫೦-೧೪೬) ; ಪೊಟಲೊಳಗೊಪ್ಪೆ ಕನ್ನಡಿಯ ಕಂಚಿನ ತೋರಣದೋಳಿಗಳ್ (ಪಂಪಭಾ. ೩-೭೪) ; ಊರುಯುಗಸ್ತಂಭೋದ್ಗತ ತೋರಣಮೆಂಬಂತೆ ಮಿಸುಗುವುಡಿನೂಲ್ (ಕಾದಂಪೂ. ೩೩೪) ; ಪೊನ್ನ ತೋರಣದಿಂ ದುಕೂಲದ ಸೂಸಕಂಗಳನೊಪ್ಪುವೆತ್ತುನ್ನತಧ್ವಜದೋಳಿಯಿಂ . . . ಪಿರಿದುನ್ನತಿಕ್ಕೆಯಿನಿರ್ದುದೀ ಜಿನಮಂದಿರಂ (ಧರ್ಮಾಮೃ. ೬-೪೮) ; ಹಬ್ಬಕ್ಕೆ ತಂದ ಹರಕೆಯ ಕುಱ ತೋರಣಕ್ಕೆ ತಂದ ತಳಿರ ಮೇಯಿತ್ತು (ಬಸವ. ೧೨೯); ಕಾರಿರುಳ ಪಟ್ಟಣಕೆ ಚಂದ್ರನ ತೋರಣವ ಬಿಗಿದಂತೆ (ಕುವ್ಯಾಉ. ೧೧-೨೮) ; ಬೆಂದ ಮನೆ ಬಾಗಲಿಗೆ ಮುಂದೆ ತೋರಣವೇಕೆ (ಸರ್ವಜ್ಞ. ೯೧೯). [ ಸಂ. ]

**ತೋರಣಂಗಟ್ಟಿಸು, ತೋರಣಗಟ್ಟಿಸಂ** (ಕ್ರಿ). (ಚಿಗುರು ಮುಂತಾದುವುಗಳ) ಮಾಲೆಯನ್ನು ಬಿಗಿಸಂ : ಮಣಿಭದ್ರಮಪ್ಪ ಹೇಮ ಮುಕ್ತಾಹಾರಂಗಳಿಂ ತೋರಣಂಗಟ್ಟಿಸಿಯರಸರ ಬರವಂ ಪಾರುತ್ತಿರೆ (ವಡ್ಡಾರಾ. ೨೬-೩) ; ಇನಿಯನನೀ ಪಾಸೊಳ್ ತಂದೆಳದಳಿರಿಂದೆ ತೋರಣಂಗಟ್ಟಿಸುವೆಂ (ಚಂದ್ರಪು. ೮-೯೧). **ತೋರಣಗಟ್ಟಿಸು :** ನೀರಜಭವನ ಮಾನಸಪುತ್ರ ನೀನಲ್ಲದಾರಾದೊಡೀ ಮಾತುಗಳ ಭಾರಾಂಕನಾಗಿಯೆನ್ನೊ

ಡನೆ ಪೇಳ್ದೊಡೆ ಸೀಳಿ ತೋರಣಗಟ್ಟಿವೆನೆಂದ (ಮೋಹತ. ೧೨-೩೧).
[ ತೋರಣಂಗಟ್ಟು + - ಇಸು₃ ]

**ತೋರಣಂಗಟ್ಟು,** ತೋರಣಗಟ್ಟು (ಕ್ರಿ). (ಚಿಗುರು ಮುಂತಾದುವು ಗಳ) ಮಾಲೆಯನ್ನು ಕಟ್ಟು,_ಬಿಗಿ: ಆಗಳಾ ಬಸಂತರಾಜನ . . . ಬರವಿಂಗೆ ತೋರಣಂಗಟ್ಟಿದಂತೆ ಬಂದ ಮಾಮರಂಗಳನಡರ್ದ . . . ಮಾಧವೀಲತೆಗಳುಂ (ಶಂಖಭಾ. ೨-೧೨ ವ); ಪುರದ್ವಾರಮನವನಡಗಿಂ ಬುತ್ತಿಯಿಟ್ಟು . . . ಕರುಳಿನಿಂ ತೋರಣಂಗಟ್ಟಿ ಕೋಲಾಹಲನಾದಂ ಪೆರ್ಚಿ ಪೊಕ್ಕಂ ದನುಜನ ಪೊಟಲಂ ಸಾಗ್ರಜನ್ಮಂ ಮುಕುಂದಂ (ಜಗವಿ. ೬-೧೧). **ತೋರಣಗಟ್ಟು:** ರಾವುತ ತಲೆಯಂ ಸಂ x x x ತೋರಣಗಟ್ಟುತ್ತಂ ಚೆಲ್ವಿಂ ಸುರಲೋಕಮೊಯ್ದಿದಂ (ಸೌಇಇ. XX, ೧೬೯--೧೧ ; 1183).
[ ತೋರಣ + ಕಟ್ಟು₁ ]

**ತೋರಣಗಂಬ** 'ತೋರಣಗಂಭ' ನೋ.

**ತೋರಣಗಂಭ,** ತೋರಣಗಂಬ (ನಾ). (ತಳಿರು ಮುಂತಾದವುಗಳ) ಮಾಲೆಯನ್ನು ಕಟ್ಟುವ ಕಂಭ; ತೋರಣವನ್ನು ಕಟ್ಟುವ ಕಂಭ: ತೋರಣಗಂಭದಲ್ಲಿ ಒಬ್ಬ ಭೈರವ ಜೋಗಿ ಶೂಲದಲ್ಲಿರುವನು (ಬತ್ತೀಪು. ೧೨೩). **ತೋರಣಗಂಬ:** ಸೊಬಗಿಂಗೆತ್ತಿದ ತೋರಣಗಂಬಂಬೊಲಿರ್ದುವಾಕೆಯ ತೊಡೆಗಳ್ (ಕಬ್ಬಿಕಾ. ೭೫). [ ತೋರಣ + ಕಂಭ ]

**ತೋರಣಗಟ್ಟಿಸು** 'ತೋರಣಂಗಟ್ಟಿಸು' ನೋ.

**ತೋರಣಗಟ್ಟು** 'ತೋರಣಂಗಟ್ಟು' ನೋ.

**ತೋರಣಗಲ್ಲು** (ನಾ). ತೋರಣವನ್ನು ಕಟ್ಟುವ ಕಲ್ಲಿನ ಕಂಬ: ಬಸ್ತಿಯಿಂದ ಪಡುವಲು ಪೂರ್ವದಲು ನಡವ ಉಭಯಮಾರ್ಗದ ಹಾದಿಗೆ ಯಿಕ್ಕಿದ ತೋರಣಗಲ್ಲಿನೊಳಗಣ ಪ್ರಮಾಣಿನಲಿ . . . ಮೂಡಕಡೆಯಲು ಮೂಡಣ ತೋರಣಗಲ್ಲಿಂ ಪಡುವಲು (ಸೌಇಇ. IX-II, ೪೫೭-೨೭ ; 1466).
[ ತೋರಣ + ಕಲ್ಲು (<ಕಲ್₃) ]

**ತೋರಣಗ್ರಥನ** (ನಾ). ತೋರಣವನ್ನು ಕಟ್ಟುವುದು; ತೋರಣದ ರಚನೆ, ಬಂಧ: ತೋರಣಗ್ರಥನ ಮುಕ್ತಾಮಾಣಿಕಾಳಂಬನವ್ಯಸನ ವ್ಯಗ್ರಕರಂ ಕರಂ ಸೊಗಯಿಸಿತ್ತಂತಲ್ಲಿ ಕಾಂತಾಜನಂ (ಚಂದ್ರಪು. ೬-೫೫).
[ ತೋರಣ + ಗ್ರಥನ ]

**ತೋರಣದರ್ಪಣ** (ನಾ). ತೋರಣದಲ್ಲಿರುವ ಕನ್ನಡಿ: ತೋರಣ ದರ್ಪಣದೊಳ್ ಚಮರೀರುಹಮಂ ನೃಪತಿಗಿಕ್ಕುಮಬಲೆಯರ ನೆಟಲ್ ರಾ ರಾ ಜಿ ಸಿ ದು ವು ರಿಪುರಾಜರಾಜ್ಯಶ್ರೀಸಮೂಹಮಿದಿರ್ವಂದಿರವಂ (ಚಂದ್ರಪು. ೧೧-೧೭). [ ತೋರಣ + ದರ್ಪಣ ]

**ತೋರಣದ್ವಾರ** (ನಾ). ಹೆಬ್ಬಾಗಿಲು; ಮಹಾದ್ವಾರ: ಅಂತು ಸೊಗಯಿಸುವ ವನವೇದಿಕೆಯ ನಾನಾಮಣಿಮಯೂಖಮಾಲಾ ವಿರಾಜಿತೋತ್ತುಂಗ ತೋರಣದ್ವಾರದಿಂದಂ ನುಗುಳ್ದು ವನವೀಥಿವಿಡಿದು ಬಂದು (ಆದಿಪು. ೦೩-೧೧ ವ). [ ತೋರಣ + ದ್ವಾರ ]

**ತೋರಣವಿಡು** (ಕ್ರಿ). = ತೋರಣಂಗಟ್ಟು: ಆ ಸದ್ದಿಲ್ಲದ ಕತ್ತಲೆಯ ಮುಸುಕಿನಲ್ಲಿ, ಕಣ್ಣೀರ ಹಾರ ಕೋದು ತೋರಣವಿಟ್ಟು ಒಂದು ಗುಪ್ತ ಶೋಕಮಂದಿರವನ್ನು ನಿರ್ಮಿಸಿ ನಿಲ್ಲಿಸಿಕೊಂಡಳು (ಇಪ್ಪಳ. ೨೮೪).
[ ತೋರಣ + ಇಡು₁ ]

**ತೋರತಕ್ಕು** (ನಾ). ಹೆಚ್ಚಿನ ಯೋಗ್ಯತೆ; ಹಿರಿಯ ಯೋಗ್ಯತೆ: ಇಕ್ಕಿದ ಸೀಸಕಂ ಪಱಿದು . . . ಬೆನ್ನೊಳಮಾರ್ಚಿದ ಪೊನ್ನ ಪಲ್ಲಣಂ ಪಕ್ಕರ ಕೇಜಮಾರು ಕಟಾರಿಕರ್ಡಿಯಾದುವು ಬಾಳ ಬಾಯೊಳಿಂತಕ್ಕುಮೆ ತೋರ ತಕ್ಕಿದೆನೆ ಗೋಟಯಿಲರ್ ಕೆಲರಲ್ಲಿ ಕಾದಿದರ್ (ಕಬ್ಬಿಕಾ. ೨೮೦).
[ ತೋರ + ತಕ್ಕು₂ ]

**ತೋರತೋಟ** 'ತೋರದೋಟ' ನೋ.

**ತೋರತ್ತಿ,** ತೊರತಿ, ತೊರತ್ತಿ (ನಾ). ದೊಡ್ಡ ಜಾತಿಯ ಉದುಂಬರ; ದೊಡ್ಡ ಅತ್ತಿಯ ಮರ: ತೋರತ್ತಿ (ಕಾಸ್ತೆಲ). ಸುಂದರವಾದ ಉನ್ನತವೃಕ್ಷ. ಕಟ್ಟಿಗೆ ಇಮಾರತಿಗೆ ಬರುತ್ತದೆ. ಬೀಜದಿಂದ ದೀಪದ ಯೆಣ್ಣೆ ಹೊರಡುತ್ತದೆ (ಕಥಾಗ. ೪೧). **ತೊರತಿ:** ಸಣ್ಣ ಸೊಳ್ಳೆ, ತೊರತಿ, ಮರ ತಾತ್ರಿ (ಪ್ಯುಜಿಗಿ. ೪೫-೮೮೦). **ತೊರತ್ತಿ:** ತೊರತ್ತಿ, ಸುರಟ . . . ಎಣ್ಣೆ ಮರ, ಹಾಲವೆ (ಪ್ಯುಜಿಗಿ. ೪೫-೮೮೨). [ ತೋರ + ಅತ್ತಿ₁ ]

**ತೋರದಿಟ್ಟಿ** (ನಾ). ದೊಡ್ಡ ಕಣ್ಣು; ಅಗಲವಾದ ಕಣ್ಣು; ಬೊಗಸೆಗಣ್ಣು: ತೋರದಿಟ್ಟಿಯ ತುದಿಯೊಳು ತೊರೆದುದಕವ ಕೊರಗುರಿಂ ಪಿಡಿವಿಡಿದು ವಾರಿಜಮುಖಿ ನುಡಿಯಲು (ಶ್ರೀಪಾಂಂ. ೨-೩೮).
[ ತೋರ + ದಿಟ್ಟಿ ]

**ತೋರದುಟ** (ನಾ). ದಪ್ಪವಾದ ತುಟಿ: ತೋರಕುಚದ ತೋರದುಟ ತೋರದುರುಬಿನ ತೋರಿದ ಮೆಲ್ಲವಿರುಗಳ ಮಾರಕೇಳಿಗೆ ಮನದಣಿಯದ ಚಿತ್ತಿನಿನಾರಿಯರಿಸೆದರರ್ತಿಯಲಿ (ಕಂಸವಿ. ೨೧-೮೧).
[ ತೋರ + ತುಟಿ₂ ]

**ತೋರದುತ್ತು** (ನಾ). ದೊಡ್ಡ ತಂತ್ತು: ಸಿತರಾಜಾನ್ನ ಸದ್ವೃತ ತೊವ್ವೆಗೂಡಿ ನಿರ್ಮಿತವಾದ ತೋರದುತ್ತುಗಳ ಜತನದಪ್ಪದ ಕೈಕೊಂಡರು (ಮೋಹತ. ೩-೫೫). [ ತೋರ + ತುತ್ತು₂ ]

**ತೋರದುರುಬು** 'ತೋರದಂಬುಂಬು' ನೋ.

**ತೋರದುಱುಂಬು,** ತೋರದುರುಬು, ತೋರದಂಬುಬು (ನಾ). ದೊಡ್ಡದಾದ ಕಬರಿ; ದೊಡ್ಡ ತುರುಬು: ತೋರದುಱುಂಬಿನೊಳ್ ತೆಱುಂಬೊಳೆವಲರ್ಗೊಂಚಲೊಪ್ಪೆ (ಲೀಲಾವ. ೮-೨೮). **ತೋರದುರುಬು:** ಇಟ್ಟ ಕಸ್ತುರಿಬಟ್ಟು . . . ತೋರದುರುಬನು ಉಟ್ಟ ದೇವಾಂಗದ ನಿರಿಯ ಮೇಗಳವಟ್ಟ ಹೊನ್ನುಡಿದಾರದಿಂದ (ಸಾಂರಕಾ. ೩-೮೨). **ತೋರದುಱುಬು:** ಕಾರಗತ್ತಲೆಯೊಳು ಥಳಥಳಿಸುತಲಿಹ ತಾರಗೆಗಳೂಯೆಂಬಂತೆ ತೋರ ದುಱುಬಿನೊಳು ಕಮ್ಮಲರ್ಗಳ ತಂದಾ ರಮಣಿಗೆ ಮುಡಿಸಿದರು (ಜೀಪಂಸಾಂ. ೦೦-೯). ತೋರದುಱುಬು ದುಂಬಿಗುರುಳರನೇಱಿಲ ದೋಲೆವಣ್ದುಟ ವೆಟ್ಟೆನೊಸಲ . . . ವಾರಾಂಗನೆಯರೊಪ್ಪಿದರು (ಶ್ರೀಪಾಂಂ. ೯-೧೧);
[ ತೋರ + ತುಱುಂಬು₁ ]

**ತೋರದುಱುಬು** 'ತೋರದುಱುಂಬು' ನೋ.

**ತೋರದೆರೆ** (ನಾ). ದೊಡ್ಡ ಅಲೆ,_ತರಂಗ: ಹಂಸತಳ್ಪತಳದೊಳ್ ಪಾಲ್ಗಡಲ ತೋರದೆರೆಯ ಮೇಲೆ ಲೀಲೆಯಿನವತರಿಸುವ ಸಿರಿಯನನುಕರಿಸಿರ್ದು ನಿಜಮನೋವಲ್ಲಭನೊಡನೆ ಸುಖಸುಪ್ತಿಯಂ ತಳೆದು (ನೇಮಿಪು. ೬-೬೫ ವ); ತೋರದೆರೆ ಮುಂಚೆಯೆ ಮೂಡುವ ವಾರಣಮಂ ಪೋಲ್ತುದು (ಅರ್ಧನೇ. ೫-೧೧೩). [ ತೋರ + ತೆರೆ₄ ]

**ತೋರದೊಡೆ** (ನಾ). ದಪ್ಪವಾದ ತೊಡೆ: ಆತನಯ ತೋರದೊಡೆಗಳವಾತನ ನಿಡುದೋಳ ನಡೆಯುವಾತನ ನಡೆ (ಶಾಕ್ಷಾ.ವ. ೯೩); ನಿಜಸತಿಯ ತೋರದೊಡೆಗಳ ಮೇಲೆ ಲಲಿತಮಣಿಮಕುಟಮಂಡಿತಮಸ್ತಕಮನಿಕುಹಿ ಮಗ್ಗುಲಿಕ್ಕಿದನಾಗಳು (ಹಡಳಾ. ೬-೩೦); ಕೆಂಡಗಣ್ಣ ಹುಮ್ಮಾರಿಮೊಗಗಳ ಬಿಗಿದ ಹುಬ್ಬುಗಳ ಬಲ್ಗೋರೆದಾಡೆಗಳ ಸಲೆ ಕೊಬ್ಬಿದ ತೋರದೊಡೆಗಳ . . . ದಡಿಗರಕ್ಕಸರ್ ಕೋಟಾನುಕೋಟಿಗಳದೇನೆಂಬೆನು (ಜಬಪು. ೪೭-೦೪). [ ತೋರ + ತೊಡೆ₂ ]

**ತೋರದೊಣ್ಣೆ** (ನಾ). ದೊಡ್ಡ ಗುದಿಗೆ,_ದೊಣ್ಣೆ: ಕೂರಲಗುವಿಡಿದವನ ಕೊಡತಿವೀರರಾಗಿದ್ದವರು ಕಾದಲು ತೋರದೊಣ್ಣೆಯ ಹೊಯಿಲನಂಗೈಸುವರದಾರುಂಟು (ಕಾಶಿಖಾ. ೨೦-೩೩). [ ತೋರ + ದೊಣ್ಣೆ₁ ]

**ತೋರದೋಟ,** ತೋರತೋಟ (ನಾ). ಭಾರಿಯಾದ ಕಾಳಗ; ರಭಸದ ಯುದ್ಧ. 'ತೋರದೋಟಗ' ಪರಾ. **ತೋರತೋಟ:**

ಪೂಡುವವು ತಲೆ ಹಱಿದ ಗಱಿ ಹೊಱಬೀಡ ಬಿಡುವವು ಸುಭಟರಿಬ್ಬರ ರ್ಪುಾಡಣೆಯ ಖಂಡೆಯದ ತುಂಡದ ತೋರತೋಟಿಯಲಿ [ ಪಾಠಾಂ. ಶಾಣಕೋಟಿಗಳ] (ತೊರರಾ. ೩-೧೧-೨೦).

[ ತೋರ + ತೋಟಿ₁ ]

**ತೋರದೋಟಿಗ** (ನಾ.) ಭಾರಿಯಾದ ಕಾಳಗ ಮಾಡುವವನು; ಮಹಾವೀರ : ಕಡು ಸಡಗರದ ಬಡಿವಾರದ ತೋರದೋಟಿಗ (ರಾಜಾಶೃ. ೧೯೪-೨೦). [ ತೋರದೋಟಿ + – ಗ₃ ]

**ತೋರಪಿಲ್ಲಿ** (ನಾ). ದೊಡ್ಡ ಪಿಲ್ಲಿ : ವೀರಮುದ್ರಿಕೆ ಕಾಲುಂಗುರ ಮೆಂಟಿಕೆ ತೋರಪಿಲ್ಲಿ ಕಿಱುಪಿಲ್ಲಿ ಭೂರಿರುಚಿಗಳಿಂದ ಮೆಱೆದವು (ಅನಂಜ. ೭-೧೦೮).

[ ತೋರ + ಪಿಲ್ಲಿ₁ ]

**ತೋರಬಾಷ್ಪ** (ನಾ). ಅತಿಶಯವಾದ ಕಣ್ಣೀರು ; ಅಧಿಕವಾದ ಕಣ್ಣೀರು : ಪುದಿದ ಮನೋಗತಾರ್ಥಮನದಂ ನೆಱೆ ಜಹ್ನುಗೆ ತಂದು ಪೇಟಲೀಯದೆ ಮೊಗಕಡ್ಡವಿರ್ದ ಕಡುನಾಣ್ಚಿಕೆಯಂ ತೊಳೆವಂತೆ ತೋರಬಾಷ್ಪದ ಪನಿದಂದಲಂ ಸುರಿಯುತುಂ (ಕುಸುಮಾ. ೧೨-೧೪೪).

[ ತೋರ + ಬಾಷ್ಪ ]

**ತೋರಬೆರಳು** 'ತೋರುಬೆರಳು' ನೋ.

**ತೋರಮರ** (ನಾ). ದೊಡ್ಡ ಮರ ; ಹೆಮ್ಮರ: ಒತ್ತಿ ಕಾಲಿಡಲೊಡನೆ ಗಿರಿ ತಲೆಗುತ್ತುತಿರ್ದುದು ತೋರಮರಗಳು ಕಿತ್ತು ಹಾರುತಲಿರ್ದವಂಬರ ಮಣಿಯನಣೆದಣೆದು (ತೊರರಾ. ४-೧೨-೨೯). [ ತೋರ + ಮರ₁ ]

**ತೋರಮಲ್ಲಿ, ತೋರ್ಮಲ್ಲಿ** (ನಾ). ಒಂದು ಬಗೆಯ ಹರಳು,–ರತ್ನ ; ಗಂಧರ್ವಮಣಿ : "ಪ್ರಶಸ್ತ ಶಿಲೆಯಾಗಿ ಉಪಯೋಗಿಸುವ, ಬಲವಾದ ವಿದ್ಯುದ್ಗುಣಗಳನ್ನುಳ್ಳ, ಬೇರೆ ಬೇರೆ ಬಣ್ಣಗಳ ಖನಿಜ ವಸ್ತು : ತೋರ ಮಲ್ಲಿ" (Tourmalin (e). ಇಂಕನಿ). **ತೋರ್ಮಲ್ಲಿ** : ತೋರ್ಮಲ್ಲಿಗಳು ಒಳಗಡೆಯಲ್ಲಿ ಯುರೋಪದಿಂದ ಮುಂಬಯಿಗೆ ಮಾರಾಟಕ್ಕೆ ಬರುತ್ತವೆ. ಈ ಹರಳುಗಳು ಕಡಿಮೆ ಜಾತಿಯ ರತ್ನಗಳೆಂದು ಎಣಿಸಲ್ಪಡುತ್ತವೆ (ಪುಂಬಿಱು. ೬-೪೭).

[ ದೇ.॥ ತಮಿ. ತೋರಮಲ್ಲಿ, ತೋರಾಮಲ್ಲಿ ; ತೆಲು. ತೋರಮಲ್ಲಿ, ತೋರಮಲ್ಲ./ಮರಾ. ತೋರಮಲೀ, ತೋರಮಲ್ಲೀ./ಇಂ. Tourmaline. ಸಿಂಹಳೀ. ತೋರಮೊಲ್ಲಿ]

**ತೋರಮಲ್ಲಿಗೆ** (ನಾ). ದೊಡ್ಡ ಮಲ್ಲಿಗೆ : ಬಿಳಿಯ ತಾವರೆಯೆಳಗಾವಿನಸಿಯ ನೂಲೊಳ್ ಕೋದ ತೋರಮಲ್ಲಿಗೆಯ ಬಿರಿಮುಗುಳ ಸರಿಗೆಯುಮಂ (ಶಂಪಥಾ. ೩-೬ ಪ); ಒದವಿದ ತೋರಮಲ್ಲಿಗೆಯ ಹಾರದ ಸೂಸಕದಿಂದೆ ಸಿಂಧುವಾರದ ಚಮರೀಜದಿಂದೆ ... ಚೆಲ್ವುವೆತ್ತುದು ಕದಳೀದ್ರುಮಗ್ರಥಿತ ಸುಂದರ ವಂದನಮಾಲಿಕಾವೃತಂ (ಕಾದಂಉ. ೨೦೩) ; ಕೊಸಗಿನೆಸಟ ಕೇಸರಮಂ ತೊಡರ್ಚಿದ ತೋರಮಲ್ಲಿಗೆಯ ಮುಗುಳ್ಗಳಾರಂಗಳುಮಂ (ಜಗಪಿ. ೬-೧೬ ಪ). 'ತೋರಮೊಲ್ಲೆ' ಪರಾ [ ತೋರ + ಮಲ್ಲಿಗೆ ]

**ತೋರಮಾಣಿಕ** (ನಾ). ದೊಡ್ಡ ಮಾಣಿಕ್ಯ,–ರತ್ನ: ತೋರಮಾಣಿಕವೆಂದು ಪಿಡಿದರೆ ಭೂರಿಕೆಂಡವಿದಾಯ್ತು.(ನಳಚ. ೬-೧೩). [ ತೋರ + ಮಾಣಿಕ ]

**ತೋರಮುಡಿ** (ನಾ). = ತೋರದುಱುಂಬು : ತೋರಮುಡಿವಿಡಿದು ಕುಡಿಯಂ ನಾರಂ ಸದೆವಂತೆ ತದೆದು (ಭುಕೋಜ. ೨-೩೦) ; ತೋರಮುಡಿ ಬಿಟ್ಟಪ್ಪುದಾರುಣಿಯೊಳಗ್ರ ಕಚಂ (ಸೂಕ್ತಿಸು. ೧೩-೯) ; ತೋರಮುಡಿಯ ಕೆಂಜೆಡೆಯ ರತ್ನದ ಕರ್ಣಪೂರದ ಫಣಿಕುಂಡಲಗಳ ಚಾರುಕುಂಕುಮಗಂಧ ಭಸಿತಲೇಪನದರ್ಧನಾರೀಶ ಜಯ (ಪ್ರಭುಲಿ. ೨೩-೧) ; ಕಡುತೋರಮುಡಿ ಮುಗಿಲನಧರಮತಿಸಂಚಯಂ [ಪಾಠಾಂ. ಮಧುವೃಷ್ಟಿಯಂ] ತನುಮಧ್ಯ ಮದು ಪುಸಿಯನು ಬಿಡದೆ ವಿಕ್ರಮಂ ಮಹಾಚಂಚಲಮೆ ರೂಪಾದ ಮಡದಿಯರ . . . ನಂಬುವಂ ಮೂಢಂ (ಜಲಪು. ೧೧-೫೭); ದೇವೇಂದ್ರ ಸಿಂಹಾಸನದಿಂದಿದ್ದು ತೋರಮುಡಿಯ ತಿಲೋತ್ತಮೆಯ ಕೈಯನ್ನು ಹಿಡಿದುಕೊಂಡು ಉದ್ಯಾನದಲ್ಲಿದ್ದ ನಮೇರುವೃಕ್ಷದಡಿಯನ್ನು ಸೇರಿದ (ಧೂಮಮ. ೬೧). [ ತೋರ + ಮುಡಿ₃ ]

**ತೋರಮುಡುಹು** (ನಾ). ದೊಡ್ಡ ಹೆಗಲು ; ಗಾತ್ರವಾದ ಹೆಗಲು: ಪರಿಮಳದ ಕಸ್ತುರಿಯ ತಿಲಕದ ಹೊರೆದ ಗಂಧದ ತೋರಮುಡುಹಿನ ಕರದ ಖಂಡೆಯದರದಟಕ್ಕೈದಿದರಾನೆ ಕುದುರೆಯಲಿ (ಕುಮ್ಮಾವಿ. ೯-೪೫) ; ತೋರಮುಡುಹು ನಿಡುಗಯ್ಯತಿದೀರ್ಘಶರೀರ ವೇರುರ ಪೆರ್ಚಿ ಬೆಳೆದ ಚಾರುಬಾಹುಯುಗವೆಸೆಯೆ ಬಾದುರನಂದು ಸಾರಿದನಾ ಶಾರ್ಙ್ಗವನು (ಕುರಾಸಾಂ. ೧೪-೭೭). 'ತೋರಮುಯ್ಯ' ಪರಾ.

[ ತೋರ + ಮುಡುಹು₄ (<ಮುಡುಪು₄) ]

**ತೋರಮುತ್ತು** (ನಾ). ದಪ್ಪವಾದ ಮುತ್ತು ; ಗಾತ್ರವಾಗಿರುವ ಮೌಕ್ತಿಕ : ತೋರಮುತ್ತಿನ ಹಾರಂಗಳುರಸ್ಥಳಂಗಳೊಳೊಪ್ಪುಳಿದಾಡೆಯುಂ (ಕಾದಂಪೂ. ೭೭) ; ನೊಸಲೆಡೆಯಲ್ಲಿ ನೀಳ್ದ ಕುರುಳೊಳಗಳುಯ್ಯಲನಾಡೆ ಡಾಳಮಂ ಪಸರಿಪ ತೋರಮುತ್ತಿನ ಸರಂ ಮೊಲೆಯೊಳ್ ತಲೆಯೊತ್ತೆ . . . ಪೊಸರನ್ನದಾರತಿಯನೆತ್ತಿದರಗ್ಗದ ಗಾಡಿಕಾರ್ತಿಯರ್ (ಕಬ್ಬಿಗಕಾ. ೩೪೩) ; ಕೊರಳೊಳಿಕ್ಕಿರ್ದಾ ತೋರಮುತ್ತುಗಳೆಲ್ಲ ತಿಳಿಗೊಳದೊಳು ತೋರ್ಪ ತಾರಾಳಿಯಂತೆ ತೋಱಿದುವು (ಭರತೇ. ೧-೪೨) ; ಈಕೆಯ ಕೊರಳಿನ ಕಾಂತಿಯ ಹೊಳೆಯೊಳು ಮುಳುಗಿವೆ ತೋರಮುತ್ತುಗಳು (ಇಂಚಾಪ. ೮೫-೧೨). [ ತೋರ + ಮುತ್ತು₆ ]

**ತೋರಮುಯ್ಯು** (ನಾ). = ತೋರಮುಡುಹು : ತೋರಮುಯ್ಯುಗಳೊಳೆಸೆವ ಕುಂಕುಮಂಗಳ ಬಂಬಲ ಸೋಂಕಿನೊಳ್ ರಜಂ ನೆಗೆದು ದೆಸೆಗಳ್ಪೊಂಬಣ್ಣಮಾಗೆಸೆಯೆಯುಂ (ಕಾದಂಪೂ. ೭೭).

[ ತೋರ + ಮುಯ್ಯು₁ ]

**ತೋರಮೂಗುತಿ** (ನಾ). ದೊಡ್ಡಗಾತ್ರದ ಮೂಗುತಿ; ದೊಡ್ಡ ಮೂಗು ಬೊಟ್ಟು : ತೋರಮೂಗುತಿ[ಪಾಠಾಂ. ಮುತ್ತಿನ]ಬೊಟ್ಟು ತುಟಿಯಿನ ಬಲವಣಿ ಸೇರಿ ಕಣ್ಗೆಸೆದುವವರಿಗೆ (ಕುರಾಸಾಂ. ೩೭-೧೩೭).

[ ತೋರ + ಮೂಗುತಿ ]

**ತೋರಮೊಗ** (ನಾ). ಅಗಲವಾದ ಮುಖ ; ವಿಸ್ತಾರವಾದ ಮುಖ : ತೋರಮೊಗಂ ಸಮುನ್ನತಗಳಂ ಸಮಗೆಂಪಡರ್ದಕ್ಷಿ . . . ಕರ್ಕಶದೇಹ ಮತೀವಭೀಷಣಾಕಾರಮನಪ್ಪುಕೈಯ (ದಕಕು. ೯-೧೩).

[ ತೋರ + ಮೊಗ ]

**ತೋರಮೊಲೆ** (ನಾ). = ತೋರಕುಚ : ತೋರಮೊಲೆಗಳ ಮೊಗಂಗಳ್ ರಾರಾಜಿಸಿ ಕರ್ಪುವೆತ್ತು ಮೋಹನಧೂಮೋದ್ಗಾರಿಗಳಂ ಕಾಂಚನಭೃಂಗಾರಿ ಗಳಂ ಪೋಲ್ತುವು (ಶಂರಾಮಾ. ೩-೯೫); ಮೊರೆಯದ ತುಂಬಿಯುಂ ಕುರುಳ ಸಂದಣಿ ಸೋಲಿಸೆ ಜಕ್ಕವಕ್ಕಿಯಂ ಪರಿಪಡೆದಿರ್ದ ತೋರಮೊಲೆ ಬಗ್ಗಿಸೆ (ಕಬ್ಬಿಗಕಾ. ೧೧೨); ಮುಡಿ ತೋರಮೊಲೆಯ ಭಾರಗಳಿಂದಲಂಗುರವಿಡಿನಡು ಬಳುಕುವಂತಿಹರು (ಪ್ರಜೋಹ. ೨-೪೨) ; ನೀರೆಱೆವಬಲಾಜನದಾ ತೋರ ಮೊಲೆಗಳಿಗೆಱಗಿದ ಪಾಂಥರ ದಿಟ್ಟಿ ತೋಱಿದುವಾನವಿಷತೆಯನು (ಕಂಜಪಿ. ೨-೫೪). [ ತೋರ + ಮೊಲೆ₁ ]

**ತೋರಮೊಲ್ಲೆ** (ನಾ). ದೊಡ್ಡ ಜಾತಿಯ ಮೊಲ್ಲೆ : ಭೃಂಗ ಕೈದುಡುಕದ ಸೌರಭ್ಯವಾಂತ ಪುಷ್ಪಂಗಳ ತೋರಮೊಲ್ಲೆಗಳೆ . . . ತಂದಿತ್ತು (ಕೋಜಕ. ೪-೩೦). [ ತೋರ + ಮೊಲ್ಲೆ ]

**ತೋರವಜ್ಜೆ** (ನಾ). ದೊಡ್ಡ ಹೆಜ್ಜೆ ; ಅಗಲವಾದ ಪಾದ: ಮನವಳಸಿ ಮಲ್ಲ ಸಲ್ಲಕೀಪಲ್ಲವಂಗಳಲ್ಲಲ್ಲಿಗುಡಿದುಡಿದು ಬೀಟುತ್ತಿರೆ ಪೋದ ಮದ ವಾರಣಂಗಳ ತೋರವಜ್ಜೆಗಳುಮಂ (ಕುಸುಮಾ. ೧೪-೨೯ ಪ).

[ ತೋರ + ಪಜ್ಜೆ ]

**ತೋರವಣ್** (ನಾ). ದೊಡ್ಡದಾಗಿರುವ ಹಣ್ಣು : ಅವ್ರುದ ತೋರ ವಣ್ಗೊಳೊಂದಱ ರಸದುತುಗಾಣದೆ ದಲೊಂದು ಶುಕಂ ಮಧುಸಮ್ಮ ದೋತ್ಸುಕಂ (ಚಂದ್ರಪು. ೭-೪೭) ; ಕಾಯ್ಪೇಱದ ತೆಂಗು ಕೋರಗೊನೆ ವೇಱದ ಕಂಚಳವಾೞಿ ತೋರವಣ್ಪೇಱದ ಬಕ್ಕೆ (ಅನಂಪು. ೧-೭೮).
[ ತೋರ + ಪಣ್₃ ]

**ತೋರವಣ್ಗೊನೆ** (ನಾ). ದೊಡ್ಡ ಹಣ್ಣುಳ್ಳ ಕೊಂಬೆ : ಎಳವಲಸು ನಿಜಸ್ಕಂಧಾವಲಂಬಿಯೆನಿಸಿರ್ದ ತೋರವಣ್ಗೊನೆಯಿಂ ಕಣ್ಗೊಳಿಸಿತ್ತು (ಚಂದ್ರಪು. ೭-೮೫). [ ತೋರವಣ್ + ಗೊನೆ (<ಕೊನೆ) ]

**ತೋರವನಿ**, ತೋರಹನಿ (ನಾ). ದಪ್ಪವಾಗಿರುವ ಹನಿ,-ಬಿಂದು : ಸುರಿದಪುದು ಮುಗಿಲ ಮುತ್ತಿನ ಸರಿ ಗಗನದಿನೆನಿಸಿ ಪೊಳೆವುವೆಳವಿಸಿಲೊಳ್ ಬೆಳ್ಪರಿ ತೋರವನಿಯ ಪುದುವಿನೊಳರಲ್ದ ತಿಳಿಗೊಳನೆ ನಭದೊಳೆಱ ದಂತಿರ್ಕುಂ (ಆದಿಪು. ೧೧-೮); ಅಲ್ಲಲ್ಲಿಗೆ ಮುತ್ತಿನ ಪುದಿಯ ಸುಣ್ಣಳಲ್ಲಳಾಲ ವಾಲಂಗಳಿಂ ಕೂಡಿರ್ದಡೆವಿಡದೆ ಸುರಿವ ತೋರವನಿಗಳಿಂ (ಶಬ್ದಮಣಿ. ೨೦೭); ಕಾರ ತೋರವನಿ ಚಾದಗೆಗೆ ಭಾರವೆ ಶಿವನ ಕರುಣಮೆನಗಿದಿರ್ವರೆ ವಿಚಾರವೆ (ಗಿರಿಜಾ. ೧೦-೩೭ ವ). **ತೋರಹನಿ**: ಕಣ್ಣೀರ ಕೋಡಿ ಹರಿಯಿತು. ತಟ್ಟೆಯಲ್ಲಿ ಅನ್ನದಲ್ಲಿ ಬಿದ್ದವು ಆ ಕಣ್ಣೀರ ತೋರಹನಿಗಳು (ಸುವಸಂ. ೧೯).
[ ತೋರ + ಪನಿ₂ ]

**ತೋರವೆಟ್ಟು** (ನಾ). = ತೋರಗಿರಿ : ಎಸೆವಲರ್ಗೊಂಚಲಂ ತಳೆದ ಪಲ್ಲಿಗೆ ಪೂವಿನ ಸಂತೆ ಕೊಂಬಿನಿಂ ಮಿಸುಗುವ ಮಾಮರಂ ಪೆಸರ ಮಾಳಿಗೆ ಮಾಡಿದ ತೋರವೆಟ್ಟುಗಳ್ (ಕಬ್ಬಿಗಕಾ. ೦೦೧). [ ತೋರ + ಬೆಟ್ಟು₂ ]

**ತೋರವೆಣ** (ನಾ). ದೊಡ್ಡ ಹೆಣ; ಗಾತ್ರವಾದ ಶವ: ತೋರವೆಣಂಗಳಂ ತಳೆದು ಭೂತಗಣಂ ಕುಣಿದಾಡುವಂತಿರಲ್ . . . ಸುತ್ತಲುಂ ವಾರಿಧಿ ಮೇರೆದಪ್ಪಿ ಕವಿವಂತು ಬಿಗುರ್ವಿಸಿದಂ ದಶಾನನಂ (ಪಂಪರಾಮಾ. ೯-೧೪೯).
[ ತೋರ + ಪೆಣ ]

**ತೋರಶಿಖೆ** (ನಾ). ದಪ್ಪಗಾತ್ರದ ಜುಟ್ಟು (?): ದುಗುಲದಿಂದ ಜೀಗಿ ತೋರಶಿಖೆಯನು ಧರಿಸಿ (ಜಕಸ. ೧೭). [ ತೋರ + ಶಿಖೆ ]

**ತೋರಹತ್ತ** (ನಾ). ೧. ದೊಡ್ಡ ಸೊಂಡಿಲು: ಆ ವಾರಣದ ತೋರಹತ್ತ ಮಾನುಪೂರ್ವಿ ಸ್ಥೂಳಮುಮಾಭೀಳಮುಮುಪಚಿತಪ್ರಲಂಬಮುಮಪ್ಪಾಗ (ಅನಂಪು. ೧೩-೨೦ ವ); ನೆಲ್ಲಿಯ ಕಾಯ್ಗಳಂ ಬಡಿಗೆ ಕೊಂಡವೊಲೆತ್ತಿದ ತೋರಹತ್ತದಿಂ ಜಲ್ಲನೆ ತುಂಬಿಗಳ್ ಕೆದಱ ಬಂದುವು ಬಿಂಕದಿನಂಕದಾನೆಗಳ್ (ಕಬ್ಬಿಗಕಾ. ೨೦೩) ; ಹೇಱದ ಹೇರಂಬುಗಳನಿಕ್ಕಿಡಿ ಮಾಡಿ ತೋಱದ ತೋರಹತ್ತದಲಿ (ಕೋಹಕ. ೪೮-೪೭). ೨. (ಶಕ್ತಿಯುತವಾದ) ಕೈಗಳುಳ್ಳವನು ; ಶೂರ : "ತೋರಹತ್ತನೆನೆ ತಾಂ ರಣಧೀರ೯" (ಭಾರತಿ. ೩೪) ; ಭುಜಬಳದಳವಿಂ ಭೀಮನಿಂ ತೋರಹತ್ತಂ ಬಳನಿಂದಂ ತೋರಹತ್ತಂ (ಎಕ. V, ಅರಸೀ. ೯-೫ ; 1286) ; ಬೆಳೆದವೊ ಕೈಕಾಲು ನೀಲಾಚಲಕೆ ಹೇಳೆನೆ ಮುಗಿಲ ತುಡುಕುವ ತಲೆಯ ಜೋಕೆಯ ತೋರ ಹತ್ತನ ಕಂಡು ಕುರುಸೇನೆ (ಕುಮಾರವ್ಯಾ. ೧೫-೫೧); ಬೈದು ಬೆರಸುವ ತೋರಹತ್ತರ ಕೈದುಗಳ ಹೊಳೆಹೊಳೆವ ಧಾರೆಯ ಮೈದಡಿಗೆ . . . ಪಾರುಶದ ಮುಖ್ಯರು ಸಂದಿರಿದಿರಾಗಿ (ನಿಭಾಗ. ೮-೧೭-೩೭). ೩. ಶೌರ್ಯ ; ಸಾಹಸ: ನೀರೊಳು ಪೊಕ್ಕ ರಕ್ಕಸನ ಘೋರಾಕೃತಿವೆತ್ತು ವಿಷಾನಾಗಿ ಮಡುಹಿದ ತೋರಹತ್ತದ ತೋಱನ್ನೊಡನೆ (ಮೋಹತ. ೪೦-೧೯). ೪. ಮಲ್ಲಯುದ್ಧದಲ್ಲಿ ಒಂದು ವರಸೆ : ಮಿಕ್ಕುದು ವಜ್ರ ಪಾತಮುಮನೆಂಬಿನಮುಬ್ಬಿಸಮಾದ ತೋರಹತ್ತಕ್ಕೆ ತಗುಳ್ದು ಪತ್ತಿಸುವ ಮಾನಸಗೋಳಮಸಪ್ಪ ಡೊಕ್ಕರಕ್ಕಿಕ್ಕಿದ ವಜ್ರಲೇಪಮೆನೆ ಪತ್ತುವ ಲಗ್ಗೆಗೆ ಮಾರಿಯೊಳ್ ಮೊಗಂಬೊಕ್ಕವೊಲಾಗೆ ಬೆರ್ಚಿದನವಂ (ಚಂದ್ರಪು. ೫-೮೦) ; ಎರಾವತಂ ಮಲ್ಲವೇಷದೊಳಿದಿರಾದೊಡಂ ತೋರಹತ್ತದೊಳಂ ತಿವಿದು ತಿರಿವುವ . . . ಮಲ್ಲರ ನೆರವಿಗಳೊಳು (ಗಿರಿಜಾ. ೨-೧೦೩ ವ) ; ಇರ್ವರ ಚಮತ್ಕಾರಕಿರ್ವರೇ ಸಾಟಿಯೆನಲು ವರಶಿರೋಪಲಯದಿಂ ಸಿಲ್ಕಿವರ್ ತೋರಹತ್ತದೆ ತವಕದಿಂ ಒಡಿವರು (ಚಬಸಪು. ೨೫-೩೪) ; ತಳಹತ್ತಂ ದಣುವಟ್ಟ ಪೊಪ್ಪರಮುರೋಬಂಧಂ . . . ಭುಜಗಬಂಧಂ ತೋರಹತ್ತಂ ಶಿರೋವಳಯಂ ಬಾಹುತಳಂ ಚಮತ್ಕರಿಸೆ ನಾನಾ ಕೌಶಲಂದೋಱದರ್ (ಶಬಶಂ. ೪-೭೫). 'ತಳಹತ್ತ' ಪರಾ.
[ ತೋರ + ಹತ್ತ₂./ತೆಲು. ತೋರಹತ್ತ ]

**ತೋರಹನಿ** 'ತೋರವನಿ' ನೋ.

**ತೋರಹಾರ** (ನಾ). ದೊಡ್ಡದಾದ ಮಾಲೆ ; ದೊಡ್ಡ ಗಾತ್ರದ ಸರ : ಪಸರಿಸಿದ ತೋರಹಾರದ ಪೊಸವೆಳ್ಪಿಂಗಳುಮನವರ್ದ ಪೆರ್ದುಡುಗೆ ಗಳೊಳ್ ಮಿಸುಗುವ ಪೊಸ ಮಾಣಿಕದೆಳವಿಸಿಲುಮನೊಡಗಾಣಲಾದುದಾ ಸ್ಥಾಯಿಕೆಯೊಳ್ (ಆದಿಪು. ೯-೫) ; ಪ್ರಮದದೊಳೆನ್ನ ಕಂಧರದೊಳಂ ದಿರುಳಿಕ್ಕಿದ ತೋರಹಾರಮುಂ ಹಿಮಗ್ರಹ ಪ್ರವೃತ್ತಕಮಂ . . . ಅ ರಮಣಿಯದೊಂದು ಭಾವಗತಮಂ ನೆಱಸೂಚಿಸೆ (ಕಾದಂಬ. ೩೪೭); ಸುತ್ತದೆ ನೆಲೆಗೊಂಡಂ ಪರಿವೃತ್ತೋನ್ನತ ಚಂದ್ರನಗಜೆಯಾಸ್ಯದೊಳೆಂದು ನೃತ್ತತೆಯೊಳ್ ತಾರಗೆಗಳ್ ಸುತ್ತಿದುವೆನೆ ತೋರಹಾರಮಂ ರಂಜಿಸಿದರ್ (ಗಿರಿಜಾ. ೧೦-೩೭). [ ತೋರ + ಹಾರ₁ ]

**ತೋರಱಕೆ** (ನಾ). ಹೆಚ್ಚಿನ ಪ್ರಸಿದ್ಧಿ ; ಅತಿಶಯವಾದ ಕೀರ್ತಿ : ಅಗ್ಗದ ಬೀರರ್ ತಗೆದೋಡೆ ತೋರಱಕೆಯಾಳ್ಗಳ್ ಬಳ್ಕಿ ಬೆಂಬೀೞ (ಕಬ್ಬಿಗಕಾ. ೩೦೪). [ ತೋರ + ಅಱಕೆ ]

**ತೋರಾಟೆ** (ನಾ). ಒಂದು ಬಗೆಯ ಮರ : ತೋರಾಟೆ (ಕೌಂಟೆಲ) . . . ಇದರ ಎಣ್ಣೆ ಔಷಧಕ್ಕೂ ದೀಪಕ್ಕೂ ಬರುತ್ತದೆ (ಕಭಾಗ. ೪೧). 'ತೋರತ್ತಿ' ಪರಾ. [ ? ]

**ತೋರಾಯ** (ನಾ). ಬಹಳ ಸಾಮರ್ಥ್ಯ ; ಅತಿ ಪರಾಕ್ರಮ : ನಾರಾಯಣಂ ಮಹಾರೋಷದಿಂದೆಸುತಿರ್ಪ ತೋರಾಯದೆಸುಗೆಯಿಂ ತರಹರಿಸದಾಕ್ಷಣಂ ಪೂರಾಯ ಗಾಯದಿಂ ಬಲಮಳಿಯೆ ಕಂಡು ಸಂಹಾರಾ ವತಾರನಾಗಿ (ಚಬಸಪು. ೩೨-೮). [ ತೋರ + ಆಯ₃ ]

**ತೋರಿ** (ನಾ). (ಕರಾ). ಒಂದು ಬಗೆಯ ಮೀನು. [ ? ]

**ತೋರಿಕೆ** 'ತೋಱಕೆ' ನೋ.

**ತೋರಿತು**, ತೋರಿತ್ತು, ತೋರಿದಂ (ನಾ). ೧. ದೊಡ್ಡದಾಗಿರುವುದಂ; ತೋರವಾದುದು: (೩). **ತೋರಿತ್ತು** : ೧. ತುಕಾರಾಂತಕ್ಕೆ ವಿಕಲ್ಪದಿಂ ದ್ವಿತ್ವಮುಂಟು . . . ತೋರಿತ್ತು; ನೇರಿತ್ತು . . . ಬಲ್ಲಿತ್ತು ಎಂಬಂತೆ ನೋಡಿಕೊಳ್ವುದು (ಶಮದ. ೭೭ ಪ್ರಯೋ). ೨. ಅಗಲವಾದುದು ; ವಿಶಾಲವಾಗಿರುವುದು : ಪೊಂಗೋಂಟೆಯಂ ತೋರಿತ್ತಾದಗಳೆಯ್ದೆ ಸುತ್ತಿ ಮೆಱೆಗುಂ (ಚಾರಪು. ೪-೩೭). **ತೋರಿದು** : ೧.ಪಾದರಿ ಪೂತುವು ತೋರಿದುವಾದುವು ಮಲ್ಲಿಗೆಗಳೆಯ್ದೆ ಪಣ್ತುವು ಮಾವು (ಆದಿಪು. ೧೧-೮೭); ತೋರಿದುವಾದ ಮಲ್ಲಿಗೆಯ ಮೊಗ್ಗೆಗಳೊಳ್ ಮೊಗವೂಱ ಬಿರ್ದ ಭೋಭೋರೆನೆ ಪಾಯ್ದು ಬಂಡಿನೊಳ್ ಬೆಂಡೊಗೆದು . . . ಕಾಱ ಕಡಲಿಟ್ಟುವು ಮತ್ತಮಧುವ್ರತಾಳಿಗಳ್ (ಲೀಲಾವ. ೯-೧೧೭) ; ನಾರಿಯು . . . ತೋರಿದುವಾದ ನಿತಂಬಂ ತೊಡೆಯಡಿಗಳು ಕಡುಸೊಗಸಿದುವು (ಅಯುಕಾ. ೨-೭).

**ತೋರಿದಂ** = ತೋರವಾದವನು : ಒಳ್ಳಿದಂ, ತಳ್ಳಿದಂ, ಮೆಲ್ಲಿದಂ, ಬೆಟ್ಟಿದಂ, ತೋರಿದಂ (ಶಮದ. ೧೫೨ ಪ್ರಯೋ). [ <ತೋರ ]

**ತೋರಿತ್ತು** 'ತೋರಿತು' ನೋ.

**ತೋರಿದು** 'ತೋರಿತು' ನೋ.

**ತೋರಿಸು** 'ತೋಱಸು' ನೋ.

**ತೋರು** 'ತೋಱು' ನೋ.

**ತೋರುಗಣ್ಣು** (ನಾ). ಸನ್ನೆ ಮಾಡುವ ಕಣ್ಣು ; ಸೂಚಿಸುವ ಕಣ್ಣು : ಕುಳಿಂದಕನು ಚಂದ್ರಹಾಸನ ಕಡೆಗೆ ತೋರುಗಣ್ಣಾಗುತ್ತಾನೆ (ಚಂದ್ರಸ. ೭೭).
[ ತೋರು (<ತೋಱು) + ಕಣ್ಣು (<ಕಣ್) ]

**ತೋರುಗದ್ದಿಗೆ** (ನಾ). [ವೀಶೈ] ಶರಣರ ಹೆಸರಿನಲ್ಲಿ ನಿರ್ಮಿಸಿದ ನಾಮಮಾತ್ರ ಗದ್ದುಗೆ ; ತೋರಿಕೆಗಾಗಿ ಕಟ್ಟಿಸಿದ ಗದ್ದುಗೆ : ತೋರು ಗದ್ದಿಗೆ = ಶರಣರ ಹೆಸರಿನಲ್ಲಿ ನಿರ್ಮಿಸಿದ ನಾಮಮಾತ್ರ ಗದ್ದಿಗೆಗಳು (ನಿಜವಾದ ಗದ್ದಿಗೆಗಳಿಗೆ ವಿಭಿನ್ನವಾದುವು) (ವೀಶೈಪಾ. ೨೯೭).
[ ತೋರು (<ತೋಱು) + ಗದ್ದಿಗೆ (<ಗರ್ದುಗೆ) ]

**ತೋರುಗಪ್ಪುಕ** (ನಾ). (?) : "ತೋರುಗಪ್ಪುಕಮೆನಲ್ ಮೃಗಹಿಂಸೆಗೆ" (ಕಕಶ. ೧೦). 'ಕಪ್ಪು₃' ಪರಾ. [ ? ]

**ತೋರುಗಾಣಿಕೆ** (ನಾ). ತೋರಿಕೆ ; ನಟನೆ : ಎಲ್ಲ ಎಷ್ಟು ಸುಳ್ಳು-ಕೆಲವು ಸಾರಿ ತೋರುಗಾಣಿಕೆ ಬೇರೆ (ಪ್ರಶ್ನೆ. ೩೨).
[ ತೋರು (<ತೋಱು) + ಕಾಣಿಕೆ (<ಕಾಣ್ಕೆ) ]

**ತೋರುಬೆರಳು, ತೋರಬೆರಳಂ** (ನಾ). ಹೆಬ್ಬೆರಳಿನ ಪಕ್ಕದ ಬೆರಳಂ ; ನಿರ್ದೇಶಿಸಲು ಬಳಸುವ ಬೆರಳಂ ; ತರ್ಜನಿ : ಎಡಗೈ ತೋರು ಬೆರಳನ್ನು ತುಟಿಯ ಮೇಲಿರಿಸಿ . . . ಬಾಲೆ ಅಣಕವಾಡಿದಳು (ಮುದ್ದುಹ. ೬೪) ; ಆದರೆ ಅದು ನಿಂತಿರುವುದು ಆ ಪರಮಪ್ರಕಾಶದೆಡೆ ತೋರು ಬೆರಳಾಗಿ ಮಾತ್ರ (ಸೌಂದಸ. ೯೮). **ತೋರಬೆರಳು** : ತನ್ನ ಕೊರಳಿಗೆ ಅಡ್ಡವಾಗಿ ತೋರಬೆರಳನ್ನೆಳೆದುಕೊಳ್ಳುತ್ತ (ವೀರಯೋ. ೩೪) ; ರಾಜನ ಬಲಗೈಯಿನ ತೋರಬೆರಳು (ಧೂರಾಹ. ೯೮).
[ ತೋರು (<ತೋಱು) + ಬೆರಳು (<ಬೆರಲ್) ]

**ತೋರುಮನೆ** (ನಾ). ಪ್ರದರ್ಶನಾಲಯ : ವಸ್ತುಸಂಗ್ರಹಾಲಯ : ಗೋಡೆ ಗೋಡೆಗಳಲ್ಲಿ ಕಣ್ಣಲೆವ ಕಡೆಗಳಲಿ, ಸುತ್ತಹೆಲ್ಲೆಡೆಗಳಲಿ ಮೆರೆದುವಾ ಕುಂಭಕರ್ಣನ ಬಿನದವೇಂಟೆಯ ಕವರ್ತೆಗಳ್, ತೋರು ಮನೆಯಲ್ಲಿ ! (ಶ್ರೀರಾಮಾ. ೪೩೩-೨೭೯). [ತೋರು (<ತೋಱು) + ಮನೆ]

**ತೋರುಮರ** (ನಾ). ದಾರಿ ತೋರಿಸುವ ಮರ; ಕೈಮರ: ಒಳದಾರಿಗಳ ಕತ್ತರಿ, ಚೌಕಗಳಲ್ಲಿ ತೋರುಮರಗಳಲ್ಲದಿದ್ದರೆ ಪ್ರಯಾಣ ಕಷ್ಟವಾಗುತ್ತದೆ (ರೂಢಿ) [ ತೋರು (<ತೋಱು) + ಮರ₁ ]

**ತೋರುವಳಿ** (ನಾ). ಹೊರಕ್ಕೆ ಕಾಣಿಸುವ ರೀತಿ ; ತೋರಿಕೆ : ತಿಕ್ಕುವ ವಕ್ಕೆ ಸುರಿಯಲು, ಚಿಮುಕಿಸಲು, ಚೊಕ್ಕಗೊಳಿಸಲೋ, ಕಾಂತಿ ಹೆಚ್ಚಿಸಲೋ, ಗಮನ ಸೆಳೆವಂತೆ ಮಾಡಲೋ ತೋರುವಳಿಯನ್ನು ಬದಲಾಯಿಸಲೋ . . . ಬಳಸುವ ಆದರೆ ಸಾಬೂನಲ್ಲದ ವಸ್ತುಗಳಿಗೆ ಅಂಗರಾಗವದಾರ್ಥಗಳೆಂದು ಹೆಸರು (ಕವಿಕೋ. I, ೩೨).
[ ತೋರು (<ತೋಱು) + – ವಳಿ₁ ]

**ತೋರುವೊತ್ತೆ** 'ತೋರೊತ್ತೆ' ನೋ.

**ತೋರ್ಪೈಸು** (ಕ್ರಿ). ದೊಡ್ಡದಾಗು ; ವಿಸ್ತಾರವಾಗು : ಬಡತನದಿ ನವೆದವರು ಸುರುಚಿರ ಸುಭೋಜನವನುಣಲು ಹರೆ ಹೆಚ್ಚುವೊಲು ಬಡನಡುವು ತೋರ್ಪೈಸಲು (ನವಮೋ. ೧೩೮-೮). [ ತೋರ + – ಇಸು₁ ]

**ತೋರೊತ್ತೆ, ತೋರುವೊತ್ತೆ** (ನಾ). = ತೋರಡವು : ಅವನು ಮನೆಯನ್ನು ತೋರೊತ್ತೆ ಇಟ್ಟಿದ್ದಾನೆ (ರೂಢಿ). **ತೋರುವೊತ್ತೆ** : ಅವರು ಹೊಲವನ್ನು ತೋರುವೊತ್ತೆ ಹಾಕಿ ಸಾವಿರರೂಪಾಯಿ ತಂದಿದ್ದಾರೆ (ರೂಢಿ). [ ತೋರು (<ತೋಱು) + ಒತ್ತೆ₁ ]

**ತೋರ್ಕೆ** (ನಾ). ೧. ಕಾಣಿಸುವಿಕೆ ; ತೋರುವಿಕೆ : "ಉಟಿ ತೋರ್ಪು ತೋರ್ಕೆಯೆಂದುಂ" (ಕವಿಕಂ. ೨೦೩); ಯಕ್ಷರೂಪಿನಿಂ ತೋರ್ಕೆಗೊಳಗಾಗಿ (ರೇವಣ. ೮-೨೦) ; ಕೀಟಗಳ ಮೊಟ್ಟೆಗಳು ಅವನ್ನಿಟ್ಟ ಕೀಟಗಳಷ್ಟು ಗಾತ್ರ, ಆಕಾರ, ತೋರ್ಕೆಗಳಲ್ಲಿ ವ್ಯತ್ಯಾಸವಾಗಿಲ್ಲ (ಕೀಟಬಿ. ೯೭). ೨. ಪ್ರದರ್ಶನ ; ದೃಷ್ಟಾಂತ ಪಡಿಸುವಿಕೆ : ಇದು ನಿನ್ನರ್ಚಿಸುವಿಕ್ಷುಚಾಪವಿದು ನಿನ್ನೀ ಲೋಕಮಂ ಕೈಗೆ ಮಾಡಿದ ಪುಷ್ಪಾಸ್ತ್ರವಿದಲ್ತೆ ನಿನ್ನ ವಿಜಯಪ್ರಾರಂಭದೊಳ್ ತೋರ್ಕೆಗೆತ್ತಿದ ಚೈತ್ರಧ್ವಜಂ (ಆದಿಪು. ೧೧-೧೭) ; ಚಾಗದ ತೋರ್ಕೆಗಂ ನೆಗಟ್ಟ ಬೀರದಳುರ್ಕೆಗದೊಳ್ಪನಪ್ಪುದುದ್ಯೋಗದವರ್ಕೆಗು ಸಿರಿಯ ಸಾರ್ಕೆಗಂ . . . ಸ್ತ್ರಿವಿತಸಾಗರನಾಗರವಾಗದಿರ್ಕುಮೇ (ಶಾಂತಿಪು. ೧-೭೮). ೩. ಆಕಾರ ; ರೂಪು ; ಗಾತ್ರ : ಕುದುರೆಯ ಬಣ್ಣದಿಂ ರಥದ ತೋರ್ಕೆಯಿನೆತ್ತಿದ ಚಿತ್ರಕೇತುವೃಂದದ ಕುಱುಪಿಂದ . . . ಒರ್ವರೊರ್ವರನೆ ಮಚ್ಚರದಿಂ ಗಱಿಸನ್ನೆಗೆಯ್ದು (ಪಂಪಭಾ. ೧೦-೮೭) ; ಬೆಡಂಗಿನ ತೋರ್ಕೆಗೆ ನೋಡ ನಾಡ ಸೌಂದರಿಯರೊಳಾವಗಂ ಸೆಣಸುವಳ್ ಸಲೆ ಗಾಡಿಗಮುನ್ನತಿಕ್ಕೆಗಂ (ಧರ್ಮಾಮೃ. ೮-೧೭೭); ಘನಪೃಥ್ವಿನಿರ್ದ ತಾಣಂ ಘನಮಾಗಲ್ವೇಳ್ಕುಮೆಂಬ ಬಗೆಯಿಂದೆಂಬಾತಿನಿಯಳ ತನೂದರಂ ತಾಂ ಘನಮಾಗಿಯ ಬಳೆದು ತೋರ್ಕೆಯಂ ತಳೆದಿರ್ಕುಂ (ಚಾರಪು. ೪-೩೭). ೪. ಹೋಲಿಕೆ ; ಸಾದೃಶ್ಯ : ವರಶಬ್ದಾಲಂಕಾರದ ವಿರಚನೆಗಳ್ನೀಟಿನ್ನೊಡೊಂದ ತೋರ್ಕೆಗಳಿಂತುಂ ಪೂರದಿರಲು (ಕವಿರಾ. ೨-೪೪) ; ೫. ಆಡಂಬರ; ಡಂಬ; ನಟನೆ : ಕೆಳಗಣದೊಂದು ತಾಣದೊಳಗಿರ್ದಮಳ್ದಾವರೆಯಂತೆ ತೋರ್ಕೆಯುರ್ಬೆಳಿಯದೆ ತಳ್ತ ಪೆರ್ಮೊಗೆಗಳೊಳ್ (ಕಾವ್ಯಸಾ. ೬೦೦) ; ತಳೆಗಂ ತೋರ್ಕೆಯ ಬಿತ್ತರಂಬಡೆದು ಬಿತ್ತಿತೆಂಬವೋಲಿರ್ದ ಪೆರ್ಬೊಳೆ (ಜಾಕುಂತ. ೧೧೧-೦೭೦) ; ದಶಾನನಂ ನಿನ್ನನೆಮ್ಮಂ ವಂಚಿಸಲ್ಕೆಂದೆ ತೋರ್ಕೆಯಂತಃಕಲಹಮಂ ರಚಿಸಿ . . . ನಿರಸನಂ ಗೆಯ್ದಿರ್ಪನೇಂ ಲಂಕೆಯಿಂ? (ಶ್ರೀರಾಮಾ. ೬೦೩-೩೪). ೬. ಅರ್ಪಣೆ; ದಾನ. 'ತೋರ್ಕೆಗೊಡು' ಪರಾ. [ ತೋಱ್ (<ತೋಱು) + – ಕೆ ]

**ತೋರ್ಕೆಗಿಡು** (ಕ್ರಿ). ಕಾಣದಾಗು ; ಅಸ್ತವಾಗು : ರೂಪುಗೆಟ್ಟುದು ದೆಸೆ ತೋರ್ಕೆಗೆಟ್ಟುದಿನಮಂಡಲಂ (ಜಗವಿ. ೭-೮೦).
[ ತೋರ್ಕೆ + ಕಿಡು (< ಕಿಡು₁) ]

**ತೋರ್ಕೆಗುಡು** 'ತೋರ್ಕೆಗೊಡು' ನೋ.

**ತೋರ್ಕೆಗೊಡು, ತೋರ್ಕೆಗುಡು** (ಕ್ರಿ). ತೋರಿಸಿ ಕೊಡಂ ; ಒಪ್ಪಿಸಿ ಕೊಡಂ ; ಅರ್ಪಿಸಂ ; ದಾನವಾಗಿ ಕೊಡು: ಅರ್ಕಕೀರ್ತಿಗೆ ರಾಜ್ಯವಿರಲೆಂದು ಮುಕ್ತಿಗೆ ತೋರ್ಕೆಗೊಟ್ಟೆಯ್ದಲೊ ತವಕೆ (ಭರತ ೩೨-೧೧೯). **ತೋರ್ಕೆಗುಡು** : ನಿನಗೆನ್ನಂ ಬಿಡದುಣ್ಮದೀ ಬೆವರ್ಮಂ ಕೈನೀರಾಗಿರಲ್ತೋರ್ಕೆಗೊಟ್ಟನನಂಗಂ (ಕಾದಂಉ. ೩೯).
[ ತೋರ್ಕೆ + ಕೊಡು₁ ]

**ತೋರ್ಕೆಗೊಳ್** (ಕ್ರಿ). ಕಾಣು ; ರೂಪತಾಳು : ವಿಶ್ವರೂಪದೊಳಜಾಂಡದ ಮಂಡಲಿ ತೋರ್ಕೆಗೊಂಡುದು (ಜಕವ. ೩-೩೩).
[ ತೋರ್ಕೆ + ಕೊಳ್₁ ]

**ತೋರ್ಕೆವಡೆ** (ಕ್ರಿ). ೧. ಕಾಣು ; ಪ್ರಕಟವಾಗು ; ಸ್ಪಷ್ಟವಾಗು : "ವಿಗೆ ತಱಂಬೊಳೆದುದೆಂದೆನೆ ತೋರ್ಕೆವಡೆದ ಕಾಂತಿಗೆ ನಾಮಂ" (ಅಭ್ಯಿಕ್ಸ. ೩೪) ; ಸೊರ್ಕೊಗೆದಬ್ಧಿಯ ಮಧ್ಯದೊಳುರ್ಕಿದ ಸಿಂಹಳನ ಮದಕೌಷಧ ಮನಿಕಂ ತೋರ್ಕೆವಡೆದೆಸೆವ ಬಾಳು ಪೊಣರ್ಕೆಗೆ ಪೊಡೆಯುವುದು ಭೇರಿಯಂ ಭರದಿಂದಂ (ರಾಜಶೇ. ೩-೧೨೮). ೨. ಪ್ರಸಿದ್ಧಿಯನ್ನು ಪಡೆ,-ಹೊಂದು : ಬೆಳ್ಳಕ್ಕರಿಗರ ಕಲ್ಪಿ ತೋರ್ಕೆವಡೆಯದು (ನೀತಿವಂ. I, ೨೦).
[ ತೋರ್ಕೆ + ಪಡೆ₁ ]

**ತೋರ್ಕೆವರ್** (ಕ್ರಿ). ಸ್ಪಷ್ಟವಾಗು; ಕಾಣುವಂತಾಗು : ಪದೆದಟ್ಟಿಱುರ್ಕೆ ತೋರ್ಕೆ[ಪಾಠಾಂ. ತೋಳ್ಗೆ]ವಂದೂದವಿರೆ ನಾಣನೊಕ್ಕರ್ದ ವಿಚಿತ್ರವಿಕಾರ ರಸಾಂತರಂಗದೊಳ್ ಪುದಿದಿರೆ ಮಾಣದಾಡಿಸಿದನಾತನನಂಗಜನೆಂಬ ನಟ್ಟುವಂ (ಆದಿಪು. ೪-೧೩). [ ತೋರ್ಕೆ + ಬರ್₁ ]

**ತೋರ್ಕೆವೆಱು** (ಕ್ರಿ). = ತೋರ್ಕೆಗೊಳ್: ಶರ್ಕರೆಯಾನು ಒಡಿವಾಗಳಂಗ್ಯೆಯ ಸಂಪರ್ಕದಿ ಸಿಂಧೂರದಂತೆ ತೋರ್ಕೆವೆತ್ತುದು (ಭರತ. ೧೦-೩೬).

[ ತೋರ್ಕೆ + ವೆಱು$_1$ ]

**ತೋರ್ಕೊಳಿಸು** (ಕ್ರಿ). ತೋರಿಸಂ; ಕಾಣಿಸು; ಪ್ರಕಾಶಪಡಿಸು: ಭೋಗಿಗಂ ಜೋಗಿಗಂ ಕರುಣಿವನನುಭವವಿಂತಿವೆಂದೆನಗೆ ನಿಖಿಲಮುಮನೊಡನೆ ತೋರ್ಕೊಳಿಸುತ್ತೆ (ಸಂಸಜ. ೨೯-೯).

[ <ತೋಱು + ಕೊಳ್$_1$ + – ಇಸು$_3$ ]

**ತೋರ್ತೆಳದುಳಿ** 'ತೊಟ್ಟುಟಿದುಂಟಿ' ನೋ.

**ತೋರ್ಪಡಿಸು** (ಕ್ರಿ). ೧. ತೋರಿಸು ; ವ್ಯಕ್ತಗೊಳಿಸು ; ಪ್ರಕಟಿಸಂ : ಯೋಗದೊಳಾತ್ಮತತ್ತ್ವವೆ ಕಡೆ ದಶವಿಧಭೋಗಕಂಗನೆ ಕಡೆಯೆಂದು ಯೋಗ ಶಾಸ್ತ್ರವ ಭೋಗಶಾಸ್ತ್ರವನೆರಡನು ತೂಗಿ ತೋರ್ಪಡಿಸಿ ಪಾಡಿದಳು (ಭರತ. ೧೧-೨೬). ೨. ತೋರು; ಪ್ರಕಟವಾಗಂ : ಸುಸ್ಮೇರಭವದ್ವದನದಾ ವಿಂಚಂತಿದೆ ನಿವ್ಯಾಜದಿ ಮನಕದೇಂ ಸಂಶಯಂ ತೋರ್ಪಡಿಸಿತೆನೆ (ಶಠಕು. ೧೯-೨೦).

**ತೋರ್ಪಡಿಸಿಕೊಳ್ಳು** = ೧. ವ್ಯಕ್ತವಾಗು ; ಪ್ರಕಟವಾಗು : ತಾನು ಎಂಬುದು ಎರಡು ಸ್ವರೂಪಗಳಲ್ಲಿ ತೋರ್ಪಡಿಸಿಕೊಳ್ಳಬಹುದು (ಆಸ್ಸಾಂಸಂ. ೨೪೨). ೨. ತೋರಿಸು ; ವ್ಯಕ್ತಪಡಿಸಂ : ಅವರು ತಮ್ಮ ಅಂತ್ಯಕಾಲ ಸಮೀಪಿಸಿದೆಯೆಂದು ನಿರ್ಧರಿಸಿದ್ದ ಹಾಗೆ ಕಂಡರೂ ನನಗೆ ಬುದ್ಧಿವಾದವನ್ನು ಹೇಳುವಾಗ ಅದನ್ನು ತೋರ್ಪಡಿಸಿಕೊಳ್ಳಲಿಲ್ಲ (ಕಂಗಾಳ್ಮ. ೧೩೩). [ ತೋರ್ಪಡು + – ಇಸು$_3$ ]

**ತೋರ್ಪಡು** (ಕ್ರಿ). ೧. ಸ್ಪಷ್ಟವಾಗಿ ಕಾಣು; ತೋರು; ಗೋಚರಿಸು: ಮರಾಳಾವಳಿ ನಗದ ಬಿಲದ್ವಾರದಿಂದೇಳ್ದುದಾಶಾವಳಯಂ ತೋರ್ಪಟ್ಟು ದಬ್ಜಂ ಪಳಚನಲರ್ದುದಬ್ಜಾರಿಬಿಂಬಂ ಕಳಂಕಂ ಕಳಿದತ್ತೆಂಬಂತೆ ನೀಡುಂ ತೊಳಗಿತು ಶಿಳಿದತ್ತಾಪಗಾವಾರಿಪೂರಂ (ರಾಜಶೇ. ೬-೨); ಸೊಂಟದಲ್ಲಿ ಧೋತ್ರ ಅಥವಾ ಇತರ ಬಟ್ಟೆಯಿದ್ದಂತೆ ತೋರ್ಪಡಲಿಲ್ಲ (ಕಪಾಕುಂ. ೧೪). ೨. ಮೇಲಾಗು ; ಪ್ರಸಿದ್ಧವಾಗಂ ; ಶ್ರೇಷ್ಠವಾಗಂ : ಶರಣಾ ಹೊಕ್ಕುದು ಬಂದು ಮಕುಟದ ಗರುವರವನೀಪಾಲಕರು ಮೋಹರಕೆ ತೋರ್ಪಟ್ಟವರು ಭಾರಿಯ ಬಿರುದಿನತಿಬಲರು (ಕುಮ್ಮಾದ್ರೋ. ೧೬-೨೦).

[ ತೋಱ್ (<ತೋಱು) + ಪಡು$_1$ ]

**ತೋರ್ಪು**, ತೋಪ್ಪು$_2$, ತೋವು, ತೋಹು$_3$, ತೋಹೆ (ನಾ). ೧. ಕಾಣಿಸಂವಿಕೆ ; ತೋರಂವಿಕೆ ; ಪ್ರದರ್ಶನ : "ತೋರ್ಪನೆ ಕಾಣ್ಕೆ" (ರನ್ನಕಂ. ೧೨) ; "ತೋರ್ಪು ತೋರ್ಕೆಯೊಳಂ ವಿಂಗೆ ತೋರ್ಕಂ" (ಕರ್ಣಾನಿ. ೬); ದೀನನೇತ್ರಂ ತುಷಲಘುತರಮಾತ್ರಂ ಕರಂ ಪೊರ್ದಿ ತೋರ್ಪಿಂ ಜನಮಂ ಬೇಳ್ಪಾಸೆಯಿಂ ಸಾವಿನ ಪರಿಯೆನಿಪೀ ದೈನ್ಯಮಂ ಬಿಟ್ಟು ನಿಮ್ಮಂ ನೆನೆಯುತ್ತಿರ್ಪಂತೆ ಪಂಪಾಪುರದರಸ ವಿರೂಪಾಕ್ಷಂ ರಕ್ಷಿಪ್ಪುದೆನ್ನಂ (ರಕ್ಕಾಶ. ೨೧); ತೋರ್ಪೆಂದು ತೋರ್ಕೆ (ತೋರ್ಪೆ) (ಶಮದ. ೧೧೩). ೨. ಆಕಾರ; ಸ್ವರೂಪ. 'ತೋರ್ಪುಗೆಡು' ಪರಾ. **ತೋಪ್ಪು$_2$**:. ೧. ವ್ಯಾಪಿಸಿಯ ನೀವ್ ಮಲ್ಲವಿದ್ಯೆಯ ತೋಪ ಮಱಿವುದು ಭೀಮನಿದ್ದರೆ ಆ ಪುರ ದೊಳೊತೆಸ್ತ್ರುತ್ತಿ ಹೊಗಳಿಸಿ ನಿಮ್ಮ ಬಿರುದುಗಳ (ಕುಮ್ಮಾವಿ. ಒರಿ೩. ೪-೧೪). ೩. (ಬೇಟೆಯಲ್ಲಿ ಒಡ್ಡುವ) ಆಕರ್ಷಣೆ ; ಆಮಿಷ ; ಆಕರ್ಷಕ ವಸ್ತು ಧರಣೀಪತಿ ಚಂಡಶಾಸನಂಬೆರಸು ವನಾಂತರದೊಳ್ ತೆರೆಯಾ ತೋಪಿನ ಸೋಹಿನ ಸೀರ ಬೇಂಟೆಯುರ್ವರೆಗಳನೀಕ್ಷಿಸುತ್ತೆ ಬರೆ (ಅನಂಪು. ೧೧-೪೦) ; ಸೋಪಿನ ತೋಪಿನ ಪಳಹದ ಕೋಪಿನ ಪಾಳಿವದ ಗೋರಿವೇಂಟೆಗೆ ಮತ್ತಂ ಚಾಪ ಪ್ರವೀಣರುದ್ಧತಕೋಪರ್ ನಡೆತಂದರಲ್ಲಿ ಮುಂದೆ ಪುಳಿಂದರ್ (ಸೂಕ್ತಿಸು. ೩-೧೦೪). **ತೋವು** : 'ತೋವಿಕ್ಕು' ಪರಾ. **ತೋಹು$_2$**: ೩. ತೋಹಿನಶಬರನಂತೆ ಲಾಗಿನ ವ್ಯಾಘ್ರದಂತೆ ಆಡುವ ವಿಧಾನದಂತೆ ಇಂತೀ ವೇಷ ಸಹಜ (ವೋರವಾ. ೩೪-೧೪೧) ; ಜಾಳವಣಿಗಳ ಬಲೆಯ ಠಕ್ಕಿನ ತೌಳಿಗಳ ತೋಹುಗಳ ನಗೆಗಳ ಮೇಲುಮುದ್ದಿನ ಬೇಟೆಕಾತಿಯರ್ಯದಿದರು ವನವ (ತೊರರಾ. ೧-೩-೩೯). ೪. ಬೇಟೆಯ ಸ್ಥಳ ; (ದೀವದ ನೆರವಿನಿಂದ)ಬೇಟೆಯಾಡಲು ವನ್ಯಮೃಗಗಳನ್ನು ಆಕರ್ಷಿಸುವ ತಾಣ: ನಿಂದು ಬೇಡರ ತೋಹು ಸೋಹುಗಳ ಸಂದಿಯೊಳು (ಕಬ್ಬರ. ಜೀ. ೧೨೭-೨೦) ; ಬೆಳ್ವರ ಬಿಗಿ ತೋಹಿನೊಳು ನಿಲ್ಲು ತಿಱಿಯಂಬ ಬಿಡು (ಹಡಕಾ. ೩-೨೪) ; ಪುಳಿಂದರು ಬಳಸಿ ಬೇಂಟೆಯನೆಯ್ದಿ ಬನದೊಳು ತೋಹಿನಲ್ಲಿರ್ದು (ಬಸಪು. ೧೮-೨) ; ಸಿಂಹಳದ್ವೀಪದಿಂದೆಮ್ಮ ತೋಹಿಂ ಗೊಂದು ಸಿಂಹಮಾಟೋಪದಿಂ ಬರಲ್ (ಭಾವಚಿಂ. ೩-೧೨); ಹೋಯೆನ್ನಸು ವಿಗ ತೂಣನ ತೋಹಿಗೆ ಸಿಲ್ಕದೆನುತ್ತುಂ ನಿಷ್ಠೆಯ ನೇಹದ ಸಾಹಸಿಗಂ ಶಂಕರನಳ್ಕಱ ಪೂಜೆಗೆ ಸಲ್ವಂ (ಉದ್ಭಟ. ೩-೪೩); ಉದಕಮಂ ಕೊಳಬಂದ ಮೃಗಗಳ ಬೆದರದಂತೆಸೆಯಲ್ಕೆ ತೋಹಿನ ಹೊದರಿನೊಳು ಕಾದಿರ್ದು ಚಾಪಾಸ್ತ್ರಗಳ ಕೈಕೊಂಡು (ಅನಂರಾ. ೨-೩-೭). ೫. ಕಪಟ ; ಮೋಸ: ಯುಧಿಷ್ಠಿರಾನಾಳ್ವ ದೇಶದೊಳ್ಕಳವು ಕೋಲೆ ಪಾದರಂ ಪುಸಿ ನುಸುಳು ವೈರವುಟ್ಟುಳಿ ತೋಹು ಬೆದಱು ಬೆಜ್ಜರ . . . ಅಲಸಿಕೆ ಕರ್ಕಶಂಗಳಿವು ಮೊಳೆದೋಱವು (ಜೈಮಿಥಾ. ೨-೩). ೬. ಗುರಿಯಿಡುವಿಕೆ ; ಸಂಧಾನ ಮಾಡುವುದು : ಬಳಿಕ ನೂಱು ನಿರಂತರಸ್ಯಾಪಳಿವಿಘಾತಿಗೆ ನೂಱು ಲೆಕ್ಕವ ಕಳೆದವಿನ್ನೂಱಾನೆ ಪಾರ್ಥನ ಕೋಲ ತೋಹಿನಲಿ (ಕುಮ್ಮಾಗ. ೧-೧೦) ; ಚೂರಿಸುವ ಮೊಗಸೂನಿಗೆಯ ಕೊಲ್ಲಾರಿಗಳ ಶರಬಂಡಿಗಳ ಹೊಂದೇರು ಕವಿದುವು ಕೋಲ ಕೋಲಾಹಲದ ತೋಹಿನಲಿ (ಕುಮ್ಮಾಕ. ೨-೪೪); ಬಿಲ್ಲ ತಿರುವಿನ ಕೋಲ ತೋಹಿನ ರಾಮನಿದ್ದನು ನೋಡುತಾಹವವ (ತೊರರಾ. ೪-೩-೧೩) ; ಪತ್ತು ರಥಂಗಳಾ ಪೆಸರ ಭೂಪನು ಭಾವಿಗೆ ತೋಹನಿಕ್ಕಿ ನೋಡುತ್ತಿರೆ (ಹಂಚಕಿ. ೭೧-೪೧). ೭. ನೇತೃತ್ವ : ಮುಂದಾಳುತನ ; ಮಾರ್ಗದರ್ಶನ : ಮನುಮುನಿಯತಿವ್ರತಿಗಳೆಲ್ಲರು ನಿಮ್ಮ ತೋಹಿನೊಳಗಿದ್ದರು (ಚನ್ನವ. ಕ. ೩೯೩-೮೩೪); ಘನ ರೌದ್ರಮಯ ದುಗ್ಗಡದ ರಕ್ಕಸಸೇನೆ ನಿಂದುದು ಖಳನ ತೋಹಿನಲಿ (ತೊರರಾ. ೬-೧೯-೧೬). **ತೋಹೆ**: ೩. ಕರೆಸಿದಡವರು ನಿಲ್ಲರು ತೋಹೆ[ಪಾಠಾಂ. ಗೋರಿ] ಯಲಿ ಬಳಿಸಂದ ಮೃಗದಂತೆ (ಕುಮ್ಮಾಸ. ೧೨-೬೪).

**ತೋಪಿನ ಬೇಟೆ** = ತೋಹುವೇಂಟೆ : ಪಾಂಡುರಾಜನಧಿಕತೇಜನುಂ . . . ಒಂದು ದಿವಸಂ ತೋಪಿನ ಬೇಂಟೆಯನಾಡಲಬ್ಬಿಯ ಪೊಱ (ಪಂಪಭಾ. ೧-೧೧೦ ವ). [ ತೋಱ್ (<ತೋಱು) + – ಪು$_3$ ]

**ತೋರ್ಪುಗೆಡು** (ಕ್ರಿ). ಗಾತ್ರ ಕಳೆದುಕೊಳ್ಳು ; ಕುಗ್ಗು : ತನ್ನ ಪಕ್ಷಂ ಸತ್ತೊಡಂ ಮಾತು ಸಾಯದೆ ತೋರ್ಪುಗೆಟ್ಟೊಡಂ ಕೂರ್ಪುಗಿಡದೆ ತೇಜಂ ತೊಲಗೆಯುಮಾಯು ತೊಲಗದೆ (ಶಾಂತಿಪು. ೪-೩೨ ವ).

[ ತೋರ್ಪು + ಕೆಡು$_1$ ]

**ತೋರ್ಮಲ್ಲಿ** 'ತೋರವಂಲ್ಲಿ' ನೋ.

**ತೋಲ್$_1$**, ತೊಗಲ್, ತೊಗಲುಂ, ತೊವಲ್$_3$, ತೊವಲಿಂ, ತೋಲು$_1$, ತೋವಲ್ (ನಾ). ೧. ಚರ್ಮ; ಚಕ್ಕಳ; ತ್ವಕ್ಕು: "ತ್ವಚಮಜಿನಾಸೃಗ್ದರಿ ಕೃತ್ತಿ ಚರ್ಮಮೆನೆ ತೋಲ್ ತ್ವಗಾಹ್ವಯಂ" (ವಸ್ತುಕೋ. ೭೨-೨೮) ; ಸಿಡಿಲಂತೊರ್ಮೆಯೆ ಪೊಯ್ಯೆ ಪೊಯ್ದ ಭರದಿಂದೊಂದಾನೆ ತೋಲ್ ನೆತ್ತರೆಲ್ವಡಗೊಂದೊಂದಱೊಳೊಂದುಮೊಂದದೆ ಗದಾನಿರ್ಘಾತದಿಂ ಮಾಯಮಾದೊಡೆ (ಪಂಪಭಾ. ೧೦-೧೧೩) ; ಕರಡಿಯ ತೋಲಂ ಕಜ್ಜಲ ಪರಾಗದಿಂ ಪೊರೆದು ಬಿರಿದು ಜೇನೆಯ್ಯೊಳ್ ತಂದಿರಿಸಿದವೊಲ್ (ಶಾಂತಿಪು. ೮-೧೨೭) ; ಗಜಂ ಹತಮಾದುದಿಂದು . . . ಅದಱ ತೋಲೊಳ ಮೆಲ್ವಿನೊಳಪ್ಪುದಿಲ್ಲ ತತ್ಪುರಧನಂ (ಜಗವಿ. ೭-೭೧) ; ತೋಲಂ ಕಚ್ಚುತೆ ನಲಿವ ಸೊಣಗಂ (ನೀತಿಮಂ. I, ೩೦೩). **ತೊಗಲ್** : ೧. "ಚರ್ಮ ತ್ವಚಂ

ಕೃತ್ತಿ ಅಜಿನವದಸ್ರಗ್ಧರಿಯೆನಲು ತೊಗಲಕ್ಕು" (ಮಂಗರಾ. ೦೦೬-೩) ; ತಪೋದಾನಶೀಲವ್ರತೋಪವಾಸಾದಿಗಳಿನಲ್ಮಂ ತೊಗಲುಮಾಗಿರ್ಪರ್ (ಶಾಂತಿಪು. ೮-೦೨೮ ವ) ; ಕರ್ಬಿನಂತೆ ತೊಗಲನುಳ್ಳುದು ಬೀಣೆಯಂತೆ ನರದೊಳ್ ಕೂಡಿದುದು (ಧರ್ಮಾಮೃ. ೪-೧೭೩). ತೊಗಲು : ೧. ಸುಗಿದ ತೊಗಲೇಱದೆಗೆದಳ್ಕೆ ದಿಗ್ವಸನವಕ್ತ್ರದ ಕತ್ತಿಯೊಡ್ಡಿದ ಕಪಾಲವೆರಸು . . . ಕಾಳರಕ್ಕಸಿ ಬರುತ (ಸಿದ್ಧರಾ. ೬-೧) ; ಅಂಗುಳಂಗಳ ಸಂದಿಗಳ ಕಳೆಯಿಂಗಿ ನೆತ್ತರು ಸತ್ತ ತೊಗಲ ನರಂಗಳತಿದುರ್ಗಂಧವಾಗಳು ನಾರ್ವ ಬಾತೊಡಲ (ಬಸವು. ೭೬-೩೮) ; ತೊಗಲು ಸಡಿಲಿದ ಗಲ್ಲ ಬತ್ತಿದ ಹೆಗಲು ನಱುಕಿದ ನೆರೆತ ವಿಸಾಸೆಯು . . . ಮುಪ್ಪಿನ ಮುಗುದನೀತನು (ಶಂಪ್ರಾ.ಛೀ. ೧-೩೩) ; ಉಡಲುಬಹುದೇ ತೊಗಲು ನನ್ನೀಯಡಗು ಬೋನಕ್ಕಹುದೆ (ಕೌಶಿರಾ. ೮-೩೨) ; ತೊಗಲಿನ ದೇಹಕೆ ಗೋಪಿಗಂಧ ತೇದುಕೊಂಡು (ಪುರಂದ. ೨-೬೪-೨) ; ತೊಗಲು ಸಡಲಿ ಮುಪ್ಪು, ಹಗಲು ಸಡಲಿ ಇರುಳು (ಗಾದೆ) ; ನಾಯಿ ಬಲ್ಲದು, ತೊಗಲು ಬಲ್ಲದು (ಗಾದೆ). ತೊವಲ್$_3$ : ೧. "ಅಸೃಗ್ಧರೀ, ಅಜಿನಂ, ಚರ್ಮ,ಕೃತ್ತೀ, ತ್ವಕ್ – ಈ ೫ ತೊವಲ್" (ಹಲಾಯು. ೦೦೪-೮) ; ಪುಲಿಯ ತೊವಲ್ಗ [ಪಾಠಾಂ. ತೋಲ್ಗ] ಳುಮಂ ಚಮರಿಗಳುಮಂ ಕೊಂಡು ಬಂದು (ವಡ್ಡಾರಾ. ೦೬೩-೦೫) ; ಪಸಿಯ ತೊವಲ ತಿದಿಯೊಳ್ ಪುದಿದು ಪುಟಪಾಕಂ ಸುಡುವರುಂ (ಆದಿಪು. ೩-೮೫.ವ); ಕರಡಿಯ ತೊವಲಂ ಕಾಡಿಗೆಯೊಳರ್ದಿ ವಿಧಾತ್ರಂ ಲೋಕಮಂ ಬಾಸಣಿಸಿದ ನೆಂಬಂತಪ್ಪ ಕತ್ತಲೆಯೊಳ್ (ಧರ್ಮಾಮೃ. ೧೨-೨೦) ; ಜೋಲ್ವ ಪುರ್ವಿಂ ನೇಲ್ವ ತೋಳ ತೊವಲಿಂ ಇಟ್ಟ ವಿಭೂತಿಯಿಂ (ನಂಶಿರ. ೬-೨೪) ; ಎಲುವ ನಾಯಿಗೆ ಹೊಲೆಯುಗಂ ಮಾಂಸವನು ಮಟ್ಟಿಗಗೆ ಬಳಿಕ ತೊವಲೆಂಬಂತೆ ಮುಳಿಸಿಂ ಕೆಲಕೆ ಬಿಸುಡುವಂ (ಬಸವು. ೨೦-೪೪). 'ತೊವಲ್ವೊದೆಯು, ಪರಾ. ೨. ಮರ, ಗಿಡ ಮೊದಲಾದಂವುಗಳ ತಿಗುಡು : ತೊಗಟೆ : ತವಸಿಯ ತೊವಲೊಳಗೆ ಪುನರ್ನವಿಯುಮಂ . . . ಲೊಕ್ಕಿಯುಮಂ ಸವನಾಗಿ ಕೂಡಿಕೊಳ್ವುದು (ಅಶ್ವಶಾ. ೬-೩೨). ೩. ಕಿತ್ತಳೆ ಮುಂತಾದ ಹಣ್ಣಿನ ಕವಚ,_ಸಿಪ್ಪೆ. ತೊವಲು : ೧. ಬಲ್ಲಿದ ನರಹರಿಯ ತೊವಲು ಕರಿಗಜಾಸುರನ ತೊವಲು ಕರಿಪುಲಿದೊವಲ ನುಟ್ಟು ಹೊದ್ದ . . . ಕಟ್ಟುಗ್ರ(ನ?)ಲಾ (ಸರ್ವಜ. ೦೬೬-೭೮೭) ; ಪುದಿದ ತೊವಲ ಕಂಡ ವಿದುಳಿಲು ನರಗಳಿಂದೊದವಿದೊಡಲ ನೆನೆ ದೊಱಲುವುದು (ಗೀತಗೋ. ೫೬-೧) ; ತೊವಲು ಕೊಂಬುಗಳನ್ನು ಧರಿಸಿ ಯಜ್ಞದೀಕ್ಷೆಯನ್ನು ಹಿಡಿಯುವ ದುರ್ಮತಿಗಳೂ ಉಂಟೆ, ನಿನ್ನನ್ನು ಕಂಡ ಬಳಿಕ (ಬಿರುಕ. ೦೩೪). 'ಗಂಗೆದೊವಲ್' ಪರಾ. ತೋಲು$_1$ : ೧. ಸುರಿವ ರಕ್ತದಿ ತೋಲು ತೋಯ್ದುದು ಸಾರಥಿ ತಿರುಗಿಸಿದನು ಬೇಗಾ ರಥವ (ಅಭಿಕಾ. ೧೨) ; ಗೋಳುವೋರೆಯ ಜೋಲುತೋಲಿನ ಜೂಲು ಆರಿವೆಯ ತಿರುಕ (ಕಗದ್ಯ. ೭೪). ತೋವಲ್ : ೧. ಭಾಗದ ತೋವಲಕ್ಕೆ ಕಡುಕರ್ಪಸವಟ್ಟಿನ ಗಂಗೆದೋವಲಕ್ಕಾಗಳೆ ಕೊಂಡು ಪುಣ್ಯದಿನದೊಳ್ . . . ಸುತ್ತಿ ಕಟ್ಟಿ (ಲೋಕೋಪ. ೬-೪೧).

ತೊಗಲ ಚಲ್ಲಣ = ಚರ್ಮದ ಚಲ್ಲಣ,_ಉಡುಪು : ತೊಗಟೆ ಕುಪ್ಪಸ ತೊಟ್ಟು ತೊಗಲ ಚಲ್ಲಣ ಉಟ್ಟು (ಹರಿಶ್ಚ. ೨೮-೮೪). ತೊಗಲ ಚಿಗುರು = ತೊಗಲ ಬಾವಲಿ : ತೊಗಲ ಚಿಗುರಿಯನ್ನಂತೆತ್ತಿದನೆ ? ಅವನ ಬಿಲ್ಲಾಳ್ಯು ರಲಿ ಗಡ ಪಿನಾಕಿ (ಹರಿಶ್ಚ. ೩-೨೫). ತೊಗಲ ಚೀಲ = ಶರೀರ ; ದೇಹ : ತೊಗಲ ಚೀಲದಲ್ಲಿ ಪರಶಿವನಿದ್ದಾನೆಂದು ಪೊಡವಿಯ ಮೃಡಭಕ್ತರೆಲ್ಲ ನುಡಿವುತಿಪ್ಪರು (ಮೋಳಿಗೆಮಾ. ೩೩-೦೭೪). ತೊಗಲ ತಿತ್ತಿ = (ದ್ರವ ಪದಾರ್ಥಗಳನ್ನು ತುಂಬುವ) ಚರ್ಮದ ಚೀಲ : ಮದ್ದಿನ ಸುರೆಯ ತೊಗಲ ತಿತ್ತಿಯಲ್ಲಿ ತುಂಬಿ ಒಪ್ಪದಲ್ಲಿ ನಿಲಿಸಲಿಕೆ ಅದು . . . ಅಪ್ಪಳಿಸಿ ಬೀಳೂದ ಕಂಡೆ (ಸರ್ವಜ. ೦೪೩-೭೦೩). ತೊಗಲ ಬೊಂಬೆ, ತೊವಲ ಬೊಂಬೆ = ಚರ್ಮದ ಗೊಂಬೆ : ಚಿತ್ರವಿಚಿತ್ರ ವಿನೋದದಾಟವನು ಜಂಗಮ ಮುಂತಾಗಿ ನೋಡದೆ ತಾ ನೋಡಿದನಾದಡೆ ತೊಗಲ ಬೊಂಬೆಯ ನೋಡಿದ ಸಮಾನ (ಚನ್ನವ. ೪. ೧೨೪-೨೮೧) ; ವಿಶ್ವಪತಿಯಾಡಿಸಿದೊಡಾ ಡಿದರಲ್ಲದೆಕಟ ಪರಿಕಿಪೊಡೀ ತೊವಲ ಬೊಂಬೆಗಳ್ ತಾಮೆಯಾಡಲ್ ಸ್ವತಂತ್ರವೇ (ಪದ್ಮರಾ. ೬-೨೨). ತೊವಲ್ನಾರು = (ಜಿಂಕೆಯ) ಚರ್ಮ ಮತ್ತು ವಲ್ಕಲ ; "ತೊಗಲು ನಾರು" (ಶಂಪದೀ. ೨೫೪) ; ಆ ದುಶ್ಶಾಸನನಿಂದೆನಗಾದ ಪರಾಭವಮನೇನುಮಂ ಬಗೆಯದೊಡಿಂತಾದರಮೆ ತೊವಲ್ನಾರುಮನಾದರದೇ[ ೦ ] ನಿನ್ನ ಮನಕೆ ಚಿಂತೆಯುಮಿಲ್ಲಾ (ಪಂಪಭಾ. ೬-೪೪). ತೋಲ ಬಾವಲಿ, ತೊಗಲ ಬಾವಲಿ, ತೊಗಲ ಬಾವುಲಿ = ಒಂದಂ ಬಗೆಯ ಪಕ್ಷಿ ; ತೊಗಲು ಹಕ್ಕಿ ; ತೊಗಲಂ ಬಾವಲಿ : ಆ ದೇವಸ್ಥಾನದ ತುಂಬ ತೋಲ ಬಾವಲಿಗಳು ಸೇರಿಕೊಂಡಿವೆ (ರೂಢಿ) ; ಅಲ್ಲಿ ತೊಗಲ ಬಾವಲೀ ಚೀರತಾವ ಭರತಿ ಹಗಲಿನೊಳಗ (ಗಂಗಾತ. ೮೭-೧೩) ; ಇಂಥ ತೊಗಲ ಬಾವಲಿಗಳಿಗೆ ಸತ್ತ ಮೇಲೆ ಯಾವ ಪ್ರತ್ಯೇಕ ಸ್ಥಳದ ವ್ಯವಸ್ಥೆಯಾಗಬೇಕು (ರಕ್ತಾಕ್ಷ. ೦೦೦) ; ನವಿಲು ಮಂಗ ತೊಗಲ ಬಾವುಲಿ ಮುಂತಾದ ಪ್ರಾಣಿಗಳು ಮನೆ ಮಾಡಿಕೊಂಡು ಇರುತ್ತವೆ (ಮುಂಬಯಿ. ೨-೩೦).

[ ದೇ.॥ ತಮಿ. ತೋಲ್, ತೊಲಿ ; ಮಲ. ತೋಲ್, ತೊಲಿ, ತುಕಲ್ ; ತುಳು. ತುಗಲ್, ತೊಲಿಕೆ ; ಕೊಡ. ತೊಲಿ ; ತೆಲು. ತೋಲು ; ಕೊಲಾ, ನಾಯ್ಕಿ. ಪರ್ಜಿ. ಗದಬ. ಗೊಂಡಿ. ತೋಲ್ ; ಕುವಿ. ತೋಲು./ಸಂ. ತ್ವಕ್ ]

ತೋಲ್$_2$ 'ತೊವಲ್$_2$' ನೋ.

ತೋಲ್$_3$, ತೋಲಂ$_2$ (ನಾ). ದಾರಿ ; ಮಾರ್ಗ: "ದಾರಿ ಕಡವಸಗಳೊಳ್ ತೋಲ್ [ ಪಾಠಾಂ. ತೊಗಲ್]" (ಶಬ್ದಮಂ. ೦೦೬). ತೋಲು$_2$ : ಒರ್ಮೆ ನೇಂಟಿಗೆ ವನಚರರ್ಪೋದ ತೋಲಿನೊಳಗೊರ್ವೊರ್ಮೆ ನಡೆದು ನಿಜಪುರದ ಪಾಂಥದ ಹೊಲಬನೊರ್ಮೆಯುಂ ಕಾಣದೆ (ಸಮ್ಯಕ್ತ್ವ. ೦೦-೪೧).

[ ದೇ.॥ ತೆಲು. ತ್ರೋವ ]

ತೋಲ (ನಾ). ೧. ತೂಕ ; ಭಾರ: ಚಂದನದ ಕೊರಡುಗಳು ಕೆಂಪಾಗಿಯೂ ತೋಲವಾಗಿಯೂ ಸುಗಂಧವಾಗಿಯೂ ಇದ್ದ ಹಾಗೆ ಹೆಚ್ಚು ಬೆಲೆಗಾಣು ತ್ತವೆ (ಮುಂಬಯಿ. ೩-೭೮). ೨. (ಚಿನ್ನ, ಬೆಳ್ಳಿ ಮುಂತಾದ ಲೋಹ ಗಳ) ತೂಕದ ಪ್ರಮಾಣ ; ಒಂದಂ ರೂಪಾಯಿ ತೂಕ ; ತೊಲ : (೬). ೩. ಸಮಸ್ಥಿತಿ ; ಸಮತೋಲನ : ಪ್ಲೈಯ ಕೋಲ ತಪ್ಪಿತು (ಕುಡಿಕೊ. ೫೮) ; ಈ ತ್ರಾಸುಗಳಲ್ಲಿ ಕಡಿಮೆ ತೂಕದ ಕಲ್ಲು ಗಳಿಂದಲೂ ಭಾರವಾದ ಪಾತ್ರೆಗಳನ್ನು ಎತ್ತಿ ತೋಲದಲ್ಲಿರಿಸಲು ಬರುವುದು (ಪಾಲಕ್ರ. I, ೩೩೬). ೪. ಸಮಾನವಾದ ಆಕಾರ ; ಪ್ರಮಾಣ ಬದ್ಧತೆ : ನಿತ್ಯ ಬಳಸುವ ಕಲ್ಲು ಗಾರೆಗಳಿಂದ ಅದನ್ನು ನಿರ್ಮಿಸಿದ್ದರೂ ಅದರ ವಾಸ್ತುರಚನೆಯಲ್ಲಿ ಕಾಣುವ ವೈಖರಿ, ತೋಲ, ಇಕ್ಕಡೆಯ ಮೇಳ-ಬಲು ಚೆನ್ನಾಗಿವೆ (ಅಬೂಬ. ೦೦೪). [ ಸಂ. ]

ತೋಲಂಗಿ (ನಾ). ತೊಗಲಿನ ಅಂಗಿ : ಪುಲಿ ಚಿರತೆ ಸಿಗದ ತೋಲಂಗಿ ಸಿಂಗರಗೈದ ನವಿರಿಡಿದ ಮೆಯ್ಯು, ಬಣ್ಣದ ನಾರ್ಗಳಿಂ ಸಮೆದ ವಸ್ತ್ರದಿಂ ಶೋಭಿಸುವ ಮಲ್ಲಗಟ್ಟಿಯ ... ಸಿಡಿಲಾಳ್ಗಳ್ (ಶ್ರೀರಾಮಾ. ೫೯೧-೧೭೫).

[ ತೋಲ್$_1$ + ಅಂಗಿ$_2$ ]

ತೋಲನ (ನಾ). ೧. ತೂಕ ಮಾಡುವುದು ; ತೂಗುವುದು. ೨. ಆಯ ; ಸಮ ತೂಕ : ಆಸ್ಪತ್ರೆ ಮತ್ತು ಬಂಗ್ಲೆಗಳು ಅವಳ ಸ್ಮೃತಿಯಲ್ಲಿ ಬಂದು ಅವಳ ಚಿತ್ತತೋಲನವನ್ನು ತಪ್ಪಿಸುತ್ತಿದ್ದುವು (ವಂಶವೃ. ೩೭೮). ೩. ಹೋಲಿಕೆ ; ತಾಳೆ ; ಸಾದೃಶ್ಯ : ಸಂವಿಧಾನದ ವಿವಿಧ ಭಾಗಗಳ ತೋಲನ ವನ್ನು ಕುರಿತು ನಾಟಕದ ತಂತ್ರದ ಬಗೆಗೆ ಪ್ರಸ್ತಾಪಿಸುವಾಗ ಹೆಚ್ಚು ಹೇಳುತ್ತೇವೆ (ಸಾಹಿಪ್ರ. ೧೩೫); ಈಚಲು ಹುಳುವನ್ನು ಸುಟ್ಟು ಬಾದಿ

ಮಾಡುವ ಸಣ್ಣ ಮಣ್ಣುಹಣತೆಯ ದೀಪವನ್ನು, ಪಟ್ಟಣವನ್ನೇ ದಹಿಸಿ ನಾಶಮಾಡುವ ಉರಿಗೆ ತೋಲನಮಾಡಿದರೆ ಹೇಗೋ ಹಾಗೆ (ಚಿತ್ರಶಿರ್ವ- ೯೩). ೪. [ನಾಟ್ಯ] ಇಪ್ಪತ್ತು ಬಗೆಯ ಹಸ್ತವಿನ್ಯಾಸಗಳಲ್ಲಿ ಒಂದು: ಧೂನನ, ಶ್ಲೇಷ, ವಿಶ್ಲೇಷ . . . ವಿಕೃಷ್ಟ, ತಾಡನ, ತೋಲಸ [ಪಾಠಾಂ. ತೋದನ, ದೋಡನ] ಛೇದ, ಭೇದ, ಸ್ಫೋಟನ, ಮೋಟನ, ವಿಸರ್ಜನ, ಆಹ್ವಾನ, ತರ್ಜನ ಈ ಇಪ್ಪತ್ತು ಕರಕರ್ಮ ಭೇದಂಗಳ್ (ಲಾಸ್ಯರ. ೪-೧೩ ವ). [ಸಂ.]

**ತೋಲನಯಂತ್ರ** (ನಾ). ತೂಕವನ್ನು ತೋರಿಸುವ ಯಂತ್ರ: "ತೋಲನಯಂತ್ರ, ಸಮತೋಲಕ" (Balance. ಪತ್ರಿನಿ. ೮). [ತೋಲನ + ಯಂತ್ರ]

**ತೋಲಾಟ** (ನಾ). ಖಡ್ಗಯುದ್ಧದ ಒಂದು ಪಟ್ಟು,-ವರಸೆ: ಮೊದಲು ನಿಲ್ಲುವ ಕಡೆಯಲ್ಲಿಯೇ ನಿಂತು ಯರಡು ಪಾದಗಳ ಮುಂದುಗಡೆಯಲ್ಲಿ ಹಿಂದುಗಡೆಯಲ್ಲಿ ದಾಟುವುದು ಅವದುಂಟು ಅದು ತೋಲಾಟಯಿಂದು ಸಮ್ಮತವು (ಖಡ್ಗಬೀ. ೩-೧೫). [ ? ]

**ತೋಲು**$_1$ 'ತೋಲ್$_1$' ನೋ.

**ತೋಲು**$_2$ 'ತೋಲ್$_2$' ನೋ.

**ತೋಲು**$_3$ (ನಾ). ಸಮಸ್ಥಿತಿ; ಸಮತೋಲನ: ಜೋಲಿ ಹೋದಾಗ ಆದಿರಿ ಕೋಲು ಹಿಡಿದರೆ ನಮ್ಮ ತೋಲು (ಹಾಡುಹಾ. ೪೧-೧೧). [ < ಸಂ. ತೋಲ ]

**ತೋಲುಡೆ**, ತೊಗಲುಡೆ, ತೊವಲುಡೆ (ನಾ). ಚರ್ಮದ ಉಡುಗೆ: ಬಿಡದೆ ತೊಡಂಕಿ ತೋರ್ಪ ಜಡೆ ತೋಲುಡೆ ಪೂಸಿದ ಬೂದಿ (ಉಮಾಶ. ೨೯). **ತೊಗಲುಡೆ**: ತೊಗಲುಡೆಯು ತೆಗೆದಿಟ್ಟು . . . ಪೋದರಾಳುಗಳು (ಶಾಬೂರ. ೯೦-೧೭೫). **ತೊವಲುಡೆ**: ಒಡಿದ ಬಿಲ್ಲುಗಳಿಂದುಟ್ಟ ತೊವಲುಡೆ [ಪಾಠಾಂ. ತೊವಲುಡಿಗೆ]ಗಳಿಂ . . . ಬೇಡವಡ ಕೂಡೆ (ನಂಚಿರ. ೧೮-೩೦); ಮಿತ್ರನು ಧನಪತಿಯಾದರು ಶಂಕರ ತೊವಲುಡೆಯಾಂತನು ತಾನು (ಇಂಚಾಪ. ೧೭೩-೪). [ತೋಲ್$_1$ + ಉಡೆ$_2$]

**ತೋಲುತಪ್ಪು** (ಕ್ರಿ). ತೂಕ ತಪ್ಪು; ಸಮತೋಲನವನ್ನು ಕಳೆದು ಕೊಳ್ಳು: ತೋಲುತಪ್ಪಿತೊ-ಚೀರು, ಎದೆಯೊಡೆವ ಅಳು, ಕುದಿತ, ಮಿಡಿತ (ಸಪ್ತಕೃ. ೩-೩). [ತೋಲು$_3$ + ತಪ್ಪು$_1$]

**ತೋಲೆ, ತೋಳೆ** (ನಾ). ೧. ಬಾವಲಿ; ಕಣ್ಣಪಟ: ತೊಗಲ ಬಾವಲಿ, ತೋಲೇಹಕ್ಕಿ; ಕಣ್‌ಕಪಟ (ನಮ್ಮನು. ೨೩೯). ೨. ಕಣ್ಣಿನ ಪೊರೆ: (ಕ). **ತೋಳೆ**: ೧. ಸ್ಪರ್ಶರಸ ಗಂಧ ರೂಪುಗಳೆಂಬೀ ನಾಲ್ಕುಮನಱಿವ . . . ತೊನಸಿ ತೋಳೆ ತೋಲೆ ಕೊಲಿಗ ಮಿಸಿರಿಕೆ ವಚ್ಚೆ ಮಿಡುತೆ (ಜಪಾರ. ೪೯); ತೆ ೧ಳೆಯ ಹಿಂಡು ಕವಿದರೆ ಕರಿಗೆ ಕಳವಳವೇ (ಕಾಶಿರಾ. ೩೩-೨೦); ಎದ್ದ ತೋಳೆಯ ಹಿಂಡನಗಲಕೆ ಹದ್ದು ಬಡಿದಂದದಲಿ (ನಿಘಾಗ. ೪-೯-೦೭). [ < ತೋಲ್$_1$ ]

**ತೋಲ್ಗಟ್ಟು** (ಕ್ರಿ). (ಮುಂಗೈಗೆ) ಚರ್ಮವನ್ನು ಕಟ್ಟು: ಹಾರಾದ್ಯಾಭರಣಂಗಳನೊಲ್ಲದೆ ತೋಲ್ಗಟ್ಟಿ (ಧರ್ಮಾಮೃ. ೭-೭೩). [ತೋಲ್$_1$ + ಕಟ್ಟು$_1$]

**ತೋಲ್ದಪ್ಪು** (ಕ್ರಿ). ದಾರಿ ತಪ್ಪು; ಮಾರ್ಗ ಬಿಡು: ತೋಲ್ದಪ್ಪಿ ಕೇಡುಗಳ ಬಳಿವಿಡಿಯುಲಿಳಸುತಿಹ ಮಾಲಿಸುವ ಕವಲ್ಗಳಿಂಮಾತುಗಳನುಗಿದಂ (ಶಾಬೂರ. ೧೨೭-೨೭೯). [ತೋಲ್$_3$ + ತಪ್ಪು$_1$]

**ತೋಲ್ಪಂಜರ** (ನಾ). ತೊಗಲಿನ ಗೂಡು; ಚರ್ಮದ ಪಂಜರ: ಚಂಡಾಲರ ಕಯ್ಯೊಳ್ಪೆಟ್ಟ ತೋಲ್ಪಂಜರದ ಪಡಕೆಯೊಳ್ನಿಲ್ವ ದುರ್ವಾರದುಃಪೋತ್ಕರ ಮೆ[ಲ್ಲಂ ನೋಡ] ಲೆನ್ನಿಂದ್ರಿಯನಿವಹದ ದೋಷಂ ದಲ್ (ಶಾಂತೀಉ. ೭೩೪). [ತೋಲ್$_1$ + ಪಂಜರ$_1$]

**ತೋಲ್ವಾವಲ್**, ತೊಗಲುಬಾವಲಿ (ನಾ). (ದೊಡ್ಡ ರೆಕ್ಕೆಗಳುಳ್ಳ) ಮರ, ಗಿಡಗಳಿಗೆ ನೇತು ಬೀಳುವ ಒಂದು ಬಗೆಯ ಪಕ್ಷಿ: ಕಾವುದು ದೇವ ಯಾಚಕನನಂಜದಿರೆಕೆ ನೇಲ್ವ ತೋಲ್ವಾ[ಪಾಠಾಂ. ಳ್ವಾ]ವಲೊ ಮತ್ತವಾರಣದ ಸೊಂಡಲೊ (ಲೀಲಾವ. ೨-೧೦೪). **ತೊಗಲುಬಾವಲಿ**: ತೊಗಲುಬಾವಲಿ ಮರದ ಜೋಲು ತೊಗಟೆ (ಸಪ್ತಕೃ. ೮೭). [ತೋಲ್$_1$ + ಬಾವಲ್ (<ಪಾವಲ್)]

**ತೋಲ್ವಿಡಿ** 'ತೊವಲ್ವಿಡಿ' ನೋ.

**ತೋಲ್ವುಲ್ಲೆ** (ನಾ). (ಗುರಿಯಿಡಲು) ತೊಗಲಿನಿಂದ ಮಾಡಿದ ಹುಲ್ಲೆ; ಚರ್ಮದ ಜಿಂಕೆ: ನೆರದಿಸುತಿರೆ ತೋಲ್ವುಲ್ಲೆಯನಿರದದು ಬಿಟ್ಟೋಡೆ ಪುರಾಣಕೂಪದೊಳ್ (ಪಂಪಭಾ. ೨-೫೧). [ತೋಲ್$_1$ + ಪುಲ್ಲೆ$_1$]

**ತೋವಲ್** 'ತೋಲ್$_1$' ನೋ.

**ತೋವಿಕ್ಕು** (ಕ್ರಿ). = ತೋಹಿಡು: ತೋವಿಕ್ಕಿ ಬಹ ಚಿತ್ರಕಾಯನುರು ಗವಲಿಗಂ ಜೀವ ತಾಂ ತಲ್ಲಣಿಸಿ ಗೋವ್ರಜಂ ಬೆಚ್ಚುವೊಲು . . . ಗಜಬಜಂಗೊಳುತಿರ್ದುದು (ಜರಕು. ೩೫-೧೪). [ತೋವು (<ತೋರ್ಪು) + ಇಕ್ಕು$_1$]

**ತೋವು** 'ತೋರ್ಪು' ನೋ.

**ತೋವೆ**, 'ತೊವ್ವೆ' ನೋ.

**ತೋಶಿಕಾನೆ** 'ತೋಷೀಖಾನೆ' ನೋ.

**ತೋಷ** (ನಾ). ಆನಂದ; ಹರ್ಷ; ಸಂತೋಷ: "ಗಹಗಹಿಕೆಯೆನಲ್ ಈ ಷಂ[ಪಾಠಾಂ. ಸಂತಸ]" (ಛಾಂದಿ. ೨೧); ತಂದರು ನೊಸಲಿಗೆ ಕೈಗಳ ಬಿನ್ನಹವೆಂದರನೂನತೋಷದಲಿ (ತ್ರಿಪುಸಾಂ. ೧೭೭); ಶೀಲಕೆ ಸಮನಾದ ತೊಡವಿಲ್ಲ ತೋಷಕೆ ಸಮನಾದ ಧನವು ಬೇರಿಲ್ಲ (ಇಂಚಾಪ. ೧೩೮-೭೭); ರೋಷ ಹೆಚ್ಚಿ ತೋಷವಳಿದು ಮೋಸಹೋಯ್ತು ಜಗವಿದು! (ಕರುಣ್ಯಾ. ೬೦-೦೪); ಚಿಕ್ಕಶಿಶುವಾಗಿದ್ದ ಕಾಲವಿತ್ತೊಂದು . . . ಮಿಕ್ಕ ನೆನಹುಗಳು ಕೊಡವಾ ತೋಷವೆಂದುಂ (ಕವಿಪು. ೯-೯). [ಸಂ.]

**ತೋಷಖಾನೆ** 'ತೋಷೀಖಾನೆ' ನೋ.

**ತೋಷಣ** (ನಾ). ೧. ಆನಂದವನ್ನುಂಟುಮಾಡುವಿಕೆ; ತೃಪ್ತಿಪಡಿಸುವಿಕೆ. ೨. ಆಮೋದ; ಆಹ್ಲಾದ; ತೃಪ್ತಿ; ಸಂತಸ: ತ್ಯಾಗಗುಣಕ್ಕೆ ತಾಯ್ಮನೆ ಸಮಸ್ತನೃ[ನೃ]ಪಾಳನಿಯೋಗವರ್ತನಾಶ್ರೀಗೆ ನಿವಾಸಮಿಪ್ಪರ ವಿಶಿಷ್ಟರ ತೋಷಣ ಪೋಷಣಂಗಳೊಳ್ಯಾಗರವೆಂದು ಬಣ್ಣಿಸುವುದೀ ಧರೆ ಪಣ್ಡಿತಪಾರಿಜಾತನಂ ನಾಗನಾ ಜನಾರ್ದನನಾ (ಎಇ. XXI, ೧೩-೩೩; 1260); ಈ ಬಿನದಿಗೆ ಕುಹಕವೆ ತೋಷಣವೋ (ಗಜೇಶ. ೪-೯೪). [ಸಂ.]

**ತೋಷಿಖಾನೆ** 'ತೋಷೀಖಾನೆ' ನೋ.

**ತೋಷಿತ** (ಗು. ಸಂತೋಷಗೊಳಿಸಿದ; ತೃಪ್ತಿಪಡಿಸಿದ: ನಿಜಾಂತರಾಳಾಶ್ರಿತಲೋಕಾನಂದನವಂ ತೋಷಿತವಮಾನಂದನವಂ ನಿರೀಕ್ಷಿಸಲ್ಕಡೆ ನೃಪತೀ (ರಾಜಶೇ. ೧೧-೩). [ಸಂ.]

**ತೋಷಿಸು** (ಕ್ರಿ). ಸಂತೋಷಪಡಿಸು; ತೃಪ್ತಿಪಡಿಸು; ಆಮೋದಗೊಳಿಸು: ಅವಿಕಳವೀರರ್ಕಳಂ ಗೆಲ್ದನಿವನಾಂ ತೋಷಿಸುವೆನೆಂದನು (ಜೈಮಿಭಾ. ೨೭-೫೦); ನಿಜತನುವನರಿದು ತೋಷಿಸುವುದೊಲವು (ವಿಶೀಗೀ. ೨-೦೫). [ತೋಷಣ + – ಇಸು$_1$]

**ತೋಷೀಖಾನೆ**, ತೋಶಿಕಾನೆ, ತೋಷಖಾನೆ, ತೋಷಿಖಾನೆ, ತೋಷೇಖಾನೆ (ನಾ. ಅರಮನೆಯಲ್ಲಿ ಆಭರಣ, ಪೋಷಾಕು, ಹಣ ಮೊದಲಾದುವುಗಳನ್ನಿಡುವ ಮನೆ; ಖಜಾನೆ; ಭಂಡಾರ: ತೋಷೀಖಾನೆ ತಯಾರಿ (ಎಕ. XIV, ಮೈಸೂರು. ೧೩೦; 1827); ಟಿಪ್ಪುಸುಲ್ತಾನರ ಕಾಲದಲ್ಲಿ ತೆ ೧ಷೀಖಾನೆಯ ಅಧಿಕಾರದಲ್ಲಿದ್ದ ಪೂರ್ಣಯ್ಯನವರನ್ನು ದಿವಾನ್‌ಪದವಿಗೆ ನಿಯಮಿಸಿದರು (ಮಹಾಮಂ. II, ೩); ಪೂರ್ಣಯ್ಯನವರಂ

ಬಹು ಬುದ್ಧಿವಂತರಾಗಿ ಇದ್ದದ್ದರಿಂದ ತೋಷೀಖಾನೆಯ ಭಕ್ಷಿ ಆಸದಲ್ಲಿ ಖಾನನು ನವಾಬರಿಗೆ ಹೇಳಿ . . . ನೇಮಕ ಮಾಡಿಸಿದನು (ಖಾಮುಪಂ. ೨೧೯). **ತೋಶಿಕಾನೆ :** ಆ ದಂಡಿನ ಸಾಮಾನು, ಸರಂಜಾಮು, ತೋಶಿಕಾನೆ, ಫಿರಂಗಿ ಮುಂತಾಗಿ ಕೊಡಗಿನ ಸಂಸ್ಥಾನದವರು ತೆಗೆದುಕೊಂಡರು (ರಾಜೇಂದ್ರ. ೧೨). **ತೋಷಖಾನೆ :** ಶ್ರೀ ನರಸಿಂಹ ತೋಷಖಾನೆ ಗೆ ಸಲ್ಲ ಸೇರ್ವೆ ಜವರಾಯಿಗೌಡನ ಸೇವೆ (ಎಕ. XV, ಹೊಳೆನ. ೪೦ ; ?). **ತೋಷಿಖಾನೆ :** ನಾನು ಈಗಲೇ ತೋಷಿಖಾನೆಗೆ ಹೋಗಬೇಕಾದ ಕೆಲಸವಿದೆ (ಕೃಷ್ಣಭೂ. ೧೭); ಈ ಖಜಾನೆಯ ಐಶ್ವರ್ಯವನ್ನು ನೋಡುವುದು ಸಾಧ್ಯವಿಲ್ಲ ಎಂದು ಆ ತೋಷಿಖಾನೆಯ ಸುತ್ತಲೂ ಸೇನೆಯವರನ್ನು ನಿಲ್ಲಿಸಿ ಹೊರಟು ಹೋದರಂತೆ (ಮುಸುಗ. ೩೭). **ತೋಪೇಖಾನೆ :** ಕಛೇರಿಗಳು—೧. ದಿವಾನ್ ಕಛೇರಿ . . . ೭. ತೋಪೇಖಾ (ಮುಖಾಪಂ. II, ೩೯).

[←ಪಾರ. ತೋಶ್‌ಖಾನ; ಹಿಂ. ತೋಶಾಖಾನಾ: ಮರಾ. ತೋಶ್‌ಖಾನಾ, ತೋಶೇಖಾನಾ]

**ತೋಷೇಖಾನೆ** 'ತೋಷೀಖಾನೆ' ನೋ.

**ತೋಸ** (ನಾ). = ತೋಷ. 'ತೋಸಂಗೊಳ್' ಪರಾ.

[ <ಸಂ. ತೋಷ ]

**ತೋಸಂಗೊಳ್** (ಕ್ರಿ). ಸಂತೋಷಹೊಂದು ; ಆನಂದಿಸು : ನೇಸರ್ಸಾಸಿರ ಕೈಗಳಿಂದೊಲವಿನಿಂ ತಟ್ಕೈಸಲೆಂದೇಗಳುಂ ತೋಸಂಗೊಂಡು ಕೆಲಕ್ಕದೊರ್ಮೆ ಸೆಳೆವಂತೆ (ಮೃಸೂಮ. ೦-೫). [ ತೋಸ + ಕೊಳ್$_1$ ]

**ತೋಸ್ತಾನಿ** 'ತೋಸ್ತಾನು' ನೋ.

**ತೋಸ್ತಾನು**, ತೋಸ್ತಾನಿ (ನಾ). ಸೈನಿಕನು ತೋಟಾಗಳನ್ನಿಡಲು ಬಳಸುವ ಚರ್ಮದ ಚೀಲ; ಸಿಪಾಯಿಯ ಮದ್ದುಗುಂಡಿನ ತೊಗಲುಚೀಲ : (?). **ತೋಸ್ತಾನಿ :** ಸುಲ್ತಾನಿ ತೋಟ ತುಂಬಿದಂಥಾ ತೋಸ್ತಾನಿ ಒಂದು . . . ಕೊಟ್ಟು (ರಾಜೇಂದ್ರ. ೫೬).

[ ←ಮರಾ. ತೋಸ್ತಾನ್, ತೋಸ್‌ದಾನ್ ಪಾರ. ಹಿಂ. ತೋಶ್‌ದಾನ್ ; ]

**ತೋಹಡಿಕೆ** (ನಾ). ಓಕರಿಕೆ ; ವಾಂತಿ ; ವಮನ : "ತೋಹಡಿಕೆಯೆನಲೊಗಡಿಕೆ" (ಭಾರನಿ. ೫೩) : 'ಓಗಡಿಕೆ' ಪರಾ. [ ? + – ಇಕೆ ]

**ತೋಹಮತ್ತು**, ತೋಹಮಾತು (ನಾ). ಮಿಂಥ್ಯಾರೋಪ; ಸುಳ್ಳು ಆರೋಪ ; ಅಪವಾದ : ಸುಮ್ಮಗೆ ಅವರ ಮೇಲೆ ತೋಹಮತ್ತೂ ಹಾಕುವ ದುರಾತ್ಮರನ್ನು ದಬ್ಬಿಸಿಬಿಡೋದು ಉತ್ತಮ (ವಾಗ್ಮೀವಿ. ೧೯೭). **ತೋಹಮಾತು :** ನೀವು ಅವನ ಮೇಲೆ ನಿಷ್ಕಾರಣವಾಗಿ ತೋಹಮಾತು ಹಾಕುವದು ನಿಮ್ಮ ದುಷ್ಟಸ್ವಭಾವದ ದೃಷ್ಟಾಂತವೆಂತಲೇ ತಿಳಿಯಬೇಕು (ವಾಗ್ಮೀವಿ. ೨೧೭).

[ ←ಅರ. ಹಿಂ. ತೋಹಮತ್, ತುಹಮತ್ ; ಮರಾ. ತೋಹಮತ್ ]

**ತೋಹಮಾತು** 'ತೋಹಮತ್ತು' ನೋ.

**ತೋಹಿಡು** (ಕ್ರಿ). ಬೇಟೆಗಾಗಿ ಅಡಗಿಕೊಂಡು ಹೊಂಚು ಹಾಕು : ಸರಸಿಯ ತಡಿಯ ಮರಸನೇರ್ಯಾ ಮರದೊಳು ತೋಹಿಡಲಾ ಸರಿತದೊಳಿರ್ದುದು ಲಿಂಗಾಕಾರವನಾದ್ಯಂದ (ಸಿಂಗಿರಾ. ೨೮-೩೪).

[ ತೋಹು$_2$ (<ತೋರ್ಪು) + ಇಡು$_1$ ]

**ತೋಹು$_1$** 'ತೋಪು$_1$' ನೋ.

**ತೋಹು$_2$** 'ತೋರ್ಪು' ನೋ.

**ತೋಹುಕಾಟಿ** (ನಾ). ಮರಸು ಬೇಟೆಯಾಡಲು ಸಂಚಿನ ಸ್ಥಳದಲ್ಲಿರುವವನು : ಬಲು ನಾಯ ಬಾಯಿಂದ ಮುರುಚಿಕೊಂಡೋಡುವ ಮೊಲಂ ತೋಹುಕಾಟಿರಂ ಹರಿದೆಟಗಿ ಕೊಲುವ ಕೋಣಂ (ಸೋಮುಡ. ೩-೭).

[ ತೋಹು$_2$ (< ತೋರ್ಪು) + – ಕಾಟಿ ]

**ತೋಹುಗ** (ನಾ). = ತೋಹುಕಾಟಿ : ತಡೆಯುದೊಡ್ಡಾ ಪಂದಿ ಮಿಗಗಳ ನಿಡುವಲೆಯ ನೋಡ್ಶೈದೆ ತೋಹುಗರಡೆಗವಂ ಸೋವುಗರು ಜಡಿತರೆ ಮಿಂಥ್ಯಕನು ಕಡುಗಿ (ಸಾಳ್ವಭಾ. ೫-೨೫).

[ ತೋಹು$_2$ (<ತೋರ್ಪು) + – ಗ$_3$ ]

**ತೋಹುಗಾಣಿಸು** (ಕ್ರಿ). ಮರಸುಬೇಟೆಯಲ್ಲಿ ಕಾಯಿಸು, – ಸಂಚಿನ ಸ್ಥಳದಲ್ಲಿರಿಸು : ವಿರಹಿಮಿಗವನೆಸುವರೆ ಕಾವ ಶಬರ ತನ್ನರ ತೋಹುಗಾಹಿ[ಣಿ]ಸುವಂತೆ ಸರಸಿಜಲೋಚನೆಯರು ಲೀಲೆಯಿಂದ ಗೋಪುರದೊಳಗನುದಿನವಿಹರು (ಶಕಕಾ. ೧-೫೮).

[ ತೋಹು$_2$ (<ತೋರ್ಪು) + ಕಾಣಿಸು ]

**ತೋಹುಗೊಳ್** (ಕ್ರಿ). ಬೇಟೆಗಾಗಿ ಮರೆಯಾದ ಸ್ಥಳದಲ್ಲಿರು, ಸಂಚಿನ ತಾಣದಲ್ಲಿರು : ಬಲೆಯೊಡ್ಡಿ ತೋಹುಗೊಂಡೆರೆಗೆದಟು ಬೆಳ್ಪರ ಸುತ್ತಿ ಸರಿವ ಬಿಗಿವ ಸಂಕಟ ಬೇಡ (ಹರಿಕಾ. ೫-೨೦).

[ ತೋಹು$_2$ (<ತೋರ್ಪು) + ಕೊಳ್$_1$ ]

**ತೋಹುವಿಡಿ** (ಕ್ರಿ). ಬೇಟೆಗಾಗಿ ಹೊಂಚುಹಾಕು : ಕಾನನಸ್ಥಳದೊಳಗೊಲ್ದು ತೋಹುವಿಡಿದೊಡ್ಡಿದರೆಯ್ದಿ ಪುಳಿಂದನಾಯಕರ್ (ದಶಕು. ೨-೧೧೫); ಪಿರಿದೆನಿಪ ಗಜದ ಬೇಂಟೆಯನಾಡಲೆಂದು ಕಾನನದ ಮಧ್ಯದೊಳಗೊಂದು ಕರಮೆಸೆವ ಕೆಟಿಯೊತ್ತಿನೊಳೆ ತೋಹುವಿಡಿದಿರಲ್ಕೆ (ಸಿದ್ಧೇಪು. ೭-೯). [ ತೋಹು$_2$ (<ತೋರ್ಪು) + ಪಿಡಿ$_1$ ]

**ತೋಹುವೇಂಟೆ** (ನಾ). ಒಂದು ಬಗೆಯ ಬೇಟೆ ; ಮರಸುಬೇಟೆ : ನೆಗಳ್ತೆಯ ತೋಹುವೇಂಟೆ ಸಂಗಳಿಸಿದ ನೀರವೇಂಟೆ ಘನ ಸೋಹಿನ ವೇಂಟೆಯೆನಿಪ್ಪ ನಾಮಮಂ ತಳೆದೆಸೆವೆಂಟು ಬೇಂಟೆಗಳನಾಡಿದು (ತ್ರಿಪುವಿ. ೨೭-೯೨) ; ಅರಸಿ ಮರುತಾದೇವಿಗೊಗೆದು ಜಿನನಾಮದಿಂದಿರುತೊಮ್ಮೆ ತೋಹುವೇಂಟೆಗೆ ಹೋಗಿ ನದಿಯೆಡೆಗೆ ಬರಲು (ವೀಕ್ಷಿಪು. ೪-೭-೩೭).

[ ತೋಹು$_2$ (<ತೋರ್ಪು) + ಬೇಂಟೆ ]

**ತೋಹೆ** 'ತೋರ್ಪು' ನೋ.

**ತೋಳ್**, ತೋಳು (ನಾ). ೧. ಬಾಹು ; ರಟ್ಟೆ : ಈ ನರೇಂದ್ರಂ ಸಾಕ್ಷಾದಿಂದ್ರಂ ತಾನೆನೆ ಸಲೆ ನೆಗಟ್ದಿಂದ್ರೇಂದ್ರನ ತೋಳೆ ತೊಟ್ಟಿಲಾಗಿರೆ ಬೆಳೆದಂ (ಪಂಪಭಾ. ೧-೪೪) ; ತೊಳಗುವ ಮಾಳವೀಮುಖಸರೋರುಹಕಾಂತಿಗೆ ಸೋಲ್ತು ಚಂದ್ರಮಂಡಳದ ಕಳಂಕಮಂ ಕಳೆದವಳ್ ನಗರೀಲಲಿತಾಂಗಿ ನಿಳ್ಕಿ ತೋಳ್ಗಳನೆನೆ ಕೂಡೆ ಕಣ್ಗೊಳಿಸಿ ತೋರ್ಪುವು . . . ಕೇತನಾಳಿಗಳ್ (ಕಾದಂಪೂ. ೩೦೩) ; ಎನಗಿರ್ವರುಮರಡುಂ ತೋಳೆನಗಿರ್ವರುಮೆರಡು ಕಣ್ಗಳನ್ನರೆ ಯುವರಾಜನುಮಂಗರಾಜನುಂ (ಗದಾಯು. ೩-೭೭) ; ದೋಷಮಾಳ್ಕೊಡೆ ತನ್ನ ತೋಳನಾದೊಡಂ ಕಡಿದುಬಿಡುವುದು (ಪಂಚತಂ. ೧೦೦-೫) ; ಬಲ್ಲಾಳನ ತೋಳ ಬಾಳ ನೆಳಲಾದುದು ಧರಿತ್ರಿಗೆ ವಜ್ರಪಂಜರಂ (ಎಕ. VII, ಶಿವಮೊ. ೮೮-೦೩ ; 1203) ; ಸಖನ ಮಂಚದಲಿ ಕುಳ್ಳಿರಿಸಿ ತಕ್ಕಿಸಿಕೊಂಡು ಮುಖ ಕೊರಳುರ ತೋಳ್ತೊಡೆಯ ನಖದಗ್ರದಿಂದಿಜುದಿಜುದು (ಕಂನವಿ. ೯-೦೨೩). ೨. ಮರದ ದೊಡ್ಡ ಕೊಂಬೆ, ಮುಖ್ಯ ಶಾಖೆ : ತೋಳ ನೀಳದ ಕೆಂದಳಿರಿಂದಂ ಸಂದಣಿಸಿರ್ದ ಮದಾಳಿಯಿಂದೋಳದಿಂ ಮಳಯಾನಿಳಲೀಲಾಂದೋಳದಿನೊಪ್ಪೆ (ಆದಿಪು. ೩-೩೦); ಬಂಣಟಿ ಮೂಡೆ ೨ ಮುಂಡಿನ ಮಾಡುವ ಬಳು ಮೂಡೆ ೧ ಚಿಕ್ಕ ಬಿಟ್ಟುವ ಕೊಡಂಗೆ ಮೂಡೆ ೧ ಅದಟ ಪೋಗಣ ತೋಳ ಅರವೆ ಕಂಬಿ ಸಹಿತವಾಗಿ (ಎಇ. XVII, ೧೭೨-೫೧ ; 1256). **ತೋಳು :** ೧. "ಭುಜದೊಳಗಕ್ಕು ತೋಳೆಂದು" (ಕಶಕ. ೪೯) ; ಎರ್ದೆ ಪಡಪಡ ಪಾರ್ದಪುದೇಕೆ ಕೆಳದಿ ತೋಳುಗಳಂ ಪಿಡಿ ಮೃದುಹಸ್ತತಳದಿ (ಕಾದಂಪೂ. ೪೮೨ ರಗಳೆ) ; ಶಿವನ ತೋಳ ತೊಡವಾನತರ ಮಿಾಸಲ ಮನೋರಥವು ಸಿರಿ ಸರಸ್ವತಿವೆರಸಿ ಗಿರಿಜೆ ಬಿಜಯಂಗೈದಳು (ಸಿದ್ಧರಾ. ೧-೫೭) ; ಸಿಂಹದ ತೋಳ ತೆಕ್ಕೆಯ

ಕರಿಯು ಸಲಿವಂದದಲಿ . . . ಧರಣಿಪಾಲನ ತೆಗೆದು ಭೀಮನ ಬರಿಯ ನೆಟ್ಟನು ಜೋಡ ಜೋಕೆಯ ಜರುಹಿದನು (ಕುವ್ಯಾಕೆ. ೧೭-೨); ತೋಳು ಇಲ್ಲದವನಿಗೆ ಭುಜಕೀರ್ತಿ ತಾನೇಕೆ (ಪುರಂದ. ೨-೬೪-೧೩); ರನ್ನದ ಬಗೆ ತೋಳ ತಾಳಿ ಮೋಹನದತ್ಯುನ್ನತ ಭುಜಕೀರ್ತಿಯಿಂದ . . . ರೂಪ ಸಂಪನ್ನೆ ಮೆಚ್ಚಿದಳೊಲವಿನಲಿ (ಕಂಷವಿ. ೯-೬೪); ಕಾಲಿಲ್ಲದಲೆ ಹರಿಗು ತೋಳಿಲ್ಲದಲೆ ಹೊರುಗು ನಾಲಿಗಿಲ್ಲದಲೆ ಉಲಿವುದು (ಸರ್ವಜ್ಞ. ೨೦೨೯). ೨. ಭುಜಬಲ; ಸಾಮರ್ಥ್ಯ: ತೋಳಿಂದ ತಿಳಿವಿಂದ ನುಡಿಯಿಂದ ಜಗದಿರವ ಮೇಲೆನಿಸಿಪವನೆ ರಸಿಕ (ಮುಂಕುತಿ. ೨೬೩). ೪. ಆನೆಯ ಸೊಂಡಿಲು: ಮೋಟೆಯ ತೋಳಿನಲಿ ಮೋದಿದವು ಮಹಿಯನು ಸೂಕ್ಷ್ಮ ದಾನೆಗಳು (ಕುವ್ಯಾದ್ರೋ. ೧೨-೬); ಅಟ್ಟಿ ಹೊಯ್ಯನು ಹೊಗುವ ತೇರಿನ ಘಟ್ಟ ತೂಳುವ ತೋಳಿನಾನೆಯ ಮೆಟ್ಟಿದನು (ತೊರಣಾ. ೩-೬-೪೨). 'ತೋಳವಟ್ಟ' ಪರಾ. ೫. ಅಂಗಿಯ ಅಥವಾ ಕೋಟಿನ ಕೈ: ಮುರಿದ ಕೈಯಾದರೆ ಮುಚ್ಚಿಕೊ ಕೈಯನು ಅಂಗಿಯ ತೋಳಿನ ಒಳಗೆ (ಅಂಚಾಚ. ೨೪೯-೮೦). ೬. ಗಾಡಿಯ ತೊಟ್ಟಿಲಿನ ಎರಡೂ ಬದಿಗಿರುವ ಮರದ ದಿಂಡು: ಯಾವ ಗಾಡಿಗೆ ತೋಳು ಇಲ್ಲ. ಯಾವುದರ ಬುಟಿವು ಮುರಿದುಹೋಗಿದೆ (ಬೀಳಾ. ೧೬೬).

**ತೋಳ ತೀಟೆ** = ತೋಳಿನ ನವೆ; ಯುದ್ಧ ಮಾಡುವ ತವಕ: ತೋಳ ತೀಟೆಯುನವನ ನೆತ್ತಿಯ ಮೇಲೆ ಕಳೆವೆನು (ಕುವ್ಯಾಭೀ. ೧-೬೦). **ತೋಳ ತೀಂಟ್**=ತೋಳ ತೀಟೆ: ಸಿಡಿಲೊಳೆ ತಳ್ತು ಪೋರ್ವ ಸಿಡಿಲಂತಿರೆ ಬಾಳೊಳೆ ಬಾಳ್ ಪಳಂಚೆ ಮಾರ್ಕಡಿವಿದೆ ನೋಡಲಂಜಿ ದೆಸೆದೇವತೆಗಳ್ ಪೆಜಪಿಂಗೆ ತೋಳ ತೀನ್ ಕಿಡೆ ನಲಿದು (ಪಂಪಭಾ. ೧೧-೪೨). **ತೋಳ ತೋಟಿ**=ತೋಳಿನ (ಬಲದ) ಸ್ಪರ್ಧೆ,–ಹುರುಡು: ಕಾಳಗದಲವುರೇಂದ್ರ ಸೋತರೆ ಸೋಲವದು ನಿನಗೆಂಬೆ ನಿನ್ನಯ ತೋಳ ತೋಟಿಯ ತೋಟು (ತೊರಣಾ. ೪-೩-೫). **ತೋಳನ್ನಾಡು** = (ಮಕ್ಕಳು) ಆಟಕ್ಕಾಗಿ ಕೈಯ್ಯನ್ನು ಅಲುಗಾಡಿಸು: ತೋಳು ತೋಳು ತೋಳು ರಂಗ ತೋಳನ್ನಾಡೈ (ಪುರಂದ. ೩-೧೮೯ ಪಲ್ಲವಿ). **ತೋಳ ಪಾವಡೆ** = ಅಧಿಕಾರ ಅಥವಾ ಬಿರುದಿನ ಸಂಕೇತವಾಗಿ ತೋಳಿಗೆ ಕಟ್ಟಿಕೊಳ್ಳುವ ಬಟ್ಟೆ: ಬಿರುದಿನ ತೋಳಪಾವಡೆಯ ದುರಗಲಿಗಳು ದುರ್ಗದಾಳ್ವೇರಿಯ ಮೇಲೆ ಪರಿಶೋಭಿಸಿದರುಬ್ಬನಲಿ (ಕಂಷವಿ. ೧೧-೧೪೪). **ತೋಳ ಬಂದಿ** = ೧. ತೋಳಿಗೆ ಹಾಕಿಕೊಳ್ಳುವ ಒಂದು ಬಗೆಯ ಆಭರಣ; ಕೇಯೂರ: "ಕೇಯೂರಂ, ಅಂಗದಂ– ಈ ೨ ತೋಳ ಬಂದಿ" (ಚಾಚಿರಾ. ೦೨೩); ಇಕ್ಕಿದ ರಕ್ಷದೋಳೆ ಪೊಸ ಮುತ್ತಿನ ಮೂಗುತಿ ತೋಳ ಬಂದಿ . . . ಚೆಲ್ವನೊಳಕೊಂಡಿರೆ (ಅಕ್ಕಿಚಾ. ೩೪೦). ೨. ತೋಳುಗಳ ಬಂಧನ: ಆಲಿಂಗನ. ೧, ೨: ಆತ ಕೊಟ್ಟ ವಸ್ತು ಒಡವೆ ನನಗೆ ಅವಗೆ ಗೊತ್ತು ತೋಳುಗಳಿಗೆ ತೋಳಬಂದಿ ಕಿನ್ನ ತುಂಬ ಮುತ್ತು (ನಾದರಿ. ೫೯-೧೫). **ತೋಳಬಾಪುರಿ**, **ತೋಳ ಬಾಪುರಿ** = ತೋಳಬಂದಿ: ತೋಳ ಬಾಪುರಿ ಯುಟ್ಟು ಕವುಲ ಬಂಧವ ಕಟ್ಟಿ (ಜಿಚರಿ. ೯-೩೨); ಚಾರುಭುಜಕೀರ್ತಿಯಂ ತೋಳ ಭಾಪುರಿಯು ಕರಕಂಕಣಂಗಳನು ಧರಿಸಿ (ನವಮೋ. ೦೬-೧೦). **ತೋಳ ಮಣಿ** = ತೋಳುಬಂದಿ; ಕೇಯೂರ; ನಣತೋಳೊಳ್ ತೊಡದೊಂದು ತೋಳ ಮಣಿಪೋರ್ (ಆದಿಪು. ೧೨-೪೦). **ತೋಳ ಮೊದಲ್** = ಕಂಕುಳಂ; ಕಕ್ಷ: ಅಮರ್ದಂ ಮುಂದಿಡೆ ಮಂದಹಾಸಮಲರ್ಗಣ್ ಬೆಳ್ದಿಂಗಳಂ ಬೀಜೆ ತೋಳ ಮೊದಲ್ಗೆಯ್ದೆ ಪೊದಟ್ದ ಪೆರ್ಮೊಲೆಗೊಡಂಗಳ್ ಸೂಸೆ ಲಾವಣ್ಯತೋಯಮಂ (ಶಂಖಾಮೂ. ೧-೧೦೩); ಲಾವಣ್ಯರಸಮಂ ಬೀಜೆ ಮುಪ್ಪುಮೊಗ ಮುಗುಳೆ ಹೊಗರಂ ತೋಳ ಮೊದಲಪ್ಪುಗೆಯ್ಯ (ಹಮ್ಮಿರಾ. ೩-೩೦).

[ ದೇ. ೫ ತಮಿ. ಮಲ. ತೋಳ್; ತುಳು. ತೋಳ್, ತೋಳು ]

**ತೋಳ್₁** (ನಾ). ಒಂದು ಬಗೆಯ ಕಾಡುಮೃಗ; ಈಹಾಮೃಗ; ವೃಕ: "ಅರಣ್ಯಶ್ವಾ, ಕೋಕಃ, ಈಹಾಮೃಗಃ, ವೃಕಃ– ಈ ೪ ತೋಳಂ" (ಹಲಾಯು. ೩೪-೬೫); "ಕೋಕಮಿಹಾಹಾಮೃಗಂ ವೃಕಮೆನಲ್ಲು ತೋಳನಕ್ಕು" (ಮಂಗರಾ. ೪೮-೮); ನಿರ್ ತೋಳಂ ಬರ್ಪುದು (ಕವಿರಾ. ೧-೬೩); ಮೊಲನುಂ ಪಂದಿಯುಂ ತೋಳನುಂ . . . ಮುಂಗುರಿಯುಂ ಮೊದಲಾಗೊಡೆಯ ಸ್ಥಲಚರಂಗಳುಂ (ವಡ್ಡಾರಾ. ೯೬-೪); ಆತಂಗೆ ಧೂರ್ತವಿನೋದಮೆ ವಿನೋದಮಪ್ಪುದಱಿಂ ದುರ್ಜನಪರಿವೃತನಾಗಿ ಬಂದಂಗಡಿಯಂ ಪುಗೆ ತೋಳನಂ ಕಂಡ ಕುಱಿವಿಂಡಿನಂತೆ ಪರದರ್ ಪರದುಪೋಗೆ (ಧರ್ಮಾಮೃ. ೨-೩೨); ಮರ್ತ್ಯರ ಸಹಸವೆರ್ವ್ಹೊಡನೆ ತೋಳನಳವಿಗೆ ಮಲೆತ ಕುಱಿಗಳ ಜಾಲದಂತಿಹುದೆಂದು ಮುಂದಕರಾಳವೃತ್ತಿಗಳು ನಗಲು (ಕುವ್ಯಾಸ. ೩-೪೯); ಪುಲ್ಲೆಯುಂ ನೆಲದೊಳುಂ ಪಾಸಿ ತೋಳನ ತುಳಿದು (ಮಹಾವಿ. ೭-೨೬); ಹುಲಿ, ಕಿರುಬ, ತೋಳ ಮೊದಲಾದ ಕಾಡುಮೃಗಗಳು ಆ ಕಡೆ ಬಹಳ (ಕಳಹು. ೪); ತೋಳ ಗುಂಡಿಗೆ ಬಿದ್ದರೆ ಆಳಿಗೊಂದು ಕಲ್ಲು (ಗಾದೆ).

[ ದೇ. ೫ ತಮಿ. ತೋಣ್ಣಾನ್; ತುಳು. ತೋಳ್, ತೋಳೆ; ತೆಲು. ತೋಡೆಲು, ತೋಡೇಲು; ಬ್ರಾಹುಈ. ತೋಲ = ನರಿ ]

**ತೋಳ್₂** (ನಾ). ಗೆಳೆಯ; ಮದುವೆಯಲ್ಲಿ ಗಂಡಿನ ಜೊತೆಯಲ್ಲಿ ಬರುವ ಸ್ನೇಹಿತ: ಅಳಿಯನಿಗಿಂತ ಅವನ ತೋಳನ ಅವಾಂತರ ಬಹಳ (ರೂಢಿ). [ ದೇ. ೫ ತಮಿ. ಮಲ. ತೋಟ ]

**ತೋಳವಟ್ಟ** (ನಾ). ಆನೆಯು ಸೊಂಡಿಲಿನಿಂದ ಹೊಡೆಯುವ ಒಂದು ಕ್ರಮ: ಮಸಗಿದ ಮಿಟ್ಟುಮೆ ಮದಗಜದೆಸಕವನೊಳಕೊಂಡುದೆನಿಸಿ . . . ಬಂದು ಪನ್ನೆರಡುಂ ಹಸ್ತಪ್ರಹಾರದೊಳಂ ಪದಿನೆಂಟು ಕೋಡೇಱೊಳಂ ಎಟುಂ ತೆಱದ ತೋಳವಟ್ಟದ ಪೊಯ್ಲೊಳಂ . . . ಪಡೆಯಂ ಪ್ರಳಯಮನ್ನೈದಿಸುತ್ತುಂ ಬರ್ಪುದಂ ಕಂಡು (ಮಹಾನೇ. ೧೨-೧೪೨ ವ).

[ <ತೋಳ್ + ? ]

**ತೋಳಾಟ** (ನಾ). ಮಕ್ಕಳು ತಮ್ಮ ತೋಳನ್ನು ಆಡಿಸುವ ಒಂದು ಕ್ರಮ: ಳಕಾರಕ್ಕೆ . . . ತೋಳಾಟಂ; ಬಾಳೊಪ್ಪಂ (ಶಮದ. ೬೯ ಪ್ರಹೊಳ); ಮೇಲೆ ಪರವಾದಿಗಳ ಬಾಯ್ಗಳಂ ಪೊಯ್ವಂತೆ ತೋಳಾಟವಾಡಿ (ಚಲಪು. ೩-೩೯). [ ತೋಳ್ + ಆಟ ]

**ತೋಳಾಡಿಸು** (ಕ್ರಿ). ತೋಳನ್ನು ಅಲುಗಾಡಿಸು: ಪರವೆನಾಚಿ ಸಂಕಿಲಿ ನಾಚಿಯರನಪ್ಪುವ ತೋಳ್ಗಳವೆಂಬಂತೆ ತೋಳಾಡಿಸುತ್ತುಂ (ಸಂಚಿಲಿ. ೨-೫).

[ ತೋಳ್ + ಆಡಿಸು ]

**ತೋಳಾರ್ಪು** (ನಾ). ತೋಳಿನ ಶಕ್ತಿ; ಭುಜದ ಬಲ: ಅವರಿಗೆ ತಿಮ್ಮಣ್ಣನಾಯಕನ ತೋಳಾರ್ಪಿನ ನೆನಪಾಯಿತು (ಕವೀರ. ೧೨೦).

[ ತೋಳು (<ತೋಳ್) + ಆರ್ಪು₁ ]

**ತೋಳು** 'ತೋಳ್' ನೋ.

**ತೋಳುಕಯ್ಗೊಡು** 'ತೋಳ್ಗೈಗೊಡು' ನೋ.

**ತೋಳುಕೆಲಸ** (ನಾ). ತೋಳಿನ ಶಕ್ತಿಯಿಂದ ಮಾಡುವ ಕೆಲಸ: ಬುದ್ಧಿಯ ಕೆಲಸ ಶ್ರೇಷ್ಠ; ೋಳುಕೆಲಸ ಮಧ್ಯಮ; ಕಾಲ್ಕೆಲಸ ಹೆಗಲ ಕೆಲಸಗಳು ಅಧಮ (ವಚಚಾ. ೩೩೬).

[ ತೋಳು (<ತೋಳ್) + ಕೆಲಸ ]

**ತೋಳುಕೈಗೊಡು** 'ತೋಳ್ಗೈಗೊಡು' ನೋ.

**ತೋಳುಗುತ್ತು** (ನಾ). ಬಾಹುವಿಗೆ ಹೊಂದಿಕೊಂಡಿರುವಿಕೆ: ಭಾರಿಯ ತೋಳುಗುತ್ತಿನ ಜಯಲಕುಮಿ ಜಂಗಳವ ಜಾಱಿದಡೆ ಭಾಳಲಿಪಿಗಳ ಲೆಕ್ಕವನು ಪ್ರತಿಕೂಲವಿಧಿ ಪಲ್ಲಟಿಸಿ ಬರೆದಡೆ ಹೇಳಿ ಫಲವೇನೆನುತ ತುಂಬಿದನರಸ ಕಟಬನಿಯ (ಕುವ್ಯಾಗ. ೩-೨೮).

[ ತೋಳು (<ತೋಳ್) + ಗುತ್ತು₂ (<ಗುತ್ತ₁) ]

**ತೋಳುತೊಡಿಗೆ** (ನಾ). ತೋಳಿಗೆ ಧರಿಸುವ ಆಭರಣ; ವಂಕಿ: "ಕೇಯೂರಂ, ಅಂಗದಂ ೨ ಬಾಹುಪುರಿ ಹೆಸರು. ನಾಗಮುರಿಗೆ ತೋಳು ತೊಡಿಗೆ ಬಾಜುಬಂದೂ ವಂಕಿ" (ಸಿದ್ಧಾಂತಿ. ೧೬೪). [ ತೋಳು (<ತೋಳ್) + ತೊಡಿಗೆ (<ತೊಡುಗೆ) ]

**ತೋಳುಬಂದಿ** (ನಾ). = ತೋಳುತೊಡಿಗೆ : ತೋಳುಬಂಧನದಲ್ಲಿ ವಜ್ರದ ತೋಳುಬಂದಿಯು ಅಲಂಕೃತವಾಗಿದ್ದಿತು (ಶ್ರೀರಾಮ. ೨೩೨) ; ಶ್ಯಾಮರಾಯನಿಗೇ ಒತ್ತಿ, ಒಗೆದ, ಬೆಳ್ಳಿಯ ತೋಳುಬಂದಿಯನ್ನು ಬಿಡಿಸಿಕೊಂಡು ತಂದ (ದೀಪಹ. II, ೧೪೩). [ ತೋಳು (<ತೋಳ್) + ಬಂದಿ$_1$ ]

**ತೋಳುಮರ** (ನಾ). ೧. ಗಾಡಿಯ ಮೂಕಿಗೂ ತೊಟ್ಟಿಲಿಗೂ ಸಂಬಾಧವನ್ನು ಕಲ್ಪಿಸುವ ಮರದ ಸಾಧನ : ಅನುಕರ್ಷ:, ದಾರ್ವಧಸ್ಥಂ – ಆ ನೊಗದ ಕೆಳಗಿರುವ ಕೋಳೀಹಲಿಗೆಗೂ ತೋಳುಮರಕ್ಕೂ . . . ಹೆಸರು (ಸಿದ್ಧಾಂತಿ. ೨೫೪). ೨. ದಾರಿಯನ್ನು ತೋರಿಸುವ ಕೈಯಾಕಾರದ ಮರದ ಸಾಧನ ; ಕೈಮರ : ಆ ತೋಳುಮರದಿಂದ ಊರು ಮೂರು ಮೈಲಿಯಿದೆ (ರೂಢಿ). [ ತೋಳು (<ತೋಳ್) + ಮರ$_1$ ]

**ತೋಳುವಲ** 'ತೋಳ್ವಲ' ನೋ.

**ತೋಳುವಲೆ** 'ತೋಳ್ವಲೆ' ನೋ.

**ತೋಳುವಳೆ** 'ತೋಳ್ವಳೆ' ನೋ.

**ತೋಳುವೆರಗು** 'ತೋಳ್ವೆಱಗು' ನೋ.

**ತೋಳೆ** 'ತೋಲೆ' ನೋ.

**ತೋಳೆಡೆಗೊಡು** (ಕ್ರಿ). (ತೋಳನ್ನು ದಿಂಬಾಗಿ ಮಾಡಿಕೊಂಡು) ನಿದ್ದೆ ಮಾಡು,– ಮಲಗು : ರಜನೀನಾರಿ ತೋಳೆಡೆಗೊಟ್ಟಳಂಬುಜಬಂಧು ಹೊಱವಂಟ (ಉದ್ಯಾದರ್ಪ. ೧೮–೯೩). [ ತೋಳ್ + ಎಡೆಗೊಡು ]

**ತೋಳೆವಿಂಡು** (ನಾ). ಬಾವಲಿಗಳ ಸಮೂಹ,–ಗುಂಪು: ಬಿಲ್ಲಡೆ ಪೊಕ್ಕಿಸೆ ಬಾಣಸಂಕುಲಂ ಕವಿದುವು ತೋಳೆ[ಪಾಠಾಂ. ಳ]ವಿಂಡು ಕವಿವಂತೆಲೆಯಿಕ್ಕಿದ ಕಾನನಂಗಳಂ (ಹಂಪಾಮಾ. ೧೩–೯೩). [ ತೋಳೆ (<ತೋಲೆ) + ಪಿಂಡು$_2$ ]

**ತೋಳೇರಿಸು** (ಕ್ರಿ). ಅಂಗಿಯ ತೋಳನ್ನು ಮೇಲೆತ್ತು ; ಜಗಳಕ್ಕೆ ಸಿದ್ಧವಾಗು : ನೀನು ಇನ್ನೊಂದು ಮಾತಾಡಿದರೆ ಆ ಮಾತಿನ ಕೊನೆಯುಸುರಿನ ಸಂಗಡ ಪ್ರಾಣವನ್ನು ಕಳೆದುಕೊಳ್ಳುವೆಯೆಂದು ತಿಳಿ ಎಂದು ತೋಳೇರಿಸಿದನು (ಜಯಂತ. ೨೯೫). [ ತೋಳು (<ತೋಳ್) + ಏರಿಸು (<ಏಱಿಸು) ]

**ತೋಳ್ಕಟ್ಟು** 'ತೋಳ್ಗಟ್ಟು' ನೋ.

**ತೋಳ್ಕೈಗೊಡು** 'ತೋಳ್ಗೈಗೊಡು' ನೋ.

**ತೋಳ್ಗಟ್ಟು**, ತೋಳ್ಕಟ್ಟು (ನಾ). ತೋಳುಬಂದಿ: ಎಡೆಯೆಡೆಗೆ ಸಜ್ಜುಕವೆನಿಸಿದ ಗೊಜ್ಜಗೆಯರಲ ಮಿಶ್ರದಿನುಪಾಶ್ರಯಂಬಡೆದ ಹೇಮತಾಮರಸದ ಮೊಗ್ಗೆಯ ತೋಳ್ಗಟ್ಟುಗಳು ಮಂ (ಅಗವಿ. ೬–೧೬ ವ). **ತೋಳ್ಕಟ್ಟು** : "ಕೇಯೂರಂ, ಅಂಗದಂ — ಈ ೨ ತೋಳ್ಕಟ್ಟು" (ಹಲಾಯು. ೯೧–೪೦೩). [ ತೋಳ್ + ಕಟ್ಟು$_2$ ]

**ತೋಳ್ಗಟ್ಟು** (ಕ್ರಿ). ತೋಳು ತಟ್ಟು; ಸಡ್ಡು ಹೊಡೆ: ತೋಳ್ಗಟ್ಟುತಾರ್ದು ಸುಮ್ಮಾನದಿಂ ಪಟುಭಟಕೋಳ್ಗೊಂಡು ಕಾದಿಯುತಿರ್ದರು (ಕೃಮಿಭಾ. ೧೨–೫). [ ತೋಳ್ + ಕಟ್ಟು$_1$ ]

**ತೋಳ್ಗೈಗೊಡು**, ತೋಳುಕಯ್ಗೊಡು, ತೋಳುಕೈಗೊಡು, ತೋಳ್ಕೈಗೊಡು (ಕ್ರಿ). ಗಂಡನ ಚಿತೆಯೇರಿ ಸಹಗಮನ ಮಾಡು ; ಮಹಾಸತಿಯಾಗು: ಅಷ್ಟಮಹಿಷಿಯರ್ ಕೃಷ್ಣನೊಡನೆ ... ತೋಳ್ಗೈಗೊಟ್ಟರು (ಪದ್ಮರಾ. ೧೧–೧೫೨). **ತೋಳುಕಯ್ಗೊಡು**: ಆ ಬೊಮ್ಮನಾಯ್ಕನ ಹೆಂಡತಿ × × ಬವನಾಯಕಿತ್ತಿ ತೋಳುಕಯ್ಗೊಟ್ಟು ಸಗ್ಗ ಪ್ರಾಪ್ತರಾದರು (ಎಕ. VII, ಶಿವಮೊ. ೬೧–೧೪ ;1287). **ತೋಳುಕೈಗೊಡು**: ಗಂಗಗೌಡನ ಸೊಸೆ ಮಗಸಿ ತಿಪುರಊಡದಲಿ ? ತೋಳುಕೈಗೊಟ್ಟಳು (ಮೈಆರಿ. ೧೯೩೭, ೬೦–೪; 16 ನೆಯ ಶತ). **ತೋಳ್ಕೈಗೊಡು**: ತಲೆಗಿರಿದು ಕೃಷ್ಣಂಗೆ ತಲೆಗೊಳ್ಳಿಯಿತ್ತು ದೊಡವನಳಲಿ ಕಿಚ್ಚಂ ಪಾಯ್ದರಚ್ಯುತನೊಳು ಕಲಿ ರುಕ್ಮಿಣಿಪ್ರತತಿ ಬಲನೊಳಾ ರೋಹಿಣಿಯುಮೊಲಿದು ತೋಳ್ಕೈಗೊಟ್ಟುದುಮು (ಶಾಸಂಚ. ೨–೧೧೮). [ ತೋಳ್ + ಕೈ$_2$ (<ಕೆಯ್$_2$) + ಕೊಡು$_1$ ]

**ತೋಳ್ತಿಂಡಿ** (ನಾ). ತೋಳಿನ ತೀಟೆ,–ನವೆ : ತಮ್ಮ ತೋಳ್ತಿಂಡಿಯನ್ನು ತೀರಿಸುವುದಕ್ಕೆ ಎಷ್ಟು ಹೆಚ್ಚು ಸಂದರ್ಭಗಳು ಒದಗುವುವೊ ಅಷ್ಟು ಅವರಿಗೆ ಆನಂದ (ಕರತ್ನ. ೩೪). [ ತೋಳು (<ತೋಳ್) + ತಿಂಡಿ ]

**ತೋಳ್ದಲೆ** (ನಾ). ಹೆಗಲು : "ತೋಳ್ದಲೆಯೊಂದುಂ ಮುಯ್ಯೊಂದುಂ ಭುಜಾಗ್ರಂ" (ಕಶಸಾ. ೬೦–೬೨). [ ತೋಳ್ + ತಲೆ$_1$ ]

**ತೋಳ್ದೀಂಟೆ** (ನಾ). = ತೋಳ್ತಿಂಡಿ : ಸುಧನ್ವಂ . . . ಇಂದೆನ್ನ ತೋಳ್ದೀಂಟೆಯಂ ಕಳೆವೆನೆನುತೆ ಕೃಷ್ಣಾರ್ಜುನರ ಸರಿಸಕ್ಕೆತರುತಿರ್ದನು (ಕೃಮಿಭಾ. ೧೪–೧). [ ತೋಳ್ + ತೀಂಟೆ$_1$ ]

**ತೋಳ್ದೀನ್** (ನಾ). = ತೋಳ್ತಿಂಡಿ: ತೋಳ್ದೀನಂ ಕಳೆದು ತರದಪೆಂ ಪಂದಲೆಯಂ (ಚಂದ್ರಪ್ರ. ೧೦–೯೦). [ ತೋಳ್ + ತೀನ್ ]

**ತೋಳ್ದುಱುಗಲ್** (ನಾ). ತೋಳುಗಳ ಸಮೂಹ,–ಗುಂಪು : ತ್ರಿದಶಗಣಾಧಿನಾಯಕನ ಪರ್ವಿದ ತೋಳ್ದುಱುಗಲ್ಗಳೊಳ್ ಪಳಂಚಿದೆ . . . ಎಂಪದುಳಮಾದುದೂ ದಿವ್ಯವಧೂಕದಂಬಕಂ (ಆದಿಪು. ೭–೧೨೫) ; ಎನಗೆ ನಭಂ ದಿಕ್ತಟವಿನ್ನನಿತಂತರಮೆಂದು ನಿಕ್ಕಿ ನೋಡುವ ಗಿರಿರಾಜನ ತೋಳ್ದುಱುಗಲೆನಲ್ ನೀಳ್ದನೇಕಶಾಖೆಗಳೆನೆಸದುದೊಂದು ಕದಂಬಂ (ಜಗವಿ. ೮–೨೪). [ ತೋಳ್ + ತುಱುಗಲ್ (<ತುಱುಂಗಲ್) ]

**ತೋಳ್ನಾಯಿ** (ನಾ). ಒಂದಂ ಬಗೆಯ ದೊಡ್ಡಗಾತ್ರದ ನಾಯಿ; ತೋಳದಂಥ ನಾಯಿ : ಉದಕಮಂಡಲದಿಂದ ಹೊಸದಾಗಿ ತಂದಿದ್ದ ಅಲ್ಸೇಶನ್ ತೋಳ್ನಾಯಿ ಅವರನ್ನು ಅಡ್ಡಾಡಿಸಲು ಕರೆದೊಯ್ದಿದೆ (ದಾಕೂಟ. ೨೪). 'ಸೀಳ್ನಾಯಿ' ಪರಾ. [ <ತೋಳ$_1$ + ನಾಯಿ (<ನಾಯ್) ]

**ತೋಳ್ನೆರ** (ನಾ). ತೋಳಿನ ನೆರವು,–ಆಸರೆ,–ಆಶ್ರಯ : ದಶರಥಂ ಪುಟ್ಟ, ಪಟು ಪೂರ್ದದ ಬಟ್ಟೆಯಿಂ ಕಳೆಗುಂದದ ತೋಳ್ನೆರಂ ತನ್ನೊಳಾಗೆ . . . ತಿರೆಯಂ ಪೊರೆಯುತೆ (ರಾಮಾಶ್ವ. ೭–೧೧). [ ತೋಳ್ + ನೆರ$_2$ ]

**ತೋಳ್ಪೊಯಲ್** 'ತೋಳ್ವೊಯಲ್' ನೋ.

**ತೋಳ್ಪಲ** 'ತೋಳ್ವಲ' ನೋ.

**ತೋಳ್ಪಲ್ಪು** 'ತೋಳ್ವಲ್ಪು' ನೋ.

**ತೋಳ್ಪಲ್ಮೆ** 'ತೋಳ್ವಲ್ಮೆ' ನೋ.

**ತೋಳ್ಮಾಲೆ** (ನಾ). ತೋಳಿಗೆ ಕಟ್ಟುವ ಹಾರ ; (ಹೂವಿನ) ತೋಳುಬಂದಿ: ತೊಳಪ ಚೆಂಗಣಿಗಿಲೆಯ ತೋಳ್ಮಾಲೆಗಳನಿಕ್ಕಿ ಬೆಳಪ ಸಪುರಪ್ರಕರದುತ್ತರಿಗೆಯುಮನಿಕ್ಕಿ ಮಂಗಳವಿಳಾಸಮಂ ಮಾಡಿ (ನಂಚಿರ. ೫–೬೩). [ ತೋಳ್ + ಮಾಲೆ ]

**ತೋಳ್ಮುರಿ** (ನಾ). ತೋಳುಬಂದಿ: ಗೆಜ್ಜೆ ಪದಸರ ಕಂಠಿ ಪದಕ ತೋಳ್ಮುರಿ ಹಸ್ತವಲಯ (ಜನಮು. ೪–೨). [ ತೋಳ್ + ಮುರಿ$_3$ ]

**ತೋಳ್ಮೊದಲ್**, ತೋಳ್ಮೊದಲು (ನಾ). ೧. ಬಾಹುಮೂಲ; ಕಂಕುಳು: ಅಲರ್ವಿಲ್ಲನ ಬಾಳ್ಮೊದಲಾದ ತೋಳ್ಮೊದಲ್ ತುಳ್ಕುವ ನುಣ್ಪಾನೀಕ್ಷಿಪಳಾವಂ ಬಗೆಯೊಳ್ ಮಿಗೆ ಕಾದು ಕಾಪದಲಂ (ಚಂದ್ರಪ್ರ. ೭–೧೧೧). **ತೋಳ್ಮೊದಲು**: ೨. ಭುಜ: ತೋಳ್ಮೊದಲನಂಗಯ್ಗಳಿಂ ಚಪ್ಪರಿಸಿ ತೋರ ತೊಡೆಗಳ ನಪ್ಪಳಿಸಿ...ನಿಮಿರಿನಿಂತನು (ಶ್ರೀಕಾಮೂ. ೪೫೭–೩೩೮). [ತೋಳ್+ಮೊದಲ್]

**ತೋಳ್ಮೊದಲು** 'ತೋಳ್ಮೊದಲ್' ನೋ.

**ತೋಳ್ವಂಕಿ** (ನಾ). ತೋಳುಬಂದಿ: ಜೂಳೆಯು...ತಾಳಿಹೂ ಬಿಂಬಟ್ಟೆದಂಡೆ ತೋಳೊಂಕಿ [ತೋಳ್ವಂಕಿ] ಕರ್ಣಿಕೆ ಸರಪಣಿ ಮೊದಲಾದಾ ಬಾಲೆಗಾಭರಣ ವೊಪ್ಪಿದುವು (ಭರತ. ೪೦–೬೫). [ ತೋಳ್ + ವಂಕಿ ]

**ತೋಳ್ವಚ್ಚ** (ನಾ). ತೋಳಿನ ಆಭರಣ; ಕೇಯೂರ; ಅಂಗದ : ಮುತ್ತಿನೆಕ್ಕಸರಂಗಳುಂ ... ವಚ್ಚೆಯ ತೋಳ್ವಚ್ಚಂಗಳುಂ ಕೆಂಬರಲ ಕಡಗಂಗಳುಂ (ಚಿಕದೇವ. ೭೦-೧೧೦). [ ತೋಳ್ + ವಚ್ಚ₂ ]

**ತೋಳ್ವಲ, ತೋಳಂವಲ, ತೋಳ್ಬಲ, ತೋಟ್ಬಲ** (ನಾ). ಬಾಹುಬಲ; ಭುಜದ ಶಕ್ತಿ ; ತೋಳಿನ ಕಸುವು : ಕಲಿತನದುರ್ಕು ಜವ್ವನದ ಸೊರ್ಕು ನಿಜೇಶನ ನಚ್ಚು ವಿಕ್ಕ ತೋಳ್ವಲದ ಪೊಡರ್ಪು ಕರ್ಣ ನಿನಗುಳ್ಳನಿತೇನಿನ ಗುಂಟೆ (ಪಂಪಭಾ. ೧೧-೨೩) ; ತನ್ನೊಂದೆ ತೋಳ್ವಲದಿಂ ಭೂತಳಮಂ ನಿವಿಾರ್ಚಿ (ಎಕ. VIII, ಸೊರಬ. ೧೮೪-೨೦; 1033 ?); ಬಿಸುಗಣ್ಣೊಗ್ಗರವಂ ಕಾವನ ತೋಳ್ವಲಮನಱವೆನೆಂದೆಟ್ಟಿಂದಂ (ಕಬ್ಬಿಗ. ೨೯೦) ; ಬಲಕ್ಕೆ- ಅಳ್ವಲ (ಅಳ್ಬಲ), ತೋಳ್ವಲ (ತೋಳ್ಬಲ) (ಶಮದ. ೨೪೮ ಪ್ರಯೋ) ; ಶರಧಿಯನು ತೋಳ್ವಲದೊಳೀಸುವುಡುರವಣಿಪ ಮರುಳಂತೆ (ಸಾಳ್ವಭಾ. ೧-೩೭). **ತೋಳುವಲ** : ತಂಸುವ ತೋಳುವಲವೆನೆ ಸಾಧಯಿಸಿತ್ತನೆ (ದೊಂಕಶಾ. ೧೮೩೯, ನವಲುಗುಂದ. ೨೦೭-೨೨; 1184); ತೋಳುವಲಕಿದಿರಿಲ್ಲ ಬನುಗು ನೃಪಾಲನೆಲವೋ ಕರ್ಣ ಫಡಫಡ ಮೇಳವಾದರೆ ಮೊಗೆವ ನರುಣಾಂಬುವನು ನಿನ್ನೊಡಲ (ಕುಮಾರವ್ಯಾ. ೧೩-೨೩). **ತೋಳ್ಬಲ** : ಸಂದ ತೋಳ್ಬಲದದಟಂ ಪರಾಭವಮನೇಕೆಯೊ ಸೈರಿಸುವಂ ಬಲಸ್ಥನೊಳ್ ಬಲಮನೆ ಪೂಣ್ದುಮುದುಂ ಪರಿಭವಕ್ಕೆ ಮೊದಲ್ (ಆದಿಪು ೧೨-೧೦೩). △ **ತೋಟ್ಬಲ** : ಅಸಹಾಯಶೂರನಾಂತರನಿಱುದಟ್ಟೆಯಾಡಿಸಿದ ತೋಟ್ಬಲದಿಂ (ಎಕ. VI, ತರೀಕೆ. ೪೫-೪೭ ; 1196). [ ತೋಳ್ + ಬಲ₂ ]

**ತೋಳ್ವಲಯ** (ನಾ). ತೋಳಿಗೆ ಧರಿಸುವ ಬಳೆ ; ತೋಳ್ಬಳೆ : ಮುಯ್ಯಿನೊಳಮರ್ಚುವ ಮೃಣಾಳದ ತೋಳ್ವಲಯಂಗಳೊಳಂ ಬಾಟಿಯ ತಿರುಳಿಲೆಯ ಬಿಜ್ಜಣಿಗೆಗಳೊಳಮಸಟ ಪಸೆಗಳೊಳಂ ಎಂತುಮಾ ಸಂತಾಪಮಂ ಸಂತಯಿಸಲಱಿದ (ಕಾದಂಬ. ೭೭೩). [ ತೋಳ್ + ವಲಯ ]

**ತೋಳ್ವಲೆ, ತೋಳುವಲೆ** (ನಾ). ೧. ಬಾಹುಬಂಧನ ; ತೋಳಿನ ಸೆರೆ ; ತೋಳಿನ ಹಿಡಿತ : ನಿನ್ನನುಜರಂ ಕಂಡೆಂತುಮೇನೆನ್ನ ತೋಳ್ವಲೆಯೊಳ್ ಸಿಲ್ಕಿದೆಯೆಂದು ಮೂದಲಿಪುದುಂ (ಪಂಪಭಾ. ೧೨-೧೪೭) ; ದಶಾಸ್ಯ ದೇವೋತ್ತಮ ಕಾಮಿನೀಜನದ ತೋಳ್ವಲೆಯೊಳ್ ತೊಡರಲ್ಕೆ ತಕ್ಕುದೇ (ಪಂಪರಾಮಾ. ೧೪-೨೦೦). **ತೋಳುವಲೆ** : ೧. ಭೀಮಸೇನನ ತೋಳುವಲೆಯಲಿ ಸಿಕ್ಕಿದನು ಭೂಪಾಲ (ಕುಮಾರವ್ಯಾ. ೧೩-೪೮). ೨. ಒಂದು ಬಗೆಯ ಬಲೆ : ತೊಡರ್ಚುವಲೆ ತೋಳುವಲೆ ಮರೆವಲೆ ಸಗಾಢವಲೆಗಳ ಹೊಱೆಗಳೊಳೀಯಂ ಪೊತ್ತು ನಡೆತಂದುದು ಪುಳಿಂದರೂಪದಲಿ ಭೂತಗಣಂಗಳು (ಸೌಂದಪು. ೦೮-೭೯). [ ತೋಳ್ + ಬಲೆ₁ ]

**ತೋಳ್ವಲ್ಪು, ತೋಳ್ಬಲ್ಪು** (ನಾ). =ತೋಳ್ವಲ : ಮೊದಲೊಳು ಹೊಯ್ಸಳ ರಾಜ್ಯಲಕ್ಷ್ಮಿಯೊದವಂ ತೋಳ್ವಲ್ಪಿನಿಂ ತಾಳ್ದಿ(ದಂ) (ಎಕ. VI, ತರೀಕೆ. ೭೦-೫ ; 1164 ?). **ತೋಳ್ಬಲ್ಪು** : ಮಾಱಾಂತಿಭಮುಟ್ಟಿ ಪಾಟ್ಟಿನೆಯ ಪೋಲ್ ಬೀಟ್ಟನ್ನೆಗಂ ಪೊಯ್ದು ಕೊಲ್ಲದೆ ಬಲ್ಬಲ್ಮೆಗೆ ಗೇಣ ಬಿನ್ನಣಕೆ ತೋಳ್ಬಲ್ಪಿಂಗೆ ಮುಯ್ಯಾಂಪುದೇ (ಪರ್ಶಪು. ೭-೪೮) ; ದುರ್ಗವನ್ನು ಹೈದರ್‌ಅಲ್ಲಿಯು ಮುತ್ತಿದಾಗ ಈ ಸಿಂಹಿಣಿಯು ತನ್ನ ತೋಳ್ಬಲ್ಪಿನಿಂದ ಕೆಲವು ಕಾಲ ಹೈದರ್‌ಅಲ್ಲಿಯ ಸೇನಾಶರಧಿಯನ್ನು ತಡೆದು ಹಿಡಿದಳು (ಕವೀಕ. ೧೪೧). [ ತೋಳ್ + ಬಲ್ಪು ]

**ತೋಳ್ವಲ್ಮೆ, ತೋಳ್ಬಲ್ಮೆ** (ನಾ). ಬಾಹುಬಲ ; ಭುಜಪರಾಕ್ರಮ : ಅಳ್ವಲ್ಮೆ ; ತೋಳ್ವಲ್ಮೆ (ಶಮದ. ೭೭ ಪ್ರಯೋ). **ತೋಳ್ಬಲ್ಮೆ** : ನಿನ್ನ ಕೈಹಿಡಿತವೂ ತೋಳ್ಬಲ್ಮೆಯೂ ಕಡಿಮೆಯಾಗಿ ಹೋಯಿತೇ ? ಗಾಂಡೀವ ತನ್ನ ಸತ್ವವನ್ನು ಕಳೆದುಕೊಂಡಿತೋ ? (ವ್ಯಾಸಕಿ. ೪೦೨). [ ತೋಳ್ + ಬಲ್ಮೆ ]

**ತೋಳ್ವಳಿ, ತೋಳುವಳಿ** (ನಾ). ತೋಳಂಬಂದಿ : ವನಕುಸುಮಂಗಳಿಂ . . . ಮುಂಗುಳ್ಪರಿಗೆ ತೋಳ್ವಳಿ ಕಂಕಣವಾರವೆಂದು ಬೇಟ್ಪನಿತನ ಮಾಡಿ ತೊಟ್ಟು ಕರಮೊಪ್ಪಿದರ್ (ಪಂಪಭಾ. ೨-೧೭) ; ಮಣಿಮೇಖಳೆ ಮಕರ ಕುಂಡಳಂ ತೋಳ್ವಳಿಯೆಂಬಿವನವರ್ಗೆ ಭೂಷಣಾಂಗಂ ಕುಡುಗುಂ (ಶಾಂತಿಪು. ೬-೧೧೦) ; ಶೀತಳಿಕೆಯ ಚಾಮರಂ ಪೊಸ ಮೃಣಾಳದ ತೋಳ್ವಳಿ ಮುಕ್ತಿನಾರಂ . . . ಕಣ್ಣೊಳಿ (ಕಾದಂಬ. ೪೫೯). **ತೋಳುವಳೆ** : ಕುಡುದಾಡೆ ತೋಳುವಳಿ ಪಾವುಕಯ್ಯ (ದೊಂಕಶಾ. ೧೯೩೩, ಹಾವೇರಿ. ೧೪೩-೦ ; ?). [ ತೋಳ್ + ಬಳಿ₂ ]

**ತೋಳ್ವಾಸ** (ನಾ). ೧. ಬಾಹುಬಂಧನ ; ತೋಳಿನ ಪಾಶ ; ಅಪ್ಪುಗೆ : ಮೆಯ್ಮಱಲಾಱುವನ್ನುಮವನಂ ತೋಳ್ವಾಸದೊಳ್ ಕಟ್ಟಿ ತೂಗದೊಡಂ ಪೇಱು ಪೊಱಪೊತ್ತೆನೇ ಅವನ ವೇಷುಬೊತ್ತೆನಬ್ಬಾನನೇ (ಲೀಲಾವ. ೧೧-೭೮) ; ಅತ್ಕೇಶನಂ ಕಾಣುತನ್ನಳ ಸಂಗಕ್ಕೊಳಗಾಗಿ ಬಂದನೆನುತುಂ ಕಾಯ್ಕೇಱ ತೋಳ್ವಾಸದಿಂದೆಳೆದಾ ಕೋಮಳೆಯೋರ್ವಳೊತ್ತಿ ಬಿಗಿದಳ್ ಶೀತಾತುರಂ ಪೋಪಿನಂ (ರಾಜಶೇ. ೯-೩೨). ೨. ಒಂದು ಬಗೆಯ ತೋಳಿನ ಆಭರಣ ; ಬಾಹುಪೂರ : ತರುಣೀರ್ವರ್ಗರ್ವವೊಪ್ಪುವ ಶೀರ್ಷಕಂಗಳಂ ಮೆಱವ ಭುಜಕೀರ್ತಿ ತೋಳ್ವಾಸ ನಡುಗಟ್ಟುಗಳನೆಸೆರೆಯ ಕರವಾಲಗಳ ಶರಶರಾಶ್ರಯಚಾಪಯುಗ್ಮಮಂ ಕರದೊಳಾಂತು (ಭರತ. ೩-೦೩). [ ತೋಳ್ + ಪಾಸ₁ ]

**ತೋಳ್ವಿಡಿ** (ಕ್ರಿ). ತೋಳನ್ನು ಚಾಚು ; ಕೈಚಾಚು : ಉಗ್ರಕಣ್ಣಿಂದ ಕಾಮನ ಸುಟ್ಟು ಮನಸಿಜವಿಗ್ರಹವನು ಮಾಡಿಕೊಟ್ಟ ನಿಗ್ರಹದಿಂದ ತೋಳ್ವಿಡಿದಡೆ ಶಾಪಾನುಗ್ರಹದಿಂದೆ ಭಂಗಿಸುವೆ (ಪ್ರೋಹಚ. ೧೧-೨೮). [ ತೋಳ್ + ಪಿಡಿ₁ ]

**ತೋಳ್ವಿಸುಗೆ** (ನಾ). ತೋಳಿನ ಬೆಸಂಗೆ,-ಬಂಧನ : ವೀರಾಂಗನೆ ಕಡ್ಡ ತೋಳ್ವಿಸುಗೆಯೊಳ್ಳೀರ್ವಟ್ಟು ನಿಲ್ವನ್ನಲೇ (ಪಂಪರಾಮಾ. ೦೨-೬೦). [ ತೋಳ್ + ಬಿಸುಗೆ <ಬೆಸುಗೆ ]

**ತೋಳ್ವೀಸಲು** (ನಾ). ತೋಳನ್ನು ಬೀಸುವಿಕೆ : ಬೆರಳ್ಮಿಡಿತ ತಲೆದೂಕ ಕೊಡವೊಯ್ಲು ಮುಡುಹಿನಾಟ ತೋಳ್ವೀಸಲು ಭ್ರೂಲೀಲೆ ನಯನಚೇಷ್ಟೆ ಇತ್ಯಾದಿಗಳ . . . ಸುಮ್ಮಾನ ಸಂತೋಷೋತ್ಸಾಹಗಳಲ್ಲಿರುವರು (ಬಟ್ಟಲು. ೭೦-೧೯). [ ತೋಳ್ + ಬೀಸಲು ]

**ತೋಳ್ವೆಱಗು, ತೋಳುವೆಱಗು** (ನಾ). ತೋಳಿನ ಹಿಂಭಾಗ : ಪ್ರಣಯ ಕಲಹಕೇಳಿಯಿಂ ವಿಜಯಶ್ರೀಯುಂ ಜನಿಸುವಂತೆ ತೋಳ್ವೆರ[ಱ]ಗ ನಪ್ಪುಕೆಯ್ದು (ಪಂಪರಾಮಾ. ೩-೯ ವ) ; ಶ್ರೀಗೆರ್ದೆವತ್ತುಗೆ ವರವಾಕ್ಶ್ರೀಗೆ ನಿಜಂ ಸುಮುಖವೃತ್ತಿ ತೋಳ್ವೆರ[ಱ]ಗು ಜಯಶ್ರೀಗೊಲವೀನಿಯ ನೆಗಟ್ದಂ ಭೂಗಧಿಪತಿ (ಚಂದ್ರಪು. ೨-೧) ; ಶ್ರೀಯಂ ಕುರಿಸಿ ವಿಜಯ ಶ್ರೀಯಂ ತೋಳ್ವೆರೆ[ಱ]ಗಿನೊಳ್ ಮನಂಗೊಳಿಸಿ . . . ನೆಗಟ್ದಂ ವಿನೇಯಜನಮುಖತಿಲಕಂ (ಅನಂಪು. ೯-೧); ಜಯಶ್ರೀ ಮನಂಗೊಳ್ವಿನಂ ತೋಳ್ವೆರ[ಱ]ಗಂ ಪಾರ್ದಿರ್ಪ ದರ್ಪೋನ್ನತಿ (ಧರ್ಮಾಮೃ. ೨-೧೪೭). **ತೋಳುವೆಱಗು** : ವೀರಲಕ್ಷ್ಮಿ ತೋಳುವೆಱಗಿನೊಳೊಪ್ಪೆ (ಎಕ. VI, ಚಿಕ್ಕಮ. ೦೭೦-೪೩ ; 1187). [ ತೋಳ್ + ಪೆಱಗು ]

**ತೋಳ್ವೊಯ್, ತೋಳ್ಪೊಯ್** (ಕ್ರಿ). ಭುಜವನ್ನು ತಟ್ಟು,-ಆಸ್ಫಾಳಿಸು : ಉಭಯಸುಭಟರ್ಗಳಾರ್ಭಟಿಸಿ ತೋಳ್ವೊಯ್ದು ಪಟುಭಟವಾಜಿ ವರ್ಗಮಂ ರಾವ್ತರಡ್ಡಾಡಿದರ್ (ಚಬಪು. ೨೯-೩); ರಾಮಾವತಾರದೊಳ್ದೇಹ ಮುಳ್ಳನಿತು ದಿನಮಾರ್ಜಿಸಿದ ಪುಣ್ಯಮಂ ರೂಹುಗಾಣಿಸಿಕೊಟ್ಟು ಶಕ್ತಿಯಂ ನೆಲೆಗೊಳಿಸಿ ಮುರಹರಂ ತೋಳ್ವೊಯ್ದನು (ಜೈಮಿಭಾ. ೦೩-೪೨). **ತೋಳ್ಪೊಯ್** : ಹೂಂಕರಿಸಿ ತೋಳ್ಪೊಯ್ಯುತೆ . . . ಬಂದುದು ಪದಾತಿಬಲಂ (ಚಬಪು. ೪೭-೩೭). [ ತೋಳ್ + ಪೊಯ್₁ ]

**ತೋಳ್ವೊಯ್ಲು** (ನಾ). ಭುಜ ತಟ್ಟಿಕೊಳ್ಳುವಿಕೆ ; ಬಾಹಾಸ್ಫಾಲನ : ತೋಳ್ವೊಯ್ಲು ತುಟಿವೆರಳ ಬೊಬ್ಬೆಗಳ ರಿಪುಗಳಂ ಸೀಳ್ವ ಸಡಗರದ . . . ಸಂಭ್ರಮವವನಿರದೆ ಪಡೆಯೆರಡೀಕ್ಷಿಸುತ್ತಿರ್ದುವು (ಜಬಪು. ೨೬-೧೭). [ ತೋಳ್ + ಪೊಯ್ಲು ]

**ತೋಳ್ಸಾರ್ಚು** (ಕ್ರಿ). = ತೋಳ್ವಿಡಿ : ನೀನು ಆವ ವೈರ್ಯದಿಂದ ಮನವೇರಿಸಿ ತೋಳ್ಸಾರ್ಚಿದೆ ? (ಜಿಟ್ಟಿಅ. ೦೯-೦೦). [ ತೋಳ್ + ಸಾರ್ಚು ]

**ತೋಳ್ಸುತ್ತು** (ನಾ). ಬಾಹು ಬಂಧನ ; ಅಪ್ಪುಗೆ : ಜನನಂ ಸೋಲಿಪ ಪೆಂಡಿರಾರ್ ಪರಮನಂ ತೋಳ್ಸುತ್ತಿನೊಳ್ ಕಾವ ಕಾಮಿನಿಯಾರ್ (ಅನಂಪು. ೬-೨೪). [ ತೋಳ್ + ಸುತ್ತು$_{2}$ ]

**ತೋಳ್ಸೆರೆ** (ನಾ). = ತೋಳ್ಸುತ್ತು : ಅವನ ತೋಳ್ಸೆರೆಯಲ್ಲಿ ನಾನು ಮಲಗಿದಾಗ . . . ಒಂದು ಬಗೆಯ ಅಮಲು ಬಂದಿತ್ತು (ಮೂಕಜ್ಜಿ. ೩೦೧). [ ತೋಳ್ + ಸೆರೆ$_{2}$ (<ಸೆಱೆ$_{3}$) ]

**ತೋಱ್** 'ತೋಱು' ನೋ.

**ತೋಱಿಕೆ, ತೋರಿಕೆ** (ನಾ). ೧. ಕಾಣಿಸುವಿಕೆ ; ತೋರುವಿಕೆ ; ಹೊರನೋಟ : ತೋಱುವೀ ತೋಱಿಕೆಯ ತುಷವನು ತೂಱಿದರೆ ಮೇಣ್ ವಿಶ್ವಮುಖದಲಿ ತೋಱ್ ತೋಱದೆ ಮೆಱೆವನೀ ಹರಿಯೆಂದನಾ ಭೀಷ್ಮ (ಕುಮ್ವಾಸ. ೯-೧೨) ; ತೋಱುವೀ ತೋಱಿಕೆಯೊಳಗೆ ಸಲೆ ವಿ ಱ್ ತೋಱುವ ನಿಜವನಱಿಯದ ಗಾಜುಗಳು ನೀವ್ ಪಶುಗಳೆಂದರೆ ಪೇದ ವೇಕೆಂದ (ಕುಮ್ವಾಕ. ೭-೨೩) ; ಭೇದಾಭೇದದಿಂದ ತೋಱುವ ತೋಱಿಕೆಗಳೇನೂ ಇಲ್ಲದಂದು ಅಖಂಡೇಶ್ವರಾ ನಿಮ್ಮ ನೀವಱಿಯದೆ ಅನಂತಕಾಲ ವಿರ್ದಿರಂದು (ಅಖಂಡೇ. ೧-೧). ೨. ಸಾದೃಶ್ಯ ; ಹೋಲಿಕೆ : ತೋಱಿದವು ಗರ್ಭಗಳು ಶುಕ್ತಿಯ ಕೋಟಿಕೆಯ ಮೌಕ್ತಿಕದವೊಲು (ತೊರಿರಾ. ೧-೮-೨). ೩. ದೃಶ್ಯ ; ನೋಟ : ಕಂಪಿನ ತನಿರಸದ ತಾವರೆಯ ತೆಕ್ಕೆಯ ತೋಳ ತೋಱಿಕೆಯ ಜನುಗುದುಂಬಿಯ ಜಾಳಿಗೆಯ ತನಿವಿನನುಗು ವೋಱಿಯ ಕಣ್ಣ ಕಂಪಿನ ಘನಭಯಂಕರರೂಪ ಭೀಮನ ಕಂಡನವನೀಶ (ಕುಮ್ವಾಅ. ೧೧-೪). ೪. ಅಂದ ; ಚೆಂದ : ಮೂಱುಂ ರೇಖೆಗಳಿಂದಂ ತೋಱಿಕೆಯಂ ಪಡೆದು ಸೊಗಸನೀವುತ್ತಿರ್ದಾ ನೀಱೆಯ ಕೊರಳತಿಶಯತಂ ಮಾಱುಂಗೊಂಡುದು ನೃಪಾಳಶಿಳಕನ ಮನಮಂ (ರಾಧಪು. ೨-೪೩). **ತೋರಿಕೆ** : ೧. ಇಂದ್ರಿಯಗಳು ತೋರಿಕೆಯ ಪ್ರಪಂಚವನ್ನು ಅರಿಯಲು ಮಾತ್ರ ಸಹಾಯ ಮಾಡುತ್ತವೆ (ತತ್ವಶಾ. ೦೦). ೫. ಆಡಂಬರ ; ದಂಬ ; ನಟನೆ : ತೋರಿಕೆಯ ಪ್ರವೃತ್ತಿ ಅವರದು (ಮುರಳೀ. ೮೩). [ ತೋಱು + – ಇಕೆ ]

**ತೋಱಿಕೆವೆಱು** (ಕ್ರಿ). ಕಾಂತಿ ಹೊಂದು ; ಥಳಥಳಿಸು ; ಹೊಳೆ : ತೋಱಿಕೆವೆತ್ತ ಭೂರಿತರ ಬಾಡವಸಂಸ್ಥಿತಿಯಿಂದವೊಪ್ಪಿ ಕೂರ್ವೇಱಿದ ತೀರದಂಬುಗಳನೆಯ್ದೊಳಕೊಂಡು . . . ಅಗುರ್ವನದಿತ್ತುದಾಕ್ಷಣಂ (ರಾಧಪು. ೦೩-೯೧). [ ತೋಱಿಕೆ + ಪೆಱು$_{1}$ ]

**ತೋಱಿಸು, ತೋರಿಸು** (ಕ್ರಿ). ೧. ಕಾಣಿಸು ; ದೃಷ್ಟಿಗೆ ಬೀಳುವಂತೆ ಮಾಡು : ತನುವನದೊರ್ವೆಯುಂ ಮಗುಟ್ದು ತೋಱಿಸಲಾಱನೆ (ಕಾದಂಊ. ೫೬೬) ; ಮಹಾನುಭಾವರ ತೋಱಿಸು ಕೂಡಲಸಂಗಮದೇವಾ (ಬಸವ. ೮೮೨) ; ಧುರದೊಳಹಿತಖಿಳೋತ್ತಮರ ದುರ್ಧರದ ಶಿರಖಂಡನವ ನೆಮ್ಮಯ ಸರಳ ಮೊನೆಯಲಿ ತೋಱಿಸುವೆವಿದ ನಂಬಿ ನೀವೆಂದ (ತೊರಿರಾ. ೦-೮-೬೬) ; ಬೇಟ್ಟಿಣ್ಣು ಮಾಂದಳಿರಸುಗೆ ಪುನ್ನಾಗ ದಾಳಿಂಬ ತ್ರಿವರ್ಣಪುಷ್ಪಗಳು ಮುಂಬಾಗದೆ ತೋಱಿಸುವ ವಸಂತನನಿದಿರ್ಗೊಂಬಂತೆ ಬನದಿ ರಂಜಿಸಿತು (ಪೋಹತ. ೪-೪೯). ೨. ಪ್ರಕಟಿಸು ; ವ್ಯಕ್ತಪಡಿಸು ; ಪ್ರದರ್ಶಿಸು : ಶ್ರುತಸಾಗರದ್ವಿಜವರಂ . . . ಅನೇಕವಿಧಶಾಸ್ತ್ರಪ್ರೌಢಿಯಂ ನಾಡೆ ತೋಱಿಸುತಿರ್ದಂ (ಸುಕುಮಾ. ೭-೫೧) ; ಲುಳಿಯ ಬಲುವಿದ್ಯಾ ಚಮತ್ಕೃತಿಯಳವು ಗರುಡಿಯೊಳಲ್ಲದೀ ರಿಪುಬಲಗೆ ತೋಱಿಸಬಹುದೆ (ಕುಮ್ವಾಭೀ. ೬-೫) ; ಜಯಸಿರಿಗೆ ನೀನೇ ಪತಿಯೆನಿಸಿ ತೋಱಿಸುವೆನೆಂದನು ಶಲ್ಯ ಕುರುಪತಿಗೆ (ಕುಮ್ವಾಕ. ೦-೨೭). ೩. ಕಾಣಿಸಿಕೊಳ್ಳು ; ವ್ಯಕ್ತವಾಗು : ನೊಸಲೊಳ್ ತೃತೀಯಲೋಚನಮಮವುಗುಂಟು ತೋಲಮಱೆಯಿಂದದು ತೋಱಿಪುದಿಲ್ಲ (ಕಾದಂಪೂ. ೫೬೮) ; ಸಮನಿಸಿ ತೋಱಿಸುಗುವಿವಿಂದ ಮಿಂದೆಯೆಂಬಿವು ತೃತೀಯೆಯೊಳ್ (ಶಮದ. ೧೦೭). ೪. ಜವಾಬ್ದಾರಿ ಹೊರಿಸು ; ಗುರಿಮಾಡು : ಎಮ್ಮ ತೋಱಿಸಬೇಡ ಸುಖದಲ್ಲಿ ನಿಮ್ಮ ಚಿತ್ತಕೆ ಬಹುದ ಮಾಡುವುದು (ಕುಮ್ವಾಶ. ೦-೨೬). **ತೋರಿಸು** : ೧. ತಮ್ಮ ಚಾತುರ್ಯವನು ದೊಡ್ಡವರಿಗೆ ತೋರಿಸಬೇಕೆಂದು ಹುಡುಗರು ಸದಾ ಅಭಿಲಾಷಿಸುವರು (ರಾವಿಜ. ೨೨).

**ತೋಱಿಸಿಕೊಡು, ತೋರಿಸಿಕೊಡು** = ದೃಷ್ಟಿಗೆ ಬೀಳುವಂತೆ ಮಾಡು ; ತಿಳಿಸು ; ಅರಿಯುವಂತೆ ಮಾಡು : ಈ ವಿರೋಧಿಯ ಕೆಡಹು ಸೂರ್ಯನ ನಾವು ತೋಱಿಸಿಕೊಡುವೆವು (ಕುಮ್ವಾದ್ರೋ. ೧೯-೩೮) ; ಸಾವಿರ ಸಾವಿರ ಶಿಷ್ಯರಿಗರಿವನು ತೋರಿಸಿಕೊಟ್ಟರು ತಂದೆ (ಇಂಜಾಪ. ೯-೩೪) ; ರಾಮಕೃಷ್ಣ ಪರಮಹಂಸ – ವಿವೇಕಾನಂದರು, ತಮ್ಮ ಬಾಳಿನಲ್ಲಿ, ಕೃತಿಗಳಲ್ಲಿ ಭಗವದ್ಗೀತೆಯ ರಹಸ್ಯವನ್ನು ತೋರಿಸಿಕೊಟ್ಟಿದ್ದಾರೆ (ಧರ್ಮಸಾ. ೧೨೭). [ ತೋಱು + – ಇಸು$_{2}$ ]

**ತೋಱು, ತೋರು, ತೋಱ್** (ಕ್ರಿ). ೧. ಕಾಣು ; ದೃಷ್ಟಿಗೆ ಬೀಳು ; ಗೋಚರವಾಗು : "ತೋಱು_ದರ್ಶನೇ" (ಶಮಧಾ) ; ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆಱವೋಲ್ಮಂಜುವೊಲ್ತೋಱಿ ಬೇಗಂ ಪಿರಿಗುಂ ಶ್ರೀರೂಪ ಲೀಲಾಧನವಿಭವಮಹಾರಾಶಿಗಳ್ನಿಲ್ಲವಾಗ್ಗೆ೯ಂ (ಎಕ. II, ೮೮-೦; ಸು.700) ; ಮದನಾಟವಿಯಂತೆವೊಲೊಪ್ಪಿ ತೋಱಿದಳ್ (ಕಾವ್ಯಸಾ. ೬೦೨ ಕೂದ್ರಕ) ; ಸಮುದಾಯಾರ್ಥಮನಾರಯೆ ಸಮನಿಸುವರ್ಥಪ್ರತೀತಿ ತೋಱಿದೊಡೆಲ್ಲಂ ಕ್ರಮಮಕ್ಕುಂ (ಕವಿರಾ. ೦-೭೭) ; . ದುಗ್ಧಾರ್ಣವಫೇನಪಾಂಡುರತೆಯಂ ಕಯ್ಕೊಂಡು ಬೆಳ್ದಿಂಗಳಂತಿರೆ ತೋಱುತ್ತಿಸವೃತ್ತರೀಯವಸನಂ (ಕಾದಂಪೂ. ೮) ; ಸುರಭಗಜಂ ಜ್ಯೋತಿರಂಗಂ ಬೆಳಗೆ ತಮದ ಮಾತಿಲ್ಲ ಚಂದ್ರಾರ್ಕರುಂ ಮೈಗರದಿರ್ದರ್ ತೋಱದಾಱುಂ ಬುತು (ಶಾಂತಿಪು. ೦-೭೦). ೨. ದೃಷ್ಟಿಗೆ ಬೀಳಿಸು ; ಕಾಣಪಡಿಸು ; ತೋರಿಸು ; ವ್ಯಕ್ತಪಡಿಸು : ತಮ್ಮ ದೇವತ್ವಮಂ ಕೋಱಲ್ವೇಡಿ ಆಕಾಶಮೆಲ್ಲಂ ಚಿತ್ರಪಟಂಗೆದಱಿದಂತೆ ವಿಮಾನಂಗಳಿಂ ಸಂಛನ್ನವಾಗಿ ವ್ಯಾಪಿಸೆ (ಪದ್ಮಾಛಾ. ೧೪೧-೨೫) ; ಮೂಱಡಿ ಮಾಡಿದಂದು ನೆಲನೆಲ್ಲಮನಾ ಬಲಿಗಾದ ರೂಪಮಂ ತೋಱಿದಂ (ಪಂಪಭಾ. ೯-೭೦) ; ಕವರಲ್ಬಂದಂಗೆ ಬಯಕೆಯಂ ತೋಱಿದರೆಂಬಂತೆ (ಧರ್ಮಾಮೃ. ೨-೦೪೯) ; ಎನ್ನ ಮನದ ದುರಾಶೆಯ ಮಾಣಿಸಿ ನಿಮ್ಮತ್ತ ತೋಱು (ಮಹಾದೇ. ಬ. ೧೫-೦೭) ; ಹಿತವಂ ತೋಱುವನಾತ್ಮಬಂಧು (ಸೋಮೇಶ. ೮) ; ಗುಣಹೀನನಲ್ಲಿ ಗುಣವನು ತೋಱುವದು ಗರುವರಿಗೆ ತೊಡಿಗೆಯಿದು (ಕುಮ್ವಾಅ. ೨೦-೧೩) ; ದಾರಿಯ ತೋಱೋ ಮುಕುಂದಾ (ಪುರಂದ. ೩-೦೨೩ ಪಲ್ಲವಿ) ; ಊರಿಂಗೆ ದಾರಿಯನು ಆರು ತೋಱಿದಡೇನು (ಸರ್ವಜ್ಞ. ೩೮). ೩. ಉಂಟಾಗು ; ಆಗು : ನಿಜಕರದೊಳಾಯುಧವಿಲ್ಲ ಘನ ಸಂಗರಕೆ ಬೇಸಱು ತೋಱಿತೇ (ಕುಮ್ವಾದ್ರೋ. ೩-೬೩). ೪. ತಿಳಿಸಿಕೊಡು ; ಅರಿವನ್ನುಂಟುಮಾಡು : ಲಿಂಗ ಜಂಗಮ ಪ್ರಸಾದದ ನಿಲವ ತೋಱ್ ಬದುಕಿಸಯ್ಯಾ (ಬಸವ. ೮೩೩). ೫. ಅಶುಭವನ್ನು ಸೂಚಿಸು ; ಅಪಶಕುನವಾಗು : ಅರಸಿಂಗೆ ತೋಱಿತೋ ದೇಶಕಳಿವಪ್ಪುದೋ ಹರನೆ ಬಲ್ಲಂ (ಕನ್ನರ. ದೇ. ೦೪೫-೧೩). ೬. ಹೊರಗೆಡಹು ; ಪ್ರಕಟಪಡಿಸು : ಚಂದ್ರಕಾಂತದ ಶಿಲೆಯಲ್ಲಿ ಜಲವಿಲ್ಲದನ್ನಕ್ಕ ಶೈತ್ಯವ ತೋಱುವ ಪರಿಯಂತೋ (ಬಸವ. ೮೦೪).

**ತೋರು** : ೧. ಇಲ್ಲಿ ಹುಡುಕಿದರೆ ಅಲ್ಲಿ ತೋರುವವನು ಎಲ್ಲಿಡೆ ಸ್ವಚ್ಛಂದ (ಸಿಂಮು. ೩೯-೦೨) ; ಭೂಮಿಯ ಪೃಷ್ಠಭಾಗವು ಸಮನಾಗಿದ್ದಂತೆ ತೋರುತ್ತದೆ (ಮುಂಬಯಿ. ೪-೬೫). ೨. ತಾರತಮ್ಯ ತಂದು ತೋರತಮ್ಯ (ಕಪಿಪು. ೮-೧). ೬. ರತಿಯನ್ನು ಅವನು ಸುಡಲಿಲ್ಲ. ಅವಳಿಗೆ ಕಾರುಣ್ಯವನ್ನು ತೋರಿದನು (ಸಾಹಿಸ. ೧೪೩). **ತೋಱು** : ೧. ಈಗಳೆನ್ನ ಕಂಡ ಕನಸುಗಳೀ ಯುಗದ ಕಡೆಯೊಳ್ ಪ್ರಜೆಗಳ್ಗೆ ವಿವಿಧೋಪದ್ರವಸೂಚಕಂಗಳಾಗಿ ತೋಱುರ್ಗುಂ (ಆದಿಪು. ೧೫-೨೧ ವ) ; ನವಕೂಟಾಗ್ರಂಗಳೊಳ್ ತೋರ್ಪ ಕಾಂಚನವರ್ಣಾಂಚಿತಪಂಚರತ್ನಮಯ ಶೋಭಾಭಾಸಿಗೆ . . . ಜೈನಗೃಹಾಳಿಗಂದೆಱಗಿದಂ ಸೌಜನ್ಯಕಂದಾಂಕುರಂ (ಶಾಂತಿಪು. ೨-೧೧೯) ; ಮದ್ದುಕಣಿಕೆಯಂ ತಿಂದಂಗೆ ಕಲ್ಲುಂ ಮಣ್ಣುಂ ಮರನುಂ ಪೊಂಬಣ್ಣವಾಗಿ ತೋರ್ಪಂತೆ (ಧರ್ಮಾಮೃ. ೧-೧೧೫) ; ಕೈವಾಳಮಂ ಬೀಸಿದಂತೆ ಬಟ್ಟಿತ್ತಾಗಿ ತೋರ್ಪುದು ಸೊನ್ನೆ (ಶಮದ. ೧೬ ವೃತ್ತಿ). ೨. ನರಪತಿಯ ಗುಣಾಗುಣದಂತರಮಱಿವುದನಾಳ ಸಿರಿಯ ಲೀಲೆಯೆ ತೋಱುರ್ಗುಂ (ಶಾಂತಿಪು. ೧-೬೯) ; ಗುಣಮನೆ ತೋರ್ಪಂ ದೋಷದ ಗುಣಂಗಳನೆ ನೆಗಟ್ದು ತೋರ್ಪ ದುರ್ಜನನುಮದೇಂ ಗುಣಗಣನೆಗೆ ತೋರ್ಪಂ ಕೃತಿ ಗುಣದೋಷಪರೀಕ್ಷೆಗಾಱರಾರ್ಬರಾರಿಪರೋ (ಗದಾಯು. ೧-೪೫) ; ಆಗ್ರಹಿಸಿ ತರ್ಕಶಾಸ್ತ್ರಸಮಗ್ರತೆಯಂ ತೋರ್ಪುದಲ್ಲಿ ನೀಂ (ಸುಕುಮಾ. ೨-೧೯) ; ಜಡರಂ ಕರಮಱಿದು ತಿಳಿಪಲೆಂತೆನೆ ಖರಕರನಂ ಗೂಗೆಗೆಯ್ದು ತೋರ್ಪಂತಕ್ಕುಂ (ಧರ್ಮಾಮೃ. ೧-೪೩) ; ಇನ್ನೀ ಭಕ್ತನ ದೃಢಭಕ್ತ್ಯನ್ನತಿಯಂ ಧರೆಗೆ ತೋರ್ಪೆನೆಂದಾ ಸೋಮೇಶಂ ನಿಲ್ಲದೆ . . . ನಡೆತಂದಂ (ಉದ್ಭಟ. ೧೧-೧೦೪).

**ತೋರಗೊಡು** = ವ್ಯಕ್ತಪಡಿಸು ; ಕಾಣಿಸು : ಅವನು ತನಗಾದ ದುಃಖವನ್ನು ತೋರಗೊಡಲಿಲ್ಲ (ರೂಢಿ). **ತೋಱಪಡು** = ಕಂಗೊಳಿಸು : ಪೇಱೊಂದು ಕೋಣೆಯುಂಟುಪ್ಪರಿಗೆಯೊಳಲ್ಲಿ ತೋಱಪಟ್ಟೊಂದು ಪಂಕ್ತಿಯೊಳು ನೀಱನು ನೀಱಿಯರಾರೋಗಿಸಿದರು (ಭರತ. ೧೧-೧೧೮). **ತೋಱಿಕೊಡು, ತೋಱಿಸುಡು** = ಕಾಣುವಂತೆ ಮಾಡು ; ತೋರಿಸಿಕೊಡಂ : ಮನ್ಮಥ ಮಹೀಭುಜನೋವದೆ ತೋಱಿಕೊಟ್ಟುದೊಂದಾನೆಯ ತನ್ನನಾನೆಗೊಲೆಗೊ[ೞ]ದಪುದೆಂದು ಲತಾಂಗಿ ಬೆರ್ಚಿದಳ್ (ಪಂಪಭಾ. ೪-೫೮) ; ಚೆನ್ನಮಲ್ಲಿಕಾರ್ಜುನನ ತಂದೆನಗೆ ತೋಱಿಕೊಟ್ಟ ಗುರುವೆ ನಮೋ ನಮೋ (ಮಹಾದೇ. ಬ. ೨೩-೪೨); ಪಾರ್ಥನ ತೋಱಿಕೊಡುವೆನು (ಕುಮಾ.ಕ. ೯-೨) ; ತೊಡೆಯಂ ಪೊಯ್ದಾರ್ವ ನೆವದೆ ನೆಱನೀತಂಗೀಯೆಡೆಯೆಂದು ತೋಱಿಕುಡೆ (ಗದಾಯು. ೮-೩೫). **ತೋಱುನುಡಿ** = (ಕುಂದನ್ನು ನಿರ್ದೇಶಿಸಿ) ಸ್ಪಷ್ಟವಾಗಿ ಮಾತನಾಡು,– ಖಂಡಿತವಾಗಿ ನುಡಿ : ನಿನ್ನ ಪೆಡಿರುವಂ ಬದ್ಧಕಲಿತ್ತಪ್ಪುರಲ್ಲೆಂದು ತೋಱಿ ನುಡಿದೊಡೆ (ಪಂಪಾ.ರಾ. ೧೬೮-೩) ; ತೋಱಿ ನುಡಿದರೆ ಭೀಷ್ಮದ್ರೋಣರು ಜಾಱಿಸಿದ ರಣವೆವಗೆ ಸದರವೆ ದೂಱುವವರಾವಲ್ಲ (ಕುಮಾ.ಕ. ೧-೨೪): P ಇದು ಬೇರೆ ಬೇರೆ ಶಬ್ದಗಳೊಡನೆ ಸೇರಿ ಅನೇಕ ಅರ್ಥಗಳನ್ನು ಕೊಡುತ್ತದೆ. ಉದಾ: ಕೈದೋಱು, ಬೆನ್ನುತೋರು, ಮೈದೋಱು ಇತ್ಯಾದಿ.

[ ದೇ.॥ ತಮಿ. ತೋಱು ; ಮಲ. ತೋನ್ನು ]

**ತೋಱುಂಗೈ** (ನಾ). ಮಾರ್ಗದರ್ಶನ ಮಾಡುವ ಕೈ; ನಿರ್ದೇಶಿಸುವ ಕೈ: ಪಟುವಂ ಪೊಲನಂ ತಿರುಗಿಸಿ ಬಟಲಿಸದಿರು ತೋಱು ದೇವ ತೋಱುಂಗೈಯಂ (ಪಾಸ್ತ.ವಂ. ೧೫-೧೧೨). [ ತೋಱು + ಕೈ$_2$ ( < ಕಯ್$_2$ ) ]

**ತೋಱುಂಬೊಣೆ** (ನಾ). (ವ್ಯವಹಾರ ಪತ್ರ ಮುಂತಾದಂವುಗಳಲ್ಲಿ ಬರೆದು) ಕಾಣಿಸುವ ಹೊಣೆ : ಬಕಾರಕ್ಕೆ – ಬತ್ತುಂಬಯಲ್ . . . ತೋಱುಂ ಬೊಣೆ[ಪಾಠಾಂ. ಳೆ] ಹೇಱುಂಬಳೆ (ಶಮದ. ೧೭೦ ಪ್ರಯೋ).

[ ತೋಱು + ಪೊಣೆ$_2$ ]

**ತೋಱುವಲೆ** (ನಾ). ಒಂದು ಬಗೆಯ ಬಲೆ : ತೋಱುವಲೆ ತೊಟ್ಟಿವಲೆ ಗೂಟವಲೆ ಕಣ್ಣವಲೆ . . . ಮಂದಸಿನವಲೆಯ ಹೊಱಗಳ ಬೇಡವಡೆ ನೆರೆದುದೇನೆಂಬೆನು (ಹಚಕಾ. ೫-೮). [ ತೋಱು + ಬಲೆ$_1$ ]

**ತೋಱುಹ** (ನಾ). ಕಾಣಿಸುವಿಕೆ ; ತೋರುವಿಕೆ: ಕುರುಡಂಗೆ ಕನ್ನಡಿಯಂ ತೋಱುಹವುಂ ಮೂರ್ಖನಂ ಬುದ್ಧಿವಂತನೋಲೈಸುಹವುಂ ಇವಱೋಪಾದಿ (ಪಂಪಶಂ. ೧೩೬-೧೦). [ ತೋಱು + – ಹ$_2$ ]

**ತೋಱೆತ್ತು** (ನಾ). ಬೇಟೆಯಲ್ಲಿ ಕ್ರೂರವಾದ ವನ್ಯಮೃಗಗಳನ್ನು ಆಕರ್ಷಿಸಲು, ಅವುಗಳಿಗೆ ಕಾಣುವಂತೆ ಕಟ್ಟುವ ಎತ್ತು ; ದೀಹದ ಎತ್ತು: ಕಾಂತಾರದೊಳು ಮೃಗವ ನೆಲೆಗೊಳಿಸಿ ಮೇಗಾಳಿಯಂ ದೂರದಿಂ ತೋಱೆತ್ತನೊಡ್ಡಿ ಕಿಗ್ಗಾಳಿಯಿಂ ಬಂಡಿಯಿಂದಿಳುಹಿ ಹುಲಿಯ ಹಾರಯಿಸಿ (ಹಚಕಾ. ೫-೩೦). [ ತೋಱು + ಎತ್ತು$_2$ ( < ಎಟ್ಟು$_1$ ) ]

**ತೋಟಯ್ಯ** (ನಾ). ಒಬ್ಬಾತನ ಹೆಸರು: ತೋಟಯ್ಯನ ಮಗ ಮಜ್ಜಿಯ್ಯಂ ದುರ್ವಿನೀತನ ತಮ್ಮ ಬೂತುಗಂ (ಎಕ. XII, ಮಧುಗಿ. ೫೯-೯; ಸು. 950).

[ ತೋಟ್ ? + ಅಯ್ಯ$_1$ ]

**ತೋಟೂರ್** (ನಾ). ಒಂದು ಊರಿನ ಹೆಸರು : ಮಾರಶರ್ಮ್ಮಣಃ ಪುತ್ರಾಯ ತೋಟೂರ್ವ್ವಾಸ್ತವ್ಯಾಯ (ಎಕ. X, ಗೌರಿಬಿ. ೪೬-೪೫; 762).

[ ತೋಟ್ ? + ಊರ್ ]

△ **ತೋಟ್ಟಲ** ‘ತೋಳ್ವಲ’ ನೋ.

**ತೌಂಕಲ್** ‘ತವುಂಕಲ್’ ನೋ.

**ತೌಂಟಗೆ** ‘ತಿವದಿಗೆ’ ನೋ.

**ತೌಂಬುರವೀಣೆ** (ನಾ). ಒಂದು ಬಗೆಯ ವೀಣೆ : ಗೌರೀವೀಣೆಯ ಗೌರವದಿಂದಾ ತೌಂಬುರವೀಣೆಯ ತುಂಬುರರಿಂ ಕಿನ್ನರವೀಣೆಯ ಕಿಂಪುರುಷರಿಂದಂ . . . ಒಪ್ಪಿದತ್ತಾ ಮಹಾಲಿಂಗದಾಸ್ಥಾನಂ (ಹರಿಶ್ಚಂ. ೮-೪೧ ವ). ‘ತುಂಬುರವೀಣೆ’ ಪಠಾ. [ ತೌಂಬುರ$_3$ + ವೀಣೆ ]

**ತೌಕಲ್** ‘ತವುಂಕಲ್’ ನೋ.

**ತೌಗೆ** ‘ತವುಗೆ’ ನೋ.

**ತೌಟಗೆ** ‘ತಿವದಿಗೆ’ ನೋ.

**ತೌಡಂಗಿ** ‘ಚವುಡಂಗಿ’ ನೋ.

**ತೌಡಿ** ‘ತವುಡಿ$_1$’ ನೋ.

**ತೌಡು** ‘ತವುಡು’ ನೋ.

**ತೌಡುಕುಟ್ಟು** ‘ತವಡುಕುಟ್ಟು’ ನೋ.

**ತೌತರ್** ‘ತವುತರ್’ ನೋ.

**ತೌದಲೆ** ‘ತವುದಲೆ’ ನೋ.

**ತೌದಲೆಗಾಣಿಸು** ‘ತವುದಲೆಗಾಣಿಸು’ ನೋ.

**ತೌದೆ** (ನಾ). ಒಂದು ಬಗೆಯ ತೆರಿಗೆ: ಬಸದಿಯ ವಸದಲಿ ಪಲವ ಮನೆಗಳ ಮಾಡಿಸಿ ರಿಷಿಹಳ್ಳಿಯೆಂದು ಪೆಸರನಿಟ್ಟು ಮನೆದೆಱೆ ಮದುವೆದೆಱೆ ಊರುಟ್ಟಿಗೆ ತೌದೆ ಸುರಂದು ಕವತ್ತರ್ಸೇಸೆ . . . ಪೊಳಗಾಗಿ . . . ಆಚಂದ್ರಾರ್ಕ್ಕತಾರಂಬರಂ ಸಲ್ಗೆ (ಮ್ಯಆರಿ. ೧೯೩೨, ೧೬-೫೯ ; 1069).

P [ ಇದು ‘ತಪ್ಪುಡಿ’ ಯಾಅವಲಿಖಿತವಿರಬಹುದು ]

**ತೌಬಂದ** (ನಾ). ಉಡುವ ಸೀರೆ,–ವಸ್ತ್ರ : ಚಂದ್ರಕಿರಣವು ಪೋಲ್ವ ಚಲ್ವ ಜರತಾರಂಚಿನ ತೌಬಂದನುಟ್ಟು ಚೆಲ್ವಿಕೆಯಾ ನೋಡುತ್ತಿದ್ದಳು (ತ್ರಿಶ್ಯಾಚಾ. ೧೭). [ ← ಪಾರ. ತಹ್ಬಂದ್, ತಹಮತ್ = ಲುಂಗಿ ]

**ತೌಮೊನೆ** (ನಾ). ನಾಶಕಾರಿಯಾದ ಮೊನೆ: ಎತ್ತಿದ ನಿನ್ನ ಕಯ್ಯ ನಿಶಿತಾಸಿಯ ತೌಮೊನೆ ಬೆನ್ನ ದಾರನೆತ್ತುತ್ತಿರೆ (ಎಕ. II, ೨೪೦-೨೨ ; ಸು. 1175). [ < ತವು$_2$ + ಮೊನೆ$_1$ ]

**ತೌರು** ‘ತವುರ್’ ನೋ.

**ತೌರುಮನೆ** 'ತವರ್ಮನೆ' ನೋ.

**ತೌರೂರು** 'ತವರೂರ್' ನೋ.

**ತೌರ್ಮನೆ** 'ತವರ್ಮನೆ' ನೋ.

**ತೌರ್ಯತ್ರಿಕ** (ನಾ). ವಾದ್ಯ, ನೃತ್ಯ, ಗೀತ ಈ ಮೂರರ ಮೇಳ: ತೌರ್ಯತ್ರಿಕಂ[ಪಾಠಾಂ. ತ್ರಯಂ]ಪೊಣ್ಮಲೆಲ್ಲ್ ಸತತಂದು . . . ಭಕ್ತ ತತಿವೆರಸಂತವುರಕೆಯ್ದಿ ಶಿವಸುಖದೊಳೊಪ್ಪುತಿರ್ದಂ (ಪದ್ಮರಾ. ೧೧-೨೦೦): ತೆತ್ಕನೆಯ ಮಾಧುರ್ಯಗಿರಿಶೃಂಗವೆನಿಪೊಂದು ಸುಂದರಂ ಕೇಳ್ದತ್ತು ತೌರ್ಯತ್ರಿಕಂ (ಶ್ರೀರಾಮಾ. ೪೮೮-೩೮). [ ಸಂ. ]

**ತೌಲನಿಕ** (ಗು). ೧. ಪರಸ್ಪರ ಹೋಲಿಸಿ ನೋಡುವ; ತುಲನೆ ಮಾಡುವ; ತುಲನಾತ್ಮಕ. 'ತೌಲನಿಕವಿಧಾನ' ಪರಾ. (ನಾ). ೨. ತುಲನೆ ಮಾಡಿದುದು; ತುಲನಾತ್ಮಕವಾದುದು: ಈ ಪರಿಷ್ಕರಣಗಳನ್ನು ಮೊದಲು ತೌಲನಿಕವಾಗಿ ಪರಿಶೋಧಿಸಿದ ಕೀರ್ತಿ ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿಗಳಿಗೆ ಸಲ್ಲಬೇಕು (ಜೂನ್ನಕು. ೩೫); ಇವೆರಡನ್ನು ತೌಲನಿಕವಾಗಿ ನೋಡುವವರು ಕನ್ನಡದ ಅಕ್ಷರಪಂಕ್ತಿ ಶಾಸ್ತ್ರೀಯವಲ್ಲ ವೆನ್ನುವುದುಂಟು (ಸಂಶೋಧ. ೩೫). [ ಸಂ. ]

**ತೌಲನಿಕವಿಧಾನ** (ನಾ). ತುಲನಾತ್ಮಕವಾದ ಅಭ್ಯಾಸ; ಹೋಲಿಕೆಯ ವಿಧಾನ: ವ್ಯಕ್ತಿ ಲೇಖಕರ ಅಭ್ಯಾಸದಲ್ಲಿ ಮಹತ್ವಪೂರ್ಣವೆನಿಸಿಕೊಂಡ ತೌಲನಿಕವಿಧಾನ, ಸಾಹಿತ್ಯದೊಡನೆ ನಾವು ಚಾರಿತ್ರಿಕವಾಗಿ ವ್ಯವಹರಿಸು ವಾಗ ತುಂಬ ಉಪಯುಕ್ತವಾಗುತ್ತದೆ (ಸಾಹಿತ್ಯ. ೪೦).

[ ತೌಲನಿಕ + ವಿಧಾನ ]

**ತೌಲಿ, ತೌಳಿ** (ನಾ). [ಜ್ಯೋತಿ] ಮೇಷ ಮೊದಲಾಗಿ ಏಳನೆಯ ರಾಶಿ; ತುಲಾರಾಶಿ. 'ತೌಲಿಗೇಹ' ಪರಾ. **ತೌಳಿ**: ಲಲನಾ ವೃಶ್ಚಿಕ ತೌಳಿ ಕುಂಭ ಹರಿಗಳ್ ಶೀರ್ಷೋದಯಂಗಳ್ (ಜಾತತಿ. ೦-೩೯); ಕನ್ನೆ ಮಿಥುನಂ ಮೀನಂ ಮೃಗಂ ಕರ್ಕ ತೌಳಿ ಗವೇಂದ್ರಂ ವರಲಗ್ನಮಾಗಿ ನಿಲೆ ಮಾಟಾನ್ನಂದದಿಂ ಚೌಳಮಂ (ಜೋಶೋಪ. ೨-೩೨).

[ ಸಂ. ತೌಲಿನ್ ]

**ತೌಲಿಗೇಹ** (ನಾ). = ತೌಲಿ. 'ತೌಲಿಗೇಹೋದ್ಭವ' ಪರಾ.

[ ತೌಲಿ + ಗೇಹ ]

**ತೌಲಿಗೇಹೋದ್ಭವ** (ನಾ). ತುಲಾರಾಶಿಯಲ್ಲಿ ಹುಟ್ಟಿದವನು: ಸ್ವಬಂಧು ನಿಕಾಯಕ್ಕುಪಕಾರಿ ತೆತ್ತಿಗನೆನಿಕ್ಕುಂ ತೌಲಿಗೇಹೋದ್ಭವಂ (ಜಾತತಿ. ೧೭-೭).

[ ತೌಲಿಗೇಹ + ಉದ್ಭವ ]

**ತೌವುಡಿ** 'ತವುಡಿ₁' ನೋ.

**ತೌಸಿತಾಳ** (ನಾ). (?): ನಲಿಸೆಟ್ಟಿಗೆ ಮಾಳತಂಗಿಗೆ ಅವರ ಮಗ ಮಂಚಿ ಗೌಂಡ ನಿಲಿಸಿದ ತೌಸಿತಾಳಿಯ ಕಲ್ಲು (ಎಕ. III, ಶ್ರೀರಂಗ. ೩೭-೪ ; ?).

[ ? ]

**ತೌಳವ** (ಗು). ತುಳುದೇಶಕ್ಕೆ ಸಂಬಂಧಿಸಿದ,-ಸೇರಿದ: ಕಾಮುರ್ಗಿಲ ಮುಂಬನಿಗಳೊಳು ವಹಿಲದಲಿ ಕೇರಳ ಜನಪದದ ತೌಳವದ ಕೊಂಕಣ ವಿಷಮವೀಥಿಯಲಿ . . . ಬಂದನು ಕಿರೀಟ (ಕುಜ್ಞಾಲ. ೦೯-೨೦); ಸರೋಂಬುಧಿತೀರವೆ ಶರಣಾಗಿ ಬಾಳ್ವ ಚಾರುರಥಾಂಗ ತೌಳವ ತನುರಕ್ಷಕ ಸೇರುವೆ ಸೊಗಸದೆ ನೋಡು (ಪರ್ವಣಿ. ೧೧-೧೨೭); ಜಯುಜಯ ತೌಳವ ಕಾಯೇ ಮಣಿವೆ ತಂದೆತಾಯುಂದಿರ ಕಾಯೇ (ಗಿರಿವಿಂ. ೪೭-೦).

[ <ತುಳುವ₁ ]

**ತೌಳಿ** 'ತೌಲಿ' ನೋ.

**ತ್ಯಕ್ತ** (ಗು). ೧. ತೊರೆದ; ತ್ಯಜಿಸಿದ; ಬಿಟ್ಟ: ಕ್ರೂರಾತ್ಮಂ ತ್ಯಕ್ತವ್ರತ ನಾರ[ಕ್ರ]ಪಟಪ್ರಿಯನಜತ್ಕತಿಯ ತ್ರ್ಯಂಶಂ (ಜಾತತಿ. ೦೯-೩); ತ್ಯಕ್ತಾವಿಲ ದೋಷಮ ಸುವ್ಯಕ್ತಾಂಗಂ . . . ತೊಳಗುತಿರ್ದಂ (ಅನಂಪು. ೦೨-೮೦). (ನಾ). ೨. ತೊರೆದುದು; ತ್ಯಜಿಸಿದುದು; ಬಿಟ್ಟುದು: "ಅವಕೀರ್ಣಂ. ಅವಧ್ವಸ್ತಂ, ತ್ಯಕ್ತಂ, ಉತ್ಸೃಷ್ಟಂ, ಉಜ್ಝಿತಂ – ಈ ೫ ಬಿಡಲ್ಪಟ್ಟುದು" (ಹಲಾಯು. ೧೦೮-೨೯); "ತ್ಯಕ್ತಮವಕೀರ್ಣಮುಪಧ್ವಸ್ತವೆಮನಲು ಬಿಡುಹಂ" (ಮಂಗರಾ. ೧೨೯-೧೧). [ ಸಂ. ]

**ತ್ಯಜ** (ನಾ). ೧. ತೊರೆಯುವಿಕೆ; ಬಿಡುವಿಕೆ: "ಚರಿತಂ ತ್ಯಜವುಂ ನೋಡೆ ವಿಸರ್ಜಾಹ್ವಯ" (ನಾನಾರ. ೭೩). ೨. [ಗಣಿತ] ಕಳೆಯುವಿಕೆ; ವ್ಯವಕಲನ: ರಜತಂ, ರಜಿತಂ, ಉವಿತಂ, ತ್ಯಜಂ . . . ಇಂತಿನಿತುಂ ಕಳೆವುದಕ್ಕೆ ಪೆಸರು (ವ್ಯವಹಾ. ೧೧-೨೦). [ ಸಂ. ]

**ತ್ಯಜಯಿಸು** 'ತ್ಯಜಿಸು' ನೋ.

**ತ್ಯಜಿಸು, ತ್ಯಜಯಿಸು** (ಕ್ರಿ). ೧. ಬಿಡು; ತೊರೆ; ವರ್ಜಿಸು: ಪ್ರಾಣಮಂ ತ್ಯಜಿಸಿದ ಶರಣನಂ ಕಾಣುತಂ (ಬಸವು. ೩೭-೧೮); ಮಹಾಮುನಿಪವ್ರಕಪ್ಪ ದ್ವಿಪರ ವರ್ತನೆಯ ತ್ಯಜಿಸಲೀಸ[ಪಾಠಾಂ. ಭಜಸಲೀಯ] ನಿದೀಗ ಗರುಡಧ್ವಜನ ಬಿರುದು (ತೊರವೆ. ೧-೮-೦೪); ಗರ್ಭಾಣಾಮಪಟ್ಟಿ ಪಕ್ಕಗಳಲ್ಲಿ ಬೆಳೆದು ಭ್ರೂಣದ ಪೊರೆಯನ್ನು ಕ್ರಮೇಣ ತ್ಯಜಿಸುತ್ತದೆ (ಕೀಟವಿ. ೦೦೪). ೨. [ಗಣಿತ] ಕಳೆ; ವ್ಯವಕಲನಮಾಡು: ತ್ಯಜಿಸು, ಕಳೆ ಇಂತಿನಿತುಂ ಕಳೆವುದಕ್ಕೆ ಪೆಸರು (ವ್ಯವಹಾ. ೧೧-೨೦). **ತ್ಯಜಯಿಸು**: ೧. ರಾಜಭಾಗಂ ತ್ಯಜಯಿಸುವದು ತುಷ್ಣೀರುತಂ ಮೌನಮಕ್ಕುಂ (ನಾನಾರ. ೧೫೬).

[ ತ್ಯಜನ + – ಇಸು₃ ]

**ತ್ಯನನಹಳ್ಳಿ** (ನಾ). ಒಂದು ಹಳ್ಳಿಯ ಹೆಸರು; **P** ಈಗಿನ ಬೌರಿಂಗ್ ಪೇಟೆ ತಾಲ್ಲೂಕಿನ ತ್ಯಾರನಹಳ್ಳಿ: ನಮ್ಮ ನಾಯಕತನದ ತ್ಯನನಹಳ್ಳಿಯ ಅತ್ತಿಕುಣ್ಟೆ ಪೂರ್ವ್ವ (ಮ್ಯಆರಿ. ೧೯೨೩; ೧೪-೭ ; ?).

[ ? + ಹಳ್ಳಿ (<ಪಳ್ಳಿ₁) ]

**ತ್ಯಾಗ** (ನಾ). ೧. ಬಿಡುವುದು; ತೊರೆಯುವುದು; ವರ್ಜನ: ಸತ್ಯ ಶೌಚಸಂಯಮ ತಪಸ್ತ್ಯಾಗಾಕಿಂಚನ್ಯ ಬ್ರಹ್ಮಚರ್ಯಾಪರ್ಯಾಪ್ತದಶ ಧರ್ಮಂಗಳುಮಂ ಕೈಕೊಂಡು (ಆದಿಪು. ೭-೩೦ ವ); ಭೋಗಿಗೆ ಲೋಭಿಗೆ ಯೋಗಂ ತ್ಯಾಗಂ ಹಿತಮಾಗದು (ಹಮ್ಮಿರ. ೨-೫). ೨. ದಾನ; ಕೊಡುಗೆ. 'ತ್ಯಾಗಜೀವನ', 'ತ್ಯಾಗಬುದ್ಧಿ' ಪರಾ. ೩. ಬಿಟ್ಟು ಕೊಡುವುದು; ಔದಾರ್ಯ: ತ್ಯಾಗ ಬಲಿದಾನಗಳಿಂದ ಕೂಡಿದ ಧರ್ಮವೇ ನಿಜವಾದ ಧರ್ಮ (ಧರ್ಮಸಾ. ೭); ಗವುಡೀ ಹಾಡಿಗೆ ತವುಡೇ ತ್ಯಾಗ (ಗಾದೆ). ೪. [ಜೈನ] ಹದಿನಾರು ಭಾವನೆಗಳಲ್ಲಿ ಒಂದು: ತ್ಯಾಗತಪಸೀ ಸಮಾಧಿ ವೈಯಾವೃತ್ಯ . . . ಎಂಬ ಷೋಡಶ ಭಾವನೆ ಗಳೊಳು (ಜಾವುಂಪು. ೨೯೦).

**ತ್ಯಾಗಜಗಝಂಪ, ತ್ಯಾಗಜಗಝಂಪಿ** = ತ್ಯಾಗಗುಣದಿಂದ ಪ್ರಸಿದ್ಧ ನಾದವನು; ಒಂದು ಬಿರುದು: ತ್ಯಾಗಜಗಝಂಪನರ್ಥಾಂಗಿ . . . ಮೈಳಲ ಮಹಾದೇವಿಯರ್ (ಎಇ. XIII, ೨೭೦-೮; 1125); ಮಹಾಶಕ್ತಿ ಪ್ರಭಾವಂ ತ್ಯಾಗಜಗಝಂಪಿ ಝಂಪಳಾಚಾರ್ಯ್ಯ (ಎಇ. XVII, ೦೧೮-೯; 1124). **ತ್ಯಾಗಮಾಡು**=ಬಿಡು; ತೊರೆ; ತ್ಯಜಿಸು: ಭಾಸನ ವಾಸವದತ್ತೆ, ಪದ್ಮಾವತಿ, ಬಾಣನ ಮಹಾಶ್ವೇತೆ ಇವರೆಲ್ಲ ಪತಿಗಾಗಿ ಸರ್ವಸ್ವವನ್ನೂ ತ್ಯಾಗಮಾಡುವ ದುರ್ಭರ ದೀಕ್ಷೆಯಲ್ಲಿ ... ನಿಸ್ಸೀಮರು (ಧರ್ಮಸಾ. ೭೪). **ತ್ಯಾಗವಿನೋದ** = ದಾನದಿಂದ ಸಂತೋಷವನ್ನು ಪಡೆಯುವವನು; ಒಂದು ಬಿರುದು: ಮಹಾಲಕ್ಷ್ಮೀದೇವೀಲಬ್ಧ ವರಪ್ರಸಾದಂ ತ್ಯಾಗ ವಿನೋದಂ (ಸೌಇಇ. XX, ೭೦-೧೭ ; 1109); ತ್ಯಾಗವಿನೋದಂ ಬಿರುದ ಮನ್ನೆಯ ಮದನಿವಾರಣಂ . . . ಅರಸುಗೆಯ್ಯುತ್ತುಮಿರೆ (ಕಇ. IV, ೧೧-೦೮ ; 12ನೆಯ ಶತ). [ ಸಂ. ]

**ತ್ಯಾಗಜೀವನ** (ನಾ). ಇತರರಿಗಾಗಿ ತನ್ನದನ್ನು ಬಿಟ್ಟುಕೊಡುತ್ತಾ ಬಾಳುವಿಕೆ; ತ್ಯಾಗಪೂರ್ಣವಾದ ಬದುಕು; ಪರೋಪಕಾರದ

ಬಾಳು : ತ್ಯಾಗಜೀವನದಿಂದ ಆತ್ಮಸಂತೋಷವಾಗುತ್ತದೆಂದು ತಿಳಿದ ಅವನು . . . ಆಸ್ತಿಯ ಮೇಲಣ ಸ್ವಾಮ್ಯವನ್ನು ತ್ಯಜಿಸಿ ರೈತರಿಗೆ ಅದನ್ನೆಲ್ಲ ಹಂಚುವುದೆಂದು ನಿರ್ಧರಿಸಿಕೊಂಡಿದ್ದನು (ಪುನರು. ೫೪).

[ ತ್ಯಾಗ + ಜೀವನ ]

**ತ್ಯಾಗಪತ್ರ** (ನಾ). ಯಾವುದಾದರೂ ಅಧಿಕಾರ, ಹೊಣೆಗಾರಿಕೆಗಳನ್ನು ತ್ಯಜಿಸಿರುವುದಾಗಿ ತಿಳಿಸಿ ಬರೆಯುವ ಪತ್ರ ; ರಾಜೀನಾಮೆ ಪತ್ರ : ಇದರ ಪ್ರತಿಭಟನೆಗಾಗಿಯೇ] ೧೯೩೯ರಲ್ಲಿ ಕಾಂಗ್ರೆಸ್ ಪ್ರಾಂತಮಂತ್ರಿ ಮಂಡಲಗಳು ತ್ಯಾಗಪತ್ರ ಕೊಟ್ಟದ್ದು (ಎಚ್ಚಸಾ. ೧೯).

[ ತ್ಯಾಗ + ಪತ್ರ ]

**ತ್ಯಾಗಬುದ್ಧಿ** (ನಾ). = ತ್ಯಾಗಮನ : ಭರತಂ ಮಹಾತ್ಮನೆಸೆದನು ದಿವ್ಯ ತೇಜಸ್ವಿ, ತ್ಯಾಗಬುದ್ಧಿಯಾಲಿ (ಶ್ರೀರಾಮಾ. ೩೭-೭೯೪).

[ ತ್ಯಾಗ + ಬುದ್ಧಿ ]

**ತ್ಯಾಗಮನ** (ನಾ). ಎಲ್ಲವನ್ನು ತೊರೆಯುವ ಮನಸ್ಸು: ನಿರ್ಮಲಿನದಪ್ಪು ತತ್ವಮಾಗದು ತ್ಯಾಗಮನಮಿರದೆ (ನಗಜಾ. ೧೭-೨೩).

[ ತ್ಯಾಗ + ಮನ$_1$ ]

**ತ್ಯಾಗಮಯಿ** (ನಾ). ತ್ಯಾಗಗುಣದಿಂದ ಕೂಡಿದವಳು ; ಉದಾರ ಸ್ವಭಾವದವಳು : ಅವನ ಕಣ್ಣ ಮುಂದೆ ತ್ಯಾಗಮಯಿಯಾದ ರಂಗಸಾನಿ ದೇವತೆಯಂತೆ ಸುಳಿದಂತಾಯಿತು (ರಂಗರಿಪೀ. ೩೭) ; ಇದರ ಪ್ರಧಾನ ಪಾತ್ರಗಳಾದ ರಾಜರ್ಷಿ ಜನಕ . . ತ್ಯಾಗಮಯಿ ಮೈತ್ರೇಯಿ ಮತ್ತು ಬ್ರಹ್ಮವಾದಿನಿ ಗಾರ್ಗಿ ಭಾರತೀಯರಿಗೆ ಚಿರಪರಿಚಿತರಾಗಿದ್ದಾರೆ (ಭಾರದ. ೩೮). [ ಸಂ. ತ್ಯಾಗಮಯೀ ]

**ತ್ಯಾಗಮಾನ** (ನಾ). [ಛಂದ] ಒಂದು ಬಗೆಯ ಪದ್ಯಜಾತಿ: ತ್ಯಾಗಮಾನ ಅಟತಾಳ (ಸಾರಂಗ. ೧೪) ; ಯಾಲಪದವು ಮತ್ತು ತ್ಯಾಗಮಾನಗಳು ಅಂಶಗಣಾನ್ವಯವಾದ ಉತ್ಸಾಹಲಯದಲ್ಲಿವೆ ಎಂಬುದನ್ನು ಗಮನಿಸಬೇಕು (ಛಂದೋವಿ. ೨೫೧ ಅಡಿಟಿ). [ ? ]

**ತ್ಯಾಗವೀರ** (ನಾ). ತ್ಯಾಗದಲ್ಲಿ ಬಹಳ ಉತ್ಸಾಹವುಳ್ಳವನು ; ದಾನದಲ್ಲಿ ಆಸಕ್ತನಾದವನು : ಸಾಮಾನ್ಯಜನತೆಯ ಕ್ಷೇಮಸಾಧನೆಗಾಗಿ ತಮ್ಮ ಬಾಳನ್ನೇ ಮುಡಿಪಾಗಿಟ್ಟ ತ್ಯಾಗವೀರರೆಂದೂ ಅವಳಿಗೆ ಮನವರಿಕೆಯಾಯಿತು (ಪುನರು. ೪೯೧). [ ತ್ಯಾಗ + ವೀರ ]

**ತ್ಯಾಗಶೀಲ** (ನಾ). ೧. ತ್ಯಾಗಸ್ವಭಾವ : ಧರ್ಮವೀರರ ತ್ಯಾಗಶೀಲವೂ, ಸಂನ್ಯಾಸಿಗಳ ಆನಂದವೂ ವ್ರತಶೀಲರ ಸಂಯಮಶಕ್ತಿಯೂ ಆದ ಯೇಸು ಭಗವಾನ್, ನಮ್ಮನ್ನುದ್ಧರಿಸು (ಪುನರು. ೧೭೮). ೨. ಉದಾರಬುದ್ಧಿಯುಳ್ಳವನು: ಇಂದಿನ ಸಿರಿವಂತರಲ್ಲಿಯೂ ಅನೇಕ ಜನ ತ್ಯಾಗಶೀಲರಿದ್ದಾರೆ (ರೂಢಿ). [ ತ್ಯಾಗ + ಶೀಲ ]

**ತ್ಯಾಗಾಂಗ** (ನಾ). [ವೀಶೈ] ಜೀವನ ಮೂರು ಅಂಗಗಳಲ್ಲಿ ಒಂದು ; ತನುಗುಣವನ್ನು ಅಳಿದ ಸ್ಥಿತಿ : ತನ್ನಲ್ಲಿ ತ್ಯಾಗಾಂಗ ಭೋಗಾಂಗ ಯೋಗಾಂಗ ಸರ್ವಸಮಾಧಾನ ಸುಚಿತ್ರವಿರ್ದು ಮತ್ತೆ ಇತ್ಯಾದಿಗಳಲ್ಲಿ ನೋಡಿಹೆನೆಂಬ ಭ್ರಾಂತು ಭ್ರಾಮರವೇತಕ್ಕೆ (ಪ್ರೋಲಿಮಾ. ೧೯೦-೭೧೫) ; ಮಹಾತ್ಯಾಗಾಂಗವೇ ಸ್ಥೂಲತನುವೆನಿಸಿ ವಿವಿಧ ಭೇದದೊಳಪ್ಪುದಂಗ ತ್ರಯಂ (ಲಶಿಚಂ. ೫೦-೩) ; ಸಂಸಾರಭ್ರಾಂತಿಯು ಸಹಜವಾಗಿಯೇ ತ್ಯಾಗವಾಗಿರುವುದರಿಂದ ಇನೆಯದು ತ್ಯಾಗಾಂಗವೆಂದು ಹೇಳಲ್ಪಡುವುದು (ಶಿವಾಸೂ. ೪೮-೭) ; ನ್ಯೂನಭಾವವನ್ನು ಹೊಂದಿದ ಅಂಗಸ್ಥಲವು (ಶುದ್ಧ ಜೀವನು) ಯೋಗಾಂಗ, ಭೋಗಾಂಗ, ತ್ಯಾಗಾಂಗವೆಂದು ಮೂರು ವಿಧವಾಯಿತು (ಭಾರದ. ೨೫೩). [ ತ್ಯಾಗ + ಅಂಗ$_2$ ]

**ತ್ಯಾಗಾಂಗಿ** (ನಾ). [ವೀಶೈ] ಸಂಸಾರಭ್ರಾಂತಿಯನ್ನು ಕಳೆದುಕೊಂಡವನು; ತನುಗುಣವನ್ನು ಬಿಟ್ಟುಕೊಡುವ ಸ್ಥಿತಿಗೆ ಏರಿದವನು: ತ್ಯಾಗಾಂಗಿಯಾಗಿ ಶಿವದೀಕ್ಷೆ, ಶಿವಪೂಜೆ, ಶಿವಧ್ಯಾನದ ಮೂಲಕ ಸಂಸಾರಭ್ರಾಂತಿಯನ್ನು ತ್ಯಾಗ ಮಾಡುವನು (ಭಾರದ. ೨೧೭).

[ ಸಂ. ತ್ಯಾಗಾಂಗಿನ್ ]

**ತ್ಯಾಗಿ** (ನಾ). ೧. (ಎಲ್ಲವನ್ನೂ) ಬಿಡುವವನು ; ವರ್ಜಿಸುವವನು ; ವಿರಾಗಿ: ತ್ಯಾಗಿಗೆ ಯೋಗಿಗೆ ಲೋಭಂ ಭೋಗಂ ಹಿತಮಾಗದು (ಹಮ್ಮೀರ. ೨-೫) ; ತ್ಯಾಗೀ ಗುಣ ಭೋಗದಲ್ಲಿ ಕಾಣುವುದು (ಗಾದೆ). ೨. ಕೊಡುವವನು ; ದಾನಮಾಡುವವನು ; ಉದಾರಿ ; ದಾನಶೀಲ : "ತ್ಯಾಗಿಯುಂ ತಾಂ ಚಾಗಿ" (ಕವಿಕಂ. ೨೭೦) ; ಕವಿ ವಾಗ್ಮಿ ದೀರ್ಘಮುಖಿ ಕಂಠಂ ಧಾರ್ಮಿಕಂ ತ್ಯಾಗಿ . . . ಧನುರ್ಗೇಹಜಂ (ಜಾತತಿ. ೧೭-೯) ; ಭೂವರರೊಳ್ ತ್ಯಾಗಿಗಳಿಲ್ಲವೇ (ಸೋಮೇಶ. ೩೮). [ ಸಂ. ತ್ಯಾಗಿನ್ ]

**ತ್ಯಾಜಕ** (ನಾ). ಕೊಡುವವನು ; ದಾನಿ : ಭೋಜನದಿ ಪರಮಭೋಜನ ಪರಬ್ರಹ್ಮರಸ ಯಾಚಿಸಲ್ಕೇನಿರ್ಪುದದನುಂಡ ಬಳಿಕ ? ತ್ಯಾಜಕ ತ್ಯಾಗ ಸಂತ್ಯಾಜ್ಯಭೇದಗಳಿರದೆ ರಾಜ ನೀಂ ಜಗಕೆಲ್ಲ (ಮುಂಕುಕ. ೭೫೨). [ ಸಂ. ]

**ತ್ಯಾಜ್ಯ** (ಗು). ೧. ಬಿಡಲು ಯೋಗ್ಯವಾದ ; ವರ್ಜಿಸಲು ತಕ್ಕುದಾದ. ೨. ತ್ಯಜಿಸುವ. ೩. ಕೊಡಲು ಯೋಗ್ಯವಾದ ; ದಾನಮಾಡಲು ಅರ್ಹವಾದ. (ನಾ). ೪. ಬಿಡಲು ಯೋಗ್ಯವಾದುದು ; ಬಿಡಬೇಕಾದುದು ; ವರ್ಜ್ಯ : ಯೂಕಾಭೀತಿಯಿಂದಂಬರಂ ಪರಿಹರ್ತವ್ಯಮೆ ಮೇಣಜೀರ್ಣಭಯದಿಂ ಪ್ರಾಜ್ಯಾಜ್ಯಮೋಂ ತ್ಯಾಜ್ಯಮೋ (ಚಂದ್ರಪ್ರ. ೧-೯೫); ಗುಣವೂ ಗೌಣವಾದದ್ದಲ್ಲ, ಅದರಂತೆಯೇ ಕರ್ಮವೂ ತ್ಯಾಜ್ಯವಾದದ್ದಲ್ಲ (ಭಾರದ. ೧೧೭); ಶಿಕ್ಷಾಶಾಸ್ತ್ರದ ಬೆಂಬಲವು ಅದಕ್ಕಿಲ್ಲದೇ ಹೋದರೂ ಅದು ಸರ್ವಥಾ ತ್ಯಾಜ್ಯವೆಂದು ಹೇಳಲಾಗುವುದಿಲ್ಲ (ದ್ರಾವಿವಿ. ೮೭). [ ಸಂ. ]

**ತ್ಯಾಜ್ಯವಸ್ತು** (ನಾ). ವರ್ಜಿಸಲು ಯೋಗ್ಯವಾದ ಪದಾರ್ಥ ; ಬೇಡವಾದ ವಸ್ತು : ಮನೆಯ ಎಲ್ಲಾ ತ್ಯಾಜ್ಯವಸ್ತುಗಳನ್ನೂ ನಿರ್ಮೂಲ ಮಾಡಿ ಸದಾ ಶುಚಿಯಾಗಿ ಇಟ್ಟುಕೊಳ್ಳಬೇಕು (ಗೃಹವಿ. ೧೨೯).

[ ತ್ಯಾಜ್ಯ + ವಸ್ತು ]

**ತ್ಯಾಪಿ** (ನಾ). ೧. ಗಾರೆ ಕೆಲಸದ ಒಂದು ಸಾಧನ ; ಕರಣಿಗೆ : ನಮ್ಮ ನರ್ಸಿನ ಸಹಾಯದಿಂದ ಒಂದು ಅಳತೆ ಕಟ್ಟಿಗೆ, ಉಪ್ಪಾರರ ಗುಂಡು, ತ್ಯಾಪಿಗಳನ್ನು ಸಂಪಾದಿಸಿದೆವು (ಮೀರಿಮ. ೨೨೩). ೨. ಲೇಪ; ಗಿಲಾಯಿ: ಮಣ್ಣಿನ ತ್ಯಾಪಿಯನ್ನು ಕೆದರಿಸಿ ಅದು ತಿಳಿಯಬಾರದೆಂದು ಸುಣ್ಣ ಬಳಿಸಿದರಂತೆ (ಹೂಅರ. ೧೨೪). [ ←ಹಿಂ. ಮರಾ. ಥಾಪೀ ]

**ತ್ಯಾಬೆ** (ನಾ). ಗೋಧಿ ಬೆಳೆಗೆ ಬರುವ ಒಂದು ಬಗೆಯ ರೋಗ: ತ್ಯಾಬೆ ಕುಂಕುಮ ಇಟ್ಟಂಗಿ ಮೊದಲಾದ ರೋಗಗಳು ಹಾಯದೆ ಧಾನ್ಯಗಳು ದಪ್ಪಾಗಿ ... ಮೂರು ತಿಂಗಳದೊಳಗೆ ಬರುವವು (ಕೃಷಿಪ್ರ. ೫೩). [ ? ]

**ತ್ಯಾಮನ** (ನಾ). ಸುಂಕ ; ತೆರಿಗೆ (?) : ತೆಂಗೆ ತ್ಯಾಮನದಿಂದ ಲೋಕವ ಮುರಿವರಿನ್ನು (ಕಾಲಸಂ. ೨೨-೫). [ ? ]

**ತ್ಯಾರಣ** 'ತೇರಣ$_1$' ನೋ.

**ತ್ರಪಾಹೀನ** (ನಾ). [ಕಾಮಶಾ] ಲಜ್ಜಾಹೀನವಾದುದು : ಲತಾವೇಷ್ಟನ ವೃಕ್ಷಾಧಿರೋಹಣವೆಂಬ ಯರಡಾಲಿಂಗನಮುಂ ಸ್ತ್ರೀಯರಿಗೆ ತ್ರಪಾ[ಪಾಹೀ]ನವೆಂಬ ಯರಡನೆಯ ಅವಸ್ಥೆ (ಕಾಮಶಾ. ೮೪).

[ ಸಂ. (ತ್ರಪಾ + ಹೀನ) ]

**ತ್ರಪು** (ನಾ). ೧. ಒಂದು ಬಗೆಯ ಲೋಹ ; ಸೀಸ : "ತ್ರಪು ವಂಗಂ ಸೀಸಂ" (ವಸ್ತುಕೋ. ೨೯-೯); ಅತಿವಿಚಿತ್ರತ್ರಪುಮಯಪತ್ರ ಖಚಿತೋಚ್ಚಂಡತಾಳ ಚಾಪದಂಡಂ (ಆದಿಪು. ೧೩-೪೫ ವ); ಧರಿತ್ರಿಪುತ್ರನಿಂ ಹೇಮಮೈಂದವನಿಂದಂ ತ್ರಪು ಕಾಂಸ್ಯವರ್ಗಂ (ಜಾತತಿ. ೪-೧೫). ೨. ತವರ ; ತಗರ : "ಮಧುರಂ ತ್ರಪುವೆನಲು ವಂಗವೆನೆ ತವರವೆನಿಕ್ಕು" (ಮಂಗರಾ. ೩೦-೫).

[ ಸಂ. ]

**ತ್ರಪುಸ** (ನಾ). (ಸೌತೆ ಜಾತಿಗೆ ಸೇರಿದ) ಒಂದು ಬಗೆಯ ಬಳ್ಳಿ ಮತ್ತು ಅದರ ಕಾಯಿ : ತ್ರಪುಸ (ಸವತೀಜಾತಿ) . . . ಕೆಂಪುಕುಂಬಳ ಇವು ಕಫ ವಾತಕರ (ಅಷ್ಟಾಂಗ. ೧೬೭-೮೬). [ ಸಂ. ]

**ತ್ರಪುಸೆ** (ನಾ). ಸೌತೆಯ ಬಳ್ಳಿ : ಅಂಕುಡೊಂಕಿನ ಅಳ್ಳುಜಳ್ಳಿಯ ತರುವಿನ ಸುತ್ತ ಸುತ್ತುವುದಿದೊ ತ್ರಪುಸೆ (ಗಾಥಾಸ. ೬-೩೪). [ ಸಂ. ತ್ರಪುಸ ]

**ತ್ರಪೆ** (ನಾ). ಲಜ್ಜೆ ; ನಾಚಿಕೆ : "ಹ್ರೀ ತ್ರಪಾಹ್ವಯಂ ವ್ರೀಡೆ ಲಜ್ಜೆಯೆನೆ ಮಂದಾಕ್ಷಂ" (ವಸ್ತುಕೋ. ೧೧೪-೧೯) ; "ಹ್ರೀ, ಲಜ್ಜಾ, ಅಪತ್ರಪಾ, ವ್ರೀಡಾ, ತ್ರಪಾ, ಮಂದಾಕ್ಷಂ – ಈ ೬ ಲಜ್ಜೆ" (ಹಲಾಯು. ೯೩-೪೧೩). [ ಸಂ. ತ್ರಪಾ ]

**ತ್ರಪ್ಸ್ಯ** (ನಾ). ಮಜ್ಜಿಗೆ ; ತಕ್ರ. [ ಸಂ. ]

**ತ್ರಯ** (ನಾ). ಮೂರು ; ಮೂರರ ಗುಂಪು. 'ತಾಪತ್ರಯ' ಮರಾ. [ ಸಂ. ]

**ತ್ರಯಸ್ಥ** (ಗು). ೧. ತಟಸ್ಥವಾದ ; ಪಕ್ಷಾತೀತವಾದ : ಚರಿತ್ರ ಲೇಖಕರಿಗೆ ಇರಬೇಕಾದ ತ್ರಯಸ್ಥ ಭೂಮಿಕೆಯನ್ನವರು ಸಾಧಿಸಿದ್ದಾರೆ (ಸ್ಮೃತಿಚಿ. ೬). (ನಾ). ೨. ಮಧ್ಯಸ್ಥ ; ನ್ಯಾಯತೀರ್ಮಾನ ಮಾಡುವವನು : ತ್ರಯಸ್ಥರು ಈ ತಂಟೆಯನ್ನು ಬಗೆಹರಿಸಲು ಮಾಡಿದ ಪ್ರಯತ್ನ ಫಲಿಸಲಿಲ್ಲ (ಮುನಿಲ. ೦೩೬). [ ಸಂ. ]

**ತ್ರಯಿ** (ನಾ). ೧. ಮೂರರ ಗುಂಪು ; ಮೂರರ ಸಮುದಾಯ. ೨. = ತ್ರಯೀ : "ಸಾಮಗ್ಯರ್ಜುಸ್ತ್ರಯಂ ತ್ರಯಿಯೆನಿಕುಂ" (ವಸ್ತುಕೋ. ೩-೧೨) ; ಸರ್ವಬೀಜ ಭೂತಾಧ್ವರ ಗರ್ಭಸ್ಫುರಿತೆಯಾದ ತ್ರಯಿಯುಂ ನೀನೇ (ವಿಷ್ಣುಪು. ೫-೧-೧೧೦). ೩. ಗಂಡ ಮತ್ತು ಮಕ್ಕಳುಗಳನ್ನುಳ್ಳ ಗೃಹಿಣಿ. [ ಸಂ. ತ್ರಯೀ ]

**ತ್ರಯಿರಾಶಿಕ** (ನಾ). = ತ್ರೈರಾಶಿ: ಇನ್ನು ಮುಂದೆ ರಾಜಾದಿತ್ಯದ ಗಣಿತದಲ್ಲಿ ತ್ರಯಿರಾಶಿಕ, ಬೆಸ್ತತ್ರಯಿರಾಶಿಕ (ವ್ಯವಹಾ. ೧೧ ಅನುಬಂಧ). [ <ಸಂ. ತ್ರೈರಾಶಿಕ ]

**ತ್ರಯೀ** (ನಾ). ಋಗ್ವೇದ, ಯಜುರ್ವೇದ ಮತ್ತು ಸಾಮವೇದಗಳೆಂಬ ಮೂರು ವೇದಗಳು: "ಮೂಱು ವೇದಂಗಳುಮಂ ತ್ರಯೀಯೆಂಬುದು" (ಹಲಾಯು. ೩-೮); ತತ್ಸನಯಂ ತ್ರಯೀತ್ರಿಪಥಗಾ ಹಿಮವದ್ಗಿರಿ ಸಚ್ಚರಿತ್ರ ಸಂಪತ್ತಿಯ ಬಿತ್ತು. . . ದೇಚಿರಾಜವಿಪ್ರೋತ್ತಮನಾ ಮಹಾಪುರುಷನಂ ಪುರುಷೋತ್ತಮನೆನ್ನದಿರ್ಪರಾರ್ (ಶಾಸಮಂ, ೨೦೯ ; 1112) ; ವೇದವು ಋಗ್ವೇದ ಯಜುರ್ವೇದ ಸಾಮವೇದ ಎಂದು ಮೂರು ವಿಧ. ಮೂರಕ್ಕೂ ಸೇರಿ ತ್ರಯೀ ಎಂದು ಹೆಸರು (ಹಿಂದುಸಾ. ೧೫೬). [ ಸಂ. ]

**ತ್ರಯೀಚೋರ** (ನಾ). ೧. ಮೂರು ವೇದಗಳನ್ನು ಕದ್ದವನು; ಹಯಗ್ರೀವನೆಂಬ ರಾಕ್ಷಸ : ಹಯವದನನಾಗಿ ನೀ ತ್ರಯೀಚೋರನನ್ನು ಕೊಂದು ಸ್ತ್ರೀಯರಿಗೆ ನ್ಯಾಯದಿಂದ ದಯಾ ಬೀರಿದೆಯಲ್ಲ (ವಾದಿಕೀ. ೩೭-೫). ೨. ಸೋಮಕನೆಂಬ ರಾಕ್ಷಸ. ☞ ಈ ಬಗ್ಗೆ ಪುರಾಣಗಳ ಕಥೆಗಳಲ್ಲಿ ಭೇದವಿದೆ. [ ತ್ರಯೀ + ಚೋರ ]

**ತ್ರಯೀತನು** (ನಾ). ಮೂರು ವೇದಗಳನ್ನು ಶರೀರವಾಗಿ ಉಳ್ಳವನು ; ಸೂರ್ಯ ; ಆದಿತ್ಯ : "ಆದಿತ್ಯಃ, ಸವಿತಾ . . . ತ್ರಯೀತನುಃ – ಈ ೪೭ ಆದಿತ್ಯನ ಪೆಸರ್" (ಹಲಾಯು. ೭-೩೭) ; "ತ್ರಯೀತನು . . . ಸೂರ್ಯನಕ್ಕುಂ" (ಕುಂಗರಾ. ೧೦-೨). [ ತ್ರಯೀ + ತನು ]

**ತ್ರಯೀಮಯ** (ನಾ). = ಮೂರು ವೇದಗಳ ಸ್ವರೂಪನಾಗಿರುವವನು ; ಸೂರ್ಯ : ತ್ರಯೀಮಯನಂ ನಿತ್ಯೋದಯನುಮಪ್ಪ ಗಭಸ್ತಿಮಾಲಿಗರ್ಘ್ಯಮನೆತ್ತಿ (ಶಂಚತಂ. ೨೬೬-೫). [ಸಂ.]

**ತ್ರಯೋದಶ** (ಗು). ೧. ಹದಿಮೂರನೆಯ. (ನಾ). ೨. ಹದಿಮೂರು : ಬಳಿಯಂ ಸಂಜ್ವಳನಕಷಾಯಚತುಷ್ಕನೋಕಷಾಯನವಕನಾಮತ್ರಯೋದಶಪ್ರಕೃತಿಗಳನರಿದು (ಶಾಂತಿಪು. ೧೧-೧೧೧ ವ) ; ಪರಿಗೃಹೀತ ದಶವಿಧ ಶ್ರಮಣ ಧರ್ಮನುಂ . . . ತ್ರಯೋದಶವಿಧ ಕ್ರಿಯಾನಿರತನುಂ (ಚಾವುಂಪು. ೫-೨೫). [ ಸಂ. ]

**ತ್ರಯೋದಶಿ** (ನಾ). ಚಾಂದ್ರಮಾನ ತಿಂಗಳ ಎರಡೂ ಪಕ್ಷಗಳ ಹದಿಮೂರನೆಯ ದಿನ : "ತೇರಸಿಯೆ ತ್ರಯೋದಶಿ" (ಚತುನಿ. ೬೪) ; ಅಮಾವಾಸ್ಯೆ ತ್ರಯೋದಶಿ . . . ನವಮಿಯೆಂಬವೇ ಸರಣಿಯಿಂ ಷಡ್ಜಾದಿ ಸ್ವರೋತ್ಪತ್ತಿ ತಿಥಿಗಳು (ವಿವೇಕ. ೨೩೧). [ ಸಂ. ತ್ರಯೋದಶೀ ]

**ತ್ರಯೋಭಾಗ** (ನಾ). ಮೂರನೆಯ ಒಂದು ಭಾಗ: ಬೆನಕಂಗೆ ತಾರಕಾರಿಗೆ ಎನಗೆ ನೀವೆಂದು ಧನಮುಳ್ಳುದಂ ತ್ರಯೋಭಾಗವಾಗಿರಲೆಂದು ಹಂಚಿಕೊಟ್ಟಲ್ಲದಾರೋಗಿಸಲ್ಕಾನೀಯೆ (ಸಂಬರ. ೧೭-೯೩). ☞ಸಂಸ್ಕೃತ ವ್ಯಾಕರಣದ ಪ್ರಕಾರ ಇದು ಅಬದ್ಧರೂಪ. [ <ಸಂ. ತ್ರಿಭಾಗ ]

**ತ್ರಸ** (ಗು). ೧. ಚಲಿಸುವ ; ಸರಿಯುವ ; ಚರಿಸುವ. (ನಾ). ೨. (ಎರಡು ಅಥವಾ ಎರಡಕ್ಕಿಂತ ಹೆಚ್ಚು ಇಂದ್ರಿಯಗಳನ್ನುಳ್ಳ) ಚಲಿಸುವ ಜೀವ ; ಜಂಗಮಪ್ರಾಣಿ : "ತ್ರಸಮಕ್ಕುಂ ಜೀವನಿಕಾಯಂ ಜಂಗಮಮಾವಿರ್ಭೂತ ಪ್ರಧಾನ ಚೈತನ್ಯಗುಣಂ" (ವಸ್ತುಕೋ. ೧೮-೨) ; ತ್ರಸವೆನೆ ಚರಿಸುವ ಜೀವಂ (ತ್ರಿಲೋಕ. ೯). ೩. [ಜೈನ] ತ್ರಸನಾಮಕರ್ಮದ ಉದಯದಿಂದ ಉಂಟಾಗುವ ಎರಡು ಇಂದ್ರಿಯಗಳಿಂದ ಹಿಡಿದು, ಐದು ಇಂದ್ರಿಯಗಳನ್ನು ಪಡೆದಿರುವ ಜೀವ: ತ್ರಸ ಸ್ಥಾವರ ಯೋನಿಗಳೊಳು ಪಲಕಾಲಂ ತೊಳಲ್ದು (ಚಾವುಂಪು. ೩೪೬-೧೪) ; ಕೇವಲಗಮ್ಯಂ ತ್ರಸಮುಂ ಸ್ಥಾವರಮುಂ . . . ಇರ್ದುವು ಜೀವದ್ರವ್ಯಂಗಳಿಂ ಜಗತ್ತ್ರಯ ಮಧ್ಯಂ (ಅಜಿಪು. ೧೦-೩೭) ; ತ್ರಸಮೆನಿಕುಂ ದ್ವೀಂದ್ರಿಯದಿಂ ಪೆಸರ್ಗೊಳೆ ಪಂಚೇಂದ್ರಿಯಂಬರಂ ಕ್ರಮದಿಂದಂ (ಚಂದ್ರಪು. ೦೭-೧೨). ೪. ಹುಳು ; ಕ್ರಿಮಿ ; ಕೀಟ : "ತ್ರಸ ಲಾಕ್ಷಂ ಕ್ರಿಮಿಯೆಂದಕ್ಕು" (ನಾನಾರ. ೧೨೨) ; ಹಸಿದ ದಿಂಡುಕಂಗೆ ಭಕ್ತಂಗೆ ಎಸಕದ ಧ್ಯಾನ ಉಂಟೇ ಅದು ತನ್ನ ಹಸಿವಡಗುವನ್ನಕ್ಕ ತ್ರಸಗಳು ಬಂದು ಸೇರುವನ್ನಕ್ಕ ಹುಸಿಧ್ಯಾನದಿಂದ ಜೀವದ ಅಸುಗಳ ಕೊಂಬವು (ಬೋಳೆಮೂ. ೫೭-೨೩೮) : ತ್ರಸಮಂ ಕರಿಪತಿ ಪರಿರಕ್ಷಿಸುವುದದೇನರಿದೆ (ಪಾರ್ಶ್ವಪು. ೫-೫೯) ; ಧರಣಿಯೊಳು ದ್ವೀಪಾದ್ರಿಗಂಗಾಶರಧಿಪಕ್ಷಿಮೃಗತ್ರಸಂಗಳ ವಿರಚಿಸಿದರೊಲವಿಂದ (ಶಂಕೆದಾ. ೪-೨೯). ೫. ಕಾಡು ; ಅರಣ್ಯ. [ ಸಂ. ]

**ತ್ರಸಕಾಯ** (ನಾ). ೧. [ಜೈನ] ಚಲಿಸುವ ಶರೀರ : ನಾರಕರ್ಗೆ ಮಿಥ್ಯಾದೃಷ್ಟ್ಯಾದಿಯಾಗಿ ನಾಲ್ಕು ಗುಣಸ್ಥಾನಮುಂ ... ಪಂಚೇಂದ್ರಿಯತ್ವಮುಂ ತ್ರಸಕಾಯಮುಂ . . . ನೀನವಶ್ಯಂ ಮಾಡೆ ಪಡುಗುಂ (ಜಸಾರ. ೧೭೪). ೨. ಚಲಿಸುವ ಶರೀರವುಳ್ಳ ಪ್ರಾಣಿ : ಅಲ್ಲಿಯುಂ ತ್ರಸನಾಮ ಕರ್ಮೋದಯವಶಂಗಳ್ ತ್ರಸಕಾಯಂಗಳ್ (ಆದಿಪು. ೧೦-೬೧ ವ). [ತ್ರಸ+ಕಾಯ]

**ತ್ರಸಕಾಯಿಕ** (ಗು). ೧. ತ್ರಸಜೀವಿಗಳ ದೇಹಕ್ಕೆ ಸಂಬಂಧಿಸಿದ. (ನಾ). ೨. = ತ್ರಸಜೀವ : ಕಾಯಾನುವಾದದಿಂ ತ್ರಸಕಾಯಿಕಂಗಳ್ಗೆ ಮೂಱುಮೊಳವು (ತಸೂವ್ಯ. ೧೧) ; ತ್ರಸಕಾಯಿಕಂಗಳ ಗಣನಂ ಪಂಚೇಂದ್ರಿಯ ಸಂಖ್ಯಾಸಮಾನಂ (ತತ್ತ್ವಸೂ. ೨೨). [ ತ್ರಸ + ಕಾಯಿಕ ]

**ತ್ರಸಘಾತ** (ನಾ). [ಜೈನ] ತ್ರಸಜೀವಿಗಳನ್ನು ಕೊಲ್ಲುವುದು,–ನಾಶ ಮಾಡುವುದು : ಅಲ್ಲಿ ತ್ರಸಘಾತಮೆಂಬುದು ತ್ರಸಂಗಳಂ ಕೊಂದೊಡಲ್ಲದೆ ಮಧುಮಾಂಸಮಿಲ್ಲಪ್ಪುದಱಿಂದವಂ ಸದಾಕಾಲಂ ವರ್ಜಿಸುವುದು (ಜಸಾರ. ೩೧೬). [ ತ್ರಸ + ಘಾತ ]

**ತ್ರಸಜೀವ** (ನಾ). [ಜೈನ] ಸಂಚರಿಸುವ ಜೀವ ; ಜಂಗಮಪ್ರಾಣಿ : ಸ್ಪರ್ಶನರಸನಘ್ರಾಣಚಕ್ಷುಶ್ಶ್ರೋತ್ರೇಂದ್ರಿಯ ಸಮನ್ವಿತಂಗಳಪ್ಪ ಮನುಷ್ಯಾದಿ ಪಂಚೇಂದ್ರಿಯಂಗಳುಮೆಂದಿಂತು ತ್ರಸಜೀವಂಗಳ್ ಚತುರ್ವಿಧಮಕ್ಕುಂ (ಆದಿಪು. ೧೦-೬೩ ವ). [ ತ್ರಸ + ಜೀವ ]

**ದಕ್ಷಿಣಾಶಾಪತಿ** (ನಾ). ದಕ್ಷಿಣ ದಿಕ್ಪಾಲಕ; ಯಮ: "ಶಮನಃ . . . ದಕ್ಷಿಣಾಶಾಪತಿಃ, ಶ್ರಾದ್ಧದೇವಃ,-ಈ ೧೬ ಜವನ ಪೆಸರ್" (ಹಲಾಯು. ೦೩-೭೩). [ ಸಂ. ]

**ದಕ್ಷಿಣಾಶೆ** (ನಾ). ತೆಂಕಲು; ದಕ್ಷಿಣದಿಕ್ಕು: ದಕ್ಷಿಣಾಶೆಯ ನಱುಸುಯ್ಯ ಗಾಳಿಯನೆ ಪೋಲ್ವುದು ಗಂಧವಹಂ ವಸಂತದೊಳ್ (ಶಾಂತಿಪು. ೭-೦೩೬); ಮೇರುವಿನ ದಕ್ಷಿಣಾಶೆಯೊಳು . . . ಲಕ್ಷ್ಮಿಯ ರಾಜಧಾನಿಯೆನಲೊಪ್ಪುವುದು ಚಾರುತರ ಲಾಳದೇಶಂ (ಹರಿಕಾ. ೦-೩೪). [ ದಕ್ಷಿಣ + ಆಶೆ ]

**ದಕ್ಷಿಣಾಸ್ಥ** (ನಾ). = ದಕ್ಷಿಣಸ್ಥ ೨: ನಿಯಂತಾ, ಪ್ರಾಜಿತಾ, ಕ್ಷತ್ತಾ, ದಕ್ಷಿಣಾಸ್ಥಃ . . . ಸೂತಃ—ಈ ೭ ಸಾರಥಿ" (ಹಲಾಯು. ೭೩-೨೯೫). [ ಸಂ. ]

**ದಕ್ಷಿಣೆ** (ನಾ). ೧. ಪಿತೃಕಾರ್ಯ, ದೇವತಾಪೂಜೆ, ಯಾಗ, ವ್ರತ ಮುಂತಾದ ಸಂದರ್ಭಗಳಲ್ಲಿ ಬ್ರಾಹ್ಮಣರು, ಗುರುಹಿರಿಯರು ಮುಂತಾದವರಿಗೆ ನೀಡುವ ಕಾಣಿಕೆ,-ಸಂಭಾವನೆ: ಆವ ಲಕ್ಷಣದ ಹಯಮುಮದಕೆ ಋತ್ವಿಜರೆನಿಬರೆನಿಸು ದಕ್ಷಿಣೆಗಳದರಂದಮಂ ವಿಸ್ತಂಸ ವೇಳ್ವುದು (ಜೈಮಿಥಾ. ೨-೨೫); ತೃಪ್ತಿಯೆ ತಣಿದು ತೇಗಿದುದೆನಲ್ಕೆ ನಲಿದಂದು ಜನಂ ಭಾರಕಾ ಭೋಜನಕೆ ಮೇಣ್ ದಾನ ದಕ್ಷಿಣೆಗೆ (ಶ್ರೀರಾಮಾ. ೧೧-೨೮೪). 'ಗುರುದಕ್ಷಿಣೆ' ಪರಾ. ೨. ಹಣದ ದಾನ,-ಕೊಡುಗೆ: "ಯಾಗವ್ರಯಂ ದಾನಮುತ್ಸರ್ಗಮಪವರ್ಜನಂ ದಕ್ಷಿಣೆಯುದೆ ನಿಕ್ಕಂ" (ಮಂಗರಾ. ೭೭-೦೪); ಬಂದ ದಕ್ಷಿಣೆ ವೃಷ್ಟಭೋಜನದಿಂದ ತುಷ್ಟರು ನಾವು (ಶುಪ್ರಾಆ. ೦೫-೩); ಮಾಡಿದನು ಮನದಣಿಯ ದಕ್ಷಿಣೆಗೂಡಿ ಕನ್ಯಾಧೇನು ದಾನವನು (ತೊರರಾ. ೨-೨-೨೦); ಮುತ್ತೈದೆಯರಿಗೆ ಅರಿಶಿನ ಕುಂಕುಮ ಫಲಪುಷ್ಪ ತಾಂಬೂಲಗಳನ್ನೂ ದಕ್ಷಿಣೆಯನ್ನೂ ಇತ್ತು ಸತ್ಕರಿಸಿದನು (ಶ್ರೀಚಾಯ. ೬) ಭಕ್ಷ್ಯವಿಲ್ಲದಿದ್ದರೂ ದಕ್ಷಿಣೆ ಸಿಕ್ಕಿದರೆ ಸಾಕು (ಗಾದೆ). [ ಸಂ. ದಕ್ಷಿಣಾ ]

**ದಕ್ಷಿಣೆಗೊಡು** (ಕ್ರಿ). ಪಿತೃಕಾರ್ಯ, ದೇವತಾಪೂಜೆ ಮುಂತಾದ ಸಂದರ್ಭಗಳಲ್ಲಿ ಗುರುಹಿರಿಯರೇ ಮೊದಲಾದವರಿಗೆ ದಾನವನ್ನು ಕೊಡು,-ದಕ್ಷಿಣೆ ನೀಡು: ಅಂತು ನಿಜಧವಳಚ್ಛತ್ರ ಚಾಮರ ಸಿಂಹಾಸನಾದಿ ರಾಜಚಿಹ್ನಂಗಳುಮಂ ಸರ್ವಸ್ವಮೆಲ್ಲಮಂ ದಕ್ಷಿಣೆಗೊಟ್ಟು (ಶಂಪಥಾ. ೬-೪೦ ವ). [ ದಕ್ಷಿಣೆ + ಕೊಡು$_1$ ]

**ದಕ್ಷಿಣೇಂದ್ರ** (ನಾ). ದಕ್ಷಿಣ ದಿಕ್ಕಿನ ಅಧಿಪತಿ: ಬ್ರಹ್ಮಲೋಕನಿಳಯರಪ್ಪ ಲೋಕಾಂತಿಕರುಂ ದಕ್ಷಿಣೇಂದ್ರರುಂ . . . ಭವವಲ್ಲೀದಳಫಲಮೂಲ ವಿಷಯಮುಮಂ ಪಱಿದು (ಶಾಂತಿಪು. ೧೨-೯೩ ವ). ⓟ ಜೈನರ ಪ್ರಕಾರ ದಕ್ಷಿಣೇಂದ್ರರು ಸೌಧರ್ಮ, ಸನತ್ಕುಮಾರ, ಬ್ರಹ್ಮ, ಶುಕ, ಆನತ ಮತ್ತು ಆರಣ್ಯರೆಂದು ಆರುಮಂದಿ. [ ದಕ್ಷಿಣ + ಇಂದ್ರ ]

**ದಖನ್, ದಕನ್** (ನಾ). ದಕ್ಷಿಣಭಾರತದ ಪ್ರದೇಶ; ನರ್ಮದಾ ಮತ್ತು ಕೃಷ್ಣಾ ನದಿಗಳ ನಡುವಿನ ಭೂಭಾಗ: ದಖನ್ನಿನ ಭಾಗವು ವಾಸಯೋಗ್ಯವಾಗಿತ್ತು (ಭಾಇಪ್ರ. ೧೫); ದಖನ್ನಿನ ಒಂದು ಭಾಗ (ಜೀನಡ್. ೧೦೪). **ದಕನ್**: ಈ ಕಾಲದಲ್ಲಿ ದಕನ್ ಬಾದಷಹರು ದಿಲ್ಲಿ ರಾಜನಿಗೆ ವಿರುದ್ಧರಾದರು (ಉರ್ದುಪಾ. ೬). [ ←ಪಾರ. ದಕನ್; ಹಿಂ. ದಖಿನ್, ದಕನ್; ಪ.ಪ್ರಾ. ದಕ್ಖಿನ್./ಪ್ರಾ. ದಕ್ಖಿಣ ]

**ದಖಿನಿ** (ಗು). ೧. ದಕ್ಷಿಣಕ್ಕಿರುವ; ದಕ್ಷಿಣದೇಶದ. (ನಾ). ೨. ದಖನ್ ಪ್ರದೇಶದ ಗುಲ್ಬರ್ಗ, ಬಿಜಾಪುರ ಪ್ರದೇಶಗಳಲ್ಲಿ ಪ್ರಚಲಿತವಾಗಿದ್ದ ಉರ್ದು ಭಾಷೆಗೆ ಮೊದಲಿನ ಒಂದು ಇಂಡೋ-ಆರ್ಯನ್ ಭಾಷೆ: (ಶಿ). [ ←ಹಿಂ. ದಕ್ಖಿನೀ; ಮರಾ. ದಖಿಣೀ ]

**ದಖಾಫಿ** 'ಧಕ್ಕಾಫಿ' ನೋ.

**ದಖೀಲಿ** (ನಾ). ಮೊಗಲ್‌ಸೈನ್ಯದ ಒಂದು ಪಂಗಡ: ದಖೀಲೀ ಇದಕ್ಕೆ ಸಂಬಳವೇನೋ ಸರ್ಕಾರದಿಂದ ಬರುತ್ತಿದ್ದರೂ ಇದು ಮನ್‌ಸಬ್‌ದಾರರ ಅಧೀನದಲ್ಲಿರುತ್ತಿತ್ತು (ಇಸ್ಲಾಂಸಂ. ೬೮). [ ←ಅರ. ಹಿಂ. ದಖೀಲ್ = ಅಧಿಕಾರಿ ]

**ದಗ** 'ದಗಾ' ನೋ.

**ದಗಡಿ** 'ಧಗಡಿ$_1$' ನೋ.

**ದಗದ** (ನಾ). (ಉಕ) ಕೆಲಸ; ಕಾರ್ಯ: ಹರಿಯ ಹೊತ್ತಿಲೆದ್ದು, ಅತ್ತಿ ಮಾವಗ ಶರಣ ಮತ್ತೊಂದು ಶರಣ ಗುರುವೀಗೆ ನಾ ಮಾಡಿ ಹೊಕ್ಕೀನಿ ಮನಿಯ ದಗದಕ (ಜನಗೀ. ೭೬); ಅಪ್ಪ ರಾಚಣ್ಣನ ತೇರೆಳೆದು ಬರುವಾಗ ತೀರಲಿಲ್ಲವ್ವ ಮನೆ ದಗದ (ಕನ್ನಜಾ. ೧೦); ಬೆಳತನಕ ದುಡಿಯೋವಷ್ಟು ದಗದ ಆದ್ರೂ ಐತಿರಾ ಅದು? (ಕುಮಾಕಾ. ೦೩೫); ಅವರ ಕಡೀಗೆ ತುಸು ದಗದ ಇತ್ತು (ಜೀವಪ್ರ. ೮೨). [ ?./ಮರಾ. ದಗದಗ = ಪರಿಶ್ರಮ. ]

**ದಗದಗ** (ನಾ). ಒಂದು ಅನುಕರಣ ಶಬ್ದ. 'ದಗದಗನೆ' ಪರಾ.

**ದಗದಗನೆ** (ಅ). ದಗದಗ ಎಂಬ ಶಬ್ದದೊಡನೆ: ಬೆಂಕಿ ದಗದಗನೆ ಉರಿಯಿತು (ರೂಢಿ) [ ದಗದಗ + -ಅನೆ$_1$ ]

**ದಗದಗಿಸು** (ಕ್ರಿ). (ಬೆಂಕಿ) ದಗದಗ ಎಂದು ಉರಿ; ಪ್ರಜ್ವಲಿಸು: ಕರಿಗಿರಿಯೊಳು ದಗದಗಿಸಿ ಹರಿಯಾವಳಿಯುರುಗುಲ್ಮದೊಳು ಭುಗುಭುಗಿಸಿ ಬರುದಿನ ಮನ್ನೆಯ ಭಟರ ಪ್ರತಾಪಾಗ್ನಿ ಮೆಱೆದುದು ರಿಪುವನದೊಳಗೆ (ಕಂನವಿ. ೦೫-೫೫). [ ದಗದಗ + -ಇಸು$_3$ ]

**ದಗಮು, ಧಗಮು** (ನಾ). ಒಂದು ಬಗೆಯ (ಚರ್ಮದ) ವಾದ್ಯವಿಶೇಷ: ಕೊಂಬು ಬೊಂಬುಳಿ ಕಾಳೆ ಡೋಳು ದಗಮು ಚಿನ್ನ ಚಂಬಕವಱೆ ತಿತ್ತಿರಿಗಳ ಡೊಂಬಿಯ ಧ್ವನಿಯಿಂದ ಪೌಜುಗಳತ್ಯಾಡಂಬರದಿಂದೆಯ್ದಿದವು (ಕುಲಾಸಾಂ. ೦೨-೨೫); ಡಕ್ಕೆ ದಗಮು ಕೊಂಬು ಕೊಳಲು ತಪ್ಪಟೆ ಮೃದಂಗದ ರವ ತುಂಬಿತು ಲೋಕವನಿರದೆ (ರಾಮವಿ. ೭-೦೨); ಪೊಡೆವ . . . ತಂಬಟ ಡೋಳು ದಗಮು ಗಿಡಿಬಿಡಿಗಳ ಬಲ್ಲನಿ ಮುಪ್ಪೊಡವಿಯನದರಲು ನಡೆದುದಾ ಸೇನೆ(ಶಂಪ್ರಸಾಂ. ೨೦-೬೧); ಅನ್ನಿಗರೆನಗೊಡ್ಡಿ ನಿಂದರೆ ದಗಮಿನ ಸನ್ನೆಯೊಳ್ಪಾಯ ಕುಟ್ಟಿಸುವೆ (ಭರಜ. ೪೯-೩೬); ಮೆಱೆವ ತುಡುಮು ಭೇರಿ ದಗಮು ಡಿಂಡಿಮ ಡೌಡೆ ಮೊಱೆವ ದೋಲುಂಗಳು ಡಕ್ಕೆಗಳು (ಜ್ಞಾನಸ. ೪೧-೩೫). **ಧಗಮು**: ಭೇರಿ ತಮ್ಮಟ ನಿಸ್ಸಾಳ ಧಗಮು ರುಂಜೆ ಭೋರೆಂಬ ಶಂಖದಾಡೆಗಳು (ಜ್ಞಾನಸ. ೧೦-೩). [ ? ]

**ದಗಲಬಾಜಿ** 'ದಗಲ್ಬಾಜಿ' ನೋ.

**ದಗಲಬಾಜಿತನ** 'ದಗಲ್ಬಾಜಿತನ' ನೋ.

**ದಗಲು, ತಗಲ್$_2$, ತಗಲು$_3$** (ನಾ). ೧. ಮೋಸ; ವಂಚನೆ; ದ್ರೋಹ; ವಿಶ್ವಾಸಘಾತ: "ಠಕ್ಕತನ; ತಗಲು; (ದಗಲುಬಾಜಿ), ಅಪ್ರಾಮಾಣಿಕತನ" (ಜಾನಕೋ. ೨). **ತಗಲ್$_2$**: ೧. "ಮೋಸ, ವಂಚನೆ" (ಪ್ರಥಮ). **ತಗಲು$_3$**: ೧. ಯಾವುದರಲ್ಲಿ ತಂಟೆಯಿಲ್ಲ ತಗಲು ಇಲ್ಲ; ಮೋಸವಿಲ್ಲ; ಮರೆಯಿಲ್ಲ (ಜನಜೀ. ೩೯). ೨. ಸುಳ್ಳು: "ತೊದಳು, ಸುಳ್ಳು . . . ಸಟೆ, ತಗಲು" (ಕಂನಹು. ೪೭). 'ತಗಲುಸಾಕ್ಷಿ' ಪರಾ.

**ತಗಲುಬಗಲು** = ಮೋಸ; ವಂಚನೆ: ತಗಲುಬಗಲಿನಿಂದ ದುಷ್ಟವಾಜಿಗಳಾಗ ಖಿಗಸಾಳ್ವನಂತೆ ಹೊಕ್ಕಿಱಿಯೆ (ಬಿಜ್ಜರಾ. ೦೨-೩೦). **ತಗಲುಬಿಗಲ್ಲನ**= ತಗಲುಬಗಲು: ಹೌದದು ಅಂಥವರು ಇರೋ ಪೊತ್ಗೇ ಮತ್ತೆ ಇಂಥ ತಗಲುಬಿಗಲ್ಲನ ನಡಿಯೋದು (ಕಂಬಿರ. ೦೨). **ತಗಲು ಮಾಡು** = ಮೋಸ ಮಾಡು; ವಂಚಿಸು: ಅದರಲ್ಲಿ ಒಂದು ಪೈ ಸಹ ತಗಲು ಮಾಡಿದ್ದಿಲ್ಲ (ಮುಂಬಯಿ. ೪-೫೦); ತೂಕದಲ್ಲಿ ಯಾರಾದರೂ ತಗಲುಮಾಡಿದರೆ ಆ ತೂಕಕ್ಕೆ ಸರಿಯಾಗಿ ಅವರ ದೇಹದ ಮಾಂಸವನ್ನು ತೆಗಿಸುತ್ತಿದ್ದನು (ಹಿಂಮುಂಸ. ೭೦). [ ←ಅರ. ಹಿಂ. ಮರಾ. ದಗಲ್./ಸಂ. ಜಗಲ ]

**ದಗಲೆ₁**, ತಗಲೆ (ನಾ). ಕವಚ ; ತನುತ್ರಾಣ : "ದಗಲೆ ಜವಳಿ ಜೋಡು" (ಕಬ್ಬಮಂ. ೯೪) : ಶೀರ್ಷಕಂ . . . ಪೃಷ್ಠಕಂಟಕ ॥ ಈ ೧೭ ದಗಲೆಯು ತೊಟ್ಟು ಸನ್ನದ್ಧನಾಗಿದ್ದವನು (ರಾಜಶಾ. ೧೩೪) : ಕೆಂಪು ದಗಲೆಯಿಂದ ಕೆಳಗಾಗಲರುಣನ ಗರಿಪಾದಕಂಸೆಯಗಲಿ ಇಂದ್ರನೀಲದ ದಾಳ ದಿಕ್ಕುಗಳನೆ ಬೆಳಗುತಲೆ (ವಾದಿಶೀ. ೧೫೦-೨) ; ಮುತ್ತಿನ ದಗಲೆ ವಜ್ರದ ಜೋಡು ಸಿರದಲಿ ಬಿತ್ತರವಹ ಸೀಸಕದ ಪೃಸ್ಸಂಗ ತೊಡರಾ ಗಾವಳಿಯಿಂದ ಭೂಪೋತ್ತಮ ನಡೆದನುಬ್ಬಿನಲಿ (ಕಂಸವಿ. ೧೫-೧೨) ; ಸಿರದ ಮುಂಡಾಸವ ಸೀಳ್ದಿಕ್ಕಿ ದಗಲೆಯ ಪರಿಪಾಟ ಮಾಡಿದರಾಗ (ಕಂಸವಿ. ೧೫-೪೭) ; ಪೊಸದಗಲೆಯಂ ಬಿಗಿದು ಅಳವಟ್ಟ ಪೊನ್ನ ಪಡಿದೇರನೇಱ್ ಮುಟ್ಟಿಯಿಸಿ ಕಱುತ್ತೈಱಗಿ (ರಾಮಾಶ್ವ. ೯೦-೨೯) ; ದಗಲೆ (ತಗಲೆ) :- ತೆಗಲೆ ಎಂಬುದು ಉರಸ್ತ್ರಳಕ್ಕೆ ನವ್ಮಿ ಕನ್ನಡನಾಡಿನಲ್ಲಿ ಮಾತ್ರ ರೂಢವಾದ ಹೆಸರಾದರೂ ಪಂಪಭಾರತದೊಳಗೆ ತೋರಿಬಾರುದರಿಂದ ಅದು ಅಚ್ಚಗನ್ನಡ ಎಂಬುದು ಈಗ ನಿರ್ಧಾರವಾಗಿದೆ. 'ದಗಲೆ' ಅಥವಾ 'ತಗಲೆ' ಎಂದರೆ ತೆಗಲೆಯ ಮೇಲೆ ಬಿಗಿದು ಕಟ್ಟುವ ಬಟ್ಟಲಿನಾಕಾರದ ಒಂದು ಪದಾರ್ಥ, ಇದನ್ನು 'ಉರಃಸ್ತ್ರ' ಎನ್ನಬಹುದು (ಪಾರ್ತಿಸು. ೪೭). **ತಗಲೆ :** ದಗಲೆ (ತಗಲೆ):- ತೆಗಲೆ ಎಂಬುದು ಉರಸ್ಥಳಕ್ಕೆ ನವ್ಮಿ ಕನ್ನಡನಾಡಿನಲ್ಲಿ ರೂಢವಾದ ಹೆಸರಾದರೂ . . . ಇದನ್ನು 'ಉರುಸ್ತ್ರ' ಎನ್ನಬಹುದು (ಪಾರ್ತಿಸು. ೪೭).

**ದಗಲೆಜೋಡು** = ಯುದ್ಧಕಾಲದಲ್ಲಿ ಸೈನಿಕರು ಧರಿಸುವ ಕವಚ ; ತನುತ್ರಾಣ : ಜರಿಟೋಪಿ ದಗಲೆಜೋಡಿನ ರಾವುತರ ಮುಂದುರವಣಿಸುವ ನಿವನಾರೆ (ಕಂಸವಿ. ೧೨-೫೮). [ <ಸಂ. ಜಗಲ ]

**ದಗಲೆ₂**, ಡಗಲಿ, ಡಗಲೆ, ದೊಗಲೆ, ದೊಗಳೆ (ಗು). ೧. ಸಡಿಲವಾದ ; ಅಳ್ಳಕವಾದ : ನನ್ನ ದೊರೆಯಾದ ಖಾಜಾನ್‌ಕಾಲಿಕಟ್ ದೊರೆಗೆ ಬಹುಮಾನವಾಗಿ ಕೆಲವು ಕುದುರೆಗಳನ್ನೂ, ದಗಲೆ ಅಂಗಿಗಳನ್ನೂ, ಜರತಾರಿ ಉಡುಪುಗಳನ್ನೂ . . . ಕಳುಹಿಸಿಕೊಟ್ಟದ್ದನು (ಪ್ರವಾಸ. II, ೦೪೯). (ನಾ). ೨. ಸಡಿಲವಾದ ಅಂಗಿ ಮೊದಲಾದುವು : ಬೂದುಬಣ್ಣದ ದಗಲೆ, ಕುರಿ ತೊವಲಿನ ಅಂಗಿ, ಜೊತೆಗೆ ಬೇಡಿ ಕೋಲಗಳ ಸೈನಿಕರ ತಂಡ ದಾರಿಯುದ್ದಕ್ಕೂ ಮಯಕ್ಕಾಲು ಮೈಲಿ ದೂರದ ತನಕ ವ್ಯಾಪಿಸಿತ್ತು (ಪುನರು. ೩೫೭); ಮೈಯಿಂದ ಇಳಿಯುತ್ತಿದ್ದ ಬೆವರು ಅವನ ದಗಲೆಯನ್ನೂ ಸೊಂಟದ ಪಂಚೆಯನ್ನೂ ಒದ್ದೆಮುದ್ದೆಯನ್ನಾಗಿ ಮಾಡಿತ್ತು (ಮಳೆಮು. ೫೭೩). ೩. ಉಡುಪು ಕೊಳೆಯಾಗದಂತೆ ಮೇಲೆ ಕಟ್ಟಿಕೊಳ್ಳುವ ಉಡುಗೆ ; ಮೇಲಂಗಿ : ದಗಲೆಯನ್ನು ಎತ್ತಿಕೊಂಡು ಅದನ್ನು ಎದೆಯ ಮೇಲೆ ಹೊಂದಿಸಿ, ಕೊರಳಿಗೆ ಹಿಂಗಡೆಯಿಂದ ಕಟ್ಟುವಂತೆ ತಿಳಿಸಿದ (ಬಣ್ಣಮಾ. ೯೦) ; ಮಕ್ಕಳ ಮತ್ತು ಕೆಲಸಗಾರರ ಉಡುಪು ಕೊಳೆಯಾಗ ದಂತೆ ಮೇಲೆ ಹಾಕುವ ದಗಲೆ (Jumper. ಇಂಕನ್ನ). **ಡಗಲಿ :** ೩. ಕೆಂಪು ರುಮಾಲು ಡಗಲಿಗಳಿಂದಲಂಕೃತನಾದ ಉಸ್ಮಾನಸಾಹೇಬರು ಕರೆಯುತ್ತಾ ರೆಂದು ಹೇಳಲು, ಶೇಷಪ್ಪ ಮತ್ತೆ ತಿರುಗಬೇಕಾಯಿತು (ಗ್ರಾಮಾಯ. ೨೫೫) ; ನಾನು ಅವರ ವಚನಕ್ಕೆ ಅನುಮತಿಸಿ, ಅವರು ಕೊಟ್ಟ ಒಂದು ಡಗಲಿಯನ್ನು ಮೈಯೊಳಗೆ ಹಾಕಿಕೊಂಡು ಅವರ ಸಂಗಡಲೆ ಬಿದ್ದೆನು (ಮಂಜುಳ. ೦೦೨) : ಅವರ ಮುರಿಗೀ ಮುಂಡಾಸ ಬಣ್ಣದ ಡಗಲಿ ಕೈಯಾಗಿನ ಕಟಾರಿ . . . ಎಲ್ಲಾ ಗುಂಗ ಹಿಡಿಸಿ ಬಿಡತಾವ ! (ಚಿಂದಯ. ೧೦೨). **ಡಗಲೆ :** ೨. ಮೊಣಕಾಲುಗಳನ್ನು ಮುಚ್ಚುವಷ್ಟು ಉದ್ದನಾದ ಹಸುರು ರೇಸಿಮೆಯ ಡಗಲೆ ಅವನ ಸ್ಥೂಲವಾದ ಕಾಯವನ್ನು ಹೇಗೋ ಮುಚ್ಚಿತ್ತು (ಜಿರಂಗ. ೭೭). **ದೊಗಲೆ :** ೪. ಸಡಿಲು; ಅಳ್ಳಕ: ಯಾವುದೂ ಪಿಟ್ ಆಗಕೂಡದು, ಎಷ್ಟು ದೊಗಲೆ ಆದರೆ ಅಷ್ಟು ಚೆಂದ (ನಮ್ಮೂರು. ೦೯೦). **ದೊಗಳೆ :** ೪. ಗಂಡಸು ತುಂಬ ಉದ್ದವೂ ತೀರ ದೊಗಳೆಯೂ ಆದ ಜೈಲುಡುಪು ಧರಿಸಿದ್ದನು (ಪುನರು. ೩೩).

ದಗಲೆ ಚಡ್ಡಿ, ದೊಗಳೆ ಚಡ್ಡಿ = ಸಡಿಲವಾದ ಚಣ್ಣ, - ಚಲ್ಲಣ; ಅಳ್ಳಕ ವಾದ ನಿಕ್ಕರು: ರಾತ್ರಿಯಲ್ಲಾಗಲೀ, ಹಗಲಿನಲ್ಲಾಗಲಿ ದಗಲೆ ಚಡ್ಡಿಗಳನ್ನು ಹಾಕಿಕೊಂಡು ಮನೆಯಲ್ಲಿ ಓಡಾಡಬೇಡ (ಮಹಾಗ. ೦೦೨) ; ಬೆಳ್ಳಿಯ ನಡುಕಟ್ಟು—ನೀಲಿಯ ಮೇಲಂಗಿ—ದೊಗಳೆಚಡ್ಡಿ (hose) ತುಪ್ಪಟದ (fur) ಜೋಡು ಕಬ್ಬಿಣದ ತಲೆಮುಚ್ಚು (casque) ಒಂದು ಛುರಿಕೆಯು ನಡುವಿ ನಲ್ಲಿ ನೇತಾಡುತ್ತಿದೆ (ಅರ್ಥೆಳ. ೧). ದಗಲೆ ಷರಾಯಿ, ದೊಗಳೆ ಷರಾಯಿ= ಸಡಿಲವಾದ ಇಜಾರ, - ಪಾಯಿಜಾಮ : ಮೊಣಕಾಲಿನವರೆಗೆ ಬಂದು ಅಲ್ಲಿ ಗೊಂಡೆಯ ದಾರದಿಂದ ಕಟ್ಟಿದ್ದ ದಗಲೆ ಷರಾಯಿ ; ಅದರ ಎರಡು ಪಕ್ಕದಲ್ಲೂ ಗುಂಡಿಗಳು (ಯೋಧರು. ೫೦); ಹಿಂದೆ ಬರುತ್ತಿರುವ ಮಾರ್ವಾಡಿ ಗಳನ್ನಾಗಲೀ, ದೊಗಲೆ ಷರಾಯಿಯವರನ್ನಾಗಲೀ ಕಂಡು ಕಂಬಿಕೀಳಲು ಏರ್ಪಾಟುಗಳನ್ನು ಮಾಡಿಕೊಳ್ಳಬಹುದು (ನಾಡಿಗೇ. ೪೫) ; ನಮ್ಮ ಜನರು ಅನ್ಯಾಯವಾಗಿ ದೊಗಲೆ ಷರಾಯಿ ವರ್ಗದವರಲ್ಲಿ ಸಾಲ ತೆಗೆದುಕೊಂಡು ನಾನಾ ವಿಧವಾದ ಕಷ್ಟ ನಷ್ಟ, ಅಪಮಾನಗಳಿಗೆ ಗುರಿಯಾಗುತ್ತಿದ್ದಾರಲ್ಲ (ಕಸಬು. ೭೦). ದೊಗಳೆ ಷರಟು = ಸಡಿಲವಾದ ಅಂಗಿ: ಸಾವಿರದ ಏಳ ನೂರ ಮೂರು ಸಂಖ್ಯೆಯ 'ಮಲ್ಲಿನ' ದೊಗಳೆ ಷರಟು (ಕಾಳಹೊ. ೩).

[ ←ಹಿಂ. ದಗಲ್, ದಗಲಾ ; ಮರಾ. ದಗಳ, ಡಘಳ ]

**ದಗಲ್ಬಾಜಿ**, ದಗಲಬಾಜಿ (ನಾ). ೧. ಕಪಟ ; ಮೋಸ ; ವಂಚನೆ ; ದ್ರೋಹ: (೬). ೨. ಕಪಟಿ; ಮೋಸಗಾರ; ದಗಾಕೋರ: ಅವನೊಬ್ಬ ಭಾರಿ ದಗಲ್ಬಾಜಿ (ರೂಢಿ). **ದಗಲಬಾಜಿ :** ೧. "ನನ್ನ ಹತ್ರ ದಗಲಬಾಜಿ ಮಾಡ್ತೀಯಾ ? " ಎಂದು ಗಂಗನನ್ನು ಬೈದನು (ಕಾನೂರು. ೦೯೪); "ನನ್ನ ಹತ್ತಿರ ದಗಲಬಾಜ ಮಾಡ್ತೀಯಾ ? " ಎಂದನು (ಮಳೆಮು. ೧೨೪).

[ ←ಮರಾ. ದಗಲ್‌ಬಾಜೀ ]

**ದಗಲ್ಬಾಜಿತನ**, ದಗಲಬಾಜಿತನ (ನಾ). ಮೋಸಮಾಡುವಿಕೆ ; ದಗಾ ಹಾಕುವಿಕೆ : ಆ ನಾಗಪ್ಪಯ್ಯನ ದಗಲ್‌ಬಾಜಿತನ ತಿಳಿದುದರಿಂದ, ಆ ನಾಗಪ್ಪಯ್ಯನನ್ನು ಹಿಡಿದು ತೂಗಹಾಕಬೇಕೆಂಬದಾಗಿ ಟೀಪುಸುಲ್ತಾನರು ಅಪ್ಪಣೆಕೊಟ್ಟದ್ದರಿಂದ (ರಾಜೇಂದ್ರ. ೦೭). **ದಗಲಬಾಜಿತನ :** ಸುಬ್ಬ ಕೃಷ್ಣನಿಗೆ ಮಧುಸೂದನನ ವಿಷಯದಲ್ಲಿ ವಿಶ್ವಾಸವಿತ್ತು. ಆದರೆ ಮುರಲಿಯ ದಗಲಬಾಜಿತನಕ್ಕೆ ಹೆದರುತ್ತಿದ್ದ (ರಾಗಿಣಿ. ೩೭). [ ದಗಲ್ಬಾಜಿ + – ತನ ]

**ದಗಳು** (ನಾ). ಒಂದು ಬಗೆಯ ಯುದ್ಧಸಾಧನ : ಚೇಳು ಬಾಣಗಳ ಊಟಳವುರಿಪೊಟ್ಟಣವೇಳುವ ಜಂತ್ರದ ದಗಳು ತೂಳುವ ಗುಂಡುಗಲ್ಲುಗಳ ರಾಸಿ ಪಟ್ಟಣದಾಳುವೇರಿಯ ತುಂಬಿಹುವು (ಕಂಸವಿ. ೩-೨೦).

[ ದೇ.॥ ತೆಲು. ದಗರು ]

**ದಗಾ**, ದಗ್ಗೆ₁, ತಗ, ದಗ, ದಗ್ಗೆ₂, ದಹ್ಹ₁ (ನಾ). ಮೋಸ ; ಕಪಟ ; ವಂಚನೆ ; ದ್ರೋಹ : ಕುಡಿತಕ್ಕೆ ದುಡ್ಡಿಲ್ಲದ ಕಳ್ಳತನ, ಮೋಸ, ದಗಾ ಆರಂಭವಾಗಿವೆ (ನಮ್ಮೂರು. ೩೦೫). **ದಗ್ಗೆ₁ :** (೬). **ತಗ :** ನೂಱನಾಡೊಡೆ ಕೊಂಬುದೇಱದೂಱನೆಬೇಡ ವಿಱಾಱದಡೆ ತಗವ ಕೊಡುವುದು ಸಾಲಿಗನು ಗೋಱು ತಿಂದಾನೆ (ಸರ್ವಜ್ಞ.ಬ.೪೯೭). **ದಗ:** ಇದು ಪಶ್ಚಾತ್ತಾಪವೊ, ಸ್ವಕ್ಷೇಮ ಚಿಂತನೆಯೊ . . . ದಗವೂ ಹೃದ್ಗತವಾದ ಅಭ್ಯಾಸ ಬಿದ್ದ ಮಂತ್ರ ಮನಸ್ಸನ್ನು ಸುಳಿಯಿತು (ಸಂಸ್ಕಾರ. ೮೨); "ಎಷ್ಟು ಬಾರಿ ದಗ, ಅಧರ್ವಾ ನಡೆಸಿದ ಮೇಲೆ" ನೀನೆ ನನಗ್ಕೊಟ್ಟ ದಗ. ನಾನ್ ನಿನಗ್ಕಾಟ್ದೆ—ನಾವು (ಶಕಾರ. ೨೩). **ದಗ್ಗೆ₂ :** ದಗೆಯೆಂಬುವದು ಹಗೆಯೇ ಸರಿ (ಗಾದೆ). **ದಹ್ಹ₁:** ಅಮ್ರುತೂರ ಸಂಧ್ಯ ಮಂಟಪದ ಸತ್ರಕೆ ಬಿಟ ಗ್ರಾಮಯಿದಕೆ ದಹ ಮಾಡಿದವ ಹುಳತು ಸಾವರು (ಎಕ. XVI, ಕುಣಿಗ. ೮೭-೯; 18 ನೆಯ ಶತ).

ದಗಾ ಕೊಡು, ದಗೆ ಕೊಡು = ಮೋಸಮಾಡು ; ವಂಚಿಸು : ನನ್ನ ಹಾಗೆ ಅದೆಷ್ಟು ದೊಡ್ಡಮನುಷ್ಯರಿಗೆ ದಗಾ ಕೊಟ್ಟಿದಾನೋ (ಸಾಹೇಬ್. ೨೮೨) ; ಎತ್ತಿನ ಗಾಡಿಯವರು ಮೋಸ ಕೊಟ್ಟರು, ಲಾರಿಯವರು ದಗೆ

ಕೊಟ್ಟರು (ಹಾರುದಾ. ೨೭೩). ದಗಾ ಮಾಡು=ಮೋಸಮಾಡು; ವಂಚಿಸು: ಆ ಚರಕಲ ರಾಜರು ಅರವಾಶಿ ಹಣಾ ಕೊಡದೆ ದಗಾವಾಡಿದ ವಿವರ ಸೋಮಶೇಖರನಾಯಕರಿಗೆ ಬರೆಸಿ ಕಳುಹಿದಲ್ಲಿ (ರಾಕೇಂದ್ರ. ೭); ನಂಜಾ! ಸಾವಿರರೂಪಾಯಿಗೆ ದಗಾ ಮಾಡಿದೆಯಾ (ಮಾಂಗಲ್ಯ. ೨೫). ದಗಾ ಹಾಕು, ದಗ ಹಾಕು = ದಗಾಕೊಡು: ನಾನೇನೂ ಅವರ ಸಾಲಕ್ಕೆ ದಗಾಹಾಕು ವುದಿಲ್ಲ (ಮುಕಿಹು. ೯೭೨); ಒಂದಲ್ಲ ಎರಡಲ್ಲ ಐವತ್ತುಸಾವಿರ ರೂಪಾಯಿ ಗಳನ್ನು ಕಾಗದ ಪತ್ರವಿಲ್ಲದೆ ಸಾಲ ಕೊಟ್ಟ ರಾಣಿಯನ್ನು ಹಿಡಿಸಿ ಅವಳಿಗೆ ದಗ ಹಾಕಬೇಕೆಂದು ಯೋಚಿಸಿದವನು ಅವನು (ಬಂಕಿಮ. ೨೯೨).

[ ←ಅರ. ಪಾರ. ಹಿಂ. ಮರಾ. ದಗಾ ]

**ದಗಾಕೋರ**, ದಗಾಖೋರ (ನಾ). ಮೋಸಗಾರ; ಕಪಟಿ; ವಂಚಕ: "ಏತಕ್ಕೂ ಹೇಸದವನು; ದಗಾಕೋರ; ಪಟಿಂಗ, ಠಕ್ಕ" (Scoundrel. ಇಂಕಿನಿ); ಎಲ್ಲರೂ ದಗಾಕೋರರೆ (ಕಂಗೂಲಿ. ೦೯೦). **ದಗಾಖೋರ**: ದಗಾಖೋರರ ಕೈಲಿ ಸಿಕ್ಕಿಬಿದ್ದು ನರೇಶನ ಮರಣ? (ಹಾರುಹು. ೬೦): ಅವನು ದಗಾಖೋರನಾಗಿ ವಂಚನೆಯಿಂದ ಪರರ ಧನವನ್ನು ಕಸರಿ ಕೊಂಡಿರುವನೋ ಅಂತಹವನ ಮೇಲೆ ನಾವು ಡಕಾಯಿತಿ ನಡೆಯಿಸುತ್ತೇವೆ (ದೇವೀಚಾ. ೧೧೯); "ಅವನೆಂಥ ಸ್ವಾಮಿ...ದಗಾಖೋರ, ನಿಷ್ಪ್ರಯೋಜಕ" (ಶಾಯಿಳ. ೦೬೦). [ ದಗಾ + – ಕೋರ$_3$ ]

**ದಗಾಖೋರ** 'ದಗಾಕೋರ' ನೋ.

**ದಗಾಬಾಜಿ** (ನಾ).=ದಗಲ್ಬಾಜಿ ೧: ಅದೆಲ್ಲಾ ಬರೀ ಮೋಸ, ಸುಳ್ಳು, ದಗಾಬಾಜಿ, ಅದರಿಂದೇನೂ ಉಪಯೋಗವಿಲ್ಲ (ಸಾಹೇಬ. ೨೯೫).

[ ←ಪಾರ. ಹಿಂ. ಮರಾ. ದಗಾಬಾಜೀ ]

**ದಗುಂತಿ**, ಅದಗುಂತಿ, ಡಗುಂತಿ (ನಾ). ೧. ಹೆಚ್ಚಳ; ಅತಿಶಯ; ಆಧಿಕ್ಯ: ಅಂತೆ ಮೂಱುಮಮರಾವಾಸಂಗಳೊಳ್ ಪೇಟ್ಟೊಡುತ್ತಮಸಮ್ಯಕ್ತ್ವ ಫಲಂ ದಗುಂತಿ ಮಿಗಳೇ ನೀನಿಂತಿದಂ ನಂಬು (ಅದಿಪು. ೫-೬೩); ಕ್ಷಮೆ ಭೂರಿ ದಗುಂತಿ ಪೆಂಪು . . . ಚತುರಾನ್ವಿತಮೆಂಬ ನೆಗೞ್ತೆಯಿಂದಿಳಾವಂತ ರೊಳಾರುಮೇಂ ದೊರೆಗೆ ವರ್ಪರೆ (ಕೋಟೇಶ್ವರ. ಶಾಸನ. ೦-೦೦); ಹರಿ ರುಕ್ಮಿಣಿಯರ ರಾಗದ ಪರಮಪ್ರೇಮದ ದಗುಂತಿಯಂ ಬಣ್ಣಿ ಸುವಂ (ನೇಮಿಪು. ೬-೦೦೬); ಚದುರ ಚಾಗದ ದಗುಂತಿಯಂ ಮೆಱೆವ ವಿವಿಧ ವಿಟರೊಳಂ (ಪುಷ್ಪಪು. ೨-೭೭ ಪ); ಪಡೆದುದು ತನ್ನಿತಂಬಿನಿಯ ಕಾಯದ ಕಾಂತಿ ಸುಧಾಂಶುವಿಂದೆ ನೂರ್ಮಡಿಸುವ ಕಾಂತಿ ಸಂತತಿಯ ಸಾರಸ ಮುಚ್ಚಯದಿಂ ದಗುಂತಿಯಂ (ಮಹಾನೇ. ೮-೫೬). ೨. ಆಶ್ರಯ; ನೆಲೆ: ವಿನಯದ ಮೇರೆ ಧರ್ಮ್ಮದ ತವರ್ಮ್ಮನೆ ಸತ್ಯದ ಜನ್ಮಭೂಮಿ ಮಾಂತನದ ದಗುಂತಿ ಚಾಗದ ಮಹಾನಿಧಿ (ಎಕ. XIII, ೦೭೦-೨೭; 1055). **ಅದಗುಂತಿ**: ೧. ನೆಗಟ್ದಮರಾಂಗನಾಜನದ ರೂಪುಗಳೆಲ್ಲಮದೀಕೆಯೊಂದು ದೇಸೆಗೆ ನಿಮಿರ್ಪೊಂದು ಪುರ್ವಿನ ನಯಕ್ಕಮರ್ಪೊಂದದಗುಂತಿಗೊಂದು ಭಂಗಿಗೆ ನೆಗಟ್ದೊಂದು ಮೆಲ್ಪಿನ ತೊದಳ್ನುಡಿಗಪ್ಪೊಡಮೆಯ್ದೆವಾರವು (ಅದಿಪು. ೨-೬೫); ಸೋಂಕುವ ನಲ್ಲಳ ಸೋಂಕಲಂಪಿನಸುದ್ದಾನಿಯನೀಯೆ ಸಂತಸದ ದೊಂದದಗುಂತಿಯೆ ರೂಪುಗೊಂಡುದು (ಶಂದ್ರಪು. ೭-೬೯). ೨. ಅವರೊಡ ವುಟ್ಟದೊಳಱಿವಿನ ತವರೆನೆ ಧರ್ಮದದಗುಂತಿಯನೆ ನೆಗಟ್ಬಳ್ (ಎಕ. II, ೦೩೯-೬; ಶು. 950). **ಡಗುಂತಿ**: ೧. ಆ ಮಹಿಮಾವಿಲಾಸದ ಡಗು[ನ್ತಿ]ಯಾ ಪೆರ್ಗ್ಗಡೆ (ಎಕ. XIX, ೨೨೦-೨೦; 1037). P ಇದು 'ದಗುಂತಿ' ಎಂಬುದರ ಅಪಲಿಖಿತವಿರಬಹುದು. [ <ಅಗುಂತಿ ]

**ದಗೆ$_1$**, ಡಗೆ$_1$, ಢಗೆ, ಧಗೆ (ನಾ). ೧. ಕಾವು; ಝಳ; ತಾಪ: ಕುದಿವ ಕೂಬಂತೆ ಕುದಿದು ದಗೆಯೇೞಿದ ಕೋಡಗದಂತೆ ಬೆಱಗಾಗಿ (ಧರ್ಮಾಮೃ. ೩-೩೫): ಮೃಗನೇತ್ರೆಯುರು ಪಥಿಕರ್ಗೆ ನಗುತ ನೀರೆಱೆವುತಿಹರು ವಿರಹಾಗ್ನಿಯಿಂ ದ[ಪಾಠಾಂ. ಡ]ಗೆ ಪೆಚ್ಚಲೆದೆಯೊಳವರಿಗೆ (ಶಬರಾಸಾಂ. ೨-೯೭); ವಿಪರೀತವಾಗಿ ಕಾಯುತ್ತ ದಗೆಯ ಸೀಮೆಯಾಗಿರುವ ಅರಬ್ಬೀದೇಶದಲ್ಲಿ (ಪ್ರಮುಹ. ೫೮). **ಡಗೆ$_1$**: ೧. ಬಿಸಿಲ ಡಗೆ ತಾಗಿ ವಸುಧೆಯವರೆಲ್ಲರು ಬಾಯ ಕಿಸುವುತ್ತಿರ್ದ್ದರು (ಮನುಗುಂ. ೨೫೯-೫೦): ಶೋಕದ ಡ[ಪಾಠಾಂ. ಬ]ಗೆಯೊಳುಬ್ಬಿದ ನಗೆಯಲಾ ಸ್ವೇದದಲಿ ರೋಮಾಂಚ ದುಗುಡದಲಿ ಪರಿತೋಷ . . . ಭೀಷ್ಮಾದಿಗಳೊಳಗೆ ಪಲ್ಲಟಿಸುತಿರ್ದುದು ಪದಿಮುಹೂರ್ತದಲಿ (ಕುಮ್ವಾ.ಸ. ೧೫-೫); ಈ ಕಿಚ್ಚನೀಗ ಸಂಹರಿಸುವೆಂ ವರುಣಬಾಣದೊಳೆಂದಾ ಧನುವಿನಿಂ ಹರಿಸಿದಂ ಪರಿದು ಸಂಹರಿಸುವುರಿಯ ಡಗೆಯಾವರಿಸೆ ನೀರ್ ನಿಮಿಷದೊಳಗೆ (ಕಬಕು. ೪೦-೧೫); ಬೀಳ್ವೇಳ್ವ ಸುಳಿವ ಸುತ್ತುವ ಡಗೆಯಂ ತರಹರಿವ ಸಾರ್ವ ಪಾರ್ವಟ್ಟರಿವೆಸಕಂ ವಿಾಱಿ ಕಾದಿದರ್ ಕಡುಗಲಿಗಳ್ (ಕಬಕಂ. ೪-೭೬); ಕಟ್ಟುಱಿದ ಡಗೆಯ ಪೇರೊಡಲ ಗೋರರೂಪಿನ ದಾನವಂ (ರಾಮಾಶ್ವ. ೧೦೨-೦). ೨. ಬಾಯಾರಿಕೆ; ಸೇದೆ: ಬಿಱುಬಿಸಿಲ ಸೆಕೆಯುಸುರ ಬಿಸಿ ಹೊಡೆದುದುರಿಹೊತ್ತಿ ಬಾಯ್ಪತ್ತಿ ಡಗೆಸುತ್ತಿ ಸಾವಡಸುತಿದೆ (ಹಹಕಾ.೭-೯). **ಢಗೆ**: ೧. ವಿರಹದ ಢಗೆ ರಥಾಂಗದೊಳೆಳೆಯ ರವಿಯುದಯಾ ಚಳಕೆ ಬಂದ (ಕುಮ್ವಾ.ಕ. ೨-೧); ಝಳದ ಢಗೆ ಡಾವರಿಸೆ ಹೊಕ್ಕರು ಕೊಳನ (ಕೊರರಾ. ೨-೪-೨೨); ಢಗೆಯಿಂ ನೀರ ಪೊಕ್ಕನೊ ಮಿತ್ರನೆಂಬಂ ತಾಗಲಸ್ತಮಯ (ಅಂಬಿಕಾ. ೨೩-೬೦). ೨. ಒಡಲ ಜಡಿದವು ರೋಮ ರೋಮದೊಳಡಸಿದಂಬುಗಳಂಗವೇದನೆ ತೊಡಕಿತುಬ್ಬರಿಸಿದುದು ಢಗೆ ಗೋನಾಳಿ ನೀರ್ದಗೆಯೆ ನುಡಿಯಲಾಱೆನು (ಕುಮ್ವಾ.ಭೀ. ೧೦-೨೪): ೩. (ಆಲಂ) ಕಳವಳ; ತಳಮಳ: ಮನದ ಢ[ಪಾಠಾಂ. ಡ]ಗೆ ಪನ್ನೀರ ಶೈತ್ಯದಿಂ ಪರಿವುದೇ (ಹಹಕಾ. ಪರಿ. ೪-೬೩). ಮನದ ಢ[ಪಾಠಾಂ. ಡ]ಗೆ ಯಡಗಿದವು ಮತ್ಸ್ಯೇಶನ ಪುರಾಂತರದೊಳಗೆ ಮೈ ಮಱೆಸನುಪಮಿತ ಭುಜಸತ್ವರಿದ್ದರು ಭೂಪ ಕೇಳೆಂದ (ಕುಮ್ವಾ.ವಿ. ೧-೩೨). **ಧಗೆ**: ೧. ಸುರ ತರುನಂದನಕ್ಕಿದಟ ನಂದನದಿಂ ಧಗೆ ಪೋಪುವಾ ಮಹೇಶ್ವರನ ಜಟಾಗ್ರ ದಿಂದಿಳಿದ ಗಂಗೆಯಾ (ಎಕ. XIII, ೪೯-೩೭; 1112); (P ಭಾಷಾಂತರ ದಲ್ಲಿ 'Danger' ಎಂದಿದೆ); ಹೊರಗೆ ಮುಗಿಲಿನಲ್ಲಿ ಮೋಡಕಟ್ಟಿ ಬಿಸಿಲಿಲ್ಲದಿದ್ದರೂ ಧಗೆ ಉಸಿರುಕಟ್ಟಿಸುತ್ತಿತ್ತು (ಶಂದಶೋ. ೦೨); ಹೊಗೆ ನುಂಗುವುದಿದೆ ಧಗೆಯ ಕಳೆವುದಿದ ಅಡಿಯಂ ಮುಡಿವರ ಬೆಳಗುವುದಿದೆ ಇದೆ (ಅರಳು. ೨೬೦-೭). ೩. ಒಳಗೆಯೊತ್ತುವ ಧಗೆಯ ಹೊಱಗಣ ತಳಿತ ಬಿಮ್ಮನ ನಗೆಯ ನೃಪಮಂಡಲದ ಮೌಳಿಯನೇನನೆಂಬೆನು (ಕುಮ್ವಾ.ಅ. ೦೪-೩೬); ಪೆಗ್ಗಳಿಸಿ ಭೋಗಿಸಲು ಧಗೆಯಹುದಾಸಱಹುದು ಮತಿಗೆಡುವುದು ಪಗೆಯಹುದಾ ಸುಖ ತನಗೆ (ಭರತೇ. ೭-೨೪).

[ ←ಮರಾ. ಧಗ್./ತೆಲು. ದಗ ]

**ದಗೆ$_2$** 'ದಗಾ' ನೋ.

**ದಗ್ಗನೆ** (ಅ).=ಧಗಧಗನೆ: ಬೆಂಕಿ ದಗ್ಗನೆ ಉರಿಯಿತು (ರೂಢಿ).

ದಗ್ಗನೆ ಹತ್ತಿಕೊಳ್ಳು = ದಗ್ಗನೆ ಉರಿ ಉಂಟಾಗು: ಬೆಂಕಿ ದಗ್ಗನೆ ಹತ್ತಿಕೊಂಡಿತು (ರೂಢಿ). [ ದಗ್$_0$ + – ಅನೆ$_1$ ]

**ದಗ್ಗಳಿ** 'ದೊಗ್ಗಳೆ' ನೋ.

**ದಗ್ಗುದುಳಿ** (ಕ್ರಿ). ಚೆನ್ನಾಗಿ ತುಳಿ; ನಂಗ್ಗುನುರಿ ಮಾಡು: ಖಂಡ ತೊಗಲೆಲು ದಗ್ಗುದುಳಿದುದರೆ ಕೆಲರು ಮಾಡಿದುದು ಕರಿಗಳಳವಿಯಲಿ ಯುಗ್ಗಡವನೇನೆಂಬೆ (ಅಂಬಿಕಾ. ೨೯-೧೫); ಎರಡೂ ಒಳಹೊಕ್ಕು ಮನಸ್ಸನು ದಗ್ಗುದುಳಿಯುವುದೂ ಉಂಟು (ದೇಕನ್ನ. ೯೦).

[ <ತಗ್ಗು$_1$ + ತುಳಿ$_1$ (<ತುಬು$_1$) ]

**ದಗ್ಧ** (ಗು). ೧. ಸುಟ್ಟ; ಬೆಂದ; ದಹಿಸಿದ: ಮೈಮುರಿದಂ . . . ಸುತವಿರಹ ಸಂತಾಪದಗ್ಧವಸುಧಾಧಿಪಂ! (ಶ್ರೀಕಾಮಾ. ೯೫-೪೭೩). ೨. ಬಾಡಿದ; ಬತ್ತಿದ; ಒಣಗಿದ. ೩. ಅಶುಭದ; ಅಪಶಕುನದ;

ಅವುಂಗಳದ. ೪. ದಂಷ್ಟ್ರ; ಕುತ್ಸಿತವಾದ. (ನಾ). ೫. ಸಂಶಯವಿಲ್ಲದಿರುವುದು; ನಿಶ್ಶಂಕೆ. ೬. ಸುಟ್ಟುದು; ದಹಿಸಿದುದು. [ ಸಂ. ]

**ದಗ್ಧಕ** (ನಾ). ಸುಟ್ಟಂತಹುದು; ಹಪ್ಪಳ ಇತ್ಯಾದಿ: "ಹಪ್ಪಳಾದಿಗಳ್ ದಗ್ಧ[ ಪಾಠಾಂ. ಗ್ಧ]ಕ ಮಕ್ಕು" (ಮಂಗರಾ. ೬೪-೩). [ ಸಂ. ]

**ದಗ್ಧಕರ್ಪೂರ** (ನಾ). ಸುಟ್ಟ ಕರ್ಪೂರ; ಉರಿದ ಕರ್ಪೂರ: ದಗ್ಧಕರ್ಪೂರದಂತೆಲ್ಲಾ ಜನಂಗಳೋಳ್ ಸ್ನಿಗ್ಧವೆನೆ ವಸರಿಸುವ ಕಾಮೂರಿಯುಗ್ನಿಕರರುಗ್ಧವಲಿಮಾಸ್ತ್ರ ತ್ರಿಯುಕ್ತನೆ (ವೀಕ್ಕೃಷು. ೩-೦೪-೧).

[ ದಗ್ಧ + ಕರ್ಪೂರ ]

**ದಗ್ಧಪಟ** (ನಾ). ಸುಟ್ಟ ಅರಿವೆ, ಬಟ್ಟೆ: ನಿತ್ಯನೇಮವೆಂದು ಮಾಡುವ ಭಕ್ತಿವಿದಂಗೆ ಮಾಡಿಯೂ ಮಾಡದಿದ್ದಡೇನು ದಗ್ಧಪಟದಂತೆ (ಪ್ರೋಲಿಮೂ. ೧೪-೫೦); ಅನುಭಾವಿಯಾದಡೆ ಸುಟ್ಟ ಸರವೆಯಂತಿರಬೇಕು ಅನುಭಾವಿಯಾದಡೆ ದಗ್ಧಪಟದಂತಿರಬೇಕು (ಅಬಂಡೀ. ೦೯೨-೧೨); ದಗ್ಧಪಟವೆಂದಿನಂದದಿ ತೋಜಲಿಳೆಯಲಿ ವಿದಗ್ಧರಾರದನುಟ್ಟು ತಳ್ಳಿದರು ಹಿಮಮಂ (ಕವಿಜ. III, ೦೨೦ ನೀಲದೀಬಿಕಾರತ್ನ). [ ದಗ್ಧ + ಪಟ್ಟ ]

**ದಗ್ಧಪಟನ್ಯಾಯ** (ನಾ). ಸುಟ್ಟ ವಸ್ತ್ರದಂತೆ ಮೂಲರೂಪವಿದ್ದರೂ ಮೂಲಗುಣವಿಲ್ಲದ ಸ್ಥಿತಿಯನ್ನು ವಿವರಿಸುವ ಒಂದು ಬಗೆಯ ನ್ಯಾಯ: ಬಾಹ್ಯಕರಣಂಗಳು ಕರಣಮದಕ್ಕೆ ತಿಬಹುಗೊಡದೆ ಆಳವಟ್ಟು ಅವಗ್ರಹಿಸಿ ದಗ್ಧಪಟನ್ಯಾಯದ ಹಾಂಗೆ ತೋಱಕೆಯುದ್ದು ಅವಱ ಗುಣ ಧರ್ಮ ಕರ್ಮಂಗಳೇನೂಯಿಲ್ಲದೆ ಸದ್ಯೋನ್ಮುಕ್ತನಾಗಿ (ಪದಗೋ. ೨-೫೦).

[ ದಗ್ಧಪಟ + ನ್ಯಾಯ ]

**ದಗ್ಧವಾಣಿ** (ನಾ). ಚೆನ್ನಾಗಿ ಮಾತನಾಡುವುದಕ್ಕೆ ಬಾರದವನು; ವಾಗ್ಮಿಯಲ್ಲದವನು: ಕವಿಯಂ ಕಂಡೊಡೆ ಶಾಸ್ತ್ರಹೀನನಿವನೆಂದಿಂತಾರ್ದುರ್ ಶಾಸ್ತ್ರಜ್ಞನಂ ಕವಿಯಲ್ಲೆಂದಣಮಾರ್ದುರ್ ಮಿಕ್ಕ ಬಹುಶಾಸ್ತ್ರಜ್ಞನಪ್ಪಾ ಮಹಾಕವಿಯಂ ಕಂಡೊಡೆದಗ್ಧವಾಣಿಯವನೆಂದಿಂತಾರ್ದುರ್ ಹಾಸ್ಯೋಕ್ತಿಯಿಂ ಕವಿಗಳ್ ವರ್ತಿಪರ್ (ಸೂಕ್ತಿಸು. ೦-೩೭). [ ದಗ್ಧ + ವಾಣಿ₁ ]

**ದಗ್ಧವಾರಿ** (ನಾ). ಸುಟ್ಟು ಆವಿಯಾಗಿ ಹೋದ ನೀರು(?): ಉರಿದಱಿದವ್ರದು ಎಮ್ಮಯ ಕ್ಷೀರವೋವೆಮ್ಮ ಪುತ್ರಶೋಕಾನಲನಿಂ ನರಪಾಲ ಮತ್ತಮನಲಾಂತರಮೇವುದೆ ದಗ್ಧವಾರಿಯೆಂಬುದುಮುಂಟೆ (ಅಜಿಪು. ೦೦-೩೯). [ ದಗ್ಧ + ವಾರಿ₂ ]

**ದಗ್ಧಹಸ್ತ** (ನಾ). ೧. [ಸಾಮುದ್ರಿ] ದುರದೃಷ್ಟಕರವಾದ ಕೈ; ಬರಿಗೈ. ೨. ಅದೃಷ್ಟವಿಲ್ಲದವನು; ಬರಿಗೈಯವನು: ಯಾವಾತನ ಹಸ್ತದಲ್ಲಿ ರೇಖೆಗಳು ಕಪ್ಪಾಗಿಯಿರಲು ಆತನನ್ನು ದಗ್ಧಹಸ್ತನೆಂದು ಹೇಳುವರು (ಸಾಮುಂ. ೯೪-೮). [ ದಗ್ಧ + ಹಸ್ತ ]

**ದಗ್ಧಿಕೆ** (ನಾ). ಸೀದುಹೋದ ಅನ್ನ; ಕರಿಕಾದ ಅನ್ನ: "ಸುಟ್ಟ ಅನ್ನ ಹೊತ್ತು" (ಗಂಗಾಮು. ೦೬೨). [ ಸಂ. ದಗ್ಧಿಕಾ ]

**ದಗ್ಗಿ** 'ದೊಗ್ಗಳೆ' ನೋ.

**ದಚ್ಚಿ** (ನಾ). ೧. ಹುಣಿಸೇಬೀಜದ ಬೇಳೆ; ಹುಣಿಸೆಪಕ್ಕ. ೨. ಕವಡೆ. 'ದಚ್ಚಿಬಾರ' ಪರಾ. ೩. ದಚ್ಚಿಬಾರದ ಆಟದಲ್ಲಿ ಬೀಳುವ ನಾಲ್ಕರ ಗರ; ಚೌಕ.

ದಚ್ಚಿ ಬಾಚು=ಕವಡೆಯಾಟದಲ್ಲಿ ನಾಲ್ಕರ ಗರ ಬಿದ್ದ ಕವಡೆಗಳನ್ನು ಬಾಚು: ಕೈಮೇಲೆ ಕವಡೆಯಾಡುವಾಗ ಪ್ರತಿಸಾರಿಯೂ ಕಮಲೆಯೇ ದಚ್ಚಿ ಬಾಚುತ್ತಿದ್ದಳು (ರೂಢಿ). ದಚ್ಚಿಯಾಟ = ಚೌಕಾಬಾರ: ದಚ್ಚಿಯಾಟ ಆಡೋಣ ಬಾ (ರೂಢಿ). [ ದೇ.; ತಮಿ. ತಚ್ಚಿ; ತೆಲು. ದಚ್ಚಿ ]

**ದಚ್ಚಿಬಾರ** (ನಾ). (ಕವಡೆಯಿಂದಾಡುವ) ಚೌಕಾಬಾರ: ದಚ್ಚಿಬಾರ ಆಡೋಣ ಬಾ (ರೂಢಿ). [ ದಚ್ಚಿ + ಬಾರ್ತ್ಯ./ತಮಿ. ತಚ್ಚಿಪಾರಾ ]

**ದಟದಟ** (ನಾ). ಒಂದು ಅನುಕರಣ ಶಬ್ದ. 'ದಟದಟಿಸು' ಪರಾ.

**ದಟದಟಿಸು** (ಕ್ರಿ). ದಟದಟ ಎಂದು ಶಬ್ದಮಾಡು: ಮುಗಿಲಡವಿಯೊಳ್ಜ್ವಲೆಯುಗುಳ್ದ ದವಶಿಖಿಯಂತೆ ಬಗೆಗೊಳಿಸಿ ಬಳ್ಳಿಮಿಂಚಾವಳ್ಳಿ ದಟದಟಿಸಿ ದಗದಗಿಪ ದವದಂತೆ ಸಿಡಿಲ ರವವೆಸೆಯೆ (ಶಶಿಂದಪು. ೧೫-೩೯).

[ ದಟದಟ + - ಇಸು₃ ]

**ದಟಲ್** (ನಾ). ಒಂದು ಅನುಕರಣ ಶಬ್ದ: ಜೊಜ್ಝೆಂಬ ಚುಮ್ಮೆಂಬ ಚಿಕ್ಕೆಂಬ ಧೊಕ್ಕೆಂಬ ಧಡಲೆಂಬ ದಟ[ಪಾಠಾಂ. ಡುಟ, ಡಣ]ಲೆಂಬ . . . ಕೊರಚಿಗಳಾರವಣೆಯ ದನಿಯುಡಮುತಂ ಪುಟ್ಟೆ (ಇಹರ. ದೇ. ೪೨-೧).

**ದಟ್ಟ₁** (ನಾ). ೧. ಒತ್ತಾದುದು; ಸಾಂದ್ರವಾದುದು: "ಘನ. ನಿರಂತರ, ಸಾಂದ್ರ-ದಟ್ಟವಾದುದು" (ನಾಚಿರಾ. ೬); "ಬಹುಳಂ ಘನಂ ಸಾಂದ್ರಮುವಿರಳಂ ದಟ್ಟಮದು" (ಮಂಗರಾ. ೦೨೮-೪); ಅಶಾವಧೂ ದೌತ್ಯವರ್ತನದಿಂದಂ ಗಗನಸ್ಥಳೀಕುಲಟೆ ಕೊಂಡಳ್ ನೀಲ ಚೇಲಾವಗುಂಠನಮಂ ತಾನೆನೆ ದಟ್ಟಮಾಗಿದೆ ತಮಂ ತಳ್ತತ್ತು ದಿಕ್ಪ್ರಾಂತಮಂ (ಅನಂಪು. ೭-೭೩); ದಟ್ಟದ ಸೀರೆ ಬಟ್ಟನ ಬಟ್ಟುಂಗುರಯಿಟ್ಟಾ ಕಿವಿಯ ಕಲ್ಲೋಲೆ (ಶ್ರೀಪಾಲಿ. ೪-೭೩); ಆ ವಾಯುಘೊಂದೊಂದು ತಳದೊಳಗಿಪ್ಪತ್ತುಸಾಸಿರಗಾವುದ ದಟ್ಟಾ ಗಾವುದಕಿಪ್ಪು ಕಡಿಮೆ ತುದಿಗವಱಲ್ಲಿ ಕೀವಿರುತಿಹುವಾಱುದ್ರವ್ಯ (ಭರತ. ೭೭-೭೧); ಗುರುವನ್ನು ಸುತ್ತಲೂ ಆವರಿಸಿಕೊಂಡಿರುವ ವಾಯುಮಂಡಲವು ಬಲು ದಟ್ಟ ಮತ್ತು ದಪ್ಪ (ಜ್ಯೋತಿರ್ವಿ. ೦೩೩). ೨. ಒತ್ತಾಗಿ ಹೆಣೆದ ಬಟ್ಟೆ: ಮಂದಲಿಗೆಯನ್ನು ಹಾಸಿ ಅದರ ಮೇಲೆ ಸಕ್ತಿ ದಟ್ಟವೊಂದನ್ನು ಹಾಕಿ ಮಲಗಿಕೊಂಡ (ಹಂಗಾಳ್ಕ. ೨೦೭); ಪಲವಾರು ಬಣ್ಣಬಣ್ಣದ ಬಟ್ಟೆಯ ಚೂರುಗಳನ್ನು ನೇರವಾಗಿ ಕತ್ತರಿಸಿ ಸೇರಿಸಿ ಹೊಲಿದ ದಟ್ಟಗಳನ್ನು ನೆಲದ ಮೇಲೆ ಎಲ್ಲೆಲ್ಲೂ ಹಾಸಿದಂತೆ ಕಾಣಿಸುವ ಹೊಲಗದ್ದೆಗಳು(ನಂಟರು. ೧೩೦).'ದಟ್ಟ₁' ಪರಾ. (ಗು). ೩. ದಪ್ಪವಾದ; ಮಂದವಾದ; ಸಾಂದ್ರವಾದ: ಹೊಲಸುಮೈಯವಗೇಕೆ ಹೊಸ ಕಸ್ತೂರಿ ವಾಟ ತಲೆದೋಱುವವಗೇಕೆ ದಟ್ಟ ಪುನುಗು (ಪುರಂದ. ೦-೦೦೦-೦). 'ದಟ್ಟಗತ್ತಲೆ' ಪರಾ.

[ ದೇ., ತಮಿ. ಮಲ. ತಟ; ತುಳು. ದಟ, ದಟೊ; ತೆಲು. ದಟ್ಟ; ಕೊಂ. ಡಾಟ./ಮರಾ. ದಾಟ್ ]

**ದಟ್ಟ₂** (ನಾ). ಒಂದು ಬಗೆಯ ವಾದ್ಯ: ಈಬೂನ ಈಶ್ವರಮುಡಿಯಾರ್ಗ್ಗೆ ಕೊಟ್ಟ ಶಿವಳಿ ೧ ದಟ್ಟ ೩ ಖಣ್ಡಿಕೆ ೩ . . . , ಪಞ್ಚಮಹಾಶಬ್ದಮಂ ತ್ರಿಕಾಳಂ ಬಾಜಿಸುಂದಕ್ಕೆ (ಮ್ಯುಆರಿ. ೧೯೪೩, ೨೮-೦೪; 1033). [ ? ]

**ದಟ್ಟ₃** (ನಾ). ಹೆಣ; ಶವ(?): ಹರ ಗಿರಿ ಬಲ ಪಾರ್ವತಿ ವಟ ತರು ಪುಳಿನಂ ದ್ವಿಪಳಿ ನಾಣಿ ತುಕ ನರಿ ದಟ್ಟಂ ನೊರೆ ಪುಣ್ಯ ಪಾವು ಶುಭ ಸುಖ ವರ ಸಿತ ಪದಿನೆಂಟು ನಾಮ ಶಿವಶಬ್ದಂಗಳ್ (ನಾನಾರ್ಥ. ೫). [?]

**ದಟ್ಟಂದರಿ** (ಕ್ರಿ). ಬಟ್ಟೆಯನ್ನು ಹರಿ,-ಕತ್ತರಿಸಂ: ಪುರ್ಚಿನಿಂ ಕುಣಿದಾಡಿ ದಟ್ಟಂದರಿವ ನಗುವ ಕಪಡಿನಟಮಟದ ವೇಸಂದಳೆಯುದಿರ್ಪೊಡಂ ನನ್ನಿ . . . ಪೊಡಕರಿಪ ದಾರಿಯನಿತ್ತನಿರುಕಿಸಾ ದುಃಖದಿಂ ಪರಿಪಕ್ವಮಾದ (ಸಂಸಪ. ೨೫-೦೪). [ ದಟ್ಟ₁ + ತರಿ₁ (< ತಱಿ₁) ]

**ದಟ್ಟಕೂದಲು** 'ದಟ್ಟಗೂದಲು' ನೋ.

**ದಟ್ಟಗತ್ತಲೆ** (ನಾ). ಸಾಂದ್ರವಾದ ಕತ್ತಲೆ; ಕಗ್ಗತ್ತಲೆ: ಪಾತಾಳದಡಿಯ ದಟ್ಟಗತ್ತಲೆಯನ್ನೆತ್ತಿ ಸತ್ಯಲೋಕದ ಪಾವಟಿಗೆಗೆ ಹೊದೆಯಿಸಿದಂತಿದೆ (ಮಂತ್ರಕ. ೯೦-೦೫). [ ದಟ್ಟ₁ + ಕತ್ತಲೆ₁ (< ಕಟ್ತಲೆ) ]

**ದಟ್ಟಗಾಡು** (ನಾ). ಒತ್ತಾದ ಕಾಡು,-ಅರಣ್ಯ: ಮಲೆಯ ಬೀಡಿನೆದೆಯ ಮೇಲೆ ದಟ್ಟಗಾಡು ಹಬ್ಬಿರೆ (ಅನೀಳ. ೪೨-೬). [ ದಟ್ಟ₁ + ಕಾಡು₃ ]

**ದಟ್ಟಗೂದಲು, ದಟ್ಟಕೂದಲು** (ನಾ). ಒತ್ತಾದ ಕೂದಲು: (೬). ದಟ್ಟಕೂದಲು: ಅವಳಿಗೆ ದಟ್ಟಕೂದಲಿದೆ (ರೂಢಿ).

[ ದಟ್ಟ₁ + ಕೂದಲು (<ಕೂಂದಲ್) ]

**ದಟ್ಟಗೆ₁** (ನಾ). ಸೀರೆಯ ಸೆರಗು (?) : ಎಲೆಯಕ್ಕ ನಿನ್ನ ಪುರದೊಳಗೆ ಪರಮೇಶ್ವರಂ ಗೆಲವಿನಿಂ ಶ್ರೀಗಂಧವಿಧುಲೇಖನೀಲವಮಂ ವಿಲಘದಿಂ ಕುಟು ಹಾಂತು ನೆಲಸಿದನಿದೇನೆಂದು ಗಿಳಿ ಕೇಳಲವಳು ನಾಣ್ಚಿ ಒಲವಿನಿಂ ದಟ್ಟಗೆಯ ಮುಚಿಸಿಕೊಂಡಳು (ಪ್ರಭುಪು. ೯-೧೯೩). [ ? ]

**ದಟ್ಟಗೆ₂** (ಅ). ಹೆಚ್ಚು ಒತ್ತಾಗಿ ; ತುಂಬ ನಿಬಿಡವಾಗಿ; ಸಾಂದ್ರವಾಗಿ: ಬೀಜಗಳನ್ನು ದಟ್ಟಗೆ ಬಿತ್ತಬಾರದು (ರೂಢಿ). [ ದಟ್ಟ₁ + – ಅಗೆ₃ ]

**ದಟ್ಟಡಿ, ತಟ್ಟಡಿ** (ನಾ). ಮಕ್ಕಳು ನಡೆಗಲಿಯುವಾಗ ಹತ್ತಿರ ಹತ್ತಿರವಾಗಿ ಇಡುವ ಹೆಜ್ಜೆ ; ಒತ್ತಾದ ಹೆಜ್ಜೆ ; ತಪ್ಪುಹೆಜ್ಜೆ : ತಳರ್ನಡೆಮುದ್ದುಮೊಗಂ . . . ದಟ್ಟಡಿಯೊಳ್ಪರಿದೋಡುವಂಗಣಂ ನೆಱೆ ತನಗೊಪ್ಪುವರ್ಭಕನನೊರ್ವನನಾಂ ಪಡೆವಂದಮಾವುದೋ (ಸುಕುಮಾ. ೯-೯೯) ; ಬ್ರಹ್ಮಾಂಡ ಪವಣಿಸಿದ ವಿಲಸಿತದ ವಿಭುವಿಂಗೆ ದಟ್ಟಡಿ ಬಳುಕು ನಡೆ ಮೆಲ್ನಡೆಗಳೆಂಬಿವು ತಿಳಿವವರ ಮನಸಿಂಗೆ ಮಱೆ ತಾನಲ್ಲವೇಯೆಂದ (ತೊರರಾ. ೦-೮-೬೬) ; ಮೆಲ್ಲಮೆಲ್ಲನೆ ದಟ್ಟಡಿಯನಿಡಲ್ ಗೆಜ್ಜೆಗಳ್ ಘಲಘಲ್ಲನೆ . . . ಪಳಿಕನಿಂ ಸವೆದ ನೆಲಗಟ್ಟು ಜಾರ್ವುದು (ಚಿಬಪು. ೫-೪೦) : ದಟ್ಟಡಿಯನಿಕ್ಕುವ ಬಾಲಕನಂಗದೊಂದು ಮಾರ್ಪೊಳಪಿರೆ ನೀಲಕುಟ್ಟಿಮದೊಳ್ (ರಾಜಶೇ. ೪-೬೩) ; ಶಿಷ್ಯಂಗೆ ತೊದಲುನುಡಿಯೇಕೆ ಕಳ್ಳಂಗೆ ದಟ್ಟಡಿಯದೇಕೆ (ಸರ್ವಜ್ಞ. ೧೦೯೩) ; ಹೆಜ್ಜೆಹೆಜ್ಜೆಗೆ ತಪ್ಪ ಮಾಡಿದರೇನಹುದು ದಟ್ಟಡಿಯನಿಡದೆ ನಡೆ ಕಲಿಯಬಹುದೇ ? (ಅರಳು. ೨೬೩-೪). **ತಟ್ಟಡಿ** : ಅಂಬೆಗಾಲಿಂದ ತೊದಲುಲಿದ ತಟ್ಟಡಿಯಿಟ್ಟು ಬೆಳಬೆಳೆದು (ಜಿನಮು. ೪೦-೪). [ ದಟ್ಟ₁ + ಅಡಿ₁ ]

**ದಟ್ಟಡಿಕಾಱ** (ನಾ). ದೃಢವಾದ ಹೆಜ್ಜೆಯನ್ನು ಹಾಕುವವನು ; ಗಂಭೀರವಾದ ನಡಗೆಯನ್ನುಳ್ಳವನು: ಹಲವು ಪಯಣದೊಳು ದಟ್ಟಡಿಕಾಱ ಗಂಗಾಕೂಟವದು ಮುಟ್ಟಮುಟ್ಟಲಾಯ್ತೆನೆ ಬರುತಿರ್ದ (ಭರತೇ. ೩೬-೨೪).

[ ದಟ್ಟಡಿ + – ಕಾಱ ]

**ದಟ್ಟಡಿಯಿಡಿಸು** (ಕ್ರಿ). ನಡೆಗಲಿಸು ; ತಪ್ಪುಹೆಜ್ಜೆಯನ್ನು ಹಾಕುವಂತೆ ಮಾಡು : ಪಟ್ಟಾಭಿಷೇಕಾನು ಕಟ್ಟದಾನೆಯ ನೋಡಿ ತೊಟ್ಟ ಭೂಷಣವು ಮಾವುತನಿಗೆ ಕೊಟ್ಟಾನು ದಳಕರ್ತ ಮೆಚ್ಚಿದನಾನೆಯ ದಟ್ಟಡಿಯಿಡಿಸಿ ನೋಡಿದರು (ಸೌಂದಕಾ. ೫-೬೦). [ ದಟ್ಟಡಿ + ಇಡಿಸು₁ ]

**ದಟ್ಟಡಿಯಿಡು** (ಕ್ರಿ). ನಡೆಯಲು ಪ್ರಾರಂಭಿಸು ; ತಪ್ಪುಹೆಜ್ಜೆಹಾಕು ; ನಿಧಾನವಾಗಿ ನಡೆ : ಎಡೆಯಾಡಿದಪುದು ರನ್ನದ ಸೊಡರೆನೆ ಹರಿನೀಳರತ್ನಕುಟ್ಟಿಮದೊಳ್ದಟ್ಟಡಿಯಿಡುವ ತನೂಭವನಂ ನಡೆ ನೋಡಲ್ಪಡೆದ ತಾಯ ಜನ್ಮಮೆ ಸಫಳಂ (ಮಲ್ಲಿಪು. ೩-೧೧೮) ; ಚಲನದೊಳ್ ಭವನಾಂಗಣದೊಳ್ ಕಂದನೆಂದು ದಟ್ಟಡಿಯಿಡುವಂ (ಚಂದ್ರಪು. ೩-೪೮) : ದಟ್ಟಡಿಯಿಟ್ಟು ಭಕ್ತಿ ತನ್ನಯ ಮನೆಮಂ ಬಂದಡರೆ ಭರಂ ಮಿಗೆ ಮುದದಿಂದಂ ಪುಷ್ಪಾಪಚಯಕೆ ಗಿರಿಸುತೆ ಬಂದಳ್ (ಗಿರಿಕ. ೫-೫೦) ; ದಟ್ಟಡಿಯಿಡುತಲೆ ಬೆಣ್ಣೆಯ ಮೆಲುವ ತೋಳನ್ನಾಡೈ (ಪುರಂದ. ೩-೦೮೯-೩) ; ಅಂಬೆಗಾಲಿಕ್ಕಿ ತೊಳಲುವವನಲ್ಲ ಕಾಲು ಬಲಿದು ದಟ್ಟಡಿಯಿಡುವವನಲ್ಲ ಬಾಲನೆಲ್ಲಿಗೆ ಹೋದನವ್ವ (ಮೋಹತ. ೯-೮೩). [ ದಟ್ಟಡಿ + ಇಡು₁ ]

**ದಟ್ಟಣೆ** (ನಾ). ನಿಬಿಡತೆ ; ಒತ್ತಾಗಿರುವುದು ; ಕಿಕ್ಕಿರಿದಿರುವಿಕೆ ; ಸಾಂದ್ರತೆ ; ನೆರವಿ : ಕೊಡರಿಂದಡೆ ತಾಂ ಕೈಗಟ್ಟಿ ಪ್ಪುಡನೊಡನಾದಡಂಜದೆ ಗೆಲಲು ಜಂಗಮದ ದಟ್ಟಣೆಗೆ ಸೈರಿಸುವ ಮನವಳೆವಟ್ಟಿರಲು (ಬಸವು. ೮-೫೬) ; ಕಿಚ್ಚಿನುಱುಬೆಯ ದಟ್ಟಣೆಗೆ ಧಾರೆಗಳ ಬಿಡುತೆಣ್ಣೆಗಳ ಪಕ್ಕಲೆಯ ಥಟ್ಟುಗೆಡುವಾನೆಗಳಿಗಾನೆಯ ಕಟ್ಟುಕೆ (ತೊರರಾ. ೫-೭-೧೩) ; ಜನವಸತಿಯ ದಟ್ಟಣೆಯಿಂದ ನಿರ್ಣಯಿಸಲ್ಪಡುವುದಾದರೆ ದ್ರಾವಿಡಜನಾಂಗದ ಗುರುತ್ವಾಕರ್ಷಣಾವು ಮೈಸೂರುರಾಜ್ಯದ ಸಮೀಪವರ್ತಿಯಾಗುವುದು (ತತ್ತ್ವಶಾ. ೪೨೩). [ ದಟ್ಟಯಿಸು + – ಅಣೆ₄ ]

**ದಟ್ಟದರಿದ್ರ** (ನಾ). ಕಡುಬಡವ ; ನಿರ್ಗತಿಕ : ದಟ್ಟದರಿದ್ರನಂತೆ ಕಾಸಿಗೆ ಮನವಿತ್ತನೆಂದವಳಕೀರ್ತಿನಿತಂಬಿನಿ ದೂಱುತಿರ್ಪಳ್ (ವೀರವಿ. ೨-೫೪) : ದಟ್ಟದರಿದ್ರರು ಮೊದಲಾಗಿ ಹತ್ತನು ಬಿಟ್ಟಹರುಂಟು ಬಾಹ್ಯದೊಳು (ಭರತೇ. ೭೦-೯೨) ; ಸತಿಪತಿಯರು ರೂಪಸಂಪನ್ನರಾದರೆ ದಟ್ಟದರಿದ್ರರು ಅರರೆ ! (ಇಂದಾಪ. ೧೮೧-೯೩) ; ಹೊಟ್ಟೆಗೆ ಹಿಟ್ಟಿಲ್ಲದ, ಮೈಗೆ ಬಟ್ಟೆಯಿಲ್ಲದ, ದಟ್ಟದರಿದ್ರರಿಗೆ ಕುಲವಂತೆ ಕುಲ (ಕುಂಗಧ. ೫೪) : ಇನ್ನೊಬ್ಬರ ಅನುಕೂಲತೆಗೆ ಒದಗದ ಲಕ್ಷಾಧೀಶನು ದಟ್ಟದರಿದ್ರನೆಂದೇ ನನ್ನ ಅಭಿಪ್ರಾಯ (ರಂಗರೂ. ೦೫೮). [ ದಟ್ಟ₁ + ದರಿದ್ರ ]

**ದಟ್ಟದಾರಿದ್ರ್ಯ** (ನಾ). ಕಡುಬಡತನ ; ನಿರ್ಗತಿಕತನ : ಶ್ರೀರಮ್ಯವಪ್ಪ ಭೋಗಂಗಳಳಿದಾ ದಟ್ಟದಾರಿದ್ರ್ಯವಾಗಲು (ವೀಶೈಪು. ೩-೧೬-೦೪).

[ ದಟ್ಟ₁ + ದಾರಿದ್ರ್ಯ ]

**ದಟ್ಟದಾರಿದ್ರ್ಯತ್ವ** (ನಾ). = ದಟ್ಟದಾರಿದ್ರ್ಯ : ಅಕುಲಂಗೆ ಸಕಲರಾಜ್ಯಂ ತ್ರಿಕರಣಶುದ್ಧಂಗೆ ದಟ್ಟದಾರಿದ್ರ್ಯತ್ವಂ . . . ಮೆರೆವುದೀ ಕಲಿಯುಗದೊಳ್ (ನೀತಿಸಾ. ೧೫೨). [ ದಟ್ಟ₁ + ದಾರಿದ್ರ್ಯತ್ವ ]

**ದಟ್ಟದೊವಲ್** (ನಾ). ದಪ್ಪವಾದ ತೊಗಲು : ನಂಜುಂಡಂ ದಟ್ಟದೊ[ಪಾಠಾಂ. ದ]ವಲಂ ಪೊದೆದಗಜೆವೆರಸು ಬೆರೆವೊಡಲೊಳಿರ್ದಂ (ರಾಮಾಶ್ವ. ೧೧೫-೬). [ ದಟ್ಟ₁ + ತೊವಲ್₂ (<ತೊಱಲ್₁) ]

**ದಟ್ಟಪಳುವ** (ನಾ). = ದಟ್ಟಗಾಡು : ಸಾಗಿದಳು ಹಜ್ಜೆಹಜ್ಜೆಯನಿಟ್ಟು ದಟ್ಟಪಳುವದ ಪಸುರ್ ನೆಳಲೊಳ್ (ಶ್ರೀರಾಮಾ. ೧೨೬-೬೬).

[ ದಟ್ಟ₁ + ಪಳುವ (<ಪಱುವ) ]

**ದಟ್ಟಯಿಸು, ದಟ್ಟಯ್ಸು, ದಟ್ಟವಿಸು, ದಟ್ಟಿಸು₁, ದಟ್ಟೈಸು** (ಕ್ರಿ). ೧. ಒತ್ತಾಗು ; ಸಾಂದ್ರವಾಗು ; ದಟ್ಟವಾಗು : ಧಿಗಧಿಪರೆಣ್ದೆಸೆಗಾಂತಿರೆ ಭುಜದೊಲು ಗಗನದ ಮೇಲ್ಕಟ್ಟುಂ ದಟ್ಟಯಿ[ಪಾಠಾಂ. ದಟ್ಟೈ]ಸಲು ಮಿಗೆ ಭಕ್ತರ ಜಯರವ ಒಟ್ಟಯಿಸಲು (ತಿರುನಾ. ದೀ. ೨೨೦-೫) : ಭೀಮಸೇನನ ದಂಡಿಯನು ದಟ್ಟಯಿಸೆ ಸುಯಿ ದಳ್ಳುರಿಯ ಚೂಣಿಯಲಿ ಗಂಡುಗೆದಱಿದ ರೋಷಶಿಖಿ ಹುರಿಗೊಂಡುದಕ್ಷಿಗಳಲಿ (ಕುಮ್ಯಾಗ. ೮-೨೨) ; ಹೆಣೆದುಕೊಂಡವು ಗಗನ ದಿಗು ಧಾರಾಣೆಗಳನು ದಟ್ಟಯಿಸಿ ರಿಪುಮಾರ್ಗಣ ವಿತಾಳಿಸಿ ಮುಸುಕಿದುದು ರಘುನಂದನನ ರಥವ (ತೊರರಾ. ೬-೫೦-೫) ; ಹೊಳೆಹೊಳೆಯುವ ಅವರ ಮುಖಗಳನ್ನು ಕಂಡು ಚಕೋರಚಯ ದಟ್ಟಯಿಸಿ ಬಂದವು (ಧಾಮುಣ. ೦೨೧). **ದಟ್ಟಯ್ಸು** : ೧. ಬಟ್ಟತಂ ಮಾಡಿ ಸುತ್ತುಗಳೆತ್ತಲ್ಕಸಿತಾತಪತ್ರಮೆನಲಕ್ಕುಂ ತಾನೆಂಬಂತಿರೀ ಜಗದೊಳ್ ಕಣ್ಗೆ ವಿಚಿತ್ರಮಾಗೆ ನೆಱೆ ದಟ್ಟಯ್ಸಿ[ಪಾಠಾಂ. ದಟ್ಟಯಿಸಿ]ತ್ತನಿತ್ತುಂ ತಮಂ (ಗಿರಿಕ. ೪-೬೬). **ದಟ್ಟವಿಸು**: ೧. ದಟ್ಟವಿಸಿ ದಜ್ಞಾನತಿಮಿರದ ಥಟ್ಟು ಮಾರ್ಗವ ಕಾಣಲೀಸದು (ನಿಧಾಗ. ೫-೮-೪). **ದಟ್ಟಿಸು₁** : ೧. ನಟ್ಟಡವಿಯಲ್ಲಿ ಬೀಡಂ ಬಿಟ್ಟಿರಲಾ ಬಂಧುದತ್ತನಾತನ ಬೀಡಂ ನಟ್ಟಿರುಳು ಬಂದು ಬೇಡರ್ ದಟ್ಟಿಸಿ ಕೂಕಿಱಿದು ಸುತ್ತಿ ಮುತ್ತಿದರಾಗಳ್ (ಪುಣ್ಯಾಸ್ರ. ೮-೮) ; ತುರುಗಿ ದಟ್ಟಸಿದಾ ಕತ್ತಲೆಯ ಮೊತ್ತದೊಳು ಸ್ಮರನಂಗಜಾತ ಪ್ರೀತರ ಕೂಡಿ . . . ಮೆಲ್ಲಡಿಗಳಿಡುತೇ ಬರುತಿರಲು (ನವಮೋ. ೦೬-೨೦). **ದಟ್ಟೈಸು**: ೧. "ದಟ್ಟೈಸಿತೆಂದೊಡತಿಸಾಂದ್ರಾರ್ಥಂ" (ಧಾರನಿ. ೩೪) : ಚಿತ್ರಕ್ಕೊಗೆಗುಮತಿಭೀತಿಯೆನಲುರ್ವಿಗೆ ದಟ್ಟೈಸಿದುರ್ದಂಧಕಾರಾಕಾರಂ (ದಶಕು. ೨-೪೨) ; ಬಾಲಕನ ಘನತೇಜಮುರ್ವಿಯ ಮೇಲೆ ಪರ್ಬಲು ಸೂಚಿಮುಖಮಂ ಕೀಲಿಸುವೊಡರಿದೆನಿಸಿ ದಟ್ಟೈಸುವ ತಮಂಧದಲಿ (ಬಸಪು. ೩-೩೦) ; ದಟ್ಟೈಸಿತು ಬನಬನದಲ್ಲಿ ಕೊಳ ಮಂಳಲೊಟ್ಟು ಗೋಮತಿಯ ತೀರದಲಿ (ಮೋಹತ. ೩೬-೬೩) : ಕಿನ್ನರರ್ ಸಿದ್ಧ ವಿದ್ಯಾಧರರ್ ಕಿಂಪುರುಷರು ದಟ್ಟೈಸಿದರ್ (ಚಲಪು. ೩೦-೪೦) ; ಕತ್ತಲೆಯ ಮೊತ್ತ ದಟ್ಟೈಸಲಾ ವಾರ್ತೆ ಕೇಳುತ್ತರ್ಕ ತನ್ನ ಚೂಣಿಯ ಭಟರ ಕಳು

ಹಲ್ಕೆ (ನವಮೋ. ೦೪-೨೬) ; ಬುವಿ ಬಾನಂತರವೆಲ್ಲವ ಕತ್ತಲು ತುಂಬಿರಲು . . . ತವಕಿವು ಸೇತುವೊ ಎನೆ ದಟ್ಟೈಸಿರೆ ತಾರೆಗಳು (ಗಣೇಶ. ೨೮-೪) ; ಕತ್ತಲಲಿ ಮಿಂಚು ಹೊಳೆದಂತಾಗಿ, ಬಟ್ಟೆಗೆಡುವುದು, ಕುರುಡು ದಟ್ಟೈಸಿ! (ಚಂದ್ರಸ. ೨೦-೧೯). ೨. ಹೆಚ್ಚಾಗು; ಅತಿಶಯವಾಗು: ನೆಟ್ಟನೆ ಪೃಥಿವೀ ಪತಿಗಳು ತನಯರ್ಗೆ ಪಟ್ಟವ ಕಟ್ಟೆ ಕಾಣಿಕೆಯ ಇಟ್ಟಿಅಗಿದರೇನು ಹೀನವೆ ಪರಿತೋಷ ದಟ್ಟೈಸುವುದು ಕಣ್ಣಾನಕೆ (ಮೋಹತ. ೩೬-೧೨).

[ ದಟ್ಟ$_1$ + -ಇಸು$_3$ ]

ದಟ್ಟಯ್ಸು 'ದಟ್ಟಯಿಸು' ನೋ.

ದಟ್ಟವಳ್ಳಿ (ನಾ). ಒತ್ತಾಗಿ ಬೆಳೆದಿರುವ ಬಳ್ಳಿ; ನಿಬಿಡವಾದ ಲತೆ: ಅತ್ತಕ್ಕೆ – ಬಟ್ಟತ್ತು ತೊಡೆ, ಬಟ್ಟದೊಡೆ, ಬೆಟ್ಟವೇಸಗೆ, ದಟ್ಟವಳ್ಳಿ – ಇವುಮೊದಲಾದವು (ಶಮದ. ೧೬೮ ಪ್ರಯೋ). [ ದಟ್ಟ$_1$ + ಬಳ್ಳಿ ]

ದಟ್ಟವಿಸು 'ದಟ್ಟಯಿಸು' ನೋ.

ದಟ್ಟಳ್ (ನಾ). ಪರಾಕ್ರಮಿ; ಶೂರ (?) : ಅಟ್ಟದಲೆಯ ಮಾತನೆಟ್ಟನೆ ದಟ್ಟಳ್ಸಿರಗಂಬೆರಗುವಂ ಬಗೆಯದೆ ಕಟ್ಟಳ್ಸತ್ತನೆಱಿಯವ್ವ (ಶಾಇಶ. IX-1, ೩೧-೦೦ ; ೯೬೬).

[ ☞ ಇದು 'ದಟ್ಟಾಳ್' ಎಂಬುದರ ಅಪಲಿಖಿತವಿರಬಹುದು.]

ದಟ್ಟಿ$_1$, ಧಟ್ಟಿ (ನಾ). ೧. ಸೊಂಟಕ್ಕೆ ಸುತ್ತುವ ವಸ್ತ್ರವಿಶೇಷ : ಮಡದಿಯಲ್ಲದೆ ಬೊಮ್ಮಚರಿಯವು ಉಡಿಗೆ ನಾರಿನ ದಟ್ಟಿಯಲ್ತೆ ತಮ್ಮಡಿಗೆ ಕಾಳಗವೇಕೆ (ಕಾಶಿಶಾ. ೨೨-೪೨) ; ಉಡಿಯ ಪಟ್ಟೆಯ ದಟ್ಟಿ ಬೆನ್ನ ಜಲ್ಲಿಯ ವೀರರೆಡಬಲದೊಳಗೈತರಲು (ಕಂನವಿ. ೧೨-೩೪) ; ನಡುವಂ ಬಿಗಿದುದೆ ದಟ್ಟಿಯುನೊಡನೆರಿವನಿತಾಜನಕ್ಕೆ ಜಗುಳ್ಗುಂ ಮುಡಿಗಳ್ (ಚಿಕವಿ. ೩-೨೨) ; ಪಾಂಚಾಲಿಯ ದೀನಾಲಾಪಗಳನ್ನು ಕೇಳಿ . . . ಭೀಮಸೇನನು . . . ವಿಜೃಂಭಿಸಿ ದಟ್ಟಿಯನ್ನು ಕಟ್ಟಿ (ಕೃಪಾವಿ. ೯೬) ; ಕಟ್ಟಿದ ದಟ್ಟಿಯ ಬಲ್ಪಿನ, ತೊಟ್ಟ ಪೊಸಗುಪ್ಪಸದ ಚೆಲ್ವಿನ . . . ಕಿಱುಜವ್ವನದ ಬಿಂಕದ ನಡೆವೊಂದು ಗಾಡಿಯ ಪುಷ್ಕಲಂ (ರಾಮಾಶ್ವ. ೪೮-೦೬) ; ಸೊಂಟದಿಂದ ಕೆಳಕ್ಕೆ ನಾಲ್ಕು ಮೊಳದ್ದು ಒಂದು ದಟ್ಟಿ (ನಮ್ಮೂರ. ೯) ; ಧರ್ಮಕ್ಕೆ ದಟ್ಟಿ ಕೊಟ್ಟರೆ ಹಿತ್ತಲಿಗೆ ಹೋಗಿ ಮೊಳ ಹಾಕಿ ನೋಡಿದ (ಗಾದೆ). ೨. ಬಟ್ಟೆ; ವಸ್ತ್ರ: ನೀಲಿಯ ದಟ್ಟಿಯನಿಳಿಗೆ ದಿಶಾಲಂಬನವಾಗೆ ಕವಿಚಿಸುರಾರಿಯೆನಲ್ಕಾ ಲೋಕನಕ್ಕೆ ಭಯವಮಂ ಸಾಲಿಡುತಂ ತಂದನಂಧಕಾರಕಾರಂ (ನಳಚಂ. ೦೯೩); ಕಾಗಿನ ಸುಚಲ್ಲಣದ ದಟ್ಟಿ ಹೇರಿಟ್ಟ ಹಿಲ್ಲರಿ (ರುಕ್ಮಾಂಗ. ೧೦-೦೮). ೩. ನಡುವಿನ ಸುತ್ತು ಕಟ್ಟಿಕೊಳ್ಳುವ ಪಟ್ಟಿ ; ನಡುಕಟ್ಟು : ಕಾಶೆ ದಟ್ಟಿ ಚಲ್ಲಣಂಗಳಂ ಸಮಂತು ತೊಟ್ಟು ಬಲ್ಮೆಸೆಯಂ ಕರಾಬ್ಜದಿಂದೆ ತಿರ್ದುತೆ (ಹಾಲಾಸ್ಯ. ೨-೦೦-೦೬). ೪. ಚಿಕ್ಕ ಸೀರೆ ; ಕಿರಿಗೆ : ಪಟ್ಟೆವಾಳಿಯನುಟ್ಟು ಬನ್ನಿ ದಟ್ಟಿ ಚುಂಗ ಬಿಟ್ಟು ಬನ್ನಿ (ಪುರಂದ. ೧-೧೦೭-೬) ; ಚಪ್ಪರ ಮಂಟಪದಾಗ ಹೊಕ್ಕಬಾಳ್ಹೊತ್ತಾತು ಪುತ್ರಿಯು ಮಾರಿ ಬಳಲ್ಯಾವ ಬೀಗುತಿ ದಟ್ಟಿಯ ಉಡಿಸ ಮಗಳಿಗೆ (ಜೋಕಗೀ. ೫೯) ; ಉಟ್ಟ ದಟ್ಟಿ ಎಷ್ಟು ಮಾಸಿದೆ (ಮುಂಬಯಿ. ೦-೦೩). ೫. ಅನೇಕ ಮಡಿಕೆಗಳಿರುವಂತೆ ಬಟ್ಟೆಯನ್ನು ಸೇರಿಸಿ ಹೊಲಿದ ಹೊದಿಕೆ; ಕವುದಿ; ಲೇಪು : ಭುಜಂಗಳ ತಣ್ಪನೊತ್ತು ಬಿಂಕಂಬಡೆದಿರ್ದ ಕೆಳ್ಗದಪಿನೊತ್ತು ವಿಟರ್ ನೆಱೆ ಕಾವುದಲ್ಲದೀ ಕಂಬಳಿ ದಟ್ಟಿ ಬೂರವಡವೆಂಬವು ಕಾವುವೆ ಶೀತಕಾಲಮಂ (ಸೂಕ್ತಿಸು. ೧೧-೨೭೦). ಧಟ್ಟಿ : ೨. ಮುಂಭಾಗದೊಳ್ ಮುತ್ತಿನ ಸರಂಗಳಂ ಚೌಕಳಿಯಾಗಿ ಪೆಣೆದು ಕಟ್ಟಿರುವ ಧಟ್ಟಿ (ಸೌಗಂಧಿ. ೩೦೫-೯). ೩. ಬಱುಮಂಡೆ ಪೂಸಿದ ಗಂಧ ಕಾಸೆಯ ಧಟ್ಟಿ ಮೆಱೆಯೆ ಸಬಳಿಗರೆಯ್ದುಂದು ತಱುಬಿದರಂದು . . . ಮಿಱುಗೆ ಸಬಳ ಕಯ್ಗೊಳಗೆ (ಶಂರಾಸಾಂ. ೦೦-೩೪).

[ ದೇ.೩ ತಮಿ. ತಟ್ಟು; ತುಳು. ದಟ್ಟ, ಜಟ್ಟ; ತೆಲು. ದಟ್ಟಿ/ಸಂ. ಧಟೀ ]

ದಟ್ಟಿ$_2$ 'ದಡ್ಡಿ$_2$' ನೋ.

ದಟ್ಟಿ$_3$ (ನಾ). ಶೌರ್ಯ ; ಪರಾಕ್ರಮ : ಕನ್ನಡವಕ್ಕಿ ಪೂರ್ಣಾರ್ವಕ್ಕಿ ಮೊದಲಾದ ದಟ್ಟಿಯ ಕೂರಾಳ್ಗಳುಂ ತುತವ್ಮ ಪಡೆವೆರಸು ಬಂದು ಕಾಣ್ಬುದುಂ (ಕಬ್ಬಿಕಾ. ೦೯೬). [ <ಸಂ. ಧೃಷ್ಟಿ ]

ದಟ್ಟಿಗಟ್ಟಿಸು (ಕ್ರಿ). ೧. ನಡುಕಟ್ಟನ್ನು ಬಿಗಿಸಂ. ೨. (ಅಲಂ) ಸಿದ್ಧವಾಗಿರುವಂತೆ ಮಾಡು : ಇಂತು ಮೊರೆಯುಟ್ಟು ಪುರುಡಂ ಪುಟ್ಟಿಸಿ ದಟ್ಟಿಗಟ್ಟಿಪುದುಂ (ಚಿಕವಿ. ೨-೩೮ ಪ); ಸರ್ವಶಕ್ತಿಯೊಳ್ ಪೂಣರಲ್ಕಾತನಂ ದಟ್ಟಿಗಟ್ಟಿಸಲೆಂದು ದೇವರ್ ತವ್ಮೊಳಿಸಗಿದ ಪರಿಭವಮಂ ಮವನೊಳ್ ನಡೆಯಿಪೌದಾಸೀನ್ಯಮುಮಂ ಬಿನ್ನವಿಸಿ (ಚಿಕವಂ. ೨೦-೮); ನಿನ್ನ ವಾತ್ಸಲ್ಯ ಗುಣಂ ಮುಂದುವರಿದೆನ್ನಂ ದಟ್ಟಿಗಟ್ಟಿಸುತ್ತಿದೆ (ಚಿಕಶು. ೨೬).

[ ದಟ್ಟಿಗಟ್ಟು + -ಇಸು$_3$ ]

ದಟ್ಟಿಗಟ್ಟು (ಕ್ರಿ). ೧. ನಡುಕಟ್ಟನ್ನು ಬಿಗಿ. ೨. (ಅಲಂ) ಸೊಂಟಕಟ್ಟು ; ಸಿದ್ಧವಾಗು; ತಯಾರಾಗು: ಜೀಯ ಪರಾಕೆದು ಬೇಱೊಂದೋಯರದಿಂ ಬಂದು ಪಂದಿಪೆರ್ ಕಿಱಿಯರಸರ್ ಸಾಯಸವಡುವರ್ ಸಂತತವಿನಾಯಸಕ ಮನೆಳಸಿ ದಟ್ಟಿಗಟ್ಟುವರನಿಬರ್ (ಚಿಕವಿ. ೫-೩೮).

[ ದಟ್ಟಿ$_1$ + ಕಟ್ಟು$_1$ ]

ದಟ್ಟಿಗೆ$_1$ (ನಾ). (?) : ಸುರರ ಮನ್ನಿಸಿ ಕಳುಹುತಂದನು ನಿರುತ ನಿಮ್ಮಯ ಬಾಧೆ ತನ್ನದು ಥರಥರದ ದಟ್ಟಿಗೆಯ ದೈತ್ಯರ ಹವಣು ತನಗೆಂದ (ಸಂಭಪ. ೭-೬೩). [ ? ]

ದಟ್ಟಿಗೆ$_2$ (ನಾ). ಉಪ್ಪರಿಗೆ; ಕರುಮಾಡ; ಮಹಡಿ (?) :

ದಟ್ಟಿಗೆಯಮನೆ = ಉಪ್ಪರಿಗೆ ಮನೆ (?): ಕನಕಮಯ ನಿರ್ಮಿತಗಳಿಂದಲಿಹ ದಟ್ಟಿಗೆಯಮನೆಯ ಸುತ್ತಲ್ ಮೆರೆವ ಮದನಗೃಗಳ ಮೇಲೆ ನಿನದದೊಳ್ ನವಿಲ ತಂಡಗಳಿರಲ್ (ರುಕ್ಮಾಂಗ. ೩-೪೨). [ ? ]

ದಟ್ಟಿಚಲ್ಲಣ (ನಾ). ನಡುಪಟ್ಟಿಯುಳ್ಳ ಚಲ್ಲಣ : ದಟ್ಟಿಚಲ್ಲಣವನುಟ್ಟು ಕಠಾರಿಯಂ ನಡುವಿನೊಳು ಕಟ್ಟಿ (ಭೃಂಗಸೂ. ೨೫೭) : ಮಲ್ಲಗಾಸಿಯ ದಟ್ಟಿ ಚಲ್ಲಣಗಳನುಟ್ಟು (ಸೌಂದಕಾ. ೦೨-೩೩) ; ಕಟ್ಟಿದ ದಟ್ಟಿಚಲ್ಲಣದ ಉಟ್ಟ ಮಲ್ಲವರಿಯ ಈ ವೇಷದಿಂದ . . . ಕುಳ್ಳಿರುತ್ತ (ವಿಗಡ. ೩೦-೨೫) : ಕಂಠೀರವಒಡೆಯರು . . . ಅಲ್ಲಿ ಕೋಟೆ ಬಾಗಲಿಗೆ ಕಟ್ಟಿದ್ದ ದಟ್ಟಿಚಲ್ಲಣಗಳನ್ನು ತಮ್ಮ ಆಳಿನ ಕೈಕೋಲಿನಿಂದ ತೆಗೆಸಿ ಅನಂತರ ಕೋಟೆಯೊಳಕ್ಕೆ ಪ್ರವೇಶಮಾಡಿದರು (ಒಡೆಚ. ೩೫). ☞ ಇವು ಪ್ರತ್ಯೇಕವಾಗಿಯೂ ಬಳಕೆಯಾಗುತ್ತಿವೆ. [ ದಟ್ಟಿ$_1$ + ಚಲ್ಲಣ ]

ದಟ್ಟೈತು, ದಟ್ಟೈತ್ತು (ನಾ). ೧. ದಪ್ಪವಾದುದು ; ಗಾತ್ರದಿಂದ ಕೂಡಿದುದು : ಕುಟ್ಟಿ ಕಣಕದೊಳು ಸರಿ ಬೆಣ್ಣೆಯಾಱೊಳೊಂದು ಬಟ್ಟ ವಾಲನೆಯಿಕ್ಕಿ ಮಿದಿದು ಬಟ್ಟಂ ಮಾಡಿ ದಟ್ಟೈತಂದೆನಿಸಿ ಲತೆಯಿಱಿದು ಹಂಚಿನೊಳಿಟ್ಟು ಸುಟ್ಟು ಪರಿಯಣಕೆ ತೆಗೆದು (ಸೂಪಶಾ. ೧-೦೦). (ಗ). ೨. ದಪ್ಪವಾದ; ದಟ್ಟವಾದ; ಗಾತ್ರವಾದ; ಮಂದವಾದ : ಬೆಟ್ಟೈತು, ಬೆಟ್ಟೈತ್ತು, ದಟ್ಟೈತು, ದಟ್ಟೈತ್ತು (ಶಮದ. ೭೭ ಪ್ರಯೋ). ೩. ವಿಸ್ತಾರವಾದ ; ಅಗಲವಾದ : ನೂಱು ಗಾವುದುದ್ದ ಮೊದಲ ದಟ್ಟೈತು . . . ನೋಡೆ ಪಗಡೆಯ ಕಾಯಂತೆ ತೋಱುತಿದ್ದುದು ವೃಷಭಾದ್ರಿ (ಭರತೇ. ೩೬-೮೦). ದಟ್ಟೈತ್ತು : ೧. "ವ್ಲಾಕ್ಷ, ವ್ರುಕ್ಷ – ಕ್ಷರಣಸ್ನಿಗ್ಧಾರ್ಥೇ, ಒರಸುಹಣದೊಳಂ ದಟ್ಟೈತ್ತುರೊಳಂ" (ಶಾಕಕ್ಕ. ೨೬೮). ೨. ಮೇಲಿನ 'ಶಮದ' ಪ್ರಯೋಗವನ್ನು ನೋಡಿ.

ದಟ್ಟೈತಾಗು, ದಟ್ಟೈತ್ತಾಗು : ಒತ್ತಾಗು = ಸಾಂದ್ರವಾಗು ; ನಿಬಿಡವಾಗು : ದಟ್ಟೈತಾಗಿಹ ತೋಳು ತೊಡೆ ಬಾಯ್ಬಟ್ಟ ಬೆಟ್ಟದ ತೆರದಿ ಬುದನು ಕಿತ್ತು ಪೇರ್ವರನ (ಜರಾಮಾ. ೩೦-೩೬) ; ಈ ವನಮಹೀವ ಭೀಕರಮೆನಿಸಿದಪುದು ನಾನಾವಿಧದ ಮರಗಿಡುಗಳಿಂದೆ ದಟ್ಟೈತ್ತಾಗಿ ಕಾಪಳಂಗೊಂಡು (ಶೀಷರಾ. ೪-೨). [ <ದಟ್ಟ$_1$ ]

**ದಟ್ಟಿತ್ತು₂** 'ದಟ್ಟಿತಂ' ನೋ.

**ದಟ್ಟಿಪಂಚೆ** (ನಾ). ಅಡ್ಡಲಾಗಿ ಸುತ್ತಿಕೊಳ್ಳುವ ಪಂಚೆ ; ಮುಂಡು ; ತಡವು : ಅವಳ ಜೊತೆಗೆ ಇದ್ದಾತ ಎ ತ್ತ ರ ವಾ ದ ಆಳು . . . ಒಂದು ದಟ್ಟಿಪಂಚೆಯುಟ್ಟು ಕೊಳೆಯಾದ ಒಂದು ಶರಟು ಧರಿಸಿದ್ದ (ಕುಸುಹಂ. ೩೪) ; ಕುಳ್ಳಿಗೆ ಇದಾನೆ. ಒಂದು ದಟ್ಟಿ-ಪಂಚೆ ಖಾದಿಯದು ಮೇಲಕ್ಕೊಂದು ಅರೆತೋಳಿನ ಷರಟು (ಅಂಡೂ. ೧೦೬). 'ಕಚ್ಚೆಪಂಚೆ' ಪರಾ. [ ದಟ್ಟಿ₁ + ಪಂಚೆ ]

**ದಟ್ಟಿಸೀರೆ** (ನಾ). ಸಣ್ಣಸೀರೆ; ಕಿರಿಗೆ : ದಟ್ಟಿಸೀರೆ, ಬೆಳ್ಳಿ ತೋಳಬಂದಿ, ಬೆಳ್ಳಿ ಕೈಕಡಗ, ಕೊರಳಲ್ಲಿ ಕೆಂಪುಹವಳದ ಸರ, ಕಿವಿಯಲ್ಲಿ ಬಂಗಾರದ ಬೆಂಡವಲಿ (ಹೊಸಂಸಾ. ೧೪೦). [ ದಟ್ಟಿ₁ + ಸೀರೆ₂ ]

**ದಟ್ಟಿಸು₁** 'ದಟ್ಟಯಿಸು' ನೋ.

**ದಟ್ಟಿಸು₂**, ಧಟ್ಟಿಸು, ಧಟ್ಟೈಸು (ಕ್ರಿ). ೧. ಗದರಿಸು ; ಬೆದರಿಸು : ನಿನ್ನ ನಿಟ್ಟೆಲುವ ಮುಱಿವೆನೆಂದುರವಣಿಸಿ ಜಱಿಯುತ್ತ ದಟ್ಟಿಸುತ ಬಂದು (ಹಜಳಾ. ೧೨-೩೬); ದಟ್ಟಡಿಯಿಡುತೆಯತಹ ಹಸುಳೆಯನೊಲಿದಿಟ್ಟಯದಱ ದಿಟ್ಟಯನು ತೊಟ್ಟನೆ ವಾಜುಗೊಂಬಳು ಬಾಲ್ಕವಟಾಯಲು ದಟ್ಟಿಸದಿಹಳೆ ಲೋಕವನು (ಅಂಜಿಚ. ೪-೫೬) ; ದಟ್ಟಿಸುತ್ತೆಲೆ ಬಸವ ಕೊಡುಕೊಡು ಪೆಟ್ಟಿಗೆಯ ಪೊನ್ನಲ್ಲವಂ ಹಿಮ್ಮೆಟ್ಟದೀಗಳೆ (ಬಸಪು. ೧೦-೩) : ತನಯರು ಗಳತಿ ದಟ್ಟಿಸುವರಂಗನೆಯರುಲ್ಲಂಘಿಸುವರಂ . . . ತಿಳಿಯ ದರಿದ್ರನಿಂದತಿ ಕಷ್ಟರಿಲ್ಲೆಂದ (ಜೀವಂಚ. ೭-೩) ; ಇರುಳಿನಲಿ ನಿದ್ರೆಗಿಳಿದಾ ಹೊಲೆಯ ನ ವ ನಾ ವ ವ ನೊ ಮಾಂಸವ ಕಳುವವನು ಹೇಳೆನುತ ಗರ್ಜಿಸಿ ದ[ಪಾಠಾಂ. ಧ]ಟ್ಟಿಸುತಲಿರಲು (ತಿಮ್ಮಪಾಂ. ೫-೩೬) ; ರವಿನಂದನಂ ರಯದಿ ಪಾಶದಿಂ ಬಿಗಿದವನ ತವಕದಿ ಸೆಳೆಯೆ ಲಿಂಗದೊಳು ಪರಶಿವನುದಿಸಿ ಧವಳಾಂಗನಾಗಿ ದಟ್ಟಿಸುತಱಿನ ಮುವ್ವೊನೆಯ ಸಬಳದಟ್ಟುಗಿಯೊಳಱಿಯೆ (ಪ್ರಭುಪು. ೩-೧೦೦) : ನೋಡಿರೈ, ದೊರೆಸ್ವಾಮಿ ಹೆಂಡತಿ ನಳಿನಿ, ಏ ಪರಿ ಗಂಡನ ನಮ್ಮಿದಿರೆ ದಟ್ಟಿಸುತಲಿರುವಳು (ಗಣೇಶ. ೭೪-೨). ೨. ಹೀಗಳೆ ; ತಿರಸ್ಕರಿಸು ; ಮೂದಲಿಸು : ನೇವುರದ ದನಿ ದಟ್ಟಿಸಿತು ವೇದಾವಳಿಯ ನಿರ್ಘೋಷವನು ನಾನಾವಿಭೂಷಣಕಾಂತಿ ಕೆಣಕಿತು ಮುನಿಸವಾಧಿಗಳ (ಕುಮ್ಮಾಅ. ೦೯-೬) ; ಬೆಟ್ಟದ ಬಲ್ಮೆಯಿಂದೆಮ್ಮ ರಾಯಸವನು ದಟ್ಟಿಸಿ ಕಳೆದ ಕಂಪಿಲನ ಕಟ್ಟಿ ತರಿಸುವೆನು (ಕುಠಾಸಾಂ. ೦೭-೮೪). ೩. ಪ್ರತಿಭಟಿಸು ; ವಿರೋಧಿಸು : ದಿಟ್ಟಿಸಿ ಹೋಗಂಬೆ ಹೋಗದಿದ್ದರೆ ಬೆನ್ನ ಮುಟ್ಟಿ ಹೋಗೆಂದು ನೂಂಕುವೆನು ದಟ್ಟಿಸಿದರೆ ಕಟ್ಟಿ ಕಳುಹುವೆ ಶಿಬಿಕೆ ಯೊಳಿಟ್ಟು ಚಿಕ್ಕಮ್ಮನ ಬಳಿಗೆ (ಧಠಚ. ೪೯-೫೪). ೪. ಘಟ್ಟಿಸು; ಹೊಡೆ; ತಾಗು : ಪಟ್ಟಣದುರು ವೀಧಿಗಳೊಳಗಾ ನೃಪವಿಟ್ಟಣಿಸಿಯ ಬರುತಿರಲು ದಟ್ಟಿಸಿ ಪೊಡವ ನಾನಾವಾದ್ಯದ ರವ ಮುಟ್ಟಿ ದಿಗಂತರಾಳವನು (ಅಂಜಿಚ. ೧೧-೨೭೭); ಬಿಟ್ಟನು ನಿಜವೃಷಭಾಂಕನು ಬಲವೆರಸಿಟ್ಟಣಿಸಿಯೆ ತ್ರಿಪುರವನು ದಟ್ಟಿಸಿ ಪೊಡವ ನಾನಾವಾದ್ಯರವಗಳು ಮುಟ್ಟಿ ದಿಗಂತರಾಳವನು (ತ್ರಿಪುಸಾಂ. ೦೩-೦೪೦). **ಧಟ್ಟಿಸು** : ೧. ಸುರವನಾನಂದರಸವಱಿತು ಬೆಱಗಿನ ಮೊಗ ದೋಱಿರಲು ನಾರಂದ ಧಟ್ಟಿಸುತೆದ್ದು ಕೊಡು ವಸಿಷ್ಠಂಗೆ ಭಾಷೆಯನು ಕೌಶಿಕ ಎಂದನು (ಹಜಳಾ. ೨-೨೪) ; ಓರೆಪೋರೆಯೊಳಾಡಿ ಧರ್ಮದ ಧಾರಣೆಯ ಧಟ್ಟಿಸುವದಿದು ಗಂಭೀರರಿಗೆ ಗರುವಾಯಿಯೇ (ಕುಮ್ಮಾಸ. ೦೯-೮೪) ; ನೀ ತಳೋದರಿ ಕಱುಬುಗೆಡದೀ ಮಾತಿನಲಿ ತಾ ಬಿಡುವನೇ ನಿನ್ನಾತಗಳ ನುಡಿಸೆಂದು ಖಳ ಧಟ್ಟಿಸಿದನಂಗನೆಯ (ಕುಮ್ಮಾಸ. ೦೫-೧೦) ; ನಿನ್ನಯ ಪುರುಷನಪಗತನಾದ ಬಳಿಕೀ ಪರಿಯ ಮಱಿದಿಹುದುಚಿತವೇ ಹೇಳೆಂದು ಧಟ್ಟಿಸಿದ (ಜೀ ವ ಂ ಚ. ೦೩-೩) ; ಮಾರೀಚನಾ ದಶಗಳನ ಧ[ಪಾಠಾಂ. ದ]ಟ್ಟಿಸಿ ಕೆಲವು ದಿನ ನೀನುಳಿವುಪಾಯವ ಮಾಡುವೆನು . . . ತಾನೆಂದ (ತೊರರಾ. ೩-೮-೧೦). ೨. ಧಿಟ್ಟನಹೆ ಬಾಣಸಿಗ ಸವಿಯೊಳಗಟ್ಟ ಕೂಳನ ತಿಂದು ದೇಹದೊಳಟ್ಟಿಯಲಿ ಸಿರವಿರಲಹಂಕಾರದಲಿ ನೀನೆಂದು ಧಟ್ಟಿಸುತ ಜೀಮೂತಮಲ್ಲನು . . . ಹೊಕ್ಕನು ತೋಳ ತೆಕ್ಕೆಯ ಮಲ್ಲ ಗಾಳಗಕೆ (ಕುಮ್ಮಾವಿ. ೬೦೩. ೪-೩೪). ೩. ಖರ್ಪರನೆಂಬ ಜೋಗಿ ಶಿವಸಿದ್ಧ ರಾಮನ ಸರ್ವಸಾಮರ್ಥ್ಯದ ಹೆಸರ ಧಟ್ಟಿಸುವೆ ವಾದಿಸುವೆ ಸೋಲಿಸುವೆ ನೆಂದೊಸೆದು ... ಐತಂದನು (ಸಿದ್ಧರಾ. ೭-೨೬). ೪. ತೋಳ ನೆಗಹಿನಲ್ಲಟ್ಟಿ ಹೊಯ್ದುದು ನೀಲನನು ನೀಲಾದ್ರಿಯನು ದಂಭೋಳಿ ಧ[ಪಾಠಾಂ. ದ] ಟ್ಟಿಸಿದಂತೆ ನೊಂದನು ಹೊಯ್ಲಲಿಭಪತಿಯ (ತೊರರಾ. ೬-೩೨-೩೬). ೫. ನಿಗ್ರಹಿಸು ; ಸೋಲಿಸು ; ಹಿಡಿತಕ್ಕೆ ತರು ; ಅಂಕೆಯಲ್ಲಿರಿಸು : ಪದಪಾಣಿ ಗುಹ್ಯ ಕರ್ಮೇಂದ್ರಿಯಂಗಳಲ್ಲಿ ಬೆದಱದವ ಧಟ್ಟಿಸುವ ಅದಟು ಬೇಕವಱಲ್ಲಿ (ದೀಕ್ಷಾಬೋ. ೦೬-೦೯) ; ಚೋಳ ಪಾಂಡ್ಯರ ದಳವ ಧಟ್ಟಿಸಿ ಕೊಂಡದನನುಪಮಸಾರವಸ್ತುಗಳ (ಕುಮ್ಮಾಸ. ೫-೨೦). **ಧಟ್ಟೈಸು** : ೨. ಪುಟ್ಟ ನೆಂದೆನಬೇಡ ಪರಮಶಕ್ತಿಯಂ ತಂದುಕೊಟ್ಟನು ಕೃಷ್ಣ ಮನ್ಮಥಗೆ ಧಟ್ಟೈಸಿ ನೀ ಬಾಹುಬಲದಿಂದೆ ಕಾದಲಂ ಪೆಟ್ಟನಿಕ್ಕದೆ ಬಿಡನೆಂದ (ಮೋಹತ. ೦೨-೯).

ಧಟ್ಟಿಸುತೆ ಹೇಳು = ಒತ್ತಾಯ ಮಾಡು : ಬಿಟ್ಟು ಹೋಗುವ ಲಲನೆ ವಲ್ಲಭಗೆ ಬುದ್ಧಿಯಂ ಧಟ್ಟಿಸುತೆ ಹೇಳಿ ಮೇಲಟ್ಟದೊಳು ಗುಡುಹವದೆ ಬಟ್ಟಲೊಳು ಚಿಲಿಪಾಲ ಸಲಿಸೆಂದು ತಾ ತಳರ್ವಕಳೆತೆಯವಳಂತೆ ನೀನು ಆಟ್ಟುಳಿಯ ಮಾಡಿದವೆ (ಪ್ರಭುಪು. ೬-೨೩). [ ದಟ್ಟಿ₃ + – ಇಸು₃ ]

**ದಟ್ಟೆ** (ನಾ). ದಪ್ಪಬಿದಿರಿನ ಸೀಳು–ದಬ್ಬೆ : ವಿಪಿನಕ್ಕೆ ಹೊರಟ ಕೇತಯ್ಯ ಚಂದದಿಂ ಬಿದಿರನಂ ಸೋಸಿ ತರುವುದಕೆ ಹೋಗಿ ದಟ್ಟೆಯ ತಂದು ಪೊಳವೆ ಸೀಳುತಿರೆ (ಕರಲೀ. ೦೭೨-೧೦). [ <ತಟ್ಟಿ₁ ]

**ದಟ್ಟೈಸು** 'ದಟ್ಟಯಿಸು' ನೋ.

**ದಡ₁** (ನಾ). ಒಂದು ಅನುಕರಣ ಶಬ್ದ. 'ದಡಗುಟ್ಟು₁' ಪರಾ.

**ದಡದಡ** (ದ್ವಿರುಕ್ತಿ) = ೧. ರಭಸ ; ವೇಗ ; ಜೋರು : ದಡದಡ ಎಂದು ಓಡುತ್ತಾನೆ (ರೂಢಿ). ೨. ನಡುಕ ; ಕಂಪನ : ಗಡಬಡಿಸಿದುದು ಲಗ್ಗವಱಿ ಕೋಟಪಗೆಗಳಂ ಕೆಡೆಕೆಡೆಯೆನುತ್ತ ಕಹಳೆಗಳೊದರ್ದುವೆಳ್ಳೆ ರ್ದೆಯ ದ ಡ ದ ಡ ೦ ಗ ಳ್ ಮಾಣ್ದುದವರರ್ಗೆ (ಚಬಪು. ೪೯-೫೦). **ದಡವಾಡು** = ಅವಸರಪಡಿಸು: ದಡವಾಡಿದರು ಯಮನಾಳುಗಳು ಓಡಿ ಬಂದರು ಏಳೇಳೆನುತ ಏಳಲೆಳೆದರು ಪಾಪಿಯ ಬೀಳಲೆಳೆದರು (ಘರಂದ. ೫-೦೨೬-೦).

**ದಡ₂** 'ದಡ್ಡ₂' ನೋ.

**ದಡ₃** 'ತಡ₂' ನೋ.

**ದಡ₄** 'ದಳ₁' ನೋ.

**ದಡಂಗೊಳ್** (ಕ್ರಿ). ದಡ ಸೇರು: ಮಕರಾಕರದಿಂ ಪೊಱಮಡುವ ಕರಿಮಕರ ದಂತೆ ಕಮಳಾಕರದಿಂ ಪೊಱಮಟ್ಟು ದಡಂಗೊಳ್ವಲ್ಲಿ (ಅರ್ಧನೇ. ೫-೧೧೩ ವ).
[ ದಡ₃ (<ತಡ₂) + ಕೊಳ್₁ ]

**ದಡಂದಡಿಸು** 'ದಡದಡಿಸು' ನೋ.

**ದಡಕ್** (ನಾ). ಒಂದು ಅನುಕರಣ ಶಬ್ದ: ಅಟ್ಟದಿಂದ ಪಾತ್ರೆಯು ದಡಕ್ ಎಂದು ಬಿದ್ದಿತು (ರೂಢಿ).

**ದಡಕಟ್ಟು** 'ದಡೆಕಟ್ಟು' ನೋ.

**ದಡಗಲಿ** (ನಾ). ದಪ್ಪನೆಯ ಹೆಂಗಸು : ಈಗ ಹೊಸದಾಗಿ ನಡೆಯುವ ದನ್ನ ಕಲೀತೀರೋ ಈ ದಡಗಲಿ ಕೋಲು ಜಾರಿ ಬಿದ್ದಿದ್ರೇ ಒಂದು ಭಯಂಕರ ವಿಚಾರವೇ! (ಉಮೂಶ. ೬೮). 'ದಡಾಲಿ' ಪರಾ. [ ? ]

**ದಡಗುಟ್ಟು₁** (ಕ್ರಿ). ೧. ದಡದಡ ಶಬ್ದಮಾಡು: ಗಾಡಿ ದಡಗುಟ್ಟುತ್ತಾ ಬಂತು (ರೂಢಿ). ೨. ವೇಗದಿಂದ ಕೂಡಿರು : ಬೇಕಾದಷ್ಟು ಸಮಯ ವಿದ್ದರೂ ಆಕೆ ದಡಗುಟ್ಟಿಕೊಂಡು ಕೆಲಸ ಮಾಡುತ್ತಾಳೆ (ರೂಢಿ).
[ ದಡ₁ + ಕುಟ್ಟು₁ ]

**ದಡಗುಟ್ಟು$_2$** (ಕ್ರಿ). ದಡ ಸೂಸಿ ಹರಿ; ತುಂಬಿ ಹರಿ : ಸಾಲದ್ದಕ್ಕೆ ಕೆಲಸದ ಆಯಾಸವೂ ಸೇರಿ ಬೆವರು ದಡಗುಟ್ಟಿಕೊಂಡು ಹರಿಯುತ್ತಿದೆ (ಶಾಟೀಮು. ೧೦೩). [ ದಡ$_3$ (<ತಡ$_2$) + ಕುಟ್ಟು$_1$ ]

**ದಡದಡನೆ** (ಅ). ೧. ದಡದಡ ಎಂಬ ಸದ್ದಿನೊಡನೆ : ಶ್ರೀ ಸೋಮನಾಥನು ನಡುವಿರುಳು ಭಕ್ತಂಗೊಲಿದು ದಡದಡನೆ [ಪಾಠಾಂ. ಧಡಧಡನೆ] ಕದವಂ ಹಾಕಿತೆಗೆಯಲು (ಬಸಪು. ೪೩-೯೭). ೨. ವೇಗವಾಗಿ : ಬೇಗನೆ ; ಶೀಘ್ರವಾಗಿ : ಅವನು ದಡದಡನೆ ಮೆಟ್ಟಿಲಿಳಿದನು (ರೂಢಿ).
[ ದಡ$_1$ + – ಅನೆ$_1$ ]

**ದಡದಡಿಸು**, ದಡಂದಡಿಸು, ಧಡಧಡಿಸು$_1$ (ಕ್ರಿ). ೧. ನಡುಗು; ಅದುರು; ತತ್ತರಿಸು : ತೊಡೆ ದಡದಡಿಸೆ ನಡೆಗೆಟ್ಟು ಕಳಲುಲಿಗೆ ಬಟಾಸಲ್ಕೆ ಕಳಹಂಸವುಂಡಲಕ್ಕಯಶವಂ ಮಾಡಿಸಿಯುಂ (ಕಾದಂಉ. ೩೬) ; ಕುತ್ತಂ ಬಡೆದರಂತೆ ಬೀಟ್ವರ್ ಬಡಗೊಂದೆಯಂತೆ ದಡದಡಿಸುವರ್ (ಧರ್ಮಾಪ್ರು. ೩-೮೧) ; ಕಣ್ಗಳಂ ಮುಚ್ಚಿ ಸರಬಿಗಿದು ದಡದಡಿಸಿ ದೊಪ್ಪನೆ ಬಿದ್ದು (ಬಸರ. ೨-೫೮); ಕುಡಿದು ಕೊಬ್ಬಿದ ಬಸುಜು ದಡದಡಿಸಿ ತರಹರಿಸುವಡಿಯ . . . ಕಲಿವೀರ ಬಾಹುಕ ಬರುತ್ತಂ (ಹಡಳಾ. ೧೧-೦೭): ತನುವನೊಲೆದವು ದಡದಡಿಸಿ ಕಿವಿಗೊನೆಯ ಜೋಲಿಸಲಲ್ಲಿ ಮಡಿಗಾಲಿನಲಿ ಕುಸಿದವು (ಶುಪ್ಪಾವಿ. ೮-೮೩) ; ಇಂತು ನಲ್ಮೆ ಮಿಗೆ ಬಿನದಿಪ ಕಾಮಿನಿಯರ್ಗೆ . . . ನೊಸಲೊಳ್ ಬೆಮರ್ ಪನಿಯ ತೆಳ್ಗದಂಪು ಕೆಂಪಡರೆ ಏರ್ದೆ ದಡದಡಿಸೆ (ರಾಮಾಶ್ವ. ೦೨೩-೭). ೨. ಆತುರಪಡು ; ಸಂಭ್ರಮದಿಂದ ಕೂಡಿರು ; ತ್ವರೆಮಾಡು : ತಾಳ್ದು ಪರಮಾನಂದವಂಕುರಂದೋಱುತಂ ದಡದಡಿಸುತೆದ್ದು ತಿರುನೀಲಕಂಠರ್ಬಂದು (ತಿರುಶ. ಡೇ. ೨೫-೦) ; ದಡದಡಿಸಿ ಕೊಳನಿಂದ ಹೊಱಟಡಿಯಿಡುತ ಬಳಲಿದನನಿಲಸುತನವರೊಡನೆ ಮೆಯ್ಯಿಕ್ಕಿದನು (ಕುಪ್ಪಾಅ. ೭೩೩. ೨೬-೨೯) ; ಕಡು ಮಱುಗುತೆ ವಿಪ್ರಜನವದ್ದು ತಣ್ಣೀರ ತೊಡೆದು ಕಣ್ಗಳಿಗಾಗ ಮೆಲ್ಲನೆ ಓಡಿದತ್ತಿ ನಿಂದಿರಿಸಲು ದಡದಡಿಸುತೆ ಕೆಡಿಸಿದ ಶುಭವಸ್ತುನಿಚಯವ (ತ್ರಿಶುಶಿ. ೯-೨೬). **ದಡಂದಡಿಸು** : ೧. ಅಡವಿಗಿಚ್ಚಟ್ಟೆದಳಹುಲ್ಲೆಯಂತೆರ್ದೆ ದಡಂದಡಿಸಿ ಪವ್ವನೆ ಪಾಱೆ ದೂವೆಯೊಳ್ ಪೊಕ್ಕುರಗಿಯಂತೆ ಬೆದಬೆದನೆ ಬೆಂದು (ಜಬಪು. ೦೯-೪೩).
**ಧಡಧಡಿಸು$_1$** : ೧. ಕರಹತಿಗೆ ಧಡಧಡಿಸಿ . . . ಧೈರ್ಯದಲಿ ಹೊಡಕರಿಸಿ ಹೊಱಬಿನೊಳಿದ್ದು ಹೊಯ್ದನು ಪಾರ್ಥನಂದನನ (ಕುಪ್ಪಾದ್ರೋ. ೭-೫೯) ; ಧಡಧಡಿಸಿದವೊಳ್ಳೊಡೆಗಳ್ ನಿಡುಸುಯ್ ಪೊಣ್ಮಿದುದು ಮೊಗದ ಬೆಮರ್ವನಿಯೊಗೆದತ್ತುಡುಗಿದುದಳವು ನಡುಂಗಿದು ದೊಡಲ್ವಿದರ್ಭಜಗೆ ವಿಪಿನಗಮನಶ್ರಮದಿಂ (ದಮಸ್ವ. ೨-೦೦). [ <ತಡತಡಿಸು ]

**ದಡಪಡಿಸು** 'ಧಡಪಡಿಸು' ನೋ.

**ದಡಪಶಾಹಿ** (ನಾ). ಅಧಿಕಾರದ ಬಲದಿಂದ ಜನರನ್ನು ಹತ್ತಿಕ್ಕುವುದು ; ಅನ್ಯಾಯದ ಆಳ್ವಿಕೆ ; ದಬ್ಬಾಳಿಕೆ : ಈ ಮೊದಲೇ ದಡಪಶಾಹಿಗೆ ಕಳೆಯೇರಿ ಸಾವಿರಾರು ಜನರು ತುರಂಗದಲ್ಲಿ ಬಿದ್ದಿದ್ದರು (ಕಾಂಗ್ರೆಸ. ೧೭).
[ ←ಮರಾ. ದಡಪ್‌ಶಾಹೀ ]

**ದಡಬಡ$_1$** (ನಾ). ಒಂದು ಅನುಕರಣ ಶಬ್ದ : ದಡಬಡ ಶಬ್ದಮಾಡುತ್ತ ಗಾಡಿ ಹೊರಟಿತು (ರೂಢಿ).

**ದಡಬಡ$_2$** 'ಧಡಪಡ' ನೋ.

**ದಡಬಡನೆ** (ಅ). ಆತುರದಿಂದ ಕೂಡಿ : ಉದ್ದನ ಮೂಟೆಯು ದಡಬಡನೆ ಉರುಳಿ ಹೋಗುವಂತೆ ಈ ಮರಳನ್ನೂ ದಾಟಿ ... ಮರೆಯಾಗಿರುವಳು (ಹುಟ್ಟಿಹ. ೦೨೯) ; ರಂಗಪ್ಪ ಪಕ್ಕದ ಮನೆಯಲ್ಲಿ ಗುಲ್ಲು ಕೇಳಿ ದಡಬಡನೆ ಎದ್ದು ಹೊರ ನೋಡಿದ (ಚಿಗುಬ. ೩೪) ; ಹುಡುಗರ ತಲೆತಲೆ ಟೊಪ್ಪಿಯ ಆಟವ ದಡಬಡನಾಡಿಸಿ, ಮನೆಮನೆ ಕೋಟವ ಅಡಿಮೇಲಾಗಿಸಿ (ಕಪಪು. ೨೮-೫). [ ದಡಬಡ$_2$ (<ಧಡಪಡ) + – ಅನೆ$_1$ ]

**ದಡಬಡಲು** (ನಾ). ಆತುರ ; ವೇಗ ; ಗಡಿಬಿಡಿ : ಯಾದತರದ ಕಾಂತೆಯರೆಲ್ಲಾ ದಡಬಡಲಾಗಿ ಅಲಂಕಾರಗಳಂ ಮಾಡಿಕೊಳುತ್ತಿರುವ (ಸೌಗಂಧಿ ೨೦೨-೦೫). [ ದಡಬಡ$_2$ ( <ಧಡಪಡ) + – ಅಲು (< – ಅಲ್$_4$) ]

**ದಡಬಡಿ** (ನಾ). ದಪ್ಪ ; ಗಾತ್ರ : ದಡಬಡಿ ಇದ್ದರೆ ಠೊಣ್ಣನೆಂಬರು ತೆಳುವಿದ್ದರೆ ರೋಗಿಷ್ಟನೆಂಬರು (ಪುರಂದ. ೪-೬೦-೫). [ ? ]

**ದಡಬಡಿಸು$_1$** (ಕ್ರಿ). ದಡದಡ ಶಬ್ದವನ್ನು ಮಾಡು : ಸಣ್ಣ ಬಂಡಿಗಳು ದಡಬಡಿಸುತ್ತಿದ್ದುವು (ಪುನರು. ೧೮೨). [ ದಡಬಡ$_1$ + – ಇಸು$_2$ ]

**ದಡಬಡಿಸು$_2$** 'ಧಡಪಡಿಸು' ನೋ.

**ದಡಮಿ** 'ದುಡುಮಿ' ನೊ .

**ದಡಯ** 'ಧಡೆ$_1$' ನೋ.

**ದಡರ್** (ನಾ). ಒಂದು ಅನುಕರಣ ಶಬ್ದ : ತಡೆಯದೇ ಕಳ್ಗೊಯ್ಯುದಂ ಕಂಡು ಬೆದಱಿ ಎದೆ ದ[ಪಾಠಾಂ. ಧ]ಡರೆಂದು ಬಡಿಯಲಿನ್ನೇವೆನಕಟಕಟ (ಸಮ್ಯಕ್ತ್ವ. ೦೦-೬೮). 'ಡಡಾರ್' ಪರಾ.

**ದಡಲ್** (ನಾ). ಒಂದು ಅನುಕರಣ ಶಬ್ದ : ಬಾವಿಯಲ್ಲಿ ಕಲ್ಲು ದಡಲ್ ಎಂದು ಬಿದ್ದಿತು (ರೂಢಿ). 'ದಡಲನೆ' ಪರಾ.

**ದಡಲನೆ** (ಅ). ವೇಗವಾಗಿ ; ರಭಸವಾಗಿ : ಬಹುವ್ಯಾಗಗಳಂ ಕೊಂದು ಕೆಡಹಿ ಕೊಬ್ಬಿಱಿದು ಕಡುಲಹರಿಯಿಂ ದಡಲನೆಯ್ದುವ ಹುಲಿಗಳಾ ಪಂಕರುಹಮಿತ್ರನಪರವಾರಾಶಿಯಂ ಪುಗೆ ತದ್ವನಾಂತರದೊಳ್ ಸೊಗಯಿಸಿದುವು (ಸಮ್ಯಕ್ತ್ವ. ೦೦-೨೫). [ ದಡಲ್ + – ಅನೆ$_1$ ]

**ದಡಸಲು** (ನಾ). ಒಂದು ಬಗೆಯ ಮರ : ಬಾಳೆ . . . (ಪರೂಷಕ) ದಡಸಲಹಣ್ಣು, ಅವಾತ್ರ . . . ಇವುಗಳ ಫಲಗಳು ಪೌಷ್ಟಿಕ (ಅಷ್ಟಾಂಗ. ೧೪೫-೧೦೭-೦೨೦). 'ತಡಸಲ್ಲು' ಪರಾ. [ ? ]

**ದಡಸು** 'ದಳಸು' ನೋ.

**ದಡಸೂಸು** (ಕ್ರಿ). ದಡಮೀರಿ ಹರಿ : ಅಂಚನ್ನು ಮೀರು ; ತುಂಬಿ ಹೊರಬರು ; ತುಂಬಿ ಹರಿ : ತುಳುಕಿದ ಮಧುರಸ ದಡಸೂಸೆ ಪರಿವ ಪೆರ್ಬೊಳೆಯೆಸೆದುದನೀಕ್ಷಿಸಿದ (ಮೋಹತ. ೫-೨೩).
[ ದಡ$_3$ (<ತಡ$_2$) + ಸೂಸು$_1$ ]

**ದಡಾಣಿ** 'ದಡಾಲಿ' ನೋ.

**ದಡಾರ್** (ನಾ). ಒಂದು ಅನುಕರಣ ಶಬ್ದ : ಗಾಳಿಗೆ ಬಾಗಿಲು ದಡಾರ್ ಎಂದು ಮುಚ್ಚಿಕೊಂಡಿತು (ರೂಢಿ).

**ದಡಾರ** (ನಾ). ಮೈಮೇಲೆಲ್ಲಾ ಗುಳ್ಳೆಗಳಾಗಿ ಬಾಧೆಯನ್ನುಂಟು ಮಾಡುವ, ಸಾಮಾನ್ಯವಾಗಿ ಮಕ್ಕಳಿಗೆ ಬರುವ ಅಂಟುರೋಗ : ಮಕ್ಕಳಲ್ಲಿ 'ದಡಾರ' (Measles) ಕಾಣಿಸುವುದಕ್ಕೆ ಮುಂಚೆ ಕಣ್ಣು ಕೆಂಪಾಗಿ ನೀರು ಸುರಿಯುವುದುಂಟು (ನಿಮ್ಮಆ. ೦೫೯) ; ಇದು ಮಕ್ಕಳ ಕಾಯಿಲೆ. ಮೈಮೇಲೆ ದಡಾರ ಬರೋದು. ಒಮ್ಮೆಯಲ್ಲ, ಒಮ್ಮೆ ನಮಗೆಲ್ಲರಿಗೂ ಬರುತ್ತೆ (ತಾಯಿ. ೦೫೬) ; ಮಕ್ಕಳಿಗೆ ದಡಾರವೆದ್ದಾಗ ತಾಯಂದಿರು . . . ಮಾರಿಗುಡಿಗೆ ಪ್ರಯಾಣಬೆಳೆಸುವುದನ್ನು ನಾವು ಇಂದೂ ನೋಡುತ್ತಿದ್ದೇವೆ (ಕೆಲಂಆ. ೧) ; ನಮ್ಮ ದೇಶದಲ್ಲಿ ದಡಾರ ಇಳಿದ ತಕ್ಷಣ ಬೇವಿನಸೊಪ್ಪು ಮತ್ತು ಅರಶಿನ ಅರೆದು ಹಚ್ಚಿ ಸ್ನಾನ ಮಾಡಿಸುವರು (ಗೃಹವಿ. ೦೫೦). 'ಗೋಣಿದಡಾರ' ಪರಾ. [ ? ]

**ದಡಾರನೆ** (ಅ). ದಡಾರ್ ಎಂಬ ಶಬ್ದದೊಂದಿಗೆ : ದಡಾರನೆ ಬಾಗಿಲು ಮುಚ್ಚಿತು (ರೂಢಿ). [ ದಡಾರ್ + – ಅನೆ$_1$ ]

**ದಡಾಲಿ**, ದಡಾಣಿ (ನಾ). ದಪ್ಪನೆಯ ಹೆಂಗಸು : (ಪ). ದಡಾಣಿ : (ಪ.) ದಡಾಲ್ದಿಮ್ಮಿ, ದಡರದಿಮ್ಮಿ=ಗಟವಾಣಿ; ಗಯ್ಯಾಳಿ: ದಡಾಲ್ದಿಮ್ಮಿಯ ಹಾಗೆ ಆಡಿದರೆ ಜನ ನಗುತ್ತಾರೆ (ರೂಢಿ). ದಡರದಿಮ್ಮಿಯ ಹಾಗೆ ಆಡಬೇಡ (ರೂಢಿ). [ ? ]

**ದದಾಳಿ** (ನಾ). (?): ಬಿಂಕದ ಬಿರುದಂಕದ ವಿದಾಯದ ದದಾಳಿಯ ವೀರಾಳಾಪದ ವಿಪುಳಪ್ರತಾಪದ ಬನ್ನಣೆಯ ಬಿನ್ನಣದ ರನ್ನದೋರಣದ . . . ಮಿಂಚಿನ ಸಂಚುಮದಂತೆ ಮುಂಚುವ ಸರಳಸುಗೆಯು ಕೌತುಕದ ಕಡುಗಲಿ ಬಿಲ್ಲಾಳ್ಗಳ ಬೆಂಬಲವಾಗಿರ್ದಂ (ಹಮ್ಮಿ.ರ. ೩-೩೩ ವ). [ ? ]

**ದಡಿ$_1$**, ದಡೆ$_1$ (ನಾ. ೧. ಬಿದಿರಿನ ಕೋಲು; ಬಡಿಗೆ: "ವೈಣವಂ ಯಷ್ಟಿ ರಂಭಾದಂಡವೆನಲು ದಡಿ" (ಮಂಗರಾ. ೧೩೧-೨೦); ತಲೆಯಂ ದಡಿಯಿಂ ಪೊಯ್ದಂ (ಧರ್ಮಾಮೃ. ೭-೧೦೫); ಗುಡಿಯೊಳಗಿರ್ದು ಗುಡಿಯ ನೇಣ ಕೊಯಿದರೆ ಗುಡಿಯು ದಡಿ[ಪಾಠಾಂ. ದಂಡಿಗೆ]ಬಿದ್ದು ಹಲ್ಲು ಹೋಹುದು ನೋಡಾ (ಬಸವ. ೫೬೬); ದಡಿಯಂ ಪಿಡಿದಬ್ಬರಿಸುತ್ತುಮಿರ್ಪ . . . ತತ್ಪುರೀಜನದ ಪೊದಟ್ಟ ತಲ್ಲಣದ ಮಲ್ಲಣ ಬೀದಿಯೊಳಾದುದದ್ಭುತಂ (ಪಢಳು. ೩-೫); ಗೂಢಗರ್ಭವನಿದ ನೋಡೆಲ್ಲೆನೆಂದವ ಕೂಡಿ ಬಡಿದು ದಡಿಯೊಳಗೆ ಜೋಡ ನೀನೆಸಗಿದುದಕೆ . . . ಸಮಮಾಡಿಸದಾನು ಬಿಡುವೆನೆ (ಅಂಜನ. ೯-೩೩); ನಿನ್ನ ತಲೆಗೊಂಬೆವೆಂದು ದಡಿ ಗುಂಡು ಬಡಿಯಂ ಕೊಂಡು ನೆಲದಿನಾಕಾಶಂಬರಂ ಬೆಳೆದು ಘುಡುಘುಡಿಸಿ ಬೆದಱಿಸುತ್ತಿರಲು (ಸಮ್ಯಕ್ತ್ವ. ೮-೬೨). (ಗು). ೨. ದಪ್ಪವಾದ; ಗಾತ್ರದಿಂದ ಕೂಡಿದ. 'ದಡಿಗೋಲು' ಪರಾ. ದಡೆ$_1$: ೧. ಎಱದು ಸತ್ತರ್ ಅಂಕನ್ ದಡೆಯ ಬಡಿದು ಸುರಾಂಗನೆಯೊಳ್ಕರದನಾತಗೆ ಕೊಟ್ಟ (ಎಕ. X, ಶ್ರೀನಿವಾ. ೬೪,೪: ಹು. 930); ಕಾಬ ಕಣ್ಣಿದ್ದು ಕನ್ನಡಿಯ ನೋಡುವನಂತೆ ನಡೆವ ಕಾಲಿದ್ದು ದಡೆಯನೂಱಿ ನಡೆವವನಂತೆ (ಮೋಳಿಮಾ. ೧೬೭-೬೨೫).

ದಡಿಯ ಕೈಯವರು = ಕೋಲನ್ನು ಹಿಡಿದಿರುವವರು: ಬಡದ ನಾಯಕವಾಡಿ ಚೂಣಿಯ ಹಿಡಿದು ಕಾದಿತ್ತುಭಯರಾಯರು ದಡಿಯ ಕೈಯವರಿಂದ ಕವಿಸಿದರಂದು ಸಬಳಿಗರ (ಕುಮಾರ್ಕೃಣೀ. ೪-೩೪).

[ ದೇ.೫ ತಮಿ. ಮಲ. ತಟಿ ]

**ದಡಿ$_2$** 'ತಡಿ$_2$' ನೋ.

**ದಡಿ$_3$** 'ತಡಿ$_3$' ನೋ.

**ದಡಿಕಾಱ** (ನಾ). ಕೋಲನ್ನು ಹಿಡಿದಿರುವವನು; ದಂಡಧಾರಿ; ಕಟ್ಟಿಗೆಕಾರ; ವೇತ್ರಧಾರಿ: ಇಬ್ಬರು ದಡಿಕಾಱರು ಬಾಗಿಲ ಕಾಯ್ದಿಪ್ಪರು (ಅವಹಂ. ೨೨೨-೧೦೦೮); ಗಡಬಡಿಸದಿರಿ ಗದಱಿಕೊಳ್ಳದಿರಿ ಮೂಲೋಕದೊಡೆಯನ ಸಮ್ಮುಖಮದಲ್ಲೆಂದು ದಡಿಕಾಱರುಗಳಡಿಗಡಿಗೆ ಪೇಳುತಿಹರು (ಚತುಶು. ೦-೨-೧೦೦). [ ದಡಿ$_1$ + - ಕಾಱ ]

**ದಡಿಕೆ** (ನಾ). (ಕರಾ) ಬಾಸುಳು; ಬಾಸುಂಡೆ: ಅವರು ರಾಕ್ಷಸರ ಹಾಗೆ ಈ ಮಗುವನ್ನು ಬಡಿಯುವಾಗ ಸುಮ್ಮನಿರಬೇಕೇ? ನೋಡು. ಇದರ ಬೆನ್ನು ಹೇಗೆ ಕೆಂಪಾಗಿ ದಡಿಕೆ ಬಂದಿದೆ (ಮುಗಿಯು. ೯೫).

[ ← ತುಳು. ದಡಿಕೆ ]

**ದಡಿಗ, ಧಡಿಗ** (ನಾ). ೧. ದೊಣ್ಣೆಯನ್ನು ಹಿಡಿದವನು. ೨. ಶೂರ; ಬಲಶಾಲಿ: ಸಡಿಲ್ದ ಪಾಲಿಗೆವಂದರಂ ಕರ್ಚಿ ಕೈಯಿಡ್ದಾಯುಧವನೀಡಾಡಿ ದಡಿಯಂ ಕೊಂಡು ಪರಿವ ದಡಿಗರುಮಂ (ಲೀಲಾವ. ೫-೧೩೪ ವ); ಕಾಲಾಳ್ಗಳಿಂ ಪಿಡಿದೀಡಾಡಿಯುಮಿರ್ದಿಯುಂ ತಿರಿಪಿಯುಂ ತೇದುಂ ತೆಱಂಬೊಯ್ದುಮಾ ದಡಿಗಂ ದಾನವನಂದದಿಂ ಕೆಡಪಿದಂ ಸಂಗ್ರಾಮರಂಗಾಗ್ರದೊಳ್ (ಮಹಾನೀ. ೧೨-೨೦೪); ದಡಿಗ ಕಾಳೆಗಕ್ಕೆದಲಾಕ್ಷಣ ಪೊಡವಿಸುತೆಗೆಡಗಣ್ಣ ಕುಣಿದುದು (ಕಾಶಿರಾ. ೦೦-೩೨); ಪೊಡೆಯರಿದ್ದಾಮನೆಯ ಪೊಕ್ಕುದೆ ನೋಡನುತ ಕೋಪವನು ಪಿಡಿದಾ ದಡಿಗನಪ್ಪಳಿಸಿದರೆ ಘಾಯಕೆ ಹಿಂದೆ ತಿರುತಿರುಗಿ (ಕೃಷ್ಣಾಳ ೨೦-೦೯). ೩. ದಾಂಡಿಗ; ದಡಿಯ: ದಡಿಗನ ಮಿಟ್ಟುವಂ ಮಿಡಿದೊಡಲ್ಲದೆ ಮಾಣೆನವೋಘಮೆಂದು ಕೂರ್ಪುಡುಗನೆ ಬಂದು ತಾಗೆ ಯಮಳರ್ ತಡೆಗೊಂಡೊಡೆ ತಾವುಮೆವ್ವೊಳಂ ತೊಡರ್ದಪರ್ (ಶಂಕಥಾ. ೧೨-೦೬೨); ಮಿಂಚುದಲೆ ಒಣಕರುಂ ನಿಡುಗಯ್ಯ ದಡಿಗರುಂ . . . ಕಂಪ್ಪಿರಲು (ಪಾಗೀರ. ದೀ. ೨೫೪-೨೨); ಕಡುಗಾಯ್ದ ಲೋಹರಸಮಂ ಕುಡಿಯೆಂದವರೊಡದು ಪಾಯೊಳೆಱೆವರ್ಕಳ್ಳಂ ಕೂಡಿದ ಕಡುಪಾಪಿಯುವನೆಂ . . . ದಂಡಿಸುತ್ತುಮಿರ್ಪರ್ದಡಿಗರ್ (ಶಾಸ್ತ್ರಟೀ. ೫೧-೫); ದಡಿಗಂ ರಕ್ಕಸನನ್ನಿದಿರ್ಗೆ ಮುಳಿಸಿಂದೆಬ್ಬಂದನಾ ಶೈಲದಿಂ (ದಶಕು. ೧೨-೩೪). ೪. ಒಬ್ಬಾತನ ಹೆಸರು: ಗಂಗಗಚ್ಚಿನ ಪಿರಿಯ ಮಗಂ ದಡಿಗಂ ವಯ್ಯೊನ್ನವಾಸಿಯಾದೊಡ ದಡಿಗೇಸ್ವರಮನ್ನಾ ದೇಗುಲಮಂ ಮಾಡಿಸಿದಂ (ಎಕ. IX. ಚೂಗಡಿ. ೬೫-೦೫; 960); ರಾಮ ಲಕ್ಷ್ಮಣರ್ಗ್ಗೆ ದಡಿಗ ಮಾಧವರಂದು ಪೆಸರನಿಟ್ಟು (ಎಕ. VII, ಶಿವಪ್ರ. ೪-೨೫; 1133). (ಗು). ೫. ದೊಡ್ಡದಾದ; ಎತ್ತರವಾದ: [ವಿ]ಷ್ಣು ಭಟ್ಟೋಪಾಧ್ಯಾಯರಿಂಗೆ ಕೊನಿಗಾರಗದ್ದೆಯೊ[ಳಗೆ] ದಡಿಗ ಮೂಡೆ ೩ (ಎಇ. XXVII, ೧೬೨-೪೭; 1256); ದಡಿಗ ರಕ್ಕಸಿಯರಂತಾ ನೀಱೆಯಾಳಿಯರೊಡನೆಳ್ದೊಂದು ಬೇಗದೊಳು ಜಡಿದು ಕೆಡಪಲೆಳ್ದು ಬಂದಾ ಕಾವಯಕಿ ತೊಡಾ ಪಿಡಿದಳು ಮತ್ತವನ (ಕಂರಾಸಾಂ. ೩೨-೧೦೩). 'ದಡಿಗವೆಣ' ಪರಾ. ೬. ಬಲಿಷ್ಠವಾದ; ಶೌರ್ಯದಿಂದ ಕೂಡಿದ: ಕಿಡಿಗಣ್ಣ ದಡಿಗಜಟ್ಟಿಗರ ಗರ್ಜನೆಗಳಿಂ ನಿಡುಗರುಳ ಮಾಲೆಯಿಂ ತಳೆದ ಸುರಮುನಿಗಳಿಂ . . . ದುರ್ಗಾನಿಲಯಮುಮಂ ಮಹೋದ್ಯೋಗದಿಂ ವಸುಧಾಧಿಪಂ ಪೊಕ್ಕನತಿಮನೋರಾಗದಿಂ (ದಶಕು. ೫-೫ ರಗಳೆ); ದಡಿಗ ಕಱಿಗಳನೇಳನೇಳಾಳೊಡನೆ ಕೊಂಡುರು ಕ್ರಮದಿ ತಿದ್ದಿದರೊಡನೆ (ಹಾಳ್ಳಥಾ. ೧೭-೭೪). **ಧಡಿಗ**: ೭. ಕೊಂತ ಭಲ್ಲೆಯ ಶೂಲ ಸಬಳದಲಿ ಇಡುಂತ ಬಾಣದಲೆಸುತ ಕವಿದರೆ ಧಡಿಗ ದಾನವರೆರಡುಕಡೆಯಲಿ ಜಡಿದು ಹೆಮ್ಮರದಿಂದ ಹೊಡೆದೀಡಾಡಿದನು ಹನುಮ(ಕಾಶಿರಾ. ೧೧-೨೭).

[ ದಡಿ$_1$ + - ಗ$_2$ ]

**ದಡಿಗಯ್ಯ** 'ದಡಿಗೆಯ್ಯ' ನೋ.

**ದಡಿಗವಟ್** (ನಾ). ೧. ಒಂದು ಊರಿನ ಹೆಸರು. ೯ ಈಗಿನ ಬೆಂಗಳೂರು ಜಿಲ್ಲೆಯ ನೆಲಮಂಗಲ ತಾಲ್ಲೂಕಿನ ದಡಿಗವಾಡಿ: ಶ್ರೀ ಸತ್ಯಯೂನಾಳೆ ದಡಿಗವಟ್ಟಿಯ ಮಸಿಕಲ್ಲಗಾವುಣ್ಡನ ಮಗಂ ಮಟ್ಟಗಂ ಸೆಡೆಯಲ್ಲಾಕನ ಕಾಳೆಗದೊಳ್ ಸತ್ತಂ (ಮ್ಯುಆರಿ. ೦೯೩೬, ೪೨-೦; ೯೦೦). ೨. ಒಂದು ಪ್ರದೇಶದ ಹೆಸರು (?): ದೇವರ್ಗ್ಗೆ ನಿವೇದ್ಯಕ್ಕಂ ನನ್ದಾದೀವಿಗೆಗನ್ದಡಿಗವಟ್ಟಿಯಾದ ವಿಕ್ರಮ ಚೋಳಮಣ್ಡಲದ ಕುಕ್ಕನೂರ್ನ್ನಾಡ ನಾಟ್ಟಾವುಣ್ಡಾಂ ಗಂಗಗಾವುಣ್ಡನ ಮಗಂ ರಟ್ಟಕುಳಕಾಲ ಚೋಳಗಾವುಣ್ಡಂಗಂ . . . ಗಟ್ಟಿಯುಂ ಕೊಣ್ಡಂ (ಎಕ. IX, ನೆಲಮಂ. ೧-೮: 1029). [ ? ]

**ದಡಿಗವೆಣ** (ನಾ). ದೊಡ್ಡ ಗಾತ್ರದ ಹೆಣ: ಉಡಿದಿರ್ದ ಕಯ್ದು ನೆತ್ತರ ಕಡಲೊಳಗಡಿಗಡಿಗೆ ತಳಮನಾರ್ಚುತ್ತಿರೆ ಕಾಲಿಡಲೆಡೆವಡೆಯದೆ ಕುರುಪತಿ ದಡಿಗವೆಣಂಗಳನೆ ಮೆಟ್ಟಿ ನಡೆಯುತ್ತಿರ್ದಂ (ಗದಾಯು. ೪-೦೪)

[ದಡಿಗ + ಪೆಣ]

**ದಡಿಗಸೆಟ್ಟಿ** (ನಾ). ಒಬ್ಬಾತನ ಹೆಸರು: ಶ್ರೀಮತ್ ಸ್ವಸ್ತ್ಯನೇಕ ಗುಣಗಣಾಲಂಕೃತರಪ್ಪ ದಡಿಗಸೆಟ್ಟಿಯರ ದೇವರದಾಸಯ್ಯನ ಅಬ್ಬೆಗಳ್ (ಎಕ. XV, ಹೊಳೆನ. ೬೭-೪; ಹು. 950). [ ದಡಿಗ + ಸೆಟ್ಟಿ ]

**ದಡಿಗಾಳು** (ನಾ). ದಪ್ಪವಾದ ಕಾಳು: ದಡಿಗಾಳುಗಳು ಬೇಗನೆ ಬೇಯುತ್ತವೆ (ರೂಢಿ). [ ದಡಿ$_1$ + ಕಾಳು$_2$ (<ಕಾಟ್$_3$) ]

**ದಡಿಗಿರಿ** (ನಾ). ದೊಡ್ಡ ಬೆಟ್ಟ; ಭಾರಿ ಪರ್ವತ: ಕಿಡಿಗಳನು ಕಂಗಳಲಿ ಕಾಱುತ ದಡಿಗಿರಿಗಳನು ದಾಡೆಯಿಂದವೆ ಕೆಡಹುತಾಗಳೆ ಹರಿದ ರಾಕ್ಷಸಗಾಗಿ ಹರಿ ಬಳಿಕ (ಸಂಭವ. ೭-೩೬). [ ದಡಿ + ಗಿರಿ$_1$ ]

**ದಡಿಗೆಯ್ಯ, ದಡಿಗಯ್ಯ, ದಡಿಗೈಯ** (ನಾ). ಕೋಲನ್ನು ಹಿಡಿದಿರುವವನು; ದಂಡಧರ; ಯಮ: "ಜವಸಱಿಂ ದಮ್ಮನು ದಡಿಗೆ[ಪಾಠಾಂ.

ಗ]ಯ್ಯ . . . ನೇಸಱಣುಗನೆನಲಂತಕನೊಳಿಡೆವಿಡದ ನಾವು" (ಶಬ್ದಮಂ. ೦೩).

**ದಡಿಗಯ್ಯ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. **ದಡಿಗ್ಗೆಯ:** "ದಡಿಗ್ಗೆಯನೆಂದೆನಲ್ ದಮ್ಮನೆಂದೆನಲಂತಕಂ" (ಶಶರ. ೫೦). [ ದಡಿ$_1$ + ಕೆಯ್$_2$ + – ಅ$_7$ ]

**ದಡಿಗ್ಗೆಯ** 'ದಡಿಗೆಯ್ಯ' ನೋ.

**ದಡಿಗೊಳ್** (ಕ್ರಿ). ಕೋಲನ್ನು ಹಿಡಿ; ದಂಡ ಹಿಡಿ: ಪುರವರವನು ನೆಱೆ ಕವಿಸಿದ ವಜ್ರಖರ್ವರವನುದ್ಧತ ಗದೆಯಿಂದ ಭರದಿ ಪೊಡೆಯಲದು ದಡಿಗೊಂಡ[ ಡು ] ಮಣ್ಣ ಬಗ್ಗರೆಯುಸೊಡೆದ ತೆಱನಾಯ್ತು (ನೇಮಿನಂ. ೨೫-೫೨). [ ದಡಿ$_1$ + ಕೊಳ್$_1$ ]

**ದಡಿಗೋಲು** (ನಾ). ದಪ್ಪವಾದ ಕೋಲು; ಲಾಠಿ: ಆಗುಳ್ಗೆ ಎಂಬ ದಡಿಗೋಲಿನಲ್ಲಿ ಅಗಡದ ಎಮ್ಮೆಯ ಚರ್ಮವ ತೆಗೆದು ಉಭಯನಾಮವೆಂಬ ನಾರಿನಲ್ಲಿ ಕಿತ್ರಿಯನೊಪ್ಪವ ಮಾಡಿ (ಸವಚ. ೧೦೭-೫೫೪). [ ದಡಿ$_1$ + ಕೋಲು$_1$ (<ಕೋಲ್$_1$) ]

**ದಡಿತ** (ನಾ). (?): ಕಡಿಯನಾಗುವವೆಡಕ್ಕೆ ಕೆತ್ತುವ ನಿಡುಗಿವಿಗಳುಂ ಕಿಱಿದ ಹಲ್ಗಳು ದಡಿತ[ಪಾಠಾಂ. ದ]ವುಂಡೆಯ ಮೇಲೆ ಪಿಡುಕುವ ಬಾಲವಾಯ ತದಿ (ಸಾಳ್ವಭಾ. ೫-೩೦). [ ? ]

**ದಡಿದೋಳ್** (ನಾ). ದಪ್ಪವಾದ ತೋಳು: ಪೇರೊಡಲುರ್ವಿನಿಂದ ದಡಿದೋಳ್ಗಳ ಕೊರ್ವಿನಿಳಾತಳಾಗ್ರದೊಳ್ ಬೀಱುತೆ ತಮ್ಮ ಮಂತ್ರಚಯಮಂ (ಹಾಲಾಸ್ಯ. ೨-೦೩-೨೦). [ ದಡಿ$_1$ + ತೋಳ್ ]

**ದಡಿದೋತ್ರ, ದಡಿಧೋತರ, ಧಡಿದೋತರ** (ನಾ). ಅಂಚುಳ್ಳ ಪಂಚೆ: ಮಣಿದೊಡವಿನ ಪೆಡಗೆ ಪಾಗು ದಡಿದೋತ್ರದ . . . ಮಟ್ಟಿಗರೆಸೆದರ್ (ಹಮ್ಮೀರ. ೬-೦೯). **ದಡಿಧೋತರ:** ಶರೀಫರು . . . ತುದಿ ಕಾಲ್ಬೆರಳು ಗಳು ಮುಚ್ಚುವಂತೆ ನಿರಿಗೆ ಹೊಯ್ದು ದಡೀಧೋತರವನ್ನು ಉಡುತ್ತಿದ್ದರು (ಶರೀಫ. ೬೦ ಕವಿಕಾವ್ಯ ಪರಿಚಯ). **ಧಡಿದೋತರ:** ಗದಗನ್ನು ದಾಟುತ್ತಲೆ ಚುಂಗುಬಿಟ್ಟು ಧಡಿದೋತರ ಉಟ್ಟ ಜನರು . . . ಕವ್ವುಮುಖದಲ್ಲಿ ಮುಳುಗಿಹೋದ ಸಾದಿನ ಬೊಟ್ಟು ಇಟ್ಟುಕೊಂಡ ಬಾಲಕಿಯರು–ಇವರೇ ತುಂಬಿಬಿಟ್ಟರು (ಮುಂಗಾರು. ೨೭). [ ದಡಿ$_2$ (<ತಡಿ$_2$) + ದೋತ್ರ (<ಧೋತ್ರ) ]

**ದಡಿಧೋತರ** 'ದಡಿದೋತ್ರ' ನೋ.

**ದಡಿಯ$_1$, ಧಡಿಯ$_1$** (ನಾ). ೧. ಬಲಶಾಲಿ; ಶಕ್ತ; ಶೂರ: ಕೈದು ವಿಡಿಯನಾಂ ನಿನಗನಾಯುಧಂಗೆಂದು ಕೈಯ ಪಾವಂ ವಿನತಾತನಯಂ ಬಿಸುಡುವ ಪೋಲ್ ತೊಟ್ಟನೆ ಬಿಸುಟಂ ಪಿಡಿದ ಬಡಿಯನಂತಾ ದಡಿಯಂ (ಚಂದ್ರಪ್ರ. ೫-೭೭). ೨. ದಾಂಡಿಗ; ಟೊಣಪ: ಯಾವ ಕೆಲಸಕ್ಕೂ ಬಾರದ ದಡಿಯ ಅವನು (ಲೂಢಿ). **ಧಡಿಯ$_1$:** ೨. ಅವತ್ತು ಅಂಗಡಿಗೆ ಹೋಗದೆ ಮುದಿ ತಾಯಿಯನ್ನೇ ಕಳುಹಿಸಿದ ಧಡಿಯ (ಹೊಸಕ್ಕ. ೦೨೭). 'ದಡಿಗ' ಪರಾ. [ ದೇ.॥ ತಮಿ. ಮಲ. ತಟಿಯ ]

**ದಡಿಯ$_2$** 'ಧಡ$_1$' ನೋ.

**ದಡಿವಲೆ** (ನಾ). ಒಂದು ಬಗೆಯ ಬಲೆ; ದಡಿಗಳನ್ನುಳ್ಳ ಬಲೆ: ಬರಿಯಂ ಬಿಡದ ಹೊಡವ ದಡಿವಲೆಗೆ ನೊಂದಡೆ ಮೆಳೆಯ ಹೊಕ್ಕು ನೇಣ ಕಡಿವುತಿರೆ (ಸೋಮಚ. ೩-೦೨); ಸರಳ ಸೊಂಪಿನ ಸೋಹಿನಲಿ ನಿಱುಗರುಳ ದಾವಣಿವಲೆಗಳಲಿ ಸಂಗರದ ಸುಭಟವ್ರಜದ ಮಧ್ಯದ ಗೂಡುವಲೆಗಳಲಿ ಉರುಗದೆಯ ದಡಿವಲೆಯಲಸಿ ಮುದ್ಗರದ ಸಿಡಿವಲೆಗಳಲಿ ಸಮರದೊಳಿಂ ಮೃಗವ್ರಾತವನು ಭೀಮಕಿರಾತ ಕೈಕೊಂಡ (ಕುಮಾರವ್ಯಾ.ದ್ರೋ. ೦೨-೩೦): ಒಡ್ಡಿದರು ದಡಿವಲೆಯ ಸಿಡಿವಲೆ ಕಡ್ಡಿವಲೆ ಕುಣಿವಲೆಯನೆಗಲಕೆ (ತೊರವ. ೩-೩-೦೨); ತನ್ನಾಳ್ದನಂ ಬೇಂಟೆಯೊಳ್ ಮೆಚ್ಚಿಸಿ ಬಸಂಗೆಯ್ದುವೆನೆಂದು ದಡಿವಲೆಗಳಂ ಬಡಿಕೋಲ್ಗಳಂ ಅಂಟುಗಳಿಗಳಂ ಕಾಲ್ಗಣ್ಣಿಗಳಂ ಗಿಡುಗ ಸಾಳುವ ಜಾಯಿಲಂಗಳಂ ದೀಹದ ಮಿಗವಕ್ಕಿಗಳಂ ತರಿಸಿರಿಸಿ (ಚಿಕದೇವ. ೫-೦೬). 'ತಡಿವಲೆ' ಪರಾ. [ ದಡಿ$_1$ + ಬಲೆ$_1$ ]

**ದಡಿವಿಡಿ** (ಕ್ರಿ). ಕೋಲನ್ನು ಹಿಡಿ; ದಂಡವನ್ನು ಹಿಡಿ: ದಡಿವಿಡಿದು ಧಟ್ಟಿಸುತೆ ನಂದಿಮಾಕಾಳರತಿಬಳನಸಿತಗಳನ ಸಮ್ಮುಖದೊಳಿರ್ದರುನ್ನತಿ ವೆರಸಿ ಸಲುಗೆಯಿಂದೆ (ಸಿದ್ಧೇಶು. ೦-೪೩); ಅಧಿಕಾರದ ತಲೆಸುತ್ತು, ಕಕ್ಕಸದ ಎದೆ, ಕಿಡಿಕಣ್ಣುಗಳಿಂದ ದಡಿವಿಡಿದು ಹುಲಿಗಳಂತೆಯೇ ಬಂದು ಮದುವೆಯ ಮನೆಯನ್ನು ನುಗ್ಗಿದರು (ಕಾಲೂರ. ೦೫ ಕಥಾಸಾರ). [ ದಡಿ$_1$ + ಪಿಡಿ$_1$ ]

**ದಡಿವೊಯಿಲ** (ನಾ). ದೊಣ್ಣೆಯಿಂದ ಹೊಡೆಯುವವನು: ಕಡವೆಗ ತ್ಯಾಸ್ವಾದಿಯೆಂಬ ನಂಬೊಲಗಳಿಗೆ ದಡಿವೊಯಿಲನೆಂಬ ಕರಡಿಯ ಗಂಡನೆಂಬ ಬಟ್ಟಡೆ ಕೋಳ ಜಜ್ಜಾರನೆಂಬ ನರಿದಿನಿಹಿಯೆಂದೆಂಬ ಕುನ್ನಿಗಳನಾಯ್ದು ಗಡಣದಿಂ ಬೇಡವಡೆಯೊಡೆಯರೆಲ್ಲರು ನೆರೆದು (ಹರಿಕಾ. ೫-೭); "ಕೋಲಿನ ಏಟು; ದೊಣ್ಣೆಯ ಪೆಟ್ಟು" (ಹರಿಕಾ. ಕೋಶ). [ ದಡಿ$_1$ + ಪೊಯಿಲ್ (<ಪೊಯ್ಯು) + – ಅ$_7$ ]

**ದಡಿಸೀರೆ** (ನಾ). ಅಂಚಿನ ಸೀರೆ: ದಡಿಸೀರೆ ದುಡಿಸೀರೆ ಪೊಸಸೀರೆಗಳನುಟ್ಟು ನಡು ಕನಕರುಚಿ ಪೊಲ್ಲ ಕುಬುಸಗಳನುರೆ ತೊಟ್ಟು (ಸಿದ್ಧಕಾ. ೮-೦೨); ರಂಗೀಲಿ ಉಟ್ಟೇರಿ ರೇಸ್ಮಿ ದಡಿಸೀರೆ ಮಾತ್ರ ಹುಂಗನೂಲಿನ ಪರವಿ ಮರತವ್ವ ನಾರಿ (ಚರೀಫ. ೨೦-೩). [ ದಡಿ$_2$ (<ತಡಿ$_2$) + ಸೀರೆ$_2$ ]

**ದಡುಂ** (ನಾ). ಒಂದು ಅನುಕರಣ ಶಬ್ದ: (೬).

**ದಡುಕಿಸು** (ಕ್ರಿ). (?): ಕಡಿಯಲು ಖಡ್ಗದ ತಲೆಯನು ಮಡದಿಯ ಶಿರ ತಾಗಿದಾಗ್ಯು ಛೇದಿಸದಿರಲಾ ಪೊಡವಿಪ ಚಿಂತಿಸಿ ಮನದೊಳ್ ದಡುಕಿಸಿ ತಾ ಪುನಹ ಕಡಿಯೆ ಸುರಗಣ ಮೆಚ್ಚಲ್ (ಹಮಚ. ೨೦೩). [ ? + – ಇಸು$_3$ ]

**ದಡೂತಿ** 'ಧಡೂತಿ' ನೋ.

**ದಡ್ಡೆ$_1$** 'ದಡಿ$_1$' ನೋ.

**ದಡ್ಡೆ$_2$, ದಡ್ಡ$_2$** (ನಾ). ತೂಕಮಾಡುವಾಗ ತಕ್ಕಡಿಯಲ್ಲಿ ಒಂದು ಕಡೆ ಪಾತ್ರೆ ಮೊದಲಾದುವನ್ನು ಇಟ್ಟು, ಅದರ ತೂಕಕ್ಕೆ ಸರಿಯಾಗಿ ಮತ್ತೊಂದು ಕಡೆ ಇಡುವ ಬಟ್ಟು, ಕಲ್ಲು ಮುಂತಾದ ವಸ್ತು; ಪೇರು; ಕಾಣಿ. 'ದಡಕಟ್ಟು' ಪರಾ. ದಡ್ಡ$_2$. 'ದಡಕಟ್ಟು' ಪರಾ. [ ದೇ.॥ ತಮಿ. ತಟ್ಟೆಯ; ತೆಲು. ದಡ ]

**ದಡ್ಡೆ$_3$** 'ಧಡ$_1$' ನೋ.

**ದಡೆಕಟ್ಟು, ದಡಕಟ್ಟು** (ಕ್ರಿ). ತಕ್ಕಡಿಯಲ್ಲಿ ಪಾತ್ರೆ ಮೊದಲಾದುವುಗಳ ತೂಕವನ್ನು ಸರಿದೂಗಿಸುವಾಗ ಮತ್ತೊಂದು ಕಡೆಗೆ ಬಟ್ಟು, ಕಲ್ಲು ಮುಂತಾದ ಸಾಮಗ್ರಿಯನ್ನು ಹಾಕಿ ತೂಕವನ್ನು ಸಮತೋಲನ ಗೊಳಿಸು; ಪೇರುಕಟ್ಟು: ದಡೆಕಟ್ಟಿ ಬೆಣ್ಣೆ ತೂಗು (ಲೂಢಿ). **ದಡಕಟ್ಟು:** ತೂಗುವ ಮುಂಚೆ ದಡಕಟ್ಟು (ಲೂಢಿ). [ ದಡ್ಡೆ$_2$ + ಕಟ್ಟು$_1$ ]

**ದಡೆಮಾರು** (ನಾ). (?): ಆ ಮೇಳಣ ದಡೆವಾರಂಗಳಲ್ಲಿ ಮುಡಿ ೪ (ಇಅ. V, ೭೨-೩೬; 1587). [ ? ]

**ದಡೆಯ** 'ಧಡ$_1$' ನೋ.

**ದಡ್ಡ$_1$** (ನಾ). ಹೊಂದಿಕೆ; ಜೋಡಣೆ; ಸೇರಿಕೆ; ಒತ್ತಾಗಿರುವಿಕೆ: "ಗಾಢದೊಳೆ ದಡ್ಡಂ" (ಕರ್ನಾಟಿ. ೬೦). 'ದಡ್ಡಕ್ಕರ' ಪರಾ. [ ದೇ.॥ ತೆಲು. ಜಡ್ಡ ]

**ದಡ್ಡ$_2$, ಧಡ್ಡ** (ನಾ). ೧. ತಿಳಿಗೇಡಿ; ಮೂರ್ಖ; ಅಜ್ಞಾನಿ: ಅನುಸರಣೆಯಿಂದ ದಡ್ಡರೂ ದೊಡ್ಡವರಾಗಬಹುದೆ? (ಕಳವಿ. I, ೪೦); ನಾ ಬಲು ದಡ್ಡ (ನನ್ನಹೊ. ೩೨); ದಡ್ಡನಿಗೆ ದೊಣ್ಣೆಪೆಟ್ಟು, ಜಾಣನಿಗೆ ಮಾತಿನ ಪೆಟ್ಟು (ಗಾದೆ). (ಗು). ೨. ತಿಳಿಗೇಡಿಯಾದ; ಮೂರ್ಖ

ತನದ; ಬುದ್ಧಿಯಿಲ್ಲದ: ಅಡ್ಡಬಿದ್ದು ಶಿಷ್ಯನ ಮಾಡಿಕೊಂಬ ದಡ್ಡ ಪ್ರಾಣಿಗಳನೇನೆಂಬೆನಯ್ಯ (ವಚಸಂ. ೧೨೪-೧೧). ಧಡ್ಡ : ೧. ನಮಗ ಧಡ್ಡರು ಅಂತ ಬಯ್ಯೋದನ್ನ ಬಿಟ್ಟು,ನಮ್ಮ ಊರವರು ಅಂತ ತಿಳಿಸಿಕೊಡು (ಕಮ್ಮಟ. ೩೭); ಈಗೇನು ಹೊತ್ತಿಲ್ಲದ ಹೊತ್ತಿನ್ಯಾಗ ಬಿರಡಿ ಹಚ್ಚಿ ಕೊಡಕಾರೊ ಧಡ್ಡ ಪೋಡಿ (ಪ್ರನಿ. ೨೭).

ದಡ್ಡ ದಾಮೋದರ = ಹೆಡ್ಡನಾದವನು ಎಂಬರ್ಥದಲ್ಲಿ ಬಳಸುವ ಒಂದು ಮಾತು : ಅವನೊಬ್ಬ ದಡ್ಡ ದಾಮೋದರ (ರೂಢಿ).

[ ದೇ.॥ ತುಳು. ದಡ್ಡ ; ಕೊಡ. ದಡ್ಡೇ ]

ದಡ್ಡ₃ 'ದಡ್ಡಸ' ನೋ.

ದಡ್ಡಕ್ಕರ (ನಾ). ಹೊಂದಿಕೊಂಡಿರುವ ಅಕ್ಷರ; ಒತ್ತಕ್ಷರ; ದ್ವಿತ್ವಾಕ್ಷರ; ಸಂಯುಕ್ತಾಕ್ಷರ : "ದ್ವಿತ್ವಾಕ್ಷರವದು ದಡ್ಡಕ್ಕರಂ" (ಚಕುನಿ. ೨೪) ; ಬಿಂದು ವಿಸರ್ಗಂ ವ್ಯಂಜನವೊಂದಿದ ದಡ್ಡಕ್ಕರಂ ಪದಾಂತ್ಯಂ ದೀರ್ಘಂ ಬಂದೊಡೆಱ ವನಜಮುಖಿ ಗುರುವೆಂದುಂ (ಛಂದೋಂಬು. ೧-೩೩) : ಓರಿಯರ್ ಸಲಿಪರ್ ದಡ್ಡಕ್ಕರದ ಱಟಕ್ಕೃದೆ ರೇಫವೆರಸಿದ ದಡ್ಡಕ್ಕರಮಂ ಱಟನಾಗದನುಚ್ಚರಿಸಲ್ಕಾಗಿರ್ದ ತೆಱದಿನಂತದು ಶುದ್ಧಂ (ಶಮದ. ೨೪) : ಕಥೆಯನಾಲಿಸಿ ನವರಸಾಂಬುಧಿಯೊಳಾಳದೀ ಕಥೆಯ ನಿಂದಿಸುವರ್ ತಕಾರ ದಡ್ಡಕ್ಕರದ ಕಥೆಗಳಲ್ಲದೆ ಮನುಜರಲ್ಲವದಱಿಂ ಭಕ್ತರೀ ಕಥೆಯ ಕೇಳ್ವು ದೊಲಿದು (ಚಬಪು. ೧-೩೦). 'ಒತ್ತಕ್ಕರ' ಪರಾ. [ದಡ್ಡ₁ + ಅಕ್ಕರ₂]

ದಡ್ಡತನ (ನಾ). ತಿಳಿಗೇಡಿತನ; ಅಜ್ಞಾನ; ಮಂಕುತನ: ದಡ್ಡತನದಿ ಹೀಗೆ ಹೆಡ್ಡೆಯಾಗಿರುವಂತ ಮುದ್ದಿಯಾದರೆ ನಿನ್ನ ನೆನೆಯೆ (ಕಪೋತ. ೦೪-೫೦); ನಾವು ಮೌನದಿಂದಿದ್ದರೆ, ನಮ್ಮ ದಡ್ಡತನವು ಒಂದು ವೇಳೆ ಜನರಲ್ಲಿ ಪ್ರಕಟವಾಗದೆ ಇರಬಹುದು (ಮುಂಬಯಿ. ೪-೪೯) : ತನ್ನ ಮಾತೃಭಾಷೆಯಲ್ಲಿ ಉಪನ್ಯಾಸ ಮಾಡುವುದಂತೂ ಶುದ್ಧ ದಡ್ಡತನ (ಹುಚ್ಚುಹು. ೧೧೦).

[ ದಡ್ಡ₂ + - ತನ ]

ದಡ್ಡಸ, ದಡ್ಡ₃ (ನಾ). ಒಂದು ಬಗೆಯ ಚರ್ಮವಾದ್ಯ; ಡೊಂಬರವನ ಡೊಳ್ಳು; ದೊಂಬರ ಹರೆ : "ದಡ್ಡಸ = ದೊಂಬವಱ" (ಕಮುದ. ೫೨. ೨) ; "ದಡ್ಡಸಮೆಂದು ಡೊಂಬವಱ" (ಕಹಾನಿ. ೦೪) ; ದಡ್ಡಸ ಮೊನಲ್ ಡೊಂಬರೂದುವ ವಾದ್ಯವು" (ಕಶಠ. ೫೦) ; ಪೆಸರ್ ನಿನಗೆ ಕೇಳ್ ಪೊಸರ್ ಪೆಱರ್ಗೆ ನಿನ್ನ ಮೆಯ್ ಡೊಂಬ ದಡ್ಡಸಕ್ಕೆ[ಪಾಠಾಂ. ಮೆಯ್ಗೊಳ್ವ ದಡ್ಡಿಸಕ್ಕೆ] ಗುಱಿಯುಪ್ಪುದೊಡ್ಡಿಱದು ಶಿಂಬರನ್ನಕ್ರಿಯಾವಸಾನವಿರಸಂ ಗಳಿಂದ್ರಿಯಸುಖಂಗಳಿಂತಾದ ಸಂತಸಂ ಗತವಿವೇಕ ಪೇೞ್ ನಿನಗಸಾರ ಸಂಸಾರದೊಳ್ (ಆದಿಪು. ೩-೬೦) : ನಿಮ್ಮ ದಡ್ಡಸದ ಕುಡುಹಿನಾಣತಿ ಯಂತೆಯೇ ಗಳಿಗೂಸಾಡಲಂಳ್ಪ ಡೊಂಬರ ಪೋರಿಯು ನಾನು (ಮುಂತ್ರಕ. ೨೯-೬). ದಡ್ಡ₃ : "ದಡ್ಡ-ಡೊಂಬರ ಡೊಳ್ಳು" (ಗಂಗಾಮಬ. ೦೬೩).

ದಡ್ಡಿ₁ (ನಾ). ದಡ್ಡಳಾದ ಹೆಂಗಸು; ದಡ್ಡೆ : ಅವಳೋ ಶುದ್ಧ ದಡ್ಡಿ (ರೂಢಿ). [ ದಡ್ಡ₂ + - ಇ₂ ]

ದಡ್ಡಿ₂, ದಟ್ಟಿ₂ (ನಾ). ೧. ತೆರೆ; ಪರದೆ; "ಜವನಿಕೆ" (ಚಕುನಿ. ೬. II, ೨೪) ; ಕೂಡೆ ಮುಸುಱುವ ಮಱಿದುಂಬಿಯ ಬಂಬಲಿಂ ಲತೆಗಳುಂ ಕರಿಯ ದಡ್ಡಿಯಂ ಕವಿದಂತೆಯುಂಮಾಗೆ (ಕಾದಂಬ. ೨೦೯); ಗುರುವ ಬಿಜಯಂಗೈಸಿ ಮನೆಕೆ ಪರಿತೋಷ ಪುಟ್ಟಲು ವಜ್ರಪಂಜರದ ದಡ್ಡಿಯದ್ದಂಬಡೆಯಲು (ಸಿದ್ಧರಾ. ೯-೫) ; ರಾಣಿಯು ವಾಸದಂದಳಕೆ ದಡ್ಡಿ ಮುಸುಂಕುವುದುಂಟು ತಮ್ಮ ನೇರಾಣಿಯು ಪೊಂಗಳಂದಳಕೆ ದಡ್ಡಿ ಮುಸುಂಕಿದನಿತ್ತೆ ಭೇದಮಾ ರಾಣಿಯ ವಾಸದೊಳ್ ತವಗೆನಿಪ್ಪ ವಿಳಾಸಿನಿಯರ್ . . . ನಡೆ ತಂದರದೊಂದು ಲೀಲೆಯಿಂ (ಪಾರ್ಶ್ವಪು. ೮-೯೩) : ಕವಿದ ಚಿತ್ರಾವಳಿಯ ದಡ್ಡಿಯ ವಿವಿಧ ಭಟರುಗ್ಗಡಣೆಯಲ್ಲಿ ವರೆಯುವತಿ ಬಂದಳು (ಕುಮಾ್ಯಉ. ೬-೧೪) : ಮಣಿಮಯದ ಮುಕ್ತಾಫಲದ ಕೇವಣದ ಕನಕದ ದಡ್ಡಿ ಬಿಗಿ ದಂಡಣವನೇಱಿದರರಸಿಯರು (ತೊರರಾ. ೧-೬-೫) : ಅಱುವರೇ ತಾವುಸದ ದಡ್ಡಿಯ ಮಱಿಯ ಮೂರ್ಖರು (ಉತ್ತರಾ. ೧೦-೫೦); ಮುತ್ತಿನ ದಡ್ಡಿಯ ಪಲ್ಲಕ್ಕಿಯೇಱ ತವ್ಮೊತ್ತಿನೊಳ್ಪಹ ಕೆಳದಿಯರ ಮೊತ್ತದ ದೊರೆ ಕುವರಾರತಿಯರಾ ಬೀದಿಯೊಳರ್ತಿಯೊಳೆಡೆಯಾಡುತಿಹರು (ಕಂನವಿ. ೬-೦೯); ಮುಗಿಲೊಡ್ಡಿನ ದಡ್ಡಿಯಂತೆ ಜವನಾಳ್ಗಳ ಜಂಗುಳಿಯಂತೆ ನಡೆವ ಕಾರೊಡಲ ಪೇರಾನೆಗಳ (ಹಾಮೂಕ್ತ. ೯೪-೯). ೨. ಮನೆಯ ಮಾಳಿಗೆ,-ಮಾಹಡಿ : "ದಡ್ಡಿಯೆಂದು ಮಾಳಿಗೆ"(ಕಶಸಾ.೦೬-೩೦೫);"ದಡ್ಡಿಯ ಮಾಳಿಗೆಯೆನಿಪುದು" (ಚಕುನಿ. ೩೪); ಸೆಗಳಿಗೆ ಪೆಂಡಿರ ಮೊಲೆ ಕೆಚ್ಚಗಿರುವ ಪೊಗೆ ಕುಂಕಮಾಂಕ ಮೋಪಂ ನೆಲಮಾಳಿಗೆ ದಡ್ಡಿಯೆಂಬಿವಮುರ್ದರಸನಲ್ಲದು ಪೊಲೆಯಾಳ ತೆಱದೆ ಮುಟ್ಟದೆ ಶಿಶಿರಂ (ಪುಷ್ಪಪು. ೬-೫೩). ೩. ಮುಚ್ಚಳ'; ಮುಸುಕು ; ಆಚ್ಛಾದನ : "ದಡ್ಡಿಯೆನಲ್ಕೆ ಪಿಧಾನನಾಮದೊಳ್" (ಕಹಾನಿ. ೦೪) ; ತೆಗೆಸುವೆವು ನಾಳೆನಲಿ ನಿಮ್ಮಯ ಮೊಗದ ದುಗುಡದ ದಡ್ಡಿಯನು ಮೈದೆಗೆಯದಿರಿ ಕಲಿಯಾಗಿಯೆಂದನು ನೃಪತಿ ಸುಭಟರಿಗೆ (ಕುವ್ಯಾಕ. ೧-೨೨) : ಪಂದಲೆಯಿಂದಮೇ ಜಗಲಿ ನಿಗ್ಗವದಿಂದಮ ಕಂಬವಿಟ್ಟಿಗಾ ವಿಂದಮೆಯದ್ದವಾಸು ಕಣೆಯಿಂದಮೆ ಪಂಜರಗಟ್ಟು . . . ಪಲಗೆ ಯಿಂದಮೆ ದಡ್ಡಿಯುಮೆಡ್ಡವಾಗೆ ಚೆನ್ನೊಂದಿತು ಬೀರವಣ್ಣದುವೆಯೊಳ್ ಪಸಗಿಕ್ಕಿದ ಪಂದಲಂದದಿಂ (ಚಕಪಿ. ೨-೬೩). ೪. "ಪಂಜರ" (ಚಕುನಿ. ೬. I, ೦೦) : ನವನಾಳ ಬಿಂದುಗಳ ದಡ್ಡಿಯಂ ನಿಟ್ಟಿಸುತ (ಲಿಂಗಪು. ೨೨-೨೭).

ದಟ್ಟಿ₂ : ೧. ಸಿದ್ಧೇಂದ್ರನಂ ತಂದು ಬಿಜಯಗೈಸಿ ಇತ್ತರದಿ ವಜ್ರಪಂಜರದ ದಟ್ಟಿಯ ಬಿಗಿದು ಸುತ್ತ ಪರಿಜನವ್ಯದೆ ಹರಿದು ಬರುತ (ಸಿದ್ಧರಾ. ೯-೯) ; ಪಸ ಪಂದಲ್ ದಟ್ಟಿ ಜಾಗಂ ಜಗಲಿ ಬಿಗಿದ ಭೃಂಗಾರಿ ಮೇಲ್ಕಟ್ಟು ಚಿತ್ರಂ ಪೊಸಕುಂಭಂ ಶಂಕು ನೂರ್ಲ್ಕರಣೆ ತಳಿರ್ಗಳಸಂ . . . ಸಮಸ್ತ ಸ್ತ್ರೀಜನಂ ಕನ್ನಡಿ ಜವಳಿಗಳುದ್ಯಾಹದೊಳ್ ವರ್ಣನೀಯಂ (ಸೂಕ್ತಿಸು. ೬-೧). ೩. ಗುರುವಿಗೆ ಸೂರ್ಯನ ಸುತ್ತುಬರಲು, ೧೨ ವರುಷಗಳ ಕಾಲ ಹಿಡಿಯುವುದು. ಅದರ ಸುತ್ತಲು, ಮುಗಿಲುಗಳ ದಟ್ಟಿಯ ಮೇಲೆ ದಟ್ಟಿ ಗಳಿವೆ (ಖಾಂಶ. I, ೦೮೨). 'ತಟ್ಟಿ₁' ಪರಾ.

[ ದೇ.॥ ತಮಿ. ಮಲ. ತಟ್ಟ ; ತಟ್ಟು ; ತುಳು. ದಡೆ. ತಟ್ಟ ; ತೆಲು. ದಡಿ ; ಕುಯಿ. ತಟ ]

ದಡ್ಡಿ₃ 'ದಿಡ್ಡಿ' ನೋ.

ದಡ್ಡು, ಜಡ್ಡು₂, ಜಿಡ್ಡು (ನಾ). ಮೇಲಿಂದ ಮೇಲೆ ಏಟು ಬಿದ್ದು ಘರ್ಷಣೆಯಾಗಿ ಅಥವಾ ಒತ್ತಿ ಒತ್ತಿ, ಚರ್ಮವು ಒರಟಾಗಿ ಕಾಯಿ ಗಟ್ಟುವಿಕೆ,- ಒರಟಾಗುವುದು : ಚೆಂದಳಿರ ಮೆಲ್ಪಾಸಿನೊಳ್ಮಲಂಗುತಿರ್ದ ನಿನ್ನೀ ಬೆನ್ನಲುವಿನೋಳಾವಗಂ ಬಿಗಿದಿರ್ದ ಪಲ್ಲಣದೊತ್ತಿನಿಂದೊಗೆದ ದಡ್ಡು ಗಳುಮಂ (ಕಾದಂಬ. ೭೩೦) : ಕೆಱಿದೆಡೆಯಯಶದ ಭವದಿಂ ಕರಟಾದ ಪೊಲಣೆಯ ಬುಗುಟು ನೆಗೆದಡೆ ಶಿರದೊಳ್ ತರದಿಂದೆ ದಡ್ಡು ನೆಗೆದಂತಿರೆ ಓರಿದಪಮಾನಮಯ್ದಿದಂ ದುಶ್ಚರಿತಂ (ಪಾರ್ಶ್ವಪು. ೪-೨೬) ; ತಿರುಪೊಯ್ಲಿಂ ದಾದ ದಡ್ಡುಬ್ಬರಿಸಿ ಮೆಱೆವ ಮುಂಗೆಯ್ಗಳಿಂ ವನ್ಯಮಾತಂಗರದಾ ಘಾತಕ್ಷತಂ ಕಣ್ಗೊಳಿಪಗಲ್ದುರದಿಂ ಕಾಳಮಂ ಕಾನನಕ್ಕುಬ್ಬರಮಾಗಲ್ . . . ತಾನಿರ್ದನಾ ಬೇಡರೊಳೊರ್ವಂ (ಶಾಂತೀಶ್ವ. ೩-೭೫) ; ಬಲೆ ಕಲ್ಲಿ ಕುಬ್ಬಿಗಳ ಪೊತ್ತ ಹೆಗಲಿನ ದಡ್ಡು[ಪಾಠಾಂ. ಸೊಗಡು, ದಂಡ]ಗಳ ಪಿಡಿದ ಬಲೆ ಕೋಲ ಕುಕ್ಕುರಂಗಳ ಕಯ್ಯೊಳಳವಟ್ಟ ಗಿಡುಗ ಲಗುಡಗಳೆಸೆಯಲಲ್ಲಿ ವನಚರರಿಂದೆ ವನಮೆಸೆದುದು (ಚಬಪು. ೫೩-೨೨) ; ನಮ್ಮ ಕಾಲಿಗೆ ಅಥವಾ ಇನ್ನಾವುದಾದರೂ ಭಾಗಕ್ಕೆ ಮೇಲೆ ಮೇಲೆ ಕೆಲಸ ಬಿದ್ದು ಅಲ್ಲಿ 'ದಡ್ಡು' ಆಗಿರುತ್ತದೆ (ಶರಿನ. ೨೭). ಜಡ್ಡು₂ : ಭಕ್ತರಂ ಬಿಡದಱಿ ಜಡ್ಡಾದವೀ [ಪಾಠಾಂ. ಕಾಯ್ದಟ್ಟಿದುವು] ಪದಂ ಭಕ್ತರ್ಗೆಯಿತ್ತಿತ್ತು ನಿಂದುದೆಮ್ಮಯ ಪದಂ (ಅನೇಕ ದೇ. ೫೯-೨೫) : ದೊಡ್ಡಮಾರ್ಗಂ=ಆನೆ ಕುದುರೆಗಳೊಳಾದ

**ದಳಭವನ** (ನಾ). ಎಲೆವನೆ ; ಪರ್ಣಕುಟಿ : ಲವನೆ ಕೇಳಾ ದಿನವನಾ ದಳಭವನದಲಿ ನೂಕಿದರು (ತೊರರಾ. ೨-೬-೨೭). [ ಸಂ. ದಲಭವನ ]

**ದಳಮಳ** (ನಾ). ತಂಬಿ ತುಳುಕುವುದಂ ; ಡಮುಡಮಿಸುವುದಂ : ವರ್ಷಾಕಾಲದಲ್ಲಿ ವನಜ್ಯೋತ್ಸ್ನೀ ಎಂಬ ಲತೆಯು ತನ್ನ ಪತ್ರರಾಶಿಯ ಬಾಹುಳ್ಯದಿಂದ ಹೇಗೆ ದಳಮಳಮಾಡುವುದೋ ಅವಳ ಶರೀರವೂ ಹಾಗೆ ಪೂರ್ಣತೆಯಿಂದ ದಳಮಳವಾಗುತ್ತಿದ್ದಿತಂ (ಶಾಕುಂ. ೪೩). 'ಡಳಮಳ' ಪಾಠ. [ ←ಮರಾ. ದಳಮಳ್ ]

**ದಳಮೇಟು** 'ದಳವೇಟು$_1$' ನೋ.

**ದಳವಡಿಗ** (ನಾ). ಸೈನ್ಯದಲ್ಲಿ ವ್ಯವಹರಿಸುವವನಂ ; ಸೈನಿಕ; ಯೋಧ : ಮಣಿಮಯ ಹಜಾರದೊಳು ಬಿತ್ತರದ ದಳವಡಿಗರೊಡನೆ ಸೇನಾನಿಯಾರಿ ರ‍್ಯ ರಾವುತರೊಗ್ಗಿನಲಿ (ಸವಮೋ. ೨೭-೩೭). [ದಳವಡೆ + – ಇಗ]

**ದಳವಡೆ** (ನಾ). ಸೈನ್ಯದ ತುಕಡಿ ; ಪಡೆ : ಗುರಿಕಾರ ನಾಯಕರು ದಳವಡೆಯ ಜಟ್ಟಿಗಳು ಕರಣಿಕರು ಕಣಜ ಬೋ ರಕ್ಕಸರಾಯಭಾರಿಗಳು . . . ಮುಂತಾದಯಸಮಸದ್ಭುಧಜನರು ಮು ಖ್ಯ ವಿ ನಿ ಯೋ ಗ ದೊಡ್ಡೋಲಗದ ಮಧ್ಯದಲೀ ಶಶಿವಾಳಿಯಂದದಿ ಸಮಸ್ತ ಪ್ರಭುವರನೆನಿಸಿ (ಸವಮೋ. ೩-೨೫). ℗ ಇದಂ ಒಂದೇ ಅರ್ಥದ ಎರಡುಂ ಶಬ್ದಗಳಂ ಸೇರಿ ಆಗಿರುವ ರೂಪ. [ ದಳ$_2$ ( = ದಲ) + ಪಡೆ$_3$ ]

**ದಳವಯ** 'ದಳವಾಯ್' ನೋ.

**ದಳವರಿ** (ಕ್ರಿ). ದಾಂಗುಡಿಯಿಡು ; ಹಬ್ಬು ; ವ್ಯಾಪಿಸು : ಗಳಬಳಿಪ ಗದ್ಗದಂ ದಳವರಿವ ಮೋಹಲತೆ ತುಳುಕಿ ತುಂತುರುಗೆದರ್ವ ಘರ್ಮಂ (ಕೃಕಪ. ೦-೬-೪). [ ದಳ$_2$ ( = ದಲ ) + ಪರಿ$_2$ ]

**ದಳವಾಡ** (ನಾ). ೧. ಸೇನಾಸಮೂಹ; ಪಡೆಯ ಸಾಲು ; ಸೈನ್ಯ : ಸಂಭ್ರಮದೆ ದಳವಾಡವೋಲೈಸೆ (ರೇವಂ. ೦೦೫-೩) ; ದಳವಾಡಸಹಿತ ದೈಚಪ್ಪ ದುರ್ಗವ ಹೊಕ್ಕು ತಳುವದದಟ ಬಲಿಕೆಯನು ಬಳಸಿ ಬಳಸಿ ನೋಡಿ (ಕುರಾಸಾಂ. ೩೭-೫೦) ; ಶಿರಂವಡಿಯ ರಾಜ್ಯಕೆ ಮನ್ನರನೂ ದಳವಾಡವನೂ ಕಳುಹಿಸಲಾಗಿ (ಸೌಇಇ. IX-II, ೫೫೦-೧ ; 1532) : ವಿಭೀಷಣ ಬಂದಿನ್ನು ಪೊಳಮೋಸಗೊಟ್ಟ ಕಾರಣದಿ ಕಳಿದುಳಿದವನ ಮರ್ದಿಸಿಯಲ್ಲದೆ ನಿನ್ನ ದಳವಾಡವೇನು ನೀನೇನಂ (ಮೋಹತ. ४೦-೨೫) ; ಹೊಳೆವ ತ್ರಿಶೂಲಮುಮ್ಮೊನೆಯಿಂದೆ ಕೆಂಗಿಡಿಗಳನುಗುಳ್ದುರಿಯ ನಿಷ್ಠುರದಿ ದಳವಾಡ ದಹನವ ಮಾಡುತ್ತ ಹರಿಯುರಸ್ಥಲದಲ್ಲಿ ಬಂದು ಮೋಹಿಸಿತು (ಮೋಹತ. ४೦-೬೬) ; ಆಗ ಕೌರವರಾಯ ಸರ್ವ ದಳದಾಡದಿಂದ ಮುತ್ತಯ್ಯನಿಂಗೆ ಸರಿಬಲವಾಗಿ ಬರಲು ಬಳಿಕತ್ತ ಕಳುಹಿದ ನರನ ಬೆಂಬಲಕೆ ಪಾಂಚಾಲಮತ್ಸ್ಯನಂ (ತುರಂಗ. ४೭-೨೧). ೨. ಸೇನೆಯಂ ನೆಲೆ ; ಶಿಬಿರ ; ಪಾಳೆಯ : ಬಳಿಕಾ ಯುಧಿಷ್ಠಿರಂ ಧೀತಿಯನ್ನಪಹರಿಸಿ ತನ್ನ ದಳವಾಡದಿಂದಾ ತತುಕ್ಷಣ ಪೊರಡಲೊದರಿದವು ಭೇರಿ ನಿಸ್ಸಾಳಂಗಳುರವಣಿಯೊಳು (ತುರಂಗ. ४೯-೦) ; ಮೆರೆವ ಮಣಿಕನಕಂಗಳನ್ನಿತ್ತು ಕು ರು ನೃ ಪ ನ ಸುಭಟರಂ ಕಳುಹಿಸಿದನು ಭರದೊಳೈತಂದವರು ಪೋದ ವೃತ್ತಾಂತಮನ್ನರುಹಿದರು ಕೌರವಂಗನಿಲಜನ ಮತವ ವಿಸ್ತರಿಸಿದರು ಕದನಕಂ ಬರಲಾಗ ಕೌರವರು ಸರ್ವ ದಳವಾಡದಿಂದ (ತುರಂಗ. ೬४-೧೯).

[ ದಳ$_2$ ( = ದಲ) + ವಾಡ$_3$ ]

**ದಳವಾಯ್, ದಳವಯ, ದಳವಾಯಿಂ, ದಟವಾಯ್, ದಟವಾಯಿ** (ನಾ). ೧. ದಳನಾಯಕ ; ಸೇನಾಪತಿ : ಸುಲಿತಿಂದು ರಾಜ್ಯವನಿತಂ ನೀಮೇಕೆ ತಾವೇತಕೆಂದುಳಿದರ್ಗೀಯಂದೆ ತಾನೆ ಕಾಲಯಮನಂತತ್ಯುಗ್ರಮಂ ತಾಳ್ದಿದಾ ದಳವಾಯೇ ಬಳಿಮಾರಿಯ್ಯ (ಸೋಮೇಶ. ೬४) ; ಆರಿಯರ ದಳವಾಯ ಕೂಚಿರಸನು ಎತ್ತಿ ಬಂದು ಎಣಿಕಲನುಯಿಟಿದು ಸೆಟಿ ಸೂಟಿಗೊಣ್ಡು ಹೋಹಲ್ಲಿ (ಎಕ. XII, ಪಾವಗ. ४೮-೧ : 1286?) ; ನೀವು ಕಟಕಾಚಾರ್ಯಪುತ್ರರು ನೀವಿರಲು ಕೃಪನಿರಲು ದಳವಾಯ್ ನಾವಹವೆ (ಕುಮ್ಯಾಶ. ೧-೨೦); ಚತುರಂಗಬಲಸಹಿತವಾಗಿ ಬಲಾಹಕನೆಂಬ ದಳವಾಯನು ಕಳುಹಿಸಿ (ವಚಣಾ. ೮-೨೦) ; ಅವನ ದಳವಾಯ್ ದಧಿಕಸ್ ಎದೆಗೀಟಿ ನೆಟ್ಟು ಪಡಗಿಂದ ನೆಗೆದಾಲಿ ಮುಳುಗಿದನ್ (ಪಾರಸಿ. ೦೩-೩೦೬). **ದಳವಯ:** ೧. ಕರಿಮುಖಂ ದಳವಯಂ ಜ್ಯೋತಿಷಂ ರವಿ ಯಜ್ಞಪುರುಷ ಬಾಣಸಿಗಯಮ ತಳವಾಟ (ಅಶಿಚಂ. ೫-೧೩); ℗ ಇದಂ ಛಂದಸ್ಸಿಗಾಗಿ ಮಾಡಿಕೊಂಡ ರೂಪ. **ದಳವಾಯಿ:** ೧. ಬಲುಬಲಸಹಿತಲೆಮ್ಮಯ ದಳವಾಯಿ ಹಿಂದುಳಿದನಿಲ್ಲಿಲ್ಲ ಮುಖಿಗಳಿನೆ (ಸೊಬಸೋ. ೬-೨೦); ಬಾಗಿಲ ದಳವಾಯಿ ಮಂಗಳರಾಜ ತುಹಾ ಅರಸುಗಳು . . . ಕುಕ್ಕಸಮುದ್ರದ ಕೆಱೆಯ ಕಟ್ಟಿಸಿದರು (ಎಕ. VI, ಕಡೂರು. ೦೬೦-೬; 1542); ದಳವಾಯಿ ಚೆಂನ್ನಮನಾಯಕರ ಮಕ್ಕಳು ದಳವಾಯಿ ಕೃಷ್ಣಪ ನಾಯ[ಕ]ರೂ (ಸೌಇಇ. IX-I, ೬೦೫-೫ ; 1543) ; ಪೊಡವಿಪ ದಳವಾಯಿ ನಂಜರಾಜೇಂದ್ರ ತನ್ನೊಡೆಯನ ಕಾರ್ಯದೇಳಿಗೆಯ ಗಡಣವ ಚ ರಿ ತೆ ಯಾ ಗೊ ಲಿ ದು ಪೇಳಿಸಿದನು (ಕಂನವಿ. ೧-೨೮) : ನಿಮ್ಮ ಮಗನಿಗೆ ದಳವಾಯಿಯಾಗುವ ಯೋಗವಿದೆ (ಕಂಗಾಳ್ಕ. ४) ; ಎಳೆಗರು ಎತ್ತಲ್ಲ ದಳವಾಯಿ ದೊರೆಯಲ್ಲ ಮನೆಗೆ ಬಂದಳಿಯ ಮಗನಲ್ಲ (ಹಳ್ಳಿಹಾ. ೬೫). ೨. (ಹಿಂದಿನ ಮೈಸೂರಂ ಸಂಸ್ಥಾನದಲ್ಲಿ) ಪ್ರಧಾನಿ ; ಮಹಾಮಾತ್ಯ : △ **ದಟವಾಯ್ :** ೧. ಎಟುಮ್ ಬಾಗಿಲೊಳೇಟ್ ದಟವಾಯ್ಗಳ್ ಎಟ್ ದಟವಾಯ್ಗಳನಿದಿರಿಸಿ ನಿಂದರ್ (ಅಂತಿಗೊ ೭-೧೨೭). △ **ದಟವಾಯಿ :** ೧. ದಟವಾಯಿ ರಾಮರಾಜಂ ಬಟಿಕಟಿಜಸದೊಡನೆ ಮೆರಸಿಯಾಳ್ದನ ಸಿರಿಗಂದಟುಪಿಯಳಿಯನೆನಿಸಿಯುಮೊಡನಟಿದಂ (ಚಿಳವಿ. ೨-೧೭).

[<ಸಂ. ದಲಪತಿ./ತಮಿ. ತಳವಾಯ್; ತುಳು. ತೆಲು. ದಳವಾಯಿ./ ಮರಾ. ದಳವಈ, ದಳವಾಯಿ, ದಳವೈ; ℗ ಸಂ. 'ಪತಿ' ಎಂಬುದು ಪ್ರಾ. 'ಪಇ' ಎಂದಾಗಿದ್ದು ದಲಪತಿ> ದಲಪಇ> ದಳವಯಿ> ದಳವಾಯಿ> ದಳವಾಯ್ ಎಂದು ಆಗಿರಬೇಕು ]

**ದಳವಾಯಿ** 'ದಳವಾಯ್' ನೋ.

**ದಳವಾಯಿತನ** 'ದಳವಾಯ್ತನ' ನೋ.

**ದಳವಾಯಿವರ್ಯ** (ನಾ). ದಳವಾಯಿಶ್ರೇಷ್ಠ : ದಳವಾಯಿವರ್ಯ, ಮುಂದಣ ಶ್ರೀಮನ್ಮಹಾರಾಜ ಮಹಾಸ್ವಾಮಿಯವರೆಂದು ನಿಷ್ಕೃಷ್ಟರಾಗಿರುವ ಈಗಳಿನ ಕಿರಿಯರಸ ಪಟ್ಟದ ಶ್ರೀರಾಜಒಡೆಯರವರ ಸನ್ನಿಧಾನವು ಒಡ್ಡೋಲಗಕ್ಕೆ ಬಿಜಯಮಾಡಿದೊಡನೆಯೇ ಆಸ್ಥಾನಿಕರೆಲ್ಲ . . . ನಮಸ್ಕರಿಸಿ ಗೌರವಿಸಿಕೊಳ್ಳಬೇಡವೆ ? (ಚಿಟ್ಕಅ. ೩४-೦೧).

[ ದಳವಾಯಿ (<ದಳವಾಯ್) + ವರ್ಯ ]

**ದಳವಾಯ್ತನ, ದಳವಾಯಿತನ** (ನಾ). ೧. ಸೇನಾಪತಿಯಂ ಹುದ್ದೆ ; ಪ್ರಧಾನಿಯ ಹುದ್ದೆ,–ಅಧಿಕಾರ. ೨. ದಳವಾಯಿಯಂ ಕೆಲಸ : ಈ ಅಸಮಾಧಾನದಿಂದ ನಿನ್ನ ದಳವಾಯ್ತನದ ಜೀವನದ ಮೂಲಶಕ್ತಿಯೇ ಬೇರಳಿದು–ಪ್ರಳಯವಾಗಿ ಹೋಗುತ್ತಿದೆಯಹುದು! (ಚಿಟ್ಕಅ. ೩४-೨೩). **ದಳವಾಯಿತನ :** ೧. ಖಂಡೇರಾಯನಿಗೆ ದಿವಾನಪದವಿಯೂ ಹೈದರನಿಗೆ ದಳವಾಯಿತನವೂ ಗೊತ್ತಾದವು (ಒಡಕ. ೬೬) ; ಪೂರ್ವಿಕರು ಒಬ್ಬರೂ ದಳವಾಯಿತನವಂ ನೇಮಕ ಮಾಡಲಿಲ್ಲ (ಮಹಾವಂ. I, ४೬). ೨. ದಳವಾಯಿತನವು ವಿಪತ್ಕರವು (ಸುಗುಗಂ. ೧೧-೨೦).

[ ದಳವಾಯ್ + – ತನ ]

**ದಳವಿಡು** (ಕ್ರಿ). ಚಿಗುರು ; ಅಂಕುರಿಸು ; ಮೊಳೆ : ಹೊಳೆವ ಹೊಂಚೆಳೆಮೆಯ್ಯ ಸೊಬಗಿಯ ಕಳಶಕುಚವರೆದೋಱೆ ಹೃದಯದಿ ದಳವಿಡುವ ಮೋಹದೊಳೆ ಯುವನೆವೆಹಳಚದೀಕ್ಷಿಸಿ ಹಿಗ್ಗುವಂತೆ (ಕೃಕಪ. ३-೫-३).

[ ದಳ$_2$ (= ದಲ) + ಇಡು$_1$ ]

**ದಳವುಳ** 'ದಟದಂಟ' ನೋ.

**ದಳವುಳಕಾಱ** 'ದಳದಂಳಕಾಱ' ನೋ.

**ದಳವುಳಿ** 'ದಟದಂಟ' ನೋ.

**ದಳವುಳಿಕಾಱ** 'ದಳದಂಳಕಾಱ' ನೋ.

**ದಳವುಳಿಗ** 'ದಳದಂಳಿಗ' ನೋ.

**ದಳವುಳಿಗೊಳ್** (ಕ್ರಿ). ಕಸಿ ; ದೋಚು ; ಸುಲಿಗೆಮಾಡು : ಅರಿಬರ ಧೃತಿಯಂ ನೆಱೆ ಕವರುತ ಮತ್ತರೆಬರ ಪೆಂಪಂ ದಳವುಳಿಗೊಳುತಂ ಸ್ಮರ ಚಕ್ರೇಶನ ಸಲ್ಗೆಯ ಮದಮತ್ಪ್ರಾಯಿತೆಯಯ್ದಿದಳು (ಜಯಕಾ. ೫-೫೦).
[ ದಳವುಳಿ (<ದಟದುಟ) + ಕೊಳ್$_1$ ]

**ದಳವುಳಿಸು** 'ದಳದುಳಿಸಂ' ನೋ.

**ದಳವೆತ್ತು** (ಕ್ರಿ). ದಂಡೆತ್ತು ; ದಂಡಂಸಹಿತವಾಗಿ ದಾಳಿಮಾಡಂ : ಅಲಂಬುಸ ಶ್ರುತಾಯುಗಳೂ ಸನ್ನದ್ಧರಾಗಿ . . . ಪಾಂಡವ ಬಲಗಳ ಮೇಲೆ ದಳವೆತ್ತಿ ಬಂದರು (ಕೃಪಾಭ್ಯ. ೦೫೫).
[ ದಳ$_2$ ( = ದಲ) + ಎತ್ತು$_1$ ]

**ದಳವೇರು** 'ದಳವೇಱು$_2$' ನೋ.

**ದಳವೇಱಿಸು** (ಕ್ರಿ). ಹೆಚ್ಚಿಸು ; ವೃದ್ಧಿಗೊಳಿಸು : ನನಗಣೆಯನರ್ಚಿಪಂತೆ ಚಂದ್ರಕಳೆಯಂ ದಳವೇಱಿಪಂತೆ ಪುಣ್ಯಮಂ ಪುಟವಿಡುವಂತೆ . . . ಹರನ ಮನೋರಥಮಂ ಮದವೇಱಿಪಂತೆ ಪಾರ್ವತಿಗೆ ಸುವಾಸಿನಿಯರ್ ಸಿಂಗರವಂ ಮಾಡಿ (ಗಿರಿಕ. ೧೦-೯೫ ವ) ; ಇನಿಯರ ಕಂತುರಾಗರಸಮಂ ದಳವೇಱಿಸುವಂತೆ . . . ಕೆಂದಳಿರ ಪೊಂಪುಳಿ ಪಪ್ಪುಕವಮಾಯ್ತಶೋಕೆಯೊಳ್ (ಅನಂಪು. ೬-೭೭). [ ದಳವೇಱು$_1$ + – ಇಸು$_1$ ]

**ದಳವೇಱು$_1$**, ದಳವೇಱು (ಕ್ರಿ). ೧. ದಟ್ಟವಾಗು ; ನಿಬಿಡವಾಗು ; ಸಾಂದ್ರವಾಗು : ಅಳಿಯ ಕಪ್ಪನು ನೀಲಮೇಘದಸಿತವನು . . . ಎಳೆದು ಕೊಂಡೊಡಗೂಡಿ ತುಳಿದು ಪಿಳಿದಬುಜಜಂ ಬೆಳಗು ಮುಳಿಂಗಲು ಬಳಿದನೋ ಬಯಲನೆಂದೆನಿಸಿ ದಳವೇಱಿತೊತ್ತರಿಸಿ ಮೋಡಗತ್ತಲೆ ಗಾಳಿ ಹನಿ ಮಿಂಚು ಮೊಳಗು ಸಹಿತ (ಸಿದ್ಧರಾ. ೬-೩೭) ; ಪೊರೆ ಪೊರೆಯಾಗಿ ದಳವೇಱಿ ಬಹುಳತರ ಧವಳತೆಯನಾಂತ ಮುಗಿಲ ಮೊತ್ತಮೊತ್ತಲುಂ ಬಿತ್ತರಂಬಡೆಯ (ಚಾರಿತ್ರ. ೪-೩೭ ವ). ೨. ಹೆಚ್ಚಾಗು ; ವೃದ್ಧಿಹೊಂದು; ಏಳಿಗೆಯಾಗು : ಉತ್ಸವಕರಮೆನೆ ಬೆಳವ ಶರತ್ಸಮಯದೊಳಿಂದುಕಾಂತಿ ದಳವೇಱುವವೋಲ್ ವತ್ಸಳರೆನಿಸುವ ಬುಧರಿನಮತ್ಸರರಿಂ ಕೃತಿ ಕೃತಾರ್ಥ ಮಕ್ಕುಮಮೋಘಂ (ಜಗವಿ. ೧-೧೧) ; ದಳವೇಱಿದುತ್ಸವದ ಹೆಚ್ಚುಗೆಯ ಬೀಜಮಂ ಬೆಳೆಸುವೈಸಲ್ಕೆಯಿಂತಾದನಿನ್ನಾವಾಗಳೆಳಿಸಿ ಮೊಳೆಯುಂಬನೋ (ಕೋಮುಕ. ೧-೭೫) ; ಹೊಸಪೊಲುಮೆ ದಳವೇಱಿ ಸಲೆ ಪಸರಿಸಿ ಮಹದ್ಗುರುವಿನ ಚರಣ ಸಾರಸಯುಗವಪಾನಂದಜಲದಿಂ ತೊಳೆದು (ಬಸಪು. ೪-೫೯) : ಬೇಗುದಿಯು ದುಮ್ಮಾನ ದಳವೇಱಿದುದು ಹೇಱಿತು ಭೀತಿ ಭೂಪತಿಗೆ (ಕುಮಾ್ವಗ. ೦-೬೨). **ದಳಮೇಱು** : ೨. ನೆಱೆಯ ನೆಗೆರ್ತೆವೆತ್ತುದು ನಿಯೋಗಮಗುಂದಲೆಯಾಯ್ತು ತೇಜಮಚ್ಚಿಱಿದುದು ವಿಕ್ರಮಿಚ್ಚತಿಕೆ . . . ದಳಮೇಱಿದುದಕ್ಕರಂ ಪಗಣ್ಣಿಱಿದುದು ಪೌರುಷಂ ಸಫಳಮಾದುದು ಮಾನ್ಯಕೆ ಮಾದಿರಾಜನೊಳ್ (ಶಾಶಾ. XI-II. ೦೪೭-೩೭ ; 1099). [ ದಳ$_1$ + ಏಱು$_1$ (<ಏಱ್$_1$) ]

**ದಳವೇಱು$_2$**, ದಳವೇರಂ (ಕ್ರಿ). ೧. ಅರಳು; ವಿಕಾಸಗೊಳ್ಳು; ವಿಕಸಿಸಂ : ವನಜಂಗಳ್ ದಳವೇಱಿ ಚೂತಲತೆಗಳ್ ನೀರೇಱಿ . . . ಬಂದುದು ವಸಂತಂ (ಧರ್ಮಾಮೃ. ೦೩-೧೦) ; ಅಳಿಯೆಣಿಗೆದನಿಲನಲುಗದ ರವಿಕರಂ ಪುಗದ ಸುಳಿಗೊಂಡು ದಳವೇಱಿ ಹಸುರಳಿದು ಬೆಳುಪುಳಿದ ಸುರುಚಿರ ಮೆನಿಪ್ಪ ಮಿಸಲ ಮೊಗ್ಗೆಯಂ ಕೊಂಡು (ಬಸರ. ೩-೨೦). ೨. ಕಾಂತಿ ಹೊಂದಂ: ಮುಗುಳ ಮಾಲೆ ಸುಯ್ಯಿನೆಱುಗಂಪಿನೊಳ್ಮರ್ಡಿ ಗಮ್ಮನಾಗೆ ಸೆಳ್ಳುಗುರ್ವೆಳಗಿಂದರಲ್ಗಳ ದಳಂ ದಳವೇಱಿ ಮದಾಳಿ ಮಲ್ಲಮಲ್ಲಗೆ ಸುತಿಗೂಡೆ ಕಂಕಣದ ನುಣ್ಣುರದೊಳ್ . . . ಅಲರ್ಗಟ್ಟುವುದಂಗನಾಜನಂ (ವರ್ಧಪು. ೦-೩೪) ; ಬಾಗುತೆ ಬಲಿಯುತೆ ಪೊಳೆದಿನಿದಾಗುತೆ ದಳವೇಱಿ ತಿಡಿದಿಡಿದು ಹಿಗ್ಗುತೆ ಪಣ್ಣಾ [ಪಾಠಾಂ. ದಳವೇಱಿ ಹಿಗ್ಗುತ್ತವೆ ಹೂದಾ] ಗುತೆ ಕಾಯ್ಗಳ್ ಪೊಱಮಡೆ ಬೀಗುತ್ತುಂ ಬೆಳೆದುವಲ್ಲಿ ಕದಳೀಷಂಡಂ (ಗಿರಿಕ. ೨-೫೦). ೩. ಉಬ್ಬು ; ಹಿಗ್ಗು ; ಸಂತಸಗೊಳ್ಳು ; ಉತ್ಸಾಹಗೊಳ್ಳು : ಮಾಂಗೊನರಂ ನಸುಗರ್ಚಿ ಸೊರ್ಕಿನಿಂ ತನು ದಳವೇಱಿ ಕಂಠವಿವರಂ ತೊವರೇಱಿ ಪಟುತ್ವಮೇಱಿ ಕಾಮನ ನನೆಯಂಬುಗಳ್ ವಿರದಿಂವ್ಯಂದದ ಮೆಲ್ಲೆರ್ದೆಯಂ ಪುಗಲ್ . . . ಪುಗಲ್ಪುಗಲೆಂದುದು ಕೋಕಿಲವ್ರಜಂ (ಜಗವಿ. ೧೪-೩೮) ; ಪುಟವೆದ್ದು ಹೊಂಗುತಂ ದಳವೇಱಿ ಹಿಗ್ಗುತಂ ನಟ್ಟಿರ್ಪ ನೋಟದಿಂದೋಡೆಯಂ ವಿಾಱುತಂ (ಬಸರ. ೩-೧೦೩) ; ತರಿದಡವಿ ತರ್ಜವಿಸಿ . . . ಅಂಜದಿರೆಂದೆನ್ನೊಳು ನುಡಿಯೆ ಹಬ್ಬಿ ಹಸರಿಸಿ ದಳವೇಱುವೆನಾಂ (ಶಂಕಶಂ. ೭೦); ಇನಿಯಳ ಗರ್ಭದಂದವಂ ನೋಡಲ್ಬಿತ್ತಂ ದಳವೇಱುತ್ತಿರೆ ಬಂದಂದೊಳಪೊಕ್ಕಂ ತ್ರಿದೀಯ ಮಣಿಮಯ ಗೃಹಮಂ (ಚಾಚಿತ. ೪-೪೪). **ದಳವೇರು** : ೨. ನನ್ನ ಮಿದುಳು ದಳವೇರಿ ದಳ್ಳಿಸಿತು ಸ್ವರ್ಣದೀಪ್ತಿ ಇಳಿಯ ಮನದ ಕರಿನೆರೆಯ ಹುಳುಗಳೆಲ್ಲ ಹೊತ್ತೇರಿ ನಿದ್ದೆ ತಿಳಿಯ (ಅರಳು. ೧೯೧-೦). ೪. ಚಿಗುರು; ಎಲೆಬಿಡಂ ; ಪಲ್ಲವಿಸಂ : ಬಿದುರು ಸಹ ಹೂ ಬಿಡುವುದುಂಟು. ಆದರೆ ಯಾವಾಗ ಅದು ದಳವೇರಿ ಹೂ ಬಿಟ್ಟೀತು ಇದರ ನಿಯಮವಿಲ್ಲ (ಇಪ್ಪಕ. ೨೮೦).
[ ದಳ$_2$ ( = ದಲ) + ಏಱು$_1$ (<ಏಱ್$_1$) ]

**ದಳಸಂಘಾತ** (ನಾ). ಪಡೆಯ ಒಡ್ಡು ; ಸೇನಾಜಾಲ : ಈತನೊಡ್ಡಿನ ಸಾರ ಸಂಗರಕಾತುಕೊಂಡದ ಕೃಪನ ದಳಸಂಘಾತವೊಂದಕ್ಷೋಣಿ ಸುಭಟರ ಸಾಲ ಮಧ್ಯದಲಿ (ಕುಮಾ್ವಭೀ. ೩-೦೨). [ ದಳ$_2$ ( = ದಲ) + ಸಂಘಾತ ]

**ದಳಸರ**(ನಾ). ೧. ದಟ್ಟಣೆ; ಸಾಂದ್ರತೆ; ಹುಲುಸಂ: ಪೈರು ದಳಸರವಾಗಿ ಬೆಳೆಯಿತು (ರೂಢಿ). ೨. ಗಟ್ಟಿಮಂಟ್ಟಾಗಿರುವಿಕೆ ; ದೇಹದಾರ್ಢ್ಯ : (ಶಾ್ಸಂದರ್). ೩. ದರ್ಪ : ಅರಸನು ದಳಸರದಿಂದ ಆಳಿದನು (ರೂಢಿ).
[ ದಳ$_1$ + – ಸರ$_2$./ತುಳು. ತೆಲು. ದಳಸರಿ ]

**ದಳಸು**, ದಡಸಂ (ನಾ). ೧. ಮಂದವಾದಂದು ; ಗಟ್ಟಿಯಾದಂದು; ೨. ದಟ್ಟವಾದದು ; ಒತ್ತಾದುದು : "ದಡಸಂ, ಸಾಂದ್ರ, ಒತ್ತು" (ಶಬ್ದಮ$_2$). ರಾಗಿ ದಳಸಾಗಿ ಬೆಳೆದಿದೆ (ರೂಢಿ). ೩. ಗಟ್ಟಿಮಂಟ್ಟಾಗಿರುವಿಕೆ; ದೃಢತೆ : (ಶಾ್ಸಂದರ್). **ದಡಸು** : ೧. ಚನ್ನವು ವ್ಯವಹಾರದಲ್ಲಿ ಎಲ್ಲಕ್ಕೂ ಹೆಚ್ಚು ದಡಸಾದ ಪದಾರ್ಥವಿರುತ್ತದೆ (ಮುಂಬಯಿ. ೩-೩೪) ; ಇದು ವರ್ಣವೂ ಗಂಧವೂ ಇಲ್ಲದ್ದಾಗಿ ಎಣ್ಣೆಯಂತೆ ಸ್ವಲ್ಪ ದಡಸಾಗಿರುವುದು (ಮುಂಬಯಿ. ೬-೩೫). [ ದಳ$_1$ + – ಸು$_2$ ]

**ದಳಾದುಳಿ** 'ದಟದುಟ' ನೋ.

**ದಳಿ$_1$** 'ತಳಿ$_2$' ನೋ.

**ದಳಿ$_2$** (ನಾ). ೧. ಎಲೆ ; ಪತ್ರ : "ದಳಿ = ಪತ್ರಂ" (ಶಮದ. ಶರಿ. ೨). ೨. (ಕರಾ) ತಡಿಕೆ ; ಮರದ ಸಲಕೆಗಳಿಂದ ಎಡೆ ಬಿಟ್ಟು ಮಾಡಿದ ಗೋಡೆ; ತಟ್ಟಿಗೋಡೆ: ಅದರ ಆಚಿನ ಚಾವಡಿ, ಅಡುಗೆಯ ಮನೆಗಳು, ನೀಲವಾದ ಲಾಯಗಳು. ಅವಕ್ಕೆ ಎದುರಿನ ದಳಿಯಿಂದ ಒಳಗಡೆ ಬೆಳಕು ಬರುತ್ತದೆ (ನಂಬಿನಾ. ೪). 'ತಟಿ$^3$', 'ದಳಿಕೋಣೆ' ಪರಾ.
[ ದೇ.೫ ತಮಿ. ತಟ್ಟಿ; ಮಲ. ತಟ; ತುಳು. ದಳಿ./ಸಂ. ದಲ ]

**ದಳಿಂಬ**, ದಣಬ, ದಣೆಂಬ, ದಣೆಬ, ದಣೆಬು, ದಣುಬ, ದಳಿವ (ನಾ). ೧. ಶುಭ್ರವಾದ ಬಟ್ಟೆ ; ದುಕೂಲ ; ಮಡಿ : ವಿವಾಹಮಂಟಪದ ನಡುವಣ ಮಣಿಮಯ ವೇದಿಕೆಯ ಹಾಟಕಪೀಠದ ಮೇಲೆ ಹಾಸಿದ ದುಗುಲದ ದಳಿಂಬದೊಳಿರಿಸಿದಾಗಳ್ (ಆದಿಪು. ೪-೪೭ ವ); ತೀರ್ಥಜಲಂಗಳಂ

ವಿಂದು ದಳಿಂಬವನುಟ್ಟು ಮುತ್ತಿನ ತೊಡಿಗೆಗಳಂ ತೊಟ್ಟು ದರ್ಭಶಯನದೊಳಿರ್ದು (ಶಂಪಥಾ. ೧-೧೧೮ ವ) ; ವಧೂಕಾಂತರಿರ್ವರುಮಂ ವಿವಾಹವೇದಿಕಾಮಧ್ಯದೊಳ್ ದ ಳಿ ಂ ಬ ದಿ ಂ ಪಚ್ಚವಡಿಸಿದ ಪಳಿಕಿನ ಪಟ್ಟವಣೆಯೊಳಿರಿಸಿ (ಚಂದ್ರಪ್ರ. ೭-೭೦ ವ) ; ವರದಂ ಕೊಟಂ ಕಲಸಿ ಪಲವುಂ ಬಾಡುವೆರಸಿ ಕೊಟನೊಂದು ದಳಿಂಬದ ಕಪ್ಪಟದೊಳ್ ಕಟ್ಟಿ ಕೊಟ್ಟಡೆ (ಬಂಹರಿ. ೧೪-೩೦ ವ) ; ಪಾಸಿದ ದಳಿಂಬಮುಂಗುರ್ಗಳ ಕೇಸಡಿಗಳ ಚರಣಭೂಷಣಗಳ ರುಚಿಯಿಂ ಬಾಸಣಿಸಿ ಚಿತ್ರಪಟಮಂ ಪಾಸಿದವೊಲಿರೆ (ಅನಂಪು. ೬-೩೪) ; ತಿಳಿನಗೆಯ ಮಣಿವಾರಿಯೊಳ್ ವಿಂದಳಂಟ್ಟಳು ಮುಡಿ ಮುಳುಗೆ ಬಿಳಿ ದಳಿಂಬವಂ ಮಡಿಗೆ ನೂರ್ಮಡಿ ಮೆರೆಯೆ ಕಡುನೋಂಪಿ (ಶ್ರೀರಾಮಾ. ೮೬೧-೨೯೩). ೨. ಹಾಸಿಗೆ ; ಶಯ್ಯೆ : ಗಂಧರ್ವಕನ್ಯಾಕರ ಗ್ರಹಣಪೂರ್ವಕಂ ಬಂದಾಕೆವೆರಸು ದಳಿಂಬದೊಳ್ಮಳ್ದಿರ್ದು (ಕಾದಂಋ. ೩೨೦) ; ಅವನಿಪಾಲಕನಲರ್ಗಳ ತಲೆಗಿಂಬಿನಿಂದಮಲರ ಮಲಂಗಿಂದಲರ ದಳಿಂಬದಿನಿಂಬಾದಲವಾಸಿನ ಮೇಲೆ ಲೀಲೆಯಿಂ ಕುಳ್ಳಿರ್ದಂ (ಪಾರ್ಶ್ವಪು. ೯-೩೦). ದಣಬ : ೧. ಬಂದ ಸುಕುಮಾರಕರುವೆರಸವ ವಿ ಂ ದು ದಣಬವನುಟ್ಟು (ಪಕುಥಾ. ೩-೩). ದಣಂಬ : ೧. ತೊಳಗುವ ದಣಂಬುಗಳಂ ಮೇಲೆ ವಿಂಗೆ ಹಾಸಿ ಅಳಿಗಳಟಸುವ ಸುಪ್ರಸವಕುಲಮುಮಂ ಹಾಸಿ (ಪಾಹೂರ. ಹ. ೩೨೩-೧೨) ; ಮೊಳೆವ ಪುಳಕಂಗಳಾಭರಣವಂ ತೊಟ್ಟು ಸಂತಸದಣಂಬವನುಟ್ಟು (ಸಿದ್ಧರಾ. ೩-೪೦). ೩. ಮಡಿಯಾದ ಸೀರೆ ; ಶುಭ್ರವಾದ ಸೀರೆ : ಚಾತುರ್ಥಿಕಾಸ್ನಾನವಂ ಮಾಡುತಂ ದಣಂಬವನುಟ್ಟಳು (ಚೀರಮ. ೩-೮) ; ಪರಿಮಳೋದಕದಿಂ ಜಳಕಂಬೆ ಎಕ್ಕು ದಣಂಬಮನುಟ್ಟು . . . ಸಡಗರದಿನೇಳ್ತಂದು ಶಿವಾಲಯಮಂ ಪೊಕ್ಕು (ವೃಷಭಿ. ೯-೭೦ ವ). ದಣಿಬ : ೧. ಧೋತ್ರದ ದಣಿಬವನು ನಿಚಾವಿಡಿದು ಮಹಳದ ಮನೆಯ ಚೌಕದಲಿ ಮಣೆಗೆ ಮಂಡಿಸಿ ಕುಳ್ಳಿತುಂಬೌತಣದ ವಿದ್ಯವ ಬಲ್ಲಿರಲ್ಲದೆ ರಣವಿಚಾರದ ವಿದ್ಯೆ ನಿಮಗೇಕೆ (ಕುಮ್ಮಾವಿ. ೭-೦೨) ; ಸುಲಿದು ಪಲ್ಗಳ ವಿಂದು ದಣಿಬದ ಸೀರೆಯನೊಲಿದುಟ್ಟು . . . ಅರ್ಚಿಸಿದಳು (ಕುರಾಸಾಂ. ೨೬-೧) ; ಉರೆ ಸಚೇಲಸ್ನಾನವಂ ಮಾಡಿ ದಣಿಬವನು ಧರಿಸಿ (ಮಹಾಂಪೇ. ೧೩-೧೫). ೨. ಪಾಸಿದ ವಣಿಬದೊಳಿಲ್ಲರು ಪಲ್ಯಂಕಾಸನದೊಳ ಗೊಲ್ದು ಕುಳಿತು ... ಭಾಸುರ ಸ್ತುತಿಯ ಮಾಡಿದರು (ಭರತ. ೦೮-೮೩) ; ದುಗುಲ ಪಾಸಿದ ದಣಬದ ಮೇಲೆ ಮುದದಿಂ ಸುಗುಣದಂಪತಿಗಳೀರ್ವರನು ಅಗಣಿತಹರುಷದಿ ನಡಸಿದರು (ಅನಂತ. ೭-೧೧೪). ೩. ಕೊಡಗೂಸುವಾಗಳೆ ದಂತಧಾವನಗೆಯ್ದು ಮಿಂದೊಲವಾಂತು ದಣಿಬವನುಟ್ಟು ಭೂಷಿತವನಿಟ್ಟು ಭಾಳದಲಿ (ಬಸಪು. ೧೪-೩). ದಣಿಬು : ೧. ಉಟ್ಟ ದಣಿಬು ಸುಲಿ ಪಲ್ಬಿಟ್ಟ ನಿಡುಜಡೆ ಇಟ್ಟ ವಿಭೂತಿಯ ಬೊಟ್ಟು ಕಟ್ಟಿದ ಬಹುರಕ್ಷೆ ಹೊಸ ಮೊಂಜುರಿಗೆಯ ಕಟ್ಟಾಳು ಕಣ್ಗೆ ರಾಜಿಸಿದ (ಶ್ರೀಪಾಂಲಿ. ೮-೩೮). ದಣುಬ : ೧. ಆ ರಾಜಭವನದೊಳೊದಚುವ ಪರಿಚಾರಕಿಯರ್ ಕೆದಱುವ ಪೂವಲಿಗಳ್ . . . ಪಾಸುವ ದಣುಬಂಗಳಪ್ಪುಸುವ ನೀರಾಜನಂಗಳ್ (ನಾಗಕು. ೩-೬೦ ವ). ದಳಿವ : ೧. ತೊಟ್ಟಿಕ್ಕವಡಂ ಮರವಿಲ್ ಕಟ್ಟಿದ ಪಣೆಕಟ್ಟು ಬೇಂಟೆವಚ್ ದೊರೆಯೊಳೊಡಂಬಟ್ಟಸಿಯ ಸುರಗಿ ದಳಿವದ ತೊಟ್ಟಂಗಿಗೆ ತ ನ್ನೊ ಳ ಮ ರೆ ಬೇಂಟೆಯನೊರ್ವಂ ಬಂಮ (ಶಂಪಥಾ. ೩-೫೬) ; "ಮೇಲುಹೊದಿಕೆ" (ಶಂಪದೀ. ೦೯೩).

[ ?₃/ತುಳು. ದಳಿಯ = ಮೈಲಿಗೆ ಕಳೆಯುವುದು, ಮಡಿಮಾಡುವುದು ; ತೆಲು. ದಡಿವ, ದಡಿಬ, ದಡಿಮ. ದಲಿವ = ಉತ್ತರೀಯ, ದುಪ್ಪಟಿ./ಪ್ರಾ. ತಲಿಮ./ಸಂ. ತಲಿಮ ]

**ದಳಿಕೋಣೆ** (ನಾ). ಒಂದು ಪಾರ್ಶ್ವದಲ್ಲಿ ಗೋಡೆಯ ಬದಲು ಮರದ ಕಟಕಟೆ ಅಥವಾ ಕಟಾಂಜನವಿರುವ ಕೋಣೆ : (ಕಿಸಂಗ್ಡಾ. ೮೦).

[ ದಳಿ₂ + ಕೋಣೆ₂ (<ಕೋಣ್) ]

**ದಳಿಗವಟಿಗೆ** (ನಾ). ಒಂದು ನಾಡಿನ ಹೆಸರು : ಸ್ವಸ್ತಿಶ್ರೀ ಕನ್ನರ ಬಲ್ಲಹ ದಳಿಗವಟಿಗೆಯನಾಳೆ ಮರಗಲ್ಲಗಾಮುಣ್ಡನ ಮಗ ಪವೋದೆಚ ಮಣ್ಣು ಲೋರವಿಂಕಿಗಾಳೊಳ್ಕಾದಿ ಪುಳಗಣ್ಣೊಳು ಸತ್ತು ಸಗ್ಗಿಯಾದಂ (ಎಕ. X (8), ಮುಳಪ. ೧೮೭-೩ ; ಸು. ೩೭೦). 'ದಡಿಗವಟಿ' 'ದಟಿಗವಾಡಿ' ಪರಾ. [ ? ]

**ದಳಿಗೆ₁, ದಳಗೆ** (ನಾ). ೧. ಹೊಲಿಗೆ : ಅಂಗಿಗೆ ಒಂದು ದಳಿಗೆ ಹಾಕಿಸಿಕೊಂಡು ಬಾ (ಜೂಘ). ದಳಗೆ : ೨. ಜೋಡಿಸಿ ಹೊಲಿದುದು ; ಹೊಲಿಗೆಯಂ ರೇಖೆ : (ಕ). [ < ದಳ₁ ]

**ದಳಿಗೆ₂** (ನಾ). ಒಂದು ಬಗೆಯ ಪಾತ್ರೆ : ಧೂಪ – ಒಂದಲಗನಸೊಪ್ಪು, ಗಾಂಧಾರಿಸೊಪ್ಪು . . . ಆಡಿನ ಹಿಕ್ಕೆ ಇವುಗಳನ್ನೆಲ್ಲಾ ದಳಿಗೆಯಲ್ಲಿ ಹಾಕಿ . . . ಕುದಿ ಬರುವ ಹಾಗೆ ಕಾಯಿಸಿ ಆ ಹೊಗೆಯಿಂದುಬ್ಬೆಯ ಕಾಯಿಸಲು ವಾತಜ್ವರಂ ತೀರ್ಗುಂ (ಸಕವ್ಯ. ೩೯). 'ಅಳಗೆ₁', 'ಅಳಿಗೆ' ಪರಾ.

**ದಳಿತ** 'ದಲಿತ' ನೋ.

**ದಳಿತಜನ** 'ದಲಿತಜನ' ನೋ.

**ದಳಿತಮರ್ಯಾದ** (ನಾ). ಮರ್ಯಾದೆ ಇಲ್ಲದವನು; ನೀತಿಯಿಲ್ಲದವನು; ಮಾನಗೇಡಿ: ಖಳನ ಧೂರ್ತನ ನಾಸ್ತಿಕನ ಚಂಚಳನ ಪರನಿಕ್ಷೇಪಹಾರಿಯ ದಳಿತಮರ್ಯಾದನ ಕೃತಘ್ನನ ಭರ್ತೃನಿಂದಕನ . . . ವಿಕಳವೃತನ ಲೋಕಾವಳಿಗಳಾಗಲಿ ಕೊಲ್ಲದಿದ್ದರೆ ನಾಳೆ ಸೈಂಧವನ (ಕುಮ್ಮಾದ್ರೋ. ೮-೩೮).

[ ಸಂ. ದಲಿತಮರ್ಯಾದ (ದಲಿತ + ಮರ್ಯಾದಾ + –) ]

**ದಳಿತಮಾರ** (ನಾ). ಕಾಮನನ್ನು ನಾಶಮಾಡಿದವನು ; ಮನ್ಮಥನನ್ನು ಗೆದ್ದವನು : ಜಯ ಜಿನೇಂದ್ರ ನತಸುರೇಂದ್ರ ದುರಿತದೂರ ದಳಿತಮಾರ (ಅಜಿಪು. ೭-೦೩ ರಗಳೆ). [ ಸಂ. ದಲಿತಮಾರ ]

**ದಳಿತಾಂಬುಜ** 'ದಲಿತಾಂಬುಜ' ನೋ.

**ದಳಿತಾಂಬುಜನೇತ್ರೆ** 'ದಲಿತಾಂಬುಜನೇತ್ರೆ' ನೋ.

**ದಳಿತಾಬ್ಜ** (ನಾ). ೧. ಅರಳಿದ ತಾವರೆ,–ಕಮಲ : ದಳಿತಾಬ್ಜಪ್ರಸರಂ ಸರಂ ಕುಸುಮಮಮಾಳಾರಾಮಮಮಾರಾಮಮ (ಜಗವಿ. ೨-೨). ೨. ಅರಳಿದ ಕಮಲಗಳನ್ನುಳ್ಳುದು ; ಬಿರಿದ ತಾವರೆಯಿಂದ ಕೂಡಿದುದು. ೧,೨: ಕೊಳಗಳ್ ದಳಿತಾಬ್ಜಂಗಳ್ ದಳಿತಾಬ್ಜಂಗಳ್ ಸಮೃದ್ಧಮಧುಗಳ್ . . . ಬನದೊಳ್ (ಕಾವ್ಯಾವ. ೬೨೩). [ ದಳಿತ (= ದಲಿತ) + ಅಬ್ಜ ]

**ದಳಿತೇಂದೀವರ** (ನಾ). ಅರಳಿದ ಕನ್ನೈದಿಲೆ : ಒಂದಿನಿತು ಧೈರ್ಯಮಂ ದಳಿತೇಂದೀವರನಯನೆ ತಾಳ್ದು (ಚಂದ್ರಪ್ರ. ೮-೯).

[ ದಳಿತ (= ದಲಿತ) + ಇಂದೀವರ ]

**ದಳಿತೇಕ್ಷಣೆ** (ನಾ). ತೆರೆದ ಕಣ್ಣವಳು ; ಬಿಡುಗಣ್ಣವಳು : ಬಿಮರ್ತುದು ತನುಶಶಿಮಣಿಶಲಾಕೆ ದಳಿತೇಕ್ಷಣೆಯಾ (ಲೀಲಾವ. ೭-೯೦).

[ ಸಂ. ದಲಿತೇಕ್ಷಣಾ (ದಲಿತ + ಈಕ್ಷಣ + – ) ]

**ದಳಿಯಿಸು** 'ದಳಿಸು₂' ನೋ.

**ದಳಿವ** 'ದಳಿಂಬ' ನೋ.

**ದಳಿವಿಡಿ** (ಕ್ರಿ). "ಕೂಡಿಸು, ತೆತ್ತಿಸಂ,ಹತ್ತಿಸಂ, ಕಟ್ಟಿಸಂ" (ಅದಿಪು. ಕೋಶ) : ಹಾರಾದ್ಯಾಭರಣಂಗಳಿನಾ ರೂಪಾಶ್ಚರ್ಯವಾಗೆ ಮಾಣಿಕಚಟ್ಟಂ ನೀರಂಜಿಸಿ ದಳಿವಿಡಿದ ಮಹಾರತ್ನದ ದೊರೆಗೆವಂದುದಾ ಸ್ತ್ರೀರತ್ನಂ (ಆದಿಪು. ೮-೪೨). [ ದಳಿ₀ (<ದಳಿ₁) + ಪಿಡಿ₁ ]

**ದಳಿಸು₁** (ಕ್ರಿ). ಅರಳು ; ದಳ ಬಿಡು : ಇಂದು ಕೆಂದಾವರೆಯ ದಳ ದಳಿಸಿ ದಾರಿಯಲಿ ಗಂಧದೌತಣ ಹೋಗಿ ಬರುವ ಜನಕೆ (ನಡಬಂ. ೨೦-೦).

[ ದಳ₃ (= ದಲ) + – ಇಸು₂ ]

**ದಳಿಸು₂, ದಳಿಯಿಸು** (ಕ್ರಿ). ೧. ನಾಶಮಾಡು; ಹಾಳುಮಾಡು : ಎನ್ನಂ ದಹಿಸಿ ದ ಳಿ ಸು ವ ದವಾಗ್ನಿಗೆಯುನ್ನತಿಕೆಯ ಸತ್ತ್ವಮನಿರದೊದವಿಪ

. . . ಗಾಳಿ ಎನ್ನೊಳೆ ಪುಗೆ ಕೀಡೆನಗಿರದಪ್ಪುದು (ಜಯನೃ. ೧೫-೨೭).

**ದಳಯಿಸು :** ೨. ಸೀಳಲ್ ; ಬಗಿ: ಅಸುಹೃತ್ಕರಿಯಂ ಹಲಿ ದಳಯಿಸು ವಂದುಚ್ಚಳಿಸಿ ಪುದಿದ ನೆತ್ತರ ಕೆಂಪಾಗಸದೊಳ್ ತೋರುವುದಿನ್ನುಂ ಕಿಸು ಸಂಜೆಯ ನೆವದೆ ದಿವದ ರಾತ್ರಿಯ ಪುಗಿಲೊಳ್ (ಜಗವಿ. ೮-೪೪).

[ ದಳನ (= ದಲನ) + _ ಇಸು$_3$ ]

**ದಳೆ$_1$** (ಕ್ರಿ). ೧. (ಮರದಲ್ಲಿ ಎಲೆ, ಹೂವು, ಹಣ್ಣು ಮೊದಲಾದುವು) ಒತ್ತಾಗಿ ಬೆಳೆ; ದಟ್ಟವಾಗಿ ಬೆಳೆ; ವಿಪುಲವಾಗು: ಮುಗಿಲ್ಗಳತಿ . . . ಪೆರ್ಮಳೆಯನು ಸೂಸದು ದಳೆದ ಪೂ ತಳಿರ್ಗಳಿಂಪಿನ ಸೊಂಪು ಮಾಸದು ತರುಗಳಲ್ಲಿ ವಣ್ಣ್ಗಳ್ಗಳಂ ಬೀಯಲೀಸದು ಸಮಸ್ತ ಋತುಸಮಯಂ ಗಳಚಲೇಂದ್ರತನುಜೆ ತಪಮಿರೆ ಬನದೊಳು (ಜ್ಞಮಿಥಾ. ೦೬-೦೭). ೨. ಹೊಲಿಗೆ ಹಾಕು ; ಹೊಲಿ : ಸಕಲ ಶರೀರದಂಗಿಯು ಪೊಲಿದುವಾಯುಃ ಕರ್ಮದೆಳೆಗಳನು ಸೇರಿಸಿಯೆ ದಳೆದಂಬರವನು ವಿಸ್ತಾರದಾಕಾಶವನು ಮಿಗೆ ಗೂಡಾರವಂ ಪೊಲಿದೆತ್ತಿದಂ ಕನಕಾದ್ರಿಕಂಬದೊಳು (ಶಂಕದಾ. ೪-೩೨). ೩. (ಮೈ ಮೇಲೆ ಸಿಡುಬು ಮಂಂತಾದುವು) ಸಂರಿ : 'ತಳೆ$_1$' ಪರಾ. [ ದೇ.॥ ತಮಿ. ತಳ್ಳೈ, ತಟ್ಟ್ಯೆ; ತುಲ.ತಟ್ ]

**ದಳೆ$_2$** 'ತಳೆ$_2$' ನೋ.

**ದಳೆ$_3$** (ನಾ). ೧. ಎರಡು ಬಟ್ಟೆಗಳ ಅಂಚುಗಳನ್ನು ಜೋಡಿಸಿ ಹೊಲಿದ ರೇಖೆ ; ಕೂಡು ಹೊಲಿಗೆಯ ರೇಖೆ : (ಕ). ೨. ಗದ್ದೆಯ ಹಾಳೆ ; ಕಾಲುವೆ ದಂಡೆಯ ಗದ್ದೆ ಖ ೧ಕ್ಕೆ ದಳೆವೈನ ಮೊದಲ ದಳೆ ೧ಕ್ಕೆ ಸೀಳು ೩ಕ್ಕೆ ಖ ಥಿ ಸೀಳು ೩ಕ್ಕೆ ಖ ಥಿ ಮೂರನೆ ದಳೆ ಸೀಳು ೨ಕ್ಕೆ ಖ ಥಿ ನಾಲ್ಕನೆ ದಳೆ ಸೀಳು ೨ಕ್ಕೆ ಖ ೧೦ ಅಂತೂ ಸೀಳು ೧೦ಕ್ಕೆ ದಳೆ ಳಕಖ ೧೦ (ಎಕ. XVI. ಚಿಕ್ಕನಾ. ೫೩-೦೬ ; 1639).$_3$

[ ದೇ.॥ ತಮಿ. ತಳ್ಳೆ ]

**ದಳೆಕಟ್ಟು** (ಕ್ರಿ). (ಹಾಲು ಕರೆಯುವಾಗ) ಹಸು ಮೊದಲಾದುವುಗಳ ಕಾಲಿಗೆ ಹಗ್ಗವನ್ನು ಕಟ್ಟು : (ಕ್ಯಾಂಟಲ್).

[ ದಳೆ$_3$ (< ತಳೆ$_3$) + ಕಟ್ಟು$_{11}$ ]

**ದಳೆಯಿಕ್ಕಿಸು** (ಕ್ರಿ). ದನದ ಕಾಲುಗಳಿಗೆ ಹಗ್ಗವನ್ನು ಕಟ್ಟಿಸು : ಕಟೆವ ಕಟ್ಟುವ ಲಾಲಿಸುವ ಮೈದುಡಿಸಿ ದಳೆಯಿಕ್ಕಿಸುವ ಕರುಗಳ ಕರೆಕರೆದು ಮುಂಡಾಡಿ ತಟ್ಟುವ . . . ಲೀಲೆಯಲಿ ಹರಿಯಿರೆ ಕಂದನಕ್ರೂರ (ಅಕ್ರೂಚ. ೨-೫೨). [ ದಳೆಯಿಕ್ಕು (< ತಳೆಯಿಕ್ಕು) + _ ಇಸು$_3$ ]

**ದಳೆಯಿಕ್ಕು** 'ತಳೆಯಿಕ್ಕು' ನೋ.

**ದಳೆಹಾಕು** (ಕ್ರಿ). = ದಳೆಕಟ್ಟು : ಈ ಹಸುವಿಗೆ ದಳೆಹಾಕದಿದ್ದರೆ ಹಾಲು ಕರೆಯಲು ಆಗುವುದಿಲ್ಲ. (ರೂಢಿ).

[ ದಳೆ$_3$ (<ತಳೆ$_3$) + ಹಾಕು (< ಪಾಯ್ಕು$_1$) ]

**ದಳ್ದಳಿ** 'ದಟ್ಟಟ' ನೋ.

**ದಳ್ದಳಿಸು** 'ದಳದಳಿಸು' ನೋ.

**ದಳ್ಳಾಳ** 'ದಲ್ಲಾಳ' ನೋ.

**ದಳ್ಳಾಳಿತನ, ದಳ್ಳಾಳ್ತನ** (ನಾ). ೧. ಮಧ್ಯಸ್ಥನಾಗಿರುವಿಕೆ : ನಮ್ಮೂರಿ ನಲ್ಲಿ ಮೂರು ಅಂತಸ್ತಿನ ಜನರಿದ್ದರೆಂದು ಧಾರಾಳವಾಗಿ ಹೇಳಬಹುದು. ಒಂದು ಯಜಮಾನಿಕೆ, ಎರಡನೇದು ಆಳುತನ, ಮೂರನೇದು ಇವರಿಬ್ಬರ ದಳ್ಳಾಳಿತನ (ಹುಟ್ಟಿಹ. ೬೭). ದಳ್ಳಾಳ್ತನ: ೨. ದಲ್ಲಾಳಿಯ ವೃತ್ತಿ ; ಇನ್ನೊಬ್ಬರ ಮಾಲಿಗೆ ಗಿರಾಕಿಯನ್ನು ಹೊಂದಿಸಿಕೊಡುವ ಕೆಲಸ : ನಗರದೊಳಗಿನ ವ್ಯಾಪಾರ ಮಾತ್ರವಲ್ಲ, ಹೊರನಾಡುಗಳ ವ್ಯಾಪಾರೀ ದಳ್ಳಾಳ್ತನವೂ ಅವರಿಗಿತ್ತು (ಕಾಲಿಯೂ. ೬೫).

[ ದಳ್ಳಾಳ (< ದಲ್ಲಾಳ) + _ ತನ ]

**ದಳ್ಳಾಳಿ** 'ದಲ್ಲಾಳಿ' ನೋ.

**ದಳ್ಳಾಳಿತನ** 'ದಲ್ಲಾಳಿತನ$_1$' ನೋ.

**ದಳ್ಳಾಳ್ತನ** 'ದಳ್ಳಾಳಿತನ' ನೋ.

**ದಳ್ಳಿಸು** (ಕ್ರಿ). ೧. ಉರಿಯೇಳು ; ಭುಗಿಲಿಡು ; ಪ್ರಜ್ವಲಿಸು ; ಧಗ ಧಗಿಸು : ನಿಶಾಚರಬಲಮಪಿವಜಗಾದ ಕಾಡನಳುರ್ವ ಬೇಗೆಯ ದಳ್ಳುರಿ ಯಂತೆ ದಳ್ಳಿಸಿ ಕೊಳ್ಳೆಂದರಾತಿಬಲಮನಳುರೆ . . . ಬಂದು ತಾಗಿದಾ ಗಳ್ (ಪಂಪಭಾ. ೧೨-೭ ವ) ; ಅದ್ಭುತನಟನಟಲಾಲೋಲಕೀಲಾಕ್ಷಿಪೋಲ್ ದಳ್ಳಿಸೆ ಕೋಪಾರಕ್ತನೇತ್ರಂ (ಗದಾಯು. ೬-೩೦) ; ಶಿಶಿರ್ಕೆ ನಿಧಾನಮಪ್ಪ ಚಂದನದೊಳೆ ಪುಟ್ಟಿ ಕಿಚ್ಚು ಸುಡದಿರ್ಪುದೆ [ ತತ್ತ್ವಶಮೈಕಕಾರಣಂ ವನನಿಧಿ ಯಾದೊಡೇ] ನುರಿಯದಿರ್ಪುದೆ ದಳ್ಳಿಸಿ ಬಾಡಬಾನಲಂ (ಕಾದಂಪೂ. ೫೯೦); ದಳ್ಳಿಸೆ ವಹ್ನಿಜ್ವಾಲೆ ದೀರ್ಘಾನನಕುಹರಸಹಸ್ರಂಗಳಿಂ . . . ಫಣ ಸಹಸ್ರಂಗಳಂ ಬಿರ್ಚಿ ಕಣ್ಗವಿಸಿ ವಜ್ರಾವರ್ತಚಾಪಂ ಪಡೆದುದು ಭಯಮಂ ಕಾಳಕಾಳಾಹಿರೂಪಂ (ಹಂರಾಮಾ. ೫-೭೪) ; ಘೃತಾಹುತಿವಡೆದನಲನಂತೆ ಮಿಗೆ ದಳ್ಳಿಸಿದಂ (ಕಮದ. ೨೩೦ ಪ್ರಯೋ) ; ಒಡನೊಡನೆ ಕೈಮಾಡಿದನು ಕೈಗಡಿಯನಂಬಿನ ಧಾರೆ ದಳ್ಳಿಸಿ ಕಿಡಿಗೆದಱುವವು ನೃಪನ ರಥಸಾರಥಿ ಹಯಾಳಿಯಲಿ (ಕುಮ್ಯಾಶ. ೨-೩೭) ; ಉಕ್ಕೆಱುವ ಕೋಪಾಗ್ನಿ ದಳ್ಳಿಸಿ ದಿಕ್ಕು ಗಳನಳ್ಳಿಱಿಯೆ ಲಕ್ಷ್ಮಣನೆಕ್ಕತುಳದಲಿ ಬಂದನು (ತೊರರಾ. ೨-೩-೦೦) ; ಕಡಲೊಡಲ ವಡಬಂ ಬಿಡದೆ ತೀಡುವ ಬಿಱುಗಾಳಿಯ ತೀಟದಿಂ ದಳ್ಳಿಸ ಲೊಡಮೊಡಗೊಂಡ ಬೆಟ್ಟುಗಳ್ ಕರಂ ಸೀಕರಿಪೋಗೆ ಪುಟ್ಟಿತಕ್ಕುಂ (ರಾಮಾಶ್ವ. ೨-೨೯). ೨. ಸುಡು ; ದಹಿಸು : ವಿಷವನಹಿರಾಜನನಿತಱೊಳಂಗುಳೆಯಾ ವಿಷಜ್ವಾಲೆಯಾ ಋಷೀಶ್ವರನ ದಳ್ಳಿಸಲಾಗಳು (ಪಾಸೋಕು. ೧೦-೨೦೬). ೩. ಕವಿ ; ಆವರಿಸು ; ಮುತ್ತು ; ವ್ಯಾಪಿಸು : "ಅಳುರ್ಕೆಯೆಂದುಂ ದಳ್ಳಿಸಿತೆಂದುಂ ಆವರಿಸಿದುದು". (ಕಶಸಾ ೬೬-೯೭೭) ; "ದಳ್ಳಿಸಿತೆಂದಳುರ್ಕೆ ಯೆಂದಾವರಿಸಿದುದಕೆ ಪೊಸನಾಮಮುಕ್ಕು" (ಶಬ್ದಮ. ೫೨); ಇಂಚರಮಂ ವಿಪಂಚಿ ಮೆಱೆದತ್ತಿರ್ಲ್ವೆಕಿ ತನ್ನಂಗಿ ನಿನ್ನ ಸಭಾಸದ್ಮದೊಳೇಕಿ ದಳ್ಳಿಸಿದು ದಿಲ್ಲುತ್ತಾನ ವಂಶಸ್ವನಂ (ಮಲ್ಲಿಪು. ೪-೯) ೪. ಹೆಚ್ಚು ; ಉಕ್ಕೇರು ; ಉಕ್ಕು : ದಳ್ಳಿಸಿ ಕುಕಿಲುತ್ತಂಬುಧಿಯಲ್ಲೋಲಂ ನೆಗಟಿ ನಲಿದು ನರ್ತಿಸಿ ನಡೆದತ್ತಳ್ಕಾಡೆ ನೆಲಂ ಬಲಮದು ಕೊಳ್ಳೆಂದು ಗುಹಾರವಂ ಪೊದಟ್ದಿಸೆ ವಿನೆಗಂ (ಅಜಿತಪು. ೦೩-೫೩) ; ಕೊಳ್ಳೆನೆ ಕೊಳ್ಳೆವೀಸೆ ಪಡೆಯಂದೆರಡುಂ ದಿಗಧೀಶರೋಡಿದರ್ . . . ಎತ್ತಲುಂ ದಳ್ಳಿಸಿದತ್ತೊ ವೀರರಸವಾರಿಧಿ ವಾತಮಹಾಪ್ರಘಾತದಿಂ ನಿಲ್ಲದೆನಿಪ್ಪನಂ ರವಳಿ ಘೋಷಿಸಿ ಭೈರವಮಾದುದಾ ರಣಂ (ನೇಮಿಪು. ೦೦-೦೨೩) ; ತಿರ್ದುಮಂ ಪ್ರಸರದ್ದಂತಿಯ ದಂತದೊಳ್ ಹರಿಯ ದಂಷ್ಟ್ರಾಲೇಪಯಂ ಕಿಟ್ಟಿ ತೆತ್ತಿಸುವಂ ಲೀಲೆಯೊಳರ್ಧಚಂದ್ರ ಶರಮಂ ಮಾಚ್ಚುಟ್ಟಿಯಿಂದಣ್ಣು ದ[ಪಾಠಾಂ. ಪ]ಳ್ಳಿಸೆ ಸಿಂಹೀಶತನೇತ್ರದತ್ತ ಪತಿ ಶೋಕಾವ್ಯಂದಕಂ ವಿಂಧ್ಯಕಂ (ಅರ್ಧನೇ. ೩-೫೩). ೫. ಹೊಳೆ ; ಥಳಥಳಿಸು: ದಿವಿಜೇಂದ್ರಭವನಮೆಂಬೀ ನಿವಾಸದಿಂದತ್ತ ಮತ್ತ ಮೇಲಿ ರ್ದಪುದೆಂದವಗಯಿಪವೊಲಲ್ಲಿಯ ವಾತವಿಧೂತವಿನೂತಕೇತುಗಳ್ ದಳ್ಳಿ ಸುಗುಂ (ಸುಕುಮಾ. ೦೦-೪೯); ದಾಂಗುಡಿವಿಟ್ಟು ದಳ್ಳಿಸುವ ಕೆಂದಳಿರಿಂದೊಸೆ ದೆತ್ತಿ ಲಕ್ಷ್ಮಿ ಕಾಮಂಗೆ ಮಗಂಗೆ ಶೈಶವಾರೀಕ್ಷಣಕೇಳಿಗೆ ನೇತ್ರಸೂತ್ರದಿಂ ದಿಂಗಡಲೆಂಬ ಸಜ್ಜೆವನೆಯೊಳ್ಪರೆದೊಟ್ಟಿಲ ಮೇಲೆ ಕಂಬರಲ್ದಿಂಗಣೆಗಟ್ಟಿ ದಂತುವದಯಶೈಲಶಿಖಂಡದೊಳಿಂದುಮಂಡಲಂ (ಮಲ್ಲಿಪು. ೬-೨೯). ೬. ಮಿಂಚು ; ಮಿಂಬರಿಸು: ಅಳಿನೀಲೀಕಂಚುಕಂ ದಳ್ಳಿಸೆ ಮೊಳೆಯಲೆಪಂ ಕಯ್ಯಸೋಂಕಿಂದೆ ಕೆಂಪಂ ತಳೆದೊಪ್ಪಂಬೆತ್ತ ಪೊಂಬೆತ್ತದ ಸಳೆಗೆ ತಳೆವರ್ಮಾಡಿ ದಂತಾಗೆ . . . ಎಸೆದು ಬಂದಳ್ ಪ್ರತೀಹಾರಿಯೊರ್ಬಳ್ (ಲೀಲಾವ. ೪-೭೩); "ನೂಕಲ್ಪಡುಂ" (ಪ್ರಭ್ಯ). ೭. ಅದಿರು ; ಅಳ್ಳಾಡು ; ಅಲುಗು: ಸಿಡಿಲು ಹೊಡೆದಡೆ ಸಿಗುರುಬೋಟದ ಕಡುಹಿನಗ್ಗದ ಶೈಲ ನುಗ್ಗಿಯದಡಿಗೆ ದ[ಪಾಠಾಂ. ಧ]ಳ್ಳಿ ಸುವುದೆ (ತೊರರಾ. ೬-೨೭-೨೮).

೮. (ಆಲಂ) (ಕೋಪ, ಗರ್ವ, ಅಹಂಕಾರ ಮೊದಲಾದುವುಗಳಿಂದ) ಕೆರಳಂ ; ಉರಿ; "ಗರ್ವದಿಂದ ಮೆರೆ" (ಶಂಷನಿ) : ಆ ದುಶ್ಶಾಸನನಂ ಪೊರಳ್ಚಿ ರಣದೊಳ್ ಕೊಂದೀ ಮರುತ್ಪುತ್ರನಿಂತಾದಂ ದಳ್ಳಿಸೆ ನೋಡಿ ನೋಡಿ ಪುದುವಾಟಿಂತಕ್ಕುಂ (ಶಂಶಭಾ. ೧೩-೮೮) ; ಬಸಿವ ರಕುತವ ಬಳಿದು ಖಾತಿಯ ಮಸಕದಲಿ ಕೈಮಟಿದು ಮಿಗೆ ದಳ್ಳಿಸುತ ಹೊಗರಿಡು ತೌಡುಗಚ್ಚುತ ಹುಬ್ಬುಗಳ ಬಲಿದು . . . ಪುನರಪಿ ಕಟಿದನಂಬುಗಳ (ಕುವ್ಯಾ.ಛೀ. ೯-೩೯). ೯. (ಆಲಂ) ಸಡಗರಿಸಂ; ಸಂಭ್ರಮಿಸು ; ಅತಿ ಆನಂದಪಡು: ಗಿಳಿಗಳೊಳೆ ಗಳಪಿ ಮೊಜಿವಳಿಕುಳದೊಡನಾಳ್ಳಿಸಿ ಪುರುಳಿಯೊಡನಳಿಸಿ ನವಿಲ್ಗಳ ಬಳಗದೊಡನೆ ನರ್ತಿಸಿ ವಿಳಾಸಿನೀನಿವಹ ಮಾಗಳೀಂ ದಳ್ಳಿಸಿತೋ (ಆದಿಪು. ೧೧-೮೨). [ ದಳ್ + – ಇಸು$_{3}$ ]

**ದಳ್ಳಿಟು** (ಕ್ರಿ). ೧. ಶಿವಿ ; ಇರಿ ; ಚುಚ್ಚು : ಮುಗಿಲಂ ಮರಗಳ ತುದಿಗೋಡುಗಳೊಳೆ ದಳ್ಳಿಟಿದೊಡುದಿರ್ದ ಕೆದಟಿದ ಕಿಬುದಾರೆಗಳೆನಿಪುವು ಕಾನನದೊಳೊಗುವಿಗೆ ಪರಿದಿರ್ದ ಪಿರಿಯ ನೆಲ್ಲಿಯ ಕಾಯ್ಗಳ್ (ಲೀಲಾವ. ೬-೩೪). ೨. ಕಾಂತಿ ಹೊಂದು ; ಶೋಭೆಯನ್ನು ಪಡೆ ; ಹೊಳೆ : ಏಟಿ ವಿಮಾನಮಂ ಕೃತಕಗಾಯಿಕೆಯರ್ ಧವಳಾಭ್ರ ಕೂಟದೊಳ್ ತೋಟುವ ಮಿಂಚಿನಂತೆ ಮುಂಗಿಲೊಡ್ಡೊಡೆದಿಬ್ಬಗಿಯಾಗಿ ನಿರ್ಭರಂ ಪಾಟಿ ಪತಾಕೆಗಳ್ ಮಗುಟ್ದು ವಿಳ್ಳಿಸಿ ದಳ್ಳಿಟಿದಾಡೆ ಯಾನವೇಂ ಕೇಟಿದುದೋ ನಭಃಪ್ರಸೃತಿಗಿಟ್ಟೆಡೆಯಾದುದೆಂಬಿನಂ (ಶಾಂತಿಪು. ೨-೮೨) : ಒಳ್ಳಾನೆಗೋಡಲಟಿಯದ ಬೆಳ್ಳಾಳಪೊಲಗಿದು ಕಂಡು ಲಾವಣ್ಯರಸಂ ತಳ್ಳಂಕಂಗುಟ್ಟೆ ವಿಳ್ಳಿಸಿ ದಳ್ಳಿಟಿದಾಡುವ ಜಿನೇಂದ್ರಶಿಶುವಂ ತಳದಿಂ (ಶಾಂತಿಪು. ೧೦-೮). 'ಅಳ್ಳಿಟು' ಪರಾ. [ ದಳ್ + ಇಟು$_{1}$ ]

**ದಳ್ಳಿಬಾಟು** 'ತಳ್ಳವಾಟು$_{1}$' ನೋ.

**ದಳ್ಳುರಿ$_{1}$** (ಕ್ರಿ). ೧. ತೀವ್ರವಾಗಿ ಉರಿ ; ಭುಗಿಲಿಡು ; ಪ್ರಜ್ವಲಿಸು : ೨. (ಆಲಂ) ಕೊಬ್ಬಿನಿಂದ ಉರಿ ; ಗರ್ವದಿಂದ ಮೆರೆದಾಡು. ೧, ೨ : ಮೋಹದಿಂ ನೀಂ ಮಾಡಿದ ಪಲ್ಲವು ಪೊಲ್ಲಮೆಗಳಂ ಸ್ಮರಿಸಿರ್ದೊಡಂ ನೀಂ ಕೊರ್ವಿ ಗಾಳಿಯೊಳ್ಕೂಡಿದ ಕಿರ್ಚಿನಂತೆ ದಳ್ಳುರಿದು ಪೊಬಲೊಳಗೆ ಮುನ್ನಿನೆಡೆಗೇಗಳಂ ಪಿರಿದಬ[ಬ್ಬ]ರಮಂ ಮಾಡಿದೆ (ಧರ್ಮಾಮೃ. ೨-೯೯). [ ದಳ್ + ಉರಿ$_{1}$ ]

**ದಳ್ಳುರಿ$_{2}$** (ನಾ). ೧. ಭುಗಿಲಿಡುವ ಕಿಚ್ಚು ; ದೊಡ್ಡ ಉರಿ ; ಪ್ರಜ್ವಲಿಸುವ ಜ್ವಾಲೆ: "ದಳ್ಳುರಿಯು ಪೇರುರಿಯು ಘನಜ್ವಲಿತದೊಳು" (ಕಬ್ಬಮಂ. ೦೨) ; ಮುಳಿಸಿನ ದಳ್ಳುರಿಗಳನುಗುಬುತ್ತುಂ ಚಕ್ರರತ್ನಮಂ ಬಗೆದು ಬೆಸಸಿದಂ ಭರತೇಶಂ (ಆದಿಪು. ೧೪-೧೧೫) ; ವಿದ್ಯಾತಿರೂಪಮಲ್ಲದ ವಿನತಾಸುತಂ ಮಿಳಿರ್ಪ್ಪ ದಳ್ಳುರಿಯಲ್ಲದ ವಹ್ನಿ ಕಾಳನಲ್ಲದ ಜವನಬ್ಧಿ ಮಧ್ಯಗತನಲ್ಲದ ಬಾಡಬಂ (ಕಇ. V, ೫೨-೧೮ ; 1087) ; ಸೋಂಕಿದ ಗಾಳಿ ದಳ್ಳುರಿವೊಲಾದುದು ಪೊಕ್ಕ ಸರೋವರಾಂಬು ಕಾಯ್ದಿಕ್ಕುಂ ಕುದಿದತ್ತು . . . ನಿಡಾಂಗತಾಪದಿಂ ಪಂಕರುಹಾಕ್ಷಿ ಕಾಮಶಿಖಿ ಪೆಣ್ಪುರಿಜಂ ತಳೆದಂತೆ ತೋಟಿದರ್ (ಕಾವ್ಯಸಾ. ೭೦೩) ; ಬಗೆದು ಧಂಧಗಧಗಧಗಂ ಘುಳುಘುಳಿಂ ದುಬ್ಬಿ ನೆಗೆದು ದಳ್ಳುರಿ ಬಳ್ಳಿವರಿದು ಕತ್ತಲಿಸಿ . . . ದಾವಾಗ್ನಿ ಮುತ್ತಿತ್ತು ನಾಲ್ದೆಸೆಯನಂ (ಹರಿಕಾ. ೧೦-೬); ಅರಗಿನರಸನ ಬಾಗಿಲಲಿ ದಳ್ಳುರಿಗೆ ತಡವೇ (ಕುವ್ಯಾದ್ರೋ. ೫-೯೧) ; ಆ ದಳ್ಳುರಿಯ ಕೆಂಬೊಗೆಯು ಎತ್ತಲೂ ಚಿಮ್ಮಿ ಕಾಡ ದಾರಿಗರನ್ನು ಭೀತಿಗೊಳಿಸಿದೆ (ನೂರಜ. ೦). ೨. ಬಿಸಿ ; ಝಳ ; ತಾಪ ; ಶಾಖ: ಸಕಲದಿಗಂತರಂಗಳೊಳ್ ದಳ್ಳುರಿಯನುಗುಟ್ಟ ತೀವ್ರರಶ್ಮಿಜಾಲಮುಂ ಪಸರಿಸುತ್ತಿರೆ ನಿದಾಘಸಮಯ ಸಹಸ್ರಭಾನುಮಂಡಲಂ ಮಧ್ಯಾಹ್ನವರ್ತಿಯಾಗೆ (ಕಾದಂಬ. ೪೫೭) ; ನಾಸಿಕದುಸಿರ ದಳ್ಳುರಿ ಮೂಳಿಕುತಿ ಗಂಧಗ್ರಾಸ ಸಂತಾಗಿ ಮೆಯ್ಯೊಳಗೆ ಪೂಸಿದ ಸಿರಿಗಂಧ ಕರಿಕಾದುದು (ಮೋಹತ. ೨೮-೧೭) ; ದಳ್ಳುರಿಗರೋತ್ತಮ = ವಿಷಜ್ವಾಲೆಯುಳ್ಳ ಮಹಾಸರ್ಪ : ರಜ್ಜುವದೆತ್ತ ದಳ್ಳುರಿಗರೋತ್ತಮನೆತ್ತ ವಜ್ರವೆತ್ತಾಲಿಕಲ್ಲೆತ್ತ ಮಜ್ಜವಿತೇಶ್ವರನೆತ್ತ ನೀನೆತ್ತ ಕೇಳ್ ದುರ್ಜೀವಿ ತರಳೆಂದಳೊಲಿದು (ಮೋಹತ. ೭-೩೪); "ದಳ್ಳುರಿಯಂತೆ ಉರಿಯುತ್ತಿರುವ ವಿಷಜ್ವಾಲೆಯಿಂದ ಮಹಿಮೆಂ ಹೊಂದಿದ ಕೃಷ್ಣಸರ್ಪ (?)" (ಮೋಹತ. ಅಡಿಟಿ) . ದಳ್ಳುರಿಗಂಧ = ನಿಗಿನಿಗಿಕೆಂಡ ; ತಳಲುಗೆಂಡ : ಸಿರಿಖಂಡದನುಲೇಪ ತನುವಿಗತಿಶಯತಾಪ . . . ಪರಪಿದಸುಗೆಯ ತಳಿರ ತಂದ ದಳ್ಳುರಿಗೆಂಡ (ಸಾಂಗ್ರಪು. ೮-೭೬). ದಳ್ಳುರಿ ಜ್ವಾಲೆ = ಧಗಧಗಿಸುವ ಉರಿಯ ನಾಲಗೆ : ಕಾಳುಕಿಚ್ಚೆದ್ದಡವಿಯನು ಕುಡಿನಾಲಗೆಯೊಳಳವಡಿಸಿ ದಳ್ಳುರಿಜ್ವಾಲೆ ತಗ್ಗಿದವೋಲು . . . ಸುರಪಾಲತನಯನ ತನಯನಸ್ತ್ರವಿಸಿದನು ರಣದೊಳಗೆ (ಕುವ್ಯಾದ್ರೋ. ೬-೭೦). [ ದಳ್ + ಉರಿ$_{2}$ ]

**ದಳ್ಳುರಿತಿರುಳು** 'ದಳ್ಳುರಿದಿರುಳು' ನೋ.

**ದಳ್ಳುರಿದಿರುಳು, ದಳ್ಳುರಿತಿರುಳು** (ನಾ). ಉರಿಯುತ್ತಿರುವ ಬೆಂಕಿಯ ತಿರುಳು ; ಗಟ್ಟಿಕೆಂಡ : ಮುಳಿದು ವಿಷಸೆಯ ಮುರಿದು ಹುಬ್ಬನು ಬಲಿದು ದಳ್ಳುರಿದಿರುಳನಕ್ಷಿಗಳೊಳಗೆ ಪಸರಿಸಿ ಘುಡುಘುಡಿಸಿ ರೋಮಾಳಿ ಸ್ಫುನಿವಿಸಿ . . . ಭಾರ್ಗವದತ್ತಬಾಣಕೆ ನೀಡಿದನು ಕರವ (ಕುವ್ಯಾಕರ್ಣ. ೧೩-೫೧). ದಳ್ಳುರಿತಿರುಳು : ನೆರೆದುದಸುರರು ಕಾಲಕೂಟದ ಕರುವಿನೆರಕವೊ ಸಿಡಿಲ ದಳ್ಳುರಿತಿರುಳ ದಡ್ಡಿಯೊ ವಿಲಯಭೈರವನುಬ್ಬಟೆಯ ಪಡೆಯೊ . . . ಗಾಢಾಯ ತೇಜದ ದುರುಳ ದಾನವ ಭಟರು ಬಂದುದು ಕೋಟಿ ಸಂಖ್ಯೆಯಲಿ (ಕುವ್ಯಾ.ಅ. ೧೨-೨೯). [ ದಳ್ಳುರಿ$_{2}$ + ತಿರುಳು (<ತಿರುಳ್) ]

**ದಳ್ಳುರಿದುಟುಗಲು** (ನಾ). ಉರಿಯುತ್ತಿರುವ ಜ್ವಾಲೆಯ ಸಮೂಹ,– ಗುಂಪು ; ಜ್ವಾಲಾಸಮೂಹ : ಹೊಗೆಯನೊದೆದೊಳಬಿದ್ದು ಕಿಡಿಗಳ ನುಗಿದು ದಳ್ಳುರಿದುಟುಗಲನು ತನಿಬಿಗಿದು ಭೀಮನ ರಥದ ಸುತ್ತಲು ಸೂಸಿ ತೆರೆವಸಗೆ . . . ಉರವಣಿಸಿತಮಳಾಸ್ತ್ರ (ಕುವ್ಯಾದ್ರೋ. ೧೯-೪೭); ಬಿಜುನಗೆಯಲಿಂದ್ವಾರಿ ದಳ್ಳುರಿದುಟುಗಲಿನ ಕೊಳ್ಳಿಗಳಲಿದ್ದೆಸೆಗೊಟಗ ದಂತಿರೆ ಕಟ್ಟಿದರು ಕಂಭದಲಿ ಹಳವಿಗೆಯ (ತೊರರಾ. ೫-೭-೧೧).

[ ದಳ್ಳುರಿ$_{2}$ + ತುಟುಗಲು (<ತುಟುಂಗಲ್) ]

**ದಳ್ಳುರಿಧಾರೆ** (ನಾ). ದಳ್ಳುರಿಯಂತೆ ಹೊಳೆಯುವ ಅಲಗಂ : ಸಾರಥಿಯ ಕೊಂದಲ್ಲದರ್ಜುನ ತೀರುವವನಲ್ಲೆನುತ ದಳ್ಳುರಿಧಾರೆಯಂಬೈದಟಿ ದೇವನನೆಸಲು (ಕುವ್ಯಾದ್ರೋ. ೩-೫೪). [ ದಳ್ಳುರಿ$_{2}$ + ಧಾರೆ ]

**ದಳ್ಳೆನ್** (ಕ್ರಿ). 'ದಳ್' ಎಂದು ಶಬ್ದ ಮಾಡು: ಇವೆ ಕೋಪಾನಲಧೂಮಲೇಖೆಯನೆ ಪುರ್ವುರ್ವೆಟ್ಟು ಜರ್ವಲ್ ತಗುಳ್ದುವು . . . ಕೋಪಾನಲತಾಪದಿಂ ರಣರಸಂ ದಳ್ಳೆಂದು ಕಾಯ್ದುದ್ದುಕ್ಕುವಂತೆವೊಲಾಗಳ್ ಬೆಮರ್ಗಳ್ ಕಪೋಲತಲದೊಳ್ ತಳ್ತೊಯ್ಯುದ್ದಾ ದೈತ್ಯನಾ (ಪಂಪಭಾ. ೯-೪೮) ; ನಿಶಾಚರನ ಕೋಪೋಗ್ರಾನಳಂ ಪೊತ್ತುತುಂ ಪೊಗೆಯುತ್ತುಂ ಕಿಡಿಗುಟ್ಟುತುಂ ಮಸೆಯುತುಂ ದಳ್ಳೆಂಬ ಭೋರೆಂಬ ಭುಗ್‌ಭುಗಿಲೆಂಬೆಟ್ಟಿಯ ನಾಂತು ಕೇಸುರಿಗಳಂ ಸೂಸಿತ್ತುಗ್ರಪರ್ವಟ್ಟಿನಂ (ಜಗವಿ. ೧೫-೪೦) ; ಜವದಿಂ ಬಂದುದು ದಳ್ಳೆನುತ್ತುರಿವ ಮೆಯ್ಯುಂ ಧೂಮದುರ್ದೆಂಬ ಜರ್ಬುವ ಪುರ್ಬುಂ . . . ರೌದ್ರಜ್ವರಂ ತಪ್ತಹೇಮವಿಭೂಷಂ ತ್ರಿಶಿರತ್ರಿಪಾದ ವರುಣಾಕ್ಷಂ ರೂಕ್ಷರಕ್ಷಾಯುಧಂ (ಜಗವಿ. ೦೯-೦೩). [ ದಳ್ + ಎನ್$_{1}$ ]

**ದಟದಟ, ದರದರ$_{1}$** (ನಾ). ಒಂದು ಅನುಕರಣ ಪದ : ದಟದಟ ಮೆಂದೆಟಿದು ಪುಯ್ಯಲಿಡೆಯಿಡೆ ಕೊಲ್ಲಂ (ಅಜಿಪು. ೧೦-೨೮) ; ಧುಳು ಧುಳುಂ ದೊಪ್ಪೆಂಬ ಗುಜುಗುಜು ಧಳಧಳಂ ಜೋಟಿಂಬ ದಟದಟ ದೊಳದೊಳಂಬೀ ಧ್ವನಿಗಳವನಿಗೆ ಭಯವನೀವುತಿರೆ (ಸಾನಂಕ. ೮-೦೩). ದರದರ$_{1}$ : ಕುರ್ಚಿಯನ್ನು ಕೈಗೆ ಎತ್ತಿಕೊಳ್ಳದೆ ದರದರ ಎಂದು ಎಳೆದು ನೆಲವನ್ನು ಗಾರು ಮಾಡಬೇಡ (ರೂಢಿ). 'ದರದರನೆ' ಪರಾ.

**ದಟದಟನೆ**, ದರದರನೆ (ಅ). (ಎಳೆದುಕೊಂಡು ಹೋಗುವಾಗ) ದರದರ ಎಂದಂ : ತಲೆನವಿರಂ ಪಿಡಿದು ದಟದಟನೆಟ್ಟೆದುಕೊಂಡು ಬಂದಂ (ಪಶ್ಚಾಶಾ. ೧೧೭-೩೩); ದಟದಟನೆಟೆಯೆಟೆ ಪಿಡಿಪಿಡಿ ತಟೆತಟೆ . . . ಕೊಟೆಕೊಟೆಯೆಂದೊದಟೆ ಗಜಟೆ ಗರ್ಜಿಸಿ ಮೇಳೈಸೆ (ಅಜಪು. ೧೧-೯) ; ಕಿಡಿಪೇಂ ಕರ್ಮುಮನೊಳ್ಪಂ ಪಡೆವೆನೆನುತ್ತಿರರಾತ್ಮನಾತ್ಮನ ಕಾಲಂ ಪಿಡಿದು ದಟದಟನೆ ಕರ್ಮಕ್ಕೆಳೆಯಿಂದೆಟೆದೊಯ್ದು ನೂಂಕುಗುಂ ಸಂಸೃತಿಯೊಳ್ (ಸಮಪ. ೧೩-೫೨). **ದರದರನೆ :** ಹಿಂದೆ ಮುಂದೆ ನೋಡದೆ ದರದರನೆ ಎಳೆದೊಯ್ದರು (ಬೂಧಿ). [ ದಟದಟ + – ಅನೆ ]

**ದಟ** (ನಾ). ೧. ಬಲ ; ಸೈನ್ಯ ; ಪಡೆ: "ಪಡೆ, ಅಣಿ, ದಟಂ, ಒಡ್ಡು ಬಲಂ– ಈ ೫ ಸೇನೆ" (ಶಕಸಾ. ೧೪-೨೮೧); ಕೆದಟೆ ಚತುರ್ಬಲಂ ಬೆದಟೆ ತಳ್ತ ದಟಂ ಕೆಡೆದಟ್ಟೆ ತಟ್ಟು ಮಾಣದೆ ಪೆಟಗಿಟ್ಟು ಬಾಯ್ವಿಡೆ ಘಟಾಳಿ ಪಣಾದ ಪೆಣದಂ ಹರಂ ದಿಗಿಭದೊಳ್ ದಿಗಿಭಂ ಪೆಣೆವಂತೆ ಪಾರ್ಥನೊಳ್ (ಹಂಪಭಾ. ೯-೨೧); ನಾಲ್ಕುಂ ದಟಂ ನೂಂಕೆ ನುರ್ಗುವೆಂ (ಕಬ್ಬಿಕಾ. ೧೫೪); ಊರವರ್ ಘರದಿಂದಂ ಪೊಣವಟ್ಟು ಪೊಕ್ಕು ದಟವಂ ನೆರ್ಗುತ್ತ ನುರ್ಗುತ್ತೆಯೊತ್ತರದೊಳ್ ಮತ್ತಿದಿರಾಗೆ . . . ಶಿವಂ ಬಟ್ಟಾಡಿ ಬಿಟ್ಟೋಡಿದಂ (ಚೆಳವಿ. ೫-೩೨). ೨. ಕಂದಂರೆಗಳ ಪಡೆ ; ತುರಗಬಲ : "ದಟಂ = ತುರಂಗಬಲಂ, ಸಾಮಾನ್ಯಬಲಂ" (ಶಮದ. ಶಶಿ. ೧). ೩. ಸೈನ್ಯದ ತುಕಡಿ ; ಸೈನ್ಯವಿಭಾಗ : "ತುರಂಗಬಲದೊಳಮಲ್ಪಬಲದೊಳಂ ದಟವೆಸರ್" (ಸಂಜೀವ. ೧೪).

**ದಟವೋಡೆಗಂಡ** = ಸೈನ್ಯವು ಓಡಿದಾಗಲೂ ಏಕಾಂಗಶೂರನಾಗಿ ಹೋರಾಡುವವನು ; ಏಕಾಂಗಶೂರ ; ಒಂದು ಬಿರುದು: ಮಹಾಸಾಮನ್ತಂ ದಟವೋಡೆಗಣ್ಡನ್ದ್ರಮ್ಮಂಡಲಾಣ್ಮಾನುಜ್ವನಿಭುಜಙ್ಗಂ ಶ್ರೀಮತ್ಪ್ರಸೂದ್ರಕಯ್ಯ (ಎಕ. XI, ಹೊಳಲ್ಕೆ. ೨೩-೭ ; ೯೬೮).

[ P ಇದು ದ್ರಾವಿಡ ಶಬ್ದವೆಂದು ಕೆಲವರ ಅಭಿಪ್ರಾಯ ]

**ದಟಂಬಟನೆ** (ಅ). ಒಂದಂ ಅನುಕರಣಾವ್ಯಯ : ಸೀರ್ವನಿ ಸಿಡಿಯ ತೆರೆ ಮಸಗೆ ಕೊಳಂ ತಳಮಳಮಾಗೆ ಮಿಾಂಗಳ್ ಮೆಯ್ಗರೆಯೆ ದಟಂಬಟನೆ ಕೈಕಾಲ್ಗಳೊಳೀಸುವ ಕಾವನ ಪಟ್ಟದಾನೆಗಳೆಬೋಲಾಡಿದರ್ ಬಾಲೆಯರ್ (ರಾಮಾಶ್ವ. ೦೨೩-೨೪). [ ದಟಂಬಟ್ಟ + – ಅನೆ ]

**ದಟದುಟ**, ದಳದಂಳ್ಳ, ದಳದುಳಿ, ದಳವುಳ, ದಳವುಳಿ, ದಳಾದುಳಿ, ದಟವುಟ (ನಾ). ೧. ಬಲವಾದ ಸುಲಿಗೆ ; ತಂಂಬು ಸೂರೆ ; ಅಧಿಕವಾದ ಕೊಳ್ಳೆ ; ಹೆಚ್ಚಾದ ಲೂಟಿ: "ದಟದುಟಂ (ದಟವುಟಂ) = ಬಲ್ಸೂಱೆ" (ಶಮದ. ಶಶಿ. ೦) ; "ಬಲ್ಸೂಱೆಯೊಳಂ ದಟದುಟವೆಂದೆನೆ" (ಶಶಾನಿ. ೮೨) ; ದಟದುಟವಾದುದಾಗಳಸಿಯೇಱಿಸಿದೇ [ ಯೇ ] ಱಿದು ಬಾದಿ ಬಂದಿ ದಂಡುಬಮೆಲೆ ದಂಡುಳಂ ಪಿಡಿದರಂಗನೆಯಂ ಪಿಡಿದೊಯ್ದರೆಂದು ತಲ್ಲಟಿಸಿ (ಅನಂತಪು. ೧೧-೭೩) ; ಗರಗರಿಕೆಯು ದಟದಂಟದ ಬಿಂಕದ ಬೀರರುಗ್ಗಡಣೆ ಪಿಡಿದಾಗೆ . . . ಪಡೆ ನಡೆಯುತುಮಿರ್ದುದು (ರಾಮಾಶ್ವ. ೫೦-೯). **ದಳದುಳ್ಳ :** ೧. ಭಕ್ತಿದಳದುಳದಿಂದ ಬಂದಿಕಾಱರಾಗಿ ಬಂದು ಹೊಕ್ಕಡೆ ಬದನೆಯ ಕಾಯಿಗಳು ಬಾಣಲಿಂಗವಾಗವೆ ನಮ್ಮ ಬಸವಣ್ಣನ ದೃಷ್ಟಿ ತಾಗಲು (ಚನ್ನಪ. ೪. ೮೯-೧೮೧) ; ಹುಸಿ ಕಳವು ದುಷ್ಕೃತಿ . . . ದಳದುಳ ನುಸುಳು ಹಿಂಸೆ ವಿವಾದ . . . ದೋಷಪ್ರಸರವಿಲ್ಲ ನೃಪನ ಕಾಲದೊಳ್ (ಜೀಮಂಕ. ೨-೫೨) ; ಬೆಳಗವತೆಯನ್ಯಾಯವಾಜಿದಿ ಕಳವು ದಳದು[ಪಾಠಾಂ. ವು]ಳ ಬಾದಿ ಡಾವರ ಕೊಲೆ ಹುಸಿಗಳಿಲ್ಲಿವರ ರಾಜ್ಯದೊಳು (ಕುಪ್ಪಾಳ. ೧೪-೦೭) ; ಮರ್ಕಟರ ದಳದುಳದ ದೂಱಿನ ದಕ್ಕಡೆಯತನ ಬಿದ್ದುದೈ ಕರ್ಣಕ್ಕೆ (ತೊರರಾ. ೪-೧೧-೦೭). ೨. ದಾಳಿ ; ಮಂತ್ರಿಗೆ ; ಆಕ್ರಮಣ : ರಾಯಕುವರನ ಮದುವೆಗಬ್ಬ ದಳಾಯತಾಕ್ಷಿಯರನು ವಿಚಾರಿಸಿ ಹಾಯಿದನು ದಳದುಳದೊಳೊಂದು ವಿವಾಹಮಂಂಟಪಕೆ (ಕುಪ್ಪಾಳ. ೨-೬೨) ; ಗಿಳಿಯ ಹಿಂಡುಗಳೆತ್ತ ಗಿಡಿಗನ ದಳದುಳವು ಶಾನೆತ್ತ ಭೀಮನ ಸುಳಿವು ಗಡ ಕಾಲೂಱುವವೆ ಕರಿಘಟೆಗಳೊಗ್ಗಿನಲಿ (ಕುಪ್ಪಾದ್ರೋ. ೨-೮೧). ೩. ಲೂಟಿ ಮಾಡುವ ಸೈನ್ಯ,–ದಳ : ಚರಣಗತಿಯಲಿ ಬಪ್ಪರಾ ಸರೋಜಾನನೆಯರೊಂಬತ್ತುಕೋಟ ಬರಲು ಅರಲ ಬಾಣ ಹೊಲಬುಗೆಡುವ ಕಾನನವೊ ಹಿಮಕರನ ಮನೆಗೊಳಿದು ದಾಳಿಯನಿಡುವ ದಳದುಳವೊ ಮರತವೋಧನರ ನಿಷ್ಠಾಮನಿಧಿಯಂ ಕಳುವ ಚೋರರ ನಲೆಯ್ಸಂದರು (ಹಡಕಾ. ೩-೨೪). ೪. ಉತ್ಸಾಹ; ಸಡಗರ; ಸಂಭ್ರಮ: ಕವಿತೆ ಕಲ್ಪನಶಕ್ತಿ ವಿರಚಿಸುವಿಂದ್ರಜಾಲಗಳಲ್ಲವೆಯ್ ಕವಿಯ ಚಿಂತಣ ಜನ್ಮಕೋಟಿಯೊಡರ್ಚಿಯಾಳ್ಗೊಂಡನುಭವಂ ವಿವಿಧಕೃತಿ ಸಾಕ್ಷಿತೆ ತಪಂ ಸತ್ತ್ವಾನುಸನ್ಧಾನಂಗಳಾಸವನ ನೆನೆಪಿಂ ದಳದುಳದೆ ಸೌನ್ದರ್ಯಮನುವದಿ ಪುಜ್ಜುಗಂ (ಸ್ತಂಸಪ. ೧೮-೪೬). **ದಳದುಳಿ :** ೧. 'ದಳದುಳಿಗಾಱ' ಪರಾ. **ದಳವುಳ :** ೧. ಕಳವಿಂದೆ ಬಲ್ಪಿಂದೆ ದಳವುಳದಿನರ್ಥದಿಂ ಚೆಲುವೆಂಬ ತೊವಲ ಮಱಿಗಱುವಿನಿಂದೆ ಪಲತೆಱದಿನಕಟ ಪರಲಲನೆಯರನೊಯ್ಕಲಾ ಪೊಲೆಮನದ ಕಿಡಿಸುವುದನೀಕ್ಷಿಸುವುದು (ಸಾನಂಚ. ೫-೧೮) ; ಹುಸಿ ನುಸುಳು ಡೊಳ್ಳಾಸ ಹಿಂಸಾವ್ಯಸನವಾಱಡಿ ಬಂದಿ ದಳವು[ಪಾಠಾಂ. ದು]ಳವಸುರಭಯ ದುರ್ಭಿಕ್ಷ ಎಂಬಿವರೆಸಕ ಹೊದ್ದದಯೋಧಿಪನ ಧರಣೀತಳಾಗ್ರದಲಿ (ತೊರರಾ. ೧-೩-೨೭). ೩. ಕಾಮನ ಕಾರಾಗಾರದೊಳಿರ್ಪಂತೆ ಕೇಳೀವನದೊಳಿರ್ಪ ಬಾಲಕಿಗೆ ಚಂದ್ರನ ದಾಳಿ ಅಳಿಗಳ ದಳವು[ಪಾಠಾಂ. ದು]ಳಂ ಬಸಂತನ ಬಂದಿ . . . ಶಿಶಿರೋಪಚಾರದ ದಂಡಣೆಯುಖಂಡಿತಮಾಗೆ (ಗಿರಿಕ. ೪-೧೧೬ ಪ) ; ತಳಿತ ಝಲ್ಲರಿಗಳಿಗೆ ಗಗನದ ಪಳಯಮೈದದು . . . ದಿಗುಪಳಯವಿಟ್ಟೆಡೆಯಾಗೆ ರಥಹಯ ದಳವುಳಕೆ ಕುರುಸೇನೆ ನಡೆದುದು ದೊರೆಯ ನೇಮದಲಿ (ಕುಪ್ಪಾದ್ರೋ. ೧-೪೩). **ದಳವುಳಿ.** 'ದಳವುಳಿಗ', 'ದಳವುಳಿಗೊಳ್' ಪರಾ. **ದಳಾದುಳಿ :** ೧. ಬಡವರೆಂದು ಮಱಿ ಮಗ್ಗುಲಲ್ಲಿ ಕೊಂಬುದು ತುಡುಗುಣಿ ಪ್ರಸಾದ ನಚ್ಚುಮಚ್ಚಿನಲ್ಲಿ ಎಳೆದು ಸೆಳೆದುಕೊಂಬುದು ದಳಾ[ಪಾಠಾಂ. ಳ]ದುಳಿಪ್ರಸಾದ (ಚನ್ನಪ. ೪. ೨೮೦-೫೭೭). **ದಟವುಟ :** ೧. "ದಟವುಟಂ ಬಲ್ಸೂಱೆ" (ಸಂಜೀವ. ೩) ; ದಟವುಟವಾಱಿಡಿ . . . ಲಂಚಂ ಕಳವು ಪಿಸುಣ್ ಪಸವು ಬಱಂ ಪಟಿಪಟಿ ಪಲಸೊಲಸು ಕುತ್ತುಮಿಲ್ಲಾ ನಾಡೊಳ್ (ಶಬ್ದಾನು. ೧೧೦ ವ್ಯಾಖ್ಯಾ). ೫. "ಅಬ್ಬರ ; ಗಲಾಟೆ" (ಪ್ರಭಣ್ಮ): ಕಿವಿಸಂ ಪಳಂಚಲೆವ ಮಂಚದ ಶಕುನಿಯಂಚೆಯ ಗಿಳಿಯ ಪುರುಳಿಯ ಪಾರಿವದ ಕೊರಲುಲಿಯ ದಟವುಟವನಾಲಿಸಿ (ಚಂದ್ರಪು.೯-೬೩ ಪ); ಜವನ ದೂಱುಗಾಱರ ಜಂಗುಟೆ ನೇಣ ಶೂಲದ ಕರಗಸದ ಇಟ್ಟಿಯ ಕವೆಗೋಲ ಇಕ್ಕುಟೆಯ . . . ಪರುಟವಣೆಯ ಸಡಗರದ ದಟವುಟದಿಂ ಬಂದು ಮುತ್ತಿ ಮುತ್ತಿ ಅಱಗುಲಿ ಜೀವಾತ್ಮನಂ ಸೆಱೆವಿಡಿದತ್ತು ( ರಾಮಾಶ್ವ. ೬೯-೨೨) ; "ದಾಂಧಲೆ" (ರಾಮಾಶ್ವ. ಕೋಶ) ; "ಅಬ್ಬರ ; ಹಾವಳಿ" (ಪ್ರಭಣ್ಮ).

**ದಳದುಳವಾಗು**, ದಳದುಳವಾಗು = ೧. ಸೂರೆಹೋಗು ; ಲೂಟಿಯಾಗು : ಮೊಳೆತುವೊಂದೊಂದು ನಕ್ಷತ್ರ ಕ್ಷತ್ರತ್ವದೊಂದಳವು ದಳದುಳಮಾಯ್ತು ಕಾಮಿಜನಕಂಗಜಂ ಗೆಲಿದನೀ ಜಗವ ಗಮನೋದ್ಯುಕ್ತನಾಗಿ ನೇಸಱಿ ಬೀಳಲೀವೆಲ್ವೆನು (ಚಬಸಪು. ೯-೩); ಕಾಳಲದೇವಿಯ ಕುಮಾರ ಪಾಣ್ಡ್ಯದೇವ ಮಹಾದೇವನವರು ದಳದುಳವಾಗಿ ಆ ಮರಕಾಲನ ಕೊಂದು ವಸ್ತು ವಾಹನವನು ಕೊಣ್ಡುದಕ್ಕೆ (ಎಕ. VI, ಚಿಕ್ಕಮ. ೩೭-೭ ; 1292) ; ದಳವು ದಳವುಳವಾಯ್ತು . . . ತನಿಸೊಕ್ಕಿ ದೆಸೆವಟದುಳಿದು ಸೌಭದ್ರೇಯ ಭೃಂಗನ ಬಿಲುದನಿಯ ಭರವಂಜಿಸಿತು ಜಯಯುವತಿ ವಿರಹಿಗಳ (ಕುಪ್ಪಾದ್ರೋ. ೭-೩೦). **ದಳದುಳ ಮಾಡು** = ಲೂಟಿ ಮಾಡು : ಚರಲಿಂಗ ವಿಂತು ದಳದುಳ ಮಾಡೆ ಮುನ್ನಿರ್ದ ಸರಳ ಪೆಟ್ಟಿದರನಂ ಪೆರ್ಚಿ ತುಳ್ಕಾಡುತಿರೆ ಕರಮೆ ವರ್ಧಿಸುತಿರಲ್ಸೋಕುಲಂ (ಅರಾಚ. ೦೩-೪೩).

**ದಟದುಟವಾಯ್, ದಳದುಳವಾಯ್** (ಕ್ರಿ). ದಾಳಿಮಾಡಿ ಸೂರೆಗೊಳ್ಳು,-ಕೊಳ್ಳೆಹೊಡೆ,-ಲೂಟಿಮಾಡು : ದಟದುಟವಾಯ್ವವೋಲ್ ಸಕಲಸೈನ್ಯಯುತಂ ಧಳಿ ಚಂಡವರ್ಮನಾಗಳೆ ಮುಳಿದಂಗಭೂಪತಿಯ ಸತ್ವಮನೊರ್ವೆಯ ಸೂ ಟಿ ಗೊ ೦ ಡು (ದಶಕು. ೮ ೩.೨೨) ; ನಿಶ್ಶಂಕಮಾಗಿರ್ದ ತೆಲುಂಗಪಾಳೆಯಮಂ ದಟದುಟವಾಯ್ದು (ಚಿಕವಿ. ೨-೯೯). **ದಳದುಳವಾಯ್** : ತಾನು ಆರ ವೆ ೯ ಲೆ ಯಾ ದ ರೂ ದಳದುಳವಾಯ್ದಾಗ ಕೈಸಾರ್ದ ದೇಶಕೋಶ ಧನಕನಕ ವಸ್ತ್ರಭೂಷಣ ಧಾನ್ಯಾದಿಗಳಲ್ಲಿ (ಬಿರುಗಿ. ೩೬-೧೫). [ ದಟದುಟ + ವಾಯ್$_1$ ]

**ದಟಮುಖ** (ನಾ). ಸೈನ್ಯದ ಮುಂಭಾಗ ; ಚೂಣಿ.

ದಟಮುಖಧವಳ = ಸೇನೆಯ ಅಗ್ರಭಾಗದಲ್ಲಿ ಶೋಭಿಸುವವನು ; ಒಂದು ಬಿರುದು : ಗುಣಕ್ಕೆ ನಲ್ಲ ಗಣೇಶಂ, ದಟಮುಖಧವಳಂ, ದಟಮುಖಾದಿತ್ಯಂ, ರಾಯಕೋಲಾಹಳಂ ಈ ತೆಱದೆ ಬಿರುದಿನೊಳ್ ಪತ್ತಾನುಂ ಸಲ್ವುದು (ಶಮದ. ೧೭೪ ಪ್ರಯೋ). ದಟಮುಖಾದಿತ್ಯ = ಸೈನ್ಯದ ಅಗ್ರಭಾಗದಲ್ಲಿ ಸೂರ್ಯನಂತೆ ಪ್ರತಾಪಶಾಲಿಯಾದವನು ; ಒಂದು ಬಿರುದು : ಗುಣಕ್ಕೆ . . . ದಟಮುಖಾದಿತ್ಯಂ, ರಾಯಕೋಲಾಹಳಂ (ಶಮದ. ೧೭೪ ಪ್ರಯೋ). [ ದಟ + ಮುಖ ]

**ದಟವಡು** (ಕ್ರಿ). ಪಡೆಯಾಗು ; ದಳವಾಗು ; ಗುಂಪಾಗು : ಕಟ್ಟುಱದೊಳಟ್ಟಣಿಸಿ ಮುಟ್ಟಿ ನಡೆದಾರ್ಪಿಂ . . . ನೆಟ್ಟನಿನಿಸಂ ಪಿಮ್ಮೆಟ್ಟಿ ದಟವಟ್ಟಡರೆಯುಟ್ಟಳಿವರಂ ಕೈಗೊಟ್ಟು ಪುಯಿಲಿಟ್ಟರೆನೆ ದಿಟ್ಟತನಮಂತೋ (ಚಿಕವಿ. ೨-೯೩). [ ದಟ + ಪಡು$_1$ ]

△ **ದಟವಾಯ್** 'ದಳವಾಯ್' ನೋ.

△ **ದಟವಾಯಿ** 'ದಳವಾಯ್' ನೋ.

**ದಟವುಟ** 'ದಟದುಟ' ನೋ.

**ದಟಿಗವಾಡಿ** (ನಾ). ಒಂದು ಸ್ಥಳದ ಹೆಸರು : ಅಯ್ಯಪದೇವನ ಮಗಂ ಗನ್ನರಸಂ ದಟಿಗವಾಡಿಯ ಕುಱುಕ್ಷನ್ನಟ್ಟಿಯನಾಳುತ್ತಿರೆ (ಎಕ. IX, ಹೊಸಕೋ. ೧೧೧-೪; 997); ದಟಿಗವಾಡಿಯಾನ ವಿಕ್ರಮಚೋಳಮಣ್ಡಲದ ಮಣ್ಣಿನಾಡ ಕೇಸೂರ ಬಣ್ಣಕರ ಬಲಿವಱ (ಮೈಆರಿ. ೧೯೧೫, ೧೯-೬ ; 1050). 'ದಳಿಗವಟಿಗ' ಪರಾ. [ ದಟಿಗ$_1$ + ಪಾಡಿ$_2$ ]

**ದಟಿ** (ನಾ). ಒಂದು ವೃತ್ತಿಯ ಹೆಸರು (?) :

ದಟಿಯರು=(?): ಪೆರ್ದ್ದಯಲ ಕವ್ವಿಚ್ಚರು ದಟಿಯರು ಕುರ[ಬ]ರು ಗಣಿಗರು ಪೆಮ್ಮದವರು ಅನಂದರು ಎನಿತ್ತರು ಸಾಕ್ಷಿ (ಇಆ. XIV, ೨೩೩-೩೯ ; ಸಂ. ೯ನಯ ಶತ). [ ? ]

**ದಟ್ಟಟಿ, ದಳ್ವಳಿ** (ನಾ). ಸಂಕೋಲೆ ; ಕೋಳ ; ಸರಪಣಿ : "ದಟ್ಟಟಿ= ಸಂಕಲೆ" (ಶಮದ. ಪರಿ. ೧) ; "ದಟ್ಟಟಿಯೆಂದು ಸಂಕಲೆಯೊಳಿಯ್ದು" (ಕರ್ಣಾನಿ. ೭೩). **ದಳ್ವಳಿ** : ಮುಳಿಸಿಂದಂ ಭೂತವೃಂದಂ ಕೊಳುಗುಳದೆಡೆಯೊಳ್ ಸಿಲ್ಕಿದಸ್ವಪ್ನರಂ ದಳ್ವಳಿಯಂ ಕಯ್ಕಾಲ್ಗೆ ಮತ್ತಾ ಜಠರಗಳಕೆ ತಂದಂತವಂ ಮೇಳಿಸುತ್ತಂ . . . ಕಟ್ಟುತ್ತುಂ ಬಳಿಕ್ಕಂತವರ್ಗಳನೆಳತಂದೊಪ್ಪಿಸುತ್ತಿರ್ದುದೇಗಂ (ವೀರವಿ. ೧೨-೬೯). [ ? ]

**ದಾ$_1$** (ನಾ). ಒಂದು ಅನುಕರಣ ಶಬ್ದ : ದಾಯೆನೆ ನೋಡುವ ಕರೆದಯ್ಯಾಯೆನಲಾರ್ಪವ ... ಮಯ್ಯುರಿದಾಯಿರವಿಂದತ್ತ್ರಲೆಸೆದಮುತಿಯುತಿಶಯಮಂ (ಮಹಾನೀ. ೬-೭); ಸೆಱಗಿನೊಳಗಡಗಿ ನೋಡುತಲಿದಾ[ಪಾಠಾಂ. ಬಾ]ಎನುತ ಚೈಮುಂಡಾಡಿ ಮುಂದಲೆವಿಡಿದು ಕುಣಿಕುಣಿದಾಡಿ (ಪ್ರಭುಲೀ. ೩-೨೯) ; ಬೇಡುವರ್ಕೆಯ್ಗಳೊಳ್ ಮೆ ಯ್ಗ ಳೊ ಳ್ ಬಾಯ್ಗಳೊಳಗಾಡಿಸುವ ರಾಯೆಂದುದಾಯೆಂದು ಬಾಯೆಂದು ಪಾ ಡು ವ ರ್ . . . ಕುವರನಂ (ಚಬಪು. ೩-೨೬) ; ಪಡಿನೆಳಲಂ ಮಣಿಕುಟ್ಟಿಮದೆಡೆಯೊಳ್ ನಡೆ ನೋಡಿ ನೋಡಿ ದಾಯೆನುತುಂ (ರಾಜಶೇ. ೩-೫೨).

**ದಾ$_2$** 'ದಸ್ಯ' ನೋ.

**ದಾ$_3$** (ನಾ). [ಗಣಿತ] ಆರು ಎಂಬ ಸಂಖ್ಯೆಯ ಸಂಕೇತ : "ದಾ, ಖರ . . . ವದನ ? ಇಂತಿನಿತುಂ ಒಕ್ಕೆ ಪೆಸರು" (ವ್ಯವಹಾ. ೧೦-೨೩). [ ? ]

**ದಾಂಗುಡಿ** 'ದಾಂಟುಂಗುಡಿ' ನೋ.

**ದಾಂಗುಡಿಬಿಡು** 'ದಾಂಗುಡಿವಿಡು' ನೋ.

**ದಾಂಗುಡಿಯಿಡು** (ಕ್ರಿ). ೧. ಕುಡಿ ಚಾಚು ; ಕುಡಿ ಹಬ್ಬು : ಬಿಸರುಹನೇತ್ರೆಯೊಳ್ನಡು ಪೊದಟ್ಟುದು ದಾಂಗುಡಿಯಿಟ್ಟು ಚಾಪ ನೀಳ್ದೆಸೆದುದು ಪಿಂಗಿ ಪೋದುದು ವಳಿತ್ರಿತಯಂ (ಶಂಕರಶಂ. ೦೬೪-೦೦) ; ಅಂಗಣದೊಳಗಾಡುವ ಭೂಮಿಪವರನಂಗನೆಯರ ದಿಟ್ಟಿವೆಳಗು ದಾಂಗುಡಿಯಿಡಲಿಕ್ಕಿದ ಹೊಸ ಮುತ್ತಿನ ರಂಗವಲ್ಲಿಯ ತೆಱನಹುದು (ಶ್ರೀಪಾಲ. ೨-೪). ೨. ಹಬ್ಬು; ವೃದ್ಧಿಯಾಗು ; ವ್ಯಾಪಿಸು ; ಮುಂದುವರಿ : ದಾಂಗುಡಿಯಿಟ್ಟುದಿಂಗಡಲ ಬೆಳ್ಪು ಕರಂ ಪೊಳೆವೊಂದುದೆಂದು ಕಾಂತೆಗಳ ಬೆಳ್ಪು ಮೂಡಿದುದು ನೆಯ್ದಿಲ ಬೆಳ್ಪು (ಲೀಲಾವ. ೨-೩೧) ; ಹೆಂಗಳು ಮತ್ತೆಂಟುದೆಸೆಗೆ ದಾಂಗುಡಿಯಿಟ್ಟು ಸಾಲ್ಗಿಡಿದಾಗ ಶೃಂಗಾರಗಂಗೆ ಪರಿವಪೊಲಾಡಿದರು (ಭರತ. ೧೩-೯೪) ; ಆನಂದವಾರಾಶಿ ದಾಂಗುಡಿ [ಪಾಠಾಂ. ತಾಂಕುಡಿ, ತಾಂಗುಡಿ]ಯಿಟ್ಟುದು ಸಲೆ ಸೌಖ್ಯಮೇ ರೂಪನಾಂತು ನಡೆತಂದುದು (ಚಬಪು. ೨೦-೬) ; ವಿಜಯಾಂಶುವೃದ್ಧಿ ದಾಂಗುಡಿಯಿಡೆ ಧರ್ಮರಾಜ್ಯಮೆನಿಸುತ್ತಖಿಲಾವನಿಭಾಗವಮಂ ಜಸಂಬಡೆದಿರೆ ಕೃಷ್ಣರಾಯನೆನಿಪೊಳ್ಸರಿಯರಸಿಂಗೆ ಸಂಗತಂ (ಚಿಕವಿ. ೨-೧೧) ; ಅಮರರ್ವರೆಸಿ ಬಳೆವುದು ಶಂಕರ ಲಲಿತಾಲಾಸ್ಯಂ . . . ಹರಿವಾಣೀವಾದನಕನುಕೂಲಂ ದಾಂಗುಡಿಯಿಡುವೊಲು ಮಾಯಾಜಾಲಂ (ಗಣೇಶ. ೧೯-೪೯೦).

[ ದಾಂಗುಡಿ (<ದಾಂಟುಂಗುಡಿ) + ಇಡು$_1$ ]

**ದಾಂಗುಡಿವಡೆ** (ಕ್ರಿ). ಕುಡಿಯಿಡು ; ಬೆಳೆ : ಕಡುಚೆಲ್ವುವಡೆದು ಬಳಸಿಯುಂ ಪೆಂಡೆಯುಡುಗದೆ ಕಾಂತೆಯರ್ ನಯುಂಬಿಡದಿರೆ ದಾಂಗುಡಿವಡೆದ ಕಲ್ಪಲತೆಗಳ ನಡುವಣ ಕಲ್ಪಾವನೀಜಮಿರ್ಪಂತಿರ್ದಂ (ಸುಕುಮಾ. ೧೦-೧೧೧).

[ ದಾಂಗುಡಿ (<ದಾಂಟುಂಗುಡಿ) + ಪಡೆ$_1$ ]

**ದಾಂಗುಡಿವರಿ** (ಕ್ರಿ). ಕುಡಿ ಹಬ್ಬು ; ಮುಂದೆ ಚಾಚು : ಮರದಿಂದ ಮರಕ್ಕೆ ದಾಂಗುಡಿವರಿವೆಳಲತೆಯಂತೆ ನೀತಿಮಾಂಧಾತನೊಳಾವರಿಸಿರ್ದ ರಾಜವಿದ್ಯಾಧರನಲ್ಲಿಗೆ ರಾಜ್ಯಲಕ್ಷ್ಮಿ ನಿಲುಕಿದಳಾಗಳ್ (ಕಾದಂಪೂ . ೫೫೧).

[ ದಾಂಗುಡಿ (<ದಾಂಟುಂಗುಡಿ) + ಪರಿ$_1$ ]

**ದಾಂಗುಡಿವಿಡಿಸು** (ಕ್ರಿ) . ವೃದ್ಧಿಯಾಗುವಂತೆ ಮಾಡು ; ಬೆಳೆಸು : ಆ ಎಲ್ಲ ಝರಿಗಳಿಂದ ತಮ್ಮ ಭಕ್ತಜೀವನದ ಬಳ್ಳಿಗೆ ನೀರುಣಿಸಿ ದಾಂಗುಡಿವಿಡಿಸಿದರು (ತವನಿ. ೧೬೧). [ ದಾಂಗುಡಿವಿಡು + -ಇಸು$_3$ ]

**ದಾಂಗುಡಿವಿಡು, ದಾಂಗುಡಿಬಿಡು** (ಕ್ರಿ) . ಹಬ್ಬು ; ವ್ಯಾಪಿಸು ; ಮುಂದುವರಿ : ಏಕಟಾಕ್ಷರಂಗಳೊಳ್ತೊಡರದೆ ಸಕ್ಕದಂಗಳ ಪದಂ ಪವಣಾಗಿರೆ ಪೆಲ್ಲುವೆತ್ತು ದಾಂಗುಡಿವಿಡುವಂತೆ ನೀಟ್ಟು ನಿಲೆ ಪೇಟ್ಟುದು ನೀತಿನಿರಂತರ ಕ್ರಮಂ (ಕವಿರಾ. ೦-೧೪೪); ಅಂತು ತನ್ನ ಕಾಂಡವಾರಂಭದೊಳಳವಿಗಱದ ರಾಗದಿಂ ನಿರ್ಮಿಸಿದ ಭುಜಶಾಖಾಸಹಸ್ರಂಗಳೊಳ್ ದಾಂಗುಡಿವಿಟ್ಟನಂಗಜಂಗಮಲತೆಗಳನನುಕರಿಸಿ ದೇವಗಣಿಕೆಯರುಱುಡುವಾಗಳ್ (ಆದಿಪು. ೬-೦೨೨ ವ) ; ಚಾಗದ ಕೀರ್ತಿವಲ್ಲಿ ದಾಂಗುಡಿವಿಡೆ (ಗದಾಯು. ೧೦-೫); ತಳಿವುದು ಮಾಂಸವಾರಿಯಂ ನ ಸಿ ಗ ಳೊ ದ ವಿ ದಾಂಗುಡಿವಿಡುಗುಂ(ಲೋಕೋಪ. ೬-೭). **ದಾಂಗುಡಿಬಿಡು** : ಹೊಕ್ಕುಳ ಬಳ್ಳಿ ಹರಿದಂದಿನಿಂದಲೂ ನಡೆದಿದೆ ಸಂಯೋಗಕ್ಕಾಗಿ ನಿರಂತರ ತಪ: ದಾಂಗುಡಿಬಿಟ್ಟಿದೆ ವಾತ್ಸಲ್ಯದ ಬಯಕೆಯಾಗಿ (ಮೂರುದಾ. ೨೦೬) ; ಹೊಸಹರುಷಗಳ ಬಳ್ಳಿಗಳು ಕೊನರಿ ಕುಡಿಯೊಡೆದು ದಾಂಗುಡಿಬಿಡುವಂತಿಲ್ಲ (ಹಾಡುಕ. ೯೯).

[ ದಾಂಗುಡಿ (<ದಾಂಟುಂಗುಡಿ) + ಬಿಡು$_1$ ]

**ದಾಂಟಿಸು₁**, ದಾಟಿಸು (ಕ್ರಿ). ೧. ಈ ಕಡೆಯಿಂದ ಆ ಕಡೆಗೆ ಹಾಯಿಸು; ಹಾರಿಸು; ನೆಗೆಸು: ತುರಗವನು ಮಡದಿಂದೊತ್ತಿ ದಾಂಟಿಸಿದನಾ ಮಹಾ ದ್ವಾರವನು (ಕೀಜಮ. ೯-೪) ೨. ಆಚೆಗೆ ಒಯ್ಯು; ಕಡೆಹಾಯಿಸು; ತಟಹಾಯಿಸು; ಪಾರುಗಾಣಿಸು: ಸಂಸರಣಮಹಾಸಮುದ್ರಮನತೀವ ಸರೌದ್ರಮನೆಯ್ದೆ ದಾಂಟಿಸಿ ಕರುಣದಿನೆಮ್ಮಂ (ನೇಮಿಪು. ೦೪-೧೦೦); ಅದು ಸಂಸಾರಾಬ್ಧಿಯಂ ದಾಂಟಿಸುವುದದು ದುರಾಚಾರ ದುರ್ಬುದ್ಧಿಯಂ ಕೀಳ್ವುದು . . . ಲಿಂಗಾರೂಢನಂ ಮಾಡುವುದು ಶರಣಸಾಂಗತ್ಯವು (ರಕ್ಷಾಶ. ೩೭); ಸ್ವಕುಲದಖಿಲರಂ ಘೋರಭವವಾರ್ಧಿಯಿಂ ದಾಂಟಿಸುವನೆಂದು ಬೋಧಾಮನಸುಶಾಖೆಯುಲಿಗುಂ (ಶರ್ವಶಾ. ೧೧-೧೨೫); ಪೆಸರುವಡೆದ ಮಧುರಸವಾಹಿನಿಯ ದಾಂಟಿಸಲು ಚಂದನಡೋಣಿಗಡರ್ದು (ಪೋಹಕ. ೫-೩೭). ೩. ದಮನ ಮಾಡು; ನಿಗ್ರಹಿಸು: "ದಾಂತಃ, ದಮಿತಃ – ದಾಂಟಿಸಲ್ಪಟ್ಟುದು" (ಸಾಚಂ. ೬) ೪. ಮೀರಿಸು: ನಿಜಾಗಳನಿಕ್ಕಿ ದಾಂಟಿಸದೆ ದುಂಡಿಸುವಾಕೆಯನೊತ್ತಿಗೊಳ್ಳದಂತೆಜಿಯದೆ ಕೇವೆಗುಳ್ಳ ಬಳಿನೀರ್ಗಳನಗ್ಗದ ಪೆಣ್ಗೆ ಮೆಯ್ಯನೆಯ್ದುಜಿಯದೆ (ಲೀಲಾವ. ೨-೯೩). ೫. ಮೀರು; ಅತಿಕ್ರಮಿಸು: ವ್ಯತ್ಯಯವ ಜವನ ಮಾರಿಯ ದಾಂಟಿಸುವ ವೇದಾಂತಿಗಳ ಪಾಟ ಶಿವನ ಪೊಸ ಕರವಾಳು . . . ಶಂಕರ ನೊಲುಮೆಯುಳ್ಳಾಳು (ಬಸಪು. ೬-೧೧). **ದಾಟಿಸು**: ೨. ನಾನು ಅವಳಿಗೆ ಊಟದ ಮನೆಯ ಹೊಸಲು ದಾಟಿಸಿ ಅಡಿಗೆಯ ಮನೆಯೊಳಕ್ಕೆ ಕರೆದುಕೊಂಡು ಹೋದೆ (ಕಂಗಾಳ್ಯ. ೦೩); ಎಲೈ ಅಗ್ನಿಯೆ . . . ನೀನೇ ಅನ್ನ ಸಾಧಕನು, ಪಾಪದಿಂದ ದಾಟಿಸತಕ್ಕವನು (ಋಕ್ಸಾರ. ೨೫). ೬. ಸಾಗಿಸು; ಕಳುಹಿಸು; ರವಾನಿಸು; ಹೋಗುವಂತೆ ಮಾಡು: ಸುಗ್ರೀವ ಹಾಯೆನುತೊದಱೆ ರಣದಲಿ ಜೀವವನು ದಾಟಿಸಿ [ಪಾಠಾಂ. ದಾಳಿಸಿ, ದಾಟಿಸಿ]ದನಾ ಧ್ವನಿಗೇಳಿಸಿತು ಕಿವಿಗೆ (ತೊರರಾ. ೪-೨-೨೫); ಸೂಟಿಯ ಬಾಣಗಳಿಂದಿಟ್ಟು ಜೀವವ ದಾಟಿಸಿದರು ಯಮಪುರಿಗೆ (ಕಂನವಿ. ೧೮-೭೭); ಕನ್ಯಾದಾನವೆನ್ನುವುದು ಒಂದು ಕೈಯಿಂದ ಇನ್ನೊಂದು ಕೈಗೆ ದನಕರುಗಳನ್ನು ದಾಟಿಸಿದ ಹಾಗೆ (ವಕಥಾ. ೭೦); ದ್ರುಪದನು ರಾಜಾಧಿರಾಜನಾದ ತನಗೆ ಬಡಹಾರವರ ಗೆಳೆತನವೆಲ್ಲಿಯದೆಂದು ಅವನನ್ನು ಹೊರಗಣಿಂದ ಹೊರಕ್ಕೇ ದಾಟಿಸಿಬಿಟ್ಟನು (ನೀಗಟ್ಟು. ೦೦೪).

**ದಾಟಿಸಿಕೊಳ್** = ರಕ್ಷಿಸು; ಆಶ್ರಯ ಕೊಡು; ಕಾಪಾಡು: ದೈತ್ಯವಧೂಟಿಯ ಕರೆದು ತನ್ನೊಡನೆ ಸೂಟಿಯೊಳ್ ಸಾವಂತ ಕೆಯ್ಯ ಖಡ್ಗವನಿಕ್ಕಿ ದಾಟಿಸಿಕೊಂಡಳೆಲ್ಲರನು (ಪೋಹಕ. ೩೩-೩೮).

[ ದಾಂಟು₁ + – ಇಸು₃ ]

**ದಾಂಟಿಸು₂** 'ತಾಂಟಿಸು' ನೋ.

**ದಾಂಟು₁**, ದಾಟು₁ (ಕ್ರಿ). ೧. ಹಾರು; ನೆಗೆ; ಜಿಗಿ; ಲಂಘಿಸು: "ದಾಂಟು–ಲಂಘನೇ" (ಶಮಧಾ); "ಲಂಘಿಸುವುದಕ್ಕೆ ದಾಂಟೆಂದು" (ಶಶರ ೧೨೫); ಸುಹೃಚ್ಛ್ರೇಣಾಂಧನಂ ಮಗುಟ್ದುಮರ್ತ್ಯಮಾರ್ಗದೊಳ್ ಪರಿಯುತ್ತುಮೊರ್ವ ವೈಮಾನಿಕನಂ ಭರದಿಂ ದಾಂಟುವುದುಂ (ಕಾದಂಸಂ. ೬೦೪). ೨. ಹಾಯ್ದು ಹೋಗು; ಮುಂದೆ ಸಾಗು; ತಟಹಾಯು; ಆಚೆಗೆ ಹೋಗು: ವಿಷಯಾಧಿಪತಿಗಳಪ್ಪರಸುಗಳೆಲ್ಲಂ ನೆರೆದಿರ್ದಲ್ಲಿಯಾರುಮಂ ಮೆಚ್ಚದೆ ದಾಂಟಿ ಪೋಗಿ ಕುಬೇರಕಾಂತಂಗೆ ಮಾಲೆಯಂ ಸೂಡಿದಳ್ (ವಡ್ಡಾರಾ. ೪೧-೪); ಭೀಮನಂ ಪೊಣರ್ದು ನೆಲಕ್ಕಿಕ್ಕಿ ಬೆನ್ನಂ ಮೆಟ್ಟಿ ದಾಂಟುವ ಮದಗಜದಂತೆ ಕೊಲಲೊಲ್ಲದೆ ದಾಂಟಿದಾಗಳ್ (ಪಂಪಭಾ. ೦೩-೪೧ ವ); ರುಧಿರಸ್ರೋತಂಗಳಂ ದಾಂಟಿದಾಂಟುಭದೋರ್ನಿಲಲತಾ ಪ್ರತಾನವಿಪಿನವ್ರಾತಂಗಳೊಳ್ಸಿಲ್ಕಿಸಿಲ್ಕಿ (ಗದಾಯು. ೯-೪೭); ಗರಳಪುರದ ನದಿಯನು ದಾಂಟ ಬಲ ಸಹ ನೆಜಿಯರ್ಧರಾತ್ರಿಯೊಳಾಗ . . . ಅರಿತಂತ್ರವ ತಱದೊಟ್ಟಿದನು (ಕಂನವಿ. ೩-೫೫). ೩. ಬಿಟ್ಟು ಹೋಗು; ತೊರೆದು ಹೋಗು: ಉತ್ತರಗುಡದೆ ಜಲವೀಂಟಿದನು ದಾಂಟಿದುದಸು ಕಳೇಬರವ (ಕುಮ್ಯಾಭ. ೨೩-೨೧). ೪. ಮೀರು; ಪಾಲಿಸದೆ ಇರು; ಅತಿಕ್ರಮಿಸು: ಸಪ್ತಸಮುದ್ರಂ ಕರೆಗಣ್ಮೆ ತನ್ನವಧಿಯಂ ದಾಂಟಿತ್ತು . . . ಎಂಬೊಂದು ಸಂದೇಹಮಂ ಪೊಸತಂ ಭೂಭುವನಕ್ಕೆ ಮಾಡಿದ ದುತ್ತನ್ನನ್ನಾಹಭೇರೀರವಂ (ಪಂಪಭಾ. ೯-೯೪); ಯತಿಯೆಂಬುದು ಗಣನಿಯತಂ ಪ್ರತೀತಮುಸಿರ್ವಾಣಮಂತದಂ ದಾಂಟಲ್ಕಾ ಯತಿ ಕೆಡುಗುಂ ದಾಂಟಿದೊಡಾ ಯತಿ ಕೆಡೆ ಕವಿತಾಭಿಧಾನಮೇನೆಸೆದಪುದೆ (ಛಂದೋಂಬು. ೧-೪೫); ರವಿ ಮಾಱಿಟ್ಟಳೆದಂ ವಿಯತ್ತಳಮನಾಶಾಸೀಮೆಯಂ ದಾಂಟುವನ್ನೆವರಂ ತನ್ನ ಕರಂಗಳಿಂದೆನೆ ಪೆಱಂಗೇಂ ಪೊಗ್ಗೆ (ಪಂಪಾಶತ. ೧-೩೯); ನಿಜಾಯನಿಕ್ಕಿ ದಾಟಿದರೆ ಅಂತನ್ನ ನಂಬಾ (ಬಸವ. ೩೦೦); ಉಟ್ಟ ನಿಜಿ ದಾಂಟದೊಡೆ ಕಚ್ಚುವುದೆ ದೈವವಂ ಮುಟ್ಟದೊಡೆ ಬೆರಳು ಹತ್ತುವುದೆ (ಸೋಮಶ. ೨-೪೦); ನಿಜಾಯ ದಾಂಟಲು ಕಚ್ಚುವುದೆ ಬಳಿನೀರ್ಗುಡಿಯಲೀಯುದರ ಉರಿವುದೆ (ಜೀವಂಕ. ೦೭-೩೭); ಅಣ್ಣಾನಾಜ್ಞೆಯ ಚಿತ್ರದಲಿ ನೀವ್ ದಾಂಟಿದಿಹುದಾರಣ್ಯವಾಸದಲಿ (ಕುಮ್ಯಾಭ. ೭೦೫. ೪-೩೯); ಉಟ್ಟ ಸೀರೆಯ ದಾಂಟು ಮುಟ್ಟನ್ನು ದೈವವ (ಅಮುಸಾಂ. ೩-೭೩); ಬಳಿನೀರ ಕುಡಿದು ನಿಜಾಯ ದಾಂಟ ಪುತ್ರೂಧಿ ಬಳಸಂದಿನಿಯರ ಚಿತ್ರವನು ತಿಳಿಸಿ ಕಾಲ್ವಿಡಿದೊಡಗೂಡುವ ಗಳಸಾಳಿ ಬೆಲೆವೆಣ್ಣಗಳು (ಕುರಾಸಾಂ. ೨೮-೮೮). **ದಾಟು₁**: ೨. ಹಳುವ ದಾಟಲಿ ದ್ರುಪದನಂದನೆಯಳಲಶಿವಿಗಿಂಧನವರೇ ಕುರುಕುಲದ ಕರಡದ ಬಣಬೆ ಕಾದುರುಹುವುದು ಕೆಳಿಂದ (ಕುಮ್ಯಾಭ. ೨-೩೨); ದಾನದ ಕೈಯ ತೋಱಸಬೇಕು ಅದಱಿಂದ ನದಿಯ ದಾಟುತಿಮುಪ್ಪ (ಪುರಂದ ೧-೧೮೧-೨೧); ಸೆಱಿ ತುಱ ಸಹಿತ ಸೋಸಲೆಯ ಕಡುವ ದಾಟ ಹರಿದು ಮಾರ್ಬಲಗೂಡಿ ಬಂದು (ಕಂನವಿ. ೩-೫೭); ನೀನು ಇನ್ನು ಸಂಸಾರವೆಂಬ ಮಹಾಸಾಗರದೊಳಗಿಂದ ದಾಟಿಹೋಗತಕ್ಕವನು (ಮುಂಬಯಿ. ೪-೩೯); ಹೊಳೆ ದಾಟಿದ ಮೇಲೆ ಅಂಬಿಗರ ಮಿಂಡ (ಗಾದೆ). ೮. ಗತಿಸು; ಸಾಯು; ತೀರಿಹೋಗು; ಮುಗಿ; ಕೊನೆಗೊಳ್ಳು: ಅವನು ದಾಟಿಕೊಂಡನು (ಮುಂಬಯಿ. ೩-೧೯೯).

[ ದೇ. ೫ ತಮಿ. ತಾಣ್ಡು; ಮಲ. ತಾಣ್ಡು, ತಾಟ್ಟು; ತುಳು. ದಾಂಟು; ತೆಲು. ದಾಟು ]

**ದಾಂಟು₂** 'ತಾಂಟು' ನೋ.

**ದಾಂಟು₃**, ದಾಟು₂ (ನಾ). ೧. ನೆಗೆತ; ಜಿಗಿತ. 'ಮಾಱಿಂದಾಂಟು' ಪರಾ. ೨. ಹಾದುಹೋಗುವಿಕೆ; ಹಾಯುವಿಕೆ: (೬). ೩. ಹಬ್ಬುವಿಕೆ; ಚಾಚುವಿಕೆ. 'ದಾಂಟುಂಗುಡಿ' ಪರಾ. ೪. (?): ಇಱಿಯ ಮುಸುಕಿಟ್ಟು ಬಾಗಿಲ ಬಱಿಯಱನೆ ಪರಿತಂದು ದಾ(ದ)ಂಟನೂರಿ(ಱ) ಸಿರೊ(ರ)ೇಱಂ ಬಿಡದೆ ನಡುಗುತ್ತುಮೊಯ್ಯನೆ ಮಱಿಯಂ ಬೆಸಗೊಂಡೊಡಮಕ್ಕುಮಿದುಪೊಂದು ಮತಂ (ಅಟ್ಟಿಮ. ೧-೩೯). **ದಾಟು₂**: ೨. ಕರವಾಳೋನ್ನುಖ ಚಣ್ಣವಜ್ರಹತಿಯಂ ಬಿಳ್ದನ್ಯಮತ್ತೇಭ ಭೂವರದಿಂದುಣ್ಮುವ ರಕ್ತವಾಹಿನಿಯುಮಂ ಕಣ್ಣಾಯ್ದು ಭೂತಬ್ರಜಂ ತ್ವರಿತಂ ಮುಂಣ್ಣದ ತಪ್ಪದಿಂ ಶಿರದಲಾಂ ಬದ್ಧದಿಂ ದಾಟುಭೀಕರವಾಗಿರ್ದುದು ಬಿಟ್ಟದೇವನಿಱದತ್ಯುಗ್ರಾಜಿರಂಗಾಂಗಣಂ (ಎಕ. XVI (೬), ಚಿಕ್ಕನಾ. ೯೮-೪೪; 1169). ೫. ದಾಟುವಂತಹ ಸ್ಥಳ,–ಎಡೆ: ಕೋಟಿಯಿದ್ದುದು . . . ಘೋಟಕದ ಮದಕರಿಯ ಕಂಡಿಯ ದಾಟುಗಳ[ಪಾಠಾಂ. ದ] ಹುಲಿಮುಖದ ವಂಕದ ಕೊಟದುರುವಿಲಾಸದ ವಿವಿಧರಚನೆಯಲಿ (ತೊರರಾ. ೫-೨-೪). ೬. ಸಂಗ್ರಹ; ಅಡಕಗೊಳಿಸುವಿಕೆ. 'ದಾಟಂಕಥೆ' ಪರಾ. ೭. ದೃಷ್ಟಿದೋಷ, ಕಾಲುಧೂಳು ಮುಂತಾದಂವುಗಳ ಪರಿಹಾರಕ್ಕಾಗಿ ನಿವಾಳಿಸಿ ಎಸೆದ ಪದಾರ್ಥಗಳನ್ನು ದಾಟುವುದರಿಂದ ಉಂಟಾಗುವ ಅನಾರೋಗ್ಯ. 'ಕಾಲುರಂಜು', 'ದಾಟುತೆಗೆ' ಪರಾ.

**ದಾಟಾಗು** = ನಿವಾಳಿಸಿ ಎಸೆದ ಪದಾರ್ಥಗಳನ್ನು ದಾಟಿ ಅನಾರೋಗ್ಯವುಂಟಾಗು; ಕಾಲುರಂಜು ಆಗು : ದಾಟು ತೆಗೆಯುವುದು : ದಾಟಾಗಿದ್ದರೆ, ಅಂದರೆ ಏನಾದರೂ ದೋಷದ ಕಾರಣ ತೊಡೆ ಅಥವಾ ಕಾಲು ಊದಿಕೊಂಡಿದ್ದರೆ . . . ಮಾಡುವ ಶಾಂತಿ (ನನ್ನೂರು. ೪೦೯).

[ <ದಾಂಟು$_1$ ]

**ದಾಂಟುಂಗುಡಿ, ದಾಂಗುಡಿ** (ನಾ). ಉದ್ದವಾದ ಕುಡಿ ; ಚಾಚಿಕೊಂಡಿರುವ ಕುಡಿ : "ದಾಂಗುಡಿಯೆಂದು ದಾಂಟುಂಗುಡಿಯೆಂಬರ್" (ಕಶಸಾ. ೨೬-೫೬೪) ; "ದಾಂಗುಡಿಯೆನ್ನಲ್ ನೆಟ್ಟನೆ ದಾಂಟುಂಗುಡಿ" (ಕವಿಕಂ. ೨೨೮) ; ಕಟಂಜನವನ್ನು ದಾಂಟುಂಗುಡಿಯನ್ನೆಂಬಂತೆ ಕಳೆದುಹೋಗಿ, ತಿರುಗಿ ನಿಂತು, ನಿಟ್ಟುಸಿರ್ಗೊಂಡು, ಹೊರಡಲನುವಾಗುತ್ತಿರುವನಂ (ಚಿಟ್ಟಿಅ. ೧೧೨-೦೪). **ದಾಂಗುಡಿ** : "ದಾಂಗುಡಿಯೆಂದು ದಾಂಟುಂಗುಡಿಯೆಂಬರ್" (ಕಶಸಾ. ೨೬-೫೬೪); "ದಾಂಗುಡಿಯೆನ್ನಲ್ ನೆಟ್ಟನೆ ದಾಂಟುಂಗುಡಿ" (ಕವಿಕಂ. ೨೨೮) ; ಸೋರ್ವ ಸೋನೆಯೊಳೆ ದಾಂಗುಡಿಯಿಂದೆಸೆದಿರ್ಪ್ಪ್ರವು (ಎಇ. XIII, ೩೩೧-೨೯ ; ೭೨೦) ; ತಳ್ತು ಕಟ್ಟಿದ ಗುಡಿ ರಂಗವಲ್ಲಿಗಳೆ ದಾಂಗುಡಿಯಂತಿರೆ ಸೂಸೆ ಸೇಸೆಯಂ ಸುದತಿಯರ್ (ಪಂಹಥಾ. ೫-೦೦೫) ; ಪಸರಿಸೆ ಸುತ್ತಲುಂ ಗುಡಿಯ ದಾಂಗುಡಿ ಮುತ್ತಿನ ರಂಗವಲ್ಲಿ ನಾಲ್ದೆಸೆಯೊಳಮರ್ಕೆವೆತ್ತ ಪಟಹಧ್ವನಿ (ಸುಕುಮಾ. ೧೦-೨೬) : ಗಣಿಕೆಯ ತೊಳಟಿಯ ದಾಂಗುಡಿಯಂ ಚಿವುಂಟಿ (ರಾಮಾಶ್ವ. ೪೩-೧೬).

[ ದಾಂಟು$_1$ + ಕುಡಿ$_2$; P 'ದಾವುಕುಡಿ'ಯಿಂದಲೂ ಇದಕ್ಕೆ ನಿಷ್ಪತ್ತಿ ಹೇಳಬಹುದು ]

**ದಾಂಟುಗಳೆ** (ನಾ). ಹಳ್ಳವನ್ನು ದಾಟಲು ಹಾಕಿರುವ ಬಿದಿರಿನ ಕೋಲು, ಗಳು, ಬೊಂಬು ಇತ್ಯಾದಿ : ಕಾಡುಮೇಡುಗಳುಳಿದು ಪಾಡಿಗಳ ಬಳಿ ವಿಡಿದು ಕೋಡುಗಳ ದಾಂಟುಗಳೆಗಳ ತೂಗಿ ನಡೆದು (ಕಾಲೂರ. ೦೫೦-೩೩೦).

[ ದಾಂಟು$_1$ + ಗಳೆ (<ಗಟ$^3$) ]

**ದಾಂಟುಗೊಡು** (ಕ್ರಿ). ದಾಟಲು ಅವಕಾಶ ಕೊಡು : ಏಱುಗೊಂಡಕ್ಕಲನ ದಾಂಟುಗೊಟ್ಟು ಪಾವಿನ ಪೊಸವಗೆಯೊಂದು ಮುಸಳದಾ ಕಿಡಿಕಿಡಿವೋಗಿ ಕುಡಿವರಿವ ವಿಸಾಸೆಯಂ ತಿರ್ದುತ (ರಾಮಾಶ್ವ. ೮೫-೧೮).

[ ದಾಂಟು$_3$ + ಕೊಡು$_1$ ]

**ದಾಂಟುದಾಣ** (ನಾ). ದಾಟುವ ಸ್ಥಳ ; ಹಾಯ್ಗಡ : ದಾಂಟುದಾಣದಾಬಿರುವೊನಲ್ ಕಾಲ್ಗಡ್ಡಮಾಗಿ ಕಣ್ಗಡ್ಡವಾದುದೊ ಮುಂದೆ ಕಾಳಿಂದಿಯಾ (ಶ್ರೀರಾಮಾ. ೦೩೮-೩೬೮). [ ದಾಂಟು$_1$ + ತಾಣ ]

**ದಾಂಟುಮರ** 'ದಾಂಟುಂವರ' ನೋ.

**ದಾಂಟುವರ, ದಾಂಟುಮರ, ದಾಟುಮರ** (ನಾ). ೧. = ದಾಂಟುಗಳೆ : ತೆವತ್ತ ಕಾಲ್ಗಳಿಂ ದಾಂಟುವರವಳಿದಂ (ಕಾಲೂರ. ೧೩೬-೨೯೬). **ದಾಂಟುಮರ** : ೧. ಹಿಂದೆ ಪೋಗುವುದೇಕೆ ದಾರಿಯಿದನುಂ ಬಣ್ಣಿನೆಂದಿರ್ಪ ದಾಂಟುವುವರದೆಡೆಗೆ ನಡೆತಂದಂ (ಕಾಲೂರ. ೦೩೬-೨೯೫). **ದಾಟುಮರ** : ೨. ನೆಲಬಾವಿಯ ಮೇಲೆ ಅಡ್ಡವಾಗಿ ಹಾಸುವ ಗಳ : ದಾಟುಮರ ಮುರಿದು ಬಾವಿಯಲ್ಲಿ ಬಿದ್ದನು (ಜೂಡಿ). [ ದಾಂಟು$_1$ + ಮರ$_1$ ]

**ದಾಂಡಗಾಯಿ** (ನಾ). ಪುಂಡುಗಾರಿಕೆ ; ಪುಂಡಾಟ : ಅಂತಯೇ ಪಡದಪ್ಪ ಕೊಟ್ಟ ಅರ್ಜ ನಾನಾನ ಪ ಕರಣದ ಬಗ್ಗೆ ಇರದೆ ದಾದಾ ತನ್ನ ಮೇಲೆ ಏರಿ ಬಂದು ದಾಂಡಗಾಯಿ ಮಾಡಿದ ಬಗ್ಗೆ ಇರಬೇಕು ಎಂದು ಅವರಿಗನಿಸಿತ್ತು (ಗತ್ರಮಾಯ. ೧೧೩). 'ಕಾಟಕಾಯಿ' ಪರಾ.

[ ←ಮರಾ. ದಾಂಡಗಾಈ ]

**ದಾಂಡಪಟಿ** 'ದಾಂಡಪಟ್ಟೆ' ನೋ.

**ದಾಂಡಪಟ್ಟೆ, ದಾಂಡಪಟೆ** (ನಾ). ಒಂದು ಕೈಯ್ಯಲ್ಲಿ ಉದ್ದವಾದ ಕತ್ತಿಯನ್ನೂ ಮತ್ತೊಂದು ಕೈಯಲ್ಲಿ ಕೋಲನ್ನೂ ಹಿಡಿದು ಮಾಡುವ ಕಸರತ್ತು : ಕುಸ್ತಿಯಲ್ಲಿ ಅರ್ಜುನದಾಸನ ಕೈ ಮೇಲಾದರೆ, ದಾಂಡಪಟಿಯಲ್ಲಿ ರಾಜವರ್ಧನನ ಪರಿಶ್ರಮ ಹೆಚ್ಚು (ಪರಮು. ೨). **ದಾಂಡಪಟೆ** : ಚಿಕ್ಕಂದಿನಿಂದ ಗರಡೀ ಸಾಧಕ, ದಾಂಡಪಟೆ, ಕುಸ್ತಿ ಮುಂತಾದ ಶೌರ್ಯದ ಅಭ್ಯಾಸಗಳನ್ನು ಇವರು ಮಾಡುತ್ತಾರೆ (ಕಥಾಗ. ೦೦೪).

[ ←ಮರಾ. ದಾಂಡ್‌ಪಟ್ಟಾ ]

**ದಾಂಡಾಜನಿಕ** (ನಾ). ಮೋಸಗಾರ ; ವಂಚಕ; ಮಾಯಾವಿ: "ದಾಂಡಾಜ[ಜಿ]ನಿಕಃ, ಕುಹಕಃ, ಕಾಪಟಿಕಃ, ಜಾಲಿಕಃ, ಕೌಸೃತಿಕಃ, ಧೂರ್ತಃ, ವ್ಯಂಸಕಃ, ಮಾಯಾವೀ, ಮಾಯಿಕಃ, ಮಾಯೀ–ಈ ೧೦ ಮಾಯಾವಿ" (ಹಲಾಯು. ೫೮-೧೯೪). [ ಸಂ. ]

**ದಾಂಡಿ** (ನಾ). ಸಮುದ್ರತೀರದಲ್ಲಿ ಗುರುತಿಗಾಗಿ ನೆಟ್ಟ ಕಲ್ಲು : (ಕಿಸಂಗ್ರಾ. ೧೩೫). [ ದೇ.; ತುಳು. ದಾಂಡಿ ]

**ದಾಂಡಿಗ, ಧಾಂಡಿಗ** (ನಾ). ೧. ಗಟ್ಟಿಗ ; ಕಟ್ಟುಮಸ್ತಾದ ಆಳು ; ಶಕ್ತಿವಂತ ; ಕಸುವುಳ್ಳವನು ; "ಬಲವುಳ್ಳ ದೊಡ್ಡ ಆಳು ; ಬಲವಂತ ; ಶಕ್ತಿವಾನ" (ಜಾನಕೋ. ೪): ಮನೆಯಲ್ಲಿ ಕರೆಯುವ ಎರಡು ಎಮ್ಮೆಗಳು, ಎರಡು ಹಸುಗಳು, ದುಡಿಯಲು ಇಬ್ಬರು ದಾಂಡಿಗರಾದ ಆಳುಗಳು (ಚಿಮ. ೧೩೨). ೨. ಒರಟು ವ್ಯಕ್ತಿ ; ಅಸಂಸ್ಕೃತ ; ಹುಂಬ : ಕರೆಯದೇ ಮಾಡದೇ ನಾವಿಬ್ಬರು ದಾಂಡಿಗರು ಹೋದರೆ ಕತ್ತು ಹಿಡಿದು ತಳ್ಳಿಯಾರು (ಮಧುಸಂ. ೩೮). **ಧಾಂಡಿಗ** : ೧. ಧಾಂಡಿಗರಾದ ಯುವಕರೂ ಹೆದರುವ ಹುಲಿಗಳನ್ನು ನೀನು ಕೊಲ್ಲಬಲ್ಲೆಯಾ ? (ಜಿಕಥ. ೧೫) ; ನಾನು ಬಹಳ ಚೆನ್ನಾಗಿ ಬೆಳೆದು ಧಾಂಡಿಗನಾಗಿದ್ದೆ (ಗರುಡಾ. ೮೩); ಅಲ್ಲೊಬ್ಬ ಧಾಂಡಿಗನು ಬಂದವರನ್ನೆಲ್ಲ ಭುಜದ ಮೇಲೆ ಕೂರಿಸಿಕೊಂಡು ನದಿಯನ್ನು ದಾಟಿಸುವನು (ದೇಶಾಂಕ. ೭೫). 'ದಡಿಗ$_2$' ಪರಾ. [ ←ಮರಾ. ದಾಂಡಗಾ ]

**ದಾಂಡಿಗತನ** (ನಾ). ಒರಟುತನ : ಅವನ ದಾಂಡಿಗತನದಿಂದ ಎಲ್ಲರಿಗೂ ಬೇಸರವಾಯಿತು (ಜೂಡಿ). [ ದಾಂಡಿಗ + -ತನ ]

**ದಾಂಡು** (ನಾ). ೧. ಚಿಣ್ಣಿಕೋಲಾಟದಲ್ಲಿ ಚಿಣ್ಣಿಯನ್ನು ಹೊಡೆಯಲು ಬಳಸುವ ಕೋಲು. 'ಚಿಣ್ಣಿದಾಂಡು' ಪದಾ. ೨. ಕ್ರಿಕೆಟ್ ಮೊದಲಾದ ಆಟಗಳಲ್ಲಿ ಚೆಂಡನ್ನು ಹೊಡೆಯುವ ಸಾಧನ; ಬ್ಯಾಟು : ಹೃತ್ಪಿಂಡ ಚೆಂಡು, ಬೆನ್ನೆಲುಬು ದಾಂಡು (ನಡಬಂ. ೧೦೨-೨೦) ; ಕ್ರಿಕೆಟ್ ಆಟದ ದಾಂಡು ; ಚಪ್ಪಟೆ ದಾಂಡು, ಬ್ಯಾಟು (Bat. ಇಂಕನಿ).

[ ←ಮರಾ. ದಾಂಡ್, ದಾಂಡಾ ]

**ದಾಂಡೆ** (ನಾ). (ಕರಾ) ಒಂದು ಬಗೆಯ ವಿಮಾನ. [ ? ]

**ದಾಂತ$_1$** (ನಾ). ದಕಾರದಲ್ಲಿ ಕೊನೆಗೊಳ್ಳುವ ಶಬ್ದ ; ಕೊನೆಯಲ್ಲಿ ದಕಾರವಿರುವಂತಹುದು : "ದಾಂತಕ್ಕೆ–ಆಬ್ದ (ಅಬ್ದ)–ಜಲಮುಗ್ಗೇ (ಮುಗಿಲು)" (ಶಬ್ದಾ). [ ದ$_1$ + ಅಂತ ]

**ದಾಂತ$_2$** (ಗು). ೧. ನಿಗ್ರಹಗೊಂಡ ; ದಮನವಾದ. ೨. ಪಳಗಿಸಿದ ; ಸಾಧುಗೊಳಿಸಿದ. (ನಾ). ೩. ಇಂದ್ರಿಯನಿಗ್ರಹ : ದಾಂತರಹಿತನ ನಶುಚಿಯಂ ವಿಭ್ರಾಂತನಂ . . . ಸಲಹು (ಬಸಪು. ೨೨-೫೦). ೪. ಇಂದ್ರಿಯನಿಗ್ರಹವನ್ನು ಉಳ್ಳವನು : "ದಾಂತಃ, ದಮಿತಃ–ಇಂದ್ರಿಯನಿಗ್ರಹವುಳ್ಳವನಿಗೂ, ನಿಗ್ರಹಿಸಲ್ಪಟ್ಟ ಇಂದ್ರಿಯಕ್ಕು ಪೆಸರು" (ಸಿದ್ಧಾಂತಿ. ೩೪೯). ೫. ತಪಶ್ಚರ್ಯೆಯ ಮೂಲಕ ಇಂದ್ರಿಯಗಳನ್ನು ನಿಗ್ರಹಿಸಿದವನು; ತಪಸ್ಸಿನ ಕ್ಲೇಶವನ್ನು ಸಹಿಸಿಕೊಳ್ಳುವವನು : "ತಪದ ಬಾಧೆಯಂ ಸೈರಿಸುವಾತನಂ ದಾಂತನೆಂಬುದು" (ಹಲಾಯು. ೬೬-೨೪೫) ; "ಸಂದ ತಪಬಾಧೆಯಂ ಸೈರಿಸುವವಂ ದಾಂತನಕ್ಕು" (ಮಂಗರಾ. ೬೪-೪); ಸಮಜೀವಿಯಾಗಿ ದಾಂತನಾದವನಿಗೆ . . . ಉಪಶಾಂತನಾದಂಥವನಿಗೆ ಕ್ರೋಧವೆಲ್ಲಿಯದು ? (ಬುದ್ಧಕ. ೬೫) : ದಾಂತನಲ್ಲದವನು ಲೋಕನಿಷ್ಠ ; ಬ್ರಹ್ಮನಿಷ್ಠನಲ್ಲ (ಭಾತತ್ತ್ವ. ೫೦೬). [ ಸಂ. ]

**ದಾಂತತೆ** (ನಾ). ಇಂದ್ರಿಯನಿಗ್ರಹ; ಸಂಯಮ: ದಾಂತತೆ ಎಂದರೆ ಮನಸ್ಸು ಮತ್ತು ಇಂದ್ರಿಯಗಳ ಸ್ವಾಭಾವಿಕವಾದ ಪ್ರವೃತ್ತಿಗೆ ತಾನು ಅಧೀನವಾಗದೆ, ತನ್ನ ಇಚ್ಛೆಯಂತೆ ಅವುಗಳನ್ನು ನಿಯಮಿಸುವುದು (ಭಾತತ್ತ್ವ. ಉಪೋದ್ಘಾತ. XIV). [ಸಂ. ದಾಂತತಾ]

**ದಾಂತಿ** (ನಾ). ೧. ಇಂದ್ರಿಯನಿಗ್ರಹ; ಸಂಯಮ: ದಾಂತಿಯೇ ಸುಖಭೋಗ ಮಾಯಾಶ್ರಾಂತಿಯೇ ಮಹಾತ್ಮೆಯಿವು ಋಷಿಸಂತತಿಗೆ ವರ್ತನವಲ್ತೇ ವೈದಿಕವಿಧಾನದಲಿ (ಶುಬ್ರಾ.ಆ. ೩-೧೯); ನಿಮಗೆ ಐವತ್ತು ತುಂಬಿತು. ಈಗ ಮಡಿ ಮಂತ್ರ ಶಾಂತಿ ದಾಂತಿಗೆ ತಕ್ಕ ಕಾಲ (ದೀಕಮ. ೬೦-೩). ೨. ತಪಸ್ಸಿನ ಕಷ್ಟಗಳನ್ನು ಸಹಿಸಿಕೊಳ್ಳುವಿಕೆ. [ಸಂ.]

**ದಾಂದಣ** 'ದಣದಣ' ನೋ.

**ದಾಂದಲೆ** 'ಧಾಂದಲೆ' ನೋ.

**ದಾಂಧಣ** (ನಾ). ಒಂದು ಅನುಕರಣ ಶಬ್ದ: ನಟಿಸು ರಾಜನ ರಾಜಗೃಹದ ಮೇಲಾಕಾಶಘಟನೆಯೊಳದ್ಭುತವಾಗಿ ಝುಟ ದಾಂಧಣ [ಪಾಠಾಂ. ದಾಂದಳ] ದಿಂದಿಮಿಕು ದಿಮ್ಮೆನೆ ಸುರಪಟಹನಿನಾದ ಕೇಳುತದ (ಭರತ. ೩-೧೧೧).

**ದಾಂಧಣರ್** (ನಾ). ಒಂದು ಅನುಕರಣ ಶಬ್ದ: ದಾಂಧಣರೆನುತ ಭೇರಿ ನವಪೊತ್ತು ಕಹಳಾದಿ ದುಂದುಭಿಧ್ವಾನ ದಶದಿಕ್ಕುಗಳನಾವರಿಸ (ಕೃಷ್ಣವಿ. ೨-೩೦).

**ದಾಂಧಲೆ** 'ಧಾಂದಲೆ' ನೋ.

**ದಾಂಧಳನೆ** (ಅ). ಒಂದು ಅನುಕರಣಾವ್ಯಯ: ಮೇರುವಿನ ಮೇಲೆ ಶಂಖಧ್ವನಿಸಹಿತ ಭೇರಿ ದಾಂಧಳನುಲಿವುದು (ಕೃಕವ. ೪-೯-೪).
[ದಾಂಧಳ$_{0}$ + - ಅನೆ$_{1}$]

**ದಾಂಪತ್ಯ** (ನಾ). ದಂಪತಿಗಳಾಗಿರುವಿಕೆ; ಗಂಡಹೆಂಡಿರಾಗಿರುವಿಕೆ; ದಂಪತಿಗಳ ಜೀವನ; ಇರವಿನೊಳರಿವಿನ ಮರುಳೇ ನಲವು... ನಿಮ್ಮಾ ದಾಂಪತ್ಯದೊಳಿದ ಕಾಂಚೆ ಅಸ್ತು ಅಸ್ತು ಸ್ವಸ್ತಿ ಸ್ವಸ್ತಿ ಎಂದೆ (ಗಣೇಶ. ೩-೧೦೯); ಕೇವಲ ಬೌದ್ಧಿಕ ಮೈತ್ರಿಯೇ ಸಾಕಾದಲ್ಲಿ, ಬೇರೆ ಲಿಂಗಗಳು ಜೊತೆಗೂಡಿ ದಾಂಪತ್ಯವನ್ನು ಹೂಡುವುದೇ ಬೇಡ (ದೂರಕ. ೨೯); ದಾಂಪತ್ಯದ ನೊಗ ಕತ್ತಿನಿಂದ ಕಳಚಿ ಬಿತ್ತು (ಯೋಧಕು. ೯೪). [ಸಂ.]

**ದಾಂಪತ್ಯಜೀವನ** (ನಾ). ಗಂಡಹೆಂಡಿರ ಜೀವನ; ಸಂಸಾರ: ಒಮ್ಮೊಮ್ಮೆ ಈ ಪ್ರಣಯವು ದಾಂಪತ್ಯಜೀವನಕ್ಕಿಂತಲೂ ಬಾಧುರವಾದುದು (ಕನ್ನಡಾ. ೧೧೩). [ದಾಂಪತ್ಯ + ಜೀವನ]

**ದಾಂಪತ್ಯಧರ್ಮ** (ನಾ). ದಾಂಪತ್ಯ ಜೀವನದ ನಡೆವಳಿ,-ಆಚಾರ: ಗೃಹ ಪವಿತ್ರವಾಗಿರಲೆಂದು, ದಾಂಪತ್ಯಧರ್ಮದಲ್ಲಿ ಆನುಮಾನಿಕ ಕಾಲ್ಪನಿಕ ಕಲಂಕ ಕೂಡ ಲೇಶಮಾತ್ರವೂ ಸ್ಪರ್ಶಿಸದೆ ಇರಲೆಂದು, ಸಾಧ್ವಿಯರಾದ ಸ್ತ್ರೀಯರ ಈ ವಿತಿಮೀರಿದ ಜಾಗರೂಕತೆಯಲ್ಲಿ... ಒಂದು ಬಗೆಯ ಮಾಧುರ್ಯ ಉಂಟು (ಇಬ್ಬಳ. ೨೬೦). [ದಾಂಪತ್ಯ + ಧರ್ಮ]

**ದಾಂಪತ್ಯಪ್ರೇಮ** (ನಾ). ದಂಪತಿಗಳಲ್ಲಿರುವ ಪರಸ್ಪರವಾದ ಅನುರಾಗ,-ಪ್ರೀತಿ: ಶುದ್ಧ ದಾಂಪತ್ಯಪ್ರೇಮವೇನೆಂಬುದನ್ನು ನೀನು ಅರಿಯಲಾರದೆ ಹೋದೆ (ಹೊಸಕ್ಷ. ೧೦). [ದಾಂಪತ್ಯ + ಪ್ರೇಮ]

**ದಾಂಪತ್ಯಯೋಗ** (ನಾ). ದಾಂಪತ್ಯದ ಸಂಬಂಧ: ಇಲ್ಲವೋ ಪೆರ್ಪಡಿಯ ಪೆರ್ಮೆಯುವರೊಡನೆ, ಪಂಬಲಿಸಲೇವುದರ್ ದಾಂಪತ್ಯಯೋಗಮನ್? (ಐದ್ಯಕ್ರ. ೪೭-೧೦೩೪). [ದಾಂಪತ್ಯ + ಯೋಗ]

**ದಾಂಪತ್ಯವಿಚ್ಛೇದನ** (ನಾ). ದಂಪತಿಗಳು ಬೇರ್ಪಡುವಿಕೆ; ಗಂಡ-ಹೆಂಡಿರು ತಮ್ಮ ಪರಸ್ಪರ ಸಂಬಂಧವನ್ನು ರದ್ದುಪಡಿಸಿ ಬೇರೆ ಬೇರೆಯಾಗುವಿಕೆ; ಸೋಡಚೀಟಿ; ಘಟಸ್ಫೋಟ; ಪಾರೀಖತ್ತು (ಉಕ): ದಾಂಪತ್ಯ ವಿಚ್ಛೇದನಕ್ಕೆ ಅವಕಾಶವಿರುವ ವಿಚಾರ ಮುಂತಾದುವುಗಳ ಸಂಬಂಧವಾಗಿ ಹೊಸ ಕಾನೂನು ರಚನೆಯಾಗಿರುವುದರಿಂದ ಮಹಿಳೆಯರ ಸ್ಥಿತಿಯು ಉತ್ತಮವಾಗುವ ಸೂಚನೆಗಳು ತೋರುತ್ತಿವೆ (ಭಾರತ. ೩೯೨). [ದಾಂಪತ್ಯ + ವಿಚ್ಛೇದನ]

**ದಾಂಪತ್ಯಸಂಬಂಧ** (ನಾ). ದಂಪತಿಗಳ ಸಾಂಸಾರಿಕ ಸಂಬಂಧ: ನಿಮ್ಮ ದಾಂಪತ್ಯಸಂಬಂಧವನ್ನು ವಿಚ್ಛೇದಮಾಡುವುದು ಮಹಾಪಾತಕವೆಂತಲೂ ತಿಳಿದಿದ್ದೇನೆ (ಕಥಾಳುಂ. ೧೨೧). [ದಾಂಪತ್ಯ + ಸಂಬಂಧ]

**ದಾಂಬರು** 'ಡಾಮರ್' ನೋ.

**ದಾಂಭಿಕ** (ಗು). ೧. ಕಪಟದ; ವೇಷಧಾರಿಯಾದ. ೨. ಆಡಂಬರದ; ಜಂಬದ. (ನಾ). ೩. ವೇಷಧಾರಿ; ಕಪಟಿ; ಸೋಗಿನವನು: ದುರ್ವಿನೀತ ಬ್ರಾಹ್ಮಣ ಏಳು ಭಿಕ್ಷಾಜೀವಿ! ...ದಾಂಭಿಕ! (ಶಾಂಡಳ. ೮೩); ದುರ್ಗುಣಭರಿಟ್ಟ ಘಟ್ಟವಾಳಯ್ಯ ದಾಂಭಿಕರಿಗೆ, ನಾಮಧಾರಿಗಳಿಗೆ... ಸಿಂಹಸ್ವಪ್ನವಾಗಿ ಉಳಿದಿದ್ದಾನೆ (ಶರಕ. ೩೭೫). [ಸಂ.]

**ದಾಕ** 'ಡಾಗು$_{1}$' ನೋ.

**ದಾಕಲು** 'ದಾಖಲೆ' ನೋ.

**ದಾಕಿಡು** (ಕ್ರಿ). ದೂರದೂರಕ್ಕೆ ಹೆಜ್ಜೆಹಾಕಂ; ದಾಟುಹೆಜ್ಜೆ ಹಾಕು: ಸಾಕಿಂದು ತವಕಿಗೆಯುನ್ನುವರೊಡನೆಮಗಾಸೆಯೆಂಕೆಂದು ನಾವು ಜಾಱುವೆವು ದಾಕಿಟ್ಟು ಹತ್ತೆಂಟು ಹಜ್ಜೆಯ ತಾವೆಯ್ದಿ ತಾಕಿ ಕೈವಿಡಿದೊಯ್ದರೆಮ್ಮ (ಭರತ. ೬೦-೪೩). [ದಾಕು$_{2}$ + ಇಡು$_{1}$]

**ದಾಕು$_{1}$** 'ಡಾಗು$_{1}$' ನೋ.

**ದಾಕು$_{2}$** (ನಾ). ದೊಡ್ಡ ಹೆಜ್ಜೆ; ದಾಟು ಹೆಜ್ಜೆ: ಮೂಲೋಕವ ಚೋಟಿಕ್ಕುವಂತೆ ದಾಕೊಂದಱೊಳು ಕೋಟಿವಾರ್ಧಿಯ ಪಾಯ್ವ ನಿರಾಕು ಲೋನ್ನತಿಯಿರ್ದುದೊಳಗೆ (ಭರತ. ೭೪-೧೭). 'ದಾಪು' ಪರಾ. [?]

**ದಾಕುದಾರ** 'ಡಾಕ್ಟರು' ನೋ.

**ದಾಕುಹಾಕು** (ಕ್ರಿ). ಮೈಲಿ ಚುಚ್ಚು; ದೇವಿಹಾಕು; ಸಿಡುಬುಹಾಕು: ಮಗುವು ಹುಟ್ಟಿದ ನಾಲ್ಕು ತಿಂಗಳಿನಿಂದ ಹಿಡಿದು ಒಂದು ವರುಷದೊಳಗೆ ಕಡ್ಡಾಯವಾಗಿ, ಮೈಲಿಗೆ, ಕಾಲರಾ... ಇತ್ಯಾದಿ ೧೮ ಬೇನೆಗಳಿಗಾಗಿ ದಾಕುಹಾಕುವ ಯೋಚನೆಯು ನಡೆದಿದೆ (ದೇವದೂ. ೨೫೨); ಜನ್ನರನು ದನದ ಮೈಲಿಯ ಬೊಕ್ಕೆಗಳ ಕೀವನ್ನು ತೆಗೆದು ಶಸ್ತ್ರದಿಂದ ಫಿಪ್ಸನ ಚರ್ಮದ ಮೇಲೆ ಗಾಯವಮಾಡಿ ರಕ್ತದಲ್ಲಿ ಸೇರಿಸಿದನು. ಇದೇ ಮೊತ್ತ ಮೊದಲು ದಾಕುಹಾಕಿದ ಉದಾಹರಣೆಯು (ಮಾನಕ. ೪).
[ದಾಕು$_{1}$ (<ಡಾಗು$_{1}$) + ಹಾಕು (<ಪಾಯ್ಚು$_{1}$)]

**ದಾಕೋಟಿ** 'ದಹಕೋಟಿ' ನೋ.

**ದಾಕ್ಟಾರ** 'ಡಾಕ್ಟರು' ನೋ.

**ದಾಕ್ಷ** (ಗು). ದಕ್ಷನಿಗೆ ಸಂಬಂಧಪಟ್ಟ. [ಸಂ.]

**ದಾಕ್ಷಾಯಣಿ** (ನಾ). ೧. ದಕ್ಷನ ಮಗಳು; ಸತೀದೇವಿ; ಪಾರ್ವತಿ; ಗೌರಿ: "ರುದ್ರಾಣೀ, ಶರ್ವಾಣೀ... ದಾಕ್ಷಾಯಣೀ, ಶಿವಾ... ಮೇನಕಾತ್ಮಜಾ - ಈ ೨೧ ಗೌರೀದೇವಿಯ ಪೆಸರ್" (ಹಲಾಯು. ೪-೧೫); ದಕ್ಷನುದರದರಿ ಸಂಭವಿಸಿದಳು ದಾಕ್ಷಾಯಣೀನಾಮದಿಂ (ಅಶಿಚಂ. ೧೩-೨); ನೀರೇಜಾಸನಸೂನು ದಕ್ಷನುಱ ಸದ್ದಾಕ್ಷಾಯಣೀದೇವಿಯುಂ ... ಪಡೆದಂ (ಹಮ್ಮಿರ. ೨-೬). ೨. ಇಪ್ಪತ್ತೇಳು ನಕ್ಷತ್ರಗಳಲ್ಲಿ ಯಾವುದಾದರೂ ಒಂದು; P ದಕ್ಷಬ್ರಹ್ಮನಿಗೆ ವೀರಿಣಿ ಎಂಬುವಳಲ್ಲಿ ಹುಟ್ಟಿದ ಅಶ್ವಿನೀ ಮೊದಲಾದ ಇಪ್ಪತ್ತೇಳು ಜನ ನಕ್ಷತ್ರಕನ್ಯೆಯರು. ಇವರೆಲ್ಲಾ ಚಂದ್ರನ ಪತ್ನಿಯರು: "ಅಶ್ವಿನೀ ಮುಂತಾದ ೨೭ ನಕ್ಷತ್ರಗಳೂ ದಾಕ್ಷಾಯಣ್ಯಃ. ದಾಕ್ಷಾಯಣಿಯರೆನಿಸಲ್ಪಡುತ್ತವೆ" (ಸಿದ್ಧಾಂತಿ. ೩೦).
[ಸಂ. ದಾಕ್ಷಾಯಣೀ]

**ದಾಕ್ಷಾಯಣೀರಮಣ** (ನಾ). ೧. ಶಿವ. ೨. ಚಂದ್ರ: "ಇಂದುಃ, ಚಂದ್ರಃ . . . ವಿಧುಃ, ದಾಕ್ಷಾಯಣೀರಮಣಃ–ಈ ೨೧ ಚಂದ್ರನ ಪೆಸರ್" (ಹಲಾಯು. ೮-೪೨). [ ಸಂ. ]

**ದಾಕ್ಷಾಯ್ಯ** (ನಾ). ರಣಹದ್ದು ; ದೊಡ್ಡಹದ್ದು ; ಗೃಧ್ರ. [ ಸಂ. ]

**ದಾಕ್ಷಿಣಾತ್ಯ** (ಗು). ೧. ದಕ್ಷಿಣಕ್ಕೆ ಸಂಬಂಧಿಸಿದ: ಇದು ದಾಕ್ಷಿಣಾತ್ಯ ಕವಿಮಾರ್ಗಮುದಾರವಮುದೀಚ್ಯದುರುವಿಶೇಷಣಯುತಮಪ್ಪುದು (ಕವಿರಾ. ೨-೭೯). (ನಾ). ೨. ದಕ್ಷಿಣ ಭಾರತದಲ್ಲಿ ವಾಸಿಸುವ ಜನ: ವಿಂಧ್ಯ ಪರ್ವತದ ದಕ್ಷಿಣದಲ್ಲಿರುವ ಪ್ರದೇಶವನ್ನು ದಕ್ಷಿಣಭಾರತವೆಂದು ಪರಿಗಣಿಸ ಬಹುದು. ಇಲ್ಲಿ ವಾಸಮಾಡುವ ಜನರು ದಾಕ್ಷಿಣಾತ್ಯರು (ಭಾರದ. ೩೯೫) ; ಆರ್ಯಸಂಸ್ಕೃತಿಯ ನಿಜವಾದ ರಕ್ಷಕರು ದಾಕ್ಷಿಣಾತ್ಯರು (ಜುಕ್ಕಾ ರ. ೧೧೦ ಪೀಠಿಕೆ). ೩. [ಸಂಗೀತ] ಒಂದು ರಾಗದ ಹೆಸರು: ಕೌಶಿಕಿ, ವೇಳಾವಳಿ . . . ದಾಕ್ಷಿಣಾತ್ಯ [ಪಾಠಾಂ. ದಕ್ಷಿಣಾದಿತ್ಯ] . . . ಶಯು ಸೋದರಿಯೆಂಬ ಮೂವತ್ತುನಾಲ್ಕು ರಾಗಂಗಳೇ ಭಾಷಾಂಗದಿಂದ ಪುಟ್ಟಿದವು (ವಿವೇಕ. ೨೩೩). [ ಸಂ. ]

**ದಾಕ್ಷಿಣಾತ್ಯಕ** (ನಾ). [ಕಾವ್ಯಮಿ] ದಕ್ಷಿಣಮಾರ್ಗ: ಮನದೊಳ ಗಾಗಳುಂ ನಿಜಾಸದಾ ಮುಳಿಸಂ ಗತರಾಗಮೋಹನೊಯ್ಯನೆ ಮುನಿ ನಾಥನೆಂಬ ವಚನಾಂತರಮಿಂತಿದು ದಾಕ್ಷಿಣಾತ್ಯಕಂ (ಕವಿರಾ. ೨-೧೦೭). [ ಸಂ. ]

**ದಾಕ್ಷಿಣಾತ್ಯಪಾಠ** (ನಾ). ದಕ್ಷಿಣ ಭಾರತದಲ್ಲಿ ದೊರೆಯುವ ಪಾಠ: ಮಹಾಭಾರತಕ್ಕೆ ದಾಕ್ಷಿಣಾತ್ಯಪಾಠ, ಔತ್ತರೇಯಃಪಾಠವೆಂದು ಎರಡು ಪಾಠಗಳಿವೆ (ಭಾರದ. ೯೬). 'ಔತ್ತರೇಯಪಾಠ' ಪರಾ.

[ ದಾಕ್ಷಿಣಾತ್ಯ + ಪಾಠ್ಯ ]

**ದಾಕ್ಷಿಣಾತ್ಯಸಂಗೀತ** (ನಾ). ದಕ್ಷಿಣ ಭಾರತದಲ್ಲಿ ಪ್ರಚುರವಾದ ಸಂಗೀತ; ಕರ್ಣಾಟಕ ಸಂಗೀತ: ಈಚೆಗೆ ದಾಕ್ಷಿಣಾತ್ಯಸಂಗೀತದಲ್ಲಿ ಹೆಚ್ಚಿನ ಪ್ರೀತ್ಸಾ ಹಗಳು ಅಂಕುರಿಸಿರುವಂತೆ ಕಾಣುತ್ತದೆ (ಸಂಗೀತಾ. ೧೮೩).

[ ದಾಕ್ಷಿಣಾತ್ಯ + ಸಂಗೀತ ]

**೫ದಾಕ್ಷಿಣಾತ್ಯೆ** (ನಾ). ೧. ದಕ್ಷಿಣದೇಶದಲ್ಲಿ ವಾಸಿಸುವವಳು ಅಥವಾ ಹುಟ್ಟಿದವಳು. ೨. [ಸಂಗೀತ] ದಕ್ಷಿಣ ಭಾರತದಲ್ಲಿ ಪ್ರಚುರವಾದ ವೃತ್ತಿ,–ಪದ್ಧತಿ: ಮಾಗಾವತಿಯುಂ ದಾಕ್ಷಿಣಾತ್ಯೆಯುಂ ಪಾಂಚಾಲಿಯುಂ ಮಾದ್ರ ಮಾಗಧಿಯುಮೆಂಬ ನಾಲ್ಕುಂ ವೃತ್ತಿಯುಮಂ (ಅಜಿಪು. ೫-೩೦ ವ). [ ಸಂ. ದಾಕ್ಷಿಣಾತ್ಯಾ ]

**ದಾಕ್ಷಿಣ್ಯ** (ಗು). ೧. ದಕ್ಷಿಣೆಗೆ ಸಂಬಂಧಿಸಿದ; ಉಪಾಯನಕ್ಕೆ ಸೇರಿದ. (ನಾ). ೨. ದಕ್ಷಿಣೆಗೆ ಯೋಗ್ಯನಾದವನು: "ದಕ್ಷಿಣೀಯಃ, ದಕ್ಷಿಣಾರ್ಹಃ, ದಾಕ್ಷಿಣ್ಯಃ -ಹಿ ದಕ್ಷಿಣೆಗೆ ಯೋಗ್ಯನಾದವನು, ಧಾರಾಳವಾಗಿ ಕೊಡತಕ್ಕವನು" (ಸಿದ್ಧಾಂತಿ. ೨೭೯). ೩. ಸಂಕೋಚ; ಭಿಡೆ: "ಬಡೆಯುಮೆನಲ್ ದಾಕ್ಷಿಣ್ಯಂ" (ಶಬ್ದಾನು. ೨೧೨). ೪. ದಯೆ ; ಅನುಕಂಪ ; ಕರುಣೆ ; ಮರುಕ: ಅ ರ ಸು ಗ ಳ್ ತಮಗೆನಿತುಂ ಸ ಮ ಚಿ ತ್ತ ಮಿ ಲ್ಲ ದಿ ದ್ದೊ ಡ ಂ ಸಮ್ಮುಖಕ್ಕೆ ಬಂದ ಪ್ರಾಣಿಮಾತ್ರಕ್ಕೆ ಪರಾಙ್ಮುಖರಾಗಲಾಗದು ದಾಕ್ಷಿಣ್ಯಂ ಬೇಟ್ಕುಮೆಂಬ ನೀತಿಯುಂಟು (ಪಂಚತಂ. ೩೩-೧೧) ; ಮನೆಯಲ್ಲಿ ಇಟ್ಟು ಕೊಂಡು ತೋರಿಸಿದ ಈ ಹೆಚ್ಚಿನ ದಾಕ್ಷಿಣ್ಯಕ್ಕೆ ಪ್ರತಿಯಾಗಿ ಅವನಿಂದ ಹೆಚ್ಚಿನ ಕೆಲಸವನ್ನು ಆದಾಯ ಮಾಡಿದರೆ ಸರಿ (ಇಪ್ಪಕ. ೩೦೩). ೫. ಜಾಣ ತನ. ೬. ಸಾಮರ್ಥ್ಯ. ೭. ಇನ್ನೊಬ್ಬರ ಮನಸ್ಸನ್ನು ಅನುಸರಿಸಿ ನಡೆಯುವಿಕೆ ; ಇನ್ನೊಬ್ಬರಿಗೆ ನೋವಾಗದಂತೆ ನಡೆಯುವಿಕೆ; ಸೌಜನ್ಯ : ಒದವಿದ ದಾಕ್ಷಿಣ್ಯಕ್ಕುಂ ವಿದಗ್ಧವೃತ್ತಿಗಂ . . . ಮೊದಲೆನಿಸಿದ ಸಕಲಗುಣಾಸ್ಪದರಂ ಜಗದೊಳಗೆ ಪಡೆವುದಸದಳಮಲ್ತೆ (ಕಾದಂಪೂ. ೧೦) ; ಕಾಮದಿಂ ಕೋಪದಿಂ ಕೂರ್ಪರ ದಾಕ್ಷಿಣ್ಯಂಗಳಿಂ . . . ದೇವ ನಿಮ್ಮಂ ಸ್ಮರಿಯಿಪ್ಪಂತಿತ್ತು (ರಕ್ಷಾಶ. ೭೦) ; ದಾಕ್ಷಿಣ್ಯಕ್ಕೆ ಬಸುರಾಗಿ ಹೆರೋಕೆ ತಾವಿಲ್ಲ (ಗಾದೆ). 'ಮುಖದಾಕ್ಷಿಣ್ಯ' ಪರಾ. ೮. ದಕ್ಷಿಣದೇಶಕ್ಕೆ ಸೇರಿದವನ . [ ಸಂ. ]

**ದಾಕ್ಷಿಣ್ಯಪರ** (ನಾ). ಸೌಜನ್ಯ ಸ್ವಭಾವದವನು ; ಇನ್ನೊಬ್ಬರ ಭಿಡೆ ಮುರವತ್ತಿಗೆ ಒಳಗಾಗುವವನು: ನ್ಯಾಯನಿಷ್ಠುರಿ ದಾಕ್ಷಿಣ್ಯಪರನು ನಾನಲ್ಲ ಲೋಕವಿರೋಧಿ ಶರಣನಾರಿಗಂಜುವನಲ್ಲ (ಬಸವ. ೭೩೩).

[ ಸಂ. ]

**ದಾಕ್ಷಿಣ್ಯವಂತ** (ನಾ). ನಮ್ರತೆಯಿಂದ ಕೂಡಿದವನು : ಆತ ತುಂಬಾ ದಾಕ್ಷಿಣ್ಯವಂತ (ರೂಢಿ). [ ದಾಕ್ಷಿಣ್ಯ + – ವಂತ ]

**ದಾಕ್ಷಿಣ್ಯವರ್ತಿ** (ನಾ). ೧. ನಮ್ರತೆಯಿಂದ ವ್ಯವಹರಿಸುವವನು. ೨. ದಕ್ಷಿಣದೇಶದಲ್ಲಿ ವಾಸಿಸುವವನು ; ದಕ್ಷಿಣದೇಶದವನು. ೧, ೨ : ವಿದ್ಯಾಧರನರ್ಘಭೋಜನರೆನಿಸರೆಲ್ಲರುಂ ದಾಕ್ಷಿಣ್ಯವರ್ತಿಗಳ್ಬಳಿಯ ಲಂಕಾನಿವಾಸಿ ಗಳೆನಿಸರು (ಕ್ರಮಿಥಾ. ೨-೧೧). [ ಸಂ. ದಾಕ್ಷಿಣ್ಯವರ್ತಿನ್ ]

**ದಾಖಲ್** 'ದಾಖಲೆ' ನೋ.

**ದಾಖಲ** 'ದಾಖಲೆ' ನೋ.

**ದಾಖಲಾತಿ**, ದಾಖಲಾತು, ದಾಖಲಾತೆ (ನಾ). ೧. ಕಾಗದಪತ್ರ ; ದಫ್ತರು : ಓತೂರಿ ನಡೆಸಿದ್ದಾರೆಂದು ದಾಖಲಾತಿಗಳಿವೆ (ಬಾಂಕ್. ೧೯೭); ಅವನು ಮುಕಲಾಂಧನ ದಾಖಲಾತಿ ಇಲಾಖೆಯಲ್ಲಿದ್ದಾನೆ (ಪುನರು. ೩೨೯). ೨. ರುಜುವಾತು. ೩. ಪ್ರವೇಶ ; ಸೇರಿಸುವಿಕೆ : ಶಾಲೆಗೆ ಮಕ್ಕಳನ್ನು ದಾಖಲಾತಿ ಮಾಡಿಸುವರು (ರೂಢಿ). **ದಾಖಲಾತು:** (೩). **ದಾಖಲಾತೆ:** ೧. ಪಾರ್ಲಿಮೆಂಟಿನ ದಾಖಲಾತೆಗಳಲ್ಲಿ ನಾನು ಓದಿದ್ದೇನೆ (ಶೇಮ್ಸ್‌ಗಂ. ೬೦).

[ ದಾಖಲ್ (<ದಾಖಲೆ) + – ಆತಿ ]

**ದಾಖಲಾತು** 'ದಾಖಲಾತಿ' ನೋ.

**ದಾಖಲಾತೆ** 'ದಾಖಲಾತಿ' ನೋ.

**ದಾಖಲು** 'ದಾಖಲೆ' ನೋ.

**ದಾಖಲೆ**, ದಾಕಲು, ದಾಖಲ್, ದಾಖಲ, ದಾಖಲು (ನಾ). ೧. ಲೆಕ್ಕಕ್ಕೆ ಸೇರಿದುದು ; ಲೆಕ್ಕಕ್ಕೆ ಸಂದಾಯವಾದುದು : (೩). ೨. ಆಧಾರ ಪೂರ್ವಕವಾದ ಪ್ರಮಾಣಬದ್ಧವಾದ ಕಾಗದ ಪತ್ರಗಳಲ್ಲಿ ಸೇರಿಸಿದ ಒಕ್ಕಣಿಕೆ,–ನಮೂದು : ಅಗತ್ಯವಾದ ನೂತನ ಅಂಕಿ ಅಂಶಗಳನ್ನೂ ಹೊಸ ದಾಖಲೆಗಳನ್ನೂ ಅಳವಡಿಸಲು ಅವಕಾಶವಿರಬೇಕು (ಶಿಕ್ಷದ. ೩೭೫). ೩. (ಒಂದು ಸಂಗತಿಯನ್ನು ಸ್ಥಾ ಪಿ ಸ ಲು ದ ಕ್ಕೆ ಪೂರಕ ವಾದ) ಲಿಖಿತ ; ರುಜುವಾತು ; ಪ್ರಮಾಣಬದ್ಧವಾದ ಕಾಗದ,–ಪತ್ರ ; ಸರ್ಕಾರಿ ದಫ್ತರದಲ್ಲಿ ನಮೂದಾದ ಕಾಗದ : ದೇವರಿಗೆ ನಿತ್ಯ ನೈಮಿತ್ತಿಕ ಪೂಜಾ ನಡೆಯೂ ಬಗ್ಗೆ ತಸದೀಕು ದಾಖಲೆಯು ಮಾಡಿಸಿ (ಎಕ. III, ತಿರುಮ. ೫೭-೩೧ ; 1855) ; ಗ್ರಾಮದ ಸರ್ವೆ ನಂಬರು ಒಂದು ಒಬ್ಬನ ಹೆಸರಿಗೆ ಪಟ್ಟೆಯಿರುತ್ತಾ ದಾಖಲೆಯಿಲ್ಲದೆ ಒಳ ಅನುಭವ ದಾರರು ಅನೇಕ ಮಂದಿ ಇರುತ್ತಾರೆ (ಭೂಮಿಉ. ೩೭) ; ಆ ಪಾದ್ರಿಯ ಪ್ರದೇಶದಲ್ಲಿ ಅದಕ್ಕೂ ಮೊದಲಿನ ಯಾವ ಕಾಲದ ದಾಖಲೆಗಳನ್ನೂ ಇಡಲಾಗಲಿಲ್ಲ (ಬಂಜನ್. ೧೦) ; ತೊರೆಯರು ಈಚೆಗೆ ಆ ಮಾರ್ಗವಾಗಿ ಹೋದ ದಾಖಲೆ ಇಲ್ಲ (ಕಲನಿ. ೨೦೩) ; ತನ್ನ ತಂದೆಯ ಆಸ್ತಿಯನ್ನು ವಿಲೇವಾರಿ ಮಾಡುವ ಹಕ್ಕಿದೆಯೆನ್ನುವುದಕ್ಕೆ ದಾಖಲೆಯೇನೂ ಸಿಕ್ಕಿಲ್ಲ ವಂತೆ (ಹೋಧಪು. ೩೭). ೪. ಸೇರುವಿಕೆ ; ಹಾಜರಾಗುವಿಕೆ : ಇಲ್ಲಿಗೆ ದಾಖಲೆಯಾದ ದಿನ ಹೇಗಿದ್ದನೋ ಹಾಗೇ ಇದ್ದ (ವೀರಹೋ. ೪). **ದಾಕಲು :** ೩. ವಿಷಯುವನ್ನು ಸ್ಪಷ್ಟಪಡಿಸುವಂತಹ ದಾಕಲುಗಳೂ ಸಿಕ್ಕಿದವು (ರೂಢಿ). **ದಾಖಲ್ :** ೪. ಮೂರು ಗಂಟೆಗೆ ದಾಖಲ್ ಆದನು ತಂಗಿಪೂರಿನ ಒಳಗೆ (ಕರ್ನಾಸಂ. ೮೪). **ದಾಖಲ :** ೩. ಮದ್ದಗಿರಿ ಸರಕಾರ

**ದಾಯಗಲ್ಲು** (ನಾ). ಒಂದು ಊರಿನ ಹೆಸರಂ ಮತ್ತು ಅಲ್ಲಿ ತಯಾರಾಗುವ ಸೀರೆ : ಗುಜ್ಜರಿ ಸಿಂಗಳ ಗುಲುಗಂಜಿ ಮಡಿಯು ಗಂಗಪುರವು ದಾಯಗಲ್ಲು ಕರಾಳೆಯುತ್ತುಂಗ ವಿಳಾಸ ವಿಭ್ರಾಂತು (ಅಮುಸಾಂ. v-೦೩). [ ? ]

**ದಾಯಗಾಜಿ** (ನಾ). ಅವಕಾಶವನ್ನು ಉಪಯೋಗಿಸಿಕೊಳ್ಳುವವನು; ಸಮಯಸಾಧಕ; ಸ್ವಾರ್ಥಿ : ದಾಯಗಾಜಿನ ಶೀಲ ತ್ರಿವಿಧ ಧಾಳಕನ ಭಕ್ತಿ ಶಬರನ ದಯ ಚೋರನ ಲಜ್ಜೆ ಕಳ್ಳಿಯ ಬಲ್ಲತನ ಇವೆಲ್ಲವು ಕಲಿಯು ಮಣಿಯಂತೆ ಅಲ್ಲಿಗಲ್ಲಿಗೆ ದಾಯ (ಏಕೋತ್ತ. ೪೨೭-೯). [ ದಾಯ₁ + — ಗಾಜಿ ]

**ದಾಯಗಾಜಿಕೆ** (ನಾ). ಸ್ವಂತಕ್ಕೆ ಮಾಡಿಕೊಳ್ಳುವ ಸಂಪಾದನೆ,—ಗಳಿಕೆ: ಭಕ್ತರು ಕಾಯಕವೆಂದು ದಾಯಗಾಜಿಕೆಯಲ್ಲಿ ತಂದು ದಾಸೋಹವ ಮಾಡಬಹುದೆ (ಕೊನ್ನಸಂ. ೨೬೩-೦೩). [ ದಾಯಗಾಜಿ + — ಇಕೆ ]

ದಾಯಗೆಡಿಸು 'ದಾಯಂಗಿಡಿಸು' ನೋ.

**ದಾಯಗೆಡು₁** (ಕ್ರಿ). ಸಮತೆಯನ್ನು ಕಳೆದುಕೊಳ್ಳು; ತೊಳತವ್ವು : ಈ ಅಂತರ್ಭೇದದಿಂದ ರಾಜಕಾರ್ಯವು ದಾಯಗೆಟ್ಟಿತು (ಆರ್ಯಕೀ. ೧೦೪). [ ದಾಯ₁ + ಕೆಡು₁ ]

**ದಾಯಗೆಡು₂** (ಕ್ರಿ). ಪಾಲನ್ನು ಕಳೆದುಕೊಳ್ಳು : ದಾಯಾದ್ಯವಿಷಯದಿ ಹಿಂದೆ ಕೆಲಂಬರು ದಾಯಗೆಟ್ಟವರುಂಟು ಜೀಯ (ನಾಗಳು. ೧೧-೧೦). [ ದಾಯ₂ + ಕೆಡು₁ ]

**ದಾಯಗೊಡು** (ಕ್ರಿ). ದಾನಕೊಡು; ಕಾಣಿಕೆ ನೀಡು; ದಕ್ಷಿಣೆ ಬಿಡು : ಅವನ್ಗೆ ವಂಶೋತ್ಪತ್ತಿಯಾಗೆ ದಾಯಗೊಟ್ಟುದುಮದೆಗೂಬುಂಬಿಬಾಡೆಯು (ಎಕ. X, ಶ್ರೀನಿವಾ. ೬-೧೧ ; ಸು. 780). [ ದಾಯ₂ + ಕೊಡು₁ ]

**ದಾಯಗೊಳ್** (ಕ್ರಿ). ವಿಚಾರಮಾಡು ; ಆಲೋಚಿಸು ; ಪರಿಶೀಲಿಸು : ಪ್ರಾಯದೋಱಿತು ಮದುವೆಯ ಮಾಡಬೇಕೆಂದು ದಾಯಗೊಂಡಿರ್ದವು (ಭರತ. ೭೦-೨೮). [ ದಾಯ₁ + ಕೊಳ್₁ ]

**ದಾಯದೋಱು** (ಕ್ರಿ). ಮಾರ್ಗವನ್ನು ತೋರಿಸು; ದಾರಿಯನ್ನು ಕಾಣಿಸು : ತಾಯಿಲ್ಲ ತಂದೆಯಿಲ್ಲಂತವಿಲ್ಲಾದಿಯಿಲ್ಲಾ ಯಾಸವಿನಿತಿಲ್ಲದಭವ ದಾಯದೋಱಿನಗೆ (ಭರತ. ೪೭-೧). [ ದಾಯ₁ + ತೋಱು ]

**ದಾಯದ್ರವ್ಯ** (ನಾ). ಒಂದು ಬಗೆಯ ತೆರಿಗೆ (?) : ಪೂಳಲ ಮನ್ನೆಯ ದಾನಿಕೆಯುಳ್ಳ [ ದೀವ ]ವಂ ದಾಯದ್ರವ್ಯದ ಕಿಱುದೆಱೆಗಳುಮಂ ಸರ್ವಬಾಧಾಪರಿಹಾರಮಾಗೆ ಬಿಟ್ಟು ನಡೆಯಿಸಿದ (ಸೌಇಇ. XX, ೪೭-೩೭; 1074). [ ದಾಯ₂ + ದ್ರವ್ಯ ]

**ದಾಯನಿರ್ಣಯ** (ನಾ). ಆಸ್ತಿ ವಿಭಾಗದ ತೀರ್ಮಾನ : ವಿವದಿಗಳಾ ದಾಯನಿರ್ಣಯಕೆ ಯೋಜಿಸುವಂತೆ, ನೀಂ ಜಗದ ಶ್ರೇಯಸ್ಸಿಗುಜ್ಜುಗಿಸು (ಮುಂಕುಕ. ೮೧೪). [ ದಾಯ₂ + ನಿರ್ಣಯ ]

**ದಾಯಬೀಳು** (ಕ್ರಿ). ೧. ಗರ ಬೀಳು. ೨. ಅವಕಾಶ ಉಂಟಾಗು; ಸಂಭವಂಯ ಉಂಟಾಗು : ದಾಯಬಿದ್ದಾಗ ಹಾಯಬೇಕು (ಗಾದೆ). [ ದಾಯ₁ + ಬೀಳು₁ (<ಬೀೞ್₁) ]

**ದಾಯಭಾಗ** (ನಾ). ಆಸ್ತಿಯ ಭಾಗ ; ಸಂಪತ್ತಿನ ಭಾಗ; ದಾಯಭಾಗದ ವಿಷಯದಲ್ಲಿ ಅನೇಕ ವಿವಾದಗಳು ನಡೆದು ಕಡೆಗೆ . . . ರಾಜ್ಯವನ್ನು ಹೊಂದುವ ಸಂದರ್ಭ ಬಂದಿತು (ಭಾಕತ್ತ. ೯೯); ಈ ಸಿದ್ಧಾಂತದ ಮೇಲೆಯೇ ಸರ್ವರಲ್ಲಿಯೂ ಧರ್ಮ, ಚಾರಿತ್ರ್ಯ, ದಾಯಭಾಗ ಮುಂತಾದುವುಗಳು ವ್ಯವಸ್ಥಿತವಾಗಿರುವುದು (ಆರ್ಯಧ. ೧೩೨). [ ದಾಯ₂ + ಭಾಗ ]

**ದಾಯರೆ** (ಗು). ೧. ಪ್ರಾಂತೀಯ. ೨. ಕರಾವಳಿಯಲ್ಲಿ ವಾಸಿಸುವ : ಕೆಲವು ದಾಯರೆ ಮುಸಲ್ಮಾನ್ ಜಮೀನ್‌ದಾರುಗಳೂ, ವರ್ತಕರೂ ಇದ್ದರು (ಕಲಿನ. ೨೦೪). [ ←ಪಾರ. ದಯಾರ್, ದಾಯರಾ=ವೃತ್ತ; ಹಿಂ. ದಯಾರ್, ದಿಯಾರಾ ]

**ದಾಯವಾದಿ** (ನಾ). ಆಸ್ತಿಯ ಭಾಗಕ್ಕಾಗಿ ವಾದ ಮಾಡುವವನು ; ದಾಯಾದಿ ; ನಂಬಬಹುದೇ ದಾಯವಾದಿಗಳೆಂಬ ಪಾಪಿಗಳೇನ ಮಾಡರು ತಿಂಬವನೆ ಕೊಲುವಲ್ಲಿ ಕರುಣೆಗಳುಂಟೆ ಭಾವಿಸಲು (ಕೌತಿರಾ. ೦೮-೩೯) ; ದಾಯವಾದಿಗಳರಿದಡಂ ಯಲವೂ ಸಂಜಯ ವಿಡಾಯಿಗೆಡುವುದು ರಾಜ್ಯಕಾರ್ಯಗಳ್ (ತುರಂಗ. ೭೩-೬೦). [ ಸಂ. ದಾಯವಾದಿನ್ ]

**ದಾಯವಾದ್ಯ** (ನಾ). = ದಾಯವಾದಿ : ಸುಡು ತನ್ನ ಪ್ರಾಣವಂ ದಾಯವಾದ್ಯರ ಕೈಯ ಬಡಿಸಿಕೊಂಡಾ ಜೀವವಿದ್ದೇನು ಫಲ (ತುರಂಗ. ೩೪-೦೪). [ <ಸಂ. ದಾಯವಾದ್ಯ ]

**ದಾಯವಿಭಾಗ** (ನಾ). ೧. ಪಿತ್ರಾರ್ಜಿತವಾದ ಆಸ್ತಿಯಲ್ಲಿಯ ಭಾಗ ಅಥವಾ ಪಾಲು : ವ್ಯವಹಾರ – ಅಷ್ಟಾದಶ ವಿಭಾಗಗಳು, ಸಭಾ . . . ನಿಯೋಗ, ದಾಯವಿಭಾಗ, ಅನಧ್ಯಯನ, ವರ್ಣಸಂಕರನಿಂದಾ, ಆಪದ್ಧರ್ಮಗಳು (ಭಾರರ. ೬೨). ೨. ಬರಬೇಕಾದ ಸ್ವತ್ತಿನ ಪಾಲು ; ಹಂಚಿಕೆ : ಯಜ್ಞದ ದಾಯವಿಭಾಗದಲ್ಲಿ ಪ್ರವಿಷಾತ್ಮನ್ ಸ್ಮೃಸನ್ನು ವಂಚಿಸಿದ (ಬಧ್ಯತ್ರ. V, ೬೬೨೪). [ ದಾಯ₂ + ವಿಭಾಗ ]

**ದಾಯಾದ** (ನಾ). ೧. ಪಿತ್ರಾರ್ಜಿತವಾದ ಆಸ್ತಿಯಲ್ಲಿ ಭಾಗವನ್ನು ಪಡೆಯುವವನು; ಪಾಲುಗಾರ ; ಜ್ಞಾತಿ : ಎಮ್ಮ ದಾಯಾದನುಂ ಕೋಪದಿನೆನ್ನೊಳ್ ಕಾದಲೆಂದುಬ್ಬರಿಸಿದ ಸಮರಾಟೋಪದಿಂ ನಿಂದೊಡಂ ಮಾಣ್ಬುದು (ಅದಿಪು. ೧೪-೮೫) ; ಒಡವುಟ್ಟಿದ ಕೌಸ್ತುಭಮಿರ್ಪೆಡೆಗಂ ದಾಯಾದನಪ್ಪನೆನ್ನೆಗವೆಂದುದುಪತಿಕಳೆ ನೆಲಸಿತ್ತೆನೆ ಪೊಡೆಯಲರನ ಕೊರಲ ಪುಲಿಯುಗುರ್ ಕರಮೆಸೆಗುಂ (ಜಗವಿ. ೩-೪೪) ; ಧುರದೊಳ್ ತನ್ನಯ ವೀರರೊಳ್ ಪ್ರಜೆಗಳೊಳ್ ದಾಯಾದರೊಳ್ . . . ಸ್ತ್ರೀಯರೊಳ್ ದೊರೆಗಳ್ಗೆಳ್ಬು ಬೇಕೆಲ್ಲೆ (ಸೋಮೇಶ. ೫೭) ; ದಾಯಾದರಿಲ್ಲ ಮಾರ್ಮಲೆವ ಪರಮಂಡಲದ ನಾಯಕರ ಸುಳಿವಿಲ್ಲ ನಿನ್ನಾಳ್ಕೆಗೆಲ್ಲಿಯುಮು ಪಾಯಮುಮವನಿಯೊಳಿಲ್ಲ (ಕೃಮಿಥಾ. ೨-೫೪). ೨. ಆಸ್ತಿಯ ಉತ್ತರಾಧಿಕಾರಿ ; ಹಕ್ಕುದಾರ. ೩. ಮಗ ; ಪುತ್ರ. ೪. ಸತ್ತ ಬಂಧುಗಳಿಗೆ ಪಿಂಡಾದಿಗಳನ್ನು ನೀಡುವ ಕರ್ಮಗಳನ್ನು ಆಚರಿಸುವಲ್ಲಿ ಭಾಗಿಯಾಗ ತಕ್ಕ ಬಂಧುವರ್ಗದವನು.

ದಾಯಾದಮಲ್ಲ= ದಾಯಾದಿಗಳಿಗೆ ಭಯಂಕರನಾದವನು,— ಜಟ್ಟಿಯಂತಿರುವವನು; ಒಂದು ಬಿರುದು : ಶ್ರೀಯಾಂ ಕುರುಭೂಭೃದ್ಬಲತೋಯಧಿಯೊಳ್ ಕಡೆದು ಪಡೆದು ಭುಜಮಂದರದಿಂ ದಾಯಾದ ಮಲ್ಲನೆನಿಸಿದಹೇಯಂ ಭುಜಬಲವಿಭಾಸಿ ಸಾಹಸಭೀಮಂ (ಗದಾಯು. ೨-೧). [ ಸಂ. ]

**ದಾಯಾದವಿಷಯ** (ನಾ). ಪಿತ್ರಾರ್ಜಿತವಾದ ಆಸ್ತಿಯ ವಿಷಯ ಸೋದರರ ಮನ ಕದಡಿದವು ದಾಯಾದವಿಷಯದಲಿ (ಕುಮ್ಯಾಉ. ೨-೨೭). [ ದಾಯಾದ + ವಿಷಯ ]

**ದಾಯಾದಿ₁** (ನಾ). ೧. ಆಸ್ತಿಯಲ್ಲಿ ಪಾಲನ್ನು ಪಡೆಯುವವನು ; ಅಣ್ಣ ಅಥವಾ ತಮ್ಮ. ೨. ಅಣ್ಣ ತಮ್ಮಂದಿರ ಮಕ್ಕಳು ; ಚಿಕ್ಕಪ್ಪ ದೊಡ್ಡಪ್ಪನ ಮಕ್ಕಳು. ೩. ಒಂದೇ ಕುಟುಂಬಕ್ಕೆ ಸೇರಿದ ಪೀಳಿಗೆಯವರು; ವಂಶಜ: ಜ್ಞಾತಿ: ಇವರಿಗೆ ಕೌರವರೆಂಬ ದಾಯಾದಿಗಳಿದ್ದರು (ನೀತಿಚಿಂ. I, ೯); ದೇಶಪದ್ಧತಿಯಂತೆ ರಾಜ್ಯವು ಹಿರಿಯನಾಗಿದ್ದ ದಾಯಾದಿಯಾಗಿನ್ಸ್ಯೇಯನ ಕೈಸೇರಿತು (ಮಹಿಸ. ೮೭) ; ಹುಟ್ಟುತ್ತಾ ಅಣ್ಣ–ತಮ್ಮ, ಬೆಳೆದಮೇಲೆ ದಾಯಾದಿ (ಗಾದೆ) ; ಸವತಿ ಸಣ್ಣವಳಲ್ಲ, ದಾಯಾದಿ ಚಿಕ್ಕವನಲ್ಲ (ಗಾದೆ). [ <ಸಂ. ದಾಯಾದ್ಯ ]

**ದಾಯಾದಿ₂** (ನಾ). ೧. ಆಸ್ತಿಯ ಹಕ್ಕು ಉಳ್ಳವಳು. ೨. ಮಗಳು. [ ಸಂ. ದಾಯಾದೀ ]

**ದಾಯಾದಿತನ** (ನಾ). = ದಾಯಿಗತನ ೧ : ಈ ವಿಷಯದಲ್ಲಿ ನೀವು ದಾಯಾದಿತನವನ್ನು ತೋರತಕ್ಕದ್ದಲ್ಲ (ಛಾಮಂತಿ. ೭೩). [ ದಾಯಾದಿ₁ + – ತನ ]

**ದಾಯಾದ್ಯ** (ನಾ). ೧. ಅಣ್ಣ ತಮ್ಮಂದಿರಿಗೆ ಬರಬೇಕಾದ ಪಿತ್ರಾರ್ಜಿತವಾದ ಆಸ್ತಿ; ಆಸ್ತಿಯಲ್ಲಿ ಬರಬೇಕಾದ ಪಾಲು,–ಭಾಗ : ನಮಗೆ ಬರಬೇಕಾದ ದಾಯಾದ್ಯವೇನಂಟೋ, ಅದ ಹಂಚಿಕೊಡುವುದಿಂದು (ಭಾಷನಾ. ೫೧). ೨. ಚಿಕ್ಕಪ್ಪನ ಅಥವಾ ದೊಡ್ಡಪ್ಪನ ಮಗ; ಪಾಲುಗಾರಿಕೆ ಯುಳ್ಳವನು; ದಾಯಾದಿ: ಮಕ್ಕಳಿಲ್ಲದಿರ್ದ್ದಡೆ ಮಗಳು ಮಗಳ ಮಕ್ಕಳು ದಾಯಾದ್ಯರ ವಿಲ್ಲದೆ ನಿಸ್ಸನ್ತತಿಯಾದವ [ರೆ]ಲ್ಲವನರಸುಗಾ[ಣಕೆ] . . . ಕುಡ:ವುದು (ಕಇಅ. ೨೬–೩೯–೪೦ ; 1110); ಉದಯದಲಿದ್ದು ಪತ್ರೆ ಪುಷ್ಪಗಳಿಗೆ ಹೋಗುವ ಅಣ್ಣಗಳು ನೀವು ಕೇಳಿರೊ ನೀವು ಗಿಡದ ವೈರಿಗಳೋ ಗಿಡದ ದಾಯಾದ್ಯರೋ (ವಚಸಂ. ೮೪೦–೪೦ ಅಂಬಿಗ) ; ಹೆಱುವೆನಾ ಮುನ್ನೆಂದು ಗರ್ಭವ ಧರಿಸಿದೆನು . . . ವರುಷವೆರಡಾಯ್ತಿದಱ ಭಾರವ ಧರಿಸಿದೆನು ದಾಯಾದ್ಯರೊಳಗವತರಿಸಿದನು ಮಗನೆನುತ ಮುಖದಿರುಹಿದಳು ಗಾಂಧಾರಿ (ಕುಭಾ.ಅ. ೯–೪೪) ; ಹೆಂಡತಿಯು ತನ್ನ ದಾಯಾದ್ಯರ ಮನೆಯಲ್ಲಿ ಕಷ್ಟದಿಂದ ಜೀವನ ಸಾಗಿಸುತ್ತಿದ್ದಳು (ನಿಚ್ಕಾ.ಮ. ೯). ೩. ಬಲತಾಯಿಯ ಮಗ ; ಮಲ ಅಣ್ಣ ಅಥವಾ ಮಲ ತಮ್ಮ : "ಉಪಮಾತೆಯನೆ ಬಲದಾಯೆ ನಿಕ್ಕುಮಾಕೆಗೆ ಪುಟ್ಟಿದಾತ ದಾಯಾದ್ಯನು" (ಮುಂಗರಾ. ೯೨–೦೨). [ಸಂ.]

**ದಾಯಾಧಿಕಾರ** (ನಾ). ಪಿತ್ರಾರ್ಜಿತವಾದ ಆಸ್ತಿಗೆ ಸಂಬಂಧಪಟ್ಟ ಅಧಿಕಾರ ; ಆನುವಂಶಿಕ ಹಕ್ಕು : ಅವಳ ಗಂಡನಿಗೆ ಪ್ರಿಯವೆಂದು ತೋರಬಹುದಾದ ದಾಯಾಧಿಕಾರದ ಬಗೆಗೆ ತನ್ನ ನಿರ್ಧಾರವನ್ನು ಸೂಚಿಸಿದಾಗ, ಅವಳ ಮುಖದಲ್ಲಿ ಮಿಂಚಿದ ಕಾಂತಿಯನ್ನು ಸ್ಪಷ್ಟವಾಗಿ ಗಮನಿಸಿದನು (ಪುಸರು. ೪೭೪). [ ದಾಯ್ಯ₂ + ಅಧಿಕಾರ ]

**ದಾಯಾರ್ಧ** (ನಾ). ಆಸ್ತಿಯಲ್ಲಿ ಅರ್ಧ ಭಾಗ : ಗೃಹಯುಗ್ಮಂ ನೆಲಸಿದೋರ್ಡೊಂಡೆ ಗೃಹದೊಳ್ ದಾಯಾರ್ಧಮಂ . . . ಅಳ್ಗುಂ (ಜಾತತಿ. ೯–೯). [ ದಾಯ್ಯ₂ + ಅರ್ಧ ]

**ದಾಯಿ** 'ದಾದಿ' ನೋ.

**ದಾಯಿಗ** (ನಾ). ೧.=ದಾಯಾದಿ₁ ೨ : "ದಾಯಾದರೊಳ್ ದಾಯಗಂ" (ಕರ್ಣಾನಿ. ೩) ; ಅವರ ದಾಯಿಗಂ ಶಾಸ್ತ್ರಂಗಳಂ ಬಲ್ಲೊಂಗಂ ಮಂತ್ರಿಪದವಿಯುಂ ಕೊಟ್ಟುದಂ ಕೇಳ್ದು (ವಡ್ಡಾರಾ. ೨–೨೫) ; ಕಾಡೊಳ್ ಬೇಡರಂತೆ ತೊಟಲ್ವ ದಾಯಿಗರ ಕಂದಿ ಕುಂದಿದ ಮೊಗಂಗಳಂ ನೋಡುವುದುಂ (ಶಂಪಭಾ. ೭–೩೨ ಪ); ಬಲ್ಮೊಗದಿಂದಿರ್ದು ಪದಾರ್ತ್ಥಮಂ ಬಿಸುಟು ತಮುಳ್ಳಾರ್ತ್ಥಮಂ ಬಯ್ತು ಬಂದಿಗೆ ಕಳ್ಳಂಗರಸಿಂಗೆ ದಾಯಿಗರಿಗಂ ಕಟ್ಟೋವತಂ ಮುಟ್ಟ ಲೋಭಿಗಳೇಂ ಪೋಲ್ವರೆ . . . ರಾಮನಂ (ಕಇಅ. ೭೬–೦೩–೨೭ ; 1088) ; ಕಾಂಚನಮಪ್ಪೊಡೆ ದಾಯಿಗರಿಂದನುನಯದಿಂ ಠಕ್ಕರಿಂದಮಱೆವುದು ಬೇಗಂ (ಧರ್ಮಾಮೃ. ೭–೦೪೫) ; ಜನಪನಾ ದಾಯಿಗನ ಮೆಱುಜಾಜಿನಲಿ ಗೆಲಿದನು (ತೊರರಾ. ೩–೨–೫೩) ; ಕಾದವರುಂಟು ದಾಯಿಗರ್ ಪಗೆಗಳಗ್ರಜಾನುಜರ್ . . . ಕಂಡೆನಿಲ್ಲ ಕೇಳ್ದೆನಿಲ್ಲೀ ತೆಱನ ದೊರೆವೆತ್ತ ಸೆಣಸಂ (ರಾಮಾಶ್ವ. ೧೬೨–೨). ೨. ಮಗ : "ಪುತ್ರನಲ್ಲಿ ದಾಯಗನೆಂಬುದು" (ಮುಂಗರಾ. ೧೪೨–೦೮) ೩. ಮಲತಮ್ಮ ಅಥವಾ ಮಲಅಣ್ಣ : (ಕ). ೪. (ಅಲಂ) ಪುಣ್ಯದಲ್ಲಿ ಪಾಲುಗಾರ; ಪುಣ್ಯಸಾಧಕ ; ಪುಣ್ಯಶಾಲಿ: ಬೀಯ ಮಾಡಿಯ ಲಿಂಗದಲಿ ನಿಜಕಾಯ ನಿಲುವೊಡೆ ನಿತ್ಯರಪ್ಪೊಡೆ ದಾಯಿಗರು ಲಾಲಿಸುವುದೀ ಪ್ರಭುಲಿಂಗ ಲೀಲೆಯನು (ಪ್ರಭುಲೀ. ೦–೦೦).

**ದಾಯಿಗದಲ್ಲಳ** = (ಶತ್ರುಗಳಾದ) ದಾಯಾದಿಗಳಿಗೆ ಭಯವನ್ನುಂಟುಮಾಡುವವನು : ಒಂದು ಬಿರುದು : ಸಕಳಗುಣಗಣೋತ್ತುಂಗ ಮಾವನ ಸಿಂಗ ಜಿತವೈರಿಸಂಕುಳ ದಾಯಿಗದಲ್ಲಳಂ ಶ್ರೀಮತ್ ಕಲಿಯಮ್ಮರಸಂ (ಎಇ. XIX, ೧೪೦–೨೧ ; 1045). ದಾಯಿಗ ಮುರಾರಿ = ಒಂದು ಬಿರುದು : ಗೋತ್ರಪವಿತ್ರಂ ಪರಾಂಗನಾಪುತ್ರಂ ದಾಯಿಗಮುರಾರಿ ವಿನಯೋಪಕಾರಿ (ಎಕ. XII, ತಿಪಟೂ. ೧೦೪–೦೬ ; 1130). [ ದಾಯ್ಯ₂ + – ಇಗ ]

**ದಾಯಿಗತನ** (ನಾ). ೧. ದಾಯಾದಿಯಾಗಿರುವಿಕೆ : (ಕ). ೨. ದಾಯಾದಿಯ ಸ್ವಭಾವ ; ವೈರ ; ದ್ವೇಷ : ಕಡಂಗಿ ಮಿಗೆ ತಳ್ತುಱಿಯಲ್ಕೆಂದಾನುರಂ ಬಿದಿರ್ದರಿದೇಂ ದಾಯಿಗತನಮನೆಮಗವರ್ ತೋಱಿದಪರ್ (ಶಂಪಭಾ. ೧೦–೩) ; ನೀಮೆಲ್ಲಂ ದಾಯಿಗತನಮನಿಲ್ಲಿ ತೋಱಲ್ವಗದು (ಗದಾಯು. ೭–೬೨); ಪೂಣ್ದೆನ್ನೊಳಂ ದಾಯಿಗತನಮನಿವಂ ತೋರ್ಕೆ (ಶಂರಾಮಾ. ೦೨–೭೩). [ ದಾಯಿಗ + – ತನ ]

**ದಾಯಿತ** (ನಾ). ಆತ್ಮೀಯ ; ಪ್ರೀತಿಪಾತ್ರನಾದವನು ; ಇಷ್ಟಮಿತ್ರ (?) : ದಾಯಿತರಿಂ ಪೆಸರ್ವೆತ್ತ ಪಸಾಯಿತರಿಂ ಸುಭಟ ಚೇಟಕ ಪ್ರಕಟಮಹಾನಾಯಕರಿಂ ನಿರುಪಮಂ ಶೋಭಾಯತಮಾಯ್ತೋಲಗಂ (ಕುಸುಮಾ. ೩–೪೮). 'ದಾಯಿದ' ಪಠಾ. [ ? ]

**ದಾಯಿತ್ವ** (ನಾ). ೧. ಕೊಡಬೇಕಾದುದು. ೨. ಸಾಲ–ಸೋಲ ಮೊದಲಾದ ಹಣಕಾಸಿನ ಜವಾಬ್ದಾರಿ,–ಬಾಧ್ಯತೆ : ಭಾರತ ಡೊಮಿನಿಯನ್ನಿನ ಎಲ್ಲ ಅಧಿಕಾರಗಳೂ, ದಾಯಿತ್ವಗಳೂ, ಆಭಾರಗಳೂ . . . ಕ್ರಮವಾಗಿ ಭಾರತ ಸರ್ಕಾರದ ಮತ್ತು ಆಯಾ ರಾಜ್ಯಪಾಲಪ್ರಾಂತಕ್ಕೆ ಸಂಬಂಧಿಯಾದ ರಾಜ್ಯದ ಅಧಿಕಾರಗಳೂ, ದಾಯಿತ್ವಗಳೂ, ಆಭಾರಗಳೂ ಆಗಿರತಕ್ಕದು (ಭಾರಾಸ. ೦೬೯). ೩. ಕೊಡುವಿಕೆ ; ನೀಡುವಿಕೆ : ಆ ಸಂಪತ್ತನ್ನು ದೇಶದೇಶಾಂತರಗಳ ಎಲ್ಲರಿಗೂ ದಾನಮಾಡಬೇಕೆಂಬ ಒಮ್ಮೊನೆಯ ದಾಯಿತ್ವಜ್ಞಾನವನ್ನು ಅವರು ಪಡೆದಿದ್ದುದು (ಸಿರಿಂಧ. I. ೩೩೭). [ ಸಂ. ]

**ದಾಯಿದ** (ನಾ). = ದಾಯಿತ (?) : ಚಕ್ರವರ್ತಿ ಸ್ವಕೀಯ ರಸನೆಗತೀವ ಸ್ವಾದುವಾದ ವಸ್ತುಗಳಂ ಕುಮಾರಾವರೋಧವಧೂವಿಳಾಸಿವರ್ಗಕಂ ದಾಯಿದ ಪಸಾಯಿತರ್ಗಂ ಕಳಿಪುತ್ತುಂ (ಶಾಂತೀಶ್ವ. ೦೫–೭೦ ಪ). [ <ದಾಯಾದ್ಯ ? ]

**ದಾಯಿದೊಡ** (?). (ನಾ). ಒಂದು ಬಗೆಯ ತೆರಿಗೆ (?) : ಶ್ರೀಮನುಮಹಾ ಮಂಡಳೇಸ್ವರಂ ಬೋ(ಂ)ಮಿದೇವರಸರ್ಗ್ಗೆ ಉರಗುರಕೆ ಕೊಟ್ಟು ದಾಯಿದೊಡ (?) ಸರ್ವ್ವ ನಮಸ್ಯಂ ಮಾಡಿ ಏರಿಂಗಲ್ಲದ ದಕ್ಷಿಣ ದಿಶಾಭಾ[ಗ]ದಲ್ಲಿ ತಾ ಪ್ರತಿಷ್ಠೆ ಮಾಡದ ಹಯಿಮೇಶ್ವರದೇ[ವ]ರಿಗೆ ಬಿಟ್ಟ ಕೆಯಿ ಮತ್ತರು ೬ (ಸೌಇಇ. XX, ೦೬೯–೨೦ ; 1208). [ ? ]

**ದಾರ₁** (ನಾ). ನೂಲು ; ಎಳೆ ; ಸೂತ್ರ : ಮುನ್ನಮೆಂಬ ಬಟೆಕೆಂಬ ಜನೋಕ್ತಿಯೊಳಾಯ್ತು ಸೂಚಿಶಕ್ತಿಗೆ ನೃಪರಾನೆ ದಾರದವೊಲಾದುವು ರಾಜಕುಮಾರರಾನೆಗಳ್ (ಗದಾಯು. ೦–೦೬) : ಸೂಜಿಯ ಬಟಿಯ ದಾರದಂತೆ (ಧರ್ಮಾಮೃ. ೦೪–೧೦೪) ; ಬಿಡುಮುತ್ತು ಘನೋಪಳದೊಂದು ರೂಪದಿಂ ಸುರಿಯಲನಂತರಂ ಬಟಿಯ ದಾರವೆಬಲ್ಲಪುದೆಂಬ ಚೆಲ್ವನಾಪರಿಸಿದುವು . . . ವಾರಿಧಾರೆಗಳ್ (ಆಗಪಿ. ೪–೩೧) ; ದಾರ ಉರಗನ ಪಡೆವಣಿಯ ಗೊಂಡೆಯದ ಕಿಗ್ಗಟ್ಟಿಸೆಯಿ ಪಶುಪತಿಯ (ಕುಪ್ರಾಕ. ೭–೧೨); ಒಟ್ಟು ಬಟ್ಟೆಮಾಡುವ ಕೆಲಸವನ್ನು ತೆಗೆದುಕೊಂಡರೆ ದಾರದ ಎಳೆ ತೆಗೆಯುವುದೇ ಒಂದು ಭಾಗ (ಹಹಿತ್ರ. ೮) ; ಎಲ್ಲಾ ನಾರುಗಳಿಂದ ಎಳೆಗಳನ್ನು ತೆಗೆದು ದಾರಗಳನ್ನಾಗಿ ಹೊಸೆದು, ದಾರಗಳಿಂದ ಬಟ್ಟೆಯನ್ನು ತಯಾರಿಸಲಾಗುತ್ತದೆ (ಗೃಹವಿ. ೬೨).

[ ?./ತಮಿ. ತಾರ್, ತಾರ; ತುಳು. ತೆಲು.ದಾರ. / ಪ್ರಾ. ದಾರ = ಕಟೀಸೂತ್ರ. / ಸಂ. ದೋರ ]

**ದಾರ್₁**, ದರ್₁, ದೋರ್₁ (ನಾ). ಬಾಗಿಲು; ದ್ವಾರ: ದರ ದಾರ ಬಾರ ಮಕ್ಕುಂ ವರದಾ ದ್ವಾರಕ್ಕೆ ಪೂರ್ವದೊಳ್ ತದ್ಭವಮಾಗಿರೆ (ಶಮದ. ೨೯೭). ದರ್₁ : ಮೇಲಿನ 'ಶಬ್ದ' ಪ್ರಯೋಗವನ್ನು ನೋಡಿ. ದೋರ್₁] ಬಾದು ಕಾಷ್ಠಾಂಗಾರೆ ದೋರದಿ ಹೊಂದಿಸಿಹ ಹೊಂಗಂಟೆಯನು ಸಾನಂದ ದಲಿ ದನಿಗೆಯ್ದ (ಜೀವಂಚ. ೩-೧೪). [ <ಪ್ರಾ. ದಾರ. / ಸಂ. ದ್ವಾರ ]

**ದಾರ್₂** (ನಾ). ೧. ಬಿರುಕು; ಸೀಳು; ತೂತು; ರಂಧ್ರ. ೨. ಉತ್ತ ಭೂಮಿ. ೩. ಹೆಂಡತಿ; ಪತ್ನಿ; ಭಾರ್ಯೆ: "ದಾರಾಃ, ಕ್ಷೇತ್ರಂ, ಕಳತ್ರಂ . . . ಗೃಹಿಣೀ, ಗೃಹಾಃ – ಈ ೧೩ ಹೆಂಡತಿ" (ಹಲಾಯು. ೬೦-೩೪೦); "ದಾರಂ ಕಳತ್ರಂ . . . ಪತ್ನಿ ಮಹಿಳೆಯೆನೆ ಹೆಂಡತಿಗೆ ನಾಮಮಕ್ಕುಂ" (ಮಂಗರಾ. ೯೦-೬); ಪ್ರಭುಗಳ ಆಯುರ್ದಾಯ ದಾರಾ ಪುತ್ರಾದಿ ಕ್ಷೇತ್ರಗಳನ್ನು ಅವರು ಸೂಕ್ಷ್ಮವಾಗಿ ಗುಣಿಸಿ ನೋಡಿರಲಿಲ್ಲ (ಹಂಶರಾ. ೯೫). 'ದಾರಪರಿಗ್ರಹ' ಪರಾ. [ ಸಂ. ]

**-ದಾರ್** (ಪ್ರ). ಹೊಂದಿರುವವನು; ಪಡೆದಿರುವವನು ಎಂಬ ಅರ್ಥದಲ್ಲಿ ಸೇರುವ ಒಂದು ತದ್ಧಿತಪ್ರತ್ಯಯ. 'ಅಬ್ಕಾರಿದಾರ', 'ಅಮಲ್ದಾರ', 'ಆಡಳಿತದಾರ' ಪರಾ. [ ←ಪಾರ. ಹಿಂ. ಮರಾ. ದಾರ್ ]

**ದಾರಂದ** 'ದಾರವಂದ' ನೋ.

**ದಾರಕ** (ನಾ). ೧. ಬಾಲಕ; ಗಂಡುಮಗು; ಕುಮಾರ; ಹುಡುಗ; ಮಗ: ಸುಂದರ ದಾರ ದಾರಕೋದಾರ ವಿಮೋಹದೊಳ್ ತೊಡರ್ದು ದಾರುಣದುಃಖಮನೆಯ್ದಿದಿರ್ಕುಮೋ (ಆದಿಪು. ೨-೫೩); ಕಾಳಿಕನೆಂಬ ಧೂಮಕೇತುಂಗೆ ದಾರಕನಾದಂ ಕಡೆಯೊಳ್ (ಶಾಂತಿಪು. ೬-೩೭); ದಾರಕನಂ ಘನತೇಜಸ್ಸಾರನನಾವೆಂದು ನಲ್ಮೆಯಿಂದೆತ್ತುವೆನೋ (ಪುಷ್ಪಪು. ೩-೯೩); ನೀರೆಯುಮುರ್ಕಿನಿನಕ್ಷತೆಯ ದಾರಕನ ಮೇಲೆ ತಳಿದು ಹರಸಿದ ರಾಮಾರವರ್ಷ ಬದುಕೆಂದು (ಜ್ಞಾನಚ. ೩-೧೫೫); ಆಲಯದಿ ದಾರಕರ ಸಂಬಂಧ ಬಹುಳಂ (ವಂಶರಾ. ೨-೧೦-೫೦). ೨. ತರುಣ; ಯುವಕ: "ದಾರಕಃ, ತರುಣಃ, ಯುವಾ – ಈ ೩ ಜವ್ವನಿಗಂ" (ಹಲಾಯು. ೮೩-೩೯೯). [ ಸಂ. ]

**ದಾರಕಮಲ್ಲ** (ನಾ). ಬಾಲಕರಲ್ಲಿ ಗಟ್ಟಿಗ; ಬಲಿಷ್ಠನಾದ ಹುಡುಗ: ದಾರಕಮಲ್ಲನೆಲ್ಲಿದನಮಾನುಷಖೇಳನದಲ್ಲಿದಂ ವ್ರಜಾಂಭೋರುಹಮಿತ್ರನೆಲ್ಲಿ ದನನಂತಸಹಾಯನದೆಲ್ಲಿದಂ . . . ಎಲ್ಲಿದನಬ್ಜಲೋಚನಂ (ಜಗವಿ. ೩-೯೦). [ ದಾರಕ + ಮಲ್ಲ ]

**ದಾರಗಟ್ಟು** (ನಾ). ದಾರದಿಂದ ಕಟ್ಟಿರುವಂತಹುದು: ದಡದಡನೆ ಹೋಗಿ, ನಂಜರಾಜಯ್ಯನ ಹಸ್ತಗಳಿಂದ ಆ ಪುಟಿಕೆಯನ್ನೆಳೆದೀಯಾಸಿ ಕೊಂಡು, ತನ್ನ ಕರವಾಳಿಂದ ಮುದ್ರೆಯನ್ನು ದಾರಗಟ್ಟನ್ನು ಗವಸಣಿಕೆ ಯನ್ನು ಅರಿದು ಬಿಸುಟ್ಟು (ಮುಂಶ್ರಕ. ೧೬-೬). [ ದಾರ್₁ + ಕಟ್ಟು₂ ]

**ದಾರಗೊಂಡೆ** (ನಾ). ನೂಲಿನಿಂದ ಮಾಡಿದ ಕುಚ್ಚು: (ಕ). [ ದಾರ್₁ + ಗೊಂಡೆ (<ಕೊಂಡೆ₁) ]

**ದಾರಣ** (ನಾ). ೧. ಒಡೆಯುವಿಕೆ; ಹರಿಯುವಿಕೆ; ವಿಭಜಿಸುವಿಕೆ. ೨. ತೆರೆಯುವಿಕೆ; ಹೊರಗೆಡಹುವಿಕೆ. 'ಅವದಾರಣ' ಪರಾ. [ಸಂ.]

**ದಾರಣೆ** 'ಧಾರಣೆ₂' ನೋ.

**ದಾರಣೆವಾಸಿ** 'ಧಾರಣೆವಾಸಿ' ನೋ.

**ದಾರದ** (ನಾ). ಒಂದು ವಿಧವಾದ ವಿಷ; ಪಾದರಸ; ಇಂಗಲೀಕ; P ಕಾಕೋಲ, ಕಾಲಕೂಟ, ಹಲಾಹಲ, ಸೌರಾಷ್ಟ್ರಿಕ, ಶೌಕ್ಲಿಕೇಯ, ಬ್ರಹ್ಮಪುತ್ರ, ಪ್ರದೀಪನ, ದಾರದ ಮತ್ತು ವತ್ಸನಾಭ ಎಂಬುವು ವಿಷಭೇದಗಳು: "ಬ್ರಹ್ಮಪುತ್ರಃ, ಶೌ(ಕ್ಲಿ)ಲ್ಕಿಕೇಯಃ, ದಾರದಃ . . . ತೀಕ್ಷ್ಣಃ, ವಿಷಂ – ಈ ೯ ವಿಷಂ" (ಹಲಾಯು. ೦೦೬-೩೪); "ದಾರದ – ನಂಜು, ವಿಷ" (ಗಂಗಾಮು. ೧೬೩). [ ಸಂ. ]

**ದಾರಪರಿಗ್ರಹ** (ನಾ). ಮದುವೆಯಾಗುವುದು: ನವಕುಮಾರನು ವೈಗರಾದಿಂದ ಪುನಃ ದಾರಪರಿಗ್ರಹ ಮಾಡಲಿಲ್ಲ (ಕಪಾಕುಂ. ೩೪); ದಾರಪರಿಗ್ರಹಕ್ಕೆ ವಿಮುಖರಾದರೂ ತಮ್ಮನ ಮದುವೆಗಾಗಿ ಪ್ರಯಾಸಪಟ್ಟರು (ಠೀಕ್ಷ್ಮಕ. ೩೭). [ ದಾರ್₂ + ಪರಿಗ್ರಹ ]

**ದಾರವ** (ಗು). ಮರದ; ಮರದಿಂದ ಮಾಡಿದ. [ ಸಂ. ]

**ದಾರವಂದ**, ದರವಂದ, ದಾರಂದ (ನಾ). ೧. ಬಾಗಿಲ ಚೌಕಟ್ಟು; ಬಾಗಿಲುವಾಡ: ಅಗಲಕ್ಕೆವರ್ಗಡಿ ನೀಳಮಾಗೆ ತರುಗಳ್ ಚೀಟ್ಪಿಲ್ಲ ದೊಂದಾಗೆ ಮಾಡುಗೆ ನೇರ್ಪಟ್ಟಿರೆ ದಾರವಂದಮನದರ್ಕಾದೋಳೆಯಂ ಮಾಟಕ್ಕೆ ವಾ ಜಿ ಗ ಜಾ ರೂ ಢ ಮ ನ ಸ್ಕ ಮಂ ನಿಜಗೃಹದ್ವಾರಾಂತರೋದ್ದೇಶಮಂ ಪುಗುವಾಗಲ್ (ಮೋಕ್ಷೋಪ. ೩-೩೨); ಒಂಬತ್ತು ಬಾಗಿಲಿಗೆ ಕದವನಿಕ್ಕಿ ಒಂದು ಬಾಗಿಲ ಅಗುಳಿ ದಾರವಂದವನಿಕ್ಕಿ ಬಲಿಯಲು ತಿರುಗುವುದಕ್ಕೆ ತಾವು ಕಾಣದೆ (ಶಿಂಗವ. ೪. ೭೩-೭೪); ಮಣಿದಾರವಂದವಂ ಒಡಿದಣಮಿಕ್ಕಿಸುತ್ತುಮೆಲ್ಲರ ಸುಮ್ಮನೆ ಯಮ್ಮಗ್ಗಣೆಯನ್ನುಂ ದಾರನೆನು ತ್ತೆಣಿಸುತ್ತೆಸದಿರ್ದಳ್ (ಉದ್ಭಟ. ೦೦-೫೫); ಸುಪುತ್ರ ಮಾಕಯ್ಯನು ಮಾಡಿಸಿದ ದೇವರ ಪೀಠ ಜಾಲಾಂಧರ ದಾರವಂದ (ಎಕ. XII, ತಿಕ್ನಾ. ೫೫-೬; 1212 ?) ವಿಳಸಿತ ಮಹಾಮರಕತದ ದಾರವಂದವಮಂ ತೊಳಪ ವೈಡೂರ್ಯಗಳುಂ ನಾಡೆ ಕಂಗೊಳಿಸೆ ಮೆಚಿದುದು (ಸಿದ್ಧೇಪು. ೦-೩೦). ೨. ಸಾಗವಂದಿಗೆ: ಗೋಮೇಧಿಕದ ದಾರವಂದದಿಂ, ಪವಳದ ಭಿತ್ತಿಯಿಂ, ಮರಕತದೊಂದು ಕಳಸದಿಂ ತಾರಗೆವಟ್ಟ ಮುಟ್ಟ ನಿಗುರ್ದ ಸ್ಫಟಿಕನಾಗರಂ ಬೋಲ್ . . . ಕಣ್ಗೆಡ್ಡಮಾಗಿ ರಂಜಿಕುಂ (ಕಾಮಶ. ೫೯-೨೨); ಚಪ್ಪಲನ್ನು ಸೂರಿಗೆ ಸಿಕ್ಕಿಸಿ ಅಥವಾ ಬಾಗಿಲ ದಾರವಂದದ ಮೇಲೆ ಇರಿಸಬಾರದು (ಬಹ್ಮಾ. ೧೪). **ದರವಂದ**: ೧. ಕೊರುವರ್ ಯಿಪತ್ತು ಕಂಭ(ಂ)ಕ್ಕೆ ಎರಡು ದರವಂದಕ್ಕಂ ಕೊಟ್ಟ ಗದ್ಯಾಣ ಮೂವತ್ತು (ಸೌಇಇ. XV, ೩೫೩-೬; 1076). **ದಾರಂದ**: ೧. ಬಾಗಿಲಿನ ದಾರಂದಗಳು ಗಡುಸು, ಅದರಲ್ಲಿ ಶಂಖ, ಚಕ್ರ, ಗದಾಪದ್ಮಗಳೂ, ಗಿಳಿ, ನವಿಲು, ಇತ್ಯಾದಿ ಬಡಗಿಯ ಕಲಾಕೌಶಲ್ಯಗಳೂ ಇವೆ (ಕೃಹಿಶಾ. ೦೯); ಬಾಗಿಲಿನ ದಾರಂದ ಕ್ಕೊರಗಿ ಕೆಲಸದಾಳು ಸೋಮ್ನಾ ನಿಂತಿದ್ದ (ವಾತ್ಸಲ್ಯ. ೦೩); ಕೋಣೆಯ ಬಾಗಿಲಿನ ದಾರಂದಕ್ಕೊರಗಿ ಸುಮಿತ್ರ ನಿಂತಿದ್ದಳು (ಅನುರ. ೩೫); ಮನೆ ಬಾಗಿಲಿನ ದಾರಂದ ಹಣಿಗೆ ಬಡಿದರೂ ಉಂಟು (ಮರಮು. ೦೦೪). [ <ಸಂ. ದ್ವಾರಬಂಧ ]

**ದಾರವಟ್ಟ**, ದ್ವಾರವಟ್ಟ (ನಾ). ೧. ಹೆಬ್ಬಾಗಿಲು; ಗೋಪುರ; ಪುರದ್ವಾರ: "ಗೋಪುರಮಾ ಪುರದ್ವಾರಮೆನೆ ದಾರವಟ್ಟ [ಪಾಠಾಂ. ದಾರವಟ]ಮಕ್ಕು" (ಮಂಗರಾ. ೫೭-೪); ಪ್ರಣವ ಪಂಚಾಕ್ಷರಿಯಗುಳಿ ದಾರವಟ್ಟ[ಪಾಠಾಂ. ಗುಡಿಯ ದ್ವಾರವಾಟ, ದ್ವಾರವಟ್ಟ]ವೊಪ್ಪುತ್ತಿರೆ (ಹನ್ನವ. ೪. ೦೯೯-೩೪೦); ಮರದ ಕೊಂಬಿನೊಳ್ ಬರೆದು ಕಟ್ಟಿದ ಕಪ್ಪಡಮುಮಿರ್ದಪ್ಪುದೆಂದು ಚಿತ್ರವನಪಾಳಕಂ ಕ ಪಾ ಳ ಕು ೦ ಡ ಳಂ ದಾರವಟ್ಟಕ್ಕೆ ಬಂದು (ಅರ್ಜನೀ. ೫-೪೦ ವ); ವಕ್ತ್ರಲೋಪಕ್ಕೆ ಈಶ್ವರ – ಈಸರ . . . ದ್ವಾರವಟ್ಟ – ದಾರವಟ್ಟ (ಶಮದ. ೨೮೦ ಪ್ರಯೋ); ವರುಣಸೂನು ಜಯಂತ ನಳಕೂಬರರು ಸಮಯವನೊಮ್ಮೆ ಕಾಣದೆ ಮರುಷ ವೋಲೈಸುವರು ಸೌಧದ ದಾ ರ ವ ಟ್ಟ ದ ಲಿ (ಕುಮಾ.ಅ. ೮-೯); ಕಳಿದು ಹೊಕ್ಕರು ಹೋಳಿವ ವಜ್ರೋಪಲ ಕವಾಟದ ದಾರವಟ್ಟಂಗಳನು (ವಿಭಾಗ. ೩-೩-೭). ೨. ಹೊಸ್ತಿಲು: (ಕ). ೩. ಕೈಸಾಲೆ; ಮೊಗಸಾಲೆ: "ಪ್ರಘಾಣಃ, ಪ್ರಘೇಣಃ, ಅಲಿಂದಃ–ಈ ೩ ಹನ್ನೆರಡು ಕಂಬದ ಕಡೆಯ ದಾರವಟ್ಟದ ಪೆಸಳು" (ನಾಚಿರಾ. ೦೦೪); ಮೂಡಣ ತಟ್ಟೆಯ ನಡುವೆ ಒಂದು ಕಂಭವ ನೆಟ್ಟು ಎಂಬತ್ತುನಾಲ್ಕು ಲಕ್ಷ ದಾರವಟ್ಟವ ಕಟ್ಟಿ ಅದರ ಮೇಲೆ ನಿಂದಾಡುತ್ತಿರಲಾಗಿ ನಡುವಣ ಕಂಭ ಮುರಿದು ಬೀಳುತ್ತಿರಲಾಗಿ

(ಪೋಲೀಸ್‌ಮೂ. ೨೫೭-೮೦೮). **ದ್ವಾರವಟ್ಟ**: ಮೇಲಿನ ಚನ್ನವ. ೯.೧೪೯-೩೪೦ ಪ್ರಯೋಗದ ಪಾಠಾಂತರವನ್ನು ನೋಡಿ ; ಕನಕಮಯ ಚಿತ್ರಗೆಲಸದ ದ್ವಾರವಟ್ಟಮಂ ಮಿನುಗುತಿಹ ರತ್ನಕೀಲಿತ ಕಳಶದುಪ್ಪರಿಗೆ ಮನೆ ಮನೋಹರ ವಿಶಾಲಂಬಡೆದು ರಾಜಿಸಲು (ಗುರುಚಾ. ೮-೪೩) ; ಶಶಿವದನೆ ಯೋರ್ವಳೊಡಲಿತ್ತು ಚೊನ್ನಕೆ ದ್ವಾರವಟ್ಟದೊಳು ನಿಂದಿರ್ದಳು (ರಾಘಾಶ. ೭-೪೫) ; ದ್ವಾರವಟ್ಟದ ಮುಂದೆ ನಿಂತ ವರಪ್ರಭು ಸಿದ್ಧರಾಮರ ಬರವ ಕಂಡು (ಸಿದ್ಧಪು. ೨೮-೮೪) ; ಆ ಪುರದ ದ್ವಾರವಟ್ಟದ ಮುಂದೆ ಶಾಸನ ದೊಳು ಕಲ್ಯಾಣದ ಮಹಾತ್ಮೆಯನು . . . ಬರೆದಿಡಲು (ಚೆನ್ನಸಂ. ೮೩-೧೭). [ <ಸಂ. ದ್ವಾರವಟ್ಟ./ಮರಾ. ದಾರವಟಾ ]

**ದಾರವಟ್ಟಗ** (ನಾ). ಬಾಗಿಲನ್ನು ಕಾಯುವವನು ; ದ್ವಾರಪಾಲಕ: ಪಂಡಿತ ವಟ್ಟೈಸಿ ಪುಗುವುದುಂ ದಾರವಟ್ಟಗಂ ದಟ್ಟಿಸಿ ಕೊರಳಂ ಪಿಡಿದು ನೂಂಕೆ (ಪುಣ್ಯಾಸ್ರ. ೫-೨೮ ವ). [ ದಾರವಟ್ಟ + -ಗ$_3$ ]

**ದಾರವಟ್ಟಲು** 'ದಾರೆವಟ್ಟಲ್' ನೋ.

**ದಾರವಾದ** (ನಾ). ಬಾಗಿಲು ; ದ್ವಾರ: ಎಲುವಿನ ತೊಲೆಗಳು . . . ಹುಳುವಿನ ಜೋಣಿಗಳು ಜಂತಿನ ಬಣದಿಗಳು ಇಂತಪ್ಪ ಗೃಹಕ್ಕೆ ಎಂಟು ರವಕ್ಕಿಗಳು ಬಾಯಿ ಎಂಬುದೇ ಒಂದು ದೊಡ್ಡ ದಾರವಾಜವು (ವಚಸಾ. I, ೨೫೧-೨೮). [ ←ಪಾರ. ದರ್‌ವಾಜಹ್ ; ಹಿಂ. ಮರಾ. ದರ್‌ವಾಜಾ ]

**ದಾರಸಂಗ್ರಹ** (ನಾ).=ದಾರಪರಿಗ್ರಹ : ಅಂತಾಗಿ ದಾರಸಂಗ್ರಹ ಪರ್ಣ ಶಾಲೆಗಳನಿಂತೆಲ್ಲದಚಿರಕಾಲದೊಳಳಿವ ಕಾಯಮಿದಕೆಂತಿರ್ದೊಡೇನೆಂದು ತಲೆಗೆ ತಱಗೆಲೆವಿಡಿದುತಾಂ ಪೊತ್ತುಗಳೆವೆನು (ಕೃಮಿಥಾ. ೩೨-೩೦).

[ ದಾರ$_3$ + ಸಂಗ್ರಹ ]

**ದಾರಾಢ್ಯ** (ನಾ). ಗಡುಸಂತನ; ಗಟ್ಟಿತನ: ತನ್ನ ಅಣ್ಣನಿಗಿರುವ ದಾರಾಢ್ಯ ದಲ್ಲಿ ಅರ್ಧ ಪಾಲಷ್ಟೂ ಇವನಿಗೆ ಇಲ್ಲ (ರೂಢಿ). [ <ಸಂ. ದಾರ್ಢ್ಯ ]

**ದಾರಿ** (ನಾ). ೧. ಹಾದಿ ; ಬಟ್ಟೆ; ಮಾರ್ಗ: ನರಕದ ದಾರಿ ಮಹಾನಿಷ್ಠುರ ದುಃಖದ ಬಿತ್ತು ಪುಣ್ಯದ ಕ್ಷಯದುಳಿಪಿಂಗಿರಲೆಡೆ ಕೊಲೆಯ ತವರ್ಮನೆ (ಧರ್ಮಾಮೃ. ೧೨-೨೩೩ ಅಧಿಟಿ); ಆನೆಯೂ ಆ ದಾರಿಯಲ್ಲಿ ಹೋಯಿತ್ತೆಂದಡೆ ಆಡೂ ಆ ದಾರಿಯಲ್ಲಿ ಹೋಯಿತ್ತೆನ್ನಬಹುದೆ (ಬಸವ. ೩೨೮) ; ಹೋಗದ ಊರಿನ ಬಾರದ ದಾರಿಯ ಕಂಡು ಸುಖಿಯಾದೆನಯ್ಯ (ಅದಚ. ೪೧-೦೦೩); ದಾರಿ ವ್ಯಕ್ತವ ನುಂಗಿ ನಗುತ್ತಿದ್ದಿತ್ತು (ಅಚಚಂ. ೨೬-೧೦೧) ; ದಾರಿ ಯೊಳಿಡುಕುಱೊಳೋಣಿಯೊಳಾರವೆಗಳ ತಳದೊಳಂಗಡಿಗಳೊಳ್ . . . ಬೇರೂಱಿತು ಜಾರರನುಭವಂ ಕಲ್ತಲೆಯೊಳ್ (ಗಿರಿಕ. ೪-೮೩) ; ಆ ಬ್ರಹ್ಮ ಪುರಿಯ ಪಡುವಲು ದಾರಿಯಿಂ (ಎಕ. XIX, ೨೫-೩೩ ; 1265); ಸಾರತರ ಸುಕೃತವನು ಸಂಚಿಸಿ ಧೀರರೈದುವ ಸತ್ಯಲೋಕದ ದಾರಿಯಿಂಬಂದದಲಿ ಗಂಗೆಯು ಧಾರೆ ವೆಂಚಿದಿಹುದು (ಕುವ್ಯಾಅ. ೭-೩೩) ; ದಾರಿ ಯಾವುದಯ್ಯ ವೈಕುಂಠಕ್ಕೆ ಹಾದಿ ತೋಱಿಸಯ್ಯ (ಪುರಂದ. ೨-೧೩೭ ಪಲ್ಲವಿ) ; ಊರಿಂಗೆ ದಾರಿಯನು ಯಾರು ತೋಱಿದರೇನು (ಸರ್ವಜ್ಞ. ೩೮); ಕನ್ನಡವೇ ತಾಯಿ ಕನ್ನಡವೇ ತಂದೆ ಕನ್ನಡವೇ ದಾರಿ ಮುಂದೆ (ಇಂಚಾಹ. ೮೦-೮೭) ; ಬಂದ ದಾರಿಗೆ ಸುಂಕವಿಲ್ಲ (ಗಾದೆ). ೨. ರೀತಿ; ಕ್ರಮ; ಉಪಾಯ: ಹಾಗಾದರೆ ಈ ಪಾಶದಿಂದ ಮುಕ್ತವಾಗುವ ದಾರಿಯಿಲ್ಲವೇ ? (ಧರ್ಮಸಾ. ೧೩೨). ೩. ನಡತೆ ; ನೀತಿ; ಶೀಲ ; ಆಚಾರ : ಕೆಟ್ಟ ಸಹವಾಸದಿಂದ ಅವನು ದಾರಿಯನ್ನು ತಪ್ಪಿದ (ರೂಢಿ); ಆ ಹುಡುಗನ ದಾರಿಯೇ ಸರಿಯಿಲ್ಲ (ರೂಢಿ). 'ದಾರಿದಪ್ಪು', 'ದಾರಿಬಿಡು' ಪರಾ. ೪. (ಆಲಂ) ಬರುವಿಕೆಯ ಅಥವಾ ಆಗಮನದ ಸಮಯ. 'ದಾರಿಕಾಯು' ಪರಾ. ೫. (?) : ಕ್ಷೀರಾಬ್ಧಿಯ ನೀರಲ್ಲದೆ ಧೀರನ ಮಜ್ಜನಕೆ ಪೆಱವು ನೀರ್ ತಗವೆಂದಾ ವಾರಾಶಿವರಂ ಸುರಜನ ದಾರಿ ಮನೋಹಾರಿ ನೀಳ್ದುವೆರಡುಂ ಕೆಲದೊಳ್ (ಆದಿಪು. ೭-೮೨).

**ದಾರಿ ಗುಂಟ, ದಾರಿಯ ಗುಂಟ** = ಹಾದಿಯುದ್ದಕ್ಕೂ : ದಾರಿಗುಂಟ ನಡೆಯುವುದು ನಿನ್ನ ಕೆಲಸವಲ್ಲವೇ ? (ಹರಹ. ೨೮) ; ದಾರಿಯ ಗುಂಟ ದೀಪವಾಗದೇಕು (ಅಪನಾ. ೭). **ದಾರಿಗೆ ತರು** = ಒಳ್ಳೆಯ ನಡತೆಯನ್ನು ಕಲಿಸು ; ಪಳಗಿಸು : ಕೆಡುತ್ತಿರುವವನನ್ನು ದಾರಿಗೆ ತರಬೇಕಾಗಿದೆ (ರೂಢಿ). **ದಾರಿಗೆ ಬರು** = ಸರಿಯಾದ ರೀತಿಯನ್ನು ಅನುಸರಿಸು : ಆ ಮೂರ್ಖ ದಾರಿಗೆ ಬರಲಿಲ್ಲ (ವಚಧಾ. ೨೬.೨). **ದಾರಿಗೆ ಹಚ್ಚು** = ವ್ಯವಸ್ಥೆಯನ್ನು ಉಂಟು ಮಾಡು ; ಏರ್ಪಾಟುಮಾಡು : ನಾನವನಿಗೆ ನೀರು ಕುಡಿಯುವ ಪಾತ್ರೆ, ಒಂದಿಷ್ಟು ಫರಾಳ, ಹಾಸಿಗೆ, ಹೊದಿಕೆ ಕೊಟ್ಟು ದಾರಿಗೆ ಹಚ್ಚಿದೆ (ಸ್ಮೃತಿಚಿ. ೨೬.೪). **ದಾರಿ ತಪ್ಪಿಸು** = ಮಾರ್ಗ ತಪ್ಪುವಂತೆ ಮಾಡು ; ಕೆಟ್ಟ ದಾರಿ ಹಿಡಿಯುವಂತೆ ಮಾಡು: ಅವನಿಗೆ ದಾರಿ ತಪ್ಪಿಸುವಂತಹ ಸ್ನೇಹಿತರೇ ಹೆಚ್ಚು ಮಂದಿ (ರೂಢಿ). **ದಾರಿಯ ತೆಗೆ** = ಹಾದಿಯನ್ನು ಮಾಡಿಕೊಳ್ಳು ; ಮಾರ್ಗವನ್ನು ತಿಳಿ : ಬಗಿದು ಹೊಕ್ಕರು ಮೇಳೆಗಳನು ಮಿಂಚುಗಳ ಕಂಬೆಳಗಿನಲಿ ದಾರಿಯ ತೆಗೆತೆಗೆದು ಸಾರಿದರು (ಕುವ್ಯಾಅ. ೯-೨೪). **ದಾರಿಯ ದೀಪ** = ಹಾದಿಯ ಬೆಳಕು ; ಮಾರ್ಗದರ್ಶನವನ್ನುಂಟುಮಾಡುವ ಪ್ರಭೆ: ಅವರು ದಾರಿಯ ದೀಪವಾದರು ಬಾಳಿಗೆ (ಇಂಚಾಹ. ೩-೫).

[ ದೇ.II ತಮಿ. ಅತರ್, ತಾರಿ, ತಾರೈ; ತುಳು. ತೆಲು. ದಾರಿ ]

**ದಾರಿಕ** (ನಾ). ಹಾದಿಯಲ್ಲಿ ಹೋಗುವವನು; "ದಾರಿಗ, ದಾರಿಹೋಕ" (ಜಾನಕೋ. ೪). [ ದಾರಿ + -ಕ$_3$ ]

**ದಾರಿಕಟ್ಟು** (ಕ್ರಿ). ಹಾದಿಗೆ ಅಡ್ಡ ಬರು; ಅಡ್ಡಗಟ್ಟು; ರಸ್ತೆಯಲ್ಲಿ ಬಂದು ತರುಬು : ಹಠಾತ್ತಾಗಿ ಕಳ್ಳರು ಬಂದು ದಾರಿಕಟ್ಟಿ ಮೇಲೆ ಬಿದ್ದು . . . ಕುಳಿತಿದ್ದ ಸುಂದರಾಂಗಿಯನ್ನು ಹೊರಕ್ಕೆ ಎಳೆದರು (ಭಾರವೀ. ೨).

[ ದಾರಿ + ಕಟ್ಟು$_1$ ]

**ದಾರಿಕಾಯು** (ಕ್ರಿ). (ಆಲಂ) (ಯಾವುದಾದರೂ ವಸ್ತು ಅಥವಾ ಯಾರಾದರೊಬ್ಬರ ಬರವನ್ನು) ಎದುರುನೋಡು,-ನಿರೀಕ್ಷಿಸು ; ಹಾದಿನೋಡು : ಎತ್ತಿನ ಬಂಡಿಯಿಳಿದು, ಬಸ್ಸಿನ ದಾರಿಕಾಯ್ದು, ಕಾರಿನಲ್ಲಿ ತೂರಿ, ಹಡಗ ಬಿಟ್ಟು ವಿಮಾನದಲಿ ಹಾರಿ ಗೋಲಗಳ ಮೇಲೆ ದಾಳಿಮಾಡಿದ್ದೇವೆ (ನೆಂಮು. ೩೧-೨೮); ಅವರೆಲ್ಲ ಗಪ್‌ಚಿಪ್ ಉಪಹಾರ ಮಾಡಿ ಬೀಗರ ದಾರಿ ಕಾಯುತ್ತಾ ಕುಳಿತರು (ಸ್ಮೃತಿಚಿ. ೨೫).

[ ದಾರಿ + ಕಾಯು$_1$ (<ಕಾ$_1$) ]

**ದಾರಿಕಾರ** 'ದಾರಿಕಾಱ' ನೋ.

**ದಾರಿಕಾಱ, ದಾರಿಕಾರ, ದಾರಿಗಾರ** (ನಾ). ಹಾದಿಯಲ್ಲಿ ಹೋಗುವ ವನು ; ಪಯಣಿಗ ; ಪಥಿಕ : ಊರಿಗೆಯ್ದಿದ ಮಾರಿ ಬೀರಸೆಟ್ಟಿಯ ಹೊಯ್ದು ದಾರಿಕಾಱರ ಗಾದೆಯಂತೆ (ಭರಹ. ೪೮-೯೪). **ದಾರಿಕಾರ**: ದಾರಿಕಾರರ ಹಾಗೆ, ನೀರಡಿಸಿ ಬೇಸಿಗೆಯ ನಡುಹಗಲಿನಲ್ಲಿ ನಡೆದು (ಸಹೀಗೀ. ೭೦-೩) ; ನೀರಡಿಸಿ ಬಂದನವನಾ ಜಗದ ದಾರಿಕಾರ (ನಲಿನು. ೪೩-೧೭) ; ಮರೆಯದಿರು ರಾಜಕುವರ ಪಥದಿ ನೀನೊಬ್ಬನೇ ದಾರಿಕಾರ (ಸ್ವರಶಿ. ೨೯); ಸಂದರ್ಭ ಸಿಕ್ಕಿದಾಗಲೆಲ್ಲ ದಾರಿಕಾರರನ್ನು ಹಿಡಿದು ಕೊಳ್ಳೆ ಹೊಡೆಯುತ್ತ ಜೀವನ ಸಾಗಿಸಿದ್ದರು. (ಅಕ್ರಮು. ೫೦). **ದಾರಿಗಾರ** : (ಕ).

[ ದಾರಿ + -ಕಾಱ ]

**ದಾರಿಕೆ** (ನಾ). ೧. ಕನ್ಯೆ; ಹೆಣ್ಣುಮಗಳು; ಹುಡುಗಿ: ನೀರ ಬೊಬ್ಬುಳಿಕೆ ಕಾಮನ ಬಿಲ್ಲು ಸಂಜೆಯೊಳೊಪ್ಪುವ ಕೆಂಪು ಪುಲ್ಲನಿಯು ದಾರಿಸಂಗಡ ದಾರಿಕೆಯರ ಚಿತ್ರದವೊಲು ಅರೆಯ್ಕಲೆಲ್ಲವಧ್ರುವವು (ಶಾಂತೀಶ. ೮-೮೯). ೨. ಸೂಳೆ ; ವೇಶ್ಯೆ ; ವಾರಾಂಗನೆ : ಘನತರಭೋಗಮುಂ ಗತಿಯ ವಕ್ರತೆಯುಂ ತಱಪಾಗೆ ಸಾರ್ದು ಮೆಲ್ಲನೆ ಪುಗುವಂದಮುಂ ನೆಱೆಯೆ ಭಾವಿಸಿ ಬಂದ ಭುಜಂಗನಂ ಭುಜಂಗನೆ ದಿಟಮೆಂದು ದಾರಿಕೆ ಮಯೂರಿಕೆ ಯಂದದಿನೇಂ ಕನಲ್ದಳೋ (ಚಂದ್ರಪ್ರಪು. ೮-೫೮). [ ಸಂ. ದಾರಿಕಾ ]

**ದಾರಿಕೆಳೆ** (ನಾ). ೧. ದಾರಿಯಂ ಸ್ನೇಹ; ಹಾದಿಯಂ ಗೆಳೆತನ. ೨. (ಆಲಂ) ತಾತ್ಕಾಲಿಕ ಸ್ನೇಹ ; ನಶ್ವರವಾದ ಸಂಬಂಧ : ಏಾರ ಮೋಹವನು ಸಂಸಾರದಿಂ ಭಯವೇನು ದಾರಿಕೆಳೆಯದು ನಿನಗೆ ? (ಮಂಕುಳ. ೬೧೪).
[ ದಾರಿ + ಕೆಳೆ₂ ]

**ದಾರಿಗ** (ನಾ). = ದಾರಿಕಾಱ : ತೀರಲು ತೃಷೆ ನೀರು ತೀರಲು ಸಂತಾಪ ತೀರಲವರ ನೋಳ್ಪಾಸೆ ತೀರದೆ ನಿಂದಿರುತಿರೆ ಭೂರಿದಾರಿಗರಾ ವಾರಿಮಂಡಪ ಗಳೊಳು (ಅಂಜಚ. ೨-೧೦೭); ನೀರೆಡಿಸಿ ಕಾಲ್ಗೆಳಱುತವಾರಿಯ ಜಳವಿಲ್ಲ ಕೆಲವು ಕೆಲಿತೂಱಗಳೊಳಂ ನೀರೊಲ್ಲೆಗೊಳ ಕಾದುದು ದಾರಿಗರುಂ ಬಿಡದಂತುಱ ಬೀಳ್ವರ್ ನೆಳಲೊಳ್ (ಹಮ್ಮಿ.ಕ. ೪-೬೭) ; ಮಿಗೆ ಕುವರಗೆ ಶಶಿಪ್ರಭೆಯ ಚೆಲ್ವಿಕೆಯ ದಾರಿಗ ವೇಳ್ವನೆಂದನಾ ಮುನಿಪ (ಕುಪ್ರಸಾಂ. ೭); ದಾರಿಗರೂರುಗರ್ನಾಡುಗರಿಹ ಪರಿವಾರ ವಿದ್ವಾಂಸರು ನೃಪರು ನೀರುಗಣ್ಣೊಳು ಹಗಲಿರುಳು ಗೋಳಿಟ್ಟರು (ಭರತ. ೭೮-೧೦೩) ; ರಸ ದಾಱಗರ್ವಗಳ ಸೋೞಿಗೆಗಳ ವಸುರುವೂಗರಾಗಸಕೆ ಪರ್ವುತಿಹುದಾ ನಾಡೊಳೆಲ್ಲಿಯುಂ ದಾರಿಗರ ಕಣ್ಗೆ ಕೌತುಕವಾಗಲು (ಚೈಬಿಕಾ. ೩-೩).
[ ದಾರಿ + ‒ ಗ₂ ]

**ದಾರಿಗಳ್ಳ** (ನಾ). ಮಾರ್ಗದಲ್ಲಿ ದರೋಡೆ ಮಾಡುವ ಕಳ್ಳ; ಹಾದಿಗಳ್ಳ: ದಾರಿಗಳ್ಳರ ಕೈಗೆ ಸಿಕ್ಕಿ ಅವರು ಹಣವನ್ನೆಲ್ಲಾ ಕಳೆದುಕೊಂಡಿದ್ದರು (ರೂಢಿ). [ ದಾರಿ + ಕಳ್ಳ₁ ]

**ದಾರಿಗಾಣ್** (ಕ್ರಿ). ೧. ದಾರಿಯಂನ್ನು ತಿಳಿ. ೨. ಉಪಾಯವನ್ನು ತಿಳಿ : ಅಕ್ಕ ಮಾತ್ರ ವಿಹ್ವಲಳಾಗಿ ದಾರಿಗಾಣದೆ ಒಳಗೆ ಓಡಿಬಂದು (ಕಮನಿ. ೨೦೦).
[ ದಾರಿ + ಕಾಣ್ ]

**ದಾರಿಗಾಣಿಸು** (ಕ್ರಿ). ಮಾರ್ಗ ತೋರಿಸು; ದಾರಿತೋರಂ : ಎದೆಗೊಂಡು ದಾರಿಗಾಣಿಸುವ ಈ ವಾಗ್ಜ್ಯೋತಿ (ನಾಡೂಱು. ೩೭). [ ದಾರಿ + ಕಾಣಿಸು ]

**ದಾರಿಗಾರ** 'ದಾರಿಕಾಱ' ನೋ.

**ದಾರಿಗುಟಿಗ** (ನಾ). ಹಾದಿಯಂನ್ನು ಸವೆಸುವವನಂ; ದಾರಿಹೋಕ; ಪಯಣಿಗ । ದಾರಿಗುಟಿಗಂ ಪಾರಿಪಂಥಿಕಃ (ಕನ್ನಾಸು. ೩೪೮ ಪ್ಯಾಖ್ಯಾ).
[ ದಾರಿ + ‒ ಕುಟಿಗ₁ ]

**ದಾರಿಗೆಡು** (ಕ್ರಿ). ಮಾರ್ಗತಪ್ಪು ; ದಾರಿ ತಿಳಿಯದಾಗು : ಬಿರುದರ್ ಕರಿಗಿಕ್ಕಿದ ಕಳ್ಳನಂತೆ ಜರಿಯ ಬೀರರ್ ದಾರಿಗೆಟ್ಟರಂತೆ ಬೆದಱ (ಧರ್ಮಾಮೃ. ೨-೬೪). [ ದಾರಿ + ಕೆಡು₁ ]

**ದಾರಿಗೊಳ್**, ದಾರಿಗೊಳ್ಳು (ಕ್ರಿ). ಹಾದಿಹಿಡಿ ; ಮಾರ್ಗಹಿಡಿ : ದಾರಿಗೊಂಡು ಹೋಹವರಲ್ಲ ನೀವು ಕೇಳಿರೇ (ಅವತಂ. ೧೦೩-೯೬೪) ; ವೀರ ಕೋಪಾಟೋಪದಿಂ ಮದವಾರಣಂ ಬರೆ ಕಾಣುತಂ ಬಾಹೂರ ಬೊಮ್ಮಯ್ಯಂ ಬಗೆಯದಂಜದೆ ತೊಲಗದಿಂತು ದಾರಿಗೊಂಡೆಯ್ದಿರಲ ದುಗ್ರಾಕಾರದಿಂ ಮೇಲ್ಪರಿಯೆ (ಬಸವು. ೨೨-೩೦). **ದಾರಿಗೊಳ್ಳು** : ಶಾಪವ ನಿತ್ತು ದೂರ್ವಾಸ ತನ್ನ ದಾರಿಗೊಂಡು ತಾನು ಹೋದಲ್ಲಿ (ಸಕಳ್ಮ. ೮).
[ ದಾರಿ + ಕೊಳ್₁ ]

**ದಾರಿಗೊಳ್ಳು** 'ದಾರಿಗೊಳ್' ನೋ.

**ದಾರಿಡು** (ಕ್ರಿ). ಸುರಿ ; ಹರಿ ; ಪ್ರವಹಿಸಂ ; ಧಾರಾಕಾರವಾಗಿ ಹರಿ : ಚೂತಫಲದಾಸಾರ ದಾಡಿಮಕದರ ತದ್ರಸ ಕದಳಿಗಳ ಮೇಲೆ ದಾರಿಡಲು (ಜೀಪಂಕ. ೨-೮) ; ಶೈಲದೆಡಬಲದೊಱತೆಯೆನೆ ಸುಕಪೋಲದಲಿ ದಾರಿಡುವ ಮದಜಲ ಧಾರೆಗಳ . . . ನೋಡಿದರು (ಕುಪ್ರಾಸು. ೧೦-೧೯).
[ ದಾರೆ₂ + ಇಡು₁ ]

**ದಾರಿತ** (ಗು). ಒಡೆದ ; ಭೇದಿಸಿದ ; ಸೀಳಿದ ; ಕತ್ತರಿಸಿದ ; ಹರಿದ : ದುಃಖಕ್ರಕಚದಾರಿತ ದಾರುದಾರುಣಕರುಣಾಕ್ಷಿಪ್ತಬಾಷ್ಪಜಲಲುಳಿತ ಲೋಚನಂ ಬಂದು ನೆಗವ (ಲೀಲಾವ. ೦೪-೬೯ ವ). [ ಸಂ. ]

**ದಾರಿತಪ್ಪು** 'ದಾರಿದಪ್ಪು' ನೋ.

**ದಾರಿತುಳಿ** (ಕ್ರಿ). ಹಾದಿಯಲ್ಲಿ ನಡೆದು ಸಾಗು.‒ಮುಂದೆ ಹೋಗು ; ನಡೆ: ಬಿಸಿಲಿನಲ್ಲಿ ದಾರಿತುಳಿಯುವಾಗ ಅನೇಕ ವಿಧವಾದ ಆಲೋಚನೆಗಳು, ನೆನಪುಗಳು ಅವಳ ಮನಸ್ಸಿನಲ್ಲಿ ಸುಳಿಯುತ್ತಿದ್ದುವು (ದೂರಸ. ೯೪).
[ ದಾರಿ + ತುಳಿ₁ (<ತುಳ್₁) ]

**ದಾರಿತೆಗೆ** 'ದಾರಿದೆಗೆ' ನೋ.

**ದಾರಿತೋರ್** 'ದಾರಿದೋಱು' ನೋ.

**ದಾರಿತೋರಿಕೆ** (ನಾ). ಮಾರ್ಗದರ್ಶನ : ನಾಗವರ್ಮನು ಕಾಣದ, ೮೦೦ ವರ್ಷಗಳ ಹೊಸ ಹಾಡುಕಟ್ಟುಗಳ ದಾರಿತೋರಿಕೆಯ ಮೇಲೂ, ಇಂಗ್ಲಿಷ್ ಛಂದಸ್ಸಿನ ಸ್ವಾತಂತ್ರ್ಯ ವೈವಿಧ್ಯ ಸೌಂದರ್ಯಗಳ ಪ್ರೇರಣೆಯ ಮೇಲೂ . . . ಸರಳರಗಳೆಯನ್ನೂ ಪ್ರಯೋಗಿಸುತ್ತಾ ಇದ್ದಾರೆ (ಕೈಬಿಡಿ. ೧೧೮).
[ ದಾರಿತೋರು (<ದಾರಿದೋಱು) + ‒ ಇಕೆ ]

**ದಾರಿತೋರು** 'ದಾರಿದೋಱು' ನೋ.

**ದಾರಿತೋಱು** 'ದಾರಿದೋಱು' ನೋ.

**ದಾರಿದಪ್ಪು**, ದಾರಿತಪ್ಪು (ಕ್ರಿ). ೧. ಮಾರ್ಗವನ್ನು ಕಳೆದುಕೊಳ್ಳು; ಹಾದಿತಪ್ಪು : ದಾಂದ[ಪಾಠಾಂ. ತ]ಪ್ಪಿದೆವಜಸಿ ಧಾಜದ್ವಾರವನು ಹೇಳೌ ಸ್ವಯಂಪ್ರಭೆ ಧಾರುಣೀಶನ ಹಗೆಯ ನಗರಕೆ ಹೋಗಬೇಕು (ಕೊರಚಾ. ೪-೧೦-೩೪); ದಾರಿದಪ್ಪಿದವರಿಗೆ ವಿಭ್ರಮ ತೋರಿದಂತೆ (ಜಕಾಸಾ. ೨೪-೦೨). ೨. ಧರ್ಮಮಾರ್ಗವನ್ನು ಬಿಡಂ; ಅನ್ಯಾಯಕ್ಕೆ ಬೀಳಂ ; ಕೆಟ್ಟ ದಾರಿ ಹಿಡಿ: ದಾರಿದಪ್ಪಿದ ಮನುಷ್ಯನನ್ನು ಬಹಳ ಚಾತುರ್ಯದಿಂದ ದಾರಿಗೆ ತಂದುಕೊಂಡಳು (ರೂಢಿ). **ದಾರಿತಪ್ಪು** : ೧. ನನ್ನ ಭಾಗ್ಯ ದೇವತೆಯು ದಾರಿತಪ್ಪಿ ಬಂದಳೋ ಹೇಗೋ (ಚಿಂಪ. ೦೬೪) ; ಬೋಳನು ದಾರಿತಪ್ಪಿ ನಡೆದಿದ್ದನು (ಕಾಬೂರ. ಕಥಾಸಾರ ೧೦).
[ ದಾರಿ + ತಪ್ಪು₁ ]

**ದಾರಿದೀಪ** (ನಾ). ೧. ಬೀದಿಗಳಲ್ಲಿ ಸಾಲಾಗಿ ಹಾಕಿರುವ (ವಿದ್ಯುಚ್ಛಕ್ತಿಯಂ) ದೀಪ : ಆ ಸಣ್ಣ ಹಳ್ಳಿಯಲ್ಲಿ ಇತ್ತೀಚೆಗೆ ದಾರಿ ದೀಪ ಗಳನ್ನು ಹಾಕಿದ್ದಾರೆ (ರೂಢಿ). ೨. (ಆಲಂ) ಬದುಕಿನ ಮಾರ್ಗದರ್ಶನ ಮಾಡುವ ಬೆಳಕು.‒ದಾರಿಯಂನ್ನು ತೋರಿಸುವ ಬೆಳಕು: ಈ ವಿಚಾರ ಓಸಿಯನಸ್‌ಗೆ ದಾರಿದೀಪವಾಗಿ ಕಂಡಿತು (ಬದ್ವಶ್ರ. XVI ಸಂ೨೪) ; 'ಗೀತಾಂಜಲಿ' ಯಂಥ ಅಮೂಲ್ಯ ಗ್ರಂಥಗಳು ನಮ್ಮ ದಾರಿದೀಪವಾಗ ಬೇಕು (ರವೀಂಸಾ. ೯೩). [ ದಾರಿ + ದೀಪ₂ ]

**ದಾರಿದೆಗೆ**, ದಾರಿತೆಗೆ (ಕ್ರಿ). ೧. ದಾರಿಹಿಡಿ ; ಹೊರಡಂ : ಆ ಗಜದಿಂ ಪಲರುಂ ಸೀಱಿಸಿ ವಿಜಯೋದ್ಯೋಗಕ್ಕೆ ದಾರಿದೆಗೆದನಲಂಪಿಂ (ಚಕು. ೭-೦೦೪) ; ಆ ಪರ್ವತಾಗ್ರದ ಚಾರಣರು ಚದುರೆಯರು ಸಿದ್ಧರು ಮುಗ್ಧೆ ಯರು ಕಪಿಯ ಭೈರವಾಡಂಬರಕೆ ಬೆದಱು ದಾರಿದೆಗೆದರು ಸುರಪುರಕೆ (ಕೊರಚಾ. ೪-೧೨-೨೦). **ದಾರಿತೆಗೆ** : ೨. ಹಾದಿಯಂನ್ನು ಕಂಡುಹಿಡಿ ; ಮಾರ್ಗವನ್ನು ಕಲ್ಪಿಸಂ : ಕಾದಿರಮಿಯಾ ಗಿಂಧರನ ಕಿವಿಯಲ್ಲಿ ಮೆಲ್ಲನೆ ಹೇಳಿದ : ಮಹಾರಾಜ, ಮನೋಹರಗೆ ಏನಾರ ದಾರೀತೆಗೀರಿ (ಪ್ರೇಮಾಕ್ಕ. ೦೩). [ ದಾರಿ + ತೆಗೆ₁ ]

**ದಾರಿದೋಂಟ** (ನಾ). ಮಾರ್ಗದಲ್ಲಿರುವ ತೋಟ : ತರತರದ ಬಳ್ಳಿ ಗಿಡುಮರಗಳಿಂದಿಡಿದ ದಾರಿದೋಂಟಂಗಳಂ ಸೋವುತ್ತ ಕಣ್ ಕಿವಿಗಳಿಚ್ಛರಿ ಕೆಯಿಂ . . . ಪ್ರವೇಶಿಸಿದನಯ್ ಶಿಖರತ್ರಯವ್ಯಾಪಿಯಾ ದಶಗ್ರೀವ ಪುರದ ಪಾವದ ಸಾಂದ್ರಕೇಂದ್ರಮಂ (ಶ್ರೀರಾಮಾ. ೪೪೭-೩೦).
[ ದಾರಿ + ತೋಂಟ ]

**ದಾರಿದೋಱು**, ದಾರಿತೋರ್, ದಾರಿತೋರಂ, ದಾರಿತೋಱು (ಕ್ರಿ). ಹಾದಿತೋರಂ ; ಮಾರ್ಗ ಕಾಣಿಸಂ; ಉಪಾಯ ತಿಳಿಸಂ; ಗತಿ

ಭೃಂಗಿಯು ವೀರಭದ್ರಾದಿ ಪ್ರಮಥರೋಲ್ಪೈಸ ಸಮಯದೊಳು (ಬಸಪು. ೧-೩೨). ೨. ಕೃಷ್ಣನ ಸಾರಥಿ: ನಾಗಾರಿಕೇತನಂ ದಾರುಕಾನ್ವಿತಂ ವರೂಥಸ್ಥನಾಗಿ ಕುಶಸ್ಥಳಕ್ಕೆ ತಳರ್ದಂ (ಆಜಿಪು. ೯-೩೩ ವ); ಘನ ಬಳಾಹಕ ಸೈನ್ಯ ಸುಗ್ರೀವನನು ನಿರ್ಮಳ ಮೇಘಪುಷ್ಪನನನುವಿನಲಿ ಹೂಡಿದನು ದಾರುಕ ಹೇಮಮಯ ರಥವ (ಕುಮ್ಯಾಭಾ. ೭-೬); ಪಾಥೋರುಹಾಕ್ಷನಂ ದಾರುಕಂನಿಟ್ಟಿಸಿ ವರೂಥಮಂ ತಿರುಗಿಸಿದನು (ಜೈಮಿಭಾ. ೭-೩೬). ೩. ದೇವದಾರು ಮರ. ೪. ಮರ; ಕಟ್ಟಿಗೆ; ಕಾಷ್ಠ. 'ದಾರುಕಾಸನ' ಪರಾ. ೫. [ವೀಶೈ] ಪಂಚಾಚಾರ್ಯರಲ್ಲಿ ಒಬ್ಬ; ಪಂಚಪೀಠಗಳಲ್ಲಿ ಒಂದಾದ ಉಜ್ಜಯಿನಿ ಪೀಠದ ಸ್ಥಾಪಕ. 'ದಾರುಕಪೀಠ' ಪರಾ. [ಸಂ.]

**ದಾರುಕಪೀಠ** (ನಾ). [ವೀಶೈ] ಪಂಚಪೀಠಗಳಲ್ಲಿ ಒಂದು; ಉಜ್ಜಯಿನಿಯ ಪೀಠ: ಉಜ್ಜಯಿನಿಯಲ್ಲಿ ದಾರುಕಪೀಠವಿದೆ; ಬಾಳೆ ಹೊನ್ನೂರಿನಲ್ಲಿ ರೇಣುಕಪೀಠವಿದೆ (ರೂಢಿ). [ದಾರುಕ + ಪೀಠ]

**ದಾರುಕರ್ಮ** (ನಾ). ಮರದ ಕೆಲಸ; ಬಡಗಿಯ ಉದ್ಯೋಗ: ದಾರುಕರ್ಮ ವಾಸ್ತುವಿದ್ಯಾಪೂರ್ವಯಂತ್ರ ಪ್ರಯೋಗ ವಿ[ಷಾ]ಪಹರಣ ಸರಭೇದ ರತಿತಂತ್ರೇಂದ್ರ ಜಾಲ ವಿವಿಧ ವಿದ್ಯೆಗಳೊಳಂ . . . ಜಾಣ (?) [ನು]ಮಾಗಿ (ಶಂಪಧಾ. ೨-೩೪ ವ). [ದಾರು₂ + ಕರ್ಮ]

**ದಾರುಕಾಸನ** (ನಾ). ಮರದ ಪೀಠ; ಮರದ ಮಣೆ: ದಾರುಕಾಸನ ಭಾಗ್ಯಹಾನಿಯು (ಗಗಶಾ. ೪-೨೨). [ದಾರುಕ + ಆಸನ]

**ದಾರುಕುಲ** (ನಾ). ಮರಗಳ ಸಮೂಹ: ಫಲವೀವ ವೃಕ್ಷಮಂ ಜಿಟ್ಟು ನೀರಸ ದಾರುಕುಲಕಾಲವಾಲಮಂ ತಿರ್ದಿಸಿ (ಅರಾಚ. ೧೨-೨೭). [ದಾರು₂ + ಕುಲ]

**ದಾರುಜೀವನ** (ನಾ). (ಆಲಂ) ನೀರಸವಾದ ಜೀವನ; ಸ್ವಾರಸ್ಯವಿಲ್ಲದ ಬಾಳು: ತಾವು ಅನ್ಯೋನ್ಯವಾಗಿರದೆ, ಮಾತುಕಥೆ ಕೂಡ ಇಲ್ಲದೆ, ಮಸಣ ಮೌನದಿಂದ ದಾರುಜೀವನವನ್ನು ಜೀವಿಸುವುದು ಸಾವಿಗಿಂತ ಕಡೆ! (ಬಂಕಿಮ. ೨೧೨). [ದಾರು₂ + ಜೀವನ]

**ದಾರುಣ** (ಗು). ೧. ಕ್ರೂರವಾದ; ಭಯಂಕರವಾದ; ಉಗ್ರವಾದ; ಕಠಿಣವಾದ: ಮುನಿಜನಕೃತವಿಘ್ನಂಗಳಂ ದಾರುಣ ದೈತ್ಯರ್ ಮಾಡೆ (ಶಂಪಧಾ. ೪-೧೧); ಕನಕ ಶಾಂತಿ ತಪೋಧನನುಂ ಧ್ಯಾನಾನಲಸಂಧುಕ್ಷ ಮಾಣದಾರುಣದುರಿತಾರಣ್ಯನಾಗಿ ಯೋಗದೊಳಿರೆ (ಶಾಂತಿಪು. ೯-೧೯ ವ); ವೀರರಸಂ ಬವರಿಸುಗುಮುದಾರೋತ್ಸಾಹ ಪ್ರವೃತ್ತಿ ಕಾರಣ ಕಾರ್ಯಂ ದಾರುಣ ರೋಷಾವೇಶ ವಿಕಾರಭವಂ ರೌದ್ರಮಂಬ ರಸವದು ನೆಗಟ್ಟುಂ (ಕಾವ್ಯಾವ. ೮೧೭). (ನಾ). ೨. ಭಯಂಕರವಾದುದು; ಕ್ರೂರವಾದುದು; ಕಠಿಣವಾದುದು: ಕಾನನಂ ಕಣ್ಗೆ ದೂರಕೆ ನುಣ್ಪು ದೋರ್ದಪಂ ಬಾಳ್ಕೆಗತಿ ದಾರುಣಂ (ಶ್ರೀರಾಮಾ. ೮೮-೨೦೬). ೩. ಕ್ರೂರಿ; ಹಿಂಸಿಸುವವನು; ನಿಷ್ಕರುಣಿ; ನಿರ್ದಯಿ: ರವಿ ಚಾಪಕ್ಷೇತ್ರದೊಳ್ ನಿಂದೊಡೆ ಧನಪತಿ ಸತ್ಪೂಜಿತಂ ದಾರುಣಂ ವೈದ್ಯವಿದಂ ತಕ್ಷೋಪಜೀವ್ಯಂ (ಜಾತಕ. ೧೭-೧೭); ಓಹೋ ಹೋ ಹಾ ಮಾಣ ದಾರುಣ ಮಾಣೆಂದೊ ಜಲುತ್ತೆ ಬೀಟ ತವೆ ಪೀರ್ದಂ ಪೂತನಾಜೀವಮಂ (ಆಜಿಪು. ೩-೨೪); ನಾನೆ ದಾರುಣನೆಂದಿದೇತಕೆ ಬೀಗುವೆ ಸುಮ್ಮನೆ ಓ ಹಾಲಾಹಲವೆ (ಇಂಚಾಪ. ೨೨೧-೯೩). ೪. ಕ್ರೂರತನ; ಉಗ್ರತೆ; ನೋವು: ದಾರುಣದ ಕರ್ಮ ನಿಯತಿಯನಿನಿತು ಶಿಥಿಲಿಪುದು ಕಾರುಣ್ಯದಿಂ ದೈವ (ಮಂಕುಕ. ೩೦೯). ೫. ಒಂದು ನರಕದ ಹೆಸರು: ಬಳಿಕ ಕುಂಭೀಪಾಕ ಸುಪಾಕ ಪ್ರಮುಖ ದಾರುಣ ಅಂಗಾರಕಮೆಂಬೈದು ಮಂತ್ರಿ ನರಕಂಗಳಂ ಸೇರಿ ತರಳತಾರ ವೆಂಬರಸುನರಕವಿಹುದು (ವಿವೇಕ. ೦೮೦). [ಸಂ.]

**ದಾರುಣತೆ** (ನಾ). ಉಗ್ರತೆ; ಕ್ರೌರ್ಯ; ಭಯಂಕರತೆ: ದೈವದ ದಾರುಣತೆಯುಮಂ ಶೋಕೋದ್ರೇಕಮುಮಂ ದುಃಖದ ದುಸ್ಸಹತೆ ಯುಮಂ ಪದಾರ್ಥದನಿತ್ಯತೆಯುಮಂ ಭಾವಿಸಿ ನೋಡಿ (ಕಾದಂಪೂ. ೯೩೨). [ಸಂ. ದಾರುಣತಾ]

**ದಾರುಣಮುಖ** (ನಾ). ಕ್ರೂರವಾದ ಮುಖವುಳ್ಳವನು; ಅತ್ಯಂತ ಕಟುವಾಗಿ ಮಾತನಾಡುವವನು: ವಿದ್ವತ್ಸಭಾಮಧ್ಯದೊಳ್ ಕಾಳೋ ಗ್ರೋರಗನಂತೆ ದಾರುಣಮುಖರ್ ದುಷ್ಟರ್ ಖಳರ್ ದುರ್ಮುಖರ್ ದೋಷಾನ್ವೇಷಣರಪ್ಪವರ್ ಪಟುದೊಡೇವಂ ಮಾಳ್ಪರೇಗೆಯ್ಪರೋ (ಸುಕುಮಾ. ೧-೪೭). [ದಾರುಣ + ಮುಖ]

**ದಾರುಣವಡೆ** (ಕ್ರಿ). ಉಗ್ರತೆಯನ್ನು ಹೊಂದು; ಕ್ರೂರವಾಗು: ಸೊಗಯಿಪ ಸತಿಯತಿಕಾರ್ಶ್ಯಂದಳೆದೊಪ್ಪಿದಳು ದಾರುಣವಡೆದ ನಿದಾಘ ಸಮಯ ಕಾಸಾರದ ಭಂಗಿಯುಮಂ ಸಿತಪಕ್ಷಂ ತೀರಿದ ನಿರ್ಮಲಶಶಿಬಿಂಬದ ಭಂಗಿಯುಮಂ ನೆನೆಯಿಸುತ (ಜಯುಕಾ. ೪-೩೨). [ದಾರುಣ + ಪಡೆ₁]

**ದಾರುದಾರುಣ** (ನಾ). ಮರದ ಹಾಗೆ ಒರಟಾದುದು: ದಾರುದಾರುಣನಂ ದಾನವಾರಿವಾರಿತಲೋಕನಂ ಬಾರಬಾರಣಮಂ ನೋಡಾ ಸಾರಸಾರಾಂಬು ದಾಭಮಂ (ಕವಿರಾ. ೨-೧೩೦); ಮಕರಂದನರಸನವಸ್ಥೆಯುಂ ಕಂಡು ದುಃಖ ಕ್ರಕಚದಾರಿತ ದಾರುದಾರುಣ ಕರುಣಾಕ್ರೈಷ್ಟ ಬಾಷ್ಪಜಲಲುಳಿತಲೋಚನಂ ಬಂದು ನೆಗವೆ (ಲೀಲಾವ. ೧೪-೬೯ ವ). [ದಾರು₂ + ದಾರುಣ]

**ದಾರುಪಾಶವಿಧಿ** (ನಾ). ಹಗ್ಗದಿಂದ ಮರಕ್ಕೆ ಕಟ್ಟುವ ಕ್ರಮ (?): ಅಪರಾಜಿತ ಮಹಿಪಸಮದ ದ್ವಿಪಂಗಳಂ ಪಿಡಿಯಲವನಿನಾಥನ ಸೇನಾಧಿಪನ ತಲೆವಿಲ್ಲ ದಲ್ ದಾರುಪಾಶವಿಧಿಯಾಯ್ತು ಬಂದು ಕಾಣ್ಬನ್ನೆವರಂ (ಶಾಂತಿಪು. ೧೧-೧೯). [ದಾರು₂ + ಪಾಶ + ವಿಧಿ]

**ದಾರುಪಂದಿ** (ನಾ). ಒಂದು ಬಗೆಯ ಹಂದಿ; ಕಾಡುಹಂದಿ: ಉಡುವು ಹೆಬ್ಬಾವು ಮುಂಗುರಿ ದಾರುಪಂದಿಯು ಕಡವೆ ಕೆನ್ನಾಯಿ ಕೊಂಡಗುರಿಯ್ (ಮಾರೇಶಾಂ. ೦-೩೦). [ದಾರು₂ + ಪಂದಿ]

**ದಾರುಹರಿದ್ರೆ** (ನಾ). ಮರದರಿಸಿನ; ಅಂಬೆಹಳದಿ: "ಪೀತದ್ರುಃ, ಕಾಲೇಯಕಃ . . . ದಾರುಹರಿದ್ರಾ, ಪರ್ಜನೀ-೭ ಮರದರಿಸಿನ, ಕಸ್ತೂರಿ ಅರಿಸಿನವೆಂದು ಕೆಲವರನ್ನುವರು" (ಸಿದ್ಧಾಂತಿ. ೦೩೩). [ಸಂ. ದಾರುಹರಿದ್ರಾ]

**ದಾರುಹಸ್ತ** (ನಾ). ಮರದ ಸೌಟು; ಹುಟ್ಟು; ಸಟ್ಟುಗ; ಮರದ ಚಮಚ: "ದರ್ವೀ, ತರ್ದೂಃ, ಖಜಿಕಾ, ದಾರುಹಸ್ತಃ-ಈ ೪ ಸಟ್ಟುಗಂ" (ಹಲಾಯು. ೫೨-೦೫೭); "ಖಜಿಕೆ ದರ್ವೀ ದಾರುಹಸ್ತಂ ದ್ರುತಂ ಹುಟ್ಟೆನಿಕ್ಕು" (ಮಂಗರಾ. ೬೧-೦೮). [ದಾರು₂ + ಹಸ್ತ]

**ದಾರುಹಸ್ತಕ** (ನಾ). = ದಾರುಹಸ್ತ: "ತಂಡಕಃ, ದಾರುಹಸ್ತಕಃ - ೨ ಕೈಬಟ್ಟ ಪೆಸರುಗಳು. ಮರದ ಸೊಟಕ; ಮರದ ಸೌಟು" (ಸಿದ್ಧಾಂತಿ. ೨೮೪). [ದಾರು₂ + ಹಸ್ತಕ]

**ದಾರೆ₁** (ನಾ). ೧. (ನೀರು) ಧಾರೆಯಾಗಿ ಹರಿಯುವಿಕೆ; ಧಾರಾಕಾರ ವಾಗಿ ಬೀಳುವಿಕೆ: ಧಕಾರಕ್ಕೆ ದಕಾರಂ – ಧಾರಾ – ದಾರೆ; ಧೂಪ – ದೂಪ (ಶಮದ. ೨೩೩ ಪ್ರಯೋ); ಜೀರದಲಿ ನೆಟ ತುಂಬಿದಂತಿರೆ ಪೂರವಿಸಿ ಬುದಿಲೆನಿಸಿ ಭಸಿತದ ದಾ[ಹಾಂ. ಧಾ] ರೆ ಪೊಜಿಮಡೆ ಜೀರ್ಕೊಳವೆಯಲಿ ಚಿಮ್ಮಿದಂತಾಯ್ತು (ಬಸಪು. ೪೪-೦೩). 'ಅಳಂದಾರೆ' ಪರಾ. ೨. ಪ್ರಧಾನ ವಾದ ಗೆರೆ; ಪ್ರಮುಖ ಗೆರೆ; ಮುಖ್ಯವಾದ ಗೀಟು; ಅಂಚು: ಮೇಲಣ ಪಟ್ಟಿಕ್ಕೆ ಎಂಟು ದಾರೆಯ ಪಿಣಂ ಮುಜಿದು ಗರಿಗೆಪಟ್ಟ ವರ್ತುಳಾಕಾರದಿಂ ಶುದ್ಧವ ಮಾಡಿ (ಸವಶಿವ. ೧೨೦-೬೦೭). ೩. ಕತ್ತಿಯ ಅಲಗು,–ಅಂಚು: ಕಂತು ಹೊಡೆದೊಡೆ ಮುನೀಶ್ವರ ಕಠಿನಮನಕಾಂತಂ ದಾರೆಗಳು ಮುಜಿದಲಗುಗಳಯುಕ್ಕುಗಳ ಬಳಗವೊ . . . ಎನಿಸಿ

(ಹರಿಕಾ. ೩-೨೭). ೪. [ಅಶ್ವಶಾ] ಕುದುರೆಯ ನಡಗೆಯ ಐದು ರೀತಿಗಳಲ್ಲಿ ಒಂದು: ತುರಗವನೇರಿ ದಾರೆಗಳಿಂದ [ ಕೋರಿಪ ? ] ಪರಿಪರಿ ವಿಧಾಯದಿಂದ ತಿರುಗಿಸುವನು (ಗೋಪುಟೀ. ೩-೨೦). 'ದಾರೆಗತಿ' ನೋ. [ < ಸಂ. ಧಾರಾ ]

**ದಾರೆ₂** (ನಾ). ಹೆಂಡತಿ ; ಪತ್ನಿ : ದಶರಥನ್ನೃಪಂ, ತನ್ನವೂಲೆ ನಾರುಮಡಿಯುಟ್ಟು ನೋಂಪಿಗೆ ನಿಂದ ದಾರೆಯರ್ವೆರಸಿ ತನುಜಾತಕಾಮೇಷ್ಟಿಯಂ ಕೈಕೊಂಡು (ಶ್ರೀರಾಮಾ. ೧೦-೨೯೯). [ ಸಂ. ದಾರ ]

**ದಾರೆ₃** (ನಾ). ಒಂದು ಬಗೆಯ ಸಸ್ಯ : "ಉಪಹಾರಿ – ದಾರೆ, ಹೀರೆ" (ಒಷಧಿ. ೧೭). 'ದಾಹೀರೆ' ನೋ. [ ? ]

**ದಾರೆಕಟ್ಟು** (ನಾ). ೧. ವಾಮಾಚಾರದ ವ್ಯವಹಾರಗಳಲ್ಲಿ ಒಂದು ; ಕತ್ತಿಯ ಬಾಯಿ ಚಲಿಸದಂತೆ ನಿಲ್ಲಿಸುವ ಒಂದು ತಂತ್ರದ ಸಾಧನೆ : ಖಡ್ಗಸ್ತಂಭನ. ೨. ಹಾಗೆ ನಿಲ್ಲಿಸುವ ಕ್ರಿಯೆ: ಆತನು ಮಂತ್ರ, ತಂತ್ರ . . . ದಾರೆಕಟ್ಟು, ಮೊನೆಕಟ್ಟೆಂಬ ಕುವಿದ್ಯದಿಂ ಗೆಲುವೆನೆಂದು ಬಂದವನ . . . ನಿವಾರಿಸಿ (ಭೃಕಶಾ. ೩೭೭). [ ದಾರೆ₁ + ಕಟ್ಟು₂ ]

**ದಾರೆಗಡಗ** (ನಾ). (ವಿವಾಹ ಸಮಯದಲ್ಲಿ) ಹೆಣ್ಣಿಗೆ ಧಾರೆಯೆರೆಯುವ ಮುನ್ನ ತೊಡಿಸುವ ಕಡಗ: ದಾರೆಗಡಗ ನೇವುರ ಪೊಸರನ್ನದ ಚಾರುತರದ ಸೂಡಗವನು ನಾರಿಯ ಕರಯುಗದೊಳಂದು ಸತಿಯರು ಸೇರಿಸಿದರು ನಲವಿನಲಿ (ಅಂಜನ. ೮-೩೩) ; ಗಿಳಿದಾರಿ ತೋಳಬಂದಿ ದಾರೆಗಡಗಂ . . . ತೊಂಡಿಲ್ಗಳಿಂದಲಂಕೃತೆಯಾದ . . . ಕನ್ನಿಕೆಯಂ . . . ಪಸೆಯ ಜಗಲಿಗೆ ಬಿಜಯಂಗೆಯ್ಸುತರ್ಪಿರ್ಪನಮಾಗಳ್ (ಹಾಲಾಸ್ಯ. ೪-೯-೩೪ ಪ). [ ದಾರೆ₁ + ಕಡಗ₁ ]

**ದಾರೆಗತಿ** (ನಾ). [ಅಶ್ವಶಾ] ಕುದುರೆಯ ನಡಗೆಯ ಐದು ರೀತಿಗಳಲ್ಲಿ ಒಂದು: ದಾರೆಗತಿ ಲಯ ಪೊಯ್ಮು ಕಾಯಕ್ಷಂ ತಿತಿಕ್ಷೆ ಹಿತನೆರಿ ತುರ(ಗ?) ಸಮಾನಂ ಭಾರಿಕೊಸಿ ಮುಷ್ಟಿಭಾಗಂ ವ್ಯೂಹಂ ನಿವರ್ತನೆ ಪದಂ ಯತಿ ಗಾತ್ರವೆ ವಿಮಾರ್ಗಂ (ಮಂಡುಕ. ೧-೩೦). [ ದಾರೆ₁ + ಗತಿ ]

**ದಾರೆಗಿಂಡಿ** (ನಾ). ೧. ನೀರು, ಹಾಲು ಮೊದಲಾದ ದ್ರವಪದಾರ್ಥಗಳನ್ನು ಹೊರಸೂಸಲು ಸೊಂಡಿಲಂತಹ ಆಕಾರವಿರುವ ಗಿಂಡಿ ; ಸೊಂಡಿವಿಂಳ್ಳೆ (ಉಕ). ೨. ನೀರು ಕುಡಿಯುವ ಪಾತ್ರೆ. [ ದಾರೆ₁ + ಗಿಂಡಿ ]

**ದಾರೆಬಟ್ಟಲು** 'ದಾರೆವಟ್ಟಲ್' ನೋ.

**ದಾರೆವಟ್ಟಲ್**, ದಾರ್ವಟ್ಟಲು, ದಾರೆಬಟ್ಟಲು, ದಾರೆವಟ್ಟಲು (ನಾ). ಜರಡಿ ; ಜಾಳಿಗೆ ; ಒಂದರಿ : "ಚಾಲನಿ, ತಿತವು" (ಅಭಿಧಾ. ೪). **ದಾರವಟ್ಟಲು**: ದಾ[ಪಾಠಾಂ. ಧಾ]ರವಟ್ಟಲ ತೆರದಿ ನಿನ್ನ ಕುಮಾರಿ ಕಸವನೆ ಹಿಡಿಯ ನೀನವಿಚಾರಿಯಾದ್ಯೆ ರಾಜಪುತ್ರ ಸಮಾಜವನು ಬಿಸುಟು (ಸಾಳ್ವಭಾ. ೦೮-೩೩). **ದಾರೆಬಟ್ಟಲು**: ರಸವನ್ನು ತ್ಯಜಿಸಿ ಕಸವನ್ನು ಹಿಡಿಯುವ ದಾರೆಬಟ್ಟಲಂತಹ ಜನರಿಗೆ, ದುರಾಸೆಯುಳ್ಳವರಿಗೆ . . . ಎಂದಿಗೂ ಸೊಗಸುವುದಿಲ್ಲವೆಂದೂ ಚಂದ್ರಿಕವಿಯ ಸ್ಪಷ್ಟವಾದ ಅಭಿಪ್ರಾಯ (ಕಂಕಿಕ. XLV ವಿಮರ್ಶ). **ದಾರೆವಟ್ಟಲು**: ಮೋಕ್ಷದ ಬಗೆಗಾಣ್ಬವರ್ಗೆ ಸೊಗಯಿಪ್ಪುದಿದಲ್ಲದೆ ದಾರೆ[ಪಾಠಾಂ. ದಾರ]ವಟ್ಟಲಂದದಿ ರಸಮಂ ಬಿಡುತ್ತೆ ಕಸಮಂ ಪಿಡಿದಿರ್ಪ ದುರಾಸೆಯರ್ಗೆ . . . ಸೊಗಯಿಪ್ಪುದೆ (ಕಂಕಿಕ. ೭). [ ದಾರೆ₁ + ಬಟ್ಟಲ್ ]

**ದಾರೆವಟ್ಟಲು** 'ದಾರೆವಟ್ಟಲ್' ನೋ.

**ದಾರೆಹುಳಿ**, ಧಾರೆಹುಳಿ (ನಾ). (ಕರಾ) ಒಂದು ಬಗೆಯ ಮರ ಮತ್ತು ಅದರ ಹಣ್ಣು ; ಕವಂರಿಕೆ : ಕಮರಕ್ ಮರ, ಕಮರಾಕ್ಷಿ, ದಾರೆಹುಳಿ (ಮೃಶಿಗಿ. ೦೦-೧೮೯). **ಧಾರೆಹುಳಿ** : ಧಾರೆಹುಳಿ ಉಪ್ಪಿನಕಾಯಿ (ಕೂಡಿ). [ ← ತುಳು. ದಾರೆಪುಳಿ ]

**ದಾರೇಷಣ** (ನಾ). ಹೆಂಡತಿಯನ್ನು ಬಯಸುವಿಕೆ ; ಸಂಸಾರಿಯಾಗುವ ಅಪೇಕ್ಷೆ : ಪ್ರಕೃತಿಯು–ಮೂರು ಪರಿಚ್ಛೇದ ಸ್ವರೂಪವಳು, ಸತ್ವ ಪರಿಚ್ಛೇದ, ರಜಃ ಪರಿಚ್ಛೇದ, ತಮಃ ಪರಿಚ್ಛೇದವೆಂದು ಈ ಮೂರರಲ್ಲಿ ವಿಶ್ವ, ತೈಜಸ, ಪ್ರಾಜ್ಞ ಎಂಬ ಮೂರು ರೂಪಗಳಿಂದ ಶ್ರೀ ಪರಮಾತ್ಮನು ವಾಸ ಮಾಡುವನು. ದಾರೇಷಣ, ಪುತ್ರೇಷಣ, ವಿತ್ತೇಷಣವೆಂಬ ಈಷಣತ್ರಯದಲ್ಲಿ ಆತ್ಮ, ಅಂತರಾತ್ಮ, ಪರಮಾತ್ಮನೆಂಬ ರೂಪತ್ರಯಗಳಿಂದ ವಾಸಮಾಡುವನು (ಹಸಾರ ೨೪-೧೦ ಟೀಕು). [ < ಸಂ. ದಾರೈಷಣ ]

**ದಾರೊಕ್ಕಲು** (ನಾ). ಸಂಬಳದಾಳಂಗಳನ್ನು ಇಟ್ಟು ವ್ಯವಸಾಯ ಮಾಡುವ ಒಕ್ಕಲು ; ದೊಡ್ಡ ಒಕ್ಕಲು. 'ಕೂಡೊಕ್ಕಲು' ನೋ. [ ದಾರು₀ + ಒಕ್ಕಲು(< ಒಕ್ಕಲ್) ]

**ದಾರ್ಢ್ಯ** (ನಾ). ೧. ಗಟ್ಟಿಯಾಗಿರುವಿಕೆ ; ಬಿಗಿಯಾಗಿರುವಿಕೆ ; ಗಡುಸು. ೨. ಧೈರ್ಯ; ಬಲ ; ಶಕ್ತಿ : ತನುವೊಳ್ ದಾರ್ಢ್ಯಂ ಸಮಂತೊಪ್ಪುವಾ ಸುಖ ಪೂರ್ವಾರ್ಜಿತ ಪುಣ್ಯವೈ (ಸೋಮೇಶ. ೩೭). ೩. ಸ್ಥಿರವಾದುದು ; ದೃಢವಾದುದು. 'ಧರ್ಮದಾರ್ಢ್ಯ' ನೋ. [ ಸಂ. ]

**ದಾರ್ವ** (ಗು). ಮರದ ; ಮರದಿಂದ ಮಾಡಿದ. [ ಸಂ. ]

**ದಾರ್ವಾಘಾಟ** (ನಾ). ಮರಕುಟುಕ ಪಕ್ಷಿ : "ಶತಪತ್ರಕಃ, ದಾರ್ವಾಘಾಟಃ – ೨ ಮರಕುಟುಕನ ಹಕ್ಕಿ" (ಸಿದ್ಧಾಂತಿ. ೧೫೪). [ ಸಂ. ]

**ದಾರ್ವಿ** (ನಾ). ಮರದರಿಸಿನ ; ದಾರುಹರಿದ್ರ : "ಸದಾಯುಗತ–ದಾರ್ವಿ" (ಒಷಧಿ. ೦೭೪). [ ಸಂ. ದಾರ್ವೀ ]

**ದಾರ್ವಿಕೆ** (ನಾ). ೧. ಮರದರಿಸಿನದಿಂದ ಮಾಡಿದ ಕಾಡಿಗೆ ಅಥವಾ ಕಣ್ಣಪ್ಪು ; ರಸಾಂಜನ : "ದಾರ್ವಿಕಾ. ಕ್ವಾಥೋದ್ಭವಂ, ತುತ್ಥಂ, ರಸಾಂಜನಂ, ರಸಗರ್ಭಂ, ತಾರ್ಕ್ಷ್ಯಶೈಲಂ – ೬ ರಸಾಂಜನದ ಹೆಸರುಗಳು" (ಸಿದ್ಧಾಂತಿ. ೦೩೯). ೨. ಒಂದು ಬಗೆಯ ಸಸ್ಯ ; ಎತ್ತುನಾಲಿಗೆ ಗಿಡ ; ಗೋಜಿಹ್ವೆ : "ಗೋಜಿಹ್ವಾ, ದಾರ್ವಿಕಾ – ೨ ಎತ್ತುನಾಲಗೆ ಗಿಡದ ಹೆಸರುಗಳು" (ಸಿದ್ಧಾಂತಿ. ೦೩೯). [ ಸಂ. ದಾರ್ವಿಕಾ ]

**ದಾರ್ಶನಿಕ** (ಗು). ೧. ತತ್ವಜ್ಞಾನಕ್ಕೆ ಸಂಬಂಧಿಸಿದ : ಈಸ್ಕಿಲಸ್ಸಿನ ಕೃತಿಗಳಲ್ಲಿ ಈ ಪ್ರಶ್ನೆ . . . ದಾರ್ಶನಿಕತರ್ಕವಾಗಿ ಎತ್ತಿ ಕಾಣದಿದ್ದರೂ ಅದನ್ನು ಗುರುತಿಸಲಾಗದಷ್ಟು ಅಸ್ಪಷ್ಟವಾಗಿಯೂ ಇಲ್ಲ (ಬಳ್ಳಪ್ರ. LXVI ಪೀಠಿಕೆ). (ನಾ). ೨. ದರ್ಶನಗಳನ್ನು ತಿಳಿದವನು ; ತತ್ವಜ್ಞಾನಿ ; ವೇದಾಂತಿ: ದಾರ್ಶನಿಕನು ನೀರನ್ನು ಶೋಧಿಸಿ ಕುಡಿಯುವವನು (ಭಾರದ. ೦೮೩) ; ಆದ್ದರಿಂದಲೇ ಆತ್ಮಶಕ್ತಿ, ಆತ್ಮವಿಶ್ವಾಸ . . . ಇತ್ಯಾದಿಗಳಿಗೆ ಕೆಲವು ದಾರ್ಶನಿಕರು ಮಹತ್ವದ ಸ್ಥಾನವನ್ನು ಕೊಟ್ಟಿರುವುದು (ಶಿಕ್ಷದ. ೪೫೯) ; "ನಮ್ಮ ಇರವಿನ ಅರಿವು ನಮಗೆ ಪ್ರತಿಕ್ಷಣದಲ್ಲಿಯೂ ಆಗುತ್ತಿರುತ್ತದೆ . . . ಅದರ ಅಸ್ತಿತ್ವದಲ್ಲಿ ನಮಗೆ ಸಂದೇಹವೇ ಇಲ್ಲ" ವೆಂದು ಹಲವು ದಾರ್ಶನಿಕರು ಹೇಳುತ್ತಿರುತ್ತಾರೆ (ಜೀವಾಶ್ಮ. ೯೭); ಆಧುನಿಕ ಮಹಾವಿಜ್ಞಾನಿಗಳನ್ನು ದಾರ್ಶನಿಕರ ಸಾಲಿಗೇ ಸೇರಿಸಬೇಕೆಂದೆನ್ನಿಸುತ್ತದೆ (ಹುಳ್ಳಾರ. ೭ ಪೀಠಿಕೆ). ೩. [ಜೈನ] ನೈಷ್ಠಿಕ ಶ್ರಾವಕರಲ್ಲಿಯ ಹನ್ನೊಂದು ತರಗತಿಗಳಲ್ಲಿ ಮೊದಲನೆಯ ತರಗತಿಯವನು : ಇಂತು ದಾರ್ಶನಿಕಂ ವ್ರತಿಕಂ ಸಾಮಯಿಕಂ ಪ್ರೋಷಧೋಪವಾಸಂ ಸಚಿತ್ತವಿರತಂ ರಾತ್ರಿಭುಕ್ತಂ ಬ್ರಹ್ಮಚಾರಿ ಆರಂಭನಿವೃತ್ತಂ ಪರಿಗ್ರಹವಿರತಂ ಅನುಮತಿವಿರತಂ ಉದ್ದಿಷ್ಟವಿರತಂ ಎಂದು ಶ್ರಾವಕಸ್ಥಾನಂ ಪನ್ನೊಂದಕ್ಕುಂ (ಧರ್ಮಾಮೃ. ೩-೦೪೭) ; ದಾರ್ಶನಿಕ – ಇವನು ನೈಷ್ಠಿಕ ಶ್ರಾವಕರಲ್ಲಿ ಮೊದಲನೆಯ ತರಗತಿಯವನು (ಜೈನಪ. ೪೭೭). [ ಸಂ. ]

**ದಾರ್ಶನಿಕವಾಣಿ** (ನಾ). ತತ್ವಜ್ಞಾನಿಗಳ ಮಾತು ; ದಾರ್ಶನಿಕರ ನುಡಿ : ಈ ದಾರ್ಶನಿಕವಾಣಿಗಾದರೂ ಅದರ ದಾರ್ಶನಿಕಶಕ್ತಿ ಹಾಗು ದಾರ್ಶನಿಕ ಅಭಿವ್ಯಕ್ತಿಗಳಿಗನುಗುಣವಾಗಿ ಬೇರೆ ಬೇರೆ ಶ್ರೇಣಿಗಳಿರುತ್ತದೆ (ಪ್ರಬಂಧ. ೧೨೩). [ ದಾರ್ಶನಿಕ + ವಾಣಿ₁ ]

**ದಾಷ್ಟಾಂತಿಕ** (ಗು). ೧. ದೃಷ್ಟಾಂತದೊಡನೆ ಕೂಡಿದ ; ದೃಷ್ಟಾಂತದಿಂದ ವಿವರಿಸಲ್ಪಟ್ಟ.(ನಾ).೨. ದೃಷ್ಟಾಂತದಿಂದ ಸ್ಥಿರಪಡಿಸಿದುದು: ಜ್ಞಾನದ ಕರ್ಮವು ಇಲ್ಲದಿದ್ದರೂ 'ಅದು ಯೋಚಿಸಿ ನೋಡೀತು' (ತದ್ದೃಷ್ಟಿಕ) ಎಂದು ಕರ್ತೃತ್ವನ್ನು ಹೇಳಬಹುದಾಗಿದೆ. ಆದ್ದರಿಂದ ದೃಷ್ಟಾಂತ ದಾಷ್ಟಾಂತಿಕಗಳಿಗೆ ಹೋಲಿಕೆ ಇಲ್ಲದೆ ಇಲ್ಲ (ಬ್ರಹ್ಮಸೂ. ೮೪).
[ ಸಂ. ]

**ದಾಲ** (ನಾ).೧. ಒಂದು ವಿಧವಾದ ಕಾಡಂಜೇನು. ೨. ಮಕರಂದ ; ಪುಷ್ಪಪರಾಗ. [ ಸಂ. ]

**ದಾಲಕ್ಷ** 'ದಹಲಕ್ಷ' ನೋ.

**ದಾಲಚಿನಿ** 'ದಾಲಚಿನ್ನಿ' ನೋ.

**ದಾಲಚಿನ್ನಿ, ದಾಲಚಿನಿ, ದಾಲಚಿನ್ನೆ, ದಾಲ್ಚಿನ್ನಿ, ದಾಲ್ಚಿನ್ನೆ** (ನಾ). ಸಾಂಬಾರಿಗೆ ಬಳಸುವ ಮಸಾಲೆಯ ಸಾಮಾನುಗಳಲ್ಲಿ ಒಂದು; ಮಸಾಲೆಚಕ್ಕೆ ; ಲವಂಗ ಪಟ್ಟೆ : ಸಿಂಹಲ ದ್ವೀಪದಲ್ಲಿ ದಾಲಚಿನ್ನಿ, ಮೆಣಸು ಮುಂತಾದ ಮಸಾಲೀ ಸರಕುಗಳು . . . ಬಹಳ ಆಗುತ್ತವೆ (ಮುಂಬಯಿ. ೪-೨೦೦) ; ಸೀಮೆಸುಣ್ಣದ ಪುಡಿ ೨ ತೊಲ . . . ದಾಲಚಿನ್ನಿ ೧ ತೊಲ-ಇವುಗಳನ್ನೆಲ್ಲಾ ಚೆನ್ನಾಗಿ ಪುಡಿಮಾಡಿ . . . ಪರಿದಾವೃತ್ತಿ ಕುಡಿಸುವುದು (ಗ್ರಾಮೂಳ. ೧೨೪). **ದಾಲಚಿನಿ** : ಲೋಭಾನ, ಕಾಚು . . . ದಾಲಚಿನಿಯ ಎಣ್ಣೆ, ಗುಲಾಬನೀರು ಮುಂತಾದವುಗಳು (ಮುಂಬಯಿ. ೯೯). **ದಾಲಚಿನ್ನೆ** : ದಾಲಚಿನ್ನೆ ಅಡವಿಯಲ್ಲಿ ಸಾಧಾರಣ. ಬಹಳ ಎತ್ತರವಾಗುವುದಿಲ್ಲ. ಕಾಯಿಗಳಿಂದ ಎಣ್ಣೆ ಹೊರಡುತ್ತದೆ. ಅದು ಔಷಧಕ್ಕೆ ಬರುತ್ತದೆ (ಕಥಾಗ. ೯೦). **ದಾಲ್ಚಿನ್ನಿ** : ಜಾಯಿಕಾಯಿ, ಏಲಕ್ಕಿ . . . ದಾಲ್ಚಿನ್ನಿ, ಲವಂಗಪತ್ರೆ . . . ಚೂರ್ಣಿಸಿ ಜೇನುತುಪ್ಪದಲ್ಲಿ ಕಲಿಸಿ ತೆಗೆದುಕೊಳಲು ಬಹುಮೂತ್ರ ಕಲ್ಲುಕಟ್ಟು ಸಹ ಮಾಣುವುವು (ಸಕಪ. ೫೦೦ ೫೮) ; ಕ್ರಿ.ಪೂ. ೧೫ನೆಯ ಶತಮಾನದ ಈಜಿಪ್ಟ್ ಶಿಲಾಶಾಸನಗಳಲ್ಲಿ ಕಂಡುಬರುವ ಲವಂಗಪಟ್ಟೆ ಅಥವಾ ದಾಲ್ಚಿನ್ನಿ ಮಲಬಾರಿನಲ್ಲಿ ಉತ್ಪನ್ನವಾಗುವ ವಸ್ತುವನ್ನೇ ಪ್ರಾಯಶಃ ಸೂಚಿಸುತ್ತದೆ (ಪಠಾಇ. ೩೨). **ದಾಲ್ಚಿನ್ನೆ** : ಸಿಂಹಳ ದ್ವೀಪದಲ್ಲಿ ದಾಲ್ಚಿನ್ನೆಯ ಗಿಡಗಳು ಬಹಳ (ಮುಂಬಯಿ. ೩-೬೩).
[ ←ಪಾರ. ಹಿಂ. ದಾರ್ಚೀನೀ ; ಮರಾ.ದಾರುಚಿನೀ, ದಾಲ್‌ಚೀನೀ ]

**ದಾಲಚಿನ್ನೆ** 'ದಾಲಚಿನ್ನಿ' ನೋ.

**ದಾಲಿಮ** (ನಾ). = ದಾಳಿಂಬ. [ ಸಂ. ]

**ದಾಲುಮರ** (ನಾ). ಒಂದು ಬಗೆಯ ಮರ : ಹೆಸವ . . . ಕವಲು, ಗಂಡಗರಿಗೆ, ದಾಲುಮರ, ಅರುಸಿನಬೂರುಗ (ಪಟ್ಟುಸು. ೩೩೭).
[ ದಾಲು? + ಮರ$_1$ ]

**ದಾಲ್ಚಿನ್ನಿ** 'ದಾಲಚಿನ್ನಿ' ನೋ.

**ದಾಲ್ಚಿನ್ನೆ** 'ದಾಲಚಿನ್ನಿ' ನೋ.

**ದಾವ$_1$** 'ದಾವುದು' ಪರಾ.

**ದಾವ$_2$** (ನಾ). ೧. ಕಾಡು ; ಅಡವಿ ; ಕಾನನ : "ಅಡವಿಯಲ್ಲಿಯುಂ, ದವ, ದಾವ ಎಂಬುದು" (ಹಲಾಯು. ೦೩೩-೦೩) ; ಭವದಾವದಲ್ಲಿ ತೊಳಲುವ ಜೀವರಿಗೆ ಸದಾ ಶಿವಪಥವ ತೋರ್ಪ ಗುರುವರ್ಯ ಬಿನ್ನಪವನವಧರಿಪುದೀಗ (ಅನುಸಾ. ೨-೦-೨). ೨. ಕಾಡುಗಿಚ್ಚು; ಕಾಳ್ಗಿಚ್ಚು; ಕಾಡಂಬೇಗೆ: "ವನವಹ್ನಿ, ದವ, ದಾವ-ಈ ಮೂರು ಕಾಟ್ಕಿಚ್ಚು" (ಹಲಾಯು ೧೩-೭೦); "ನಿಮಿರ್ದ ಕಾಂತಾರದಲ್ಲಿಯ ಕಿಚ್ಚು ದಾವಂ [ದವಂ]" (ಮಂಗರಾ. ೧೪-೯) ; ಶಾಶ್ವತನವತರಿಸಿರ್ದಂ ಗದಾಶಂಖಚಕ್ರಾಂಕಿತಹಸ್ತಂ ವಾಸುದೇವಂ ದನುಜವಿಪಿನದಾವಂ,ಸಮಸ್ತಪ್ರಭಾವಂ (ಜಗವಿ. ೨-೦೦೦). ೩. ಕಿಚ್ಚು ; ಬೆಂಕಿ ; ಶಾಖ. [ ಸಂ. ]

**ದಾವಂತ** 'ಧಾವಂತ' ನೋ.

**ದಾವಂತಬಡಿಸು** (ಕ್ರಿ). ಗಾಸಿಪಡಿಸು ; ಬಳಲಿಸು ; ಆಯಾಸವನ್ನುಂಟುಮಾಡು : ದಾವಂತಬಡಿಸಿ ದೇಹವನು ಪಸಿದಿರಲೇಕೆ ಶ್ರೀವರನನಂತನಾಮದೊಳು (ತಿರುಕ. ೭-೪೧).
[ ದಾವಂತಬಡು (<ಧಾವಂತಪಡು) + -ಇಸು$_3$ ]

**ದಾವಂತಬಡು** 'ಧಾವಂತಪಡು' ನೋ.

**ದಾವಡಸು** (ಕ್ರಿ). ಬಾಯಾರು ; ನೀರಡಿಕೆಯುಂಟಾಗು : ಮೃಗವನ್ನು ಕಾಣದಿರಲು ಬಳಲಿ ಬಸವಳಿದು ದೂವಡಿಸಿ [ದಾವಡಸಿ] ನೀರಂ ಕಾಣದಳಲಿಯರಸುತ್ತಿರಲು (ಕುರಂಗ. ೩೪-೪೭).
[ ದಾವು$_1$ <ಡಾಹ) + ಅಡಸು ]

**ದಾವಣ$_1$** (ನಾ). ಚಪ್ಪರ ; ಹಂದರ : ಪಾದರಿಯ ನೆಲೆವಾಡಂಗಳೊಳಂ ದವನದ ದಾವಣಂಗಳೊಳಂ ಮಲ್ಲಿಗೆಯ ಮನೆಗಳೊಳಂ ಕಪ್ಪುರದ ಸೊದೆಯೊಳಂ ಸೊಂಪುವಡೆದ ಕಂಪಿನ ಪೊಟಲೆಂಬ ಬೀಡು ಬಗೆಗೊಳಿಸುತಿರ್ಪುದು (ಕಲ್ಯಾಕಾ. ೦೦೮); ದುರ್ಗಾಶಿಕ್ಷೇಶಕರಮುಖ್ಯಮಧ್ಯಂ ದೇವತೆಗೆಂದುಂ ಮಂತ್ರಸಿದ್ಧ್ಯರ್ಥಮಾಗಿಯುಂ ಮನೆ ಕೊಟ್ಟಿಗೆ ದಾವಣ ರಾಶಿ ತೋಂಟಂ ಮೊದಲಾದುವನರ್ಚಿಸಲೆಂದುಂ ಮನವಚನಕಾಯದಿಂ ಮಾಡಲಾಗದು ಮಾಡಿಸಲಾಗದು ಮಾಡುವನ್ನನುಗೊಡಂಬಡಲಾಗದು (ಚಸಾರ. ೨೯೮). 'ಕಾವಣ' ಪರಾ.
[ ದೇ.೫ ತಮಿ. ತಾವಳ ; ತೆಲು. ತಾವಲ = ನಿವಾಸ, ವಾಸಸ್ಥಾನ ]

**ದಾವಣ$_2$** (ನಾ). ಒಬ್ಬಾತನ ಹೆಸರು : ಸಿರದ ದವಟಿಯರ ಮಗ ದಾವಣಗವುದದ ಮಂಹಾ ಜನಕ್ಕೆ ಕೊಟ್ಟದು ಶಾಲೆ (ಎಕ. VII, ಶಿಕಾರಿ. ೪೫ (b)-೩೩; ಸು. 890 ?). [ <ದೇವಣ್ಣ ]

**ದಾವಣ$_3$** 'ದಾಹಣ' ನೋ.

**ದಾವಣಹೇರುಂದವ್ವ** (ನಾ). ಒಬ್ಬಾಕೆಯ ಹೆಸರು : ಇ ಧಮ್ಮದಿ ದಾವಣ ಪೇರುಂದವ್ವಬ್ಗೆ ಕೊಟ್ಟೊದು ಐಗುಳ ಕಟಿನ ಪರಿಹಾರ (ಎಕ. X,ಶ್ರೀನಿವಾ. ೭-೧೩ ; ಸು. 760). [ ದಾವಣ$_2$ + ಪೇರುಂದವ್ವ$_6$ ]

**ದಾವಣಿ$_1$, ಡಾಣಿ, ಡಾವಣ, ಡಾವಣಿ, ಡಾವಣೆ, ಧಾವಣಿ, ದವಣಿ, ದವನಿ, ದಾವಿಳಿ, ದಾವುಣಿ** (ನಾ). ೧. (ದನಕರುಗಳನ್ನು ಸಾಲಾಗಿ ಕಟ್ಟುವ) ಹಗ್ಗ ; ಹುರಿ ; ಪಾಶ : "ದಾವಿಳಿಯೆನಲು ದಾವಣಿ" (ಮಂಗರಾ. ೦೦೯-೩) ; ದಾವಣಿ[ಪಾಠಾಂ. ಣಿ]ಯೊಳ್ಕಟ್ಟಿರ್ದಾ ಜೀವಧನಮದೊಂದೆ ಮಗ್ಗುಲಿಂದಿರದೊಡವಿನ್ನೇವೇಟ್ಟುದಧಿಕಮೆನಿಸುವ ಜೀವಧನಮನೆಂದು ಸೇಸೆದಳಿವವರ್ಮೂರ್ಧರ್ (ಸಮಾಪ ೩೮೨-೩೮ ಅನುಬಂಧ. ೦); ಆವ ಕುಲದಲಿ ಪುಟ್ಟಲಿ ಪರವಣ್ಣಗಳ ಭಾವಿಸನಾವನವನಿಗೆ ದೇವರು ಸರಿಯಲ್ಲ ನರಪಶುಗಳ ಬಲು ದಾವಣಿಯವನೆ (ಕುಡಸಾಂ. ೦-೯೧) ; ಕಾವು ಗೋಚರವಾಗದಿರೆ ಕೋಪ ಪೆರ್ಗ್ಗಳಿಸಿ ತೀವಿ ಭದುರೋಪಮಿತ ಶಬ್ದವೇಧಿಯ ತೆಗೆದು ದಾವಣಿಯನಿಟ್ಟು [ಪಾಠಾಂ. ರಾವವನ್ನರಿದು] ಕೊಂದವೆನೆನಲು ಧಾವವನ್ನರಿದು ಯಕ್ಷಿಣಿಯು ಜವದಿ ಪಬಂಬರಿದು (ಪಂಕಾರಾ. ೧-೦೨-೪೨); ಕೊರಳ ದಾವಣಿಗೆ ಕುಣಿಕೆ ಬೇಕು ಕವಲೆತ್ತಿಗೂಸು ಕಣಿಕೆ (ಅರಕು. ೨೪೨-೭); ಪುಂಡಿ ನಾರಿನ ಹಗ್ಗ ಹೊಸೆಯುವುದು, ಎತ್ತು ದನ ಕಟ್ಟುವ ದಾವಣ ತಿರುಪುವುದು (ಮಚಿತು. ೭೦). ೨. ಕಟ್ಟು ; ಬಂಧನ: ಹೊಟ್ಟೆಯ ಪಾಡಿಗೆ ದುಡಿಯುವ ದಾವಣಿಯಲಿ ಸಿಕ್ಕಿ ಚಲಿಸುತ್ತಿವೆ ದಿಟ ನಿನಗಾ ಸಂಕುಲ ಪಂಕ್ತಿಯು ಬಕಪಕ್ಷಿ (ಅನಿಕೇ. ೪೬-೧೧); ನಾವಾದರೂ ಅರಸರ ದಾವಣಿಯಲ್ಲಿ ಸೇರತಕ್ಕವರೆ (ಮುಭಾರ. ೩೦). ೩. ಸಾಲು ; ಪಂಕ್ತಿ : ಅಟಾಟಿಗೆ ಬಲ್ಲಾಳನ ದಾಟಿಯಂ ದಾವಣಿಯ ತುರಗ ದಟ ಖುರಹತಿಯಿಂ ಪೇಟೆ ಪೆಸರಿಲ್ಲದಂತಿರೆ ಪಾಟಾದುವು ವೈರಿದುರ್ಗಮೆನಿತೊಳವನಿತುಂ (ಯಶೋಚ. ೧-೧೪) ; ಧರಣೀದೇವರನಂ ಸತ್ಕರಿಸಿ ತಿಲಧೂರತ್ನರುಕ್ಮದಲ್ಲಿ ಧಾ[ದಾ[

ವಣಿ[ಪಾಠಾಂ. ಳಿ]ಯ ಸುರಭಿಗಳನಖಿಳ ಮಹಾವಿಭವಸಹಿತಂ ಕೊಡುಧಾರೆಯನಾವರಾಂಬಂಧಿಯಿತ್ತನು (ಎಭಾಗ. ೧೦-೭೮-೨). ೪. ಗುಂಪು; ನೆರವಿ; ಸಮೂಹ: ಭೈರವನ ಶಕ್ತಿಗರ ದಾವಣಿಯೊಳಣ್ಣನ ಮತ್ತವಾರಣ ಭೀಮಸೇನನನಿತ್ತ ನೋಡೈ ಮಗನೆ ಕುರುಕುಲಕೇಣಿಕಾಬನನು (ಕುಮಾಭೀ. ೨-೧೬); ದೇವ ನೀ ಬಹನೆಂದು ಬಂದರು ದಾವಣಿಯ ಹವಣಳಿದು ಬಳಿಕ ಮಹಾವಿಳಾಸದೊಳೊಪ್ಪವಿಟ್ಟರು ತಮ್ಮ ನಗರಂಗಳ (ಕುಮಾವಿ. ೦೦-೯೭). ೫. ದನಗಳನ್ನು ಕಟ್ಟುವ ಸ್ಥಳ; ಕೊಟ್ಟಿಗೆ: ಇನ್ನು ಛತ್ರಕ್ಕೆ ಹೋಗಿ ಊಟ ತೀರಿಸಿಕೊಂಡು ನಮ್ಮ ದಾವಣಿಯ ಹತ್ತಿರ ಹಿಂತಿರುಗಿ ಬಂದು . . . ಕಳಿತುಕೊಂಡವು (ಹಂಗಾಳ್ಮ. ೩೩೩). ಡಾಣಿ$_{1}$: (ಕ). ಡಾವಣ: ೧. ಅಣೆಯುಳ್ ಡಾವಣವೊಡ್ಡುವೊನ್ (ಎಪಿ. IX, ೦೮-೦೦ ; ೩೦೦). ಡಾವಣಿ: ೨. ಕಣೆಗಳೋ ಕಲ್ಪಾಂತ ವಹ್ನಿಯ ಡೊಣಗಳೋ ಹಾಳಾಹಳದ ಡಾವಣಿಗಳೋ ನಾವರಿಯೆವು (ಕುಮಾಳ. ೨೦-೯); ಹ್ಯಾವರಿಕೆ ಸಂಸಾರ ಡಾವಣಿಯ ನಡುವೆ ಕೊರಳಾವಲಿಗೆ ಸಿಗಬಿದ್ದು ಮಿಡುಕುತಿಪ್ಪ ಜೀವಾಧಮನು ನಿನ್ನ ಮೆಚ್ಚಿಸಲಾಪನೆ (ವಿಕ್ರೋಸು. ೩೦-೦). ಡಾವಣೆ: ೧. ವಾರುವಗಳ ಡಾವಣೆ ನೇಣ್ಗಳ ಬಲು ಬೀರುಗುಣಿಕೆಗಳ ಕಳಿದು ಕೇರಿ ಕೇರಿಯೊಳು ತಮ್ಮಿಚ್ಚೆಯೊಳಗೆ ಸಲೆ ತಾಟುದಮಾಟಾಗಿಯೋಡಿದುವು (ಕಷವಿ. ೦೨-೯೦). ಧಾವಣೆ: ೩. 'ಧಾವಣಗಿರಿ' ವರಾ. ದವಣಿ: ೫. ಇನ್ನು ಈ ಮನೆಯೊಳಗೆ ಮಲಗಿಕೊಂಡರೆ ದನದ ದವಣಿಯೊಳಗೆ ಮಲಗಿದ ಹಾಗೆ (ಪ್ರಹಾಪ. ೨೦). ದವನಿ: ೫. ತಾರಕ್ಕ ಕಟ್ಟೆಯ ಮೇಲಿಂದ ಒಮ್ಮೆಲೇ ಕೆಳಗುರುಳಿ ಬಿದ್ದಳು ದನಗಳನ್ನು ಕಟ್ಟುವ ದವಣಿಯಲ್ಲಿ (ಸಿಕಗ. ೩೯೪). ದಾಮಿಳಿ: ೧. "ದಾಮಿಳಿ ಯೆನಲು ದಾವಣಿ" (ಮುಂಗರಾ. ೦೦೯-೩). ದಾವುಣಿ: ೧. ಏರಿದನು ಕೈಯೊಡನೆ ಖಳನೇಳನೂರು ಘಂಟೆಯ ರಥವ ಮದಕರಿ ಮೂರು ಸಾವಿರ ಸೇರಿದವು ದಾವುಣಿಯ ನೊಗಗಳಲಿ . . . ಹದಿನಾರು ಸಾವಿರ ಬಂಡಿಯಲಿ ನೂಕಿದುವು (ಅಪಿಕಾ. ೦೯-೩೦). [ <ಸಂ. ದಾಮನೀ ]

ದಾವಣಿ$_{2}$, ಧಾವಳಿ (ನಾ). ಲಂಗವುಟ್ಟ ಹೆಣ್ಣುಮಕ್ಕಳು ಧರಿಸುವ ಮೇಲುಹೊದಿಕೆ: ವೈಷ್ಣವಭಕ್ತರು ಅವಳ ದಾವಣಿಯ ಸೆರಗು ಮಾತ್ರ ಪರಮಾತ್ಮನ ಮೇಲಿರುವುದನ್ನು ಕಂಡರು (ಭಕ್ತಮಿ. ೯೨). ಧಾವಳಿ: ಪಟೇಲರ ಮಗ ನನ್ನನ್ನು ದುರುಗುಟ್ಟಿ ನೋಡಿ ನಾನು ಹೊದ್ದಿದ್ದ ಧಾವಳಿಯನ್ನು ಕಿತ್ತೆಸೆದ (ಗೋಪುರ. ೩೫); ಕಾಲಿನ ಕಿರಿಗೆಜ್ಜೆಗಳಿಂದ ಹಿಡಿದು ತಲೆಯ ಮೇಲೆ ಹೊದೆದಿದ್ದ ಧಾವಳಿಯವರೆಗೆ ಎಲ್ಲವೂ ಸ್ಥಳೀಯ ಉಡುಗೆಯೇ ಆಗಿದ್ದಿತು (ಘೂರಾಕಿ. ೯೦).

[ ←ಪಾರ. ದಾಮನೀ ; ಹಿಂ. ದಾಮನ್ = ಸೆರಗು, ಅಂಚು ]

ದಾವಣಿ$_{3}$ 'ದಾಹಣಿ' ನೋ

ದಾವಣಿಗಟ್ಟು$_{1}$, ಡಾವಣಿಕಟ್ಟು (ಕ್ರಿ). ೧. ಸಾಲಾಗು; ಸಾಲುಗಟ್ಟು: ದಾವಣಿಗಟ್ಟಿದ ಮಧುಕರಜೀವಧನಕ್ಕೆ ಕಿಚ್ಚುವಂತೆ ಮೇಪಂ ಸಖಿ ಲೀಲಾವತಿಯ ಮಂತಿಗುರುಳಿಳ್ ಪೂವಿನ ಕೇಸರದ ರಜಮನೊರ್ವಳ್ ತಳಿದಳ್ (ಲೀಲಾವ. ೦೨-೬೦). ೨. ಸಾಲಾಗಿ ಕಟ್ಟು; ಮಾಲೆಗಟ್ಟು: ಮಣಿಮಿಂಗಳ ದಾವಣಿಗಟ್ಟಿದವೋಲ್ ಬೆಳ್ದಿಂಗಳ ಹಕ್ಕಿಯ ಹಸುಳೆಗಳ ಲಾವಣಿಗೆಯ ಮುಸುಕಿದವೋಲ್ . . . ಕುಮರನ ಲಾವಣ್ಯಾಂಗ ಮನಡರ್ದುವು ಪುರಸತಿಯರ ಕಣ್ಗಳ ಬೆಳಗು (ಜಯಕಾ. ೧೦-೩೩). ಡಾವಣಿಕಟ್ಟು: (ಕ). [ ದಾವಣಿ$_{1}$ + ಕಟ್ಟು$_{1}$ ]

ದಾವಣಿಗಟ್ಟು$_{2}$ (ನಾ). (ಹೂವನ್ನು) ಸಾಲಾಗಿ ಕಟ್ಟಿರುವಂತಹುದು; ಮಾಲೆ: ನನೆಯುಂ ದಾವಣಿಗಟ್ಟುಂ ಕಟ್ಟುವಿತ್ತಿನಿಯರ್ಗೊಪ್ಪಿಸಿ ಕೊಡುವ ಪೊಲಿತ್ತರ್ವನಿತೆಯರಾ ಪೂವಿನ ಪೇಟೆಯೊಳ್ಪೊಸಗವುಂ ವಿಟರ್ಗೆ (ಜಯಕಾ. ೦-೩೮). [ ದಾವಣಿ$_{1}$ + ಕಟ್ಟು$_{2}$ ]

ದಾವಣಿಗುಣಿ (ನಾ). ಹಗ್ಗದಿಂದ ಸಾಲಾಗಿ ಕಟ್ಟಿದ ಕುಣಿ: ನಿನ್ನಸಿ ಮುಖದಿಂ ದಾವಣಿಗುಣಿಯಂ ತಣಿದೊಡೆ ದೇವಿ ಶುಭೇತರವಿನಾಶವಂ ದಯೆಗೆಯ್ಗುಂ (ಯಶೋಚ. ೩-೧೩). [ ದಾವಣಿ$_{1}$ + ಕುಣಿ$_{3}$ ]

ದಾವಣಿಗೂಂಟ (ನಾ). ಹಗ್ಗ ಬಿಗಿಯಲು ಹೊಡೆಯುವ ಗೂಟ: ದಾವಣಿಗೂಂಟವುಂ ಪೊಡೆವ ಕಾಟ್ಕರುಳಂ ಪರಿದಾಯ್ದು ಪೇರ್ಗಳಂ ಕಾವಣಿದೊಟ್ಟಲೊಟ್ಟುವ . . . ಅಡುವ ದೋಲಿಗರಿಂದೆಸೆದಂ ವಣಿಗ್ವರಂ (ದಶಕು. ೪-೭೮). [ ದಾವಣಿ$_{1}$ + ಗೂಂಟ ]

ದಾವಣಿಗೆ (ನಾ). = ದಾಹಣಿ: ದಾವಣಿಗೆಯೊಳ್ ಕಟ್ಟಿ (ಲಕ್ಷ್ಮಿಭಾ. ೭-೬-೬). [ ದಾವಣಿ$_{3}$ (<ದಾಹಣಿ) + -ಗೆ ]

ದಾವಣಿಗೆಡಹು (ಕ್ರಿ). ಸಾಲಿನಲ್ಲಿ ಉರುಳಿಸು: ಮಗಧನ ಹೆಣನ ದಾವಣಿ [ಣಿ]ಗೆಡಹಿದನು ಸಮರಂಗಭೂಮಿಯಲಿ (ಕುಮಾದ್ರೋ. ೬೭೪ ಹು. ೨೮೦). [ ದಾವಣಿ$_{1}$ + ಕೆಡಹು (<ಕೆಡಪು) ]

ದಾವಣಿಗೊಳ್ (ಕ್ರಿ). ಗುಂಪುಗೂಡು; ಒಟ್ಟಾಗು: ದಾವಣಿ [ಪಾಠಾಂ. ಗಾವಳಿ]ಗೊಂಡೆಳಗಿದ ಭೃಂಗಾವಳಿಯಂ ಸೋವಲ್ (ಲೀಲಾವ. ೦೩-೬೬). [ ದಾವಣಿ$_{1}$ + ಕೊಳ್$_{1}$ ]

ದಾವಣಿಸುಳಿ (ನಾ). ಕೊರಳಿನ ಹತ್ತಿರ (ಹಗ್ಗ ಕಟ್ಟುವ ಬಳಿ) ಇರುವ ಸುಳಿ: ದನಾ ಪರೀಕ್ಷೆ ಮಾಡೋವಾಗ ಹೀವಸುಳಿ, ಪಾತಾಳಸುಳಿ, ದಾವಣಿ ಸುಳಿ . . . ಕೋರಬಗ್ರಿ, ಕೊಮ್ಮಲ್ಲು ಇವೆಲ್ಲಾನೂ ಚಂದಾಗಿ ನೋಡಿ ಒಳ್ಳೆ ಸುಳಿ ಇರೋದ ತಕ್ಕಾಲಾ (ಹುಟ್ಟಿಹ. ೧೩೯). [ ದಾವಣಿ$_{1}$ + ಸುಳಿ$_{2}$ (<ಸುಟ್ಟಿ$_{2}$) ]

ದಾವಣೆ 'ದಾಹಣಿ' ನೋ.

ದಾವತಿ 'ಧಾವತಿ' ನೋ.

ದಾವತಿಗೊಳ್ 'ಧಾವತಿಗೊಳ್' ನೋ.

ದಾವತಿಪಡಿಸು (ಕ್ರಿ). ಸಂಕಟವನ್ನುಂಟುಮಾಡು; ಆಯಾಸಗೊಳಿಸು: [ ದಾವತಿಪಡು (<ಧಾವತಿಬಡು) + -ಇಸು$_{3}$ ]

ದಾವತಿಪಡು 'ಧಾವತಿಬಡು' ನೋ.

ದಾವತಿಬಡು 'ಧಾವತಿಬಡು' ನೋ.

ದಾವತಿವೆಱು (ಕ್ರಿ). ಬಳಲಿಕೆಯನ್ನು ಹೊಂದು; ಶ್ರಮಪಡು: ದಾವತಿವೆತ್ತುವಂದ ಋತುಪರ್ಣನೃಪಂ ಪುರದೊಳ್ ನಿರಂತರಂ ಶೀವಿದ ವಾರ್ತೆಯಂ ಪಲಬರಿಂ ತಿಳಿವಂತಿರೆ ಕೇಳ್ದು (ನಳಚಂ. ೭೪೮). [ ದಾವತಿ (<ಧಾವತಿ) + ಪೆಱು$_{1}$ ]

ದಾವತಿಹಿಡಿ (ಕ್ರಿ). ಕೆಲಸವನ್ನು ಪ್ರಾರಂಭಿಸು; ಕಾರ್ಯೋನ್ಮುಖನಾಗು: ಮಾಳೂನನ್ನು ನೋಡಿ ಮುಂಗೈ ತಗುಲಿಸಿ ಕೆಳದನಿಯಲ್ಲಿ ಕೇಳಿದನು "ದಾವತಿ ಹಿಡಿಯಲಾ ?" (ಪವನ. ೧೩). [ ದಾವತಿ (<ಧಾವತಿ) + ಹಿಡಿ$_{1}$ (<ಪಿಡಿ$_{1}$) ]

ದಾವದಗ್ಧ (ಗುಂ). ಕಾಳ್ಗಿಚ್ಚಿನಿಂದ ಸುಟ್ಟ: ಎನೆ ದಾವದಗ್ಧಗಿರಿ ನೂತನ ಜಳದಜಳಂಗಳಿಂದಮಾಱುವವೋಲ್ ಭೋಂಕನೆ ಭರತನನಾಱಿಸಿದಂ ಮುನಿವಿನುತ ಗಣಾಧಿನಾಥವಚನಾಮೃತದಿಂ (ಆದಿಪು. ೦೬-೬೦). [ ದಾವ$_{2}$ + ದಗ್ಧ ]

ದಾವದಹನ (ನಾ). ಕಾಡಿನ ಕಿಚ್ಚು; ಕಾಳ್ಗಿಚ್ಚು: ಮದನದಾವದಹನಂ ತಳ್ತಿರ್ದಪುದಿಲ್ಲ ನಿನ್ನ (ಕಾದಂಪೂ. ೮೪೯). [ ದಾವ$_{2}$ + ದಹನ ]

ದಾವಧೂಮ (ನಾ). ಕಾಡುಕಿಚ್ಚಿನ ಹೊಗೆ: ಆವು(ವಿ)ಗೆಯ ಕಿಚ್ಚಿನಂತೆ ದಾವಧೂಮ [ಪಾಠಾಂ. ಧಾಮಧೂಮ] ವಾದಂತೆ ಆವ ಓಡ ಸುಟ್ಟನೆಂದ ಱಿಯನವ್ವಾ (ಸಮಕವ. ೬೨-೪೦೩). [ ದಾವ$_{2}$ + ಧೂಮ ]

ದಾವಪಾವಕ (ನಾ). = ದಾವದಹನ: ದಾವಪಾವಕಂ ಬಳಸೆ ಸುರುಳ್ದ ಬಾಳ ಸಹಕಾರಮಹೀರುಹಂ (ಆದಿಪು. ೨-೩೯); ದಾವಪಾವಕಜಾಳೆಯಂ

ಕಂಡ ವನಶಿಖಂಡಿಯಂತೆಯುಂ ಗರುಡನಂಚುಂವಂ ಕಂಡ ಕಂಚುಕೀಂದ್ರನಂತೆಯುಂ ಭಯಂಗೊಂಡು (ಪುಷ್ಪಪು. ೦೪-೨೬ ವ).

[ ದಾವ₂ + ಪಾವಕ ]

**ದಾವಯ್ಯ** (ನಾ). ಒಬ್ಬಾತನ ಹೆಸರು : ಸ್ವಸ್ತಿ ಶ್ರೀ ದಾವಯ್ಯನ ಕಿಱಿಯ ನಾರಾಯಣಂ ರಾಜಾಶ್ರಯ ವಿಣ್ನಗರ ದೇವರ್ಗ್ಗೆ ತನ್ನ ಪಡುವಣ ಕೋಂಟ್ಟ ಕಟನಿಯಲ್ (ಎಕ. XIV, ಮಳವ. ೧೨೫-೦ ; ಸು. 1014).

[ <ದೇವಯ್ಯ ]

**ದಾವರ** 'ಡಾವರ' ನೋ.

**ದಾವರಂಗ** (ನಾ). ಒಂದು ಸ್ಥಳದ ಹೆಸರು : ದಾವರಙ್ಗದ ದೊದಿವನ್ನಿ ಗಲಿಯು ಕಿಲ್ಲೂರು ಕಬೂರುವೊಳನಿಕ (ಎಕ. XII, ತಿಪಟೂ. ೧೦-೩; ಸು. ೯೭೦ ?). [ ? ]

**ದಾವರಿಸು** 'ಡಾವರಿಸು' ನೋ.

**ದಾವಶಿಖಿ** (ನಾ). = ದಾ ವ ದ ಹ ನ : ಉಗ್ರಾರಿವಂಶಲತಾವಲ್ಲರಿಗಳ್ಗೆ ದಾವಶಿಖಿಪೊಲ್ಮೆಯ್ದೋಱ (ಶಂಖಪ. ೩-೩೩) ; ರತ್ನಶಿಲಾಗ್ರಕವುಂ ಸಿಡಿಲಂತಿರೆ ಧವಲಹಾರವುಂ ದಾವಶಿಖಿವೊಲಲುರ್ದುದು ದ ಹ ನ ಂ (ಶಂಣಾಮೂ. ೧೦-೦೯೦). [ ದಾವ₂ + ಶಿಖಿ ]

**ದಾವಾ, ದಾವೆ₁** (ನಾ). (ವ್ಯವಹಾರಕ್ಕೆ ಸಂಬಂಧಿಸಿದ) ವ್ಯಾಜ್ಯ ; ಮೊಕದ್ದಮೆ ; ಕಟ್ಲೆ : ವಾದಿಯು ದಾಖಲ್ಮಾಡಿದ ದಾವಾಕ್ಕೆ ಪ್ರತಿವಾದಿಯ ಉತ್ತರವೂ ಆದಕ್ಕೆ ವಾದಿಯ ಜವಾಬೂ . . . ಕೋರ್ಟಿಗೆ ದಾಖಲಾಗುತ್ತಿದ್ದುವು (ಮಹಾವಂ. II, ೪೫). **ದಾವೆ₁** : ಕೋರ್ಟಿನಲ್ಲಿ ದಾವೆಗಳನ್ನು ಹಾಕಿದರೆ ಆ ದಾವೆಗಳ ತೀರ್ಮಾನ ಪ್ರತಿವಾದಿಗೆ ಬರೆದು ಕೊಟ್ಟ ಪತ್ರದ ಆಧಾರದ ಮೇಲೆ ಆಗುತ್ತದೆ (ಪ್ರಜಾಆ. I. ೩೭೭); ಆಸ್ತಿ, ಸಂವಿದೆಗಳು, ಅಧಿಕಾರಗಳು, ದಾಯಿತ್ವಗಳು, ಆಭಾರಗಳು ಮತ್ತು ದಾವೆಗಳು (ಭಾಧಾನ. ೦೬೯) : ರೆಗ್ಯುಲೇಷನಿನ ೭ನೆಯ ಪ್ರಕರಣದ ಮೇರೆ ದಾವೆಗಳನ್ನು ವಿಚಾರಿಸುವ ಬಗ್ಗೆ . . . ಹೆಸರುಗಳು ಸೇರಿರತಕ್ಕದ್ದು (ಗ್ರಾಮಾಕ. ೧೧).

ದಾವಾ ಅರ್ಜಿ = ಕೋರ್ಟಿನಲ್ಲಿ ತಗಾದೆ ಹೂಡಲು ಕೊಡುವ ಅರಿಕೆ: ವಾದಿಯು ತನ್ನ ದಾವಾ ಅರ್ಜಿಯಲ್ಲಿ ಅಂಥಾ ಮನುಷ್ಯನನ್ನು ನೇಮಿಸಿದ್ದರೆ . . . ಆತನಿಗೆ ತಿಳಿಸತಕ್ಕದ್ದು (ಗ್ರಾಮಾಕ. ೦೭). ದಾವಾದಾಖಲೆ = ತಗಾದೆಯ ಅರಿಕೆಯನ್ನು ದಾಖಲು ಮಾಡಿಸುವುದು : ಲಿಖಿತ ಮೂಲಕವಾಗಿ ದಾವಾದಾಖಲೆಯನ್ನು ಪಡೆದು ಅದಕ್ಕೆ ಉತ್ತರ ಪ್ರತ್ಯುತ್ತರಗಳನ್ನು ಬರೆಸುವ ಪದ್ಧತಿಯಿರಲಿಲ್ಲ (ಮಹಾವಂ.II, ೩೮). ದಾವಾ ಮಾಡು, ದಾವೆ ಮಾಡು = ನ್ಯಾಯಾಲಯದಲ್ಲಿ ವ್ಯಾಜ್ಯ ಹೂಡು : ಸೆಟ್ಟಿ ದಾವಾ ಮಾಡವನೆ (ಮೂಂಗಲ್ಸ. ೦೯) ; ವಕೀಲರ ಮನೆಗೆ ಹೋಗಿ ಕೋರ್ಟಿನಲ್ಲಿ ದಾವೇ ಮಾಡಬೇಕೇ (ಪೋಹಿನೀ. ೧೨೪). ದಾವಾ ಸೊತ್ತು = ತಗಾದೆಯಲ್ಲಿರುವ ಭೂಮಿ ; ವ್ಯಾಜ್ಯದಆಸ್ತಿ : (ಕ). ದಾವಾ ಹಾಕು, ದಾವೆ ಹಾಕು = ಕೋರ್ಟಿನಲ್ಲಿ ವ್ಯಾಜ್ಯ ಹೂಡು ; ಮೊಕದ್ದಮೆ ನಡೆಸು : ನಿಮ್ಮ ತಂದೆಯವರ ಮೇಲೆ ದಾವಾ ಹಾಕಿ ಬಿಟ್ಟೇನು(ಹನ್ನೊಂದ. ೫೦); ಕಂಪನಿಯ ಡೈರೆಕ್ಟರುಗಳಲ್ಲಿ ಯಾರ ಮೇಲಾದರೂ ದಾವಾ ಹಾಕಿ ಸಾಲದ ಪೂರ್ತಿ ಹಣವನ್ನು ಅವರಿಂದ ವಸೂಲುಮಾಡಿಕೊಳ್ಳಬಹುದು (ಹಂಪ್ರ. ೦೨೯ ಅಡಿಟಿ); ಕೋರ್ಟಿಗೆ ಹೋಗಿ ಕಳಸಯ್ಯನ ಮೇಲೆ ದಾವಾ ಹಾಕಿದ (ಗಂಗಾಳ. ೩೩). ದಾವೆ ಹೂಡು = ದಾವಾ ಹಾಕು : ನನಗೆ ನಾಳೆ ದಾವೆ ಹೂಡಬೇಕಾಗಿ ಬರುತ್ತದೆ (ಪ್ರಳಾಕ. ೦೯೭) [ ←ಅರ. ಹಿಂ. ಮರಾ. ದಾವಾ ]

**ದಾವಾಗ್ನಿ** (ನಾ). ೧. = ದಾವದಹನ : ತೀವ್ರ ದಾವಾಗ್ನಿವೊಲುರಿಂದವು ದುರ್ಬೀಜಕಂ (ಸುಕುಮಾ. ೯-೦೩) ; ದಾವಾಗ್ನಿಯನೆಬ್ಬಿಱಪ ಮಹಾವಾಯುವಿನಂತೆ ತಮ್ಮ ಮನದಳಿಪಂ ನಾನಾ ವಿಧ ದುರಾಗಮೋಕ್ತಿಗಳಾವಗವೆಬ್ಬಿರಿಸೆ (ವರ್ಧಪು. ೧೦-೯೨) ; ಅಡವಿವಿಡಿದೋಡುತಿಹ ಗಜಂ ದಾವಾಗ್ನಿ ತನುವೊತ್ತು ಬೀದಿವರಿವಂತಿರ್ದುದು (ಹಹಕಾ. ೫-೩೬) ; ಇಡಿದ ಧೂಳಿಯ ಧೂಮರಾಶಿಯ ಪಡೆ ವಿರಾಟನ ಮಗನ ಕಂಗಳಿಗೊಡನೊಡನೆ ದಾವಾಗ್ನಿಯಂತಿರೆ ತೋಱತಿದಿರಿನಲಿ (ಕುಮ್ಮಾವಿ. ೬-೩) ; ಅವಳ ಮನಸ್ಸಿನಲ್ಲಿ ಯಾವುದೊ ದಾವಾಗ್ನಿ ಎದ್ದಿದೆ (ಶಾಂತಲಾ. ೨೮೬). ೨. ಪಂಚಾಗ್ನಿಗಳಲ್ಲಿ ಒಂದು : ಗ್ರೀಷ್ಮಾದಿ ರೂಪಕಾಲಾಗ್ನಿ ಆತಪರೂಪ ಸೂರ್ಯಾಗ್ನಿ ಪುಷ್ಕ್ಯಾಭಿವ್ಯಕ್ತರೂಪ ಸೂರ್ಯಕಾಂತಾಗ್ನಿ ವೇಣ್ವಭಿವ್ಯಕ್ತ ದಾವಾಗ್ನಿ ದೇಹಾಂತರ್ಗತ ಉದರಾಗ್ನಿಗಳೆಂಬ ಪಂಚಾಗ್ನಿಗಳು (ವಿವೇಕ. ೦೯೪).

[ ದಾವ₂ + ಅಗ್ನಿ ]

**ದಾವಾದಾರ, ದಾವೆದಾರ** (ನಾ). ವ್ಯಾಜ್ಯ ಹೂಡಿದವನು : ಕೋರ್ಟಿನ ಕೊನೆಯ ತೀರ್ಮಾನದ ಮೇರೆಗೆ ದಾವಾದಾರನೇ ಜಾಮೀನು ತೆರಬೇಕಾಯಿತು (ರೂಢಿ). **ದಾವೆದಾರ** : (ಕ). [ ದಾವಾ + –ದಾರ್₄ ]

**ದಾವಾನಲ, ದಾವಾನಳ** (ನಾ). = ದಾವದಹನ : "ಬನಬೆಂಕಿಯ ದಾವಾನಲಂ" (ಕವಿಕಂ. ೫೮) ; ಮಹಾಸ್ಮರವಿಪಿನದಾವಾನಲ ಕೃಪಾವನಧಿ ಬಲಿದುರುಶೃಂಗಿಯಾದಂದವೊ (ಜಕೋಕು. ೨-೬). **ದಾವಾನಳ** : ಆತ್ಮಜರಿನಾದ ಕುಲಾಪವಾದ ಪರಾಭವದ ದಾವಾನಳದಿಂ . . . ಚಿಂತಿಸಂತರಂಗನುಮಾಗಿ (ಸುಕುಮಾ. ೨-೦೦ ವ) ; ಲಲಿತ ಚಂದ್ರಿಕೆಗೇಕೆ ದಾವಾನಳನ ಜಾಡಾಜಾಡಿ (ಕುಮ್ಮಾದ್ರೋ. ೯-೪೮) ; ಲಲಿತನಿರ್ಮಲಚಂದ್ರಕಾಂತದ ಶಿಲೆಯ ಹತ್ತಿರೆ ಲತೆಯ ದಾವಾನಳನು ಕೊಳಲಾ ಜ್ವಾಲೆಯಾ ಶಿಲೆಯೊಳಗೆ ತೋರ್ಪಂತೆ (ಪ್ರಭುಲೀ. ೭-೨೫). [ ದಾವ₂ + ಅನಲ ]

**ದಾವಾನಲಚೂರ್ಣ** (ನಾ). ಒಂದು ವಿಧವಾದ ಚೂರ್ಣ : ದಾವಾನಲ ಚೂರ್ಣ–ಹಿಂಗು, ವಾಯುವಿಳಂಗ, ಪಂಚಲವಣ, ಕರ್ಕಾಟಕ ಶೃಂಗಿ, ತಾಳೀಸಾಯಿ, ನೆಲ್ಲೀಚಟ್ಟು, ತ್ರಿಕಟುಕ, ಚವ್ಯ, ಚಿತ್ರಮೂಲ, ವೋಡಿ, ಕೊನ್ನಾರಿಗೆಡ್ಡೆ, ಕಟುಕರೋಹಿಣಿ, ಕರೀಜೀರಿಗೆ, ಬಿಳೀಜೀರಿಗೆ, ಕೊಡಸಿಗೆ ಬೀಜ, ಚಂಗಲ್ವಕೋಷ್ಟ, ಹೆಗ್ಗುಳ್ಳ, ನೆಲಗುಳ್ಳ, ತಿಗಡೆ, ಗಜಹಿಪ್ಪಲಿ, ಸಿಹಿಹಾಲೆಬೇರು, ವಿಷಮುದ್ದಿ, ಈಶ್ವರೀಬೇರು, ಗಂಟುಭಾರಂಗಿ, ಯವಕ್ಷಾರ, ಸರ್ಜಕ್ಷಾರ, ಬಿಳಿಗಾರ, ಅರಿಸಿನ, ಮರದರಿಸಿನ ಇವನ್ನು ಸಮಾಂಶ ಚೂರ್ಣಮಾಡಿ ಬೆಲ್ಲ ಅಥವಾ ಜೇನು ತುಪ್ಪದೊಡನೆ ತೆಗೆದುಕೊಳ್ಳಲು ಕಾಸ ಶ್ವಾಸ, ಅಜೀರ್ಣ, ವಾತತಿಮಿರ, ತ್ರಿದೋಷಶೂಲೆ, ಸಹ ಪರಿಹಾರವಾಗುವುವು (ಸಕವ್ಯ. ಶಟಿ. ೯೩೬).

[ ದಾವಾನಲ? + ಚೂರ್ಣ₂ ]

**ದಾವಾನಳ** 'ದಾವಾನಲ' ನೋ.

**ದಾವಾರಿ** (?). (?) : ವೃಷಗ ವೃಶ್ಚಿಕಗಮನ ದಾವಾರಿ ಕಂಸವುಂ ಕೊಲೆಯಿದಿರ್ವ (ಜಕೋಕು. ೨). [ ? ]

**ದಾವು₁** 'ಡಾಹ' ನೋ.

**ದಾವು₂** (ನಾ). ಹಗ್ಗ ; ಹುರಿ; ರಜ್ಜು : "ತಳ್ಳೆಂದುಂ ದಾವೆಂದುಂ ಆಗ್ಗರಣೆಯೆಂದುಂ ರಜ್ಜು" (ಕಶನಾ. ೩೦-೩೯೦) : ದಾವಿನ್ನಡುವಂ ತೊಡರ್ಚಿ ದೃಢವಾಗಲುಲೂಖಲದಲ್ಲಿ ಕಟ್ಟಿ ಪೋಗಿನ್ನು . . . ನೋಟಪ್ಪಿನೆಂಬುದುಂ (ಜಗಿವಿ. ೩-೩೭) ; ದಾವುಂ–ದಾವು (ಶಮದ. ೨೭೮ ಪ್ರಯೋ) ; ಮುನ್ನೇಂ ಕಟ್ಟಿದೆ ಮಣ್ಣಾರೇ ಕಡೆವ ದಾವಿಂದೆನ್ನಂ (ಅಭ್ರತಿ. ೯೪-೨೩) ; ಎನ್ನೀ ಅಬ್ಬೆ ಮೆಯ್ಯಂ ಬಾವಿ ದಾವುಗಳ್ಗೊಪ್ಪಿಸಿ ಎನ್ನನಿಯಂನಂ ಮಗುಟ್ದುಂ ಕಾಣಲಕ್ಕುಮೆಂದೊಡೇವೆನ್ನೆ (ರಾಮೂಕ್ಷ. ೯೨-೦). [ <ಸಂ. ದಾಮನ್ ]

**ದಾವುಣಿ** 'ದಾವಣಿ₁' ನೋ.

**ದಾವುದು** (ಸ). ರೂಪಗಳು (ಪುಂ. ಸ್ತ್ರೀ ಬಹುವ) ದಾರು₁, (ವಿಶೇ) ದಾವ₁. ಪ್ರಶ್ನಾರ್ಥಕ ಸರ್ವನಾಮ : ದಾವುದು ದಾರಿ ಆ ಊರಿಗೆ (ರೂಢಿ).

**ದಾರು$_1$** = ಅದು ಯಾರಂ ; "ಯಾರು" (ಜಾನಕೋ. ೪) : ದಾರಿಗೆ ದಾರು ಮತ್ತಿಲ್ಲ ದೃಢ ಸೇರಿತು ಮನವಹು ಮನೆ ಮನೆಯೊಳಗೆಲ್ಲ (ಪುರಂದ. ೧-೪೨-೬); ಅಂತರಂಗದ ಒಳಗೆ ಭ್ರಾಂತಿ ಬಿಡಿಸುವ ಎಮ್ಮ ಅಂತು ದಾರಿಗು ತಿಳಿಯಂದಂಥ ಎಮ್ಮ (ಪುರಂದ. ೨-೩೫-೩): ದಾರೊಡೆಯನೊ ದಾರ್ವತ್ತ್ರನೊ ನೀರೆ ಇವಳ ಸೊಬಗಿದೇನೊ (ರಣ್ನಾಳ. ೩೦) : ಈ ಮತ್ತೊಬ್ಬ ನಾಲ್ಕನೇ ಸ್ತ್ರೀಯು ದಾರಪ್ಪಾ? (ಉರಾಜ. ೦೪); ಸೋರುತಿಹುದು ಮನೆಯ ಮಾಳಿಗಿ ದಾರು ಗಟ್ಟಿ ಮಾಳ್ಪರಿಲ್ಲ ಕಾಳಕತ್ತಲೆಯೊಳಗೆ ನಾನು ಮೇಲಕೇರಿ ಮೆಟ್ಟಲಾರೆ (ಶರೀಫ. ೦೯-೧) : ಎಲ್ಲೆ ಭಗವತಿಯರಿರಾ ! ನೀವು ದಾರು ? (ಮುಂಬಯಿ. ೪-೩೯೯). **ದಾವ$_1$**= ಅದು ಯಾವ; "ಯಾವ" (ಜಾನಕೋ. ೪); ನಿನ್ನ ಶೀಲ ಸೌಂದರ್ಯವನು ಧರೆಯೊಳಗೆ ವರ್ಣಿಸುವ ಕವಿಯು ದಾವಾ (ಹಾದಿಕೀ. ೪-೧); ಈಗ ಆ ರಾಜನು ದಾವ ಕಾರ್ಯದಲ್ಲಿ ಆಸಕ್ತನಾಗಿದ್ದಾನೆ (ಉರಾಜ. ೪೩). 'ಆವುದು', 'ಯಾವುದು' ಪರಾ.

[ <ಅದು$_1$ + ಅವುದು ]

**ದಾವೆ$_1$** 'ದಾವಾ' ನೋ.

**ದಾವೆ$_2$** (ನಾ). ೧. ಹಗ್ಗ (?) : ನಿನ್ನಯ ನಣ್ಣು ದಲೆಂದು ತಂದ ಹುಟ್ಟಿಗೆಯಂಟಿದೇಟಿಸ್ಕೊಳಂಗಟಿದು ಸೇದೆಯ ಜಾವಿಯೊ ಬಂದ ದಾವೆ[ಪಾಠಾಂ. ಶಾವಿ]ಯೋ (ಲೀಲಾವ. ೨-೧೦೦). ೨. (?): "ದಾವೆ[ಪಾಠಾಂ. ರಾವೆ]ಯೆನೆ ಸಾವೆಯಾಕ್ಕುಂ" (ಮಂಗರಾ. ೩೬-೧೮). [ ? ]

**ದಾವೆದಾರ** 'ದಾವಾದಾರ' ನೋ.

**ದಾಶ** (ನಾ). ೧. ಬೆಸ್ತರವನು ; ಮೀನಂಗಾರ : ಆ ಮೀನನೊರ್ವಂ ಜಾಲಗಾಱಂ ಜಾಲದೊಳ್ ಪಿಡಿದಲ್ಲಿಗರಸಪ್ಪ ದಾಶನಲ್ಲಿಗುಯ್ದು ತೋಱಿದೊಡೆ (ಶಂಶಧಾ. ೧-೬೮ ವ). ೨. ಆಳು ; ದಾಸ ; ಸೇವಕ : ಮಹಾಬಲಶಾಲಿಯಾದ ಜರಾಸಂಧನು, ಕೃಷ್ಣನು ದಾಶನೆಂದು ಅವನೊಡನೆ ಯುದ್ಧಕ್ಕೆ ಹೋಗಲಿಲ್ಲ (ಪಠಭಾ. ೮೩). 'ದಾಶಾರ್ಹ' ಪರಾ. [ ಸಂ. ]

**ದಾಶಮಿಕ** (ಗು). ಹತ್ತನೆಯ ; ಹತ್ತು ಹತ್ತಾಗಿ ಎಣಿಸಿದ ; ಹತ್ತು ಹತ್ತು ಹಿಡಿದು ಹೋಗುವ : "ದಾಶಮಿಕ, ದಶಮಲವ" (Decimal. ಪಾರಿಬಿ. ೨೩). [ ಸಂ. ]

**ದಾಶಮಿಕಪದ್ಧತಿ** (ನಾ). [ಗಣಿತ] ಹತ್ತು ಹತ್ತರಂತೆ ಏರುತ್ತಾ ಅಥವಾ ಇಳಿಯುತ್ತಾ ಹೋಗುವ ಎಣಿಕೆಯ ಕ್ರಮ : ಈತನ ಸಲಹೆಗಳ ಪ್ರಕಾರವೇ, ದಾಶಮಿಕಪದ್ಧತಿಯು ಜಾರಿಗೆ ಬಂದಿತು (ಗಣಿಶ. ೦೩೮).

[ ದಾಶಮಿಕ + ಪದ್ಧತಿ ]

**ದಾಶರಥಿ** (ನಾ). ದಶರಥನ ಮಗ ; ಶ್ರೀರಾಮ : ರತ್ನ ಪ್ರದೀಪಮುಮಾಯ್ತು ತಪಮೆಲ್ಲಮುಂ ರಘುಜಪ್ರತಾಪಮುಮಾಯ್ತು, ಮೂಜಗಮೆಲ್ಲಮುಂ ದಾಶರಥಿ ರಾಜ್ಯಮುಂ ಪಾಲಿಸೆ (ಅಭಿಮಿಭಾ. ೧೮-೧೨). [ ಸಂ. ]

**ದಾಶಾರ್ಹ** (ನಾ). ೧. ದಶಾರ್ಹನ ವಂಶದವನು; ಯದುವಂಶದವನು. ೨. ಕೃಷ್ಣ. [ ಸಂ. ]

**ದಾಶಾಳ** 'ದಾಸವಣ' ನೋ.

**ದಾಶಿವಾಳ** 'ದಾಸವಣ' ನೋ.

**ದಾಷ್ಟಿಕ$_1$** 'ದಾಷ್ಟೀಕ' ನೋ.

**ದಾಷ್ಟಿಕ$_2$** (ನಾ). ಹಾವು ಕಚ್ಚಿದವನು : ಇಲ್ಲಿಯ ಇರುಳೀ ದಾಷ್ಟಿಕಂಗೆ ಜಾವಮಿರಿಮೆಂದು ಪೇಟ್ದು ಪೋದಂ (ಪದ್ಮಾರಾ. ೦೪-೨೫). [ ಸಂ. ]

**ದಾಷ್ಟಿಕತನ** (ನಾ). ಎದೆಗಾರಿಕೆ ; ದಿಟ್ಟತನ ; ಕೆಚ್ಚು : ದಾಷ್ಟಿಕತನಗೆಟ್ಟು ದರಹಾಸಮುಖಿ ಪರಿವೇಷ್ಟಿಸಿದಮಳ ಸೌಂದರದಿ ಚೇಷ್ಟಿಪ ವೇಶ್ಯಾಭುಜಂಗರ ಮಧುಪಾನಗೋಷ್ಠಿಯ ಸೊಬಗನೀಕ್ಷಿಸಿದ (ಮೋಹತ. ೦೮-೪೩); ಅವಳು ಹಳ್ಳಿಯ ಹೆಣ್ಣಾದುದರಿಂದ ಅಷ್ಟೊಂದು ದಾಷ್ಟಿಕತನವುಳ್ಳವಳಾಗಿರಲಿಲ್ಲ (ಮೂರಾನ. ೦೫). [ ದಾಷ್ಟಿಕ$_1$ (<ದಾಷ್ಟೀಕ) + -ತನ ]

**ದಾಷ್ಟೀಕ, ದಾಷ್ಟಿಕ$_1$** (ನಾ). ೧. ಎದೆಗಾರಿಕೆ ; ಧೈರ್ಯ ; ದಕ್ಷತೆ : ಜಾಣತನ ದಾಷ್ಟೀಕ ದೇಹತ್ರಾಣ ನಡೆನುಡಿಗಳಲಿ ಸಕಲ ಪ್ರಾಣಿಗಳಲತ್ಯಧಿಕನಾಗಿರುತಿರ್ದು (ನಿಧಾಗ. ೦೦-೦೩-೮) : ಮನದೊಳು ಕಳವಳಗೊಳುತ ಕೇಳಿದಡೆಯೇನು ದಾಷ್ಟೀಕವೆಂದು ತೋರುವುದೊ (ಸೌಗಂಧಿ. ೨೩೯-೦೫). ೨. ದಕ್ಷನೂ ಪ್ರಭಾವಶಾಲಿಯೂ ಆದವನು : (ಶ). ೩. ಒರಟ ; ನಿರ್ಲಜ್ಜ. **ದಾಷ್ಟಿಕ$_1$**: ೧. ಆದರಲ್ಲಿ ಅಭಿರುಚಿಯಿಲ್ಲದಿದ್ದರೂ ಇದೆಯೆಂದು ಸಾಧಿಸುವ ದಾಷ್ಟಿಕ ಅವರಲ್ಲಿತ್ತು (ಸಾಡಿಗೀ. ೧) ; ಕಲಾವಿದರಲ್ಲಿ ದಾಷ್ಟಿಕವಿಲ್ಲದಿರುವುದರಿಂದಲೋ ಅವರಿಗೆ ತಕ್ಕ ಪ್ರೋತ್ಸಾಹವಿಲ್ಲದಿರುವುದರಿಂದಲೋ ಈ ಪದ್ಧತಿಗಳು ಅಷ್ಟು ಪ್ರಖ್ಯಾತವಾಗಿಲ್ಲ (ಭಾರದ. ೫೬೨).

**ದಾಷ್ಟಿಕವಾಗು** = ದೃಢತೆ ಹೊಂದು; ಗಟ್ಟಿಯಾಗಿರು: ಹುಡುಗನಿಗೆ ವಿದ್ಯೆಯ ಹಂಬಲವಿದೆ. ದಾಷ್ಟೀಕವಾಗಿದ್ದಾನೆ (ಹತ್ತುಮು. ೧೦೨).

[ <ಸಂ. ಧಾರ್ಷ್ಟ್ಯಕ ]

**ದಾಸ** (ನಾ). ೧. ಆಳು ; ತೊತ್ತು; ಊಳಿಗದವನು; ಸೇವಕ : "ದಾಸಃ, ದಾಸೇರಕಃ-ಈ ೨ ಕೊ (ಟ್ತಿ)ತ್ತಿನ ಮಗಂ" (ಹಲಾಯು. ೬೦-೨೦೦) : ಕಾಳಿದಾಸಂಗೆ ದಾಸರೆನಿಪರ್ ಕವಿಗಳ್ (ಜಗವಿ. ೧-೯); ಈಶ ನಿಮ್ಮ ದಾಸರ ದಾಸಿಯ ದಾಸ[ಪಾಠಾಂ. ಸಿ] ನಾನಯ್ಯ (ಬಸವ. ೩೪೧) : ದಾಸನ ಮಾಡಿಕೋ ಎನ್ನ ಸ್ವಾಮಿ ಸಾಸಿರ ನಾಮದ ವೆಂಕಟರಮಣ (ಪುರಂದ. ೧-೯ ಪಲ್ಲವಿ) ; ದಾಸನಾಗಿಹ ಕೂಸು ಮೊರೆಯಿಡಲಾ ಸಮಯಕೈತಂದು (ಗಗತಾ. ೦೯-೨೬). ೨. ವೈಷ್ಣವ ಪಂಥದ ಭಕ್ತ; ಹರಿದಾಸ ; ದಾಸಯ್ಯ ; ದಾಸಕೂಟಕ್ಕೆ ಸೇರಿದ ವ್ಯಕ್ತಿ: ಅಷ್ಟವಿಧಾರ್ಚನೆ ಮಠಪತಿ ದಾಸ ವೈಷ್ಣವರಾಹಾರದಾನಕಂ ಬಿಟ್ಟ ದತ್ತಿ (ಎಕ. XIV, ನಾಗಮಂ ೦೪೦-೬೭ ; ಸು. 1224) ; ದಾಸರ ನಿಂದಿಸಬೇಡ ಮನುಜ ಹರಿದಾಸರ ನಿಂದಿಸಬೇಡ (ಪುರಂದ. ೧-೧೦ ಪಲ್ಲವಿ) ; ದಾಸನೆಂತಾಗುವೆನು ಧರೆಯೊಳಗೆ ನಾನು ವಾಸುದೇವನಲ್ಲಿ ಲೇಶಭಕುತಿಯು ಕಾಣೆ (ಪುರಂದ. ೪-೦೬೫ ಪಲ್ಲವಿ) : ದಾಸರು ಬಂದಾರ ಮದುವಿಗೆ (ಜೋಳಗೀ. ೨೫) : ಹರಿದಾಸರಲ್ಲಿ ದಾಸರು, ವ್ಯಾಸರು ಎಂದು ಎರಡು ವಿಧ (ಭಾರದ. ೩೦೧). ೩. ಒಂದು ಜಾತಿ ; P ಸಾಮಾನ್ಯವಾಗಿ ಇವರು ಒಂದು ಕಡೆ ನಿಲ್ಲದೆ ಊರಿಂದೂರಿಗೆ ಸಂಚಾರಮಾಡುತ್ತಾ ಕೀರ್ತನೆ, ಭಜನೆ ಮುಂತಾದುವುಗಳಿಂದ ಹೊಟ್ಟೆ ಹೊರೆದುಕೊಳ್ಳುವರು : ದಾಸರು . . . ಇವರಲ್ಲಿ ತಿರುಮಲದಾಸರೆಂತಲೂ ಗಂಡುದಾಸರೆಂತಲೂ ಯೆರಡು ವೊಳಭೇದಗಳಿವೆ (೪ ಭಾಗ. ೨೦೭). ೪. ಮೀನಂಗಾರ; ಬೆಸ್ತ: ನುತ ದಾಸಾನ್ವಯ ನಾಯಕಸುತ ನಾನೆನಗಿದಿರ ದಾರುಮಿಲ್ಲಂ ಜಗದೊಳ್ (ಜಾಲಾಶ್ವ. ೪-೯-೫೨).

**ದಾಸಮಕ್ಕಳು** = ಆಳುಮಕ್ಕಳು ; ತೊತ್ತಿನ ಮಕ್ಕಳು ; ಭಕ್ತರು : ಶ್ರೀ ಭೇರುಂಡೇಶ್ವರ ದೇವರ್ಗೆ . . . ಸಮಸ್ತಪ್ರಜೆ ದಾಸಮಕ್ಕಳು ತಂಮ . . . ಕೊಟ್ಟ (ಎಕ. VII (8), ಶಿಕಾರಿ. ೩೫೪; ಸು. 1250). **ದಾಸರ ಆಟ, ದಾಸರಾಟ** = ದಾಸರು ಆಡುವ ನಾಟಕ ; ಬಯಲಾಟದ ಒಂದು ಪ್ರಕಾರ : ದಾಸರ ಆಟ ಆಟವಲ್ಲ ದೋಸೆಯ ಊಟ ಊಟವಲ್ಲ (ಗಾದೆ); ಅವನು 'ದಾಸರಾಟ' ನೋಡುವುದಕ್ಕೆಂದು ಪಕ್ಕದ ಹಳ್ಳಿಗೆ ಹೋಗಿದ್ದನು (ರೂಢಿ). **ದಾಸರ ಪದ** = ದಾಸರುಗಳ ಹಾಡು; ಹರಿದಾಸರ ಕೀರ್ತನೆ: 'ದಾಸರ ಪದದಲ್ಲಿ ತಪ್ಪಿಲ್ಲ, ತಂಗಡೀ ಹೂವಿನಲ್ಲಿ ವಾಸನೆಯಿಲ್ಲ' ವೆಂದು ಹರಿದಾಸರನ್ನು ನಿಂದಿಸುವವರ ವಾಗ್ಬಂಧನವಾಗುತ್ತದೆ (ಕಭವಿ. II, ೦೨೫). **ದಾಸರ ಸಾನಿ** = ವೇಶ್ಯಾವೃತ್ತಿಯವಳು : "ದೇವದಾಸಿ. ಕಸಬಿ" (ಜಾನಕೋ. ೪). **ದಾಸಾನುದಾಸ** = ಅಡಿಯಾಳು ; ಸೇವಕರ ಸೇವಕ : ಅವಳನ್ನು ಕ್ಷಣಮಾತ್ರವೂ ಎದುರಿಸಲಾರದೆ ಮಿತಿಮೀರಿ ಮೋಹಗೊಂಡು ದಾಸಾನುದಾಸನಾಗಿ ಅವಳಿಗೆ ಶರಣು ಬಿದ್ದೆ (ಯೋಧಪು. ೪೯). [ ಸಂ. ]

**ದಾಸಕಟ್ಟು** 'ದಾಸರಿಕಟ್ಟು' ನೋ.

**ದಾಸಕೂಟ** (ನಾ). ಹರಿದಾಸರ ಪಂಥ : ದಾಸಪಂಥ; ವೈಷ್ಣವ ಪಂಥದ ಭಕ್ತರ ಕೂಟ : ಶ್ರೀ ಪುರಂದರದಾಸರಾಯರಿಂದ ಸ್ಥಾಪಿತವಾದ ದಾಸ ಕೂಟವು . . . ಪುನಃ ಉದ್ಧೃತವಾಯಿತು (ವಿದಾಕೃ. ೫ ಪೀಠಿಕೆ); ದಾಸಪಂಥ ಅಥವಾ ದಾಸಕೂಟ ಬಂದದ್ದು ಇವರ ಕಾಲದಲ್ಲೇ (ಭಾರದ. ೨೯೩); ಪುರಂದರದಾಸರದ್ದು ಒಂದು ಕೂಟ; ಅದು 'ದಾಸಕೂಟ'; ನಮ್ಮೀಥವ ರದ್ದು ಮತ್ತೊಂದು ಕೂಟ; ಇದು ವ್ಯಾಸಕೂಟ! (ಹೇಮುಕೂ. ೦೪೨). 'ವ್ಯಾಸಕೂಟ' ಪರಾ. [ ದಾಸ + ಕೂಟ$_1$ ]

**ದಾಸಗಾವುಂಡ** (ನಾ). ಒಬ್ಬಾತನ ಹೆಸರು : ವಲ್ಲಣಗಾವುಂಡನುಂ ಸತ್ಯಣನುಂ ದಾಸಗಾವುಂಡನುಂ ಮಾಡಿಸಿಟ್ಟಯುಂ (ಕಇಇ. ೦೦೫-೦೦-೨೦ ; 1087). [ ದಾಸ + ಗಾವುಂಡ(<ಗ್ರಾಮುಂಡ) ]

**ದಾಸಗಿತ್ತಿ** (ನಾ) ದಾಸನ ಹೆಂಡತಿ ; (ಕ). [ ದಾಸ + – ಗಿತ್ತಿ ]

**ದಾಸಗೆಲಸ** (ನಾ). ಆಳು ಮಾಡುವ ಕೆಲಸ ; ಸೇವಕವೃತ್ತಿ ; ಸೇವೆ : ಒಸಗೆಯಾಯಿತ್ತೆನ್ನ ದಾಸ [ಪಾಠಾಂ. ದಾಸಿ] ಗೆಲಸಕೆ ಬದುಕಿದೆ ನಾನೆನುತ ತಾಂ ಅಸಮ ಜಂಗಮದರುಶನಾಪೇಕ್ಷತೆಯೊಳಿಯ್ದಂದು (ಬಸಪು. ೨೦-೩). [ ದಾಸ + ಕೆಲಸ ]

**ದಾಸಡಿ** (ನಾ). ಒಬ್ಬಾತನ ಹೆಸರು : ವಳ್ಳಿಗ್ರಾಮೆಯರ ದಾಸಡಿಯುಂ ಅಮಲಿಯರ ದೇವಡಿಯುಂ ವೆದೆವಳ್ಳಿಯರಾ ದೇವಡಿಯುಂ ಅಲಂವಳ್ಳಿ ಯರಾ ರವಿಚನ್ದನುಂ (ಎಕ. VII, ಶಿಕಾರಿ. ೦೫೪-೭ ; ಕ್ರಿ. 686).

**ದಾಸಣ** 'ದಾಸವಣ' ನೋ.

**ದಾಸತ್ವ** (ನಾ). ದಾಸನಾಗಿರುವಿಕೆ ; ಗುಲಾಮತನ ; ಸೇವಕತನ. ೨. ಹರಿದಾಸನಾಗುವಿಕೆ ; ದಾಸಯ್ಯನಾಗುವಿಕೆ : ವ್ಯರ್ಥವಲ್ಲವೇ ಜನುಮ ವ್ಯರ್ಥವಲ್ಲವೇ . . . ದಾಸರೊಡನೆ ಆಡದವನ ದಾಸರ ಕೂಡೆ ಪಾಡದವನ ದಾಸರ ಕೊಂಡಾಡದವನ ದಾಸತ್ವ ಪೊಂದದವನ (ಪುರಂದ. ೩.೦೪೩-೫) ; ಜಗನ್ನಾಥದಾಸರು ದಾಸತ್ವ ವಹಿಸುವುದಕ್ಕೆ ಮುಂಚೆ ಸಂಸ್ಕೃತ ಶಾಸ್ತ್ರಾಭ್ಯಾಸಬಲದಿಂದ ಆಚಾರ್ಯರ ರೀತಿಯನ್ನು ನಡೆಸುತ್ತ ಬಂದರು (ಕಮಪಾಂ. ೯೩). ೩. ಶಿವಶರಣನಾಗುವಿಕೆ : ದಾಸತ್ವ ವೀರ ದಾಸತ್ವ ಭೃತ್ಯತ್ವ ವೀರಭೃತ್ಯತ್ವ ಸಮಯಾಚಾರತ್ವ ಸಕಲಾವಸ್ಥತ್ವಂಗ ಳೆಂಬ ಷಡ್ವಿಧ ಸಜ್ಜನತ್ವಯುಕ್ತನಾಗಿ . . . ಜಗತ್ಪೂಜ್ಯನಪ್ಪಾತನೇ ವೀರಶೈವನಪ್ಪ (ವಿಶೀಕ. ೦೦). [ ಸಂ. ]

**ದಾಸದೀಕ್ಷೆ** (ನಾ). ಹರಿದಾಸನಾಗುವುದಕ್ಕೆ ಪಡೆಯಬೇಕಾದ ದೀಕ್ಷೆ : ನೀವು ದಾಸದೀಕ್ಷೆಯನ್ನು ಸ್ವೀಕರಿಸಿ, 'ಪುರಂದರದಾಸ'ರೆಂಬ ಅಭಿಧಾನದಿಂದ ಪ್ರಸಿದ್ಧರಾಗಿರಿ (ಹೇಮುಕೂ. ೭೬). [ ದಾಸ + ದೀಕ್ಷೆ ]

**ದಾಸನೂರ್** (ನಾ). ಒಂದು ಊರಿನ ಹೆಸರು : ಅಲ್ಲಿಂದ ಬಡಗಲು ಪೊಟಿಯೂರ ಬೆದಿರೂರ ದಾಸನೂರ ಮುಕ್ಕೂಟ ಸಂಧಿಯಲು (ಕ್ಯಾಅಂ. ೦೯೨೫, ೦೦೫-೪೭ ; 684). [ <ದಾಸ + ಊರ್ ]

**ದಾಸಪಂಕ್ತಿ** (ನಾ). = ದಾಸಕೂಟ : ಪುರಂದರದಾಸರು ದಾಸಪಂಕ್ತಿಯಲ್ಲಿ ಶ್ರೇಷ್ಠರಾದವರಾದರೂ ದಾಸಪರಂಪರೆ . . . ನರಹರಿತೀರ್ಥರಿಂದ ಬೆಳೆದು ಬಂದಿರುವುದು ಚಾರಿತ್ರಿಕವಾಗಿ ಕಾಣುತ್ತದೆ (ಭಾರದ. ೨೯೩). [ ದಾಸ + ಪಂಕ್ತಿ ]

**ದಾಸಪಂಥ** (ನಾ). = ದಾಸಕೂಟ : ದಾಸಪಂಥ ಅಥವಾ ದಾಸಕೂಟ ಬಂದದ್ದು ಇವರ ಕಾಲದಲ್ಲೆ (ಭಾರದ. ೨೯೩). [ ದಾಸ + ಪಂಥ$_2$ (<ಪಂತ್ಥ) ]

**ದಾಸಪಟ್ಟೆ** (ನಾ). ದಾಸಯ್ಯಗಳು ಹಾಕಿಕೊಳ್ಳುವ ನಾಮ : ಕೆಂಬರು ಹಣೆಯ ದಾಸಪಟ್ಟೆಯ ಮೇಲೆ, ಅಲಂಕಾರಾರ್ಥವಾಗಿ ಇಳಿಬಿಟ್ಟಿದ್ದ ಗೆಜ್ಜೆಯ ಕುಚ್ಚಿನಿಂದ ಗಲಿರುಗಲಿರೆಂದು ಕಿಂಕಿಣಿನಾದ ಹೊಮ್ಮುತ್ತಿತ್ತು (ಮುಳಿಮು. ४೨೨). [ ದಾಸ + ಪಟ್ಟೆ$_1$ ]

**ದಾಸಪದವಿ** (ನಾ). ಹರಿದಾಸನ ಸ್ಥಾನ : ನಿಮ್ಮನ್ನು ಎಂತೋ ಅಂತೆಯೇ ಆತನನ್ನೂ ದಾಸಪದವಿಯಿತ್ತು ಅನುಗ್ರಹಿಸಿದ್ದೇವೆ (ಹೇಮುಕೂ. ೯೩). [ ದಾಸ + ಪದವಿ ]

**ದಾಸಪದ್ಧತಿ** (ನಾ). ಗುಲಾಮಗಿರಿ : ದಾಸಪದ್ಧತಿ (ಗುಲಾಮಪದ್ಧತಿ), ಸಹಗಮನ . . . ಕಾಲಕ್ರಮದಲ್ಲಿ ಹೇಗೋ ಆಚರಣೆಗೆ ಬಂದವು (ಭಾರದ. ೩೮೭). [ ದಾಸ + ಪದ್ಧತಿ ]

**ದಾಸಪರಂಪರೆ** (ನಾ). ಹರಿದಾಸರ ಸಂಪ್ರದಾಯ : ದಾಸಪರಂಪರೆ ಶ್ರೀಮನ್ಮಧ್ವಾಚಾರ್ಯರ ಕಾಲದಿಂದ ಆರಂಭವಾಗಿ ನರಹರಿತೀರ್ಥರಿಂದ ಬೆಳೆದು ಬಂದಿರುವುದು ಚಾರಿತ್ರಿಕವಾಗಿ ಕಾಣುತ್ತದೆ (ಭಾರದ. ೨೯೩). [ ದಾಸ + ಪರಂಪರೆ ]

**ದಾಸಬಣಜಿಗ** (ನಾ). ಬಣಜಿಗರಲ್ಲಿ ಭಕ್ತಿಪಂಥಕ್ಕೆ ಸಂಬಂಧಪಟ್ಟಿರುವ ಒಂದು ಪಂಗಡ : ಹರಿದಾಸ ದಾಸಬಣಜಿಗರಿಂದ ಬಸ್ತಿಗಳ ಕೀಳಿಸುತ ತರಿಸೊಂದು ಕೆರೆಯನ್ನು ವಿಸ್ತಾರದಿಂ ಮಾಡಿಸದಕೆ ರಾಮಾನುಜರ ಕೆರೆಯೆಂದು ಪೆಸರನಿಟ್ಟು (ಅರ್ಜಾಪಿ. ೨೭-೯). [ ದಾಸ + ಬಣಜಿಗ (<ಬಣಂಜಿಗ) ]

**ದಾಸಭಾವ** (ನಾ). ೧. ಆಳಿನ ಮನೋಭಾವ ; ಕಿಂಕರ ಭಾವ : ಒಪ್ಪವಾಯಿತು ದಾಸಭಾವದೊಳಿಪ್ಪ ಭಾವವೆನುತ್ತ ನಿಂಬಿಯನಕ್ಕ ಮುಂಡಾಡುತ್ತ (ಬಸಪು. ೨೪-೮೬). [ ದಾಸ + ಭಾವ$_3$ ]

**ದಾಸಮಾರ್ಗ** (ನಾ). ಸಾಧಕನು ಸೇವಾಮನೋವೃತ್ತಿಯಿಂದ ಪರ ವನ್ನು ಸಾಧಿಸುವ ಭಕ್ತಿಮಾರ್ಗ : ದಾಸಮಾರ್ಗದಲ್ಲಿ ಸಾಧಕನು ದೇವಸ್ಥಾನಗಳಲ್ಲಿ ಶಿವಾರ್ಚನೆಗೆ ಸಲಕರಣೆಗಳನ್ನೊದಗಿಸಿ . . . ಸಾಲೋಕ್ಯ ಪದವಿಯನ್ನು ಹೊಂದುವನು (ಭಾರದ. ೩೦೭). [ ದಾಸ + ಮಾರ್ಗ ]

**ದಾಸಯ್ಯ** (ನಾ). ೧. ವಿಷ್ಣುವಿನ ಆರಾಧಕ ; ದಾಸ : ಊರಿಗೆ ಬಂದರೆ ದಾಸಯ್ಯ ನಮ್ಮ ಕೇರಿಗೆ ಬಾ ಕಂಡ್ಯ ದಾಸಯ್ಯಾ (ಕಂದ. ೨-೮೭ ಪಲ್ಲವಿ); ನಾಗಾರಾಧನೆಯಲ್ಲಿ ಪಾತ್ರವಹಿಸುವ 'ವೈದ್ಯರು' ಅಂತಹ ವ್ಯಾವಸಾಯಿಕ ಜನಗಳು 'ದಾಸಯ್ಯ'ಗಳ ವರ್ಗ ಅಂಥದು (ಜಾಸಗೀ. ೦೦). ೨. ಊರಿಂ ದೂರಿಗೆ ದೇವರ ಹೆಸರಿನಲ್ಲಿ ಪ್ರಯಾಣ ಮಾಡುತ್ತಾ ಸಾಗುವವನು: ಸಾವಿರ ಬಾರಿ ಗೋವಿಂದ ಎನ್ನಬಹುದು ಒಬ್ಬ ದಾಸಯ್ಯಗೆ ಭಿಕ್ಷೆ ನೀಡೋದು ಕಷ್ಟ (ಗಾದೆ). ೩. ಒಬ್ಬಾತನ ಹೆಸರು :ಬಿಟ್ಟಿಯಗನ ವೆಗ್ಗಡೆ ದಾಸಯ್ಯನ ಮಗಂ ಭೀಮಯ್ಯಂ (ಎಕ. VIII, ಸೊರಬ. ೫೨೦-೮; ೫೫೭). ೪. (ಆಲಂ) ನಿರ್ಗತಿಕ : ಬೀದಿಯ ದಾಸಯ್ಯನನ್ನು ಮದುವೆ ಯಾಗಲು ಒಪ್ಪಿಕೊಂಡಳು (ಬೂದಿ). [ ದಾಸ + ಅಯ್ಯ$_1$ ]

**ದಾಸರ** 'ದಾಸರಿ' ನೋ.

**ದಾಸರಕಬ್ಬು** 'ದಾಸರಿಕಬ್ಬು' ನೋ.

**ದಾಸರಹಾವು** 'ದಾಸರಿಹಾವು' ನೋ.

**ದಾಸರಿ, ದಾಸರ** (ನಾ). ಹರಿದಾಸ ; ದಾಸಯ್ಯ : ದೀವಟಿಗೆಯವನ ಪಕ್ಕದಲ್ಲಿ ಬಲಗಡೆ ದಾಸರಿಯೊಬ್ಬನು ಹಳದಿನಾಮವೊಂದನ್ನಿಟ್ಟು ಕೈಲಿ ಜಾಗಟೆ ಬಡಿಯುತ್ತ ಆಗಾಗ್ಗೆ ಶಂಖವೂದುತ್ತ ಹೋಗುತ್ತಿರುವನು (ಹಂಪಾಕ್ಷ್ರ. ೫೦). ದಾಸರ : 'ದಾಸರಕಬ್ಬು', ದಾಸರಹಾವು' ಪರಾ. [ ?./ತಮಿ. ತಾಚರಿ, ತೆಲು. ದಾಸರಿ./ಸಂ. ದಾಸೇರ = ದಾಸಿಯ ಮಗ ; ಸೇವಕ, ಆಳು ]

**ದಾಸರಿಕಬ್ಬು, ದಾಸಕಬ್ಬು, ದಾಸರಕಬ್ಬು** (ನಾ). ದಾಸರ ನಾಮದಂತೆ ಉದ್ದ ಗೆರೆಗಳನ್ನು ಉಳ್ಳ ಕಬ್ಬು ; ಪಟಾಪಟ್ಟೆ ಕಬ್ಬು : ದಾಸರಿಕಬ್ಬಿಗೆ ಪಟಾವಳಿಯೆಂದೂ ಹೆಸರು (ಬೂದಿ). ದಾಸಕಬ್ಬು : ನಮ್ಮ ದೇಶದಲ್ಲಿ ರಸದಾಳಿ ದಾಸಕಬ್ಬುಗಳು ಹೆಸರಾದುವು (ಶಾಲಶ್ರ. II, ೬೪೯) : ಹೆಗಲ ಮೇಲೆ ಒಂದು ತಕ್ಕಮಟ್ಟಿಗೆ ದೊಡ್ಡದೆ ಆದ ದಾಸಕಬ್ಬಿನ ಹೊರೆ ಇತ್ತು

(ಮುಕಿಮ. ೪೨೩). **ದಾಸರಕಬ್ಬು:** ಅವುಗಳಲ್ಲಿ ರಸದಾಳಿಕಬ್ಬು ಎಂದರೂ ದಾಸರಕಬ್ಬು ಎಂದರೂ ಒಂದೇ (ಕೃಷಿಪ್ರ. ೧೬೨).
[ ದಾಸರಿ + ಕಬ್ಬು₂ (<ಕರ್ಬು₁) ]

**ದಾಸರಿಹಾವು**, ದಾಸರಹಾವು (ನಾ). ಹಣೆಯಂವೇಲೆ ಬಿಳಿಯ ನಾಮದ ಪಟ್ಟೆಯಂತಿರುವ ಗುರುತುಳ್ಳ ಒಂದು ಬಗೆಯ ಹಾವು; ಹೆಬ್ಬಾವು: (೬). **ದಾಸರಹಾವು:** (೬). [ ದಾಸರಿ₁ + ಹಾವು (<ಪಾವು₁) ]

**ದಾಸವಣ** ದಾಶಾಳ, ದಾಶಿವಾಳ, ದಾಸಣ, ದಾಸವಾಣ, ದಾಸವಾಳ, ದಾಸಳ, ದಾಸಾಣ, ದಾಸಾಳ, ದಾಸಿವಣ, ದಾಸಿವಾಣ, ದಾಸಿವಾಳ (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹೂವು: "ರುದ್ರ ಪುಷ್ಪಂ, ಜಪಾ–ಈ ೨ ದಾಸವಣಂ" (ಹಲಾಯು. ೩೫-೩೪): ದಾಸವಣ [ಪಾಠಾಂ. ದಾಸಣ] ದಂಡೆಯಂ ತೋರದೀಡೆಯಾಡಿದಂತೆ ದೆಸೆದೆಸೆಗೆ ಕೆದಱಿದ ಕಂಡದಿಂಡೆಗಳುಂ . . . ಪಾಱುವ ಪೆತ್ತರ ಸುಟ್ಟುರೆಗಳುಮತಿ ಭಯಂಕರಾಕಾರವಾಗೆ (ಶಂಕಥಾ. ೧೧-೧೯೦ ವ). **ದಾಶಾಳ:** ಈ ಪರೀಕ್ಷೆಯ ಸಲುವಾಗಿ ನೀಲವರ್ಣದ ಗೋಕರ್ಣ ಎಂಬ ಹೂವನ್ನಾಗಲಿ ಕೆಂಪು ದಾಶಾಳದ ಹೂವನ್ನಾಗಲಿ ತಂದು . . . ಇಡಬೇಕು (ಮುಂಬಯಿ. ೬-೩೩). **ದಾಶಿವಾಳ:** ಕೆಂಪು ದಾಶಿವಾಳ ಬಿಳಿಯ ದಾಶಿವಾಳ ಚಂಡುದಾಶಿವಾಳ . . . ಇರವಂತಿಗೆ ಇವುಗಳಲ್ಲಿ ಕೆಲವು ಕೊಲ್ಲೆಗಳನ್ನು ಕೆಲವು ಅಂಟುಗಳನ್ನು ಮಾಡಿ ಹಚ್ಚಬೇಕು (ಕೃಷಿಪ್ರ. ೨೦೦). **ದಾಸಣ:** "ಜಪಾರುದ್ರಮನೆ ದಾಸಣಂ" (ಮಂಗರಾ. ೩೮-೩೪); ಸೊರೆ ದಾಸಣ [ಪಾಠಾಂ. ದಾಣ]ವುಮಂ ಮುಳ್ಳಕ್ಕುರಿಗೆಯನಿಕ್ಕುವಱ ಬೇರ್ಗಳೊಳ್ ಮೆಚ್ಚಿದುದಂ ಕೊರಲೊಳ್ ಕಟ್ಟುಗೆ ಬರ್ಕುಂ . . . ಶಿಶುವಿನ ಪಲ್ಲಳ್ (ಲೋಕೋಪ. ೯-೧೮೫); ಕೇತಕಿಯಸಳ ಕೂರಲಗು ದಾಸಣದ ಗೊಂಡೆಯಂ ನನೆಗಣೆಗಳಂ ತಳೆದ ಸಂಪಗೆಯ ಬಿರಿಮುಗುಳ ಮೂಡಿಗೆ ತುಂಬಿಗಳ ರವದ ನಾರಿ . . . ಬೆರಸಿ ಮನ್ಮಥನೆಸೆದನು (ಸಿದ್ಧರಾ. ೪-೬೪); ಕೆದಱಿದ ನೆಣದ ಹಸರ ರಂಜಿಸಿಸುದುದು ರಣದೇವತೆ ಮೆಚ್ಚಿ ರಾಮಗೆ ಕಟಿದ ದಾಸಣದ ಪೂವಿನ ಮಳೆಯಂತೆ (ಕುರಾಸಾಂ. ೪೩-೧೧೧); ವಿನುಪ ಸಸಿವಣಿಯು ದಾಸಣದ ಸನ್ನಿಧಿಯಳಿಯೆ ಘನಕಾಂತಿಮಯವೆನಿಸಿ ಬೆಳಗುತಿರುವಂತೆ (ಕೃಕಪ. ೦೨೩-೦೬-೨). **ದಾಸವಾಣ:** ತಿಲಕ ಸರಸಿಜ ದಾಸವಾಣ ಕುವಲಯ . . . ಅಲಗ್ರ್ಗೆರುತಿಹವೆಮ್ಮ ಮೈಯೊಳಗೆ (ಅಜಾಕವಿ. ೦೬-೩೫). **ದಾಸವಾಳ:** ದಾಸವಾಳ, ಮೂಲಂಗಿ, ಹತ್ತಿ ಮುಂತಾದ ಹೂವುಗಳಲ್ಲಿ ಸಾಮಾನ್ಯವಾಗಿ ಪುಷ್ಪತಲ ಕೋನಾಕಾರವಾಗಿ ಉಬ್ಬಿಕೊಂಡಿದೆ (ಸಸ್ಯಶಾ. ೫೫). **ದಾಸಳ:** "ಓಡ್ರಪುಷ್ಪ, ಜಪೆ – ದಾಸ[ಪಾಠಾಂ.ಸಾ]ಳ" (ನಾಚಿರಾ. ೬); ಕೆಂದಾವರೆಯ ದಾಸಳ [ಪಾಠಾಂ. ಣ]ದ ಪೂವಿನ ವರ್ಣದ ಸಂಪದದಿಂ ಮದದಿಂ ಮುದದಿಂ ದೊಪ್ಪಿತ್ತು ಚಂದ್ರಬಿಂಬವಿಡಂಬಂ (ಗಿರಿಳ. ೪-೯೮). **ದಾಸಾಣ:** "ರುದ್ರ ಪುಷ್ಪಂ, ಜಪಾಪುಷ್ಪಂ–ಈ ೨ ದಾಸಾಣ" (ನಾಚಿರಾ. ೦೧೯); ಪಳುಕಿನೊಳು ತೋರ್ಪ ಕೆಂಬೆಳಗು ಪುಸಿ ದಾಸಾಣ (ಅಮುಶಾ. ೬-೩-೭); ಸಿರಿಗಂಧಂ ಜಾಜಿ ದಾಸಾಣ ಸೇವಂತಿಗೆ . . . ಇರ್ಕುಂ (ಹಮ್ಮೀರ. ೬-೪೬); ದಾಸಾಣದ ಮೊಗ್ಗೆಯನಾದರೂ ಚಲುಕೇರೆಯ ಬೇರನಾದರೂ ಅಕ್ಕಿಗಚ್ಚಿನಿಂದ ಅರೆದು ಜೇನುತುಪ್ಪ ಬೆರಸಿ ಕುಡಿಯ ಕೊಡೆ ಗರ್ಭಿಣಿಸ್ತ್ರೀಯರಿಗೆ ಕೆಂಪಾದ ಪ್ರದರ ಹರವಹುದು (ವೈದ್ಯಸಾ. I, ೪೭೩). **ದಾಸಾಳ:** "ನವಮಾಲಿಕಾ – ಮೊಲ್ಲೆ, ದಾಸಾಳ, ಜಾಜಿ" (ಚಿಕಥಿ. ೪೪); ದಾಸಾಳದಲರ [ಪಾಠಾಂ. ದಾಸಳದಲರಂ] ಕುಂಕುಮಕೇಸರದ ಬೆಳರ್ತ ಬಣ್ಣದುಂಕಿರದ ರಕ್ತ ಸೂಸಿ ತುದಿಗಿವಿಯ ಮೊತ್ತಿದೊಡಾ ಸಿಸು ಪದಿನೆಂಟು ವರ್ಷಂ ನೆಱೆ ಬಾಳ್ಗುಂ (ಅಶ್ವಶಾ. ೬-೭೦); ಸಂಜೆಗೆಂಪು-ದಾಸಾಳ ಬಣ್ಣದವಾಗಿ ನೀನು ಮೆರುಗಿ (ಮೀಕಾಮೂ. ೧೧-೩೬); ನಮ್ಮ ಮೈಯೊಳಗಣ ರಕ್ತವೂ ಕೆಂಪು, ದಾಸಾಳದ ಹೂವೂ ಅದರಂತೆ (ಮುಂಬಯಿ. ೦-೦೨). **ದಾಸಿವಣ:** ಎಱೆಯ ಸಿತ ಪ್ರಯುತಾಸವಮಂ ಪೊಯ್ಗೆರ್ವೆಯ ಪಾಲಂ ದಾಸಿವಣದ ಪೂ ಬಿಳಿದಕ್ಕುಂ (ಲೋಕೋಪ. ೯-೫೦). **ದಾಸಿವಾಣ:** ಕೆಂಪು ಸುತ್ತು ದಾಸಿವಾಣದ ಹೂವಿನಂತೆಯೂ ಯಿಂತು ಯಂಟು ಬಗೆ ಹೊಳವಿನ ರತ್ನವು ಕ್ಷತ್ರಿಯ ಜಾತಿಯಾದ ಕುರುವಿಂದವೆಂದು ತಿಳಿಯತಕ್ಕದ್ದು (ಸೌಗಂಧಿ. ೩೬೬-೦೯). **ದಾಸಿವಾಳ:** ಹೊಳೆಯ ನಡುಕುರುವದೊಳು ದಾಸಿವಾಳದ ಪುಷ್ಪದಿಂದ ಲಿಂಗಾರ್ಚನೆಯನಾಸರದೆ ಮಾಡುತಿರೆ (ಗುರುಚಾ. ೮-೬೩).
[ ದೇ. ಶ ತುಳು. ದಾಸನ, ದಾಸಾನೊ, ದಾಸಾಳೊ ; ತೆಲು. ದಾಸನ ]

**ದಾಸವರ್ಣ** (ನಾ). ನಾಲ್ಕು ವರ್ಣಗಳಲ್ಲಿ ಒಂದು; ಶೂದ್ರವರ್ಣ 'ದಸ್ಯು'ವೆಂದೂ 'ದಾಸವರ್ಣ'ದವನೆಂದೂ ಅವರು ಕರೆಯುವ ಈ ಶತ್ರುವಿನೊಡನೆ ಹೋರಾಡುವಾಗ ಅವರಿಗೆ ಜಯಗಳಿಸಿ ಕೊಡುವುದಕ್ಕೆ ಇಂದ್ರನಂಥ ಶೂರನಾದ ದೇವತೆಯೇ ಹೆಚ್ಚು ಪ್ರಿಯನಾದನು (ಭಾಕಿದ. ೨೦).
[ ದಾಸ + ವರ್ಣ ]

**ದಾಸವಾಙ್ಮಯ** (ನಾ). = ದಾಸಸಾಹಿತ್ಯ: ದಾಸವಾಙ್ಮಯದ ಬೆಳವಣಿಗೆಯಲ್ಲಿ ಚಾರಿತ್ರಿಕವಾಗಿ ನಾಲ್ಕು ಹಂತಗಳನ್ನು ಗುರುತಿಸಬಹುದು (ಜಗದಾ. ೫೦).
[ ದಾಸ + ವಾಙ್ಮಯ ]

**ದಾಸವಾಣ** 'ದಾಸವಣ' ನೋ.

**ದಾಸವಾಳ** 'ದಾಸವಣ' ನೋ.

**ದಾಸವೂಳಿಗ** (ನಾ). ಆಳಿನ ಕೆಲಸ: ದಾಸವೂಳಿಗಕ್ಕೆ ಯಾರೂ ಇಲ್ಲವೆಂದು . . . ಹೇಳಲಾಗಿ (ಮೈಶಿ. ೧೯೨೯, ೬-೯ ; 1678).
[ ದಾಸ + ಊಳಿಗ (< ಊೞಿಗ) ]

**ದಾಸಸಾಹಿತ್ಯ** (ನಾ). ಕನ್ನಡ ಸಾಹಿತ್ಯಪರಂಪರೆಯಲ್ಲಿ ಹರಿದಾಸರು ರಚಿಸಿದ, ಸಂಗೀತ ಪ್ರಧಾನವಾದ ಸಾಹಿತ್ಯರೂಪ; ದಾಸರ ಪದಗಳು: ದಾಸಸಾಹಿತ್ಯ ಭಕ್ತಿಮಾರ್ಗದ ಸಾಹಿತ್ಯದಲ್ಲಿ ಒಂದು ಮಹತ್ವದ ಸ್ಥಾನವನ್ನು ಪಡೆದಿದೆ (ಭಾಕಿದ. ೩೦೦): ದಾಸಸಾಹಿತ್ಯದಲ್ಲಿಶಬ್ದಗಳ ಜೋಡುಕಟ್ಟು ಬಹು ಸುಂದರವಾಗಿದೆ (ಜಗದಾ. ೭೦). [ ದಾಸ + ಸಾಹಿತ್ಯ ]

**ದಾಸಳ** 'ದಾಸವಣ' ನೋ.

**ದಾಸಾಣ** 'ದಾಸವಣ' ನೋ.

**ದಾಸಾವಿರ** (ನಾ). ಹತ್ತು ಸಾವಿರ: ಏಕ್ಕಂ, ದಾಹಂ, ಶತಂ, ಸಾವಿರ, ದಾಸಾವಿರ, ಲಕ್ಷ, ದಾಲಕ್ಷ . . . ಪರಿಮಿತ, ಮಹಾಪರಿಮಿತ–ಈ ೪೦ ಸ್ಥಾನದ ಉಗ್ಗಡಣೆ (ವ್ಯವಹಾ. ೮-೨೫); ದಾಸಾವಿರ, ಲಕ್ಷ, ದಹಲಕ್ಷ . . . ಇವು ೩೨ ವೃಥಗಣೆ ಹೆಸರುಗಳು (ಭಾಸ್ಕರ. ೦೦-೬).
[ ದಾ₂ (<ದಸ₂) + ಸಾವಿರ ]

**ದಾಸಾಳ** 'ದಾಸವಣ' ನೋ.

**ದಾಸಿ** (ನಾ). ೧. ಹೆಣ್ಣಾಳು; ಸೇವಕಿ; ತೊತ್ತು; ಪರಿಚಾರಿಕೆ: ದಾಸಿಯ ವರ್ಗದಲ್ಲೆಷ್ಟನು ಶಿವಶರಣರ ಮನೆಯಲ್ಲಿ (ಬಸವ. ೪೭೨); ಅರವಿಂದಗಂಧಿಯ ದಾಸಿ ತಾನೆಯಿತಂದವರ್ಗೆಗಱುಹಿದಳು (ಬಸಪು. ೪೧-೨೪). ೨. ಸೂಳೆ; ವೇಶ್ಯೆ. ೩. ಒಂದು ಬಗೆಯ ಗಿಡ: "ನೀಲೀ, ಝಿಂಟೀ, ಬಾಣಾ, ದಾಸೀ, ಆರ್ತಗಳ–೫. ಕರೀ ಹುವ್ವುಳ್ಳ ಗೋರಂಟದ ಹೆಸರುಗಳು" (ಸಿದ್ಧಾಂತಿ. ೦೨೪). [ ಸಂ. ದಾಸೀ ]

**ದಾಸಿಕೆ** (ನಾ). ಸೇವಕತನ; ದಾಸನಾಗಿರುವಿಕೆ: ಲಿಂಗಾಂಗ ಸಂಬಂಧ ಘಟಿಸಿದ ಶರಣ ತನುಮನ ಪ್ರಾಣೇಂದ್ರಿಯಗಳು ಮೊದಲಾದ ಅಜ್ಞಾನ ಪ್ರಪಂಚಿನ ವರ್ತನೆಯ ಆಸೆ ನಿವೃತ್ತಿಯಾಗಿತ್ತೆಂಬುದೀಗ ಹೊತ್ತ ದಾಸಿಕೆ ಹುಸಿಯಾಯಿತ್ತೆಂಬ ಶಬ್ದಕ್ಕರ್ಥ (ಗುಪ್ತಮಂ. ೦೫-೦೮೭): ನಾಸಿಕವನುಳ್ಳವನು ಹೋಗಲೆ ದಾಸಿಕೆಯ ನಮ್ಮಸುರರೊಳಗೆ ವಿನಾಶವಡೆದವನೊಬ್ಬ ನೀನೇ ಸಾರು ಹೋಗೆಂದ (ಪ್ರಹ್ಲಾದ. ೦೦-೨೦). [ ದಾಸ + – ಇಕೆ ]

**ದಾಸಿಗ** (ನಾ). (?) : ದೇಸಿಗನಪ್ಪನಂ ಭಯದಿ ನೋಡುವನಂ ಕರಮಂಜಿ ದಾತನಂ ದಾಸಿಗನಲ್ಲದಾತನನಣಂ ಧನಹೀನನನಂಜಿ ಕಾಗುವೆಂಬಾಸಿಯೊಳಂ ಚಿಯೆಂದು ಪುಲುಗರ್ಚಿದನಂ ಕೊಲಲಾಗದೆಂಬವಂ ಪೇಸದೆ ಪಾಳಿವುಳ್ಳ ನಿನಿತುಳ್ಳ ಮೃಗಂಗಳನೆಂತು ಕೊಲ್ವನೋ (ಪಶಾರ. ೨೯೮).
[ P ಇದು 'ದೇಸಿಗ' ಎಂಬುದರ ಅಪಲಿಖಿತವಿರಬಹುದೆ ? ]

**ದಾಸಿಗೆ** (ನಾ).=ದಾಸಿಕೆ (?) : ಶ್ರೀಸಂಕರದೇವರ ನಂದಾದೀವಿಗೆಗೆ . . . ಸಂಕರದಾಸಿವಿ ಕೊಟ್ಟ ದಾಸಿಗೆ ಸುಂಕದ ಹೆಗ್ಗಡೆ ಬೊಪ್ಪಡೆ ಒಳಗಾಗಿ ಸುಂಕ ಆಯದಾಯ ಸಮಸ್ತಮ ಸ್ಯೆವಾಧಿ ಧಾರಾಪೂರ್ವಕ ಮಾಡಿಬಿಟ್ಟರು (ಎಕ. III, ತ್ಮುಸೂರು. ೮-೦೪ ; 1176). [ <ದಾಸಿಕೆ ? ]

**ದಾಸಿಪತ್ರ** (ನಾ). ಊಳಿಗ ; ಸೇವೆ : ಬೀರವ್ವನ ಕಾಲಮಾನಿತುಂ ದಾಸಿಪತ್ರಕ್ಕೆ ನಿಂದರ್ (ಸೌಇಇ. XX, ೪೯-೨೩ ; 1076 ?).
[ P ಇದು 'ದಾಸಿಪಾತ್ರ' ಎಂಬುದರ ಅಪಲಿಖಿತವಿರಬಹುದು ]

**ದಾಸಿವಣ** 'ದಾಸವಣ' ನೋ.

**ದಾಸಿವಾಣ** 'ದಾಸವಣ' ನೋ.

**ದಾಸಿವಾಳ** 'ದಾಸವಣ' ನೋ.

**ದಾಸೀಪುತ್ರ** (ನಾ). ದಾಸಿಯ ಮಗ ; ತೊತ್ತು : ದಾಸೀಪುತ್ರನಾಗಲಿ ವೇಶ್ಯಾಪುತ್ರನಾಗಲಿ ಶಿವದೀಕ್ಷೆಯಾದ ಬಳಿಕ ಸಾಕ್ಷಾತು ಶಿವನೆಂದು ವಂದಿಸಿ ಪೂಜಿಸಿ ಪಾದೋದಕ ಪ್ರಸಾದವ ಕೊಂಬುದೆ ಯೋಗ್ಯ (ಬಸಹ. ४೦).
[ ಸಂ. ]

**ದಾಸೀಸುತ** (ನಾ). ತೊತ್ತಿನ ಮಗ ; ಸೇವಕಿಯ ಮಗ : "ಗೋಪ್ಯಃ, ದಾಸೀಸುತಃ-ಈ ೨ ತೊಟ್ಟಿನ ಮಗಂ" (ಹಲಾಯು. ೮೨-೩೮೭). [ ಸಂ. ]

**ದಾಸು** (ನಾ). ಸೇವಕ ; ದಾಸ : ದೇವರಿಗೆ ಹೂವಿನ ದಂಡೆಯ ಕಟ್ಟುವ ದಾಸುಗಳು ತಿರುವಮಾಳದಾಸನು ಹಿರಿಯದಾಸನು (ಎಕ. X, ಮಾಲೂರು. ೩-೨೨ ; 1431). [ <ದಾಸ ]

**ದಾಸೆ** (ನಾ). ಮಚ್ಚೆ : ಆ ಕೋಣನ ಮಂಡದ ಮೇಲೆ ಸೂರ್ಯಪಾನ ಹೂವಿನಂತೆ ಬಿಳಿ-ಹಳದಿ ಕೂದಲಿನ ದೊಡ್ಡ ದಾಸೆ (ಮಚ್ಚೆ)ಯಿತ್ತು (ಕಂಬಹು. ४३). [ ? ]

**ದಾಸೆಯ** (ನಾ). ಒಬ್ಬಾತನ ಹೆಸರಂ (?) : ಶ್ರೀ ಸಿದ್ಧೇಶ್ವರದೇವರ ಪಾದಾರಾಧಕರುಮಪ್ಪ ನಾಡಿಗ ದಾಸೆಯನ ಮಗಂ ಬಾರಿಕೆ ಬೆದ್ದಮನು ತನಗಂ ಮುಕ್ತಿಪದಾರ್ತ್ಥವಾಗಿ . . . ಸುರಲೋಕಪ್ರಾಪ್ತನಾದಂ (ಎಕ. VII, ಶಿವಮೊ. ೩೮-೩ ; ?). [ <ದಾಸಯ್ಯ ]

**ದಾಸೆಯನಾಯಕ** (ನಾ). ಒಬ್ಬಾತನ ಹೆಸರಂ : ಎಲವಟ್ಟಿಯ ದಾಸೆಯ ನಾಯಕನ ನಿಸಿದ್ಧಿಯಪ್ಪ ಭೂಮಿಯಿದು (ಎಕ. VII. ಶಿವಮೊ. ೩೮-೩; ?).
[ ದಾಸೆಯ + ನಾಯಕ ]

**ದಾಸೇಯ** (ನಾ). ಸೇವಕ ; ಆಳು : ನಿನ್ನಂತಹ ಪ್ರಧಾನನಾದರೆ, ಬ್ರಹ್ಮ ಸಭೆಯೂ ದೀನದಾಸೇಯ ಸ್ತುತಿಪಾಠಕರ ಸಂತೆಯಾಗುವುದು (ಮುಂತ್ರಕ. ೨೦-೧೩). [ ಸಂ. ]

**ದಾಸೇರ** (ನಾ).=ದಾಸೇಯ : "ಭೃತ್ಯಃ, ದಾಸೇರಃ, ದಾಸೇಯಃ, ದಾಸಃ . . . ಪರಿಚಾರಕಃ - ೧೧ ಬಂಟನ ಪೆಸರು, ಚಾಕರಿಯವನು" (ಸಿದ್ಧಾಂತಿ. ೩೦೨). [ ಸಂ. ]

**ದಾಸೇರಕ** (ನಾ). ೧. ಪರಿಚಾರಿಕೆಯ ಮಗ ; ತೊತ್ತಿನ ಮಗ ; ಆಳು ; ಸೇವಕ: "ದಾಸಃ, ದಾಸೇರಕಃ-ಈ ೨ ತೊ(ಟ್ಟಿ)ತ್ತಿನ ಮಗಂ" (ಹಲಾಯು. ೬೦-೨೦೦) ; ಅಂತಃಪುರದಾಸೇರಕನನೇಟಿ ಕಿಂಚಿದಾಕುಂಚಿತಾಗ್ರ ತರ್ಜನೀ ನಿಶಿತಾಂಕುಶನಂತಃಪುರಪ್ರಮದವನಪ್ರವಿಷ್ಟನಾಗಿ (ಆದಿಪು. ೮-೪೦ ವ) ; ಈ ಸಕಲ ಧರೆಯನುಗ್ರಭೂಜಾಸಿಯೊಳಳವಡಿಸಿ . . . ರಿಪುದಾರಕರಂ ದಾಸೇರಕರೆನೆ ಪೊಡರ್ಪುಗಿಡೆ ನಡೆಯಿಸಿದಂ (ಪಂರಾಮಾ. ೨-೬೦) : ಒರ್ವ ಭಕ್ತಂ ವೃಥಾ ಗೃಹಗೃಹಕ್ಕೆ ಮುಂಕೊಂಡು ದಾಸೇರಕನ ಪೊಂಗಿನಿಂ ಪೋಗಿ (ಕೊಟ್ಟೂಬ. ೧೬-೬೬). ೨. ಒಂಟೆ : "ದಾಸೇರಕಃ, ಕ್ರಮೇಳಕಃ, ಉಷ್ಟ್ರಃ, ಮಯಃ, ರವಣಃ, ಕರಭಃ, ಶೃಂಖಳಕಃ - ಈ ೭ ಒಟ್ಟೆ" (ಹಲಾಯು. ४೬-೦೨೩) ; ಅಂತಕನ ದೆಸೆಗೆ ದಾಸೇರಕವನೇಱಿ ಪೋಪಂ (ಚ್ಯಮಿಥಃ. ೨४-४೬). [ ಸಂ. ]

**ದಾಸೊತ್ತು** (ನಾ). ಶಕ್ತಿ ; ತಾಕತ್ತು ; ಸಾಮರ್ಥ್ಯ : ಬಾಯೊಳ್ಳಸಂಗವು ನ್ಮಾಡಿದರೆ ದಾಸೊತ್ತು ಸಾಲದ್ಯೆ ತನಗೆಂದನು (ಕುರಂಗ. ೮೩-೨೦). [?]

**ದಾಸೋಗ** (ನಾ). ಜಂಗಮ ಭೋಜನ ; ಪುಣ್ಯಸಂಪಾದನೆಗಾಗಿ ಜಂಗಮರಿಗೆ ಮಾಡುವ ಊಟದ ಸಮಾರಾಧನೆ : ಊರಲ್ಲಿಯ 'ದಾಸೋಗ'ದಲ್ಲಿ ಅವರಿಗೆ ಅನ್ನದ ವ್ಯವಸ್ಥೆ ಮಾಡಿಯೋ ವಾರದ ಮನೆಗಳಲ್ಲಿ ಕೆಲವರನ್ನು ಕಳಿಸಿಯೋ ಅವರ ಉಪಜೀವನ ಸಾಗಿಸುತ್ತಿದ್ದರು (ಋುಗಿಪು. ೬): ಆಗ ಭಿಕ್ಷಾನ್ನಗಳಿಂದ ತೃಪ್ತವಾಗುತ್ತಿದ್ದ ಶಿಷ್ಯರು ಈಗ ಆ ಅನ್ನವನ್ನು 'ದಾಸೋಗ'ದಲ್ಲಿ ವಾರದ ಮನೆಗಳಲ್ಲಿಯೂ ಪಡೆಯುತ್ತಿದ್ದಾರೆ (ಹಬ್ಬಲ. ೧೯४) : ನಿಮ್ಮಂತ ಕುಡುಕರಿಗೆಲ್ಲಿಂದ ತರಲಿ ಕೂಳು ? ಇಲ್ಲೇನು ದಾಸೋಗ ನಡೆಯುತ್ತದೆಯೇ (ಹವನ. ೬). [ <ದಾಸೋಹ ]

**ದಾಸೋಹ** (ನಾ). ೧. ನಾನು ದಾಸನೆಂಬ ಭಾವನೆ : ಪ್ರಸಾದಲಿಂಗ ಭಕ್ತನಾದೊಡೆ ದಾಸೋಹವಿಲ್ಲದಿರಬೇಕು (ಆರವ. ೮-೦೩) ; ಸಂಕಟವೆ ಇಲ್ಲದವಗೆ ವೆಂಕಟನು ಬೇಕೆ ಸಂತೋಷವುಳ್ಳವಗೆ ದಾಸೋಹವೇಕೆ ? (ಗಹೀಕ. ೭೦-೦೨). ೨. = ದಾಸೋಗ : ಯಾ ಮಠದಲ್ಲಿ ಕಟ್ಟಿಸಿದ ಅಡಿಗೆ ಮನೆ ಉಗ್ರಾಣದ ಮನೆಯೂ ಈ ತೋಟದ ಸ್ವಾಮಿಯ ದಾಸೋಹಕ್ಕೆ ಸಲುವದು (ಎಕ. XVI, ಕುಣಿಗ. ४೯ ४೦ ; ಸು. 1480) ; ಬೆಳಸು ದವಸಗಳನ್ನು ಮಠದ ದಾಸೋಹಕ್ಕೆ ಕೊಡುತ್ತಾನೆ (ಕನ್ನಡಾ. ೫). ೩. [ ವೀಶೈ] ಕಿಂಕರಭಾವದಿಂದ ಮಾಡುವ ಗುರು ಲಿಂಗ ಜಂಗಮ ಸೇವೆ: ಅಯ್ಯಾ ನಿಮ್ಮ ಶರಣರ ದಾಸೋಹಕ್ಕೆ ಎನ್ನ ತನು ಮನ ಧನವಲಸದಂತೆ ಮಾಡಯ್ಯ (ಬಸವ. ४೩೮) ; ನಿಮ್ಮ ಜಂಗಮವನುದಾಸೀನವ ಮಾಡಿ ದಾಸೋಹವಿಲ್ಲದ ಅತಿದೂಷಕದ್ರೋಹಿ ನಾನಯ್ಯ (ಉರಿವ. ೩೩-೩೮) : ಸವಿನಯಂಗಳ ಮೇಟಿ ದಾಸೋಹವನಲರ್ಚುವ ಬೇಟಿ ಮೃತ್ಯುವ ಜವನ ಮಾರಿಯ ದಾಟಿ ವೇದಾಂತಾದಿಗಳ ಪಾಟಿ (ಬಸಪು. ೬-೦೦). [ <ದಾಸ ೱಹಂ ]

**ದಾಸೋಹಂ** (ನಾ). ನಾನು ದಾಸನೆಂಬ ಭಾವನೆ: ಸೋಹಮನ್ನಬೇಡೆಲೊ ದಾಸೋಹವೆಂದು ಪೇಳಲವೊ (ಪುರಂದ. ೦-೦೬೫-೦) : ಸೋಹಂ ಎಂದಡೆ ಅಂತರಂಗದ ಗರ್ವ ಶಿವೋಹಂ ಎಂದಡೆ ಬಹಿರಂಗದ ಅಹಂಕಾರ ಈ ಉಭಯವನಳಿದು ದಾಸೋಹಂ ಎಂದಡೆ ಪರಮಪದವು (ಅಖಂಡೇ. ೮೦-೬೧).
[ P ಸಂಸ್ಕೃತದಲ್ಲಿ 'ದಾಸಃ ಅಹಂ' ಎಂಬುದು ಒಂದು ವಾಕ್ಯ. ಕನ್ನಡದಲ್ಲಿ ಇದು ಒಂದು ಪದವಾಗಿ ಬಳಕೆಯಾಗಿದೆ]

**ದಾಸೋಹಂಭಾವ** (ನಾ). ದಾಸನ ಭಾವನೆ; ಭಕ್ತಭಾವ: ಸರ್ವಪದಾರ್ಥಗಳನ್ನೂ ಶಿವನಿಗರ್ಪಿಸುವ ಸಮರ್ಪಣಕ್ರಿಯೆಯಲ್ಲಿ ಮಾತ್ರ 'ದಾಸೋಹಂ' ಎಂದರೆ, ನಾನು ಶಿವನ ದಾಸನು ಎಂದು ಸರ್ವಾಚರಣೆಯನ್ನು ನೆರವೇರಿಸತಕ್ಕದು, ಹೀಗೆ ಆಚರಿಸುವುದೇ ದಾಸೋಹಂಭಾವವು (ಶಿವಾಸೂ. ೦೨೧) ; ದಾಸೋಹಂಭಾವಮನುಳಿದಾ ಸೋಹಂಭಾವದೆಡೆಗಾ ಮನವಿಕ್ಕದೆ ನೀಂ ಲೇಸನೊಡರ್ಚಿದೆ ಭಲರೆ (ವೃಷವಿ. ೨೩-४೨) : ದಾಸೋಹಂಭಾವವನೆ ಕರುಣಿಸಿ ಬದುಕಿಸಯ್ಯ (ಅಖಂಡೇ. ೮೦-೬೧). [ ದಾಸೋಹಂ + ಭಾವ ]

**ದಾಸೋಹತನ** (ನಾ). ದಾಸನಾಗಿರುವಿಕೆ ; ಸೇವಾವೃತ್ತಿ : ಹದುಳಿಗರು ದಾ ಸೋ ೕ ಹ ತ ನ ದ ಲಿ ವಿದಿತಕಾಮಕ್ರೋಧಲೋಭಾಸ್ಪದವಿರಹಿತರ ವರ್ಗಳಿರವಂ ಕೇಳು (ಬಸಪು. ೨४-४೨); ಬೇಡಿದವರಿಗೆ ಬೇಡಿತನು ಕೈಗೂಡಿಸುವ ದಾಸೋಹತನದಲಿ ಮಾಡುತಿರ್ದನು (ಪ್ರಭುಲೀ. ೯-೨೬).
[ ದಾಸೋಹ + - ತನ ]

**ದಾಸೋಹಭಾವ** (ನಾ). = ದಾಸೋಹಭಾವನೆ: ಈಚೀಚೆಗೆ ಜನರಲ್ಲಿ ದಾಸೋಹಭಾವ ಕಡಮೆಯಾಗುತ್ತಿದೆ (ರೂಢಿ). [ ದಾಸೋಹ + ಭಾವ$_2$ ]

**ದಾಸೋಹಭಾವನೆ** (ನಾ). ಭಕ್ತಭಾವ; ದಾಸನ ಭಾವ : ವ್ರಜನರಹಿತನು ಲಿಂಗಜಂಗಮಭಜನಶೀಲನೆನಲ್ಕೆ ಭಕ್ತವ್ರಜದೊಳಗೆ ದಾಸೋಹಭಾವನೆಯಿಂದ ಪೇಪೆಸೆದು (ಬಸಪು. ೩೦-೩). [ ದಾಸೋಹ + ಭಾವನೆ ]

**ದಾಸೋಹಿ** (ನಾ). [ವೀಶೈ] ದಾಸನೆಂಬ ಭಾವದಿಂದ ಸೇವಾಪ್ರವೃತ್ತಿಯಲ್ಲಿ ತೊಡಗಿರುವವನು ; ಕಿಂಕರಭಾವವುಳ್ಳವನು; ಭಕ್ತ : ಮನದ ಕೊನೆಯ ಮೊನೆಯ ಮೇಲೆ ಮನೆಯ ಮಾಡಿಕೊಂಡಿಪ್ಪನೊಬ್ಬ ದಾಸೋಹಿ (ಬಸವ. ೮೦೩) ; ವೇಷ ನಿರ್ವಯಲಾಗಿ ಆಶೆ ರೋಷವ ಬಿಟ್ಟು ದಾಸೋಹಿಯಾಗಿದ್ದರೆ ಗುಹೇಶ್ವರಲಿಂಗವು ತಾನೇ (ಅವಚಂ. ೨೦೩-೯೨೨) ; ಮುಂದ ನೆನೆಸದ ದಿನದಿನಕೆ ಪರಮಾಯು ಸಲೆ ಸಂದುದೆನಿಪಾ ದೃಢತೆ ನೆಲಗೊಂಡು ಚರಲಿಂಗಕಂದಂದಿಗೇನುವಂ ವಂಚಿಸದ ಮಾಡುತಿಹ ದಾಸೋಹಿ ಸದ್ಭಕ್ತನು (ಶಿವಗೀ. ೦೫-೫೯) ; ಬೆಂದುದನು ಬಿತ್ತಿ ಬೆಳೆದುಂಬ ದಾಸೋಹಿ ಇಂದುಧರ ನಕ್ಕು (ಸರ್ವಜ್ಞ. ೬೦೦). [ ದಾಸೋಹ + –ಇ$_3$ ]

**ದಾಸೋಹಿತನ** (ನಾ).=ದಾಸೋಹತನ: ಕುಸುಮಶರನುಪಟಳಕೆ ಸೊಂದು ಬಂದವನಲ್ಲ . . . ನಿನ್ನ ದಾಸೋಹಿತನವಾ ವಸುಧೆಯೊಳು ಹಿಸುಕಿ ವಸರಿಸೆ ಬಂದೆನು (ಸಿದ್ಧೇಶು. ೦೦-೩೫). [ ದಾಸೋಹಿ + –ತನ ]

**ದಾಸ್ತಾನು** (ನಾ). ಸಂಗ್ರಹ; ಶೇಖರಣೆ; ಶೇಖರಿಸಿಟ್ಟ ಸಾಮಾನು,–ಸರಕು : ದಾಸ್ತಾನುಗಳ ಲೆಕ್ಕ ಸರಿಯಾಗಿಲ್ಲವೆಂದು ಎರಡು ಮೂರು ಸಾರೆ ಆಡಳಿತದವರು ರಾಮಕೃಷ್ಣಯ್ಯನಿಗೆ ಎಚ್ಚರಿಕೆ ಕೊಟ್ಟದ್ದರು (ರಂಗವ. ೨೭೨); ಗ್ರಾಮನೌಕರರಲ್ಲೂ ದಾಸ್ತಾನನ್ನು ಇಡುತ್ತಿದ್ದೆ (ಕಲಿತ. ೨೪೦) ; ಮುಂದಿನ ಓಟನ ಬೇಟೆಯ ಕಾಲದಲ್ಲಿ ಈ ಕಸವೇ ಕೈಮಾಡಿ ಕೋರಿಸೋ ದಾಸ್ತಾನು (ಮಾಡುನಿ. ೬೭) : ಸ್ವಲ್ಪ ದವಸ, ದಾಸ್ತಾನು ಇಟ್ಟುಕೊಂಡಿದ್ದಾರೆ (ಪಾಂತ್. ೨೪೭). [ ←ಮರಾ. ದಾಸ್ತಾನ್; ಪಾರ. ದಾಶ್ತನ್ ]

**ದಾಸ್ತಾನಿಡು** (ಕ್ರಿ). ಸಂಗ್ರಹಿಸಿ ಇಡಂ; ಕಾಯ್ದಿಡಂ: ಅಕ್ಕಿಯನ್ನು ಬಹಳ ಆರೋಗ್ಯಕರಸ್ಥಿತಿಯಲ್ಲಿ ದಾಸ್ತಾನಿಡಬೇಕು (ಅಡುಸಾ. ೬೪). [ ದಾಸ್ತಾನು + ಇಡು$_1$ ]

**ದಾಸ್ಯ** (ನಾ). ೧. ಸೇವಕತನ ; ಆಳುತನ ; ಗುಲಾಮಗಿರಿ ; ಅಧೀನತೆ: ನಮ್ಮಲ್ಲಿಯ ಮನೋದಾಢ್ಯ, ಸ್ವಾರ್ಥ ... ನಮ್ಮ ದಾಸ್ಯಕ್ಕೆ ಕಾರಣವಾಗಿವೆ (ಧರ್ಮಸಾ. ೩೨) ; ದ್ವೈತವೇದಾಂತದಲ್ಲಂತೂ ಮುಕ್ತನಿಗೆ ಪರಮಾತ್ಮನ ದಾಸ್ಯವು ಮುಕ್ತಿಯಲ್ಲೂ ತಪ್ಪುವಂತಿಲ್ಲ (ಕಕೈವಿ. ೦೯). ೨. ನವವಿಧವಾದ ಭಕ್ತಿಗಳಲ್ಲಿ ಒಂದು ; ದಾಸನೆಂಬ ಭಾವದಿಂದ ಮಾಡುವ ಭಕ್ತಿ : "ಶ್ರವಣಂ, ಕೀರ್ತನಂ, ವಿಷ್ಣೋಃಸ್ಮರಣಂ, ಪಾದಸೇವನಂ, ಅರ್ಚನಂ, ವಂದನಂ, ದಾಸ್ಯಂ, ಸಖ್ಯಂ, ಆತ್ಮನಿವೇದನಂ" ಎಂಬ ೯ ವಿಧ ಭಕ್ತಿಯಿಂದ ಪರಮಾತ್ಮನನ್ನು ಭಜಿಸುತ್ತಾರೆ (ಹಸಾರ. ೨೦-೩೦ ತಾತ್ಪರ್ಯ). [ಸಂ.]

**ದಾಸ್ಯದೀಕ್ಷೆ** (ನಾ). ಸೇವಕನಾಗುವಿಕೆ ; ಗುಲಾಮಗಿರಿ : ಎಮ್ಮಂ ಗೆಲ್ದು ದಾಸ್ಯದೀಕ್ಷೆಯನೀಯೆ ಪೂಣ್ದು ತರಿಸಂದು ಬೀಡುಬಿಟ್ಟಿಹರಲ್ಲಿ (ಶ್ರೀರಾಮಾ. ೩೩೩-೯೬). [ ದಾಸ್ಯ + ದೀಕ್ಷೆ ]

**ದಾಸ್ಯಪದ್ಧತಿ** (ನಾ). ಮನುಷ್ಯರನ್ನು ಕೊಂಡುಕೊಂಡು ಆಳಾಗಿ ದುಡಿಸಿಕೊಳ್ಳುವ ಪದ್ಧತಿ ; ಗುಲಾಮಗಿರಿಯ ಪದ್ಧತಿ : ಅನಾಗರಿಕ ದಾಸ್ಯಪದ್ಧತಿಯ ಅವನತಿಗೆ ಅದು ನಾಂದಿಯಾಗಿತ್ತು (ಪುನರು. ೨೬೨). [ ದಾಸ್ಯ + ಪದ್ಧತಿ ]

**ದಾಸ್ಯಶೃಂಖಲೆ** (ನಾ). ಆಳುತನದ ಬಂಧನ; ಗುಲಾಮಗಿರಿಯ ಬೇಡಿ,–ಸರಪಣಿ : ವಿಶ್ವಬಂಧು ಪ್ರವಿಮಾತೃಸ್ನೆ ಉಂಟಾದ ಈ ದಾಸ್ಯಶೃಂಖಲೆ ಘೋರಶಿಕ್ಷೆ ವೇದನೆಯ ತೀಕ್ಷ್ಣತೆ ವಿಶ್ವಪ್ರಕೃತಿಯಲ್ಲಿ ತಳಮಳದ ಹೊನಲಬ್ಬಿಸಿತು (ಐದ್ಯಶ್ರ. XVI ಏ೬೪೪). [ ದಾಸ್ಯ + ಶೃಂಖಲೆ ]

**ದಾಹ$_1$** 'ದಸ್ಯ$_3$' ನೋ.

**ದಾಹ$_2$** (ನಾ). ೧. ಉರಿ ; ಕಿಚ್ಚು. ೨. (ಮನಸ್ಸಿನ) ತಾಪ ; ಬೇಗೆ : ಅರಿಗನ ಬೇಟದೊಂದೆ ಪೊಸಬೇಟದ ಕೇಸರಿಯಿಂದಮೆಯ್ದು ದಳ್ಳುರಿ ನೆಗೆದಂದು . . . ಕೆಳದಿಯರನದಿಪ್ಪುತ್ತಿರೆ ನೋಡೆ ದಾಹಮೊತ್ತರಿಸಿದುದೊಂದು ಪೊನ್ನ ಸಲಗಿರ್ಪವೊಲಿರ್ದುದು ಮೆಯ್ ಸುಭದ್ರೆಯಾ (ಪಂಪಭಾ. ೩-೮). ೩. ನೀರಡಿಕೆ ; ಬಾಯಾರಿಕೆ ; ತೃಷ್ಣೆ : ಜಾಹ್ನವಿಯೊಳಾಳ್ದಂಗೆ ದಾಹಮೆತ್ತಣದು (ಕೃಮಿಥಾ. ೦೪-೩೦) ; ತೃಷ್ಣೆಯೆಂದೊಡಂ, ದಾಹವೆಂದೊಡಂ, ಬಾಯಾರಿಕೆಯೆಂದೊಡಂ ನೀರಡಿಕೆಯೆಂದರಿವುದು (ಸಕವ್ಯ. ೨೮೨) ; ನನಗೆ ಬಹಳ ದಾಹ ಆಗಿದೆ (ಮುನಿಪ್ರಾ. ೦೦೭). ೪. ತೀಕ್ಷ್ಣವಾದ ಆಕಾಂಕ್ಷೆ ; ತೀವ್ರವಾದ ಅಭೀಪ್ಸೆ. [ಸಂ.]

**ದಾಹಕ** (ಗು). ೧. (ವಸ್ತುಗಳನ್ನು) ದಹಿಸುವ ; ಸುಡುವ. 'ದಾಹಶಕ್ತಿ' ಪರಾ. (ನಾ). ೨. ಬೆಂಕಿ ; ಅಗ್ನಿ : ದಾಹಕದೊಳಂ ನೆಲೆಯಹ ಪ್ರಾಕಾಶತಮುಮೆನಿಸಿಯಲ್ಲಿಯುಂ ಶಿಖಿಯಂಶದಿಂ ಪ್ರಕಾಶದೊಲವಾಗಿ ಲೋಹಾಂಶದಿಂ ಪ್ರಕಾಶ್ಯಮುಮಾಗುತಲೆ (ವೀಕೈಶು. ೩-೪-೦೬). [ಸಂ.]

**ದಾಹಕಶಕ್ತಿ** (ನಾ). ಸುಡುವ ಸತ್ವ ; ದಹಿಸುವ ಶಕ್ತಿ : ತೇಜಸ್ಸಿನಲ್ಲಿ ದಾಹಕಶಕ್ತಿಯೂ, ವಾಯುವಿನಲ್ಲಿ ಚಲನಶಕ್ತಿಯೂ . . . ಸ್ವಾಭಾವಿಕವಾಗಿ ನೆಲೆಸಿರುವುದನ್ನು . . . ಕಾಣಬಹುದಾಗಿದೆ (ಕಕೈವಿ. ೩೦). [ ದಾಹಕ + ಶಕ್ತಿ ]

**ದಾಹಗೊಳ್ಳು** (ಕ್ರಿ). ಬಾಯಾರಿಕೆಯನ್ನು ಹೊಂದು : ದಾಹಗೊಂಡಿದ್ದ ನಾಲಗೆಗೆ ಎಳನೀರು ಬಹಳ ರುಚಿಯಾಗಿ ಕಾಣಿಸಿತು (ರೂಢಿ). ೨. ತೀಕ್ಷ್ಣವಾದ ಬಯಕೆಯನ್ನು ಹೊಂದು : ಸಂಪೂರ್ಣವಿಷಯವನ್ನು ತಿಳಿಯುವವರೆಗೆ ದಾಹಗೊಂಡ ಅವರ ಮನಸ್ಸು ತಣಿಯುವುದಿಲ್ಲ (ರೂಢಿ). [ ದಾಹ$_2$ + ಕೊಳ್ಳು$_1$ (<ಕೊಳ್$_1$) ]

**ದಾಹಜ್ವರ** (ನಾ). ೧. ತೀವ್ರವಾದ ಉಷ್ಣದಿಂದ ಉಂಟಾಗುವ ಜ್ವರ : ಜೇನಿಕರ್ಪೂರ, ಯಷ್ಟಿಮಧುಕ . . . ಅಕ್ಕಿಗಟ್ಟಿನಿಂದರೆದು ಕುಡಿಯೆ ದಾಹಜ್ವರ ಪರಿಹಾರವಾಗುವುದು (ಸಕವ್ಯ. ೬೬) : ನಾಭಿ ೭ ಭಾಗ, ಗಂಧಕ ೬ ಭಾಗ, ಉಮ್ಮತ್ತದ ಬೀಜ ೪ ಭಾಗ . . . ರಸದಲ್ಲಿ ಮರ್ದಿಸಿ ಹೆಸರುಗಾತ್ರದ ಗುಳಿಗೆಯಂ ದಾಹಜ್ವರಕ್ಕೆ ಕೊಡುವುದು (ವಿಪ್ರವಿ. ೯೬). ೨. (ಅಲಂ) ವಿರಹ ಜ್ವರ : ವಾರಿಜ ಮಳಯಜ ಮಳಯಸಮೀರಣಂ ಚಂದ್ರಾಂಶು ಚಂದ್ರಕಾಂತ ದ್ರವಕರ್ಪೂರ ಮೃಣಾಲಾದಿಗಳುಂ ಬಾರಿಸಲಾಱವೆ ದಲವನ ದಾಹಜ್ವರಮಂ (ಆದಿಪು. ೨-೦೩); ದಾಹಜ್ವರಮುರಿಯುತ್ತಿರಲ್ ಚಂದನದ್ರವ್ಯಾದಿ ಶೀತಲಕ್ರಿಯೆಯುಂ ಸಂತಾಪಮನೆಂತುಂ ಆಱಿಸಲಾಱದೆ ಇರೆ (ಜಾಪುಂಪು. ೦೩). [ ದಾಹ$_2$ + ಜ್ವರ ]

**ದಾಹಜ್ವರಕಲ್ಕ** (ನಾ). ದಾಹಜ್ವರವನ್ನು ನಿವಾರಿಸಲು ತಯಾರಿಸಿದ ಔಷಧದ್ರವ್ಯ : ದಾಹಜ್ವರಕಲ್ಕ – ಕೇದಿಗೆ ಬೇಳಿನ ರಸದಲ್ಲಿ ನೆಲದಾಳವನ್ನರೆದು ಕುಡಿಯೆ ದಾಹಜ್ವರ ಪರಿಹಾರವಾಗುವುದು (ಸಕವ್ಯ. ೬೬). [ ದಾಹಜ್ವರ + ಕಲ್ಕ ]

**ದಾಹಣೆ, ದಾವಣ$_1$, ದಾವಣ್ಯ, ದಾವಣೆ** (ನಾ). ರಾಕ್ಷಸರ ಕತ್ತಿ ; ದೊಡ್ಡ ಕತ್ತಿ: "ರಕ್ಕಸಗತ್ತಿಯೊಳೆ ದಾಹಣೆಯೆನಲ್ಪಡೆಗುಂ" (ಕರ್ಣಾನಿ. ೦೩). **ದಾವಣ$_1$** : ದೇವಸತ್ರುವದ ವಜ್ರಾಂಗಿ ಸೀಸಕ ಮೇಲಾವರಿಸಿದ ಲೋಚು ಸುರಗಿ ದಾವಣ ಕರಣನಿಗ್ರಹವೆನೆ (ವರ್ಧಚ.೦೦-೯೩). **ದಾವಣ್ಯ**: 'ದಾವಣಿಗೆ' ಪರಾ. **ದಾವಣೆ** : ಕೊಡಲಿ ಕತ್ತಿ ಕುಡುಗೋಲು . . . ಕೊಂತ ದಾವಣೆ ಮೊದಲಾದಾಯುಧಂಗಳ್ (ಪ್ರಾವಕಾ. ೦೪೦-೦೦). 'ಡಾಕಿನಿ' ಪರಾ. [ ? ]

**ದಾಹನ** (ನಾ). ೧. ಸುಡಿಸುವುದಂ; ದಹಿಸುವಂತೆ ಮಾಡುವುದಂ. 'ದಾಹನಕರ್ಮ' ಪರಾ. ೨. ಬರೆಯೆಳೆಯುವುದಂ ; ಬರೆ ಹಾಕಂ

ವುದು : ತಾಂತ್ರಿಕ ವೈದಿಕವೆಂಬೆರಡು ಪೂಜಾಭೇದಂಗಳಂ ಶೋಷಣ ದಾ[ಹಾಕಾಂ. ದ]ಹನ ಪ್ಲಾವನಗಳೆಂಬ ಮೂಱು ಕ್ರಿಯೆಗಳಂ (ವಿವೇಕ. ೧೦೩). ೩. ಒಂದು ಬಗೆಯ ಆಯುಧ ವಿಶೇಷ: ಬಿಲ್ಲು ತೀರು . . . ದಾಹನ ಶಲಲೀ ಭಲ್ಲ . . . ಮಾಯೂರಿ, ಖೇಟಕ ಮುಂತಾದ ಶತ್ರುಜಯಾತ್ಮ ರಕ್ಷಾಧಿಸಾಧನ ವಿಶೇಷಂಗಳಿಂದಲುಂ (ವಿವೇಕ. ೨೬.೨). [ ಸಂ. ]

**ದಾಹನಕರ್ಮ** (ನಾ). =ದಹನಕರ್ಮ: ನೂತನ ಮನೋಜನಾ ಖಳಪತಿಯ ಮರ್ದಿಸಲು . . . ದಾಹನಕರ್ಮವಂ ಗೈಸಿ (ನವಮೋ. ೦೩-೫).
[ ದಾಹನ + ಕರ್ಮ ]

**ದಾಹನಿವಾರಣೆ** (ನಾ). ನೀರಡಿಕೆಯಂನ್ನು ಹೋಗಲಾಡಿಸಿಕೊಳ್ಳುವುದು; ಬಾಯಾರಿಕೆಯನ್ನು ಪರಿಹರಿಸಿಕೊಳ್ಳುವುದು : (*).
[ ದಾಹ೨ + ನಿವಾರಣೆ ]

**ದಾಹರೋಗಿ** (ನಾ). ನೀರಡಿಕೆಯಿಂದ ಬಳಲುತ್ತಿರುವ ರೋಗಿ : ಪಿತ್ತರೋಗಿ, ಜ್ವರರೋಗಿ, ಹಸಿದವನು, ದಾಹರೋಗಿ . . . ಮೇಹ ರೋಗಿ ಇವೇ ಮೊದಲಾದ ರೋಗವುಳ್ಳವರು ಮರ್ದನಕ್ಕೆ ಅಯೋಗ್ಯರು (ಸಕಳವೈ. ೩೦). [ ದಾಹ೨ + ರೋಗಿ ]

**ದಾಹಿಕಾಶಕ್ತಿ** (ನಾ). ಸುಡುವ ಶಕ್ತಿ ; ದಹಿಸುವ ಸಾಮರ್ಥ್ಯ : ಸತಿಯ ವಿಶುದ್ಧಾಚಾರಂ ಹುತಾಶನ ಪ್ರಬಲದಾಹಿಕಾಶಕ್ತಿಯುಮಂ ಪ್ರತಿಬಂಧಿಸಿ ದುದು ಚೋದ್ಯಮೆ (ಶಂಕರಾಮಾ. ೦೭-೨೯). [ ಸಂ. ]

**ದಾಹಿಣಿ** (ನಾ). (ವಿರಹವೇಬ) ದಾಹದಿಂದ ಬಳಲುತ್ತಿರುವವಳು ; ತಾ ಪ ದಿಂ ದ ನೋಯುತ್ತಿರುವವಳು : ಅವರೆಲ್ಲ ಅಲ್ಲಿ ಬಂದು ಸುವಾಸನೆಯ ನೀರಿನ ಸಾಗರವನ್ನೇ ನಿರ್ಮಿಸಿದ್ದರು ! ಆದರೂ ಆ ದಾಹಿಣಿಯ ತಾಪ ತಣಿಯುತ್ತಿರಲಿಲ್ಲ (ಕಂಬಚು. ೩೦). [ ? ]

**ದಾಹಿಸು** (ಕ್ರಿ). ದಹಿಸು ; ಸುಡು ; ತಾಪವನ್ನುಂಟುಮಾಡು : ವಿಜಯಪಟಹವಂ ಪೊಯ್ಸಿ ಕೋಳ್ಕೊ[ಡೆಯಂ] ಬೆಳಸಿ ಬೀಡಂ ಬಿಟ್ಟರ್ದು ವಿಶ್ವಾವಸು ಮೊದಲಾಗೆ ಸತ್ತ ನಾಯಕರಂ ದಾಹಿ [ಹಾಕಾಂ. ಜಾನಿ]ಸ ವೇಟ್ಟು (ಬಂಹಿರಿ. ೭-೭೦ ಪ); ದುಃಖಸೌಖ್ಯದ ತಾರತಮ್ಯತೆಯಂ ಉಸುರಂ ಪಸರಣವಿಲ್ಲದೆ ಎನ್ನುಬ್ಬಸದ ಭೀತಿಯ ಬೇಗೆ ಮಿಗೆ ದಾಹಿಸುವುದೈ ಕಾರುಣ್ಯ ನಿಧಿಯೆಂದೊರಲಿದಳು (ಶುದ್ಧಾಸ. ೦೯-೦೨೮) : ಬಲು ಝಳದ ರಥವಾಡಿ ಯನಟ್ಟಿದನು ದೆಸೆದೆಸೆಗೆ ದಾಹಿಸಲು ನೆಳಲು ಹೊಗಿಸಿದನೆಲ್ಲರನು ಜಕ್ಕುಲಿಸಿ ಜಗವನು ಸುರಿದು ಬಿಸಿಲನು ಬೆಳೆಯಿಸಿದನು ಗ್ರೀಷ್ಮಋತು ಬೆದಱಿಸಿ ಜಗತ್ರಯವ (ನಿಭಾಗ. ೦೦-೦೮-೨). [ ದಾಹ್ಯ + – ಇಸು ]

**ದಾಹೀರೆ** (ನಾ). ಒಂದು ಬಗೆಯ ಔಷಧಿ ಸಸ್ಯ : "ಕನಕಪುಷ್ಪಿ–ದಾಹೀರೆ, ನೆಲದಾಳು ಹೊನ್ನಾವರೆ" (ಓಷಧಿ. ೨೬). [ ? ]

**ದಾಹೋತ್ತರ** (ನಾ). ಬೆಂಕಿಯಲ್ಲಿ ಸುಟ್ಟು ಶುದ್ಧವಾದುದು ; ಪುಟ ವಿಟ್ಟು ತೆಗೆದುದು : ಮಾದ್ರಿ ಪಾಂಡುರಾಜನೊಡನೆ ದಾ [ಹಾಕಾಂ. ಡಾ] ಹೋತ್ತರದಂತೆ (?) ಕೀರ್ತಿಂಗೆ ಕುಲದೊಳಂ ಚಲದೊಳವಾ[ವ] ಕುಂದುಂ ಕುಂದುವಿಲ್ಲದೆ ತನ್ನೊರೆಗಂ ದೊರೆಗವಮಾರುಮಿಲ್ಲೆನಿಸಿದಾಗಳ್ (ಹಂಪಭಾ. ೨-೨೬ ಪ) : ದಾಹೋತ್ತರಮಪ್ಪ ಪೊನ್ನ ಪೊಳೆಪಂ ಗೆಲೆವಂದುದು ಕಾಂತಿ ಕಾಂತೆಯಾ (ಅಜಿತಪು. ೨-೩೭). [ ಸಂ. ]

**ದಾಳ್ಯ, ಧಾಳ್ಯ** (ನಾ). ಪಗಡೆಯಾಟದಲ್ಲಿ ಗರಕ್ಕಾಗಿ ಉರುಳಿಸುವ ಆಟದ ಸಾಧನ: ಚೌಕ ದುಗನಿದ್ದುಗನಿತ್ತಿಗನೆಂಬ ದಾಯವಂ ಪೋರಿಸಿ ಬೇಡಿದ ದಾಳಮುಳವಟ್ಟರೆ (ಪುಣ್ಯಾಸ್ರ. ೪-೦೮) : ಆಗಳಾ ಪಕ್ಷಿಗಳು ನಿನ್ನಯ ರಾಜ್ಯಭೋಗವನು ಬೇಗದಿಂದಪಹರಿಸಿಕೊಂಡನ ಭಾಗದಾ ದಾಳಗಳು ತಿಳಿಯೆಂದಾಗಸದೊಳಡಗಿದುವು ವಿಸ್ಮಯಮಾಗೆ ನಿಮಿಷದಲಿ (ನಳಚ. ೫-೫): ಕುರಿತ ನೆತ್ತಗಳಂ ಬೀಳದೆ ದಾಳಗಳು ಪರಾಙ್ಮುಖವಾಗಿ ಬೀಳುವುದನ್ನು ತಿಳಿದಿದ್ದರೂ (ಕೃವಾಉ. ೩) : ಈ ಗಾಂಧಾರರಾಜನು ದಾಳಗಳ ಮೋಸ ದಿಂದೆಸೆಯುತ್ತ, ಗರ್ವದಲಿ ನಗುತಿಹನು (ಭಾಕಸಾ. ೩೨). **ಧಾಳ್ಯ :** ಧಾಳದ ಬೆಂಬಳಿವಿಡಿದು ಧಡಾಳಿಸೆ ದೃಗ್ರುಚಿ ಸುಧರ್ಮಸುತೆ . . . ಧರಣೀಪಾಲಕನೊಡನೊಲ್ದು ಲೆತ್ತವಾಡುತ್ತಿಸೆದಳ್ (ಉದ್ಯಟ. ೦೦-೦೬) : ತಿಳಿಪಿದ ದ್ಯೂತಕೌಶಲವ . . . ವರಗ್ರಹದ ದಶಚೌಕವರದಱ ಪರಿಯ ಧಾಳವು ತನಗೆ ಬೀಳುವ ಲಕ್ಷಭೇದನವ (ಸಂಭಕ. ೨೭-೨೦).

ದಾಳ ಹಾಕು = ೧. (ಪಗಡೆಯ ಆಟದಲ್ಲಿ) ನೆತ್ತವನ್ನು ಹಾಕು. ೨. ಆಟ ಮೊದಲುಮಾಡು ; ನಿರ್ಧಾರದ ಹೆಜ್ಜೆಯಿಡು : ಚನ್ನವ್ವನು ದಾಳ ಹಾಕಿ ಬಿಟ್ಟಳು (ಮುನಿಮಾ. ೦೩೯). [ ? ]

**ದಾಳ೩, ಧಾಳ೩** (ನಾ). ಒಂದು ವಾದ್ಯ ವಿಶೇಷ (?) : ಎರಡು ವೇಳೆ ನಡೆಯುತ್ತಿದ್ದ ದಾಳ ದಮಾಣ ಭೇರಿ ಮುಂತಾದ ಓಲಗಗಳಿಗೆ ಈಗ ದಿಳ್ಳಿ ಯಿಂದ ಬಂದ ನವಪತ್ರನ್ನು ಪ್ರತಿದಿನದಲ್ಲಿಯೂ ನಾಲ್ಕುವೇಳೆ ನಡೆಯು ವಂತೆ ಕಟ್ಟಳೆ ಮಾಡಿದರು (ಚಾಮವಂ. ೦೩೮); ಎರಡು ವೇಳೆ ದಾಳ ದಮಾಣ ಭೇರಿ ಮುಂತಾದ ಓಲಗಗಳಿಗೆ ಈಗ ದಿಳ್ಳಿಯಿಂದ ಬಂದ ನೌಬತ್ತನ್ನು ಪ್ರತಿನಿತ್ಯದಲ್ಲಿಯೂ ನಾಲ್ಕುವೇಳೆ ನಡೆಸುವಂತೆ ಕಟ್ಟಳೆ ಮಾಡಿ ದರು (ಮಹಾವಂ. I, ೦೪೬) : ರೇಮಟ ವೆಂಕಟಾದ್ರಿನಾಯಕನಂ ಸೋಲಿಸಿ ಅವನ ದಾಳ ದಮಾಣ ಅಂದಳಾದಿಗಳಂ ಸೂರೆಗೊಂಡ ಅದ್ವಿತೀಯ ಶೂರ (ಸುಗುಗಂ. ೦೩೫-೫) : ನಾಯಕನು ದಾಳ, ದಮಾಣ, ಅಂದಳ ಮುಂತಾದವು ಗಳಿಂದೊಡಗೂಡಿ ಶ್ರೀರಂಗಪಟ್ಟಣಕ್ಕೆ ಹೋಗುತ್ತಿದ್ದಾಗ ಚಾಮರಾಜ ಒಡೆಯರು ಆತನನ್ನು ಕಾಳಗಕ್ಕೆ ಕರೆದರು (ಒಡೆಕ. ೦೦). **ಧಾಳ೩ :** ಢಕ್ಕಾನಿನಾದದಿಂ ಧಾಳ ಧವಳಂಧ್ರ ಢಕ್ಕೆ ತನ್ನೊಡನೆ ಮಾರಾಂತ ಢಕ್ಕಾದಿ ಯಾದ ಮೂರ್ಧಕರ್ಕಳ ದಢಕ್ಕನಳಿದ ಹರಿ ಜಯಿತು (ಶತಸಾಂ. ೭೦-೫೬). 'ದವಳ' ಪರಾ. [ ? ]

**ದಾಳಕ** (ನಾ). ಅರಿದಾಳ ; ಹರಿತಾಲ : ಸಿರಿಕಂಡಂ ರುಜೆ ಮಾಂಸಿ ನಟ್ಟಮಧುಕಂ ವಕ್ರಂ ಹರಿದ್ರಾದ್ವಯಂ ಸಿರಿಸಂ ದಾ(ತಾ)ಳಕಮೇಲೆಯೆಂಬಿ ನಿತುಮಂ ಶೀತಾಂಬುವಿಂ ಪೂಸೆ ಸಂಹರಿಕು ... ಜ್ವರಮಸ್ರಪ್ರಹರವ್ರಣಂ ಗಳೆನಿಪೀ ದೋಷಂಗಳಂ (ಲೋಕೋಪ. ೯-೦೬೩). [ <ಸಂ. ತಾಲಕ ]

**ದಾಳಾದಾಳಿ** 'ದಾಟಾದಾಟಿ' ನೋ.

**ದಾಳಾದೂಳಿ** 'ದಾಟಾದಾಟಿ' ನೋ.

**ದಾಳಾಧೂಳಿ** 'ದಾಟಾದಾಟಿ' ನೋ.

**ದಾಳಿ** 'ದಾಟಿ' ನೋ.

**ದಾಳಿಂಬ, ಡಾಡಿಮ, ಡಾಲಿಮ, ಡಾಳಿಂಬ, ಡಾಳಿಂಬೆ, ಡಾಳಿಂಬ್ರ, ಡಾಳಿಮ, ದಾಳಿಂಬರ, ದಾಳಿಂಬರಿ, ದಾಳಿಂಬೆ** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು ; ದಾಳಿಂಬೆ : ೧. "ದಾಡಿಮ ಮೆನಲ್ ದಾಳಿಂಬಮದು" (ಮುಂಗರಾ. ೩೬-೦೭); "ದಾಳಿಂಬಮೆ ದಾಡಿಮಂ" (ಕತುನಿ. ೦೯)-; "ಆ ದಾಡಿಮಕ್ಕೆ ದಾಳಿಂಬವಾಯ್ತು" (ಸಂಜೀವ. ೩೦) : ಪೊಸ ಕೆಂದಳಿರ್ಗಳ ದಾಳಿಂಬಸಾರವಂ ಕಟ್ಟಿ ತನ್ನ ಬಣ್ಣದೊಳದು ರಂಜಿಸ (ಶಾಂತಿಪು. ೮-೦೬), ಆ ಪೊದಱ ನೊದರೊಳೊದವಿ ಬೆಳೆದು ಬೀಗಿ ತವಿಲ್ವಂ ತಾವೆ ಬಿರಿದು ಬಿರಿವಟ್ಟು ಸುರಿವ ದಾಳಿಂಬದ ಪಣ್ಗಳ ತನಿರಸದ ಪರಿಪೊನಲೆ ಪರಿನೀರಾಗೆ (ಹಂಚಕಂ. ೦೦೭-೦೫) ; ಮಲ್ಲಿಗೆಯಲ್ಲದೆ ಸಂಪಗೆಯಲ್ಲದೆ ದಾಳಿಂಬವಲ್ಲದೊಪ್ಪುವ ಚೆಂದೆಂಗಲ್ಲದೆ ಮಾವಲ್ಲದೆ ಕೌಂಗಲ್ಲದೆ ಗಿಡುಮರ ಗಳೆಂಬುವಿಲ್ಲಾ ನಾಡೊಳ್ (ಕಬ್ಬಿಗಕಾ. ೨೦) ; ಇಂಬಿಲ್ಲ ಪಲ್ಗಿರಿದುಸಿರುವ ಪೊಲ್ಲಲಿಸಿ ದಾಳಿಂಬದ ಮರಗಳೊಪ್ಪಿಹುವು (ಕಂಸವಿ. ೫-೮೦) ; ಮೈ ಮುರಿದು ಬಿರಿದ ದಾಳಿಂಬದಂತೆ ಜೀವನದ ಪ್ರಭೆಯು ನುಗ್ಗಿ (ಅರಳು. ೪೩೨-೦೭) ; ದಾಳಿಂಬ–ಈ ಎಲೆಯಂ ನೀರಲ್ಲಿ ಅರೆದು ಕುಡಿಯೆ ಮೈಲೆ ರೋಗ ಗುಣ (ವಿಶ್ವವಿ. ೫). **ಡಾಡಿಮ :** ೧. "ಡಾಡಿಮ–ಡಾಳಿಮಂ, ಕರಕ" (ನಾಚಿರಾ. ೬). **ಡಾಲಿಮ :** (*). **ಡಾಳಿಂಬ :** (*). **ಡಾಳಿಂಬೆ :** (*).

**ದಾಳಿಂಬ್ರ**: (+). **ಡಾಳಿಮ**: ೧. 'ಡಾ ಡಿ ಮ' ಉಲ್ಲೇಖಕ್ಕೆ ಕೊಟ್ಟಿರುವ 'ನಾಚಿರಾ'. ಕಿ. ಪ್ರಯೋಗವನ್ನು ನೋಡಿ. **ದಾಳಿಂಬರ**: ೧. ಸ್ಫೂರ್ತಿ ಚವಾಳಾಮಣದ ಕಿವ್ಮತ್ತು ಇರತಕ್ಕ ಜೀನಸಗಳು ೧, ಅಕ್ಕಲಖಾರ . . . ೧೦೫, ದಾಳಿಂಬರದ ತೊಗಟ (ಮುಂಬ್ವಾ. ೧೩೪). **ದಾಳಿಂಬರಿ**: ೧. "ಕರಕಃ, ದಾಡಿಮಃ–೨ ದಾಡಿಂಬೇಗಿಡ, ಸಾಳಿಂಬೇಗಿಡ, ದಾಳಿಂಬರೀ ಗಿಡ" (ಸಿದ್ಧಾಂತಿ. ೧೧೧). **ದಾಳಿಂಬೆ**: ೧. ನಿಂಬೆ . . . ದಾಳಿಂಬೆ, ಅಂಜೂರ–ಇವೇ ಮುಂತಾದ ಹಲವು ಹಣ್ಣುಗಿಡಗಳನ್ನು ತೋಟಗಳಲ್ಲಿ ಬೆಳೆಯಬಹುದು (ವ್ಯವಖ. ೩೮). ೨. ಮೊರಸು ಒಕ್ಕಲಿಗರಲ್ಲಿ ಒಂದು ಪಂಗಡ: (ಎಕವ್ಮು. XV, ೨೪೩).

ದಾಳಿಂಬದ ಚೂರ್ಣ, ದಾಳಿಂಬಾದಿ ಚೂರ್ಣ = ದಾಳಿಂಬೆಯಿಂದ ತಯಾರಿಸಿದ ಚೂರ್ಣ: ದಾಳಿಂಬದ ಚೂರ್ಣ–ದಾಳಿಂಬದ ಕಾಯಿ ತೊಕ್ಕು, ಮಾವಿನ ಬೀಜ . . . ಚೂರ್ಣಿಸಿ ಮೊಸರಿನಲ್ಲಿ ಕಲಸಿ ಕೊಡಲು ಸರ್ವಾತಿಸಾರ . . . ಕೆಡುಗುಂ (ಕಳವ್ಯ. ೩೨೮); ದಾಳಿಂಬಾದಿ ಚೂರ್ಣ–ದಾಳಿಂಬದ ಕಾಯಿ ತೊಕ್ಕು, ಮಾವಿನ ಬೀಜ . . . ಚೂರ್ಣವ ಮಾಡಿ ಎಮ್ಮೆಯ ಕಟ್ಟುಮೊಸರಿನಲ್ಲಿ ಸೇವಿಸೆ ರಕ್ತಾತಿಸಾರ, ಆಮಾತಿಸಾರ ಹೊಟ್ಟೆಶೂಲೆ ಸಹ ಪರಿಹರ (ಕಳವ್ಯ. ೩೧೨). **ದಾಳಿಂಬದ ಪಂಚಾಂಗ** = ದಾಳಿಂಬೆಯ ಮರದ ಐದು ಅಂಗಗಳು (ಹೂ, ಎಲೆ, ಕಾಯಿ, ತೊಗಟೆ, ಹಣ್ಣು): ದಾಳಿಂಬದ ಪಂಚಾಂಗ ಬಿಳು ಸಾಸುವೆ ಕೈಲದೊಳಟ್ಟು ಯೋನಿಗೆ ಪೂಸುವುದು (ಕಾಮುಶಾ. ೧೦–೭೭೪). **ದಾಳಿಂಬಾದಿವಟಕ** = ದಾಳಿಂಬೆ, ಬಿಲ್ವಪತ್ರೆಹೀಚು ಮೊದಲಾದುವುಗಳಿಂದ ಮಾಡಿದ ಗುಳಿಗೆ: ದಾಳಿಂಬಾದಿವಟಕ–ದಾಳಿಂಬವಂಚಕ, ಬಿಲ್ವಪತ್ರೆಹೀಚು . . . ಮುಳ್ಳುಕೊಗ್ಗಿಬೇರಿನ ಪಟ್ಟೆ ಇವಂ ಸಮಭಾಗವಾಗಿ ಎಮ್ಮೆಮೊಸರಿಂ ದರೆದು . . . ಗುಳಿಗೆಯಂ ಮಾಡಿ ಒಣಗಿಸಿ ಜೇನುತುಪ್ಪದಿಂದ ಒಂದು ಗುಳಿಗೆಯಂ ತೆಗೆದುಕೊಳ್ಳಲು ಹೊಟ್ಟೆಬೇನೆ ನಿಲ್ಗುಂ (ಕಳವ್ಯ. ೩೪೬).

[ <ಪ್ರಾ. ದಾಡಿಮ, ದಾಲಿಮ./ಸಂ. ದಾಡಿಂಬ, ದಾಡಿಮ, ದಾಲಿಮ ]

**ದಾಳಿಂಬಗೆ** (ನಾ). (?): ದಾಳಿಂಬದ ಕಿಬುನನೆಗಳ್ ದಾಳಿಂಬ [ಪಾಠಾಂ. ಬ]ಗೆ ಮಬೀಯ ಮುಗುಳ ಮುತ್ತಿನಲೊರ್ವಳ್ ಬಾಳಕಿ ಪಂಚಶರಂಗೊಯ್ದೀಳಿಸಿದಳ್ ಪಂಚಶರನ ಶರಪರಿಣತಿಯಿಂ (ಅನಂಪು. ೭–೨೦). [ ? ]

**ದಾಳಿಂಬರ** 'ದಾಳಿಂಬ' ನೋ.

**ದಾಳಿಂಬರಿ** 'ದಾಳಿಂಬ' ನೋ.

**ದಾಳಿಂಬವಣ್** (ನಾ). ದಾಳಿಂಬೆಯ ಹಣ್ಣು: ಬಕ್ಕೆವಲಸುಗಳ ಪಣ್ಗೊನೆಗಳಂ ಬಿತ್ತುಗಳ ಪೆಕ್ಕಸಂ ಬಿರಿದ ದಾಳಿಂಬವಣ್ಗೊನೆಗಳಂ ಮುಕ್ಕಣ್ಣನೆಡೆಗೆ ವನಪಾಲಕಂ ಪೊರಿಸಿಕೊಂಡೈತಂದನು (ಚಬಪು. ೪೫–೨೯); ವನಪಾಲು ಕಾಣ್ಕೆಗೈದಂ . . . ದಾಳಿಂಬವಣ್ಣಂ ಸುರಯಿಯಸುರು ಚಾಂಪೇಯಮಂ (ರಾಜಶೇ. ೧೦–೨). [ ದಾಳಿಂಬ + ಪಣ್ ]

**ದಾಳಿಂಬಾಷ್ಟಕ** (ನಾ).=ದಾಡಿಮಾಷ್ಟಕ: ದಾಳಿಂಬಾಷ್ಟಕ–ತವಕ್ಷೀರ ಗ ಳ ತೂಕ, ಏಲಕ್ಕಿ ಗ ರ ತೂಕ . . . ಚೂರ್ಣಿಸಿ . . . ಜೇನುತುಪ್ಪದಿಂ ಸೇವಿಸಲು . . . ಕ್ಷಯರೋಗ ಸಹ ಮಾಣ್ಗುಂ (ಕಳವ್ಯ. ೩೨೮).

[ ದಾಳಿಂಬ + ಅಷ್ಟಕ ]

**ದಾಳಿಂಬೆ** 'ದಾಳಿಂಬ' ನೋ.

**ದಾಳಿಕಾಜಿ** 'ದಾಟಿಕಾಜಿ' ನೋ.

**ದಾಳಿಕ್ಕು** (ಕ್ರಿ). ದಾಳಿಯಿಡು; ಮಂತ್ರ್ಯ: ಬಲುಬೇಡವಡೆ ಕಡಗಿ ಹರಕರಿಸಿ ನಡೆಯೆ ಕೈಮಿಕ್ಕು ಹೇರಡವಿ ಗೋಳಿಡಲು ದಾಳಿಕ್ಕಿದಂ ನಿಜದೇಶಜನ ವನಧಿಕುಮುದಸಖನು (ಹಹಕಾ. ೫–೧೪). [ ದಾಳಿ (<ದಾಟಿ) + ಇಕ್ಕು ]

**ದಾಳಿಗ** (ನಾ). ದಾಳಿ ಮಾಡುವವನು; ಆಕ್ರಮಣಗಾರ: ಇತ್ತಲಸುರನ ದಾಳಿಗರ್ ಸೆಟಿಸೂಜಿಗಳನಿತ್ತ ರಾಜ್ಯದ ಜನಂ ಪೊಬಬಾಗಿಲೊಳ್ ಮೊಟಿಯಿಡುತ್ತಿರಲ್ ಕೇಳ್ದು (ಚಬಪು. ೪೮–೧೩): ಕೋಟೆಯನ್ನು ಬಲಾಧಿಕರಾಗಿರುವ ಪ್ರಚಂಡ ಶತ್ರುದಾಳಿಗನಿಂದ ತಾನೇ ಹೇಗೆಯಾದರೂ ಕಾಪಿಟ್ಟು ಉಳಿಹಿಕೊಳ್ಳಬೇಕಾಗಿರುವ ಭಾರಕೆಯ ಭಾರವನ್ನೂ (ಚಿಟ್ಕೃಅ ೬೨–೨೦). [ ದಾಳಿ (<ದಾಟಿ) + –ಇಗ ]

**ದಾಳಿಡು** 'ದಾಟಿಯಿಡು' ನೋ.

**ದಾಳಿಯಿಡಿಸು** (ಕ್ರಿ). ಆಕ್ರಮಣಮಾಡಿಸಂ; ದಾಳಿಯಿಡುವಂತೆ ಮಾಡಂ; ದಾಳಿ ಮಾಡಲು ಅನುಮತಿಯನ್ನು ಕೊಡಂ: ಸ:ಡಿಸು ಕೈಲಾಸಮಂ ಕೆಡಿಸು ಹರಸಾಸಮಂ ತಡೆಸದನ್ನಂ ದಾಳಿಯಿ [ಪಾಠಾಂ. ಇ] ಡಿಸು ಬೇಗದೊಳು (ಚಬಪು. ೪೭–೨೨).

[ ದಾಳಿಯಿಡು (<ದಾಟಿಯಿಡು) + –ಇಸು ]

**ದಾಳಿಯಿಡು** 'ದಾಟಿಯಿಡಂ' ನೋ.

**ದಾಳಿವರಿ**, ಧಾಳಿವರಿ, ಧಾಟಿವರಿ (ಕ್ರಿ). ದಾಳಿಮಾಡಂ; ಮಂತ್ರಿಗೆಹಾಕು: ಪ್ರಾಣವಿಲ್ಲದ ಸೇನೆ ಪದ್ಮಸಂಖ್ಯೆಯು ಕೋಟಿ ದಾಳಿವರಿದುದು ಎಂಟು ಜಾವದೊಳಗೆ ಜಾಲಗಾಜಿನ ಕೈಯು ಪರಾಕ್ಕ ಸಿಕ್ಕದೆ ಆಳಿಗೊಂಡಿತ್ತು ಜಗವ ಬೇಳುಮಾಡಿ (ಸರ್ವಜ್ಞ. ೮೯–೪೯೩). **ಧಾಳಿವರಿ**: ಅಲ್ಲಿಗಲ್ಲಿಗೆ ಧಾಳಿವರಿದವರೆಲ್ಲರನು ನೆಟಿ ಕೊಲ್ಲುವುದು (ನಿಘಾಗ. ೬–೨–೬). **ಧಾಟಿವರಿ**: ಸಾನ್ತರನ ಮೇಲೆ ಮೂಕರಸಂ ಧಾಟಿಟ್ಟಲ್ಲಿ ನಾಗಾರ್ಜುನಯ್ಯನ ಮಗಂ ಮನ್ನೆಯ ನಾಗವರ್ಮ್ಮಂ ತಾನಂ ಧಾಟಿವರಿದಲ್ಲಿ ಸತ್ತು ಸುರಲೋಕಕ್ಕೆ ಸನ್ದಂ (ಎಕ. VII, ಶಿಕಾರಿ. ೨೨೦–೦೨ : 1016).

[ ದಾಳಿ (<ದಾಟಿ) + ಪರಿ ]

**ದಾಳಿವರಿಸು** (ಕ್ರಿ). ದಾಳಿಮಾಡಿಸಂ; ದಾಳಿಮಾಡಲು ಕಳಿಸಂ: ಶಾದುಲ್ಲ ಖಾನನ ಪೌಜುಮಡೆರಸು ಸುಬೇದಾರ ಲಿಂಗಪ್ಪನಂ ಮಾಯಾವಿಗಳ ಸೀಮೆಯ ಮೇಲೆ ದಾಳಿವರಿಸಲು (ಕೆಳನೃ. ೧೧–೬೧). [ ದಾಳಿವರಿ + –ಇಸು ]

**ದಾಳಿವೂ** (ನಾ). (?): ಮುನಿಗಣೇಶ್ವರರೊಡನೆ ದಾಳಿವೂಗೊಯ್ವೊಡನೆ ವರ್ಜ ಗೋಳಾಂಗೂಳಿಂಗಳುಮಂ ನೋಡಿ (ಪಂಪಭಾ. ೧–೧೧೫ ವ): "ದಾಳಿವೂಗೊಯ್ದು = ದಾಳಿಹೂವನ್ನು ಕೊಯ್ಯುವ" (ಪಂಪದೀ. ೪೪).

[ ? ]

**ದಾಳಿಹೋಗು** 'ದಾಟಿವೋಗು' ನೋ.

**ದಾಳಿಯ** (ನಾ). ಒಂದು ಬಗೆಯ ಪಾತ್ರೆ; ಕುಡಿಯುವ ಪಾತ್ರೆ (?): ಮಗಮಗಿಸುವ ಕಂಪೊದವಿರ್ಪ ತಕ್ರಮಂ ತೀವಿದ ದಾಳಿಯುಮಂ ಮೃಗಾಕ್ಷಿಯರ್ತಂದಿಟ್ಟರ್ (ಶಾಂತೀಶ್ವ. ೦೫–೬೦). 'ತಾಲಿ' ಪರಾ.

[ <ಸಂ. ಸ್ಥಾಲೀ ? ]

**ದಾಳಿಸಿಂಪು** (ನಾ). (ಕರಾ) ಒಂದು ಬಗೆಯ ವಿಮಾನ.

[ ದಾಳಿ ? + ಸಿಂಪು ]

**ದಾಟಾದಾಟಿ**, ದಾಳಾದಾಳಿ, ದಾಳಾದೂಳಿ, ದಾಳಾಧೂಳಿ, ಧಾಳಾಧೂಳಿ, ಧಾಟಾಧಾಟ್ (ನಾ). ೧. ವೇಗ; ರಭಸ: ದಾಟಾದಾಟಿಯಿ ಬಂದು ಪ್ರತಿಪಾಲಪುರವಂ ಪೊಕ್ಕು (ಧರ್ಮಾಮೃ. ೧೦–೧೨೭). ೨. ಪರಸ್ಪರ ಆಕ್ರಮಣ: ಮುಟ್ಟಾಮುಟ್ಟಿ, ಹೆಲ್ಲಾಹೆಲ್ಲಿ, ದಾಟಾದಾಟಿ, ದೆಕ್ಕಾದೆಕ್ಕಿ, (ಹಾಣಾಹಾಣಿ) ಹಣಾಹಣಿ (ಶಮದ. ೧೮೫ ಪ್ರಯೋ). **ದಾಳಾದಾಳಿ**: ಕಿ. ಆಕ್ರಮಣ; ಮಂತ್ರಿಗೆ: ಮನ್ಮಥನೀದೊಡೆ ಮತ್ತೆ ದಾಳಾದಾಳಿ ಮಾಡುವೆನು (ಪರ್ವಶ. ೧೨–೩೯); ಧರ್ಮಯುದ್ಧದ ದಾಳಾದಾಳಿಯಲ್ಲಿ ಕದನ ವಿತ್ತು, ದೈವವಶದಿಂದ ಸೋಲ್ಲು (ಚಿಟ್ಕೃಅ. ೦೨೩–೧೪). **ದಾಳಾದೂಳಿ**: (+). **ದಾಳಾಧೂಳಿ**: ಕಿ. ಬಡದೆ ದೆಪ್ಪಾದೆಪ್ಪಿಯಲಿ ಧೃತಿಗೆಡದೆ ದಾಳಾಧೂಳಿಯಲಿ ಬಲುಂಗಡಿಯ ಖಾಡಾಖಾಡಿಯಲಿ ಕಾದಿದರು ಕಡುಹಿನಲಿ (ತೊರರಾ. ೬–೪೭–೫೬). **ಧಾಳಾಧೂಳಿ**: ೧. ಇಬ್ಬಾತಕಂಜದಿರೀಜದಿರು ಕೈ ಮಟಿಯ ದಿರು ಕಲಿಯಾಗೆನುತ ಬೊಬ್ಬಿಟಿದು ಧಾಳಾಧೂಳಿಯಲಿ ತಾಗಿದನು

ಕಲಿಕರ್ಣ (ಕುಮಾ.ಭಾ. ೦೪-೨೮). ೩. ಕಾಳಗದೊಳಿಟ್ಟೊರಸಿ ಬಾಣನ ತೋಳ ತಱಿವಂದಾಯ್ತು ಧಾ[ಪಾಠಾಂ. ದಾ]ಳಾಧೂಳಿಯಾಹವವೆಂದುಮೌಳಿಯೊಳೆಮಗೆ ಮುಳಿಸಿನಲಿ (ಕುಮಾ.ಉ. ೧-೩೮) ; ಬೆರಸಿ ಧಾಳಾಧೂಳಿಯಲಿ ಪೊಪ್ಪರಿಸಿ ಖಾಡಾಖಾಡಿಯಲಿ . . . ಕಾದಿತು ಸೇನೆ ಸೇನೆಯಲಿ (ತೊರರಾ. ೬-೩೮-೩). ೪. ಅಬ್ಬರ ; ಆರ್ಭಟೆ ; ಘೋರಂ : ದುಗನ ಹಾಯಿಕು ತನಗೆ ಹಾಯ್ಕಿತ್ರಿಗನವೆಂಬಬ್ಬರದ ಹಾಸಂಗಿಗಳ . . . ತಳಸಾರಿಗಳ ಧಾ[ಪಾಠಾಂ. ದಾ]ಳಾಧೂಳಿ ಮಸಗಿತು (ಕುಮಾ.ಸ. ೦೩-೫೦). ೫. ಸಡಗರ ; ಸಂಭ್ರಮಂ : ಹೇಳಲೇನದನಶ್ವಮೇಧದ ಬೇಳುವೆಯ ಸಂಭ್ರಮದ ಧಾಳಾಧೂಳಿಯಲಿ ಶಿವದಾಡಿದವು ಜಿಹ್ವೆಗಳು ಹುತವಹನ (ತೊರರಾ. ೧-೭-೪೮): ಪ್ರೇಮಸಂಕೇತಗಳನೆಂದು ಧಾಳಾಧೂಳಿಯಿಂದ ಕುಣಿದೆನು ನಾನು ಮ್ರಾತ್ಯಶುಕ ದಂತೆ ಮಾಮರನ ಚಿಗುರನ್ನು ಕನಸಿನಲ್ಲಿಯ ಕಂಡು ಕಣ್ಮುಚ್ಚಿ ಕುಕಿಲುತಿಹ ತರುಣಪಿಕದಂತೆ (ಸಖೀಗೀ. ೫೫-೫) ; ನಲಿವಿನ ನಲಿನವು ತಾನೇ ತಾನಾಗಿಯೇ ಬಿಚ್ಚಿ ಏಳ್ಮಡಿ ಧಾಳಾಧೂಳಿಯ (ಕೃಷ್ಣಾ. ೫೩-೪).

**ಧಾಟಾಧಾಟಿ** : ೧. ತಪೋಧನರ ದೇವತಾರಾಧನೆಗೆ ಕಾಲಾತಿಕ್ರಮ ಮಾಗಲೀಯದೆ ಧಾಟಾಧಾಟಿಯಲ್ಲಿ ಬರ್ಪ ಪರಿಚಾರಕರ ನೆರವಿಯುಮಂ ಕಂಡು (ಪಂಚತಂ. ೧೧೭-೧೦).

**ದಾಳಾದೂಳಿಯಾಗು, ದಾಳಾಧೂಳಿಯಾಗು** = ಆಕ್ರಮಣಕ್ಕೆ ಒಳಗಾಗು ; ನಾಶವಾಗು : ಈ ರಂಗಪ್ಪನ ದಾಳಿ ಹೊರಟಿದೆಂದರೆ ಕನ್ನಡದೊಳಗಿನ ತಂಟೆಗಾರರೆಲ್ಲ ದಾಳಾದೂಳಿಯಾಗುವರು (ನಡೆದಾ. I, ೪೫೭) ; ಏನು ಮಾಡಿದರೂ ಕಾಲಗತಿಯಲ್ಲಿ ಎಲ್ಲವೂ ದಾಳಾಧೂಳಿಯಾಗುತ್ತದೆ (ದೇಶಸ್ನೆ. ೦೪೦).

[ <ದಾಟ./P ಕೆಲವು ವೇಳೆ ಇವುಗಳು 'ದಾಟಿ' ಶಬ್ದದ ದ್ವಿರುಕ್ತಿಯಾಗಿಯೂ ಬಳಕೆಯಾಗಿರಬಹುದು]

**ದಾಟಿ, ಡಾಳಿ$_2$, ದಾಟಿ$_1$, ದಾಳಿ, ಧಾಳಿ, ಧಾಟಿ (ನಾ). ಲಗ್ಗೆ; ಮುತ್ತಿಗೆ ; ಆಕ್ರಮಣ** : "ಅವಸ್ಕಂದಃ, ಪ್ರಪಾತಃ – ಈ ೨ ದಾಟಿ" (ಹಲಾಯು. ೭೪-೨೯೮) : "ಪ್ರಪಾತಮುದವಸ್ಕಂದವೆನೆ ದಾಟಿ [ಪಾಠಾಂ. ಧಾಳಿ]" (ಮಂಗರಾ. ೯೫-೨೬) ; ದಾಟಿ ಬಂದುದೆಂದಂಜಿ ತ್ರಸ್ತಾಭಿಭೂತನಾಗಿಯೋಡಲ್ (ಪಮ್ಪಾರಾ. ೧೬೩-೧೨); ಘನದ ಕರಗಿದುದನಱಿದಪಘನದ ವಿಳಾಸವುನದೆಂತು ನಂಬುವುದೋ ಘನಾಘನದಿಂದಮುಱಿಯಲಾದುದು ಘನಾಘನಂ ಜವನ ದಾಟಿಗಿಲ್ಲೆಂಬಿನಿತಂ (ಆದಿಪು. ೪-೩೫); ಅಲ್ಲಿಗೆ ನಿಟ್ಟಾಲಿಯಾಗಿ ದಾಟಿಯನಿಟ್ಟು ಮುಟ್ಟಿವಂದು ಬಾಯ್ಮಾಡಿ ಧೃಷ್ಟದ್ಯುಮ್ನ ಶಿಖಂಡಿ ಚೇಕಿತಾನ ಯುಧಾಮನ್ಯೂತ್ತಮೌಜಸರಂ ಕೊಂದು (ಪಂಪಭಾ. ೦೩-೦೦೬ ವ) : ಇವಳ ಕಟಾಕ್ಷವೆನ್ನೆರ್ದೆಯನೆರ್ಚುಪುದೀಕೆಯ ರೂಪು ದಾಟಿಯೊಳ್ ಕವಿದಪುದು (ಧರ್ಮಾಮೃ. ೦೩-೦೦೪) ; ಆ ಟಾಟಿಗೆ ಬಲ್ಲಾಳನ ದಾಟಿಯ ದಾವಣಿಯ ತುರಗದಲಿ ಖುರಹತಿಯಿಂ ಪೇಟೆ ಪೆಸರಿಲ್ಲದಂತಿರೆ ಪಾಟಿಾದುವು ವೈರಿದುರ್ಗಮೆನಿತೊಳವನಿತುಂ (ಯಶೋಚ. ೧-೧೪) ; ಕೈಲಾಸಕ್ಕಲಂಪಾಂತು ಚೇರಮನೇಂ ದಾಟಿಯನಿಕ್ಕನೇ (ಉದ್ಭಟ. ೦೨-೨೪). **ಡಾಳಿ$_2$** : ಬಂದುದಾ ಸಚಿವಸಿದ್ಧಂಗೆ ಸ್ವರ್ಗದ ಡಾಳಿ[ಪಾಠಾಂ. ಧಾಳಿ] ನಿಂದು ದೇಹವನಲೆದುದದಲ್ಲಿ ರೋಗದ ಕೇಳಿ (ಬಸರ. ೫-೦೪೭). **ದಾಟಿ$_1$** : ಕೋಟಿ ಕೋಟ್ಯಾವಧಿಕವಾಗಿ ಧವಾಟಿಯಲಿ ವಾಸನಾಪರಿಪಾಟಿಯೇ ಪ್ರಾಬಲ್ಯಮಂ ತವೊಳಗೆ ತಾವ್ಮೆದಿ ದಾಟಿಯಂ ಮಾಡುವವು (ವಿವೇಚ. ೫-೩೨). **ದಾಳಿ** : ಗಗನತಳಂಬರಂ ನೆಗೆದ ಧಾಳಿಯ ಧೂಳಿಗೆ ಬೆರ್ಚಿ ದಾಳಿಗಂ ತೆಗೆದು ವನಾನ್ತಮಂ ಪುಗೆ (ಸೌಇಇ. XI-ii, ೦೪೭-೦೦ ; 1099); ದಾಳಿಯನಿಟ್ಟುಱಿಯಟ್ಟಿ ಪಾಂಡ್ಯನಂ ಬಾಳಿಸಿ (ಮ್ಯಾಆರ್. ೦೯೩೦, ೧-೩೫ ; ಸು. 1180) ; ಕಾಮನ ಕಾರಾಗಾರದೊಳಿರ್ಪಂತೆ ಕೇಳೀವನದೊಳಿರ್ಪ ಬಾಲಕಿಗೆ ಚಂದ್ರನ ದಾಳಿ . . . ಶಿಶಿರೋಪಚಾರದ ದಂಡಣೆಯುಖಂಡಿತವಮಾಗೆ (ಗಿರಿಳ. ೪-೧೦೮ ವ); ಝುಗಝುಗಿಸಿ ಹೊಳೆಹೊಳೆವ ಬಾಯ್ದಾರೆಗಳ ಬೆಳಗಿನ ದಾಳಿ ಧೀಂಕಿಡೆ ಮೊಗೆದವರ್ಜುನನಂಬು ರಿಪು ಚತುರಂಗ ಜೀವನವ (ಕುಮಾ.ಭೀ.೮. ೫೧): ಮಾಂಸದ ಸವಿಗೆ ಗಂಟಲ ಗಾಳವನು ವಿಗೆ ಕಚ್ಚಿ ದುಷ್ಟನ ದಾಳಿಗೊಳಗಹ ಮೀನಿನಂತಿರೆ ವಿಷಯಸುಖಿಗಳಿಗೆ ಲೋಲರಾದರು (ಪ್ರಭುಲೀ. ೦೩-೬೦); ಕಾಳಗಗ್ಯೆದನ್ಯರಬಲೆಯ ತಹುದೆಂದು ದಾಳಿಯ ಬಿಡುವವೆ ನಾವು (ಭರತ. ೫೬-೬೭) : ಮೇಲಕ್ಕೆದುವ ಬಾಣಗಳ ದಾಳಿಯೊಳ್ಕಿದುದು (ಕಂನವಿ. ೧೨-೨೦). **ಧಾಳಿ** : ಧಾಳಿಯೊಳಂಧ್ರನಂ ಪಿಡಿದವಂ ಮಗಧೇಶನನಿಕ್ಕಿ ಮೆಟ್ಟಿವಂ (ಸೌಇಇ. XI-i, ೫೨-೦೪ ; 1007); ದಿನಪನ ಧಾಳಿ ರಾತ್ರೀಶನ ಮೇಲೆ ಪಾಳೆಯವೆರಸು ಬಪ್ಪುದು (ಅಂಜಕ. ೮-೦೪೨); ಧಾಳಿ ಬಾರದ ಮುನ್ನ ಧರ್ಮವ ಗಳಿಸಿರೊ (ಪುರಂದ. ೧-೦೪-೨); ತರಣಿಯ ಕಿರಣದ ಧಾಳಿಗೆ ಕತ್ತಲೆಯುರವಣೆ ಮುಱಿವುದೆ (ಕಂನವಿ. ೩-೦೭). **ಧಾಟಿ** : "ಧಾಟ ಧಾಟಾ" (ಸಂಜೀವ. ೦೯) : ಬಟ್ಟಿಕೆಱಿಯ ಧಾಟಿಗೆ ಮುಱಿಯುವಡದ ಪೊಲನ ಕೊಳ್ವೆನೆನ್ದು ಬನ್ದೊಡ್ಡಿ ನಿನ್ದಾನೆಂಬ ಮಾತಂ ಕೇಳ್ದು (ಸೌಇಇ. XI-i, ೨೧-೩; 893).

**ದಾಳಿ ಹೊರಡು** = ಆಕ್ರಮಣಕ್ಕೆ ಸಿದ್ಧವಾಗಿ ಹೋಗು : ನೀನೂ ಚತುರಂಗಬಲಸಮೇತನಾಗಿ ವಿರಾಟನ ಮೇಲೆ ದಾಳಿಹೊರಟು ಹಸುಗಳನ್ನು ಹಿಡಿತರುವುದು ಯುಕ್ತವು (ಕೃಪಾವಿ. ೫೪). **ದಾಟಿ ಮಾಡು, ಧಾಳಿ ಮಾಡು, ಧಾಳಿಮಾಡು** = ಮುತ್ತು ; ಆಕ್ರಮಿಸು : ಎಬ್ಬಟ್ಟಿ ಕಾಬ್ಬಟ್ಟಿಯೊಳ್ ತಳರ್ವರ್ ಗಂಡರ ಗಂಡ ಪಾಂಡ್ಯಸತಿಯರ್ ನೀಂ ದಾಟಿ ಮಾಟ್ಟನ್ನೆಗಂ (ಅಪ್ರತಿ. ೪೬-೭) ; ಪೊಟಲಂ ಲೀಲೆಯೊಳ್ ದಾಟಿಮಾಟ್ಟುಂ (ಚಿಕವಿ. ೩-೫೪) : ಹಡಗ ಬಿಟ್ಟು ವಿಮಾನದಲಿ ಹಾರಿ ಗೋಲುಗಳ ಮೇಲೆ ದಾಳಿಮಾಡಿದ್ದೇವೆ (ನೆಲಮು. ೩೧-೨೮): ಧಾಳಿಮಾಡುವೆ ವರುಣಲೋಕವ ಹಾಳುಮಾಡುವೆನು (ಕೌಶಿರಾ. ೦೫-೪೦); ಅಂಗದೇಶವ ಧಾಳಿಮಾಡುವರ ಕಟಕಟ ಸೆಱಿಸೂಱಿಗಳ ಪಿಡಿದು ಕಾಳುಮಾಡುವರು (ಹರಿಶಾ. ೯೦). **ಧಾಳಿಯನಿಕ್ಕು** = ದಾಳಿಮಾಡು; ಮುತ್ತಿಗೆ ಹಾಕು: ತ್ರಿಭುವನ ಗಿರಿಯರಸು ತ್ರೈಲೋಕಪಟ್ಟಣಕ್ಕೆ ಧಾಳಿಯನಿಕ್ಕಿದರು (ಸರ್ಪವ. ೧೫೩-೬೩೦) ; **ಧಾಟಿಯನಿಡು, ಧಾಳಿಯನಿಡು** = ದಾಳಿಯನಿಕ್ಕು : ಎಱಿಯನಿಟ್ಟರಿಧರಿತ್ರೀಪಾಳರ ಸಂಪತ್ತಿಯೆಲ್ಲವುಂ ತಂದೊಡೆ (ಚಾರಿಪು. ೨-೨೦) : ಪಡೆವಳ ಗಂಗಿಮಯ್ಯ ಬೆಳಗವತ್ತಿಯ × × × ಮೇಲೆ ಧಾಳಿಯನಿಟ್ಟಳಿವಳಿದು ಪಲರಳಿವಿನಲು ತನ್ನ ಪರಿಚ್ಛೇದಿಸಿ (ಎಕ. VII, ಶಿಮೊ. ೫೬-೨೫ ; 1125).

[ ದೇ.ಶ?/ ಪ್ರಾ. ಧಾಡೀ./ ಸಂ. ಧಾಟೀ ]

**ದಾಟಿಕಾಱ, ದಾಳಿಕಾಱ, ಧಾಳಿಕಾರ (ನಾ). ಮುತ್ತಿಗೆ ಹಾಕುವವನು; ಆಕ್ರಮಣ ಮಾಡುವವನು ; ಲೂಟಿ ಹೊಡೆಯುವವನು ; ದರೋಡೆ ಮಾಡುವವನು** : ಬಣ್ಣದಿಂ ಮದುವೆಯಂ ದಾಟಿಕಾಱರಿಂದರಸುಗಳಂ . . . ಅಱಿವಂತೆ (ಧರ್ಮಾಮೃ. ೯-೬೮).. **ದಾಳಿಕಾಱ** : ದಾಳಿಕಾಱಂಗೆ ಧರ್ಮವುಂಟೆ ಕಂಗಳಿಗೆ ಕರುಳುಂಟೆ (ಅವಚಂ. ೩೨-೦೪೪) ; ಏಳು ವ್ಯಾಸನವೆಂಬ ದಾಳಿಕಾಱರು ಕರವಾಳ ಜಡಿದು . . . ನುಡಿದರು ಕಡೆಗಾಲದ ಸಿಡಿಲಿನಂದದೊಳು (ತ್ರಿಪುಸಾಂ. ೦೫೩). **ಧಾಳಿಕಾರ** : ಧಾಳಿಕಾರರಿಂಗೆ ಸ್ವಾಭಾವಿಕವಾದ ಜಲಮಾರ್ಗವು ದೊರೆಯಲಿಲ್ಲ (ದಭಾಇ. ೩) : ಭಾರತೀಯರು ಮುಸಲ್ಮಾನ್ ಧಾಳಿಕಾರರ ಆಕ್ರಮಣಗಳಿಂದ ನರಳುತ್ತಿದ್ದರು (ಭಾರದ. ೫೨೮). [ ದಾಟಿ + – ಕಾಱ ]

**ದಾಟಿಗಿಱು (ಕ್ರಿ). ಆಕ್ರಮಣವೆಂದು ಭಾವಿಸು** : ಪೂಗಳಿಂ ಕೆದಱುವ ಧೂಳಿ ಪಾಡುವ ಮದಾಳಿ ಪೊದಟ್ಟಲರೋಳಿಯೆಂಬಿನಂ ಮದನನ ದಾಟಿಗೆತ್ತು ಸುಗಿದಿರ್ಪುದು ಪಾಂಥಜನಂ ನಿರಂತರಂ (ಪುಷ್ಪಪು. ೨-೨೦).

[ ದಾಟಿ + ಗಿಱು ]

**ದಾಟಿಡು** 'ದಾಟಿಯಿಡು' ನೋ.

**ದಾಟಿಪೊಗು** (ಕ್ರಿ). ಆಕ್ರಮಣಕ್ಕಾಗಿ ಪ್ರವೇಶಿಸಂ; ಮುತ್ತಲುಂ ಬರಂ: ಭವನವಾಸಿಗರಂ ಕರಂ ದವನದ ಮಡಿಯಂ ದಾಟಿಪೊಕ್ಕಂತೆ ಮಾಡಿ (ಧರ್ಮಾಮೃ. ೭-೯೩). [ ದಾಟಿ + ಪೊಗು (<ಪುಗು) ]

**ದಾಟಿಯಿಡು, ದಾಳಿಡಂ, ದಾಳಿಯಿಡಂ, ದಾಟಿಡು, ಧಾಳಿಡಂ, ಧಾಳಿಯಿಡು, ಧಾಟಿಡಂ** (ಕ್ರಿ). ಏರಿಹೋಗು; ಮುತ್ತಿಗೆಯಿಡು; ಲಗ್ಗೆ ಹಾಕು; ಆಕ್ರಮಣಮಾಡು: ದಾಟಿಯಿಡುವಂಗಂದಂಬರಂ ತ್ಯಾಗಿಗಂ ಭಾಸ್ವದ್ದೇವಗಣ ಗಳೆಂದಜಿದು ಪೇಟಲ್ಲಲ್ಲಿಗೆ (ಛಂದೋಂಬು. ೦-೪೩); ಪುಳಿಂದರವಿಷ್ಮಾ ವಿಷಯಕ್ಕೆ ದಾಟಿಯಿಡಲುಜ್ಜುಗದಿಂದಿರೆ (ಪು ಪ್ರ ಪು. ೩-೦೨೬); ದೇವವಲ್ಲಭನ ಪತ್ತನಕೀಗಳೆ ದಾಟಿಯಿಟ್ಟು . . . ಇರುಳೆಡೆ ಗಾಳೆಗಕ್ಕೆ ನಡೆವಂತೆವೊಲಿರ್ದುದು ದಾವಪಾವಕಂ (ದಶಕು. ೨-೧೦೩): ಆ ಕೆಯ ಭರ್ತಾರನಾಕ್ಲೇಶವಂ ಕೇಳಿಯಲ್ಲಿಗೆ ದಾಟಿಯಿಟ್ಟು ಕಾಲ ನೊಳ್ಕಾದಿ ಗೆಲ್ದವನಂ ಕಟ್ಟಿ ಆ ಬ್ರಾಹ್ಮಣಿಯಂ ತಂದಂ (ಧರ್ಮಾಪ. ೪-೨೦ ವ). **ದಾಳಿಡು:** ಕಾದಬೇಕೆಂದಿಳೆಯ ರಾಜಾಳಿಯಂ ಕೂಡಿ ದಾಳಿಟ್ಟು . . . ಪೆರ್ಬಡೆ ನಡೆದುದು (ಭಾಪಚಿಂ. ೮-೬). **ದಾಳಿಯಿಡು:** ದಾಳಿಯಿಟ್ಟರು ಹರಿದು ದಿಕ್ಕಿನ ಮಾಲೆಯವರಂಜಿದರು (ನಳಚ. ೯-೨೧); ಪ್ರಪಂಚದ ಯೋಚನೆಗೆ ಇನ್ನೆಲ್ಲೂ ಸ್ಥಳವಿರದೆ ಅವನೆಡೆಗೇ ದಾಳಿಯಿಡುವಂತಿತ್ತು (ರೂಪಸ. ೪). **ದಾಟಿಡು:** "ದಾಟಿಡು (ದಾಟ್ + ಇಡು) – ದೂರ ಧಾವನೇ (ನುಗ್ಗಿಹೋಗು)" (ಕಮಧಾ); "ದಾ [ಪಾಠಾಂ. ಧಾ] ಟಿಡುವ ಗಂಬರ ಸೋಲ್ಪವಂಗೆರವಿ ಬಯಸುವಗೆ ಸ್ವರ್ಗಗಣವಂ ಪೇಳಲುಚಿತ ಮಕ್ಕುಂ" (ಮಂಗರಾ. ೦೦೭-೨೧); ಕೊಲ್ಲೆಂಬ ಘೋರಸ್ವನಂ ಪೊಣ್ಮರೆ ವನ್ಯ ಪ್ರಾಣಿಗಳ್ಗಂತಕನ ಪಡೆಯೆ ದಾಟಿಟ್ಟವೋಲ್ ಬೇಡರಿರ್ದರ್ (ಜಗವಿ. ೦೬-೧೩); ಬೇಂಟೆಗೆ . . . ಪೊಱಮಟ್ಟು ಕಾಳಂ ದಾಟಿಟ್ಟು ಗಹನದುರ್ಗಮಂ ನಿರ್ಘೃಣವೃತ್ತಿಯಿಂ ಮುತ್ತುವಂತೆ ಮುತ್ತಿ (ಪಾರ್ಶ್ವಪು. ೦೨-೭೩ ವ); ಮುದ್ದುಮೊಗದಿಂ ಪೊರ್ಣೇಂದುಬಿಂಬಕ್ಕೆ ದಾಟಿಡುವಂತೆಲ್ಲರ ಧೈರ್ಯಮಂ ಮೊಲೆಯ ಬಿಣ್ಪುಂ ನುರ್ಗಿ ನೂಂಕಲ್ಕೆ (ಅನಂಪು. ೮-೬); ಕಾಯ್ದು ದಾಟಿಡುವವೊಲಾ ಬನಕ್ಕೆ ನಡೆತಂದುದು ಪೆಂಡಿರ ತಂಡಂ (ಕಬ್ಬಿಗಕಾ. ೯೨). **ಧಾಳಿಡು:** ಅರಿನೃಪತಿಗಳಂ ಧಾಳಿಟ್ಟು ಕೊಲ್ಲುಗಮಾವನೀಪಾಳಂ ತ್ರೈಳೋಕ್ಯಮಲ್ಲನಾಹವಮಲ್ಲಂ (ಸೌಇಇ. IX-II, ೧೦೨-೬: 1046); ಕಾಮನ ಹೆಸರನಡಗಿಸಲು ಧಾಳಿಡುವ ಪಡೆಯೊ (ಸಿದ್ಧರಾ. ೨-೪೦); ಪ್ರಾಗ್ಜ್ಯೋತಿಷಕೆ ಧಾಳಿಟ್ಟನಲ್ಲಿ ಮಹಾತಿಬಲನವನೊಡನೆ ಬಲುಹಾಯ್ದ ಜರ್ಗನನ ಸಮರ (ಕುಮ್ಯಾಸ. ೩-೦೪); **ಧಾಳಿಯಿಡು:** ಧಾಳಿಯಿಟ್ಟೆಯ್ದಿ . . . ಪಾಣ್ಡ್ಯನಂ ಖಣ್ಡಿಸಲ್ . . . ಬಂದಂ (ಸೌಇಇ.XX, ೪೯-೦೯: 1076 ?); ದಿವಿಜರ ಹಿಂಡು ಗೋಳಿಡೆ ಧಾಳಿಯಿಟ್ಟನು ಚಂಡ ಗಾಂಡೀವಿ (ಕುವ್ಯಾಅ. ೨೦ ಸೂಚನೆ); ಆ ದುರಾಗ್ರಹಿ ಧಾಳಿಯಿಟ್ಟನು ಧೂರ್ಜಟಿಯ ಗಿರಿಗೆ (ತೊರೆರಾ. ೧-೮-೩೧). **ಧಾಟಿಡು:** ಸಾನ್ತರನ ಮೇಲೆ ಮಾಕರಸಂ ಧಾಟಿಟ್ಟಲ್ಲಿ ನಾಗಾರ್ಜುನಯ್ಯನ ಮಗಂ ಮನ್ನೆಯ ನಾಗವರ್ಮ್ಮ ತಾನುಂ ಧಾಟಿವರಿದಲ್ಲಿ ಸತ್ತು ಸುರಲೋಕಕ್ಕೆ ಸನ್ದಂ (ಎಕ. VII, ಶಿಕಾರಿ ೨೨೦-೧೦: 1016). [ ದಾಟ್ + ಇಡು$_1$ ]

**ದಾಟಿವೋಗು, ದಾಳಿಹೋಗಂ** (ಕ್ರಿ). ೧. ಆಕ್ರಮಣಕ್ಕಾಗಿ ಹೊರಡಂ: ಚರಪುರುಷರನಟ್ಟಿ ಬೇಗಂ ದಾಟಿವೋಗಿ ಜಲಕ್ರೀಡೆಯಾಡುವನನಿಱಿದು (ವಡ್ಡಾರಾ. ೦೬೬-೧). **ದಾಳಿಹೋಗು:** ೨. ದಾಳಿಗೆ ಈಡಾಗಂ: ದಾಳಿ ಹೋದ ಆಳಿನ ಉಸುರಿನಲ್ಲಿ ಒಂದು ವೇಣು ಹುಟ್ಟಿತ್ತು (ಕೋಲಶಾಂ. ೩೭-೨೬). [ ದಾಟಿ + ಪೋಗು$_1$ ]

**ದಾಟಿಸಾಂತರ** (ನಾ). ಒಬ್ಬಾತನ ಹೆಸರು: ದಾಟಿಸಾನ್ತರನ ಮಗಂ ಸಾನ್ತರಾಯ ರಾಜ್ಯಂಗೆಯೆ (ಎಕ. VIII, ಸಾಗರ. ೧೦೦-೩: 986 ?). [ ದಾಟಿ$_0$ + ಸಾಂತರ$_0$ ]

**ದಾಟಿಸಿಂದ** (ನಾ). ಒಬ್ಬಾತನ ಹೆಸರು: ಸ್ವಸ್ತಿಶ್ರೀದಾಟಿಸಿನ್ದರ್ ಜಯುಮೆಮ್ಬ ಸವತ್ಸರದ ಉತ್ತರಾಯಣ ಸಂಕ್ರಾನ್ತಿ ಅನ್ದು ನಾಲ್ಗಣ್ಡುಗದ ಬೆದೆಮಣ್ಣನ್ ಕೌಣ್ಡನ್ಯಗೋತ್ರದ ದೇವದತ್ತಗ್ಗೆ ಇತ್ತಾರ್ (ಎಕ. XVI, ಪಾವುಗ. ೧೧-೧: 764). [ ದಾಟಿ$_0$ + ಸಿಂದ$_2$ ]

**–ದಿ** (ಪ್ರ). ಒಂದು ಕೃದಂತ ಭಾವನಾಮ ಪ್ರತ್ಯಯಂ. 'ಇಬ್ಬಿದ್ದಿ'. 'ಬಿಡದಿ' ಪರಾ.

**ದಿಂ** (ನಾ). ಒಂದಂ ಅನುಕರಣ ಶಬ್ದ: ಸುಮ್ಮಾನದಿಂದ ಪಟ್ಟಂಡದ ದೊರೆಗಳ ತಮ್ಮವರನೆ ಮಾಡಿಕೊಂಡು ದಿಮ್ಮೆಂಬ ವಾದ್ಯಕೋಟಿಗಳಲ್ಲಿ ದೊರೆ ನೋಡಿ ಬಿಮ್ಮನುತೆಯ್ತರುತಿರ್ದ (ಭರತ. ೪೯-೭೦); 'ದಿಮಂಗ್ಗಿಡಂ', 'ದಿಮ್ಮಿಡಂ', ಪರಾ.

**ದಿಂಕ** (ನಾ). ಹೇನಿನ ಮೊಟ್ಟೆ,–ತತ್ತಿ; ಸೀರಂ. [ ಸಂ. ]

**ದಿಂಕಿಕ್ಕು** (ಕ್ರಿ). ನೆಗೆ; ಚಿಮ್ಮು: ಮುಂದೆ ದಿಂಕಿಕ್ಕುವ ಹುಲ್ಲೆವಿಂಡನದು ಕಂಡುಱ್ ಲಂಘಿಸಿ ಪಾಯ್ದು ನೆತ್ತರಿಂ ಸೊಕ್ಕಿರುತಿರ್ಪ ಪೆರ್ಬುಲಿಯ ನೊರ್ವನೆ ಪೊಯ್ದಂ (ನಳಚಂ. ೬೬). [ ದಿಂಕು (<ಧೀಂಕು) + ಇಕ್ಕು ]

**ದಿಂಕಿಡಿಸು** (ಕ್ರಿ). ಮುಸುಕಂ; ಆವರಿಸು; ಆಕ್ರಮಿಸು: ಪಟುಪಾಠಕರ ನಿರವಧಿರವಂಗಳ ಕೋಳಾಹಳಮಲ್ಲಮೊಮೊರ್ದಲೊಳ್ ಭೋರೆಂದು ನೆಗೆದು ದೆಸೆಯಂ ಮುಸುಂಕಿ ದಿಂಕಿಡಿಸುತ್ತುಮಿರೆ (ಬಾಧಪು. ೧೩-೭ ವ).
[ ದಿಂಕಿಡು (<ಧೀಂಕಿಡು) + –ಇಸು$_3$ ]

**ದಿಂಕಿಡು** 'ಧೀಂಕಿಡು' ನೋ.

**ದಿಂಕು** 'ಧೀಂಕು' ನೋ.

**ದಿಂಕುಗೊಳ್** (ಕ್ರಿ). ನೆಗೆದು ಚುಚ್ಚು; ಹಾರಿ ಬಂದು ತಿವಿ: ನಡುವ ಸರಲ್ಗೆ ಮೆಯ್ಯೊಳಗಡಂಗುವ ಸಂಕುಗೆ ದಿಂಕುಗೊಳ್ವ ಕಕ್ಕಡೆಗಿದಿರುರ್ಚ ವಿಟ್ಟಗಿದಿರಾನೆಯ ಕೋಟ್ಕಳ ಕೋಳ್ಗೆ ನೊಂದು ಬಾಯ್ವಿಡದೆ . . . ಬಿಟ್ಟುವಿರ್ದ ನೆಲೆಯಿಂ ಕೆಲವುನ್ನದ ಗಂಧಸಿಂಧುರಂ (ಪಂಪಭಾ. ೧೦-೯೪): "ದಿಂಕುಗೊಳ್ವ = ಹಾರಿ ಬರುವ" (ಪಂಪದೀ. ೩೭೧).
[ ದಿಂಕು (<ಧೀಂಕು) + ಕೊಳ್$_1$ ]

**ದಿಂಕುವಾಱು** (ಕ್ರಿ). (ಸಂತೋಷದಿಂದ) ನೆಗೆದಾಡಂ; ಕುಣಿದಾಡು; ಪುಟಹಾರು: ಕುಸುಮಾಸ್ತ್ರನೆಚ್ಚೊದೆದು ಪುಟ್ಟಿಸಿ ರಾಗದಿನುರ್ವಿ ದಿಂ[ಪಾಠಾಂ. ಧಿಂ] ಕುವಾಱಿದಪನೆನಿಪ್ಪನಂ ಸ್ಮರಜಸಾಧ್ವಸದಿಂ ದಿಗಿಲ್ಲೆಂದು ಗೂಡುವಾಯ್ಮಿದು ನೃಪಕನ್ನೆಗಾಗಳೆರ್ದ ನೋಡಲೊಡಂ ಮನಃವಂಶ ಮೇರುವಂ (ವರ್ಧಪು. ೬-೧೩). [ ದಿಂಕು (<ಧೀಂಕು) + ಪಾಱು$_1$ ]

**ದಿಂಗು** 'ಧಿಂಗಂ' ನೋ.

**ದಿಂಗುವಿಡಿ** (ಕ್ರಿ). (?): ಶಿಲೆಯೊಳಗಿಪ್ಪ ಕುಲಾಲ ಬೆಳಗಿ ತೊಳಗುವ ಆ ಮಲಿನರ ಮುಖವ ಕಂಡು ಮತ್ತೆ ದಿಂಗುವಿಡಿಯಲೇಕೋ ದಿಂಗುವಿಡಿದು ಭಂಡರಾದ ಲಂಡರಿಗೇಕೋ ಲಿಂಗದ ಸುದ್ದಿ (ತೋಳಮಾ. ೧೮೪-೬೯೩).
[ ದಿಂಗು$_0$ + ಪಿಡಿ$_1$ ]

**ದಿಂಟಿ** 'ತಿಟ್ಟು$_3$' ನೋ.

**ದಿಂಡ$_1$, ಡಿಂಡಲ, ಡಿಂಡಿಗ, ದಿಂಡಗ, ದಿಂಡಲ, ದಿಂಡಲು$_1$, ದಿಂಡಿಗ$_1$, ದಿಂಡುಂಗ, ದುಂಡಿ$_2$, ದುಂಡಿಗ, ದುಂದುಲು** (ನಾ). (ಚೆನ್ನಾಗಿ ಉರಿಯುವ ಗಟ್ಟಿಯಾದ) ಒಂದು ಬಗೆಯ ಮರ,– ವೃಕ್ಷ: ದಿಂಡ ತಂಡಸ (ಶೀವಡ. ೩೭-೦೩): ಒಪ್ಪುವಮಳ ಸಿರಿಖಂಡದಿಂ ದಿಂಡದಿಂ ಒರಿವಿಡಿಯೆ ನಿಗುರ್ದ ಹೆತ್ತೇಗದಿಂ ತೇಗದಿಂ ಕಾನನಂ ಕಣ್ಗೆಸೆದುದು (ರಾಘುಪ. ೧೭-೫೪): ತುಂಬುರ ಬನ್ನಿ ಗೊಟ್ಟಕ್ಕಿ ದಿಂಡ (ರುಕ್ಮಾಂಗ. ೯-೩೬). **ಡಿಂಡಲ:** ಶೋಣಕ = ಡಿಂಡಲಮರ (ಗಂಗಾಮು. ೩೧೦). **ಡಿಂಡಿಗ:** ಡಂಡಿಗ, ಬೆಜ್ಜಲು (ಮ್ಯಾಜಿಗಿ. ೭-೧೧೯). **ದಿಂಡಗ:** (ಈ). **ದಿಂಡಲ:** ಆಲಮಾ ಬಸರಿ ದಿಂಡಲ [ಪಾಠಾಂ. ದಿಂಡಂ] ತಂಡಸಂ ನೆಲ್ಲಿ ಜಾಲಮಾ

ಹೊನ್ನರಳಿ . . . ಮೊದಲಾದ ವೃಕ್ಷಂಗಳಿಂ ವನವೊಸೆದುದು (ಕಬಕು. ೩೩-೧೯); ಅತ್ತಿ ಮತ್ತಿ ಮಧುಕಂ ಮಗ್ಗಾರೆ ಪಚ್ಚಾರಿ ದಿಂಡ [ಪಾಠಾಂ. ಡಿ] ಲವಮಾಲಂ ಬೆಳವಿಂಗಳಂ ಪುಣಿಸೆ ಜಾಲಂ (ರಾಜಶೇ. ೩-೫೭); ಕಾರಾ ಚವುಂಕೋಲೆ ದಿಂಡಲ . . . ಎಕ್ಕೆ ಮೊದಲಾದುವೀರ್ಗುರುಹು ರಾಜಿಕುಂ (ಹೂದಕಂ. ೪-೪೫); ದಿಂಡಲ(ಧಾವರಾ) . . . ಬನದೊಳಗೆ ಇಮಾರತಿಗೆ ಬರುವ ಹಾಗೆ ಎತ್ತರವಾಗಿ ಬೆಳೆಯುತ್ತದೆ. ಕಟ್ಟಿಗೆ ಬೆಳ್ಳಗೆ, ಬಿರುಸು, ಜಿಗುಟುಳ್ಳದ್ದು (ಕಠಾಗಿ. ೪೦). **ದಿಂಡಲು$_1$**: ತಗ್ಗಿಬೇರು . . . ದಿಂಡಲಬೇರು, ಹಗ್ಗುಳದ ಬೇರು, ಶುಂಠಿ ಇವಂ ಕಷಾಯವಿಕ್ಕಿ ಕೊಡಲು ಸಕಲ ಸನ್ನಿದೋಷವು ಪರಿಹರ (ಸಕವೃ. ೧೭೪). **ದಿಂಡಿಗ$_1$**: ಮರಗಳು: ಹೆಸವ, ಹೆಬ್ಬಲಸು . . . ದಿಂಡಿಗ, ಬೂರಗ (ನಮ್ಮನು. ೨೩೭). **ದಿಂಡುಗ**: ದಿಂಡುಗ = "ದಿಂಡದ ಮರ" (ಪ್ರಕಠ). **ದುಂಡಿ$_1$**: "ಮುಂಡೂಕಪರ್ಣ, ಪತ್ರೋರ್ಣಃ, ನಟಃ, ಕಟ್ವಂಗಃ, ಡುಂಡುಕಃ – ಈ ೫ ದುಂಡಿಗಿಡುವಿನ ಪೆಸರು" (ನಾಚಿರಾ. ೧೦೫); **ದುಂಡಿಗ**: ಹಾರೆ ತಾಳಂಕೋಲೆ ದಿಂಡ ದುಂಡಿಗ ಬೋರೆ . . . ಪೇರಿಪ್ಪೆ ತುಪ್ಪೆಗೇರ್ವುವು (ನಂದಿಮಾ. ೧೧-೩೭). **ದುಂಡುಲು**: "ಶ್ಯೋನಾಕ – ದುಂಡುಲು" (ಓಷಧಿ. ೧೭೨)

[ ← ತೆಲು. ದುಂಡಿಕ, ದುಂಡಿಗ, ದುಂಡಿಲ, ದುಂಡುಗ, ದುಂದಿಲ ]

**ದಿಂಡ$_2$** (ನಾ). ಒಂದಂ ಬಗೆಯಂ ಹೂವಿನ ಬಳ್ಳಿ; ಗಿರಿಕರ್ಣಿಕೆ: "ಗಿರಿಕರ್ಣಿಕೆಯು ದ ವ ರಾ ಜಿ ತ ೦ ದಿಂಡ [ಪಾಠಾಂ. ದಿಂದ]ವುದು" (ಮಂಗರಾ. ೩೪-೧೧). [ ←ತೆಲು. ದಿಂಟೆನ ]

**ದಿಂಡ$_3$** 'ದಿಂಡು' ನೋ.

**ದಿಂಡ$_4$**, ಡಿಂಡ (ನಾ). ೧. ಸೊಕ್ಕಿದವನು; ಉದ್ಧತ: ಅವಳನ್ನು ನಿಂದಿಸಿದ ದಿಂಡರನ್ನು ನಿಪಾತ ಮಾಡಿಬಿಡುವೆನೆಂದು ಭಾಷೆಯನ್ನು ಕೊಟ್ಟು . . . ಮನೆಗೆ ಮರಳಿದನು (ಪಾಗ್ಯವಿ. ೫೭). ೨. (ದೇವರಂತೆ) ಶಕ್ತ; ಸಮರ್ಥ; ಅಧಿಕ ಬಲಶಾಲಿ: ನಿನ್ನನತ್ಯಾದರದಿಂ ದೇವನೆ ದಿಂಡನೆಯೆಂದೊಡೆ ದೇವಂ ನೀನೆಂತದಂತು ದೊಡ್ಡಿದನಪ್ಪೈ (ಧರ್ಮಾಮೃ. ೯-೧೦೭); ದೇವರನೆತ್ತ ಬಲ್ಲನವರೊತ್ತಿನ ದಿಂಡರನೆತ್ತ ಬಲ್ಲ (ಶಶಕ. ೭೦). ತಲೆ ಮೇಲೆತ್ತಿ ನೋಡಿದಾಗ ದೇವರೂ ಕಾಣಿಸಲಿಲ್ಲ ದಿಂಡರೂ ಕಾಣಿಸಲಿಲ್ಲ (ಕಥಾಮಂ. IV, ೧೧೧). **ಡಿಂಡ**: ೧. ಬಂಧು ಬಳಗ ಕಂಡು ಬಿಡಿಸಿ ಕೊಂಬರಾರೊ ಡಿಂಡ ಯಮನ ದೂತರೆಳೆಯೆ (ಕನಕ. ೫೦-೧).

[ ದಿಂಡು + – ಅ$_6$ ]

**ದಿಂಡಗ** 'ದಿಂಡ$_1$' ನೋ.

**ದಿಂಡತನ** 'ದಿಂಡಂತನ' ನೋ.

**ದಿಂಡಲ** 'ದಿಂಡ$_1$' ನೋ.

**ದಿಂಡಲು$_1$** 'ದಿಂಡ$_1$' ನೋ.

**ದಿಂಡಲು$_2$** (ನಾ). (ಉಕ) ಪ್ರಸ್ತ; ಶೋಭನ. 'ಮರುದಿಂಡಲು' ಪರಾ. [ ? ]

**ದಿಂಡಾಳು** (ನಾ). ಶಕ್ತಿಶಾಲಿ; ಬಲಶಾಲಿ: ದಿಂಡಾಳುಗಳನ್ನು ಕರೆದರೆ ಮಿಂಡಾದ ಕೆಲಸವು ಆಗುತ್ತದೆ (ಗಾದೆ). [ ದಿಂಡು+ಆಳು$_3$ (<ಆಳ್$_3$) ]

**ದಿಂಡಿ$_1$** (ನಾ). ಬಾಳೆಯೆಲೆಯಲ್ಲಿ ಅಗ್ರವನ್ನು ಕತ್ತರಿಸಿ ತೆಗೆದ ಹಿಂದಿನ ಭಾಗ. 'ಅಗ್ರ' ಪರಾ. [ <ದಿಂಡು ]

**ದಿಂಡಿ$_2$** (ನಾ). ೧. ಭಜನೆಯ ಮೇಳ,–ಮೆರವಣಿಗೆ: ಒಂದು ದಿನ ಟಿಳಕರು ಕೆಲ ಕ್ರಿಸ್ತೀಯರೊಡನೆ ತಿರುಗಾಡ ಹೋದಾಗ ಅತ್ತಣಿಂದ ಒಂದು ಭಜನೆಯ ಮೇಳ (ದಿಂಡೀ) ಬಂತು (ಕ್ರೈತಿಚಿ. ೩೩೪). 'ದಿಂಡೀ ಯಾತ್ರೆ' ಪರಾ. ೨. ದೇವಾಲಯಗಳಲ್ಲಿ ಪ್ರಾಕಾರದ ಒಳಭಾಗದಲ್ಲಿ ಭಜನೆಯೊಂದಿಗೆ ಎಳೆಯುವ ಚಿಕ್ಕ ತೇರು; ಸಣ್ಣ ಉತ್ಸವ.

ದಿಂಡಿನುತ್ಸವ = ದೇವಾಲಯಂಗಳಲ್ಲಿ ದೇವರಿಗೆ ನಡೆಸುವ ಚಿಕ್ಕ ತೇರಿನ ಉತ್ಸವ,–ರಥೋತ್ಸವ: ಬಳಿಕಾಗ ದಶಮಿಯ ದಿಂಡಿನುತ್ಸವದಲಿ ನೆಳಿನಾಕ್ಷ ಪಶ್ಚಿಮರಂಗ ಘಳಿಲನೆ ಸರ್ವಸಃಭ್ರಮವ ಬೀಚುತ್ತಲಾ ಪೊಳಲೊಳು ಮೆಚೆಯುತ್ತಿತಂದ (ಕಂಠವಿ. ೯-೩೯).

[ ←ಮರಾ. ದಿಂಡೀ ]

**ದಿಂಡಿಗ$_1$** 'ದಿಂಡ$_1$' ನೋ.

**ದಿಂಡಿಗ$_2$** (ನಾ). ಒರಟನಾದವನು; ಉದ್ಧತ. 'ದಿಂಡಿಗತನ' ಪರಾ. [ ದಿಂಡ$_4$ + – ಇಗ ]

**ದಿಂಡಿಗಗಾವುಂಡ** (ನಾ). ಒಬ್ಬಾತನ ಹೆಸರು: ಗಾದಿಯರ ದಿಣ್ಣಗ ಗಾವುಣ್ಣರುವೆನ್ನುವರು × × × ಮಂಗರು ವಲ್ಲಭಗಾವುಣ್ಣರುಂ (ಎಕ. II, ೩೫-೭; ಶು. ೬೦೦). [ ದಿಂಡಿಗ$_2$ + ಗಾವುಂಡ ]

**ದಿಂಡಿಗತನ** (ನಾ). ಒರಟುಸ್ವಭಾವ; ಉದ್ಧಟತನ: ನೀನು ಶುದ್ಧ ಪೋಕರಿ ಹುಡುಗಿ! ತೊಂಡೆದ್ದ ದಿಂಡಿಗತನದ ಪುಂಡಹೆಣ್ಣು! (ಮಂತ್ರಶ. ೨೪-೧೭). [ ದಿಂಡಿಗ$_2$ + – ತನ ]

**ದಿಂಡಿಗರ** (ನಾ). ಒಬ್ಬಾತನ ಹೆಸರುಂ: ಪೃಥಿವೀ ಕೊಂಗುಣಿ ಮಹಾರಾಜಾಧಿರಾಜ ಬಾಣವಂಶೋತ್ಪವ ಶ್ರೀದಿಂಡಿಗರರ್ಕಬ್ಬವ್ವನಾಡುಸಾಸಿರದೊಟ್ಟಾಡು ಮಾನಾಳುತ್ತಿಟ್ಟು (ಪ್ರಾಅಶಿ. ೧೯೨೭, ೧೦೯-೪೦; ಶು. 726). [ ದಿಂಡಿಗ$_2$ + ಅರ$_4$ ]

**ದಿಂಡಿಯು** 'ದಿಂಡೆಯು' ನೋ.

**ದಿಂಡೀಯಾತ್ರೆ** (ನಾ). ಭಜನೆಯ ಮೇಳದೊಂದಿಗೆ ಹೊರಡುವ ಯಾತ್ರೆ: ಹೊರಡು ಪಂಡರಪುರದ ತನಕ ದಿಂಡೀಯಾತ್ರೆ ಆ ಸೇತುಹಿಮಗಿರಿಗೆ ಹಡದಿ ಹಾಸು (ನಂಮು. ೧೯-೫). [ ದಿಂಡಿ$_2$ + ಯಾತ್ರೆ ]

**ದಿಂಡೀರಪಿಂಡ** (ನಾ).=ಡಿಂಡೀರಪಿಂಡ: ಕಣ್ವಾಗ್ಗರ್ಗಕಾಬ್ಧಿಚಂದ್ರನಖಿಣ್ಡಿತ ಸುತಪೊ ವಿಭಾಸಿ ಖಣ್ಡಿತ ಮದನಂ ದಿಣ್ಡೀರಬಿಣ್ಡಾ ಸುರವೇದಣ್ಡಾಯಶಟ್ಟಣ್ಣನರ್ಹಣಾಣ್ಡಿ ಮುನೀಂದ್ರ (ಶಾಶಿಶಿ. XX. ೧೯-೨೮;980).

[ <ಸಂ. ಡಿಂಡೀರಪಿಂಡ ]

**ದಿಂಡು**, ದಿಂಡ$_3$, ದಿಡ್ಡು (ನಾ). ೧. (ಬಟ್ಟೆ, ಸೌದೆ ಮೊದಲಾದವುಗಳ) ಗಂಟು; ಪಿಂಡಿ; ಕಟ್ಟು; ಹೊರೆ: ಬಳಗಜವಳಿಗೆಂದು ಬಂದ ಚೀನದುಕೂಲದ ಹಾರಾವಳಿಯ ಪಲವು ದಿಂಡುಗಳುಮಂ ಯಾಚಕ ಕೋಟಿಗೆ ಬೇಡಿದುದನೀಯಲೆಂದು ಪುಂಜಿಸಿದ ಪೊನ್ನರಾಶಿಯುಮನನಂತಮತಿ ನೋಡಿ (ಧರ್ಮಾಮೃ. ೩-೨೫೨); ಹಂಸಾವಳಿ ಗಜಾವಳಿ ಮೊದಲಾದ ಪಟ್ಟವಳಿಯ ದಿಂಡುಗಳಂ ತರಿಸಿ (ಬಸವ. ೮-೧೨); ವಿವಿಧ ರತ್ನಾಭರಣ ಕಾಂಚನ ನವದುಕೂಲದ ದಿಂಡಿನಲಿ ಬುಧನಿವಹ ದಣಿದುದನಂತ ಕೃಪಣಾನಾಥಜನಸಹಿತ (ಕುಮ್ಯಾಸ. ೧-೧೯); ಎಣ್ಣೆಯಾನಡಕಿರೋ ಸೀರೆಗಳ ದಿಂಡನು ಬಿಡಿಸಿರೋ ಕೋದುಡಿಸಿರೋ ತಡವೇನು ಬೇಗೆನುತ . . . ನಿಡಿಯ ಬಾಲವ ಸುತ್ತುತಿರ್ದರು (ತೊರವೆರಾ. ೫-೮-೮); ಪುಲಿದೊಗಲ ಪೊಟಿ ಜೇನುತುಪ್ಪದ ನಳಿಗೆ ಮೇಣದ ಮುದ್ದೆ ಆನೆಯ ತಲೆಯ ಮುತ್ತಿನ ಪುಡಿಕೆ ಚಮರೀವಾಲಗಳ ದಿಂಡು (ಸಾಳ್ವಭಾ. ೧೭-೬); ದೇವಾಂಗ ಚಿತ್ರಾವಳಿ ಸುವರ್ಣಾವಳಿಯ ವಸನದ ದಿಂಡನರ್ಪಿಸಿದ (ಅಕ್ರೂಚ. ೮-೪೦). ೨. ಒತ್ತಾಗಿ ಕಟ್ಟಿರುವ ಹಾರ,–ದಂಡೆ: ಸುಮದಂಡೆಗಳ ಮಾಲತಿಯ ಕುಸುಮ ನವಪರಿಮಳದ ಬಂಡುಳ್ಳ ದಿಂಡುಗಳ ಮೊನೆ ಮಲ್ಲಿಗೆಯ ಬೀಡು ತುರಾಯಿಗಳ ಸೊಬಗು (ಚತುರ್ಪು. ೧-೫-೫೩). 'ದಿಂಡುಕಟ್ಟು' ಪರಾ. ೩. ಮರದ ಕಾಂಡ,–ತಾಳು: "ಪ್ರಕಾಂಡ, ಸ್ಕಂಧ–ಮರದ ಮೊದಲಿಂದ ಕೊಂಬುಪರ್ಯಂತರವಿರ್ದ ನಡುವಣ ದಿಂಡು" (ನಾಚಿರಾ. ೬). ೪. (ಬಾಳೆಯ) ಕಾಂಡ ಅಥವಾ ದಂಟಿನೊಳಗಿರುವ ಭಾಗ: ಅಪೂರ್ವಂಗಳಾಗಿ ತೊಳಗುವ ಕಿಚುದೊಡೆಗಳುಡುವಡರ್ದನ್ನಮಾರೂಢ

ಸರ್ವಜ್ಞನ ದೊಡ್ಡ ಮಾರ್ಗಂಗಳೆಳವಾಟೆಯ ದಿಂ[ಪಾಠಾಂ. ದಂ]ಡಿನೊಳ್ ಸಾಣೆಗಟ್ಟಿದಂತಾದುವು (ಪಂಪಭಾ. ೨-೩೯ವ); ದೊರೆಕೊಳೆ ಬಾಟೆಯ ದಿಂಡಿನ ತಿರುಳೊಳ್ ಮತ್ಸ್ಯಾಕ್ಷಿ ಮೂಲಮಂ ಸುಣ್ಣಮುಮಂ ಬೆರಸಿ (ಲೋಕೋಪ. ೮-೧೯); ಮುಳಿವೆಂ . . . ಬಾಟೆಯ ದಿಂಡಂ ಮುಳಿವುತ್ತ ಕಾವನಾನೆಯ ಕೊಂಬಂ (ಕಬ್ಬಿಗ. ೨೪೪). ೫. ಕೋಲು; ದಂಡ: ಖಂಡಣೆಗೆಯ್ದು ಕಾಮುರ್ಕದರ್ಧಭಾಗದ ದಿಂಡನೆ ಶಿರಃಹಿ ಮನ್ಮಥನ ಮಂಡೆಯ ಮೇಲೆ ಗಟ್ಟಿಸಲೊಡ್ಡಿಕೊಳಲು ಕೋದಂಡವಿಕ್ರಮಿಯಾಯ್ತು ಕರೆದೆ (ಬೋಹಕ. ೧೨-೬೪). ೬. ತುಂಡು; ಚೂರು: ಮಂಡಿಸಿತು ನೊರೆರಕುತ ಕರುಳಿನ ಜೊಂಡು ಮಸಗಿತು ಕಡಿದ ಖಂಡದ ದಿಂಡು ತಳಿತುದು . . . ಕಾಲಾಂತಕನ ಹೆಬ್ಬಳಸು ಹುಲುಸಾಯ್ತು (ಶಾಮ್ರ್ಯಭೀ. ೯-೧೩). ೭. (ಕುಂಟೆ ಮೊದಲಾದ ಉಪಕರಣಗಳಿಗಾಗಿ ಉಪಯೋಗಿಸುವ) ಮರದ ತುಂಡು,-ಕೊರಡು: "ದಿಂಡು-ಕುಂಟೆಯ ದಿಂಡು; ಕೂರಿಗಿಯ ದಿಂಡು; ಕಟ್ಟಿಗೆಯ ತುಂಡು . . . ಗಳೇದ ಸಾಮಾನ" (ಜಾನಕೋ. ೫). ೮. ಕಟ್ಟಡಗಳ ತಳಪಾಯಕ್ಕೆ ಉಪಯೋಗಿಸುವ ಕಲ್ಲು,-ದೊಡ್ಡದಾದ ಗುಂಡುಕಲ್ಲು: ಚವುಕಮಾದ ವಜ್ರದ ದಿಂಡುಗಳ್ (ಸೌಗಂಧಿ ೩೩೮-೫): ಕಲ್ಲಿನ ದಿಂಡುಗಳನ್ನು ಕಂಬಗಳನ್ನು ತುಂಬಿದ ಗಾಡಿಗಳನ್ನು ಎಳೆಯುವ ಕುದುರೆಗಳ, ತಂದುದನ್ನು ಗಾಡಿಗಳಿಂದ ಇಳಿಸಿಕೊಳ್ಳುವ ಸಲಗಗಳ ಸಂಖ್ಯೆ ಹೆಚ್ಚು ಕಡಿಮೆ ದುಡಿಯುವ ಮಂದಿಗಿಂತ ಕಡಿಮೆಯೇನಿರಲಿಲ್ಲ (ಸವತಿ. ೬೮). ೯. ಚಿನ್ನ ಮುಂತಾದ ಲೋಹಗಳ ಗಟ್ಟಿ: ಪೋಗಲಣ್ಮದೆ ಚಿನ್ನದ ದಿಂಡಿರ್ದಡೆಯಂ ಪೊಕ್ಕು ಮೇಲೊಂದು ಚಿನ್ನದ ದಿಂಡಂ ತೆಗೆದುಕೊಂಡು (ಧರ್ಮಾಮೃ. ೧೨-೬೩). ೧೦. ಅಂಚು; ದಡ; ದಂಡೆ. 'ದಿಂಡುಕಟ್ಟು' ಪರಾ. ೧೧. (ಹಣ್ಣು, ಕಾಳು ಮೊದಲಾದವುಗಳ) ಒಳಭಾಗ; ತಿರುಳು: ಉಂಡೆಗುಂಬಳಕಾಯ . . . ತೊಟ್ಟಿನ ಬಳಿಯ ತೋಡಿ ಗುಂಡಿಯಂ ಮಾಡಿ ಸೆರೆಗತ್ತಿಯೊಳು ಮತ್ತದಱ ದಿಂಡುಮಂ ಪೂರಿಸಿದ ಬಿತ್ತಮಂ ನೆಱೆದದಱೊಳಿನಿಸಿಲ್ಲದಂತೆ ತೆಗೆದು (ಸೂಪಶಾ. ೫-೨೩). ೧೨. ಶರೀರ; ಒಡಲು; ದೇಹ; ಮೈ: ಲಿಂಗವ ಕೈಯಲ್ಲಿ ಹಿಡಿದು ಅವರಂಗದಿಚ್ಛೆಯ ನುಡಿದು ತನ್ನ ದಿಂಡ ಹೊರೆಯಲೇಕೋ (ಮೋಳಿಮಾ. ೧೦೫-೪೧೭); ದಿಂಡುದಿರಿಸಿ [ಪಾಠಾಂ. ದಿಂಡುರಿಸಿದ] ತಲೆ ಖಂಡಿಸಿ ಹೊಯ್ಯುತ ಸೆಂಡಾಟಮನಾ ತಲೆಗಳಿನಾಡುತ ಮುಂಡಂಗಳ ನೆಲೆಯೊಳುಯಾಡಿಸುತಿರ್ದ[ಪನಂದಾ] ನಟನಂತೆ (ಕುಮುರಾ. ೮-೪೯). ೧೩. ರುಂಡವಿಲ್ಲದ ದೇಹ; ಮುಂಡ: "ಅಟ್ಟೆ, ಧಡ" (ಕಂನುಹು. ೬೮). ೧೪. ಗಟ್ಟಿಯಾದ ಭಾಗ; ಗಡುಸಾದ ಭಾಗ; ಅಪಕ್ವವಾದ ಭಾಗ: ಅನ್ನ ಸರಿಯಾಗಿ ಬೆಂದಿಲ್ಲ, ಇನ್ನೂ ದಿಂಡಿದೆ (ರೂಢಿ); ಹಾಲು ಒಡೆದರೆ ನೀರು ಬೇರೆ, ದಿಂಡು ಬೇರೆಯಾಗುತ್ತದೆ (ರೂಢಿ). ೧೫. ಸ್ಥೂಲವಾದುದು; ದಪ್ಪವಾದುದು: ಚೆಂಡಿನಂದದಿ ಬಿಗಿದ ಮಾಂಸದ ದಿಂಡು ಮೊಲೆಗಳು ಮುಖವು ಶ್ಲೇಷ್ಮದ ಜೊಂಡು (ಅಮೃತ. ೨-೮೧): ಗೂಳಿಯ ಹಿಣಿಲಂತಿರೆ ಹೆಗಲವರೆಗೆ ಮಂಡಿಯ ಮುಟ್ಟುವ ತೋಳ್‌ದಿಂಡು (ಅಹಲ್ಯೆ. ೯೬-೨೦). 'ದಿಂಡುಕ' ಪರಾ. ೧೬. ಬಾಳೆಯ ದಿಂಡಿನಿಂದ ಮಾಡಿದ ಪಲ್ಯ,-ತಾಳಿದ: ಇಂದು ನಮ್ಮ ಮನೆಯಲ್ಲಿ ದಿಂಡು ಮಾಡಿದ್ದರು (ರೂಢಿ). ೧೭. ಪುಷ್ಟಿಕರವಾದುದು; ಪುಷ್ಟಿದಾಯಕವಾದುದು: ಗೋಧಿಯು ಅಕ್ಕಿಗಿಂತ ದಿಂಡಾದ ಆಹಾರಧಾನ್ಯ (ರೂಢಿ). ೧೮. ಮೂಲಸತ್ತ್ವ,-ಸಾರ; ಒಳತಿರುಳು: ಶೈವಕರುಣಾಂಶುಗಳ ಎಳೆಬಿಡಿಸುವೆಸಕದೊಳು ದಿಂಡಿನೀ ಜೀವಾತ್ಮವನೆ ಮರೆವೆಯೆಂತು? (ಮುಳಿದೀ. ೩೯-೮). ೧೯. ಬಲ; ಕಸುವು; ಶಕ್ತಿ. 'ದಿಂಡಾಳು' ಪರಾ. ೨೦. ಧೈರ್ಯ; ದಿಟ್ಟತನ. 'ದಿಂಡುಗೆಡು' ಪರಾ. ೨೧. ಗರ್ವ; ಸೊಕ್ಕು; ಅಹಂಕಾರ: ಒಂದಿನಂ ಮುಚ್ಚಂಜೆ ಹಸಿಮಣ್ಣಿನುಂಡೆ, ಗುದ್ದುವೊರಂವೊಡ್ಡನನು ಸಂತೆಯಲಿ ಕಂಡೆ, ನಾಲಗೆಯ ಸಾಲದುಲಿಯಿಂ ಗೊಜಗಿತಿಂತು-'ಮೆಲ್ಲನೆಲೆ ತಟ್ಟಣ್ಣ! ನನ್ನೊಳೀ ದಿಂಡೇ?' (೧೪ವಿಂ. ೧೩೦-೨೭). ೨೨. ಬೂಚು; ಬಿರಡೆ (?): ಬಳೆಯ ಕುಪ್ಪಿಗೆಗೆತ್ತು . . . ಅದರ ಬಾಯಿಗೆ ಬಳಹದ ದಿಂಡನಿಕ್ಕಿ ವಜ್ರಗಾರೆಯಂ ಮಾಡಿ (ವಾತಾಚಿ. ೩೯-೪). ದಿಂಡ್ಯ: ೧೩. ನಿನ್ನ ರುಂಡವನ್ನು ದಿಂಡದಿಂದ ಬೇರೆ ಮಾಡದೆ ಘಾತ್ಕನು ಎಂದೂ ಬಿಡಲಿಕ್ಕಿಲ್ಲ (ಅಂದೀ. ೧೧೨): ತಾನು ಅವನ ರುಂಡವನ್ನು ದಿಂಡದಿಂದ ಬೇರೆ ಮಾಡಿದ್ದು (ಮುನಲಿ. ೧೬೧); ಪ್ರತಿಯೊಂದು ನಾಟಕದಲ್ಲಿ ಕೆಲವು ದಿಂಡಗಳೂ ಹಲವು ಡೌಗಿಗಳೂ ಬರುತ್ತಿದ್ದವು (ಜನನಾ. VII ಪ್ರಸ್ತಾವನೆ). ೨೧. 'ದಿಂಡತನ' ಪರಾ. ದಿಡ್ಡು: ೨೩. ಹಸುವಿನ ಕೊರಳಿಗೆ ಕಟ್ಟುವ ಗುದಿ,-ಗುದ್ದಿ: (ಸ್ಯಾಂಡರ್). ೨೪. (ಆಲಂ) ಹೊರೆ; ಭಾರ: ದೊಡ್ಡ ಧ್ಯೇಯವನ್ನು ಕಟ್ಟಿಕೊಂಡಿರುವ ನನಗೆ ಕೊರಳಿಗೆ ಅವಳು ಒಂದು ದಿಡ್ಡಾಗುವ ಬದಲಾಗಿ ಈಗ ನನ್ನ ಅಬಾಧಿತಸ್ವಾತಂತ್ರ್ಯವೇ ನನಗೆ ದೊಡ್ಡದು (ನಿಷ್ಕಾಮ. ೧೧೦).

**ದಿಂಡಾಗು, ದಿಡ್ಡಾಗು**=೧.(ಕೊಂಬೆಯಿಲ್ಲದ ಮರದಂತೆ)ಬೋಳಾಗು; ಬರಿಗೈಯಾಗು; ಹುರುಳಿಲ್ಲದಾಗು: ಕಂಡು ಸತ್ಕರಿಸಿ ಮುನಿ ಮಧುರವಚನದಲಿ ಮಾಂಕೊಂಡಾ ಭರದ್ವಾಜಸುತನೊಳಿಂತೆಂದನೀ ಮಂಡಲವ ಭೂಸುರರ್ಗಿತ್ತೆವೆಮಗೇನುಂಟು ಭಾಗ್ಯವೀಯಲ್ಕೆ ನಿಮಗೆ ದಿಂಡಾದ ಧನಹೀನನಿಂದೇನು ಭಾರಿ ಕೋದಂಡವೊಂದಿದೆ (ಲಕ್ಷ್ಮಿಭಾ. ೨೮-೩೦). ೨. ಸೊಕ್ಕೇರು; ಮದವೇರು: "ಪರ್ವತೀತಿ ದಿಂಡಾದವುದೆಂಬುದು; ಹಾಚ್ಚಿಗ=ಮದಂ" (ಕಾಶಕ್ಕ. ೩೦). ೩. ಭರ್ತಿಯಾಗು; ಗಡದ್ದಾಗು; ಪುಷ್ಟವಾಗು: ಮಲ್ಲಣ್ಣನಿಗೆ ಹೊಟ್ಟೆಗೆ ತುಂಬ ದಿಂಡಾಗಿತ್ತು (ಮಲ್ಲಿ. ೦೪). ೪. ಹೊರೆಯಾಗು; ಭಾರವಾಗು: ದೊಡ್ಡ ಧ್ಯೇಯವನ್ನು ಕಟ್ಟಿಕೊಂಡಿರುವ ನನಗೆ ಕೊರಳಿಗೆ ಅವಳು ಒಂದು ದಿಡ್ಡಾಗುವ ಬದಲಾಗಿ ಈಗ ನನ್ನ ಅಬಾಧಿತಸ್ವಾತಂತ್ರ್ಯವೇ ನನಗೆ ದೊಡ್ಡದು (ನಿಷ್ಕಾಮ. ೧೧೦)

**ದಿಂಡಿನ ಕೋಸಂಬರಿ** = ಬಾಳೆಯ ದಿಂಡಿನಿಂದ ತಯಾರಿಸಿದ ಕೋಸಂಬರಿ: ದಿಂಡಿನ ಕೋಸಂಬರಿ ಬಹಳ ರುಚಿಯಾಗಿರುತ್ತದೆ (ರೂಢಿ). **ದಿಂಡಿನ ಪಲ್ಯ** = ಬಾಳೆಯ ದಿಂಡಿನಿಂದ ಮಾಡಿದ ಪಲ್ಯ,-ತಾಳಿದ: ಹಾಗಲಕಾಯಿ ಗೊಜ್ಜು, ದಿಂಡಿನ ಪಲ್ಯ ಗೋಚರಿಸಲಿಲ್ಲವಲ್ಲ (ಬಾಳಹೊ. ೪೫); ತಿಥಿಯ ದಿನ ದಿಂಡಿನ ಪಲ್ಯ ಮಾಡುತ್ತಾರೆ (ರೂಢಿ). **ದಿಂಡಿನ ಹುಳಿ**=ಬಾಳೆಯ ದಿಂಡಿನಿಂದ ತಯಾರಿಸಿದ ಹುಳಿ,-ಮೇಲೋಗರ: ದಿಂಡಿನ ಹುಳಿಯೆಂದರೆ ನನಗೆ ಬಹಳ ಇಷ್ಟ (ರೂಢಿ). **ದಿಂಡು ಜಡಿ** = ಗುಂಪನ್ನು ಚೆದರಿಸು: ಮೆಲ್ಲಡಿ ತಡವಾಗಿ ದಿಂಡುಜಡಿವುದ್ದುಗದಿಂ ದನಿಯೆತ್ತಿ ಮುಂ ತೊದಳ್‌ನುಡಿಗೊಳೆ ಲೀಲೆಯಿಂದೆಱಗೆ ಶಾಳಿವನಕ್ಕೆ ಶುಕಾಳಿ (ಸೂಕ್ತಿಸು. ೪-೬೦).

[ದೇ.೫ ಮಲ. ತಿಣ್ಣು; ಕೊಡ. ದಿಣ್ಣೀ; ತುಳು.ದಿಂಡು;
ತೆಲು. ದಿಂಡು, ದ್ರಿಂಡು./ಮರಾ. ದಿಂಡ್]

**ದಿಂಡುಕ**(ನಾ). ೧. ಸ್ಥೂಲ ಶರೀರವುಳ್ಳವನು; ಸ್ಥೂಲದೇಹಿ; "ಟೊಣಪ" (ಕಂನುಹು. ೮೫): ಉಕ ಪ್ರತ್ಯಯಕ್ಕೆ – ಕಟ್ಟುಕಂ . . . ಬೊಂದುಕಂ, ದಿಂಡುಕಂ (ಶಮದ. ೨೦೫ ಪ್ರಯೋ); ಬೊಂದುಕಂ, ದಿಂಡುಕಂ (ಶಬ್ದಾನು. ೪೪೧ ಪ್ರಯೋ). ೨. ಭಯವೂ ವಿವೇಕವೂ ಇಲ್ಲದ ಒರಟು ಮನುಷ್ಯ: "ತುಂಟ, ಪೋರ, ಪೋಕರಿ, ಅಗಡ" (ಕಂನುಹು. ೮೫).

[ದಿಂಡು + – ಉಕ (< – ಉಗ)]

**ದಿಂಡುಕಟ್ಟು** (ಕ್ರಿ). ೧. (ಹೂವಿನ) ದಂಡೆಯನ್ನು ಕಟ್ಟು; ಹಾರವನ್ನು ಕಟ್ಟು: ಗುಡ್ಡದ ಮೇಲಕ್ಯಾದರೂ ಹೋಗಿ ಹೂಕೊಯ್ದುಕೊಂಡು ಬಾ ದಿಂಡುಕಟ್ಟಿಕೊಡ್ತೇನೆ (ನಿಕಹು.೬) ೨. (ಪಾತಿ, ಮೊದಲಾದವುಗಳಿಗೆ)

ಅಂಚನ್ನು ಕಟ್ಟು; ದಂಡೆಯನ್ನು ಮಾಡು: ಅವರು ಹೂಗಿಡಗಳ ಪಾತಿಗಳಲ್ಲಿ ಸರಿಯಾಗಿ ನೀರು ನಿಲ್ಲುವಂತೆ ದಿಂಡುಕಟ್ಟಿದ್ದಾರೆ (ರೂಢಿ). ೩. (ಬಟ್ಟೆ ಮೊದಲಾದುವುಗಳ) ಅಂಚನ್ನು ಕಟ್ಟು; ಕರೆಕಟ್ಟು: ಅವರು ಸೀರೆಯ ಸೆರಗಿಗೆ ದಿಂಡುಕಟ್ಟುತ್ತಿದ್ದಾರೆ (ರೂಢಿ).

[ ದಿಂಡು + ಕಟ್ಟು$_1$ ]

**ದಿಂಡುಕಾಱ** (ನಾ). ಶಕ್ತಿಶಾಲಿ; ಬಲಶಾಲಿ: ನಡೆವಳಿಕಾಱಂ, ದಿಂಡುಕಾಱಂ, ಬಿಲ್ಕಾಱಂ (ಭಾಷಾಭೂ. ೭-೧೭೧ ಉದಾ). [ ದಿಂಡು + -ಕಾಱ ]

**ದಿಂಡುಗ** 'ದಿಂಡ$_1$' ನೋ.

**ದಿಂಡುಗಲ್ಲು** (ನಾ). ಮನೆಯ ತಳಪಾಯಕ್ಕೆ ಹಾಕುವ ಕಲ್ಲು; ಕಲ್ಲಿನ ದಿಂಡು: ಮನೆಯ ತಳಪಾಯಕ್ಕಾಗಿ ದಿಂಡುಗಲ್ಲುಗಳನ್ನು ರಾಶಿಮಾಡಿದ್ದರು (ರೂಢಿ). [ ದಿಂಡು + ಕಲ್ಲು (<ಕಲ್$_2$) ]

**ದಿಂಡುಗವಿ** (ಕ್ರಿ). ದಿಟ್ಟತನದಿಂದ ಮೇಲೆಬೀಳು; ಸೊಕ್ಕಿನಿಂದ ಆಕ್ರಮಿಸು: ದಿಂಡುಗವಿವನ ಬಾಯೊಳಗೆ ದೋರ್ದಂಡವನು ನೂಕಿದನು (ನಿಘಾಗ ೧೧-೩೦-೧೭). [ ದಿಂಡು + ಕವಿ$_1$ ]

**ದಿಂಡುಗುಂಡಿಗೆ** (ನಾ). ೧. ಸೊಕ್ಕಿನಿಂದ ಕೂಡಿದ ಎದೆ, -ಹೃದಯ. ೨. ಸೊಕ್ಕು; ಗರ್ವ: ತುರುಕರ ದಿಂಡುಗುಂಡಿಗೆಯು ಹಿಂಡಿದ ನಿನ್ನಯ ಬಾಹುದಂಡವಂ ಪೊಗಳ್ವೆನೆ? (೧೮ವಿಂ. ೫೨-೮).

[ ದಿಂಡು + ಗುಂಡಿಗೆ$_1$ ]

**ದಿಂಡುಗೆಡಪು**, ದಿಂಡಂಗೆಡಹು (ಕ್ರಿ). ೧. ರಾಶಿರಾಶಿಯಾಗಿ ಬೀಳಿಸು, -ಕೆಡಹು: ಕರಚಂಡಾಘಾತದೊಳ್ ತೊಂಡುಗೆಡದ ತುರಗದಱಂಗಳಂ ಬಱಸಿಡಿಲ ಬಳಗಂ ಚಂದದ ಪರ್ವರಗಾಡಂ ದಿಂಡುಗೆಡಪಿದಂತಿರ್ದುವು (ಅನಂಪು. ೦೪-೭ ವ); ಭದ್ರಾವತೀಶ್ವರನ ಸುತನ ಸೈನ್ಯಂ ನಡೆದು ಬಂದಾ ವೃಕೋದರನ ಮುತ್ತಿದೊಡವನ್ನಿಜಗದಾದಂಡಮಂ ಕೊಂಡು ದಿಂಡುಗೆಡಪಿದೊಡೆ . . . ಬೆಱಗಾದರು (ಕೃಮಿಭಾ. ೪-೫೭). **ದಿಂಡುಗೆಡಹು**: ೨. ದಿಂಡುರುಳುವಂತೆ ಕೆಡಹಂ; ಕೆಳಕ್ಕೆ ಉರುಳಿಸು: ಬಂಡವ ತುಂಬಿದ ಹಸುಬೆ ಕೊಂಡವನ ನುಂಗಿತ್ತು ಆ ಚೀಲದ ಮಧ್ಯ ನುಂಗಿದವನ ಕಂಡವ ನೊಡೆದು ದಿಂಡುಗೆಡಹಿತ್ತು ತನುವ (ಮೋಲಿಪೂ. ೨೪೩-೭೯೪); ಚಂಡಿತನವನು ಮಾಡು ಮಿಗೆ ಕೈಕೊಂಡು ಫಲುಗುಣನೆಸಲಿ ತನುವನು ದಿಂಡುಗೆಡಹಲಿ ಬಳಿಕ ಗೆಲುವಿರಿ ಕೌರವೇಶ್ವರನ (ಕುವ್ಯಾಭೀ. ೭-೫೭); ತೊಂಡ ದೈತ್ಯರ ಬಸುಱ ಬಗಿಬಗಿ ದಿಂಡುಗೆಡಹೋ . . . ಎನುತ ಮರ್ಕಟತಂಡ ಕವಿದುದು (ಕಾಶಿರಾ. ೩೨-೧೭); ದಿಂಡುಗೆಡಹುವೆನಿವನ ನೆಂದಾ ಉದ್ದಂಡವನು ಕೊಬ್ಬಿಱಿದೆಱ್ (ಸೌಮಿಹ. ೧೩-೩೩). ೩. ಅಡ್ಡ ಬಿದ್ದು ನಮಸ್ಕರಿಸು; ಸಾಷ್ಟಾಂಗವೆರಗು: ಶಂಭು ನೆಲಸಿದನಾತ ನಿದಿರಿಂನಲಿ ಕಂಡು ಪುರುಷಾವ್ಯುಗ ಶರೀರವ ದಿಂಡುಗೆಡಹಿತು (ಕುವ್ಯಾಸ. ೭೭೪೩. ೭-೩೦). [ ದಿಂಡು + ಕೆಡಪು ]

**ದಿಂಡುಗೆಡಹು** 'ದಿಂಡುಗೆಡಪು' ನೋ.

**ದಿಂಡುಗೆಡು** (ಕ್ರಿ). ಧೈರ್ಯಗೆಡು; ಅಂಜು; ಹೆದರು: ಅವುಗಳಿಂದ ಅವನು ದಿಂಡುಗೆಡಲಿಲ್ಲ (ಪ್ರಮುಹ.೯೧). [ ದಿಂಡು + ಕೆಡು$_1$ ]

**ದಿಂಡುಗೆಡೆ** (ಕ್ರಿ). ೧. ಉರುಳಿ ಬೀಳು; ಕುಸಿದು ಬೀಳು: ಗಂಡನುಳ್ಳಮ್ಮನ ಒಡವೆರೆದಾತ ನರಕದಲ್ಲಿ ದಿಂಡುಗೆಡೆದಿಪ್ಪನ್ನೆ (ಬೇಬಾವ. ೩೩-೫೭); ದಿಂಡುಗೆಡೆಯಲಿ ಮೇರು ಮೇದಿನಿ ನಿಲಲಿ ವಿತಳದಲಿ (ಕುವ್ಯಾಭೀ. ೬-೨೭); ದಿಂಡುಗೆಡೆದುದು ನೆಲಕೆ ರಕ್ಕಸ ದಿಂಡೆಯನ ಕೌಕುಳದ ರಕುತದ ಮುಂಡವು (ತೊರರಾ. ೧-೧೧-೧೮); ದಿಂಡುಗೆಡೆದು ಪಶ್ಚಿಮವಾರಿಧಿಯೊಳು ಖಂಡ ಶಶಾಂಕನಳಿಯೆ (ಜಯುಳಾ. ೦೪-೯೦); ಗಾಳಿಗೆ ಬಾಟ್ ದಿಂಡುಗೆಡೆವಂತೆ ಕಾಲಾಳ್ಗಳ್ ಕೆಡೆದುವು (ರಾಮಾಶ್ವ. ೦೩೦-೦೭). ೨. ಸಾಷ್ಟಾಂಗ ಬಿದ್ದು ನಮಸ್ಕರಿಸು; ಅಡ್ಡಬೀಳು: ಕಂಡು ಪೊನ್ನಾಂಬಲನ ಶ್ರೀಪಾದ ಯುಗಳವಂ ದಿಂಡುಗೆಡೆದಪ್ಪಿಕೊಂಡನು ಹರನ ಚರಣವಂ (ಸಾಮೂರ. ೭೮-೧೪); ಕಂಡು ಮೈಯ್ಯಿಕ್ಕಿಸಿದನತಿಥಿಗೆ ದಿಂಡುಗೆಡೆದನು (ಸಂಭಪ. ೦೦-೦೮); ಕಾಣ್ಕೆಯಂ ಮುಂದಿರಿಸಿ ದಿಂಡುಗೆಡೆದದ್ದು ಮಗುಳೆಬಿಗಲು (ಜಬಪು. ೫೭-೫೦). [ ದಿಂಡು + ಕೆಡೆ$_1$ ]

**ದಿಂಡುಡಿಗೆ** (ನಾ). ೧. ಗುಂಡಗೆ ಸುತ್ತಿರುವ ಬಟ್ಟೆ: ಪೆಂಡತಿಯ ನುಡಿಗೇಳಿ ಶಾಟಿಯಂ ಕಟಿತಟದಿ ದಿಂಡುಡಿಗೆಯಂಗೈದು ಭೃಗ್ವಂಗಿರಾಥ ನಡೆಗೊಂಡು ರಘುವೀರನರಮನೆಯ ಬಾಗಿಲ್ಗಳಂ ಕಳಿದು ಮುದದಿಂದ ಪೊಕ್ಕು (ವಂಶಾಅ. ೨-೧೧-೫೦). ೨. (ಅಲಂ) ಅಸ್ತವ್ಯಸ್ತವಾದ ಬಟ್ಟೆ; ಅವಸರದಲ್ಲಿ ಸುತ್ತಿಕೊಂಡ, ಮುದುರಿರುವ ವಸ್ತ್ರ: ಅಗಲಸುರೆಯರಾ ಪುರೋತ್ತರಭಾಗದಲಿ ಹೊರವಂಟು ರಣಕಿದಿರಾಗಿ ದಿಂಡುಡಿಗೆಯಲಿ ಕೆದರಿದ ಕೇಶಭಾರದಲಿ ಜಾಗಜಾಗದಿ ನಿಂದು ಗುಂಪುಗಳಾಗಿ ಪತಿಸುತ ಸೋದರಾದಿ ವಿಯೋಗದುಃಖದೊಳೊರಲಿದರು (ಅಸಂರಾ. ೭-೧೭-೨).

[ ದಿಂಡು + ಉಡಿಗೆ$_1$ (<ಉಡುಗೆ) ]

**ದಿಂಡುತನ**, ದಿಂಡತನ (ನಾ). ಸೊಕ್ಕು; ಗರ್ವ; ಅಹಂಕಾರ: ದಿಂಡುತನದಲಿ ಕೊಂಡು ಗದುಗವ ಕೊಂಡವೋಲಿರ್ಲ್ಲೇನು ಸಾಗದು ರಂಡೆಯರೆ ಹೋಗೆಂದು ನುಡಿದನು ನಗುತ ಕೌರವನು (ಜನಭಾ. ೭-೫). **ದಿಂಡತನ**: ಕಟ್ಟಬೇಕು ಕಾಟದೆಮ್ಮೆ ಅದಱ ಹಯನ ಎಷ್ಟಾದರು ಉಣಬೇಕು . . . ಚಂಡಿತನವೆಂಬ ಹಿಂಡಿ ಇಡಬೇಕು ದಿಂಡತನವೆಂಬ ಪೆಂಡೆ ಮೇವು ಪುಂಡ ತನವೆಂಬೊ ಹಿಂಡಿ ರುಬ್ಬಿಡಬೇಕು (ಪುರಂದ. ೨-೫೫-೨); ಕೊಂಡೆಯರ ಮಾತ ಕಿವಿಗೊಂಡು ಕುಲವನಿಕ್ಕಿ ದಿಂಡತನದಿ ಕೆಡದಿರು (ಪಾರ್ತಿಸು. ೦೦೩).

[ ದಿಂಡು + -ತನ ]

**ದಿಂಡುದರಿ** 'ದಿಂಡುದಱ್' ನೋ.

**ದಿಂಡುದಳಿರು** (ಕ್ರಿ). (ಅಲಂ) ಅಧಿಕವಾಗು; ಹೆಚ್ಚಾಗು: ಕಂಡು ದೂರದಲಾ ಮುಕುಂದನಖಂಡಮೂರ್ತಿಯನು ಕೈಕೊಂಡವಂತರ್ಧಾನವನು ಬಹಿರಂಗವೃತ್ತಿಗಳು ದಿಂಡುದಳಿತುದು ಪುಳಕ (ನಿಘಾಗ. ೦೦-೭೨-೩೮). [ ದಿಂಡು + ತಳಿರು$_1$ (<ತಳಿರ್$_1$) ]

**ದಿಂಡುದಱ್**, ದಿಂಡುದರಿ (ಕ್ರಿ). ತುಂಡುಮಾಡು; ಚೂರುಮಾಡು: ದಿಂಡುದಱಿದನು ಶ್ರಾವಕರನೇರಂಡವನವಂ ಪೊಕ್ಕ ಮದವೇತಂಡದಂದದಿ (ಬಸಪು. ೫೦-೬೯); ದಿಂಡುದಱಿದನು ದಾನವರ ಕಡಿಖಂಡವಾಯ ಮಾಯ್ದುವನಿ ರಕುತದ ದೊಂಡೆಗೆಸಱ್ನೊಳದ್ದುದಗಣಿತ ರಥಗಜಾಶ್ವಚಯ (ಉತ್ತ್ಯಾಳ. ೭-೩೦); ಚಂಡದೇವತೆಗಳನಾರಾಧಿಸಿದಳು ದಿಂಡುದಱಿದು ಕುಱಿಗಳನು (ಕುರಾಕಾಂ. ೨೭-೭); ದಿಂಡುದಱಿದಹಿತರಂ ಭೀಷ್ಮನಂ ಕೊಂದನು (ಕೃಮಿಭಾ. ೨೪-೦೭); ದಿಂಡುದಱಿದು ಕೆಡಹಿದ ಸಾಲ ಕೊಲ್ಲಾರ ಬಂಡಿಗಳೆಸೆದುವಾ ಧುರದೆ (ಕಂಸವಿ. ೦೫-೭೭). **ದಿಂಡುದರಿ**: ಇಂದ್ರನ ಮಗ ಅರ್ಜುನ ಭೀಷ್ಮಾದಿ ವೈರಿಗಳನ್ನು ದಿಂಡುದರಿದ (ಬಿದುರಿ. ೦೦೩).

ದಿಂಡುದಱಿದಱ್ = ಕಾಂಡವನ್ನು ಕತ್ತರಿಸುವಂತೆ ಕತ್ತರಿಸು, -ತರಿ: ದಿಂಡುದಱಿದಱಿದವನ ಸೇನೆಯು ಹಿಂಡ ಬಱಿಕ್ಕೆದವನ ಕೊಂದನು (ಸಂಭಪ ೨೭-೦೨೦). [ ದಿಂಡು + ತಱ್$_1$ ]

**ದಿಂಡುದಿರುಹು** (ಕ್ರಿ). ೧. ಸುತ್ತಲೂ ತಿರುಗು: ಕೊಂಡನಾ ತುರಗವ ನದಾಕ್ಷಣ ಗಂಡುಗಲಿ ಮನವಳುಕದಾಗಳು ದಂಡೆಯುದು ಲೇಸೆನುತ ಮಿಱಿಲೆ ತುರಗ ಖುರಗಳಲಿ ದಿಂಡುದಿರುಹುತ್ತಿರಲು (ಸಂಭಪ ೩-೦೪). ೨. ಸುತ್ತು; ಹುರಿಮಾಡು: ಕಣ್ಣಲಿ ಕೆಂಡವನು ಕಾಱುತ್ತ ಗರ್ಜಿಸಿ ಕೆದಱ್ ಮಿಱಸೆಗಳ ದಿಂಡುದಿರುಹುತ್ತುಗಿದು ಸವುರಕೆ ಗಂಡುಗಲಿ ಹೊಱ ವಂಟನು (ನಿಘಾಗ. ೦೦-೭೭-೦೯). ೩. ಸುತ್ತಲೂ ತಿರುಗಿಸು: ಗಂಡುಗಲಿ ಬರಲವನ ಹಸ್ತವ ದಿಂಡುದಿರುಹುತ ಗದೆಯುಲಿಟ್ಟನು ದಾನವಧ್ವಂಸಿ (ನಿಘಾಗ. ೦೦-೭೦-೨೩). [ ದಿಂಡು + ತಿರುಹು (<ತಿರಿಪು$_1$)

ಕೊಳ್ಗುಂ ಸುತ್ತಲುಂ ತೋಱಿದೊಡೆ ಜನಪಗಂ ನಾಡೆಯುಂ ಭೀತಿಯೆತ್ತುಂ ಪಿರಿದಕ್ಕುಂ ಶಾಂತದೊಳ್ ತೋರ್ಪೊಡೆ ನೃಪತಿಜಯುಂ ದೀಪ್ತದೊಳ್ ಭೂಪನಾಶಂ (ಲೋಕೋಪ. ೪-೪೦). 'ದೀಪ್ತದಿಕ್ಕು' (ಲೋಕೋಪ. ೮೪೪).

[ ಸಂ. ]

**ದೀಪ್ತತಪ** (ನಾ). [ಜೈನ] ಶರೀರದಲ್ಲಿ ಕಾಂತಿ ಹೆಚ್ಚುವಿಕೆ ; ತಪಸ್ಸಿನಿಂದ ಯೋಗಿಗಳಿಗೆ ಉಂಟಾಗುವ ಋದ್ಧಿಗಳಲ್ಲಿ ಒಂದು ; ☞ ಇದರಿಂದ ಯೋಗಿಗೆ ಮನಸ್ಸು, ವಾಕ್ಕು, ಕಾಯಂಗಳು ಬಲಗೊಂಡು, ಸೂರ್ಯನಿಗೆ ಸಮಾನವಾದ ಪ್ರಕಾಶ, ಅಂದರೆ ಶರೀರಕಾಂತಿಯುಂಟಾಗುತ್ತದೆ: ಪೊಂಪುಟಿಪೋಯ್ತು ದೀಪ್ತತಪಮೆಂಬಿನವರ್ಕಕರಂಗಳತ್ತಮಿತ್ತಂ ಪುದಿದುಷ್ಣರಶ್ಮಿ ಪುರುಷಾಕೃತಿಯಂತಿರೆ . . . ತಂ[ದುದಂ]ದು ಬರ್ದೊಂ ಪರಿದಿರ್ದಪೋಲ್ ಮುನಿಗೆ ಕಲ್ಮೆಲೆ ಬಲ್ಮೆಲೆಯುಂ ನಿದಾಘದೊಳ್ (ಶಾಂತಿಪು. ೯-೦೦೮) ; ಶರೀರದ ಕಾಂತಿ ಪೆರ್ಚುವುದುಂ ದೀಪ್ತತಪವೆಂಬುದುಂ (ಧ್ರಾವಕಾ. ೯೪-೩೩).

[ ದೀಪ್ತ + ತಪ$_3$ ]

**ದೀಪ್ತಶಿಖರ** (ನಾ). ಉರಿಯುವ ಶಿಖರ: ಅಪರಜಲಧಿಯೊಳುರಿವ ವಡಬನ ದೀಪ್ತಶಿಖರದೊಳಡಗುವಂತೆ ಪತಂಗಮಂಡಲವಿಳಿದುದಂಬರವ (ಕುಮಾರ್ಯ. ೩-೭೦). [ ದೀಪ್ತ + ಶಿಖರ ]

**ದೀಪ್ತಶಿಖೆ** (ನಾ). ಉರಿಯುವ ದೀಪದ ಕುಡಿ,-ಶಿಖೆ : ಮನುಷ್ಯತ್ವದ ಗಭೀರತಮ ಆಕಾಂಕ್ಷೆಯ ದೀಪ್ತಶಿಖೆಯ ಸಮ್ಮುಖದಲ್ಲಿ ಯಾವನನ್ನು ಅವನು ಅಂದು ಕಾಣುತ್ತಿರುವನೋ ಆತನು ನರೋತ್ತಮನು (ನಿಬಂಧ. I, ೪). [ ದೀಪ್ತ + ಶಿಖೆ ]

**ದೀಪ್ತಾಗಮ** (ನಾ).=ದೀಪ್ತ ೬ : ಮತ್ತಮಾ ಸಿದ್ಧಾಂತಭೇದಂಗಳಾವಾವವೆಂದೊಡೆ ಕಾಮಿಕಾಗಮ . . . ದೀಪ್ತಾಗಮ ಸೂಕ್ಷ್ಮಾಗಮ ವಾತೂಲಾಗಮವೆಂಬವಿಪ್ಪತ್ತೆಂಟು ದಿವ್ಯಾಗಮಂಗಳಕ್ಕು (ವಿವೇಕ. ೬೮). 'ಕಾಮಿಕಾಗಮ' ಪರಾ. [ ದೀಪ್ತ + ಆಗಮ ]

**ದೀಪ್ತಿ** (ನಾ). ೧. ಪ್ರಕಾಶ ; ಬೆಳಕು ; ಹೊಳಪು ; ಕಾಂತಿ : "ವರ್ಚಃ . . . ದೀಪ್ತಿಃ . . . ಪ್ರಭಾ, ರಶ್ಮಿಃ – ಈ ೧೧ ದೀಪ್ತಿ" (ಹಲಾಯು. ೧೩-೬೩) : ವಿನಮ್ರಪ್ರಕ್ಷಿಪ್ತಶಿಖಂ ದೀಪದೀಪ್ತಿಪ್ರತಿಹತದಿನಕೃಚ್ಚಕ್ರ ತೀವ್ರಾಂಶುಚಕ್ರಂ . . . ಇರ್ದತ್ತೊಳ್ಪುಗದ ಪುರೋಪಾಂತದೊಳ್ ಚಕ್ರರತ್ನಂ (ಆದಿಪು. ೧೪-೩) ; ನುಡಿದರೆ ಮುತ್ತಿನ ಹಾರದಂತಿರಬೇಕು ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು (ಬಸವ. ೮೦೩) ; ದೀಪಕ್ಕೆ ದೀಪ್ತಿಗೆ ಭೇದವುಂಟೇ ಅಯ್ಯಾ (ಮಹಾದೇ. ಬ. ೬೩-೧೫೦) ; ದೀಪ್ತಿಯನುಳಿದುವು ಭಗಣಂ ಸುಪ್ತಜನಂ ನಿದ್ರೆದಿಳಿದುದಿದೆ ಕೋಕಂ ತನ್ನಾಪ್ತನನಱಸುತ್ತಿರುಳ ಸಮಾಪ್ತಿ ಕರಂ ಹತ್ತೆ ಸಾರ್ದುದು (ಗಿರಿಜೆ. ೪-೧೬೦). ೨. ದೀವಿಗೆ; ದೀಪ: "ಆ ದೀವಿಗೆ ಜ್ಯೋತಿ ದೀಪ್ತಿ ಗೃಹಭಾನುವಕ್ಕು" (ಮಂಗರಾ. ೭೦-೧೮) ; ಜೀವಂ ತೊಲಗಿದೊಡಲಿಂಗೆ ತೈಲವಿಂಗಿದ ದೀಪ್ತಿಗುದಕವಱತ ಘನತಟಾಕಕ್ಕೆ . . . ನೆಟ್ಟನೆ ಜೋಡಿಯಾದುದಾ ಪುರಜನಂ ಪರಿಜನಂ ಜನಪತಿ ಹರಿಶ್ಚಂದ್ರ ನೆಲ್ಲವಂ ಮುನಿಗಿತ್ತರಣ್ಯಕ್ಕೆ ನಡೆವಾಗಲು (ಹರಿಶ. ೯-೩೪). ೩. ಕಿರಣ ; ಕದಿರು ; ರಶ್ಮಿ: "ಕರಮುಸ್ರಮಂಶು...ದೀಪ್ತಿ ಘೃಷ್ಟಿ...ಪ್ರದ್ಯೋತಮಾ ರಶ್ಮಿ" (ಮಂಗರಾ. ೦೦-೩) : ದಿನಕರನುದಯಿಸಲೊಡಮೇಂ ದಿನದೀಪ್ತಿಗಳೊಡನೆ ಬಂದು ನೆಲೆಸುವವೋಲ್ ಪ್ರಾಕ್ತನ ಜನ್ಮವಿದ್ಯೆಗಳ್ ಬಂದನಿತುಂ ನೆಲಸಿದವು ಸಕಲ ವಿದ್ಯಾನಿಧಿಯೊಳ್ (ಅಜಿಪು. ೩-೬೮). ೪. (ಸೆಳೆದು ಬಿಟ್ಟ ಬಾಣದ) ವೇಗ,-ತೀವ್ರತೆ : "ದೀಪ್ತಿಃ, ವೇಗಃ, ತೀವ್ರತಾ – ಈ ೩ ಅಂಬಿನ ವೇಗಂ" (ಹಲಾಯು. ೭೭-೩೦೬) : "ಅಂಬುಗಳ ವೇಗಮದು ದೀಪ್ತಿಯೆನಿಕುಂ" (ಮಂಗರಾ. ೮೭-೩೩) : ಪ್ರಾಪ್ತರ ಕಳುಹಿಲೆದ್ದನು ತಾಯ ಮನೆಗತಿ ದೀಪ್ತಿಯೊಳು[ಪಾಠಾಂ. ದೀಪ್ತದೊಳು] ನಮಿರಾಜ (ಧರಜ. ೩೭-೪೩). ೫. ಆಕಾಶದಿಂದ ಕೆಳಗೆ ಬೀಳುವ ತೇಜಃಪುಂಜ ವಸ್ತು ; ಉಲ್ಕೆ : (ಶ). ೬. [ಕಾವ್ಯಮೀ] ಸಹೃದಯನ ಮನಸ್ಸಿನಲ್ಲಿ ಉಂಟಾಗುವ ಭಾವವಿಸ್ತಾರ,-ವ್ಯಾಪಕತೆ,-ಭಾವತೀವ್ರತೆ,-ಭಾವೋದ್ರೇಕ: ಕಾವ್ಯದಲ್ಲಿರುವ 'ರೌದ್ರ' ಮೊದಲಾದ ರಸಗಳು ದೀಪ್ತಿಯನ್ನು ಹೆಚ್ಚಾಗಿ ಉಂಟು ಮಾಡುತ್ತವೆ (ಧ್ವನ್ಯಾಲೋ. ೭೦); ಸಹೃದಯನ ಮನಸ್ಸಿನ ವಿಕಾಸ, ವಿಸ್ತಾರ, ಉಜ್ವಲತೆಗಳು ದೀಪ್ತಿಯೆನಿಸುತ್ತವೆ (ಧ್ವನ್ಯಾಲೋ. ೭೦ ಅಡಿಟಿ).

[ ಸಂ. ]

**ದೀಪ್ತಿಕೆ** (ನಾ). ದೀವಿಗೆ; ದೀಪ: ಗೃಹಸಮುಚಿತದೊಳ್ ತೊಳಗಿ ಬೆಳಗಿದುವು ದೀಪ್ತಿಕೆಗಳ್ (ಸೂಕ್ತಿಸು. ೮-೦೮೩). [ ಸಂ. ದೀಪ್ತಿಕಾ ]

**ದೀಪ್ತಿದಾನಂಗೆಯ್** (ಕ್ರಿ). ಬೆಳಕನ್ನು ನೀಡು,-ಕೊಡು: ದೀಪವಿನ್ನೊಂದು ದೀಪಕೆ ದೀಪ್ತಿದಾನಂಗೆಯ್ವುದೆನೆ (ಶ್ರೀರಾಮಾ. ೩೪೯-೧೪೯).

[ ದೀಪ್ತಿ + ದಾನ + ಕೆಯ್$_1$ ]

**ದೀಪ್ತಿನ್ಯಾಯ** (ನಾ). ಒಂದು ಬಗೆಯ ನ್ಯಾಯ ; ☞ ನಾಟಕದಲ್ಲಿ ಶೃಂಗಾರಾದಿ ರಸಗಳನ್ನು ಉದ್ದೀಪನ (ಪರಿಪೋಷ)ಗೊಳಿಸುವ ವಸಂತಋತು, ಚಂದ್ರೋದಯ ಮೊದಲಾದ ಉದ್ದೀಪನ ವಿಭಾವಗಳಂತೆ ಒಂದು ವಿಷಯವನ್ನು ಉದ್ದೀಪಿಸುವ ನ್ಯಾಯ : ಆಯಿತೆಮ್ಮವತಾರವೀ ರಾಮಾಯಣದ ನಾಟಕಕೆ ದೀಪ್ತಿನ್ಯಾಯದವೊಲ್ (ಶೂರರಾ. ೦-೦೭-೦೭). [ ದೀಪ್ತಿ + ನ್ಯಾಯ ]

**ದೀಪ್ತಿಮಂತ** (ಗು). ಕಾಂತಿಯಿಂದೊಡಗೂಡಿದ; ಪ್ರಜ್ವಲಿಸುವ : ಅವನ ದೀಪ್ತಿಮಂತವಾದ ಮಿಂಚಿನಂಥ ಆತ್ಮವನ್ನು ನನ್ನಲ್ಲಿ ಹಿಡಿದಿಡುವುದು ಶಕ್ಯವೇ (ಮುಕ್ತಿ. ೯). [ ಸಂ. ದೀಪ್ತಿಮತ್ ]

**ದೀಪ್ತೌಷಧಿ** (ನಾ). ತೀಕ್ಷ್ಣವಾದ ಔಷಧಿ ; ಹೆಚ್ಚು ಪರಿಣಾಮವನ್ನುಂಟು ಮಾಡುವ ಔಷಧಿ: ಆ ಪ್ರಸ್ತಾವದೊಳ್ ಫಲಪಾಕವಿರಾಮಂಗಳಪ್ಪ ಗರ್ಭಷಷ್ಠಿವ್ರೀಹಿಯವಗೋಧೂಮಾದಿ ಮಹೌಷಧಿಗಳುಂ ತಿಲಾತಸೀ ಕುಸುಂಭಾದಿ ದೀಪ್ತೌ[ಪಾಠಾಂ. ಪ್ತೌ]ಷಧಿಗಳುಂ ಯಾವನಾಳ ಕಂಗು ಕೋದ್ರವಾದಿ ಸರ್ವೌಷಧಿಗಳುಂ (ಆದಿಪು. ೮-೭೦ ವ). [ ದೀಪ್ತ + ಔಷಧಿ ]

**ದೀಪ್ಯ** (ನಾ). ೧. ನೀರುಹಿಪ್ಪಲಿ. ೨. ಓಮ ; ವಾದಕ್ಕಿ. ೩. ಜೀರಿಗೆ.

[ ಸಂ. ]

**ದೀಪ್ರ** (ಗು). ೧. ಹೊಳೆಯುವ; ಪ್ರಕಾಶಿಸುವ: ಧೂಪ ಧೂಮಾಮೋದಿತಾಭ್ಯಂತರದೊಳಲಘುತರ ವಿಳಸದರುಣಮಣಿ ದೀಪ್ರ ದೀಪಾಂಕುರದೊಳಮರನರವಿಮಾನಾಪಹಾಸವಾಸಗೃಹದೊಳ್ . . . ಆತ್ಮೀಯ ಪ್ರಾಣೇಶ್ವರಿ ಸಹಿತಂ ಸುಖಸುಪ್ತನಾಗಿ (ವರ್ಧಮಾ. ೫-೩ ವ). ೨. ತೀವ್ರವಾದ ; ಉಜ್ವಲವಾದ : ಹರಿ ಹರ ಹಿರಣ್ಯಗರ್ಭರನುರವಣೆಯಿಂ ಗೆಲ್ದ ಕಾಮನಂ ದೀಪ್ರತಪೋಭರದಿಂದುರಿಪಿದರೆನೆ ಬಿತ್ತರಿಸದರಾರ್ ವೀರಣಂದಿ ಸೈದ್ಧಾಂತಿಕರಂ (ಶಂಠಾರಾಮಾ. ೧-೩೭) ; ದೀಪ್ರಸುವರ್ಣವಪ್ರವಿಪುಳಪ್ರಭೆಗಳ್ ಬಳೆದುಂಟುಮಾಡೆ ಸೂರ್ಯಪ್ರಭೆಯುಕ್ಕಿದುಕ್ಕನಿರುಳುಂ ಪಗಲುಂ . . . ಶುಭ್ರಸೌಧ ಪ್ರಭೆಗಳ್ ಶಶಿಪ್ರಭೆಯ ಮಾಡಿದ ಮಾಟಮನುಂಟು ಮಾಡೆ (ಅರ್ಥನೇ. ೨-೭೯). (ನಾ). ೩. ಪ್ರಕಾಶಮಾನವಾದಂದು ; ಕಾಂತಿಯುತವಾದಂದು : ಪರಿಷಾತ್ರಿತಯಕ್ಕೆ ಚತುಶ್ಶರಾಸನಾಂತರದ ಸುರಶರಾಸನಭಾಭಾಸುರವೊಪ್ಪಿ ತೋಱುಗುಂ ಪಂಚರತ್ನಪಾಂಶುಚ್ಛದೀಪ್ತಿದೀಪ್ರಂ ವಪ್ರಂ (ಆದಿಪು. ೬-೦೦೩). ೪. ಬೆಂಕಿ ; ಅಗ್ನಿ. [ ಸಂ. ]

**ದೀರ್ಕ** (ನಾ). ಒಂದು ಬಗೆಯ ಹಣ್ಣು : ಹಲಸಿನಹಣ್ಣೋ ದೀರ್ಕನ ಹಣ್ಣೋ ಮಾವಿನಹಣ್ಣೋ ಕಲ್ಲುಸಂಪಿಗೆಹಣ್ಣೋ ಕುಯ್ಯುವುದು, ಉರುಳು ಒಡ್ಡಿ ಹುಂಡುಕೋಳಿ . . . ಹಿಡಿಯುವುದು, ಮೊದಲಾದ . . . ಸಾಹಸಗಳಲ್ಲಿ ತಿಮ್ಮಪ್ಪ ಅಣ್ಣನೊಡನೆ ಭಾಗಿಯಾಗಿ ಸಂತೋಷಪಟ್ಟಿದ್ದನು (ಮಲೆಮ. ೫೬೩). [ ? ]

**ದೀರ್ಘ** (ಗು). ೧. ಉದ್ದವಾದ ; ನೀಳವಾದ. 'ದೀರ್ಘಕೇಶ' ಪರಾ. (ನಾ). ೨. ನೀಳವಾದುದು ; ಉದ್ದವಾದುದು ; ಲಂಬವಾದುದು : "ಸಮುದಗ್ರಮುನ್ನತಂ ತುಂಗಮುಚ್ಛ್ರಿತಂ ಪ್ರಾಂಶು ದೀರ್ಘಮುಚ್ಚಂ" (ಪಮ್ತುಕೋ. ೧೦೧-೩೭) : "ದೀರ್ಘಮಾಯತಂ ನೀಳಕ್ಕೆ ಪೆಸರೆನಿಕ್ಕುಂ" (ಶುಂಗರಾ. ೧೩೩-೨೪). ೩. [ವ್ಯಾಕ] ಉಚ್ಚಾರಣೆಗೆ ಎರಡು ಹ್ರಸ್ವಾಕ್ಷರಗಳಷ್ಟು ಕಾಲವನ್ನು ತೆಗೆದುಕೊಳ್ಳುವ ಸ್ವರ ಮತ್ತು ಅಂಥ ಸ್ವರ ಸಹಿತವಾದ ವ್ಯಂಜನ : ಗಜ ದೀರ್ಘಂ ಬಿಂದು ವೃಷಭ ವಂ[ ವ್ಯಂ ] ಜನ ಶರಭಂ (ಛಂದೋಂಬು. ೦-೪೭ ಅಡಿಟಿ) ; ಸ್ವರ ಸಂಜ್ಞೆಕಂಗಳವುದೋಂದಿರೆ ಮುಂದೆ ವಿಕಲ್ಪದಿಂ ದ್ವಿತೀಯೆಗೆ ದೀರ್ಘಂ ದೊರೆಕೊಳ್ಗುಮೆಲ್ಲಿಯುಮನುಪುರಾತನೋಕ್ತಿಗಳಂತದಲ್ಲಿ ಯಥೇಷ್ಟಂ (ಶಾಬ್ದಾವ. ೧೩೪) : . ಕ್ರಮದಿಂ ಹ್ರಸ್ವಕ್ಕಂ ಹ್ರಸ್ವವೊದವೆ ದೀರ್ಘಕ್ಕೆ ದೀರ್ಘವೊದವೆ ತಗುಳ್ಗುಂ ಸಮಸಂದಾ ಯುಗಳಂಗಳೊಳ್ . . . ಸವರ್ಣವಿಧಾನಂ (ಶಮದ. ೭) ; ವಿದಿತ ಸಮಾನಂಗಳ ಪೂರ್ವದಕ್ಕರಂ ಹ್ರಸ್ವಮದಱ ಪರದಕ್ಕರವುಂತದು ದೀರ್ಘಂ (ಶಮದ. ೯): ಸ್ವರಗಳಲ್ಲಿ ಹ್ರಸ್ವವೆಂದೂ, ದೀರ್ಘವೆಂದೂ ಎರಡು ವಿಧ (ಶಬ್ದಾದ. ೧). ೪. [ಛಂದ] ಉಚ್ಚಾರಣೆಯಲ್ಲಿ ಎರಡು ಮಾತ್ರೆಗಳ ಕಾಲವನ್ನು ತೆಗೆದುಕೊಳ್ಳುವ ಅಕ್ಷರ ; ಗುರು (-) : ಉಚ್ಚಾರಣೆಯಲ್ಲಿ ಎರಡು ಮಾತ್ರಾಕಾಲ ತಗಲುವಂಥದು ದೀರ್ಘ (ಸಂಕೋಛ. ೦೦೩). ೫. [ಸಂಗೀತ] ಇಪ್ಪತ್ತೆರಡು ವಿಧವಾದ ಶ್ರುತಿಗಮಕಗಳಲ್ಲಿ ಒಂದು: ಸ್ಫುರಿತ ಪ್ರಮಿತ ದೀರ್ಘ ಲಲಿತ . . . ಕೋಮಲವೆಂಬ ಇಪ್ಪತ್ತೆರಡೇ ಶ್ರುತಿಗಮಕಗಳೆಂತಲುಂ (ವಿವೇಶ. ೨೪೮). 'ಶ್ರುತಿ' ಪರಾ. ೬. [ಸಂಗೀತ] (?) : ಆ ರಾಗಂಗಳಂ ಪಾಡುವಲ್ಲಿ ಗ್ರಾಮವರ್ಜ್ಯಂಗಳಂ ತೋಱದು ಜನ್ಯಜನಕಂಗಳಂ ಬಳ್ಳಿಗೊಳಿಸಿ . . . ಮಂದ್ರ ಮಧ್ಯ ವೇಗ ಕುಂಚನ ಉಚ್ಚರಾನನ ಸ್ತಂಭನ ದೀರ್ಘಭೇದಗಳಿಂ ರವವಿಕಲ್ಪಗಳಂ ತೋಱ (ವಿವೇಶ. ೨೩೨).

**ದೀರ್ಘವಾಗು** = ದೊಡ್ಡದಾಗು ; ಉದ್ದವಾಗು : ಸೂರ್ಯೋದಯದಿಂದ ಸೂರ್ಯಾಸ್ತಮದವರೆಗೆ ಕಾಲವಮಾನ ಕೆಲವು ತಿಂಗಳು ಕಡಮೆ ಕೆಲವು ತಿಂಗಳು ದೀರ್ಘವಾಗಿ ಇರುವುದಕ್ಕೆ ಈ ಓರೆಯೇ ಕಾರಣ (ಆಕಾಶ. ೧೭) ; ಆವರ ಉಪನ್ಯಾಸವು ದೀರ್ಘವಾಗಿತ್ತು, ಆದರೆ ಸ್ವಾರಸ್ಯವಾಗಿರಲಿಲ್ಲ (ರೂಢಿ). [ ಸಂ. ]

**ದೀರ್ಘಕಂಠ** (ನಾ). ೧. ಉದ್ದವಾದ ಕುತ್ತಿಗೆಯುಳ್ಳುದು. ೨. ಬಕ. ೩. ಜಿರಾಫೆ ಎಂಬ ಹೆಸರಿನ ನಕ್ಷತ್ರರಾಶಿ : ಧ್ರುವನಕ್ಷತ್ರಕ್ಕೂ ವಿಜಯಸಾರಥಿಗೂ ಮಧ್ಯೆ ಇರುವ ಕ್ಷೀಣಕಾಂತಿ ನಕ್ಷತ್ರಗಳ ರಾಶಿಯು ಕಮೆಲೊಲಾರ್ಡಲಿಸ್ ಅಂದರೆ ಜಿರಾಫೆ. ಇದನ್ನು ನಾವು ದೀರ್ಘಕಂಠನೆಂದು ಗುರುತಿಸಿದ್ದೇವೆ (ನಕ್ಷತ್ರ. ೩೦). [ ದೀರ್ಘ + ಕಂಠ ]

**ದೀರ್ಘಕರ** (ನಾ). ೧. ಉದ್ದವಾದ ತೋಳು; ಆಜಾನುಬಾಹುವಾದ ಕೈ. ೨. ನೀಳವಾದ ಸೊಂಡಿಲು. ೧, ೨: ನಿಜಾಭ್ಯುದಯನಿವೇದ ದೀರ್ಘಕರವೊಪ್ಪೆ ಜಗತ್ಪ್ರಿಯನಾದ ದೇವನಂತದ ಗಣನಾಯಕಂ (ಗದಾಯು. ೧-೦೧). [ ದೀರ್ಘ + ಕರ$_3$ ]

**ದೀರ್ಘಕಾಲ** (ನಾ). ಬಹಳ ಕಾಲ ; ಹೆಚ್ಚು ಕಾಲ : ಪುರೂಥಮೆಂಬುದು ದೀರ್ಘಕಾಲಪ್ರವೃತ್ತಮುಮನಾದ್ಯನಿಧನಮುಪ್ಪ ಧರ್ಮಂ (ಚಾವುಂಪು. ೭): ಲೋಕವ್ಯಾಪಾರವೆಲ್ಲ ತನ್ನ ಪಾಲಿಗೆ ಸ್ತಬ್ಧವಾಯಿತೇನೋ ಎಂಬಂತೆ ದೀರ್ಘಕಾಲ ಅವ್ವಿ ಮಲಗಿದ್ದಳು (ಬನಶಂ. ೧೯೪).
[ ದೀರ್ಘ + ಕಾಲ ]

**ದೀರ್ಘಕಾಲಿಕ** (ಗು). ಹೆಚ್ಚು ಕಾಲದವರೆಗೆ ಇರುವ ; ಬಹಳ ಕಾಲದ: ದೀರ್ಘಕಾಲಿಕ ಯೋಜನೆಗೆ ಹೆಚ್ಚು ಹಣವನ್ನು ನಿರೀಕ್ಷಿಸಬಹುದು (ರೂಢಿ).
[ ಸಂ. ]

**ದೀರ್ಘಕೇಶ** (ನಾ). ೧. ಉದ್ದವಾದ ಕೂದಲು : ಗಂಡಸರು ದೀರ್ಘಕೇಶವನ್ನು ಹಿಂದೆ ಗಂಟುಹಾಕಿ ಪಟ್ಟವನ್ನು ಸುತ್ತಿಕೊಳ್ಳುತ್ತಿದ್ದರು (ಘಾಠದ. ೦೪). ೨. ಉದ್ದವಾದ ಕೂದಲನ್ನುಳ್ಳುದು : ಸ್ನಿಗ್ಧಕೃಷ್ಣಬಹುಲದೀರ್ಘಕೇಶನುಂ . . . ಸಪ್ತದ್ವ್ಯಾಸ್ಥಿ ತನುಮಪ್ಪ ವಿಜಯ ಪರ್ವತಗಜೇಂದ್ರಂ ಬಂದು ಮುಂದೆ ನಿಲ್ವುದುಂ (ಅಧಿಪು. ೦೨-೫೭ ವ).
[ ದೀರ್ಘ + ಕೇಶ ]

**ದೀರ್ಘಕೇಶಿ** (ನಾ). ಉದ್ದವಾದ ಕೂದಲುಳ್ಳವನು : ಹಿಪ್ಪಿಗಳು ದೀರ್ಘಕೇಶಿಗಳು (ರೂಢಿ). [ ಸಂ. ದೀರ್ಘಕೇಶಿನ್ ]

**ದೀರ್ಘಕೋಶಿ** (ನಾ). = ದೀರ್ಘಕೋಶಿಕೆ. [ ಸಂ. ದೀರ್ಘಕೋಶೀ ]

**ದೀರ್ಘಕೋಶಿಕೆ** (ನಾ). ಒಂದು ಬಗೆಯ ದೊಡ್ಡ ಜಿಗಣೆ: "ದುರ್ನಾಮಾ, ದೀರ್ಘಕೋಶಿಕಾ-೨ ಅನಿಗಳ ರಕ್ತವನ್ನು ಹೀರಲುಳ್ಳ ದೊಡ್ಡ ಜಿಗಣೆ ಪೆಸರು. ಅಂದರೆ ಹೆಜ್ಜಿಗಣೆ" (ಸಿದ್ಧಾಂತಿ. ೮೪). [ ಸಂ. ದೀರ್ಘಕೋಶಿಕಾ ]

**ದೀರ್ಘಗೊಳಿಸು** (ಕ್ರಿ). ೧. ಉದ್ದವಾಗುವಂತೆ ಮಾಡು; ವಿಸ್ತರಿಸು; ಬೆಳಸು : ಈ ವಿಷಯದಲ್ಲಿ ಕಾಲವನ್ನು ದೀರ್ಘಗೊಳಿಸುವುದು ತರವಲ್ಲ (ರೂಢಿ). ೨. [ಛಂದ] ಅಕ್ಷರವನ್ನು ಎರಡುಮಾತ್ರೆಗಳ ಕಾಲಕ್ಕೆ ಅಳವಡಿಸು,—ಗುರುವನ್ನಾಗಿ ಮಾಡು : ಎರಡನೆಯ ಸಾಲಿನಲ್ಲಿ "ಸಿಡಿಲು" ಎಂಬುದಕ್ಕೂ ಇದೇ ನಾಲ್ಕುಮಾತ್ರೆಯ ಕಾಲ; ಇಲ್ಲಿಯ ಮೂರು ಲಘುಗಳಲ್ಲಿ ಯಾವುದನ್ನು ಅರ್ಥ ಕೆಡದಂತೆ ದೀರ್ಘಗೊಳಿಸುವುದು ? (ಸಮಾಲೋ. ೨೦೭). [ದೀರ್ಘ + ಕೊಳ್$_1$ + -ಇಸು$_1$]

**ದೀರ್ಘಜೀವಿ** (ನಾ). ಬಹಳ ಕಾಲ ಜೀವಿಸುವಂತಹುದು ; ಚಿರಂಜೀವಿ: ತುರಗದ ಕಿವಿಯಂ ಪಾಳಿಸಿ ಸುರಗೋಪಚ್ಛಾಯೆಯಿಂದಮರುಣಜಲಂ ಪಾಯ್ತುರುತಿರೆ ದೀರ್ಘಜೀವಿ ನೆತ್ತರ್ ಸುರಿಯದ ಕಿವಿಯಿಂದಮಲ್ಲ ಜೀವಿತನಕ್ಕುಂ (ಅಶ್ವಶಾ. ೫-೨೫). [ ದೀರ್ಘ + ಜೀವಿ$_1$ ]

**ದೀರ್ಘತಮವೃತ್ತ** (ನಾ). [ರೇಖಾಗ] ಒಂದು ಶಂಕುವನ್ನು ಅದರ ಆಧಾರಕ್ಷೇತ್ರಕ್ಕೂ ಮೈಗೂ ಇರುವ ಕೋನಕ್ಕಿಂತ ಹೆಚ್ಚಾದ ಕೋನದಲ್ಲಿ ಒಂದು ಸಮಕ್ಷೇತ್ರದಿಂದ ಕತ್ತರಿಸಿದರೆ ಉಂಟಾಗುವ ವಕ್ರರೇಖೆ : ಬೈಸಿಕಲ್ ಲಾಂದ್ರದಿಂದ ನೆಲದ ಮೇಲೆ ಬಿದ್ದಿರುವ ಬೆಳಕಿನ ಪರಿಧಿಯಂ ದೀರ್ಘತಮವೃತ್ತಕ್ಕೆ ಉದಾಹರಣೆ (ಭೌತವಿ. ೩೫).
[ ದೀರ್ಘತಮ$_3$ + ವೃತ್ತ ]

**ದೀರ್ಘತರವೃತ್ತ** (ನಾ). [ರೇಖಾಗ] ಶಂಕುವಿನ (ಓರೆಯ) ಪಕ್ಕಕ್ಕೆ ಸಮಾನಾಂತರವುಳ್ಳ ಯಾವುದಾದರೊಂದು ಸಮತಲಕ್ಷೇತ್ರದಿಂದ ಆ ಶಂಕುವನ್ನು ಕತ್ತರಿಸಿದರೆ ಆಗುವ ಸಮತಲ ವಕ್ರರೇಖೆ ; ಪರವಲಯ : ಒಂದು ಕಲ್ಲನ್ನು ಓರೆಯಾಗಿ ಮೇಲಕ್ಕೆಸೆದರೆ ಅದರ ಪಥವು ದೀರ್ಘತರವೃತ್ತವಾಗಿರುವುದು (ಭೌತವಿ. ೩೫). [ದೀರ್ಘತರ$_3$ + ವೃತ್ತ]

**ದೀರ್ಘತುಂಡಿ** (ನಾ). ೧. ಉದ್ದವಾದ ಮೂತಿಯುಳ್ಳುದು; ನೀಳವಾದ ಮುಖವುಳ್ಳುದು. ೨. ಸೊಂಡಿಲಿ. [ ಸಂ. ದೀರ್ಘತುಂಡೀ ]

**ದೀರ್ಘತೆ** (ನಾ). ಉದ್ದವಾಗಿರುವಿಕೆ ; ನೀಳವಾಗಿರುವಿಕೆ.
[ ಸಂ. ದೀರ್ಘತಾ ]

**ದೀರ್ಘತ್ರಿಭುಜ** (ನಾ). [ರೇಖಾಗ] ಸಮದ್ವಿಭುಜ ತ್ರಿಭುಜ: ಇದ್ದೆಸೆಯ ಭುಜವು ಸಮವಿರೆ ಮಧ್ಯದ ತಾನಳಿದು ಉಳಿದ ಭುಜವೊಂದನು ಮಾನ್ಯರ್ಧಿಸಿ ಗುಣಿಸಲುಂ ಕಂಬವು ನಿರ್ಧರದಿಂ ದೀರ್ಘತ್ರಿಭುಜಗಕ್ಕುಂ ನಿರುತಂ (ಕ್ಷೇತ್ರಗ. ೦೨-೦೦). [ ದೀರ್ಘ + ತ್ರಿಭುಜ ]

**ದೀರ್ಘದಂಡಪ್ರಣಾಮ** (ನಾ). (ಕೋಲಿನಂತೆ) ಉದ್ದವಾಗಿ ಭೂಮಿಯ ಮೇಲೆ ಮಲಗಿ ಮಾಡುವ ನಮಸ್ಕಾರ ; ಸಾಷ್ಟಾಂಗ ನಮಸ್ಕಾರ : ಶೀನಪ್ಪನಾಯಕ ದೀರ್ಘದಂಡಪ್ರಣಾಮಗಳನ್ನು ಮಹಾಪ್ರಭುಗಳಿಗೆ ಅರ್ಪಿಸಿ . . . ಹೊರಬಿದ್ದ (ಹೇಮುಕೊ. ೧೭). [ ದೀರ್ಘ + ದಂಡಪ್ರಣಾಮ ]

**ದೀರ್ಘದರ್ಶಿ** (ನಾ). ೧. ಮುಂದಾಲೋಚನೆಯುಳ್ಳವನು. ೨. ಭೂತ ಮತ್ತು ಭವಿಷ್ಯತ್ತನ್ನು ಕುರಿತು ಯೋಚಿಸುವವನು; ಹಿಂದು ಮುಂದಂ ಕುರಿತು ಆಲೋಚಿಸುವವನು: ರಾಜರ್ಷಿಯಾ ದೀರ್ಘ ದರ್ಶಿಯಾ ಸಮದರ್ಶಿ ತಾಂ ಸಮಬುದ್ಧಿಯಿಂ ದರ್ಪದಿಂ ಪಾಲಿಸಿರ್ದನು ರಾಜ್ಯಮಂ (ಶ್ರೀರಾಮಾ. ೬-೦೬೯). ೩. ವಿವೇಕಿ; ಬುದ್ಧಿವಂತ.
[ ಸಂ. ದೀರ್ಘದರ್ಶಿನ್ ]

**ದೀರ್ಘದರ್ಶಿನಿ** (ನಾ). ಮುಂಬರುವುದನ್ನು ಕುರಿತು ಆಲೋಚಿಸುವವಳು; ಮುಂದಾಲೋಚನೆಯುಳ್ಳವಳು: ಮೂರ್ಛೆವೋದತ್ತಿಗೆಯ ನೋಡಿ ಸೌಮಿತ್ರಿ "ಅಗ್ರಜನೆ, ದೀರ್ಘದರ್ಶಿನಿ ದಿಟಂ ಆ ಕೈಕೆ!" ಎಂದಾರ್ಭಟಿಸಿ ಬಾಣಮಂ ಪೂಡಿ ರಯುವನೆಚ್ಚನ್ ರಾಕ್ಷಸಾಕೃತಿಗೆ (ಶ್ರೀರಾಮಾ. ೦೮೦-೧೪೬). [ ಸಂ. ದೀರ್ಘದರ್ಶಿನೀ ]

**ದೀರ್ಘದೃಷ್ಟಿ** (ನಾ). ೧. ಮುಂದಾಲೋಚನೆ; ದೂರದೃಷ್ಟಿ. ೨. ವಿವೇಕ; ಮುಂಜಾಗ್ರತೆ. ೩. ಮುಂದೆ ನಡೆಯುವುದನ್ನು ತಿಳಿಯುವ ಶಕ್ತಿಯುಳ್ಳವನು; ದೂರದೃಷ್ಟಿಯುಳ್ಳವನು: "ಮುಂದರಿವವನಂ ದೀರ್ಘದೃಷ್ಟಿಯೆಂಬುದು" (ಹಲಾಯು. ೬೨-೨೨೧); "ದೀರ್ಘದೃಷ್ಟಿಯೆನೆ ಮುಂದರಿವವಂ" (ಮುಂಗರಾ. ೬೧-೦೯): ಪ್ರಜೆಗಳು . . . ಬಿರುಗಣ್ಣುಗಳ ದೀರ್ಘದೃಷ್ಟಿಯಿಂದೀಕ್ಷಿಸುತ್ತ (ಸುಗುಗಂ. ೮೩-೩). 'ದೀರ್ಘದರ್ಶಿ' ಪರಾ. [ ದೀರ್ಘ + ದೃಷ್ಟಿ ]

**ದೀರ್ಘದೇಹಿ** (ನಾ). ೧. ದೊಡ್ಡ ಶರೀರವುಳ್ಳವನು; ಗಾತ್ರವಾಗಿರುವವನು; ಮಹಾಕಾಯಂ: ರಕ್ಕಸರನಿಬರೆಲ್ಲರುಂ ದೀರ್ಘದೇಹಿಗಳ್ಬೆಕ್ಕಸದ ಕೋಪಿಗಳ್ (ಜೈಮಿಭಾ. ೦೬-೨೨). ೨. ಹೆಗ್ಗಣ: "ದೀರ್ಘದೇಹೀ, ಮೂಷಿಕಾ–೨ ಹೆಗ್ಗಣಗಳ ಹೆಸರು" (ಸಿದ್ಧಾಂತಿ. ೧೩೭).
[ ಸಂ. ದೀರ್ಘದೇಹಿನ್ ]

**ದೀರ್ಘದ್ವೇಷ** (ನಾ). ಬಹಳ ಕಾಲದಿಂದಿರುವ ವೈರ; ಬದ್ಧವೈರ: ದೀರ್ಘದ್ವೇಷವಂ ಮಾಡಲಾಗದು (ವಿವೇಕ. ೦೩೧): ದೀರ್ಘದ್ವೇಷವು ನಮ್ಮ ಹಳ್ಳಿಯವರಿಗೆ ಸ್ವಲ್ಪವೂ ಬೇಕಾಗಿರಲಿಲ್ಲ (ಹುಟ್ಟಿಹ. ೮೦).
[ ದೀರ್ಘ + ದ್ವೇಷ ]

**ದೀರ್ಘದ್ವೇಷಿ** (ನಾ). ಬಹಳ ಕಾಲದಿಂದ ವೈರವುಳ್ಳವನು; ಬದ್ಧವೈರಿ.
[ ಸಂ. ದೀರ್ಘದ್ವೇಷಿನ್ ]

**ದೀರ್ಘಧನು** (ನಾ). ಉದ್ದವಾದ ಬಿಲ್ಲು: ಪೇರುರಂ ಕಟಿಯ ನಡು ಕೊಬ್ಬಿದ ಪೆಗಲು ಪಿಡಿದ ಕೂರಂಬು ದೀರ್ಘಧನುವೆರಸಿ ನೆರೆದುದು ಕಾನನಾರಿಗಳೆನಿಪ್ಪ ಶಬರಾಧಿಪರು (ಹಚಕಾ. ೩-೨). [ ದೀರ್ಘ + ಧನು ]

**ದೀರ್ಘನಾಡಿ** (ನಾ). ಶರೀರದ ಒಂದು ನಾಡಿಯ ಹೆಸರು: ಮಯೂರ ನಾಡಿ ... ದೀರ್ಘನಾಡಿ ... ಸಂತೋಷ ನಾಡಿ ಇಂತೀ ನಾಡಿಗಳೊಳಗಾದ ಶರೀರದಲ್ಲಿ ತೋರುವ ನಾಡಿ ಜೀರ್ಣವರ್ಣದಂತೆ (ಶರಚ. ೪೮೦).
[ ದೀರ್ಘ + ನಾಡಿ$_1$ ]

**ದೀರ್ಘನಿದ್ರಿತ** (ನಾ). ಮರಣ ಹೊಂದಿದವನು; ಸತ್ತವನು: ಕೆಲವು ಕಾಲದಿನಾತನ ತಂದೆ ಮಹಾದ್ರುಮಂ ದೀರ್ಘನಿದ್ರಿತನಪ್ಪುದುಂ ಕಟದ್ರುಮಂ ರಾಜಪದವಿಯೊಳ್ ನಿಂದಂ (ಶಂಕಶಂ. ೨೬-೨೨). [ ಸಂ. ]

**ದೀರ್ಘನಿದ್ರೆ** (ನಾ). ಸಾವು; ಮರಣ: "ನಿಧನಂ, ನಾಶಃ, ಮೃತ್ಯುಃ . . . ದೀರ್ಘನಿದ್ರಾ–ಈ ೧೨ ಸಾವು" (ಹಲಾಯು. ೦೦೩-೬): "ಮೃತ್ಯು ಮರಣಂ ದೀರ್ಘನಿದ್ರೆ . . . ಎನೆ ಸಾವಕ್ಕು" (ಮುಂಗರಾ. ೧೧೬-೩): ಈಗಳ್ ನಿನಗಿಂತೀ ದೀರ್ಘನಿದ್ರೆಯಂ ಮಾಡಿದನೇ (ಗದಾಯು. ೫-೨೧): ಮಬ್ಬಿದೊಬ್ಬಿಗಿದಂತಲ್ಲಿ ದೀರ್ಘನಿದ್ರೆಯೊಳಿರಲು ಹೊಬಗೆ ಶಶಿಧರನತ್ತ ಹಸಿದೆನೆಂದೆನುತಿರಲು (ಇಳಕ. ದೀ. ೫೪-೧೬): ಯಮಧರ್ಮರಾಜನು ಅವನಿಗೆ ದೀರ್ಘನಿದ್ರೆ ತಂದಿದ್ದಾನೆ (ವಚಭಾ ೩೪೪). [ದೀರ್ಘ + ನಿದ್ರೆ]

**ದೀರ್ಘಪೃಷ್ಠ** (ನಾ). ಹಾವು: "ಆಶೀವಿಷಃ, ದೀರ್ಘಪೃಷ್ಠಃ–ಈ ೨ ನಿಮಿರ್ದ ಪಾ(ಹಾ)ವು" (ಹಲಾಯು. ೦೦೫-೦೯). [ ದೀರ್ಘ + ಪೃಷ್ಠ ]

**ದೀರ್ಘಪ್ರಜ್ಞ** (ನಾ). ಆಳವಾಗಿ ಆಲೋಚನೆ ಮಾಡುವವನು; ಮುಂದಾಲೋಚನೆ ಮಾಡುವವನು: ಅಡಕತಲ್ಲಿಯ ಧನ ಪಯೋಧಿಯ ಕಡೆಯ ಕೋಟಿಯ ಮುಟ್ಟಿಯಲವನೆದೆಯೊಡೆದು ದೀರ್ಘಪ್ರಜ್ಞನಿತ್ತನು ಬೇಹ ವಸ್ತುಗಳ (ಕುಮ್ಯಾಸ. ೪-೪). [ ದೀರ್ಘ + ಪ್ರಜ್ಞ ]

**ದೀರ್ಘಪ್ರಣಾಮ** (ನಾ).=ದೀರ್ಘದಂಡಪ್ರಣಾಮ: ಸೇಟ ಗಿರಿದಾಸರಿಂ ದೀರ್ಘಪ್ರಣಾಮ ಹಾಕಿದರು (ಕಂಬಹು. ೯೩). [ ದೀರ್ಘ + ಪ್ರಣಾಮ ]

**ದೀರ್ಘರೋಗ** (ನಾ). ಬಹಳ ಕಾಲದ ರೋಗ; ಹಳೆಯ ಖಾಯಿಲೆ: ನಾಲಗೆಯು ಅತಿದೀರ್ಘವಾಗಿಯಾದರೂ ಅತಿಗಿಡ್ಡನಾಗಿಯಾದರೂ ಇದ್ದರೆ ದೀರ್ಘರೋಗದಿಂದ ಮರಣವೆಂದರಿವುದು (ಸಕಲ್ಯ. ೦೪).
[ ದೀರ್ಘ + ರೋಗ ]

**ದೀರ್ಘರೋಷಿ** (ನಾ). ಬಹಳ ಕಾಲ ಕ್ರೋಧವನ್ನಿಟ್ಟುಕೊಂಡಿರುವವನು: ಜ್ಞಾತಿ ಬಹಿಷ್ಕೃತಂ ವ್ಯಸನಿ ದೈವಪರಂ ಶಿಶು ದೀರ್ಘರೋಷಿ ಸತ್ಯೇತರನಸ್ಥಿರಂ . . . ಎನಿಪ ನರಪನೊಳೆಂದುಂ ವಿಜಿಗೀಷುಗಳಪ್ಪ ಮಹೀಭುಜರೆಂದುಂ ಸಂಧಿ ಮಾಡರ್ (ಶಂಕಶಂ. ೨೨೦-೬).
[ ಸಂ. ದೀರ್ಘರೋಷಿನ್ ]

**ದೀರ್ಘಲಲಿತ** (ನಾ). [ಸಂಗೀತ] ಇಪ್ಪತ್ತೆರಡಂ ಶ್ರುತಿಗಮಕಗಳಲ್ಲಿ ಒಂದು: ಸಂತ ಪ್ರಮಿತ ದೀರ್ಘ ಲಲಿತ . . . ದೀರ್ಘ ಲ [ಪಾಠಾಂ. ಲಾ]ಲಿತ . . . ಕೋಮಲವೆಂಬ ಇಪ್ಪತ್ತೆರಡೇ ಶ್ರುತಿಗಮಕಗಳೆಂತಲುಂ (ವಿವೇಕ. ೨೪೮). 'ಶ್ರುತಿ' ಪರಾ. [ ದೀರ್ಘ + ಲಲಿತ ]

**ದೀರ್ಘವರ್ತುಲ** (ನಾ). ಅಂಡಾಕಾರವಾದ ವೃತ್ತ; ದೀರ್ಘವಾದ ಗೋಳ: ಅವರ ಎಲೆಗಳು ದೀರ್ಘವರ್ತುಲಾಕಾರ (ಮುಂಬಯಿ. ೪-೫೪).
[ ದೀರ್ಘ + ವರ್ತುಲ ]

**ದೀರ್ಘವೃಂತ** (ನಾ). ಉದ್ದವಾದ ಕಾಂಡವನ್ನುಳ್ಳುದು; ಹೆಮ್ಮರ: "ಮಂಡೂಕಪರ್ಣಃ . . . ದೀರ್ಘವೃಂತಃ, ಕಟನ್ನಟಃ, ಶೋಣಕಃ, ಅರಳುಃ–೧೨ ಹೆಮ್ಮರದ ಹೆಸರುಗಳು" (ಸಿದ್ಧಾಂತಿ. ೦೨೫).
[ ದೀರ್ಘ + ವೃಂತ ]

**ದೀರ್ಘವೃತ್ತ** (ನಾ). ಅಂಡಾಕಾರದ ಸುತ್ತು,–ಗೋಳ: ಭೂಮಿಯು ಸೂರ್ಯನ ಸುತ್ತು ತಿರುಗುವ ಹಾದಿಯು, ಸರಿವೃತ್ತಾಕಾರವಾಗಿರದೆ, ದೀರ್ಘವೃತ್ತವಾಗಿದೆ (ಕಾಲಕ್ರ. I, ೩೦೧): ದೀರ್ಘವೃತ್ತ (Ellipse) ವು ಭಾರತೀಯರಿಗೆ ವೇದಗಳ ಕಾಲದಲ್ಲಿಯೇ ತಿಳಿದಿತ್ತು (ತತ್ತ್ವಶಾ. ೪೬೧).
[ ದೀರ್ಘ + ವೃತ್ತ$_1$ ]

**ದೀರ್ಘವ್ಯಾಧಿ** (ನಾ).=ದೀರ್ಘರೋಗ: (Chronic Complaint. ಇಂಕನಿ).
[ ದೀರ್ಘ + ವ್ಯಾಧಿ ]

**ದೀರ್ಘಶಯನ** (ನಾ). = ದೀರ್ಘನಿದ್ರೆ. 'ದೀರ್ಘಶಯನಂಗೆಯ್' ಪರಾ. [ ದೀರ್ಘ + ಶಯನ ]

**ದೀರ್ಘಶಯನಂಗೆಯ್** (ಕ್ರಿ). ಸಾವನ್ನು ಹೊಂದು; ಮರಣವನ್ನು ಹೊಂದು: ಏರ್ಗಳಿಂದೊಗುರ್ಡಿಸಿ ಸಾರಥಿ ಬಳಲ್ಕೆ ಕೆನ್ನೀರ್ಗಾರಿ ದೀರ್ಘಶಯನಂಗೆಯ್ಕೆ ಕುದುರೆಗಳ್ನೀರ್ಗೋಲ ಪೋರ್ಗಳಾ ನೃಪನಂಗದೊಳ್ಕಾಣಿಸಿದುವು ಜಾಳಂಧ್ರದಂತೆ (ಜೈಮಿಭಾ. ೪-೩೫).
[ ದೀರ್ಘಶಯನ + ಕೆಯ್$_1$ ]

**ದೀರ್ಘಶ್ಮಶ್ರು** (ನಾ). ನೀಳವಾದ ಗಡ್ಡ,–ದಾಡಿ: ಗಂಡಸರು ದೀರ್ಘಕೇಶವನ್ನು ಹಿಂದೆ ಗಂಟುಹಾಕಿ ಜಟ್ಟವನ್ನು ಸುತ್ತಿಕೊಳ್ಳುತ್ತಿದ್ದರು ಮತ್ತು ದೀರ್ಘಶ್ಮಶ್ರು ಬೆಳಸಿ ಮೀಸೆಯನ್ನು ಮಾತ್ರ ತೆಗೆಸುತ್ತಿದ್ದರು (ಭಾರತ. ೦೩).
[ ದೀರ್ಘ + ಶ್ಮಶ್ರು ]

**ದೀರ್ಘಶ್ರುತಿ** (ನಾ). ನಿಡಿದಾದ ನಾದ ; ಬಹುದೂರದವರೆಗೆ ಕೇಳಿಸುವಂತಹ ನಾದ : ನಾತಿದೂರದೊಳೊಂದು ಪೊಣ್ಮಿದುದು, ಸೀಳ್ದಪೋಲ್ ವನ್ಯನಿಶ್ಶಬ್ದಮಂ ದೀರ್ಘಶ್ರುತಿಯ ಸೀಳ್ (ಶ್ರೀರಾಮಾ. ೨೯೦-೧೬೯).
[ ದೀರ್ಘ + ಶ್ರುತಿ ]

**ದೀರ್ಘಶ್ವಾಸ** (ನಾ). ನಿಟ್ಟುಸಿರು : ಅಲಘುಂತರವರಿವೇದನಾವಿಹ್ವಳಿತಕಂಠಗತಾತ್ಮನೂರ್ಧ್ವಗಸ್ಖಲಿತ ದೀರ್ಘಶ್ವಾಸನಿದ್ದನು ಕೌರವರ ರಾಯ (ಕುವ್ಯಾಗ. ೦೦-೨). [ ದೀರ್ಘ + ಶ್ವಾಸ ]

**ದೀರ್ಘಸತ್ರ** (ನಾ). ೧. ಬಹು ಸಮಯದವರೆಗೆ ನಡೆಯುವ ಯಾಗ ; ಸೋಮಯಜ್ಞ : ಋಷಿಗಳು ಮತ್ತು ರಾಜರ್ಷಿಗಳು ಮಾಡುತ್ತಿದ್ದ ದೀರ್ಘಸತ್ರಯಾಗಗಳಲ್ಲಿ ಸೂತರು ಈ ಪುರಾಣಗಳನ್ನು ಹೇಳುತ್ತಿದ್ದರು (ಭಾರದ. ೧೩೮). ೨. ಬಹುಕಾಲ ಯಾಗ ಮಾಡುವವನು.
[ ದೀರ್ಘ + ಸತ್ರ ]

**ದೀರ್ಘಸುಮಂಗಲಿ** (ನಾ). ಬಹುಕಾಲ ಐದೆಯಾಗಿರುವವಳು ; ಬಹುಕಾಲ ಗಂಡನನ್ನು ಹೊಂದಿರುವವಳು ; ಮುತ್ತೈದೆ : ಬ್ರಾಹ್ಮಣರಿಗೂ ಮುದುಕರಿಗೂ ಅತ್ತೆಮಾವಂದಿರಿಗೂ ನಮಸ್ಕರಿಸಿ, ಅವರಿಂದ 'ದೀರ್ಘಸುಮಂಗಲಿಯಾಗು' ಎಂದು ಆಶೀರ್ವಾದ ಪಡೆದಳು (ಶಕಥಾ. ೧೬೯). [ ಸಂ. ದೀರ್ಘಸುಮಂಗಲೀ ]

**ದೀರ್ಘಸೂತ್ರ** (ನಾ). ೧. ತಡಮಾಡುವವನು ; ಸಾವಕಾಶವಾಗಿ ಕೆಲಸ ಮಾಡುವವನು ; ಜಡ ; ಆಲಸಿ : "ಅಳಸಂ ಮಂದಂ ಜಡಂ ಮಂಥರನೆನಿ[ಪನವನುಂ] ಶೀತಲಂ ದೀರ್ಘಸೂತ್ರಂ" (ವಸ್ತುಕೋ. ೦೦೦-೧೧). ೨. ಉದ್ದವಾದ ಎಳೆಗಳುಳ್ಳುದು, ೧, ೨ : ಎಳೆಯುಳ ನಳಿತೋಳಂ ದಂದಳಿಪೆನೆನುತ್ತೆಳಸಿ ತಳೆಯದಳಲಿಂ ಜಲದೊಳ್ಮುಳುಗಿತು ಮೃಣಾಳಮಿಷ್ಟ ಮನಿಳೆಯೊಳ್ತಿಳಿ ದೀರ್ಘಸೂತ್ರನೇಂ ಪಡೆದಪನೇ (ಚಾಜಿಕೆ. ೭-೪೦).
[ ದೀರ್ಘ + ಸೂತ್ರ ]

**ದೀರ್ಘಸೂತ್ರಿ** (ನಾ). ಸಾವಕಾಶವಾಗಿ ಕೆಲಸ ಮಾಡುವವನು; ವಿಳಂಬಿ : "ದೀರ್ಘಸೂತ್ರೀ, ಜಡಕ್ರಿಯಃ—ಈ ೨ ತಡೆದು ಗೆಯ್ವವಂ" (ಹಲಾಯು. ೬೩-೨೨೮) : ದೀರ್ಘಸೂತ್ರಿಗಳವರ ಸಂಗದಿಂ ಕಿಡುವುದೆ ದಿಟಂ ಕವ್ಮ ಕಷ್ಟಂ (ಶ್ರೀರಾಮಾ. ೩೦೨-೨೧). [ ಸಂ. ದೀರ್ಘಸೂತ್ರಿನ್ ]

**ದೀರ್ಘಸ್ವರ** (ನಾ). [ವ್ಯಾಕ] ಉಚ್ಚಾರಣೆಗೆ ಎರಡು ಹ್ರಸ್ವಾಕ್ಷರಗಳಷ್ಟು ಕಾಲವನ್ನು ತೆಗೆದುಕೊಳ್ಳುವ ಸ್ವರ : ಉಚ್ಚಾರಣೆಗೆ ಹೆಚ್ಚು ಕಾಲ ಬೇಕಾಗುವ ಆ, ಈ, ಊ, ಋ, ಏ, ಓ ಎಂಬುವಕ್ಕೆ ದೀರ್ಘಸ್ವರಗಳೆಂದೂ ಹೆಸರು (ಶುಧ್ಯಶು. ೧೩). [ ದೀರ್ಘ + ಸ್ವರ ]

**ದೀರ್ಘಾಕಾರ** (ನಾ). ೧. ಎತ್ತರವಾದ ಆಕಾರ. ೨. ಎತ್ತರವಾದ ಆಕಾರವುಳ್ಳವನು : ಕಫಾತ್ಮಂ ದೀರ್ಘಾಕಾರಂ ಸುಬುದ್ಧಿ ಮೇದಸ್ವಾರಂ ನಸುಕೆಂಚತಲೆಯುವಕ್ಕುಂ ಜೀವಂ (ಚಾತಿ. ೨-೨೩). [ ದೀರ್ಘ + ಆಕಾರ ]

**ದೀರ್ಘಾಕ್ಷರ** (ನಾ). = ದೀರ್ಘ ೩ : ಉಭಯಮಾತ್ರಂ = ಎರಡು ಮಾತ್ರೆಯನುಳ್ಳುದು, ದೀರ್ಘಂ = ದೀರ್ಘಾಕ್ಷರಂ (ಅಪ್ಪುದು) (ಕಮುದ. ೦೦ ಟೀಕೆ).
[ ದೀರ್ಘ + ಅಕ್ಷರ ]

**ದೀರ್ಘಾದೇಶ** (ನಾ). [ವ್ಯಾಕ] ಒಂದು ಸ್ವರಕ್ಕೆ ಪ್ರತಿಯಾಗಿ ಮತ್ತೊಂದು ದೀರ್ಘಸ್ವರವು ಬರುವುದು : ತುದಿಯೊಳ್ ದೀರ್ಘಾದೇಶಂ ಪೊದಟ್ಟು ಷಷ್ಠೀವಿಭಕ್ತಿಗರೆಬರ ಮತದಿಂ ಪುದಿದಿರ್ಕುಂ (ಶಾವ್ಯಾವ. ೦೩೬). [ ದೀರ್ಘ + ಆದೇಶ ]

**ದೀರ್ಘಾಯಿತ** (ನಾ). [ಸಂಗೀತ] ಇಪ್ಪತ್ತೆರಡು ಶ್ರುತಿಗಮಕಗಳಲ್ಲಿ ಒಂದು : ಸ್ಫುರಿತ . . . ದೀರ್ಘಾಯಿತ [ಪಾಠಾಂ. ದೀರ್ಘಿತ] . . . ಕೋಮಲವೆಂಬ ಇಪ್ಪತ್ತೆರಡೇ ಶ್ರುತಿಗಮಕಗಳೆಂತಲುಂ (ವಿವೇಕ. ೨೪೮). 'ಶ್ರುತಿ' ಪರಾ. [ ಸಂ. ]

**ದೀರ್ಘಾಯು** (ನಾ). ೧. ಹೆಚ್ಚು ಕಾಲ ಬದುಕಿರುವಿಕೆ ; ಬಹಳ ಕಾಲದ ಬಾಳು: ಮಾಡುಗೆ . . . ಈಶನಿಷ್ಟಸುಖಮಂ ದುರ್ಗಂಗೆ ದೀರ್ಘಾಯುಮಂ (ಪಂಚಶಂ. ೦-೮) ; ಕುಡುಗೆ ಕಂದರ್ಪಂಗೆ ದೀರ್ಘಾಯುಮಂ (ಲೀಲಾವ. ೩-೭೧) : ಎಮಗೀ ಯುಗಕೆ ನೀವಲ್ಲದೆ ದೀರ್ಘಾಯುಮಂ ಕೊಡುವವನ ದಾವಂ ಪೇಮನಾರಾಧ್ಯ (ಬಸಪು. ೪೬-೪೧) ; ಏಗೆ ದೀರ್ಘಾಯುಮಿರೆ ಮುನಿದು ಕಲಿ ಜವರಾಯಂ ಕೊಲಲಾಜಂ (ಹಮ್ಮಿರ. ೮-೨೮). ೨. ಹೆಚ್ಚು ಕಾಲ ಬದುಕಿರುವವನು : ದೊರೆಕೊಂಡಂದಧಿಯೋಗಂ ನರಪತಿ ದೀರ್ಘಾಯು ವಿಭವಸಂಯುತನಭಯಂ ನಿರುಜಂ ಸುಖಾನ್ವಿತಂ ಜಿತವಿರೋಧಿ ತಾನೆನಿಸಿ ವರ್ತಿಕುಂ (ಜಾತಿ. ೧೪-೧೧); ಭಾವಿಸಿ ಪರಸಿದಡೆ ದೀರ್ಘಾಯುವಾಗಿರೆ ಕರುಣಿಸಬೇಕು (ಬಸಪು. ೪೬-೧೭). [ ಸಂ. ]

**ದೀರ್ಘಾಯುಷಿ** (ನಾ).=ದೀರ್ಘಾಯು ೨ : ಹಿರಿಯರು ದೀರ್ಘಾಯುಷಿಯಾಗು ಎಂದು ಆಶೀರ್ವದಿಸಿದರು (ರೂಢಿ). [ ಸಂ. ದೀರ್ಘಾಯುಷೀನ್ ]

**ದೀರ್ಘಾಯುಷ್ಯ** (ನಾ).=ದೀರ್ಘಾಯು ೧ : ವಜ್ರವೃಷಭನಾರಾಚಾಸ್ಥಿಸಂಧಿಬಂಧಮುಂ ... ಲಕ್ಷಸಮಾಸಮಿತಾನಪವರ್ತಿತ ದೀರ್ಘಾಯುಷ್ಯಮುಂ ತನಗನುಸಂಗತಮಾಗೆ (ಶಾಂತಿಪು. ೦೦-೯೪ ವ) ; ಪ್ರಾತಃಕಾಲದಲ್ಲಿ ಏಳದೆ ಬಹಳ ಹೊತ್ತಿನ ತನಕ ಮಲಗಿ ನಿದ್ದೆ ಮಾಡುವವರು ದೀರ್ಘಾಯುಷ್ಯವನ್ನೂ ಘನತೆಯನ್ನೂ ಪಡೆಯಲಾರರು (ಮುಂಬಯಿ. ೪-೧೯೧).
[ ದೀರ್ಘ + ಆಯುಷ್ಯ ]

**ದೀರ್ಘಾಯುಸ್ಸು** (ನಾ). ೧.=ದೀರ್ಘಾಯು ೧ : ದೀರ್ಘಾಯುಸ್ಸಿಗಾಗಿ ಪ್ರಾರ್ಥನೆಯಿದ್ದರೂ ಐಹಿಕವಾದ ಪಾರ್ಥಿವಜೀವನವೆ ಶಾಶ್ವತವೆಂದು ಅವರು ಅರಿಯಲಿಲ್ಲ (ಋಕ್ಸಾರ. ೦೦ ಟೀಕೆ). ೨. ಕಾಗೆ. ೩. ಮಾರ್ಕಂಡೇಯ. [ ಸಂ. ದೀರ್ಘಾಯುಸ್ ]

**ದೀರ್ಘಾಲೋಚನೆ** (ನಾ). ಆಳವಾದ ಯೋಚನೆ,-ಚಿಂತನೆ : "ಏನೇ ಮಂಗ್ಲೀ . . . ಭಾಳ ದೀರ್ಘಾಲೋಚನೆ ಮಾಡ್ತಾ ಇರೋ ಹಾಗಿದೆ !" ಎಂದು ನಗೆಯಾಡಿದನು (ಸರ್ವಮಂ. ೩೨೯) ; ಹೂವಯ್ಯ . . . ತಾನು ಸೀತೆಮನೆಯಲ್ಲಿ ಕೇಳಿದ ಒಂದು ವಿಚಾರವನ್ನು ಕುರಿತು ದೀರ್ಘಾಲೋಚನೆ ಮಾಡತೊಡಗಿದ್ದನು (ಕಾನೂರು. ೩೩೯). [ದೀರ್ಘ + ಆಲೋಚನೆ ]

**ದೀರ್ಘಾವಧಿ** (ನಾ). ಬಹಳ ಕಾಲ,-ಅವಧಿ : ಈ ಕೆಲಸಕ್ಕೆ ದೀರ್ಘಾವಧಿ ಬೇಕು (ರೂಢಿ).

**ದೀರ್ಘಾವಧಿ ಬೆಳೆ**=ಬೆಳೆಯುವುದಕ್ಕೆ ಹೆಚ್ಚು ಕಾಲ ತೆಗೆದುಕೊಳ್ಳುವ ಬೆಳೆ : ಈಗ ಬಳಕೆಗೆ ಬಂದಿರುವ ಹೊಸ ಬೇಸಾಯ ಪದ್ಧತಿಯಿಂದ ದೀರ್ಘಾವಧಿ ಬೆಳೆಗಿಂತ ಅಲ್ಪಾವಧಿ ಬೆಳೆಗೆ ಪ್ರೋತ್ಸಾಹ ಹೆಚ್ಚಿದೆ (ರೂಢಿ). **ದೀರ್ಘಾವಧಿ ಯೋಜನೆ** = ಹೆಚ್ಚು ಕಾಲ ತೆಗೆದುಕೊಳ್ಳುವ ಯೋಜನೆ : ಪಂಚವಾರ್ಷಿಕಯೋಜನೆಯ ಜೊತೆಗೆ ದೀರ್ಘಾವಧಿಯೋಜನೆಗಳು ಅಗತ್ಯವೆಂಬುದನ್ನು ನಾವು ಮನಗಂಡಿದ್ದೇವೆ (ರೂಢಿ). **ದೀರ್ಘಾವಧಿ ಸಾಲ** = ಹೆಚ್ಚು ಕಾಲದವರೆಗೆ ಕಂತುಗಳನ್ನು ವಿಸ್ತರಿಸಿದ ಸಾಲ ; ವಾಯಿದೆ ಹೆಚ್ಚು ಇರುವ ಸಾಲ : ಬ್ಯಾಂಕುಗಳು ರೈತರಿಗೆ ಅಲ್ಪಾವಧಿ ಮತ್ತು ದೀರ್ಘಾವಧಿ ಸಾಲಗಳನ್ನು ಒದಗಿಸುತ್ತವೆ (ರೂಢಿ).
[ ದೀರ್ಘ + ಅವಧಿ ]

**ದೀರ್ಘಿಕೆ** (ನಾ). ೧. ಉದ್ದವಾದ ಕೊಳ : ಕುಂದದೆ ಪೆರ್ಚುವ ತೋಯದಿಂದಮಾ ನಗರದ ಬಾವಿಪೊಕ್ಕರಣೆ ದೀರ್ಘಿಕೆ . . . ಪಳ್ಳಮೊಳಿವೆಂಬ ಜಲಾಶಯಮಿಂತು ಸುತ್ತಲುಂ (ಪುಷ್ಪಪು. ೨-೩೪) ; ಬಗರನೆ ದೀರ್ಘಿಕೆ ಹೊಕ್ಕರಣೆಯು ಬಾವಿ . . . ಪೂಗೊಳನಿಲ್ಲದ ನಗರವಿಲ್ಲಾ ನಾಡೊಳಗೆ (ರಾಜುವಿ. ೨-೨೭). ೨. ಸರಸ್ಸು : ಕಲ್ಯಾಣಿ ; ಪುಷ್ಕರಿಣಿ : "ವಾಪಿ ದೀರ್ಘಿಕೆ ಪರಿಖಾತಂ ದೇವಖಾತಮಕ್ಕುಮುಖಾತಂ" (ವಸ್ತುಕೋ. ೨೪-೦೩); ಶತಸಹಸ್ರಮುಖಾವಹ ಜಾನುದಘ್ನ ದೀರ್ಘಿಕಾಂಭಃಕುಲ್ಯಾಪ್ರವಾಹಂ

ಗಳಂ ಜಲದುರ್ಗಂಗಳಿಂದೆ ನೊಂಕಿ ಕದಡಿಯುಂ (ಆದಿಪು. ೮-೧೧ ವ) ; ಏನಂ ಬೇಟ್ಟುದೊ ಸಿರಿಯುದ್ಯಾನಿಯನಣ್ಣಿಯೊಳೆ ತೀವಿ ದೀರ್ಘಿಕೆಗಳವಂತಾ ನೃಪತಿ ನಿಚ್ಚಲಯುಸ್ಯಾನಿಯನವಗಾಹವಿರಿಸುವಂ ಬೋದನದೊಳ್ (ಶಂಖಳಾ. ೧-೧೭) ; ಕೈರವ ಪುಂಡರೀಕ ಪುಂಡಷಂಡದಿನೆಸೆದಿರ್ದ ದೀರ್ಘಿಕೆಗಳಿಂದ ಮನೋಹರವಾಗಿ ಕುಕ್ಕುನೂರುದಿತಯಶೋವಿಧಾನದಿನಲಂಕೃತವಾದುದು ಭೂಮಿಭಾಗದೊಳು (ಶಾಸಸ. ೮೨; 1138). ೩. ನದಿ : ಪಾವನ ಮಲಪ್ರಹರಿಯೆಂಬ ದೀರ್ಘಿಕೆ ಪರಿದಲ್ಲಿ ಜೀವಿಗಳಿಗೊಲಿದು (ಗುರುಚಾ. ೧-೦೩). [ ಸಂ. ದೀರ್ಘಿಕಾ ]

**ದೀರ್ಘೀಕರಣ** (ನಾ). ೧. ವಿಸ್ತರಿಸುವುದು ; ಲಂಬಗೊಳಿಸುವುದು : "ಉದ್ದವಾಗುವುದು ; ಉದ್ದ ಮಾಡುವುದು ; ದೀರ್ಘೀಕರಣ ; ಲಂಬನ" (Elongation. ಕಂಕನಿ). ೨. [ವ್ಯಾಕ] ದೀರ್ಘಸ್ವರ ಪ್ರಯೋಗ ; ಸ್ವರವನ್ನು ಎಳೆದು ಉಚ್ಚರಿಸುವುದು: 'ದೇಗುಲಮಾನ್', ಏಚಿದಾನ್', ತವ್ವಾದ' ಈ ತರದ ದೀರ್ಘೀಕರಣವು ಎಲ್ಲಿಯೂ ಇಲ್ಲ (ಕಶಾಅ. ೬೬).
[ ಸಂ. ]

**ದೀರ್ಘೋಕ್ತಿ** (ನಾ). [ವ್ಯಾಕ] ದೀರ್ಘಸ್ವರದ ಪ್ರಯೋಗ: ಸಂಬೋಧನೆ ದೀರ್ಘೋಕ್ತಿಯೊಳಂಬಾಗಿರೆ ಬರ್ಕುಂ (ಶಬಿದಾ. ೨-೨೩).
[ ದೀರ್ಘ + ಉಕ್ತಿ ]

**ದೀರ್ಘೋಚ್ಛ್ರಿತ** (ನಾ). [ಸಂಗೀತ] ಇಪ್ಪತ್ತೆರಡು ಶ್ರುತಿಗಮಕಗಳಲ್ಲಿ ಒಂದು : ಸ್ಫುರಿತ . . . ದೀರ್ಘೋಚ್ಛ್ರಿತ . . . ಕೋಮಲವೆಂಬ ಇಪ್ಪತ್ತೆರಡೇ ಶ್ರುತಿಗಮಕಗಳೆಂತಲುಂ (ವಿವೇಕ. ೨೪೮). 'ಶ್ರುತಿ' ಪರಾ.
[ ದೀರ್ಘ + ಉಚ್ಛ್ರಿತ ]

**ದೀರ್ಘೋದ್ಯೋಗ** (ನಾ). ೧. ಬಹುಕಾಲದವರೆಗೆ ಮಾಡುವ ಕೆಲಸ ; ಸಂತತವಾಗಿ ಮಾಡುವ ಕಾರ್ಯ. ೨. ಸಂತತವಾಗಿ ಮಾಡುವ ಪ್ರಯತ್ನ : ನಿತ್ಯಜೀವನದಲ್ಲಿ ಯಶಸ್ಸು ದೊರೆಯುವುದು ತಾಳ್ಮೆ, ದೀರ್ಘೋದ್ಯೋಗಗಳಿಂದಲೇ ಹೊರತು ಜಾದುವಿನ ಕಳ್ಳದಾರಿಯಿಂದಲ್ಲ (ಕಥಕ. ೧೧೨). [ ದೀರ್ಘ + ಉದ್ಯೋಗ ]

**ದೀರ್ಣ** (ಗು). ೧. ಒಡೆದ ; ಸೀಳಿದ. ೨. ಹೆದರಿದ ; ಭಯಗೊಂಡ. ೩. ತೆರೆದ ; ಬಿರಿದ. 'ದೀರ್ಣಾನನ' ಪರಾ. [ ಸಂ. ]

**ದೀರ್ಣಾನನ** (ನಾ). ತೆರೆದ ಬಾಯಿ : ರಸನಾಶಂಪಾಶತಂ ಸಂಚಳಿಸೆ ವುದಿಯೆ ಫೂತ್ಕಾರವಾ ಶಾಂತವುಂ ದಳ್ಳಿಸೆ ವಚ್ಚಿಜ್ವಾಲೆ ದೀರ್ಣ [ಪಾಠಾಂ. ನಾಗಾ] ನನ ಕುಹರಸಹಸ್ರಂಗಳಿಂ ಕಣ್ಗಳಿಂದೆಣ್ಡೆಸೆಗಂಗಾರಂಗಳೆತ್ತಂ ಕೆದಱೆ ಫಣಸಹಸ್ರಂಗಳಂ ಬಿರ್ಚಿ ಕಣ್ಗವಿಸಿ ವಹ್ನಾವರ್ತಬಾಪಂ ಪಡೆದುದು ಭಯಮಂ ಕಾಳಕಾಳಾಹಿರೂಪಂ (ಶಂರಾಮಾ. ೩-೭೪).
[ ದೀರ್ಣ + ಆನನ ]

**ದೀವ, ದೀಹ** (ನಾ). ೧. ಬೇಟೆಯಲ್ಲಿ ಕ್ರೂರಮೃಗಗಳನ್ನು ಆಕರ್ಷಿಸುವುದಕ್ಕಾಗಿ ಬಳಸುವ ಪ್ರಾಣಿ; ಬೇಟೆಗೆ ಉಪಯೋಗಿಸಲು ಪಳಗಿಸಿದ ಪ್ರಾಣಿ : ಅಮೃತಮತಿ ಗಡ ಯಶೋಧರನ ಮನಃಪ್ರಿಯೆಯಾಕೆ ದೀವವಾಗೆ ಪುಳಿಂದಂ ಸುಮನೋಬಾಣಂ ತದ್ಭೂರಮಣನನೊಲಿವಂತೆ ಗೋರಿಗೊಳಿಸುತ್ತಿರ್ಕುಂ(ಯಶೋಚ. ೨-೯). ೨. ಸಾಕಿದ ಪ್ರಾಣಿ. ದೀಹ: ೨. ವೃಕ ಶಾರ್ದೂಲ ಕೇಸರಿ ಕದಲಿ ಕಳಭ ಕ್ರೋಢ ಖಿಣಿ ಲೂಲಾಯ ಸಾರಂಗ ಮದದ ರಹಿಯಲಿ ಮಾನಿಸರು ಸೋಂಕಿದೊಡೆ ಸೆಡೆಯವು ಹೊಲನ ಹೊದೆಜಂಕ್ಕಿದವು ದೀಹದ ಹಿಂದಿನಂತಿರೆ (ಕುಮಾಭಾ. ೧೩-೧೭). ೩. ಆಕರ್ಷಣೆಯ ಸಾಧನ ; ಮೋಹವನ್ನುಂಟುಮಾಡುವ ಸಾಧನ: ಎನ್ನ ಪಸರಿಸಿದ ಚಿತ್ರಪಟಮೆಂಬ ದೀಹಕ್ಕೆ ಖೇಚರ ಭೂಚರಯುವಮೃಗಂಗಳೆಳಸಿ ಬಂದು (ಆದಿಪು. ೩-೮೬ ವ) ; ಜಾಲಗಾಜನ ಕೈಯ ದೀಹ [ಪಾಠಾಂ. ವ]ದಂತೆ ಬಾಲೆಯರ ಮನದ ಸೋಲುವೆಯಂತೆ ಇಂತಿವರನಳವಾಡಿ

ಸಿಕ್ಕಿಸುವ ಪೋಲಿಗಾಱಿರಿಗೆಲ್ಲಿಯದೋ ಸತ್ಯ (ವೀರೇಶಮಾ. ೬೩-೨೬೮)-; ಚರಿಸುವ ವಿಟರ ಕರಣವೆಂಬ ಖಗಪಿಂಡಿಗಿರದೊಡ್ಡಿದ ದೀಹವೆನಲು ಮೆಱೆದುದು ಸೂಳೆಗೇರಿಯ ಸಾಲು (ಕಂಸವಿ. ೬-೯೨).

ದೀವದ ಖಗಮೃಗ = ಸಾಕಿದ ಪಕ್ಷಿ ಮತ್ತು ಪ್ರಾಣಿ : ಉಡುಪಾನನೆ ಗಿಂತಯ್ದುದ ನೋವವಳವ ದವಕೆ ಕೈಬಿಡಿ ಕೌಳುಡ ತೊಡವುಡಿಗೆ ಚವರ ಸೀಗುರಿ ಬಿಜ್ಜಣ ಮುಡಿವೂ ಕರಗಂಬೊತ್ತ ಮಡದಿಯರ್ಗಂ ದೀವದ ಖಗ ಮೃಗಕಂ ಬಿಡದಡಿಸಿತು ತರುಮೂಲವನೊಂದಿದ ಕಡುನೋವಾ ಶಾಪಾ ಸಂತತಿಗಿರದೆಯ್ದುವ ಮಾಕ್ಕೆಯೊಳು (ಜಯಚಾ. ೨-೪೦). ದೀವದ ನವಿಲ್, ದೀಹದ ನವಿಲ್ = ೧. ಹೆಣ್ಣುನವಿಲನ್ನು ಹಿಡಿಯಲು, ಉಪಯೋಗಿಸುವ ನವಿಲು. ೨. ಸಾಕಿದ ನವಿಲು; ಮಯೂರ: ಕಾಮ ಕಾಳೋರಗರೇಖೆಯಂತೆ ನಿಮಿರ್ದ ನೀಲಮಣಿಸ್ತಂಭದುನ್ಮುಖ ಮಯೂಖರೇಖೆಯುಂ ಕರ್ಪುಗಕುವ ದೀವದ ನವಿಲ್ಗಳುಂ . . . ಅತಿ ರಮಣೀಯಮಾಗೆ (ಶಂರಾಮಾ. ೩-೭೩ ವ) ; ಹರಿನೀಲಮಣಿಯು ಸೂಸಕದ ನೆಟಲ್ಗಳನಸಿತಾಹಿಗಳೆಂದೊಸೆದೆಳಸುವ ದೀಹದ ನವಿಲ್ಗಳೊಪ್ಪುಗುಮುವ ಜಿಓಲ್ (ಚಗವಿ. ೯-೦೨೮). ದೀವದ ಪುಲ್ಲೆ, ದೀವದ ಹುಲ್ಲೆ, ದೀಹದ ಪುಲ್ಲೆ, ದೀಹದ ಹುಲ್ಲೆ = ಬೇಟೆಯಲ್ಲಿ ಮೃಗಗಳನ್ನು ಆಕರ್ಷಿಸುವುದಕ್ಕಾಗಿ ಬಳಸುವ ಜಿಂಕೆ,-ಚಿಗರೆ : ಆ ವನಿತೆಯರ್ ಮನೋಜನ ದೀವದ ಪುಲ್ಲೆಗಮನಂಗರಾಜನವರಾಜ್ಯೇವಾಸಕ್ಕಂ ದೂರೆ (ಶಾಂತಿಪು. ೩-೧೯) ; ಮನೋಜನ ದೀವದ ಪುಲ್ಲೆಗಳೆನಿಸಿದುವು ನೆರೆದ ಪೆಂಡಿರ ತಂಡಂ (ಸುಕುಮಾ. ೧೧-೨೦) ; ಒಲವಿಂದೆಯ್ದು ಪರಿವ ದೀವ [ಪಾಠಾಂ. ಹ]ದ ಹುಲ್ಲೆಗಳನಾ ಲಲನೆ ನೋಡಿದಳು (ಕುರಾಸಾಂ. ೭-೫೭) ; ಕರತಳದೊಳ್ ತೀವಿದ ಮರಕತಮುದ್ರಿಕೆಯ ಪಸುರ್ವೆಳಗುಗಳನಾ ಪಸುರ್ವುಲ್ಲೆಗೆತ್ತು ಮುಸುಂಡಿನೊಳಾರಯ್ದು ದೀಹ[ಪಾಠಾಂ. ವ]ದ ಪುಲ್ಲೆಯು ಕೊಣಸುಗಳ್ಗೆ ಪುಲ್ಲೆಸಟುಂ ಸೆಟೆದು ನೀಡುತುಂ (ಲೀಲಾವ. ೪-೧೬ ವ); ನಗಿಸುವ ಕೋಡಗಂ ನೆರೆದು ನೋಡುವ ದೀಹದ ಹುಲ್ಲೆ ಸೋಗೆಯಂ ನೆಗಪಿ ತುಡುಂಕಿ ಮೆಟ್ಟುವ ನವಿಲ್ (ಸೂಕ್ತಿಸು. ೧೧-೭೪). ದೀವದ ಬೇಂಟೆ = ಪಕ್ಷಿ, ಪ್ರಾಣಿಗಳನ್ನು ಆಕರ್ಷಣೆಯಾಗಿ ಒಡ್ಡಿ, ಅವುಗಳ ಆಸೆಯಿಂದ ಬರುವ ಇತರ ಪ್ರಾಣಿಗಳನ್ನು ಬೇಟೆಯಾಡುವಿಕೆ ; ಬೇಟೆಯಲ್ಲಿ ಒಂದು ವಿಧ : ದೀವದ ಬೇಂಟೆಯುಂ ಬಿನ್ನಪಂಗೆಯ್ವೊಡೆ ಕಟ್ಟು[ಪು]ಟ್ಟುಂ ಕಾವುಂ ಮೇವುಂ . . . ಆನೆ ಬಲ್ಲೆಂ (ಶಂಖಳಾ. ೩-೪೩ ವ). ದೀವದ ಮೃಗ = ಬೇಟೆಯಲ್ಲಿ ಕ್ರೂರಮೃಗಗಳನ್ನು ಆಕರ್ಷಿಸುವುದಕ್ಕಾಗಿ ಬಳಸುವ ಪ್ರಾಣಿ : ಹಾಸದ ಕುನ್ನಿ ದೀವದ ಮೃಗಂ ಬಲೆ ಪೆರ್ವಡಿ . . . ಎಂಬೀ ಸಮಕಟ್ಟು ಪಾಪದೆಱೆವೆಟ್ಟು ಜಳಸ್ಥಳಪಾರದಿಂ ಕ್ರಿಯೋಲ್ಲಾಸ ಮನುಂಟುಮಾಡಿ ಪೊಣಮಟ್ಟುದು ಬೇಂಟೆಗೆ ಲುಬ್ಧಕವ್ರಜಂ (ಪುಷ್ಪಪು. ೩-೯೯). ದೀವದ ರಾಜಹಂಸೆ=ಸಾಕಿದ ಅರಸಂಚೆ : ಲೀಲಾಲಸಗಮನಮಂ ಗಜಗಮನೆಯರ್ಗುಪದೇಶಂಗೆಯ್ವ ದೀವದ ರಾಜಹಂಸೆಗಳುಮಂ . . . ಕೊಟ್ಟು ಪಂಡಿತೆಯುಮನೊಡವೋಪಂತು ಮಾಡಿ (ಆದಿಪು. ೪-೫೪ ವ). ದೀವದ ರಾಯ = ಬೇಟೆಯಾಡುವ ಸಾಧನವಾಗಿ ಬಳಸುವ ಪ್ರಾಣಿಗಳಂತೆ ಸೆರೆಯಲ್ಲಿಟ್ಟ ರಾಜ ; ಇತರ ರಾಜರನ್ನು ಶರಣಾಗತರಾಗಿ ಮಾಡಲು ಸೆಳೆಯಾಗಿ ಮಾಡಿಕೊಂಡ ರಾಜ: ಕದಪಂ ಪೊಯ್ಯುನ್ನುದ ಕೈಗೇಗೊಳಿಸಿ ತಿವುಳನಂ ಗಣ್ಣುದೊತ್ತಾಳ್ದನೊತ್ತಂಬದೆ ಪೂಗಿಟ್ಟೇಱದಂ ಮಾಳವನನಿರದೆ ಸಱೆಂಬಿನಂ ಮೆಟ್ಟಿ ಸಿಟ್ಟಿಕ್ಕಿದನಂಗಾಧೀಶನಂ ರಾಯರನೆ ಬದಿವೊಲಂಗೊಣ್ಣು ತನ್ನದ್ರಿತಿಯಿಂ ದೀವದ ರಾಯಮ್ಮರ್ಮಾಡಿ ಕಾರಾಗೃಹ ದೊಳಿರಿಸಿದಂ (ಮೃಅಲಿ. ೧೯೨೯, ೬೩-೧೯ ; 1091). ದೀವದ ಹರಿಣ = ದೀವದ ಪುಲ್ಲೆ: ಪಚ್ಚೆಯ ಜಗಲಿಯು ಜೆಲ್ವಿಂಗೆ ಕಣ್ಗೆಱವಿಯಾದಂತೆ ತೆಱಂಬೊಳೆವ ದೀವದ ಹರಿಣಗಳ ಲೋಚನಪ್ರತಿಬಿಂಬಗಳುಂ . . . ಅತಿ

ರಮಣೀಯವಪ್ಪಾಗೆ (ಶಂಶಾಮಾ. ೩-೭೩ ಪ). ದೀವದ ಹುಲಿ, ದೀಹದ ಪುಲಿ, ದೀಹದ ಹುಲಿ = ಬೇಟೆಯಲ್ಲಿ ಇತರ ಮೃಗಗಳನ್ನು ಆಕರ್ಷಿಸಲು, ಸೆಳೆಯಾಗಿ ಒಡ್ಡಲು ಉಪಯೋಗಿಸುವ ಹುಲಿ : ಗಿಡಗ ದೀವ[ಪಾಠಾಂ. ಹ] ದ ಹುಲಿ ಸಾಳುವ ಕರಿ ಕೋಣ ಹಿಡಿಯೆರಲೆಯ ಮೊತ್ತವನು ತಡೆಯದೆ ಕೊಂಡೆಯ್ದುಂದರು ಬೇಟೆಯ ಕಡುಗಲಿಗಳು (ಕುರಾಶಾಂ. ೨೭-೪೪): ಸಾಹಸದ ಬೇಟೆಯಪಡಲ್ ತೋಹಿನೊಳಂ ನಿಂದು ಬೇಡರಾಡಂಬರದಿಂ ದೀಹದ ಪುಲಿಗಳನಿಂಸುತೆ ಸೋಹಿದರ್ (ಹಮ್ಮಿರ. ೪-೪೩) ; ಲಂಘಿಸಿ ನೆಲನನೊದೆದು ಪುಟನೆಗೆದು ಗರ್ಜಿಸುತ ಬರೆ ಹೆದಱಿ ಕಂಗೆಟ್ಟು ಡೆಂಡಣಿಸಿ ಸರಳಿಸುವ ಹರಿಣಂಗಳಂ ಮೋದಿ ಮುಱಿದಟ್ಟಿ ಕೆಡಹಿದವು ದೀಹದ ಹುಲಿಗಳು (ಹಠಕಾ. ೩-೩೧). ದೀಹದ ಸಾಳುವ = ಪಕ್ಷಿಗಳ ಬೇಟೆಗೆ ಬಳಗಿಸಿ ಉಪಯೋಗಿಸುವ ಪಕ್ಷಿ ; ಡೇಗೆ : ಬೋಳೆಗಳ ವಿಚ್ಚೆಗಳ ದೀಹದ ಸಾಳುವನ ಗಳೆಯಂಟುಗಳ ಶಬರಾಳಿ ಬಂದುದು ಪರ್ಣಶಾಲೆಗೆ (ಶೂರರಾ. ೩-೩-೩).

[ <ಪ್ರಾ. ದೀವಿಅ./ಸಂ. ದೀಪಕ./ತೆಲು. ದೀವು, ದೀಮು ]

**ದೀವ₂** 'ದೀಪ₁' ನೋ.

**ದೀವ₃, ದೀವಿ₂** (ನಾ). ದೀವಿಗೆ ; ಸೊಡರು ; ದೀಪ : "ದೀವ-ದೀಪ = ಸೊಡರು" (ಶಬ್ದಕೋ. ೦೯) ; ದೀಪಶಬ್ದೋ ದೀಪವಚನಃ (ಶಬ್ದಾನು. ೪೪೧ ವ್ಯಾಖ್ಯಾ). **ದೀವಿ₂** : 'ದೀವಿಜಾಲ' ಪರಾ.

[ <ಪ್ರಾ. ದೀವ./ಸಂ. ದೀಪ ]

**ದೀವ₄** (ನಾ). ೧. ಮೀನು ಹಿಡಿಯುವವನು; ಬೆಸ್ತ : "ಧೀವ:, ಧೀವರಃ= ದೀವಂ" (ಶಾಕಶ್ಮ. ೫೩) ; ಸನ್ಯಾಸಿಯೊಬ್ಬಂ ದೀವನರಸಿಯಂ ಹೋಗು ತಿರ್ದೊಮ್ಮೆ ಬಂದ ಗಾವಳಿಗೆ ಹೆದಱಿ ಅಂಜನಗೆಯೊಳಗಡಗಲಾ ದೀವ ನಱಿಯದೆ ಸುರಿದ ಸುರೆಯಿಂದ ಸತ್ತವಂ ಭಾವಿಸಲು ಲಿಂಗವಾದ ವಿಭಾಂಡೇಶನಂ ಕಂಡನಂದವನೀಶನು (ಹಠಕಾ. ೧೧-೪೩) ; ಮೀನನ್ನು ಹಿಡಿದು ಜೀವಿಸುತ್ತಿದ್ದವರು ದೀವರು (ಕಶಾಅ. ೪೪೩) : ದೀವರ ಹೆಂಗಸರ ಕಳ್ಳನೋಟ, ಯಾರಾರೋ ಹಬ್ಬಿಸಿದ್ದ ಸುದ್ದಿ . . . ಇವೆಲ್ಲ ಅವಳ ಸಾವಿಗೆ ಕಾರಣವಾಗುತ್ತವೆ (ಆದೋಲೀ. II ಮುನ್ನುಡಿ). ೨. ಬೇಡ ; ಶಬರ : ಕಣುವೆ ಕಾವ ದೀವರಿಗೆ ಅರಮನೆಯವರ ಮುಖಾಂತ್ರ ವಿಂಗಡದಲೂ ಸಲುವದು (ಎಕ. VIII, ತೀರ್ಥಹ. ೯೪-೨೩ ; 1632).

[ <ಸಂ. ಧೀವನ್ ]

**ದೀವ₅** (ನಾ). (?) : ಆವುದು ಬಾಗಿದುದುಮಧಿಕ ಬಸನಂ ಕೇವಲಮಾಗೆ ನೆಗೆವುದು ಚಿತಾವಯವಂ ದೀ[ಪಾಠಾಂ. ದಿ]ವದಿಂ ನಿಂದು ಸಿತಗನಂ ನುಡಿದುವು ಭಾವಿಸೆ ಬಗೆಗೊಳದಾರ ಕೋರ್ಣದಿಯಂ (ಕವಿರಾ. ೩-೧೫೦). [?]

**ದೀವಗಾಱ** (ನಾ). ಪ್ರಾಣಿಗಳನ್ನು ಆಕರ್ಷಣೆಯಾಗಿ ಒಡ್ಡಿ ಅವುಗಳ ಆಸೆಯಿಂದ ಬರುವ ಇತರ ಪ್ರಾಣಿಗಳನ್ನು ವಂಚಿಸಿ ಬಲೆಗೆ ಕೆಡಹು ವವನು ; ದೀವದ ಮೃಗಗಳ ಸಹಾಯದಿಂದ ಬೇಟೆಯಾಡುವವನು: ಮನೋಜನೆಂಬ ದೀವಗಾಱನ ಪುಲ್ಲೆಗಳಂತೆ ತಂತಮ್ಮ ಮನೆಯ ಮುಂದಣ ಪಚ್ಚೆಯ ಜಗಲಿಗಳೊಳಂ . . . ತಂಡತಂಡದ ನೆರೆದಿರ್ದ ಪೆಂಡವಾಸ ದೊಳ್ವೆಂಡಿರಂ ಕಂಡು (ಶಂಶಭಾ. ೪-೮೪ ಪ). [ ದೀವ₁ + -ಕಾಱ ]

**ದೀವಟ** 'ದೀವಟಿಗೆ' ನೋ.

**ದೀವಟಕಳ್ಳ** 'ದೀವಟಿಗೆಕಳ್ಳ' ನೋ.

**ದೀವಟಿಗ, ದೀವಟ್ಟಿಗ** (ನಾ). ದೀಪವನ್ನು ಹಿಡಿಯುವವನು; ಪಂಜು ಹಿಡಿಯುವ ವೃತ್ತಿಯವನು : ಕರ್ಗತ್ತಲೆಯೊಳೆದೆಯಾಡುತಡಹದಂತೆ ತನಗೆ ತಾಂ ದೀವಟಿಗನಾದನೊ . . . ಎಂದೆನಿಸಿ ಮೆಱೆದನಚಳಿತ ಸಿದ್ಧನು (ಸಿದ್ಧರಾ. ೭-೩೯) : ಅಟಿಗ ಪ್ರತ್ಯಯಕ್ಕೆ-ಕೊಲ್ಲಟಿಗಂ, ದೀವಟಿಗಂ, ಮಾವಟಿಗಂ (ಶಮದ. ೨೦೪ ಪ್ರಯೋ) : ರವಿಶಶಿಗಳೊಪ್ಪುವ ದೀವಟಿಗರು (ಶೂರರಾ. ೧-೮-೬೩) : ದೀವಟಿಗರು ಕೊಟ್ಟಿಗೆಯರು ವರತುರಗಾವಳಿಗಳ ನೆಱೆ ಪಿಡಿವ ಕೋವಿದನಿವಹ ಗಜಾರೋಹಕರ ಗೃಹ ಶೀವಿಹುವಾ ಪಟ್ಟಣದ (ಕಂಸವಿ. ೬-೫೭): ಇಬ್ಬರು ದೀವಟಿಗರು . . . ಅವರವರ ಮನೆ ಮುಟ್ಟ ಹೋಗಿ ತಲಪಿಸಿದರು (ಸವತಿ. ೪೩). **ದೀವಟ್ಟಿಗ** : ತೆಗೆಸು ಚೂಣಿಯ ಬಲವ ದೀವಟ್ಟಿಗರ ಕರೆಕರೆ ತೈಲಪೂರ್ಣದ ತೊಗಲ ಕುನಿಕಲ ಬಂಡಿ ಕವಿಯಲಿ ಕೋಟಿ ಸಂಖ್ಯೆಯಲಿ (ಕುಭ್ಯಾದ್ರೋ. ೧೫-೩೨); ℙ ಇದಂ ಛಂದಸ್ಸಿಗಾಗಿ ಮಾಡಿಕೊಂಡ ರೂಪ.

[ ದೀವ₃ + -ಅಟಿಗ; ℙ ಇದನ್ನು ದೀವಟಿಗೆ + - ಅ₇ ಎಂದೂ ಬಿಡಿಸಬಹುದು. ]

**ದೀವಟಿಗೆ, ದಿವಟಿ, ದೀವಟಿ** (ನಾ). ಪಂಜು ; ಹಿಲಾಲು : "ಪಂಜು: = ದೀವಟಿಗೆ" (ಶಾಕಶ್ಮ. ೬೫) : ಕಾಂತಿಯಿಂದಂಗಡಿಗಳೊಳ್ ಸರ್ವಜನತಾ ಗೃಹಾಂತದೊಳ್ ದೊರೆದೊರೆಗಳೋಲಗದೊಳೊಪ್ಪಿದುವನಂತದೀಪಂ ದೊಡ್ಡದೀವಟಿಗೆಗಳ್ ನಭದ ನಕ್ಷತ್ರಜಾಲದಂತೆ (ಜಲಪು. ೪೮-೩೩) : ದೆಸೆದೆಸೆಗಳ ಬೆಳಗುತ ದೀವಟಿಗೆಗಳೆಸೆದುವು (ಕಂಸವಿ. ೮-೨೨) : ದೀವಟಿಗೆಗಳನ್ನು ಹಿಡಿದುಕೊಂಡು ಹೋಗಿ ನೆಲಮಾಳಿಗೆಗಳನ್ನೆಲ್ಲಾ ಹುಡುಕಿದರು (ಶ್ರೀರಾಯ. ೧೩೦) : ದಾಸಿಯರು ಕೈಯ ದೀವಟಿಗೆಗಳಿಗೆ ಗುಗ್ಗುಳವನ್ನೆರಚಿ ಉರಿ ಮಾಡಿದರು (ಸವತಿ. ೪) : ದೀವಟಿಗೆ ಮುಂದೆ ದೀಪವೇ (ಗಾದೆ). **ದಿವಟಿ** : ಕರದ ದಿವಟಿ ಹಿಲಾಲುಗಳ ಭಾಸುರ ಜಗಂಜ್ಯೋತಿಗಳ ಕಾಂತಿಸ್ಫುರಿತ ಸೂರ್ಯಜ್ಯೋತಿಗಳ ಸಾಲುಗಳು ಬೆಳಬೆಳಗೇ (ಅಸಂರಾ. ೧-೨೪-೩೫). **ದೀವಟಿ** : 'ದೀವಟಕಳ್ಳ' ಪರಾ; ℙ ದಿವಟಿ, ದೀವಟಿ ಎರಡೂ ಶಬ್ದಗಳು 'ದೀವಟಿಗೆ' ಎಂಬುದರ ಸವಕಳಿ ರೂಪವಿರ ಬಹುದೆ ?

ದೀವಟಿಗೆಯವ = ದೀವಟಿಗ : ಚಾವಡಿಯ ಕಾವಲ್ಗಾರರು ನೀರುಗಂಟಿ ದೀವಟಿಗೆಯವ . . . ಕಂದಾಚಾರದವರು ಕಳ್ಳಬಂಟರು ಅವರು ಇವರು- ಎಲ್ಲಾ ಗರ್ಗೂವೆ, ಸೇನಾಯಮುದ್ರೆ, ಕಡತದ ಕಾಣಿಕೆ . . . ಅದು, ಇದು- ಎನ್ನುತ ಎಲ್ಲವನ್ನೂ ಸಲ್ಲಿಸಿಕೊಳ್ಳುತ್ತಾರೆ (ಚಿಟ್ಟಿಅ. ೧೫೩-೫೦): ಆಟದ ಮನೆಗೆ ದೀವಟಿಗೆಯವನ ಮೇಲೇ ಕಣ್ಣು (ಗಾದೆ).

[ ?./ಸಂ. ದೀಪವರ್ತಿಕಾ./ಮರಾ. ದಿವಟೀ./ ತೆಲು. ದೀವಟಿ, ದೀವಟೀ, ದಿವ್ವಟ ]

**ದೀವಟಿಗೆಕಳ್ಳ, ದೀವಟಕಳ್ಳ** (ನಾ). ಬೆಂಕಿ ಹೊತ್ತಿಸಿ ಅದರ ದೆಸೆ ಯಿಂದಾದ ಅವಸ್ಥೆಯಲ್ಲಿ ಕಳ್ಳತನ ಮಾಡುವವನು; ಪಂಜು ಹಿಡಿದು ಸೂರೆ ಮಾಡುವ ಕಳ್ಳ; ಪಂಜುಗಳ್ಳ : ಹಿಂದೆ ದೀವಟಿಗೆ ಕಳ್ಳರ ಹಾವಳಿ ಬಹಳವಾಗಿತ್ತು (ದೂಪ). **ದೀವಟಕಳ್ಳ** : (ಶ).

[ ದೀವಟಿಗೆ + ಕಳ್ಳ₁ ]

**ದೀವಟಿಗೆಮಾನ್ಯ** (ನಾ). ದೀವಟಿಗರಿಗೆ ಕೊಟ್ಟ ಉಂಬಳಿ,-ವೃತ್ತಿ; ದೀಪ ಹಿಡಿಯುವವರಿಗೆ ಉಪಯೋಗಕ್ಕಾಗಿ ಕೊಟ್ಟ ಭೂಮಿ : (ಶ).

[ ದೀವಟಿಗೆ + ಮಾನ್ಯ ]

**ದೀವಟಿಗೆವೆಣ್** (ನಾ). ದೀಪವನ್ನು ಹಿಡಿಯುವವಳು; ದೀಪವನ್ನು ಹಿಡಿಯುವ ಸೇವಕಿ: ಕಾಳಾಂಜಿ ಕುಂಚ ಹಡಪ ಪಾವುಗೆ ರತ್ನದಾಲವಟ್ಟವು ಚೊಂಬಾಳ ಸಾಲ ದೀವಟಿಗೆವೆಣ್ಗಳು ಭೂಪನಿದಿರಿನೊಳ್ ಮೋಳದೊಳೆಸೆ ದರಕಿಯಲಿ (ಕಂಸವಿ. ೮-೫೧). [ ದೀವಟಿಗೆ + ಪೆಣ್ ]

**ದೀವಟಿಗೆ ಸಲಾಂ, ದೀವಟಿಗೆ ಸಲಾಮು** (ನಾ). ಪ್ರತಿದಿನ ಸಾಯಂ ಕಾಲ, ರಾಜ, ಗುರು ಮತ್ತು ಇತರ ಶ್ರೇಷ್ಠಪುರುಷರಂಗಳ ಅಥವಾ ದೇವತಾವಿಗ್ರಹಗಳ ಮುಂದೆ ಉರಿಯುತ್ತಿರುವ ಪಂಜು ಗಳನ್ನಾಡಿಸಿ ಗೌರವ ಸೂಚಿಸುವ ಒಂದು ಆಚರಣೆ : ಪಟ್ಟದಾನೆ ಕುದುರೆಗಳು ನದೀತೀರಕ್ಕೆ ಪೋಗಿ ಅಲ್ಲಿ ಆಗತಕ್ಕ ಪೂಜೆ ದೀವಟಿಗೆ ಸಲಾಂ

ಮೊದಲಾದುದನ್ನು ನೆರವೇರಿಸಿಕೊಂಡು ಬರುತ್ತಲಿರುವ ಸಮಯದಲ್ಲಿ ದೊರೆಗಳವರಿಗೆ ದೀವಟಿಗೆಸಲಾಂ ಆದ ನಂತರ (ಮಹಾಪಂ. I, ೩೭); ಆ ಕಂಬಕ್ಕೆ ಈಗಲೂ ಮಹಾಪೂಜೆ ವೇಳೆ, ದೀವಟಿಗೇಸಲಾಂ ಮಾಡಿ ಮಹಾಪೂಜೆಗೆ ಆಮಂತ್ರಣ ಕೊಡುವ ಪದ್ಧತಿ ಇದೆ (ಕುಕುನಾ. ೦೦೯).

**ದೀವಟಿಗೆಸಲಾಮು** : (ಕ). [ ದೀವಟಿಗೆ + ಸಲಾಂ ]

**ದೀವಟಿಗೆಸಲಾಮು** 'ದೀವಟಿಗೆಸಲಾಂ' ನೋ.

**ದೀವಟಿಗೆಸೇವೆ** (ನಾ). ಪಂಜುಗಳಿಂದ ನೀವಳಿಸಿ ಸಲ್ಲಿಸುವ ಸೇವೆ: ನೋಡ ಬನ್ನಿರೊ ಜನರು ಶ್ರೀಕೃಷ್ಣನ ಜೋಡು ದೀವಟಿಗೆ ಸೇವೆ (ಪುರಂದ. ೨-೪೨ ಪಲ್ಲವಿ) ; ದೀವಟಿಗೆಸೇವೆಯಾದ ನಂತರ ದೇವರ ಮೆರವಣಿಗೆ ಹೊರಡುತ್ತದೆ (ರೂಢಿ). [ ದೀವಟಿಗೆ + ಸೇವೆ$_1$ ]

**ದೀವಟ್ಟಿಗ** 'ದೀವಟಿಗ' ನೋ.

**ದೀವಬ್ಬರಸಿ** (ನಾ). ಒಬ್ಬಾಕೆಯ ಹೆಸರು : ಶ್ರೀವಧು ಧರೆ ಪೋಲಲ್ಕೋರಾವ ನೃಪಪ್ಪಗ್ರಮಹಿಷಿ ಭುವನಾಂಬಿಕೆ ವಾಗ್ದೇವಿಯರ ದೊರೆಯರೆನಿಸಿದ ದೀವಬ್ಬರಸಿಯರ ದೊರೆಗೆಟ್ಟರ್ ಪೆಱರೊಳರೆ (ಎಕ. X, ಮುಳಬಾ. ೩೮-೩: ಹು. ೩೨೦). [ ದೀವಬ್ಬೆ + ಅರಸಿ ]

**ದೀವಬ್ಬೆ** (ನಾ). ಒಬ್ಬಾಕೆಯ ಹೆಸರು: ಸ್ವಸ್ತಿ ಶ್ರೀಮದ್ ಸಕರರ ಸೂಳೆಯಬ್ಬೆಯ ಮಗಳ್ದೀವಬ್ಬೆ ಮಾಡಿಸಿದ ತೊಮ್ಮು (ಎಕ. IX (8), ಚನ್ನಪ. ೨೮೭-೨ : ೨೩೩). [ ದೀವ$_2$ + ಅಬ್ಬೆ$_1$ ]

**ದೀವರಿಗೆ** (ನಾ). ಒಂದು ಬಗೆಯ ಸಸ್ಯ : ದೇವಗರಿಗೆ . . . ದೀವರಿಗೆ, ಕಾಡುಜೀರಿಗೆ (ಮೃಜಿ. ೩೮-೭೩೯). [ ? ]

**ದೀವಸ**, **ಧೀವಸ** (ನಾ). ೧. ಬುದ್ಧಿಗೆ ಸಂಬಂಧಿಸಿದುದು; ಆಲೋಚನೆ; ಅಭಿಪ್ರಾಯ. ೨. ಧೈರ್ಯ ; ಕೆಚ್ಚು : ಇರುಳಿರದೀ ದಿವಸವ ದೀವಸಂ ಮಾಳ್ಪ ತರಣಿ ತರಣಿಗಂಬರವನು ವಿರಚಿಸಿದಬ್ಬುರುಹನ ಪರಿಕಿಸದಿಂತು ಪರಶಿವನೇಕೆ ಪೆತ್ತನೊಯೆಂದ (ಸೂಲಕೋ. ೨೩-೫೭): ಇನಿಸುಂ ಚೊಕ್ಕಳಿಕೆಯ ದೀವಸಮೋಸರಿಸದೆ ತಕ್ಕಳಿಯದೆ ತದ್ಧೀರೋದಾತ್ತಂ ಮೇರುವಿನಂತಿರ್ದಂ (ಜಯಳಾ. ೦೭-೦೫). **ಧೀವಸ** : ೨. "ಧೀವಸಮಂ ದೆನಲುಸಿರ್ದಂ ಧೈರ್ಯಾರ್ಥಮಂ" (ಕಕುನಿ. ೧೦೭). ೩. ನಿಷ್ಠೆ ; ದಾರ್ಢ್ಯ: ದೇಶಿಯನಾಡಿದಳು ಪರವೆನಾಚಿ ವಲ್ಮೀಕನಾಥನ ಮುಂಬಿನೊಳು ರಸಿಕರೆ ದೆಯನಲ್ಲಾಡಿಸುತ ಯತಿಜನದ ಧೀವಸವನೀಡಾಡುತ (ಸೌಂದಪು. ೮-೧೧). ೪. ಉದ್ಧಟತನ; ಧಾರ್ಷ್ಟ್ಯ: ಕೊಡಲು ಹುಸಿದಡವಿಗಟ್ಟಿ ಬೈಚಿಟ್ಟ ನೆಂಬುದನಂತು ಎಸೆವ ವೇದಂಗಳೊಳು ಕೇಳಿ ಪೊಗಳುವಡದು ನಿನ್ನ ಧೀವಸವೆಂದನು (ಹಜಳಾ. ೨-೦೪). [ <ಸಂ. ಧೀವಶ ]

**ದೀವಸಂಗೆಡು** (ಕ್ರಿ). ಧೈರ್ಯಗೆಡು : ಬಗೆದನಂದು ಪೂರ್ವಾಚಲದೊಳು ಆವರಿಸಿ ಜಗವ ದಶದಿಶೆಯ ಮುದ್ರಿಸಿದ ತಮ ದೀವಸಂಗೆಟ್ಟೋಡೆ ಮುಂಚೂಣಿಯೊಳ್ಪದ್ಮಿನೀವಲ್ಲಭಂ (ಕೂಟ್ಟೊಲ. ೩-೩). [ ದೀವಸ + ಕೆಡು$_1$ ]

**ದೀವಸಿ**, **ಧೀವಸಿ** (ನಾ). ದಿಟ್ಟ ; ಸಾಹಸಿ ; ಶೂರ : ದೊರೆಗಳೊಡನೀ ಘಟ್ಟಿಗೊಬ್ಬನೆ ನಿಲುವೆನೆಂದನದಾವ ಸತ್ವನಿಧಿ . . . ಈ ಪರಿ ಮುಟ್ಟಿ ದೀವಸಿಯಾವನೆಂದುದು ನಿಖಿಳ ಪರಿವಾರ (ಕುಪ್ಪಾಗ. ೩-೪೪). **ಧೀವಸಿ** : ಬಿರುದಭಟರೌಕಿದರು ರಾಯನ ಧುರದ ಧೀವಸಿಗಳು ನಿಹಾರದಲುರ ವಣಿಸಿದರು ಶಲ್ಯನಂಬಿನ ಮಳೆಯ ಮನ್ನಿಸದೆ (ಕುಪ್ಪಾಶ. ೨-೪೨). [ <ಸಂ. ಧೀವಶಿನ್ ]

**ದೀವಸಿಅಮಾವಾಸ್ಯೆ** 'ದಿವಶೀಅಮಾವಾಸ್ಯೆ' ನೋ.

**ದೀವಸಿಕೆ** (ನಾ). ಧೈರ್ಯ ; ಸಾಹಸ: ಬಿಸಿಲು ಮಳೆ ಚಳಿಗಳಿಗೆ ಸಲಿಸ್ಯೆರಿಸುವ ದೇಹವೆ ನಿನ್ನದಿದು ದೀವಸಿಕೆಗಾವಂಜುವೆವು [ಪಾಠಾಂ. ಧೀವಸತನಕ್ಕಾವಂಜುವೆವು] (ಕೂರರಾ. ೨-೩-೩೫). [ ದೀವಸ + –ಇಕೆ ]

**ದೀವಸಿಗ**, **ಧೀವಸಿಗ** (ನಾ).=ದೀವಸಿ : ದೇವ ದನುಜ ನರೋರಗರ ಸುಭಟಾವಳಿಯೊಳವನಂತೆ ಧೈರ್ಯದ ದೀವಸಿಗರುಂಟೇ ವಿಚಾರಿಸಲೆಂದನಸುರೇಂದ್ರ (ಕೂರರಾ.೬-೩೦-೫೬); "ಜಾಗರೂಕನಪದವನಂ, ಎಚ್ಚರಿಕೆಯುಳ್ಳವನಂ, ಸಾಹಸಿ" (ಪ್ರಥಮ); ಆವ ದೀವಸಿಗನ ಆಟಪಾಟ ಕೂಟಗಳಲ್ಲಿ ಕಲೆತು, ಆ ನಿಶ್ಚಿಂತಸ್ಥಿತಿಯ ಉತ್ಸವದ ಆನನ್ದದ ಅನ್ನಸ್ವತ್ವ ದಿಂದ ಜೀವಿಸಿದ್ದವೋ, ಆ ಕಂಠೀರವನು . . . ತಪ್ಪಿಸಿಕೊಂಡು . . . ಬದುಕಿಕೊಂಡನು (ವಿಗತ. ೩೪-೧೨). **ಧೀವಸಿಗ** : ಘಾವಾಡಿಗನನು ಗೆಲುವೆ ನೆನುತಲಿ ಧೀವಸಿಗ ತಿರುಗಿದನು ಪುನರಪಿ ತಾಯ ಮಂದಿರಕೆ (ಪ್ರಹ್ಲಾಚ. ೪-೭). [ ದೀವಸ + –ಇಗ ]

**ದೀವಳಿ** 'ದಿವಾಳಿ$_1$' ನೋ.

**ದೀವಳಿಗೆ** 'ದೀಪಾಳಿಗೆ' ನೋ.

**ದೀವಾಣ** 'ದಿವಾಣ' ನೋ.

**ದೀವಾಳಿಗೆ** 'ದೀಪಾಳಿಗೆ' ನೋ.

**ದೀವಾಳೀಚರಧವಳ** (ನಾ). ಒಂದು ಬಿರುದು (?) : ಸೋಮೇಶ್ವರ ದಾಸಿಯಾಶ್ರಿತಜನಕಲ್ಪವೃಕ್ಷಂ ದೀ ವಾ ಳೀ ಚ ರ ಧ ವ ಳ ೦ (ಎಕ. XII, ೨೬೯-೧೧ : 1040). [ ? ]

**ದೀವಿ$_1$** 'ದೀಪ$_1$' ನೋ.

**ದೀವಿ$_2$** 'ದೀವ$_3$' ನೋ.

**ದೀವಿ$_3$** (ನಾ). (?) : "ವಂಕಿಯನೆ ದೀವಿ[ಪಾಠಾಂ. ದಿವ] ಮೇದರಕತ್ತಿಯಕ್ಕು" (ಕುಂಗರಾ. ೦೦೩-೮). [ ? ]

**ದೀವಿಕರೆ** (ನಾ). ದ್ವೀಪದ ತಡಿ,–ತೀರ : ದೀವಿಕರೆಯರಗಳಿನ್ ಮೊಳಗೆ ಮಾರಲಿಗಳ್ ಬೆದರಿ, ಎದೆಗುಂದಿ, ಪೆಚ್ಚಾದರೆಮ್ಮವರು ಕೇಳ್ದೊಡನೆ ! (ಪಾರಸಿ. ೦೫-೩೫೪). [ ದೀವಿ$_1$ (<ದೀಪ$_1$) + ಕರೆ$_4$ ]

**ದೀವಿಗೆ** (ನಾ). ಸೊಡರು; ದೀಪ : "ಆ ದೀವಿಗೆ ಜ್ಯೋತಿ ದೀಪ್ತಿ ಗೃಹಭಾನುವಕ್ಕು" (ಮುಂಗರಾ. ೬೧-೦೯); ದೀವಿಗೆಗಳ್ ಜಲಕ್ಕನೆಕ್ಕೆಕ್ಕೆಯಿನಿಟ್ಟಳಂ ಬೆಳಗುತಿರ್ದುವೆರಟ್ಟಿಸಿಯೊಡ್ಡಣಂಗಳೊಳ್ (ಪಂಪಭಾ. ೦೨-೫): ದೀವಿಗೆಗಳಂ ಪಿಡಿದು ದೀಪಧಾರಿಣಿಯರ್ವರಂದು (ಕಾದಂಉ. ೩೨೨); ಕೊಸಗಿನ ಪೂವಿನೊಪ್ಪ ಸುರಹೊನ್ನೆಯ ಪುಷ್ಪದ ಚೆಲ್ವು . . . ರಂಜಿಸ ವನದೇವಿಯರ್ ನಲಿದು ಮನ್ಮಥರಾಜನ ಬರ್ಪುದಕ್ಕೆ ರಾಗಿಸಿ ಮನವೊಲ್ದು ಪೊತ್ತಿಸಿದ ದೀವಿಗೆಯಂದದಿನೊಪ್ಪಿ ತೋಱುಗುಂ (ಧರ್ಮಾಮೃ. ೦೩-೦೩) : ಸುಖಕ್ಕೆ ತುಂಬಿದ ದೀವಿಗೆ ಮನೆಯೆಲ್ಲವ ಸುಟ್ಟಂತೆ ಆನು ಮಾಡಿದ ಭಕ್ತಿ ಎನಗಿಂತಾಯಿತ್ತು (ಬಸವ. ೮೫೦) ; ಪಲವುಂ ದೀವಿಗೆಗಳ್ . . . ಒಪ್ಪೆ ತಿರ್ದುವಾ ಮನೆಮನೆಯೊಳ್ (ಗಿರಿಳ. ೪-೮೦) : ಎರಡು ಬಲದಲಿ ಹಿಡಿದ ದೀವಿಗೆ ನಂದಿದವು (ಕುಪ್ಪಾದ್ರೋ. ೦೬-೭).

ದೀವಿಗೆಯೆಣ್ಣೆ = ದೀಪ ಉರಿಸಲು ಬಳಸುವ ಹರಳೆಣ್ಣೆ, ಎಳ್ಳೆಣ್ಣೆ, ಹೊಂಗೆಯೆಣ್ಣೆ ಮೊದಲಾದುವು : (ಕ). [ < ಸಂ. ದೀಪಿಕಾ ]

**ದೀವಿಗೆಗಂಬ** (ನಾ).=ದೀಪಕಂಭ ೧ : ವಿಗೆ ರಮ್ಯವಡೆದ ಹೊಂಬರಿಯಣ ತಳಿಗೆ ತಂಬಿಗೆ ಗಿಂಡಿ ಗಿಣ್ಣಲುಗಳನು ನಗೆಮೊಗದರ್ಪಣ ಹಂಸೆ ಪುತ್ಥಳಿಯ ದೀವಿಗೆಗಂಬಗಳನಿತ್ತನೊಲಿದು (ಮೋಹತ. ೧೩-೧೪). [ ದೀವಿಗೆ + ಕಂಬ$_1$ (< ಕಂಭ) ]

**ದೀವಿಗೆವಿಡಿ** (ಕ್ರಿ). ದೀಪವನ್ನು ಹಿಡಿ: ಉಸಿರನಾರೈದು ನಿರ್ಜೀವವೆಂದೆಂದು ಶಂಕಿಸಿ ನೋಡಲಮ್ಮದೊಯ್ಯನೆ ದೂರದಿಂದ ದೀವಿಗೆವಿಡಿದು ದಿಟ್ಟಿಸಿದರು (ಸಿದ್ಧರಾ. ೨-೪). [ ದೀವಿಗೆ + ಪಿಡಿ$_1$ ]

**ದೀವಿಜಾಲ** (ನಾ). ದೀಪಗಳ ಸಾಲು,–ಶ್ರೇಣಿ,–ಸಮೂಹ: ತಳತಳಿಪ ದೀವಿಜಾಲಮಂ ಸಂದಳಿಸಿರೆ (ಬೊಂಕಳಾ. ೧೯೪೫, ಬಂಕಾಪುರ. ೨೭-೪ ; 1076). [ ದೀವಿ$_2$ (<ದೀವ$_3$) + ಜಾಲ$_1$ ]

**ದೀವಿನಾಡು** (ನಾ). ದ್ವೀಪದ ಪ್ರದೇಶ: ಕೇಳಿ ಬಲ್ಲೆವು ಲಂಕೆಯಂ ತೆಂಕಣದ ಕಡಲ ನಡುವಣ ದೀವಿನಾಡಂ (ಶ್ರೀರಾಮಾ. ೨೯೬-೨೯೯).
[ ದೀವಿ₁ (<ದೀವ₁) + ನಾಡು ]

**ದೀವಿಸು** (ಕ್ರಿ). ಆಶೀರ್ವದಿಸಂ; ಆಶೀರ್ವಾದ ಮಾಡಂ; ಹರಸು: "ಎಲ್ಲೆ ಭಕ್ತರೇ ನಿಮಗೂ ಮಹಿಳೇಶ್ವರಿಗೂ ಶಿವಾನುಗ್ರಹಮುಂಟಾಗಲಿ" ಎಂದು ದೀವಿಸಿದರು (ಪುರಾವಿ. ೧೬೬). [ ← ತೆಲು. ದೀವಿಂಚು ]

**ದೀವಿಹಲಸು** (ನಾ). ಒಂದಂ ಬಗೆಯಂ ಹಲಸು; ಸೀಮೆಹಲಸು; ದ್ವೀಪದ ಹಲಸಂ: ಸೀಮೆಹಲಸು, ದೀವಿಹಲಸು, ರೊಟ್ಟೀಹಲಸು (ಮೃಕಿಗಿ. ೯-೧೬೦); ಆಲೂಗಡ್ಡೆ . . . ಬಾಳೆಕಾಯಿ, ದೀವಿಹಲಸು, ಹಲಸಿನ ಕಾಯಿಯ ಸೊಳೆ ಇತ್ಯಾದಿಗಳನ್ನೂ ಈ ರೀತಿ ಕರಿಯಬಹುದು (ಅಡುಶಾ. ೯೦). [ ದೀವಿ₁ (<ದೀವ₁) + ಹಲಸು (<ಪನಸು) ]

**ದೀಹ** 'ದೀವ₁' ನೋ.

**ದೀಹಳಿಗೆ** 'ದೀಪಾಳಿಗೆ' ನೋ.

**ದೀಹಾರ** (ನಾ). ದೀಹದ ಮೃಗಗಳನ್ನು ಇಡುವ ಜಾಗ,-ಸ್ಥಳ: ಇದು ದೀಹಾರದ ಗೇಹದಂತೆ ಹರಿಣೀರವ್ಯಂ ಗೃಹಗ್ರಾಮದಂತುದಿತಕ್ರೋಡ ವಿಭಾಸಿ ಕೋಶಗೃಹದಂತಪ್ರಾಪದಾಧಿಷ್ಠಿತಂ ಕದನೋರ್ವೀತಳದಂತೆ ದಾರುಣಚಮೂರಾವಸ್ಥಿತಕ್ಷೋಭಿತಂ ಮದಮತ್ತಕುಂಜರಗಾತ್ರದಂತೆ ವಿಳಸದ್ಭೂಪ್ರಭಾವಿಭ್ರಮಂ (ಪುಶ್ಯ.ಪು. ೩-೬೮): "ದೇಹಾರ (ದೇವಾರ ಎಂದಿರಬಹುದು)" (ಪುಶ್ಯ.ಪು. ಅಡಿಟಿ). [ ದೀಹ (<ದೀವ₁)+<ಆಗಾರ ]

**ದು, ದೂ** (ನಾ). ಎರಡು ಎಂಬ ಸಂಖ್ಯೆ: ಏಕದ್ವಿತ್ರಿ ಚತುಃ ಶಬ್ದಾಕೃತಿಗಳ್ ದುತಿಚೌಗಳಾದೇಶಂಗಳ್ (ಶಮದ. ೨೯೦). 'ದಂಗುಣ', 'ದಂಗ್ಗಾಣಿ' ಪರಾ. ದೂ: "ದು (ದೂ)-ದ್ವಿ=ಎರಡು" (ಕದ್ಯಕೋ. ೩೦). 'ದೂಜಾವ' ಪರಾ. [ <ಸಂ. ದ್ವಿ ]

**ದುಂ** (ನಾ). ಒಂದಂ ಅನುಕರಣ ಶಬ್ದ: ದುಡುಹುಂಬ ದುಮ್ಮೆಂಬ . . . ಖಿಣಿಲೆಂಬ ಕಟಲೆಂಬ ದನಿ (ವೀಕ್ಷ.ಪು. ೨-೦೦-೮); 'ದುಂ' 'ದ್ಗಂ' ಎಂಬ ಸಪ್ಪಳ ಮಾಡುವ ವಾದ್ಯಗಳನ್ನು ಬಾರಿಸಿ ಹಾಡುವ ವಾಡಿಕೆಯೂ ಮೊದಲಿನಿಂದಲೂ ಬಂದಿದೆ (ಕನ್ನಜಾ. ೯೩).

**ದುಂಕಿ** (ನಾ). (ಕರಾ) ಗಾಣವನ್ನು ಎಳೆಯುವಾಗ ಗಾಣದ ಮರಕ್ಕೆ ಸಮತೋಲನ ಬರುವಂತೆ ಮಾಡಲು ಗಾಣದ ಮರದ ಮೇಲೆ ಇಡುವ ಭಾರ: ಹೂಡಲಿಕ್ಕೆ ಬರದ ಎತ್ತು ಗಾಣಕ್ಕೆ ಕಟ್ಟಿದರೆ ದುಂಕಿ ಎಳೆದೀತೇ (ರೂಢಿ). [ ? ]

**ದುಂಡಂಕಿ** 'ದುಂಡಂಕೆ' ನೋ.

**ದುಂಡಂಕೆ, ದುಂಡಂಕಿ** (ನಾ). ಪೂರ್ಣ ಅಂಕಿ; ಬಟುವು ಸಂಖ್ಯೆ: ಕೃಪಣತನ ಇಲ್ಲಿಯೂ ಬಿಡಲಿಲ್ಲವೊ? ದುಂಡಂಕೆ ಹೇಳಬೇಕು (ಗಾಳಿಶ ೨೨). ದುಂಡಂಕಿ: ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದಾಗಲೆಲ್ಲ ಸಾಮಾನ್ಯವಾಗಿ ದುಂಡಂಕಿ ಹಾಕುತ್ತಾರೆ (ರೂಢಿ). [ ದುಂಡು₁ + ಅಂಕೆ₄ ]

**ದುಂಡಂಚು** (ನಾ). ಸೀರೆ, ಪಂಚೆ ಮೊದಲಾದಂವುಗಳ ದಪ್ಪವಾದ ಅಂಚು,-ಗುಂಡಂಚು,-ದುಂಡಾಕಾರವಾಗಿರುವ ಅಂಚು.

ದುಂಡಂಚಿನ ಪಂಚೆ = ಗುಂಡಂಚಿನ ದೋತರ: ದುಂಡಂಚಿನ ಪಂಚೆ ಉಟ್ಟುಕೊಂಡು ಜರೀಶಲ್ಯ ಹೊದ್ದುಕೊಂಡು ರಾಯರು ಹೊರಟರು(ರೂಢಿ). ದುಂಡಂಚಿನ ಸೀರೆ =ದಪ್ಪದಾದ ಅಂಚಿನ ಸೀರೆ; ಗುಂಡಂಚಿನ ಸೀರೆ: ದುಂಡಂಚಿನ ಸೀರೆ ತುಂಬಾ ಬಾಳಿಕೆ ಬರುತ್ತದೆ (ರೂಢಿ).
[ ದುಂಡು₁ + ಅಂಚು₂ ]

**ದುಂಡಕ್ಕಿ** (ನಾ). ೧. ಗುಂಡಗಿರುವ ಅಕ್ಕಿ: ಹಂಡಕ್ಕಿ ದುಂಡಕ್ಕಿ ದುಂಡು ರಾಜಣದಕ್ಕಿ . . . ನೆಲ್ಲಕ್ಕಿ ಬಂದವೆ ನಮ್ಮ ಅರಮನೆಗೆ (ನಾಹದ. ೧೧೩). ೨. ನಂಬಾ ಗದ ಅಕ್ಕಿ. [ ದುಂಡು₁ + ಅಕ್ಕಿ₁ ]

**ದುಂಡಗೆ₁** (ನಾ). ಒಬ್ಬಾತನ ಹೆಸರಂ (?): ಪುತ್ತೂರುಡೆ ಶಿವವಾರವಮ್ಮಂ ದುಣ್ಣಗೆಗ್ಗ್ಗಂ ನಲ್ಲತ್ತೂರೊಡೆ ಒಗ್ಗಮನೆ ಬಳೆಗವುಂ ಅಯ್ದೂವುಟ್ಟು ಮೆಡಕಟನಿಯು ಎಬ್ರೊಮ್ಮು ಬಾಳೆತೊಟ್ಟಪ್ಪಟ್ಟು ಬ್ರಹ್ಮದೇಯಂ ಕೊಟ್ಟೋದು (ಎಕ. X, ಕೋಲಾರ. ೨೩೦-೩: ಕು. ೮೦೦ ?). [ ? ]

**ದುಂಡಗೆ₂** (ಅ). ೧. ಗುಂಡಾಗಿ; ವರ್ತುಲಾಕಾರವಾಗಿ: ಪೃಥ್ವಿ . . . ಗೋಲವದೆ ಅಂದರೆ ಕಿತ್ತಳೇ ಹಣ್ಣಿನಂತೆ ದುಂಡಗದೆ (ಮುಂಬಯಿ. ೯-೩೮); ದಪ್ಪಗೆ, ದುಂಡಗೆ, ಏನನೊ ಒಂದನು ಉರುಳಿಸಿಕೊಂಡವ ತಂದ. ದಪ್ಪಗೆ, ನುಣ್ಣಗೆ, ದುಂಡಗೆ ಇರುವುದು, ಅಜ್ಜ ಇದೇನೆಂದು ಕೇಳಲು ಬಂದ (ಶಂಗೀತ. ೩೨-೧೧). ೨. ತುಂಬಿಕೊಂಡಿರುವಂತೆ; ದಪ್ಪವಾಗಿ: ದುಂಡಗೆ ಇರುವ ತೆನೆಗಳ ಭಾರದಿಂದ ಜೋಳದ ದಂಟುಗಳು ತಲೆಯನ್ನು ಬೊಗ್ಗಿಸಿವೆ (ಮುಂಬಳ. ೨). ೩. ಬೋಳಾಗಿ. 'ದುರುದುಂಡಗೆ' ಪರಾ.

ದುಂಡಗಿಡು=ಗಂಟುಮಾಡು; ದೊಡ್ಡ ಮೊತ್ತವಾಗಿಸು: ಹೊಟ್ಟೆನೆತ್ತಿ ಕಟ್ಟ ನಾವು ದುಡ್ಡನ್ನು ದುಂಡಗಿಡುತ್ತೇವೆ (ಜಮೀನ್ದಾ. ೦೯). ದುಂಡಗೆ ಮಾಡು = ಕೂಡಿಡು; ಪೇರಿಸಿಡಂ: ಆಟವು ಮುಗಿಯುತ್ತ ಬಂದಿತು, ರೂಪಾಯಿಗಳನ್ನು ದುಂಡಗೆ ಮಾಡಹತ್ತಿದರು (ಕೂತಕಾ. ೨೩).
[ ದುಂಡು₁ + -ಅಗೆ₂ ]

**ದುಂಡನೆ** (ಗು). ದುಂಡಗಿರುವ; ದಪ್ಪನಾದ: ಪಕ್ಕದ ಕುರ್ಚಿಯ ಪೀಠದಿ ಸುಖದಾಸನವಂ ಕೊಂಡಿಹ ಮಾಟದಿ ದುಂಡನೆ ಕಾಲ್ಗಳ ಮೇಲೆತ್ತಿಟ್ಟು ಹೊಟ್ಟೆಯ ಮೇಗಡೆ ಸೊಂಡಿಲನಿಟ್ಟು (ಗಜೇಶ.೨-೩೩). [ದುಂಡು₁+-ಅನೆ₁]

**ದುಂಡರಳ್ಗಡಲೆ** (ನಾ). ದುಂಡಗೆ ಹುರಿದು ಉಪ್ಪು ಖಾರ ಬೆರಸಿದ ಕಡಲೆ; ಉಪ್ಪುಗಡಲೆ (?): ಸಂಡಿಗೆ ಸಂಭಾರಗಡಲೆ . . . ದುಂಡರಳ್ಗಡಲೆ ಭಕ್ಷ್ಯಗಳ ಬದ್ದಿಸಿಕೊಳುತುಂಡರು ನೆಟಿ ಸೊಕ್ಕುವನಕ (ಕೋಹಕ. ೦೮-೮೭). [ ದುಂಡು₁ + ಅರಲ್₃ + ಕಡಲೆ ]

**ದುಂಡರಿಸು** (ಕ್ರಿ). (ಉಕ) ಹೊಟ್ಟೆ ತೊಳಸಂ; ಹೊಟ್ಟೆಯಲ್ಲಿ ಮರಳಿದಂತಾಗು: ಅವಳಿಗೆ ಹೊಟ್ಟೆದುಂಡರಿಸಿತು, ಕಾರಿಬಿಟ್ಟಳು (ರೂಢಿ).
[ <ದುಂಡು₁ + -ಇಸು₂ ]

**ದುಂಡಾಪು** (ನಾ). ದುಂಡಾಗಿರುವ ಒಂದು ಬಗೆಯ ಅವುಹುಲ್ಲು: "ತೃಣಚ್ಛದಃ - ದುಂಡಾಪಿನ ಹುಲ್ಲು" (ಓಷಧಿ. ೬೨); "ದೀರ್ಘನಾಳಂ-ದುಂಡಾಪು" (ಓಷಧಿ. ೬೬); "ಪೇಲವ-ಮುಸ್ತೆ, ದುಂಡಾಪು" (ಓಷಧಿ. ೦೦೩).
[ ದುಂಡು₁ + ಅವು₁ ]

**ದುಂಡಾಮ** (ನಾ). ಒಂದು ಬಗೆಯ ಸಸ್ಯ: "ಅನಾಹ್ವಯಃ-ದುಂಡಾಮ" (ಓಷಧಿ. ೬). [ ದುಂಡು₁ + ಅಮ₂ ]

**ದುಂಡಾವರ್ತಿ** (ನಾ). ೧. ಪುಂಡತನ; ಪುಂಡಾಟಿಕೆ: ಅಂಥಾ ದುಂಡಾವರ್ತಿಯವರೇನು ನಮ್ಮವರು (ಮಾಮನಿ. ೧೬೩): ಅಡ್ಡಿ ಬಂದರೆ ದುಂಡಾವರ್ತಿಯ ಹೆಸರಿನಲ್ಲಿ ಪೋಲೀಸಿನವರ ಸಹಾಯ ಪಡೆಯಬಹುದು (ಗಂಗಾಳ. ೩೪). ೨. ಪುಂಡಾಟಿಕೆ ಮಾಡುವವನು; ಪುಂಡ: ಕಪಾಸಾಪನದಿಂದ ಮುಂದೆ ಪ್ರಯಾಣ ಮಾಡಿ ಜಾಲಂಧರನಾಡಿಗೆ ಬಂದೆವು. ಇಲ್ಲಿಯ ಜನ ದುಂಡಾವರ್ತಿಗಳು (ಪ್ರವಾಕ. I, ೨೦೬). [ ದುಂಡು₂ + <ವೃತ್ತಿ? ]

**ದುಂಡಿ₁** (ನಾ). ೧. ಹೆಂಗಸು; ಸ್ತ್ರೀ: ಗಂಡಗೆ ತಕ್ಕಂಥ ದುಂಡೀರು ಬರುತಾರೆ ಗಂಡನ ಮಡದೀ ನಡಿ ಮುಂದೆ (ನಾಹದ. ೩೬). ೨. ಮೈತುಂಬಿಕೊಂಡಿರುವವಳು; ಚೆಲುವೆ: ದುಂಡಿ ನಿನ್ನಯ ಕೈಯ ತೋಟು ನೀನುಂಡೂಟ ಕಂಡ ಕನಸ ಹೇಳುವೆನು (ನೇಮಿಸಂ. ೨೦-೩೩): ದುಡುದುಡನೆಯ್ತಂದು ದುಂಡಿಯರಾ ಚೆಲ್ವರೊಡೆಯನ ಚೆಲ್ವ ನೋಡಿದರು (ಭರಕ. ೨೦-೬೪): ದುಂಡೀ ನಿನ ಗಂಡ ಪ್ರಚಂಡ ಉದ್ದಂಡ ದನುಜರ ಗಂಟಲಗಾಣ (ಶ್ರೀಕೃಪಾ. ೬೬); ಕೈ ತಾರೆ ದುಂಡೀ ಕೈ ನೋಡಿ ಕಣಿಯಾನು ಹೇಳ್ತೀನಿ (ಹುಟ್ಟುಹ. ೯೩). [ ←ತೆಲು. ದುಂಡಿ ]

**ದುಂಡಿ$_2$** (ನಾ). ಗುಂಡಗಿರುವ ಕಲ್ಲು ; ಕಲ್ಲುಗುಂಡು : ದುಂಡಿಯ ಹೊಟ್ಟೆಸಲಿ ಗುಂಡಿಯ ಕೂಡಲಿ ಹಂಚೆ ಕಲ್ಲಿನೊಳಿಟ್ಟು ಕೊಲಲಿ ಖಂಡವ ಕೊಯ್ಯ ಸಾಲವ ತಿದ್ದದಿರುಯೆಂದು ವೊಂಡ ಹೇಳಿದ ವಗನೊಡನೆ (ಅಮುಸಾಂ. ೩-೧೩೦) : ನೆಲದ ಹೊಟ್ಟೆ ಬದುಕ ನೋಡು ಗಟ್ಟಿಗಲ್ಲು ಹಿಟ್ಟು ಮಟ್ಟಿ ಪದರು ಗುಂಡು ದುಂಡಿ ಬಂಡೆ (ಮೂರ್ತಿಕಾ. ೧೩-೩) ; ತಣ್ಣೀರಿನ ಮಣ್ಣುಹರವಿಯಲ್ಲ, ಕಾದ ಕಬ್ಬುನದ ಕೆಂಡದ ದುಂಡಿ ! ಕೆಂಗೆಂಡದ ಹೆದ್ದುಂಡಿ ! (ತುಂಗಳ. ೧೦೯) ; ಪೂಜಾರಿಯು ತನ್ನ ಎರಡೂ ಕೈಗಳಿಂದ ಆ ದುಂಡಿಯನ್ನು ಎತ್ತುವನು (ಗಂಗಾಸಾ. ೧೭); ಭಿಲ್ಲರು . . . ಶತ್ರುಗಳ ಮೇಲೆ ಒಗೆಯುವುದಕ್ಕೆ ದೊಡ್ಡ ದೊಡ್ಡ ದುಂಡಿಗಳು ಇಟ್ಟುಕೊಂಡು . . . ಸಿದ್ಧರಾಗಿದ್ದರು (ಸತ್ಯಸಾ. ೮೦). [ <ದುಂಡು$_1$ ]

**ದುಂಡಿ$_3$** 'ದಿಂಡ$_1$' ನೋ.

**ದುಂಡಿಗ** 'ದಿಂಡ$_1$' ನೋ.

**ದುಂಡಿಗು** (ನಾ). ೧. ಬೇಲಿಗೆ ಹಾಕಲು ಉಪಯೋಗಿಸುವ ಮೊನೆಯಾದ ಎಲೆಗಳನ್ನುಳ್ಳ ಒಂದು ಬಗೆಯ ಸಸ್ಯ: (ಕಿ). [ ? ]

**ದುಂಡಿಗೆ** (ನಾ). (?): ಅರಸರ ದಣ್ಣಗೆವೆರಸಿಟ್ಟ ಪೊನ್ನ ಕಿಯ್ದುಡಿಯಪ್ಪಂ ಗೊಟ್ಟಿಸಿಮೊನ್ನು ತನ್ನು ಭಗವನ್ತರ ಕಯ್ಗಳಾನತಿ ಕೊಟ್ಟು (ಎಕ III, ನಂಜನ. ೭೮-೧೩ : ಸು. ೯೦೦). [ ? ]

**ದುಂಡಿಜೆ** (ನಾ). ಚದುರಂಗ ಅಥವಾ ಪಗಡೆಯಾಟದ ಕಾಯಿ : "ದುಂಡಿಜೆಯುಮರ ಬಿಸುಗೆ ಸಾರಿಯೆಂದಕ್ಕು" (ಕವ್ಯಕ್ಷ. ೮೦) : "ದುಂಡಿಜೆಯು ಬಿಸುಗೆಯುನೆ ಸಾರಿ" (ಕಲ್ಯಮು. ೪೦). [ ? ]

**ದುಂಡಿಸು** (ಕ್ರಿ). ೧. ಗುಂಡಾಗುವಂತೆ ಮಾಡು; ಸುತ್ತು : ಕಡುವೇಗದಿಂದ ಲಂಘಿಸುತ ಬಾಲವನು ಕಾನೊಡನೆ ದುಂಡಿಸುತ ಬಾಯ್ದೆರೆದು (ಜ್ಞಾನಕ. ೧೧-೩೭). ೨. ವರ್ತುಲಾಕಾರವಾಗಿ ಚಲಿಸು; ಸುತ್ತುಹಾಕು; ತಿರುಗು: ಹಿಂದೆ ಮುಟ್ಟುವ ಕೆಲಕೆ ಚಿಮ್ಮುವ ದುಂಡಿಸಿ ನೆಗೆವ . . . ಸುಕಳಾಶ್ವಮಂ ಬೇಗದಿಂ ಬೆಂಗವಾಯ್ದು (ಗಿರಿಜ. ೨-೧೦೩ ವ) : ಲೀಲೆ ಕಾಲಾದಂತೆ ತಿರುಗಿ ಬಂದಾಡುತುಂ ದುಂಡಿಸಿ ಪುಟಂ ನೆಗೆದು ಪೆರ್ಚೆ ಪೊರೆಯೇಱುತುಂ . . . ಇಂತು ಮಧ್ಯಾಹ್ನಪರ್ಯಂತವರ್ಚಿಸಿ (ಸಾಮುರ. ಹ. ೨೩೦-೧೮): "ಪ್ರದಕ್ಷಿಣೆ ಹಾಕು" (ಸಾಮುರ. ಹ. ಕೋಶ) ; ಹೊಳೆವ ದುಂಡಿಸುಪೊತ್ತುವೆತ್ತುವ ಮಾಲೆವ . . . ಕಡವುಗಳ ಬಿಡದಲಲಿಸುವ ಸೂಕಳಿಕೆಯುಂ ಕೈಕೊಂಡುದಾ ತುರಗಂ (ಕುಮುರಾ. ೩-೬೦): ಮಿಡಿವ ಕಡೆಗಣಿಸಿ ಪಾರ್ವ ದುಂಡಿಪ ದಿಂಡು ವಾಯ್ದು ... ಕೈಕೊಳದ ಬಗೆಯಂ ಬಗೆದಂತೆ ಕಂಡು (ರಾಜಶೇ. ೬-೧೦ ವ). ೩. ಚಲಿಸು; ಹೊರಳು; ಚಂಚಲವಾಗು : ತೊಂಡು ಮಿಕ್ಕುದು ಮುಖ ರಸಂ ಜವ್ವನಂ ಮಸಗೆ ದುಂಡಿಸಲ್ತೊಡಗಿದವು ಕಂಗಳೆರಡುಂ ದೆಸೆಗೆ ... ನವಯುವ್ವನಂ ಪೇಱುತಿರೆ (ನಂಲಠ. ೪.೨೧೭-೭೦). ೪. ವಕ್ರವಾಗಿ ಚಲಿಸು : ಅಂಕುಡೊಂಕಾಗಿ ಚಲಿಸು ; ನುಣಾಚಿಕೊಳ್ಳು : ಕಂಡುದು ಮೃಗಮಲ್ಲಿ ಭಯಗೊಂಡುದು ಪೆಪ್ಪಳಿಸುತದಿರುತೆೞೆದಲ್ಕೆ ಕರಂ ದುಂಡಿಸುತಿರ್ದಪುದಂ ದುರುಚಂಡಾಸ್ತ್ರದಿನಚಲ ಶಬರನಿಸೆ ಕಾನನದೊಳ್ (ಗಿರಿಜ. ೧-೯೦). ೫. ಮೈತುಂಬಿಕೊಂಡಿರು; ದಷ್ಟಪುಷ್ಟವಾಗಿರು: ನಿಜಾಂಗಳನಿಕ್ಕಿ ದಾಂಟಸದೆ ದುಂಡಿಸುವಾಕೆಯನೊತ್ತಗೊಳ್ಳದಂತೆಱಿಜಂದೆ . . . ಮತ್ತೆ ಪೇಸಿ ಪೆಜರಪ್ಪದವೋಲ್ ಸ್ಮರಭೈರವಂಗೆ ಪೆಣ್ಗುಱಿಗಳನಿಕ್ಕದೊಂದೆರಡನೇಂ ವಿಟವೃತ್ತಿಗೆ ಮುಯ್ವನಾಂಪುದೇ (ಲೀಲಾವ. ೨-೯೩) ; ದುಂಡಿಸಿ ಬಿಂಕದಿಂ ಬಿಗಿದ ಪೆರ್ಮೊಲೆಗಳ್ (ಕಾವ್ಯಸಾ. ೩೮೩) : ಕಿರುಜವ್ವನದ ಕನ್ನೆವೆಣ್ಣ ದುಂಡಿಸಿದ ನುಣ್ಪಿನ ಮೆಯ್ವೊಬಗು (ಮುಂತ್ರಶ. ೮೮-೧೦). ೬. ಒಟ್ಟಾಗು ; ದಟ್ಟಯಿಸು ; ಗುಂಪಾಗು : ಗುಂಡು ಹಾರಕಾವ ಬಂಡೇವು ತೂರಕಾವ ಮುಂಡ ಬಾಗಿ ಜನತಂಡ ನಿಂತ ದೊರೆಸದರ ಮೆಟ್ಟಿಲು ದುಂಡಿಸಿ ಕೀರಿಟ್ಟು ನುಡಿ ಕಾಳಿ ಹೆಬ್ಬಾಗಿಲಕ (ಕೋಳಗೀ. ೩೦೦). [ ದುಂಡು$_1$ + -ಇಸು$_3$ ]

**ದುಂಡು$_1$** (ನಾ). ೧. ಚೆಂಡಿನಂತೆ ಗುಂಡಾಗಿರುವುದು,-ಬಟುವಾದುದು; ವೃತ್ತಾಕಾರವಾಗಿರುವುದು : ದುಂಡು ಉಕ್ಕಿನ ದಪ್ಪ . . . ೨॥ ಇಂಚಿನ ತನಕ ಇರುತ್ತದೆ (ಮುಂಬಪ್ಯಾ. ೧೧೭). ೨. ವರ್ತುಲ; ಮಂಡಲ; ವೃತ್ತ: ಆ ವರ್ತುಲದ ಸುತ್ತ ಇನ್ನೊಂದು ದೊಡ್ಡ ದುಂಡು ಸುತ್ತಿ, ಈಗ ಮೊದಲಿನದು ಚಿಕ್ಕದಾಯಿತಲ್ಲ ಎಂದನಂತೆ ! (ಪ್ರಹಾರ. ೯). ೩. ಒಂದು ಬಗೆಯ ಟೊಳ್ಳಾದ ಕೈಬಳೆ ; ಕಡಗ : (ಕಿ). ೪. ಸ್ಥೂಲವಾದುದು ; ತುಂಬಿಕೊಂಡಿರುವುದು; ದಷ್ಟಪುಷ್ಟವಾದುದು : ಆನೆಯ ಮೆಯ್ಕಟ್ಟು ದುಂಡು (ಮುಂಲಯ. ೪-೨೨).

**ದುಂಡಾಗು** = ದಷ್ಟಪುಷ್ಟವಾಗು ; ದಪ್ಪವಾಗು : ಕೆಲವು ಮಕ್ಕಳಿಗೆ ಏನು ತಿನ್ನಿಸಿದರೂ ಅವು ದುಂಡಾಗುವುದಿಲ್ಲ (ರೂಢಿ). **ದುಂಡಾಡು** = ಹಾಲಿನಿಂದ ತುಂಬಿಕೊಳ್ಳು ; ಕಾಳಾಗು : ಭತ್ತ ದುಂಡಾಡುತ್ತಿವೆ (ರೂಢಿ). **ದುಂಡು ತಗಡು** = ವರ್ತುಲಾಕಾರದ ಲೋಹದ ಹಾಳೆ : ಆ ದೀಪದ ಬೆಳಕಿನ ದಾರಿಯಲ್ಲಿ. ಸುಮಾರು ಮೂವತ್ತು ರಂಧ್ರಗಳಿಂದೊಡಗೂಡಿದ ಒಂದು ದುಂಡು ತಗಡನ್ನಿಟ್ಟಿರುತ್ತಾರೆ (ವಿಜ್ಞಾವಿ. ೯೮).

[ ದೇ.॥ ತುಳು. ದುಂಡು, ದೊಂಡಿ ]

**ದುಂಡು$_2$** (ನಾ). ಧೂರ್ತ : ಮಿಂಡ ದುಂಡು [ಪಾಠಾಂ. ಡಿ] ಗಳರ್ಥಿಕಾಱರು ಗಂಡಿಗರು ಗರ್ವಿತರು . . . ಖಂಡೆಯದ ಕಲಿಕೆಗಳ ತರಳರ ತಂಡ ಕೂಡಿತು (ತೊರರಾ. ೫-೫-೦೪). [ ←ತೆಲು. ದುಂಡಗ = ಧೂರ್ತಕೃತ್ಯ ]

**ದುಂಡುಕಡಗ** (ನಾ). = ದುಂಡು$_1$ ೩ : (ಕಿ). [ ದುಂಡು$_1$ + ಕಡಗ ]

**ದುಂಡುಕರ** (ನಾ). ಒಂದು ಬಗೆಯ ಮರ ; ಅಳಂಗಿ : (ಕಿ). [ ? ]

**ದುಂಡುಕಳ್ಳಿ** 'ದುಂಡುಗಳ್ಳಿ' ನೋ.

**ದುಂಡುಕೆ** (ನಾ). ಒಂದು ಬಗೆಯ ಸಸ್ಯ : "ಝುಡೂಕ – ದುಂಡುಕೆ" (ಓಷಧಿ. ೭೪). [ ? ]

**ದುಂಡುಗಳ್ಳಿ, ದುಂಡುಕಳ್ಳಿ** (ನಾ). ಒಂದು ಬಗೆಯ ಕಳ್ಳಿ: (ಕಿ). ದುಂಡು ಕಳ್ಳಿ: (ಪಂಡಿತ. ೮೮). [ ದುಂಡು$_1$ + ಕಳ್ಳಿ$_2$ ]

**ದುಂಡುಗಾಮುಂಡ** (ನಾ). ಒಬ್ಬಾತನ ಹೆಸರು : ಶ್ರೀಪುರದಾ ದುಣ್ಡುಗಾಮುಣ್ಡರಾ ತೋಣ್ಟದಾ ಪಡುವಾಯೊನ್ದು ತೋಣ್ಟ (ಎಕ. IV, ನಾಗಮಂ. ೮೫-೬೭ : 776). [ ದುಂಡು$_1$ + ಗಾಮುಂಡ ]

**ದುಂಡುತಗಸಿ** (ನಾ). ಒಂದು ಬಗೆಯ ಅಗಸೆ : ಸೊಪ್ಪುಗಳು : ಅಗಸೆ ... ಬಿಳೀಸಾಸಿವೆ, ಕಾರೇ, ದುಂಡುತಗಸಿ, ಸಕೋಟ (ನಮ್ಮನು. ೨೩೭).

[ ದುಂಡು$_1$ + ತಗಸಿ (< ತಗಚಿ) ]

**ದುಂಡುದಂಡೆ** (ನಾ). ದುಂಡಾದ ಮಾಲೆ; ಗುಂಡಾಗಿ ಕಟ್ಟಿರುವ ಹಾರ : ಸಂಪಗೆಯ ದುಂಡುದಂಡೆಗಬಿಂಪಿಂ ಮಲ್ಲಿಗೆಯ ದಂಡೆಯುಂ ಕೆಳಗೊಳಪಂ ತಿಂಪಡರೆ ತೋಳ್ಗೆ ಮೌಕ್ತಿಕದಿಂ ಪುದಿದುರು ಬಾಹುಪೂರಮಂ ಪದೆದಿತ್ತಳ್ (ರಾಜಶೇ. ೮-೨೩). [ ದುಂಡು$_1$ + ದಂಡೆ$_1$ ]

**ದುಂಡುದೋಳು** (ನಾ). ತುಂಬಿದ ತೋಳು; ಶಕ್ತಿಯುತವಾದ ಬಾಹು : ಚೆಂಡಾಡಿದಂತೆ ಕುಂಭವನೆತ್ತಿ ಗಜಗಳ ಸೊಂಡಿಲ ನಗುವ ಚೆಲ್ವಿಕೆಯ ದುಂಡುದೋಳೆತ್ತಿ ಸ್ವಾಮಿಯ ಮೇಲೆ ಸುರಿವನಖಂಡಿತದಮೃತಧಾರೆಗಳಾ (ಭರತ. ೧೬-೯೮) : ಇಳೆಯ ಸೋಂಕುವ ದುಂಡುದೋಳು ಬೆಳಗುತ ಪಾತಾಳದ ಫಣಿಪನ ಫಣಾವಳಿಯ ರತ್ನವ ಪಳಚಿದುವು (ಕಂನವಿ. ೨೦-೨೬). [ ದುಂಡು$_1$ + ತೋಳು (<ತೋಳ್) ]

**ದುಂಡುಬಳೆ** (ನಾ). = ದುಂಡು$_1$ ೩ : (ಕಿ). [ ದುಂಡು$_1$ + ಬಳೆ$_3$ ]

**ದುಂಡುಭ** (ನಾ). ನೀರು ಹಾವು : ಒಳ್ಳೆ : "ದುಂಡುಭಂ ರಾಜಳನೆಸಲೊಳ್ಳೆಗಕ್ಕು ನಾಮಂ" (ಮಂಗರಾ. ೧೧೯-೩). [ ಸಂ. ]

**ದುಂಡುಮಲ್ಲಿಗೆ** (ನಾ). ಒಂದು ಬಗೆಯ ಮಲ್ಲಿಗೆ; ಗುಂಡುಮಲ್ಲಿಗೆ : ಮಾಧವಿ : "ದುಂಡುಮಲ್ಲಿಗೆಯು ಪುದನಿಯುಕ್ಕುಂ" (ಮಂಗರಾ.

೬೮-೩೪) : "ವೃತ್ತಮಲ್ಲಿಕಾ-ದುಂಡುಮಲ್ಲಿಗೆ" (ಒಹಿ. ೧೫೮) : ಓಜೆಯಿಂ ದುಂಡುಮಲ್ಲಿಗೆಯ ಪದಕವನಿತ್ತು ಮರುಗದೊಡ್ಡಣಿಗಳಿಂ ಗಜಚರ್ಮಮಂ ತೊಡಿಸಿ (ಪುಷ್ಪರ. ೧೧-೮) : ಎಳೆವರೆಯದ ಪುರುಷನನೆಳೆವೊಗಳು ನಲಿದಪ್ಪಿ ದೊಂದು ವಿಲಾಸ ಎಳೆಮಾವನಪ್ಪಿದ ದುಂಡುಮಲ್ಲಿಗೆಗಳಂತಿಳಿಗೊಪ್ಪುತಿಹುದು (ಭರತ. ೬-೭) ; ಕತ್ತುರಿ ಸೇವಂತಿಗೆ ದುಂಡುಮಲ್ಲಿಗೆ ಮೊತ್ತದ ಜಾಜಿ ಸಂಪಗೆಯು ಇತ್ತರದಲಿ ಮಾಲೆಗಟ್ಟಿ ಮಾಜುವ ಹೆಂಗಳೆರ್ತಿಯನೇನ ಬಣ್ಣಿಸುವೆ (ಕಂಚವಿ. ೬-೬೨) ; ಮಾಧವೀಪುಷ್ಪವನ್ನು (ದುಂಡುಮಲ್ಲಿಗೆ) ಧರಿಸುವುದರಿಂದ ವಾತ ಶ್ಲೇಷ್ಮಗಳು ನಾಶವಾಗುವುವು (ಸಕವ್ಯ. ೪೪).

ದುಂಡುಮಲ್ಲಿಗೆಗೋಲು = ಗುಂಡುಮಲ್ಲಿಗೆ ಹೂವಿನ ಬಾಣ ; (ಮನ್ಮಥನ) ಹೂಬಾಣ : ಮುಂಡೆಗಸಿರ್ದ ಮಾನಿನಿರನ್ನೆಯರ ನೋಡಿ ಕಂಡ ನಿಷ್ಕಾಮಾತುರರು ದುಂಡುಮಲ್ಲಿಗೆಗೋಲು ತಾಗಲು ತವಗಟ್ಟು ಬೆಂಡಾದರತಿವಿರಹದಲಿ (ಮೋಹತ. ೪೧-೩೨). [ ದುಂಡು₁ + ಮಲ್ಲಿಗೆ ]

**ದುಂಡುಮುಖ** (ನಾ). ಗುಂಡಗಿರುವ ಮುಖ : ಬಟ್ಟತಲೆ, ದುಂಡು ಮುಖ, ಕಿವಿಯವರೆಗೂ ಕಣ್ಣು, ಇಷ್ಟಾಗಿ ಶಾಸ್ತ್ರಕ್ಕೆ ಹತ್ತು ಕೂದಲು (ದೀಹರು. ೪೧-೩೨). [ ದುಂಡು₁ + ಮುಖ ]

**ದುಂಡುಮುಡಿ** (ನಾ). ಗುಂಡಾಗಿ ಕಟ್ಟಿದ ತುರುಬು,-ಗಂಟು : ಹೊಸ ಹೊಂಗೇದಗೆಯೆಸಳ್ಗಳ್ ನವಶಸ್ತ್ರತತಿ ದುಂಡುಮುಡಿಯ ಓಲಿಯ ಪಳಯಿಗೆಯನೆ ತೊಡೆದುಟಯು ತರುಣೀರತ್ನದ ನುಣ್ಮಂಡೆ ಮನೋಭವನೇಱುವ ಪೂದೇರಂದದಿನೊಪ್ಪಿದುದು (ಅಮುಶಾ. ೫-೬).

[ ದುಂಡು₁ + ಮುಡಿ₃ ]

**ದುಂಡುಮುತ್ತು** (ನಾ). ಗುಂಡಾಗಿರುವ ಮುತ್ತು, - ಮೌಕ್ತಿಕ : ತಂಡ ತಂಡದಿ ಹೊಱವಳಯದಿ ಡಿಂಡೀರಪಾಂಡುರ ಶಂಖಪ್ರವಾಳ ದುಂಡುಮುತ್ತುಗಳಿಂದೆ ಮೇರೆಯಬ್ಧಿಯು ಕೊರಲ್ದಂಡೆಯುಂತಿರ್ದುದೇನೆಂಬೆ (ಮೋಹತ. ೨-೬) ; ದುಂಡುಮುತ್ತಿನ ರತ್ನ ಕೇವಣಿಸಿದ ಹೊನ್ನ ತೊಂಡಲ ಸೂಡಿದು ಮುದದಿ ಖಂಡೇಂದುಮುಖಿಕೆ ಕತ್ತುರಿಯಿಟ್ಟು (ಮೋಹತ. ೧೩-೬೫). [ ದುಂಡು₁ + ಮುತ್ತು₅ ]

**ದುಂಡುಮೇಜು** (ನಾ). ವರ್ತುಲಾಕೃತಿಯ ಮೇಲ್ಮೈಯುಳ್ಳ ಮೇಜು; ವರ್ತುಲಾಕಾರದ ಮೇಜು: ಕಾಫೀಭವನದ ಸುಂದರವಾದ ಕೈದೋಟದಲ್ಲಿ ಒಂದು ದುಂಡುಮೇಜಿನ ಸುತ್ತಲೂ ನಾವು ಕುಳಿತಿದ್ದೆವು (ಈದುಟಿ. ೪೧).

ದುಂಡುಮೇಜಿನ ಪರಿಷತ್ತು, ದುಂಡುಮೇಜು ಪರಿಷತ್ತು="ಎಲ್ಲ ಸದಸ್ಯರಿಗೂ ಸಮಾನ ಗೌರವವಿರುವ ಸಮ್ಮೇಳನ; ಮಂಡಲ ಗೋಷ್ಠಿ ; ದುಂಡುಮೇಜಿನ ಪರಿಷತ್ತು" (Round table conference. ಇಂಕನಿ) : ಬಳಿಯ ಹೊಂಡದ ದುಂಡುಮೇಜು ಪರಿಷತ್ತಿನಲಿ ಕಪ್ಪೆಗಳು ಚಪ್ಪಾಳೆ ತಟ್ಟಿ, ಜಿಗಿದಾಡುತಿವೆ ತಮ್ಮ ಪಕ್ಷವೆ ಕೊನೆಗೆ ಗೆದ್ದ ಹಾಗೆ! (ದೀಕಥಾ. ೧೧-೧೬). ದುಂಡುಮೇಜಿನ ಸಭೆ = ದುಂಡುಮೇಜಿನ ಪರಿಷತ್ತು : ೧೯೩೧ರಲ್ಲಿ ಇಂಗ್ಲೆಂಡಿನಲ್ಲಿ ನಡೆದ ದುಂಡುಮೇಜಿನ ಸಭೆಯಲ್ಲಿ ಗಾಂಧೀಜಿ ಪಾಲ್ಗೊಂಡಿದ್ದರು (ಕೂಡಿ). [ ದುಂಡು₁ + ಮೇಜು ]

**ದುಂಡುಮೊಗ** (ನಾ). = ದುಂಡುಮುಖ : ದುಂಡುಮೊಗ ತಿದ್ದಿ ಬೆಳೆದಿತ್ತು (ರಕ್ತರ್ಕ. ೩೩೦). [ ದುಂಡು₁ + ಮೊಗ ]

**ದುಂಡುರುಪೆ**, ದುಂದುರುಪೆ (ನಾ). ಒಂದು ಬಗೆಯ ಸಸ್ಯ : "ಅಶ್ವತ್ಥಫಲಾ - ದುಂಡುರುಪೆ" (ಒಹಿ. ೭) : "ಡೋಲಾಫಲ, ಹಿಪ್ಪೆ, ಎಸಗ, ದುಂಡುರುಪೆ, ಹೆಮ್ಮರ" (ಒಹಿ. ೬೪). ದುಂದುರುಪೆ : "ದೋಲಾಫಲ- ಎಲವ, ದುಂದುರುಪೆ" (ಒಹಿ. ೮೦) ; "ಟುಂಡುಕ ದುಂದುರುಪೆ" (ಅಕಾನಿ. ೦೧-೭) ; ಅಡವಿ ಹಾಗಲದ ಗೆಡ್ಡೆ ದುಂದುರುಪೆ ಗೆಡ್ಡೆ [ಪಾಠಾಂ. ದುಮ್ಮಲಪಿ ಗೆಡ್ಡೆ] . . . ಅರೆದು ಕೊಟ್ಟು ಬಿಸಿನೀರಂ ಕುಡಿಯಿಸೆ ಚೆನ್ನಾಗಿ ವಿರೇಚನ ವಾಕ್ಕು (ಸಕವ್ಯ. ೨೯೯). [ ? ]

**ದುಂಡುಸಂಪಿಗೆ** (ನಾ). ಒಂದು ಬಗೆಯ ಗುಂಡಾದ ಸಂಪಿಗೆ : ಪುಷ್ಪವೃಕ್ಷಗಳಲ್ಲಿ ದೊಡ್ಡ ವೃಕ್ಷಗಳಾಗ ತಕ್ಕ ಸುಂದರ ಪುಷ್ಪಗಿಡಗಳು ಸಂಪಿಗೆ ವನಸಂಪಿಗೆ . . . ದುಂಡುಸಂಪಿಗೆ ಇವುಗಳೆಲ್ಲ ಬೀಜಗಳಾಗಿವೆ (ಕೃಶಿಶ. ೨೦೦). [ ದುಂಡು₁ + ಸಂಪಿಗೆ (< ಸಂಪಗೆ) ]

**ದುಂಡುಸಮುದ್ರ** (ನಾ). ಒಂದು ಸ್ಥಳದ ಹೆಸರು ; ಉತ್ತರ ಪೂರ್ವ್ವಸ್ಯಾನ್ದಿಶಿ ಕಳವ್ಯತ್ತಿಗಟ್ಟು ಇವಾನ್ಯಾನ್ಯಾನಿ ಕ್ಷೇತ್ರಾನ್ತರಾಣಿ ವತ್ವಾನಿ ದುಣ್ಡಸಮುದ್ರದಾ ವಯಲುಳ್ಕೊಱುದಾಱಾಮೆಗೆ ಪದಿರ್ಕ್ಕಣ್ಡುಗಂ ಪುಣ್ಣಂ ಪಟಿಚಿಯಾ ಎರೆನಲ್ಲೂರಾ ಉಪ್ಪಾರ್ಟು ಒರ್ಕ್ಕಣ್ಡುಗ (ಎಕ. IV, ನಾಗಮಂ. ೮೫-೬೫ ; 776). [ ದುಂಡು₁ + ಸಮುದ್ರ₁ ]

**ದುಂಡುಳಿ** (ನಾ). ಗುಂಡಗಿರುವ ಉಳಿ,-ಚಾಣ.

[ ದುಂಡು₁ + ಉಳಿ₅ ]

**ದುಂಡುಱುಂಬೆ** 'ದಂಡುಱುಂಬೆ' ನೋ.

**ದುಂಡುಱುವೆ** (ನಾ). ಅತಿಶಯವಾದ ತಾಪ : ಬೆಂಡಾದಳಂಗಜಾತನ ನೋಡಲವನಸ್ತ್ರ ಕೊಂಡವು ಕುಚದ ಮಧ್ಯದಲಿ ದುಂಡುರು[ ಱು ]ವೆ [ಪಾಠಾಂ. ದಿಂಡುರುವೆ]ಯ ಮಾಡುತಿರಲುಚ್ಚರಿಸಿದಳು ಕೆಂಡಗಣ್ಣನ ಮಂತ್ರವಾಯವ (ಮೋಹತ. ೨೯-೪೯).

[ ದುಂಡು₁ + ಉಱುವೆ (<ಉಱುಬೆ) ]

**ದುಂದಕಾರ** (ನಾ). ಕಗ್ಗತ್ತಲೆ; ಅಂಧಕಾರ : ಗಾಳಿ ಉಕ್ಕಿ ಒದರಿತಾಗ, ಗಿಡದ ಸಾಲು ಅದುರಿತಾಗ, ಅತ್ತ ಇತ್ತ ಅಂಧಕಾರ, ನೋಡಿದತ್ತ ದುಂದಕಾರ (ನನಲ್ಲ. ೮೩-೧೨).

[ ←ಮರಾ. ಧುಂದಕಾರ್ ; ಹಿಂ. ಧುಂಧುಕಾರ್ ]

**ದುಂದಾಗು₁** 'ದುಂದು₁' ಪರಾ.

**ದುಂದಾಗು₂** 'ದುಂದು₃' ಪರಾ.

**ದುಂದು₁** (ನಾ). ೧. ಮಿತಿಯಿಲ್ಲದೆ ಖರ್ಚು ಮಾಡುವುದು ; ಅಗತ್ಯವಲ್ಲದ ಹೆಚ್ಚು ವೆಚ್ಚ ; ಪೋಲು ಮಾಡುವಿಕೆ : ವ್ಯರ್ಥವೇದೆನಿಪುದಲ ಸೃಷ್ಟಿಯುಲಿ ಬಹುಭಾಗ ? ಅರ್ಥವೇಂ ಕ್ರಿಮಿಕೀಟಕೋಟಿ ರಚನೆಯಲಿ ? ಕರ್ತನಾಲೋಚಿಸದ ದುಂದಿನವನೆಂಬ ನುಡಿಯರ್ಥದೃಷ್ಟಿಯು ವಿವರ (ಮಂಕುತಿ. ೭೭) ; ಇನ್ನೂ ನಿಮಗೆ ದುಂದುಖರ್ಚಿನ ಚಟ ಬಿಟ್ಟಿಲ್ಲ (ಮಹಾಗ. ೩೩೪). ೨. ದುಂದುಗಾರ : ಬಂಗಾರದ ತಗಡಿನಲಿ ಬರೆದಿಡಬೇಕಾದ ಪದ್ಯ, ಕಲ್ಲಿನಲ್ಲಿ ಕಟೆದಿಟ್ಟರು ನಮ್ಮ ದುಂದು ಕಲೋಪಾಸಕರು (ಸಾಹಿವಿ. ೩೯). ೩. ಆಡಂಬರ ; ಪ್ರದರ್ಶನ ; ವೈಭವ ; ಡಂಬ : ದುಂದಿಗಾಗಿ ನೂರಾರು ರೂಪಾಯಿ ಪೋಲುಮಾಡುವ ಜನ ನಮ್ಮ ಬಳಗದ ಬಗ್ಗೆ ಮೂಗುಮುರಿದರು (ಜೀವನ. ೨ ಆರಿಕೆ).

ದುಂದಾಗು₁ = ವೈಭವದಿಂದ ಕೂಡಿರು : ಏನು ದುಂದಾತು ನಿನ್ನಿನ ಮೇಜವಾನಿ (ಎತ್ರಿಕೈ. ೨೭). ದುಂದಾಟ = ದುಂದಂ₁ : (ಕ). ದುಂದು ಮಾಡು = ೧. ವೃಥಾ ಖರ್ಚುಮಾಡು ; ಪೋಲು ಮಾಡು ; ಹಾಳು ಮಾಡು : ಮೂಱು ದಿನದೊಳಗೆ ದುಂದು ಮಾಡಿದ ಕಾರಣದೊಳಿಂದು ಘನಪುಣ್ಯವಾಯ್ತನ್ನದಾನದಿಂದೆನ್ನ ಮನಕೆ ಬರ್ಪಂತೆ ದೃಷ್ಟಪಂದೋಱೆ ಕೊಡಿಯಂದನು (ವೀಕ್ರಿಪು. ೪-೧-೩೬): ಸಿಕ್ಕಾಪಟ್ಟೆ ಮದ್ದು ದುಂದುಮಾಡುವುದು ಸೈನಿಕರ ಪ್ರತಿನಿತ್ಯದ ಹವ್ಯಾಸವಾಗಿತ್ತು (ಪೂನಟು. ೬೨) ; ಅವರ ಆಸ್ತಿಯ ಅರ್ಧಪಾಲನ್ನೆಲ್ಲ ನೀನು ದುಂದು ಮಾಡಿ ಕಳೆದೆ. ಉಳಿದ ಅರ್ಧ ಜುಗಾರಿ ಆಡಿದೆ . . . ಜನರು ನಗುವಂತಾಯಿತು (ಮುಂಗಾಮು. ೪). ೨. ವೈಭವದಿಂದ ಕೂಡು ; ಆಡಂಬರವನ್ನು ಹೊಂದು : ಹತ್ತ ಪಲ್ಲವರಿಗೆ ಕತ್ತಿಯು ಕೊಡುವೆನ ಹತ್ತಿ ಮಂಟಪ ಬಗೆರಂದ ಮಲಸಜ್ಜ ದುಂದುಮಾಡಿ ಮಣ್ಣ ಕೊಡಿರೆಂದ (ಜಾಕಗೀ. ೨೦೦).

[ ದೇ.೫ ತುಳು. ದುಂದು ]

**ದುಂದು$_1$** (ನಾ). ೧. ಒಂದು ಬಗೆಯ ಚರ್ಮವಾದ್ಯ. ೨. ಕೃಷ್ಣನ ತಂದೆ; ವಸುದೇವ. [ ಸಂ. ]

**ದುಂದು$_2$** (ನಾ). ಮಾದಕ ವಸ್ತುವಿನಿಂದ ಉಂಟಾಗುವ ಅಮಲು,–ಮತ್ತು : ಬಯ್ದಾಡುತ ಸುಮ್ಮ ಸುಮ್ಮ ಬದ್ದಿ ಹನಗೊ ಅಣ್ಣಾ, ತಮ್ಮ ಕುಡಿದು ದುಂದು ಕಂದಮ್ಮ (ಅರಳು. ೧೫೦-೧೭).

**ದುಂದಾಗು$_1$** = ಅಮಲೇರು ; ಮತ್ತು ಬರು,_ಉಂಟಾಗು : ನೀವು ಕುಡಿದು ದುಂದಾಗಿದ್ದರೂ ನನಗೆ ಸಿಟ್ಟು ಬರುತ್ತಿದ್ದಿಲ್ಲ! (ದೇಪದಾ. ೯೩) : ಇವರು ಹೀಗೆ ದುಂದಾಗಿ ಬಿದ್ದಿರುವುದನ್ನು ನೋಡಿದರೆ (ಕುರಿಹಿಂ. ೧೦೭).
[ ← ಮರಾ. ಧುಂದ್ ]

**ದುಂದುಗಾರ** (ನಾ). ಮಿತಿಯಿಲ್ಲದೆ ಖರ್ಚುಮಾಡುವವನು; ಹಣ ಪೋಲು ಮಾಡುವವನು : ದುಂದುಗಾರರು ಈ ಹೊತ್ತು ದೊರೆತ ಸಂಪತ್ತಿಯನ್ನು ಈ ಹೊತ್ತೇ ಆದಷ್ಟು ಪ್ರಕಾರದಿಂದ ಭೋಗಿಸಲಿಕ್ಕೆ ಹವಣಿಸುತ್ತಾರೆ (ಮುಂಬಯಿ. ೩-೨೪೮) ; ದುಂದುಗಾರ ಚಂದಿರನು ಇಣಿಕಿ ದನು ಬೆಳಕೆ ಸಾಲದಾಗಿ ರಸಿಕ ನೀತಿಯಲಿ ಬೆರೆಸಿ ಬಳಸುವನು ತಮವ ಸಾಲವಾಗಿ (ಅರಳು. ೪೦೪-೩) ; ನೀನು ಬಹಳ ದುಂದುಗಾರನಾಗಿ ತೋರುತ್ತಿ (ಕಥಾಮಂ. IV, ೪) : ದುಂದುಗಾರರಿಗೆ ಎಷ್ಟು ಸಂಪಾದನೆಯಾದರೂ ಬಡತನ ತಪ್ಪುವುದಿಲ್ಲ (ನೀತಿಚಂ. IX, ೩೨).
[ ದುಂದು$_1$ + – ಗಾರ(< – ಕಾಱ) ]

**ದುಂದುಗಾರತನ** (ನಾ). ಮಿತಿಯಿಲ್ಲದೆ ಖರ್ಚುಮಾಡುವಿಕೆ : (ಕಿ).
[ ದುಂದುಗಾರ + – ತನ ]

**ದುಂದುಗಾರಿಕೆ** (ನಾ). ೧. =ದುಂದುಗಾರತನ : ತವಕ್ಕ ದುಂದುಗಾರಿಕೆಯ ಬಗ್ಗೆ ಅವರಿಗೆ ಸಂತೋಷ (ನನ್ನ ಜೊ. ೬೦): ನಾನೂ ಮೊದಲಿನಿಂದ ದುಂದು ಗಾರಿಕೆಯಲ್ಲಿ ಬೆಳೆದವಳು (ಕುಂಕುಮ. ೮) : ಹೀಗೆ ದುಂದುಗಾರಿಕೆ ಕಲಿತರೆ ಈಗ ಪರವಾಗಿಲ್ಲವಾದರೂ ಮುಂದೆ ಕಷ್ಟವೆನಿಸೀತು (ಬಾಡಿಲ. ೭೬). ೨. ಯಥೇಚ್ಛವಾಗಿರುವಿಕೆ; ಹುಲುಸಾಗಿರುವಿಕೆ; ಎರಚಾಟ; ಸುಗ್ಗಿ : ರಸ್ತೆಯ ಎರಡು ಕಡೆಗಳಲ್ಲೂ ಹುಚ್ಚುಹುಚ್ಚಾಗಿ ಹಸುರಿನ ದುಂದುಗಾರಿಕೆ ಯನು ನೋಡುತ್ತಾ ಅವನು ಪ್ರಯಾಣ ಮಾಡುತ್ತಿದ್ದ (ದೂರಸ. ೦೫೭).
[ ದುಂದುಗಾರ + – ಇಕೆ ]

**ದುಂದುಗಾರ್ತಿ** (ನಾ). ಮಿತಿಯಿಲ್ಲದೆ ಖರ್ಚುಮಾಡುವವಳು ; ವ್ಯರ್ಥ ವಾಗಿ ಪೋಲು ಮಾಡುವವಳು : ನಾನೆಂದೂ ದುಂದುಗಾರ್ತಿಯಲ್ಲ (ಕುಂಕುಮ. ೯೩). [ ದುಂದುಗಾರ + – ತಿ$_1$ (<–ಇತ್ತಿ) ]

**ದುಂದುಗೆಡಿಸು** (ಕ್ರಿ). ಅಪವ್ಯಯ ಮಾಡಿ ಕಳೆದುಕೊಳ್ಳು ; ಪೋಲು ಮಾಡು : ಮನೆ ಮಾರು ಮಾಡಿ ನೆಮ್ಮದಿಯಾಗಿ ಬಾಳದಿಂತಲಿವನೇತಕೆ ಬೆಸದರೊಡನೆ, ಹರಯವನೇಕೆ ಮರಳಿನೊಂಟಿಯೊಲಿಂತು ದುಂದುಗೆಡಿಸು ವನು (ಗೊರೂ.ಛಾ. ೨-೪೧). [ದುಂದು$_1$ + ಕೆಡಿಸು$_1$ ]

**ದುಂದುತನ** (ನಾ).=ದುಂದುಗಾರತನ : ಅವನ ದುಂದುತನವೇ ಅವನಿಗೆ ಮುಳುವಾಯಿತು (ದೂಕಿ). [ ದುಂದು$_1$ + – ತನ ]

**ದುಂದುಬಾಳು** (ನಾ). ದುಂದುಗಾರತನದ ಬದುಕು ; ವ್ಯರ್ಥವಾಗಿ ಖರ್ಚುಮಾಡುವ ಜೀವನ : ಇತರ ಸಹೋದ್ಯೋಗಿಗಳಂತೆ ಅವನೂ ದುಂದುಬಾಳನ್ನು ಬದುಕಲು ಸಿದ್ಧನಾದನು (ಪುನರು. ೬೨).
[ ದುಂದು$_1$ + ಬಾಳು$_2$ (<ಬಾೞ್$_2$) ]

**ದುಂದುಬೀಳು** (ಕ್ರಿ). ಹೆಚ್ಚಾಗು; ಮಿತಿಮೀರು : ಗಂಗಿ ಗೌರಿ ಜಗಳ ದುಂದುಬಿದ್ದಾ ಮಂದ ಅಂಗಳದ ಕಲ್ಲ ಶಿವ ಮೆಟ್ಟಿ ಕೇಳ್ಯಾನ ಗಂಗಿ ನಿನ ಬಾಯಿ ಬಲುಬಾಯಿ (ಕನ್ನಜಾ. ೧೦೭). [ ದುಂದು$_1$ + ಬೀಳು$_1$ (<ಬೀೞ್$_1$) ]

**ದುಂದುಭಿ$_1$** (ನಾ). =ದುಂದುಮೆ ೨ : 'ದುಂದುಭಿಗಳು' ಕನ್ನಡಿಗರಿಗೇನು ಅಪರಿಚಿತವಲ್ಲ. ಶಿವಶರಣರು ತಮ್ಮ ಕಾಲಜ್ಞಾನದ ಹಾಡುಗಳನ್ನು ಹೋಳಿಯ ದುಂದುಭಿಯಲ್ಲಿ ಹಾಡಿದ್ದಾರೆ . . . 'ದುಂದುಭಿ' ಹಾಗು 'ದುಂದುಮಿ' ಇವು ಎರಡೂ ಬಾಜನಗಬ್ಬಗಳಿದ್ದರೂ, ಹಾಡುವ ತಾಳ, ಲಯ, ಗತಿ, ರಾಗ ಮೊದಲಾದವುಗಳು, ಬೇರೆಬೇರೆ ಇವೆ (ಕನ್ನಜಾ. ೯೩). [ <ದುಂದುಮೆ ]

**ದುಂದುಭಿ$_2$** (ನಾ). ೧. ಒಂದು ಬಗೆಯ ಚರ್ಮವಾದ್ಯ; ದೊಡ್ಡ ಭೇರಿ ; ನಗಾರಿ : "ಪಿರಿದಪ್ಪ ಭೇರಿ ದುಂದುಭಿ" (ವಡ್ಡಕೋ. ೬೯-೨೬) ; "ರವ ಮಿಕ್ಕ ಹಱೆ ದುಂದುಭಿಯನಿಕ್ಕಿ" (ಮಂಗರಾ. ೬-೨೦) : ದುಂದುಭಿ ಗಭೀರನಿನದಂ . . . ಜಿನಚರಣಕಮಲಭೃಂಗಂ ಪಂಪಂ (ಆದಿಪು. ೧-೩೩); ದುಂದುಭಿಗಭೀರರವ ಸುರದುಂದುಭಿಗಳ್ಗಗನತಳದೊಳೆಸೆದಪುವು (ಅಜಿಪು. ೮-೦೩) ; ಮೊಱೆಯೆ ದುಂದುಭಿ ಶಂಖ ಕಹಳಾ ಪರಮ್ಮದಂಗಾದಿಗಳು . . . ದೇವ ಹೊಱಮಂಟ (ಕುಮ್ಮಾಉ. ೬-೫) ; ದುಂದುಭಿಗಳು ಧಂಧಣ ರೆನುತಿರೆ . . . ಬಟ್ಟನು ವಾಳಿಯಮ (ಕುರಾಸಾಂ. ೦೬-೩೦) ; ರಕ್ತಕಲಿತ ದುಂದುಭಿ [ಪಾಠಾಂ. ಮಿ]ಯಂತೆ ಸ್ವನಸ್ನಿಗ್ಧಹರ್ಯಕ್ಷತನುಜಶ್ಮಶ್ರುಪ್ರವರ ಮೆನಿಪ ಶುಭಲಕ್ಷಣಂ ದಿವ್ಯಭೂಷಾಯುಕ್ತ ಲೋಹಿತಾನನದ ಸೊಬಗು (ಪಂಚಾರಾ. ೦-೮-೩೩). ೨. ಅರುವತ್ತು ಸಂವತ್ಸರಗಳಲ್ಲಿ ಐವತ್ತಾರ ನೆಯದು : ದುಂದುಭಿಸಂವತ್ಸರೋದ್ಭವಂ . . . ಸುರದುಂದುಭಿ ಪತಿ ಚರಣಕಮಲಭೃಂಗಂ ಪಂಪಂ (ಆದಿಪು. ೧-೩೩) ; ಮತ್ತಮಾ ಪರುಷವೇ ಪ್ರಭವ ವಿಭವ . . . ದುಂದುಭಿ ರುಧಿರೋದ್ಗಾರಿ ರಕ್ತಾಕ್ಷಿ ಕ್ರೋಧನ ಅಕ್ಷಯವೆಂದರುವತ್ತು ತೆಱನಾಗಿಹುದು (ವಿವೇಕ. ೩೨೦). ೩. ಪಗಡೆಯಾಟ ದಲ್ಲಿ ಬೀಳುವ ಇತ್ತಿಗದ ಗರ. ೪. ವಾಲಿಯಿಂದ ಹತನಾದ ಒಬ್ಬ ರಾಕ್ಷಸನ ಹೆಸರು : ನೀಂ ಪೇಳ್ದುದಿದೆ ಕಥಾ ನಿನ್ನಗ್ರಜಂ ಕೊಂದು ಬಿಸುಟ ದುಂದುಭಿ ? (ಶ್ರೀರಾಮಾ. ೨೯೮-೩೬೪) ; ಕಿಷ್ಕಿಂಧಕಾಂಡ ಬ್ರಹ್ಮಾಂಡ, ದುಂದುಭಿ ಹೆಣದ ಸುತ್ತಲೂ ಮರ್ಕಟೋತ್ತಮರ ಎದೆ ದುಂದುನೃತ್ಯ (ಕುಂಡಮ. ೨೨-೬). [ ಸಂ. ]

**ದುಂದುಭಿಧ್ವನಿ** (ನಾ). ಭೇರಿಯ ಶಬ್ದ,–ಸ್ವರ: ಗಂಭೀರಾಯತ ದುಂದುಭಿ ಧ್ವನಿ ರಥ ಜ್ಯಾ ದೀರ್ಘರಾವಂಗಳುಂ . . . ದಿಗಂತಂ ತಾಗೆ (ಹವಿಪ್ಪ್ರ. ೩-೧೨). [ ದುಂದುಭಿ$_2$ + ಧ್ವನಿ ]

**ದುಂದುಭಿನಾದ** (ನಾ). = ದುಂದುಭಿಧ್ವನಿ : ದುಂದುಭಿನಾದಮಾಪೂರಿಸೆ ದಿಕ್ತಟಮಂ (ಶಂರಾಮಾ. ೧೭-೩೯). [ ದುಂದುಭಿ$_2$ + ನಾದ$_1$ ]

**ದುಂದುಭಿನಿನಾದ** (ನಾ).=ದುಂದುಭಿಧ್ವನಿ : ದುಂದುಭಿನಿನಾದಮುಖರಿತ ಮಂದಾರನಮೇರುವಿಚಕಿಲಕುಸುಮಾಸಾರಂ ಸಂದಿಸೆ ಕೇವಲಿಪೂಜೆಗೆ ಬಂದತ್ತು ಚತುರ್ನಿಕಾಯಂ ದೇವನಿಕಾಯಂ (ಶಂರಾಮಾ. ೮-೩೦) ; ದುಂದುಭಿನಿನಾದ ವಾದಂತೆ ಪಂಪನ ವಾಗ್ಝರಿ ದುಮ್ಮಿಕ್ಕಿತು ! (ದಾನಚಿಂ.೦೩).
[ ದುಂದುಭಿ$_2$ + ನಿನಾದ ]

**ದುಂದುಭಿನಿಸ್ವನ** (ನಾ). = ದುಂದುಭಿಧ್ವನಿ : ದುಂದುಭಿನಿಸ್ವನಂ ನೆಗಳೆ . . . ತನ್ನ ನಂದನಂಗಂದನುರಾಗದಿಂ ಪರಸಿ ಕಟ್ಟಿದನೊಲ್ದಧಿರಾಜ ಪಟ್ಟಮಂ (ಶ್ರೀಪುವಿ. ೦೯-೩೦). [ ದುಂದುಭಿ$_2$ + ನಿಸ್ವನ ]

**ದುಂದುಭಿಪದ** (ನಾ). ಹರೆಯೊಂದಿಗೆ ಹಾಡುವ ಹಾಡು ; ಹೋಳೀ ಪದ : ಚಾಲುಕ್ಯರ ಪೂರ್ವದಲ್ಲಿಯೇ ನಮ್ಮಲ್ಲಿ ವರ್ಣಕಸಾಹಿತ್ಯವಿತ್ತು . . . ಶೃಂಗಾರಿಕ ದುಂದುಭಿಪದಗಳು, ಹೆಣ್ಣುಮಕ್ಕಳು ಹೇಳುವ ತ್ರಿಪದಿ ಯೊಳಗಿನ ಒನಕೆವಾಡುಗಳು (ಸಾಹಿವಿ. ೮೩) ; ದುಂದುಭಿಪದಗಳ ಚಂದಾಗಿ ಕೇಳಿರಿ (ಕನ್ನಜಾ. ೯೪). [ ದುಂದುಭಿ$_2$ + ಪದ$_2$ ]

**ದುಂದುಭಿರವ** (ನಾ).=ದುಂದುಭಿಧ್ವನಿ : ಮಿಮೋಹಮ್ಮುಗಮಂ ಮಿಥ್ಯಾ ಕಂದರದೊಳ್ ಚೆದಱಿಸುವ ದುಂದುಭಿರವದಂತಿರೊಗೆಯೆ ಗಂಭೀರರವಂ (ಧರ್ಮಾಮೃ. ೪-೨೨) ; ಧಂಧಂಧಮೆಂಬುವಾ ಭೇರಿ ದುಂದುಭಿರವಕೆ ನಡುಗೆ ಗಿರಿವನಗುಹಾಕಿಷ್ಕಿಂಧೆ (ಶ್ರೀರಾಮಾ ೨೯೬-೩೨೦). [ದುಂದುಭಿ$_2$ + ರವ]

**ದುಡಿಗೆ** (ನಾ). ಒಂದು ಬಗೆಯ ಸಸ್ಯ : ದುಡಿಗೆಯ ಕಾಯಿ ಎರದ ಹಣ್ಣು ಕುರಟಿಗೆ ಹಣ್ಣು . . . ಎಲ್ಲಾ ಕಂದಮೂಲ ಕದಿರ ಶಾಕ ಪುಷ್ಪ ಫಲಾದಿ ಗಳಂ (ಶಾಸ್ತ್ರಟೀ. ೫೫-೪). [ ? ]

**ದುಡಿತ₁** (ನಾ). ೧. ದುಡಿಯಂವಿಕೆ ; ಕೆಲಸ ; ಕಾರ್ಯ : ಈ ದುಡಿತದ ಪರಿಣಾಮದಿಂದಲೋ ಎಂಬಂತೆ ಅವರ ಮೂರನೆಯ ಹೆರಿಗೆ ತೊಂದರೆಯಿಂದಲೇ ಆಯಿತು (ಹಕ್ಕಿಬ. ೨೫) ; ಆ ಸಂಶೋಧನಾ ಮಂದಿರವು . . . ಭಾರತೀಯ ವಿಜ್ಞಾನ ಸಂಶೋಧನೆಗಳ ದುಡಿತದ ಹೆಗ್ಗುರುತಾಗಿಯೂ ಇತ್ತು (ಪಕ್ಕಳ. ೧೩೦) ; ದುಡಿತದಲ್ಲಿ ವಾಸುದೇವ ಭಟ್ಟರಿಗೆ ಸಹಪಾಟಿಯಾಗಿದ್ದಳು (ಭ್ರಾಂತಿಕು. ೧) ; ದುಡಿತವು ದುಡ್ಡಿನ ತಾಯಿ (ಗಾದೆ). ೨. ಸಂಪಾದನೆ ; ಗಳಿಕೆ ; ಉತ್ಪನ್ನ : ದುಡಿತ ಹೋಯಿತು ವಗೆಯ ಮಳೆಹೋಲ್ (ಕಥಾಪು. ೧೯-೩೨) ; ಹಿರಿಯರಿಂದ ಬಂದ ಸಂಪತ್ತಿಗೆ . . . ತಂತಮ್ಮ ದುಡಿತವನ್ನೂ ಕೂಡಿಸಿ ಅದನ್ನು ಓರಂತೆ ಹಿಗ್ಗಿಸುತ ಬರಬೇಕು (ಮೂರುಲು. ೭ ಎರಡು ಮಾತು) : ಯಾರ ಹಂಗೂ ಇಲ್ಲದೆ ತನ್ನ ದುಡಿತದಿಂದ ಹಾಯಾಗಿ ಬಾಳುತ್ತಿದ್ದಳು (ಮುಕ್ತಿಮು. ೬). [ ದುಡಿ₁ + – ತ₂ ]

**ದುಡಿತ₂** 'ತಂಡಿತ' ನೋ.

**ದುಡಿತಗಾರ** (ನಾ). ದಂಡಿಯುವವನು; ಶ್ರಮದ ಕೆಲಸ ಮಾಡುವವನು (ಪ್ರಾಚೀನ ಸ್ಪಾರ್ಟಾ ರಾಜ್ಯದಲ್ಲಿ ಸ್ವತಂತ್ರಪ್ರಜೆಗೂ ಗುಲಾಮನಿಗೂ ಮಧ್ಯದರ್ಜೆಯಲ್ಲಿದ್ದ) ಒಂದು ತರಗತಿಯ ಸ್ವತಂತ್ರನಲ್ಲದ ಉಳುಮೆಯ ಜೀತಗಾರ ; ಸ್ವತಂತ್ರನಲ್ಲದ ದುಡಿತಗಾರ (Helot. ಇಂಕೋ).
[ ದುಡಿತ + – ಗಾರ (< – ಕಾಱ) ]

**ದುಡಿಮೆ** (ನಾ). ೧. ದುಡಿತ ; ಕಾಯಕ : "ತಂತು–ದುಡಿಮೆ" (ಕಾಕಳ್ಳ. ೮) ; ದುಡಿಮೆಯ ಉತ್ಸಾಹ ಮತ್ತೆ ಮನಸ್ಸಿನಲ್ಲಿ ಮೂಡುವುದು (ವಾತ್ಸಲ್ಯ. ೨೮) ; ದೇವರು ಒಂದು ಹೊತ್ತಿನ ಅನ್ನಕ್ಕೆ ದುಡಿಮೆ ಕೊಟ್ಟರೂ ನನಗೆ ತೃಪ್ತಿ (ಪದ್ಮಸ. ೨೫೯) : ವಿದ್ಯಾರ್ಥಿಗಳ ವ್ಯಕ್ತಿತ್ವವು ವೃದ್ಧಿಯಾಗುವುದಕ್ಕೆ ದುಡಿಮೆಯೇ ಅತ್ಯಾವಶ್ಯಕ (ಕೃಯಾಶಿ. ೫೮). ೨. ಗಳಿಸುವುದು ; ಸಂಪಾದಿಸುವುದು. ೩. ಗಳಿಕೆ; ಸಂಪಾದನೆ: ನಾನು ಭಿಕಾರಿ, ದುಡಿಮೆಯಿಲ್ಲದ ಭಿಕಾರಿ . . . ಗಂಗಾಧರ ಕಿರುಚುತ್ತಲೆ ಇದ್ದ (ಮುಂಗಾಮು. ೩೦)
[ ದುಡಿ₁ + – ಮೆ₁ ]

**ದುಡಿಮೆಗಾರ** (ನಾ). ದಂಡಿತಗಾರ; ದಂಡಿಯುವವನು : ನಾನೂ ದುಡಿಮೆಗಾರನಾಗಬೇಕು (ಬೆಳುವು. ೮).
[ ದುಡಿಮೆ + – ಗಾರ (< – ಕಾಱ) ]

**ದುಡಿಮೆಟ್ಟು** (ಕ್ರಿ). ದಂಡಿಯನ್ನು ಬಾರಿಸು : ಅವನಿಗೆ ಸಾವೂ ಒಂದೇ, ಹುಟ್ಟೂ ಒಂದೇ ; ಹಗಲೂ ಒಂದೇ, ರಾತ್ರಿಯೂ ಒಂದೇ. ದುಡಿಯುವುದು ; ದುಡಿಮೆಟ್ಟುವುದು (ಕೋಟುದು. ೬). [ ದುಡಿ₃ + ಮೆಟ್ಟು₁ ]

**ದುಡಿಸೀರೆ** (ನಾ). ಒಂದು ಬಗೆಯ ಸೀರೆ : ದಡಿಸೀರೆ ದುಡಿಸೀರೆ ಪೊಸ ಸೀರೆಗಳನುಟ್ಟು (ಸಿದ್ಧಕಾ. ೯-೧೨). [ ದುಡಿ ? + ಸೀರೆ₂ ]

**ದುಡಿಸು** (ಕ್ರಿ). ಕೆಲಸ ಮಾಡಿಸು ; ದಂಡಿಯುವಂತೆ ಮಾಡು : ಬಹು ಸಂಖ್ಯೆಯ ಜನರು ಬಡವರಾಗಿ, ಅತ್ಯಂತ ಬಡವರಾಗಿ ಇರಬೇಕಾಗುತ್ತದೆ. ಮತ್ತು ಅಲ್ಪಸಂಖ್ಯೆಯ ಜನರು ಅವರಿಂದ ದುಡಿಸಿ ಹಣವಂತರಾಗುವ ಅವಸರವಿರುತ್ತದೆ (ಪ್ರಕಾಶ. ೬೨).

ದುಡಿಸಿಕೊಳ್ಳು = ೧. ತನಗಾಗಿ ಇನ್ನೊಬ್ಬರಿಂದ ಕೆಲಸ ಮಾಡಿಸಿಕೊಳ್ಳು. ೨. (ಪದಗಳನ್ನು) ಹೆಚ್ಚು ಅರ್ಥವತ್ತಾಗುವಂತೆ ಬಳಸು : ಅರ್ಧಸತ್ಯಗಳನ್ನು, ವಿಕೃತದೃಷ್ಟಿಕೋಣಗಳನ್ನು, ನಿರುತ್ತರವಾದಿತ್ವವನ್ನೂ 'ಪೋಕ್ರ'ತನವನ್ನು ಅವರು ಚೆನ್ನಾಗಿ ದುಡಿಸಿಕೊಂಡಿದ್ದಾರೆ (ಗಾಳಿಪ. XI, ಮುನ್ನುಡಿ). [ ದುಡಿ₁ + – ಇಸು₃ ]

**ದುಡುಂ** (ನಾ). ಒಂದು ಅನುಕರಣ ಶಬ್ದ: ಹುಡುಗ ದುಡುಮ್ಮೆಂದು ನೀರೊಳಗೆ ಧುಮುಕಿದ (ರೂಢಿ).

ದುಡುಂ ಪ್ರವೇಶ=ಮುಂದಾಲೋಚನೆಯಿಲ್ಲದೆ ಕೆಲಸದಲ್ಲಿ ಪ್ರವೇಶ ಮಾಡುವುದು ; ವಿಚಾರಮಾಡದೆ ಕೆಲಸವನ್ನು ಕೈಗೊಳ್ಳುವುದು ; ದುಡುಕುತನ : (ಹ).

**ದುಡುಂಬಿಱ್** 'ದುಡುಮ್ಮಿಱ್' ನೋ.

**ದುಡುಕ** (ನಾ). ವಿಚಾರ ಮಾಡದೆ ಮುನ್ನುಗ್ಗುವವನು ; ದುಡುಕುವ ಸ್ವಭಾವದವನು: ಭೀಮನೆಂಬವ ದುಡುಕನೀ ಸುತ್ರಾಮಸುತ ಸೈರಣೆಯ ಮನದವನು (ಕುವ್ಯಾಅ. ೭೦೩. ೪-೩೦). [ ದುಡುಕು₂ + – ಅ₇ ]

**ದುಡುಕಿ** (ನಾ). ೧. ದಂಡುಕು ಸ್ವಭಾವದ ವ್ಯಕ್ತಿ : ಶೂರನೂ, ರಾಮ ಭಕ್ತನೂ ಸ್ವಲ್ಪ ದುಡುಕಿಯೂ ಆದ ಲಕ್ಷ್ಮಣನ ಪಾತ್ರವು . . . ಸರ್ವರ ಹೃದಯಕ್ಕೂ ಪ್ರಿಯವಾಗಿದೆ (ಭಾರತ. ೯೦). ೨. ಉದ್ಧಟ ವ್ಯಕ್ತಿ.
[ ದುಡುಕು₂ + – ಇ₃ ]

**ದುಡುಕು₁** (ಕ್ರಿ). ೧. ಮುಂದಾಲೋಚನೆಯಿಲ್ಲದೆ ಕೆಲಸಮಾಡು ; ಆತುರದಿಂದ ವರ್ತಿಸು ; ವಿಚಾರಮಾಡದೆ ಮುನ್ನುಗ್ಗು : ಮುಕ್ತಿಯ ವಂಚಿಸಿ ಮುಕ್ತಿಯ ಹುಡುಕಿದೆ ತತ್ತ್ವವಿಚಾರದ ಗಲಭೆಗೆ ದುಡುಕಿದೆ (ಪಾಂಚಜ. ೫೯-೧೩); ಚಿರಂತನದ ಪಥಿಕ ನಾನು ಹೊರಟೆ ತಿರೆಯ ಹುಡುಕುತ ನೆರಳಿನಂತೆ ಹುರುಳಿನಲ್ಲಿ ಕರಗಿದರೂ ದುಡುಕುತ (ಅರಳು. ೪೪-೨೦) : ಜೀವನದಲ್ಲಿ ಅವರು ಎಲ್ಲೂ ದುಡುಕಿರಲಿಲ್ಲ (ಮಹಾಶ್ವ. ೨೦); ದುಡುಕಿದರೆ ಆಕೆಯು ಆತ್ಮಹತ್ಯವನ್ನಾದರೂ ಮಾಡಿಕೊಳ್ಳಬಹುದು (ರಾವಿಜ. ४೧). ೨. "ಹುಂಬತನ ಮಾಡು" (ಜಾನಕೋ. ೬). ೩. ಉದ್ಧಟತನದಿಂದ ವರ್ತಿಸು ; ದುಷ್ಟತನದಿಂದ ವರ್ತಿಸು : (ಹ). 'ತಂಡುಂಕು₁' ಪರಾ.
[ ದೇ. ೩ ತುಳು. ತೆಲು. ದುಡುಕು ]

**ದುಡುಕು₂** (ನಾ). ೧. ಆಲೋಚನೆ ಮಾಡದೆ ಮುನ್ನುಗ್ಗುವುದು : ಈ ಪರಿಯೊಳ್ ದುಡುಕಿನಿಂ ಪೋದೊಡೆ ಅವಶ್ಯಮಾಗಿ ಪಶ್ಚಾತ್ತಾಪಮಪ್ಪುದು (ಮಿತ್ರಗೋ. ೬೫) ; ತುಂಗೆಳಮಾಸ್ತರರ ದುಡುಕಿಗೆ ನಾವೊಂದು ಪಾಠ ಕಲಿಸಿದಂತಾಗುವುದು (ರಂಗತೋ. ೨೫) ; ತಿಮ್ಮಾವಧಾನಿ, ಇದೇನೀ ದುಡುಕು ? (ತುಂಗಭ. ೧೮) ; ಮಡಕೆ ಮಾರುವವನಿಗೆ ದುಡುಕಿನ ಗವುಜಿ ಯಾಕೆ? (ಗಾದೆ). ೨. ಆತುರ ; ಅವಸರ : ಬಾಲಗೆ ದೊರಕಿತು ಪುಣ್ಯೋದಯದಿ ಸಾಲಿಗ್ರಾಮಶಿಲೆಯು ಕೈಯ ದುಡುಕಿಲಿ ತೆಕ್ಕೊಂಡನು ಹರುಷದಿ ಲಕ್ಷ್ಮೀನಾರಾಯಣ ಮೂರುತಿಯು (ಚಂದ್ರಹಾ. ೧-೩೩) ; ಖಡಕೀಲೆ ಉಡಿಯಕ್ಕಿ ಹಾಕಿದರಪ್ಪಾ ಒಳ್ಳೆ ದುಡುಕಿಲೆ ಮುಂದಕೆ ನೂಕಿದರಪ್ಪಾ (ಕರೀಪ. ೨೦-೩) : ದುಡುಕು ಇದ್ದವಗೆ ಬಡಿತ ತಪ್ಪದು (ಗಾದೆ). ೩. ಉದ್ಧಟತನ : ಗುಡ್ಡ ಬೆರಳೊಳೆತ್ತಿ ದೊಡ್ಡಿಗೋವ್ಗಳ ಕಾಯ್ದು . . . ದುಡುಕು ಮಾಡಿ ಹಾಲುಮಡಕೆಗಳ ಒಡೆದು ಹಡಗನೇಱ್ ಬಂದು ಉಡುಪಿಲಿ ಇದ್ದನೆ (ಪುರಂದ. ३-३३-४).

ದುಡುಕಿನಾಳ್= ದುಡುಕುವ ಸ್ವಭಾವದವನು; ವಿಚಾರ ಮಾಡದೆ ಕೆಲಸಕ್ಕೆ ಕೈಹಾಕುವವನು : ಈಗಡಿನ ಕೀಡುಗಳ ಕುಱುತಾರರಯಲ್, ದುಡುಕಿನಾಳ್, ನೀನ್, ತಕ್ಕ ಕಾಲದಲೆ ತಟ್ಗಿ ನಡೆದುಕೊಳ್ (ಬದ್ರಕ್ಷ. ೫೩-೧೦೩೩). [ <ದುಡುಕು₁ ]

**ದುಡುಕುತನ** (ನಾ). ಆಲೋಚನೆ ಮಾಡದೆ ಮುನ್ನುಗ್ಗುವುದು : ನಿನ್ನ ಪವಿತ್ರಪ್ರಾಣವನ್ನು ಅಗ್ನಿದೇವನಿಗೆ ದುಡುಕುತನದಿಂದ ಅರ್ಪಿಸದಿರು (ಹಿಂತಿರು. ೬೩).

ದುಂದುಡುಕುತನ (ದ್ವಿರುಕ್ತಿ) : ಲಕ್ಷ್ಮಿ ಅಂತಹವಳಲ್ಲ. ಆಕೆಗೆ ದುಂದುಡುಕುತನವು ಇಲ್ಲ. ಆಕೆಯ ಸ್ವಭಾವವತಿಶಾಂತವು(ಲಕ್ಷ್ಮೀಪ್ರ. ४೮).
[ ದುಡುಕು₂ + – ತನ ]

**ದುಡುಕುದೋರು** (ಕ್ರಿ). ಅವಸರ ಪಡು ; ಆತುರಪಡು : ನಡತೆ ನುಡಿತೆಗಳಿಂದ ಹಿರಿದಹ ದುಡುಕುದೋರಲು ಪುತ್ರಮೋಹವು ಪಡೆದರಿಗೆ ಪರ್ಯಾಯವೆನಿಸುವುದೆ (ಗಗಚಾ. ೧೦-೬).

[ ದುಡುಕು₂ + ತೋರು (<ತೋಱು) ]

**ದುಡುಕುಪ್ರವೃತ್ತಿ** (ನಾ). ದಂಡಂಕಿನಿಂದ ನಡೆದುಕೊಳ್ಳುವಿಕೆ ; ದುಡುಕು ಪ್ರವೃತ್ತಿ ಅವರಲ್ಲಿ ಇರಲಿಲ್ಲ (ಮಹಾತ್ಮಾ. ೧೩).

[ ದುಡುಕು₂ + ಪ್ರವೃತ್ತಿ ]

**ದುಡುಕುಬುದ್ಧಿ** (ನಾ). ತಕ್ಕಷ್ಟು ಆಲೋಚನೆ ಮಾಡದೆ ಮುನ್ನುಗ್ಗುವ ಸ್ವಭಾವ : (ಪ). [ ದುಡುಕು₂ + ಬುದ್ಧಿ ]

**ದುಡುಕುಹೆಮ್ಮೆ** (ನಾ). ದುಡುಕುತನದಿಂದ ಉಂಟಾದ ಗರ್ವ: ದೊರೆಗಳ ದೊರೆ ಚಕ್ರಿಯೆನಿಸಿ ದರ್ಪವೃಷನು ಮೆರೆದನು : ಈಗಳದನು ದುಡುಕು ಹೆಮ್ಮೆದೂಳ್ಕೊದೆದುದೊ ಅರಿಯನು (ಶಾರಸಿ. ೯-೦೫೭).

[ ದುಡುಕು₂ + ಹೆಮ್ಮೆ (<ಪೆರ್ಮೆ) ]

**ದುಡುಕೆಸಗು** (ಕ್ರಿ). ಆಲೋಚಿಸದೆ ಕಾರ್ಯಮಾಡು ; ಅವಸರಪಡು : ಬೆಲೆವೆಣ್ಣಳ ಪೆರ್ಗಡೆ ನೀಂ ಕಲೆಯಜಾತುರವಣಿಸಿ ಬಿರುದು ಬೊಜಗರ ಬಂಕಂ ತೊಲಗೆ ದುಡುಕೆಸಗಿ ಕೆಕ್ಕಲಗೆಲೆವಂದಮನಿಂದು ಸವಿಯಲಂ ದೇಟ್ಟ್ರೆದಂ (ಚಳವಿ. ೬-೨೬೬). [ ದುಡುಕು₂ + ಎಸಗು₁ ]

**ದುಡುಗುಟ್ಟು** (ಕ್ರಿ). ಬಡಿದುಕೊಳ್ಳು ; ನಡುಗು ; ಸ್ಪಂದಿಸು : ಒಡನೆ ಕೈಮುಗಿದು ಪೆಣ್ಣುಗಳೆಲ್ಲ ಪೋದರು ದುಡುಗುಟ್ಟುವೆದೆಯ ಬಲ್ಲಿದಿದು (ಭರತ. ೪೮-೦೦೪). 'ದಡಗುಟ್ಟು₁' ಪರಾ.

[ <ದುಡುದುಡು + ಕುಟ್ಟು₁ ]

**ದುಡುದುಡನೆ**, ದುಡದುಡನೆ (ಅ). ದುಡುದುಡು ಎಂಬ ಶಬ್ದದೊಡನೆ: ದುಡುದುಡನೋಡಿ ಬರುತಿರ್ಪ ಬೇಡನಾಕಾರವಂ ನೋಡಿದಂ ರೂಢೀಶನು (ಹಕಶಾ. ೬-೦೮) ; ದುಡುದುಡನೆಯ್ದುಂದು [ಪಾಠಾಂ. ದಡದಡನೆಯ್ದುಂದು] ದುಂಡಿಯರಾ ಚೆಲ್ವರೊಡೆಯನ ಚೆಲ್ವ ನೋಡಿದರು (ಭರತ. ೨೧-೭೪). **ದುಡದುಡನೆ** : ವಃಡದಿಯ ತಾನೆತ್ತಿಕೊಂಡು ದುಡದುಡನಡಿಯಿಟ್ಟು ಶಕುನಿ ಮಂಚದ ಮೇಲೆ ಮಡಗಿಕೊಂಡನು ರಾಜಮೋಹಿ (ಭರತ. ೪೨-೦೫೦). 'ದಡದಡನೆ' ಪರಾ. [ ದುಡುದುಡು + – ಅನೆ₁ ]

**ದುಡುದುಡಿಕೆ** (ನಾ). ಬಳಲಿಕೆ ; ಆಯಾಸ : ತಾಯ್ ನೊಂದು ಬಳಲುತ್ತ ತಾಯ ದೇಹಕ್ಕಲ್ಲಿ ದುಡುದುಡಿ[ಪಾಠಾಂ. ಡು]ಕೆಯಾಗುತಿರೆ ದಾಯಿಳವುತೆ ನ್ನಸುಗೆ ಸಂದೇಹವಾಗುತಿರೆ ಇಂತು ನಾನಾ ವಿಧದ ಕಂಟಕಮುಮಂ ಕಳೆದು (ಪಿಂಡೋರ. ಹ. ೫೦೧-೦೬). [ ? ]

**ದುಡುದುಡು** (ನಾ). ಒಂದು ಅನುಕರಣ ಶಬ್ದ : ಓಡಿಹಿಡಿಹಿಡಿಯೆಂದು ಪುರಂದರವಿಠಲನ ದುಡುದುಡು ದುಡುದುಡನೇ ಓಡುತ . . . ಮೆಲ್ಲನೆ ಓಡಿಯಲು ಬಿಡಿ ಬಿಡಿ ಬಿಡಿ ದಮ್ಮಯ್ಯ ಎನ್ನುತ (ಪುರಂದ. ೨-೬೨-೩) ; ಬಸ್ಸಿನ ಬುಡದಿಂದೆದ್ದು ಬಂದು ಸಿದ್ಧಣ್ಣ ದುಡುದುಡು ಹೊರಟ (ಬೆಂಗಳ. ೧೧೪).

**ದುಡುಮ**, ದುಂಬ (ನಾ). ೧. ದಷ್ಟಪುಷ್ಟವಾಗಿರುವವನು ; ದಾಂಡಿಗ : ಈ ದುಡುಮ ಕೆಲಸಮಾಡುವುದರಲ್ಲಿ ತುಂಬಾ ಮೈಗಳ್ಳ (ರೂಢಿ). ದುಬ್ಬ: ೧ : (ಪ). ೨. ಮಂಕ ; ಮೂಢ : ಆ ದುಬ್ಬನಿಗೆಲ್ಲಿ ಕಂಡೀತು ಬಿಡ್ರೋ (ಬೆಳುಮ. ೮). 'ಡುಮ್ಮ' ಪರಾ.

[ ದುಡುಮು₂ (<ದುಮ್ಮು₁) + – ಅ₂ ]

**ದುಡುಮಿ**, ದಡಮಿ, ದುಬ್ಬಿ₁ (ನಾ). ೧. ದಷ್ಟಪುಷ್ಟವಾಗಿರುವವಳು ; ದಢೂತಿ ಹೆಂಗಸು : ದುಡುಮಿಯಾದ ಅವಳ ನಡಗೆಯೂ ನಿಧಾನ (ರೂಢಿ). ೨. (?) : ಒಡೆಯ ಕೈಲಾಸಪುರಕ ಕೈವಲ್ಯವಾದಂತ ದುಡುಮಿ ಕಲ್ಯಾಣ ಬಾರ ಒರಳಕ್ಕಿ ಪಾಡುನು (ಲೋಕಗೀ. ೨೧). ದಡಮಿ: ೧. ಏಳು ವರ್ಷದ ಅವಳ ಮಗಳು . . . ಕೆಂಗೂದಲ ದಡಮಿಯು ಸೆರಗು ಹಿಡಿದುಕೊಂಡು ನಿಂತಿದ್ದಳು (ಪುನರು. ೧೯೩). ದುಬ್ಬಿ₁ : (ಪ). [ ದುಡುಮ + – ಇ₃ ]

**ದುಡುಮು₁** (ಕ್ರಿ). ಸಶಬ್ದವಾಗಿ ಬೀಳು ; ರಭಸದಿಂದ ಧುಮುಕು : ಮೇಲಕೆ ಪುಟನೆಗೆವ ದುಡುಮ್ಮಿಗಾವೊಲೊಯ್ಯ ಅಗುಳ್ದ ತೇಲುವ ನೀರಾಟ ವೆಸೆದರಾ ಬಗಸೆಗಂಗಳ ಭಾವೆಯರು (ಶ್ರೀಪಾರಿ. ೩-೫೩) ; ಬೀಳುವೇಳುವ ಕೈದುಗಳನೀಡಾಡುವ ತೇಲುವ ಸುಳಿಯೊಳು ಸುಳಿವ ಆಳುವ ದುಡುಮುವ ಯಾಸುವ ಭಟರ ಹೇರಾಳದಿ ನದಿ ಹೂಳಿಮುದು (ನಾಗಳು. ೦೫-೬೦). 'ದುಡುಮ್ಮಿಱು' ಪರಾ. [ <ದುಡುಂ ]

**ದುಡುಮು₂** 'ದುಮ್ಮು₁' ನೋ.

**ದುಡುಮ್ಮನೆ** (ಅ). ೧. ದುಡುಂ ಎಂಬ ಶಬ್ದದೊಡನೆ : ಅವಳು ದುಡುಮ್ಮನೆ ನೀರಿಗೆ ಬಿದ್ದುಬಿಟ್ಟಳು (ರೂಢಿ). ೨. ಇದ್ದಕ್ಕಿದ್ದಂತೆ ; ಕೂಡಲೆ ; ತಕ್ಷಣ : ಎದುರಾಳಿಗಳನ್ನು ವಿರೋಧಿಸಿ ದುಡುಮ್ಮನೆ ಪರಾಜಯಗೊಳಿಸುವ ಒಂದು ನೂತನ ಚಾಕಚಕ್ಯವಿದ್ದೆ ಅವರಲ್ಲಿ (ರಾಜಪ.೮೧).

[ ದುಡುಂ + – ಅನೆ₁ ]

**ದುಡುಮ್ಮಿಱು**, ದುಡುಂಬಿಱು (ಕ್ರಿ). (ನೀರಿನಲ್ಲಿ) ಧುಮುಕಿ ಅಥವಾ ಕೈಯಿಂದ ಹೊಡೆದು ಶಬ್ದಮಾಡು : ಒಳಪೊಕ್ಕು ದುಡುಮ್ಮಿಱುದಾಡ ಲೀಸಲಗ್ಗಲಿಸಿದಲಂಪಿನಿಂ ಬಗೆದುದಂದು ಜನಂ ಘನಚಂದ್ರಿಕಾಂಬುವಂ (ಅಜಿಪು. ೬-೪೫) ; ಹಂಸೆಗಳ ಕ್ರೇಂಕಾರವೇ ಕಹಳೆಗಳ್ಕೈಯ್ಯರ್ವ ನೀರೊಳ್ದು ದುಮ್ಮಿಱುವ ವಿಜ್ಞಾನ್ಗಳ ರವಂ ತಂಬಟಂ (ಜೀರಸು. ೬-೨೧) ; ನಲಿದು ದುಡುಮ್ಮಿಱುವುತ ತೇಂಕಾಡುತ ನಲಿದಾಡುತ (ಪಂಪ್ರಸಾಂ. ೦೭-೨೦೫). **ದುಡುಂಬಿಱು** : ಅಲ್ಲಿಯೋಲಾಡಿಸಲವನಾನಂದದಿಂದೀಸಿ ದುಡುಂಬಿಱುದು ಕುಡಿದು ನೋಡಿ (ಪುಣ್ಯಾಸ್ರ. ೯-೩೭ ಪ). [ ದುಡುಂ + ಇಱು₁ ]

**ದುಡುಮ್ಮು** (ನಾ). ಒಂದು ಅನುಕರಣ ಶಬ್ದ : ದೊಗಹು ಧೊಕ್ಕು ದುಡುಮ್ಮು . . . ಗರಿಗರಿಲೆಂಬ ನಿಸ್ಸುರರವಂ ಏಗೆ ತಳ್ತಿಱಿದತ್ತು ಯುದ್ಧದೊಳ್ (ಗಿರಿಳ. ೬-೬೮).

**ದುಡುಹು** (ನಾ). ಒಂದು ಅನುಕರಣ ಶಬ್ದ: ದು[ಪಾಠಾಂ. ಧು]ಡುಹೆಂಬ ಧುಮ್ಮೆಂಬ ಘೋರೆಂಬ ಭೋರೆಂಬ ಕೂರಸಿಗಳರವಣೆಯ ದನಿಯಡಸುತಂ ಪುಟ್ಟೆ (ಅಹರ. ದೇ. ೪೨-೨) ; ಹೊಡದನಾ ಕೊಡಲಿಯಿಂ ತಲೆ ಮುಂಡ ಮೆರಡಲ್ಲಿ ದುಡುಹು ದುಮ್ಮೆಂದು ಬಿದ್ದವು (ವೀಕ್ಷ್ಮಕು. ೩-೧೭-೫೮).

**ದುಡ್ಡಸ್ತ** (ನಾ). ಹಣವುಳ್ಳವನು ; ಐಶ್ವರ್ಯವಂತ : ಅವನೊಬ್ಬ ಭಾರಿ ದುಡ್ಡಸ್ತ (ರೂಢಿ). [ ದುಡ್ಡು₁ + – ಸ್ತ ]

**ದುಡ್ಡಸ್ಥ** (ನಾ). = ದುಡ್ಡಸ್ತ: ದುಡ್ಡಸ್ಥರಿಗೇ ಈಗಿನ ಕಾಲದಲ್ಲಿ ಮರ್ಯಾದೆ (ರೂಢಿ). [ ದುಡ್ಡು₁ + – ಸ್ಥ ]

**ದುಡ್ಡು₁** (ನಾ). ೧. ಒಂದು ತಾಮ್ರದ ನಾಣ್ಯ: ಇಪ್ಪತ್ತು ದುಡ್ಡಿಗೆ ಸೇರು ತೀರ್ಥವ ಒಪ್ಪದಲಿ ಕ್ರಯಮಾಡಿ ಕೊಡಿಸುವ (ಪುರಂದ. ೦-೧೧೯-೨) ; ಹಿಂದೆ ರಘುರಾಮಂಗೆ ಕಾಡ ಕಪಿಗಳು ಕೂಡಿಯೊಂದು ದುಡ್ಡಾದರೆಂ ಸಂಬಳವು ಮಿಲ್ಲದೇ ಬಂದು ಸೇರಿದ ತೆರದಿ (ಅರ್ಜಾವಿ. ೨೬-೦೮). ೨. ಮೂರು ಕಾಸು ; ಕಾಲಾಣೆ ; ಒಂದು ಬಿಲ್ಲೆ(ಉಕ) : ಮಧುಮತಿಯ ಕಿಸೆಯಲ್ಲೊಂದು ದುಡ್ಡು ಇತ್ತು (ಹೊಬಿ. ೩) : ಪಂಡಿತರಿಗೆ ನಾಲ್ಕು ದುಡ್ಡ ಕೊಡಲಿಕ್ಕೆ ಇಷ್ಟೇಕೆ ಜೀನತನ?(ಅಕೋಳ. ೪). ೩. ನಾಲ್ಕು ಕಾಸು: ಎಲೇ ಎಡ್ಡ ಪ್ರಾಣಿಗಳಿರಾ ಅಡ್ಡದಾಸೆಗೆ ದುಡ್ಡಿನ ಲಾಭವ ಕಳೆವರೇ (ಅಜಿಂಡೇ. ೬೩-೦೭) ; ನಾಲ್ಕು ಕಾಸು ಒಂದು ದುಡ್ಡು, ಮೂರು ದುಡ್ಡು ಒಂದ ಆಣೆ, ಹದಿನಾರಾಣೆ ಒಂದು ರೂಪಾಯಿ–ಇದು ಹಿಂದಿನ ಕೋಷ್ಟಕ (ರೂಢಿ). ೪. ಹಣ ; ರೊಕ್ಕ : ದುಡ್ಡು ಕೂಡಿಟ್ಟು ಬಳಿದು ಹೋಗುವಾಗ ಬಳಲಿ ಬಳಲಿ ಆಳವಾರಿಗೆ ಬಂದೆ (ಪುರಂದ. ೨-೩೨-೧) ; ಅಳತೆ ತೂಗುವಿಕೆಯಲ್ಲಿ ನೀ ಸತ್ಯವಂತನುಮೆನಿಸಿಕೊಂಡೊಳ್ಳಿಮಾತಿಂದ ಮಾರು ದುಡ್ಡೋಗದಂತೆ

(ಅಶಾಪಿ. ೩೧-೩೪); ಬ್ಯಾಂಕಿಗಳಿಗೆ ಎರಡಾಣೆ ದುಡ್ಡೆಣಿಸಿ ಹೊರಟರು (ಮುಂಗಾರು. ೧); ಬ್ಯಾಂಕಿನಲ್ಲಿ ದುಡ್ಡಿಟ್ಟವರೆಲ್ಲರೂ ದುಡ್ಡಿದ್ದವರೇ (ಹುಚ್ಚುಹು. ೬೧): ದುಡ್ಡಿದ್ದವನೇ ದೊಡ್ಡಪ್ಪ (ಗಾದೆ). ೫. ಒಂದು ದುಡ್ಡಿನ ತೂಕ: ಅನ್ನಶುದ್ಧಿಗೆ ತುಪ್ಪ ದಿ ೧೫ಕ್ಕೆ ದುಡ್ಡು ತೂಕದಲ್ಲು ಸೇ ೧೫ಕ್ಕೆ ಕ್ರಯ (ಎಕ. VI, ಶೃಂಗೇರಿ. ೨೧-ಪುಟ ೩೬೨; 1652).

ದುಡ್ಡಿನ ಚೀಲ = ಹಣದ ಚೀಲ; ಥೈಲಿ; ಹಮ್ಮಿಣಿ: ತಿಂಗಳ ಕೊನೆಯಾದ್ದರಿಂದ ದುಡ್ಡಿನ ಚೀಲ ಖಾಲಿಯಾಗಿಬಿಟ್ಟಿದೆ (ರೂಢಿ). ದುಡ್ಡಿನ ಡಬ್ಬಿ = ಹಣವಿಡುವ ಡಬ್ಬಿ: ಅಜ್ಜಿಯ ದುಡ್ಡಿನ ಡಬ್ಬಿಯಲ್ಲಿ ಬರೀ ಚಿಲ್ಲರೆ ಕಾಸೇ ತುಂಬಿದೆ (ರೂಢಿ). ದುಡ್ಡುಕಾಸು = ಹಣ; ಧನ: ದುಡ್ಡು ಕಾಸನು ಕೂಡಿಹಾಕಲು ಹೋಗಿ ಹಡಗ ಸೇರಿಕೊಂಡ (ಜಾಗೀತ. ೫೩-೭). ದುಡ್ಡುತಿನ್ನು = ಇನ್ನೊಬ್ಬರ ಹಣವನ್ನು ನೀತಿಗೆ ವಿರುದ್ಧವಾಗಿ ಬಳಸಿಕೊಳ್ಳು.- ದುರುಪಯೋಗ ಪಡಿಸಿಕೊಳ್ಳು.- ಅಪಹರಿಸು: ಹುಲ್ಲು ತರುವಾಗ ಆಳುವ ಮನುಷ್ಯ ದುಡ್ಡು ತಿನ್ನುತ್ತಿದ್ದ. ಹೀಗಾಗಿ ಆ ಕೆಲಸ ನನಗೆ ಒಪ್ಪಿಸಲಾಯಿತು (ಸ್ಮೃತಿಚಿ. ೯೧). ದುಡ್ಡುದುಗ್ಗಾಣಿ = ದುಡ್ಡುಕಾಸು: ಅವನು ಬಹಳ ಕಷ್ಟಪಟ್ಟು ಒಂದಿಷ್ಟು ದುಡ್ಡುದುಗ್ಗಾಣಿ ಸೇರಿಸಿಟ್ಟಿದ್ದಾನೆ (ರೂಢಿ). ದುಡ್ಡು ನುಂಗು = ದುಡ್ಡುತಿನ್ನು: ಬೇರೊಬ್ಬರ ದುಡ್ಡು ನುಂಗುವಂತಹ ಹೀನಕಾರ್ಯ ಮತ್ತೊಂದಿಲ್ಲ (ರೂಢಿ). ದುಡ್ಡು ಹೊಡೆ = ದುಡ್ಡು ತಿನ್ನು: ಈ ವ್ಯವಹಾರದಲ್ಲಿ ದಳ್ಳಾಳಿ ಸಾಕಷ್ಟು ದುಡ್ಡು ಹೊಡೆದಿದ್ದಾನೆ (ರೂಢಿ).

[ ದೇ.॥ ತಮಿ. ಮಲ. ತುಟ್ಟು; ತುಳು. ತೆಲು. ಡುಡ್ಡು; ಕೊಡ. ದುಡ್ಡಿ ]

ದುಡ್ಡು₂ 'ದೊಡ್ಡು' ನೋ.

ದುಢುಂ (ನಾ). ಒಂದು ಅನುಕರಣ ಶಬ್ದ. 'ದಂಢುಮ್ಮಿಜು' ಪರಾ.

ದುಢುಂದಾಳಿ (ನಾ). ಇದ್ದಕ್ಕಿದ್ದಂತೆ ಮಾಡುವ ಆಕ್ರಮಣ.- ಮಂತ್ರಿಗೆ: ಶ್ರೀಮನ್ತ ನಂಜರಾಜಯ್ಯನ ದುಢುಂದಾಳಿಯ ಕೊಳ್ಳೆಯಲ್ಲಿ ನಿರ್ಮೂಲವಾಗಿ ಹೋಗುವರು (ಮಂತ್ರಶ. ೪೭-೬). [ ದುಢುಂ+ದಾಳಿ(<ದಾಟಿ) ]

ದುಢುಂಬಿಜು 'ದುಢುಮ್ಮಿಜು' ನೋ.

ದುಢುಮಿಜು 'ದಂಢುಮ್ಮಿಜು' ನೋ.

ದುಢುಮ್ಮನೆ (ಅ). ದಂಢಂ ಎಂಬ ಶಬ್ದದೊಡನೆ: ಅನುಕರಣಕ್ಕೆ- ಖಣಿಲ್ಲನೆ . . . ದುಢುಮ್ಮನೆ[ಪಾಠಾಂ. ದುಢುಮ್ಮೆನೆ, ಧಟಮ್ಮನೆ] (ಕಮರ. ೧೪ ಪ್ರಯೋ); ಅನುಕರಣಾವ್ಯಯಗಳು - ಗಟಗಟ . . . ಖಟಿಲನೆ, ದುಢುಮ್ಮನೆ, ಇತ್ಯಾದಿ (ಶ್ಮಶಿಡಿ. ೫೨). [ ದುಢುಂ + - ಎನೆ₁ ]

ದುಢುಮ್ಮಿಜು, ದಂಢಂಬಿಜು, ದುಢುಮಿಂಜು (ಕ್ರಿ). = ದುಡುಮ್ಮಿಜು: ಅಂತು ತನ್ನೊರೆಗಳ್ದೆರಸು ದುಢುಮ್ಮಿಜುದೋಲಾಡುವಲ್ಲಿ (ಶಾಂತಿಪು.೬-೨೬೪). ದುಢುಂಬಿಜು: ವಿಕಲ್ಪಬಿಂದುಗೆ-ಕದಂಪು, ಕದಪು . . . ದುಢುಂಬಿಜುದಂ. ದುಢುಮಿಜುದಂ (ಶಮದ. ೩೬ ಪ್ರಯೋ). ದುಢುಮಿಜು: ಮೇಲಿನ ಶಮದ. ಪ್ರಯೋಗವನ್ನು ನೋಡಿ. [ದುಢುಂ + ಇಜು₁ ]

ದುಣಕಲು (ನಾ). (ಉಕ). ಕೊಟ್ಟಿಗೆಯಲ್ಲಿ ದನಗಳಿಗೆ ಹುಲ್ಲು ಹಾಕುವ ಜಾಗ: ಗೋಂತಂ. [ ? ]

ದುಣ್ಣ (ನಾ). ೧. ದಪ್ಪವಾಗಿರುವುದು; ದಪ್ಪಪುಷ್ಪವಾಗಿರುವುದು. ೨. ದಪ್ಪವಾಗಿರುವವನು: "ಮಾವತಿ = ದಪ್ಪವಾದವಂ; ಮಾವಃ = ದುಣ್ಣಂ" (ಕಾಶಕ್ಕ. ೫೨). (ಗು). ೩. ಸ್ಥೂಲವಾದ; ದಪ್ಪವಾದ: ಅದಕ್ಕೇನು ಧಾಡಿ? ದಿಂಡೆ ದುಣ್ಣ ದಾಂಡಿಗ ನಾಯಿ (ಮಲೆಮ. ೬೨೫).

[ ದೇ.॥ ತುಳು. ದುಣ್ಣ, ದುನ್ನ ]

ದುಣ್ಣರ (ನಾ). ೧. ಕೆಟ್ಟವನು. ೨. ಯಮ: ದುಣ್ಣರನು ಬಂದೆನ್ನ ಸುಣ್ಣಗುದಿಯೊಳಗದ್ದಿ ಬಿಣ್ಣತ್ತುಮಪೆಟ್ಟುಗಳ ಪೊಣಿಸಿದವನು (ಪ್ರಭುಪು. ೩-೧೦೦).

[ <ಸಂ. ದುರ್ನರ ]

ದುತಯ, ದೂತಯಂ (ನಾ). ಎರಡರ ಜೊತೆ,— ಜೋಡಿ: ದೂತಯಂ, ದುತಯಂ, ದ್ವಿತಯಂ (ಶಬ್ದಾನು. ೩೭೭ ಪ್ರಯೋ). ದೂತಯ: ಮೇಲಿನ ಪ್ರಯೋಗವನ್ನು ನೋಡಿ. [ <ಸಂ. ದ್ವಿತಯ ]

ದುತಾರ್ (ನಾ). ಎರಡು ತಂತಿಗಳುಳ್ಳ ಒಂದು ಬಗೆಯ ವಾದ್ಯ: ಆ ತಂಬೂರಿಯ ಝುಂಕಾರಕ್ಕೆ ಅನುವಾದಿಯಾಗಿ ಒಂದು ದುತಾರ್ ಬಾಜಿಸುತ್ತಿತ್ತು (ನಗೆಹೂ. ೬೩). [ ←ಹಿಂ. ದುತಾರಾ ]

ದುತೀಯ, ದೂತೀಯ(ನಾ). ಎರಡನೆಯದು; ದ್ವಿತೀಯ: ದೂತೀಯಂ, ದುತೀಯಂ, ದ್ವಿತೀಯಂ (ಶಬ್ದಾನು. ೩೭೭ ಪ್ರಯೋ). ದೂತೀಯ: ಮೇಲಿನ ಪ್ರಯೋಗವನ್ನು ನೋಡಿ. [ <ಸಂ. ದ್ವಿತೀಯ ]

ದುತೂಂಬುರ್ (ನಾ). ಒಂದು ಊರಿನ ಹೆಸರು: ಅಸ್ಯ ಗ್ರಾಮಸ್ಯ ಪೂರ್ವ್ವದಿಕ್ಷೇಮಾನಿ ದುತೂಂಬುರ್ಪ್ಪಳ್ಳಿಂ ದಕ್ಷಿಣತಃ ಪರದಗೆಜುಪಳ್ಳಿಂ ಪಶ್ಚಿಮತಮ್ಮಮುನ್ನೆಗುಂಡಿಪಳ್ಳಿಂ (ಪ್ರಾಆಶಿ. ೧೯೪೪, ೦೫-೪೦; ಸು. 725).

[ ? ]

ದುತ್ತಂಡಿಕೆ (ನಾ). ದೌರ್ಜನ್ಯ: ದುತ್ತಂಡಿಕೆಯೊಳು ತನಗಿದಿರಾದ ಮನ್ನೆಯರ ತೊತ್ತಳಂದುಳಿದು ನಿರ್ವಂಶಮಂ ಮಾಡುವೆನೆನುತ್ತ ಕೋಪಾರೂಢನಾಗಿ (ಸಮ್ಯಕೌ. ೨-೯). 'ಉದ್ದಂಡಿಕೆ' ಪರಾ.

[ ದುತ್ತಂಡ₂ (P ← ಪ್ರಾ. ದುತ್ತುಂಡ) + - ಇಕೆ ]

ದುತ್ತಾರಿ (ನಾ). ೧. ಕಸೂತಿ ಕೆಲಸ ಮಾಡಿದ ಮಸ್ಲಿನ್ ಬಟ್ಟೆ: (ಕ). ೨. ತೆಳ್ಳನೆಯ ಹತ್ತಿಬಟ್ಟೆಯಿಂದ ಮಾಡಿದ ಒಂದು ಬಗೆಯ ಉಡುಪು: ಕುಪ್ಪಸ ಚಲ್ಲಣವೊಪ್ಪುವ ಪೈಠಣಿ ಸುಪ್ಪತ್ತಿಗೆ ದುತ್ತಾರಿ[ಪಾಠಾಂ. ಗಾಸಿ]ಗಳನು . . . ಹೊಲಿವುತ ಚಿಪ್ಪಿಗರಿರ್ದರೊಂದೆಸೆಯ (ಅಭ್ಯಂಊ. ೩-೯೦). [ ದೇ.॥ ತಮಿ. ತುತ್ತಾರಿ ]

ದುತ್ತೂರ 'ದುತ್ತೂರ' ನೋ.

ದುತ್ತೂರ, ದುತ್ತುರ, ಧುತ್ತೂರ (ನಾ). ಮದ್ದುಗುಣಿಕೆ; ಉಮ್ಮತ್ತಿ: "ದುತ್ತೂರಂ ಕಾಂಚನಮುನ್ಮತ್ತಂ" (ವಸ್ತುಕೋ. ೩೯-೩೬); ದುತ್ತೂರರಸಂ ಲವಣಮೆಂಬಿವಂ ನೆಲದಾಟಿಳ್ ಬಾರಿಸಿ ಪೂಸುಗೆ (ಲೋಕೋಪ. ೯-೦೦೦); ದು[ಪಾಠಾಂ. ದ]ತ್ತೂರ ಬಿತ್ತಿನಲ್ಲಿ ಕಲ್ಪತರು ಹುಟ್ಟಿ ಕಲ್ಪತರುವಿನ ಅಗ್ರದಲ್ಲಿ ಇಟ್ಟಿಯ ಹಣ್ಣಾಯಿತ್ತು (ಅಕಮಶಾ. ೦೫೬-೫೯೯); ದುತ್ತೂರದ ಹೂವಿನಂತೆಸೆವ ಹೆಗ್ಗಾಳೆಯ ಮೊಗವಿನಂತೆಯಾವಗಂ ಸರ್ವಮುಮನೊಳಕೊಂಡು ಶುಭ್ರವರ್ಣಾವಿರಳ ತನ್ನ ತಾನೇ ವಿವೇಕಿಸಿ ನೋಡಿ (ವೀಶೈಪು. ೮-೨೨-೦೩). ದುತ್ತುರ: ದುತ್ತುರವ ಸವಿದುದೋ ತಲೆ ಪಿತ್ತಂ ಹಿಡಿದುದೋ ಮನಕ್ಕೆ ಹಲವು ದೆಸೆಯಂ ಸುತ್ತುತಿದೆ (ಶಂಕಶಂ. ೦೦). ಧುತ್ತೂರ: ಕನಕಾಭಿಧಾನ ಸಾಮ್ಯದೆ ಜನಿಯಿಪುದುನ್ಮತ್ತವೃತ್ತಿಯಂ ಧುತ್ತೂರಂ ಕನಕಮೆತಾಂ ತತ್ಕ್ಷಣದೊಳ್ ಜನಿಯಿಪುದಚ್ಚರಿಯೆ ಜನದ ಮನದೊಳ್ ಮದಮಂ (ಚಂದ್ರಪು. ೦೦-೧೨೧). 'ದತ್ತೂರ' ಪರಾ.

[ <ಸಂ. ಧುಸ್ತೂರ, ಧುಸ್ತುರ ]

ದುದುಗೆಜು (ನಾ). ಒಂದು ಊರಿನ ಹೆಸರು: ನೊಟಮ್ಮನೊಳ್ ಕಾದಿ ರಾಚೆಯಗಟ್ಟ ಸತ್ತೊಡೆ ಪೆರ್ಮ್ಮಾಡಿಯು ಎಜುಯಪ್ಪನು ಬಿಟ್ಟು ಇಗ್ಗಲಿನುಂ ದುದುಗೆಜುಯುಮಂ ಕಲ್ನಾಡುವಡದ ಸ್ಥಿತಿ ಯಾವುದನ್ನೊಡೆ (ಎಕ. III, ನಂಜನ. ೦೬೯-೩; ಸು. 10 ನೆಯ ಶತ). [ ? + ಕೆಜು ]

ದುದ್ದಿಕೆ (ನಾ). ಒಂದು ಬಗೆಯ ಸಸ್ಯ: ಉಪ್ಪಿನ ರಸಗಾಯಿ ದುದ್ದಿಕೆ ಸೋರೆಯ ಕಾಯಿ . . . ಮೊದಲಾಗಿ ಆಗಮದೊಳು ನಿಷಿದ್ಧಮಪ್ಪಲ್ಲಿ ಕಂದಮೂಲ ಕರೀರ ಶಾಖಾಶಾಕಪುಷ್ಪಫಲಾದಿಗಳಂ ಕೊಳ್ಳದುದು (ಪಶಾರ. ೩೧೭); ಬೆಣ್ಣೆ ಕಳವಿಗೆ ಕಾಯಿ ಕರಜಗೆಯು ಹಣ್ಣು ದುದ್ದಿಕೆಯ ಕಾಯಿಗಳು (ದ್ವಾದಶಾ. ೦೫೫-೨೫೯). 'ದುಗ್ಧಿಕ' ಪರಾ.

[ < ದುಗ್ಧಿಕೆ ]

**ದುದ್ದು₁**, ದಂದ್ದೆ (ನಾ). ಸೌತೇಕಾಯಿಂ, ಕುಂಬಳಕಾಯಿ ಮೊದಲಾದವುಗಳ ಒಳಗಿರುವ (ಬೀಜವುಳ್ಳ) ಮೆದುವಾದ ಭಾಗ,- ತಿರುಳು: ಕುಂಬಳಕಾಯ . . . ಬೀಜವುಂ ಮತ್ತದಱ ದುದ್ದುವುಂ ಚೆನ್ನಾಗಿ ತೆಗೆದು ಹಾಕಿ . . . ಕರಿಬೇವುವುಂ ಹಾಕಿ ಮುಗುಳ್ವದನಾಗು ವಂತಡುವುದು (ಸೂಪಶಾ. ೫-೧೮); ಬೂದಿಗುಂಬಳದಕಾಯ ನಡುವೆ ಕತ್ತರಿಸಿ ಒಳಗಣ ಬಿತ್ತು, ದುದ್ದುಗಳ ತೆಗೆದು ಹಾಕಿ ಬೆಲ್ಲವ ಪುಡಿಮಾಡಿ ... . . . ಕೊಡಲು ಹುಚ್ಚುಪಿತ್ಥ, ಹುಚ್ಚು ದಾಹ ಸದ್ಯಃ ಶಮನವಹುದು (ವೃದ್ಯಸಾ. I. ೬೬); ಕುಂಬಳದ ಹಣ್ಣಿನ ತೊಕ್ಕು ಒಳಗಣ ದುದ್ದು ಬಿತ್ತಣಗಳ ಸಹ ತೆಗೆದು . . . ಹುರಿದು ಚೂರ್ಣವ ಮಾಡಿ(ಸಕವೃ. ೨೨೫). ದುದ್ದೆ : ನಿಂಬೆಹಣ್ಣಿನ ಬೀಜ ದುದ್ದೆ ಸಹ ತೆಗೆದು ಶುಂಠಿ, ಹಿಪ್ಪಲಿ ಸಹ ಇವನ್ನೆಲ್ಲ ಅರೆದು . . . ತೆಗೆದುಕೊಳ್ಳಲು ವಿರೇಚಕವಹುದು (ಸಕವೃ. ೩೦೩).
[ ದೇ.೫ ತವಿ. ತುತಿಯ, ತುತ್ತುರು = ತಾವರೆಯ ಬೀಜಕೋಶ;
ತೆಲು. ದುದ್ದು = ತಾವರೆಯ ಬೀಜಕೋಶ ]

**ದುದ್ದು₂** 'ದದ್ದು₁' ನೋ.

**ದುದ್ದೆ** 'ದುದ್ದು₁' ನೋ.

**ದುದ್ದೀಗ್ರಾಮ** (ನಾ). ಒಂದು ಹಳ್ಳಿಯ ಹೆಸರು. P ಈಗಿನ ಕೊಲ್ಹಾಪುರದ ಬಳಿಯ ದೂದಗಾವ : ಪೂರ್ವ್ವತಃ ದುದ್ದೀಗ್ರಾಮೋನಾಮ ಗ್ರಾಮಃ (ಇಇ. XVI, ೨೪-೬೫ : 1009). [ ದುದ್ದೀ₀ + ಗ್ರಾಮ ]

**ದುದ್ರುಮ** (ನಾ). ಹಸಿರು ಈರುಳ್ಳಿ ; "ಉಳ್ಳೀಗಡ್ಡೆ" (ಗಂಗಾಮು. ೧೬೮).
[ ಸಂ. ]

**ದುಧಿರ** (ಗು). ಭಯಂಕರವಾದ ; ಘೋರವಾದ : ಮದನನಂ ಕಾಲನಂ ತ್ರಿಪುರವಂ ತಿಂದುಗಿದು ದುಧಿರ ಭಿಕ್ಷುಕನ ಶುಕ್ರಾಕ್ಷಿಯಸ್ವಾಚಲದ ತುದಿಯೊಳ್ (ಐಕೋಶ. ೪-೪೬). [ < ಸಂ. ದುಧ್ರ ]

**ದುನಿಯಾ** (ನಾ). ಜಗತ್ತು ; ಪ್ರಪಂಚ ; ಲೋಕ : ತಮ್ಮ ಕೀರ್ತಿ ಈ ದುನಿಯಾ ಮೇಲೆ ಬಹಳ ದೊಡ್ಡದಾಗುವ ಹಾಗೆ . . . ಸಾಹೇಬರವರಿಗೆ ತಿಳಿಯ ಹೇಳಿ ಇದ್ದೇವೆ (ರಾಜೇಂದ್ರ. ೧೮೫).
[ ←ಅರ. ಫಾರ. ಹಿಂ. ಮರಾ. ದುನಿಯಾ ]

**ದುಪ್** (ನಾ). ಒಂದು ಅನುಕರಣ ಶಬ್ದ. 'ದುಪ್ಪನೆ' ಪರಾ.

**ದುಪಟ** 'ದುಪ್ಪಟ' ನೋ.

**ದುಪಟಿ** 'ದುಪ್ಪಟಿ' ನೋ.

**ದುಪಿಕಿ** (ನಾ). ವರ್ಷದಲ್ಲಿ ಸಿಗುವ ಎರಡು ಬೆಳೆ : ಇದು ಫಲವತ್ತಾದ ದುಪಿಕಿಭೂಮಿ (ರೂಢಿ). [ ←ಮರಾ. ದುಪಿಕೀ ]

**ದುಪುದುಪು** (ನಾ). ಒಂದು ಅನುಕರಣ ಶಬ್ದ : ಅಡಕಿದ್ದ ಮೂಟೆಗಳೆಲ್ಲ ದುಪುದುಪು ಎಂದು ಕೆಳಕ್ಕೆ ಬಿದ್ದುವು (ರೂಢಿ).

**ದುಪ್ಪಟ** 'ದುಪ್ಪಟಿ' ನೋ.

**ದುಪ್ಪಟಿ**, ದುಪಟ, ದುಪಟಿ, ದುಪ್ಪಟ, ದುಪ್ಪಟೆ, ದುಪ್ಪಟ್ಟ, ದುಬಟಿ, ದುವಟ, ದುವ್ವಟ, ದುವ್ವಟ್ಟ, ದೂಪಟ, ದೂವಟ, ದೂವಟಿ, ದೂವಾಟ (ನಾ). ೧. ಹೊದೆಯಲು ಅಥವಾ ಹಾಸಲು ಉಪಯೋಗಿಸುವ ಸಾಮಾನ್ಯವಾಗಿ ಎರಡು ಪದರಗಳನ್ನುಳ್ಳ ಬಟ್ಟೆ, - ವಸ್ತ್ರ ; ಚಾದರ ; ಹಚ್ಚಡ : "ದ್ವಿಪಟೀ = ದುಪ್ಪಟೀ" (ಶಾಶಕ್ಕ. ೨೬೯) ; ಒಮ್ಮೆ ಒಬ್ಬ ಗೃಹಸ್ಥರು ಮಹಮ್ಮದನಿಗೆ ಒಂದು ದುಪ್ಪಟಿಯನ್ನು ತಂದು ಕೊಟ್ಟಂತೆ (ಪೈಗಂಬ. ೫೮) ; ನಾನು ಹೊದ್ದಿದ್ದ ಹಚ್ಚಡ ದುಪ್ಪಟ ಆಯಿತು (ಕಥಾಮಂ. IV, ೮೨) ; ಮಾಡೋನು ಕಂಬಳಿಯವನು ದೂರೋದು ದುಪ್ಪಟಿಯವನನ್ನು (ಗಾದೆ). ೨. ಹೊದೆದುಕೊಳ್ಳುವವಸ್ತ್ರ; ಉತ್ತರೀಯ ; ವಲ್ಲಿ : "ವಲ್ಲೀ = ಬಳ್ಳಿಯುಂ, ದುಪ್ಪಟಿಯುಂ" (ಕಾಶಕ್ಕ. ೧೦೩) ; ದುಪ್ಪಟಿಗಳನ್ನೆಲ್ಲ ಸುತರ್ಗೆ ತರಿಸಿಕೊಟ್ಟನು (ಭರತ. ೪೬-೧೭೩) ; ನಳರಾಜನು . . . ನವರತ್ನಾಭರಣವಂ ತೊಟ್ಟು ಅಪರಂಜಿಸರಿಗೆ ದುಪ್ಪಟಿಯುಂ ಹೊದ್ದು (ಯುವಳ. ೬೨) ; ತಾನು ಹೊದ್ದಿದ್ದ ದುಪ್ಪಟಿಯನ್ನು ತೆಗೆದು ತಲೆಗೆ ಸುತ್ತಿಕೊಂಡುದಾಯಿತು (ನವನೀ. ೨೧). ೩. ಉಡುವ ಬಟ್ಟೆ, - ವಸ್ತ್ರ : ಅಸುಗದೆಳರ ದುಪ್ಪಟಿಯುಂ ಪಾಡಱ ದುಟ್ಟು ಪುಳಿಂದ ಪುರಂಧ್ರಿಯರೊಪ್ಪವಡೆದರಲ್ಲಿ (ಜಯುಕಾ. ೧೫-೩೮). **ದುಪಟ** : ೨. ಜೋಡಿಯ ಮೇಲೆ ಶಿವ್ಮತ್ತು ಆಗತಕ್ಕ ಕವಡಾ ಜೀನಸಗಳು. ೧. ಧೋತ್ರ ಜೋಡು . . . . ೨. ದುಪಟ ಮುಂತಾದವುಗಳು (ಮುಂಬಯ್ಯ. ೧೧೧) : ಮೊದಲು ಮೂರು ವರುಷ ವರುಷಕ್ಕೆ ಹತ್ತು ರೂಪಾಯಿ, ಊಟ, ಬಟ್ಟೆ - ಅಂದರೆ ಒಂದು ದುಪಟ, ಒಂದು ದಟ್ಟಿ (ದೇಶ್ಯಕ. ೩೭). **ದುಪಟಿ** : ೧. ಹಗಲಿನ ಸಭೆಯೇನೋ ಚದರಿದೆ ; ಆದರೂ ಅಲ್ಲಿ ಅದರ ಬಿಳಿಯ ದುಪಟಿ ಹಾಸಿದೆ (ನಿಬಂಧ. II, ೨೦೬). ೨. ಚಂದ್ರಕಾಂತಿಯ ದುವಟಿಯನ್ನು ಚಂದದಿಂದಲಿ ಪೊದ್ದನು (ಗೋಹಾರು. ೬-೨೯). **ದುಪ್ಪಟ** : ೧. "ಹಚ್ಚಡಂ ದುಪ್ಪಟಾಖ್ಯಂ" (ಮಂಗರಾ. ೧೧೧-೨೮). ೨. ಲಾಲಿತ ಚಿಂಬಾವುಗೆ ಮೆಟ್ಟಿ ಮೃದುವೆತ್ತ ಸಾಲಿಯ ದುಪ್ಪಟವಾಳ್ದು ಸೋಲಿಸಿ ತೊಲಗಿ ಪೋದವನ ನಿಟ್ಟಿಸುವ ಸಲ್ಲೀಲೆಯಿಂದಿದ್ದಳಾ ಕುವರಿ (ಮೋಹತ. ೨೮-೬) : ಕಟ್ಟಾಣಿ ಮುತ್ತು ತೆತ್ತಿಸಿದುಡಿಗೆಯೊಳೆಳವಟ್ಟು ಮೆಱೆದ ದುಪ್ಪಟದ ಸೃಷ್ಟಿಗೆ ನರರೂಪ ನರಸಿಂಹನ ಪೋಲ್ವವೊಲ್ಪು ಮೆಱೆದ ನರಸೇಂದ್ರ (ಕಂವವಿ. ೨೪-೬೨) ; ಚೀನಾ ಚಕ್ರವರ್ತಿಯವರು ಕೊಟ್ಟ ಅಪೂರ್ವವಾದ ರೇಷ್ಮೆ ದುಪ್ಪಟ ಅದನ್ನು ಕೊಡುತ್ತೇನೆ (ಅರ್ಯಾಕ. ೫). **ದುಪ್ಪಟೆ** : ೧. ಮಲಗಿದ್ದ ರಾಗವ್ವ, ತಾನು ಹೊದೆದಿದ್ದ ದುಪ್ಪಟೆಯನ್ನು ಎಳೆದುಕೊಂಡೇ ಓಡಿ ಬಂದ (ವಂಶವೃ. ೧೧೫). **ದುಪ್ಪಟ್ಟ** : ೧. ಸಂದೂಕದ ಬೀಗದ ಕೈ, ಹಾಸಿಗೆಯ ಮೇಲಣ ದುಪ್ಪಟ್ಟ, ವೀಳೆಯದ ಸುಣ್ಣ, ಗ್ಲಾಸಿನ ನೀರು (ಬಂಕಿಮು. ೯೯). ೨. ರಾಮರಾಯನು ಎದ್ದು ಅಂಗರೇಕಿ ರುಮಾಲುಗಳನ್ನು ಧರಿಸಿಕೊಂಡು, ದುಪ್ಪಟ್ಟಾವನ್ನು ಹೊದ್ದುಕೊಂಡು . . . ಹೊರಟನು (ಶ್ರೀರಾಮು. ೦೬೮). **ದುಬಟಿ** : ೧. ಮಗು ದುಬಟಿಯನ್ನು ಹೊದ್ದುಕೊಂಡು ಮಲಗಿತ್ತು (ರೂಢಿ). ೨. ಚಿನ್ನದ ದುಬಟಿಯನ್ನು ಹೊದ್ದು ತೆರೆಯಿಂದ ಹೊರಟು (ಸೌಪರಿ. ೪-೨೦). **ದುವಟ** : ೨. ಪಟಪಲ್ಲವ ಛತ್ರ ಚಮರ ಝಲ್ಲರಿಗಳ್ದುವಟ[ಪಾಠಾಂ. ಗಳ್ದುವ್ವಟ್ಟ] ಜಗಜಗಿವ ಜೋಡುಗಳು ಛಟಛಟಧ್ವನಿಯಿಂದೆ ಬಿಸಿಯ ಕೆಂಗಿಡಿಗಳು ಪುಟನೆಗೆದುವು ನಭಸ್ತಳಕೆ (ಮೋಹತ. ೪೦-೩೮); ಸೊಧನವಿಲಾಸನಂ ಪುಷ್ಪದಿಂ ರಚಿತಂ ತಾ ದುವಟಮಂ ಪೊದಿಸುತ (ಲಿಂಗಪು. ೨೮-೨೭). **ದುವ್ವಟ** : ೧. ಹಾಸುವುಂಚದ ಮೇಲೆ ಲೇಸಪ್ಪ ದುವ್ವಟವ [ಪಾಠಾಂ. ದುಪ್ಪಟವ] ಹಾಸಿ ಕರಚರಣಗಳನೊತ್ತಿ ನಿವಿಷಕ್ಕೆ ಮೋಸ ಮಾಡುವರು ಯತಿಗಳ (ಗುರುಬೋ. ೧-೯೫) ; ಮಾಸಲಿಂ ತೊಳೆಯೆ ಮಡಿಯಾದ ದುವ್ವಟದಂತೆ . . . ನೆಲ ಹೇಸುವಂದದ ನಡೆಯ ನುಳಿದು ಸಚ್ಚರಿತಮಂ ತಳೆದು ಮಯಣನೊಪ್ಪಿರ್ದನು (ಸಮ್ಯಕ್ತ್ವ. ೧೧-೨೦). ೨. ಬಿಳಿಯ ಪಟ್ಟೆಯನುಟ್ಟು ದುವ್ವಟದ ಹಚ್ಚಡವನೆಳವಡಿಸಿ ಸಾಲಂಗಿಯಂ ತೊಟ್ಟು . . . ಸೌಂದರಂ ವನಕೆ ಪೋಜವಟ್ಟನು (ಸೌಂದರು. ೧೧-೧೧) ; ಆನಂದರಸ ದೇವಗಿರಿ ಕೊಂದಿ ಬಿಳಿದಿನದೇನವಣ್ಣಿಪೆ ದುವ್ವಟ [ಪಾಠಾಂ. ಪಾಟ]ಗಳ (ಅಮುಶಾಂ. ೪-೧೭). ೩. ಉರ ತುಂಬ ಮೆಱೆವ ಕಂಚುಕ ಕಾಲ ಕುಪ್ಪಸ ಮಿಱುಗುವ ದುವ್ವಟದ[ಪಾಠಾಂ. ದುವ್ವಪದ] ನಿಱಿಗಳ . . . ಚೆಲ್ವ ತುರುಕನಾರಿಯರೊಪ್ಪಿದರು (ಕಂವವಿ. ೨೦-೮೩). **ದುವ್ವಟ್ಟ** : ೨. ನಾರಿಯಂಗಗಂಧರಸಮನಾಂತ ದುವ್ವಟ್ಟ[ಪಾಠಾಂ. ಟ]ಮುದಲ್ಲದೆ ತಾಳದ . . . ನಲ್ಲನೊಪ್ಪಿದಂ (ಹಾದಚಂ. ೩-೧೧೩). **ದೂಪಟ** : ೪. ರೇಷ್ಮೆಯ ಬಟ್ಟೆ ; ಪಟ್ಟೆವಸ್ತ್ರ : ಪದೆದು ದೂಪಟದ ಆವಕೆಗಳ ನಲವಿನಿಂ ತೊಟ್ಟು (ಅರಾಕ. ೬-೨). **ದೂವಟ** : ೨. ಹೊದೆದ ದೂವಟವ ನಿವಾಳಿಯಾಟ್ಟೊಡನೊಂದ ಹೊದವುತ ನೃಪ ತನ ತಾಯ ಇದಿರಲ್ಲಿ

ಸಾಷ್ಟಾಂಗವೆಱಗಲು (ಭರತೇ. ೯೭-೪೩) ; ಚಾರುತರ ಪಂಚಾಮೃತಂಗಳಿಂ ದಭಿಷೇಕಗೈದು ದೂವಟವ ಪೊದಿಸಿ (ಸಿದ್ಧೇಶು. ೯-೬೦) : ರಂಭೆ ಶ್ವೇತಂಗೆ ನಿಜರಮಣೀಯಮಾಗಿ ಪನ್ನೀರೊಳಂ ಮಜ್ಜನಂಬೊಗಿಸಿ ದೂವಟವ ಪೊದಿಸಿ (ಪ್ರಭುಶು. ೩-೯೧). ೪. ಎಳೆವೆಣ್ಣುಡಲ್ ನಿಱಿಯ ಓಡಿದ ದೂವಟವೊ ಪೇಳೆನಲು ಬೆಳ್ಮುಗಿಲೆಸೆದವು (ಕೀರಮ. ೪-೩) : ಶುಭ್ರ ದೂವಟವ ಸ್ಮರಬಾಣಗಱಿಯಂತೆ ನಿಱಿವಿಡಿದುಡಿಸಿದರ್ ದರಹಾಸಮುಖಿಗೆ (ಕೋಹಶ. ೨೩-೧೩) : ನಡುವ ಬಳಸಿ ಬಂದ ದೂವಟದೊಲ್ಲಿ ತನ್ನೆಡದ ತೋಳೊಳು ಸುತ್ತಿ ನಿಮಿರೆ . . . ನಡೆತಂದನಾ ಮೋಡಿಕಾಱ (ಭರತ. ೩೯-೧೪) ; ನಲ್ಲಳಂಗಗಂಧಂ ಬಗೆಗೊಂಡ ದೂವಟಮುನಲ್ಲದೆ ತಾಳದ . . . ಕಾಂತ ನೊಪ್ಪಿದಂ (ರಾಜಶೇ. ೧೧-೩೦). ದೂವಟಿ : ೪. ದೂವಟಿಯುಡ ಸುತ್ತಿ ಚಾವಡಿಯೊಳಹೊಕ್ಕು ಭೂವರನೆಡೆಗೆಯ್ದುವಾಗ (ಭರತ. ೫೭-೧೩). ದೂವಾಟ : ೨. ವೀರೇಶ ನೀಂ ಸೌಂದರ್ಯ ದೂವಾಟಮಂ ತೊಳೆದು ಪೊದಿಸು (ಪ್ರಭುಶು. ೬-೬೦).

[ ದೇ.॥ ತಮಿ. ತುಪ್ಪಟ್ಟಿ, ತುಪ್ಪಟ್ಟಾ; ಮಲ. ತುಪ್ಪಟ್ಟಿ, ತುಪ್ಪಟ್ಟಾವು; ತುಳು. ದುಪ್ಪಟ, ದುಪ್ಪಟಿ; ತೆಲು. ದುಪ್ಪಟಿ, ದುಪಟ, ದುಪ್ಪಟ./ ಮರಾ. ದುಪಟಾ, ದುಪಟ್ಟಾ : ಹಿಂ. ದುಪಟಾ, ದುಪಟೀ, ದುಪಟ್ಟಾ, ದುಪಟ್ಟೀ ]

ದುಪ್ಪಟಿ 'ದುಪ್ಪಟ' ನೋ.

ದುಪ್ಪಟ್ಟ 'ದಂಪ್ಪಟ' ನೋ.

ದುಪ್ಪಟ್ಟು (ನಾ). ಎರಡರಷ್ಟು : ಇಮ್ಮಡಿ : ಮಧ್ಯಾಹ್ನ ಕೆಲಸಕ್ಕೆ ಹೋದಾಗ ಕತ್ತೆಗಳು ಮುಂಜಾವಿನಕಿಂತ ದುಪ್ಪಟ್ಟಾಗಿದ್ದವು (ಕುರಿದಮ. ೧೭೦) : ಯಾವ ಅಂಚಿಚೀಟಿಯೂ ಇಲ್ಲದ ಪತ್ರಗಳ ಮೇಲೆ ಇಲಾಖೆ ಯವರು ದುಪ್ಪಟ್ಟು ದಂಡ ವಸೂಲಿ ಮಾಡುತ್ತಾರೆ (ಕವಿಕೋ. I, ೬೫) : ಇಂದಿಗೆ ಹಣ ಉಳಿಸಿಕೊಂಡು ನಾಳಿಗೆ ದುಪ್ಪಟ್ಟು ಕಳೆಯುವುದು ಎಂಥ ವ್ಯವಹಾರಜ್ಞಾನ ? (ಸುಕೀವು. ४०) : ಈ ಅಂಗಡಿಯ ಮೇಲೆ ನಾ ಸುರಿಸಿದ ಬೆವರಿನ ಅರ್ಧದಷ್ಟನ್ನು ನನ್ನ ಮಗ್ಗದ ಮೇಲೆ ಸುರಿಸಿದ್ದರೆ ಇದರ ದುಪ್ಪಟ್ಟು ಗಳಿಸುತ್ತಿದ್ದೆ (ಮೂರುದಾ. ೬೦) : ದುಪ್ಪಟ್ಟಿದ್ದ ರಕಮು ಅರ್ಧ ಕ್ಕಿಳಿಸುವದೂ ಬಡ್ಡೀದರ ಕಡಿಮೆ ಮಾಡುವುದೂ ಇವೆಲ್ಲ . . . ಉಳಿತಾಯವೇ ಎಂದನು (ದಾಕಹು. ೫೮). [ ದು + ಪಟ್ಟು₂ ]

ದುಪ್ಪಡಿ (ನಾ). (?) : ನಿಯತ ದ್ವಿತ್ವಕ್ಕೆ–ಪಪ್ಪುಕಂ . . . ಟಿಪ್ಪರಂ, ದುಪ್ಪಡಿ (ಶಮದ. ೩೬ ಪ್ರಯೋ).   [ ? ]

ದುಪ್ಪನೆ (ಅ). 'ದುಪ್' ಎಂಬ ಶಬ್ದದೊಡನೆ : (ಕ).

[ ದುಪ್ + – ಅನೆ₁ ]

ದುಪ್ಪಳ, ದುಬ್ಬುಳಿ, ದೊಬ್ಬುಳಿ (ನಾ). ೧. ಮನೆಯಂ ಒಂದು ಭಾಗ: ಪಾದರಿಯ ಪಟ್ಟಸಾಲೆಯೊಳಂ ಬಂದ ಮಾವಿನ ಬಳ್ಳಿವಾಡದೊಳಂ ತಳಿತ ಪಚ್ಚಕರ್ಪೂರಬಾಳೆಯ ಸುಳಿಗಳಿಂದೊಪ್ಪುವ ದುಪ್ಪಳಗಳಿಂದಂ . . . ಗುಜ್ಜುಮಾವಿನ ಸಜ್ಜೆವನೆಗಳಿಂ ಚೆಲ್ವಾಗಿರೆ (ನಾಗಕು. ೩೦-೫೫ ವ). ದುಬ್ಬುಳಿ : ೨. ಮೇಲಿನ ಮಂಹಡಿ,–ಉಪ್ಪರಿಗೆ ; "ಸಿರಿಯ ಕರುಮಾಡ ವೈಭವದಿಂದ ಕೂಡಿದ ಉಪ್ಪರಿಗೆ" (ಪ್ರಶಬ್ದ) ; ಕನಕಮಯಮಾಟಾ ಕೂಟಂಗಳಿಂದೇಳಂಟಾದಿಯಾದಿ ದ್ವಾದಶ ಷೋಡಶ ನೆಲೆಯ ದುಬ್ಬುಳಿ ಗಳಿಜ್ಞಾ [ಜ್ಞಾ] ಲಿನಲಿ ವಿಭ್ರಾಜಮಾನದ ಜಿನಭವನಂಗಳೆಸೆದಿರ್ಪುವು (ಆದಿಪ. ೫-೬). ದೊಬ್ಬುಳಿ : ೨. "ದೊಬ್ಬುಳಿ [ಪಾಠಾಂ. ದುಬ್ಬುಳಿ] ಸಿರಿಯ ಕರುಮಾಡ" (ಕಬ್ಬಿಕೈ. ೧೨).   [ ? ]

ದುಪ್ಪಿ, ದುಪ್ಪೆ (ನಾ). ೧. ಒಂದು ಬಗೆಯ ಜಿಂಕೆ : ಎಕ್ಕಲನ ಪೊಕ್ಕರಿಂದು ದುಪ್ಪಿ ಸಾರಂಗಕುಂ ಕುಕ್ಕುರಗಳಿಂ ಬಿಡುತೆ (ಶರಕು. ೨೧-೩೩). ದುಪ್ಪೆ : ೨. ಕವಲೊಡೆದಿರುವ ಕೊಂಬುಗಳನ್ನುಳ್ಳ, ಚುಕ್ಕೆಗಳುಳ್ಳ ಜಿಂಕೆ ; ಸಾರಂಗ : ಕರುಳ್ಗಳ ವಗೆಯುತ ನಾಯ್ಗಳ ಬಗಿಯುತ ದುಪ್ಪೆಯು ಜಗಿಯುತ ಶಬರರು ವಗರಿಸಿ ಕಾಡಿನ ಮೃಗಗಳನೆಲ್ಲವನು (ಹಮಡ. ೧೮). 'ಚುಕ್ಕೆದುಪ್ಪಿ' ಪರಾ.

[ ದೇ.॥ ತೆಲು. ದುಪ್ಪಿ ; ಕೊಲಾ. ಡುಪ್ಪಿ ; ಗೊಂಡಿ. ಡುಪ್ಪರ್ ]

ದುಪ್ಪು₁ 'ದುಂಪು' ನೋ.

ದುಪ್ಪು₂ (ನಾ). (?) : ಒಪ್ಪೀಸಿದೇನು ನಿನಗೆ ದುಪ್ಪೀನ ಶೀಕ್ಷಕೆ ಎನುತಾಲಿ ಯಿಂದುಮತಿಗೆ ಜನಪಾನು ಪೇಳುತಾಗ (ಹಮಡ. ೧೯೯).   [ ? ]

ದುಪ್ಪೆ 'ದುಪ್ಪಿ' ನೋ.

ದುಪ್ಪೆಗೆಣಸು (ನಾ). ಒಂದು ಬಗೆಯ ಗಡ್ಡೆ,–ಗೆಣಸಂ : ದುಪ್ಪೆಗೆಣಸು, ಹೆಬ್ಬು (ಮೃಶಿಗಿ. ೩೧-೫೯೩).   [ ದುಪ್ಪೆ? + ಗೆಣಸು (<ಗೆಣಸು) ]

ದುಪ್ರತಿ (ನಾ). ಮೊದಲಿನ ಪ್ರತಿಯಂತೆಯೇ ಸಿದ್ಧಪಡಿಸಿದ ಇನ್ನೊಂದು ಪ್ರತಿ ; ನಕಲು ; ಪ್ರತಿರೂಪ: (ಒಂದು ಪತ್ರದ ಅಥವಾ ದಸ್ತೈವಜಿನ) ದುಪ್ರತಿ. ನಕಲು (ಅಸಲಿನಂತೆಯೇ ಕಾನೂನಿನ ಅಂಗೀಕಾರವುಳ್ಳದ್ದು) (Duplicate. ಇಂಕನಿ).   [ ದು + ಪ್ರತಿ ]

ದುಫಸಲ್ (ನಾ). ಒಂದು ಜಮೀನಿನಲ್ಲಿ ವರ್ಷಕ್ಕೆ ಎರಡು ಬೆಳೆ ತೆಗೆಯುವುದು : (ಕೃಶಗಿ. II, ೫೪೭).   [ ದು + ಫಸಲ್ ]

ದುಬಟ 'ದುಪ್ಪಟ' ನೋ.

ದುಬದುಬ (ನಾ). ಒಂದು ಅನುಕರಣ ಶಬ್ದ : (ಕ).

ದುಬಾರಿ (ಗು). ೧. ಎರಡರಷ್ಟು; ಇಮ್ಮಡಿ; ಎರಡು ಪಟ್ಟು. 'ದುಬಾರಿ ಕೆಲಸ' ಪರಾ. ೨. ಅತಿಯಾದ ; ಹೆಚ್ಚಾದ ; ಅಧಿಕವಾದ : ದುಬಾರಿ ಬಡ್ಡಿ ಹಾಕುವುದರಲ್ಲಿಯೂ ನಿಸ್ಸೀಮರು (ಪ್ರವಾಇ. II, ೩೩೨); ಅತ್ತ ಕಡೆ ಬರುತ್ತಿದ್ದ ದುಬಾರಿ ಬಡ್ಡಿಗಾರರನ್ನು ಕಂಡ ಕೂಡಲೇ ಜನ ಓಡಿ ಹೋದ ದ್ದರ ಕಾರಣವನ್ನು ತಿಳಿದುಕೊಂಡನು (ನಗೆಹೂ. ೯೯). 'ದುಂಬಾರಿ ಬೆಲೆ' ಪರಾ. (ನಾ). ೩. ಹೆಚ್ಚು ಬೆಲೆಯುಳ್ಳದು : ತಂಟೆ: ಅರ್ಜಿ ಹಾಕಿಕೊಂಡರೆ ಎಲ್ಲವೂ ಸರಿಹೋಗುತ್ತದಂತೆ. ಆದರೆ ಅದು ದುಬಾರಿಯ ಕೆಲಸವಂತೆ (ಪುನರು. ೧೯೪) : ಅನುಭವಶಾಲೆಯ ಶುಲ್ಕ ದುಬಾರಿಯದಲ್ಲಿ ರಿಯಾಯಿತಿಯಿಲ್ಲ (ಇಂಜಾಪ. ೧೦೮-೨೯). ೪. (ಆಲಂ) ಅಪಾಯಕಾರಿಯಾದ ವ್ಯಕ್ತಿ (?) : ದುರಾತ್ಮಚಾರಿಯಂ ದುಬಾರಿಯಂ ದೃಷ್ಟಪಾಂಡ್ಯರಾಜನುತ್ಕನಿಷ್ಠಕರ್ವದಲ್ಲಿ ತಾಂ ಸ್ಪಷ್ಟಮಾಗಲಿಟ್ಟು ಕಾಯ್ದು ನಪ್ಪುಱಿಂದೆ ಪೆರ್ಚದೇ (ಹಾಲಾಸ್ಯ. ೩-೩-೪೧).

[ ←ಪಾರ. ದುಬಾರಾ, ದೋಬಾರಾ ; ಮರಾ. ದುಬಾರ್, ದುಬಾರಾ, ದುಬಾರೀ ; ಹಿಂ. ದುಬಾರಾ, ದೋಬಾರಾ./ತುಳು. ದುಬಾರಿ ]

ದುಬಾರಿಕೆಲಸ (ನಾ). ೧. ಎರಡು ಪಟ್ಟು ಕೆಲಸ; ಎರಡರಷ್ಟು ಕಾರ್ಯ: ಹೊಲಕ್ಕೆ ಮಡಿಕೆಯ ಹೊಡಿಯುವುದೇತಕ್ಕೆ ದುಬಾರಿಕೆಲಸವೆಂದು ವ್ಯೆಗಳ್ಳತನದಿಂದ . . . ಅಷ್ಟಕ್ಕೆ ಸಂತುಷ್ಟರಾಗುತ್ತಾರೆ (ಕೃಷಿಪ್ರ. ೫೦). ೨. ಬಹಳ ಖರ್ಚು ಉಂಟಾಗುವ ಕೆಲಸ : ಈಗಿನ ಕಾಲದಲ್ಲಿ ಮನೆ ಕಟ್ಟಿಸುವುದು ಬಹಳ ದುಬಾರಿಕೆಲಸ (ರೂಢಿ). ೩. (ಆಲಂ) ಅಪಾಯ ಕಾರಿಯಾದ ಕೆಲಸ; ಹೆಚ್ಚು ತೊಂದರೆಯುಳ್ಳ ಕೆಲಸ : ನೀವೇನೂ ಶಾಶ್ವತವಾಗಿ ಮುಖಂಡರಾಗಿ ಉಳಿಯುವುದಕ್ಕಾಗುವುದಿಲ್ಲ. ಆದ್ದರಿಂದ ದುಬಾರಿ ಕೆಲಸಕ್ಕೆ ಕೈಹಾಕಬೇಡಿ (ಹಂಚಿಹಂ. ೧೭೮).   [ ದುಬಾರಿ + ಕೆಲಸ]

ದುಬಾರಿಖರ್ಚು (ನಾ). ಬಹಳ ಹೆಚ್ಚಾದ ವ್ಯಯ,–ವೆಚ್ಚ : ಬೆಲೆ ಏರಿಕೆಯ ಈ ಕಾಲದಲ್ಲಿ ದುಬಾರಿಖರ್ಚನ್ನು ಮಾಡಬಾರದು (ರೂಢಿ).

[ ದುಬಾರಿ + ಖರ್ಚು (<ಕರ್ಚು₄) ]

ದುಬಾರಿಬೆಲೆ (ನಾ). ಹೆಚ್ಚಾದ ಕಿಮ್ಮತ್ತು ; ಬಹಳವಾದ ಕ್ರಯಂ : ಇಂದಿನ ರೇಷನ್ ಮತ್ತು ಸಾಮಾನು ದುಬಾರಿಬೆಲೆ ಕಾಲದಲ್ಲೂ . . . ದೋಸೆಗಳನ್ನು ಆರುಕಾಸಿಗೊಂದರಂತೆ ಮಾರುವ ಏರ್ಪಾಡು ಮಾಡಿದ್ದೇನೆ

(ನಾಡಿಗೇ. ೨೪೬) : ಆರುತಿಂಗಳು ಹೇಗೋ ಕಾಲ ಹಾಕಿ, ಇನ್ನಾರುತಿಂಗಳು ದುಬಾರಿಬೆಲೆ ಕೊಟ್ಟು ಸಾಮಾನುಗಳನ್ನು ಕೊಂಡು ಸಂಸಾರ ಸಾಗಿಸಬೇಕು (ನನ್ನೂರು. ೩೧೭). [ ದುಬಾರಿ + ಬೆಲೆ ]

**ದುಬಾರಿವೆಚ್ಚ** (ನಾ). = ದುಬಾರಿ ಖರ್ಚು: ದುಬಾರಿವೆಚ್ಚದ ಯಜ್ಞಯಾಗಾದಿಗಳ ನೆರವಿಲ್ಲದೆಯೇ ವ್ಯಕ್ತಿಯು . . . ಪರತತ್ತ್ವವನ್ನು ಕುರಿತು ಧ್ಯಾನಮಾಡಿ ಸಾಮೀಪ್ಯವನ್ನು ಸಾಧಿಸಬಹುದು (ತತ್ತ್ವಪ್ರಾ. ೧೫೪).

[ ದುಬಾರಿ + ವೆಚ್ಚ ]

**ದುಬಾರಿಸು** (ಕ್ರಿ). (?): ಸುಬಾಹುಸಯನಾಂತರಂ ಹನುಮಿನುತ್ತ ಸನ್ನಾಸಿಕಂ ದು[ಪಾಠಾಂ. ದೂ]ಬಾರಿಸದ ಸತ್ಯುಚಾಂತರಮಿಪ್ಪೆಯ್ದು ದೀರ್ಘಂ ಪಲಂ (ಹಾಲಾಸ್ಯ. ೧-೧೨-೩೭). [ ? + –ಇಸು ]

**ದುಬಾಷಿ** 'ದುಭಾಷಿ' ನೋ.

**ದುಬಾಸಿ** 'ದುಭಾಷಿ' ನೋ.

**ದುಬುದುಬು** (ನಾ). ಒಂದು ಅನುಕರಣ ಶಬ್ದ: ಇದ್ದಕ್ಕಿದ್ದಂತೆ ದುಬುದುಬು ಎಂದು ಮಳೆ ಬೀಳಲು ಆರಂಭವಾಯಿತು (ಜೂಗಿ).

**ದುಬ್ಬಿ** (ನಾ). ೧. ಸಂಶಯ ; ಹೊಯ್ದಾಟ : ದುಬ್ಬಿಮೂಲಗಳರಿ ದಧ್ಯಾತ್ಮ ಸ್ವಾರಸ್ಯಲಬ್ಧಮಂ ತಿಳಿದಿರ್ಪ ಯೋಗಾಢ್ಯರಿಂಗೆಯುಪಲಬ್ಧಿ ಯಿಂದುಣಬಡಿಸಿ ಸೌಖ್ಯದಿಂದನಿಬರಂ ಪೊಂಗಿಸಿದನಿಂಗಡಲೊಲು (ಶರಶು. ೧೭-೦೦). 'ದುಗ್ಡೆ' ಪರಾ. ೨. ನಿರಾಶೆ ; ಚಿಂತೆ ; ದುಃಖ. 'ದುಬ್ಬಿಗೊಳ್ಳು' ಪರಾ. ೩. ಹೊಟ್ಟೆಕಿಚ್ಚು ; ಅಸೂಯೆ. 'ದುಬ್ಬಿಪಡು' ಪರಾ. [ ←ಹಿಂ. ದುಬಧಾ, ದುಬಿಧಾ, ದುಬಿಧ./ಸಂ. ದ್ವಿವಿಧ ]

**ದುಬ್ಬಿಗೊಳ್ಳು** (ಕ್ರಿ). ಹತಾಶನಾಗು ; ವ್ಯಥೆಪಡು ; ಬೇಗುದಿಗೊಳ್ಳು : ತನ್ನ ಸಂದಿಗ್ಧಪರಿಸ್ಥಿತಿಗಾಗಿ ತೀರ ದುಬ್ಬಿಗೊಂಡಂತೆ 'ಅಲ್ಲಾ' ಎಂದು ನಿಟ್ಟುಸಿರಿಡುತ್ತಾ . . . ಕೈ ಚಾಚಿದ (ನನ್ನರ. ೪೪).

[ ದುಬ್ಬಿ + ಕೊಳ್ಳು$_1$ (<ಕೊಳ್$_1$) ]

**ದುಬ್ಬಿಪಡು** (ಕ್ರಿ). ಹೊಟ್ಟೆಕಿಚ್ಚು ಪಡು ; ಕರುಬು ; ಮತ್ಸರಿಸು : ಕಮಲಮ್ಮ ಅವರ ಜೀವನ ನೋಡಿ ಗಂಭೀರಮುಖ ಮಾಡಿಕೊಂಡು ನಿಲ್ಲುತ್ತಿದ್ದಳು . . . ಲಕ್ಷುಂದೇವಿ ಮಾತ್ರ ಒಳಗೇ ದುಬ್ಬಿಪಡುತ್ತಿದ್ದಳು (ತಾಯಿಕ. ೩೭). [ದುಬ್ಬಿ + ಪಡು$_1$ ]

**ದುಬ್ಬ** 'ದಂಡಂಬು' ನೋ.

**ದುಬ್ಬಗಾಣಿಸು** (ಕ್ರಿ). ಪ್ರಕಟಪಡಿಸು ; ವ್ಯಕ್ತಗೊಳಿಸು : ಒಬ್ಬಳ ಮೇಲೆ ತನಗೆ ಸೋಲವಿದ್ದರು ದುಬ್ಬಗಾಣಿಸನದ ನುಡಿದು ಒಬ್ಬ ಪುರುಷನೊಬ್ಬ ಸತಿಯೊಳಿಪ್ಪಂತಿಹನುಬ್ಬಸವಿಲ್ಲದೆಲ್ಲರೊಳು (ಭರತೇ. ೫-೯೭).

[ <ತುಬ್ಬು$_3$ + ಕಾಣಿಸು ]

**ದುಬ್ಬಿ$_1$** 'ದಂಡುಮಿ' ನೋ.

**ದುಬ್ಬಿ$_2$** (ನಾ). ದೊಡ್ಡಪಾತ್ರೆ ; ಕೊಪ್ಪರಿಗೆ : ಸರ್ಬನಾಶಕನೆಂಬನೊಬ್ಬನು ದುಬ್ಬಿಯಲಿ ಜನಿಸಿದನು ಕೌರವನು (ಸಂಧಿಕ. ೧೫-೬೮).

[ ದುಬ್ಬು (<ದುಮ್ಮು$_1$) + –ಇ$_3$ ]

**ದುಬ್ಬು** 'ದುಮ್ಮು$_1$' ನೋ.

**ದುಬ್ಬುಳಿ** 'ದಂಪ್ಪಳ' ನೋ.

**ದುಬ್ಬುಳುಕ** (ನಾ). (?) : ಸರಕಾರಕ್ಕೆ ರುಜು ಇಲ್ಲದೆ ರೈತನಾಗಬಾರದು ಅದೇತೆಂದೊಡೆ ಇಪ್ಪುಳ್ಯಾತನೇ ಪಾಟ್ಯಾ ರೈತ ಇಲ್ಲದಾತ ದುಬ್ಬುಳುಕ ಎಂದನಯ್ಯಾ ನಿಮ್ಮ ಶರಣ (ವಚಸಂ. ೬೦-೬೦). [ ? ]

**ದುಬ್ಬೆಸನ** (ನಾ). ಕೆಟ್ಟಚಾಳಿ ; ದುಷ್ಟವ್ಯಸನ : ಹುಸಿವ ತನಲ್ಪ ಬಯ್ವ . . . ಬೇಸಬೆಳೊಲೊಂದಿದೆವೆಂಬ ಕೂಡೆ ದುಬ್ಬೆಸನದೊಳಿಕ್ಕಿ ದೇವರನವಂತವೆ ತಿಂಬ ತಪಸ್ವಿಯಲ್ಲಿ ಹೋಲಿಸುವುದೆ . . . ಹರಿಸಕ್ತಿದೇವನನ್ (ಶಾ. IV, ೦-೯೦ ; 1204). [ <ಸಂ. ದುರ್ವ್ಯಸನ ]

**ದುಭಾಷಿ**, ದುಬಾಷಿ, ದುಬಾಸಿ (ನಾ). ೧. ಭಾಷಾಂತರ ಮಾಡಿ ಹೇಳುವ ವ್ಯಕ್ತಿ.– ತಿಳಿಸುವ ವ್ಯಕ್ತಿ : ಅವರಿಗೆ ದುಭಾಷಿಯು ಕೆಲಸ ಮಾಡುವ ಮೊದಲನೆಯ ಪ್ರಸಂಗ ಇಲ್ಲಿಯೇ ಬಂದಿತು (ಕಠವೀ. ೨೦೭). ದುಬಾಷಿ : ೧. ನೆಕ್ಲರೋವ್ ದುಬಾಷಿಯಾದನು (ಪುನರು. ೫೭೮) : ಅಂಥಾ ಭಾರೀ ದುಬಾಷಿಗಳು ಯಾರಾದರೂ ಸಿಕ್ಕಿದರೆ . . . ನಾನೂರು ವರಹ ಸಂಬಳವನ್ನು ಕೊಟ್ಟು ಅವರನ್ನು ಇರಿಸಿಕೊಳ್ಳೋಣವು (ಮುಸುಗ. ೪೫) ; ಸಂದರ್ಭದಲ್ಲಿ ನೀವು ನಮ್ಮ ದುಬಾಷಿಗಳಾಗಿದ್ದರೆ ಚೆನ್ನಾಗಿರುತ್ತಿತ್ತು (ಕೃಷ್ಣಚಿ. ೨೦೪). ದುಬಾಸಿ : ೧. "ದುಬಾಸಿ–ದ್ವಿಭಾಷಿ" (ಶಬ್ದಕೋ. ೬೦); "ಅರ್ಥ ವಿವರಣೆ ಮಾಡುವವನು ; ವ್ಯಾಖ್ಯಾಕಾರ. ಬೇರೆ ಬೇರೆ ಭಾಷೆಗಳನ್ನಾಡುವವರ ಮಾತನ್ನು ಒಬ್ಬರಿಂದೊಬ್ಬರಿಗೆ ಬಾಯಿಮಾತಿನಲ್ಲಿ ಭಾಷಾಂತರ ಮಾಡಿ ಹೇಳುವವನು ; ದುಬಾಸಿ" (Interpreter. ಇಂಕಿನಿ).

೨. ಎರಡು ಭಾಷೆಗಳನ್ನು ಬಲ್ಲ ವ್ಯಕ್ತಿ : ಯಿಲಿ ಕಾವಳು ದುಬಾಸಿಮಗನ ವಂಶಸ್ಥರದೂ (ಎಕ. XIV, ಶ್ರೀರಂಗ. ೧೮೭-೨೦ : 1863).

[ ←ಹಿಂ. ಮರಾ. ದುಭಾಷೀ./ಸಂ. ದ್ವಿಭಾಷಿನ್ ]

**ದುಮಗುಟ್ಟು** 'ದುಮುಂಗುಟ್ಟು' ನೋ.

**ದುಮಜಿ**, ಧುಮ್ಮುಚಿ (ನಾ). ಕುದುರೆಯ ಜೀನಿನ ಹಗ್ಗ.–ಬಾರು : ೧ ಸಿಂಹದ ತಲೆ ೧೮ ದುಮಜಿ ಗುಬ್ಬಿ ೨ ಯದರ ಕೆಳಗಣ ಪಟ್ಟಿ (ಎಕ. XIV, ನಂಜನ. ೨೯೩-ಪುಟ ೦೯೩ : 1847). ಧುಮ್ಮುಚಿ : ಅವನ ಘೋಟಕಂಗಳ್ಗಂದುಂ ಧುಮ್ಮುಚಿಯನಿಕ್ಕಿಗಿತ ಪರಿಯವನ್ನಾಡಿಸಿ ತದ್ವಕೀಲಿಯಂ ಮಾಣಿಸಿದಂ (ಕಳನ್ನ. ೯-೩೩).

[ ← ಪಾರ. ದುಮ್ಚಾ ; ಹಿಂ. ಮರಾ. ದುಮಚೀ ]

**ದುಮದುಮಿಸು** 'ದುಮುದುಮಿಸು' ನೋ.

**ದುಮಾನ$_1$** 'ದುಮ್ಮಾನ' ನೋ.

**ದುಮಾನ$_2$** (ನಾ). ಒಂದು ಬಗೆಯ ಡೇರೆ: ಹಲವು ಬಣ್ಣದ ಮುಗಿಲಾಗಸದಿಂದೇತಕಿಳಿದುವೀ ಧರೆಗೆಂದೆನಿಸಿ ತಳತುವು ದೂಸು ದುಮಾನಗೂಡಾರವಾಬಲದೊಳು ತಿಂಥಿಣಿಯಾಗಿ (ನಾಗಕು. ೦೫-೦೦೮) ; ಮಹಾಶೂರರಂ ಕಡಿದವರಾನೆ ಕುದುರೆ ಬೊಕ್ಕಸ ದೂಸು ದುಮಾನ ಬಿರುದು ಮುಂತಾದವಂ ಕೊಂಡು (ಸಕಪ್ರ. ೩ ಪ್ರಸ್ತಾವನೆ). 'ದುಮ್ಮಳ$_2$' ಪರಾ. [ ? ]

**ದುಮಾಲಿ** (ನಾ). ೧. ಸರ್ಕಾರ ಮತ್ತು ಖಾಸಗಿ ವ್ಯಕ್ತಿ ಈ ಇಬ್ಬರ ಆಳ್ವಿಕೆಗೆ ಒಳಪಟ್ಟ ಗ್ರಾಮ ಅಥವಾ ಜಮೀನು : ದುಮಾಲೀ ಭೂಮಿಗಳ ಪರಭಾರೆ ಜಮಾಖರ್ಚು ಬಿಟ್ಟು ಆ ವರ್ಷದ ಒಟ್ಟು ಆದಾಯ ೩೫೫೬೦೫ ರೂಪಾಯಿ (ಕಭಾಗ. ೩೯೦). ೨. ಖಾಸಗೀ ಒಡೆತನಕ್ಕೆ ಸೇರಿದಂದಂ ಇನಾಂಗ್ರಾಮ : ಆರದಲ್ಲಿ ೧೨೦೪ ಗ್ರಾಮಗಳಿದ್ದವು ; ಅವುಗಳಲ್ಲಿ ಸರಕಾರೀ ೧೧೦೩, ದುಮಾಲಿ ೨೦೦ (ಕಭಾಗ. ೩೩೯).

[ ← ಮರಾ. ದುಮಾಲಾ ; ಪಾರ. ದುಬಾಲ್ ]

**ದುಮಿಕ್ಕು** 'ದುಮ್ಮಿಕ್ಕು' ನೋ.

**ದುಮು** (ನಾ). (ಕೋಪ, ಅಸಂತುಷ್ಟಿಯನ್ನು ಸೂಚಿಸುವ) ಒಂದು ಅನುಕರಣ ಶಬ್ದ. 'ದುಮುಗುಟ್ಟು' ಪರಾ.

ದುಮುದುಮು (ದ್ವಿರುಕ್ತಿ) : "ದುಮುದುಮು = ಉರಿಯುವುದು. ರೇಗುವುದು" (ಜಾನಕೋ. ೬) : ಹಗಲೆಲ್ಲ ದುಮುದುಮು ಉರೀತಿರತಾನ (ರಂಗಗೀತ. ೩೩).

**ದುಮುಕ**, ದೂಮುಕ (ನಾ). ಎರಡು ಮುಖಗಳಿಂದ ಕೂಡಿದುದು : ದೂಮುಕಂ, ದುಮುಕಂ, ದ್ವಿಮುಖಂ (ಶಬ್ದಾಸು. ೩೭೭ ಪ್ರಯೋ).

ದೂಮುಕ: ಮೇಲಿನ ಪ್ರಯೋಗವನ್ನು ನೋಡಿ. [<ಸಂ.ದ್ವಿಮುಖ]

**ದುಮುಕದುಂಡಿ** (ನಾ). (?) : ಕಸಮಾರಿಗೇಕೆ ದುಮುಕದುಂಡಿ ? (ಗಾದೆ)

[ ? ]

ದುಮುಕು 'ದುಮ್ಮಿಕ್ಕು' ನೋ.

ದುಮುಗುಟ್ಟು, ದುಮುಗುಟ್ಟು (ಕ್ರಿ). ೧. ಊದಿಕೊಳ್ಳು ; ದದ್ದರಿಸು ; ಉಬ್ಬು : ಜ್ವರದಿಂದ ಅವಳ ಮುಖ ದುಮುಗುಟ್ಟುತ್ತಿದೆ (ಕೂಡಿ). ೨. ಸಿಡುಗುಟ್ಟು; ಅಸಂತುಷ್ಟಿ ತೋರು; ಮುಖಗಂಟಿಕ್ಕು; ಸಿಂಡರಿಸು: ಬೆಳಗಿನಿಂದ ಹುಬ್ಬುಗಂಟಿಕ್ಕಿ ದುಮುಗುಟ್ಟುತ್ತಲೆ ಇದ್ದಳು (ಚತಚಾ. II· ೯೪೨) ; ಬೆಳಗಿನ ವೋಡಗಳು, ಕೋಪ ಬಂದ ಮನುಷ್ಯ ಮಾತನಾಡದಲಾಗದೆ ಹೋದರೆ ಹೇಗೆ ದುಮುಗುಟ್ಟುತ್ತ ದುಪ್ ಎಂದುಕೊಂಡಿರುತ್ತಾನೋ ಹಾಗಿದ್ದುವು (ನಿಬಂಧ. II. ೧೮೩) ; ಯಾವಾಗಲೂ ದುಮುಗುಟ್ಟುತ್ತ ಇರುವುದೇಕೆ ? (ಸ್ವಾಮಿಸ್ವೇ. ೩೭). ದುಮುಗುಟ್ಟು : ೨. "ದುಮುಗುಟ್ಟು = ಸಿಟ್ಟಾಗು ; ಉರಿ" (ಜಾನಕೋ. ೬). [ ದುಮು + ಕುಟ್ಟು₁ ]

ದುಮುದುಮನೆ (ಅ). ದುಮುದುಮು ಎಂಬ ಶಬ್ದದೊಡನೆ : ಅಲ್ಲಿಯ ವರೆಗೆ ಅವನ ಹೃದಯದಲ್ಲಿ ಹೊರಗಂಡಿ ಕಾಣದೆ ಮಡುಗೊಂಡಿದ್ದ ಪ್ರೇಮ ಪ್ರವಾಹ ದ್ವಾರ ತೆರೆದಂತಾಗಿ ದುಮುದುಮನೆ ಹರಿಯಲಾರಂಭಿಸಿತು (ಪುತರು. ೪೯೮). [ <ದುಮು + – ಅನೆ₁ ]

ದುಮುದುಮಿಸು, ದುಂದುಮಿಸು, ದುಮದುಮಿಸು (ಕ್ರಿ). ೧.=ದುಮು ಗುಟ್ಟು ೨ : ಕೋಪವೇ ದುಮುದುಮಿಸುತ್ತಿರುವ ಮೊಗದವರು . . . ನೆರೆದರು (ಬದುಕಿ. ೧೩೪). ೨. ಆವರಿಸು ; ಇಡುಗು ; ತುಂಬು : ಜಯ ಘೋಷವು ರಾಜಾಂಗಣದಲ್ಲಿ ನೆರೆದ ಸಂದಣಿಯಿಂದೆದ್ದು ಮೂರು ಬಾರಿ ಬಾಂದಳವನ್ನು ದುಮುದುಮಿಸಿತು (ವೀರಬಂ. ೬೩) ; ಗದ್ದಲದಿಂದ ದುಮು ದುಮಿಸಿದ ಪಡಸಾಲೆ ಬರಿದಾಯಿತು (ಗಂಮುಯಿ. ೧೭). ದುಂದುಮಿಸು : ೨. ಇಷ್ಟಾಗುವಲ್ಲಿ ಮೇಲಿನ ಧರ್ಮಶಾಲೆಯ ಪರಿಸರದಿಂದೆದ್ದ ಗುಲ್ಲು ಬಾಂದಳವನ್ನು ದುಂದುಮಿಸಿತು (ವೀರಬಂ. ೫೦). ದುಮದುಮಿಸು : ೩. ಪ್ರತಿಧ್ವನಿಸು ; ಅನುರಣನವಾಗು : ನನ್ನ ಕಿವಿಯಲ್ಲಿ ಹಾಗೆ ದುಮ ದುಮಿಸುವಂತಿದೆ ಆ ಭಜನೆ (ಸ್ಮೃತಿಚಿ. ೪೫೭). [<ದುಮು + – ಇಸು₁]

ದುಮ್ಮಜಲು (ನಾ). ಎರಡಂತಸ್ತಿನ ಕಟ್ಟಡ : ಹೂಂ. ದುಮ್ಮಜಲಾಗೇದ. ಕೆಳಗ ಮೋಟಾರಖಾನಿ, ಮ್ಯಾಲೆ ಸರ್ವಿಸ ಕಂಪನಿಯ ಆಫೀಸು (ದಾಸಹು. ೯). [ ದು + ಮಜಲು./ಮರಾ. ದುಮಜಲಾ, ದುಮಜಲೀ ]

ದುಮ್ಮತಿ 'ದುರುಮಂತಿ' ನೋ.

ದುಮ್ಮನ 'ದುಮ್ಮಾನ' ನೋ.

ದುಮ್ಮರಾಸ್ಮೆ 'ದುಂಪರಾಸ್ಮೆ' ನೋ.

ದುಮ್ಮಸ (ನಾ). ಒಂದು ಬಗೆಯ ಸಿಹಿಯ ತಿನಿಸು : ಆಕಳ ಹಾಲಾಗ ದುಮ್ಮಸ ಮಾಡ ಪರಡಿ ಸವತೀ ಬೀಜ ಪಾಯಸ ಮಾಡ (ಮಲ್ಲಿಗೆ. ೮೩). [ ? ]

ದುಮ್ಮಸಾಲೆ 'ದುಮ್ಮಿಸಾಲು' ನೋ.

ದುಮ್ಮಳ₁ (ನಾ). ಕಳವಳ ; ಚಿಂತೆ ; ದುಗುಡ: ಕರ್ಮವ ಮಾಡುವಲ್ಲಿ ಆ ಕರ್ಮದ ಮರ್ಮವನರಿಯದೇಕು ಆ ಮರ್ಮದ ಮರ್ಮವನರಿವಲ್ಲಿ ಉಮ್ಮಳ ದುಮ್ಮಳವೆಂಬ ಸುಖಸುಮ್ಮಾನವೆಂಬ ಉಭಯವಡಗಿದಲ್ಲಿ ಪ್ರಾಣ ಲಿಂಗ ಸಂಬಂಧ (ಪೋಲೀಮಾ. ೭೫-೦೯) : ಒಡನೆ ದುಮ್ಮಳ ತವಿಸುವಂತೆ . . . ಲಲನೆ ಪರವೆಗೆ ಸೌಂದರಾಧಿಪನ ತಂದಿತ್ತು ಸಲಹೈಯ್ಯ (ಸಾಂಚಪು. ೮-೬೯). [ <ಉಮ್ಮಳ ]

ದುಮ್ಮಳ₂ (ನಾ). ಒಂದು ಬಗೆಯ ಡೇರೆ : ಗುಡಿ ದುಮ್ಮಳ ಚಂಪೆಯ ಗೂಡಾರಂ ಗಡಣಿಸೆ ತರತರದಿಂ ಬಿಡೆ ಕೆಲಕೆಲವೆಡೆಯೊಳು ಚೀನ ಮಹಾ ಚೀನದ ದೇವಾಂಗದ ಕಾವಿಗಳಾ (ಕುಮುರಾ. ೧೭-೨೩) ; ಗುಡಿ ಗೂಡಾರಂ ಚೆಲ್ವಂಗಡಿ ಚೌಂಗಿ ಚಂಪೆ ತಿವುರಿ ದುಮ್ಮಳವಿವಱೊಂದಡಸಿದ ವಸುರಿಂ ಕಪ್ಪಿಂ ಕಡುಗೆಂಪಿಂ ಮೆಱೆದುದವನ ಪೊಱವೀಡು ಕರಂ (ವಾರಪು. ೧೧-೧೯). 'ದುಮಾನ್ನ' ಪಠಾ. [ ? ]

ದುಮ್ಮಾನ, ದುಮಾನ₁, ದುಮ್ಮನ (ನಾ). ೧. ಮನಸ್ಸಿನ ಉಮ್ಮಳ ; ಚಿತ್ತಕ್ಷೋಭೆ: ಏನುವಂ ಕಾಣದೋರಂತೆ ಮಱವಟ್ಟು ದುಮ್ಮಾನವೊಡಲಂ ಕೀವಿ ತುಳುಕಾಡುತಿರಲು ರಿಪುಭೂನಾಥಶರಧಿಪಡಬಾನಲಂ ಮಱೆದು ಚಿಂತಾಚಿತ್ರನಿರುತಿರ್ದನು (ಹಕಕಾ. ೬-೩೮) : ದುಮ್ಮಾನಂ ಕೀರ್ದೋಡೆನಗೆ ರಿಪುಜಯೋಪಾಯಮಾವುದು (ರಕಕು. ೨-೭೩ ವ) ; ಕೆತ್ತ ದುಮ್ಮಾನದಲಿ ದ್ರೌಪದಿಯುತ್ತಮೆಯುಲಾ ದೃಢಪತಿವ್ರತೆಗೆತ್ತಣದು ಪರಿಭವವಿದೆಂದಸುರಾರಿ ಚಿಂತಿಸಿದ (ಕುವ್ಯಾಸ. ೭೦೩. ೧೫-೧೩೪) : ಆಗ ಬಿಜ್ಜಳಂ ದುಮ್ಮಾನದಿಂ ಕುಳ್ಳಿರೆನಲು (ಚಬಸು. ೭-೨೫) ; ಕಾತರಿಸಿ ಕಳೆಗುಂದಿ ದುಮ್ಮಾನದಿಂ ಪೊಕ್ಕೆ ನಂತಃಪುರಕೆ ಪುತ್ರವೃಗುವಹಿವನಂತೆ (ಅಮಿಥಾ. ೦೯-೪೭) : ಆ ದರೆ ದುಮ್ಮಾನಕ್ಕೆ ಒಳಗಾಗಿದ್ದ ವ್ಯಕ್ತಿಯು ಹುಡುಗಾಟಕೆಯು ಇಲ್ಲವೆ ಬಡಿ ವಾರದ ಮೇಳಕ್ಕೆ ಅರ್ಹತೆ ಪಡೆದಿರಲಿಲ್ಲ (ಹೇಮಂತ. ೭೮). ೨. ದುಃಖ ; ದುಗುಡ ; ಅಳಲು ; ಚಿಂತೆ : "ಬೇವಸಂ, ದುಮ್ಮಾನಂ, ಉಮ್ಮಳಂ – ಈ ೩ ಚಿಂತೆ" (ಶಕಸಾ. ೧೨-೨೨೭); ಕತ್ತಲೆಯಲ್ಲಿ ಗತಿಯ ಕಾಣದೆ ದುಮ್ಮಾನ ನೆಲೆಗೊಂಡಿತ್ತು ಸುಮ್ಮಾನ ಹೋಯಿತ್ತು (ಅವಚಂ. ೪೦-೪೭೦) ; ಕಂದ ನುಡಿ ದುಮ್ಮಾನ ಬೇಡೆನ್ನಾಣೆನುತ ಸಂತೈಸಿದನು ಮಗನ (ಕುವ್ಯಾಸ. ೦೭-೦೭) ; ಕಳೆಗುಂದಿದ ವದನ ದುಮ್ಮಾನವಾರಿಂದಾಯ್ತು (ತೊರರಾ. ೬-೨೭-೬೪) ; ಮನೆಮನೆಗಳಿಗೆ ದುಮ್ಮಾನವಡಸಿತು (ಸವತಿ. ೨೦೦) ; 'ಈ ಪ್ರಾಸಾದದಲ್ಲಿ ನನಗೆ ಪುಣ್ಯಭಾಗದ ಲಭ್ಯವಿಲ್ಲ' ಎಂದು ದುಮ್ಮಾನ ಹೊಂದಿ ಒಂದು ಕಡೆ ಅಲುತ್ತಾ ನಿಂತಳು (ಹತ್ತು.ದು. ೩೩). ೩. ಕಷ್ಟ ; ಹಿಂಸೆ ; ತೊಂದರೆ ; ಕೇಡು ಕಂ : ಭೂನಾಥ ಬೆಟ್ಟದ ಚಾಮೇಂದ್ರ ಬಹು ದುಮ್ಮಾನವಿತ್ತನ್ನ ರಿಪುಗಳಿಗೆ (ಕಂಠವಿ. ೩-೮೧); ಒಡಲಿನಬ್ಬರವೇನು? ಅತುಮದ ನಾಣ್ಯೇನು? ಪೊಡವಿಗಿದೆ ದುಮ್ಮಾನ (ಮಂಕುಳ. ೧೯೧); ಬಿಲದೊಡತಿ ನಾನಿಂತು ಅಳಿಯೆ, ಬಲು ದುಮ್ಮಾನ ಕುಲಕೆ ಬಹುದನುಮಾನ ಬೇಡ, ತಿಳಿಯಮ್ಮಾ ! (ಕಎಪು. ೩೩-೩). ೪. ಅವಮಾನ; ಅಪಮಾನ : ಅಖಿಳ ಧರಣೀಪಾಲಕರ ದುಮ್ಮಾನವನು ಪಾಂಚಾಲದೇಶವ ಕಳೆದು ಹೊಕ್ಕರು ತಮ್ಮ ನಗರಿಗಳ (ಕುವ್ಯಾ ಆ. ೦೬-೧) ; ಮುದಿ ತುಂಬುರಗೆ ಸಮ್ಮಾನವುಪ್ಪೆಡೆಯೊಳೆನಗೆ ದುಮ್ಮಾನವಾದುದು ಗಡ ! (ಅದ್ಭುತ. ೨೦-೯): ನೆಲಗಟ್ಟನ್ನು ನೀರೆಂದು ಭ್ರಮಿಸಿ ತಾನು ಉಟ್ಟಿದ್ದ ಬಟ್ಟೆಯನ್ನು ಮುದುರಿಕೊಂಡನು. ಅದು ನೀರಲ್ಲ ವೆಂದು ತಿಳಿದಾಗ ದುಮ್ಮಾನದಿಂದ ಮುಖ ತೋರಿಸದೆ ಮುಂದೆ ಹೋದನು (ವಚಧಾ. ೮೭). ೫. ಅಸಮಾಧಾನ ; ಅಸಂತುಷ್ಟಿ : ಒಮ್ಮೆ ನಿನ್ನೊಳಗೆ ಪತಿಯು ಬಗೆ ದುಮ್ಮಾನವಾಗೆ ... ಸುಮ್ಮನಿಹುದು ಗುಣವಮ್ಮ (ಹಾಕಂತ. ೩೭ ಅಧಿಕರ). ದುಮಾನ₁ : ೨. ಸುಮಾನ ಹೋಗಿ ದುಮಾನವಾಯಿತು ಮತ್ತೆ ಜನಪತಿಗೆ (ಪ್ರಭುಲೀ. ೦೦-೨೨). ದುಮ್ಮನ : ೨. "ದುಮ್ಮನ – ದುರ್ಮನಸ್ = ವ್ಯಥೆ" (ತದ್ಭಕೋ. ೨೦) ; ಕಿಱಿದನುರಾಗವಂ ಕಿಱಿದು ದುಮ್ಮನಮಂ ... ಸೆಱೆವಿಡಿದೆನ್ನ ವಲ್ಲಭೆಯ ಮುದ್ದುಮೊಗಂ ವ್ಯಭಿಚಾರ ವಿಶ್ರಮಂ ಮೆಱೆದಪುದೋ ದಿನಾಗಮದ ರಾತ್ರಿವಿರಾಮದ ಪದ್ಮದಂದದಿಂ (ಅರ್ಜನೀ. ೧-೦೦೦) ; ವಿಜಯವಿಠ್ಠಲ ಮಹಮೂರುತಿ ಧಮ್ಮನದಿಂದಲಿ ಬಂದು ದುಮ್ಮನವ ಕಳೆವ (ವಿಸಾಸು. ೩೩-೨).

[ <ಪ್ರಾ. ದುಮ್ಮಣ./ಸಂ. ದುರ್ಮನಸ್ ]

ದುಮ್ಮಾನಗೊಳು (ಕ್ರಿ). ಚಿಂತಿಸು ; ಬೇಗುದಿಗೊಳ್ಳು : ತನ್ನ ಮನದಲ್ಲಿ ದಕ್ಷ ದುಮ್ಮಾನಗೊಳುತ ಮಿಗೆಯನ್ನಪಾನಾದಿ ಭೋಗಗಳ ಕೊಳ್ಳದೆ ಮಗಳ ಮನ್ನಿಸುತ್ತಿತ್ತುದಕೆ ಫಲವಲಾ (ಚತುಪು. ೩-೮-೦೮).

[ ದುಮ್ಮಾನ + ಕೊಳು (<ಕೊಳ್₁) ]

ದುಮ್ಮಾನತತಿ (ನಾ). ದುಗುಡದ ಸಮೂಹ : ಒಡನೆ ಸುರರಿಗೆ ಹತ್ತಿತ್ತೆ ದುಮ್ಮಾನತತಿ ನರನಾಥ ಕೇಳೆಂದ (ಅಂಬಿಕಾ. ೭-೪೯).

[ ದುಮ್ಮಾನ + ತತಿ₂ ]

ದುಮ್ಮಾನವಮನ (ನಾ). ಚಿಂತೆಯಿಂದ ಕೂಡಿದ ಮನಸ್ಸುಳ್ಳವನಂ; ಯೋಚನೆಯಿಂದ ತುಂಬಿದವನು : ದೇವಿಯರಿರವು ತನ್ನಯ ಕಂಗಳಿಗೆ ಗೋಚರಿಸುವುದು ದುರ್ಲಭವೆನುತ ದುಮ್ಮಾನವಮನನಾದ (ಕೊರಠಾ. ೫-೩-೫). [ ದುಮ್ಮಾನ + ಮನ$_1$ ]

ದುಮ್ಮಾನವಡು (ಕ್ರಿ). ವ್ಯಥೆಪಡಂ; ದುಃಖಹೊಂದಂ: ಬೊಮ್ಮನೇ ಸಂಸ್ಕೃತಿಯು ಕಟ್ಟಿಕೊಂಡುತ್ತಹಿಸೆ . . . ಜನ್ಮ ಸಾಕೆನುವುದೇಂ? ದುಮ್ಮಾನವಡುವುದೇಂ (ಮುಂಕುಳ. ೨೭೨). [ ದುಮ್ಮಾನ + ಪಡು$_1$ ]

ದುಮ್ಮಾನಿಸು (ಕ್ರಿ). ಕಳವಳದಿಂದ ಕೂಡಿರು : ದೂರದಲಿ ದುಮ್ಮಾನಿಸಿದ ವದನಾರವಿಂದವ ಕಂಡು . . . ಶೌರಿಗಾಯ್ತುವಮಾನವಿದಲೇ ಮಾರಿ ಗುತ್ತವವೆನುತ ಬಂದನು ಮಾರುತನ ಮಗನು (ಕುಮ್ಮಾಋ. ೧೧-೨).
[ ದುಮ್ಮಾನ + – ಇಸು$_2$ ]

ದುಮ್ಮಿ, ದಿಮ್ಮಿ$_2$ (ನಾ). ೧. ಒಂದು ಬಗೆಯ ಚರ್ಮವಾದ್ಯ. ೨.=ದುಮ್ಮಿಸಾಲು : ನೀರಾಜನಪದಂಗಳಂ ದುಮ್ಮಿಯ ಪದಂಗಳಂ ಪಾಡುತೊಸೆದು (ಅರಾಚ. ೧-೨೫); ದುಮ್ಮಿಸಾಲು ಕಾಮನಿಂಗೆ ದುಮ್ಮಿ ತಜ್ಜನಕನಿಂಗೆ ನೆಮ್ಮಿ ಭಜಿಸಿ ನಿಜವನರಿತು ಕಾಮಹರನನು (ಕವಿಚ. III, ೮೦; ಕಾಮವಿಡಂಬನ). ದಿಮ್ಮಿ$_2$ : ೧. ಕಲಾವಿದರು ದಿಮ್ಮಿಯನ್ನು ಕೈಯಲ್ಲಿ ಹಿಡಿದು ಕುಣಿತಕ್ಕೆ ಸಿದ್ಧರಾಗುತ್ತಿದ್ದಾರೆ (ರೂಢಿ). 'ದಂಂದುಮೆ' ಪರಾ. [ <ದುಂ./ತುಳು. ದಿಮ್ಮ ]

ದುಮ್ಮಿಕ್ಕು, ದುಮಿಕ್ಕು, ದುಮುಕು, ಧುಮುಕಂ, ಧುಮ್ಮಿಕ್ಕು (ಕ್ರಿ). ೧. ಕೆಳಗೆ ಹಾರು,-ನೆಗೆ; ಎರಗು: ಕೂಪವನೀಕ್ಷಣಂಗೆಯ್ದಲ್ಲಿ ಸಿಸುವಂ ಕಂಡು ವಾತ್ಸಲ್ಯದಿಂ ನೆಲೆಗೊಡದ ವಿಷಮಯಮಪ್ಪ ಭಾವಿಯಂ ದು[ಪಾಠಾಂ. ಧು]ಮ್ಮಿಕ್ಕೆ (ಜೀವಸಂ. ೫೦. ೦-೨೩೬); ಕೆ ಜೆ ಗ ಳ ಲ್ಲಿ ದು[ಪಾಠಾಂ. ಧು]ಮ್ಮಿಕ್ಕಿ ಮುಳುಗುತ ಸಜೀಗಳಂ ಕಾಪದರುತಂ ಪಿರಿದೊಂಬಲುತಳುತಂ . . . ಅಖಿಳ ಜೈನರು ಹೊರಳುತಿರಲು (ಬಸಪು. ೫೨-೧೫); ಹಕ್ಕಿಗಳರಸ ಜೀಮೂತವಾಹನಗೆ ದುಮ್ಮಿಕ್ಕಿದೊಲೆಬಗಿ ರಕ್ಕಸನ ಸಿಕ್ಕಿಸಿ ತಲೆಮುಱಿವಂತೊದ್ದು ನೆಲದೊಳಗಿಕ್ಕಿದ (ಮೋಹತ. ೧೨-೯೪); ಇಳೆಯ ಮೇಗಣ್ಗೆ ದುಮ್ಮಿಕ್ಕಿ . . . ದಕ್ಷನಂ ತುಡುಕಿ ಕಡುಪಿಂ ಕೆಡಪಿ ಗೋಣ್ಗೊಂಡಿದ ವೀರಭದ್ರಂ (ನಂದಿಮಾ. ೦-೮); ತಲೆಗೆದರಿ . . . ತಿಲಪಿಷ್ಟಮಂ ಮೆಲುತ ತೈಲವಾನದಿ ಕಾವ ನಿಲದೆಂದು ದು[ಪಾಠಾಂ. ಧು]ಮ್ಮಿಕ್ಕಿದಂ ಗೋಮಯಹ್ರುದಕ್ಕೆಂದು ಕಂದಿದಾನನದಿ ಪಿತನು (ವಂಶಾರಾ. ೨-೨೪-೬೨). ೨. ಹೊರಸೂಸು ; ಹೊರಹೊಮ್ಮು ; ಪ್ರಕಟಪಡು : ಕಂಡಳವಳೀ ರಾಜಚಂದ್ರಮನ ದೂರದಲಿ ದು[ಪಾಠಾಂ. ಧು]ಮ್ಮಿಕ್ಕಿದುದು ದೃಢವೈರ ದರುಶನವಾತ್ರದಲಿ (ಕೊರಠಾ. ೩-೯-೬); ದುಂದುಭಿನಿನಾದವಾದಂತೆ ಪಂತನ ವಾಗ್ಸರಿ ದುಮ್ಮಿಕ್ಕಿತು (ದಾಸಚಂ. ೦೩). ದುಮಿಕ್ಕು : ೧. ಮುಗಿಲನತ್ತಿ ದು[ಪಾಠಾಂ. ಧು]ಮಿಕ್ಕಿ ವೆರ್ಗದಹುಗಳನೊಡೆಬಡಿ (ಬಸಪು. ೫೭-೩೭). ದುಮುಕು : ೧. "ಎಸೆವುದುಂ ದುಮುಕೆನಲ್ ಲಂಘನಕೆ" (ಶಶರ. ೧೨೫); ಧರ್ಮಸ್ರಾವಕೇಂದ್ರನು ಮುಂದೆ ಬಸದಿಯನೇಱಿ ದು[ಪಾಠಾಂ. ಧು]ಮುಕಿದನು (ಬಸಪು. ೫೨-೦೬); ಪ್ರಾಣಸ್ಪಂದನವು ನಿಂತುಬಿಟ್ಟರೂ ಸಾವು ದುಮುಕ ಸಲ್ಲ ಉಸಿರು ಹಿಂಗಿಯೂ . . . ಆತ ಬದುಕಬಲ್ಲ (ಅರಳು. ೨೦೯-೦೫); ದುಮುಕಿದರೆ ದುಃಖ ಹೋದೀತೆ? (ಗಾದೆ). ೩. ಧಾವಿಸು ; ನುಗ್ಗು ; ಮುನ್ನುಗ್ಗು : ಅವುಗಳನ್ನು ನೋಡಿ ಮನಸ್ಸು ಚಕಿತವಾಗಿ ಸಂಶೋಧನೆಗೆ ದುಮುಕುವುದು (ಕನ್ನಡಾ. ೦೩೦). ೪. ದಂಡುಕು ; ವಿಚಾರವಿಲ್ಲದೆ ಪ್ರವೇಶಿಸು: ಯಾವ ಕೆಲಸವೇ ಆಗಲಿ, ಹಿರಿಯರ ಸಲಹೆಯನ್ನು ಕೇಳದೆ ಒಂದೇ ಸಲ ದುಮುಕಬಾರದು (ರೂಢಿ). ಧುಮುಕು : ೧. ಮಡುವ ಧುಮುಕಿ ಕಾಳಿಂಗನ ಹಿಡಿದು ಹೆಡೆಯ ಮೇಲೆ ಕುಣಿದಾಡುತ್ತಿರೆ (ಪುರಂದ. ೦-೯೬-೪); ಅವನು ಪಾಳಿಯಿಂದ ಧುಮುಕಿ ಹುಡುಗಿಯರ ಹಿಂದೆ ಓಡಿದನು (ಮುಳಿಪಾ. ೦೯೯). ೩. ಹಜ್ಜೆಯಿಟ್ಟಲ್ಲೆಲ್ಲ ಜೋಲಿ ಹಿಡಿದಿದೆ ಮಣ್ಣು ಧುಮುಕುತಿದೆ ನೀರು (ನಲಮು. ೩೦-೩); ಅದು ತಕ್ಷಣವೇ ಬೊಗಳುವುದನ್ನು ನಿಲ್ಲಿಸಿ ತಿಂಡಿಗಾಗಿ ಧುಮುಕುತ್ತಿತ್ತು (ಹಾರಮ. ೦೯೮). ೪. ಹಲವು ಮಕ್ಕಳು ಪ್ರಶ್ನೆಯನ್ನೂ ಸಮಸ್ಯೆಯನ್ನೂ ಅರ್ಥಮಾಡಿಕೊಳ್ಳದೆಯೇ ಇತ್ಯರ್ಥಪಡಿಸಲು ಧುಮುಕುವರು (ಶಿಕ್ಷಣ. ೫೪೫). ಧುಮ್ಮಿಕ್ಕು : ೧. ಜೀವವಂ ತ್ಯಜಿಸುವೆನೆನುತ್ತಂ ಬಾವಿಯೊಳು ಧುಮ್ಮಿಕ್ಕಿ ಬಿದ್ದಂತಾತನಂ ಹಿಡಿದು (ಬಸಪು. ೦೩-೯); ರಥದಿಂ ಪೊಡವಿಯೊಳು ಧು[ಪಾಠಾಂ. ದು]ಮ್ಮಿಕ್ಕಿದನು (ಕುಮ್ಮಾಋ. ೬-೩೫); ಧುಮ್ಮಿಕ್ಕಿದನು ಧರೆಗೆ (ಕೊರಠಾ. ೩-೨-೨೨); ಕಲ್ಲಬೆಗಳ ಮೇಲೆ ಧುಮ್ಮಿಕ್ಕಿ ನೃತ್ಯವನಾಡುವಂತೆ (ಮೋಹತ. ೦೯-೬೪); ಪುಗುವೆನಂಗುಷ್ಠವಾತ್ರದಿ ಕೇಳು ಘೋರತರ ವೊಗವನೆಂದೆನುತ ಧುಮ್ಮಿಕ್ಕಿ ವದನವ ಪೊಕ್ಕು (ಪಂಕರಾ. ೫-೦-೫೦); ದಿನವನಿತೆ ಧುಮ್ಮಿಕ್ಕೆ ಪಶ್ಚಿಮ ಸಮುದ್ರಕ್ಕೆ. ಚಿಮ್ಮಿದುವು ರತ್ನಾಳಿ ತಳದಿಂ ನಭೋಗಣಕೆ (ಶ್ರೀರಾಮಾ. ೨೬೦-೮೭೬); ಆವ ಸಾಗರಕಲ್ಲಿ ಹೋಗಿ ಸೇರುವುದೋ! ಆವ ಕಡೆ ಧುಮ್ಮಿಕ್ಕುತ್ತೆಲ್ಲಿ ಸುಳಿಯುವುದೋ! (ವಿಜೀಗೀ. ೯-೦೬). ೪. ಏಕಾಏಕಿ ಧುಮ್ಮಿಕ್ಕಬಾರದು. ಸಾವಧಾನವಾಗಿ ಮೆಲ್ಲಮೆಲ್ಲನೆ ಕಾರ್ಯವನ್ನೆಸಗಬೇಕು (ಕುರುಕಾ. ೧೨೯).
[ ದೇ.೩ ತುಳು. ದುಮುಕು; ತೆಲು. ದುಮುಕು, ದುಮುಕ್ಕು ]

ದುಮ್ಮಿಸಲೆ 'ದುಮ್ಮಿಸಾಲಂ' ನೋ.

ದುಮ್ಮಿಸಾಲು, ದಿಮಿಸಾಲೆ, ದಿಮ್ಮಿಸಾಲು, ದಂಮ್ಮಸಾಲೆ, ದಂಮ್ಮಿಸಲೆ, ದುಮ್ಮಿಸಾಲೆ (ನಾ). ವಾದ್ಯದ ಸಂಗತಿಯೊಡನೆ ಹಾಡುವ ಒಂದಂ ಬಗೆಯಂ ಹಾಡು : ದುಮ್ಮಿಸಾಲು ಕಾಮನಿಂಗೆ ದುಮ್ಮಿ ತಜ್ಜನಕನಿಂಗೆ ನೆಮ್ಮಿ ಭಜಿಸಿ ನಿಜವನರಿತು ಕಾಮಹರನನು (ಕವಿಚ. III, ೮೦; ಕಾಮವಿಡಂಬನ). ದಿಮಿಸಾಲೆ : ಇಲ್ಲಿನ ಮೂಲನಿವಾಸಿಗಳ ಒಂದು ಬಳಗದವರು ಮನೆಮನೆಗೆ ಬರುತ್ತಾರೆ. ಅವರು ಸ್ವಂತ ಬೇಸಾಯಗಾರರಲ್ಲ. ಅವರಲ್ಲಿ ಒಬ್ಬಾತ . . . 'ದಿಮಿಸಾಲೆ' ಎಂಬ ಪಲ್ಲವಿಯುಳ್ಳ ಒಂದು ಹಾಡನ್ನು ಹಾಡುತ್ತಾನೆ. ಸಾಲೆ, ಶಾಲಿ ಅಕ್ಕಿಯ ಹೆಸರಾದುದರಿಂದ ಪೂರ್ವದ ಕೃಷಿಯ ಸಂಸ್ಕಾರಕ್ಕೆ ಸಂಬಂಧಿಸಿದುದು ಎಂದು ಊಹಿಸಬಹುದು (ಜಾನಗೀ. ೮೪); ಕುಂದಾಪುರದ ಕಡೆ ಹಾಡುವ ದಿಮಿಸಾಲೆ ಹಾಡಿನ ಕೊನೆಗೆ 'ಕಾಮನ ಭೀಮನಾ ಹೋಳಿಯ ಹಬ್ಬ' ಎಂಬ ಸೊಲ್ಲು ಬರುತ್ತದೆ (ಜಾನಗೀ. ೮೫). ದಿಮ್ಮಿಸಾಲು : ದಿಮ್ಮಿಸಾಲೆನ್ನಿ ಚಿಕ್ಕ ತಮ್ಮಗಳಿರಾ (ವಾಧಿಕೀ. ೬೦ ಪಲ್ಲವಿ). ದುಮ್ಮಸಾಲೆ : ನಲಿದು ಮುಡುಪಿಕ್ಕಿ ಗುಮ್ಮಡಿಗೆಲವಂ ಪೆರ್ಗರಡಿಯಂತೆ ಕುಪ್ಪಿಕ್ಕಿ ಕರಂ ಕೆಲವಂ ಕಣ್ಣಪ್ಪಂ ಮುಂದಲೆ ದುಱುಬಿಂ ದುಮ್ಮಸಾಲೆಯೆನುತಂ ಕೆಲವಂ ಪಿರಿದುಂ ಕೊಂಬು ಕೊಳಲ್ ವಶೌವರಿಗಳ ನುಣ್ದರಮನಾಸ್ವದೊಳ್ ತೋಱುತ್ತ (ಶ್ರೀಕೃಪು. ೨೬-೦೫೬). ದಂಮ್ಮಿಸಲೆ : ಮುಂದೆ ತುಱುಬಂ ಕಟ್ಟಿ ದುಮ್ಮಿ [ಪಾಠಾಂ. ದಂಡಿ] ಸಲೆಯಾಡುತಂ ಥಂದಥಂದದ ಬೇಡರಾಟಮಂ ತೋಱುತಂ (ಕಣ್ಣ.ರ. ದೇ. ೦೩೯-೯). ದುಮ್ಮಿಸಾಲೆ: "ದುಂದಂವಿಂ ; ಹೋಳಿಯಂ ಹಾಡು ; ಕಾಲಜ್ಞಾನ ಪಲ್ಲವಿ" (ಜಾನಕೋ. ೬). P 'ದಿಮ್ಮಸಾಲೆ' ಎಂದು ಕೊನೆಯಾಗುವ ಹಾಡಂಗಳನ್ನು ಹಾಡುವವನಿಗೂ ಈ ಹೆಸರು ಉಪಯೋಗವಾಗುತ್ತದೆ. ಶ್ರೀರಂಗಪಟ್ಟಣದ ಕಡೆಯಲ್ಲಿ 'ಬಿಸಿಲು ಮಾರಮ್ಮ'ನ ಗಂಡ ಎಂಬ ಅರ್ಥದಲ್ಲಿ ಇದನ್ನು ಬಳಸುತ್ತಾರೆ.
[ ದುಮ್ಮಿ + ಸಾಲು$_2$ (<ಸಾಲ್$_2$) ]

ದುಮ್ಮಿಸಾಲೆ 'ದುಮ್ಮಿಸಾಲು' ನೋ.

ದುಮ್ಮಿಸು (ಕ್ರಿ). ಬಿಗಿದುಕೊಂಡಿರು; ಸಿಂಡರಿಸು; ಅಸಮಾಧಾನವನ್ನು ಸೂಚಿಸು : ಮಾತಾಡದೆ ಮುಖ ದುಮ್ಮಿಸಿಕೊಂಡಿದ್ದರೆ ಯಾಕೆ ವಹಕಾಡ್ತೀವಿ ಹೇಳಿ (ಸಿಂದಸ. ೨೬). [ ದುಮ್ಮು$_1$ + – ಇಸು$_2$ ]

**ದುಮ್ಮು$_1$**, ಡುಬ್ಬ, ಡುಬ್ಬು, ಡುಮ್ಮಿ, ಡುಮ್ಮು, ದಾಡುವಂಬು$_2$, ದುಬ್ಬು (ನಾ). ೧. ದಪ್ಪನಾಗಿರುವುದು ; ಬೊಜ್ಜುಬೊಜ್ಜಾಗಿ ಬೆಳೆದುದು : ಹೊಟ್ಟೆಗೆ ಹಾಕುತ್ತಿದ್ದುದು ಗಂಜಿ ನೀರಾದರೂ ಆ ಮರಿ ದುಮ್ಮುದುಮ್ಮಾಗಿ ಬೆಳೆಯಿತು (ಮಕಾಮು. ೭). ೨. ಹೊಟ್ಟೆ: ದುಮ್ಮಿನಿಂದ ಹಮ್ಮು ಕಳಕೊಂಡ (ಗಾದೆ). **ಡುಬ್ಬ** : ೩. ಮೇಲಕ್ಕೆ ಉಬ್ಬಿಕೊಂಡಿರುವುದು ; ಉಬ್ಬಿದುದು : ಅಂಗಿಯು ಮೇಲೆ ಎದ್ದು ನಿಂತಿದ್ದ ಡುಬ್ಬದ ಮೇಲೆ ಕೈ ಆಡಿದ (ಬಳಜೀ. ೮೯). ೪. ಒಂಟೆ, ಗೂಳಿ ಮೊದಲಾದುವುಗಳ ಬೆನ್ನಿನ ಮೇಲಿರುವ ಉಬ್ಬು, ಮೇಲಕ್ಕೆದ್ದಿರುವ ದುಂಡನೆಯ ಭಾಗ : ವಿರಜಯ ಒಂಟೆಯ ಡುಬ್ಬದಂತಹ ಮಹಾ ವೀಥಿಯಲ್ಲಿ ಟ್ರಕ್ಕು ಏರಿ ಇಳಿದಾಗ ಜೋಕಾಲಿಯ ಜೀಕು ಕೊಡುತ್ತಿತ್ತು (ದೀಪಹ. II, ೩೯೪) ; ಯಾವ ಡುಬ್ಬ (ಹಿಣಲು) ವೃಷಭದ ಕಾಂತಿಯನ್ನು ವೃದ್ಧಿಗೊಳಿಸುವುದೊ ಆ ಡುಬ್ಬವು ಆಕಳಿಗಿಲ್ಲ (ಕಮಶ. ೭೩). ೫. ಬೆನ್ನು; ಶರೀರದ ಹಿಂಬದಿ : ನೀನು ನನ್ನ ಡುಬ್ಬವನ್ನು ಹಿಡಿದುಕೊಂಡು ಬಾ, ನಾನು ನಿನ್ನನ್ನು ಆಚೇ ದಂಡೆಗೆ ಸುರಕ್ಷಿತವಾಗಿ ಒಯ್ಯುವೆನು (ಅಂಬಿಕ. ೧೦೯) ; ಗುರುಗಳು ಹೊರಗೆ ಹೋಗುವುದೊಂದೇ ತಡ . . . ಇಳಿಜಾರು ಮೇಜು, ವಿದ್ಯಾರ್ಥಿಗಳ ಡುಬ್ಬ ಮುಂತಾದುವುಗಳ ಮೇಲೆ ಸಪ್ಪಳ ಹೊರಡುತ್ತಿತ್ತು (ಕಶ್ತ್ರಶ್ರ. ೦೩೭). **ಡುಬ್ಬು** : (೩). **ಡುಮ್ಮಿ** : (ಗು). ೬. ದಪ್ಪವಾದ ; ಉಬ್ಬಿದ : ಏನು ಮಾಟ ಶಿವ ಡುಮ್ಮಿ ಡುಮ್ಮಿ ಹೊಟ್ಟೆ (ಪಲಾನ. ೬೦-೬). **ಡುಮ್ಮು** : ೧. ನೋಡುವುದಕ್ಕೆ ಡುಮ್ಮು ಡುಮ್ಮಾಗಿದ್ದರೂ ಶಕ್ತಿ ಮಾತ್ರ ಸ್ವಲ್ಪವೂ ಇಲ್ಲ (ರೂಢಿ). **ದುಡುಮ್ಮು$_2$** : ೧. 'ದುಡುಮು' ಪರಾ. **ದುಬ್ಬು** : ೧. 'ದುಬ್ಬ' ಪರಾ.

**ದುಮ್ಮು$_2$** 'ದಂಪು' ನೋ.

**ದುಮ್ಮೆಸಗು** (ಕ್ರಿ). ದೂಳೆಬ್ಬಿಸು ; ನಾಶಮಾಡು : ಮಕುಟವ ಚಿಮ್ಮಿದವು ಮುಮ್ಮಖದಿ ಕವಚವ ನೆಮ್ಮಿದವು ದುಮ್ಮೆಸಗಿ ಮಹಿಷಾಸುರನ ಶರಜಾಲ (ಅಂಬಿಕಾ. ೨೩-೨೬). [ ದುಮ್ಮು$_2$ (<ದಂಪು) + ಎಸಗು$_1$ ]

**ದುಮ್ಮೇಳು** (ಕ್ರಿ). ರಭಸದಿಂದ ಏಳು; ಒಮ್ಮೆಲೆ ಮುನ್ನುಗ್ಗು : ಇಕ್ಕಿರ್ದ ಚೀಲಗಳ್ದುಮ್ಮೆದ್ದು ಫಲಗಳಂ ಮುಕ್ಕಲದ ನಾರಿಗುಸರಲ್ಲೇಕು ಭೂಪ ನಿಮ್ಮಕ್ಕಳಿಗೆ ಬಹಳ ಬಲವಿದ್ದೇನು ದೈವಬಲವಿಲ್ಲ (ತುರಂಗ. ೫೪-೩೮) ; ಧಾಳಿಯಿಟ್ಟುದು ಸೇನೆ ಕರಿಘಟೆ ತುರಂಗಚಯ ಹೋಳಿದವು ಕಡುಹಿನೋಳ್ದುಮ್ಮೆದ್ದು ನೂಕೆ (ತುರಂಗ. ೭೩-೨೦). [ ದುಂ + ಏಳು$_1$ (<ಎೞ್$_1$) ]

**ದುಯಂ** 'ದಯ್ಯಂ' ನೋ.

**ದುಯಂತರಾಘಂಟೆ** (ನಾ). ಎರಡನೆಯ ಮೆಟ್ಟಲಿನ ಘಂಟೆ : ರಥದ ಅಲಂಕಾರಕ್ಕೆ . . . ಆವಲುತರಾಘಂಟೆಗಳೂ x x x ೫೨ ದುಯಂತರಾ ಘಂಟೆಗಳೂ x x x ೧೩೪ ಸೀಯಂತರಾಘಂಟೆಗಳೂ (ಎಕ. XIV, ಸಂಜನ. ೨೯೨--ಪುಟ. ೧೯೨ ; 1847).

[ ದುಯಂ (<ದುಯ್ಯಂ) + <ತರ$_3$ + ಘಂಟೆ ]

**ದುಯನೃತ್ಯ** (ನಾ). [ನಾಟ್ಯ] ದ್ರುತಗತಿಯ ಒಂದು ಬಗೆಯ ನೃತ್ಯ : ಮೇಘಕುಮಾರರಾಜನ ಆಸ್ಥಾನದಲ್ಲಿ ದುಯನೃತ್ಯ, ವಿಲಂಬಿತನೃತ್ಯ, ಅರ್ಘಟನೃತ್ಯ, ವಿಭವನೃತ್ಯ ಮುಂತಾದ ನಾಟ್ಯಗಳು ಅಭಿನಯಿಸಲ್ಪಡುತ್ತಿದ್ದುವೆಂದು ಉಕ್ತವಾಗಿದೆ (ಧಾರಕ. ೩೩೦).

[ ದುಯ$_0$ (P ← ಪ್ರಾ. ದುಇ) + ನೃತ್ಯ ]

**ದುಯ್ಯಂ**, ದುಯಂ, ದೂಯಂ (ಗು). ೧. ಎರಡನೆಯ ಗಣನೆಯ,–ದರ್ಜೆಯ : ಅವ್ವಲು ದುಯ್ಯಂ ಶೀಯ್ಯಂ ಭೂಮಿಗೆ ಕೃಷ್ಣರಾಜ ಖಂಡಗ ಭೂಮಿಗೆ ಯಿಷ್ಟು ಖಂಡಗ ದವಸಾ ಯೆಂಬದಾಗಿ ಡವಲು ಕಟ್ಟಿ (ಮಹಾವಂ. II, ೬೦) ; ಜೂನಿಯರ್ (Junior)ಎಂದರೆ ದುಯ್ಯಂ ಕವಿಷಾಷನರೆಂದೂ ಹೀಗೆ ಇಬ್ಬರು ಕಮಿಷನರನ್ನು . . . ನೇಮಿಸಿದರು (ಮಹಾವಂ. II, ೯೮). **ದುಯಂ** : ೧. 'ದುಯಂಪ್ರತಿ' ಪರಾ. ೨. ಕೈಕೆಳಗಿನ ; ಅಧೀನ : ಆ ಕಾಲದಲ್ಲಿ ರಾಯಚೂರಿನಲ್ಲಿ ದುಯಂ ತಾಲ್ಲೂಕುದಾರ(Assistant Commissioner)ನಾಗಿದ್ದ ಮುಸಲ್ಮಾನ ಅಧಿಕಾರಿ ೩. ಯೊಬ್ಬನು . . . ದರ್ಶನಕ್ಕೆ ಬಂದನು (ಕಥಾ. II, ೩೮೦). (ನಾ). (ಅಂತಸ್ತು ಅಥವಾ ಯೋಗ್ಯತೆಯಲ್ಲಿ) ಎರಡನೆಯ ದರ್ಜೆ (೩). ; **ದೂಯಂ** : ೪. ಎರಡನೆಯದು: ಅವ್ವಲ್, ದೂಯಂ, ಸೀಯಂ, ಚಾರಂ ನಾಲ್ಕನು ಹೇಳುವರಂತೆಲೋ ಸೀಯಂ ನಂಬರು ದೂಯಂ ಮಾಡುವ ಸಬೂಬ್ ಜವಾಬ್ ನೋಡೆಲೋ (ನಾಶದ. ೦೧೦).

[ ←ಪಾರ. ದುಯುಮ್ ; ಮರಾ. ದುಯ್ಯಮ್, ದುಯಮ್ ]

**ದುಯ್ಯಂಖಿಸ್ತು** (ನಾ). ಎರಡನೆಯ ಕಂತು : ಬದಸ್ತೂರು ದುಯ್ಯಂಖಿಸ್ತು ಮಾರ್ಗಶಿರ ಲಾಗಾಯ್ತು . . . ಐವಜು ಕಾರ್ತಿಕ ಮಾಸದ ಭತ್ತ ಕಾಡಾರಂಭ ಮಹಾಸೂಲು ಆಗುತ್ತಾ ಇದೆ (ಮಹಾವಂ. II, ೬೭).

[ ದುಯ್ಯಂ + ಖಿಸ್ತು (<ಕಿಸ್ತು) ]

**ದುಯ್ಯಂಪ್ರತಿ** (ನಾ). ಎರಡನೆಯ ಪ್ರತಿ ; ನಕಲು : ಆ ಬಗ್ಗೆ ಇನ್‌ಸ್ಪೆಕ್ಟರು ಹಿಂದೆ ಕಳಿಸಿದ್ದ ದಾಖಲೆಗಳು ಕಛೇರಿಯಲ್ಲಿ ದೊರೆಯದ್ದರಿಂದ ದುಯ್ಯಂ ಪ್ರತಿಗಳನ್ನು ಮಾಡಿ ಕಳಿಸಬೇಕೆಂದೂ ಆಜ್ಞೆಮಾಡಿದ್ದರು (ರಂಗಕ. ೧೬೩).

[ ದುಯ್ಯಂ + ಪ್ರತಿ ]

**ದುಯ್ಯಂಬಾರ್‌ಕಛೇರಿ** (ನಾ). ಅಠಾರಾ ಕಛೇರಿಯ ಹದಿನೆಂಟು ಇಲಾಖೆಗಳಲ್ಲಿ ಒಂದು : ತಾಲ್ಲೂಕುಗಳೂ ಮತ್ತು ಈ ಗಡಿಗಳ ಒಟ್ಟು ವಿಚಾರಣೆ ಮಾಡುವುದಕ್ಕೋಸ್ಕರ . . . ೬. ಫೌಜುದಾರಿ (ತುಕಡಿ)ಗಳೂ ಸ್ಥಾಪಿತವಾದುವು. ಅವರ ವಿವರ :—ಕಛೇರಿಗಳು—೧. ದಿವಾನ್ ಕಛೇರಿ . . . ೧೪. ದುಯ್ಯಂಬಾರ್ ಕಛೇರಿ, ೧೫. ಜನಸಿ ಕಛೇರಿ (ಮಹಾವಂ. II, ೩೯) 'ಅಠಾರಾಕಛೇರಿ' ಪರಾ.

[ ದುಯ್ಯಂಬಾರ್? + ಕಛೇರಿ (<ಕಚೇರಿ) ]

**ದುರ್**–(ಉಪ). ಕೆಟ್ಟದ್ದನ್ನು ಸೂಚಿಸುವ ಸಂಸ್ಕೃತದ ಒಂದು ಉಪಸರ್ಗ; P ಸಂಸ್ಕೃತ ಶಬ್ದದ ಸಾದೃಶ್ಯದ ಮೇಲೆ ರೂಪಿತವಾದ ಕನ್ನಡ ಶಬ್ದಗಳಿಗೆ ಈ ಉಪಸರ್ಗವನ್ನು ಬಳಸಲಾಗುತ್ತದೆ. 'ದುರ್ನಡತೆ', 'ದುರ್ನಡೆ' ಪರಾ. [ <ಸಂ. ದುಸ್ ]

**ದುರ**, ದುಱ, ಧುರ$_1$ (ನಾ). ಯುದ್ಧ; ಕಾಳಗ : ದುರದುಳ್ ದುಗ್ಗವಾರರ ಪಡೆ ಒಟ್ಟ ಎಱದು ಬಿಟ್ಟ (ಎಕ. IX, ದೇವನ. ೬೩-೩೪ ; 780) ; ದುರದೊಳ್ ಕಾಯ್ದು ಕಡಂಗಿ ಪೊಂಗಿ ಮಲೆದೋರರಾತಿಜ್ಜನೆಯ್ದಂದ (ಎಕ. XVIII, ೧೭೩-೫ ; 985) ; ಅವದಿರ ದುರದ ಸಿಂಹಧ್ವಾನದಬ್ಬರ ಮೆರೆಯ ಲೀಕ್ಷಿಸಿ ನುಡಿದನಸುರಾರಾತಿಯಿದಿರಿನಲಿ (ಕೋಗಮು. ೧೦-೨೬). △ **ದುಱ** : ಅನೇಕಬಲಸಮೇತನಾಗಿ ಯಿದಿರಾಗಿ ನಡದು ಕಾದಿದಲ್ಲಿ[ದಳದ ತ]ನಗೆ ಅಟ್ಟಗಳು ಭಟ್ಟಗಳಾಗ ಖಂಡ ತುಂಡಗಳಂ ಮಾಡಿ ವೀರವುಂ ದುಱದಲ್ಲಿ ತಂನ ದಳವಿನಿ x x ರಿದ (ಕಇ. I, ೬೩-೧೫ ; 1481). **ಧುರ$_1$** : "ಸಮಿತಿ ಸಂಗ್ರಾಮಂ ರಣಂ . . . ಧುರಂ ವಿಗ್ರಹಂ . . . ಸಂಖ್ಯಮೆಂದೆನಲು ಕಾಳೆಗಕೆ ನಾಮಮಕ್ಕುಂ" (ಮಂಗರಾ. ೮೫-೨೮); ಧುರದೊಳ್ ನಿಮ್ಮಡಿಯುಂ ಗೆಲಲಱಿಯರು ಮಾ ಪಾಂಡುಸುತರ್ಗಂ (ಪಂಪಭಾ. ೧೨-೫೫) ; ಧುರದೊಳ್ಗೋನುಗ ಭೂಪನಿಂನ ನಿಸಿತಾಸ್ತ್ರಾಘಾತದಿಂ ಸತ್ತ ಭೂಪರ ಪೆಂಡಿರ್ ಬಿಸುಸುಯ್ಯೆ (ಎಕ. VIII, ಸಾಗರ. ೧೦೯-೩೪ ; 1042) ; ಧುರದೊಳ್ ಮಯನಾಶನುಮಂ ವಿರಥಂ ಮಾಟ್ಟುದುಂ (ಪಂಪರಾಮಾ. ೦೪-೧೩೮) ; ನೀನೇ ಧುರವ ಜಯಿಸಿದೆನೆನ್ನು-(ಕುಮಾವ್ಯಾ. ೯-೩). [ <ಸಂ. ಉದರ./ತೆಲು. ದುರ; P ಸಂ. ಧುರ್ ಎಂಬುದರಿ ದಲೂ ಇದರ ನಿಷ್ಪತ್ತಿಯನ್ನು ಹೇಳಬಹುದು]

**ದುರಂಗಿ** (ಗು). ೧. ಎರಡು ಬಣ್ಣಗಳನ್ನು ಉಳ್ಳ : ಕಂಬಿ ಕಂಬಿಯೊಳು ಬಂದಿಳುಹಿದ್ದ ಕೋಟಿ ಕಾಕಂಬಿಯ ರಸವನೆಜಿದನು ಬಾಂಬಕೆ ಹೋಳಿವ

ದುರಂಗಿಯು ವೈರಣೆಯಿಂಬುಗೊಂಡಂತಿದ್ದುದಾಗ (ಭರತೇ. ೧೭-೭೭); ಮೆಱೆವ ದುರಂಗಿ ಪಟ್ಟೆಯು ಗದ್ದುಗೆಯೊಳು ರಸಿಕೆ ಕುಳಿತ ಭಾವವಿಹುದು (ಜ್ಞಾನಸಿ. ೧೮-೧೧೩). ೨. ಎರಡು ಪಕ್ಕಗಳಲ್ಲೂ ಬೇರೆ ಬೇರೆ ಬಣ್ಣವನ್ನು ಹೊಂದಿದ. [ ←ಪಾರ. ಹಿಂ. ಮರಾ. ದುರಂಗೀ ]

**ದುರಂಜಿ** (ನಾ). ೧. ಒಂದು ಬಗೆಯ ಹಣ್ಣು ; ಸೀತಾಫಲ : ಸೀತಾಫಲ, ಅಮೃತಫಲ, ದುರಂಜೀಹಣ್ಣು (ಮೃತಿಗಿ. ೭-೧೨೩). ೨. ಮಳ್ಳು ರಾಮಫಲ : (ತ). 'ತುರಂಜಿ' ಪರಾ. [ ? ]

**ದುರಂತ** (ಗು). ೧. ಕೊನೆಯಿಲ್ಲದ ; ಎಂದಿಗೂ ಮುಗಿಯದ : ಘೋರ ದುರ್ಗತಿಯಂ ಪೊಕ್ಕು ದುರಂತದುಃಖಮನಃನುಭವಿಸುಗುಂ (ಆದಿಪು. ೩-೩೬); ಮೋಕ್ಷದ ಬಟ್ಟೆಗಟ್ಟಿ ಬಿಡದಾಜಡಿಗೊಳ್ವ ದುರಂತದುಷ್ಕರ್ಮಕ್ಷುಭಿತೋಗ್ರತಸ್ಕರರ ದುಷ್ಪರ . . . ಕ್ಷತಿ ಮಾಡಲಾರ್ಪ ತಪದೊಳ್ಪಿನ ತೆಳ್ಪಿನ ಸಾಧುವರ್ಗಮಿಾಗಕ್ಷಯಸೌಖ್ಯಮಂ (ಜೀವಸಂ. ೧-೫); ಬಹು ದುಸ್ಸಹ ಕಠಿಣತರ ಕ್ರೂರ ಭಯಂಕರ ದುರಂತ . . . ತೀವ್ರವೇದನಾ ರೂಪಂಗಳಾಗಿ ಶಿವದ್ರೋಹಿಗಳಿಗೆ ನಿಷ್ಕಾರುಣ್ಯದಿಂ ಮಾಳ್ಪ ಶಿಕ್ಷಾಲೇಶಮೆಂದೆನಿಸಿ (ವಿವೇಕ. ೧೯೪). ೨. ದುಃಖದಲ್ಲಿ ಕೊನೆಗೊಳ್ಳುವ; ದುಃಖಾಂತವಾದ : ಪದ್ಮಾವತಿಯು ದುರಂತವಿವಾಹಕ್ಕೆ ಕೇಶವನ ಮೋಹವೂ ಅದೇ ವೇಳೆಗೆ ಸ್ವಾಮಿಗಳ ಆಗಮನವೂ ಕಾರಣವಾಗುತ್ತದೆ (ಸಮುಜೀ. ೩೩ ಪೀಠಿಕೆ). 'ದುರಂತನಾಟಕ' ಪರಾ. (ನಾ). ೩. ಕೊನೆಯಿಲ್ಲದುದು : ಭೀಮನ ನರನಕುಲಸಹದೇವ ಸಾತ್ಯಕಿ ಧರಣಿಪನ ದ್ರೌಪದಿಯ ಚಿಂತೆ ದುರಂತವಾಯ್ತೆಂದ (ಕುಮಾವ್ಯಾ. ೨೬-೨೭). ೪. ದುಃಖಪೂರ್ಣವಾದ ಮುಕ್ತಾಯ; ದುಃಖದಲ್ಲಿ ಕೊನೆಗೊಳ್ಳುವಿಕೆ; ದುಃಖಾಂತ : ಆತ್ಮಯಾತ್ರೆಯು ಮಹಾಜ್ಯೋತಿರ್ಮಹದ್ದರ್ಶನಂ ಲಭಿಸಿದಾತಂಗದೇಂ ಗುರುತರಾನಂದಕರ ಗುಹ್ಯಮಾಗುವುದೇನೊ ದೇಹಯಾತ್ರೆಯು ದುರಂತಂ ? (ಶ್ರೀರಾಮಾ. ೧೦೯-೨೦೪). ೫. ದುರ್ಘಟನೆ; ಅಪಘಾತ : ಒಗ್ಗಟ್ಟಿನಿಂದ . . . ಸಮಾಜದಲ್ಲಿ ಅಂದಂದು ಒದಗುತ್ತಿರುವ ದುರಂತಗಳೂ ನಿಂತಾವು (ಶಿಕ್ಷರ. ೨೭); ಅವರ ಆರ್ಥಿಕ ಪರಿಸ್ಥಿತಿಯ ದುರಂತವನ್ನು ಯಾರು ವಿಚಾರಿಸಬೇಕು ? (ಹಳ್ಳಿಬ. ೧೪೪); ಈ ಕಾವ್ಯದಲ್ಲಿ ಕಿತ್ತೂರ ದುರಂತವೂ ಬರುವುದಿಲ್ಲ (ಕನ್ನಜಾ. ೯೪). [ ಸಂ. ]

**ದುರಂತಃಕರಣ** (ನಾ). ಕೆಟ್ಟ ಮನಸ್ಸಿನವನು : ದುರುಳರೆನ್ನವದಿರು ದುರಂತಃಕರಣರಾವ್ (ಕುಮಾವ್ಯಾ. ೧೩-೪೯). [ ಸಂ. ]

**ದುರಂತಕತೆ** (ನಾ). ದುಃಖದಲ್ಲಿ ಮುಗಿಯುವ ಕತೆ; ದುರಂತದಲ್ಲಿ ಕೊನೆಗೊಳ್ಳುವ ಕತೆ : ಜೀವಕಳೆ ಧರಿಸಿ ತಂತಾನೆ ಹೇಳುದು ನಿಲ್ಲುತ್ತಿದೆ- ಆ ಇಡಿಯ ದುರಂತಕತೆ ನನ್ನ ಕಣ್ಣ ಮುಂದೆ (ಆಹೋಲೀ. ೧೩).
[ ದುರಂತ + ಕತೆ ]

**ದುರಂತಕಥೆ** (ನಾ). = ದುರಂತಕತೆ: ಮೂಲತಃ ಉರ್ವಶೀ-ಪುರೂರವರ ಪ್ರಣಯಕಥೆ ದುರಂತಕಥೆ (ಕಾವ್ಯಸ. ೧೯). [ ದುರಂತ + ಕಥೆ ]

**ದುರಂತಘಟನೆ** (ನಾ). ದಾರುಣವಾದ ಸಂಗತಿ; ಸಂಕಟಕರವಾದ ಘಟನೆ ; ದುಃಖಪ್ರಸಂಗ : ಅಂಥ ರುದ್ರಪ್ರಸಂಗದಲ್ಲಿಯೇ ಇನ್ನೊಂದು ದುರಂತಘಟನೆಯೂ ಸಂಭವಿಸುತ್ತದೆ (ಧರ್ಮಸಾ. ೧೪೦).
[ ದುರಂತ + ಘಟನೆ ]

**ದುರಂತಚಿಂತೆ** (ನಾ). ಕೊನೆಯಿಲ್ಲದ ಚಿಂತೆ : ಸಾತು ಮಗನೆ ದುರಂತ ಚಿಂತೆಯಿದೇಕೆ . . . ಪಾಲಿಸು ಸಕಲಭೂತಳವ (ಕುಮಾಅ. ೨೦-೩೩); ಕೆಟ್ಟಕೇಡದನೇನ ಹೇಳುವೆನಾ ಜಯದ್ರಥನ ಬೆಟ್ಟದಿಂದುರುಳುವೆನೊ ಹಾಸಟೆಗಟ್ಟ ಹೊಗುವೆನೊ ಮಾಡುವೆನುತ ಅಡಿಯಿಟ್ಟನಂತಃಕಲುಷಚಿತ್ರ ದುರಂತಚಿಂತೆಯಲಿ (ಕುಮಾಅ. ೨೨-೪೨).
[ ದುರಂತ + ಚಿಂತೆ ]

**ದುರಂತಚಿತ್ರ** (ನಾ). ೧. ದುರಂತಪೂರ್ಣವಾದ ಘಟನೆಯ ದೃಶ್ಯ : ಪಂಡಿತ ಜವಹರಲಾಲರು ಪಂಜಾಬಿಗೆ ಹೋಗಿದ್ದವರು ಬಂದು ನಮ್ಮ ಪಾರ್ಟಿ ಮಿಾಟಿಂಗ್‌ನಲ್ಲಿ ಅಲ್ಲಿನ ದುರಂತಚಿತ್ರವನ್ನು ವಿವರಿಸಿದರು (ದಿಲ್ಲಿಕ. ೫೦). ೨. ದುಃಖಪೂರ್ಣವಾದ ಘಟನೆಯ ಚಿತ್ರಣ,- ನಿರೂಪಣೆ. [ ದುರಂತ + ಚಿತ್ರ ]

**ದುರಂತನಾಟಕ** (ನಾ). ದುಃಖದಲ್ಲಿ ಮುಕ್ತಾಯವಾಗುವ ನಾಟಕ ; ಶೋಕದಲ್ಲಿ ಕೊನೆಗೊಳ್ಳುವ ನಾಟಕ; ರುದ್ರನಾಟಕ : ಪಾಶ್ಚಾತ್ಯರಿಗೆ ದುರಂತನಾಟಕವು ಕೇವಲ ಕಲೆಯು ಬೆಡಗಲ್ಲ. ಅದು ಆತ್ಮಸಂಸ್ಕಾರದ ಸಾಧನ, ಜೀವನ ಸಾರದ ಸಾಕ್ಷಾತ್ಕರಣ (ಕಾವ್ಯಸ. ೦).
[ ದುರಂತ + ನಾಟಕ ]

**ದುರಂತಪರಾಕ್ರಮ** (ನಾ). ಕೊನೆಗಾಣಿಸಲು ಅಸಾಧ್ಯವಾದ ಶೌರ್ಯವುಳ್ಳವನು ; ಸೋಲಿಸಲು ಅಸಾಧ್ಯವಾದ ಪರಾಕ್ರಮವುಳ್ಳವನು ; ಮಹಾಶಕ್ತಿಶಾಲಿ : ಸೈನ್ಯ ಮಹೋದಧಿಯ ಮಧ್ಯದಲಿ ಮೆಱೆವವನಾ ದುರಂತಪರಾಕ್ರಮನು ಗಂಗಾಕುಮಾರಕನು (ಕುಮಾಭೀ. ೩-೭).
[ ದುರಂತ + ಪರಾಕ್ರಮ ]

**ದುರಂತರ** (ನಾ). ಕಡಿಮೆಯಾದ ಅಂತರವುಳ್ಳುದು ; ನಡುವೆ ಕಡಿಮೆ ಜಾಗವುಳ್ಳುದು; ದಟ್ಟವಾದುದು : ಅರಸನ ವರೂಥಮಂ ತುರಗಂಗಳ್ ತರುಗಳಿಂ ದುರಂತರಮಪ್ಪರಣ್ಯಮಾರ್ಗದೊಳ್ ತಮ್ಮಿಚ್ಛೆಯಿಂ ಕೊಂಡೋಡಿ ಪೋಗೆ (ದಕಕು. ೨-೩೭ ವ). [ ಸಂ. ]

**ದುರಂತಸಾಹಿತ್ಯ** (ನಾ). ದುಃಖಾಂತದ ವಸ್ತುವನ್ನುಳ್ಳ ವಾಙ್ಮಯ : ದುರಂತಸಾಹಿತ್ಯವು . . . ಕನ್ನಡದಲ್ಲಿ ಹನ್ನೊಂದನೆಯ ಶತಮಾನದ ಪೂರ್ವದಲ್ಲಿಯೇ ಅಸ್ತಿತ್ವದಲ್ಲಿದ್ದಿತೆನ್ನುವುದು ತುಂಬಾ ಅಭಿಮಾನದ ಸಂಗತಿ (ಸಾಹಿಸ. ೧೦೭). [ ದುರಂತ + ಸಾಹಿತ್ಯ ]

**ದುರಂತೋದ್ವೇಗ** (ನಾ). ಕೊನೆಯಿಲ್ಲದ ತಳಮಳ,- ಆತಂಕ: ತತ್ಪಿತೃದ್ವಂದ್ವದ ಮನಕೆ ಸಮಾಕಾರಸಂಪದ್ವರಾಲಾಭದುರಂತೋದ್ವೇಗಮಂ ನೀಡಿದನತಿತರ ನಿರ್ಬಂಧದಿಂ ಪದ್ಮಸದ್ಮಂ (ಚಂದ್ರಪು. ೩-೯೭).
[ ದುರಂತ + ಉದ್ವೇಗ ]

**ದುರಕ್ಷರ** (ನಾ). (ಅಲಂ) ಕೆಟ್ಟ ಹಣೆಯ ಬರಹ: ಸರಸಿರುಹಸಂಭವಕೃತ ದುರ[ಪಾಠಾಂ. ರಾ] ಕ್ಷರವಿನಿಮುತ ನಿರಾಸಕಮಹಾನಿರುಪಮಿತ ಮಹಿಮಾಧ್ಯನಂ ಪ್ರಾರ್ಥನನಮೌಧ್ಯನನು . . . ಕೊಂಡಾಡಿ (ಬಸಪು. ೪೬-೭೦).
[ ಸಂ. ]

**ದುರಗಲಿ, ಧುರಗಲಿ** (ನಾ). ಕಾಳಗದಲ್ಲಿ ಶೂರನಾದವನು ; ರಣಧೀರ: ದುರಗಲಿ ಕಂಸನುದ್ಧತಸಾಹಸವ ಕೇಳಿ ಹರಿವ ಹಾವುರಿವ ಕಿಚ್ಚುಗಳ ಭರದಿಂದಡಗುವುವು (ನೇಮಿಷಂ. ೧೯-೮); ದುರಗಲಿಯೆಯೆನ್ನ ಪ್ರೀತಿಯ ಸಲಿಸು ನೀನೆಂದು ವಿರಹದಿಂದೂರ್ವಶಿಯು ನುಡಿಯೆ (ಪ್ರಭುಪು. ೩-೭೭); ದುರಗಲಿ ಕಂಠೀರವ ನರಸೇಂದ್ರಭೂವರನೊಳ್ಪಿನ ಸೊಬಗಿಂದ (ಕಂಸವಿ. ೮-೪೭). **ಧುರಗಲಿ** : ಎತ್ತಾನುಮಿ[ದುರ್ಮಿಱಿವ]ದೋಡಿಱಿವ ಧುರಗಲಿಗಳುಮಂ . . . ನೋಡಿ [ವಿಸ್ಮಯಂಬಟ್ಟು] (ಗದಾಯು. ೯-೩೪ ವ); ಧುರಗಲಿ ಚೋಳನ ಪಟ್ಟದ ಕರಿವರನಾ ನೀಲಗಿರಿಯ ನಿರ್ಝರಜಲದಂತಿರೆ ಗಂಡಯುಗಳದಿಂದಂ ಪರಿವ ಮದಾಂಬುಗಳನೆಸೆದುದದನೇಪೊಗಳ್ವೆಂ (ಶಿಪುವಿ. ೨೨-೧೭); ಗರ್ಜನಕ್ಕಿಳಿ ನಡುಗೆ ಮಹಾಹವಮನೆಸಗಿದರ್ ಧುರಗಲಿ[ಪಾಠಾಂ. ದುರಗಲಿ, ಧುರಕಲಿ]ಗಳ್ (ಶಬಶಂ. ೪-೭೭). [ ದುರ + ಕಲಿ ]

**ದುರಗಲಿತನ** (ನಾ). ಯುದ್ಧದಲ್ಲಿ ತೋರುವ ಪರಾಕ್ರಮ,-ಶೌರ್ಯ : ಆತನ ದಳಪತಿ ಮನ್ನೆಯರುಗಳ ದುರಗಲಿತನವ ಪೇಳಿದನು (ಕಂಸವಿ. ೧೧-೭೨); ಆತನ ಸೈನಿಕರು ದುರಗಲಿತನದಿಂದ ಹೋರಾಡಿ . . . ತುರುಕರ ಸೈನ್ಯವನ್ನು ತರಿದು ತೂರಿದರು (ಕವೀರ ೧೧೪). [ ದುರಗಲಿ + -ತನ]

**ದುರಗುಟ್ಟು** 'ದುರುಗುಟ್ಟು' ನೋ.

**ದುರಗೆ** (ನಾ). ಒಂದು ಬಗೆಯ ಸಸ್ಯ : (ಪ್ರಭುಲಿಂ. ೬೬-೧೫೮೩). [ ? ]

**ದುರಘ** (ನಾ). ಮಹಾ ಪಾಪ,-ಪಾತಕ; ದುಷ್ಕರ್ಮ: ಜಾನಕಿ ಮೂರ್ಛಿತೆಯಾಗೆ ದಶಾನನನನುಕಂಪೆ ಪುಟ್ಟಿ ಕರುಣಿಸಿ ತನ್ನಂ ತಾನೆ ಪಲುಬಿದುಬಿದು ಕರ್ಮಾಧೀನ ಸಮುತ್ಪನ್ನದುರಘದುಷ್ಪರಿಣತಿಯಂ (ಶಂರಾಮ. ೧೪-೧೧೦) ; ದುರಘವಿಷವೃಕ್ಷಮೂಲೋತ್ಕರಮಂ ಕೀಳ್ವಂತೆ ಕಿಟ್ಟಂ . . . ಕುಟಿಳ ಕುಂತಳಕುಳಮಂ (ನೇಮಿಪು. ೦೩-೩೬). [ ಸಂ. ]

**ದುರತ್ಯಯ** (ಗು). ೧. ಅಧೀನಮಾಡಿಕೊಳ್ಳಲು ಕಷ್ಟವಾದ ; ಅಜೇಯವಾದ (ನಾ). ೨. ಅಧೀನಮಾಡಿಕೊಳ್ಳಲು ಕಷ್ಟವಾದುದು; ಅಜೇಯವಾದಂದು : ಗೋಪಿಯರೀಕ್ಷಿಸೆ ಕೃಷ್ಣನಾರ್ದು ತಳಕಟ್ಟ ದುರತ್ಯಯನಸುರವೃಷಂಗಭಿಮುಖತೆಯಿನೆಯ್ದಿದಂ (ಜಗವಿ. ೫-೩೬) ; ಈ ಪಥವು ಕ್ಷುರಧಾರೆಯಂತೆ ನಿಶಿತವೆಂದೂ ದುರತ್ಯಯ ಎಂದರೆ ಅಡಿಯಿಡುವದು ತುಂಬ ಕಷ್ಟಕರವೆಂದೂ ವರ್ಣಿಸಲ್ಪಟ್ಟಿದೆ (ಮಹಾಯೋ. ೬೯).
[ ಸಂ. ]

**ದುರದುರ₁** 'ದುರು' ಪರಾ.

**ದುರದುರ₂** (ನಾ). ಮುಜುಗರ: ಈ ಬಂಧುಗಳೆಲ್ಲರೂ ಇಂದಿನ ಕಾಲದ ಹುಡುಗರು. ಯಾವ ಮಾತುಗಳೂ ಅವರ ಬಾಯಲ್ಲಿ ಬರುವಾಗ ದುರದುರ ಇಲ್ಲ, ಬಾಧೆ ಸಂಕೋಚ ಇಲ್ಲ (ಇಪ್ಪಳ. ೨೪೩).
[ ←ಹಿಂ. ದುರಾದುರೀ ]

**ದುರದುರನೆ** 'ದುರುದುರನೆ' ನೋ.

**ದುರದೃಷ್ಟ** (ನಾ). ಕೆಟ್ಟ ಅದೃಷ್ಟ ; ದುರ್ದೈವ ; ದೌರ್ಭಾಗ್ಯ : ನನ್ನ ಹುಟ್ಟನ್ನು ಹಿಡಿದಂಟಿದ ದುರದೃಷ್ಟಕ್ಕೆ ನೊಂದೆನಲ್ಲದೆ ನಿಮಗಲ್ಲ (ವೀರಲಿಂ. ೯೪); ಬರುವಾಗ ದುರದೃಷ್ಟ ಬೇಗನೆ ಬರುವುದು ಧಾವಿಸಿ ಕುದುರೆಯನೇರಿ ಬೀಳ್ಕೊಂಡು ಹೋಹಾಗ ಮೆಲ್ಲನೆ ಹೋಹುದು ಹೋಹಂದು ಅದು ಪಾದಚಾರಿ (ಇಂಚಾಹ. ೧೬೩-೯೬). [ ಸಂ. ]

**ದುರದೃಷ್ಟಶಾಲಿ** (ನಾ). ಹೀನ ಅದೃಷ್ಟವುಳ್ಳವನು ; ಭಾಗ್ಯಹೀನ : ಕೆಲವರು ಮಾತ್ರ ತನ್ನಂತಹ ದುರದೃಷ್ಟಶಾಲಿಗಳು (ಬಳಜೀ. ೧೬೪).
[ ಸಂ. ದುರದೃಷ್ಟಶಾಲಿನ್ ]

**ದುರಧ್ವ** (ನಾ). ೧. ಕೆಟ್ಟದಾರಿ:"ವ್ಯಧ್ವಃ, ದುರಧ್ವಃ, ವಿಪಥಃ, ಕದಧ್ವಾನ್, ಕಾಪಥಃ ಇ ಕೆಟ್ಟದಾರೀ; ಸೀಳುಹಾದಿ" (ಸಿದ್ಧಾಂತಿ. ೮೬). ೨. ಅಸಭ್ಯವಾದ ಮಾರ್ಗ ; ಗಾಂಭೀರ್ಯವಿಲ್ಲದ ರೀತಿ. [ ಸಂ. ]

**ದುರನ್ನ** (ನಾ). ದೋಷಪೂರ್ಣವಾದ ಆಹಾರ: ಸಲೆ ನಿಜವೃತ್ತಿಯನುಳಿದು ದುರನ್ನವ ನಲಿದುಂಡು ಹೊಟ್ಟೆಯ ಹೊರೆಯುತಲಿ (ಪುರಂದ. ೫-೦೪೩-೨); ದುರನ್ನವೆಂದರೆ ಅನ್ನದ ಅಥವಾ ಪದಾರ್ಥದ ದೋಷದಿಂದಲೇ ತಿನ್ನಬಾರದಾದುದು. ಗಿಣ್ಣುಹಾಲು, ಫಲಕ್ಕೆ ಬಂದ ಹಸುವಿನ, ಎಮ್ಮೆಯ ಹಾಲು . . . ಇತ್ಯಾದಿಗಳು (ಆರ್ಯುರಾ. ೨೦೮). [ ಸಂ. ]

**ದುರಪದ, ಧ್ರುಪದ**(ನಾ). ನರ್ತನಕ್ಕೆ ಹೊಂದಿಕೊಳ್ಳುವ ಒಂದು ಬಗೆಯ ಹಾಡು : ಅಡಿಗಡಿಗೆ ದುರಪದವನೊಯ್ಯನೆ ನುಡಿಸು ಲಿಂಗಾದೇವಿ ಕೊಳಲಂ ನುಡಿಸು ಚಂಗಳೆ ತಾಳಧರಿ ನೀನಾಗು ಭೋಗಾಯಿ (ಬಸಪು. ೦೨-೪೨). ಧ್ರುಪದ : ಆದರ ನೀಳವಾದ ಜೋಲುಬಾಲ ಧ್ರುಪದಗಾನದ ಆಲಾಪದಂತೆ ... ವಿಲಾಸಮಾಡುವುದು (ಗಾಳಿಹ. ೮). 'ದ್ರುಪದ' ಪರಾ.
[ <ಸಂ. ಧ್ರುವಪದ./ತೆಲು. ದುರುಪದ = ತ್ವರಿತಗತಿಯಿಂದ ಮಾಡುವ ಪಾದವಿನ್ಯಾಸ ]

**ದುರಭರ** (ಗು). ಸಹಿಸಲು ಕಷ್ಟವಾದ ; ತಾಳಲಾಗದ ; ಅತಿಶಯಂವಾದ : ದುರ[ಪಾಠಾಂ. ರು]ಭರದ ಜವ್ವನದಲ್ಲಿ ತೋರಣದೆ(ದ)ಲೆಯಂತೆ ಮಹಾಲಿಂಗ ಗಜೇಶ್ವರನ ನೆರೆವ ಭರದಿಂದ ಅಳಿಕವೃದ್ಧಿಯಾಗಿದ್ದಳಲ್ಲಾ (ಸರ್ವವ. ೬೮-೩೬೦) ; ಭೂತ ಶರೀರದೊಳು ಬಿದ್ದು ಬೆಂಬೀಳುವವನಲ್ಲ ದುರಭರದ[ಪಾಠಾಂ. ದುರಾಭವದ, ದುರುಬರದ, ಧುರಾಭರದ] ಕಾಮುಕತ್ತಲೆಯ ಕಳದುಳದ ಕಲಿ ಓರಿದಪ್ಪ ಮಾಯೆಯು ಗೆಲಿದ ನಿರೋಧವಿಲ್ಲದೆ (ಶಿವಗೀ. ೨೬-೦೦೮). [ <ಸಂ. ದುರ್ಭರ ]

**ದುರಭಿಪ್ರಾಯ** (ನಾ). ೧. ಕೆಟ್ಟ ಉದ್ದೇಶ; ದುಷ್ಟ ಆಶಯ,-ಭಾವನೆ: ಆದರಿಂದ ಮಹಾಪ್ರಭುಗಳ ಬಗ್ಗೆ ಯಾವ ಬಗೆಯ ದುರಭಿಪ್ರಾಯವೂ ಮೂಡಲಾರದು (ನಗಹೊ. ೨೩೮). ೨. ದುಷ್ಟಬುದ್ಧಿಯುಳ್ಳವನು ; ಕೆಟ್ಟವ್ಯಕ್ತಿ : ದುರಭಿಪ್ರಾಯನೆ ಖೇಚರಾನ್ವಯದ ಶುದ್ಧಾಚಾರಮಂ ಬಿಟ್ಟು . . . ಪರದಾರಪ್ರಿಯನಾದ ಪಾತಕನೆ (ಶಂರಾಮ. ೧೪-೯೮).
[ ಸಂ. ]

**ದುರಭಿಮತ** (ನಾ). ೧. = ದುರಭಿಪ್ರಾಯಂ. ೨. ಕೆಟ್ಟ ಅಭಿಪ್ರಾಯಂ ಉಳ್ಳವನು ; ನೀಚ ಮನಸ್ಸುಳ್ಳವನು : ದುರಭಿಮತದುಷ್ಪೂರ್ವರೆನ್ನ ಕುಮಾರರಭಿಧಾನ (ಕುವ್ಯಾಸ. ೧೫-೪೯). [ ಸಂ. ]

**ದುರಭಿಮಾನ** (ನಾ). ಕೆಟ್ಟ ಅಹಂಕಾರ ; ಒಣಹೆಮ್ಮೆ : ದುರಭಿಮಾನಮಂ ಕೈಕೊಂಡಿರಲ್ ಪಸಿದು ಸಾವಾದಪುದು (ಶಂಕತಂ. ೨೬೯-೧); ಗನ್ನಗತಕಂಗಳ ನೆಲೆಗಳಾ ದುರಭಿಮಾನೋನ್ನತಂಗಳು ಪಾರಸತಿಗಳ ಮನಸುಗಳು (ಬಸಪು. ೪೦-೬೬) ; ಎಷ್ಟೋ ಜನರು ದುರಭಿಮಾನದಿಂದ . . . ಎರಡನೆಯವರ ಅಪರಾಧಗಳನ್ನು ಕ್ಷಮಿಸುವುದಿಲ್ಲ (ಮುಂಬಯಿ. ೪-೮೫). [ ಸಂ. ]

**ದುರಭಿಮಾನಿ** (ನಾ). ಒಣಹೆಮ್ಮೆಯಿಂದ ಕೂಡಿದವನು: "ವಿದಗ್ಧಂಮನ್ಯನವಂ ದುರಭಿಮಾನಿ ಮತ್ತಂ ಕ್ಲೀಬಂ" (ವಸ್ತುಕೋ. ೦೦೦-೦೪).
[ ಸಂ. ದುರಭಿಮಾನಿನ್ ]

**ದುರಭಿಸಂಧಿ** (ನಾ). ಕೆಟ್ಟ ಅಭಿಪ್ರಾಯ,-ಉದ್ದೇಶ ; ದುರುದ್ದೇಶ : ಕ್ರೋಧಮೂರ್ಛಿತನಾಗುತಾರೋಪಣಂಗೆಯ್ವ ನೀಂ ಭ್ರಾತೃವತ್ಸಲ ಭರತನಿಗೆ ದುರಭಿಸಂಧಿಯಂ (ಶ್ರೀರಾಮಾ. ೦೫೯-೦೮೬); ಯುಧಿಷ್ಠಿರನು ದುರ್ಯೋಧನನ ದುರಭಿಸಂಧಿಯನ್ನು ತಿಳಿದಿದ್ದರೂ ... ಆ ಮನೆಯಲ್ಲಿ ಇಳಿದು ಜೋಕೆಯಿಂದಿದ್ದನು (ಭೀಷ್ಮಜ. ೬೪) : ತನ್ನನ್ನೆ ರಾಜನಾಗಿರೆಂದು ಬೇಡಿಕೊಳ್ಳುತ್ತಿರುವಂಥ ಜನರ, ದುರಭಿಸಂಧಿ ಅರ್ಥವಾಗುತ್ತದೆ (ಸುವರ್ಣ. ೧೮೮) ; ಅವನ ಹೃದಯದ ನಿಗೂಢ ದುರಭಿಸಂಧಿ, ಅಷ್ಟು ಶೀಘ್ರವಾಗಿ ಕೈಗೂಡುತ್ತದೆ ಎಂದು ಅವನು ಭಾವಿಸಿರಲಿಲ್ಲ (ಮಲಮ. ೬೯೫) [ ಸಂ. ]

**ದುರಭಿಹಿತ** (ನಾ). ಇಷ್ಟವಾಗದ ಹೇಳಿಕೆ ; ಹಿತವನ್ನುಂಟುಮಾಡದ ನಂಡಿ : ದೂತನ ದುರಭಿಹಿತಂಗಳಂ ಭೂಪಾಲನೇಳಿಲಂಗೇಳ್ದು ಮಂದಸ್ಮಿತ ಮುಖಸರೋಜಂ ಯುವರಾಜನಂ ನಿರೀಕ್ಷಿಪುದುಂ (ಚಂದ್ರಪು. ೯-೦೦೬ ವ).
[ ಸಂ. ]

**ದುರಭ್ಯಾಸ** (ನಾ). ಕೆಟ್ಟ ಚಟ, - ಅಭ್ಯಾಸ : ಶ್ವೇತವರ್ಣೀಯರು ನಮ್ಮ ಮೇಲೆ ಅಪಪ್ರಚಾರ ಮಾಡುವ ದುರಭ್ಯಾಸ ಇಟ್ಟುಕೊಂಡಿದ್ದಾರೆ (ನಾಡಿಗೇ. ೦೬೩) ; ತರಕಾರಿ ಇಂತಹುದೆ ಎಂದು ಹೇಳುವುದು ಕಷ್ಟವಾಗುವ ಮಟ್ಟಿಗೆ ಬಣ್ಣ, ವಾಸನೆಗಳನ್ನು ರೂಪಾಂತರ ಮಾಡುತ್ತಿರುವ ದುರಭ್ಯಾಸ ಹೋಗಬೇಕು (ತರಬಿ. ೬೦). [ ಸಂ. ]

**ದುರಭ್ಯಾಸಿ** (ನಾ). ಕೆಟ್ಟಚಟವುಳ್ಳವನು ; ದುಷ್ಟಚಾಳಿಯುಳ್ಳವನು : ವಿದ್ಯಾರ್ಥಿಗಳೆಲ್ಲ . . . ಸಿಗರೇಟು ಸೇದುವ ದುರಭ್ಯಾಸಿಗಳಾಗಿದ್ದಾರೆ (ರಂಗರೂ. ೦೨೩). [ ಸಂ. ದುರಭ್ಯಾಸಿನ್ ]

**ದುರವಗಾಹ** (ಗು). ೧. ಅಳೆಯಲು ಅಸಾಧ್ಯವಾದ ; ಆಳವನ್ನು ಅಳೆಯಲಾಗದ. (ನಾ). ೨. ತಿಳಿಯಲು ಕಷ್ಟವಾದುದು ; ಕಷ್ಟಗ್ರಾಹ್ಯವಾದುದು: ಇಷ್ಟ ಬಂದಂತೆ ಪದಕಲ್ಪನೆಗಳನ್ನು ಮಾಡಿಕೊಳ್ಳುತ್ತಾ ಬರಲು ಅವು ಇತರ ಮಾಂಡಲಿಕರಿಗೆ ದುರವಗಾಹಗಳಾದಂತೆ (ಕಸಾಪ. I, ೫೯-೦೯೦೯). [ ಸಂ. ]

**ದುಸ್ಸಹ** (ಗು). ೧. ಸಹಿಸಲಂ ಕಷ್ಟವಾದ; ತಾಳಲಾರದ; ಸೈರಿಸಲಾಗದ: ತನ್ನ ಪಿರಿಯ ಮಗನಂ ಕರೆದು ತನ್ನ ದುಸ್ಸಹಾವಸ್ಥಾಂತರಮನಱಿಪಿ (ಆದಿಪು. ೨-೧೪ ವ); ಅತಿ ದುಸ್ಸಹವಾರ್ತಾವಿಪಲತೆಯಿಂ ನಾಂಟಿಸಲಿದಲ್ತೆ ಕಂಸಶೋತ್ರಕ್ಷತಿಖಿನವಿಶಲಾಕಾತತಿಯೆನೆ ದಶನಾಂತು ನಿವಿರೆ ಮುನಿ ಯಿಂತೆಂದಂ (ಜಗವಿ. ೨-೪೩); ಇತ್ತ ಹೆತ್ತ ತಾಯಿ ದುಸ್ಸಹ ಸಮಾಚಾರ ವನ್ನು ಕೇಳಿ ಪ್ರಾಣಬಿಟ್ಟರು (ಶಾಂತಲಾ. ೧೭೦). (ನಾ). ೨. ಸಹಿಸ ಲಾಗದುದಂ; ತಾಳಲಾಗದುದಂ: ಆ ಕಾಮುಬಾಣಾಗ್ನಿಯಿಂ ಸರ್ವ ಮುಖಿಕ್ಷೀಡಾಗ್ನಿಯೇಂ ದುಸ್ಸಹಮೆ (ಜಗವಿ. ೩-೯೩); ದುಸ್ಸಹವು ನಿಮ್ಮಭ್ಯುದಯವಹಿತರಿಗೆ (ಕುಮ್ಯಾ.ಸ. ೧೧-೧೦); ತೆರಳಲ್ಕಿಪ್ಪರ್ ದೇಶಾಂತರ ಕಬಲಾಜನದ ಚಿಂತೆ ದುಸ್ಸಹಮಲ್ತೇ (ಶಾಕುಂತ. ೪೮-೪); ಅವಮಾನವನ್ನು ಸಹಿಸಲು ಯುವಕರಿಗೆ ದುಸ್ಸಹ (ಶಿಕ್ಷದ. ೧೦೩). ೩. ಸಹಿಸಿಕೊಳ್ಳಲು ಆಗದವನು: ದುರ್ಲಭನಾರು ದುಸ್ಸಹನಾರು ದುರ್ಮತಿ ಯಾರು ಧರ್ಮಜ ತಿಳಿಯಹೇಳೆಂದ (ಕುಮ್ಯಾ.ಉ. ೧೩-೩೭): ಮಹಾದುಸ್ಸಹನ ದುಶ್ಶೀಲನ ದುರಾಚಾರನ . . . ಕೈವಿಡಿದೆತ್ತಬೇಕೆಲೆ ದೇವ (ತೊರವೆರಾ. ೪-೪-೩೭); ದುಸ್ಸಹರಜೇಯುರವ್ರತಿಸಮರಥರ್ಸಾಹಸಿಗಳೆರ್ವರುಂ ಗಗನಗಮನದ ವೀರರು (ಕೃಮಿಥಾ. ೨೨-೩೦). [ ಸಂ. ]

**ದುಸ್ಸಹವಾಸ** (ನಾ). ಕೆಟ್ಟ ಸಹವಾಸ ; ದುಸ್ಸಂಗ : ದುಸ್ಸಹವಾಸವು ದುರ್ಗತಿಯನ್ನು ಕೊಡುವುದಾಗುವುದು (ಅರ್ಕಾಮ. ೬೯). [ ಸಂ. ]

**ದುಸ್ಸಹಸ** (ನಾ). ಅಸಾಮಾನ್ಯವಾದ ಸಾಹಸ ; ಅತ್ಯಂತ ಸಾಹಸ : ಹುದುಗಿದಗ್ಗದ ಸತ್ವ ದುಸ್ಸಹಸದ ನಿರೂಢಿಯ ಸೋಸಮಯ [ಪಾಠಾಂ. ದುತ್ಸಾಹದ ನಿರೂಢಶ್ವಾಸದಲಿ]ಗದುಗದಿತ ಕಂಠದ . . . ಗುರುವಾಯಿಳಿದ ಭೀಮನ ಕಂಡನಾ ಭೂಪ (ಕುಮ್ಯಾ.ಉ. ೧೩-೩೮). [<ಸಂ. ದುಸ್ಸಾಹಸ]

**ದುಸ್ಸಾಧ್ಯ** (ನಾ). ಕಾರ್ಯಗೊಳಿಸಲು ಅಸಾಧ್ಯವಾದುದಂ,-ಕಷ್ಟಸಾಧ್ಯ ವಾದುದು : ವಿದ್ಯಾವಂತರು . . . ಉತ್ತಮವುಟ್ಟದ ಜೀವನ ನಡೆಸ ಬೇಕೆಂದು ಹಾರೈಸುವುದು ಸಹಜವಾದ್ದು. ಆದರೆ ಅನೇಕರಿಗೆ ಅದು ದುಸ್ಸಾಧ್ಯವೆನಿಸಬಹುದು (ಶಿಕ್ಷದ. ೬೬೮). [ ಸಂ. ]

**ದುಸ್ಸಾಹಸಿಕ** (ನಾ). ಗಂಡಾಂತರವನ್ನು ಎದುರಿಸುವ ಅತಿಯಾದ ಸಾಹಸ : ತನ್ನ ಪ್ರಾಧಾನ್ಯವನ್ನು ರಕ್ಷಿಸಿಕೊಳ್ಳುವುದಕ್ಕೋಸ್ಕರ ದುಸ್ಸಾ ಹಸಿಕವಾದೊಂದು ಸಂಕಲ್ಪವನ್ನು ಮಾಡಿದಳು (ಕಪಾಕುಂ. ೬೩). [ ಸಂ. ]

**ದುಸ್ಸ್ಥಲ, ದುಸ್ಸ್ಥಳ** (ನಾ). ೧. ಕೆಟ್ಟ ಸ್ಥಳ ; ಅನುಕೂಲವಲ್ಲದ ಜಾಗ. **ದುಸ್ಸ್ಥಳ** : ೨. ಇಕ್ಕಟ್ಟಾದ ಮಾರ್ಗ,-ಸ್ಥಳ : ದುಸ್ಸ್ಥಳಮುದಯಾಚಳ ಧಾತುಸ್ಥಳಿಯಿಂ ಬೇಗಮುಡರ್ವ ದಿನನಾಥರಥಪ್ರಸ್ಥಾನಪಾಂಸುವೆನಿಸಿ ದಿಶಾಸ್ಥಗಿತಂ ರಂಜಿಸಿತ್ತು ಸಂಧ್ಯಾರಾಗಂ (ಮಲ್ಲಿಪು. ೭-೧೦೩). [ ಸಂ. ]

**ದುಸ್ಸ್ಥಳ** 'ದುಸ್ಸ್ಥಲ' ನೋ.

**ದುಸ್ಸ್ವಪ್ನ** (ನಾ). = ದುಸ್ವಪ್ನ : ದುಸ್ಸ್ವಪ್ನಕೆ ಬೆಚ್ಚುತಲೆಚ್ಚತ್ತಂತೆ ನಾವೆ ದ್ದೆವು ನಲ್ಲಿರುಳಿಗೆ (ಅಹಲ್ಯ. ೧೦೩-೧೦). [ ಸಂ. ]

**ದುಸ್ಸ್ವಭಾವ** (ನಾ). ಕೆಟ್ಟ ಸ್ವಭಾವ; ದುಷ್ಟ ಗುಣ. [ ಸಂ. ]

**ದುಸ್ಸ್ವರ** (ನಾ). = ದುಸ್ವರ ೧ : ಕಾಗೆ ಬಂದು ವಾಯ್ದುಂ ದುಸ್ಸ್ವರದಿಂ ಕರೆವುದುಂ (ಪಂಚತಂ. ೨೨೪-೧೧). [ ಸಂ. ]

**ದುಸ್ಸ್ವರೆ** (ನಾ). ಕೆಟ್ಟ ಧ್ವನಿಯುಳ್ಳವಳಂ : ದುರ್ಗಂಧೆ ದುಸ್ಸ್ವರೆ ಪುಟ್ಟುಂ ಗುರುಡಿ ಪೊಲತಿಯಾಗಿ ಪುಟ್ಟಿ (ವಡ್ಡಾರಾ. ೯-೩). [ ಸಂ. ದುಸ್ಸ್ವರಾ ]

**ದುಹತ್ತ, ದೂಹತ್ತ** (ನಾ). ಎರಡು ಕೈ : "ದುಹತ್ತ (ದೂಹತ್ತ) - ದ್ವಿಹಸ್ತ = ಹಸ್ತಯುಗ್ಮ" (ಕರ್ನಾಕೋ. ೨೦) ; ದುಗೆ - ದ್ವಿಗುಣ - ದುಗುಣ . . . ದ್ವಿಹಸ್ತ - ದುಹತ್ತ, ದೂಹತ್ತ (ಶಮದ. ೨೯೦ ಪ್ರಯೋ). **ದೂಹತ್ತ** : ಮೇಲಿನ ಪ್ರಯೋಗಗಳನ್ನು ನೋಡಿ. [ ದು + ಹತ್ತ ]

**ದುಹಾರ** (ನಾ). (?) : ಕಂಗಳೋರೆಯು ಥಾಳಿಸುವ ಹಾಸಂಗಿಗಳ ಬಿಗುಹಿನ ದುಹಾರದ ಭಂಗಿಗಳ ಬಲುವಿಟರ ಕರಣದ ಸಾರಿಗಳ ಸೆರೆಯ ಮುಂಗುಡಿಯ ನಿಜನಾರಿಯರ ಕವಿವಂಗವಣೆಗಳ ಜೂಜುಗಾತಿಯರಂಗನೆಯ ದಂಡಿಗೆಯ ಬಳಿವಿಡಿದರು ವಿದಗ್ಧೆಯರು (ಕುಮ್ಯಾ.ಆ. ೧೩-೪೨) : ಕೆಲಬಲನ ಭಿತ್ತಿಯ ಕಂಬ ಕಂಬದ ನಡುವೆ ಭಿತ್ತಿಗಳು ಹೊಳಹನೀ ಕಂಡೆನು ವಿವೇಕದ ಕಳಿವು ಚಿತ್ರದ ಸೆಱ ದುಹಾರದೊಳಿ [ಪಾಠಾಂ. ಳು] ಳಿದವಕ್ಷಿಗಳಿಂತು ಸೋತೆನು (ಕುಮ್ಯಾ.ಸ. ೧೨-೩೩) ; ದುಗನ ಹಾಯಿಕು ತನಗೆ ಹಾಯ್ಕ್ತಿಗನವಂಬಬ್ಬರದ ಹಾಸಂಗಿಗಳ ಬೊಬ್ಬೆಯ ಸಾರಿಗಳ ಮಣಿಖಚಿತನಿಸ್ವನವ ಉಗಿವ ಸೆರೆಗಳ ಬಳಿ ದುಹಾರದ ಬಿಗುಹುಗಳ ಬೀದಿಗಳ ತಳಿಸಾರಿಗಳ ಥಾಳಾಥೂಳಿ ಮಸಗಿತು (ಕುಮ್ಯಾ.ಸ. ೧೩-೩೦) ; ನಿಮ್ಮಣ್ಣನಾಡಿ ದುಹಾರದಲಿ ಸೆಱ ಯೊದನಾತನ ಹರಿಬವೇ ನಿಮಗೆ (ಕುಮ್ಯಾ.ಕ. ೨೦-೧೩). [ ? ]

**ದುಹಿ** (ನಾ). ದ್ವೇಷ ; ವಿರೋಧ : ದುಹೀ ಮಾಡುವವ ಅಹೀ ಹಾಗೆ (ಗಾದೆ) : ದುಹೀ ಮಾಡುವವ ಅಹಿಗಿಂತ ಕಡೆ (ಗಾದೆ).

[ ←ಮರಾ. ದುಹೀ, ದುಈ ]

**ದುಹಿತಾರ** 'ದುಹಿತೆ' ನೋ.

**ದುಹಿತೃ** (ನಾ). ೧. ಮಗಳು; ಪುತ್ರಿ : "ಪೆಣ್ ದುಹಿತೃ ನಂದನೆ ಪುತ್ರಿ ತನೂಜೆ ಸೂತಿ ಶಾನೆನಿಕುಂ" (ವಸ್ತುಕೋ. ೫೯-೧೭) ; ಅಹಹ ನರ್ತಕಿಯಲು ಗಂಧರ್ವನಾಯಕನ ದುಹಿತೃವಲ್ಲಾ ನಿನ್ನ ಮಾತೆ (ಕೃಮಿಥಾ. ೧೭-೩೫) . ಅಂತರಿಕ್ಷದಲ್ಲಿ ಆದಿತ್ಯನು ತನ್ನ ದುಹಿತೃವಾದ (ಪುತ್ರಿ) ಪೃಥ್ವಿಯ ಗರ್ಭ ರೂಪವಾದ ಉದಕವನ್ನು ಧರಿಸಿದ್ದಾನೆ (ಮುಕ್ಯಾರ. ೨೬೬). ೨. ಹಾಲು ಕರೆಯುವವಳು ; ಗೌಳಿಗಿತ್ತಿ : (ಕ). [ ಸಂ. ]

**ದುಹಿತೆ, ದುಹಿತಾರ** (ನಾ). ಮಗಳು ; ಪುತ್ರಿ : "ದುಹಿತೆ - ದುಹಿತೃ = ಮಗಳು" (ತಿದ್ದ್ಯಕೋ. ೨೦) : ಆದಿಶಿವಭಕ್ತಂಗೆ ಮದುವೆಯನಾದರದಿ ನಾ ಮಾಳ್ಪೆನಲ್ಲದೆ ಈ ದುಹಿತೆಯಂ ಭವಿಗೆ ಕೊಡೆನು (ಬಸವು. ೩-೮೭) : ದುಹಿತೆಯಳ ಹರಿರಾಯನರಮನೆಗೆ ವಿಜಯದಿಂ ಕಳುಹಲ್ಕೆ ತರಳೆ ಬಂದಂ (ಗುರುಚಾ. ೩-೧೧). **ದುಹಿತಾರ** : ಅರಾದೇಶಕ್ಕೆ-ಸವಿತಾರ, ಕರ್ತಾರ . . . ದುಹಿತಾರ (ಶಮದ. ೮೫ ಪ್ರಯೋ). [ <ಸಂ. ದುಹಿತೃ ]

**ದುಹಿಸು** (ಕ್ರಿ). (ಹಾಲಿನಂತೆ) ಕರೆ ; ಸುರಿಸು ; ನೀಡು : ಸ್ತನದೆ ಸರ ಸಾಮೃತವ ಕರೆಯುವ ಜನರ ಕಾಮನೆಯನ್ನು ದುಹಿಸುವ ಮುನಿಯ ಹೋಮದ ಧೇನುವನು ತನ್ನೆದುರಿನಲಿ ಕಂಡ (ರಘುವಂ. ೨-೬೧).

[ ದುಹ್ (P < ಸಂ. ದುಹ್) + - ಇಸು ]

**ದುಹೇರ, ದುಹೇರಿ** (ಗು). ೧. ಇಮ್ಮಡಿ ; ದ್ವಿಗುಣಿತ (ಕ). **ದುಹೇರಿ**: ೨. ಪ್ರತಿ ; ಸಮಾನವಾದ ಗುಣವುಳ್ಳ : ಸ್ವಾತಂತ್ರ್ಯಚಳುವಳಿಯ ಕಾಲ ದಲ್ಲಿ ದುಹೇರಿ ಕಾರುಭಾರು ನಡೆಯುತ್ತಿತ್ತು (ರೂಢಿ).

[ ←ಮರಾ. ದುಹೇರಾ, ದುಹೇರೀ, ದುಹಿರೀ ]

**ದುಹೇರಿ** 'ದುಹೇರ' ನೋ.

**ದುಳಿರವಟ** (ನಾ). ಒಂದು ಬಗೆಯ ತೆರಿಗೆ : ಯಾ ಗ್ರಾಮದ ಚತುಸ್ಸೀಮೆಗೆ ಸಲುವ ನಂಜೆ ಪುಂಜೆ . . . ಕುಳವಡೆ ಸಾರಡೆ ದುಳಿರವಟ ಕಟಳೆವಟ ಏರಿ ಏರಿ ಬೆಲೆ ಸಂತೆ ಉಂಟಾದ ಹಲ ಉಪಾಧಿಗಳೂ ಸಹ ಸೇರ್ಸಿ ಕೊಟ್ಟೆವಾಗಿ (ಸೌಇಇ. IX-II, ೪೬೩-೮ ; 1470). [ ? ]

△ **ದುಱ** 'ದುಱ₁' ನೋ.

**ದುಱದುಱಿಸು** 'ದುಱುದುಱಿಸು' ನೋ.

**ದುಱ, ಜುಱ** (ಕ್ರಿ). ಹೊರಚೆಲ್ಲು; ಹೊರಸೂಸು : ಇಱಿದ ನೆಲಂಗಳಿಂ ತವರ ನೆತ್ತರನಕ್ಕಿಸಲಾಱ್ದೀಗಳುಂ ದುಱತೊರೆಯುತ್ತವಿರ್ದ್ದವುವು ತೀಂಬ ಕಟಂಗಳನೆಂಟುಮಾನೆಗಳುಂ ತಳಿತಜನಪ್ಪಿನಂ ಜಯದ ಲಚ್ಚಣಗಂಬ ದೊಳುದ್ದಿಂಕೊಳುವುವು (ಎಕ. V, ಬೇಲೂರು. ೧೭೦-೦೫ ; ಸು. 1160).

**ದುಱಿ**: ಮುರಾರಿ ಮು[೦] ಖರನಂ ಸಜ್ಜನೆ ಸೀಳ್ದಾಬಿದ ಮುನಿಸಿಂದೊಗೆ ದಾಱೆ ಪರಪೆ ಧಾತು ನಿರ್ಝರದಂತಶ್ರು[ಜ]ಳವೊಱಿತು ದುಱಿಯುತ್ತು ಮಿರ್ಪ ಧಾತ್ರಿಯುಪ್ಪುದಂ (ಅರ್ಧನೇ. ೮-೩೩ ವ); ತಱಿದ ಕುಱಿಗಳ ಹೆದಿ ಯಡಗಿನ ಜುಱಿತ ರಕುತದ ಪೊಲನ ಖಂಡದ . . . ಹಜಿದೆಱಕೆಗಳ ಕಂಡಬಲೆ ಹೊಗೆಳಿದಳಡಬಳದ ವಂನೆಯ (ಕುಪ್ಪಾವಿ. ೩-೩೬). 'ತೊರೆ₂', 'ಸುರಿ₁' ಪರಾ.

**ದುಱಿದುಂಬಿ** 'ದುಱುದುಂಬಿ' ನೋ.

**ದುಱು**– (ಉಪ). ಕೆಟ್ಟದ್ದನ್ನು ಸೂಚಿಸುವ ಒಂದು ಉಪಸರ್ಗ. 'ದುಱುದುಂಡಿ', 'ದುಱುದುಂಬಿ' ಪರಾ. [ <ದುರ್‌– ]

**ದುಱುದುಂಡಿ**, ದುರುದುಂಡಿ, ದುರ್ದುಂಡಿ (ನಾ). ೧. ಕೆಟ್ಟ ವ್ಯಕ್ತಿ; ಕೇಡುಕು ಮಾಡುವವಳು; ದುಷ್ಟೆ: ಪಂಚಭೃಥ್ವಿಯ ಮಧ್ಯದಲ್ಲಿ ಒಂದು ಉಡುವರದ ಗಿಡ ಹುಟ್ಟಿತ್ತು ಆ ಗಿಡುವನೊಡದು ಒಬ್ಬ ದುಱುದುಂಡಿ ಹುಟ್ಟಿದಳು (ಕಶೀಲಶಾಂ. ೩೨-೮); ತನುಮಧ್ಯದಲ್ಲಿ ಅಜ್ಞಾನಸ್ವರೂಪಿಣಿ ಯಾದ ಮಾಯೆಯೆಂಬ ದುರ್ವಿಕಾರಿ ಹುಟ್ಟಿ ಆ ತನುಮಧ್ಯದಲ್ಲಿ ಇರುತ್ತಿಹಳೆಂಬುದೀಗ . . . ದುಱುದುಂಡಿ ಹುಟ್ಟಿದಳು ಎಂಬ ಶಬ್ದಕ್ಕರ್ಥ (ಕೋಲಶಾಂ. ೩೨-೮ ಟೀಕು). **ದುರುದುಂಡಿ**: ೧. ಅನಿತರೊಳು ದುರು ದುಂಡಿಯ್ಯತಂದು ಪೂಜೆಗೈದಾ ಮಹಾಕಾಳಿಯಂ (ವಂಶಾಶಾ. ೬-೪೮-೪೪). **ದುರ್ದುಂಡಿ**: ೨. ಬಜಾರಿ; ಗಂಡುಬೀರಿ: ಈ ದುರ್ದುಂಡಿಯನ್ನು ಮದುವೆಯಾಗಲಾರೆ (ಸೀತಾಕ. ೧೧); ಒಮ್ಮೊಮ್ಮೆ ಆಕೆಯನ್ನು ದುರ್ದುಂಡಿ ಎಂತಲೂ ಕರೆಯುತ್ತಿದ್ದರು (ಸನ್ನೂರು. ೮). [ ದುಱು + ದುಂಡಿ₁ ]

**ದುಱುದುಂಬ** (ನಾ). ಕೆಟ್ಟವನು; ನೀಚ: ದುಱುದುಂಬ ಪೊಡವಿಯವರರ ಬಸಿಱೊಳೊಗೆದು ಸುಗತಿಯ ಸೊಂಪುವಡೆಯದತ್ಯಂತ ಪಾತಕಿಯಾದ (ಕೊಟ್ಟೂಬ. ೪-೧೩೨). [ <ದುಱುದುಂಬಿ ]

**ದುಱುದುಂಬಿ**, ದುರುದುಂಬಿ₁, ದುಱಿದುಂಬಿ (ನಾ). ೧. ಕೆಟ್ಟ ಗುಣ ವುಳ್ಳ ವ್ಯಕ್ತಿ; ನೀಚ ವ್ಯಕ್ತಿ: ನಾಡ ದುಱುದುಂಬಿಯರೆಂದುದನೆಂದ ಮಂದಿರೊಳ್ ನೆಱೆದೊಡಗೂಡಿ ಕಳ್ಳಂದಿವ ದುಂಬಿಗೊತ್ತಿರನಾರಂ ಬಾರಿ ಪರ್ (ಪಂಪಾರ. ೪೬೬); ಪರಿಣತರ ನುಡಿಗಳನು ಕಿವಿಯೋಕರಿಸಿದವೋ ದುಱು ದುಂಬಿಗಳ ಬಾಹಿರರ ನುಡಿಗಳನಡಿಗಡಿಗೆ ಕುಡಿದು ತೇಗಿದವು (ಕುಪ್ಪಾಸ. ೧೦-೩); ಓರಿಯಪಟ್ಟಣದ ರಾಜ್ಯವಾಳುವ ದುಷ್ಟ ದುಱುದುಂಬಿ ನಂಜುಂಡರಾಜ . . . ಮಲೆತಿರ್ದನಾಗ (ಕಂಠವಿ. ೧೮-೩೦); ಮುಂಬಗಲ ನೆಳಲಪೋಲ್ ದುಱುದುಂಬಿಗಳೊಳ್ ಮಾಳ್ಪ ಮೈತ್ರಿ ಕುಂದುಗುಂ (ನೀತಿಮುಂ. I, ೩೩೪). ೨. ತುಂಟತನವುಳ್ಳುದಂ: ನಿನ್ನಯ ಸುಱಿ ಗುರುಳಲ್ಲವಿವೆನ್ನಯ ಮಱುಯೆಂದು ಬಂದು ತಲೆವಿಡಿದವೊಲಾ ಚೆನ್ನೆಯ ತಲೆವಿಡಿದಿರ್ದುದು ಶಾಂ ನಱುಗಂಪಿಗೆ ತುಂಬಿ ದುಱುದುಂಬಿ ಕರಂ (ಚಂದ್ರಪು. ೬-೧೧೨). ೩. ತುಂಟ: ಮಱಿಯೊಳು ಬಂದು ಮಕ್ಕಳ ಗರ್ರು ಗವ ಹಾಲುಮಱಿಯಂದು ಬಾಚ ಹಿಡಿಯಲು ಹೆಱನೂಂಕಿ ಬಳಿಕ ಕೈಯಿಂದ ಸುಲಿವನಾವ ದುಱುದುಂಬಿಯಾ ಬಾಲವಿಪ್ಪು (ನೇಮಿಶಂ. ೧೫-೧೦೮). (ಗು). ೪. ಕೆಟ್ಟಗುಣವುಳ್ಳ; ಭಂಡತನದ: ಕೆಲಬರ್ದುಱುದುಂಬಿ ಮುಂಡೆಯರ್ಮಾನೆಯಿಳಗುಳ್ಳುದಂ ತವಿಸಿ ಗಂಡರನೇಂ ಕುಱಿಮಾಡಿ ತಂದವರ್ (ಸಮ್ಯಕ್. ೯-೧೧೩); ಸಂದುಗೊಂದಿನೊಳಡಂಗಿರ್ದು ಬಱಿವೋಕರ ಕೊಲ್ವ ಕಳ್ಳ ದುಱುದುಂಬಿ ಕೊಲೆಗಂಗೆ (ರಾಜೂಕ್ಷ. ೭೪-೨). **ದುರುದುಂಬಿ₁**: ೧. ಶಿಶುಪಾಲನು ಮಹಾ ದುರುದುಂಬಿ (ರಾಜಸೂ. ೧೧). ೪. ಈ ದುರು ದುಂಬಿ ತುಂಬಿಯು ಪೂಜ್ಯಳಾದ ಈಕೆಯ ಮುಖಕ್ಕೆ ಎರಗುವುದು (ಶಾಕುಂತ. ೯೦-೧೬). **ದುಱಿದುಂಬಿ**: ೫. ದುರಭಿಮಾನದ; ಹೆಮ್ಮೆಯ: ಕೆಱಪಿಲ್ಲದಿರೆ ಮುನ್ನಿನೊಂದು ದುಱಿದುಂಬಿ ಲಿಪಿಯನುಜ್ಜುಗಿ ಬರೆಸಿದೆನು (ಭರತ. ೫೪-೪೩). [ ದುಱು + ತುಂಬು₂ + – ಇ₃ ]

**ದುಱುದುಂಬಿಗ**, ದುರುದುಂಬಿಗ (ನಾ). ದುಷ್ಟ; ನೀಚ; ಕೆಟ್ಟವನು; ಪುಂಡ: ನೋಟಕರು ನಿರ್ಭಯರು ಕೊನಬಿಗಳಾಟವಿಕ ದುಱುದುಂಬಿಗರು [ಶಾಕಾಂ. ಗಳು] . . . ಖಳರು ಕೂಡಿತು ಕೋಟಿಸಂಖ್ಯೆಯಲಿ (ತೊರರಾ. ೫-೫-೧೫); ಡಂಬಕನು ದೌಳಿಯ ವೃಥಾ ದುಱುದುಂಬಿಗಂ . . . ಎಂದಿರದೆ ಬಂದೆ ನಂದಿ ನೆಱೆ ಪಶ್ಚಾದಿರಕ್ಕಟ ದುಃಖದುರಿಗೆಂದ (ಮುದ್ರೇಪು. ೩-೨೬). **ದುರುದುಂಬಿಗ**: ಪೆರರ ಪಡಿಮಾತನಾಡುವ ದುರುದುಂಬಿಗನೆಕ್ಕಸಿಕ್ಕನಂ (ನೀತಿಶಾ. ೮೫೬). [ ದುಱುದುಂಬಿ + – ಗ₂ ]

**ದುಱುದುಂಬಿತನ**, ದುರುದುಂಬಿತನ (ನಾ). ೧. ಕೆಟ್ಟ ನಡವಳಿಕೆ; ದುಷ್ಟತನ; ನೀಚತನ: ತಾನಿಲ್ಲದುದ ನೆವವನಿಕ್ಕಿ ದುಱುದುಂಬಿತನದಿ ನಿವನಂ ಕೊಲಿಸಿ (ಸಮ್ಯಕ್. ೨-೯೫); ರಾಮನ ಕೊಱಚಾಟದಿಂ ಕೊಲಿಸು ವುದು ದುಱುದುಂಬಿತನವಲ್ಲವಿದು ರಾಜಕಾರ್ಯದ ಹೊಱಗೆಯಲ್ಲೆಂದು ಪೇಳಿದನು (ಕುಂಅಾಂ. ೩೫-೩೦); ಆತನೊಳ್ ನೆಲೆಗೊಂಡ ದೈವದೊಲ ವುಮಂ, ಪಾರ್ವರ ಪರಕೆಗಳುಮನಱಿಯದೆ ದುಱುದುಂಬಿತನದಿಂ ಕೆಣಕಿ ಜಗಳಂ ತೆಗೆವುದುಂ (ಚಾವುಂ. ೦೩-೭). ೨. ತುಂಟತನ: ಮಿಸುಪ ಕರ ವೀರದ ಕದುಗೊರ್ದಿದ ದಿರಿಮುಂಗುಳ್ಗಳಂ ಮಾಸುಂಕಿ ಮುತ್ತಿ ಮುಸುರ ರೆಂದು ಮುಂಕೊಂಡು ಝೇಂಕರಿಸುತ್ತ ದುಱುದುಂಬಿತನದಿಂ ಬಂದು ಮಱಿದುಂಬಿಗೆ ಚಂಪಕಕೋರಕ ಭ್ರಾಂತಿಗೊಟ್ಟು ತೊಟ್ಟನೆ ಮುಗುಳ್ಗಿಯುಂ (ರಾಜಶೇ. ೧೨-೫೯ ವ). ೩. ಅವಿವೇಕ; ದುಂಡುಹುತನ: ದುರುಳ ನೀ ದುಱುದುಂಬಿತನದಲಿ ನಿನ್ನ ಹೊಗಳಿದೊಡೆ ಗರುವ ಮಾನ್ಯರು ಮೆಚ್ಚುವರೆ (ಕುಪ್ಪಾವಿ. ೬-೧೮): ದುಱುದುಂಬಿತನದಿ ಧುರಮಂ ಮಾಳ್ಪೆನೆಂದೂರ ಪೊಱಮಟ್ಟು ತನ್ನ ಸೇನೆಯನು ಪರಬಲಕೆ ಕುಯ್ಗುಱಿ ಮಾಡಿ ನಾಡು ಬೀಡಂ ಕೆಡಿಸಿಕೊಂಡನಲ್ಲಾ ನಮ್ಮ ನೃಪತಿ (ಸಮ್ಯಕ್. ೮-೫೪): ಇಱಿದು ಮೆಱೆದು ಪೊಕ್ಕು ಪೊಱಮಡಬಲ್ಲ ಅಱಕೆಯಧಟರಿರ್ದಂತೆ ದುಱುದುಂಬಿ ತನದೊಳಿಂತಿದನೆಣಿಸುವರೇ ಕಿಱುವರೆಯದೆಳಲೆ ಮಗನೇ (ಸಮಿಶಂ. ೨೮-೩೦). **ದುರುದುಂಬಿತನ**: ೧. ಬಂದೆ ದುರುದುಂಬಿತನದ ಮಾಸನಿಯ ವಳ್ ಕುಲನಾಶಿನಿ (ರುಕ್ಮಾಂಗ. ೬-೫೬); ಅವರು ಮಕ್ಕಳ ದುರುದುಂಬಿ ತನಕ್ಕೆ ಎಡೆಕೊಟ್ಟು ಕುಟುಂಬವಿನಾಶಕ್ಕೆ ಕಾರಣರಾಗುತ್ತಾರೆ (ಕಪಾಡ. ೨೫೬); ದುರುದುಂಬಿತನ, ಕಾಮುಕತ್ವಷ್ಟೆ, ಹಿಡಿಹೊನ್ನಾಶಿ ಈ ಗೋಡೆಗಳಾಚೆ ಮಾನವ ದೃಷ್ಟಿಯು ಇನ್ನೂ ಹರಿದಿಲ್ಲ (ರೂಪಮು. ೧೮); ಜೈಲುಗಳಲ್ಲಿ ತಾಂಡವ ವಾಡುತ್ತಿದ್ದ ಘೋರದುಷ್ಕರ್ಮವನ್ನೂ ದುಷ್ಕರ್ಮಪ್ರವರ್ತಕರ ದುರು ದುಂಬಿತನವನ್ನೂ ಅವನು ಕಣ್ಣಾರೆ ಕಂಡಿದ್ದನು (ಕುಸಕು. ೫೯೦). ೪. ಮಂದ; ಸೊಕ್ಕು; ಅಹಂಕಾರ: ರಾಮನನ್ನು ಬಗ್ಗು ಬಡಿಯುತ್ತೇನೆಂಬ ದುರು ದುಂಬಿತನದಿಂದ ರುದ್ರ ಕರ್ನಾಟಕ ರಾಜ್ಯದ ಮೇಲೆ ಧಾಳಿ ನಡೆಸಿದನು (ನಂಟುಂಠ. ೪೪); ಆದರೆ, ನಾನೀಗ ದುರುದುಂಬಿತನದ ಗಂಗನನ್ನು ಹದ ಗೊಳಿಸಲಾಗಿ ಅವನ ರಾಜ್ಯದೊಳಗೇ ನುಗ್ಗುತ್ತೇನೆ (ವೀರಬಂ. ೬೫). [ ದುಱುದುಂಬಿ + – ತನ ]

**ದುಱುದುಂಬಿನಿ** (ನಾ). ದುಷ್ಟೆ; ಕೆಟ್ಟವಳು: ಕೇಡಿಯೊ ಕುಂಟಣೆಯೊ ಕುಟ್ಟಿಯೊ ನಾಡೆ ದುರ್ಗಂಧಿನಿಯೊ ದುಱುದುಂಬಿನಿಯೊ ದುರ್ಜನಿಯೊ (ಮುದ್ರೇಪು. ೬-೨೦). [ < ದುಱುದುಂಬಿ ]

**ದುಱುದುಱನೆ** (ಅ). ವೇಗವಾಗಿ; ದುರುದುರು ಎಂಬ ಶಬ್ದದೊಡನೆ: ಇಱಿದೆಚ್ಚು ಕಡಿವಲ್ಲಿ ಹೊಡವಲ್ಲಿ ಸೀಳ್ವಲ್ಲಿ ದುಱುದುಱನೆ ನೆತ್ತರುಗೆ (ವೀಕ್ಷ್ಪು. ೨-೧೧-೬). 'ದುರುದುರನೆ' ಪರಾ. [ ದುಱುದುಱು + – ಅನೆ₁ ]

**ದುಱುದುಱಿಸು**, ಜುಱುಜುಱಿಸು, ದುರುದುರಿಸು₁, ದುಱಿದುಱಿಸು (ಕ್ರಿ). (ನೊರೆ ಸಹಿತವಾಗಿ) ಧಾರೆಯಾಗಿ ಸುರಿ; ಒಂದೇ ಸಮನೆ ಸ್ರವಿಸು; ಬಳಬಳನೆ ಸುರಿ: ಕೋಣನ ಮುಱಿದಲೆಯ ಮಿಸಲಿನ

ರಕುತದ ದುಱುದುಱುಪ ದಂಡೆಯುಲಿ ಕಲಸಿದ ಕೂಳ ಮುದ್ದೆಗಳ (ಶಾಬ್ಯಾ.ಳ. ೮-೮) ; ದುಱುದುಱುಪ ನೆತ್ತರ ನಿಹಾರದ ವೈಯ ಸಡಲಿದ ಕೈಯ ಬಿಲುಸರಳ ಅರಸಸನು ಕಂಡಳಲಿದರು (ಶಾಬ್ಯಾ.ಳ. ೧೧-೩೩): ದ ಱುದುಱುವ ತಲೆ ಏದುಳ ಹಱುಗರುಳ ನೆಣವಸೆಯು ಮೂಳೆಯು ಮುಱುಕಂಗಳ ಕಡಿಖಂಡಮಯವಾಯ್ತು ಖಳಚತುರಂಗ (ಶಬ್ಯಾದ್ಯೋ.೧೮ ೩೩): ಮುಱುದ ಮೂಳೆಗಳಿಂ ಸುಭಟರ ದುಱುದುಱುಸುವ ಗಾಯಗಳಿಂದಾ ರಣ ಧರಿ ದುದು ಭೀಕರವಡೆದು (ಕುಡಾಸಾಂ. ೧೨-೮೦). ದುಱುದುಱಿಸು: ಆ ಕುವಾರ ಶರಾಘಿವರುಷದಲಿ ದುಱುದುಱುವ ಕರುಳಗಳ ಖಂಡದ ಹಱದೊಗಲ ತೊಡೆ ತೋಳ್ಗಳಲಿ ಹದ್ದೊಱಗಳೀದವು (ನಿಘಾಗ. ೧೦-೮೬-೮) ; ದುಱು ದುಱುಪ ಕೀವು ನೆತ್ತರ್ಗೆಱಗುತ ಝುವ್ಮೆಂದು ಮೊರೆವ ನೊಳವಿಗೆ (ವೃಷವಿ. ೩೮-೧೨೪). ದುರುದುರಿಸು : ಗುರುಗುರಿಸುವ ಜೀವದೊಡಲೊಳು ದುರುದುರಿಸುತಿಹ ರಕುತವಾಯುದಿಂ ಮೆರದುದೈ ರಣಭೂಮಿ (ವೀವೀಕು. ೩-೧೪): ದುಱುದುಱಿಸು : ದುಱುದುಱುವ ರಕುತದ ಕಾಲುವೆಯೊಳುಱ ತೇಲಿದುವು ಹಯರಾವ್ಯರಟ್ಟೆಗಳು (ಮೃಡಾಶಾ. ೪-೪೯): ದುಱುದುಱಿಪ ನೆತ್ತರಿನ ಕೋಡಿಯರದೊತ್ತರಿಸಿ ಸುತ್ತುವರಿಯೆ . . . ಬೆಂಬತ್ತಿದರ್ ದಾನವರನೆತ್ತಿದಾಯುಧಗಳಿಂದೆ (ಜಲಕು. ೪೪-೫೦).

[ದುಱು ದುಱು + -ಇಸು₂]

ದುಱುದುಱು (ನಾ). (ದ್ರವಪದಾರ್ಥಗಳು ಸುರಿಯುವುದನ್ನು ಸೂಚಿಸುವ) ಒಂದು ಅನುಕರಣ ಶಬ್ದ: ದುಱುದುಱೆಂದು ನೆತ್ತರುಱ ಶಾಕಿನಿಗಳ್ಗಳಿ ಬಾಯ್ಗಳನೊಡ್ಡಿ ಬಿಸಿನೆತ್ತರ ಜುಟ್ಟೆಂದು ಪೀರಿಯಾನಂದಿಸುತ ನಲಿದು ಫಱಫಱೆಂದು ತೇಗಿದ ವು (ಜೀರವ. ೪-೧೩); ದುಱುದುಱೆಂದು ನೆತ್ತರುಗೆ ಕುಕಿಲಿರಿದು ಭೂತಂಗಳಯ್ದೆ ಬಾಯೊಡ್ಡಿ ನಲಿದು . . . ಫಱೆಂದು ತೇಗಿ ಪರಸಿದವು ಶಿವದೂತರಂ (ವೀಕ್ಕೃ. ೨-೬-೪೮).

ದುಱುದುಱುದಿನ್ 'ತುಱುತುಱುತಿನ್' ನೋ.

△ದುಱುಸು 'ದುರಂಸು₁' ನೋ.

ದೂ 'ದು' ನೋ.

ದೂಂಟಿಕ್ಕು, ದೂಟಿಕ್ಕು (ಕ್ರಿ). ೧. ಮೇಲಕ್ಕೆ ನೆಗೆ; ಜಿಗಿ: ಭರದಿಂ ಬಂದೆನ್ನ ಮೇಗಾಲ್ಗಳನವಳಡಿಯಿಂ ಮೆಟ್ಟಿ ದೂಂಟಿಕ್ಕಿ . . . ತಾವಾ ಧರವುಂ ತತ್ಕಾಂತ ಪೆಂಪಿಂ ಮುಗುಟ್ಟು ಮುಗುದ್ದವಳೇ ಚುಂಬನು ಗೆಯ್ವಳಾಗಳ್ (ದಕಳ. ೦೦-೯೬); ಮರಳಿ ಕುಂಟುತ್ತೆ ದೂಂಟಿಕ್ಕಿ ನಡೆಯುತಿತ್ತುಮ್ಮೆ ಕರದೊಳಗೆ ಲೇಖ್ಯಮಂ ಪಿಡಿದೆತ್ತಿಕೊಂಡು (ಅರಾಕ. ೬-೧೭). ದೂಟಿಕ್ಕು : ೧. ಉರದೊಳ್ ಪೆರ್ವೊಲೆ ನಿಂದು ವಿಳ್ಳಿಸೆ ಭುಜಾಮೂಲಂಗಳ ಸ್ಥಾನದೊಳ್ ಬೆರಸಲ್ ಪೆರ್ದೊಡೆ ನೀಳ್ದು ಕೂಡೆ ನಿಮಿರಲ್ ದೂಟಿಕ್ಕಿತಾಂ ನೀಳ್ಕೆ ಸೌಂದರಿಯೊರ್ವಳ್ ಕಡುನೀಡಿ ಮೇಲೆ ನೆಳತೋಳಂ ಚಂಚಳಂಬೆತ್ತ ನುಣ್ಚರಲಿಂ ಪೂದಿಱುವುತ್ತವಿರ್ದಳೊಲವಿಂ ದೊಂದುಚ್ಚಶಾಖಾಗ್ರದೊಳ್ (ಶಾರಕು. ೧೪-೬೩). ೨. ತಳ್ಳು ; ದೂಡು; ಸರಿಸು: ತರಳತನದಲಿ ತಾನು ಮಾಡಿದ ದುರುಳತೆಯ ದೂಟಿಕ್ಕಿ ನಿಮ್ಮಯ ಹಿರಿಯತನವನು ಮೆಱುವುದು (ತೊರಣಾ. ೬-೨೪-೬೭) ; ನಿನ್ನ ನಂದನಂ ದುರುಳತನದಿಂ ನಿಮ್ಮ ದೂಟಿಕ್ಕಿ ಹಿರಿಯರಂ ಕುರುಡನಂ ನಂಬಿ ಕುರುಡುದಲಿಡವಿಯಂ ಪೊಕ್ಕಪೊಲಾದ (ಕುರುಣಗ. ೭೦-೬) ; ಗುರು ಭೀಷ್ಮ ವಿದುರಾದಿಗಳ್ನುಡಿಯ ದೂಟಿಕ್ಕಿ ದುರುಳರ ಕುಯುಕ್ತಿಗಂ ಮೈಗೊಟ್ಟು ಕೆಟ್ಟು ಪೊರದೆಗದು ಪೋಪಾಗಳೀಗಾರುಂಟು (ಕುರುಂಗ. ೭೩-೫೪) ; ನಮ್ಮ ಪಾಂಡವರೆಂಬ ಪ್ರೀತಿಯ ಸೊಮ್ಮ ನಾವು ಸುರಿದರೆ ಕೌರವ ಕರ್ಮಿಗಳುಚಿತವ ನೆನವನಂದೇ ಹೊರಗೆ ದೂಟಿಕ್ಕಿ ನಮ್ಮ ಪ್ರೀತಿಗೆ ಮುನಿದರಿಯದ ಹೆಮ್ಮೆಯಿಂದವರೊಡನೆ ವೆರವಿಗಧರ್ಮವಿಡಿದೈತಂದ ಕೌರವನಲ್ಲಿ ತೋರಿಂದ (ಕೃಷ್ಣಾ.ಳ. ೨೮-೪೦). [ದೂಂಟು₁ + ಇಕ್ಕು₂]

ದೂಂಟಿಸು, ದೂಟಿಸು, ದೂಡಿಸು (ಕ್ರಿ). ೧. ಹಾರುವಂತೆ ಮಾಡು ; ಜಗಿಸು ; ಚಿಮ್ಮಿಸು : ಎಂಟು ಶಿರವನೀವನೇಟೊಡಲಾತಂಗೆಂದುಂಟ ಮಾನಸದಿ ಮಂತ್ರವನೂ ದೂಂಟಿಸುತವೆ ತನ್ನ ಕಂಠವರಿಯಲು ಶ್ರೀ ಕಂಠ ಹೋ ಪುರೆ ಸಾಕು ನಿಲ್ಲು ಎನುತ (ಭೈರವೇ. ೧-೨೬೪). ದೂಟಿಸು : ೧. ಉಚ್ಚದಿರು ದೋರ್ವಳತಟಾಕದ ಮುಚ್ಚುದೊಂಬನು ನಮ್ಮ ಮುಂದೆನು ತೆಚ್ಚು ಗಗನಕೆ ದೂಟಿಸಿದ[ಪಾಠಾಂ. ದನು] ದೂಷಣನ ಮಸ್ತಕವ (ತೊರಣಾ. ೩-೬-೧೪). ೨. ನಾಶಪಡಿಸು ; ಇಲ್ಲವಾಗಿಸು: ಭಕ್ತಜನ ಹೃದಯಾಂಧ ಕಾರವುಂ ದೂಟಿಸಲು ಬಲದ ಕೈಯೊಳಗೆ ಚಕ್ರಾದಿತ್ಯನಂ ಧರಿಸಿ ರಾಜಿಸುತಿಹ (ಅರ್ಜುವಿ. ೦-೮೩) ; ತಾಟಕಿಯಾಟವುಂ ಕಣೆಯೊಂದರಿಂದ ದೂಟಿಸಿದನು ರಾಮಾ (ಸಂರಾಘಾ. ೧೭). ದೂಡಿಸು : ೩. ಮುಂದಕ್ಕೆ ಬರು ; ಚಾಚು: ದೂಡಿಪ ಬೆಳಗಾಯಿ ಬೊಗರಿಮೊಲೆಯ ಚೆಲ್ವ ಗಾಡಿಕಾತಿಯರ್ಕೆದಿದರು (ಕಂಶವಿ. ೯-೮೦) ; ಒಡಿತು ತವದೊಡ್ಡು ಪಾಡಿದೊ ಕೋಗಿಲೆ ದೂಡಿಸಿ ಅಂಬುಜವರಳ್ದೊ (ಪೂಜ್ಯಕ. ೭).

ದೂಡಿಸಿಕೊಳ್ಳು = ನೂಕಿಸಿಕೊಳ್ಳು ; ಹೊರಗೆ ಹಾಕಿಸಿಕೊಳ್ಳು : ದೂಡಿಸಿಕೊಂಡ ಮನುಷ್ಯ ಹೇಡಿಗಿಂತ ಕಡೆ (ಗಾದೆ) ; ದೂಡಿಸಿಕೊಂಡವನಿಗೆ ನಾಡಿನ ಗೊಡವೆ ಯಾಕೆ ? (ಗಾದೆ). [ದೂಂಟು₁ + -ಇಸು₂]

ದೂಂಟು₁, ದೂಟು₁, ದೂಡು (ಕ್ರಿ). ೧. ಒಂದೇ ಕಾಲಿನಿಂದ ನಡೆ ; ಒಂಟಿಕಾಲಿನಲ್ಲಿ ನಡೆ ; ಕುಂಟುನಡೆ ; ಕುಂಟು : "ದೂಂಟು – ಏಕಪಾದ ಗತೌ" (ಶಮಧಾ) ; ನಿತ್ಯಬಂದುಗೆ–ಬೆಡಂಗು, ಕಡಂಗು . . . ದಾಂಟು, ದೂಂಟು (ಶಮದ. ೩೭ ಪ್ರಯೋ) ; ದಾಂಟು, ದೂಂಟು (ಕಬ್ಬಾಸು. ೮೦ ಪ್ರಯೋ) ೨. ಹಾರಾಡು ; ಗಾಳಿಯಲ್ಲಿ ತೇಲಾಡು, – ಸುತ್ತಾಡು : ನವಸಹಕಾರನೊಳ್ ನೆರೆದ ವಲ್ಲಿಗೆ ಸಲ್ಲಳ ತಾರಹಾರದಂತೆವೊಲಿರೆ ಮೊಲ್ಲೆ ಮೊಗ್ಗರಿಸೆ ಕಂಪನಲಂಪಿನೊಳೀಂಟ ದೂಂಟುವಾಡುವ ಮುಱಿದುಂಬಿ ಮಾಲೆ ತಳಿರೊಳ್ ತಡವಾಯ್ತುದೆ ಝುಂಕೃತಂ ತುಳುಂಕುವ ನೆವದಿಂದೆ ಜೇವೊಡೆದು ನೋಡಿದನಂಗಜನಿಕ್ಷುಚಾಪಮಂ (ಅನಂಪು. ೭-೯). ದೂಟು₁ : ೩. ಹಾರು ; ಚಿಮ್ಮು : ದೂಟ ಬಿದ್ದವು ಸೀಸಕವು ಶತಕೋಟ ಘಾಯದ ಘಟನೆಯೊಳು ಶತಕೋಟ ಘಾಯಕೆ ಸಿಡಿದ ಹೇಮಾಚಳದ ತುದಿಯಂತೆ (ಕೃಷ್ಣಾಗ. ೭-೧೨). ೪. ಹಾರಿಸು ; ಚಿಮ್ಮಿಸು : ದೂಟಿ ಮಸ್ತಕವಭ್ರ ಕಟ್ಟುದು ಕೂಟದಲಿ (ತೊರಣಾ. ೩-೬-೧೯). ೫. ನೂಕು; ದಬ್ಬು; ತಳ್ಳು. ೬. ನಿವಾರಿಸು ; ದೂರಮಾಡು : ಪದಧೂಳಿಯಲಿ ದೂಟಿದನಹಲ್ಯಾ ಸತಿಯ ದುಷ್ಕೃತವ (ತೊರಣಾ. ೧-೨-೨೦) ; ದೂಡಿದಳು ಲಜ್ಜೆಯನು ಮೂರ್ಛೆಯ ಧಾಟಿಯಲಿ ಧೃತಿಗೆಟ್ಟಳು . . . ತರಳಾಕ್ಷಿ (ನಿಘಾಗ. ೧೦-೩೮-೨೪). ೭. ಅಲುಗಾಡು; ಕಂಪಿಸು; ತೂಗಾಡು; ಏರುಪೇರಾಗು: ಕೋಟಿಸಂಖ್ಯೆಯ ಬಲದ ಮಿಕ್ಕಿನ ಕೋಟಿಸಂಖ್ಯೆಯ ಯೂಥಪರು ಧರೆ ದೂಟಲಂಬುಧಿ ಮಿಾಟಲು . . . ತೋಱಿಸಿದರೀ ಪರಿಪಾಟಿಯಲಿ . . . ಗಣನೆಯಿಲ್ಲದ ರಾಮಸೈನಿಕವ (ತೊರಣಾ. ೪-೬-೩೩). ದೂಡು : ೫. ತೊಟ್ಟಗೆ ವಿಭು ಸಾಯೆ ಪೊಯ್ದು ಕಿವಿಯಂ ಓಂದಿ ದೂಡಲೊಡರ್ಚ ಬಂದನೇ (ಸುಕುಮಾ. ೨-೬೩) ; ದಶಕಂಠ . . . ದೂಡಿಬಿಟ್ಟನು ತಮ್ಮ ವಿಭೀಷಣನ (ಕೌಶಿರಾ. ೧೪ ಪಲ್ಲವಿ) ; ಚೇದಿಭೂಪತಿ ದಂತವಕ್ತ್ರರು ವಿಪ್ರ ಶಾಪದಲಿ ಆದರೀ ಪರಿ ವಿಷ್ಣುಪದದಿಂ ದೂಡಿದುದು ನಿಜಕರ್ಮಗತಿ (ನಿಘಾಗ. ೭-೧-೨೩); ಈ ಸಣ್ಣ ಮಗುವ ದೂಡುವರಲ್ಲೆ ಯುದ್ಧಕ್ಕೆ (ಅಭಿಅ. ೮) ; ಬಳಿಕಿತ್ತ ಮಲ್ಲಮ್ಮನಂ ದೂಡಿ ತಾವುಣ್ಣಲೆಳಸುತೊಳಪೊಕ್ಕು ನೋಡಲ್ ಬೋನ ಕಜ್ಜಾಯ ಉಳಿಯದೆಲ್ಲವಡಂಗಿ ಪೋಗಿತ್ತು (ಮಲ್ಲಕ. ೭-೨) ; ಬೆಳಕು ಕತ್ತಲೆಯ ಎರಡು ಗೋಲಗಳು ಒಂದನೊಂದು ದೂಡೆ (ಅರಳು. ೨೨೮-೨೦) ; ಎರಡು ಗಂಟೆ ಕಾಲ ನಿದ್ದೆ ಮಾಡದೆ ಅತ್ತಿತ್ತ ಹೊರಳಿ ಸಮಯ ದೂಡಿದರು (ಕಾವೇಶಿ. ೧೭೦) ; ಕಂಡವರ ಮಕ್ಕಳನ್ನು ಬಾವೀಲಿ

ದೂಡಿ, ಅಳಾ ನೋಡಿದ ಹಾಗೆ (ಗಾದೆ). ೭. ಸಖಿ, ಮುನ್ನಿನ ಸಖ್ಯವು ಸಾರ್ಥಕವೆ ಸುಖಕಾಲದಿ ಸಖಿಯರ ದೂಡುವರೆ (ವಿಜಯಗೀ. ೭೮-೪). ೮. (ಹಳ್ಳಿ, ಜಾತಿ ಮುಂತಾದುವುಗಳಿಂದ) ಹೊರಗೆ ಹಾಕು,- ಬಹಿಷ್ಕರಿಸು: "ದೂಡು-ಹೊರಗೆ ಹಾಕು" (ಜಾನಕೋ. ೭).

[ ದೇ.೫ ತಮಿ. ತೂಣ್ಱು; ತುಳು. ದೂಡು; ಕೊತ. ದುಡ್, ದಡಿ; ತೆಲು. ದೂಂಟು ]

ದೂಂಟು₂, ದೂಟು₂ (ನಾ). ಹೆಜ್ಜೆ; ಅಡಿ (?): ಎಡೆಯೊಳ್ ದೂಂಟಂದೆ ದೂಂಟಂಗೆ ಪೆರ್ವಜೆಯಂ ಪೊಯ್ವ ಕಿಲಕ್ಕೆ ನಾಣ್ಚಿ ತಲೆಗುತ್ತಿರ್ಪಾಕೆಯೇಂ ಜೋಡೆಯೋ (ಪಂಪಭಾ. ೪-೮೩). ದೂಟು₂: ದೂಟಂದೆ ದೂಟಂಗೆ ಮರವಟ್ಟುವಾ ಮುದುಕಿ ತೊಟ್ಟ ನೋಂಪಿಯ ಬಲ್ಮೆಯೂರೆಗೋಲಂ ನೆವ್ಮಿ ಸಂಚಲಿಸಿದಳೊ ರಾಮನಂ ಕರೆದೊರಲಿ, ಕರೆದು ಕೂಗಿ (ಶ್ರೀರಾಮಪು. ೧೫೩-೫೪); ಈ ಇದಂ 'ದಾಂಟಂದೆ ದಾಂಟೆಂಗೆ' ಎಂಬುದರ ಅಪಲಿಖಿತವಿರಬಹುದೆ? [ <ದೂಂಟು₁ ]

ದೂಂದು (ನಾ). ಮನಸ್ಸಿನ ಅನಿರ್ಧಾರ (?): ಮನವೊಸೆದಿತ್ತು ದೂಣ್ದರದೆ ಭೂಮಿಯನಿತ್ತು (ದೊಂಕಕಾ. ೧೯೪೫, ಬಂಕಾಪುರ. ೧೧-೩೩; ?).

[ <ದೂಂಟು₁ ? ]

ದೂಕೀಲ (ನಾ). ಒಂದು ಬಗೆಯ ಆಭರಣ (?): ಮಣಿಹಾರ ಕಾಂಚಿ ಯನಿಟ್ಟುಯಿಟ್ಟು ದೂಕೀಲ ನೀವಾರಿಗಳನಿಟ್ಟನಾಗಮನೆಲೆಯನರಿದು ಕೈಗೋಣ್ಣಳಿಶ್ರಿ ಸಾರಿದರು (ಜಿನಮು. ೩-೫). [ ? ]

ದೂಕು, ದೂಗು (ಕ್ರಿ). ದೂಡು; ದಬ್ಬು; ತಳ್ಳು: ಸಾವಿತ್ರಿ ಎರಡು ತಿಂಗಳ ಕಾಲ ಕುಮುದಮ್ಮ ರಂಗಮ್ಮ ಇವರನ್ನು ಆಶ್ರಯಿಸಿ ಬಾಳು ದೂಕಬೇಕಾಯಿತು (ಶಾಯಿಕ. ೧೫೦). ದೂಗು: ತನ್ನ ತಾನೆ ದುಂಬಾಲ ಬಿದ್ದ ಕವಿನೆರಳ ದೂಗು ನೂಗು (ಅರಳು. ೩೫೫-೧೦). 'ನೂಂಕು₁' ಪರಾ.

[ ದೇ. ೫ ತೆಲು. ದೂಂಕು = ಹಾರು, ನೆಗೆ ]

ದೂಗ 'ದುಗ' ನೋ.

ದೂಗರುವ (ನಾ). ಇಮ್ಮಡಿ ಪರಾಕ್ರಮವುಳ್ಳವನು (?): ಪಂಪರಿಯ ಶಸ್ತ್ರಾಸ್ತ್ರ ಕೌಶಲಗಳ ದೂಗರುವ ತೋರಿದಂ (ತುರಂಗ. ೧೧-೩೮).

[ ದೂ (<ದು) + ಗರುವ₂ ]

ದೂಗಿಸು (ಕ್ರಿ). ದಬ್ಬು; ತಳ್ಳು; ನಂಗ್ಗಿಸು: ಮಧ್ಯಮರು ಪುಢಾರಿತನದ ಯಜ್ಞದಲ್ಲಿ ಯಾರನ್ನೋ ದೂಗಿಸಿ ಕಪಟಸಾಕ್ಷಿತ್ವದ ತಾಟಸ್ಥ್ಯದಿಂದ ಅವರು ವ್ಯಾಪಾರಿಸಿಕೊಳ್ಳುವುದು ... ವಾಡಿಕೆಯದೇ ಆಗಿದೆ (ಪಂಚಪಂ. ೭ ಮುನ್ನುಡಿ). 'ನೂಂಕಿಸು' ಪರಾ. [ ದೂಗು (<ದೂಕು) + -ಇಸು₂ ]

ದೂಗು 'ದೂಕು' ನೋ.

ದೂಜಾವ 'ದುಜಾವ' ನೋ.

ದೂಟಾಡು (ಕ್ರಿ). ಅಲುಗಾಡು; ಅಲ್ಲಾಡು. 'ದೂಟಾಡಿಸು' ಪರಾ.

[ ದೂಟು₁ (<ದೂಂಟು₁) + ಆಡು₁ ]

ದೂಟಾಡಿಸು (ಕ್ರಿ). ೧. "ಹಾರಾಡಿಸು; ಚಿಮ್ಮಾಡು" (ಶ್ರಬ್ದ). ೨. ಅಲುಗಾಡಿಸು; ಅಲ್ಲಾಡಿಸು; ತೂಗಾಡಿಸು: ಮೇರುಶೈಲವಂ ದೂಟಾಡಿಸಿತು ರಾಶಿ ತಾರಾಗ್ರಹಂಗಳಂ ತಾಟಾಡಿಸಿತು ಹನುಮನಬ್ಬರಣೆ (ಕೃಮಿಭಾ. ೦೩-೪೩); ಮರುತನೆಡೆಯಾಟವೇಂ ಗಿರಿವರನ ದೂಟಾಡಿಸಲು ಬಲ್ಲುದೆ (ದಿಲೀಪ. ೨-೩೩); ಬಾಡ ದೂಟಾಡಿಸಿ, ತಲೆ ತಾಟಾಡಿಸಿ, ಗುಡಿಸಿಲ ವಾಡನು ಹುಲುಹುಲುವಾಡಿಸಿ ಬಂತೈ! ಬಂತೈ (ಕಿಚಿಪು. ೨೮-೫).

[ ದೂಟಾಡು + -ಇಸು₂ ]

ದೂಟಕ್ಕು 'ದೂಂಟಕ್ಕು' ನೋ.

ದೂಟಿಸು 'ದೂಂಟಿಸು' ನೋ.

ದೂಟು₁ 'ದೂಂಟು₁' ನೋ.

ದೂಟು₂ 'ದೂಂಟು₂' ನೋ.

ದೂಡಿಸು 'ದೂಂಟಿಸು' ನೋ.

ದೂಡು 'ದೂಂಟು₁' ನೋ.

ದೂಡುಗಾಡಿ (ನಾ). ತಳ್ಳುಬಂಡಿ; ತಳ್ಳುಗಾಡಿ: "ಮಕ್ಕಳನ್ನು ಕುಳ್ಳಿರಿಸಿ ದೂಡಿಕೊಂಡು ಒಯ್ಯುವ ಗಾಡಿ" (ಕಸಾ.ಶಕೋ. ೪೯೪).

[ ದೂಡು (<ದೂಂಟು₁) + ಗಾಡಿ₃ ]

ದೂತ (ನಾ). ೧. ಸುದ್ದಿ ಅಥವಾ ಸಂದೇಶವನ್ನು ಒಯ್ಯುವವನು; ಓಲೆಕಾರ: "ಲೇಖವಾಹಂ ದೂತಂ" (ವಸ್ತುಕೋ. ೬೦-೫೮); "ದೂತನೆನೆ ಪೋಗಿ ಪೇಳುವನೆನಿಕ್ಕು" (ಮಂಗರಾ. ೩೩-೨೪): ದೂತಂ ದಕ್ಷನ ವಾರ್ತೆಯಂ ನುಡಿದು ಮೇಗಂ ನೋಟ್ಬಡಿಲ್ಲೆಂಗೆ ತದ್ದೂತಂ ನಿಶ್ಚಯ ಕಾರ್ಯಮಂ ನುಡಿಯುತುಂ ತನ್ನಂಗಮಂ ಮುಟ್ಟದಂತಾ ಶಾಣಂ ಘಣ ದಕ್ಷಮೆಂಗೆ (ರಾಜಶೇಖ. ೧೧-೬೬); ಉಳಿದ ಚತುರಾಂಬುಧಿವೃತಾ ಭೂತಳದ ಭೂಪಾಲರಿಗೆ ದೂತರ ಕಳುಹಿದನು (ಕುಮರರಾ. ೧-೭-೧೧). ೨. ರಾಯಭಾರಿ; ನಿಯೋಗಿ: ಇನಿತೊಂದು ನುಡಿದ ಬಲ್ಮೆಯ ನಿನಗಿಲ್ಲ ದೊಡೇಕೆ ನಿನ್ನನಾಳ್ದಂ ನಿನ್ನಂ ಮನವೊಲ್ದು ನಟ್ಟಿಯುಟ್ಟಿದನನಾತುಳಂ ದೂತನಿಂತು ನುಡಿಯಲ್ವೇಟ್ಕುಂ (ಆದಿಪು. ೧೪-೬೫); ಎಟ್ಕೋ ಗು ದೂತನಪ್ಪನ ಬೆಟ್ಟನ ನುಡಿಗೇಳ್ಕೆ ಮುಳಿಯಲಾಗದು (ಪಂಪಭಾ. ೯-೫೮); ದೂತನನಟ್ಟುವುದೆಂತುಂ ನೀತಿಯು (ಪಂಪರಾಮಾ. ೧೧-೨೪); ದೂತಂಗೋಲಗದೊಳ್ ಪೆರ್ಮಾತಂ ಮಂಗಳಿಂದೆ ನುಡಿಯುವೆಡೆಯಲ್ಲಿದು (ಚಂದ್ರಪ್ರ. ೧೦-೧೧೧); ದೂತಂ ಸಂಗರವಂ ನಿರೂಪಿಸೆ (ಪಾರ್ಶ್ವಪು. ೨-೯೦); ಎರಡಕ್ಕಂ ಸಲ್ವಂತಿರೆ ಸರನಾಥಂಗುಸಿರ್ದೆ ಸಂಧಿವಿಗ್ರಹಿನುಡಿಯುಂ ಸರಿಯಪ್ಪುದನೆರಡಕ್ಕಂ ಪರಿಣತವಂತಿ ದೂತನಿಂತು ನುಡಿಯಲವೇಟ್ಕುಂ (ಸುಕುಸು. ೬೩-೮೩); ಬಂದ ದೊತನ ಕೊಲುವನರಸೇ ... ಶಾನೊಂದು ಹುಲುಗಟಿ ವೀರನನು ಬೇಹಿಂಗೆ ಕಳುಹುವರೇ (ಕಾಶೀಂ. ೧೧-೫೩). ೩. ಸಂಧಾನ ಕೂಡಿಸುವವನು; ಮಧ್ಯಸ್ಥ. ೪. ಸೇವಕ; ಆಳು: ಮನೋಜ ವಸಂತರಾ ಖಳನ ಬೆಸನ ಮಾಡುವ ದೂತರೀ ರವಿ ಶಶಿಗಳೊಪ್ಪುವ ದೀವಟಿಗರು (ಕುಮಾರರಾ. ೧-೮-೬೩); ನಿನ್ನ ಬಳಿ ಒಬ್ಬ ಸಿಪಾಯಿ ದೂತ ಇರುವನಲ್ಲವೇ? (ಶಾಲಿನಾ. ೬೪). [ ಸಂ. ]

ದೂತಕಾರ್ಯ (ನಾ). ರಾಯಭಾರಿಯ ಕೆಲಸ: ಮುರಾಂತಕನಂತಪ್ಪವಂ ಯುಧಿಷ್ಠಿರಂ ದೂತಕಾರ್ಯಕ್ಕಟ್ಟಿದಂ (ಪಂಪಭಾ. ೨೪೮-೮).

[ ದೂತ + ಕಾರ್ಯ ]

ದೂತಿಕೆ (ನಾ). ಸೇವಕಿ: ಇತ್ತ ಪುತ್ರೋದಯದ ಶುಭವಾರ್ತೆಯಾ ಬಂದೋರ್ವ ದೂತಕೆಯು ಶ್ರೀಕೃಷ್ಣರಾಯಂಗೆ ಪೊಂದಿಸುತ ನಿಂದು ಸೂಚಿಸೆ (ನವಪಕೋ. ೧೧-೨೨); ಶ್ರೀವೃಷಾದೇವಿಯರುಯಿದನರಿದು ಶಕಿತ ಭೂಜದ ನೆಳಲೊಳಂ ನಿಂತು ದೂತಿಕೆಯರಂ ಕಳುಹೆ (ನವಪಕೋ. ೨೪-೪೯).

[ <ಸಂ. ದೂತಿಕಾ ]

ದೂತಟ್ಟು 'ದೂದಟ್ಟು' ನೋ.

ದೂತತನ (ನಾ). = ದೂತತ್ವ: (*). [ ದೂತ + -ತನ ]

ದೂತತ್ವ (ನಾ). ರಾಯಭಾರ ಮಾಡುವಿಕೆ; ದೂತ್ಯ: ಸಾಂಗವಾದುದು ನರಪತಿಯ ದೂತತ್ವವಿನ್ನೀಶ್ವರನು ಪಾದಲ್ಲನಗನುತ ಹಿಗ್ಗಿದನು ಹರುಷದಲಿ (ಕುಮಾರರಾ. ೫-೩-೨೭); ಮೆಲ್ಲಗೆ ಕಿವಿಯಲ್ಲಿ 'ನಿನ್ನ ತಂಗಿಯುಸಕ್ಕೆ ಬರುವಂತೆ ಹೇಳು' ಎಂದನು. ದೂತತ್ವವೆ ಸಿದ್ಧಿಸಿತು (ಮಾರಮಸ. ೨೬೮).

[ ಸಂ. ]

ದೂತಮುಖ್ಯ (ನಾ). ರಾಯಭಾರಿಗಳಲ್ಲಿ ಶ್ರೇಷ್ಠನಾದವನಂ,-ಪ್ರಮುಖ ನಾದವನಂ: ಚತುರವಚನರಚನಾಪ್ರಪಂಚಕಂಚುಕಿತ ರೋಮಾಂಚಕಂಚು ಸಭಾಜನಶರೀರನುಮಪ್ಪ ದೂತಮುಖ್ಯನನಟ್ಟಿ (ಶಾಂತಿಪು. ೨-೫೦ ವ);

ನೀತಿನಿರತನುಮಾಕಾರವಂತನುಂ ವಚನಚತುರನುಮಪ್ಪುದ್ದವನೆಂಬ ದೂತಮುಖ್ಯನನಟ್ಟಿದೊಡೆ (ಚಂದ್ರಪ್ರ. ೬-೧೮. ವ); ಧೃಷ್ಟಂ ಪರವಕ್ರೋಕ್ತಿವಿಶಿಷ್ಟಂ ನಿಶ್ಶಂಕನನ್ವಿತಂ ನಯನಿಪುಣಂ ಸ್ಪಷ್ಟ ಪರಚಿತ್ತವೃತ್ತಿಸ್ಪಷ್ಟಾರ್ಥನೆನಿಪ್ಪ ದೂತಮುಖ್ಯನನಾಗಳ್ ಕರೆದು (ಪಾರ್ಶ್ವಪು. ೨-೫೦).

[ ದೂತ + ಮುಖ್ಯ ]

**ದೂತಯ** 'ದಾತಯಂ' ನೋ.

**ದೂತಲಕ್ಷಣ** (ನಾ). ರಾಯಭಾರಿಯು ಹೊಂದಿರಬೇಕಾದ ಲಕ್ಷಣ,- ವಿಶಿಷ್ಟ ಗುಣ : (೬). 'ದೂತಾಂಗ' ಪರಾ. [ ದೂತ + ಲಕ್ಷಣ ]

**ದೂತವಚನ** (ನಾ). ರಾಯಭಾರಿಯ ಮಾತು; ದೂತನ ನುಡಿ: ಬಾಹುಬಲಿಕುಮಾರಂ ದೂತವಚನಾಕರ್ಣನೋದೀರ್ಣ ಕ್ರೋಧೋದ್ಗಚ್ಛದಚ್ಛೇದ ಜಳಸ್ವೇದಧಾರಾಸಾರಭೀಕರಾಲೋಹಿತ ಕಪೋಳತಳಮುಂ ... ಭೀಷಣಾರುಣಗಂಡಸ್ಥಳಮುಮಪ್ಪ ಗಂಧಸಿಂಧುರೇಂದ್ರಮನನುಕರಿಸಿ (ಆದಿಪು.೧೪-೬೩ ವ).

[ ದೂತ + ವಚನ ]

**ದೂತಸಂಪ್ರೇಷಣ** (ನಾ). ವಾರ್ತಾವಾಹಕನನ್ನು ಕಳುಹಿಸುವುದು; ದೂತನನ್ನು ಕಳುಹಿಸುವುದು : ಆಕೆ ನಿನಗನುರಕ್ತೆ ವಿರಕ್ತೆಯುಂಬುದಂ ದೂತಸಂಪ್ರೇಷಣದಿನಱಿದನುರಕ್ತೆ ಯಪ್ಪೊಡೇಕಾನುಮೊಂದು ಪಾಯದಿಂ ತಪ್ಪದು ವಿರಕ್ತೆಯಪ್ಪೊಡಾಕೆಯಂ ಬಲ್ಲಾಳ್ತನದಿಂ ತಪ್ಪದುಮೆನೆ (ಪಾರ್ಶ್ವಪು. ೩೦೨). [ ಸಂ. ]

**ದೂತಾಂಗ** (ನಾ). [ಕಾವ್ಯಮಿ] ದೂತಲಕ್ಷಣವನ್ನು ತಿಳಿಸುವ ಭಾಗ; ರಾಯಭಾರಿಯು ಹೊಂದಿರಬೇಕಾದ ಲಕ್ಷಣಗಳ ವಿವರಣೆ; ಅಷ್ಟಾದಶ ವರ್ಣನೆಗಳಲ್ಲಿ ಒಂದು : ಸ್ವೈರನಾದೇಯಸ್ವರೂಪಂ ಪರನೃಪವಸುಧಾಂತಾಕುಳಜ್ಞಂ ಸದೃಷ್ಟಾಂತರವಾಕ್ಯಂ ಸಾಮಭೇದಾದ್ಯತಿಶಯವಿದಸಗ್ರಾಮ್ಯವೇಷಂ ಸಭಾಭ್ಯಂತರ ನಿಶ್ಶಂಕಂ ಪರಾಶೇಂಗಿತವಿದನೆನಿಪಂ ದೂತನೆಂದಿಂತು ಧಾತ್ರೀಶ್ವರ ಕಾರ್ಯೋದ್ಯೋಗಿಗಳ್ ಬಿತ್ತರಿಪ ಕವಿಗಳಿಂ ಖ್ಯಾತ ದೂತಾಂಗವಕ್ಕುಂ (ಸೂಕ್ತಿಸು. ೧೬-೧); ೭ ರಾಯಭಾರಿಗಳ ಕಾರ್ಯಗಳನ್ನು ಕುರಿತ ವಿವರಣೆ; ರಾಯಭಾರಿಯಲ್ಲಿರಬೇಕಾದ ಸ್ಥಿರತೆ, ಔದಾರ್ಯ, ಶತ್ರುರಾಜ್ಯದ ಒಳಗಿನ ತೊಂದರೆಗಳನ್ನು ತಿಳಿಯುವಿಕೆ ದೃಷ್ಟಾಂತಸಹಿತವಾಗಿ ಭಾಷಣ ಮಾಡುವ ಚಾತುರ್ಯ, ಚತುರೋಪಾಯಗಳ ಆಳವಾದ ಜ್ಞಾನ, ನಾಗರಿಕವಾದ ವೇಷಭೂಷಣ, ಮಹಾಸಭೆಗಳ ನಡುವೆ ನಿಶ್ಚಂಚಲವಾದ ಅಭಿಪ್ರಾಯವನ್ನು ಹೊಂದಿರುವಿಕೆ, ಇತರ ರಾಜರ ಅಂತರಂಗದ ಉದ್ದೇಶಗ್ರಹಣಶಕ್ತಿ, ಸಹಜಪ್ರಜ್ಞೆ, ಅನೇಕ ಭಾಷೆಗಳ ಜ್ಞಾನ, ದಕ್ಷತೆ, ನೋಟದಿಂದಲೇ ಇತರರನ್ನು ಗೆಲ್ಲಬಲ್ಲ ಶಕ್ತಿ, ಕೋಪರಾಹಿತ್ಯ ಮುಂತಾದುವೆಲ್ಲ ಇದ್ದರೆ ಅಂತಹವನನ್ನು ನಿಜವಾದ ದೂತನೆಂದು ಕರೆಯುತ್ತಾರೆ. ಕಾವ್ಯಗಳಲ್ಲಿ ಬರಬೇಕಾದ ಹದಿನೆಂಟು ವರ್ಣನೆಗಳಲ್ಲಿ ಇವುಗಳನ್ನು ಕುರಿತ ವರ್ಣನೆಯೂ ಒಂದು. ಅದನ್ನು ದೂತಾಂಗವೆಂದು ಕರೆಯುತ್ತಾರೆ. [ ದೂತ + ಅಂಗ ]

**ದೂತಾವಾಸ** (ನಾ). ರಾಯಭಾರಿಯ ವಾಸಸ್ಥಾನ; ನಿಯೋಗಿಯ ಮನೆ : ಮಾಸ್ಕೋದಲ್ಲಿರುವ ಅಮೆರಿಕ ದೂತಾವಾಸದ ಮುಂಗಡೆ ಮುಷ್ಕರ ಪ್ರದರ್ಶನ (ಪ್ರಜಾ. ೧೧-೨-೬೫; ೫-೬). [ ದೂತ + ಆವಾಸ ]

**ದೂತಿ** (ನಾ). ೧. ಸೇವಕಿ; ಗೌಡಿತಿ. ೨. [ಕಾವ್ಯಮಿ] ಶೃಂಗಾರ ಸನ್ನಿವೇಶಗಳ ನಿರೂಪಣೆಯಲ್ಲಿ ಕವಿಗಳು ಹೇಳುವ ನಾಲ್ಕು ಬಗೆಯ ಪರಿಚಾರಿಕೆಯರಲ್ಲಿ ಒಂದು ಬಗೆ; (ಅಂತರಂಗದ ವಿಷಯಗಳನ್ನು ಹೇಳಬಹುದಾದ) ಸಖಿ ಗೆಳತಿ: "ಸಂಚಾರಿಯೆನೆ ದೂತಿಯಕ್ಕುಂ" (ಮಂಗರಾ. ೯೦-೫); ನವಪಲ್ಲವಗಳಂತೆ ಸರಾಗಂಗಳಾದ ದೂತೀವಚನಂಗಳ್ ಕಾಂತಾಜನಕ್ಕೆ ಕರ್ಣಪೂರಂಗಳಾಗೆಯುಂ (ಕಾದಂಪೂ. ೫೦೩); ದೂತೀ ಪ್ರೇಷಣಕೃತ ಸಂಕೇತಾದಿಗಳೊಂದುಮಿಲ್ಲ (ಲೀಲಾವ. ೧೦-೪೮); ಬಳಿಕ ಅಭಿಸಾರಿಕೆ ಚತುರಿಕೆ ಸಹಸಂಚಾರಿಕೆ ದೂತಿಯೆಂಬ ಚತುರ್ವಿಧ ಸಖಿಯರುಂ (ವಿವೇಕ. ೨೨೯); ಯಾವುವು ಕಳೆದರು ಬರಲಿಲ್ಲವಾತನು ದೂತಿಯ ಹೋಗೋಣ ಏಳು (ಇಂಜಾಪ. ೧೬೭-೨೨). ೩. ಸಮಾಚಾರವನ್ನು ತಲುಪಿಸುವ ಹೆಂಗಸು: "ದೂತೀ, ಸಂಚಾರಿಕಾ – ಈ ೨ ದೂದವಿ" (ಹಲಾಯು. ೮೧-೩೨೭). ೪. ತಲೆಹಿಡುಕಿ; ಕುಂಟಣಿ: ನೆರೆಯ ಮುಂದುಕಿ ಕನ್ನೆದೊತ್ತು . . . ಕುಂಟಣಿಯೆಂಬ ಪೆಣ್ಗಳರಸಿ ಕೇಳು ದೂತಿಯರ್ಕಳಪ್ಪುದೇ ದಿಟಂ (ಜನಪ. ೧೭-೨). [ ಸಂ. ದೂತೀ ]

**ದೂತಿಕೆ** (ನಾ). ದೂತಿ; ದೂದವಿ: "ದೂತೀ, ಸಂಚಾರಿಕಾ–೨ ದೂತಿಕೆಯ ಹೆಸರುಗಳು" (ಸಿದ್ಧಾಂತಿ. ೧೭೨). [ ಸಂ. ದೂತಿಕಾ ]

**ದೂತೀಜಲ್ಪ** (ನಾ). ದೂತಿಯ ನುಡಿ : ಕವಿವುಗೆ ನುಡಿದೊಡಂಗೊಂಡು ಪೋಪುದುಂ ದಕ್ಷಿಣನವಳ ದೂತೀಜಲ್ಪಂ [ಪಾಠಾಂ. ದೂತಿಕಾಕಲ್ಪಂ] ವಿಸ್ಮಯಾರ್ಥಮಾದುದೆಂದುಮಲ್ಲಿಂ ತಳರ್ದು ರಾಜಭವನಾಭಿಮುಖನಾಗಿ (ಚಂದ್ರಪ್ರ. ೮-೯೦ ವ). [ ಸಂ. ]

**ದೂತೀಯ** 'ದಂತೀಯ' ನೋ.

**ದೂತು** 'ದೂದು' ನೋ.

**ದೂತ್ಕೃತ** (ನಾ). [ಕಾಮಶಾ] ರತಿಕ್ರೀಡೆಯ ಒಂದು ಧ್ವನಿ : ಸೀತ್ಕೃತಂ ಹೂಂಕೃತಂ . . . ದೂ[ಪಾಠಾಂ. ಹೂ]ತ್ಕೃತಂ ಶ್ವಸಿತಮುರುರಾತ್ಕೃತಂ ಎನಿಪೀ ಚಮತ್ಕೃತಿಯನಱಿದು ರಮಿಸುವನೆ ಚದುರಂ (ಜನಪ. ೮-೫೦).

[ ಸಂ. ]

**ದೂತ್ಯ** (ನಾ). ೧. ರಾಯಭಾರಿಯ ಉದ್ಯೋಗ,- ಸ್ಥಾನ; ನಿಯೋಗಿಯ ಅಧಿಕಾರ. ೨. ದೂತನ ಕೆಲಸ; ರಾಯಭಾರ: "ದೂತ್ಯಂ,(ದೌತ್ಯಂ) ತದ್ಭಾವಕರ್ಮಣೋಃ, ದೂತಭಾವಕ್ಕೂ ದೂತಕೃತ್ಯಕ್ಕೂ ಹೆಸರು. ದೂತನಾಗುವಿಕೆ, ದೂತನು ಮಾಡತಕ್ಕ ಕೆಲಸ, ಇವುಗಳು"(ಸಿದ್ಧಾಂತಿ. ೨೬೯). ೩. ಸುದ್ದಿ; ವರ್ತಮಾನ; ಸಮಾಚಾರ. 'ದೌತ್ಯ' ಪರಾ. [ ಸಂ. ]

**ದೂದ** (ನಾ). ಸುದ್ದಿಯನ್ನು ಒಯ್ಯುವವನು; ವಾರ್ತಾವಾಹಕ; ದೂತ : ಇನಿಯನಟ್ಟಿದ ದೂದರ ಸೀಯನಪ್ಪ ಮಾತಿನ ರಸದೊಳ್ ಕೊನರ್ವುದು ತಳಿರ್ವುದು . . . ನಲ್ಮೆಯೆಂಬ ನಂದನವನಮೋಪರೊಳ್ (ಪಂಪಭಾ. ೪-೧೦೨); ತೆಂಗಾಳಿಯೆಂಬ ದೂದನಂ ಕರೆದು . . . ನಮ್ಮ ಪೆಱೆಯಂ ತಡೆಯದೆ ಬಿಡಿಸಿಕೊಂಡು ಬಾಯೆಂದೊಡೆ (ಲಬ್ಧಿಕಾ. ೧೩೦).

[ <ಸಂ. ದೂತ ]

**ದೂದಗ, ದೂದವ** (ನಾ). ದೂತ; ಕುಂಟಣಿಗ: ಬೋಳೈಸಿ ತೆತ್ತು ಕಾವನ ಕೇಳಿಯೊಳನುಮೆತ್ತು ಪೊರೆವ ಪುರುಳಿಗನಂ ತಾಂ ಮೇಳೈಸುವ ದೂದ[ಪಾಠಾಂ. ದು]ಗನಿಂ ಸೂಳೆಗಮುಪರಜ್ಜೆಯರ್ಗಮಪ್ಪುದು ಪಜ್ಜಂ (ಚಕವಿ. ೬-೧೦೭). **ದೂದವ** : "ಸೂಳ್ಗರೆವನೆನಲ್ಕೆ ದೂದವಂ [ಪಾಠಾಂ. ದೂದಂ]" (ಕಚುನಿ. ೩, I, ೪೫); ಓತು ಮಾತಡಕಲೊಂದಿದ ದೂದವರಿಲ್ಲ ನೆಟ್ಟನಪ್ಪುದಱನದಿಂತರಣ್ಮುದಿತಂ ವಲವೆ ನ್ಯೊಲವಿಂದು ವಕ್ಕೆಯಾ (ಪಂಪಭಾ. ೪-೭೯); ತಪ್ಪದು ಮಾ[ತು] ದೂದವರ ಕೆಯ್ಯೊಳೆ ಕಾಲ್ವಿಡಿದಟ್ಟಿ ಕಣ್ಣ ನೀರ್ ತಪ್ಪುವೆ (ಪಂಪಭಾ. ೪-೯೯). [ <ಸಂ. ದೂತಕ ]

**ದೂದಟ್ಟು, ದೂತಟ್ಟು** (ಕ್ರಿ). ೧. ಸಮಾಚಾರವನ್ನು ಕಳುಹಿಸು; ಸುದ್ದಿಯನ್ನು ತಿಳಿಸು : ಸುವಸ್ತುವಾಹನವ ಸಡಗರದಿ ತೆಗೆಕೊಂಡು . . . ಮೇಘಕೂಟದ ಕಡೆವೊಳಲ ಹೊಕ್ಕರ್ದು ದೂದಟ್ಟಿದನು ಪುರವರ್ಗೆ (ಸಾಳ್ವಭಾ. ೩೭-೫೦). ೨. ರಾಯಭಾರವನ್ನು ಮಾಡಲು ಕಳುಹಿಸು : ಆ ನಾರದನನೆ ದಿವಿಜಾರಾಜಂಗೆ ದೂದಟ್ಟಿ (ಜಗವಿ. ೧೪-೩೨ ವ); ಬಹು ಶಾಖದಶೋಕಾನೋಕಹಮೆಸೆದುದು ಮುನಿಯ ಪೆಜಗೆ ನೆಟಲಾಗೆ ಮನಸ್ಕೃಹೆಯಿಂದಪ್ಪಮಹಾಪ್ರಾತಿಹಾರ್ಯತರನೆರೆಯಲೆಂದು ದೂದಟ್ಟಿದ

ಪೊಲ್ (ಆಪಂಪು. ೨-೪೬); ಪುದುವಾಟ್ಟರೊಳ್ ಪಗೆಯಂ ದೂದಟ್ಟಿಯುಂ, ತಾಂ ಪಿಡಿದಿರ್ದರೊಳ್ ಕಾವನಂ ಕಾವಲ್ಮಾಡಿಯುಂ ನೋಟಮಾಟಂಗಳ್ಗೆ ತೋಱದನಲ್ತೆ! (ರಾಮಾಶ್ವ. ೪೩-೮). ೩. ಕಂಟಣಿಯ ಕೆಲಸಕ್ಕೆ ಕಳುಹಿಸು : ಮೋಹಧನಮಂ ಮುಂದಿಟ್ಟು ದಲ್ ತೃಷ್ಣೆ ಲಂಪಟೆ ಬೆನ್ನಿಂ ಬಿಡದೊಲ್ಲೆಮೊಲ್ಲೆಮೆನೆಯುಂ ದೂದಟ್ಟಿ ದುರ್ಬುದ್ಧಿಯಂ (ಶಾಂತಿಪು. ೭-೭೭) : ನೃಪಂ ಬೆಂಬಿಟ್ಟುಂ ದೂದಟ್ಟಿಯುಂ ಬಾರಂ (ಕಮದ. ೨೩೮ ಪ್ರಯೋ) : ವೇದಾಗಮಮನೊರೆದ ವಾಮದೇವನನೆ ಬೆಲೆವೆಣ್ಣಡೆಗೆ ದೂದಟ್ಟಿ ತನ್ನ ಭಕ್ತಿಯ ಬಲ್ಮೆಯ ಭೂಮಿಯೊಳ್ಪ್ರಕಟಿಸಿದ ಕಡುನೀಱಂ (ಸೌಂದಪು. ೨-೩೩): ನಂದಿ ದೂದಟ್ಟಿ ಕಾಳ್ಗೆಲಸಂಗೈಸಿದನಯ್ಯೊ ದೇಸಿಗನಿವಂ ತಾಯುಳ್ಳೊಡಿಂತಪ್ಪನೇ (ಬ್ರಹಮಿ. ೯-೧೦೭). **ದೂತಟ್ಟು** : ೨. ಮಾಱುಜೂಜಂ ಕುಡುವೇಟ್ಟುದಾಂ ರವಣಮಂ ಬೇಟ್ಟಂತುಟಂ ತಂದೆ ನೆಂದಱಿಪಲ್ಕೊರ್ವ ಕಠೋರವಾಕ್ಯಮಖನಂ ದೂತಟ್ಟೆ (ಹಳಕಂ. ೭೩೪).

[ ದೂದು + ಅಟ್ಟು$_2$ ]

**ದೂದಪೇಡಾ** (ನಾ). ಹಾಲಿನಿಂದ ತಯಾರಿಸಿದ ಒಂದು ಬಗೆಯ ಸಿಹಿತಿಂಡಿ: ಪರೀಕ್ಷೆಯಲ್ಲಿ ಮೊದಲನೇ ದರ್ಜೆಯಲ್ಲಿ ತೇರ್ಗಡೆಯಾದುದರಿಂದ ಅವಳು ತನ್ನ ಗೆಳತಿಯರಿಗೆಲ್ಲಾ ದೂದಪೇಡಾ ಹಂಚಿದಳು (ಊಹಿ).

[ ←ಮರಾ. ದೂಧ್‌ಪೇಢಾ ]

**ದೂದಫೇಣಿ** (ನಾ). ಹಾಲಿನಲ್ಲಿ ಬೇಯಿಸಿ ತಯಾರಿಸಿದ ಒಂದು ಬಗೆಯ ಸಿಹಿತಿಂಡಿ,–ಫೇಣಿ : (ಸ್ಯಾಂಡರ್). [ ←ಹಿಂ. ದೂಧ್‌ಫೇನೀ ]

**ದೂದವ** 'ದೂದಗ' ನೋ.

**ದೂದವಿ** (ನಾ). ೧. ದೂತಿ; ಸಮಾಚಾರವನ್ನು ತಿಳಿಸುವವಳು,–ತಲುಪಿಸುವವಳು: ಪಿಂದಾಂ ಬಂದುದೆನೆಂದಿದಂ ನರರ್ಗೆ ನೀಂ ಪೇೞೆಂದು ಮನೋರ್ಥಾಂತಕಂ ನಿಂದ್ಯಾಂಗಂ ಜರೆಯೆಂಬ ದೂದವಿಯುಮಂ ಮುಂದಟ್ಟಿ (ಬಾರಪು. ೫-೩೩). ೨. ತಲೆಹಿಡುಕಿ ; ಕಂಟಣಿ : "ಸಂಚಾರಿಕೆ ತಾಂ ದೂದವಿಯಭಿಸಾರಿಕೆ ಸಂಕೇತನಕ್ಕೆ ಪೋಪವಳಕ್ಕುಂ" (ಪಚ್ಚುಕೋ. ೩೩-೭): ಒರ್ವಳ್ ತನ್ನ ನಲ್ಲನಲ್ಲಿಗೆ ದೂದುವೋಗಿ ಬಂದ ದೂದವಿಗೇಗೆಯ್ದು ತೆಱನುಮನಱಿಯದೆ ಪದೆದು ಪಡೆಮಾತಂ ಬೆಸಗೊ[ಳ್ವುದಂ] ಕಂಡು (ಕಂಪಭಾ. ೯-೧೧೦ ವ) : ಬರ ಪಾರದೆ ದೂದವಿಯರ ಹಂಸದೆ . . . ಮನವೊಲ್ದಾಗಳ್ಪೆರೆಯಂಲ್ವೊರೆಕೊಳ್ಳ ರತಮ ಸಂಕಲ್ಪರತಂ (ಕಾರಂಅ. ೩೦೮) ; ಅನ್ನೆಗಂ ನೆರೆಮನೆಯ ನಾವಿದನ ಪೆಂಡತಿಯಪ್ಪ ದೂದವಿ ಪಾದರಿಗನಂ ಸಂಕೇತಸ್ಥಾನದೊಳಿರಿಸಿ ಪರಿತಂದು (ಪಂಚತಂ. ೭೩-೨) ; ಅವರ ದೂದವಿಯರ ಲಲ್ಲೆವೆರಸಿದ ಮೆಲ್ನುಡಿಯೆ ಕರ್ಣಪೂರಮಾಗೆಯುಂ (ಮಲ್ಲಿಪು. ೩-೯೨ ವ) ; ಅವನ ಕಾದಲಳ ದೂದವಿ ಬಂದು ಪೊಡೆವಟ್ಟು ಪೊರ್ದಿ ಕಳ್ಳಿರ್ದು (ಚಂದ್ರಪು. ೮-೬೨ ವ) ; ಮುದುಗರಡಿಯ ಮಱು–ದೊಮಲಂದದೆ ಕರಿಯಂ . . . ಎಂದೊಡೆ ದೂದವಿಗವಳಿಂತೆಂದಳ್ (ಜುಪೋಅ. ೨-೯೦); ಪಾರದೆ ಬರ್ಪ ದೂದವಿಯರಂ ತವಕಂ ತವೆ ಮಿಕ್ಕು ನೀವಿಯೊಳ್ ಚಾರುಕಳಾಪಮಂ ನಿಲಿಸುತುಂ ದೆಸೆಯಂ ನಡೆ ನೋಡುತುಂ . . . ಜಾರೆಯರೆಯ್ದುತಿರ್ದರುಪಶಾಂತರನಂದು ಮಹಾಂಧಕಾರದೊಳ್ (ಕುಸುಮಾ. ೯-೩೩) ; ಉನ್ನತಪ್ರೌಢನಂಗನೆಗೆ ವಿತ್ತಂಗುಡದೆ ಚೆನ್ನನುಡಿ ಗೂಟಂಗಳಿಂದೆ ಕಾಲಂ ಕಳೆವುದನ್ನೋಡಿ ಕಾಯ್ದು ದೂದವಿ . . . ಇಂತೆಂದಳು (ಭಾವಚಂ. ೭-೨೪) ; ಬಯಸಿದ ನರರೊಳವರ ತಂದು ನೆರೆಯಿಸುವರು ದೂದವಿಯರು (ಕುರಾಸಾಂ. ೨೯-೦೦೦).

[ ದೂದವ (<ದೂದಗ) + –ಇ$_2$ ]

**ದೂದವಿಗೆಲಸ** (ನಾ). ದೂತಿಯ ಕಾರ್ಯ; ಕಂಟಣಿಯ ಕೆಲಸ: ಶಿವಶಂಭುಶಂಕರನ ದೂದವಿಗೆಲಸಕೆ ತೆರಳಿಚಿದ ದುಷ್ಕರ್ಮಿ (ಸೌಂದಪು. ೧೬-೨೪). [ ದೂದವಿ + ಕೆಲಸ ]

**ದೂದಿ$_1$** (ನಾ). ೧. (ಶುದ್ಧಿಮಾಡಿದ) ಹತ್ತಿ ; ಅರಳೆ : "ದೂದಿ–ತೂಲೀ =ಹತ್ತಿ" (ಶಬ್ದಕೋ. ೨೦). ೨. (ಬೆಂಕಿಯನ್ನು ಹೊತ್ತಿಸಲು ಉಪಯೋಗಿಸುವ) ಬೂರಗದ ಹತ್ತಿ ಮತ್ತು ಅದರ ಮರ "ದೂದಿ= ತೀವ್ರವಾಗಿ ಬೆಂಕಿ ಹತ್ತುವದೊಂದು ಪದಾರ್ಥ" (ಗಂಗಾಪು. ೩೫೬) ; "ದೂದಿ–ಕಿಡಿ ಹಿಡಿಯುವ ಹಿಂಜರ; ಅರಳೆ" (ಜಾನಕೋ. ೭) ; ಕೆಂಡ ದೊಡಿಗೆಗೆಳಸುವ ದೂದಿಯೊಟ್ಟಿಲಂತೆ (ವೀಶೈಪು. ೩-೨-೧೦).

[ ದೇ.? ತೆಲು. ದೂದಿ ]

**ದೂದಿ$_2$** (ನಾ). ಸಮಾಚಾರವನ್ನು ತಿಳಿಸುವವಳು ; ದೂದವಿ ; ದೂತಿ : ತಕಾರಕ್ಕೆ ದಕಾರಂ–ಕೈತವ–ಕೈದವ . . . ದೂತಿ–ದೂದಿ (ಕಮದ ೨೫೫. ಪ್ರಯೋ) ; ದೂತಿ, ದೂದಿ ; ಕೈತವ, ಕೈದವ (ಶಬ್ದಾನು. ೦೬೩ ಪ್ರಯೋ).

[ <ಸಂ. ದೂತೀ ]

**ದೂದಿಬೋಯ** (ನಾ). ಒಬ್ಬಾತನ ಹೆಸರು: ದೂದಿಬೋಯಸ್ಯ ಕೌಣ್ಡಲ್ಯ ಗೋತ್ರ ಗದೋತಶರ್ಮ್ಮಣ ಏಕಂಶಃ (ಇಇ. VII, ೧೮೪–೩೭ ; ೫೫೩).

[ ದೂದಿ? + ಬೋಯ ]

**ದೂದು**, ದೂತಂ (ನಾ). ೧. ಸಮಾಚಾರ ; ಸುದ್ದಿ. 'ದೂದಂವೋಗು' ವರಾ. ೨. ರಾಯಭಾರ ; ನಿಯೋಗ : "ದೂದು . . . ದೌತ್ಯ" (ಶಬ್ದಕೋ. ೨೦). 'ದೂದ್ಯೆದು' ವರಾ. **ದೂತು**: ೨. ಏನೇನು ವಿಸ್ಮಯದ ವಾಂಗ್ಮೆದೆ ನಿಷ್ಠುರವ ನೀನಾಡ ಸಲ್ಲದಾದಿಯಲಿ ನಿಮ್ಮಯ್ಯಗೆ ನಿಧಾನದಿಂ ದೂತಿತ್ತ ಬಂದೆಯನರೊಪ್ಪ ಹಿತವಾಕ್ಯವೆ ವಿವಾಹವೆನುತ (ಲಕ್ಷ್ಮಿಭಾ. ೧–೨೦–೪೪). [ ದೂದ + – ಉ$_4$ ]

**ದೂದುಗಾರ** 'ದೂದುಗಾಱ' ನೋ.

**ದೂದುಗಾಱ**, ದೂದುಗಾರ (ನಾ). ಸುದ್ದಿಯನ್ನು ಒಯ್ಯುವವನು ; ದೂತ : ಆ ನುಡಿಗೊಪ್ಪಿ ದೂದುಗಾಱನಲ್ಲಿಂ ತಳರ್ದು ... ಮೆಲ್ಲಮೆಲ್ಲನೆ ತಮಸಿಯ ಪೊರೆಗೈತಂದಂ (ರಾಮಾಶ್ವ. ೫೭–೨೬). **ದೂದುಗಾರ** : ರಾಯಸಮಂ ಬರೆದೊರ್ವ ಪಟುಭಟನ ಕರದೊಳಿಟ್ಟು ಕಳಿಪಲೊಡಮಾ ದೂದಂಗಾರಂ . . . ಬಂದಾಸ್ಥಾನಮಂ ಪೊಕ್ಕು (ಚಂದ್ರಛ್ಛು. ೫–೦೦).

[ ದೂದು + – ಕಾಱ ]

**ದೂದುನಡೆ** (ಕ್ರಿ). ರಾಯಭಾರಕ್ಕಾಗಿ ಹೋಗು; ದೂತಕಾರ್ಯಕ್ಕೆಂದು ಹೋಗು : ಅಂದು ಪಾಂಡವರ ಪಾಳೆಯದಿಂ ಕುರುನಗರಿಗೆ ದೂದುನಡೆದ ಬಬ್ಬೆಗಳೆಯಲೇದು ಒಯ್ಯನೊತ್ತುವ ಸಿರಿಪೊಡವಿಯರ ಮೆಲ್ಗಾಲ್ಗೆ ಸೋಂಕಿಗೆ ನವಿರುಣ್ಮುವ ಕಿಱುದೊಡೆಗಳಂ (ಚಳವಂ. ೩೯–೮).

[ ದೂದು + ನಡೆ$_1$ ]

**ದೂದುವೋಗು** 'ದೂದುವೋಗು' ನೋ.

**ದೂದುವೋಗು**, ದೂದುಪೋಗು (ಕ್ರಿ). ವರ್ತಮಾನ ಕೊಡಲು ಹೋಗು; ಸುದ್ದಿ ತಿಳಿಸಲು ಹೋಗು : ತನ್ನ ನಲ್ಲನಲ್ಲಿಗೆ ದೂದುವೋಗಿ ಬಂದ ದೂದವಿಗೇಗೆಯ್ದು ತೆಱನುಮನಱಿಯದೆ ಪದೆದು ಪಡೆಮಾತಂ ಬೆಸಗೊ[ಳ್ವುದಂ] ಕಂಡು (ಕಂಪಭಾ. ೯–೧೧೦ ವ). **ದೂದುಪೋಗು** : ಬೇಟದ ಸೂಡಿಂ ಬಾಡಿ ಬಸಂಗೆಟ್ಟುದನಿಂದು ನಿಂದು ಕಾಂತೆಗಱಿಪಿ ಬೞಿಯುಟ್ಟುಮೆವನಿತೋಂದು ಪೊಟ್ಟು ಸ್ವೈರ್ಪವೆಂದು ಸಂತಯಿಸಿ ದೂದು ಪೋಪವೆನೆ ಮುಯ್ಯೇರಡಿಗಳೋಡೆ (ರಾಮಾಶ್ವ. ೨೨–೧೩).

[ ದೂದು + ಪೋಗು$_1$ ]

**ದೂದ್ಯೆದು** (ಕ್ರಿ). ರಾಯಭಾರ ಮಾಡಲು ಹೋಗು,–ಪ್ರಯಾಣ ಮಾಡು : ಅಂತಪ್ಪದುಮಾಗಳರ್ಕಿನ ಸೊರ್ಕಾಳ್ತನದಿಂ ನೀಳ್ದಂಗದು ಗದನಂದಿನ ರಾವಣನೆಡೆಗೆಂತಂತು ಕಡುಸಡಗರದಿಂ ದೂದ್ಯೆದಿವಂದು ಸಮುಚಿತಾಸನದೊಳ್ ಕುಳ್ಳಿರ್ಪುದುಂ (ರಾಮಾಶ್ವ. ೦೯೨–೭).

[ ದೂದು + ಐದು$_1$ (<ಎಯ್ದು) ]

**ದೂನ** (ಗು.) ೧. ಸಂತಾಪ ಹೊಂದಿದ ; ನೋವಾದ ; ಪೀಡೆಗೊಳಗಾದ : ಆ ಲೇಖವಾಹಕರ್ . . . ಆ ವೃತ್ತಾಂತಮಂ ತ್ವರಿತಗತಿ ಬಿನ್ನವಿಸಿದವ್ವನೆನ:ತ್ರಂ ವಿಷಣ್ಣದೂನವದನರಾಗಿರ್ಪುದುಂ (ಕಾದಂಬ. ೭೩೯). ೨. ಬಳಲಿದ ; ಆಯಾಸಗೊಂಡ. 'ದೂನಿಸು' ಪರಾ. ೩. ಸಂಟ್ಟ ; ಕಾಯಿಸಿದ ; ತಪ್ತ. [ ಸಂ. ]

**ದೂನಿಕೆ** (ನಾ). ಒಂದು ಬಗೆಯ ಆಭರಣ (?) : ಪಟ್ಟಸರವ ದೂನಿಕೆಗಳ ಚಿನ್ನದ ದಾರಿ ಕಟ್ಟಾಣಿ ಪೊನ್ನ ದಾರಿಗಳ (ದೇವಾಂಪು. ೩-೧೦೭). [ ? ]

**ದೂನಿಸು** (ಕ್ರಿ). ೧. ದುಃಖಿಸು ; ಶೋಕಪಡು ; ಸಂತಾಪ ಹೊಂದು : ದೂನಿಸಿ ಜಾನಿಸಿ ನಿಟ್ಟಸುತಿರ್ದಂ ತಾನದು ಕಾರಣದಿಂ ನಸುನಗೆ ಮಿಗೆಯೊಗೆದುದೆನಗೆಯೆನಲು (ಉದ್ಭದೇ. ೩-೬೨) ; ಸುತರು ಸುಮ್ಮಾನದೊಳಿಯ್ಯುರುತಿರಲು ದೂನಿಸುತಿದ್ದಿರಿ ನೀವೆಮಗಿದಱ ಸಂಧಾನಸಗುಣ ಸದಾಡಿರೆಂದ (ಭರತ. ೪೭-೪೫) ; ದೂನಿಸುತಿರೆ ನಿಮ್ಮ ಹಗೆಸೋಕೇಕಾಗಿ ಹಾಸ್ಯಾನುವಾದದಿ ನಗಿಸಿದನೌ ಅನುದರದಿ ಶೋಕವಿಲ್ಲದೆ ಕಾಲ್ದೆನೌ ಏನಹುದಿನ್ನಳಲಿದರೆ (ಭರತ. ೭೧-೧೦೧). ೨. ಬಳಲು ; ಆಯಾಸ ಹೊಂದು : ಬೆಚ್ಚುತ್ತ ಬೆದಱುತ್ತ ದೂನಿಸುತ . . . ಓಡಿದನು (ಸೌಂದಪು. ೧೬-೪೭). [ ದೂನ + – ಇಸು₁ ]

**ದೂಪ** (ನಾ). ೧. ಸುಟ್ಟಾಗ ಸುವಾಸನೆಯನ್ನು ಬೀರುವ (ಹಾಲು ಮಡ್ಡಿ, ಸಾಂಬ್ರಾಣಿ ಮುಂತಾದ) ಪರಿಮಳಪದಾರ್ಥ : (ಪ್ರ). ೨. ಸಾಂಬ್ರಾಣಿ ಮೊದಲಾದ ಸುವಾಸನೆಯ ಪದಾರ್ಥಗಳಿಂದ ಹೊರಡುವ ಹೊಗೆ : ಧಕಾರಕ್ಕೆ ದಕಾರಂ_ಔಷಧ_ಔಸದ . . . ಧೂಪ–ದೂಪ (ಶಮದ. ೨೫೫ ಪ್ರಯೋ). ೩. ಒಂದು ಬಗೆಯ ಮರ; ಧೂಪದ ಮರ : ಕೆಲವು ಕಡೆಗಳಲ್ಲಿ ತೇಗ, ನಂದಿ, ಹೆಬ್ಬಲಸು, ಬಿಲಿಗೆ, ದೂಪ, ಜಂಭೆ . . . ಮುಂತಾದ ಗಗನಚುಂಬಿತ ವೃಕ್ಷಗಳಿದ್ದರೆ ಕೆಲವು ಕಡೆಗಳಲ್ಲಿ ಗರಿಗಿ, ಬಿದಿರು . . . ಮುಂತಾದ ಗಿಡ ಬಳ್ಳಿ ಪೊದೆಗಳಿದ್ದವು (ಕಂಬಪಂ. ೨).

ದೂಪದ ಕಡ್ಡಿ=ಧೂಪಕ್ಕಾಗಿ ಸುಗಂಧವಸ್ತುಗಳಿಂದ ತಯಾರಿಸಿದ ಕಡ್ಡಿ ; ಊದುಕಡ್ಡಿ : (ಪ್ರ). ದೂಪ ಹಾಕು = ೧. ಸುಗಂಧದ್ರವ್ಯಗಳಿಂದ ಹೊಗೆ ಹಾಕು ; ಧೂಪ ಹಾಕು : ದೂಪ ಹಾಕಿದರೆ ಪಾಪ ಹೋದೀತೆ ? (ಗಾದೆ). ೨. (ಆಲಂ) ಕೆರಳಿಸು ; ಉದ್ರೇಕವನ್ನುಂಟು ಮಾಡು : ಅಣ್ಣ ತಮ್ಮಂದಿರಲ್ಲಿ ಜಗಳ ತರಲು ಮಾವನು ಕಿರಿಯವನಿಗೆ ಆಗಿಂದಾಗ ದೂಪ ಹಾಕುತ್ತಲಿದ್ದಾನೆ (ರೂಢಿ). [ <ಸಂ. ಧೂಪ ]

**ದೂಪಟ** 'ದುಪ್ಪಟ' ನೋ.

**ದೂಪಾರತಿ**(ನಾ). ೧. ಧೂಪದಿಂದ ಮಾಡುವ ಆರತಿ: ಅರ್ಚಕರು ದೇವರಿಗೆ ದೂಪಾರತಿಯನ್ನು ಮಾಡುತ್ತಿದ್ದಾರೆ (ರೂಢಿ). ೨. ಸುಗಂಧ ವಸ್ತುಗಳಿಂದ ಆರತಿ ಎತ್ತುವುದಕ್ಕೆ ಉಪಯೋಗಿಸುವ ಸಾಧನ ; ಧೂಪಾರತಿಯನ್ನು ಮಾಡುವ ಪಾತ್ರೆ,– ಉಪಕರಣ : ಸ್ವಸ್ತಿಶ್ರೀ ನಗರೇಶ್ವರದೇವರಿಗೆ . . . ಸೊಣ್ಣಪ್ಪನು ಕೊಟ್ಟ ಉಪಕರಣ ಹರಿಯಾಣ ಅಡ್ಡಣಿಗೆ ಗಂಟಿನವಾರತಿ ದೂಪಾರತಿ ಬಟ್ಟಲು ಶಂಕು (ಎಕ. IX, ಕಂಗಳೂ. ೯೦-೧೧ ; ಸು. 1400) ; ದೂಪಾರತಿಯು ಘಂಟೆಯುಮನುಯ್ಯನೂರನಾ ಪದ್ಮವದನೆಯರು ತಂದಿಡರು [ಲು] ವಲವಿನಿಂ ತಾ ಪಿಡಿದು (ನವಮೋ. ೨೧-೨೭). 'ಧೂಪಾರತಿ' ಪರಾ. [ ದೂಪ + ಆರತಿ₁ ]

**ದೂಪಿಸು₁, ಧೂಪಿಸು₁** (ಕ್ರಿ). ೧. ಬಾಯಾರು; ನೀರಡಿಸು : ಯಯಾತಿ ಬೇಂಟೆಯ ನೆವದಿ ಸೇನಾಸಹಿತಾರಣ್ಯದೊಳ್ ಬಳಲಿ ದೂಪಿಸಿ ಕೊಳದಿ ನೀರನೀಂಟಿ (ಲಕ್ಷ್ಮೀಭಾ. ೦೫-೮) : ವಿಪಿನದೊಳು ಮೃಗಹರಣಕೇಳಿಗಂ ನಡೆತಂದು ಸಂಚರಿಸಿ ದೂಪಿಸಿದರು (ತುರಂಗ. ೦೬-೦೯). ೨. ಸಂತಾಪ ಹೊಂದು; ಸಂಕಟಪಡು: ಹಸಿವು ತೃಷೆ ಬಳಲಿಕೆಗಳಲಿ ದೂ[ಪಾಠಾಂ.ಧೂ]ಪಿಸುತ ಬಂದಳು ಮಾಯೆ ತಾನಲ್ಲಮನನಜಸುತಲಿ (ಪ್ರಭುಲೀ. ೬-೪೪) ; ಶರತಾಪದಿಂ ದೂಪಿಸುತ ಕೇಳದರ್ (ಜನಮು. ೪೧-೧೪). ೩. ಮೂರ್ಛೆ ಹೊಂದು : ಶೋಕಪ್ರಳಾಪದಿಂ ನರನಳಲುತಿರಲತ್ತ ಕರ್ಣಸುತನಟ್ಟೆ ಬಂದಪ್ಪಳಿಸಲು ದೂ[ಪಾಠಾಂ. ಧೂ]ಪಿಸಿ ಧರೆಗೆ ಬಿದ್ದು (ಜೈಮಿಭಾ. ೨೩-೪೦).

**ಧೂಪಿಸು₁** : ೧. ನಡೆದು ಪಡೆ ಧೂಪಿಸಿತು ಬಾಜದಿ ಕುಡಿಯ ನೀರನು ಕಾಣದಸವಳಿದು (ಕಾರಿಶಾ. ೯-೩೪); ಶರಹತಿಯಲುಂಟಿ ನೊಂದು ಧೂಪಿಸಿ ತರಹರಿಸುವಶ್ವಾಳಿ (ಕುಮಾರ. ೨೩-೨೯) ; ಮನುಮಥನ ಶರಹತಿಗೆ ಧೂಪಿಸುತ ಮೈಮುಱಿದರು (ನಿಘಂ. ೧೦-೮೦-೩೯).

[ ←ತೆಲು. ದೂಪಿಂಚು ]

**ದೂಪಿಸು₂** (ಕ್ರಿ). (ಸುಗಂಧ ದ್ರವ್ಯಗಳಿಂದ ಹೊಗೆ ಹಾಕಿ) ಪರಿಮಳಿಸುವಂತೆ ಮಾಡು,–ಸುವಾಸನೆ ಬೀರುವಂತೆ ಮಾಡು: ದೂಪಿಸಿದ ಬಳಿದುಗುಳನುಟ್ಟನುಲೇಪನಂಗಳ ಹೂಸಿ . . . ಇದಿರಾಯ್ತು ನೃಪಕಟಕ (ಕುಮಾರ. ೧-೨೭). [ ದೂಪ + – ಇಸು₃ ]

**ದೂಪೆ** 'ದೂವೆ₁' ನೋ.

**ದೂಬರದಿಂಡಿ** (ನಾ). ದುಂದುವೆಚ್ಚ ಮಾಡುವವಳು ; "ದುಂದುಗಾರತಿ" (ಹಾನಕೋ. ೭). [ ದೇ.? ತಮಿ. ತೊಪ್ಪರತಣ್ಣಿ ; ತೆಲು. ದೂಬಬದಿಂಡಿ ]

**ದೂಮರ** 'ತೂಪರು' ನೋ.

**ದೂಮುಕ** 'ದಂಪುಕ' ನೋ.

**ದೂಮುಧಾಮು** (ನಾ). ಹಾಳುಮಾಡುವಿಕೆ ; ಪೋಲುಮಾಡುವಿಕೆ : (ಸ್ಕಾಂಡರ್). 'ಧೂಮಧೂಮು' ಪರಾ.

[ ←ಮರಾ. ಹಿಂ. ಧೂಮಧಾಮ್ ]

**ದೂಯಂ** 'ದುಯ್ಯಂ' ನೋ.

**ದೂರ್** 'ದೂಱು₁' ನೋ.

**ದೂರ** (ಗು). ೧. ಸಮೀಪವಲ್ಲದ ; ಹತ್ತಿರವಲ್ಲದ. ೨. ದೀರ್ಘವಾದ ; ನಿಡಿದಾದ : ಅಂತು ದೂರಾಯುಸ್ಸಾಗರಪಾರಗನಾಗಲೊಡಂ (ಚಂದ್ರಪು. ೯-೫೬ ವ). (ನಾ). ೩. (ಕಾಲ, ಸ್ಥಳ ಮುಂತಾದುವುಗಳಲ್ಲಿ) ಹತ್ತಿರವಲ್ಲದುದು ; ಸಮೀಪವಲ್ಲದುದು : "ಗೆಂಟು ವಿಪ್ರಕೃಷ್ಟಂ ದೂರಂ" (ವಸ್ತುಕೋ. ೦೦೯-೬೮) ; ತಂದೆ ಕಟಿದಬಲ ಬೇಗೆಯೊಳಂ ದೂರದೆ ಬಿರ್ದದೊಂದು ಕಡುಸೇದೆಯೊಳಂ ಬಂದನ್ನಂ ಪರವಶತೆಯೊಳೊಂದಿಸಿ ದತ್ತಾಗಳಾ ಪಿಪಾಸೋದ್ರೇಕಂ (ಕಾದಂಪೂ. ೦೮೯); ಅಯ್ಯ ದೂರದಲ್ಲಿರ್ದಹೆಯೆಂದು ಬಾಯಾಱ ಬಳಲುತ್ತಿರ್ದ್ದೆನಯ್ಯ ನಾನು (ಮಹಾದೇ. ಬ. ೩೮-೮೧) ; ದೂರದೊಳೆ ನೋಡಿ ಕಂಡು ಪುರೂರವನಿದಪೂರ್ವಮೃಗಮೆನುತ್ತಿಸಲುಂಬಂ ನಾರಿಯೊಳಿಟ್ಟಂ (ವರ್ಧಪು. ೧೦-೩೦); ದೂರದಿಂ ಪರ್ವತಂ ರಮ್ಯಂ (ಎಕ. VI, ಕಡೂರ. ೪೫-೬೪; 1196); ತೇರನೆಚ್ಚನು ಕುದುರೆಕಾಱರ ದೂರದಲಿ ಖಂಡಿಸಿದನು (ಕುಮಾರ. ೨೦-೨೨) ; ಇರುಳು ಕತ್ತಲೆಯ ಗವಿ ; ಮನೆ ದೂರ ; ಕನಿಕರಿಸಿ, ಕೈಹಿಡಿದು ನಡೆಸೆನ್ನನು (ಇಂಗೀತ. ೯೭-೩) ; ದೂರದ ಬೆಟ್ಟ ಕಣ್ಣಿಗೆ ನುಣ್ಣಗೆ (ಗಾದೆ). ೪. ಸೇರದಂದು ; ಹೊರತಾದುದು ; ಎರವಾದುದು : ತನ್ನ ತಾನಱಿದೆನೆಂಬಹಂಕಾರವುಳ್ಳರೆ ನಿಮ್ಮವರಿಗೆ ದೂರ (ಬಸವ. ೬೩೯) ; ಈ ಗುಣ ಸಂಗನಬಸವಣ್ಣಂಗೆ ದೂರ (ಸವಚ. ೦೨೦-೬೦೯). ೫. ಎರಡು ಸ್ಥಳಗಳ ನಡುವಿನ ಅಂತರ : ಮಕ್ಕಳ ಮೇಲೆ ಗಮನವಿದ್ದುದರಿಂದ ಕುಂತಿಗೆ ದೂರವೇ ಕಾಣಲಿಲ್ಲ (ವಜಭಾ. ೦೫).

ದೂರದೂರ (ದ್ವಿರುಕ್ತಿ): ದೂರದೂರೋಪವಿಷ್ಟಮೂಕಮುಖಕುಬ್ಜವಾಮನಕಿರಾತವರ್ಷಧರಕಂಚುಕಿಪ್ರಪಂಚಿಯುವಾಗಿರ್ಪಿನೆಗಂ (ಚಂದ್ರಪು. ೩-೫೦ ವ) : ನಿಮ್ಮ ನಿರ್ಮಳರೂಪಮಂ ಕಂಡವರುಗಳ ಬಹುಪಾಪಸಂಕುಳವಳಿದುಹೋಗವೆ ದೂರದೂರದಲಿ (ಬಸವು. ೪೭-೩೩) ; ದೂರ

ದೂರದಿಂದ ಜನರು ಬರುತ್ತಾರೆ (ಮುಂಬಯಿ. ೪-೧೪೨). **ದೂರಣ** = ೧. ಸಮೀಪವಲ್ಲದ ; ದೂರದ : ದೂರಣ ದೇಶದಿಂ ಬಂದವನೀಶರು ಮಾರರು ನೆರೆದು ನೋಡುತಿದೆ ಮಾರನ ಮದದಾನೆ ನೋಡೇಳು (ಶಂರಾಸಾಂ. ೨೧-೩೦); ನೋಡೆಂದು ಸಖಿಜನರು ಕರವೆತ್ತಿ ದೂರಣಂ ತೋರೆ ವೀಕ್ಷಿಸಲು (ಪವಮೋ. ೭-೯). ೨. ಬಹುಕಾಲದಿಂದ ನಡೆದು ಬಂದ ; ಬಹಳ ದೀರ್ಘವಾದ : ಚಿರಕಾಲದಿಂ ದೂರಣ ಸ್ನೇಹವೆಮಗೆಂದು ತರಣಿ ತಾವರೆಯೆಡೆಗೆಯ್ದಿ ಹರುಷದೊಳೊಪ್ಪಿತೆಂದೆನೆ ಚಕ್ರವರನಾ ಕರಕಮಲ ದೊಳೊಪ್ಪಿದುದು (ಶ್ರೀಪಾಲ. ೧೨-೪೩): ℙ ಇದಂ ಅತ್ತಣ, ಇತ್ತಣ, ಪಡಂವಣ, ನಡುವಣ ಎಂಬ ಕನ್ನಡ ಶಬ್ದಗಳ ಸಾದೃಶ್ಯದ ಮೇಲೆ ಮಾಡಿಕೊಂಡ ರೂಪವಿರಬಹುದಂ. **ದೂರದ ನಂಟ, ದೂರದ ನೆಂಟ** = ಹತ್ತಿರದ ಬಂಧುವಲ್ಲದವನು ; ದೂರದ ನೆಂಟಸ್ತಿಕೆಯುಳ್ಳವನು : ದೂರದ ನಂಟರಂ ಕಂಡರಂತೆ ಸಂಶಯುವಾಗದೆ (ಧರ್ಮಾಮೃ. ೯-೧೪೩) ; ನಾವು ನಿನ್ನ ಮನೆಯಲ್ಲಿ ಯಾರೊ ದೂರದ ನೆಂಟ . . . ಅಂತ ತಗ್ಗಿ ನಡೆಯೋದು ನನ್ನಿಂದಾಗೋದಿಲ್ಲವಲ್ಲ ! (ಸಂಕ್ರಾ. IX, ೩೬). **ದೂರದ ಬಳಗ.** = ಹತ್ತಿರವಲ್ಲದ ಸಂಬಂಧ,-ನೆಂಟಸ್ತಿಕೆ : ಅಲ್ಲಿರೋದು ದೂರದ ಬಳಗ ಅವರು ಹೋಗು ಅಂದಾಗ ಹೊರಟಾಟರ್ತೀನಿ (ಬನಶಂ. ೧೯೦). **ದೂರದ ಸಂಬಂಧ** = ದೂರದ ಬಳಗ: ಓಬಯ್ಯ ಯಾವುದೋ ಭೂಗತ ವಾಗಿದ್ದ ದೂರದ ಸಂಬಂಧವೊಂದನ್ನು ಸಂಶೋಧನೆಯಿಂದ ಕಂಡುಹಿಡಿದು ಅವಳನ್ನು 'ತಂಗಿ' ಎಂದು ಕರೆಯತೊಡಗಿದ್ದನು (ಕಾನೂರು. ೧೩೦). **ದೂರ ಪಡಿಸು** = ಪರಿಹರಿಸಂ; ಇಲ್ಲವಾಗಿಸಂ : ಇದನ್ನೆಲ್ಲಾ ದೂರಪಡಿಸುವುದರಲ್ಲಿ ಕಾವೇರಿ ಸಾಯುವುದು ಮೇಲು (ಕಾವೇರಿ. ೨೦೩). **ದೂರಪಾರ, ದೂರ ಬಾರ** = ಹತ್ತಿರವಲ್ಲದುದಂ ; ದೂರ : ನಾವು ನೋಡಿಕೊಂಡು ಬರುವ ದೂರಪಾರ ಏನಿಲ್ಲ (ಸ್ವಪ್ನಹೊ. ೨೮) ; ಮಗಳನ್ನು ದೂರಬಾರ ಕೊಟ್ಟರೆ ಹೋಗಿಬರುವುದು ಕಷ್ಟವಾಗುತ್ತೆ (ರೂಢಿ). **ದೂರವಹಾಗು, ದೂರವಾಗು, ದೂರಾಗು** = ೧. ಹತ್ತಿರದಲ್ಲಿರದಿರು ; ಹೆಚ್ಚು ಅಂತರ ಹೊಂದು ; ತೊಲಗು: ಸಾಮಂತಸಂದೋಹಮಾವಸರಭೀತಿಯಿಂ ತೊಲಗಿ ಪೋಗೆಯುಂ ನಿಜನಿಯತಪ್ರದೇಶದಿಂ ಪ್ರತೀಹಾರರತಿದೂರವಾಗೆಯುಂ (ಮಲ್ಲಿಪು. ೪-೭೪ ವ); ತನುಮುಟ್ಟಿ ಮನಮುಟ್ಟದೆ ದೂರವಾದರಯ್ಯಾ ಬೆಲೆವೆಣ್ಣನಂತೆ (ವಚಸಂ. ೩೦೭-೯೦) ; ಸದ್ಭಕ್ತಂಗೆ ಜನನ ಮರಣಂಗಳು ದೂರವಾಗಿರ್ಪು ವಯ್ಯಾ (ಅಬಂಡೀ. ೧೬೧-೨೩) ; ಸಾತ್ವಿಕಸದುಭಕುತಿಯನರಿಯದವರ ಸಂಗದಿಂದ ಕೈಲಾಸಕ್ಕೆ ದೂರಾಗಿಪ್ಪರು (ಸವಪುವ. ೨-೭) ; ಈ ಕರ್ನಾಟಕ ಭಾಗವು ಸಹ್ಯಾದ್ರಿಯಿಂದ ಪೂರ್ವಕ್ಕೆ ಹೆಚ್ಚುಹೆಚ್ಚು ದೂರಾಗುತ್ತ ಹೋಗು ತ್ತದೆ (ಕಭಾಗ. ೪). ೨. ಅಗಲು ; ಎರವಾಗು; ಸಂಬಂಧವನ್ನು ಕಳೆದು ಕೊಳ್ಳು : ಎಲ್ಲ ತೆಱದಿಂ ನಿಮಗೆ ದೂರವಪ್ಪಂ ದೇವ (ಬಸರ. ೧-೭೪) ; ಇಂದಿರೇಶನ ಅರ್ಚಿಸದಱಿಂದ ಬಹು ನೊಂದು ದೂರಾದೆ ಸದ್ಗತಿಯಿಂದ (ಪುರಂದ. ೧-೦೭೭-೬). ೩. ನಿವಾರಣೆಯಾಗು : ನಾನು ಪತ್ರಿಕೆಯನ್ನು ಉತ್ತಮವಾಗಿ ನಡೆಸಿಕೊಂಡು ಹೋದರೆ ಆರ್ಥಿಕ ಕೊರತೆ ತಾನೇ ದೂರಾ ಗುವದು (ಅಪನಾ. ೨೬). **ದೂರವಿರಿಸು** = ಹತ್ತಿರ ಬರದಂತೆ ಮಾಡು ; ಅಂತರವಿರುವಂತೆ ಮಾಡು : ಸಾಲವೆಂಬುದು ಭಯಂಕರಪಿಶಾಚಿ. ಅದನ್ನು ಆದಷ್ಟು ದೂರವಿರಿಸಬೇಕು (ಅದುಸಾ. ೧೨೪). **ದೂರ ಸರಿ** = ಹತ್ತಿರದಲ್ಲಿರದಿರಂ ; ಅಂತರವನ್ನು ಹೆಚ್ಚಿಸಂ : ಬುದ್ಧಿಯ ಸೆಣಸಾಟ ಮೇಲುಗೈ ಆಗಿ ವಾಸ್ತವಿಕ ನಿಲುವಿನಿಂದ ದೂರ ಸರಿಯುವರು (ದ್ರಾವಿವಿ. ೭೮). **ದೂರ ಸಾರು** = ದೂರಸರಿ : ಕೈಕಟ್ಟಿ ಲಕ್ಷಿಸದೆ ದೂರ ಸಾರಿದೆಯಾ ? ಕೈಕೊಟ್ಟು ಬರಹೇಳಿ ಸಾಸಮಾಡಿದೆಯಾ ? (ಕವಿಪು. ೩೭-೬). **ದೂರಾ ದ್ದೂರ** = ಸಮೀಪವಲ್ಲದುದು; ಹೆಚ್ಚು ಅಂತರವಿರುವುದು : ದೂರಾ ದ್ದೂರದ ನೆಲನಾವುದುಯಿದು (ಬದ್ಧಪ್ರ. ೩೦-೭೪೮). [ ಸಂ. ]

**ದೂರಂಬೋಗು, ದೂರವೋಗು, ದೂರಹೋಗು** (ಕ್ರಿ). ಸಮೀಪದಲ್ಲಿರ ದಿರು ; ತೊಲಗು : "ಕಟಿದಂ = ಸತ್ತಂ ; ದೂರಂಬೋದಂ ; ಕಯ್ಯಾ ಱಿದಂ" (ಕಮದ. ಪರಿ. ೧). **ದೂರವೋಗು** : "ತೂಱಲ್ – ದೂರ ಪೋದುದು" (ಕಹುನಿ.ಕೆ. I, ೭೬). **ದೂರಹೋಗು**: ದೂರಹೋದವರಿಂದು ಬರುವರೆ, ಎಂದು ಬರುವ ನಿರೀಕ್ಷೆಯು ? (ನಲಮು. ೦೧-೮) ; ಅವಳು ದೂರಹೋದುದು ಒಳ್ಳೆಯದಾಯಿತು (ಹೂಹಯ್ಯ. ೦೯೩).
[ ದೂರ + ಪೋಗು$_1$ ]

**ದೂರಂಮಾಡು, ದೂರಮಾಡು** (ಕ್ರಿ). ೧. ದೂರಹೋಗುವಂತೆ ಮಾಡು ; ಹತ್ತಿರವಿರದಂತೆ ಮಾಡು ; ತ್ಯಜಿಸು : ಪೂರ್ವಾರ್ಜಿತ ಪ್ರಾಪ್ತಿಯಿಂ ದಾರಿದ್ರ್ಯಂ ಧನಮೆಂಬೆರಳ್ಗಮನಿಕುಂ ಮತ್ತೇಕೆ ಧೀರತ್ವಮಂ ದೂರಂಮಾಡಿ ಮನಂ ಸದಾ ಕುದಿವುದೋ (ರತ್ನಾಕ. ೪೭). **ದೂರಮಾಡು**: ೨. ಇಲ್ಲದಂತೆ ಮಾಡು ; ನಿವಾರಿಸು ; ಕಳೆ : ಪರಿಹರಿಸಂ : ನನ್ನ ಕಷ್ಟ ವನ್ನು ದೂರಮಾಡುವುದಕ್ಕಾಗಿ (ಮುಂಬಯಿ. ೪-೦೦೭) ; ಆದ ತಪ್ಪು ತಿಳಿವಳಿಕೆಯನ್ನು ದೂರಮಾಡಿ ಸರಿಯಾದ ವಿಚಾರಸರಣಿಯೊಂದಕ್ಕೆ ಎರಡೂ ಪಕ್ಷಗಳು ಬರಬಹುದು (ಅಪನಾ. ೧೩೨). [ ದೂರ + ಮಾಡು$_1$ ]

**ದೂರಗ** (ಗು). ೧. ಸಮೀಪವಲ್ಲದ ; ಹತ್ತಿರವಲ್ಲದ. (ನಾ). ೨. ದೂರ ಹೋಗುವಂಥದು. [ ಸಂ. ]

**ದೂರಗತ** (ಗು). ದೂರ ಹೊರಟುಹೋದ : ಕೃಷ್ಣವರ್ಣದ ಅವಳ ಮಾಲುಗಣ್ಣುಗಳು ಕ್ಷಣ ಮಾತ್ರ ಅವನ ಮುಖದಲ್ಲಿ ನಾಟಿದ್ದು, ಅನಂತರ ದೂರಗತವಾದುವು (ಪುನರು. ೩೨೨). [ ಸಂ. ]

**ದೂರಗತೆ** (ನಾ). ಸಮೀಪವರ್ತಿಯಲ್ಲದವಳಂ ; ಹತ್ತಿರವಿಲ್ಲದವಳಂ: ಇನ್ನು ಮೇಲೆ ನಿನಗೆ ನಾನು ದೂರಗತೆಯಾಗುವೆನಲ್ಲವೆ ? (ಶಾಕುಂತ. ೩೪-೦೯). [ ಸಂ. ದೂರಗತಾ ]

**ದೂರಗಾಮಿ** (ನಾ). ೧. ದೂರ ಹೋಗುವವನು : ಊರಿನಿಂದ ದೂರ ಗಾಮಿಯಾಗುವ ನನಗೆ ಈ ವ್ಯವಹಾರವೆಲ್ಲ ಏಕೆ? (ರೂಢಿ). . ೨. ದೂರ ಹೋಗುವುದು,-ಚಲಿಸುವುದು : ಮನುಷ್ಯನ ಕಣ್ಣೂ ಕಿವಿಯೂ ಸಮಾನವಾದ ದೂರಗಾಮಿಯಾಗಿದ್ದರೆ ಮನುಷ್ಯನ ದುಃಖಪ್ರವಾಹವು ಹೆಚ್ಚುತ್ತಿದ್ದಿತೋ, ಕಡಿಮೆಯಾಗುತ್ತಿದ್ದಿತೋ ಆದನ್ನಾರು ಹೇಳಬಲ್ಲರು ? (ಕಪಾಕುಂ. ೦೨೨). ೩. ಬಾಣ ; ಶರ. [ ಸಂ. ದೂರಗಾಮಿನ್ ]

**ದೂರಗೆಯ್ಯು** 'ದೂರಗೈ' ನೋ.

**ದೂರಗೈ, ದೂರಗೆಯ್ಯು** (ಕ್ರಿ). ೧. ಬಿಡಂ ; ತ್ಯಜಿಸಂ : ಕೆಟ್ಟ ಅಭ್ಯಾಸ ಗಳನ್ನು ದೂರಗೈಯದಿದ್ದರೆ ಬಾಳು ಸಂತೋಷವಾಗಿರುವುದಿಲ್ಲ (ರೂಢಿ). ೨. ಪರಿಹರಿಸಂ; ಕಳೆ; ನಿವಾರಿಸು: ಸಜ್ಜನಸಂಗವು ತೋರಿ ಸುಗತಿಯನು ದೂರಗೈವುದು ಕುಮತಿಯನು (ಇಂದಿರಾಪ. ೭೪-೬೦). **ದೂರಗೆಯ್ಯು** : ೧. ಸಣ್ಣಪುಟ್ಟ ಮಾತಿಗೆ ಸ್ನೇಹಿತರನ್ನು ದೂರಗೆಯ್ಯುವುದು ಸರಿಯಲ್ಲ (ರೂಢಿ). [ ದೂರ + ಗೈ (<ಕೆಯ್$_1$) ]

**ದೂರಘ್ರಾಣ** (ನಾ). [ಜೈನ] ಹದಿನೆಂಟು ಬಗೆಯ ಬುದ್ಧಿಋದ್ಧಿಗಳಲ್ಲಿ ಒಂದು : ಆವುದೊಂದು ದೂರದಿಂ ಬಂದ ಗಂಧಮನಿಂತುಟೆಂದಱಿವುದು ದೂರಘ್ರಾಣಮೆಂಬುದು (ಪಸಾರ. ೩೮೬). [ ದೂರ + ಘ್ರಾಣ ]

**ದೂರತೋಪಾಸ್ತ** (ನಾ). ದುಸ್ತರವಾದುದು ; ಅಸಾಧ್ಯವಾದುದಂ : ನೀವು ಕನ್ಯಕುಬ್ಜದ ಸಾರ್ವಭೌಮನನ್ನು ಪರಾಭವಗೊಳಿಸಿದ ಹೊರತು, ಆ ದೇಶಗಳು ನಿಮ್ಮ ಮಾಂಡಲಿಕತ್ವವನ್ನು ವಹಿಸುವುದು ದೂರತೋಪಾಸ್ತ ವಿರುವದು (ಕುಶಸಂ. ೧೪) ; ಇನ್ನು ಉಪಾಯಾಂತರಗಳಿಂದ ಹಿಡಿಯುವ ದಂತೂ ದೂರತೋಪಾಸ್ತವೇ ಸರಿ (ಕಳ್ಳಕಾ. ೪೭) ; ℙ 'ದೂರತಃ+ ಅಪಾಸ್ತ' ಎಂದು ಬಿಡಿಸಬಹುದಾದ ಸಂಸ್ಕೃತಶಬ್ದಕ್ಕೆ 'ದೂರ ದಿಂದಲೇ ತಳ್ಳಲಾದುದಂ' ಎಂಬ ಅರ್ಥವಿದೆ. [ ? ]

**ದೂರದರ್ಶಕ** (ಗು). ೧. ದೂರದಲ್ಲಿರುವುದನ್ನು ತೋರಿಸುವ,-ಕಾಣು ವಂತೆ ಮಾಡುವ. 'ದೂರದರ್ಶಕಯಂತ್ರ' ಪರಾ. (ನಾ). ೨. ದೂರದ ವಸ್ತುಗಳು ಹತ್ತಿರದಲ್ಲಿದ್ದಂತೆಯೂ, ಹೆಚ್ಚು ಗಾತ್ರ ದಲ್ಲಿಯೂ ಕಾಣುವಂತೆ ಮಾಡುವ ಸಲಕರಣೆ,-ಯಂತ್ರ ; ದುರ್ಬೀನು : ದೂರದರ್ಶಕ ; ದುರ್ಬೀನು (Telescope. ಶಕ್ತಿನಿ. ೮೨) : ದೂರದರ್ಶಕವನ್ನು ಅಂತರಿಕ್ಷಕ್ಕೆ ತಿರುಗಿಸಿದುದರಿಂದ ಅದುವರೆಗೂ ಕೇವಲ ಕಲ್ಪನಾವಿಲಾಸದಿಂದ ಸೃಷ್ಟಿಸಲ್ಪಟ್ಟಿದ್ದ ಹಲವಾರು . . . ಕಟ್ಟುಕಥೆಗಳೂ ಆಧಾರರಹಿತವಾದುವು (ಶುಕ್ರಾ. ೧೦ ಪೀಠಿಕೆ) ; ದೂರದರ್ಶಕದ (Telescope) ಮೂಲಕ ಶನಿಗ್ರಹದ ಬಳೆಗಳನ್ನು ಕೆಲವು ಪಂಡಿತರಿಗೆ ತೋರಿಸಿದಾಗ ಅವರಲ್ಲೊಬ್ಬರು, "ಹೀಗೆ ಬಳೆಗಳು ಕಾಣುವುದು ದೃಷ್ಟಿ ದೋಷವೋ, ಈ ದೂರದರ್ಶಕದ ಗಾಜಿನ ದೋಷವೋ?" ಎಂದು ಕೇಳಿದರು (ಭೌತವಿ. ೨೦). [ ದೂರ + ದರ್ಶಕ ]

**ದೂರದರ್ಶಕಯಂತ್ರ** (ನಾ). = ದೂರದರ್ಶಕ ೨ : ದೂರದರ್ಶಕಯಂತ್ರ ದಕ್ಷಿಯೊಳ್ ಕಣ್ಣಿಟ್ಟು. ಗಗನವಿಜ್ಞಾನಿ ತಾಂ ರಾತ್ರಿಯಾಕಾಶದಲಿ ಕಾಣ್ಗೊಂದು ತಾರಾಗರ್ಭದಂತೆ (ಶ್ರೀರಾಮಾ. ೧೦-೨೭೩); ಗೆಲಿಲಿಯೊ ತನ್ನ ಪ್ರಖ್ಯಾತವಾದ ದೂರದರ್ಶಕಯಂತ್ರ ಅಥವಾ ದುರ್ಬೀನನ್ನು (Telescope) ತಯಾರಿಸಿದನು (ಗತಿಶ. ೦೦೩) ; ಆಕಾಶವನ್ನು ನೋಡುವುದಕ್ಕೆ ಒಂದು ಸರಳವಾದ ದೂರದರ್ಶಕ (Telescope) ಯಂತ್ರವನ್ನು ತಯಾರಿಸಿದ (ಆಕಾಶ. ೩). [ ದೂರದರ್ಶಕ + ಯಂತ್ರ ]

**ದೂರದರ್ಶನ** (ನಾ). ೧. ದೂರದಿಂದ ನೋಡುವಿಕೆ ; ದೂರದಿಂದ ಕಾಣುವುದು. ೨. ತಡೆಗಳಿಂದ ಅಥವಾ ಹೆಚ್ಚು ಅಂತರದಿಂದ ಮರೆಯಾಗಿರುವ ವಸ್ತುಗಳನ್ನು ಅಥವಾ ದೇಶಾಂತರಗಳಲ್ಲಿ ನಡೆ ಯುವ ಸಂಗತಿಗಳನ್ನು ನಿಸ್ತಂತು ತರಂಗಗಳ ಅಥವಾ ಇತರ ವೈಜ್ಞಾನಿಕ ಸಾಧನೆಗಳ ಸಹಾಯದಿಂದ ನೋಡುವುದು ; ಟೆಲಿ ವಿಷನ್ನು ದೂರ(ವಸ್ತು)ದರ್ಶನ; ಪರೋಕ್ಷವೀಕ್ಷಣ (Television. ೩೦೪೧). ೩. ಮುಂದಾಲೋಚನೆ ; ದೀರ್ಘದೃಷ್ಟಿ. ೪. ಪಂಡಿತ ; ವಿದ್ವಾಂಸ. ೫. ಹದ್ದು. ೬. [ಜೈನ] ಹದಿನೆಂಟು ಬಗೆಯ ಬುದ್ಧಿಋದ್ಧಿ ಗಳಲ್ಲಿ ಒಂದು : ಅಯ್ದುವರ್ಣಂಗಳೊಳಾವುದೊಂದು ದೂರದಿಂ ಬಂದ ವರ್ಣಮನಿಂತುಟೆಂದರಿವುದು ದೂರದರ್ಶನಮೆಂಬುದು (ಶಸಾರ. ೩೮೭). 'ಬುದ್ಧಿಋದ್ಧಿ' ಪರಾ. [ ದೂರ + ದರ್ಶನ ]

**ದೂರದರ್ಶಿ** (ಗು). ೧. ದೂರದೃಷ್ಟಿಯುಳ್ಳ ; ಮುಂದಾಲೋಚನೆ ಯನ್ನು ಮಾಡುವ; ವಿವೇಕವುಳ್ಳ. (ನಾ). ೨. ದೂರದರ್ಶಕಯಂತ್ರ: ದೂರದರ್ಶಿಯು (Telescope) ಹಾಲೆಂಡಿನಲ್ಲಿ ೧೬೦೮ರಲ್ಲಿ ತಯಾರಾಯಿತು (ಶಿಲ್ಪನಾ. ೦೫೨) ; ನಮ್ಮ ದೃಷ್ಟಿಯ ಶಕ್ತಿಯನ್ನು ದೂರದರ್ಶಿಗಳು ಇನ್ನೂ ಹೆಚ್ಚಿಸಿವೆ (ವಾಲಪ್ರ. I, ೩). ೩. ದೂರಾಲೋಚನೆಯುಳ್ಳವನು ; ವಿವೇಕಿ ; ಪಂಡಿತ : "ದೂರದರ್ಶಿ, ದೀರ್ಘದರ್ಶೀ – ಈ ೨ ದೂರವಾದ ಹಿಂದುಮುಂದು ಯೋಚನೆಯುಳ್ಳವನ ಹೆಸರು" (ಸಿದ್ಧಾಂತಿ. ೨೦೩). [ ಸಂ. ದೂರದರ್ಶಿನ್ ]

**ದೂರದರ್ಶಿತ್ವ** (ನಾ). ದೂರದೃಷ್ಟಿ ; ಮುಂದಾಲೋಚನೆ ; ವಿವೇಕ : ಬಹುಶ್ರುತನ ಮಂತ್ರನಿಶ್ಚಯಮುಮಂ ದೂರದರ್ಶಿತ್ವಮುಮಂ ಪ್ರತಿಭಾ ಗುಣಮುಮಂ . . . ಸಚಿವಸಮೂಹಂ ಮಚ್ಚಿ (ಶಾಂತಿಪು. ೨-೭೦ ವ) ; ಸರ್. ಎಂ. ವಿಶ್ವೇಶ್ವರಯ್ಯನವರ ದೂರದರ್ಶಿತ್ವದಿಂದಲೂ . . . ದೇಶವು ಹೊಸರೂಪವನ್ನೇ ತಾಳಿತು (ಪ್ರಬಾಶು. ೨೦). [ ಸಂ. ]

**ದೂರದರ್ಶಿನಿ** (ನಾ). ೧. ಮುಂದಾಲೋಚನೆ ಮಾಡುವವಳು ; ವಿವೇಕಿ : ಆಗ ದೂರದರ್ಶಿನಿಯಾದ ನಿದಾನಬುದ್ಧಿಯ ಹಿರಿಯ ಹೆಂಗುಸು ಎಂದರೆ ಏನುತಿಯೇ (ದೂರಸ. ೦೫೩). ೨. ದೂರದರ್ಶಕಯಂತ್ರ : ದೂರದರ್ಶಿನಿಯ ನೋಟಕ್ಕೆ ಎಲ್ಲ ಜ್ಯೋತಿರ್ಮಂಡಳಗಳೂ ಬಹು ಸುಂದರ (ನಕ್ಷತ್ರ. ೩) ; ದೂರದರ್ಶಿನಿಯಿಂದ ನೋಡುವೆನಾ ಅನಂತದ ಅಂಚನು (ಶಿಲಾಲ. ೩೭-೦೩). [ ಸಂ. ದೂರದರ್ಶಿನೀ ]

**ದೂರದೃಷ್ಟಿ** (ನಾ). ೧. ದೂರದ ನೋಟ. ೨. = ದೂರದರ್ಶಿತ್ವ : ಸಾವಕಾಶಗಳನ್ನು ಕೊಂಡುಕೊಳ್ಳುವಾಗ ನೀವು ಕೊಡುವ ಬೆಲೆಗೆ ಸರಿಯಾದ ಪ್ರತಿಫಲ ಸಿಗಬೇಕೆಂದರೆ ಕೊಂಡುಕೊಳ್ಳುವವನಲ್ಲಿ ದೂರದೃಷ್ಟಿಯಿರಬೇಕು (ಅರ್ಥಶಾ. ೦೩೪). ೩. ಅರುವತ್ತು ನಾಲ್ಕು ವಿದ್ಯೆಗಳಲ್ಲಿ ಒಂದು ; ಮುಂದಾಗುವುದನ್ನು ತಿಳಿಯುವುದು : ಅಕ್ಷರ ಲೆಕ್ಕ . . . ದೂರ ದೃಷ್ಟಿ ದೂರಶ್ರವಣ . . . ಮಂತ್ರ ತಂತ್ರಸಿದ್ಧಿ ಇವೆಲ್ಲವ ಕಲಿತದೇನೋ (ವಚಸಂ. ೦೩-೪೨); P ಪರಂಪರಾಗತವಾದ ಅರುವತ್ತು ನಾಲ್ಕು ವಿದ್ಯೆ ಗಳಲ್ಲಿ ಇದರ ಉಲ್ಲೇಖವಿಲ್ಲ. ೪. ದೃಷ್ಟಿಯ ದೋಷಗಳಲ್ಲಿ ಒಂದು; ದೂರದ ವಸ್ತುಗಳು ಮಾತ್ರ ಸ್ಫುಟವಾಗಿ ಕಾಣುವ ಕಣ್ಣಿನ ಕುಂದು: ದೂರದೃಷ್ಟಿಯುಳ್ಳ ಕಣ್ಣು ಅದೇ ದೂರದ ವಸ್ತುಗಳನ್ನು ಸ್ಪಷ್ಟವಾಗಿ ನೋಡಬೇಕಾಗಿದ್ದರೆ ಹೆಚ್ಚು ತ್ರಾಸವಡಬೇಕು (ನಿಮ್ಮದೃ. ೬೪). 'ಚಾಳೀಸು' ಪರಾ. [ ದೂರ + ದೃಷ್ಟಿ ]

**ದೂರದೆಸೆ** (ನಾ). (ಒಂದು ಪ್ರದೇಶದಿಂದ) ಅಂತರ ಅಧಿಕವಾಗಿರುವ ಪ್ರದೇಶ,-ಸ್ಥಳ : ಕದಡುಬಗೆ ತಿಳಿಯಾಗಿ, ದೂರದೆಸೆ ಬಳಿಯಾಗಿ, . . . ನುಡಿದಳವಳಂದು (ಹೊಂಗಳು. ೦೨-೨೨). [ ದೂರ + ದೆಸೆ₂ ]

**ದೂರದೇಶ** (ನಾ). ಬಹಳ ಅಂತರವಿರುವ ನಾಡು,-ಸೀಮೆ : ದೂರ ದೇಶದೊಳಿರ್ದು ಬರೆದ (ಧರ್ಮಾಮೃ. ೦೩-೪೦). [ ದೂರ + ದೇಶ ]

**ದೂರನಿರ್ದೇಶನ** (ನಾ). ಅಧಿಕವಾದ ಅಂತರದಲ್ಲಿದ್ದೂ ಯಂತ್ರಗಳ ಕಾರ್ಯವನ್ನು ಮಾರ್ಗದರ್ಶನ ಮಾಡಬಲ್ಲ ಶಕ್ತಿ,-ತಿಳಿವು : ಬಿಲ್ಲು ಬಾಣಗಳಿಂದ ಯುದ್ಧ ಮಾಡುತ್ತಿದ್ದ ಕಾಲಕ್ಕೂ ಅಣುಬಾಂಬುಗಳನ್ನು ದೂರನಿರ್ದೇಶನದಿಂದ ಹಾರಿಸುವ ಈಗಿನ ಕಾಲಕ್ಕೂ ಇರುವ ವ್ಯತ್ಯಾಸವೇ ಅನ್ನಿ (ಮನೋಸಂ. ೦೩೪). [ ದೂರ + ನಿರ್ದೇಶನ ]

**ದೂರಪಥ** (ನಾ). ಬಹಳ ಅಂತರವುಳ್ಳ ಮಾರ್ಗದ ಸ್ಥಳ ; ಹತ್ತಿರ ವಲ್ಲದ ಜಾಗ : ದೂರಪಥಕ್ಕೆ ಪೋಪೆನೆನುತುಂ ಪ್ರಿಯಳಲ್ಲಿಗೆ ಬಂದು ಕೇಳಲ್ (ಮಲ್ಲಿಕಾ. ೦೩-೨೦೩). [ ದೂರ + ಪಥ ]

**ದೂರಪಾತಂ** (ಅ). ದೂರದಿಂದ ಗುರಿಯಿಟ್ಟು : ಒರ್ವನನೆ ಲಕ್ಷ್ಯಂಮಾಡಿ ಶರಾಸಾರದಿಂ ದೂರಪಾತಮಿಸುವುದುಂ (ಶಾಂತಿಪು. ೪-೮ ವ). [ ಸಂ. ]

**ದೂರಪೋಗು** 'ದೂರಂಬೋಗು' ನೋ.

**ದೂರಪ್ರತಿ** (ನಾ). (ಕಾಲ ಕಳೆದ ಕಾರಣದಿಂದ ಅಥವಾ ಅನೇಕ ಸಲ ಪ್ರತಿಮಾಡಿದ ಪರಿಣಾಮವಾಗಿ) ಬಹಳ ವ್ಯತ್ಯಾಸಹೊಂದಿದ ನಕಲು,-ಪ್ರತಿ : ಹಸ್ತಪ್ರತಿಸಂಗ್ರಹಗಳಲ್ಲಿ ನಮಗೆ ಇಂದು ಕಾಣ ಸಿಗುತ್ತಿರುವ ಪ್ರತಿಗಳು, ಸ್ವಹಸ್ತಪ್ರತಿಗಳಿಂದ ಇಲ್ಲವೆ ಅವುಗಳ ಸದ್ಯಪ್ರತಿ (Immediate Copy) ಅಥವಾ ದೂರಪ್ರತಿ(Distant Copy)ಗಳಿಂದ ಎಂಥ ಪರಿಸ್ಥಿತಿಯಲ್ಲಿ ನಕಲುಗೊಂಡವು ಎಂಬುದನ್ನು ನಾವು ಕೇವಲ ಊಹಿಸ ಬೇಕಷ್ಟೆ ! (ಭಾರತೀ. ೨೮). [ ದೂರ + ಪ್ರತಿ ]

**ದೂರಪ್ರಾಚ್ಯ** (ಗು). ೧. ತೀರ ಪೂರ್ವದಲ್ಲಿರುವ : ದೂರಪ್ರಾಚ್ಯ ದೇಶ ಗಳಿಗೆ ಹೋಗಿ ಇದೇ ತರಹದ ಸಂಶೋಧನೆ ಮಾಡಿ ಆ ವಿವರಗಳನ್ನೂ ತಮ್ಮ ಪುಸ್ತಕಕ್ಕೆ ಸೇರಿಸುವುದಾಗಿ ಹೇಳಿದರು (ಮಾರ್ಗದ. ೦೫೩). (ನಾ). ೨. ಜಪಾನ್ ಮೊದಲಾದ ತೀರ ಪೂರ್ವದ ದೇಶ. [ದೂರ+ಪ್ರಾಚ್ಯ]

**ದೂರಪ್ರಿಯ** (ನಾ). ದಕ್ಕದ ಪ್ರಿಯ ; ದೊರಕದ ನಲ್ಲ : ನೀರೇಜನಿ ಯೆನಿತಲರ್ದೊಂ ಸಾರದೆ ಪೋದಂ ದಿನೇಶನಂತೆಸಗಂ ನೀಂ ದೂರ ಪ್ರಿಯನಾದೈ ಸಂಸಾರಂ ವ್ಯರ್ಥಯಾದುದೆಂದು ಬೆಚ್ಚನೆ ಸುಯ್ದಳ್ (ಅರ್ಧನೇ. ೩-೨೭). [ ದೂರ + ಪ್ರಿಯ ]

**ದೂರಫಲ** (ನಾ). ೧. ಬಹಳ ಕಾಲದ ಬಳಿಕ ಆಗುವ ಪರಿಣಾಮ; ತುಂಬ ತಡವಾಗಿ ಬಂದೊದಗುವ ಫಲ: ಇವು ದೂರಫಲಂಗಳ್ ಸ್ವಪ್ನವಿಶೇಷಂಗಳ್ (ಅದಿಪು. ೧೩-೪೪). ೨. ಹೆಚ್ಚು ಅಂತರವಿರುವ ಸಂತತಿ, –ಸಂತಾನ: ತಮ್ಮನು ಅಣ್ಣನಿಂದ ಹದಿನೈದು ವರ್ಷಗಳಷ್ಟು ಅಂತರದಲ್ಲಿ ಹುಟ್ಟಿದ ದೂರಫಲವಾಗಿದ್ದನು (ರೂಢಿ). [ದೂರ+ಫಲ$_1$]

**ದೂರಭವ್ಯ** (ನಾ). [ಜೈನ] ಸಮ್ಯಕ್ತ್ವಕ್ಕೆ ಇನ್ನೂ ದೂರವಾಗಿರುವವನು: ಸಿದ್ಧಿಯನ್ನು ಸಾಧಿಸದಿರುವವನು: ಅತನತ್ಮನ್ನತಬೋಧ ನೀಂ ಬೆಸಸಭವ್ಯನೋ ಭವ್ಯನೋ ದೂರಭವ್ಯನೋ (ಆದಿಪು. ೨-೩೪); ಎಮ್ಮರಸಂಗಾನನಿತು ಧರ್ಮಶ್ರವಣಂಗೆಯ್ದೊಡಂ ಭೋಗಂಗಳ್ಗೆ ವಿಮುಖನಾಗಂ ಅತನಭವ್ಯನೊ ಭವ್ಯನೊ ದೂರಭವ್ಯನೊ ನಿಮ್ಮಡಿಗಳೆ ತಿಳಿಯೆ ಬೆಸಸಿಂ (ಶಾಂತಿಪು. ೦೩); ವಾಯುಭೂತಿಚರನಪ್ಪಾ ಜೀವನೀಗಳಭವ್ಯನೋ ಭವ್ಯನೊ ಮತ್ತಂ ದೂರಭವ್ಯನೋ ಬೆಸಸಿಮಿದಂ (ಸುಕುಮಾ. ೩-೨೨); ಕಣ್ಬೇನೆ ಮಾಣ್ದಂದು ಕಾಣ್ಬಕ್ಷಿರೋಗಿಯಂತೆ ದೂರಭವ್ಯಂ ಕರ್ಮೋಪಶಮ ಮಾದಾಗಳಱಿಗುಂ (ಕಕಾರ. II, ೯೩೨). 'ಭವ್ಯ' ನೋಡಿ.

[ದೂರ + ಭವ್ಯ]

**ದೂರಮಾಡಿಸು** (ಕ್ರಿ). ದೂರವಾಗುವಂತೆ ಮಾಡು; ನಿವಾರಿಸು; ಪರಿಹರಿಸು: ನೆರೆಯುವರ ಕಷ್ಟಗಳನ್ನು ದೂರಮಾಡಿಸಿದನು (ಮುಂಬಯಿ. ೩-೨೦೬). [ದೂರಮಾಡು (<ದೂರಂಮಾಡು) + –ಇಸು$_3$]

**ದೂರಮಾಡು** 'ದೂರಂಮಾಡು' ನೋ.

**ದೂರಮಾಪಕ** (ನಾ). ಒಂದು ಪ್ರದೇಶ ಅಥವಾ ವಸ್ತುವಿನೊಂದಿಗೆ ಇರುವ ಅಂತರವನ್ನು ಅಳೆಯುವ ಯಂತ್ರಸಾಧನ: ದೂರದಲ್ಲಿರುವ ಯಂತ್ರಸಲಕರಣೆಯ ಅಳತೆ ಸಂಖ್ಯೆಗಳನ್ನು ವಿದ್ಯುತ್ಪ್ರವಾಹದ ಸಹಾಯದಿಂದ ದಾಖಲಿಡುವ ಸಲಕರಣೆ; (ವೋಲ್ಟೇಜ್, ಫಿರಂಗಿ ಅಭ್ಯಾಸ, ವೊ.ಗಳಲ್ಲಿ) ದೂರಗಳನ್ನು ಗೊತ್ತುಮಾಡಲು ಉಪಯೋಗಿಸುವ ಸಲಕರಣೆ; ದೂರಮಾಪಕ (Telemeter. ಇಂಕನಿ). [ದೂರ + ಮಾಪಕ]

**ದೂರಮುದ್ರಕ** (ನಾ). ಯಾಂತ್ರಿಕ ನಿರ್ದೇಶನದಿಂದ ಹತ್ತಿರವಿರದ ಪ್ರದೇಶಕ್ಕೆ ಕಳುಹಿಸಿದ ವರ್ತಮಾನ, ಸೂಚನೆ, ನಿರೂಪಣೆ ಮುಂತಾದುವನ್ನು ಮುದ್ರಿಸುವ ಸಾಧನ: "ದೂರಮುದ್ರಕ; ಟೆಲಿಪ್ರಿಂಟರ್" (Tele-Printer. ಶಕ್ತಿನಿ. ೮೨). [ದೂರ + ಮುದ್ರಕ]

**ದೂರಮುದ್ರಣ** (ನಾ). = ದೂರಮುದ್ರಕ: (Tele-Type. ಶಕ್ತಿನಿ. ೮೨).

[ದೂರ + ಮುದ್ರಣ]

**ದೂರಲೇಖ** (ನಾ). ವಿದ್ಯುಚ್ಛಕ್ತಿಯ ಸಹಾಯದಿಂದ ವರ್ತಮಾನಗಳನ್ನು ಸಂಕೇತಗಳ ಮೂಲಕ ಹತ್ತಿರದಲ್ಲಿರುವವರಿಗೆ ತಿಳಿಸುವ ಯಾಂತ್ರಿಕ ಸಾಧನ: ಸಮಾಚಾರ ಕಳುಹಿಸಲು ಉಪಯೋಗಿಸುವ ದೂರಲೇಖದ (ಟೆಲಿಗ್ರಾಫ್)ಭಾಗ (Communicator. ಇಂಕನಿ).

[ದೂರ + ಲೇಖ]

**ದೂರವಂದೆ** (ನಾ). ತುಂಬ ಪುಕ್ಕಲ; ತೀರ ಅಂಜುಕುಳಿಯಾದ ವ್ಯಕ್ತಿ; ಮಹಾಭೀತ: ಶ್ರುತವಿಲ್ಲದ ಲಿಂಗಿಯಂತೆ ಮೂರ್ಖನಾಗದೆ ದೂರವಂದೆಯಂತೆ ತಲ್ಲಣಿಸದೆ . . . [ಧರ್ಮದೊಳ್] ನಿಶ್ಶಂಕನುಮಪ್ಪುದು (ಧರ್ಮಾಮೃ. ೮-೯೬). [ದೂರ + ವಂದೆ]

**ದೂರವಾಣಿ** (ನಾ). ವಿದ್ಯುಚ್ಛಕ್ತಿಯ ಮೂಲಕ ಧ್ವನಿಯನ್ನು, ಮುಖ್ಯವಾಗಿ ಮಾತುಗಳನ್ನು ಸಾಗಿಸುವ ಸಲಕರಣೆ; ಟೆಲಿಫೋನು: ಮೊದಲು ದೂರವಾಣಿಯ ಮುಂದೆ ಕುಳಿತು ವಿಮಾನಕ್ಷೇತ್ರದ ಅಧಿಕಾರಿಯನ್ನು ವಿಚಾರಿಸಿದೆ (ನಟರು. ೧೦೩); ಟಪಾಲು ಮತ್ತು ತಂತಿ, ದೂರವಾಣಿ ನಿಸ್ತಂತುವಾರ್ತೆ ಮತ್ತು ಪ್ರಸಾರಣ ಮತ್ತು ಇತರ ಅದೇ ರೂಪದ ಸಮಾಚಾರ ಸಾಧನ (ಭಾರಸಂ. ೨೮೦). [ದೂರ + ವಾಣಿ$_1$]

**ದೂರವಾರ್ತಾವ್ಯವಸ್ಥೆ** (ನಾ). ದೂರದೂರದ ಪ್ರದೇಶಗಳಿಗೆ (ದೂರಲೇಖ, ದೂರವಾಣಿ ಮುಂತಾದುವುಗಳ ಮೂಲಕ) ಸಮಾಚಾರಗಳನ್ನು ತಲುಪಿಸಲು ಮಾಡಿರುವ ವ್ಯವಸ್ಥೆ: ಇಂತಹ ಸಂಕ್ಷೋಭಗಳಿಂದ ಟೆಲಿಗ್ರಾಫ್, ಟೆಲಿಫೋನ್, ರೇಡಿಯೋ ಮುಂತಾದ ದೂರವಾರ್ತಾವ್ಯವಸ್ಥೆಗಳಿಗೆಲ್ಲಾ ಅಡಚಣೆಯುಂಟಾಗುವುದು (ಭೌತವಿ. ೩೨೨).

[ಸಂ. ದೂರವಾರ್ತಾವ್ಯವಸ್ಥಾ]

**ದೂರವೀಕ್ಷಣ** (ನಾ). ೧. ದೂರದಲ್ಲಿರುವ ವಸ್ತುಗಳನ್ನು ನೋಡುವುದು. 'ದೂರವೀಕ್ಷಣಯಂತ್ರ' ನೋಡಿ. ೨. ಕಣ್ಣಿಗೆ ಕಾಣದ ವಿಷಯಗಳನ್ನು ಪ್ರತ್ಯಕ್ಷವಾಗಿ ಕಂಡಂತೆ ಮನಸ್ಸಿನಲ್ಲಿ ಗ್ರಹಿಸುವುದು; ಅತೀಂದ್ರಿಯ ದೃಷ್ಟಿ: ಅವಧಿಜ್ಞಾನ ಆಧುನಿಕ ಮನಶ್ಶಾಸ್ತ್ರದಲ್ಲಿ ದೂರವೀಕ್ಷಣ (Clairvoyance) ವೆಂದು ಕರೆದಿರುವ ಶಕ್ತಿಯನ್ನು ಹೋಲುತ್ತದೆ. ದೂರದಲ್ಲಿ ನಡೆದಿರುವ ಅಥವಾ ಗತಕಾಲದಲ್ಲಿ ನಡೆದಿರುವ ಸಂದರ್ಭಗಳನ್ನು ಕುಳಿತ ಕಡೆಯಿಂದಲೇ, ಕಣ್ಣಿನ ಸಹಾಯವಿಲ್ಲದೆಯೇ ಒಂದು ದೃಶ್ಯದಂತೆ ನೋಡುವುದು-ದೂರವೀಕ್ಷಣಶಕ್ತಿಯಿಂದ ಸಾಧ್ಯ (ತತ್ವಶಾ. ೧೧೮).

[ದೂರ + ವೀಕ್ಷಣ]

**ದೂರವೀಕ್ಷಣಯಂತ್ರ** (ನಾ). ದೂರದರ್ಶಕಯಂತ್ರ: ಇದು ದೂರವೀಕ್ಷಣಯಂತ್ರ (Telescope) ಇರಬಹುದೇ ಎಂಬ ಸಂಶಯ ಬರುತ್ತದೆ (ಮೈವಾಸು. ೧೦೯). [ದೂರವೀಕ್ಷಣ + ಯಂತ್ರ]

**ದೂರವುಳಿ** (ಕ್ರಿ). ಹತ್ತಿರದಲ್ಲಿರದಿರು; ದೂರವಿರು: ಸಂಬಂಧಿಕರು ಅವರ ನಡವಳಿಕೆಯನ್ನು ನೋಡಿ ದೂರವುಳಿದರು (ರೂಢಿ).

[ದೂರ + ಉಳಿ$_1$ (<ಉಳ್$_1$)]

**ದೂರಶ್ರವಣ** (ನಾ). ೧. ಅರುವತ್ತುನಾಲ್ಕು ವಿದ್ಯೆಗಳಲ್ಲಿ ಒಂದು; ಹೆಚ್ಚು ಅಂತರದಲ್ಲಿಯ ಧ್ವನಿಯನ್ನು ಕೇಳುವುದು: ಅಕ್ಷರ ಲೆಕ್ಕ . . . ದೂರದೃಷ್ಟಿ ದೂರಶ್ರವಣ . . . ಮಂತ್ರ ತಂತ್ರಸಿದ್ಧಿ ಇವೆಲ್ಲವ ಕಲಿತಡೇನೋ (ವಚನ. ೧೩-೪೨). P ಪರಂಪರಾಗತವಾದ ಅರುವತ್ತುನಾಲ್ಕು ವಿದ್ಯೆಗಳಲ್ಲಿ ಇದರ ಉಲ್ಲೇಖವಿಲ್ಲ. ೨. = ದೂರಶ್ರವಣತ್ವ: ರಾಜಸದ ದಶಸಿದ್ಧಿಯಿದ್ಧಿಹವು . . . ಕೇಳನೂರ್ಮಿಯು ಒಂದು ಮತ್ತೆಯು ಕೇಳು ದೂರಶ್ರವಣ ಎರಡದು (ಜ್ಞಾಸಿಂ. ೨೦-೩೩). ೩. [ಜೈನ] ಹದಿನೆಂಟು ಬಗೆಯ ಬುದ್ಧಿ ಋದ್ಧಿಗಳಲ್ಲಿ ಒಂದು: ದೂರದಿಂ ಬಂದ ಶಬ್ದಮನಿಂತು ಟೆಂದಱಿವುದು ದೂರಶ್ರವಣಮೆಂಬುದು (ಕಕಾರ. ೩೮೬). 'ಬುದ್ಧಿ ಋದ್ಧಿ' ನೋಡಿ. [ದೂರ + ಶ್ರವಣ$_1$]

**ದೂರಶ್ರವಣತ್ವ** (ನಾ). [ಯೋಗ] ರಾಜಸಯೋಗದ ಹತ್ತು ಬಗೆಯ ಸಿದ್ಧಿಗಳಲ್ಲಿ ಒಂದು; ಇರುವ ಕಡೆಯಿಂದಲೇ ದೂರದ ಧ್ವನಿಯನ್ನು ಕೇಳಬಲ್ಲ ಶಕ್ತಿ: ಅನೂರ್ಮಿಮತ್ತ್ವ, ದೂರಶ್ರವಣತ್ವ, ದೂರದರ್ಶಿತ್ವ, ಕಾಮರೂಪತ್ವ, ಪರಕಾಯಪ್ರವೇಶಿತ್ವ, ಸ್ವಚ್ಛಂದಮೃತ್ಯುತ್ವ, ದೇವತೆಗಳ ಮತ್ತು ದೇವಕನ್ಯೆಯರ ಸಹಕ್ರೀಡೆಯನ್ನು ನೋಡುವಿಕೆ, ಯಥಾಸಂಕಲ್ಪಸಿದ್ಧಿ, ಅಪ್ರತಿಹತವಾದ ಆಜ್ಞಾಶಕ್ತಿ (ಶ್ರೀತತ್ವ. ೪೮೯). 'ದಶಸಿದ್ಧಿ' ನೋಡಿ. [ಸಂ.]

**ದೂರಸಂಪರ್ಕ** (ನಾ). ದೂರದಲ್ಲಿರುವವರೊಡನೆ ಸಂಭಾಷಿಸಲು ಸಹಾಯ ಮಾಡುವ ಸಾಧನ: (Tele-Communication. ಶಕ್ತಿನಿ. ೮೦).

[ದೂರ + ಸಂಪರ್ಕ]

**ದೂರಸ್ಥ** (ನಾ). ೧. ಹತ್ತಿರಕ್ಕೆ ಬರದವನು; ದೂರವೇ ಉಳಿಯುವವನು. ೨. (ಆಲಂ) ಎರವಾದವನು; ದೂರವಾದವನು: ಇವರಲ್ಲಿ ನಾವು ಯಾರಾದರೂ ಕಾಣಿಕೆ ತೆಗದುಕೊಂಡರೆ ನಮ್ಮ ಸ್ರೀಸೈಲದ ಸೂರ್ಯ ಸಿಂಹಾಸನಕೆ ದೂರಸ್ತರು (ಎಕ. VI, ಚಿಕ್ಕಮ. ೧೧೦-೨೩: 1702).

[<ಸಂ. ದೂರಸ್ಥ]

**ದೂರಸ್ಥ** (ಗು). ೧. ಹೆಚ್ಚು ಅಂತರದಲ್ಲಿರುವ ; ಹತ್ತಿರವಲ್ಲದ. (ನಾ). ೨. ಹೆಚ್ಚು ಅಂತರದಲ್ಲಿರುವುದು ; ಸಮೀಪವಲ್ಲದುದು : ಜನತತ್ತ್ವಂ ಸ್ಮರತತ್ತ್ವಮೆಂಬಿವೆರಡುಂ ದೂರಸ್ಥಂ (ಶಾಂತಿಪು. ೧-೧೬). ೩. (ಯಾವುದಾದರೊಂದು ಸ್ಥಿತಿಯನ್ನು) ಮೀರಿದವನು,-ಅತೀತನಾದವನು : ಅಷ್ಟವಿಧಾರ್ಚನೆಯ ಮಾಡಿ ಒಲಿಸುವೆನೆ ಅಯ್ಯ ನೀನು ಬಹಿರಂಗ ವ್ಯವಹಾರ ದೂರಸ್ಥನು (ಮಹಾದೇ. ಬ. ೧೩-೧೧). [ ಸಂ. ]

**ದೂರಸ್ಪರ್ಶನ** (ನಾ). [ಜೈನ] ಹದಿನೆಂಟು ಬಗೆಯ ಬುದ್ಧಿಋದ್ಧಿಗಳಲ್ಲಿ ಒಂದು; ದೂರದಿಂದಲೇ ಸ್ಪರ್ಶಜ್ಞಾನವನ್ನು ಪಡೆಯುವುದು : ಎಂಟು ಸ್ಪರ್ಶಂಗಳೊಳಾವುದೊಂದು ದೂರದಿಂ ಬಂದ ಸ್ಪರ್ಶನಮನಿಂತುಟೆಂದಱಿವುದು ದೂರಸ್ಪರ್ಶನಮೆಂಬುದು (ಹಸಾರ. ೩೮೬). 'ಬುದ್ಧಿಋದ್ಧಿ' ಪರಾ. [ ದೂರ + ಸ್ಪರ್ಶನ ]

**ದೂರಹೋಗು** 'ದೂರಂಬೋಗು' ನೋ.

**ದೂರಾನ್ವಯ** (ನಾ). ೧. ಹತ್ತಿರವಲ್ಲದ ಸಂಬಂಧ : ವೈಜ್ಞಾನಿಕ ಪ್ರಭಾವದ ದೂರಾನ್ವಯ ಅಲ್ಲಿದೆ ಎಂದು ಒಪ್ಪಿಕೊಳ್ಳಬಹುದು (ಸುವರ್ಣ. ೨೦೮). ೨. [ವ್ಯಾಕ] ಕಾವ್ಯದಲ್ಲಿ ಶಬ್ದಗಳು ಹತ್ತಿರವಿರದೆ ಇರುವುದರಿಂದ ಅರ್ಥವನ್ನು ಸ್ಪಷ್ಟಗೊಳಿಸಲಾಗದಿರುವಿಕೆ; ದೂರದ ಶಬ್ದವನ್ನು ಅನ್ವಯಕ್ಕಾಗಿ ಹತ್ತಿರಕ್ಕೆ ತರುವುದು : ಇದು ಒಂದು ದೋಷ. ನೇಯಂದ ದೋಷ ಎಂದು ಕರೆಯುತ್ತಾರೆ.

[ ದೂರ + ಅನ್ವಯ ]

**ದೂರಾನ್ವಿತ** (ನಾ). ಹತ್ತಿರದ ಸಂಬಂಧವಿಲ್ಲದುದು ; ಹೊಂದಿಕೆಯಾಗದುದು : ವಿರುದ್ಧರಸದ ವಿಭಾವಾದಿಗಳನ್ನು ವರ್ಣಿಸುವುದು ದೂರಾನ್ವಿತವಾದ ವಸ್ತುವಾವುದೋ ಒಂದನ್ನು ಬೆಳೆಸುವುದು . . . ಇವೆಲ್ಲವೂ ರಸದ ವಿರೋಧಕ್ಕೆ ಕಾರಣಗಳಾಗುತ್ತವೆ (ಧ್ವನ್ಯಾಲೋ. ೦೬೩).

[ ದೂರ + ಅನ್ವಿತ ]

**ದೂರಾರಿಷ್ಟ** (ನಾ). ಮುಂದೆ ಉಂಟಾಗುವ ಅಶುಭ,-ಕೇಡು : ಅಂತು ಭರತೇಶ್ವರಂ . . . ಒಂದುದಿವಸಂ ತ್ರಿಯಾಮಾವಿರಾಮದೊಳ್ ಆಶ್ಚರ್ಯಭೂತಂಗಳುಂ ದೂರಾರಿ[ಪಾಠಾಂ. ನಿ]ಷ್ಟಫಲಸೂಚಕಂಗಳುಮಪ್ಪ ಸ್ವಪ್ನಂಗಳಂ ಕಂಡು (ಆದಿಪು. ೧೩-೨೦ ವ). [ ದೂರ + ಅರಿಷ್ಟ ]

**ದೂರಾರ್ಥ** (ನಾ). ೧. ಹತ್ತಿರವಿರದ ವಸ್ತು,-ಪದಾರ್ಥ : (+). ೨. [ಕಾವ್ಯಮೀ] ಪದಗಳಿಂದ ಸಹಜವಾಗಿ ಹೊರಡದ ಅರ್ಥ; ಊಹಿಸಲು ಕಷ್ಟವಾಗುವ ಅರ್ಥ. [ ದೂರ + ಅರ್ಥ ]

**ದೂರಾಲೋಚನೆ** (ನಾ). ಮುಂದಿನದನ್ನು ಯೋಚಿಸಬಲ್ಲ ಶಕ್ತಿ,-ವಿವೇಕ ; ಮುಂದಾಲೋಚನೆ : ಈ ಪ್ರಕಾರವಾಗಿ ದೂರಾಲೋಚನೆಯಿಂದ, ಪರಿಣಾಮ ಪರಿಜ್ಞಾನವನ್ನು ಅರಿತು . . . ಸದಾ ವಾಕ್ಕಿಗೆ ಸಂಸ್ಕಾರವನ್ನು ಮಾಡಿಕೊಳ್ಳುತ್ತಿರಬೇಕು (ಆಯುರ್ಧ. ೩೩).

[ ದೂರ + ಆಲೋಚನೆ ]

**ದೂರಾಸ್ವಾದ** (ನಾ). [ಜೈನ] ಹದಿನೆಂಟು ಬಗೆಯ ಬುದ್ಧಿಋದ್ಧಿಗಳಲ್ಲಿ ಒಂದು : ಪಂಚರಸಂಗಳೊಳಾವುದೊಂದು ದೂರದಿಂ ಬಂದ ರಸಮನಿಂತುಟೆಂದಱಿವುದು ದೂರಾಸ್ವಾದಮೆಂಬುದು (ಹಸಾರ. ೩೮೬). 'ಬುದ್ಧಿಋದ್ಧಿ' ಪರಾ. [ ದೂರ + ಆಸ್ವಾದ ]

**ದೂರಾಸ್ವಾದನ** (ನಾ). = ದೂರಾಸ್ವಾದ : ಪಂಚರಸಂಗಳೊಳೊಂದೊಂದು ರಸಂ ದೂರದಿಂ ಬಂದುದು ಇಂತುಂಟೆದಱಿವುದು ದೂರಾಸ್ವಾದನಮೆಂದಱಿವುದು (ಜ್ಞಾವಚಾ. ೯೩-೩). 'ಬುದ್ಧಿಋದ್ಧಿ' ಪರಾ. [ ದೂರ + ಆಸ್ವಾದನ ]

**ದೂರಾಳಿ** (ನಾ). ನಿಂದಿಸುವ ಸ್ವಭಾವದ ವ್ಯಕ್ತಿ ; ಹೀಯಾಳಿಸುವುದೇ ಸ್ವಭಾವವಾದ ವ್ಯಕ್ತಿ : ಕನ್ನಡದ ದೂರಾಳಿಗಳನ್ನು ಎರಡು ಪಂಗಡ ಮಾಡಬಹುದು (ಕನ್ನಸು. I, ೧೩೦). [ದೂರು$_2$ (<ದೂಱು$_2$)+-ಆಳಿ$_2$]

**ದೂರಿ$_1$** (ನಾ). ಬಂಡಿಯ ಎರಡು ಚಕ್ರಗಳನ್ನೂ ಕೂಡಿಸುವ ಸಾಧನ; ಅಚ್ಚುಮರ : ರಥಕ್ಕೆ ಸೇರಿಸತಕ್ಕ ದೂರಿ ಮೊದಲಾದ ಸಾಮಗ್ರಿಗಳನ್ನೂ (ಕೃವಾಉ. ೨೪೪) ; ಗಾಡಿಯ ಎರಡು ಚಕ್ರಗಳನ್ನೂ ಮಧ್ಯದ ದೂರಿಯೊಂದಿಗೆ ಹೊತ್ತುಕೊಂಡು ಹೋಗಿ . . . ನದಿಯ ತೀರದ ಮರಳಿನಲ್ಲಿ ಹೂಳಿದವರುಂಟು (ಚಸ್ತುಕ. ೩೬).

[ ←ಹಿಂ. ಮರಾ. ಧುರೀ, ಧುರಾ./ಪ್ರಾ. ಧುರೀ./ಸಂ. ಧುರ್ ]

**ದೂರಿ$_2$** (ನಾ). ಎಳೆಯ ಮಕ್ಕಳನ್ನು ಆಡಿಸುವಾಗ ಉಪಯೋಗಿಸುವ ಒಂದು ಪದ ದೂರಿ ದೂರಿ ದುಗ್ಗಲಮ್ಮ (ಕೂಶಿ). [ ? ]

**ದೂರಿತ** (ನಾ). ದೂರ ಉಳಿಯುವವನು : ದೂರದೊಳಿರ್ಪೆಯೇಕೆನಲ್ ದೂರಿತರಲ್ತೆ ಪುಷ್ಪವತಿಯಾದಳ ಕಂಡರೆ ನೀತಿಮಾರ್ಗದರ್ (ಮಲ್ಲಿಕಾ. ೪-೭೮೮). [ ಸಂ. ]

**ದೂರಿಸು$_1$** 'ದೂಱಿಸು' ನೋ.

**ದೂರಿಸು$_2$**, ದೂರ್ಚಿಸು (ಕ್ರಿ). ನಿವಾರಿಸು ; ಪರಿಹರಿಸು : ದೂರಿಸದೆ ನೆನೆದು ಕೂಳಂ ನೀರುಮನಜ್ಞಾನದಿಂಡಮಿರುಳುಂ ಪಗಲುಂ ಸಾರತರ ಪರಮಸೌಖ್ಯಸುಧಾರಸಭರಿತಾತ್ಮತತ್ತ್ವಮಂ ನೆನೆ ಮನದೊಳ್ (ಉಸಾರ. ೪೪-೨೭೦) ; (ಹಸಾರ. ೩೭೦ ನೋ) ; ತಾಂ ವರಸತಿಯು ಸಂಭೋಗದೊಳಮಲಾತ್ಮಸಂವರೆಪೂರ್ವಕಮಾಗಿ ಪುಂವೇದನೀಯ ಕರ್ಮವನು ದೂರಿಸಿದನದೇಂ ವೀತರಾಗನೊ ಭೋಗಿ (ಭರತೇ. ೧೦-೧೨೩) ; ಅರಮೇಲೆಸುಗೆ ದೇವರಿಗೆ ಹಂಗಳ ಮೇಲೊ ದೂರಿಸುವಾಳ್ಗಳ ಮೇಲೊ (ಭರತೇ. ೩೦-೨೩). ದೂರ್ಚಿಸು : ನನ್ನಯ ಚಿಂತೆಯನ್ನು ದೂರ್ಚಿಸಲಿಚ್ಛಿಸಿ ಕಾಂತೆ ಪ್ರಾಣಗಳಲ್ಲಿ ಸ್ಥಿರವಾಗಿರಿಸಿ ಪ್ರೇಮದಲಿ ಅಂತವನ್ನೈದಿದರು ನನ್ನಯ ಸ್ವಾಂತರಂಗಕೆ ಸುಖವು ತೋರದು (ರಘುವಂ. ೮೪-೭೦).

[ ದೂರ + – ಇಸು$_2$ ]

**ದೂರೀಕರಿಸು** (ಕ್ರಿ). ತ್ಯಜಿಸು ; ಬಿಟ್ಟುಬಿಡು : ಅರಿವನೊತ್ತಿಗನೇಕೆಂದು ನೀನೆನ್ನ ದೂರೀಕರಿಸಬೇಡಮ್ಮ (ಕುರಾಶಾಂ. ೧-೨೪) : ದೇವರನ್ನು ದೂರೀಕರಿಸಿ ಮಿಲ್ಪಿಯವರನ್ನು ದೇವರೆಂದು ತಿಳಿದುಕೊಂಡಂತೆ ಕಾಣುವದು (ಅಮಗಾಂ. ೪) ; ಜಾತಿ ಅಥವಾ ವರ್ಗಭೇದ ಭಾವನೆಗಳನ್ನು ದೂರೀಕರಿಸಿ ಬಡವರೂ ಶ್ರೀಮಂತರೂ, ಹಿರಿಯರೂ ಕಿರಿಯರೂ ಒಂದಾಗಿ ಸೇರುತ್ತಾರೆ (ಧಾರಿಣಾ. ೪೭) ; ಅವನನ್ನು ದೂರೀಕರಿಸಲು ಆಗ ಅವರಿಗೆ ಇನ್ನೊಂದು ಕಾರಣವೂ ಉದ್ಭವವಾಯಿತು (ನಿಕುತ. ೪೮) ; ಹೊಸಗನ್ನಡಕ್ಕೆ ಸೇರುವುದಿಲ್ಲವೆಂದು ದೂರೀಕರಿಸಬೇಕಾದ ಯಾವ ಪ್ರಯೋಗವೂ ಈ ಪದ್ಯಪಂಕ್ತಿಗಳಲ್ಲಿಲ್ಲ (ಸಮಾಲೋ. ೦೩). [ ದೂರೀಕರಣ$_0$ + – ಇಸು$_2$ ]

**ದೂರೀಕೃತ** (ಗು). ೧. ನಿವಾರಿಸಿದ ; ದೂರಗೊಳಿಸಿದ : ಕಾರವತಿವತ್ಕೀರ್ತಿವಿಹಾರಾ . . . ಪ್ರಭಯಾನಿಜತನುಪೂರಾ ಪೂರಾಶ್ರಿತಹೃತ್ಕ್ಲೇಶವಿದೂರಾ ದೂರೀಕೃತಬಲವಿಸ್ತಾರಾ (ಕವಿರಾ. ೩-೨೩೩) : ಅತಿವಿಶದಮಣಿಪ್ರದೀಪಿಕೋದ್ಯೋತದೂರೀಕೃತತಮಸ್ತಮದೊಳನೇಕರತ್ನರಚಿತ ಪ್ರತಿಪಾದುಕವಿನ್ಯಸ್ತಕಾಂಚನಮಂಚೋಪಶೋಭಿತದೊಳ್ . . . ಆ ದಂಪತಿಗಳ್ . . . ನಿದ್ರಾರಸವಶಗತರಾದರ್ (ಆದಿಪು. ೫-೨೨ ವ) ; ದೂರೀಕೃತಾರಿಷಡ್ವರ್ಗನುಂ . . . ನಮಿತಾಕೃತಸಾಮಂತವರ್ಗನುಮಾಗಿ (ಚಂದ್ರಪು. ೪-೨೮ ವ) ; ದೂರೀಕೃತಾಘಂ ಮಹಿತಜೀವನ್ಮುಕ್ತಮಾನಸನು (ಲಸಪು. ೨೯-೨). ೨. ಬೇರ್ಪಡಿಸಿದ ; ಪ್ರತ್ಯೇಕಪಡಿಸಿದ. [ ಸಂ. ]

**ದೂರೀಭೂತ** (ನಾ). ಪ್ರತ್ಯೇಕವಾದುದು ; ಬೇರೆಯಾದುದು : ವ್ಯಂಗ್ಯಾರ್ಥವು ವಾಚ್ಯಾರ್ಥದೊಡನೆ ಕೂಡಿಯೇ ಅನುಭವಕ್ಕೆ ಬರುತ್ತದೆ. ಆದುದರಿಂದಲೇ . . . ವ್ಯಂಗ್ಯಪರಾಮರ್ಶಕಾಲದಲ್ಲಿ ವಾಚ್ಯಬುದ್ಧಿಯು ದೂರೀಭೂತವಾಗುವುದಿಲ್ಲ (ಧ್ವನ್ಯಾಲೋ. ೨೩). [ ಸಂ. ]

**ದೂರು$_1$** 'ದೂಱು$_1$' ನೋ.

**ದೂರು$_2$** 'ತೂರು$_2$' ನೋ.

**ದೂರು$_3$** 'ದೂಱು$_1$' ನೋ.

**ದೂರು$_4$** (ನಾ). ಹತ್ತಿರವಲ್ಲದುದು ; ದೂರ : ದೂರಿಂದ ಕಾಣಿಸುವ ಗ್ರಾಮಗಳು ಸುಟ್ಟಂತೆ ತೋರುತ್ತವೆ (ಕಥಾಗ. ೬) : ಅಗ್ನಿ ದೂರಿನಿಂದ ವ್ಯಂಜನ, ರುಳಿ, ಗೆಜ್ಜೆ ಸಪ್ಪಳವಾಯಿತು (ವಿಜಯ. ೧೪೪) ; ಮೂದರ ಚಿನ್ನಪ್ಪ ದೂರಿನಲ್ಲಿ ಕೂಗಿಕೊಂಡನು (ಹಳ್ಳಿಬ. ೪). [ <ಸಂ. ದೂರ ]

**ದೂರುಗ** 'ದೂಱುಗ' ನೋ.

**ದೂರೈಸು** 'ದೂರಿಸು$_2$' ನೋ.

**ದೂರೋತ್ಸಾರಿತ** (ಗು). ಬಹು ಅಂತರದಲ್ಲಿ ಬಿಟ್ಟ ; ದೂರದಲ್ಲಿ ನಿಲ್ಲಿಸಿದ : ಓರ್ವಂ ರಾಜಕುಮಾರಂ ದೂರೋತ್ಸಾರಿತವಾಹನಂ ಸಸಂಭ್ರಮೋಪಗತಪರಿಚಾರಕಸ್ಕಂಧವಿನ್ಯಸ್ತವಾಮಹಸ್ತನಾಗಿ (ಆದಿಪು. ೩-೪೦ ವ) ; ಸಪ್ತಾನೀಕಸಮೇತರಾಗಿ ಗಗನತಳಮನಲಂಕರಿಸಿ ಬಂದು ದೂರೋತ್ಸಾರಿತವಾಹನರಾಗಿ ಸೂರ್ಯಮಿತ್ರಜನೇಂದ್ರನಂ ತ್ರಿಃಪ್ರದಕ್ಷಿಣಂಗೆಯ್ದು (ಸುಕುಮಾ. ೮-೬೬ ವ) ; ದೂರೋತ್ಸಾರಿತ ವಿಚಿತ್ರಾತಪತ್ರ ವಿವಿಧ ವಾಹನಂ ಬಸದಿಯಂ ಬಲಗೊಂಡು . . . ಬಂದು (ಶಂಖಾಮಾ. ೭-೬೪ ವ). [ ದೂರ + ಉತ್ಸಾರಿತ ]

**ದೂರ್ತ** (ಗು). ೧. ಮೋಸದ ; ವಂಚನೆಯ. (ನಾ). ೨. ಮೋಸಗಾರ; ವಂಚಕ : ದೂರ್ತರ್ ಮಾರ್ತಾಂಡನಂ ಕಂಡ ಮಂಜಿನಂತೆ ಪರಿಯೆ (ಧರ್ಮಾಮೃ. ೨-೬೪). 'ದೂರ್ತವಡೆ' ಪರಾ. ೩. ಕಾಮುಕ ; "ವಿಟ" (ನಾಚಿರಾ. ೯). [ <ಸಂ. ಧೂರ್ತ ]

**ದೂರ್ತವಡೆ** (ನಾ). ಮೋಸಗಾರರ ಗುಂಪು: ವಂಚಕರ ಸಮೂಹ : ಸರ್ವಸ್ವಾಪಹರಣಂ ಮಾಡಿ ತನ್ನೊಡನಿರ್ದ ಕಸವಿಂಗಂ ಕಳುಬಿಂಗಂ ಡಸಿಕಿಂಗಂ ದೂರ್ತವಡೆಗಮಿತಿಚಪಳರ್ಗಂ . . . ಕುಡುವನುರ್ಕಿ ಕುಮಾರಂ (ಧರ್ಮಾಮೃ. ೨-೭೦). [ ದೂರ್ತ + ಪಡೆ$_2$ ]

**ದೂರ್ತು** (ನಾ). ೧. ಮೋಸ ಮಾಡಿಯೂ ನಾಚಿಕೆ ಪಡದಿರುವುದು,– ಸಂಕೋಚಪಡದಿರುವುದು. ೨. ವಂಚಕತನ ; ದುಷ್ಟತೆ ; ಮೋಸಗಾರಿಕೆ : ದೂರುಂ ದೂರ್ತುಂ [ಪಾಠಾಂ. ಕುರ್ತುಂ] ದುಷ್ಕುಂ ನೂಱುಂಟು (ಮುದ್ರಿ. ೧೦-೫); ಉಣ್ಬರ ಬಾಯೊಳ್ ತಿಣ್ಣನೆ ಕಿರ್ಚಂ ಪುಡಿಯು ಮಣ್ಣಂ ಪೊಯ್ದಂತು ಮಾಡಿದ್ಯ ದೂರ್ತಿಂದಂ (ಧರ್ಮಾಮೃ. ೯-೦೩೬) : ಕೊಲೆಗೆಯ್ದುವ ದೂರ್ತುಗಳಂ ಪಲಮನವರ್ ಚಲದೆ ಮಾಡಿ ನೆಲನಂ ಬಿಸುಟೀ ಕುಲಪತಿಗೆ ಮಲೆದು (ನೇಮಿಪು. ೧೦-೪೭) ; ದ್ವಿಗುಣಮಾಗದೆ ಮಾಣ್ಬುದೆ ನಿನ್ನ ಧೂ[ದೂ]ರ್ತು (ದಶಕು. ೧೦-೧೦೪). ೩. ವಿಟವೃತ್ತಿ ; ಕಾಮುಕತೆ ; ಲಂಪಟತೆ : ಅವಳಿಂದಳಿಂತಿನಿತು ಧೂ[ದೂ]ರ್ತಿನೊಳಿಂತಿರುತೇನೊ ನಾಣ್ಚಯೊ ಎನೆ (ನೇಮಿಪು. ೩-೦೪೮). [ ದೂರ್ತ + –ಉ$_4$ ]

**ದೂರ್ತೆ** (ನಾ). ವಂಚಕಿ ; ಕಪಟಿ ; ಮೋಸಗಾರ್ತಿ : (+). [ ದೂರ್ತ + –ಎ$_3$ ]

**ದೂರ್ವ** (ನಾ). ಗರಿಕೆ : ಅನುರೂಪಂ ಸ್ಫಟಿಕಾಬ್ಜದೊಳ್ ದಧಿ ಸುವರ್ಣ ಕ್ರೌಂಚದೊಳ್ ರೋಚನಂ ಘನಹಾರೀತಕಹುಸಿಯೊಳ್ ಹರಿತ ದೂರ್ವಂ . . . ಮಾಣಿಕ್ಯಭಾಜನದೊಳ್ ಕುಂಕುಮಮಂಕಮೇಂ ಮೆಱೆದುವೋ ಮಾಂಗಲ್ಯಸಾಕಲ್ಯಮಂ (ಹಂಸಾಮಾ. ೩-೦೨೫). [ ಸಂ. ದೂರ್ವಾ ]

**ದೂರ್ವಾಂಕುರ** (ನಾ). ಗರಿಕೆಯ ಚಿಗುರು; ಎಳೆಗರಿಕೆ : ಆ ದೂರ್ವಾಂಕುರ ವರ್ಣದೊಳಾದಮೊಡಂಬಟ್ಟ ಕನಕಕವಚಂ . . . ಕ[ಣ್ಗಾದ]ಮ ಬರೆ ಬಂದು ಮುಂದೆ ನಿಂದಂ ಹಂಗಂ (ಹಂಸಭಾ. ೨-೬೪) : ಉಜ್ಜ್ವಲದಂತಂ ಪರಿವೃತ್ತ ಮೌಕ್ತಿಕಸಮಂ . . . ತನೂರೋಮರಾಜಿ ವಿಲಸದ್ದೂರ್ವಾಂಕುರಾಭಂ ಮನಂಗೊಳೆ ಚಂಚನ್ನಿಜಪಂಚವರ್ಣ ಪಡೆಗುಂ ಚಿತ್ರಾಂಗನಾಶಂಕೆಯಂ (ಅಜಿಪು. ೨-೪೪); ರುಚಿರಮರಕತಶ್ಯಾಮ ದೂರ್ವಾಂಕುರಗ್ರಾಸದೊಳಂ ಅತಿಸ್ವಚ್ಛಸ್ವಾದು ಸಲಿಲಪಾನದೊಳಂ ಮೆಲ್ಲಮೆಲ್ಲನೆ ಮೆಲ್ವಾಡಿ (ಹಂಡತಂ. ೨೪-೧೨) ; ಮೆಱೆವ ದೂರ್ವಾಂಕುರದ ಮಾಲೆಯಿಂದಿರದಿಾದ ಮೌಕ್ತಿಕದ ಮಾಲೆ ... ಸ್ತಂಭದಿಂದೆಸೆವುದು (ದಸುಪು. ೬-೧-೫೭). [ ಸಂ. ]

**ದೂರ್ವಾಂಚಿತ** (ನಾ). ಗರಿಕೆಯಿಂದ ತುಂಬಿ ಅಲಂಕಾರ ಮಾಡಿದುದು : ಪಂಚರತ್ನ ಸಮಸ್ತೌಷಧಿ ಗರ್ಭಮಕ್ಷತಯುತಂ ದೂರ್ವಾಂಚಿತಂ ಸರ್ವಧಾನ್ಯಸಮುತ್ತಂಭಿತಪೂರ್ಣಕುಂಭಮೆಸೆದತ್ತು ವೇದಿಕಾಮಧ್ಯದೊಳ್ (ಹಂಸಾಪ್ರಾ. ೫-೧೨೪). [ ಸಂ. ]

**ದೂರ್ವಾಕಿಸಲಯ** (ನಾ). = ದೂರ್ವಾಂಕುರ: ಅಷ್ಟರಲ್ಲಿ ನಾನೂ ಶಕುಂತಳೆಗೋಸ್ಕರ ಗೋರೋಚನ, ತೀರ್ಥಮೃತ್ತಿಕೆ, ದೂರ್ವಾಕಿಸಲಯಗಳ ಮಂಗಳಾನುಲೇಪಗಳನ್ನು ಮಾಡುವೆನು (ಶಾಕುಂತ. ೪೯-೨೧). [ ಸಂ. ]

**ದೂರ್ವಾಪ್ರವಾಲ** (ನಾ). = ದೂರ್ವಾಂಕುರ : ಅಪೂರ್ವ ದೂರ್ವಾಪ್ರವಾಲಾಲಂಕೃತ ಕರ್ಣಪೂರನುಂ . . . ಪುಣ್ಯಾಶೀರ್ವಚನ ನಿರ್ಘೋಷದತ್ತಕರ್ಣನುಂ ಆಗಿರ್ದು (ಆದಿಪು. ೧೧-೦೦ ವ). [ ಸಂ. ]

**ದೂರ್ವಾಸಕ್ತಿ** (ನಾ). ಗರಿಕೆಯಲ್ಲಿ ಆಸಕ್ತಿ ; ಹುಲ್ಲನ್ನು ತಿನ್ನುವ ಆಸೆ : ಘನ ದೂರ್ವಾಸಕ್ತಿಯಂ ಗಾರುಡಮಣಿರುಚಿಯೊಳ್ ದಾವವಿಭ್ರಾಂತಿಯಂ ಕಾಂಚನಭಿತ್ತಿವ್ರಾತದೊಳ್ . . . ವಾನೇಚರಸ್ತ್ರೀಭ್ರಮಮನತುಳ ನೀಳಾಶ್ಮಪಾಂಚಾಳಿಕಾದರ್ಶನದೊಳ್ ತಾಳುತ್ತುಮೆತ್ತಂ ಸುಟ್ಟುದು ಮಹೀಭೃದ್ಗೇಹದೇಣೀಸಮೂಹಂ (ಚಂದ್ರಪು. ೦-೧೪೭). [ ಸಂ. ]

**ದೂರ್ವಿಜ ?** (ನಾ). ಬ್ರಹ್ಮ (?) : ಮೂವರೆನ್ನ ಸುತರಾಗಿಯೆನೆ ಶಶಿಧರಂ ಯಜ್ಞಾಕರ ದೂರ್ವಿಜಂ ದೂರ್ವಾಸವೆಸರಾದವೊಲಂ ಬಸವತ್ಯಣಕೆ ಮೆಸಂಟ್ಟವನ ಚರಣಾಂಬುಜಕ್ಕೆ ಶರಣು (ಅಶಿಶಂ. ೩೩-೩೩). [ ? ]

**ದೂರ್ವೆ** (ನಾ). ಒಂದು ಬಗೆಯ ಹುಲ್ಲು; ಗರಿಕೆ: "ಹರಿತಾಲೀ, ದೂರ್ವಾ– ಇವೆರಡುಂ ಕಱುಕೆ" (ಹಲಾಯು. ೩೨-೩೪) : "ದೂರ್ವೆ ಹರಿತಾಳಿಯೆನೆ ಕಱುಕೆಯೆನಿಸಿಕ್ಕು" (ಮುಂಗರಾ. ೩೩-೭) ; ಎಳಸೆ ಪುರ್ವು ದೂರ್ವೆಯನು ರೋರುಹಮುಜ್ಜ್ವಲಕುಂಭಶೋಭೆಯಂ ಪಾಳಿಸೆ (ಚಂದ್ರಪು. ೦೦-೫) ; ಆ ಕ್ಷಣ ದೂರ್ವೆ ದಧಿಗಳನು ತರಿಸಿದನು (ಶಾಶಿರಾ. ೩-೩೦) ; ದೂರ್ವೆಯ ದಳವ ಮೇಯ ಬಂದ ಮೊಲನ ಉರ್ವಿಯ ಕರಡಿ ತೊಡರಿಕೊಂಡಿಪ್ಪುದಯ್ಯ (ಸಿದ್ಧೇಶ. ೦೯೫-೫೯೪) : ದೂರ್ವೆಯಿಂ ಗಡೆಗಾದ ವಸ್ತುಗಳುರ್ವಿಯೊಳಗಿಲ್ಲೆಂಬರೆಲ್ಲರು . . . ದೂರ್ವೆಯಿಂ ಕಡೆ ಬೇಡಿ ಬಾಳುವ ಮನುಜನು (ಶಂಕರಾ. ೭-೨೦). [ ಸಂ. ದೂರ್ವಾ ]

**ದೂಲ, ಧೂಲ** (ನಾ). ಉದ್ದವೂ ದಪ್ಪವೂ ಆದ ಮರದ ತೊಲೆ,– ಮರಮುಟ್ಟು : ನೀಲಮಯ ಬೋದಿಗೆ ಪಟ್ಟೆಯ ಚೆಲ್ವ ದೂಲಗಳ್ . . . ಮೃಗನಾಭಿಯ ಸುತ್ತುಭಿತ್ತಿ ಬಾವನ್ನದಿನರ್ಥಿಯಿಂದೆ ಮೆಱೆಗುಂ ಧರಣೀಶನ ಮಂತಣಾಗೃಹಂ (ಮುಲ್ಲಕಾ. ೫-೫) ; ನಾರಾಯಣಶಾಸ್ತ್ರಿಗಳು ಮನೆಯ ಒಂದಂಕಣವನ್ನು ಕೀಳಿಸಿ ಹೊಸದಾಗಿ ಕಟ್ಟಬೇಕೆಂದು ಒಂದಷ್ಟು ತೊಲೆ ದೂಲ ತರಿಸಿಹಾಕಿಕೊಂಡಿದ್ದರು (ನಾಲ್ಕುಳ. ೯) ; ಆನೆಗಳ ಎಳೆತಕ್ಕೆ ಶಕಟದ ಮರದ ದೂಲಗಳು ಕಿತ್ತುಬಂದುವು (ಶಾಂತಲಾ. ೨೪೬) ; ಅಲ್ಲಿ ಹಿಂದಿನ ದಿನದಂತೆ ದೊಡ್ಡ ದೊಡ್ಡ ದೂಲದಂತಿದ್ದ ಕಟ್ಟಿಗೆಯ ರಾಶಿಯಲ್ಲಿ ಬೆಂಕಿಯು ಉರಿಯುತ್ತಿತ್ತು (ಕಪಾಳಕುಂ. ೨೫) ; ಅಂತರಿಕ್ಷಕ್ಕೆ ದೂಲವಿಲ್ಲ (ಗಾತತ್ತ್ವ. ೨೩). ಧೂಲ: ನಾರಾಚ ಸಲಾಕಿ ಕೊಂಡಿ ಸಹ ೧ ಮರದ ರಥದ ಗಾಲಿಚಕ್ರಗಳು ಧೂಲ ೨ ಸಹ . . . ಯಿಾ ಸಾಮಾನು ಲೆಕ್ಕ ಬರ ಬರದಿರುವ ಶಾಂಬ್ರದ ತಗಡು (ಎಕ. XIV, ನಂಜನ. ೨೯೪, ಪುಟ ೦೪೪ ; 1862). 'ತೊಲೆ$_3$' ಪರಾ. [ ?./ತಮಿ. ತೂಲ ; ತೆಲು. ದೂಲ ]

**ದೂವಟ** 'ದುಪ್ಪಟ' ನೋ.

**ದೂವಟಿ** 'ದುಪ್ಪಟಿ' ನೋ.

**ದೂವಟ್ಟಿಗೆ** 'ದುವಟ್ಟಿಗೆ' ನೋ.

**ದೂವಡಿಗೆ** 'ದುವಟ್ಟಿಗೆ' ನೋ.

**ದೂವಾಟ** 'ದುಪ್ಪಟ' ನೋ.

**ದೂವಾರಿ** (ನಾ). ಹೊರುವವನು : ಹೊಂದುಂದಿಗೆಯ ದೂವಾರಿಗಳು ವೆಂಠಣಿಸಿದರು (ಕುಮಾ.ರಾಮ. ೮-೩೫). [ < ಸಂ. ಧೌರೇಯ ]

**ದೂವಾಳಿ** 'ದುವ್ವಾಳಿ' ನೋ.

**ದೂವಾಳಿಸು** 'ದುವ್ವಾಳಿಸು' ನೋ.

**ದೂವೆ₁**, ದುವ್ವೆ, ದೂಪೆ, ದೂಹೆ (ನಾ). ೧. ಹೊಗೆ ; ಧೂಮ : ಬಟ್ಟೆಯ ದೂಳಿದೂವೆ ಮೊದಲಾದುದು (ಕಾದಂಪೂ. ೧೯೭) ; ಧೂಮ– ದೂವೆ (ಶಬ್ದಾನು. ೧೬೦ ಪ್ರಯೋ) . ತಳಿಗಳ ದಳ್ಳುರಿಯಲರಿಂ ಬೆಳೆದಲರ್ವುದಿ ದೂವೆ [ಪಾಠಾಂ. ದೂನೆ, ಧೂಮ]. ಮಂತ್ರಘೋಷಂ ಪಿಕಸಂಕುಳರವಮನೆ ಚೂತಂ ಕಣ್ಗೊಳಿಪುದು ಹೋಮಾಗ್ನಿಯಂತೆ ಕಾಮಾಧ್ವರಿಯಾ (ಕಲಾಂ. ೨-೪೮). ೨. ಆವಗೆ : ದೂವೆಯೊಳ್ ಪೊಕ್ಕ ಪಾವಿನಂತೆ ಬೆದಬೆದ ಬೆಂದು (ಲೀಲಾವ. ೧೧-೭೦ ವ); ಪೊಗೆಯಡಂಗಿಗವಿದ ದೂವೆಯಂತಿರೆ ಬರುಂಟಿದೊಡೆ ಬಿಸಿಯನುಗುಟ್ಟ ಕಪ್ಪುರದ ನಪ್ಪಾಳಿ ಜಗಲಿಯುಂ (ವರ್ಧಪು. ೩-೬೩ ವ) ; ದೂವೆ [ಪಾಠಾಂ. ದಾವಿ]ಯೊಳ್ ಪೊಕ್ಕುರಗಿಯಂತೆ ಬೆದಬೆದನೆ ಬೆಂದು (ಹಲಪು. ೦೯-೪೩). ೩. ಹೆಣವನ್ನು ಸುಡುವ ಜಾಗ ; ಚಿತೆ : ಪಂದಲೆಯೋಳಿದೋರಣದ ಸೀಯುದರಂ ಪೊಸದೂವೆ ದೂವ ತೂಗುಂದಲೆ ಬಾಟ್ವಿಣಂ ಪೂಡರೆ ಬಳ್ಳುವ ಸಮ್ಮನ ಸೂಲಂ (ಕಾವ್ಯಾವ. ೩೬) ; ಪರೇತವನದೊಳಗೆ ಪೊಸದೂವೆಯ ಕಿಲದೊಳ್ ಕಳೆದೊಟ್ಟಿದ ತೊಡವುಗಳುಮಂ ಮರದ ಕೊಂಬಿನೊಳ್ ಬರೆದು ಕಟ್ಟಿದ ಕಪ್ಪಡಮುಮಿರ್ದಪ್ಪುದೆಂದು ಪಿತೃವನವಾಳಕಂ . . . ಬಿನ್ನವಿಸಿ (ಅರ್ಧನೇ. ೩-೪೦ ವ) : ಭೂನುತಕುಮಾರನಂ ದಹಿಸಿ ದೂವೆಯ ಕೆಲದೊಳೇ ನರಕಿ ವನಿತೆಯನನಾಮಿಕನ ಕಯ್ಯೊಳನುಮಾನವಿಲ್ಲದೆ ಕೊಲಿಸಂ (ಹರಿಶ್ಚ. ೦೩-೯); ತ್ವರಿತದೆ ಪುಟ್ಟಿ ಬಿರ್ರನುತಮಾ ಕ್ಷಣದಿಂ ಮೊಗೆದೆತ್ತಿ ದೂವೆಯಂತಿರೆ ಕಡುಗಾಯ್ದ ಭೂರಜಮಂ . . . ಅಂಬರಮನೆ ಚುಂಬಿಸುತ್ತಿರದೆ ಸುಟ್ಟುರಿಗಳ್ ನೆಗೆದತ್ತುವೆತ್ತಲುಂ (ಕುಸುಮಾ. ೮-೧೨೨) : ಅಸಿಯ ಗಸಣಿಯುಂ ದೂವೆಯ ಬೇವಸಮುಂ . . . ಕನಸಿನೊಳಂ ಇಲ್ಲೆನಿಸಿ (ಎಳ್. XI, ಮೊಳಕಾ. ೨೦-೪೦; 1278 ?). **ದುವ್ವೆ** : ೪. ಬೆಂಕಿ; ಅಗ್ನಿ; ಕೆಂಡ: ಕುಂದಿ ನದೀಜಲಂ ಪರಿಯೆ ನಾಲ್ದೆಸೆಯೊಳ್ ಮೃಗತೃಷ್ಣೆ . . . ದುವ್ವೆ ಪೊರಗೆ ಧೂಳಿ ಕಾಮಂ ದಯೆಗೆಟ್ಟು ಕಾಮುಕರನಿರ್ದಿಸಿ ನೋಡಲುದಗ್ರ ತೇಜದಿಂ ಬಂದುದು ಚೈತ್ರ ಮಾಸಂ (ನಳಚಂ. ೩೬). **ದೂಪೆ** : ೩. ಉರಿಯು ಸ್ಥೂಲ ದೂಪೆಯು ಸತ್ತರ ಕರುಳ್ಗಳನವರ ತಲೆಯ ತೋರಣ ದಿಂದಂ ಕರವ ಸುರದಿರ್ಪಾಲ[ದ]ಮರದಿಂ ಭರದಿಂದ ಮಾಟ್ಟ ಬ[ಳ್ಳಿ]ನ ಸರದಿಂ . . . ಅಗುರ್ವಾಗಿರೆ (ಬಂಹರಿ. ೨-೧೧). **೫.** ಸಮಾಧಿ: ಇನ್ನೂ ವ್ಯ ಮೂರರೊಳ್ ದೂಪೆಯಿಂದಳಲಾಯ್ತು ಹನ್ನೊಂದರೊಳ್ ನೆರವಿಯಿಂ ಬಳಗವೆರೆದು ಚೆನ್ನೆಯಿಂ ಪೆಸರೆತ್ತಿ ತಣಿದುಂಡು ಮರೆಯಾಯ್ತು (ಕಾಲಜ್ಞಾನ. ೦೮೫-೪೨೦): **ದೂಹೆ** : ೩. 'ದೂಹೆಗಾಡು' ಪರಾ.

**ದೂವೆ ಮಾಡು** = ಸಮಾಧಿಮಾಡಂ : ನೆನ್ನೆ ಸತ್ತವನನ್ನು ಈಗ ದೂವೆ ಮಾಡಿ ಬಂದರು (ರೂಢಿ). [ < ಸಂ. ಧೂಮ./ತುಳು. ದೂವೆ ]

**ದೂವೆ₂**, ದುರುವೆ (ನಾ). ಹುಲ್ಲು ; ಗರಿಕೆ : ಹಟ್ಟಿ = ದೂವೆಯೊಳ್ ತಟಲಂ ಪೂಟ್ಟ ಕ್ರಿಯೆ (ಶಮದ. ಪರಿ. ೧) ; ಕೆಸಟ್ಟೂಳಾಗದ ಬಸಿಟ್ಟೊಳ್ ಪುಟ್ಟಿದಾಣಿಮುತ್ತುಗಳಿಂ ಬಿಗಿದು ದೂವೆಯು ಕಂಸುಜಾಂ ಪುದಿದು . . . ತಾವರೆಯ ಕೋಶದಂತಿರೆಸವ ಜೋಳದ ಪಾಟಿಯಂ (ರಾಮಾಶ್ವ. ೦೦೦-೨೫). 'ದೂವೆದೊಟ್ಟು' ಪರಾ. **ದುರುವೆ** : ಮೊಸರು ಅಕ್ಷತೆ ಕಲಸಿಯೆಸಳು ದುರುವೆ ಮುಡಿಸಿ (ಕರ್ಣಾಗೀ. ೦೨೫). [ < ಸಂ. ದೂರ್ವಾ ]

**ದೂವೆಕಿಚ್ಚು** 'ದೂವೆಗಿಚ್ಚು' ನೋ.

**ದೂವೆಗಿಚ್ಚು**, ದೂವೆಕಿಚ್ಚು, ದೂವೆಗಿರ್ಚು (ನಾ). ೧. ಬಹಳ ಕಾಲ ವನ್ನು ಹೊಮ್ಮಿಸುವ ಬೆಂಕಿ ; ನಿಗಿನಿಗಿಯಾದ ಬೆಂಕಿ : ಕೆಂಡದ ಮಟಿ ಕೊಂಡಪ್ಪುದಜಾಂಡದಿನಿಳೆ ದೂವೆಗಿಚ್ಚನುಗುಟ್ಟುವಪ್ಪುದು (ಪುಷ್ಪಪು. ೮-೬೫). **ದೂವೆಕಿಚ್ಚು** : ೨. ಆವಗೆಯ ಬೆಂಕಿ : ಪುಲ್ಲ ಕಿಚ್ಚಿನಂತೆ ಪುಂವೇದಂ ದೂವೆಕಿಚ್ಚಿನಂತೆ ಸ್ತ್ರೀವೇದಂ ಇಟ್ಟಿಗೆಯ ಕಿಚ್ಚಿನಂತೆ [ನ]ಪುಂಸಕವೇದಂ (ಧಾತ್ರಸಿ. ೦೧೯-೫). △ **ದೂವೆಗಿರ್ಚು** : ೨. ಲಿಂತೊರ್ವರನೊರ್ವರ್ ಕರಗಸದಿಂ ಸೀಳ್ವ ದೂವೆಗಿರ್ಚ[ಪಾಠಾಂ. ಗಿಚ್ಚ]ನೊಳ್ ಪೂಟ್ವ ತತ್ತಿಬಿಡಟುವ ಪಲ ತೆಱದ ದಂಡನೆಗಳುಂ (ವರ್ಧಪು. ೧೧-೪೬ ವ). [ ದೂವೆ₁ + ಕಿಚ್ಚು ]

△ **ದೂವೆಗಿರ್ಚು** 'ದೂವೆಗಿಚ್ಚು' ನೋ.

**ದೂವೆದೊಟ್ಟು** (ನಾ). (ಅಲಂ) ಕೀಳಾದ ದಾಸಿ; ಹುಲುದಾಸಿ: ಸಿರಿವೆಣ್ಣಂ ದೂವೆದೊಟ್ಟೆಂಗಣೆಯನೆ ಬಗೆದಂ ಮತ್ತಮಾ ವಿಶ್ವವಿಶ್ವಂಭರೆಯಂ ಮೃತ್ಪಿಂಡಮಾತ್ರಾಕೃತಿಯನೆ ಬಗೆದಂ (ಶಾಂತಪು. ೧೧-೦೨೪). [ ದೂವೆ₂ + ತೊಟ್ಟು ]

**ದೂವೆಯಿಡು** (ಕ್ರಿ). ಹೊಗೆಯಾಡು ; ಹೊಗೆಯೇಳು : ಮೆಟ್ಟಿದೊಡೆ ದೂವೆಯಿಡುವುದು . . . ಮುಟ್ಟಿದೊಡೆ ಹೊತ್ತಿ ಹೊಗೆವುದು ಕಟ್ಟುಗ್ರಂ ವಿರಹತಾಪವಂಗಜಕೋಪಂ (ನಳಚಂ. ೦೬೬) [ ದೂವೆ₁ + ಇಡು₁ ]

**ದೂವ್ವಾಡ** (ನಾ). ಖಡ್ಗಯುದ್ಧದ ಒಂದು ವರಸೆ: ನುತಚೌಪಟಂ . . . ಪಂಚಾಯುತಮೆನಿಪ್ಪಯಿದು ನಿಜಗಾಯತ ಮಂಡಿ ದೂವ್ವಾಡ [ಪಾಠಾಂ. ದುವಾಡ, ದೂವಾಡ]ವೆಕ್ಕಸರ . . . ಚಟಯೆಂಬ ಚತುರ ಠಾಣದ ತರಹರದೊಳು ಹಲಗೆಯ ಮಗ್ಗುಲೊಳು ಖಡ್ಗವಂ ಜಡಿದರು (ಸೋಮಮಹ. ೩-೦೪). [ ? ]

**ದೂಷಕ** (ಗು). ೧. ಬಯ್ಯುವ ; ನಿಂದಿಸುವ ; ತೆಗಳುವ: ದೀಪಿಸಲು ಶಿವಭಕ್ತಿಸತ್ಪಥ ಪಾಪಸಂಕುಳವಳಿಯೆ ದೂಷಕ ತಾಪಸರು ತಾವ್ಪೆಸಱಿಂ ಸಾಷ್ಟಾಂಗದಿಂ ನಮಿಸಿ (ಬಸವಪು. ೪೪-೩೪). ೨. ಕೆಟ್ಟದ್ದನ್ನು ಮಾಡುವ ; ಕೆಡುಕನ್ನುಂಟುಮಾಡುವ ; ದುಷ್ಟತನದ. ೩. ಹಾಳುಮಾಡುವ ; ಅಪಮಾನಗೊಳಿಸುವ ; ಭ್ರಷ್ಟಗೊಳಿಸುವ. (ನಾ). ೪. ನಿಂದಿಸು ವವನು ; ದೋಷಾರೋಪಣೆ ಮಾಡುವವನು ; ತೆಗಳುವವನು ; ನಿಂದಕ : ಜಂಗಮಪ್ರಸಾದ ದೂಷಕರ ಭಂಜಿಸುತ ಯಮನಧಿಕನಾರಕ ಪುಂಜದಲಿ ಕೆಡಹುವನು(ಬಸವಪು. ೫೬-೨೨) ; ದೂಷಕಸಂಕುಳಶರನಿಧಿಶೋಷಣ ಕಳಪತ್ರಿಯಾಂಡಭಕ್ತಿಂಗತಿಸಂತೋಷದಿ ಗಣಪದವಿತ್ಸಹಿಭೂಷ ಶಿವಂ (ಶ್ರೀಕೃಷಿ. ೪೬-೧೫). ೫. ದುಷ್ಟ ; ನೀಚ : ದೂಷಕನವನೊಬ್ಬ ದೇಶವ ಕೊಟ್ಟರೆ ಆಸೆಮಾಡಿಯವನ ಹೊರೆಯಲಿರಬೇಡ (ಬಸವ. ೦೩೬); ದಾಸೋಹ ವನಱಿಯದ ದೂಷಕನು ನಾನಯ್ಯ (ಉರಿವ. ೩೪-೪೨). ೬. ಹಾಳು ಮಾಡುವವನು; ನಾಶಮಾಡುವವನು : ಪಾತಕನು ಪತಿತನು . . . ದೂಷಕನು ದುರ್ಜನನಪ್ರಯೋಜಕನು ನೀತಿಹೀನನು (ಕುಮಾವ್ಯಾಉ. ೪-೪೦). [ ಸಂ. ]

**ದೂಷಣ** (ನಾ). ೧. ನಿಂದೆ ; ತೆಗಳಿಕೆ ; ಖಂಡಿಸುವುದು : ಪಟು–ವಸ್ತ್ರ ವಿಶೇಷಂ; ದೂಷಣಂ; ನಾಯ ಸೋವುವುದು; ಲೋಹದ ಘಟ್ಟ (ಶಮದ. ಪರಿ. ೦). ೨. ಅಪಮಾನ ; ಅಪಮರ್ಯಾದೆ : ನಿಮ್ಮ ಮಗ ಕುಲಭೂಷಣನಲಾ ಧರ್ಮಸುತನಾತನಲಿ ಹುರುಡಿಸುವ ರೋಷವುಂಟೇ ತನಗೆ ನಿಮಗಿದು ದೂಷಣವೆ ತಾನಲ್ಲ(ಕುಮಾವ್ಯಾಉ. ೨೦-೬೭) ; ಅನುಜನಂಗನೆ ಗಳುಪಿ ವೈರವ ಕೊನರಿಸಿದೆಯಾತನಲಿ ತಾನಿದು ನಿನಗೆ ದೂಷಣವಲ್ಲವೆ (ತೊರವೆರಾ. ೪-೪-೦೦) ; ಶಿವಶಿವಾ ದೂಷಣಕೆ ಬೆದಱಿ ಮಾಡಿದ್ದಿರಿ ಕೃತವ ಚಾರವಿದ್ಯೆಗಳ (ಕೃಮಿಥಾ. ೨-೭೦). ೩. ಕೆಡಿಸುವುದು; ದುರುಪಯೋಗ

ಪಡಿಸುವುದು: ಅದು ಸಾಧನ ದೂಷಣ ಪ್ರಯೋಗಾನ್ಯಥಾನುಪತ್ತಿಯಿಂ ಬಹಿರರ್ಥಸಿದ್ಧಿಯಕ್ಕುಂ (ಅರಿಪು. ೨-೧೦ ವ). ೪. ನಿಂದಕ; ಖಂಡಿಸುವವನು: ಶಿವಗುಣದೂಷಣಾಹಿತಕಾರ ಜಂಗಮತೋಷಣಾಚಾರ . . . ಬಸವಕುಮಾರ ಮಾಂ ತ್ರಾಹಿ (ಬಸಪು. ೨೦-೩೮). ೫. ದೋಷ; ತಪ್ಪು: ವರಯತಿಗೆ ಭಂಗಮುಂ ತಾರದೆ ನಿಜಾನ್ವಯಕ್ರಿಯೆಗಳ್ಗೆ ದೂಷಣಂ ಬಾರದೆ . . . ಕಾವ್ಯಪ್ರಬಂಧಮುಂ ಶಾರದೆಯ ಕರುಣದಿಂ ಪೇಳ್ವೆ (ಕ್ಷಮಿಚ. ೧-೬): ಇದು ಭೂಷಣವೋ ದೂಷಣವೋ ಈ ಬಿನದಿಗೆ ಕುಹಕವೆ ತೋಷಣವೋ (ಗಣೇಶ. ೪-೯೩). ೬. ಪಾತಕ; ಪಾಪ. ೭. ರಾಮನಿಂದ ಹತನಾದ ಒಬ್ಬ ರಾಕ್ಷಸನ ಹೆಸರು: ಎಚ್ಚು ಗಗನಕೆ ದೂಟಿಸಿದ ದೂಷಣನ ಮಸ್ತಕವ (ತೊರರಾ. ೩-೬-೧೮). [ಸಂ.]

**ದೂಷಣಿಕ** (ಗು). ಹೀಯಾಳಿಸುವ; ನಿಂದಿಸುವ: ದೋಷದಾ ಕಥೆಯಲ್ಲ ದೂಷಣಿಕಕಥೆಯಲ್ಲ ಭಾಸುರೋಜ್ಜ್ವಲ ಜಗದೀಶನ ಕೃತಿಯು (ಅದಿಶ. ೨-೫).
[ಸಂ.]

**ದೂಷಣೆ** (ನಾ). ೧. ನಿಂದಿಸುವುದು; ತೆಗಳಿಕೆ: ಪರರ ದೂಷಣೆಯಿಂದ ಇಂಥಾ ಅವಸ್ಥೆಯು ನಿನಗೆ ಬಂದ ಹಾಗೆ ಕಾಣುತಿದೆ (ನೀತಿಚಿಂ. VI, ೧೯): ದೋಷ ಮಾಡಿದವನಿಗೆ ದೂಷಣೆ ತಪ್ಪದು (ಗಾದೆ). ೨. ಅಪವಾದ; ದೋಷಾರೋಪಣೆ: ನಮ್ಮ ಲಂಕಸಾನಿ ಮಾಡಿದಿರಿ ಅಂತ ನಮಗೆ ದೂಷಣೆ ಕೊಡುತ್ತಾರೆ (ಮುಂಬವ್ಯಾ. ೪೦ ಪ್ರಸ್ತಾವನೆ). [ಸಂ. ದೂಷಣ]

**ದೂಷಿ** 'ದೂಸಿ' ನೋ.

**ದೂಷಿಕೆ** (ನಾ). ಕಣ್ಣಿನೊಳಗಿರುವ ಕೊಳೆ; ಪಿಸುರು; ಗೀಜು.
[ಸಂ. ದೂಷಿಕಾ]

**ದೂಷಿತ** (ಗು). ೧. ನಿಂದೆಗೊಳಗಾದ. ೨. ಹಾಳಾದ; ಭಗ್ನವಾದ. ೩. ಕೆಟ್ಟುಹೋದ; ಭ್ರಷ್ಟವಾದ. (ನಾ). ೪. ದೋಷವುಳ್ಳುದು; ದೋಷಯುಕ್ತವಾದುದು: ಕಪೋಲಕ್ಕೆ ಉಪಮಾನ ಕೊಡುವುದಾದರೆ . . . ಅದಕ್ಕಿಂತ ಎಷ್ಟೋ ಹೀನವಾದ, ಕಲಂಕದಿಂದ ದೂಷಿತವಾದ ಚಂದ್ರಬಿಂಬವನ್ನು ಹೇಳಿದರೆ ಸರಿಯೆ? (ಧ್ವನ್ಯಾಲೋ. ೧೧೯ ಅಡಿಟಿ). ೫. ಪಾಪ; ಪಾತಕ: "ಕಿಲ್ಬಿಷಂ. . . . ದೂಷಿತಮುಘಮೆನಲ್ . . . ಪಾಪಮಕ್ಕುಂ" (ಮಂಗರಾ. ೧೧೬-೨). [ಸಂ.]

**ದೂಷಿತಾನ್ನ** (ನಾ). ಬೇರೊಂದು ವಸ್ತುವಿನ ಸಂಪರ್ಕದಿಂದ ಕೆಟ್ಟುಹೋದ ಆಹಾರ; ಮಲಿನವಾದ ಆಹಾರ: ದೂಷಿತಾನ್ನವೆಂದರೆ ಶುದ್ಧವಾದ ಆಹಾರಕ್ಕೆ ಶುದ್ಧವಾದ ಮತ್ತೊಂದು ವಸ್ತುಸಂಪರ್ಕವಾಗಲೀ ಅಶುದ್ಧವಾದುದರ ಸಂಪರ್ಕವಾಗಲೀ ಆಗುವುದು. ಹಾಲಿಗೆ ಹುಳಿ, ಪಾಯಸಕ್ಕೆ ಉಪ್ಪು ಬೆರೆದರೆ, ಹುಳಿ ಉಪ್ಪು ಎರಡೂ ತಿನ್ನುವ ಪದಾರ್ಥವೇ ಆದರೂ ಹಾಲೂ ಪಾಯಸವೂ ದೂಷಿತವಾಗುವುವು (ಆಯುರ್ಧ. ೨೧೮).
[ದೂಷಿತ + ಅನ್ನ₃]

**ದೂಷಿತೆ** (ನಾ). ೧. ದೂರುಂ ಹೊತ್ತವಳು; ಅಪವಾದವನ್ನು ಹೊಂದಿದವಳು: ಅಪವಾದಂ ಪೊರ್ದಿದಿಂ ಬಟಿಯಂ ದೂಷಿತೆಯಾದೀ ಮಡದಿಯಂ ಬಿಟ್ಟಲ್ಲದೆ ಮಾಣೆಂ (ರಾಮಾಶ್ವ. ೨೩-೧೧). ೨. ಪಾಪ ಮಾಡಿದವಳು; ಪಾಪಿಷ್ಠೆ. 'ದೋಷದೂಷಿತೆ' ಪರಾ. [ಸಂ. ದೂಷಿತಾ]

**ದೂಷಿಸು** (ಕ್ರಿ). ೧. ನಿಂದಿಸು; ತೆಗಳು: ಮಹಾಪುರುಷರು ನಿರ್ವಹಿಸುವ ಮೂಲೋತ್ತರ ಗುಣಂಗಳಂ ತದ್ಬಲಹೀನರುಮಲ್ಪಸತ್ವರುಂ ನಿರ್ವಹಿಸಲಾರದೆ ಗುರುಕುಳಮಂ ದೂಷಿಸುವರು (ಚಾವುಂಪು. ೩೩); ಹಾರಂ ಕಣ್ಬನಿಯಿಂದಾದತ್ತುಟಿದ ಭೂಷೆಯಂ ದೂಷಿಪವೊಲ್ (ಚಂದ್ರಪು. ೫-೦೨೮): ದೂಷಿಸಿದಡಾ ವೀರಭದ್ರನು ಪೂಷನೆಂಬನ ಹಲ್ಲನಾದುರ್ಚಿನೆ (ಬಸಪು. ೫೪-೫೨): ಈ ತೆಱದಿಂ ದುರ್ಜನರಂ ದೂಷಿಸಿ ನೀತಿನಿಪುಣರೆನಿಸುವ ಸಜ್ಜನರಂ ಪ್ರೀತಿ ಮಿಗಿಲು ತುತಿಯಿಸಿ (ಜಯುಸಾ. ೧-೨೩). ೨. ವಂಚಿಸು; ಅನ್ಯಾಯಂ ಮಾಡು: ಭರತ ಬಂದವ ಬಂದ ಹದನೇನಱಿಯಬಾರದು ಜೀಯ . . . ಧರೆಯ ದೂಷಿಸಿ ಕೊಂಡುದಲ್ಲದೆ ಧುರಕೆ ಬಹುದಿದು ಗುಣವಯೆಂದುಬ್ಬರದ ರೋಷಾವೇಶದಲಿ ಸೌಮಿತ್ರಿ ಗರ್ಜಿಸಿದ (ತೊರರಾ. ೨-೬-೨೦). [ದೂಷಣ + -ಇಸು₃]

**ದೂಷ್ಯ** (ಗು). ೧. ಕೆಡುವ; ಕೆಟ್ಟುಹೋಗಬಹುದಾದ. ೨. ದೂಷಣೆಗೆ ಅರ್ಹವಾದ; ಖಂಡನೆಗೆ ಯೋಗ್ಯವಾದ; ನಿಂದ್ಯ: ಸಮುಚಿತಕೃತಿ ದೋಷದೂಷ್ಯಮಾರ್ಗಕ್ರಮಪರಿಭಾವಿತಚಿತ್ರವೃತ್ತಿಯಪ್ಪೊಂಗಮುಳಿನ ಕವಿತಾಗುಣೋದಯಶ್ರೀ ಸಮನಿಸುಗುಂ ಸತತಾಭಿಯೋಗದಿಂದಂ (ಕಾವ್ಯಾವ. ೪೯೬). ೩. ಕೆಟ್ಟ; ದುಷ್ಟತನದ. (ನಾ). ೪. ನಿಂದೆ; ತೆಗಳಿಕೆ: ಜನರ ಪರಿಪರಿ ದೂಷ್ಯ ಭೂಷ್ಯವ ನೆನೆನೆನೇ ತಮ್ಮಡಿಯ ಸಂಭಾವನದ ಬಲುಹಿರಲಾವ ಭಯಮೇಕೆಂದು ಕೈಮುಗಿದ (ಗದುಭಾ. ೦೭-೬೪). ೫. ನಿಂದ್ಯವಾದುದಂ; ತೆಗಳಿಕೆಗೆ ತಕ್ಕುದು: ನಿರುಪಮಗಂಧರ್ವಗತಿಸ್ವರಾದಿಕಳಾಗುಣಂ ಚತುಃಷಷ್ಟಿವಿಧಂ ದೊರೆಕೊಳ್ಳದುದೆಲ್ಲಿ ಕಳಾವಿರುದ್ಧದೋಷಂ ವಿಶಿಷ್ಟಜನತಾದೂಷ್ಯಂ (ಕವಿರಾ. ೧-೧೦೬); ಧುರದೊಳ್ಪಱಿಮುಱಿಯಾಡುವ ತೆಱದಿಂದುಱದಿಱಿದನೆಂಬ ನಿಯಮಮಂ ದೂಷ್ಯಂ (ಶಮದ. ೧೯ ಪ್ರಯೋ): ಲೌಕಿಕಕ್ಕಿದು ದೂಷ್ಯವೆಂದವರುಗಳನೊಡಬಡಿಸಿ (ತೊರರಾ. ೦-೩-೬). ೬. ಬಟ್ಟೆ; ವಸ್ತ್ರ. ೭. ಹತ್ತಿ. ೮. ಗುಡಾರ; ಡೇರೆ: "ದೂಷ್ಯಂ, ಸ್ಥೂಲಂ . . . ಕೇಳಿಕಾ—ಈ ೫ ಗುಡಿ" (ಅಭಿಧಾ. ೬೪-೨೯೭); "ಚಿತ್ರಕುಟಿ . . . ದೂಷ್ಯಮೆನೆ ಗುಡಿಯಕ್ಕು" (ಮಂಗರಾ. ೩೫-೨೭). ೯, ೮: ನಡೆದು ಬಟಿಯಂ ಕ್ರೋಶದ್ವಿತಯ ಮಾತ್ರದೊಳ್ ಪ್ರಸಿದ್ಧದೂಷ್ಯಮಾಗಿಯುಮಂ ದೂಷ್ಯಮುಮಂ . . . ವಿಶಾಲಪರಿಧಿಯಾಗಿಯುಂ ಅವಿಶಾಲಪರಿಧಿಯನಿಸಿ ಗೃಹಮಹತ್ತರಂ ಮುನ್ನಮೆ ಸಮೆದುದಂ ಪ್ರಸ್ಥಾನಶಿಬಿರಮಂ ಪೊಕ್ಕು (ಚಂದ್ರಪು. ೧೧-೦೭ ವ). [ಸಂ.]

**ದೂಸ₁** (ನಾ). ಕಾಡುಬತ್ತ; ನೀವಾರ: "ದೂಸಂ ತೃಣಧಾನ್ಯ(ಮಂ) ಮಟವೀಸಂಭವಮದೆ ಗವೇಧುಕಂ ನೀವಾರಂ" (ವಸ್ತುಕೋ. ೯೩-೦೯).
[←ತೆಲು. ದೂಸ]

**ದೂಸ₂, ದೂಸು** (ನಾ). ೧. ಬಟ್ಟೆ; ಅರಿವೆ: "ದೂಸ (ಸಂ) – ದೂಷ್ಯ = ವಸ್ತ್ರಭೇದ" (ಕರ್ನಕೋ. ೨೦). 'ದೂಸಿಗ' ಪರಾ. ೨. ಗುಡಾರ; ಡೇರೆ ಪುದಿಯ ಕವಿಲ್ದ ಕೇಸರದ ದೂಸಮಶೋಕೆಯ ವೀಣೆಯಂ ಪ್ರಿಯಾಳಿದ ಗಂಡಿ . . . ಒಪ್ಪೆ ತೋಱಿದುವು ಮನೋಜರಾಜಶಿಬಿರಂಗಳೆವೆಂಬಿನೆಗಂ ವನಾಳಿಗಳ್ (ಚಂದ್ರಪು. ೬-೩೨); ದೇಶಾಧಿಪರ ಬೆಳ್ಗೊಡೆಗಳು ನಕ್ಷತ್ರರಾಶಿಯಂತೆಸೆಯೆ ಮಧ್ಯದಲಿ ಕೇಶವರಾಯನ ದೂಸ ರೋಹಿಣಿಯ ಪ್ರಾಣೇಶನೆಂಬಂತೆ ರಂಜಿಸಿತು (ಮೋಹಚ. ೨೬-೩೦): ಹಳದಿ ಬಿಳಿಯ ಮುಂತಾದ ಪಟ್ಟೆಗಳಿಂದ ಚಲುವೆತ್ತ ಧೂಸವನು ಬಿಗಿಸಿ (ಜಿನರಾ. ೬-೫೮). ದೂಸು: ೨. ಕಟ್ಟಕಡೆಗಳೊಳು ಜಯವಿಜಯರ ದೂಸು ಕಟ್ಟಾಯತದೊಳೆತ್ತಿದುವು (ನಾಗಕು. ೦೫-೦೦೫); ಧೊರೆ ಮುಂದರ ತನ್ನ ದೂಸ ತೊರೆಯೊತ್ತಿಲಿ ಹುಯಿಸೆ ದೊರೆದೊರೆಗಳ ದೂಸು ಇರದೆ ಸುತ್ತಲು ಹೊಯಿದವಾಗ ಪಡುವ ದಿಕ್ಕಿಲಿ ದಳವಾಯಿಯುಳಂಪನ ಕಡು ದೊಡ್ಡ ದೂಸು ತಾನೆತ್ತುಬಿಡದಾ ದೂಸ ಬಳಸಿ ಗುರಿಕಾಱರ ಗಡಣ ಗಾಮ್ಮತಿಗಳ ದ್ದಾವು (ಕ್ಷಾವಕ. ೦೨-೯೭); ಬಿಟ್ಟ ಬೀಡಿನ ನಡುವೆ ಗಗನವ ಮುಟ್ಟಲೆಸೆದಿಹ ದೂಸಿನೊಳು ವಲವಿಟ್ಟು ಕುಳಿತಿಹನು (ಜನಭಾ. ೯೭-೨೦); ದೂಸಿಗತಿಸಂತೋಷದಲಿ ಪ್ರಾಣೇಶನನು ಕರವಿಡಿದು ಗುಣವಾರಾಶಿ ನಡೆತಂದಮಲತರ ಸಿಂಹಾಸನದ ಮೇಲೆ . . . ಕುಳಿತಳು (ಜನಭಾ. ೯೯-೦೦): ಇಂತು ಮರಾಟರೊಳ್ ಪ್ರಸಿದ್ಧರಾಗಿರ್ದ . . . ಮಹಾಶೂರರಂ ಕದಿದವರಾನೆ ಕುದುರೆ ದೊಕ್ಕಸ ದೂಸು ದುಮಾನ ಬಿರುದು ಮುಂತಾದವಂ ಕೊಂಡು (ಸಕವ್ಯ. ೩ ಪ್ರಸ್ತಾವನೆ). [<ಪ್ರಾ. ದೂಸ./ಸಂ. ದೂಷ್ಯ]

**ದೂಸಕ** (ನಾ). ೧. ನಿಂದಿಸುವವನು ; ತೆಗಳುವವನು; ದೂಷಕ : ದೂಸಕರ ದೂಱುಗೇಳ್ದುಂ ಸಾಸಿಗನೆನ್ನಳವನಱಿದುಮಱಿಯದೆ ಪಿರಿದುಂ ದೋಸಿಗನಾದೊಡೆ ಕೊಲ್ಲುಂ ಪೇಸುವನಲ್ಲಂ ಸಮುದ್ರವಿಜಯನಜೇಯಂ (ಅರ್ಧನೇ. ೫-೧೪); ಇನ್ನುಇಳಿ ತಾವು ಮಾಡಿತನೆಂದು ಭರವಸದೊಳು ದೂಸಕರು ತಮ್ಮ ನಿಳಯಕ್ಕೆ ತಿರುಗಿದರು (ಸೌಂದರ್ಯ. ೧೨-೭೦): ದೋಷಿಯಲ್ಲದನೆನ್ನನು ದೋಷಿಯೆಂಬಾ ದೂಸಕರಾ ದೂಱುಗೇಳ್ . . . ಸೆಱೆವನೆಯೊಳಿಕ್ಕಿದಿರಿ (ನೇಮಿಸಂ. ೮-೧೧೪) ; ಬಿಟ್ಟು ರಸವನುಱೆ ಕಸವ ಪಿಡಿವ ಧಾರೆವಟ್ಟಲ ಪೋಲ್ವ ದೂಸಕರು ಮಿಟ್ಟನೆ ಮಿಡುಕದಾಲಿಸಿದೊಡೀ ಕೃತಿ ಝುಮ್ಮುದಿಟ್ಟದೆ ಕಲ್ಲೆರ್ದೆಗವರ (ನಾಗಕು. ೧-೭೧). ೨. ತೆಗಳಿಕೆ ; ನಿಂದೆ: ಒಡೆಯನೆ ಬಂದ ಸೌಜನ್ಯವ ಮಱೆವುದು ಬಿಡುವುದು ಪಾಸಿ ದೂಸಕವ (ವರ್ಧಕ. ೬-೬೩). [ <ಸಂ. ದೂಷಕ ]

**ದೂಸಗ** (ನಾ). = ದೂಸಿಗ : "ವಸ್ತ್ರಕ್ರೀತನೊಳು ದೂಸಗನುಮಕ್ಕು" (ಶಕರ. ೫೦) ; ಬೀಳದುಪ್ಪಟ ರಾವಣಮೆಚ್ಚು ಗಜಾವಳಿ ಮಂಡೋದರಿ ಮೆಚ್ಚಿನ ಸೀರೆಯ ಮಾಳಿಗೆಗಳಂ ಬಳ್ಳಿಳನೆ ಬಳಸಿದುದು ದೂಸಗರಾಸುರ ದಿಂದೋಸರಿಸೆ (ಕುಮುದಾ. ೧೪-೩೮). [ ದೂಸ್ತ + – ಗ ]

**ದೂಸಣ**, **ದೂಸಣೆ** (ನಾ). ನಿಂದೆ; ತೆಗಳಿಕೆ; ದೂಷಣೆ : ದೂಷಣ, ದೂಸಣ; ಅನಿಮಿಷ, ಅನಿಮಿಸ (ಶಬ್ದಾನು. ೦೩೮ ಪ್ರಯೋ). **ದೂಸಣೆ** : ಷಕಾರಕ್ಕೆ–ಅನಿಮಿಷ–ಅನಿಮಿಸ . . . ದೂಷಣ–ದೂಸಣೆ (ಶಮದ. ೨೫೩ ಪ್ರಯೋ). [ <ಸಂ. ದೂಷಣ ]

**ದೂಸಣೆ** 'ದೂಸಣ' ನೋ.

**ದೂಸರ್** 'ದೂಸಱು' ನೋ.

**ದೂಸರ** (ನಾ). ೧. ಬೂದಂಬಣ್ಣ ; ಕಂದುಬಣ್ಣ ; ಮಾಸಲುಬಣ್ಣ ; ನಸುಬಿಳಿದು : "ದೂಸರ–ಧೂಸರಂ ಬೂದುಬಣ್ಣ" (ಶಬ್ದಕೋ. ೨೦) ; ನವಸುರಭಿಕುಸುಮ ಪಾದಪಪ್ರಸೂನಮಂಜರೀರಜಃಪುಸರದೂಸರೋಪ ಕಂಠದೊಳ್ (ವರ್ಧಮಾ. ೫-೬೨ ವ) ; ಧಕಾರಕ್ಕೆ ದಕಾರಂ–ಔಷಧ–ಔಸದ . . . ಧೂಸರ–ದೂಸರ (ಶಮದ. ೨೫೫ ಪ್ರಯೋ). ೨. ಮಲಿನತೆ; ಕೊಳಕು; ಮಾಲಿನ್ಯ : ಕುಂದಣದ ಪುತ್ಥಳಿಯು ದೂಸರ ಕೆಡಲೆಂದು ಪುಳಿದೊಳಿವಂದದಿಂದವೆ ಕೋಮಲೆಯರು ಜಳಕವ ಮಾಡಿಸಲೆಸಗಿದರು (ಶ್ರೀಪಾಲ. ೨-೪೯) ; ಜಗದೊಳಗೆ ದೂಸರವು ಪರಿಕಿಸಿ ನಗೆನಗೆಯೊಳಿವಂಗೈದಿ ಕುಂದಿತು ಜಗಳದಲಿ ಭುಜಶೌರ್ಯ ಪ್ರಾಣಕ್ಕೊದಗಿತುಪಹತಿಯು (ಅಂಬಿಕಾ. ೪೪-೧೦).

**ದೂಸರಮಂಗೆಯ್** = ಮಲಿನಗೊಳಿಸಂ : ಪೂಸರಲನ ಜಸಮಂ ದೂಸರಮಂಗೆಯ್ದನ . . . ನುತಿಸಿದನವನಭವನ (ಉದ್ಯಕೇ. ೬-೧೯).

**ದೂಸರಮಾಗು** = ಬೂದಂಬಣ್ಣದಿಂದ ಕೂಡು: ಅಗಳ್ ದೂಸರ ಮಾದುದು ಗಗನಂ (ಲೀಲಾವ. ೬-೧೦೬): ತುಂಬಿಗಳಚ್ಚಪೂಗಳಿಂ ದೂಸರ ಮಾದ ಚೊಲ್ಲೆಯದ ಕಂಪಿನೊಳೋಕುಳಿಯಾಡೆ ಸಿಂಗರಂ ದೇಸೆಯೊಳೊಂದಿ ಕೋಱು ತಳರ್ದಂ ನನೆಯಂಬನದೊಂದು ಚೆಲ್ವಿನಂ (ಅಭ್ಯಂಶಾ. ೯೦) ; ಆ ಪೊಳ್ತಗೆ ಪಾಸರ ದೂಸರಮಾಯ್ತು (ಉದ್ಯಕೇ. ೩-೭೩).

[ <ಸಂ. ಧೂಸರ ]

**ದೂಸರಂದಾಳ್** (ಕ್ರಿ). ಮಂಕಾಗು ; ಬಣ್ಣಗೆಡು: ಪುದಿದು ಕಂದಿನೊಳೊಂದಿ ಚಂದಂಗೆಡುತ್ತೆ ಮುಗಿವುದು ಮಾಸಿ ದೂಸರಂದಾಳ್ದು ಮುನ್ನಾಡೆ ನಾಣ್ಚದೆ ಕೊಱತೆವಡೆದಮರ್ದುಗಯ್ಯನಂ ಪೊಂದಾವರೆಯನಮಳಮಣಿಮುಕುರಮಂ ಪದಪಿನಿಂದೇಳಿಪ್ಪ ಟಾಳಿಪ್ಪ ಜಾಳಿಪೊಂದದಟನಿಂದೇಳಿಸಿತು ಸುದತಿಯಾ ಮಿಱುಮಿನುವ ವದನ (ಉದ್ಯಕೇ. ೨-೫೫). [ ದೂಸರ + ತಾಳ್$_1$ ]

**ದೂಸರಿಗ** (ನಾ). ಕಾರಣನಾದವನು ; ನಿಮಿತ್ತನಾದವನು : "ಹಯುನ್, ಹಯಾನಃ . . . ಹೇತ್ರಾ ಈ ೬ ದೂಸರಿಗಂ" (ಶಾಶಕ್ಯ. ೨೦೬). [ದೂಸರ್ (<ದೂಸಱು) + – ಇಗ ]

**ದೂಸರು** 'ದೂಸಱು' ನೋ.

**ದೂಸಱು**, **ದೂಸರ್**, **ದೂಸರಂ** (ನಾ). ೧. ಕಾರಣ; ನಿಮಿತ್ತ ; ನೆಪ; ನೆವ : "ದೂಸಱಿಂದು ತನ್ನ ದೆಸೆ" (ಕಕಶಾ. ೨೮-೬೦೨) ; ಧೂಳೀಧೂಸರ ವರರತ್ನಾಳಿಗಳಂ ಕಂಡ ದೂಸಱಿಂದಂ ಧರಣೀಪಾಳಕಮುನಿವರ್ ವಂಚವಮಾಳದೊಳಣಮಾಗರಲ್ತೆ ಬುದ್ಧಿಪ್ರಾಪ್ತರ್ (ಆದಿಪು. ೦೫-೩೮) ; ಎನ್ನಯ ದೂಸಱಿನೆನ್ನ ಕರ್ಮದಿಂ ಪಗೆವರನಕ್ಕಟಾ ನಿಮಗವಿಸಾಯಿರ ವಾದುದೆ ಕುಂಭಸಂಭವಾ (ಪಂಪಭಾ. ೦೩-೫೬); ಲೋಕಾನುಗ್ರಹಂಗೆಯ್ವ ದೂಸಱಿನಾಂ ಬಂದುದಯಂಗೆಯುತ್ತವಿರಲ್ (ಕಾದಂಬ. ೬೧೦) ; ಪೊಡೆವಡೆ ಪರಸದೆ . . . ಮುಂದೆ ನಿಂದರಂ ಕಾಣದೆ ತಕ್ಕೆಡೆಯೊಳ್ ಕಡೆಗಣಿಸುವ ನೃಪವಿಡಂಬಮಿವು ಲಕ್ಷ್ಮಿ ನಿನ್ನ ದೂಸಱಿನಲ್ತೇ (ಗದಾಯು. ೯-೮) ; ಜಾನಕಿಯ ದೂಸಱಿಂ ಲಂಕಾನಾಥಂ ದಾಶರಥಿಯ ಕೈಯೊಳ್ ಮಡಿಗುಂ (ಪಂಪರಾಮಾ. ೩-೨೩); ಭಕ್ತನಂ ಭವಿಯೆಂದ ದೂಸಱಿಂದಪ್ಪುದಿದು (ಮದೇರ. ೧-೧೨೬) ; ಎನಗೆ ನಿಮ್ಮಯ ದೂಸಱಿಂದಾಯ್ತನಿತು ಸಭೆಯಲಿ ಮಾನಹಾನಿ (ಕುಮ್ಮಾ. ೧೧-೬) ; ನಂದಿಸು ನಂದಿಸು ನಿನ್ನಯ ಕರುಣದ ನಂದನನಾಸಱ ಬೇಸಱ ದೂಸಱನೀಸರ ಮೇಲುಜದೆ (ಉದ್ಯಕೇ. ೬-೨೮). ೨. ಅಪವಾದ; ನಿಂದೆ; ತೆಗಳಿಕೆ: ಹುಲುಮನುಜ ರಜಕನಾಡಿದ ದೂಸಱಂ ನೆನೆದು ಕುಲಪತ್ನಿಯಂ ಬಿಡುವ ಹದನಾವುದಱಟ (ಜೈಮಿಭಾ. ೧೯-೫೩). ೩. ದಿಕ್ಕು ; ದೆಸೆ : "ದೆಸೆಯೆಂದೆನ್ನಲ್ ದೂಸಱದು" (ಶಬಿಶಂ. ೨೫೩) ; ಆ ಸಮಯದಿ ಮೂಡ ಪಡುವಣ ಖಂಡದ ದೂಸಱಿಂದಿಬ್ಬರೆಯ್ತಂದು ಆ ಸೀಮೆ ವಶವಾದುವೆಂದು ತಂದೋಲೆಯ ಭೂಸುದತೀಶಗಿಕ್ಕಿದರು (ಭರತ. ೩೬-೬೪). ೪. ಸ್ಥಿತಿ; ಇರುವಿಕೆ : ದೂಸಱದೆತ್ತಣನಾಯ್ತು (ರಾಮಾಶ್ವ. ೨೦-೦೩). **ದೂಸರ್** : ೧. "ಕಾರಣಂ = ದೂಸರ್" (ಶಾಶಕ್ಯ. ೨೪೦) ; ಚೆನ್ನಲ್ಲದೆಂದು ಕೆಲರ್ಕೈದಿದರ್ ಬದ್ದಿನರ್ ಬಿನ್ನನೆಯ ದೂಸರ್ಗಳೊಂದೊಂದ ನುಡಿದು (ಶಾಖೂರ. ೧೮೦-೪೦೬). **ದೂಸರು** : ೧. ತರುಣೀ ನಿನ್ನಯ ದೂಸರಿನುರುವುವ ಮದನಾಗ್ನಿಕೀಲದಿಂ ಸೀದುರೆ ಸೀಕರಿಪೋದ ವರುಣನೆನ್ನಂ ಕರುಣದೆ ನೀಂ ವರಿಸಿ ತಂಪಿಸೆಂದೊರೆಯೆಂದಂ (ದಮಸ್ಸ. ೩-೦೬೭) ; ಬೀಳೇಳುಗಳಿಗನುಪೊ ಗೆಯ್ಯೆಯೋ ದೂಸರೇಂ (ಶಾಖೂರ. ೫೮-೯೪). [ ದೇ.೫ ತೆಲು. ದೂಸರಿ ]

**ದೂಸಿ**, **ದೂಷಿ** (ನಾ). [ನಾಟ್ಯ] ನರ್ತನದ ಒಂದು ಭಂಗಿ: ದೂಸಿಯುಂ ವಿಷಮದೂಷಿಯುಮೆನಿಸುವಡಹುಗಳನು . . . ತುಳಿಲೆನಿಪ್ಪವು ಲೇಸು ವಡೆಯೆ ತಾಂಡವಮನಾಡುತಿರ್ದಳು (ಶೀವಾ. ೩-೪೮). **ದೂಷಿ**: ಲಾಗನು ಲಾಗು ಬೀಸುಗಾಲು ದೂಷಿ ವಿಷಮದೂಷಿ . . . ಮೊದಲಾದವಗಡ ದಡವುಗಳನಳವಡಿಸಿ (ವಿಕ್ರಮಾ. ೦೬ ವ). [ <ಸಂ. ಧೂಸೀ ]

**ದೂಸಿಗ** (ನಾ). ಬಟ್ಟೆಯ ವ್ಯಾಪಾರಿ; ಜವಳಿ ವ್ಯಾಪಾರಿ: "ದೂಸಿಗನೆನಲ್ ಸೀರೆವರದಂಗೆ ನಾಮಂ" (ಅಭ್ಯಕ್ಯ. ೩೪); ಬಚ್ಚರ ದೂಸಿಗರ ನಿಯೋಗಿಗಳ ಅಗ್ಗಳಿಯಲಿಯರಪ್ಪ ಸೂಳೆಯರ ಸಾಮಂತರ ಕಸವರಂಗಳೆಲ್ಲಮಂ ಕಳ್ದು (ವಡ್ಡಾರಾ. ೦೨೩-೪) ; ದೇವಕಾರ್ಯ್ಯಮಂ ದೂಸಿಗ ಕೇತಿಸೆಟ್ಟಿ ಬಿನ್ನವಿಸೆ (ಶಾ. I. ೦೬-೨೬ ; 1056) ; ದೂಸಿಗರಂಗಡಿಯಂ ಪೊಕ್ಕು . . . ವಸ್ತ್ರನಿಕರಮನೋಸರಿಸದೆ ಸೂಱೆಗೊಂಡು (ಧರ್ಮಾಮೃ. ೨-೩೩) ; ಒಪ್ಪಿವರಲ್ಲಿ ದೂಸಿಗರ್ದೇಸಿವೆತ್ತು (ಶಬ್ದರಾ. ೮-೬೬) ; ಚೆನ್ನವರದರ್ ದೂಸಿಗರ್ ಮುತ್ತುಮಾಣಿಕದ ಪರದರ್ ವಣಿಗ್ವರರ್ . . . ಜೂಜುಗಾಱರ್ ಮುಖ್ಯರೊದಗಿ ಬರುತಿರ್ದರೇಂ ವಣ್ಣಿಸುವೆನು (ಚಲಪು. ೪೬-೪೦).

**ದೂಸಿಗವರದ** = ಬಟ್ಟೆಯ ವ್ಯಾಪಾರಿ; ಜವಳಿವರ್ತಕ: ಮಿಸುನಿಗಟ್ಟಿನ ಬಣ್ಣಸೀರೆಯ ದೂಸಿಗವರದರ ಮಱಗೆಯಿಂ . . . ಕಮ್ಮಾಱರ ಮುಂಗುಡಿಯಿಂ ಪುರಂ ಕಣ್ಗಿಂಬಾದುದು (ರಾಮಾಶ್ವ. ೦೦೩-೦೫).

[ ದೂಸ್ತ + – ಇಗ ]

**ದೂಸಿಗವಸರ** (ನಾ). ಜವಳಿ ವ್ಯಾಪಾರಿಗಳ ಅಂಗಡಿ ; ಜವಳಿ ಅಂಗಡಿ; ಬಟ್ಟೆ ಅಂಗಡಿ : "ದೂಸಿಗವಸರವೆನಿಪ್ಪುದೇ ಸೀರೆಯ ಪಸರವು" (ಚಉಪಿ. ೬೨) ; ತೊಳಗಿದುವು . . . ಪಟ್ಟಾವಳಿಯ ದುಕೂಲದ ಚೀನದ ತಳಿರ್ವಟ್ಟೆಯ ಪಟಿಯವಟಿಯ ದೂಸಿಗವಸರಂ (ಲೀಲಾವ. ೭-೧೪) ; ದಿವ್ಯಾಂಬರಂಗಳಿಂದೆಸೆವುವಲ್ಲಿ ದೂಸಿಗವಸರಂ (ಜಗವಿ. ೪-೧೧೧); ಪವಣಿಸಿ ಷಡ್ವರ್ಗಂಗಳನವನುದ್ಧವಿಸಿದ ವಿರಂಚಿಗಟ್ಟರಿಯಂ ಬೀಱುವ ಬಹುವರ್ಣಂಗಳ ವಸ್ತ್ರ ವಿತಾನವೆನಿಪ್ಪುದೊಪ್ಪಿ ದೂಸಿಗವಸರಂ (ಕುಸುಮಾ. ೨-೧೧೭): ಶೀವಿರ್ವಶ್ವಾವಳಿಯ ಗಜಾವಳಿಯ ನರಾವಳಿಗಳ ವಿಕ್ರಯದಿಂದಂ ಭಾವಿಸೆ ದೂಸಿಗವಸರಂ ಮೂವರ್ ರಾಯರನೆ ಮಾಱುವಂತೆಸೆದಿರ್ಕುಂ (ಗಿರಿ. ೨-೯೪). [ ದೂಸಿಗ + ಪಸರ ]

**ದೂಸಿಗವ್ಯವಹಾರಿ** (ನಾ). ಬಟ್ಟೆಯ ವ್ಯಾಪಾರಿ : ಎರಡು ಸ್ಥಳದ ದೂಸಿಗ ವ್ಯವಹಾರಿಗಳಲುಂ ನಾನಾದೇಶಿ ದೂಸಿಗವ್ಯವಹಾರಿಗಳಲುಂ ಪೊಂಗೆ ಕಾಣಿ ಎರಡು (ಎಕ. VII, ಶಿಕಾರಿ. ೧೧೮-೫೯ ; 1150).

[ ದೂಸಿಗ + ವ್ಯವಹಾರಿ ]

**ದೂಸಿಸು** (ಕ್ರಿ). ದೋಷವನ್ನುಂಟುಮಾಡು ; ಕೆಡಂಕನ್ನುಂಟುಮಾಡು : ಒಂದೆ ಬೆರಲನಿತನಿತೆ ನೀಳ್ದೊಂದಳವಿಗಳೂರ್ಧ್ವರೇಖೆ ತೋರ್ಪೊಡಂ ಮಱಿಗಂತೊಂದು ವರಿಸದೊಳೆ ಮುಖರೋಗಂ ದೂಸಿಸೆ ಮರಣಮಕ್ಕುಂ (ಅಶ್ವಶಾ. ೩-೪). [ <ದೂಷಿಸು ]

**ದೂಸು** 'ದೂಸ$_1$' ನೋ.

**ದೂಸೆಯಕ್ಕಿ** (ನಾ). ಅರ್ಧ ಕುಟ್ಟಿದ ಕೊಟ್ಟಣದ ಅಕ್ಕಿ ; ಹೊಟ್ಟಿರುವ ಅಕ್ಕಿ : ಉಂಭಪಡ್ಭಾಗ ಪ್ರದಾನೇನ = ಭತ್ತವಂ ಮಿದಿವಲ್ಲಿ ಓಡಿಯಕ್ಕಿಯ [ಪಾಠಾಂ. ಸಿಡಿಯಕ್ಕಿಯ]ನಾಯ್ದುಕೊಳ್ಳಲ್ಲಿನಿತು ಭಕ್ಷ್ಯಯಾಱನೆಯ ಭಾಗವಂ ಅಥವಾ ದೂಸೆಯಕ್ಕಿಯಾಱನೆಯ ಭಾಗವಂ (ಪ್ರದಾನೇನ) ಕುಡುವುದಱಿಂದಂ (ಸೀಹಿಶಾ. ೬--೨೬). [ ದೂಸೆ$_0$ + ಅಕ್ಕಿ$_1$ ]

**ದೂಹತಿ** 'ದೂಹತ್ತಿ' ನೋ.

**ದೂಹತ್ತ** 'ದುಹತ್ತ' ನೋ.

**ದೂಹತ್ತಿ**, ದೂಹತಿ (ನಾ). ಒಂದು ಬಗೆಯ ಉದ್ದವಾದ ಕತ್ತಿ : ರಾಹುತರು ನಿಲ್ಲದೆ ದೂಹತ್ತಿಯ ಕೊಂಡಾಡುತ್ತಲ್ಲರುವೊಯ್ದು ಮುಳಿದು ಮೂವಳಿಸಲ್ಲಲ್ಲಿಸದೆ ನಸುನಗುತಂ ನೋಡಿದನಂದು ಲಕ್ಷ್ಮಣಂ ಬಲವ (ಕುಮುರಾ. ೮-೫೩) ; ಇಳಿದು ಗಜವನು ಕೈದುಗಳ ನೆಲಕಿಳುಹಿ ಜೋಧರು ವಾರುವದಿನಿಳಿಗಿಳಿದು ರಾವ್ತರು ಹಾಯ್ಕಿದರು ದೂಹತ್ತಿ ಲೌಡಿಗಳ (ಕುವ್ಯಾಆ. ೧೪-೫೩) ; ತೆತ್ತಿಸಿದವಂಬುರವಣಿಸಿ ದೂಹತ್ತಿ ಹೊಳೆದವು ಸಮರದಲಿ (ಕುವ್ಯಾಗ. ೨-೦೭) ; ಬರಬರೆ ದೂರದಲಿ ದೂಹತ್ತಿಯಲಿ ಕಡಿವಡೆದ ಸೀತೆಯ ಕಂಡನಜಸೂನು (ತೊರರಾ. ೬-೪೦-೪೨). ದೂಹತಿ : ೧. ಅವನ ಮಂತ್ರಿಗಳು ಮತವಿದಲ್ಲೆಂದಡ್ಡವಿಸಿ ದೂಹತಿಯ ಹಸ್ತವ ಹಿಡಿದು ರಣನಿಷ್ಕೃತಿಗೆ ರಂಜಕವಾವುದಿನಿತಱಿೞೆಂದರವರಂದು (ತೊರರಾ. ೬-೪೫-೬೨). ೨. "ಎರಡು ಅಲಗುಳ್ಳ ಖಡ್ಗ " (ಶ್ರಕೂ).

[ <ಸಂ. ದ್ವಿಹಸ್ತೀ ]

**ದೂಹಸ್ತಿ** (ನಾ). = ದೂಹತ್ತಿ : ಪದದಾದಿಯ ದೀರ್ಘಕ್ಕೆ – ಅಮರ – ಆವರೆ . . . ದ್ವಿಹಸ್ತಿ – ದೂಹಸ್ತಿ ; ನವಮಿ – ನಾಮಿ (ಶಮದ. ೨೬೭ ವೃತ್ತಿ). [ ಈ ಇದು 'ದೂಹತ್ತಿ' ಎಂಬುದರ ಅಪಲಿಖಿತವಿರಬಹುದು ]

**ದೂಹೆ** 'ದೂವೆ$_1$' ನೋ.

**ದೂಹೆಗಾಡು** (ನಾ). ಶ್ಮಶಾನ ; ಸುಡಂಗಾಡು : ಕನ್ನವಿಕ್ಕಿದವರನು . . . ಕಡಿಯೆಂದು ಕಳುಹಿದರೆ ಚೆನ್ನಾಗಿ ಮೆಚ್ಚಿಸುತ್ತ ತಂದವರ ದೂಹೆಗಾಡಿನೊಳು ತಲೆಗಳ ಹೊಡೆಯಲು (ಸಿಂಗಿರಾ. ೨೩-೧೧).

[ ದೂಹೆ (<ದೂವೆ$_1$) + ಕಾಡು$_1$ ]

**ದೂಳ್** 'ದೂಳಿ' ನೋ.

**ದೂಳ** (ನಾ). ಒಂದು ಬಗೆಯ ಮರ : ದೂಳ, ದೇವದಾರು, (ಪಬ್ಬ).– ಕಾನಡಾಜಿಲ್ಲೆಯ ಅತ್ಯುನ್ನತವೃಕ್ಷಗಳಲ್ಲಿ ವೊಂದು ... ಕಟ್ಟಿಗೆ ಯಾವತ್ತು ಕೆಲಸಕ್ಕೆ ಬರುವುದು (ಕಥಾಗ. ೪೨). [ ? ]

**ದೂಳಕ್ಕರ** (ನಾ). ಬರೆಯುವುದನ್ನು ಕಲಿಯುವಾಗ ಮರಳಿನ ಮೇಲೆ ಬರೆಯುವ ಅಕ್ಷರ: ದೂಳಕ್ಕರ ಗಜತುರಗದೇಱಾಟವು ಬಾಲಕೇಳಿಗಳಾದಿಯಾಗಿ ಮೇಳದೊಳಿಹ ಪ್ರಾಣಸಖ ಪ್ರಹಸಿತನೊಳು ಪೇಟಿದ ತನ್ನ ದುಸ್ಥಿತಿಯಂ (ಅಂಜಕ. ೫-೪೭); ಕನಕದಾಸನ ಪಡನೆ ಹರಿ ಮಾನ್ನ ಪೇಳಿಸಿದ ನಾನು ದೂಳಕ್ಕರಮನರಿಯೆನೆನ್ನಿಂದ ಪೇಳಿಸುವ ಹರಿಹರರ ಮಹಿಮೆಯನು ಯಾರ್ಬಲ್ಲರಥವಾ (ನವಮೋ. ೦-೯). [ದೂಳು (<ದೂಳಿ) + ಅಕ್ಕರ$_1$]

**ದೂಳಕ್ಷರ** (ನಾ). = ದೂಳಕ್ಕರ : (೬). [ ದೂಳು (<ದೂಳಿ) +ಅಕ್ಷರ ]

**ದೂಳಾಟ**, ಧೂಳಾಟ (ನಾ). ಮಣ್ಣಿನಲ್ಲಿ ಆಡುವ ಆಟ ; ಧೂಳಿನಲ್ಲಿ ಆಡುವುದು ; ಮಣ್ಣಾಟ : ಕೊಳನ ಹೊಂದರೆಯತ್ತಿ ಮಿಂದೇಳಲೆಯ ವಾಳೆಯ ಕರ್ಪೂರದ ದೂ[ಪಾಠಾಂ. ದೂ]ಳಾಟಗಳನಾಡಿ . . . ನಂದನದೊಳಗೆ ಸುಳಿದಾಡುವುದು ಬಾಲಕನಂದದೊಂದೆಲರು (ಸಾಳ್ವಭಾ. ೨-೫) : ಓರಗೆವಕ್ಕಳೊಡನೆ ದೂಳಾಟ ಮೊದಲಾದ ಲೀಲೆಗಳ ಪರಿವಿಡಿಯಿಂದೆಸೆವ ಕುಮಾರರ್ಗೆ ಮುನಿಪತಿ ಚೌಲಕರ್ಮಂಗಳಂ ಮಾಡಿಸಿ (ಜೈಮಿಭಾ. ೦೯-೫೦). ಧೂಳಾಟ : ಭೀಷ್ಮನ ತೋಳ ತೊಟ್ಟಿಲಿನೊಳಗೆ ಬೆಳೆದವು ಸಲಹಿದನು ಧೂಳಾಟ ಮೊದಲಾಗಿ (ಕುವ್ಯಾಭೀ. ೭-೨೮); ಸೊಕ್ಕಿದ ರದನಿಗಳ ಧೂಳಾಟ ವೊಪ್ಪಿದವವರ ಯುದ್ಧದಲಿ (ಸಾಳ್ವಭಾ. ೨೨-೭೦) ; ತೊದಲುನುಡಿಗಳಂಬೆಗಾಲು ದಟ್ಟಡಿ ಮುಂದವೊದವಿದ ಧೂಳಾಟದಿಂದ ಪದುಳದೆ ಬಾಲಲೀಲೆಯ ತೋಱಿ ಸಕಲರ್ಗೆ ಚದುರಕುಮಾರರೊಪ್ಪಿದರು (ಕಂನವಿ. ೪-೮೦) ; ಇಬ್ಬರೂ ಬಾಲ್ಯದಲ್ಲಿ ಒಟ್ಟಿಗೆ ಧೂಳಾಟವಾಡಿದ ಜೊತೆಗಾರರು (ಕಾವ್ಯಸ. ೭೫). [ ದೂಳು (<ಧೂಳಿ) + ಆಟ ]

**ದೂಳಿ**, ದೂಳ್, ದೂಳು, ಧೂಳ್, ಧೂಳು (ನಾ). ೧. ಮಣ್ಣಿನ ಹುಡಿ ; ಪಾಂಸು ; ರಜ : "ದೂಳಿ – ರಜಸ್, ಪಾಂಸು" (ಶಾಚರಾ. ೬) : ಬಟ್ಟೆಯ ದೂಳಿ ದೂವೆ ಮೊದಲಾದುದು (ಕಾದಂಪೂ. ೧೪೭) ; ದೂಳಿಯ ಪಚ್ಚೆಯಂತೆ . . . ಬೂದಿಯ ಬೊಟ್ಟನಂತೆ ಮಾಗೆಯ ಪೊತ್ತಿನಂತೆ ತೋಱಿ ಪಾಱುವಾಯುಷ್ಯಮಂ (ಧರ್ಮಾಮೃ. ೯-೨೩ ಅಡಿಟಿ) : ದೂಳಿಯೊಳಿಬಲ್ಮ ಮೇಲಾದಿನ ದುಗುಲದ ಸೆಱಂಗಿನೊಳಂ (ವರ್ಧಕ. ೯-೬೦ ವ) ; ಒತ್ತರಿಸಿ ಫಲುಗುಣನ ಸೂನುವಂ ಭಾನುವಂ ಮುಚ್ಚಿದುದು ಚಾತುರಂಗಾಳಿಯಂ ದೂ[ಪಾಠಾಂ. ಧೂ]ಳಿಯುಂ . . . ಘೋರತರ ಸಂಗರದೊಳು (ಜೈಮಿಭಾ. ೨೨-೩೭) ; ದೂಳಿಯಿಂದ ಮಾಳಿಗೆ ಆದೀತೇ ? (ಗಾದೆ). ೨. ಪುಡಿ ; ಚೂರ್ಣ ; ಹಿಟ್ಟು : ಮನೋಭಾಸುರವಪ್ಪ ಕಪ್ಪುರದ ದೂ[ಪಾಠಾಂ. ಧೂ]ಳಿಯನಲ್ಲದೆ ದೂ[ಪಾಠಾಂ. ಧೂ]ಳಿಯಂ ನಿದಾವಾಸದೊಳೆಂತುಟೆಂದಱಿಯನಿಂತುಟು ಪುಣ್ಯಮಗಣ್ಯಮಾತನಾ (ಸುಕುಮಾ. ೦೦-೧೦೭). ೩. ಹೂವಿನಲ್ಲಿರುವ ಪುಡಿ; ಪರಾಗ : ಸೊಂದಿಗೋಡಗಂಗಳ ಕಾಲಾಟದಿನಲ್ಲಿಕ್ಕಲಿನುದಿರ್ದ ದೂಳಿಗಳನಮರ್ಚಿಯುಂ (ಕಲ್ಯಾಕಾ. ೫೩ ವ): ತಿಳಿಗೊಳಂಗಳೊಳಲರ್ದ ಪೊಚ್ಚ ಪೊಂದಾವರೆಗಳ ದೂ[ಪಾಠಾಂ. ಧೂ]ಳಿ ತನಿಗಂಪನುಂಡು ಮಿಂಡೆದ್ದ ಭೃಂಗಾಳಿಗಳ ಬಳಗಂ ಪರಿಯಲು (ಜೈಮಿಭಾ. ೩-೮). ದೂಳ್ : ೧. ಮಸಗಿದುರಿ ಪೊಗೆ ಸಿಡಿಲ್ಮಿಂಚು ಕತ್ತಲೆ ಗಾಳಿ ಮುಗಿಲೊಡ್ಡು ದೂಳ್ಗಳಿಂದೆ ದೆಸೆಗೆಡಿಸುತ . . . ಮಸಗಿದಂ (ಜೈಮಿಭಾ. ೦೬-೩೭) ; ಲಕ್ಷ್ಮಣಂ . . . ಎಂದುಮಗಲದಣ್ಣನ ಕಡೆಗೆ ದೂಳ್ಮಾಯದೊಳ್ಪತ್ತಿ ಪೊರಳ್ವ ಸೀತೆಯ ಕಡೆಗೆ ತೂಗುಯ್ಯಲೆವೊಲಾದನು (ಜೈಮಿಭಾ. ೧೯-೨೯) ; ದೊರೆಗಳ ದೊರೆ ಚಕ್ರಿಯೆನಿಸಿ ದರ್ಯವೃಷನು ಮೆರೆದನು : ಈಗಳದನು ದುಡುಂಕುಹೆಮ್ಮೆ

ದೂಳ್ಗೊದೆದುದೊ ಅರಿಯೆನು (ಪಾರಸಿ. ೯-೧೮೭). ದೂಳು: ೧. ಶರ್ಕರೆಯ ಬುದ್ಧಿಯಲಿ ದೂಳನು ತಿಂಬಬುಧರಂತೆ ದುಃಖದಳಿವನು ಪಡೆಯದೇ ಸುಖಸೌಖ್ಯವಿಲ್ಲದೆ ಬಳಲುವುದು ತಾವತ್ಕಧಿಕಬುದ್ಧಿಯಲಿ (ನಿಠಾಗ. ೦೧-೩-೪); ಗಾಳಿಯಿಂದ ದೂಳು ಹಾರಿದರೆ ಕೋಳೀ ಹೊಟ್ಟೆ ತುಂಬೀತೆ? (ಗಾದೆ); ದೂಳಲ್ಲಿ ಬಿದ್ದವ ಮೂಳನಿಂದ ಕಡೆ (ಗಾದೆ). ೩. "ಪರಾಗ, ಸುಮನೋರಜ = ಹೂವಿನ ದೂಳು" (ನಾಜಿಶಾ. ೩); "ಪರಾಗಃ, ಸುಮನೋರಜಃ -೨ ಹೂವ್ವಿನೊಳಗಿರುವ ದೂ[ಪಾಠಾಂ. ಧೂ]ಳು, ಪೂದೂಳಿ, ಅಲರ ಪುಡಿ" (ಸಿದ್ಧಾಂತಿ. ೦೦೦). ಧೂಳ್ : ೧. ಅಬುನೀರ್ವಳ್ಳಂ ನೆಟಲ್ಗಂದಿದ ತರುನಿಚಯಂ ಧೂಳದುರ್ದಿಬೆ ನಿಚ್ಚಂ ಪಟಿಗೆಟ್ಟಪ್ಪಾಸ ...ಸರ್ವೋರ್ವಿಯೊಳ್ ಕೂಡ ನೋಡಲ್ ಬಟಿನಾಗಲ್ (ಚಕಕು. ೩-೧೨). ಧೂಳು : ೧. ಸೃಷ್ಟಿಯಲಿ ಅಣುವಿನಣುವಿನ ಮೈಯು ಧೂಳಿನಲೊಂದು ಕಣ ನೀನು (ಕಗದ್ಯ. ೧೧೦); ಎರಡೂ ಕೈಗಳನ್ನು ಬಡಿದು ಧೂಳನ್ನು ಜಾಡಿಸಿ (ಕಮ್ಮಟಿ. ೨). ೨. "ಹುಡಿ = ಧೂಳು" (ಶಾಕಕ್ಕ. ೩೭).

ದೂಳ ಅಡರಿಸು = (ಉಕ) ತರಾಟೆಗೆ ತೆಗೆದುಕೊಳ್ಳು : ನಾನು ಚೆನ್ನಾಗಿ ದೂಳ ಅಡರಿಸಿದೆ. ಕೊನೆಗೆ ನನ್ನ ಸೂಚನೆ ಮಾನ್ಯವಾಯಿತು (ಕೃಶಮಾತ್ಮ. ೨೬೭). ಧೂಳಸಂಜೆ = ಸಾಯಂಕಾಲದ ಮಬ್ಬುಗತ್ತಲೆ : ಭೂತ ಪಿಶಾಚಿಗಳು . . . ಅಡ್ಡಾಡುವ ಕಾಲವೆಂದರೆ ಧೂಳ ಸಂಜೆ ಅಥವಾ ದೊಡ್ಡ ನಸುಕು (ಕನ್ನಜಾ. ೨೦). ಧೂಳಾಗು = ೧. ಹೊಲಸಾಗು; ಕೊಳೆಯಾಗು : ಮಣ್ಣಿನಲ್ಲಿ ಕೆಲಸಮಾಡಿ ಆತನ ಬಟ್ಟೆಯೆಲ್ಲಾ ಧೂಳಾಗಿದೆ (ರೂಢಿ). ೨. ಮಣ್ಣುಪಾಲಾಗು; ನಾಶವಾಗು; ಹಾಳಾಗು : ದ್ರೋಹಿಗಳು ಧೂಳಾಯ್ತು ಬಳಿಕನೋಳೀ ಹದನು ಬಂದಿದೆ ಜಗತ್ರಯ ರೂಹು ಗೆಡುತಿದೆ (ಕುಮ್ಮಾಳ. ೭-೪೩). ದೂಳು ಧುಮಸ = ಮಣ್ಣು, ಕಸ ಇತ್ಯಾದಿ : ಇದು ಧೂಳುಧುಮಸವೆನ್ನದೆ ಅಂಗಳ ನಡುವೆ ಮಣ್ಣಲ್ಲಿ ಕುಳಿತು ಕುಟ್ಟುವುದು (ಕನ್ನಜಾ. ೩೭). [ <ಸಂ. ಧೂಲಿ ]

ದೂಳಿಕಡವ 'ದೂಳಿಗಡವ' ನೋ.

ದೂಳಿಗಡವ, ದೂಳಿಕಡವ, ಧೂಳಿಕಡವ, ಧೂಳಿಗಡವ (ನಾ). ಒಂದು ಬಗೆಯ ಸಸ್ಯ : "ರೇಣುಕದಂಬಕಃ - ದೂಳಿಗಡವ" (ಒಷಧಿ. ೧೪೦). ದೂಳಿಕಡವ : "ಮಕರಂದವಾಸಃ - ದೂಳೀಕಡವ, ಕರ್ಕಟಕ, ಹಿಪ್ಪಲಿ, ಉತ್ತರಣೆ" (ಒಷಧಿ. ೧೨೩). ಧೂಳಿಕಡವ : "ಬಲಭದ್ರಸಂಜ್ಞಕಃ - ಧೂಳಿ ಕಡವ" (ಒಷಧಿ. ೦೦೭). ಧೂಳಿಗಡವ : "ಕ್ರಮುಕಪ್ರಸೂನಃ - ಧೂಳಿ ಗಡವ" (ಒಷಧಿ. ೨೮). [ ದೂಳಿ + ಕಡವ₁ (<ಕದಂಬ) ]

ದೂಳಿಗತ್ತಲೆ (ನಾ). ಧೂಳಿನಿಂದ ಉಂಟಾದ ಮಬ್ಬು, - ಕತ್ತಲೆ: ಅಗಳಾಗಸಕ್ಕೆ ನೆಗೆದು ಪರ್ವಿದ ದೂಳಿಗತ್ತಲೆಯೊಳ್ . . . ಕಾದಿ (ಕಬ್ಬಿಗಾ. ೨೬೭). [ ದೂಳಿ + ಕತ್ತಲೆ ]

ದೂಳಿಗೋಂಟೆ, ದೂಳಿಗೋಟೆ, ದೂಳ್ಗೋಂಟೆ, ಧೂಳ್ಗೋಂಟೆ (ನಾ). ೧. ನಾಶಕ್ಕೆ ಒಳಗಾದ ಕೋಟೆ, - ದುರ್ಗ : ಚಲಂ ನೆಲೆಗಿಡೆ, ಬಲಂ ಬಯಲ್ವುಗೆ, ಕೊಂಟೆಗೋಂಟೆ ದೂಳಿಗೋಂಟೆಯುಪ್ಪುದುಂ (ರಾಮಾಶ್ವ. ೯೭-೩೦). ದೂಳಿಗೋಟೆ : ೨. ವಶಪಡಿಸಿಕೊಂಡ ಕೋಟೆ; ಅಧೀನಕ್ಕೊಳಗಾದ ದುರ್ಗ : ಇಕ್ಕೇರಿಯ ಭೂಪ . . . ಪೊಕ್ಕ ಮಲೆಯ ನಾಕ್ಷಣ ದೂಳಿಗೋಟೆಯು ಗಕ್ಕನೆ ಕೊಂಡರೇವೇಳ್ವೆ (ಕಂನಪಿ. ೧೧-೩). ದೂಳ್ಗೋಂಟೆ. ಧೂಳ್ಗೋಂಟೆ :

ದೂಳಿಗೋಂಟೆಯ ಕೊಳ್, ದೂಳಿಗೋಟೆಯ ಕೊಳ್, ದೂಳಿಗೋಟೆಯುಂ ಕೊಳ್, ದೂಳ್ಗೋಂಟೆಯುಂ ಕೊಳ್, ಧೂಳ್ಗೋಂಟೆಯುಂ ಕೊಳ್ = ಕೋಟೆಯನ್ನು ನಿರ್ನಾಮ ಮಾಡು; ದುರ್ಗವನ್ನು ಧೂಳು ಧೂಳಾಗುವಂತೆ ಮಾಡು : ಇಕ್ಕಿ ನಿಚ್ಚಣಿಗೆಯುಂ ದೂಳಿಗೋಂಟೆಯ ಕೊಳ್ಳಬೇಕೆಂಬ ಪಡಿಯಚರ ಕಲಕಲಂ ಕರವೊಪ್ಪಿತು (ಸಮ್ಮಕಾ. ೮-೩೦) : ಸುಯೋಧನಾದಿಗಳೂರನುರವಣಿಸಿ ದೂ[ಪಾಠಾಂ. ಧೂ]ಳಿಗೋಟೆಯ ಕೊಂಡಿವರು ರಾಜಾಲಯಕೆ ಬರೆ (ಕುಮ್ಮಾಭ. ೭-೬೪); ಉರವಣಿಸಿ ದೂ[ಪಾಠಾಂ. ಧೂ]ಳಿಗೋಟೆಯ ಕೊಂಡ ರಘುವೀರನಂದು (ಕೃಮಿಧಾ. ೧೮-೭); ತ್ರಿಪುರಮಂ ಪರಿದೈದಿ ಮುತ್ತಿ ದೂಳ್ಗೋಂಟೆಯುಂ ಕೊಂಬುದೆನೆ ಹರುಷದಿಂ ತಂತಮ್ಮ ಚಾತುರ್ಬಲಂವೆರಸಿ ನಡೆದರತಿಸಂಭ್ರಮದೊಳು (ಚಬಪು. ೪೨-೨೩); ಧೂಳ್ಗೋಂಟೆಯಂ ಕೊಂಡು ನೆಲಸರಿತಮಂ ಮಾಡುತಿರಲು (ಚಬಪು. ೪೮-೮). 'ಧೂಳೀಗೋಂಟೆ' ಪರಾ.

[ ದೂಳಿ + ಕೋಂಟೆ ]

ದೂಳಿಗೋಟೆ 'ದೂಳಿಗೋಂಟೆ' ನೋ.

ದೂಳಿಚಿತ್ರ (ನಾ). ಬಣ್ಣಬಣ್ಣದ ಪುಡಿಗಳಿಂದ ರಚಿಸಿದ ಚಿತ್ರ, - ರಂಗವಲ್ಲಿ : ಮಳೆಯುಜದ ಮೊಲೆಯ ಕುಂಕುಮದಳಕದ ಕತ್ತುರಿಯ ಬಣ್ಣವಣ್ಣಗೆ ಕೊಳದೊಳ್ಪರ್ದಿರೆ ಜಳರುಹಮುಖಿಯರ್ ಜಳಕೇಳಿಯ ನೆವದಿ ದೂಳಿಚಿತ್ರಂ ಬರೆದರ್ (ಯಕೋಚ. ೪-೮). 'ಧೂಳೀಚಿತ್ರ' ಪರಾ.

[ ದೂಳಿ + ಚಿತ್ರ ]

ದೂಳಿಡು (ಕ್ರಿ). ದೂಳನ್ನು ಎಬ್ಬಿಸು, - ಹರಡಿಸು, - ಎರಚು : ಜಡಿವ ಕಲ್ಗಂಡು ದೂಳಿಡುವ ಬಿರುಗಾಳಿ ಕಂಗೆಡಿಪ ಕತ್ತಲೆ (ಕೃಮಿಧಾ. ೪-೨೩); ಊರ್ಧ್ವಮುಖಮಾಗಿ ಸೂಸುವ ರಜದ ಸೋನೆಯೆನೆ ದೂಳಿಡೆ . . . ಗುಹೆ ದೋಣಿ ಮೊರಡಿ ಪಳ್ಳ ಕೊಳ್ಳ ಜನ ಸರಿ ಜಲುಗು ಗಹನ ಗಹ್ವರದ ವೀಥ್ಯಾದ್ರಿಯಂ ಫಲಗುಣನ ಸೇನೆ ತುಳಿದಸಿಯುರೆದುದು (ಕೃಮಿಧಾ. ೧೧-೮); ಪಡಲಿಡು, ಪೊಡಮಡು . . . ದೂಳಿಡು, ಮೂಳಿಡು (ಕಬ್ಬಾಸು. ೪೮೮ ಪ್ರಯೋ). [ ದೂಳು (<ದೂಳಿ) + ಇಡು₁ ]

ದೂಳಿತ (ನಾ). ಭಸ್ಮ; ವಿಭೂತಿ : ಆ ಮಹಾತ್ಮರು . . . ತಿಮ್ಮಣ್ಣ ನಾಯಕನಿಗೆ ದೆಸೆಗಟ್ಟಿನ ದೂಳಿತ, ಸಿದ್ಧಮೂಲಿಕೆ, ಕೈಲಂಬು ಇವುಗಳನ್ನು ಕೊಟ್ಟು . . . ಹೊರಟುಹೋದರಂತೆ (ಚಿತ್ರಪಾ. ೭).

[ <ಸಂ. ಧೂಲಿತ ]

ದೂಳಿದರ್ಶನ (ನಾ). ಮೊದಲಸಲದ ನೋಟ, - ದರ್ಶನ : ದೊಡ್ಡ ದರಬಾರು ಮಾಡಿ ದೂಳಿದರ್ಶನದಲ್ಲೇ ಅಂದರೆ ಮೊದಲನೇ ಸರ್ತಿ ಕಾಣುವುದರಲ್ಲೇ ಮಂತ್ರಿಬುದ್ಧಿಯನ್ನರಿಯಬೇಕು (ಕಥಾಮಂ. IV, ೩೨): P ಪ್ರಯಾಣದಲ್ಲಿ ಮೈಮೇಲೆ ಬಿದ್ದ ಧೂಳಿಸಹಿತವಾಗಿ ಎಂದರೆ ಬಂದ ಕೂಡಲೆ ಮಾಡುವ ದೇವರ ಅಥವಾ ಹಿರಿಯರ ದರ್ಶನ.

[ ದೂಳಿ + ದರ್ಶನ ]

ದೂಳಿಸು (ಕ್ರಿ). ೧. ಹುಡಿ ಹರಡು, - ವ್ಯಾಪಿಸು : ಚಾರುತರಮುಖವರಡರಮಳಾಗಾರಮಂಟಪವಳಯದಲಿ ಕರ್ಪೂರ ದೂ[ಪಾಠಾಂ. ಧೂ]ಳಿಸಿತು (ಕೊರರಾ. ೧-೭-೧೩). ೨. ಲೇಪಿಸು; ಪೂಸು : ಪಳಿಮಂಜಳಿಣ್ಣೆಯಂ ದೊಡ್ಡಂಗೆ ದೂಳಿಸಿದರೆಳೆವೆಣ್ಗಳೊಸಗೆಯಿಂ (ಕಾಲೂಕ. ೦೪೭-೩೨೦). [ ದೂಳಿ + - ಇಸು₃ ]

ದೂಳಿಸೆಜ್ಜರ (ನಾ). ಧೂಳಾಟವಾಡುವ ಜಾಗ; ಕ್ರೀಡಾಸ್ಥಾನ : ಪದೆಪಿಂ ಮೇಳಿಸೆ ದೂ[ಪಾಠಾಂ. ಧೂ]ಳಿಸೆಜ್ಜರವಿದೆಂದಾಶಾಗಜಂ ಭೀತಿಯೊಂದಿದು ನೂಂಕಿಂದೊಡೆನಿಸಿರ್ದ ಕೇತುವೆರಸೀಗಳ್ ರಾಹು ಮೇಲೆತ್ತಿ ಬಂದುದೆನುತ್ತುಂ ರವಿಮಂಡಳಂ ನಡುಗೆ . . . ಪರ್ಬಿತ್ತುರ್ಬಿ ಸೇನಾರಜಂ (ಮಲ್ಲಿಪು. ೮-೦೪೩); ಆ ಸಮಯದೊಳ್ ದೂಳಿಸೆಜ್ಜರಕ್ಕುಡುಗಿಸಿ ಕಾಡಾನೆಗಳ ಕೋಡ ಮೊನೆಯನೀಡಿಬಾವ ಗಿರಿಯ ದರಿಯ ಗೈರಿಕಪರಾಗವುಂ ಸಂಧ್ಯಾರಾಗವಿಮಿಷದಿನಾಗಸಕ್ಕೆ ಪಸರಿಸಿಯುಂ (ಚಂದ್ರಪು. ೮-೪ ವ); ಕಪ್ಪುರದೊಪ್ಪುವ ಜಗಲಿ ದೂ[ಪಾಠಾಂ. ಧೂ]ಳಿಸೆಜ್ಜರಮೆನಿಸೆ (ಪಾರ್ಶ್ವಪು. ೯-೩೦ ವ). 'ಧೂಳಿಸೆಜ್ಜರ' ಪರಾ. [ ದೂಳಿ + ಸೆಜ್ಜರ (<ಸೆಜ್ಜಾರ) ]

ದೂಳು 'ದೂಳಿ' ನೋ.

**ದೂಳುಗೆದಱು** (ಕ್ರಿ). ೧. ಪುಡಿಪುಡಿಯಾಗಿ ಬೀಳು ; ಧೂಳಾಗಿ ಹೋಗು: ಸೊಗಸಿನ ಗೋಪುರಂಗಳು ಕಾಲುಗುರದಾಗಿನಲಿ ಸಿಡಿಲೊಡೆದದ್ರಿಯಂದದಲಿ ದೂಳು[ಪಾಠಾಂ. ದೂಳಿ, ಧೂಳಿ]ಗೆದಱಿದವು (ತೊರರಾ. ೬-೧೦-೨೬). ೨. ಧೂಳು ತುಂಬಿರು : ಅಲಿ ಮರಳದ ಮುಸುಡ ಮುಸುಕಿನ ದೂಳುಗೆದಱಿದ ತಲೆಯ ತೇರಿನ ಮೇಲೆ ತಂದಿಳುಹಿದನು (ತೊರರಾ. ೬-೪೩-೧೦). [ ದೂಳು (<ದೂಳಿ) + ಕೆದಱು$_1$ (<ಕೆದಱ್$_1$) ]

**ದೂಳುಪಾವಡ** (ನಾ). [ವೀಶೈ] ಸಜ್ಜೆಯಲ್ಲಿ ಈಶ್ವರಲಿಂಗದ ಮೇಲೆ ಧೂಳು ಬೀಳದಂತೆ ಮುಚ್ಚುವ ಬಟ್ಟೆ, - ವಸ್ತ್ರ : ದೂಳುಪಾವಡ ಕಂಠಪಾವಡ ಸರ್ವಾಂಗಪಾವಡ ಇಂತೀ ತ್ರಿವಿಧಶೀಲ ನಡೆಸುವಲ್ಲಿ ದೂಳು ಪಾವಡವಾದಲ್ಲಿ ಆತ ನೀರನು ಹಾಯಬಹುದು (ಜಲೀಶ್ರ. ೩೪) : ಕಂಠ ಪಾವಡ ಧೂಳ[ ದೂಳು ] ಪಾವಡ ಸರ್ವಾಂಗಪಾವಡ ಉಂಟೆಂಬ ಮಹಾ ಪಾತಕರಿಗೆ ಗುರುವಿಲ್ಲ ಲಿಂಗವಿಲ್ಲ ಜಂಗಮವಿಲ್ಲ (ಚನ್ನವ. ಶ. ೩೨೪-೪೧೬). ಧೂಳ ಪಾವಡದವರು = ಲಿಂಗಾಯತ ಜಾತಿಯಲ್ಲಿ ಒಂದು ಪಂಗಡ : ಲಿಂಗಾಯತರಲ್ಲಿ ಒಟ್ಟಿಗೆ ೩೧ ಒಳಭೇದಗಳು. ಧೂಳಪಾವಡದವರು, ಶೀಲವಂತರು . . . ಇವರೇ ಮೇಲಾದ ಲಿಂಗಾಯತರು (ಕರಾಗೆ. ೯೦).
[ ದೂಳು (<ದೂಳಿ) + ಪಾವಡ$_1$ ]

**ದೂಳುವಡೆ** (ಕ್ರಿ). ಪುಡಿಯಾಗು ; ಧೂಳಾಗು : "ಗುಂಡಿತ, ರೂಷಿತ = ದೂಳುವಡೆದುದು" (ನಾಚಿರಾ. ೩). [ ದೂಳು (<ದೂಳಿ) + ಪಡೆ$_1$ ]

**ದೂಳೆಯ** (ನಾ). ಕೈಗೆ ತೊಡುವ ಮುತ್ತಿನ ಆಭರಣ : ಹೇಮಶೃಂಖಳೆ ಮಣಿಮಾಳೆ ದೂಳೆ[ಪಾಠಾಂ. ವೆ]ಯದ ಕಂಕಣಮಿಟ್ಟು . . . ಕೀರ್ತಿಪತಾಕೆ ತನ್ನೊಳೊಳ್ಪಳವಡೆ ಬಂದನಂದು ಗಜಭಟ್ಟನಿಪ್ಪಂ (ಲೀಲಾವ. ೯-೫೩).
[ ? ಇದು 'ಜೂಳೆಯ' ಎಂಬುದರ ಅಪಲಿಖಿತವಿರಬಹುದೆ ? ]

**ದೂಳ್ಗೋಂಟೆ** 'ದೂಳಿಗೋಂಟೆ' ನೋ.

**ದೂಳ್ವಡಿಸು** (ಕ್ರಿ). ಧೂಳಾಗುವಂತೆ ಮಾಡು ; ಧೂಳು ಏಳುವಂತೆ ಮಾಡು; ಪುಡಿಪುಡಿ ಮಾಡು: ನಡೆದತ್ತಾ ರಾಜರಾಜೇಂದ್ರನ ಬಲಮದು . . . ವಲ್ಗದಶ್ವೋತ್ಕರಖುರಹತಿಯಿಂ ಬೆಟ್ಟುವೆಟ್ಟಿಲ್ಲಮಂ ದೂಳ್ವಡಿಸುತ್ತುಂ (ಶಾಂತೀಶ್ವ. ೦೩-೧೦೭). [ ದೂಳ್ (<ದೂಳಿ) + ಪಡಿಸು ]

**ದೂಱ್** 'ದೂಱು$_1$' ನೋ.

**ದೂಱಿಡು** (ಕ್ರಿ). ೧. ಅಪವಾದ ಹೊರಿಸು ; ತಪ್ಪು ಹೊರಿಸು : ಪಱಿವನ್ನಾಯುವ ನೋಡದನ್ಯರೊಳೆ ದೂಱಿಟ್ಟಲ್ಲರಂ ಬಾಧಿಪಾ ತಳವಾಱಂ ಬೆಳವಾಱನ್ನೆ (ಸೋಮೇಶ. ೬೬). ೨. ವರದಿ ಮಾಡು ; ಹೇಳು : ದೊರೆಯಲ್ಲಿಗೈದಿದನೊಬ್ಬ ದೂಱಿಡಲು (ಕೌಶಿರಾ. ೩೨-೨೭).
[ ದೂಱು$_1$ + ಇಡು$_1$ ]

**ದೂಱಿಸು, ದೂರಿಸು$_1$** (ಕ್ರಿ). ೧. ನಿಂದಿಸು ; ತೆಗಳು ; ಟೀಕಿಸು : ಸರಸತಿಯಂ ಮನೋಮುದದೆ ತಾಳ್ದಿದನೆನ್ನನವಜ್ಞೆಗೆಯ್ದನಾನಿರನವಳ್ಕೆರ್ಚಿ ಸವತಿಯೊಳ್ಪುದುವಾಳ್ದುದು ಕಷ್ಟಮೆಂದು ನಿಷ್ಠುರವಚನಂಗಳಂ ನುಡಿದು ದಿಕ್ಕರಿಯಂ ಪರಿದೇಱೆ ಕೀರ್ತಿ ತಾಂ ಪುರುಡಿಸಿ ದೂಱಿಪಳ್ ವರತಪೋನಿಧಿಯಂ ನಯಸೇನಸೂರಿಯಂ (ಎಕ. XVI, ೬೦-೩೦ ; 1081) ; (ಪಾಠಮಂ.೦೧೫ ನೋ); ದೂಱಿಸದಿರಬೇಕು ದೂಱಿಗಳುಕಬೇಕು (ಕುರಾಪಾಂ. ೨೪-೩೦). ೨. ಚಿಂತಿಸು ; ಕಳವಳಪಡು ; ವ್ಯಥೆಪಡು ; ದುಃಖಿಸು : "ದೂಱಿಪುದೆಂದು ಚಿಂತಿಪುದು" (ಕಶಸಾ..೦೨-೩೨೮) ; ಆಕೆಯ ದೂಱಿಸಿ ಸುಯ್ದು ಸುಯ್ಯೊಳಚ್ಚಳಿಸಿದುದಾ ಸರೋಜದಳನೇತ್ರೆಯ ನಲ್ಮೆಯೊಳತ್ತು ಕಣ್ಣ ನೀರ್ಗಳ ಪೊನಲಿಂದೆ ಕರ್ಚಿ ಕಳೆದುತಿರೆ ಪೋದುದು ಕೋಪಮೋಪನಾ (ಆದಿಪು. ೦೨-೦೩) ; ನಿಮ್ಮನೆ ನೆನೆದು ದೂಱಿಪಂ ರಘುವೀರಂ (ಪಂಪರಾಮಾ. ೧೦-೬೪) ; ನೀರದಪಿಟಂಗೆ ವಿದ್ಯುನ್ನಾರಿಯು ವಿರಹಂ ಪೊಣರ್ಚೆ ಬಡವಾಗಿ ಕರಂ ದೂಱಿಸಿ ಬೆಳರ್ತ ಕೆಬಿದಿಂ ಶಾರದಜಳಧರದ ತುಱುಗಲೊಗೆದುವು ನಭದೊಳ್ (ಲೀಲಾವ. ೫-೨೪) ; ಕಱುವಂ ದೂಱಿಸಿ ಮೆಲ್ಕನೊಕ್ಕು ತುಱುವಂ ತಾಯ್ಗಾಡಿನೊಳ್ಬಿಟ್ಟು ಮುಂದುಱುವಾಮ್ರುರ್ಪೆಳಗಂದಿಗಳ್ (ಲೀಲಾವ. ೫-೯೬) ; ಮನದೊಳ್ ಪಿರಿದುಂ ದೂಱಿಸಲದೇಕೆ ಬಿದಿ ಕೈವಾರಿಸಿದೊಡೆ ಶೀರದಿರ್ಪುದಾವುದುಮುಂಟೇ (ಚಂದ್ರಪ್ರ. ೩-೬೭); ಮರುಳು ಮಗನೇನಾದನೋ ಎನುತ್ತ ಬಳವಳಿದು ದೂಱಿಸುತ್ತಿರಾಗಿ ಬರುತ ಮಕ್ಕಳ ನಡುವೆ ಬಪ್ಪ ಸಿದ್ಧೇಶ್ವರನನತಿದೂರದೊಳು ಕಂಡು (ಸಿದ್ಧರಾ. ೨-೧೪) ; ಬಸಂತಂ ತಳರ್ವನೆಯೊಳ್ ನಲ್ಲನಂ ನೆನೆದು ದೂಱಿಸುತಿರ್ಪೆಚ್ಚೆ ಗಾರ್ತಿಗಾ ತೆಱನೆಲ್ಲಮಂ ಬಿನ್ನಪಂಗೆಯ್ದು (ಕಬ್ಬಿಗಕಾ. ೩೨೧);ದೂರದೆರ್ದೊಳಿರ್ದ ಕಾಮಿನಿಯನಾಸೆವಡುತ್ತತಿಕಾಪದೇಳ್ಗೆಯಿಂ ದೂಱಿಸಿ ಸುಯ್ಯಲೇಕೆ ವಿರಹ ವ್ಯಥೆಯಿಂದಂ (ನಳಚಂ. ೬೨) ; ಮೊದಲಲೆಯರ್ಕಳಿಲ್ಲದುಱೆ ದೂಱಿಸಿ ಮದ್ಗುರುಪವಿತ್ರ ಮಂತ್ರದಿಂ ಪದಟನೋಳೀತನಂ ಪಡೆದು . . . ಯೌವ ನೋದಯವಿಳಾಸಮನೀಕ್ಷಿಪ ಕಾಲಕಂತು ಬಂದುದೆ ವ್ಯಾತಿಯೆಂದು ಚಿಂತಿಸದಿರ್ (ರಾಜಶೇ. ೦೪-೩೯). ೩. ಚಿಂತೆಗೆ ಒಳಗುಮಾಡು ; ವ್ಯಥೆಗೆ ಒಳಪಡಿಸು: ಸ್ವೈರದಿನಾಂ ಪೋಗುತ್ತಿರೆ ತಾರಾಪಥದೊಳ್ ಪಳಂಚಿದುದು ಕಿವಿಯಂ ಹಾಹಾರವಮುಱಿಯೆಣ್ಣೆಯುವೋಲ್ ದೂಱಿಸೆ ಬಗೆಬಗೆ ಯೊಳೊಗೆಯೆ ಕಾರುಣ್ಯರಸಂ (ಪಂಪರಾಮಾ. ೦೦-೫೭); ತನ್ನ ತಾನೇ ದೂಱಿಸಿ ದೂಡಾನೇನ ಮಾಡುವೆನೆಂದನಲ್ಲಮನು (ಪ್ರಭುಲೀ. ೭-೫೦). **ದೂರಿಸು$_1$** : ೧. ಮನಮಂ ದುರ್ವ್ಯಸನಕ್ಕೆ ತಂದು . . . ಲೋಕದಪವಾದಕ್ಕಾವಗಂ ಬನ್ದು ದುರ್ಮ್ಮನದಿಂ ದೂರಿಸುತಿರ್ಪ್ಪ ತಾಪಸ ನಿಕೃಷ್ಟಜ್ಞಾನಶಕ್ತಿ ಬ್ರತೀಂದ್ರನನೇವ್ವೋಲ್ವರೆ (ಎಕ. XI-II, ೦೫೨-೩೩ ; 1103).
[ ದೂಱು$_1$ + – ಇಸು$_1$ ]

**ದೂಱು$_1$, ದೂರ್, ದೂರು$_1$** (ಕ್ರಿ). ೧. ನಿಂದಿಸು ; ತೆಗಳು ; ಬಯ್ಯು ; ಟೀಕಿಸು : ಇತ್ತ ಸರ್ವದಯಿತೆ ಗರ್ಭಮಂ ತಾಳೆ ಸಾಗರದತ್ತಂ ಕಂಡು ದುಶ್ಚರಿತೆಯೆಂದು ದೂಱಿ (ಜಾವುಂಪು. ೮೦); ಪೆಱರವಗುಣಮಂ ಕಂಡೊಡೆ ಯುಱಿಯುಟ್ಟಿ ತಗುಳ್ದು ದೂಱವೇಡ (ಧರ್ಮಾಮೃ. ೫-೧೦೨) ; ಲಿಂಗವಾರೋಗಣೆಯ ಮಾಡಿದನೆಂಬರು ತಾವುಂಡು ನಿಮ್ಮ ದೂಱುವರು (ಅವಹಂ. ೩೭-೧೭೨) ; ಕಸವಮಂತ್ರಿಗಳು . . . ದೂಱಿದರು ಬಸವಣದಂಡ ನಾಯಕನ (ಬಸಪು. ೧೦-೪) ; ದೂಱುವವರಾವಲ್ಲವೆಂದನು ಭಾನುಸುತ ನಗುತ (ಕುಭಾ. ಕ. ೦-೨೪); ಸರಸರಿಸಿ ಬಳಿಕಾ ಮುನೀಂದ್ರರು ಸರಸಿಜಾಕ್ಷನ ಸಂದರುಶನಕೆ ಬರಲು ಬಳಿಯಲಿ ಬಂದು ದೂಱಿದರವರು ಮುನಿವರರ (ತೊರರಾ. ೧-೪-೧೪) ; ಸಾರಿ ದೂಱಿ ಹೇಳುತೇನೆ ಕೆಟ್ಟ ಕಂಡ್ಯ ಬಡ್ಡಿ ಮನವೆ (ಕನಳ. ೩೨ ಪಲ್ಲವಿ). ೨. ಚಾಡಿಹೇಳು : "ದೂಱು–ಪೈಶುನ್ಯೇ (ದೂಱು ಹೇಳು)" (ಶಮದಾ) ; ಮಂದರೋದ್ಧರ ಧರಣಿಪಾಲಕನೆಂದು ನಿಂದಿಹ ತಾಗಿ ಧರಣಿಯಾನಿಂದು ಕದ್ದರೆ ಕಮಲಸಂಭವ ದೂಱುವನು ಹರಿಗೆ (ಸುಭಪ. ೭-೨೮); ಮೆಲ್ಲಮೆಲ್ಲನೆ ಬೆಮರುಣ್ಣೆ ಜಾಣ್ಮೆಯೊಳವಂ ಮಱಸುತ್ತಿರೆ ದೂಱಿದತ್ತು ಕಂಪನಕೃತಕಂಕಣಸ್ವನಮುಮಾಸ್ಯವಿಕಾಸಮುಮಾತ್ತ ರಾಗಮಂ (ರಾಜಶೇ. ೮-೬೪). ೩. ಅಪವಾದ ಹೊರಿಸು ; ಅನ್ಯಾಯವಾದ ಆರೋಪಣೆಯನ್ನು ಮಾಡು : ನೆರೆಯಳ್ ತಾನೀಯಳಿಮ್ಮಂ ಸವತಿತನಕೆ ಶೀತಾಂಶುವಂ ರೋಹಿಣೀಸೌಂದರಿಯೆಂದಿಟ್ಟೆಂದು ದೂಱಲ್ಕೆಱಗಿದಮಳತಾರಾಳಿಯೋ (ಕುಸುಮಾ. ೦೩-೬೬) ; ದನುಜನೊಯ್ದಾಸತಿಯ ರಾಘವ ಮನದ ಮೋಹದಿ ಕೂಡಿಕೊಂಡನುಯೆನುತ ಲೋಕವು ದೂಱುಗೆಂದಾನಿನಿತು ಕಾಡಿದೆನು (ಕೌಶಿರಾ. ೧೩-೫೨). ೪. ಮೊರೆಹೊಗು ; ತೋಡಿಕೊಂಡು ಸಹಾಯವನ್ನು ಕೋರು : ಎನಗಾದದೊಂದು ಪರಿಭವಮನಾರ್ಗೆ ದೂಱಿದಪೆನಾರ್ಗೆ ಪೇೞ್ವಪೆಂ (ಕಾದಂಬ. ೨೯೮) : ಕೂರ್ಪವರಿಂ ಪೇೞ್ವುದು ಬುದ್ಧಿಯನೆಂದು ದೂಱುತಿರ್ಪರ್ ಪೆಂಡಿರ್ (ಸಮುಪ. ೫-೯೮). ೫. ಸುದ್ದಿಮುಟ್ಟಿಸು ; ಹೇಳು ; ನಿವೇದಿಸು ;

ಅರಿಕೆಮಾಡು: ಬಂದನಾ ಗುರು ಮತ್ತೆ ಗಂಗೆಯ ಮಿಂದು ಬಳಿಕಲ್ಲೊಬ್ಬ ಸೂತಜಗೆಂದನೆಲವೋ ನೀನು ಹಸ್ತಿನಪುರಕೆ ದೂಱುವುದು ಇಂದು ಭಾರದ್ವಾಜನನು ತಾನೊಂದು ನೆಗಳ್ಚಿತಂದು ನುಂಗಿತದೆಂದು (ಕಂಭಪ. ೧೮-೨೩); ಗಂಡಗೆ ದೂಱಬೇಕೆನುತಡಱಿದಳು ಸೋಪಾನಪಂಕ್ತಿಗಳ (ಕೃ ಕ ರಾ. ೩-೮-೨೬). ೬. ಅಪಶಕುನ ನುಡಿ: ದೂಱಿತು ಬಲದ ಭಾಗದೆ ಪಲ್ಲಿ ಮುಂಗಟ್ಟೆ ಪಾಱಿತು ವಾಸುಗಿವಕ್ಕಿ (ಮೋಹತ. ೬-೨೩). ದೂರ್: ೧. ಲಿಂಗ ಚಂದಯರೆಲ್ಲ ವಾಚಯ್ಯರಲ್ಲಿ ದೂರ್ದರು ಶರಣು ಶರಣಾರ್ಥಿ (ಮಣಿಕ. ೦೩). ೨. ಗುರುವಿನೆಡೆಗ್ಯಿದಿ ನೀಂ ದೂರ್ದುರ್ದೇಂ (ಪಂಕಾರಾ. ೩-೨೦-೨೯). ದೂರ್ಱು: ೧. ಅವನನ್ನು ದೂರುವ ಹಾಗಿಲ್ಲ (ಕಾವ್ಯಸ. ೫೦); ನಾನೇನೂ ಅವನನ್ನು ದೂರಲಿಲ್ಲ (ಕಾಲಿಮ. ೧೯೦); ಬಲಾತ್ಕರಿಸಿ ನಿನ್ನನ್ನು ತಂದೆನೆಂದು ದೂರುತ್ತಾರೆ (ಜಾಲಂಕ್. ೩೦೦). ೨. ಈ ರೂಹಿನಿಂದವಾನಿರ್ದ ದೆಯು ರಕ್ಕಸರು ದೂರದಿರರಸುರಪತಿ ಕೇಳ್ದರೆ ಕುತೂಹಲಂ ತೋರುತನ್ನಂ ಪಿಡಿವರು (ಪಂಕಾರಾ. ೩-೨-೧೦): ಪೊಂದೊಡಿಗೆಯಂ ತೋರರಲೆಂದು . . . ಕಾಮಗೆ ದೂರಲೆಂದು ಕಾಮುಕಿಯರ್ಕೈತಂದು ಬೀದಿಯ ನಡುವೆ ನಿಂದು ಬೆರಗಾಗಿರ್ದರು (ಕುರಂಗ. ೬-೨೩). ೪. ಕಾಡ ಕಾಪಿನವರ್ಗೆ ದೂರಿದೊಡೆ ಬಾಳ್ವೆಯೇಂ (ಕಾಲೂರ. ೪೯-೬೨).

ದೂಱಿಕೊಳ್ಳು = ನಿಂದಿಸು; ಅವಹೇಳನ ಮಾಡು; ಬಯ್ಯು: ಕೊಟ್ಟಡೆ ಕೊಂಡಾಡಿ ಕೊಡದಿರ್ದರೆ ದೂಱಿಕೊಂಡು ಹೋಹ ಜಂಗಮವಲ್ಲ (ಅವಹಂ. ೨೨೩-೦೦೦೯).

[ದೇ.೩ ತವಿ. ತೂಱು, ತೂಱ್ಱು; ಮಲ. ತೂಱು; ತುಳು. ದೂರು: ತೆಲು. ದೂಱು]

**ದೂಱ್ಱು, ದೂರ್ಱು, ದೂಱ್** (ನಾ). ೧. ನಿಂದೆ; ತೆಗಳಿಕೆ; ಟೀಕೆ: ದೂಱಿದು ತಮ್ಮಯ ಚಿತ್ರಕ್ಕೇಱಿದ ದಿವಸದೊಳ್ ಪೊಲ್ಲಕೆಯ್ದಂ (ಅರ್ಧನೇ. ೩-೪೪); ಪ್ರಿಯಾನನಮನೀಕ್ಷಿಸಲುದ್ಯತೆಯಾಗಿ ತಾನೆ ಲಜ್ಜಿಸಿ ತಲೆವಾಗಿ ಕಂಡು ಮಣಿಕುಟ್ಟಿಮದೊಳ್ ನೆಱಿ ನೋಡಿ ಮತ್ತೆ ಮಾನಸದೊಳಗಿಟ್ಟೊಡಂ ನವಸುಖಾನುಭವಕ್ಕರೆಮುಚ್ಚಿ ಕಣ್ಗಳಂ ಪಸರಿಪ ಹೋವ ಘೂವತತಿಗೆಂದು ಶಶಿಪ್ರಭೆ ದೂಱನೇಱಿಪಳ್ (ಶಂದ್ರಪ್ರ. ೬-೭೭): ಬಸವನ ದೂಱಿಗೊಳಗ ದನೆಯಿಸುತ ತಲೆದೋಱವತ್ತಲೆ ಸರಿವುತಿರೆ (ಬಸಪು. ೯-೩೦): ಅನ್ಯಥಾ ದೂಱು ಪುಟ್ಟಿತು (ಕವ್ಯಾಸು. ೮೨ ವ್ಯಾಖ್ಯಾ). ೨. ಕೆಟ್ಟ ಹೆಸರು; ಅಪವಾದ: "ಗಾರಣಂ—ದೂಱು" (ಕವಿರ. ಹಿ. ೨); ಅವರನಾ ಮಾಟ್ಕೆಯೊಳೆ ನಡೆಯಲೀಯದೆ ಮಾಡಿ ಕಿಡಿಸಿದೊಡೆ ನಿನಗೆ ಪಿರಿದುಂ ದೂಱಕ್ಕುಂ (ಅದಿಪು. ೦೩-೨೩ ವ); ಕಾಮಾಂಧಂ ಕೀಚಕನಾಟಿಸಿ ಗಂಧರ್ವರಿನಿಱಿದನೆನಗೆ ದೂಱಿಲ್ಲನೆಗಂ (ಪಂಪಭಾ. ೮-೭೯): ವರಪುರುಷಾ ಕುಳಕೆಯುನನ್ನಯಕ್ಕೆ ದೂಱಂ ತಂದಳ್ (ಜಾಂತಿಪು. ೩-೮೩); ಸುರಭಿಪ್ರಾಲೇಯಂತೋಯಂಗಳಂ ಯುಂವಮಾಂಥರ್ಗಱಿವಲ್ಲಿ ತಮ್ಮ ಲಲಿತಾಂಗೋಪಾಂಗಕ್ಕಂಗಾರಗೌರವಮಂ ಬೀಱುವರೆಂಬ ದೂಱನೆಸಗುತ್ತಿರ್ಪರ್ ಪ್ರಮಾಕಾಂತೆಯರ್. (ಪುಷ್ಪಪು. ೨-೨೨); ದೂಱು ಮಱವೊಳ್ಮಡಿ ವಂಚನೆಯಂಬುಮಾಯುಮಂ ಪಾಱಿಸಿ ಧರ್ಮಮಂ ನಿಱಿಸಿ ಪಾಲಿಸವೇಟ್ಟುದು ದೇಶಮಂ ನೃಪಂ (ಸೂಕ್ತಿಸು. ೦೬-೮): ತನ್ನಿಂದ ತೋಱಿತು ದೂಱು ದುರ್ಘಯ ಸುದಿಸದಲೇ ತಾಯನೆನುತಳವಳದನಾ ಹನುಮ (ಕೊರರಾ. ೩-೮-೯೭). ೩. ಮೊರೆ; ಇತರರಲ್ಲಿ ತೋಡಿಕೊಳ್ಳುವಿಕೆ; ಅಹವಾಲು; ರಕ್ಷಣೆಗಾಗಿ ಮಾಡಿಕೊಳ್ಳುವ ಬೇಡಿಕೆ: ದೇವರಿಗೆ ದೂಱ್ಱಿದಲಿಂ ದೊಱಲಿದಳು ಲಲಿತಾಂಗಿ (ಕುವ್ಯಾಸ. ೦೫-೨೦): ಆಖಿಳ ಸುರಾಳಿಗಳ ದೂಱಿನಲಿ ಲಕ್ಷ್ಮೀಲೆ ಇಲ ನಿನ್ನುದರದಲಿ ಜನಿಸುವನು (ಕೊರರಾ. ೦-೩-೭). ೪. ಸುದ್ದಿ; ಸಮಾಚಾರ; ವರದಿ. 'ದೂಱಿಂಗಾಱ' ಪರಾ. ೫. ಸ್ವರೂಪ; ಅಪ್ಪಣೆ; ಸೂಚನೆ: ಬೇಱಿ ಬೇಱವನೀಶಂಗೆ ಪಡಿಹಾಱವನಂ ಕಳುಹಿದನು ಕೃಷ್ಣನ ದೂಱು ಬರಲಳವಡಿಸಿದರು ಸಂಗ್ರಾಮಸಾಧನವ (ಕುವ್ಯಾಉ. ೦೧-೧೦). ೬. ಚಿಂತೆ; ವ್ಯಸನ; ಕಾಳಜಿ: ಬೇಱಿ ಮತವೇ ನೆಮಗೆ ಲೋಕದ ದೂಱು ನಿಮ್ಮದು [ಪಾಠಾಂ. ಬೇಱಿ ಮತವೆಮಗೇನು ಬೊಪ್ಪನ ಚಾರಿ ನಿಮ್ಮದು] ನೀವು ಬೊಪ್ಪನ ನೂಱುಮಡಿಯುಮಗೊಳ್ಳಿದರು ಬೇಱನ್ನು ಹಿತರುಂಟೆ (ಕುವ್ಯಾಉ. ೮-೬೩); ಬಱದ ಕಾಪದಿರೆಳು ಮನದಲಿ ಮಱದವಾಗಳೆ ಕೌರವನು ಮುಂದಱಿಯದವಗಡಿಸಿದನು ಹೋಗಲಿ ನಿಮ್ಮ ದೂಱೇಕೆ (ಕುವ್ಯಾಉ. ೧೧-೮). ೭. ವೇದನೆ; ಬಾಧೆ: ಆಡಾಗಿ ಸಾಯರೆ ದೂಱಂಗೆಡೆಯಾಗಿ ಬೇಯರೆ ಪರಸ್ತ್ರೀಗಾಸೆಗೆಯ್ದರ್ವರ್ (ಧರ್ಮಾಮೃ. ೦೩-೦೩೨); ಮೊದಲೆನ್ನ ಹಸಿವಿನ ದೂಱ ನೀ ದಿಟ ನಿಲಿಸಬಲ್ಲೊಡೆ ಮಾಱುಮಾತುಗಳೇನು ಕಾರಣ (ಪ್ರಭುಲೀ. ೨೩-೦೨). ದೂರ್ಱು: ೩. ಪುರಂದರನ ಸಮೀಪವನ್ನೈದಿ ದೂರುಗಳ ಪೇಳಿಕೊಳಲೋಸುಗ ಅಮರಾವತೀಪುರಲಕ್ಷ್ಮಿಯೆ ಬರುವಳೋ ಎಂಬಂತೆ (ಸೌಗಂಧಿ. ೪೮೦-೨೦); ಕಷ್ಟದಲ್ಲಿರುವವರ ದೂರನ್ನು ನ್ಯಾಯವಾಗಿ ವಕಾಲತ್ತು ವಹಿಸಿ ನ್ಯಾಯಾಲಯದಲ್ಲಿ ವಾದಿಸುವ ನ್ಯಾಯವಾದಿಗಳಿಗೇ ವಕೀಲರು ಎಂದು ಹೆಸರು (ಪ್ರಶಾಕ. ೯೨); ವಿವಾದದಲ್ಲಿ ಅಥವಾ ದೂರಿನಲ್ಲಿ ನ್ಯಾಯನಿರ್ಣಯ ಮಾಡುವುದಕ್ಕೆ . . . ಅವಕಾಶವನ್ನು ಕಲ್ಪಿಸಬಹುದು (ಭಾಧಾನ. ೧೪೮): ದೂರು ನನ್ನ ಹತ್ತಿರವೂ ಬಂತು (ದೂಹಸಂ. ೦೩); ದೊರೆಯ ತನಕ ದೂರು, ಹೊಳೆಯ ತನಕ ಓಟ (ಗಾದೆ). ೮. ಚಾಡಿ: ಇತರರ ಮೇಲೆ ದೂರನ್ನು ಹೇಳುವುದೇ ಅವನ ಸ್ವಭಾವ (ದೂಕೋ). ದೂಱ್: ೨. ದನುಜಾರಾತಿ ಸ್ಯಮಂತರತ್ನವ ನೃಪಂಗೀಯಲ್ಕೆ ದೂಱ್ ಪೋದುದೇ (ಸೋಮೇಶ. ೮೩). ೯. (?): ಪೊಡವಿಪತಿ ಗೊರವನೆನೆ ಬೇಟ್ಟಡೆಯದುದುವದಕರಿಸಿ ಕಬ್ಬಿಗರ್ದೂಱನೆಯುಂ ಹಡುವಸುಮಱಿಸಿಟ್ಟಸುಗೆಮ್ಮುಡಿಯೊಳಮಾರ್ಗಂದು ನುಡಿವ ಪ ಟ ಗ ನ್ನ ಡ ಮಂ (ಕವಿರಾ. ೦-೪೯).

ದೂರು ಹೇಳಿಕೊಳ್ಳು = ಮೊರೆಯಿಡು: ಬಿನ್ನವಿಸಿಕೊಳ್ಳು: ವಾಲ್ಲವ್ವನು ಆ ಊರ ದೊರೆಯ ಬಳಿಗೆ ಹೋಗಿ ದೂರು ಹೇಳಿಕೊಂಡಳು (ನೀತಿಕಿಂ. IX, ೩೦). ದೂರು ಹೇಳು= ೧. (ತನಗಾದ ತೊಂದರೆಯನ್ನು ಕುರಿತು) ಬಿನ್ನವಿಸು; ಮೊರೆಯಿಡು: ಮೃಗಗಳ ಬಾಧೆಗೆ ಸೈರಿಸಲಾರದೆ ಬಂದು ಧೊರೆಯಾದ ಸುಚರಿತ್ರರಾಮನಿಗೆ ದೂರು ಹೇಳಲಾಗಿ (ಸೌಗಂಧಿ. ೨೪-೪). ೨. ಚಾಡಿ ಹೇಳು: ಅಪಾದನೆಮಾಡು: ತಂಬಟೆ ಹೋಗಿ ಭೇರಿಗೆ ದೂರು ಹೇಳಿದ ಹಾಗೆ (ಗಾದೆ). ದೂರು ಹೊರಿಸು = ನಿಷ್ಕಾರಣವಾಗಿ ಆರೋಪಿಸು: ನನ್ನ ತಂಗಿಯ ಮೇಲೆ ದೂರು ಹೊರಿಸುವುದು ನನ್ನ ವೃತ್ತಿಯೆ? (ವಾತ್ಸಲ್ಯ. ೦೦೮). ದೂಱು ತರು, ದೂರು ತರು = ೧. ಅಪವಾದ ಬರುವಂತೆ ಮಾಡು; ಕೆಟ್ಟ ಹೆಸರು ತರು: ಹೆತ್ತಮನೆಗೆ ದೂರುತರ ಬೇಡವೆಂದು ಹೆಣ್ಣುಮಕ್ಕಳಿಗೆ ಬುದ್ಧಿವಾದ ಹೇಳುವುದು ಸಂಪ್ರದಾಯ (ದೂಕೋ). ೨. ಚಾಡಿ ಹೇಳು: ಕುಂದು ನಿಂದೆ ಬಂದರೆ ದೂಱು ತಂದು ಕೊಡುವರು ಲಕ್ಷ್ಮೀರಮಣ (ಪುರಂದ. ೪-೯-೨). ದೂಱು ಮಾಡು, ದೂರು ಮಾಡು = ಅಪವಾದವನ್ನು ಹೊರಿಸು; ಆರೋಪಣೆ ಮಾಡು: ದೂಱುಮಾಡುವರೇನೆ ರಂಗಯ್ಯನ ದೂಱುಮಾಡುವರೇನೆ (ಪುರಂದ. ೦-೯೪ ಪಲ್ಲವಿ); ಬ್ರಹ್ಮಾನಂದನೂ ಅವಳು ರೋಹಿಣಿಯನ್ನು ಊರು ತುಂಬ ದೂರುಮಾಡಿರುವುದಾಗಿ ಬರೆದನು (ಬಂಕಿಮ. ೭೦). ದೂಱು ಮುಟ್ಟು = ಅಪವಾದ ಬರು; ಆರೋಪಕ್ಕೆ ಗುರಿಯಾಗು: ಮೊಱಿಯಿಟ್ಟ ಕಾಯದಿರೆ ದೂಱು ಮುಟ್ಟುವುದು ಶ್ರೀ ಲಕ್ಷ್ಮೀರಮಣ (ಪುರಂದ. ೪-೯-೧). ದೂಱು ಹೊಱು, ದೂರು ಹೊರು = ೧. ನಿಂದೆ ಬರು; ತೆಗಳಿಕೆ ಅಂಟಿಕೊಳ್ಳು: ಕಿಡದು ದನುಜರು ಕೇಣವಿಲ್ಲದೆ ತೊಡಗಿದಾಹವದೊಳಗೆ ಕೊಂದವ ಕೊಡನ ಮ ಗ ನೋ ೯ ದೂಱು

ಹೊತ್ತುದು ಬಱಿದೆ ಹಗೆಗಳಿಗೆ (ಕುಮಾರವ್ಯಾ. ೧೩-೩೩). ೨. ಅಪವಾದಕ್ಕೆ ಈಡಾಗು; ಆರೋಪಕ್ಕೆ ಪಕ್ಕಾಗು: ದೂರು ಹೊರೋಕಿಂತ ಮಾರಿ ಹೊರೋದುತ್ತಮ (ಗಾದೆ).

[ <ದೂಱು$_1$./ತಮಿ. ತೂಱು ; ಮಲ. ತುಳು. ದೂರು ; ಕೊಡ. ದೂರೀ ; ತೆಲು. ದೂಱು ]

**ದೂಱುಕಾಱ** 'ದೂಱ ಗಾಱ' ನೋ.

**ದೂಱುಗ,** ದೂರುಗ (ನಾ). ೧. ವರ್ತಮಾನ ಒಯ್ಯುವವನು ; ವರದಿ ಒಪ್ಪಿಸುವವನು ; ದೂತ ; ಸೇವಕ : ಪರಾತ್ಪರವಸ್ತು ನಸುನಗುತ ತೋಱಿದನು ಬಳಿಕುಮೆಗೆ ರಾವುನ ದೂಱುಗರ ನೋಡಿವರನೆನೆ ಹೊರೆಯೇಱಿ ಹೊಂಪುಳಿಯೋದಳುಮೆ ಮಹಿಮೆಗೆ ಮಧುದ್ವಿಷನ (ತೊರವೆರಾ. ೪-೯-೩೨). **ದೂರುಗ :** ೨. ಅಪವಾದ ಹೊರಿಸುವವನು ; ಆರೋಪ ಮಾಡುವವನು : ಅದು ಇಲ್ಲದಿದ್ದರೆ ವ್ಯಕ್ತಿಯಲ್ಲಿ ಉಡಾಳತನ ಬೇರೂರಿದೆ ಎಂದು ದೂರುಗರಿಗೆ ಅವಕಾಶ ಸಿಕ್ಕಂತಾಗುವುದು (ಗೋಯೂತ್ರ. ೩೩).

[ ದೂಱು$_2$ + – ಗ$_2$ ]

**ದೂಱುಗಣ್** (ನಾ). ದೈನ್ಯವನ್ನು ಸೂಚಿಸುವ ಕಣ್ಣು ; ಮೊರೆಯಿಡುವ ಕಣ್ಣು : ಜಾಱಿದುಬ್ಬಿನ ಹೊತ್ತ ದುಗುಡದ ಮೋಱೆಗಳ ಮೋನದ ನಿಹಾರದ ದೂಱುಗಂಗಳ ದೇವನಿಕರವ ಕಂಡು ಕರುಣದಲಿ . . . ಶಿವ ತೋಱಿ ನುಡಿದನು ಪಾಶುಪತ್ಯದ ಸಾರಸಂಗತಿಯ (ಕುಮಾರವ್ಯಾ. ೬-೨೫).

[ ದೂಱು$_2$ + ಕಣ್ ]

**ದೂಱುಗಾಱ,** ದೂಱುಕಾಱ (ನಾ). ೧. ಸಮಾಚಾರವನ್ನು ತಿಳಿಸುವವನು ; ದೂತ : ಜವನ ದೂಱು[ಪಾಠಾಂ. ದೂದು]ಗಾಱರ ಜಂಗುಳಿ ...ಕೊಡಲಿಯು ಕೂರ್ವಾಳ ಪರುಟವಣೆಯ ಸಡಗರದ ದಟವುಟದಿಂ ಬಂದು ಮುತ್ತಿ ಮುತ್ತಿ ಅಱಗುಲಿ ಜೀವಾತ್ಮನಂ ಸೆಱೆವಿಡಿದತ್ತು (ರಾಮಾಶ್ವ. ೬೯-೨೦). **ದೂಱುಕಾಱ:** ೨. ಮೊರೆಯಿಡುವವನು : ನಗರ ಮಾಱಱ ದೂಱುಕಾಱರ ದುಗುಡವನು ಪರಿಹರಿಸಿ ಕರುಣಾಳುಗಳರಸ ಶಿವ ಸಂತವಿಟ್ಟನು ಸುರಕದಂಬಕವ (ಕುಮಾರವ್ಯಾ. ೮ ಸೂಚನೆ) ; ಕೇಳಿದನು ಕಡು ದೂಱುಕಾಱರ ನಾಲಿಗೆಯ ರಚಿತೋಕ್ತಿಯನು ಕರುಣಾಳುಗಳ ಬಲ್ಲಹನು ನಿದ್ರಾಯೋಗವಮುದ್ರೆಯಲಿ (ತೊರವೆರಾ. ೦-೮-೩೪).

[ ದೂಱು$_2$ + – ಕಾಱ ]

**ದೂಱುಗೇಳ್** (ಕ್ರಿ). ನಿಂದೆಯನ್ನು ಕೇಳು ; ನಿಂದೆಗೆ ಕಿವಿಗೊಡು : ದೂಸಕರ ದೂಱುಗೇಳ್ದಂ ಕೊಲ್ಗಂ ಪೇಸುವನಲ್ಲಂ ಸಮುದ್ರವಿಜಯಂ (ಅರ್ಹನೇ. ೫-೧೪). [ ದೂಱು$_2$ + ಕೇಳ್ ]

**ದೃಕ್ಕು** (ನಾ). ೧. ಕಣ್ಣು ; ನೇತ್ರ : "ದೃಕ್ಕೆಂಬುದಂ ಕಣ್ಣೆನಲ್ಕಕ್ಕು" (ಶಬ್ದಸ್ಮೃ. ೬೨) ; ವಿಭವಕ್ಕೆ ಬಾಹ್ಯದಲ್ಲಿ ಮುಟ್ಟಿ ನೋಡಿಹೆನೆಂದಡೆ ಚಿತ್ತಶುದ್ಧನಲ್ಲದ ಕಾರಣ ದೃಕ್ಕಿಂಗೆ ತೋಱಿ ಸರ್ವಾಂಗದಲ್ಲಿ ಲಕ್ಷ್ಯವಾಗದೆಂಬುದಕ್ಕೆ ಸೂಚನೆ (ಮೋಳಿಗೆ. ೯೮-೩೮೬) ; ಲಿಂಗದೃಷ್ಟಿ ಪರಿಪೂರ್ಣವಾದಲ್ಲಿ ದೃಕ್ಕಿಂಗೆ ತೋಱುವುದೆಲ್ಲವೂ ಲಿಂಗಮಯವಾಗಿ (ಮಾದೇವ. ೨೮೬-೬೬) : ಭಾವದ ದೃಕ್ಕಿನಿಂದ ನವಲಿಂಗಂಗಳ ನೋಡಿ ಪೂಜಿಸಿ (ಅಖಂಡೇ. ೨೩೧-೮೩). ೨. [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ. [ ಸಂ. ದೃಶ್ ]

**ದೃಕ್ಕುಬೊಂಬೆ** (ನಾ). ಕಣ್ಣಿನ ಪಾಪೆ ; ಕಣ್ಣುಗೊಂಬೆ : ಇಂತೀ ಉಭಯ ಬಿನ್ನವಾದಲ್ಲಿ ಎನ್ನ ಮಱವೆಯೇ ನಿನ್ನ ಕೇಡು ನಿನ್ನ ಮಲ ಎನ್ನ ಕೇಡು ಅದು ದೃಕ್ಕುಬೊಂಬೆಯಂತೆ ನಿಶ್ಚಯವಾದಲ್ಲಿ ನೀನೇ ನಿಃಕಳಂಕ ಮಲ್ಲಿಕಾರ್ಜುನಾ (ಮೋಳಿಗೆ. ೩೬-೦೪೯). [ ದೃಕ್ಕು + ಬೊಂಬೆ ]

**ದೃಕ್ಕುಸ್ಥಿತಿ** (ನಾ). [ಯೋಗ] ರಾಜಯೋಗದ ಹದಿನೈದು ಬಗೆಯ ಯೋಗಾಂಗಗಳಾದ ಯಮ, ನಿಯಮ, ತ್ಯಾಗ, ಮೌನ, ದೇಶ, ಕಾಲ, ಆಸನ, ಮೂಲಬಂಧ, ದೇಹಸಾಮ್ಯ, ದೃಕ್ಕುಸ್ಥಿತಿ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣೆ, ಧ್ಯಾನ ಮತ್ತು ಸಮಾಧಿ ಎಂಬವುಗಳಲ್ಲಿ ಹತ್ತನೆಯದು : ದೃಕ್ಕು ದೃಶ್ಯವು ನಶ್ಯ ಮೂರನು ದೃಷ್ಟಿಸಿಯೆ ನೋಡ್ಯಾವವಸ್ತುವು ದೃಷ್ಟದಿಂ ಅದು ತಾನೆಯೆಂದೇ ಅದುವೆ ತಾನಾಗಿ ದೃಷ್ಟಿಸಿಯೆ ತಾ ನೋಡುತಿಹುದೇ ಶಿಷ್ಟ ದೃಕ್ಕುಸ್ಥಿತಿಯಿದೆಂದು ಯಥೇಷ್ಟದಿಂ ಯೋಗಿಗಳು ಹೊಗಳ್ವರು ದೃಕ್ಕುಸ್ಥಿತಿಯೆಂದು (ಜ್ಞಾನಸಿಂ. ೧೭-೨೮). [ ದೃಕ್ಕು + ಸ್ಥಿತಿ ]

**ದೃಕ್ಕೋಣ** (ನಾ). ನೋಡುವ ರೀತಿ ; ದೃಷ್ಟಿಕೋನ : ಕೇವಲ ಕರ್ಮಾತಭಾವದಿಂದ, ಪಾಪ ಪುಣ್ಯಗಳ ದೃಕ್ಕೋಣದಿಂದ ನೋಡಿದರೂ ಅರ್ಜುನನು ಯಾರಿಗಾಗಿ ಎಂದರೆ ಯಾವ ಶತ್ರುಗಳಿಗಾಗಿ ಅಳಬಾರದೋ ಅಂಥವರಿಗಾಗಿ ಅಳುತ್ತಿದ್ದಾನೆ (ಭಾರದ. ೧೦೩). [ ಸಂ.

**ದೃಕ್ಕ್ರಿಯಾತ್ಮಕ** (ನಾ). [ ಯೋಗ ] ದರ್ಶನ ಮತ್ತು ಕರ್ಮ ಇವೆರಡನ್ನೂ ಕೂಡಿಕೊಂಡಿರುವುದು : ಜ್ಞಾನಯೋಗಿಯಾದವನು ಕರ್ಮಯೋಗಿಯೂ ಆಗಬೇಕು ; ಏಕೆಂಬರೆ ಯೋಗ ದೃಕ್ಕ್ರಿಯಾತ್ಮಕವಾದದ್ದು (ಭಾರದ. ೦೦೫). [ ಸಂ. ]

**ದೃಕ್ಛ್ರುತಿ** (ನಾ). ಕಣ್ಣೇ ಕಿವಿಯಾಗಿರುವ ಪ್ರಾಣಿ ; ಹಾವು ; ಸರ್ಪ : "ವಿಷಧರಃ, ದಂದಶೂಕಃ . . . ದೃಕ್ಛ್ರುತಿಃ, ಭುಜಂಗಮಃ – ಈ ೨೫ ಪಾವಿನ ಪೆಸರ್" (ಹಲಾಯು. ೦೦೫-೧೮). [ ಸಂ. ]

**ದೃಕ್ಪಥ** (ನಾ). = ದೃಗುಪಥ : ಭರತಗೆ ರಾಜ್ಯಸಿರಿಯನಿತ್ತಾದೊಡಂ ತಪ್ಪದಿಂದೆನ್ನ ದೃಕ್ಪಥವನಗಲದೆ ಸುಖದೊಳಿಪ್ಪುದುಚಿತವು (ವೆಂಕಾರಾ. ೨-೯-೩೨). [ ಸಂ. ]

**ದೃಕ್ಪರಿಧಿ** (ನಾ). ನೋಟದ ಮೇರೆ ; ದೃಷ್ಟಿಯ ಎಲ್ಲೆ : ಎತ್ತಣನೊ ದೃಕ್ಪರಿಧಿಯಾಚೆಯಿಂದಲನಂತಸತ್ತ್ವ ತೆರೆತೆರೆಯಾಗಿ ಬೀಸಿ ಗೂಢದಲಿ ಚಿತ್ತರಿಸುತಿಹುದು ಹೊಸಹೊಸತನವನೆಡೆಬಿಡದೆ (ಮಂಕುಕ. ೯೨). [ಸಂ.]

**ದೃಕ್ಪ್ರಭೆ** (ನಾ). ಕಣ್ಣಿನ ಕಾಂತಿ,-ಪ್ರಕಾಶ; ನೇತ್ರದ ಹೊಳಪು : ದಿಕ್ಚಕ್ರಮನಚ್ಚಜೊನ್ನಮೆಳಸಿತ್ತೆಬನ್ನೆಗಂ ತುಂಬೆ ದೃಕ್ಪ್ರಭೆ . . . ಬಂದಳ್ ಕುಡುತುಂ ಶಶಿಪ್ರಭೆ ಜನಾಕ್ಷೀಂದೀವರಾನಂದಮಂ (ಚಂದ್ರಪ್ರ. ೬-೬೯).

[ ಸಂ. ದೃಕ್ಪ್ರಭಾ ]

**ದೃಕ್ಸಹಸ್ರ** (ನಾ). ಸಾವಿರ ಕಣ್ಣುಗಳು : ದೇವಗಣಿಕಾತತಿಯಾತನ ಗೀತಮಂ ನಿಜಾನಂದದೆ ಪಾಡೆ ಕೇಳಲೆರಡುಂ ಕಿವಿಯಿಲ್ಲದೆ ತನ್ನ ದೃಕ್ಸಹಸ್ರಂ ದಿಟದಿಂದೆ ಕರ್ಣಚಯಮಾಗದೆ ನಿಷ್ಫಲಮಾದುದೆಂದು ಸಂಕ್ರಂದನನೆಯ್ದೆ ಕಣ್ಗೆ ಕಿಸುಗಣ್ಣುಮನಾತ್ಮಸಭಾಂತರಾಳದೊಳ್ (ಚಂದ್ರಪ್ರ. ೦೦-೯೬).

[ ಸಂ. ]

**ದೃಕ್ಸಿದ್ಧಾಂತ** (ನಾ). [ಜ್ಯೋತಿ] (ಆಧುನಿಕ ಯಂತ್ರ ಸಹಾಯದಿಂದ) ಗ್ರಹಗಳ ಸ್ಥಿತಿಯನ್ನು ಪ್ರತ್ಯಕ್ಷವಾಗಿ ಕಂಡುಕೊಂಡು ನಿರ್ಣಯಿಸುವ ಖಗೋಳ ವಿಜ್ಞಾನ; ಜ್ಯೋತಿರ್ವಿಜ್ಞಾನ. 'ದೃಗ್ಗಣಿತ' ಪರ್ಯಾ [ ಸಂ. ]

**ದೃಕ್ಸೌಮ್ಯ** (ಗು). ಕಣ್ಣಿಗೆ ಹಿತವನ್ನುಂಟುಮಾಡುವ ; ನೇತ್ರಾನಂದಕರವಾದ : ಪ್ರಕ್ಷುಭಗೋರಸ್ಸ್ಥಳನಂ ದೃಕ್ಸೌಮ್ಯಶರೀರನಂ ಸವೇಣುಸ್ವನನಂ ಪಾಕ್ಸಾರನನಾ ಬಳವಿಷ್ವಕ್ಸೇನರ್ ಗೋಪಬಂಧುಗಿತ್ತರ್ ಖಳನಂ (ಜಗವಿ. ೪-೫೦). [ ಸಂ. ]

**ದೃಗಂತ** (ನಾ). ಕಣ್ಣಿನ ಕೊನೆ ; ಅಪಾಂಗ ; ಕಟಾಕ್ಷ : ತನ್ನ ದೃಗಂತದಿಂದೀಕ್ಷಿಸುತ ಪ್ರಿಯೆ ಪೋಗೆ ಬಂದುದೀ ಬೇಗೆ (ಶಾಕುಂತ. ೦೮ ಅವಿಶಿಷ್ಟ).

[ ಸಂ. ]

**ದೃಗಂತರ** (ನಾ). ಕಣ್ಣಿನ ಒಳಗು,-ಒಳಭಾಗ : ಚರಣಾಲಕ್ತಕಲಾಂಛನಂ ನಿಟಿಲದೊಳ್ . . . ತಾಂಬೂಲರಾಗಂ ದೃಗಂತರದೊಳ್ ಪುಷ್ಪರಜಃಪ್ರಲೇಪಮುರದೊಳ್ ತಳ್ತಿರ್ಪುದು (ಕಾವ್ಯಸಾ. ೬೫೫). [ ಸಂ. ]

ದೃಗಂಬು (ನಾ). ಕಣ್ಣೀರು ; ಕಂಬನಿ ; ಅಶ್ರು : ಮೃಗನಯನೆಯ ಮನದ ಖೇದಮಂ ಪಚ್ಚುಗೊಳಲ್ ಬಗೆದಂತಾಕುಳಚಿತ್ತಂ ದೃಗಂಬುವಂ ತೊಡೆದು ಮೆಲ್ಲನಂದಿಂತೆಂದಂ (ಚಂದ್ರಪು. ೩-೫೩). [ ಸಂ. ]

ದೃಗು (ನಾ). ೧. = ದೃಕ್ಕು ೧ : ಮೊಗಸದಾದವು ನೋಡಲಮರರ ದೃಗುಗಳಸುರರ ಸುಪ್ರತಾಪದ ಸೆಗಳಿಕೆಯ ಶಿಖಿಯುಬ್ಬರದ ಸಂತಾಪಲಹರಿಯಲಿ (ತೊರರಾ. ೭-೨೦-೫೨). ೨. = ದೃಕ್ಕು ೨ : ನಯನ . . . ದೃಗು ಯಮಳ ಲೋಚನ ದಂಪತಿ ಇಂತಿನಿತುಂ ಇಕ್ಕೆ ಹೆಸರು (ಕೃಕಹಾ. ೧೦-೦೩). [ <ಸಂ. ದೃಶ್ ]

ದೃಗುಜಲ (ನಾ). = ದೃಗಂಬು : ಅಂದು ಭಂಗಿಸುವಲ್ಲಿ ದೃಗುಜಲಬಿಂದುವೊಂದುಂ ಹೊಱವಡದು . . . ಇಂದದೇನು ನಿಮಿತ್ತಂ ಸಲಿಲಂ ನಿನ್ನ ನಯನದಲಿ (ಬಸಪು. ೧೮-೫೩) : ಕೊರಳ ಸೆರೆ ಹಿಗ್ಗಿದವು ದೃಗುಜಲ ಉರವಣಿಸಿ ಕಡುನೊಂದನಕಟಾ ಕುರುಪತಿಗೆ ಕೇಡಾದುದೆಂದನು ತನ್ನ ಮನದೊಳಗೆ (ಕುವ್ಯಾಉ. ೧೦-೦೧) : ಮಗನ ಮರಣದಲೆಂತು ಜೀವವ ಬಗೆವಳಕಟ ಸುಭದ್ರೆಯೆನುತವೆ ದೃಗುಜಲವ ಬೆರಳಿಂದ ಮಿಡಿದರು ಗೌರಿದೇವಿಯರು(ಕುವ್ಯಾದ್ರೋ. ೭-೯೪); ದೃಗುಜಲಗಳೊಱತೆಗಳ ತೋಳಪ್ಪುಗೆಯ ಮಿಗೆ ತೋತ್ಸವದ ಸಮರದ ನಗಮಹೀರುಹ ಮುಕ್ತಹಸ್ತರ ನೋಡುತೈತರಲು (ತೊರರಾ. ೬-೪೧-೪೩). [ ದೃಗು + ಜಲ$_2$ ]

ದೃಗುದೀಧಿತಿ (ನಾ). ಕಣ್ಣಿನ ಕಾಂತಿ : ಶತದಳಾಯತಲೋಲದೃಗುದೀಧಿತಿಗಳಲ್ಲಿಯೆ ಸಿಕ್ಕಿ ಕಾಲಿಡಲಱಿಯದೋರಂತೆ ರತಿಪನೆಸುವ ನಿಶಾತಮಾರ್ಗಣಹತಿಗೆ ಗುಱಿಯಾದೆನು (ಬಸಪು. ೪೦-೭). [ ದೃಗು + ದೀಧಿತಿ ]

ದೃಗುಪಥ (ನಾ). ದೃಷ್ಟಿಯ ಹರಹು ; ಕಣ್ಣಳತೆ ; ನೋಟ : ನೆಗಹಿ ಬೀಸುವ ಚೌರಿಗಳ ಸನ್ನೆಗೆ ಚತುರ್ಬಲವೆಲ್ಲ ದ್ರೋಣನ ದೃಗುಪಥಕೆ ತೋಱಿದರು ತಂತಮ್ಮಾಳು ಕುದುರೆಗಳ (ಕುವ್ಯಾದ್ರೋ. ೯-೦೭). [ ದೃಗು + ಪಥ ]

ದೃಗುಮಧ್ಯ (ನಾ). ಕಣ್ಣಿನ ಗುಡ್ಡೆ ; ಕಣ್ಣಾಲಿ : ನಗ ಮರುತಂ ಋಕ್ಷ ಮುಕ್ತಾಫಲಂಗಳ್ ದೃಗುಮಧ್ಯಂ . . . ಶುಭ್ರಾದಿಗಳ್ ತಾರಶಬ್ದಂ (ನಾನಾರ. ೪೦). [ ದೃಗು + ಮಧ್ಯ ]

ದೃಗುಯುಗ (ನಾ). ಎರಡು ಕಣ್ಣುಗಳು : ಬಿಚ್ಚಿದ ಕೇಶಪಾಶದ ಮುಗಿದ ಸರಸಿಜದಂತೆ ದೃಗುಯುಗದೊರೆತ ಕಂಬನಿಯ ಒಗುವಪಾಂಗದ . . . ಬಿಗಿದ ದಾಳಿಂಬವನು ಹೋಲುವ ಬಾಯ ಬಿಡುತಿರಲು (ಕಾಶಿರಾ. ೦೦-೫೪); ನಗೆಮೊಗದ ಮಿಂಚುಗಳ ದೃಗುಯುಗದ ಕಾಂತಿಗಳ . . . ಮಿಗಡೆಯನೆರೆದು ಕಾಳಗಕೆ ಮುಂಕೊಳುತಿರ್ದರು (ಕೃಮಿಥಾ. ೦೭-೪). [ ದೃಗು + ಯುಗ ]

ದೃಗುಯುಗಳ (ನಾ). = ದೃಗುಯುಗ : ದೃಗುಯುಗಳ ಜಲಬಿಂದುಗಳಿಗಾ ಜಲಬಿಂದು ಸೂಸಿವಂತೆ ಒಗುವ ಖಂಡಿತಹಾರ ಮುಕ್ತಾಳಿಗಳು ಮೆಱೆದವು (ಕುವ್ಯಾಸ. ೦೪-೭೦) ; ಯುಗದ ಪರಿಯವಸಾನದುದಯದಲಗಧರನು ಲೀಲೆಯಲಿ ಮನುವಿನ ದೃಗುಯುಗಳ ಗೋಚರಕೆ ಸುಳಿದನು ಮತ್ಸ್ಯರೂಪದಲಿ (ನಿಭಾಗ. ೨-೩-೨) : ಬಿಗಿದ ಪದ್ಮಾಸನ ನಾಸಿಕಾಗ್ರದ ದೃಗುಯುಗಳ ಸಂಚಲಿಸದ ಚಿತ್ತ ಬಗೆದೋಱುತಿಹ ರಾಮನಾಮವ ಜಾನಿಪ ಜಗದೆಱೆಯನ ಕಾವ ಕಂಡ (ಮೋಹತ. ೭-೩೪). [ ದೃಗು + ಯುಗಳ ( = ಯುಗಲ) ]

ದೃಗುವಿಹೀನ (ನಾ). ಕಣ್ಣುಗಳಿಲ್ಲದವನು ; ಕುರುಡ : ದೃಗುವಿಹೀನರ ಬಾಳಿಕೆಯ ಸುಡಲೆನುತ ತನ್ನೊಳು ಹಿರಿದು ಚಿಂತಿಸಿದ (ಕುವ್ಯಾಭೀ. ೧-೫೪): ದೃಗುವಿಹೀನನು ಕತ್ತಲೆಯ ಮೊಗೆಮೊಗೆದು ಕಡೆಗಾಣದವೊಲಿಂಸಂಯುಗಕೆ ಸರಣಿಯ ಕಾಣದುಸುರಿಡುತಿರ್ದನಸುರೇಂದ್ರ (ತೊರರಾ. ೬-೪೦-೩). [ ದೃಗು + ವಿಹೀನ ]

ದೃಗುಶಿಖಿ (ನಾ). ಕಣ್ಣಿನ ಬೆಂಕಿ ; ನೇತ್ರಾಗ್ನಿ : ದೃಗುಶಿಖಿ ಕಿಡಿಗಳೊಗೆ ಭುಗಿಭುಗಿಲು ಛಿಟಿಛಿಟಲೆನುತ ಮಿಗೆ ನೆಗೆಯೆ (ಬಸಪು. ೦೭-೧೯) ; ಸಗರಸುತ ಚರಿತವನು ಕಪಿಲನ ದೃಗುಶಿಖಿಯುಲುರಿದುದನು ಬಳಿಕವರಿಗೆ ಭಗೀರಥ ನಿಳುಹಿದಮರನದೀಕಥಾಂತರವ . . . ಮುನಿಪ ವರ್ಣಿಸಿದ (ಕುವ್ಯಾಅ. ೯-೦೩). [ ದೃಗು + ಶಿಖಿ ]

ದೃಗುಸನ್ನೆ (ನಾ). ಕಣ್ಣಿನಿಂದ ಮಾಡುವ ಸೂಚನೆ.-ಸಂಕೇತ; ಕಣ್ಣುಸನ್ನೆ : ಇಂಚರದಮರಿಯರೊಡನಾಡುವ ನೇತ್ರಲಾಂಛನಗುಱಿ ಮೇಘವೆಣ್ಣುಸಂಚಲದೃಗುಸನ್ನೆಯ ಮಾಡಿದಾದದಿ ಮಿಂಚಡರಿತು ನಭಸ್ಥಲದಿ (ಮೋಹತ. ೪-೩೩). [ ದೃಗು + ಸನ್ನೆ$_2$ ]

ದೃಗ್ಗಣಿತ (ನಾ). [ಜ್ಯೋತಿ] ಗ್ರಹ, ನಕ್ಷತ್ರ ಮುಂತಾದುವುಗಳನ್ನು ಪ್ರತ್ಯಕ್ಷವಾಗಿ ಪರಿಶೀಲಿಸಿ ತಯಾರಿಸಿದ ಲೆಕ್ಕ ; ಜ್ಯೋತಿರ್ಗಣಿತ. ‘ದೃಕ್ಸಿದ್ಧಾಂತ’ ಪರಾ. [ ಸಂ. ]

ದೃಗ್ಗೋಚರ (ನಾ). ಕಣ್ಣಿಗೆ ಕಾಣಿಸುವಂಥವಂ ; ದೃಷ್ಟಿಗೆ ಗೋಚರವಾಗುವಂಥದು : ಕಣಾದನ ವೈಶೇಷಿಕದರ್ಶನ ಅಣುಗಳ ಸಂಯೋಗವಿಯೋಗವಿಶೇಷವೇ ದೃಗ್ಗೋಚರವಾಗುತ್ತಿರುವ ಜಗತ್ತೆಂದಿತು (ಭಾಕದ. ೧೨೨) : ಸೂಕ್ಷ್ಮವಾಗಿ ಅವಲೋಕಿಸಿದಾಗ ನಮ್ಮೆದುರು ಮೂರೇ ಮೂರು ಜೀವನ ತತ್ತ್ವಗಳು ದೃಗ್ಗೋಚರವಾಗುತ್ತವೆ (ಧರ್ಮಸಾ. ೩). [ ಸಂ. ]

ದೃಗ್ದೀಪ್ತಿ (ನಾ). = ದೃಕ್ಪ್ರಭೆ : ಮುಗಿಲೊಡ್ಡಂ ಕುಡುಮಿಂಚಿನಬ್ಬರಮುಮಂ ಶಕ್ರಾಸ್ತ್ರಮುಂ ತಂದಲಂ ನಗಭಿದ್ಗೋಪಕಳಾಪಮುಂ ಕಚಭರಂ ದೃಗ್ದೀಪ್ತಿ ಕಾಂಚೀರವಂ ಸೊಗಯಿಪ್ಪಾಭರಣಾಂಶು ದೇಹರುಚಿ ಕೆಂಬಾಯ್ ಪೋಲೆ (ಪುಷ್ಪಪು. ೧೪-೪೭). [ ಸಂ. ]

ದೃಗ್ಯುಗ (ನಾ). = ದೃಗುಯುಗ : ಹರಿಯಾತನೇ ದೃಗ್ಯುಗಕೆ ಗೋಚರನಾದನು (ಕುವ್ಯಾಅ. ೦೪-೨೦). [ ಸಂ. ]

ದೃಗ್ಯುಗಳ (ನಾ). = ದೃಗುಯುಗ: ನಗುವಂತಿರ್ದಪ್ಪುದಿಂತೀ ವದನಮುರುಳಿಗೊಂಡಿರ್ಪುದೀ ಕೇಶಮೀ ದೃಗ್ಯುಗಳಂ ಕನ್ನೆಯ್ದಿಲಂತಿರ್ದಪ್ಪುದು (ಕಾದಂಉ. ೭೩೨) ; ಕೇಳಿಯಮರೆ ಸುವಾದವ ತಿದ್ದಲು ಕಾಳಿ ನಿರ್ವಾಣದಾಕೃತಿಯ ತಾಳಿ ಬಂದಿದಿರಾಗಿ ನಿಲಲಚ್ಯುತ ನೋಡಿ ಹೂಳಿದ ದೃಗ್ಯುಗಳವನು (ಮೋಹತ. ೩೮-೨೪). ‘ದೃಗುಯುಗಳ’ ಪರಾ. [ ಸಂ. ದೃಗ್ಯುಗಲ ]

ದೃಙ್ಮಾಲ (ನಾ). ಕಣ್ಣಿನ ಕುಣಿಕೆ ; ಕಣ್ಣಿನ ತುದಿ : ದೃಙ್ಮಾಲದೊಳ್ ಮುದಶ್ರುವೊಗೆಯೆ ಕರಯುಗ್ಮಂಗಳ ಮುಗಿದು (ಉದ್ಭದೇ. ೩-೭೦). [ಸಂ.’

ದೃಢ (ಗು). ೧. ಭದ್ರವಾದ ; ಮಜಬೂತಾದ ; ಬಿಗಿಯಾದ ; ಗಾಢವಾದ. ೨. ಬಲವಾದ ಶಕ್ತಿಯುಳ್ಳ ; ಬಲಿಷ್ಠ. ‘ದೃಢಾಯ್ಸು’ ಪರಾ. ೩. ಸ್ಥಿರವಾದ ; ಅಚಲವಾದ: “ಸ್ಥಿರ, ಸ್ಥಾಯಿ, ದೃಢ, ನಿತ್ಯ” (Constant. ಪಾರಿನಿ. ೨೧). ೪. ಕಠಿನವಾದ; ಗಟ್ಟಿಯಾದ. ೫. ನಿಶ್ಚಯವಾದ ; ದಿಟವಾದ ; ಸ್ಥಿರಪಡಿಸಿದ : ಹಿಂದಿರುಗಿ ಬರಬೇಕಾಗಿದ್ದ ಹೊತ್ತು ಬಹಳ ಮೀರಿಹೋದುದರಿಂದ ಅವರ ಅನುಮಾನವು ದೃಢಸಿದ್ಧಾಂತವಾಯಿತು (ಕಪಾಕುಂ. ೭). ೬. ಉತ್ಕಟವಾದ; ತೀವ್ರವಾದ. ೭. ಅಧಿಕವಾದ ; ಹೆಚ್ಚಾದ. (ನಾ). ೮. ಗಟ್ಟಿಯಾದಂದು ; ಬಲವಾದುದು ; ಬಿಗಿಯಾದಂದು : ಗೋಪಿ ದಾಮಿನ್ನಡುಮಂ ತೊಡರ್ಚಿ ದೃಢವಾಗಲುಲೂಖಲದಲ್ಲಿ ಕಟ್ಟಿ (ಜಗವಿ. ೩-೫೬). ೯. ಸ್ಥಿರತೆ ; ಅಚಲವಾಗಿರುವಿಕೆ : ಏನಿಸು ಕಾಲ ನಿಮ್ಮ ಪೂಜಿಸಿ ಏವೆನಯ್ಯಾ ಮನದಲ್ಲಿ ದೃಢವಿಲ್ಲದನ್ನಕ್ಕ (ಬಸವ. ೯೯) ; ಕಡೆಗೆ ಮಾಡದ ಭಕ್ತಿ ದೃಢವಿಲ್ಲದಾಳುತನ ಮೃಡನೊಲಿಯ ಹೇಳಿದರೆ ಎಂತೊಲಿವನಯ್ಯ (ಮಹಾದೇ. ಬ. ೪೫-೧೦೫) ; ಅಮೃತದಲಿ ಬಟುಹಿನಲಿ . . . ದೃಢದಲ್ಲಿ ಮೇಣ್ ವೃತ್ರನಾಮಮೆನಿಕು (ಮಂಗರಾ. ೧೫೪-೭೫); ಕರ್ಣನ ದೃಢವ ಕಂಡನು ಮನದೊಳುತ್ಸಾಹಿಸಿದನು (ಕುವ್ಯಾಉ. ೦೧-೨೦). ೧೦. ದಟ್ಟವಾಗಿರುವಿಕೆ ; ಸಾಂದ್ರತೆ : “ನಿಬಿಡಂ,

ನಿಬಿರೀಸಂ, ದೃಢಂ, ಗಾಢಂ–ಈ ೪ ತೆಱಪಿಲ್ಲದುದು" (ಹಲಾಯು. ೧೧೯-೩೩). ೧೧. ನಿರ್ಧಾರ; ನಿಶ್ಚಯ: ತಾ ನುಡಿದ ನುಡಿಯನು ಸಲಿಸುವುದು ನೆಜ಼ ದೃಢವೆ ದೃಢವೆಂದಿತ್ತನಜಿಯದೆ ಸತಿಗೆ ನಂಬುಗೆಯ (ಹರಿಶ್ಚಂ. ೨-೩-೬); ಪಾಂಡಿತ್ಯವೆನುವುದು ಅನುವಾನಕಿನ್ನೊಂದು ಹೆಸರೆಂದು ದೃಢವಾಯಿತೆನಗೆ (ಇಂಜಾಹ. ೨೩೭-೬೨). ೧೨. ಕಠಿನತೆ; ಕಾಠಿನ್ಯ; "ಖರಃ, ಕಠೋರಃ, ಕಠಿನಃ . . . ದೃಢಃ–ಈ ೬ ಬೆಟ್ಟದು" (ಹಲಾಯು. ೩೭-೦೮೭). ೧೩. ಸತ್ಯವಾದುದು; ದಿಟವಾದುದು :ನಡೆಯೊಳೆಚ್ಚ ಅವ ಬಿಡದಿರು ಪರವಶದಿ ದೃಢವನಗಲದಿರು (ಸರ್ವಜ್ಞ. ೩೦೦). [ ಸಂ. ]

**ದೃಢಕಾಯ** (ನಾ). ೧. ಬಲಿಷ್ಠವಾದದೇಹ; ಗಟ್ಟಿಮುಟ್ಟಾದ ಶರೀರ: ಆದರೆ ಎಲ್ಲಕ್ಕಿಂತ ಮಿಗಿಲಾಗಿ ಮುಕ್ತಾಪತ್ರಯದ ಅರೋಗದೃಢಕಾಯ ಸಂಪನ್ನತೆಯ ಆತ್ಮಸಂತೋಷ (ಪುನರು. ೨೨೦). ೨. ಗಟ್ಟಿಮುಟ್ಟಾದ ದೇಹವುಳ್ಳವನು; ಬಲಿಷ್ಠ: ದೃಢಕಾಯರಾದ ಯುವಕರು ಶಾಲೆಗಳಿಂದ ಹೊರಬರಬೇಕು (ಶಿಕ್ಷಣ. ೩೮೩); ಬಲಿಷ್ಠನೂ ಅರೋಗದೃಢಕಾಯನೂ ಎಂಬುದು ಆತನ ಚಲನೆಯ ವೈಖರಿಯಿಂದ ತಿಳಿದುಬರುತ್ತಿತ್ತು (ಕಾನೂರು. ೧). [ ದೃಢ + ಕಾಯ ]

**ದೃಢಗಲಿ** (ನಾ). ಅತಿಶಯವಾದ ಪರಾಕ್ರಮವುಳ್ಳವನು; ಮಹಾ ಪರಾಕ್ರಮಿ: ದೃಢಗಲಿ ಖಳನುರಸ್ಥಲದೆ ಕಠಾರಿಯ ಬುಡಮುಟ್ಟ ಚುಚಿ ಬೊಬ್ಬಿಱಿದ (ಮೋಹತ. ೧೨-೬೭); ದೃಢಗಲಿಯಹುದೆಂದು ಮಗನ ಮಸ್ತಕವ ಮೆಯ್ದಡವಿ ತಕ್ಕೆಯೊಳೆಟ್ಟಿಕೊಂಡು (ಮೋಹತ. ೦೩-೫೦).
[ ದೃಢ + ಕಲಿ₂ ]

**ದೃಢಗುಣ** (ನಾ). ಅಚಲವಾದ ಗುಣ; ಸ್ಥಿರವಾದ ಗುಣ: ಅತಿ ಸೂಕ್ಷ್ಮ ತತ್ತ್ವಮಂ ಕಾಣ್ಬತನುವನೊಟ್ಟಯಿಸಿ ಕಟ್ಟುವೀ ದರ್ಶನಶುದ್ಧತೆಗಂ ದೃಢಗುಣಸುಸಮರ್ಥತೆಗಂ ಸಲೆ ದೇವಚಂದ್ರಯತಿಪತಿ ನೋಂತಂ (ಚಂದ್ರಪ್ರ. ೧-೩೩). [ ದೃಢ + ಗುಣ ]

**ದೃಢಗೊಳ್ಳು** (ಕ್ರಿ). ಸ್ಥಿರವಾಗು; ಅಚಲವಾಗು; ಭದ್ರವಾಗು
[ ದೃಢ + ಕೊಳ್ಳು₁ (<ಕೊಳ್₁) ]

**ದೃಢಚರ್ಯ** (ನಾ). ೧. ಬಿಡದೆ ಆಚರಿಸುವುದು; ಸ್ಥಿರವಾಗಿ ಆಚರಿಸುವುದು. ೨. [ಜೈನ] ಜೈನಮತದ ಧರ್ಮಗ್ರಂಥಗಳನ್ನು ವ್ಯಾಸಂಗ ಮಾಡಿ ಜ್ಞಾನಾಭಿವೃದ್ಧಿಗೆ ಸಹಾಯಕವಾದ ಇತರ ಗ್ರಂಥಗಳನ್ನು ವ್ಯಾಸಂಗ ಮಾಡುವುದು: ಮತ್ತಮುವಕಾರವ್ಯಕ್ತಿಲೋಭಗ್ರಹಣಪೂಜಾರಾಧ್ಯ ಪುಣ್ಯಯಜ್ಞ ದೃಢಚರ್ಯೋಪಯೋಗತ್ವಮೆಂಬೆಂಟುಂಬೆರಸು (ಆದಿಪು. ೦೫-೧೬ ವ); ದೃಢಚರ್ಯವುಂ ಉಪಯೋಗಿತ್ವಮೆಂಬೆಂಟು ಗರ್ಭಾನ್ವಯಕ್ರಿಯೆಯೊಳು (ಚಾವುಂಪು. ೨೬೦); ಅಂಥಾ ಪುಣ್ಯಯಜ್ಞವನ್ನುಳ್ಳವನು ಜೈನಾಗಮಶಾಸ್ತ್ರಂಗಳಂ ಓದಿ ಪೂರೈಸಿ ಅನ್ಯಮತ ಗ್ರಂಥಾರ್ಥಗಳಂ ಸಹ ತಿಳಿದುಕೊಳ್ಳುವುದೇ ದೃಢಚರ್ಯವೆಂಬ ೭ನೇ ಕರ್ಮವು (ಪುರುಷ. ೨೦೭). 'ದೀಕ್ಷಾನ್ವಯಕ್ರಿಯೆ' ನೋಡಿ.
[ ದೃಢ + ಚರ್ಯ ]

**ದೃಢಚಿತ್ತ** (ನಾ). ೧. ಚಂಚಲವಾಗದ ಮನಸ್ಸು; ಗಟ್ಟಿಮನಸ್ಸು; ಅಚಲವಾದ ಚಿತ್ತ. 'ದೃಢಚಿತ್ತವಿಡಿ' ನೋಡಿ. ೨. ಗಟ್ಟಿಮನಸ್ಸುಳ್ಳವನು; ಚಂಚಲನಲ್ಲದವನು: "ಶಂಸಿತನಾ ಸುನಿಶ್ಚಿತಂ ದೃಢಚಿತ್ತನೆಂದೆ ನಿಕ್ಕಂ" (ಮಂಗರಾ. ೭೫-೫); ದೃಢಚಿತ್ತಂ ಗುಣನಿಳಯಂ ಕಡುಗಲಿ . . . ಭವ್ಯವನಜವನಕಳಹಂಸಂ (ಧರ್ಮಾಮೃ. ೭-೦೩). [ ದೃಢ + ಚಿತ್ತ ]

**ದೃಢಚಿತ್ತವಿಡಿ** (ಕ್ರಿ). ದೃಢಮನಸ್ಸಿನಿಂದ ಕೂಡಿರು; ಸ್ಥಿರವಾಗಿರು: ದೃಢಚಿತ್ತವಿಡಿದು ಭೋಗಿಭೂಷಣ ಕೋಪವ ತಾಳಿ ಕಿಡಿಕಿಡಿಯೋಗಿ ಕೆಂಗಿಡಿಗಣ್ಣ ತೆಱೆದ (ಮೋಹತ. ೭-೫೦). [ ದೃಢಚಿತ್ತ + ಪಿಡಿ₁ ]

**ದೃಢತೆ** (ನಾ). ಸ್ಥಿರತೆ; ನಿಶ್ಚಲತೆ. [ ಸಂ. ದೃಢತಾ ]

**ದೃಢತ್ವ** (ನಾ). ಚಂಚಲವಾಗದಿರುವಿಕೆ; ಸ್ಥಿರವಾಗಿರುವಿಕೆ: "ಗಲ್ಭ-ಅಧಾಷ್ಟ್ಯ್ಯೇ, ದೃಢತ್ವದೊಳ್" (ಶಾಶಕ್ಕ. ೧೦೬). [ ಸಂ. ]

**ದೃಢನಿರ್ಧಾರ** (ನಾ). ಅಚಲವಾದ ನಿರ್ಣಯ; ಸ್ಥಿರವಾದ ನಿರ್ಧಾರ: ಆ ಬಗ್ಗೆ ಅವನ ಮನಸ್ಸಿನಲ್ಲಿ ದೃಢನಿರ್ಧಾರ ಬಲಿತಿರಲಿಲ್ಲ (ಪುನರು. ೪೩೬).
[ ದೃಢ + ನಿರ್ಧಾರ ]

**ದೃಢನಿಶ್ಚಯ** (ನಾ). = ದೃಢನಿರ್ಧಾರ: ಸುಲಭವಾಗಿ ಸಡಿಲದ ದೃಢ ನಿಶ್ಚಯ ಅವನ ಹುಟ್ಟುಗುಣವಾಗಿತ್ತು (ಪುನರು. ೩೩೨).
[ ದೃಢ + ನಿಶ್ಚಯ ]

**ದೃಢಪಡಿಸು** (ಕ್ರಿ). ನಿಶ್ಚಿತಗೊಳಿಸು; ಖಚಿತಪಡಿಸು; ಬಲಪಡಿಸು: ಅನಂತಕವಿಯ ಗ್ರಂಥದ ಮೇರೆಗೆ . . . ಕೂಷ್ಮಾಂಡಿಯೇ ಮುಖ್ಯ ಪ್ರೇರಕಳೆಂಬುದನ್ನು ದೃಢಪಡಿಸುತ್ತದೆ (ಸಮಾಲೋ. ೨೬೦).
[ ದೃಢಪಡು + –ಇಸು₁ ]

**ದೃಢಪಡು** (ಕ್ರಿ). ನಿಶ್ಚಿತವಾಗು; ಸ್ಥಿರವಾಗು. 'ದೃಢಪಡಿಸು' ನೋಡಿ.
[ ದೃಢ + ಪಡು₁ ]

**ದೃಢಪತಿವ್ರತೆ** (ನಾ). ಗಂಡನನ್ನು ಕುರಿತ ವಿಶ್ವಾಸ ಮತ್ತು ಭಕ್ತಿಗಳಲ್ಲಿ ಸ್ಥಿರವಾದ ನಡವಳಿಕೆಯುಳ್ಳವಳು; ಮಹಾಪತಿವ್ರತೆ: ಇಂದು ಜಯವಧು ದೃಢಪತಿವ್ರತೆಯೆಂದು ಬಗೆದೈ ಭೂಪ ಹುಸಿ ಹೋಗೆಂದು ಗುರುಸುತ ನಗುತ ಹೋದನು ತನ್ನ ಮೋಹರಕೆ (ಕುಮ್ಯಾಭ. ೨೯-೨೨).
[ ದೃಢ + ಪತಿವ್ರತೆ ]

**ದೃಢಪ್ರತ್ಯಯ** (ನಾ). ಸ್ಥಿರವಾದ ವಿಶ್ವಾಸ,-ನಂಬುಗೆ; ದೃಢನಿಶ್ಚಯ.
[ ದೃಢ + ಪ್ರತ್ಯಯ ]

**ದೃಢಬುದ್ಧಿ** (ನಾ). ಅಚಲವಾದ ಬುದ್ಧಿ; ಗಟ್ಟಿಮನಸ್ಸು: ದೃಢಬುದ್ಧಿಯಿಲ್ಲದವ ಕಡುಮೂರ್ಖ (ಗಾದೆ). [ ದೃಢ + ಬುದ್ಧಿ ]

**ದೃಢಬ್ರತ** (ನಾ). = ದೃಢವ್ರತ: (ಶ). [ ದೃಢ + ಬ್ರತ ]

**ದೃಢಬ್ರತೆ** (ನಾ). ಸ್ಥಿರವಾದ ಪ್ರತಿಜ್ಞೆಯನ್ನುಳ್ಳವಳು; ಸ್ಥಿರಸಂಕಲ್ಪದಿಂದ ಕೂಡಿರುವವಳು: ಈಯುಯ್ಯುಮಣುಬ್ರತಮಂ ಕೈಕೊಂಡು ದೃಢಬ್ರತೆಯಾಗು ಸುವ್ರತೆಯಾಗು ಮಗಳೆ (ವಡ್ಡಾರಾ. ೨೨-೨೦).
[ <ಸಂ. ದೃಢವ್ರತಾ ]

**ದೃಢಭಕ್ತ** (ನಾ). ನಿಶ್ಚಲವಾದ ಭಕ್ತಿಯನ್ನು ಉಳ್ಳವನು: ನಡೆದದ್ದಲ್ಲವು ಲಕ್ಷ ಪ್ರದಕ್ಷಿಣೆ ನುಡಿದದ್ದಲ್ಲವು ಗಾಯತ್ರಿಮಂತ್ರಗಳು . . . ದೃಢ ಭಕ್ತರೇನು ಮಾಡಿದರದೇ ಮರಿಯಾದೆ (ಪುರಂದ. ೩-೧೦೬-೨).
[ ದೃಢ + ಭಕ್ತ ]

**ದೃಢಭಕ್ತಿ** (ನಾ). ನಿಶ್ಚಲವಾದ ಭಕ್ತಿ: ದೃಢಭಕ್ತಿ ನಿನ್ನಲಿ ಬೇಡಿ ನಾನಡಿಗೆಡಗುವೆನಯ್ಯ ಅನುದಿನ ಪಾಡಿ (ಪುರಂದ. ೦-೯-೨). [ ದೃಢ + ಭಕ್ತಿ ]

**ದೃಢಮನಸ್ಸು** (ನಾ). = ದೃಢಬುದ್ಧಿ: ದೃಢಮನಸ್ಸು ಮಾಡಿಕೊಂಡು ಕೆಲವು ಕಾಲ ಮನಃಕ್ಲೇಶವನ್ನು ಸಹಿಸಿಕೊಳ್ಳಬೇಕು (ಸಾವಿತ್ರಿ. ೩).
[ ದೃಢ + ಮನಸ್ಸು ]

**ದೃಢಮುಷ್ಟಿ** (ನಾ). ೧. ಬಲವಾದ ಹಿಡಿ; ಶಕ್ತಿಯುತವಾದ ಮುಷ್ಟಿ: ಒತ್ತಿ ದೃಢಮುಷ್ಟಿಯಲಿ ಕಿವಿದರು ಸತ್ವವುಳ್ಳವರೆರಡು ಬದಿಯನು (ಕೌಶಿರಾ. ೨೯-೬). ೨. ಅಚಲವಾದ ನಿರ್ಧಾರ; ಹಿಡಿದ ಪಟ್ಟು ಬಿಡದಿರುವಿಕೆ: ದೃಢಮುಷ್ಟಿಯರಸನ್, ಅರ್ಗಮೊಳಗಲ್ಲದೋನ್ ಸ್ವರ್ಗದಲ್ಲಾಳ್ವನ್ (ಬಿರ್ಮೂಕೃ. ೦೯-೩೬೮). ೩. ಕತ್ತಿ; ಖಡ್ಗ. ೪. ಜಿಪುಣ; ಲೋಭಿ; ಜೀನ. 'ಕಪಿಮುಷ್ಟಿ' ನೋಡಿ. [ ದೃಢ + ಮುಷ್ಟಿ₁ ]

**ದೃಢಮೂಲ** (ನಾ). ಬಲವಾಗಿ ಬೇರೂರಿದುದು; ಸ್ಥಿರವಾಗಿರುವುದು: ಭವಾನೀಶಂಕರನ ಮನದಲ್ಲಿ ಒಂದು ವಿಧದ ಭರವಸೆ ದೃಢಮೂಲವಾಗಿ ಹೋಯಿತು (ಇಷ್ಟಕ. ೩೩೮). [ ದೃಢ + ಮೂಲ ]

ರಸ ಗಂಧ ರೂಪು ಶಬ್ದ ಸ್ಪರ್ಶನ ಜನಿಸಿತ್ತು (ಆದಪ. ೨೮-೮೦) : ಕಶ್ಯಪ ಮುನಿಯ ದೆಸೆಯಿಂದಾದುದೀ ಮೇದಿನಿಯು ವಿಸ್ತರವೆಂದು ಮುನಿ ನುಡಿದನು (ತೊರಪಾ. ೧-೩-೧೨) ; ನಿನಗಿನಿವಿದೀದು ಭಯಾವೇಶವಾರ ದೆಸೆಯಿಂದವಾದುದು (ಶಾಂತಿಪು. ೬-೬೨.ವ) ; ಎಂದುವಿವರ ದೆಸೆಯಿಂದಂ ನಿಮಗೊಂದುಂ ಭಯಮಿಲ್ಲಂ (ಜಾಪುಂಪು. ೦೩) : ಏಳ್ನೂಱು ಭೂತಮಾಶನ ಪುರಕ್ಕೈದಲಾಳಿದೊಂದು ಭೂತಂ ಬಂದವಂ ಕಾಣದಳುತಿರೆ ಭೋಜನದಱ ದೆಸೆಯಿಂದೆ ಮಗುಳಾ ಗುರುವಿನಸ್ಥಿಗಳ ಪೂಗೆಯೊಳಗೆ ಚಂದದಿಂದವಿಳಜನ ವೆರಸಿ . . . ಶಿವಪುರಕ್ಕೈದಿದಂ (ಚಉಪು. ೩೩-೯೬); ತನ್ನಾಳ್ದನ ದೆಸೆಯೊಳ್ ಭೀತನುಮುಪಮಾನಿತನುಮಾಗಿರ್ದಂ (ಶಂಕಶಂ. ೨೪೬-೦೯) ; ಬಸವನಿರವಾ ದ್ವಾರಪಾಲರ ದೆಸೆಯೊಳಱುದು . . . ಗಮನಿಸಲು (ಬಸಪು. ೩೩-೪೨).

[ <ಸಂ. ದಿಶಾ ]

**ದೆಸೆ₃** (ನಾ). ಒಂದು ಬಗೆಯ ತೆರಿಗೆ (?) : ಈ ಧರ್ಮ್ಮದ ಸ್ಥಳದಲ್ಲಿ ಬಳ್ಳಾಳರಿಗೆ ಅನಾಯ ಸನಾಯ ಸಲ್ಲದು ಇಲ್ಲ ಆ ಸ್ಥಳ(ಗ)ದಲು ಇದ್ದ ಪೊಕ್ಕಲಿಗೆ ಬಿಟ್ಟಿ ಬಿರಾಡ ಸಲ್ಲದು ಕಾಣಿಕೆ ದೆಸೆ ಅಪ್ಪಣೆ ಪಡೆದಲ್ಲಿಯೆತ್ತು ಸಲ್ಲದು (ಎಕ. XX, ೯೯-೩೪ ; 1556). [ ? ]

**ದೆಸೆಗಟ್ಟು** (ನಾ). ದಿಗ್ಬಂಧನ : ಆ ಮಹಾತ್ಮರು . . . ಶಿವ್ಮಣ್ಣ ನಾಯಕನಿಗೆ ದೆಸೆಗಟ್ಟಿನ ದೂಳಿತ, ಸಿದ್ಧಮೂಲಿಕೆ, ಕೈಅಂಬು ಇವುಗಳನ್ನು ಕೊಟ್ಟು . . . ಬುದ್ಧಿ ಹೇಳಿ ಹೊರಟು ಹೋದರಂತೆ (ಚಿತ್ರಶಾ. ೭) ; "ದೆಸೆಗಟ್ಟಿನ ಧೂಳಿತ = ಸಣ್ಣಗಿರುವ ಮಣ್ಣಿನ ಹುಡಿಗೆ ಧೂಳು ಎಂದಂ ಹೆಸರು . . . ರೂಢಿಯಲ್ಲಿ ದೇವರ ಪಾದದಲ್ಲಿರುವ ಧೂಳು ಅಥವಾ ವಿಭೂತಿಗೆ ಈ ಹೆಸರು ಬಂದಿದೆ, ಇದಕ್ಕೆ ಪಾದರೇಣು ವೆಂದು ಸಹ ವಾಡಿಕೆ ಇದೆ" (ಚಿತ್ರಶಾ.ಅನುಬಂ. ೩).

[ ದೆಸೆ₂ + ಕಟ್ಟು₂./ತೆಲು. ದೆಸಕಟ್ಟು = ಕಳ್ಳತನಮಾಡುವಾಗ ಬಳಸುವ ಒಂದು ಬಗೆಯ ಸಾಧನ ]

**ದೆಸೆಗಡೆ** (ನಾ). ೧.ದಿಕ್ಕಿನ ತಂದಿ ; ದಿಗಂತ : ಮೆಟ್ಟಿದುದುರಗಪುರವನಳಕೆಯನಱೆಯಟ್ಟಿದುದು ದೆಸೆಗಡೆಗೆ ಮುಟ್ಟಲೀಯದೆ ಮೇಲಕೆ ನೂಕಿದುದು ಸುರಪಟ್ಟಣವನು ಚೆಲ್ವಿನಿಂದ (ಕುಶಾಸಾಂ. ೦೭-೭). ೨. ಮೂಲೆ ; ಕೊನೆ: ಬಿಡದಿರೆ ಪರಮಪಾತಕಿಯನಿವಳ ದೆಸೆಗಡೆಗಿರದಿಟ್ಟು ಪೋಗುವೆನು (ಕುಶಾಸಾಂ. ೬೨-೧೨೦). [ ದೆಸೆ₂ + ಕಡೆ₃ ]

**ದೆಸೆಗಾಣ್** (ಕ್ರಿ). ದಿಕ್ಕನ್ನು ಕಾಣು; ದಿಕ್ಕು ತೋಚು; ಮುಂದುಗಾಣು: ಉರಿಕೊಳೆ ದೆಸೆಗಾಣದೆ ದೆಸೆವರಿವರಿದು ಕುಜಂಗಳಂ ಪಡಲ್ವಡಿಸಿ ಭಯಂಬೆರಸೋಳಱೆ ನೆಗೆದುದಾ ವನಕರಿಶರಭಕಿಶೋರಕಂಠಗರ್ಜನೆ ಬನದೊಳ್ (ಶಂಕಥಾ. ೩-೯೦) ; ಅದನಾಂ ಕೇಳ್ದೆದೆಗೆಟ್ಟು . . . ಕಣ್ಣೀರ ಪೂರದ ಗುರ್ವಿಂ ದೆಸೆಗಾಣದಂದೆಡವುತಂ ತಾಗುತ್ತಂ (ಕಾದಂಪೂ. ೯೦) : ಬೆಳಗೆ ತಿಗ್ಮಕರಂ ದೆಸೆಗಾಣದಿರ್ಪ ಕೌಶಿಕನಯನಂಗಳಂ . . . ಏಕೆಯೊ ಮಾಡಿದ ನಬ್ಜವಿಷ್ಟರಂ (ಶಂರಾಮಾ. ೧-೩೦) ; ಅಗರುವ ಧೂಪಧೂಮದೊದವಿಂ ದೆಸೆಗಾಣದ(ವರ್ಧಪು. ೧-೩೭). [ ದೆಸೆ₂ + ಕಾಣ್]

**ದೆಸೆಗಾರ** (ನಾ). ಅದೃಷ್ಟಶಾಲಿ ; ಪುಣ್ಯವಂತ ; ಭಾಗ್ಯಶಾಲಿ : ಅಡಕೆ ಬೆಳೆದವರು ಭಳ್ಳಿ ದೆಸೆಗಾರರಾಗಿ ಬದುಕಿ ಹೋದರು (ರೂಢಿ).

[ ದೆಸೆ₁ (<ದಸೆ) + -ಗಾರ (< -ಕಾಱ) ]

**ದೆಸೆಗಿಡಿಸು** 'ದೆಸೆಗೆಡಿಸು' ನೋ.

**ದೆಸೆಗಿಡು** 'ದೆಸೆಗೆಡು' ನೋ.

**ದೆಸೆಗೂಡು** (ಕ್ರಿ). ಗುಂಪನ್ನು ಸೇರು : ಶಿವಶಿವ ವಲಿಮುಖರ ದೆಸೆಗೂಡೆ ದಳಪತಿ ನೀಲ ಹರಿತಂದ (ಕಾಶಿರಾ. ೨೦-೪೧). [ ದೆಸೆ₂ + ಕೂಡು₁ ]

**ದೆಸೆಗೆಡಿಸು, ದೆಸೆಗಿಡಿಸು** (ಕ್ರಿ). ೧. ದಿಕ್ಕು ತೋರದಂತೆ ಮಾಡು ; ಮುಂದುಗಾಣದಂತೆ ಮಾಡು ; ದಿಗ್ಭ್ರಮೆಯುಂಟುಮಾಡು : ಅಱಿವುಗೆಡಿಸುತ್ತುಮೆಲ್ಲಾ ತೆಱದಿಂ ದೆಸೆಗೆಡಿಸದಿರದು ವಿಷಯಸಮೂಹಕ್ಕೆಱಗಿ ಬಿಡದಂತೆ ಪತ್ತುವ ಮೋಹಂ ದಿಙ್ಮೋಹದಂದದಿಂ ಮಾನಿಸರಂ (ಕಾದಂಪೂ. ೩೪೮) ; ಮಸುಳುವನು ಶೋಚುವನು ತೊಡೆವನು ದೆಸೆಗೆಡಿಸುವನು ಬಳಿಕ ಮೊಳೆಸಿನೊಳಾ ಮಹಾರಥರ (ಕುಮ್ವಾಭ. ೧೧-೩೭) ; ಎಸಲ ಲರ್ಗಣೆಗಳವರ . . . ಕರಣಗಳ ದೆಸೆಗೆಡಿಸದವನಲವಳ ವಿರಹದೊಂದೆಸಕವನೇನ ಪೇಳುವೆನು (ಕುಶಾಸಾಂ. ೩೨-೮೯). **ದೆಸೆಗಿಡಿಸು**: ೧. ಜಸೆದು ಯಶೋದೃ x x x ದೇವನಿದಿರಾಂತವರಂ ದೆಸೆಗಿಡಿಸಿ ವೀರಭೋಜ್ಯಾ ವಸುಂಧರಾ x x x (ಎಕ VIII (S), ಸೊರಬ. ೫೦೭-೨೦ ; 1201). ೨. ಓಡಿಸು ; ನಿವಾರಿಸು ; ನಾಶಪಡಿಸು ; ನಲ್ಲಿ . . . ಅಸಿತದಯಃ ಕಾಂತದ ಮದವಮಂ ದೆಸೆಗಿಡಿಸುಗುವೆಂದೊಡಿಲ್ಲಿ ಸಂದೆಯಮುಂಟೇ (ಪಾರ್ಶ್ವ. ೨-೬೯); [ ದೆಸೆ₂ + ಕೆಡಿಸು₁ ]

**ದೆಸೆಗೆಡು, ದೆಸೆಗಿಡು** (ಕ್ರಿ). ೧. ದಿಕ್ಕು ತೋಚದಿರು ; ಮುಂದುಗಾಣದಿರು ; ದಿಗ್ಭ್ರಾಂತಿಗೊಳ್ಳು : ದೆಸೆಯಂ.ಪೊತ್ತ ಮದೇಭರಾಜಿ ದೆಸೆಗೆಟ್ಟೋಡಲ್ಕೆಗುಳ್ದತ್ತು (ಶಂಕಥಾ. ೯-೯೯) ; ದೆಸೆಗೆಟ್ಟುದಾಪ್ತಪ್ಪದಿಂದಂ . . . ಅಧೋಮುಖಿಯೆನಿಪ ಮಹಾಶ್ವೇತೆಯುಂ ಕಂಡನಾಗಳ್ (ಕಾದಂಪೂ. ೫೪೨) ; ಭಯರಸದಿಂ ದೆಸೆಗೆಟ್ಟರ್ ಕಂಡದೃಷ್ಟಪೂರ್ವಮವಾರ್ಯರ್ (ಶಂರಾಮಾ. ೦-೭೧) ; ಕಾಗೆಯಂ ಕಂಡ ಕೋಗಿಲೆಯಂತೆ ಮಾಲೆಗಾಱರ್ಚಿರ್ ದೆಸೆಗೆಟ್ಟು ಪರಿಯೆ (ಧರ್ಮಾಮೃ. ೨-೨೩); ಬಿಸಿಲು ಮಳೆ ಬಿಱುಗಾಳಿಯೊಳು ಬಲು ದೆಸೆಗೆಟ್ಟು ತಿರುಗಿ ದೇಶದೇಶದೊಳು (ಪುರಂದ. ೦-೧೭೭-೨). ೨. ಹಾಳಾಗು ; ನಾಶವಾಗು ; ವಿನ್ನ ಮೊಗಮುಂ ತಲೆಯುಂ ಬಾತು ಪೋದವುದು ಕಿಚ್ಚಲ್ಲ ವಿಂಚುಂಬುಟು ನೀನಿದನೂದಿ ದೆಸೆಗೆಡವೇಡ (ಶಂಕಶಂ. ೨೪೨-೭) ; ರಾಯನರನೆಲೆ ದೆಸೆಗೆಡಲು ಮೊಳೆಗಿದನು ಪಾರ್ಥ ಕುಮಾರನಳವಿಯಾಲಿ (ಕುಮ್ವಾದ್ರೋ. ೬. ೩-೦೫) : ಬಸವನೆಂದರೆ ಪಾಪ ದೆಸೆಗೆಟ್ಟು ಹೋಗುವುದು (ಸರ್ವಜ್ಞ. ೨೯೪). **ದೆಸೆಗಿಡು** : ೨. ನೀಂ ಸ್ತ್ರೀರೂಪದೊಳ್ ತೊಡರ್ದು ದೆಸೆಗಿಡಲ್ವೇಡ (ಜಾಪುಂಪು. ೪೦) ; ಕಲಿಕಾಲದೇಳ್ಗೆಯಂ ದೆಸೆಗಿಡೆ ತೂಳ್ದಿ ತಾಳ್ದಿ . . . ಸಿಜ್ಜವಿಷ್ಟರಮನೇಱಿದನಾ ಜಯಸಿಜ್ಜವಲ್ಲಭಂ (ಎಕ. VII, ಶಿಕಾರಿ. ೧೨೩-೦೫; 1019); ಸುಖಮುಮಂ ಆಯುಷ್ಯಮುಮಂ ಮಂತ್ರ [ತಂತ್ರವೈದ್ಯಂಗಳಿಂ] ಪಡೆವೆನೆಂದು ದೆಸೆಗಿಡಲ್ವೇಡ (ಧರ್ಮಾಮು. ೮-೫೦).

ದೆಸೆಗೆಟ್ಟವ=ದಿಕ್ಕುಗೆಟ್ಟವನು: "ನಷ್ಟಃ, ಗೃಹೀತದಿಕ್, ಕಾಂದಿಶೀಕಃ, ಭಯದ್ರುತಃ – ಈ ೪ ದೆಸೆಗೆಟ್ಟವಂ" (ಹಲಾಯು. ೩೯-೩೨೫).

[ ದೆಸೆ₂ + ಕೆಡು₁ ]

**ದೆಸೆಗೇಡಿ** (ನಾ). ದಿಕ್ಕಿಲ್ಲದವನು ; ಆಶ್ರಯವಿಲ್ಲದವನು ; ನಿರಾಶ್ರಿತ : ಏತಕ್ಕೆ ಬಿಟ್ಟುಹೋದನು ನಿನ್ನನು ಮಾತೆ ಏತಕ್ಕೆ ಅವನತಿಗಳೆದ ಏತಕ್ಕೆ ನಾ ದೆಸೆಗೇಡಿಯಾದೆನು ಎಂದು ಮಾತೆಯಾವಪ ಬೆಸಗೊಂಡ (ನಿಜಶಾಂ. ೪೨-೫) ; ನಾನೇ ದೆಸೆಗೇಡಿಯಾದ ಅಹಮ್ಮದನು (ಮುಂಬಯಿ. ೩-೦೨೫) ; ಹೊಟ್ಟೆಯ ಮಗನು ದೆಸೆಗೇಡಿಯಾದದ್ದರ ಅರಿವು ನಿಮಗೆ ಇಲ್ಲವೇ ಇಲ್ಲವೋ? (ತುಳಸೀ. ೧೦೭೫. [ ದೆಸೆ₂ + ಕೇಡಿ₁ ]

**ದೆಸೆದಪ್ಪು** (ಕ್ರಿ). ದಿಕ್ಕುತಪ್ಪು ; ಆಶ್ರಯವಿಲ್ಲದಂತಾಗು: ಪ್ರಮುಖರಪ್ಪ ನಾಯಕರ ಪೆಂಡಿರುಂ ತಮ್ಮ ಗಂಡರಂ ಕೊಳಗುಳದೊಳಱಸಿ ಕಾಣದೆ ಬಾಯಬಿಡು ಪಳಯಿಸುತ್ತುಂ ಯೂಥಪತಿ ಕೆಡೆಯೆ ದೆಸೆದಪ್ಪಿದ ವನಕರಿಕರೇಣುಗಳುಮಾನಡರ್ಪಿಲ್ಲದ ಕಲ್ಪವೃಕ್ಷಮುಡಿದು ಕೆಡೆಯೆ ಬಂಬಲ ಬಾಡಿದ ವನಲತೆಗಳುಮಂ ಪೋಲ್ತು (ಶಂಕಥಾ. ೧೯-೪ ವ). [ ದೆಸೆ₂ + ತಪ್ಪು₁ ]

**ದೆಸೆದಿರಿ** (ಕ್ರಿ). ದಿಕ್ಕುದಿಕ್ಕುಗಳಲ್ಲಿ ಅಲೆ –ತಿರುಗು : ಜನ್ನಗುದುರೆಯಂ ಕಾಣದಿರೆ . . . ದೆಸೆದಿರಿಯುತುಮಿರ್ಕೆಱನೊಳಱಸುತುಂ (ರಾಮಾಶ್ವ. ೦೦೦-೭). [ ದೆಸೆ₂ + ತಿರಿ₁ ]

**ದೆಸೆದೀವು** (ಕ್ರಿ). ದಿಕ್ಕುಗಳನ್ನು ತುಂಬು, – ವ್ಯಾಪಿಸು : ದೆಸೆದೀವಿತ್ತು ಘೋರಾಂಧಕಾರಂ (ರಾಜಶೇ. ೦೧-೧೯). [ ದೆಸೆ$_2$ + ತೀವು ]

**ದೆಸೆದೇವತೆ** (ನಾ). ದಿಕ್ಕಿನ ದೇವತೆ : ಸಿಡಿಲೊಳೆ ತಳ್ತು ಪೋರ್ವ ಸಿಡಿಲಂತಿರೆ ಬಾಳೊಳ್ ಬಾಳ್ ಪಳಂಚಿ ಮಾರ್ಕೊಡಿವಿಡೆ ನೋಡಲಂಜಿ ದೆಸೆದೇವತೆಗಳ್ ಪೆಱಪಿಂಗೆ (ಹಂಶಧಾ. ೧೦-೪೩) ; ದೆಸೆದೇವತೆಗಳ್ಗೆ ಜಪಾಪ್ರಸೂನದುಂ ರಕ್ತ ಬಲಿಯುಮಂ ತಾಮೆ ಕುಡುವಂತೆಸೆದಿರ್ದರೊ ಕಡೆಗಣ್ಗಳ್ ಪಸರಿಸೆ ಕಡುಗೆಂಪು ಭೀಮದುರ್ಯೋಧನರಾ (ಗದಾಯು. ೯-೩) ; ದೆಸೆದೇವತೆಯ ಕುಸುಂಬೆಯ ಕುಸುಮಂಗಳಿನಿಂಡೆಯಾಡುವಂತಿರೆ (ಅರ್ಧನೇ. ೭-೩೨).
[ ದೆಸೆ$_2$ + ದೇವತೆ ]

**ದೆಸೆಪಟದುಳಿ** (ಕ್ರಿ). ದಿಕ್ಕಾಪಾಲಾಗಿ ಹೋಗುವಂತೆ ಮಾಡು ; ಧೂಳೆಬ್ಬಿಸು ; ನಾಶಮಾಡು : ಸಂಗರಜಯದ ಮಡುವಿನಲಿ ಸಲೆ ಸೊಗಸಿ ತನಿಸೊಕ್ಕಿ ದೆಸೆಪಟದುಳಿದು ಸೌಭದ್ರೇಯಭೃಂಗನ ಬಲುದನಿಯು ಭರವಂಜಿಸಿತು ಜಯಯುವತಿವಿರಹಿಗಳ (ಕುಮಾರವ್ಯಾ.ದ್ರೋ. ೬-೩೦).
[ ದೆಸೆ$_2$ + ಪಟ$_2$ + ತುಳಿ$_1$ (<ತುಟಿ$_1$) ]

**ದೆಸೆಬಿದ್ದಂ, ದೆಸೆವಿದ್ದಂ** (ಅ). ೧. ಹೆಚ್ಚಾಗಿ ; ಅತಿಶಯವಾಗಿ : ಚಿತ್ರಜನಾಜ್ಞೆ ಮುತ್ತೆ ದೆಸೆಬಿದ್ದಂ ಬೆಳ್ಗೆ ಲಜ್ಜಾರಸಂ ಮನದಿಂ ಸೂಸಿದುದು (ಮಲ್ಲಿಪು ೩-೭) ; ದೆಸೆಬಿದ್ದಂ ಕುಣಿವಂಗನಾಜನದ ಕಾಂಚೀಘಂಟಿಕಾಘೋಷವೊಂದೆಸೆಯೊಳ್ . . . ಘೂರ್ಣಿಸೆ ಪೂರ್ಣಮಾಯ್ತು ಜನಜನ್ಮೋತ್ಸಾಹ ಕೋಳಾಹಳಂ (ಮಲ್ಲಿಪು. ೧೨-೦೨) : ಪುಸಿವಡೆ ಪೋಲಲ್ಪುಸಿವುದು ಪುಸಿಯಲ್ಕಱಿಯದೊಡೆ ಮಾಣ್ಬುದಂತಿರದೆ ಕರಂ ದೆಸೆಬಿದ್ದಂ ಪುಸಿವಡೆ ಬಾರಿಸ ಬಪ್ಪುದೆ ಪುಸಿಯು ಬಸನಮಾಗಿಪ್ಪವರಂ (ಸಮಯ. ೧೦-೦೨) ; ಪಸರಿಸೆ ಪೂವಲಿಗಳ್ ಬಾಜಿಸೆ ಬದ್ದವಣಂಗಳೊಡನೆ ಮಿಳ್ಳಿಸೆ ಗುಡಿಗಳ್ ದೆಸೆಬಿದ್ದವಾಡೆ ತರುಣಿಯರೊಸಗೆಯ ಮೇಲೊಸಗೆಯಾದುದು (ಹಂರಾಮಾ. ೩-೦೩೪) ; ಬದ್ದವಣಂ ಬಾಜಿಸೆ ದೆಸೆಬಿದ್ದಂ ಕುಣಿದಾಡೆ ಗಣಿಕೆಯರ್ . . . ಪರಿದತ್ತು ಹರ್ಷರಸಮಾ ಪುರದೊಳ್ (ಹಂರಾಮಾ. ೯-೨೮). ೨. ಗುರಿಯೇ ಇಲ್ಲದಂತೆ ; ದಿಕ್ಕಾಪಾಲಾಗಿ ; ಎಲ್ಲ ಕಡೆಗೂ: ಪ್ರಮಥರಂಗೋಪಾಂಗಸಂಧನ್ನಸಾಯಕಪತ್ರಂಗಳೆಱಂಕೆಯಾಗೆ ದೆಸೆಬಿದ್ದಂ ಪಾಱಿದರ್ ಬೇಗದಿಂ (ಜಗವಿ. ೦೮-೦೨) ; ನೀಂ ದೆಸೆಬಿದ್ದಂ ಮರೆಯಂತೆ ಪಾಯ್ತಂದೆಯಪ್ಪುದಱಿಂ ಮರೆಯಾಗೆಂದು ಶಾಪಮಂ ಕುಡೆ (ಕೊಲ್ಹಾ.ಶಾ. ೦೩-೨೩ : 1186.) ಎತ್ತಿಸಿ ತೋರ್ಪೆಂ ರಿಪುಬಳಮುಂ ದೆಸೆಬಿದ್ದಂ ತೂಳ್ದ ಜಯಪತಾಕಮಾನೀಗಳ್ (ಚಂದ್ರಪು. ೦೦-೮೦). **ದೆಸೆವಿದ್ದಂ** : ೧. ದೆಸೆವಿದ್ದಂ ಸುರತೂರ್ಯಮುಣ್ಮೆ ಬರಲಂತಾಯ್ತು ಪ್ರತಿಧ್ವಾನಂ (ನೇಮಿಪು. ೮-೦೨೬).
[<ಸಂ. ದಿಶಾವಿದ್ಧ ? ]

**ದೆಸೆವಿಣಿ** 'ದೆಸೆವಿಳಿ' ನೋ.

**ದೆಸೆಮಿಳಿ, ದೆಸೆವಿಣಿ** (ನಾ). (ತೇರು ಮುಂತಾದ ಯಾವುದಾದರೂ ವಸ್ತುವಿನ) ಎರಡು ಮಗ್ಗುಲುಗಳಿಗೆ ಕಟ್ಟಿ ಎಳೆಯುವ ಹಗ್ಗ : ದಬ್ಬುಕ ಪಾಳಾಸ ದೆಸೆವಿಳಿ ಚೆಲ್ಲಹ ಕಬ್ಬಿ ತಾಪಣೆ ಮೇಲಕ್ಕೆ ಉಬ್ಬಲೀಯದ ಕಬ್ಬುನದ ಗುಂಡು ಪಾಡಿಗಳಬ್ಬರವಿರೆ ಸುಮ್ಮನಿಹುದು (ಕುರಾಜಾಂ. ೯-೩೭). **ದೆಸೆಮಿಣಿ** : ಹಿಡಿದರಾಗಳೆ ತೇರ ಮಿಣಿಯಂತೆ ಕಟಕದ ಕಡೆಮಟ್ಟ ನಿಡುಸರಮಣಿಯ ಎಡಬಲಕಲ್ಲಲ್ಲಿ ಕವಲಾಗಿ ಸರಪಣಿ ನಡೆದುವು ದೆಸೆಮಿಣಿಯಂತೆ (ಭರತ. ೪೯-೦೦೯). [ ದೆಸೆ$_2$ + ಮಿಳಿ$_2$ ]

**ದೆಸೆಮುಟ್ಟು$_1$** (ಕ್ರಿ). ದಿಕ್ಕಿನ ಗಡಿಯನ್ನು ಸೇರು ; ದಿಗಂತವನ್ನು ತಲಪು; ಬಹುದೂರ ವ್ಯಾಪಿಸು : ಮುಟ್ಟೆಂಬುದರ್ಕೆ – ದೆಸೆಮುಟ್ಟಿ, ಪಾರ್ಧಿಮುಟ್ಟಿ, ಅಂತಮುಟ್ಟಿ (ಶಮದ. ೨೯೮ ಪ್ರಯೋ) ; ಡೌಡೆಯ ಮಾಪುರಿಯ ಭೇರಿಯ ಭೂರಿನಿನಾದಂ ದೆಸೆಮುಟ್ಟೆ ಪಳಂಚಲೆಯೆ (ರಾಮಾಶ್ವ. ೫೦-೨).
[ ದೆಸೆ$_2$ + ಮುಟ್ಟು$_1$ ]

**ದೆಸೆಮುಟ್ಟು$_2$** (ನಾ). ದಿಕ್ಕನ್ನು ಮುಟ್ಟಿದುದಂ ; ದಿಗಂತವಿಶ್ರಾಂತವಾದುದಂ : ರಾವಣಂ ಮುಂತಪ್ಪ ದೆಸೆಮುಟ್ಟಿನ ಜಸದ ದೈತ್ಯರಂ ಱಿಪ್ಪಿ ಸೊಪ್ಪಿ ಸೋವಿದ ಶ್ರೀರಾಮಂ ಬೇಳ್ವ ಜನ್ನದ ಹಸುವಂ ಕಳ್ದುಯ್ದಂ ಬಾಟ್ಟಿನೆಂದು ಬಗೆವ ನೀನಾವುಂ ? (ರಾಮಾಶ್ವ. ೧೧೨-೨೦).
[ ದೆಸೆ$_2$ + ಮುಟ್ಟು$_2$ ]

**ದೆಸೆಮೂಲೆ** (ನಾ). ದಿಕ್ಕುಗಳು ಸೇರಿರುವ ಸ್ಥಳ ; ದಿಕ್ಕಿನ ಗೊಂಟು : ದೆಸೆಮೂಲೆಗಳ್ ಪಳಂಚಿ ಮಾರ್ದನಿಗುಡುವಂತು . . . ಬೊಬ್ಬಿಱಿದಂ ಕಲಿಯಣಾವಂ (ರಾಮಾಶ್ವ. ೧೩೧-೨೮). [ ದೆಸೆ$_2$ + ಮೂಲೆ ]

**ದೆಸೆಯಾಣ್ಮ** (ನಾ). ದಿಕ್ಕಿನ ಅಧಿಪತಿ ; ದಿಕ್ಪಾಲಕ : ಅಲರಂಬನಯ್ಯ ಬಿದಿಯುಮರ್ದಂಬರೆಱಿಯ ದೆಸೆಯಾಣ್ಮರೆಲ್ಲರ್ವಟ್ಟೆಗರು . . . ಅಱು ಮೊಗನೊಡನೆ ಕಱಿಗೊರಲನೊಪ್ಪಿರ್ದನು (ಶಾವಚಂ. ೯-೪೬) : ದೆಸೆಯಾಣ್ಮರ ಪುರವಿದಕೆಣೆಯಿಲ್ಲೆಂದು ನಸುನಗೆ ಪುರಲಕ್ಷ್ಮಿಯವಳ ದಶನಪಂಕ್ತಿಗಳ ಚೆಲ್ವಿನ ಕೋಟೆಯಾ ಕಿನೆಯೆಸೆದುವು (ಶಂನವಿ. ೬-೫) ; ದೆಸೆಯಾಣ್ಮರುಂ ಸಂತಸಂಗೊಂಡು ಮುಂತೆ ಆ ಪಿರಿಯ ರಕ್ಕಸನ ಕಡೆಯಂ ಕಾಯುತಿರ್ದರ್ (ಅದ್ಭುತ. ೪೭-೧೬). [ ದೆಸೆ$_2$ + ಆಣ್ಮ (<ಆಳ್ಮ) ]

**ದೆಸೆಯಾನೆ, ದೆಶೆಯಾನೆ** (ನಾ). ಎಂಟುದಿಕ್ಕುಗಳಲ್ಲಿಯೂ ಭೂಮಿಯನ್ನು ಹೊತ್ತಿರುವುದೆಂದು ನಂಬಲಾದ ಐರಾವತವೇ ಮೊದಲಾದ ಆನೆ ; ದಿಗ್ಗಜ : ದೆಸೆಯಾನೆಗಳಾನನದೊಳ್ ಪಸರಿಸಿ ದುಗ್ಧೋದಬಿಂದು . . . ಬೆಳ್ಪಸದನದಂತಿದುರ್ವಜಿತ ಸವನೋತ್ಸವದೊಳ್ (ಅಜಿಪು. ೪-೩೯) ; ಎಣ್ದೆಸೆಯೊಳಿರ್ದ ದೆಸೆಯಾನೆಗಳಂ ಜಳಕೇಳಿಗೆ ಕರೆವಂತಿರೆ (ಮಲ್ಲಿಪು. ೨-೫೦) : ಉಲಿದೆಂಟುಂ ದೆಸೆಯಾನೆಯುಂ ಓಡಿದು ಕೋಡಂ ಕಿಟ್ಟು ತಾರೆಂಬುದೇಂ . . . ಬೀರಮೋ (ಕಲ್ಯಾಕ. ೨೪೦) : ದೆಸೆಯಾನೆಗಳುಱಿ ಬೆಳ್ಗೆ ಕಡಲು ತೆರೆಮಸಗಿ ಮೇರೆಯ ಮೀಱಿ ಪೆರ್ಚೆ ಎಸೆದುದು ಜಯದುಂದುಭಿನಾದ (ಕುರಾಜಾಂ. ೦೦-೭೫). **ದೆಶೆಯಾನೆ**. ದೆಶೆಯಾನೆಗಳ್ಕ=ಒಂದು ಬಿರುದು : ಮಹಾಮಂಡಲೇಶ್ವರನಯೋಧ್ಯ ಸಿಂಹಾಸನಂ [ಕಂ]ಬುಕುನ್ದ್ವಪ್ರರವರೇಶ್ವರಂ ದೆಶೆಯಾನೆಗಳ್ಗನೆಳಂಪೂರ ಭುಜಂಗರಿಪು ಪಕ್ಷ[ಕ್ಷ]ಯಕಾರಣಂ (ಕಶಾಆ. ೪೦-೫೮-೧೦ ; 1087).
[ ದೆಸೆ$_2$ + ಆನೆ$_1$ ]

**ದೆಸೆವಂತ** (ನಾ). = ದೆಸೆಗಾರ: ದೆಸೆವಂತರಾಗಿ ಬದುಕ್ಯಾರೆ ರಾಯರು (ಜಗೀತ. ೮೦). [ ದೆಸೆ$_1$ (<ದಸೆ) + – ವಂತ ]

**ದೆಸೆವಡೆ** (ಕ್ರಿ). ಅದೃಷ್ಟವನ್ನು ಹೊಂದು ; ಭಾಗ್ಯವನ್ನು ಪಡೆ ; ಭಾಗ್ಯಶಾಲಿಯಾಗಿರು : ದೆಸೆವಡೆದು ಕೆಲವುದಿನ ಬಸವನಿದ್ದಂತಿರ್ದ . . . ಬಸವ ರಸೆಯಲ್ಲಿ ಬಿದ್ದಳಿದುದೆಂಬ ಬಱುನುಡಿಗೇಳಿ (ಗುರುಜಾ. ೧೦-೮೫).
[ ದೆಸೆ$_1$ (<ದಸೆ) + ಪಡೆ$_1$ ]

**ದೆಸೆವರಿ** (ಕ್ರಿ). ದಿಕ್ಕುದಿಕ್ಕಿಗೆ ಓಡು ; ಗುರಿಯಿಲ್ಲದೆ ಚಲಿಸು ; ಸಿಕ್ಕಿದ ಕಡೆಗೆ ಹೋಗು : ಉರಿ ಕೊಳೆ ದೆಸೆಗಾಣದೆ ದೆಸೆವರಿವರಿದಂ ಕುಜಂಗಳಂ ಪದಲ್ವಡಿಸಿ ಭಯಂಬೆರಸೊಳಱಿ ನೆಗೆದುದಾ ವನಕರಿಶರಭಕಿಶೋರ ಕಂಠಗರ್ಜನೆ ಬನದೊಳ್ (ಹಂಶಧಾ. ೫-೯೧). [ ದೆಸೆ$_2$ + ಪರಿ$_1$ ]

**ದೆಸೆವಲಿ** (ನಾ). ೧. (ಶಾಂತಿಕರ್ಮ ಮೊದಲಾದ ಸಂದರ್ಭಗಳಲ್ಲಿ) ದಿಗ್ದೇವತೆಗಳನ್ನು ತೃಪ್ತಿಪಡಿಸುವುದಕ್ಕಾಗಿ ಕೊಡುವ, ಅನ್ನಾಹಾರಾದಿ ವಸ್ತು ; ದಿಗ್ಬಲಿ. ೨. (ಆಲಂ) ದೇಹವನ್ನು ತುಂಡರಿಸಿ ದಿಕ್ಕಾಪಾಲಾಗಿ ಬಿಸಾಡುವಿಕೆ ; ಬಲಿಕೊಡುವಿಕೆ : ಒಡಿಖಣ್ಣ[ಂ]ಗೊಣ್ಡು ದೆಸೆವಲಿಗೆಱಪೊಟ್ಟು (ಸೌಇಇ. XI-1, ೦೧-೨೦ : 965) ; ಪೂರ್ವಪದಂ ತದ್ಭವಮಾದುದರ್ಕೆ – ಗ್ರಾಮರಸ–ಗಾವರಸ . . . ದಿಶಾಬಲಿ – ದೆಸೆವಲಿ (ಶಮದ. ೨೮೯ ಪ್ರಯೋ). 'ದೆಸೆವಲಿಗೊಡು' ಪರಾ. [ ದೆಸೆ$_2$ + ಬಲಿ$_2$ ]

**ದೆಸೆವಲಿಗುಡು** 'ದೆಸೆವಲಿಗೊಡು' ನೋ.

**ದೆಸೆವಲಿಗೆಯ್** (ಕ್ರಿ). ದಿಕ್ಕುಗಳಿಗೆ ಬಲಿಯಂನ್ನಾಗಿ ಮಾಡು ; ಕತ್ತರಿಸಿ ದಿಕ್ಪಾಲರಿಗೆ ಎಸೆ: ಉಬಿದಿರ್ದೊಡಾನಱಿವೆಂ ನಿನ್ನನಿಲ್ಲಿ ದೆಸೆವಲಿಗೆಯ್ವೆನ್ (ಪಂಪಭಾ. ೬-೫೭) ; ಕೆಲರಂ ದೆಸೆವಲಿಗೆಯ್ದುಂ ಕೆಲರಂ ಭುಜಬಲದಿನಱಿದು ಶಿಲೆಯೊಳ್ಪೊಯ್ದುಂ (ಗದಾಯು. ೩-೧೧): ಅನ್ಯಕಾಂತೆ ಗಾಟಿಸಿದ ದುರಾತ್ಮನಂ ರಣದೊಳಣ್ಮಿದನಪ್ಪೊಡಮೋಘಬಾಣದಿಂ ದೆಸೆವಲಿಗೆಯ್ವೆಂ (ಪಂಪಾಮಾ. ೧೧-೫) : ನಾಳೆ ನಿನ್ನಂ ದೆಸೆವಲಿಗೆಯ್ದಲ್ಲದೆ ಮಾಣೆಂ (ಧರ್ಮಾಮೃ. ೩-೧೧೧ ಅಧಿಕಾರ) ; ಏಟಿಂ ತೆಱದ ತಾಳವಟ್ಟದ ಪೊಯ್ಲೊಳಂ ನಾಲ್ವತ್ತನಾಲ್ಕು ಗಾತ್ರಾಪರವಾತದೊಳಂ ದೆಸೆವಲಿಗೆಯ್ದು . . . ಮಹಾವನಮಂ ವನಕೇಳಿಗಜಂ ಪೊಕ್ಕುದಂ ಕೇಳ್ದು (ಚಂದ್ರಪ್ರ. ೯-೧೧೧ ವ). [ ದೆಸೆವಲಿ + ಕೆಯ್$_1$ ]

**ದೆಸೆವಲಿಗೊಡು, ದೆಸೆವಲಿಗುಡು** (ಕ್ರಿ). = ದೆಸೆವಲಿಗೆಯ್ : ಈಕೆ . . . ರಕ್ಕಸರ ಬಳಗವಂ ಸದೆದು ದೆಸೆವಲಿಗೊಟ್ಟು ನಿಮ್ಮಂ ಪೊರೆದ ಶ್ರೀರಘುರಾಮನ ಪಟ್ಟದ ರಾಣಿ (ರಾಮಾಶ್ವ. ೩೯-೩). **ದೆಸೆವಲಿಗುಡು :** ಅಂತು ಭಯ.ಬಲದ ಚಾತುರ್ದಂತಂ ಪೇಸೇಟ್ ಕಾದಿ ದೆಸೆವಲಿಗುಡಲ್ (ಪಂಪಾಮಾ. ೧೩-೯೬) ; ಬಸಸನದೆಂ ದಶಮುಖನಂ ದೆಸೆವಲಿಗುಡಲೆಂದು ಭರತಶತ್ರುಘ್ನರ್ . . . ಸನ್ನಾಹಭೇರಿಯಂ ಪೊಯಿಸುವುದುಂ (ಪಂಪಾಮಾ. ೧೪-೬೨). [ ದೆಸೆವಲಿ + ಕೊಡು$_1$ ]

**ದೆಸೆವಳ** (ನಾ). ದಿಕ್ಕುಗಳ ಮೇಲೆ ಅಧಿಕಾರವುಳ್ಳವನಂ: ದಿಕ್ಪಾಲ: ಆಗಳ್ ಸೌಮಿತ್ರಿ ಡೋಲಾಯಮಾನಮಾನಸನಾಗಿ ದೇವಿಯರಂ ಬಲವಂದು ಕೈಮುಗಿದು ದೆಸೆವಳರ್ಗೆ . . . ಕೇಳಿಸಿ (ರಾಮಾಶ್ವ. ೩೯-೨).

[ ದೆಸೆ$_2$ + – ವಳ (< – ವಾಳ$_1$) ]

**ದೆಸೆವಾನ** (ನಾ). ಅದೃಷ್ಟಶಾಲಿ ; ಭಾಗ್ಯವಂತ : ಬಹಳ ದೆಸೆವಾನ ಆಗುತ್ತನಂತ ಅಣ್ಣ ಹೇಳೇ ಹೇಳುತ್ತಾನೆ (ದಾಕೊಟ. ೧೧೧).

[ <ಸಂ. ದಶಾವತ್ ]

**ದೆಸೆವಿದ್ದಂ** 'ದೆಸೆಬಿದ್ದಂ' ನೋ.

**ದೆಸೆವೆಟ್ಟು** (ನಾ). ದಿಕ್ಕಿನ ಕೊನೆಯ ಬೆಟ್ಟ : ತೆಱಪುಗುಡದೆ ಸೂಟ್ಕೆಸುವ ನಿಸ್ಸಾಳದ ಬಲ್ಸರಕೆ ದೆಸೆವೆಟ್ಟುಗಳ್ ನಿಬ್ಬರಂ ಬಿಱಿಯೆಯುಂ (ಕಬ್ಬಿಗಕಾ. ೨೮೮). [ ದೆಸೆ$_2$ + ಬೆಟ್ಟು$_2$ ]

**ದೆಸೆಹೊದ್ದು** (ಕ್ರಿ). ಸಾನ್ನಿಧ್ಯವನ್ನು ಹೊಂದಂ ; ಹತ್ತಿರದಲ್ಲಿರು : ಬಿಸರುಹಕುಸುಮಜನ ಕಪಾಲವ ಹಿಡಿದಾತನ ಕೈಯಲ್ಲಿ ಗಸಣಿಗೊಳಗಾದರು ಆತ್ಮನ ರಸಿಕವನಱಿಯದೆ ಈ ಹುಸಿತರ ನೋಡಿ ದೆಸೆಹೊದ್ದಿಹನೆಂದರೆ [ಪಾಠಾಂ. ಹೊದ್ದೆನೆಂದೆ] ಪಶುಪತಿ ದೂರ (ಮೋಳಿಘಾ. ೫೯-೨೪೩).

[ ದೆಸೆ$_2$ + ಹೊದ್ದು$_1$ (<ಪೊರ್ದು$_1$) ]

**ದೇಂಟು, ದೇಟು** (ನಾ). ೧. ಮರ, ಗಿಡ ಮುಂತಾದುವುಗಳ ತಾಳು.– ಕಾಂಡ : ಕಲಂಬ = ೧. ಬಾಣ. ೨. ದೇಂಟು (ಗಂಗಾಪು. ೬೪). ೨. ತೊಟ್ಟು ; ವೃಂತ ; ದಂಟು ; ತುಂಬು : ಅದರ ಎಲೆಗಳು . . . ದೇಂಟಿನ ಬುಡದಿಂದ ತುದಿಯ ತನಕ ಎರಡೆರಡರಂತೆ ಸಾಲುಗೊಂಡಿರುತ್ತವೆ (ಕುಂಬಳಯು. ४-५४). **ದೇಟು :** ೨. ವೃಂತ = ಕಾವು, ದೇಟು, ತುಂಬು. (ಗಂಗಾಪು. ೨೯೫) ; ಗೀತೆ ಕಲ್ಪತರುವಿನ ಒಂದು ಮೊಳಕೆಯೆಂದರೆ, ಜ್ಞಾನ, ಕರ್ಮಗಳು ಅದರ ಎರಡು ಎಲೆಗಳು, ಅದಕ್ಕೆ ಭಕ್ತಿಯೇ ದೇಟು (ಧರ್ಮಸಾ. ೧೦೮) ; ಎಲ್ಲಾ ಒಂದೇ ದೇಟಿನ ಮಾವುಗಳು ನಾವು ದೇವನ ದೇಟಿನ ಕಾಯಿಗಳು (ನವಿಲ್ಲ. ೧೩೨-೬) ; ಸರಳವಾಗಿ ಒಂದು ಹೂವಿನ ದೇಟಿನಂತೆ ಪ್ರಮಿಳೆಯು ಬೆಳೆದಿದ್ದಳು (ಸಮಜೀ. ೮೬೨) : ಅಲ್ಲಿ ದೇಟಿಗೆ ಅಂಟಿಕೊಂಡು ತಪ್ಪಗಿನ ಕಳ್ಳನಂತೆ ನುಸುಳುತ್ತಿರುವ ಆ ಹಸಿರು ಕೀಟವನ್ನು ಕಂಡಿರಾ ? (ಗಾಳಿಪ. ೧೧೬).

[ ದೇ.?೮ ./ ಮರಾ. ದೇಂಟ್, ದೇಟ್ ]

**ದೇಕಗಾವುಂಡ** (ನಾ). ಒಬ್ಬಾತನ ಹೆಸರು : ತನ್ನ ತಮ್ಮಂ ದೇಕಗಾವುಣ್ಡಂ ಮಾಡಿಸಿದ ಶಿವಾಲಯ (ಎಕ. VII, ಶಿಕಾರಿ. ೨೦-೧೨ ; 1082).

[ ದೇಕ$_0$ + ಗಾವುಂಡ (<ಗಾಮುಂಡ) ]

**ದೇಕಬ್ಬೆ** (ನಾ). ಒಬ್ಬಾಕೆಯ ಹೆಸರು : ಪೊನ್ನಬ್ಬೆಗಂ ರವಿಗಂಗಂ ಪುಟ್ಟಿದ ದೇಕಬ್ಬೆಯಾರಂ . . . ಏಚಂಗೀಯೆ (ಎಕ. IV, ಹೆಗ್ಗಡ. ೧೮-೧೬; 1057).

[ ದೇಕ$_0$ + ಅಬ್ಬೆ$_1$ ]

**ದೇಕಾರ** (ನಾ). ದಾನವಾಗಿ ದೊರೆತುದು : ಆಚಾರ್ಯರೇ ದಕ್ಷಿಣೆ, ದೇಕಾರಗಳು ಕೂಡಿ ತಲೆಗೆ ಎಷ್ಟೆಷ್ಟು ಸಿಕ್ಕಿತು ? (ನಲದ. ೫೩).

[ ←ಮರಾ. ದೇಕಾರ್ ]

**ದೇಕು, ಡೀಕು, ಡೇಕು, ತೀಕು, ದೇಗು, ದೋಕು** (ಕ್ರಿ). ೧. ತಗ್ಗಿ ಮುಂದುವರಿ ; ಕುಳಿತುಕೊಂಡು ಜರುಗು,–ಸರಿ : ಗುಡಿಯೊಳಕ್ಕೆ ದೇಕಿಕೊಂಡು ಬರಬಹುದಾಗಿತ್ತು (ಗರಿಚಿತ್ರ. ೧೩). ೨. ಕಷ್ಟಪಡು; ಏಗು; ಹೆಣಗು: ಮ್ಯಾಲೀನ ಓಣೀಯ ಮೂಗ ಸಂಪಗಿ ಹೆಣ್ಣ ದೇಕೂದ ಬಂತ ನಿನಗಾಗಿ (ಕನ್ನಡಾ. ೧೦೮) ; ನಾನು ಹೊರಗೆ ದುಡೀತಾ ಇದೇನೆ, ನೀನು ಒಳಗೆ ದೇಕುತಾ ಇದೀಯೆ (ಚಿಲುಮ. ४೧). ೩. (ಗೋಲಿಯಾಟದಲ್ಲಿ ಸೋತವನು) ಕೈಯ ಗಿಣ್ಣನಿಂದ ಗೋಲಿಯನ್ನು ಮುಂದಕ್ಕೆ ನೂಕು,– ತಳ್ಳು : ಗೋಲಿಯಾಟ ಆಡಿ ಸೋತೂ ಕೂಡ ದೇಕದೆ ಹೋಗುವ ಭಂಡರೂ ಇದ್ದಾರೆ (ಊಠಿ). **ಡೀಕು :** ೨. ಬರಿಯ ಒಂದು ವಿಷಯದಲ್ಲಿ ಸ್ವಲ್ಪ ಗುಣ ಕಡಿಮೆ ಬಿದ್ದು ನಪಾಸಾಗಬೇಕು; ಅದಕ್ಕಾಗಿ ಮತ್ತೆ ಆರು ತಿಂಗಳಾದರೂ ಡೀಕುವುದೆ ? (ಭೂಮಿತಾ. ೧೧). ೩. ವೆಂಕಟೇಶನನ್ನು ಸೋಲಿಸಿ ಡೀಕಲಿಕ್ಕೆ ಹಚ್ಚಿದ್ದಾಗ್ಗೆ ಅವನ ಕೈತೊಗಲೆಲ್ಲ ಸುಲಿದು ಬಿಡುತ್ತಿತ್ತು (ಕಲಿಸಂ. ೨೬). **ಡೇಕು :** ೨. ಅವರೆಲ್ಲ ಗಾಣದೆತ್ತಿನಂತೆ ಬೆಳಗಿನಿಂದ ಸಂಜೆಯವರೆಗೆ 'ಡೇಕು'ತ್ತಿರುವಾಗ ತಾನು ಹಾಯಾಗಿ ಕೈಚಲ್ಲಿ ಕುಳಿತುಕೊಂಡಿರಬೇಕೆ ? (ಕರಿಹಾ. ೨४). **ತೀಕು :** ೩. ಗೋಲಿಯಾಟದಲ್ಲಿ ಸೋತು, ತೀಕಿ ಮುಂಗೈಯನ್ನೆಲ್ಲಾ ಗಾಯ ಮಾಡಿಕೊಂಡಿದ್ದನು (ಊಠಿ). **ದೇಗು :** ೧. ಸರಸ್ವತಿ ಬಹಳ ಪ್ರಯಾಸದಿಂದಲೇ ದೇಗಿಕೊಂಡು ಬಂದು ಅವನನ್ನು ಸಮೀಪಿಸಿದಳು (ಹೇಮಳೂ. ४೬). **ದೋಕು :** ೩. ದೋಕು ಬಾವ್ಯಾ ಆನಂದು . . . ದೋಕೋಕ್ಕೆ ಹೆದರುತ್ತೇನೇನೋ ? (ನಡೆದಾ. I, ೫೨೨). ೪. ಹುಲ್ಲನ್ನು ಕೆತ್ತು. 'ಏಗು$_1$', 'ದೋಕರಿ' ಪರಾ.

[ ದೇ.೫ ತುಳು. ದೋಗು ; ತೆಲು. ದೇಂಕು, ಡೇಂಕು ]

**ದೇಕ್ಷಿ** (ನಾ). ಅಡುಗೆಗೆ ಉಪಯೋಗಿಸುವ ಒಂದು ಬಗೆಯ ದೊಡ್ಡ ಪಾತ್ರೆ : ಹಿಡಿಪಾತ್ರೆಗಳು, ತಟ್ಟೆಗಳು, ಡಬ್ಬಗಳು, ಡಬರಿಗಳು, ದೇಕ್ಷಿಗಳು, ಹಾಲಿನ ಪಾತ್ರೆಗಳು ಮೊದಲಾದುವನ್ನು ಅಲ್ಯುಮಿನಿಯಂನಿಂದ ಮಾಡಲಾಗುತ್ತದೆ (ಗೃಹವಿ. ೦೭೬).

[ ← ಪಾರ. ಹಿಂ. ದೇಗಚೀ, ದೇಗಚಾ; ಮರಾ. ದೇಖಚಾ, ದೇಗಚಾ ]

**ದೇಖಣೆ** (ನಾ). ಪ್ರದರ್ಶನ : ಅದರಲ್ಲಿ ಸಾಕಷ್ಟನ್ನು ಮಾರಿಯೂ ಮಾರುತ್ತಾರೆ. ಆದರೆ ದೇಖಣೆಗೆ ಇರಿಸುವುದಿಲ್ಲ (ಸ್ವಪ್ನಹೊ. ४೬).

[ ←ಮರಾ. ದೇಖಣೇ = ನೋಡು ]

**ದೇಖರಖಿ** 'ದೇಖರೇಖಿ' ನೋ.

**ದೇಖರೇಖಿ, ದೇಖರಖಿ** (ನಾ). ಮೇಲ್ವಿಚಾರಣೆ; ಉಸ್ತುವಾರಿ; ನೋಡಿಕೊಳ್ಳುವುದು ; ರಕ್ಷಣೆ : ಗ್ಯಾಂಗ ಮುಖ್ಯರು ತಮ್ಮ ಗ್ಯಾಂಗಿನ ದೇಖರೇಖಿ ಮಾಡುತ್ತ ಓಡಾಡಹತ್ತಿದರು (ಅನ್ನ. ೨೦೩) ; ನಿನ್ನ 'ದೇಖರೇಖಿ ಯಿದ್ದರೆ ಸಾಕು' ಎಂದು ಗಣಪೂನನ್ನು ಕಳಿಸಿದರು (ಮೂರುದಾ. ೭೦) ; ಅವರ ಹುಣಸೀಗಿಡದ ಹೊಲದಾಗ . . . ಅಷ್ಟು ದೇಖರೇಖಿ ಮಾಡಬೇಕಾಗೇದ (ತಿದುಗು. ४೦). **ದೇಖರಖಿ:** ಅದೆಲ್ಲದರ ದೇಖರಖಿ ರಾಚಪ್ಪನ ಕಡೆಗಿತ್ತು (ದೀಪಹ. II, ೮). [ ←ಹಿಂ. ಮರಾ. ದೇಖರೇಖ್ ]

**ದೇಖಾವಳಿ** (ನಾ). = ದೇಖರೇಖಿ : ಅಸ್ಪೃಶ್ಯರ ದೇಖಾವಳಿ (ಆರೈಕೆ) ನಡೆಯದಿರುವುದನ್ನು ಕಂಡು ಪದ್ಮನಾಭಭಟ್ಟರಿಗೆ ಬಲು ದುಗುಡವಾಯಿತು (ಭ್ರಾಂತಿಸು. ೮೭). [ ←ಹಿಂ. ದೇಖಾಭಾಲಿ, ದೇಖಭಾಲ್ ]

**ದೇಖಾವೆ** (ನಾ). ನೋಡತಕ್ಕುದು ; ದೃಶ್ಯ ; (ನಾಟಕ, ಸಿನಿಮಾ ಮೊದಲಾದ) ಪ್ರದರ್ಶನ : ನಿಮ್ಮ ದೇಖಾವೆಯೇ ಅಲ್ಲಿಯ ದೊಡ್ಡ ಆಕರ್ಷಣೆ (ಕೃಲಾಸ. ೪೦) ; ಲಂಡನಿನಲ್ಲಿ ಆದಿತ್ಯವಾರ ಸಿನೆಮಾ ದೇಖಾವೆಗಳೂ ಇರುವುದಿಲ್ಲ (ಅಞಪ. ೪೧) ; ಒಂದೂವರೆ ತಾಸಿನ ಈ ದೇಖಾವೆಯಲ್ಲಿ ಅರುವತ್ತು ಎಪ್ಪತ್ತು ಮಂದಿ ನಟರು ಬಂದು ಯುಗಾಂತರ ಭಾರತದ ಒಂದು ದೃಶ್ಯವನ್ನು ತೋರಿಸಿದರು (ಹುಮುಜ. ೩೦೯).
[ ←ಹಿಂ. ದೇಖಾವ್ ; ಮರಾ. ದೇಖಾವಾ ]

**ದೇಖೀಲು** (ಅ). ಎಲ್ಲಾ ಸೇರಿ ; ಒಟ್ಟಿನಲ್ಲಿ ; ಕೂಡಿ : ಬಿಡಾರದಲ್ಲಂತೂ ಆಳುಕಾಳು ದೇಖೀಲು ಇಪ್ಪತ್ತು ಜನಗಳ ಮೇಲೆ ಭೋಜನಕ್ಕೆ ಸೇರುತ್ತಿದ್ದರು (ಕಂನ. ೨೩೩). [ ←ಮರಾ. ದೇಖೀಲ್ ]

**ದೇಗು** 'ದೇಕು' ನೋ.

**ದೇಗುಲ, ದೇವಳ₁. ದೇವುಲ** (ನಾ). ೧. ಗುಡಿ ; ದೇವಸ್ಥಾನ ; ದೇವಾಲಯ : "ದೇಗುಲಂಗಳನೆ ಆಯತ(ನ)ವೆಂಬುದು" (ಹಲಾಯು. ೪೯-೦೩೪) ; ಗಾವುಂಡಸ್ವಾಮಿಗಳ ಮಗನಾಗಮ್ಮಯ್ಯ ಕಲ್ಲ ದೇಗುಲ ಮಾಡಿಸಿದಡೆ ಸಲಿಸಲೆನ್ದು ಕೊಟ್ಟ ಮಣ್ಣು ಒಕ್ಕರ್ಣನ್ದಾಗ (ಎಕ. III, ಮಂಡ್ಯ. ೦೩-೯ ; 896) ; ನಿಜರಾಜರಾಜಧಾನಿ ಮೆಟುವಿಡುವಿನೊಳಿನ್ದ್ರ ವಿಮಾನಸಮಾನಮಪ್ಪ [ದೇಗು]ಲಮಂ ಮಾಡಿ (ಸೌಇಇ. XI-I, ೨೨-೯ ; 897) ; ಗೋವರಣ್ಣ ಬರೆ ಪಾಯಿಸಿ ಫೋಟಯಿಲರ್ ತಗುಳ್ದು ತತ್ರಬ ತಳಿದಿಕ್ಕಿ ದೇಗುಲಕೆ ಪೆರ್ಮಾರನಂ ಕಡಿವಂತೆ ಮಾಡಿದರ್ (ಕಂಪಭಾ. ೮-೯೩ ವ) ; ಸಾವಾಗ ದೇಹವ ದೇಗುಲಕ್ಕೊಯ್ಯೆಂಬ ದೇವರಿಗೆ ಹಣ ಬಿಟ್ಟ ಹೇಳಿತ್ತ (ಬಸವ. ೩೩೩) ; ವಸುಧೆಯೊಳು ಪೊಡವುಡಲು ದೇಗುಲಂ ಬಿರ್ದ ನುಡಿ ಪಸರಿಸುವ ನಾಡಗಾದೆಯ ಕೆಳದಿ ನಿಮ್ಮ ಸೇವಿಸ ಬಂದು ನಮಗಾಯ್ತು ನರಕವು (ಸಿದ್ಧರಾ. ೧-೩೭) ; ಒಳಗಿದ್ದ ದೇವನ ಕಾಣದೆ ಹೊರಗೆ ದೇಗುಲವ ಪೂಜಿಸುವೆಗ್ಗನಂತೆ (ಭರತ. ೨-೩೩). ೨. ಹಾಳು ಬಿದ್ದ ಜಾಗ ; ಪಾಳುಮನೆ : ಬಡವಾದಿರರಸ ಕಾಲೊಳ್ ನಡೆದಪೆರೊಡ ನಾರುವಿಲ್ಲ ಕಡಲೆಗಳೇಂ ನಿಮ್ಮಡಿಯೊಳಗೆ ಪಡುವ ದೇಗುಲದೆಡೆ ಯಾವುದು ಕುಡದ ನಿಮಗಮಿಾಯುಡಬುಾಯ್ತು (ಕಮುದ. ೧೦೩ ಪ್ರಯೋ). **ದೇವಳ₁** : ೧. ನನ್ನ ಜೀವನಾವಸ್ಥೆಯ ವಿಚಾರದಲ್ಲಿಯೂ ಹೀಗೇನೆ! ದೇವಳದ ಪೂಜೆಭಟ್ಟನಾಗಿದ್ದೆನೆಂದು, ಹರಿಕತೆಯ ಹರಿದಾಸನಾಗಿದ್ದೆನೆಂದು ಏನೆಲ್ಲ ಹೇಳುತ್ತಿದ್ದಾರೆ (ಕೂಪಸಂ. ೨೯) ; ಸ್ಥಾನಿಕರಿಗೆ ಅನಾದಿಯಲ್ಲಿ ದೇವಳದ ಅರ್ಚಕತನವಿತ್ತು (ತುಳುನಾ. ೧೦೭). **ದೇವುಲ** : ೧. ಬ(ಂ)ಮ್ಮಯ ನಾಯಕ × × × ಯಂ ದೇವುಲದ ತನ್ನ ಪೂಜೆ ವೃತ್ತಿಯೊ × × × (ಸೌಇಇ. XI-II, ೦೯೭-೭ ; 1121).
[ <ಸಂ. ದೇವಕುಲ./ಪ್ರಾ. ದೇಉಲ./ಮರಾ. ದೇಉಳ. ದೇವಳ ]

**ದೇಗುಲಕಾಱ** (ನಾ). ೧. ದೇವರ ಪೂಜೆ ಮಾಡುವ ಅರ್ಚಕ. ೨. ದೇವಸ್ಥಾನದ ಪಾರುಪತ್ತೆಗಾರ,- ರಕ್ಷಕ : ಆ ದೇಗುಲಕಾಱ ರಱಿಯದಂದದಿನೆಯ್ದಿಯಾ ದೇವಿಯ ಬೆಂಗಡೆಯೊಳು ಭೇದಿಸದಂದದೊಳಡಗಿರ್ದು (ಪ್ರಭುಲಿ. ೪-೩೧). [ ದೇಗುಲ + -ಕಾಱ ]

**ದೇಗುಲದೋಂಟ** (ನಾ). ಹೂವು, ತುಳಸಿ, ಬಿಲ್ವ ಮೊದಲಾದುವನ್ನು ಬೆಳೆಸುವ, ದೇವಸ್ಥಾನಕ್ಕೆ ಸೇರಿದ ಉದ್ಯಾನ : ದೇಗುಲದೋಣ್ಟಂ ಪ × × ವೆ ನೂಱು ಬತ್ತದ ಮಣ್ಣು ಯಾಱುವಸುವಂ ಮಾದೇವಗ್ಗ ಮಾಪಳ್ಳಿ ಗೊಣ್ಡದೇವಗಂ ನನ್ದಾವಳಕಿಱ್ಗೆ ಕೊಟ್ಟಂ (ಎಕ. IV. ಗುಂಡ್ಲುಪೇ. ೯೩-೨೫ ; 1049). [ ದೇಗುಲ + ತೋಂಟ ]

**ದೇಗುಲವಱೆ³** (ನಾ). ದೇವಾಲಯಗಳಲ್ಲಿ ಬಾರಿಸುವ ತಮಟೆ, ನಗಾರಿ ಮುಂತಾದ ಚರ್ಮವಾದ್ಯ : ಸನ್ನೆಯ ಘಂಟಾರವ ದೇಗುಲವಱೆ³ ರನ್ನಘಟದ ನಿರ್ಮಲಾಂಬು (ಶ್ರೀಪಾಲ. ೧೦-೩೪) ; ದೇಗುಲವಱೆಯ ಧ್ವನಿಗಳುಱೆ³ ಪೆರ್ಚಿದುವು (ಚಬಪು. ೫-೨೦) ; ಪೊಳಗಿದುವಲ್ಲಲ್ಲಿ ದೇಗುಲವಱೆಗಳು (ಕಂನವಿ. ೯-೦೬೭). [ ದೇಗುಲ + ಪಱೆ³₁ ]

**ದೇಗುಲಿಗ** (ನಾ). ದೇವಸ್ಥಾನದ ಸೇವಕ,-ಪರಿಚಾರಕ : ಆಚರಣಕ್ಕೆ - ದೇಗುಲಿಗಂ, ಅಕ್ಕರಿಗಂ. ಚಂದಸಿಗಂ (ಶಮದ. ೧೯೭ ಪ್ರಯೋ).
[ ದೇಗುಲ + -ಇಗ./ಪ್ರಾ. ದೇಉಲಿಅ ]

**ದೇಚಯ್ಯ** (ನಾ). ಒಬ್ಬಾತನ ಹೆಸರು : ಶ್ರೀ ದೇಚಯ್ಯ (ಎಕ. II, ೪೬೧-೦ ; 1060). [ ದೇಚ₀ + ಅಯ್ಯ₁ ]

**ದೇಟ** (ನಾ). ಒಂದು ಬಗೆಯ ವೀಳೆಯದೆಲೆಯ ಬಳ್ಳಿ ; ಕಾಡು ವೀಳೆಯದೆಲೆಯ ಬಳ್ಳಿ : ಕಾನಡಾ ಜಿಲ್ಲೆಯಲ್ಲಿ ದೇಟೀಯೆಲೆಯ ಬಳ್ಳಿಗಳು ಅಡವಿಯಲ್ಲಿ ತಮಗೆ ತಾವೇ ಬೆಳೆದು ಕೊಳೆತು ಕೆಡುತ್ತಿರುತ್ತವೆ (ಕಭಾಗಿ. ೨೭೭). [ ←ಮರಾ. ದೇಂಟೀ, ದೇಂಠೀ ]

**ದೇಟು** 'ದೇಂಟು' ನೋ.

**ದೇಡ** (ನಾ). ನೇಕಾರ ; ನೆಯ್ಗೆಯವನು : ಬಡಗಿ ೧ ಕಂಮಾಱ ೧ ಸಂಮಗಾಱ ೧ ಅಸಗ ೧ ದೇಡ ಮಗ್ಗ × × ಟ್ಟನಿತೆ ಗಾವಲಿ ೨ . . . ಧಾರಾಪೂರ್ವ್ವಕಂ ಮಾಡಿಕೊಟ್ಟರು (ಸೌಇಇ. XX, ೧೭೮-೪೭ ; 1192) ಬಡಗಿ ಕಂಮ್ಮಾಱ ಅಕ್ಕಸಾಲೆ ಅಸಗ ಸಂಮ್ಮಗಾಱ ದೇಡ ಹೊಲೆಯರ ಕೂಡೆವೊಳಗಾಗಿ ಪುರದ ಬೀರವಣವಂ ಬಿಟ್ಟರು (ಸೌಇಇ. XX, ೨೯೯-೮ ; 12ನೆಯ ಶತ); ಅಸಗ ಸಂಮ್ಮಗಾಱ ದೇಡ ಹೊಲೆಯರ ಕೂಂಟೆ (ಬೊಂಕಶಾ. ೦೯೩೭, ಸಿಂದಗಿ. ೩೯-೭ ; ?). [ <ಜೇಡ ]

**ದೇಡಸೀರೆ** (ನಾ). ಒಂದು ಬಗೆಯ ಸೀರೆ : ಸೀರೆಗೆ ಪಾಗ ೧ ಮೊಟ್ಟೆಯ ಸೀರೆಗೆ ಪೊಂಗೆ ಪಣ ೧ ದೇಡಸೀರೆಗೆ ಪೊಂಗೆ ಪಣ ೧ (ನಾಂದೇಡ್. ೩-೩೨ ; 1047). [ ದೇಡ + ಸೀರೆ₂ ]

**ದೇಣಾಲೇಣ** (ನಾ). ಹಣಕಾಸುಗಳನ್ನು ಬಡ್ಡಿಗೆ ಕೊಡುವುದು ಮತ್ತು ತೆಗೆದುಕೊಳ್ಳುವುದ : ಲೇವಾದೇವಿ ವ್ಯವಹಾರ : (೬).
[ ←ಹಿಂ. ದೇನಲೇನಾ ; ಮರಾ. ದೇನ್‌ಲೇನ್ ]

**ದೇಣಗೆ** (ನಾ). ೧. ಕೊಡುಗೆ ; ದಾನ ; ದತ್ತಿ : ನಮ್ಮ ಭೌತಿಕ ನಾಗರಿಕತೆಯು ಇಂದಿನ ಉನ್ನತದೆಸೆ ಕೇವಲ ವಿಜ್ಞಾನದ ದೇಣಗೆಯಾಗಿದೆ (ನಿರಶಾ. ೦) ; ನಿನ್ನಿಂದ ಯಾವುದಾದರೂಂದು ದೇಣಗೆಯನ್ನು ದೊರಕಿಸುವದಕ್ಕಾಗಿಯಾಗಲಿ . . . ಛತ್ರಸಾಲನು ನಿನ್ನ ದರ್ಬಾರಕ್ಕೆ ಬಂದಿರುವುದಿಲ್ಲ (ಧಾರ್ಮಿಕೀ. ೩೪೬) ; ಮನುಷ್ಯರು ಎಷ್ಟು ಕೊಟ್ಟರೂ ಸಾಲದು. ದೇವರ ದೇಣಗೆ ಮಾತ್ರ ಅಖಂಡವಾಗಿರುತ್ತದೆ (ಸ್ತ್ರೀಶಿ. ೧೦). ೨. ಅನುಗ್ರಹ ; ವರ : ಜಗತ್ತಿನಲ್ಲಿ ಕಲೆಯಷ್ಟು ಪವಿತ್ರವಾದದ್ದು ಬೇರೆ ಯಾವುದೂ ಇಲ್ಲ. ಇಂಥ ಪೂಜನೀಯ ದೇಣಗೆಯನ್ನು ಪಡೆದವರು ನಿಜಕ್ಕೂ ಧನ್ಯರು (ಗಂಗಾವ. ೧೩೯). [ ←ಮರಾ. ದೇಣಗೀ , ದೇನಗೀ ]

**ದೇಣೆ** (ನಾ). ೧. ಸಾಲ ; ಋಣ : ಶಿವಿಲ್‌ಕೋರ್ಟನವರು ದೇಣೆಗಾರನ ದೇಣೆಗೋಸ್ಕರ ಹಕ್ಕು ಬಾಧ್ಯತೆಯನ್ನು ಹರಾಜು ಮಾಡಿದರೆ (ಗ್ರಾಮೂಕ. ೭೯). ೨. ಕೊಡಬೇಕಾದ ಹಣ : ಬೊಂಬಾಯಿಯವರೆಷ್ಟೋ ಮಂದಿ ಕಾಗದ ಬರೆಯುತ್ತಿದ್ದಾರೆ, ಮೂರುಸಾವಿರ ದೇಣೆ ಕೊಡುತ್ತಾರೆಂದು ಬರೆದಿದ್ದಾರೆ (ಸನ್ಯಾಸಿ. ೮೭). [ ←ಮರಾ. ದೇಣೇ ]

**ದೇಣೇದಾರ** (ನಾ). ಸಾಲವನ್ನು ತೆಗೆದುಕೊಂಡಿರುವವನು ; ಸಾಲವನ್ನು ಹಿಂದಿರುಗಿಸಬೇಕಾಗಿರುವವನು : ಕೋರ್ಟಿನ ಡಿಕ್ರಿಯ ಅಮಲ್ಜಾರಿಯಲ್ಲಿ ಜಡ್ಜ್‌ಮೆಂಟ್ ದೇಣೇದಾರನು ದಸ್ತಗಿರಿ ಮಾಡಲ್ಪಡಲೂ ಕೂಡದು (ಗ್ರಾಮೂಕ. ೩೪). [ ದೇಣೆ + -ದಾರ₂ ]

**ದೇನಗವಳೆ** (ನಾ). ಒಂದು ಬಗೆಯ ಉತ್ತಮ ಜಾತಿಯ ಬತ್ತ: ಮಾಧವೇಶ್ವರ ದೇವರ ದೇವತಾಪೂಜೆಗೆ . . . ನೈವೇದ್ಯಕ್ಕೆ ದೇನಗವಳೆ ನೆಲ್ಲು ಬಳ್ಳ ೨ (ಸೌಇಇ. XV, ೩೪೧-೬೮ ; 1174).
[ ದೇನ್$_0$ + ಕವಳೆ$_2$ (<ಕಟವೆ) ]

**ದೇಯ್$_1$** (ನಾ). ಶರೀರ ; ದೇಹ : ಭಂಮನಾಯಗ ರಾವುನು ಹುಲಿಯ ಕಾದು ದೇಯ ಬಿಟ್ಟು ವಳಿಕಾ ಸ್ವಸ್ತನಾದನು (ಎಕ. VI, ಕಡೂ. ೧೬-೬ ; 1193 ?); ದೇಯದ ನೀಲದುಂಗುರದ ಕಾಂತಿಗಳಿಂ ಕರಿದಾಗಿ ಶೋಭೆಯುಂ ಬೀಯದ ಪಾಣಿಶೋಣಮಣಿಕಂಕಣ ಸತ್ಕಿರಣಂಗಳಿಂದೆ ಕೆಂಪಾಯತವಾಗಿ ತೋರ್ಪುದೊಡೆ ಮಾನಸದೊಳ್ ಪುದಿಯಲ್ಕೆ ಕೌತುಕಂ ಮಾಯದ ಮದ್ಯ ಮೆಂದಬಳೆ ಪಿಂದೆ ನೋಡಿದಳೊಂದು ಜಾವಮುಂ (ಧಾರಪು. ೧೦-೧೩೪).
[ <ಸಂ. ದೇಹ ]

**ದೇಯ್$_2$** (ಗು). ೧. ಕೊಡಬೇಕಾದ ; ದಾನ ಮಾಡಬೇಕಾದ. ೨. ಕೊಡುವ ; ದಾನಮಾಡುವ: ಸ್ವಸ್ಯ-ದೇಯದ್ರವ್ಯದ. ಅತಿಸರ್ಗಃ– ಕೊಡುವುದು (ತತ್ತ್ವಪ್ರ. ೨೮೫). (ನಾ). ೩. ದಾನಕೊಡಬೇಕಾದ ಪದಾರ್ಥ.– ವಸ್ತು: ದಾನಲಕ್ಷಣಮಪ್ಪಡೆ ದಾತೃವೆಂದುಂ ದೇಯಾವೆಂದುಂ ಪಾತ್ರವೆಂದುಂ ತ್ರಿವಿಧಮಕ್ಕುಂ (ಚಾವುಂಪು. ೨೨೬) ; ಇದೇ ದೇಯಂ ಮತ್ತ್ರದೇಯಂ ಬಗೆವೊಡಿದು ದಲೆಂಬೀ ವಿಚಾರಕ್ಕಣಂ ಸಲ್ಲದೆ . . . ಕೊಟ್ಟು ದಾರಿದ್ರ್ಯದ ಮಾತಿಲ್ಲೆಲ್ಲಿಯುಂ ಬಾಟಿಸಿಗಮಖಿಳಧರಾಚಕ್ರದೊಳ್ ತಾನೆನಿಪ್ಪಗ್ಗದ ಮಾತಂ ಮಾಡಿದಂ (ಚಂದ್ರಪು. ೬-೧೦೩). ೪. ದಾನವಾಗಿ ಕೊಟ್ಟುದು: ಪುರವರ್ಗ್ಗದ ಪನ್ನೆರಡು ಮನೆಯ ನೇಸಣಮುಮಂ ನೊನ್ನುಗಾಣಮುಮಂ ಬಿಟ್ಟರಿನ್ತೀ ದೇ[ಯ]ಮಂ ಮೇಲಾಳ್ಕೆಯರಸಿಂಗೆ (ಕಇ. V, ೬-೧೪ ; 1032 ?). 'ಅದೇಯ' ಪರಾ. [ ಸಂ. ]

**ದೇಯಾರ್ಥಿ** (ನಾ). ದಾನವನ್ನು ಬೇಡುವವನು ; ಯಾಚಕ ; ಭಿಕ್ಷುಕ : ರಾಯನಂ ಕಾಣಲಾಗದೆ ಮಂತ್ರಿಯೆಡೆ ಸಾರ್ವ ದೇಯಾರ್ಥಿಗಳೊಲು ನೀನು (ಮಂಕುಶ. ೦೪೯). [ ದೇಯ್$_2$ + ಅರ್ಥಿ$_2$ ]

**ದೇಯಿ** (ನಾ). (ಕರಾ) ಹೆಣ್ಣುದೆವ್ವಗಳಲ್ಲಿ ಒಂದು : 'ದೈಯ್ಯೊಂ' (ಗಳು) = ದೈವ (ಗಳು) ಎನ್ನುತ್ತಾರೆ. ಅವುಗಳಲ್ಲಿ ಗಂಡುಭೂತಗಳೂ . . . ಇವೆ. ಹೆಣ್ಣುಭೂತಗಳೂ (ಉದಾ :–ಉಳ್ಳಾಲ್ದಿ, ಜುಮಾದಿ, ಕಲ್ಲುರ್ಟಿ, ದೇಯಿ, ಬೈದ್ಯದಿ ಇತ್ಯಾದಿ) ಇವೆ (ತುಳುನಾ. ೨೫೧).
[ ←ತುಳು. ದೇಯಿ./ಪ್ರಾ. ದೇಈ./ಸಂ. ದೇವೀ ]

**ದೇಯಿಂಗೆಱೆ** (ನಾ). ಒಂದು ಸ್ಥಳದ ಹೆಸರು : ಇನ್ತೀ ದಣ್ಣದೊಳಂ . . . ಪುಟ್ಟಿದ ದ್ರವ್ಯಮುಮಂ ಕಳೆವುದ್ದಳೆಯ ಪಣಮುಂ ದೇಯಿಂಗೆಱೆಗೆ (ಎಇ. XX, ೬-೪೧ ; 1012). [ ದೇಯಿ + ಕೆಱೆ ]

**ದೇಯಿಮಯ್ಯ** (ನಾ). ಒಬ್ಬಾತನ ಹೆಸರು : ದಾತಾರಂ ದೇಯಿಮಯ್ಯ ಸೆಟ್ಟಿಯರ × ಗಂ ಮುಟ್ಟಂ ನಲ್ಲಯ್ಯನುಂ . . . ತಿಪ್ಪ ವೇಳೆ (ಸೌಇಇ. XX, ೧೯-೬೯ ; 1016). [ ದೇಯಿ + ಅಮ (<ಅಮ್ಮ$_1$) + ಅಯ್ಯ$_1$ ]

**ದೇವ** (ಗು). ೧. ದೇವಲೋಕಕ್ಕೆ ಸೇರಿದ. 'ದೇವನದಿ' ಪರಾ. ೨. ಪ್ರಕಾಶಿಸುವ. (ನಾ). ೩. ದೇವಲೋಕದಲ್ಲಿ ವಾಸಿಸುವವನು ; ಸ್ವರ್ಗಲೋಕವಾಸಿ ; ದೇವತೆ ; ದಿವಿಜ : "ದಿವಮೆಂದಿಂತಿದು ಶಾ ನಮುತ್ಕಭವನಂ ತದುದ್ಭವ [ರ್ಕಳ್] ದಿವೌಕಸರ್ ದೇವರ್ಕಳ್ . . . ತ್ರಿದಶರ್" (ವಸ್ತುಕೋ. ೬-೩೦) ; "ಆದಿತ್ಯಃ, ತ್ರಿದಶಃ, ಸುರಃ . . . ದೈವತಂ–ಈ ೨೧ ದೇವರ್ಕಳ ಪೆಸರ್" (ಹಲಾಯು. ೨-೪) ; ದೇವರ ಪೞಿಗಳ ರವದೊಳ್ ದೇವರ ಸುರಿವರಲ ಸರಿಯ ಬೆಳ್ಸರಿಯೊಳ್ ತದ್ದೇವವಿಮಾನಾವಳಿಯೊಳ್ ತೀವಿದುದೊರ್ಮೊದಲೆ ಗಗನದಿಂ ಧರೆ ಮಧ್ಯಂ (ಪಂಪಭಾ. ೧-೧೪೬) ; ಜೀವಾತ್ಮರುಗಳಿಗೆ ಅವರವರ ಕರ್ಮಾಧೀನ ವಾಗಿ ಬರುವ ದೇಹವನ್ನು ದೇವ ಮನುಷ್ಯ ತಿರ್ಯಕ್ ಸ್ಥಾವರವೆಂದು . . . ವಿಭಾಗಮಾಡಿರುತ್ತಾರೆ (ಹಿಂದುಶಾ. ೧೪). ೪. ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣನಾದವನು ; ಪರಮಾತ್ಮ ; ಭಗವಂತ ; ಪರಬ್ರಹ್ಮ : ಜೀವನುಮಶುದ್ಧನು ದೇವನತಿಶುದ್ಧನು (ಬಸಪು. ೫೧–೨೯) ; ದೇವ ಬಂದ ನಮ್ಮ ಸ್ವಾಮಿ ಬಂದನೋ (ಪುರಂದ. ೧–೪೮ ಪಲ್ಲವಿ) ; ದೇವ ನಾರೆಂದೆನಲು ಬುದ್ಧಿಯ ಭಾವದಲಿ ಭಾವವನಱಿವ ಸದ್ಭಾವರೂಪನು ಸಾಕ್ಷಿಯಾತನೆ ದೇವನೆನಿಸುವನು (ಅಮೃತ. ೩-೧೪೬) ; ಆ ದೇವ ಈ ದೇವ ಮಾದೇವನೆನವೇಡ ಆ ದೇವರ ದೇವ ಭುವನದ ಪ್ರಾಣಿಗಳಿಗಾದವನೆ ದೇವ (ಸರ್ವಜ್ಞ. ೦೯೦) ; ಇಬ್ಬನಿಯಲಿ ಸುಖಿಸುವ ಹೃದಯವೆ ದೇವಗೆ ಗುಡಿ (ಅನಿಕೇ. ೩೪-೩). ೫. ಬ್ರಹ್ಮ : "ಸರಸಿರುಹಭವಂ ಬ್ರಹ್ಮಂ ಹಿರಣ್ಯಗರ್ಭಂ ವಿಧಾತೃ ದೇವನಜಂ . . . ಚತುರಾಸ್ಯಂ" (ವಸ್ತುಕೋ. ೩-೦೧). ೬. ಗುರು, ದೊರೆ ಮುಂತಾದ ಹಿರಿಯರನ್ನು ಕುರಿತು ಸಂಬೋಧಿಸು ವಾಗ ಬಳಸುವ ಗೌರವಸೂಚಕವಾದ ಮಾತು : ದೇವ ಬಿನ್ನಪ ಮಿಂದು ಖಾಂಡವಮಂ ಕೃಶಾನು ತಗುಳ್ದು ನಾನಾವಿಧಂ ಸುಡೆ . . . ದೇವರೆಂದಱಿದಿರ್ದಂ (ಪಂಪಭಾ. ೫-೯೪); ದೇವ ಪೞಿತಾವುದವ್ಯಕ್ತ್ರವಯುವ ದೊಳಂ ಕುಮಾರಸನ್ನತಿಕೆಯನುದ್ಭಾವಿಸುತಿರ್ದಪ್ಪ[ದಂ ಪರಿ]ಭಾವಿಸು ನೀಂ ಚಕ್ರವರ್ತಿಚಿಹ್ನೋತ್ಕರಮಂ (ಶಾಂತಿಪು. ೪೧೯) ; ದೇವ ನಿಮಗಪ್ಪ ಪಿರಿತಮನಾವೆಡೆಯೊಳಮಱಸಿ ಪಡೆದೆವಿಲ್ಲ (ಪಂಚತಂ. ೦೪೪-೨೧) ; ದೇವ ಕನಸಿದು ಕರಂ ದೋಷಾವಹಂ (ಯಕೋಚ. ೩-೦೩). ೭. ಪೂಜ್ಯ, ಮಹನೀಯ ಎಂಬರ್ಥದಲ್ಲಿ ಹೆಸರಿನ ಕೊನೆಯಲ್ಲಿ ಸೇರಿಸುವ ಮಾತು: "ಪಾದಃ, ದೇವಃ, ಭಟ್ಟಾರಕಃ – ಈ ಮೂಱುಂ ಪೆಸರ ಕಡೆಯೊಳ್ ಪೂಜಾವ[ಚ]ನಂ" (ಹಲಾಯು. ೨೫-೦೩೪) : "ಪೆಸರ್ ಕಡೆಯಾಗುನುಡಿ ದೇವಮಕ್ಕು" (ಮಂಗರಾ. ೨೬-೭). ೮. ವಿಹರಿಸುವವನು ; ಕ್ರೀಡಿಸು ವವನು : ದೇವ ಎಂದರೆ ಕ್ರೀಡಾಮಯ ಎಂದು ಮತ್ತೊಂದು ಅರ್ಥ (ಛಾತತ್ತ್ವ. ೪೮೭). ೯. ದಡ್ಡ ; ಹೆಡ್ಡ. ೧೦. ಮಗು ; ಶಿಶು. ೧೧. [ಛಂದ] ಒಂದು ಅಕ್ಷರ ಗಣದ ಹೆಸರು; ನಗಣ (UUU): ನಗಣ . . . (ನಾಕ, ಇಂದ್ರನಿಲಯ, ದೇವ, ಇಂದ್ರ) (ಛಂದೋಂಬು. ೩. ೦೨). ೧೨. [ಜೈನ] ಲೋಕಾಂತಿಕ ದೇವತೆ : ದೇವರೊಳಂ ಗುರುಗಳೊಳ ಮಾಗಮದೊಳಂ ನ^ಬುಗೆಯುಂ ನಲ್ಮೆಯುಂ ಭಕ್ತಿಯುಮನೂನವಾಗೆ (ಸುಕುಮಾ. ೩-೪೬ ವ).

ದೇವಾಂದೇವ = ದೇವರ ದೇವ ; ದೇವಾಧಿದೇವ; ಪರಮೇಶ್ವರ: ಕಿಟ್ಟೇಶ್ವರದಾ ದೇವರು ಪರವರಿಯ ಛತ್ರಮುಂ ಕವಿಲೆಯ ಪಾಲುಂ ಎಟ್ಟುಂ × × × ದೇವಾನ್ದೇವನ ಪರಿಜನಮಲ್ಲಾಡೆ ಪೆಱನೊರ್ವನಾರು ಮುಂಣಲ್ಕೊಮೆಣ್ಣುಕಂ ಇನ್ನುಣ್ಣೋರುಂ ಉಣಿಯ ಕೊಡುವೋನುಂ . . . ಪೂತಿ ಎನ್ನ ನರಗಕ್ಕೆ ಸಲ್ಗೆ (ಎಕ. VI, ಕೊಪ್ಪ. ೩೬-೪; ಸು. 675 ?).
[ ಸಂ. ]

**ದೇವಂಗೆಯ್$_1$** (ಕ್ರಿ). ದೇವತ್ವವನ್ನು ಆರೋಪಿಸು : ದೇವಂಗೆಯ್ಯುದು ಕಲ್ಲ ಮಣ್ಣ ಪರಿಜಂ ಚಿಹ್ನಂಗಳಂ ಶೂನ್ಯಮಂ (ಸಂಗಪ. ೩-೨).
[ ದೇವ + ಕೆಯ್$_1$ ]

**ದೇವಂಗೆಯ್$_2$** (ನಾ). ದೇವರಿಗೆ ಸೇರಿದ ಸಾಗುವಳಿ ಜಮೀನು : ತೆಂಕ ದೇವಂಗೆಯ್ಯ ಮೇರೆ (ಎಇ. VII, ೨೦೦-೦೦ ; 886).
[ ದೇವ + ಕೆಯ್$_4$ ]

**ದೇವಂಗೇರಿ** (ನಾ). ಒಂದು ಸ್ಥಳದ ಹೆಸರು : ಶ್ರೀಪುರದಾ ಬಡಗಣ ಪಡುವಣ ಕೋಣುಳ್ಳನ್ದೇವಂಗೇರಿ ಮದವಮನೆ ಒಂದಂ (ಎಕ. IV, ನಾಗಮಂ. ೮೫-೬೯ ; 776). [ ದೇವ + ಕೇರಿ ]

**ದೇವಋಣ** (ನಾ). ದೇವ, ಋಷಿ ಮತ್ತು ಪಿತೃ ಎಂಬ ಋಣತ್ರಯ ದಲ್ಲಿ ಮೊದಲನೆಯದು ; ದೇವತೆಗಳು ತನಗೆ ಮಾಡಿರುವ ಉಪ

ಕಾರಕ್ಕಾಗಿ ಮನುಷ್ಯನು ಮಾಡಬೇಕಾದ ಕೃತಜ್ಞತೆಯ ಕಾರ್ಯ: ಪಿತೃಋಣ, ಗುರುಋಣ, ದೇವಋಣ ಇತ್ಯಾದಿ ಎಲ್ಲ ಋಣದ ಭಾರವನ್ನು ನಿವ್ವೊಬ್ಬರ ತಲೆಯ ಮೇಲೆ ಹೊರಿಸಬೇಕಾಗುತ್ತದೆ (ಹೊಸಕ. ೨೫೨). [ ದೇವ + ಋಣ ]

**ದೇವಋಷಿ** (ನಾ). = ದೇವರ್ಷಿ ೧ : ಪರಸಮಯದ ದೇವಋಷಿ ಸಮೂಹಕ್ಕಂ ಪೆಂಡಿರು ಮಕ್ಕಳುಮೊಳರಾಯ್ತಾಪ್ತರಿಕ್ಕೆ ಮುನಿಗಳ್ಗೆ ಸಲ್ಲ ಜಿನಶಾಸನದೊಳ್ (ಸಮಪ. ೮-೨೦೭) ; ದೇವವೃಂದವು ಬೆರಸಿ ನಾನಾದೇವ ಋಷಿಯರು ಕೂಡಿ ಭೂಮಿಯೀದೇವಿಯನು ಸಂತೈಸಿ (ಸಂಭಪ. ೬-೬೨). [ ದೇವ + ಋಷಿ ]

**ದೇವಕಂಟಕ** (ನಾ). ದೇವತೆಗಳಿಗೆ ಮುಳ್ಳಿನಂತಿರುವವನು ; ದೇವತೆಗಳನ್ನು ಕಾಡುವವನು ; ರಾಕ್ಷಸ: ದೇವ ಮಗನೆಳಲಿಂದ ಕಾದಲು ದೇವಕಂಟಕ ಬಂದ ಮೇಲಿನ್ನಾವುದುಚಿತವು ನೀವೆ ಬಲ್ಲಿರಿ ಕಾಳಗದ ಪರಿಯ (ಕೌಶಿರಾ. ೩೬-೨೩). [ ದೇವ + ಕಂಟಕ ]

**ದೇವಕಣಗಿಲೆ** 'ದೇವಗಣಗಿಲು' ನೋ.

**ದೇವಕಣಶ** (ನಾ). ಒಂದು ಬಗೆಯ ಸಸ್ಯ ; ಪಚ್ಚೆತೆನೆ : "ದೇವಕಣಶಂ ಪಚ್ಚೆಯಕಬ್ಬು" (ಮಂಗರಾ. ೪೦-೩೦). [ ಸಂ. ]

**ದೇವಕನ್ನಿಕೆ** (ನಾ). ದೇವತಾಸ್ತ್ರೀ; ದೇವಕನ್ಯೆ: ಗವುಡನು ಸೋಮು ××× ತುಜುವ ಮರಳ್ಳಿಯರವಿ ××× ನು ದೇವಕಂನಿಕೆಯುರು (ಎಕ. XVI, ಚಿಕ್ಕನಾ. ೧೧೧-೨ ; 1301). [ ದೇವ + ಕನ್ನಿಕೆ₁ ]

**ದೇವಕನ್ಯೆ** (ನಾ).=ದೇವಕನ್ನಿಕೆ: ದೇವಕನ್ಯೆಯ ಸಾಕ್ಷಾತ್ಕಾರಕ್ಕಾಗಿ ಹಂಬಲಿಸಿ ಹತಾಶನಾದ ರಾಜಪುತ್ರನ ಕಥೆಯೊಂದಿದೆ (ದೇಕನ್ಯ. ೫). [ ದೇವ+ಕನ್ಯೆ ]

**ದೇವಕಾಂಚನ** (ನಾ). ಒಂದು ಬಗೆಯ ಮರ ; ಕೆಂಪು ಕಂಚಿವಾಳ. [ ಸಂ. ]

**ದೇವಕಾಂತೆ** (ನಾ). = ದೇವಕನ್ನಿಕೆ: ಚಂದ್ರಮಂಡಲಂಗಳನೆಳಮಿಂಚು ತಾಳ್ದಿದವೊಲದ್ದಣದೊದ್ದಣಮೆದ್ದಮಾಗೆ ಕಾವಳವಿಗೆ ಖಡ್ಗಧಾರಿಣಿಯ ರಾವರಸಿಂದೆಗೆ ದೇವಕಾಂತೆಯರ್ (ಅನಂಪು. ೪-೫೦). [ ದೇವ + ಕಾಂತೆ ]

**ದೇವಕಾರ್ಯ** (ನಾ). ೧. ದೇವರ ಅನುಗ್ರಹವನ್ನು ಬಯಸಿ ಮಾಡುವ ವ್ರತೋಪವಾಸಗಳು ಮುಂತಾದ ಕಾರ್ಯ: ದೇವಕಾರ್ಯಕೆ ನೆರೆದು ನೆರೆಯೂರಿಂಗೆ ಪೋಪಂತೆ (ಬಸಪು. ೪೪-೬೨) ; ಮೊಸರುಹೆಡಿಗೆ ಶಿರದಲಿ ದೇವಕಾರ್ಯ ಮಿಾಸಲು (ಪ್ರರಂಚ. ೨-೨೦೪-೨); ಆತನಿಗೆ ಹಿಂದೂ ರಾಜ್ಯದ ಪುನರುದ್ಧಾರಕಾರ್ಯ, ದೇಶೋದ್ಧಾರಕಾರ್ಯ, ದೇವಕಾರ್ಯವಾಗಿತ್ತು (ಬಂಕಿಮ. ೬೮೫). ೨. ಕೆಲವು ಪಂಗಡಗಳಲ್ಲಿ ಮದುವೆಗೆ ಮುಂಚೆ ಮಾಡುವ ಕುಲದೇವತೆಯ ಪೂಜೆ: ಈಗ ದನಿಗಳಿಗೆ ಅವಕಾಶವಿಲ್ಲ, ದೇವಕಾರ್ಯ ನಡೆದಿದೆ (ಅಮಿನ್ನಾ. ೧೦). ೩. ಸಂಪ್ರದಾಯ ನಿಷ್ಠರ ಮನೆಗಳಲ್ಲಿ ವರ್ಷಂಪ್ರತಿ ಒಂದು ವಿಶಿಷ್ಟವಾದ ತಿಥಿಯಲ್ಲಿ ಆಯಾ ಮನೆದೇವತೆಯ ಪ್ರೀತ್ಯರ್ಥವಾಗಿ ನೆರವೇರಿಸುವ ಒಂದು ಪವಿತ್ರಕಾರ್ಯ. [ ದೇವ + ಕಾರ್ಯ ]

**ದೇವಕುಜ** (ನಾ). ದೇವಲೋಕದ ಮರ ; ಕಲ್ಪವೃಕ್ಷ: ಇದು ದಲ್ ಚಂದ್ರಮನಲ್ತು . . . ತತ್ಕಂಠವಿಲಂಬಿ ದೇವಕುಜಪುಷ್ಪಸ್ರಗ್ವಿಜೋ ವಿಭ್ರಮಂ (ರಾಜಶೇ. ೧೩-೪೪). [ ದೇವ + ಕುಜ ]

**ದೇವಕುರು** (ನಾ). [ಜೈನ] ವಿದೇಹಕ್ಷೇತ್ರದಲ್ಲಿ ಮೇರುಪರ್ವತಕ್ಕೆ ದಕ್ಷಿಣದಲ್ಲಿರುವ ಒಂದು ಭೋಗಭೂಮಿ: ಕರುಮಾಡದೇಬನೆಯ ನೆಲೆಯೊಳಿರ್ದಲ್ಲಿ ಸಿಡಿಲ್ ಪೊಡೆಯೆ ಸತ್ತು ದೇವಕುರುವಿನೊಳ್ ಪುಟ್ಟಿದಂ (ಶಾಂತಿಪುರಾ. ೦೬-೪೩ ವ) ; ಪುರಂ ವಿರಾಜಿಪುದು ದೇವಕುರುಪ್ರತಿಮಾನ ಮೆಂಬಿನಂ (ಚಂದ್ರಪ್ರ. ೧೦-೬೨). [ ದೇವ + ಕುರು₃ ]

**ದೇವಕುಲ, ದೇವಕುಳ** (ನಾ). ೧. ದೇವಾಲಯ ; ದೇವಸ್ಥಾನ : ಕುಲನಗಂಗಳೆನಿಪ ದೇವಕುಲದ ಭೋಗದಿಂ ಸರಾಗಮಾದ ರಾಗದಿಂ (ಶಂಪಭಾ. ೧-೫೮ ರಗಳೆ): ಅಮರಾವಗಾಪಯಃಪೂರಮನಾಂತ ಹೈಮನಗದಂತಿರೆ ದೇವಕುಲಂಗಳೊಪ್ಪುಗುಂ (ಆದಿಪು. ೨೯೩) ; ಕೈತೊಳೆದು ದೇವಕುಲ ಕೈತಂದು ವಿಘ್ನಶಾಂತಿಯ ಬೇಳ್ವ (ಪಾರಿಸಿ. ೧೦-೨೧೫). ೨. ದೇವತೆಗಳ ಗುಂಪು,-ಸಮೂಹ: "ದೇವಕುಲಕೆ ಬಿಜ್ಜೋದರರುಮಚ್ಚರರುಮಕ್ಕು" (ಕಬ್ಬಿಕೈ. ೧೦). ೧, ೨ : ಧನದನಿವಾಸದಿಂ ಮಣಿಮಯೋಜ್ವಳದೇವಕುಲಂಗಳಿಂದೆ . . . ಪೌದನಪುರವೊಪ್ಪುತಿರ್ಪುದಮರಾವತಿಯಂತೆ (ಪಾರ್ಶ್ವಪು. ೧-೧೧೨). **ದೇವಕುಳ**: ೧. ದೇವಕುಳಂಗಳಿಂ [ವ] × ವಧೂಕುಳಹರ್ಮ್ಯಶತಂಗಳಿಂ ಮಹೀದೇವಗೃಹಂಗಳಿಂ ಧನಪತಿಪ್ರಭವೈಶ್ಯಕದಂಬಗೇಹದಿಂ (ಎಇ. XX, ೧೧೬-೨೯ ; 1167); ತಾರಕಪ್ರತುತಿಗಳಾರಯಲ್ಪಡೆವ ದೇವಕುಳಂಗಳ . . . ತಟಾಕಚಯಂಗಳ ಪೆರ್ಮೆಯಿಂದ ಮೂರ್ಜಿತಮೆನಿಪಗ್ರಹಾರಮವು ವಿಷ್ಣುನೃಪಾಳಕನಿತ್ತ ದತ್ತಿಗಳ್ (ಎಕ. VI, ಕಡೂರು. ೪೩-೨೯ ; 1196). [ ದೇವ + ಕುಲ ]

**ದೇವಕುವರ, ದೇವಕುಮಾರ** (ನಾ). ೧. ದೇವರ ಮಗ; ಏಸುಕ್ರಿಸ್ತ: ದಿವಕೇದು ದೇವಕುವರಂ ಮರಳಿ ಬಹನೆಂಬ ಗೆಲುವಿಂದ ದೇವದೂತರೆ ಬಾರಿಸುವರೂ ಮಂಗಲವಾದ್ಯವೆನಲು (ಗೊಲ್ಗೊಥಾ. ೦-೭). **ದೇವಕುಮಾರ**: ೨. ಒಬ್ಬಾತನ ಹೆಸರು: ಶ್ರೀವರಮತಿಸಾಗರಪಣ್ಡಿತಭಟಾರರ ಬೆಸದೊಳಣ್ಣಯ್ಯನುಂ ದೇವಕುಮಾರನುಂ ಧೋರನುಮಿಬ್ಬು (ಎಕ. III, ಶ್ರೀರಂಗ. ೧೪೪-೧೧ : 904 ?). [ ದೇವ + ಕುವರ₂ ]

**ದೇವಕುಸುಮ** (ನಾ). ಲವಂಗ: "ಲವಿ ಲವಂಗಂ ದೇವಕುಸುಮಮೆನೆ" (ಮಂಗರಾ. ೪೩-೪೦) ; "ಲವಂಗಂ, ದೇವಕುಸುಮಂ, ಶ್ರೀಸಂಜ್ಞಂ-ಇ ಲವಂಗದ ಹೂವ್ವು, ಲವಂಗ" (ಸಿದ್ಧಾಂತಿ. ೦೬೯). [ ದೇವ + ಕುಸುಮ ]

**ದೇವಕುಳ** 'ದೇವಕುಲ' ನೋ.

**ದೇವಕೂಟ** (ನಾ). ೧. ದೇವಾಲಯ. ೨. ದೇವಸ್ಥಾನದ ಭೋಜನಶಾಲೆ. ೩. ದೇವಸ್ಥಾನದ ಭೋಜನಶಾಲೆಯ ಮೇಲ್ವಿಚಾರಣೆ : ಅಧಿಕಾರವುಳ್ಳ ಸಂಸ್ಥೆಗಳು :—ಊರು (ಊರವರು), ನಾಡು . . . ಸರ್ವಾತಿಥ್ಯಕುಟುಂಬ, ದೇವಕೂಟ, ಕ್ರಮುಕಾರಿಯ (ತುಳುವಾ. ೨೬೦). [ ದೇವ + ಕೂಟ₁ ]

**ದೇವಕೃಚ್ಛ್ರ** (ನಾ). ಒಂದು ಬಗೆಯ ಪ್ರಾಯಶ್ಚಿತ್ತ ; ಹೆಚ್ಚಾದ ಕಾಯಕ್ಲೇಶದಿಂದ ನಿರ್ವಹಿಸಬೇಕಾದ ಒಂದು ಬಗೆಯ ತಪಸ್ಸು: ದೋಷಪರಿಹಾರಾರ್ಥಮಾಗಿ ಶರೀರಬಾಧಾತ್ಮಕತ್ವದಿಂ ಮಹತ್ಕಷ್ಟಸಾಧ್ಯಂಗಳಾದ ತಪ್ತಕೃಚ್ಛ್ರದೇವಕೃಚ್ಛ್ರಯಾವಕೃಚ್ಛ್ರ ಮುಂತಾದುವುಗಳಿಂ ಪಕ್ಷಮಾಸಾದಿಕಂಗಳಲ್ಲಿ ಅನ್ನಮಂ ವರ್ಜಿಸಿ ತಗ್ಗಿಸಿಕೊಂಬುದು (ವಿವೇಕ. ೧೩೯). [ ಸಂ. ]

**ದೇವಕೃತ** (ನಾ). ೧. ದೇವರಿಂದ ಆದುದು ; ಮನುಷ್ಯಶಕ್ತಿಗೆ ಅಸಾಧ್ಯವಾಗಿದ್ದು ಕೇವಲ ಅದೃಷ್ಟದಿಂದ ಒದಗಿಬರುವುದು. ೨. [ಜೈನ] ಮೂವತ್ತು ನಾಲ್ಕು ಅತಿಶಯಗಳಲ್ಲಿ ಒಂದು ; ಜೈನರ ಪ್ರಕಾರ ೩೪ ಅತಿಶಯಗಳಿವೆ. ಇವು ತೀರ್ಥಂಕರನಿಗೆ ಉಂಟಾಗುವ ಅತಿಶಯಗಳು. ಇವುಗಳನ್ನು ಸ್ವಾಭಾವಿಕ ಅತಿಶಯಗಳು, ಕರ್ಮಕ್ಷಯಜ ಅತಿಶಯಗಳು ಮತ್ತು ದೇವಕೃತ ಅತಿಶಯಗಳೆಂದು ಮೂರು ವಿಭಾಗ ಮಾಡಿದ್ದಾರೆ. ಸ್ವಾಭಾವಿಕ ಅತಿಶಯಗಳು-ಸ್ವೇದರಹಿತತ್ವ, ನಿರ್ಮಲಶರೀರ, ಹಾಲಿನಂತೆ ಬಿಳಿಯ ರಕ್ತ, ವಜ್ರವೃಷಭನಾರಾಚಸಂಹನನ, ಸಮಚತುರಸ್ರ ಶರೀರಸಂಸ್ಥಾನ, ಅನುಪಮರೂಪ, ಅತ್ಯಧಿಕ ಸುಗಂಧತ್ವ, ೧೦೦೮ ಬಗೆಯ ಉತ್ತಮ ಲಕ್ಷಣಗಳನ್ನು ಹೊಂದಿರುವಿಕೆ, ಅತ್ಯಧಿಕ

ವಾದ ಬಲ ಮತ್ತು ಹಿತಮಿತವಾದ ಭಾಷಣ ಎಂಬ ಹತ್ತು ವಿಧಗಳು. ಕರ್ಮಕ್ಷಯಜ ಅತಿಶಯಗಳು–ತನ್ನ ಸುತ್ತಲೂ ನಾಲ್ಕು ದಿಕ್ಕುಗಳಲ್ಲಿ ನೂರುಯೋಜನಗಳವರೆಗೆ ಸುಭಿಕ್ಷತೆ, ಆಕಾಶಗಮನ, ಹಿಂಸೆಯ ಅಭಾವ, ಭೋಜನದ ಅಭಾವ, ಉಪಸರ್ಗಗಳ ಅಭಾವ, ನಾಲ್ಕೂ ಕಡೆಗೆ ಮುಖವಾಗಿರುವ ಸ್ಥಿತಿ, ನೆಳಲು ಬೀಳದಿರುವಿಕೆ, ಎವೆ ಬಡಿಯದಿರುವಿಕೆ (ನಿರ್ನಿಮೇಷ ದೃಷ್ಟಿ), ಸಮಸ್ತವಿದ್ಯೆಗಳಲ್ಲಿ ಪ್ರಭುತ್ವ, ನಖ ಹಾಗು ರೋಮಗಳು ಸಮಾನವಾಗಿರುವಿಕೆ ಮತ್ತು ಹದಿನೆಂಟು ಭಾಷೆಗಳಲ್ಲಿಯೂ ಏಳುನೂರು ಕ್ಷುದ್ರಭಾಷೆಗಳಲ್ಲಿಯೂ (ಏಕಕಾಲಕ್ಕೆ) ಹೊರಡುವ ದಿವ್ಯಧ್ವನಿ ಎಂಬ ಹನ್ನೊಂದು ವಿಧಗಳು. ದೇವಕೃತ ಅತಿಶಯಗಳು–ತೀರ್ಥಂಕರ ಮಹಿಮೆಯಿಂದ ಯೋಜನಗಳ ವರೆಗಿನ ವನಗಳಲ್ಲಿ ಎಲೆ, ಹೂ, ಹಣ್ಣುಗಳು ತುಂಬುವುದು, ಮುಳ್ಳು, ದೂಳು ಹೊರಟುಹೋಗಿ ಸುಖವಾದ ಗಾಳಿ ಬೀಸುವುದು, ಜೀವಗಳು ಪರಸ್ಪರ ವೈರಭಾವವನ್ನು ತ್ಯಜಿಸುವುದು, ಭೂಮಿ ಕನ್ನಡಿಯಂತೆ ಸ್ವಚ್ಛವೂ ರತ್ನಮಯವೂ ಆಗುವುದು, ಸೌಧರ್ಮೇಂದ್ರನ ಆಜ್ಞೆಯಿಂದ ಸುಗಂಧಜಲದ ವೃಷ್ಟಿ, ದೇವವಿಕ್ರಿಯೆಯಿಂದ ಸಸ್ಯಫಲಸಮೃದ್ಧಿ, ಎಲ್ಲ ಜೀವಗಳಿಗೂ ನಿತ್ಯ ಆನಂದ, ಶೀತಲವಾದ ಗಾಳಿ ಬೀಸುವಿಕೆ, ಬಾವಿ, ಕೆರೆ, ನದಿಗಳಲ್ಲಿ ನಿರ್ಮಲವಾದ ನೀರು ತುಂಬುವಿಕೆ, ಆಕಾಶ ನಿರ್ಮಲವಾಗುವಿಕೆ, ಎಲ್ಲ ಜೀವಗಳೂ ರೋಗರಹಿತರಾಗಿರುವಿಕೆ, ನಾಲ್ಕು ದಿವ್ಯ ಧರ್ಮಚಕ್ರಗಳ ದರ್ಶನ ಮತ್ತು ತೀರ್ಥಂಕರನ ನಾಲ್ಕೂ ಮಗ್ಗುಲುಗಳಿಗೆ ಸಕಲ ಪೂಜಾದ್ರವ್ಯಗಳುಂಟಾಗುವಿಕೆ ಎಂಬ ಹದಿಮೂರು ವಿಧಗಳು: ಸ್ವಾಭಾವಿಕ ಕರ್ಮಕ್ಷಯಜ ದೇವಕೃತಂಗಳೆಂಬ ಮೂವತ್ತುನಾಲ್ಕು ಮತಿಶಯಂಗಳೊಳೊಂದುಗುಂದದಿರೆಯುಂ (ಶಾಂತಿಪು. ೧೨-೦೪ ವ): ದೇವಕೃತಂಗಳುಮಂ ಸ್ವಾಭಾವಿಕಮುಮನಜಿತ ನೀನೆ ತಾಳ್ದಿದೆ (ಅಜಿಪು. ೬-೦೨). [ದೇವ + ಕೃತ]

**ದೇವಕೊಮಾರ** ‘ದೇವಕುವರ’ ನೋ.

**ದೇವಕ್ರಿಯೆ** (ನಾ). [ಸಂಗೀತ] ಒಂದು ರಾಗದ ಹೆಸರು: ದೇವಕ್ರಿಯೆ ತ್ರಿನೇತ್ರಕ್ರಿಯೆ ಭೂತಾಳಕ್ರಿಯೆಯೆಂಬ ಮೂಱುಂ ಕೋಲಾಹಲರಾಗಕ್ಕುಪಾಂಗಗಳು (ವಿವೇಕ. ೨೩೪). [ಸಂ. ದೇವಕ್ರಿಯಾ]

**ದೇವಖಾತ** (ನಾ). ೧. ನೈಸರ್ಗಿಕವಾಗಿ ಉಂಟಾದ ಜಲಾಶಯ; ಅಕೃತ್ರಿಮವಾದ ಸರೋವರ ಮೊದಲಾದ ಜಲಾಧಾರ: “ದೇವಖಾತಮಕೃತ್ರಿಮಖಾತಂ” (ವಸ್ತುಕೋ. ೨೪-೩); “ಅಖಾತಮು ದೇವಖಾತಮೆನಲ್ಕೆ” (ಬಂಗರಾ. ೦೨೩-೦೪); ತಾನಾಗಿ ನಿರ್ಮಿತವಾದ ಪುಷ್ಕರಿಣಿ ಮುಂತಾದವು ದೇವಖಾತವು (ಅಯಾಂಧ. ೦೬೬). ೨. ಕುರುಕ್ಷೇತ್ರದಲ್ಲಿದ್ದ ಒಂದು ಜಲಾಶಯದ ಹೆಸರು: ನಡುವಗಲಿಬ್ಬರುಂ ಕಾದಿ ಬಟಲ್ದು ಕುದುರೆಗಳಂ ನೀರೊಳಿಕ್ಕಲೆಂದು ದೇವಖಾತಮೆಂಬ ಮಡುವಿಂಗೆ ಬರ್ಪುದುಂ (ಪಂಪಭಾ. ೦೧-೦೩೬ ವ). [ದೇವ + ಖಾತ₂]

**ದೇವಗಂಗೆ** (ನಾ). ದೇವಲೋಕದ ನದಿ: ಸುಜ್ಞಾನ ನಿರ್ಮಲ ದೇವಗಂಗೆಯಲಿ ಇಳಿದು ಸ್ನಾನಂಗೈದು (ಗಗಚಾ. ೦೩-೦೯). [ದೇವ + ಗಂಗೆ₂]

**ದೇವಗಂಟೆ** (ನಾ). ಒಂದು ಬಗೆಯ ಔಷಧಿಸಸ್ಯ: ಹೊಟ್ಟೆ ನುಲಿಯುವುದಕ್ಕೆ:–ದೇವಗಂಟೆಯ ರಸದಲ್ಲಿ ಉಳ್ಳಿ, ಮೆಣಸು ಅರೆದು ಆ ದೇವಗಂಟೆಯ ರಸದಲ್ಲಿ ಕದಡಿ ಮೂಱುದಿನ ಕೊಳ್ಳಲು ಹೊಟ್ಟೆ ಕಚ್ಚುವುದು ಮಾಣ್ಗುಂ (ವಿಷವಿ. ೬೬); ನಾಲ್ಕುವರಹ ತೂಕ ದೇವಗಂಟೆ ಸೊಪ್ಪನೂ . . . ಒಂದು ಮಾನ ಹಸುವಿನ ತುಪ್ಪದಲ್ಲಿ ಹಾಕಿ ಕಾಸಿ ಹದದಲ್ಲಿ ತೆಗೆದು ನಸಿಕದಲ್ಲಿ ನಸ್ಯವುಂ ಮಾಡಿಸಲು ಅರೆದಲೆಬೇನೆ ಮಾಣುವುದು (ವೈದ್ಯಸಾ II, ೦೩೪). [<ಸಂ. ದೇವಘಂಟಾ]

**ದೇವಗಣ** (ನಾ). ೧. ದೇವತೆಗಳ ಗುಂಪು, –ಸಮೂಹ: ರುದ್ರನ ಹಾವುಗೆ ಉರಿಯಿತ್ತು ದೇವಗಣಂಗಳು ನಿವಾತವಾದರು (ಬಸವ. ೪೩೦); ಭಯಮಂ ದೇವಗಣಕ್ಕೆ ಮಾಡಿ . . . ಅಂದಿನ ಕಾಲನೇಮಿಯೆ ಕಂಸಾಸುರನಾಗಿ ಪುಟ್ಟಿದುದನಾಂ ಬಲ್ಲೆಂ (ಜಗವಿ. ೧-೬೮): ಮಾಲೆಗೊಂಡೆಯ್ತಪ್ಪ ದೇವಗಣತತಿಯೊಳಗೆ ಶಾಂತಾರ್ಕಕೋಟಿಪ್ರಭಾಪುಂಜದಿಂ ಬೆಳಗೆ ಮುಂತೆ ಶಿವಮೂರ್ತಿ (ನಂಬಿರ. ೬-೧೨೨): ಭಾಸ್ವರಭಕ್ತಿಯಿಂದೆಱಗೆ ದೇವಗಣಂ (ಪುಷ್ಪಪು. ೧೦-೦೪). ೨. [ಜ್ಯೋತಿ] ನಕ್ಷತ್ರಗಳ ಮೂರು ಗಣಗಳಲ್ಲಿ ಒಂದು; ದೇವವರ್ಗಕ್ಕೆ ಸೇರಿದುವೆಂದು ಭಾವಿಸಲಾದ ನಕ್ಷತ್ರಗಳ ಗುಂಪು: ₱ ೧. ಅಶ್ವಿನಿ, ಮೃಗಶಿರೆ, ಪುನರ್ವಸು, ಪುಷ್ಯ, ಹಸ್ತ, ಸ್ವಾತಿ, ಅನೂರಾಧೆ, ಶ್ರವಣ ಮತ್ತು ರೇವತಿ–ಇವು ಒಂಬತ್ತು ಸೇರಿ ದೇವಗಣ. ೨. ಭರಣಿ, ರೋಹಿಣಿ, ಆರ್ದ್ರೆ, ಪುಬ್ಬೆ, ಉತ್ತರೆ, ಪೂರ್ವಾಷಾಢ, ಉತ್ತರಾಷಾಢ, ಪೂರ್ವಾಭಾದ್ರೆ, ಉತ್ತರಾಭಾದ್ರೆ–ಈ ಒಂಬತ್ತೂ ಸೇರಿ ಮನುಷ್ಯಗಣ. ೩. ಕೃತ್ತಿಕೆ, ಆಶ್ಲೇಷೆ, ಮಖೆ, ಚಿತ್ತೆ, ವಿಶಾಖೆ, ಜ್ಯೇಷ್ಠೆ, ಮೂಲ, ಧನಿಷ್ಠೆ, ಶತಭಿಷೆ–ಇವು ಒಂಬತ್ತು ಸೇರಿ ರಾಕ್ಷಸಗಣ. ಒಬ್ಬ ಕನ್ಯೆಗೆ ಮತ್ತು ಒಬ್ಬ ವರನಿಗೆ ಮದುವೆ ಮಾಡಬಹುದೆ ಎಂಬ ವಿಷಯವನ್ನು ಪರಿಶೀಲಿಸಲು ಜ್ಯೋತಿಷ್ಯಶಾಸ್ತ್ರದಲ್ಲಿ ಹನ್ನೆರಡುಕೂಟಗಳನ್ನು ಹೇಳಿದ್ದಾರೆ. ಅವುಗಳಲ್ಲಿ ಗಣಕೂಟವೆಂಬುದೂ ಒಂದು. ಅದರಲ್ಲಿ ಕನ್ಯೆಯ ಮತ್ತು ವರನ ನಕ್ಷತ್ರಗಳು ಒಂದೇ ಗಣಕ್ಕೆ ಸೇರಿದ್ದರೆ ಪ್ರಶಸ್ತ. ದೇವಗಣ ಮನುಷ್ಯಗಣವಾದರೆ ಮಧ್ಯಮ. ದೇವಗಣ ರಾಕ್ಷಸಗಣವಾದರೆ ಅಧಮ. ಮನುಷ್ಯಗಣ ರಾಕ್ಷಸಗಣವಾದರೆ ನಿಷಿದ್ಧ: ದೆವ್ವ ಭೂತಗಳು . . . ದೇವಗಣದವರಿಗೆ ಕಾಣಿಸುವುದಿಲ್ಲ (ಸಜದಾ. III, ೨೦೬೦); ಗಂಡಿನ ನಕ್ಷತ್ರ ದೇವಗಣ. ಹೆಣ್ಣಿನದು ಮನುಷ್ಯಗಣ. ಚೆನ್ನಾಗಿ ಕೂಡಿದೆ (ಕೂಧಿ). ೩. [ಛಂದ] ಕರ್ತೃವಿಗೂ ಅವನ ಒಡೆಯನಿಗೂ ಶುಭವನ್ನುಂಟುಮಾಡುವ ಒಂದು ಬಗೆಯ ಗಣ: ಭಾಸ್ವದ್ದೇವಗಣಂಗಳಿಂದಱಿದೆಂ ಪಂಕೇಜವಕ್ತ್ರೇಕ್ಷಣೇ (ಛಂದೋಂಬು. ೬-೪೩); ತಾಳಮಾನಸರಿಸವನಱಿಯೆ ಓಜೆ ಬಜಾವಣೆಯ ಲೆಕ್ಕವನಱಿಯೆ ಅಮೃತಗಣ ದೇವಗಣವನಱಿಯೆ (ಬಸವ. ೪೯೪); ಭಾವಿಸೆ ಪದಪದ್ಯಂಗಳೊಳಾವಾವಂ ಗಣಮನಿಕ್ಕಲವುವಿವುಮನ್ನದೆ ದೇವಗಣಮಿಟ್ಟು ಮಾಡಿದ ಕಾವ್ಯವ ಗಣಂ ಬಂದಡುತ್ತಮಂ (ಕವಿಜಿ. ೦-೩೬); ₱ ‘ನಗಣ’ಕ್ಕೆ ಅಧಿದೇವತೆಗಳು ದೇವತೆಗಳು. ಆದ್ದರಿಂದ ಕೆಲವರು ‘ನಗಣ’ವನ್ನೂ ಕೆಲವರು ‘ಮಗಣ’ವನ್ನೂ ದೇವಗಣವೆಂದು ಹೇಳುತ್ತಾರೆ. ಅಮೃತಗಣ ಎಂಬ ಪದದ ವಿಚಾರ ಪಿಂಗಳಾಚಾರ್ಯನ ಛಂದಶ್ಶಾಸ್ತ್ರದಲ್ಲಿಲ್ಲ. ದೇವಗಣವು ಆಯುರ್ವೃದ್ಧಿ ಮಾಡುವುದೆಂದೂ ರಾಕ್ಷಸಗಣವು ಕೇಡುಕನ್ನುಂಟುಮಾಡುವುದೆಂದೂ ನಂಬಿಕೆಯಿದೆ. [ದೇವ + ಗಣ]

**ದೇವಗಣಿಕೆ₁** (ನಾ). ಒಂದು ಬಗೆಯ ಗಿಡ: “ಅಂಬಾಲಾ–ದೇವಗಣಿಕೆ” (ಶಾಕಸ್ಯ. ೩೦). [ದೇವ + ಗಣಿಕೆ₂]

**ದೇವಗಣಿಕೆ₂** (ನಾ). ರಂಭೆ, ಊರ್ವಶಿ, ತಿಲೋತ್ತಮೆ, ಚಿತ್ರಲೇಖೆ, ಮಂಜುಘೋಷೆ, ಮೇನಕೆ, ಸುಕೇಶಿ ಮತ್ತು ಘೃತಾಚಿ ಎಂಬ ಅಪ್ಸರಸ್ತ್ರೀಯರಲ್ಲಿ ಒಬ್ಬಳು: ಭೀಷ್ಮನ್ ಎಟ್ಟಂತೆ ನೆಲ ಮುಟ್ಟದೆ ಬಿಟ್ಟೋನಾನ್ ದೇವಗಣಿಕೆಯರಾಗ್ರ್ರವಿಪ್ಪಿಡಿದು ಬನ್ದಿದಿಗೊಗ್ಗಣ್ಣಿಯ ವೀರಲೋಕಕೆ ಸನ್ದೋನ್ (ಎಕ. VIII, ಸೊರಬ, ೧೦-೪; ಸು. ೮೦೦); ದೇವಗಣಿಕೆಯರನೆ ಪೋಲ್ವಯ್ವೂರ್ವರರಸಿಯರ್ಕಳಿಂದಂ (ವರ್ಧಮಾ. ೬೦-೬): ರಂಭೆ ಊರ್ವಶಿ ತಿಲೋತ್ತಮೆ ಚಿತ್ರಲೇಖೆ ಮಂಜುಘೋಷೆ ಮೇನಕೆ ಸುಕೇಶಿ ಘೃತಾಚಿ ಮೊದಲಾದ ದೇವಗಣಿಕೆಯರುಂ (ವಿವೇಕ. ೨೨೮). [ದೇವ + ಗಣಿಕೆ₂]

**ದೇವಗಣಗಿಲು,** ದೇವಕಣಗಿಲೆ (ನಾ). ಸುತ್ತಲೂ ಬಿಳಿ, ಒಳಗೆ ನಸು ಹಳದಿ ಬಣ್ಣದ ದಪ್ಪರೇಕುಗಳಿಂದ ಕೂಡಿದ ಹೂವುಗಳನ್ನು ಬಿಡುವ ಒಂದು ಬಗೆಯ ಮರ ಮತ್ತು ಅದರ ಹೂವು: ಹಳ್ಳಿಗಳಲ್ಲಿ ಸಾಮಾನ್ಯವಾಗಿ ದೇವಾಲಯದ ಹತ್ತಿರವೇ ದೇವಗಣಗಿಲು ಮರಗಳಿರುತ್ತವೆ (ಜಾನ). **ದೇವಕಣಗಿಲೆ:** ದೇವಕಣಗಿಲೆಯ ಮರದ ತುಂಬ ತುಂಬಿದ ಎಲೆಯ ಮಧ್ಯೆ ಕೊಂಬೆಕೊಂಬೆಯಲ್ಲಿ ಬೆಳ್ಳನೆ ಹೂತಿದ್ದಿತು (ಸಾ.ಶ. VII, ೪೧). [ ದೇವ + ಗಣಗಿಲು (<ಕಣಗಿಲೆ$_1$) ]

**ದೇವಗತಿ** (ನಾ). ೧. ದೇವತೆಯಾಗುವಿಕೆ; ದೇವತ್ವವನ್ನು ಪಡೆಯುವಿಕೆ; ಜೀವನಿಗೆ ಉಂಟಾಗುವ ದೇವ, ಮಾನವ, ತಿರ್ಯಕ್ ಮತ್ತು ನಾರಕ ಎಂಬ ನಾಲ್ಕು ಗತಿಗಳಲ್ಲಿ ಮೊದಲನೆಯದು : ನಿಜದ್ವಿಚರಮ ಸಮಯದೊಳ್ ಅನ್ಯತರ ವೇದನೀಯ ದೇವಗತಿ ತತ್ಪ್ರಯೋಗ್ಯಾನುಪೂರ್ವ ಶರೀರಬಂಧನ ಸಂಘಾತ . . . ನೀಚೈರ್ಗೋತ್ರಗಳೆಂಬ ದ್ವಿಸಪ್ತತಿ ಪ್ರಕೃತಿಗಳಂ ನಿರವಶೇಷಂ ಕಿಡಿಸಿ (ಆದಿಪು. ೧೬-೪೯ ವ) ; ಮುನ್ನಿನ ತಿರ್ಯಗ್ಗತಿ ಬಟ್ಟೆಗಂ ನೆರಪಿದ ದೇವಗತಿ ವಿನಿಷ್ಫಲಮಾದತ್ತು (ಪಾರ್ಶ್ವಪು. ೬-೩೬) ; ಎಲ್ಲ ಪರಿಣಾಮಂಗಳಿಂದಲೂ ಯಾವ ಗತಿಯಲ್ಲಿ ಸುಖವುಂಟಾಗುವುದೋ ಅದೇ ದೇವಗತಿಯು (ಭ್ರನಪ. ೨೯೩). ೨. ದೇವತೆಗಳಿಗೆ ದಿಕ್ಕಾಗಿರುವವನು ; ಶಿವ : ದೇವಗತಿ ದೇವಮತಿ ದೇವದುರ್ಲಭನೆಂಬ ಕರೆವ ಬಿರುದಿನ ಕಹಳೆಗಳ ಮಹಾರವದೊಳಗೆ ಧರೆ ನಡುಗೆ (ನಂಚಿರ. ೬-೧೧೮). [ ದೇವ + ಗತಿ ]

**ದೇವಗತಿವಡೆ** (ಕ್ರಿ). ದೇವತ್ವವನ್ನು ಹೊಂದು ; ದೇವತೆಯಾಗು : ನಿಜಸ್ವಾಮಿಯಪ್ಪ ಶಂಭುವಿನ ಕೈಯೊಳ್ ಕನ್ಯಾನಿಮಿತ್ತಂ ಸತ್ತು ದೇವಗತಿವಡೆದಲ್ಲಿಂ ಬಂದು (ಹರಿವಂಶಪು. ೧೬-೩೮ ವ) ; ದೇವಗತಿವಡೆದು ಬಂದೀ ಭೂವಿಶ್ರುತರಾದಿರಿಂತಿದಂ ಮಱದಿರೆ ಪೇಟ್. ದೇವಿ (ನೇಮಿಪು. ೧೪-೫೭). [ ದೇವಗತಿ + ಪಡೆ$_1$ ]

**ದೇವಗರಿಗೆ** (ನಾ). ಒಂದು ಬಗೆಯ ವನಸ್ಪತಿ: ದೇವಗರಿಗೆ, ಹಿರೇಕಣಗಿಲು . . . ಕಾಡುಜೀರಕ (ವೃಕ್ಷಾಗಿ. ೩೮-೬೫೯). [ ? ]

**ದೇವಗಾಂಧಾರ** (ನಾ). [ಸಂಗೀತ] ಒಂದು ರಾಗದ ಹೆಸರು: ಆ ರಂಭಾದಿ ವೇಶಿಯರು ದೇವಗಾಂಧಾರರಾಗದಿಂ ದೇವತಾಸಾರ್ವಭೌಮನಾದ ಇಂದ್ರನಂ ಸ್ತುತಿಸಿ (ಸಾಗಂಧಿ. ೫೦೩-೨). [ ಸಂ. ]

**ದೇವಗಾಂಧಾರಿ** (ನಾ). [ಸಂಗೀತ] ಒಂದು ರಾಗದ ಹೆಸರು : ಸಮಸ್ತ ರಾಗಂಗಳೊಳಗೆ ರಾಮಕ್ರಿಯೆ . . . ದೇವಗಾಂಧಾರಿ ... ಮಧ್ಯಮಾವತಿಯೆಂಬ ಮೂವತ್ತಾರುರಾಗಂಗಳೇ ಮುಖ್ಯಮಾಗಿ ಬಳಕೆಯಿಂದಧುನಾತನರಲ್ಲಿ ಪ್ರಸಿದ್ಧಗೊಂಡಿರ್ಪವು (ವಿವೇಕ. ೨೩೪); ದೇವಗಾಂಧಾರಿ . . . ಸೌರಾಷ್ಟ್ರವೆಂಬ ಪಾವನರಾಗದೊಳರುಹನನೊಲ್ದು ಸಂಜೀವನವೆನಿಸಿ ಹಾಡಿದರು (ಭರತ. ೫-೬೬) ; ದೇವಗಾಂಧಾರಿ ೨೯ನೇ ಮೇಳಕರ್ತ ಧೀರಶಂಕರಾಭರಣದಲ್ಲಿ ಜನ್ಯ (ಸಂಗೀತಂ. ೧೧೪). [ ಸಂ. ದೇವಗಾಂಧಾರೀ ]

**ದೇವಗಾಣ** (ನಾ). ದೇವಸ್ಥಾನಕ್ಕೆ ಸಂಬಂಧಪಟ್ಟ ಎಣ್ಣೆಯ ಗಾಣ : ಧಾರಾಪೂರ್ವಕಂ ಮಾಡಿಬಿಟ್ಟಾಯವೆಂತೆಂದಡೆ . . . ದೇವಗಾಣದೊಕ್ಕಲಲ್ಲಿ ದವಸವಳವಂಕೆ ಸೊಳಸವೊಂದು (ಎಕ. XX, ೦೩-೪೯; 1167). [ ದೇವ + ಗಾಣ$_1$ ]

**ದೇವಗಾತ್ರ** (ನಾ). ದೇವತೆಗಳ ಶರೀರದಂತೆ ಶರೀರವುಳ್ಳವನು ; ಸುಂದರವಾದ ದೇಹವುಳ್ಳವನು : ಸಜ್ಜೆಯೆಡೆ ನಟ್ಟು ನಿಂತವಧರಿಸಿದಳ್ ದೇವಗಾತ್ರನಂ (ಶ್ರೀರಾಮಾ. ೨೭೩-೨೬೮). [ ದೇವ + ಗಾತ್ರ ]

**ದೇವಗುಪ್ತ** (ನಾ). [ಸಂಗೀತ] ಒಂದು ರಾಗದ ಹೆಸರು : ಸೈಂಧವಿ ಪಂಚಮ ಷಾಡವ ದೇವಗುಪ್ತ . . . ಎಂಬೆಂಟು ರಾಗಂಗಳುಂ ಷಟ್ಸ್ವರ ಜಾತೀಯಂಗಳು (ವಿವೇಕ. ೨೩೩). [ ಸಂ. ]

**ದೇವಗುರು** (ನಾ). ದೇವತೆಗಳ ಗುರು ; ಬೃಹಸ್ಪತಿ : ದೇವಗುರು ಬೆಸಸೆ ಜನಕ ಭವಾವಳಿಯುಂ ಕೇಳ್ದು ವಿನಯವಿನಮಿತನಾದೊಂ (ಶಾಂತಿಪು. ೬-೬೩); ಖಳನೆಡೆಗೆ ಮೆಲ್ಲನೆ ದೇವಗುರು ಬಿಡದಂಜುತ್ತೈತಂದ (ತೊರೆರಾ. ೬-೪೬-೪೦); ದೇವಗುರುದರ್ಶನದಿಂದಲೇ ಶಾಂತಿಯನ್ನು ಪಡೆದ ಆತನ ಮನಸ್ಸು . . . ನಿರ್ಮಲವಾಗಿತ್ತು (ಮಹಾಶಾ. ೦೦೦). [ ದೇವ + ಗುರು$_4$ ]

**ದೇವಗೃಹ** (ನಾ). ದೇವಾಲಯ ; ದೇವಸ್ಥಾನ : ಇದು ರಮ್ಯವೆನಿಸಿದಲ್ಲಿಪ್ಪುದು ದಯ್ಯಂ ದೇವಗೃಹದೊಳಿಪ್ಪುದು ಮೇಣೆನ್ನದೆ ಪೊಗೆವುತಪೊಲೆಯೊಳಗಿಪ್ಪುದು ದೈವಮೆನಲ್ಕೆ ಸಲ್ಲದಱವುಳ್ಳೈತಂ (ಸಮಯಪ. ೮-೧೮೩). [ ದೇವ + ಗೃಹ ]

**ದೇವಗೃಹೋದ್ಧರಣ** (ನಾ). ದೇವಾಲಯದ ಜೀರ್ಣೋದ್ಧಾರ ; ಹಳೆಯದಾಗಿ ಬಿದ್ದುಹೋಗುವಂತಿರುವ ದೇವಸ್ಥಾನಗಳ ದುರಸ್ತು, – ರಿಪೇರಿ : ಶ್ರೀಮದಾಹವಮಲ್ಲದೇವ ಪಾದಪದ್ಮೋಪಜೀವಿಯಪ್ಪ ಪೆರ್ಗ್ಗಡೆ ಜೋಗವಯ್ಯಂ ತದೀಯ ದೇವಗೃಹೋದ್ಧರಣಮುಮಂ . . . ಮಾಡಿ (ಕಶಾಇ. ೩೮-೨-೨೭ ; 1056). [ ದೇವಗೃಹ + ಉದ್ಧರಣ ]

**ದೇವಗೇಹ** (ನಾ). ಗುಡಿ ; ದೇವಸ್ಥಾನ ; ದೇವಾಲಯ : "ಉಪನಂದನ ಕೈತವ ದೇವಗೇಹ ಕೇದಾರಮನಿಕ್ಕು" (ನಾನಾರ. ೩೯). [ ದೇವ + ಗೇಹ ]

**ದೇವಗೊಳಗ** (ನಾ). ಬೆಳೆದ ಧಾನ್ಯದಲ್ಲಿ ಮೊಟ್ಟಮೊದಲು ದೇವರಿಗೆ ಮೀಸಲಾಗಿ ಕೊಳಗದಲ್ಲಿ ಅಳೆಯುವ ಧಾನ್ಯ : ಕೊಟ್ಟಾರದ ಕರಣಂ ದೇವರ್ಗ್ಗೆ ಪೂಜಿಸುವ ಪಣ ಶ . . . ದೇವಗೊಳಗಂ ಧರ್ಮ್ಮಗೊಳಗಂ ಪೊನ್ನು (ಸೌಇಇ. IX-1, ೦೦೭-೦೮ ; 1050) ; ಕೆಱೆಯ ಕೊರಲು ದೇವಗೊಳಗಂ ಧರ್ಮಗೊಳಗವೆರಡು (ಎಕ. XI, ಚಳ್ಳಕೆ. ೨೦-೨೩ ; 1087) ; ಶ್ರೀಮೂಲಸ್ಥಾನದೇವರ ಗೋಸಗೆಯುಪಹಾರಕ್ಕೆ ಕುಲಕೆ ಪೊಕ್ಕುಳಾಭತ್ತ ದೇವಗೊಳಗವಾಗಿ ಕೊಟ್ಟರು (ಎಕ. VIII, ಸೊರಬ. ೨೪೭-೯ ; 1288). [ ದೇವ + ಕೊಳಗ$_1$ ]

**ದೇವಗ್ರಹ** (ನಾ). ಸೂರ್ಯ, ಚಂದ್ರ ಮೊದಲಾದ ಗ್ರಹಗಳಿಂದುಂಟಾಗುವುದೆಂದು ನಂಬಲಾದ ಪೀಡೆ : ನಾನಾಶಸ್ತ್ರಧಾರಣೆ ಮಾಡುವುದರಿಂದ . . . ದೇವಗ್ರಹ, ಗಂಧರ್ವಗ್ರಹ, ಯಕ್ಷಗ್ರಹ ಮುಂತಾದ ದುಷ್ಟಗ್ರಹಂಗಳನ್ನೂ ಶತ್ರುಗಳಿಂದುಂಟಾಗುವ ಹಾನಿಯನ್ನೂ ಕೆಡಿಸುವುದು (ಸಕಲ್ಯ. ೫೬). [ ದೇವ + ಗ್ರಹ ]

**ದೇವಚಾಪ** (ನಾ). ಮಳೆಬಿಲ್ಲು ; ಕಾಮನ ಬಿಲ್ಲು ; ಇಂದ್ರಚಾಪ : ಕಡೆಯೊಳ್ ತಗುಳ್ದ ರತ್ನದ ಬೆಡಂಗುವೆತ್ತೆಸೆವ ದೀಪ್ರವಲಯದ ಬೆಲ್ಪಂ ಪಡೆದು ಸಲೆ ದೇವಚಾಪದ ನಡುವಣ ಲಲಿತಾರ್ಧಚಂದ್ರನಿರ್ಪಂತಿರ್ದಂ (ಆದಿಪು. ೬-೭೩) : ದೇವಾನಕಂಗಳ್ ಪೊಡೆಗೆ ಪಲವುಮಾ ಕಾಲದೊಳ್ ದೇವಚಾಪಂ ಜ್ಯೋತಿರ್ಲೋಕಾಧಿಪಾಲಾಭರಣಕಿರಣದಿಂದುರ್ವಿಯಂ ಪರ್ವೆ ಬಂದರ್ (ಶಾಂತಿಪು. ೮-೧೨೦). [ ದೇವ + ಚಾಪ ]

**ದೇವಚಿಕಿತ್ಸಕ** (ನಾ). ೧. ದೇವತೆಗಳ ವೈದ್ಯ ; ಧನ್ವಂತರಿ. ೨. ಅಶ್ವಿನೀ ದೇವತೆಗಳು : "ದೇವಚಿಕಿತ್ಸಕರಶ್ವಿನಿದೇವರ್" (ವಸ್ತುಕೋ. ೦೦-೫೩): "ನಾಸತ್ಯಾ, ಅಶ್ವಿನೌ, ದಸ್ರೌ, ದೇವಚಿಕಿತ್ಸಕೌ-ಈ ೪ ದೇವರ ವೈದ್ಯರ್" (ಹಲಾಯು. ೦೫-೮೪). [ದೇವ + ಚಿಕಿತ್ಸಕ ]

**ದೇವಚೆನ್ನೆಲ್ಲಕೊಳ** (ನಾ). ಒಂದು ಜಲಾಶಯದ ಹೆಸರು : ದಾಸನೂರಕ್ಕೂಟಸಂಧಿಯಲ್ ಉನ್ನತಭೂಮಿಯ ದೇವಚೆನ್ನೆಲ್ಲಕೊಳಮ್ (ಮ್ಯಾಆರಿ. ೦೯೨೫, ೦೦೫-೪೮ ; 634). [ ? + ಕೊಳ$_2$ ]

**ದೇವಚ್ಛಂದ** (ನಾ). ೧. ಒಂದು ಬಗೆಯ ಮುತ್ತಿನ ಸರ; ಎಂಭತ್ತೊಂದು ಎಳೆಗಳುಳ್ಳ ಹಾರ : ವಿಜಯಚ್ಛಂದಹಾರ ದೇವಚ್ಛಂದಾರ್ಧಹಾರ . . .

ಮಾಣವಕಂಗಳೆಂಬ ಪನ್ನೊಂದು ನಾನಾರತ್ನಸುವರ್ಣಪದಕವಿರಚನಾದಿ ಭೇದದಿಂ (ಆದಿಪು. ೮-೫೪ ವ). ೨. ನೂರು ಎಳೆಗಳುಳ್ಳ ಮುತ್ತಿನ ಸರ: "ದೇವಚ್ಛಂದಂ ಯಷ್ಟಿಶತಾವಚ್ಛನ್ನಂ" (ವಸ್ತುಕೋ. ೭೫-೩) : "ನೂಱು ಸರದ ಮುತ್ತು ದೇವಚ್ಛಂದ ಎಂಬುದು" (ಹಲಾಯು. ೯೨-೪೦೫) ; "ನೂಱು ಸರ ಮುತ್ತು ದೇವ[ಚ್ಛಂ. ಹ]ಚ್ಛಂದಮಕ್ಕುಂ" (ಶಬ್ದಮಣಿ. ೧೦೦-೨೪): ☞ ಈ ಹಾರದಲ್ಲಿರತಕ್ಕ ಎಳೆಗಳ ಸಂಖ್ಯೆಯ ಬಗ್ಗೆ ವಿವಿಧಾಭಿಪ್ರಾಯ ಗಳಿವೆ. [ ಸಂ. ]

**ದೇವಜಗ್ಧಕ** (ನಾ). ಒಂದು ಬಗೆಯ ಸುಗಂಧದ ಹುಲ್ಲು ; ಕಾಚಿ ಹುಲ್ಲು : "ಕತ್ತೃಣಂ, ಪೌರಂ, ಸೌಗಂಧಿಕಂ, ಧ್ಯಾಮಂ, ದೇವಜಗ್ಧಕಂ, ರೌಹಿಷಂ-೬ ಕಾಚೀಹುಲ್ಲು, ಕಾಚೀಕಡ್ಡಿ, ಹಂಚೀಕಡ್ಡಿ, ಬರಗುಕಡ್ಡಿ ಇವು ಗಳೆಲ್ಲಕ್ಕೂ ಪೆಸರುಗಳು" (ಸಿದ್ಧಾಂತಿ. ೧೫೧). [ ಸಂ. ]

**ದೇವಜನಿತ** (ನಾ). ದೇವರಿಂದ ಉಂಟಾದುದು ; ಪರಮಾತ್ಮನಿಂದಾ ದುದು : ಲೋಕದಲ್ಲಿ ಪಾಪ, ಅನ್ಯಾಯ, ನೀಚತನಗಳೂ ದೇವಜನಿತ ವೆಂದು ತಿಳಿಯಬೇಕೆ ? (ಸಮಜೀ. ೩೦೬). [ ದೇವ + ಜನಿತ ]

**ದೇವಜಾತಿ** (ನಾ). ದೇವತೆಗಳ ಕುಲ,-ಪಂಗಡ : "ಯಕ್ಷಃ . . . ಪೈಶಾಚ, ದೇವಯೋನಿಃ-ಇಂತಿವೆಲ್ಲಂ ದೇವಜಾತಿಯೆಂಬುದು" (ಹಲಾಯು. ೧೫-೮೬). [ ದೇವ + ಜಾತಿ ]

**ದೇವಜ್ಯೇಷ್ಠ** (ನಾ). ದೇವತೆಗಳಲ್ಲಿ ಹಿರಿಯುವನು ; ಬ್ರಹ್ಮ : ದೇವ ಜ್ಯೇಷ್ಠನ ಬೆಸದಿಂ ರೈವತಕಂ ತಂದು ತನ್ನ ಮಗಳಂ ಕುಡಲ್ . . . ಬಲದೇವಂ ವೈವಾಹೋತ್ಸವದೆ ನೆರೆದು ಸುಖದಿಂದಿರ್ದಂ (ಜಗವಿ. ೦೦-೨). [ ದೇವ + ಜ್ಯೇಷ್ಠ ]

**ದೇವಟ್ಟ** (ನಾ). ದೇವರ ಸ್ವತ್ತು, - ಆಸ್ತಿ : ಈ ದೇಗುಲವ ಮಾಡಿಸಿ ತೆರ ಗಾಲಂ ದೇವಟ್ಟ ಬಿಟ್ಟರ್ (ಮ್ಯಆರಿ. ೧೯೩೦, ೧೪-೦೦; ಸು. 882). [ <ಸಂ. ದೇವಾರ್ಥ ]

**ದೇವಡಿ$_1$** (ನಾ). ೧. ದೇವರ ಸೇವೆ ಮಾಡುವವನು ; ದೇವಾಲಯದ ಪೂಜಾರಿ,-ಅರ್ಚಕ : ಧರ್ಮಸ್ಥಳದ ಅಮ್ರುತಪಡಿಗೆ ದೇವಡಿಗಳಿಗೆ ಬಿಟ್ಟ ಬಾಳಿಗೆ ಅರ್ಥ್ಧ ಅರುವಾರ ಸಲ್ಲ (ಸೌಇಇ. IX-II, ೪೬೦-೬೦ ; 1482). ೨. ಒಬ್ಬಾತನ ಹೆಸರು : ವಳಿಗ್ಗಾಮೆಯರ ದಾಸಡಿಯುಂ ಅಮಲಿಯರ ದೇಪಡಿಯು (ಎಕ್. VII, ಶಿಕಾರಿ. ೦೫೪-೬ ; ಸು. 685) ; ಬಾಣಗುನ್ನೂರಾ ದೇವಡಿಗಳುಂ ಕುನ್ನಡಿಗಳುಂ ಅಂಬ್ಬಲ್ಕಡಿಯ ಪೇಮಸರುಂ ಆಳಗೆವಿ ಯರುಂ . . . ಇ ಪೊಲನಂ ನಡೆಯಿಸಿದೋರ್ (ಎಕ್. XVI, ಗುಬ್ಬಿ. ೬೫-೫೭ ; 733). [ ದೇವ + ಅಡಿ$_1$ ]

**ದೇವಡಿ$_2$** (ನಾ). ೧. ಮುಖಮಂಟಪ ; ಕೈಸಾಲೆ ; ಮೊಗಸಾಲೆ : ಶ್ರೀಪ್ರಸಂನಕೇಶವದೇವರ ಪೂಜಾರಿಗಳ್ ದೇವರ ದೇವಡಿಗಳಂ ಕಟ್ಟಲು ಸದ್ಭಕ್ತಿಯಿಂ ಕೊಟ್ಟರು (ಸೌಇಇ. XV, ೫೪೫-೦೦ ; 1165): ಪಟ್ಟಣಕ್ಕೆ ಬಂದು ಕರ್ತರ ಅರಶಿನವರ ದೇವಡೀ ಬಳಿಯಿಂದ ಬಹದರರ ಬಳಿಗೆ ಬಂದು (ಹೈದರ. ೧೦೦). ೨. ಮನೆಯ ಮುಂದೆ ಇರುವ ಕಟ್ಟೆ ; ಜಗಲಿ : ಪಶುಗಳ ಮುಂದೆ ನಡೆಯುಂದು ಘರ್ಜಿಸುತ ನಿಂದಿಹರು ದೇವಡಿಯೊಳು (ಕೃಪ್ಪವಿ. ೨-೧೦) ; ಪ್ರಘಣ - ಬಾಗಿಲ ಹೊರಗಿನ ದೇವಡಿ (ಗಂಗಾಮ. ೨೦೯) ; ಇನ್ಸ್‌ಪೆಕ್ಟರರು ಅಚ್ಚಕರೀಬಣ್ಣದ ಡ್ರೆಸ್ಸಿನಿಂದ ಸಜ್ಜಾಗಿ ದೇವಡಿಯ ಮೇಲೆ ಬಂದು ನಿಂತುಕೊಂಡಿದ್ದರು (ಕಳ್ಳಕಾ. ೨೪). ೩. ಮನೆಯ ಬಾಗಿಲಿನಲ್ಲಿ ಅಳವಡಿಸಿರುವ ಬಾಗಿಲುವಾಡದ ಕೆಳಮರ ; ಹೊಸ್ತಿಲು : (?).
[<ಸಂ. ದೇಹಲೀ./ಹಿಂ. ದೇಹರೀ ; ಮರಾ. ದೇವಡೀ, ದೇವಢೀ. ದೇಹುಡೀ; ಗುಜ. ದೇವ್ರೀ; ಬಂಗಾಳಿ. ದೆಉರಿ, ದೆಹುರಿ ; ಒರಿಯಾ. ದೆಹುರಿ ]

**ದೇವಡಿಗ** (ನಾ). ದೇವಾಲಯದಲ್ಲಿ ದೇವರ ಪೂಜೆ ಮಾಡಿ ಜೀವಿಸುವ ವನು ; ಪೂಜಾರಿ ; ಅರ್ಚಕ : ಅರಸಗವು x x ಮಾಕಲಸಮಭಟ್ಟನು ದೇವಡಿಗಗೆ ಕೊಟ್ಟಂ (ಎಕ್. XIV, ಶ್ರೀರಂಗ. ೩೪-೧೫ ; 1127) ; ಅಡಿಗ ಪ್ರತ್ಯಯಕ್ಕೆ-ದೇವಡಿಗಂ, ಪಾವಡಿಗಂ, ಪೂವಡಿಗಂ (ಶಮದ. ೨೦೩ ಪ್ರಯೋ): ಹಾವಡಿಗನು ದೇವಡಿಗನೊಳಗೆ ಅಡಗಲು ಹಾವೆತ್ತ ಹೋದವೋ ದೇವಾ (ಸಿದ್ಧೇವ. ೦೨೮-೩೮೨) : ದೇವಡಿಗನು ದೇವಗೊಂದು ಪೂವನರ್ಪಿಸಲದು ದೇವಡಿಗನ ಹುಗೊ ದೇವನ ಮಹಿಮೆಯೊ ಸ್ವಾಮಿ (ಭರತ. ೫೩-೮೪) ; ದೇವರ ಪೂಜಿಸುವಂ ದೇವಡಿಗಂ (ಶಬ್ದಾನು. ೪೦೩ ವ್ಯಾಖ್ಯಾ) ; ದೇವಸ್ಥಾನದ ಸೇವಕರು . . . ಅಂಬಲವಾಸಿ, ಬರಿಯ, ದೇವಡಿಗ, ದೇವಾಳಿ (ತುಳುನಾ. ೧೬೨). [ ದೇವ + – ಅಡಿಗ$_2$ ]

**ದೇವಡಿತಿ, ದೇವೆಡಿತ್ತಿ** (ನಾ). ೧. ದೇವತಾಸ್ತ್ರೀ ; ಅಪ್ಸರೆ : ಸಗ್ಗಂ ಗಳೊಳಿರ್ಪ ದೇವಡಿತಿ ತೊಟ್ಟಿರೊಳಟ್ಟಿಯನಾಗಲೀವನೇ (ಪಂಪಭಾ. ೦೦-೪೫). ೨. ದೇವದಾಸಿ : ಪನ್ನೆರಡುಂ ಗಟ್ಡೆ ನೀರ್ವರ್ಣಾಮಂ ಪದಿಂಬರ್ ದೇವಡಿತಿಯಗ್ಗರ್ಗಂ ತಮಗಂ ಮನೆಗಂ . . . ಧಾರೆಯನೆರೆದು ಬಿಟ್ಟು ಕೊಟ್ಟರ್ (ಎಕ್. IV, ಚಾಮರಾ. ೦೮-೮ ; ಸು. 1000 ?). **ದೇವೆಡಿತ್ತಿ** : ೨. ಇನ್ನುಣ್ಣೋರುಂ ಉಣಿಯ ಕೊಡುವೋನುಂ ದೇವೆಡಿತ್ತಿಯರಿನ್ನುಂ ಸಾವಿರಿನ್ನುಂ ಅಭರಮೆತ್ತಿ ಆಯತಿವ ಕೊಳ್ವೋರುಂ . . . . ನರಗಕ್ಕೆ ಸಲ್ಗೆ (ಎಕ್. VI, ಕೊಪ್ಪ. ೩೬-೫ ; ಸು. 675?). [ ದೇವಡಿ$_1$ + – ಇತಿ$_1$ (< – ಇತ್ತಿ) /ತಮಿ. ತೇವಟಿ ]

**ದೇವಣ** 'ದೇವಣ್ಣ' ನೋ.

**ದೇವಣ್ಣ, ದೇವಣ** (ನಾ). ಒಬ್ಬಾತನ ಹೆಸರು : ಕರಣಿಕ ದೇವಣ್ಣಗಳ ಬರಹ (ಎಕ್. XI, ಚಿತ್ರದು. ೩-೩೫ ; 1356). 'ದೇವಣ್ಣಯ್ಯ' ಪರಾ. **ದೇವಣ** : ದೇವಣ ಕ್ರಮಯಿತ ಭಟ್ಟಪೌತ್ರಾಯ (ಇಆ. XVI, ೨೪-೬೩ : 1009). [ ದೇವ + ಅಣ್ಣ$_1$ ]

**ದೇವಣ್ಣಯ್ಯ** (ನಾ). ಒಬ್ಬಾತನ ಹೆಸರು : ವಿಶಿಷ್ಟಜನಾಶ್ರಯನಪ್ಪ ಶ್ರೀ ಮದ್ದೇವಣ್ಣಯ್ಯ[ಂ] (ಇಆ. XII, ೨೦೯-೦೮; 814); ಶ್ರೀಮದ್ದೇವಣ್ಣಯ್ಯಂ ಬೆಳ್ವೊಲ ಮೂನೂಱುಮನಾಳುತ್ತಂ (ಎಇ. VII, ೨೦೬-೧೮ ; 866). [ ದೇವಣ್ಣ + ಅಯ್ಯ$_1$ ]

**ದೇವತನ** (ನಾ). ದೇವತ್ವವನ್ನು ಹೊಂದಿರುವಿಕೆ : ದೇವನೆಂದೇ ನೀವು ಬಗೆವಿರಿ ದೇವತನ ನಮ್ಮಲ್ಲಿ ಲವವಿಲ್ಲ (ಕುವ್ಯಾಉ. ೦-೪೩) ; ದೇವತನಮಂ ಬಿಟ್ಟು ನರನಾದವಂಗೆ ಬಳಿಕಾವ ಗೌರವವಿಹುದು (ಜೈಮಿಭಾ. ೬-೫೪) ; ಬ್ರಾಹ್ಮಣರಿಗೆ ದೇವತನ ಏತರಿಂದ ? . . . ಬ್ರಾಹ್ಮಣರಿಗೆ ದೇವತನ ಅಧ್ಯಯನದಿಂದ (ವಚಭಾ. ೧೮೦). [ ದೇವ + – ತನ ]

**ದೇವತನು** (ನಾ). ದೇವತೆಗಳಿಗೆ ಇರುವಂಥ ಶರೀರ : ದೇವತನುವೆರಸಿ ರೆಂತಂತಾ ವೈಶಂಪಾಯನಂ ಸುಖನಿಶ್ಚಯದಿಂ ಜೀವಿಸುತಿರ್ದಪಂ (ಕಾದಂಉ. ೪೩೪). [ ದೇವ + ತನು ]

**ದೇವತರು** (ನಾ). ೧. ದೇವಲೋಕದ ಮರ : ಮಂದಾರ, ಪಾರಿಜಾತ, ಸಂತಾನ, ಕಲ್ಪವೃಕ್ಷ ಮತ್ತು ಹರಿಚಂದನ ಎಂಬ ಐದುಂ ವೃಕ್ಷಗಳಲ್ಲಿ ಒಂದುಂ : "ಮಂದಾರಃ, ಪಾರಿಜಾತಕಃ, ಸಂತಾನಃ, ಕಲ್ಪವೃಕ್ಷಃ, ಹರಿ ಚಂದನಂ . . . ೫ ಈದೇವತರವಃ – ದೇವತಾಕಲ್ಪವೃಕ್ಷಗಳ ಹೆಸರು ಗಳು" (ಸಿದ್ಧಾಂತಿ. ೨೨) ; ದೇವತರುವಿನ ಕುಸುಮವಮ್ಮಾ ನಾನು ಭಾವಜನ ಪಿತಗೆ ಕೊಂಡು ಬಂದಿದ್ದೆನಮ್ಮಾ (ಕೃಷ್ಣಕಪಾ. ೬). ೨. ಅರಳಿಯ ಮರ ; ಅಶ್ವತ್ಥ. [ ದೇವ + ತರು$_2$ ]

**ದೇವತಾಂಶಕೆ** (ನಾ). = ದೇವತಾಧಿಷ್ಠಿತೆ : ರತಿಗೆಣೆಯೆನಿಸಿದ ಗುಣಸಂತತಿ ಯುಳ್ಳಿಕೆ ದೇವತಾಂಶಕೆಯುತಾ ಸತಿಯುಂ ಕೊಂಡಾಡುಗೆ ತತ್ಪತಿಗಂ ಧರ್ಮಾರ್ಥಕಾಮಭೋಗಂ ನೆಗಟ್ದುಂ(ಪುದತಿ. ೮-೨). [ಸಂ. ದೇವತಾಂಶಕಾ]

**ದೇವತಾಡ** (ನಾ). = ದೇವದಾಳಿ: "ದೇವತಾಡಃ, . . . ದೇವತಾಳೀ ವೃಕ್ಷದ ಹೆಸರುಗಳು" (ಸಿದ್ಧಾಂತಿ. ೧೨೭). [ ಸಂ. ]

**ದೇವತಾಣ** (ನಾ). ದೇವಸ್ಥಾನ; ದೇವಾಲಯ: ಕೇಣವಿಲ್ಲದೆ ಬೀದಿ ಬೀದಿಯೊಳಗೆ ದೇವತಾಣ ನೋಟಕರ ಸಂದೋಹ ವಾಣದ ವಣಿ ಸೊಡರ್ವೆಳಗಿನೊಳ್ ಕೃಷ್ಣ ದಿವಾಣದೊಳಿದ್ದನೋಲಗದಿ (ಮೋಹತ. ೧೮-೮). [ ದೇವ + ಠಾಣ./ಸಂ.ದೇವಸ್ಥಾನ ]

**ದೇವತಾತತ್ತ್ವ** (ನಾ). ಜಗತ್ತಿನ ನದಿ, ಕಾಡು ಮೊದಲಾದ ಪ್ರತಿಯೊಂದು ಪ್ರಕೃತಿಸ್ವರೂಪಕ್ಕೂ ಒಬ್ಬೊಬ್ಬ ಅಧಿದೇವತೆಯುಂಟು ಎಂಬ ಸಿದ್ಧಾಂತ: ವೈದಿಕತತ್ತ್ವದಲ್ಲಿ ದೇವತಾತತ್ತ್ವ, ಈಶ್ವರತತ್ತ್ವ, ಆತ್ಮತತ್ತ್ವ ಎಂದು ಮೂರು ವಿಭಾಗಗಳಿವೆ (ಬಂಕಿಮ. ೩೦೯). [ ಸಂ. ]

**ದೇವತಾತ್ಮ** (ನಾ). ದೇವತಾಸ್ವರೂಪ: ದೇವತಾತ್ಮನಾದ, ನೀನು ನಮ್ಮ ಯಜ್ಞದಲ್ಲಿ ಸತ್ಫಲಗಳನ್ನು ಹಂಚುವವನಾಗು (ಋಗ್ವ್ಯಾಕ. ೧೭).
[ ಸಂ. ದೇವತಾತ್ಮನ್ ]

**ದೇವತಾಧಿಷ್ಠಿತೆ** (ನಾ). ದೇವಾಂಶದಿಂದ ಕೂಡಿಕೊಂಡಿರುವವಳು; ದೇವಾಂಶಸಂಭೂತಳು: ಲಕ್ಷ್ಮೀವಮತಿಯಲವೂ ದೇವತಾಧಿಷ್ಠಿತೆಯಲ್ಲದ ಕೇವಳಮನುಷ್ಯಾಙ್ಗನೆಯೇ (ಎಕ. II, ೦೨೪-೨೨ : 1121).
[ ಸಂ. ದೇವತಾಧಿಷ್ಠಿತಾ ]

**ದೇವತಾನಿಷ್ಠ** (ನಾ). ದೇವರಲ್ಲಿ ನಿಷ್ಠೆಯುಳ್ಳವನು; ಭಕ್ತ: ಪರವಂ ಜನಪದಾಂಭೋಜಾತದೊಳ್ ಭೃಂಗಮಾಲಾಪರಿಕರಮನೆ ಕಣ್ಗ ಳ್ . . . ಶುದ್ಧಚೈತನ್ಯರೂಪಂಗಿರಲೆಡೆಯೆನೆ ಚಿತ್ತಂ ದೇವತಾನಿಷ್ಠನಾದಂ (ಅನಂಪು. ೪-೬೩). [ ಸಂ. ]

**ದೇವತಾಪ್ರಸ್ತ** (ನಾ). ಮದುವೆಗೆ ಮೊದಲು ಕುಲದೇವತೆಯ ತೃಪ್ತಿಗಾಗಿ ಮಾಡುವ ಭೋಜನ ಸಮಾರಂಭ; ದೇವರೂಟ: ಸುವಾಸಿನಿಯರೊಲವಿನಿಂ ಕಂಭಮನುಯರ್ಚಿಸಿ ದೇವಕಾಪ್ರಸ್ತವಾ ಲೇಸಿನಿಂ ತೀರ್ಚಿ (ನವಮೋ. ೦೪-೫೪). [<ಸಂ. ದೇವತಾಪ್ರಸ್ಥ ? ]

**ದೇವತಾಭಾವ** (ನಾ). ತಾನು ದೇವರೆಂಬ ಭಾವನೆ,- ತಿಳಿವಳಿಕೆ: ಸುಪ್ರೀತನಾದ ಯಜ್ಞೇಶ್ವರ ಪೂಜಾರ್ಹನಾದ ದೇವತಾಭಾವವನ್ನು ಬಿಟ್ಟು, ಮಿತ್ರಭಾವವನ್ನು ಧರಿಸಿದ (ಬಿತಂಬಾ. ೪). [ ಸಂ. ]

**ದೇವತಾಮನುಷ್ಯ** (ನಾ). ದೇವತೆಯ ಸ್ವಭಾವದ ವ್ಯಕ್ತಿ; ದೈವಿಕ ಗುಣವುಳ್ಳವನು: ದೊಡ್ಡರಾಯರು ಇನ್ನೂ ಇಪ್ಪತ್ತುವರ್ಷ ಬದುಕುತ್ತಾರೆ. ಅವರು ದೇವತಾಮನುಷ್ಯ (ವಾತ್ಸಲ್ಯ. ೩); ಅವಳು ದೇವತಾಮನುಷ್ಯಳು. ಎಲ್ಲರ ಪರಾಂಬರಿಕೆ ಮಾಡುತ್ತಾಳೆ (ಶ್ಯಾಮಲಾ. ೪೦). 'ದೇವಮಾನವ' ಪರಾ. [ ಸಂ. ]

**ದೇವತಾಮೂಢ** (ನಾ). [ಜೈನ] ಲೋಕಮೂಢ, ದೇವತಾಮೂಢ ಮತ್ತು ಪಾಷಂಡಿ ಎಂಬ ಮೂಢತ್ರಯಗಳಲ್ಲಿ ಒಂದು; ಗಿಡ, ಮರ, ಕಲ್ಲು ಮುಂತಾದುವನ್ನೂ ಅಹಮಿಂದ್ರ, ಪ್ರತೀಂದ್ರ, ಕ್ಷೇತ್ರಪಾಲ ಮೊದಲಾದ ದೇವತೆಗಳನ್ನೂ ಪೂಜಿಸುವುದು: ಜಿನನಲ್ಲ ದಾಪ್ಪರಂ ಪಿಡಿದು ನಮೆವುದುಂ ಕಿಚ್ಚು ಕವಿಲೆ ಮರನಾಯುಧಮೆಂದಿನಿತಕ್ಕಂ ಪೊಡವಡುವುದುಮನೇಕವಿಧ ಬಗೆಯ ದೇವತಾಮೂಢಂಗಳ್ (ಸಮಪ. ೯-೩); ಅಹಮಿಂದ್ರ ಪ್ರತೀಂದ್ರ ಲೋಕಪಾಲಾದ್ಯನೇಕ ಸ್ವರ್ಗಜಾಮರ ನಿಕಾಯಮಂ ನಿರ್ದೋಷಿದೇವರೆಂದಾರಾಧನೆಯಂ ಮಾಳ್ಪುದು ದೇವತಾಮೂಢಮೆಂಬುದು (ಪಶಾರ. ೪೬೩). [ ಸಂ. ]

**ದೇವತಾಯಾತ್ರೆ** (ನಾ). ದೇವರ ರಥೋತ್ಸವ; ಜಾತ್ರೆ: ತಿರುವೆಂಗಳನಾಥನ ಧ್ವಜದ ಸೇವೆ ದೇವತಾಯಾತ್ರೆಯನೂ ಪ್ರತಿವರುಷವೂ ನಡಸುವ ಧರ್ಮ (ಎಕ. XVI, ಪಾವುಗ. ೦೦೨-೩ : 1641).
[ ಸಂ. ದೇವತಾಯಾತ್ರಾ ]

**ದೇವತಾರತಿ** (ನಾ). ದೇವರುಗಳ ವಿಷಯದಲ್ಲಿರುವ ಪ್ರೀತಿ,-ಭಕ್ತಿ: ದೇವತಾರತಿಯು ಭಾವವಾಗಿ ಉಳಿದುದು ಸಾಮಾಜಿಕಕಾರಣಕ್ಕಾಗಿ (ಸಾಹಿವಿ. ೨೯). [ ಸಂ. ]

**ದೇವತಾರೂಪ** (ನಾ). ೧. ದೇವತೆಯ ಆಕಾರ,- ಸ್ವರೂಪ. ೨. ದೇವರು: ಈ ಹತಕಲ್ಮಷಂಗೆ ಮಾತಾಪಿತೃಭಾವಮೆಂದು ನಿಮಗಾದುದು ನೀವೆಮಗಂದು ದೇವತಾರೂಪಂ (ಶಾಂತಿಪು. ೦೯-೭೩). [ ಸಂ.]

**ದೇವತಾರ್ಚನೆ** (ನಾ). ದೇವರ ಪೂಜೆ: ನಾವು ಬಲದಲು ನಮ್ಮ ಎಡದಲು ನೀವು ಕುಳ್ಳಿರ್ದತಿ ವಿಶೇಷದ ದೇವತಾರ್ಚನೆಯಂ ಸಲಿಸಿ (ಬಸವು. ೨೪-೨೮); ಮಧ್ವರಾಯರ ದೇವತಾರ್ಚನೆಯ . . . ಮೂಲರಘುಪತಿ ಒಂದು ಮುದ್ದು ಜಾನಕಿ ಒಂದು (ಪುರಂದ. ೩-೧೦೩ ಪಲ್ಲವಿ).
[ ಸಂ. ದೇವತಾರ್ಚನಾ ]

**ದೇವತಾರ್ಪಣ** (ನಾ). ದೇವರಿಗೆ ಸಮರ್ಪಿಸುವುದು. 'ದೇವತಾರ್ಪಣಗೈ' ಪರಾ. [ ಸಂ. ]

**ದೇವತಾರ್ಪಣಗೈ** (ಕ್ರಿ). ದೇವರಿಗೆ ಒಪ್ಪಿಸು: ಸುಜನೆಯರು . . . ನಿತ್ಯವಿಧಿಭಜನೆಯೆಲ್ಲವ ತೀರ್ಚಿಸಲು ಪರಿಪರಿ ಪಾಕದ್ರವ್ಯಮಂ ಗಡಣಿಸಿದಲು ನೋಡುತ್ತ ದೇವತಾರ್ಪಣಗೈದು ಸವಿರುಚಿಯು ಮಾಡಿ ಸವಿಸವಿದುಂಡು ತೇಗಿ (ನವಮೋ. ೧೭-೧೮). [ದೇವತಾರ್ಪಣ+ಕೈ$_1$ (<ಕೆಯ್$_1$)]

**ದೇವತಾಲ, ದೇವತಾಳ** (ನಾ). = ದೇವದಾಳಿ: "ದೇವತಾಲ, ಜೀಮೂತ" (ನಾಚಿರಾ. ೬). **ದೇವತಾಳ**: "ವೇಣೀ, ಗರಾಗರೀ, ದೇವತಾಳೀ, ಜೀಮೂತಃ – ೪ ದೇವತಾಳೀವೃಕ್ಷದ ಹೆಸರುಗಳು" (ಸಿದ್ಧಾಂತಿ. ೧೨೭); "ದೇವತಾಳ – ದೇವತಾಳಿ" (ಒಷಧಿ. ೭೯). [ ಸಂ. ]

**ದೇವತಾಲಯ** (ನಾ). ದೇವಾಲಯ; ಗುಡಿ: ಮಂಡಳವಂ ನಿಜಮಂ ದ್ವಿಜಮಂಡಲಿಗಂ ದೇವತಾಲಯಕ್ಕಂ ಕೊಟ್ಟಂ ಖಂಡಯಮೆತ್ತಳೆಯಂ ಪರಮಂಡಳಮಂ ವೀರವಿಷ್ಣುವರ್ಧನನಾಳ್ದಂ (ಎಕ. VI, ಕಡೂರು. ೦೩೯-೪೦ : 1173). [ ಸಂ. ]

**ದೇವತಾವರಣ** (ನಾ). ಜಪ, ಪೂಜೆ ಮೊದಲಾದ ಸಂದರ್ಭಗಳಲ್ಲಿ ಆರಾಧ್ಯದೇವತೆಯನ್ನು ಮಂತ್ರಪೂರ್ವಕವಾಗಿ ಆವಾಹನೆ ಮಾಡುವುದು; ಆರಾಧ್ಯದೇವತೆಯ ನಾಮಗ್ರಹಣಪೂರ್ವಕವಾಗಿ ಸಂಕಲ್ಪ ಮಾಡುವುದು: ಋಷಿಚಂದಮುಖ್ಯಾದಿ ದೇವತಾವರಣದಿಂ . . . ಪರಿಶುದ್ಧಿಯೊಡೆದು (ನವಮೋ. ೨-೩೩). [ಸಂ. ]

**ದೇವತಾಸಾನ್ನಿಧ್ಯ** (ನಾ). ೧. ದೇವತಾಮೂರ್ತಿಯ ಬಳಿಯಿರುವುದು; ದೇವರ ಸಾಮಿಪ್ಯ. ೨. ಶಾಸ್ತ್ರೋಕ್ತವಾದ ಕ್ರಮದಿಂದ ಪ್ರತಿಷ್ಠೆ ಮಾಡಿದ ಪ್ರತಿಮೆಗಳಲ್ಲಿ ದೇವರು ನೆಲಸುವುದು; ಆವಾಹನೆ ಮಾಡಿದ ಸ್ಥಳದಲ್ಲಿ ದೇವರು ಇರುವುದು: ಶಿಲಾ, ಮೃತ್, ದಾರು, ರತ್ನ, ಲೋಹಾದಿ ಮೂರ್ತಿಗಳಲ್ಲಿ ಯಾವ ಪರಿಮಿತಿಯಲ್ಲಿ, ಎಷ್ಟು ಕಾಲ ಆಯಾಯ ದೇವತಾಸಾನ್ನಿಧ್ಯವು ನೆಲೆಗೊಳ್ಳುವುದೆಂಬುದೂ . . . ಆಗಮ ಶಾಸ್ತ್ರದಲ್ಲಿ ಉದಾಹೃತವಾಗಿವೆ (ಭಾರರ. ೮೦). [ ಸಂ. ]

**ದೇವತಾಸಿದ್ಧಾಂತ** (ನಾ). ದೇವತೆಗಳನ್ನು ಕುರಿತ ಸಿದ್ಧಾಂತ: ಹೋಮರನ ದೇವತಾಸಿದ್ಧಾಂತ (Theology)ವನ್ನು ಅನೈತಿಕವಾದ.ದೆಂದು ಖಂಡಿಸುವುದರಿಂದ ತೃಪ್ತರಾಗದೆ . . . ಅವನ ಮೇಲೆ ದೋಷಗಳ ಪರ್ವತವನ್ನೇ ಹೇರಲು ಅವರು ಶ್ರಮಿಸಿದರು (ಅರಿಕಾ. ೦೩೭ ಅಡಿಟಿ). 'ದೇವತಾತತ್ತ್ವ' ಪರಾ. [ ಸಂ. ]

**ದೇವತಾಸ್ಥಳ** (ನಾ). (ಪ್ರಾಚೀನವಾದ) ದೇವಸ್ಥಾನಗಳು ಇರುವ ಸ್ಥಳ: ಆ ನಿಯಮ ನಿಬಂಧನೆಗಳಂತೆ ನಿರ್ಮಿತವಾದ ದೇವತಾಸ್ಥಳಗಳು ಕ್ಷೇತ್ರಗಳೆಂದು ವಿಖ್ಯಾತಿ ಹೊಂದಿ . . . ಪ್ರಕಾಶಿಸುತ್ತವೆ (ಭಾರರ. ೮೦).
[ ಸಂ. ದೇವತಾಸ್ಥಲ ]

**ದೇವತಾಸ್ಥಾನ** (ನಾ). ದೇವತೆಗಳ ಪ್ರತಿಮೆಗಳನ್ನು ಪೂಜಿಸುವ ಸ್ಥಳ ; ದೇವಾಲಯ ; ದೇವಸ್ಥಾನ: ದೇವತಾಸ್ಥಾನದಲಿ ವಿಪ್ರಸಭಾವಳಯದಲಿ . . . ಉಪಹತಿಯ ಮಾಡುವುದಾವ ಗುಣ ಗರುವರಿಗೆ (ಕುವ್ಯಾಉ. ೩-೧೫೮). [ ಸಂ. ]

**ದೇವತಾಳ** 'ದೇವತಾಲ' ನೋ.

**ದೇವತೂರ್ಯ** (ನಾ). ದೇವತೆಗಳು ನುಡಿಸುವ ವಾದ್ಯ; ದೇವಲೋಕದ ವಾದ್ಯ: ಬೆಳ್ಗೊಡೆ ಸೊಗಯಿಪ ಭಾಮಂಡಳಂ ದೇವತೂರ್ಯೋದಿತನಾದಂ . . . ವಿಶ್ರುತಮಾಗಿರ್ಪಂ ಸುರೇಂದ್ರೋಪಕೃತಮೆನಿಸಿ ನಿಮ್ಮೊಳ್ (ಸುಕುಮಾ. ೯-೫೦). [ ದೇವ + ತೂರ್ಯ ]

**ದೇವತೆ** (ನಾ). ಸ್ವರ್ಗನಿವಾಸಿಯೆಂದು ಭಾವಿಸಲಾದ, ಅತಿಮಾನುಷ ಶಕ್ತಿಯುಳ್ಳ ಜೀವ; ದಿವಿಜ: ದೇವತೆ ನಿಂದಿದಂ ನುಡಿದಳಕ್ಕ ನೆಗಟ್ಟಿಯ ಪುಷ್ಕರಾರ್ಧದೊಳ್ (ಜಜಿತು. ೪-೯೩) ; ಕ್ಷೇತ್ರಮುಮಂ ದಯವಮಾಡನು ತಲುದ್ದಾಮ ಶಿವಭಾವದಿ ಶರಣುವೊಗಲಾ ಮಹಿಮನಾ ದೇವತೆಗಳಂ ಕಾಯ್ದು ಸಲಹುತ್ತ (ಬಸವು. ೨೩-೧೭): P ಈ ಶಬ್ದ ಪುಂ, ಸ್ತ್ರೀ, ನಪುಂಸಕ ಈ ಮೂರು ಲಿಂಗಗಳಲ್ಲೂ ಉಪಯೋಗವಾಗುತ್ತದೆ. [ ಸಂ. ದೇವತಾ ]

**ದೇವತೋಪದ್ರವ** (ನಾ). ದೇವತೆಯಿಂದುಂಟಾದ ಕೇಡು,- ಅನಿಷ್ಟ: ವಿಗತಜೀವಿತರಾಗಿರ್ದ ಮೂವರನುಜರುಮಂ ಕಂಡಿದು ಮನುಜರಿಂದಾದು ಪದ್ರವಮಲ್ಲಮೇನಾನುಮೊಂದು ದೇವತೋಪದ್ರವಮಾಗಲೆವೇಟ್ಕುಮೆಂದು (ಪಂಪಭಾ. ೮-೯೦ ವ). [ ಸಂ. ]

**ದೇವತೋದ್ಯಾನವನ** (ನಾ). ದೇವಾಲಯಕ್ಕೆ ಸೇರಿದ ತೋಟ: ಕಲ್ಕೆರೆಯುತ್ತರದಿಶಾಭಾಗದ ದೇವತೋದ್ಯಾನವನಮಧ್ಯಸ್ಥಿತ ಸರೋವರದ ಪಶ್ಚಿಮತಟದಲ್ಪೂರ್ವಾಭಿಮುಖಮಾಗಿಟ್ಟು ಶಿವಾಲಯಂ ಪ್ರದಕ್ಷಿಣಂ ಬಂದು (ಶಾಇಇ. XX, ೯೯-೯೮ ; ಸು. 1076). [ ಸಂ. ]

**ದೇವತೋಪಾಸನೆ** (ನಾ). ದೇವರನ್ನು ಒಲಿಸಿಕೊಳ್ಳುವುದಕ್ಕಾಗಿ ಮಾಡುವ ಜಪ, ಪೂಜೆ ಮೊದಲಾದುವು: ಆಗಮೋಕ್ತ ವಿಧಾನಗಳು ಹೊರತು ಬೇರೆ ಮಾರ್ಗಗಳು ಕಲಿಯುಗದಲ್ಲಿ ದೇವತೋಪಾಸನೆಗೆ ಪ್ರಶಸ್ತಗಳಲ್ಲ (ಭಾರರ. ೬೮). [ಸಂ. ದೇವತೋಪಾಸನಾ]

**ದೇವತೋಪಾಸ್ತಿ** (ನಾ). = ದೇವತೋಪಾಸನೆ: ಆ ದೇವತೋಪಾಸ್ತಿಯಾತನೇ ಯೋಗಿಯೆನಲು (ವೀಕ್ಷ್ಮಿತು. ೫-೧೭ ಸೂಕನಿ). [ ಸಂ. ]

**ದೇವತ್ತಿ** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು: ತರುವಾಟಗಳಿಂದೆಸವ ನಂದನಾದ್ಯಾರಾಮಂಗಳೊಳು . . . ಪನ್ನೇರಳೆ ದೇವತ್ತಿ . . . ಸಾರ್ವರ್ತುಕವಪ್ಪ ಫಲಂಗಳುಳ್ಳ ತರುನಿಕರಂಗಳುಂ (ವಿವೇಕ. ೨೦೦). [ ದೇವ + ಅತ್ತಿ ]

**ದೇವತ್ರಯ** (ನಾ). ಬ್ರಹ್ಮ, ವಿಷ್ಣು, ಮಹೇಶ್ವರ ಎಂಬ ಹೆಸರಿನಿಂದ ಪ್ರಸಿದ್ಧರಾದ ಮೂರು ದೇವತೆಗಳು; ತ್ರಿಮೂರ್ತಿ: ದೇವತ್ರಯಾದ್ಯನಪ್ಪಾ ದೇವಜ್ಯೇಷ್ಠಂ ಸ್ವನಾಭಿಕಮಳಭವಂ ಮಾದೇವಂ ದ್ವಿತೀಯನೆನಿಪೀ ದೇವಂ ಶ್ರೀವಾಸುದೇವ ನಿರ್ಘ್ನನಮೋಘಂ (ಜಗವಿ. ೧೭-೨೭): ದೇವತ್ರಯದೊಳ್ ಪಿರಿಯನದಾವಂ ಶಶಿಮೌಳಿಯೆಂಬ ತೆಱದಿಂದತುಳಾಜ್ಞಾವಿಭವದಿಂದೆ ಪಿರಿಯಂ ಭೂವಿನುತಂ ಚಿಕ್ಕರಾಜನೂರ್ಜಿತತೇಜಂ (ಚಿಸುಷಾ. ೦-೦೩): ರುದ್ರ ವಿಷ್ಣು ಬ್ರಹ್ಮರೆಂಬ ದೇವತ್ರಯದೊಳು ಪ್ರೇರಿಪಾ ತ್ರಿಗುಣಕ್ಕತೀತವಹ ಶಿವತತ್ವಕಾರಣದೊಳು (ವೀಕ್ಷ್ಮಿತು. ೦-೦-೩೨). [ ದೇವ + ತ್ರಯ ]

**ದೇವತ್ರಿತಯ** (ನಾ). = ದೇವತ್ರಯ: ತನಗೆ ದೇವತ್ರಿತಯವಲ್ಲದೆ ದನುಜದಿವಿಜಾದಿ ತ್ರಿಲೋಕದ ಜನವಿದಿರೆ ಮೆಚ್ಚಿಸಿತು ಮಗುವಿನ ದಿಟ್ಟತನವೆಂದ (ಕುವ್ಯಾಕ. ೨೦-೩೦). [ ದೇವ + ತ್ರಿತಯ ]

**ದೇವತ್ವ** (ನಾ). ೧. ದೇವತನ; ದೇವತಾಸ್ವರೂಪ: ಆ ಪುಣ್ಯದಿಂ ಭೋಗಭೂತಳದೊಳ್ ಪುಟ್ಟಿ ಕಷಾಯಮಿಲ್ಲದುದಱಿಂ ದೇವತ್ವಮಂ ಪೆತ್ತಿಂ (ಶಾಂತಿಪು. ೬-೨೦); ಕೆಲರಾ ಸಭೆಯೊಳಿರ್ದು ಕುಣಿದುಂ ದೇವತ್ವಕ್ಕಾಟಿಪರ್ (ಜಿನಾಕ. ೧೫-೦೫) ; ದೇವತ್ವವಿಹ ನರಂ ಪ್ರತಿಮೆ ತಾಂ ಚಿಂತೆಯಂ ವಿಸರಿಹ ನಿರಾಕೃತಿಗೆ! (ಅಗ್ನಿಂಹ. ೫೫-೨). ೨. ದೇವತೆಯ ಪ್ರಭಾವ,- ಶಕ್ತಿ,- ಮಹಿಮೆ: ನಾದಪ್ರಿಯ ನಂದಿಯನೇಱಿಕೊಂಡು ಅತೀತನ ಮೇಲೆ ಆನಂದಸಿಂಹಾಸನವಿಕ್ಕಿ ಕುಳ್ಳಿತ್ತು ಕೂಡಲಸಂಗಮದೇವರ ದೇವತ್ವ ಕೆಟ್ಟಿತ್ತು (ಬಸವ. ೯೩೦) ; ಆ ದೇವರಲ್ಲಿ ದೇವತ್ವ ಏನಾದರೂ ಇದ್ದ ಪಕ್ಷದಲ್ಲಿ ... ನನ್ನ ಅದೃಷ್ಟ ಪರೀಕ್ಷೆಮಾಡಲು ತಯಾರಾಗಿದ್ದೇನೆ (ವೀಲಯೋ. ೫೫). [ ಸಂ. ]

**ದೇವದತ್ತ** (ಗು). ೧. ದೇವರು ಕೊಟ್ಟ; ಅದೃಷ್ಟದಿಂದ ಉಂಟಾದ: ನಿನಗೆ ನಗದುಹಣವಿರದಿದ್ದರೂ ದೇವದತ್ತವಾದ ಮೋಹನರೂಪು ಇದೆ (ಹೇಮುಂತ. ೧೦೨). (ನಾ). ೨. ಅರ್ಜುನನ ಶಂಖದ ಹೆಸರು: ಇದ ನಿಂದ್ರನಟ್ಟಿದಂ ನಿನಗಿದಱ ಪೆಸರ್ ದೇವದತ್ತಮೆಂಬುದು ನಿನಗಭ್ಯುದಯಕರಂ ಶಂಖಂ (ಪಂಪಭಾ. ೬-೯) ; ದೇವದತ್ತದ ಧರಧುರದ ದೆಪ್ಪಾಳವಿದೆ ಗಾಂಡಿವದ ಬೊಬ್ಬೆಯಿದೆ (ಕುವ್ಯಾವಿ. ೭-೯) ; ಈ ಸವ್ಯಸಾಚಿತ್ಯಮಿಾ ದೇವದತ್ತಶಂಖಂ ತನಗಿದೇಕೆ ನಿನ್ನಂ ಜಯಿಸದೆ (ಜೈಮಿಭಾ. ೧೫-೮) ; ಅರ್ಜುನನ ದೇವದತ್ತವೆಂಬ ಶಂಖವೂ ಬಂದದ್ದು ಈ ಮಯನಿಂದಲೇಯೆ (ಪಕಥಾ. ೭೫). ೩. ಶರೀರದಲ್ಲಿರುವ ಒಂದು ಬಗೆಯ ವಾಯು ವಿಶೇಷ; ಆಕಳಿಕೆ, ಓಕರಿಕೆ ಮತ್ತು ಹೊಟ್ಟೆತೊಳಸು ಮೊದಲಾದುವನ್ನು ಉಂಟುಮಾಡುವ ವಾಯು: ಓಕರಿಕೆಯ ಮಾಡುವುದೊಂದು ದೇವದತ್ತವಾಯು (ಜನ್ನಕ. ೪. ೯೦೦-೮೬೪); ಮತ್ತಮಾ ಉಪವಾಯುಗಳೊಳು ನಾಗವಾಯುವಿನಿಂ ಸೀನು ಕೆಮ್ಮು ದೇವದತ್ತವಾಯುವಿನಿಂ ನಗೆನುಡಿ (ವಿವೇಕ. ೩೯): ವಿಜೃಂಭಣರೂಪಕ್ರಿಯೆಯಂ ಮಾಡುವದರಿಂದ ದೇವದತ್ತ ಸಂಜ್ಞೆಯನ್ನೂ . . . ಪಡೆದುಕೊಂಡಿರುವುದು (ಮುಮುಕ್ಷು. ೩). ೪. ಅನಿರ್ದಿಷ್ಟ ವ್ಯಕ್ತಿಯನ್ನು ಸೂಚಿಸುವಾಗ ಬಳಸುವ ಶಬ್ದ: ದೇವದತ್ತನ ಘಟದ ಮಾಟ್ಕೆ, ದೇವದತ್ತನ ಇರವು (ಕಬ್ಬಾಸು. ೨೨೬ ಪ್ರಯೋ). [ ಸಂ. ]

**ದೇವದತ್ತಿ** (ನಾ). ದೇವಸ್ಥಾನ ಮೊದಲಾದ ಧರ್ಮಸಂಸ್ಥೆಗಾಗಿ ಕೊಡುವ ದಾನ,- ಉಂಬಳಿ. [ ದೇವ + ದತ್ತಿ ]

**ದೇವದಲ್ಲಣ** (ನಾ). (ತನ್ನ ಪರಾಕ್ರಮದಿಂದ) ದೇವತೆಗಳಿಗೆ ಆತಂಕವನ್ನುಂಟುಮಾಡುವವನು: ದೇವದಲ್ಲಣರೆನಿಪ ದೈತ್ಯರಿಗೋವಿ ಸುರೆಯ ನದೆಱೆದು ಸೊಕ್ಕಿಸಿ (ಸಂಭಪ. ೮-೯೦) ; ಕಪಿಗಳ ಕೆಣಕಿ ಚತುರಾಹವದ ಕೋವಿದ ದೇವದಲ್ಲಣನು ಅಣುವ ಮೊದಲಾದವರ ತೃಣವೆಂದೆಣಿಸಿ (ತೊರಾಮಾ. ೩೭-೦೬) ; ರಾವಣಗೆ ಹುಟ್ಟಿಹನುಯೆಂಬರು ದೇವದಲ್ಲಣನಿಂದಕೀಯನು (ಮೂಲರಾ. ೦-೦). [ ದೇವ + ತಲ್ಲಣ (<ತಲ್ಲಟ) ]

**ದೇವದಾನ** (ನಾ). ದೇವಾಲಯಕ್ಕೆ ಕೊಡುವ ದಾನ,- ದತ್ತಿ,- ಉಂಬಳಿ: ಕೂಲಿಗೊಳ್ಳಂ ನೋಡ ದೇವದಾನದ ಕಿಯ್ಗೆ ಕೂಲಿಗೊಳ್ಳಂ ನೋಡ ಮಿಕ್ಕ ಭವಿಗಳ ಕಿಯ್ಗೆ (ಅಶಿರ. ದೇ. ೧೭೪-೦೫) ; ದೇವದಾನದ ಗದ್ದೆ ಬೆದ್ದಲು ಸಹಿತ . . . ಕೊಳ್ಳಿವೆಂದು ಬಿಟ್ಟು (ಎಕ. II, ೩೪೭-೩೩ ; ಸು. 1296). [ ದೇವ + ದಾನ ]

**ದೇವದಾಯ** (ನಾ). = ದೇವದಾನ: ನಮ್ಮಯ ವೃತ್ತಿ ದೇವದಾಯಕೆ ಸಂದುದೆಂಬರವ್ಮಭಿಧಾನ ಭಾವಿಸಿ ವಿಶ್ವೇಶ್ವರರೆಂದು (ತ್ರಿಭುತಿ. ೧೦-೦೦) ; ದೇವದಾಯಂಗೊಟ್ಟು ಅಱಿಂಗೆಯ್ದು (ಚಿಕದಂ. ೯೯-೧೮); ಗುಮ್ಮಟನಾಥಸ್ವಾಮಿಯವರ ದೇವದಾಯಗಳನ್ನೂ . . . ಜೀರ್ಣೋದ್ಧಾರ ಮಾಡಿ (ಬಿಟ್ಮಿಅ. ೯೦-೧೨). 'ದೇವದೇಯ' ಪರಾ. [ ದೇವ + ದಾಯ ]

**ದೇಸಾಯಿಗೌಡ** (ನಾ). ೧. ಮೊರಸು ಒಕ್ಕಲು ಜನಾಂಗದ ಮುಖಂಡ,–ನ್ಯಾಯತೀರ್ಮಾನ ಮೊದಲಾದವುಗಳಲ್ಲಿ ಪರಮಾಧಿಕಾರವುಳ್ಳವನು,–ಭೂಮಿಗೌಡ : (ಎಸವ್ಯ. XV, ೨೬). ೨. ಕಂದಾಯ ಮತ್ತು ನ್ಯಾಯನಿರ್ಣಯಗಳ ಎರಡೂ ಅಧಿಕಾರಗಳನ್ನುಳ್ಳ ಸ್ಥಳೀಯ ಅಧಿಕಾರಿ. [ ದೇಸಾಯಿ + ಗೌಡ₁ (<ಗಾಮುಂಡ) ]

**ದೇಸಾಯಿತಿ** (ನಾ). ದೇಸಾಯಿಯ ಹೆಂಡತಿ,–ಪತ್ನಿ : 'ದೇಸಾಯಿತಿಯು ಬಸಿರಿದ್ದದ್ದು ನಿಜ ಎಂದಾಯಿತು (ನಿರಾಶ. ೧೧೦) ; ದೇಸಾಯಿತಿ ಹತ್ತನೆ ತಿಂಗಳಲ್ಲಿ ಹಡೆದಳು (ನಿರಾಶ. ೧೧೨).

[ ದೇಸಾಯಿ + –ತಿ (< –ಇತ್ತಿ) ]

**ದೇಸಾಳ** (ನಾ). ದೇಶಕ್ಕೆ ಸಂಬಂಧಪಟ್ಟುದು ; ದೇಶೀಯವಾದುದು (?) : ಉಟ್ಟ ಹೊಸ ದೇಸಾಳದುಡುಗೆ ರಂಜಿಸುತಮಿರೆ (ಚಹರ. ದೇ. ೩೨–೦೯) ; ಕೈಸಾಳಂ ಸನ್ನೆಯೊಳೊತ್ತುತ್ತಿರೆ ದೇಸಾಳಂ ನುಡಿಯೊಳಿ ಬೆಳೆವುತ್ತಿರೆ (ಶೃಂಗೀರ. ಹ. ೪೭೬–೦೯) ; ಅಗ್ಗಳದ ದೇಸಾಳ ನುಡಿಗಡಣ (ರೇವಣ. ೦೨೭–೩೩).

[ ←ಮರಾ. ದೇಸಾಳ್, ದೇಸೋಳೀ, ದೇಶವಳೂ ; ಹಿಂ. ದೇಸವಾರ್ ]

**ದೇಸಿ, ದೇಸೆ** (ನಾ). ೧. ಒಂದುದೇಶದಲ್ಲಿ ಮಾತನಾಡುವ ಭಾಷೆ ; ದೇಶ್ಯಭಾಷೆ : ದೊರೆಕೊಂಡಿರೆ ಸೊಗಯಿಸುಗುಂ ಪುರಾಣಕಾವ್ಯಪ್ರಯೋಗದೊಳ್ ತತ್ಕಾಲಂ ವಿರ(ಸ) ಕರವುವು ದೇಸಿಗೆ ಜರದ್ಧಧೂ ವಿಷಯಸುರತರಸಕತೆವೋಲ್ (ಕವಿರಾ. ೧–೫೦) ; ಹಳ್ಳಿಯ ಆಡುವ ಭಾಷೆಯ ಜೊತೆಗೆ ಹೋಲಿಸಿ ನೋಡಿದೆನತ್ತ ಶಿವಮೊಗ್ಗೆಯ ದೇಸಿಯ ನುಡಿಯನು ಕೊನೆಗೆ (ಇಂಚಾಪ. ೩೩–೫೦). ೨. ಪರಭಾಷೆಯ ಅನುಕರಣವಿಲ್ಲದೆ ಅಚ್ಚಗನ್ನಡ ಶಬ್ದಗಳನ್ನು ಮನೋಹರವಾಗಿ ಬಳಸುವ ಶುದ್ಧಗನ್ನಡದ ಶೈಲಿ : ಪೂರ್ವಾಚಾರ್ಯರ್ ದೇಸಿಯನೆ ನಿಚ್ಚಾಸಿ ಖಂಡ ಪ್ರಾಸಮನತಿಶಯಮಿದೆಂದು ಯತಿಯಂ ವಿಃಕ್ಕರ್ (ಕವಿರಾ. ೦–೭೩) ; ಬಗೆ ಪೊಸತಪ್ಪುದಾಗಿ ಮೃದುಬಂಧದೊಳೊಂದುವುದೊಂದಿ ದೇಸಿಯೊಳ್ ಪುಗುವುದು ಪೊಕ್ಕ ಮಾರ್ಗದೊಳೆ ತಳ್ವುದು ತಳ್ತೊಡೆ ಕಾವ್ಯಬಂಧಮೊಪ್ಪುಗುಮೆಳಮಾವು ಕೆಂದಳಿರ ಪೂವಿನ ಬಿಣ್ಪೊಚೆಯಿಂ ಬಟಲ್ದು ತುಂಬಿಗಳಿನೆ ತುಂಬಿ ಕೋಗಿಲೆಯ ಬಗ್ಗಿಸೆ ಸುಗ್ಗಿಯೊಳೊಪ್ಪುವಂತೆವೋಲ್ (ಪಂಪಭಾ. ೧–೮) ; ಅಸಗನ ದೇಸಿ ಪೊನ್ನನ ಮಹೋನ್ನತಿವೆತ್ತ ಬೆಡಂಗು ಪಂಪನೊಂದಸದೃಶವಪ್ಪಪೂರ್ವರಸವೆುಯ್ದು . . . ನೆಲಸಿರ್ಕೆ ಧಾರಿಣಿ ಮನಂಗೊಳೆ ಮತ್ಕೃತಿಯೊಳ್ (ಧರ್ಮಾಮೃ. ೦–೩೯) ; ಮಾರ್ಗವು ತನ್ನ ಸ್ವಾರಸ್ಯವನ್ನು ಕಳೆದುಕೊಂಡಾಗ . . . 'ದೇಸಿ'ಯು ತಲೆಯೆತ್ತುತ್ತದೆ (ನವ್ಯಕಾ. ೪೦). ೩. ಅಚ್ಚಗನ್ನಡ ಶಬ್ದ,–ಪದ : ಕನ್ನಡಕೆಂತಪ್ಪುವು ಶಬ್ದಮೆಂಬ ವಿದ್ವಜ್ಜನರಾ ಚಿಂತೆ ಪರಿಹರಿವ ಮಾಟ್ಕೆಯೊಳೆಂತುಸುರ್ವೆಂ ದೇಸಿ ತದ್ಭವಂ ತತ್ಸಮಮಂ (ಶಬ್ದಮ. ೨). ೪. ಒಂದು ದೇಶದಲ್ಲಿ ಪರಂಪರಾಗತವಾಗಿ ಬಂದಿರುವ ಸಂಸ್ಕೃತಿ, ಆಚಾರ, ವ್ಯವಹಾರ ಮೊದಲಾದುವು : ಯಹೊದ್ಯದೊಳಿರುವ ದೇಸಿ ಪರದೇಸಿಯ ತನುಮನಧನಂಗಳಂ ಸೂರೆಗೊಂಡು (ಗೂಲ್ವೆಾ. ೨–೪೮). ೫. ಸ್ವಾಭಾವಿಕವಾದ ಚೆಲುವು,–ಸೊಬಗು ; ಸಹಜವಾದ ಸೌಂದರ್ಯ : ವಿಳಿರ್ವ ಕುರುಳ್ಗಳೊಳ್ ತೊಡರ್ದು ದೇಸಿ[ಪಾಠಾಂ. ಸೆ]ಯನಾವಗಮಿವಾವ ಬೆನ್ನ ಪೂಗಳನವನೊಯ್ಯನೋಸರಿಸುತುಂ . . . ಬರ್ಪ ಮಾದ್ರಿಯುಂ . . . ಪಾಂಡುರಾಜಂ ಕಂಡು (ಪಂಪಭಾ. ೨–೦೭) ; ಗಾಡಿಗೆ ಪಾಡಾದ ಪಸದನಕ್ಕಂ ತೇಜಕ್ಕೊಡಾದ ಕಾಂತಿಗಂ ಬೆಡಂಗಿಗೆ ಪಾಂಗಾದ ದೇಸಿಗಂ . . . ಪೊಗಟ್ಟು (ಶಾಂತಿಪು. ೩–೩೩ ವ) ; ಚರಣಂ ನವಕೇಸರದೊಂದು ದೇಸಿಯಂ ಪ್ರಕಟಿಸೆ (ಕಾದಂಬ. ೬೧) ; ನೆಲೆಮಾಡದ ಪೊಸದೇಸಿಯ ನೆಲೆಮಾಡದ ಕಲ್ಪವನಮೆಯ್ದಿದಣಂ ಕೀಟಿನ್ ನೆಲೆಯಾದುದು (ಪಂಚಾಮಾ. ೦–೧೨೬) ; ಕೊಸುಗಳಂ ಮುಂದ್ದಾಡಿಸಿ ದೇಸಿಯ ಮಾತುಗಳನಾಡಿಸಿ ಪೆರ್ಚಿಸಿ (ಧರ್ಮಾಮೃ. ೫–೯೦) ; ದೇಸಿಯ ರಾಜವಟ್ಟದ ಸವಿನುಡಿಗಳನು ಸೃಷ್ಟೀಶ್ವರಗೆ ಬಿನ್ನೈಸುತ ಮಂತ್ರಿಗಳಟ್ಟಣಿಸಿಹರು (ಕಂಸವಿ. ೮–೩೭). ೬. ಗತ್ತು ; ಠೀವಿ ; ವಿಜೃಂಭಣೆ : ತಳಿರ ತೊಂಗಲೊಳ್ ಕೊಡೆಯ ಬಿಂಕಮಂ ಬೀಜೆ ಪೊಳೆವ ಕೆಂಗಾಯ್ ನೊಸಲ ಕಣ್ಣ ದೇಸಿಯ ಸೂಸೆ . . . ಶಿವಚಿಹ್ನವಾಂತಂತೆ ನೇಜಿಲ್ವರಂ ಚೆಲ್ವಾದುದು (ಪದ್ಮರಾ. ೮–೩೦) ; ಅಗ್ಗದ ಸಗ್ಗದ ಜೋಸೆಯರೊಂದು ನೆರವಿಯೊಳ್ ದೇಸಿಯಿಂ ಬೆರೆದಾಗಳುಂ ಬನದಿಸತ್ತ (ರಾಜಶೇಖ. ೧೩೬–೧೯). ೭. ಅಲಂಕರಣ ; ಶೃಂಗಾರ : ಆವ ಪರಿಯ ದೇಸಿಯಾಣ್ಮಗೆ ಬಗೆವರ್ಪುದಾ ವಿಧಗಳನಾರ್ಕೈದು ಭಾವಿಸಿ ತಿಳಿದುಟ್ಟು ತೊಟ್ಟು ಬಣ್ಣಿಗೆಯಿಂದ ಭಾವವ ಬಂದಿಗೊಳುವುದು (ಹದಿಬ. ೩–೧೭). ೮. ಬಗೆ ; ರೀತಿ ; ಕ್ರಮ ; ಸಂಪ್ರದಾಯ : ಛಂದಮಿದಾವುದೆಂದೊಡಿಬ್ಬರ್ ಪದಬಂಧದೊಳೇ ಪ್ರಯೋಗಮೆಂತಂದೊಡೆ ಬಯ್ಸರಾವ ಕವಿಮಾರ್ಗವಿದೆಂದೊಡೆ ಪೊಯ್ಸರರ್ಥವೇನೆಂದೊಡೆ ತೊಂಡುಭಂಡುಗೆಡೆದಾಟ್ಟುದನಿಕ್ಕುವರಾವ ನೀತಿ ಪೇಟೆಂದೊಡೆ ಕೊಲ್ವ ರೀಗಳಿನ ದೇಸಿಗೆ ಬಿಟ್ಟ ಮಹಾಕವೀಶ್ವರರ್ (ಸೂಕ್ತಿಸು. ೧–೩೩) ; ಮೊಗವೊಂದು ತೋಳೆರಡಟೇ ಸ್ಫುರಿಸುತೀ ಪರಿಯಿಂದೆ ವಿಟಜಂಗಮಾ ಕೃತಿಯಿನಾಂತು ಪೊಸದೇಸಿ ರಚಿಸೆ . (ಪದ್ಮರಾ. ೫–೯೨) ; ಬಲಿದು ಮಕುಟಾವಳಿಯ ಶೋಣಿತವಳಿಯ ರಕ್ಕಸ ದೇಸಿ[ಪಾಠಾಂ. ಶಿ]ಯಲಿ ಬಿಗಿದೆಳೆವ ಹಾಹೆಯನೋಜೆಗೊಳಿಸಿಕ್ಕಲಿಸಿ ಪದಯುಗವ (ಕೌರರಾ. ೧–೧೫–೦೯). ೯. "ನೇರ್ಪು, ತಕ್ಕುಮೆ, ಔಚಿತ್ಯ" (ಗೀಪಿಂ. ೧೩೭ ಟಿಪ್ಪಣಿ) : ತಕ್ಕೆಳಿಯದೆ ನಿಲ್ಲದೆ ಕಬ್ಬಿಗನ ಮಾತು ವಿಮರ್ಶಕನಿತ್ತ ದೇಸಿಯಿಂ (ಗೀಪಿಂ. ೦೦೦–೮). ೧೦. (ಹಿಂದಿನ ಕಾಲದಲ್ಲಿದ್ದ) ವರ್ತಕರ ಒಂದು ಪಂಗಡ,–ಮಂಡಲಿ : ಅಗ್ರಹಾರು ತುಂಬುಳದಲು ತಂಬುಲಿಗರುಂ ದೇಸಿಯುಂ ಬಿಟ್ಟ ಧರ್ಮ್ಮಂ (ಸೌಇಇ. IX–1, ೨೩೯–೧೭ ; 1142) ; ಬಾವಿಯನಗಳಸಿ ತತ್ಸವಿಸಾಪದಲು ಸಮಸ್ತದೇಸಿಯನುಮತದಿಂ ದೇಸೀಶ್ವರದೇವರ ಪ್ರತಿಷ್ಠೆಯಂ ಮಾ[ಡಿ] (ಸೌಇಇ. IX–1, ೨೬೮–೪೭ ; 1162). 'ನಾನಾ ದೇಸಿ' ಪರಾ. ೧೧. (ಅಲಂ) ತೋರಿಕೆ ; ಭೂಷಣ ; ಚಂದ : ಒಸೆದವಂವರೆನ್ನದೆ ಸಂತೊಸಮುಪ್ಪಿಸಮಿತ್ತು ಪಡೆದನೀ ವಸುಮತಿಯೊಳ್ ವಸುಧೈಕಬಂಧು ಪಂಬೀ ಪೆಸರಂ ರೇಚರಸನಂತು ದೇಸಿಯಿನಾಯ್ತು (ಎಕ. V, ಅರಸೀ. ೭೭–೨೯ ; 1220). ೧೨. [ನಾಟ್ಯ] ಒಂದು ಬಗೆಯ ದೇಶೀಯ ನೃತ್ಯ : ತೋರಮುಲ್ಲಿಗೆಯ ತುಱುಂಬು ರಾಹು ತವೆ ನುಂಗಿದ ಚಂದ್ರನನೊಯ್ಯನೊಯ್ಯನಂದುಗುಟ್ಟವೊಲೊಪ್ಪಿರಲ್ ಬಲದೊಳುರ್ವಸಿ ದೇಸಿಗೆ ದೇಸಿಯಾಡಿದಳ್ (ಪಂಪಭಾ. ೭–೮೭) ; ಬುಧಸನ್ನುತ ದೇಶಾದ್ಯ ವಿವಿಧನೃತ್ಯಂ ದೇಸಿಯೆನಿಸಿ ಪೆಂಚಿವುದು ಜಗದೊಳ್ (ಲಾಸ್ಯರಂ. ೧–೨೦) ; ಭಾವಾಶ್ರಯವಾದ 'ನೃತ್ಯ'ಕ್ಕೆ ಮಾರ್ಗವೆಂದೂ ತಾಲಲಯಾಶ್ರಯವಾದ 'ನೃತ್ತ'ಕ್ಕೆ ದೇಶಿ (ದೇಸಿ)ಯೆಂದೂ ಹೆಸರಿರುವಂತೆ ದಶರೂಪಕದಿಂದ ತಿಳಿಯಬರುತ್ತದೆ (ಕೃಶಿಡಿ. ೨೨೩). **ದೇಸೆ** : ೨. ಆದಿಪುರಾಣವಸ್ತುಕೃತಿಯಂ ಪೇಟ್ದಂ ಬೆಡಂಗಪ್ಪ ಮಾರ್ಗದೊಳಂ ದೇಸೆಯೊಳಂ ಪೊದಟ್ದಿಸವಿನಂ ಸಂಸಾರಸಾರೋದಯಂ (ಆದಿಪು. ೦೭–೭೮) ; ನೆಗಟ್ದ ರಸಂ ಪುಸಂಗೊಳಿಸೆ ಮಾರ್ಗಮೊಡಂಬಡೆ ದೇಸೆ ಕಬ್ಬಮಂ ಬಗೆಗೊಳಲಿಂತು ಪೇಟ್ದುದು (ಗದಾಯು. ೧–೩೭) ; ಪೊಸತೆನಿಸಿ ದೇಸೆಯಿಂ ನವರಸವಸೆಯಲ್ಕೊಳ್ಪುವೆತ್ತ ಮಾರ್ಗದಿನಿಳೆಗೇನೆಸೆದುವೊ ಸುಕವಿಗಳೆನೆ ನೆಗಟ್ದಸಗನ ಮನಸಿಜನ ಚಂದ್ರಭಟ್ಟನ ನುಡಿಗಳ್ (ಪಂಚತಂ. ೫–೯) ; ನಾಗವರ್ಮನ ನೆನಹು ಹೊನ್ನನ ದೇಸೆ [ಪಾಠಾಂ. ಸಿ] ವಿಜಯನ ಭಾವ . . . ಅನುಕರಿಸಲಿ ಕಾವ್ಯದೊಳಗೆ (ಜೀವಂಚ. ೧–೩೦). ೫. "ದೇಸೆಯು ಗಾಡಿಯು ಸೊಬಗಹುದು" (ಕವಿಶಂ. ೨೦೨) ; ಒದವಿದ ನೂಲ ತೊಂಗಲುಲಿ ದೇಸೆಯನಾಂತು ವಿಳಾಸದಿಂದಿಱುಂಕಿದ ನಿಱಿ ಗಂಡರಳ್ಳೆರ್ದೆಗಳಂ ತುಱಿ

ಪೋಚೆಯನುಂಟುಮಾಡುವಾದದೆ ನಿಡುಗಣ್ಗಳೊಳ್ನಡೆ (ಪಂಪಭಾ. ೪-೩೩) : ಚಂದ್ರಬಲವುಂ . . . ತದಾನನಚಂದ್ರಂ ಕುಡೆ ದೇಸೆ ಪೊಚ್ಚಪೊಸತಾಯ್ತು (ಗದಾಯು. ೧-೬) ; ಆಗಳಂತವುರದಂಗನೆಯರ್ನಡೆತಂದು ಬಾಹುವಲ್ಲರಿ ಕುಡೆ ದೇಸೆಯಂ ತ್ರಿಭುವನಪ್ರಭುಗಿಕ್ಕಿದರೊಲ್ದು ಸೇಸೆಯಂ (ಜಗವಿ. ೧೩-೬೯) ; ನಮ್ಮಯ ಮಾತಿಂಗಿಂಬುಗೊಟ್ಟೊಡೆ . . . ಕೃತಾರ್ಥರೆ ನಾವಿದು ನಮ್ಮ ದೇಸೆಯೊಳ್ ಗಡಣಿಸೆ ನಾಡೆ ಕೌತುಕವೆನುತ್ತುಮವಳ್ ತಳರ್ದಳ್ ಪ್ರಮೋದದಿಂ (ಕುಸುಮಾ. ೧೨-೦೦); ದೇಸೆಯನಾಂತ ಕನ್ನಡಿತಿಯರ್ ಕವಡೊಂದಿದ ಚೆಂದದಾಂಧ್ರಿಯರ್(ಚಕವಿ. ೫-೧೬೩). ೬. ಕನಕಾಂಬುಜ ಪಾದಪೀಠದೊಳ್ ನಿಸದಮೆ ನೀಡಿ ಕಾಲನಿಡೆ ರಾಜಕುಮಾರನದೊಂದು ದೇಸೆಯಿಂ (ಶಾಂತಿಪು. ೮-೪); ದಿಟ್ಟಿಗೆ ನಯಂಬಡೆದ ಪೊಚ್ಚಪೊಸ ದೇಸೆಯಿಂ (ಆದಿಪು. ೪-೭ ರಗಳೆ); ಪೊಸತಿದೆಂದು ನಿರೀಕ್ಷಿಸಲೊಂದು ದೇಸೆಯುಂ ಪೆತ್ತು (ಜಗವಿ. ೨-೨೯). ೭. ಲಲಿತೋನ್ನತವಣಿಮಯಕೂಟದಂದಮದು ಪಲವುಂ ದೇಸೆಯು ಮಾಟದಂದಂ (ಆದಿಪು. ೪-೩೦ ರಗಳೆ). ೧೧. ಸಾಸಿರತೋಳ್ಗಳುಳ್ಳನಗೆ ಕಾಳೆಗಮಿಲ್ಲಿನಿತೊಂದು ತೋಳ್ಗಳಂ ದೇಸೆಗೆ ಪೊತ್ತನಲ್ಲದಿಟಿವಂತಿರೆ ಪೊತ್ತೆಸೆ. ಪೇಟಿಂ (ಜಗವಿ. ೧೭-೮೩) ; ಯದುರಾಜನ ಮನ್ತ್ರಿಗೀಗಳಿಂತಚ್ಯುತದೇವನೆಂಬ ಪೆಸರಾದುದಿದಲ್ಲದೆ ದೇಸೆಗಾದುದೇ (ಎಕ. V,ಬೇಲೂರು. ೧೭೩-೨೦ ; 1196): ಗುರುಶಬ್ದಂ ವಾಚ್ಯವಾಯ್ತಲ್ಲದೆ ವರಮುನಿಚಂದ್ರಂಗಿದೇಂ ದೇಸೆಗಾದ್ದು (ಸೌಇಇ. XX, ೨೪೮-೯ ; 1228). ೧೨. ತುಱುಗಿ ತುರಂಗವಂ ಪೊಳೆದು ಮೆಟ್ಟುವ ದೇಸೆಯನಾಡಿ ತೋರ್ಪವೋಲ್ ತುಱುಗಿ ಕಪೋಲರಂಗತಟದೊಳ್ ಕುಣಿಯಲ್ ಮ ಣಿ ಕು ಂ ಡ ಳ ದ್ವ ಯ ಂ (ಪುಷ್ಪಪು. ೩-೭೪). ೧೩. [ಸಂಗೀತ] (?): ಬಹುಲಾಯಿ ದೇಸೆ ಪೆಲ್ಲಣೆ ಕಳಿಯೆಂಬಿವಂ ಮೆಱೆದು ಬಾಜಿಸಿದಂ ಮುರವೈರಿ ವಾಸವಂ (ಜಗವಿ. ೫-೩) : ವಾದ್ಯವಿದ್ಯಾಧರನಪ್ಪ ವಿದ್ಯಾಧರಮಾರ್ದಂಗಿಕಂ ಮೃದಂಗಸಂಗತೋತ್ಸಂಗವಾಗಿ . . . ರಿಪುವಣೆ ಸಹರಣೆ ತುಡುಕು ದರಿದು ವತ್ತಿರಿ ಜತಿ ಜೋಕೆಯೆಂಬ ದೇಸೆಯ ಶಬ್ದಂಗಳಸೆಯೆ ಬಾಜಿಸುತ್ತಿರೆಯಬಿಂ (ಶಾಂತೀಶ್ವ. ೧೩-೭೭ ವ).

ದೇಸಿಯಂಕಕಾಱ=ಒಂದಂ ಬಿರುದು : ವೂರ ಹಳಿಯರು ತಂಮಡಿಹರದಾಡೆ ಮಂಟಿ ಬೋವ ಮಡೆಯು ಬೋವ ಅಪ್ಪಹರುಯ ಮಲ್ಲಿಗಗೆಟಿ ತೊರಗಾಗಿ ಕೊಟ್ಟರು ಎಣಿಸು ಮಗ ದೇಸಿಯಂಕಕಾಱಯಿಸಾಸ×ಗಲ್ಲ ಬರದ ಸೇನಬೋ ಗೋವಯ್ಯ (ಎಕ. XIV, ಮಳವ. ೧೪೨-೨೮ ; ಸು. 1251).

[ <ಪ್ರಾ. ದೇಸೀ./ಸಂ. ದೇಶೀ./ತೆಲು. ದೇಸಿ ]

**ದೇಸಿಕಾರ್ತಿ** 'ದೇಸಿಗಾರ್ತಿ' ನೋ.

**ದೇಸಿಕಾರ್ತಿತನ** (ನಾ). ಚೆಲುವು; ಸೊಬಗು; ಬೆಡಗು: ದೇಸಿಕಾರ್ತಿತನಮಂ ನೆಱಿ ಬೀಱುತದೊರ್ವಳೊಪ್ಪಿದಳ್ (ತ್ರಿಪುವಿ. ೨೪-೧೫೭).

[ ದೇಸಿಕಾರ್ತಿ (<ದೇಸಿಗಾರ್ತಿ) + – ತನ ]

**ದೇಸಿಕಾಱ** 'ದೇಸಿಗಾಱ' ನೋ.

**ದೇಸಿಗ, ದೇಶಿಗ** (ಗು). ೧. ಪರದೇಶಿತನದ; ನಿರ್ಗತಿಕತನದ: ಪರದೇಶಕ್ಕೆ ದೇಸಿಗಮಾರ್ಗದಿಂ ಪೋಗಿ ಸೇದೆಗಿಡಲ್ವೇಡ (ಸುಕುಮಾ. ೨-೩೭ ವ). (ನಾ). ೨. ಪರಸ್ಥಳದವನು; ಬೇರೆ ಕಡೆಯಿಂದ ಬಂದವನು; ಯಾತ್ರಿಕ: ಪಱಿಕಾಱಗ್ಗ೯ಂ ಪಾತ್ರಕ್ಕಂ ದೇಸಿಗ ಛಾತ್ರಭೋಜನಕ್ಕಮೆಂದು ಸಮಕಟ್ಟಿ . . . ಸರ್ವ್ವನಮಸ್ಯಮಾಗೆ ಕುಡೆ (ಸೌಇಇ. IX-1, ೮೦-೧೭ ; 1018) ; ಅವಮಾಪಾಸ್ಕೆ ಸೋಮವಾರದಂದು ದೇಸಿಗ ಪ್ರವಾಸಿಗರ ಆಹಾರದಾನಕ್ಕೆ ಬಿಟ್ಟ ಸಕ್ತಂ (ಎಕ. VII, ಶಿಕಾರಿ. ೧೪-೧೪ ; 1089). ೩. ದಿಕ್ಕಿಲ್ಲದವನು; ಗತಿಗೆಟ್ಟವನು; ಪರದೇಶಿ; ನಿರ್ಗತಿಕ: ಪೊಟಲೆಲ್ಲವಂ ತೊಟಲ್ದು ಬಸಿಱಿಂ ಪೊರೆವೊಂ ದೇಸಿಗಂ (ವಡ್ಡಾರಾ. ೪೭-೮); ಎನ್ನೀ ಶ್ರೀಪತ್ನೀಶತೆಯುಂ ಬಗೆಯದೆ ಯತ್ನಪರರ್ ದೇಸಿಗಂಗೆ ಕೂಸಂ ಕೊಟ್ಟರ್ (ಶಾಂತಿಪು. ೫-೪೩) ; ಧವಳವಂಗಳಗೇಯದಿನೊಪ್ಪಿ ಬರ್ಪ ಕೌರವಧವಳಂಗೆ ದೇಸಿಗನೆ ಬರ್ಪವೊಲೊರ್ವನೆ ಬರ್ಪುದಾದುದೇ (ಗದಾಯು. ೫-೪೧) ; ಆರುಮಿಲ್ಲದ ದೇಸಿಗರಂತೆ ಕಾಡಂ ಪೊಕ್ಕು (ಧರ್ಮಾಮೃ. ೮-೮೦); ಮಗನರಸಿ ಮಂತ್ರಿಸಹಿತವನಿವಂ ಹಿಂದೆ ದೇಸಿಗನಂತೆ ಕೌಶಿಕನ ಕಾಹಿನೊಳು ಬರೆ (ಹರಿಕಾ. ೮-೭೨) : ಒಕರ್ಗಡಿತೆ ನೀರ್ಗೆ ಪಱಿಪಟ್ಟರ್ಕೆಱು ಪಣ್ಗಲೆಯ ಮುಱಿಗೆ ದೇಸಿಗರಂ ದೇವರ್ಕಳೊಗ್ಗಡೆಯರ್ ಮಾಟ್ಪರೆ (ಕಪುದ. ೨೪ ಪ್ರಯೋ); ಏಳಿರೈ ಸಾಕೇಳಿ ಮಕ್ಕಳಿರೇಳಿರೈ ದೇಸಿಗರು ನಾವ ಭೂಪಾಲಕರು ನೀವು (ಕುಮಾ.ಗ. ೧೧-೫೪); ಈ ಕ್ಷೋಣಿಸುತೆ ಗಂಗೆಯಂ ಕಳೆದು ಕಾಡೊಳ್ಪಾಕ್ಷೀಣೆಯಾಗಿ ದೇಸಿಗಪಂತೆ ದೆಸೆದೆಸೆಯನೀಕ್ಷಿಸುತೆ ಮಱುಗುತಳುತಿರ್ದುದಂ ಕಂಡೆನು (ಕೃಮಿಛಾ. ೧೮-೪೦). ೪. ಋಷಿ; ಮುನಿ; ತಪಸ್ವಿ: ಕರುಣಾರಾಸಿ ಪಪಡಿಸಿರಲ್ಕೆ ಕಂಡಾ ದೇಸಿಗನು ದಂಡಪ್ರಣಾಮ ಮಾಡುತ್ತೈತಂದ (ನಿಭಾಗ. ೯-೪-೨೩)– ದೇಸಿಗರಾಣ್ಮ! ಬೆಳರ್ವಯ್ಯನಾಂತ ಪಕ್ಕಿದೇರನಂತುಂ ನಾಲ್ಗೈಪೊತ್ತ ಬಾಂಬೊಟ್ಟದಲೆಯನಂತುಂ ಒತರ್ಲೆಯ ಪೊಂಬಸಿಱನಂತುಂ ನಿನ್ನಂ ಕಾಣ್ಬೆಂ (ರಾಮಾಶ್ವ. ೭೩-೨೮). ೫. ಶಿವ; ಪರಮೇಶ್ವರ: "ಎಣ್ಮಯ್ಯಂ . . . ದೇಸಿಗಂ . . . ಐಮೊಗಂ – ಈ ೩೩ ಈಶ್ವರಂಗೆ ಪೆಸರ್" (ಕಶಸಾ. ೧-೧) : "ಗೊಂದೆವಟ್ಟುಗೆಯ ದೇಸಿಗನೆಂದುಂ . . . ಪೇಟ್ಬರ್ ಸ್ಮರಹರಂಗೆ ನಾಮವಿದೆನುತುಂ" (ಕವಿಕಂ. ೧೭) : "ದೇಸಿಗನೀಶ್ವರಂ" (ಕಶರ. ೫೧). **ದೇಶಿಗ:** ೩. ನೆನೆದನು ಮಱಿದಿರದೆ ತಾನಾಪುಸುಧೆಯನು ಹರಿಹರಿಯೆ ಗೋವಿಂದ ದೇಶಿಗರೊಡೆಯ ನೀನೆನುತ (ಸಂಭಪ. ೮-೪೪) : ದೇಶಿಗನಾದನೆಂದತ್ತರಿರ್ವರು ದುಗುಡದಲಿ (ಬೋಹಕ. ೩೪-೩೩). ೬. ದೇಶದ ಪ್ರಜೆ,-ಜನ; ದೇಶದವನು: ದೇಶಿಗನು ತನ್ನೂರನುಳಿದು ವಿದೇಶದಲಿ ತೊಳಲುತ್ತ ತನ್ನಯ ದೇಶವನು ನೆನೆದಲ್ಲವನು ಬಿಸುಟೈದುವಂದದಲಿ (ನಿಭಾಗ. ೪-೧೩-೩೭). ೭. ಆಚಾರ್ಯ; ಗುರು: ಎಲೆಷೊ ದೇಶಿಗ ಕಂಕಭಟ್ಟನೆ ಹಲವು ಧರ್ಮವ ಬಲ್ಲೆ ಗಡ ನೃಪತಿಲಕಗಱುಹುವುದೇನು ಸನ್ಯಾಸಿಗಳಿಗುಚಿತವಿದು ಶಿಳಿಯ ದೇಶಿಗರಿಂಗೆ ದೇಶಿಗರೊಲವು ಸಮನಿಸಬೇಕು ಸಭೆಯಲಿ ಬಲವಿಹೀನಂಗಾಪ್ತರಿಲ್ಲೆಂದಬಲೆಯೊಱಲಿದಳು (ಕುಮಾ.ವಿ. ೩-೧೯). [ <ಸಂ. ದೇಶಿಕ ]

**ದೇಸಿಗಗಣ** (ನಾ). [ಜೈನ] ಜೈನಮುನಿಗಳ ಒಂದು ಪಂಗಡ; ಪರಂಪರಾಗತವಾದ ಜೈನ ವಿರಕ್ತರ ಒಂದಂ ಗುಂಪು: ದೇಸಿಗಗಣದ ಮಹೇಂದ್ರಪಂಡಿತರ್ (ಸೌಇಇ. XI-1, ೩೮-೧೦; 950); ಜಿನಶಾಸನಮಂ ಮೊದಲಿನ್ದಿಂತಳವಟ್ಟ ದೇಸಿಗಗಣ ಶ್ರೀಕೊಣ್ಡಕುನ್ದಾನ್ವಯಾಸ್ಪದವಾಚಾರ್ಯರ್ (ಕಇಇ. ೭೨-೮-೬ ; 1008) ; ದೇಸಿಗಗಣದ ಪುಸ್ತಕಗಚ್ಛದ ಬೋಧವಿಭವದ ಕುಕ್ಕುಟಾಸನ ಮಲಧಾರಿದೇವರ ಶಿಷ್ಯರೆನಿಪ ಪೆಂಪಿಂಗಾದಂ (ಎಕ. II, ೭೩-೩೦: 1118). [ ದೇಸಿಗ + ಗಣ ]

**ದೇಸಿಗಣ** (ನಾ). = ದೇಸಿಗಗಣ: ಶ್ರೀಮೂಲಸಂಘ ದೇಸಿಗಣ ಪುಸ್ತಕಗಚ್ಛದ × × × ಕೊಂಡಕುಂದಾನ್ವಯರಾರ್ಯ್ಯ ಶುಬೇನ್ದು ಕಂದವಿ[ಜಯ]ಕೀರ್ತಿದೇವರ ಪ್ರಿಯಶಿಷ್ಯರಪ್ಪ ಬಾಹುಬಲಿದೇವರು (ಎಕ. I (R), ೭೩-೨ : 1390). [ ದೇಸಿ + ಗಣ ]

**ದೇಸಿಗತನ** (ನಾ). ದಿಕ್ಕಿಲ್ಲದಿರುವಿಕೆ; ನಿರ್ಗತಿಕತೆ: ನಿನ್ನಾಸೆಯೊಳಾಂ ನಿನಗೆ ಸಕಲ ರಾಜ್ಯಶ್ರೀಯುಂ ಲೇಸಾಗಿ ಮಾಡದಿರ್ದೊಡೆ ದೇಸಿಗತನದಿಂದೆ ನವೆವುದೊಂದನೆ ಬಗೆವಾ (ಧರ್ಮಾಮೃ. ೩-೯೯) : ಉಸಿರ್ದಳು ವರರತಿ ದೇಸಿಗತನದ ಸುದ್ದಿಯನು (ಮೋಹತ. ೧೦-೨೦). [ ದೇಸಿಗ + – ತನ ]

**ದೇಸಿಗಾತಿ, ದೇಶಿಕಾತಿ** (ನಾ). = ದೇಸಿಗಾರ್ತಿ: ದೇಸಿಗಾತಿಯರನೆಸಗೆಯಲ್ಲಿಕರ ನೊಂದು ಬೇಸತ್ತು ತುದೆಯನಿಳುಹದೆ ಸಾಸಿಗ ಕಾಮನಿಟ್ಟಕ್ಷುಚಾಪದವೊಲು ಮಿಸೆ ಅಂಜಿಪುದು ಕೇಶವನ (ವರ್ಧಪ.೪-೧೦). **ದೇಶಿಕಾತಿ:** ಸೂಸಕಂಗಳ ಮುರಿದ ಮುತ್ತಿನ ದೇಶಿಕಾತಿಯರಾನನೇಂದುಗಳಾ ಸುಧಾಕರವನಲುಗೆಲಿದುದು ಸಭೆ ನಭಸ್ಥಳವ (ಕುಮಾ.ಸ. ೧೩-೩೦). [ ದೇಸಿ + – ಕಾತಿ ]

**ದೇಸಿಗಾರ್ತಿ**, ದೇ ಸಿ ಕಾ ರ್ತಿ F, ದೇಸೆಕಾರ್ತಿ,ದೇಸೆಗಾರ್ತಿ (ನಾ). ಚೆಲುವೆ ; ಸುಂದರಿ ; ವಿಲಾಸವತಿ : ಮುನ್ನ ಬರ್ಪುದಕ್ಕೃವಡಿ ಬಣ್ಣವೇಱಿ ಕಳೆ ಧೂಸರಮಾದುದು ದೇಸಿಗಾರ್ತಿಯಾ (ವಿಕ್ರಮಾ. ೯೧). **ದೇಸಿಕಾರ್ತಿ** : ಮಿಸುಗುವ ದೋರೆವಲ್ ಕರಮೆ ವಾಸರ್ರವಾದುದು ದೇಸಿಕಾ [ಪಾಠಾಂ.ಸೆಗಾ]ರ್ತಿಯೊಳ್ (ಚಂದ್ರಪ್ರ. ೮-೩೦) : (ರಸರ. ೩-೧೩೭ ನೋ:) ಮತ್ತಮೊರ್ವ ದೇಸಿಕಾರ್ತಿ ದೇಸಿಗೆ ತಕ್ಕ ವೇಷವಳವಟ್ಟಿರೆ . . . ನೋಟಕರ ದಿಟ್ಟಿಗೆ ಮಧುರವಾಗೆ ಮೆಚ್ಚುನಟ್ಟೊತ್ತಿರ್ದಳ್ (ವಿಕ್ರಮಾ. ೯೦). **ದೇಸೆಕಾರ್ತಿ** : ಲಲಿತಾಂಗನಂ ಮನಂಗೊಳಿಸುವರಿಚ್ಛೆಕಾರ್ತನದ ಲಲ್ಲೆಯ ಸಗ್ಗದ ದೇಸೆ[ಪಾಠಾಂ. ಗಾಡಿ]ಕಾರ್ತಿಯರ್ (ಆದಿಪು. ೨-೬೧) ; ಪರಿಣತಿ ರಾಜಿಸುತ್ತುಮಿರೆ ನರ್ತಿಸಿದರ್ ಪೊಸ ದೇಸೆಕಾರ್ತಿಯರ್ (ಅಜಿಪು. ೫-೩೧) ; ಈಸು ಲಾವಣ್ಯವನುಳ್ಳ ಸರ್ವಾಂಗವಿಲಾಸದ ಪೊಸದೇಸೆ [ಪಾಠಾಂ. ಸಿ]ಕಾರ್ತಿ ಆಸೆ ಮಾಡಿದಳು ನಿನ್ನನು (ಶಬರಶಂ. ೨೫-೯೮). **ದೇಸೆಗಾರ್ತಿ** : ಮೇಲಿನ 'ಚಂದ್ರಪ್ರ' ಪ್ರಯೋಗದ ಪಾಠಾಂತರ ವನ್ನು ನೋಡಿ. [ ದೇಸಿಗಾಱ + – ಇ $_1$ (< – ಇತ್ತಿ) ]

**ದೇಸಿಗಾಱ**, ದೇಸಿಕಾಱ, ದೇಸೆಕಾಱ, ದೇಸೆಗಾಱ (ನಾ). ೧. ಚೆಲುವ ; ಸುಂದರ. ೨. ತನ್ನ ಕುಶಲಕಲೆಯಿಂದ ಸೌಂದರ್ಯವನ್ನುಂಟು ಮಾಡುವವನು ; ಕಲಾವಿದ: ಶಿಲ್ಪದ ದೇಸಿಗಾಱರ ಕೈಮೆಗಳು ಲೇಸೈಸಲೇ (ಕುಮಾ.ಸ. ೧೩-೨೪). **ದೇಸಿಕಾಱ**: ೧. ಉಸಿರಿನಿಯನೆ . . . ರಸಿಕ ಚೂಡಾಮಣಿ ಪೊಸದೇಸಿ [ಪಾಠಾಂ. ಸೆ] ಕಾಱನೆ ರಸಪೂರ ಜಾತಿ ಸತ್ಕಥೆಯ (ವರ್ಧಮ. ೭-೨). **ದೇಸೆಕಾಱ** : ೧. ಕಲಿಗಳಾದಿತ್ಯಂ ದೆಸೆಕಾಱರದಗಣ್ಣರೊ [ಳ್ಪ]ಳಿವಂ ಪಿಸುಣರ್ಗೆ ಮುಳಿವಂ ವಾದ್ಯವಿದ್ಯಾಧರಂ . . . ಸಮಸ್ತ ಪ್ರಶಸ್ತಿಸಹಿತಂ ಶ್ರೀಮನ್ಮಹಾಸಾಮಂತನೆಱೆಯಮ್ಮನಿರಲ್ (ಶಾಸಇ. XI-1, ೭೪-೧೨ ; 1041) ; ಗಣ್ಡಮಣ್ಡಳಿಕಗಣ್ಡ ತಳಪ್ರಹಾರಿ ದೆಸೆಕಾಱರ ದೇವ ಮೂಱುರಾಯರಾಸ್ಥಾನಕಱಿ ಬಿರುದರ ಗಂಡ ಶ್ರೀ[ಮ]ನ್ಮಹಾ ಮಣ್ಡಳೇಶ್ವರಂ ಕಾರ್ತವೀರ್ಯದೇವರಸರು (ಕಳ. V, ೨೦-೪೩ ; 1125) ; ದೇಸೆಕಾಱನಂ ನಿಶ್ಚಿಂತನಂ ಸಿದ್ಧರಾಮಯ್ಯನಂ ದೂರದಿಂ ಕಂಡಳು (ಸಿದ್ಧರಾ. ೭-೧). **ದೇಸೆಗಾಱ** ೧: 'ದೇಸೆಗಾರ್ತಿ' ಪರಾ.

[ ದೇಸಿ + – ಕಾಱ ]

**ದೇಸಿಗಾಱಿಕೆ** (ನಾ). ಬೆಡಗು ; ಠೀವಿ ; ಗತ್ತು : ಕಾಸೆವೆರಸಿ ಕಳದರಿ ನೀಂದದೊಂದು ವಿಲಾಸಕೆ ರಂಗದೊಳ್ನಿಂದ ದೇಸಿಗಾಱಿಕೆಯ ಸುಪಾತ್ರ ಮೋಹಿಸುವಂತೆ ಪೂಸರ ನಿಂದ ಮೋಹಿಸುತ (ಧರಣ. ೫೨-೩೪).

[ ದೇಸಿಗಾಱ + – ಇಕೆ ]

**ದೇಸಿಗಿತಿ**, ದೇಶಿಗಿತಿ, ದೇಶಿಗಿತ್ತಿ (ನಾ). ಅನಾಥೆಯಾದ ಹೆಂಗಸು ; ದಿಕ್ಕಿಲ್ಲದ ವಂಹಿಳೆ : ಸೆಱೆಸಿಕ್ಕಿಂ ಪಿಡಿತಂದ ದೇಸಿಗಿತಿಯಂ ಭೋಗೋಪ ಭೋಗಂಗಳಂ ಮಱೆದುಂ ಕಾಣದನಾಥೆಯಂ ನುಡಿವವೊಲ್ನಿನ್ನೊಂದು ಸಂಪತ್ತಿಯಂ ಜಱಚುತ್ತಿರ್ದವೆ (ಅನಂಪು. ೧೧-೯೦) ; ಸ್ವರಲೋಪಕ್ಕೆ– ಘಟ್ಟವಳ್ತಿ . . . ದೇಸಿಗಿತಿ (ಶಮದ. ೨೦೯ ಪ್ರಯೋ) ; ಆಸೆಗೊಡುವವ ರಿಲ್ಲವಕಟಾ ದೇಸಿ[ಪಾಠಾಂ. ಶ, ಶಿ]ಗಿತಿ ತಾನಾಹನೇ ನೆಱೆ ದೋಷವಿಲ್ಲವೆ ನಿಮಗೆ ಕಂದನ ಕೊಂದವರು . . . ಎಂದಬಲೆ ಮೊಱೆಯಿಟ್ಟಳು ಭಟಾ ವಳಿಗೆ (ತೊರವೆ. ೬-೯೫-೨೪) ; ದೇಸಿಗಿತಿಯನು ಕಂಡು ಮಾಯಾಪಾಶಕಿದು ಘನವಲ್ಲೆನುತ ಬೆಸಗೊಂಡನಾ ಸತಿಯ (ಸಿಭಾಗ. ೮-೧೩-೨೭). **ದೇಶಿಗಿತಿ** : ಮೇಲಿನ 'ತೊರವೆ' ಪ್ರಯೋಗದ ಪಾಠಾಂತರವನ್ನು ನೋಡಿ. **ದೇಶಿಗಿತ್ತಿ** : ದೇಶಿಗಿತ್ತಿಯರನು ಕೊಲಲೊಂದು ಸಿಂಗ ಬಂದಾಸೆವಟ್ಟದೆ ನೋಡಿಮನಲು (ಅಂಜಿಚ. ೧೦-೨೫) ; ದೇಶಿಗಿತ್ತಿಯು ನುಡಿವಂತೆ . . . ಎನ್ನ ಘಾಸೆ ಮಾಡುವರೆನಿಸಿತಾಗ (ಅನಂಚ. ೧೮-೦೧೩).

[ ದೇಸಿಗ + – ಇತಿ $_1$ (< – ಇತ್ತಿ) ]

**ದೇಸಿಪರಿ** (ನಾ). ದೇಸಿಯ ರೀತಿ ; ಸೊಬಗು: ಹೊಳೆಹೊಳೆವ ಕಂಜೆಡೆಯ ನಹಿಪತಿಯಳುಕೆ ಬಿಗಿವನು ದಂತಿಚರ್ಮವ ನೆಲಕೆ ಮುಂಜಿಱಿಗೆಳೆಯಲುಟ್ಟನು ದೇಸಿಪರಿ ಮೆಱೆಯೆ (ಕುಮಾ.ಕ. ೭-೧೧). [ ದೇಸಿ + ಪರಿ $_3$ ]

**ದೇಸಿಯಗಣ** (ನಾ). = ದೇಸಿಗಗಣ : ಶ್ರೀಮೂಲಸಂಗ ದೇಸಿಯಗಣ ಪುಸ್ತಕಗಛ ಕೊಂಡಕುಂದಾನ್ವಯ ಇಂಗುಳೇಸ್ವರದ ಬಳಿಯ . . . ಪ್ರಭಾಚಂದ್ರದೇವರ ನಿಸಿಧಿ (ಎಕ. I (R), ೫೯-೧ ; 1044) ; ಸ್ವಸ್ತಿಶ್ರೀ ಮೂಲಸಂಘ ದೇಸಿಯಗಣ ಪುಸ್ತಕಗಚ್ಛ ಕೊಂಡಕುಂದಾನ್ವಯದ ತಾತಂಗಿಯ ಶ್ರೀಮಾಘಣಂದಿ ಭಟ್ಟಾರಕ ದೇ × × ಶಾಂತಿನಾಥದೇವರ ಪ್ರತಿಷ್ಠೆಯ ಮಾಡಿದರು (ಎಕ. I (R), ೯-೧ ; ಸು. 12ನೆಯ ಶತ).

[ <ದೇಸೀಯ + ಗಣ ]

**ದೇಸಿವಡೆ**, ದೇಸೆವಡೆ (ಕ್ರಿ). ೧. ಚೆಲುವನ್ನು ಹೊಂದು ; ಸೌಂದರ್ಯ ವನ್ನು ಹೊಂದು ; ಶೋಭಿಸು ; ಬೆಡಗನ್ನು ಪಡೆ : ಕಡುಚೆಲ್ವಿಂ ರತಿಗೆಗ್ಗಂ ಪಡೆದು ವಿಲಾಸಕ್ಕೆ ದೇಸಿವಡೆದವನಿಪನೊಳ್ ಪಡೆದು ಪಿರಿಯರು ತನವುಂ (ಶಂರಾಮಾ. ೨-೬೨) ; ಕೆಂಜೆಡೆಗಳ ಗೊಂಚಲ್ಗಳಿಂ ದೇಸಿವಡೆದುಟ್ಟ ವ್ಯಾಘ್ರಚರ್ಮಾಂಚಲದೊಳ್ಕದ . . . ಸಾಲೋಕ್ಯಸಾಮಿಪ್ಯದವರಸೆ ದಿರ್ದರು (ಚಂಪು. ೨-೨೫) ; ತರುಣಹರಿಣಗಣಕ್ಕೆ ಸರಸೇಕ್ಷಣದ ಸವಿನೋಟ ಮನುಪದೇಶಿಪಂತೆ ದೇಸಿ[ಪಾಠಾಂ. ದೆಸೆ]ವಡೆದು (ರಾಜಶೇ. ೧-೧೩೫ ವ). **ದೇಸೆವಡೆ**: ೧: ದೇಸೆವಡೆದತ್ತು ರತ್ನಶಿಲಾಸೋಪಾನದಿಂ . . . ಕಾಸಾರಂ (ಆಗವಿ. ೧೦-೬೨) ; ನುಣ್ಪೆಳಗನುಗುಳ್ವ ಪದತಳದ ಸೌಂದರಿಯದಿಂ ದೇಸೆವಡೆದ ಹದಿನಾಱಱ ಹರೆಯದ ಹರಂ ಕರುಣಿಸಿ ನಡೆತಂದು (ಬಸರ. ೧೨-೧೦೦). ೨. ಹಿರಿಮೆಯನ್ನು ಹೊಂದು ; ದೊಡ್ಡಸ್ತಿಕೆಯನ್ನು ಪಡೆ : ದೇವಾ ನಿಮ್ಮ ಪೂಜಿಸಿ ದಾಸನ ಕುಲ ದೇಸೆ [ಪಾಠಾಂ. ಸಿ] ವಡೆಯಿತ್ತು (ಬಸವ. ೬೦೭).

[ ದೇಸಿ + ವಡೆ $_1$ ]

**ದೇಸಿವೆಱು**, ದೇಸೆವೆಱು (ಕ್ರಿ). ಚೆಲುವನ್ನು ಪಡೆ ; ಶೋಭೆಯನ್ನು ಹೊಂದು ; ಶೋಭಿಸು : ರಸ ಭಾವಂ ಗಮಕಂ ಕಾಣಿಸೆ ನಾಣ್ಣುಡಿ ದೇಸಿವೆತ್ತ ಪೊಸನುಡಿ ಮಾರ್ಗಂ . . . ಇನಿತಱೊಳೆಸೆಯದ ಕೃತಿ ಕೃತಿಯೆ (ರಘುಮ್ಮ. ೧-೪೦) ; ಅಂಬರವಿತಾನದಿಂ ನರರ ಬರಿಸುತ್ತೊಪ್ಪಿದರಲ್ಲಿ ದೂಸಿಗರ್ದೇಸಿವೆತ್ತು (ಶಬ್ದರಾ. ೮-೭೭) ; ಕಿಱುಗಿವಿ ದೇಸಿವೆತ್ತಸಿಮೊಗಂ . . . ಸೂಕ್ಷ್ಮರೋಮದಿಂ ಮೆಱೆದುವು ಸಂಗರಾಂಗಣದೊಳಪ್ರತಿವೀರನ ವಾಜಿರಾಜಿಗಳ್ (ಅಪ್ರತಿ. ೧೩೩-೭) ; ಮುರಿದೆಳವಿಸಾಸೆ . . . ಎಡಗಾಲ ತೊಡರ್ವಿರಾಜಿಸುತ್ತಿರೆ ಪೊಸದೇಸಿವೆತ್ತಸೆದುದಲ್ಲಿ ನರೇಂದ್ರಕುಮಾರಸಂಕುಳಂ (ರಾಜಶೇ. ೧೨-೪೫). **ದೇಸೆವೆಱು** : ನವರಸಮುಣ್ಕೆ ಮಾತು ಪೊಸತಾಗಿರೆ ದೇಶಿಯ ದೇಸೆವೆತ್ತುದೆಂಬವೊಲಿರೆ . . . ಒಡರ್ಚಿದೆನೀ ಪ್ರಬಂಧಮು (ಧಂದಶೋಬು. ೧-೧೧) ; ಬಾಸೆ ದೇಸೆವೆತ್ತುದು ವಳಿರೇಖೆ ಮಸುಳ್ದು ತೋಱಿದುವು (ಸುಕುಮಾ. ೧೦-೧೯) ; ದೇಸೆವೆತ್ತುವು ಕಮಳಭವಂಗಿಕ್ಕು ವಮಳ ಚಮರರುಹಂಗಳ್ (ಆಗವಿ. ೧-೩೪). [ ದೇಸಿ + ಪೆಱು $_1$ ]

**ದೇಸಿಸೆಟ್ಟಿ** (ನಾ). ವರ್ತಕರ ಒಂದು ಪಂಗಡ : ಸಾಸನಿಸೆಟ್ಟಿ, ದೇಸಿಸೆಟ್ಟಿ ಮುಮಮಿರಿದಂಡಂ ರಪ ಮುಖ್ಯವಾಗಿ ಆ ಮಹಾಜನಂಗಳ ಸಂನಿಧಾನದಲು (ಕಕಲ. ४-೧೯ ; ?). [ ದೇಸಿ + ಸೆಟ್ಟಿ ]

**ದೇಸೀಯ** (ನಾ). ದೇಶಕ್ಕೆ ಸಂಬಂಧಿಸಿದುದು ; ದೇಶ್ಯ : "ಕಾಕಂದೆನೆ ದೇಸೀಯಂ" (ಶವಿಳಂ. ೨೪೭). [ < ಸಂ. ದೇಶೀಯ ]

**ದೇಸುಕ್ಕೆ** (ನಾ). ಒಂದು ಉದ್ಯೋಗ (?): ಹೂವಿನ ಹಡಂಗಿಲೆಯ ಚಲ್ಲಿಯ ಕೇರಿಯಲ್ಲಿ ವರಮಾಳಿಗೆಮನೆ ಸರ್ವ್ವಮಂ ದೇಸುಕ್ಕೆ ಎಳುವೂರೊಡೆಗೆಱೆಯ ಕೆಳಗಣ ತೋಂಟಾ (ಶಾಸಇ. IX-1, ೨೫೪-೭೭ ; 1148). [ ? ]

**ದೇಸೆ** 'ದೇಸಿ' ನೋ.

**ದೇಸೆಕಾರ್ತಿ** 'ದೇಸಿಗಾರ್ತಿ' ನೋ.

**ದೇಸೆಗಾರ್ತಿ** 'ದೇಸಿಗಾರ್ತಿ' ನೋ.

**ದೇಸೆಗಾಱ** 'ದೇಸಿಗಾಱ' ನೋ.

**ದೇಸೆಯಿಱು** (ಕ್ರಿ). ಬೆಡಗನ್ನು ತಿಳಿ; ಅಂದವನ್ನು ತಿಳಿ: ಭಾಸಿಪ ಬಹುರತ್ನವಿಭೂಷಣದಿಂ ದೇಸೆಯಿಱಿದು ಸಿಂಗರಿಸಿದ ಬಳಿಕ (ಜಯಿಕಾ. ೩-೨೪). [ದೇಸೆ (<ದೇಸಿ) + ಇಱು]

**ದೇಸೆವಡೆ** 'ದೇಸಿವಡೆ' ನೋ.

**ದೇಸೆವೆಱು** 'ದೇಸಿವೆಱು' ನೋ.

**ದೇಹ** (ನಾ). ಮೈ; ಶರೀರ; ಅಂಗ: "ಕಾಯಂ ಸಂಹನನಂ ದೇಹಂ ವಪುಯೆಂದಿನಿತುಂ ಭಾವಿಸುವೊಡಂಗಪರ್ಯಾಯಂಗಳ್" (ವಸ್ತುಕೋ. ೬೭-೧); ದೇಹಕ್ಕಶುಚಿತ್ವಂ . . . ಅಶುದ್ಧಾಹಾರಪ್ರದ್ವಮಧುಕೀಟಾಹತ ಮತಿದುಸ್ತರಾಮಯಂ ಧಾತುಮಯಂ (ಮಲ್ಲಿಪು. ೧೪-೬೯); ಎಡದ ಕೈಯಲಿ ನಿಗಳವನಿಕ್ಕಿ ಬಲದ ಕೈಯ ಕಡಿದುಕೊಂಡರೆ ನೋಯದಿಪ್ಪುದೆ ಪ್ರಾಣ ವೊಂದಾಗಿ ದೇಹ ಬೇಱಿಲ್ಲ (ಬಸವ. ४೦೩); ದೇಹಕ್ಕನುಗುಣವಾಗಿರ ಬಾಹುಕನೆಂಬಧಮನಾಮಮಂ ತಳೆದಂ (ನಳಕಂ. ೬೪೭); ದೇಹ ತಾನಭಿಮನ್ನುವೋ ದಿಟ ದೇಹಿ ತಾನಭಿಮನ್ನುವೋ ಜಡದೇಹ ತಾನಭಿಮನ್ಯು ವಲ್ಲದು ಕೆಟ್ಟರೇನಾಯ್ತು (ಕುಮಾರವ್ಯಾ. ೬-೨೭); ದೇಹವೆಂತೆನೆ–ದೇಹವು ಕೃಶ, ಸ್ಥೂಲ, ಮಧ್ಯಮವೆಂದು ಮೂರು ತೆರನಾಗಿರುವುದು (ಸಕವೈ. ೧೯)·

ದೇಹ ಮಾರು = ಪರಪುರುಷನಿಗೆ ಶರೀರವನ್ನು ಒಪ್ಪಿಸು; ಅನೈತಿಕ ಸಂಬಂಧವನ್ನು ಬೆಳೆಸು; ವೇಶ್ಯಾವೃತ್ತಿಯನ್ನು ನಡೆಸು: ಶೀಲ ಚೆಲುವೆಯಿರಬಹುದು. ಗುಣವತಿಯಿರಬಹುದು. ಆದರೆ ಅವಳ ತಾಯಿ ನಾಲ್ಕು ಜನಕ್ಕೆ ದೇಹಮಾರಿದಳೆಂದರೆ ಗೌರವವುನೆತನದ ಹುಡುಗ ಒಪ್ಪುತ್ತಾನೆಯೇ? (ಹೂಹಂ. ೬೪). [ಸಂ.]

**ದೇಹಗುಣ** (ನಾ). ಶರೀರದ ಗುಣ; ಶರೀರಧರ್ಮ: ದೇಹಗುಣಗಳೆಲ್ಲದು ಲಿಂಗದೇಹಿಯಾದ ಶರಣನು ಬಾಹಿರಂಗದ ಬಳಿಕ ಮಾಯಾ ಮೋಹವನ್ನು ಜಱಿದನು (ಅವಕಂ. ३೫೧-೧೩೦೩). [ದೇಹ + ಗುಣ]

**ದೇಹಜ** (ಗು). ೧. ದೇಹದಲ್ಲಿ ಹುಟ್ಟಿದ; ಶರೀರದಲ್ಲಿ ಉಂಟಾದ. (ನಾ). ೨. ಅಂಗಜ; ಕಾಮ; ಮನ್ಮಥ: ದೇಹಜ ತನಗೆ ಮಾರ್ಮಲೆವ ತಾಪಸರೆಂಬ ವಿಹಂಗಮಗಳ ತಲೆಯನು (ಜ್ಞಾನಸಿ. ३-೧३). [ಸಂ.]

**ದೇಹಝಾಡೆ** (ನಾ). ಹಳ್ಳಿಯ ಮನೆಗಳ ಮತ್ತು ಜಾನುವಾರುಗಳ ಗಣತಿ: (ಕಿಸಂಗ್ರ. ೧೯೬). [←ಮರಾ. ದೇಹಝಾಡಾ, ದೇಹೇಝಾಡಾ]

**ದೇಹತೆ** (ನಾ). ದೇಹದ ಭಾವ,–ಧರ್ಮ; ದೇಹತನ; ದೇಹತ್ವ: ಭಕ್ತಿಯುಕ್ತಿಯನಧಿಕಭಯಮಂ ಭಕ್ತದೇಹಿಕ ದೇಹತೆಯುಮಂ [ಪಾಠಾಂ. ದೇವತನಂಮ] ವ್ಯಕ್ತಮಾಗಲು ನಂಬಿಯಣ್ಣಂಗಱುಹಬೇಕೆಂದು (ಬಸಪು. ३೬-२४). [ಸಂ. ದೇಹತಾ]

**ದೇಹತ್ಯಾಗ** (ನಾ). ದೇಹವನ್ನು ಬಿಡುವುದು; ಸಾವು; ಮರಣ: ದೇಹಗತ ಆತ್ಮಕ್ಕೆ ಜೀರ್ಣದೇಹತ್ಯಾಗವೂ ನವ್ಯದೇಹಲಾಭವೂ ಸಹಜ (ಭಾರದ. ೧೧४). [ದೇಹ + ತ್ಯಾಗ]

**ದೇಹತ್ರಯ** (ನಾ). [ವೇದಾಂತ] ಸ್ಥೂಲ, ಸೂಕ್ಷ್ಮ, ಕಾರಣಗಳೆಂಬ ಮೂರು ಶರೀರಗಳು; ೧. ಸ್ಥೂಲಶರೀರ: ಪಂಚಭೂತಗಳಿಂದ ಆಗಿರುವ ಶರೀರ. ೨. ಸೂಕ್ಷ್ಮ ಶರೀರ: ಸ್ಥೂಲಶರೀರದ ಒಳಗಡೆ ಪಂಚಪ್ರಾಣಗಳೂ ದಶೇಂದ್ರಿಯಂಗಳೂ ಮನಸ್ಸೂ ಬುದ್ಧಿಯೂ ಪಂಚತನ್ಮಾತ್ರೆಗಳೂ ಕೂಡಿರುವ ಶರೀರ. ಇದಕ್ಕೆ ಲಿಂಗಶರೀರವೆಂದೂ ಹೆಸರು. ಇದು ಮರಣಾವಸ್ಥೆಯಲ್ಲಿ ಸ್ಥೂಲಶರೀರವನ್ನು ಬಿಟ್ಟು ಹೋಗಿ ಪುಣ್ಯಪಾಪಫಲಗಳನ್ನು ಅನುಭವಿಸಲು ಬೇರೊಂದು ಸ್ಥೂಲಶರೀರವನ್ನು ಸೇರಿಕೊಳ್ಳುತ್ತದೆ. ಇದು ಮೋಕ್ಷವಾಗುವವರೆಗೂ ಇರುತ್ತದೆ. ३. ಕಾರಣಶರೀರ: ಇದು ನಿದ್ರೆಯಲ್ಲಿ ಜೀವನಿಗೆ ಆಶ್ರಯವಾಗಿರುವ ಅವ್ಯಕ್ತ ಎಂಬ ಹೆಸರುಳ್ಳ ಅನಾದಿಯಾದ ಮಾಯೆ. ಇದು ಸುಷುಪ್ತಿಯಿಂದ ಅಭಿವ್ಯಕ್ತವಾಗುತ್ತದೆ. ನಿದ್ರಾವಸ್ಥೆಯಲ್ಲಿ ಬುದ್ಧಿಯ ವ್ಯಾಪಾರವೆಲ್ಲ ಈ ಮಾಯೆಯಲ್ಲಿ ಅಡಗಿರುತ್ತದೆ. ಜೀವನು ನಿದ್ರೆಯಲ್ಲಿ ಅಲ್ಲಿದ್ದುಕೊಂಡು ಸುಖವನ್ನು ಅನುಭವಿಸುತ್ತಾನೆ. ಇದು ಅದ್ವೈತದ ಪ್ರಕ್ರಿಯೆ: ಗುರುವು ಸ್ಥೂಲ, ಸೂಕ್ಷ್ಮ, ಕಾರಣಗಳೆಂಬ ದೇಹತ್ರಯಗಳಲ್ಲಿರುವ ಆಣವ, ಮಾಯಾ, ಕಾರ್ಮಿಕಗಳೆಂಬ ಮಲತ್ರಯಗಳನ್ನು . . . ಸುಟ್ಟು (ಅಷ್ಟಾವ. ೧); ದೇಹತ್ರಯದ ಸ್ಮೃತಿಯು ತಪ್ಪಿ ದೇವಾ ನೀನೆ ಗತಿಯು ಎಂದು (ಶರೀಶ. ೧೭-೧). [ದೇಹ + ತ್ರಯ]

**ದೇಹದಂಡಣೆ** (ನಾ). = ದೇಹದಂಡನೆ: ದೇಹದಂಡಣೆಯೇಕೆ ಆಯಾಸ ಗೊಳಲೇಕೆ ಮಾಯಾರಿ ಶಿವನ ನಿಜಸುಖದೊಳೊಡವೆರೆದ ಕಾಯುವೆ ಶಿವನ ನಿಜರೂಪ (ಗುರುಬೋ. ३-४४). [ದೇಹ + ದಂಡಣೆ]

**ದೇಹದಂಡನೆ** (ನಾ). ತಪಸ್ಸು, ವ್ರತ, ಉಪವಾಸ, ವ್ಯಾಯಾಮ ಮುಂತಾದ ಕಾರಣಗಳಿಂದಾಗಿ ಶರೀರಕ್ಕೆ ಮಾಡಿಕೊಳ್ಳುವ ಕ್ಲೇಶ,–ಶಿಕ್ಷೆ; ಕಾಯಕ್ಲೇಶ: "ತಪಃ–ದೇಹದಂಡನೆ" (ಕಾಶಕ್ಕ. ३४). [ದೇಹ + ದಂಡನೆ]

**ದೇಹದಾರ್ಢ್ಯ** (ನಾ). ದೇಹದ ಶಕ್ತಿ; ಶರೀರದ ಬಲ: ದೇಹದಾರ್ಢ್ಯವೂ ಸಾಕಷ್ಟಿದ್ದಿತು (ಬಂಗಬ. ೧೯४). [ದೇಹ + ದಾರ್ಢ್ಯ]

**ದೇಹದೀಪ್ತಿ** (ನಾ). ಶರೀರದ ಕಾಂತಿ,–ಶೋಭೆ: ಹಾರ ಮರೀಚಿಯಂ ಮರಕತಚ್ಛವಿಯಂ ಗೆಲೆ ದೇಹದೀಪ್ತಿ . . . ಬಲಾಚ್ಯುತರದೇನೆಸೆದಿರ್ದರೊ ರಾಮಲಕ್ಷ್ಮಣರ್ (ಹಂಚಾಮಾ. ३-೧३४). [ದೇಹ + ದೀಪ್ತಿ]

**ದೇಹಧರ್ಮ** (ನಾ). ೧. ದೇಹದ ಸ್ವಭಾವ,–ಪ್ರಕೃತಿ. ೨. ಶರೀರದಲ್ಲಿ ತನ್ನಷ್ಟಕ್ಕೆ ನಡೆಯುತ್ತಿರುವ ಶ್ವಾಸೋಚ್ಛ್ವಾಸಾದಿ ಕಾರ್ಯ; ಶರೀರ ವ್ಯಾಪಾರ: ದೇಹಧರ್ಮ ತನ್ನ ಅದಂತೆ ಆಗಲಿ ಕೂಡಲಸಂಗನ ಪೂಜಿಸಿದಲ್ಲದೆ ನಿಲಲಾಱೆನು (ಬಸವ. ४४३); ದೇಹಧರ್ಮವೆಂದರೆ ದೇಹದಲ್ಲಿ ತಾನಾಗಿ ನಡೆಯುತ್ತಿರುವ ಪ್ರಾಕೃತಿಕ ಕಾರ್ಯಗಳು (ಆರ್ಯಧ. ೧೧). [ದೇಹ + ಧರ್ಮ]

**ದೇಹಧಾರಣ** (ನಾ). ಶರೀರವನ್ನು ಧರಿಸುವುದು; ಬದುಕಿರುವುದು: ಜೀವನು ತನ್ನ ಕರ್ಮಾನುಸಾರವಾಗಿ ದೇಹಧಾರಣ ಮಾಡುತ್ತಾನೆ (ರೂಢಿ). [ದೇಹ + ಧಾರಣ]

**ದೇಹಧಾರಿ** (ಗು). ೧. ದೇಹವನ್ನು ಹೊಂದಿರುವ; ಶರೀರವನ್ನು ಪಡೆದಿರುವ. (ನಾ). ೨. ದೇಹವನ್ನು ಹೊಂದಿರುವ ಜೀವ; ಬದುಕಿರುವ ವ್ಯಕ್ತಿ. 'ಚರಮದೇಹಧಾರಿ' ಪರಾ. [ಸಂ. ದೇಹಧಾರಿನ್]

**ದೇಹನಿಸ್ಪೃಹ** (ನಾ). ಶರೀರಾಭಿಮಾನವನ್ನು ತೊರೆದವನು; ವಿರಕ್ತ: ಸುಸಮಾಧಿಯೋಗದಲ್ಲಿದು ನಿಜವನು ದೇಹನಿಸ್ಪೃಹನಾಗು ನೀನೆಂದ (ಕುಮಾರವ್ಯಾ. ೧೮-३४). [ದೇಹ + ನಿಸ್ಪೃಹ]

**ದೇಹನ್ಯಾಸ** (ನಾ). ಜಪ, ಪಾರಾಯಣ ಮೊದಲಾದ ಕಾಲದಲ್ಲಿ ವಿಧ್ಯುಕ್ತವಾದ ರೀತಿಯಲ್ಲಿ ಹೃದಯವೇ ಮೊದಲಾದ ದೇಹಭಾಗಗಳನ್ನು ಮುಟ್ಟಿಕೊಳ್ಳುವುದು: ನಿರುತ ಸತ್ಯಾಣಯಾಮವ ತೀರ್ಥಕರ ದೇಹನ್ಯಾಸಂಗಳರ ಪೂರಿಸಿ (ನವಮೋ. ३-४३). 'ಅಂಗನ್ಯಾಸ', 'ಕರನ್ಯಾಸ' ಪರಾ. [ದೇಹ + ನ್ಯಾಸ]

**ದೇಹಪುಷ್ಟಿ** (ನಾ). ಶರೀರವು ಪುಷ್ಟವಾಗುವುದು,–ದೃಢವಾಗುವುದು: ರಸ, ಗಂಧಕ . . . ಕಿರುಮೂಲಕ. ಇವ ಚೂರ್ಣಮಾಡಿ ಕೊಳ್ಳುವುದು. ದೀಪನ ಹುಟ್ಟುವುದು, ದೇಹಪುಷ್ಟಿಯಹುದು (ವಿವೈವಿ. ೧೭೦). [ದೇಹ + ಪುಷ್ಟಿ]

**ದೇಹಪ್ರಕೃತಿ** (ನಾ). ಶರೀರದ ಸ್ವಭಾವ ; ನೈಜವಾದ ಮೈಗುಣ : ದೇಹಪ್ರಕೃತಿಯ (Constitutional) ರೋಗಲಕ್ಷಣಗಳು (Symptoms) ಉಗ್ರವಾಗುತ್ತವೆ (ಕಲರೋ. ೧೭) ; ನನ್ನ ದೇಹಪ್ರಕೃತಿಗೆ ಅದು ಒಗ್ಗುವುದಿಲ್ಲ (ಶರ್ಮಸ. ೨೫೫). [ ದೇಹ + ಪ್ರಕೃತಿ ].

**ದೇಹಬಾಧೆ** (ನಾ). ೧. ಶರೀರಕ್ಕೆ ಒದಗುವ ತೊಂದರೆ. ೨. ಮಲಮೂತ್ರ ವಿಸರ್ಜನೆ: ಕತ್ತಲೆಯಲ್ಲಿ ಕಾಣದಾದನು. ದೇಹಬಾಧೆಗೆ ಅವಸರವಾಗಿರಬೇಕು (ಮಲೆಮ. ೬೩೪). [ ದೇಹ + ಬಾಧೆ ]

**ದೇಹಬಿಡು** (ಕ್ರಿ). (ಜೀವಾತ್ಮನು) ಶರೀರವನ್ನು ತ್ಯಜಿಸು ; ಸಾಯು ; ಮರಣಹೊಂದು: ನನಗೆ ದೇಹಬಿಡಲು ಅಪ್ಪಣೆ ಕೊಡು ; ನೀನು ಅನುಜ್ಞೆ ಕೊಟ್ಟರೆ ನನಗೆ ಸದ್ಗತಿ ಲಭಿಸುತ್ತದೆ (ಪಕಥಾ. ೩೫೪).
[ ದೇಹ + ಬಿಡು$_1$ ]

**ದೇಹಭಾನ** (ನಾ). ಮೈ ಮೇಲಿನ ಎಚ್ಚರ,–ಪರಿವೆ,–ಪ್ರಜ್ಞೆ: ಮಾತುಂಗಾ ದೇಹಭಾನವಿಲ್ಲದೆ ಎದೆಯನ್ನು ಗಟ್ಟಿಯಾಗಿ ಗುದ್ದಿಕೊಂಡಳು (ವಾಸನಾ. ೧೨೧); ದೇಹಭಾನವನ್ನು ಮರೆತು ಸುಶೀಲೆಯ ಜೀವ ಅಲೆಯುತ್ತಿತ್ತು (ಸಮಜೀ. ೬೨೩). [ ದೇಹ + ಭಾನ ]

**ದೇಹಭಾನಗೊಳ್ಳು** (ಕ್ರಿ). ಮೈಮೇಲಿನ ಪ್ರಜ್ಞೆಯನ್ನು ಪಡೆ; ಮೂರ್ಛೆ ತಿಳಿ : ತಾಯಿಯ ದರ್ಶನವಾಗುತ್ತಲೆ ಹೊಸ ದೇಹಭಾನಗೊಂಡು ತಾವು ಮನೆಗೆ ಬಂದೆನೆಂದು ತಿಳಿದುಕೊಂಡಳು (ಹಂಸಾ. ೮).
[ ದೇಹಭಾನ + ಕೊಳ್ಳು$_1$ (<ಕೊಳ್$_1$) ]

**ದೇಹಭಾವ** (ನಾ). ಶರೀರದ ಸ್ವಭಾವ ; ಶರೀರಧರ್ಮ : ದೇಹಭಾವವಳಿದಲ್ಲದೆ ಜೀವಭಾವವಳಿಯದು ಜೀವಭಾವವಳಿದಲ್ಲದೆ ಭಕ್ತಿಭಾವವಳವಡದು (ಅವಹಂ. ೨೭೩-೧೨೩೭). [ ದೇಹ + ಭಾವ$_2$ ]

**ದೇಹಮಬ್ಬು** (ನಾ). ಮೈಮೇಲೆ ಕಪ್ಪುಬಣ್ಣ ಹರಡುವ ಒಂದು ಬಗೆಯ ಚರ್ಮರೋಗ: ದೇಹಮಬ್ಬುವರ್ಧನಕ್ಕೆ :–ಶುಂಠಿ ಪಲ ೧ ತಾಳೀಬೆಲ್ಲ ಪಲ ೩, ಸಮುದ್ರಪಾಳಬೀಜ ಪಲ ೧, ಈ ಮೂರನ್ನೂ ಮರ್ದಿಸಿ ಎಲಚಿಹಣ್ಣಿನ ಪ್ರಮಾಣ ಗುಳಿಗೆಯ ಕೊಡಲು ಕರ ಉಷ ಮಾಸಿ ಸಾಯಂಕಾಲದಲ್ಲಿ ಗುಣ (ವಿಶ್ವವಿ. ೦೦೭).
[ ದೇಹ + ಮಬ್ಬು (<ಮರ್ವು) ]

**ದೇಹಮುಕ್ತ** (ನಾ). ದೇಹದಿಂದ ಬಿಡುಗಡೆ ಹೊಂದಿದವನು ; ಸತ್ತು ಹೋದವನು ; ಮೃತ : ಎರೆಯಂಗರು ದೇಹಮುಕ್ತರಾದರು (ಶಾಂತಲಾ. ೧೮). [ ದೇಹ + ಮುಕ್ತ ]

**ದೇಹಮೋಹ** (ನಾ). ಶರೀರದ ಮೇಲಿನ ಮಮತೆ ; ಬದುಕಬೇಕೆಂಬ ಇಚ್ಛೆ : ತಂದೆಯಳಿದಾ ಹೊತ್ತು ಹಗೆಯನು ಕೊಂದು ಸಾಯದೆ ದೇಹ ಮೋಹಕೆ ನಿಂದು ನೀ ನಿಶ್ಶಂಕನಾದೈ ವೈರಿಶರಹತಿಗೆ (ಕುವ್ಯಾಭ. ೩-೨೮).
[ ದೇಹ + ಮೋಹ ]

**ದೇಹಯಾತ್ರೆ** (ನಾ). ದೇಹವನ್ನು ಪೋಷಿಸಿಕೊಂಡು ಹೋಗುವಿಕೆ ; ಜೀವನವನ್ನು ಸಾಗಿಸುವಿಕೆ : ಪೋಲೀಸಿನವರಿಗೆ ಗೂಢಚಾರನಾಗಿದ್ದು ಕೊಂಡು ದೇಹಯಾತ್ರೆಯನ್ನು ನೆರವೇರಿಸಿಕೊಳ್ಳುತ್ತಿರುವ . ಆ ಹರೇರಾಮನೇ ? (ಬಿಶಾಪ. ೧೫). [ ದೇಹ + ಯಾತ್ರೆ ]

**ದೇಹರ** 'ದೇವಾರ' ನೋ.

**ದೇಹರುಚಿ** (ನಾ). = ದೇಹದೀಪ್ತಿ : ಕನಕಚ್ಛಾಯೆಯನಾಳ್ದ ದೇಹರುಚಿ ಚೆಲ್ವಂ ಬೀಱೆ (ಪುಷ್ಪಪು. ೦-೧೧). [ ದೇಹ + ರುಚಿ ]

**ದೇಹಲಬ್ಧಾಂಗುಲ, ದೇಹಲಬ್ಧಾಂಗುಳ** (ನಾ). [ಶಿಲ್ಪಶಾ] ದೇವತಾ ಪ್ರತಿಮೆಗಳನ್ನು ಕಡೆಯುವಾಗ ದೇಹದ ಪ್ರಮಾಣವನ್ನು ನಿರ್ಣಯಿಸುವ ಒಂದು ಅಳತೆ : ಮಾನಾಂಗುಲ, ಮಾತ್ರಾಂಗುಲ, ದೇಹಲಬ್ಧಾಂಗುಲವೆಂಬ ಅಳತೆಗಳಿಂದ ಪಂಚತಾಲ, ನವತಾಲಾದಿ ವಿವೇಚನೆಯಿಂದ ಮೂರ್ತಿಗಳನ್ನು ರಚಿಸುವ ವಿಧಾನಗಳನ್ನೂ...ಶಿಲ್ಪಶಾಸ್ತ್ರ ಮತ್ತು ಆಗಮಶಾಸ್ತ್ರಗಳು ತಿಳಿಸುತ್ತವೆ (ಭಾರದ. ೬೦). **ದೇಹಲಬ್ಧಾಂಗುಳ :** ಪ್ರತಿಮೆಯ . . . ಒಂದೊಂದವಯವಕ್ಕೆಷ್ಟು ಭಾಗವೆಂದು ವಿಭಾಗಿಸುವದೇ ದೇಹಲಬ್ಧಾಂಗುಳವಕ್ಕುಂ (ವಿವೇಕ. ೩೦೦).
[ ದೇಹ + ಲಬ್ಧ + ಅಂಗುಲ ]

**ದೇಹಲಬ್ಧಾಂಗುಳ** 'ದೇಹಲಬ್ಧಾಂಗುಲ' ನೋ.

**ದೇಹಲಿ, ದೇಹಳಿ** (ನಾ). ೧. ಹೊಸತಿಲು ; ಹೊಸ್ತಿಲು. ೨. ಬಾಗಿಲ ಮುಂದಿನ ಜಗಲಿ : (೬). **ದೇಹಳಿ :** ೧. "ದೇಹಳಿಯದೊಗೆದ ಹೊಸತಿಲೆನಿಕ್ಕುಂ" (ಮಂಗರಾ. ೫೮-೧೨) ; "ನೆಱೆ ದೇಹಳಿಯ ಪೊಸಂತಿಲ್" (ಶಬ್ದಶ್ಮ. ೪೭) : "ಹೊಸ್ತಿಲೊಳು ದೇಹಳಿಯೆನಿಕ್ಕು" (ಕಶರ. ೫೨); ಎಳಶರಧಿಪಟ್ಟೋರೆ ಪಶರದಿಕ್ಕು ದೇಹಳಿ ನೆರೆದ ಜನವೇ ಚಿತ್ರದಿರವಜಾಂಡವೆ ಚೆಂಡು ಸುಪತರು ನಿಂಬಭೂಜವಾಗಲದೇ ವಿರತಿ (ಕೃವಲ್ಮ. ೨-೨೦-೧) ; ಪಕ್ಕಂಗಳಂ ನೋಡಿ ಗೇ[ದೇ]ಹಳಿಯು ಸಾರ್ದರದರ್ಕೆ ಮೇಲೆ ನಸು ಬೆರ್ಚುತ್ತಂಗಳಂಬೊಕ್ಕರ್ (ಚಕವಿ. ೬-೧೧೯); ಶ್ರೀದ್ವಾರದ ದೇಹಳಿಯನ್ನು ದಾಂಟಿಸಿ ನಿಲಿಸಿ (ಬಟ್ಟಿಅ. ೩೭-೨) ; ರಾಣಿಯ ತೊಟ್ಟಿಯ ದೇಹಳಿಗಳ ಪಡಿಯರತಿಯರು ಮಾಟಿಕಟ್ಟೆಗೆ ದಾರಿ ಮಾಡಿಕೊಟ್ಟರು (ಸವತಿ. ೯೨).
[ ಸಂ. ]

**ದೇಹಲೀದೀಪನ್ಯಾಯ** (ನಾ). ಒಂದು ಬಗೆಯ ಲೋಕನ್ಯಾಯ ; ಹೊಸ್ತಿಲಿನ ಮೇಲೆ ದೀಪವನ್ನಿಟ್ಟರೆ, ಹೊಸ್ತಿಲಿನ ಎರಡು ಕಡೆಗೂ ಬೆಳಕು ಹಬ್ಬುತ್ತದೆ. ಹೀಗೆ ಒಂದು ಕಾರ್ಯದಿಂದ ಬೇಕಾದ ಎರಡು ಫಲಗಳು ಲಭಿಸಿದಂತಾಗುತ್ತದೆ. ಇದನ್ನು 'ದೇಹಲೀದೀಪನ್ಯಾಯ'ವೆಂದು ವ್ಯವಹರಿಸುತ್ತಾರೆ. ದೀಪಕಾಲಂಕಾರದಲ್ಲಿ–ಉಪಮಾನವಾಕ್ಯದಲ್ಲಾಗಲಿ, ಉಪಮೇಯವಾಕ್ಯದಲ್ಲಾಗಲಿ ಒಂದು ಕಡೆ ಸಾಮಾನ್ಯಧರ್ಮವನ್ನು ತಿಳಿಸುವ ಪದವನ್ನು ಬಳಸಿದರೆ ಅದು ಎರಡು ವಾಕ್ಯಗಳಿಗೂ ಅನ್ವಯಿಸುತ್ತದೆ–ಎಂಬ ಸಂದರ್ಭದಲ್ಲಿ ಆಲಂಕಾರಿಕರು ಈ ನ್ಯಾಯವನ್ನು ಉದಾಹರಿಸಿದ್ದಾರೆ. [ ಸಂ. ]

**ದೇಹಲೇಪ** (ನಾ). ಮೈಗೆ ಬಳಿಯುವುದು : ಸಹದೇವೀಸೊಪ್ಪಿನ ರಸ . . . ಕಾಯಿಸಿ, ಹದದಲ್ಲಿಳುಹಿ, ದೇಹಲೇಪವಂ ಮಾಡಲು ಶೀತಜ್ವರ, ಗರ್ಭಿಣಿಜ್ವರ ಸಹ ಮಾಣ್ಗುಂ (ಸಕವೈ. ೬೧). [ ದೇಹ + ಲೇಪ ]

**ದೇಹವಂಚಕ** (ನಾ). ಕೆಲಸಮಾಡಲು ಹಿಂದೆಗೆಯುವವನು ; ಮೈಗಳ್ಳ; ಸೋಮಾರಿ : ಆದಿಜಂಗಮಭಕ್ತಿ ತತ್ಪ್ರಸಾದಭೋಗಂ ದೇಹವಂಚಕನಾದವಂಗಳವಡದು (ಬಸಪು. ೫೯-೧೯). [ ದೇಹ + ವಂಚಕ ]

**ದೇಹವಾಸನೆ** (ನಾ). ೧. ದೇಹಧರ್ಮ ; ದೇಹದ ಇಚ್ಛೆ ; ಶರೀರದ ಕಡೆಗಿರುವ ಅಭಿಮಾನ: ಅಂತಾ ಭೇದವಳಿದು ತಾನೆಲ್ಲಾ ಲಿಂಗವಯವಾಗಿಪ್ಪ ಸದ್ಭಕ್ತಂಗೆ . . . ದೇಹವಿಡಿದಿರ್ದು ದೇಹವಾಸನೆಯಿಲ್ಲ (ವಚಸಂ. ೩೨೮-೩ ೮೬೪). ೨. ಹಿಂದಿನ ಜನ್ಮದ ಸಂಸ್ಕಾರ; ಹಿಂದಿನ ಜನ್ಮದಲ್ಲಿ ಪಡೆದಿದ್ದ ದೇಹದ ಮೇಲಿನ ಅಭಿಮಾನ ಮೊದಲಾದ ಭಾವಗಳು ಈಗಿನ ದೇಹಕ್ಕೂ ಅನುಸರಿಸಿ ಬರುವಿಕೆ : ಶಾಸ್ತ್ರವಾಸನೆಯು ಲೋಕಗಳ ವಾಸನೆ ದೇಹವಾಸನೆಯು ವಾಸನೆಗಳಿವು ಮೂರು (ಜ್ಞಾನಸಿಂ. ೩೪-೧೧).
[ ದೇಹ + ವಾಸನೆ ]

**ದೇಹವಿಡಿ** (ಕ್ರಿ). ಶರೀರವನ್ನು ಹೊಂದು ; ದೇಹಧಾರಣೆ ಮಾಡು : ಸದ್ಭಕ್ತಂಗೆ . . . ದೇಹವಿಡಿದಿರ್ದು ದೇಹವಾಸನೆಯಿಲ್ಲ (ವಚಸಂ. ೩೨೮-೩ ೮೬೪). [ ದೇಹ + ಪಿಡಿ$_1$ ]

**ದೇಹವಿಡು** (ಕ್ರಿ). ಶರೀರವನ್ನು ಬಿಡು,–ತ್ಯಜಿಸು ; ಮರಣ ಹೊಂದು: ಗುರು ಜಯಂತಿ ದಿನ, ದೇಹವಿಟ್ಟ ಗೆಳೆಯ ಚೆನ್ನಮಲ್ಲಪ್ಪ ಗಲಗಲಿ (ಹೃದಸ. ೫ ಅರ್ಪಣ). [ ದೇಹ + ಇಡು$_1$ ]

**ದೇಹಶುದ್ಧಿ** (ನಾ). ಶರೀರವನ್ನು ನಿರ್ಮಲಗೊಳಿಸುವಿಕೆ; ಸ್ನಾನ ಮಾಡುವಿಕೆ: ದೇಹಶುದ್ಧಿಯನ್ನು ತಿಳಿದು ಯೋಗಾಭ್ಯಾಸವನ್ನು ಮಾಡಿ ಶಿವೈಕ್ಯವನ್ನು ಪಡೆಯುವ ವಿವರಣೆಗಳು "ಯೋಗಪಾದ"ದಲ್ಲಿ ಉಕ್ತವಾಗಿವೆ (ಭಾರದ. ೬೩). [ ದೇಹ + ಶುದ್ಧಿ ]

**ದೇಹಶೇಷ** (ನಾ). ಹೆಣವನ್ನು ಸುಟ್ಟ ಬಳಿಕ ಉಳಿಯುವ ಬೂದಿ ಮುಂತಾದುವು: ಇವು ಅವರ ದೇಹಶೇಷಗಳು; ಇವನ್ನೂ ಈ ಮಕ್ಕಳನ್ನೂ ನಿಮ್ಮ ವಶಕ್ಕೆ ತೆಗೆದುಕೊಂಡು ಮೃತರಿಗೆ ನಡೆಸಬೇಕಾದ ಉತ್ತರಕ್ರಿಯೆಗಳನ್ನು ನಡೆಸಿ! ಎಂದು ಹೇಳಿ, ಕೌರವರಿಗೆ ಒಪ್ಪಿಸಿ ಹೊರಟನು (ಚದಥಾ. ೧೫). [ ದೇಹ + ಶೇಷ ]

**ದೇಹಶೋಧನೆ** (ನಾ). ಭೇದಿ; ವಿರೇಚನ: ೧೦ ನಿಂಬೆಯ ಹಣ್ಣ ಹಿಂಡಿ ಅಟ್ಟು ಇಳುಹಿಕೊಂಡು ದೇಹಶೋಧನೆಯಂ ಮಾಡಿಸಿ . . . ಸೇವಿಸುತ್ತ ಬರಲು ಶ್ವಾಸ . . . ದಾಹ ಮುಂತಾಗಿ ಪರಿಹಾರಮಕ್ಕುಂ (ಸಳವೈ. ೨೩೪). [ ದೇಹ + ಶೋಧನೆ ]

**ದೇಹಸಂಬಂಧ** (ನಾ). ಶಾರೀರಕವಾದ ಸಂಬಂಧ; ದೈಹಿಕವಾದ ಸಂಪರ್ಕ: ಈಗ ಸುಬ್ಬುವಿಗೂ ಅವಳಿಗೂ ದೇಹಸಂಬಂಧ ಇಲ್ಲ. ಪರಸ್ಪರ ಗೌರವ ಮಾತ್ರ ಇದೆ (ಛೀಮುಕಾ. ೨೨೯). [ ದೇಹ + ಸಂಬಂಧ ]

**ದೇಹಸಂಬಂಧಿ** (ನಾ). ಶರೀರಕ್ಕೆ ಸಂಬಂಧಿಸಿದವನಂ; ಜೀವ: ದೇಹಸಂಬಂಧಿಯಾದವನನ್ನು ಜನರು ಅರಿಯಬಲ್ಲರು, ದೇಹಾತಿರಿಕ್ತನನ್ನು ಜನರು ಅರಿಯಲಾರರು (ಶುಕ್ಯಾರ. ೨೮೧). [ ಸಂ. ದೇಹಸಂಬಂಧಿನ್ ]

**ದೇಹಸಾತ್ಮ್ಯ** (ನಾ). [ವೈದ್ಯಶಾ] ಮೂರು ಬಗೆಯ ಸಾತ್ಮ್ಯಗಳಲ್ಲಿ ಒಂದು: ವಿರುದ್ಧವಾದ ಆಹಾರ ಪಾನೀಯಗಳಾದರೂ ದೇಹಕ್ಕೆ ಒಗ್ಗುವಿಕೆ: ದೇಶಸಾತ್ಮ್ಯ, ದೇಹಸಾತ್ಮ್ಯ, ವ್ಯಾಧಿಸಾತ್ಮ್ಯವೆಂದು ಆ ಸಾತ್ಮ್ಯ ಮೂರುತೆರನಾಗಿಹುದು (ವೈದ್ಯಸಾ. I, ೦೨). 'ದೇಶಸಾತ್ಮ್ಯ' ಪರಾ. [ ದೇಹ + ಸಾತ್ಮ್ಯ ]

**ದೇಹಸಾಮ್ಯ** (ನಾ). [ಯೋಗ] ರಾಜಯೋಗದ ಹದಿನೈದು ಅಂಗಗಳಲ್ಲಿ ಒಂದು; ಆಹಾರ, ಪಾನೀಯ, ನಿದ್ರೆ ಮುಂತಾದುವುಗಳನ್ನು ಪರಿಮಿತಗೊಳಿಸಿ ದೇಹವನ್ನು ದಂಡಿಸಿ, ಒಣಗಿದ ಕಟ್ಟಿಗೆಯಂತೆ ಮಾಡಿ ತನ್ನ ಹತೋಟಿಯಲ್ಲಿಟ್ಟುಕೊಳ್ಳುವುದು: ಯುಕ್ತಾಹಾರಂಗಳನು ಮಾಡಿಯು ಯುಕ್ತನಿದ್ರೆಗಳನ್ನು ಮಾಡಿಯು ಯುಕ್ತವುದಕವು ಯುಕ್ತವ್ಯವಹರ ಯುಕ್ತಗಳು ಮಾಡಿ ಯುಕ್ತದಿಂ ದೇಹವನೆ ದಂಡಿಸಿ ಯುಕ್ತದಿಂ ತನ್ನಾಜ್ಞೆಯೊಳಗೆಯು ಯುಕ್ತ ಶುಷ್ಕಾಷ್ಠದಂತಿರಲದು ದೇಹಸಾಮ್ಯ (ಜ್ಞಾಸಸಿಂ. ೧೬-೨೭). [ ಸಂ. ]

**ದೇಹಸುಖ** (ನಾ). ಶರೀರದ ಸುಖ: ದೇಹಸುಖಹೇತುಗಳುಮಂ ದೇಹಮುಮಂ ತನ್ನವೆಂದು ಪಂಬಲಿಸದೆ ನಿರ್ಮೋಹದಿನಿರೆ ಯತಿಪತಿಗವ್ಯಾಹತ ಮಳವಟ್ಟುದುತ್ತಮಾಕಿಂಚನ್ಯಂ (ಮಲ್ಲಿಪು. ೧೧-೪೮); ದೇಹಸುಖದೂರಂ ಜರಾತನ್ಮಹಾದ್ರುಮ್ಯನಂ ದೇಹಾಂತರಪ್ರಾಪ್ತಿಯುನ್ಮಹಾಧೀರಸ್ತು ತತ್ರ ಮುಹ್ಯತಿ ನ ಸುಲಸನ್ನೋಹಿಯುಷ್ಪ ಭಗವದ್ವಾಕ್ಯಮುಂಟವ್ಪ ಕಾರಣಂ (ವೀಶೈಪು. ೫-೫-೧೪). [ ದೇಹ + ಸುಖ ]

**ದೇಹಸುಕರ್ಜ** (ನಾ). ಮೈಮೇಲಿನ ಸುಕ್ಕು,- ಚರ್ಮದ ತೆರೆ: "ದೇಹಸುಕರ್ಜ ತೆರೆಯು" (ಶಬ್ದಮಂ. ೧೦೬). [ ದೇಹ + ಸುಕರ್ಜ₂ ]

**ದೇಹಸ್ಥಿತಿ** (ನಾ). ದೇಹದ ಇರುವಿಕೆ; ಶರೀರಾರೋಗ್ಯ; ಶರೀರದ ಪ್ರಕೃತಿ: ಚತುರ್ವಿಧ ದೇವರ್ಕಳ್ಗೆಲ್ಲಾ ಕಾಲಂ ಕಬಳಾಹಾರವಿಲ್ಲದೆಯುಂ ಶರೀರಸ್ಥಿತಿಯುಂಟೆಂದು ಕಾಣಲ್ಪಪ್ಪುದರಿಂ ಮೇಣ್ಗರ್ಭಾರ್ಭಕದೊಳು ಕಬಳಾಹಾರವಿಲ್ಲದೆಯುಂ ಶರೀರಸ್ಥಿತಿ ಕಾಣಲ್ಪಪ್ಪುದರಿಂ ದೇಹಸ್ಥಿತಿಗೆ ಕಬಳಾಹಾರಮೆ ನಿಯಮಮಲ್ತು (ಪಸಾರ. ೫೦೪): ಈಗೀಗ ನನ್ನ ದೇಹಸ್ಥಿತಿಯೇ ಚೆನ್ನಾಗಿಲ್ಲ (ರೂಢಿ). [ ದೇಹ + ಸ್ಥಿತಿ ]

**ದೇಹಳಿ** 'ದೇಹಲಿ' ನೋ.

**ದೇಹಾಂತ** (ನಾ). ದೇಹದ ಕೊನೆ,-ನಾಶ; ಮರಣ; ಸಾವು: ಸಂತವಿಡಿರೇ ಮಗನ ನಿಜದೇಹಾಂತಕೃತ ಸಂಕಲ್ಪ ಗಡ ನೃಪನಂತರಂಗವ ಕರೆಸಿಯೆಂದಳಲಿದಳು ಗಾಂಧಾರಿ (ಕುಮ್ಯಾಆ. ೨೧-೬೨). [ದೇಹ+ಅಂತ₁]

**ದೇಹಾಂತರ** (ನಾ). ಬೇರೆಯ ಶರೀರ: ವರುಷತನಕ ನಪುಂಸಕದ ಲಾಚರಿಸಬಲ್ಲೆನೆ ಸಾಕು ದೇಹಾಂತರವನಂಗೀಕರಿಸುವೆನಲಾ ತನ್ನ ಸುಡ ಲೆಂದ (ಕುಮ್ಯಾಆ. ೮-೪೫): ದೇಹಸುಖದೂರಂ ಜರಾತನ್ಮಹಾದ್ರುಮ್ಯನಂ ದೇಹಾಂತರಪ್ರಾಪ್ತಿಯುನ್ಮಹಾಧೀರಸ್ತು ತತ್ರ ಮುಹ್ಯತಿ ನ ಸುಲಸನ್ನೋಹಿಯುಷ್ಪ ಭಗವದ್ವಾಕ್ಯಮುಂಟಪ್ಪ ಕಾರಣಂ (ವೀಶೈಪು. ೫-೫-೦೪). [ ಸಂ. ]

**ದೇಹಾಂತಶಿಕ್ಷೆ** (ನಾ). ಗಲ್ಲು; ಮರಣದಂಡನೆ: ಕಾನೂನು ಕೊಲೆಗಡುಕರಿಗೆ ದೇಹಾಂತಶಿಕ್ಷೆಯನ್ನು ವಿಧಿಸುತ್ತದೆ (ರೂಢಿ). [ ದೇಹಾಂತ + ಶಿಕ್ಷೆ ]

**ದೇಹಾಂಶು** (ನಾ). ಶರೀರದ ಕಾಂತಿ,-ಹೊಳಪು,-ಪ್ರಭೆ: ಉದ್ಯೋತಿಸಿದಂ ಹಿಮಾಂಶುರುಚಿಯಿಂ ದೇಹಾಂಶುವಿಂ ಭೂಭುಜಂ (ಪುಷ್ಪಪು. ೧೩-೨೪). [ ದೇಹ + ಅಂಶು ]

**ದೇಹಾತಿರಿಕ್ತ** (ಗು). ೧. ದೇಹದಿಂದ ಬೇರೆಯಾದ,-ಭಿನ್ನವಾದ. (ನಾ). ೨. ದೇಹದಲ್ಲಿದ್ದುಕೊಂಡು ದೇಹದಿಂದ ಬೇರೆಯಾಗಿರುವವನು; ಜೀವಾತ್ಮ: ದೇಹಸಂಬಂಧಿಯಾದವನನ್ನು ಜನರು ಅರಿಯಬಲ್ಲರು, ದೇಹಾತಿರಿಕ್ತನನ್ನು ಜನರು ಅರಿಯಲಾರರು (ಶುಕ್ಯಾರ. ೨೮೧). [ ದೇಹ + ಅತಿರಿಕ್ತ ]

**ದೇಹಾತುರ** (ನಾ). ದೇಹದ ಮೇಲಿನ ಪ್ರಬಲವಾದ ಆಸೆ; ದೇಹವನ್ನು ಪೋಷಿಸಿಕೊಳ್ಳಬೇಕೆಂಬ ಹೆಬ್ಬಯಕೆ: ತನ್ನ ದೇಹಾತುರದಲಡವಿಯೊಳನ್ಯರನು ಸಂಹರಿಸುತಿರೆ (ಹರಿಸಾ. ೪೩). [ ದೇಹ + ಆತುರ ]

**ದೇಹಾಭಿಲಾಷೆ** (ನಾ). ಶರೀರದ ಮೇಲಿನ ಆಸೆ; ಬದುಕಬೇಕೆಂಬ ಆಸೆ: ಅರಸುಕುಲದಲಿ ಹುಟ್ಟಿ ಸಾಪತ್ನರುಗಳಿರೆ ದೇಹಾಭಿಲಾಷೆಯಲುರಗನಂತೊಳಗಿಹುದು ಧರ್ಮವೆ (ಕುಮ್ಯಾಉ. ೩-೨೨). [ ದೇಹ + ಅಭಿಲಾಷೆ ]

**ದೇಹಾಯಾಸ** (ನಾ). ಶರೀರಶ್ರಮ; ದೇಹಾಲಸ್ಯ: ಮಹಾರಾಜರು ದೇಹಾಯಾಸದಿಂದ ಮಲಗುತ್ತಾರೆ. (ಸಂಸಳ. ೧೦೬). [ದೇಹ + ಆಯಾಸ]

**ದೇಹಾರ₁** 'ದೇವಾರ' ನೋ.

**ದೇಹಾರ₂** (ನಾ). ದೇವರ ವಿಗ್ರಹ; ದೇವತಾಮೂರ್ತಿ,-ಪ್ರತಿಮೆ: ತನ್ನ ದೇಹಾರವ ತನ್ನ ಕಣ್ಣುಗಳಿಂದ ನನ್ನಿಯಾಗಿಯೆ ಕಾಣ್ಬನ್ನೆವರ ತನ್ನ ದೇಹವು ಮೊದಲಾದ ವಸ್ತುಗಳನು ತನ್ನದಲ್ಲೆಂದುಳಿದಳು (ಅಂಜಚ. ೯-೨೬೪); ತನ್ನ ದೇಹಾರವ ಕಾಣುತಲಾ ಲಕ್ಷ್ಮಿ ತನ್ನ ಕಣ್ಣುಗಳು ಬಂದಂತೆ ಉನ್ನತಹರ್ಷವನೈದಿದಳದನಿನ್ನು ವರ್ಣಿಸಲೆನ್ನಳವಲ್ಲ (ಅಂಜಚ. ೯-೨೭೦); ಕರಿಕರಿಗೊಂಡು ಬಾಜಿಪ ವಾದ್ಯರಭಸದೊಳುರುಜಯಜಯರಭಸದೊಳು ಕುಲುಕುಲುಮೆಟ್ಟಲಾನೆಯ ಮೇಲೆ ಬಂದನು ಮೆರೆವ ದೇಹಾರದಂದದೊಳು (ಭರಚ. ೨೧-೯೩): ಬಸದಿಗಳ್ನವರತ್ನಮಯ ಹೇಮಮಯವಲ್ಲಿ ಎಸೆವ ದೇಹಾರಗಳ್ತಾವು ಮಿಸುನಿರನ್ನದೊಳು ಸಿದ್ಧಾಸನದಲ್ಲಿ ರಾಜಿಸಿದುವು (ಭರಚ. ೬೨-೩೧).

ದೇಹಾರದ ಮಂದಿರ = ದೇವರ ಪ್ರತಿಮೆಯಿರುವ ಮಂದಿರ; ದೇಗುಲ; ದೇವಾಲಯ: ಒಂದುದಿನದೊಳಾಕೆಯ ದೇಹಾರದ ಮಂದಿರವನು ಹೊಕ್ಕು ಕಪಟದಿಂದ ಜಿನೇಂದ್ರಬಿಂಬವನೊಯಿದು ನಿಜವಾಸದೊಂದು ತಾಣದೊಳಿರಿಸಿದಳು (ಅಂಜಚ. ೯-೨೪೮).

[ <ಸಂ. ದೇವಾಗಾರ ]

**ದೇಹಾರ$_2$** (ನಾ). ೧. ದೇವರಿಗೆ ಸಮರ್ಪಿಸುವ ಆಹಾರ; ಎಡೆ; ನೈವೇದ್ಯ : ಮನ ಮುಟ್ಟದ ಮಜ್ಜನ ತನು ಮುಟ್ಟದ ದೇಹಾರ ಭಾವ ತಾಗದ ಪೂಜೆ ವಿವೇಕ ತಾಗದ ನೋಟ ವಾಯು ತಾಗದ ಠಾವ ತೋರ್ಬ (ಅವಕಂ. ೧೯೫-೮೬೩) ; ಕಸವ ಬೋಹರಿಸಿ ದೇಹಾರಕ್ಕೆಡೆಮಾಡಿ ಕಸನಿರಲು ದೇಹಾರ ಶುಚಿಗೆ ಸೊಬಗಿತನಲ್ಲ ಪರದೈವವುಳ್ಳವಂಗೆ ಗುರುಲಿಂಗವಿಲ್ಲ (ಸಮೂವ. ೨೨-೮೪). ೨. ಊಟ ; ಭೋಜನ; ಆರೋಗಣೆ : ಉಡಲುಂ ತುಡಲುಂ ಕೊಟ್ಟುಂ ಪಿಡಿ ತೀವಿದ ಪೊನ್ನನಿತ್ತುಮವನ್ನರೊಳನ್ನಮರ್ಪಡೆಯರ್ದೇಹಾರಮನುಡ ತುಡಲಿತ್ತುಂ ಕುಡುವರರ್ಥಿಯಿಂದಂ ಜೈನರ್ (ಸಮುಪ. ೭-೫೧) ; ಶಿಷ್ಯನಂ ಮುನ್ನಂ ಸಚ್ಚಾರಿತ್ರಂ ಮಾಡದೆ ದೇಹಾರಮನೀಯಲ್ಕೆ ಮಾಡುಗುತಿಪ್ಪರ್ಗೊರವರ್ (ಸಮುಪ. ೧೪-೨೧) ; ಆರೋಗಿಸುವೆಡೆಯೊಳ್ ದೇಹಾರದೊಳ್ . . . ನೃಪನಾರೈದಚ್ಚಿತ್ತು ನಡೆಗೆ (ನೀತಿಶಾ. ೩೫೭). ೩. ಪೂಜೆ : ನೋಡುವರುಳ್ಳರೆ ಮಾಡುವೆ ದೇಹಾರವ . . . ಲಿಂಗವ ತೋರಿ ಉದರವ ಹೊರೆವ ಭಂಗಗಾಟ ನಾನು (ಬಸವ. ೩೦೬) ; ದೇಹಾರವ ಮಾಡಿ ಲಿಂಗಾರ್ಪಿತವ ಮಾಡದೆ ಆಹಾರವ ಕೊಂಡರೆ ಕೋಳಿ ಹುಳುವನಾಯ್ದು ತಿಂದಂತೆ (ದೇದಾವ. ೫೧-೧೦೨) ; ಹೃದಯಕಮಲ ಮಧ್ಯದಲ್ಲಿಪ್ಪ ದೇವನ ದೇಹಾರವ ಮಾಡಲರಿದು ದೇಹಿ ನಿರ್ದೇಹಿಯಾಗದನ್ನಕ್ಕರ ದೇಹಾರವೆಲ್ಲಿಯದೊ ಅನಂತಮುಖದಲ್ಲಿ ದೇಹಾರವ ಮಾಡಲು ದೇವನಲ್ಲಿಲ್ಲ ನೋಡಾ (ಚನ್ನವ. ಕ. ೪೪೫-೯೪೩). [<ಸಂ. ದೇವಾಹಾರ]

**ದೇಹಾರಂಗೆಯ್$_1$** 'ದೇವಾರಂಗೆಯ್' ನೋ.

**ದೇಹಾರಂಗೆಯ್$_2$** (ಕ್ರಿ). ದೇವತಾಮೂರ್ತಿಯನ್ನುಮಾಡು, ಕಂಡರಿಸು: ಶ್ರೀಶಿಲಲೇಪ್ಯಕಾಂಸ್ಯರಜತಾಷ್ಟಾಪಾದರತ್ನಂಗಳಿಂ ದೇಹಾರಂಗೆಯಲಂಗ ಸೌಂದರಬಲಂ (ರಕ್ಷಾಶ. ೪೪). [ದೇಹಾರ$_2$ + ಕೆಯ್$_1$]

**ದೇಹಾರಗೃಹ** (ನಾ). ದೇವತಾಮೂರ್ತಿ ಇರುವ ಗೃಹ ; ದೇವಾಲಯ: ಒಳಗಣ ಪೂಜಾರಚನಾವಿಳಸನಮಂ ಪೊರಗೆ ತೋರಿಸುತ್ತುಂ ಮೆರೆಗುಂ ಪಳಿಕಿನ ಶಿಲೆಯಿಂ ಮಾಡಿದ ಥಳಥಳಿಪ ವಿಶಾಳ ಚಾರು ದೇಹಾರ ಗೃಹಂ (ಬಾಧಪು. ೧-೧೭೩). [ದೇಹಾರ$_2$ + ಗೃಹ]

**ದೇಹಾರಾಗಾರ** (ನಾ). ದೇಹಾರಗೃಹ ; ದೇವಾಲಯ : ಅಂತು ಬಂದು ದೇಹಾರಾಗಾರಮಂ ಪೊಕ್ಕು ವೀತರಾಗಶ್ರೀಚರಣಸಮಾರಾಧನಂಗೆಯ್ದು ಬಟಿಯಮಾರೋಗಣೆಯಂ ಮಾಡಿ (ಬಾಧಪು. ೬-೧೧೫ ಪ). [ದೇಹಾರ$_2$ + ಆಗಾರ]

**ದೇಹಾರಿ** (ನಾ). ದೇವಸ್ಥಾನದ ಅರ್ಚಕ,-ಪೂಜಾರಿ: ದೇವರು ಪೂಜಿಸುವ ದೇಹಾರಿಗಳಿರ್ವ್ವರ್ಗಂ ಮತ್ತ ೪೮ (ಕಇಅ. ೯-೩-೩೭೨ ; 1062). [ದೇಹಾರ$_1$ (< ದೇವಾರ) + - ಇ$_3$]

**ದೇಹಾರೈಕೆ** (ನಾ). ದೇಹದ ಪೋಷಣೆ : ಅಭ್ಯಂಜನಾದಿ ದೇಹಾರೈಕೆಗಳಂ ಬಿಟ್ಟು (ಚುಕಸ. ೧೭). [ದೇಹ + ಆರೈಕೆ (<ಆರಯ್)]

**ದೇಹಾಲಸ್ಯ** (ನಾ). ಶರೀರದಲ್ಲಿ ಉಂಟಾಗುವ ಬಳಲಿಕೆ,-ಅನಾರೋಗ್ಯ,-ಅಸ್ವಸ್ಥತೆ : ರಾಜನ ದೇಹಾಲಸ್ಯವನ್ನು ಕುರಿತು ವರ್ತಮಾನ ಕೊಟ್ಟರು (ಪೀಟಿಮೂ. ೨೧). [ದೇಹ + ಆಲಸ್ಯ]

**ದೇಹಾವಗಾಹನ** (ನಾ). [ಜೈನ] ಜೀವಸಮಾಸದ ಹದಿನಾಲ್ಕು ಭಾಗಗಳಲ್ಲಿ ಒಂದು ; ಶರೀರದ ಆಕಾರ,-ಪ್ರಮಾಣ : ಜೀವಸಮಾಸದಲ್ಲಿ ಸಾಮಾನ್ಯವಾಗಿ ಹದಿನಾಲ್ಕುಭಾಗಗಳಾದರೂ ಉತ್ತರಭೇದಗಳು ಐವತ್ತೇಳಾಗುತ್ತವೆ. ಅವುಗಳಲ್ಲಿ (೧) ಸ್ಥಾನ . . . (೩) ದೇಹಾವಗಾಹನ (ಶರೀರದ ಆಕಾರ) (ಜೈನಪ. ೩೦೧). [ದೇಹ + ಅವಗಾಹನ]

**ದೇಹಾವಸಾನ** (ನಾ). ಸಾವು ; ಮರಣ : ಜೀವಭಾವದ ಭ್ರಮೆಯಳಿದು ದೇಹಾವಸಾನದಲಿ ಕೇವಲಾದ್ವಯಪದ ಒದಗುವದು (ಗಗಶಾ. ೨-೧೦). [ದೇಹ + ಅವಸಾನ]

**ದೇಹಿ$_1$** (ನಾ). ೧. ದೇಹವುಳ್ಳದು; ಪ್ರಾಣಿ, ಮನುಷ್ಯ ಇತ್ಯಾದಿ: ಕೈಕೊಳ್ವದಾತ್ಮಸುಖಮನೆ ಕೈಕೊಳ್ವುದು ದೇಹಿ (ಶಾಂತಿಪು. ೦೧-೮೭) ; ಸಕಲ ದೇಹಿಗೆ ನೀನೆ ಶರಣ್ ಜಿನೇಶ್ವರಾ (ಶಂರಾಮಾ. ೫-೮) : ನೀಂ ನಿಃಶಂಕತೆಯಿನಿನಿತು ದೇಹಿಗಳಂ ಕೊಂದವೆ (ಯಚೋಚ. ೯-೭೦). ೨. ದೇಹದೊಳಗೆ ನೆಲಸಿರುವವನು ; ಜೀವಾತ್ಮ : ದೇಹ ತಾನಭಿಮನ್ಯವೋದಿಟ ದೇಹಿ ತಾನಭಿಮನ್ಯವೋ (ಕುವ್ಯಾದ್ರೋ. ೬-೨೭): ದೇಹಿದೇಹೀಯೆಂಬುದಾತ್ಮರೊಳ್ ಬೆರೆತಿಹುದು (ಉದ್ಭದೇ. ೨-೧೫). [ಸಂ. ದೇಹಿನ್]

**ದೇಹಿ$_2$** (ಅ). ೧. "ಕೊಡು" ಎಂಬರ್ಥದ ಒಂದು ಶಬ್ದ: "ಭವತಿ ಭಿಕ್ಷಾಂ ದೇಹಿ" ಎಂಬುದಿದುವೆ ಕಬ್ಬಿಗರ್ಗೆ ಸಿದ್ಧಿಸಿದ ಪೆರ್ಮೆಯ ಸಪ್ತಾಕ್ಷರೀಮಂತ್ರಂ (ರಾಮಾಕ್ಷ. ೧೧೮-೧೯) : ಪ್ರಾತ್ಯನೆಡೆಗೆ ದೇಹಿ ಎಂದು ಬಂದೆ (ಗಜೀಶ. ೩-೫೨). ೨. (ಆಲಂ) ದೇಹಿ ಎಂದು ಬೇಡುವವನು ; ಯಾಚಕ : ದೇಹಿ ನೀನು ವ್ಯಾಪಾರಿಗಳು ನಮ್ಮವರು ಬೇಡು ಕೂಡಲಸಂಗಮದೇವಾ ಎಮ್ಮವರ ಕೈಯಲು (ಬಸವ. ೪೪೩); P ತ್ರಾಹಿ, ದೇಹಿ, ಪಾಹಿ, ಮುಂತಾದ ಸಂಸ್ಕೃತದ ಕೆಲವು ಕ್ರಿಯಾಪದಗಳನ್ನು ಅವ್ಯಯಂಗಳೆಂದು ಪರಿಗಣಿಸಿ, ಮುಖ್ಯ ಉಲ್ಲೇಖಗಳಾಗಿ ಕೊಟ್ಟಿದೆ. ಇಲ್ಲಿ 'ದೇಹಿ' ಎಂಬುದು ವಿಶೇಷವಾಗಿ ನಾಮಪದದ ಅರ್ಥದಲ್ಲೂ ಉಪಯೋಗವಾಗಿದೆ. [ಸಂ.]

**ದೇಹುತ** (ನಾ). ದೇವರಿಗೆ ಅರ್ಪಿಸಿದುದು (?) : ಅಲ್ಲಿಯ ಗೌಂಡದೇವರ ದೇಹುತನಾಗಿ ಮಾಡಿದ ಭೂಮಿಯಬೀದು ಹತಕ್ಕೊಂದು ಮತ್ತರೋಪಾದಿಯಂ ಮೂಖಿಗರಮಾಗಿ ಮಾನ್ಯದಿಂ ಮಾಡಿಕೊಂಡುಂಬರು (ಸಾಇಇ. IX-I, ೨೫೪-೯೭ ; 1148). [< ಸಂ. ದೇವಹುತ ?]

**ದೇಹೋಚ್ಛ್ರಿತಿ** (ನಾ). ದೇಹದ ಎತ್ತರ : ಅಮರನ ದೇಹೋಚ್ಛ್ರಿತಿ ಮೂಱು ಮೊಳಂ (ಸುಕುಮಾ. ೯-೩೩). [ದೇಹ + ಉಚ್ಛ್ರಿತಿ]

**ದೇಹೋತ್ಥಾನ** (ನಾ). [ಯೋಗ] ಪ್ರಾಣಾಯಾಮಸಿದ್ಧಿಗಳಲ್ಲಿ ಒಂದು; ಆಕಾಶದಲ್ಲಿ ನಿರಾಧಾರವಾಗಿ ನಿಂತಿರುವುದು ; ಶ್ವಾಸನಿರೋಧದಿಂದ ದೇಹವು ಹಗುರವಾಗಿ ಮೇಲಕ್ಕೇರುವುದು : ಸ್ವೇದ ಕಂಪನ ದೇಹೋತ್ಥಾನವೆಂಬ ಕ್ರಮದಿಂ ಕನಿಷ್ಠಮಧ್ಯಮೋತ್ತಮ ಪ್ರಾಣಾಯಾಮಸಿದ್ಧಿಸೂಚನಂಗಳಂ (ವಿವೇಕ. ೧೫೦). [ದೇಹ + ಉತ್ಥಾನ]

**ದೇಹೋದ್ಭವ** (ನಾ). ೧. ಶರೀರದಲ್ಲಿ ಹುಟ್ಟಿದುದು. ೨. ಮಗ ; ತನುಜ : ರವಿ . . . ಕುಂಭದೊಳ್ ಕೂಡೆ ದೇಹೋ[ಪಾಠಾಂ. ಧರ್ಮೋ]ದ್ಭವ ಭಾಗ್ಯೋತ್ಸೃಷ್ಟನಸ್ಸಂ (ಜಾತಕ. ೧೭-೦೭). [ದೇಹ + ಉದ್ಭವ]

**ದೇಹೋಪಚಾರ** (ನಾ). ಶರೀರಕ್ಕೆ ಮಾಡುವ ಸೇವೆ,-ಶುಶ್ರೂಷೆ : ಅತ್ತೆಗೆ ದೇಹೋಪಚಾರ ಮಾಡುತ್ತ ಮಾವನಿಗೆ ದೇವತಾಪೂಜಾದಿಗಳಲ್ಲಿ ಸಹಾಯವಾಗಿದ್ದಳು (ವಚಭಾ. ೧೭೮). [ದೇಹ + ಉಪಚಾರ]

**ದೈತ** (ನಾ). ೧. ಪ್ರೀತಿಪಾತ್ರ ; ಕಾಂತ ; ಗಂಡ ; ಪತಿ : ಆತಂ ನಿನ್ನಯ ಮೋಹದ ದೈತಂ ವಿಭು ನಾಗದತ್ತನಂಗಜವಿಕಳೋಪೇತಂ ಬೆನ್ನೊಳು ಬರುತಿರ್ಪಾತಂ ತಾನೆನಲು ಪರದಿ ವಿಸ್ಮಯಬಟ್ಟಳ್ (ಪುಚ್ಯಾಸ್ತ್ರ. ೧-೫೫). ೨. ಒಡೆಯ ; ಅಧಿಪತಿ: "ನಾಯಕಂ ನಾಥನಿಂದ್ರಂ ಕಾಂತನೀಶ್ವರಂ ಪ್ರೀಯನಧಿಪಂ ದೈ[ಪಾಠಾಂ. ದಯಿ]ತನೀಶಂ . . . ಎನಲೊಡೆಯಂಗೆ ನಾಮಮಕ್ಕುಂ" (ಪುಂಗರಾ. ೭೭-೬). 'ದೈತೇಂದ್ರ' ಪರಾ. [<ಸಂ. ದಯಿತ]

**ದೈತೆ** (ನಾ). ೧. ಪ್ರೀತಿಪಾತ್ರಳಾದ ಮಹಿಳೆ ; ನಲ್ಲೆ ; ಪ್ರಾಣಕಾಂತೆ; ಮಡದಿ ; ಪತ್ನಿ : ದೈತೆ ನೋಡೆನುತಿಳಿದು ರಾಘವ ಸೇತುವನು ಧನುವಿನಲಿ ಖಂಡಿಸೆ (ಕೌಶಿರಾ. ೪೪-೧೭). ೨. ಹೆಣ್ಣು ; ಯುವತಿ; ಸ್ತ್ರೀ : ದೈತೆಯಂ ತಂದೊರ್ಬಳಂ ಮದುವೆಯಂ ಮಾಡಿ ಸೈತಿಕ್ಕಿ ಬಿಡಬಾರದಂತೆ ನೇಹಂಗೂಡಿ (ಬಿಂದೂರೆ. ಹ. ೫೬೨-೧೯). [ದೈತ + - ಎ$_2$]

ದೈತೇಂದ್ರ (ನಾ). ಒಡೆಯಂರ ಒಡೆಯ : ದೈವ್ಯತೀಯಕ ಜನಪಂಗದ್ವೈತಂಗಜತಂಗೆ ಭುವನದಯಿತಂಗಾಗಳ್ ದೈತೇಂದ್ರರೆಲ್ಲಮೆಱಗಿದರಾತತಪುಣ್ಯಂಗೆ ಜಗದೊಳಿಱಗದರೊಳರೆ (ಅಜಿಪು. ೫-೩).
[☞ ಇಲ್ಲಿ ಸಂಸ್ಕೃತದ'ದಯಿತೇಂದ್ರ' ಎಂಬುದನ್ನು ಪ್ರಾಸಕ್ಕಾಗಿ ಕವಿ ಅಂಸವಾಸ ಮಾಡಿಕೊಂಡಂತೆ ತೋರುತ್ತದೆ]

ದೈತೇಯ (ನಾ). ೧. ದಿತಿಯ ಮಗ ; ಅಸುರ ; ರಾಕ್ಷಸ : "ದನುಜರ್ ದೈತೇಯರ್ ದಿತಿತನೂಭವರ್ ಪೂರ್ವದೇವರಸುರರ್" (ವಸ್ತುಕೋ. ೬-೩೩) ; "ಅಸುರಃ, ದಾನವಃ, ದೈತ್ಯಃ, ದೈತೇಯಃ . . . ಪಾತಾಲನಿಲಯಃ (ಸ್ಮೃತಾಃ) – ಈ ೮ ಅಸುರರ ಪೆಸರ್" (ಹಲಾಯು. ೨-೫) ; ಬಲಿದರ್ಪಹರಂ ಜಿತಾರಿ ದೈತೇಯನನಂತಭೋಗನಿಲಯಂ (ಗದಾಯು. ೧-೧). ೨. ಲೋಕಪಾಲಕರಲ್ಲಿ ಒಬ್ಬ ; ನಿರ್ಋತಿ : ತೊಡೆಮಂ ಶಕ್ರನ ನಾಮಮಂ ತುಡುಕಿ ನೀರೊಳ್ ಮೆಟ್ಟುವೆಂ ವಹ್ನಿಯಂ ಪೊಡೆವೆಂ ಕಾಲನನಿಕ್ಕಿ ಡೊಕ್ಕರಿಸುವೆಂ ದೈತೇಯನಂ (ಜಗವಿ. ೩-೨೦). [ ಸಂ. ]

ದೈತೇಯಿ (ನಾ). ರಾಕ್ಷಸಿ : ಅಸುರಸ್ತ್ರೀ : ಪಟಮೆತಾಯ್ ಎನ್ನವಳ್. ದೈತೇಯಿ ತೀವಿಸಳ್ (ಬಧ್ಯಪ್ರ. ೪೬-೧೦೦೧). [ ದೈತೇಯ + -ಇ$_2$ ]

ದೈತ್ಯ (ಗು). ಅತ್ಯಧಿಕವಾದ ; ಅತಿಶಯವಾದ : ತಾಯೂರ್ಗೆ ಧಾವಿಸಿದನ್ನೆ ದೇವಾಸುರರ ವಿಪರ್ವ, ದೈತ್ಯಬಲಶಾಲಿ, ಆ ವಾಲಿ! (ಶ್ರೀರಾಮಾ. ೪೧೧-೨೬೩). (ನಾ). ೨. ರಾಕ್ಷಸ ; ಅಸುರ : "ಸುರದ್ವಿಷರೆನೆ ದೈತ್ಯರ್ ಶುಕ್ರಶಿಷ್ಯರಾರ್ಗಮದೃಶ್ಯರ್" (ವಸ್ತುಕೋ. ೬-೩೩) ; ಕೃತಯುಗದಿಂದಾದವರ್ ತ್ರೇತೆಯೊಳ್ ಪುಟ್ಟಿದವರ್ ಮತ್ತೀಗಳೀ ದ್ವಾಪರದೊಳೊಗೆದವರ್ ದೈತ್ಯರಿರ್ದಪ್ಪರ್ (ಜಗವಿ. ೧-೬೬) ; ದೈತ್ಯರಂ ಕನಸೊಳ್ ಕಾಣಲು ಬಾರದೈ (ಸೋಮೇಶ. ೬೦) ; ಸಾಕು ದೈತ್ಯನ ಕಿಡಹು . . . ತಡವು ಮಾಡದಿರು (ಕುವ್ಯಾದ್ರೋ. ೧೬-೨೩); ದೈತ್ಯರ ಕುಲವ ಸವೆಯಲು ವಿಷ್ಣು ಕ್ಷತ್ರಿಯವಧೆಗೆ ಭಾರ್ಗವನು (ಗಗಜಾ. ೧೬-೫೬). ೩. (ಆಲು) ದಡಿಗ ; ಟೊಣಪ. ೪. ಬಹಳ ದುಷ್ಟ; ಜನರಿಗೆ ಹಿಂಸೆಯನ್ನು ಕೊಡುವವನು. ೫. ಬಹಳ ಶಕ್ತಿವಂತ ; ಅಮಾನುಷ ಪರಾಕ್ರಮಿ. [ ಸಂ. ]

ದೈತ್ಯಕುಠಾರ (ನಾ). ರಾಕ್ಷಸರಿಗೆ ಕೊಡಲಿಯಂತೆ ಇರುವವನು ; ರಾಕ್ಷಸರನ್ನು ನಾಶಪಡಿಸುವವನು ; ಕೃಷ್ಣ : ವೀರ ದೈತ್ಯಕುಠಾರ ಗಳಿತ ವಿಕಾರ ಗೋಪೀಜಾರ . . . ಮುರಹರ ಸಲಹಬೇಕೆಂದ (ಕುವ್ಯಾಭೀ. ೩-೮೬). [ ದೈತ್ಯ + ಕುಠಾರ ]

ದೈತ್ಯಗುರು (ನಾ). ೧. ರಾಕ್ಷಸರ ಗುರು,-ಪುರೋಹಿತ; ಶುಕ್ರಾಚಾರ್ಯ. ೨. ನವಗ್ರಹಗಳಲ್ಲಿ ಆರನೆಯದು ; ಶುಕ್ರಗ್ರಹ : "ಉಶನಾಃ, ಶುಕ್ರಃ, ಕಾವ್ಯಃ, ದೈತ್ಯಗುರುಃ, ಭಾರ್ಗವಃ, ಕವಿಃ, ಧಿಷ್ಣ್ಯಃ– –ಈ ೭ ಶುಕ್ರನ ಪೆಸರ್" (ಹಲಾಯು. ೯-೪೮) : ಧರಣೀಜಂ ಪದಿನೈದು . . . ದೈತ್ಯಗುರುವಿಪ್ಪತ್ತೊಂದು ಸಂವತ್ಸರಂ ಪರಮೋಚ್ಚಾಂಶದೊಳಿರ್ದು ನಿಂದೊಡದು ಪಿಂಡಾಯುಷ್ಯಮಕ್ಕುಂ ಧ್ರುವಂ (ಜಾತಕ. ೮-೧೦). [ ದೈತ್ಯ + ಗುರು$_2$ ]

ದೈತ್ಯಜೀವ (ನಾ). ೧. ರಾಕ್ಷಸರ ಪ್ರಾಣ. ೨. ರಾಕ್ಷಸರ ರೂಪವಾದ ಚೈತನ್ಯ : ದೈತ್ಯರಿಗೆ ಸುಖವಾದರೂ ದೇವಾವೇಶದಿಂದಲೇ ಹೊರತು ದೈತ್ಯಜೀವರಿಗಿಲ್ಲ (ಹಸಾರ. ೬-೧ ತಾತ್ಪರ್ಯ). [ ದೈತ್ಯ + ಜೀವ ]

ದೈತ್ಯಧ್ವಂಸಿ (ನಾ). ರಾಕ್ಷಸರನ್ನು ನಾಶಪಡಿಸುವವನು ; ದೈತ್ಯಾರಿ; ವಿಷ್ಣು. [ ಸಂ. ದೈತ್ಯಧ್ವಂಸಿನ್ ]

ದೈತ್ಯನಿಕಾಯ (ನಾ). ರಾಕ್ಷಸರ ಸಮೂಹ,-ಗುಂಪು : ದಾಯವಿದು ತಮಗೆಂದು ದೈತ್ಯನಿಕಾಯ ಬಂದು ರಸಾತಳಕೆ ಕುರುರಾಯನನು ಕೊಂಡೊಯ್ದು ತಿಳುಹಿದರವರು ಸಾಮದಲಿ (ಕುವ್ಯಾಅ. ೨೦-೬೩).
[ ದೈತ್ಯ + ನಿಕಾಯ ]

ದೈತ್ಯಮರ್ದನ (ನಾ). = ದೈತ್ಯಧ್ವಂಸಿ : ದನುಜರ ಕಯ್ಯೊಳಿರ್ದಮರ್ದನಾವಗವಿಪಾಟಿಸ್ಕೊಳಲೆಂದು ದೈತ್ಯಮರ್ದನನೆನಿಸಿರ್ಪವಂ ಕಪಟದಿಂದೆ ವಿಲಾಸಿನಿಯಾದ ವೇಷಮಂ ನೆನೆಯಿಸಿದಪ್ಪುದೀ ಪಸಿಯ ಬಣ್ಣವಿವಳ್ಗೆನೆ (ಕಾದಂಪೂ. ೩೮). [ ದೈತ್ಯ + ಮರ್ದನ ]

ದೈತ್ಯಮಹತ್ತರ (ನಾ). ೧. ರಾಕ್ಷಸರಿಗೆ ಮಂತ್ರಿಯಾದವನು ; ಶುಕ್ರಾಚಾರ್ಯ. ೨. ಶುಕ್ರಗ್ರಹ : ನಿಲೆ ದೈತ್ಯಮಹತ್ತರನಸಿವಿಪದೊಳ್ ಸಮಸ್ತ ಧರಣೀಶನಕ್ಕುಮಕುಲೋದ್ಭವನುಂ (ಜಾತಕ. ೧೨-೧೩).
[ ದೈತ + ಮಹತ್ತರ ]

ದೈತ್ಯರಿಪು (ನಾ). ರಾಕ್ಷಸರ ಶತ್ರು ; ಅಸುರರ ವೈರಿ ; ದೈತ್ಯಾರಿ ; ಕೃಷ್ಣ : ಮಱುದಿವಸ ವೈಹಾಳಿಯಾನು ಹೊಱವಂಟರನಿಬರು ದೈತ್ಯರಿಪು ಸಹಿತ (ಕುವ್ಯಾಉ. ೧೧-೧೪). [ ದೈತ್ಯ + ರಿಪು ]

ದೈತ್ಯವೈರಿ (ನಾ). = ದೈತ್ಯರಿಪು : ಧರಿಸಿಕೊಂಡಿಹ ದೈತ್ಯವೈರಿ ವಿರಿಂಚಿ ಮುಖ್ಯಾದಿತ್ಯಕಾಪಾಲಾಸ್ಥಿಮಾಲಾವಳಿಗಳೇ ಸಾಕ್ಷಿ (ಬಸಪು. ೫೪-೫೯).
[ ದೈತ್ಯ + ವೈರಿ ]

ದೈತ್ಯಾಂತಕ (ನಾ). = ದೈತ್ಯರಿಪು : ದೈತ್ಯಾಂತಕನಾವುದಿಂದೆಸೆವ ಲಕ್ಷ್ಮೀವಲ್ಲಭಂಗೆತ್ತಿದಾ ಗಗನಚ್ಛತ್ರದ ಹೇಮದಂಡಮೆನಿಸಲ್ ಸಾಲ್ದತ್ತು ಹೇಮಾಚಲಂ (ಜಗವಿ. ೧-೨೫) ; ಮೇಲು ಪೋಗಿನ ಸಿದ್ಧಿ ದೈತ್ಯಾಂತಕನ ಬುದ್ಧಿಯಲಿ . . . ಎನುತ್ತೈತಂದನಾ ಪಾರ್ಥ (ಕುವ್ಯಾಅ. ೪-೩೪).
[ ದೈತ್ಯ + ಅಂತಕ ]

ದೈತ್ಯಾಮಾತ್ಯ (ನಾ). ೧ ರಾಕ್ಷಸರ ಮಂತ್ರಿ; ಶುಕ್ರಾಚಾರ್ಯ. ೨. ಶುಕ್ರಗ್ರಹ : ತುಲೆಯೊಳ್ ದೈತ್ಯಾಮಾತ್ಯಂ ನಿಲೆ . . . ಪುಟ್ಟಿದ ಮನುಜನವನಿಪಾಲಕನಕ್ಕುಂ (ಜಾತಕ. ೧೨-೧೬). [ ದೈತ್ಯ + ಅಮಾತ್ಯ ]

ದೈತ್ಯಾರಾತಿ (ನಾ). = ದೈತ್ಯರಿಪು: ದೈತ್ಯಾರಾತಿಗೆಱಗಿಯನಂತಶಯನಖ್ಯಾತಿ ವಿಭವವನೀಕ್ಷಿಸುತ ಹರುಷದಲಿ ನಡೆತಂದ (ಕುವ್ಯಾಅ. ೧೯ ೧೬).
[ ದೈತ್ಯ + ಅರಾತಿ ]

ದೈತ್ಯಾರಿ (ನಾ). = ದೈತ್ಯರಿಪು : ಒಲ್ದೀಕ್ಷಿಸಿದಂ ನಿಜಾಗ್ರಭವನಂ ದೈತ್ಯಾರಿ (ಜಗವಿ. ೪-೫೮). [ ದೈತ್ಯ + ಅರಿ$_2$ ]

ದೈತ್ಯೆ (ನಾ). ೧. ರಕ್ಕಸಿ ; ರಾಕ್ಷಸಿ. ೨. ಒಂದು ಬಗೆಯ ಸುಗಂಧ ದ್ರವ್ಯ ; ಮುರೆ: "ತಾಲಪರ್ಣೀ, ದೈತ್ಯಾ, ಗಂಧಕುಟೀ, ಮುರಾ, ಗಂಧಿನೀ–೫ ಮುರೆಯೆಂಬುವ ಗ್ರಂಧಿಕ ಜಿನಸು" (ಸಿದ್ಧಾಂತಿ. ೦೨೩).
[ ಸಂ. ದೈತ್ಯಾ ]

ದೈತ್ಯೇಂದ್ರ (ನಾ). ರಾಕ್ಷಸರ ರಾಜ; ಪ್ರಬಲನಾದ ರಾಕ್ಷಸ: ಚತುರಾಸ್ಯೇಂದ್ರಾದಿದೇವಲ್ ನಡೆದು ಜಲಧಿತಲ್ಪಂಗೆ ದೈತ್ಯೇಂದ್ರರು ದ್ವೃತ್ತತೆಯಂ ಪೇಳ್ಕಲ್ಕೆ ಕಂಸಪ್ರಭೃತಿದಿತಿಜರಂ ಕೊಲ್ವೆನಾನೆಂದು ಪೂರ್ಣಾಚ್ಯುತದೇವಂ ದೇವಕೀಗರ್ಭದೊಳುದಯಿಸಲೆಂದಿರ್ದಂ (ಜಗವಿ. ೨-೪೪) ; ನಿನ್ನ ಪಾಡಿನ ದುರುಳರೇ ದೈತ್ಯೇಂದ್ರರೀತನ ಕೆಣಕಿದವರು (ಕುವ್ಯಾಸ. ೯-೫೯) : ಭ್ರಾಂತಿಗದ್ದಿದ ಮತಿವಿಕಾರದಾ ದೈತ್ಯೇಂದ್ರನಂ ತಂದನರಮನೆಗೆ . . . ಅತಿಪೀದದಲಿ (ಶ್ರೀರಾಮಾ. ೮೧೧-೬).
[ ದೈತ್ಯ + ಇಂದ್ರ ]

ದೈತ್ಯೇಂದ್ರಗುರು (ನಾ). ೧. ರಾಕ್ಷಸರಾಜನ ಪುರೋಹಿತ,-ಆಚಾರ್ಯ; ಶುಕ್ರಾಚಾರ್ಯ. ೨. ಶುಕ್ರಗ್ರಹ : ದೈತ್ಯೇಂದ್ರಗುರುವಿಂದ ವಾಗ್ಮಿ ಸುರೇಂದ್ರಾರ್ಚಿತನಿಂದೆ ಗೀತವಿದನಕ್ಕುಂ (ಜಾತಕ. ೦೫-೪).
[ ದೈತ್ಯೇಂದ್ರ + ಗುರು$_2$ ]

ದೈನಂದಿನ (ಗು). ಪ್ರತಿದಿನದ ; ಪ್ರತಿದಿನದಲ್ಲೂ ಉಂಟಾಗುವ ; ಪ್ರತಿದಿನವೂ ಜರುಗುವ ; ದೈನಿಕ : ದೈನಂದಿನ ಸಾಮಾನ್ಯದ ನೀರಸವನೆ ಉಜ್ವಲಿಸಿದೆ ರತೀಂದ್ರಿಯ ಆವೇಶದಲಿ ! (ಅನಿಕೇ. ೪೫-೨೦) : ಪುರಂದರ,

ತ್ಯಾಗರಾಜ, ಸದಾರಂಗರ ಕೃತಿಗಳನ್ನು ಕೇಳಿದಾಗ . . . ನಮ್ಮ ಮನಸ್ಸು ದೈನಂದಿನ ರಾಗದ್ವೇಷಗಳನ್ನು ಮರೆತು ಪ್ರಶಾಂತಸ್ಥಿತಿಯನ್ನು ಮುಟ್ಟುತ್ತದೆ (ಭಾರದ. ೫೩೧ ; ದೈನಂದಿನ ಜೀವನಕ್ಕೆ ಸಂಬಂಧಿಸಿದ ಕೆಲಸಗಳು ಮೊದಲಿಗಿಂತ ಈಗ ಸುಲಭವಾಗಿ ನಡೆಯುತ್ತಿವೆ (ಜೀವಾತ್ಮ. I ಮುಖ್ನುಡಿ); ದೈನಂದಿನ ವರ್ತಮಾನಗಳನ್ನು ಪತ್ರಿಕೆಗಳಲ್ಲಿ ನೋಡಬೇಕು (ರೂಢಿ).

[ ಸಂ. ]

**ದೈನಂದಿನಪತ್ರಿಕೆ** (ನಾ). ಪ್ರತಿನಿತ್ಯವೂ ಹೊರಡುವ ಸಮಾಚಾರಪತ್ರಿಕೆ; ವೃತ್ತಪತ್ರಿಕೆ ; ದಿನಪತ್ರಿಕೆ : ಆ ದಿನದ ದೈನಂದಿನಪತ್ರಿಕೆಯಲ್ಲಿ ಸಿಡಿಮದ್ದಿನ ವಿಷಯವು ದೊಡ್ಡದೊಡ್ಡ ಅಕ್ಷರಗಳಲ್ಲಿ ಮುದ್ರಿಸಲ್ಪಟ್ಟು ಎಲ್ಲೆಲ್ಲಿಯೂ ಮಾರಾಟವಾಗುತಿದ್ದಿತು (ಬಿಕಾಹ. ೯೬). [ದೈನಂದಿನ+ಪತ್ರಿಕೆ]

**ದೈನಾಸ** (ನಾ). ೧. ಅನುಕಂಪ ಬರುವಂತೆ ಬೇಡಿಕೊಳ್ಳುವಿಕೆ ; ಕನಿಕರವುಂಟಾಗುವಂತೆ ಕೇಳಿಕೊಳ್ಳುವಿಕೆ. ೨. ದೈನ್ಯಭಾವ ; ದೀನತೆ : ಅದೆಷ್ಟೋ ದೈನಾಸದಿಂದ ಕಲ್ಪಿಸಿ ಹೇಳಿದ ಯಾವ ಸೇವಕರ ಮಾತಿನಲ್ಲಿಯೂ ಅವಳಿಗೆ ವಿಶ್ವಾಸ ಉಂಟಾಗಲಿಲ್ಲ (ಮಹಾಪೂ. ೫೧) : ಹೇಳು ಕಮಲವೆ ಮೇಲೆ ಮುಖವಮಾಡಿ ದೈನಾಸದಿಂದೇನು ನೋಡುತಿರುವೆ ? (ನವಿಲ್ಲ. ೩೪-೪).

[ <ಸಂ. ದೈನ್ಯ ]

**ದೈನಾಸಪಡು** 'ದೈನಾಸಬಡು' ನೋ.

**ದೈನಾಸಬಡು, ದೈನಾಸಪಡು** (ಕ್ರಿ). ದೀನತನವನ್ನು ಹೊಂದು ; ಕನಿಕರವುಂಟಾಗುವಂತೆ ವರ್ತಿಸಂ ; ಮೊರೆಯಿಡು : ಈ ಸಮ್ಮಿಲನದ ಸುದ್ದಿಯನ್ನು ಇನ್ನಾರಿಗೂ ಹೇಳಬಾರದೆಂದು ದೈನಾಸಬಡುತ ಬಿನ್ನವಿಸಿಕೊಂಡಳು (ಕೂಪಾಸಾ. ೫೦) : ವೈದ್ಯರನಾರೆ ಕರಕೊಂಡು ಬರ್ರಿ . . . ಹೆಂಡತಿ ದೈನಾಸಬಟ್ಟು ಹೇಳಿಕೊಂಡಳು (ನಿರಾಭ. ೧೧೩) : ಆಚಾರ್ಯರು ದೈನಾಸಬಟ್ಟರು (ಸಮಜೀ. ೩೫). **ದೈನಾಸಪಡು** : ಮನಸಿಲ್ಲದವಗೆ ದೈನಾಸಪಡೂದು ಯಾಕ ಬಿಡ (ಮುದ್ದ್ಯಹ. ೧೬೭). [ ದೈನಾಸ + ಪಡು$_1$ ]

**ದೈನಿಕ** (ಗು). ೧. ದಿನದಲ್ಲಿ ಉಂಟಾಗುವ : "ಒಂದು ದಿನದ ; ಒಂದು ದಿನ ಹಿಡಿಯುವ ; ದೈನಿಕ" (Diurnal. ಇಂಕನಿ) ; ನಿನ್ನ ದೈನಿಕ ಕಾರ್ಯಕ್ರಮವೇನು ? (ರೂಢಿ). (ನಾ). ೨. ಪ್ರತಿನಿತ್ಯವೂ ಹೊರಡುವ ಸಮಾಚಾರ ಪತ್ರಿಕೆ ; ದಿನಪತ್ರಿಕೆ : ಮುಂಬಯಿಯ ವಿಖ್ಯಾತ ದೈನಿಕಗಳನ್ನೋದುವ ಎಲ್ಲ ವಿದ್ಯಾವಂತರಿಗೂ ಅದು ಗೊತ್ತಿದೆ (ಒಂಟಿದ. ೩).

[ ಸಂ. ]

**ದೈನ್ಯ** (ನಾ). ೧. (ಬಡತನ, ಅಪರಾಧ ಮೊದಲಾದ ಕಾರಣದಿಂದ ಉಂಟಾಗುವ) ಕರುಣಾಜನಕವಾದ ಸ್ಥಿತಿ; ದೀನತನ: "ದೈನ್ಯದಲಿ ಯಜ್ಞೋತ್ಸಾರದಲಿ ಕೋಪದಲಿ ಮನ್ಯುವೆಂದೆಂಬುದು" (ಮಂಗರಾ. ೦೪೫-೨೮) : "ದೈನ್ಯದಿ ಯಜ್ಞದಂತ್ಯದೊಳು . . . ಮನ್ಯುವೆನಿಕ್ಕುಂ" (ನಾನಾರ. ೩೬) ; ಮುಖದ ಕಾಮಕಾವರ್ಣ್ಯಮುಮಂ ದೃಷ್ಟಿಯ ದೈನ್ಯಮುಮನಱಿದು ಏನಾನುಮೊಂದು ನೆವಂಬಡೆದೆದ್ದು (ವಂಬಿಕ. ೪-೧೨); ತನ್ನ ಮಾಡಿದ ತಪ್ಪು ತನ್ನಂ ನೋಯಿಸೆ ತಾನೆ ತಿಳಿಪಲೆಂದು ನುಡಿದಂ ದೈನ್ಯದ ಮಾತಂ (ಆಸಂಪು. ೮-೯) ; ಮುನಿದಿನಿಯನ ಕಡುಮೊನೆವಾತಿಗೆ ನೊಂದು ಕನಲದೆ ಗಾಜುವಡೆಯದೆ ತನುಮನಗಳ ತನ್ನ ಬಸಗೈದು ದೈನ್ಯವ ಕೊನರಿಸಿ ತಂಪುಗೊಳಿಪುದು (ಹದಿಬ. ೩-೨೩) ; ನಾರಾಯಣನು ದೈನ್ಯದಿಂದ ಬೇಡಿಕೊಂಡನು (ಕಂಬಹು. ೧೩೪) ; ದೈನ್ಯದಿಂದ ಬೇಡೋಕಿಂತ ದೈವಾಧೀನವಾಗೋನುತ್ತಮ (ಗಾದೆ). ೨. ದೀನಭಾವದಿಂದ ಕೂಡಿರುವವನು ; ಹೇಡಿ ; ಅಶಕ್ತ : ಪ್ರಿಯವ ನುಡಿದರೆ ದೈನ್ಯನೆಂಬರು ನಯದಿ ಬರಲ ಸಮರ್ಥನೆಂಬರು (ಕಾಶಿರಾ. ೦೫-೪೯). ೩. ವಂಚನೆಗೆ ಒಳಗಾದವನು : "ವಿಕೃತಂ ವಿಪ್ರಲಬ್ಧನೆನೆ ಸಲೆ ದೈನ್ಯನಕ್ಕು" (ಮಂಗರಾ. ೭೨-೨೦). ೪. [ ಕಾವ್ಯವಿ ] ರಸಕ್ಕೆ ಪರಿಪೋಷಕಗಳಾದ ಮೂವತ್ತುಮೂರು ವ್ಯಭಿಚಾರಿಭಾವ ಅಥವಾ ಸಂಚಾರಿಭಾವಗಳಲ್ಲಿ ಒಂದು ; ದುರವಸ್ಥೆಯೊದಗುವುದು ಮೊದಲಾದ ಕಾರಣಗಳಿಂದ ಉಂಟಾಗುವ ಒಂದು ಬಗೆಯ ನಿರುತ್ಸಾಹ ಮನೋಭಾವ,-ಕುಗ್ಗಿದ ಮನಸ್ಸು ; P ಇದು ಪೆಚ್ಚುಮುಖ, ಕ್ಷೀಣಸ್ವರ ಮೊದಲಾದುವುಗಳಿಂದ ಅಭಿನಯಗೊಳ್ಳುತ್ತದೆ : ಮತಿ ನಿರ್ವೇದ . . . ಅಮರ್ಷ ದೈನ್ಯೋತ್ಸುಕ . . . ವ್ಯಾಕಿಗಳಿವಿಂತೆಯ್ದೆ ಸಂಚಾರಿಭಾವಂ (ಕಾವ್ಯಾವ. ೬೯೫) ; ಮನದ ಪರಿತಾಪದಿಂದಂ ಜನಿಯಿಸುಗುಂ ದೈನ್ಯಭಾವಮೆಂದದನಱಿಮಂಡನಶೂನ್ಯರೂಪಮಳಿನಾನನ ವಿಕೃತಾಕಾರಕರಣಮಪ್ಪ ಕ್ರಮದಿಂ (ಶೃಂಗಾರ. ೨-೨೬) ; ಆದಂ ಹೃತ್ತಪದೌರ್ಗತ್ಯಾದಿಯೆ ದೈನ್ಯಕೆ ವಿಭಾವಮಂತಾ ಮುಸುಕಿಂಬುದ ವ್ಯಡಾತ್ಯಾಗಂ ಮೆಯ್ಗಾದುನ್ನತಭಾರ ದೈನ್ಯವಾಗನುಭಾವಂ (ರಸರ. ೧೧೮ ಸೂತ್ರ) ; ದುರ್ಗತಿಯಿಂದ ಜನಿಸುವುದು ದೈನ್ಯ (ಭಾರಮಿ. ೩೪೭).

ದೈನ್ಯವಾಚಾಯುತ = ದೀನಭಾವದಿಂದ ಮಾತನಾಡುವವನು ; ರಕ್ಷಣೆಗಾಗಿ ಬೇಡಿಕೊಳ್ಳುವವನು : ಚಾಪಚ್ಯುತರನಪಗತವಾಹನರ ಪರಿಮುಕ್ತಕೇಶಿಗಳ ಗತಿವಿಹೀನರ ದೈನ್ಯವಾಚಾಯುತರ ತರುವಲ್ಮೀಕ ಜಲಸಂಗತರನಿಱಿವುದು ಧರ್ಮವೇ (ಕುಮ್ಯಾಕ. ೨೬-೩೨). [ ಸಂ. ]

**ದೈನ್ಯಂಗಪಿ** (ಕ್ರಿ). ದೀನತೆಯನ್ನು ಹೊಂದು ; ದೈನ್ಯಭಾವದಿಂದಿರು : ದೈನ್ಯಂಗಪಿದು ಪೊಗಳುತ ಸಭಯಮಾನಸರಾಗಿ ವಂದಿಸುವ ಅವನಿಸುರರಿಗೆ ಅಭಯಮಂ ಕೊಟ್ಟು (ಬಸರ. ೫೭-೫೦). [ ದೈನ್ಯ + ಕವಿ$_1$ ]

**ದೈನ್ಯಂದೋಱು** (ಕ್ರಿ). ದೀನತನವನ್ನು ತೋರಿಸಂ: ಆ ತಪೋಧನರೊಳೊರ್ವಂ ಪ್ರಗಲ್ಭತಾಪಸಂ ಕಿಂಕರತೆಯನಾಳ್ದು ಕರಾಂಬುಜಂಗಳಂ ಮುಗಿದು ದೈನ್ಯಂದೋಱಿ ನಿಂದು (ಶಬಶಂ. ೨-೨೫ವ). [ ದೈನ್ಯ + ತೋಱು ]

**ದೈನ್ಯಂಬಡು, ದೈನ್ಯಪಡು** (ಕ್ರಿ). ೧. ದೀನತನವನ್ನು ಅನುಭವಿಸು : ತಾನು ಕೀಳೆಂಬ ಭಾವನೆಯನ್ನು ಹೊಂದು : ಘನದೈನ್ಯಂಬಡುವರ್ ಗುರುತ್ವಗೆಡುವರ್ ಗ್ರಾಸಕ್ಕೆ ಕುಗ್ರಾಮವಾಗೆ (ಸೋಮೇಶ. ೪೮) : ನಾಡೆ ದೈನ್ಯಂಬಟ್ಟಭಯಮಂ ಬೇಡಿ . . . ಭಕ್ತರ ಕರುಣವಡೆವೆನು (ಬಸಪು. ೨೬-೬೬). ೨. ದೈನ್ಯದಿಂದ ಬೇಡಿಕೊಳ್ಳು,-ಪ್ರಾರ್ಥಿಸಂ : ಮಾರಸನ್ನಿಭನ ಪುಪಂಕಿ ಕರತಾರೆಂದುಯೆನಗೆ ದೈನ್ಯಂಬಡಲು (ನವಕೋ. ೨೬-೪೫). **ದೈನ್ಯಪಡು** : ೨. ಕೇಳು ರಘುಪತಿ ಬಿನ್ನಹವನೀ ಖೂಳ ಕೈಮುಗಿದೆನಲು ಬಗೆವನೆ ಧಾಳಿಮಾಡುವೆ ವರುಣಲೋಕವ ಹಾಳುಮಾಡುವೆನು ಗೋಳಿಡಲು ನಾ ಕಟ್ಟೆ ತಹೆ ನೀ ಕಾಳುಮೂಳನ ಬೇಡಲೇತಕ್ಕೇಳು ರಾಘವ ದೈನ್ಯಪಡದಿರುಯೆಂದ ಸುಗ್ರೀವ (ಕಾಶಿರಾ. ೦೫-೪೧).

ದೈನ್ಯಂಬಟ್ಟವ = ಮೋಸಕ್ಕೆ ಸಿಕ್ಕಿ ವ್ಯಥೆಯನ್ನು ಅನುಭವಿಸುತ್ತಿರುವವನು : "ವಿಕೃತಃ, ವಿಪ್ರಲಬ್ಧಃ–ಈ ೨ ದೈನ್ಯಂಬಟ್ಟವಂ" (ಹಲಾಯು. ೬೭-೨೨೮). [ ದೈನ್ಯ + ಪಡು$_1$ ]

**ದೈನ್ಯಗೂಡು** (ಕ್ರಿ). ದೀನತನವನ್ನು ಹೊಂದಿರು ; ಅತ್ಯಂತ ನಮ್ರತೆಯನ್ನು ಪಡೆ : ಒಂದಾನೊಂದುದಿನಮುಮಪಾದೇವಿಯು . . . ಆ ರಾಜಶೇಖರನ ಎಡದೊಡೆಯೊಳ್ಕುಳಿತು ವಿಜ್ಞಾಪನಂಗೆಯ್ವಲ್ಲಿ ಮಹಾಭಕ್ತಿಯಿಂದ ಅತ್ಯಂತ ದೈನ್ಯಗೂಡಿ (ಸಕಪ್ಪ. ೬ ಪೀಠಿಕಾಪ್ರಕರಣ).

[ ದೈನ್ಯ + ಕೂಡು$_1$ ]

**ದೈನ್ಯದೃಷ್ಟಿ** (ನಾ). ದೀನತನವನ್ನು ವ್ಯಕ್ತಪಡಿಸಂವ ನೋಟ : ಒಡಿದಿರ್ದ ಶಿವನ ಮೆಲ್ಲಡಿಯಂ ಬಿಟ್ಟು ದೈನ್ಯ ದೃಷ್ಟಿಯಿಂ ಶಿವನ ಮೊಗಮಂ ನೋಡುತ್ತಿರಲ್ (ಸಂವಿರ.೦೬-೯೦); ಪೊಸಜೆಡೆಯೊಳ್ ತೊಡಂಕಿ ನೊಸಲೊಳ್ ನಡೆಪಾಡಿ . . . ಕರಂಗಳೊಳ್ ವಿರಾಜಿಸಿ ಪದದಲ್ಲಿ ಬಿಳ್ದುವು ಭವಾನಿಯ ದೂನಿಯ ದೈನ್ಯದೃಷ್ಟಿಗಳ್ (ಗಿರಿಕ. ೫-೮೭).

[ ದೈನ್ಯ + ದೃಷ್ಟಿ ]

**ದೈನ್ಯಭಾವ** (ನಾ). ೧. ದೀನತನ ; ದೈನ್ಯ. ೨. ದುಃಖ ; ವ್ಯಥೆ : ಮುಂದೆ ನಿಂದಿರ್ದ ಮೇದಿನೀದೇವಿಯು ದೈನ್ಯಭಾವಮಂ ವಿರಿಂಚಿ ಕಾರುಣ್ಯಚಿತ್ತದಿಂ ನೋಡಿ (ಜಗವಿ. ೧-೨೭ ವ) ; ತರಣಿಕುಲತಿಲಕನೊಯ್ಯನೆ ದೈನ್ಯಭಾವದಿಂ . . . ಸೌಮಿತ್ರಿಗಿಂತೆಂದನು (ಜೈಮಿಭಾ. ೧೮-೫೭).
[ ದೈನ್ಯ + ಭಾವ₂ ]

**ದೈನ್ಯವಚನ** (ನಾ). ೧. ದೀನತನದಿಂದ ಕೂಡಿದ ಮಾತು. ೨. ದುಃಖವನ್ನು ತೋಡಿಕೊಳ್ಳುವ ವಾಕ್ಯ ; ಮೊರೆ : ವ್ಯಾಳಕುಳಾಂಗನಾಜನದ ದೈನ್ಯವಚನಪರಂಪರೆಗೇಳ್ದು (ಜಗವಿ. ೩-೦೧೩ ವ); ಓವಿ ಓ ಎನದಿರ್ದೊಡೆಂತೆಲೆ ದೇವ . . . ಸಂಗಮದೇವ ಎನುತತಿ ದೈನ್ಯವಚನದಲಿ (ಬಸವು. ೨೨-೫೩). [ ದೈನ್ಯ + ವಚನ ]

**ದೈನ್ಯವಡು** 'ದೈನ್ಯಂಬಡು' ನೋ.

**ದೈನ್ಯವದನ** (ನಾ). ೧. ದೀನತನವನ್ನು ತೋರಿಸುವ ಮುಖ. ೨. ದೀನತನವನ್ನು ತೋರ್ಪಡಿಸುವ ಮುಖವುಳ್ಳವನು ; ದೀನ : ಕೈಯಂ ಮುಗಿದು . . . ದೈನ್ಯವದನನುಂ ಕಾರ್ಪಣ್ಯ ಕಾಯನುಮಾಗಿ (ಬಸರ. ೬-೪೪). [ ದೈನ್ಯ + ವದನ ]

**ದೈನ್ಯವೃತ್ತಿ** (ನಾ). ೧. ಬಹಳ ದೀನತನದಿಂದ ಕೂಡಿದ ಜೀವನ ; ಹೀನವಾದ ಬದುಕು : ಕೊಳನ ಬಿಡು ಕಾದೇಳು ಹಿಂದಣ ಹಳಿವ ತೊಳೆ . . . ಭೂವಳಯಮಾನ್ಯನು ದೈನ್ಯವೃತ್ತಿಯು ಬಳಸುವರೆ ಸುಡು ಮರುಳೆ ಕುರುಪತಿ ಕೈದುಗೊಳ್ಳೆಂದ (ಕುಮ್ಯಾಗ. ೫-೨೩). ೨. ದೀನಭಾವ ; ದೀನತನ ; ದೈನ್ಯ : ಅರಸ ದ ಶ ರ ಥ ನಾ ವಿಭಾಂಡುಕ ವರ ಕುಮಾರನ ಚರಣದಲಿ ತನ್ನರಸಿಯರು ಸಹ ದೈನ್ಯವೃತ್ತಿಯ ಭಕ್ತಿಭಾವದಲಿ . . . ವೈಯಿಕ್ಕಿದನು (ತೊರರಾ. ೦-೬-೦೫). ೩. ಹೀನವಾದ ವ್ಯವಹಾರವುಳ್ಳುದು : ಗನ್ನಗತಕಂಗಳ ನೆಲೆಗಳಾಪನ್ನಿಧಿಗಳತಿವೋಹ ಮಾಯಾಸನ್ನವರ್ತಿಗಳಸ್ಥಿರಂಗಳು ದೈನ್ಯವೃತ್ತಿಗಳು . . . ವಾರಸತಿಯರ ಮನಸುಗಳು (ಬಸವು. ೪೦-೬೭). [ ದೈನ್ಯ + ವೃತ್ತಿ₂ ]

**ದೈರ್ಘ್ಯ** (ನಾ). ೧. ಉದ್ದ ; ನೀಳ ; ಆಯಾಮ : "ಸು (ವ್ಯ)ಕ್ತಂ ದೈರ್ಘ್ಯನಾಮಮಜಿಗಾಯಾಮಂ" (ವಸ್ತುಕೋ. ೦೦೩-೦೫) ; ಅರಿರೌದ್ರಂ ಶರದೈರ್ಘ್ಯಮುಲ್ಲಸದಹೀನಾಲಂಕೃತಂ . . . ರಕ್ಷಿಕ್ಕೆ ಭೂಚಕ್ರಮಂ (ಜಗವಿ. ೦-೫) ; ಹಣೆಯಿಂಡ ಬಾಲದವರೆಗೆ ನೀಳವಾಗಿ ಮಾಡಿದ ಅಳತೆಯು ದೈರ್ಘ್ಯವೆನಿಸಿಕೊಳ್ಳುವುದು (ಶಾಗಂಧಿ. ೨೬೭-೯) ; ಇದು ಚರಮಪಾಳಿ ದೈರ್ಘ್ಯದಿಂ ಗುಣಿಯಿಸಿ ವಿಶೇಷಾಧಿಕವಾಗಿ ಮಾಡುತ್ತಿರಲು (ಕ್ಷೇಗಣ. ೫೨-೨೨). ೨. ಎತ್ತರ. ೩. ವಿಶಾಲತೆ ; ಹರಹು : "ದೈರ್ಘ್ಯಂ, ಆಯಾಮಃ, ಆರೋಹಃ-೩ ಉದ್ದವಾಗಿರುವ ತಿರ್ಯಕ್ಪರಿಮಾಣ, ನೀಳವಾಗಿರುವಿಕೆ" (ಸಿದ್ಧಾಂತಿ. ೨೦೩). [ ಸಂ. ]

**ದೈವ** (ಗು). ೧. ದೇವರಿಗೆ ಸಂಬಂಧಪಟ್ಟ ; ದೇವರಿಗೆ ಸೇರಿದ. (ನಾ). ೨. ದೇವತೆ ; ದೇವರು ; ಭಗವಂತ : ಪದಿನಾಲ್ಕುಂ ರತ್ನಕ್ಕಂ ಮೊದಲೆನಗೀ ಚಕ್ರರತ್ನಮಿದಜಿಂ ಮೇಲಾವುದು ದೈವಮೆನಗಿದಯೋಧ್ಯೆಯನಿದು ಪುಗದೆ ತಜುಂಬ ನಿಂದ ಕಾರಣಮೇನೋ (ಆದಿಪು. ೦೪-೭) ; ಮಡಕೆ ದೈವ ಮೊಐ ದೈವ ... ದೈವ ದೈವವೆಂದು ಕಾಲಿಡಲಿಂಬಿಲ್ಲಾ ದೈವನೊಬ್ಬನೆ ಕೂಡಲಸಂಗಮದೇವ (ಬಸವ. ೫೬೩) ; ಎನ್ನ ಕರುಣಾಸಿಂಧುವೇ ನೀವೆನ್ನತಿ ಪ್ರಿಯಬಂಧುವೇ ನೀವೆನ್ನ ಸತ್ಕುಲದೈವವೇ ಮನೆದೈವವೇ ಅಕಟ (ಬಸವು. ೩೬-೩) ; ದೈವದಾಧೀನದಲಿ ಜಗವಾ ದೈವ ಮಂತ್ರಾಧೀನ (ಕುಮ್ಯಾಉ. ೪-೫೦) ; ದೈವವು ಮಂತ್ರವು ತೀರ್ಥವು ವೈದ್ಯವು . . . ಲೋಗರಿಗಿವು ದಿಟಸಿದ್ಧಿಯನೀವುವು (ಕುಂಚಾಪ. ೬೩-೬೬). ೩. ಕ್ಷುದ್ರದೇವತೆ ; ಪರಿಮಿತವಾದ ಪ್ರಭಾವವುಳ್ಳ ದೇವತೆ : ಲೋಗರ ಬೇಡಿಕೊಂಡುಂಬ ದೈವಂಗಳು ತಾವೇನ ಕೊಡುವುವು (ಬಸವ. ೫೫೫). ೪. ಅಧಿಕಾರಿ ; ಒಡೆಯ ; ಪ್ರಭು : ಜಗದೊಳು ಭೋಗಮೋಕ್ಷಂಗಳಿಗೆ ಶಿವನೇ ದೈವವಹುದು (ಬಸವು. ೪೯-೧೩). ೫. ಜನ್ಮಾಂತರದಲ್ಲಿ ಮಾಡಿದ ಪುಣ್ಯಫಲ ; ಅದೃಷ್ಟ ; ಭಾಗ್ಯ ; ಸುಕೃತ : ದೈವವಿದಿರ್ಚೆ ಬಂದುದು ಜಗಜ್ಜಯಮಂ ತಳೆ ದೇವ (ಕಾದಂಪೂ. ೪೨೬) ; ಪುರುಷಂ ದೈವಮೆ ಶರಣೆಂದಿರಲಾಗದು ತನಗೆ ತಾನೆ ಮಾಡದು ದೈವಂ (ಪಂಚತಂ. ೧೯೦-೨೦) ; ತನ್ನ ಚಿಂತೆಯುದೊಂದು ದೈವದ ಗನ್ನಗತಕವದೆರಡು ಭಾವದ ಬನ್ನಣೆಯು ಬಗೆ ಮೂಱು ದೈವಧ ಭಿನ್ನಮುಖ ನಾಲ್ಕು (ಕುಮ್ಯಾಉ. ೩-೫) ; ದೈವ ಅಂದರೆ ಅದೃಷ್ಟ ಅಥವಾ ಕರ್ತಾ ಜೀವ (ಹಸಾರ. ೩-೧೦ ವಿಶೇಷಾರ್ಥ). ಕಾರ್ಯಸಾಧನೆಯಾಗಲು ಯತ್ನ ಮಾಡದಿದ್ದರೆ ನಮಗೆ ದೈವವು ಎಂತು ಸಹಾಯ ಮಾಡೀತು ? (ಸಾವಿತ್ರಿ. ೩) ; ಕಣ್ಣು ಕೊಂಡುಹೋದ ದೈವ ಮತೀಕೊಟ್ಟಿತು (ಗಾದೆ) : ತಾನೆ ಒಂದೆಣಿಸಿದರೆ ದೈವವೊಂದೆಣಿಸಿತು (ಗಾದೆ). ೬. ದೆವ್ವ ; ಪಿಶಾಚಿ ; ಭೂತ : ಅರಸನ ಅಂಕೆಯಿಲ್ಲ ದೈವದ ಕಾಟವಿಲ್ಲ (ಗಾದೆ). ೭. (ಉಕ) ಸಮಾಜ ; ಕುಲದ ಹಿರಿಯರು : ಅವಳ 'ದೈವ'ದ ಗಂಡಸರು ತಮ್ಮ ವೃತ್ತಿಯನ್ನು ಕೈಕೊಳ್ಳಲು ಹೊಲ, ಕಾಡುಗಳಿಗೆ ಹೋಗಿದ್ದರೆ ಹೆಂಗಸರು ತಿರುಪೆಗೆ ಹೋಗಿ ಅದೆಷ್ಟೋ ಸಮಯ ಕಳೆದುಹೋಗಿದೆ (ಬನಸಿ. ೪೯). ೮. ಆಸ್ತಿ ; ಐಶ್ವರ್ಯ.

ದೈವ ತೆರೆ=ಅದೃಷ್ಟವುಂಟಾಗು : ದೈವ ತೆರೆದರೆ ಬಡವ ಬಲ್ಲಿದನಾಗು (ರೂಢಿ). ದೈವದ ಕಲ್ಲು = ಕ್ಷುದ್ರದೇವತೆಗಳನ್ನು ಪೂಜಿಸುವವರು ದೇವತಾಪ್ರತಿನಿಧಿಯೆಂದು ಪೂಜಿಸುವ ಕಲ್ಲು,-ಪ್ರತಿಮೆ : ಅವರ್ ಒಂದುದಿನ ಗ್ರಾಮದ ದೈವದ ಕಲ್ಲನ್ನು ತಂದು, ತಮ್ಮ ಬಚ್ಚಲಮನೆಯ್ಲ್ಲಿ ಹಾಸಿದರು (ಹುಚ್ಚುಹು. ೩೩). ದೈವದ ಕೊಡಿ = ದೇವರ ಬಾವುಟ: ಅದಕ್ಕೆ ವರುಷ ವರುಷ ದೈವದ'ಕೊಡಿ' ಕಟ್ಟಿಸುತಿದ್ದರು. ಆ ಬಳಿಕ ಅದನ್ನಾರಾದರೂ ಕದ್ದು ತಿಂದರೆ ಅವರು ದೈವದ ಕೋಪಕ್ಕೆ ತುತ್ತಾಗುವರೆಂದು ನಂಬಿಕೆ (ರಕ್ತಕೂ. ೨). ದೈವದಚ್ಚು = "ದೇವರ ವಿಗ್ರಹಾದಿಗಳಂ ಬರೆದಿರುವ ಯಂತ್ರ" (ಪದ್ಯಸಾ. II, ೮೨೨ ಟೀಕು) : ಪರಕೆಯ ದೈವದಚ್ಚುಗಳನಚ್ಚರಿಯಾಗಿರೆ ಕಟ್ಟುವರ್ ಕೆಲರ್ ಕೊರಲೊಳ್ (ಪದ್ಯಸಾ. II, ೮೨೨; ಧರ್ಮಾಪ). ದೈವರ್= ಅದೃಷ್ಟಶಾಲಿಗಳು ; ಭಾಗ್ಯವಂತರು : ಕೈವಾರದೆ ಕೈಮುತದಿಂ ಕೈವಾರದಿ ಗೆಲ್ದೆ ಲಜ್ಜಿತೆಯನೆಂತನೆ ಕೇಳ್ ದೈವರ್ಕೂಡಿದೊಡೆತ್ತಂ ದೈವಂ ಮರುಳಾದುದೆಂಬುದಂ ಕೇಳ್ದಱಿಯಾ (ಸುದತಿ. ೧೦-೪೩). ದೈವುಳ್ಳತನ = ಶ್ರೀಮಂತಿಕೆ ; ಐಶ್ವರ್ಯ : ಸಂಸಾರದಲ್ಲಿ ನಮಗೆ ದೈವುಳ್ಳತನವಾಗಲಿ ಬಡತನವಾಗಲಿ ಬರುವದು (ಮುಂಬಯಿ. ೪-೧೯೦). ದೈವುಳ್ಳವ = ಐಶ್ವರ್ಯವಂತ ; ಧನಿಕ ; ಸಾಹುಕಾರ : ಅವನು ಬಡವನೇ ಆಗಲಿ, ದೈವುಳ್ಳವನೇ ಆಗಲಿ, ಈ ತರದ ಕೆಲವು ಸಣ್ಣ ದೊಡ್ಡ ಸಂಧಿಗಳು ಬಂದೇಬರುತ್ತವೆ (ಚರಿಸಂ. ೦೯೯) ; ದೈವುಳ್ಳವರಿಗೆ ದಯವೇ ಇಲ್ಲ ! ತಿತ್ತಿರಿ ತುಂಬಿದ ಕೂಳಿನ ಕೋಟೆ! (ಗರಿ. ೫೯-೧೧) : ದೈವುಳ್ಳವರ ಮಗನೆಂಬ ಗರ್ವವಿದ್ದಿಲ್ಲ (ನಿರಾಳ. ೭೭). [ ಸಂ. ]

**ದೈವಂಬೊಱಿಸು** (ಕ್ರಿ). ಅದೃಷ್ಟವನ್ನೇ ನಂಬು ; ಅದೃಷ್ಟದ ಮೇಲೆ ಭಾರಹಾಕು : ''ಯದೃಚ್ಛಿಕಃ, ದೈವಪರಃ—ಈ ೨ ದೈವಂಬೊರಿ[ಱಿ] ಸಿರ್ಪವಂ'' (ಹಲಾಯು. ೬೨-೨೨೨). [ ದೈವ + ಪೊಱಿಸು ]

**ದೈವಕಾರ್ತಿ** (ನಾ). ಮಾಟ, ಮಂತ್ರ, ತಂತ್ರಗಳನ್ನು ಮಾಡುವ ಹೆಂಗಸು ; ಮಂತ್ರಗಾರ್ತಿ : ಆ ದೈವಕಾರ್ತಿ ಬಂದು ಮಾಯಾದೇವತೆಗಳನೀ ಪರಿಯಿಂದೊಲಿದಾರಾಧಿಸಿದಳು (ಕುರಾಸಾಂ. ೨೫-೦೦೭).
[ ದೈವಕಾಟಿ + -ತಿ₁ (< -ಇತ್ತಿ) ]

**ದೈವಕಾಟಿ** (ನಾ). ಮಾಟ, ಮಂತ್ರ, ತಂತ್ರಗಳನ್ನು ಮಾಡುವವನು ; ಮಂತ್ರಗಾರ ; ಮಾಟಗಾರ. 'ದೈವಕಾರ್ತಿ' ಪರಾ.
[ ದೈವ + -ಕಾಟಿ ]

**ದೈವಕೃತ** (ಗು). ೧. ಅದೃಷ್ಟದಿಂದ ಮಾಡಿದ,-ಉಂಟಾದ: ನೀವು ಸೇನಾಪತ್ಯವನು ಸಂಭಾವಿಸಿರೆ ಸಾಕಿನ್ನು ಮಿಗಿಲಾ ದೈವಕೃತ ಪೌರುಷವ ನಾಳಿನೊಳಚಿಯಬಹುದೆಂದ (ಕುವ್ಯಾ.ಕ. ೧-೧೮). ೨. ಅದೃಷ್ಟ; ದೈವ. [ ದೈವ + ಕೃತ ]

**ದೈವಕೃತಿ** (ನಾ). ದೇವತೆಗಳು ಮೆಚ್ಚುವಂತಹ ಕಾರ್ಯ: ನೀವು ಮೊದಲಲಿ ಬೆಸಸಿದಿರಿ ಮಾಯಾವಿಗಳ ಮಾಯೆಯಲಿ ಗೆಲುವುದು ದೈವಕೃತಿಯಿದು ರಾಜಮಂತ್ರದ ಸಾರತರವೆಂದು (ಕುವ್ಯಾ.ಗ. ೭-೪೪). [ ದೈವ + ಕೃತಿ ]

**ದೈವಗತಿ** (ನಾ). ಅದೃಷ್ಟದ ಘಟನೆ; ಅದೃಷ್ಟದ ಪರಿಣಾಮ; ದೈವೇಚ್ಛೆ: ದೈವಗತಿಗಾರಳಲಿ ಮಾಡುವುದೇನೆನುತ ನುಡಿಸಿದನು ಕುರುಪತಿಯ (ಕುವ್ಯಾ.ಗ. ೬-೨). [ ದೈವ + ಗತಿ ]

**ದೈವಗೇಡಿ** (ನಾ). ಅದೃಷ್ಟಹೀನ; ದುರ್ದೈವಿ; ದುರದೃಷ್ಟವಂತ: ಇದಕ್ಕೆ ದೈವಗೇಡಿಯಾದ ನಾನು ಇನ್ನೇನು ಮಾಡಲಿ (ಉರಾಚ. ೩೦-೩೮ ವ); ಈ ದೈವಗೇಡಿಗಳಿಗೆ ದೇವರನ್ನು ಬಿಟ್ಟು ಯಾರೂ ಕಾಯೋರಿಲ್ಲ (ಪ್ರೇಮಾಕ್ಕ. ೪೭). [ ದೈವ + ಕೇಡು + – ಇ ]

**ದೈವಘಟನೆ** (ನಾ). = ದೈವಗತಿ: ಈಸು ಪೌರುಷ ದೈವಘಟನೆಯೊಳೀಸು ಪರಿಯಂತಾಯ್ತು (ಕುವ್ಯಾ.ಸ. ೧೧-೬); ಆ ಮಹಾಗಿರಿದುರ್ಗವಿದು ತಾ ವ್ಯೋಮಕೇಶನು ಗೆಲಿದ ದುರ್ಗದ ಕೈಮೆಗಿಮ್ಮಡಿಸಾಧ್ಯವಾದುದು ದೈವಘಟನೆಯಲಿ (ತೊರರಾ. ೫೯-೧೪). [ ದೈವ + ಘಟನೆ ]

**ದೈವಚಿಂತಾಸಕ್ತ** (ನಾ). ಭಗವಂತನ ಧ್ಯಾನದಲ್ಲಿ ನಿರತವಾದುದು: ದೈವಚಿಂತಾಸಕ್ತವಾದೆನ್ನ ಹೃದಯದೊಳು ಹೊಮ್ಮಲಂತಃಶರ್ಮಲಹರಿ ಲಹರೀ (ಮಲಿದೇ. ೫೯-೦೦). [ ಸಂ. ]

**ದೈವಜ್ಞ** (ನಾ). ಗ್ರಹಗತಿಯನ್ನು ತಿಳಿದು ಜನರಿಗೆ ಮುಂದೆ ನಡೆಯುವ ಶುಭಾಶುಭ ಫಲಗಳನ್ನು ತಿಳಿಸುವವನು; ಭವಿಷ್ಯಜ್ಞ; ಜೋಯಿಸ: "ಕಾರ್ತಾಂತಿಕಂ . . . ದೈವಜ್ಞನಾ ದಿಶಿಗಣಕಂ ತಾನಕ್ಕುಂ" (ವಸ್ತುಕೋ. ೩೦-೨೦); ಮಕ್ಕಳನಾರ್ಗೆ ಕುಡುವಮೆಂದು ದೈವಜ್ಞನಂ ಬೆಸಗೊಂಡೊಡೆ (ವಡ್ಡಾರಾ. ೬೧-೨೦); ದೈವಜ್ಞವದನತಿಲಕಂ ... ಜಾತಕತಿಲಕಂ ತ್ರೈಲೋಕ್ಯತಿಲಕಮಿದು ಕೇವಲಮೇ (ಜಾತತಿ. ೨೪-೩೮); ಚಂಡ ದೈವಜ್ಞನನಧಿಕ ಗುಣಮಂಡನನ ಬಹುಶಾಸ್ತ್ರಪಠನನ ಪಂಡಿತನ ಪೌರೋಹಿತನ ಮಾಡುವುದು (ಕುವ್ಯಾ.ಉ. ೩-೦೬). [ ಸಂ. ]

**ದೈವಜ್ಞೆ** (ನಾ). ಜ್ಯೋತಿಷ್ಯವನ್ನು ತಿಳಿದಿರುವವಳು. [ ಸಂ. ದೈವಜ್ಞಾ ]

**ದೈವತ** (ಗು). ೧. ದೇವರಿಗೆ ಸಂಬಂಧಿಸಿದ,- ಸೇರಿದ. (ನಾ). ೨. ದೇವತೆ; ದೇವರು: "ಆದಿತ್ಯಾಃ . . . ಅಮೃತಾಶನಃ, ಅನಿಮಿಷಾಃ, ದೇವಃ (ತಥಾ) ದೈವತಂ—ಈ ೨೧ ದೇವರ್ಕಳ ಪೆಸರ್" (ಹಲಾಯು. ೨-೪); ಬಂದೆವು ಇಕೊ ಹಿಮಪರ್ವತ! . . . ನಿಂತಿದೆ ಅಕೊ ಶಿವದೈವತ! (ಕ್ಷ್ರಾಂಜಿರ್ಧ. ೨೦-೧೧); ಪಂತರ ಮನೆಯ ದೇವರನ್ನು ತನ್ನ ದೈವತವನ್ನಾಗಿ ಮಾಡಿಕೊಂಡಳು (ದೀಪಹ. II, ೧೭೮): ಕಲೋಪಾಸಕನಿಗೆ ಈ ಎರಡೂ ಮೂಲಭೂತ ದೈವತಗಳು ಕೊನೆಗೆ ಒಂದಾಗಿಯೇ ಕಾಣಿಸಿಕೊಳ್ಳುತ್ತವೆ (ಸವ್ಯಸಾ. ೭೦). [ ಸಂ. ]

**ದೈವದತ್ತ** (ನಾ). ದೇವರಿಂದ ಕೊಡಲ್ಪಟ್ಟುದು; ದೈವಿಕವಾಗಿ ಬಂದುದು; ಶ್ರೇಷ್ಠವಾದುದು: ನೋಡು ನಿನ್ನ ಕಲೆ ದೈವದತ್ತವಾದದ್ದು (ಹುಕಗೀ. ೧೩೦). [ ದೈವ + ದತ್ತ ]

**ದೈವದುರ್ವಿಪಾಕ** (ನಾ). ವಿಧಿಯ ದುಷ್ಟಪರಿಣಾಮ; ದುರ್ದೈವ: ದೈವದುರ್ವಿಪಾಕದಿಂದ ಆ ಶ್ರೀಮಂತ ದರಿದ್ರನಾಗಿಬಿಟ್ಟ (ರೂಢಿ). [ ದೈವ + ದುರ್ವಿಪಾಕ ]

**ದೈವದೂರ** (ನಾ). ಭಾಗ್ಯದಿಂದ ದೂರವಾದವನು; ಅದೃಷ್ಟಹೀನ; ದುರ್ದೈವಿ: ದೈವದೂರರು ಧರ್ಮಹೀನರು ನೆಯ್ಯ ನೆಯ್ಗಗಳೆನುತ ಮಿಗೆ ಬಿಸುಸುಯ್ದು ತಿರ್ದರು ಕರ್ಣಕೃಪಗುರುನಂದನಾದಿಗಳು (ಕುವ್ಯಾ.ದ್ರೋ. ೧೪-೪೬); ದೈವದೂರರಿಗೆಂತು ಸೇರುವುದುಚಿತ ಬೋಧೆಗಳು (ಜಾಶಿರಾ. ೨೩-೦೫); ಭವಣೆಗೆಗೆ ನೆಲೆ ಬರಿಸಿ ಕೊಲುವನಲಾ ಕೃತಾಂತನು ದೈವದೂರರನು (ನಿಭಾಗ. ೨-೧-೪). [ ದೈವ + ದೂರ ]

**ದೈವದ್ರೋಹ** (ನಾ). ದೇವರುಗಳ ಬಗೆಗೆ ಮಾಡುವ ಅಪಚಾರ: ದೇವಾಲಯ ಮೊದಲಾದವುಗಳ ಸ್ವತ್ತನ್ನು ಅಪಹರಿಸುವುದೇ ಮೊದಲಾದ ದುಷ್ಕೃತ್ಯ: ಗುರುವಿರೋಧ ಮಹೀಬುಧರ ಮತ್ಸರವು ದೈವದ್ರೋಹ ... ವೆಂಬಿವನರವರಿಸದಂಗೈಸೆ ಭೂಪನ ಸಿರಿಗೆ ಮೊಳೆಯದೆ ಕೇಡು (ಕುವ್ಯಾ.ಉ. ೩-೬೯); ಆವ ವಿಪ್ರದ್ರೋಹವೋ ತನಗಾವ ದೈವದ್ರೋಹವೋ ಶಿವ ಆವ ಪುಣ್ಯವನಳಿಸಿದೆನೊ (ಜಾಶಿರಾ. ೩೦-೪೩); ಬಗೆವೊಡಿವು ಮುನ್ನ ಮಾಡಿರ್ದ ದೈವದ್ರೋಹದಧದಿಂದೆ ಬನದ ಪೂಜೆ ವಳಯದೊಳ್ಪುಟ್ಟುಕಂಟಕಿಗಳಾಗಿ ಬಂದು ಸಂಭವಿಸಿರಲ್ ತಳತ ಹೂಂಗೇದಗೆಗಳು (ಕೃಮಿಥಾ. ೩-೩೩). [ ದೈವ + ದ್ರೋಹ ]

**ದೈವದ್ರೋಹಿ** (ನಾ). ದೇವರಿಗೆ ದ್ರೋಹವನ್ನು ಮಾಡುವವನು,-ಅಪಚಾರ ಮಾಡುವವನು: ದೈವದ್ರೋಹಿಗೆತ್ತಣ ಲೇಸು ಬಹುದೆಂದ (ಕುವ್ಯಾ.ದ್ರೋ. ೧೨-೧೯); ದೈವದ್ರೋಹಿಗಳು ನಿಮಗೆ ಅರಿವಿಜಯವೆಲ್ಲಿಯದು ನೀವ್ ಮನಬಂದರ್ಕೆ ನಿಮ್ಮನ್ನೆಯವ ಸಂಹರಿಸಿದಿರಿ ಸಾಕೆಂದು ಸಂಜಯ ತೂಗಿದನು ಶಿರವ (ಕುವ್ಯಾ.ಶ. ೦-೦೩); ಏಳು ದೈಹದ್ರೋಹಿ ಭೂದಿವಿಜಾಳಿ ನಿಂದಕ ನಿಂದಿರೆಸುರರ ಕಾಲಕರ್ಮದ ಮೃತ್ಯು ಬಂದಿದೆ ನೋಡು ಕಣ್ದೆಱೆದು (ತೊರರಾ. ೬-೯೨-೩೦). [ ಸಂ. ದೈವದ್ರೋಹಿನ್ ]

**ದೈವಪರ** (ನಾ). ೧. ದೇವರಲ್ಲಿ ಒಲವುಳ್ಳವನು; ದೈವಭಕ್ತ: ಅವನು ಒಳ್ಳೆಯ ಸಾತ್ವಿಕ ಮತ್ತು ದೈವಪರ (ರೂಢಿ). ೨. ಕೇವಲ ಅದೃಷ್ಟವನ್ನೇ ನಂಬಿಕೊಂಡಿರುವವನು; ಪುರುಷಪ್ರಯತ್ನವನ್ನು ಮಾಡದಿರುವವನು: ಜ್ಞಾತಿಬಹಿಷ್ಕೃತಂ ವ್ಯಸನಿ ದೈವಪರಂ ಶಿಶು ದೀರ್ಘರೋಷಿ . . . ಎನಿಪ ನರಪನೊಳಿಂದುಂ ವಿಜಿಗೀಷುಗಳಪ್ಪ ಮಹೀಭುಜರೇದುಂ ಸಂಧಿಮಾಡರ್ (ಪಂಚತಂ. ೨೨೦-೭). [ ಸಂ. ]

**ದೈವಪುರುಷ** (ನಾ). ದೇವಾಂಶದಿಂದ ಹುಟ್ಟಿದವನು; ದೇವಾಂಶಸಂಭೂತ; ಮಹಾತ್ಮ: ಮುನಿಪನ ಬರಿಸಲೆನ್ನಳವಹುದೆ ಕೆರಳದಡುರುಹಿ ಕಳೆಯನೆ ದೈವಪುರುಷರು ಸುಲಭರೇ (ಜಾಶಿರಾ. ೦-೪೦). [ ದೈವ + ಪುರುಷ ]

**ದೈವಪ್ರೇರಣೆ** (ನಾ). ಅಂತಃಪ್ರೇರಣೆ; ತಾನಾಗಿಯೇ ಉಂಟಾಗುವ ಅಂತರಂಗ ಪ್ರವೃತ್ತಿ: ಹೊಮ್ಮುಗವೆತ್ತ ವಾನರರ ಸೇರುಪಡಿ ತಾನೆತ್ತ ದೈವಪ್ರೇರಣೆಯದ್ದೆ ಸಲ್ಲದಿದು ನಾವಾರು ಮಾಡುವುದಲ್ಲ (ತೊರರಾ. ೬-೩೦-೮೪). [ ದೈವ + ಪ್ರೇರಣೆ ]

**ದೈವಬಲ, ದೈವಬಳ** (ನಾ). ಅದೃಷ್ಟದ ಶಕ್ತಿ,-ಪ್ರಭಾವ,-ಮಹಿಮೆ: ಕುರುಪತಿಗಿಲ್ಲ ದೈವಬಲಮಾಜಿಗೆ ಮೇಲ್ಮಲೆಗೆಯ್ಯರಾಗಳುಂ ಗುರು ಗುರುಪುತ್ರ ಸಿಂಧುಸುತರಾಳ್ದನುಮೆನ್ನನೆ ನಚ್ಚಿ ಪೆರ್ಚಿ ಮುಂ ಪೊರೆದನಿದಿರ್ಚಿ ಕಾದುವರುಮೆನ್ನಯ ಸೋದರರೆಂತು ನೋಡಿ ಕೊಕ್ಕರಿಸದೆ ಕೊಲ್ವೆನೆನ್ನೊಡಲನಾಂ ತವಿಪೆಂ ರಣರಂಗಭೂಮಿಯೊಳ್ (ಪಂಪಭಾ. ೯-೭೦); ಅಗಳವಗತವಿಷಾದರುಮುಪಗತಪ್ರಮೋದರುಮಾದಂತಃಪುರಾವರೋಧಜನಂಗಳೆಲ್ಲಂ ತನ್ನ ಮೇಗಿಲ್ಲದ ಬಲ್ಲಾಳ್ತನಮುಮಂ ದೈವಬಲಮುಮಂ ಮೆಚ್ಚಿದು (ಶಾಂತಿಪು. ೮-೩೪ ವ); ದೈವಪೌರುಷದೊಳಗೆ ಶಿವ ಶಿವ ದೈವಬಲವೇ ಬಲವಲಾ (ಕುವ್ಯಾ.ದ್ರೋ. ೬೪-೪೬). ದೈವಬಳ: ಪಾಂಡವರ್ ಬಳಸಂಪನ್ನರುದಗ್ರದೈವಬಳಸಂಪನ್ನರ್ (ಪಂಪಭಾ. ೧೧-೩). [ ದೈವ + ಬಲ ]

**ದೈವಬಳ** 'ದೈವಬಲ' ನೋ.

**ದೈವಭಕ್ತಿ** (ನಾ). ದೇವರ ಮೇಲಿನ ಅತಿಶಯವಾದ ಪ್ರೀತಿ: ತಾಯದಿರು ಇಂತ ದೃಢಮನ ದೈವಭಕ್ತಿ ಧೃತಿ ಸತ್ಯಚರಿತವ ಮೆರೆಯಬೇಕು (ನಪಜಾ. II, ೩೩); ಅವರು ಬಾಳುವುದು ದೈವಭಕ್ತಿಪೂರಕವಾಗಿ ಸಾಯುವುದು ದೈವಭಕ್ತಿಪೂರಕವಾಗಿ (ಛಾರಚ. ೩೨೬). [ ದೈವ + ಭಕ್ತಿ ]

**ದೈವಮಾಯೆ** (ನಾ). ವಿಧಿಯ ಲೀಲೆ,-ವಿಲಾಸ: ದೇವಿಯಾರೆಂದಱಿಯೆಲಾ ನೀನಾವನೆಂಬುದ ಮಱೆದ ಶಿವ ಶಿವ ದೈವಮಾಯೆಗೆ ಸಂದೊಡುಳಿದವ ರಳವೆ (ಕಾಶಿರಾ. ೪೩-೩೮). [ ದೈವ + ಮಾಯೆ ]

**ದೈವಯಂತ್ರ** (ನಾ). ದೇವರ ಹತೋಟಿ,- ನಿಯಂತ್ರಣ; ದೇವರ ಪ್ರಭುತ್ವ,-ಆಜ್ಞೆ: ಮಂತ್ರಿ ಮತ್ಸರದಿಂದ ಮುಂದೆ ತಪ್ಪುವ ದೈವ ಯಂತ್ರಭೇದವನಱಿಯದಿಂದುಹಾಸನ ಮೇಲೆ ತಂತ್ರವಂಪಣ್ಣಿಕೊಲಿಸು ವೆನೆಂದು ಕಳುಹಿದಂ ಕುಂತಳೇಂದ್ರನ ನಗರಿಗೆ (ಜೈಮಿಭಾ. ೨೯ ಸೂಚನೆ). [ ದೈವ + ಯಂತ್ರ ]

**ದೈವಯಜ್ಞ** (ನಾ). ದೇವರ ಪ್ರೀತ್ಯರ್ಥವಾಗಿ ಮಾಡುವ ಯಾಗ: ಬ್ರಹ್ಮಯಜ್ಞ ಪಿತೃಯಜ್ಞ ದೇವಯಜ್ಞ ಭೂತಯಜ್ಞ ಮನುಷ್ಯಯಜ್ಞ- ಈ ಐದು ಮಹಾಯಜ್ಞಗಳು (ಆರ್ಯಧ. ೧೮೭). [ ದೈವ + ಯಜ್ಞ ]

**ದೈವಯೋಗ** (ನಾ). ಅದೃಷ್ಟದ ಘಟನೆ,-ಸಂಬಂಧ; ಜನ್ಮಾಂತರದ ಪುಣ್ಯಪಾಪಕರ್ಮಗಳ ಫಲವಾಗಿ ಘಟಿಸುವ ಸಂಬಂಧ: ಅಂತಸ ಕೀಳ್ಮೆ ದೈವಯೋಗವ ಪರಿಹರಿಸಲಾರಳವು (ಕುವ್ಯಾಗ. ೪-೪೩); ದೈವಯೋಗದಿಂದ ನೀನು ತಪ್ಪಿಸಿಕೊಂಡು ಬಂದೆ (ಶಾಕುಂತ. ೯೩-೧೦): ಈ ಮಿಂತ್ರನು ದೈವಯೋಗದಿಂದಲೇ ಪ್ರಾಪ್ತನಾದನು (ಮಂಜುಕ. ೨); ದೈವಯೋಗ ದಿಂದ . . . ಅಲ್ಲೇ ಸಮೀಪದಲ್ಲಿ ಒಂದು ಮರದ ಟೊಂಗೆಯು . . . ಅವನ ದೃಷ್ಟಿಗೆ ಬಿತ್ತು (ಮುಂಬಯಿ. ೪-೩೮). [ ದೈವ + ಯೋಗ ]

**ದೈವರೂಪು** (ನಾ). ದೇವರ ಸ್ವರೂಪ; ದೇವತಾಸ್ವರೂಪ: ತನ್ನ ನೆನಹಿನವೋಲು ಕಾರ್ಯವು ಚೆನ್ನಹಡೆ ಲೋಕಕ್ಕೆ ತಾ ಬೇರಿನ್ನು ದೈವವದೇಕೆ ತಾನೇ ದೈವರೂಪೆಂದ (ಕುವ್ಯಾಉ. ೩-೫). [ ದೈವ + ರೂಪು ]

**ದೈವರೇಖೆ** (ನಾ). ಅದೃಷ್ಟದ ಗೆರೆ, – ಬರಹ; ಹಣೆಬರಹ; ಭಾಗ್ಯ ರೇಖೆ: ಒಡಲ ನೂಲಿನಿಂದ ನೇಯುವಂತೆ ಜೇಡ ಜಾಲಾ ತನ್ನ ದೈವರೇಖೆ ಬರೆಯುವಂತೆ ತಾನೆ ಭಾಲಾ (ನಾದಲೀ. ೮೯-೧೦); ಪ್ರತಿಯೊಂದು ಶಬ್ದಕ್ಕೂ ಅದರದರ ದೈವರೇಖೆಯನ್ನು ಕೊರೆಯಿಸುವ ಒಂದು ಜನ್ಮಕುಂಡಲಿ ಸಿದ್ಧವೇ ಆಗಿದೆ (ಭಾಷಾಶಾ. ೧೩೮). [ ದೈವ + ರೇಖೆ ]

**ದೈವರ್ದ್ಧಿ** (ನಾ). ಅದೃಷ್ಟದ ಸಮೃದ್ಧಿ,-ಹೆಚ್ಚಳ,- ಅತಿಶಯ: ದೇವ ರೊಳ್ ಕೆಲರ್ಗೆ ಜಾತಿಸ್ಮರಣಂ ಕೆಲರ್ಗೆ ಧರ್ಮಶ್ರವಣಂ ಕೆಲರ್ಗೆ ಜಿನಮಹಿಮಾದರ್ಶನಂ ಕೆಲರ್ಗೆ ದೈ[ಪಾಠಾಂ. ದೇ] ವರ್ದ್ಧಿದರ್ಶನಂ ಇಂತು ಸಹಸ್ರಾರಕಲ್ಪಂಬರಂ ಅಕ್ಕುಂ (ತತ್ತ್ವಾರ್ಥಸೂ. ೧೩). [ ದೈವ + ಋದ್ಧಿ ]

**ದೈವವಂತ** (ನಾ). ಭಾಗ್ಯವಂತ; ಧನಿಕ: ಯಾರಾದರೂ ದೈವವಂತರ ಕನ್ಯೆಯನ್ನು ಆರಿಸಿ ತಂದರೆ ಸಿಗುವ ಅಲ್ಪಸ್ವಲ್ಪ ವರದಕ್ಷಿಣೆಗೆ ಒಡೆಯನು ನಾನಲ್ಲದೆ ಇನ್ನಾರು? (ಬಿಟ್ಟಿಹೊ. ೯೭). [ ಸಂ. ದೈವವತ್ ]

**ದೈವವಶ** (ನಾ). ಅದೃಷ್ಟ; ಭಾಗ್ಯ: ದೈವವಶದಿಂದ ವಿವಾಹ ಸಂಭ್ರಮ ಗಳೆಲ್ಲ ಮುಗಿದ ಮೇಲೆ ಅದು ವೆಂಕಟರಾಮನ ಗಮನಕ್ಕೆ ಬಂದಿತು (ಗೋಘಟ. ೧೬೨). [ ದೈವ + ವಶ ]

**ದೈವವಶಾತ್** (ಅ). ಭಾಗ್ಯವಿಶೇಷದಿಂದ; ಸುಯೋಗದಿಂದ; ಅದೃಷ್ಟ ವಶಾತ್: ಅವರು ದೈವವಶಾತ್ ಇಂದು ಅಪಘಾತದಿಂದ ಪಾರಾದರು (ರೂಢಿ). [ ಸಂ. ]

**ದೈವವಾಣಿ** (ನಾ). ದೇವರು ಕೊಟ್ಟ ತಿಳುವಳಿಕೆ; ದೇವರ ಆದೇಶ; ಅಂತರ್ವಾಣಿ: ಆ ದೈವವಾಣಿಯು ಬೇಡವೆಂದುದನ್ನು ಆತನು ಮಾಡು ತ್ತಿರಲಿಲ್ಲವಂತೆ (ಸೋಕ್ರಮ. ೩೦). [ ದೈವ + ವಾಣಿ$_1$ ]

**ದೈವವಿಡಂಬನೆ** (ನಾ). ಅದೃಷ್ಟದ ದುರ್ವಿಲಾಸ; ದೈವದ ಮೋಸ: ತನ್ನಂತಹ ನತದೃಷ್ಟನ ಮುಂದೆ ಲೋಲಾನಂತಹ ಲಾವಣ್ಯವತಿಯು . . . ಯಾಚಿಸುವುದು ದೈವವಿಡಂಬನೆಯೆಂದುಕೊಂಡನು (ಜಯಂತ. ೧೬೨). [ ದೈವ + ವಿಡಂಬನೆ ]

**ದೈವವಿದ** (ನಾ). = ದೈವಜ್ಞ: ದೈವವಿದನಂಗನೆಯೊಳ್ ಕೆಳೆಗೊಳ್ವವಂ . . . ಕುಳೀರಸಂಭವಂ (ಜಾತತಿ. ೧೭-೪). [ ಸಂ. ದೈವವಿದ್ ]

**ದೈವವಿದ್ವಿಷ್ಟ** (ನಾ). ದೇವರಿಗೆ ವಿರೋಧಿಯಾದವನು; ದೇವರ ಶತ್ರು: ಅವನಿಂದೆಯುಂ ದೈವ ವಿದ್ವಿಷ್ಟರಾರು೦ಟು (ಕುಮಾರುನಾ. ೧೨೫-೮೭೪). [ ದೈವ + ವಿದ್ವಿಷ್ಟ ]

**ದೈವವಿಮುಖ** (ನಾ). ಪ್ರತಿಕೂಲವಾದ ಅದೃಷ್ಟವುಳ್ಳವನು: ದುರ್ದೈವಿ; ದುರದೃಷ್ಟವಂತ: ದೈವವಿಮುಖಿಗೆ ತಂದೆತಾಯ್ಗಳೆ ಮೃತ್ಯು ಮಾರಿಗಳು (ಕಾಶಿರಾ. ೩೭-೬೦). [ ದೈವ + ವಿಮುಖ ]

**ದೈವವಿಸೂತ್ರ** (ನಾ). ಬ್ರಹ್ಮಸಂಕಲ್ಪ; ವಿಧಿನಿಯಮ; ಪೂರ್ವಜನ್ಮದ ಕರ್ಮಾನುಸಾರವಾಗಿ ಇದು ಹೀಗೆಯೇ ಆಗಬೇಕೆಂಬ ನಿಯಮ; ಭವಿತವ್ಯತೆ: ದೈವವಿಸೂತ್ರಮಂ ಪುರುಷಕಾರಂ ವಿಲಾಸಿಲೇನಕ್ಕುಮೇ (ಜಗವಿ. ೩-೧೯). [ ದೈವ + ವಿಸೂತ್ರ ]

**ದೈವವಿಹೀನ** (ನಾ). ಅದೃಷ್ಟಹೀನ; ದೌರ್ಭಾಗ್ಯವಂತ: ಏಸು ಬಲ ವೆನಿತೈಶ್ವರಿಯವಿದ್ದೇಸು ಭಟರನಿತಗ್ಗಳೆಯರಿದ್ದೇಸಜಲಿ ಫಲವೇನು ದೈವ ವಿಹೀನರಿವರೆಂದ (ಕುವ್ಯಾಗ. ೩-೪): ಭಾವಿಸಿದಿರೇ ಜಾಂಬವರೆ ಸದ್ಭಾವದಲಿ ನೀವುತ್ತರಾಯಿಗಳಾವು ದೈವವಿಹೀನರಾದೆವು (ತೊರರಾ. ೬-೫೧-೩೦). [ ದೈವ + ವಿಹೀನ ]

**ದೈವವ್ಯವಸಿತ** (ನಾ). ದೈವಸಂಕಲ್ಪ; ದೈವೇಚ್ಛೆ: ಇನ್ನು ದೈವವ್ಯವಸಿತದ ಫಲಿಸುವುದಲಾ ಕೌರವನ ಸಿರಿ ಪಣ್ಯಾಂಗನಾವಿಭ್ರಮವ ವರಿಸಿತಲಾ (ಕುವ್ಯಾಗ. ೪-೬೦). [ ದೈವ + ವ್ಯವಸಿತ ]

**ದೈವಶಾಲಿ** (ನಾ). ಅದೃಷ್ಟವಂತ; ಭಾಗ್ಯವಂತ; ಧನ್ಯ. [ ಸಂ. ದೈವಶಾಲಿನ್ ]

**ದೈವಶಿಕ್ಷೆ** (ನಾ). ದೇವರು ಕೊಡುವ ಶಿಕ್ಷೆ; ದೇವರಿಂದುಂಟಾಗುವ ತೊಂದರೆ,-ಕ್ಲೇಶ. [ ದೈವ + ಶಿಕ್ಷೆ ]

**ದೈವಶಿಲ್ಪಿ** (ನಾ). ದೇವತೆಗಳ ಬಡಗಿ; ಸ್ವರ್ಗಲೋಕದ ಶಿಲ್ಪಿ: ಎರಡನೆಯದಾಗಿ "ತ್ವಷ್ಟಾ" ಎಂಬ ದೈವಶಿಲ್ಪಿಯು ಹೆಸರು ಋಗ್ವೇದದಲ್ಲಿಯೇ ಉಕ್ತವಾಗಿದೆ (ಭಾರತ. ೫೦೯). [ ದೈವ + ಶಿಲ್ಪಿ$_1$ ]

**ದೈವಸಂಕಲ್ಪ** (ನಾ). = ದೈವವಿಸೂತ್ರ: ನಾನು ಆ ದಿನ ಮನೆಯಲ್ಲಿರಲಿಲ್ಲ, ಅವನಿಗೂ ಇದು ಯಾರ ಮನೆ ಎಂಬುದೂ ತಿಳಿದಿರಲಿಕ್ಕಿಲ್ಲ. ಎಂತಹ ದೈವ ಸಂಕಲ್ಪ! (ಕರುಳ. ೨೩೯). [ ದೈವ + ಸಂಕಲ್ಪ ]

**ದೈವಸನ್ನಿಧಿ** (ನಾ). ದೇವರ ಸಾನ್ನಿಧ್ಯ: ದೇವರ ಸಮೀಪದಲ್ಲಿ ಇರುವಿಕೆ: ಸಾಕ್ರಟೀಸನ ಸ್ನೇಹಿತನೊಬ್ಬನು ಡೆಲ್ಫಿ ಎಂಬ ಪ್ರಸಿದ್ಧಕ್ಷೇತ್ರಕ್ಕೆ ಹೋಗಿ, ಅಲ್ಲಿಯ ದೈವಸನ್ನಿಧಿಯಲ್ಲಿ . . . ಕೇಳಲಾಗಿ, "ಇಲ್ಲ" ಎಂದು ಆ ದೇವತೆಯು ಉತ್ತರಕೊಡಿಸಿತಂತೆ (ಸೋಕ್ರಮ. ೨೦). [ ದೈವ + ಸನ್ನಿಧಿ ]

**ದೈವಸಹಾಯ** (ನಾ). ದೇವರ ಕೃಪೆ, – ಕರುಣೆ: ದೈವಸಹಾಯವಿದ್ದರೆ ಯಾವ ಕಾರ್ಯವೂ ಸುಲಭವಾಗಿ ನಡೆಯುತ್ತದೆ (ರೂಢಿ). [ ದೈವ + ಸಹಾಯ ]

**ದೈವಸಾಕ್ಷಾತ್ಕಾರ** (ನಾ). ದೇವರನ್ನು ಕಣ್ಣಾರೆ ನೋಡುವಿಕೆ; ದೇವರ ಪ್ರತ್ಯಕ್ಷ ದರ್ಶನ: ತಾನು ಪಡೆದ ಅನುಭವವು ದೈವಸಾಕ್ಷಾತ್ಕಾರವೆಂದೂ, ಅದೇ ಪರಮಸತ್ಯವೆಂದೂ ಅವನು ಬಗೆಯುತ್ತಾನೆ (ದೂರಕ. ೨೩೦). [ ದೈವ + ಸಾಕ್ಷಾತ್ಕಾರ ]

**ದೈವಸಾಧನೆ** (ನಾ). ದೇವತ್ವವನ್ನು ಪಡೆಯಲು ಮಾಡುವ ಸಾಧನೆ; ಆಧ್ಯಾತ್ಮ ಸಾಧನೆ: ಅದಿಯನ್ನು ತಿಳಿಯಲು ಆಶಿಸುವ ಇಂತಹ ಕುತೂಹಲ ಮನೋಭಾವ ತಾನೇ, ಮನುಷ್ಯನನ್ನು ದೈವಸಾಧನೆಗೆ ಎಳೆದಿರುವುದು (ನಿಕಲು. ೩೩). [ ದೈವ + ಸಾಧನೆ ]

**ದೈವಸೂತ್ರ** (ನಾ). = ದೈವವಿಸೂತ್ರ: ಅರಸ ಕೇಳುಪವಾಸಗಳು ಜಾಗರಗಳವಾಲ ಬ್ರಹ್ಮಚರಿಯದ ನಿರತಿಶಯ ಸುವ್ರತವು ದೊರಕಿತು ದೈವಸೂತ್ರದಲಿ [ಹಾಠಾಂ. ಗತಿಯಿಂದ] (ತೊರರಾ. ೬-೪೩-೮). [ದೈವ+ಸೂತ್ರ]

**ದೈವಸೃಷ್ಟಿ** (ನಾ). ದೇವರಂ ಉತ್ಪತ್ತಿಮಾಡಿದಂದು; ದೇವರು ನಿರ್ಮಿಸಿದಂದು; ಜಗತ್ತು: ದೈವಾನುಗ್ರಹದಿಂದ ಅರಳಿದ ಪ್ರತಿಭಾಪುಷ್ಪ ಮಾರ್ಗಮಧ್ಯದಲ್ಲಿ ಆದಷ್ಟು ದೈವಸೃಷ್ಟಿಯ ಸೇವೆಮಾಡಿ, ಕೊನೆಗೆ ದಿವ್ಯಪಾದಗಳಲ್ಲಿ ಲೀನವಾಗಬೇಕು (ಹಂಸಗೀ. ೧೩೦). [ ದೈವ + ಸೃಷ್ಟಿ ]

**ದೈವಹೀನ** (ನಾ). = ದೈವವಿಹೀನ: ದೈವಹೀನನವಿನೀತ ಸೈನ್ಯನನ್ಯಾಯಿಯೆನಿಪ ನರಪನೊಳೆಂದುಂ ವಿಜಿಗೀಷುಗಳಪ್ಪ ಮಹೀಭುಜರೆಂದುಂ ಸಂಧಿಮಾಡರ್ (ಪಂಚತಂ. ೨೨೧-೧೩); ದೈವಬಲವವರಲ್ಲಿ ನೀವೇ ದೈವಹೀನರು (ಕುವ್ಯಾಭೀ. ೧-೨೩); ತಪವನು ನಾನು ಮಾಡಿದೆ ದೈವಹೀನಗೆ ವಿಫಲವಾಯ್ತೆಂದು (ಚಾಶಿರಾ. ೨೩-೨೩). [ ದೈವ + ಹೀನ ]

**ದೈವಹೊಡಕ** (ನಾ). ದೆವ್ವಬಡಿದಿರುವವನು; ಪಿಶಾಚಗ್ರಸ್ತ: ಭೂತಾವೇಶವಾದವನು: ದೈವಹೊಡಕ ಮದ್ಯವ ಪಾನಮಾಡಿದಂತೆ ಮೊದಲೆ ಮನ್ಮಥವಿಕಾರವುಂಟಾದ ನನ್ನ ಮನಸ್ಸು . . . ಕದಡಿತು (ವಚಳಾ. ೨೪). [ ದೈವಹೊಡೆ + - ಕ ]

**ದೈವಹೊಡೆ** (ಕ್ರಿ). ಪಿಶಾಚಗ್ರಸ್ತವಾಗು; ಭೂತಾವೇಶವುಂಟಾಗು: ದೆವ್ವಬಡಿ: ದೈವಹೊಡೆದಂದದಲಿ ಬೆಚಿತು ಸಭಾವಲಯದಲಿ ಗರ್ವವಿಭ್ರಮಭಾವಭೂಷಿತನಾಗಿ ವೈಹಾಯಸವನೀಕ್ಷಿಸುತ ಹಾವಿನಂದದೊಳಿರದೆ ಹಾಸ್ಯರಸಾವಲಂಬನನಾಗದೆಯು ಸುಖಜೀವಿಯಾಗಿಹುದುತ್ತಮವು (ಕುವ್ಯಾಅ. ೮-೩೬). [ ದೈವ + ಹೊಡೆ₁ (<ಪೊಡೆ₁) ]

**ದೈವಾಧೀನ** (ನಾ). ದೇವರಿಗೆ ವಶವರ್ತಿಯಾಗಿರುವುದಂ; ಅದೃಷ್ಟದ ವಶದಲ್ಲಿರುವುದು: ಎಲೆ ಮರುಳೆ ರಾಧೇಯ ಫಡ ಮನವಿಳುಹದಿರು ತಪ್ಪೇನು ಸೋಲವು ಗೆಲವು ದೈವಾಧೀನ ನಿನ್ನಾಳ್ತನಕೆ ಕುಂದೇನು . . . ನೀ ಮಾನವಳುಕದಿರು ಹಿಡಿ ಧನುವನನುವಾಗೆಂದನಾ ಶಲ್ಯ (ಕುವ್ಯಾಕ. ೧೩-೨೧); ಏನ ಮಾಡಿದರೇನು ದೈವಾಧೀನವೆಲ್ಲವು (ಚಾಶಿರಾ. ೨೩-೨೩): ದೈವಾಧೀನದಿ ಬಂದಿದನಾವಂಗಸದಳಮನಿವ್ವುದಂ ನಿರವಿಸಿ ನೀಂ ಪಾವನರಂ ಮಾಳ್ಪುದು ನುತದೇವ ಮಹಾದೇವ ಶಂಭುವೆಮ್ಮನೆನುತ್ತಂ (ಹಾಲಾಸ್ಯ. ೨-೯-೨೮); ಹುಟ್ಟು, ಸಾವು ದೈವಾಧೀನ. ಹುಟ್ಟಿದವನು ಸಾಯಲೇಬೇಕು ಎಂಬ ಮನೋಭಾವವವರದು (ಧರ್ಮಸಾ. ೧೪೧).

**ದೈವಾಧೀನನಾಗು** = ಸಾಯು; ಮರಣಹೊಂದು: ಇವೊತ್ತಿಗೆ ಹದಿನೇಳು ದಿವಸದ ಹಿಂದೆ ಆತನು ದೈವಾಧೀನನಾದನು (ಚಿಚಥಾ. ೧೩); ಕಡೆಗೊಮ್ಮೆ ಹೃದಯವಿಕಾರದಿಂದ ದೈವಾಧೀನನಾದನು (ಸಸ್ಮಳ. ೪೭); ನಂಜುಂಡಮ್ಮನವರು ದೈವಾಧೀನರಾಗಲು ನಾನು ಮಾಡಿದ್ದ ಅನುವಾದವನ್ನು . . . ಪ್ರಕಟಿಸಲು ನನಗೆ ಸಾಧ್ಯವಾಗದೇ ಹೋಯಿತು (ಚಿತ್ರೀಶಿವಿ. ಳ, ೩೬೩೪). **ದೈವಾಧೀನವಾಗು** = ದೈವಾಧೀನನಾಗು: ಮದ್ದಗಿರಿಯಲ್ಲಿಯವರ ಚಿಕ್ಕಪ್ಪ ಗುಲಾಮ ಹೈದರಸಾಬರು ದೈವಾಧೀನವಾದ್ದರಿಂದ (ಹೈದರ. ೩೦); ದೈನ್ಯದಿಂದ ಬೇಡೋಕಿಂತ ದೈವಾಧೀನವಾಗೋದು ಉತ್ತಮ (ಗಾಡಿ). [ ದೈವ + ಅಧೀನ ]

**ದೈವಾನ** (ನಾ). ಅದೃಷ್ಟಶಾಲಿ; ಭಾಗ್ಯವಂತ: ದತ್ತಗೇಡಿಗೆ ಕೊಟ್ಟವರಿಲ್ಲಂತ ದೈವಾನರದು ಕಸಗೊಂಡವರಿಲ್ಲಂತ (ಅಲ್ಪವಿ. ೦೦೮).
[ <ಸಂ. ದೈವವತ್ ]

**ದೈವಾನುಕೂಲ** (ನಾ). = ದೈವಸಹಾಯ: ಅನಲನಲ್ಪವದಾದಡೇನದುವ ನಿಲನಿಂದ ಪ್ರಕಾಶಿಸುತಲಿಹುದನವರತಲಾ ನೀತಿಯಲಿ ದೈವಾನುಕೂಲವದು ಘನವೆನಿಸಿಯ್ಯದುತ್ತಿಹುದುವ ರ್ಧನವಸತ್ಕರ್ಮಾಚರಣದಲಿ ಮನುಜರೊಳಗಿದನಱಿದು ನಡೆವವ ಜಾಣನಹನೆಂದ (ತಿಮ್ಮಅ. ೨-೨೪); ಅನುದಿನ ಕರ್ಮಶುದ್ಧಿಯ ಕಾರ್ಯವಿದ್ದಾಗ ಅರಿದೆನಿಪ ದೈವಾನುಕೂಲವದಿರದೆ ಕೆಡುವುದು ತಿಳಿದದನು ವಿಗೆ ನರನು ಪೃಥುತರ ಪುಣ್ಯಕರ್ಮವ ಮಾಡಬೇಕೆಂದ (ತಿಮ್ಮಅ. ೨-೨೩). [ ಸಂ. ]

**ದೈವಾನುಕೂಲತೆ** (ನಾ). = ದೈವಸಹಾಯಂ: ಏನಮಾಡಿದಡೇನು ಸದ್ಧರ್ಮಾನುಭಾವಂಗೆಸಲೇ ದೈವಾನುಕೂಲತೆ (ತೊರರಾ. ೬-೨೦-೪೦).
[ ಸಂ. ದೈವಾನುಕೂಲತಾ ]

**ದೈವಾನುಕೂಲ್ಯ** (ನಾ). = ದೈವಸಹಾಯ: ಏನನಾಡಿದಡೇನು ಫಲ ದೈವಾನುಕೂಲ್ಯದ ಕುಣಿಕೆ ಬೇಱಹುದಾ ವರೇಂದ್ರನ ಸಾರಿ ಸೋತುದು ನಿಮಿಷಮಾತ್ರದಲಿ (ಕುವ್ಯಾಸ. ೧೩-೫೬). [ ದೈವ + ಅನುಕೂಲ್ಯ ]

**ದೈವಾನುಗ್ರಹ** (ನಾ). ದೇವರ ಕೃಪೆ, – ದಯೆ: ದೈವಾನುಗ್ರಹದಿಂದ ಅರಳಿದ ಪ್ರತಿಭಾಪುಷ್ಪ, ದೈವಾನುಗ್ರಹಕಾತರನಾಗಿ, ಮಾರ್ಗಮಧ್ಯದಲ್ಲಿ ಆದಷ್ಟು ದೈವಸೃಷ್ಟಿಯ ಸೇವೆ ಮಾಡಿ, ಕೊನೆಗೆ ದಿವ್ಯಪಾದಗಳಲ್ಲಿ ಲೀನವಾಗಬೇಕು (ಹಂಸಗೀ: ೧೩೦): ದೈವಾನುಗ್ರಹದಿಂದ ಮಳೆ ಬಂದು ಕೆರೆಗೆ ನೀರು ಬಂದಿದೆ (ರೂಢಿ). [ ದೈವ + ಅನುಗ್ರಹ ]

**ದೈವಾಪರ** (ನಾ). ದೇವರನ್ನು ಅಪರ(ಪರಕೀಯನಲ್ಲದವನೆಂದು ನಂಬಿ)ದವನು; ದೈವಭಕ್ತ; ದೇವರ ಪಕ್ಷಪಾತಿ: ಅನುಪಮಚರಿತ ದೈವಾಪರನು ಪುಣ್ಯನಿಧಿ . . . ಎಂದಿಳೆ ಹೊಗಳುತಿರಲದುವೆ ಕೇಳ್ಕೆ ಸ್ವರ್ಗ (ಕುವ್ಯಾಉ. ೪-೪೦). [ ದೈವ + ಅಪರ ]

**ದೈವಾಯತ** (ನಾ). ದೇವರ ಅಧೀನದಲ್ಲಿರುವುದು; ಅದೃಷ್ಟದ ಕೈಯಲ್ಲಿರುವುದು; ಮನುಷ್ಯರ ಕೈಯಲ್ಲಿ ಇಲ್ಲದಿರುವುದು; ದೈವಾಯತ್ತ: ನಿನಗೆ ಮುನಿದಡೆ ಸೋಯಿಸುವಡಳವಲ್ಲ ಫಡ ದೈವಾಯತಕೆ ನೀನೇಕೆ ಬೆಱೆತಿಹೆಯೆಂದನಾ ಭೂಪ (ಕುವ್ಯಾಗ. ೬-೧೮).
[ <ಸಂ. ದೈವಾಯತ್ತ ]

**ದೈವಾಯತ್ತ** (ನಾ). = ದೈವಾಯತ: ಸಮರಜಯಂ ದೈವಾಯತ್ತಮದಱಿನಾ ಪುರುಷಕಾರಮೆಮಗಾಯ್ತಾಗಳ್ (ಗದಾಯು. ೩-೪೬); ಫಲವು ದೈವಾಯತ್ತ ನಾವು ಮಾಡುವುದೇನು (ಕೃಷ್ಣಾಕೊ. ೦೦೬).
[ ದೈವ + ಆಯತ್ತ₂ ]

**ದೈವಿಕ** (ಗು). ೧. ದೇವತೆಗಳಿಗೆ ಸಂಬಂಧಿಸಿದ; ದೇವತೆಗಳಿಂದ ಉಂಟಾದ,_ಒದಗಿದ: ಮಾನುಷ ಪ್ರಮಾಣವು ದೊರೆಯದಿದ್ದ ಪಕ್ಷದಲ್ಲಿ ದೈವಿಕ ಪ್ರಮಾಣವನ್ನು ಪಡೆಯುತ್ತಿದ್ದರು (ಕಾರದ. ೫೬); ಅಲ್ಲಿನ ಶಿಕ್ಷಣ ದೈವಿಕಭಾವನೆ ಮೂಡಿಸುತ್ತಿದ್ದರೂ ದುತಸಹಿಷ್ಣುತೆಯನ್ನು ಬೋಧಿಸುವಂತಿರಲಿಲ್ಲ (ಶಿಕ್ಷದ. ೬೫); ಈ ದೈವಿಕ ಪ್ರೇರಣೆಯು ತನಗೆ ಬಾಲ್ಯದಿಂದಲೂ ಲಭ್ಯವಾಗಿತ್ತೆಂದು ಆತನೇ ಹೇಳಿದ್ದಾನೆ (ಸೂಕ್ತಿಸು. ೨೦). ೨. ಅದೃಷ್ಟದಿಂದ ಒದಗಿದ; ಆಕಸ್ಮಾತ್ತಾಗಿ ಉಂಟಾದ: ಏನೋ ದೈವಿಕಘಟನೆಯಿಂದ ಅವರ ಭೇಟಿಯೊದಗಿತು (ರೂಢಿ). (ನಾ). ೩. ಅತಿಮಾನುಷವಾದುದು: ಅರಸ ಚಿತ್ತೈಸೇಳು ತಾಳಿವೆ ಸರಿಸದಲಿ ದೈವಿಕದ ಮರನಿವನುರಗನಂದದ ದೈತ್ಯಮುನಿ ಧರಿಸಿಹನು ವಿತಳದಲಿ (ತೊರರಾ. ೪-೨-೪೫). ೪. ದುರ್ದೈವ; ದುರದೃಷ್ಟ: ಪಲವುಂ ಭವಂಗಳೊಳ್ ನೆರಪಿದೆನ್ನಯ ಪಾಪಮೊ ಮೇರೆಗೆಟ್ಟ ಕೋಟಿಲೆಗಳನಾಣ್ಚೆನೆಂಬಬಲ ಸ್ವೈರಣೆಯೋ ಕಡುಪಿಂ ತಗುಳ್ದು ನಟ್ಟಲೆವಸವಾಸ್ತ್ರವಕ್ರತೆಯೊ ದೈವಿಕಮೋ ನಿನಗೇನನೆಂಬೆ ನಗ್ಗಲಿಸಿಯೆ ನಿಂದುದೆಂತುಮಸು ಪೋಗದೆ ಕಲ್ಲೆರ್ದೆಯಿಂ ಮಹೀಪತೀ (ಶಾದಂಪೂ. ೯೨೧). [ ಸಂ. ]

**ದೈವಿಕಶರ** (ನಾ). =ದೈವಿಕಾಸ್ತ್ರ: ಉರಿವುದುದೇ ಕೇರು ಕರ್ಣನ ಗುರು ನದೀನಂದನನ ದೈವಿಕಶರಹತಿಯೊಳಿಮ್ಮಿಂದ ನಿಂದುದು ಪಾರ್ಥ (ಕುಮ್ಯಾಗ. ೮-೩೦). [ ದೈವಿಕ + ಶರ ]

**ದೈವಿಕಾಸ್ತ್ರ** (ನಾ). ದೇವರಿಂದ ಕೊಡಲ್ಪಟ್ಟ ಅಸ್ತ್ರ; ದಿವ್ಯಾಸ್ತ್ರ; ಮಂತ್ರಾಸ್ತ್ರ: ನಾವಿಳಿದ ಬಳಿಕೀ ರಥದೊಳಿರಲಾವ ಹದನೋ ನಿನಗೆ ಕಂಡೈ ದೈವಿಕಾಸ್ತ್ರದ ಮಹಿಮೆಗಳನು (ಕುಮ್ಯಾಗ. ೮-೩೬). [ ದೈವಿಕ + ಅಸ್ತ್ರ ]

**ದೈವೀಕೃಪೆ** (ನಾ). ದೇವರ ದಯೆ,– ಕರುಣೆ: ದೈವೀಕೃಪೆಯ ಮಂತ್ರದಂಡ ತನ್ನಾವುದೋ ಕಾರ್ಯಕ್ಕಾಗಿ ಅರಸಿದ ಹೂವು ಜನತೆಗೆ ನೀಡುವ ತನ್ನ ಪರಿಮಳಕ್ಕೆ ಸುಂಕ ಕೇಳುತ್ತದೆಯೇ ? (ಹಂಸಗೀ. ೧೩೦). [ ಸಂ. ದೈವೀಕೃಪಾ ]

**ದೈವೀಪ್ರವೃತ್ತಿ** (ನಾ). ದೇವತೆಗಳ ಸಂಬಂಧವಾದ ವ್ಯವಹಾರ,– ಆಚಾರ; ಸಾತ್ವಿಕ ಕಾರ್ಯಾಚರಣೆ,– ಪ್ರವರ್ತನೆ: ಅವನಲ್ಲಿದ್ದ ಪಾಶವೀಶಕ್ತಿ . . . ಆ ದಿನ ಬೆಳಗ್ಗೆ ಸುಳುಹುದೋರಿದ್ದ ದೈವೀಪ್ರವೃತ್ತಿಯನ್ನು ಮೆಟ್ಟಿ ತುಳಿದು ಭೂಗತವಮಾಡಿತು (ಪುನರು. ೭೩). [ ಸಂ. ]

**ದೈವೀವಿರುದ್ಧ** (ಗು). ದೈವಿಕ ಪ್ರವೃತ್ತಿಗೆ ವಿರೋಧವಾದ; ಸಾತ್ವಿಕ ಕಾರ್ಯಾಚರಣೆಗೆ ಪ್ರತಿಬಂಧಕವಾದ; ಒಳ್ಳೆಯ ಗುಣಗಳಿಗೆ ಬಾಧಕವಾದ: ದೈವೀವಿರುದ್ಧಂ ತಮಃಪ್ರವೃತ್ತಿಯಂ ನಿಗ್ರಹಿಸಿ (ಶ್ರೀರಾಮಾ. ೪೪೩-೪). [ <ಸಂ. ದೈವವಿರುದ್ಧ ]

**ದೈವೀಶಕ್ತಿ** (ನಾ). ದೇವತೆಗಳ ಸಂಬಂಧವಾದ ಬಲ; ದೈವಪ್ರಭಾವ,– ಮಹಿಮೆ; ದೇವತೆಗಳ ಸಾಮರ್ಥ್ಯ: ಆಗಮವು ದೈವೀಶಕ್ತಿಯ ವಿಲಾಸವನ್ನು ಜಗತ್ತಿಗೆ ಅರಿವು ಮಾಡಿಕೊಡಲು ದೇವಸ್ಥಾನದ ನಿರ್ಮಾಣವನ್ನು ಸಾಧ್ಯವಾಗಿಟ್ಟುಕೊಂಡಿದೆ (ಭಾರದ. ೫೦). 'ದೈವೀಪ್ರವೃತ್ತಿ' ಪರಾ. [ ಸಂ. ]

**ದೈವೀಸಂಪತ್ತು** (ನಾ). ದೇವತೆಗಳಿಗೆ ಸಂಬಂಧಿಸಿದ ಗುಣಗಳ ಸಮೃದ್ಧಿ; ಅಹಿಂಸೆ, ಸತ್ಯ, ಶಾಂತಿ, ತ್ಯಾಗ ಮೊದಲಾದ ಒಳ್ಳೆಯ ಗುಣಗಳು; ಶೀಲವಂತನಾಗಿ ನಡೆದುಕೊಳ್ಳುವ ಸ್ವಭಾವ; ಸದ್ಗುಣಗಳನ್ನು ಪ್ರಕಟಿಸುವ ಸ್ವಭಾವ: ಅಹಿಂಸಾ, ಸತ್ಯ . . . ಇತ್ಯಾದಿ ಗುಣಗಳನ್ನು ಘೋಷಿಸಿದ ಆತ್ಮ ದೈವೀಸಂಪದ್ಯುಕ್ತವಾಗಿ ಜಗತ್ಕಲ್ಯಾಣಸಾಧಕವಾಗುತ್ತದೆ (ಹುಳ್ಳಾರ. ೭೪೪ ಟೀಕೆ). 'ಆಸುರೀಸಂಪತ್ತು' ಪರಾ. [ ಸಂ. ದೈವೀಸಂಪದ್ ]

**ದೈವೀಸ್ಫೂರ್ತಿ** (ನಾ). ದೈವಿಕವಾದ ಸ್ಫುರಣೆ; ಸಮಯೋಚಿತವಾದ ಸಂಗತಿಯು ತಟ್ಟನೆ ಹೊಳೆಯುವುದು: ಕಾವ್ಯ ಎಂಬುದು ಸೃಷ್ಟಿ, ಅದರಲ್ಲಿ ಆಡುವ ಉಸಿರು ದೈವೀಸ್ಫೂರ್ತಿ– ಎಂದು ಅವರ ನಂಬಿಕೆ (ಸೌಂದಕ. ೦೦೬). 'ದೈವೀಪ್ರವೃತ್ತಿ' ಪರಾ. [ ಸಂ. ]

**ದೈವೇಚ್ಛೆ** (ನಾ). ಪೂರ್ವಜನ್ಮದ ಕರ್ಮಾನುಸಾರವಾಗಿ ಇದಂ ಹೀಗೆಯೇ ಆಗಬೇಕೆಂಬ ನಿಯಮಂ; ವಿಧಿನಿಯಮ; ಬ್ರಹ್ಮಸಂಕಲ್ಪ; ಭವಿತವ್ಯತೆ: ಎಮ್ಮ ಸಾವುಮುಳಿವುಂ ದೈವೇಚ್ಛೆಯಿಯಾಯ್ತಾಗದೇ (ಹಂಪಕಲಾ. ೨-೫೯); ನನ್ನದು ಹೀಗೆ ಕೊನೆಗಾಣಬೇಕೆಂದು ದೈವೇಚ್ಛೆ ಇತ್ತು. ಅದಕ್ಕೆ ನೀನು ನಿಮಿತ್ತವಾಗಿ ಒದಗಿ ಬಂದೆ (ಹಂಸಗೀ. ೨೦೩). [ ದೈವ + ಇಚ್ಛೆ ]

**ದೈವೋದಯ** (ನಾ). ಒಳ್ಳೆಯ ಅದೃಷ್ಟದ ಆರಂಭ; ಭಾಗ್ಯೋದಯ: ಅವಳ ದೈವೋದಯವದ್ಯೆಸಲೆ ಸವಡಿಸೀರೆಯು ಸುತ್ತು ಸಡಿಲದು (ಕುಮ್ಯಾಸ. ೦೬-೩) [ ದೈವ + ಉದಯ ]

**ದೈವೋಪಹತ** (ಗು). ದುರದೃಷ್ಟಕ್ಕೆ ಈಡಾದ; ದುರ್ದೈವಕ್ಕೆ ಒಳಗಾದ: ಏಸಲೇ ದೈವೋಪಹತ ಮನದಾಸೆ ಜಾರಿಂದಡಗುವುದು (ಕುಮ್ಯಾಆ. ೨೦-೪೭). [ ದೈವ + ಉಪಹತ ]

**ದೈಶಿಕ** (ಗು). ೧. ದೇಶಕ್ಕೆ ಸಂಬಂಧಪಟ್ಟ: ದಹಿಕ ದೈಶಿಕ ಕಾಲಿಕತ್ರಯ ಗಹನ ಕರ್ಮಗಳುಂಟು (ಹಸಾರ. ೯-೯). (ನಾ). ೨. ಆಯಾ ದೇಶದಲ್ಲಿ ಆಚರಿಸಬೇಕಾದ ಕರ್ಮ: ಮನುಷ್ಯರು ಮಾಡಬೇಕಾದ ಕರ್ಮಗಳು ಮೂರು ಪ್ರಕಾರ, ದೈಹಿಕ, ದೈಶಿಕ, ಕಾಲಿಕ . . . ದೈಶಿಕ ದೇಶಸಂಬಂಧವಾದುದು (ಹಸಾರ. ೯-೯ ತಾತ್ಪರ್ಯ). [ ಸಂ. ]

**ದೈಹಿಕ** (ಗು). ದೇಹಕ್ಕೆ ಸಂಬಂಧಪಟ್ಟ; ಶರೀರಕ್ಕೆ ಸಂಬಂಧಿಸಿದ: ಜನಾಂಗದ ದೈಹಿಕ ಯೋಗ್ಯತೆ, ಮಾನಸಿಕ ಶಕ್ತಿ... ಇದೇ ಹೆಣ್ಣುಮಕ್ಕಳ ಆರೋಗ್ಯ ಮತ್ತು ಸುಖಸಂತೋಷಗಳನ್ನು ಹೊಂದಿಕೊಂಡಿದೆ (ಅದುಸಾ. ೨೦); ಮೂಢನಂಬಿಕೆಯಾದರೂ ದೃಢವಾದುವಾದರೆ, ಮನಸ್ಸಿಗೆ ಧೈರ್ಯವನ್ನು ತುಂಬಿ ದೈಹಿಕ ಪವಾಡಗಳನ್ನು ನಡಸಬಹುದು (ಮನೋನಂ. ೦೯೬); ಮನುಷ್ಯರು ಮಾಡಬೇಕಾದ ಕರ್ಮಗಳು ಮೂರು ಪ್ರಕಾರ: ದೈಹಿಕ, ದೈಶಿಕ, ಕಾಲಿಕ,– ದೈಹಿಕವೆಂದರೆ ದೇಹದಿಂದ ಮಾಡುವ ಸೇವೆಗಳು – ನಮನಾದಿಗಳು (ಹುಳ್ಳಾರ. ೯-೬ ತಾತ್ಪರ್ಯ). [ ಸಂ. ]

**ದೈಹಿಕಮಲ** (ನಾ). ಶರೀರದಲ್ಲಿ ಉತ್ಪತ್ತಿಯಾಗುವ ಹನ್ನೆರಡು ಬಗೆಯ ಅಶುಚಿದ್ರವ್ಯ,– ಕೊಳೆ,– ಹೊಲಸು: ಗುಗ್ಗೆ ಜಬುರು ಕಣ್ಣೀರು ಸಿಂಬಳ ಶ್ಲೇಷ್ಮ ಬೆವರು ಕನುಗು ಜಲ ಮಲ ರಕ್ತ ರೇತಸ್ಸು ಮಜ್ಜೆ ಈ ಹನ್ನೆರಡೂ ದೈಹಿಕಮಲಗಳು (ಅಧ್ಯಾಶ. ೦೦೦). [ ದೈಹಿಕ + ಮಲ ]

**ದೈಹಿಕಯಾತನೆ** (ನಾ). ಶರೀರಕ್ಕೆ ಉಂಟಾಗುವ ಹಿಂಸೆ,– ಬಾಧೆ: ದೈಹಿಕ ಯಾತನೆಯಾಗಿ ಪರಿಣಮಿಸಿದ ನೈತಿಕ ಜುಗುಪ್ಸೆ . . . ಭಯಂಕರವಾಗಿ ಅವನ ಮನಸ್ಸನ್ನಾಕ್ರಮಿಸಿತು (ಪುನರು. ೨೩೬). [ ದೈಹಿಕ + ಯಾತನೆ ]

**ದೈಹಿಕವಿಕ್ರಮ** (ನಾ). ಶಾರೀರಕವಾದ ಸಾಹಸ,– ಶ್ರಮ: ಹೀಗೆ ದೈಹಿಕ ವಿಕ್ರಮವೇ ಕ್ರಮವೆಂದು ಕೊರೆದುಕೊಂಡನು (ಜಯಂತ. ೨೭೯). [ ದೈಹಿಕ + ವಿಕ್ರಮ ]

**ದೈಹಿಕಶಿಕ್ಷಣ** (ನಾ). ದೇಹಶಕ್ತಿಯನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿ ಕೊಡುವ ವ್ಯಾಯಾಮ ಶಿಕ್ಷಣ; ಅಂಗಸಾಧನೆಯನ್ನು ಕಲಿಸುವುದು: ದೈಹಿಕಶಿಕ್ಷಣವು ಪ್ರೌಢವಿದ್ಯಾಭ್ಯಾಸದ ಒಂದು ಅವಿಭಾಜ್ಯ ಭಾಗವಾಗಿದೆ (ರೂಢಿ). [ ದೈಹಿಕ + ಶಿಕ್ಷಣ ]

**ದೈಹಿಕಸುಖ** (ನಾ). ಶರೀರದಿಂದ ಅನುಭವಿಸುವ ಸುಖ; ಕಾಮಸುಖ; ಕಾಮೋಪಭೋಗ: ಹಸಿವಾದಾಗ ರುಚಿರುಚಿಯಾದ ಭೋಜನ, ಕೋಪ ಬಂದಾಗ ಅಬ್ಬರ, ದೈಹಿಕಸುಖ ಬಯಸಿದಾಗ ಹೆಂಡತಿ ಸಾಯುತ್ತಾ ಬಿದ್ದಿದ್ದರೂ ಅವಳನ್ನು ತಮ್ಮ ಬಯಕೆಗೆ ಬಲಿಕೊಡುವುದು ಅವರಿಗೆ ಸಾಮಾನ್ಯವಾಗಿಹೋಗಿತ್ತು (ಶೀಲಾಗೂಂ. ೦೦೩); ಹೆಂಡೊಮ್ಮೆ ದೈಹಿಕ ಸುಖಕ್ಕೆ ತನ್ನನ್ನು ಬಳಸಿಕೊಂಡಂತೆ ಮತ್ತು ಆಧ್ಯಾತ್ಮಿಕ ಕಲ್ಯಾಣಕ್ಕೆ ಬಳಸಲವಕಾಶ ಕೊಡುವುದಿಲ್ಲವೆಂದೂ . . . ಅವಳು ಯೋಚಿಸಿದಳು (ಪುನರು. ೩೩). [ ದೈಹಿಕ + ಸುಖ ]

**ದೊಂಗರ** 'ಡೊಂಗರ' ನೋ.

**ದೊಂಟೆ** (ನಾ). ಪ್ರಾಣಿಗಳ ಕೊರಳಿಗೆ ಕಟ್ಟುವ ಮರದ ತುಂಡು; ಗುದಿ: ಕೊರಳ ದೊಂಟೆ ಟಣ್ ಟಣ್ ಎನೆ ಚಿಮ್ಮುತ ಬಿಸಿಲೊಳು ಮಲಗಿಹ ಹೊಮ್ಮಿದ ಹಸುರಲಿ ಕಟಿಯುವ ಕರುಗಳ ಕೂಡುವೆನು (ಕದಳಿ. ೨-೦೮); ಕೊಟ್ಟಿಗೆಯಲ್ಲಿಯೂ ಗೊರಸಿನ ಸದ್ದು, ಕೊಂಬಿನ ಸದ್ದು, ದೊಂಟೆಯ ಸದ್ದು . . . ಕೇಳಿಸತೊಡಗಿತು (ಮಲೆಮ. ೪೦). [ ದೇ.ಶ ತಮಿ. ತೊಣ್ಣು; ಮಲ. ತೊಣ್ಣ ]

**ದೊಂಡಿ** (ನಾ). ಒಂದು ಬಗೆಯ ವಿಮಾನಂ: ಗಜ ಮುಖವ ಕಾಗೆಂಡೆಯ್ಯ್ಯರಿಗ ದೊಂಡಿ ಕೆಂಗಟ . . . ಎಂಬ ಪರಿಪರಿಯ ವಿಮಾನ್ಗಳಂ ಗುಡಿಗೆಯ್ದರ (ಹಕಳಾ. ೩-೪೩). [ ದೇ.ಶ ತಮಿ. ತೊಣ್ಣೈ; ತೆಲು. ದೊಂಡು, ದಂಡಾವ ]

**ದೊಂಡೆ$_1$, ಜೊಂಡು$_3$, ಜೊಂಡೆ, ತೊಂಡೆ$_4$** (ನಾ). ೧. ಸಿಕ್ಕು ಸಿಕ್ಕಾಗಿರುವುದು ; ತೊಡರಿಕೊಂಡಿರುವುದು ; ಹೆಣೆದುಕೊಂಡಿರುವುದು : ನಾನಾವ್ಯಾಗಾನೀಕದ ಕರ್ಗಂಡಂಗಳಂ ದೊಂಡೆಗಳನಡಸಿ ನುಂಗುತ್ತುಂ (ಶಾಂತೀಶ್ವ. ೩-೬) ; ಪಾರ್ಥನ ಕರುಳ ದೊಂಡೆಯು ಕೊಳ ಮುದ್ದೆಯ ಬಡಿಸಿ ದೈತ್ಯರಿಗೆ . . . ದಣಿಸಿದಡರಸು ಕೌರವನೆನ್ನ ಸಾಕಿತಕೆಂದು ಫಲವೆಂದ (ಕುವ್ಯಾ.ಕ. ೮-೪೨); ವೋಱಿವೃತಿರ್ದವ್ವ ರಣಸಮುದ್ರದ ತೆರೆಯ ಬಲುರವದಂಕೆ ನೆಣನುಬ್ಬರದ ನೆತ್ತರಿನಸ್ಥಿ ಪಮಾಂಸದ ಮಿದುಳ ದೊಂಡೆಗಳ . . . ನಡು ಹಱಿದ ಕಱಗಳ ಖಳಕದಂಬದ ಸಂಚಿರಕೆಯಲಿ (ತೊರಠಾ. ೬-೩೬-೪೨). ೨. ಅಜಿಗಿಜಿಯಾದುದಂ ; ಜಿಗುಟಾದುದು : ಕಣವೋದ ಕಾಲ್ ಸಿಡಿದ ಖಂಡದ ದೊಂಡೆಯು ರಾಶಿ ಪೊಕ್ಕವರ್ಗಡಿಯಿಡಲಿಲ್ಲೆನಲ್ (ಮುಜಾಸೀ. ೧೨-೧೩). **ಜೊಂಡು$_3$** : ೧. ಬಿಡುಮಿದುಳ ಜೊಂಡಿನಿಂ ನಡುತೊಡೆಯ ತುಂಡಿನಿಂ ಪೊಡಗೆಡೆದು ದೀಳ್ದರಿಂ ನೆತ್ತರಿನೊಳಾಳ್ದರಿಂ ರಣಧರಣ ಕಣ್ಗೆಸೆದುದು (ಜಬಪು. ೩೮-೩೯). **ಜೊಂಡೆ** : ೧. ನರಳ್ವ ವೀರರ ಮಿದುಳ ಜೋಱಿನ ಜೊಂಡೆ ಜೋಡಣೆಯ . . . ಭಟರಟ್ಟೆಗಳೆಸೆದುದು ಕೂಡೆ ರಣಭೂಮಿ (ಕುವ್ಯಾ.ಕ. ೦೫-೩೩) ; ಕರುಳ ರಕುತದ ಜೊಂಡೆಯಲಿ ಜರಿದೆಲುಗಳಲಿ ಜವನುಂಡು ಕಾಱಿದ ನೆಲನವೊಲು ರಣಭೂಮಿ ರಂಜಿಸಿತು (ತೊರಠಾ. ೩-೬-೦೬). **ತೊಂಡೆ$_4$** : ೧. 'ತೊಂಡೆಗರುಳು' ಪರಾ.

**ದೊಂಡೆ$_2$** 'ತೊಂಡೆ$_3$' ನೋ.

**ದೊಂಡೆಕರುಳ್** 'ದೊಂಡೆಗರುಳ್' ನೋ.

**ದೊಂಡೆಗರುಳ್, ತೊಂಡೆಗರುಳು, ದೊಂಡೆಕರುಳ್, ದೊಂಡೆಗರುಳು** (ನಾ). ಕುಚ್ಚುಕುಚ್ಚಾಗಿ ಹೆಣೆದುಕೊಂಡಿರುವ ಕರುಳು ; ಮಾಲೆಗರುಳು : ಮುನಿಸಂ ಮಾಡಿದರಾತಿನಾಥರಡಗಂ ಸುಪ್ಪಲ್ಗೆ ಕೆನ್ನೆತ್ತರಂ ಕೆನೆಗೊಂಡಾಱಿದ ಪಾಲ್ಗೆ ದೊಂಡೆಗರುಳಂ ಕರ್ದಂಗೆ ಲೆಕ್ಕ[ಕ್ಕ ತಂ]ದಿನಿಸುಂ ಮಾಣದೆ ಪೀರ್ದು ಪೀರ್ದು ನೊಣೆದು (ಹಂಪಭಾ.೧೨-೦೬೦); ದೊಂಡೆಗರುಳುಂ ತ್ರೂರಳೆಯುಂ ಮುತ್ತೆ ಬಾಡುತಂ ಪುಂಡಗುಳು ನೀರ್ಸೂರಿಯ ನಡನಡುಗಿ ಕೋಡುತಂ (ಬಿಂದೂರ. ೦-೬) ; ಕಂಡು ಪವನಜ ತುಡುಕಿ ಮಿಗೆ ಮುಂಕೊಂಡು ನೆಲಕ್ಕಪ್ಪಳಿಸೆ ಮೆಲ್ಲನೆ ದೊಂಡೆಗರುಳುಱಿ ಸೂಸೆ ಚೆಲ್ಲಿತು ರಾಜಸಭೆಯೊಳಗೆ (ಕುವ್ಯಾ.ವಿ. ೬೦೪. ೪-೬೨) ; ವೀರ ದುರ್ಮುಖನ ದೊಂಡೆಗರುಳಗಲಿದವ್ವ ಪನಸನ ತುಂಡುಗಳು ತೂಱಿದವ್ವ ಮರುಳ್ಗಳ ತಂಡದಲಿ ತಱಿದೊಟ್ಟಿದನು ಮಿಕ್ಕಾದ ಯೂಥಪರ (ತೊರಠಾ. ೬-೦೬-೨೨) ; ದೊಂಡೆಗರುಳ್ಗಳನುಗಿದು ಸೌಬಲನ ನಾಸಿಕದ ಬಿಸಿನೆತ್ತರಂ ಸುರಿಯಿಸಿ (ಘೋರಾಸು. ೩೫-೨೩). **ತೊಂಡೆಗರುಳು** : ಮುಂಡದ ಹಲಗೆ ಹೆಣದ ಎಲುವಿನ ಕತ್ತಿ ತೊಂಡೆಗರುಳು ಬಿರುಹಗ್ಗ ಖಂಡದ ಹಿಡಿಗಲ್ಲು ನರದ ಚಬುಕುಗಳ ಗಂಡುಭೂತಗಳೆದ್ದವಾಗ (ಹರಿಶಾಂ. ೩-೫೬) ; ತೊಂಡೆಗರುಳನು ದಂಡೆಯನು ಮಾಡಿಸುವೆಯಾವಳಿಗೆ (ಕರಿಕ. ೬೩-೩). **ದೊಂಡೆಕರುಳ್** : ಮೊರ್ಬಿರಿ ಪಾಯೆ ಕಂಠಗತಜೀವಿತರಾದವರೆಕ್ಕಲಂ ಕನಲ್ದುರ್ಬಿ ಪಿಸುಟ್ಟು ದೊಂಡೆಕ[ಪಾಠಾಂ. ಗ]ರುಳಂ ತಳೆದಿರ್ಪವರ್ . . . ಸರ್ಬ ಮೃಗಂಗಳಂ ಕೆಡಪಿ ಬರ್ಪವರೊಪ್ಪಿದರ್ (ಮಕಸು. ೫-೪೦). **ದೊಂಡೆಗರುಳು** : ದೊಂಡೆಗರುಳಿನ ಪಾಯು ಡೋಲಿನ ಕುಂಡಲಿತಕರಜಂಘೆಗಳ ಬಿಡುಮಂಡೆಗೆದಱಿದ ಖಳನ ಕಂಡುದು ಭೂಸುರವ್ರಾತ (ಕುವ್ಯಾ.ಆ. ೧-೩೩) ; ದೊಂಡೆಗರುಳಿನ ರಾಸಿಗಳ ಕೊಡೆಯಿಂದ ಮುರಿದಿಹ ಕಾಲ್ಗಳಿಂ ರಣವಂದು ಭೀಕರಿಸಿದುದು (ದೇವೀಮ. ೩-೨೫). [ ದೊಂಡೆ$_1$ + ಕರುಳ್ ]

**ದೊಂಡೆಗರುಳು** 'ದೊಂಡೆಗರುಳ್' ನೋ.

**ದೊಂಡೆಗೆಸಱು** (ನಾ). ಮಂದವಾದ ಕೆಸರು ; ಅಜಿಗಿಜಿಯಾದ ಕೆಸರು : ರಕುತದ ದೊಂಡೆಗೆಸಱಿನೊಳದ್ದುದಗಣಿತ ರಥಗಡಾಕ್ಕಟೆಯ (ಕುವ್ಯಾ.ಕ. ೬-೩೦). [ ದೊಂಡೆ$_1$ + ಕೆಸಱು (<ಕೆಸಱ್) ]

**ದೊಂಡೆದೊಂಗುವೊಂಗು ?** (ಕ್ರಿ). (?) : ಕೆದಱಿದ ಕುಂತಳಂ ಕುಸಿದು ಕೊರ್ಬಿದ ಪೆರ್ವೊಲೆ ದೊಂಡೆದೊಂ[ಪಾಠಾಂ. ವೊಂ]ಗುವೊಂಗಿದ ತುಟಿ ತಳ್ಪಿನಿಂ ಮುಱಿದ ಮೆಯ್ಮವಿರೋಪನ ತಳ್ತ ತೋಳ್ಗಳೊತ್ತಿದ ಬಱಿಮೆಯ್ಯ ಕೂರುಗುರ ಬಾಸುಱಿ ಭೂಷಣವಾಗಳುಂ ರತಾಂತದೊಳ್ (ರೀಠಾಪ. ೦೩-೩೫). [ ? ]

**ದೊಂಡೆನರವು**(ನಾ). ಮುದ್ದೆಗಟ್ಟಿದ ನರ; ಹೆಣೆದುಕೊಂಡ ನರ: ತೊಗಲ ಕೊಯ್ಲಿನ ಮುಱಿದ ಮೂಳೆಗಳ ದೊಂ[ಪಾಠಾಂ. ಜೊಂ]ಡೆನರವಿನ ಜುಱಿತ ಮಿದುಳಿನ . . . ಕಾಲಾಂತಕನ ಹಬ್ಬೆಳಸು ಹುಲುಸಾಯ್ತು (ಕುವ್ಯಾ.ಭೀ. ೯-೦೩). [ ದೊಂಡೆ$_1$ + ನರವು ]

**ದೊಂದಡಿ** 'ದೊಂದುಳಿ' ನೋ.

**ದೊಂದಣ** 'ದೊಂದುಳಿ' ನೋ.

**ದೊಂದಣೆ** 'ದೊಂದುಳಿ' ನೋ.

**ದೊಂದಿ** 'ದೋಂದೆ' ನೋ.

**ದೊಂದಿಬೆಳಕು** 'ದೊಂದಿವೆಳಗು' ನೋ.

**ದೊಂದಿಮೀಸೆ** (ನಾ). ಗುಂಡುಗುಂಜಾಗಿರುವ ಮೀಸೆ ; ಕೆದರುಮೀಸೆ : ದೊಂದಿಮೀಸೆಯ ಆ ವ್ಯಕ್ತಿ ಉದ್ದವಾಗಿ ದಡೂತಿಯಾಗಿದ್ದನು (ಪುನರು.೨೫). [ ದೊಂದಿ (<ದೋಂದೆ) + ಮೀಸೆ ]

**ದೊಂದಿವೆಳಗು, ದೊಂದಿಬೆಳಕು** (ನಾ). ಪಂಜಿನ ಬೆಳಕು: ದೊಂದಿವೆಳಗಂ ಸಮರ್ಪಿಸಿ ನಿಶೀಥಿನಿಯ ಮಕಳೆ, ದ್ರಾಂಟಿದರಗಂ ಇರ್ವರ್ . . . ಕಬಿದ್ಧಜರ್ ! (ಶ್ರೀರಾಮಾ. ೬೧೦-೦೨). **ದೊಂದಿಬೆಳಕು** : ಒಮ್ಮೆ ದೊಂದಿ ಬೆಳಕಿನಲ್ಲಿ ಎರಡು ಮೈಲಿ ಕಾಡು ಸುತ್ತಿ ದಿಕ್ಕುತಪ್ಪಿ ನಿಂತ ಹಸುವನ್ನು ಹುಡುಕಿ (ಬಾಳಿನ್ಯ. ೦೪). [ ದೊಂದಿ ( < ದೋಂದೆ) + ಬೆಳಗು$_2$ ]

**ದೊಂದುಳಿ, ದೊಂದಡಿ, ದೊಂದಣ, ದೊಂದಣೆ** (ನಾ). ೧. ಗುಂಪು ; ಸಮೂಹ; ಜಂಗುಳಿ: "ಬಂಬಲ್ . . . ದೊಂದುಳಿ . . . ಗೊಂದಣೆ (ಉಂದಲ್)–ಈ ೪೦ ಸಮೂಹಂ" (ಕಶಸಾ. ೦೦-೨೨೨); "ಜಂಗುಳಿ ಕಿರಳ್ದೊಂದುಳಿ ನೆರವಿ ಘಟ್ಟು . . . ಸಂದಣಿ ಜಾಳಿಗೆಯುಮೆನೆ ಶ್ರೇಣಿಕಾಖ್ಯಂ" (ಕರ್ಣಿಕ. ೧೬); "ಸಮೂಹಾರ್ಥದೊಳ್ ದೊಂದುಳಿಯೆನಿಕ್ಕು" (ಕಶರ. ೫೩); ಸುರರ ಸಂದಣಿಯ ಕಿನ್ನರರ ದೊಂದುಳಿ[ಪಾಠಾಂ. ಗೊಂದಣೆ, ಜಂಗುಳಿ]ಯ ಖೇಚರರ ಗುಂಪಿನ ಪನ್ನಗರ ಪಂಕ್ತಿಯಿಂ . . . ಹರನ ಸಭೆ ಸುಖದ ಸೊಗಸಿನ ಜೊಮ್ಮುವಿಡಿದು ಮೆಱಿದಿರಲು (ಸಿದ್ಧರಾ. ೦-೨೩) ; ಸಿಡಿಲ ದೊಂದುಳಿಯಂತೆ . . . ಜಗವ ಸುಡುವ ಪೆರ್ಗಿಚ್ಚಿನಂತಿಹ ಕೋಪಶಿಖಿ ಮುಖದೊಳಡರೆ (ಲಕ್ಷ್ಮಭಾ. ೩-೪೦). ೨. ಗುಂಪಿನಲ್ಲಿ ಉಂಟಾಗುವ ಸಂತೋಷ,– ಮುದ : "ನೆರವಿ ಮುದಗಳೊಳು ದೊಂದುಳಿ" (ಕಬ್ಬಸುಂ. ೧೦೪) : "ದೊಂದುಳಿ ಮುದಂ" (ಸಂಜೀವ. ೨೫) : "ದೊಂದುಳಿಯೆನಲ್ ಸಂತೋಷಮಕ್ಕು" (ಕಶರ. ೫೨) ; ಮರಿಯ ತಿಂದಾಮೇಲೆ ಎಳಸವ್ರತೆಯು ಮೆದ್ದು ಮೊರೆದು ದೊಂದುಳಿಯನ್ನು ಸಾರುತ್ತಲಿಹುದು (ಕಾಲೂರ.೫೩-೮೦); ಎಲ್ಲಿ ದೊಂದುಳಿಗಳವ್ವ ಪಗಲಿರುಳ ತೊಡಕಲ್ಲಿ (ಕಾಲೂರ. ೬೮-೦೦೮). **ದೊಂದಡಿ** : ೧. ಸಂದಣಿಯ ಕಳಕಳದ ಮಂದಿಯು ದೊಂದಡಿ [ಪಾಠಾಂ. ಗೊಂದಣಿ, ದೊಂದಣಿ]ಯನಿಲ್ಲದೆ ಕೆಲಬರೆರವಿಂದವದನೆಯರುಪ್ಪರಿಗೆಗಳನೇಱಿ ನೋಡುವರು (ಬಸಪು. ೫-೩೮). **ದೊಂದಣ** : ೧. ಆದಣದ ಸಂದಣಿಯು ದೊಂ[ಪಾಠಾಂ. ಗೊಂ]ದಣ ಮಂದಿಯಿಬ್ಬಗಿಯಾಗಿ . . . ಮುಂದೆ ತೊಲಗದೆ ಬಪ್ಪವರ ಮುಡುಹಿಂದಣೆದು ಹೊಯ್ವುತ್ತ ಕೈದುಗಳಿಂದ ಚಿಮ್ಮುತ ಬಂದು ಹೊಕ್ಕರು ರಾಜಮಂದಿರವ (ಬಸಪು. ೬೦-೨೮) ; ಲಲನಾಶಿರೋಮಣಿಯ ಮುಖತುಹಿನಕಿರಣನಂ ನಲವಿಂದ ಬಯಸಿ ನಡೆತಂದ ತಾರಾಗಣದ ಚೆಲುವ ದೊಂ[ಪಾಠಾಂ. ಗೊಂ]ದಣಗಳತ್ತರದಿ ನಿಂದಿರ್ಪವೋಯೆನೆ (ಬಂಳಾರಾ. ೦-೨೦-೫೦). **ದೊಂದಣೆ** : ೧. ದೊಂದಣೆ

ಯೊತ್ತಿನೊಳೊತ್ತರಿಸಿದ ಬಿಲ್ಗಾಣರ್ (ವೀರೇಶ. ೨-೩೩) : ಉತ್ಕಟದ ದೊಂದಣಿಗಲಸಿ ಬಂದೈ ಸಿರಿಗಿರಿಯೊಳಿರದೆ (ಬಸಪು. ೧೮-೯) ; ಭೂತ ವೇತಾಳರಿಂ ಶಾಕಿರಿಂ ಕಡುಭಯಂಕರವಾಗೆ ಸುದಣಿಯು ದೊಂದಣಿಯು ವರ್ಣಿಸುವನಾರಿಳೆಯೊಳು (ಅಕ್ಷ್ಮಣಾ. ೩-೩೪); ಸಂತತಂ ಶುಕಕೋಕಿಲ ಧ್ವನಿಯ ದೊಂದಣಿಯ ನಾದದ ವಿನೋದದಿಂದ (ಚಿಕ್ಕಾಂಗ. ೨-೨೫) ; ಸಂಸಾರವನ್ನು ಅಲ್ಲಿ ದುರ್ಜನರ ದೊಂದಣಿಯಿಂದಾಚೆ ಹೂಡಿಬಿಡೋಣ (ಜನಪಾ. ೪೪). 'ತೊಂತುಳಿ' ಹೋ. [←ತೆಲು. ದೊಂದಡಿ, ದಂದಡಿ]

**ದೊಂದುಳಿಸು** (ಕ್ರಿ). ೧. ಗುಂಪುಗೂಡು. ೨. ಗುಂಪಿನಲ್ಲಿ ವಿನೋದ ಪಡು,_ ಸಂತಸಪಡು : ಅಳಿಗುರುಳ್ಗಳ ಮುಂದೆ ತೊಳಪ ನಾಸಿಕದಿ ಮಂಡಳಿಪ ಮೌಕ್ತಿಕ ಧಾ ಳ ಗೊ ಳ ಲ ಲಂ ಕಾ ರ ವೆಗ್ಗಳಿಸಿ ದೊಂದುಳಿಸಿ ಯೊರ್ಗುಳಿಸಿ ವನದೊಳ್ ಬಳಸಿ ಸು ಳಿ ದಾ ಡಿ ದ ರ್ ಸ ತಿ ಯ ರು (ಲಕ್ಷ್ಮಣಾ. ೧೫-೨೭). [ದೊಂದುಳಿ + – ಇಸು]

**ದೊಂದೆ**, ದೊಂದಿ (ನಾ). ೧. ಕಟ್ಟು ; ಕಂತೆ ; ರಾಶಿ : ಹೊತ್ತಿಸಿದ ಹುಲ್ಲ ದೊಂದೆಗಳ ಕೇಸುರಿಗಳಿಂ ಸುತ್ತುವರಿದಸುವ ಶರಸಂತತಿಯ ಸಮಿತಿಯಿಂದೆ . . . ಆ ನಗರಿ ದಾರುಣತರಂ ಬಡೆದುದು (ಸಮ್ಯಕ್ತ್ವ. ೮-೨೯); ಸುಡುವ ಸುಣ್ಣಕಲ್ಲ ಉರಿವ ಪುಲ್ಲಗಳ ದೊಂದೆ ಸುರಿವ ಕೆಂಡ ತಜೆ ಕರವೆಸೆದುದು ದುರ್ಗದೊಳಗೆ (ಕುಠಾಸಾಂ. ೩೭-೩೩); ಹುರಿದ ಮಳಲು ಹುಲ್ಲ ದೊಂದೆಗಳಿಂ ಭೀಕರಮಾಯ್ತು ಕೋಟೆ (ಚಂಪ್ರಸಾಂ. ೮-೧೦); ಬಲ್ಮೊನೆಗೆಯ್ವೆ ಶೂನುವೊಳ್ ಬೆರಸಿದ ಪುಲ್ಲ ದೊಂದೆ ಪೆಟಲುಪ್ಪಿನ ಪರ್ದಿದಿ ಮರ್ದಿಪೆಂಬಿವಾ ಸುರಿದು . . . ಅಂಭಟರಿಂತು ಕಾದುತಿರೆ ಮುತ್ತಿದರಳ್ಕದೆ ತನ್ನಹಾಭಟರ್ (ರಾಜಶೇ. ೬-೧೦೬). **ದೊಂದಿ** : ೨. ಕೋಲಿಗೆ ಬಟ್ಟೆಯ ಚೂರುಗಳನ್ನು ಸುತ್ತಿ ಎಣ್ಣೆಯನ್ನು ಸುರಿದು ಹೊತ್ತಿಸಿದ ಪಂಜು,–ಹಿಲಾಲು,–ದೀವಟಿಗೆ: ವೀರಭದ್ರನ ಮುಂಗಡೆಗೆ ಉರಿಯುತ್ತಿರುವ ದೊಂದಿಯನ್ನು ಹಿಡಿದೊಬ್ಬ ನಿಂತ (ಬಣ್ಣಮೂ. ೯೩) ; ಮೂಢಗ್ರಾಮ್ಯರಾರಾದರೂ ದೂ ರ ದಿಂ ದ ನೋಡಿದ್ದರೆ ಅದನ್ನು ಕೊಳ್ಳಿದೆವ್ವವೆಂದು ತಿಳಿಯುತ್ತಿದ್ದರು; ತಿಳಿದವರು 'ದೊಂದಿ' ಎಂದು ಹೇಳುತ್ತಿದ್ದರು (ಕಾನೂರು. ೦೦೩) ; ರಾತ್ರಿಯ ಅರ್ಚನೆ ಮುಗಿಯುತ್ತಿದ್ದಂತೆ ಹತ್ತಿಸಿದ ದೊಂದಿಗಳು ಮಂಕಾಗಿ ಜಾತ್ರೆಯ ಗಲಿಬಿಲಿ ಕಡಿಮೆಯಾಗುತ್ತದೆ (ಸಂಸ್ಕಾರ. ೦೯೨) ; ದೊಂದಿಗಳನ್ನು ಹೊತ್ತಿಸಿ ದೇವಸ್ಥಾನದ ನವರಂಗಮಂಟಪದ ಮೇಲಿನಂಕಣದ ಶಿಲ್ಪಗಳನ್ನು ನನಗೆ ತೋರಿಸುತ್ತಾನೆ (ಈಚಳ. ೯೪). [ದೇ.ಶ ತುಳು. ದೊಂದಿ]

**ದೊಂಬ**, ಡೊಂಬ್ಬ, ದೊಮ್ಮರ (ನಾ). ಗಳೆಯ ಮೇಲೆ ಲಾಗ ಹಾಕಿ ಕಸರತ್ತುಗಳನ್ನು ತೋರಿಸುತ್ತಾ ಜೀವನವನ್ನು ನಡೆಸುವವನು; ಕೊಲ್ಲಟಿಗ : ಕೌಶಂಬೀಪುರದೊಳ್ ಬಹುಕರ್ವಿಯೆಂಬ ದೊಂಬನ ಮನೆಯೊಳ್ ಸ್ತ್ರೀವೇದದಿಂ ಬೆಳ್ಗತ್ತಿಯಾಗಿ ಪುಟ್ಟಿ (ಸುಕುಮಾ. ೫-೧೨ ವ) ; ಮೇಲೆ ಮರದ ರೆಂಬೆಯೊಂದಕ್ಕೆ ಮತ್ತು ಕೆಳಗೆ ನೆಲಕ್ಕೆ ಬಿಗಿದಿದ್ದ ದಪ್ಪನೆಯ ಮಿಣಿಯ ಇಳಿಜಾರಿನಲ್ಲೊಬ್ಬ ದೊಂಬ ಜರ್ರನೆ ಜಾರಿಬಿಟ್ಟು ನಿಂತು, ಸಲಾಮು ಮಾಡಿದ (ಸಂಸ್ಕಾರ. ೦೩೩) ; ದೊಂಬರ ಮ ಗು ವಿ ಗೆ ತಂತಿಯೂ ನೆಲ (ಶಿರಾಂ. ೬೪-೧) ; ದೊಂಬನ ಸಾವು ಗಣೆಯ ಮೇಲೆ, ಬಿಲ್ಲವರ ಸಾವು ಮರದ ಮೇಲೆ (ಗಾದೆ) ; ಅಗಸನ ಕತ್ತೆ ದೊಂಬನಿಗೆ ತ್ಯಾಗ (ಗಾದೆ). **ಡೊಂಬ್ಬ** : "ಕೊಲ್ಲಟಗನೆನೆ ಡೊಂಬನು" (ಶಬ್ದಮಂ. ೬೦) ; "ಡೊಂಬನ ಪೆಸರ್ ತವೆ ಕೊಲ್ಲಟಿಗನೆಕ್ಕುಂ" (ಶಬ್ದಕೈ. ೩೭); "ಡೊಂಬವೆಸರಿಂ ಪೇಟಲ್ಬದು ಸಲ್ಗು ಕೊಲ್ಲಟಿಗನೆಂದೆನುತುಂ" (ಕವಿಕಂ. ೦೬೨); ಕೋಳಿಯಂತೆ ಕೂಗಿ ಡೊಂಬರಂತೆ ಕೂಡಿ ಆಡಿ ದಾಗಿ ಹಿಂಗದಿದ್ದಡೆ ಕೊಂಡಾಡುವ ಈ ಲಾಗ ನೋಡಿಕೊಳ್ಳಿ (ಬಲೀಶ್ವ. ೪೩೪-೩೩); ಪಂದೆಯ ಮಾತಿನಂತೆ ಡೊಂಬರ ತೋಟಿಯಂತೆ (ಧರ್ಮಾಮೃ. ೮-೯೪) ; ಶುಕನೇಂದಿಂಗುಜೆ ಚೆಲ್ವೆ ಕಾಕರವ ರಂಭಾನೃತ್ಯಕಂ ಡೊಂಬರೇ (ಸೋಮೇಶ. ೩); ಅಗಣಿತರಹ ಡೊಂಬರುಗಳು ಬಗೆಬಗೆಪಾಟವ ತೋಟಿಪಾಸ್ಥಾನವ ಮಿಗೆ ಮೆಚ್ಚಿಸಿದರು (ಶಂಸಪ. ೨೦-೯೭): ಕಣ್ಣು ಕುಂಬಳ ಹೋಳು ಹೊಟ್ಟೆ ಡೊಂಬರ ಡೋಳು ಕೈಕಾಲು ಬಿದಿರಿನ ಕೋಲು (ಇಂಚರಪ. ೦೦೦-೪೦). **ದೊಮ್ಮರ** : ತೆಲುಗು (Telugu):– ದೇವಾಂಗ, ಸಾಲೆ . . . ಬೋಗಂ, ದೊಮ್ಮರ, ಇತರರು (ತುಳುನಾ. ೦೭೩).

**ದೊಂಬರ ಕೋಡಗ** = ೧. ಕೊಲ್ಲಟಿಗರು ತಮ್ಮ ಆಟಕ್ಕಾಗಿ ಪಳಗಿಸಿ ಉಪಯೋಗಿಸುವ ಕಪಿ. ೨. ಮಂತ್ರೊಬ್ಬನ ಪ್ರೇರಣೆಯಂತೆ ಕಾರ್ಯವನ್ನೆಸಗುವವನು ; ಕಲಿಸಿದಂತೆ ಕಾರ್ಯದಲ್ಲಿ ಪ್ರವರ್ತಿಸುವವನು : ದುರ್ಯೋಧನಂ . . . ಡೊಂಬರ ಕೋಡಗದಂತೆ ಆಡಿಗೆಲ್ದಾಗಳ್ (ಪಂಪಭಾ. ೬-೭೨ ವ). **ದೊಂಬರಲಾಗ**, ಡೊಂಬ ಲಾಗ = ೧. ಡೊಂಬರವನು ಹಾಕುವ ಲಾಗ ; ದೊಂಬರು ಗಣೆ ಹತ್ತಿ ತಲೆ ಕೆಳಗು ಮಾಡಿ ಹಾರುವುದು; ತಿಪ್ಪರಲಾಗ : "ಅಂತರಪಲ್ಟಿ ; ಡೊಂಬರ ಲಾಗ" (Somersault. ಇಂಕನಿ) ; ಡಂಭಕ ಭಕ್ತಿಗೆ ಮೆಚ್ಚಿ ಕೊಡನು ಕೃಷ್ಣ ಡೊಂಬಲಾಗವ ಹಾಕಿ ಡೊಂಡೊಂಡೆ ಹೊರಳಿದರಿಲ್ಲ, (ಪುರಂದ. ೫-೦೩೮ ಅನುಪಲ್ಲವಿ). ೨. ವಿಶ್ವ ಪ್ರಯತ್ನ ಮಾಡುವುದು: ಡೊಂಬರ ಲಾಗ ಹಾಕಿದರೂ ಬೇರೆಯವರು ಈ ಕೆಲಸಮಾಡಲು ಸಾಧ್ಯವಿಲ್ಲ (ರೂಢಿ). **ಡೊಂಬರ ಹುಳ** = ಡೊಂಬರಲಾಗದಂತೆ ಲಾಗಹಾಕಿಸಲು ಮಕ್ಕಳು ಆಟಕ್ಕಾಗಿ ಉಪಯೋಗಿಸುವ ಒಂದು ಬಗೆಯ ಹುಳು ; ಭೋರಂಗಿ ಹುಳು : (ಕ). **ದೊಂಬರ ಕುಣಿತ** = ಕಲೆಗಾರಿಕೆಯಿಲ್ಲದೆ ಕುಣಿಯುವ ಕುಣಿತ; ಕುಮಾರರಾಮನಿಗೆ ಸಂಬಂಧಿಸಿದ ಹಾಡುಗಳನ್ನು ಹಾಡಿಕೊಂಡು ದೊಂಬರು ಆಚರಿಸುವ ಹಬ್ಬಗಳ ಸಂದರ್ಭದಲ್ಲಿ ದೊಂಬರ ಹೆಂಗಸರು ಮಾಡುವ ಒಂದು ಬಗೆಯ ಜಾನಪದ ನೃತ್ಯ: ದೊಂಬರ ಕುಣಿತ ಇದ್ದಲ್ಲಿ ಜನ ಸೇರಿರುತ್ತಾರೆ (ರೂಢಿ). **ದೊಂಬರಗಿತ್ತಿ** = ದೊಂಬರ ಸ್ತ್ರೀ ; ದೊಂಬಿತಿ : (ಕ). **ದೊಂಬರ ಪೋರಿ** = ೧. ದೊಂಬರವಳು; ದೊಂಬರ ಹುಡುಗಿ : ಆ ದೊಂಬರ ಪೋರಿ ಊರೂರು ಸುತ್ತಿ ಜೀವನ ನಡೆಸುತ್ತಾಳೆ (ರೂಢಿ). ೨. ಬಸವಿ; ಸೂಳೆ: (ಕ). **ದೊಂಬ ರಾಟ**, ಡೊಂಬರಾಟ = ೧. ದೊಂಬರು ಆಡುವ ಗಣೆಯ ಆಟ,–ಕಸರತ್ತು : ಪೂರ್ವಕಾಲದಲ್ಲಿ ಇಲ್ಲಿಗೆ ಸುತ್ತುಮುತ್ತಲಿನ ಏಳೂರು ಶಿಡಿತೇರುಗಳು ಬಾರದು ದೊಡ್ಡ ಜಾತ್ರೆಯಾಗಿ ಕುಸ್ತಿ, ದೊಂಬರಾಟ ಎಲ್ಲಾ ಆಗುತ್ತಿದ್ದುವಂತೆ (ಹುಟ್ಟಿಹ. ೪); ದೊಂಬರಾಟ ಮುಂತಾದ ಹಲವಾರು ಮನರಂಜನೆಯ ಕಾರ್ಯಕ್ರಮಗಳು ಪದ್ಧತಿಯಂತೆ ನಡೆದುವು (ಸವತಿ. ೯೦) ; ದೊಂಬರಾಟದವರು ರಂಗಸ್ಥಳದ ಮೇಲಕ್ಕೆ ಓಡುತ್ತಾಬಂದರು (ಶಾಕಿಹು. ೦೨೧) ; ಅರಸನಿದ್ದನು ಡೊಂಬರಾಟಕೆ ಸೆರೆಯ ಸಿಕ್ಕಿದ ಮನದಲಿ (ಕವಿಪು. ೩೭-೦); ಸಾಲೆಯಲ್ಲಿ ಅದೇನೋ ನಡೆದಿದೆಯೆಂತಲ್ಲ—ಹಗರಣವೋ ಡೊಂಬರಾಟವೋ (ಮೂಕರುದಾ. ೩೦). ೨. ವಿಶೇಷ ಪ್ರಯತ್ನ ; ಮಹತ್ವವನ್ನು ತೋರಿಸಿಕೊಳ್ಳುವುದು ; ಆಟೋಪ : ಯಮುನಿಯಮಗಳ ಡೊಂಬರಾಟದಿಂದ ಫಲವೇನು (ವಿದಾಮಂ. ೪೯); ಕವಿಯ ಕಲ್ಪನಾಶಕ್ತಿ ಎತ್ತರಕ್ಕೆ ಹೋದರೂ ಡೊಂಬರಾಟಕ್ಕಾಗಿ ಎಂದು ತೋರಬಹುದು (ಕರ್ನಾಟ. ೫೦). ೩. ಹಸಿವು: ಕಣ್ಣುರುಮಮ್ಮು ನೋಟ, ಕಾಲು ಸೋಲುವ ತನಕ ಓಟ, ಹೊಟ್ಟೆಯಲ್ಲಿ ಡೊಂಬರಾಟ (ನಿಲಮು. ೬೫-೨). **ದೊಂಬರು ಗಣೆ** = ಕೊಲ್ಲಟಿಗರು ಆಟದಲ್ಲಿ ಉಪಯೋಗಿಸುವ ಗಣೆ,–ಬಿದಿರಿನ ಕೋಲು : ಯೆಲ್ಲಕ್ಕನು ಭಾರಿ ದೊಂಬರುಗಣೆ ಮೇಲೆಯಿಂದ ಬಿದದ ಕಾರಣ (ಮೈಅರಿ. ೦೯೩೮, ೯೮-೪ ; ಸು. 17 ನೆಯ ಕಲ).

[ದೇ.ಶ ತಮಿ. ತೊಮ್ಮ ; ಮಲ. ದೊಮ್ಮರ್, ಡೊಮ್ಮರ್; ತುಳು. ದೊಂಬೆ, ದೊಮ್ಮರೆ, ಡೊಂಬೆ, ಡೊಂಬಾರೆ; ತೆಲು. ದೊಮ್ಮರ./ಸಂ. ಡೋಂಬ, ಡೋಮ]

**ದೊಂಬಚ್ಚೆ** (ನಾ). ಒಬ್ಬಾಕೆಯ ಹೆಸರು: ತ್ರೈಲೋಕವೊಬಲಂ ದೊಪ್ಪುಚ್ಚೆ ಆಳುತ್ತಿರೆ ಅಲ್ಲಿ ಕೊಟ್ಟದು ಅಙಗಣ್ಣಾಗ ವಣ್ಣಾ (ಎಕ. XII, ಶಿರಾ. ೨೯-೪೩ ; ಸು. ೯೦೦). [ ದೊಂಬಂ + ಅಚ್ಚೆ$_1$ ]

**ದೊಂಬಿ, ಡೊಂಬಿ$_1$, ಡೊಂಬು$_1$, ಡೊಂಬೆ$_1$, ದೊಂಬೆ** (ನಾ). ೧. ಗುಂಪು ; ಸಮೂಹ : ಕುಸುಮಸೌರಭಕೆ ಊಟೆವರಿವ ತುಂಬಿಗಳ ದೊಂಬಿ (ಚೋಚಕ. ೩-೨೫); ದ್ವಾದಶಾರ್ಕಬಿಂಬ ಪೂರ್ವೋದಧಿಯನುಚ್ಚಳಿಸಿ ಕತ್ತಲೆಯ ದೊಂಬಿಯಂ ತುಳಿವುತುದಯಾಚಲಾಗ್ರವ ನಿಲ್ಕಲಂಬುಜೋದರ . . . ಸಂಗವಸ್ಥಾನಕ್ಕೆಂತಂದನೊಲಿದು (ವಂಕಾಠಾ. ೬-೦೮-೧). ೨. ಗದ್ದಲ; ಗೊಂದಲ. ೩. ದಂಗೆ ; ವಿರೋಧದ ಚಳುವಳಿ ; ಜಗಳ ; ಕದನ ; ಕಾಳಗ : ದೊಡ್ಡ ದೊಂಬಿ ಉಂಟಾಗುವಂತಿತ್ತು (ವ್ಯಾಸಜ. ೬೦); ದೊಂಬಿಗೆ ಹೋದವನು ಶರೀರದ ಹಂಬಲು ಬಿಟ್ಟರ ಲೇಸು (ಗಾದೆ). **ಡೊಂಬಿ$_1$** : ೧. ನೆರನೆರದು ಮೊರೆವ ಮಱಿದುಂಬಿಗಳ ಡೊಂ[ಪಾಠಾಂ. ದೊಂ]ಬಿ (ಕೃಷಿಠಾ. ೨೯-೪೬); ತನಿಗಂಪನುಂಡುಂಡು ಪೆಸಾರಲವ್ವುದಿಹ ತುಂಬಿಗಳ ಡೊಂಬಿಗಳ ನೆರವಿ ಕಾಣುತಲಿ (ವಂಕಾಠಾ. ೧-೩-೩೬). ೩. 'ಡೊಂಬಿಗ$_1$' ನೋಡಿ. **ಡೊಂಬು$_1$** : ೧. ಸರಸಿಜದ ನಿಜಗಂಧದಲಿ ತನುವರಿಮಳವ ತಕ್ಕೈಸಿ ವನದಲಿ ತರಳೆಯರು ತುಂಬಿದರು ಮಱಿದುಂಬಿಗಳ ಡೊಂಬಿನಲಿ (ಕುವ್ಯಾಆ. ೧೮-೬); ಅಂಬುನಿಧಿ ಬಡಬಡನಗೆ ತೆಗೆದುಂಬಿಗೊಡಲೊಡ್ಡುವುದೆ ಕಪಿಗಳ ಡೊಂಬಿಗೀವುದೆ ಬೆನ್ನ ದಿಟ್ಟಿಕೆ ಕಥೆಯ ಮಾತಲ್ಲ (ತೊರರಾ. ೬-೩೪-೦೯). **ಡೊಂಬೆ$_1$** : ೨. ಆ ಖರ್ಪರನ ಕೂಡಲ ಜೋಗಿಗಳು ಡೊಂಬೆಯಂ ಮಾಡಿ ರಾಮಯ್ಯನ ಶಿಷ್ಯರ ನೋಯಿಸಲು (ಭೃರಚೂ. ೩೨೬). **ದೊಂಬೆ** : ೩. ನಿಶ್ಚಯವಾಗಿ ಈ ದೊಂಬೆಯಿಂದ ಸರಕಾರಕ್ಕೆ ಒಳಗೊಳಗೆ ಬಹಳ ಆನಂದವಾಗಿರಲಿಕ್ಕೆಬೇಕು (ಕುರಾಹಿಂ. ೦೪೦). 'ತೊಂಬೆ$_1$' ನೋಡಿ.

**ದೊಂಬಿ ಎಬ್ಬಿಸು** = ದಂಗೆಯೇಳುವಂತೆ ಮಾಡು : ನಿನಗೇನು ಹಳ್ಳಿಯಲ್ಲಿ ದೊಂಬಿ ಎಬ್ಬಿಸಬೇಕೆಂಬ ಉದ್ದೇಶವೊ ? (ಯೋಧವು. ೮೫). **ದೊಂಬಿ ಏಳು** = ವಿರುದ್ಧವಾಗಿ ನಿಲ್ಲು ; ದಂಗೆ ಏಳು: ಅವನ ಮನಸ್ಸು ದೊಂಬಿ ಏಳಲು ಯತ್ನಿಸುತ್ತಿತ್ತು (ಬಿಕಂಠಾ. ೦೦೩). **ದೊಂಬಿಮಾಡು, ಡೊಂಬಿ ಮಾಡು, ಡೊಂಬು ಮಾಡು**=ದಂಗೆ ಏಳು: ದೊಂಬಿಮಾಡಿ ಜನರು ಅವರ ಜಾಲದಲ್ಲಿ ಬಿದ್ದಂತೆ ಆಯಿತು (ಯುಕ್ಷಕ್ಷ. ೩೬) ; ಜನರು ತಮ್ಮ ಕರ್ತವ್ಯಗಳನ್ನೇ ಮರೆತು ಪಂಗಡಗಳನ್ನು ಕಟ್ಟಿಕೊಂಡು ದೊಂಬಿ ಮಾಡಲುಪಕ್ರಮಿಸಿದರು (ಪ್ರಗಂಅ. ೩) ; ಹಿಮಕರಹಾಸನನು ಸೆಳೆದು ಡೊಂಬಿ ಮಾಡುವ ಪಾಲಿತನುಜನ ಸಂಬಳಿಸಿ (ತೊರರಾ. ೬-೪೮-೨೭) ; ಪಾಳಿಸಿತು ರಥ ಜಡಿವ ಕೌರವನಾಳ ರೆಯೋಂಟಿಸಿ ಡೊಂಬು ಮಾಡುವ ಪಾಳ ಠುಸಾಡಿಸಿ ಬೈದು ಹೊಕ್ಕನು ಮತ್ತೆ ಗುರುಸೂನು (ಕುವ್ಯಾಕ. ೦೯-೨೯). **ದೊಂಬಿಯ ಜಗಳ** = **ದೊಂಬಿಜಗಳ** : ಬರಿದೆ ದೊಂಬಿಯ ಜಗಳವನು ನರಹರಿಯ ನೀ ಮಾಡಿದೊಡೆಯೊಪ್ಪೆನು (ಅಜಾವಿ. ೦೦-೦೬). **ದೊಂಬಿ ಹಚ್ಚು** = ದೊಂಬಿ ಮಾಡು : ಶತ್ರುಗಳನ್ನು ಎಡೆಬಿಡದೆ ನೆಲಕ್ಕುರುಳಿಸಿದರೆಂದು ಕೂಗುತ ದೊಂಬಿ ಹಚ್ಚಿದರು (ಕೋಹಿಸೂ. ೦೪).

[ ದೇ.೩ ತುಳು. ದೊಂಬಿ, ಡೊಂಬಿ, ಡೊಂಬೆ; ತೆಲು. ದೊಮ್ಮಿ ]

**ದೊಂಬಿಗ, ಡೊಂಬಿಗ$_1$** (ನಾ). ೧. ಗೊಂದಲವನ್ನುಂಟುಮಾಡುವವನು; ಗದ್ದಲ ಮಾಡುವವನು : (ಕ). **ಡೊಂಬಿಗ$_1$** : ೨. ಕಾಳಗ ಮಾಡುವವನು ; ವೇಲೆಬೀಳುವವನು : ಅಂಬರಕೆ ಜಡದಿಟ್ಟನೌಕುವ ಡೊಂಬಿಗರ ದವಡಿಗರ ದಳ್ಳಿದ ರಕ್ಕಸರ ಹನುಮ (ತೊರರಾ. ೩-೪-೨೨).

[ ದೊಂಬಿ + - ಗ$_2$ ]

**ದೊಂಬಿಗಾರ, ಡೊಂಬಿಗಾರ** (ನಾ). ೧. ಗದ್ದಲ ಮಾಡುವವನು ; ಗಲಾಟೆ ಮಾಡುವವನು : ಬೀದಿಯ ದೊಂಬಿಗಾರರೂ ವಿದ್ಯಾನಿಲಯಗಳನ್ನು ಹೊಕ್ಕು ಅಲ್ಲಿಯೂ ಮರ್ಕಟಚೇಷ್ಟೆ ನಡಿಸುವಂತೆ (ವಿಜಾಮಂ. ೦೧೨). **ಡೊಂಬಿಗಾರ** : ೨. ದಂಗೆಎಬ್ಬಿಸುವವನು : ಡೊಂಬಿಗಾರನಿವನಂ ಮರಳಿ ಹಿಡಿವುದೆನೆ ಸಾಧ್ಯನೇನಿನ್ನು (ಗೊರೂಧಾ. ೬-೧೭೦).

[ ದೊಂಬಿ + - ಕಾರ$_1$ (< - ಕಾಜ) ]

**ದೊಂಬಿಗೂಡು** (ಕ್ರಿ). ಗುಂಪು ಸೇರು ; ಸಂದಣಿಗೂಡು : ಈ ಗುಂಬದಂಬಟೆಯವರ್ ದೊಂಬಿಗೂಡಿ ಪಾಡುವ ಬಣ್ಣವಾದಂ ಕೇಳುತ್ತೆ (ಚಿಕವಿ. ೬-೧೩೯ ಪ). [ ದೊಂಬಿ + ಕೂಡು$_1$ ]

**ದೊಂಬಿಜಗಳ** (ನಾ). ಬೀದಿಯಲ್ಲಿ ನಡೆಯುವ ಜಗಳ ; ಬೀದಿಜಗಳ ; ಹಾದಿಜಗಳ : ಹೆಚ್ಚು ಗುಡಿಸಿಲುಗಳಿರುವಲ್ಲಿ ದೊಂಬಿಜಗಳ ಸರ್ವೇಸಾಮಾನ್ಯವಾಗಿರುತ್ತದೆ (ಬೂಧಿ). [ ದೊಂಬಿ + ಜಗಳ (<ಜಗಟ) ]

**ದೊಂಬಿತಿ, ಡೊಂಬತಿ, ಡೊಂಬಿತಿ$_1$** (ನಾ). ದೊಂಬರ ಹೆಂಗಸು ; ಕೊಲ್ಲಟಗಿತ್ತಿ: ತನ್ನ ಗುರು ದೊಂಬಿತಿಯು ಕೂಡುಣುತ್ತಿರಲ್ (ಶಾಕೋವು. ೧೩-೪). **ಡೊಂಬತಿ** : ಇದು ವಿಷದ ಮರನೆಂದು ಮುಳ್ಳ ಕಟ್ಟಿರಲು ಅದನಱಿದು ಒಬ್ಬ ಡೊಂಬತಿ . . . ರಾಯನ ತೋಟದ ವಿಷದ ಹಣ್ಣ ಮೆದ್ದು (ಭೃರಚೂ. ೧೬೩) ; ಸಂಕೆಯುಂಗಡಿ ಸೂಳೆ ಮುಂತೊಲಿವ ಡೊಂಬತಿಯ . . . ಹೋದವನ ಸಂತಾನ ಕೆಡುಗು (ಸರ್ವಜ್ಞ. ೧೯೪೬) ; ಬಲ್ಲಂತೆ ನಾನು ನಾಡಾಡಿ ಡೊಂಬತಿಯಾಗಿ ಗಣಮಿಣಗಳನ್ನೇರಿ ಕುಣಿಯಬಹುದು (ಸಚೀಗೀ. ೩೯-೬). **ಡೊಂಬಿತಿ$_1$**: ಅಮಿತವೈಭವದೊಳು ಬರುತ್ತ ಗುರು ಡೊಂಬಿತಿಯು ಮಮತೆಯಿಂ ಪೋದನೆನೆ (ವೀಶೈವು. ೬-೪-೦೬).

[ ದೊಂಬ + - ಇತಿ$_1$ (< - ಇತ್ರಿ) ]

**ದೊಂಬಿದಾಸ** (ನಾ). ಊರೂರು ಸಂಚರಿಸುತ್ತಾ ಐತಿಹಾಸಿಕ, ಪೌರಾಣಿಕ ಕಥೆಗಳಿಗೆ ಸಂಬಂಧಿಸಿದ ಹಾಡುಗಳನ್ನು ಹಾಡುತ್ತಾ, ಬಯಲಿನಲ್ಲಿ ರಾತ್ರಿಯ ಹೊತ್ತು ನಾಟಕ ಆಡುವ ವೃತ್ತಿಯವನು ; P ಇವರಿಗೆ 'ಹೆಣ್ಣುವೇಷ' ದವರು ಎಂತಲೂ ಕರೆಯುತ್ತಾರೆ : ದೊಂಬಿಯಾಗಿ ಆಟ ಆಡುತ್ತಿದ್ದುದರಿಂದ ಯಕ್ಷಗಾನವನ್ನು ನನ್ನೂರಿನಲ್ಲಿ ದೊಂಬೀಆಟವೆಂದು, ದೊಂಬೀಆಟ ಆಡುವ ಜನರಿಗೆ ದೊಂಬೀದಾಸರೆಂದೂ ಕರೆಯುತ್ತಾರೆ (ನನ್ನೂರು. ೩೦೩) : ದೊಂಬೀದಾಸರ ಆಟಗಳಲ್ಲಿ ಇದು ಇನ್ನೂ ನಿಂತಿರುವುದನ್ನು ನಾವು ಬಲ್ಲೆವು (ಸಾಹಿಚೀ. ೧೬) ; ದೊಂಬಿದಾಸನ ನಿಲುವಂಗಿ ಹಾಕಿದಂಥ ನಾರದ ಬರುತ್ತಿರಲಿಲ್ಲ (ಯುಕ್ಷಬ. ೧೦೮) :

[ ದೊಂಬಿ + ದಾಸ ]

**ದೊಂಬಿದುಳುಕು** (ನಾ). ಬಹಳವಾದ ತುಳುಕು ; ಕಲ್ಲೋಲ ಧುಮ್ಮಿಕ್ಕಿದನು ಸರಸಿಯಲಿ ದೊಂಬಿದುಳುಕಿನೊಳದನು ಕಾಣದೆ ಶಂಬರಾಂತಕನಟ್ಟ ಮೂಡಿಗೆಯಂಬೆನಲು ಪೊರಮಟ್ಟ ದಿವ್ಯಾಂಗನೆಯ ರೂಪಿನಲಿ (ಅನಂರಾ. ೪-೧-೦೩). [ ದೊಂಬಿ + ತುಳುಕು$_2$ (<ತುಳುಂಕು$_2$) ]

**ದೊಂಬಿಯುದ್ಧ** (ನಾ). ಗುಂಪುಗುಂಪಾಗಿ ಮಾಡುವ ಯುದ್ಧ ; ಅನೇಕ ಜನರು ಆಕ್ರಮಣ ಮಾಡಿ ಮಾಡುವ ಯುದ್ಧ : ಕೌರವಬಲದೊಡನೆ ಯುದ್ಧಕ್ಕೆ ಮುಹೂರ್ತ ಮಾತ್ರವು ದೊಂಬಿಯುದ್ಧವನ್ನು ಮಾಡಿ (ಕೃಪಾಅ. ೩೩೯). [ ದೊಂಬಿ + ಯುದ್ಧ ]

**ದೊಂಬಿಸಾಕ್ಷಿ** (ನಾ). ಗೊಂದಲವನ್ನುಂಟುಮಾಡುವ ಹೇಳಿಕೆ,-ಸಾಕ್ಷಿ : (ಕ). [ ದೊಂಬಿ + ಸಾಕ್ಷಿ ]

**ದೊಂಬಿಸ್ವಾಧ್ಯಾಯ** (ನಾ). ೧. ಗುಂಪಿನಲ್ಲಿ ವೇದವನ್ನು ಅಧ್ಯಯನ ಮಾಡುವಿಕೆ. ೨. ಜಾತ್ರೆ ಮುಂತಾದ ಕಡೆ, ಗಲಾಟೆಯ ನಡುವೆ, ಗೊಂದಲದಲ್ಲಿ ನಡೆಯುವ ಅತ್ಯಾಚಾರ : (ಕ).

[ ದೊಂಬಿ + ಸ್ವಾಧ್ಯಾಯ ]

**ದೊಂಬೆ** 'ದೊಂಬಿ' ನೋ.

**ದೊಕ್ಕನೆ** (ಅ). ೧. ದೊಕ್ಕೆಂದು ಶಬ್ದವಾಗುವ ಹಾಗೆ: ಒಂದೆ ಸರಲಿಂದವು ವನರ್ದೆಯಂ ದೊಕ್ಕನೆ ತಿಣ್ಣಮೆಚ್ಚು ಕೊಲಲೊಲ್ಲನೆ ಸಂಕ್ರಂದನನಂದನ

ತನಯಂ (ಪಂಪಭಾ. ೧೧-೯೭): ಇಕ್ಕೆಯೊಳಱಸಿ ಕಾಣದೆ ಪಕ್ಕಿಯಂಪಿರಕಕ್ಕಱು ಮಿಗೆ ಪಾಱಿ ನೆಲಕೆ ದೊಕ್ಕನೆ ಕೆಡೆದು ಪ್ರಳಾಪಿಸಿತದಱೊಂದು ದುಃಖ ಮಂನದನೇನೆಂಬೆ (ಅಂಜನ. ೭-೧೭೭). ೨. ಕೂಡಲೆ; ಬೇಗನೆ; ತಕ್ಷಣ: ಎಕ್ಕೆಯ ಕೋರಕವಂ . . . ಅರೆದು ಕದಡೀಂಟಲೊಡಂ ದೊಕ್ಕನೆ ಮಣ್ಣಾಂ ಪೇಕುಳಿಯುಕ್ಕಿದ ಶುನಕನ ವಿಷಂ (ಖಮದ. ೧೬-೩೭); ಪಕ್ಕ ವಿಲ್ಲದ ಪಕ್ಕಿಯಂದದಿ ನನ್ನನಂ ದೊಕ್ಕನೆ ಮಾಡಿದ ಮಗನೆ ದಿಕ್ಕಾವುದು ಪೇಳೆನಗಿನ್ನು ನಂದನ ಅಕ್ಕಟ ತಾಯಂನು ತೊಱೆದೈ (ಕವಿಚ. II, ೪೪. ಕಾಮನ ಕಥೆ); ದಿಕ್ಕುದಿಕ್ಕುಗಳಿಂದ ಬಂದೊಂದು ಮರದಲಿ ಪಕ್ಷಿ ಕುಳಿತು ರಾತ್ರಿಯಲಿ ಅರ್ಕನುದಯವಾಗೆ ತಮತಮ್ಮ ದಿಕ್ಕಿಗೆ ದೊಕ್ಕನೆ ಪೋಪಂತೆ ಕಾಣ (ದ್ವಾದಶಾ. ೦-೩೭); ರುಗುಮಿಣಿ ದೊಕ್ಕನಾಕೆಯ ಕರಸಿ ನೋಡಿ ದಳಕ್ಕೞಿಂದ (ಸಾಳ್ವಭಾ. ೩೦-೩೩); ದೊಕ್ಕಸ ಭಂಡಾರ ದೇಶ ರಾಣಿಯ ವಾಸ ಮಿಕ್ಕ ಕುಮಾರವರ್ಗವನು ದೊಕ್ಕನೆ ಬಿಟ್ಟುಹೋದನು (ಅನುಭ. ೩-೨೦೭). [ದೊಕ್ಕು + -ಅನೆ₁]

ದೊಕ್ಕರಿ 'ಡೊಕ್ಕರ್₂' ನೋ.

ದೊಕ್ಕರಿಗೊಳ್ 'ಡೂಕ್ಕರಂಗೊಳ್' ನೋ.

ದೊಕ್ಕರಿಸು 'ಡೊಕ್ಕರಿಸು' ನೋ.

ದೊಕ್ಕು (ನಾ). ಒಂದಂ ಅನುಕರಣ ಶಬ್ದ: ದೊ[ಪಾಠಾಂ. ಧೊ]ಕ್ಕು ಧಡ ಸಬುದಗಳಲಿಳೆ ಗುಮ್ಮಿಕ್ಕಿ ಕೂರುಮಾನಱಿಟೆ . . . ಧೈರ್ಯಬಲ ರೊದಗಿದರು ಸರಿಸದಲಿ (ತೊರಣಾ. ೪-೪-೨೭).

ದೊಕ್ಕೆ 'ಡೊಕ್ಕೆ' ನೋ.

ದೊಕ್ಕೆನ್ (ಕ್ರಿ). ದೊಕ್ಕೆಂದಂ ಶಬ್ದವುಂಟಾಗು: ಉರ್ಕಾಂಬುಗಳೆಱಗಿ ರೋಮರೋಮಕ್ಕೆ ನೆಳಲ್ ನೆಕ್ಕು ಚಳಿಲ್ ಚಕ್ಕು ದೊಗಲ್ ದೊಕ್ಕೆನೆ ನಾಂಟಿದುವರಾತಿಭಟರವಯವಮಂ (ಜಗವಿ. ೭-೮೦): ಹಾಳಾಹಳಸಮಾನ ತೀವ್ರಾನುಭಾಗದ ದುರಿತಭಾರದಿಂ ಬೀಟ್ಟಂತೆ ದೊಕ್ಕೆನೆ [ಪಾಠಾಂ. ದೊಕ್ಕನೆ] ಬಿಟ್ಟು (ಪರ್ವಪು. ೧೦-೧೫ ವ); ಕರಘಾತದಲಿ ದಡ ದೊಕ್ಕೆನಲು ಕೆಡಹಿದನು ಕೇಳೀ ಸೌಧಸಂಕುಳವ (ತೊರಣಾ. ೫-೪-೧೫).

[ದೊಕ್ಕು + ಎನ್₁]

ದೊಗರು 'ಡೊಂಗಱ' ನೋ.

ದೊಗಲ್ (ನಾ). ಒಂದಂ ಅನುಕರಣ ಶಬ್ದ: ಉರ್ಕಾಂಬುಗಳೆಱಗಿ ರೋಮರೋಮಕ್ಕೆ ನೆಳಲ್ ನೆಕ್ಕು ಚಳಿಲ್ ಚಕ್ಕು ದೊಗಲ್ ದೊಕ್ಕೆನೆ ನಾಂಟಿದುವರಾತಿಭಟರವಯವಮಂ (ಜಗವಿ. ೭-೮೦).

ದೊಗಲೆ 'ದಗಲ್₂' ನೋ.

ದೊಗಹು (ನಾ). ಒಂದು ಅನುಕರಣ ಶಬ್ದ: ಘೀಲೆಂಬ ಘಣ್ಣೆಂಬ ದೊಗಹೆಂಬ ದೊಕ್ಕೆಂಬ . . . ಕೂರಸಿಗಳುರವಣೆಯ ದನಿಯಡಸುತಂ ಪುಟ್ಟೆ (ಇಹರ. ದೀ. ೪೧-೨೨); ಖಣಿಲ್ಪಟಲ್ದೊಗಹು . . . ಗರಿಗರಿಲೆಂಬ ನಿಷ್ಠುರರವಂ ಮಿಗೆ ತಟ್ಟಿಱಿದತ್ತು ಯುದ್ಧದೊಳ್ (ಗಿರಿಜಾ. ೬-೩೮).

ದೊಗಳೆ 'ದಗಲ್₂' ನೋ.

ದೊಗೆ₁ (ಕ್ರಿ). ಉಗುರಿನಿಂದ ಗೆಬರು; ಕವರು: ಮಣ್ಣನ್ನು ದೊಗೆದು ಅಲ್ಲಿ ಬಚ್ಚಿಟ್ಟಿದ್ದ ಗೋಲಿಯನ್ನುಹುಡುಕತೊಡಗಿದ (ಜಾ). [?]

ದೊಗೆ₂ (ನಾ). ಕೆತ್ತಿದ ಪ್ರದೇಶ; ಹಳ್ಳ ಮಾಡಿರುವ ಜಾಗ (?): ಕಲ್ಲ ಮೇಗಣ ದೊಗೆಯುಲುಂ ಜೆಯಕೇತನಿವರ್ತ್ತಿತ್ತು ಮಾ[ಳ]ಕಯ್ಯ ಕೆಲಸಂಗೆಯ್ದು (ಸೌಇಇ. XI-1, ೮೫-೪೦; 1049). [<ದೊಗೆ₁]

ದೊಗ್ಗ (ನಾ). ೧. ಹುಳಿಯಾದುದಂ: ಕಳ್ಳಂ ಕುಡಿದರಂತೆ ಸೊರ್ಕಿ ದೊಗ್ಗಳೆಯಂತುರ್ಬಿ [ಪಾಠಾಂ. ಕಾಯ್ದ ಪಾಲಂತುರ್ಕಿ] [ಬಳೆವ ಪೊಲೆಯಂತೆ ಕೊರ್ವಿ] ಎಳವೆಱೆಯಂತೆ ವಕ್ರನಾಗಿ (ಧರ್ಮಾಮೃ. ೨-೧೦೫). ೨. ಹುಳಿನುಚ್ಚು; ತರಿಯಿಂದ ಮಾಡಿದ ಗಟ್ಟಿಯಾದ ಅಂಬಲಿ: ಅಗ್ಗಸಗ್ಗಿಗಳುಂಟು ದೊಗ್ಗ[ಪಾಠಾಂ. ಡೊಗ್ಗೆ]ಮಜ್ಜಿಗೆಯುಂಟು ಹೆಗ್ಗಳದ ಕಾಯಿ ಮೆಲಲುಂಟು (ಸರ್ವಜ್ಞ. ೧೭೦೯). [?]

ದೊಗ್ಗಳೆ, ದಗ್ಗಳೆ, ದಗ್ಲಿ (ನಾ). ಒಂದು ಬಗೆಯ ಸಸ್ಯ: ಹುಲಿಗಿಲ್ ದೊಗ್ಗಳೆ[ಪಾಠಾಂ. ಡೊಗ್ಗಗೆ, ದೊಗ್ಗಗೆ]ಯ ಹಱುಹೆಯೆಂಬವಱೆಲೆಯಂ ಕಱಿಯೊಳಿಱಿ ಕಾಸಿ ಕಟ್ಟಿಲ್ ತೊಲಗುಗುಮೊದಱೆಸುವ ಮುಳ್ಳ ವಿಷಮೆನಿತನಿತುಂ (ಖಮದ. ೨-೨೦೦). ದಗ್ಗಳೆ: ಸೊಪ್ಪುಗಳು: ಅಗಸೆ . . . ಹರಿವೆ, ಚಿಲಕಿ, ದಗ್ಗಳೆ, ಕೆಸವೆ, ದೊಡ್ಡಬಸಲಿ (ನಮ್ಮನು. ೨೩೭). ದಗ್ಲಿ: ದಗ್ಲಿಸೊಪ್ಪು, ಚಿಲಕೀರೇಸೊಪ್ಪು (ಪ್ಯಾಜಿಗಿ. ೬-೯೭).

[ದೇ.೫ ತುಳು. ದೊಗ್ಗಲಿ, ದೊಗ್ಗೊಲಿ; ತೆಲು. ದೊಗ್ಗಲಿ, ದಗ್ಗಲಿ]

ದೊಗ್ಗಾಲು 'ಡೊಗ್ಗಾಲು' ನೋ.

ದೊಗ್ಗಾಲೂರು 'ಡೊಗ್ಗಾಲೂರು' ನೋ.

ದೊಟ್ಟಿ (ನಾ). (ಕರಾ) ಬಾವಿಯಿಂದ ನೀರನ್ನು ಮೇಲಕ್ಕೆ ಎತ್ತುವ ಸಾಧನ; ಏತ: ನೀರಿನ ಆಳ ಲಕ್ಕು ದೊಟ್ಟಿಯ ನೀರು ಸೇದಲು ಬಂದಾಗ ರಾಮನಾಥ ಹಾಗೂ ಅವನ ತಂದೆ ಇಬ್ಬರೂ ಹಿತ್ತಲಲ್ಲಿದ್ದರು (ಮೂರುನಾ. ೨೯): ಇಪ್ಪ ವರ್ಷ ದೊಟ್ಟಿಯಿಂದ ಅವರು ನೀರನ್ನು ಮೊಗೆಯುತ್ತಿದ್ದರು (ಮರಮ. ೫೪). [←ತುಳು. ದೊಟ್ಟಿ]

ದೊಠಾರ (ನಾ). ೧. ಶೂರ; ಪರಾಕ್ರಮಿ; ಕಲಿ: ಆರಿವನು ಕಲಿ ಪಾರ್ಥನೇ ತ್ರಿಪುರಾರಿ ಹಿಡಿವಂಬಾಯಿತೆಂಬ ದೊಠಾರನೇ ದೈತ್ಯಾರಿ ಸಾರಥಿಯೆಂಬ ಗರ್ವಿತನೆ (ಕುಮ್ಯಾದ್ರೋ. ೯-೪೨); ಮೇಳವದ ಮರಿ ಲೇಸ್ಸು ಕರ್ಣನ ಸೋಲದಲಿ ಸೀವರಿಸಿದರೆ ಭೂಪಾಲನಾಣೆ ದೊಠಾರರಹಿರೆನು ತಚ್ಚನಾ ಪಾರ್ಥ (ಕುಮ್ಯಾಕ. ೨೪-೪೦). ೨. ನಿಂದೆ; ಮೂದಲೆ; ಚುಚ್ಚುಮಾತಾಡುವಿಕೆ; ಬಯ್ಗುಳ. 'ತುಂಟಾರ', 'ದೊಠಾರತನ', 'ದೊಠಾರಿಸು' ಪರಾ. [?]

ದೊಠಾರತನ (ನಾ). ೧. ಶೌರ್ಯ; ಸಾಹಸ; ಪರಾಕ್ರಮ: ಆಳುತನದ ದೊಠಾರತನ ಸರಿಯಾಳಿನಲಿ ಸೊಸಾದೊಡೊಳ್ಳಿತು ಮೇಳವೇ ಗುರುದೈವದಲಿ (ಕುಮ್ಯಾದ್ರೋ. ೦-೨೭); ಆರ ತೇಜದಲೊಲಿಸಿದೆನು ಮದನಾರಿಯನು ಮಱಗಾಳಗದ ದೊ[ಪಾಠಾಂ. ಕು]ಠಾರತನದಲಿ ಮೆಚ್ಚಿ ಕೊಟ್ಟನಲ್ಲೆ ನಿಜಾಸ್ತ್ರವನು (ನಿಭಾಗ. ೧-೦೦-೪೩). ೨. ನಿಂದಿಸುವಿಕೆ; ಮೂದಲಿಸುವಿಕೆ; ಬಯ್ಯುವಿಕೆ: ನಾಡ ಮಾತನು ಕಲಿತು ನಮ್ಮೊಡನಾಡುತಿಹರೆ ದೊಠಾರತನದಲಿ ಮರುಳುತನದಿಂದೆ (ಪ್ರಭುಲೀ. ೦೩-೮೨).

[ದೊಠಾರ + -ತನ]

ದೊಠಾರಿಸು (ಕ್ರಿ). ೧. ಪರಾಕ್ರಮವನ್ನು ತೋರಿಸು; ಶೌರ್ಯ ತಾಳು; ಸಾಹಸಮಾಡು: ಅಳಿವನ ಘಾಟವೆ ದೊಠಾರಿಸಿ ಸೋಲಿಸುವ ದೇನರಿದೆ (ಕುಮ್ಯಾಕ. ೨೭-೩೩). ೨. ಮೂದಲಿಸು; ನಿಂದಿಸಿ ಮಾತಾಡು: ಮೋದಿ ಮಾಡದಿರಲೆ ಕಿರೀಟಿ ವಿಭಾಡಿಸುವುದರಿಂದೇ ದೊಠಾರಿಸಿಯಾಡುವುದು ದೊರೆಗುಚಿತವೇ (ಕುಮ್ಯಾಭೀ. ೯-೩೭); ಫಡ ದೊಠಾರಿಸಿ ನುಡಿದ ಜಿಹ್ವೆಯ ಹೆಡತಲೆಯಲುಗಿವೆನು ಕಣಾ (ಕುಮ್ಯಾದ್ರೋ. ೦೭-೩೪): ಇವನ ದೊಠಾರಿಸುವ ನಾಲಗೆಯ ಕೊಯ್ಲಿಗೆ ಶಸ್ತ್ರವಿವೆಯೆನುತ (ಕುಮ್ಯಾಕ. ೪-೦೦).

[ದೊಠಾರ + -ಇಸು₂]

ದೊಡಹಳತ 'ದೊಡ್ಡಹಾಳತ' ನೋ.

ದೊಡ್ಡ (ಗು). ೧. ಗಾತ್ರದಲ್ಲಿ ಹಿರಿದಾದ; ದಪ್ಪವಾದ; ಸ್ಥೂಲವಾದ: ಅವಳ ತಂದೆ ಒಂದು ಕಡೆ ಕುಳಿತು ದೊಡ್ಡ ಒಂದು ಡೋಲನ್ನು ಬಡಿಯುತ್ತಿದ್ದನು (ಸಂಪ್ರಕ. IV, ೩೨). 'ದೊಡ್ಡನೇಱಿಲ್' ಪರಾ. ೨. ವಯಸ್ಸಿನಿಂದ ಹಿರಿಯರಾದ; ಹಿರಿಯ; ಜ್ಯೇಷ್ಠ. 'ದೊಡ್ಡಕ್ಕ', 'ದೊಡ್ಡಣ್ಣ' ಪರಾ. ೩. ಮುಖ್ಯವಾದ; ಪ್ರಧಾನವಾದ. 'ದೊಡ್ಡಗಿಡ್ಡಂಗಿ', 'ದೊಡ್ಡಬೀದಿ' ಪರಾ. ೪. ಉದಾರವಾದ; ಉದಾತ್ತವಾದ;

ಧಾರಾಳ. 'ದೊಡ್ಡಮನಸ್ಸು' ಪರಾ. ೫. ಒಳ್ಳೆಯ ತಳಿಯ; ಉತ್ತಮವಾದ. 'ದೊಡ್ಡದನ' ಪರಾ. ೬. ವಿಸ್ತಾರವಾದ; ವಿಶಾಲವಾದ; ಅಗಲವಾದ: ಅವನದು ತುಂಬಾ ದೊಡ್ಡಮುಖ (ರೂಢಿ). 'ದೊಡ್ಡಮನೆ' ಪರಾ. ೭. ಎತ್ತರವಾದ; ಬೆಳೆದ. 'ದೊಡ್ಡಮರ' ಪರಾ. ೮. ಉಬ್ಬಿದ; ಚಾಚಿದ. 'ದೊಡ್ಡಹೊಟ್ಟೆ' ಪರಾ. ೯. ಶಕ್ತಿಯುತವಾದ; ಬಲವಾದ. ೧೦. ಉದ್ದವಾದ; ನೀಳವಾದ. 'ದೊಡ್ಡಿತು' ಪರಾ. ೧೧. ಅತಿಯಾದ; ಆಡಂಬರದ; ವೈಭವದಿಂದ ಕೂಡಿದ: ಆಗಾಗ ಅವರ ಮನೆಯಲ್ಲಿ ದೊಡ್ಡ ಮೇಜವಾನಿಗಳು ನಡೆಯುತ್ತಲೇ ಇರುತ್ತವೆ (ರೂಢಿ). ೧೨. ಭರ್ತಿಯಾದ; ತುಂಬಿದ: ಇಂದು ಮಳೆ ಬಂದಿರುವ ಕಾರಣ ದೊಡ್ಡ ಹೊಳೆ ಆರಂಭವಾಗಿರುವುದರಿಂದ ನದಿಯನ್ನು ದಾಟಿ ಬರಲು ಯಾರೂ ಸಾಹಸ ಮಾಡುವುದಿಲ್ಲ (ರೂಢಿ). ೧೩. ಗಟ್ಟಿಯಾದ; ಜೋರಾದ. 'ದೊಡ್ಡದನಿ' ಪರಾ. ೧೪. ಗಾಢವಾದ; ಅಂತ್ಯವಿಲ್ಲದ. 'ದೊಡ್ಡನಿದ್ದೆ' ಪರಾ. ೧೫. ವೇಗದಿಂದ ಕೂಡಿದ; ವೇಗವಾದ. 'ದೊಡ್ಡನಡೆ' ಪರಾ. ೧೬. ಸಿರಿ ತುಂಬಿದ; ಐಶ್ವರ್ಯವುಳ್ಳ. 'ದೊಡ್ಡೊಕ್ಕಲು' ಪರಾ. ೧೭. ಹೆಚ್ಚಿನದಾದ; ಮಹತ್ತಾದ. 'ದೊಡ್ಡಸುದ್ದಿ' ಪರಾ. ೧೮. ತಿಳಿದ; ತಿಳಿವಳಿಕೆ ಹೊಂದಿದ. 'ದೊಡ್ಡಮಾತು' ಪರಾ.

ದೊಡ್ಡದೊಡ್ಡ (ದ್ವಿರುಕ್ತಿ): ಗಂಡಶೈಲಃ . . . ಬೆಟ್ಟದಿಂದ ಕೆಳಕ್ಕೆ ಉರುಳಿಕೊಂಡು ಜಾರಿದ ದೊಡ್ಡದೊಡ್ಡ ಕಲ್ಲುಗುಂಡುಗಳು (ಸಿದ್ಧಾಂತಿ. ೧೦೮); ದೊಡ್ಡ ದೊಡ್ಡ ಕಣ್ಣುಗಳನ್ನು ಮೆಡ್ಡರಿಸಿಕೊಂಡು . . . ಬಸ್ಸು ಗಾಡಿಗೆ ಎದುರಾಗಿ ಬರುತ್ತಿದ್ದರೆ ಎತ್ತುಗಳಿಗೆ ಬೆಟ್ಟದಾಕಾರದ ಭೂತವೇ ಬಂದಂತೆ ಕಂಡು... ಪರಾರಿಯಾಗುತ್ತಿದ್ದುವು (ನನ್ನೂರು. ೩೯).

ದೊಡ್ಡಂಕಂ ಬಡಿವ, ದೊಡ್ಡಂಕ ಬಡಿವ = ಮಹಾಯುದ್ಧಗಳಲ್ಲಿ ಹೋರಾಡುವವನು; ಅತಿಶಯವಾಗಿ ಹೋರಾಡುವವನು; ಒಂದು ಬಿರುದು: ತೂಗಿ ತುತ್ತಿಡುವ ಬಿರುದರ ವೆಣ್ಣರ ಗಣ್ಣಂ . . . ದೊಡ್ಡಂಕಂ ಬಡಿವ ಗೀತ ಪ್ರಗೀತಂ ಗೇಯವಿನೋದನ್ ನಿಜಕುಳೋತ್ತುಂಗ ಶ್ರೀಮದೆಜೆಯಂಗದೇವ ಸ್ಥಿರಂ ಜೀಯಾತ್ (ಮ್ಯಾಆರಿ. ೧೯೩೯, ೩೭-೩೦: ೧೦೯೮); ದೊಡ್ಡಂಕ ಬಡಿವ ಜಗವಣ್ಣಲೆವ ಸಿತಗರ ಗಣ್ಣ ಸಾಮನ್ತ ಬಿಟ್ಟದೇವರು (ಎಕ. XVI, ಕ್ನಿನಾ. ೯೮-೦೩: ೧೧೬೯); ದೊಡ್ಡಂಕ ಬಡಿವನೆಂಬ ಬಿರುದಂ ಚಾಲುಕ್ಯಚಕ್ರವರ್ತಿಯಾಹವ[ಮ]ಲ್ಲನ ಕಯ್ಯಲು ಪಡೆದು (ಎಕ. XVI, ಚಿಕ್ನಾ. ೬೩-೬೩: ೧೨೪೨).

ದೊಡ್ಡಕುದುರೆ ಚೇಷ್ಟೆ = ಹಣದ ಸಾಮರ್ಥ್ಯವಿದ್ದವರು ಮಾಡುವ ವ್ಯವಹಾರವನ್ನು ಹಣವಿಲ್ಲದವರು ಅನುಕರಿಸುವ ನಡವಳಿ: ಅವರದೆಲ್ಲ ದೊಡ್ಡಕುದುರೆ ಚೇಷ್ಟೆ. ನಾವು ಅವರಿಗೆ ಈಡೇನೂ ಅಲ್ಲ (ಮಹಾಗ. ೨).

ದೊಡ್ಡದಾಗು = ೧. ಗಾತ್ರದಲ್ಲಿ ಹಿರಿದಾಗು; ದಪ್ಪವಾಗು: ಬಲೂನಿನಲ್ಲಿ ಗಾಳಿ ತುಂಬುತ್ತಾ ತುಂಬುತ್ತಾ ಅದು ದೊಡ್ಡದಾಗುತ್ತಾ ಬಂತು (ರೂಢಿ). ೨. ವಿಶಾಲವಾಗು; ವಿಸ್ತಾರವಾಗು: ಜನರಲ್ ವಾರ್ಡಿನಲ್ಲಿ ಪ್ರಪಂಚ ದೊಡ್ಡದಾಗಿತ್ತು (ಕೀಲುಗೊಂ. ೧೪೨). ೩. ನೀಳವಾಗು; ಉದ್ದವಾಗು: ಈ ದಿನದ ನನ್ನ ಭಾಷಣ ಸ್ವಲ್ಪ ದೊಡ್ಡದಾಗಬಹುದು (ರೂಢಿ). ೪. ದೊಡ್ಡವಳಾಗು; ಮೈನೆರೆ: ಆರೇಳು ತಿಂಗಳುಗಳಾದವು. ಹೆಣ್ಣು ದೊಡ್ಡದಾಯಿತು (ಹುಟ್ಟಿಹ. ೧೬).

ದೊಡ್ಡದು = ೧. ಹಿರಿದಾದುದು; ಹೆಚ್ಚಿನದು: ನಿಮ್ಮ ಭಾಗ್ಯ ದೊಡ್ಡದೋ ನಮ್ಮ ಭಾಗ್ಯ ದೊಡ್ಡದೋ (ಪುರಂದ. ೨-೩೦ ಪಲ್ಲವಿ); ಕ್ಷಮೆಯು ದೊಡ್ಡದೇ ಹೊರತಾಗಿ ಪಾಪಕೃತ್ಯದಿಂದುಂಟಾಗುವ ಭೋಗವು ದೊಡ್ಡದಲ್ಲ (ಶ್ರವಾಲು. ೩೧); ನಿನ್ನನ್ನು ಕಣ್ಣಿಗೆ ಒತ್ತಿಕೊಳ್ಳಬೇಕೆಂಬ ಆಶೆಯಾಗುವುದು. ನೀನು ಎಷ್ಟು ದೊಡ್ಡವಳು! ನಿನ್ನ ಹೃದಯ ಎಷ್ಟು ದೊಡ್ಡದು, ಶಾಂತಲೆ! (ಶಾಂತಲಾ. ೩೯೨). ೨. ವಿಶಾಲವಾದುದು: ಕುಪ್ಪತ್ತೂರಿನ ದೇವಾಲಯವು ಬಹಳ ಹಳೆಯದು ಮತ್ತು ದೊಡ್ಡದು (ಮ್ಯಾವಾಸ್ತು. ೧೨೦). ೩. ಅಪಮೂಲ್ಯವಾದುದು; ಮಹತ್ತಾದುದು: ಮಾನವಜನ್ಮ ದೊಡ್ಡದು ಇದ ಹಾನಿ ಮಾಡಲಿಬೇಡಿ ಹುಚ್ಚಪ್ಪಗಳಿರಾ (ಪುರಂದ. ೧-೧೪-೧). ೪. ಅಶಕ್ಯವಾದುದು; ಅಸಾಧ್ಯವಾದುದು: ಇದೇನು ದೊಡ್ಡದೆಂದು ಕೈಯನ್ನು ತೂಗುತ್ತಾ ಪಾಲದಲ್ಲಿ ನಡೆದನು (ಕಾಲೂರ. ೧೦ ಕಥಾಸಾರ).

ದೊಡ್ಡದು ಮಾಡು = ಅಲ್ಪವನ್ನು ಅತಿಯಾಗಿ ಭಾವಿಸು: ಇಷ್ಟು ಸಣ್ಣದಾದ ವಿಷಯವನ್ನು ದೊಡ್ಡದು ಮಾಡಬಾರದು (ಆಳಿನಿ. ೨೪); ತನ್ನ ಹೆಂಡತಿಗಾದ ಒಂದು ಸಣ್ಣ ಅಪಚಾರವನ್ನು ದೊಡ್ಡದು ಮಾಡಿ ಹಿರಿಯ ಮಗ ಮನೆ ಬಿಟ್ಟು ಬೇರೆ ಸಂಸಾರ ಹೂಡಿದ್ದಾನೆ (ರೂಢಿ).

ದೊಡ್ಡವ, ದೊಡ್ಡವನು = ೧. ವಯಸ್ಕ; ಹಿರಿಯ: ಎಡ್ಡಮಂ ಮುಬ್ಬನೊಳ್ ದೊಡ್ಡನುಂ ನೋಡಿದಂ ದೊಡ್ಡವಂ ಕಿರಿದಾಗಿ ಬಯಕೆಯೊಳಗಿಳಿದಂ (ಕಾಲೂರ. ೯೦-೫೦); ಹೌದು ಮಗು, ನೀನೀಗ ತುಂಬ ದೊಡ್ಡವ (ಮರಳು. ೩೭೬); ವೆಂಕಟಕಾಮಿ ನನಗಿಂತ ಸುಮಾರು ಹತ್ತು ವರುಷ ದೊಡ್ಡವನು (ಸತ್ಯಾ. IV, ೩೦); ಮಧು ದೊಡ್ಡವನಾಗುತ್ತಾನೆ, ಓದಿ ವಿದ್ಯಾವಂತನಾಗುತ್ತಾನೆ (ಕೀಲುಗೊಂ. ೮೦). ೨. ಶ್ರೀಮಂತ; ಸಾಹುಕಾರ: ದೊಡ್ಡವನುಂಡರೆ ಮದ್ದು ಬಡವನುಂಡರೆ ಹೇಸಿಗೆ (ಗಾದೆ); ದೊಡ್ಡವನ ಮಾತು ಸವಿ, ಬಡವನ ಊಟ ಸವಿ (ಗಾದೆ). ೩. ಶ್ರೇಷ್ಠನಾದವನು.

ದೊಡ್ಡವರು, ದೊಡ್ಡರ್ (ಬಹುವ) = ೧. ಹಿರಿಯರು: ಹೆದ್ದರೆಂಬುವರೇನೋ ಲಂಗೋಟಿ ಜನರನ್ನು ದೊಡ್ಡವರೆಂದು ವಂದಿಸುವರು ಯತಿಗಳ (ಪುರಂದ. ೪-೫೫-೩); ಗೊಡ್ಡು ನಾಮ ತೀಡಿಕೊಂಡು ಅಡ್ಡಾದಿಡ್ಡಿ ಮುದ್ರೆಗಳ ಬಡಿದುಕೊಂಡಿನ್ನು ದೊಡ್ಡ ದೊಡ್ಡ ಮಾತುಗಳಾಡಿ ದೊಡ್ಡವರೆಂದ್ಹೇಳಿಕೊಂಬ ಬಡ್ಡೀ ಧಗಡೀಮಕ್ಕಳಿಗಿನ್ನು ವೈಷ್ಣವ ಸಲ್ಲುವುದೆ (ಪುರಂದ. ೪-೧೧೧-೧); ತಮ್ಮ ಚಾತುರ್ಯವನ್ನು ದೊಡ್ಡವರಿಗೆ ತೋರಿಸಬೇಕೆಂದು ಹುಡುಗರು ಸದಾ ಅಭಿಲಾಷಿಸುವರು (ಶಾವಿಚಿ. ೨೨); ದೊಡ್ಡವರದೆಲ್ಲವು ದೊಡ್ಡದೆಂಬುವ ಮಾತು ಸುಳ್ಳಲ್ಲ! (ಉದ್ಯಾಸಿ. ೬೫-೦). ೨. ಸಾಹುಕಾರರು; ಶ್ರೀಮಂತರು: ಗುರುಕಾರರಿಗೆ ಮೈಸೂರಿನಲ್ಲಿ ದೊಡ್ಡವರುಗಳ ಮನೆವಾರ್ತೆಗಳ ಮತ್ತು ಚಾಕರರುಗಳ ನೆಂಟಸ್ತನ ಮತ್ತು ಗೆಳೆತನ ಬಹಳ ಉಂಟಂತೆ (ಕಲಿಸ. ೨೨೦); ದೊಡ್ಡವರ ಮನೆ ನೋಟ ಚಂದ, ಬಡವರ ಮನೆ ಊಟ ಚಂದ (ಗಾದೆ); ದೊಡ್ಡವರ ಕೈ ಗಿಡ್ಡ (ಗಾದೆ). ೩. ಮೇಲೆನಿಸಿಕೊಂಡವರು; ಮಹಾವ್ಯಕ್ತಿಗಳು; ಹೆಚ್ಚಿನವರು: ಜಾಗೃತಿಯು ಘನ,-ಕೃತಿಯು ಘನವು,-ವಿಸ್ಮೃತಿಯು ಘನ! ದೊಡ್ಡವರು! (ಉದ್ಯಾಸಿ. ೬೫-೧೬); ಅಂತು ಪೊಡಮಡುವರಾಕಿಕಾಲಾನಲನಂ ಕಂಡು ಕಡ್ಡುವಂದ ದೊಡ್ಡರೆಲ್ಲಂ ಮುಸುಕಿ (ಶಂಪಧಾ. ೩-೬೦ ವ); "ವೃದ್ಧರು" (ಶಂಪದೀ. ೦೧೫).

ದೊಡ್ಡವಳಾಗು = ೧. ವಯಸ್ಕಳಾಗು: ನೀನು ಚಿಕ್ಕವಳು . . . ದೊಡ್ಡವಳಾದ ಮೇಲೆ ನಿನಗೆ ಎಲ್ಲಾ ಅರ್ಥವಾಗುತ್ತೆ (ಕೀಲುಗೊಂ. ೧೨). ೨. ಪ್ರಥಮ ಋತುಮತಿಯಾಗು; ಪುಷ್ಪವತಿಯಾಗು; ಮೈನೆರೆ: ಈ ಅನಾಥ ಬಾಲಿಕೆಯ ವಿವಾಹದ ಭಾರವೂ ಗುರುಚರಣರ ಮೇಲೆಯೇ ಬಿದ್ದಿದೆ. ದೊಡ್ಡವಳಾಗಿ ಬಿಟ್ಟಿದ್ದಾಳೆ (ಶರಿಹೆ. ೨೯); ಅಬ್ಬಬ್ಬಾ ಅಂದ್ರೆ ಇನ್ನೆರಡು ವರ್ಷಗಳಲ್ಲಿ ದೊಡ್ಡವಳಾಗುತ್ತಾಳೆ (ಕೀಲುಗೊಂ. ೩೦).

ದೊಡ್ಡವಳು = ೧. ಹಿರಿಯಳು: ಹಾಗಾದರೆ ನೀನು ದೊಡ್ಡವಳಲ್ಲಾ, ನಿನಗೇಕೆ ಮಕ್ಕಳಾಗೋದಿಲ್ಲ? (ಕೀಲುಗೊಂ. ೧೧). ೨. ಶ್ರೇಷ್ಠಳಾದವಳು: ನೀನು ಎಷ್ಟು ದೊಡ್ಡವಳು! ನಿನ್ನ ಹೃದಯ ಎಷ್ಟು ದೊಡ್ಡದು, ಶಾಂತಲೆ! (ಶಾಂತಲಾ. ೩೯೨). ೩. ಎತ್ತರವಾಗಿರುವವಳು: ಇಬ್ಬರನ್ನೂ ಅಕ್ಕಪಕ್ಕದಲ್ಲಿ ನಿಲ್ಲಿಸಿ ನೋಡಿದರೆ ದೊಡ್ಡವಳು ಯಾರು ಎಂದು ತಿಳಿಯುತ್ತದೆ (ರೂಢಿ).

ದೊಡ್ಡ ಹಾಲುಗೆಯ ದೇವರು = ಪ್ರಸಿದ್ಧವಾಗಿದ್ದ ಒಂದು ದೇವತೆಯನ್ನು ಕುರಿತ

ವಿವರಣೆಯನ್ನು ಕೊಡುವ ಪದ : ಸಯುಂಭುದೇವರ ಗುಡಿಯು ದೊಡ್ಡ ಹಾಉಗೆಯ ದೇವರ ಕೃಪೆಯಿಂದ ದನಗೂರ ದೊರೆ . . . ಸುಬರಾಜ್ಯಂಗೆ ಯುಕ್ತಿರಲು (ಎಕ. III, ಮಳವ. ೬೩-೩ ; 1603). ದೊಡ್ಡಾಳು = ೧. ಎತ್ತರವಾದ ಆಳು : ಅಪ್ಪಾಜಿಯು ಅಷ್ಟು ದೊಡ್ಡಾಳಲ್ಲವಾದ್ದರಿಂದ ಅವರಿಗೆ ಸರಿಯಾಗಿತ್ತು (ಕಂಗಾಳ್ಯ. ೨೫). ೨. ಬಲವಾದ ಆಳು : ಗಾರೆಕೆಲಸಕ್ಕೆ ನಾಲ್ಕು ಜನ ದೊಡ್ಡಾಳುಗಳು ಅವಶ್ಯಕ (ಜೂ). ದೊಡ್ಡಿಹ = ೧. ದಪ್ಪವಾದ ; ಸ್ಥೂಲವಾದ : ಗಂಡಶೈಲಂಗಳ್ – ಬೆಟ್ಟದತ್ತಣಿಂದ ಉರುಳ್ದ ದೊಡ್ಡಿಹ ಕಲ್ಲುಗಳು (ನಾಚಿರಾ. ೬) ; ಮಹೋಕ್ಷ–ದೊಡ್ಡಿಹ ಎತ್ತು (ನಾಚಿರಾ. ೬). ೨. ಹಿರಿದಾದ ; ಹೆಚ್ಚಿನ ; ಶ್ರೇಷ್ಠ : ಒಡ್ಡಿದ ಮೋಹರಗಳನೊಡೆ ಹಾಯ್ಸುವೆ ದೊಡ್ಡಿಹ ರಾವುತರುಗಳ ಒಡ್ಡಮುಜುವೆ (ಕುರಾಸಾಂ. ೦೫-೧೬); ಒಡ್ಡಿದ ಶೂಲವ ಹಾಯ್ದು ವೈರಾರದ ದೊಡ್ಡಿಹ [ಹಾಕಾಂ.ಯು] ದೇವರಿಂದವನ ಅಡ್ಡಾಕಿಲ್ಲದೆ ತರಿಸಿ ನಿನ್ನಯು ಕಾಲಿಗಡ್ಡಗೆಡಹುವೆನಾಜದಿರು (ಕುರಾಸಾಂ. ೨೯-೩೬). P ಇದಲ್ಲದೆ ಅನೇಕ ನಾಮವಾಚಕಗಳೊಡನೆ ಕೂಡಿ ಸಂದರ್ಭಕ್ಕನುಸಾರವಾಗಿ ಈ ಶಬ್ದ ಹೆಚ್ಚು ವ್ಯಾಪ್ತವಾದ ಅರ್ಥವನ್ನು ಪಡೆಯುತ್ತದೆ. ಉದಾಹರಣೆಗೆ– ದೊಡ್ಡ ಅಂಗಡಿ, ದೊಡ್ಡ ಊರು, ದೊಡ್ಡಕೆರೆ, ದೊಡ್ಡ ಕೆಲಸ, ದೊಡ್ಡ ಜಾತ್ರೆ, ದೊಡ್ಡ ತಪ್ಪು, ದೊಡ್ಡಧಿಕಾರಿ, ದೊಡ್ಡನದಿ, ದೊಡ್ಡ ಪುಸ್ತಕ ಭಂಡಾರ, ದೊಡ್ಡ ವಸ್ತುಪ್ರದರ್ಶನ, ದೊಡ್ಡ ಸೈನ್ಯ, ದೊಡ್ಡಹಳ್ಳಿ, ದೊಡ್ಡಹೊಟ್ಟೆ ಮುಂತಾದುವು.

[ ದೇ.೩ ತಮಿ. ತೊಟ್ಟ; ತುಳು. ದೊಡ್ಡ, ದೊಡ್ಡು; ತೆಲು.ದೊಡ್ಡ; ಕೊಡ. ದೊಡ್; ಕೊಲಾ. ದೊಡಾಂದ್ ]

**ದೊಡ್ಡ ಅಂಚಿಹುಲ್ಲು** 'ದೊಡ್ಡ ಹಂಚಿಹುಲ್ಲು' ನೋ.

**ದೊಡ್ಡ ಅಂಟುಪುರಲೆಹುಲ್ಲು** (ನಾ). ಒಂದು ಬಗೆಯ ದೊಡ್ಡದಾದ ಅಂಟುಪುರಲೆ ಹುಲ್ಲು : ದೊಡ್ಡಅಂಟುಪುರಲೆಹುಲ್ಲು, ಕರೀಅಟ್ಟೆಹುಲ್ಲು (ಮೈಕಿಗಿ. ೬೯-೦೯೩೦). [ದೊಡ್ಡ + ಅಂಟುಪುರಲೆ + ಹುಲ್ಲು (<ಪುಲ್)]

**ದೊಡ್ಡ ಏಲಕ್ಕಿ** 'ದೊಡ್ಡೇಲಕ್ಕಿ' ನೋ.

**ದೊಡ್ಡಕಡಗ** (ನಾ). ಒಂದು ಬಗೆಯ ದೊಡ್ಡ ತೇಗದ ಮರ : ಹೆತ್ತೇಗ, ಎಟ್ಟೆಗ, ಎತ್ತಾಗ, ಅರ್ಸಿನತೇಗ, ದೊಡ್ಡಕಡಗ, ಹಡ್ಡ (ಮೈಕಿಗಿ. ೩-೪೦).

[ ದೊಡ್ಡ + ಕಡಗ₃ ]

**ದೊಡ್ಡಕಡವ** (ನಾ). ಒಂದು ಬಗೆಯ ದೊಡ್ಡ ಕದಂಬವೃಕ್ಷ : "ಮಹಾಕದಂಬಃ–ದೊಡ್ಡಕಡವ, ರಾಶ್ಮೆ" (ಓಷಧಿ. ೦೨೨).

[ ದೊಡ್ಡ + ಕಡವ₁ (<ಕದಂಬ) ]

**ದೊಡ್ಡಕರುಳು** (ನಾ). ಜಠರದ ಕೊನೆಯಿಂದ ಗುದದ್ವಾರದವರೆಗಿನ ಅನ್ನನಾಳದ ಭಾಗ : ಸಣ್ಣಕರುಳಿನಲ್ಲಿ ಸಹ ಅರಗದ ಹಾಗೂ ಶರೀರಕ್ಕೆ ಬೇಡವಾದ ಅನ್ನದ ಭಾಗವು ದೊಡ್ಡಕರುಳಿನಲ್ಲಿ ಬಂದು ಸೇರುತ್ತದೆ (ಗೋಗ್ರಾಸ. ೪೫) ; ಕೆಲವು ಕೀಟಗಳಲ್ಲಿ . . . ದೊಡ್ಡಕರುಳು (ಕೊಲೊನ್) ಗುದನಾಳದ ಚೀಲ (Rectal sac) ಮತ್ತು ಗುದಗಳೆಂತ ವಿಭಾಗಿಸಬಹುದು (ಕೀಟಕ. ೨೮). 'ಸಣ್ಣಕರುಳು' ಪರಾ.

[ ದೊಡ್ಡ + ಕರುಳು (<ಕರುಳ್) ]

**ದೊಡ್ಡಕಹಿಮೆಣಸು** (ನಾ). ಒಂದು ಬಗೆಯ ಸಸ್ಯ ; ಕಂಕೊಳ : "ಕಂಕೊಲ–ಕಂಕೊಳ, ದೊಡ್ಡಕಹಿಮೆಣಸು" (ಓಷಧಿ. ೨೨).

[ ದೊಡ್ಡ + ಕಹಿಮೆಣಸು ]

**ದೊಡ್ಡಕಳವಿ** (ನಾ). ದಪ್ಪವಾದ ಹಣ್ಣುಗಳನ್ನು ಬಿಡುವ ಕಳವಿ ಗಿಡ,– ಕಮರಿಕೆಗಿಡ : "ಮಹಾಶ್ವೇತ–ದೊಡ್ಡಕಳವಿ, ಬಿಳಿಯ ಬಳ್ಳಿ, ಸುಂಡೆ, ಕೆಂಜಿಡೆ" (ಓಷಧಿ. ೦೭೭) ; "ಶಿರಿಪತ್ರಃ–ದೊಡ್ಡಕಳವಿ" (ಓಷಧಿ. ೦೭೭).

[ ದೊಡ್ಡ + ಕಳವಿ (<ಕಳವೆ₁) ]

**ದೊಡ್ಡಕಳವಿಗೆ** (ನಾ). ಮುಳ್ಳಗಸೆಯಲ್ಲಿ ಒಂದು ಬಗೆ : "ಗಿರಿಕರ್ಣಿಕೆ–ದೊಡ್ಡಕಳವಿಗೆ" (ಓಷಧಿ. ೪೮). [ ದೊಡ್ಡ + ಕಳವಿಗೆ₃ ]

**ದೊಡ್ಡಕಳ್ಳಂಗಡಲೆ** (ನಾ). ದೊಡ್ಡದಾದ ಕಳ್ಳಂಗಡಲೆ ಜಾತಿಗೆ ಸೇರಿದ ಒಂದು ಬಗೆಯ ಸಸ್ಯ ; ದೊಡ್ಡದಾದ ಏಲಾವಾಲುಕ : "ವರ್ಷಪುತ್ರಿ–ದೊಡ್ಡಕಳ್ಳಂಗಡಲೆ" (ಓಷಧಿ. ೦೪೪).

[ ದೊಡ್ಡ + ಕಳ್ಳಂಗಡಲೆ ]

**ದೊಡ್ಡಕಾಗೆ** (ನಾ). ಒಂದು ಬಗೆಯ ಕಾಗೆ ; ಮಂಡಕಾಗೆ : "ಅರಣ್ಯವಾಯಸಃ–ದೊಡ್ಡಕಾಗೆ" (ಓಷಧಿ. ೯); "ಕಾಕೋಲ–ಚವ್ಯ, ದೊಡ್ಡಕಾಗೆ, ನೀರುಳ್ಳಿ" (ಓಷಧಿ. ೨೯). [ ದೊಡ್ಡ + ಕಾಗೆ ]

**ದೊಡ್ಡಕಾವಲಿ** (ನಾ). ಒಂದು ಬಗೆಯ ಸಸ್ಯ : ಕರಂಡಹಣ್ಣಿನ ಗಿಡ, ಕಬಳಿಗಿಡ, ಕಳಾಗಿಡ, ದೊಡ್ಡಕಾವಲಿ, ಹಜ್ಜಾರಿಗೆ (ಮೈಕಿಗಿ. ೦೮-೩೨೨).

[ ದೊಡ್ಡ + ಕಾವಲಿ₀ ]

**ದೊಡ್ಡಕಿತ್ತೀಳೆ** (ನಾ). ಈಳೆ ಜಾತಿಗೆ ಸೇರಿದ ಒಂದು ಬಗೆಯ ದೊಡ್ಡ ಮರ ಮತ್ತು ಅದರ ಹಣ್ಣು : "ದ್ವಿಪದಃ–ದೊಡ್ಡಕಿ(ತ್ತ್ರಿ)ತ್ತೀಟಿ[ಳೆ]" (ಓಷಧಿ. ೭೭) : "ದ್ವಿಪಖರ್ಜೂರೀ–ದೊಡ್ಡಕಿತ್ತೀಟಿ[ಳೆ]" (ಓಷಧಿ. ೭೭) : "ಬೃಹತ್ಪಾರಾವತಂ–ದೊಡ್ಡ ಕಿತ್ತೀಟಿ[ಳೆ]" (ಓಷಧಿ. ೦೦೯). [ ದೊಡ್ಡ + ಕಿತ್ತೀಳೆ ]

**ದೊಡ್ಡಕುಶೆ** (ನಾ). ಒಂದು ಬಗೆಯ ದೊಡ್ಡದಾದ ಹುಲ್ಲು : "ಶವಿಷಾ–ಬನ್ನಿ, ದೊಡ್ಡಕುಶೆ" (ಓಷಧಿ. ೦೫೯). [ ದೊಡ್ಡ + ಕುಶೆ₁ ]

**ದೊಡ್ಡಕೂವೆ** (ನಾ). ಗೆಣಸಿನಲ್ಲಿ ಒಂದು ಬಗೆ : ದೊಡ್ಡಕೂವೆ, ಕೆಂಪುಕೂವೆ (ಮೈಕಿಗಿ. ೨೬-೫೨೦೦). [ ದೊಡ್ಡ + ಕೂವೆ₁ ]

**ದೊಡ್ಡಕ್ಕ** (ನಾ). ಅಕ್ಕಂದಿರಲ್ಲಿ ಹಿರಿಯಳಾದವಳು ; ಹಿರಿಯ ಅಕ್ಕ ; ಜ್ಯೇಷ್ಠ ಸೋದರಿ : ದೊಡ್ಡಕ್ಕನನ್ನು ಕಕ್ಕಿ ಗದರಿಸಿದಳೆಂದು ಮಕ್ಕಳೆಲ್ಲಾ ನಗತೊಡಗುವಾಗ ಯಶೋದೆಯ ಮೊಗದಲ್ಲೂ ಮೂಡುತ್ತಿದ್ದುದು ನಗುವೆ (ವಾತ್ಸಲ್ಯ. ೮೦) : ದೊಡ್ಡಕ್ಕನ ಚಾಳಿ ಮನೆಮಂದಿಗೆಲ್ಲಾ (ಗಾದೆ).

[ ದೊಡ್ಡ + ಅಕ್ಕ₁ ]

**ದೊಡ್ಡಕ್ಕಿಹುಲ್ಲು** (ನಾ). ಹೊಲದಲ್ಲಿ ತಾನಾಗಿ ಬೆಳೆಯುವ ದೊಡ್ಡದಾದ ಒಂದು ಬಗೆಯ ಹುಲ್ಲು : ದೊಡ್ಡಕ್ಕಿಹುಲ್ಲು, ಮಣ್ಣಕ್ಕಿಹುಲ್ಲು (ಮೈಕಿಗಿ. ೩೦-೫೪೪). [ ದೊಡ್ಡ + ಅಕ್ಕಿಹುಲ್ಲು ]

**ದೊಡ್ಡಕ್ಷರ** (ನಾ). (ಇಂಗ್ಲಿಷ್ ಭಾಷೆಯಲ್ಲಿ) ವಾಕ್ಯದ ಅಥವಾ ಹೆಸರಿನ ಮೊದಲನೆಯ ಅಕ್ಷರ ; ಆದಿಯ ಅಕ್ಷರ : ಪ್ರತಿ ಫಾಂಟಿನಲ್ಲಿಯೂ ದೊಡ್ಡಕ್ಷರಗಳು (Capitals) ಚಿಕ್ಕಅಕ್ಷರಗಳು . . . ಸಂಯುಕ್ತಾಕ್ಷರಗಳೂ ಇರುತ್ತವೆ (ಮುದ್ರಣ. ೦೮). [ ದೊಡ್ಡ + ಅಕ್ಷರ ]

**ದೊಡ್ಡಖಚೋರ** (ನಾ). ಒಂದು ಬಗೆಯ ದೊಡ್ಡದಾದ ಖಚೋರ : ಅಗಿಲು, ಸಣ್ಣಖಚೋರ, ದೊಡ್ಡಖಚೋರ . . . ಇವಿಷ್ಟನ್ನು ಪ್ರತ್ಯೇಕ ಎರಡು ವರಹ ತೂಕಗಳನು ಸೂಕ್ಷ್ಮವಾಗಿ ಚೂರ್ಣಿಸಿ ಹಾಕಿ . . . ನಸ್ಯಂಗಳ ಮಾಡಿಸಲು ನೇತ್ರರೋಗ, ಶಿರೋರೋಗಂಗಳು ಶಮನವಹವು (ವೈದ್ಯಸಾ. II, ೦೩೫). [ ದೊಡ್ಡ + ಖಚೋರ ]

**ದೊಡ್ಡಖರ್ಜೂರ** (ನಾ). ಒಂದು ಬಗೆಯ ದೊಡ್ಡದಾದ ಖರ್ಜೂರದ ಮರ ಮತ್ತು ಅದರ ಹಣ್ಣು : "ರಾಜಪಿಂಡಾ–ದೊಡ್ಡಖರ್ಜೂರ" (ಓಷಧಿ. ೦೫೭) ; "ರಾಜಜ್ಯೇಷ್ಠಾ–ಬಾಟಿ, ದೊಡ್ಡಖರ್ಜೂರ" (ಓಷಧಿ. ೦೫೭). [ ದೊಡ್ಡ + ಖರ್ಜೂರ ]

**ದೊಡ್ಡಗಟ್ಟು** (ನಾ). ದೊಡ್ಡದಾದ ಅಣೆಕಟ್ಟು : ಬ್ರಹ್ಮೇಶ್ವರದೇವರ್ಗ್ಗೆ ಬ್ರಹ್ಮವೇದಿಜೀಯರಂ ಕಾಲಂ ಕರ್ಚ್ಚಿಯುೂರಿಂ ಪಡುವ ದೊಡ್ಡಗಟ್ಟನ ಕೆಳಗೆ ಬಿಟ್ಟ ಗಟ್ಡಿ ಮ ತ್ತ ರೊ ೦ ದು (ಎಕ. XI, ದಾವಣ. ೦೨೬-೨೦ : 1037). [ ದೊಡ್ಡ + ಕಟ್ಟು₈ ]

**ದೊಡ್ಡಗರಿಕೆಹುಲ್ಲು** (ನಾ). ಒಂದು ಬಗೆಯ ಗರಿಕೆಹುಲ್ಲು : (ವ್ಯಶಿಗ. ೩೮-೬೬೪). [ ದೊಡ್ಡ + ಗರಿಕೆ (<ಕಱುಂಕೆ) + ಹುಲ್ಲು (<ಪುಲ್) ]

**ದೊಡ್ಡಗಾದಾರಿ** (ನಾ). ಒಂದು ಬಗೆಯ ಸಸ್ಯ ; ದೊಡ್ಡಮಾಚಿಪತ್ರೆ : (*). [ ದೊಡ್ಡ + ಗಾದಾರಿ ]

**ದೊಡ್ಡಗಿಡ್ಡಂಗಿ** (ನಾ). ಮುಖ್ಯವಾದ ಕಾರಾಗೃಹ : ನಿಮ್ಮನ್ನೆಲ್ಲ ದೊಡ್ಡ ಗಿಡ್ಡಂಗಿಯ ಗುಪ್ತಗೃಹದಲ್ಲಿ ಉಳ್ಳ ಆ ಹಲಕೆಲವು ಮುಟ್ಟುಗಳ ಶಸ್ತ್ರಗಳ ಯಂತ್ರಗಳ ಕಡಿಕರ ಸಾಹಾಯ್ಯದಿಂದ (ಚಟ್ಟುಅ. ೫೨-೫).
[ ದೊಡ್ಡ + ಗಿಡ್ಡಂಗಿ$_2$ ]

**ದೊಡ್ಡಗುಣ** (ನಾ). ಉದಾರವಾದ ಗುಣ : ದೊಡ್ಡಗುಣವನೊಂದ ನೇನೆಂಬೆ ಪತಿಯ ಮೈಯೊಡ್ಡಿನೊಳುಣ ಕುಳಿತಾಗ ಅದ್ದಣಿಗೆಯನೊಲ್ಲರ ವಕೇನು ಲೋಕದ ಹೆಡ್ಡ ಹೆಂಗಳೆ ಹೇಳುವಾಗ (ಭರತ. ೪-೫೯) ; ಕೆಟ್ಟದ್ದನ್ನು ಸರಿಪಡಿಸಿಕೊಳ್ಳುವದೇ ದೊಡ್ಡಗುಣ (ಧೀಮಕಾ. ೨೨೯).
[ ದೊಡ್ಡ + ಗುಣ ]

**ದೊಡ್ಡಗುಲಗಂಜಿ** (ನಾ). ದೊಡ್ಡದಾದ ಒಂದು ಬಗೆಯ ಸಸ್ಯ ಮತ್ತು ಅರ್ಧ ಕೆಂಪಾಗಿಯೂ ಅರ್ಧ ಕಪ್ಪಾಗಿಯೂ ಇರುವ ಅದರ ಬೀಜ ; ಆನೆಗುಲಗಂಜಿ : ಮಂಜತ್ತಿ, ಮಂಜಟಿ, ಮುಂಜಟ್ಟಿ, ದೊಡ್ಡಗುಲಗಂಜಿ, ಆನೆಗುಲಗಂಜಿ (ವ್ಯಶಿಗ. ೩-೩೮).
[ ದೊಡ್ಡ + ಗುಲಗಂಜಿ (<ಗುರುಗುಂಜಿ) ]

**ದೊಡ್ಡಗೆಣಸು** (ನಾ). ಗೆಣಸಿನಲ್ಲಿ ಒಂದು ಬಗೆ : "ವರಾಹಕಃ–ದೊಡ್ಡ ಗೆಣಸು" (ಓಷಧಿ. ೯೨). [ ದೊಡ್ಡ + ಗೆಣಸು (<ಗೆಣಸು) ]

**ದೊಡ್ಡಗೋಣಿ** (ನಾ). ದೊಡ್ಡದಾದ ಒಂದು ಬಗೆಯ ಗೋಣಿಮರ : (ವ್ಯಶಿಗ. ೬೮-೧೨೯೩). [ ದೊಡ್ಡ + ಗೋಣಿ$_1$ (<ಗೋಳಿ$_1$) ]

**ದೊಡ್ಡಗೋರ** (ನಾ). ಒಂದು ಬಗೆಯ ಸೊಪ್ಪು : ಸೊಪ್ಪುಗಳು : ಅಗಸೆ . . . ತುಂಬೆ, ಚಿಟಗಿನೆ, ಪರಪಾಟಕ, ದೊಡ್ಡಗೋರ, ಹು ಳಿ ಬ ಟ್ಟ ಲಿ (ನಮ್ಮನು. ೨೩೬). [ ದೊಡ್ಡ + ಗೋರ ]

**ದೊಡ್ಡಗೋರಂಟಿ** 'ದೊಡ್ಡಗೋರಂಟೆ' ನೋ.

**ದೊಡ್ಡಗೋರಂಟೆ** ದೊಡ್ಡಗೋರಂಟಿ, ದೊಡ್ಡಗೋರಟೆ (ನಾ). ಕೆಂಪುಹೂವುಗಳನ್ನು ಬಿಡುವ ಕುರವಕಗಿಡದಲ್ಲಿ ಒಂದು ಬಗೆ ; ಹೆಗ್ಗೋರಂಟೆ : "ಅಮ್ಲಾನಃ, ಮಹಾಸಹಾ–೨ ದೊಡ್ಡಗೋರಂಟೆ" (ಸಿದ್ಧಾಂತಿ. ೧೩೯). **ದೊಡ್ಡಗೋರಂಟೆ** : "ಕುರವಕಃ, ಶೋಣೀ, ತತ್ರ ಕೆಂಪುಹುವ್ವುಗಳುಳ್ಳ ದೊಡ್ಡಗೋರಂಟಿ, ಹೆಗ್ಗೋರಂಟ" (ಸಿದ್ಧಾಂತಿ. ೧೦೩). **ದೊಡ್ಡಗೋರಟೆ** : "ಮಹಾಸಹಾ–ಸೇವಂತಿಗೆ, ಕಾಡುದ್ದು, ದೊಡ್ಡ ಗೋರಟೆ, ಕಾಡಹುರುಳಿ" (ಓಷಧಿ. ೧೧೮). [ ದೊಡ್ಡ + ಗೋರಂಟೆ ]

**ದೊಡ್ಡಗೋರಟೆ** 'ದೊಡ್ಡಗೋರಂಟೆ' ನೋ.

**ದೊಡ್ಡಚಂಚು** (ನಾ). ಒಂದು ಬಗೆಯ ದೊಡ್ಡದಾದ ಹರಳು ಗಿಡ : "ಬೃಹಚ್ಚಂಚುಃ–ದೊಡ್ಡಚಂಚು" (ಓಷಧಿ. ೧೧೯). [ದೊಡ್ಡ + ಚಂಚು$_1$]

**ದೊಡ್ಡಚಿರಾಯತ** (ನಾ). ಒಂದು ಬಗೆಯ ಮೂಲಿಕೆ ; ನೀಲಿ ಹೂವುಗಳನ್ನು ಬಿಡುವ ಚಿ ರಾ ಯ ತ ಎಂಬ ಸಸ್ಯದಲ್ಲಿ ಒಂದು ವಿಧ : (ವ್ಯಶಿಗ. ೩೬-೭೦೦). [ ದೊಡ್ಡ + ಚಿರಾಯತ (<ಕಿರಿಯಾತು) ]

**ದೊಡ್ಡಚಿಲ್ಲ** (ನಾ). ದೊಡ್ಡದಾದ ಒಂದು ಬಗೆಯ ಚಿಲ್ಲದ ಗಿಡ : "ಕಾಲಮಂಜಿಷ್ಠ–ಕೋಲಿಕುಟುಮ, ಕರಿಯ ತಿಗಡೆ, ದೊ ಡ್ಡ ಚಿ ಲ್ಲ, ಮೆಣಸು" (ಓಷಧಿ. ೨೮). [ ದೊಡ್ಡ + ಚಿಲ್ಲ$_1$ ]

**ದೊಡ್ಡಚುಂಚು** (ನಾ). ಒಂದು ಬಗೆಯ ವನಸ್ಪತಿ : "ಮಹಾಚುಂಚು–ದೊಡ್ಡಚುಂಚು" (ಓಷಧಿ. ೧೧೬). [ ದೊಡ್ಡ + ಚುಂಚು$_1$ ]

**ದೊಡ್ಡಜಡ** (ನಾ). ಕಾಲರಾಬೇನೆ : ಊರಿನಲ್ಲಿ ದೊಡ್ಡಜಡ ಬಂದಂದಿನಿಂದ ಜನಗಳು ನರಳುವುದು ನೋಡಲು ಸಾಧ್ಯವಿಲ್ಲ (ರೂಢಿ). [ದೊಡ್ಡ+ಜಡ]

**ದೊಡ್ಡಜಾಜಿಕಾಯಿ** (ನಾ). ಒಂದು ಬಗೆಯ ಕಾಯಿ : ದೊಡ್ಡಜಾಜಿಕಾಯಿ, ಕನಾಗಿ (ವ್ಯಶಿಗ. ೫೬-೧೧೧೫).
[ ದೊಡ್ಡ + ಜಾಜಿಕಾಯಿ (<ಜಾದಿಕಾಯ್) ]

**ದೊಡ್ಡಜೀರಗೆ** (ನಾ). ಜೀರಗೆಯಲ್ಲಿ ಒಂದು ಬಗೆ : "ತವಸಃ–ದೊಡ್ಡ ಜೀರಗೆ, ಬಿಡಲ" (ಓಷಧಿ. ೬೫). [ ದೊಡ್ಡ + ಜೀರಗೆ ]

**ದೊಡ್ಡಜೀರಿಗೆ** (ನಾ). = ದೊಡ್ಡಜೀರಗೆ : ದೊಡ್ಡ ಸೋಂಪು, ದೊಡ್ಡ ಜೀರಿಗೆ (ವ್ಯಶಿಗ. ೩೮-೬೮೭). [ ದೊಡ್ಡ + ಜೀರಿಗೆ ]

**ದೊಡ್ಡಜೀವ** (ನಾ). ಮುಖ್ಯವಾದ ಜೀವ,–ಪ್ರಾಣ ; P ಹೆಣ್ಣು ಬಸುರಿಯಾಗಿದ್ದಾಗ ಅವಳನ್ನು ದೊಡ್ಡಜೀವ, ದೊಡ್ಡಪ್ರಾಣ ಎಂದು ಕರೆಯುವುದುಂಟು : ಅವನೆದೆಗೆ ಕಿವಿಯೊಡ್ಡಿ . . . "ದೊಡ್ಡ ಜೀವವೇ ಹಾರಿಹೋಗಿದೆ" ಎಂದವನು ಗೊಣಗುಟ್ಟಿದನು (ಪುನರು. ೪೫೨) ; ಗರ್ಭದಲ್ಲಿದ್ದ ಪಿಂಡವು ಸಿರುಗಿ ಸ್ಥಳಪಲ್ಲಟವಾಗಿದ್ದುದರಿಂದ ಅದನ್ನು ಕತ್ತರಿಸಿ ಹೊರತೆಗೆಯದಿದ್ದರೆ ದೊಡ್ಡಜೀವಕ್ಕೆ ಅಪಾಯವೆಂದು ಮಾತ ನಾಡಿಕೊಂಡರು ಆಸ್ಪತ್ರೆಯಲ್ಲಿ (ಬಂಗಬ. ೧೯೭) ; ಸತತವಾದ ಗಮನವನ್ನು ಕೊಟ್ಟು ಆ ವೈದ್ಯರು ದೊಡ್ಡಜೀವ ಸಣ್ಣಜೀವಗಳೆರಡನ್ನೂ ಉಳಿಸಿದರು (ರೂಢಿ). [ ದೊಡ್ಡ + ಜೀವ ]

**ದೊಡ್ಡಜೋಳ** (ನಾ). ಮುಸುಕಿನ ಜೋಳ : (*).
[ ದೊಡ್ಡ + ಜೋಳ ]

**ದೊಡ್ಡಜ್ವರ** (ನಾ). ಕಾಲರಾಬೇನೆ : ಊರೂರಿಗೆ ದೊಡ್ಡಜ್ವರ ಬಂದು ಬಿಟ್ಟಿದೆ (ರೂಢಿ). [ ದೊಡ್ಡ + ಜ್ವರ ]

**ದೊಡ್ಡಣ** (ಗು). ದೊಡ್ಡದಾದಂಥ ; ಗಾತ್ರವಾದ : ಕುಣಿಹಲ್ಲ ಪುರುಷ ನಂತೆ ಮಾತು ದೊಡ್ಡಣ ಕಾಲು ಕೆಂಪಾಗಿದ್ದ ಕೇಶ (ಶಾಮುಂ. ೨೯-೨).
[ <ದೊಡ್ಡ ]

**ದೊಡ್ಡಣ್ಣ** (ನಾ). ಅಣ್ಣಂದಿರಲ್ಲಿ ಹಿರಿಯನಾದವನು ; ಮೊದಲನೆಯ ಅಣ್ಣ : ಏನು ಲೀಲೆಯೊಳು ಚಿಕ್ಕಣ್ಣನಿಹನು ತನ್ನ ವಿ ಜಾ ನ ಲೋ ಚ ನೆ ಯ ರೆಂ ತಿ ಹ ರು ತಾನು ದೊಡ್ಡಣ್ಣನಂತುಪವಾಸಗೈವನೊ ಮಾನಿನಿ ಹೇಳೆಂದಳಾಗ (ಭರತ. ೦೯-೩೩) ; ನಮ್ಮ ದೊಡ್ಡಣ್ಣನಿಂದ ಕಾಗದ ಬಂದು ಬಹಳ ದಿನವಾಯಿತು (ರೂಢಿ). [ ದೊಡ್ಡ + ಅಣ್ಣ$_1$ ]

**ದೊಡ್ಡತಂಗಡಿ** (ನಾ). ಒಂದು ಬಗೆಯ ದೊಡ್ಡದಾದ ತಂಗಡಿ ಸಸ್ಯ : ದೊಡ್ಡತಂಗಡಿ, ಸೀಮೆ ಅಗಸೆ (ವ್ಯಶಿಗ. ೦೮-೩೨೫).
[ ದೊಡ್ಡ + ತಂಗಡಿ ]

**ದೊಡ್ಡತಂದೆ** (ನಾ). ೧. ತಂದೆಯ ಅಣ್ಣ : ದೊಡ್ಡಪ್ಪ. ೨. ತಾಯಿಯ ಅಕ್ಕನ ಗಂಡ : (*). [ ದೊಡ್ಡ + ತಂದೆ ]

**ದೊಡ್ಡತಗಚೆ** (ನಾ). ಒಂದು ಬಗೆಯ ಸಸ್ಯ ; ತಗಚೆಯಲ್ಲಿ ಒಂದು ವಿಧ : ಕೋಲ್‌ತಗಸಿ, ದೊಡ್ಡತಗಚೆ, ಆನೆಸೊಗಚೆ (ವ್ಯಶಿಗ. ೦೯-೩೩೬).
[ ದೊಡ್ಡ + ತಗಚೆ ]

**ದೊಡ್ಡತನ** (ನಾ). ೧. ಹಿರಿಯತನ ; ಘನತೆ ; ಮರ್ಯಾದೆ : ದೊಡ್ಡ ತನವೆನಗಿಲ್ಲ ಅಂಜುವೆನಂಜುವೆ ನಿಮ್ಮ ಪ್ರಮಥರಿಗೆ (ಬಸವ. ೪೧೨) ; ದೊಡ್ಡತನವ ನೀಗಿ ಗಡ್ಡದ ತಾಪಸನಡ್ಡಬಿದ್ದಿರೆ ಗೋಪಿಯರು ಗಡ್ಡವ ಪಿಡಿದು ತೂಗುತ ಗೋ ೬ ವ ರೊ ಳು ವೇಳ್ವರಡ್ಡಬಿದ್ದಿದ್ದು ನಗುವರು (ಅಂಬಿಕ. ೨-೬೬) : ಅಡ್ಡಮೋಜಿಯನಿಕ್ಕಿ ನಗುವಳು ನೋಡುವಳೊಡ್ಡೊಡ್ಡಿ ನುಡಿದೇಡಿಸುವಳು ದೊಡ್ಡತನವೆ ಭಾವ ನಿನಗಿದೆಂಬಳು ರಾಯ ಸಡ್ಡೆ ಮಾಡದೆ ಕೇಳುತಿಹನು (ಭರತ. ೯-೧೧೪). ೨. ಗುಣಾತಿಶಯ ; ಒಳ್ಳೆಯ ಗುಣ : ತಂದೆಯ ಸಹಾನುಭೂತಿಯ ಸಮ್ಮತಿಯಿಂದಾಗಿ ಹೈಮವತಿಯ ಮನಸು ಗೋವರ್ಧನನ ದೊಡ್ಡತನದಲ್ಲಿ ಅನುರಕ್ತವಾಯಿತು (ಎರಡ. ೫೦). 'ಸಣ್ಣತನ' ಪರಾ. [ ದೊಡ್ಡ + – ತನ ]

**ದೊಡ್ಡತಾಯಿ** (ನಾ). ೧. ತಾಯಿಯ ಅಕ್ಕ ; ದೊಡ್ಡಮ್ಮ. ೨. ತಂದೆಯ ಅಣ್ಣನ ಹೆಂಡತಿ ; ದೊಡ್ಡಪ್ಪನ ಹೆಂಡತಿ : ದೊಡ್ಡತಾಯಿ ತೀರಿಕೊಂಡ ಬಗೆಗೆ ಹೆಚ್ಚಿನದು ತನಗೇನೂ ತಿಳಿದಿರಲಿಲ್ಲ (ಬಾತ್ಕ್ರಿ. ೧೦) ; ಆ ವಂಗುವಿ ಗಾದರೂ . . . ತಾಯಿಯೊಡನೆ ಇರಲು ಮನಸ್ಸಾಗದೆ ನಿತ್ಯವೂ ಬಯಲು, ಬೆಂಗರೆ, ಅರಾಲುಗಳಿಂದು ಮನೆಯ ಹೊರಗೇನೆ ದಿನ ಕಳೆಯುತ್ತಿದ್ದ ದೊಡ್ಡತಾಯಿಯುನ್ನು ಹಿಂಬಾಲಿಸುವ ಮನಸ್ಸಾಯಿತು (ಮರಮ. ೧೪೩). [ ದೊಡ್ಡ + ತಾಯಿ (<ತಾಯ್) ]

**ದೊಡ್ಡತಿಪ್ಪಲಿ** 'ದೊಡ್ಡಹಿಪ್ಪಲಿ' ನೋ.

**ದೊಡ್ಡತುಂಬೆ** (ನಾ). ಒಂದು ಬಗೆಯ ದೊಡ್ಡದಾದ ತುಂಬೆ ಗಿಡ ಮತ್ತು ಅದರ ಹೂವು: ಹಸುರುತುಂಬೆ, ದೊಡ್ಡತುಂಬೆ (ವ್ಮಕಿಗಿ. ೩೦-೦೦೦೩). [ ದೊಡ್ಡ + ತುಂಬೆ ]

**ದೊಡ್ಡತೊಪ್ಪೆಮರ** (ನಾ). ಒಂದು ಬಗೆಯ ಮರ : ದೊಡ್ಡತೊಪ್ಪೆಮರ, ...ದಲ್ಲಿಮರ, ಬಟ್ಟಗ (ವ್ಮಕಿಗಿ. ೯೩-೮೮೩). [ದೊಡ್ಡ+ತೊಪ್ಪೆ+ಮರ]

**ದೊಡ್ಡದಗರೆ** (ನಾ). ಒಂದು ಬಗೆಯ ತಗರೆ ಸಸ್ಯ : (ವ್ಮಕಿಗಿ. ೦೫-೩೩೩). [ ದೊಡ್ಡ + ತಗರೆ ]

**ದೊಡ್ಡದತ್ತ್ರಿಲೆ** (ನಾ). ಒಂದು ಬಗೆಯ ಎಳ್ಳಗಸೆ ಸಸ್ಯ : ದೊಡ್ಡದತ್ತ್ರಿಲೆ, ಉಮ (ವ್ಮಕಿಗಿ. ೬೩-೦೩೦೪). [ ದೊಡ್ಡ + ದತ್ತ್ರಿಲೆ ]

**ದೊಡ್ಡದನ** (ನಾ). ಒಳ್ಳೆಯ ತಳಿಯ ಪಶು ; ಉತ್ತಮಜಾತಿಯ ದನ : ಹೆಚ್ಚು ದನಗಳನ್ನು ಇಟ್ಟುಕೊಳ್ಳುವ ಬದಲು ಎರಡು ದೊಡ್ಡದನಗಳನ್ನು ಇಟ್ಟುಕೊಂಡರೆ ಸಾಕು (ರೂಢಿ). [ ದೊಡ್ಡ + ದನ ]

**ದೊಡ್ಡದನಿ** (ನಾ). ಗಟ್ಟಿಯಾದ ಧ್ವನಿ; ಜೋರಾದ ಧ್ವನಿ : ಕೆಲಹೊತ್ತಿನ ಮೇಲೆ ಭಟ್ಟರು ತಮ್ಮ ದೊಡ್ಡದನಿಯಲ್ಲಿ, "ವಾದ್ಯಾ ಬಾರಿಸಿರೋ" ಎಂದರು (ಅಜೋ೮೦. ೩೩).

**ದೊಡ್ಡದನಿ ತೆಗೆ** = ಎತ್ತರದ ಧ್ವನಿಯಲ್ಲಿ ಮಾತನಾಡು ; ಜೋರು ಮಾಡು : ನಾಗಮ್ಮನ ಅಳು ಅಳತೆ ಮೀರಿತು . . . ಅಳುತ್ತ "ನಾನು ನನ್ನ ಮಾವನವರ ಊರಿಗೇ ಹೋಗ್ತೀನಿ" ಎಂದು ದೊಡ್ಡದನಿ ತೆಗೆದಳು (ದಾಸಕಥಾ. ೮೬) ; ಅವನು ದೊಡ್ಡದನಿ ತೆಗೆಯದೆ ಮಾತನಾಡುವುದತಯೇ ಇಲ್ಲ (ರೂಢಿ). [ ದೊಡ್ಡ + ದನಿ ]

**ದೊಡ್ಡದರ್ಭೆ** (ನಾ). ಒಂದು ಬಗೆಯ ಹುಲ್ಲು: "ಬಹುಮೂಲಃ – ದೊಡ್ಡದರ್ಭೆ, ಮಗ್ಗೆ" (ಓಷಧಿ. ೦೦೬). [ ದೊಡ್ಡ + ದರ್ಭೆ ]

**ದೊಡ್ಡನಡೆ** (ನಾ). ವೇಗದಿಂದ ಕೂಡಿದ ನಡಿಗೆ ; ವೇಗವಾದ ನಡಿಗೆ : ಎತ್ತುಗಳನ್ನು ದೊಡ್ಡನಡೆಯಲ್ಲಿ ಬಿಡು (ರೂಢಿ). [ ದೊಡ್ಡ + ನಡೆ ]

**ದೊಡ್ಡನಸುಕು** (ನಾ). ಇನ್ನೂ ಕತ್ತಲು ಇರುವ ಜಾವ ; ಬೆಳಗು ಬರಲು ಇನ್ನೂ ಸಾಕಷ್ಟು ಸಮಯವಿರುವ ಪ್ರಭಾತಕಾಲ : ದೊಡ್ಡನಸುಕಿನಲ್ಲಿ ಎದ್ದು ಸೋನಾಮಣಿಯು . . . ಬಾಗಿಲಿಗೆ ಬಂದು ಸದ್ದಿಲ್ಲದೆ ನಿಂತಳು (ಇಶ್ವಕ. ೦೫೦) ; ಅವು ಅಡ್ಡಾಡುವ ಕಾಲವೆಂದರೆ ಧೂಳಸಂಜೆ ಅಥವಾ ದೊಡ್ಡನಸುಕು (ಕನ್ನಡಾ. ೨೦). [ ದೊಡ್ಡ + ನಸುಕು ]

**ದೊಡ್ಡನಾತದಗಿಡ** (ನಾ). ಒಂದು ಬಗೆಯ ಸಸ್ಯ : ಅರದ್ರಿ, ದೊಡ್ಡನಾತದ ಗಿಡ, ಇಟನ್ನೆ, ರುಚಿಕತ್ರಿ (ವ್ಮಕಿಗಿ. ೦೫-೨೮೩). [ ದೊಡ್ಡ + ನಾತ + ಗಿಡ (<ಗಿಡು) ]

**ದೊಡ್ಡನಾಯಿ** (ನಾ). ೧. ಎತ್ತರವಾಗಿ ಬೆಳೆದಿರುವ ನಾಯಿ, –ಶುನಕ: ದೊಡ್ಡತಲೆ ಯಮನ ದೂತರು ಗಡ್ಡದ ದೂತರು ಓಡಿ ಬಂದರು ದೊಡ್ಡ ನಾಯಿಗಳ ಟೊಂಕಕೆ ಬಿಗಿದು ಚಿಕ್ಕನಾಯಿಗಳ ಎಡಕೈಯಲಿ ಕೊಂಡು (ಪುರಂದ. ೩-೧೨೬-೩). ೨. ಹೆಬ್ಬುಲಿ : "ಶಾರ್ದೂಲಃ, ದ್ವೀಪೀ, ವ್ಯಾಘ್ರಃ – ಕಿ ದೊಡ್ಡಹುಲಿ, ಹೆಬ್ಬುರಹುಲಿ, ದೊಡ್ಡನಾಯಿ" (ಸಿದ್ಧಾಂತಿ. ೦೫೩). [ ದೊಡ್ಡ + ನಾಯಿ (<ನಾಯ್) ]

**ದೊಡ್ಡನಾಳಲು** (ನಾ). ಒಂದು ಬಗೆಯ ದೊಡ್ಡದಾದ ಹುಲ್ಲುಗಿಡ : ದೊಡ್ಡದಾದ ಜೊಂಡುಗಿಡ : "ದೇವನಾಳಃ – ದೊಡ್ಡನಾಳ(ನ)ಲು" (ಓಷಧಿ. ೭೯). [ ದೊಡ್ಡ + ನಾಳಲು (< ನಾನಲ್) ]

**ದೊಡ್ಡನಿಂಬೆ** (ನಾ). ಒಂದು ಬಗೆಯ ದೊಡ್ಡದಾದ ನಿಂಬೆಯ ಗಿಡ ಮತ್ತು ಅದರ ಹಣ್ಣು ; ಗಜನಿಂಬೆ : "ಜಂಬೀರ = ದೊಡ್ಡನಿಂಬೆ" (ಅಕಾನಿ. ೧೧-೩). [ ದೊಡ್ಡ + ನಿಂಬೆ ]

**ದೊಡ್ಡನಿದ್ದೆ** (ನಾ). ೧. ಗಾಢವಾದ ನಿದ್ರೆ ; ೨. ಸಾವು ; ಮರಣ : "ದೊಡ್ಡನಿದ್ದೆ–ಗಾಢನಿದ್ರೆ, ಸಾವು" (ಅನಕೋ. ೭). [ ದೊಡ್ಡ + ನಿದ್ದೆ ]

**ದೊಡ್ಡನಿದ್ರೆ** (ನಾ). = ದೊಡ್ಡನಿದ್ದೆ : (ಕ). [ ದೊಡ್ಡ + ನಿದ್ರೆ ]

**ದೊಡ್ಡನೀರಂಜಿ** (ನಾ). ಒಂದು ಬಗೆಯ ಸಸ್ಯ ; ನೀರಂಜಿಯಲ್ಲಿ ಒಂದು ವಿಧ : ದೊಡ್ಡನೆಗ್ಗಿಲು, ದೊಡ್ಡನೀರಂಜಿ, ಆನೆನೆಗ್ಗಿಲು (ವ್ಮಕಿಗಿ. ೬೦-೦೨೦೬). [ ದೊಡ್ಡ + ನೀರಂಜಿ (<ನೀರುವಂಜಿ) ]

**ದೊಡ್ಡನೀಲಿ** (ನಾ). ಒಂದು ಬಗೆಯ ದೊಡ್ಡದಾದ ನೀಲಿಗಿಡ : "ರಾಜನೀಲಿಕಾ – ದೊಡ್ಡನೀಲಿ" (ಓಷಧಿ. ೦೩೮) ; ಕೊಮ್ಮೆಬೇರು, ದೊಡ್ಡ ನೀಲಿ, ಅಣಬೆ ಇವಿಷ್ಟನ್ನು . . . ಕಲ್ಲೊಳಿಟ್ಟು ಅರೆದು ಹಸುವಿನ ಮಜ್ಜಿಗೆ ಯಲ್ಲಿ ಕುಡಿಯ ಕೊಡಿಸಲು . . . ವಿಷ ಪರಿಹರವಹುದು (ವೈದ್ಯಸಾ. II, ೨೦೬). [ ದೊಡ್ಡ + ನೀಲಿ ]

**ದೊಡ್ಡನೂಲು** (ನಾ). ದಪ್ಪವಾದ, ಒರಟು ನೂಲು: ಸ್ಥೂಲ, ಶಾಟಕ – ದೊಡ್ಡನೂಲ ಸೀರೆ (ನಾಚಿರಾ. ೬). [ದೊಡ್ಡ + ನೂಲು (<ನೂಲ್)]

**ದೊಡ್ಡನೆಕ್ಕರೆ** (ನಾ). ನೇರಳೆ ಬಣ್ಣದ ಹೂವುಗಳನ್ನು ಬಿಡುವ ನೆಕ್ಕರೆ ಎಂಬ ಗುಲ್ಮಜಾತಿಯಲ್ಲಿ ಒಂದು ವಿಧ : (ವ್ಮಕಿಗಿ. ೩೩-೦೦೬೯). [ ದೊಡ್ಡ + ನೆಕ್ಕರೆ ]

**ದೊಡ್ಡನೆಗ್ಗಿಲು** (ನಾ). ಒಂದು ಬಗೆಯ ಸಸ್ಯ ; ನೆಗ್ಗಿಲಿನಲ್ಲಿ ಒಂದು ವಿಧ : ದೊಡ್ಡನೆಗ್ಗಿಲು, ದೊಡ್ಡನೀರಂಜಿ, ಆನೆನೆಗ್ಗಿಲು (ವ್ಮಕಿಗಿ. ೬೦-೦೨೦೬). [ ದೊಡ್ಡ + ನೆಗ್ಗಿಲು (<ನೆಗ್ಗಿಲ್) ]

**ದೊಡ್ಡನೆಲದಾವರೆ** (ನಾ). ಒಂದು ಬಗೆಯ ಹೂವಿನ ಗಿಡ ; ನೆಲದಾವರೆ ಯಲ್ಲಿ ಒಂದು ವಿಧ : "ಶುದ್ಧಮೂಲಂ – ದೊಡ್ಡನೆಲದಾವರೆ" (ಓಷಧಿ. ೦೬೮). [ ದೊಡ್ಡ + ನೆಲದಾವರೆ ]

**ದೊಡ್ಡನೆಲ್ಲಿ** (ನಾ). ನೆಲ್ಲಿಯಲ್ಲಿ ಒಂದು ವಿಧ : ಬೆಟ್ಟದ ನೆಲ್ಲಿಕಾಯಿ . . . ದೊಡ್ಡನೆಲ್ಲಿ, ಬೆಟ್ಟನೆಲ್ಲಿ (ವ್ಮಕಿಗಿ. ೪೪-೬೪೯). [ ದೊಡ್ಡ + ನೆಲ್ಲಿ ]

**ದೊಡ್ಡನೇಟಿಲ್**, ದೊಡ್ಡನೇಟಿಲು (ನಾ). ಗಾತ್ರದಲ್ಲಿ ಹಿರಿದಾದ ನೇರಳೆಹಣ್ಣಿನ ಮರ ಮತ್ತು ಅದರ ಹಣ್ಣು : "ಮಹಾಫಲ – ಬೆಲ್ಲವತ್ತ, ಹಲಸು, ದೊಡ್ಡನೇಟಿಲ್" (ಓಷಧಿ. ೦೦೦). **ದೊಡ್ಡನೇಟಿಲು** : "ಕೋಕಿ ಲೇಷ್ಟಾ – ದೊಡ್ಡನೇಟಿಲು" (ಓಷಧಿ. ೪೧). [ ದೊಡ್ಡ + ನೇಟಿಲ್ ]

**ದೊಡ್ಡನೇಟಿಲು** 'ದೊಡ್ಡನೇಟಿಲ್' ನೋ.

**ದೊಡ್ಡಪಟಿಕ** (ನಾ). ಸ್ಫಟಿಕದ ಗಿಡದಲ್ಲಿ ಒಂದು ಬಗೆ ಮತ್ತು ಅದರ ಹೂವು : ದೊಡ್ಡಪಟಿಕ, ನಾಗಮಲ್ಲಿಗೆ (ವ್ಮಕಿಗಿ. ೬೬-೦೩೯೩). [ ದೊಡ್ಡ + ಪಟಿಕ ]

**ದೊಡ್ಡಪಡಪತ್ರೆ** (ನಾ). ಒಂದು ಬಗೆಯ ಮೂಲಿಕೆ : ದೊಡ್ಡಪಡಪತ್ರೆ ಚೂರ್ಣ ವರಾಹ ತೂಕ ಗುಳಿಗೆ ಮಾಡಿ ಕೊಡಲು ಹಾವುಗಳ ನಾನಾ ವಿಷ, ನಾನಾ ಪ್ರಾಣಿಗಳಿಗೂ ವಿಷ ಹರ (ವಿಶ್ವವಿ. ೦೦೪). [ದೊಡ್ಡ+ಪಡಪತ್ರೆ]

**ದೊಡ್ಡಪತ್ರೆ**, ದೊಡ್ಡಿಪತ್ರೆ (ನಾ). ಅಡುಗೆಗೂ ಔಷಧಿಗೂ ಉಪಯೋ ಗಿಸುವ, ದೊಡ್ಡ ದೊಡ್ಡ ದಪ್ಪ ಎಲೆಗಳನ್ನುಳ್ಳ ಒಂದು ಬಗೆಯ ಗಿಡ ಮತ್ತು ಅದರ ಎಲೆ : "ಛತ್ರಕೋಶಾತಕೀ–ದೊಡ್ಡಪತ್ರೆ (ಬೋಟತರ ?)" (ಓಷಧಿ. ೩೯). **ದೊಡ್ಡಿಪತ್ರೆ** : "ಅಜಪಾದಃ – ಎಲೆಗಳ್ಳಿ, ದೊಡ್ಡಿಪತ್ರೆ" (ಓಷಧಿ. ೬). [ ದೊಡ್ಡ + ಪತ್ರೆ ]

**ದೊಡ್ಡಪರೀಕ್ಷೆ** (ನಾ). ಮುಂದಿನ ತರಗತಿಗೆ ತೇರ್ಗಡೆ ಮಾಡಲು ಮಾಡುವ ಪರೀಕ್ಷೆ; ವಿದ್ಯಾ ಇಲಾಖೆಯವರು ನಡೆಸುವ ಸರ್ವಶಾಲಾ ಪರೀಕ್ಷೆ : ದೊಡ್ಡಪರೀಕ್ಷೆಯೊಳಿನ್ನ ದುರ್ದೈವಕೆ ವಿಜಯವು ಅರೆಬರೆಯಾಗೆ (ಇಂಚಾಪ. ೧೯-೮೦). 'ಸಣ್ಣಪರೀಕ್ಷೆ' ಪರಾ. [ ದೊಡ್ಡ + ಪರೀಕ್ಷೆ ]

**ದೊಡ್ಡಪುಂಡರೀಕ** (ನಾ). ದೊಡ್ಡದಾದ ಬಿಳಿ ತಾವರೆಯ ಬಳ್ಳಿ ಮತ್ತು ಅದರ ಹೂವು : "ಪುಂಡರೀಯಕಂ – ದೊಡ್ಡಪುಂಡರೀಕಂ" (ಚಿಷಧಿ. ೧೦೦). [ ದೊಡ್ಡ + ಪುಂಡರೀಕ ]

**ದೊಡ್ಡಪುರಲೇಹುಲ್ಲು** (ನಾ). ಒಂದು ಬಗೆಯ ಹುಲ್ಲು : ದೊಡ್ಡಪುರಲೇ ಹುಲ್ಲು, ಸಣ್ಣಊಗು ಹುಲ್ಲು (ವ್ಯಕಿ. ೩೪-೬೬೧).
[ ದೊಡ್ಡ + ಪುರಲೈ (<ಪುರುಲೈ) + ಹುಲ್ಲು (<ಪುಲ್) ]

**ದೊಡ್ಡಪ್ಪ** (ನಾ). ೧. ತಂದೆಯ ಅಣ್ಣ ; ದೊಡ್ಡತಂದೆ : "ಪಿತೃವ್ಯಃ, ಪಿತುರ್ಭ್ರಾತಾ – ತಂದೆಗೆ ಪಡಹುಟ್ಟಿದವನ ಪೆಸರು. ಚಿಕ್ಕಪ್ಪ, ದೊಡ್ಡಪ್ಪ" (ಸಿದ್ಧಾಂತಿ. ೦೭೫); ಇಲ್ಲ ದೊಡ್ಡಪ್ಪ, ಇಲ್ಲಿಯೇ ಮಲಗುತ್ತೇನೆ (ವಾತ್ಸಲ್ಯ. ೦) : ವೈದಿಕಲೌಕಿಕೋಭಯವಿದ್ಯಾನಿಪುಣರು ನನ್ನ ಆ ದೊಡ್ಡಪ್ಪನವರು (ಇಂಚಾಪ. ೧೫-೬೦). ೨. ಗೌರವವುಳ್ಳ ವ್ಯಕ್ತಿ ; ಮನ್ನಣೆಯನ್ನು ಹೊಂದಿರುವವನು : ದುಡ್ಡು ದೊಡ್ಡಪ್ಪ ವಿದ್ಯಾ ಗಂಡರಾಗಲು ಬಹುದೆ ದುಡಿದುಂಡರು ಗಂಡರಿರದೇಕ (ಕನ್ನಜಾ. ೩೯೬): ದುಡ್ಡಿದ್ದವನೇ ದೊಡ್ಡಪ್ಪ (ಗಾದೆ). [ ದೊಡ್ಡ + ಅಪ್ಪ$_1$ ]

**ದೊಡ್ಡಬರ** (ನಾ). (ಹಿಂದೆ ೧೮೭೭-೭೮ರ ಧಾತು ಮತ್ತು ಈಶ್ವರ ಸಂವತ್ಸರಗಳಲ್ಲಿ ಇಡೀ ರಾಷ್ಟ್ರವನ್ನೇ ತಲ್ಲಣಗೊಳಿಸಿದ) ಒಂದು ದೊಡ್ಡ ಕ್ಷಾಮ ; ಭಯಂಕರವಾದ ಬರ : ಆಚಾರ್ಯರು . . . ಮೂರು ವರ್ಷದ ಬರ ಅಥವಾ ದೊಡ್ಡಬರ, ಜೋಳದ ಬರಗಳನ್ನು ಕಂಡಿದ್ದರು (ನನ್ನೂರು.೦೯೨) : ಮೊದಲೇ ಬಡತನ, ಅದರಲ್ಲಿ ದೊಡ್ಡಬರ (ಕನ್ನಜಾ. ೨೦).
[ ದೊಡ್ಡ + ಬರ$_1$ (<ಬಟ) ]

**ದೊಡ್ಡಬಸಲೆ, ದೊಡ್ಡಬಸಳೆ** (ನಾ). (ಅಡುಗೆಗೆ ಉಪಯೋಗಿಸುವ) ಒಂದು ಬಗೆಯ ಬಳ್ಳಿ ಮತ್ತು ಅದರ ಸೊಪ್ಪು : ಸೊಪ್ಪುಗಳು : ಅಗಸೆ . . . ದಗ್ಗಳಿ, ಕಿಸವೆ, ದೊಡ್ಡಬಸಲೆ, ಬಿಲವರಗ (ನಮ್ಮನು. ೩೫೭). ದೊಡ್ಡಬಸಳೆ : ದೊಡ್ಡಬಸಳೆ ಬಳ್ಳಿ ತಾರಸಿಯ ಮೇಲಕ್ಕೂ ಹಬ್ಬಿಕೊಂಡು ಹೋಗಿದೆ (ಜೂಢಿ). [ ದೊಡ್ಡ + ಬಸಳೆ ]

**ದೊಡ್ಡಬಸಳೆ** 'ದೊಡ್ಡಬಸಲೆ' ನೋ.

**ದೊಡ್ಡಬಿಂದಿಗೆಗಿಡ** (ನಾ). ಒಂದು ಬಗೆಯ ಹೂವಿನ ಗಿಡ : (ವ್ಯಕಿ. ೫-೮೭). [ ದೊಡ್ಡ + ಬಿಂದಿಗೆ + ಗಿಡ (<ಗಿಡು) ]

**ದೊಡ್ಡಬೀದಿ** (ನಾ). ಮುಖ್ಯವಾದ ಬೀದಿ ; ಪ್ರಧಾನ ರಸ್ತೆ : ದೇವರ ಉತ್ಸವದ ಕಾರಣ ಆ ದೊಡ್ಡಬೀದಿಯಲ್ಲಿ ಬಹುಜನರು ಸೇರಿದ್ದಾರೆ (ಜೂಢಿ). [ ದೊಡ್ಡ + ಬೀದಿ ]

**ದೊಡ್ಡಬೆಂಡೆ** (ನಾ). ಒಂದು ಬಗೆಯ ದೊಡ್ಡದಾದ ಕಾಯಿಗಳನ್ನು ಬಿಡುವ ಬೆಂಡೆ ಗಿಡ ಮತ್ತು ಅದರ ಕಾಯಿ : ದೊಡ್ಡಬೆಂಡೆ, ಕಾಡುಕುತ್ರಿ (ವ್ಯಕಿ. ೬೬-೦೫೬೦). [ ದೊಡ್ಡ + ಬೆಂಡೆ ]

**ದೊಡ್ಡಬೆಟ್ಟ** (ನಾ). ಎತ್ತರವಾದ ಬೆಟ್ಟ : "ತ್ರಿಕೂಟಃ . . . ಮೂರು ಶಿಖರಗಳುಳ್ಳ ಬಹಳ ಪ್ರಸಿದ್ಧವಾದ ದೊಡ್ಡಬೆಟ್ಟ" (ಸಿದ್ಧಾಂತಿ. ೯೪); ಅಂಬುಧಿಯೊಳ್ ಮಗನ ಮಲಗಿಸಿ ಮೇಲೆ ದೊಡ್ಡಬೆಟ್ಟವನ್ನು ಇಟ್ಟು ಬನ್ನಿರೋ (ಪುರಂದ. ೪-೭-೩) : ಕನ್ನಡ ಶಾಸನಗಳಲ್ಲಿ ಚಿಕ್ಕ ಬೆಟ್ಟವನ್ನು ಕಟ್ವಪ್ಪು ಎಂದೂ ದೊಡ್ಡಬೆಟ್ಟವನ್ನು 'ಪೆರ್ಗಟ್ವಪ್ಪು' ಎಂದೂ ಕರೆದಿದೆ (ಕಶಾಅ ೬೮). P ಶ್ರವಣಬೆಳಗೊಳದಲ್ಲಿರುವ ಚಂದ್ರಗಿರಿಗೂ ಊಟಿಯ ಬಳಿಯಿರುವ ನೀಲಗಿರಿಯ ಶಿಖರಕ್ಕೂ ದೊಡ್ಡಬೆಟ್ಟವೆಂಬ ಹೆಸರು ಬಂದಿದೆ. [ ದೊಡ್ಡ + ಬೆಟ್ಟ (<ಬೆಟ್ಟು$_3$) ]

**ದೊಡ್ಡಬೆಲ್ಲಗೆಣಸು** (ನಾ). ಒಂದು ಬಗೆಯ ಸಿಹಿಗೆಣಸು : "ತಾಂಬೂಲ ಪತ್ರಿಕಾ – ದೊಡ್ಡಬೆಲ್ಲಗೆಣಸು" (ಚಿಷಧಿ. ೬೮).
[ ದೊಡ್ಡ + ಬೆಲ್ಲ + ಗೆಣಸು (<ಗೆಣಸು) ]

**ದೊಡ್ಡಬೆಳ್ಳಿಹಣ** (ನಾ). ಒಂದು ಬಗೆಯ ಬೆಳ್ಳಿ ನಾಣ್ಯ : (*).
[ ದೊಡ್ಡ + ಬೆಳ್ಳಿ + ಹಣ ]

**ದೊಡ್ಡಬೇನೆ** (ನಾ). ಕ್ಷಯ ಮೊದಲಾದ ಭಯಾನಕ ವಾದ ರೋಗ ; ದೊಡ್ಡ ರೋಗ : ಜಗಳದ ಕಾವಿನಲ್ಲಿ ಆಕೆ ನಿನಗೆ ದೊಡ್ಡ ಬೇನೆ ಬರ, ಎಂದು ನಟಿಕೆ ಮುರಿದಳು (ಜೂಢಿ). [ ದೊಡ್ಡ + ಬೇನೆ ]

**ದೊಡ್ಡಬೇವು** (ನಾ). ಒಂದು ಬಗೆಯ ಬೇವಿನ ಮರ : "ರಕ್ತಃ – ದೊಡ್ಡ ಬೇವು, ತಾರೆ, ಕಡುಸಿಗೆ" (ಚಿಷಧಿ. ೧೫೩) : "ವಿನಿಂಬಃ–ದೊಡ್ಡಬೇವು" (ಚಿಷಧಿ. ೧೫೩). [ ದೊಡ್ಡ + ಬೇವು ]

**ದೊಡ್ಡಬೊಂಬೆಯಾಟ** (ನಾ). ಬೊಂಬೆಯಾಟದಲ್ಲಿ ಒಂದು ಪ್ರಕಾರ. ದೊಡ್ಡಬೊಂಬೆಯಾಟದವರು = ದೊಡ್ಡ ಬೊಂಬೆಯಾಟವನ್ನು ಆಡಿಸುವವರು : (ಎಪಿಕ್ಯ. XXII, ೩). [ ದೊಡ್ಡ + ಬೊಂಬೆಯಾಟ ]

**ದೊಡ್ಡಮದ್ದು** (ನಾ). ಅಶ್ವಗಂಧದ ಬೇರು ; ಹಿರೇಮದ್ದು : (*).
[ ದೊಡ್ಡ + ಮದ್ದು$_1$ (<ಮರ್ದು) ]

**ದೊಡ್ಡಮನಸ್ಸು** (ನಾ). ಉದಾರಬುದ್ಧಿ ; ವಿಶಾಲಹೃದಯ : ಗಿರಿಜ ಬದುಕಿದ್ದಾಗ "ದೋಸೆ ತಿನ್ನು" ಎಂದು ದೊಡ್ಡಮನಸ್ಸು ತೋರಿಸಿರಲಿಲ್ಲ (ಹದ್ಯಕ. ೬೨) : ನೀವು ಅಂತಹ ದೊಡ್ಡಮನಸ್ಸಿನವರೆಂಬುದನ್ನು ಮುಂದಿ ಬಲ್ಲುದು ಮಹಾರಾಣಿ (ಸವತಿ. ೧೨).
ದೊಡ್ಡಮನಸ್ಸು ಮಾಡು=ಉದಾರಬುದ್ಧಿಯನ್ನು ತೋರು; ಕರುಣೆ ತೋರು : ತಾವು ದೊಡ್ಡಮನಸ್ಸು ಮಾಡಬೇಕು (ಚಳಿ. ೯೧) : ಈಗ ಕುಂತಿಯು ದೊಡ್ಡಮನಸ್ಸು ಮಾಡಿದರೆ ನನಗೂ ಮಕ್ಕಳಾದಾವು (ವಚಳಾ. ೧೩). [ ದೊಡ್ಡ + ಮನಸ್ಸು ]

**ದೊಡ್ಡಮನುಷ್ಯ** (ನಾ). ೧. ಗೌರವಯುತ ಮನುಷ್ಯ : ನನ್ನ ಸಬ್ ಡಿವಿಜನ್ ಆಫೀಸರು ದಳವಾಯಿ ಮನೆತನದ ಚಿಕ್ಕದೇವರಾಜೇಅರಸರೆಂಬ ದೊಡ್ಡಮನುಷ್ಯರು (ಕಲಿಸಿ. ೨೧೭) : ಊರಿಗೆ ದೊಡ್ಡಮನುಷ್ಯ ಅನ್ನಿಸಿ ಕೊಳ್ಳೋಕೆ ನಾನು, ಬಂದೋರ ಚಾಕರಿ ಮಾಡೋಕೆ ನೀವಾ? (ಕಂದಕೋ.೩೬). ೨. ಶ್ರೀಮಂತ : "ದೊಡ್ಡಮನುಷ್ಯ, ದೊಡ್ಡಸ್ತಿಕೆಗಾರ" (Aristocrat. ಪಾರಿಸಿ. ೭). [ ದೊಡ್ಡ + ಮನುಷ್ಯ ]

**ದೊಡ್ಡಮನೆ** (ನಾ). ೧. ವಿಶಾಲವಾದ ಮನೆ : ಸಾಹುಕಾರನು ಆ ದೊಡ್ಡ ಮನೆಯಲ್ಲಿ ಬೀದಿಯ ಕಡೆಯ ಒಂದು ಕೊಠಡಿಯನ್ನು ಸುಬ್ಬಣ್ಣನವರಿಗೆ ತೋರಿಸಿ, ನೀವು ಬೇಕಾದರೆ ಇಲ್ಲಿಯೇ ಇರಿ, ಎಂದು ಹೇಳಿದನು (ಸಣ್ಣಕ. I, ೩೪) : ಒಂದು ಕಾಲಕ್ಕೆ ಅದು ಬಹಳ ದೊಡ್ಡಮನೆ ಆಗಿದ್ದಿರಬೇಕು (ಕಂದಕೋ. ೩೦). ೨. (ಆಲಂ) ಕಾರಾಗೃಹ ; ಸೆರೆಮನೆ : (*).
[ ದೊಡ್ಡ + ಮನೆ ]

**ದೊಡ್ಡಮಬ್ಬು** (ನಾ). ಬೆಳಗಿನ ಜಾವಕ್ಕೂ ಮುಂಚಿನ ಸಮಯ ; ಬೆಳಗಾಗುವುದಕ್ಕಿಂತ ತುಂಬಾ ಮುಂಚಿನ ಸಮಯ : ಚನ್ನ ದೊಡ್ಡ ಮಬ್ಬಿಗೇ ಊರು ಬಿಟ್ಟು ಮೂರಾಳುದ್ದ ಹೊತ್ತಿಗೆ ಬೆಟ್ಟ ಸೇರಿದ (ನನ್ನೂರು. ೨೦೯). 'ನಸುಮಂಬರ್' ಪರಾ.
[ ದೊಡ್ಡ + ಮಬ್ಬು (<ಮರ್ಬು) ]

**ದೊಡ್ಡಮರ** (ನಾ). ೧. ದೊಡ್ಡದಾದ ಮರ ; ಎತ್ತರವಾದ ವೃಕ್ಷ. ೨. ಹಿರೇಮರ ; ಹೆಮ್ಮರ : "ಮಂಡೂಕಪರ್ಣಃ, ಪತ್ರೋರ್ಣಃ, ನಟಃ, ಕಟ್ವಂಗಃ . . . ೧೨ ಹೆಮ್ಮರದ ಹೆಸರುಗಳು. ದೊಡ್ಡಮರ, ಹೆಗ್ಗೊಗಟೇ ಮರ" (ಸಿದ್ಧಾಂತಿ. ೧೧೯) : ದೊಡ್ಡಮರ, ಹೆಮ್ಮರ, ಹಿರೇಮರ (ವ್ಯಕಿ. ೪-೫೮). [ ದೊಡ್ಡ + ಮರ$_1$ ]

**ದೊಡ್ಡಮಳೆ** (ನಾ). ಜೋರಾಗಿ ಸುರಿಯುವ ಮಳೆ ; ಬಿರುಮಳೆ : ದೊಡ್ಡಮಳೆ ಬೆಳ್ಳಿಬಿಸಿಲುಗಳೆರಡ ಮುಕ್ಕುಳಿಸಲೆಡ್ಡಮೆನೆ ಬಾನೊಡಲ್ ಬರಿದಾಗುತಿತ್ತು (ಕಾಲಾರ. ೩೭-೪೭); ಮಳೆಗಾಲದಲ್ಲೆಲ್ಲ ಕೂಡಿ ನಾಲ್ಕಾರು ದೊಡ್ಡಮಳೆಗಳು ಬಿದ್ದರೆ ಬಹು ಸುದೈವ (ಮುಂಬಯಿ. ೩-೧೯೪). [ ದೊಡ್ಡ + ಮಳೆ (<ಮಳೆ) ]

**ದೊಡ್ಡಮಾತು** (ನಾ). ಅತಿ ಉಚಿತವಾದ ಮಾತು ; ಎಲ್ಲರೂ ಒಪ್ಪಬಹುದಾದ ಮಾತು ; ತಿಳಿವಳಿಕೆಯಿಂದ ಕೂಡಿದ ಮಾತು : ದೊಡ್ಡ ಮಾತೇನು, ಗಿಡ್ಡಮಾತೇನು ? (ಪೀಟಿಮಾ. ೨೯) ; ಇಂತಹ ಕೆಲಸ ಮಾಡುವುದಕ್ಕೆ ನಿಮಗೆ ನಾಚಿಕೆಯಿಲ್ಲವಂತೆ . . . ಮತ್ತೆ ಮರ್ಯಾದಿ ಬಗ್ಗೆ ದೊಡ್ಡಮಾತು ಹೇಳುತ್ತೀರಿ (ದೇವಹಂ. ೧೭೨) ; ನಮಗೇಕಪ್ಪ ಅಷ್ಟು ದೊಡ್ಡಮಾತು (ಕತ್ತಲೆ. ೩೯). [ ದೊಡ್ಡ + ಮಾತು₁ ]

**ದೊಡ್ಡಮಾರವಾಳ** (ನಾ). ಒಂದು ಬಗೆಯ ಒಣಹುಲ್ಲು : (ಕ).
[ ದೊಡ್ಡ + ಮಾರವಾಳ (<ಮಾರುಳ) ]

**ದೊಡ್ಡಮಾರ್ಗ** (ನಾ). ಆನೆ, ಕುದುರೆಗಳ ಸವಾರಿಯಿಂದ ಕಿರುದೊಡೆಯಲ್ಲುಂಟಾಗುವ ಜಡ್ಡು,-ದಡ್ಡು : "ದೊಡ್ಡಮಾರ್ಗಂ = ಆನೆ ಕುದುರೆಗಳೊಳಾದ ಕಿಱುದೊಡೆಯ ಜಡ್ಡು. (ಜಡ್ಡು, ದಡ್ಡು)" (ಶಮದ. ಶಬ್ದ. ೨): "ದೊಡ್ಡಮಾರ್ಗಮೆಂದಾನೆ ಕುದುರೆಗಳ ಕಿಱುದೊಡೆಯೊಳಿರದಾದ ದಡ್ಡಕ್ಕು" (ಕಲ್ಮಶ. ೯೧) ; ಆರೂಢಸರ್ವಜ್ಞನ ದೊಡ್ಡ [ಪಾಠಾಂ. ಡ್ಡಿ]ಮಾರ್ಗಂಗಳೆಳವಾಟೆಯ ದಿಂಡಿನೊಳ್ ಸಾಣೆಗಟ್ಟಿದಂತಾದುವು (ಪಂಪಭಾ. ೨-೩೯ ವ) ; ಮದಗಜದ ಪೊರಜು ಪೊಯ್ದೇಟ್ಟ ದೊಡ್ಡಮಾರ್ಗದ ಕಿಣಂಗಳಂ ಕಿಗ್ಗಣ್ಣೊಳ್ ಪದನತನ್ನಪರೀಕ್ಷಿಸೆ (ಅನಂತ. ೨-೯). [ ದೊಡ್ಡ+ಮಾರ್ಗ ]

**ದೊಡ್ಡಮಾವು** (ನಾ). ಒಂದು ಬಗೆಯ ಗಿಡ : "ಶರಾಟಿಕಾ – ದೊಡ್ಡಮಾವು" (ಓಷಧಿ. ೧೬೦). [ ದೊಡ್ಡ + ಮಾವು ]

**ದೊಡ್ಡಮೆಕ್ಕೆಗಿಡ** (ನಾ). ಒಂದು ಬಗೆಯ ಬಳ್ಳಿ ; ಹಾಲ್ಮೆಕ್ಕೆ ಬಳ್ಳಿ: (ಕ).
[ ದೊಡ್ಡ + ಮೆಕ್ಕೆ + ಗಿಡ (<ಗಿಡು) ]

**ದೊಡ್ಡಮೆಣಸಿನಕಾಯಿ** (ನಾ). = ದೊಣ್ಣೆಮೆಣಸಿನಕಾಯಿ : (ಮೈಕಿಗಿ. ೧೭-೩೦೩). [ ದೊಡ್ಡ + ಮೆಣಸಿನಕಾಯಿ ]

**ದೊಡ್ಡಮೇದೆ** (ನಾ). ಒಂದು ಬಗೆಯ ಮೂಲಿಕೆ: "ವೃಕ್ಷಾರ್ಹಃ – ದೊಡ್ಡಮೇದೆ" (ಓಷಧಿ. ೦೫೭). [ ದೊಡ್ಡ + ಮೇದೆ ]

**ದೊಡ್ಡಮ್ಮ** (ನಾ). ೧. = ದೊಡ್ಡತಾಯಿ ೧ : ಚಿಕ್ಕಮ್ಮಗಾ ರಾಯ ಕೈಲಾಗು ಗೊಟ್ಟೊಳಹೊಕ್ಕು ದೊಡ್ಡಮ್ಮನ ಕಂಡ (ಭರತ. ೩೨-೧೯೦) ; ಕಾಳೂರಿನಲ್ಲಿ ಗಿರಿಜಳ ದೊಡ್ಡಮ್ಮನ ಮನೆಯಿದೆ (ದೇವಹಂ. ೯೭). ೨. = ದೊಡ್ಡತಾಯಿ ೨ : ನಿದ್ದೆ ಚೆನ್ನಾಗಿ ಬಂತು ದೊಡ್ಡಮ್ಮ (ಪಾತ್ಕಲ್ಯ. ೧೭). ೩. ಕೆಡುಕನ್ನುಂಟುಮಾಡುವವದೆಂದು ನಂಬಲಾದ ಒಬ್ಬ ಹೆಣ್ಣು ದೇವತೆಯ ಹೆಸರು : ಮಾರುದ್ದ ಮಂಡೇ ಧಂಸೊ ದೊಡ್ಡಮ್ಮಾ ನಿನ್ನ ಮಾಯಾ ಒಬ್ಬರಿಗೂ ತಿಳಿಯಾದೋ (ಹುಟ್ಟಿಹ. ೬೨) ; ಕೋಣಗಳನ್ನು ಕಡಿದ ರಕ್ತ ಚಿಕ್ಕಮ್ಮನ ಗುಡಿಯಿಂದ ದೊಡ್ಡಮ್ಮನ ಗುಡಿಯತನಕ ಹರಿದು ಹೋಗುತ್ತಿತ್ತು (ನನ್ನೂರು. ೩೦). ೪. ಸಿಡುಬು : ಮಗೂಗೆ ದೊಡ್ಡಮ್ಮ ಆಗಿರುವುದರಿಂದ ಮೈಲಿಗೆ ಆಗಗೊಡಬಾರದು (ರೂಢಿ). ೫. ದನಗಳಿಗೆ ಬರುವ ಕಾಲರಾ ಜಾತಿಯ ರೋಗ ; ದೊಡ್ಡರೋಗ : (ಎಸಮ್ಮು. XV, ೩೭). [ ದೊಡ್ಡ + ಅಮ್ಮ₂ ]

**ದೊಡ್ಡಯ್ಯ** (ನಾ). = ದೊಡ್ಡಪ್ಪ : (ಕ). [ ದೊಡ್ಡ + ಅಯ್ಯ₁ ]

**ದೊಡ್ಡರತ್ನಗಂಧಿ** (ನಾ). ಕೆಂಪು ಮತ್ತು ಹಳದಿ ಹೂವುಗಳನ್ನು ಬಿಡುವ ಒಂದು ಬಗೆಯ ಮರ ಮತ್ತು ಅದರ ಹೂವು ; ಗುಲ್ಮೊಹೋರ್ ಮರ: ಸೀಮಸಂಕೇಶ್ವರ, ದೊಡ್ಡರತ್ನಗಂಧಿ, ಕೆಂಪುತುರಾಯಿ, ಗುಲ್ಮಹರ್ ಮರ, ಕತ್ತೀಕಾಯಿ (ಮೈಕಿಗಿ. ೨೯-೩೭೪). [ ದೊಡ್ಡ + ರತ್ನಗಂಧಿ ]

**ದೊಡ್ಡರಾಗಿ** (ನಾ). ಒಂದು ಬಗೆಯ ರಾಗಿ; ಆರು ತಿಂಗಳಲ್ಲಿ ಕೊಯ್ಲಿಗೆ ಬರುವ ರಾಗಿ : ಹೊಲಗಳಲ್ಲಿ ಗಿಡ್ಡರಾಗಿಯು ಬಂದು, ದೊಡ್ಡರಾಗಿಯ ನಾಟಿಯನ್ನು ಹಾಕಿದರು (ಹುಟ್ಟಿಹ. ೬೨). [ ದೊಡ್ಡ + ರಾಗಿ₁ ]

**ದೊಡ್ಡರಾಜಾನ್ನ** (ನಾ). ಗಾತ್ರದಲ್ಲಿ ಹಿರಿದಾದ ಒಂದು ಬಗೆಯ ಭತ್ತ,-ನೆಲ್ಲು : "ಗಂಧಾಢ್ಯ-ಶಾಲಿ, ದೊಡ್ಡರಾಜಾನ್ನ" (ಓಷಧಿ. ೪೭).
[ ದೊಡ್ಡ + ರಾಜಾನ್ನ ]

**ದೊಡ್ಡರಿಸಿನ** (ನಾ). ಅರಿಸಿನದಲ್ಲಿ ಒಂದು ಬಗೆ: "ಪೀತದ್ರುಃ, ಕಾಲೀಯಕಃ . . . ಪರ್ಜನೀ-೭ ಮರದರಿಸಿನ, ಕಸ್ತೂರಿಅರಿಸಿನವೆಂದು ಕೆಲವರನ್ನುವರು ದೊಡ್ಡರಿಸಿನ, ಕಾಡುಅರಿಸಿನ" (ಸಿದ್ಧಾಂತಿ. ೧೩೩). [ ದೊಡ್ಡ + ಅರಿಸಿನ ]

**ದೊಡ್ಡರೋಗ** (ನಾ). ೧. ಭಯಂಕರವಾದ ರೋಗ ; ಸಾವು ತರುವ ರೋಗ: ಕ್ಷಯ ಮೊದಲಾದ ಭಯಾನಕವಾದ ರೋಗ : ನಿಂಗೆ ದೊಡ್ಡರೋಗ ಬರ (ಹುಟ್ಟಿಹ. ೦೫೯). ೨. ದನಗಳಿಗೆ ಬರುವ ಕಾಲರಾ ಜಾತಿಯ ರೋಗ : ದೊಡ್ಡಮ್ಮ : (ಎಸಮ್ಮು. XV, ೩೭).
[ ದೊಡ್ಡ + ರೋಗ ]

**ದೊಡ್ಡವನಮುಗುಳಿ** (ನಾ). ಒಂದು ಬಗೆಯ ದೊಡ್ಡದಾದ ಕಾಡುಮರ: (ಮೈಕಿಗಿ. ೭೦-೧೯೬೨). [ ದೊಡ್ಡ + ವನಮುಗುಳಿ₀ ]

**ದೊಡ್ಡವರಹ** (ನಾ). ಒಂದು ಬಗೆಯ ನಾಣ್ಯ : ಶಾಸನಗಳಲ್ಲಿ ಬರುವ ನಾಣ್ಯಗಳೂ, ಅಳತೆಗಳೂ:- ಗದ್ಯಾಣ . . . ವರಹ, ದೊಡ್ಡವರಹ, ಮಂಗಳೂರು ಗದ್ಯಾಣ (ತುಳುನಾ. ೨೬೦). [ ದೊಡ್ಡ + ವರಹ ]

**ದೊಡ್ಡವೂಸಿ** (ನಾ). ಪುಷ್ಯ ಮಳೆ: (ಎಸಮ್ಮು. XV, ೩೦). 'ಚಿಕ್ಕವೂಸಿ' ಪರಾ. [ ದೊಡ್ಡ + ಪೂಸ್ಯ (<ಪುಷ್ಯ₁) ]

**ದೊಡ್ಡವ್ವ** (ನಾ). = ದೊಡ್ಡತಾಯಿ : (ಕ). 'ಚಿಕ್ಕವ್ವ' ಪರಾ.
[ ದೊಡ್ಡ + ಅವ್ವ₁ (<ಅವ್ವೆ) ]

**ದೊಡ್ಡಶಣಬು** 'ದೊಡ್ಡಸಣಬು' ನೋ.

**ದೊಡ್ಡಶರ** (ನಾ). ಒಂದು ಬಗೆಯ ಹುಲ್ಲು : "ಮಹಾಶರಂ-ದೊಡ್ಡಶರ" (ಓಷಧಿ. ೧೧೭). [ ದೊಡ್ಡ + ಶರ ]

**ದೊಡ್ಡಸಂಪಿಗೆ** (ನಾ). ಒಂದು ಬಗೆಯ ಸಂಪಿಗೆ ಮರ ಮತ್ತು ಅದರ ಹೂವು : (ಮೈಕಿಗಿ. ೩೩-೦೦೭೩). [ ದೊಡ್ಡ + ಸಂಪಿಗೆ (<ಸಂಪಗೆ) ]

**ದೊಡ್ಡಸಣಬು, ದೊಡ್ಡಶಣಬು** (ನಾ). ಒಂದು ಬಗೆಯ ಗಿಡ: "ಮಹಾಶ್ವೇತವರ್ಣೀ-ದೊಡ್ಡ ಸಣಬು" (ಓಷಧಿ. ೦೨೨). **ದೊಡ್ಡಶಣಬು:** "ಮಹಾಶಣಪುಷ್ಪಿಕಾ – ದೊಡ್ಡಶಣಬು" (ಓಷಧಿ. ೦೨೩).
[ ದೊಡ್ಡ + ಸಣಬು (<ಸಣಂಬು) ]

**ದೊಡ್ಡಸರ್ಲೆಹಕ್ಕಿ** (ನಾ). ಒಂದು ಬಗೆಯ ಪಕ್ಷಿ. ೧. ಸಿರಿಗಿರಿ. ೨. ತಾಡಿಗ್ಯ. ೩. ಸಲಿಕಿಬಾಯಿ ಹಕ್ಕಿ : (ಕ).
[ ದೊಡ್ಡ + ಸರ್ಲೆ (<ಸರಲೆ) + ಹಕ್ಕಿ₁ (<ಪಕ್ಕಿ₁) ]

**ದೊಡ್ಡಸಾಮೆ** (ನಾ). ಸಾಮೆಧಾನ್ಯದಲ್ಲಿ ಒಂದು ವಿಧ ; ಹೆಜ್ಜಾವೆ ; ದೊಡ್ಡ ಜಾತಿಯ ಸಾಮೆ ಅಕ್ಕಿ : (ಎಸಮ್ಮು. I, ೩೦).
[ ದೊಡ್ಡ + ಸಾಮೆ₁ (<ಸಾವೆ₁) ]

**ದೊಡ್ಡಸಾಸುವೆ** (ನಾ). ಸಾಸವೆಯಲ್ಲಿ ಒಂದು ವಿಧ : (ಕ).
[ ದೊಡ್ಡ + ಸಾಸುವೆ (<ಸಾಸವೆ) ]

**ದೊಡ್ಡಸಿವನ್ನಿ** (ನಾ). ಒಂದು ಬಗೆಯ ದೊಡ್ಡದಾದ ಸಿವನ್ನಿ ಮರ : "ಮಹಾಕುಮುದ-ದೊಡ್ಡ ಸಿವನ್ನಿ" (ಓಷಧಿ. ೧೨೨).
[ ದೊಡ್ಡ + ಸಿವನ್ನಿ (<ಸೀವನ್ನಿ) ]

**ದೊಡ್ಡಸಿಹಿಗೆಣಸು** (ನಾ). ಸಿಹಿಗೆಣಸಿನಲ್ಲಿ ಒಂದು ಬಗೆ : "ಮಹಾನೀಲಾ ಕರಿಯ ಗಿರಿಕರ್ಣಿ, ಹಿರಿಯ ನೇಟಿಲ್, ದೊಡ್ಡಸಿಹಿಗೆಣಸು" (ಓಷಧಿ. ೧೧೭).
[ ದೊಡ್ಡ + ಸಿಹಿಗೆಣಸು (<ಸೀಗೆಣಸು) ]

**ದೊಡ್ಡಸುದ್ದಿ** (ನಾ). ವಿಶೇಷವಾದ ಸುದ್ದಿ ; ಮಹತ್ವದ ಸಮಾಚಾರ : ಶಾನುಭೋಗರ ಮಗಳಿಗೆ ಮದುವೆ ನಿಶ್ಚಯವಾದದ್ದು ಊರಿಗೆಲ್ಲ ದೊಡ್ಡ ಸುದ್ದಿಯಾಯಿತು (ಊಧ). [ ದೊಡ್ಡ + ಸುದ್ದಿ]

**ದೊಡ್ಡಸುರುಟ** (ನಾ). ಒಂದು ಬಗೆಯ ಸಸ್ಯ : ದೊಡ್ಡಸೊಳ್ತಿ, ದೊಡ್ಡ ಸುರುಟ (ವೃಶಿಗ. ೦೦-೧೬೧). [ ದೊಡ್ಡ + ಸುರುಟ₀ ]

**ದೊಡ್ಡಸೇವಗೆ** (ನಾ). ಒಂದು ಬಗೆಯ ಸೇವಿಗೆ ; ದಪ್ಪನಾದ ಸೇವಿಗೆ : ಪರಡಿ ಗೌವಲಿಯಪ್ಪ ಮಣ ಸಣ್ಣ ಗೋಧೂಮ ಸರವಳಿಗೆ ದೊಡ್ಡಸೇವಗೆ ಕಡುಬುಪೇಡಲಿಗೆ ಬೆರಲ ಸೇವಗೆಯಾದಿಯಾಗಿಯಡವಾದ ಕಜ್ಜಾಯಗಳ ತೆಗೆದುಕೊಂಡು (ಸೂಪಶಾ. ೩-೬). [ ದೊಡ್ಡ + ಸೇವಗೆ (<ಸೇವಿಗೆ) ]

**ದೊಡ್ಡಸೊಳ್ತಿ** (ನಾ). ಒಂದು ಬಗೆಯ ಸಸ್ಯ : ದೊಡ್ಡಸೊಳ್ತಿ, ದೊಡ್ಡ ಸುರುಟ (ವೃಶಿಗ. ೦೦-೧೬೧). [ ದೊಡ್ಡ + ಸೊಳ್ತಿ₀ ]

**ದೊಡ್ಡಸೋಂಪು** (ನಾ). ಒಂದು ಬಗೆಯ ದೊಡ್ಡದಾದ ಸಾಂಬಾರದ ಕಾಳು : ದೊಡ್ಡ ಸೋಂಪು, ದೊಡ್ಡಜೀರಿಗೆ (ವೃಶಿಗ. ೩೮-೬೪೬). [ ದೊಡ್ಡ + ಸೋಂಪು ]

**ದೊಡ್ಡಸೋರೆ** (ನಾ). ಒಂದು ಬಗೆಯ ಸೋರೆ ಬಳ್ಳಿ ಮತ್ತು ಅದರ ಕಾಯಿ : ಕಾಯಿಗಳು :-ಅಗಸೆ . . . ದೊಡ್ಡಕುಂಬಳ, ದೊಡ್ಡಸೋರೆ (ನಮ್ಮನು. ೨೩೬). [ ದೊಡ್ಡ + ಸೋರೆ₁ ]

**ದೊಡ್ಡಸೌತೆ** (ನಾ). ಒಂದು ಬಗೆಯ ತರಕಾರಿ ಬಳ್ಳಿ ; ಸೌತೆಗಿಡದಲ್ಲಿ ಒಂದು ಬಗೆ ಮತ್ತು ಅದರ ಕಾಯಿ : "ನಾಗಮಾತಾ – ಮಣಸಿಲೆ, ತುಳಸಿ, ದೊಡ್ಡಸೌತೆ" (ಓಷಧಿ. ೮೬). [ ದೊಡ್ಡ + ಸೌತೆ (<ಸವುತೆ) ]

**ದೊಡ್ಡಸ್ತ** (ನಾ). ದೊಡ್ಡತನವುಳ್ಳವನು ; ಹಿರಿಮೆಯುಳ್ಳವನು. 'ದೊಡ್ಡಸ್ತನ' 'ದೊಡ್ಡಸ್ತಿಕೆ' ಪರಾ. [ ದೊಡ್ಡ + – ಸ್ತ ]

**ದೊಡ್ಡಸ್ತನ, ದೊಡ್ಡಿಸ್ತನ** (ನಾ). ದೊಡ್ಡತನ ; ಗೌರವ ; ಮರ್ಯಾದೆ; ಹಿರಿಮೆ : "ದೊಡ್ಡಸ್ತನ-ದೊಡ್ಡಸ್ತಿಕೆ" (ಜಾನಕೋ. ೬). **ದೊಡ್ಡಿಸ್ತನ** : ತಮ್ಮ ಅಣ್ಣನ ದೊಡ್ಡಿಸ್ತನವನ್ನು ಕೊಚ್ಚಿಕೊಳ್ಳುತ್ತಾ ಇದ್ದಳು (ಪ್ರತಿಬಿಂ. ೪೬); ನಿಮ್ಮ ಮರ್ಯಾದೆಯು ದೊಡ್ಡಿಸ್ತನವಾದರೂ ಏನು ? (ರಂಗಕೋ. ೬೯). [ ದೊಡ್ಡಸ್ತ + – ತನ ]

**ದೊಡ್ಡಸ್ತಿಕೆ** (ನಾ). ೧. ಹಿರಿಮೆ ; ಹೆಚ್ಚುಗಾರಿಕೆ ; ಘನತೆ; ಗೌರವ ; ಮರ್ಯಾದೆ : ಮನುಷ್ಯನ ಹಿರಿಮೆ ದೊಡ್ಡಸ್ತಿಕೆಗಳು ತಾಯಿ ತಂದೆ ಗಳನ್ನೇ ಹೆಚ್ಚಾಗಿ ಅವಲಂಬಿಸಿರುತ್ತವೆ (ಶ್ಯಾಮಶಾ. ೧); ಮಾಡಬಾರದು ಎಂದು ಯಾವಾಗ ದೊಡ್ಡವರು ಹೇಳುತ್ತಾರೋ ಹಾಗೆ ಮಾಡದಿರುವುದೂ ಒಂದು ದೊಡ್ಡಸ್ತಿಕೆ! (ಕಂಲಹು. ೭೨) ; ಇದರಿಂದ ನನ್ನ ಅವನ ದೊಡ್ಡಸ್ತಿಕೆ ಮತ್ತೂ ಬೆಳೆಯಿತು (ಕಾಲಿಮ. ೨೨೮) : ಒಂದು ಬಾನಿ ಹೆಂಡಕ್ಕೆ ಎರಡರ ಬಾನಿ ನೀರು ಬೆರಸಿ ಸಂಪಾದನೆ ಮಾಡಿದಾರೆ ಈ ದೊಡ್ಡಸ್ತಿಕೇನ (ಮುಠಳ. ೩೩). ೨. ಠೀವಿ ; ಜಬರ್ : "ಠೀವಿ = ದೊಡ್ಡಸ್ತಿಕೆ" (ಗಂಗಾಮು. ೧೪೪) ; ದೊಡ್ಡಸ್ತಿಕೆಯ ಆಶೀರ್ವಾದಗಳಿಂದ ಸಂದೇಶವನ್ನು ಮಾತ್ರ ಕಳಿಸಬೇಕು (ಹುಡುಹು. ೧೦೨). [ ದೊಡ್ಡಸ್ತ + – ಇಕೆ ]

**ದೊಡ್ಡಸ್ತು** (ನಾ). ಹಿರಿಮೆ ; ಘನತೆ : ದೊಡ್ಡಸ್ತಿನೀದೂಡನೆ ಸುಪ್ರಧಾನಿ ವರೇಣ್ಯ ಗದ್ದಮಂ ಗಂಟಿಕ್ಕಿ (ಶರಶು. ೯-೨೦). [ ದೊಡ್ಡಸ್ತ + – ಉ₄ ]

**ದೊಡ್ಡಹಂಚೀಹುಲ್ಲು, ದೊಡ್ಡಅಂಚಿಹುಲ್ಲು** (ನಾ). ಒಂದು ಬಗೆಯ ಹುಲ್ಲು : ದೊಡ್ಡಹಂಚೀಹುಲ್ಲು . . . ಕರೀಸಣ್ಣ ಹಂಚೀ ಹುಲ್ಲು (ವೃಶಿಗ. ೯-೧೪೬). **ದೊಡ್ಡಅಂಚಿಹುಲ್ಲು** : ಚೆಟ್ಟಂಚಿ ಹುಲ್ಲು, ಭೀಮನ ಹಂಚಿ, ದೊಡ್ಡಅಂಚಿಹುಲ್ಲು, ಗುಂಡುಮುಂಚಿ ಹುಲ್ಲು, ಗಂಟುಕಾಚಿ (ವೃಶಿಗ. ೭೪-೦೫೦೯). [ ದೊಡ್ಡ + ಹಂಚಿಹುಲ್ಲು ]

**ದೊಡ್ಡಹತ್ತಿ** (ನಾ). ಹತ್ತಿಯ ಗಿಡದಲ್ಲಿ ಒಂದು ಬಗೆ : (ವೃಶಿಗ. ೪೦-೭೯೨). [ ದೊಡ್ಡ + ಹತ್ತಿ₁ (<ಪಟ್ಟಿ) ]

**ದೊಡ್ಡಹನಿಚೆ** (ನಾ). ಒಂದು ಬಗೆಯ ಗಿಡ : (ವೃಶಿಗ. ೧೫-೨೬೫). [ ದೊಡ್ಡ + ಹನಿಚೆ ]

**ದೊಡ್ಡಹರಳು** (ನಾ). ದೊಡ್ಡ ಗಾತ್ರದ ಹರಳು ಮತ್ತು ಅದರ ಗಿಡ: ದೊಡ್ಡಹರಳು, ಚಿಟ್ಟಹರಳು, ತುರುಕುಹರಳು, ಮರಹರಳು, ಕಾಡು ಹರಳು (ವೃಶಿಗ. ೪೬-೯೪೩). 'ಚಿಟ್ಟುಹರಳು' ಪರಾ. [ ದೊಡ್ಡ + ಹರಳು (<ಪರಲ್) ]

**ದೊಡ್ಡಹಲ್ಲಿ** (ನಾ). ಒಂದು ಬಗೆಯ ಹೂವಿನ ಗಿಡ : "ಕಂಭವಿಪುಷ್ಪ- ದೊಡ್ಡಹಲ್ಲಿ" (ಓಷಧಿ. ೩೬). [ ದೊಡ್ಡ + ಹಲ್ಲಿ₀ ]

**ದೊಡ್ಡಹಾಲುಗುಂಬಳ** (ನಾ). ಒಂದು ಬಗೆಯ ಕುಂಬಳ ಬಳ್ಳಿ ಮತ್ತು ಅದರ ಕಾಯಿ : "ನಾಡ್ಯಲಾಬೂಃ – ದೊಡ್ಡಹಾಲುಗುಂಬಳ" (ಓಷಧಿ. ೮೫). [ ದೊಡ್ಡ + ಹಾಲುಗುಂಬಳ (<ಪಾಲ್ಗುಂಬಳ) ]

**ದೊಡ್ಡಹಾಲ್ಮೆಕ್ಕೆ** (ನಾ). ದೊಡ್ಡದಾದ ಹಾಲುಮೆಕ್ಕೆ ಗಿಡದಲ್ಲಿ ಒಂದು ಬಗೆ : ದೊಡ್ಡಹಾಲ್ಮೆಕ್ಕೆ, ಹಾವುಮೆಕ್ಕೆಕಾಯಿ, ಇಂದ್ರಾವರುಣ (ವೃಶಿಗ. ೨೨-೪೦೦). [ ದೊಡ್ಡ + ಹಾಲ್ಮೆಕ್ಕೆ ]

**ದೊಡ್ಡಹಾಳಿತ, ದೊಡಹಳತ** (ನಾ). ಒಂದು ದೊಡ್ಡ ಅಳತೆಯ ಪ್ರಮಾಣ : ದೊಡ್ಡಹಾಳಿತದ ಮಣವಿನ ತೂಕಕ್ಕೆ ಇದೆ: ೪೪-೪೬ ಸೇರು ಎಂತಲೂ ನಿಬಂಧನೆ ಮಾಡಿದರು (ಚಾಮುಚಂ. ೧೧೯). **ದೊಡಹಳತ** : ಹೊನ್ನವರದ ಲಿಂಗಸೆಟರ ಮಗ ಸಿದಲಿಂಗಸೆಟಿ ಯಡವುರ ಸಿದಲಿಂಗೇಸ್ವರ ಸೋಮಿ ಪದಕೆ ಮಲರ ಸೆ ೩ ನ ಕಳಸ ಯಾ ನಗದ ತೂಕ ದೊಡಹಳತ ನ ೨ ತಿಮೂರು ಸೇರು (ಎಕ. XVI, ಕುಣಿಗ. ೭೮-೨ ; ?). [ ದೊಡ್ಡ + ಹಾಳಿತ (<ಪಾಳತ) ]

**ದೊಡ್ಡಹಿಂಗಿನಬಳ್ಳಿ** (ನಾ). ಒಂದು ಬಗೆಯ ಬಳ್ಳಿ : (ವೃಶಿಗ. ೩೮-೬೪೬). [ ದೊಡ್ಡ + ಹಿಂಗು₃ + ಬಳ್ಳಿ ]

**ದೊಡ್ಡಹಿಂಡಿಗಿಡ** (ನಾ). ಒಂದು ಬಗೆಯ ಸಸ್ಯ : (ವೃಶಿಗ. ೩-೫೦). [ ದೊಡ್ಡ + ಹಿಂಡಿ₂ (<ಪಿಂಡಿ₁) + ಗಿಡ (<ಗಿಡು) ]

**ದೊಡ್ಡಹಿಟ್ಟಳಿಕ** (ನಾ). ಒಂದು ಬಗೆಯ ಸಸ್ಯ : "ಮಹಾಫಲ-ದೊಡ್ಡ ಹಿಟ್ಟಳಿಕ" (ಓಷಧಿ. ೧೧೮). [ ದೊಡ್ಡ + ಹಿಟ್ಟಳಿಕ ]

**ದೊಡ್ಡಹಿಪ್ಪಲಿ, ದೊಡ್ಡತಿಪ್ಪಲಿ** (ನಾ). ಒಂದು ಬಗೆಯ ಹಿಪ್ಪಲಿ ಗಿಡ ಮತ್ತು ಅದರ ಕಾಳು ; ಬಾಲಮೆಣಸು : "ಕಪಿವಲ್ಲಿ-ದೊಡ್ಡಹಿಪ್ಪಲಿ" (ಗಂಗಾಮು. ೬೦) ; ಗಜಹಿಪ್ಪಲಿ, ದೊಡ್ಡಹಿಪ್ಪಲಿ (ವೃಶಿಗ. ೬೮-೧೩೪೮) ; ಜೀನಸುಗಳು–೧ ಅಕ್ಕಲಕಾರ . . . ೭೭ ದೊಡ್ಡಹಿಪ್ಪಲಿ (ಮುಂಬಮ್ಯಾ. ೦೨೫). **ದೊಡ್ಡತಿಪ್ಪಲಿ** : (ವೃಶಿಗ. ೬೬-೦೬೪೨). [ ದೊಡ್ಡ + ಹಿಪ್ಪಲಿ ]

**ದೊಡ್ಡಹೀರೆ** (ನಾ). ಹೀರೆಬಳ್ಳಿಯಲ್ಲಿ ಒಂದು ವಿಧ ಮತ್ತು ಅದರ ಕಾಯಿ : "ಕೋಶಾತಿ–ದೊಡ್ಡಹೀರೆ" (ಓಷಧಿ. ೪೧) [ ದೊಡ್ಡ + ಹೀರೆ₁ (<ಪೀರೆ) ]

**ದೊಡ್ಡಹುಳಕ** (ನಾ). ನೀಳವಾದ ಕೊಕ್ಕಿನ, ವಕ್ರವಾಗಿ ಹಾರುವ ಒಂದು ಬಗೆಯ ಬೇಟೆಯ ಹಕ್ಕಿ ; ತೇವದ ಮರಳುಪ್ರದೇಶಗಳಲ್ಲಿ ಸೇರಿಕೊಳ್ಳುವ ಒಂದು ಬಗೆಯ ಹಕ್ಕಿ ; ಉಲ್ಲಂಗಿ : (+). [ ದೊಡ್ಡ + ಹುಳಕ ]

**ದೊಡ್ಡಹುಳಿ** (ನಾ). ಒಂದು ಬಗೆಯ ನಿಂಬೆಯ ಗಿಡ ಮತ್ತು ಅದರ ಕಾಯಿ : ಕಾಡುನಿಂಬೆ, ದೊಡ್ಡಹುಳಿ (ವೃಶಿಗ. ೧೦-೧೬೩). [ ದೊಡ್ಡ + ಹುಳಿ₁ (<ಪುಳಿ₁) ]

**ದೊಡ್ಡಹೆಂಡತಿ** (ನಾ). ಮೊದಲನೆಯ ಹೆಂಡತಿ ; ಹಿರಿಯ ಹೆಂಡತಿ : "ಕೃತಸಾಪತ್ನಿಕಾ, ಅಧ್ಯೂಢಾ, ಅಧಿವಿನ್ನಾ–ಇ ದೊಡ್ಡಹೆಂಡತಿ, ಹಿರೇ ಹೆಂಡತಿ ಹೆಸರುಗಳು" (ಸಿದ್ಧಾಂತಿ. ೧೪೬). [ ದೊಡ್ಡ + ಹೆಂಡತಿ (<ಪೆಂಡತಿ) ]

**ದೊಡ್ಡಹೆಮ್ಮರ** (ನಾ). ಹೆಮ್ಮರದಲ್ಲಿ ಒಂದು ಬಗೆ "ಭೂತಸಾರಃ–ದೊಡ್ಡಹೆಮ್ಮರ" (ಒಷಧಿ. ೧೧೩). [ ದೊಡ್ಡ + ಹೆಮ್ಮರ (<ಪೇರ್ಮರ) ]

**ದೊಡ್ಡಹೊಂಗೆ** (ನಾ). ಒಂದು ಬಗೆಯ ಹೊಂಗೆ: "ಕಳಾರಾಮಃ–ದೊಡ್ಡಹೊಂಗೆ" (ಒಷಧಿ. ೨೪). [ ದೊಡ್ಡ + ಹೊಂಗೆ ]

**ದೊಡ್ಡಹೊಟ್ಟೆ** (ನಾ). ದೊಡ್ಡದಾದ ಉಬ್ಬಿದ ಹೊಟ್ಟೆ, – ಉದರ ; ಡೊಳ್ಳುಹೊಟ್ಟೆ : ಮನದೊಳಿದ್ದುದನೆಹಗೆ ಹೇಳಿದೆಯೆನುತ ಪಡೆದಾ ದೊಡ್ಡಹೊಟ್ಟೆಯನೆನುತ ಬಡನುಡಿಯಂ ನುಡಿವರೇ (ಬಸಪು. ೫೯–೧೪) : ದೊಡ್ಡಹೊಟ್ಟೆಯಿದ್ದವ ಹೆಡ್ಡನೋ (ಗಾದೆ).

**ದೊಡ್ಡಹೊಟ್ಟೆಯವ** = ದೊಡ್ಡ ಹೊಟ್ಟೆಯನ್ನು ಉಳ್ಳವನು ; ಗಣೇಶ : "ಪಿಚಿಂಡಿಲಃ, ಪಿಚಂಡಿಲಃ–ದೊಡ್ಡಹೊಟ್ಟೆಯವ, ಗಣೇಶ" (ಗಂಗಾಮು. ೨೧೩). [ ದೊಡ್ಡ + ಹೊಟ್ಟೆ$_1$ (<ಪೊಟ್ಟೆ) ]

**ದೊಡ್ಡಹೊನ್ನೆ** (ನಾ). ಒಂದು ಬಗೆಯ ದೊಡ್ಡದಾದ ಹೊನ್ನೆಮರ: "ಅವಸಾಯನಿ–ದೊಡ್ಡಹೊನ್ನೆ" (ಒಷಧಿ. ೮). [ ದೊಡ್ಡ + ಹೊನ್ನೆ (<ಪೊನ್ನೆ) ]

**ದೊಡ್ಡಹೊಲೆಗಾರ** (ನಾ). ಒಂದು ಬಗೆಯ ಸಸ್ಯ : ದೊಡ್ಡಹೊಲೆಗಾರ, ಬೆಟ್ಟಹೊಲೆಗಾರ (ವ್ಯಾಜಿಗಿ. ೪೪–೮೬೦). [ ದೊಡ್ಡ + ಹೊಲೆಗಾರ$_0$ ]

**ದೊಡ್ಡಾಟ** (ನಾ). ಬಯಲಾಟದ ಒಂದು ಪ್ರಕಾರ ; ಮೇಳ : ಮೊನ್ನೆ ಒಂದು ದೊಡ್ಡಾಟವೂ ಆಯ್ತು, ಸತ್ಯಹರಿಶ್ಚಂದ್ರ ಅಂತ (ತುಂಗಳ. ೧೪). [ ದೊಡ್ಡ + ಆಟ ]

**ದೊಡ್ಡಾಣೆ** (ನಾ). ಎಂಟನೆಯ ಒಂದು (⅛) ರೂಪಾಯಿಯ ಬೆಲೆಯಿದ್ದ ಒಂದು ಹಳೆಯ ಬೆಳ್ಳಿಯ ನಾಣ್ಯ : ಒಂದೆರಡು ದಿವಸಗಳ ಮೇಲೆ ಊದಿದ ಸ್ಥಳಗಳಲ್ಲೆಲ್ಲಾ ದೊಡ್ಡಾಣೆಯಷ್ಟು ಅಗಲ ನೀಲಿಬಣ್ಣದ ಗುಳ್ಳೆಗಳೇಳುತ್ತವೆ (ಗ್ರಾಮಾಳ. ೧೬೦). [ ದೊಡ್ಡ + ಆಣೆ$_6$ ]

**ದೊಡ್ಡಾನೆ** (ನಾ). ಗುಂಪಿನಲ್ಲಿಯೇ ಹಿರಿದಾದ ಆನೆ ; ಗುಂಪಿನ ಒಡೆಯನಾದ ಆನೆ ; ಸಲಗ : "ಯೂಥನಾಥಃ, ಯೂಥಪಃ–೨ ಆನೆಗಳ ಹಿಂಡಿನಲ್ಲಿ ಮುಖ್ಯವಾದ ಗಜದ ಪೆಸರುಗಳು ; ಸಲಗ, ದೊಡ್ಡಾನೆ" (ಸಿದ್ಧಾಂತಿ. ೨೧೧). [ ದೊಡ್ಡ + ಆನೆ$_1$ ]

**ದೊಡ್ಡಿ$_1$** 'ತೊಟ್ಟಿ$_1$' ನೋ.

**ದೊಡ್ಡಿ$_2$** (ನಾ). ಸೂಳೆ ; ವೇಶ್ಯೆ. 'ದೊಡ್ಡಿತನ' ಪರಾ. [<ತೊಟ್ಟಿ$_3$]

**ದೊಡ್ಡಿ$_3$** (ನಾ). ಒಂದು ಬಗೆಯ ಮೂಲಿಕೆ : ದುಗ್ಧಿಕ, ದೊಡ್ಡಿ, ಹಾಲದೊಡ್ಡಿ . . . . ಪ್ರಾತಃಕಾಲದಲ್ಲಿ ಗ ಳ ತೂಕವಂ ಸೇವಿಸುವುದು (ಸಳವ್ಯ. ೨೧೮). 'ತೊಟ್ಟಿ$_4$' ಪರಾ. [ ? ]

**ದೊಡ್ಡಿಗೂಡು** (ಕ್ರಿ). ದೊಡ್ಡಿಯಲ್ಲಿ ಕೂಡಿಹಾಕು : ಆ ಮಂದೆಯನ್ನು ಅರಮನೆಯ ಅಯ್ಯನೆಯ–ಎಂದರೆ, ತಳಾತಳದ ಹಸರ–ನೆಲಮಾಳಿಗೆಯಲ್ಲಿ ದೊಡ್ಡಿಗೂಡಿರು (ಚಟ್ಟಿಅ. ೧೪೩–೭). [ ದೊಡ್ಡಿ$_1$ (<ತೊಟ್ಟಿ$_1$) + ಕೂಡು$_1$ ]

**ದೊಡ್ಡಿಗೊಳ್** (ಕ್ರಿ). ಗುಂಪುಗೂಡು ; ಗುಂಪಾಗು : ತನೆಯ ಸಂದಿಗಳೊಳ್ ಸಂದಣಿಸಿ ನೇಲ್ವ ವೀರಭಟ ಕುಣಪಂಗಳಿಂ ಪೆಣೆದ ಪೆರ್ಮರ್ಚಿಯಂ ಕಱುವ ವಿಳಯಜಳಧರದೊಡ್ಡಿನಂತೆ ದೊಡ್ಡಿಗೊಂಡಿರ್ದುದು (ಅನಂಪು. ೧೧–೮೪ ವ). [ ದೊಡ್ಡಿ$_1$ (<ತೊಟ್ಟಿ$_1$) + ಕೊಳ್$_1$ ]

**ದೊಡ್ಡಿತನ** (ನಾ). ೧. ಸೂಳೆತನ ; ಸೂಳೆಗಾರಿಕೆ : ನಾನು ವೇಶ್ಯೆ ! ನಾನು ಸೂಳೆ ! ಎಂದು ಕಂಡಕಂಡವರೊಡನೆ ಸಾರಿಕೊಳ್ಳುವುದಿದೊಂದು ದೊಡ್ಡತನವೇನು . . . ಅಲ್ಲ ದೊಡ್ಡಿತನ (ಮಂತ್ರಕ. ೨೭–೨೨). ೨. ಮೋಸ ; ವಂಚನೆ : ಸಲೆ ನಂಬಿದರೊಳೆರಡುಟನೆಣಿಸುವರು ಕೈವಿಡಿದು ದೊಡ್ಡಿತನ ಮಾಡಿದನ ಲೆಕ್ಕಿಸದಿಹರು (ನಿಜಶಿ. ೮೪). [ ದೊಡ್ಡಿ$_2$ + – ತನ ]

**ದೊಡ್ಡಿತು, ದೊಡ್ಡಿತ್ತು** (ನಾ). ೧. ಗಾತ್ರದಲ್ಲಿ ಹಿರಿದಾದುದು ; ದಪ್ಪವಾದುದು ; ಸ್ಥೂಲವಾದುದು : "ದೊಡ್ಡಿತೆನಲ್ಕೆ ಮಹಾರ್ಥಶಬ್ದದೊಳ್" (ಕರ್ಣನಿ. ೧೮) : ಅಸಿದು ಬೆಳೆಯದೆ ಕೊಬ್ಬಿ ದೊಡ್ಡಿತಹ [ಪಾಠಾಂ. ಗೊಡ್ಡಿಡದ] ತೆನೆಗಳೊಳು (ಸಿದ್ಧರಾ. ೨–೨೯) ; ಕಲ್ಲನತಿ ದೊಡ್ಡಿತಂ ಒಡೆದು ತೊಟ್ಟಿಯೊಳಿಯೆ ಚಿತ್ರೋಲ್ಲಾಸದಿಂದೆತ್ತಿ ಹಾಯ್ಕಲ್ (ಪಾಕೋಪು. ೪–೧೦೭). ೨. ಅಗಾಧವಾದುದು ; ಗಹನವಾದುದು ; ಮುಖ್ಯವಾದುದು : ದೇವ ಚಿತ್ತೈಸೈ ಸಲೆ ನಿಜಸೇವಕರು ನಾವಿರಲು ದೊಡ್ಡಿತದಾವುದು (ತೊರರಾ. ೪–೮–೧೦); ಅದೇನು ದೊಡ್ಡಿತು ಮಾಂಧಾತ ಸುತ್ಯಾಗವ ಬೇಡ ಬಂದವಗೆ ರಾಗದಿಂದೊಡಲ ಧಿಕ್ಕನೆ ಸೀಳ್ದು ದಕ್ಷಿಣಭಾಗವ ಕೊಟ್ಟುದನರಿಯಾ (ಮೋಹತ. ೩–೩೪). ೩. ಎತ್ತರವಾದುದು ; ದೊಡ್ಡಿತಾದ ಎಲವದ ಮರದ ಮೇಲೆ ಅನೇಕ ಗಿಣಗಳಿರುವುವು (ಕಾದಂಬ. ೩). ೪. ಉದ್ದವಾದುದು ; ನೀಳವಾದುದು : ಮಹಾಬಾಹೋ ಎಲ್ಲೈ ದೊಡ್ಡಿತಾದ ತೋಳುಗಳುಳ್ಳಂಥಾ ಹೀಗೆ ಸಂಬೋಧನೆ ಮಾಡಿದ್ದರಿಂದ (ಉತ್ತಟೀ. ೨–೩). ೫. ಗಟ್ಟಿಯಾದುದು ; ಜೋರಾದುದು : ಐದು ತಿಂಗಳ ಕೂಸಂ ಸಂಸಿನಿಯೆಂಬ ದೇವತೆ ಒಡಿದೊಡಾ ಕೂಸು . . . ಆಕಾಶವಂ ನೋಡುಗುಂ ದೊಡ್ಡಿತಪ್ಪ ಧ್ವನಿಯಿಂದಳುಗುಂ (ಬಾಲಚಿ. ೦೨೩–೧೭) : ಒಡ್ಡಿದ ಭೈರವ ಬಲರಾಮನ ಪೆಟ್ಟು ದೊಡ್ಡಿತೆನುತ್ತೆ ನಿಮ್ಮರದಿ ಒಡ್ಡಿಯ ನುಡಿದು (ಮೋಹತ. ೩೯–೧೩) ; ಕೇಳಿ ಕಿಡಿಕಿಡಿವೋಗಿ ಬಾಯ್ ದೊಡ್ಡಿತೆಂದೆನ್ನನೊಳುವೆಯ (ಬಲಪು. ೪೭–೨೯). ೬. ಹೆಚ್ಚಿನದು; ಮಿಗಿಲಾದುದು ; ಮಹತ್ತಾದುದು : ಕೊಡುವರ್ಗಾವುದು ದೊಡ್ಡಿತ್ತೆ (ಸೋಮೇಶ. ೮೪) : ಪರವೊಮ್ಮದನುಭವವೊಂದುಳ್ಳರವನಿಗೆ ದೊರಕದ ದೊಡ್ಡಿತೊಂದುಂಟೆ (ಭರತ. ೩–೮೩) : ತುಪ್ಪ ಸಕ್ಕರೆ ಪಾಲ ಸವಿವ ಮನುಜರ ತಂದೊಟ್ಟಿಸುವುದು ದೊಡ್ಡಿತಲ್ಲ (ಕಂಸವಿ. ೧೦–೪) : ಎನ್ನೀ ಕೀರ್ತಿಯೆ ದೊಡ್ಡಿತೆಂಬ ತೆರದಿಂ . . . ಕೀರ್ತಿಯ ನಾಂತು ಕಂಗೊಳಿಸಿದರ್ (ಶ್ರೀಸೂಕು. ೭–೨೨೨). ೭. ಅಮೂಲ್ಯವಾದುದು; ಶ್ರೇಷ್ಠವಾದುದು: ವ್ಯರ್ಥವಾದುದು ಮದ್ವಚನ ಸೃಷ್ಟಿಸುವ ಸಮರ್ಥ ಪೇರ್ಗಾವನೈಶ್ವರ್ಯ ಕರ್ತಳೀತನ ರಾಣಿ ನಿಖಿಳಮೈಭೋಗವು ವ್ಯರ್ಥ ದ್ವಾರಕಿ ದೊಡ್ಡಿತಹುದೆ (ಮೋಹತ. ೨೯–೨೭). ೮. ಹೆಚ್ಚಳ ; ಹಿರಿಮೆ ; ಘನತೆ : ನಾವಿವಗೆ ಮನವೊಡ್ಡಿಬಿಡದೆ ಸುಖಿಸುವ ದೊಡ್ಡಿತೆಂದಿಂಗಹುದೊ ಎಂದು ಕೆಲಬರು ಗುಡ್ಡಣಿಕೆಯನೆಣಿಸುವರು (ನೇಮಿಸಂ. ೮–೩೭). ೯. ದೊಡ್ಡವಸ್ತು ; ಹಿರಿಯ ವಸ್ತು : ಪೇತೆ ನೀನೇನು ದೊಡ್ಡಿತು ನನ್ನ ಸರಲ ಮುಯ್ಯಾತುಕೊಂಬೊಡೆ ರುದ್ರಗರಿದು ಮಾತುಗಾಳಿಕೆ ಬೇಡ ಹಿಡಿಯೆಂದು ಭಾಳದ ತೂತೇಳಲೆಚ್ಚು ಬೊಬ್ಬಿರಿದ (ಮೋಹತ. ೧೨–೫೯). **ದೊಡ್ಡಿತ್ತು** : ೧. ಆ ಗ್ರಾಮಕ್ಕೊಂದು ಎಳಗನಂ ಕಳಿಪಿ ಯಥೇಷ್ಟ ಗ್ರಾಸವನಿಕ್ಕುವುದು ಬಡವಾದಡೆಯು ದೊಡ್ಡಿತ್ತಾ [ಪಾಠಾಂ. ಡ್ಡನಾ] ದಡೆಯು ತಪ್ಪು ಸಮಾನವಾಗಿರಿಸದಿರ್ದೊಡೆ ನಿಮ್ಮ ಗ್ರಾಮಮಂ ಕೆಡಿಸುವೆಂ (ಪುಣ್ಯಾಸ್ರ. ೩–೨೭ ವ) ; ಅದಱಲ್ಲಿ ದೊಡ್ಡಿತ್ತಾದ ತಗರು ಹುಟ್ಟಿ ಮಲವೃತ್ತ ಬರಲು (ಛಂದಸೂ. ೦೨೩) : ಮೆಯ್ಯು ನುಣುಪಾಗಿ ಬಟುವಾಗಿ ದೊಡ್ಡಿತ್ತಾಗಿ ತನ್ನ ಮೆಯ್ಯಿಗೆ ತಕ್ಕ ಚೆಂದವಾದ ರೂಪು ಕಾಣಿಸುವುದು (ಅಶ್ವಟೀ. ೨೨–೧೧). ೨. ಸುವ್ರತದ ಫಲದಿನುರಗ ನರ ನಾಕವೆಂಬ ನೆಲಕೊಡೆಯರಾಗುವರ್ ಕೈವಲ್ಯಕಾಂತೆಯೊಳಗಲಸದೇ ಕೂಡುವರೆಂದೇನು ದೊಡ್ಡಿತ್ತೆನಲ್ (ಸಮ್ಯಕಾ. ೬–೭). ೬. ಎಲ್ಲರಿಗೂ ಪ್ರಾಣದಾಸೆ ದೊಡ್ಡಿತ್ತಾಗಿರುವುದರಿಂದಲೂ . . . ಬದುಕಿರುವುದು ಕಾರ್ಯವೆಂದು ನಿಶ್ಚೈಸಿ (ಪಕಶಾ. ೪೦). ೭. ಗ್ರಹನಿಚಯಾ ಆದಿತ್ಯಾದಿ ನವಗ್ರಹಂಗಳೂ ಉರುತತ್ವ ಶಿವಾದಿ ಪೃಥುವ್ಯಾಂತವಾದ ದೊಡ್ಡಿತ್ತಾದ ಮೂವತ್ತಾಱು ತತ್ವಂಗಳು ಶ್ರೀಗುರುವಿನ ಪಾದದ ಜಂಘೆಯಲ್ಲಿಹವು (ಅಕ್ಷತ್ರಿ. ೫ ಟೀಕು) ; ಓಂಕಾರವು ಶಿವಾತ್ಮ ಹಕಾರವು ಉರು ಪಂಚ ಪ್ರಣವ

ದೊಡ್ಡಿತ್ತಾದವೈದು ಪ್ರಣವಂಗಳು (ಅಕ್ಕತ್ರಿ. ೯೧ ಟೀಕು). ೧೦. ಅಗಲವಾದುದಂ ; ವಿಶಾಲವಾದುದಂ : ಸಿಂಹಕಟಿತಟಮನಿಳಿಸುವ ರಿಪುತುರಂಗಕಂಠೀರವನ ಕಟಿತಟವೊಲ್ದು ನೋಡುವ ಗಾಡಿಕಾರ್ತಿಯರ ಕಣ್ಗೆ ಕಾವು [ನ]ಡ್ಡಣವಂತೆ ದೊಡ್ಡಿತ್ತಾಗಿ ಮಾಡುವುದ್ಯೃತ್ತತೆಯು [ನೀಟ್ದು] ಕೊಂಡಂತುದ್ವೃತ್ತಂಗಳಾದುವು (ಪಂಪಭಾ. ೨-೩೯ ವ) ; ಹುಕ್ಕಿನವೋಲ್ ಕೆಟಗು. ದೊಡ್ಡಿತ್ತಾಗಿ ಮೇಗಸಿದವ್ವ ಶರೀರರೂಪ (ತತ್ತ್ವಶ್ರ. ೨೯೭). (ಗಂ). ೧೧. ಹಿರಿದಾದ ; ದೊಡ್ಡದಾದ : ತುಕಾರ ದುಕಾರಂಗಳ ಕಡೆಯಾಗಿ ಪಲವು ಗುಣವಚನಂಗಳೊಳವು ; ಅವಱೊಳ್ ತುಕಾರಾಂತಕ್ಕೆ ವಿಕಲ್ಪದಿಂ ದ್ವಿತ್ವಮುಂಟು . . . ಅಗಲಿತ್ತು, ದೊಡ್ಡಿತ್ತು, ಒಳ್ಳಿತ್ತು ಎಂಬಂತೆ ನೋಡಿಕೊಳ್ವುದು (ಶಮದ. ೭೭ ಪ್ರಯೋ).

ದೊಡ್ಡಿದ = ೧. ಹಿರಿಯ ; ಪೂಜ್ಯ : ಭೀಮನ ಮಱೆಯಂ ಬಂದು ಪುಗೆ ಕೊಂದು ಕುಡೆ ನೀನಂದಿಂಬಟೆಕಹಹ ದೇವ ದೊಡ್ಡಿದನಾದಯ್ (ಗದಾಯು. ೭-೯೯) ; ನಿನ್ನನತ್ತಾದುದರಿಂ ದೇವನ ದಿಂಡನೆಯಂದೊಡೆ ದೇವಂ ನೀನೆಂತದಂತು ದೊಡ್ಡಿದನಪ್ಪೈ (ಧರ್ಮಾಮೃ. ೯-೧೦೭). ೨. ಶೂರ ; ಪರಾಕ್ರಮಿ : ನಿಮ್ಮ ಕಣ್ಣಗೆ ನರನು ದೊಡ್ಡಿದನುಳಿದ [ಪಾಠಾಂ. ದೊಡ್ಡಿತು ಉಳಿದ] ವೀರರ ಕಣ್ಗೆ ತುಸು ಮಾತ್ರ (ಕುಮ್ಮಾವಿ. ೭-೧೧) ; ವಿನವನು ದೊಡ್ಡಿದನು ಶರಸಂಧಾನಸಮಯಿಗಳಾವು ನವಗಾ ವಾನರಮಿತ್ರತ್ವವೆಂಬುದು ಲೋಕಹಾಸ್ಯವಲೆ (ತೊರರಾ. ೪-೭-೧೪).

ದೊಡ್ಡಿದುವು (ಬಹುವ) = ಗಾತ್ರದಲ್ಲಿ ಹಿರಿದಾಗಿರುವಂಥವು : ನಡೆನೋಟ್ನೊಡಮಂತುಮಿಂತು ಮೂಱಿಸಿಯುವು ಮೂಱು ದೊಡ್ಡಿದುವು ಮೂಱೆಡೆ ಕೆಳ್ಳಿದುವೆಂಬುಜಾಕ್ಷಿಯಾ (ಪಂಪಭಾ. ೪-೭೩) ; ಅತಿರಥನಾತಂ ಗಡ . . . ತದ್ರಥದ ಗಾಲಿಗಳ್ದೊಡ್ಡಿದುವೇ (ಗದಾಯು. ೩-೫೫).

ದೊಡ್ಡಿಯ = ಬಲವುಳ್ಳ ; ಶಕ್ತಿಯ : ಇವಂ ದೊಡ್ಡಿಯಾಳ್ಕುದುರೆಯಂ ಕೋಱು ಮಾಱು ಕಾಡಿದಡೆ ಎನ್ನ ಸತ್ತ ಸಾವುಂ ಕೆಟ್ಟ ಕೇಡುಂ ನಂಬಿಯುಮಂ ನರಸಿಂಗವೊನೆಯರುಮಂ ತಾಗುವುದು (ಸಂಬಿಶ. ೬-೧೦೨).

[ <ದೊಡ್ಡ ]

ದೊಡ್ಡಿತೆ (ನಾ). = ದೊಡ್ಡತನ ೧ : ಅವಳ ದೊಡ್ಡಿತೆಯು ಸಹನಶೀಲತೆಯಲ್ಲಿಯಷ್ಟೇ ಮುಗಿಯುವುದಿಲ್ಲ (ಗೂತ್ತುಗು. ೦೩೯) ; ಖಾನನಿಗೆ ತಾವು ಕಂಡ ಆ ದೊರೆಯ ದೊಡ್ಡಿತೆಯನ್ನು ಬಿನ್ನವಿಸುವರು (ಕರ್ಣಾಟಟ. ೦೯೧) ; ಜ್ಞಾನ ಮತ್ತು ಧೈರ್ಯ–ಇವೇ ದೊಡ್ಡಿತೆಯ ಹಾಗೂ ಹಿರಿಮೆಯ ಅಡಿಗಲ್ಲು (ದಾಬುತ್ರಿ. ೦೯). [ <ದೊಡ್ಡಿತು ]

ದೊಡ್ಡಿತ್ತು 'ದೊಡ್ಡಿತು' ನೋ.

ದೊಡ್ಡಿದಾರ (ನಾ). ದೊಡ್ಡಿಯನ್ನು ನೋಡಿಕೊಳ್ಳಲೆಂದು ನಿಯುಕ್ತನಾದ ಅಧಿಕಾರಿ : ಡಿಸ್ಟಿಕ್ಟ್‌ಮ್ಯಾಜಿಸ್ಟ್ರೇಟರವರು ಪ್ರತಿಯೊಂದು ದೊಡ್ಡಿಗೂ ದೊಡ್ಡಿದಾರರುಗಳನ್ನು ಸಹಾ ನೇಮಿಸುವರು (ಗ್ರಾಮಕ. ೧೦೩). [ ದೊಡ್ಡಿ₁ (<ತೊಟ್ಟಿ₁) + – ದಾರ್₄ ]

ದೊಡ್ಡಿಪತ್ರೆ 'ದೊಡ್ಡಪತ್ರೆ' ನೋ.

ದೊಡ್ಡಿಪ್ಪೆ (ನಾ). ಒಂದು ಬಗೆಯ ಮರ ; ಇಪ್ಪೆಯಲ್ಲಿ ಒಂದು ವಿಧ : ಇಪ್ಪೆ, ದೊಡ್ಡಿಪ್ಪೆ, ಹಿಪ್ಪೆ, ಹಾಲಿಪ್ಪೆ (ವೃಕ್ಷಿಗಿ. ೦೩-೨೦೪).

[ ದೊಡ್ಡ + ಇಪ್ಪೆ₁ (<ಇರ್ಪೆ) ]

ದೊಡ್ಡಿಮರ (ನಾ). ಒಂದು ಬಗೆಯ ಮರ,–ವೃಕ್ಷ : ದೊಡ್ಡತೊಪ್ಪೆ ಮರ, ದೊಡ್ಡಿಮರ, ಬಿಂದಾರಿಮರ, ದಲ್ಲಿಮರ, ಬಟ್ಟಗ(ವೃಕ್ಷಿಗಿ. ೪೫-೮೮೫).

[ ದೊಡ್ಡಿ₃ + ಮರ₁ ]

ದೊಡ್ಡಿಮೆ (ನಾ). ಮರ್ಯಾದೆ ; ಘನತೆ ; ದೊಡ್ಡಸ್ತಿಕೆ : ವ್ಯಾಪಾರೋದ್ಯೋಗಗಳಲ್ಲಿ ವ್ಯಕ್ತಿಸ್ವಾತಂತ್ರ್ಯವಿದೆ . . . ಒಕ್ಕಲತನದಲ್ಲಿ ದುಡಿತಕ್ಕೆ ತಕ್ಕ ದೊಡ್ಡಿಮೆ ಇದೆ (ಠಕ್ಸ್ಯ. ೦೦೨). [ <ದೊಡ್ಡಿತು + – ಮೆ₁ ]

ದೊಡ್ಡಿಲಿ (ನಾ). ದೊಡ್ಡ ಇಲಿ ; ಹೆಗ್ಗಣ : "ಮೂಷೀ–ದೊಡ್ಡಿಲಿ" (ಒಷಧಿ. ೧೨೭) ; ಸಣ್ಣಿಲಿ, ದೊಡ್ಡಿಲಿ, ಮೂಗಿಲಿ . . . ಹುಡುಗಿಲಿ, ಎಲ್ಲಾ ಬಂದುವು ಓಡೋಡಿ, ಜೋಗಿಯು ಬಾರಿಸೆ ಕಿಂದರಿಯು (ದೂತಜೋಗಿ. ೧೦-೨೫೭). [ ದೊಡ್ಡ + ಇಲಿ₁ ]

ದೊಡ್ಡಿಲೆ, ದೊಡ್ಡಿಲ್ಲ (ನಾ). ಒಂದು ಬಗೆಯ ಕಾಡುನಿಂಬೆಯ ಗಿಡ ಮತ್ತು ಅದರ ಕಾಯಿ : ಮಾದಲ ನಿಂಬೆ ದೊಡ್ಡಿಲೆ ಕಂಚಿ ಕಿತ್ತಿಳೆ ಸ್ವಾದು ಖರ್ಜೂರ ದ್ರಾಕ್ಷೆಗಳು (ದೋಹಕ. ೨೯-೬೨); "ದದ್ದಿಲೆಹಣ್ಣು" (ಪ್ರಭ್ಮಾ). ದೊಡ್ಡಿಲ್ಲ : (ಕ). [ ←ತುಳು. ದೊಡ್ಡಲೆ, ದೊಡ್ಡೆ ]

ದೊಡ್ಡಿವೆಸರ್ (ನಾ). ದೊಡ್ಡಹೆಸರು ; ಕೀರ್ತಿ : ವಾರಿಜನಾಭಂ ಹರಿಯಂ ದೊಡ್ಡಿ [ಪಾಠಾಂ. ದ್ದ]ವೆಸರಂ ಪೊತ್ತಿರ್ದ ನೀಂ ಮಂತ್ರಿಯಾಗೆ (ಪಂಪಭಾ. ೯-೯೭) ; ಬಲದ ಕೆಲದೊಳು ಮಿಱುಮಿಱುಮಿಱುಗಿ ತನ್ನ ಪಡೆದೊಂಗಂ ತನ್ನ ವೆಸರಿಂದಮೆ ದೊಡ್ಡಿವೆಸರಾಗಿ ನೆಗಟ್ದ ಚಕ್ರಮಂ ನೋಡ (ಶಾಂತಿಪು. ೪-೪೮ ವ). [ <ದೊಡ್ಡಿತು + ಪೆಸರ್ ]

ದೊಡ್ಡಿಸು (ಕ್ರಿ). ವಿವರವಾಗಿ ಹೇಳು ; ವಿವರಿಸು : ಗಂಗಾದೇವಿಗಾ ಗೋವಿಂದನೀ ರೀತಿಯಲಿ ದೊಡ್ಡಿಸಿಯಂದು ತನ್ನಾನಸದ ಬಹುದುಃಖವನು ಬಿಡಿಸಿದನು (ತಿಮ್ಮಳ. ೧೦-೯೭). [ ದೊಡ್ಡಿತು + – ಇಸು₃ ]

ದೊಡ್ಡಿಸ್ತನ 'ದೊಡ್ಡಸ್ತನ' ನೋ.

ದೊಡ್ಡೀಚಲು (ನಾ). ಒಂದು ಬಗೆಯ ಈಚಲುಮರ ಮತ್ತು ಅದರ ಹಣ್ಣು : "ಪಿಂಡಖರ್ಜೂರೀ–ದೊಡ್ಡೀಚಲು" (ಒಷಧಿ. ೯೮).

[ ದೊಡ್ಡ + ಈಚಲು₁ (<ಈಂಚಿಲ್) ]

ದೊಡ್ಡೀಳೆ (ನಾ). ಈಳೆಯ ಜಾತಿಗೆ ಸೇರಿದ ಒಂದು ಬಗೆಯ ಮರ ಮತ್ತು ಅದರ ಹಣ್ಣು : ತೆಂಗಡಕೆ ಪಲಸುಗಳ್ ನಾರಂಗಂ ಕಿತ್ತಿಳೆ ನಿಂಬೆ ದೊಡ್ಡೀಳೆ[ಳೆ]ಗಳಿಂ ಸಂಗಳಸಿದ ಸವಿನಿಂಬೆಗಳಿಂಗಿತದಿಂ ಬೆಳೆದ ರಾಯಗಿತ್ತಿಳೆ[ಳೆ]ಗಳುಂ (ಹಾಲಾಸ್ಯ. ೦-೦೪-೦೦). [ ದೊಡ್ಡ + ಈಳೆ ]

ದೊಡ್ಡು₁, ದುಡ್ಡು₂, ದೊಡ್ಡೆ₁ (ನಾ). ಕಾಡುಕೋಣ; ಕಾಸರ : ಅದ್ವಿಸಿ ಸೋಹಿದರು ಕೋಣನ ದೊಡ್ಡುಗಳ ದಂತಿಗಳ ಮರೆಗಳ ಒಡ್ಡೊಡೆಯದವೊಲಾ ಸುಮಿತ್ರಾಸುತನ ಸರಿಸದಲಿ (ತೊರರಾ. ೩-೩-೧೨) ; ಕಾಡುಕೋಣಗಳಿಗೆ 'ದೊಡ್ಡು' ಎಂದು ಹೆಸರು (ಕಾನೂರು. ೫೪) ; ಕಡ ಮತ್ತು ಸಾರಗದ ಹಿಂಡುಗಳೂ ದೊಡ್ಡುಗಳ ಮಂದೆಗಳೂ . . . ಅಲ್ಲಲ್ಲಿ ಅವಿಶ್ರಾಂತವಾಗಿ ಸುತ್ತಾಡುತ್ತಿದ್ದವು (ಶಂಜಹಂ. ೨). ದುಡ್ಡು₂ : ಗುಡ್ಡಗಳ ವೆಂಬಂತೆ ರಥನಿವಹ ಕಾರ್ಮುಗಿಲಿನೊಡ್ಡಿನಂತಿಭರಾಜಿ ಹಯನಿಕರ ಕಡಲಂತೆ ದುಡ್ಡಿನಂತಿಪ್ಪುಪ್ಪಿ ಕಾಲ್ಬಲಂ ಕೂಡಿಕಿದರಾವ ನಾಡೀಡಂಬೊಲು (ಶರಶು ೯-೨೧) ; ಕೋಣಕ್ಕೆ "ದುಡ್ಡು" ಎಂದು ನಮ್ಮವರು ಕರೆಯುತ್ತಾರೆ (ಶಾಂಪತ್ರ. III, ೦೭೦೯). ದೊಡ್ಡೆ₁ : ಹುಲಿಯಾಗಲಿ ಕರಡಿಯಾಗಲಿ ದೊಡ್ಡೆಯಾಗಲಿ ಉರಿಯುವ ಬೆಂಕಿಗೆ ಅಂಜಿ ಅದರ ಬಳಿ ಸಾರುವುದಿಲ್ಲ (ದುಲಿಮು. ೨೯೯).

ದೊಡ್ಡಿನ ಮೃಗ = ಕೋಣದ ಜಾತಿಗೆ ಸೇರಿದ ಪ್ರಾಣಿ: ಪರಿಹರಿಕುಂ ದೊಡ್ಡಿನ ಮೃಗ [ಪಾಠಾಂ. ದೊಡ್ಡಿಮೃಗ] ದುರುವಿಷಮಂ ನಸ್ಯಲೇಪ ನಾಂಜನದಿಂದಂ (ಖಮದ. ೦೩-೬೯). ದೊಡ್ಡಿನ ಹೋರಿ = ಹೋರಿ ಕೋಣ : ಉಡು ನವಿಲಾವೆ ಬೆಕ್ಕು ನರಿ ಲಾವುಗೆ ದೊಡ್ಡಿನ ಹೋರಿ ಹೇರನಲ್ . . . ಕೊಂಡುಗುಱು ಕೂರಗೆಯೆಂಬಿವನ್ನೆದೆ . . . ಪೊತ್ತು ಬೇಡವಡೆ ಬಂದುದು (ಸೂಕ್ತಿಸು. ೩-೦೬೮). [ ತೆ ೯.೩ ತುಳು. ದೊಡ್ಡು ]

ದೊಡ್ಡೆ₁ 'ದೊಡ್ಡು' ನೋ.

ದೊಡ್ಡೆ₂ (ನಾ). ದಪ್ಪವಾಗಿರುವವಳು; ಸ್ಥೂಲವಾಗಿರುವವಳು : ಕಡು ನಿಡಿಯಳ್ ಕರಮ ಗುಜ್ಜೆ ಮೇಣ್ ಕರಮುಸಿಯಳ್ ಕಡು ದೊಡ್ಡೆಯೆನಿಪ್ಪೊಡಂ ನೋಟ್ಪೊಡೆ ಪುರುಷಾಕಾರೆಯಪ್ಪೊಡಂ ಕಪ್ಪೆಯವಳ್ (ಲೋಕೋಪ. ೧೦-೬೦). [ ದೊಡ್ಡ + – ಎ₂ ]

**ದೊಡ್ಡೆಲಚಿ** (ನಾ). ಒಂದು ಬಗೆಯ ಎಲಚಿಮರ ಮತ್ತು ಅದರ ಹಣ್ಣು: "ರಾಜವಲ್ಲಭಃ-ಹಣ್ಣಿನ ಹಾಲೆ, ದೊಡ್ಡೆಲಚಿ" (ಓಷಧಿ. ೧೪೮). [ದೊಡ್ಡ + ಎಲಚಿ]

**ದೊಡ್ಡೆರೆಭೋಗಿ** (ನಾ). ಒಂದು ಬಗೆಯ ಮರ; ಉನ್ನಿಮರ: ಹೈಗ, ಉನ್ನಿಮರ, ಕಲ್‌ದೋವು, ದೊಡ್ಡೆರೆಭೋಗಿ (ಪ್ರುಕಿಗಿ. ೪೪-೬೬೪). [ದೊಡ್ಡ + ಎರೆ₁ + ಭೋಗಿ]

**ದೊಡ್ಡೇಲಕ್ಕಿ, ದೊಡ್ಡ ಏಲಕ್ಕಿ** (ನಾ). ಒಂದು ಬಗೆಯ ಏಲಕ್ಕಿ ಗಿಡ ಮತ್ತು ಅದರ ಕಾಯಿ: "ದಿವ್ಯಗಂಧಾ-ದೊಡ್ಡೇಲಕ್ಕಿ" (ಓಷಧಿ. ೬೪). **ದೊಡ್ಡ ಏಲಕ್ಕಿ**: "ಪೃಥ್ವೀಕಾ-ಜೀರಗೆ, ದೊಡ್ಡ ಏಲಕ್ಕಿ, ಹಿಂಗುಪತ್ರ, ಹರೇಣುಕ" (ಓಷಧಿ. ೦೦೨). [ದೊಡ್ಡ + ಏಲಕ್ಕಿ]

**ದೊಡ್ಡೊಕ್ಕಲು** (ನಾ). ಹಿರಿಯ ಒಕ್ಕಲು; ಮುಖ್ಯವಾದ ಒಕ್ಕಲು; ಶ್ರೀಮಂತ ಒಕ್ಕಲು: ಊರಿಗೆಲ್ಲಾ ಅವರದೇ ದೊಡ್ಡೊಕ್ಕಲು (ರೂಢಿ). [ದೊಡ್ಡ + ಒಕ್ಕಲು₂ (<ಒಕ್ಕಲ್₂)]

**ದೊಡ್ಲಿ** 'ದೊಡ್ಡಿಲೆ' ನೋ.

**ದೊಣೆ₁, ಜೊಣೆ, ಡೊಣೆ₁, ಡೋಣೆ₁, ಧೊಣೆ, ದೋಣೆ₁, ಧೋಣೆ** (ನಾ). ೧. ಬೆಟ್ಟದ ಮೇಲಿರುವ ಸ್ವಾಭಾವಿಕವಾದ ಹೊಂಡ,-ಕೊಳ: ಮುಗಿಲ ನೀರಂ ನಂಬಿ ದೊಣೆಯ ನೀರಂ ತುಳುಂಕುವ ಕೋಡಗವುಮಂ (ಧರ್ಮಾಮೃ. ೮-೩೦); ಕಾಯುದ್ದೇಶ್ಯವ ದೊಣೆಯುದಕ ದೊರೆವೆಡೆ ಚಂಚು ಬೆಂದು (ಕುಸುಮಾ. ೮-೧೨೮); ಎಲ್ಲರೂ ದೊಣೆಯೊಂದರಲ್ಲಿ ಸ್ನಾನಮಾಡಿ ಮಧ್ಯಾಹ್ನಸಮಯಕ್ಕೆ ಊರಿಗೆ ಹಿಂತಿರುಗಿದರು (ಶಾಂತಲಾ. ೩೭೮); ಇಲ್ಲಿ ಎಲ್ಲೋ ಒಂದು ದೊಣೆ ಇದ್ದಹಂಗಿತ್ತಪ್ಪಾ (ಮುಕಿಮ. ೨೩೯); ದೊಣೆಗೆ ಹೋದರೂ ಹೊಣೆ ತಪ್ಪದು (ಗಾದೆ). ೨. (ಕಟ್ಟಿಸಿದ ಅಥವಾ ನಿರ್ವಿಸಿದ) ಕೊಳ,-ಕಲ್ಯಾಣಿ: ಆನಂದಸಂವಚ್ಛದಲ್ಲಿ ಕಟ್ಟಿಸಿದ ದೊಣೆಯು (ಎಕ. II, ೦೬೨-೦; 1194 ?); ಹೊಸ್ತಾಗಿ ಹಂಪೆಯ ದೊಣೆಯ ತೋಡ್ಸಿ ಬರಸಿದ ಶಾಸನ (ಸೌಇಇ. IX-1- ೩೫೯-೧೨: 1340). ೩. ಹಳ್ಳ; ತಗ್ಗು: "ದ್ರೋಣಿಃ, ಶೈಲಸಂಧಿಃ . . . ಈ ೨ ದೊಣೆಯ ಹೆಸರು" (ಪಾಚಿಕಾ. ೦೦೪); ದನಕಟ್ಟುವ ಕೊಟ್ಟಿಗೆಯಲ್ಲಿ ದೊಡ್ಡ ದೊಡ್ಡ ದೊಣೆಗಳು ಬಿದ್ದಿವೆ (ರೂಢಿ). **ಜೊಣೆ**: ೧. ಕೆರೆ ಕೊರೆ ಮಡು ಜೊಣೆ ಪರಿವಾ ನಿರ್ಝರ (ಶಬ್ದ. ೩೯೦). **ಡೊಣೆ₁**: ೧. ಮುಗಿಲ ನೀರಂ ನಚ್ಚಿ ಡೊಣೆಯ ನೀರಂ ತುಳುಂಕಿದ ಕೋಡಗದಂದಂ ನಿನಗಕ್ಕುಂ (ಶಬ್ದಶಂ. ೬೮-೮); ನಾವೀ ಪ್ರದೇಶದೊಳು ಕೆಱೆಯಾಗಿ ತೊಱೆಯಾಗಿ ಡೊಣೆಯಾಗಿ ವಾಪಿಕೂಪಂಗಳಾಗಿ ಈಶನಭಿಷವದಗ್ರುಡಲಕೆ ಸಂದಿಪ್ಪೆವು (ಸಿದ್ಧರಾ. ೪-೨೩); ನೀರಡಸಿ ಬಟಲ್ದು ಬಂದು ಬೆಟ್ಟದ ಡೊಣೆಗಳೊಳ್ ಮುನ್ನ ಪೊಕ್ಕಿರ್ದ ಕಳ್ಳುಂ ಬಳಿದು ತೀವಿದಿರ್ದೊಡದಂ ಕುಡಿದು ಸೊಕ್ಕಿ (ಜೀವಸಂ. ೧೪೪-೧೯); ದಂಟೆ ಡೊಣೆ ದೀರ್ಘಿಕೆ ಕರ್ಮಡು ಪಳ್ಳ ಕೊಳ್ಳ ನೀರೊಱೆವ ಕೊಳಂ (ಅಭ್ಯಕು. ೦.೪೮); ದಿವಿಜ ಧಾರುಣಿರುಹಂಗಳ ನೆಲೆಯೊ ಕಡವರದಿರವೊ ಶೋಭನದ ಡೊ[ಪಾಠಾಂ. ದೊ]ಣೆಯೊ (ಬಸವ. ೦-೩೯). ೨. ಬಡಗಣ ಭಾಗೆಯು ಪಡುವಣ ಭಾಗದಲು ಕಟ್ಟಿಸಿದ ಡೊಣೆ (ಎಕ. XII, ತುಮುಕೂ. ೩೯-೮; 1387); ಕನ್ನರಿದೇವನ ಮಲವಗಳು ಕಟ್ಟಿಸಿದ ಲಖುಮಣ್ಣಗಳ ಬಾಗಿಲು ಡೊಣೆ ಸೋಪಾನಕೆ (ಎಕ. X, ಬಾಗೇಪ. ೫೩-೮; 1406). ೩. "ಡೊಣೆ-ತಗ್ಗು" (ಶಾಸಕೋ. ೬೩): "ಬೆಟ್ಟಗಳ ನಡುವಣ ಆಳವಾದ ಗುಂಡು ಪೊಳ್ಳು" (Punch-bowl, ಇಂಕಸಿ). **ಡೋಣೆ₁**: ೧. ಕಾಮ ಧೇನುವಿನ ನಡುವೊಂದು ಕೋಣ ಕಟ್ಟಯಿದ್ದಿತ್ತು ಕೋಣನ ಗವಲು ತಾಗಿ ಕಾಮಧೇನು ಕೆಡುತ್ತದೆ. ಕೋಣನ ಡೋಣೆ [ಪಾಠಾಂ. ದೊಣೆ]ಗೆ ತಳ್ಳಿ ಕಾಮಧೇನುವ ಕಾಣದಂತೆ ಮಾಡು (ಕೋಲಶಾಂ. ೭೨-೩೨); ಕೆಱೆ ಬಾವಿ ಬಗರಗೆ ಡೊಣೆ ಡೋಣೆ [ಪಾಠಾಂ. ಣೆ] ದೀರ್ಘಿಕೆಯೊಳಿತ ಕಾಲುವೆ ಬೆಂಟೆ ಪಳ್ಳ ಮೆಱೆದಿರುತಿಹವು (ಕುರಾಸಾಂ. ೪-೬೭); ಸುರಕುಜದ ತೋಪು ಸುರಧೇನುವಿನ ಹಿಂಡು ಸಿದ್ಧರಸ ತೀವಿರ್ದ ಡೋಣಿಗಳ್ವ್ಯತದ ತಟಾಕಗಳು (ನಂದಿಮಾ. ೧೧-೧೧). ೨. ನಾಲ್ಕನೆಯ ವಿಟ್ಟಪಯ್ಯಂಗಳ ಪ × × × ಸಿನಲು ಡೋಣೆಯಿಂ ಬಡಗಲು ಶಿವಾರಾಜನ ವೃತ್ತಿಯ ಮತ್ತರು ೪ (ಕೂರ್ಮಾಶಾ. ೮-೬೪: 1147). ೩. ಎರಡು ಕೊರಿಗೆಯ ಡೋಣೆಯ ಹೊಲವೊಂದು ಮಾತ್ರ ಉಳಿದಿದ್ದಿತು (ವಿಶರ್ಗ. ೨೮೨). 'ಡೋಣೆವಟ್ಟೆ' ಪರಾ. **ಧೊಣೆ**: ೧. "ಧುಣಾ-ಧೊಣೆ" (ಶಾಶಕ್ಸ. ೩೩). **ದೋಣೆ₁**: ೧. ದೋಣೆಯ ತಿಳಿನೀರ ಕುಡಿದು (ಮಹಾವಿ. ೬-೩೮); ಬೆಟ್ಟದ ಮೇಲಿನ ದೋಣೆಗಳಲ್ಲಿ ನೀರು ಬಹಳ ಗಲೀಜಾಗುವುದೆಂದು ತಿಳಿದಿದ್ದರಿಂದ ಹೀಗೆಮಾಡಬೇಕಾಯಿತು (ಕಂಗಾಳ್ಳ. ೩೪೮). ೩. 'ದೋಣೆವೋಗು' ಪರಾ. ೪. ತಗ್ಗಿನ ನೆಲ; ಹಳ್ಳವಾಗಿರುವ ಹೊಲ,-ಗದ್ದೆ: ಸರ್ವನಮಸ್ಯ ಮಾಡಿ ಬಿಟ್ಟ ಮತ್ತರು ೧೦೦ ದೋಣೆಯಿಂ [ತೆಂ]ಕ ದೇ × × × ತೋಟ ಮತ್ತ ೨೭ (ಸೌಇಇ. XX, ೨೩-೨೨; 1029); ಕೇತಯ್ಯಂ ಬಿಟ್ಟ ದೋಣೆಯ ನೆಲ ಮತ್ತ[ರು ನಾ]ಲ್ವತ್ತು (ಸೌಇಇ. XI-1, ೮೩-೩೦: 1049); ಶ್ರೀಸೋಮೇಶ್ವರದೇವರ್ಗ್ಗೆ ತಮ್ಮ ಪ್ರಭುತ್ವದ ದೋಣೆಯಿಂ ತೆಂಕ ಒಡ್ಡವಾಡಿಗೆಯು ಬಟ್ಟೆಯಿಂ ಪಡುವ ಬಸ್ತುಚಿನ್ತಾಮಣಿಯ ಈರ್ಪ್ಪತ್ತೆಂಟು ಗೇಣ ಕೋಲಲು ತಮ್ಮಂ[ಶ]ಕ್ಕೆ ಬಂದ ಮತ್ತರಯ್ವತ್ತೇಳು (ಸೌಇಇ. XX, ೬೯-೪೪; 1107); × × × ಪೇಸ್ವರ ದೇವರ ೩ ದೋಣೆ × ಬೆಂಣ್ಣೆ × × × ದೇವ[ರು] ನದಿಯೊಳ[ವ]ಯ ಮಲ್ಲಿಕಾರ್ಜುನ [ದೇವ]ರು ಗುಂಡಿಯ ಹಳ್ಳಿಯ ರಾವಣನಾಥದೇವ (ಸೌಇಇ. XI-1, ೩೦-೩೩; ಸು. 12ನೆಯ ಶತ). **ಧೋಣೆ**: ೫. ಬಾವಿ: ಸಾನ್ಸರಸ . . . ಬಟರಿಜ್ಗೆ ಕೊಟಾರ್ ಧೋಣೆಗೂಡಲಾ ನರಡಿ ಇಬ್ಬು ಕೊಟಾರ್ (ಎಕ. VI, ಕೊಪ್ಪ. ೩೯-೪; ಸು. 700 ?).

**ದೋಣೆಗೆರೆ** = ಹೊಲ, ಗದ್ದೆಗಳನ್ನು ಉಳುವಾಗ ನೇಗಿಲಿನಿಂದ ಮಾಡುವ ಹಳ್ಳದ ಗೆರೆ; ಸೀತೆಸಾಲು; ಉಕ್ಕೆಗೆರೆ.-ಸಾಲು: ದೋಣೆಗೆರೆಗಳಿಗೆ ಸರಿಯಾಗಿ ಪೈರನ್ನು ನಾಟಿ ಮಾಡುತ್ತಾ ಹೋಗುತ್ತಾರೆ (ರೂಢಿ). **ದೋಣೆಸಾಲು** = ದೋಣೆಗೆರೆ: ಉಳುವಾಗ ದೋಣೆಸಾಲುಗಳು ಒಂದೇ ಸಮನಾಗಿ ಮೂಡುತ್ತಾ ಹೋಗುತ್ತವೆ (ರೂಢಿ).

[ದೇ.ಶ ತೆಲು. ದೊನ./ಸಂ. ದ್ರೋಣೀ]

**ದೊಣೆ₂** 'ತೊಣೆ₁' ನೋ.

**ದೊಣೆನಾಯಕ, ಡೊಣೆನಾಯಕ** (ನಾ). ಕೆರೆ, ಕುಂಟೆಯ ಕಾವಲುಗಾರ; ದೊಣೆಯನ್ನು ಕಾಯುದ್ದಕೊಂಡಿರತಕ್ಕವನು; ದೊಣೆಯ ರಕ್ಷಕ: ಹೊಳೇ ನೀರು ಕುಡಿಯಕ್ಕೆ ದೊಣೇನಾಯಕನ ಅಪ್ಪಣೆ ಬೇಕಿಲ್ಲ (ಕಂಗಾಳ್ಳ. ೩೩೩). **ಡೊಣೆನಾಯಕ**: ಹರಿಯೋ ನೀರಿಗೆ ಡೊಣನಾಯಕನ ಅಪ್ಪಣೆ ಯೇನು (ಹುಟ್ಯಹ. ೦೨೩); ಹೊಳೆಯ ನೀರಿಗೆ ಡೊಣೆನಾಯಕನ ಅಪ್ಪಣೆಯೇ? (ಗಾದೆ). [ದೊಣೆ₁ + ನಾಯಕ]

**ದೊಣೆವೋಗು, ಡೊಣೆವೋಗು, ಡೋಣೆವೋಗು, ದೋಣೆಯೋಗು, ದೋಣೆವೋಗು** (ಕ್ರಿ). ಡೊಗರು ಬೀಳು; ತಗ್ಗುಬೀಳು; ಹಳ್ಳವಾಗು: ಪಿಸುಟ್ಟ ಕಿಟ್ಟೂಡಿಯುಂ ಕಣಿವೋದ ಕಣಕಾಲುಂ ದೊಣೆ [ಪಾಠಾಂ. ಡೊಣೆ, ದೋಣೆ]ವೋದ ಮೇಗಾಲುಂ ಪಱಿದು ಪಾಯ್ದು ಪಂದಲೆಗಳುಂ (ಶಬ್ದಾಮ. ೦೩-೩೪ ವ). **ಡೊಣೆವೋಗು**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. **ಡೋಣೆವೋಗು**: ಕುಮತಿ ಸಿದ್ಧಾಂಜನದಿನೊಡದೊಂದು ಕಣ್ಗಳಿಂ ತಱುದುಕೊಳೆ ಡೋಣೆವೋಗಿರ್ದ ಪೆರ್ಬುಣ್ಗಳಿಂ (ಕಾದಂಬ. ೨೬೦ ಕಗಳ). **ದೋಣೆಯೋಗು**: ೬೦ತು ಚಕ್ರಹತಿಯಿಂ ದೋಣೆಯೋದ [ಪಾಠಾಂ. ವೋದ] ರಣಕ್ಷೋಣಿಯಂ . . . ರಥಿಗಳಟ್ಟೆಗಳೆಂಬ ಬೆಟ್ಟುಗಳಿಂ ಪೂಱ್ದು ಸಮತಳಂ ಮಾಡಿ

(ಪಾಠ ಸಪು. ೩-೧೨೦ ವ). **ದೋಣೆವೋಗು** : ಒಡೆದಿರ್ದಗಿಯಾಗಿ ಪೋಟ್ಟು ನೀರೇಱಿದ ನಾಳಿವುಣ್ಗಡೆದು ಸೌಳೆನೆ ಸೀಳ್ದುದು ದೋಣಿವೋಪಿನಂ [ಪಾಠಾಂ. ದೋಳಿವೋಪಿನಂ] (ಸುಕುಮಾ. ೫-೧೭) ; ತನು ದೋಣಿವೋದುವು ನೆತ್ತರ್ ಕೊಡನೆತ್ತಿ ಸುರಿವವೊಲ್ ಸುರಿದು (ನೇಮಿಪು. ೧೧-೧೭೫).

[ ದೋಣೆ₁ + ಪೋಗು₁ ]

**ದೊಣ್ಣೆ₁, ಡೊಣ್ಣೆ₁** (ನಾ). ೧. ದಪ್ಪವಾದ ಕೋಲು; ದಂಡ: ಲಗುಡ : ಕೈಯಲ್ಲಿ ದೊಣ್ಣೆ [ಪಾಠಾಂ. ದಾಣೆ] ಮನದಲ್ಲಿ ಕ್ರೋಧ ವಚನದಲ್ಲಿ ಕಿಂಕಿಲ ಲಿಂಗದ ವಾರ್ತೆ ನಿನಗೇಕೆ (ಅದಕಂ. ೨೬೫-೧೨೬೩) ; ಮಂದರಗಿರಿಯನೆತ್ತುವಡೆ ನುಗ್ಗೆಯ ದೊಣ್ಣೆಯಿಂದ ಮೀಟಬಹುದೇಳುವುದೆ (ಪೋಜಚಕ. ೨೯-೩೮) ; ನೂತನ ಕತ್ತಿ ಕಠಾರಿ ದೊಣ್ಣೆಯು ಸಾಧಕೋತ್ತಮ ರಾಜಕುವರರು (ಕಂನವಿ. ೬-೧೮) ; ನಾನೆಷ್ಟು ಮುದುಕನಾದೊಡುವೆನಗೆ ಬ್ರಹ್ಮಾಂಡಭಾನದೊಳಗೆಲ್ಲೆಲ್ಲಿಯುಂ ತಿರುಗುವದು ತಪ್ಪದೇನಂ ಮಾಡಲು ಶಕ್ತಿ ಕುಂದಿರ್ದುದೆಂದೂರಿಕೊಂಡಿರ್ದ ದೊಣ್ಣೆಯಿಂದು (ಅಜಾವಿ. ೧-೮೫) ; ಈ ಡಕಾಯಿತರ ಕಥೆಗೆ ಸೂಕ್ತವಾಗಿರುವಂತೆ ಇದರಲ್ಲಿ "ಆ ಕಾಲದ ಪೀನಲ್ ಕೋಡಾಗಿದ್ದ" ದೊಣ್ಣೆಯ ಸ್ತೋತ್ರ ಬರುತ್ತದೆ (ಬಂಕಿಮ. ೨೪೮) ; ಕುಂಬಾರನಿಗೆ ವರುಷ, ದೊಣ್ಣೆಗೆ ನಿಮಿಷ (ಗಾದೆ) ; ಕಂಕುಳಲ್ಲಿ ದೊಣ್ಣೆ ಕೈಯಲ್ಲಿ ಶರಣಾರ್ಥಿ (ಗಾದೆ). (ಗು). ೨. ದಪ್ಪವಾದ; ದೊಡ್ಡದಾದ. 'ದೊಣ್ಣೆಮುಳ್ಳು' ಪರಾ. **ಡೊಣ್ಣೆ₁** : ೧. ಗಿಡುಗನ ಉಡು ನುಂಗಿ ಹೊಡೆವವನ ದಡಿ ನುಂಗಿತ್ತು . . . ಗಿಡುಗನ ಉಡುವ ಹೊಡೆವವನ ಡೊಣ್ಣೆಯ ಬಾಯಿಲ್ಲದ ಇರುಹೆ ನುಂಗಿತ್ತ ಕಂಡೆ (ಅಕಾಮಾ. ೧೯೭-೧೭೦) ; ಡೊಣ್ಣೆಯೊಳು ಚಚ್ಚಿ ಕೆಲವು ಮೃಗಗಳ ಕೊಂದರು (ನೇಮಿಸಂ. ೨-೫೦) ; ಅಣ್ಣಾತಮ್ಮಂದಿರಿನ್ನು ಜಗದೊಳಿದ್ದವರೆಲ್ಲ ಡೊ[ಪಾಠಾಂ. ದೊ]ಣ್ಣೆಯೊಳ್ಬಡಿದಾಡದಿಹರೆ (ಭರತೇ. ೪೮-೫೮) ; ಡೊಣ್ಣೆಗಳನ್ನು ಹಿಡುಕೊಂಡು ಬಂದು ಆ ಮೃಗವನ್ನು . . . ಕೊಂದುಬಿಟ್ಟರು (ಮುಂಬಯಿ. ೪-೪೨). ೨. 'ಡೊಣ್ಣೆಮುಳ್ಳು' ಪರಾ. ೩. ಟೊಣಪ : (ಕ) **ಡೊಣ್ಣೆ ಭಾಗವತ** = ಸೋಮಾರಿ; ಲವಲವಿಕೆಯಿಲ್ಲದವನು; ಕೂತ ಕಡೆಯೇ ಕೂತಿರುವವನು : ಹೊತ್ತಿಗೆ ಮುಂಚೆ ಏಳದ ಡೊಣ್ಣೆ ಭಾಗವತನಂತೆ ಬಿದ್ದು ಕೊಂಡಿರುತ್ತಾನೆ (ರೂಢಿ).

[ ದೇ.॥ ತುಳು. ದೊಣೆಲ್, ಡೊಣ್ಣೆ ; ಕೊಡ. ದೊಣ್ಣೆ; ಕೊಲಾ. ದೊಣ್ ]

**ದೊಣ್ಣೆ₂** 'ತೊಂಡೆ₂' ನೋ.

**ದೊಣ್ಣಕಾಟ** 'ತೊಂಡೆಕೇತ' ನೋ.

**ದೊಣ್ಣೆಗ, ಡೊಣಗ, ಡೊಣ್ಣೆಗ** (ನಾ). ೧. ಟೊಣಪ; ದಡಿಗ : ಶಿವಕಥಾಮೃತರಸವ ದೊ[ಪಾಠಾಂ. ಡೊ]ಣ್ಣೆಗರ್ ಕವಟಾಂಧನರರಱಿವರೇ ಪರಮಸತ್ಕವಿಗಳಱಿವಂದದಿ (ರಾಘವ. ೦-೧೯). **ಡೊಣಗ** : ೧. ಈ ಡೊಣಗಕ್ಷತ್ರಿಯಾಧಮನು ಅವರೆಲ್ಲರನ್ನು ಮೂರ್ಖರಲ್ಲಿ ಎಣಿಸಿ, ನಮ್ಮನ್ನು ಶಿಕ್ಷಿಸಬಂದಿರವನಲ್ಲ (ಧಾಮ್ರಕ. ೨೧೯). ೨. ಪುರುಷನ ಜನನೇಂದ್ರಿಯ : ರಣದೊಳು ಜಯವಧೂಟಿಯು ಮುಂದೆ ನಿನ್ನಯ ಡೊಣಗನ ಬಿಟ್ಟುಕೊಂಡಿರಲು ಅಣಕವಾಡುವರಪ್ಸರಗಣಕೆಯರೆಲೆ ರಣಭೀರು ಹೋಗೆಂದು ನುಡಿದ (ಪೋಜಚಕ. ೩೯-೪). **ಡೊಣ್ಣೆಗ** : ೧. ಮೇಲಿನ 'ದೊಣ್ಣೆಗ' ಉಲ್ಲೇಖಕ್ಕೆ ಕೊಟ್ಟಿರುವ ಪ್ರಯೋಗದ ಪಾಠಾಂತರವನ್ನು ನೋಡಿ. [ ದೊಣ್ಣೆ₁ + – ಗ₂ ]

**ದೊಣ್ಣೆಮುಳ್ಳು, ಡೊಣ್ಣೆಮುಳ್ಳು** (ನಾ). ದಪ್ಪವಾದ ಮುಳ್ಳು; ದೊಡ್ಡ ಮುಳ್ಳು : (ಕ). **ಡೊಣ್ಣೆಮುಳ್ಳು** : ಎಣ್ಣೆ ಬಲು ಕಾಸಿ ಕಣ್ಣೊಳಗೆ ಸುರಿದಂತೆ ಡೊಣ್ಣೆಮುಳ್ಳುಗಳು ನಟ್ಟಂತೆ (ಕನ್ನಜಾ. ೨೩೯).

[ ದೊಣ್ಣೆ₁ + ಮುಳ್ಳು (<ಮುಳ್) ]

**ದೊಣ್ಣೆಮೂಗು, ಡೊಣ್ಣೆಮೂಗು** (ನಾ). ದಪ್ಪವಾದ ಮೂಗು : ಅವಳದು ದೊಣ್ಣೆಮೂಗು, ಲಕ್ಷಣವಾಗಿಲ್ಲ (ರೂಢಿ). **ಡೊಣ್ಣೆಮೂಗು** : ಗುಳ್ಳಗಣ್ಣು ಮತ್ತು ಡೊಣ್ಣೆಮೂಗು ಇರುವವಳೇನು ?(ಮೋಹಿನೀ. ೨೮).

[ ದೊಣ್ಣೆ₁ + ಮೂಗು₁ ]

**ದೊಣ್ಣೆಮೆಣಸಿನಕಾಯಿ, ಡೊಣ್ಣೆಮೆಣಸಿನಕಾಯಿ** (ನಾ). ಹೆಚ್ಚು ಖಾರವಿಲ್ಲದಿರುವ, ದಪ್ಪವಾಗಿಯೂ ದುಂಡಗೂ ಇರುವ ಒಂದು ಬಗೆಯ ಮೆಣಸಿನಕಾಯಿ ; ದಪ್ಪಮೆಣಸಿನಕಾಯಿ ; ರುಚಿಯಾಗಿರುವುದರಿಂದ ಹೆಚ್ಚಾಗಿ ಇದನ್ನು ತರಕಾರಿಯಾಗಿ ಉಪಯೋಗಿಸುತ್ತಾರೆ : ದೊಣ್ಣೆಮೆಣಸಿನಕಾಯಿಯ ಬೋಂಡ ಬಹಳ ರುಚಿಯಾಗಿರುತ್ತದೆ (ರೂಢಿ). **ಡೊಣ್ಣೆಮೆಣಸಿನಕಾಯಿ** : ಮೆಣಸಿನಕಾಯಿ ಡೊಣ್ಣೆಮೆಣಸಿನಕಾಯಿ ಶಾವಿ ಹುಣಸೀಯಕಾಯಿ ಹುಳಿಪಲ್ಯ ದಾಸೋಹಕೆ ಹಣ್ಣುಗಳ ತಂದಿಹರು ತರತರದ (ಸಿದ್ಧಪು. ೧೭-೪೮) ; ನಾನೇನು ನಿಮ್ಮ ಕೈತೋಟದಲ್ಲಿ ಬೆಳೆದ ಬದನೆಕಾಯಿಯೇ, ಚಳ್ಳವರಿಯೇ, ಡೊಣ್ಣೆಮೆಣಸಿನಕಾಯಿಯೇ (ಇಪ್ಪಕ. ೨೦೫). [ ದೊಣ್ಣೆ₁ + ಮೆಣಸಿನಕಾಯಿ ]

**ದೊದಿಪಂದಿಗಲಿ** (ನಾ). ಒಬ್ಬಾತನ ಹೆಸರು : ಪಟ್ಟಲ್ಗಟ್ಟದ ಮೂರನೇ ವಂಶದನ್ದು ದಾವರಙ್ಗದ ದೊದಿಪನ್ದಿಗಲಿಯು ಕಲ್ಲೂರುಂ ಕಬೂರು ಮೊಳನಿಕೆ ಕರ್ಪೂರ . . . ತುಱುವನಿಕ್ಕಿಸಿ ಮಗುೞ್ದು ಬರುತಿರ್ಪ್ಪೊಡೆ (ಎಕ. XII, ತಿಪಟೂ. ೦೦-೪ ; ಸು. ೫೩೦ ?). [ ? ]

**ದೊದ್ದಿ** (ನಾ). ಒಂದು ಬಗೆಯ ಗಿಡ : "ಶಂ(ಕ)ಖಶರ್ಣಃ-ದೊದ್ದಿ, ಕತ್ತಿ" (ಓಷಧಿ. ೧೬೦). [ ? ]

**ದೊದ್ದೆ₁, ದೊದ್ದೆಯ** (ನಾ). ೧. ಗುಂಪು ; ಸಮೂಹ : ಎನಿತು ದೇವರ ದೊದ್ದೆ ಹಿಂಡುಗೊಳ್ಳದು ನೆನೆಯೆ (ರುದ್ರಗ. ಪೀ. ೨೦೭-೦೪) ; ಎತ್ತ ನೈರುತಿಗೀರುತಿಗಳವರೆತ್ತ ಜಲಧಿವಗೀಧಿಪಂ ಘಡಯೆತ್ತ ಪವನಂಗಿವನ ದೊದ್ದೆಗೆ ಹೊದ್ದಲೇಸಲ್ಲಿ (ಸಾಸಂಕ. ೯-೧೫) ; ದೊದ್ದೆ ತಗೆಯಲಿ ಪಾರ್ಥ ಪವನಜರಿದ್ದರಾದರೆ ಬರಲಿ ಸಮರವ ಹೊದ್ದಲಾಪರೆ ಹೊಗಲಿ ಹರಿ ತೋಱಲಿ ಸಹಾಯತೆಯ (ಕುಮ್ಹಾಭೀ. ೮-೨೦) ; ಎದ್ದಾ ನೃಪಂ . . . ನಿರ್ಮಲತಪಸ್ವಿಗಳ ನಿಶ್ಚಲಹೃದಯ ಮಧ್ಯಪಂಕೇಜಾತದ ಗದ್ದುಗೆಯೊಳಿಪ್ಪ ಚಿದ್ರೂಪನಂ ಜಗವಱಿಯೆ ದೊದ್ದೆಯೊಳ್ಮಾಡಿ ತೇರ್ಗುರುದುರೆಯುಂ ಪೊಡೆವುದುಂ ಪೊದ್ದಿಸಿದ ಪಾರ್ಥನಾರಿದರೋಳಿನಲರ್ಜುನಂ ಬಂದಾತನಂ ಕಂಡನು (ಜೈಮಿಭಾ. ೫-೯). ೨. ಗದ್ದಲ; ದೊಂಬಿ ; ಗಲಭೆ ; ಗೊಂದಲ : ನೆಱೆ ಕೂಗುವ ಕೊಳರ್ವಕ್ಕಿಯ ದೆಾದ್ದ [ಪಾಠಾಂ. ಡ್ಡಿ]ಯ ಪಱಿಯೊಪ್ಪ ಮಱಿದುಂಬಿಗಳ ಗಱಿಯ ಝುಂಕಾರಸುಸ್ವರ ಪೂರಿತ ಮಹಪುರುಮೆಗಳಱಿದವಾಗ (ಪೋಜಚಕ. ೬-೧೭). ೩. ಸೈನ್ಯ; ಪಡೆ ನೆರೆದ ದೊದ್ದೆಯನೊರಸಬಹುದೇನೆಂದು . . . ಗಹನವೆ ನಿನ್ನ ವೀರರಿಗೆ (ಕುಮ್ಹಾಭೀ. ೧-೬) ; ಧಾತುಗೆಟ್ಟುದು ದೊದ್ದೆಯಿಂದೇ ಭೂತಳಾಧಿಪ ಬಗೆಯದಿರು (ಕುಮ್ಹಾದ್ರೋ. ೧೬-೦೩) ; ತವರು ದೊದ್ದೆಯ ಹೊಗಿಸಬೇಡು ಈದವರನೇಂದೊಳಪೊಗುತ ನೇಮುವನವಸರದ ಸೇವಕರಿಗಿತ್ತು (ಕೊರಠಾ. ೨-೨-೨೫) ; ಗದ್ದೆಯ ಗೊರವನೊಳ್ ಕಡಿದಾಡಿ ಪೊಗರುವೆತ್ತಿದ್ದೆ ನೀ ರಣರಂಗದೊಳಗೆ ಬಿದ್ದೆಯ ನನ್ನ ದಾಳಿಗೆ ಕೃಷ್ಣ ಕರೆ ನಿನ್ನ ದೊದ್ದೆಯ ನಿಲಲೊಲ್ಲಗರಿದು (ಪೋಜಚಕ. ೪೦-೦೮) ; ಇಂತು ದೊದ್ದೆಯ ಹೊಯ್ಲಿನಿಂ ಕ್ಷಿತಿಯಂತರದಿ ಮಡುಗಟ್ಟ ನೆತ್ತರ ಸಂತತಂ ಪರಿಯಲ್ಕೆ (ಅಜಾವಿ. ೬-೬೯). **ದೊದ್ದೆಯ** : ೧. ಗದ್ದುದ್ದೇ ರಣವೆಲವೂ ದಿವಿಜರ ದೊದ್ದೆಯದ ಸೂಳೆಯರ ಚೌಂಗೆ ಬಿದ್ದಿನರ ವೀಳಯದ ಬಡಗರು ಭಟರ ಮೋಡಿಯಲಿ (ಕುಮ್ಹಾಅ. ೧೪-೨೫).

**ದೊದ್ದೆ₂** (ನಾ). ಉಗ್ಗು ; ತೊದಲುಮಾತು : (ಕ).

[ ದೇ.॥ ತುಳು. ದೊದ್ದೆ, ಗೊದ್ದೆ ]

**ದೊದ್ದೆಕಾಱ** (ನಾ). ಕೋಲಾಹಲವನ್ನುಂಟುಮಾಡುವವನು; ಗೊಂದಲವನ್ನುಂಟುಮಾಡುವವನು; ತೊಂದರೆಯನ್ನುಂಟುಮಾಡುವವನು: ಗುದ್ದುಗಳ ಮಳೆಗಱೆಯೆ ಕೌರವ ದೊದ್ದೆಕಾಱನು ಕಾಣನವನನು ಹೊದ್ದಿಸಿದ ಹೊಲದತ್ತ ಬುತ್ತಿಯನುಂಡು ನಿಂದಿದನ (ಸಂಭಪ. ೨೩-೭೦). [ ದೊದ್ದೆ$_1$ + -ಕಾಱ ]

**ದೊದ್ದೆಗ** (ನಾ). ೧. ಸೈನಿಕ: ಇದ್ದ ರಱುವತ್ತಾಱುಕೋಟಿಯ ದೊದ್ದೆಗರು ಮುನ್ನಮೃತಮಥನದಲ್ಲಿದ್ದವರು ಮತ್ತಲ್ಲಿ ದೇವಾಸುರರ ಕದನದಲಿ (ಸಂಭಪ. ೮-೦೦೫); ಎಲೆಲೆ ದೊದ್ದೆಗರೇಕೆ ಕೊಬ್ಬಿದರಳವನಱಿಯದೆ ನುಗ್ಗುವಂಱಿದರೆ ದಳದ ದೊರೆಗದು ಭಂಗವೇ ಬಾಹಿರನ ಹೊಯ್ಕನುತ (ಕುವ್ಯಾದ್ರೋ. ೧೭-೨೯): ಅದ್ದಲಿಸಿದುದು ತಲೆ ರಘೂತ್ತಮನಿದ್ದ ಠಾವನು ಹೇಳೆನುತ ಕಪಿ ದೊದ್ದೆಗರನಱೆಯಟ್ಟಿ ಕೊಲುತಿಟ್ಟಣಿಸಿತಿದಿರಿನಲಿ (ಮೂರಾ. ೬-೨೮-೬೦): ದೊದ್ದೆಗರೇಕೆ ಹೊಕ್ಕರು ಕೊಲ್ಲುಕೊಲ್ಲೆಂದು ಹೆದ್ದೊರೆ ದೈತ್ಯರೆಯ್ದಿದರು (ಮೋಹತ. ೩೫-೧೮); ತುಳುನಾಡಿನರಸು ದೊದ್ದೆಗರ ತುಳಿಸುತೆಯ್ದಿ ತುಳಿಲಾಗೈದನು ಚಕ್ರಧರಗೆ (ಭರಜ. ೨೨-೫೯): ದಾನವರ ಬಲದ ನೆರೆದ ದೊದ್ದೆಗರಾನಲರಿಯದೋಡಲ್ ಕಂಡು ದುರುಳಬಲ ಶುಂಭ ಧೂಮ್ರಾಕ್ಷವೃತ್ರಾದಿಗಳ್ ಕೈಕೊಂಡರಾಹವವನು (ಚಬಪು. ೨೬-೨೨). ೨. ಸಾಮಾನ್ಯಜನ; ನಾಡಾಡಿ: ದೊದ್ದೆಗರು ರಕ್ಕಸನ ಕಾಣುತ ಕದ್ದು ಹಾಯ್ದರು ಜನಕ ಚಿಂತೆಯುಲಿದ್ದನವ ನಡೆತಂದನುಗ್ರಡಣೆಯ ನಿನಾದದಲಿ (ತೊರಾ. ೦-೧೫-೧೦); ಮುದ್ದಿಸುತಿಹರು ಮಕ್ಕಳನವು ತೊಡೆಯ ಮೇಲಿದ್ದಂತೆ ಮಲವ ಬಿಡುವುವು ಎದ್ದು ವಸ್ತ್ರವ ಹಾಕಿ ಹೇಸುತಿಹರು ಥೀ ಥೀ ದೊದ್ದೆಗರೆನೆ ನಕ್ಕರವರು (ಭರಜ. ೬೫-೩೦): ಮದ್ದಳೆಯ ಗತಿಗೆ ಜಘನಗಳೆದ್ದಾಡಲು ನಗುತ ಕಂಡು ಲಾಲಿಪರಲ್ಲದೆ ಪದ್ಯ ಪದ ಕಾವ್ಯದರ್ಥವ ದೊದ್ದೆಗರೇಂ ಬಲ್ಲರೆಂದ ಚೂಡಾರತ್ನ (ನೀತಿಸಾ. ೬೩). [ದೊದ್ದೆ$_1$ +-ಗ$_2$]

**ದೊದ್ದೆಗವಿಸು** (ಕ್ರಿ). ಗುಂಪಾಗಿ ಮುತ್ತುವಂತೆ ಮಾಡು; ಆಕ್ರಮಣ ಮಾಡಿಸು: ಎದ್ದು ತಾನೈತಂದು ಸೇನೆಯ ದೊದ್ದೆಗವಿಸಿದ ಮುನಿವ ರಾಶ್ರಮಕಿದ್ದು ಗೃಹಮಂಡಲವ ಕೊಂಡರು ಸೂಱೆಗರು ನೃಪನ (ಸಂಭಪ. ೨೬-೨೦). [ ದೊದ್ದೆ$_1$ + ಕವಿಸು ]

**ದೊದ್ದೆಗೂಳು** (ನಾ). ರಾಶಿಗಟ್ಟಲೆಯ ಕೂಳು,-ಅನ್ನ: ದೊದ್ದೆಗೂಳಿನ ವೈಸಿರಿಯ ಬಲು ಬಿದ್ದನಿಕ್ಕುವ ಭೂತ ಪವಮಾನಜನ ಕಿಬ್ಬರಿಯ ಗುದ್ದಿದರೆ ಕಲಿಭೀಮನದಕುಬ್ಬೆದ್ದು ಗೋಣನು ತಿರುಹಿ ಬಸುಱೊಳಗದ್ದಯಿಸಿ ಯರೆದರೆದು ಕಾಲಲಿ ತಿಕ್ಕಿದನು ಭೀಮ (ಕುವ್ಯಾವಿ. ಒರಿ೩. ೯-೬೦). [ ದೊದ್ದೆ$_1$ + ಕೂಳು$_2$ (<ಕೂೞ್$_1$) ]

**ದೊದ್ದೆಯ** 'ದೊದ್ದೆ'$_1$ ನೋ.

**ದೊದ್ದೆವೋಗು** (ಕ್ರಿ). ಗಲಭೆಯಾಗು; ಕೋಲಾಹಲವುಂಟಾಗು: ಹೊದ್ದದೊಬ್ಬೊಬ್ಬರು ಕಲಹವಾಗೆದ್ದು ತಾವಿಱಿದಾಡಿದರು ಪುರಿ ದೊದ್ದೆವೋದಂದು ಹುಟ್ಟಿದುದು ವಿಪರೀತವದಱೊಳಗೆ (ಬಸಪು. ೬೦-೩೭). [ ದೊದ್ದೆ$_1$ + ಪೋಗು$_1$ ]

**ದೊನವುರ** (ನಾ). ಒಂದು ಊರಿನ ಹೆಸರು: ನೂರ್ಮಡಿ ಚೋೞಂ ನವಲಖ(ಕ್ಷ)ಬಲಂಬೆರಸು ಬಂದು ದೊನವುರದೊಳ್ ಬಿಟ್ಟಿದ್ದು ದೇಸ(ಶ)ವೆಲ್ಲಮಂ ಸೂಱೆಗೊಣ್ಡು (ಎಇ. XVI, ೭೪-೨ ; 1007). [ ? ಇದು 'ದೋನವುರ' ಅಥವಾ 'ದ್ರೋಣಪುರ' ಎಂಬುದರ ಅಪಲಿಖಿತ ವಿರಬಹುದೇ ? ]

**ದೊನ್ನಮಾರ** (ನಾ). ಒಬ್ಬಾತನ ಹೆಸರು: ಶ್ರೀರಾಮರಾ ರಾಮಡಿನಾಡು ಮೂನೂಱಱ ನಾಣ್ದರಸಾ ಆಳೆ ಅವರ ಮಗನ್ದೊನ್ನಮಾರನ್ ಬೋಱದ ನಚ್ಚಯನ್ನೊಳ್ಪತ್ತಿಟ್ಟು (ಎಕ. X, ಗೌರಿಬಿ. ೭೬-೩ ; ಸು. 760). [ ದೊನ್ನ? + ಮಾರ ]

**ದೊನ್ನೆ** (ನಾ). ಬಾಳೆಯ ಅಥವಾ ಅಡಿಕೆಯ ಪಟ್ಟೆಯಿಂದ ಮಾಡಿದ ಬಟ್ಟಲು; ಎಲೆಬಟ್ಟಲು: ಮೃದುತರವೆನಿಪ ಪರಿಮಳಿಪ ಹೊಸ ಖಂಡಂಗಳಂ ಸವಿಗೊಳುತ ಪುಳಕಿಸಿ ಹೊಲಿದ ದೊನ್ನೆಯೊಳಿರಿಸಿ ಬಾಸಣಿಸಿ (ಬಸಪು. ೧೮-೨೯); ದೊನ್ನೆಗಳ ಹರಹಿ ಬಾಳೆಲೆಹಾಳೆಯುಂ ಹಾಕಿ ಬಿನ್ನಣದಿ ಮಾಡಿದಾ ಚೌಕದೆಡೆಗಳ ಮುಂದೆ . . . ಕುಳ್ಳಿರ್ದು (ಸಮ್ಯಕೌ. ೬-೨೩); ಮತ್ತದಕೆ ಹಾಲು ನೀರೆಱೆದು ಸಂಪಳಿಗಲಿಸಿ ಎತ್ತರದ ಮೇಲೆ ದೊನ್ನೆಯನಿರಿಸಿ ತುಪ್ಪವಂ ಹತ್ತದಂದದಿ ತೊಡೆದು ಹೊಯ್ದುಕೊಂಡದನಿಡ್ಡಲಿಗೆಯಂತೆ ಬೇಯಿಸುವುದು (ಸೂಪಶಾ. ೬-೭); ಸಣ್ಣಸುಚ್ಚು ಇಟ್ಟುಕೊ ಗೊಡ್ಡಳಿ ಕಾಸಿಕೊ ದೊನ್ನೆಯೊಳಗೆ ತುಪ್ಪ ಬಡಿಸಿಕೊ (ಪುರಂದ. ೩-೧೮೭-೭); ನಳಿನದಳದ ದೊನ್ನೆಯೊಳು ಶಾಂತೋದಕವ ಮೊಗೆದು ಪಾಸಂಗೈಸಿ (ನವಮೋ. ೬-೬೦): ಅಡಕೆಯ ಹಾಳೆಗಳಿಂದ ಐದಾರು ದೊಡ್ಡದೊಡ್ಡ ದೊನ್ನೆಗಳನ್ನು ಹೊಲಿದರು (ಕಳಹು. ೬೫).

[ ದೇ.೫ ತಮಿ. ತೊನ್ನೈ; ಮಲ. ದೊನ್ನ; ತುಳು. ತೆಲು. ದೊನ್ನೆ; ಕುೞ. ಡೊನೊ; ಕುವಿ. ದುನ್ನೋ ]

**ದೊಪ್ಪನೆ** (ಅ). ದೊಪ್ಪೆಂದು ಶಬ್ದವಾಗುವ ಹಾಗೆ: ರಂಗಮಂಟಪದೊಳು ದೊಪ್ಪನೆ ಬಿದ್ದು (ಲಸರ. ೨-೫೦); ದೊ [ಪಾಠಾಂ. ತೊ]ಪ್ಪನೆ ಕೆಡೆಗು ದನಿಗೊಟ್ಟು ಕರೆದು ಕರಂ ಮುಗಿದು ಹೊಡಮಟ್ಟು ಗಿಣ್ಣಲನಂತು ನೂಕುಗು ಮತ್ತೆ ಮುಂದಿಡುಗು (ಬಸಪು. ೦೪-೧೮); ತನ್ನ ಬಾಯಂ ಹೊಯ್ದುಕೊಳುತಂ ತನ್ನ ಶೋಕಾಕ್ರಾಂತದಿಂದಂ ತನ್ನ ತಾ ಮಱೆದಿಂತು ದೊ[ಪಾಠಾಂ. ಧೊ]ಪ್ಪನೆ ಕೆಡೆದು ನೆಲದಲ್ಲಿ (ಬಸಪು. ೪೫-೬); ನೆಲಕೆ ದೊಪ್ಪನೆ ಹಾಯ್ದುಕೊಂಡನು (ಕುವ್ಯಾಕ. ೧೫-೨೭); ದೊಪ್ಪನೆ ಎಚ್ಚರ ತಪ್ಪಿ ಬಿದ್ದಳು (ಬಂಕಿಮ. ೦೧೧).

**ದೊಪ್ಪದೊಪ್ಪನೆ, ದೊಪ್ಪುದೊಪ್ಪನೆ** (ದ್ವಿರುಕ್ತಿ): ದೊಪ್ಪದೊ [ಪಾಠಾಂ. ತೊಪ್ಪತೊ]ಪ್ಪನೆ ಪಿರಿಯ ಕಲ್ಗೊಳು ತಪ್ಪಲಿಡುತಂ ಸೋಹುತಂ ಹರಿತಪ್ಪ ಕೆಲವಾಡುಗಳನು . . . ಹೊಡೆದು (ಬಸಪು. ೨೦-೧೪): ಶೂಲೆ ಬಾಧಿಸುತಿಪ್ಪ ಸಂಕಟಕಾಲದಿಳೆಯೊಳು ದೊಪ್ಪದೊ[ಪಾಠಾಂ. ತೊಪ್ಪತೊ]ಪ್ಪನೆ ಕೆಡೆದು ಹೊರಳುತ್ತ ಮಿಗೆ ನರಳುತಿರಲು (ಬಸಪು. ೪೯-೨೬): ದೊಪ್ಪುದೊಪ್ಪನೆ ಪಜ್ಜೆಯಿಡುವಳು ದುಗುಡವ ಸೊಪ್ಪುಸೊಪ್ಪನೆ ತುಳಿಪಂತೆ (ಭರಜ. ೧೩-೬೫). [ ದೊಪ್ಪು + -ಅನೆ$_1$ ]

**ದೊಪ್ಪು** (ನಾ). ಒಂದು ಅನುಕರಣ ಶಬ್ದ: ಬೆರಸಿ ಪದಾತಿ ನೆಕ್ಕು ನೆರಿಲೆಂಬ ನೆಳಲ್‌ನೆಳಲೆಂಬ ಘಾರು ಘರ್ಘರ ಘರಿಲೆಂಬ ದೊಪ್ಪು ದೊದಲೆಂಬ . . . ನಿಷ್ಠುರರವಂ ಮಿಗೆ ತಳ್ತಿಱಿದತ್ತು ಯುದ್ಧದೊಳು (ಗಿರಿಕ. ೬-೬೮).

**ದೊಪ್ಪುಟು** (ನಾ). ಒಂದು ಬಗೆಯ ಹುಳು: ಸ್ಪರ್ಶರಸಮೆರಡುಮನಱಿವ ಶಂಖ ಶುಕ್ತಿ ಗುಳ್ಳೆ ಗುಬ್ಬಿ ನಾಯಿನೊಳಲೆ ದೊಪ್ಪುಟು ಗೊಣ್ಣೆಹುಳು ಕ್ರಿಮಿ ಮೊದಲಾದುವೆಲ್ಲಱೊಳಂ (ಜಸಾರ. ೪೯). [ ? + ಪುಟು ]

**ದೊಪ್ಪೆ** 'ಡೊಪ್ಪೆ' ನೋ.

**ದೊಪ್ಪೆಗಿವಿ** (ನಾ). ದೊನ್ನೆಯಂತೆ ಅಗಲವಾಗಿರುವ ಕಿವಿ: ಕೈಕಾಲುವತಿ ತೋರ ದೊಪ್ಪೆಗಿವಿ ದನಿ ಕಾಕು (ಕಕ್ಕೋಕ. ೨-೧೭). [ ದೊಪ್ಪೆ (<ಡೊಪ್ಪೆ) + ಕಿವಿ$_2$ ]

**ದೊಪ್ಪೆನ್** (ಕ್ರಿ). ದೊಪ್ಪೆಂದು ಶಬ್ದಮಾಡು: ಘಾಯವಡೆದಾನೆಗಳು ಗುಳವನು ಹಾಯಿಕಲು ನೆಲಕುರುಳಿದವು ಮಾನಾಯುಜಂಗಳು ಬಿಗುಹ ಬಿಡೆ ದೊಪ್ಪೆಂದವಾಜೆಯಲಿ (ಕುವ್ಯಾಕ. ೫-೪); ತಲ್ಲಿಂಗಮುಂ ಕಂಡು ಕೋಪಾವೃತಚಿತ್ತಂ ಬೇಗದಿಂ ಕೈಗೊಡಲಿಯನಧಟಿಂದೆತ್ತಿ ಹಾಯ್ದಿಕ್ಕಿದಂ ತಕ್ಷಿತನಂ ದೊ[ಪಾಠಾಂ. ಧೊ]ಪ್ಪೆಂದು ಮುಂಡಂ ಕೆಡೆಯೆ ತಲೆ ಕರಂ ಬೀಳ್ವನಂ (ಬೃಷವಿ. ೬-೧೬). [ ದೊಪ್ಪು + ಎನ್$_1$ ]

**ದೊಬ್ಬಿಕೆ** (ನಾ). ದಬ್ಬುವುದು; ನೂಕುವುದು: ಅನಿರೀಕ್ಷಿತವಾದ ಈ ದೊಬ್ಬಿಕೆಯಿಂದಾಗಿ ಅನಂತನ ಹೆಜ್ಜೆ ತಪ್ಪಿಹೋಗಿ ಅವನು ಮುಗ್ಗರಿಸಿ ಬಿದ್ದನು (ಒಡ್ಡಿಉ. ೧೨೭). [ ದೊಬ್ಬು (<ದಬ್ಬು$_1$) + –ಇಕೆ ]

**ದೊಬ್ಬಿಸು** 'ದಬ್ಬಿಸು' ನೋ.

**ದೊಬ್ಬು** 'ದಬ್ಬು$_1$' ನೋ.

**ದೊಬ್ಬುಳಿ** 'ದಂಪ್ಪಳ' ನೋ.

**ದೊಮ್ಮ** (ನಾ). ಒಂದು ಮನೆತನದ ಹೆಸರು (?): ಪುಯ್ಯಲೊಳ್ ದೊಮ್ಮರ ಕಾಡವಂ ಸತ್ತು ಸ್ವರ್ಗ್ಗಾಲಯಕ್ಕೇಱಿದನ್ (ಎಕ. VI, ೦೭೩-೪; 780). [ ? ]

**ದೊಮ್ಮರ** 'ದೊಂಬ' ನೋ.

**ದೊಮ್ಮಳಿ** (ನಾ). ೧. ಗುಂಪು; ಸಮೂಹ. ೨. ಗಾಬರಿ. 'ದೊಮ್ಮಳಿಸು' ಪರಾ. [ <ದೊಂದುಳಿ ? ]

**ದೊಮ್ಮಳಿಸು** (ಕ್ರಿ). ೧. ಗುಂಪುಗೂಡು; ಸಂದಣಿಗೊಳ್ಳು: ಧರಾಚಕ್ರಮನಾಕ್ರಮಿಸಿ ನಿಶಾತಹೇತಿಗರ್ಭಂಗಳುಮನೇಕಪ್ರಕಾರಕೇತನ ವಾಜಿರಾಜಿಗಳುಮಾಗಿ ದೊಮ್ಮಳಿಸಿ ನಡೆವ ರಥಂಗಳುಮಂ (ಪಂಪಭಾ. ೧೦–೩೦ ವ): ಅವಿತಾಳಾಪಂಗಳಿಂ ದೊ[ಪಾಠಾಂ. ದ]ಮ್ಮಳಿಸಿ ಕಿನಿಸಿ ಕೊಟ್ಟೊಳ್ಳ ತಾತ್ಪರ್ಯವೇಂ (ಸುಕುಮಾ. ೭–೪೦); ನೆರೆದ ರಾಜಲೋಕಮೆಲ್ಲಂ ರಾಜಸುತೆಯನೀಡಾಡಿ ಬಂದು ದೊಮ್ಮಳಿಸಿ ಮುಮ್ಮಳಿಕೊಂಡು ನೋಡುತ್ತಿರ್ಪುದುಂ (ಅರ್ಧನೇ. ೭–೩೯ ವ); ಅಂತುಭಯಬಳಚತುರಂಗವಾಹನಂಗಳೊಳೊರ್ವೊರ್ದರೆ ದೊಮ್ಮಳಿಸಿ ಬೆರಸಿದಾಗಳ್ (ವರ್ಧಪು. ೮–೪೭). ೨. ಗಾಬರಿಯಾಗು; ಗಾಬರಿಪಡಂ: "ದೊಮ್ಮಳಿಸು–ತಿರ್ಯಕ್ಸಮೂಹಸಂಭ್ರಮೇ (ದನದ ಹಿಂಡಿನಂತೆ ಗಾಬರಿಪಡು)" (ಶಮಧಾ); ಅಗ್ನಿಶಿಖಾಮುಖಕ್ಕೆ ದೂರಮಪ್ಪ ಬಕ್ಕಬಯಲ ತಾಣದೊಳ್ ದೊಮ್ಮ[ಪಾಠಾಂ. ರ್ಮ]ಳಿಸಿ ನಿಂದು ಬಹುಜನಂಗಳುಮ್ಮಳಿಸಿ ತಮ್ಮೊಳಿಂತೆಂದರ್ (ಪಂರಾಮಾ. ೧೧–೧೩೩ ವ); ಆಗಳಂಜಲಿಮಂಜಲಿಮೆಂದು ಬೆಗಡುಗೊಂಡ ಗೋವಳಿಗರ ನೊಡಗೊಂಡು ದೊಮ್ಮಳಿಸಿ ಮಮ್ಮಳಿಗೊಳ್ವ ಗೋವುಗಳನಟ್ಟಿಕೊಂಡು ಕಿಱಿದಂತರದೊಳಿರ್ದ ಗೋವರ್ಧನಗಿರಿಯ ಮಱಿಗೆ ಪೋಗಿ (ಅರ್ಧನೇ. ೮–೧೦ ವ); ಹಯಂ ತಾಂ ತನಗೆ ತೂಪಿಱಿದ ಕೂರ್ಪಿನ ಪೆರ್ಮೆಯಿಂ ಸೊಮ್ಮುವೆರ್ಚಿ ದೊಮ್ಮಳಿಸಿ ಕಿಚಿಕಿಲ್ದು ಬಿಮ್ಮನೆ ನಡೆದು ಬಱಿಯ ಪೊಱಿಯಾ ಮಿಕ್ಕು ಪೊಕ್ಕು ದಿಕ್ಕುಗೆಟ್ಟು ಮುಱುಂಗಿ ಕಣ್ಮಾಯವಾಯ್ತು (ರಾಮಾಶ್ವ. ೧೨೦–೨೩). ೩. ವೇಗಗೊಳ್ಳು: ರಭಸಗೊಳ್ಳು: ಅಂತು ನೆಗಟ್ದ ಭಾವವ್ಯತಿಕರಂಗಳ್ ದೊಮ್ಮಳಿಸೆ ತಮ್ಮನಿಬರುಂ ಘಟ್ಟಿಸಿ ನಿಂದು ಶಟ್ಟುತ್ತು ತಾಗಿ ಪೋಗದೆ (ಅನಂಪು. ೭–೪೭ ವ); ಅಂತು ನಿಂದಳವಿಯೊಳ್ ದೊಮ್ಮಳಿಸಿ ನೂಂಕುವ ದೈತೇಯಚಕ್ರಿಯ ಚತುರಂಗಬಲಮುಮನಿತುಮೊಂದೆ ಮುಖದೊಳ್ ಕೈಕೊಂಡು ನಿಜಗಜಘಟಾಪಟಲಕ್ಕೆ ಸೂಚೀಯಾನೆಯಂ ಮಾಡಿ (ಅನಂಪು. ೧೪–೭ ವ).

[ ದೊಮ್ಮಳಿ + –ಇಸು$_3$ ]

**ದೊಮ್ಮೇಜಾಡ್ಯ** (ನಾ). ಪಶುಗಳಿಗೆ ಬರುವ ಒಂದು ಬಗೆಯ ರೋಗ: (ಎಸಮ್ಮ. XV, ೪೦). [ ದೊಮ್ಮೆ (P←ತೆಲು. ದೊಮ್ಮ) + ಜಾಡ್ಯ]

**ದೊರಕಿಸು** (ಕ್ರಿ). ಪಡೆ; ಹೊಂದು; ಪಡೆದುಕೊಳ್ಳು: ಎಲ್ಲಾದರೂ ಒಂದು ಉದ್ಯೋಗ ದೊರಕಿಸಿ ಉಪಜೀವನಕ್ಕೆ ಮಾರ್ಗ ಮಾಡಿಕೊಳ್ಳಬೇಕು (ಮುಂಬಯಿ. ೪–೩೦); ಸರ್ಕಾರದ ಆ ಅನ್ಯಾಯದ ವಿರುದ್ಧ ಹೋರಾಡಿ ದೊರಕಿಸಿದ ಪ್ರಥಮವಿಜಯದಿಂದಾಗಿ ಹುಡುಗರೆಲ್ಲ ಹರ್ಷದಿಂದ ಹಾರಾಡುತ್ತಿದ್ದಾರೆ (ಆಗಸ್ಟ್. ೪೧); ಗಾಂಧೀಜಿ ಹೇಳುತ್ತಾರೆ–'ರಾಟೆಯ ತಿರುಗಿಸಿರಿ! ಸ್ವಾತಂತ್ರ್ಯವ ದೊರಕಿಸಿರಿ' ಎಂದು! (ಇತಿಶ್ರೀ. ೧೩೭).

[ ದೊರಕು + –ಇಸು$_3$ ]

**ದೊರಕು** (ಕ್ರಿ). ಸಿಗು; ಸಿಕ್ಕು; ಪ್ರಾಪ್ತವಾಗು; ಲಭ್ಯವಾಗು; ದೊರೆ; ವರರಾಜ್ಯಂ ಶ್ರೀಸಹಿತಂ ದೊರಕಲ್ ಕೈಕೊಳ್ಳದಿರ್ಪರಾರ್ (ಪಂಚತಂ. ೧೦೦–೧೩); ಮಂದಮತಿಗಳಿಗೆ ದೊರಕದ ಲೇಸನೀಯಬೇಕೆಂದು ಮನದೊಳು ನೆನೆದನು (ಸಿದ್ಧರಾ. ೧–೨೩); ತನಗೆ ಮಣಿ ದೊರಕದೆಂಬೊಂದನುತಾಪದೆ ತಪನನೆಯ್ದಿದನೊ ಶರನಿಧಿಗೆಂಬಿನಮೆಸೆವರಾಗದಿಂ ಭೋಂಕೆನಲಪರಾಂಭೋಧಿಗಿಳಿದನಬ್ಜಸಹಾಯಂ (ದಶಕು. ೩–೧೮); ಧೇನುವೇತಕೆ ದಾನಗೊಂಬ ಮಹಾನುಭಾವರು ದೊರಕದಿದ್ದರೆ (ಸಂಭಪ. ೧೦–೧೧); ಇರಲಿರಲಿ ತೋಱುಸುವೆ ಮುಂದಕೆ . . . ದೊರಕು ಪಶುಭವ ಬೀದಿಗಲಹವನೆಂದಳು (ತೊರರಾ. ೨–೧–೨೯); ಪರಮಪಟ್ಟಸ್ಥಲ ಮಾರ್ಗವೀ ಶರೀರದೊಳಿಲ್ಲಿ ದೊರಕಲರಿಯದು (ಚಬಪು. ೩–೨); ದುರ್ಲಭವಾದ ವಸ್ತುಗಳೆಲ್ಲವೂ ಅವನಿಗೆ ದೊರಕಿದ್ದವು (ಪರಿಹೀ. ೧೦).

[ <ದೊರೆ$_1$./ತುಳು.ದೊರಕು, ದೊರಂಕು, ದೊರಕ್; ತೆಲು. ದೊರಕು ]

**ದೊರಗು** 'ತರಕು' ನೋ.

**ದೊರಗುಉಸುಬು** (ನಾ). ಒರಟಾದ ಮರಳು,–ಉಸುಬು; ದಪ್ಪ ಮರಳಂ: ಹೋಗುವ ದಾರಿಗೆ ದೊರಗುಉಸುಬನ್ನು ತಂದು ಸುರಿದು ಚೆನ್ನಾಗಿ ಮಾಡಿದ್ದಾರೆ (ಅಪೂಪ. ೩೨).

[ ದೊರಗು (<ತರಕು) + ಉಸುಬು (<ಉಸುಕು) ]

**ದೊರಗುಗಾಜು** (ನಾ). ಒರಟಾದ ಮೇಲ್ಮೈಯುಳ್ಳ ಗಾಜು; ಪಾರದರ್ಶಕವಲ್ಲದ ಗಾಜು: ಅದರ ಮುಂಗಡೆಯಲ್ಲಿ ಒಂದು ಭೂತಕನ್ನಡಿಯೂ ಹಿಂಗಡೆ ಒಂದು ದೊರಗುಗಾಜಿನ ಹಲಗೆಯೂ ಇವೆ (ವಿಜ್ಞಾವಿ. ೮).

[ ದೊರಗು (<ತರಕು) + ಗಾಜು (<ಕಾಜು) ]

**ದೊರಪಯ್ಯ** (ನಾ). ಒಬ್ಬಾತನ ಹೆಸರು: ಪಡಿಯಱ ದೊರಪಯ್ಯನ ಓರಿಯರಸಿ ಪಾಂಬಬ್ಬೆ ತಲೆವಱಿದುಮೂವತ್ತುವರಿಸಂ ತಪಂಗೆಯ್ದುಯ್ದಂ ನೋನ್ತುಚ್ಛಮಂಡಾಣಮೇಱಿದರ್ (ಎಕ. VI, ಕಡೂರು. ೦–೧೩; 971).

[ <ದೋರ$_3$ + ಅಪ (<ಅಪ್ಪ$_1$) + ಅಯ್ಯ$_{61}$ ]

**ದೊರಯ್ಯನಾಯಕ** (ನಾ). ಒಬ್ಬಾತನ ಹೆಸರು: ಅಯ್ಯಹರಸರ ಮಗಮ್ ದೊರಯ್ಯನಾಯಕ (ಮ್ಯಆರಿ. ೧೯೨೪, ೯೩–೯; 1021).

[<ದೋರ$_3$ + ಅಯ್ಯ$_{61}$ + ನಾಯಕ ]

**ದೊರೆ$_1$** (ಕ್ರಿ). ೧. ಸಮೀಪಕ್ಕೆ ಬರು; ಬಳಿಸಾರಂ: ಮುಳಿಯಿಸುವ ಮುಳಿವ ತಿಳಿಪುವ ತಿಳಿವೊಲಿಸುವ ದೊರೆವ ನೆರೆವ ರಮಣೀರಮಣಾಕುಳ ಕಳಕಳದಿಂದಂಗಜವಿಳಾಸದೆಱವಟ್ಟು ಸೆಟ್ಟನಿದೆ ಪೆಱತಂಟೇ (ಶಾಂತಿಪು. ೩–೧೧). ೨. ಕಾಣು; ತೋರು: ಮೂಡದೆಸೆಯೊಳ್ಕೆಂಪು ದೊರೆಯೆ ತಾರಗೆ ಪರೆಯೆ ಕೂಡೆ ತಂಗಾಳಿ ಮುಂಬರಿಯೆ (ಜೈಮಿಭಾ. ೨–೬೩). ೩. ದೊರಕು; ಸಿಕ್ಕು; ಸಿಗು; ಪ್ರಾಪ್ತವಾಗು; ಲಭಿಸಂ: ಎಮ್ಮ ಮಮ್ಮಂಗಮೆಮಗವಿಾಗಳನುವರಂ ದೊರೆಯಲಾಯ್ತು [ಪಾಠಾಂ. ದೊರೆಯಾಯ್ತು] (ಪಂಪಭಾ. ೧೧–೪೨ ವ); ನಗರಾಂಗನೆಯರ್ಮಹೋತ್ಸವಂ ದೊರೆದುದೆನುತ್ತಲಂಪು ಮಿಗೆ ನೋಡಿದರಾ ಮನುಜೇಂದ್ರಚಂದ್ರನಂ (ಕಾದಂಪೂ. ೪೨೩); ಬಿಜ್ಜಳನಡೆಯ ಪದಹತಿಗಳಿವ ಪಲತೆಱದ ಜೀವಿಗಳಿಗೆ ವಿಮೋಕ್ಷಂ ದೊ[ರೆ]ವುದೆಂದಡೆ ಬೊಮ್ಮಯನ ಕೈಯಲಿ ಮರಣವಾದ (ಬಸಪು. ೩೪–೭೬); ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ (ಪುರಂದ. ೩–೧೪೯ ಪಲ್ಲವಿ); ವಿಶೇಷ ಸುಕೃತದ ಫಲಂ ದೊರೆತುದೆನಗೆಂದವಂ ಬಿದ್ದನಚ್ಯುತನಂಘ್ರಿಗೆ (ಜೈಮಿಭಾ. ೭–೬೩): ಸೀಮೆಗೆ ಯಿರಪಗೌಡ × ರಡು ಕೈವಡ ಮುಂತಾಗಿ ಸೀಮೆನಹೆಸು ಮುಂತಾಗಿ ದೊರೆವ ತರು ಮುಂತಾಗಿ ಭೂಮಿಗೆ ನಾಲ್ಕುಮೂಲೆಗೆ ಕಲ್ಲು ನೆಟ್ಟದ್ದು (ಎಕ. VII, ಶಿವಮೊ. ೯೩–೨೭; ?): ಪರಮಾತ್ಮನ ದರ್ಶನ

ಕೇವಲ ತಪಸ್ಸಿನಿಂದಲೂ ಕರ್ಮಯೋಗದಿಂದಲೂ ದೊರೆಯಬೇಕೆಂಬುದಿಲ್ಲ (ಧರ್ಮಸಾ. ೮೫). ೪. ಉಂಟಾಗು ; ಸಂಭವಿಸು : ಮಂತ್ರಿ ಚತುರೋಪಾಯಂಗಳಂ ಬಲ್ಲೊಡಂ ದೊರೆವೋಲ್ ಚಿನ್ನಕೆ ಸೌರಭಂ (ಸೋಮೇಶ. ೧೧).

[ ದೇ.೫ ತೆಲು. ದೊರೆಯು, ದೊರವು ]

**ದೊರೆ₂** (ನಾ). ೧. ಸಮಾನ ; ಎಣೆ ; ಸಾಟಿ; ಸರಿ: "ಸರಿ, ದೊರೆ . . . ಸಂಗಡಂ–ಈ ೧ರ ಸಮಾನಕ್ಕೆ ಪೆಸರ್" (ಶಶಾ. ೫೯–೨೯೧) ; ಹರಿಣಧರ ಸರಸಿಜಂಗಳ್ ದೊರೆಯಲ್ಲವು ತನಗೆ ತಾನೆ ದೊರೆ ನಿನ್ನ ಮೊಗಂ (ಕವಿರಾ. ೩–೭೭) ; ಇದಱ ದೊರೆಗೆ ಗಿರಿಗಳುವೊಳವೇ (ಆದಿಪು. ೭–೬೫) ; ಪಾಕವ್ವೆ ಗುಟ್ಟಿದ ಪೆಂಡಿರ್ ದೊರೆಯೇ (ಪಂಪಭಾ. ೧–೪೦) ; ನರನಾರಾಯಣರೆಂಬಿರ್ವರುಮೊಡಗೂಡಿದೊಡೆ ಗೆಲ್ವರಾರುರ್ವರೆಯೊಳ್ ನಿರುತಮೆನೆ ನೆಗಟ್ದ ನಿಮ್ಮಿರ್ವರ ದೊರೆಗಂ ಬಗೆವೊಡಗ್ಗಳಂ ನರರೊಳರೇ (ಪಂಪಭಾ. ೧೨–೧೨೩) ; ದೊರೆಗಾಣೆಂ ನಿನಗೆ ಜಿನೇಶ್ವರ ಪೆಱರಂ ನಿನಗೆ ನೀನೆ ದೊರೆಯೆನಿಪ್ಪೈ (ಅಜಿಪು. ೮–೨೨) ; ತೆನಿರಸದಿಂದವ್ಯುತದ ದೊರೆಯೆನಿಸುವ ಕುಂಕುಮದ ರುಚಿಯನನುಕರಿಸುವ ಮಾವಿನ ಪಣ್ಣಂ (ಧರ್ಮಾಮೃ. ೮–೧೭); ಕಡೆಯಲೆಂದು ಪಾಲ್ಗಡಲೊಳ್ ತಂದಿರಿಸಿದ ಮಂದರಗಿರಿಗೇಂ ದೊರೆಯಾದುದೊ ಪೊನ್ನ ಕೋಂಟೆ (ಮಲ್ಲಿಪು. ೨–೫೧). ೨. ಸರಿಯಾದುದಂ; ಸಮಂಜಸವಾದುದಂ : ಕವಿಗಳ ನಾಮಧಾರಕನರಾಧಿಪರೋಳಿಯೋಳೀತನೊಳ್ಪಿದಂ ಕವಿ ನೃಪನೀತನೊಳ್ಪಿದನೆನಲ್ ದೊರೆಯಲ್ತು (ಪಂಪಭಾ. ೧–೧೦); ನಿನ್ನಂ ಪುಸಿಯಾಡಿ ಕಾಡಲೆನಗೇಂ ದೊರೆಯೇ (ಪಂಪಭಾ. ೮–೪) ; ದೊರೆಯೊಳೊಬ್ಬನ ಹಾನಿ ಭಟರಲ್ಲರಿಗೆ ದೊರೆ (ಕುವ್ಯಾಕ. ೨–೧೯). ೩. ರೀತಿ ; ಬಗೆ ; ಕ್ರಮ : ಸ್ಕಂದನಾಶ್ವಂಗಳನೊಂದೆ ದೊರೆಯೊಳ್ ಪರಿಯೆ ಪರಿಚೋದಿಸಿ ಬಾಣಪಾತಪ್ರಮಾಣದೊಳ್ ನಿಱಸುವುದುಂ (ಶಾಂತಿಪು. ೪–೧೧ ವ) ; ಮದವಮಾಂದ್ಯೋತ್ಪಾದನಾಪಹರಣಮಾರಣ ವಶೀಕರಣವಿದ್ವೇಷಣಾದಿಗಳ್ಗೆ ಪೆಜವುವಿಾ ದೊರೆಯವರ್ಕೆ ಪಿರಿದುಮಾಗಮಂಗಳ ಪ್ರಮಾಣಂಗಳ್ (ಕಾದಂಬ. ೬೪೮); ಪೂಮಳೆಯಿಾ ದೊರೆಯಕ್ಕುಮೆಂಬಿನಂ ಸುರಿದುದು ಪುಷ್ಪವೃಷ್ಟಿ (ಎಕ. II, ೨೩೪–೫೯ ; ಸು. 1180).

**ದೊರೆಗೆ ವರ್** = ಸಮನಾಗು ; ಸಮಾನವಾಗು : ಸಮಕ್ಕೆ ಬರು : ಹಾರಾದ್ಯಾಭರಣಂಗಳಿನಾ ರೂಪಾಶ್ಚರ್ಯವಾಗೆ ಪಾಣಿಕಟಕ್ಕಂ ನೀರಂಜಿಸಿ ದಳಿವಿಡಿದ ಮಹಾರತ್ನದ ದೊರೆಗೆವಂದುದಾ ಸ್ತ್ರೀರತ್ನಂ (ಆದಿಪು. ೪–೯೨) ; ಖಳರೋಳಿಯೊಳ್ದೊರೆಗೆವಂದನೆನ್ನನದೇನನೆಂದಪೆಂ (ಕಾದಂಬ. ೪೦೦) ; ಚತುರಾನ್ವಿತಮೆಂಬ ನೆಗೞ್ತೆಯಿಂದಿರಾವಂತರೊಳಾರುಮೇಂ ದೊರೆಗೆ ವರ್ಪರೆ ಪೋಲಿಸೆ ಭಟ್ಟಪಾರ್ಯನೊಳ್ (ಲೋಕೋಪ. ೧–೧೧) ; ಹರಿಕಾನ್ತೆಯುಮಿಾ ಕಾನ್ತೆಯ ದೊರೆಗೆ ವರಲ್ಕಾಱಳು (ಎಕ. VI, ಮೂಡಗೆ. ೨೨–೨೪ ; 1129). **ದೊರೆಯಾಗು** = ಹೋಲಿಕೆಯನ್ನು ಪಡೆ,–ಹೊಂದು ; ಹೋಲು : ನೇಣ್ಬಲಿಯ ತೊಡರೊಳ್ ತೊಡಂಕಿ ನಡುಗುವ ಕುರಂಗಿಯೊಳ್ದೊರೆಯಪ್ಪಳ್ (ವರ್ಧಪು. ೪–೫೭ ವ) ; ಸುರನದಿಯ ಫೇನಪುಂಜದ ಸಿರಿಯಂ ಸಲೆ ತಳೆದು ತೊಳಪ ತುಹಿನಾಚಲದೊಳ್ ದೊರೆಯಾದಂ (ಕುಸುಮಾ. ೧–೧೨೧). 'ಒರೆ₂' ಪರಾ.

**ದೊರೆ₃, ಧೊರೆ** (ನಾ). ೧. ಒಡೆಯಂ; ರಾಜ; ಪ್ರಭು; ಅರಸು : ಗಾಂಗೇಯಂ ದೊರೆಯ ಪಿರಿಯ ಮಗನುಂ ಕ್ರಮಕ್ರಮಾರ್ಹನುಮಿರ್ದಂತೆನ್ನ ಮಗಳಂ ಕುಡೆವು (ಪಂಪಭಾ. ೧–೭೦ ವ) ; ಹೊನ್ನುಳ್ಳ ದೊರೆಯಂತೆ ಭಾವಿಸಿಕೊಂಡಂ ಹಮ್ಮಿನಲಿಪ್ಪನೆ ಭಕ್ತನು (ಚೆನ್ನವ. ೪. ೧೨೧–೨೭೭) ; ದೊರೆಯೊಳ್ ಸ್ನೇಹವನಾಂತವಂ ಬಡವರಂ ತಾಂ ನೋಳ್ಪನೇ ಪ್ರೀತಿಯಿಂ (ಸೋಮೇಶ. ೪೦) ; ದೊರೆ ತತ್ಪರುಳಿದರು ನೆರವು ಬಹುದು (ಕುವ್ಯಾಕ. ೨–೧೯) ; ಮಗಳಿಗೆ ವರನಾವ ಧರೆಯ ದೊ[ಪಾಠಾಂ. ಧೊ]ರೆಗಳೊಳಗೆಂದ (ವರ್ಧಪ. ೪–೮೩) : ದೊರೆ ಎನ್ನ ಒಲವು ಸುಸ್ಥಿರವೆಂದೆಲ್ಲರ ಹಗೆತರವಲ್ಲ (ಪುರಂದ. ೨–೪೫–೨) : ದೊರೆಯು ರಥವಾದರೂ ಎತ್ತಿಯಿಲ್ಲದೆ ತಿರುಗದು (ಗಾದೆ). ೨. ಯೂರೋಪಿನಿಂದ (ವಿಶೇಷವಾಗಿ ಇಂಗ್ಲೆಂಡಿನಿಂದ) ಬಂದ ಮನುಷ್ಯ ; ಇಂಗ್ಲೀಷ್ ಅಧಿಕಾರಿ, ಕಾಫಿತೋಟದ ಒಡೆಯ, ಪಾದ್ರಿ ಮುಂತಾದವರು : ದೊರೆಗಳ ಮನಸ್ಸಿಗೆ, ಅವಳು ಆತ್ಮಹತ್ಯೆ ಮಾಡಿಕೊಂಡಿರಬೇಕೆಂಬ, ಭೀತಿ ಹುಟ್ಟಿತು (ಕಾಮದು. ೯೪) ; ದೊರೆಗಳು ಪುಸ್ತಕಗಳನ್ನು ಇನಾಮು ಕೊಡುವದಕ್ಕೆ ಬರುತ್ತಾರೆ (ಮುಂಬಯಿ. ೧–೧೪). ೩. ಸಾಮರ್ಥ್ಯ ; ಪರಾಕ್ರಮಂ : ಪರಿಭವದ ಪೊಱೆಯನಾಂತಿರ್ದರಾತಿಗಳ್ಗಳ್ಕೆ ತನ್ನ ಕುಲಮುಂ ಚಲಮುಂ ದೊರೆಯುಂ ಕಿಡೆ ದಾಟ್ಟಂ ಗಂಡರೂಪಿನೊಳ್ ಗಂಡನಲ್ತು ಪೆಂಡತಿಯ ವಲಂ (ಆದಿಪು. ೧೨–೯೭). ೪. ಹಿರಿಮೆ ; ಯೋಗ್ಯತೆ. 'ದೊರೆಗೆಡಿಸು' ಪರಾ. ೫. ಶ್ರೇಷ್ಠತೆ ; ಆಧಿಕ್ಯ. 'ದೊರೆಪೆಟ್ಟು' ಪರಾ. ಧೊರೆ : ೧. ನಿಮ್ಮ ಧೊರೆಗೆ ಶೀಘ್ರವಾಗಿ ಅರಿಕೆಮಾಡು (ಕೃಪಾಕ. ೫೩) ; ಆ ಸವಿಾಪದ ಮಹೀಶೂರಪುರದ ಧೊರೆಗಳಂ ಕಾಪಿಟ್ಟುಕೊಂಡು ಇರುತ್ತಿರುವಳು (ಪಟ್ಟಿಅ. ೧೭–೨೫). ೬. ಅಧಿಕಾರಿ (?) : ಮಳಿಗೆಯೊಳಗೈನೂರ್ವರ್ ಸ್ವಾಮಿಗಳ್ ಬಟ್ಟಾಯಂ ಹೊಂಗೆ ಕೊಟ್ಟವರಲ್ಲಿಯಡಕೆಯೊಂದು ಕೊಂಡವರಲ್ಲಿಯಡಕೆಯೊಂದು ಎಣಿಸಿದ ಧೊರೆಗಳಲ್ಲಿ ಪ್ರತ್ಯೇಕವಡಕೆಯೊಂದು (ಎಇ.XX, ೧೨–೫೩ ; 1167).

[ ದೇ.೫ ತಮಿ. ತುರೈ, ಮಲ; ತುರ ; ತುಳು. ದೊರೆ, ಧೊರೆ ; ತೆಲು. ದೊರ, ಧೊರ ]

**ದೊರೆಕಾರ್ಯ** (ನಾ). (ಶ್ರೀಮಂತಿಕೆಯ) ಆಡಂಬರ : ಕಡೆವಳ್ಳಿ ಬೀಟು ಮನೆ ಮುಂಗೆಯ್ಯಾರ್ಭಟಂ ಸಾಲದಾ ದೊರೆಕಾರ್ಯಂ ಘೃತಮಿಲ್ಲದೂಟದ ಸುಖಂ . . . ಬಱಗ್ಯೆಯಂ ಸುಱದಂತೆ (ಸೋಮೇಶ. ೧೭).

[ ದೊರೆ₃ + ಕಾರ್ಯ ]

**ದೊರೆಕುಮಾರಿತಿ** (ನಾ). ದೊರೆಯ ಮಗಳು ; ರಾಜಕುಮಾರಿ : ದೊರೆಕುಮಾರಿತಿಯರಾ ಬೀದಿಯೊಳರ್ತಿಯೊಳೆಡೆಯಾಡುತಿಹರು (ಕಂಸವಿ. ೭–೧೯).

[ ದೊರೆ₃ + ಕುಮಾರಿತಿ ]

**ದೊರೆಕೊಳ್₁, ದೊರೆಕೊಳ್ಳು** (ಕ್ರಿ). ೧. ಸಿಕ್ಕು ; ಸಿಗು ; ಲಭಿಸು ; ಪ್ರಾಪ್ತವಾಗು : "ದೊರೆಕೊಳ್ – ಪ್ರಾಪ್ತೌ" (ಶಮಧಾ) ; ಧರಣೀಶರ ಕಾರುಣ್ಯಂ ದೊರೆಕೊಣ್ಡೊಡೆ (ಎಇ. XIII, ೩೬೦–೧೪ : 929) ; ಪೂರ್ವಪುಣ್ಯಫಲದಿಂ ದೊರೆಕೊಂಡ ವಿಮಾನಂ (ಆದಿಪು. ೨–೬೫); ಸೌಖ್ಯಮದೆಂತುಂ ದೊರೆಕೊಂಡಿತಿಲ್ಲ ಹೃದಯಕ್ಕೋರಂತೆ (ಕಾದಂಪೂ. ೩೪೭) ; ಸಂದ ತಿರಿಕಂಗೆ ತೊವೆ ತುಪ್ಪಂ ದೊರೆಕೊಳಲುಣ್ಮೆ ನಲಿವ ತೆಱದಿಂ (ಧರ್ಮಾಮೃ. ೯–೩೦) : ದಿವಸಶ್ರೀ ದೊರೆಕೊಂಡ ಕೋಕಮಿಥುನಂ . . . ವಿರಾಜತ್ಕಳಹಂಸಯುಗ್ಮಮೆನೆ ಕೂಡಿ ಕ್ರೀಡಿಸುತ್ತಿರ್ಪರುತ್ಸವದಿಂದಾ ವಿಜಯಾವತೀ ಯುವತಿಯುಂ ವಿಶ್ವಂಭರೋರ್ವೀಶನುಂ (ಕುಸುಮಾ. ೩–೨೭) ; ಕೇಳಿದಗೆ ಮೋಕ್ಷದ ಮಂದಿರವು ದೊರೆಕೊಳ್ಗು (ಸಂಭಪ. ೮–೧೪೨). ೨. ಉಂಟಾಗು; ಸಂಭವಿಸು; ಕೂಡಿಬರು : ನಿಮ್ಮ ಮನದಿಂ ವಿಘ್ನಕಳಂಕಂ ತೆರಳ್ದಿನಿಸುಂ ಪೋಗದು ಕಾಲಲಬ್ಧಿ ದೊರೆಕೊಂಡಂದಲ್ಲದೇಂ ಪೋಕುಮೇ (ಆದಿಪು. ೨–೨೨) ; ಪ್ರಸವಸಮಯಂ ದೊರೆಕೊಳೆ (ಪಂಪಭಾ. ೧–೪೧೪ ವ) ; ನುಡಿತಡವಪ್ಪುದೊಂದು ಮೊಗದೊಳ್ ಮುಱುಕಂ ದೊರೆಕೊಳ್ವುದೊಂದು . . . ಕಳ್ಗುಡಿದವರಂದದವಿಂತು (ಪಂಪಭಾ. ೨–೪೯) ; ಆ ಪುಲಿಯ ಪೂರ್ವಭವವೃತ್ತಾಂತಮುಮಂ ಕಾಲಲಬ್ಧಿ ದೊರೆಕೊಳೆ ತೋಱದಿರ್ದುದುಮ ನಱಪಿ (ಚಾವುಂಪು. ೨೫) : ಗುರುವಂ ಲಘುಸಂಧಾನದೆ ನರನಿಸೆ ಗುರು ಲಘುವಿಮಿಶ್ರಿತಂ ದೊರೆಕೊಳೆ ತದ್ಗುರು ತಚ್ಛಂದೋವ್ಯತ್ಯಿಗೆ ದೊರೆಯೆನಿಸಿರ್ದುದು ಮನಕ್ಕೆ ದುರ್ಯೋಧನನಾ (ಗದಾಯು. ೪–೪೮) ; ಇನಿತೊದಾಕ್ರೋಶವಿಾ ನಾಗಶರ್ಮನೊಳೇಕಾರಣದಿಂದವಿಾಂದು ದೊರೆಕೊಂಡತ್ತುಂ

(ಸುಕುಮಾ. ೭-೪೩) ; ಪುರುಷಂಗೆ ಸುದ್ಯಕ್ಷಿತ್ವಂ ದೊರೆಕೊಂಡೊಡೆ (ಸಮುಹ. ೩-೧೧) ; ಬಲಿ ಕಾಲಲಬ್ಧಿ ದೊರೆಕೊಳೆ ಬಲವಂದಾ ಯತಿವರಂಘ್ರಿಯುಗ ದೊಳ್ ಬಿಟ್ಟು (ನೇಮಿಪು. ೩-೨೫) ; ಸ್ವರದಿಂ ಯಲದಿನಸಾದಿಷ್ಟರೇಫದಿಂ ಪರದೊಳಮದುರ್ಗ ಶೋಜ್ ಪವರ್ಗಂ ದೊರೆಕೊಳ್ಗುಂ ವಾದೇಶಂ (ಶಾಬ್ದಾವ. ೭೩) ; ಪರಿಹಾಸಹೇತುಭಾವನೆ ದೊರೆಕೊಳೆ ಚಿತ್ರಕ್ಕೆ ಹಾಸ್ಯ ಮೆಂಬ ರಸಂ ತಾಂ ಸರಸೋಕ್ತಿಗಳಿಂದಮುದಾಹರಿಪೆಂ (ಶೃಂಗಾರ. ೧-೬೬). ೩. ಈಡೇರು ; ನೆರವೇರು : ಬಗೆ ದೊರೆಕೊಂಡುದಿಲ್ಲಿದು ವಿಧಾತ್ರನ ದೋಷವೆ (ಹಂಪಭಾ. ೧೩-೧೦೩) : "ಲಭಿಸು" (ಹಂಪದೀ. ೩೫೦). ೪. ಸಿಕ್ಕಿ ಬೀಳು ; ವಶವಾಗು ; ಅಧೀನವಾಗು : ದೊರೆಕೊಂಡಯೆಂತು ಮುಂ ಪಂಜರಬಂಧನವಾದುದೆಂತು (ಕಾದಂಪೂ. ೯೧). ೫. ಕಾಣು ; ತೋರು ; ಪ್ರಕಟವಾಗು : ಉರದೊಳ್ ಫಣ ಕರದೊಳ್ ಬಿಲ್ ಶಿರದೊಳ್ [ತೊ]ಟ್ ತೊಡುಟಿಯು ಕಿಲದೊಳೆಸೆದಿರೆ ಪೆಟ್ ಮುಂಗೊರಲೊಳ್ ಕಟಿಮಟಿಯಲ್ಲದೆ ದೊರೆಕೊಳೆ ಮೃಡನಡಿಗೆ ಹರಿಗನೆಱಗಿದನಾಗಳ್ (ಹಂಪಭಾ. ೮-೨೪) ; ಗುಣಲೋಪಂ ವರಶಬ್ದಶಾಸ್ತ್ರದೊಳ್ ತಾಂ ದೊರೆಕೊಳ್ಗುಂ (ವರ್ಧಪು. ೧-೪೭). ದೊರೆಕೊಳ್ಳು : ೬. ಪಡೆ ; ಹೊಂದು : ಸೀತಾ, ಚಂದ್ರಮತೀ, ದಮಯಂತೀ ಮೊದಲಾಗಿ ಸತಿಯರು ದೊರೆಕೊಂಡ ಸುಖವೇನು? (ಭಾರದ. ೪೮೩). [ ದೊರೆ$_1$ + ಕೊಳ್$_1$ ]

**ದೊರೆಕೊಳ್₂**, ದೊರೆಗೊಳ್ (ಕ್ರಿ). ಸಮಾನವಾಗು ; ಸಾಟಿಯಾಗು ; ಹೊಂದಿಕೊಳ್ಳು : ದೊರೆಕೊಂಡಿರೆ ಸೊಗಯಿಸುಗುಂ ಪುರಾಣಕಾವ್ಯ ಪ್ರಯೋಗದೊಳ್ತತ್ಕಾಲಂ ವಿರಸಂ ಕರಮವು ದೇಸಿಗೆ ಜರದ್ಧ್ರಮವಿಷಯ ಸುರತರಸರಸಿಕತೆವೊಲ್ (ಕವಿರಾ. ೧-೫೦) ; ಪರಿಗೀತಾರ್ಥಂ ಪೂರ್ವಾಪರ ದೊಳ್ಪಗೆವಾಗಲೆಂದುವೊಂದಱೊಳೊಂದುಂ ದೊರೆಕೊಂಡೊಂದದೊಡದು ದುಷ್ಕರಮೆ ವಿರುದ್ಧಾರ್ಥವೆಂಬುದಾದಂ ದೋಷಂ (ಕವಿರಾ. ೦-೮೦) ; ಸುಂವರಲೊಂದು ಬೆಳ್ಸರಿಯದಾತ್ಮತನೂಭವನುತ್ತಮಾಂಗದೊಳ್ ದೊರೆಕೊಳೆ ನಿಲ್ಲದಲ್ಲಿ ಕುಸುಮಂ ಕಿಲವಲ್ಲುಗೆ ತನ್ನ ರತ್ನವಿಸ್ಫುರಿತಕಿರೀಟಮಂ ಕವಿದು ತಾನೆ ನರಂಗೆ ಕಿರೀಟನಾಮಮಂ ಸರಸದಿನಾಗಳುಚ್ಚರಿಸಿ ಸಾಹಸಮಂ ಪೊಗಟ್ಟಂ ಸುರಾಧಿಪಂ (ಹಂಪಭಾ. ೫-೧೦೩) ; ನಾಲ್ಕುಂ ಚರಣಂಗಳು ಮೊಂದಕ್ಕೊಂದು ದೊರೆಕೊಂಡಿರೆಯದು ಸಮತ್ವಮೆನಿಪುದು (ಅಪ್ರತಿ. ೯-೧). ದೊರೆಗೊಳ್ : ಇವಂ ಧರ್ಮದೊಳ್ ಧರ್ಮಸುತನಂ ನೇಮದೊಳ್ ರಾಮಚಂದ್ರನಂ ದೊರೆಗೊಂಡು (ಚಿಕವಿ. ೩-೧೧).

[ ದೊರೆ$_2$ + ಕೊಳ್$_1$ ]

**ದೊರೆಕೊಳಿಸು₁** (ಕ್ರಿ). ೧. ಲಭಿಸುವಂತೆ ಮಾಡು ; ದೊರಕುವಂತೆ ಮಾಡು : ಪರ[ವ]ಸದ ಬಗೆಯೊಳೊಂದಂ ದೊರೆಕೊಳಿಸುವುದಱಿಗತರ್ಕ ತೋಪಸ್ಥಾನಂ ನಿರುತಂ ಸಮಾಹಿತಾಳಂಕರಣಾಂತರಮಕ್ಕುಮಿಂತು ತದುದಾಹರಣಂ (ಕವಿರಾ. ೩-೧೨೩) : ಪುರುಪರಮೇಶ್ವರನಂದನ ದೊರೆಕೊಳಿಸುಗೆ ನಿನಗೆ . . . ಮಂಗಳಮಂ (ಆದಿಪು. ೧೨-೩೪) ; ನಾಳೆನುಣಸ ನೆನಗೆ ದೊರೆಕೊಳಿಸಿ ಬಂದುದು ಕರವೊಳ್ಳಿತಾಯ್ತೆಂದು ನಗುತಿರ್ಪನ್ನೆಗಂ (ಹಂಪಭಾ. ೩-೨೬ ವ) ; ಭಕ್ತಿಸಂಪದದ ದೊರೆಕೊಳಿಸಿ ಪಾಲಿಸಿದ ಪರಮ ಗುರುವೇ (ಶಿವಗೀ. ೬೩-೩೮೨) ; ಪರಿಣಾಮವಶದೆ ಜನ್ಮಾಂತರದೊಳ್ ಶುಭಮಶುಭಮೆಂಬ ಕರ್ಮಂಗಳೊಳಾರ್ ದೊರೆಕೊಳಿಸಿದರಾವುದನಾ ದೊರೆಯದೆ ಫಲಮಕ್ಕುಮವರ್ಗೆ ಪೆಱತಾದವುದೇ (ಚಂದ್ರಪ್ರ. ೩-೬೬). ೨. ಉಂಟುಮಾಡು : ತರಳತರಲೋಚನಂ ನಿರ್ಭರರಾಗರಸಂ ಮುಖಾರ ವಿಂದಂ ನಿನ್ನಾ ದೊರೆಕೊಳಿಸಿದೊಸಗೆಯೇಂ ಬಂಧುರಂ (ಕವಿರಾ. ೩-೧೭) ; ದೊರೆಕೊಳಿಸುವ ತತ್ಕ್ರಿಯೆಯೊಳ್ ಪರಿಣಮಿಸುವ ಫಳಮನಸ್ತ್ರಶಸ್ತ್ರ ತನುತ್ರೋತ್ಕರರಹಿತಂಗಸಹಾಯುಂಗರಾತಿಬಲಜಯಮಸಳವೆ ದೊರೆಕೊಳಿಸುವವೊಲ್ (ಆದಿಪು. ೦೫-೦೭) ; ಕರವಿಲುಳಿತ ನೀಲಕಬರಿಭರಮಂ ಪಿಡಿದುಂ ಪರಿಭವಿಸಲ್ ಕೃಷ್ಣೆಗೆ ಪಿಗೆ ದೊರೆಕೊಳಿಸದೆ ಕೋಪಮುಂ ಮನಸ್ತಾಪಮುಮಂ (ಗದಾಯು. ೧-೫೯) ; ಭಾವಿಸಲ್ಕೌತುಕಮೇನಂ ಮಾಡದೇನಂ ದೊರೆಕೊಳಿಸದೊ ಸಂಸಾರಿಗೇನೇನನೇನಂ (ಸುಕುಮಾ. ೩-೪೮) ; ಮಹಾಬಲನ ಭುಜಾಪರಿಘಕ್ಕೆ ಕುಂದನಿನಿಸಂ ದೊರೆಕೊಳಿಸದನೆಂದೊಡೇಂ ಮಯಂ ದುರ್ಜಯನೋ (ಹಂಪಣಮಾ. ೧೪-೦೩೯) ; ಪಿರಿದುಂ ಬಿದಿ ನಿಜ ಜನ್ಮಾಕರಮೆನಿಸಿದ ಪದ್ಮಜಾತಿಗಂ ಮ್ಲಾನತೆಯಂ ದೊರೆಕೊಳಿಸಿದನೆನೆ (ಚಂದ್ರಪ್ರ. ೮-೧೪). ೩. ಈಡೇರಿಸು ; ನೆರವೇರಿಸು : ಅಮರನಾಯಕರೆಲ್ಲಂ ನೆರೆದು ವಿವಾಹಮನಾಕೆಗೆ ದೊರೆಕೊಳಿಸಿದರ್ (ಆದಿಪು. ೭-೮೭). ೪. ಸೇರಿಸು ; ಕೂಡಿಸು : ಪಿರಿದಾಯಾಸದೆ ಗುಣಮಂ ದೊರೆಕೊಳಿಸಿದೊಡಂ ಖಲಂಗೆ ಗುಣಮಂ ಪಶ್ಚಾತ್ಕರಿಸಿ ಗುಣಿಯಂ ವಿಭೇದಿಪ ಪರಿ ತೀಕ್ಷ್ಣ ಮುಖಂಗೆ ಸೂಚಿಯಂತಿರೆ ಸಹಜಂ (ಚಲಕಂ. ೧-೧೭).

[ ದೊರೆಕೊಳ್$_1$ + – ಇಸು$_3$ ]

**ದೊರೆಕೊಳಿಸು₂** (ಕ್ರಿ). ೧. ಹೋಲಿಕೆಗೊಳ್ಳು ; ಹೋಲು ; ಸಮವಾಗಿ ಕಾಣು : ಶರದುದಿತಶಿಶಿರಕರನುಂ ಸರಸಿರುಹಮುಮಿಾ ತ್ವದೀಯ ವದನ ಮುಮಿನಿತುಂ ದೊರೆಕೊಳಿಸುವೊಡೆ ಪರಸ್ಪರವಿರೋಧಿಗಳ್ ನಿರುತಮೆನೆ ವಿರೋಧೋಪಮಿತಂ (ಕವಿರಾ. ೩-೭೫). ೨. ಸರಿಯಾಗಿ ಕಂಡುಹಿಡಿ ; ಗ್ರಹಿಸಂ : ಸ್ಮರನಸ್ತ್ರಸಮಿತಿಯುದು ನಿರ್ಭರಮಂಗಮನುರ್ಚಿ ಪೋಗೆಯುಂ ಪೋಬಟಿಯುಂ ದೊರೆಕೊಳಿಸಲಾಗದದಱಿಂ ಶರತತಿಯಲ್ತೆಂಬುದಿಂತು ಧರ್ಮಾಪೋಹಂ (ಕವಿರಾ. ೩-೦೮೫). [ ದೊರೆಕೊಳ್$_2$ + – ಇಸು$_3$ ]

**ದೊರೆಕೊಳ್ಳು** 'ದೊರೆಕೊಳ್$_1$' ನೋ.

**ದೊರೆಗದ್ದುಗೆ** (ನಾ). ೧. ರಾಜನ ಪೀಠ,–ಸಿಂಹಾಸನ. ೨. ರಾಜತ್ವ : ತೊರೆದು ದೊರೆಗದ್ದುಗೆಯನಿಲ್ಲಿಗೈತಂದನ್ನೆಸೆ (ಶ್ರೀರಾಮಾ. ೩೦೭-೩೩೫).

[ ದೊರೆ$_3$ + ಗದ್ದುಗೆ$_2$ (<ಗರ್ದುಗೆ$_2$) ]

**ದೊರೆಗಲಿ** (ನಾ). ಸರಿಸಮಾನನಾದ ಪರಾಕ್ರಮಿ,–ಕಲಿ : ಹರಣದ ಬಿಯಕೊಂದಿನಿಸುಮನೆಣಿಸದ ದೊರೆಗಲಿಗಳ್ ಬಿನದಕೆ ನಡೆವಂದದಿ ಹರಿಸಂ ಪಿಗೆ ನಡೆತಂದರ್ (ಜಯಶಾ. ೬-೨೪). [ ದೊರೆ$_2$ + ಕಲಿ$_3$ ]

**ದೊರೆಗಾಣ್** (ಕ್ರಿ). ಸಮಾನವಾಗಿ ಕಾಣು ; ಸರಿಯಾಗಿ ಕಾಣು : ದೊರೆಗಾಣೆಂ ನಿನಗೆ ಜಿನೇಶ್ವರ ಪೆಱರಂ ನಿನಗೆ ನೀನೆ ದೊರೆಯೆನಿಪ್ಪೈ ಮಂದರಗಿರಿಗೆ ಮಂದರಾದ್ರಿಯೆ ದೊರೆ ಜಲಧಿಗಗಾಧಜಲಧಿ ದೊರೆ ಪೆಱವೊಳವೆ (ಅಜಿಪು. ೮-೨೨). [ ದೊರೆ$_2$ + ಕಾಣ್ ]

**ದೊರೆಗಿಡಿಸು** 'ದೊರೆಗೆಡಿಸು' ನೋ.

**ದೊರೆಗಿಡು** (ಕ್ರಿ). ೧. ಸಾಮರ್ಥ್ಯವನ್ನು ಕಳೆದುಕೊಳ್ಳು ; ಪರಾಕ್ರಮ ವನ್ನು ಕಳೆದುಕೊಳ್ಳು ; ಅಸಮರ್ಥವಾಗು : ಶರಚಾಪಚಕ್ರಭೀಕರಕರ ವಾಳಾಯುಧವಿರಾಜಿ ಪಾತ್ರಕರಯುಗವಿಂ ದೊರೆಗಿಡೆ ಪೆಱಂಗೆ ಮುಗಿವುದೆ (ಆದಿಪು. ೧೨-೧೦೧). ೨. ಹಿರಿಮೆಯನ್ನು ಕಳೆದುಕೊಳ್ಳು ; ಅಯೋಗ್ಯ ವಾಗು : ದೊರೆಗಿಡೆ ಬಾಯ್ಗೆ ಬಂದುದನೆ ಬಯ್ವೆಂ (ಶೃಂಗಾರ. ೩-೧೫).

[ ದೊರೆ$_3$ + ಕಿಡು (<ಕೆಡು$_1$) ]

**ದೊರೆಗೆಡಿಸು**, ದೊರೆಗಿಡಿಸಂ (ಕ್ರಿ). ಯೋಗ್ಯತೆ, ಹಿರಿಮೆ ಮೊದಲಾದುದ ವನ್ನು ಕಡಮೆ ಮಾಡು,–ಕೀಳಾಗಿಸು : ಸರ್ವೇಶನ ನಿಶ್ಚಳತಪದುರ ವಣೆಯ ತೇಜಮಂ ದೊರೆಗೆಡಿಸಲ್ ಕಳರವದಿಂ ಬಗ್ಗಿ ಸುಪರಗಳಿಗಳ ಚಪ್ಪ ರಣೆಯೊಂದೆ ಸಾಲದೆ (ಗಿರಿಕ. ೭-೬೨) ; ವರುಣನ ಪುರುಳುಗೆಡಿಸಿ . . . ಧನದನನು ದೊರೆಗೆಡಿಸಿದನೀಶಾನ್ಯನನಿಳೆಯೊಳು ತಿರಿದುಣಿಸಿದನದಟಂದ (ತ್ರಿಪುಸಾಂ. ೬-೬೬). ದೊರೆಗಿಡಿಸು : ಕುರುವೃದ್ಧಂ ಕುಲವೃದ್ಧಂ ಸರಿತ್ಸುತಂ ತಕ್ಕನೆಂದು ನಂಬಿದ ಸಭೆಯೊಳ್ ದೊರೆಗಿಡಿಸಿ ನುಡಿದೊಡೀ ನೊಲವರಮೆನ್ನದೆ ನೀನುಮದನೆ ಕೊಂಡೆಸಗುವುದೇ (ಹಂಪಭಾ. ೭-೪೪) ; ಮನುಜಲೆಲ್ಲರ ಪೆಂಪಂ ದೊರೆಗಿಡಿಸಿ ವೀರಗಜ್ಜನ ಹನುಮಂ ಧರೆ ಪೊಗಳಲು

**ಧರಣೇಶ** (ನಾ). ದೊರೆ; ರಾಜ: ಧರಣೇಶಂ ದಯೆಗೆಯ್ದುಮುಗ್ರಮಹಿಷೀ ಸಂಪತ್ತಿಯಂ . . . ಪುತ್ರಮೋಹರಸಾಸ್ವಾದನತೃಪ್ತಿಯಿಲ್ಲವೆನುತುಂ (ಮಲ್ಲಿಪು. ೩-೧೦೭); ಧರಣೇಶನ ಯಂತ್ರದ ಕತ್ತುರಿನೀರಸೆವಸಿಯ ಧಾರೆ ಯಗ್ರದೊಳೊರ್ವಳ್ ಸ್ಮರನಸಿಯ ಧಾರೆಯಗ್ರದೊಳಿರವಿಂತುಟು ವಿಜಯಲಕ್ಷ್ಮಿಗೆಂಬವೊಲಿರ್ದಳ್ (ಚಂದ್ರಪ್ರ. ೭-೦೩೩); ಧರಣೇಶಂ ಕವಿದೊತ್ತಿ ಮುತ್ತಿ ಪೊಸನೀರಂ ಸೂಸುವ . . . ಕಾಮಿನೀವೃಂದಮಂ ಪಿರಿದಾನಂದದಿ ನೊಲ್ದು ನೋಡಿ (ಉದ್ಭಟ. ೯-೧೩೦). [ ಸಂ. ]

**ಧರಣೇಶಕ್ತಿ** (ನಾ). ಭೂಮಿಗೆ ಆಧಾರವಾದ ಶಕ್ತಿ: ಹರಿಯೆ ಧರಣೇಶಕ್ತಿ ತಾನೆಂದೊರೆವನಲ್ಲದೆ ಹರನೆ ಧರಣೀಧರಣನೆಂದೊರೆಯನು (ಬಸವ. ೫೭-೫೭). [ ಸಂ. ]

**ಧರಣೇಶಾವಾಸ** (ನಾ). ಅರಮನೆ; ರಾಜಭವನ: ಸಿಂಗದ ಸಿಸು ಬಳೆವೊಂದಂದದಿಂದಾರ್ವು ತೇಜಸ್ಸ್ಫುರಿತಂ ವಿಕ್ರಾಂತಮೆಂಬೀ ಗುಣಮೊಡವೆಳೆಯುತ್ತಿರ್ಪನಂ ನಂದನಂ ತದ್ಧರಣೀಶಾವಾಸದೊಳ್ ಶೋಭಿಸುತಿರೆ ಬಳೆದು (ಚಂದ್ರಪ್ರ. ೩-೧೦೪). [ ಧರಣೇಶ + ಆವಾಸ ]

**ಧರಣೇಶ್ವರ** (ನಾ). ೧. = ಧರಣೇಶ: ಧರಣೀಶ್ವರ ವಚನಾಮೃತಪರಿಷೇಕದೆ . . . ಪರಮೇಶ್ವರಿ ಪುಗನನಂದು ಪೆತ್ತಂತೊಸೆದಳ್ (ಅಜಿತಪು. ೩-೦೫); ಧರಣೇಶ್ವರಸುತೆಯಾಗಿಯುಮರಣ್ಯದೊಳ್ ಬಿಟ್ಟು ಸಾವ ದುಷ್ಕರ್ಮಫಲಂ ದೊರೆಕೊಂಡತ್ತೆನಗೆ (ಶಂರಾಮಾ. ೧೪-೫೫); ಸೊಗಯಿಸುವುದು ಧರಣೇಶ್ವರಗೇಹ ವಿಶಾಲವಜ್ರನಿರ್ಮಿತಶಾಲಂ (ಚಂದ್ರಪ್ರ. ೧-೦೩೮). ೨. ಶಿವ. ೩. [ಗಣಿತ] ಹದಿನಾರು ಎಂಬ ಸಂಖ್ಯೆಯ ಸಂಕೇತ; **P** ಹದಿನಾರು ಜನ ಚಕ್ರವರ್ತಿಗಳು ಪುರಾಣಪ್ರಸಿದ್ಧರು. ಆದುದರಿಂದ 'ಧರಣೇಶ್ವರ' ಎಂಬ ಶಬ್ದಕ್ಕೆ ೧೬ ಎಂಬ ಅರ್ಥ ಬರುತ್ತದೆ: ಎರಡುಂ ಮೂರುಂ ನಾಲ್ಕುಂ ಗುರುವಿಂ ಪ್ರಸ್ತರಿಸಲುಬುನಿಧಿ ಗಜ ಧರಣೇಶ್ವರ ಗಣಮೊಗೆಗುಮವರ್ಕಂ ಸರಸಿಜಭವವಿಷ್ಣುರುದ್ರಸಂಜ್ಞೆಗಳಕ್ಕುಂ (ಛಂದೋಂಬು. ೩-೩). [ ಸಂ. ]

**ಧರಣೇಸಮುತ್ಥಿತ** (ನಾ). ನೆಲದಿಂದ ಮೇಲೆ ಎದ್ದುದು: ಧರಣೀಸಮುತ್ಥಿತಂ ಪಾಂಸುರೇಣು ಚೂರ್ಣಾಭಿಧಾನಕಂ ಕ್ಷೋದಂ ಧೂಳಿ ರಜಂ ಪರಾಗಮೆಂದಿಪ್ಪ ತೆರಳ್ದು ಪುದಿದಿರ್ದುದಕ್ಕುಮದು ಪಿಂಜಳಕಂ (ಪಶು. ಕೋ. ೯೦-೦೩). [ ಸಂ. ]

**ಧರಣೇಸುತ** (ನಾ). ೧. ಅಂಗಾರಕ. ೨. ಭೂದೇವಿಯ ಮೊಮ್ಮಗ; ಭಗದತ್ತ: ಧರಣೀಸುತನಬಿವಂ ದಿಕ್ಕರಿ ಕೆಡೆದುದು ನರಶರಂಗಳಿಂ ಭುವನಮುಮಿಸ್ಸುರಿಯದಿರದು (ಪಂಪಭಾ. ೧೧-೮೨). **P** ಇದು 'ಧರಣಿಜಸುತ', ಎಂಬುವರ ಅಪಲಿಖಿತವಿರಬೇಕು. [ ಸಂ. ]

**ಧರಣೇಸುತೆ** (ನಾ). ಭೂಸುತೆ; ಸೀತೆ: ಅಭಿರಾಮಗುಣಗಣವಶೀಕರಣೀಯತಾಸುಕರಣೀಯ ಧರಣೀಸುತೆಯುಂ (ಎಕ. II (R), ೦೫೮-೫೪; 1120). [ ಸಂ. ಧರಣೀಸುತಾ ]

**ಧರಣೇಸುರ** (ನಾ). = ಧರಣಿಸುರ: ಧರಣೀಸುರರಂ ವಿಮಲಾಧ್ವರಮಂ ಸಜ್ಜನರಂ . . . ಭೂವರರೊಲ್ದು ರಕ್ಷಿಸದೊಡಾರ್ಪೊರೆವವರ್ (ಉದ್ಭಟ. ೨-೫೩); ಉಲ್ಲಾಸಿಸಭಕ್ತಿರತಿಸ್ಥಿರರು ಧರಣೀಸುರರು ಹರವೇಷಧರರಘಹರರು ಚಿದ್ವರರು (ಬಸವ. ೪೬-೯); ಆನೆಯನು ತಂದಿತ್ತು ಧರಣೀಸುರನ ಮನ್ನಿಸಿ . . . ಕಳುಹಿದನು (ಕುಮಾವ್ಯಾ. ೩೩-೫೨). [ ಸಂ. ]

**ಧರಣೇಹಾರ** (ನಾ). ಭೂಮಿಗೆ ಸರದಂತೆ ಅಲಂಕಾರಪ್ರಾಯವಾದುದು: ಧರಣೀಹಾರಂ ಹಸ್ತಿನಪುರ ಮಮರಪುರೋಪಹಾಸಿ ಭೂವನಿತೆಯ ಕರ್ಪುರದ ಕರಂಡಗೆ ಸೌಖ್ಯದ ಪರಮಂ ಪೊಸವೇಟದಿರ್ಕೆ ಸಮ್ಮಿನ ತಾಣಂ (ಶಾಂತಿಪು. ೯-೦೫೪). [ ಸಂ. ]

**ಧರಣೆ** 'ಧರಣ್ಯೆ' ನೋ.

**ಧರಣೇಂದ್ರ** (ನಾ). [ಜೈನ] ಪಾರ್ಶ್ವನಾಥತೀರ್ಥಂಕರನ ಯಕ್ಷ: ಧರಣೇಂದ್ರನೆಳದು ಭೋಂಕನೆ ಧರಾತಳಂ ಬಿರಿಯೆ ನೆಗೆದು ಬರ್ಪಂ (ಆದಿಪು. ೯-೧೦೦); ಧರಣೇಂದ್ರನ ಸತಿಯರ್ಗಂ ಸುರರಾಜನ ಪೆಂಡವಾಸದೊಳ್ಪೆಂಡಿರ್ಗಂ ಕರಮೆನ್ನರಸಿಯರುರಯ್ಯೂರ್ವರುಮುಗ್ಗಳಮಪರನೆಂತು ಬಿಸುಟಾನಿರ್ಪೆಂ (ಧರ್ಮಾಮೃ. ೧೪-೪೦). [ ಸಂ. ]

**ಧರತಿ, ಧರ್ತಿ** (ನಾ). (ವಿಶಿಷ್ಟವಾದ) ಶೈಲಿ; ರೀತಿ; ಧೋರಣೆ; ಧಾಟಿ: ಕೆಲಸಾನ ಆಟಿಗೆ ಮಾಡೂವ ಸೂಟಿಗೆ ಹಸನಾದ ಧರತಿಗೆ ಮೆಚ್ಚಿದೆ ಗರತಿಗೆ (ಗಂಗಾಹ. ೩೩-೧೨); ಪಲ್ಲವಿಗಳ ಸೊಲ್ಲಿತ್ತುವ ಧಾಟಿ ಧರತಿಗಳು ಅನೇಕವಿವೆ (ಕನ್ನಾಕ. ೩೭೭); ಅವಳು ನಗುವ 'ಧರತಿ' ಪೂರ್ಣ ಹಾಗೆಯೇ ಇದೆ (ಹೊಸಕ್ಕ. ೦೯೭); ಅಹಾ! ಏನು ಧಾಟಿ! ಅಹಾ! ಏನು ಹಾಡುವ ಧರತಿ! (ಕನ್ನಡಾ. ೪೩). ಧರ್ತಿ: ಇಂದಿರೆಯ ಮಾತಿನ ಧರ್ತಿ ಪೋಜನ ದೆನಿಸಿ ಎಲ್ಲರೂ ಬಿದ್ದು ಬಿದ್ದು ನಕ್ಕರು (ಕೊಸಶಾ. ೧೦); ತಾನು ಅನಿಕೇತ, ಅನಂತಪ್ರವಾಸಿ ಎನ್ನುವ ಧರ್ತಿಯಲ್ಲಿದ್ದಾಳೆ (ದೀಪಹ. II, ೧೭೩). [ ←ಮರಾ. ಧರತೀ, ಧರ್ತೀ ]

**ಧರಧುರ, ದರದುರ** (ನಾ). ೧. ಆರ್ಭಟ; ಕೋಲಾಹಲ; ರಭಸ; ಅಬ್ಬರ; ಆಡಂಬರ: ನೆಟ್ ನಂಬೊ ನೆಟ್ ನಂಬೊ ಧರಧುರವಿಲ್ಲದೆ ಸಾವ ವೇದಿಗಳಂತೆ (ಬಸವ. ೬೪೫); ಬಿರಿಯಲಬುಜಭವಾಂಡವಿದೆ ಕಪಿವರನ ಕಳಕಳ ದೇವದತ್ತದ ಧರಧುರದ ದೆಖ್ಖಾಳವಿದೆ ಗಾಂಡಿವದ ಬೊಬ್ಬೆಯಿದೆ (ಕುಮಾವ್ಯಾವಿ. ೭-೪); ತುರಗಹೃದಯಧ್ವನಿಯ ಸಿಡಿಲಿನ ಧರಧುರದ ಗರ್ಜನೆಯ . . . ಬಜಿನ ಬರವನು ವಿರಚಿಸುವೊಡೆ ವಿಧಾತೃಗಳವಲ್ಲ (ಕುಮಾವ್ಯಾಉ. ೩-೭೩); ಗಿರಿಯ ಮುತ್ತಿದ ಮುಗಿಲವೊಲು ಹೊಗೆ ಹೊರಳಿಗಟ್ಟಿತು ಮೇಲೆ ದಳ್ಳುರಿ ಧರಧುರದರಲೊಳಬೀಳುತಿದ್ದವು ಕಿಡಿಯ ಚೂಣಿಯಲಿ (ಕುಮಾವ್ಯಾದ್ರೋ. ೧೯-೪೩); ನಿಸ್ಸಾಳಕೋಟಿಯ ಧರಧುರದ ದೆಖ್ಖಾಳದಲಿ ಕಲೆದೋಟಿದನು ಪಾರ್ಥ (ಕುಮಾವ್ಯಾಕ. ೪-೦೯). ೨. ಹೆಚ್ಚಳ; ಅತಿಶಯ; ಆಧಿಕ್ಯ: ಹರೆದ ಬಲ . . . ಪೊರೆವ ಬಹುವಿಧವಾದ್ಯರಭಸದ ಧರಧುರದ ಕಂಧೂಳಿಯಲಿ ಮೋಹರಿಸಿ ಮುಸುಕಿತು ಭೀಮಸೇನನ ರಥದ ಬಳಸಿನಲಿ (ಕುಮಾವ್ಯಾಕ. ೧೯-೭); ಬೆರಳಲಂಬನು ತೂಗಲುರಿ ಘೂತ್ಕರಣೆಯಲಿ ಪಂತಿಸಿತು ಸುಬ್ಬುನ ಧರಧುರದ ಬೆಳುನೊರೆಯ ಲಹರಿಯ ವಿಷದ ಲೋಳೆಗಳ (ಕುಮಾವ್ಯಾಕ. ೨೫-೫); ಹೊಳೆವಡವಿ ಜನಪ್ಯೆದ ಮಧುರಾಪುರಕೆ ಪೋಡುವ ಬಿಲ್ಲ ಹಬ್ಬದ ಧರಧುರದ ಸಂಭ್ರಮವನಾ ಹೊಳಲೊಪ್ಪವನು (ನಿಘಂಗ. ೧೦-೩೪-೦೯). ೩. ತೀವ್ರತೆ; ತೀಕ್ಷ್ಣತೆ: ಬರಬರಲು ರಿಪುಭಟನ ಹೊಯ್ಲುಗಳ ಧರಧುರಕೆ ಕಲಿ ಸಾತ್ಯಕಿಯ ತರಹರಣೆ ತಗ್ಗಿತು ಮಹಿಮೆ ಮುಗ್ಗಿತು ಮಂಜಿದುದಗ್ಗಳಿಕೆ (ಕುಮಾವ್ಯಾದ್ರೋ. ೦೪-೧೦). ೪. ಉಗ್ರವಾದ ಕಾಳಗ; ತೀವ್ರವಾದ ಯುದ್ಧ (?): ಅಸಂಖ್ಯಾತ ನಿವಾತಕವಚರಂ ಧರಧುರದೊಳ್ ತಳತಾಳುಕನಿಕಾಯಮಂ [ಪಾಠಾಂ. ಧುರಂಧರರೋದ್ಯತ್ತಾಳತಳತ್ತಾಳನಿಕಾಯಮಂ] ಸಾಯಕಸಘಾತದಿಂ ಯಮಪುರಕ್ಕೆ ಕಳುಪಿ (ಜಗವಿ. ೧೫-೫ ವ). **ದರದುರ**: ೫. ಶ್ರೇಷ್ಠ; ಅಧಿಕ; ದುರಂಧರ: ಅನು ನಿಮ್ಮ ಭಕ್ತಿಯಲ್ಲಿ ದರದುರನೆಂಬೆ ದಿಟಕ್ಕೆ ಬಂದರೆ ಕಾಣದಂತಪ್ಪಮೊಗ ವಿಕ್ಕುವೆಗರುಡಂಗೆ ಘಟಸರ್ಪನ ತೋಱುವಂತೆ (ಬಸವ. ೩೧೧). [ ? ]

**ಧರಭೋಗಿ** (ನಾ). ೧. ವಿಷವನ್ನುಳ್ಳುದು; ಹಾವು. ೨. ಖಡ್ಗವನ್ನು ಬಳಸುವವನು; ಖಡ್ಗಯುದ್ಧದಲ್ಲಿ ಸಂತೋಷಿಸುವವನು. ೧, ೨: ಜಳನಿಧಿಪೋಲು(ಲ್) ಗಭೀರನಹಿರಾಜನಪೋಲು(ಲ್) ಧರಭೋಗಿ ಚಂದ್ರಮಂಡಳದವೊಲೀ(ಲೀ)ಕ್ಷಣಪ್ರಿಯಂ . . . ಎನುತ್ತೆ ಬಣ್ಣಿಸುತಮಿಪ್ಪುದು ಧಾರಿಣಿ ಚೀಲಗೊಂಡನ (ಕಇ. IV, ೧೧-೩೦; 1121). [ ಸಂ. ಧರಭೋಗಿನ್ ]

**ಧರಸೋಡಿ** (ನಾ). ಹೊಲ ಗದ್ದೆಗಳ ಮೇರೆಯನ್ನು ಗೊತ್ತುಮಾಡುವಾಗ ಅಂಕುಡೊಂಕಾಗಿರುವ ಅಂಚನ್ನು ನೇರವಾಗಿರುವಂತೆ ಅಕ್ಕಪಕ್ಕದ ಭೂಮಿಯ ಭಾಗವನ್ನು ಸರಿಪಡಿಸುವ ಪದ್ಧತಿ: ಧರಸೋಡಿ ಕೊಡುವಾಗ ಹ ಎಂಬಲ್ಲಿ ನ ಎಂಬಲ್ಲಿ ಸಹ ಕಂಪಾಸು ಇಟ್ಟು ಅಂತರ ತೆಗೆದು ಉಳಿದ ಅಂತರದಲ್ಲಿ ಕೂಡಿಸಿಕೊಳ್ಳಬೇಕು. ಅದಕ್ಕೆ ಹೊರಗಿನದು ಧರಸೋಡಿ ಅಂದರೆ ಬಿಟ್ಟುಬಿಡತಕ್ಕದ್ದು (ಭೂಮಿಅ. ೪೭).

[ ←ಮರಾ. ಧರಸೋಡ ]

**ಧರಾಗ್ರ** (ನಾ). = ಧರಣೀತಲ : ಸುರನರರಾಜಕಂ ಸಭೆ ಧರಾಗ್ರಮೆ ಕೂಡೆ ಸಮಗ್ರರಂಗಂ (ನೇಮಿಪು. ೮-೧೬೩) ; ವಿದಿತಮಾಯಮಶ್ರೀಯುಂ ಕೀರ್ತಿಯುಂ ಸದಮಳ ಜ್ಞಾನಾಭಿವೃದ್ಧಿಯುಂ ಒದಗಿ ಬಾಳುತ್ತಿಪ್ಪರವಿರತಮೀ ಧರಾಗ್ರದೊಳು (ಬಸಪು. ೪೮-೩೨). [ ಸಂ. ]

**ಧರಾಚಕ್ರ** (ನಾ). = ಧರಣೀಚಕ್ರ ೧: ಪೆಜ[ನಾ]ವಂ ಧರಾಚಕ್ರಕ್ಕೆಱಿಯಂ ಕೆಳೆಯಪ್ಪವಂ ನೆಱೆ ಯಾರೆಣೆಯೆಂಬನ್ನಂ ಕುಱಿತಬ್ಧಿಗೆ ಬನ್ನಮಂ (ಶವಿರಾ. ೨-೧೨೩) ; ಬೆಸಕೆಯ್ದತ್ತು ಸಮುದ್ರಮುದ್ರಿತಧರಾಚಕ್ರಂ (ಶಂಪಭಾ. ೧-೧೧೦) ; ತಿಱ್ರನೆ ತಿರುಗುವ ಧರಾಚಕ್ರಭ್ರಾಂತಿಯೊಳ್ ತಮಗೆ ಚಿತ್ತಭ್ರಾಂತಿಯಾಗೆ (ಗದಾಯು. ೮-೨೦ ವ). [ ಸಂ. ]

**ಧರಾತಲ, ಧರಾತಳ** (ನಾ). = ಧರಣೀತಲ : ಮಾನಕ್ಕೆ ದೊರಕಲು ಸಂತಸದಿ ಕೊಂಡಧಿಕಸಂಭ್ರಮವಾಂತು ಪರಿತರಲೆಡಹೆ ಅಕ್ಕಿ ಧರಾತಲ [ಪಾಠಾಂ. ಳ]ದೊಳೊಗಲು (ಬಸಪು. ೨೭-೧೭) : ಆ ಸತ್ಕೇಶಚಾಮಯನ ಸಾಂಗಭಾಷೆ ಧರಾತಲ[ಪಾಠಾಂ. ಳ ]ದೊಳುತ್ತುಂಗವಾಯಿತು (ಬಸಪು. ೩೭-೫೮). **ಧರಾತಳ** : ಪಟಿಯ ಧರಾತಳಮಂ ಗುಣದಟಿವನೊಡಂಬಡದ ಕಾಮದಂಗೀಯದದರ್ಕಟಿಪೆ ದೆಸೆಗಳ್ಗೆ ಕೆಮ್ಮನೆ ಮೊಬಗುವಿರೇಂ ಮೊಬಗಿದಂತೆ ಕೊಳ್ವವೆ ಮಟಿಗಳ್ (ಕಾವ್ಯಸಾ. ೪೩೭ ಕೂದ್ರಳ) : ಧರಾತಳಮಂ ಕೊಟ್ಟನಿವಂ ಜಳಾಂಜಳಿಯುಮಂ ನಾಂ ಕೊಟ್ಟೆನಿಲ್ಲ (ಗದಾಯು. ೫-೩೦) ; ಬುಡಸಹಿತ ಬಲುಮರ ಧರಾತಳಕುಡಿದು ಬಿದ್ದವು (ತೊರರಾ. ೧-೧೦-೧೪).

[ ಸಂ. ]

**ಧರಾತಳ** 'ಧರಾತಲ' ನೋ.

**ಧರಾತ್ಮಜ** (ನಾ). = ಧರಣಿಸುತ: "ವಕ್ರಃ, ಅಂಗಾರಕಃ . . . ಧರಾತ್ಮಜಃ – ಈ ೫ ಮಂಗಳನ ಪೆಸರ್" (ಹಲಾಯು. ೯-೪೭). [ ಸಂ. ]

**ಧರಾತ್ಮಜೆ** (ನಾ). = ಧರಣಿಜಾತೆ : ತಿಂಗಳ್ಮನೆಯ ಮಿಗಮೆ. . . ಬರುತಿರೆ ಧರಾತ್ಮಜಾವದನಮಂ ತನ್ನ ಸದನಂಗೆತ್ತು (ಶ್ರೀರಾಮಾ. ೨೩೦-೮೨).

[ ಸಂ. ಧರಾತ್ಮಜಾ ]

**ಧರಾದಾನ** (ನಾ). ಭೂಮಿಯನ್ನು ದಾನವಾಗಿ ಕೊಡುವುದು ; ಭೂದಾನ : ಷೋಡಶಮಹಾದಾನಗಳನ್ನು ಮಾಡಬೇಕೆಂದು ನಿಶ್ಚಯಿಸಿ . . . ಎಲ್ಲವನ್ನೂ ಮಾಡಿದರು. ಅವು ಯಾವವೆಂದರೆ . . . ೧೧. ಧರಾದಾನ ೧೨. ವಿಶ್ವಚಕ್ರದಾನ (ಚಾಮುವಂ. ೯೬). 'ಷೋಡಶದಾನ' ಪರಾ.

[ ಸಂ. ]

**ಧರಾಧರ** (ನಾ). ೧. ಭೂಮಿಯನ್ನು ಹೊತ್ತಿರುವಂಥದು : ಧುರದಗ್ಗಳದ ಗಮನಕೆ ಕರಿಗಳಡೆಗೆಡವು ಧರಾಧರದ [ಪಾಠಾಂ. ದಿಶಾವಳಿಯ, ಧರಾತಳದ, ಧರಾತಳಕೆ] (ತೊರರಾ. ೩-೨೭-೬). ೨. ಪರ್ವತ : ಆಯುಂ ಶ್ರೀಯುಂ ವಿಜಯಮುಮಾಯತಿಯುಂ ನೃಪತಿ ನಿನಗೆ ನಿಜಸಂತತಿಯುಂ ನ್ಯಾಯದೆ ಪೆರ್ಚುವುದಕ್ಕೀ ತೋಯಧಿ ಧರ[ಣೀಧ]ರಾಧರಸ್ಥಿತಿವರೆಗಂ (ಶವಿರಾ. ೩-೨೦೬) ; ಅನ್ಯದೈವಧರಾಧರಾಶನಿ ಅನ್ಯದೇವಾರ್ಣವಕಳಶಭವ (ಬಸಪು ೫೩-೪). 'ಧರಾಧರಧರ' ಪರಾ. ೩. ವಿಷ್ಣು. ೪. ದೊರೆ; ರಾಜ : ಚೌಪಳಿಗೆಗಳೊಳ್ ಧರಾಧರಧುರಂಧರಬಂಧುರರಾಜಕಂ . . . ಅವ್ವಳಿಸಿರೆ (ಶಂಪಭಾ. ೩-೫೩). [ ಸಂ. ]

**ಧರಾಧರಧನ್ವ** (ನಾ). (ಮೇರು) ಪರ್ವತವನ್ನು ಬಿಲ್ಲಾಗಿ ಮಾಡಿಕೊಂಡವನು ; ಶಿವ : ಧನಪತಿಮಿತ್ರ ಗಾತ್ರರುಚಿ ನಿರ್ಜಿತಮಿತ್ರ . . . ಧರಾಧರಧನ್ವ ಶಶಾಂಕಖಂಡಮಂಡನ (ರಾಜಶೇ. ೧೦-೫೯).

[ ಸಂ. ಧರಾಧರಧನ್ವನ್ ]

**ಧರಾಧರಧರ** (ನಾ). ೧. ಬೆಟ್ಟವನ್ನು ಎತ್ತಿ ಹಿಡಿದವನು. ೨. ಭೂಮಿಯನ್ನು ಮೇಲೆತ್ತಿದವನು ; ವಿಷ್ಣು : ೩. ಕೃಷ್ಣ : ದೋರ್ಗರ್ವದಿಂದಾಂತ ವೈರಿ ಧರಾಧೀಶಬಲಕ್ಕೆ ಗಾಂಡಿವಧರಂ ಗಂಗಾಧರಂ ತುಂಗಶಕ್ತಿಧರಂ ವಜ್ರಧರಂ ಧರಾಧರಧರಂ ಶ್ರೀ ಕೀರ್ತಿ ವಿದ್ಯಾಧರಂ (ಪಂಚತಂ. ೮-೬) ; ಸಾಹಸದೊಳ್ ಧರಾಧರಧರಂ ಭುಜವೀರ್ಯ್ಯ ನಿಜಪ್ರತಾಪನನ್ನೋಹದೊಳರ್ಜ್ಜುನಂ . . . ವಿಷ್ಣುನೃಪಾಳನೋಳಾರಿದಿರ್ಪ್ಪವರ್ (ಎಕ. VI, ಕಡೂರು. ೫೧-೧೧. 1169). 'ಗಿರಿಧರ' ಪರಾ.

[ ಸಂ. ]

**ಧರಾಧರಧೈರ್ಯ** (ನಾ). ಬೆಟ್ಟದಂತೆ ಅಚಲವಾದ ಸ್ಥೈರ್ಯವುಳ್ಳವನು : ಗುರುಸನ್ನಿಧಿಯೊಳ್ಮನ್ನಂ ಪರಿಣತಿವಡೆದಿರ್ದ ಸಕಳವಿದ್ಯೆಯನೀಗಳ್ ಪರಿವಿಡಿಗೆಯ್ವಂತೆ ಕಳಾಧರನಾದಂ ಶ್ರೀಧರಂ ಧರಾಧರಧೈರ್ಯಂ (ಮಲ್ಲಿಪು. ೪-೧೩೪). [ ಧರಾಧರ + ಧೈರ್ಯ ]

**ಧರಾಧರೇಂದ್ರ** (ನಾ). ದೊಡ್ಡ ಬೆಟ್ಟ; ಪರ್ವತಗಳಲ್ಲಿ ಶ್ರೇಷ್ಠವಾದುದು: ದುರ್ಬ್ಬಾರಾರಿಧರಾಧರೇಂದ್ರಕುಳಿಶಂ ಶ್ರೀವಿಷ್ಣುಭೂಪಾಳನಾದ್ದರ್ಗ್ಬರ್ಟ್ಟಲ್ ಸೆಡೆದೋಡಿ ಪೋಗಿ ಭಯದಿಂದಾಬಂದನೀಬಂದನೆಂದುರ್ಬ್ಬೀಪಾಳರ ಕಣ್ಗೆ ಲೋಕವನಿತುಂ ತದ್ರೂಪವಾಗಿರ್ಪ್ಪುದುಂ ಸರ್ಬ್ಬಂ ವಿಷ್ಣುಮಯಂ ಜಗತ್ತೆನಿಪುದೇಂ ಪ್ರತ್ಯಕ್ಷಮಾಗಿರ್ದ್ದುದೋ (ಎಕ. V, ಬೇಲೂರು. ೦೭೧-೦೯ : ಸು. 1160). [ ಧರಾಧರ + ಇಂದ್ರ ]

**ಧರಾಧಾರ** (ನಾ). ೧. ದೊರೆ ; ರಾಜ : ಪಾರಾವತಮಂ ಗಿಡಿಗಂ ಭೋರೆಂದೋರಂತೆ ಮುಟ್ಟೆ ಬೆನ್ನಟ್ಟೆ ಧರಾಧಾರನೆಯನ್ನಂ ಕಾವುದಕಾರಣಮಿಾ ಶ್ಯೇನಕೋಪಮುಪಗತಪಾಪಾ (ಶಾಂತಿಪು. ೯-೮೪). ೨. ಬೆಟ್ಟ ; ಪರ್ವತ. 'ಧರಾಧಾರಧರ್ಮ' ಪರಾ. [ ಸಂ. ]

**ಧರಾಧಾರಧರ್ಮ** (ನಾ). ೧. (ಮೇರು)ಪರ್ವತವನ್ನೇ ಬಿಲ್ಲನ್ನಾಗಿ ಮಾಡಿಕೊಂಡವನು ; ಶಿವ. ೨. ಬಹುಜನರು ಆಶ್ರಯಿಸಿರುವ ಶೈವಧರ್ಮದಲ್ಲಿ ನಿರತನಾದವನು ; ಬಸವೇಶ್ವರ. ೧, ೨ : ಶ್ರೀಶೈಲಾದಿಪ್ರಸಿದ್ಧಂ . . . ಧನದಮಿತ್ರಂ ಧರಾಧಾರಧರ್ಮಂ (ರಾಜಶೇ. ೧-೧).

[ ಸಂ. ಧರಾಧಾರಧರ್ಮನ್ (ಧರಾಧಾರ + ಧರ್ಮ + – ) : (ಧರಾ + ಆಧಾರ + ಧರ್ಮ + – ) ]

**ಧರಾಧಿಪ** (ನಾ). = ಧರಣಿಪ : ಪುಣ್ಯಕಥೆಯಂದದೆ ಭಾವಿಸಿ ಕೇಳ್ವುದಾಧರಾಧಿಪನ ಶರನ್ನಿಶಾಸರಕಳೋಜ್ವಳಮಂ ಜಸಮಂ ಜಗಜ್ಜನಂ (ಚಂದ್ರಪು. ೨-೬) : ಧರಾಧಿಪನತುಳಹರುಷದ ತೊನಲಿಸಲಿ ಹೊದಱಿದ್ದು . . ನುಡಿದನು (ತೊರರಾ. ೧-೫-೧೦) ; ಸಂತಾನಕಾಮಿ ಧರಾಧಿಪಂ . . ಪುತ್ರಾಭಿವಾಂಛೆಯಾ ಸಮಾಧಿಯೊಳ್ ತಾನಿರಲ್ (ಶ್ರೀರಾಮಾ ೧೨-೩೦೬).

[ ಸಂ. ]

**ಧರಾಧಿಪತಿ** (ನಾ). = ಧರಣಿಪ : ತದ್ಧರಾಧಿಪತಿ ತನ್ಮುನಿನಾಥರ ಪಾದಪದ್ಮದೊಳ್ ಬಿಟ್ಟಿಟ್ಟು (ನೇಮಿಪು. ೨-೨೪) ; ಬರೆ ಬಳವಾ ಧರಾಧಿಪತಿ ಕಾಲನದಾಟಿಯ ಮೂಲಕರ್ತೃವೀ ನರಪತಿಯೆಂಬಿನಂ ನಡೆದು (ಮುಹಾನೇ. ೫-೮೦).

[ ಸಂ. ]

**ಧರಾಧಿಪತ್ಯ** (ನಾ). ಭೂಮಿಯ ಒಡೆತನ : ಧರಾಧಿಪತ್ಯಪತಿಯಾಗದವಂ ಧರಣೀಶಪುತ್ರನೇ (ಮುಹಾನೇ. ೪-೩೪) ; ತಂದಳು ಮತ್ತೆ ವಲ್ಕಲವ ವನನಿವಾಸಧರಾಧಿಪತ್ಯದ ಜನಪತನದುಡುಗೊಱೆಯಿದೀಗೆಂದೆನುತ (ತೊರರಾ. ೨-೩-೪೫). [ ಸಂ. ]

**ಧರಾಧೀಶ** (ನಾ). = ಧರಣಿಪ : ಈಬಂದಂ ಧರಾಧೀಶನೆಂಬರವಂ ಪೊಂಪುಟ್ಟಿಪ್ಪೋಗೆ (ಆದಿಪು. ೧೨-೧೨೬) ; ಚಂಪಾಪುರದ ಧರಾಧೀಶನಪ್ಪ ಸೂರ್ಯವರ್ಮಹಾರಾಜನ ಸುತಂ ಸಾಮಾನ್ಯಲ್ಲೆಂಬುದುಂ (ಮಹಾನೇ. ೯-೪೫ ವ). [ ಸಂ. ]

**ಧರಾಧೀಶ್ವರ** (ನಾ). = ಧರಣಿಪ : ಸ್ತಿಮಿತಸಾಗರ ಧರಾಧೀಶ್ವರನವಿನಶ್ವರ ಸುಖಾನುಭವನಿರತಂ (ಶಾಂತಿಪು. ೧-೭೩ ವ) ; ಧಿಗಿಲೆಂದುದು ಧರಾಧೀಶ್ವರನ ತಂದೆಯ ಹೃದಯದಲಿ (ಕುಮ್ಯಾಕ. ೧-೨). [ ಸಂ. ]

**ಧರಾಧ್ರ** (ನಾ). = ಧರಾಧರ ೨ : ಪ್ರತಾಪಮಿನನಂ ಘನಧೈರ್ಯಗುಣಂ ಧರಾಧ್ರಮಂ . . . ಗೆಲ್ದು ತೋಱದಾ ಭೂಪನ ಖಡ್ಗವೊಂದೆ ಸಲೆ ಗೆಲ್ದುದೆ ವೈರಿನರಾಧಿನಾಥರಾ (ರಾಜಶೇ. ೩-೭). [ ಸಂ. ]

**ಧರಾನಂದನೆ** (ನಾ). = ಧರಣಿಜಾತೆ : ಧರಾನಂದನೆಯ ಪಾಣಿಗ್ರಹಣದುಜ್ಜುಗದನಿತ ಪೇಳ್ದಿಟ್ಟಱಸಿದನು ಮೇಲಣ ಮಹೋತ್ಸವವ (ತೊರರಾ. ೦-೦೬-೮). [ ಸಂ. ಧರಾನಂದನಾ ]

**ಧರಾಪುತ್ರಿ** (ನಾ). = ಧರಣಿಜಾತೆ : ಮಂತ್ರದಿಂ ಮಾಡಿನಿಂದೊಬ್ಬರೊಬ್ಬರ ಕಾಡಿ ಕರಬಿಂದೆ ಬಂದರಿಲ್ಲಿಗೆ ಧರಾಪುತ್ರಿಯಂ ಕೈವಿಡಿಯ (ತ್ರೀರಾಮಾ. ೪೦-೩೭೨). [ ಸಂ. ಧರಾಪುತ್ರೀ ]

**ಧರಾಭಾಗ** (ನಾ). ಭೂಮಿ ; ನೆಲ : ಆ ಮರುತಾತ್ಮಪ್ರಭವಂ ಮರುಜ್ಜವದಿನೆಯ್ತಂದುದ್ಧತಂ ಕೌರವೇಶ್ವರನೂರುದ್ವಯಮಂ ಗದಾಪರಿಘದಿಂ ಪೊಯ್ಯಲ್ ಧರಾಭಾಗದೊಳ್ ಗಿರಿ ಬೀೞ್ವಂತಿರೆ ಬಿೞ್ದಂ (ನೇಮಿಪು. ೧೨-೨೦೨). [ ಸಂ. ]

**ಧರಾಭಾರ** (ನಾ). ಆಡಳಿತದ ಹೊಣೆ ; ರಾಜ್ಯಭಾರ : ನೀನೆ ಜಟ್ಟಿಗನೈ ಮುನ್ನಿನೊರಂಟುವೇಡ ಮಗನೇ ಕೈಕೊಳ್ ಧರಾಭಾರಮಂ (ಪಂಪಭಾ. ೧-೮೦) ; ನಿನಗಸ್ಮದ್ವಚನಂ ವಿಧೇಯಮಪ್ಪುದಱಿಂ ಕೈಕೊಳ್ ಧರಾಭಾರಮಂ (ಪಂಪರಾಮಾ. ೬-೮೬) : ಸಂಸಾರಕ್ಕೆ ಪೇಸಿ . . . ಅರಿಂಜಯಂಗೆ [ರಾಜ್ಯಾಭಿಷೇಕಂ ಮಾಡಿ] ಧರಾಭಾರಮನೊಪ್ಪಿಸಿ (ಧರ್ಮಾಮೃ. ೪-೨೬೯). [ ಸಂ. ]

**ಧರಾಮಂಡಲ, ಧರಾಮಂಡಳ** (ನಾ). ಧರಣಿಮಂಡಲ; ಭೂಮಂಡಲ; ಪೃಥ್ವಿ : ಮುಂ ಕೋಟ ಮಂದಿ ಕುದುರೆಗೆ ಧರಾಮಂಡಲಂ ಸಂಕುಲದ ವಾದ್ಯಧ್ವನಿಗೆ ದಿಶಾಮಂಡಲಂ . . . ಸಂಕೋಚಮೆನೆ ಬಂದು ಪಿಡಿದು ಪಾರ್ಥನ ತುರಗಮಂ ಕಟ್ಟಿ ಬಳಸಿ ಪದ್ಮವ್ಯೂಹಮಾಗಿ ನಿಂದಾರ್ದುದಾ ಸೇನೆ ನಲಿದು (ಜೈಮಿಭಾ. ೧೨-೯). **ಧರಾಮಂಡಳ** : ಅಕ್ಕಣನ ಸುತಂ ಸಾಸ್ತನೊಳಕ್ಕಂ ದೊರೆ ಚಾರುದತ್ತ ಬಲಿ[ಸಿ]ಬಗುತ್ತಂ ಏಕ್ಕ ನರನಾತನಾರ್ಕ್ಕೆ[ರ್ರ]ಗಕ್ಕುಮೆ ದೊರೆಯಾಗಲೀ ಧರಾಮಣ್ಡಳದೊಳ್ (ಸೌಇಇ. XX, ೫೫-೩೪ ; 1081) [ ಸಂ. ]

**ಧರಾಮಂಡಳ** 'ಧರಾಮಂಡಲ' ನೋ.

**ಧರಾಮರ** (ನಾ). = ಧರಣಿಸುರ: ಚಾರಿತ್ರಶುದ್ಧರ್ ಧರಾಮರರೀ ಬ್ರಾಹ್ಮಣರೆಂದು ಕೊಂಡುಕೊಂಡಾ ಷಟ್ಖಂಡಭೂಮಂಡಲೇಶ್ವರನೋರಂತೆ ನೆಗೞ್ಚಿಕೊಡೆ ನೆಗೞ್ದತ್ತ್ತಂ ದ್ವಿಜನ್ಮಾನ್ವಯಂ (ಆದಿಪು. ೧೫-೨೧) : ಪೊಸವ ಧರಾಮರರ ಪರಕೆಯ ರವಂಗಳಿಂ (ಅಜಿಪು. ೪-೭) ; ಧಾಮನಾಮಧೇಯಗ್ರಾಮದೊಳಿರ್ಪಂ ಧರಾಮರಂ ವಿಮುಂಚಿಯೆಂಬಂ (ಪಂಪರಾಮಾ. ೬-೩೨ ವ) ; ಧರಾಮರರಂ ಕನಿಷ್ಠಕುಲದ ಮನುಜರಿಗೆ ಸೋಂಕಲಾಗದಿದೆಂಬುದೊಂದುಂಟೇ (ಬಸವು. ೫೫-೩೫). [ ಸಂ. ]

**ಧರಾಮರತ್ವ** (ನಾ). ಬ್ರಾಹ್ಮಣ್ಯ ; ಬ್ರಾಹ್ಮಣನಾಗಿರುವಿಕೆ : ಪಡೆಯಬಾರದ ದಿವ್ಯಮಪ್ಪ ಧರಾಮರತ್ವಮನವ್ವ ನೀಂ ಪಡೆದು ಮತ್ತದನೊಲ್ಲದಿಲ್ಲಿಗೆ ವಂದು . . . ಪೊರ್ದಿದ್ದೆ ಜಿನದೀಕ್ಷೆಯಂ (ಧರ್ಮಾಮೃ. ೦-೬೬). [ ಸಂ. ]

**ಧರಾಮರಪತಿ** (ನಾ). ೧. ಭೂಮಿಗೆ ಇಂದ್ರನಂತಿರುವವನಂ ; ದೊರೆ ; ರಾಜ : ಇರೆ ಚಂದ್ರಾ ತೊಲೆಯೊಳ್ ಹಿಮಕಿರಣಸುತಾದಿ ಗ್ರಹತ್ರಯಂ ನೋಡೆ ಧರಾಮರಪತಿ (ಜಾತಕ. ೨೦-೭). ೨. ಶ್ರೇಷ್ಠನಾದ ಬ್ರಾಹ್ಮಣ : ಕಮಂಡಲು ಪಳಚ್ಚನೆಸೆದಿರ್ದುದು ಶುದ್ಧಾಂತಃಕರಣೋಪಾಧ್ಯಾಯಾಂತೇವಾಸಿಯುಪೊಲಾಧರಾಮರಪತಿಯಾ (ಅನಂಪು. ೨-೪೪). [ ಸಂ. ]

**ಧರಾರುಹ** (ನಾ). ಮರ ; ವೃಕ್ಷ : ಪೆಡೆಯೆತ್ತಿ ನಲಿವ ನಾಗಂಗಳಂ ಕೊನೆಗೊಂಬುಗಳೊಳ್ ತಾಳ್ದು . . . ಮಾಣಿಕ್ಯದ ಮರಂಗಳಂತಿರಂದಂಬೆತ್ತ ಚಂದನಧರಾರುಹಂಗಳಿಂ (ಕಬಕಂ. ೩-೩೫ ವ). [ ಸಂ. ]

**ಧರಾವರ** (ನಾ). ರಾಜ ; ದೊರೆ : ಅಂತು ಬಂದ ನಾರದನನಾದರದಿಂದಾ ಧರಾವರಂ ಸಮುಚಿತಾಸನದೊಳಿರಿಸಿ (ನೇಮಿಪು. ೧೧-೬೮ ವ). [ ಸಂ. ]

**ಧರಾವರೆ** (ನಾ). ಶ್ರೇಷ್ಠವಾದ ಭೂಮಿ : ಪಲಕಾಲಂ ಭರತಧರಾವರೆಯೆಲ್ಲಂ ಭೋಗಭೂಮಿಯಾಗಿರೆ . . . ಭೋಗಭೂಮಿಜರ್ ಸುಖದಿನಿರಲ್ (ಸಮುತ. ೨-೯). [ ಸಂ. ಧರಾವರಾ ]

**ಧರಾವಲಯ, ಧರಾವಳಯ** (ನಾ). = ಧರಾಮಂಡಲ: ಅಡಿದಳಿರ್ಗೆ ಧರಾವಲಯಂ ಕಡುವೆಟ್ಟತ್ತಾಗೆ ನಡೆಯಲಱಿಯದೆ ಮನುಜರ್ ಸೆಡೆಯೆ ಹಯಾದಿಗಳಿಂದಂ ನಡೆಯಿಸಿದಂ ಕಲಿಸಿ ವಾಹನಾರೋಹಣಮಂ (ಪಂಪರಾಮಾ. ೧-೬೬). **ಧರಾವಳಯ** : ಅಂತು ನಿರಂತರಂ ಧರಾವಳಯಮೆಲ್ಲಂ ಬಲಮಯಮಾಗೆಯುಂ ... ಅಗುರ್ವಾಗಿ ನಡೆಯೆ (ವರ್ಧಮಾ. ೮-೫೧ ವ) ; ಧರಾವಳಯಮಂ ಪ್ರಚಂಡಭುಜದಂಡದೊಳ್ ತಾಳ್ದಿದಂ (ಮಲ್ಲಿಪು. ೩-೧೨) ; ಶೂರತ್ವದೊಳೀ ಧರಾವಳಯದೊಳ್ ವಿಭು ಕೇಶವರಾಜನೊಪ್ಪುವಂ (ಸೌಇಇ. XX, ೨೪೮-೩೪ ; 1228) ; ಧರಾವಳಯಪೂಜಿತನಾ ಜಿತಶತ್ರುಭೂಭುಜಂ ಮಗಳ್ದಿರುಮನಳಿಯನುಮಂ ಮುಂದಿಟ್ಟು ಪುರಮನರಮನೆಯುಮಂ ಪೊಕ್ಕು (ಮಹಾನೇ. ೪-೫೮). [ ಸಂ.]

**ಧರಾವಲ್ಲಭ** (ನಾ). = ಧರಣಿಪ : ಆ ಧರಾವಲ್ಲಭಂ ಮಂಥರೆಯ ಭೀಷಣೈಕಾಂತತೆಗೆ ಬಗೆಗರಗಿ (ತ್ರೀರಾಮಾ. ೨೩-೭೦೪). [ ಸಂ. ]

**ಧರಾವಳಯ** 'ಧರಾವಲಯ' ನೋ.

**ಧರಾವಿಭಾಗ** (ನಾ). ಭೂಭಾಗ ; ದೇಶ : ಪನ್ನಗಕೇತನಂಗೆ ಧರಾವಿಭಾಗಮನಿತ್ತು . . . ಬನ್ನಮಿಲ್ಲದೆ ಬಾೞ್ವುದೇಂ ಪುಟಮಾನಸಂಗೆನಗಕ್ಕುಮೇ (ಪಂಪಭಾ. ೯-೧೬). [ ಸಂ. ]

**ಧರಾಸುತ** (ನಾ). = ಧರಣಿಸುತ. [ ಸಂ. ]

**ಧರಿತ್ರಿ** (ನಾ). ೧. ನೆಲ ; ಭೂಮಿ ; ಪೃಥ್ವಿ : "ಸ್ಥಿರ ಧರಣಿ ಧಾತ್ರಿ ಮೇದಿನಿ ಧರಿತ್ರಿ ಧರೆಯವನಿ ಪೃಥ್ವಿ . . . ಭೂಮಿ ಭೂ ಗೋತ್ರ ನೆಲಂ" (ವಸ್ತುಕೋ. ೨೬-೧) ; ಧರಿತ್ರಿಯಂ ಜೀಯನೆ ಬೇಡಿಕೊಳ್ಳದೆ ವಿರೋಧಿನರೇಂದ್ರರನೊತ್ತಿಕೊಂಡುಂ (ಪಂಪಭಾ. ೧-೧) ; ನಿನಗಾರ್ ದೊರೆ ಮಾನವರೀ ಧರಿತ್ರಿಯೊಳ್ (ಪುಷ್ಪಪು. ೮-೬೬) ; ವಿರಹ ವಿಸ್ಮೃತಿ ಕೇವಳಮೋ ಧರಿತ್ರಿಯೊಳ್ (ನಳಚಂ. ೬೩); ಅವಗೆ ಧರಿತ್ರಿಯೊಳಗೆಣೆಯಾವನ್ಯ ಭೂಪಾಲ (ಕುಮ್ಯಾಅ. ೩-೬೩). ೨. ಜನ : ಮಗನೆಂಬಂತು ಧರಿತ್ರಿ ನಿನ್ನನುಜರಂ ಕೈಕೊಂಡು ಮುಂ ಪೊಣ್ದು ನನ್ನಿಗೆ ಬನ್ನಂ ಬರಲೀಯದಾರ್ತಸಗಿದೀ ವಿಖ್ಯಾತಿಯುಂ ಕೀರ್ತಿಯುಂ ಮುಗಿಲಂ ಮುಟ್ಟಿದುದಲ್ತೆ (ಪಂಪಭಾ. ೧-೮೧). [ ಸಂ. ಧರಿತ್ರೀ ]

**ಧರಿತ್ರೀಜಾತ** (ನಾ). = ಧರಾರುಹ : ಆತಪಂ ಪಿರಿದಾದಡಂ ಸಂಪ್ರೀತಿಯಲಿ ಬಂದೇಱಿದಡೆ ಚಂದ್ರಾತಪದೊಳಿರಿಸುವ ಧರಿತ್ರೀಜಾತ ಜಾತಿಗಳ (ಬಸವು. ೧೯-೫೯). [ ಸಂ. ]

**ಧರಿತ್ರೀತಳ** (ನಾ). ಭೂಲೋಕ ; ಭೂಮಿ : ಅಪ್ರಮಿತಮುನಿಮಾಲೆಯೊಳ್ ವರ್ಧಮಾನಮುನಿ ನೆಗೞ್ದನೀ ಧರಿತ್ರೀತಳದೊಳ್ (ಸುಕುಮಾ. ೧-೨೪). [ ಸಂ. ಧರಿತ್ರೀತಲ ]

**ಧರಿತ್ರೀತಿಳಕ** (ನಾ). ಭೂಲೋಕಕ್ಕೆ ತಿಲಕದಂತೆ ಭೂಷಣಪ್ರಾಯ ವಾದಂದು: ಆ ಕುರುಜಾಂಗಲವಿಷಯಮಹೀಕಾಂತೆಗೆ ಪೊಸತೆ ಸವೆದ ಮುತ್ತಿನ ಮುಡಿ ಧಾತ್ರೀಕರ್ಣಪೂರವುವನಿಸ್ತ್ರೀಕರಲೀಲಾಂಬುಜಂ ಧರಿತ್ರೀ ತಿಳಕಂ (ಶಾಂತಿಪು. ೬ ೧೩೮). [ಸಂ. ಧರಿತ್ರೀತಿಲಕ]

**ಧರಿತ್ರೀಧವ** (ನಾ). = ಧರಣಿಪತಿ: ಅವರವರ ಮತಗಳ ಧರಿತ್ರೀಧವ ನೊರೆಯಲು (ಶಂಕರವಿ. ೧೧-೬). [ಸಂ.]

**ಧರಿತ್ರೀನಾಥ** (ನಾ). = ಧರಣಿಪ: ಕುಸುಮದತ್ತಂಗೆ ಧಾತ್ರೀನಾಥ ಪದವಿಯ ಕೊಟ್ಟು ನರಪತಿ ಬಟಿಕ ದೀಕ್ಷೆಯಂ ಕೈಕೊಂದು (ಯಶೋಧ. ೪-೭೬). [ಸಂ.]

**ಧರಿತ್ರೀಪಾಲ, ಧರಿತ್ರೀಪಾಳ** (ನಾ). = ಧರಣಿಪ: ಕೇಳು ಜನಮೇಜಯ ಧರಿತ್ರೀಪಾಲ ನಿಮ್ಮಯ ಪೂರ್ವವೃಥ್ವೀಪಾಲರಿದ್ದರು ಸುವ್ರತದಿಂದ ವಿರಾಟನಗರಿಯಲಿ (ಕುಮಾವ್ಯಾ. ೩-೧). **ಧರಿತ್ರೀಪಾಳ**: ವನದೇವಂ ಕಂಡೋಲಗಿಸಿದಂ ಧರಿತ್ರೀಪಾಳಂಗೆ ಸಗೇಂದ್ರುಸಂತವಸ್ತೂತ್ಕರಮಂ (ವರ್ಧಮಾ. ೯-೬೩). [ಸಂ.]

**ಧರಿತ್ರೀಪಾಳ** 'ಧರಿತ್ರೀಪಾಲ' ನೋ.

**ಧರಿತ್ರೀಮಿತ್ರ** (ನಾ). ಇಡೀ ಭೂಲೋಕಕ್ಕೆ ಗೆಳೆಯನಂತಿರುವವನು; ಲೋಕಕ್ಕೆ ಉಪಕಾರಿಯಾದವನು: ಎಲ್ಲಿ ಬಂದುದೊ ತುರಂಗಂ ಕೇಳಿಯೇಕಾದುದೀ ಶಿಶುವಿಂತೇಕಳದತ್ತೊ . . . ಕೋಪಿಸಿ ಚೋಳಾಧಿಪನೇಕೆ ಕೊಲ್ವನೊ ಧರಿತ್ರೀಮಿತ್ರನಂ ಪುತ್ರನಂ (ರಾಜಶೇ. ೦೪-೪೬). [ಸಂ.]

**ಧರಿತ್ರೀರಮಣ** (ನಾ).=ಧರಣಿಪ: ಪತ್ರೀಂದ್ರವಾಹನಂ ಬಳಿಕ್ಕೆದೆ ಪಾಂಡವ ಧರಿತ್ರೀರಮಣರಿದಿರ್ಗೆಂಡರು (ಜೈಮಿಭಾ. ೩-೪೭). [ಸಂ.]

**ಧರಿತ್ರೀವಲ್ಲಭ** (ನಾ). = ಧರಣಿಪ: ರತ್ನಕಂಬಲಮುನು ಧರಿತ್ರೀವಲ್ಲಭಂ ಮುಹುರ್ಮುಹುರಾಲೋಕನಕುತೂಹಳಚಿತ್ರನಾಗಿ ವಿಸ್ಮಯಂಬಟ್ಟು (ಸುಕುಮಾ. ೧೦-೧೦೫ ವ). [ಸಂ.]

**ಧರಿತ್ರೀಸ್ತುತ್ಯ** (ನಾ). ಲೋಕದ ಹೊಗಳಿಕೆಗೆ ಪಾತ್ರನಾದವನು; ಲೋಕಪೂಜ್ಯ: ಸೂರ್ಯಮಿತ್ರಪ್ರಭೃತಿಪತಿಗವಧಿಜ್ಞಾನವೊಪ್ಪಿರ್ದುದಂ ಕಂಡು ಧರಿತ್ರೀಸ್ತುತ್ಯಂ . . . ತುಷ್ಟನಾದಂ ಪರಮಜನಮತಾಂಭೋಜಿನೀ ರಾಜಹಂಸಂ (ಸುಕುಮಾ. ೬-೪೮). [ಸಂ.]

**ಧರಿಯಿಸು** 'ಧರಿಸು' ನೋ.

**ಧರಿಸು, ಧರಿಯಿಸು** (ಕ್ರಿ). ೧. (ಕೈಯಲ್ಲಿ) ಹಿಡಿ; ತೆಗೆದುಕೊಳ್ಳು: ಹರಕೆಯನು ಕೈಕೊಂಡಮಿತವಿಕ್ರಮನಿಪುಧಿಚಾಪಕ್ಷಪಾಣವನು ಧರಿಸಿ ಗಮಿಸಿದನು ಮುನಿಯೊಡನೆ (ತೊರವೆ. ೦-೯-೪೩). ೨. ಹೊರು; ನಿರ್ವಹಿಸು; ಹೊತ್ತುಕೊಳ್ಳು: ರುಂಹರಿ ರುಚಿಗೆ ಸಂದಳು ಧರಿಸಲಾಟದೆ ವೈರಿವಾಹಿನಿಯು (ತೊರವೆ. ೬-೦೭-೦೩). ೩. ತಾಳು; ತಳೆ: ತನುವಿನಲ್ಲಿ ಸುಖವ ಧರಿಸಿಕೊಂಡಡೆ ಆ ತನುವಿಂಗೆ ಕೊಟಿತೆ ನೋಡಾ (ಅವಚಂ. ೯೬-೪೩೫); ಮಧುಸೇಕಮನಾದರಿಸದೆ ವಕುಳಂ ಮುಕುಳಿಮನರಲಂ ಧರಿಸಿದುದು ಕೊಂಬುಕೊಂಬಿನೊಳೆಲ್ಲಂ (ಚಂದ್ರಪು. ೩-೯೩): ಶಿರದೊಳು ಧರಿಸಿಯವರ ನಿಜಾಜ್ಞೆಯಂ (ಬಸಪು. ೯೮-೩೧); ಬಂಜೆ ಗರ್ಭವ ಧರಿಸುವಳು ಧನಧಾನ್ಯಗೋಧನಸಂಪದಾದಿಗಳು ಭಂತವಾಗಿಹವಾ ಮುನಿಪನಿಹ ಧರಣಿಯಲಿ (ತೊರವೆ. ೦-೩-೬೦); ಪರಮಪವಿತ್ರೋದಕವ ಹಸ್ತದೊಳಾಂತಾ ಶಿರದೊಳು ಧರಿಸಿಕೊಂಡು (ಮೋಹತ. ೬-೪೪); ನಕ್ಷತ್ರಮಯ ರಾತ್ರಿಯಂ ಧರಿಸಿ ಸೂರ್ಯನ ಶೋಭಿಪಂತೆ . . . ಪೊಳೆದುದು ಕಣ್ಗೆ ಮಂಗಳದಮರ ಮೂರ್ತಿ (ಶ್ರೀರಾಮಾ. ೧೩-೩೪೩). ೪. (ಉಡುಪು, ಆಭರಣ ಮೊದಲಾದಂವನ್ನು) ತೊಡು; ಹಾಕಿಕೊಳ್ಳು; ಧಾರಣೆಮಾಡು: ಏಕ ಮುಖದ ರುದ್ರಾಕ್ಷಿಯ ಒಂದನೆ ಪಚ್ಚಿಮುದಲ್ಲಿ ಧರಿಸುವುದಯ್ಯ (ಅವಚ. ೧೮-೪೫); ನೆನೆದು ಭೋಂಕೆನಲೆದ್ದು ರುದ್ರಾಕ್ಷಿಯಂ ಧರಿಸಿ (ಸಂಶಿರ. ೦೯-೭೩): ಮಗುವು ವೇಷವ ಧರಿಸಿ ದೂರದಲಗಲಿ ಹೋಗಲು ತನ್ನ ಚಿತ್ತಕೆ ಧಗೆಯು ದಾವರವಾಯ್ತು (ಕುಮಾರ್ದ್ರೋ. ೬-೬೪); ಧರಿಸಿದನು ನವರತ್ನಖಚಿತಾಭರಣ ದಿವ್ಯಾಂಬರ ಸುಮಾಲ್ಯಸುಗಂಧನಿಕರವನು (ಸಳಕ. ೩-೧೧); ವಿಜುಪ ಕಿರೀಟವುಂಟದನಂದು ಧರಿಸಿತಿಲ್ಲಾಟ ಮನದೊಂದು ಲೀಲೆಯೊಳು (ಭರತ. ೧-೩೪); ಜಡೆಯೆಡೆಯೊಳು ಗಂಗೆಯ ಮುಡಿದಂಡೆ ಯಾಗಿ ಧರಿಸಿದ . . . ಚೆನ್ನ ನಂಜುಂಡನಡಿದಾವರೆಗೆಱಗುವೆನು (ಶಂಸವಿ. ೦-೭); ಇನ್ನಿಬ್ಬರು ಒಳ್ಳೇ ಉಡುವು ಧರಿಸಿದ್ದ ಗಂಡಸರು ಬಂದಿದ್ದರು (ಕಂಗಾಳ್ಯ. ೪೬೩). ೫. ತಿಲಕ, ವಿಭೂತಿ, ಗಂಧ, ಮುದ್ರೆ, ನಾಮ ಮುಂತಾದುವುಗಳನ್ನು ಹಚ್ಚಿಕೊಳ್ಳು, – ಇಟ್ಟುಕೊಳ್ಳು: ನಿಮ್ಮ ರಾಂಧನವ ಧರಿಸಿಪ್ಪ ಉದರಪೋಷಕ ನಾನಯ್ಯಾ (ಬಸವ. ೩೪೦); ಭಸಿತ ರುದ್ರಾಕ್ಷಾದಿ ಮುದ್ರೆಗಳ ನಿರ್ಮಲತೆಯಿಂ ಧರಿಸಿ ಚರಿಸುತ ಚರ್ಮ ದುರ್ಮುದ್ರೆಗಳನೇ . . . ಧರಿಸುವುದುಚಿತವೇ ಹೇಳು (ಬಸಪು. ೩-೨೪೮). ೬. ತೊಡಿಸು; ಮುಂಡಿಸು; ತೊಟ್ಟುಕೊಳ್ಳುವಂತೆ ಮಾಡು: ಕೆಲರು ಹೂವಿನ ಹಾಸಿಗೆಯ ಕೋಮಲೆಗೆ ಸಮೆದರು ಕೆಲರು ಚಿಗುರಿನ ತೊಡವ ಧರಿಸಿದರು[ಶಾಕಾಂ. ನಾನಾ ವಿವಿಧ ಶೈತ್ಯೋಪಚಾರವ ರಚಿಸಿ] (ಸಳಕ. ೦-೪೦). ೭. ಪಡೆ; ಹೊಂದು: ಕೋಲು ಧರಿಸಿದವೆಟಕೆಗಳನೆನೆ ಚಾಳಿಸಿತು ಪಡೆ (ಕುಮಾರ್ದ್ರೋ. ೧-೭೦): ರಕ್ತಜಲದಲಿ ಕರುಳ ಹೂಮಾಲೆಯಲಿ ವೀರರಣಾಭಿಷೇಕವನು ಧರಿಸಿ . . . ಮನದುಬ್ಬರದಲಿದಾಡಿದರೆ ದಿಟ ಕೃತಕೃತ್ಯ ತಾನೆಂದ (ಕುಮಾವ್ಯಾ.ಕ. ೮-೩೯); ಲತಾಂಗಿಯ ದಕ್ಷಿಣಹಸ್ತಂ ಧರಿಸಿತು ಪಿರಿದುಂ ಚೆಲ್ವಿಕೆಯಾ (ಜಯಕಾ. ೩-೦೪); ವಿಶೇಷವಾದ್ಯವನಾಂತು ದೊಳ್ಳಡೆ ಬಳಲ್ಕೆಯಂ ಧರಿಸಿ (ಚಬಪು. ೪-೧೧); ಶರ್ಮ ಎಂಬ ಉಪಪದ ವನ್ನು ಬ್ರಾಹ್ಮಣರಲ್ಲದೆ ಅನ್ಯರು ಧರಿಸುತ್ತಿದ್ದಿಲ್ಲವೆಂಬುದನ್ನು ಜ್ಞಾಪಕವಿಡ ಬೇಕು (ಕರ್ಣಾಟ. ೭). ೮. (ವ್ರತ ಮೊದಲಾದುವನ್ನು) ಕೈಕೊಳ್ಳು; ಆಚರಿಸು: ಪಾಶುಪತ ಸುವ್ರತವ ಧರಿಸಿದುದಾ ಸುಪರ್ವಸ್ತೋಮ (ಕುಮಾವ್ಯಾ.ಕ. ೬-೩೩). ೯. ತಡೆ; ತಡೆಹಿಡಿ; ನಿರೋಧಿಸು; ನಿಲ್ಲಿಸು: ವರನದಿಗಳಲಿ ಮುಳುಗಿ ಮೂಗಿನ ಬೆರಳಲೂರ್ಧ್ವಶ್ವಾಸವವನ ಧರಿಸಿ ಕಾಲತ್ರಯಜಪಾನುಷ್ಠಾನಹೋಮದಲಿ . . . ನೀಮಾಚರಿಸುವುದು (ಕುಮಾವ್ಯಾ.ಕ. ೧೧-೬೦). ೩, ೯: ಶಶಿರವಿಗಳ ನೆಱೆ ಧರಿಸಿ ಸಂತೋಷದೆ ಪಶುಪತಿಯಂತೆ ರಾಜಿಸುತ . . . ರಂಜಿಸಿದುದಾ ಬನ ದೊರೆಯಂತೆ (ಶಂಸವಿ. ೩-೩೦). ೧೦. ಒಳಕೊಳ್ಳು; ಒಳಗೊಂಡಿರು: ಕ್ಷೀರಾಬ್ಧಿ ಹರಿಯ ಧರಿಸಿಕೊಂಡಿಹುದು (ಶಂಸವಿ. ೩-೯೨). ೧೧. ಆಧಾರವಾಗು; ಆಸರೆಯಾಗು: ಅಗ್ನಿ ವಾಯುವ ಧರಿಸಿ ವಾಯು ಆಕಾಶವ ಧರಿಸಿ ಆಕಾಶ ಅಪ್ಪುವ ಧರಿಸಿ (ಮೋಕ್ಷಮಾ. ೩-೩). **ಧರಿಯಿಸು**: ೨. ಪಲ ರಾದರಿಸಿದ ಧರಣೀಭರಮಂ ಧರಿಯಿಸಿದಂ ಪ್ರತಿಮನಂಬನಪ್ರತಿಮಬಲಂ (ಜಂಪಭಾ. ೦-೩೪); ಧರಿಯಿಸಿ ಮಂದರಮಂ ಕೂರ್ಮರೂಪದಿಂ (ಜಗವಿ. ೮-೮೩); ಕಡು ಸೊಗಯಿಸುವೀ ಕುಸುಮದ ಫಲಮೇ ಪೊಡವಿಯನೆಲ್ಲಮ ನೊಂದೇ ತೋಳೊಳ್ ಗಡಣದಿ ಧರಿಯಿಸುವದಪ್ಪುದು ನಿಶ್ಚಯಂ (ಜಯಕಾ. ೩-೪೭). ೩. ಪರಮಜಿನೇಂದ್ರವಾಣಿಯ ಸರಸ್ವತಿ ದೇಜದು ಪೆಣ್ಣ ರೂಪಮಂ ಧರಿಯಿಸಿ ನಿಂದುದಲ್ತು (ಆದಿಪು. ೧-೯); ಹರಿ ಪರ್ವಜಳನುವಂ ಸಂಹರಿಸ ಲೊಡಂ ಜೈತ್ರಚಾಪಮಂ ಜಿನಚಂದ್ರಂ ಧರಿಯಿಸಿದಂ (ಶಾಂತಿಪು. ೧೧-೧೩೫); ಮಲವಮಂ ಧರಿಯಿಸಿ ನಾಣಂ ತೊಲಗಿಸಿ ನಿರ್ಗ್ರಂಥವಿರ್ದು (ಧರ್ಮಾಮೃ. ೦-೦೦೩); ಎಟ್ಟ ಸುಟ್ಟುರಯವೊಳಪ್ಪ ದರ್ಪಮನುಪಾರ್ಜಿಸುವಲ್ಲಿ ನಿಜಾಭಿ ಮಾನಮಂ ಧರಿಯಿಸುವಲ್ಲಿ ಚಾದಗೆಪೊಲಪ್ಪುದು ತಪ್ಪದಮಾತ್ಮಲಕ್ಷಣಂ (ಕಾವ್ಯಸಾ. ೪೨೨). ೪. ಧರಿಯಿಸಿ ಮಣಿಮೇಖಲೆಯಂ ಕರಮೆಸೆದತ್ತಲಘು ಜಘನೆಯತಿಘನಜಘನಂ (ಜಗವಿ. ೧೧-೦೦೩). ೭. ಆನಿದಜಂದವಂ ಧರಿಯಿಸಲ್ವೇಟ್ಕೆಂದು ನೀಲೋತ್ಪಲಪ್ರಿಯನಿನ್ನುಂ ನೆಱೆ ಮೆರ್ಚಿತು

ಕ್ಯುಯುತಮಂ ತಾನಿರ್ವನೆಭ್ಯಾಸದಿಂ (ಧರ್ಮಾಮೃ. ೩-೦೬೭) ; ಇರೆ ನವಪದ್ಮ ರಾಗಚಷಕಂ ನಿಜಹಸ್ತತಳಾಗ್ರದೊಳ್ ಮನೋಹರಿ . . . ನವೋದಿತಚಂದ್ರ ಬಿಂಬಮಂ ಧರಿಯಿಸಿದಿಂದ್ರುದಿಗ್ವನಿತೆಯಂತೆಸೆದಳ್ ಮಧುಪಾನಗೋಷ್ಠಿ ಯೊಳ್ (ಅಗವಿ. ೦೬-೧೧೩) ; ಇರದಧಿಕಭ್ರಾಂತತೆಯಂ ಧರಿಯಿಸಿ ಕಡುಗಂದಿ ಜಿನುಗುವಾಬಿಡಿಯಾದಂತಿರೆ ತೋರ್ಪೀ ಪರಿಜನಮಂ ಹರಿಸದೆ ಕೋಳೊಡಗೂಡಿ ತೋಜು ಚರಣಾಂಬುಜಮಂ (ಚಂದ್ರಪ್ರ. ೫-೦೩) ; ಈ ಚಿತ್ರದ ಪಡಿರೂಪಂ ಧರಿಯಿಸಿದಾ ಚೆನ್ನಿಗನಲ್ಲದೆಯುಳಿದವರೆನ್ನಯ ಸೋದರರು (ಚಯುಕಾ. ೩-೭೩) ; ಅರಸುಗುಣಂಗಳನತಿಭೀಕರಕಾಂತಂಗಳನವಂ ವಿಯಚ್ಚರರಾಜಂ ಧರಿಯಿಸಿದಂ ಜಳನಿಧಿ ಜಳಚರಚಯಮುಮಂ ರತ್ನಚಯಮುಮಂ ಧರಿಯಿಪ ವೊಲ್ (ಕಾವ್ಯಾವ. ೨೪೯). ೮. ನಿಷ್ಠುರಮಪ್ಪ ಬಾಹ್ಯತಪಮಂ ಧರಿಯಿಸಿದಂ ಸೂರ್ಪನಂದು ವಹಾಯಾತಪಮಂ (ಧರ್ಮಾಮೃ.೬-೩೭) : ಸಮಸ್ತ ಬುಧರ್ಮುದದಿ ಧರಿಯಿಸುವ ರತ್ನತ್ರಯಸುರತ್ನಗಿರಿ ಪೆರ್ಮವಡೆದುದು (ಜಿಳ್ಳಭಾ. ೦-೭). ೧೦. ಧರಿಯಿಸೆ ತನ್ನಾಜ್ಞೆ ವಸುಂಧರೆಯಂ ಧರೆ ತಾಳ್ದ ತನ್ನ ವಿಶದಯಶೋವಲ್ಲರಿಯಂ ವಿದ್ವದ್ಗೋಷ್ಠೀನಿರತಂ ಸುಖಸಂಕಥಾ ವಿನೋದದೊಳಿರ್ದಂ (ಮಲ್ಲಿಪು. ೩-೨೩) ; ಶರಧಿಯ ನದಿಗಳ್ ಧರಿಯಿಸ ಲಾರ್ತಪುವೆ ಕೋಟಿಯ ನೀರಂ ಕೆರೆಗಳ್ ಧರಿಯಿಸಲಾರ್ಪುವೆ ಭಾವಿ ಗಳಿಂದೆನಿಸುವ ಕೋಟಿಯ ನೀರ್ಗಳಂ ತಾಳ್ದುಗುಮೇ (ಧರ್ಮಾಮೃ. ೩-೦೩೪). ೧೨. ಪಾಲಿಸು ; ರಕ್ಷಿಸು : ಧರೆಯಂ ಸದ್ಧರ್ಮಾಶ್ರಯ ಧರೆಯಂ . . . ಆಕಲ್ಪಂ ನೀಂ ಧರಿಯಿಸೆ ತಪಮದೆ (ಚಂದ್ರಪ್ರ. ೯-೪೦).

[ ಧರಣ$_1$ + –ಇಸು$_3$ ]

**ಧರುಮ** 'ಧರ್ಮ$_1$' ನೋ.

**ಧರೆ** (ನಾ). ೧. ನೆಲ ; ಭೂಮಿ ; ಭೂಲೋಕ : "ತಿರೆ ಪೊಡವಿ ರನ್ನವಸಿಖಳ್ ಧರೆಯೆಳೆಯೆಂದೆನ್ನಲಿರದೆ ಧಾರಿಣಿಯಕ್ಕುಂ" (ಕವಿಕಂ. ೯೭) : ಧರೆ ರತ್ನಗರ್ಭವಾದುದು ಸುರರೆಲ್ಲಂ ಹರ್ಷಗರ್ಭರಾದರ್ (ಆದಿಪು. ೭-೨೬) ; ಧರೆ ಕಂಪಂಗೊಳ್ವನಂ ಪೆರ್ವಡೆಗಳೆರಡುಮೋರೊಂದಟಿಳ್ ತಾಗೆ ತೂರ್ಯಸ್ವರಮುಂ . . . ಕ್ಷುಭಿತಜಲನಿಧಿಧ್ವಾನದಂತಾದುದೆತ್ತಂ (ಶಾಂತಿಪು. ೦೩-೩೭) ; ಮಟಿಯಲ್ಲದೆ ಪೊಯ್ಯಾರಿಂ ಬೆಳೆಗುಮೆ ಧರೆ (ಧರ್ಮಾಮೃ. ೧-೪೯) ; ಬಿತ್ತಿ ಬೆಳೆಯಬಹುದೆ ಧರೆಯಿಲ್ಲದೆ (ಬಸವ. ೩೯೮) ; ಧರೆಯುಂ ಮೂಜಡಿ ಮಾಡಿದ ಹರಿ ಬರ್ಪೊಡೆ ತಡವೆ (ಜಗವಿ. ೧೧-೩೨) ; ಧರೆ ಬೀಜಂಗಳ ನುಂಗೆ ಬೇಲಿ ಹೊಲನೆಲ್ಲಂ ಮೇದೊಡಂ (ಸೋಮೇಶ. ೨೯) ; ಕರೆವ ಕಹಳೆಗಳ ಮಹಾರವದೊಳಗೆ ಧರೆ ನಡುಗೆ (ನೇಮಿರ. ೭-೦೫೦) ; ಧರೆಯುಂ ಸ್ಥಿರೆಯೆನಿಸಿದಂ . . . ಅದೇಂ ಸಮರ್ಥನೊ ಪದ್ಮಂ (ಪುಷ್ಪಪು. ೩-೨) ; ಧರೆಯೊಳೀ ಹೊತ್ತಿನಲಿ ನಿನಗೆ . . . ಅದಾವುದು ಕೊಣತೆ (ಕುಮಾವ್ಯಾ. ೩-೭೮). ೨. ಭೂಲೋಕದ ಜನ ; ಜನತೆ : ಧರೆ ಬಣ್ಣಿಸೆ ಸ್ಥೈಯಡಿಯೊಳ್ . . . ಹರಿಹರಭವನಂಗಳನಚ್ಚರಿಯೆನೆ ಮಾಡಿಸಿದಂ (ಶಂಕರಹಂ. ೧೦-೦೩) ; ಧರೆ ಕೊಂಡು ಕೊನೆದು ಬಣ್ಣಿಪುದರಿದೆ (ಧರ್ಮಾಮೃ. ೯-೨೬೩) ; ಧರೆಗಾಚಾರಮನಟಿಪಲ್ ಗುರುವಿಂ ಕೃತವಿದ್ಯನಾದ ಕೃಷ್ಣಂ ಗುರುವಂ ಗುರುದಕ್ಷಿಣೆಯಂ ಬೇಡೆನೆ (ಅಗವಿ. ೬-೧೯) ; ಧರೆಯೊಳಗೆ ಕಡು ಮೂರ್ಖರಿವರಿಬ್ಬರು ಕಣಾ ದುರಿಯೋಧನನು ದಶಶಿರನು (ಕುಮಾವ್ಯಾ. ೩-೦೭). ೩. ರಾಜ್ಯ : ಧರೆಯುಂ ಕುಡುವಂದೆನಗಂ ಗುರು ತನಗಂ ರಾಜ ನಾಮಮಂ ಕೊಟ್ಟೊಡೆ ನೋಡಿರೆ ತನಗೀಗಳ್ ರಾಜಾಧಿರಾಜನೆಂದಿಟ್ಟು ಕೊಂಡನಡಕಿಲ್ಲಿಸರಂ (ಆದಿಪು. ೦೪-೭೪) ; ಕುರುಪತಿಯಂ ವಿಷ್ಣು ಬೇಡಿದುಂ ಧರೆಯರೆಯಂ (ಕವಮ. ೬೪ ಪ್ರಯೋ) ; ಸಕಲ ಧರೆಯ ಜನವ್ಯತಹುದು ಗಡ (ನಿಘಂ. ೧೦-೫೪-೧೯). ೪. ಮಣ್ಣು ; ಧೂಳು : ಬೆಂದ ಮಡಕೆ ಮರಳಿ ಧರೆಯ ಕೂಡಬಲ್ಲುದೆ (ಸಿದ್ಧೇಶ. ೨೦೨-೬೨೦). ೫. ಭೂದೇವಿ : ರಮೆ ಧರೆಯರಿಂದಲಾಲಿಂಗಿತ್ವದಿ ಕಮಲಜಾದಿಗಳಿಂದ ತುತಿಸಿಕೊಳ್ಳುತ ಹೃದಯ ಕಮಲದೊಳಗಿರುವ ಶ್ರೀ ವಿ ಜ ಯ ವಿ ಠ ಲ ನ ಕಂಡೆ (ವಿದಾಕೃ. ೫೭-೫). ೬. [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ : "ಶಶಾಂಕ ಸೋಮಂ . . . ವಸುಧಾತಳಮಾ ಸಿತಕರ ರಸೆ ಧರೆ ಇಳೆ ರೂಪವ್ಯಕಮೊಂದಟ ನಾಮಂ" (ವ್ಯವಹಾ. ೯-೧) ; ೧೧ ೧೧ ದಿ ದಿ ೧೧ ಗುಣದಿ ದಿ ೧೧ ಗುಣನಿಕರಂ ಪುರಗಣಿತಂ ಧರೆ ಧರೆ ಧರೆ ಧರೆ ಧರೆ ಧರೆ ಧರೆ ಧರೆ ಧರೆಯಂ ಪರಿಗಣಿತಂ (ಭಾಸ್ಕರ. ೪೪-೩). ೭. [ಛಂದ] ಅಕ್ಷರ ಗಣಗಳಲ್ಲಿ ಒಂದು ; ಮಗಣ (– – –) : ಆದಿಯ ಮಧ್ಯಾಂತದ ಗುರುವಾದೊಡೆ ಶಶಿ ಸೂರ್ಯ ವಾಯು ಗುರುವಿರೆ ಧರೆ ಮತ್ತಾದಿಯ ಮಧ್ಯಾಂತದ ಲಘುವಾದೊಡೆ ಜಲ ವಹ್ನಿ ಗಗನ ಲಘುವಿಂ ನಾಕಂ (ಛಂದೋಂಬು. ೧-೩೭ ಅದಿಪದ್ಯ) ; ಧರೆ ಜಲ ನಿಶಾಕರಂ ಸುರಪುರಗಣಮುಂ ಶುಭಮನಿಕ್ಕುಂ (ಛಂದೋಂಬು. ೧-೪೪).

[ ಸಂ. ಧರಾ ]

**ಧರೆಪೋಜು** (ನಾ). ಪ್ರಪಂಚವೇ ಸಂತೋಷದಿಂದ ತುಂಬಿರುವಂತೆ ತೋರುವಿಕೆ ; ಅತಿಯಾದ ಸಂತೋಷ : ಸರಗೀಯ ಕೊಂಡ್ಹಂಗ ಸರದಿತ್ತ ನನ ಮನವು ಸರಿಬಾರದವರು ಇದರೀಗಿ ಬಂದರ ಧರೆಪೋಜನ ಮನವು ನೆಲ ನೋಡಿ (ಕನ್ನಜಾ. ೧೦೬). [ ಧರೆ + ಪೋಜು ]

**ಧರ್ತಿ** 'ಧರತಿ' ನೋ.

**ಧರ್ಮ** (ನಾ). ೧. ಜಗತ್ತಿನ ಸ್ಥಿತಿಗತಿಗಳ ದೃಷ್ಟಿಯಿಂದ ದೃಢವಾಗಿ ಹಿಡಿಯಬೇಕಾದುದು,–ನಿಷ್ಠೆಯಿಂದ ಪಾಲಿಸಬೇಕಾದುದು ; ವಾಡಿಕೆ ಯಾಗಿ ಬಂದ ಮತಸಂಬಂಧವಾದ ಅನುಷ್ಠಾನ ; ಕಟ್ಟಳೆ ; ವಿಧಿ ; ಆಚಾರ; ಸಂಪ್ರದಾಯ; ವಿಹಿತವಾದ ಆಚರಣೆ: ಈ ಸಂಸ್ಕೃತಿಯೊಳ್ ಧರ್ಮಾಧರ್ಮಸ್ಥಿತಿಯ ವಲಂ ಸ್ವರ್ಗನರಕಸುಖದುಃಖಕರಂ(ಆದಿಪು. ೫-೭೭): ದಯವಿಲ್ಲದ ಧರ್ಮವದೇವುದಯ್ಯಾ . . . ದಯವೇ ಧರ್ಮದ ಮೂಲ ವಯ್ಯಾ (ಬಸವ. ೨೪೭) ; ಧರ್ಮಮನಾದಿಯನೊದವಿದ ಕರ್ಮದ ಕೇಡಿಂಗೆ ಮೂಲಂ (ಜೀವಸಂ. ೨೦೩-೧) : ಧರ್ಮಂ ಧಾರ್ಮಿಕನಿಂದೆ ನಿಲ್ಪುದು (ಅನಂಪು. ೩-೭೩) ; ಧರ್ಮದಾಧಾರದಲಿಹುದು ಜಗ ಧರ್ಮವುಳ್ಳನಾಶ್ರ ಯಿಸುವುದು ಧರ್ಮವೇ ನೂಕುವುದು ಜನ್ಮಾಂತರದ ಪಾತಕವ . . . ಆ ಧರ್ಮವನು ಬಿಟ್ಟಹುದು ಬದುಕಲ್ಲ (ಕುಮಾವ್ಯಾ. ೪-೫೯) ; ಧರ್ಮವೆಂದರೆ ಮನುಷ್ಯನು ಇಹಪರದೃಷ್ಟಿಯಿಂದ ಸುಖಕ್ಕಾಗಿ ಮಾಡಬೇಕಾದ ಕೆಲಸಗಳು (ಹಿಂದಸಾ. ೦೪೯). ೨. ಪುಣ್ಯ : "ಧರ್ಮಃ, ಪುಣ್ಯಂ, ವೃಷಃ, ಶ್ರೇಯಃ, ಸುಕೃತಂ–ಈ ೫ ಪುಣ್ಯದ ಪೆಸರ್" (ಹಲಾಯು. ೨೦-೦೨೫) ; ಇದನಾರಾರ್ಸ ಲಿಪ್ಪೋರ[ವ]ರ್ಕ್ಕೆ ಧರ್ಮಮಾರಾನಿರಿದಾ ಕಡಿಪ್ಪೋರವರ್ಕ್ಕೆ ಪಾಪ (ಶಾಶಇ. XX, ೯-೨೦.; ಸು. ೭ನೆಯ ಶತ) ; ಧರ್ಮಕೆ ಕೈಬಾರದೀ ಕಾಲ ಪಾಪಕರ್ಮಕೆ ಮನಸೋಲಿಲೋದೀ ಕಲಿಕಾಲ (ಪುರಂದ. ೧-೧೨೦ ಪಲ್ಲವಿ). ೩. ಚತುರ್ವಿಧ ಪುರುಷಾರ್ಥಗಳಲ್ಲಿ ಒಂದು ; ಸದ್ಗತಿಗೆ ಸಾಧನವಾದ ಅನುಷ್ಠಾನ : "ಧರ್ಮಾದಿ ಪುರುಷಾರ್ಥಮಕ್ಕು" (ಮಂಗರಾ. ೭೭-೧೨) ; ಪರಮಸುಖಪದ ಶ್ರೀಧರ್ಮಕಾಮಾರ್ಥಮೋಕ್ಷಸ್ಥಿರವಿಷಯ ವಿಶೇಷಾಖ್ಯಾನವಿಖ್ಯಾತತತ್ತ್ವಂ (ಕವಿರಾ. ೩-೨೦೦) ; ಧರ್ಮಾರ್ಥಕಾಮಮೆಂಬಿವು ಧರ್ಮಾರ್ಥಿಜನಕ್ಕೆ ನೆಱೆದ ನೆರ್ಮಂತವಱೊಳ್ ಧರ್ಮಂ ಪ್ರಧಾನಮರ್ಥಂ ಧರ್ಮಾಂಘ್ರಿಪಫಲಮದರ್ಕೆ ರಸಮದು ಕಾಮಂ (ಆದಿಪು. ೧೦-೫೦) ; ಅರ್ಥದಿಂ ಧರ್ಮವನು ಧರ್ಮ ದಿನರ್ಥವನು ಧರ್ಮಾರ್ಥವೆರಡನು ವ್ಯರ್ಥಕಾಮದಲಳಿಯಲೇ ರಾಜ್ಯಾಭಿ ಲಾಷೆಯಲಿ (ಕುಮಾವ್ಯಾ. ೧-೨೮) ; ಧರ್ಮ ಅರ್ಥ ಕಾಮ ಮೋಕ್ಷವೆಂಬ ಚತುರ್ವಿಧಫಲಪದಂಗಳ ನಾನೊಲ್ಲೆನಯ್ಯಾ (ಅಬಾದೇ. ೧೬೧-೨೨). ೪. ಕರ್ತವ್ಯ : ಮಕ್ಕಳಿಗೆ ಬುದ್ಧಿ ಹೇಳುವುದು ತಂದೆ ತಾಯಿಗಳ ಧರ್ಮ (ರೂಢಿ). ೫. ಯಮರಾಜ: "ಯಮುನರ್ಕಸುತಂ ಧರ್ಮಂ . . . ಅಂತಕಂ ಕೀನಾಶಂ" (ಪಶು.ಕೋ. ೮-೪೦) ; "ಯಮಂ ಧರ್ಮನಂತಕಂ . . . ಕೀನಾಶಂ ಕೃತಾಂತನಕ್ಕುಂ" (ಮಂಗರಾ. ೦೫-೧೦) ; ಧರ್ಮನಂ ಮೊದಲಿಸಲ್

ಪೋದಂ ಪುತ್ರನನಱಸಲ್ಪೋದನೆ ಯಮಪುರಕೆ ಮುತ್ತ್ರಬಾಣಂ ದ್ರೋಣಂ (ಗದಾಯು. ೩-೨೫); ಸುರಪತಿ ದಹನಂ ಧರ್ಮಂ ನಿರುತಿ ವರುಣಾನಿಳನೈಳಬಿಳನೀಶ ಮಹೇಶ್ವರನಿಂದುವೆಂಬ ದಿಕ್ಪಾಳರುಮಂ ದಶದಿಶೆಯೊಳಿರಿಸಿ ಪರಿಕರಸಹಿತಂ (ಚಂದ್ರಪ್ರ. ೧೨-೧೧೩). 'ಧರ್ಮಜ' ಪರಾ. ೬. ಪಾಂಡವರಲ್ಲಿ ಹಿರಿಯ ; ಯುಧಿಷ್ಠಿರ. ೨, ೬ :, ಸುತಧರ್ಮ್ಮಂ ರಿಪುಭೀಮನರ್ಜ್ಜುನಯಶಂ ವಿದ್ವಿಷ್ಟಭೂಭೃದ್ಯಮಂ ... ಭಾಸ್ವತ್ಸುಮಿತ್ರೋದ್ಯಮಂ ಕ್ಷಿತಿಪಾಳಂ ನರಸಿಂಹದೇವಂ (ಎಕ. V, ಬೇಲೂರು, ೧೯೩-೯೪ ; 1161). ೭. ಗುಣ ; ಸ್ವಭಾವ ; ಲಕ್ಷಣ : "ಧರ್ಮಃ, ಸ್ವಭಾವಃ, ಆತ್ಮಾ – ಈ ೩ ಸ್ವಭಾವ" (ಶಬ್ದಾಯು. ೧೨೯-೯೭) : "ಧರ್ಮಂ ಗುಣಸ್ವಭಾವವಾಚಿ" (ವಸ್ತುಕೋ. ೧೨೯-೭೧) ; ಬಗೆಯಲ್ಕೆ ಧರ್ಮದಿಂ ಕ್ಷತ್ರಧರ್ಮವರ್ಗ ವಿರುದ್ಧಂ (ಗದಾಯು. ೩-೩೫) ; ಪೆಱವ ಧರ್ಮಂಗಳನೇತೆಱದಿಂದು ತಱವ ಪೆಱವರೊಳ್ ಪತ್ತಿಸಿ ಕಣ್ದೆಱೆಯೆ ಚತುರೋಕ್ತಿ ಕೃತಿಯೊಳ್ ನೆಱೆದಿರ ಪೇೞ್ವುದು ಸಮಾಧಿಯೆನೆ ಪೆಸರ್ವಡೆಗುಂ (ಕಾವ್ಯಾವ. ೩೦೯) ; ಶೈಶವದಲ್ಲಿ . . . ಉಷಾ ಬೆಳೆಯುತ್ತಿದ್ದಳು. ಬೆಳೆಯುವದೇ ಅವಳ ಧರ್ಮವಾಗಿತ್ತು (ಸಮಜೀ. ೧೨೩೩). ೮. ಬಿಲ್ಲು ; ಚಾಪ : ಸ್ಮರವೈರಿಧರ್ಮವಕ್ಷೋಜ ಸ್ಮರಹರಕಾಂಡಚತುರಾವತಾರವಪ್ರಥ್ಯೇ (ಪ್ರಾಗ್ರಾಸ. ೬-೨೨). ೧, ರ : ಗುಣಮೇಱೆದ ಧರ್ಮಾ ಮಾರ್ಗಣತತಿಯಂ ಲಕ್ಷ್ಯಸಿದ್ಧಿಯೊಳ್ ಕೂಡಿ ನೃಪಾಗ್ರಣಿಯಾನಿಹಸೌಖ್ಯದಿಾದಮ ತಣಿವುದದೆ ಪರಮಸುಖೈಕಕಾರಣಮಲ್ತೇ (ಪುಷ್ಪಪು. ೩-೧೧). 'ದಶಧರ್ಮಧಾರಿ' ಪರಾ. ೯. ನ್ಯಾಯ ; ನೀತಿ : ಧರ್ಮವೆಂಬುದು ಪರಮಪದವಾ ಧರ್ಮವನು ಬಿಟ್ಟಹುದು ಬದುಕಲ್ಲರಸ ಕೇಳೆಂದ (ಶುವ್ಯಾಉ. ೮-೩೯) ; ಸತಿ ಸಹಜಾತ ಸುತರುಗಳ ತವಿಸುವುದು ತಾ ಧರ್ಮವಲ್ಲ (ತೊರರಾ. ೪-೨-೩೦) : ಧರ್ಮವೇ ಜಯವೆಂಬ ದಿವ್ಯಮಂತ್ರ ಮರ್ಮವನ್ನಱಿತು ಮಾಡಲು ಬೇಕು ತಂತ್ರ (ಪುರಂದ. ೨-೭೫ ಪಲ್ಲವಿ) : ಆತನೇ ಪಾಲಿಸುವನಿವನ ಭೂತಳಮಂ ನಿಜಾತಿಶಯಧರ್ಮದಿಂದೆಳ್ಳನಿತು ದೋಷವಿಲ್ಲದೆ (ಜೈಮಿಭಾ. ೧೭-೧೩). ೧೦. ದತ್ತಿ ; ದಾನ ; ಉಚಿತವಾಗಿ ಕೊಟ್ಟುದು: ಈ ಧರ್ಮಮಂ ಕಿಡಿಸಿದಾತ ವಾರಣಾಸಿಯೊಳು ಕುರುಕ್ಷೇತ್ರದೊಳು ಸಾಸಿರ್ವ್ವ x x ರ ಸಾಸಿರ್ವ್ವ ಕವಿಲೆಯು ಕೊನ್ದ ಪಂಚಮಹಾಪಾತಕ[ವಕ್ಕು] (ಸಾಇಇ. XX, ೩೨-೪೪ ; 1046) : ಈ ಧರ್ಮ್ಮವ ನೋನ್ತಿರ್ ಕಿಡಿಸಿದವರಧೋಗತಿಗಿಳಿವರು (ಸಾಇಇ. XX, ೧೭೫-೭೨ ; 1190) ; ಧರ್ಮಕ್ಕೆ ದಟ್ಟಿ ಕೊಟ್ಟರೆ ಹಿತ್ತಲಿಗೆ ಹೋಗಿ ಮೊಳ ಹಾಕಿ ನೋಡಿದ (ಗಾದೆ) ; ಕೆಟ್ಟು ನಂಟರ ಸೇರಬೇಡ. ಕೊಟ್ಟು ಧರ್ಮ ತಿರುಗಿ ಕೇಳಬೇಡ (ಗಾದೆ). ೧೧. ನಿಷ್ಠೆ ; ಶ್ರದ್ಧೆ ; ಭಕ್ತಿ : (ಕ). ೧೨. ಮತ ; ದರ್ಶನ : ಜೈನಧರ್ಮವು ವಿಶ್ವದ ಅತ್ಯಂತ ಪ್ರಾಚೀನಧರ್ಮಗಳಲ್ಲೊಂದಾಗಿದೆ (ಭಾರದ. ೧೬೮) ; ಇತರ ಪಂಥದವರು 'ಮತ', 'ದರ್ಶನ', 'ಸಿದ್ಧಾಂತ' ಎಂದು ಯಾವುದನ್ನು ಹೆಸರಿಸುವರೋ ಅದನ್ನು ಬುದ್ಧನು "ಧರ್ಮ" ಎಂದು ಕರೆದನು (ಭಾರದ. ೧೯೧). ೧೩. ದಯೆ ; ಕರುಣೆ; ಕೃಪೆ : ಬೆಂದ ಮನವೆನ್ನ ಮತಿಗೆಡಿಸಿ ಕಾಡಿತ್ತು ಎನ್ನ ತಂದೆ ಕೂಡಲಸಂಗಮದೇವಾ ಇವ ಮಾಣಿಸು ನಿಮ್ಮ ಧರ್ಮ (ಬಸವ. ೪೯) : ದೇವರ ಧರ್ಮದೊಳೊಂದು ಬೇಂಟೆ ದೊರೆಕೊಂಡರೆ ಕೂಡಲಸಂಗಮದೇವಂಗರ್ಪಿತವ ಮಾಡುವೆ (ಬಸವ. ೯೦೭) : ನೀನೆ ಜಂದಾಳ್ವಾಡೆ ಯುಕ್ತಿ ಕೊಂಬುದೆ ದೇವ ನೀನೇ ಬಂದಾಳೆನಲು ಧರ್ಮವುಂಟೇ ದೇವ (ನಂದಿರ. ೭-೧೫). ೧೪. ರೀತಿ; ಕ್ರಮ : ಶೆಟ್ಟರು ವೃತ್ತಿಯಿಂದ ವ್ಯಾಪಾರಿ. ಅದೇ ಧರ್ಮದಿಂದ ಸಾಕಷ್ಟು ಸಂಪಾದಿಸಿದ್ದರು (ಹೊಸಕೃ: ೩೩). ೧೫. ಒಂದು ಬಗೆಯ ತೆರಿಗೆ : ಒಂದು ಹೊಲದ ಮೇಲೆ ಹಾಕಬಹುದಾಗಿದ್ದ ಕೆಂಗೆಗಳವು—ಸಿದ್ಧಾಯ, ಅರಸರ ಸೇಸೆ, ಕಾಣಿಕೆ, ದಾಯ, ಧರ್ಮ ಇತ್ಯಾದಿಗಳು (ಕಶಾಅ. ೪೦೫). ೧೬. ನ್ಯಾಯವಾದ ಬುದ್ಧಿ : ಧನವೆಲ್ಲ ಮಲ್ಲಿಕಾರ್ಜುನನ ಧರ್ಮವ್ಯಯದದೆನೆ ಧರ್ಮದೊಳಗೆಮ್ಮ ಭಾಗೆಯರ್ಥದಲಿ ಬೆಳೆವನಿತು ಧರ್ಮವನಾದೊಡಂ ಕರುಣಿಸೆಮಗೆ (ಸಿದ್ಧರಾ. ೮-೫) : ಒಡಲಿಲ್ಲದುಸುಱಂಟೆ ನಿಮಗೆನ್ನ ಮೇಲೆ ಬಪ್ಪೊಡವೆಯಿಲ್ಲನೆ ಧರ್ಮವುಂಟೆ ಕಿಡುವೊಡವೆಯಾ ಕೊಡೆ ಕಂಡು ಕೆಡದ ಧರ್ಮವ ಕೊಡುವೆನೇ ಎನಲು (ಸಿದ್ಧರಾ. ೮-೬) : ಈತ ಕದ್ದು ತಂದೆಮ್ಮರ್ಥದೊಳಗೆಮ್ಮ ಭಾಗೆಯಂ ಕೊಡು ಕೊಡದೊಡದಱ ಬೆಂಬಳಿಯ ಧರ್ಮವನಾದೊಡಂ ಕೊಡೆಂದೆನೆ ಕೊಡಂ (ಸಿದ್ಧರಾ. ೮-೮). ೧೭. ಬಿಟ್ಟಿ ; ಪುಕ್ಕಟೆ : ನೀನೇನು ಧರ್ಮಕ್ಕೆ ಕೆಲಸ ಮಾಡುತ್ತಿಲ್ಲ. ಸಂಬಳ ತೆಗೆದುಕೊಂಡ ಮೇಲೆ ಸರಿಯಾಗಿ ಕೆಲಸ ಮಾಡು (ರೂಢಿ). ೧೮. ಯಜ್ಞ ; ಯಾಗ. ೧೯. ಯಜ್ಞದಲ್ಲಿ ಸೋಮಪಾನ ಮಾಡುವವನು. ೨೦. ಶಿವ. ೨೧. ಅರಸ ; ದೊರೆ. ೨೨. ಉತ್ಪಾತ. ೨೩. ವಿಷ ; ಗರಳ: "ಗಿರಿಶನೊಳು ಕಾಲನೊಳು ಪುಣ್ಯದೊಳು ಬಲ್ಲಿನೊಳು ಗರಳದೊಳ್ ಕ್ರತುವಿನೊಳು ಧರ್ಮಮಕ್ಕು" (ಪಾಂಗರಾ. ೧೪೫-೪೪) ; "ಅರಸುತ್ಪಾತಂ ಬಿಲು ವಿಷ ಹರ ಪುಣ್ಯಂ ಯಜ್ಞಮಹಿಂಸೆ ಯಮ ಚಾರಿತ್ರಂ ನಿರುತದಿ ದಶ ಧರ್ಮಾಖ್ಯಂ" (ನಾನಾಕಂ. ೧೦೯). ೨೪. [ಕಾವ್ಯವಿ] ಉಪಮಾಲಂಕಾರದಲ್ಲಿ ಎರಡೂ ವಸ್ತುಗಳ ನಡುವೆ ಇರುವ ಸಾಧಾರಣ ಧರ್ಮ.— ಸಾಮಾನ್ಯ ಧರ್ಮ : ಉಪಮೇಯಮುಮುಪಮಾನಮುಮುಪಮಾವಾಚಕಮುಮಂತೆ ಧರ್ಮಮುಮಿವರಲ್ಲಪವರ್ತಿಸೊಂದೆರಡು ಮೂರ್ಱವಲಾಕ್ಷಿಯಿಂದೆಂಟು ಬಗೆಯ ಲುಪ್ತೋಪಮೆಗಳ್ (ನರಚ. ೧೦-೩). ೨೫. [ಜ್ಯೋತಿ] ಜನ್ಮಲಗ್ನದಿಂದ ಒಂಬತ್ತನೆಯ ಸ್ಥಾನ : ಸಿತನಿಂ ಧರ್ಮಧನಾರಿ ಪಂಚಮ ದಶಾಯಸ್ಥಾನದೊಳ್ ಮಂದನಿಂ ತ್ರಿತಯಾರಾತಿ ಸಂಕಾಂತ್ಯದೊಳ್ . . . ಇಂದ್ರಮಂತ್ರಿ ಶುಭದಂ ಶೇಷಾಗಳೊಳ್ ನಿಂದಿತಂ (ಜಾತಕ. ೧೦-೧೧) ; ದನುಜೇಜ್ಯಂ ಧರ್ಮ ಕರ್ಮ ತ್ರಿ ತನು ಧನ ಚತುಷ್ಪಂಚ ರಂಧ್ರಾಯದೊಳ್ . . . ಲೇಸೆನಿಕ್ಕುಂ (ಜಾತಕ. ೧೦-೧೨). 'ಧರ್ಮನಿವಾಸ' ಪರಾ. ೨೬. = ಧರ್ಮಧ್ಯಾನ : ಆರ್ತ ರೌದ್ರ ಧರ್ಮ ಶುಕ್ಲಾಭಿಧಾನಧ್ಯಾನಚತುಷ್ಟಯಮುಮಂ (ಸುಕುಪಾ. ೩-೨೯ ವ) ; ಪರಿಹರಿಸಿ ಚಿತ್ತದಿಂದಾರ್ತರೌದ್ರಮುಂ ಧರ್ಮ ಶುಕ್ಲಮೆಂಬೀಯೆರಡುಂ ಸ್ಥಿರಮಾಗೆ ದಿವ್ಯಮುನಿಪಂ ನಿರಂತರಧ್ಯಾನಯೋಗತತ್ಪರನಾದಂ (ಮಲ್ಲಿಪು. ೧೧-೪೪). 'ಧ್ಯಾನಚತುಷ್ಟಯ' ಪರಾ. ೨೭. ಇಪ್ಪತ್ತನಾಲ್ಕು ತೀರ್ಥಂಕರರಲ್ಲಿ ಹದಿನೈದನೆಯವನು ; ಧರ್ಮನಾಥ : ವಿಮಳ ಅನಂತ ಧರ್ಮ . . . ವರ್ಧಮಾನರೆಂಬಿಪ್ಪತ್ತುನಾಲ್ವರ್ ತೀರ್ಥಕರರ್ (ಜಾಪುಂಪು. ೪೦೨). ೨೮. = ಧರ್ಮದ್ರವ್ಯ : ಚೇತನಾರಹಿತಮಜೀವತತ್ತ್ವಂ ಅದು ಗತಿಸ್ಥಿತ್ಯವಗಾಹಶರೀರಾದಿ ವರ್ತನಾಹೇತು ಧರ್ಮಾಧರ್ಮಾಕಾಶ ಪುದ್ಗಲ ಕಾಲಭೇದದಿಂ ಪಂಚವಿಧಂ (ಆದಿಪು. ೧೦-೬೩ ವ) : ಲೋಕಾಕಾಶದಲ್ಲಿ ಧರ್ಮ ಎಂಬುವ ಒಂದು ದ್ರವ್ಯವಿದೆ. ಈ ದ್ರವ್ಯವು ಜಗತ್ತಿನಲ್ಲಿ ಹವೆಯು ಇರುವಂತೆಯೇ ಇರುತ್ತದೆ . . . ಇದು ಆತ್ಮನ ಗಮನಕ್ಕೆ ಸಹಾಯಮಾಡುತ್ತದೆ (ಜೈನಪ. ೩೯೦). ೨೯. ದ್ವಾದಶಾನುಪ್ರೇಕ್ಷೆಗಳಲ್ಲಿ ಒಂದು ; ಧರ್ಮವನ್ನು ಕುರಿತ ಚಿಂತನೆ : ಅಧ್ರುವಮಶರಣಮೇಕತ್ವಮನ್ಯತ್ವಮಶುಚಿತ್ವಂ ಸಂಸಾರಂ ಲೋಕಮಾಸ್ರವಂ ಸಂವರೆ ನಿರ್ಜರೆ ಬೋಧಿದುರ್ಲಭ ಧರ್ಮಸ್ವಾಖ್ಯಾತಮೆಂಬುವ ಪನ್ನೆರಡುಮನುಪ್ರೇಕ್ಷೆಯಂ ಕ್ರಮದಿನನುಸ್ಮರಿಸುತ್ತುಮಿರ್ಪನ್ನೆಗಂ (ಅಜಿಪು. ೬-೬೧ ವ). 'ದ್ವಾದಶಾನುಪ್ರೇಕ್ಷೆ' ಪರಾ. ೩೦. [ದ್ವೈತ] ನಲವತ್ತು ವಿಧವಾದ ಗುಣಗಳಲ್ಲಿ ಒಂದು: ರೂಪ, ರಸ, ಗಂಧ, ಸ್ಪರ್ಶ . . . ಧರ್ಮ, ಅಧರ್ಮ, ಸಂಸ್ಕಾರ . . . ಸೌಭಾಗ್ಯವೆಂದು ಸಾಮಾನ್ಯವಾಗಿ ನಲವತ್ತು ವಿಧ ಗುಣಗಳು (ಹಿಂದಸಾ. ೨೭೫). ೩೧. [ಯೋಗ] ಮೂರು ಬಗೆಯ ಚಿತ್ತ ಪರಿಣಾಮಗಳಲ್ಲಿ ಒಂದು : ನಿರೋಧ, ಸಮಾಧಿ, ಏಕಾಗ್ರತಾ ಎಂಬ ಮೂರು ವಿಧವಾದ ಚಿತ್ತಸ್ಥಿತಿಗಳು ಧರ್ಮ ಲಕ್ಷಣ ಅವಸ್ಥಾ ಎಂಬ ಸೂಕ್ಷ್ಮ

ಸ್ಥೂಲರೂಪವಾದ ಚಿತ್ರಪರಿಣಾಮಗಳೆನ್ನಲ್ಪಡುವುವು (ಹಿಂದಸಾ. ೧೦೪). **P** ಧರ್ಮವನ್ನು ಬೇರೆ ಬೇರೆ ವಿಧಗಳಾಗಿ ವಿಂಗಡಿಸುತ್ತಾರೆ. "ಧರ್ಮ-೨: (ಅ) ಪ್ರವೃತ್ತಿಧರ್ಮ, ನಿವೃತ್ತಿಧರ್ಮ (ಮಹಾಭಾ. ಶಾಂತಿ. ೨೪೦-೬, ಅನುಶಾಸನ. ೨೧೧). (ಆ) ವಿದಿತ (ವ್ಯಕ್ತ), ಅವಿದಿತ (ಅವ್ಯಕ್ತ) (ಕೇನ. ೨-೪ ಭಾ). (ಇ) ಪಶುಧರ್ಮ, ಪತಿಧರ್ಮ (ಕ್ರಿಯಾಸಾರ. ಉಪದೇಶ. ೩). ಧರ್ಮ-೩: (ಅ) ದ್ವಿಜಾತಿಯ: ಅಧ್ಯಯನ, ಇಜ್ಯಾ, ದಾನ (ಗೌಧಸೂ. ೧೦-೧; ೮-೯ಭಾ; ಭಾಗ. ೧೧-೩೯; ಕಾಠಕ. ೨೮).(ಆ)ಬ್ರಾಹ್ಮಣರಿಗೆ ವಿಶೇಷವಾಗಿರುವ: ಪ್ರವಚನ (ಅಧ್ಯಾಪನ), ಯಾಜನ, (ಶುದ್ಧನಾದವನಿಂದ) ಪ್ರತಿಗ್ರಹ (ಗೌಧಸೂ. ೧೦-೨; ೭-೧ ಭಾ.; ಧರ್ಮಸಿಂ. ಪೂ. ೩-೨೪೦). ಅಥವಾ- ಯಾಜನ, ಅಧ್ಯಾಪನ, ಶುದ್ಧ ಪ್ರತಿಗ್ರಹ (ಮನು. ೧೦-೭೬-೪೧೧) (ಇ) ನಿತ್ಯಕರ್ಮ, ನೈಮಿತ್ತಿಕ ಕರ್ಮ, ಕಾಮ್ಯಕರ್ಮ (ವ್ಯಾಸಸ್ಮೃತಿ, ೩-೧; ಛಾಂದೋಗ್ಯ. ೧೦೬೫). (ಈ) ಕಾಯಿಕ, ವಾಚಿಕ, ಮಾನಸಿಕ (ಚರಕ. ೧೧-೫೪). (ಉ) ಸತ್ಯ, ತಪಸ್ಸು, ಅಧ್ಯಯನಾಧ್ಯಾಪನ (ತೈತ್ತಿರೀ. ೩೨೩). (ಊ) ಯಜ್ಞ, ದಾನ, ತಪಸ್ಸು (ಗೀತಾಭಾ. ೧೮-೩). (ಋ) ದೈವ, ಪಿತ್ರ್ಯ, ಮಾನುಷ (ಬೃಹದಾ. I, ೫೬). (ಋೂ) ಹೀನ, ಮಧ್ಯಮ, ಉತ್ತಮ (ಚರಕ. ೨೨೭). (ಎ) ಫಲಭೋಗದ ದೃಷ್ಟಿಯಿಂದ: ಸಂಚಿತ, ಆರಬ್ಧ, ಆಗಾಮಿ (ತೈತ್ತಿರೀ. ೪). (ಏ) ಸಾತ್ತ್ವಿಕ, ರಾಜಸ, ತಾಮಸ (ಗೀತಾಭಾ. II ೧೮-೨೩-೨೫). (ಐ) ಶಸ್ತ್ರಚಿಕಿತ್ಸೆಯ: ಪೂರ್ವಕರ್ಮ, ಪ್ರಧಾನ ಕರ್ಮ, ಪಶ್ಚಾತ್ ಕರ್ಮ (ಸುಶ್ರುತ). (ಒ) ಪೂಜಾರಾಧ್ಯ, ಪುಣ್ಯಯಜ್ಞ, ದೃಢಚರ್ಯಾ (ಆದಿಪು. ೧೫-೧೬ ವ). (ಓ) ಶಸ್ತ್ರಕರ್ಮ, ಕ್ಷಾರಕರ್ಮ, ಅಗ್ನಿಕರ್ಮ (ಚರಕ. II ೧೪-೩೫). (ಔ) ಕರ್ಮ, ಅಕರ್ಮ, ವಿಕರ್ಮ (ಗೀತಾಭಾ. ೨೫೨). (ಅಂ) ಮೃದಂಗವಾದನದ: ತ್ರ್ಯಂಕ್ಯ, ಆಲಿಂಗ್ಯ, ಊರ್ಧ್ವಕ (ವಿಚಿಂ. ೪-೩೯೪). (ಅಃ) ಪರಸ್ವಾನಭಿಧ್ಯತೆ, ಸರ್ವಸತ್ತ್ವಸೌಹಾರ್ದ, ಕರ್ಮಫಲಶ್ರದ್ಧೆ (ಮಹಾಭಾ. ಅನುಶಾಸನ. ೧೩-೫). (ಕ) ಪರಸ್ವಗ್ರಹಣ, ಅಶಾಸ್ತ್ರೀಯಹಿಂಸೆ, ಪರದಾರಗ್ರಹಣ (ಮನು. ೧೨-೭). ಧರ್ಮ-೫: (ಅ) ವರ್ಣಧರ್ಮ,ಆಶ್ರಮ-,ಗುಣ-, ವರ್ಣಾಶ್ರಮ-, ನಿಮಿತ್ತ-(ಗೌಧಸೂ. ೧-೧-ಭಾ). (ಆ) ಅಹಿಂಸಾ, ಸತ್ಯ, ಅಕ್ರೋಧ, ಶೌಚ, ಇಂದ್ರಿಯಸಂಯಮ (ಮನು- ಗೌಧಸೂ. ೧೦-೧ ಭಾ). (ಇ) ಸತ್ಯ, ಅಕ್ರೋಧ, ದಾನ, ಅಹಿಂಸಾ, ಪ್ರಜನನ (ವಸಿಷ್ಠ - ಗೌಧಸೂ. ೧೦.೫೧ ಭಾ). (ಈ) ಶಬ್ದಪ್ರವೃತ್ತಿಗೆ ನಿಮಿತ್ತವಾದವು: ಜಾತಿ, ದ್ರವ್ಯ, ಗುಣ, ಕ್ರಿಯೆ, ಸಂಬಂಧ. (ಉ) ಯೋಗಾಭ್ಯಾಸದ: ಪ್ರಾಣಾಯಾಮ, ಧ್ಯಾನ, ಪ್ರತ್ಯಾಹಾರ, ಧಾರಣಾ, ಸ್ಮರಣ (ವಾಯುಪು. I-೧೦-೭೧). ಧರ್ಮ-೮: (ಅ) ಕ್ಷಮೆ, ಸತ್ಯ, ದಯೆ, ದಾನ, ಶೌಚ, ಇಂದ್ರಿಯನಿಗ್ರಹ, ದೇವಪೂಜೆ, ಹವನ, ಸಂತೋಷ, ಸ್ತೇಯವರ್ಜನ (ಧರ್ಮಸಿಂ. ೧-೮). (ಆ) ಧರ್ಮದ (i) ಇಜ್ಯಾ, ಅಧ್ಯಯನ, ದಾನ, ತಪಸ್ಸು, ಸತ್ಯ, ಕ್ಷಮಾ, ದಮ, ಅಲೋಭ (ಮಹಾಭಾ. ವನ. ೨-೭೫). (ii) ತಪ, ಸತ್ಯ, ಕ್ಷಮಾ, ದಯ, ಶೌಚ, ದಾನ, ಯೋಗ, ಬ್ರಹ್ಮಚರ್ಯ (ವಾಮನ. ಅ. ೨೨-ಸಂ. ೧೫೧). ಧರ್ಮ-೯: ಸಾರ್ವವರ್ಣಿಕ ಧರ್ಮಗಳು: ಅಕ್ರೋಧ, ಸತ್ಯವಚನ, ಸಂವಿಭಾಗ, ಕ್ಷಮಾ, ಸ್ವಪತ್ನಿಯಲ್ಲಿ ಪ್ರಜನನ, ಶೌಚ, ಅದ್ರೋಹ, ಆರ್ಜವ, ಭೃತ್ಯಭರಣ (ಮಹಾಭಾ. ಶಾಂತಿ. ೬೦-೭, ೮). ಧರ್ಮ-೧೦: (ಅ) ಆತ್ಮನ: ಉತ್ತಮ ಕ್ಷಮೆ, ಮಾರ್ದವ, ಆರ್ಜವ, ಶೌಚ, ಸತ್ಯ, ಸಂಯಮ, ತಪಸ್ಸು, ತ್ಯಾಗ, ಆಕಿಂಚನ್ಯ, ಬ್ರಹ್ಮಚರ್ಯ (ತತ್ತ್ವಪ್ರ. ೯-೩೨೫, ೩೨೬; ಪೂರ್ವಪು. ೧೧-೧೦೩, ೧೦೪). (ಆ) ಭೈಕ್ಷ, ಅಸ್ತೇಯಂ, ಶೌಚ, ಅಪ್ರಮಾದ, ಅವ್ಯವಾಯ, ಭೂತದಯೆ, ಕ್ಷಮಾ, ಅಕ್ರೋಧ, ಗುರುಶುಶ್ರೂಷಾ, ಸತ್ಯ (ವಾಯುಪು. I-೮-೧೭೬, ೧೭೭)" (ಶ್ರೀತತ್ತ್ವ. ೨೧೮).

**ಧರ್ಮ ಕೊಡು**=ದಾನಮಾಡು: ಕಷ್ಟದಲ್ಲಿರುವವರಿಗೆ ಧರ್ಮ ಕೊಡಲು ಹಿಂಜರಿಯಬಾರದು (ರೂಢಿ). **ಧರ್ಮದ ಬಡ್ಡಿ** = ನ್ಯಾಯವಾದ ಬಡ್ಡಿ: ಧರ್ಮದ ಬಡ್ಡಿಯ ಮೇಲೆ ಹಣ ಕೊಡುವ ವಿಷಯದಲ್ಲಂತೂ ಯಾವ ಸಂದೇಹವೂ ಇರಲಾರದು (ಯೋಧಪು. ೩೧). **ಧರ್ಮದ ಮದುವೆ** = ತೆರ ಇಲ್ಲದೆ ಹೆಣ್ಣನ್ನು ತಂದುಕೊಳ್ಳುವುದು. **ಧರ್ಮದ ಮೇರು**= ಧರ್ಮದ ಆಚರಣೆಯಲ್ಲಿ ಮೇರುವಿನ ಉನ್ನತಿಯನ್ನು ಪಡೆದವನು; ಒಂದು ಬಿರುದು: [ಗು]ಣಸಂಪನ್ನಂ ಸ್ಥಿರನುಡಿವಾತಂ ಧರ್ಮ್ಮದ ಮೇರು ಸೋಮೇಸ್ವರ[ದಾ]ಸ ಪಾ × × × ಪಯ್ಯಂ (ಶಾಇ. XX, ೨೯-೩೪; 1084): ವಿಪ್ರಕುಳಪ್ರದೀಪರೀಶ್ವರಚರಣಾಬ್ಜಭೃಂಗರಧಿಕರ್ಸ್ಸಲೆ ಧರ್ಮ್ಮದ ಮೇರುಗಳ್ (ಶಾಇ. XX, ೩೭-೦೪; 1084). **ಧರ್ಮ ನೀಡು** = ಧರ್ಮ ಕೊಡು: ಪ್ರವಾಹಪರಿಹಾರನಿಧಿಗೆ ಆ ಸಂಸ್ಥೆಯು ಉದಾರವಾಗಿ ಧರ್ಮ ನೀಡಿತು (ರೂಢಿ). **ಧರ್ಮ ಬೇಡು**= ದಾನ ಬೇಡು: ಕೆಲವರು ಸೋಮಾರಿಗಳಾಗಿ ಧರ್ಮ ಬೇಡುವುದನ್ನೇ ಅಭ್ಯಾಸ ಮಾಡಿಕೊಂಡು ಬಿಡುತ್ತಾರೆ (ರೂಢಿ). **ಧರ್ಮ ಮಾಡು** = ೧. ಸತ್ಕರ್ಮವನ್ನು ಮಾಡು; ಪುಣ್ಯಕಾರ್ಯ ಮಾಡು: ಧರ್ಮ ಮಾಡುತ್ತೇನೆಂದು ಸುಳ್ಳು ಹೇಳಿ ಧನಾರ್ಜನೆ ಮಾಡುತ್ತಾನೆ (ಜಾತಕ. ೧೭-೧೦ ಟೀಕ). ೨. ದಾನ ಮಾಡು: ಇಂಥಾ ಜನ್ಮಾ ನೋಡೋ ಧರ್ಮಾ ಮಾಡೊ (ದಾಸಗೀ. ೬೭-೨); ಧರ್ಮ ಮಾಡಿದರೂ ಮರ್ಮ ತಿಳಿಯಬೇಕು (ಗಾದೆ). **ಧರ್ಮ ಹಾಕು** = ಧರ್ಮ ಕೊಡು: ಆಗರ್ಭಶ್ರೀಮಂತರಾದವರು ಹಿಂದಿನ ಕಾಲದಲ್ಲಿ ಪ್ರತಿನಿತ್ಯ ಧರ್ಮ ಹಾಕುವುದಕ್ಕಾಗಿಯೇ ಸ್ವಲ್ಪ ದ್ರವ್ಯವನ್ನು ಮೀಸಲಾಗಿಡುತ್ತಿದ್ದರು (ರೂಢಿ).

[ ಸಂ. ]

**ಧರ್ಮಏತ್ರ** (ನಾ). = ಧರ್ಮೈತ (?): ಶ್ರೀ[ಮ][ದಾ]ಹವಮಲ್ಲದೇವರಲ್ಲಿ ಮೂನೂಱು ಗದ್ಯಾಣಂ ಧರ್ಮಏತ್ರಜಿಗ್ಗೆಯ್ಯೆ ಪ[ಞ್ಚ]ರ ಸಂಪಜಮಾಗಿ ಪ್ಪಡೆದಂ ಊರಂ ವಿದ್ವಜ್ಜನಕ್ಕಾದರದೊಳ್ ಭರಣಂಗೆಯ್ದು (ಶಾಇ. XI-i, ೯೫-೯೭; ೯೮೦). [**P** ಇದು 'ಧರ್ಮಏತ' ಎಂಬುದರ ಅಪಲಿಖಿತ]

**ಧರ್ಮಏತ** 'ಧರ್ಮೈತ' ನೋ.

**ಧರ್ಮಂಗೆಯ್** (ಕ್ರಿ). ೧. ಪುಣ್ಯಕಾರ್ಯವನ್ನು ಮಾಡು: ಧರ್ಮಂಗೆಯ್ಯಲ್ ಬಯಸುಗುಮೊರ್ಮೆ ಜನಾಗಮಮನೋಜಯಿಂ ಕೇಳ್ದ ನರಂ (ಸಮುಹ. ೩-೩೦): ಧರ್ಮಂಗೆಯ್ವನ ಫಲಮನಿಲ್ಲಿಯ ಮನ್ನಣೆಯುಮಂ ಮಹಿಮೆಯುಮನಱಿವುತಿರ್ಪುದನೊಳ್ಳಿತ್ತು ಬಗೆದು ಭಾವಿಸಿ ನೋಟ್ಪುದು (ಬಂಹರಿ. ೧೦-೧೨ ವ). ೨. ದಾನಮಾಡು: ಬಸವಯ್ಯಂ ರುದ್ರಹೋಮಂಗ್ಗೆಯ್ದು ಸಹಸ್ರಭೋಜನಮಾಡಿ ಬಲಿಯಂ ಕಳೆದು ಧರ್ಮ್ಮಂಗೆಯ್ದು (ಎಕ. IV, ಹಗ್ಗಡ. ೦೬-೭; 1021). [ ಧರ್ಮ + ಕೆಯ್$_1$ ]

**ಧರ್ಮಂಪಡೆ** (ಕ್ರಿ). ಧರ್ಮದೀಕ್ಷೆಯನ್ನು ಪಡೆ: ಆ ಮುನಿನಾಥಂ ಜಿನಮಾರ್ಗಮನೀಯೆ . . . ಶುಕ್ರನುಮಾ ವಿನುತ ಬೃಹಸ್ಪತಿಯುಮಂತೆ ಧರ್ಮಂಪೆತ್ತರ್ (ನೇಮಿಪು. ೩-೨೬). [ ಧರ್ಮ + ಪೆಱು$_1$ ]

**ಧರ್ಮಂಬೇಟ್** (ಕ್ರಿ). ನ್ಯಾಯವಾದುದನ್ನು ಹೇಳು; ಧರ್ಮಸಮ್ಮತವಾದುದನ್ನು ತಿಳಿಸು: ಕರ್ಮಮುಳ್ಳಿಂ ಮನುಷ್ಯಭವಂಬಡೆದು ಧರ್ಮಮಂ ಮಱೆದು ನೆಗೞ್ದೊಡಂ . . . ಧರ್ಮಂಬೇಟಲ್ ಬಲ್ಲವರುಮೇಗೆಯ್ವರ್ (ಜೀವಸಂ. ೭೨-೨೪ವ). [ ಧರ್ಮ + ಪೇೞ್ ]

**ಧರ್ಮಕಂಟಕ**(ನಾ). ೧. ಧರ್ಮಕ್ಕೆ ಉಂಟಾಗುವ ತೊಂದರೆ, -ವಿಪತ್ತು. ೨. ಧರ್ಮಕ್ಕೆ ಹಾನಿಯನ್ನುಂಟುಮಾಡುವವನು: ಧರಣಿಯಲಿ ಮುರವೈರಿಯಿರ್ದಡೆ ನಿರುತ ತಮಗೀ ವಿಧಿಯೆ ದುಷ್ಪರ ಶಿರವನುಚಿ[3] ಚಂಡಾಡದಿಹನೇ ಧರ್ಮಕಂಟಕರ (ನಿಭಾಗ. ೧-೧೩-೧೧). [ ಧರ್ಮ + ಕಂಟಕ ]

**ಧರ್ಮಕಥನ** (ನಾ). ಧರ್ಮವನ್ನು ಕುರಿತು ಹೇಳುವುದು, -ವ್ಯಾಖ್ಯಾನ ಮಾಡುವುದು; ಧರ್ಮಬೋಧೆ: ಮುನಿಪತಿ ವಾಚನೆಯಿಂ ಪೃಚ್ಛನೆ ಯಿನನುಪ್ರೇಕ್ಷೆಯಿಂ . . . ಧರ್ಮಕಥನದಿಂದಂ ವಿನುತಸ್ವಾಧ್ಯಾಯವೆಂಬ ತಪಮಂ ತಳೆದಂ (ಸುಕುಮಾ. ೪-೧೮). [ ಧರ್ಮ + ಕಥನ ]

**ಧರ್ಮಕಥೆ** (ನಾ). ಧಾರ್ಮಿಕ ವ್ಯವಹಾರವನ್ನು ತಿಳಿಸುವ ಕಥೆ: ಇತ್ತ ಮೇಘರಥಂ . . . ಧರ್ಮಕಥೆಯಂ ಪಲರ್ಗೆ ಪೇೞುತ್ತಿರ್ಪನ್ನೆಗಂ (ಶಾಪುಂಪು. ೨೦೮); ಕೇಸುವದಣ್ಣನಾಯಕಂ . . . ಧರ್ಮ್ಮಕಥಾಪ್ರಸಂಗದಿಂ ಧರ್ಮ್ಮಕಾರ್ಯ್ಯತತ್ಪರನಾಗಿ (ಸೌಇಇ. XX, ೧೩೭-೨೭ : 1161). [ ಧರ್ಮ + ಕಥೆ ]

**ಧರ್ಮಕರ** (ನಾ). ೧. ಧರ್ಮವನ್ನು ಮಾಡುವವನು. ೨. ಬಿಲ್ಲನ್ನು ಹಿಡಿದಿರುವವನು. ೧, ೨: ಕನಕನಗೇಂದ್ರಧರ್ಮಕರನಾಗಿಯುಮುನ್ನತ ಧರ್ಮಹಂತೃ . . . ಎಂದೆನಿಸಿರ್ದನಹೀಂದ್ರಭೂಷಣಂ (ರಾಜಶೇ. ೧೪-೧೪೪). [ ಸಂ. ]

**ಧರ್ಮಕರಕ** (ನಾ). ಭಿಕ್ಷುಗಳು ಉಪಯೋಗಿಸುವ ನೀರಿನ ಪಾತ್ರೆ: ಸ್ಥವಿರನು [ಒಂದು] ಧರ್ಮಕರಕದಲ್ಲಿ ನೀರು ಹಿಡಿದುಕೊಂಡು (ಬುದ್ಧ ಪ. ಮಿಲಿಂದ. ೯೩). [ ಧರ್ಮ + ಕರಕ ]

**ಧರ್ಮಕರ್ತ** (ನಾ). ದೇವಸ್ಥಾನದ ಖರ್ಚಿನ ಮೇಲ್ವಿಚಾರಕ; ಧರ್ಮದರ್ಶಿ; ಧರ್ಮಾಧಿಕಾರಿ: (ಶ). [ ಧರ್ಮ + ಕರ್ತ ]

**ಧರ್ಮಕರ್ಮ** (ನಾ). ೧. ಧಾರ್ಮಿಕ ಕಾರ್ಯ; ಯಜ್ಞ, ಯಾಗ, ಪೂಜೆ ಮೊದಲಾದ ಕರ್ಮ: ಜನ್ಮಕುಲಧನಜಾತಿವರ್ಣಪ್ರಭೇದವಂ ಗಣಿಸದೆಯು ಮನದ ಹೃದಯದ ಧರ್ಮಕರ್ಮವನೆ ಹಿಡಿದು ಮನ್ನಣೆಮಾಡಿ (ಶ್ರೀರಾಮಾ. ೭-೧೮೧); ವೇದಗಳೂ ವೇದೋದಿತ ಧರ್ಮಕರ್ಮಗಳೂ ಅಳಿಸಿ ಹೋಗುವ ಕಲಿಯುಗದಲ್ಲಿ ಸ್ಮೃತಿಗಳನ್ನು ಕೇಳುವರಾರು? (ಭಾರಶ. ೭೮). ೨. ಪುಣ್ಯ ಕರ್ಮ; ಪುಣ್ಯಸಂಪಾದನೆಯ ಕಾರ್ಯ.

ಧರ್ಮಕರ್ಮ ಸಂಯೋಗ = ೧. ಪುಣ್ಯಕರ್ಮ ಫಲಿಸುವಿಕೆ; ಅದೃಷ್ಟ ಕೂಡಿಬರುವಿಕೆ: ಧರ್ಮಕರ್ಮ ಸಂಯೋಗದಿಂದ ಅದೇ ವೇಳೆಗೆ ಅವರೂ ಅಲ್ಲಿಗೆ ಬಂದುದರಿಂದ ನನಗೆ ಅವರ ದರ್ಶನ ಆಯಿತು (ರೂಢಿ). ೨. ಆಕಸ್ಮಿಕ. [ ಧರ್ಮ + ಕರ್ಮ ]

**ಧರ್ಮಕಹಳೆ** 'ಧರ್ಮಗಹಳೆ' ನೋ.

**ಧರ್ಮಕಾಯ** (ನಾ). ಧರ್ಮರೂಪವಾದ ದೇಹವುಳ್ಳವನು; ಧರ್ಮವೇ ಶರೀರವಾಗಿರುವವನು: ಬುದ್ಧನ ಪಾರ್ಥಿವವಾದ ಕಾಯ ಕಣ್ಮರೆ ಯಾದರೂ ಆತ 'ಧರ್ಮಕಾಯ'ನಾಗಿ ಶಾಶ್ವತನಾಗಿದ್ದಾನೆ (ಭಾರಶ. ೧೯೩). [ ಧರ್ಮ + ಕಾಯ ]

**ಧರ್ಮಕಾರ್ಯ** (ನಾ). ೧. ಧರ್ಮ ಅಥವಾ ಮತಸಂಬಂಧವಾದ ಆಚರಣೆ; ಸದಾಚಾರ. ೨. ಸತ್ಕರ್ಮ; ಪರೋಪಕಾರದ ಕೆಲಸ; ಪುಣ್ಯಕಾರ್ಯ: ಆದಿಭಟ್ಟಾರಕವೃತಿಕರಸ್ಥಿತಿಯನಾನಂದನೆಂಬಂ ಧರ್ಮ ಕಾರ್ಯನಿಮಿತ್ತಂ ಬಾದಜಿಪಿದೊಡೆ (ಆದಿಪು. ೧೭-೪೯ ವ); ಮೃತ್ಯುಪಾಶದಲ್ಲಿ ಸಿಕ್ಕಿರುವ ಚತುರಂಗಸೇನೆಯನ್ನು ಮೃತ್ಯುವಿನಿಂದ ಬಿಡುಗಡೆ ಮಾಡಿದರೆ ಅದು ಒಂದು ದೊಡ್ಡ ಧರ್ಮಕಾರ್ಯವಾಗುತ್ತದೆ (ವಚಭಾ. ೨೩೦). [ ಧರ್ಮ + ಕಾರ್ಯ ]

**ಧರ್ಮಕುಮಾರ** (ನಾ). ಯಮಧರ್ಮನ ಮಗ; ಧರ್ಮರಾಯ; ಯುಧಿಷ್ಠಿರ: ಪಾಂಡವರಾಯ ಧರ್ಮಕುಮಾರ ಗೆಲಿದನು ಕೌರವೇಶ್ವರನ (ಕುಪ್ಪಾ. ಕ. ೪ ಸೂಚನೆ). [ ಧರ್ಮ + ಕುಮಾರ ]

**ಧರ್ಮಕೃತ್ಯ** (ನಾ). = ಧರ್ಮಕಾರ್ಯ ೨: ಭಾಷೆಯನ್ನು ಯಾರೂ ಯಾರ ಉಪಕಾರಕ್ಕೆ ಕಲಿಯುವುದಿಲ್ಲ; ಅದು ಧರ್ಮಕೃತ್ಯವೂ ಅಲ್ಲ; ಉಸಿರಾಟದಂತೆ ಅದು ಸ್ವಾಭಾವಿಕವೂ ಅಲ್ಲ (ವಿಚಾಮಂ. ೧೮). [ ಧರ್ಮ + ಕೃತ್ಯ₂ ]

**ಧರ್ಮಕ್ಷೇತ್ರ** (ನಾ). ೧. ಧರ್ಮವು ಬೆಳೆಯಲು ಯೋಗ್ಯವಾದ ಕ್ಷೇತ್ರ; ಪುಣ್ಯಕ್ಷೇತ್ರ; ಪವಿತ್ರಕ್ಷೇತ್ರ; ತೀರ್ಥಕ್ಷೇತ್ರ: ಅಂತು ಧರ್ಮಕ್ಷೇತ್ರಂಗಳಂ ವಿಹಾರಿಸಿ ವಿನೇಯಜನಾಶಯಕುಶೇಶಯಂಗಳನಲರ್ಚುತಂ ಬಂದು (ಆದಿಪು. ೧೧-೭೮ ವ); ಅಮರಾನೀಕಮನೇಕಂ ಕ್ರಮಯುಗವಿನ್ಯಸ್ತವಾಸ್ತುಕಂ ಬಳಸಿರೆ ವಿಶ್ರಮಿಸುವಪೋಲ್ ಧರ್ಮಕ್ಷೇತ್ರಮದಾವುದೆನೆ ಸಮವಸರಣ ದೆಡೆಯನೆ ನಡೆದಂ (ಶಾಂತಿಪು. ೧೨-೨೦); ಧರ್ಮಕ್ಷೇತ್ರವೇ ಕರ್ಮಕ್ಷೇತ್ರ (ಭಾರಶ. ೧೧೦). ೨. ಭಾರತ. ೩. ಧಾರ್ಮಿಕನಾದ ವ್ಯಕ್ತಿ. [ಧರ್ಮ+ಕ್ಷೇತ್ರ]

**ಧರ್ಮಗತಿ** (ನಾ). ೧. ಧರ್ಮದ ಮಾರ್ಗ; ಧರ್ಮದ ಹಾದಿ: ಧರ್ಮಗತಿಯ ತಾರತಮ್ಯವ ತಿಳಿಯದೆ ಪೆರ್ಮೆಯ ಬಿಟ್ಟು ಬೇಸಱದೆ ನಿರ್ಮಲಮತಿಯಾಗಿ ನೀ ನಡೆ ಮಿಥಿಲೆಗೆ ಧರ್ಮವ್ಯಾಧನ ಬಳಿಗೆ (ಹದಿಬ. ೬೨-೪೯). ೨. ನ್ಯಾಯ ವಾದ ಕ್ರಮ, -ರೀತಿ; ಸರಿಯಾದ ನಡವಳಿಕೆ: ದುಷ್ಟಬುದ್ಧಿಯ ತಂದೆ ಪ್ರೇಮಮತಿ ಮತಿಗೆಟ್ಟು ಧರ್ಮಗತಿಯಂ ಬಿಟ್ಟು (ಶಂಕಕಂ. ೧೭೭-೨೦); ಗೆಲವಿದೆಂತುಟೊ ತನ್ನ ಸೋಲಿದು ಬಳಿಕ ಸೋತರೆ ಧರ್ಮ ಗತಿಯನು ತಿಳಿದು ಹೇಳಲಿ ತತ್ಸಭಾಸದರೆಂದಳೆಂದುಮುಖಿ (ಕುಪ್ಪಾ. ಸ ೧೪-೬೦). [ ಧರ್ಮ + ಗತಿ ]

**ಧರ್ಮಗರಣಿಗ** (ನಾ). ಧರ್ಮಕಾರ್ಯಕ್ಕೆ ಮಾಡುವ ವ್ಯಯವನ್ನು ಬರೆಯುವವನು; ಧರ್ಮಕಾರ್ಯಗಳ ಲೆಕ್ಕವನ್ನಿಡುವವನು: ಪಾಲಿಪು ಕೊಳ್ಳಿಯುಂ ಅರಮನೆ ತಾಣದ ಭಾಗಮುಂಮ್ ಅರ್ಚ್ಚಕಮ್ಮನ್ನಿಯಕಿ ಕೊಟ್ಟ ಸೇನವರಸರುಂ ಧರ್ಮ್ಮಗರಣಿಗರುಂ (ಎಕ. VI, ಕೊಪ್ಪ. ೩೭-೧೧ : ಸು. 6767). [ ಧರ್ಮ + <ಕರಣಿಕ ]

**ಧರ್ಮಗಹಳೆ, ಧರ್ಮಕಹಳೆ, ಧರ್ಮಗಾಳೆ** (ನಾ). ಯುದ್ಧದಲ್ಲಿ ಗೆದ್ದವರು ಕರುಣೆಯಿಂದ ಯುದ್ಧವನ್ನು ನಿಲ್ಲಿಸುವ ಸೂಚನೆಗಾಗಿ ಊದಿಸುವ ಕಹಳೆ: ಮುಱಿಯಲಿಱಿದು ಪಾಳೆಯ ಪರಿಯಂತರ ಒಱಲಿಸಿ ಧರ್ಮಗಹಳೆಯ [ಪಾಠಾಂ.ಗಾಳೆಯನು] ನೆಱಿಗಲಿ ರಾಮ ತಿರುಗಿದನೊಯ್ಯನೆ ತನ್ನುಱುವ ಭಟರ ಮೋಹರದೊಳು (ಕುರಾಸಾಂ. ೦೩-೧೨೧): ಬರಲು ಬಹುದು . . . ದುರ್ಧರದ ಸಾಹಸರೆಂದು ಅಡ್ಡೈತರೆ ವಿಭೀಷಣ ಧರ್ಮಗಹಳೆಗಳಲಿಯಲಿತ್ತರದಿ (ತೊರಾಮಾ. ೨೬೨-೭೪). **ಧರ್ಮಕಹಳೆ:** ತಿಮ್ಮಣ್ಣನಾಯಕನು ಧರ್ಮಕಹಳೆಯನ್ನು ಹಿಡಿಸಿದನು. ಕದನವು ನಿಂತಿತು (ಕವೀರ. ೧೨೨); ದಂಡಿನವರ ತಿಳುವಳಿಕೆಗೆ ಕೂಚುನಗಾರಿ, ಧರ್ಮಕಹಳೆ ಮೊದಲಾದ್ದನ್ನು ಉಪಯೋಗಿಸುತ್ತಿದ್ದಂತೆ ತಿಳಿಯಬರುವ ಸಂಗತಿಯು . . . ಸೇನೆಯಲ್ಲಿ ಒಂದು ವಿಧವಾದ ತರಬಿಯತ್ತು ಇತ್ತೆಂದು ತೋರಿ ಸುವುದು (ಚಿತ್ರಪಾ. ೭ ಉಪೋದ್ಘಾತ). **ಧರ್ಮಗಾಳೆ:** ಪಾಳೆಯ ಪರಿಯಂತ ಮುಱಿಯಲಿಱಿದು ಧರ್ಮಗಾಳೆಯ ದನಿಯನೆಲ್ಲರನು ಕೇಳಿಸುತೊಯ್ಯನೆ ತಿರುಗಿದನಂದು ಕಟ್ಟಾಳು ಕಾಟಣ್ಣ ಲೀಲೆಯೊಳು (ಕುರಾಸಾಂ. ೯೭-೭೮); ದಾಳಿಯಂ ಮಾಡಿದುದು ಹರಗಣಂ ಪುರದ ಪೆರ್ಬಾಗಿಲೊಳ್ ಗಾಡದಿಂ ಧರ್ಮಗಾಳೆಯನಿರದೆ ಪಿಡಿಸಿ ತಿರುಗಿತು ವಿಜಯದುತ್ಸವದೊಳು (ಚಬಸು. ೪೯-೪೭); ಸಾವಿಗೆ ಭಯಗೊಂಡು ಬೇಡಿಕೊಳ್ಳವರನು ಕಾವೆನು ಭಯ ಬೇಡೆಂದು ಕೀವಿದ ಧರ್ಮಗಾಳೆಯ ಹಿಡಿಸಿದನಾ ಭೂಪರನಂಜರಾಜೇಂದ್ರು (ಕಂನವಿ. ೧೭-೯೫). 'ದಮ್ಮಗಹಳೆ' ಪರಾ. [ ಧರ್ಮ + ಕಹಳೆ ]

**ಧರ್ಮಗಳ್** (ನಾ). ಉಚಿತವಾಗಿ ಕೊಡುವಕಳ್ಳು; ದಾನವಾಗಿ ಕೊಡುವ ಮದ್ಯ: ನೆರೆದಲ್ಲರ್ ಕಳ್ಗುಡಿಯುತ್ತಿರೆ ಬಡವರ್ಗಲ್ಲಿ ಧರ್ಮಗಳ್ಳೆಂದೆಱೆವರ್ (ಧರ್ಮಾಮೃ. ೧-೦೪೪). 'ಧರ್ಮಗಳ್ಗುಡಿ' ಪರಾ. [ ಧರ್ಮ + ಕಳ್$_3$ ]

**ಧರ್ಮಗಳೆ** (ನಾ). (ಲಕುಲೀಶ) ಯತಿಯ ಧರ್ಮದಂಡ; ಯೋಗದಂಡ: ಹರನರಸಂ ಸುರನ್ರ್ಮರದ ಗುಣ್ಣು ಜಟಾವಳಿ ತೊಂಗಲಿನ್ದುರ್ಧರಗಿರಿ ಸೇತು ಧರ್ಮ್ಮಗಳೆಯಂಕದ ಮದ್ದಳೆ ಧೂಮ ವೇಳೆ ವಿಸ್ಫುರಿತ ಶಿವಾಗಮಂ ಸುರಗಿಗೆಯಾಗಿರೆ ಪಾಪವನೊತ್ತಿ ಕುತ್ತಿ ನಿಮ್ಮುರಮಿಱಿದಿನ್ತು ಕೊನ್ದ ತಪದಂಕಮಿದೀ ತಪದಂಕಕಾಱನ (ಎಕ. XII, ಶಿರಾ. ೨೭-೬೮: ೨೬೩). [ ಧರ್ಮ + ಗಳೆ (<ಗಟ$^3$) ]

**ಧರ್ಮಗಳ್ಗುಡಿ** (ಕ್ರಿ). ಉಚಿತವಾಗಿ ಕಳ್ಳನ್ನು ಕುಡಿ; ಬಿಟ್ಟಿ ಹೆಂಡ ಕುಡಿ: ಕಳ್ಗೊಳ್ ಬೊಟ್ಟನಿಟ್ಟುಕೊಂಡು ಕೆಲವರ್ಗಲ್ಲಂ ಬೊಟ್ಟಿಟ್ಟು ಕೀಱುಯರ್ಪಿರಿಯರಱದು ಪೊಡಮಟ್ಟು ಧರ್ಮಗಳ್ಗುಡಿವರ್ಗಲ್ಲಂ ವಿಸಸಲ್ಗಳ್ವನೆಱದು (ಜಂಪಥಾ. ೯-೮೭ ವ). [ ಧರ್ಮಗಳ್ + ಕುಡಿ$_1$ ]

**ಧರ್ಮಗಾಮಿ** (ನಾ). ಧರ್ಮಮಾರ್ಗದಲ್ಲಿ ನಡೆಯುವವನು: ಧರ್ಮಗಾಮಿಗಳಾದ ಅವರು ಹೆಚ್ಚುಕಡಮೆಯಾಯಿತೆಂದರೆ ಸುಮ್ಮನಿರುವುದಿಲ್ಲ (ವಕಥಾ. ೨೯). [ ಸಂ. ಧರ್ಮಗಾಮಿನ್ ]

**ಧರ್ಮಗಾಮುಂಡ** (ನಾ). ಒಬ್ಬಾತನ ಹೆಸರು: ಶ್ರೀಪಾಲನಾಚಾಸ್ಯ ಧರ್ಮ್ಮಗಾವುಣ್ಡ ಪುತ್ರಱ ಪ್ರಾತಿಷ್ಠಿಪಟ್ಟಿಲಾಪಟ್ಟಂ ಸ್ಥೀಯಾದಾಚನ್ದ್ರತಾರಕಂ (ಸೌಇಇ. XX, ೯-೦೪: ಸು. ೩ನೆಯ ಶತ). [ ಧರ್ಮ + ಗಾಮುಂಡ ]

**ಧರ್ಮಗಾರಿಯ** (ನಾ). = ಧರ್ಮಕಾರ್ಯ೨: ಯಾ ಮರಿಯಾದೆಯುಉ ಧರ್ಮ್ಮಗಾರಿಯವನು ನಡಸುವರು (ಎಕ. XI, ಹೊಳಕೆ. ೬೪-೨೦: 1406 ?). [ <ಸಂ. ಧರ್ಮಕಾರ್ಯ ]

**ಧರ್ಮಗಾಳೆ** 'ಧರ್ಮಗಹಳೆ' ನೋ.

**ಧರ್ಮಗುಣ** (ನಾ). ೧. ಸತ್ಕರ್ಮವನ್ನು ಮಾಡುವ ಗುಣ; ಸದ್ಗುಣ: ವನಜದ್ವಿಟ್ಸುತನೊಂದಿದಂದುದಯದೊಳ್ ಪ್ರಾಜ್ಞಂ . . . ಜಾಮಿತ್ರು ಕೇತನದೊಳ್ ಧರ್ಮಗುಣಾನ್ವಿತಂ (ಜಾತಿ. ೦೪-೧೦). ೨. ಬಿಲ್ಲಿನ ಹೆದೆ: ಸೊಗಯಿಪ ಧರ್ಮಗುಣಂಗಳನಗಲಿದೊಡಾಕ್ಷಣದೊಳ್ಸ್ಯರಂ ಕೊಂದವ ವಂಬುಗಳೆಂದಡೆ ವಿರಹಿತಧರ್ಮಗುಣರ್ ಪೆಱರೇ ವಿಘಾತಿಸು ವುದದ್ಭುತಮೇ (ಜಾಧಪು. ೧೩-೬೩). ೧, ೨: ಕೃತವಿದ್ಯರ ಭೀಕರಶರ ತತಿ ಮೊಳೆತೇವಂತೆ ಸಮೆದು ಬಿಟ್ ಸಂಗರದೊಳ್ ಗತಿಗಂತುಟು ಧರ್ಮಗುಣಚ್ಯುತದಿ ನರ್ಥೋಗತಿಗೆ ಬೀಱ್ವುದೊಂದಚ್ಚರಿಯೇ (ಗದಾಯು. ೪-೩೩); ಕಡುವೇಗಿ ಧರ್ಮ್ಮಗುಣಮಂ ಬಿಡುವುದು ಖರದೂಷಣಾನ್ವಿತಂ ಮೂದಲೆಯಂ ಪಡೆದುದು ಬಲ್ಲಾಳನ ದಿಟನುಡಿಯೊಳ್ಪಡಿಯಾ ಗಲಾಪ್ಪ್ರ್ರದೇ ರಾಮಶರಂ (ಎಕ. V, ಬೇಲೂರು. ೦೭೩-೯; 1186). [ ಧರ್ಮ + ಗುಣ ]

**ಧರ್ಮಗುತ್ತಿ** (ನಾ). ಒಂದು ಬಗೆಯ ಬತ್ತ: ಕುಂದದ ಚಂದ್ರುಲೇಖೆ . . . ನಿರಂತರಮೊಪ್ಪುವ ಧರ್ಮಗುತ್ತಿಯೆಂಬಂದನೇಕ ನಾಮವೆಸೆಗಂ ಮೃದುಬಂಧುರ ಗಂಧಶಾಲಿಗಳ್ (ಮಲ್ಲಿಕಾ. ೯-೬೪). [ ? ]

**ಧರ್ಮಗುರು** (ನಾ). ಧರ್ಮಮಾರ್ಗವನ್ನು ಉಪದೇಶಿಸುವ ಗುರು: ಶ್ರೀಮನ್ನಾಗಸ್ವಾಮಿ × × × ಧರ್ಮ್ಮಗುರುಗಳಲ್ಲಿ ಜಪಳ[ಗು]ಳವಂ ಮೃನ್ನಣೆ ಪ್ರತಿಪತ್ತಿವೆರಸು ಬ್ರಹ್ಮಪುರಿಗೆ ಕೇರಿಯು [ಕೆ]ಯ್ಯುಮಂ . . . ಪಡೆದು (ಸೌಇಇ. XI-I, ೬೪-೦೮: 1028); ಡಾ. ಆಬಟ್‌ರು ಆಗ ಟಳಕರ ಧರ್ಮಗುರುವಾಗಿದ್ದರೆಂದು ಹೇಳಲಡ್ಡಿಯಿಲ್ಲ (ಸ್ಮೃತಿಚಿ. ೦೪೭). [ ಧರ್ಮ + ಗುರು$_2$ ]

**ಧರ್ಮಗೇಹ** (ನಾ). ೧. ಧರ್ಮಕ್ಕೆ ಆಶ್ರಯವಾದುದು: ಧರ್ಮದ ನೆಲೆ: ನಿಜನೇತ್ರಂ ಲೋಕನೇತ್ರಂ ನಿಜಭರಣಮಿಳಾಚಕ್ರಭಾರಾವಹಂ ಮೇಣ್ ನಿಜವಾಹಂ ಧರ್ಮಗೇಹಂ ನಿಜಧನು ದನುಜಾರಾತಿಜಾತಾಧಿವಾಸಂ . . . ಕು ಡು ಗೆ ಮ ಗ ತು ಳ ಶ್ರೇಯಮಂ ಶೈಲಜೇಶಂ (ರಾಜಶೇ. ೦-೨). ೨. [ಜ್ಯೋತಿ] ಜಾತಕನ ಜನ್ಮಲಗ್ನದಿಂದ ಒಂಬತ್ತನೆಯ ಸ್ಥಾನ. [ ಧರ್ಮ + ಗೇಹ ]

**ಧರ್ಮಗೊಡ್ಡು** (ನಾ). ೧. ಕಂದಾಚಾರದಲ್ಲಿ ನಿಷ್ಠೆ; ವ್ಯವಹಾರಜ್ಞಾನವಿಲ್ಲದಿರುವಿಕೆ: ಧರ್ಮಗೊಡ್ಡಿನ ಹುಚ್ಚನೀ ನಮ್ಮವನ ಕಯ್ಗೆ ಈ ಶಾಸನವು ದೊರೆವಟ್ಟು (ಮಂತ್ರಶಿ. ೧೩-೧೦). ೨. ವ್ಯವಹಾರಜ್ಞಾನವಿಲ್ಲದಿರುವ ವ್ಯಕ್ತಿ; ಕರ್ಮಠ. [ ಧರ್ಮ + ಗೊಡ್ಡು$_1$ ]

**ಧರ್ಮಗೊಳಗ** (ನಾ). ಕಣದ ಧಾನ್ಯರಾಶಿಯಲ್ಲಿ ಧರ್ಮಕ್ಕಾಗಿ ಮೊಟ್ಟಮೊದಲು ತೆಗೆದಿಡುವ ಒಂದು ಕೊಳಗದಷ್ಟು ಧಾನ್ಯ: ಅದಱ ಸೀಮೆ ಮಾಡಲು ವಿರಟನ ದಿಬ್ಬೆ ಬಡಗ ಕೈರವಿಯ ಹಳ್ಳ ತೆಂಕ ಕಱಯ ಹಳ್ಳಂ ಮೇರೆ ಕಱಯ ಕೊರಲು ದೇವಗೊಳಗಂ ಧರ್ಮಗೊಳಗವೆರಡು ದೇವರ ನಂದಾದೀವಿಗೆಗೆ ಬಿಟ್ಟ ಗಾಣವೆರಡು (ಎಕ. XI, ಚಳ್ಳಕೆ. ೨೦-೩೭: 1087). 'ದೇವಗೊಳಗ' ಪರಾ. [ ಧರ್ಮ + ಕೊಳಗ$_1$ ]

**ಧರ್ಮಗೋಷ್ಠಿ** (ನಾ). ಧಾರ್ಮಿಕ ಪ್ರವಚನಗಳ ಸಭೆ, – ಕೂಟ: ಮಸೀದಿಗಳಲ್ಲಿ ಕೊರಾನಿನ ಪಠನದ ಮೂಲಕ ನಡೆಯುವ ಸನ್ಮಾರ್ಗಬೋಧನೆಯೂ ಹಿಂದೂದೇವಾಲಯಗಳಲ್ಲಿ ನಡೆಯುವ ಧರ್ಮಗೋಷ್ಠಿಗಳೂ . . . ಉತ್ತಮವೂ ಉದಾತ್ತವೂ ಆದ ಸಮಾಜನಿರ್ಮಾಣಕ್ಕೆ ನೆರವಾಗುತ್ತಿವೆ (ಶಿಕ್ಷದ. ೬೩). [ ಧರ್ಮ + ಗೋಷ್ಠಿ ]

**ಧರ್ಮಗೌರವ** (ನಾ). ಧರ್ಮದ ಬಗೆಗೆ ಇರುವ ಆದರ; ಧರ್ಮವನ್ನು ಕುರಿತ ಶ್ರದ್ಧೆ: ಈ ಕ್ರೂರಜನರ ನಡತೆಯಿಂದ ನಿನ್ನ ಧರ್ಮಗೌರವವೆಲ್ಲಾ ಹೋಗಿ ಬಿಟ್ಟಂತೆ ಕಾಣುತ್ತದೆ (ವಕಥಾ. ೯೯). [ ಧರ್ಮ + ಗೌರವ ]

**ಧರ್ಮಗ್ರಂಥ** (ನಾ). ಮತದ ಪ್ರಕ್ರಿಯೆ, ತತ್ತ್ವ, ವಿಧಿ ಮುಂತಾದುವುಗಳನ್ನು ವಿವರಿಸುವ ಗ್ರಂಥ; P ವೇದ, ಬೈಬಲ್ಲು, ಕೊರಾನು ಮುಂತಾದುವು: ವೈದಿಕರೂ ಅವೈದಿಕರೂ ಪರಸ್ಪರರ ಧರ್ಮಗ್ರಂಥಗಳ ಅಧ್ಯಯನವನ್ನು ಮಾಡಬಹುದಲ್ಲವೆ? (ಮಾರಿವ. ೪೨೦); ಲಕುಲೀಶ–ಪಾಶುಪತದ ಧರ್ಮಗ್ರಂಥಗಳು ದೊರಕಿದಂತೆ ಕಾಳಾಮುಖರ ಧರ್ಮಗ್ರಂಥಗಳು ಪ್ರತ್ಯೇಕವಾಗಿ ದೊರೆತಿಲ್ಲ (ಕಹಾಅ. ೦೩೩). [ ಧರ್ಮ + ಗ್ರಂಥ ]

**ಧರ್ಮಗ್ಲಾನಿ** (ನಾ). ಧರ್ಮದ ಹಾನಿ; ಧರ್ಮ ನಷ್ಟವಾಗುವಿಕೆ: ಕೃಷ್ಣಾವತಾರವಾದದ್ದು ದ್ವಾಪರಯುಗದ ಅಂತ್ಯದಲ್ಲಿ ನಡೆದ ಧರ್ಮಗ್ಲಾನಿಯ ಕಾರಣದಿಂದ (ಭಾರಿದ. ೧೦೪); ಅರ್ಜುನನ ಅಳಲಿಗೆ ಕಾರಣ . . . ವರ್ಣಸಾಂಕರ್ಯ, ವರ್ಣಸಾಂಕರ್ಯದಿಂದ ಧರ್ಮಗ್ಲಾನಿ, ಧರ್ಮಗ್ಲಾನಿಯಿಂದ ನರಕಪ್ರಾಪ್ತಿ (ಭಾರಿದ. ೧೧೨). [ ಧರ್ಮ + ಗ್ಲಾನಿ ]

**ಧರ್ಮಘಾತಕ** (ನಾ). ೧. ಧರ್ಮದ ಉಲ್ಲಂಘನೆ; ಧರ್ಮದ್ರೋಹ: ನನ್ನನ್ನು ಕೋರದೆಯೇ ನೀನು ಆ ರಾಜನ ಸಹವಾಸ ಮಾಡಿದ್ದು ಧರ್ಮಘಾತಕವೇನಲ್ಲ (ವಕಥಾ. ೩೯೩). ೨. ಧರ್ಮವನ್ನು ಉಲ್ಲಂಘಿಸುವವನು; ಧರ್ಮದ್ರೋಹಿ. [ ಧರ್ಮ + ಘಾತಕ ]

**ಧರ್ಮಚಕ್ರ** (ನಾ). ೧. ಧರ್ಮಸಾಮ್ರಾಜ್ಯ; ಧರ್ಮವುಳ್ಳ ಚಕ್ರಾಧಿಪತ್ಯ. ೨. ಧರ್ಮರಕ್ಷಣೆ ಮಾಡಿದ ಚಕ್ರಾಯುಧವನ್ನು ಧರಿಸಿದವನು; ವಿಷ್ಣು. ೧, ೨: ಪ್ರತಿಪಾಲಿತಧರ್ಮಚಕ್ರಂ . . . ಈ ಚಳುಕ್ಯನಾರಾಯಣದೇವನೀಗೆಮಗೆ ಮಂಗಳಕಾರಣಮುತ್ತಮಂಗಳಂ (ಗದಾಯು. ೧-೧). ೩. ಬುದ್ಧ. ೪. [ಬೌದ್ಧ] ಧರ್ಮದ ಸಂಕೇತವಾದ ಚಕ್ರ: ಭರತಖಂಡದ ರಾಷ್ಟ್ರ

ಧ್ವಜದಲ್ಲಿ . . . "ಧರ್ಮಚಕ್ರ" ವಿಶ್ವಸಾಮರಸ್ಯವನ್ನು ಸಾಕ್ಷಾತ್ಕರಿಸಿದ ವೈದಿಕಋಷಿಗಳ ದಿವ್ಯಸಂದೇಶದ ಪ್ರತೀಕ (ಹುಕ್ಮಾರ. ೧೭೭ ಹಿ೬೦೪); ಸಕಲ ಜಗತ್ತಿಗೂ ಮಾರ್ಗದರ್ಶಕವಾಗಿರಬೇಕೆಂದು ನೆಹರೂ ಅವರು ವೇದ ಪ್ರಶಂಸಿತವಾದ ಆದಿತ್ಯನ ಧರ್ಮಚಕ್ರವನ್ನೂ . . . ರಾಷ್ಟ್ರಧ್ವಜದಲ್ಲಿ ಅಳವಡಿಸಿ (ಹುಕ್ಮಾರ. ೧೩೦ ಹಿ೬೦೪); ಎಂತಾದರು ಈ ದುರಂತಕಿಹುದೆ ಕೊನೆಯ ಅಂಕವು? 'ಸಂಭವಾಮಿ ಯುಗೇಯುಗೇ' ಆಗೋ ಧರ್ಮಚಕ್ರವು (ನೆರಮು. ೪೦-೩೪); ಬೌದ್ಧರಿಗೆ (ಹೀನಯಾನ) ಪೂಜಾರ್ಹವಾದ ಸಂಕೇತ ಗಳನ್ನು ಮೂರು ಗುಂಪುಗಳನ್ನಾಗಿ ವಿಭಾಗಿಸಬಹುದು . . . (iii) ಉದ್ದೇಶಿತ: ಸ್ತೂಪ, ಧರ್ಮಚಕ್ರ ಮತ್ತು ತ್ರಿರತ್ನಚಿಹ್ನೆಗಳು ಇದರಲ್ಲಿ ಮುಖ್ಯವಾದುವು (ಭಾರದ. ೪೯೫). 'ಧರ್ಮಚಕ್ರಪ್ರವರ್ತನ' ಪರಾ. ೫. [ಜೈನ] ತೀರ್ಥಂಕರನು ವಿಹಾರ ಮಾಡುವ ಸಮಯದಲ್ಲಿ ಆತನ ಮುಂದೆ ಚಲಿಸುವ, ಸೂರ್ಯನನ್ನು ಮೀರಿಸುವ ಪ್ರಕಾಶದಿಂದ ಕೂಡಿದ, ಸಾವಿರ ಅರಗಳನ್ನುಳ್ಳ ಚಕ್ರ: ಜನಚಂದ್ರದೇವಂ ನಡೆಯೆ ಧರ್ಮಚಕ್ರಂ ಮುಂದೆ ನಡೆಯೆ (ಶಾಂತಿಪು. ೧೩-೧೯ ವ); ಪಸರಿಸಿದ ಕುತೀರ್ಥಧ್ವಾಂತಮಂ ತೂಳ್ದಿ . . . ಪೊಱ ವಿಶದವಿಭವತೇಜ ಶ್ಚಕ್ರವರ್ಕಂಬೊಲುದೆ ್ಮೆಸಿಸು ಸಕಲಧಾತ್ರೀಚಕ್ರದೊಳ್ ಧರ್ಮಚಕ್ರಂ (ಅಜಿಪು. ೧-೧೭); ಪಡೆದಚ್ಚರಿಯಿಂ ಸಹಸ್ರಭಾನು ತ್ವಿ [ಡ] ದುದ್ಯೋತಿ ಸುರೇಂದ್ರಕಲ್ಪಿತಾರ್ಘ್ಯಂ ಕಿಡೆ ದುರ್ವರ್ತದುಸ್ತಮ ಪ್ರಭಾವಂ ನಡೆಗುಂ ಸಂದಿಸಿ ಮುಂದೆ ಧರ್ಮಚಕ್ರಂ (ವರ್ಧಮಾ. ೧೯-೩೭). ೬. ಯಕ್ಷರ ತಲೆಯ ಮೇಲೆ ಸಮವಸರಣಕಾಲದಲ್ಲಿ ಇರುವ ಚಕ್ರಾಕಾರವಾದ ಒಂದು ಬಗೆಯ ಆಭರಣ: ಧರ್ಮಚಕ್ರಪರಚಕ್ರಮನಾಕ್ರಮಿಸಲ್ಕೆ ಸಾಲ್ದ ಭಾಸುರತರ ತೀವ್ರತೇಜದಪರಾಜಿತ ಮಾಟ್ಕೆಮುತಿಪ್ರಕಾಶವಂ (ಮಲ್ಲಿಪು. ೧-೯); ನಾಲ್ಕುಂ ದೆಸೆಯೊಳಂ ಧರ್ಮಚಕ್ರಮಂ ಧರಿಯಿಸಿರ್ದ ಯಕ್ಷೇಂದ್ರರಿಂ . . . ಪ್ರಥಮಪೀಠಮಕ್ಕುಂ (ಹಸಾರ. ೫೭೭). ೭. ಚಕ್ರಾ ಕಾರವಾದ ಒಂದು ಬಗೆಯ ಆಭರಣವನ್ನು ಧರಿಸಿರುವವನು: ಆದಜ ನಾಲ್ಕುಂ ದಿಙ್ಮುಖಂಗಳೊಳ್ . . . ಧರ್ಮ ಚಕ್ರರ್. ಯಕ್ಷರ್ಕಳಿರ್ವರ್ (ಮಹಾನೇ. ೧೫-೭೮ ವ). [ಧರ್ಮ + ಚಕ್ರ$_1$]

**ಧರ್ಮಚಕ್ರಪ್ರವರ್ತನ** (ನಾ). ೧. [ಬೌದ್ಧ] ಧರ್ಮಚಕ್ರವನ್ನು ಚಲಿಸು ವಂತೆ ಮಾಡುವುದು. ೨. "ಬುದ್ಧನು ಮಾಡಿದ ಮೊತ್ತಮೊದಲನೆಯ ಉಪದೇಶಕ್ಕೆ 'ಧರ್ಮಚಕ್ರಪ್ರವರ್ತನ' ವೆಂದೂ ಆತನ ವಚನಗಳ ಮಣಿಹಾರಕ್ಕೆ 'ಧರ್ಮಪದ'ವೆಂದೂ ಹೆಸರು" (ಭಾರದ. ೧೯೨): ನಾಲ್ಕು ಆರ್ಯಸತ್ಯಗಳನ್ನು ಭಗವಂತನು ತನ್ನ ಮೊದಲ ಶಿಷ್ಯರಿಗೆ ವಿಶದೀ ಕರಿಸಿದನು. ಈ ಪ್ರಸಂಗವನ್ನು "ಧರ್ಮಚಕ್ರಪ್ರವರ್ತನ" ಎಂದು ಕರೆದಿ ದ್ದಾರೆ. ಇಲ್ಲಿ 'ಚಕ್ರ'ವೆಂದರೆ 'ರಾಜ್ಯ'. ಭಗವಂತನು ಧರ್ಮರಾಜ್ಯವನ್ನು 'ಪ್ರವರ್ತನ' ಮಾಡಿದನೆ ಹೊರತು 'ಸ್ಥಾಪನ' ಮಾಡಲಿಲ್ಲವೆಂಬ ಒಳ ಅರ್ಥ ವನ್ನು ಇಲ್ಲಿ ಗಮನಿಸಬಹುದು (ಭಾರದ. ೧೯೭); ಭಗವಂತನು ಧರ್ಮಚಕ್ರ ಪ್ರವರ್ತನವನ್ನು ಗೈದಾಗ . . . ಅನೇಕ ದೇವತೆಗಳೂ ಧರ್ಮವನ್ನು ಕಂಡುಕೊಂಡರು (ಬುದ್ಧಪ. ಮಿಲಿಂದ. ೨೫). [ಧರ್ಮಚಕ್ರ + ಪ್ರವರ್ತನ]

**ಧರ್ಮಚಕ್ರಮುದ್ರೆ** (ನಾ). [ಶಿಲ್ಪಶಾ] (ಬುದ್ಧನ) ಮೂರ್ತಿಶಿಲ್ಪದ ಒಂದು ಭಂಗಿ,-ಮುದ್ರೆ: ವೈರೋಚನನ ಪ್ರತಿಮೆಯು "ಧರ್ಮಚಕ್ರ ಮುದ್ರೆ" ಇಂದಲೂ ಅಕ್ಷೋಭ್ಯಬುದ್ಧನ ಪ್ರತಿಮೆಯು 'ಭೂಮಿಸ್ಪರ್ಶ' ಮುದ್ರೆಯಿಂದಲೂ . . . ಕೂಡಿರುತ್ತವೆ (ಭಾರದ. ೫೧೪).

[ಧರ್ಮಚಕ್ರ + ಮುದ್ರೆ]

**ಧರ್ಮಚತ್ರ**, ಧರ್ಮಛತ್ರ (ನಾ). ಧರ್ಮಾರ್ಥವಾಗಿ ಊಟ ವಸತಿ ಗಳನ್ನು ಒದಗಿಸುವ ಸ್ಥಳ: ಮೈಸೂರಿನಲ್ಲಿರುವ ಪೂರ್ಣಯ್ಯನವರ ಧರ್ಮಚತ್ರವು ಹಿಂದಿನ ಕಾಲದಿಂದಲೂ ಬಡಬಗ್ಗರಿಗೆ ಆಶ್ರಯ ನೀಡುತ್ತಿದೆ (ರೂಢಿ). **ಧರ್ಮಛತ್ರ**: ರಂಗಮ್ಮನ ವಠಾರವೇನು ಧರ್ಮಛತ್ರ ಕೆಟ್ಟು ಹೋಯ್ತೆ? (ರಂಗವ ೩೨); ಆ ಧರ್ಮಛತ್ರದ ಆವಾರದಲ್ಲಿ . . . ವಸುಮತಿಯೂ ಒಬ್ಬಳಾಗಿ ನಿಂತಳು (ಮುತ್ತುಮು. ೦೬೫).

[<ಸಂ. ಧರ್ಮಸತ್ರ]

**ಧರ್ಮಚರಿತ** (ನಾ). = ಧರ್ಮಚಾರಿ: ಧರ್ಮಚರಿತ ದ:ರಿತದೂರ . . . ಪ್ರಪಂಚರಹಿತ ಪರಾಪರ (ಸಿದ್ಧೇವ. ೩-೭). [ಧರ್ಮ + ಚರಿತ]

**ಧರ್ಮಚಾರಿ** (ನಾ). ಧರ್ಮಮಾರ್ಗದಲ್ಲಿ ನಡೆಯುವವನು; ಧರ್ಮ ವನ್ನು ಆಚರಿಸುವವನು: ಧರ್ಮವೇ ಖಂಡಿತವಾಗಿಯೂ ಧರ್ಮಚಾರಿ ಯನ್ನು ರಕ್ಷಿಸುತ್ತದೆ (ಭಾರದ. ೧೯೩). [ಸಂ. ಧರ್ಮಚಾರಿನ್]

**ಧರ್ಮಚಿಂತಾಪನ್ನೆ** (ನಾ). ಧರ್ಮಾಚರಣೆಯ ಕ್ರಮವನ್ನು ಕುರಿತು ಚಿಂತೆಗೆ ಒಳಗಾದವಳು: ನಿನ್ನ ನೆನೆದಂಗನೆಗೆ ಬಹುದು ಪತಿವ್ರತಾಭಾವ ಎನ್ನನುಜ್ಜೆಗೆ ಧರ್ಮಚಿಂತಾಪನ್ನೆಯಾಗದಿರೆಂದು ಕೃಪೆಯುಲ್ಲಿ ತನ್ನ ಸಿರಿಕರ ತಳವನಿರಿಸಿದನುತ್ತಮಾಂಗದಲಿ (ಕುಮಾವ್ಯಾ. ೧೭-೩೨).

[ಸಂ. ಧರ್ಮಚಿಂತಾಪನ್ನಾ]

**ಧರ್ಮಚಿಂತಾಯಕ** (ನಾ). ಧರ್ಮವನ್ನು ಕುರಿತು ಚಿಂತಿಸುವವನು: ಸಿದ್ಧಾರ್ಥಸೆಟ್ಟಿಪಂ . . . ಭಾನುದತ್ತಶೆಟ್ಟಿಯ ಧರ್ಮಚಿಂತಾಯಕನಪ್ಪ ಧನದತ್ತನ ಸಮಿಪದೊಳಿರಿಸಿ (ಮಹಾನೇ. ೪-೧೧೯ ವ).

[ಧರ್ಮ + ಚಿಂತಾಯ:ಕ]

**ಧರ್ಮಚಿಂತೆ** (ನಾ). ಧರ್ಮದಲ್ಲಿ ಆಸಕ್ತಿ; ಧರ್ಮವನ್ನು ಕುರಿತ ಎಣಿಕೆ; ಧರ್ಮಬುದ್ಧಿ: "ಉಪಾಸ್ತಿ:, ಧರ್ಮಚಿಂತಾ-ಈ ೨ ಧರ್ಮಬುದ್ಧಿ" (ಹಲಾಯು. ೦೨೭-೮೫); ಅನುಪಮ ಧರ್ಮಚಿಂತೆ . . . ಕಿಂಕರರ ಪರಿವರ್ತನ ಕ್ರಿಯೆಯ ಸಮ್ಮದದೊಳ್ ಸಲೆ ಕೂಡಿ ತದ್ದರಾಮರನಖಿಲಾವನೀವಳಯಮಂ ಪರಿಪಾಲಿಸುತಿರ್ದಂ (ಮಹಾನೇ. ೩-೩೨). [ಸಂ. ಧರ್ಮಚಿಂತಾ]

**ಧರ್ಮಚಿತ್ತ** (ನಾ). ಧರ್ಮಬುದ್ಧಿ: ಧರ್ಮಿಷ್ಠತೆ: ಬರ್ಮಗಾವುಣ್ಣಂ ಧರ್ಮಚಿತ್ತದೊಳ್ಳೆಗಳ್ದು . . . ಧಾರಾಪೂರ್ವ್ವಕದಿಂ ಬೆಂಗೇರಿಯ ಕೆಱೆಯ ಕೆಳಗೆ ಬಟ್ಟ ಗಟ್ಟಿ ಮತ್ತರೊನ್ದು (ಸಾಇಇ. XX, ೩೫-೦೦; 1055).

[ಧರ್ಮ + ಚಿತ್ತ]

**ಧರ್ಮಚ್ಯುತ** (ನಾ). ಧರ್ಮವನ್ನು ಬಿಟ್ಟವನು; ಧರ್ಮಭ್ರಷ್ಟ; ಧರ್ಮಮಾರ್ಗದಿಂದ ದೂರವಾದವನು: ರಾಜನನ್ನು ಕೊಂದು ಧರ್ಮಚ್ಯುತನಾದ ಇವನಿಗೆ ಪೂಜೆ ಮಾಡಿದೆಯಲ್ಲಾ, ಇಂಥ, ನೀನು ಧರ್ಮಾತ್ಮ ಹೇಗಾದೀಯೆ? (ವಚಭಾ. ೮೨). [ಧರ್ಮ + ಚ್ಯುತ]

**ಧರ್ಮಚ್ಯುತಿ** (ನಾ). ೧. (ಕೈಕೊಂಡ) ಧರ್ಮವನ್ನು ಬಿಡುವುದು; ಧರ್ಮಭ್ರಷ್ಟತೆ. ೨. ಬಿಲ್ಲನ್ನು ಬಿಟ್ಟುಹೋಗುವುದು; ಬಿಲ್ಲಿನಿಂದ ಚಿಮ್ಮಿ ಮುಂದಕ್ಕೆ ಹೋಗುವುದು. ೧, ೨: ಧೃತಧರ್ಮಚ್ಯುತಿ ಬಾಣಸಂಹತಿಗೆ ಬದ್ಧಾವೈಕೃತಂ ವಾರಣಕ್ಕೆ ತವಃಸಂಗತಿ ರಾತ್ರಿಗೆ . . . ಜನಕ್ಕಿಲ್ಲಲ್ಲಿ ಬೇಟೆಲ್ಲಿಯುಂ (ಪುಷ್ಪಪು. ೨-೩೯). [ಧರ್ಮ + ಚ್ಯುತಿ]

**ಧರ್ಮಛತ್ರ** 'ಧರ್ಮಚತ್ರ' ನೋ.

**ಧರ್ಮಜ** (ಗುಂ). ೧. ಧರ್ಮಬುದ್ಧಿಯಿಂದ ಹುಟ್ಟಿದ. (ನಾ). ೨. ಯಮ ಧರ್ಮನ ಮಗ; ಪಾಂಡವರಲ್ಲಿ ಹಿರಿಯ; ಯುಧಿಷ್ಠಿರ: "ಪಾಂಡವಂ ಧರ್ಮಜಂ ಯುಧಿಷ್ಠಿರನು ಧರ್ಮಪುತ್ರನೆಂದೆನಿಕುಂ" (ಮಂಗರಾ. ೭೮-೩); ಕಃ ಕೇನಾರ್ಥೀ ಕೋ ದರಿದ್ರಃ ಎನುತುಮನಿತುಮಂ ಧರ್ಮಜಂ ಸೂಱೆಗೊಟ್ಟಂ (ಪಂಪಭಾ. ೭-೪೦); ಹರಿ ಕೇಳ್ ಧರ್ಮಜ ಕೇಳ್ ಸುರೇಂದ್ರಸುತ ಕೇಳ್ ಮಾದ್ರೀಸುತರ್ ಕೇಳಿಮಿರ್ವರುಮಿಂತೆಯ್ದಿದುದಲ್ತೆ . . . ಭೀಮಪ್ರತಿಜ್ಞಾಕ್ಷರಂ (ಗದಾಯು. ೮-೭೪); ಜೂಜನಾಡಿ ಧರ್ಮಜ ಮುಖ್ಯರೆಳದರು (ಬಸಪು. ೪೪-೭೪); ವಾರುವದ ಖುರ ನಾಲ್ಕಱಲಿ ಮಣಿಚಾರು ಕನಕದ ಸುರಿದು ಧರ್ಮಜ ತೇರನೇಱಿದನು (ಕುಮಾವ್ಯಾ.ಭೀ. ೧-೬೨);

ನಿರ್ಮಲವಾಜಿಯಂ ಸುವೇಗಂ ತಂದು ನಿಲಿಸಿದಂ ಧರ್ಮಜನ ಸಮ್ಮುಖದೊಳೆ (ಜೈಮಿಭಾ. ೫-೧೧). ೩. ಬಿಳಿಯ ಹಕ್ಕಿ ; ¶ ಧರ್ಮಜ ನೆಂದರೆ ಪಾಂಡವ. 'ಪಾಂಡವ' ಶಬ್ದಕ್ಕೆ 'ಬಿಳಿಹಕ್ಕಿ' ಎಂಬರ್ಥವೂ ಉಂಟು : ಸುರಪತಿಯ ಬೆಳ್ಕಡಿಯ ರಥಚರಣದ ಪಾವಕನ ಮಾನಿಯ ಧರ್ಮಜನ ಲಸತ್ಸ್ವರಗದ ಗಜಗಂಡದ ಭಾಸುರವಾದ್ಯದ ಪೆಸರ ಖಗಕುಳಂ ಕರಮೆಸೆಗುಂ (ರಾಜಶೇ. ೫-೭೦). ೪. ಔರಸಪುತ್ರ. [ ಸಂ. ]

**ಧರ್ಮಜನಕ** (ನಾ). ೧. ಯಮನ ತಂದೆ ; ಸೂರ್ಯ. ೨. ಧರ್ಮವನ್ನು ಪ್ರಚಾರ ಮಾಡುವವನು; ಧರ್ಮಿಷ್ಠ. ೧, ೨ : ಕಮಳಾನಂದನಕಾರಿ ಚಾರುಕಮಳ ಪ್ರೋದ್ಭಾಸಿಹಸ್ತಂ ವಿರೋಧಿವಿದಧ್ವಾಂತವಿಭೇದಿ ಧರ್ಮ್ಮಜನಕಂ ಸನ್ಮಾರ್ಗವಿದ್ಯೋತನಂ . . . ಲೋಕಮನೆಲ್ಲಂ ಬೆಳಗುತ್ತ ಮಿರ್ಕ್ಕೆ ದೊರೆವೆತ್ತಾದಿತ್ಯನತ್ಯೂರ್ಜ್ಜಿತಂ (ಎಕ. VI, ಕಡೂರು. ೬೬-೩೮ ; 1172). [ ಧರ್ಮ + ಜನಕ ]

**ಧರ್ಮಜಾಗೃತಿ** (ನಾ). ಧರ್ಮವು ಉಚ್ಛ್ರಾಯಸ್ಥಿತಿಯಲ್ಲಿರುವುದು: ಭಾರತದಲ್ಲಿ ಅನೇಕ ಮಹಾತ್ಮರು ಜನಿಸಿ ಧರ್ಮಜಾಗೃತಿಯನ್ನುಂಟು ಮಾಡಿದ್ದಾರೆ (ರೂಢಿ). [ ಧರ್ಮ + ಜಾಗೃತಿ ]

**ಧರ್ಮಜ್ಞ** (ನಾ). ಧರ್ಮವನ್ನು ಬಲ್ಲವನು : ಧರ್ಮಜ್ಞರಧರ್ಮಮೆನೆ ವಾರ್ಧಕರಸಂಬದ್ಧಮೆನೆ . . . ಸಮುದ್ರಕ್ಷೋಭದಂತೆ ಘೂರ್ಣಿಸುವ ಜನಕ್ಷೋಭಮುಂ ಕೈಕೊಳ್ಳದೆ (ಆಗಿಪು. ೨-೫೩ವ) ; ಕಾರುಣಿಕರ್ ಧರ್ಮಜ್ಞರ್ ಚಾರಿತ್ರಸಮೇತರೆನಿಪ ನಿಮ್ಮನ್ನರನಾಗಾರತೆಯಿಂ ಪಾವನ ಮನಗಾರತೆಯಿಂದೆಸಗುವೆಸಕಮಿಂ ಪೆಱತುಂಟೇ (ಚಂದ್ರಪ್ರ ೯-೯೦); ಧರ್ಮ್ಮಜ್ಞನೇ ಧರ್ಮ್ಮಜಂ ಬಲವದ್ವೈರಿಮದಪ್ರತಾಪಹ[ರ]ನೇ ಅಮ್ಮಮ್ಮ ತಾನನ್ನಕಂ . . . ಬುಧನುತ ಶ್ರೀನಾಕಭೂಪಾಳಕಂ (ಸೌಇಇ. XX, ೩೦೩-೬ ; ಸು. 12ನೆಯ ಶತ) ; ನೀನೆಲಾ ಧರ್ಮಜ್ಞನೆಂದಾ ಮಾನಿನಿಯರ ವಿವಾಹದಲಿ ನೀನೇನ ಮಾಡಿದೆ ಬೇಸಱಿಸಿ ಬಳಲಿಸಿದೆ ಬಾಲಕಿಯ (ಕುಮ್ಯಾ.ಸ. ೧೦-೯೦) : ಜನನಿ ಶಿಶುವನು ಸತ್ಕುಲೀನನು ವಿನುತ ಸದ್ವರ್ತನೆಯ ಸತ್ಪುರುಷನು ಸದಾ ಚಾರವನು ಸಜ್ಜನನಧಿಕ ಸದ್ಗುಣವ ಜನವನೈಶ್ವರಿಯವನು ಧರ್ಮಜ್ಞನು ಯಶೋಲಭ್ಯವನು ಸಲಹುವ ನೆನಹಿನವೊಲಭಿಮಾನರಕ್ಷೆಯ ಸತಿಯ ಕಪಿ ಕಂಡ (ತೊರರಾ. ೫-೩-೨೫). [ ಸಂ. ]

**ಧರ್ಮಜ್ಞತೆ** (ನಾ). ಧರ್ಮವನ್ನು ತಿಳಿದಿರುವಿಕೆ; ಧರ್ಮಜ್ಞನಾಗಿರುವಿಕೆ: ಯತಿಗಳಾದಿರಿ ನೀವು ರೋಷಚ್ಯುತರಲೇ ಬಳಿಕೇನು ಧರ್ಮಜ್ಞತೆಯ ನೆಲೆಗಳನಱಿದ ಮನವೆಱಗುವುದೆ ಕಾಳಗಕೆ (ಕುಮ್ಯಾ.ಉ. ೬-೨೧).
[ ಸಂ. ಧರ್ಮಜ್ಞತಾ ]

**ಧರ್ಮಡೋಣಿ** (ನಾ). (ದನಕರುಂ ಮೊದಲಾದುವುಗಳು ನೀರು ಕುಡಿಯುವುದಕ್ಕಾಗಿ) ಧರ್ಮಾರ್ಥವಾಗಿ ಕಟ್ಟಿಸಿದ ತೊಟ್ಟಿ ಅಥವಾ ದೋಣಿ : ನಂಮ ಗ್ರಾಮಕೆ ಧರ್ಮಡೋಣಿಗೆ ನೀರ ಹೊಯಿವದಕೆ ಉರಿಗೆ ಪಡುವಲು ಅಲದ ಮರನ ಪಟಯನು ಧರ್ಮಪತದ ನೀರ ಯೆತುವದಕೆ ನಾಲು ಸರ್ವಮಾನ್ಯವಾಗಿ ಬಿಟೆಉ . . . ಗಟ ತಿಂಮೋಜ ಗೊಪುಲಪಲಿ ಮಲ್ಲೋಜಯಿವರು ಮುಂತಾದ ಪ್ರೋಜುಗಳು ಧರ್ಮಡೋಣಿಗೆ ನೀರ ಎತುವ ಕಬಿನದ ಏತದ ಬಾನೆ ಕದಿನದ ಕಟ್ಟು ಯಿಷ್ಟಂ ಧರ್ಮವನು ತಪದೆ ನಡಸಿ ಬಾಹೆಉ (ಸೌಇಇ. IX-ii, ೬೭೦-೯ ; 1559).
[ ಧರ್ಮ + ಡೋಣಿ೩ (<ದ್ರೋಣಿ) ]

**ಧರ್ಮತತ್ಪರ** (ನಾ). ಧರ್ಮದ ಆಚರಣೆಯಲ್ಲಿ ಆಸಕ್ತನಾದವನು ; ಧರ್ಮಪರಾಯಣ : ಸಕಳಾಗಮಕೋವಿದರೆಂದು ಧರ್ಮ್ಮತತ್ಪರರಿವರೆಂದು ಕೂರ್ತ್ತು ಮಲಯಾಳ ತಪೋನಿಧಿ ದೇವಸಿಂಗಿಜೀಯರ ಪದಯುಗ್ಮಮಂ ಪಡೆದು ಕಚ್ಚಿದರ್ (ಸೌಇಇ. XX, ೯೯-೫೮ ; 1076?).
[ ಧರ್ಮ + ತತ್ಪರ ]

**ಧರ್ಮತನಯ** (ನಾ). ೧. ಯುಧಿಷ್ಠಿರ; ಧರ್ಮರಾಯ : ಶಶಾಂಕಸಂಕಾಶ ಯಶೋಧವಳಿತಭುವನಂ ಶಾಗಿದನವಯವದಿಂ ಬಂದು ಧರ್ಮತನಯನ ಬಲದೊಳ್ (ಪಂಪಭಾ. ೧೧-೩೯) : ಒಡವುಟ್ಟಿದನೆಂದಱಿದೊಡೆ ಕುಡುಗುಂ ರಾಜ್ಯಮನೆ ಧರ್ಮತನಯಂ ನಿನಗಾಂ ಕುಡಲಾರ್ತೆನಿಲ್ಲ (ಗದಾಯು. ೫-೧೯). ೨. ಧರ್ಮವನ್ನು ತನ್ನ ಬಳಿ ಕಲಿತ ಶಿಷ್ಯ, - ವಿದ್ಯಾರ್ಥಿ : ರಾಮದೇವಾಚಾರ್ಯನ ಧರ್ಮತನಯನಾದ ಜಯದೇವಪಂಡಿತನಿಗೆ . . . ಪೂಜಾರ್ಥವಾಗಿ ಕೊಟ್ಟನು (ಕಶಾಇಆ. ೮೯). ೩. ಧರ್ಮಶಾಸ್ತ್ರದ ಪ್ರಕಾರ ಮಗನೆನಿಸಿಕೊಳ್ಳುವವನು. [ ಧರ್ಮ + ತನಯ ]

**ಧರ್ಮತೂಂಬು** (ನಾ). ಧರ್ಮಾರ್ಥವಾಗಿ ಕಟ್ಟಿಸಿದ ತೂಬು : ಇದುವೆ ಸೊದೂಱು ನೊಯ್ಯಮಾಲರಯ್ಯಮ್ಮನ್ಗೆ ಧರ್ಮತೂಂಬುಂ ಕೊಟ್ಟರ್ (ಎಕ. XIV, ತಿರುಮ. ೨೫೩-೧೨ ; ಸು. 800). [ ಧರ್ಮ + ತೂಂಬು ]

**ಧರ್ಮದ** (ನಾ). ಧರ್ಮ ಮಾಡುವವನು; ಧರ್ಮಿಷ್ಠ : ಪ್ರಿಯಮಾದುದು ಧರ್ಮಂ ಪೃಥ್ವಿಯ ಸೂನುವಿನಿಂದಧರ್ಮಮುಂತದು ತಾನಪ್ರಿಯಮಾಯ್ತು ತನಗೆ ಸಹಜಾರಿಯಿಂದಮೇನಾ ಧರಾಧಿಪಂ ಧರ್ಮದನೋ (ವರ್ಧಮಾ. ೭-೫೫) : ಧರ್ಮದರಾಗೆ ಮೇಗೆ ಸುಖಿಯಪ್ಪುದು ಸಂದೆಯಮೆಂದು ಗೆಯ್ಯದಿರ್ಪೊಡದು ಮರುಳ್ತನಂ ತಗುಳ್ದಮಂದಿರಂ (ಬಂಹರಿ. ೧೧-೧೩).
[ ಸಂ. ]

**ಧರ್ಮದರ್ಶಿ** (ನಾ). ಛತ್ರ, ದೇವಾಲಯ, ಮಠ ಮುಂತಾದ ಸಾರ್ವಜನಿಕ ಸಂಸ್ಥೆಗಳಿಗೆ ಸೇರಿದ ಆಸ್ತಿಯನ್ನು ನೋಡಿಕೊಳ್ಳುವ ಗೌರವ ಸದಸ್ಯ ; ಟ್ರಸ್ಟಿ : ದೇವಸ್ಥಾನಕ್ಕೆ ಹೀಗೆ ಬಂದ ದತ್ತಿಗಳನ್ನು ರಕ್ಷಿಸಲು ನಾಲ್ಕಾರು ಜನರನ್ನು ಧರ್ಮದರ್ಶಿಗಳಾಗುವಂತೆ ಕೇಳಿಕೊಳ್ಳುತ್ತಿದ್ದರು (ಕಶಾಇ. ೦೬೯) : ಕಂದಾಯ ರಾಜ ಅಥವಾ ರಾಜಾಧಿಕಾರಿಗಳ ಸ್ವಂತ ವೇತನವಲ್ಲ ; ಅದು ಪ್ರಜೆಗಳಿಗೆ ಸೇರಿದುದು. ಅದಕ್ಕೆ ಅವರು ಬರಿಯ ಧರ್ಮದರ್ಶಿ ಮಾತ್ರ (ಭಾರದ. ೩೬೦) : ಅಂತರರಾಷ್ಟ್ರೀಯ ಹಣಕಾಸಿನ ವಿಷಯಗಳ ಬಗ್ಗೆ ಧರ್ಮದರ್ಶಿ (Trustee) ಅಥವಾ ಏಜೆಂಟ್ ಆಗಿ ವರ್ತಿಸುವುದು ಮೊದಲನೆಯ ಬಗೆಯ ಕಾರ್ಯಾಚರಣೆಯಾಗಿದೆ (ಅಂಕಸಂ. ೦೯೬). [ ಸಂ. ಧರ್ಮದರ್ಶಿನ್ ]

**ಧರ್ಮದರ್ಶಿಮಂಡಲಿ** (ನಾ). ಧರ್ಮದರ್ಶಿಗಳ ಸಮಿತಿ : ಭಗವಂತನಿಂದ ಸಂಸ್ಥಾಪನೆಗೊಂಡಿದ್ದ ಈ ಸುಸ್ಥಿರ ಸಂಸ್ಥೆಗೆ ಕೇವಲ ಮಾನವೀಯ ಸಂಸ್ಥೆಯಾದ ಧರ್ಮದರ್ಶಿಮಂಡಲಿಯ ರಕ್ಷಣೆ ಅತ್ಯಗತ್ಯವಾಗಿತ್ತು (ಪುನರು. ೩೯೩). [ ಧರ್ಮದರ್ಶಿ + ಮಂಡಲಿ ]

**ಧರ್ಮದಾಯ** (ನಾ). ಸಾರ್ವಜನಿಕ ಧರ್ಮಕಾರ್ಯಗಳನ್ನು ನಡೆಸುವುದಕ್ಕಾಗಿ ಬಿಟ್ಟುಕೊಟ್ಟ ದತ್ತಿ, - ಕಾಣಿಕೆ, - ದೇಣಿಗೆ : ಪೂರ್ವದಿಂದ ನಡೆದುಬರುತ್ತಿರುವ ದೇವದಾಯ ಬ್ರಹ್ಮದಾಯ ಧರ್ಮದಾಯ . . . ಉಂಬಳಿ ರಕ್ತಕೊಡಗೆ ಮುಂತಾದುವೇನೂ ಹೆಚ್ಚು ಕಡಮೆಯಾಗದಂತೆಯೂ . . . ನಮ್ಮ ಕರಣಿಕರು ಎಚ್ಚತ್ತಿರಬೇಕು (ಬಿರುಗಂ. ೩೬-೨೧).
[ ಧರ್ಮ + ದಾಯ೨ ]

**ಧರ್ಮದೀಕ್ಷೆ** (ನಾ). ಯಾವುದಾದರೂ ಒಂದು ಮತಕ್ಕೆ ಸೇರಿಸಿಕೊಳ್ಳುವಾಗ ಮಾಡುವ ಸಂಸ್ಕಾರ : ಕ್ರಿಸ್ತೀಯಧರ್ಮದ ಅಭ್ಯಾಸವಾದ ನಂತರ ನಾಲ್ಕುತಿಂಗಳಿಗೆ ಮುಂಬಯಿಯ ಭೇಂಡೀಬಜಾರದಲ್ಲಿರುವ ಅಮೆರಿಕನ್ ಮಿಶನ್ನದ ಚರ್ಚಿನಲ್ಲಿ ಧರ್ಮದೀಕ್ಷೆ ಕೊಟ್ಟರು(ಸ್ಮೃತಿಚಿ. ೧೪೬).
[ ಧರ್ಮ + ದೀಕ್ಷೆ ]

**ಧರ್ಮದೂರ** (ನಾ). = ಧರ್ಮಚ್ಯುತ : ಧರ್ಮದೂರನು ನಿನ್ನವನು ಸತ್ಕರ್ಮಬಾಹಿರನಾತ್ಮರಚಿತವಿಕರ್ಮದೋಷದೊಳಿಳಿವ ನಿನ್ನವನೆಂದನಾ ವಿದುರ (ಕುಮ್ಯಾ.ಉ. ೬೦೩. ೩-೦೩ ಹೆಚ್ಚಿನ ಪದ್ಯ).
[ ಧರ್ಮ + ದೂರ ]

**ಧೂಳೀಧ್ವಂಸ** (ನಾ). ಮಣ್ಣುಪಾಲಾಗುವಿಕೆ ; ನಾಶ ; ಹಾಳಾಗುವಿಕೆ : ನೆಲಕ್ಕೂ ಭೂಮಿಗೂ ನಡುವೆ ಮಿಂಚು ಬಡಿಯುವುದು. ಇಂಥ ಬಡಿತಕ್ಕೆ ಮರಗಳೂ ಕಟ್ಟಡಗಳೂ ಧೂಳೀಧ್ವಂಸವಾಗುವುದುಂಟು (ಬಾಲಪ್ರ. III, ೧೩೬೪). [ ಸಂ. ಧೂಲೀಧ್ವಂಸ ]

**ಧೂಳೀಪಟ** (ನಾ). = ಧೂಳಿಪಟ : ಎಷ್ಟು ಸಾಮ್ರಾಜ್ಯಗಳು ಧೂಳೀಪಟವಾಗಿವೆ (ನನದಿ. ೩೮).

ಧೂಳೀಪಟ ಮಾಡು=ಧೂಳಿಪಟಮಾಡು ; ನಾಶಮಾಡು ; ಹಾಳುಮಾಡು : ಎಲ್ಲರನ್ನೂ ಧೂಳೀಪಟ ಮಾಡಿ ಹೇಳಹೆಸರಿಲ್ಲದೆ ಮಾಡಿಬಿಡುತ್ತಿದ್ದೆ (ಕುತುಕಾ. ೯೮) ; ರಾಯ ರಾಮಲಿಂಗನ ಸೂಚನೆ ಕೇಳಿದೊಡನೆಯೆ ಬಿರುಗಾಳಿಯಂತೆ ಶತ್ರುಗಳ ಮೇಲ್ಬಿದ್ದು ಧೂಳೀಪಟ ಮಾಡಿದನು (ಅಳಿಳ. ೨೨). [ ಸಂ. ಧೂಲೀಪಟ ]

**ಧೂಳೀಪಟಲ** 'ಧೂಲೀಪಟಲ' ನೋ.

**ಧೂಳೀಪಟ್ಟ** (ನಾ). = ಧೂಳಿಪಟ : ಮುತ್ತಿದನೋ ಇಂದೆ ಕೋಂಟೆ ಧೂಳೀಪಟ್ಟಂ [ಪಾಠಾಂ. ಧೂಳಿಪಟಂ] (ಶಮುರ. ೫೭ ಪ್ರಹೋ); ಇದಿರಾದ ಬಲುದುರ್ಗಗಳನು ಧೂಳೀಪಟ್ಟಮಂ ಮಾಡುತ (ಸಮ್ಯಕ್ತ್ವ. ೮-೨೭). ೨. ಧೂಳಿನ ರಾಶಿ, ಒಟ್ಟಿಲು : "ಧೂಳೀಪಟ್ಟಮೆನಲ್ಕಡರೆ ಧೂಳಿ ಪುಟ್ಟದುದಕ್ಕುಂ" (ಛಾಂದಿ. ೬೭). [ ಸಂ. ಧೂಲೀಪಟ್ಟ ]

**ಧೂಳೀಪ್ರತಾನ** 'ಧೂಲೀಪ್ರತಾನ' ನೋ.

**ಧೂಳೀಪ್ರಾಕಾರ** (ನಾ). = ಧೂಳೀಶಾಲ : ಆ ಧೂಳೀಪ್ರ[ ಪ್ರಾ ]ಕಾರದಿಂದೊಳಗೆ ನಾಲ್ಕುಂ ದಿಶಾಭಾಗದೊಳಮಿನ್ನೇಸಲುಮಿರ್ಬದಲುಮಾಗಿ ನೀಳ್ದ ಪರ್ವೀದಿಗಳ ನಟ್ಟನಡುವೆ (ವರ್ಧಮಾ. ೧೩-೩೦ ವ). [ ಸಂ. ಧೂಲೀಪ್ರಾಕಾರ ]

**ಧೂಳೀಶಾಲ, ಧೂಳೀಶಾಳ** (ನಾ). [ಜೈನ] ಸಮವಸರಣಮಂಟಪದ ಮೊದಲನೆಯ ಪ್ರಾಕಾರ : ಕೈಲಾಸಾಚಳಮನೇಟಿ ಧೂಳೀ[ಪಾಠಾಂ. ಲಿ] ಶಾಲದಿಂ ತಗುಳ್ದು ಪೂರ್ವೋಕ್ತವರ್ಣನೋಪೇತಮಪ್ಪ ವೃಷಭನಾಥನಾಸ್ಥಾನ ಮಂಟಪಮಂ ನೋಡುತ್ತುಂ (ಆದಿಪು. ೧೩-೮೨ವ). ಧೂಳೀಶಾಳ : ವಲಯಾಕೃತಿಯಿಂದಿದನೇಂ ಬಳಸಿದುದೊ ಸುರೇಂದ್ರಚಾಪಮಂಡಲಮೆನೆ ಬಳ್ಳಳ ಬಳೆದ ಪಂಚರತ್ನದ ಬೆಳಗಿಂದಂ ಬೆಳಪುದಲ್ಲಿ ಧೂಳೀಶಾಳಂ (ಆದಿಪು. ೧೦-೨೬) ; ಪಂಚರತ್ನಧೂಳೀಶಾಳದಿಂ ಪರಿವೇಷ್ಟಗೊಂಡ ಸಮವಸರಣಮಂಡಳಮಂ ಪುಗುವ ಸಹಸ್ರಾಕ್ಷನ (ಮಲ್ಲಿಪು. ೦೯-೨೦೦). [ ಸಂ. ಧೂಲೀಶಾಲ ]

**ಧೂಳೀಶಾಳ** 'ಧೂಳೀಶಾಲ' ನೋ.

**ಧೂಳೀಸಾಲ** (ನಾ). = ಧೂಳೀಶಾಲ : ರುತುಮಾನದ ದ್ವಾರಕುಟ್ಯಂ ಮೊದಲ್ಗೊಂಡು ಧೂಳೀಸಾಲಂಬರಮಂತರಾಳಚಕ್ರವಾಳಸ್ಥಳದೊಳೆಲ್ಲಂ ಕಿಕ್ಕಿಱಿಗಿಱಿದು (ಅಾದಪು. ೧೬-೨೨೦ ವ). [ ಸಂ. ಧೂಲೀಸಾಲ ]

**ಧೂಳು** 'ದೂಳಿ' ನೋ.

**ಧೂಳುಭೂಮ** (ನಾ). ಮದುವೆಯ ಸಂದರ್ಭದಲ್ಲಿ ಗಂಡು ಹೆಣ್ಣನ್ನು ಒಟ್ಟಿಗೆ ಕೂರಿಸಿ ಸಂಜೆಯ ಹೊತ್ತು ಹಾಕುವ ಊಟ : ವಧೂವರರನ್ನು ಧೂಳುಭೂಮಕ್ಕೆ ಕೂರಿಸಿದ್ದಾರೆ (ಜಾನ). [ ಧೂಳು (<ದೂಳಿ) + ಭೂಮ (<ಭೂವ) ]

**ಧೂಳುಮಣಿ** (ನಾ). ಘರ್ಷಣೆಯಾಗುವುದನ್ನು ತಪ್ಪಿಸಲು ರಥಕ್ಕೆ ಹಾಕಿರುವ ಮರದ ಅಥವಾ ಕಬ್ಬಿಣದ ಕಾಪು ;–ಸಾಧನ : "ರಥಗುಪ್ತಿಃ, ವರೂಥಃ–ಈ ೨ ಧೂಳುಮಣಿ" (ನಾಚಿರಾ. ೦೬೪). [ ಧೂಳು (<ದೂಳಿ) + ಮಣಿ ]

**ಧೂಳೆಬ್ಬಿಸು** (ಕ್ರಿ). ೧. ಧೂಳು ಏಳುವಂತೆ ಮಾಡು ; ಧೂಳನ್ನು ಏಳಿಸು : ಕುದುರೆಗಳು ಧೂಳೆಬ್ಬಿಸುತ್ತಾ ಓಡಿದವು (ಜಾನ). ೨. ಮಣ್ಣುಪಾಲುಮಾಡು ; ಹಾಳುಮಾಡು : ಇವತ್ತು ಇವರ ಮಾನ ಮರ್ಯಾದೆಯೆಲ್ಲಾ ಧೂಳೆಬ್ಬಿಸಿಬಿಡ್ತೀನಿ (ರಂಗನ. ೨೨೯). ೩. (ಆಲಂ) ತಿರುಗು ; ಅಲೆದಾಡು : ಅವನ ಎಣಿಕೆಯಲ್ಲಿ–ಆ ಸ್ನೇಹಿತರು ಬಂದದ್ದಾದರೆ, ನಾಲ್ಕು ದಿನ ನಗರದಲ್ಲೆಲ್ಲ ಧೂಳೆಬ್ಬಿಸಬಹುದು – ಎಂದಿತ್ತು (ಅಳಿವಿ. ೧೦೭). ೪. ಕೀಟಲೆಮಾಡು : ಸುಮ್ಮನೆ ಧೂಳೆಬ್ಬಿಸುವುದೇ ಅವನ ಸ್ವಭಾವ (ಜಾನ). [ ಧೂಳು (<ದೂಳಿ) + ಎಬ್ಬಿಸು (<ಎಬ್ಬಿಸು) ]

**ಧೂಳೆರಚು** (ಕ್ರಿ). ೧. ಮಣ್ಣನ್ನು ಎರಚು. ೨. (ಆಲಂ) ಕಳಂಕಗೊಳಿಸು ; ಕೆಟ್ಟ ಹೆಸರನ್ನು ತರು : ವಂಶದ ಮೇಲೆ ಧೂಳೆರಚಿದೆಯಲ್ಲ (ಕಗದ್ಯ. II. ೨೯). [ ಧೂಳು (<ದೂಳಿ) + ಎರಚು (<ಎಱಚು) ]

**ಧೂಳೋದಕ** (ನಾ). [ವೀಶೈ] "ಗುರು ಮನೆಗೆ ಬಂದಾಗ ಪಾದ ತೊಳೆದ ತೀರ್ಥ" (ಕರಶಾ. ೨೪-೭). [P. ಇದು 'ಧೂಳ್ಯುದಕ' ಎಂಬುದರ ಅಶುದ್ಧವಾದ ರೂಪ]

**ಧೂಳ್ಗೋಂಟೆ** 'ದೂಳಿಗೋಂಟೆ' ನೋ.

**ಧೃತ** (ಗು). ೧. ತಳೆದ; ಧರಿಸಿದ: ಧೃತದೇವೇಂದ್ರವಿಮಾನರುಂದ್ರಮಹಿಮಂ . . . ಕಲಧೌತತುಂಗಕಲಶಾ ಚೆಲ್ವಾಯ್ತು ರಾಜಾಲಯಂ (ಆದಿಪು. ೬-೧೦೭) ; ಆರೋಪಿತಚಾಪಂ ಸಂಧಾರಿತಕವಚಂ ಧೃತತೋಗ್ರಶರಧಿಯುಗಂ ತಾನಾರುದ ಮಲ್ಲಮಂ (ಪಂಪಭಾ. ೮-೧೨) ; ಧೃತ ಪಂಚರತ್ನಮಂ ರಾಗಿಕೆಯೊಳ್ ಭೂಷಣಮನಾಂಪ ತೆಱದಿಂದೆ ವಿರಾಗಿತೆಯೊಳ್. . . ಆತನಾ ವಿಭು ತಪಮಂ (ಚಂದ್ರಪು. ೧೬-೨) ; ಧೃತಪಂಕಜರ್ದ್ವಿಮಯೂಖಿಕಂ ಧೃತ ವಿಶೀರ್ಣಾಗೆ ಕೋಚ್ಚಶೃಂಗಂ . . . ಬರುತಿದ್ದುದುದ್ಧತಘಸಧ್ವಾನೋತ್ಕರಂ ಶಾಕ್ವರಂ (ಕುಸುಮಾ. ೧೦-೦೯೨) ; ಧೃತನಿವ್ರಾಲಸ್ಯಭಾರಂ ತೊಲಗೆ (ಸೂಕ್ತಿಸು. ೯-೬೫) ; ಧೃತಚಕ್ರವಾಹಿನೀಪರಿಪೂತನಾಕಿನೀ . . . ಎನುತಿರ್ದರು (ವೀಶೈಪು. ೩-೨೩-೬೪). ೨. ಹಿಡಿದ : ಧೃತಕನಕವೇತ್ರಲತೆ ಚಿತ್ರಿತವಾಗೆ ಕರಾಂಗುಲೀಯಕಪ್ರಭೆಯಿಂದಂ ಪ್ರತಿಹಾರವರವಿಯಾ ತಳೆದು (ಪುಷ್ಪಪು. ೦೩-೦೦೫). ೩. ಹೊಂದಿದ ; ಪಡೆದಿರುವ : ಧೃತನಾನಾವರ್ಣವರ್ಣಚ್ಛವಿಸಮುದಯ ಸಂದರ್ಶನೀಯಂ . . . ಪೌರಗೇ ಪಂಚೇಂದ್ರಿಯಸುಖದೊದವಂ ನಂದನಂ ಮಾಟ್ಬುದೆಂದುಂ (ಚಂದ್ರಪು. ೧-೧೧೨). ೪. ಕಾಪಾಡಲ್ಪಟ್ಟ ; ರಕ್ಷಣೆಗೊಂಡ. ೫. ಇಟ್ಟ ; ಇಡಲ್ಪಟ್ಟ. ೬. ನಿರ್ಧರಿಸಿದ ; ದೃಢವಾದ. ೭. ತಯಾರಾದ ; ಸಿದ್ಧವಾದ. ೮. ಉಪಯೋಗಿಸಿದ ; ಬಳಸಿದ. (ನಾ). ೯. ಹೊರುವುದು ; ತಳೆಯುವುದು ; ಧರಿಸುವುದು ; ಧಾರಣೆ. [ ಸಂ. ]

**ಧೃತಕಂಟಕ** (ನಾ). ಮುಳ್ಳುಗಳನ್ನು ಪಡೆದಿರುವುದು ; ಮುಳ್ಳುಗಳನ್ನುಳ್ಳದ್ದು : ಧೃತಕಂಟಕಮಾದೊಡಮುನ್ನತಿಯಿಂ ಕೇತಕಿಯೊಳಿಱಿದುದು ಮಧುಕರಂ (ಗಿರಿಕ. ೨-೬೪). [ ಧೃತ + ಕಂಟಕ ]

**ಧೃತಕಂಬಲ** (ನಾ). ಕಂಬಲನೆಂಬ ಸರ್ಪವನ್ನು ಧರಿಸಿದವನು ; ಶಿವ : ನಿಜಾಂಗಧೃತಕಂಬಲ ಧನಂಜಯ ಮದಂಬಕ (ಹಾಜಶೀ. ೦೩-೩೪). [ ಧೃತ + ಕಂಬಲ ]

**ಧೃತಕಳಾಕಳಾಪ** (ನಾ). ೧. ಅರುವತ್ತುನಾಲ್ಕು ಕಲೆಗಳನ್ನು ಪಡೆದವನು. ೨. ಹದಿನಾರು ಕಲೆಗಳನ್ನು ಹೊಂದಿದವನು. ೧, ೨ : ಅಂಗೋತ್ರಭೇದಿ ವಿಬುಧೇಶ್ವರನಲ್ಲಂ ಧೃತಕಳಾಕಳಾಪ ದೋಷಾಕರನಲ್ಲಂ (ಕವಿರಾ. ೩-೧೧೨). [ ಧೃತ + ಕಳಾಕಳಾಪ (= ಕಲಾಕಲಾಪ) ]

**ಧೃತಗೋತ್ರ** (ನಾ). (ಮಂದರ) ಪರ್ವತವನ್ನು ಹೊತ್ತವನು; ಕೂರ್ಮ: ಚಿತ್ರವದನೇವೇಳುವೆನು ಧೃತಗೋತ್ರನುತ್ಸಾಸದಲಿ ವರವೇದತ್ರಯಂಗಳ ನುಗುಳಿದನು ಕಾರುಣ್ಯಾನಿಧಿಯೆಂದ (ನಿಭಾಗ. ೨-೩-೩೨). [ ಧೃತ + ಗೋತ್ರ ]

**ಧೃತಚಂದ್ರ** (ನಾ). ಚಂದ್ರನನ್ನು ಧರಿಸಿದವನು ; ಶಶಿಧರ ; ಶಿವ ಮಳೆಯರಾಜನ ಕಥೆಯ ಕೇಳ್ದರ್ಗೆ ಧೃತಚಂದ್ರ ಮಾನದಿಷ್ಟವೀವನು (ಪ್ರಾರಾ. ೯-೬೫). [ ಧೃತ + ಚಂದ್ರ$_2$ ]

**ಧೃತದೀಕ್ಷ** (ನಾ). ವ್ರತವನ್ನು ಹಿಡಿದವನು ; ವ್ರತವನ್ನು ತೊಟ್ಟವನು : ಧಾತ್ರಿಯೊಳಾವನ್ನಾಭಯಸಕ್ರದೆ ಧೃತದೀಕ್ಷರಲ್ತೆ ಪುರುಕುಲದರಸರ್ (ಶಾಕುಂತ. ೨೮-೫೦). [ ಸಂ. (ಧೃತ + ದೀಕ್ಷಾ + -) ]

**ಧೃತಧೈರ್ಯ** (ನಾ). ಧೈರ್ಯವನ್ನು ಉಳ್ಳವನು ; ದಿಟ್ಟ : ಧೃತಧೈರ್ಯಂ ತುಂಗಶೌರ್ಯಂ ರಜತಶಿಖರಿಧಾಮಂ . . . ಪಂಪಾಧಿನಾಥಂ (ಅದ್ಭುಟ. ೧೩-೧೪೮). [ ಧೃತ + ಧೈರ್ಯ ]

**ಧೃತನವಶಶಿ** (ನಾ). ಬಾಲಚಂದ್ರನನ್ನು ಧರಿಸಿದವನು ಶಿವ: ಅತಿಶಯ ಮಹಿಮಂ ಧೃತನವಶಶಿವಿಶ್ರುತವರಗುಣಗಣಧಾಮಂ (ಹರಿಶ್ಚಂ ಕ. ೨-೧೦). [ ಧೃತ + ನವಶಶಿ ]

**ಧೃತಮಂಡಲಿ** (ನಾ). ಒಂದು ಬಗೆಯ ಸಸ್ಯ : "ತ್ರಿಪದಿ ಧೃತಮಂಡಲಿ [ಪಾಠಾಂ. ೪] ಮರಾಳಪದಿಯೆನೆ ಹಂಸಪಾದಿ" (ಮಂಗರಾ. ೪೨-೩೯). [ ಸಂ. ]

**ಧೃತಮನೋರಥ** (ನಾ). ದೃಢವಾದ ಮನಸ್ಸುಳ್ಳವನು ; ಸ್ಥಿರಮನಸ್ಕ : ಆ ಪುರವನಾಳ್ವನ:ದ್ಧತ ಗೋಪುರದ:ಂ ವಿ ಜ ತ ಶ ಕ್ರ ಧ ನ ಪ ತಿ ವ ರು ಣ ಶ್ರೀಪುರವಂ ಧರಣೀಮಣಿ ನೂಪುರಮಂ ಧೃತಮನೋರಥಂ ಪದ್ಮರಥಂ (ಅನಂತಪು. ೩-೧೯). [ ಧೃತ + ಮನೋರಥ ]

**ಧೃತಮೋಹ** (ನಾ). ಮೋಹಕ್ಕೊಳಗಾದವನು : ಹಾಹಾಧ್ವನಿ . . . ಸುತ್ತಿರ್ದೊಡದು ಸಾಹಸಿಗಂ ಕೇಳ್ದುಂ ಧೃತಮೋಹಂ ಕೇಳ್ಗಿಮೆ ಜಿತಾರ್ತ ಕುರರೀರವಮಂ (ಶಾಂತಿಪು. ೬-೩೩). [ ಧೃತ + ಮೋಹ ]

**ಧೃತರಜ** (ನಾ). ಧೂಳಿನಿಂದ ಕೂಡಿದುದು : ಧೃತರಜನಾನಿಲಂ ದಿತಿಜಪ್ರತಿ ಕೂಲಂ ಹರಿಗೆ ಸ್ವಸ್ಯಂದರ್ಶನದನುಕೂಲತೆಯಂ ಮೆಱೆವಂ (ಜಗಪು. ೧೫-೦೫). [ ಧೃತ + ರಜ$_1$ ]

**ಧೃತರಾಷ್ಟ್ರ** (ನಾ). ೧. ಸ್ಥಿರವಾದ ಚಕ್ರಾಧಿಪತ್ಯವನ್ನು ಉಳ್ಳವನು. ೨. ಒಳ್ಳೆಯ ಅರಸ. ೩. ಒಳ್ಳೆಯ ಅರಸನಿಂದ ಆಳಲ್ಪಟ್ಟ ದೇಶ. ೪. ಕುರುವಂಶದ (ದುರ್ಯೋಧನ ಮುಂತಾದ ನೂರು ಜನ ಕೌರವರ ತಂದೆಯಾದ) ಅಂಧ ದೊರೆ : "ಅಂಧರಾಜನೆನೆ ಧೃತರಾಷ್ಟ್ರನಕ್ಕುಂ" (ಮಂಗರಾ. ೭೮-೩) ; ಧೃತರಾಷ್ಟ್ರಂ ನುಡಿದಾರ್ತನೇ ಹರಿ ಭರಂಗೆಯ್ವಾರ್ತನೇ (ಶಂಶಭಾ. ೧೧-೧೦) ; ಧೃತರಾಷ್ಟ್ರಕ್ಷಿತಿಪಾಲ ಕೇಳ್ ಜನನಿ ಕೇಳ್ ಗಾಂಧಾರಿ (ಗದಾಯು.೬-೩೫); ಭರತವಂಶದೊಳ್ಗಿದು ಮಿಗೆ ನೂರ್ವರು ಕುಮಾರರು ಪಾಂಡು ಧೃತರಾಷ್ಟ್ರರಿಗೆ ಜನಿಸಿದರು (ಕುಪ್ಪಾಅ. ೪ ಸೂಚನೆ). ೫. ಒಂದು ಹಾವಿನ ಹೆಸರು : ಬಳಿಕ ಧೃತರಾಷ್ಟ್ರನೆಂಬ ದುರ್ವ್ಯಾಳಪತಿ ನುಡಿವನು (ಜೈಮಿಭಾ. ೩೯-೨೦). ೬. ಒಬ್ಬ ಗಂಧರ್ವನ ಹೆಸರು : ಪುರುದರು ಧೃತರಾಷ್ಟ್ರನೆಂಬ ಗಂಧರ್ವಂಗೆ ನೇಮಿಸಿದನು (ಜೈಮಿಭಾ. ೫-೯೧). ೭. ಒಬ್ಬ ಯಕ್ಷನ ಹೆಸರು : ಹೇಮಕೂಟಪರ್ವತದಲ್ಲಿ ಮಣಿಭದ್ರ . . . ಧೃತರಾಷ್ಟ್ರ ಪೂರ್ಣಭದ್ರ ವಿರೂಪಾಕ್ಷರೆಂಬವರು ಮೊದಲಾದ ಕೋಟಿಯಕ್ಷರ ಪಟ್ಟಣಂಗಳುಂ (ವಿವೇಕ. ೩೧೭). ೮. ಒಂದು ಬಗೆಯ ಪಕ್ಷಿ. ೯. (ಅಲಂ)ಕುರುಡ ; ಅಂಧ. [ ಸಂ. ]

**ಧೃತವೇತ್ರ** (ನಾ). ದಂಡವನ್ನು ಹಿಡಿದುಕೊಂಡವನು : ಧೃತವೇತ್ರಂ ಚಾರುಚೀನಾಂಬರರಚಿತಶಿರೋವೇಷ್ಟನಂ . . . ಅವನಿಪನೊಡ್ಡೋಲಗ ಕ್ಕೈದೆ (ಚಂದ್ರಪು. ೨-೭೪). [ ಧೃತ + ವೇತ್ರ ]

**ಧೃತವ್ರತ** (ನಾ) ೧. ಶ್ರೇಷ್ಠವಾದ ವ್ರತಗಳ ನಿಯಾಮಕ : ಎಲೈ ಅಗ್ನಿಯೇ, ಧೃತವ್ರತನೂ, ಸಕಲರಿಗೂ ಪ್ರಥ:ಪೂ, ಪ್ರಕಾಶಮಾನನೂ ಆದ ವರುಣನೂ ನೀನೆ (ಹುಕ್ಕಾಕ. ೧೭). ೨. ವ್ರತವನ್ನು ಹಿಡಿದವನು. [ ಧೃತ + ವ್ರತ ]

**ಧೃತಶಕ್ತಿ** (ನಾ). ೧. ವೀರರಸವನ್ನು ಹೊಂದಿದವಳು ; ಪರಾಕ್ರಮಿಯ ಹೆಂಡತಿ. ೨. ಸಮರ್ಥರಾದವರನ್ನು ಪೋಷಿಸುವವಳು ; ಶೂರರಿಗೆ ಆಶ್ರಯವನ್ನು ಕೊಡುವವಳು. ೧, ೨ : ಶ್ರೀರಮಣಿ ಗೌರಿ . . . ಪತಿಭಕ್ತಿ ಧೃತಶಕ್ತಿಯೆನೆ ಸ್ವಾಮಿ ವೀರನಿಧಿಯಂ ಚಲದ ವಾರಿನಿಧಿಯಂ ಗುಣದ ಚಾರುನಿಧಿಯಂ ನೆಗರ್ದ ದೇಶಲೆಯನಿನ್ನೀ ನಾರಿಜನರನ್ನಮನದಾರೊ ಮೞೆವರ್ (ಎಕ. IV, ಹೆಗ್ಗಡ. ೧೮-೩೯ ; 1057). ೧೧೬-೧೧). [ ಸಂ. ಧೃತಶಕ್ತಿ ]

**ಧೃತಶಶಿಖಂಡ** (ನಾ). ಚಂದ್ರಕಳೆಯನ್ನು ಧರಿಸಿದವನು ; ಶಿವ : ಧೃತಶಶಿಖಂಡ ಜಿತಸುಮಕಾಂಡ ವಿತರಣಶೌಂಡ ಭೃತಜಗದಂಡ (ಶಾಕುಂತ. [ ಧೃತ + ಶಶಿಖಂಡ ]

**ಧೃತಶಶಿಶಕಲ** (ನಾ).=ಧೃತಶಶಿಖಂಡ : ಧೃತಶಶಿಶಕಲಂ ಕೃತಭವನಕುಲಂ . . . ನುತಗಿರಿಜಾರಮಣಂ (ವೃಷಪು. ೩೯-೬೫). [ ಧೃತ + ಶಶಿಶಕಲ ]

**ಧೃತಶಸ್ತ್ರ** (ನಾ). ಶಸ್ತ್ರವನ್ನು ಧರಿಸಿದವನು ; ಶಸ್ತ್ರಧಾರಿ : ಕೊಲಬಹುದು ಧೃತಶಸ್ತ್ರನಾದಡೆ ಕೊಲುವೆನೆಂಕಾಚಾರ್ಯಸುತನನು ಕಳಿಯ ಹೇಳೆಂದೆಸುತ ಬೀಡಿಕೆಗಾಗಿ ನಡೆತಂದ (ವಿಭಾಗ. ೧-೪-೩೦). [ ಧೃತ + ಶಸ್ತ್ರ ]

**ಧೃತಶೈತ್ಯ** (ನಾ). ತಂಪನ್ನು ಹೊಂದಿರುವುದು ; ಶೈತ್ಯವನ್ನೊಳಗೊಂಡಿರುವುದು: ಧೃತಶೈತ್ಯಂ ಧಾರಾಜಲಯುತಮನುಕಂಪಾನ್ವಿತಂ ದಲೆನಿಸಿಯುಂ . . . ರಿಪುನೃಪರ್ಗೀವುದಧಿಕತಾಪೋದಯಮಂ (ಚಂದ್ರಪು. ೨-೩). [ ಧೃತ + ಶೈತ್ಯ ]

**ಧೃತಸತ್ವ** (ನಾ). ಗರ್ಭಿಣಿ : "ಗುರ್ವಿಣಿ ಧೃತಸತ್ವೆಯುಮಂತರ್ವತ್ನಿಯೆನಿಪ್ಪೊಡಾಕೆ ಗರ್ಭಿಣಿಯೆನಿಕ್ಕುಂ" (ಪಾಟ್ಯಕೋ. ೫೪-೧೪). [ ಸಂ. ಧೃತಸತ್ವಾ ]

**ಧೃತಸೋಮ** (ನಾ). =ಧೃತಚಂದ್ರ : ಧೃತಸೋಮ ಗತಕಾಮ ಚಿರಲಿಂಗ ವರಸಂಗ . . . ಗಿರಿಜೇಶ (ಹರಿಕಾ. ೧-೫). [ ಧೃತ + ಸೋಮ ]

**ಧೃತಿ** (ನಾ). ೧. ಹಿಡಿದುಕೊಳ್ಳುವುದು ; ತೆಗೆದುಕೊಳ್ಳುವುದು. ೨. ತಾಳುವಿಕೆ ; ಧರಿಸುವುದು. ೩. ಪಡೆಯುವುದು ; ಹೊಂದುವುದು. ೪. ಧೈರ್ಯ ; ಧೀರತನ ; ಎದೆಗಾರಿಕೆ ; ಕೆಚ್ಚು : ಧೃತಿಯ ನವಳಂಬಿಸಿ . . . ನಡೆವಾಗಳ್ (ರೇರಾಪ. ೬-೯೯) ; ಪೂಜಿಗತುರ ಧೃತಿಯ ನಾಂತಂ ನೆಱೆ ಮನದೊಳ್ ತಳೆದನೆಸೆವ ಕುಸುಮಾವಳಿಯಂ (ಕುಸುಮಾ. ೧೦-೧೦೫) : ಮರಳಿ ಧೃತಿಯಿಂದೆದ್ದು ಕೋಪಾತುರನು ತುರಗವನೊದೆದು ಕೆಡಹಲು (ಕಾಶಿಕಾ. ೨೬-೨೯) ; ಪೆಣ್ಣಾದೊಡಂ ನೀನೆನಗೆ ಮತಿಯೊಳಂ ಧೃತಿಯೊಳಂ ಗಂಡಿಗೆಣೆ (ಶ್ರೀರಾಮಾ. ೨೧೫-೧೨೭). ೫. ತಾಳ್ಮೆ ; ಸಹನೆ ; ಸಂಯಮ : ಧೃತಿ ಬಂದಾಗಳೆ ಮಾಣೆಂಬ ತೆಱದೆ ಪೇಸಿದನರಸಂ (ಹುಟೋಕ. ೨-೩೩) : ವಿರತಿ ವಿವೇಕ . . . ಧೃತಿ ಸ್ಮೃತಿ . . . ತಪಸ್ಸು ಯೋಗ ನಿಶ್ಚಯ ಮುಂತಾದ ಸಾತ್ವಿಕಗುಣಗಳಂ ಸುಖಮಹಿತೋರ್ಧ್ವಲೋಕಂಗಳಂ ಸಾರ್ದು (ವಿವೇಕ. ೨೯೭) ; ಅಱೆದು ಪಂಚಾರ್ಥವನು ಧೃತಿಯನು ಮೆಱೆದು ಮಾನವನು ನಿಲಿಸಿ ತನ್ನೀ ದಿವ್ಯಮೂರ್ತಿಯಲಿ ಅಱೆಯಿದಿತರವನಿರಲು ನೀವೆನ್ನಱೆಯಲಿ ನಾಲುಕು ಯುಗಗಳುತ್ತರಿಸಲಾ ನಿಮಗಂದು ಮೈದೋಱೆದೆನು ನಾನೆಂದ (ವಿಭಾಗ ೧೦-೪-೨). ೬. ಸ್ಥಿರವಾಗಿರುವುದು ; ಅಚಲತೆ ; ಸ್ಥೈರ್ಯ : ಆತನ ಮಾತಂ ಕೇಳ್ದಿ ಪಗತಶೋಕನುಮುಪಗತವಿವೇಕನುಮಾಗಿ ಧೃತಿಯಂ ತಾಳ್ದು (ಅಜಿಪು. ೯-೬೮) ; ಧೃತಿಯಿಂ ಮಚ್ಚರಿಸುವ ಪರ್ವತಮಂ ತಾನಿಕ್ಕಿ ಮೆಟ್ಟಿದಂತಿರೆ . . . ಇರ್ದಂ ಯೋಗದುರ್ಯನಚಲಿತಧೈರ್ಯಂ (ಅರ್ಧನೇ. ೬ ೩೦) ; ಅರ್ಥಬಂಧುಸುತಾದಿಗಳ ಪ್ರಾಪ್ತ್ಯಪ್ರಾಪ್ತಿಗಳಲ್ಲಿ ಹರ್ಷಶೋಕ ವಿಲ್ಲದಿರ್ಪುದೇ ಧೃತಿಯೆನಿಸುವುದು (ವಿವೇಕ. ೦೯೯) ; ಧೃತಿಯಾ ಶ್ರದ್ಧಾ ಸುಖವಿವಿದಿಷಾವಿವಿದಿಷಮೆಂಬತಿಶಯಗಳ್ಗಿದು ವಿಧಮಂತು ಮತ್ತದ ತಿಳಿದು ಮತಿಯಿಂದ ಮತ್ತುಸಿರಿ ಕೊನೆಗಾಣಲೆಸಗುವುದೆ ಧೃತಿ(ವಂಶಾರಾ. ೩-೭-೯೩);

ಹಾನಿವೃದ್ಧಿಯಿಂ ಮತಿಗೆ ವಿಕೃತಿ ತೋರದಿರಲದೆ ಧೃತಿ (ವೇದಾಂಪ. ೩-೫-೦೭). ೭. ಸಂತೋಷ; ಆನಂದ; ಉಲ್ಲಾಸ. 'ಧೃತಿವೆಱು' ಪರಾ. ೮. ಚಂದ್ರನ ಹದಿನಾರು ಕಲೆಗಳಲ್ಲಿ ಒಂದು: ಚಂದ್ರನಾದೊಡೆ ಅಮೃತ . . . ಧೃತಿ ಶಶಿನಿ ಚಂದ್ರಿಕೆ . . . ಕಾಮದಾಯಿನಿಯೆಂಬ ಷೋಡಶಕಲೆಗಳಿಂ ಭರಿತನಾಗಿ (ವಿವೇಕ. ೨೬೭). ೯. ಒಂದು ಬಗೆಯ ಸಸ್ಯ: "ಧೃತಿ [ಪಾಠಾಂ. ದ್ಯುತಿ]ಯೆನಲು ಮುಷ್ಪೆಯುಕ್ಕ್ಯ" (ಮಂಗರಾ. ೪೫-೪೮) ೧೦. ಒಂದು ನಾಡಿಯ ಹೆಸರು: ಧಮನಿ, ಗಮನಿ, ಲೋಲೆ, ಧೃತಿ, ಸರ್ವಗಾ ಎಂಬೈದು ನಾಮವನುಳ್ಳ ನಾಡಿಯು . . . ಕಾಣಬರುವುದು (ಸಕಪ್ರ. ೧೦). ೧೧. ವಿಶ್ವೇದೇವತೆಗಳಲ್ಲಿ ಒಬ್ಬ ದೇವತೆಯ ಹೆಸರು. 'ವಿಶ್ವೇದೇವ' ಪರಾ. ೧೨. ಮನಸ್ಸಿನ ಹದಿನಾರು ಬಗೆಯ ವಿಕಾರಗಳಲ್ಲಿ ಒಂದು: ಐತರೇಯೋಪನಿಷತ್ತಿನಲ್ಲಿ ಸಂಜ್ಞಾನ (ಚೇತನಭಾವ) . . . ಪ್ರಜ್ಞಾನ, ಮೇಧಾ, ದೃಷ್ಟಿ, ಧೃತಿ, ಮತಿ, ಮನೀಷಾ . . . ಈ ಹದಿನಾರು ಮನಸ್ಸಿನ ವಿಕಾರಗಳೆಂದಿರುವವು (ಅಮೃತ. ೬-೨೭ ಟೀಕು). ೧೩. [ಛಂದ] ಅಕ್ಷರ ಛಂದಸ್ಸಿನಲ್ಲಿ ಹದಿನೆಂಟನೆಯ ಛಂದಸ್ಸಿನ ಹೆಸರು: ಉಕ್ತೆ ಅತ್ಯುಕ್ತೆ . . . ಧೃತಿ ಅತಿಧೃತಿ . . . ಉತ್ಕೃತಿ ಎಂದಿಪ್ಪತ್ತಾಱು ಛಂದಂಗಳಕ್ಕುಂ (ಛಂದೋಂಬು. ೧-೪೭ವ). ೧೪. [ಜ್ಯೋತಿ] ವಿಷ್ಕಂಭ ಮೊದಲಾದ ಇಪ್ಪತ್ತೇಳು ಯೋಗಗಳಲ್ಲಿ ಎಂಟನೆಯದು: ವಿಷ್ಕಂಭ ಪ್ರೀತಿ . . . ಧೃತಿ ಶೂಲ . . . ಬ್ರಹ್ಮ ಐಂದ್ರ ವೈಧೃತಿಗಳೆಂಬಿಪ್ಪತ್ತೇಳು ಯೋಗಂಗಳುಂ (ವಿವೇಕ. ೩೩೦); ಯೋಗಗಳತಿಶಯುವನರಿಯ್ಯೆಯ ಪೇಳುವೆ ವೃತಿಯು ಧೃತಿ ವಿಷ್ಕಂಭ ಶೂಲವು (ಗಗಶಾ. ೪-೭೯). 'ಧೃತಿಯೋಗ' ಪರಾ. ೧೫. [ಕಾವ್ಯಮೀ] ಮೂವತ್ತಮೂರು ಸಂಚಾರೀಭಾವಗಳಲ್ಲಿ ಒಂದು; ಜ್ಞಾನ, ಅಭೀಷ್ಟಪ್ರಾಪ್ತಿ ಮುಂತಾದುವುಗಳಿಂದ ಆಸೆಯು ಪೂರ್ಣವಾಗುವುದು; ಸಂತುಷ್ಟಿ; ತೃಪ್ತಿ: ಧೃತಿ ನಿದ್ರಾ ವೇಗ . . . ಇವಿಂತೆಯ್ದೆ ಸಂಚಾರಿಭಾವಂ (ಕಾವ್ಯಾವ. ೭೯೫); ಮತಿ ಲಜ್ಜೆ . . . ಧೃತಿ ತರ್ಕ ಉನ್ಮಾದ . . . ಅಪಸ್ಮಾರಗಳೆಂಬ ಮೂವತ್ತುಮೂಱು ಸಂಚಾರೀಭಾವಂಗಳಿಂ ಪರಿವರ್ಧಿಸಿ (ವಿವೇಕ. ೨೨೭); ಜ್ಞಾನ ಮೊದಲಾದವುಗಳಿಂದ ಉಂಟಾಗುವ ಸಂತುಷ್ಟಿಯೇ ಧೃತಿ (ಭಾರಮೀ. ೩೪೭). ; ೧೬. [ಯೋಗ] ಧ್ಯೇಯವಸ್ತುವಿನಲ್ಲಿ ಅಚಲವಾಗಿ ಮನಸ್ಸನ್ನು ನೆಲೆಗೊಳಿಸುವುದು; ಧಾರಣ. 'ಧೃತಿತ್ರಯ' ಪರಾ. ೧೭. [ಜೈನ] ಐವತ್ತುಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ನಾಲ್ಕನೆಯದು: ದ್ವಾದಶಾಂಗದೊಳ್ ಪೇಟ್ದ ಆಧಾನ ಪ್ರೀತಿ ಸುಪ್ರೀತಿ ಧೃತಿ . . . ಎಂಬಯ್ವತ್ತುಮೂಱು ಗರ್ಭಾದಿ ನಿರ್ವಾಣ ಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಆದಿಪು. ೧೫-೧೫೨ವ); ೨ನೇ ತಿಂಗಳ ಗರ್ಭವತಿಗೆ . . . ಅತ್ತಿಹಣ್ಣಿನ ರಸಮಂ ಸಹ ಮಂತ್ರಪೂರ್ವಕ ಉದರದ ಮೇಲೆ ಬೀಳುವಂತೆ ಹಾಕುವುದೇ ಧೃತಿಯೆಂಬ ನಾಲ್ಕನೆ ಕರ್ಮವು (ಪುರುಪ. ೧೯೯). 'ದೀಕ್ಷೆ' ಪರಾ. ೧೮. [ನ್ಯಾಯ] ದೇವರಿದ್ದಾನೆಂದು ಸಾಧಿಸುವ ಹೇತುಗಳಲ್ಲಿ ಒಂದು; P ವಿಶ್ವವು ಕುಸಿದು ಬೀಳದಂತೆ ಧಾರಣೆ ಮಾಡುವ ಕಾರ್ಯದಿಂದ ಅದಕ್ಕೆ ಕಾರಣಭೂತನಾದವನು ಒಬ್ಬನು ಇರಲೇಬೇಕು-ಅವನೇ ದೇವರು ಎಂದು ತಾರ್ಕಿಕರು ಸಾಧಿಸುತ್ತಾರೆ: ಧೃತಿಯೆಂದರೆ ಭೂಗೋಳ ಖಗೋಳ ಮೊದಲಾದ ವಸ್ತುಗಳನ್ನು ಧರಿಸುವ ಪುರುಷನಿರಬೇಕು (ಹಿಂದಸಾ. ೧೨೭). [ ಸಂ. ]

ಧೃತಿಗಿಡಿಸು 'ಧೃತಿಗೆಡಿಸು' ನೋ.

ಧೃತಿಗಿಡು 'ಧೃತಿಗೆಡು' ನೋ.

ಧೃತಿಗುಂದು (ಕ್ರಿ). ಎದೆಗುಂದು; ಧೈರ್ಯವನ್ನು ಕಳೆದುಕೊಳ್ಳು: ಪರಿಜನಮಾಮೆ ದಲ್ ನಿನಗೆ ನೀಂ ಧೃತಿಗುಂದದಿರು (ಕುಸುಮಾ. ೦೪-೧೧೮); ಪುರಹರನಿಟ್ಟ ಪುಲ್ಲ ಮುಱಿಯುಂ ಮುರವೈರಿ ವಿರಿಂಚಿ ಮುಖ್ಯ ನಿರ್ಜರರದ ನೆತ್ತಲಾಱದ ವಲಂ ಧೃತಿಗುಂದಿದರ್ (ರಾಜಶೇ. ೦೩-೨೪).
[ ಧೃತಿ + ಕುಂದು$_1$ ]

ಧೃತಿಗೆಡಿಸು, ಧೃತಿಗಿಡಿಸು (ಕ್ರಿ). ಅಧೈರ್ಯವನ್ನುಂಟುಮಾಡು; ಎದೆಗೆಡಿಸು: ಅತಿಕಾಂಕ್ಷೆಯೆಂಬಗಳತಿ ವಿಸ್ಮಯವಾಗಿ ಕ್ಷಿತಿಯನೊಡೆದು ನಾಗತಿಯ ಧೃತಿಗೆಡಿಸುತ ಬಳಸಿಹುದಾ ಪುರದೊಳು (ತ್ರಿಪುಸಾಂ ೪-೪೦); ದಿನದಿಂದ ದಿನಕ್ಕೆ ಆತನನ್ನು ಧೃತಿಗೆಡಿಸುತ್ತಿದ್ದವು ಅಂಥವೇ (ವಾತ್ಸಲ್ಯ. ೨೭೬). ಧೃತಿಗಿಡಿಸು: ಮೂದಲಿಸಿ ಧೃತಿಗಿಡಿಸಿ ಬೆಂಕೊಣ್ಡು ಮತ್ತಂ (ಎಕ. II, ೨೪೦-೨೭; ಕು. 1175). [ ಧೃತಿ + ಕೆಡಿಸು$_1$ ]

ಧೃತಿಗೆಡು, ಧೃತಿಗಿಡು (ಕ್ರಿ). ಧೈರ್ಯವನ್ನು ಕಳೆದುಕೊಳ್ಳು; ಅಧೈರ್ಯಪಡು; ಎದೆಗುಂದು: ಮದನ ಮದೋದ್ರೇಕದಿನೆನ್ನಿದಿರೊಳ್ ಧೃತಿಗೆಟ್ಟು ಸಿಗ್ಗಿನಿಂ ತನ್ನೊಳ್ ಪೊಲ್ಲದನೆತ್ತಾಚರಿಸುಗುವೊ (ಕಾದಂಪೂ. ೮೨೫); ಮತಿಗೆಟ್ಟನು ಮನದ ವಿಕಾರದಿಂದ ಧೃತಿಗೆಟ್ಟನು ಕಾಯವಿಕಾರದಿಂದ (ಬಸವ. ೪೩); ವೃತಿಗಳ್ . . . ಮತಿಗೆಟ್ಟರ್ ಧೃತಿಗೆಟ್ಟರ್ (ಗಿರಿಕ. ೮-೨೩); ಇನಿತು ಧೃತಿಗೆಡಲೇಕೆ (ಬಸಪು. ೨೫-೨೩); ಪಟುಭಟರು ಧೃತಿಗೆಟ್ಟು ದೆಸೆದೆಸೆಗಳಲಿ ಮಿಗೆ ಸಾಲಿಟ್ಟು ಸಂದುದು (ಕುವ್ಯಾಕ. ೧೯-೯೮). ಧೃತಿಗಿಡು: ಧೃತಿಗಿ[ಪಾಠಾಂ. ಗೆ]ಡಬೇಡ ಧೈರ್ಯವನಾಂತು ಬಾರೆಂದು ರತಿರಾಜ ಮೂದಲಿಸಿದನು (ಮೋಹತ. ೦೨-೯೨). [ ಧೃತಿ + ಕೆಡು$_1$ ]

ಧೃತಿತ್ರಯ (ನಾ). [ಯೋಗ] ಸಾತ್ತ್ವಿಕಿ, ರಾಜಸಿ ಮತ್ತು ತಾಮಸಿ ಎಂಬ ಮೂರು ಬಗೆಯ ಧೃತಿ,-ಯೋಗಾಂಗವಾದ ಧಾರಣ; P ಯೋಗಾಭ್ಯಾಸದಿಂದ ಮನಸ್ಸು, ಪ್ರಾಣ, ಇಂದ್ರಿಯವ್ಯಾಪಾರಗಳನ್ನು ಹತೋಟಿಯಲ್ಲಿಟ್ಟುಕೊಂಡು ಬೇರೆ ಕಡೆಗೆ ತಿರುಗದಂತೆ ಮಾಡುವುದು ಸಾತ್ತ್ವಿಕೀಧೃತಿ; ಫಲಾಪೇಕ್ಷೆಯಿಂದ ಮನಸ್ಸು, ಪ್ರಾಣ, ಇಂದ್ರಿಯಗಳನ್ನು ಬಿಗಿಹಿಡಿದು ಮಾಡುವ ಧ್ಯಾನ ರಾಜಸೀಧೃತಿ; ನಿದ್ರೆ, ಭಯ, ಶೋಕ, ವಿಷಾದ, ಮದ ಇವೊಂದನ್ನೂ ಬಿಡದೆ ದುರ್ಬುದ್ಧಿಯಿಂದ ಕೂಡಿರುವುದು ತಾಮಸೀಧೃತಿ. ಹೀಗೆ ಭಗವದ್ಗೀತೆಯಲ್ಲಿ ಧೃತಿತ್ರಯದ ವಿವರಣೆ ಇದೆ: ತಾಪತ್ರಯ ಕರ್ಮತ್ರಯ . . . ಧೃತಿತ್ರಯ ಗುಣತ್ರಯ ಶಕ್ತಿತ್ರಯ ಕಾಲತ್ರಯ (ವೇದಾಂಪ. ೪-೧೮-೪). [ ಧೃತಿ + ತ್ರಯ ]

ಧೃತಿಯುಕ್ತ (ಗು). ೧. =ಧೃತಿಯುತ ೧. (ನಾ). ೨. =ಧೃತಿಯುತ ೨: ಧೃತಿಯುಕ್ತರ್ ಶೌರ್ಯಯುಕ್ತರ್ ಕುರುಕುಲಧರಣೀಶರ್ಕಳ್ (ಮಹಾನೀ. ೧೩-೯). [ ಸಂ. ]

ಧೃತಿಯುತ (ಗು). ೧. ಧೀರತೆಯನ್ನು ಹೊಂದಿದ; ಧೈರ್ಯವುಳ್ಳ: ಧೃತಿಯುತಕ್ಷತ್ರಿಯನು ವೇದಪ್ರತಿಯುತಶ್ರೋತ್ರಿಯನಹಂಸಾರತನು ಮಹಪುರುಷನು (ಕುವ್ಯಾಅ. ೨೩-೪೧). (ನಾ). ೨. ಧೀರ; ಧೈರ್ಯಶಾಲಿ: ಪತಿಯು ಮುನಿಸುಕಿದನಾ ಸಾಮಂತನು ಧೃತಿಯುತರ ನೆಟಿಗಾಹಲಿರಿಸಿದ ಸುತರ ಬಳಿಗಟ್ಟಿದನು ದೂತರ ಬೇಗ ಬಹುದೆನುತ (ಕೌಶಿರಾ. ೪-೭). [ ಸಂ. ]

ಧೃತಿಯೋಗ (ನಾ). = ಧೃತಿ ೧೪: ಧೃತಿಯೋಗಕೆ ರವಿ: ೪೨ ಗಳಿಗೆ ಮೇಲೆ ತ್ಯಾಜ್ಯ (ಭಾಸ್ಕರ. ೭೦-೮). [ ಧೃತಿ + ಯೋಗ ]

ಧೃತಿವೆಱು (ಕ್ರಿ). ಉತ್ಸಾಹದಿಂದ ಕೂಡಿರು; ಉಲ್ಲಾಸಗೊಳ್ಳು: ಸಂಭ್ರಮಂಪಡಂ: ಧೃತಿವೆತ್ತು ತವದಿಗ್ಗಯೋದ್ಯಮಭವದ್ಭೇರೀಪ್ರಣಾದಕ್ಕೆ ಕಂಪಿತಮಪ್ಪುದಿಯ ಕೂರ್ಮನಂ ಫಣಿಪನಂ . . . ಭೂಮಿ ಬಿಸುಟ್ಟು ಬಂದು ಪಿರಿದುಂ ನಿಶ್ಚಿಂತದಿ ಸುಪ್ರತಿಷ್ಠಮಾಗಿರ್ಪುದು ಸುಪ್ರತಿಷ್ಠಿತಪಟಿಷ್ಠೋದ್ದಂಡದೋರ್ದಂಡದೊಳ್ (ಅರ್ಧನೇ. ೪-೩೪); ಧೃತಿವೆತ್ತಂ ನೃಪಕಂತುವೀ ತೆಱಂ (ಕುಸುಮಾ. ೧೦-೧೧೪). [ ಧೃತಿ + ಪೆಱು$_1$ ]

ಧೃತಿಹೀನ (ನಾ). ಧೈರ್ಯವಿಲ್ಲದವನು : ಕ್ಷಿತಿಯೊಳು ಧನಾಢ್ಯರುಂ ಸಕಲ ವ್ಯವಹಾರಿಗಳು ಧೃತಿಹೀನತರರೆನೆ ಕುಬೇರರೆಂದೆನಿಸುವರು. . .ವೈಶ್ಯರು (ನವವೋ. ೨-೪೧). [ಧೃತಿ + ಹೀನ]

ಧೃಷ್ಟ (ಗು). ೧. ಧೈರ್ಯವುಳ್ಳ; ಕೆಚ್ಚಿನ; ಆತ್ಮವಿಶ್ವಾಸದ. ೨. ದಯೆಯಿಲ್ಲದ; ಕ್ರೂರವಾದ; ಒರಟಾದ. ೩. ನಾಚಿಕೆಯಿಲ್ಲದ; ಲಜ್ಜೆಯಿಲ್ಲದ. ೪. ವಿಷಯಲಂಪಟನಾದ; ದುರ್ಮಾರ್ಗಿಯಾದ. ೫. ಮುಂದೆ ನುಗ್ಗುವ ಸ್ವಭಾವದ; ಧಾರ್ಷ್ಟ್ಯದ; ದುಡುಕುತನದ. ೬. ದುರಭಿಮಾನದ; ಗರ್ವದಿಂದ ಕೂಡಿದ. (ನಾ). ೭. ಆತ್ಮವಿಶ್ವಾಸವುಳ್ಳವನು; ಗಟ್ಟಿಗ; ಧೈರ್ಯಶಾಲಿ : ಧೃಷ್ಟಂ ವರವಕ್ರೋಕ್ತಿ ವಿಶಿಷ್ಟಂ . . . ಎನಿಪ್ಪ ದೂತಮುಖ್ಯನಂ (ಪಾರ್ಶ್ವಪು. ೨-೩೦). ೮. ಧಾರ್ಷ್ಟ್ಯವುಳ್ಳವನು; ಉದ್ಧಟ; ದಂಡಂಕಿನವನು: "(ಧೃಷ್ಟ) ನಾತಂ ವಿಯಾತಂ" (ವಸ್ತುಕೋ. ೪೪-೬); "ವಿಯಾತಾ. ಧೃಷ್ಟಃ - ಈ ೨ ಬಗೆಯದವಂ" (ಹಲಾಯು. ೬೧-೨೦೬); "ಧೃಷ್ಟಃ, ಧೃಷ್ಣುಃ, ವಿಯಾತಃ- ೩ ದಿಟ್ಟತನವುಳ್ಳವನ ಪೆಸರು" (ಸಿದ್ಧಾಂತಿ. ೩೨೪); ಈ ಕಥೆ ಗುಣ್ಪುವೆತ್ತುದವರುಂ ಜ್ಞಾನರ್ಧಿಸಂಪನ್ನರಂದಿರದಾಂ ಧೃಷ್ಟನನೀ ಕಥಾಬ್ಧಿಯುಮನೇನೀಸಲ್ಪನಂದಂದೆನೋ (ಆದಿಪು.೧-೩೩). ೯. [ಕಾವ್ಯಮೀ] ದಕ್ಷಿಣ, ಧೃಷ್ಟ, ಅನುಕೂಲ ಮತ್ತು ಶಠ ಎಂಬ ನಾಲ್ಕು ಬಗೆಯ ಶೃಂಗಾರನಾಯಕರಲ್ಲಿ ಒಂದು ವಿಧ: "ಧೃಷ್ಟನೆಂದರೆ, ತನ್ನ ಪತ್ನಿಯಲ್ಲಿ ಅಪರಾಧ ಮಾಡಿ ದೋಷಗಳು ಸ್ಪಷ್ಟವಾಗಿದ್ದು ತಾನು ಆಕ್ಷೇಪಣೆಗೆ ಗುರಿಯಾದರೂ ನಾಚಿಕೆ ಪಟ್ಟುಕೊಳ್ಳದವನು" (ಕೈಪಿಡಿ. ೨೦೦); ಅಗಳರಸನಾ ಧೃಷ್ಟನ ಖಾತ್ಯಾಸಮಿಾಕರಣನ್ಯಾಯಮೂದ ಮುಳಿಸುಂ ತಿಳಿಪುವಿರ್ವರ್ಗ ಮುಬ್ಬೆಗಮಂ ಪಡೆದುದೆಂದಿಂತೆಂದಂ (ಚಂದ್ರಪು. ೮-೫೧ವ); ಶೃಂಗಾರನಾಯಕರಲ್ಲಿ ದಕ್ಷಿಣ, ಧೃಷ್ಟ, ಅನುಕೂಲ, ಶಠ ಎಂದು ನಾಲ್ಕು ವಿಧ (ಸಂನಾಟ. ೧೮). [ಸಂ.]

ಧೃಷ್ಣು (ಗು). ೧. ಕೆಚ್ಚಿನ; ದಿಟ್ಟತನವುಳ್ಳ; ಧೈರ್ಯವುಳ್ಳ. ೨. ನಾಚಿಕೆಯಿಲ್ಲದ; ನಿರ್ಲಜ್ಜೆಯ. ೩. ಬಲವುಳ್ಳ; ಪ್ರಭಾವವುಳ್ಳ. (ನಾ). ೪. ದಿಟ್ಟತನವುಳ್ಳವನು; ಉದ್ಧಟ: "ಧೃಷ್ಟ, ಧೃಷ್ಣು, ವಿಯಾತ" (ನಾಚಿರಾ. ೬); "ಧೃಷ್ಟಃ, ಧೃಷ್ಣುಃ, ವಿಯಾತಃ-೩ ದಿಟ್ಟತನವುಳ್ಳವನ ಪೆಸರು" (ಸಿದ್ಧಾಂತಿ. ೩೨೪). [ಸಂ.]

ಧೇನಿಕೆ, ಗೇಣಿಕೆ, ಗೇನಿಕೆ (ನಾ). ಯೋಚನೆ; ಧ್ಯಾನಿಸುವಿಕೆ : ಎದೆ ಶೀವಿ, ಕಣ್ ತುಂಬ ನಲುಮೆ ಹರಿದಾಡಿತ್ತು ತಾಯ ಧೇನಿಕೆ, ಎಣಿಕೆ ಅದರಲ್ಲಿ ಮುಳುಗೆ (ಬಿಚಾಸಿ. ೩೬-೮). ಗೇಣಿಕೆ: "ಗೇಣಿಕೆ-ವಿಚಾರ; ಕಲ್ಪನೆ" (ಜಾನಕೋ. ೫೦). ಗೇನಿಕೆ : ಕೈಯೊಳಗೆ ಕಾಸಿದ್ದರೆ, ಕುಣಿದಾಡಿಸಿಬಿಡುವೆ. ಮತ್ತ ಮನಸ್ಸಿನೊಳಗೆ ಗೇನಿಕೆ ಹಾಕ ಹತ್ತಿದ (ಕೊಡಕಾ. ೩೨). 'ಧೇನಿಸು' ಪರಾ. [<ಧ್ಯಾನ + - ಇಕೆ]

ಧೇನಿಸು, ಗೇಣಿಸು, ಗೇನಿಸು, ಜಾನಿಸು (ಕ್ರಿ). ೧. ಚಿಂತಿಸು; ಧ್ಯಾನ ಮಾಡು : ಈಸು ಪುಣ್ಯವ ಮಾಡಿ ದಿನದಿನ ಧೇನಿಸೆ (ವೃಕುಂವ. ೩-೪೪); ಮನೋಭಾವವ ಧೇನಿಸಿ ನೋಡುತ್ತ (ವಿದಾಕ್ಕ. ೧-೪೪); ಅಹರ್ನಿಶೀ ಧೇನಿಸುವೆ ನಿನ್ನನ್ನು (ಜಗದಾ. ೧೬೮); ತವುಗೊಗ್ಗಿದುದನು ಧೇನಿಸಿ ಜರ್ಜಿಸಿ ನಭದಲಿ ನೆಗೆದು ಸೊಬಗನು ವರ್ಣಿಸಿ (ಚಿಂತನ. ೫೦-೨೩). ೨. ಯೋಚಿಸು; ವಿಚಾರಿಸು; ಬಗೆ : ಧೇನಿಸಿದರೀ ಜಗದೊಳೆಲ್ಲಿಯು ಕಾಣೆ ನಿನಗನುರೂಪ ಪುರುಷನ (ಪಾರ್ವತಿಪ. ೨-೪೬); ಪದ್ಮಾವತಿಯು ಮನದಲ್ಲಿ ಧೇನಿಸಿದಳು (ಸಮುಜೀ. ೮೭). ೩. ನೆನೆಸಿಕೊಳ್ಳು; ಸ್ಮರಿಸು : ಆಗ ಕಂಡ ಅವಳನ್ನು ಅನಂತನು ಚೆನ್ನಾಗಿ ಧೇನಿಸಿಕೊಂಡ (ಕಾಗಿಳ. ೫೩). ಗೇಣಿಸು : ೨. ಅವಳನ್ನು ಮುಂದೆ ಕೂಡ್ರಿಸಿಕೊಂಡು ಬಲು 'ಖುಷಿ'ಯಿಂದ ಮಕ್ಕಳಾದ ಮೇಲೆ ಉತ್ತಮ ನಡೆತನವನ್ನು ಮಾಡೋಣವೆಂದು ಗೇಣಿಸುತ್ತಾನೆ (ಕನ್ನಕಾ. ೬೦). ಗೇನಿಸು : ೨. ಏನು ಮಾಡಲಿ . . . ಎಂದು ಮನಸ್ಸಿನೊಳಗೆಯೇ ಗೇನಿಸುತ್ತಿದ್ದಳು (ಕೊತಕಾ. ೧೩); ಬಿದ್ದುಕೊಂಡೇ ಗೇನಿಸತೊಡಗಿದಳು (ಮೂಲತಿ. ೧); ಗೇನಿಸಿ ಗೇನಿಸಿ ಜಂಪುಹತ್ತಲು ಒಂದು ಕನಸು ಸುಳಿಯಿತು (ಪವನ. ೩೭). ಜಾನಿಸು: ೧. "ಜಾನಿಸು-ಧ್ಯಾನೇ" (ಶಮುಧಾ); ದೇವರಂ ಜಾನಿಸುತ್ತಂ ಪಂಚನಮಸ್ಕಾರಮಂ ಮನದೊಳುಚ್ಚಾರಿಸುತ್ತಂ (ವಡ್ಡಾರಾ. ೧೧೧-೧೬); ಜಿನೇಂದ್ರನಂ ಬಗೆವ ಮನಂ ಗಡಂ ಮಾಸುಬ್ಬು ಜಾನಿಪ ಕಣ್ಗಡಂ (ಆದಿಪು. ೨-೬೦); ಮುನ್ನಿನಂದದೊಳ್ ಮನಂಗೊಂಡು ಜಾನಿಸುತಿರ್ದಂ (ಕಾದಂಉ. ೪೪೬). ೨. ಈ ನುಡಿಯನ್ನು ಕೇಳಿ ಭೀಷ್ಮಕಭಗಿನಿ ಜಾನಿಸಿ ನುಡಿದಳು ಜಾಣೆ (ಕಾಮುಕ. ೧-೨೭); ಎಂದಿಗವನ ಪಡಿವೊಗದೆಳು ಸಂದಪನೆಂದೆಡವಿಡದೆ ಜಾನಿಪಳು (ಹದಿಬ. ೭-೨೯); ರಘುಪ್ರವರನುಂ ಮನಮಜುಗಿ ಇನಿಸುಂ ಪೊಲ್ತು ಜಾನಿಸಿ (ರಾಮಾಶ್ವ. ೨೦-೨೪). ೩. ಆನಂದವ ಮಾಡು ಮಾಡುತೊಪ್ಪುವೃತ್ತಮಾಂಗಿಯಂ ಜಾನಿಸಿದಂ ನೃಪಾಲಕಂ (ಉದ್ಭಟ. ೩-೧೧೧). ☞ ಇಲ್ಲಿ ಒಟ್ಟಿಗೆ ಪರಿಶೀಲಿಸಿರುವ 'ಧೇನಿಸು' ಎನ್ನುವ ಶಬ್ದದ ಪರ್ಯಾಯರೂಪಗಳ ವ್ಯುತ್ಪತ್ತಿಯ ಬಗ್ಗೆ ಅನುಮಾನವಿದೆ. 'ಧೇನಿಸು', 'ಜಾನಿಸು' ಎನ್ನುವ ರೂಪಗಳು 'ಧ್ಯಾನ' ದಿಂದಲೂ, 'ಗೇಣಿಸು', 'ಗೇನಿಸು' ಎನ್ನುವ ರೂಪಗಳು 'ಜ್ಞಾನ' ದಿಂದಲೂ ನಿಷ್ಪನ್ನವಾಗಿರಬೇಕು. ಇದು ಪರಿಶೀಲನಾರ್ಹ. [<ಧ್ಯಾನ + - ಇಸು]

ಧೇನು (ನಾ). ೧. ಆಕಳು; ಹಸು; ಗೋವು: ಪೊಸರಂ ದುಗ್ಧಮನಾಜ್ಯಮಂ ಸೆಗಣಮಂ ಧಾನ್ಯಂಗಳಂ ಧೇನುವಂ . . . ಬಸೆಯಂ ತನ್ನಿದಿರಾಗಿ ಬರ್ಪವವ(ನಿಂ)ಕಣ್ಬಂತುಟತ್ಯುತ್ತಮಂ (ಲೋಕೋಪ. ೧೨-೪೮); ಹರಿಶ್ಚಂದ್ರಭೂಭುಜಂ ತನ್ನ ಸಾರ್ದರ . . . ತನ್ನಂತೆ ಮಾಳ್ಪನ್ನತಿಕೆಯುಂ ಕಂಡು . . . ಮರುಗುವಟ್ಟುದಮರರ ಧೇನು [ಪಾಠಾಂ. ಹಯಂ] (ಹರಿಶ್ಚ. ೧-೪೨); ಧೇನುಮಹಾತ್ಮ್ಯಯನಿತೋಂದು ದೊಡ್ಡಿಕೇಂ (ರಾಮಾಶ್ವ. ೧೦೪-೮); ನಾನು ಅತಿಶಯವಾದ ಸ್ತುತಿಯ ಮೂಲಕ ಧೇನುವಿಗೆ ಆಹ್ವಾನ ಕೊಡುತ್ತೇನೆ (ಹುಕ್ಕಾಂ. ೨೬೯). ೨. ಹೊಸದಾಗಿ ಕರುಹಾಕಿರುವ ಹಸು : ಈದ ಆಕಳು; ಎಳಗಂದಿ : "ಧೇನು ನವಸೂತಿ . . . ಸೃಚಿಕೆಯೆನಿಕುಂ" (ವಸ್ತುಕೋ. ೯೦-೭); "ಧೇನುಃ, ನವಪ್ರಸೂತಾ-ಈ ೨ ಎಳಗಂದಿ" (ಹಲಾಯು. ೪೫-೧೧೫); . ಎಳಗಂದಿ ಧೇನುವಕ್ಕು (ಮಂಗರಾ. ೫೪-೪). ೩. ಬಯಸಿದುದನ್ನು ಕೊಡುವ ದೇವಲೋಕದ ಹಸು; ಕಾಮಧೇನು: "ಸುರಭಿ ಸುರಪಶು ಧೇನುವನೆ ಕಾಮಧೇನುವಿಗೆ ಪೆಸರನಿಕ್ಕುಂ" (ಮಂಗರಾ. ೯-೩೦). ೪. ಹೆಣ್ಣಾನೆ; ಪಿಡಿ : "ವಶಾ ಕರಿಣೀ ಧೇನು ಕರೇಣುಗಳ್ ಗಜವಧೂಪರ್ಯಾಯದೊಳ್ ವರ್ತಿಕುಂ" (ವಸ್ತುಕೋ. ೮೭-೩೦). ೫. ಬ್ರಾಹ್ಮಣರಿಗೆ ಕೊಡುವ ಹಸು ಅಥವಾ ಅದರ ಬದಲಾಗಿ ಇನ್ನು ಯಾವುದಾದರೂ ವಸ್ತುಗಳ ದಕ್ಷಿಣೆ,-ದಾನ. ೬. ಭೂಮಿ. ೭. ಖಡ್ಗ; ಅಸಿಧೇನು : ಮುನಿಪಂತೆ ಕರಿಯಂತೆ ಶಶಿಯಂತೆ ಭಟನಂತೆ ವನಕುಸುಮದಂತೆಯಿಾಶಾನ್ಯವ್ಯಭವದಂತೆ ಘನತರವ್ರತವಶಾಲೋಹಿಣೀ ಧೇನು ಸಂಸುರಭಿ ವೃಷಯುಕ್ತವಾಗಿ . . . ವೈಶಾಖಶಬ್ದದೊಳ್ ಪ್ರಜಮಸೆದುದು (ಚಬಪು. ೧೧-೦೪). [ಸಂ.]

ಧೇನುಕ (ನಾ). ೧. ಕತ್ತೆಯ ಆಕಾರದ ಒಬ್ಬ ರಾಕ್ಷಸ; ಧೇನುಕಾಸುರ; ಆ ಮಹಾ ತಾಳವನಮಂ ಧೇನುಕನೆಂ ರಾಸಭರಾಕ್ಷಸಂ ಕಾದಿರ್ಪಂ (ಜಗವಿ. ೪-೩೯ವ); ಸುರರು ಭಾವಿಸೆ ತಾಳವನವನು ಬೆರಸಿ ಮುಂಚಿದರು ಬಾಲಕೇಳಿಯ ಪರಿಣತರು ಧೇನುಕನಸಚ್ಚುಕರಾಮರುರವಣಿಸಿ (ನಿಘಾಗ. ೧೧-೧೫ ಸೂಚನ). ೨. [ಕಾಮಶಾ] ಒಂದು ವಿಧವಾದ ರತಿಬಂಧ; ಹಸುವಿನಂತೆ ಅಂಬೆಗಾಲಿನ ಬಂಧದಲ್ಲಿರುವ ಸ್ತ್ರೀಯನ್ನು ಪುರುಷನು ಗೂಳಿಯ ರೀತಿಯಲ್ಲಿ ಸಂಭೋಗಿಸುವುದು : ಸ್ತ್ರೀಯು ಪಶುವಿನ ಹಾಗೆ

ವ್ಯಗಾಲು ಮೇಲೆಯೆರಡು ಕೈಗಳನಿಕ್ಕಿ ಮೆಲ್ಲನೆ ನಡೆಯಲ್ಕೆ ಗೂಳಿಯಂತೆ ಪತ್ತುಗಳ ರವಂಗೆಯ್ಯುತ್ತಾ ಪುರುಷ ರಮಿಸುತ್ತಾ ನಡೆಯುತ್ತಿರೆ ಧೇನುಕ ಮೆಂಬ ಕರಣಂ (ಕಾಮಶಾ. ೭-೧೪೯). [ ಸಂ. ]

**ಧೇನುಕಕರಣ** (ನಾ). = ಧೇನುಕ ೨ : ಬಾಗಿ ಪದಯುಗಕೆ ಕಾಮಿನಿ ಕೆಯ್ಗಳ ನಿಟ್ಟೊಯ್ಯನಡಿಯಿಡಲ್ ಪ್ರಿಯನದರಿಂ ಬಾಗಿ ತಳವೂರು ಪೃಷ್ಠ ವಿಭಾಗದೆ ಮನ ಮೊಲ್ದು ನೆರೆಯೆ ಧೇನುಕಕರಣಂ (ಪುನ್ನವಿ. ೧೪-೩೬). [ ಸಂ. ]

**ಧೇನುಕುಚ** (ನಾ). ಹಸುವಿನ ಕೆಚ್ಚಲು : ಸುಗಂಧಿಯೆಂಬ ವಿಷಯಮುಂಟ ದಱಿಂ ಕರಪೀಡನಂ ಧೇನುಕುಚದೊಳ್ ಬಂಧನಂ ಕಜದೊಳ್ . . . ಅಲ್ಲದಿಲ್ಲಮೆಲ್ಲಿಯುಂ (ಚಂದ್ರಪ್ರ. ೩-೯೨). [ ಧೇನು + ಕುಚ ]

**ಧೇನುಕೆ** (ನಾ). ೧. ಹೊಸದಾಗಿ ಕರು ಹಾಕಿರುವ ಹಸು; ಈದ ಆಕಳಂ: ಎಳಗಂದಿ. ೨. ಹೆಣ್ಣಾನೆ ; ಪಿಡಿ : "ಪಿಡಿಯಾನೆಯಲ್ಲಿಯುಂ ಧೇನುಕಾ, ಗಣಿಕಾ ಎಂಬುದು" (ಹಲಾಯು. ೦೩೩-೧೩). ೩. ಆನೆಯ ಹೆಣ್ಣು ಮರಿ ; ಮರಿ ಹೆಣ್ಣಾನೆ : "ಎಳೆಯ ಪಿಡಿಯಾನೆಯಲ್ಲಿ ಅನುಗೊಳಿಸಿ ಧೇನುಕಾ ಗಣಿಕಾಯೆನಿಪುದು"(ಮಂಗರಾ.೦೩೯-೭). ೪. (ಯಾವುದಾದರೂ) ಹೆಣ್ಣುಪ್ರಾಣಿ. ೫. ಕಠಾರಿ ; ಸುರಿಗೆ ; ಚೂರಿ : "ಬಾಲತರೇಣಾ ಶಸ್ತ್ರ ದನುಜಂ ಪಶುವಿಂತಿವು ಧೇನುಕಾಖ್ಯ" (ನಾನಾರ. ೯೯). [ ಸಂ. ಧೇನುಕಾ ]

**ಧೇನುವಿಗ್ರಹಣ** (ನಾ). ಹಸುಗಳನ್ನು ಸೆರೆಹಿಡಿದೊಯ್ಯುವುದು ; ಗೋಗ್ರಹಣ : ಧೇನುವಿಗ್ರಹಣವನು ಮಾಡಿದನಂದು ಕುರುರಾಯ (ಕುವ್ಯಾವಿ. ೪-೩೧). [ ಸಂ. ]

**ಧೇನುಷ್ಯೆ** (ನಾ). ೧. ಸಾಲ ತೀರುವವರೆಗೂ ಹಾಲು ಕರೆದುಕೊಳ್ಳಲು ಸಾಲ ಕೊಟ್ಟವನ ವಶದಲ್ಲಿರುವ ಹಸು : "ಧೇನುಷ್ಯಾ-ಬಂಧಕೀ-ಸೆರೆ ಯಲ್ಲಿ ಸಿಕ್ಕಿದ ಆಕಳಿಗೂ ಅಡವು ಹಾಕಲ್ಪಟ್ಟ ಆಕಳಿಗೂ ಹೆಸರು" (ಸಿದ್ಧಾಂಕಿ. ೨೯೩). ೨. ಕ್ಷೀರಾಗಾರದಲ್ಲಿರುವ ಹಸು. [ಸಂ. ಧೇನುಷ್ಯಾ ].

**ಧೇಯ** (ಗು).. ೧. ಇಡಬೇಕಾದ. ೨. ತೆಗೆದುಕೊಳ್ಳಬೇಕಾದ. ೩. ಉತ್ಪತ್ತಿಯಾಗುವ. (ನಾ). ೪. ಉತ್ಪತ್ತಿಯಾದುದು. [ ಸಂ. ]

**ಧೈಂಚ** (ನಾ). ಒಂದು ಬಗೆಯ ಸಸ್ಯ: ಮುಳ್ಳು ಜೀನಂಗಿ. ಧೈಂಚ (ಮೃಜಿಗಿ. ೬೯-೦೪೧೪). [ ? ]

**ಧೈಂಡಿ** (ನಾ). (ಮೊಸರಂ) ಗಟ್ಟಿಯಾದಂದು ; ಗಡ್ಡೆ ; ಗರಣೆ: ಒಳ್ಳೆಯ ಹೆಪ್ಪು ಹಾಕಿದ ಧೈಂಡಿ ಮೊಸರು (ಕಂಗಳ. ೧೨೬) ; ಅವರೆಕಾಯಿ ಹುಳಿ, ಹುರುಳಿ ಹಪ್ಪಳ ಮತ್ತು ಧೈಂಡಿ ಮೊಸರು (ಮನೋಲಿನಂ. ೨೧೦). [ ? ]

**ಧೈನುಕ** (ನಾ). ಹಸುಗಳ ಸಮುದಾಯಂ ; ಆಕಳ ಹಿಂಡು. [ ಸಂ. ]

**ಧೈರಿಯ** (ನಾ). ದಿಟ್ಟತನ ; " ಧೈರ್ಯ " (ಪ್ರಶಬ್ದ). [< ಸಂ. ಧೈರ್ಯ]

**ಧೈರ್ಯ** (ನಾ). ೧. ದಿಟ್ಟತನ ; ಕೆಚ್ಚು ; ಎದೆಗಾರಿಕೆ : "ಧೈರ್ಯದೊಳು ತೊನ್ನಿನೊಳು ಕ್ರೂರದೊಳು ... ಪರುಷವಕ್ಕು" (ಮಂಗರಾ. ೧೩೦-೫೧); ಎಲ್ಲಿತ್ತೊ ಧೈರ್ಯಮುಪಶಮಮೆಲ್ಲಿತ್ತೊ ಜಿತೇಂದ್ರಿಯತ್ವಗುಣಮೆಲ್ಲಿತ್ತೋ ಎಲ್ಲಿತ್ತೊ ನಿನ್ನ ಶೌರ್ಯಮದಲ್ಲಿತ್ತುಪಭೋಗರಾಗವಿಷಯದ್ವೇಷಂ (ಕಾದಂಪೂ. ೭೭೩); ಮಱಿವುಗೆ ಕಾವಂ ಯುದ್ಧಧುರನ್ಧರಂ ಧೈರ್ಯ್ಯಧರಾಧರಂ (ಸೌಇಇ. XI-1, ೯೨-೮; 1054). ಧೈರ್ಯಂ ಘೋರತಪಂ ಪರೀಷಹ ಸಮೂಹಪ್ರಾಪ್ತಿಯೊಳ್ ಸಂದ ತಾತ್ಪರ್ಯಂ (ಚಂದ್ರಪ್ರ. ೧-೩) ; ಧೈರ್ಯಂ ಸರ್ವಪರೀಷಹಾನ್ವಯ ಜಯಂ (ಜೀವಸಂ. ೨-೩) ; ತಳರು ಬಾಡದೆ ಧೈರ್ಯಸುರಭಿಜದ (ಕುವ್ಯಾಸ. ೦೪-೮೭) ; ಬಳಿಕ ಧೈರ್ಯಂ ಸರ್ವತ್ರಸಾಧನ ವೆಂಬ ವಿಳಸಿತ ವಾಕ್ಯಾರ್ಥವನು ತಿಳಿದವನೀಶ್ವರನಲೆವ ವಿಷಾದವ ತೊಳೆದು ವಿವೇಕಜಲದೊಳು (ಕುರಾಸಾಂ. ೪೨-೩೩) ; ನಡೆತಂದನಾ ವೀರಭದ್ರಂ ಧೈರ್ಯರಸಸಮುದ್ರಂ (ವೀಕೃಪು. ೩-೩-೪೨) ; ತೃಷ್ಣೆಯೆ ದೇವಿಯೆ ನಿನಗಿದೊ ನಮನವು ಧೈರ್ಯವಿಪ್ಲವಕಾರಿಯೆಂದೆ ಮೂರು ಲೋಕದ ನಾಥನಾದರು ವಿಷ್ಣುವು ವಾಮನನಾದ ನಿನ್ನಿಂದೆ (ಇಂಚಾಪ. ೦೮೨-೯೨). ೨. ಅಚಲವಾಗಿರುವುದು ; ಗಾಂಭೀರ್ಯ : ನಿಶ್ಚಲತೆ ; ದೃಢತೆ : "ಪಾಷಾಣಮುಂ ಪರ್ವತಂ ಧೈರ್ಯಂ ಗ್ರಾವಸಮಾಹ್ವಯಂ"(ನಾನಾರ.೧೦೭. ೩. ಸಹನೆ ; ಶಾಂತತೆ ; ತಾಳ್ಮೆ. [ ಸಂ. ]

**ಧೈರ್ಯಂಗಿಡು** ' ಧೈರ್ಯಂಗೆಡು ' ನೋ.

**ಧೈರ್ಯಂಗೆಡು, ಧೈರ್ಯಂಗಿಡು, ಧೈರ್ಯಗೆಡು** (ಕ್ರಿ). ಎದೆಗುಂದಂ ; ಅಧೈರ್ಯಪಡು ; ಧೈರ್ಯವನ್ನು ಕಳೆದುಕೊಳ್ಳು : ಧೈರ್ಯಂಗೆಟ್ಟತ್ತು [ಪಾಠಾಂ ಕೆಟ್ಟತ್ತು] ಸರ್ವಾಕ್ಷಮಮೆನಿಪ್ಪುದಱಿಂ ಒಳ್ತಿರ್ಸುತಿರ್ಪೆನಿಂತೀ ತಿರ್ಯಗ್ಜಾತಿತ್ವದೊಳ್ (ಕಾದಂಉ. ೭೦೩) ; ಎದುರು ಬಂದಡಸಿರಲು ಧೈರ್ಯಂಗೆಡು ವರೇ (ಕೌಶಿರಾ. ೯-೨೭). **ಧೈರ್ಯಂಗಿಡು** : ಮಱುಗಿಸೆ ಪರೀಷಹಂಗಳ್ ನೆಱೆ ಧೈರ್ಯಂಗಿಡುವವರನ್ಯಯತಿಗಳ್ (ಸಮಶ. ೭-೨೦) ; ನಿಷ್ಕಂಪಿತಶರೀರ ನಾಗಿ ಧೈರ್ಯಂಗಿಡದಿರಲ್ವೇಟ್ಕುಂ (ವರ್ಧಪು. ೧೨-೧೧೨). **ಧೈರ್ಯಗೆಡು** : ಇವನ ಕಡುನಿಬ್ಬರದ ಧಾಳಿಗೆ ಧೈರ್ಯ [ಪಾಠಾಂ. ಧಾತು]ಗೆಟ್ಟುದು ಕೂಡೆ ಪುರುಸೇನೆ (ಕುವ್ಯಾದ್ರೋ. ೦೭-೧೨). [ ಧೈರ್ಯ + ಕೆಡು₁ ]

**ಧೈರ್ಯಕ್ಷತಿ** (ನಾ). ಕೆಚ್ಚಿನ ನಾಶ,-ನಷ್ಟ ; ಎದೆಗೇಡು ; ಅಧೈರ್ಯ : ದುರ್ಯೋಧನನ ಮನದ ಧೈರ್ಯಕ್ಷತಿಗೆ ಮನಃಕ್ಷತನಾಗಿ ಸಿಗ್ಗಾಗಿ ತಲೆಯಂ ಬಾಗಿ ಧರ್ಮನಂದನನಿರೆ (ಗದಾಯು. ೬-೩೯೨). [ ಧೈರ್ಯ + ಕ್ಷತಿ ]

**ಧೈರ್ಯಗುಂದು** (ಕ್ರಿ). ಧೈರ್ಯಕುಗ್ಗು : ಅಸಮಸಾಹಸಿ ಧೈರ್ಯ ಗುಂದದೆ ದೆಸೆಯ ನೋಡದೆ ಕಾದುತಿರೆ (ಕೌಶಿರಾ. ೨೭-೩೨). [ ಧೈರ್ಯ + ಕುಂದು₁ ]

**ಧೈರ್ಯಗುಣ** (ನಾ). ಸ್ಥಿರತ್ವ ; ನಿಶ್ಚಲತೆ : ಕ್ಷಿತಿಪತಿಯ ಧೈರ್ಯಗುಣ ಪರ್ವತಮಂ ತಱಗೆಲೆಗಳೊಟ್ಟಲಂ ತೂಳ್ದುವವೋಲ್ ಅತಿವೇಗದ ಪಾಱಿಸಿದುದು ಸುತವಿರಹಪ್ರಳಯಮರುಷಪವಮಾನಪಾತಂ (ಚಂದ್ರಪ್ರ. ೩-೯). [ ಧೈರ್ಯ + ಗುಣ ]

**ಧೈರ್ಯಗೆಡಿಸು** (ಕ್ರಿ). ಭಯಂಪಡಿಸಂ ; ಎದೆಗೆಡಿಸಂ : ಜಝ್ಝುರದ ಡಿಂಡಿಮ ಡಮರು ಪಟಹದ ಧಂಧುರದ ದನಿ ಧೈರ್ಯಗೆಡಿಸಿತು ಸಕಲಸಾಗರವ (ಕುವ್ಯಾಶ. ೧೮-೮). [ ಧೈರ್ಯ + ಕೆಡಿಸು₁ ]

**ಧೈರ್ಯಗೆಡು** 'ಧೈರ್ಯಂಗೆಡು' ನೋ.

**ಧೈರ್ಯಗೊಳಿಸು** (ಕ್ರಿ). ಧೈರ್ಯವನ್ನು ತುಂಬು. [ ಧೈರ್ಯಗೊಳ್ಳು + - ಇಸು₃ ]

**ಧೈರ್ಯಗೊಳ್ಳು** (ಕ್ರಿ). ಕೆಚ್ಚನ್ನು ಪಡೆದುಕೊಳ್ಳು, - ಹೊಂದು ; ಧೈರ್ಯಶಾಲಿಯಾಗು. [ ಧೈರ್ಯ + ಕೊಳ್ಳು₁ (< ಕೊಳ್₁) ]

**ಧೈರ್ಯದರಿದ್ರ** (ನಾ). ಕೆಚ್ಚನ್ನು ಕಳೆದುಕೊಂಡವನು ; ಎದೆಗುಂದಿದ ವನು ; ಎದೆಗೇಡಿ : ಘನವಿಕರ್ಮದ ವಿಲಗದಲಿ ನಿಜತನುಜಶೋಕದ ತಗಹಿನೊಳಗರ್ಜುನನು ಧೈರ್ಯದರಿದ್ರನಾದನು (ಕುವ್ಯಾದ್ರೋ. ೮-೩೩). [ ಧೈರ್ಯ + ದರಿದ್ರ ]

**ಧೈರ್ಯನಿಧಿ** (ನಾ). ಕೆಚ್ಚಿನ ಆಗರ,-ಆಶ್ರಯಸ್ಥಾನ ; ಬಹಳ ಧೈರ್ಯ ಶಾಲಿ ; ಅಚಲವಾಗಿರುವವನು: ಧೈರ್ಯನಿಧಿ ಕೊಂಡಕುಂದಾಚಾರ್ಯರ ಚರಣಂಗಳೊಲಿದು ನೆಲಮುಟ್ಟದ ತಾತ್ಪರ್ಯಮನಱಿದಂ (ಅರ್ಧನೇ. ೧-೧೪) ; ಅಡಿಗೆಱಗಿ ನಡೆದನಾ ಧೈರ್ಯನಿಧಿ ಭೂಪಾಲನು (ಹಕಳಾ, ೮-೬೦). [ ಧೈರ್ಯ + ನಿಧಿ ]

**ಧೈರ್ಯಪರ** (ಗು). ೧. ಧೀರತ್ವವನ್ನು ಹೊಂದಿದ ; ಧೀರನಾದ : ಧೈರ್ಯಪರ ಗೃದ್ಧಪಿಂಛಾಚಾರ್ಯ ಪಟ್ಟಾಸಿಂಹನಂದಿ ಜಗತ್ಪ್ರಖ್ಯಾತಾಚಾರ್ಯ ವೃಷಭಾಪಮತ್ಯಾಶ್ಚರ್ಯಮದಂ ಪೊಗಟ್ಟಡಬ್ಜಜಂಗಮಸಾಧ್ಯಂ (ಮಹಾನೇ. ೧-೧೪). (ನಾ). ೨. ಧೀರ ; ಅಚಲನಾಗಿರುವವನು : ಧೈರ್ಯಪರಸ್ವರ್ಪರತಪಸ್ಕಾರ್ಯರ್ ತತ್ತ್ವಾರ್ಥಕರ್ತೃಗಳ್ ಜಿನಮತತಾತ್ಪರ್ಯರ್ (ಸುಕುಮಾ. ೧-೧೩). [ ಸಂ. ]

**ಧೈರ್ಯಯುತ** (ನಾ). = ಧೈರ್ಯಪರ: ಧೈರ್ಯಯುತರ್ಧರಸೇನಾಚಾರ್ಯರ್ . . . ದಯುಗೆಯ್ಗೆ ವಿಮಳರತ್ನತ್ರಯಮಂ (ಧರ್ಮಾಮೃ. ೧-೧೨). [ ಸಂ. ]

**ಧೈರ್ಯವಂತ** (ನಾ). = ಧೈರ್ಯಶಾಲಿ: ಸುಕುಮಾರಸ್ವಾಮಿಯನಹೊ ಸೂರಾ ಅಹೊ ಮಹಾಪುರುಷ ಅಹೊ ಧೈರ್ಯವಂತ ಅಹೊ ಸಂಸಾರಭೀರು . . . ಎಂದು ದೇವತೆಗಳ್ ಪೊಗೞ್ವ ಕಳಕಳಧ್ವನಿಯುಮಂ ದೇವದುಂದುಭಿಯ ರವಮುಮಂ ಯಶೋಭದ್ರೆ ನೋಡಿ (ವಡ್ಡಾರಾ. ೨೯-೨೦).

[ ಸಂ. ಧೈರ್ಯವತ್ ]

**ಧೈರ್ಯಶಾಲಿ** (ನಾ). ದಿಟ್ಟತನವುಳ್ಳವನು; ಕೆಚ್ಚು ತುಂಬಿದವನು: ಅವನು ತುಂಬ ಧೈರ್ಯಶಾಲಿ (ರೂಢಿ). [ ಸಂ. ಧೈರ್ಯಶಾಲಿನ್ ]

**ಧೈರ್ಯಸ್ಖಲನ** (ನಾ). ಎದೆಗೆಡುವಿಕೆ; ಹೆದರುವಿಕೆ: ಜಲವೃಷ್ಟಿಮಾಟ್ದು ಧೈರ್ಯಸ್ಖಲನಾರ್ಥಂ ಬೆಟ್ಟುಗಳ್ ಸಿಡಿಲ್ದೊಡಮ ಪರ್ವತಂಗಳಸಿದೊಡೆ ಯೋಗೋತ್ಕಲಿತಮನರ್ ಬಯಲೋರ್ವರ್ಥಾಗವದೊಳ್ (ಪಾರ್ಶ್ವಪು. ೩-೧೧೨). [ ಧೈರ್ಯ + ಸ್ಖಲನ ]

**ಧೈರ್ಯಸ್ಥ** (ನಾ). ಭಯಪಡದವನು; ಧೈರ್ಯವನ್ನು ಕಳೆದುಕೊಳ್ಳದವನು; ಧೈರ್ಯಶಾಲಿ: ಅವನು ಬಹಳ ಧೈರ್ಯಸ್ಥನಾದ ಮನುಷ್ಯ (ರೂಢಿ). [ ಸಂ. ]

**ಧೈರ್ಯಾವಲಂಬೆ** (ನಾ). ದಿಟ್ಟತನವನ್ನು ಅವಲಂಬಿಸಿರುವವಳು: ಧೀರೆ: ಧೈರ್ಯಾವಲಂಬೆಯೆನಿಸಿದ ಭಾರ್ಯೆಯ ಧೀರಾಭಿಧಾನಮಂ ತಾಳ್ದುಗುಂ (ಶೃಂಗಾರ. ೩-೩೭).

[ ಸಂ. ಧೈರ್ಯಾವಲಂಬಾ ( ಧೈರ್ಯ + ಅವಲಂಬ + – ) ]

**ಧೈವತ** (ನಾ). [ಸಂಗೀತ] ಸಪ್ತಸ್ವರಗಳಲ್ಲಿ ಆರನೆಯದು: ಷಡ್ಜ ವೃಷಭ ಗಾಂಧಾರ ಮಧ್ಯಮ ಪಂಚಮ ಧೈವತ ನಿಷಾದಗಳೆಂಬ ಸಪ್ತಸ್ವರಮುಮಂ (ಅಜಿಪು. ೫-೩೦೪); ಶೃಂಗಾರಾದ್ರ್ಯಂ ಕಕುಭಜನಿತಂ ಧೈವತಂ ಸಂಗ್ರಹನ್ಯಾಸಾಂಗಂ . . . ಮಧ್ಯಮಂ ಮಂದ್ರಮೆಂಬೀ ಪಾಂಗಿಂ ವೇಳಾವಳಿಯ ನೊಲವಿಂ ಪ್ರೌಢೆ ಪಾಡುತ್ತುಮಿರ್ದಳ್ (ಲೀಲಾವ. ೨-೩೦); ಮಧ್ಯಮ ಧೈವತ ಷಡ್ಜ ಪಂಚಮ ನಿಷಾದ ರುಷಭ ಗಾಂಧಾರಂಗಳೆಂಬ ಸಪ್ತಸ್ವರ ಸಂಯೋಗಸಂಜಾತ ದೇಶೀಯರಾಗಂಗಳಂ . . . ವಲಿ ಹವಣ ರಾಯಂ ಗಳಿಂದಾಳಾಪನೆಗೆಯ್ದು (ಚಾರಿತ್ರ. ೯-೧ ಪ); ಷಡ್ಜಮಾ ಋಷಭಮಾ . . . ಧೈವತಂ ಸುನಿಷಾದಮೋರಂತೆ ಸಪ್ತಸ್ವರಂಗಳಕ್ಕು (ಮಾಗರಾ. ೨೩-೩); ಕ್ರಮವಾಗಿ ಷಡ್ಜ, ಋಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ ಮತ್ತು ನಿಷಾದ ಎಂದು ಸಪ್ತಸ್ವರಗಳ ಹೆಸರುಗಳು (ಸಂಗೀತಂ. ೧೫).

[ ಸಂ. ]

**ಧೊಕ್** (ನಾ). ಒಂದು ಅನುಕರಣ ಶಬ್ದ.

**ಧೊಕ್ಕನೆ** = ಧೊಕ್ ಎಂಬ ಶಬ್ದದೊಡನೆ: ಪೇರುರಮಂ ಧೊಕ್ಕನೆ ಕುತ್ತಿ ಚಕ್ಕನೆ ಭುಜದ್ವಂದ್ವಂಗಳಿಂದೆತ್ತಿ (ಎಕ್. VI, ತರೀಕ. ೪೫-೩೩; 1190).

**ಧೊಕ್ಕನೆ** (ಅ). ಕೂಡಲೇ; ತಕ್ಷಣ; ಬೇಗನೆ: ಇಕ್ಕಲ್ ಧೂಪಮನದು ತಾಂ ಧೊಕ್ಕನೆ ಫಣಿವೃಶ್ಚಿಕಾಖುವಿಷಮಂ ಕಳೆಗುಂ (ಖಮರ. ೧೬-೯೪); ಧೊಕ್ಕನೆ ಪೊಱಮಟ್ಟು ಶ್ರೀಕೃಷ್ಣನ ಸರಿ ಪೌಜಕ್ಕ ಪೇಳಿಸಿದ ಭೂಭುಜರ (ಮೋಹತ. ೩೭-೩). 'ದೊಕ್ಕನೆ' ಪರಾ. [ ಧೊಕ್ + – ಅನೆ$_1$ ]

**ಧೊಣೆ** 'ದೊಣೆ1' ನೋ.

**ಧೊಪ್** (ನಾ). ಒಂದು ಅನುಕರಣ ಶಬ್ದ.

**ಧೊಪ್ಪನೆ** = ಧೊಪ್ ಎಂಬ ಶಬ್ದದೊಡನೆ: ಧೊಕ್ಕನೆ, ಧೊಪ್ಪನೆ, [ಪಾಠಾಂ. ಧೋಪನೆ] ಭೋಂಕನೆ (ಭಾಷಾಭೂ. ೧೧ ವೃತ್ತಿ); ಅನುಕರಣಕ್ಕೆ–ಖಣಲ್ಲನೆ . . . ಧೊಪ್ಪನೆ[ಪಾಠಾಂ. ಧೊಪ್ಪನೆ, ಧೂಪ್ಪನೆ] ಪೊಟ್ಟನೆ (ಶಮದ. ೧೪ ಪ್ರಯೋ).

**ಧೊಪ್ಪನೆ** (ಅ). ಧೊಪ್ ಎಂದು ಶಬ್ದವಾಗುವಂತೆ; ಒಮ್ಮೆಲೆ: ತಿರುನೀಲಕಂಠರುಬ್ಬರಿಸುತ್ತ ಪರಿತಂದು ಚರಣತಳದಲ್ಲಿ ಧೊಪ್ಪನೆ ಕೆಡೆದು (ತಿರುರ. ದೇ. ೨೫-೨೦); ಸುಭದ್ರೆ ನಡೆತಂದು ನೆಲಕೆ ಧೊಪ್ಪನೆ ಕೆಡೆದು ಸಭೆಯಲಿ ಹಲುಬಿದಳು (ಕುಮಾ.ದ್ರೌ. ೬-೧೩); ಧೊಪ್ಪನೆ ಕೆಡೆದು ಹೊರಳಿದನು (ಕೌಶಿಕಾ. ೨೨-೩೩): ಹಾ ರಣಧೀರ ಹಾಹಾಯೆಂದು ಧೊಪ್ಪನೆ ಕೆಡೆದಳಾ ತಾರೆ (ತೊರವಾ. ೪-೫-೨).

**ಧೊಪ್ಪಧೊಪ್ಪನೆ** (ದ್ವಿರುಕ್ತಿ): ಧೊಪ್ಪಧೊಪ್ಪನೆ ಕಲ್ಗಳಿಂದಿಡುತೋಡುವಾಡುಗಳಂ ಕರಂ ತಪ್ಪುವಂತಿರೆ ಮೆಲ್ಲಮೆಲ್ಲನೆ ಬಂದು (ವೃಷಪು. ೧೧-೬೪).

[ ಧೊಪ್ + – ಅನೆ$_1$ ]

**ಧೊಪ್ಪಳಿಸು** (ಕ್ರಿ). ಧೊಪ್ ಎಂದು ಉರುಳು, –ಕುಸಿ: ಎರಡನೆಯ ಕ್ಷಣಕ್ಕೆ 'ಅಯ್ಯೋ' ಎಂದು ಕಿರುಚಿ ನೆಲಕ್ಕೆ ಧೊಪ್ಪಳಿಸಿದಳು (ಕಾಡಿಕೂ. ೨೫); ಕಣಿಯ ಎದುರಿಗೆ ನಿಲ್ಲಿಸಿದ ಹೊಡೆಮುಂಚದ ಮೇಲೆ ಅದು ಧೊಪ್ಪಳಿಸಿ ಎರಗಿತು (ಕಾಡಿಕೂ. ೩೦೩). [ < ಧೊಪ್ + – ಅಳಿಸು ]

**ಧೊರಯ್ಗ** (ನಾ). (?): ಕನ್ನಡಕಮಾಳಿನ ಧಟಕೆ ಧೊರಯ್ಗಂ ವೈರಿ ಕಾಳಾನಳಂ ಚಣ್ಣಮಾರ್ತ್ತಣ್ಣಂ (ಎಕ್. VIII, ಸೊರಬ. ೮೮-೨; 912); ಗುಣಕೆ ಧೊರಯ್ಗ ಸುಭಟಚೂಡಾಮಣಿ ಸತ್ಯರತ್ನಾಗರಂ ತೇಜಾಗರಂ ಶ್ರೀಮತ್ತಾನ್ನಿಪರ್ಮ (ಎಕ್. VIII, ಸೊರಬ. ೪೭೭-೧೧; 991). [ ? ]

**ಧೊರೆ** 'ದೊರೆ$_3$' ನೋ.

**ಧೊರೆಪೂಜೆ** (ನಾ). ವೈಭವದಿಂದ ಮಾಡುವ ಪೂಜೆ, –ಆರಾಧನೆ: ಸುರಹರಿ ನಮ ದೇವರ ಕಾಳಿ ಧೊರೆಪೂಜೆ ಮಾಡುವೆನ (ಮಲ್ಲಿಗೆ. ೩).

[ ಧೊರೆ ( < ದೊರೆ$_3$ ) + ಪೂಜೆ$_1$ ]

**ಧೋ** (ನಾ). ಒಂದು ಅನುಕರಣ ಶಬ್ದ. 'ಧೋಯೆನ್' ಪರಾ.

**ಧೋಧೋ** (ದ್ವಿರುಕ್ತಿ): ರಾತ್ರಿಯಲ್ಲಿ ಧೋಧೋ ಮಳೆ ಬಿದ್ದಿತು (ಉದ್ಯಾ. ೧೨); **ಧೋಧೋಕಾರ** = ಮಳೆಯು ಹೊಡೆತದ ಶಬ್ದ: ಏಕಪ್ರಕಾರವಾಗಿ ಸುರಿಯುವ ಮಳೆಯ ಧೋಧೋಕಾರ (ವಾತ್ಸಲ್ಯ. ೨).

**ಧೋಂಕಾರ** (ನಾ). ಒಂದು ಅನುಕರಣ ಶಬ್ದ: ನಮ್ಮ ತನು ಮನ ಆತ್ಮಗಳಲ್ಲಿ ಆ ಧೋಂಕಾರದ ಶಂಖನಾದ ದುಮುದುಮಿಸತೊಡಗಿತು (ಮಾಕ್ಸ್. ೫೫).

**ಧೋಕಾ, ಡೋಕಾ, ಧೋಖಾ** (ನಾ). ೧. ಅನರ್ಥ; ಅಪಾಯ: ಧೋಂಡೂ ಬಾಯಿಗೆ ತುಳಸಿಯನ್ನು ಕಸಬಿನ ಕಣದಲ್ಲಿ ನಿರಂತರ ಬಿಡುವುದು ಧೋಕಾದ್ದೆಂದು ಅನಿಸತೊಡಗಿತ್ತು (ದೀಪಕ. II, ೪೦೬). **ಡೋಕಾ:** (+). **ಧೋಕಾ:** ೨. ಮೋಸ; ವಂಚನೆ; ಅದರಲ್ಲೇನು ಧೋಕಾ ಇಲ್ಲ (ಒಡಮು. ೩). [ ← ಹಿಂ. ಧೋಕಾ, ಧೋಖಾ ; ಮರಾ. ಧೋಕಾ ]

**ಧೋತರ** 'ಧೋತ್ರ' ನೋ.

**ಧೋತಿ** 'ಧೋವತಿ' ನೋ.

**ಧೋತ್ರ, ದೋತರ, ದೋತ್ರ, ಧೋತರ** (ನಾ). ೧. ಉಡುವ ಬಟ್ಟೆ,–ವಸ್ತ್ರ: ಕೂಡೆ ಕುಳ್ಳಿರ್ದಖಿಳ ವಿಪ್ರರ ನೋಡಿ ಮೆಲ್ಲನೆ ಧೋತ್ರ ದರ್ಭೆಯ ಗೂಡ ಸಂವರಿಸುತ್ತ ಸಭೆಯಿಂದೆದ್ದನಾ ಪಾರ್ಥ (ಕುಮಾ.ಆ. ೧೫-೯); ನೆಲಕೆಳಲ್ದು ಬಹಿರ್ವಾಸವಲ್ಕ ಧೋತ್ರಂಗಳ (ವೀರಪಿ. ೪-೧೧); ಕಟ್ಟದಿರಿಸೊಳ್ ತೋರ್ಪ ಮಟ್ಟಿಯ ಮರುಳ್ ವಿಪ್ರರುಟ್ಟ ಧೋತ್ರಂಗಳಂ ಸೆಳೆದು ಭಂಗಿಸಿ (ಕಪಾಪು. ೬೨-೯೫); ಧೋತ್ರಗಳನ್ನು ಉಡುಗೊರೆಯಾಗಿ ಕಳಿಸಿದ್ದಳು (ದೇವೀಕಾ. ೫). ೨. ಭುಜದ ಮೇಲೆ ಹಾಕಿಕೊಳ್ಳುವ ವಸ್ತ್ರ; ವಲ್ಲಿ; ಉತ್ತರೀಯ: "ವಿಪರ್ಯಸ್ತಕಂ ಧೋತ್ರಮಕ್ಕು" (ಸಂಗರಾ. ೭೭-೯); ತೆಗೆ ಶಿಲವನೌವಾಸನದ ಕೊಳವಿಗಳ ಧೋತ್ರವ ಪುಸ್ತಕವ (ತೊರವಾ. ೫-೮-೭೦); ಜರಿಯ ಧೋತ್ರವನ್ನು ಹೊದ್ದುಕೊಂಡು ಸ್ವಯಂ ವೆಂಕಪ್ಪ ನಾಯಕರು ದಯಮಾಡಿಸಿ (ಶ್ರೀರಾಯ. ೧೯೭). **ದೋತರ:** ೧. ದೋತರ ಉಟ್ಟುಕೊಂಡು ಬೀದಿಯೊಳಗೆ ನೀರು ಹೊತ್ತುಕೊಂಡು ಹೋಗುವ

ಯಾವುದೊ ಅನಾಥ ಬಡ ವಿಧವಾ ಕಾಣಿಸ್ತಾಳೆ (ಸಂಧ್ಯಾಕಾ. ೪೫); 'ಈತನ ತಪವನ್ನೂ ತೀರದಿರೆ ವಿಘ್ನಕೆ ನಿಮ್ಮುಯ ವಾಣಿಯ ತಂದಿರೆ' ಎನ್ನುವ ನಾ ಮುನಿ ದೋತರವೆಳೆದು (ಗಣೇಶ. ೧೧-೨೨೭); ಒಂದು ಚಕ್ಕಡಿಯು ಬರುತ್ತಿತ್ತು . . . ಹಿಂದಕ್ಕೂ ಮುಂದಕ್ಕೂ ದೋತರ ಬಿಗಿದುದರಿಂದ ಅದರಲ್ಲಿ ಯಾರಿರುವರೆಂಬುದು ತಿಳಿಯುತ್ತಿರಲಿಲ್ಲ (ರಕ್ತಾಕ್ಷಿ. ೧೨). ೨. ಧಡಿಯ ದೋತರವನ್ನು ಹೆಗಲ ಮೇಲೆ ಸರಿಯಾಗಿ ಒಗೆದುಕೊಂಡು ಒಂದು ಮೂಲೆಗೆ ಹೋಗಿ ಬಾಯೊಳಗಿನ ತಾಂಬೂಲವನ್ನು ಉಗುಳಿ ಬರುತ್ತ ನುಡಿದ (ಅಕೋಳ. ೪).

**ದೋತ್ರ:** ೧. ಎಸೆವ ದೋತ್ರುದಿನುಜ್ಜ್ವಲಿವ ಕಟಿದೇಶಂ (ಪದ್ಮರಾ. ೩-೧೭); ನುತ ಪಲ್ಲವಮ ದೋತ್ರಮುಂ ಬಹಿರ್ವಾಸಮುಂ ತತಪಿಕಸ್ವರವು ವೇದಸ್ವರಂ . . . ಎನೆಯೊಂದಶೋಕವೃಕ್ಷಂ ಮೆಱೆದುದು (ಪದ್ಮರಾ. ೫-೨೫); ದೋತ್ರ ದೊಡ್ಡದಾದರೆ ಗೋತ್ರ ದೊಡ್ಡದೇ (ಗಾದೆ). **ಧೋತರ:** ೧. ಹಳೆಯ ಮಾದರಿಯ ಅಂಗಿ, ಅಂಥದೇ ಕೋಟು, ಒಂದು ಧೋತರ (ರಕ್ತಗೋ. ೩); ಪಾದಗಳನ್ನೂ ಮುಚ್ಚುವಂತೆ ಉಟ್ಟ ಶುಭ್ರವರ್ಣದ ಧೋತರ (ಅಜೋಲೇ. ೧೩೦); ನನಗೆ ಒಂದು ಜೋಡಿ ಧೋತರ ಬರುತ್ತವೆ ಎಂದು ಮತ್ತಷ್ಟು ಹಿಗ್ಗಾಯಿತು (ವ್ಯಸಿ. ೧೭೪); ಮೈಯಾಗ ಒಂಟೀ (ಪಟ್ಟಿ) ಧೋತರವಾ ಧರಸ್ಯಾರೋ (ಹುಬ್ಬಿಹ. ೧೦೦); ಕೋಟು ಶರ್ಟುಗಳನ್ನು ತೆಗೆದು, ಧೋತರದ ಮೇಲೆ ಮಲಗಿದ್ದ ರಾಯರು (ಫಲಸಂ. ೩೦). ೨. ಧೋತರದಿಂದ ಹಣೆಯ ಮೇಲಿನ ಬೆವರು ಹನಿಗಳನ್ನು ಒರೆಯುತ್ತಿ ಕೊಂಡರು (ಹಂದುಟಿ. ೦೦೦); ಧೋತರವನ್ನು ಹೊದ್ದುಕೊಂಡು ಶೆಟ್ಟಿಯ ಮನೆಗೆ ಹೋಗೋಣ ನಡೆಯಿರಿ (ಹಳ್ಳಿಬ. ೦೪). 'ಧೋವತಿ' ಪರಾ.

[ ←ಮರಾ. ಧೋತ್ರ್, ಧೋತ್ರಾ, ಧೋತರ್; ಹಿಂ. ಧೋತರ್, ಧೋತರಾ./ತುಳು. ದೋತ್ರ ]

**ಧೋಬಿ, ಡೋಬಿ, ದೋಬಿ, ದೋಭಿ** (ನಾ). ಬಟ್ಟೆಗಳನ್ನು ಒಗೆದು ಮಡಿಮಾಡುವ ಕಸಬಿನವನು; ಅಗಸ; ಮಡಿವಾಳ; ರಜಕ: ನಮ್ಮ ಧೋಬಿ ಬಟ್ಟೆಗಳನ್ನು ಚೆನ್ನಾಗಿ ಒಗೆಯುತ್ತಾನೆ (ರೂಢಿ). **ಡೋಬಿ:** ಅಗಸ, ಡೋಬಿ, ಮಡಿವಾಳ (ತುಳುನಾ. ೧೭೩); ರೈಲಿನಲ್ಲಿ ಹಜಾಮರಿದ್ದಾರೆ ಡೋಬಿಗಳೂ ಇದ್ದಾರೆ (ಅಳಸಿ. ೩). **ದೋಬಿ:** ಅವಲು ಬಡಲಾಗಿ ಹುದೀಯುಂಗಿಯನ್ನುತ ದೋಬಿಯ ಬರಿದೆ ದೂರುವರೆ (ಹಂಪ್ರವೀ. ೦೦೬-೨೨). **ದೋಭಿ:** ದೇವಭಾವದ ಹೊಳೆಗೆ ಮರುಳುಕಡ ಸಾಬಿ, ಕಲ್ಲು ಕಡಮಮ್ಮ ಗುಡಿ ಭಟ್ಟನೇ ದೋಭಿ (ಗಣೇಶ. ೭೦-೪).

[ ←ಹಿಂ. ಮರಾ. ಧೋಬೀ ]

**ಧೋಯೆನ್** (ಕ್ರಿ). ಧೋ ಎಂದು ಕೂಗು: ಈಯಲಿಱಿಯಲ್ ಶರಣ್ಬಾಗೆ ಕಾಯಲ್ ಕ್ಷತ್ರಿಯರೆ ಬಲ್ಲರಲ್ಲದೆ ಬ್ರಹ್ಮರ್ ಧೋಯೆನಲುಂ ಬಲ್ಲರ್ ಕೊಲೆ ಧೋಯೆನಲುಂ ಬಲ್ಲರಿಱಿಯಲವರೆತ್ತಱಿವರ್ (ಗದಾಯು. ೩-೧೭). P ಗದಾಯುದ್ಧಸಂಗ್ರಹದಲ್ಲಿ ಶೀನಂಶ್ರೀಯವರು ಸ್ವೀಕರಿಸಿರುವ ಪಾಠಾಂತರ 'ಅವಿಧೋ' ಎನ್ನುವುದು. ಈ ಶಬ್ದವನ್ನೂ ನಿಘಂಟಿನಲ್ಲಿ ಸ್ವೀಕರಿಸಲಾಗಿದೆ. 'ಅವಿಧೋ' ಪರಾ. [ ಧೋ + ಎನ್$_1$ ]

**ಧೋರ$_1$** 'ದೋರ್ರ' ನೋ.

**ಧೋರ$_2$** (ನಾ). ಒಂದು ಬಗೆಯ ವಾದ್ಯ; ನಗಾರಿ; ಭೇರಿ: ಕಾಹಳ ವೇಟ ಗೌರಿಕಾಳೆ ದುಂದುಭಿಯೆಂಬ ಧೋರ . . . ವಾದ್ಯಂಗಳಂ (ವಿವೇಕ. ೨೬೬). [ ? ]

**ಧೋರಣ** (ನಾ). ೧. (ಆನೆ, ಕುದುರೆ, ರಥ ಮೊದಲಾದ) ವಾಹನ: "ಅದಿದೆನ್ನದೆ ವಾಹನವಾವುದಾದೊ[ಡಂ] ಪತ್ರ ಯುಗ್ಯ ಧೋರಣನಾಮಂ" (ವಸ್ತುಕೋ. ೮೮-೪೦); "ಪಕ್ಷಮಾ ವಾಹನಂ ಧೋರಣಂ ರಥ ಹಯಂ" (ಮಂಗರಾ. ೮೫-೨೫); "ಯಾನಂ, ಯುಗ್ಯಂ, ಪತ್ರಂ, ಧೋರಣಂ ಆ ಸರ್ವಂ ವಾಹನಂ – ನಾನಾ ಬಗೆಯಾದ ಸಕಲ ವಾಹನಗಳಿಗೂ ಹೆಸರುಗಳು" (ಸಿದ್ಧಾಂತಿ. ೨೩೪). ೨. ಕುದುರೆಯ ನಡಗೆಯಲ್ಲಿ ಒಂದು ಪ್ರಕಾರ. ೩. ಚುರುಕಾಗಿ ಹೋಗುವುದು; ಚಟುವಟಿಕೆಯಿಂದ ನಡೆಯುವುದು. ೪. ಗುರಿ; ಧ್ಯೇಯ: (*). ೫. ಕ್ರಮ; ಧಾಟಿ: (*). ೬. ಶೈಲಿ; ರೀತಿ: (*). ೭. ವಿಚಾರಧಾರೆ; ಆಲೋಚನೆಯ ಮಾರ್ಗ: ಎಲ್ಲೋ ವಿಳಾಸ ತಪ್ಪಿ ಬಂದಿರಬೇಕು ಎಂಬ ಧೋರಣದಿಂದ ಆ ಆಗಂತುಕನನ್ನು ಅವರು ಪ್ರಶ್ನಿಸಿದ ಹಾಗಿತ್ತು (ಹೊಸಕ್ಕ. ೪೦); ಆದಷ್ಟು ವಸತಿಗಳನ್ನು ತಪ್ಪಿಸಿದಾರಿಹಿಡಿಯುವ ಧೋರಣವನ್ನಿಟ್ಟುಕೊಂಡವು (ಮಾದಿಮ. ೧೨೪). ೮. ವರ್ತನೆ; ವೃತ್ತಿ; ನಡವಳಿಕೆ: ತಮ್ಮ ಸಂಸ್ಥೆಯ ಆಡಳಿತವನ್ನು ನೋಡಲು ಧೋರಣವನ್ನು ಕಾಯಲು ನಿರ್ದೇಶಕರ ಮಂಡಲವೊಂದನ್ನು ಆರಿಸುತ್ತಾರೆ (ತತ್ತ್ವಡಿ. ೪೬). ೯. ಒಲವು; ಪ್ರವೃತ್ತಿ: (*). [ ಸಂ. ]

**ಧೋರಣೆ** (ನಾ). ೧. (ರಚಿಸುವುದರಲ್ಲಿ) ಒಳ್ಳೆಯ ಶೈಲಿ, -ರೀತಿ: (*). ೨. ಧಾಟಿ; ಕ್ರಮ: ಮ್ಯಾನೇಜರರಿಗೆ ಅಧ್ಯಕ್ಷರ ಧೋರಣೆ ಸರಿ ಬೀಳಲಿಲ್ಲ (ದುಂಬಿಳ. ೧೫೪); ವಿಶಿಷ್ಟಾದ್ವೈತ ಧೋರಣೆಯು ಇಲ್ಲಿ ಒಂದು ವೈಲಕ್ಷಣ್ಯವನ್ನು ತೋರಿಸುತ್ತದೆ (ಧಾರದ. ೨೫೪); ಈ ಪ್ರಜಾಸತ್ತಾತ್ಮಕ ಧೋರಣೆಯು ಸಾಹಿತ್ಯವನ್ನಾದರೂ ಆವರಿಸಿದೆ (ಪ್ರಬಂಧ. ೦); ನೀವು ಈಗ ಎಂತಹ ಅನುಚಿತ ಧೋರಣೆಯನ್ನು ತಳೆದಿದ್ದೀರಿ (ಹಳ್ಳಿಬ. ೨೨೪); ಇದುವರೆಗೆ ಕಾಂಗ್ರೆಸ್ ಮುಂದಾಳುಗಳ ಧೋರಣೆಯಲ್ಲಿ ತಿಲಕ್ ನಂಬಿಕೆಯನ್ನಿಟ್ಟಿದ್ದರು (ಸ್ವಾವೀರ. ೫೪). ೩. ವಿಚಾರಧಾರೆ; ಆಲೋಚನೆಯ ಮಾರ್ಗ: ಒಂದೇ ರೀತಿಯ ವಿಚಾರವನ್ನೂ ಧೋರಣೆಗಳನ್ನೂ ಬೆಳಸಿಕೊಂಡು ಬಂದಿದ್ದೇವೆ (ದೂರಸ. ೮೦); ಅವರಿಗೆ ನನ್ನ ಮಾತುಗಳು, ವಿಚಾರಗಳು ಮತ್ತು ಧೋರಣೆಯ ಬಗ್ಗೆ ಸಂಪೂರ್ಣ ಅರಿವಿದ್ದಿತು (ಜೇಮಂತ. ೨೫೫); ಪತ್ರದ ಧೋರಣೆಯನ್ನು ತಿಳಿದುಕೊಂಡು ದೇಸಾಯರಿಗೆ ಅವಮರ್ಯಾದೆಯಾದಂತಾಯಿತು (ಗಂಮಾಯಿ. ೪೮). ೪. ವರ್ತನೆ; ವೃತ್ತಿ; ನಡವಳಿಕೆ: ಇವರೆಲ್ಲರ ಮಧ್ಯೆ ತಟಸ್ಥ ಧೋರಣೆಯನ್ನು ವಹಿಸುವವಳೆಂದರೆ ಮುದುಕಿ (ಹಳ್ಳಿಹಾ. ೧೦೭); ಬರ್‍ಬ್ಯಾಂಕ್ . . . ತನ್ನ ಧೋರಣೆಗಳಲ್ಲಿ ಟೀಕೆ ಅಥವಾ ತರ್ಕಕ್ಕೆ ಅವಕಾಶ ಕೊಡದವನು (ಸಸ್ಯಕ. ೩೨). ೫. ಗತ್ತು; ಠೇಂಕಾರ; ಹಮ್ಮು: ಅವರು ತುಂಬ ಧೋರಣೆಯಿಂದ ಮಾತನಾಡುವರು (ರೂಢಿ); ಅವನು ತುಂಬ ಧೋರಣೆಯ ವ್ಯಕ್ತಿ, (ರೂಢಿ). ೬. ನಿಲುವು: ಈಗಿನ ಸಾಹಿತ್ಯದ ಧೋರಣೆ ಪ್ರಾಚೀನಸಾಹಿತ್ಯಕ್ಕೆ ಹೊಂದುವುದಿಲ್ಲ (ರೂಢಿ); ೭. (ಅಲಂ) ಉದಾಸೀನತೆ; ಅಲಕ್ಷ್ಯ: ದುರ್ಯೋಧನನ ಆಶ್ರಯದಲ್ಲಿದ್ದುಕೊಂಡು ಪಾಂಡವರನ್ನು ಧೋರಣೆಯಿಂದ ನೋಡುತ್ತಿದ್ದನು (ಪಕಥಾ. ೧೮); ರಭಸ ಪ್ರವೃತ್ತಿಯನ್ನೋ ಧೋರಣೆಯನ್ನೋ ಅವಲಂಬಿಸಿದರೆ ತಪ್ಪಾಗುವುದು ಅನಿವಾರ್ಯ (ಕನ್ನಸಂ. ೧೬೩); ಇದಕ್ಕೆ ಬಹುಮಟ್ಟಿಗೆ ಇಂಜಿನಿಯರಿಂಗ್ ಖಾತೆಯ ಧೋರಣೆಯೆ ಕಾರಣ (ಶಿಕ್ಷದ. ೭೩೫. [ ಸಂ. ಧೋರಣ ]

**ಧೋವತಿ, ದೋವತಿ, ಧೋತಿ** (ನಾ). ಗಂಡಸರು ಉಡುವ ಬಟ್ಟೆ; ಪಂಚೆ; ಧೋತ್ರ: ಬಂದನಿತ್ತಲು ಪಾರ್ವನೊಳಿದಂದು ಪೂಸಿದ ವಿಭೂತಿ ರುದ್ರಾಕ್ಷಿ ಧೋವತಿಯೆಸೆಯೆ (ಕಣ್ಣರ. ದೇ. ೧೩೩-೧೫); ವಿಗಿಲು ಧೋ[ಪಾಠಾಂ. ದೋ]ವತಿ ದರ್ಭೆ ಸಂಬಳಿಗೆಗಳನೊಂದೆಡೆಯಲಿ ಮಡಗಿ (ಬಸಪು. ೫೭-೨೮). **ದೋವತಿ:** ದೋವತಿಯುಂ ಪಾದರಕ್ಷೆಯುಂ [ಪಾಠಾಂ. ಧೋತ್ರಮುಮಂ ಪಾದರಕ್ಷೆಯುಂ] ಸುತ್ತಿ (ಸಮುಶ. ೧೪-೧೫೪); ಪುಲಿದೊವಲ ದೋವತಿಯ ನಿರ್ಮಲಂ . . . ವಿರೂಪಾಕ್ಷನೊಪ್ಪಿದಂ (ಕಾಠಿರ. ದೇ. ೨೪೭-೧೭); ಜನ್ನಿವಾರವುಂ ನೇರಗಟ್ಟ ದೋವತಿಯುಂ ಮಲ್ಲಗಾಸೆಯುನುಟ್ಟು (ವೃಷವಿ. ೩೮-೯೦೩). **ಧೋತಿ:** ಒಟ್ಟಿಗೆ ನಾಲ್ಕು ಧೋತಿಗಳನ್ನು ಕೊಂಡುಕೊಳ್ಳಬೇಕು (ರೂಢಿ). 'ಧೋತ್ರ' ಪರಾ.

[ <ಸಂ ಧೃತವಸ್ತ್ರ ?./ಹಿಂ. ಧೋವತೀ, ಧೋತಿ; ಮರಾ. ಧೋತೀ./ತೆಲು. ದೋವತಿ, ದೋತಿ ]

**ಧೌತ** (ಗು). ೧. ತೊಳೆದ; ಸ್ವಚ್ಛಮಾಡಿದ; ಶುಭ್ರಗೊಳಿಸಿದ: ತರುಣೋರಗನಹನಿರ್ಮೋಕರುಚಿರಮೆನಿಸಿರ್ದ ಧೌತಧವಳಾಂಬರದಿಂ ಕರಮೆಸೆದಂ . . . ನರೇಂದ್ರಂ (ಕಾದಂಪೂ. ೬೪); ಶ್ರೀಮದಮರಮಣಿಮಕುಟರಂಜಿತ ರತ್ನಧಾಮಾಬಾಧಾರಾಧೌತಶಾತಃರಸಾಂಘ್ರಿಯುಗಲ ವೀರನಾಥನುದ್ಧಾಮಸುಖವನೀವುದೆಮಗೆ (ಶ್ರೀಪಾಲ. ೦-೧). ೨. ಬೆಳ್ಳಗಿರುವ; ಕಾಂತಿಯುಕ್ತವಾದ: ಎಂದಾಗಳ್ ಅವಿತತತೇಜಂ ದಂತಾಂಶುಧೌತಕಪೋಳಫಳಕನಾಗಿ (ಆದಿಪು. ೪-೮೦೩). (ನಾ). ೩. ತೊಳೆದುದು; ಶುಭ್ರವಾದುದು; ಸ್ವಚ್ಛವಾದುದು: "ನಿರ್ಣಿಕ್ತಂ, ಪ್ರಕ್ಷಾಳಿತಂ, ಧೌತಂ – ಈ ೩ ತೊಳೆಯಲ್ಪಟ್ಟುದು" (ಹಲಾಯು. ೬೮-೩೪೪); "ಧೌತಮೆನಲು ಪ್ರಕ್ಷಾಳಿತಮದೆನಲು ತೊಳೆವುದಕ್ಕೆ ನಾಮಂ" (ಮಂಗರಾ. ೭೭-೮); ಅಸಿಲತೆ ರಣಧೌತಮದಿ' [ಪಾಠಾಂ. ರಣಧೌತಿಮದಿ] ಮಸಿಮುಸುಡನ ಜೀವಕಳ್ಪನಿಂ ಕಂದಿದೆಡೆನ್ನೆಸೆಯನಡರ್ದನ್ನ ಕೀರ್ತಿಪ್ರಸರದ ಕುಡಿ ಕೈಪೆಸೊರೆಯ ಕುಡಿಯವೊಲಕ್ಕುಂ (ಯಶೋಚ. ೩-೫೫). ೪. ಬೆಳ್ಳಗಿರುವುದು: "ಧೌತಂ ಸಿತಂ ಗೌರಮರ್ಜುನಂ . . . ನಿಜ ಶ್ವೇತಮಕ್ಕು" (ಮಂಗರಾ. ೧೩೦-೩೩). ೫. ಬೆಳ್ಳಿ; ರಜತ. ೬. ಮಡಿ ಮಾಡಿದ ಬಟ್ಟೆ; ಒಗೆದ ಬಟ್ಟೆ: ಒಂದುದಯದಲ್ಲೆದ್ದು ಸುಸ್ನಾನಮಂಗೈದು ಚಂದದಿಂ ಧೌತಮುಮನುಟ್ಟು (ನವಮೋ. ೧೧-೬); ಅಸುರೇಂದ್ರ ಸ್ನಾನವ ಮಾಡಲಾದು ತರುಣಿಯರು ಧೌತಮನೀಯ್ಕಳ ವಟ್ಟು ಮಣಿಖಚಿತವಾವುಗೆಗಳಾ ತ್ವರಿತದಿಂದೀಯ್ಕಲವನಡಿಯಾಂಗಂಗಳಗವರ್ಚೆ (ನವಮೋ. ೧೮-೪೦). ೭. (ಆಲು) ಮಸೆದುದು; ಹರಿತಮಾಡಿದುದು: "ನಿಶಾತಂ, ನಿಶಿತಂ, ಧೌತಂ, ತೇಜಿತಂ – ಈ ೪ ಮಸೆದುದು" (ಹಲಾಯು. ೬೮-೩೩೦); "ಧೌತಂ ತೇಜಿತಂ ಮಸೆವತೆಜನಕ್ಕು" (ಮಂಗರಾ. ೮೮-೩೮). [ಸಂ.]

**ಧೌತಕೀರ್ತಿ** (ನಾ). ಧವಳಕೀರ್ತಿ; ಶುದ್ಧವಾದ ಯಶಸ್ಸು: ಅನವದ್ಯಜನಾಗಮವಿದ್ಯನಿದ್ಧದುಗ್ಧೋದಧಿಧೌತಕೀರ್ತಿವಿಶದಂ ಭರತಾವನಿರಾಜಪೂಜಿತಂ (ಶಾಂತಿಪು. ೦-೨೮). [ಧೌತ + ಕೀರ್ತಿ]

**ಧೌತವಲ್ಕಲ** (ನಾ). ಬೆಳ್ಳಗಿರುವ ನಾರುಬಟ್ಟೆ: ಧೌತವಲ್ಕಲಮನಲಂಬುವಕ್ಷಮನೆಯಂ ಸಮೆವೀ ವ್ಯವಸಾಯಮೇತ್ರಲಂ (ಕಾದಂಪೂ. ೩೩೪).
[ಧೌತ + ವಲ್ಕಲ]

**ಧೌತವಸನ** (ನಾ). = ಧೌತವಸ್ತ್ರ; ಕುಶಜಾತಪವಿತ್ರಮಾತ್ರಧೌತವಸನಮುದ್ರಿಮೌಂಜಿ ಮೃಗತುಂದಿಯರಟ್ಟಿಸ್ಸ ಕೋವಣಂಗಳಿಂಬಿಪುಕಡುರಮ್ಯಮಾದ ವಟುವೇಷಮನಾಂತು (ವರ್ಧಪು. ೧೭-೪); ಪರಿವೃತಧೌತವಸನಸಮಂಚಿತ ಕೋಮಳ ಕಳೇವರರುಂ (ರಾಜಶೇ. ೪-೨೭೮).
[ಧೌತ + ವಸನ]

**ಧೌತವಸ್ತ್ರ** (ನಾ). ಮಡಿಮಾಡಿದ ಬಟ್ಟೆ; ಶುಭ್ರವಸ್ತ್ರ: ತದ್ದರ್ವಿಕಳಸಾರೋಹಣಮಾಗಿ ನೆಱೆಯನಿರ್ವಹಿಸಿದಗ್ಗಂಗಾಜಳಧೌತವಸ್ತ್ರಪವಿತ್ರೀಕ್ರಿತೋತ್ತಮಾಂಗೆಯರಪ್ಪರ್ ಶ್ರೀಮದಕ್ಕಂ ನಾಲಬರಸಿಯರು (ಕಶಾಆ. ೪೯-೫-೫೭; 973); ತೀರ್ಥಸ್ನಾನಾರ್ಥಂ ಪರಸ್ಥಾನಂಗೆಯ್ದ ವಾನಪ್ರಸ್ಥಜನಂಗಳ ಧೌತವಸ್ತ್ರಪವಿತ್ರಾಕ್ಷಸೂತ್ರಂಗಳಂ ತಮ್ಮ ಕವಲ್ಗೊಂಬುಗಳೊಳ್ ನೇಱಿಸಿಕೊಂಡಿಂಬಿನೊಳವರೊಡನೆ ನಡೆವ ಸಾರಂಗಸಮೂಹಮುಮಂ (ಪಂಚತಂ. ೧೧೯-೩); ವ್ರಾತೀಸಮಯದೊಳ್ ಜರಾಸಂಧಚಕ್ರವರ್ತಿ ಪಾವನಜಳಸ್ನಾನಪವಿತ್ರಗಾತ್ರನುಂ ಧೌತವಸ್ತ್ರಪರಿಧಾನನುಮಾಗಿ (ನುಹಾನೇ. ೧೧-೧೪೦೨). [ಧೌತ + ವಸ]

**ಧೌತಾಂಬರ** (ನಾ). ೧. = ಮಡಿಬಟ್ಟೆ: "ಮರಣದೆೊಳು ಧೌತಾಂಬರದೆೊಳು ಮಡಿ" (ಶಬ್ದಮಂ. ೯೫); ಮಡಿಯೆಂಬುದು ಧೌತಾಂಬರದೆಡೆಯೊಳ್ಪಡಿಯೆಂಬುದಲ್ಪದಂಡದೊಳೆಗಂ ಪಡಿಯೆಂಬುದು ಕರಣೆಯೊಳೆಡೆವಿಡದಿರ್ಪುವುಬೇಱೆ ಮತ್ತಮಿಲ್ಲ ನಾಡೊಳ್ (ವೀರವಿ. ೦-೪೮). ೨. ಬಿಳಿಯಂ ಬಟ್ಟೆ: ಅಂಬರಮೆಲ್ಲಂ ಕೂಡೆ ಧೌತಾಂಬರದ ನವವಿತಾನಂಬೊಲಿಂಬಾದುದು (ರಾಜಶೇ. ೧೧-೬೭). [ಧೌತ + ಅಂಬರ]

**ಧೌತಾಂಶುಕ** (ನಾ). = ಧೌತವಸ್ತ್ರ: ಧೌತಾಂಶುಕದೊಳಗೆ ತಂಬುಲವಕಟ್ಟಿದರು (ಕುಮ್ಯಾಅ. ೧೮-೮). [ಧೌತ + ಅಂಶುಕ]

**ಧೌತಿ** (ನಾ). [ಯೋಗ] ಧೌತಿ, ಬಸ್ತಿ, ನೇತಿ, ತ್ರಾಟಕ, ನೌಲಿಕ ಮತ್ತು ಕಪಾಲಭಿತ್ತಿ ಎಂಬ ಹಠಯೋಗದ ಆರು ಅಂಗಗಳಲ್ಲಿ ಒಂದು; ೪ ನಾಲ್ಕು ಅಂಗುಲ ಅಗಲದ, ಹದಿನೈದು ಮೊಳ ಉದ್ದದ ವಸ್ತ್ರವನ್ನು ನೆನೆಸಿ ಸ್ವಲ್ಪ ಸ್ವಲ್ಪವಾಗಿ ನುಂಗಿ ಪುನಃ ಅದನ್ನು ಗುದದ್ವಾರದ ಮೂಲಕ ಹೊರಗೆ ತೆಗೆಯಬೇಕು. ಈ ಧೌತಿಕರ್ಮದಿಂದ ಕೆಮ್ಮು, ಕುಷ್ಠ ಮುಂತಾದ ಇಪ್ಪತ್ತು ವಿಧ ಶ್ಲೇಷ್ಮರೋಗಗಳೂ ವಾಸಿಯಾಗುವುವು: ಬಿಳಿಯ ಮಾವದೆಯನೊಂದು ತುದಿಯಂ ಪಿಡಿದು ಮತ್ತೊಂದು ತುದಿಯ ಮೆಲ್ಲನೆ ಹೃದಯಪರ್ಯಂತಮಾಗಿ ನುಂಗಿ ತೆಗೆವುದೂ ಧೌತಿಯೆನಿಪುದು (ಶಿವಪ್ರ. ೬-೫). [ಸಂ.]

**ಧೌತೋದಕ** (ನಾ). ಶುದ್ಧವಾದ ನೀರು: ವಿಮಲಧೌತೋದಕ . . . ಸಕಲಭೋಗಾಹುತಿಗೆ ಪೋಷೋದಕವೆನಿಪುದೀ ಪರಮಪಾದೋದಕಂ (ಶಂಕರದಾ ೧೧-೬೦). [ಧೌತ + ಉದಕ]

**ಧೌರಿತಕ** (ನಾ). [ಅಶ್ವಶಾ] ಕುದುರೆಯ ಚಲನೆಯಲ್ಲಿ ಒಂದು ಪ್ರಕಾರ; ಕುಕ್ಕುಲೋಟ: "ಧೌರಿತಕಂ, ಬಿರುನಡೆ, ಭರದಾಂಡ್" (ಸಿದ್ಧಾಂತಿ. ೨೫೦). 'ಪಂಚಧಾರೆ' ಪರಾ. [ಸಂ.]

**ಧೌರೇಯ** (ನಾ). ೧. ಭಾರ ಹೊರಲು ಯೋಗ್ಯವಾದ ಎತ್ತು, ಕುದುರೆ ಮುಂತಾದ ಪ್ರಾಣಿ: "ಧುರ್ಯಃ, ಧೌರೇಯಃ – ಈ ೨ ಹೂಟದೆತ್ತು" (ಹಲಾಯು. ೪೪-೧೧೧); "ಧೂರ್ವಹಃ, ಧುರ್ಯಃ, ಧೌರೇಯಃ, ಧುರೀಣಃ, ಧುರಂಧರಃ – ೫ ಬಂಡಿ, ಗೋಣಿ, ನೇಗಲು ಮುಂತಾದ ಭಾರವನ್ನು ಹೊತ್ತು ಕೆಳೆಯುವ ಎತ್ತು ಮುಂತಾದ ದನಗಳ ಹೆಸರುಗಳು" (ಸಿದ್ಧಾಂತಿ. ೨೯೩). ೨. ಭಾರವನ್ನು ಹೊತ್ತಿರುವವನು; ಹೊಣೆಗಾರಿಕೆಯನ್ನು ವಹಿಸಿಕೊಂಡವನು; ಜವಾಬ್ದಾರಿಯನ್ನು ಹೊತ್ತಿರುವವನು: ಚಾಳುಕ್ಯರಾಜರಾಜ್ಯಭಾರಧೌರೇಯನುಂ (ಕಇಆ. ೫-೨-೧೯೭; 1068); ಅರ್ಥಿಜನಕಾಮಸುರಭೂಜಾರಾಮಂ ಧರ್ಮೋದ್ಧಮಧೌರೇಯನುದಾತ್ತಚಿತ್ತನಭಿನವಪಂಪಂ (ಪಂಪಾಶಾ. ೬-೧); ವಿಶ್ವವಿಶ್ವಂಭರಾಭಾರಧಾರಣಾಧೌರೇಯನುಮಾಸಾದಿತ ಯುವರಾಜಪದವಿರಾಜನುಮಾಗಿ (ವರ್ಧಮಾ. ೬-೬೮. ವ). ೩. ಕುದುರೆ; ಅಶ್ವ. [ಸಂ.]

**ಧೌರೇಯಕ** (ನಾ). = ಧೌರೇಯ. [ಸಂ.]

**ಧ್ಯಾತೃ** (ನಾ). ಧ್ಯಾನ ಮಾಡುವವನು: ಆ ಧ್ಯಾನಯೋಗವಹರ್ತಿಕ್ಷಮಯದೊಳ್ ಧ್ಯಾನಂ ಧ್ಯೇಯಂ ಧ್ಯಾತೃ ಫಲಮೆಂದು ಚತುರಂಗಮಕ್ಕುಂ (ಆದಿಪು. ೮-೨೮ ವ); ಧ್ಯಾತೃಹೃದಯಾಮಹೌಘಶಮಲವ್ರಾತಪರ್ವತವಜ್ರನನು . . . ತಾಪಕ್ಲೇಶಜಲನಿಧಿಸೇತುವನು ನೆನೆವುದು ತದಂಘ್ರಿಸರೋಜವನ ಬಿಡದೆ (ನಿಘಾಗ. ೩-೧೩-೩೯); ಧ್ಯಾನದಾಧಿಕ್ಯದ ವಿವೇಕದಿಂ ಧ್ಯಾತೃವಾ ಧ್ಯಾನಾದಿ ಭೇದವಳಿದಾ ಧ್ಯೇಯ ಸುಸ್ವರೂಪ (ವೀಶೈಪು. ೫-೧೭-೧೬). [ಸಂ.]

**ಧ್ಯಾನ** (ನಾ). ೧. ಚಿಂತನೆ; ಮನಸ್ಸಿನಲ್ಲೇ ಯೋಚನೆ ಮಾಡುವುದು; ಮನನ: "ಲಕ್ಷಣಂ ದರ್ಶನಂ ಧ್ಯಾನಮವಲೋಕನಂ ನೋಟಮಕ್ಕು" (ಮಂಗರಾ. ೯೩-೨); ಧ್ಯಾನದೊಳಭವಂ ನೆಱೆದಿನಿಸಾನುಮನರೆಮುಚ್ಚಿ ಕಣ್ಗಳಂ (ಪಂಪಭಾ. ೮-೧೪); ಎನ್ನ ಚಿತ್ತವು ನಿಮ್ಮ ಧ್ಯಾನವಯ್ಯಾ (ಬಸವ. ೩೦೭); ಶಿವನುತಿಧ್ಯಾನದೊಳು ಮಹರ್ಷಿಪೋದರ್ಕಲರು (ತಿರುರ. ದೀ. ೧೫-೪); ವನಜನಾಭಧ್ಯಾನಸುಧೆಯಲಿ ನನೆದು ಹೊಂಗಿದ ಕರಣ ಹೊರೆಯೇಱಿತ್ತು ನಿಮಿಷದಲಿ (ಕುಮ್ಯಾದ್ರೋ. ೦-೩೩); ಬಿನ್ನಹ ಗುರುವೇ ಧ್ಯಾನಕೆಬೆ ಸಜ್ಜಾದಾಗ ನಿನ್ನನಾದಿಯಂ ಮಾಡಿಕೊಂದು ಕನ್ನಡದೊಳಗೊಂದು ಕಥೆಯ

ಪೇಳುವೆವದು ನಿನ್ನಾಣ್ಣೆ ಕಂಡ್ಯ ನನ್ನೊಡೆಯ (ಭರತ. ೧-೩) ; ಒಂದು ಸಂಜೆ ಸಂಚಾರ ಹೊರಟು ಯಾವುದೋ ಧ್ಯಾನದಲ್ಲಿ ನಡೆಯುತ್ತಿರುವಾಗ (ಭಾವಗೀ. ೧೨). ೨. ಗಮನ ; ಲಕ್ಷ್ಯ : ಹಾಗದ ಕೆರಹ ಹೊಱಗೆ ಕಳೆದು ದೇಗುಲಕ್ಕೆ ಹೋಗಿ ದೇವರಿಗೆ ನಮಸ್ಕಾರವ ಮಾಡುವನಂತೆ ತನ್ನ ಕೆರಹಿನ ಧ್ಯಾನವಲ್ಲದೆ ದೇವರ ಧ್ಯಾನವಿಲ್ಲ (ಬಸವ. ೧೯೯). ೩. ಆತ್ಮನನ್ನು ಯಾವಾಗಲೂ ಧ್ಯಾನಿಸುತ್ತಿರುವುದು ; ಆತ್ಮಚಿಂತನೆ ; ತಪಸ್ಸು : ಧ್ಯಾನಮರೀಚಿಯಿಂ ಬೆದಱೆ ಘಾತಿತಮಸ್ತಮಂ (ಆದಿಪು. ೧೦-೦೭) ; ಧ್ಯಾನ ನಿಶಿತಖಡ್ಗದಿನಘಸಂಕುಳಮೆಯ್ದೆ ಬೆದಱೆ (ಶಾಂತಿಪು. ೯-೩೭) ; ಪ್ರಾಯಶ್ಚಿತ್ತಂ ವಿನಯಂ ವೈಯ್ಯಾವೃತ್ಯಂ ಜನಂಗೆ ಕೂಡದು ದೋಷಾಪಾಯತೆಯಿಂ ಧ್ಯಾನಂ ಸ್ವಾಧ್ಯಾಯವ್ಯುತ್ಸರ್ಗಮುಂಟು (ಅಜಿಪು. ೧೨-೩೧) ; ಧ್ಯಾನಂ ಮುಕ್ತಿಪ್ರಾಪ್ತಿವಿಧಾನಂ (ಮಲ್ಲಿಪು. ೧೪-೭೭) ; ಮುಖದಲ್ಲಿ ಮಂತ್ರ ಹೃದಯದಲ್ಲಿ ಧ್ಯಾನ ಪ್ರಾಣದಲ್ಲಿ ಲಿಂಗ ನೆನಹು ಕರಿಗೊಂಡ ಶಿವಾತ್ಮ ಶರಣನ ಹೃದಯವೆ ಪರಮೇಶ್ವರಂಗೆ ನಿವಾಸಸ್ಥಾನ (ನೆಲೆಮನೆ)ಯಾಗಿಪ್ಪುದಯ್ಯ (ಸಿದ್ಧೇವ. ೬೩-೨೩೩) ; ಶೋಧಿಸಿದ ನಿಜಚೈತನ್ಯ ತಾನೆಂದೆಂಬುದೇ ಧ್ಯಾನ (ಅಮೃತ. ೬-೪೦) ; "ದೇಹಾದಿಗಳ ಎಚ್ಚರವಿಲ್ಲದೆ ತಾನು ಬ್ರಹ್ಮವೆಂದಿರುವುದು" (ಅಮೃತ. ಟೀಕು) ; ಧ್ಯಾನವೆಂದರೆ ಇತರ ವಿಷಯಗಳಲ್ಲಿ ಹೋಗದೆ ಆತ್ಮ ವಿಷಯದಲ್ಲೇ ಮನಸ್ಸನ್ನು ಸ್ಥಿರವಾಗಿಡುವ ಅಭ್ಯಾಸ (ಹಿಂದಸಾ. ೨೨೦). 'ಆತ್ಮಧ್ಯಾಸ' ನೋ. ೪. [ಯೋಗ] ಯೋಗದ ಅಷ್ಟಾಂಗಗಳಲ್ಲಿ ಒಂದು ; ಮನಸ್ಸನ್ನು ಒಂದೇ ವಿಷಯದಲ್ಲಿ ಸ್ಥಿರವಾಗಿ ಇಡುವುದು ; ಏಕಾಗ್ರತೆ : "ತತ್ತ್ವಾದಿ ಚಿಂತನಂ ತಾಂ ಧ್ಯಾನಂ" (ವಸ್ತುಕೋ. ೨೧-೦೮) ; ಯಮನಿಯಮಸ್ವಾಧ್ಯಾಯಧ್ಯಾನಧಾರಣಮೋನಾನುಷ್ಠಾನ ಜಪಸಮಾಧಿ ಶೀಲಸಂಪನ್ನರ್ (ಸೌಇಇ. XX. ೪೭-೦೭; 1072); ಮಿಂಚುಲಿಗನ ಹಕ್ಕಿಯಂತೆ ನೀರ ತಡಿಯಲ್ಲಿದ್ದು ಮೂಗ ಹಿಡಿದು ಧ್ಯಾನವ ಮಾಡು[ವ]ರಯ್ಯಾ (ಬಸವ. ೫೭೯) ; ಯಮನಿಯಮ . . . ಧ್ಯಾನಧಾರಣಸಮಾಧ್ಯಷ್ಟಾಂಗಯೋಗನಿಷ್ಠೆ (ವಿವೇಕ. ೦೪೩) ; "ಧ್ಯಾನ (ಅದನ್ನೆ ಎಡೆಬಿಡದೆ ನೆನೆಯುವುದು)" (ಅಮೃತ. ೨-೩೭ ಟೀಕು) ; ಯಮನಿಯಮ . . . ಧ್ಯಾನಧಾರಣಸಮಾಧಿಗಳೆಂಬ ಅಷ್ಟಾಂಗಯೋಗದೊಳಗೆ (ಅಬಂದೀ. ೨೧೪-೫೫) ; ಪ್ರಾಣಾಯಾಮ ಪ್ರತ್ಯಾಹಾರ ಧಾರಣ . . . ಧ್ಯಾನಸುಸಮಾಧಿಗಳ ಸಾಧಿಸಲು (ಗಗತಾ. ೦೦-೬೮) ; ಧ್ಯಾನವೆಂದರೆ ಧ್ಯೇಯವಸ್ತುವಿನಲ್ಲಿ ಚಿತ್ತಸ್ಥಿರೀಕರಣವು (ಹಿಂದಸಾ. ೧೦೩) ; ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ ಎಂಬ ಈ ಎಂಟೂ ಆವಶ್ಯಕ (ಭಾರದ. ೩೭). 'ಅಷ್ಟಾಂಗಯೋಗ' ನೋ. ೫. ರಾಜಯೋಗದ ಹದಿನೈದು ಅಂಗಗಳಲ್ಲಿ ಒಂದು : ರಾಜಯೋಗಕ್ಕೆ . . . ಅಂಗ ತಾ ಹದಿನೈದು . . . ಯಮ ಪ್ರಥಮ ನಿಯಮವೆರಡು . . . ಹದಿನಾಲ್ಕು ಧ್ಯಾನವು ಚಿತ್ರಕರಿ ಹದಿನೈದನೇಯದು ಸಮಾಧಿ (ಜ್ಞಾಸಿ. ೧೭-೧೪). 'ರಾಜಯೋಗ' ನೋ.

ಧ್ಯಾನ ಮಾಡು = ಚಿಂತನೆ ಮಾಡು ; ಧ್ಯಾನಿಸು : ಇದರಲ್ಲಿ ಸ್ಥೈರ್ಯವುಂಟಾದರೆ ಮುಂದಕ್ಕೆ ಧ್ಯಾನ ಮಾಡುವುದಕ್ಕೆ ಅರ್ಹತೆಯುಂಟಾಗುತ್ತದೆ (ಭಾರದ. ೧೬೪) ; ಧ್ಯಾನ ಮಾಡುತ್ತ ಕುಳಿತ ಕೂಡಲೆ ಗುರುವಿನ ಧ್ಯಾನಸ್ಥ ಮೂರ್ತಿಯು ಪ್ರತ್ಯಕ್ಷ ನನ್ನ ಎದುರಿಗೆ ಬಂದು ನನಗೆ ಯಾವುದೂ ಕಾಣದಾಗುತ್ತದೆ ! (ಮಾಧವ. ೯೨) ; ಇಲ್ಲಿಯೂ ಕುಳಿತು ಧ್ಯಾನ ಮಾಡುತ್ತಾರೆ ; ಮದಿದಂಡೆಯಲ್ಲಷ್ಟೇ ಅಲ್ಲ (ಅಳಿನಿ. ೦೦೦). P ಜೈನರ ಪ್ರಕಾರ ಆರ್ತಧ್ಯಾನ, ರೌದ್ರಧ್ಯಾನ, ಧರ್ಮಧ್ಯಾನ ಮತ್ತು ಶುಕ್ಲಧ್ಯಾನ ಎಂದು ಧ್ಯಾನದಲ್ಲಿ ನಾಲ್ಕು ಬಗೆ. ಈ ಒಂದೊಂದರಲ್ಲೂ ಉಪಭೇದಗಳಿವೆ. [ ಸಂ. ]

**ಧ್ಯಾನಂಗೈ** (ಕ್ರಿ). ಚಿಂತನೆಮಾಡಂ ; ಧ್ಯಾನಮಾಡು ; ಧ್ಯಾನಿಸು : ಸಕಲವಿಶ್ವವನಾ ವಿರಾಡ್ರೂಪೆಂದು ಧ್ಯಾನಂಗೈಯುವುದೆ ನಿಶ್ಚಯದವಸರ ಸಮಾಹಿತಿಯು (ಗಗತಾ. ೧೪-೪೩). [ ಧ್ಯಾನ + ಗೈ (<ಕೆಯ್$_1$) ]

**ಧ್ಯಾನಂಬೆಱು** (ಕ್ರಿ). = ಧ್ಯಾನಂಗೈ : ಭಕ್ತಿಯಿಂ ತತ್ಪದಧ್ಯಾನಂಬೆತ್ತು ದಯಾಬ್ಧಿಯಂ ಘನತಪಂಗೆಯ್ದೊಚ್ಚತಂ ಮಚ್ಚಿಪೆಂ (ಕಬಕಂ. ೨-೮೯ .
[ ಧ್ಯಾನ + ಪೆಱು$_1$ ]

**ಧ್ಯಾನಗಮ್ಯ** (ಗು). ೧. ಏಕಾಗ್ರತೆಯಿಂದ ಕೂಡಿದ ಚಿಂತನೆಗೆ ಗೋಚರವಾಗುವ. (ನಾ). ೨. ಏಕಾಗ್ರತೆಯಿಂದ ಕೂಡಿದ ಚಿಂತನೆಗೆ ಗೋಚರವಾಗುವುದು : ಶಿಲೆಯಿಂದ, ಮರದಿಂದ . . . ಮರಳಿನಿಂದ ಧ್ಯಾನಗಮ್ಯವಾದ ಮನೋಮಯಮೂರ್ತಿಯಾಗಿ ಮತ್ತು ರತ್ನಾದಿಗಳಲ್ಲಿ ನಿರ್ಮಿಸಿಕೊಂಡು ಪೂಜಿಸಬಹುದೆಂದು ಆಧಾರವಿದೆ (ಭಾರದ. ೭೮). ೩. ಏಕಾಗ್ರತೆಯಿಂದ ಕೂಡಿದ ಚಿಂತನೆಗೆ ಗೋಚರನಾಗುವವನು ; ಪರಮಾತ್ಮ.
[ ಧ್ಯಾನ + ಗಮ್ಯ ]

**ಧ್ಯಾನಗಮ್ಯೆ** (ನಾ). ಏಕಾಗ್ರತೆಯಿಂದ ಕೂಡಿದ ಚಿಂತನೆಗೆ ಗೋಚರವಾಗುವವಳು : ಎಲೆ ಮಾತೆ ! ನೀಂ ಭಕ್ತವತ್ಸಲೆ ಸಾಜಂ ! ಧ್ಯಾನಗಮ್ಯೆ ಸಾಜಂ ! (ರಾಮಾಶ್ವ. ೬೨-೧೧).
[ ಸಂ. ಧ್ಯಾನಗಮ್ಯಾ (ಧ್ಯಾನ + ಗಮ್ಯ + –) ]

**ಧ್ಯಾನಗೋಚರ** (ನಾ). ಏಕಾಗ್ರಚಿಂತನೆಯಿಂದ ಕಾಣಿಸುವವನು : ಧ್ಯಾನಗೋಚರನಾಗಿ ವನಿತೆಯ ಮಾನಿಸದಲಿಹ ಪರಮಹಂಸನು ಮಾನುಷಾಕೃತಿಯಾಗಿ ತೋರ್ದ ಬಾಹ್ಯರಚನೆಯಲಿ (ಕುಮಾವ್ಯಾಆ. ೦೭-೩೩).
[ ಧ್ಯಾನ + ಗೋಚರ ]

**ಧ್ಯಾನಚತುಷ್ಟಯ** (ನಾ). [ಜೈನ] ಆರ್ತ, ರೌದ್ರ, ಧರ್ಮ ಮತ್ತು ಶುಕ್ಲ ಎಂಬ ನಾಲ್ಕು ಬಗೆಯ ಧ್ಯಾನ : ಆರ್ತರೌದ್ರಧರ್ಮಶುಕ್ಲಾಭಿಧಾನಧ್ಯಾನಚತುಷ್ಟಯಮುಮಂ (ಸುಕುಮಾ. ೩-೩೯ ವ).
[ ಧ್ಯಾನ + ಚತುಷ್ಟಯ ]

**ಧ್ಯಾನಚಿತ್ತ** (ನಾ). ಏಕಾಗ್ರಚಿತ್ತದಿಂದ ಚಿಂತನೆ ಮಾಡುವವನು ; ಧ್ಯಾನದಲ್ಲಿ ಮನಸ್ಸನ್ನಿಟ್ಟವನು : ಶಿವಸಂಗಧ್ಯಾನಚಿತ್ತಂ ಶಿವಚರಣಲತಾಪುಷ್ಪವೃಂದಾಯಮಾನಂ (ನಂಬಿರ. ೨ ಸೂಚನ). [ ಧ್ಯಾನ + ಚಿತ್ತ ]

**ಧ್ಯಾನತತ್ಪರ** (ನಾ). = ಧ್ಯಾನಪರಾಯಣ : ಹಗಲು ಹಸಿವಿನ ಚಿಂತೆ ಇರುಳು ವಿಷಯದ ಚಿಂತೆ . . . ಇವು ಮಾದಲ್ಲದೆ ಸದಾಶಿವನ ಧ್ಯಾನತತ್ಪರನಾಗಿ ಶಿವತತ್ತ್ವವಿಚಾರದೊಳಗಿರಲೊಲ್ಲನು ನೋಡಾ (ಸಿದ್ಧೇವ. ೪೫-೧೨೮) ; ಹುಕ್ಕನು ... ಕೈಜೋಡಿಸಿ ಕಣ್ಣು ಮುಚ್ಚಿಕೊಂಡು ಗುರುಧ್ಯಾನತತ್ಪರನಾಗಿ ಕುಳಿತುಕೊಂಡುಬಿಟ್ಟನು (ಮಾಧವ. ೯೩). [ ಧ್ಯಾನ + ತತ್ಪರ ]

**ಧ್ಯಾನದರ್ಶಿತ** (ಗು). ಧ್ಯಾನಕ್ಕೆ ಗೋಚರವಾಗುವ ; ಧ್ಯಾನದಿಂದ ತೋರಿಸಲ್ಪಟ್ಟ : ಕೇವಲ ಧ್ಯಾನದರ್ಶಿತಾನುಭವಗಳಿಂದಲೂ ಸೌಂದರ್ಯಾನುಭವಸಾಧ್ಯ (ಸೌಂದಸ. ೭೮) ; ಧ್ಯಾನದರ್ಶಿತ ದೇವತೆಗಳ ಈ ವರ್ಣನೆಯೇ ಮುಂದಿನ ಶಿಲ್ಪಕಲಾಚಾರ್ಯರ ಪರಿಭಾವನೆಯ ವಸ್ತುಗಳಾಗಿ, ಭಾರತೀಯ ದೇವದೇವತಾವಿಗ್ರಹಗಳ ಮಾದರಿಗಳೂ ಆದುವೆನ್ನುವುದು ಗಮನಾರ್ಹವಾದ ಸಂಗತಿ (ಸೌಂದಸ. ೯೯). [ ಧ್ಯಾನ + ದರ್ಶಿತ ]

**ಧ್ಯಾನನಿಯೋಗವಾದ** (ನಾ). [ಅದ್ವೈತ] ಪರಬ್ರಹ್ಮದ ಚಿಂತನೆಯಿಂದ ಉಂಟಾದ (ನಿಯೋಗವೆಂಬ) ಪುಣ್ಯಸಂಸ್ಕಾರದ ಮೂಲಕ ಮೋಕ್ಷವು ಲಭ್ಯವಾಗುವುದೆಂಬ ಸಿದ್ಧಾಂತ, – ತತ್ತ್ವ : ಇದರಲ್ಲಿ ಧ್ಯಾನನಿಯೋಗವಾದ, ನಿಷ್ಪ್ರಪಂಚೀಕರಣನಿಯೋಗವಾದ ಇವೇ ಮೊದಲಾದ ಪ್ರಭೇದಗಳಿರುವುವು (ಹಿಂದಸಾ. ೩೨೫). [ ಧ್ಯಾನ + ನಿಯೋಗ + ವಾದ ]

**ಧ್ಯಾನಪರ** (ಗು). ೧. (ಪರಮಾತ್ಮನ) ಚಿಂತನೆಯಲ್ಲಿ ಮನಸ್ಸನ್ನಿಟ್ಟ. (ನಾ). ೨. (ಪರಮಾತ್ಮನ) ಚಿಂತನೆಯಲ್ಲಿ ಮನಸ್ಸನ್ನಿಟ್ಟವನು : ಆ ನಗರದೊಳ್ಕುಂತಳೇಶ್ವರಂ ನಿರ್ಮಲಜ್ಞಾನದಿಂ . . . ಧ್ಯಾನಪರನಾಗಿರ್ಪನು (ಜೈಮಿಭಾ. ೩೦-೪೩) ; ಬಾಲ್ಯದಿಂದೆ ನೀನಗಧರಧ್ಯಾನಪರನಾಗಿರ್ಪೆ (ಜೈಮಿಭಾ. ೩೧-೭೦). [ ಸಂ. ]

**ಧ್ಯಾನಪರಾಯಣ** (ನಾ). ಚಿಂತನೆಯಲ್ಲಿ ಆಸಕ್ತನಾದವನು, - ಮಗ್ನನಾದವನು,— ತನ್ಮಯನಾದವನು : ತ್ರಿಜಗದ್ಗುರುವೇ ಗುರುವೆಂದು ತತ್ಪದಸರಸಿಜಧ್ಯಾನಪರಾಯಣನಾಗಿ (ಆದಿಪು. ೧೬-೭೫). [ ಧ್ಯಾನ + ಪರಾಯಣ ]

**ಧ್ಯಾನಬಲ** (ನಾ). ಧ್ಯಾನದಿಂದ ಉಂಟಾಗುವ ಶಕ್ತಿ; ಸತತವಾದ ಚಿಂತನೆಯಿಂದ ಒದಗುವ ಬಲ ; ಆಧ್ಯಾತ್ಮಿಕ ಚೈತನ್ಯ : ನಿಯಾಮಿಸುವ ನಾಂತು ಜಪಿಸುವ ವಾಗ್ವಿಶೇಷ್ಯದಲೆಂತು ಮಾಯಾವಿಲಯವಪ್ಪುದು ಧ್ಯಾನಬಲವಿರದೇ (ಗಗಶಾ. ೧೦-೨೦). [ ಧ್ಯಾನ + ಬಲ್ಸ ]

**ಧ್ಯಾನಮಗ್ನ** (ನಾ). = ಧ್ಯಾನಪರಾಯಣ : ಆಗ ತ್ರಿಕಾಲಜ್ಞಾನಿಯಾದ ಋಷಿಯು ಸ್ವಲ್ಪ ಹೊತ್ತು ಧ್ಯಾನಮಗ್ನನಾದನು (ಮಣಿ೨ಸ. ೬೩). [ ಧ್ಯಾನ + ಮಗ್ನ ]

**ಧ್ಯಾನಮುದ್ರೆ** (ನಾ). ಚಿಂತನೆಯಿಂದ ಕೂಡಿದ ಮುಖಭಾವ : ಲಕ್ಷ್ಯೈಕಾಗ್ರತೆಯಿಂ ಧ್ಯಾನಮುದ್ರಾಸಮನ್ವಿತನಾಗಿ ಕುಳ್ಳಿರ್ದ (ವಿವೇಳ. ೦೦೩) ; ಅವನ ಮುಖ ಧ್ಯಾನಮುದ್ರೆಯಿಂದ ಗಂಭೀರವಾಗಿತ್ತು (ಪುನರು. ೬೩). [ ಧ್ಯಾನ + ಮುದ್ರೆ ]

**ಧ್ಯಾನಯೋಗ** (ನಾ). = ಧ್ಯಾನ ೩ : ಧ್ಯಾನಯೋಗಾದಿಗಳಿಂ ತನ್ನೊಳ ಹೊಲಗೆಲ್ಲಮುಂ ದೇವತಾತಾದಾತ್ಮ್ಯಮಂ ಪಡೆದು (ವಿವೇಳ. ೦೦೩) : ಶುದ್ಧಪ್ರಸಾದಜ್ಯೋತಿಯು ಧ್ಯಾನಿಸುವುದೇ ಧ್ಯಾನಯೋಗ (ಅಜಂಡೇ. ೨೨೦-೮೦) ; ಮೂರನೆಯದದು ಧ್ಯಾನಯೋಗವು (ಗಗಶಾ. ೨೦-೦೮) ; ದೇಹೇಂದ್ರಿಯವಿಷಯಗಳನ್ನೆಲ್ಲಾ ದೃಶ್ಯಭಾವದ ಅಕ್ಷರವನ್ನು ಮಾಡಿಕೊಂಡು ಆತ್ಮಧ್ಯಾನದಲ್ಲಿಯಿರುವದೇ ಧ್ಯಾನಯೋಗಯೆಂಬುವದು (ತತ್ವಚಿಂ. ೨೭-೦೪). [ ಧ್ಯಾನ + ಯೋಗ ]

**ಧ್ಯಾನಯೋಗಿ** (ನಾ). ಧ್ಯಾನ ಮಾಡುವವನು ; ತಪಸ್ವಿ : ಧ್ಯಾನಯೋಗಿಯು ಏಕಾಂತಮನಸ್ಕನಾಗಿ, ಪ್ರತ್ಯೇಕನಾಗಿ ಭಾವಗಳನ್ನು ಚರ್ಚಿಸುತ್ತಾನೆ (ಬಂಕಿಮ. XXII, ಮುಮ್ಮುಡಿ). [ ಸಂ. ಧ್ಯಾನಯೋಗಿನ್ ]

**ಧ್ಯಾನಶೀಲ** (ಗು). ೧. ಚಿಂತನಶೀಲವಾದ ; ಯೋಚನಾಪರ. (ನಾ). ೨. ಧ್ಯಾನಮಗ್ನನಾದವನು ; ಚಿಂತನಶೀಲ. [ ಸಂ. ]

**ಧ್ಯಾನಸ್ಥ** (ಗು). ೧. = ಧ್ಯಾನಶೀಲ ೧ : ಧ್ಯಾನ ಮಾಡುತ್ತ ಕುಳಿತ ಕೂಡಲೆ ಗುರುವಿನ ಧ್ಯಾನಸ್ಥಮೂರ್ತಿಯು ಪ್ರತ್ಯಕ್ಷ ನನ್ನ ಎದುರಿಗೆ ಬಂದು ಕುಳಿತುಕೊಳ್ಳುವುದರಿಂದ, ಆ ದಿವ್ಯಮೂರ್ತಿಯ ದರ್ಶನಾನಂದದೊಳಗೆ ನನಗೆ ಯಾವುದೂ ಬೇಡಾಗುತ್ತದೆ ! (ಮಾಧವ. ೯೩). (ನಾ). ೨. = ಧ್ಯಾನಶೀಲ ೨: ಧ್ಯಾನಸ್ಥನಾಗುವ ಮೊದಲು ಹೀಗೆ ಕರ್ತವ್ಯಭ್ರಷ್ಟನಾಗಿ ಕುಳಿತುಕೊಳ್ಳುವದು ಯೋಗ್ಯವಲ್ಲೆಂದು ಪಶ್ಚಾತ್ತಾಪಪಡುವೆನು (ಮಾಧವ. ೯೩) ; ಧ್ಯಾನಸ್ಥನಾಗಿರುವ ತಪಸ್ವಿಯೊಬ್ಬನ ತಲೆಯನ್ನು ಕತ್ತಿ ಹಿಡಿದಿರುವ ಸೈನಿಕನೊಬ್ಬನು ಕತ್ತರಿಸಿದ್ದಾನೆ (ಕಶಾಅ. ೩೪೬). [ ಸಂ. ]

**ಧ್ಯಾನಾತೀತ** (ನಾ). ಚಿಂತನೆಗೆ ಮೀರಿದುದು ; ಪರಾತ್ಪರವಸ್ತು ; ಪರಮಾತ್ಮ : ಧ್ಯಾನ ಮೌನವನಳಿಯೆ ಧ್ಯಾನಾತೀತ ತಾನೆಯಾಯಿತ್ತಾಗಿ ಜ್ಞಾತೃಜ್ಞಾನಜ್ಞೇಯಂಗಳೆಲ್ಲವೂ ವಿಾರಿ ಅಭಿನವಮಲ್ಲಿಕಾರ್ಜುನನಲ್ಲಿ ಪರಮಸುಖಿಯಾದೆನು (ವಚಸಂ ೫೦೩-೪೩). [ ಧ್ಯಾನ + ಅತೀತ ]

**ಧ್ಯಾನಾಧೀನ** (ಗು). ಚಿಂತನೆಗೆ ಒಳಗಾದ ; ಧ್ಯಾನಪರವಾದ : ಸುಧರ್ಮಾಚಾರ್ಯರುಜ್ಜಯಂತಪರ್ವತದೊಳಾಧ್ಯಾತ್ಮಧ್ಯಾನಾಧೀನಮಾನಸರಾಗಿ ಘಾತಿಕರ್ಮಂಗಳಂ ಘಾತಿಸಿ ಕೇವಲವಿಭೂತಿಯಂ ಪಡೆದು (ಸುಕುಮಾ. ೯-೨೮) ; ಧ್ಯಾನಾಧೀನಮನಂ ಮುನೀಂದ್ರನಿರೆ ಕರ್ಮಂ ಘಾತಿಸಂಘಾತಮಾಧ್ಯಾನೋಗ್ರಾನಳನಿಂದಮಂದುರಿಯೆ (ಮಹಾನೇ. ೩-೧೪೩). [ ಸಂ. ]

**ಧ್ಯಾನಾನಂದ** (ನಾ). ಪರಬ್ರಹ್ಮದ ಚಿಂತನೆಯಿಂದ ದೊರಕುವ ಆನಂದ: ' ಥಿಯೊರಿಯಾ ' ಎಂದರೆ ' ಧ್ಯಾನಾನಂದ '. ಅದು ದೇವನ ಒಂದು ಲಕ್ಷಣ. ಮನುಷ್ಯನ 'ಧ್ಯಾನಾನಂದ' ಅನುಭವವು ದೇವನ 'ಧ್ಯಾನಾನಂದ'ದ ಅಂಶವೇ ಎಂದು ಹೇಳಬಹುದು (ಧರ್ಮಶಾ. ೧೪೪). [ ಧ್ಯಾನ + ಆನಂದ ]

**ಧ್ಯಾನಾರೂಢ** (ನಾ). ೧. ಧ್ಯಾನವನ್ನು ಕೈಕೊಳ್ಳುವುದು ; ಪರತತ್ತ್ವದ ಚಿಂತನೆ: ಶ್ರೀನಾ[ರೀ]ನಿಳೆಯಂ ಶ್ರೀವಿಮಾನಾಂಬರ ದಿಬ್ಯಸ್ಥಾ[ನಾ] [ಮೋ]ದಿ ಚೂಡಾಮಣಿಮುನಿಪಂ ಧ್ಯಾನಾರೂಢದೆ ನೋಡಿ ತಾವೊಪ್ಪೆ ಕೇವಳಜ್ಞಾನ ಪ್ರಸಿದ್ಧವೇಂ ಪ್ರಕಟಿಸಿದ (ಕಶಿಅ. ೩೮-೩೩-೨; ?). ೨. ಧ್ಯಾನವನ್ನು ಕೈಗೊಂಡವನು. [ ಧ್ಯಾನ + ಆರೂಢ ]

**ಧ್ಯಾನಿ** (ನಾ). ಪರತತ್ತ್ವವನ್ನು ಕುರಿತು ಚಿಂತಿಸುವವನು ; ಧ್ಯಾನಶೀಲ : ವಿಗತೇಂದ್ರಿಯಾ ಮನೋವಿಷಯನಭವಾನಪರತಂತರ್ಗತಧ್ಯಾನಿ (ಜಸಪು. ೫೬-೧) ; ಕಣ್ಣಲ್ಲಿ ಕಾಮ ಮನದಲ್ಲಿ ಕ್ರೋಧ . . . ಅಟಯಲ್ಲಿ ಮಾಯಾ ಉಳ್ಳನ್ನಕ್ಕರ ಎಂತು ಭಕ್ತನೆಂಬೆ . . . ಎಂತು ಧ್ಯಾನಿಗಳೆಂಬೆ ಎಂತು ಅನುಭಾವಿಗಳೆಂಬೆ (ಸಿದ್ಧೇವ. ೯೧-೨೭೩). [ ಸಂ. ಧ್ಯಾನಿನ್ ]

**ಧ್ಯಾನಿಸು** (ಕ್ರಿ). ೧. ಪರತತ್ತ್ವವನ್ನು ಕುರಿತು ಚಿಂತಿಸು ; ಧ್ಯಾನಮಾಡು: ಶುಕ್ಲಧ್ಯಾನಮಂ ಧ್ಯಾನಿಸಿ ಎಂಟು ಕರ್ಮಂಗಳಂ ಕಿಡಿಸಿ ಮೋಕ್ಷಕ್ಕೆ ಪೋದರ್ (ವಡ್ಡಾರಾ. ೦೧೪-೦೭) : ನಾಲ್ಕುಂ ಧರ್ಮಧ್ಯಾನಮಂ ಧ್ಯಾನಿಸುತ್ತುಂ (ಆದಿಪು. ೧೦-೧೪೮) ; ಇಂತೀ ತ್ರಿಶುದ್ಧಿಗಳಿಂ ಧ್ಯಾನಿಸುವಮ್ಮನೋತಲಗು ಮಮ್ಮಂ ಬಾದಿಪೆಮ್ಮಂ ತ್ರಿಕಾಲಗಯೋಗರ್ ಪರಮೇಶ್ವರರ್ ಪರಸುಗಿಂ ವಾತ್ಸಲ್ಯದಿಂ (ಶಾಂತಿಪು. ೧-೫) : ಪ್ರಶಸ್ತಧ್ಯಾನಮಂ ಧ್ಯಾನಿಸುವಾಗಳ್ (ಅಜಿಪು. ೮-೨೮೮) : ಜಾನಿಪೊಡೆ ಚತುರ್ಭುಜನಂ ಧ್ಯಾ[ಪಾಠಾಂ. ಜಾ] ನಿಪ್ಪುದೋ ಮೇಣ್ದಶಾವತಾರದ ರೂಪಂ ಧ್ಯಾ [ಪಾಠಾಂ. ಜಾ] ನಿಪ್ಪುದೊ (ಸಮುಪ. ೮-೧೪೫): ಪಡ್ವಸ್ತುವಂ ಷಡ್ಚಕ್ರಭುವನೇಜಮಧ್ಯದೊಳ್ ಧ್ಯಾನಿಸಿ (ಪದ್ಮರಾ. ೨-೪೮) ; ರುದ್ರಾಣಿ ಘನಧೈರ್ಯದಿಂದೆ ಸಾನುರಾಗದೆ ತನ್ನ ಹೃತ್ಕಮಲಮಧ್ಯದೊಳ್ ಧ್ಯಾನಿಸಿದಳೀಶನಂ (ಹಬಪು. ೩೬-೩). ೨. ಚಿಂತನೆ ಮಾಡು ; ಗಮನದಲ್ಲಿಡು : ಆಲೋಚಿಸು : ಗಗನಮಂ ಪೃಥ್ವಿಯಂ . . . ಭದ್ರವೀರಸೌಂದರ್ಯಮಂ, ಧ್ಯಾನಿಸುತೆ ಭಾವಿಸುತೆ ರೂಪಿಸುತೆ ಕಾಮಿಸಿದನಾ ಭೂಮಿಪಂ (ಶ್ರೀರಾಮಾ. ೦೨-೩೦೦) ; ಪರಿಭಾವಿಸು ! ಆಸ್ವಾದಿಸು ! ಧ್ಯಾನಿಸು ! ಒಂದಾಗು ! (ಅನಿಕೇ. ೦೮-೧೦). ೩. ಆತ್ಮಚಿಂತನೆ ಮಾಡು; ಆತ್ಮವನ್ನು ಕುರಿತು ಚಿಂತಿಸು: ದೇಹ ಬೇರಾತ್ಮ ಬೇರೆಂದಾತ್ಮ ಕಲೆಯ ಮುನ್ನೊಲ್ದು ಧ್ಯಾನಿಸಿದ ಫಲದಿಂದ ದೊರೆಕೊಂಡುದಾ ರಾಯಗಾ ರೂಪು (ಭರತ. ೦-೫೪); ಧ್ಯಾನಿಸಿದನೊಂದೆರಡು ಗಳಿಗೆ (ಜ್ಞಮಿಧಾ. ೦೦-೩೭). [ ಧ್ಯಾನ + -ಇಸು₃ ]

**ಧ್ಯಾಮ** (ನಾ). ೧. (ಒಂದು ಬಗೆಯ) ಸುಗಂಧಪೂರಿತವಾದ ಹುಲ್ಲು ; ಸುವಾಸನೆಯನ್ನು ಬೀರುವ ಹುಲ್ಲು. ೨. ಹಂಚೀಕಡ್ಡಿ : " ಕತ್ತೃಣಂ ಪೌರಂ, ಸೌಗಂಧಿಕಂ, ಧ್ಯಾಮಂ [ಪಾಠಾಂ. ಧ್ಯಾಯಂ], ದೇವಜಗ್ಧಕಂ, ರೌಹಿಷಂ - ೬ ಕಾಚೀಹುಲ್ಲು, ಕಾಚೀಕಡ್ಡಿ, ಹಂಚೀಕಡ್ಡಿ, ಬರಗುಕಡ್ಡಿ, ಇವುಗಳೆಲ್ಲಕ್ಕೂ ಹೆಸರುಗಳು " (ಸಿದ್ಧಾಂತಿ. ೦೫೦). [ ಸಂ. ]

**ಧ್ಯಾಸ, ದ್ಯಾಸ** (ನಾ). ೧. ಚಿಂತನೆ ; ಧ್ಯಾನ : ಈ ಸಾಧನಶಾಸ್ತ್ರದಲ್ಲಿಯ ಭವತಾರಕರು ಹೇಳುವ ಮೊದಲನೆಯ ಅಂಶವು ನ್ಯಾಸ ಮತ್ತು ಧ್ಯಾಸ ಎಂಬುದು (ಪಂಪ. ೫೮) ; ರಂಗಕ್ಕನಿಗೆ ಮಾತ್ರ ಆ ಶೀರೆಯ ಧ್ಯಾಸ ಬಿಡಲಿಲ್ಲ (ದೀಪಪ. II, ೦೨೨). ೨. ಎಚ್ಚರ ; ಪ್ರಜ್ಞೆ ; ಅರಿವು : ಅಲ್ಲಿದ್ದವರಿಗೆ . . . ಅಜಿತ ಮನೋರಮೆಯ ವಿಷಯದಲ್ಲೂ ಧ್ಯಾಸವಿರಲಿಲ್ಲ (ಶೀಪ್ರಶ್ನ. ೫೨) : ನಾನು ಎರಡು ಸಲ ಕೂಗಿದೆ, ನಿನಗೆ ಇತ್ತ ಧ್ಯಾಸವೇ ಇರಲಿಲ್ಲ (ಮಳಿಮ. ೫೭); ಅವನ 'ಧ್ಯಾಸ'ವೇನೂ ಅತ್ತ ಇದ್ದ ಹಾಗಿಲ್ಲ (ಜಂಗಾಗಾ. ೬). ೩. ನೆನಪು ; ಜ್ಞಾಪಕ. ನನಗೆ ಬಂದೂನ ಕ್ರಾಪಿನದೇ ಧ್ಯಾಸ (ವ್ಯಾನಿ. ೭೦) : ಅದರ ಧ್ಯಾಸವೇ ಉಳಿಯಲಿಲ್ಲ (ಕನಕ. ೨೭). ೪. ಲಕ್ಷ್ಯ ; ಗಮನ : ಬರೇ ತಿನುವರ ಕಡೇನ ಧ್ಯಾಸಾ (ದೀಪಹ. II, ೫೬).

ದ್ಯಾಸ: ೨. "ಸ್ವಾಮಿಗೆ ಯಾಕೋ ಹೊರಗಿನ ದ್ಯಾಸೇ ಇಲ್ಲ" ಎಂದು ಅವರ ಗಮನವನ್ನು ತನ್ನತ್ತ ಸೆಳೆದ (ಸುತಸಂ. ೭೯). ೩. ನೆನಪು : (ದ್ಯಾಸ-ನೆನಪು ಜಾನಕೋ. ೪).

ಧ್ಯಾಸ ಬರು = ಗಮನಕ್ಕೆ ಬರು ; ಲಕ್ಷ್ಯಕ್ಕೆ ಬರು : ಅವನ ದನಿ ಕೋಳಿದ್ದಾದು ಧ್ಯಾಸ ಬಂದಿತು ಮೇಖಲೆಗೆ (ಅಳಾಕ. ೦೩೬).

[ ←ಮರಾ. ಧ್ಯಾಸ ]

**ಧ್ಯೇಯ** (ಗು). ೧. ಉದ್ದೇಶಿಸಿದ ; ಲಕ್ಷಿಸಿದ : ಸಮಾಧಿಯೆಂದರೆ ಈ ಧ್ಯಾನವೆಂಬ ಅತಿ ಸ್ವಚ್ಛಚಿತ್ತವೃತ್ತಿಪ್ರವಾಹಕ್ಕೂ ಧ್ಯೇಯವಸ್ತುವಿಗೂ ಭೇದ ತೋರದೆ ಧ್ಯೇಯವಸ್ತು ಸ್ವರೂಪದಲ್ಲೇ ಲೀನವಾಗುವಿಕೆ. ಇದನ್ನು ಧ್ಯೇಯಮಾತ್ರಸ್ಫೂರ್ತಿಯೆನ್ನುವರು (ಹಿಂದಸಾ. ೦೦೬). (ನಾ). ೨. ಲಕ್ಷ್ಯ ; ಉದ್ದೇಶ ; ಗುರಿ : "ಉದ್ದೇಶ ; ಗುರಿ ; ಧ್ಯೇಯ" (Cause. ಪತ್ರಿನಿ. ೧೩) ; ಜೀವನಕ್ಕೆ ಧ್ಯೇಯವೊಂದಿದೆಯೆಂಬುದನ್ನು ಅರಿಯುವುದೆ ಕಷ್ಟ (ಹುಕ್ಕಾರ ೧. ೩೬೩೪) ; ನಿರಂತರ ಸೇವೆಯೇ ನದಿಗಳ ಧ್ಯೇಯ (ನನದಿ. ೧೭) ; ಜೈನರಂತೆ ಶೈವರೂ ಸರ್ವಭೂತಹಿತವನ್ನೇ ತಮ್ಮ ಉಚ್ಚ ಧ್ಯೇಯವನ್ನಾಗಿ ಮಾರ್ಪಡಿಸಿಕೊಂಡರು (ಸಾಹಿಸ. ೦೩೪). ೩. ಧ್ಯಾನದ ವಸ್ತು,-ಗುರಿ : ಪ್ರಾಯೋಪಗಮನವಿಧಿಯಿಂ ಕಾಯಮನಳವಡಿಸಿ ವಿಮಳಶುದ್ಧಧ್ಯಾನಂ ಧ್ಯೇಯ [ಪಾಠಾಂ. ದೇಯ, ಧೇಯ]ದೊಳಮರೆ ಮುಮುಕ್ಷುಜ್ಯಾಯಂ ಪಂಡಿತಸಮಾಧಿವಿಧಿಯಂ ತಳೆದಂ (ಅನಂಪು. ೪-೩೭). ೪. ಆದರ್ಶ. 'ಧ್ಯೇಯಜೀವಿ', 'ಧ್ಯೇಯವಾದಿ' ಪರಾ. [ ಸಂ. ]

**ಧ್ಯೇಯಜೀವಿ** (ನಾ). ಉತ್ತಮ ಉದ್ದೇಶವನ್ನಿಟ್ಟುಕೊಂಡಿರುವವನು ; ಆದರ್ಶವಾದಿ : ಮೈ ಮನಸ್ಸನ್ನು ಮನ್ನಿಸದೆ, ಒಂದು ಕ್ಷಣ ಕುಳ್ಳಿರಲೂ ಒಲ್ಲದೆ, ಕರ್ಮನಿರತರಾಗುವುದು ಧ್ಯೇಯಜೀವಿಗಳ ಹುಚ್ಚು (ಕಒಸಾ. IX. ೩೬೩೪). [ ಸಂ. ಧ್ಯೇಯಜೀವಿನ್ ]

**ಧ್ಯೇಯವಸ್ತು** (ನಾ). ಧ್ಯಾನ ಮಾಡಬೇಕಾದ ವಸ್ತು ; ಪರಮಾತ್ಮ : ಧ್ಯಾನಯೋಗದ ಧ್ಯೇಯವಸ್ತುವೆ ತಾನೆನುತ (ಗಗತಾ. ೦೩-೩೯) ; ಸಮಾಧಿಯೆಂದರೆ ಈ ಧ್ಯಾನವೆಂಬ ಅತಿಸ್ವಚ್ಛಚಿತ್ತವೃತ್ತಿಪ್ರವಾಹಕ್ಕೂ ಧ್ಯೇಯವಸ್ತುವಿಗೂ ಭೇದ ತೋರದೆ ಧ್ಯೇಯವಸ್ತುಸ್ವರೂಪದಲ್ಲೇ ಲೀನವಾಗುವಿಕೆ (ಹಿಂದಸಾ. ೦೦೬). [ ಧ್ಯೇಯ + ವಸ್ತು ]

**ಧ್ಯೇಯವಾದ** (ನಾ). ಉತ್ತಮವಾದ ಉದ್ದೇಶದ ಸಾಧನೆಯನ್ನು ಪ್ರತಿಪಾದಿಸುವ ವಾದ ; ಆದರ್ಶವಾದ : ಧ್ಯೇಯವಾದದ ಆಂತರಿಕ ಸ್ಫೂರ್ತಿಯು ಆತ್ಮದ ಅಮರವಾದ ಆಕಾಂಕ್ಷೆಗಳೊಳಗಿಂದಲೇ ಉದ್ಭವಿಸುತ್ತಿರುವುದು (ಪ್ರಬಂಧ. ೧೧೧) ; ಅವನು ಜೀವನದ ಎಲ್ಲ ವಿಷಯಗಳನ್ನೂ ಧ್ಯೇಯವಾದದ ದೃಷ್ಟಿಕೋನದಿಂದ ನೋಡುವ ಮನುಷ್ಯ (ದೂರಸ. ೪).

[ ಧ್ಯೇಯ + ವಾದ್ಯ ]

**ಧ್ಯೇಯವಾದಿ** (ನಾ). = ಧ್ಯೇಯಜೀವಿ : ಮೊದಲಿನಿಂದಲೂ ಕನ್ನಡರು ವೀರರು, ಉದಾತ್ತರು, ಧ್ಯೇಯವಾದಿಗಳು (ಭಾಷಾಶಾ. ೨೩೪).

[ ಸಂ. ಧ್ಯೇಯವಾದಿನ್ ]

**ಧ್ಯೇಯಸಾಧನೆ** (ನಾ). ಉದ್ದೇಶದ ಸಾಧನೆ ; ಗುರಿಯನ್ನುಮುಟ್ಟಲು ಮಾಡುವ ಪ್ರಯತ್ನ : ಧ್ಯೇಯಸಾಧನೆಯು ಪ್ರಯತ್ನವೂ ಮಾನವನ ಸಹಜಪ್ರವೃತ್ತಿಯೇ ಹೊರತು ಕೃತಕವಲ್ಲ (ಹುಕ್ಕಾರ. ೦ ೩೬೩೪).

[ ಧ್ಯೇಯ + ಸಾಧನೆ ]

**ಧ್ರುಪದ** 'ದುರಪದ' ನೋ.

**ಧ್ರುವ** (ಗು). ೧. ಸ್ಥಿರವಾದ ; ಅಚಲವಾದ. ೨. ನಿಶ್ಚಿತವಾದ ; ಸಂಶಯವಿಲ್ಲದ ; ದೃಢವಾದ. ೩. ನಿತ್ಯವಾದ ; ಬದಲಾಗದ ; ಶಾಶ್ವತ ; ನಿರಂತರ ; ಸತತ. (ನಾ). ೪. ನಿತ್ಯವಾದುದು ; ಸ್ಥಿರವಾದುದು ; ಶಾಶ್ವತವಾದುದಂ : "ಸತತಂ . . . ಧ್ರುವಮಾವಿರತಂ [ನಿರು]ತರಮಜಸ್ರಮೆನೆ ತಾಂ ನಿತ್ಯಂ" (ವಸ್ತುಕೋ. ೧೦೯-೬೭) ; "ನಿತ್ಯಂ ಧ್ರುವಂ ಶಾಶ್ವತಮದು ಸನಾತನಮನಶ್ವರಂ ಸ್ಥಿರಮೆನಿಕ್ಕು" (ಮಂಗರಾ. ೮-೨೫) ; ಧ್ರುವಮಲಾ ರಾಜಾಗತೋಧರ್ಮವು ವಿದಿತವಿದ ನೀವಜಾಯಿರೇ (ಬಸಪು. ೫೫-೮) ; ದಿವಿಜರಿಪ್ಪ ಕೇಳೆಲವೂ . . . ಧ್ರುವವು ನಿನಗಾಯುಷ್ಯವೆಂಬುತ್ಸವದಿ ನಮ್ಮನು ಕೆಣಕಿ ಲಯವ್ಯತ್ಯಯವಿನ ಕೈವಶವಾದ ನೀನೆಂದಸುರಹರ ನುಡಿದ (ತೊರರಾ. ೬-೫೦-೦೩) ; ಅಧ್ರುವವನು ತೊರಿ, ಧ್ರುವದೆದೆಯನು ತೋರಿ . . . ಪುಣ್ಯಸವಿಾರನು ಬರುತಿಹನು (ಪಾಂಚಜ. ೨೩-೭). ೫. ಉತ್ತಾನಪಾದರಾಯನ ಮಗ ; ಧ್ರುವಲೋಕದ ಅರಸು : ಲೋಕೋತ್ತರದ ಪದದಲಿ ನಿಂದನಾ ಧ್ರುವನಧಿಕತೇಜದಲಿ' (ನಿಭಾಗ. ೪-೯ ಸಂಧಿ) ; ಕರಿ ಧ್ರುವ ಬಲಿ ಪಾಂಚಾಲಿ ಅಹಲ್ಯೆಯ ಪೊರೆದವ ನೀನಂತೆ (ಪುರಂದ. ೨-೭೧-೧) ; ಜಲಜಾಕ್ಷಭಕ್ತಿಯಿಂ ಪ್ರಹ್ಲಾದನಾಗಿ ನಿಶ್ಚಲ ಹರಿಧ್ಯಾನದಿಂ ಧ್ರುವನಾಗಿ (ಕೃಮಿಭಾ.೨೯-೧೪). ೬. ಒಂದು ನಕ್ಷತ್ರದ ಹೆಸರು. "ಧ್ರುವಃ. ಔತ್ತಾನಪಾದಿಃ – ೨ ಧ್ರುವನಕ್ಷತ್ರದ ಹೆಸರು" (ಸಿದ್ಧಾಂತಿ. ೩೦). 'ಧ್ರುವನಕ್ಷತ್ರ' ಪರಾ. ☞ ಧ್ರುವನು ನಾರದರಿಂದ ಮಂತ್ರೋಪದೇಶವನ್ನು ಪಡೆದು ತಪಸ್ಸನ್ನಾಚರಿಸಿ, ಸಾಮ್ರಾಜ್ಯವನ್ನಾಳಿ ಬಳಿಕ ಧ್ರುವಮಂಡಲವಾದನೆಂದು ಪುರಾಣಗಳಲ್ಲಿ ಹೇಳಿದೆ. ೭. ಎಂಟು ಜನ ವಸುಗಳಲ್ಲಿ ಒಬ್ಬ. 'ಅಷ್ಟವಸು' ಪರಾ. ೮. ಭೂಮಿಯ ಅಕ್ಷದ ಉತ್ತರ ಹಾಗು ದಕ್ಷಿಣದಿಕ್ಕಿನ ಕೇಂದ್ರ ಬಿಂದುಗಳು ; ಉತ್ತರಧ್ರುವ ಮತ್ತು ದಕ್ಷಿಣಧ್ರುವ : ಭೂಮಿಯು ತನ್ನ ಮೈಸುತ್ತು ಸರ್ವಕಾಲವೂ ತಿರುಗುತ್ತಿದ್ದಾಗ್ಯೂ ಅದರ ಬುಡ, ತಲೆ, ಇವೆರಡು ಬಿಂದುಗಳು ಸ್ಥಿರವಾಗಿ ಇರುತ್ತವೆ. ಈ ಸ್ಥಿರಬಿಂದುಗಳನ್ನು ಧ್ರುವಗಳೆಂದೆನ್ನುವರು (ಮುಂಬಯಿ. ೬-೬೦) ; ಪೂಜಕನೂ ಪೂಜ್ಯನೂ ಬೇರೆ ಬೇರೆ ಎಂಬುದರ ಕಲ್ಪನೆಗೂ ಇಬ್ಬರೂ ಒಂದೇ ಎಂಬ ಕಲ್ಪನೆಗೂ ಎರಡು ಧ್ರುವದ ಅಂತರ (ಭಾರದ. ೨೮೪) ; ಇಂದ್ರಿಯಾನುಭವಕ್ಕೆ ಪ್ರತಿಭಾನವೂ ಭಾವನೆಗೆ ಆಲೋಚನೆಯೂ ಎದುರು ಧ್ರುವಗಳಂತಿವೆ (ಶಿಕ್ಷದ. ೬೩೩). ೯. ಅಯಸ್ಕಾಂತದ ಪ್ರತಿತುದಿಯಲ್ಲೂ ಇರುವ ಪ್ರದೇಶ : ಕಬ್ಬಿಣವನ್ನು ಆಕರ್ಷಿಸುವ ಗುಣವನ್ನೇ ಕಾಂತತ್ವವೆಂದು (Magnetism) ಕರೆಯುವರು. ಈ ಗುಣವು ಕಾಂತದ ತುದಿಯಲ್ಲಿ ಹೆಚ್ಚಾಗಿದೆ . . . ಹೀಗೆ ಈ ಗುಣವು ಕೇಂದ್ರೀಕೃತವಾಗಿರುವ ಸ್ಥಾನಗಳನ್ನು ಕಾಂತದ ಧ್ರುವಗಳೆಂದು (Poles) ಕರೆಯುತ್ತೇವೆ (ಭೌತವಿ. ೩೦೦). ೧೦. ಕಂಬ ; ಗೂಟ : "ಧ್ರುವಂ ಶಂಕ್ವಾಖ್ಯಂ" (ವಸ್ತುಕೋ. ೩೧-೭) ; "ಗೂಂಟ ಮತ್ತೆ ಶಿವಕಂ ಧ್ರುವಂ ಪುಳಕಮೆನಿಸಿಕ್ಕು" (ಮಂಗರಾ. ೮೫-೨೭). ೧೧. (ಕೊಂಬೆ, ರೆಂಬೆಗಳನ್ನು ತರಿದ) ಮರದ ಬೊಡ್ಡೆ,-ಕಾಂಡ ; ಮೋಟುಮರ ; ಮರದ ತುಂಡು : "ಸ್ಥಾಣುಃ, ಧ್ರುವಃ, ಶಂಕುಃ–೩ ಮೋಟನ ಹೆಸರು. ಗೂಟ, ಮೇಕು" (ಸಿದ್ಧಾಂತಿ. ೧೧೧). ೧೨. ಎಣ್ಣೆಯ ಗಾಣದಲ್ಲಿ ಉಪಯೋಗಿಸುವ ಮರದ ತುಂಡು.-ದಿಮ್ಮಿ. ೧೩. [ಜ್ಯೋತಿ] ವಿಷ್ಕಂಭ ಮೊದಲಾದ ಇಪ್ಪತ್ತೇಳು ಯೋಗಗಳಲ್ಲಿ ಹನ್ನೆರಡನೆಯದು ; ☞ ಇದೊಂದು ಶುಭ ಯೋಗವೆಂದು ಹೇಳುತ್ತಾರೆ : ವಿಷ್ಕಂಭ ಪ್ರೀತಿ ಆಯುಷ್ಮಾನ್ ಸೌಭಾಗ್ಯ ಶೋಭನ ಅತಿಗಂಡ ಸುಕರ್ಮ ಧೃತಿ ಶೂಲ ಗಂಡ ವೃದ್ಧಿ ಧ್ರುವ ವ್ಯಾಘಾತ ಹರ್ಷಣ ವಜ್ರ ಸಿದ್ಧಿ ವ್ಯತೀಪಾತ ವರೀಯಾನ್ ಪರಿಘ ಶಿವ ಸಿದ್ಧ ಸಾಧ್ಯ ಶುಭ ಶುಕ್ಲ ಬ್ರಹ್ಮ ಐಂದ್ರ ವೈಧೃತಿಗಳೆಂಬಿಪ್ಪತ್ತೇಳು ಯೋಗಂಗಳುಂ (ವಿವೇಕ. ೩೨೦) ; ಯೋಗಗಳತಿಶಯವನರಿಯ್ಯೆಯ್ಯ ಪೇಳುವೆ ವ್ಯತಿಯು ಧೃತಿ ವಿಷ್ಕಂಭ ಶೂಲವು . . . ಧ್ರುವ ಪರಿಘ (ಗಗತಾ. ೪-೭೯). ೧೪. [ಸಂಗೀತ] ಒಂದು ತಾಳದ ಹೆಸರು : ಬೇಗದಿ ಧ್ರುವ ಮಠೆಯವು ಪಡಿಮಠೆಯವು ಯೇಗ್ಯೆಯಲಡತಾಳಗಳು (ತರ್ಕಶಾ. ೭-೫೬) ; ಧ್ರುವ, ಮಠ್ಯ, ರೂಪಕ, ಜಂಪೆ, ತ್ರಿಪುಟ, ಅಟ್ಟ,

**ನಂಟಸ್ತ, ನೆಂಟಸ್ತ** (ನಾ). ಬಾಂಧವ್ಯವುಳ್ಳವನು; ಬಂಧು. 'ನಂಟಸ್ತಿಕೆ' ಪರಾ. ನೆಂಟಸ್ತ. 'ನೆಂಟಸ್ತಿಕೆ' ಪರಾ. [ <ನಂಟು$_2$ + – ಸ್ತ ]

**ನಂಟಸ್ತನ, ನೆಂಟಸ್ತನ** (ನಾ). = ನಂಟತನ : ಸಮುದ್ರದ ನಂಟಸ್ತನ ಉಪ್ಪಿಗೆ ಬಡತನ (ಹುಟ್ಟಿಹ. ೬೯) ; ಯೋಗ್ಯರಾದವರೊಂದಿಗೆ ನಂಟಸ್ತನ ಮಾಡಬೇಕು (ರೂಢಿ). **ನೆಂಟಸ್ತನ :** ಈ ಗೆದ್ದಲಿರಾಯನ ನೆಂಟಸ್ತನ ಸಾಹಿತ್ಯದೊಡನೆ ಅಷ್ಟೇ ಅಲ್ಲ, ಕಂಬಳಿಯೊಡನೆಯೂ ಇದೆಯೋ_ಎಂದು ಕೊಂಡೆ (ಮಾಂಗಾಪು. ೧೬). 'ದೊಡ್ಡಸ್ತನ' ಪರಾ.

[ < ನಂಟಸ್ತ + – ತನ ]

**ನಂಟಸ್ತಿಕೆ, ನೆಂಟಸ್ತಿಕೆ** (ನಾ). = ನಂಟತನ : ಆ ಎರಡು ಮನೆತನಗಳ ನಡುವೆ ಮದುವೆಯ ಸಂಟಸ್ತಿಕೆ ಕೂಡ ಬೆಳೆದಿತ್ತು (ನೊಳಂಬ. ೭೨) ; ಈಗಿನ ಕಾಲದಲ್ಲಿ ನಂಟಸ್ತಿಕೆ ಹೆಚ್ಚಿದಷ್ಟೂ ಸಂಸಾರ ನಿಭಾಯಿಸುವುದು ಕಷ್ಟ (ರೂಢಿ). **ನೆಂಟಸ್ತಿಕೆ :** ನೆಂಟಸ್ತಿಕೆ ಬೆಳೆಸುವುದಕ್ಕಾಗಿ ನೀವೆ ಬಿಟ್ಟೂರಿಗೆ ಹೋಗ ಬೇಕಾಗುವುದು (ಘೂರಾಣಿ. ೩೩) ; ಹೋಗಲೇಬೇಕೆಂದು ಯೋಚಿಸಿ ಕೂಡಲೇ ಹೋಗಲು ಇಲ್ಲಿ ಚಿನ್ನದ ಕೊಪ್ಪರಿಗೆಯಿದೆಯೋ ಅಥವಾ ಕುಬೇರನ ನೆಂಟಸ್ತಿಕೆಯಿದೆಯೋ ? (ವಾತ್ಸಲ್ಯ. ೨೪). 'ದೊಡ್ಡಸ್ತಿಕೆ' ಪರಾ.

[ ನಂಟಸ್ತ + – ಇಕೆ ]

**ನಂಟಿಕೆ** (ನಾ). = ನಂಟತನ : ತಂಟೆಯಂವನ ನಂಟಿಕೆ ಸಲ್ಲ, ಒಂಟಿಯಾಗಿ ಹೋಗಸಲ್ಲ (ಗಾದೆ). [ ನಂಟ + – ಇಕೆ ]

**ನಂಟಿತಿ, ನೆಂಟಿತಿ, ನೆಂಟಿತ್ತಿ** (ನಾ). ನಂಟರವಳು ; ಸಂಬಂಧಿಯಾದವಳು: (ಕ). **ನೆಂಟಿತಿ :** ಮನೆಗೆ ಬಂದ ನೆಂಟಿತಿಯರಿಗೆ ಉಡುಗೊರೆಯಾಗಿ ಕೊಡಲು ತಂದಿದ್ದ ಸೀರೆಗಳ ವಿಚಾರ ಸಲಹೆ ಕೊಡುವ ನೆವದಿಂದ . . . ತಿಳಿಯಲು ಪ್ರಯತ್ನಿಸುತ್ತಿದ್ದನು (ಮಾಲಿಕು. ೨೨೦). **ನೆಂಟಿತ್ತಿ :** ಮನೆಯ ಮಗಳೂ ನೆಂಟಿತ್ತಿಯ ಹಾಗೆ ಮದುವೆಯ ದಿನವೇ ಬಂದಿದ್ದಾಳೆ (ರೂಢಿ).

[ ನಂಟ + – ಇತಿ$_1$ (< – ಇತ್ತಿ) ]

**ನಂಟು$_1$** (ಕ್ರಿ). ತಾಗು ; ಕೂಡು : ಸೇರು: ಅವು ತಾಮುರ್ಟ್ಟನೊಳೊರ್ಮೆ ಕಂಡು ಕಿಡಿಯುಂ ಕೆಂಡಂಗಳಂ ಸೂಸೆ ನಂಟುವ [ಪಾಠಾಂ. ಗಂಟುವ, ತಾಗುವ, ನಂಟದ]ವೊಲ್ ಬೆಟ್ಟನೊಳೊಂದು ಬೆಟ್ಟು ಭವಬದ್ಧಕ್ರೋಧದಿಂ ಕಾಯ್ದು ತಾಗುವುದುಂ (ಅರ್ಧನೇ. ೪-೧೨೦).

[ ದೇ.I ತಮಿ. ನಣ್ಣು, ನಣಂಜು, ನಣುಕು ]

**ನಂಟು$_2$, ನೆಂಟು** (ನಾ). ೧. ಸಂಬಂಧ ; ಬಾಂಧವ್ಯ : "ನಂಟಣ್ಪನಿಕ್ಕುಂ" (ಕವಿರಾಕ್ಷ. ೬೯) ; ಜವನೊಡವುಟ್ಟು ಮಾರಿಯೊಡನಾಡಿ ಲಯಾಗ್ನಿಯ ನಂಟು . . . ಸಿಡಿಲ ಸಂಗಡವಿನಾಶನ ಬೆಂಕೆಗಣ್ಣ ಬಾಂಧವನೆನೆ ಶೌರಿ ಮರ್ದಿಸಿದ ನಪ್ರತಿಮಲ್ಲರೆನಿಪ್ಪ ಮಲ್ಲರಂ (ಜಗವಿ. ೬-೭೩) ; ಕೆಳೆತನದ ನಂಟು [ಪಾಠಾಂ. ಬಂಧು] ವಿಷಯದ ಬಂಧುವಾತುಗಳ ಬಲದೊಳಾಂ ಕವಿಯೆಂದು ಕವಿರಾಯ ನೆಂದು ವೆಗ್ಗಳಿಸಿ . . . ನಂಟನೀಡಾಡಿ ಮಲೆತು (ಹರಿಶಾ. ೧-೩೦) ; ಕರಕಷ್ಟರೊಳು ನಂಟದೇತಕಾಳಿ ಶುಭವನೆಣಿಸು (ವೆಂಕಾರಾ. ೩-೯-೬) ; ಹಳಗನ್ನಡಕ್ಕೂ ತಮಿಳಿಗೂ ಇರುವ ನಿಕಟವಾದ ನಂಟು ನೋಡಬೇಕಾದುದು (ದ್ರಾವಿವಿ. ೧೧೨) ; ಸಮುದ್ರದ ನಂಟು ಉಪ್ಪಿಗೆ ಬಡತನ (ಗಾದೆ). 'ನಂಟು ಗಾಣಿಸಂ' ಪರಾ. ೨. ಪ್ರೀತಿ ; ಪ್ರೇಮ : ನಂಟಂ ಬಯಸುತ್ತಿನಿಯನ ನಂಟ ಮಹಾತುರದಿನಪ್ಪಿ ಮೀಗೆ ಪುಳಕಿಸುತುಂ . . . ಜೋಡೆಯರ್ನೆರ ಯುತಂದೆಸೆದರ್ (ಉದ್ಭಟ. ೧೦-೧೧೩) ; ನನಗೂ ನಿನಗೂ ಅಂಟಿದ ನಂಟನ ಕೊನೆ ಬಲ್ಲವರಾರು ಕಾಮಾಕ್ಷಿಯೆ ! (ಸಹೀಗೀ. ೪೬-೯೬೧). **ನೆಂಟು :** ೧. ಸ್ತುತಿಯಿಲ್ಲ ನಿಂದೆಯಿಲ್ಲ ನೆಂಟಲ್ಲ [ಪಾಠಾಂ. ನಂಟಿಲ್ಲ, ನೆಂಟರಿಲ್ಲ] ಹಗೆಯಿಲ್ಲ ಅಚುಹಿಲ್ಲ ಮ ಚಿ ಹಿ ಲ್ಲ ತಾನೆಂಬ ನೆನಹಿಲ್ಲವಾಗಿ (ಆದವ. ೧೬೦-೨೮೫) ; ರಾಮಣ್ಣನ ನೆಂಟೂ ನಮಗೆ ಗಂಟುಬೀಳುತ್ತದೊ ಏನೋ (ಮಹಾಗ. ೩೩೧) ; ಅಕ್ಕನ ಹಗೆ ಭಾವನ ನೆಂಟು (ಗಾದೆ).

ನಂಟು ಮಾಡು, ನೆಂಟು ಮಾಡು=ಸಂಬಂಧವನ್ನು ಮಾಡು; ಬಾಂಧವ್ಯ ವನ್ನು ಬೆಳೆಸು : ವಧುವಂ ತಂದೀಯೆ ಮುನ್ನಿನ್ನ ಚಿತ್ರದೊಳಿರ್ದಂದದೆ ನಂಟು ಮಾಡಿ ಸಿರಿಯಿಂದೆನ್ನೊಳ್ ಸಮಂ ಮಾಳ್ಪಂ (ವರ್ಧಪು. ೬-೩೪) ; ನೀರೆಚ್ಚದೋವಿದವರ ಕಾಲ ಕುಂಟು ಮಾಡುವ ಬೇಲದಂತೆ ಕಂಟಕವನು ಕಾಣವರು ಕೆಲಂಬರು ನಂಟು ಮಾಡುವ ಮಾನ್ಯರಿಗೆ (ಪ್ರಭುಂಜ. ೧-೨೨) ; ಒಂದೇ ಗಂಡುದೇವರ ಒಕ್ಕಲಾಗಿದ್ದರೂ ಹೆಣ್ಣುದೇವರು ಬೇರೆ ಬೇರೆ ಯಾಗಿದ್ದರೆ ನೆಂಟು ಮಾಡುವುದುಂಟು (ಹುಟ್ಟಿಹ. ೨೩).

[ <ನಂಟು$_1$./ತಮಿ. ನಟ್ಪು, ನಣ್ಪು ; ತುಳು. ತೆಲು. ನಂಟು ]

**ನಂಟುಗಾಣಿಸು** (ಕ್ರಿ). ಹೊಂದಾಣಿಕೆಯನ್ನುಂಟುಮಾಡು; ಹೊಂದಿಸು: ಒಂಟಿದಂಡಿಗೆಯೊಳು ಹಲವು ದಂಡಿಗೆಯೊಳು ನಂಟುಗಾಣಿಸಿ ಶ್ರುತಿಮುಟ್ಟಿ ಮಂಟಪ ಗುಮುಗುಮುಗುಮ್ಮನೆ ಕೊರಳೆದೆಗುಂಟಾಗಿ ಹಾಯೆದೋಚಿದರು (ಭರತೇ. ೦೪-೧೩೬). [ ನಂಟು$_2$ + ಕಾಣಿಸು ]

**ನಂಟುಗೊಳುಹ** (ನಾ). ಹೊಂದಾಣಿಕೆಯನ್ನುಂಟುಮಾಡಿಕೊಳ್ಳುವಿಕೆ ; ಸಂಬಂಧವನ್ನು ಸ್ವೀಕರಿಸುವಿಕೆ ; ಸಮನ್ವಯ ಮಾಡಿಕೊಳ್ಳುವಿಕೆ : "ಸಾಮ ಎಂದೊಡೆ ವಿನಯದಿಂ ನಂಟುಗೊಳುಹ" (ನಾಟರಾ. ೪).

[ ನಂಟು$_2$ + ಕೊಳುಹ ]

**ನಂಟುತನ, ನೆಂಟುತನ** (ನಾ). = ನಂಟತನ : ಹರಿ ಕರಿಕಳಭದುರುಬಂಧುತ್ವ ಫಣಿ ಮುಂಗುಲಿಯ ನಂಟುತನ . . . ಇರ್ದುದು ಬಸದೊಳಾ ಮುನಿಯ (ಕೊರರಾ. ೧-೫-೪೩) ; ಕೂಳ ಬೆಮೆಯಲಿ ನಂಟುತನ ದಾಕ್ಷಿಣ್ಯಪರನಾಗಿ (ಮುದಿಭ. ೨೩) ; ಎಂದುಪಾಯದಿ ಮಮತೆ ನಂಟುತನ ತೋರಿ ಮುಂದು ವರಿಯಲು ; ಮನದಿ ಸಂದೇಹ ವಿೂರಿ (ಕವಿಪು. ೧೨-೧೫) ; ಆ ಕನ್ಯೆಯರ ಪಾಣಿಗ್ರಹಣ ಮಾಡುವುದರಿಂದ . . . ಆ ಸಾಮಂತರಿಗೂ ದೊಡ್ಡವರೊಡನೆ ನಂಟುತನ ಬೆಳೆಸಿದೆವೆಂಬ ಮಾನಗೌರವಗಳೂ ಉಂಟಾಗುತ್ತಿದ್ದುವು (ಶಾಂತಲಾ. ೯೬). **ನೆಂಟುತನ :** ನೆಂಟುತನ ಹೊಸೆವ ಕಾಲೂರ್ವುದುವೆ ಪಿರಿದು (ಕಾಲೂರ. ೩೯-೪೫). [ ನಂಟು$_2$ + – ತನ ]

**ನಂಟುಭಕ್ತಿ** (ನಾ). ಬಾಂಧವರ ಮೇಲಿರುವ ಮೋಹ : ಸಂಸಾರಬಂಧು ಗಳೆನ್ನವರೆಂದೊಡೆ ನಂಟು[ಪಾಠಾಂ. ಟ]ಭಕ್ತಿ ನಾಯಕನರಕ ಇಂತೆಂದುದು ಕೂಡಲಸಂಗನ ವಚನ (ಬಸವ. ೮೯) ; ಅಣ್ಣತಮ್ಮ ಹೆತ್ತಣ್ಣ ಗೋತ್ರ ವಾದರೇನು ಲಿಂಗಸಾಹಿತ್ಯವಿಲ್ಲದವರ ಎನ್ನವರೆನ್ನೆನಯ್ಯಾ ನಂಟುಭಕ್ತಿ ನಾಯಕನರಕ (ಬಸವ. ೭೧೩). [ ನಂಟು$_2$ + ಭಕ್ತಿ ]

**ನಂಟುವೊಚ್** (ನಾ). ನೆಂಟತನದ ಸಂಬಂಧ, – ಬಾಂಧವ್ಯ : ಈ ಅಪ ದೆಸೆಯಂ ಕಂಡೊಂದು ಬಕಂ ಬೆಳರ್ತು ಮುಂಗಾಣದೆ ತನ್ನ ನಂಟು ವೊಚ್ಚಿಯ ಮೀಂಗಳ್ಗೆ ಮುಂತೆ ಬಟ್ಟೆ ಯಾವುದೆಂದಾವಗಮಗಲದೆ ಚಿಂತಾ ಪರನಾಗಿರ್ಕುಂ (ರಾಮಾಶ್ವ. ೫೧-೨೫). [ ನಂಟು$_2$ + ಮೊಚ್$_3$ ]

**ನಂಟುವಳಿ** (ನಾ). ಬಾಂಧವ್ಯ ; ನಂಟತನ : ನಂಟುವಳಿ ಜನ್ನಿಪುದು ತತ್ಸತಿಯ ದೆಸೆಯಿಂ (ಅಂಬಿಕಾ. ೩೩-೨೩). [ ನಂಟು$_2$ + – ವಳಿ$_1$ ]

**ನಂಡುಲಿ** (ನಾ). (ಕರಾ) ಮಳೆ ಬಿದ್ದು ಮಣ್ಣು ಸ್ವಲ್ಪ ಹಸಿಯಾಗಿರು ವಾಗ ಬಿತ್ತುವುದು : ಇಷ್ಟು ಬೇಗನೆ ಮಳೆ ಬರುತ್ತದೆಯೆಂದು ಯಾರಿಗೆ ಗೊತ್ತು ಕಡುಲಿಯಂತೂ ತಪ್ಪಿತು. ಇನ್ನು ನಂಡುಲಿಗಾದರೂ ಬಿತ್ತಬೇಕು (ರೂಢಿ). 'ಕಡುಲಿ' ಪರಾ. [ ? ]

**ನಂತರ$_1$** (ನಾ). ತರುವಾಯೆಂದ ಕಾಲ : ಹರನ ಪದಂಗಳಿಗೆ ವಂದಿಸಿ ಸುರರು ನಂತರದಲ್ಲಿ ಗಿರಿಜೆಯ ಚರಣಸರಸಿಜಗಳನು ನಮಿಸುವರು (ಪಾರ್ವಕ. ೩೦).

[ < ಅನಂತರ$_1$ ]

**ನಂತರ$_2$** (ಅ). ತರುವಾಯ ; ಆಮೇಲೆ : ಕಲ್ಲು ಕಾಮಗಾರಿ ಕರ್ಚ ೨೦ ವರಹ ಕೊಟ್ಟುಯಿಧಾಳೆ ಬಾವಿ ತೀರಿದಲಿ ನಂತ್ರರ ದೋವಿಗಳಿಗೆ ವುಡುಗರೆ ೧೦ ಹ ಕೊಟ್ಟುಯಿಧಾಳೆ (ಮೈಆರಿ. ೧೯೨೯, ೯೬-೯; ಸು. 1764);

ಈ ವೆನೀಸಿಯನರು . . . ಪುನಃ ತನ್ನ ಆಸ್ಥಾನಕ್ಕೆ ಹಿಂದಿರುಗಿ ಬರುವ ಭರವಸೆಯನ್ನು ಅವರಿಂದ ಪಡೆದ ನಂತರವೇ . . . ಏರ್ಪಾಡು ಮಾಡಿಸಿದನು (ಪ್ರವಾಇ. II, ೮). [ < ಅನಂತರ$_2$ ]

**ನಂದ** (ನಾ). ೧. ಸಂತೋಷ ; ಆನಂದ ; ಸಂಖ. 'ನಂದವಿಡಂ' ಪರಾ. ೨. ಕೃಷ್ಣನ ಸಾಕುತಂದೆ ; ನಂದಗೋಪ : ನಂದಾದಿಗೋಪರಿಂದು ಪುರಂದರಮಹವೆಂದು ಹರ್ಷದಿಂ ಸಂಭ್ರಮಿಸಲ್ (ಜಗವಿ. ೪-೭೬) ; ನಂದ ನಿತ್ತಲು ಕೇಳ್ದು ವಸುದೇವನ ತದುಕ್ತಿಗಳ ನೊಂದು ಶಂಕಿಸಿ ಚಿತ್ತದೊಳಗೆ ಮುಕುಂದನನು ಮಚಿಪೊಕ್ಕು ಮರಳಿದು ಬಂದನಾ ಮುಮ್ಮಾರ್ಗದಿಂದ ನಿಜಾಲಯಕ್ಕೊಲಿದು (ನಿಭಾಗ. ೧೦-೩-೨೭); ಮಂದಗಮನೆ ಇವನಾರೆ ಪೇಳಮ್ಮ . . . ನಂದನ ಕಂದ ಮುಕುಂದ ಕಾಣಮ್ಮ (ಪುರಂದ. ೨-೭೦-೧). 'ನಂದನಂದನ' ಪರಾ. ೩. ಚಾಣಕ್ಯನಿಂದ ರಾಜ್ಯವನ್ನು ಕಳೆದುಕೊಂಡ ಪಾಟಲೀಪುತ್ರದ ಒಬ್ಬ ರಾಜ ಮತ್ತು ಅವನ ವಂಶದ ಹೆಸರು : ಪಾಟಲೀಪುತ್ರವೆಂಬುದು ಪೊಟಲದನಾಳ್ವಂ ನಂದವಂಶದೊಂ ಪದ್ಮನೆಂಬೊಂ (ವಡ್ಡಾರಾ. ೧೮೦-೧೩) ; ನಂದರಿಗೆ ಮಂತ್ರಿಯಾದ ರಾಕ್ಷಸನು ಚಂದ್ರಗುಪ್ತನ ದೆಶೆಯಿಂದ ಭೀತನಾಗಿ ಆ ರಾಜ್ಯದಲ್ಲಿ ನಿಲ್ಲಲಶಕ್ಯವಾದ ಕಾರಣ ಇಲ್ಲಿಗೆ ಬಂದನೋ ! (ಮುದ್ರಾರಾ. ೨೭೦). ೪. ಕುಬೇರನ ನವ ನಿಧಿಗಳಲ್ಲಿ ಒಂದು. ೫. [ಗಣಿತ] ಒಂಬತ್ತು ಎಂಬ ಸಂಖ್ಯೆಯ ಸಂಕೇತ : ನವ, ಪದಾರ್ಥ, ರಂಧ್ರ, ನಂದ . . . ನಾಟ್ಯಾಂಗ ಇಂತಿನಿತುಂ ೯ಕ್ಕೆ ಪೆಸರು (ವ್ಯವಹಾ. ೧೦-೩). ೬. [ಛಂದ] ಒಂದು ವರ್ಣವೃತ್ತದ ಹೆಸರು : ದಿನೇಶನಿಂದತ್ತ ನೀಲಕಂಠರ್ ತನೂದರೀ ನಿಲ್ಕೆ ನಂದ[ಹಾಂ. ನಿಲ್ಕನಂಗ]ಮಕ್ಕುಂ(ಛಂದೋಂಬು. ೨-೭೧). [ ಸಂ. ]

**ನಂದಕ** (ನಾ). ೧. ಸಂತೋಷಗೊಳಿಸುವಿಕೆ ; ಆನಂದಗೊಳಿಸುವಿಕೆ. ೨. ಸಂತೋಷ ; ಆನಂದ. ೩. ಕತ್ತಿ ; ಖಡ್ಗ. ೪. ವಿಷ್ಣುವಿನ ಕತ್ತಿ, ಖಡ್ಗ : ನಂದಕಮಂ ದಿವಿಜಗಣಾನಂದಕಮಂ ಕೊಂಡು ಚೇದಿಪತಿಯೊಳ್ ಪೊಣರ್ದಂ ಮಂದರಧರಂ (ಜಗವಿ. ೭-೯೭) ; ಘನಕರಿಗಿಕ್ಕಿದಂಕುಶಮಿದಬ್ಬ ಮುಖಂದನ ನಂದಕಾಯುಧಂ (ರಾಜಶೇ. ೮-೧೦೦) ; ಓಹೋ, ಈ ನಂದ ಕಾಸಿಯು ಬಂದಿತು (ಭಾಸನಾ. ೩೧). ೫. ಕಪ್ಪೆ. ೬. ಕೃಷ್ಣನ ಸಾಕುತಂದೆ. ೭. [ಛಂದ] ಒಂದು ವರ್ಣವೃತ್ತದ ಹೆಸರು : ಬಂದು ಪಣ್ಣಿಯೊಳ್ ನಿಂದೊಡಾಲಗಂ ಸುಂದರಾಂಗಿ ಕೇಳ್ ಸಂದ ನಂದಕಂ (ಛಂದೋಂಬು. ೨-೭೭). [ ಸಂ. ]

**ನಂದಕಿ** (ನಾ). = ನಂದಕ ೪ : ಭವನ ಶೂಲದ ಗಾಯದಿಂದವೆ ಕವಲುದಲೆಯಾದವರು ಬಲು ಮಾಧವನ ನಂದಕಿಯಿಂದ ಮೂಳೆಗಳೆದ್ದ ಬೆನ್ನವರು (ಕೌಶಿರಾ. ೨೦-೧೩). [ ಸಂ. ನಂದಕ ]

**ನಂದಗಿರಿ** (ನಾ). ಒಂದು ನಾಡಿನ ಹೆಸರು ; P ಈಗಿನ ಕೋಲಾರ ಜಿಲ್ಲೆಯ ನಂದಿಬೆಟ್ಟದ ಸುತ್ತುಮುತ್ತಲಿರುವ ಪ್ರದೇಶವಿರಬಹುದು : ಮಹಾರಾಜಾಧಿರಾಜ ಕೊಳಾಲಪುರವರೇಶ್ವರ ನನ್ದಗಿರಿನಾಥಂ (ಎಕ. III, ನಂಜನ. ೧೩೩-೩; ಸು. 970) ; ಮಹಾರಾಜಾಧಿರಾಜಂ ಕೋಳಾಳಪುರ ವರೇಶ್ವರಂ ನನ್ದಗಿರಿನಾಥಂ ಜಯದುತ್ತರಂಗಂ ಗಂಗಚೂಡಾಮಣಿ . . . ವಿಕ್ರಮಾದಿತ್ಯದೇವರ್ (ಸೌಇಇ. XX, ೩೩-೩; 1066) ; ಮಹಾರಾಜಾಧಿರಾಜ ಪರಮೇಶ್ವರಂ ಕೋಳಾಲಪುರವರೇಶ್ವರಂ ನಂದಗಿರಿನಾಥಂ ಮದ ಗಜೇಂದ್ರಲಾಂಛನಂ (ಎಕ. VII, ಶಿವಮೊ. ೯-೮೬; 1122). [ ನಂದ + ಗಿರಿ$_1$ ]

**ನಂದಗೋಕುಲ** (ನಾ). ೧. ಯಮುನಾನದೀತೀರದಲ್ಲಿರುವ ಒಂದು ಸ್ಥಳದ ಹೆಸರು ; ಕೃಷ್ಣನ ಸಾಕುತಂದೆಯಾದ ನಂದಗೋಪನು ಇದ್ದ ಸ್ಥಳ : ಉತ್ತರಿಸಿ ಯಮುನೆಯನು ಹರಿಯನು ಹೊತ್ತುಕೊಂಡುರದೊಳಗೆ ಹೋಗಿ ಯದೂತ್ತಮನು ನಟ್ಟಿರುಳು ಹೊಕ್ಕನು ನಂದಗೋಕುಲವ (ನಿಭಾಗ. ೧೦-೪-೧೬). ೨. (ಅಲಂ) (ಮಕ್ಕಳಿಂದ ತುಂಬಿ) ಆನಂದಮಯವಾದ ಸಂಸಾರ, ಕುಟುಂಬ : ಪಂತರವಾಡೇ ನಂದಗೋಕುಲವಾಗಬಹುದು (ದೀಪಹ. II, ೨೦೯) ; ಅವರ ಸಂಸಾರ ನಂದಗೋಕುಲ ವಾಗಿದೆ (ಊಧಿ). [ ನಂದ + ಗೋಕುಲ ]

**ನಂದದೀವಿಗೆ** 'ನಂದಂ' ಪರಾ.

**ನಂದನ** (ನಾ). ೧. ಸಂತೋಷಗೊಳಿಸುವಿಕೆ ; ಆನಂದಗೊಳಿಸುವಿಕೆ. ೨. ಆನಂದ ; ಸಂತೋಷ : ನಂದನನಾಮದ ನಂದನನಂತಪ್ಪ ನಂದನಂ ಜನಿಕೆ ತಮಗೆಂದು ಧರೆಯೊಳಾನಂದದಿಂ ಬಯಸದವರಿಲ್ಲಾ (ವರ್ಧಪು. ೧೨-೧೦೧) ; ಶಂಕರ ನಿಮ್ಮ ಶ್ರೀಪದವ ಸಂದು ನಿಜದಿಂ ಧ್ಯಾನಿಸುವುದೇ ನಂದನಂ ವ್ಯಾಮೋಹದಿಂ ಘನವೆಂದು ಶಂಕರದಾಸಿ ಪೇಳಿದ ಜಡೆಯ ಶಂಕರಗೆ (ಶಂಕದಾ. ೧೬-೧೦). 'ಚೇತೋನಂದನ' ಪರಾ. ೩. ಮಗ ; ತನಯ ; ಪುತ್ರ : "ತನಯಂ ಸ್ತನಂಧಯಂ ತೋಕಂ ಸುತಂ ಸೂನು ತನುಜನಾತ್ಮಜನಪತ್ಯಂ ತುಕ್ ಪ್ರಸೂತಿ ನಂದನನೆನಲು ಪುತ್ರನೆನಿಸಿಕ್ಕು" (ಮಂಗರಾ. ೯೦-೯) ; ನಿನಗೆ ಭರತಾವನೀತಲಮನಿತನಿತುಮನಾಳ್ವನೊರ್ವ ನಾದಪ್ಪಂ ನಂದನಂ (ಆದಿಪು. ೮-೨೮) ; ನಿಜನಂದನರಂ ನೀನಿರೆ ನೃಪೇಂದ್ರ ಕೊಲ್ವರುಮೊಳರೇ (ಅಜಿಪು. ೧೦-೩೮) ; ನಂದನಜನ್ಮೋತ್ಸವದೊದವಿಂದಂ ಪರಿತಂದು ಪೂರ್ಣಪಾತ್ರಮ ತ್ಯಾನಂದವೊದವಲ್ಕೆ ಪರಿಜನಮೆಂದೆಳೆಕೊಳಿಗೊಳ್ವ ಸೈಪು ಸಮನಿಸಿದುದೋ (ಕಾದಂಪೂ. ೩೩೩) ; ಆ ಕನಸುಗಳನನು ಕ್ರಮದಿಂ ಕೇಳ್ದು . . . ತತ್ಫಲಮನಜುಪಲಂದಿಂತೆಂದಂ . . . ಮೃಗ ರಾಜನಿಂ ಪುರುಷಸಿಂಹಂ ಪುಟ್ಟುಗುಂ ನಂದನಂ (ಜಗವಿ. ೨-೯೩) ; ನಂದನನಕ್ಕುಂ ನಮಗೆನ್ನೆಂದಧಿಪನವೋಘವಚನದಿಂ ವನಿತೆ ಮಹಾನಂದವ ನಾಂತಂಬುದರವದಿಂದಾನಂದಿವ ಮಾಯೂರವನಿತೆಯೊಲಾದಳ್ (ಚಂದ್ರಪು. ೧೨-೨೦) ; ಆ ಜಂಪತಿಗಳ್ಗೆ ಕಳಾರಾಜಿತಮತಿಗಳ್ಗೆ ತತ್ಸಹಸ್ರಾರದ ವಿಭ್ರಾಜಿತಸುರವರನುರುತರತೇಜಂ ನಂದನಸಮಾಖ್ಯನಂದನನಾದಂ(ವರ್ಧಪು. ೧೨-೧೦೨ ; ನಂದನನೆಳೆಮೆಯ ಕೈಮೆಯನಂದಿಂಗಾ ನಂದಗೋಪನಾಲಿಸಿ ನಲಿದಂ (ಜಗವಿ. ೪-೧೯೪). 'ನಂದನಂದನ' ಪರಾ. ೪. ಇಂದ್ರನ ತೋಟ, ಉದ್ಯಾನವನ : ಸಾರಸಹಂಸಕೋಕಿಳಕುಳಧ್ವಾನೋತ್ಕರಂ ಚೆಲ್ವನಾಯ್ತು ಕರಂ ಸ[ಕ್ರ] ನಿಳಿಂಪದಂಪತಿಗಳಿಂದಾ ನಂದನಂ ನಂದನಂ (ಶಂಪಭಾ. ೩-೮೦) ; ನಂದನದಂದದಿಂದೆಸೆವಿನಂ ಬನವುಂ ಮನದಟ್ಟಜಿಂದೆ ಸಂಕ್ರಂದನಸನ್ನಿಭಂ . . . ವಿಶ್ವನಂದಿವಿಭು ಮಾಡಿಸಿದಂ (ವರ್ಧಪು. ೨-೨) : ವನ ಇಂದ್ರನ ನಂದನದಂತಿದೆ (ಶಾಂತಲಾ. ೯೦) ; ಇನ್ನು ಎಲ್ಲಿಗೋಟ ನಂದನದ ತೋಟ! (ಗರಿ. ೯೯-೧೨). 'ನಂದನವನ' ಪರಾ. ೫. ತೋಟ ; ಉದ್ಯಾನವನ : ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗಳ್ಗಾಗರವಾದ ಮಾನಸರೆ ಮಾನಸರಂತವರಾಗಿ ಪುಟ್ಟಲೇನಾಗಿಯುಮೇನೊ ತೀರ್ದಪು[ದೆ] ತೀರದೊಡಂ ಮಱುಂಬಿಯಾಗಿ ಮೇಣ್ ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ವನವಾಸಿದೇಶದೊಳ್ (ಶಂಪಭಾ. ೪-೨೯) ; ಸುಳಿವಂಚೆಗಳಿಲ್ಲದುದಿಲ್ಲ ನಂದನಂ (ಜಗವಿ. ೨-೦೦) ; ಪ್ರಚುರಚಂದನನಂದನ ಗಂಧದಿಂ ದಿಶಾಪರಿಧಿಯನೆಯ್ದೆ ಬಾಸಣಿಸುತಿರ್ಪುದು ಸುಗಂಧಿಮಂಡಲ ಮಿಳಾರಮಣೀರಮಣೀಯಕುಂಡಲಂ (ಚಂದ್ರಪು. ೩-೧೦) ; ಮರುಭೂಮಿ ನಗುವ ನಂದನವಪ್ಪುದಿದನೀಂಟೆ (ಶ್ರೀರಾಮಾ. ೧೯-೩೩೭). ೬. ೫ : ರಾಜ ಕೀರಚ್ಛದಾನಿಳಲೋಲತ್ಕಣಿಶಾಳಿಶಾಳಿ ಜನಚೇತೋನಂದನಂ ನಂದನಂ (ಜಗವಿ. ೨-೨) ; ಘನತರಭದ್ರಶಾಳದಿನಿತ್ತೆಡಮಾಡದೆ ನಂದನಕ್ಕೆ ನಂದನದಿನಡೊಂದು ಬೇಗದೊಳೆ ಸೌಮನಸಕ್ಕೆ ತಗುಳ್ದು ಮತ್ತೆ ಸೌಮನಸದಿನೆಯ್ದೆ ಪಾಂಡುಕವನಕ್ಕದರ್ತತ್ತು ಸುರೇಂದ್ರವಾರಣಂ (ಚಂದ್ರಪು. ೧೨-೧೦೯). ೬. ಅರುವತ್ತು ಸಂವತ್ಸರಗಳಲ್ಲಿ ಇಪ್ಪತ್ತಾರನೆಯದು : ಮತ್ತಮಾ ವರುಷವೇ ಪ್ರಭವ ವಿಭವ . . . ನಂದನ . . .

ಅಕ್ಷಯವೆಂದೆಜವತ್ತು ತೆಜಿನಾಗಿಹುದು (ವಿವೇಕ. ೩೩೦) ; ನಂದನಸಂವತ್ಸರದ ಪಾಲ್ಗುಣ ಶು ೧ ಲು . . . ಗುಡಿಯು ಜೀರ್ಣಉದರ ಮಾಡಿದ ವಿವಾರ (ಎಕ. III (R), ಸಂಜನ. ೩೩೭-೨; 1663). ೭. ಶಿವ. ೮. ವಿಷ್ಣು. ೯. [ಜೈನ] ರುಚಕಾಚಲದ ಜಿನನಿಲಯದ ಎಂಟು ಶಿಖರಗಳಲ್ಲಿ ಒಂದು : ಜಿನನಿಲಯರುಚಿರರುಚಕಾಚಲದ ಪೂರ್ವದಿಗ್ಭಾಗದ ವೈಡೂರ್ಯ ಕಾಂಚನಕನಕಾರಿಷ್ಟದಿಕ್ಸ್ವಸ್ತಿಕನಂದನಾಂಜನಮೂಲಕಂಗಳೆಂಬೆಂಟುಂ ಕೂಟಂಗಳೊಳ್ (ಆದಿಪು. ೬-೩ ವ). ೧೦. [ಸಂಗೀತ] ಒಂದು ರಾಗದ ಹೆಸರು. [ ಸಂ. ]

ನಂದನಂದನ (ನಾ). ನಂದಗೋಪನ ಮಗ ; ನಂದಕುಮಾರ ; ಕೃಷ್ಣ : ಅಂತು ವಿಜಯಮಂಗಳಂ ನೆಗಟ್ ಗೋಕುಲಮಂ ಪೊಕ್ಕು ನಂದನಂದನಂ ಗೋಪಾಲವಿನೋದಮ ನಿತ್ಯೋತ್ಸವಮಾಗೆ ಸುಖದಿಂದಿರ್ದನ್ನೆಗಂ (ಜಗವಿ. ೪-೫೮ ವ) ; ನಂದನಂದನಸನ್ನಿಭನು ಸಾನಂದದಿಂದಲಿ ನಮ್ಮುವನು ಕೃಪೆಯಿಂದ ಸಲಹಂಗೆ ದೇವ ಜಗದಾರಾಧ್ಯ ಗುರುರಾಯ (ಕುಮ್ಮಾ. ೧-೦೨). [ ನಂದ + ನಂದನ ]

ನಂದನಚರ (ನಾ). [ಜೈನ] ಹಿಂದಿನ ಜನ್ಮದಲ್ಲಿ ಮಗನಾಗಿದ್ದು ಸಂಸಾರ ಚಕ್ರದಲ್ಲಿ ಸುತ್ತುತ್ತಿರುವವನು : ಅರಸನುಮಾಗಳ್ ನೆತ್ತದ ಭರದಿಂ ಕೊಳ್ಳೆನುತುಮಿಕ್ಕೆ ನವಿಲಂ ಕೊಳ್ಳೆಂದರೆನುತ್ತೆ ಪಿಡಿದುದಂಬಾಚರಿ ಕುರ್ಕುರಿನೊಂದು ಬೀಟ್ವ ನಂದನಚರನಂ (ಯಶೋಚ. ೩-೯೨). [ ಸಂ. ]

ನಂದನಬನ (ನಾ). = ನಂದನವನ ೨ : ಕಾಗೆ ನಂದನಬನದೊಳಗಿರ್ದರೇನು ಕೋಗಿಲೆಯಾಗಬಲ್ಲುದೇ ಹೇಳಾ (ಬಸವ. ೯೮) ; ಹಿರಿಯ ಜಕ್ಕಿಯುಂವೆದು ಕಟಿಯ ಹಿಂದಣ ನಂದನಬನದೊಳಗೆ ಗವೆ ಸಲಗೆ ಖ ೨ (ಎಕ. II (R), ೫೩೫-೮; 1250). [ ನಂದನ + ಬನ ]

ನಂದನವನ (ನಾ). ೧. ಇಂದ್ರನ ವನ, - ಉದ್ಯಾನವನ : ನಂದನವನದೊಳಗೇನೇಂ ಬಂದಪೊ ಮರನೆಂದು ಕಂತು ಬೆಸಗೊಳೆ ವಹಾವಿಂ ಬಂದಿರ್ದುವೆಂದು ಬಿನ್ನವಿಪಂದದೆ ಕೋಗಿಲೆಗಳುಲಿದುವಾವ್ರದ್ರುಮದೊಳ್ (ಆದಿಪು. ೬-೦೩) ; ನಂದನವನಮಧ್ಯದ ಕೊಳದಿದಗಲದ ಹಂಸಮಿಥುನವೆನೆ . . . ನಲಿಯುತಿರ್ದರಾ ದಂಪತಿಗಳ್ (ಜಗವಿ. ೨-೫೨) ; ನಂದನವನಸಂಭವಹರಿಚಂದನಸಂತಾನ . . . ಕುಸುಮಕೋಟಿಯಂ (ಪುಷ್ಪಪು. ೧೧-೯೪) ; ನಮ್ಮ ದೊರೆ ನಂದನವನಕ್ಕೆ ಬೇಂಟೆವೋಗಿ ತಂದಿರ್ದನೀ ಕಂದರ್ಪನಂದನವನನ್ ! (ಚಂದ್ರಸ. ೩೯-೦). ೨. (ಸುಂದರವಾದ) ತೋಟ ; ಉದ್ಯಾನವನ : ಬರಿಸುವನಿಂದು ನಂದನವನಾಂತರದಲ್ಲಿಗೆ ಕಾಂತನಂ ಸಮಾಶರಿಸುವೆನಂತನಂತಸುಖಸಂಗತಮಂಗಳಕಾರಣಂಗಳಂ (ಕವಿರಾ. ೨-೧೦೦೪) ; ನೀನುವವುನುಂ ಕಿಟಿಯಂದೊರ್ವರುಪಾಧ್ಯಾಯರ ಪಕ್ಕದೊಳೋದುಮದು ನಂದನವನದೊಳಗೆ ನೀನೆನ್ನ ಪುಣ್ಡ ಪ್ರತಿಜ್ಞೆಯಂ ನೆನೆದಾ (ವಡ್ಡಾರಾ. ೦೨೫-೩) ; ನಂದನವನಪವನಂ ಬಟಿವಂದೊಡಗೊಂಡೊಯ್ದು ಪುಗಿಸೆ ಬನಮಂ ಪುಗಲೆಂಬೊಂದನ್ಯಭೃತಕ್ವಾಣಿತಿವಂದಂತಾಯ್ತುತನು ಬೆಸಸೆ ಕುಸುಮಾವೋದಂ (ಶಾಂತಿಪು. ೮-೩) ; ತ್ರಿಕಾಲಂ ದೇವತಾರ್ಚನಂಗೆಯ್ಯುದಕ್ಕಂ ದೇವರ್ಗ್ಗೆ ನಂನ್ದನವನಂ ಮಾಟ್ಟುದಕ್ಕಂ . . . ಬ್ರಹ್ಮಲಿಂಗಿಭಟರ್ಗ್ಗೆ ಕೊಟ್ಟುದು (ಮ್ಯಆರಿ. ೧೯೪೭, ೨೮-೦೭ ; 1032) ; ಆ ದ್ವಿತೀಯ ಮುನೀಶ್ವರ ನಗ್ರಮುನೀಶ್ವರಾದೇಶದಿಂ ನಂದನವನೋದ್ದೇಶದೊಳಿರ್ದ ಜನ್ಮಾಂಧಕಿಯಲ್ಲಿಗೆ ಬಂದು ಮುಂದೆ ನಿಂದು (ಸುಕುಮಾ. ೫-೨೩ ವ) ; ನಂದನವನಂಗಳಂ ಮಾಕಂದಮಹೀಜಾತರಂಜಿತೋದ್ಯಾನಗಳಂ ಸೌಂದರತೆವಡೆದು ತೋಱುವ ನಂದಿಗ್ರಾಮಕ್ಕೆ ಬಂದನಾ ನೃಪತೆನಯಂ (ಪುಣ್ಯಾಸ್ರ. ೩-೯). [ ನಂದನ + ವನ ]

ನಂದನವಿಮಾನ (ನಾ). [ಜೈನ] ಸ್ವರ್ಗಲೋಕದಲ್ಲಿರುವ ಒಂದು ಸ್ಥಳದ ಹೆಸರು : ವರಾಹಾರ್ಯನುಂ ನಂದನವಿಮಾನದೊಳ್ ಮಣಿಮಕುಟಕೇಯೂರಮಣಿಕುಂಡಲವಿಭೂಷಣನಾಗಿ ಮಣಿಕುಂಡಲನೆಂಬೊಂ ದಿವಿಜನಾದಂ (ಆದಿಪು. ೫-೭೦ ವ). 'ವಿಮಾನ' ಪರಾ. [ ನಂದನ + ವಿಮಾನ ]

ನಂದನಾವಲಿ, ನಂದನಾವಳಿ (ನಾ). ವನಗಳ ಗುಂಪು, - ಸಮೂಹ : ಊರ್ಜಿತವಸಂತಂ ಸಂತತಂ ನಂದನಾವಲಿಗೆಲ್ಲಂ ರತಕೇಳಿರಾಗವನಿತಂ ಸ್ತ್ರೀಪುಂವ್ರಜಕ್ಕೆಲ್ಲಮುಜ್ಜ್ವಲಚಂದ್ರಾತಪವೊರ್ಮೆಯುಂ ರಜನಿಜಾತಕ್ಕೆಲ್ಲಮಾ ದೇಶದೊಳ್ (ಜಗವಿ. ೨-೩). ನಂದನಾವಳಿ : ಕರಜಳಧರಕಳಧೌತೋತ್ಕರವರ್ಷದೆ ವಂದಿ ನಂದ[ನಾ]ವಳಿಗಳ ವಿಸ್ತರಿಪುವೆನೆ ದಾನಮುಖಿ ಳೋರ್ವ್ವರೆಗೆ ವಿಚಿತ್ರೋಕ್ತಿ ರೂಪವಿದ್ಯಾಧರಿಯ (ಸೌಇಇ. XX, ೯೯-೩೭ ; 1076 ?). [ ನಂದನ + ಆವಲಿ ]

ನಂದನಾವಳಿ 'ನಂದನಾವಲಿ' ನೋ.

ನಂದನೆ (ನಾ). ಮಗಳು ; ತನುಜೆ : "ವೇಣ್ ದುಹಿತೆ ನಂದನೆ ಪುತ್ರಿ ಸುತೆಯನಿಕ್ಕುಂ" (ಮಂಗರಾ. ೯೦-೯) ; ಈ ಭುಜಾದಂಡಮುಂ . . . ಈ ಧನುರ್ದಂಡಮುಮುಳ್ಳಿನಂ ದ್ರುಪದನಂದನೆ ಸಂಧಿಯನಾಗಲೀವೆನೇ (ಗದಾಯು. ೦-೭೩) ; ಕಮಲಭವ ಜಗವಜೀಯ ನಂದನೆಯ ಐದಯನು ನೆಟ್ ಮಾಡಿಯರವೆಣ್ಣಾದನೀಶ್ವರನಿಂದ್ರಗಿಂದ್ರರ ಹಾದಿಯದು ನಗೆಯಿ ತೃಣವರನು ಹೇಳಲೇನೆಂದ (ತೊರಆ. ೦-೫-೩೭) ; ನಂದನೆ ನೊಂದವಳಂ ದೊಲ್ದಿಂದುಧರಂ ಪಿಡಿದು ನೆಗಪಿ ನಿಜಕರದಿನವಳ್ಗಂದಣ್ಣೆ ವಾಲನೀಂಟದಂ (ವೃಷವಿ. ೯-೮೨). [ ಸಂ. ನಂದನಾ ]

ನಂದನೋತ್ಕರ (ನಾ). = ನಂದನಾವಲಿ : ಶರತ್ಪವನತಾಪದಿಂ ಕೊರಗಿಕೂಡೆ ಕೋರೈಸಿದಾ ನರೇಶ್ವರವಧೂಕದಂಬಕಮನಾಚುಸಲ್ವಾಗಳಬ್ಜರೇಣುಗಳನೆತ್ತಿಬಂದುದಿದಿರ್ವರ್ಪವೋಲ್ ನಂದನೋತ್ಕರಂಬಿಡಿದು ಮಾರುತಂ ಚಳತರಂಗೆಯಿಂ ಗಂಗೆಯಿಂ (ಆದಿಪು. ೦೦-೫೩). [ ನಂದನ + ಉತ್ಕರ ]

ನಂದಯಂತಿ (ನಾ). [ಸಂಗೀತ] ಒಂದು ರಾಗದ ಹೆಸರು : ಗಾಂಧಾರಿ ರಕ್ತೋಗಾಂಧಾರಿ . . . ನಂದಯಂತಿ ಕರ್ಮಾವ್ಯಭಿಚಾರಿಣಿ ಕೌಶಿಕಿಯೆಂಬ ಹತ್ತು ರಾಗಂಗಳು ಮಧ್ಯಮಗ್ರಾಮದಿಂ ಪುಟ್ಟಿದವು (ವಿವೇಕ. ೨೩೩). [ ಸಂ. ನಂದಯಂತೀ ]

ನಂದವರ್ತಿ (ನಾ). = ನಂದಿಬಟ್ಟಲು : ನಂದವರ್ತಿಯನೊಲಿವನಮ್ಮ ಶಂಕರನೆಂಬ ಮುಂದ್ಯೆಪ ಕಂಪೆ ಸಾಲ್ವುದು ಶಿಶಿರರಂಗೇಬ (ಬಸರ. ೭-೫೩). [ <ಸಂ. ನಂದ್ಯಾವರ್ತ ]

ನಂದವಾಡಿಗೆ (ನಾ). ಒಂದು ಊರಿನ ಹೆಸರು: ನವಿಲೆಯ [ಜಟಿ]ಯ ಸಂಕರದೇವಾಲಯಮುಮಂ ನನ್ದವಾಡಿಗೆಯೊಳ್ ಶ್ರೀನಾಗಲೇಶ್ವರಮುಮಂ(೦) ನಲ್ಲಿಯ ಮಟಮುಮಂ (ಸೌಇಇ. XI-1, ೧೦೩-೨೭ ?). [ ? ]

ನಂದವಿಡು (ಕ್ರಿ). ಸಂತೋಷಗೊಳಿಸು ; ಆನಂದಪಡಿಸು : ಅಂದು ಗುರುಮನವೊಲಿದು ಪಾರ್ಥನ ನಂದವಿಟ್ಟನು ತನ್ನ ವಿದ್ಯಾವೃಂದವನು ತಾನೀವೆನೆನುತಲಿ ದ್ರೋಣ ಹರುಷಿಸಿದ (ಸಂಭಾ. ೧೯-೦೯). [ ನಂದ + ಇಡು₁ ]

ನಂದವಿಲ್ಲುಡಿ (ನಾ). ಒಬ್ಬಾತನ ಹೆಸರು : ನನ್ದವಿಲ್ಲುಡಿಯರಾ ಮಗನೆ ಪಲಿವಜ್ (ಎಇ. IX, ೨೦-೬ ; 800). [ ? ]

ನಂದಳಿಕ 'ನಂದು' ಪರಾ.

ನಂದಾಉಳ 'ನಂದು' ಪರಾ.

ನಂದಾತ್ಮಜ (ನಾ). = ನಂದನಂದನ : ನಾರಾಯಣ ನಾಗಶಯನ ನಂದಾತ್ಮಜ ಮಾರಜನಕ ಮಂಜುಳಾಂಗ ಸಾರಸನಯನ ಸಕಲಲೋಕೇಶ್ವರ ಸಾರಿದೆ ಸಲಹೆನ್ನನೊಲಿದು (ಕತಹಾ. ೭೦-೩). [ ನಂದ + ಆತ್ಮಜ ]

ನಂದಾದೀಪ 'ನಂದು' ಪರಾ.

ನಂದಾದೀಪ್ತಿ 'ನಂದು' ಪರಾ.

**ನಂದಾದೀವಿಗೆ** 'ನಂದು' ಪರಾ.

**ನಂದಾದ್ಯುತಿ** 'ನಂದು' ಪರಾ.

**ನಂದಾಪುರ** (ನಾ). ಒಂದು ಊರಿನ ಹೆಸರು ; ಈಗಿನ ಮಂಗಳೂರಿನ ಸಮೀಪದ ಒಂದು ಹಳ್ಳಿ, ಹಿಂದೆ ಇದು ನಂದಅರಸರ ರಾಜಧಾನಿಯಾಗಿತ್ತು : ನನ್ದಾಪುರದೊಳ್ ಕೇತೇಶ್ವರಮುಮಂ ಕೋಹಳ್ಳಿಯೊಳ್ ದಾನವಿನೋದತ್ರೈಪುರುಷದೇವರ ಸಾಲೆಯುಂ . . . ಮಾಡಿಸಿ (ಕರ್ನಾ. XI-1, ೧೦೪-೩೦ ; ?). [ ನಂದ + ಪುರ ]

**ನಂದಾಬೆಂಕಿ** 'ನಂದು' ಪರಾ.

**ನಂದಾಬೆಳಕು** 'ನಂದು' ಪರಾ.

**ನಂದಾವನ** 'ನಂದು' ಪರಾ.

**ನಂದಾವಳ** 'ನಂದು' ಪರಾ.

**ನಂದಾವುಳ** 'ನಂದು' ಪರಾ.

**ನಂದಾವೆಳಕು** 'ನಂದು' ಪರಾ.

**ನಂದಿ** (ನಾ). ೧. ಸಂತೋಷಗೊಳಿಸುವವನು ; ಮಗ. ೨. ಸಂತೋಷಪಡುವವನು : ಅಂತು ದುಶ್ಶೀಲ ದುರಾಚಾರ ದುರ್ಯಶೋನಂದಿಯಾದ ವಿಶಾಖನಂದಿ . . . ಪರಿಭ್ರಮಣಪರಿಣತನಾಗಿ ತೊಲಲ್ದಂ (ವರ್ಧಪು. ೨-೩೬ ಪ). ೩. ಶಿವನ (ವಾಹನವಾದ) ಒಬ್ಬ ಅನುಚರ ; ಬಸವ : "ನಂದಿ ತಂಡುಪಕ್ಕಂ" (ಮಂಗರಾ. ೩-೬೪) ; ಏಱ[ದೆ] ನಂದಿ[ಯನಾ] . . . ಭೂತನಾಥಂ ಬಂದಂ (ಶಂಶಧಾ. ೧೨-೦೩೪) ; ನಾದಪ್ರಿಯ ನಂದಿಯ ನೇಱಿಕೊಂಡು ಅಶೀತನ ಮೇಲೆ ಆನಂದಸಿಂಹಾಸನವಿಕ್ಕಿ ಕುಳ್ಳಿತ್ತ ಕೂಡಲಸಂಗಮದೇವರ ದೇಪತ್ಯ ಕಟ್ಟಿತ್ತು (ಬಸವ. ೯೪೦) ; ಆ ರಜತಗಿರಿ ಶಿಖರದೊಳ್ ಮದನಾರಿಯುಂ ಗೌರಿಯುಮುಚಿತಲೀಲಾರಚಿತಸುಖ ಸಂಕಥಾಪ್ರಸಂಗಕೌತುಕದೊಳಿರಲಂ ವೀರ ವೀರಕ ನಂದಿರೇಣುಕ . . . ಪ್ರಮಥರೋಲ್ಗಿಪ ಸಮಯದೊಳು (ಬಸವು. ೧-೩೩) ; ನಂದಿಯನು ಏಱಿದನ ಜುವಿರನ ಸೂಡಿದನ ಕಂದನ ಬೇಡಿ ನಲಿದಾನು ನೆಗವುತ್ತ ಮುಂದೆ ಪೇಳುವೆನು (ಸರ್ವಜ್ಞ. ೧) ; ಶಂಕರನ ಮುಂದೆ ನಂದಿಯೂ ಅಷ್ಟು ವಿಧೇಯತೆ ಇಂದ ನಮ್ರತೆಯಿಂದ ನಿಲ್ಲುತ್ತಾನೋ ಇಲ್ಲವೋ (ಸುಪಸಂ. ೮೧) ; ಕೆಂದಬಣ್ಣದ ಬಲು ಚಂದ ಚಂದ ಹೋರಿಗಳು ನಂದಿಯ ಹಂಗ ಮೈಮಾಟ ಹಂಡ ಜೂಡ ಜೋಡಿ ನಡೆದವು ಸಾಲುಗೊಂಡು (ಸಿದ್ಧಪು. ೦೭-೨೦). 'ನಂದಿವಾಹನ' ಪರಾ. ೪. ಬಸವನ ವಿಗ್ರಹ,-ಮೂರ್ತಿ : ನಂದಿಗಳು ಗಾತ್ರದಲ್ಲಿ ದೊಡ್ಡವಾಗಿವೆ (ಮೈಸೂ. ೧೧೦). ೫. ಒಂದು ಬಗೆಯ ಮರ: "ಪುಂಗವಪೆಸರ್ ನಂದಿ" (ಮಂಗರಾ. ೩೭-೦೪) ; ನಂದಿ, ಬೋಳದರು, ಬೆಲ್ಲತ್ತಿ (ಮೃಶಿಗ. ೪೯-೯೭೪) ; ಮರಗಳು : ಹೆಸವ, ಹೆಬ್ಬಲಸು . . . ತಡಸಲು, ತಪಸಿ, ನಂದಿ, ಕುಂಕುಮ, ಸಂಪಿಗೆ (ನವ್ಯಸು. ೨೩೭). 'ನಂದಿಮರ', 'ನಂದಿವೃಕ್ಷ' ಪರಾ. ೬. [ಜೈನ] ಸಂಘಗಳಲ್ಲಿ ಒಂದು ಬಗೆ : ಸಂಘಗಳು : ಮೂಲ, ನಂದಿ, ಯಾಪನೀಯ, ಯಾಪನೀಯ ನಂದಿ, ದ್ರಾವಿಡ, ಶ್ರೀಸಂಘ, ಕಿತ್ತೂರು (ಕರಾಅ. ೮೭). 'ನಂದಿಸಂಘ' ಪರಾ. ೭. ಜೈನಮುನಿಗಳ ಗಣಗಳಲ್ಲಿ ಒಂದು ಬಗೆ: ಗಣಗಳು ದೇವ, ಸೇನ . . . ನಂದಿ, ಗ(ಕ)ವಾಟ . . . ಆದಿ (ಕರಾಅ. ೮೭). ೮. ಒಬ್ಬ ಜೈನಯತಿಯ ಹೆಸರು : × × × ಪೌತ್ರ ನನ್ದಿಮುನಿಪ × × × ಮಾರ್ಯ್ಯಾನ × × × (ಎಕ. II, ೧೦೦-೩; ಸು. 700). ೯. ಗ್ರಾಮಾಧಿಕಾರಿ (?) : ಸೀಮಾಂತರಸ್ಯ ಸಾಕ್ಷಿಣಾಂ ಕೊತ್ತಮಙ್ಗಲದ ನಂದಿಯರು ಹಡದ ನಡೆದು ಪುಡೆಯರು ಗಣಿಗನೂರ ಆನವಕರು ತಲಕಾಡಹನ್ನುವರು ಮದ್ದೂರ ಗಣೆಯರುಂ (ಎಕ. III (R), ನಂಜನ. ೩೩೨-೨೬ ; 969). ೧೦. (?) : ನನ್ದಿಯ ಸ್ಥಾನ ಮುಮೆಣಾಯುಗ ×× ಮಣಿಜಿೞ್ಪೆನಂದಜ್ಜಿಗೆ ವನ್ದಿಟ್ಟು ತುರುವನಿಕ್ಕಿಸಿ ಸತ್ತಂ (ಎಕ. IX, ದೇವನ. ೬೨-೯ : 900 ?).

ನಂದಿ ಬಿಡು = ಸತ್ತವರಿಗಾಗಿ ಮಾಡುವ ಅಪರಕರ್ಮದ ಸಂಬಂಧದಲ್ಲಿ ಒಂದು ಹೋರಿಯೆತ್ತನ್ನು ಸ್ವತಂತ್ರವಾಗಿ ಓಡಾಡಲು ಬಿಡು : ಸತ್ತಾತನು ವಂಶದ ಹಿರಿಯನಾದುದರಿಂದ ಉತ್ತರಕ್ರಿಯೆ ಮಾಡುವಾಗ ಯಾವುದಕ್ಕೂ ಕಡಮೆ ಮಾಡದೆ, ನಂದಿ ಬಿಡುವುದಕ್ಕೂ ಕೈಹಿಡಿಯಲಿಲ್ಲ (೮೦೦). ನಂದಿಯ ಕುಣಿತ = ನಂದಿಕೋಲನ್ನು ಹಿಡಿದು ಮಾಡುವ ಕುಣಿತ : ಆ ದಿನದ ಉತ್ಸವದಲ್ಲಿ ನಂದಿಯ ಕುಣಿತ ಬಹಳ ಆಕರ್ಷಣೆಯುಳ್ಳದಾಗಿತ್ತು (೮೦೦). ನಂದಿಯ ಕೋಲು = ನಂದಿಚಿಹ್ನೆಯ ಧ್ವಜವನ್ನುಳ್ಳ ಕೋಲು ; ನಂದಿಕಂಬ : ಆಕೆ ಕುರೂಪಿ ; ನಂದಿಯ ಕೋಲಿನಂತೆ ಉದ್ದವಾದ ಸೊರಗಿದ ದೇಹ (ಭೂಮಿತಾ. ೬೨). ನಂದಿಯ ಧ್ವಜ = ನಂದಿಧ್ವಜ ೩: ನಂದಿಯ ಧ್ವಜವನ್ನು 'ನಂದೀಕೋಲು' 'ನಂದಿಕಂಬ' ಎಂದೂ ಕರೆಯುತ್ತಾರೆ (೮೦೦). ನಂದಿಯ ಹಳವಿಗೆ, ನಂದಿಯ ಹಳವಿಗೆ = ನಂದಿಧ್ವಜ ೧ : ನಂದಿಯ ಪಳವಿಗೆ ವಿಳಿರುತೆ ದುಂದುಭಿರವದೊಳಗೆ . . . ಪೊಕ್ಕಂ (ಶ್ರೀಪವಿ. ೬೨-೭೯ ; ಇಂದುಚೂಡನು ಸುತ್ತಿದೋಲೆಯನೊಂದು ನಂದಿಯ ಹಳವಿಗೆಯನಾಗಳು ಹಿಡಿದುಕೊಂಡು . . . ಕಣಜಂಗಳಿಗೆ ಹರಿತಂದು (ಬಸವು. ೫೨-೦೬). ನಂದಿಯುಂಗುರ=ಶಿವಭಕ್ತರು ಧರಿಸುವ ಬಸವನ ಕೆತ್ತನೆಯುಳ್ಳ ಉಂಗುರ.
[ ಸಂ. ನಂದಿನ್ ]

**ನಂದಿಕ** (ನಾ). ಶಿವನ ವಾಹನ ; ನಂದಿ ; ಬಸವ. 'ನಂದಿಕೇಶ' ಪರಾ.
[ ಸಂ. ]

**ನಂದಿಕಂಬ** (ನಾ). ನಂದಿಯ ವಿಗ್ರಹವಿರುವ, ಅಲಂಕೃತವಾದ ಉದ್ದವಾದ ಕಂಬ : (೬). 'ನಂದಿಕೋಲು' ಪರಾ.
[ ನಂದಿ + ಕಂಬ$_1$ (< ಕಂಭ) ]

**ನಂದಿಕಲ್ಲುಸೊಪ್ಪು** (ನಾ). ಒಂದು ಬಗೆಯ ಸೊಪ್ಪು : (ಮೃಶಿಗ. ೧೨-೨೨೦). [ ? + ಸೊಪ್ಪು$_3$ ]

**ನಂದಿಕಾಡ** (ನಾ). ಒಬ್ಬಾತನ ಹೆಸರು : ಕೂಡಲೂರ್ಪ್ಪಾಡಿ ಒಡೆಯ ನನ್ದಿಕಾಡನಾ ಎಡನಾಗನಾ ವ್ಯಪಹಾರದನ್ತರು ಸಾಲವಿಲ್ಲಾಮ್ (ಎಕ. X, ಕೋಲಾರ : ೭-೩ ಸು. 700). [ ? ]

**ನಂದಿಕೆ** (ನಾ). (ದೀಪ ಮೊದಲಾದುವು) ನಂದುವಿಕೆ; ಆರಿಹೋಗುವಿಕೆ: ಒಂದಿಕೆ, ಒಂದಿಕೆಗಳ್; ನಂದಿಕೆ, ನಂದಿಕೆಗಳ್ (ಶಬ್ದಾಸು. ೫೭೮ ಪ್ರಯೋ).
[ ನಂದು + -ಇಕೆ ]

**ನಂದಿಕೇಶ** (ನಾ). ೧. = ನಂದಿಕೇಶ್ವರ ೧ : ಶ್ರೀಸದಾಶಿವನೊಡನೆ ಗರ್ಜಿಸಿ . . . ವ್ಯಾಸದೇವಂ ಕೈಯನೆತ್ತಿದೊಡಾ ಸಮಯದಲಿ ನಂದಿಕೇಶನು ಕೇಸಿ ಮುಳಿಸಿಯನ ಆತನೆರಡು ಕರಂಗಳಂ ಮುನಿದು (ಬಸವು. ೫೯-೯೯) ; ಎಲೆ ಗುರುವೆಯಾ ಶುಕ್ರಗಾ ಮಂತ್ರವೇತೆಜದೆ ನೆರೆಯಾಯ್ತಿದಂ ಪೇಳ್ವುದೈ ನಂದಿಕೇಶ (ವೀಶೈಪು. ೨-೦೪-೨೦). ೨. ಈಶ್ವರ ; ಶಿವ. ೧, ೨ : ಶ್ರೀಶೈಪಶ್ರೀಯವಂ ಮಾಳ್ಕೆಮಗನವರತಂ ನಂದಿಕೇಶಂ ಮಹೇಶಂ (ರಾಜಶೇ. ೦-೦). [ ನಂದಿಕ + ಈಶ ]

**ನಂದಿಕೇಶ್ವರ** (ನಾ). ೧. ಈಶ್ವರನ ಪ್ರಮಥಗಣದಲ್ಲಿ ಪ್ರಮುಖನಾದವನು ; ಬಸವ : ನಂದಿಕೇಶ್ವರ ಭೃಂಗನಾಟ್ಯ ನಮ್ಮ ಲಿಂಗನ ಮುಂದೆ (ಬಸವ. ೫೬೩) ; ಮೃಡ ಮೃಡಾಣಿ ಕುಮಾರ ಗಣಪತಿ ಮೃಡಸಮಾನದ ನಂದಿಕೇಶ್ವರ (ಸಾವಚ. ೯-೯) ; ಮನ್ಮತವಿಂದಯೋನಿಜನಾಗಿಯೊಗೆದನು ನಂದಿಕೇಶ್ವರನೆಂಬ ಪೆಸರಿಂದಾ ಶಿಲಾದಂಗೆ (ಬಸವು. ೨-೧೧) ; ಚಂದಯ್ಯ ಪ್ರೀತಿಯ ನಂದಿಕೇಶ್ವರನ ಮುನ್ನ ಕಂದ ಗಣಪದೇವಯ್ಯ ಅಂದದ ಶಿಪಶರಣರುಯಿರುತಿತೆ ಚಂದವನೇನ ಬಣ್ಣಿಸುವೆ (ಕಪೋಕ. ೬-೫೬). ೨. ಈಗಿನ ಬಿಜಾಪುರಜಿಲ್ಲೆಯ ಬಾದಾಮಿ ಪತ್ತಿರದ ಒಂದು ಗ್ರಾಮದ ಹೆಸರು. [ ನಂದಿಕ + ಈಶ್ವರ ]

**ನಂದಿಕೇಶ್ವರಶೈವ** (ನಾ). [ಶೈವ] ಶೈವಮತದ ಎಂಟು ಪ್ರಭೇದಗಳಲ್ಲಿ ಒಂದುಂ : ಶೈವಮತದಲ್ಲಿ ನಾವು ಎಂಟು ಪ್ರಭೇದಗಳನ್ನು ಕಾಣಬಹುದು. (೧) ದ್ವೈತ ಪಾಶುಪತ, (೨) ದ್ವೈತಶೈವಸಿದ್ಧಾಂತ, (೩) ದ್ವೈತಾದ್ವೈತಲಕುಲೀಶ ಪಾಶುಪತ, (೪) ವಿಶಿಷ್ಟಾದ್ವೈತಶೈವ, (೫) ವಿಶೇಷಾದ್ವೈತ (ವೀರಶೈವ), (೬) ನಂದಿಕೇಶ್ವರಶೈವ, (೭) ರಸೇಶ್ವರಶೈವ, (೮) ಕಾಶ್ಮೀರ ಶೈವ (ಭಾಕದ. ೨೨೦). [ ನಂದಿಕೇಶ್ವರ + ಶೈವ ]

**ನಂದಿಕೇಶ್ವರಸಂಹಿತೆ** (ನಾ). [ಶೈವ] ಚಂದ್ರಜ್ಞಾನಾಗಮದ ಹದಿನಾಲ್ಕು ಭೇದಗಳಲ್ಲಿ ಒಂದುಂ : ಸ್ಥಿರಸಂಹಿತೆ ಸ್ಥಾಣುಸಂಹಿತೆ ಮಹತ್ಸಂಹಿತೆ ನಂದಿಸಂಹಿತೆ ನಂದಿಕೇಶ್ವರಸಂಹಿತೆ ಏಕಪಾದಪುರಾಣ ಶಂಕರಾಗಮ ನೀಲಭದ್ರತಂತ್ರ ಶಿವಭದ್ರಾಗಮ ಕಾಲಭೇದಾಗಮ ಶ್ರೀಮುಖಾಗಮ ಶಿವಶಾಸನಾಗಮ ಶಿವರೇಖಾಗಮ ದೇವೀಮತವೆಂದು ಚಂದ್ರಜ್ಞಾನಾಗಮದ ಹದಿನಾಲ್ಕು ಭೇದಂಗಳು (ವಿಶೇಶ. ೭೧). 'ನಂದಿಸಂಹಿತೆ' ಪರಾ. [ ನಂದಿಕೇಶ್ವರ + ಸಂಹಿತೆ ]

**ನಂದಿಕೋಲು** (ನಾ). = ನಂದಿಕಂಬ : ಅನ್ನಿಜ ಸುಲದ ಕಂಬಕಂ ಕುಲಿಶಾವನ ಶಿತ್ರಾ ನಂದಿಕೋಲು ಸಂಗಮೇಶ್ವರನ ನುಡಿಗೆ ಸಬಳ ಶಾಶ್ವಿಕಸಯಲ್ಲಿ ಕತ್ತಿ ತೆಡಾಯ ಖಡಲ್ಲಿಡೆಯಲ್ಲಿ ಬಿಲ್ಲು ನಾರಾಚ ಗದೆ ಸೂಲ್ಲಿ ಚಕ್ರ ವಂಕಿ ಚೂರಿ ಜಯ ಬಾಡಿಶೃಂಗಾರ ತೊಡಪೂ ಸಂಣ ಚಂದ್ರಾಯುಧಾ ಚಿಲುತಲಿ ಮೊದಲಾದಾ ಬತ್ತೀಶಾಯುಧಾ (ಎಕ. XVI, ಗುಬ್ಬಿ. ೭೪-೨೧; ಸು. 1672) ಒಂದು ನಂದಿಕೋಲಿನಷ್ಟು ಆಳ ಅವ (ದೀಪಹ. I, ೮೯); ಗಣೆ ಅಥವಾ ನಂದಿಕೋಲನ್ನು ಮೆರೆಸುತ್ತ ಒಯ್ಯುವುದು (ಕರ್ಣಾಪೂ. II, ೬೯).

**ನಂದಿಕೋಲು ಕುಣಿತ** = ನಂದಿಕಂಬವನ್ನು ಹಿಡಿದು ಮಾಡುವ ನೃತ್ಯ : ನಂದಿಕೋಲು ಕುಣಿತದಲ್ಲಿ ಆ ಕಂಬಕ್ಕೆ ಕಟ್ಟಿರುವ ತಾಳಗಳು, ಕುಚ್ಚುಗಳು, ತಾಳಹಾಕಿದಂತೆ ಶಬ್ದಮಾಡುತ್ತವೆ (ರೂಢಿ). **ನಂದಿಕೋಲು ಕುಣಿಸು** = ನಂದಿಕಂಬವನ್ನು ಹಿಡಿದು ಕುಣಿ: ನಂದಿಕೋಲು ಕುಣಿಸ್ತಾ ಇದ್ದೀಯಾ? (ತುಂಗಭ. ೩). [ನಂದಿ + ಕೋಲು$_1$ (<ಕೋಲ್$_1$)]

**ನಂದಿಗುಂದ** (ನಾ). ೧. ಒಬ್ಬಾತನ ಹೆಸರುಂ : ನಂದಿಗುನ್ದರ್ಗೆ ದಾನಂ ಗೊಟ್ಟುದು ಕಿಸುಗೊಳದ ಮಾಜನಂ ಒನ್ದಡುವು ಮುದ್ದೂರ್‌ರೊಳ್ (ಎಕ. IV, ಹೆಗ್ಗಡ. ೪-೩೬; ಸು. 750). ೨. ಒಂದು ಊರಿನ ಹೆಸರು : ನನ್ದಿಗುನ್ದದ ಪಸುಪೊನ್ನಮೊಟಿಯಿಂ × × × ಗಾಣಗಾವುಣ್ಡನಾಡೆಲ್ಲ ಪಾಟಿದೊಡಂ (ಎಕ. IX, ದೇವನ. ೪೨-೬; ಸು. 900 ?). [ ? ]

**ನಂದಿಗೊಳಿ** (ನಾ). ಒಂದುಂ ಊರಿನ ಹೆಸರುಂ : ಶ್ರೀಮದಿಜಿವನೊಟ ಮ್ಬಾಧಿರಾಜರ ನನ್ದಿಗೊಳಿಯಂ ಗವುಣ್ಡ × × ವಿಯಾ ಭುಪ್ಪಕೆ . . . ದೇವ ಭೋಗ × × × ಎಲ್ಲ ಸಲ್ಸುದು (ಎಕ. IX, ಹೊಸಕೋ. ೩೬-೧೨; ಸು. 950). [?]

**ನಂದಿಣಗೆ** (ನಾ). ಒಂದು ಊರಿನ ಹೆಸರು : ನನ್ದಿಣಗೆ ನಾಮಗ್ರಾಮ (ಮೋ)ಪೂರ್ವ್ವಸ್ಯಾಂದಿಶಿ (ಇಇ. VII, ೪೪-೯೨; 10ನೆಯ ಶತ). [ ? ]

**ನಂದಿತ** (ಗು). ಸಂತೋಷಗೊಂಡ ; ಸಂತುಷ್ಟವಾದ : ನಂದಿತಾಮಳ ಭಕ್ತಿರಸ ಸಾನಂದಪುಳಕಂಗಳು ತನುವಿನೊಳ್ ಸಂದಣಿಸೆ ದಂಡಪ್ರಣಾಮವನಿಕ್ಕಿ ವಂದಿಸುತ (ಬಸಪು. ೨-೨೦). [ ಸಂ. ]

**ನಂದಿದೇವ** (ನಾ). ಒಬ್ಬಾತನ ಹೆಸರು : ಆಚಾರ್ಯ್ಯಪುರುಷ ಇಱಿದು ಬಸಮಟಿಯದೆ ಬೀಟಿಸ್ವಾರನ್ ತೆಜಿನ ಮೆಚ್ಚದೊಂ ಪಿಸುಣರ ಪೊಸವೊ ಕುಱಿಲಂ ಪೊ × × ವ ಈಯದೆ ಈಟಿಯದೆ ನನ್ನಿ ನುಡಿಯದೆ ನಣ್ದಿದೇವಂ ಗಟಿಸ್ಸಿಮುಯ್ಯುವಪ್ಪಡೆ ದೊಂಗರ ಅಲೆದೊಂ ಮೂದಲಿಪೊಂ (ಎಇ. XXIV, ೨೬-೦೩; ಸು. 885). [ ನಂದಿ + ದೇವ ]

**ನಂದಿದ್ರುಮ** (ನಾ). ನಂದಿಮರ ; ನಂದಿವೃಕ್ಷ : ಅಲ್ಲಿ ಸೌಧರ್ಮೇಂದ್ರಂ ನಂದಿದ್ರುಮದೊಳ್ ಮಣಿಮಯಶಿಬಿಕಾಯಾನಮನಿಟಿಪ್ಪುದುಂ (ಶಾಂತಿಪು. ೧೧-೧೧೨ವ). [ ನಂದಿ + ದ್ರುಮ]

**ನಂದಿಧ್ವಜ** (ನಾ). ೧. ನಂದಿಯ ಚಿಹ್ನೆಯುಳ್ಳ ಧ್ವಜ,- ಬಾವುಟ : ಎತ್ತಿಸಿದ ನಂದಿಧ್ವಜಂಗಳ ಮೊತ್ತದ ಪತಾಕೆಗಳ ಪಲ್ಲವಸತ್ತಿಗೆಯ ಸಾಲು ಗಳನೇಕವ್ಯಾಸಹಸ್ರಗಳಿಂ . . . ದೇವಾ ಪೃಥ್ವಿ ಬಂದೆಸೆಯ (ಬಸಪು. ೫೬-೫೩) ; ಬಿಂಕದ ಬಿರಂದಿನ ನಂದಿಧ್ವಜವಿತತಿ ಪುರದೊಳಿರ್ದುದು ಚೆಲ್ವಿಂ (ಹಮ್ಮಿರ. ೧-೬೫) ; ಶ್ರೀವೃಷಭರಾಜನನುಯಾರೋಹಣಂಗೈಯೆ . . . ಬಿರುದ ಕೊಂಡಾಡಿ ಕೈವಾರಿಸುವ ಚಂಡಕೀರ್ತಿಗಳು ಮುಂವಿಡಿದ ಶ್ರೀನಂದಿ ಧ್ವಜವೂ (ನವಮೋ. ೨೨-೫೦). ೨. ನಂದಿಯ ಚಿಹ್ನೆಯುಳ್ಳ ಧ್ವಜವನ್ನು ಹೊಂದಿದವನು ; ಶೈವ : ದೇವಾಂಗರು 'ನಂದಿಧ್ವಜ' ರೆಂದು ಹೇಳಿದೆ (ಕರ್ಣಾಪೂ. II, ೨೦). ೩. ನಂದಿಯ ಚಿಹ್ನೆಯುಳ್ಳ ಧ್ವಜವನ್ನು ಹೊಂದಿರುವ ಕೋಲು ; ನಂದಿಕಂಬ ; ನಂದಿಕೋಲು : (+). [ ನಂದಿ + ಧ್ವಜ ]

**ನಂದಿನಾಗರಿ** (ನಾ). ಒಂದು ಬಗೆಯ ಲಿಪಿ : ನಂದಿನಾಗರಿ ಕನ್ನಡ ಮತ್ತು ಗ್ರಂಥಲಿಪಿಗಳನ್ನು ಉಪಾಧ್ಯಾಯರು ಬಾಲಕರಿಗೆ ಹೇಳಿಕೊಡುತ್ತಿದ್ದಿರಬೇಕು. ಆ ಕಾಲದ ಶಾಸನಗಳೂ ಕೂಡ ಕನ್ನಡ, ಗ್ರಂಥ ಮತ್ತು ನಂದಿನಾಗರಿಲಿಪಿ ಗಳಲ್ಲಿರುವುದು ಗಮನಾರ್ಹ (ಕಶಾಅ. ೨೪೨) ; ಅದರ ಕೆಳಗೆ ನಂದಿನಾಗರಿ ಅಕ್ಷರಗಳಲ್ಲಿ "ಷಣ್ಮುಖದಾಸ" ಎಂದಿದೆ (ಹೊಯ್ಸವಾ. ೧೫೧). [ ಸಂ. ನಂದಿನಾಗರೀ ]

**ನಂದಿನಾಥ** (ನಾ). = ನಂದಿಕೇಶ್ವರ ೧ : ಇಂದುಧರನನುಮತದೊಳಾದಿಯ ನಂದಿನಾಥನು ಬಸವನಾಮದಿ ಬಂದಪಂ ಶಿವಭಕ್ತಿಯಂ ಮಸುಮತಿಗೆ ಪಸರಿಸಲು (ಬಸಪು. ೨ ಸೂಚನೆ) ; ನಂದಿನಾಥನಂ ಭೃಂಗವೀರೇಶ ಷಣ್ಮುಖ ಸಂದಿಹ ವಿಘ್ನೇಶ್ವರನು ಇಂದುಧರನ ಎಡಬಲದಲ್ಲಿ ಸೂರಿಯ ಚಂದ್ರರು ಮೆರೆದು ರಾಜಿಪರು (ಕಪೋತ. ೫-೦೩). [ನಂದಿ + ನಾಥ ]

**ನಂದಿನಿ** (ನಾ). ೧. ಸಂತೋಷವನ್ನುಂಟುಮಾಡುವವಳು; ಆನಂದವನ್ನು ಕೊಡುವವಳು ; ಮಗಳು. ೨. ಕಾಮಧೇನುವಿನ ಮಗಳು ; ವಸಿಷ್ಠ ಮಹರ್ಷಿಯ ಹೋಮಧೇನು : ಸರಸಚರಿತನೆ ನಂದಿನಿಯ ಪರಿಚರಿಯೆಯನು ಹಗಲಿರುಳು ತಪ್ಪದೆ ವರವ ಪಡೆಯುವವರೆಗೆ ಮಾಡುವದೆಂದು ಮುನಿಯುಸುರಿ ಪರಸಿದನು (ರಘುವಂ. ೧-೯೦). ೩. ಒಂದು ಬಗೆಯ ವೃಕ್ಷ ; ನಂದಿಮರ : "ನಂದಿನೀ - ಹರೇಣುಕ, ಹಸು, ನಂದಿಯ ಮರ, ಎತ್ತುನಾಲಗೆ" (ಓಷಧಿ. ೮೩). ೪. ಒಂದು ನಾಡಿಯ ಹೆಸರು : ಪೂರ್ವ ದಿಕ್ಕಿನ ನಂದಿನೀ ಎಂಬ ನಾಮಾಂತರವುಳ್ಳ ಧಾರಿಣೀನಾಡಿಯಲ್ಲಿ ಶುಕ್ಲವರ್ಣನಾಗಿ ವಾಸುದೇವ, ದಕ್ಷಿಣದಲ್ಲಿ ಪಿಂಗಳಾನಾಡಿಯಲ್ಲಿ ಪಿಂಗಳವರ್ಣನಾಗಿ ಸಂಕರ್ಷಣ, ಮಧ್ಯದಲ್ಲಿ ಸುಷುಮ್ನಾನಾಡಿಯಲ್ಲಿ ರಕ್ತವರ್ಣನಾಗಿ ನಾರಾಯಣ-ಹೀಗೆ ೫ ರೂಪಗಳಿಂದ ಭಗವಂತನಿರುವನು (ಹಸಾರ. ೪೭೬). ೫. ನಾದಿನಿ : "ಸ್ವಸೃತನಯಂ ಸ್ವಸ್ರೀಯಂ ಪೆಸರಿಂ ನಾದುನಿ ನನಾಂದೃ ನಂದಿನಿಯುನಿಕುಂ" (ಶಸ್ತುಕೋ. ೫೬-೨೪). P ಇದು 'ನಾದಿನಿ' ಎಂಬುದರ ಅಪಲಿಖಿತವಿರಬಹುದು. [ ಸಂ. ನಂದಿನೀ ]

**ನಂದಿನೆಲಬೇವು** (ನಾ). ಒಂದು ಬಗೆಯ ಸಸ್ಯ : (ಶ್ರುತಿಗಿ. ೪೮-೯೫೨). [ ? ]

**ನಂದಿಪತಾಕ** (ನಾ). = ನಂದಿಧ್ವಜ ೧ : ನಂದಿಪತಾಕಮುದಬ್ಧಿಸದಾಮಂದರ ಮಂದಿರ ಚಂದ್ರಕಲಾ . . . ಸುಬಂಧು ಜಯಾ (ಹಾಲಾಸ್ಯ. ೧-೪-೧೬). [ನಂದಿ + ಪತಾಕ ]

**ನಂದಿಪತಾಕೆ** (ನಾ). = ನಂದಿಧ್ವಜ ೧ : ಕಣಯ ಕುಣಿಕಿಲ ಬಂಡಿಯಂ ಬಚ್ಚಣಿಸಿ ನಂ[ಪಾಠಾಂ. ಮಂ]ದಿಪತಾಕೆಗಳ ತೋರಣವನದಟಿೂಳಲಂಕರಿಸಿ (ಬಸಪು. ೫೫-೫). [ ನಂದಿ + ಪತಾಕೆ ]

**ನಂದಿಪುರಾಣ** (ನಾ). ಹದಿನೆಂಟು ಉಪಪುರಾಣಗಳಲ್ಲಿ ಒಂದುಂ : ಸನತ್ಕುಮಾರಪುರಾಣ ನಾರಸಿಂಹಪುರಾಣ ನಂದಿಪುರಾಣ ಶಿವಧರ್ಮಪುರಾಣ

ದೂರ್ವಾಸ ಪುರಾಣ ನಾರದೀಯಪುರಾಣ ಕಪಿಲಪುರಾಣ ವಾಮನಪುರಾಣ ಉಶನಃಪುರಾಣ ಬ್ರಹ್ಮಾಂಡಪುರಾಣ ವಾರುಣಪುರಾಣ ಕಾಳೀಪುರಾಣ ವಾಸಿಷ್ಠಲೈಂಗಪುರಾಣ ಸಾಂಬಪುರಾಣ ಸೌರಪುರಾಣ ಪರಾಶರಪುರಾಣ ಮರೀಚಿಪುರಾಣ ಭಾರ್ಗವಪುರಾಣವೆಂಬಪೇ ಆಯಾ ನಾಮಧೇಯಮುಳ್ಳ ವರಿಂ ನಿರೂಪಿತಮಾದ ಹದಿನೆಂಟು ಉಪಪುರಾಣಂಗಳು (ವಿವೇಕ. ೮).

[ ನಂದಿ + ಪುರಾಣ ]

**ನಂದಿಬಟ್ಟಲು, ನಂಜವಟ್ಟಲು, ನಂಜುಬಟ್ಟಲು, ನಂದಿವಟ್ಟ, ನಂದಿವಟ್ಟಲು** (ನಾ). ಸುವಾಸನೆಯಾದ ಬಿಳಿಯ ಹೂವುಗಳನ್ನು ಬಿಡುವ ಒಂದು ಬಗೆಯ ಗಿಡ; ತಗರ; ನಂದ್ಯಾವರ್ತ; ವಂಜಟಿ: "ನಂದ್ಯಾವರ್ತ . . . ನಂದಿಬಟ್ಟಲ ಹೂವು" (ಗುಂಗಾಮ. ೧೭೭); ಮನೆಯ ಮುಂದೆ ಚಮನ್, ರೋಜಾ, ಡೇರಾ, ನಂದಿಬಟ್ಟಲು ಗಿಡಗಳ ಮಧ್ಯ ಪನ್ನೇರಿಳೆ ಹಣ್ಣಿನ ಮರ (ಹೊಸಕ್ಕ. ೦೨೩). **ನಂಜವಟ್ಟಲು:** ನಂಜವಟ್ಟಲಿನ ಗಿಡದ ತುಂಬ ಹೂವು ಅರಳಿದೆ (ಅದೇ). **ನಂಜುಬಟ್ಟಲು:** ನಂಜಪ್ಪ ಬೆಳೆದನೆ ನಂಜುಬಟ್ಟಲ ಹೂವ ಮಲ್ಲಯ್ಯಾಳದನೆ ಮರುಗವ (ಸಾಪದ. ೧೦೦). **ನಂದಿವಟ್ಟ:** "ನಂದಿವಟ್ಟಮದು ತಗರಸಂಜ್ಞಕಂ ತಾನಕ್ಕುಂ" (ವಸ್ತುಕೋ. ೩೮-೩೫); ಪೊಕ್ಕುಟು ನಂದಿವಟ್ಟದರಲಂ ಚೆಲ್ವಿಂದು ಗುಕರ್ಣಾಡೆ ಕೇದಗೆಯುಂ . . . ಕೈವಿಂಗೆ ಪುಷ್ಪಾಸ್ತ್ರನ ಪಂಚಬಾಣ ವಿವಳಿಂಬಾಶಂಕೆಯುಂ ಮಾಡಿದಳ್ (ಧರ್ಮಾಮೃ. ೭-೨೦೭); ನಂದಿವಟ್ಟದ ಪಾಯವಟ್ಟಮುಮಂ ಕಾಂಚಿವಾರದ ಕಾಂಚಿಯುಮಂ . . . ವಿವಿಧ ಕಿಸಲಯದ ಕಿಸಲಯಮುಮಂ ಮನೋಹರಮೆನೆ ಸಮೆದು ತಮತಮಗೆ ಪಸದನಂಗೊಂಡು (ಚಂದ್ರಪ್ರ. ೭-೧೦೪ ವ); ಪಾದರಿ ಪಾರಿಜಾತವು ನಂದಿವಟ್ಟವು ಹಾದರಿ ತುಂಬುರ ಜಾಲಿ (ದೇವಾಂಪು. ೬-೨೭೦). **ನಂದಿವಟ್ಟಲು:** "ನಂದ್ಯಾವರ್ತಃ—ನಂದಿವಟ್ಟಲು, ಮಿಾನಿನ ಭೇದ" (ಓಷಧಿ ೮೪); ಗುಲಾಬಿ, ನಂದಿವಟ್ಟಲು . . . ಮೊಲ್ಲೆ, ಮಲ್ಲಿಗೆ, ಇರವಂತಿಗೆ ಇವುಗಳಲ್ಲಿ ಕೆಲವು ಕೊಲ್ಲೆಗಳನ್ನು ಕೆಲವು ಅಂಟ ಗಳನ್ನು ಮಾಡಿ ಹಚ್ಚಬೇಕು (ಕೃಷಿಪ್ರ. ೩೦೦).

[ ದೇ. ॥ ತಮಿ. ನನ್ದಿಯಾವಟ್ಟ; ತುಳು. ನಂದಿಬಟ್ಟಲ್ ]

**ನಂದಿಮರ, ನಂದಿಯ ಮರ** (ನಾ). ಒಂದು ಬಗೆಯ ಮರ; ನಂದಿವೃಕ್ಷ: "ಕಚ್ಛಃ —ನಂದಿಮರ" (ಓಷಧಿ. ೨೦); ಆದೂರದಿಂದಾಲಾಪನೆಗೆ ಮೊದಲ್ಗೆಯ್ದುದೊರ್ ಖಂಜನಂ. ಹಿಂಬಾಲಿಸಿದುಪದಂ . . . ಇಲ್ಲಿ ಬಿದಿರ ತುದಿಯಿಂದಲ್ಲಿ ನಂದಿಮರದಿಂದಿತ್ತ . . . ಎತ್ತ ಕಿವಿಯಿತ್ತೊಡತ್ತಣಿಂದೆ (ಶ್ರೀರಾಮಾ. ೪೮೦-೧೭೦). **ನಂದಿಯ ಮರ:** "ಜಟಾವೃಕ್ಷಃ—ನಂದಿಯ ಮರ" (ಓಷಧಿ. ೬೧); ಹೊಳೆಯ ದಡದ ಮೇಲಣ ನಂದಿಯ ಮರನ ಒಕ್ಕಿನಲು (ಎಕ. VIII, ತೀರ್ಥಹ. ೦೯೦-೬೭; 1407). [ ನಂದಿ + ಮರ₁ ]

**ನಂದಿಮುಖಿ** (ನಾ). ನಂದಿಯ ಎದುರು,–ಸಮಕ್ಷ (?): ಹಾರುವರೆಲ್ಲರೂ ನೆರೆದು ಶೂದ್ರನ ಹಾರುವನ ಮಾಡುವಲ್ಲಿ ನಂದಿಮುಖಿವಲ್ಲದೆ ಮಾಡಲಾಗದು ವಿಭೂತಿಯಲ್ಲದೆ ಮತ್ತೇನನೂ ಮಾಡಲಾಗದು (ಬಸವ. ೬೧೪).

[ ನಂದಿ + ಮುಖಿ ]

**ನಂದಿಮುದ್ರೆ** (ನಾ). ನಂದಿಯ ಗುರುತು; ವೃಷಭನ ಚಿಹ್ನೆ: ವಂದಿಸುತ ಮುಂದೆಸೆಯೊಳಿರಲಂತವರ ಹಣೆಗಳಲಿ ನಂದಿಮುದ್ರೆಯನೊತ್ತಿ (ಬಸಪು. ೫೦-೪೭). [ ನಂದಿ + ಮುದ್ರೆ ]

**ನಂದಿಮೆಟ್ಟಲು** (ನಾ). ಬಸವನ ವಿಗ್ರಹಗಳನ್ನು ಎರಡು ಕಡೆಗಳಲ್ಲೂ ಹೊಂದಿರುವ ಮೆಟ್ಟಲು; ದೇವಾಲಯಗಳ ಶಿಲ್ಪರಚನೆಯ ಒಂದು ಭಾಗ: ಮೊದಲು ನಾಲ್ಕು ಗರ್ಭಗುಡಿಗಳು . . . ಒಂದೇ ಸಾಲಿನಲ್ಲಿದ್ದವೆಂದು, ಅನಂತರ ಐದನೆಯ ಗರ್ಭಗುಡಿಯನ್ನು ಸೇರಿಸಲಾಯಿತೆಂದು ಅಂತರಾಳಗಳಿಂದಲೂ ನಂದಿಮೆಟ್ಟಲುಗಳಿಂದಲೂ . . . ಸ್ಪಷ್ಟವಾಗಿದೆ )ಹೊಯ್ಸವಾ. ೧೩೫). [ ನಂದಿ + ಮೆಟ್ಟಲು ]

**ನಂದಿಯಮರ** 'ನಂದಿಮರ' ನೋ.

**ನಂದಿಯಾಲ, ನಂದ್ಯಾಲ** (ನಾ). ಒಂದು ಊರಿನ ಹೆಸರು: ಶ್ರೀನಿರ್ವಿನೀತರಾ ಕಿಱಿಯಾ ಮಗನ್ದಿರ್ಕಾಡುಪಟ್ಟಿಯರಿನ್ದವ್ ಪಲ್ಲವರಸರಿನ್ದಂ ಕೊಱ್ಗೊಣ್ಡಪಟಂ ಸೂಡಿದೊರಾ ಅನುಜೋನ್ನಕನಲ್ಗೊಳ್ ನನ್ದಿಯಾಲ ರಾವಿಟ್ಟದುಪಡೆವ್ಯಲಾವುಱುಮಸಪಾಲುಮ್ (ಎಕ. VI, ಚಿಕ್ಕಮ. ೫೦-೩; ಸು. 490); ಮಣಿಯಡೆಗುರೆಯ ನಂದಿಯಾಲ ಸೀಮ್ವಾಲ ನಾಣ್ಣುಱಿಯ ಮದಣ್ಣ (ಮ್ಯಾಆರಿ. ೦೯೨೪, ೭೮-೨೬; ?). **ನಂದ್ಯಾಲ:** ಮಣಿಗ್ರಾಮಶ್ರೇಣಿ ಚತುಃಸಾಮನ್ತ ಟೆಗುರೆ ಅಮಣಿಯ ನಂದ್ಯಾಲ ಸೀಂಬಾಲದೇಶ ಪ್ರ ಕೃ ತ್ಯಾ ಧ್ಯ ಕ್ಷಾ ಣಾ ೦ (ಮ್ಯಾಆರಿ. ೦೯೩೦, ೩-೨೧; ಸು. 600); ಶೀಯವಲ್ಲವರಸರು ಟೆ ಗು ರೆ ಯ ರು ೦ ಮಣಿಯರುನ್ನಂದ್ಯಾಲರುಂ ಶೀಮ್ಯಾಲರುಂ ಚಾತುರ್ವೈರ್ಣ್ಯದ್ಯಮುಮಜಿಯೆಂ ಪೆತ್ತಾ ಎಲ್ಲಾ ಸಾಮನ್ತರು ಮತ್ತಾಣೆಉಂ ಸಾಕ್ಷಿ (ಮ್ಯಾಆರಿ. ೦೯೪೧, ೦-೩೪; ಸು. 788); ಶ್ರೀಮನ್ಮಹಾಮಂಡಲೇಶ್ವರ ನಂದ್ಯಾಲದ ವೀರರಾಜ ಶ್ರೀರಂಗರಾಜಗಳ ಮಕ್ಕಳು (ಎಕ. X, ಮುಳಬಾ. ೪-೦೨; 1647). [ ? ]

**ನಂದಿಯುಂಡಿಗೆ** (ನಾ). ನಂದಿಯ ಚಿಹ್ನೆ,–ಮುದ್ರೆ; ವೃಷಭನ ಮೊಹರು: ತಾಮ್ರಪರ್ಣಿಯ ಮುತ್ತುಗಳುಂ ನಂದಿಯುಂಡಿಗೆಯ ವಿಸುನಿಯ ಪೊಂಗಳುಂ . . . ಬಸವನ ಮನೆಯ ಮುಂದೆ ಸುರಿದು ರಾಸಿಯಾಗಿರೆ (ಬಸರ. ೦೨-೬೪); ಪಡಿಪೊನ್ನ ಜಾಳಿಗೆಯನಂತದಂ ಸೌಂದರಂ ಕೈಕೊಂಡು . . . ನಂದಿಯುಂಡಿಗೆಯ ರಾಯಸವಿರಲು ಕಂಡದಕೆ ವಂದಿಸಿ ನಿಜೋತ್ತಮಾಂಗದೊಳಿಟ್ಟು (ಸೌಂದಪು. ೧೯-೧೧). [ ನಂದಿ + ಉಂಡಿಗೆ₃ ]

**ನಂದಿಲಿಪಿ** (ನಾ). ಒಂದು ಬಗೆಯ ರಹಸ್ಯ ಲಿಪಿ: ದೇವಲಿಪಿ ನಂದಿಲಿಪಿಯಾ ಅಗಣಿತ ಲಿಪಿಗಳ ನೋಡಲಱಿಯದೆ ಬಿಜ್ಜಳರಾಯನ ಸಭೆಯೊಳು ಕಳಕಳಗೊಳುತಿದ್ದರು ವಿದ್ವಾಂಸರುಗಳೆಲ್ಲಾ (ಭಾಸ್ಕರ. ೭೭-೭).

[ ನಂದಿ + ಲಿಪಿ ]

**ನಂದಿವಟ್ಟ** 'ನಂದಿಬಟ್ಟಲು' ನೋ.

**ನಂದಿವಟ್ಟಲು** 'ನಂದಿಬಟ್ಟಲು' ನೋ.

**ನಂದಿವರ್ಧನ** (ನಾ). ೧. ಈಶ್ವರ; ಶಿವ. ೨. ಮಗ; ತನಯ. ೩. ಸ್ನೇಹಿತ; ಮಿತ್ರ. ೪. ನಂದಿಮರ ಮತ್ತು ಅದರ ಹೂವು: "ತುನ್ನಃ, ಕುಬೇರಃ, ಕುಣಿಃ, ಕಚ್ಛಃ, ಕಾಂತಕಲಃ, ನಂದಿವೃಕ್ಷಃ—ಓ ನಂದೀಯಂಬುವ ಮರದ ಹೆಸರು. ಬಸವನ ಗಿಡ, ನಂದಿವರ್ಧನಹುವ್ವ ಪ್ರಸಿದ್ಧ" (ಸಿದ್ಧಾಂತಿ. ೧೪೧). ೫. ಒಂದು ಬಗೆಯ ದೇವಸ್ಥಾನದ ರಚನೆ. ೬. [ಜ್ಯೋತಿ] ಹುಣ್ಣಿಮೆಯ ಅಥವಾ ಅಮಾವಾಸ್ಯೆಯ ಹೆಸರು; ಪಕ್ಷದ ಕೊನೆಯ ದಿವಸ. [ ಸಂ. ]

**ನಂದಿವಳ್ಳಿ** (ನಾ). ಒಂದು ಊರಿನ ಹೆಸರು: ಕಿಱುವಳ್ಳಿ ಬಾಳಪುರು ಇತ್ಯೇಕಾಂತೇಗ್ರಾಮಾಣಾಂ ಮಧ್ಯೇ ನೆಱ್ಗಿಯೂರ್ನನ್ದಿವಳ್ಳಿ ಸಹಿತಸ್ಸಳ್ಳಿಯೂನ್ನಾಮಗ್ರಾಮೋದತ್ತಃ (ಎಕ. X, ಕೋಲಾರ. ೬೩-೩೮; 757).

[ ನಂದಿ + ವಳ್ಳಿ₁ ]

**ನಂದಿವಾಹ** (ನಾ . = ನಂದಿವಾಹನ. [ ನಂದಿ + ವಾಹ ]

**ನಂದಿವಾಹನ** (ನಾ). ವೃಷಭನನ್ನು ವಾಹನವಾಗಿ ಉಳ್ಳವನು; ಶಿವ: ಮುಕ್ಕಣ್ಣ ಅಂದದಹಿಕುಂಡಲ ಚತುರ್ಭುಜ ನಂದಿವಾಹನ ಗೌರಿಸಹಿತಂ ಮುಂದೆ ನಿಂದು ಮಹೇಶನೀಶನು ಪಾಶಧರಕರನು (ಬಸಪು. ೨೭-೨೬).

[ ನಂದಿ + ವಾಹನ ]

**ನಂದಿವಾಳ** (ನಾ). ಒಂದು ಬಗೆಯ ಹೂವು: ಮಲ್ಲಿಗೆಯುಂ . . . ನಂದಿವಾಳ ಮುಡಿವಾಳ ಸೌಗಂಧಿ ಕಣಗಿಲು ಚಂಪಕಾ ಸಲ್ಲಲಿತ ಪಾರಿಜಾತಾದಿ ಬಹುಪುಷ್ಪಗಳ್ ನಲ್ಲೆಯರುಯತಿಜಕನದಿಂ ಶಿರಿತಂದು (ನವಮೋ. ೨೪-೫೯). [ ? ]

**ನಂದಿವೃಕ್ಷ** (ನಾ). = ನಂದಿಮರ; "ನಂದಿವೃಕ್ಷಃ–ನಂದಿಮರ" (ಒಷಧಿ. ೮೪); ಅಶ್ವತ್ಥಾಕಾರವಪ್ಪ ನಂದಿವೃಕ್ಷ (ನಾಚಿರಾ. ೬); ಕೆಂಪುಗಂಧಗಿರಿ, ನಂದಿವೃಕ್ಷ . . . ಗಂಧಗರಿಗೆ (ಪುಷ್ಪಶಿಗಿ. ೧೯-೩೪೮). [ ನಂದಿ + ವೃಕ್ಷ ]

**ನಂದಿಸಂಘ** (ನಾ). [ಜೈನ] ಜೈನಸಂಘದ ಪ್ರಭೇದಗಳಲ್ಲಿ ಒಂದು : ನಂದಿಸಂಘದರುಂಗಳಾನ್ವಯದ ಗುಣಸೇನಪಣ್ಡಿತದೇವರ್ಗ್ಗೆ . . . ಕೊಟ್ಟರು (ಎಕ. I, ೬೨-೪೩; 1059); ಸ್ವಸ್ತಿಶ್ರೀ ರಾಜಾಧಿರಾಜ ಕೊಂಗಾಳ್ವನಬ್ಬೆ ಪೋಚಬ್ಬರಸಿಯದ್ರ್ರವಿಳಗಣದ ನನ್ದಿಸಂಘದರುಙ್ಗಳಾನ್ವಯದ ಗುಣಸೇನಪಣ್ಡಿತದೇವರ ಗುಡ್ಡಿ ಮಾಡಿಸಿದ ಬಸದಿ (ಎಕ. I, ೬೮-೦ ; ೭) ; ಈ ಸಂಪ್ರದಾಯದಲ್ಲಿ . . . ಬೌದ್ಧರ ಮಹಾಸಾಂಘಿಕರಂತೆ ನಂದಿಸಂಘ ಗಣಸಂಘ ದೇವಸಂಘ ಮೊದಲಾದ ಸಂಘಪ್ರಭೇದಗಳಿದ್ದರೂ ಈ ಗ್ರಂಥಗಳು ಸರ್ವಸಮ್ಮತಗಳಾಗಿರುವುವು (ಹಿಂದಸಾ. ೬೪).
[ ನಂದಿ + ಸಂಘ ]

**ನಂದಿಸಂಹಿತೆ** (ನಾ). [ಶೈವ] ಚಂದ್ರಜ್ಞಾನಾಗಮದ ಹದಿನಾಲ್ಕು ಭೇದಗಳಲ್ಲಿ ಒಂದು : ಸ್ಥಿರಸಂಹಿತೆ ಸ್ಥಾಣುಸಂಹಿತೆ ಮಹತ್ಸಂಹಿತೆ ನಂದಿಸಂಹಿತೆ ನಂದಿಕೇಶ್ವರಸಂಹಿತೆ . . . ದೇವೀಮತವೆಂದು ಚಂದ್ರಜ್ಞಾನಾಗಮದ ಹದಿನಾಲ್ಕು ಭೇದಂಗಳು (ವಿವೇಕ. ೬೦). 'ನಂದಿಕೇಶ್ವರ ಸಂಹಿತೆ' ಪರಾ. [ ನಂದಿ + ಸಂಹಿತೆ ]

**ನಂದಿಸು**₁, ನೊಂದಿಸು (ಕ್ರಿ). ೧. (ದೀಪ, ಉರಿ, ಬೆಳಕು ಮೊದಲಾದುವನ್ನು) ಆರಿಸು ; ಇಲ್ಲದಂತೆ ಮಾಡು : ಕಪ್ಪಂಗವಿಯಾಗಿ ಕವಿವ ದ್ರುಪದವಿಳಯಾನಳನಂ ದ್ರೋಣಾ ಮಹಾದ್ರೋಣ ಪುಷ್ಕಳಾವರ್ತಕಂಗಳೆಂಬ ವಿಳಯಕಾಳನೀಳಜಳಧರವರ್ಷಂಗಳಿಂ ನಂದಿಸೆಯುಂ ನಂದದೆ ಮುಟ್ಟುವರೆ (ಪಂಪಭಾ. ೧೨-೨೧ವ) ; ತಮ್ಮೆಱಂಕೆಯ ಗಾಳಿಯಿಂ ಪೊಗೆಯಂ ನಂದಿಸಲೀಯದೆ ಹೋಮಾನಲಪ್ರಜ್ವಲನಮನೆಸಗುವ ಸೋಗೆನವಿಲ್ಗಳಿಂ ಸೊಗಯಿಸುವುದು (ಕಾದಂಪೂ. ೨೨೩) ; ಜಿನಧರ್ಮವೆಂಬ ನೀರಿಂ ಕರ್ಮವೆಂಬ ಕಿರ್ಚಂ ನಂದಿಸದೆ ... ಇರ್ದೊಡೆ ಶಾಶ್ವತಸುಖಂ ದೊರೆಕೊಳ್ಳದು (ಧರ್ಮಾಮೃ. ೬-೯೭) ; ತಳ್ತುರ್ಕಿಯ್ದ ವಾರಾಸಿಯಿಂ ತದ್ಗಿರಿ ವಹ್ನಿಜ್ವಾಲೆಯಂ ನಂದಿಸಿ ಬಱಿಕ ಜರಾಸಂಧಸೇನಾಸಮೂಹಾಂತರಮಂ ಕಾಲಾಗ್ನಿರುದ್ರಂ ಪುಗುವ ತೆಱದೆ ದೈತ್ಯಾಂತಕಂ ಬಂದು ಪೊಕ್ಕಂ (ಜಗವಿ. ೮-೪೭) ; ಶಿಶಿರೋಪಚಾರಮಂ ಲಲನೆಗೆ ಮಾಳ್ಪಂದು ಘೃತದಿಂ ಕಿರ್ಚಂ ನಂದಿಪ ತೆಱವಾಗಿ ತೋಱುತಿದೆ (ಗಿರಿಕ. ೪-೧೧೫); ತರಣಿ ಪಾಶುಪತಾಸ್ತ್ರವಾದಿಯ ದಿವ್ಯಮಾರ್ಗಣಪ ಪುರಹರನ ಕೃಪೆಯಿಂದ ಪಡೆದಂತರಿಗಳನು ಸಂಹರಿಸಿ ನಿನ್ನಯ ಪರಿಭವಾಗ್ನಿಯ ನಂದಿಸುವೆ (ಕುಮಾ.ಅ. ೪-೩೧). ೨. ನಾಶ ಮಾಡು; ಕೊನೆಗಾಣಿಸು ; ಕೊಲ್ಲು : ಉರಃಪ್ರದೇಶಮಂ ನಿಶಿತ ನೆತ್ತರೊಕ್ಕು . . . ಜೋಲ್ದೊಡಾದಮ ನುಸುನೊಂದು ನಂದಿಸದೆ ತನ್ನನೆ ನಿಂದಿಱಿದಂ ದಿನೇಶಜಂ (ಪಂಪಭಾ. ೧೨-೧೧೭). ೩. ನಿವಾರಿಸು ; ಕಳೆ : ರವಿಚಂದ್ರರ್ ನಿಲೆ ಸಿಂಹಲಗ್ನದೊಳಿಳಾಜಾತಾರ್ಕಜರ್ ನೋಡೆ ನೇತ್ರವಿಹೀನಂ . . . ಆ ದುರಿತಮಂ ನಿಶ್ಶೇಷಮಾರ್ ನಂದಿಪರ್ (ಜಾತತಿ. ೫೦-೩೮) ; ತತ್ಪುರದೊಳಿರ್ದ ವಿಶಾಖಸಂದಿ ಪಸಿವಂ ನಂದಿಸಲೆಂದು ಲಂದಣಗರ ಮುಂದಿರಕ್ಕೆ ಪೋಪವಂ ಮುಂದೆ ಸಂದಣಿಸಿ ನಿಂದ ನೆರವಿಯಂ ಭೋಂಕನೆ ಕಂಡು (ವರ್ಧಪು. ೩-೧೨ವ) ; ತಂದೆಯ ಮಸದಾಗ್ರಹಮಂ ನಂದಿಸುವೆನೆನುತ್ತ ಮಾಗಿದ ಕೈಮೆರಸಾಗಳ್ ತಂದೆಯೊಡನೆಂದಳಂದರವಿಂದಾನನೆ ಮಧುರವಚನ ರಚನೆಗಳಿಂದಂ (ಭಗಾಸ್ತ್ರ. ೬-೬). ನೊಂದಿಸು : ೧. ಭೀಮನಂ ತಿಳುಪಿ ನಾನಾಪರಿಯಲಿ ನೊಂದಿಸಿದ ಶೋಕಶಿಖಿಯನ್ನಾಗ ಬಳಿಕ ಯಮನಂದನನು (ತುರಂಗ. ೯೫-೩೨) ; ಅಡವಿಯಲ್ಲಿ ಅಡಿಗೆ ಮಾಡಿಕೊಂಡು ನೊಂದಿಸದೆ ಹೊರಟು ಹೋಗುತ್ತಾರೆ (ಮುಂಬಯಿ. ೫-೩) ; ಬಂಡಾಯದ ಬೇಗೆಯನ್ನು ಕಾಲಲ್ಲಿ ತುಳಿದು ನೊಂದಿಸಿಬಿಟ್ಟಿತು (ಇಪ್ಪಕ. ೦೯೪). [ ನಂದು + – ಇಸು₃ ]

**ನಂದಿಸು**₂ (ಕ್ರಿ). ಸಂತೋಷಗೊಳಿಸು : ಆನಂದಪಡಿಸು : ಒಂದು ದಾರಿಯುಲೀಗ ಕ್ಷಣದಲ್ಲಿ ಸಾಗಿ ವಂದಿಸುವೆ ನಂದಿಸುವೆ ಮಾತಿನನುರಾಗಿ (ಕಎಪು. ೧೨-೪). [ ನಂದನ + – ಇಸು₃ ]

**ನಂದಿಸೇನ** (ನಾ). ಒಬ್ಬ ಜೈನಯತಿಯ ಹೆಸರು : ಉಱುಪತ್ತನನ್ನಿಸೇನ ಪ್ರವರಮುನಿವರನ್ದೇವಲೋಕಕ್ಕೆ ಸನ್ದಾರ್ (ಎಕ. II, ೫೮-೪; ಸು. 700).
[ ನಂದಿ + ಸೇನ ]

**ನಂದಿಸೋಪಾನ** (ನಾ). = ನಂದಿಮೆಟ್ಟಿಲು : ತಂಗಿಯುಮ್ಮ ಹೋಗಿ ತಗಱಾರ ಭಾಸಿಂಗ ನಂದಿಸೋಪಾನದ ನಸಲೀಗಿ (ಮಲ್ಲಿಗ. ೬೯). [ನಂದಿ+ಸೋಪಾನ]

**ನಂದಿಹಾಳ** (ನಾ). ಒಂದು ಬಗೆಯ ಜೋಳ : ಮೂರ ತಿಂಗಳ ಜೋಳ, ದೊಡ್ಡಜೋಳ . . . ನಂದೀಹಾಳ ಈ ಆರು ಜಾತಿಗಳನ್ನು ಮುಖ್ಯ ಪೈರುಗಳಾಗಿ ಬಿತ್ತುವರು (ಕಭಾಗ. ೨೬೦). [ ? ]

**ನಂದೀಮುಖಿ** (ನಾ). ಒಂದು ಬಗೆಯ ಗೋದಿ : ನಂದೀಮುಖಿಯೆಂಬ ಸಣ್ಣವಾಗಿಯೂ ಉದ್ದವಾಗಿಯೂ ಇರುವ ಗೋದಿಯು ಶೀತ ಒಗರು (ಅಷ್ಟಾಂಗ. ೦೧೫). [ ? ]

**ನಂದೀಶ** (ನಾ). = ನಂದಿಕೇಶ್ವರ ೧: ನಂದೀಶಂ ವೀರಭದ್ರಂ ಘನರವನಚಲಂ (ಗಿರಿಕ. ೦೦-೬೫) ; ನಂದೀಶ ವೀರಭದ್ರ ಸ್ಕಂದ ಗಜಾನನಮುಖಾಖಿಲ ಪ್ರಮಥಗಣಂ . . . ಎಸೆದಿರ್ದಂ (ಉದ್ಭಟ. ೧೨-೧೨೫) ; ನಿರುತದಿಂ ದಶಿವೀರಘೋರಾಪರಿಮಿತೋತ್ಕಟಪಟುತಪವನಾಚರಿಸಿದನು ನಂದೀಶನತಿಶಯಮತಿಶಯಮವಿದೆನಲು (ಬಸಪು. ೨-೧೫). [ ನಂದಿ + ಈಶ ]

**ನಂದೀಶ್ವರ** (ನಾ). ೧. = ನಂದಿಕೇಶ್ವರ ೧: ಆದಿಶಿವಲಿಂಗಕ್ಕೆ ವಾಹನವಾದ ನಂದೀಶ್ವರನೆ ಮತ್ತೆ ಶಿಲಾದಮುನಿಗುದಯಿಸಿದ ಪರಿಯಂ ಪೇಳ್ವೆನು (ಬಸಪು. ೧ ಸೂಚನೆ) ; ನಂದೀಶ್ವರವಂಶಜನಿವನೆಂದಱಿಪುವ ತೆಱದೊಳಮಳ ಗಗನಾಂಗಣದೊಳ್ ಸ್ಪಂದದ ಬಂಕದ ಬಿರುದಿನ ನಂದೀಧ್ವಜವಿತತಿ ಪುರದೊಳಿರ್ದುದು ಚೆಲ್ವಿಂ (ಹಮ್ಮೀರ. ೧-೬೫) ; ಬೇಗದಿಂದೈದಿ ನಂದೀಶ್ವರಂ ಗರುಡನಂ ಪೋಗದಿರ್ತಲೆಯನಾಭರಣಕ್ಕೆ ತಾರೆಂದು ನಾಗಭೂಷಣನಟ್ಟಿದಂ ತನ್ನನೀಯದೊಡೆ ನಿನಗೆ ಬಹುದುಪಹತಿಯೆಂನೆ (ಪ್ರಮಿಥಾ. ೦೪-೨೧). ೨. [ಜೈನ] ಮಧ್ಯಮಲೋಕದ ಎಂಟನೆಯ ದ್ವೀಪ. ೩. ಜೈನರ ಒಂದು ವ್ರತ,-ಹಬ್ಬ ; P ಕಾರ್ತೀಕ, ಫಾಲ್ಗುಣ, ಆಷಾಢ– ಈ ಮೂರು ತಿಂಗಳುಗಳ ಕಡೆಯ ಎಂಟುದಿನಗಳಲ್ಲಿ ನಂದೀಶ್ವರವೆಂಬ ದ್ವೀಪದಲ್ಲಿ ಸೌಧರ್ಮಾದಿ ಇಂದ್ರರು ಅದೇ ಸಮಯದಲ್ಲಿ ಲೋಕದ ಜನರೂ ಈ ರೀತಿ ಪೂಜಿಸುತ್ತಾರೆ. ಇದಕ್ಕೆ ನಂದೀಶ್ವರ ಎಂದು ಹೆಸರು : ಇತ್ತ ದಾದಿಯುಂ . . . ನಂದೀಶ್ವರದೆಂಟುದಿವಸಮಭಿಷೇಕ ಮುಮರ್ಚನೆಯುಮುಪೋಪವಾಸಮುಮಂ ಮಾಡಿ (ವಡ್ಡಾರಾ. ೦೦೬-೫); ಶಕವರ್ಷವೆಂಟುನೂಱಕೆ ಕಡೆಯೊಳಱುಪತ್ತುಮೂಱು ಸಂದಂದು ಜಗತ್ಕಟ ಪ್ಲವಸಂವತ್ಸರದ ಕಾರ್ತಿಕಂ ಮುದಮಾನೀಯೆ ನಂದೀಶ್ವರದೊಳ್ (ಆದಿಪು. ೦೬-೭೬) ; ಶಕವರ್ಷಂ ಪಂಚದಶಾಧಿಕ ನವಶತಮಾಗೆ ವಿಜಯ ಸಂವತ್ಸರ ಕಾರ್ತಿಕ ನಂದೀಶ್ವರದಿನದೊಳ್ ಪ್ರಕಟಿಸಿದುದು ರತ್ನನಿಂದಜಿತಪುರಾಣಂ (ಅಜಿಪು. ೧೨-೫೪) ; ಭವಭವದೊಳ್ ಕಟ್ಟಿದನೇಕವಿಧದ ದುಷ್ಕರ್ಮಮಂ ಕಟಿಲ್ಬರ್ ಪುಣ್ಯಾಸ್ರವದೊಳ್ ನೆರೆಯಲ್ ಭವ್ಯರ್ಗೆ ಮಿದಿವಸಮನಲ್ಕೆ ಬಂದ ನಂದೀಶ್ವರದೊಳ್ (ಪುಣ್ಯಪು. ೩-೧೨೪) ; ಚಂದಣವರ್ಣಿಯ ನಂದೀಶ್ವರದ ನೋಂಪಿಯ ಕಥೆ ಒಂದು ಚಂಪೂಗ್ರಂಥ (ಯುಕೋಸಂ. ೬೭ ಟೀಕೆ). 'ತಿಱುನಂದೀಶ್ವರ' ಪರಾ. ೪. ಬಾಹುಬಲಿ ವಿಗ್ರಹದ ಮುಂದಿರುವ ಮಂದರವೆಂಬ ತೇರಿನ ಭೇದಗಳಲ್ಲೊಂದು: ಬಾಹುಬಲಿವಿಗ್ರಹ . . . ಇದರ ಮುಂದಿರುವ "ತೇರಿ"ಗೆ ಮಂದರವೆಂಬ ಹೆಸರು. ಮಂದರಗಳಲ್ಲಿ ನಂದೀಶ್ವರ ಮತ್ತು ಮೇರು ಎಂಬ ಭೇದಗಳಿವೆ (ಹೊಯ್ಸಳವಾ. ೨೦೭).

ನಂದೀಶ್ವರದಷ್ಟಮಿ = ನಂದೀಶ್ವರವ್ರತವನ್ನು ಆಚರಿಸುವ ಅಷ್ಟಮಿ: ಜೈನಶಾಸನಗಳಲ್ಲಿ ಮುಖ್ಯವಾಗಿ ಎರಡು ಹಬ್ಬಗಳ ಅಥವಾ ವ್ರತಗಳ ಪ್ರಸಕ್ತಿ ವಿಶೇಷವಾಗಿ ಬರುತ್ತದೆ. 'ಜೀವದಯಾಷ್ಟಮಿ' ಎಂಬ 'ಪರ್ವ' ಒಂದು; ಮತ್ತೊಂದು 'ನಂದೀಶ್ವರದಷ್ಟಮಿ'; ಎರಡನೆಯ ಪರ್ವಕ್ಕೆ 'ಶಿಖನಂದೀಶ್ವರ' ಎಂಬ ಹೆಸರೂ ಉಂಟು (ಶಶಾಅ. ೯೯). ನಂದೀಶ್ವರದ್ವೀಪ = ಜೈನರು ನಂದೀಶ್ವರನೋಂಪಿಯ ಕಾಲದಲ್ಲಿ ಜಿನನನ್ನು ಪೂಜಿಸಲು ಹೋಗುವ ದ್ವೀಪ: ನಂದೀಶ್ವರದ್ವೀಪಮಹಾಚೈತ್ಯಾಳಯೊಳ್ ಪಾವನತರನವಸಂಗೀತಕಕ್ರೀಡೆಯಂಮಾಡಿ ಮನಃಪ್ರಹ್ಲಾದಮಂ ತಾಳ್ದುವನನವರತಂ ಶ್ರೀಧರಂ ಕೇಳಿಶೀಲಂ (ಚಂದ್ರಪ್ರ. ೯-೭೬). ನಂದೀಶ್ವರನೋಂಪಿ = ನಂದೀಶ್ವರ ೩: ನಂದೀಶ್ವರನೋಂಪಿಯ ಸಮಯದಲ್ಲಿ ದಾನ ಮಾಡುವುದು ಶ್ರೇಷ್ಠವೆಂದು ಶಾಸನವೊಂದು ಹೇಳುತ್ತದೆ (ಶಶಾಅ. ೯೯). [ ಸಂ. ]

**ನಂದೀಶ್ವರಂಗೆಯ್** (ಕ್ರಿ). ನಂದೀಶ್ವರವ್ರತವನ್ನು ಮಾಡು, - ಆಚರಿಸು: ಫಾಲ್ಗುಣಮಾಸದ ನಂದೀಶ್ವರದಾಂದಿನವರುಂ ಕೊಡಗೂಸುಗಳುಮ ಮಾಸಂಗೆಯ್ದು ಬಸದಿಗರ್ಚನೆಯಂ ಕೊಂಡು ಪೋಗಿ ದೇವರನರ್ಚಿಸಿ ನಂದೀಶ್ವರಂಗೆಯ್ದು ಬಂದಿಸಿ (ವಡ್ಡಾರಾ. ೧೧೩-೦೮).
[ ನಂದೀಶ್ವರ + ಕೆಯ್$_1$ ]

**ನಂದು, ನೊಂದು$_1$** (ಕ್ರಿ). ೧. (ಬೆಂಕಿ, ಬೆಳಕು ಮೊದಲಾದುವು) ಆರಿ ಹೋಗು; ಇಲ್ಲವಾಗು: "ನಂದು - ವಿನಾಶೇ, ಗತತೇಜಸಿ ಚ (ಬೆಳಕು ತಪ್ಪಿಹೋಗು)" (ಶಮದ); ಇಂದುಕಿರಣಂಗಳಿಂದಂ ಚಂದನರಸದಿಂದೆ ಮಾಗಿಯಾ ನೀರಿಂದಂ ನಂದದು ಪರಿತಾಪಾನಳನಿಂದಜ್ದಿದೆಂ ನಿನ್ನ ಮೆಯ್ಯ ಕಾಮಜ್ವರಮಂ (ಕವಿರಾ. ೩-೧೬೪); ಹೋಮಾಗ್ನಿಯನೆಱೆಂಕೆಯ ಗಾಳಿಯಿಂ ನಂದಲೀಯದುರಿವುವ ರಾಜಹಂಸೆಗಳುಮಂ (ಪಂಪಭಾ. ೦-೧೧೩ ವ); ಕಿಚ್ಚು ನಂದಿದೊಡೆ ಮತ್ತಮಿಂಧನಮನಿಕ್ಕಲೀದು ಕೊಡಲಿಗೊಂಡು ಪುಳ್ಳಿಯಂ ಪೋಟ್ವಾಗಳ್ (ಶಾಂತಿಪು. ೩೭೪); ಮನಬೀಸರವೆಂಬ ಗಾಳಿ ಬೀಸಿತ್ತು ವಿದ್ಯಾಮುಖದ ಜ್ಯೋತಿ ನಂದಿತ್ತು (ಅವತೆಂ. ೯೦-೧೭೦); ಮರೀಚಿ ನಂದುವ ಸೊಡರ ಕುಡಿವೆಳಗಿನಂತೆ (ವರ್ಧಪು. ೧೦-೯೯ವ); ಕಿಚ್ಚು ನೀರಿಂದ ನಂದುವುದದು ನೆಯ್ಯಿಂದ ಹೆಚ್ಚುವುದಂತೆ ಕಾಮಾಗ್ನಿ ಸಚ್ಚಿದಾನಂದಾತ್ಮರಸದಿ ನಂದುವುದದು ಹೆಚ್ಚುವುದಬಲೆಯರಿಂದ (ಭರತೇ. ೬೩-೯೦). ೨. ಶಮನವಾಗು; ಕುಂದು; ನಾಶವಾಗು: ಎರ್ದೆಗೆಟ್ಟಿನೀಗಳೇ ದಿಟ್ಟ ಮರಳ್ದು ನಂದಿದವುದು (ಕಾದಂಪೂ. ೦೯೯); ತಂದೆಯನಗಲ್ದ ವಿರಹಂ ನಂದದೆ ಕಾರ್ಪಾಸಶಿಖಿಯೊಲೊಳಗೊಳಗಬಲುಂ ಸಂಧಿಸೆ ನಿಲಲಾಱದೆ ನಿಜಮಂದಿರದೊಳ್ ರಾಜ್ಯಸುಖಪರಾಙ್ಮುಖನಾದಂ (ಅನಂಪು. ೦೦-೩೩); ಹೆಚ್ಚಿತು ಧರ್ಮ ಧರೆಯೊಳು ದುರ್ಮಾರ್ಗದ ಕಿಚ್ಚಿನೇಳಿಗೆ ನಂದಿತು (ಕೆಂಪವಿ. ೩-೧೦); ನಂದಿದರು ದುಷ್ಕೃತ್ಯದ ಮನಸತ್ಯೋನ್ನತರು ರಾಮಕೃಷ್ಣಾದಿಗಳು ದಿವ್ಯಭೂತಿಗಳು (ಮಿಶದೀ. ೯೦-೧). 'ನಂದಿಸು$_1$' ಪರಾ. ೩. ಕಳೆಗುಂದು; ತೇಜೋಹೀನವಾಗು; ಮಂಕಾಗು: ಕಡುನಂದಿ ಕುಂದಿ ಸಮ್ಯಕ್ಕುಲದೀಪಕಂಗೆ ಮಗುಟ್ಟೀದುಸಿರ್ದರ್ ಸಚಿವರ್ವಿಷಾದದಿಂ (ಅದ್ವಟ. ೦೦-೯೦). **ನೊಂದು$_1$**: ೧. ಸವತಿಮತ್ಸರವು ಪ್ರಪಂಚದಲ್ಲಿ ಹೆಣ್ಣಿನ ಪಾಲಿಗೆ ಬಂದ ನೊಂದದ ಕಿಚ್ಚು (ಕನ್ನಡಾ. ೦೦೩). ೨. ಅತ್ರಿಯ ಸುತನೆ ನಿನ್ನಯ ಕಳೆಯು ನೊಂದುಗುವೆಂದು ಸುರಗುರು ನೆಳನವೃಂಗೆ ಶಾಪವಿತ್ತನು (ಸಂಭಶ. ೦೨-೩); ಎಂದಿಗಾನುಂ ನಿನ್ನ ಪೂರ್ವಾಚಣೆಗಳ ಲೆಕ್ಕ ನೊಂದಬೇಕೆಂದಿರ್ದೊಡಿಂದ ಮೊದಲನಿಡು (ಮಂಕುಳ. ೭೭೭).

ನಂದದೀವಿಗೆ, ನಂದಾದೀವಿಗೆ = ಆರದೆ ಇರುವ ದೀಪ; (ದೇವರ ಮುಂದೆ) ನಿರಂತರವಾಗಿ ಉರಿಯುವ ದೀಪ, - ಜ್ಯೋತಿ: ಜನಚಂದ್ರಕುಮಾರಂ. . . ಪೋಲ್ತು ಕನಕರುಚಿಯಿಂದಮಾ ಪಳಿಕಿನ ಕೊಡನೊಳಗಿರ್ದ ನಂದದೀವಿಗೆಯಿರಮಂ (ಶಾಂತಿಪು. ೦೦-೯೩); ಮೂಲಸ್ಥಾನಕಲಿದೇವಸ್ವಾಮಿಗೆ ವಿಷ್ಣುದೇವರ್ಗ್ಗೆ ನನ್ದದೀವಿಗೆಗಂ ನಿವೇದ್ಯಕ್ಕಂ ಶ್ರೀಖಣ್ಡಕ್ಕಂ ಧೂಪಕ್ಕಂ ಮೊದಲ್ಗೊಟ್ಟ ಗದ್ಯಾಣಂ ಪದಿನ್ನೆಯ್ದು (ಸೌಇಇ. XI-1, ೯೩-೩೩; 1064); ಈ ಪೊನ್ನ ವೃದ್ಧಿಯೊಳಂ ಕೆಯ್ಯ ಗುತ್ತಗೆಯೊಳಂ ಗಂಧಧೂಪನಿವೇದ್ಯ ನಂದದೀವಿಗೆಗಂ ಆಱ್ದುಸುವ ಮಾಣಿಯ ಜೀವಿತಕ್ಕಂ ಕುಡುವುದು (ಕಇ. II, ೯-೩೪; 1076); ಶ್ರೀಪಾದವಯದೇವಗೆ ಸ್ನಾನಕ್ಕೆ ಆ ಕಪಿಲೆಯ ಬಿಟ್ಟು ನನ್ದನವನ ಮಾಡಿಸಿ ನಂದಾದೀವಿಗೆಯಂ ಪಾಲೆ ಪೂವ ನದಿಯ ಸಿಲ × × × ಬ್ರಹ್ಮಚಾರಿಯ × × × ನದೊಳು (ಎಕ. IV, ಗುಂಡ್ಲುಪೇ. ೫೯-೬; 1000?); ಮತ್ತಂ ದೇವರ್ಗೆ ನನ್ದಾದೀವಿಗೆಗತ್ತ ಗಾಣವೊನ್ದದಕೆ ಕರವಂದ ತಳಭೋಗಮಸತು ಮೊದಲಾಗಿ ಸರ್ವಬಾಧಾಪರಿಹಾರಂ (ಸೌಇಇ. XI-1, ೩೨-೭೪; 1007); ದೇವರ್ಗ್ಗೆ ಒನ್ದು ನನ್ದಾದೀವಿಗೆ ಚನ್ದ್ರಸೂರ್ಯ್ಯಕೃತಂ ಕುನ್ದದೆ ನಡೆವನ್ನಾಗೆ (ಎಕ. XIV, ಮಳವ. ೧೨೪-೦; 1014); ನಂದಾದೀವಿಗೆಯ ನಡೆಸಿಹೆವೆಂಬವರ ಮುಖವ ನೋಡಲಾಗದು (ಬಸವ. ೩೨೩); ಶಂಕರ, ಮಧ್ವ, ರಾಮಾನುಜರಂಥ ಆಚಾರ್ಯರು . . . ಭಗವದ್ಗೀತೆಯಿಂದ ಸ್ಫೂರ್ತಿ ಪಡೆದಿದ್ದಾರೆ; ತಮ್ಮ ಬಾಳ ನಂದಾದೀವಿಗೆಯನ್ನು ಹೊತ್ತಿಸಿಕೊಂಡಿದ್ದಾರೆ (ಧರ್ಮಸಾ. ೦೨೬). ನಂದಳಕ = ನಂದದೀವಿಗೆ (?): ನಯಿವೇದ್ಯ ನಂದಳಕ ನಿತ್ಯಚಿತ್ರ (ಸೌಇಇ. ೦೦೩, ಉಡುಪಿ. ೩೯೦-೮; ?). ☞ ಇದು 'ನಂದಾವೆಳಕು' ಎಂಬುದರ ಅಪಲಿಖಿತವಿರಬಹುದು. ನಂದಾಉಳಕ, ನಂದಾವಳಕ, ನಂದಾವೆಳ=ನಂದದೀವಿಗೆ: ಶ್ರೀಬುಕ್ಕಿದೇವಯ್ಯಗಳ ಕಯ್ಯಲು ಶ್ರೀಮಧುಕನಾಥದೇವರಿಗೆ ಮೂಱುನಂದಾಉಳಕವನೂ ಆಚಂದ್ರಾರ್ಕಸ್ಥಾಯಿಯಾಗಿ ನಡಸುವಂತಾಗಿ ಕೊಟ್ಟರು (ಸೌಇಇ. XX, ೩೭೭-೯; ಹು.14ನೆಯ ಶತ); ನೈವೇದ್ಯ ನಂದಾವಳ ಪೂಜಾರಿಯ[ ಜ ]ತಪತ್ರ (ಸೌಇಇ. XX, ೩೨೯-೩೬; 1369 ?); ನಂದಾವೆಳಕೆ ಪೋದು ಗಾಣದ ಮಾನೆಣ್ಣೆ ಸಲುವದು (ಎಕ. VIII, ಶಿವಮೊ. ೬೯-೩೬; 1320). ನಂದಾದೀಪ = ನಂದದೀವಿಗೆ: ಹೊಂದಿ ನಿದ್ರೆಯ ದೇವ ನಂದಾದೀಪವ ಅಂದು ಪ್ರಜ್ವಲಿಸುತ ಮಿಂದುಟ್ಟು ಪೊಂದಟ್ಟಿಯ ಮಣಿಮ್ಯಂದದ ಭೂಷಣ ಸಿಂಧೂರಸೀಮಂತದಲಿಟ್ಟು (ಪ್ರಸಭಾ. ೦೯-೦); ವಿಷ್ಣುವಿನಮಂದಿರದಲ್ಲಿ ಒಂದು ಪ್ರಕಾಶವಾದ ನಂದಾದೀಪ ನಂದಿದಂತೆ ಆಯಿತು (ಸತ್ಯಶ. ೭೬); ಅರ್ಚಕ ಜನ್ನಯ್ಯ . . . ನಂದಾದೀಪಕ್ಕೆ ಎಣ್ಣೆ ಸುರಿದು . . . ಧ್ವಜಮರದ ಕಟ್ಟೆಯ ಹತ್ತಿರ ಬಂದಿದ್ದರು (ಚಿದ್ವಸ. ೩೨೬). ನಂದಾದೀಪ್ತಿ = ನಂದದೀವಿಗೆ: ಆ ಪುರದಲ್ಲಿ ಪುಟ್ಟಿದ ದ್ರವ್ಯದಲ್ಲಿ ರುದ್ರಾಭಿಸೇಕ ಅಮ್ರುತ್ತಪಡಿ ನಂದಾದೀಪ್ತಿ . . . ಮುಂತಾಗಿ ನಡೆಯಬೇಕೆಂದು ಆ ಪುರವನೂ . . . ಕೊಟೆಉ (ಎಕ. XV$^{I}$ ಚೆನ್ನರಾ. ೭೩-೦೯; 1529); ದೇವಸ್ಥಾನ ಶಿಕ್ಕೆ ಅಮ್ರುತಪಡಿ ನಂದಾದೀಪ್ತಿ ಮುಂತಾದ ದೇವತಾವೆಚ್ಚಕ್ಕೆ . . . ಉಂಡಿಗೆ ವಿವರ (ಎಕ. VII, ಶಿವಮೊ. ೩-೮೩; 1641); ಬಿನ್ನಹ ಸ್ಥಾನಿಕ ತಂಪಯಣನು ಗಣಾಚಾರದ ಕಟ್ಟುಗೆಯ ತೆರ್ಯವ ಹಣವನು ಸಿವರಾತ್ರಿ ಪುಣ್ಯಕಾಲದಲೂ ಧಾರಾಪೂರ್ವಕವಾಗಿ ನಂದಾದೀಪ್ತಿಗೆಂ . . . ನಂದಾದೀಪ್ತಿಯನು ನಡಸುದು (ಎಕ. VII, ಶಿವಮೊ. ೩೦-೦೦; ?). ನಂದಾದ್ಯುತಿ = ನಂದದೀವಿಗೆ: ಕಡಪೂರ ವೀರೇಶ್ವರದೇವರಿಗೆ ಅಮ್ರುತಪಡಿ ನಂದಾದ್ಯುತಿ ಅಂಗರಂಗವಯಿಭೋಗಕ್ಕೆ . . . ಸಮರ್ಪಿಸ್ಸಿವೆ (ಎಕ. XI, ಹೊಳಲ್ಕೆ. ೯೦-೮; 1640). ನಂದಾಬೆಂಕಿ = ಆರದೆ ಇರುವ ಬೆಂಕಿ; ನಿರಂತರವಾಗಿ ಉರಿಯುವ ಅಗ್ನಿ: ಆ ಬೆಂಕಿ ನಿನ್ನೆ ಮೊನ್ನೆಯದಾಗಿರಲಿಲ್ಲ; ಅನೇಕ ದಿನಗಳಿಂದ ಇಪ್ಪತ್ತನಾಲ್ಕು ಗಂಟೆಯೂ ಆರದೆ ಸಜೀವವಾಗಿದ್ದ 'ನಂದಾಬೆಂಕಿ'ಯಾಗಿತ್ತು (ಮಲೆಮ. ೬೭೪). ನಂದಾಬೆಳಕು, ನಂದಾವೆಳಕು = ನಂದದೀವಿಗೆ: ಆ ಕಿಮಿಸೆಟಿಯರು . . . ಸಂಕ[ ರ ] ನಾರಾಯಣ (೦) ದೇವರಿಗೆ ಕಟಕಂಡ ತೆಱು ಒಂದು ನಂದಾಬೆಳಕು ವರುಶ ೧ದಕಾ ಯೆಂಣೆ ಹಾನೆ ೩೬ನು ನಡಸುವರು

(ಸೌಇಇ. IX-ii, ೪೦೯-೨೩; 1380) ; ನೂಱು ಬತ್ತದ ಮಣ್ಣ ಯಾಱು ಪಸುವಂ ಮಾದೇವಗ್ಗ್ರವಾ ವಳ್ಳಿಗೊಣ್ಡ ದೇವಗಂ ನನ್ದಾವೆಳಕಿಂಗೆ ಕೊಟ್ಟಂ (ಎಕ.IV, ಗುಂಡ್ಲುಪೇ. ೯೩-೨೭; 1049); ಅಡಿಗನಂ ಭಾಗವ ಹಿತ್ತಿಲ ಮೇಲೆ ವೊಂದು ನಂದಾವೆಳಕು . . . ಮೂ[ಲ] ಗಡಿಯಿಂದಲುವೊಂದು ನಂದಾವೆಳಕು . . . ಗುಡಿಯ ಹಿತಿಲ ಮೇಲೆ ಒಂದು ನಂದಾವೆಳಕು (ಕೆಇ. III, ೪-೧೭; 1339) ; ಸೌಮ್ಯಕೇಶವ ಅವ್ಯಯತನಾರಾಯಣದೇವರ ಅಮೃತಪಡಿಗೆ × × × ಪ್ರತಿದಿನ ೧ ಕಂ ನಾಡಹಾನ ೩ ನಂದಾವೆಳಕಿಂಗೆ . . . ನಡೆಸುವ ಯೆಂಣೆ ವರುಷ ೧ ಕಂ ಹಾನ ೨ಡನೂ ನಡೆಸುವಂತಾಗಿ (ಸೌಇಇ. IX-ii, ೪೦೩-೧೦; 1357). ನಂದಾವನ = ಸದಾಕಾಲವು ಹೂವು ಬಿಡುವ ತೋಟ: ಪ್ರತಿದಿನವೂ ಶಿರುಪಡಿವಾಳ ಸಮರ್ಪಿಸುವ ನಂದಾವನ ಮಾಡುವ ಸಂಬಳ ೬ ವರಹ (ಎಕ. XIV, ಶ್ರೀರಂಗ. ೯೫-೩; 1535) ; ದೇವರ ನಂದಾದೀವಿಗೆ ಕೆಱೆಯ ಕೆಳಗಣ ನಂದಾವನೆಯಿಷ್ಟನು ಸರ್ವ್ವಮಾನ್ಯವಾಗಿ ನಡಸಿ ಬಹಾಂಗೆ ಬಿಟ್ಟ ಮಗ್ಗ ತೋಟ (ಎಕ. XIV, ಶಿಬುಮ. ೨೪೩-೫; ?). ನಂದಿ ಪೋಗು, ನಂದಿ ಹೋಗು, ನೊಂದಿ ಹೋಗು = ೧. ಇಲ್ಲವಾಗು ; ನಾಶವಾಗು ; ಶಮನವಾಗು : ವಾಮನಪದಹತಿವಿದಳಿತ ಜೀಮೂತವಿಮುಕ್ತಬಹಳಜಲಧಾರೆಗಳಿಂದಾ ಮುನಿಜನಾಪಕಾರಕ ಧೂಮಧ್ವಜನೆಯ್ದೆ ನಂದಿ ಪೋದತ್ತಾಗಳ್ (ಅರ್ಜನೇ. ೭-೩೫); ನಾನೆಂಬ ಜೀವರು ನಂದಿಹೋಗುವರ್ಕ್ಕೆಸಿಯುವದರಿಂಗಹುದೆ ಶಿವಪದವು (ಸಂಭಶ. ೧೩-೫೦). ೨. ಆರಿಹೋಗು ; ಬೆಳಕನ್ನು ಕಳೆದುಕೊಳ್ಳು : ಕಪಾಲಕುಂಡಲೆಯು . . . ಕೊಠಡಿಯನ್ನು ಬಿಟ್ಟು ಹೊರಗೆ ಹೊರಬಿದ್ದದ್ದೇ ತಡ ಮನೆಯ ದೀಪವು ನೊಂದಿಹೋಯಿತು (ಕಪಾಕುಂ. ೦೨೯). ನಂದೆವೊಯ್ = ನಂದುವಂತೆ ಹೊಡೆ ; ನಾಶವಾಗುವಂತೆ ಮಾಡು : ಧೂರ್ಜಟಿಯ ನೊಸಲ ಕಣ್ಣಿಂ ಸ್ಮರಂ ನಂದೆವೊಯ್ದಂ (ಮಲ್ಲಿಪು. ೨-೫೭) ; ಉರಿಲಿಂಗಮನಾಲಿಂಗಿಸಲುಂ ಯುಗಾಂತಹುತವಹನಂ ನಂದೆವೊಯ್ಕಲುಂ (ಜಗವಿ. ೭-೮೪ವ) ; ತಳ್ತು ಚುಂಬನಮಾನೆ ಹರ್ಷೆ ತತ್ಪ್ರದುಚಿತ ಕ್ರಿಯೆಯಿಂದಮ ನಂದೆವೊಯ್ದು (ಚಂದ್ರಪು. ೮-೯೪) ; ಮನಸ್ತಾಪಮಂ ಧೃತಿಸಾಂದ್ರಚಂದ್ರಿಕೆಯಿಂ ನಂದೆವೊಯ್ದು (ರಾಜಶೇ. ೧೩-೯೭ವ).

[ ದೇ.೮ ತಮಿ. ನನ್ನು, ನತು, ನುತು, ನೊನ್ನು, ನೊತು ]

**ನಂದುರಿ** (ನಾ). ಒಂದು ಬಗೆಯ ಮರ : ಕಂಪುಗಂಧಗಿರಿ, ನಂದಿವೃಕ್ಷ, ಟೂನಮರ, ನೊಗೆ, ನಂದುರಿ, ಬೆಳಂದಿ, ಗಂಧಗರಿಗೆ (ಮೃಶಿಗಿ. ೧೯-೩೪೮).

[ ? ]

**ನಂದುವ** (ನಾ). ಒಂದು ವಂಶದ ಹೆಸರು (?) : ಜಕ್ಕಿಯಬ್ಬೆ ನಾಟಿಸ್ಗ ವೃಣ್ಡಗೆಯುಕ್ತ್ತಿರೆ ನಣ್ದುವರ ಕಲಿಗಂ ಪೆರ್ಗ್ಗಡೆತನಂ ಗೆಯ್ಯೆ (ಎಕ. VII, ಶಿಕಾರಿ. ೨೧೯-೧೨; 918). [ ? ]

**ನಂದೆ** (ನಾ). ೧. ಶಕ್ತಿದೇವತೆ ; ದುರ್ಗೆ ; ಪಾರ್ವತಿ. ೨. [ಜ್ಯೋತಿ] ಎರಡೂ ಪಕ್ಷಗಳ ಪಾಡ್ಯಮಿ, ಷಷ್ಠಿ ಮತ್ತು ಏಕಾದಶಿ ತಿಥಿಗಳು : ಅಭಿಧಾನಕ್ರಮದಿಂ ನಂದೆ ಭದ್ರೆ ಜಯೆ ರಿಕ್ತೆ ಪೂರ್ಣೆಯೆನಿತುಂ ಪ್ರತಿಪತ್ಪ್ರಭೃತಿದಿನಂಗಳುಂ (ಲೋಕೋಪ. ೦-೨) ; ನಂದಾ ಭದ್ರಾ ಜಯಾ ರಿಕ್ತಾ ಪೂರ್ಣೆಯೆಂದು ಪಾಡಿವಾದಿಯಾಗಿ ತಿಥಿಪಂಚಕಂಗಳಕ್ಕುಂ (ಜಸಾರ. ೭೭) ; ನಂದೆಯುನು ಭದ್ರೆಯುನು ಒಂದಾಗಿ ಅರ್ಥಿಸಲು ಅಂದಿನ ತಿಥಿಗೆ ಸವನಾಗೆ ಗ್ರಹಣ ತಾ ಮುಂದೆ ಬಂದಿಹ್ಯ (ಸರ್ವಜ್ಞ. ೧೫೭೦) ; ಈ ತಿಥಿಗಳಲ್ಲಿ ನಂದಾ, ಭದ್ರಾ, ಜಯಾ, ರಿಕ್ತಾ, ಪೂರ್ಣಾ ಎಂಬ ಸಂಕೇತವು ಪಾಡ್ಯ ಮೊದಲು ಪಂಚಮಿವರೆಗೂ ಆಗುವವು. ಹೀಗೆ . . . ಅಮಾವಾಸ್ಯೆ ಪರ್ಯಂತ ೬ ಸಲ ಸುತ್ತಿಬರುವವು (ಜಸಾರ. ೩೯೦ ಪದ್ಯಾರ್ಥ). [ ಸಂ. ನಂದಾ ]

**ನಂದ್ಯಾಮ್ಲ** (ನಾ). ಒಂದು ಬಗೆಯ ಸಸ್ಯ : "ಕೋಶಾಮ್ರಃ-ನಂದ್ಯಾಮ್ಲ" (ಓಷಧಿ. ೪೧). [ ? ]

**ನಂದ್ಯಾಲ** 'ನಂದಿಯಾಲ' ನೋ.

**ನಂದ್ಯಾವರ್ತ** (ನಾ.) ೧. = ನಂದಿಬಟ್ಟಲು : "ಗಂಧರಾಜಃ – ಶ್ರೀಗಂಧ, ನಂದ್ಯಾವರ್ತ, ಜವಾದಿ" (ಓಷಧಿ. ೪೭) ; ಕುಂದ ಮುಚುಕುಂದ ಮಂದಾರೇಂದೀವರನಂದ್ಯಾವರ್ತ . . . ಮಲ್ಲಿಕಾದ್ಯನೇಕ ಸುರಭಿಕುಸುಮಂಗಳಂ ಸಜ್ಜುಕಮಪ್ಪವಂ ಪುಟ್ಟಿಯೊಳ್ ತೀವಿಕೊಂಡು (ಪಂಚತಂ. ೧೧೭-೩) ; ನಂದ್ಯಾವರ್ತದ ಪೂವಂ ತಂದುಜ್ ನೋಣವೂಱಿದಡೆಗೆ ಪೂಸುಗೆ (ಅಮದ. ೧೩-೧೧೭) ; ನಂದ್ಯಾವರ್ತದ ಹೂವನ್ನು ಧರಿಸಿದರೆ – ನೇತ್ರದಲ್ಲಿ ಹುಟ್ಟಿದ ಹೂವು, ಕಾಯಿ ಮುಂತಾದ ರೋಗಗಳಂ ಪರಿಹರಿಸಿ . . . ವಿರಹವೇದನೆಯನ್ನು ಪರಿಹರಿಸುವುದು (ಸಕಲವೈ. ೪೪); ಪಾರಿಜಾತ, ನಂದ್ಯಾವರ್ತ . . . ಮೊದಲಾದ ಹೂಗಳೂ ಅಲ್ಲಿ ಬೇಕಾದಷ್ಟು ಇದ್ದವು (ಕರ್ಣಾಜ. ೧೫೫). ೨. ಪಶ್ಚಿಮದ ಬಾಗಿಲಿಲ್ಲದ ಒಂದು ಬಗೆಯ (ವರ್ತುಲಾಕಾರದ) ವಿಶಿಷ್ಟಾಕೃತಿಯ ಕಟ್ಟಡ : ದಿಕ್ಸ್ವಸ್ತಿಕಮೆಂಬ ಸಭಾಭೂಮಿಯುಂ ನಂದ್ಯಾವರ್ತಮೆಂಬ ಶಿಬಿರನಿವೇಶಮುಂ (ಆದಿಪು. ೧೫-೩ವ) ; ಸರ್ವತೋಭದ್ರಾಹ್ವಯವಿಶೇಷದಿಂ ನೋಂಪಿಯ ವಿಶೇಷಮಂ ನಂದ್ಯಾವರ್ತರಮಣೀಯತೆಯಿಂ ನಂದನವನಾಂತರಾಳಮಂ ಸ್ವಸ್ತಿಕವಿಸ್ತಾರದಿಂ ವಿವಾಹಮುಮನನುಕರಿಸಿ ಶೋಭಿಸುವುದು (ಸುಕುಮಾ. ೧೦-೫೦ವ) ; ಮಣಿಸತ್ತಿಗೆಯ ಮೇಗಮಂಟಪದ ಬಣ್ಣವಟ್ಟಿಗೆಯ ಅಮಳಗುಳಿಯ ನಂದ್ಯಾವರ್ತದ ತೋರಣದೋರಣದ ಲೋವೆಯ ಮದನಗೈಯ ಬಾಗಿಲ್ವಾಡದ ಸಿಂಗರದೊಂದು ದೇಗುಲಂ ಕಣ್ಗೆಡ್ಡಮಾಗಿ ರಂಜಿಕುಂ (ರಾಮಾಶ್ವ. ೫೪-೨೫)- ೩. ಒಂದು ಬಗೆಯ ದೊಡ್ಡ ಮೀನು : "ನಂದ್ಯಾವರ್ತಃ–ನಂದಿವಟ್ಟಮೀ, ಮೀನಿನ ಭೇದ" (ಓಷಧಿ. ೮೪). ೪. [ಅಶ್ವಶಾ] ಒಂದು ಬಗೆಯ ಚಿಹ್ನೆ,– ಗುರುತು : ಶ್ರೀವತ್ಸಂ ಕನ್ನಡಿ ನಂದ್ಯಾವರ್ತಂ ವರ್ಧಮಾನಕಂ ಸ್ವಸ್ತಿಕಮೆಂಬೀ ವಿವಿಧಲಾಂಛನಂಗಳನಾಮಸಿದ ವಾಜಿಗಾಮು ತ್ರಿಂಶದ್ವರ್ಷಂ (ಅಶ್ವಶಾ. ೫-೩೭). ೫. ದೇಹದ ಮೇಲೆ ಇರುವ ಒಂದು ಗುರುತು (?) : ನಾಭಿರಾಜಾಂಗಸಂಗತಮುಪ್ಪ ನಂದ್ಯಾವರ್ತದಂತೆ ಸೊಗಯಿಸುವ ನಂದ್ಯಾವರ್ತಂಗಳೊಳಂ (ಆದಿಪು. ೭-೧೧೭ ವ). P ಇದು ವಕ್ಷಸ್ಥಳದಲ್ಲಿರುವ ಶ್ರೀವತ್ಸಲಾಂಛನವಿರಬಹುದು : (ಚಾವುಂಪು. ೩೭೧ ನೋ).

[ ಸಂ. ]

**ನಂದ್ಯಾವರ್ತವಿಮಾನ** (ನಾ). [ಜೈನ] ಒಂದು ಸ್ವರ್ಗದ ಹೆಸರು : ವಾನರಾರ್ಯನುಂ ನಂದ್ಯಾವರ್ತವಿಮಾನದೊಳ್ ಸುರನಾರೀಮನೋಹರಂ ಮನೋಹರನೆಂಬನಿಮಿಷನಾದಂ (ಆದಿಪು. ೫-೭೦ ವ).

[ ನಂದ್ಯಾವರ್ತ + ವಿಮಾನ ]

**ನಂಬರು** (ನಾ). ೧. ಅಂಕೆ ; ಸಂಖ್ಯೆ : ನಿನ್ನದು ಎಷ್ಟನೆಯ ನಂಬರು ? (ಕೂಂ). ೨. ಪರೀಕ್ಷೆ ಮುಂತಾದ ಮೌಲ್ಯಮಾಪನದಲ್ಲಿ ಕೊಡುವ ಗುಣಾಂಕ : ನೀವು ರಷ್ಯನ್ ಮತ್ತು ಲೆಖ್ಖದಲ್ಲಿ ಹೆಚ್ಚು ನಂಬರುಗಳನ್ನು ತೆಗೆದುಕೊಳ್ಳುವವರೆಗೆ ನಿಮ್ಮನ್ನು ಅದರಲ್ಲಿ ಸೇರಿಸಿಕೊಳ್ಳುವುದಿಲ್ಲ (ಕಾಲಿಮ. ೭೫) ; ಎಲ್ಲದರಲ್ಲೂ ಹೆಚ್ಚು ನಂಬರು ಗಳಿಸಿ ತರಗತಿಗೇ ಅವನು ಮೊದಲಿಗನಾಗಿದ್ದಾನೆ (ಕೂಂ). ೩. ಸರಕಾರಿದಾಖಲೆಯಲ್ಲಿ ಒಂದು ಅಂಕೆಯನ್ನು ಪಡೆದಿರುವ ಜಮೀನು : ನೂರಿಪ್ಪತ್ತು ನಂಬರುಗಳು ಖಾಸಗಿ ಜಮೀನು ಎಂಬ ಆಧಾರ ಸಿಕ್ಕಿತು (ಗ್ರಾಮಾಯ. ೪) ; ದೂರದಿಂದಲೇ ಒಂದು ನಿಟ್ಟಿನಿಂದ ಮತ್ತೊಂದು ನಿಟ್ಟಿಗೆ ಕೈಮಾಡಿ ಅವೆಲ್ಲ ತನ್ನ ನಂಬರುಗಳೇ ಎಂದು ಇದ್ದು ಬಿದ್ದ ಹೊಲಗಳನ್ನು ತೋರಿಸಿದಾಗ ರಾಧಕ್ಕನ ತಂದೆ ಹಿರಿಹಿಗ್ಗಿದರು (ಗಂಗಾಸಾ. ೪೫) ; ಖಾತೆ ಇಲ್ಲ, ಎಕರೆ ಇಲ್ಲ, ನಂಬರಿಲ್ಲ, ಇದೇನ್ಬುದ್ಧಿ ನೀವೆ ಹಿಂಗ್ಮಾಡ್ತೀರಿ (ಹುಟ್ಟುಹ. ೧೩೮).

ನಂಬರ ಮನೆ = (ಉಕ) ಊಟದ ಮನೆ ; ಖಾನಾವಳಿ : ರಾಮಣ್ಣನಿಗೆ ಎರಡಾಣೆ ಕೊಟ್ಟು ನೇರವಾಗಿ ನಂಬರ ಮನೆಯಲ್ಲಿ ಊಟಮಾಡಿ ಬಂದ (ಜೀದಾನ. ೩೫) ; ಊಟ ಮಾಡುವ ನಂಬರ ಮನೆಗೆ ಹೋದರೆ ತನ್ನ ಹೆಸರು

"ಅ_ಬ" ಎಂದು ಹೇಳುತ್ತಾನೆ! (ಬೋಹಿನೀ. ೧೨೭) ; ನಂಬರ ಮನೀಕಿಂತಾ ಸೋವಿ ಮಾಡಿ ತೋರಿಸತೀನಿ (ವ್ಯನಿ. ೨೮೭).

[ ←ಇಂ. Number ]

**ನಂಬಿ** (ನಾ). ೧. ಭಕ್ತ. ೨. ದೇವಾಲಯದ ಅಧಿಕಾರಿ, _ಸ್ಥಾನಿಕ : ಗೋಪಾಲದೇವರ ಸ್ಥಾನೀಕ ನಂಬಿಯರು ಗಡಬಡೆಯರು ಯಿಾ ಧರ್ಮ್ಮಕೆ ಸಹಾಯಿ ಖಡೆಯದಲ್ಲವ್ವನವರು (ಎಕ. XI, ಚಿತ್ರದು. ೬-೩೭; 1338) ; ಆ ದೇವರ ನಂಬಿಗಳು ತೆಱುವ ವಿಭೂತಿ (ಎಕ. X (8), ಮಾಲೂರು. ೯೯-೧೦೮; 1406) ; ನಿರೂಪದಿಂದ ನಂಬಿಗಳು ಅವಟಿ ಅನತಪಗಳಿಗೆ (ಸೌಇಇ. ೧೯೩೯, ಪುಂಗನೂರು. ೧೫೭-೯; 1419) ; ಗೋವಿಂದರಾಜದೇವರ ನೈವೇದ್ಯ ಪ್ರಸಾದ ವನೂ ತಿರುಪತಿಯ ವರಿಗೆ ಕಾಣಿಪರಾಗಿ ನಾಲ್ಕು ಹರಿವಾಣಊ ನಂಬಿಗಳಿಗೆ ಒಂದು ಹರಿವಾಣವೂ . . . ಕೊಟ್ಟು (ಸೌಇಇ. IX-11, ೯೬೨-೨; 1467) ; ಪುರೋಹಿತವರ್ಗ (Priests) (ಬ್ರಾಹ್ಮಣರೂ, ಇತರರೂ) ಆಚಾರ್ಯ . . . ನಂಬಿ, ನಂಬಿದಿ, ಪಾಡಿಯ (ತುಳುನಾ. ೧೬೧). ೨. ತಮಿಳುನಾಡಿನ ಅರುವತ್ತುಮೂವರು ಪುರಾತನರಲ್ಲಿ ಒಬ್ಬ ; ನಂಬಿಯಣ್ಣ : ನಂಬಿ ಕರೆದೊಡೋ ಎಂದೆ ತೆಲುಗ ಜೊಮ್ಮಯ್ಯಂಗೆ ಒಲಿದೆ ದೇವಾ (ಬಸವ. ೫೦೯) ; ಹರ ತಾಂ ಕುಂಟಣಿಯಾಗೆ ನಂಬಿಯೊರೆದಂ (ಸೋಮೇಶ. ೭೪) ; ಪುಷ್ಪದತ್ತಾಖ್ಯನನೆಳೆಯಱಿಯಲ್ ನಂಬಿಯೆಂದಿಟ್ಟು ಮತ್ತಂ ಹರ ನೀನೊಲ್ದಾ ಕಥಾಸಾರವನವಧರಿಸೈ ಶ್ರೀವಿರೂಪಾಕ್ಷಲಿಂಗಾ (ನಂಬಿರ. ೧ ಸೂಚನೆ) ; ಕುಂಬಾಱ ಗುಂಡಯ್ಯ ನಂಬಿ ತ್ರಿಯಂಬಕಂ ನಿಂಬವ್ವೆ ನಿಂಬಂ ಕಂಬಿಯಲಿ ಭೈರಯ್ಯನುದ್ಭಟದೇವರ್ (ಸಾನಂದ. ೯-೮೦) ; ಹಲವು ಸೂಳೋರಂತೆ ನಂಬಿಯ ಬಳಿಗೆಲಸವ ಮಾಡಲಾಱದೆ ಬಳಲಿಕೆಯನಾಱಿಸಿ ಕೊಳಲು ಬಂದಡವಿಯೊಳಗಿರ್ದ್ದ (ಬಸಪು. ೧೮-೧೨).

[ ದೇ.೩ ತಮಿ. ನಮ್ಬಿ ; ಮಲ. ನಮ್ಬಿ ; ತುಳು. ಕೊಡ. ತೆಲು. ನಂಬಿ ]

**ನಂಬಿಕಸ್ತ** (ನಾ). ನಂಬಿಕೆಗೆ ಅರ್ಹನಾದವನು ; ವಿಶ್ವಾಸಕ್ಕೆ ಯೋಗ್ಯ ನಾದವನು : ಅವನೊಬ್ಬ ನಂಬಿಕಸ್ತನಾದ ಸೇವಕ (ರೂಢಿ).

[ < ನಂಬಿಕೆ + _ಸ್ತ ]

**ನಂಬಿಕಸ್ತಿಕೆ** (ನಾ). = ನಂಬಿಕೆ : ಅವನ ನಂಬಿಕಸ್ತಿಕೆ ಯಾರಾದರೂ ಮೆಚ್ಚುವಂಥದು (ರೂಢಿ). [ ನಂಬಿಕಸ್ತ + _ಇಕೆ ]

**ನಂಬಿಕೆ** (ನಾ). ಶ್ರದ್ಧೆ ; ವಿಶ್ವಾಸ : ಬೆಳ್ಳಿ, ಬಂಗಾರ ಕೈಯಲ್ಲಿದ್ದರೆ . . . ಬೇಕಾದ ವಸ್ತುಗಳನ್ನು ಕೊಳ್ಳುವ ಶಕ್ತಿ ಬರುವುದೆಂದು ಜನರಿಗೆ ದೃಢವಾದ ನಂಬಿಕೆ (ಹಣಪ್ರ. ೧೭) ; ಇಂದು ನನ್ನ ನಂಬಿಕೆ ಸಡಿಲವಾದಂತೆ ಭಾಸವಾಗು ತ್ತಿದೆ (ಬಾಪೂಜಿ. ೩೮೦).

**ನಂಬಿಕೆ ಮೂಡಿಸು**=ವಿಶ್ವಾಸವನ್ನು ಹುಟ್ಟಿಸು ; ಭರವಸೆಯನ್ನುಂಟುಮಾಡು ವಿಷಯವನ್ನು ಒಳಹೊಕ್ಕು ನೋಡಿದರೆ ಶಾಸನವೇ ಕಟ್ಟು ಗೋಂದಿದ್ದುದಾಗಿಯೂ ಅಲ್ಲಿ ನಂಬಿಕೆ ಮೂಡಿಸಿದ್ದುದಾಗಿಯೂ ಅವನು ತಿಳಿದುಕೊಂಡಿದ್ದನು (ಪುನರು. ೧೨೫). **ನಂಬಿಕೆ ಹುಟ್ಟಿಸು**=ವಿಶ್ವಾಸವುಂಟಾಗು ವಂತೆ ಮಾಡು ; ನಂಬಿಸು : ನನ್ನ ಮಾತಿನಲ್ಲಿ ಅವರಿಗೆ ನಂಬಿಕೆ ಹುಟ್ಟಿಸಲು ಬಹಳ ಶ್ರಮಪಡಬೇಕಾಯಿತು (ರೂಢಿ). **ನಂಬಿಕೆ ಹುಟ್ಟು** = ವಿಶ್ವಾಸ ವುಂಟಾಗು ; ನಂಬು : ಅವರ ಮಾತಿನಲ್ಲಿ ನನಗೆ ಎಳ್ಳಷ್ಟೂ ನಂಬಿಕೆ ಹುಟ್ಟಲಿಲ್ಲ (ರೂಢಿ).

[ ನಂಬು + _ಇಕೆ./ತಮಿ. ನಮ್ಬಿಕ್ಕೈ, ನಮ್ಬಕೆ ; ಮಲ. ನಮ್ಬಿಕ್ಕ ; ತುಳು. ನಂಬಿಗೆ ; ತೆಲು. ನಮ್ಮಕ, ನಮ್ಮಿಕೆ, ನಮ್ಮಿಗ ]

**ನಂಬಿಕೆದ್ರೋಹ** (ನಾ). ವಿಶ್ವಾಸವುಳ್ಳವರಿಗೆ ಕೆಡುಕುಮಾಡುವಿಕೆ ; ವಿಶ್ವಾಸಘಾತುಕತನ "ನಂಬಿಕೆದ್ರೋಹ, ವಿಶ್ವಾಸಘಾತುಕತೆ" (Breach of trust. ಪಾರಿನಿ. ೧೧) ; ಪಾಲುದಾರ ನಂಬಿಕೆದ್ರೋಹ ಮಾಡಿದ್ದರಿಂದ ಕೋರ್ಟಿಗೆ ಹೋಗಬೇಕಾಯಿತು (ರೂಢಿ). [ ನಂಬಿಕೆ + ದ್ರೋಹ ]

**ನಂಬಿಕೆದ್ರೋಹಿ** (ನಾ). ನಂಬಿಸಿ ಮೋಸಮಾಡುವವನು ; ವಿಶ್ವಾಸ ಘಾತುಕ. [ ನಂಬಿಕೆ + ದ್ರೋಹಿ ]

**ನಂಬಿಗ** (ನಾ). ನಂಬಲು ಯೋಗ್ಯನಾದವನು ; ವಿಶ್ವಾಸಯೋಗ್ಯ : ಇದೆ ಸಮಯವಣ್ಣ ಇದೆ ಸಮಯ ತಮ್ಮ ನಮ್ಮ ನಿಮ್ಮ ಆತ್ಮಗಳಿಗೆ. ಅಂಬಿಗನು ಬಂದ ನಂಬಿಗನು ಬಂದ ಬಂದದ ದಿವ್ಯಗಳಿಗೆ (ಹೃದಸ. ೧-೮).

[ ನಂಬಿಗೆ (<ನಂಬುಗೆ) + _ಅ₇ ]

**ನಂಬಿಗಸ್ತ** (ನಾ). = ನಂಬಿಕಸ್ತ : (೬). [ <ನಂಬುಗೆ + _ಸ್ತ ]

**ನಂಬಿಗಸ್ತಿಕೆ** (ನಾ). = ನಂಬಿಕಸ್ತಿಕೆ : (೬). [ ನಂಬಿಗಸ್ತ + _ಇಕೆ ]

**ನಂಬಿಗೆ** 'ನಂಬುಗೆ' ನೋ.

**ನಂಬಿರ** (ನಾ). (?) : ಇವೆಲ್ಲವನು ದೇವರ ಅಮೃತಪಡಿ ನಂದಾದೀಪ ಪಡಿ ದೀಪ ಗಂಧ ವಸ್ತ್ರವಯಿಭೋಗ ಪರ್ವತಿಥಿ ನಂಬರ ಹೂವಡಿಗ ಪೊಗಬುರಜ ಮತ್ತಾವ ವಿನಿಯೋಗವನು ನಡಸಿ ಬಹರುಯೆಂದು ಸಮರ್ಪಿಸಿದ್ದು (ಎಕ. III, ತಿರುಮ. ೩೭-೧೬; 1513).

[ ? ಇದು 'ನಂಬಿ' ಎಂಬುದರ ಅಪಲಿಖಿತವಿರಬಹುದು ]

**ನಂಬಿಸು**(ಕ್ರಿ). ೧. (ಸ್ನೇಹ, ಅಪ್ರತೆ, ಧರ್ಮ ಮುಂತಾದುವುಗಳ ವಿಷಯ ದಲ್ಲಿ) ನಂಬಿಕೆಯನ್ನುಂಟುಮಾಡು ; ವಿಶ್ವಾಸವನ್ನುಂಟುಮಾಡು ; ಭರವಸೆ ಮೂಡಿಸು ; ಶ್ರದ್ಧೆಯನ್ನುಂಟುಮಾಡು : "ನಂಬಿಸು _ ಅನು ಮೋದನೇ" (ಕಮಂಥ) ; ಈ ರೂಪಂ ತೋಱಿ ನಂಬಿಸಿ ನಿಮ್ಮ ಪ್ರಾಣ ಕೃಪಾಯಮಂ ಮಾಡಲ್ ಬಗೆದು (ವಡ್ಡಾ.ರಾ. ೦೭೬-೦೯) ; ನಂಬಿದ ಬರವುಮಂ ನಂಬದ ಬರವುಮನಱಿದು . . . ನಂಬದುದಂ ನಂಬಿಸಲುಂ ನಂಬಿದುದಂ ಬಿಡಿಸಲುಂ .... ನಿಮ್ಮಡಿಯ ಕೆಲದೊಳಾನೆ ಬಲ್ಲೆಂ (ಪಂಪಭಾ. ೫-೪೩ ವ) ; ತನಗಲ್ಲದೊಡಲ್ಗೊಡಮೆಗೆ ಮನಮಿಟ್ಟಪವರ್ಗಮಾರ್ಗಮಂ ಪೊರ್ದದೆ ತನ್ನನೆ ತಾನೆ ನಂಬಿಸುವೊಡಾತ್ಮನಂತು ಪೇೞಾತ್ಮವಂಚಕರ್ ಪೆಱರೊಳರೇ (ಅಜಿಪು. ೨-೫೫) ; ಮಕ್ಕಳ ಕೈಯ ಮಾಣಿಕವಂ ಗುಗ್ಗುರಿಯಿಂ ತೋಱಿ ನಂಬಿಸಿ ಕೊಳ್ವಂತೆ (ಧರ್ಮಾಮೃ. ೧೦-೮೩) ; ಎಂತಕ್ಕೆ ನಾ ನಿಮ್ಮ ದೇವ ರೆಂದಱಿದನು ಇಂತಾಗಿ ನೀವೆನ್ನನಾರಂದಱಿಯಿರಿ ನಂಬಲಱಿಯ ನಂಬಿಸ ಲಱಿಯ (ಬಸವ. ೨೭೪) ; ಹಿಂದೆ ನಂಬಿಸಿ ಭೀಷ್ಮ ಗುರುವನು ಕೊಂದ ಗೆಲುವಿನಲುಬ್ಬಬೇಡ (ಕುಮ್ಯಾಭ. ೨-೫). ೨. ಹಾಲುಣಿಸು ; ಹಾಲುಕೊಡು : ಕಂಬನಿಯನೊಗುತಾ ಮಱಿಯ ಮಯ್ಯಂಬನದು ನಕ್ಕುತ್ತ ಮೋಹದಿ ನಂಬಿಸುತ್ತಸುವುಳಿವುಳಿದುದಯ್ಯೋ ವಿಮೋಹ ಕಷ್ಟವಲ (ಕಾಳ್ಗಳಾ. ೫-೨೮).

[ ನಂಬು + _ಇಸು₃ / ತೆಲು. ನಮ್ಮಿಂಚು ]

**ನಂಬಿಸುಹ** (ನಾ). ನಂಬಿಸುವಿಕೆ ; ಭರವಸೆಯನ್ನುಂಟುಮಾಡುವಿಕೆ : "ಸ್ವಾಂತವನೆ ಸಾಮುವನೆ ನಂಬಿಸುಹಮಸ್ಕಂ" (ಮಂಗರಾ. ೧೩೫-೩೭).

[ ನಂಬಿಸು + _ಹ₂ ]

**ನಂಬು** (ಕ್ರಿ). ೧. (ಸ್ನೇಹ, ಅಪ್ರತೆ, ಧರ್ಮ ಮುಂತಾದುವುಗಳ ವಿಷಯ ದಲ್ಲಿ) ನಂಬಿಕೆಯಿಡು ; ವಿಶ್ವಾಸವಿಡು ; ಭರವಸೆಯನ್ನು ಹೊಂದು : "ನಂಬು_ವಿಶ್ವಾಸೇ" (ಶಮಂಥ) ; ಆ ಲಘುಗಳಲ್ಲದ ತಾಣದೊಳಂ ಲಘೂ ಪಾಗಮಕ್ರಮದೆ ನಂಬುಗೆ ಲಾಘವದೋಷವಂ (ಕವಿರಾ. ೧-೧೨೭) ; ಧರ್ಮಮಂ ಕೇಳ್ದು ಮೆಚ್ಚಿ ನಂಬಿ ಶ್ರಾವಕಬ್ರತಂಗಳಂ ಕೈಕೊಂಡು ಶ್ರಾವಕ ನಾಗಿ (ವಡ್ಡಾ.ರಾ. ೦೭೬-೯) ; ನಂಬು ನಂಬಿನ್ನ ಕಣ್ಣಿಂ ಕಿಡಿಯುಂ ಕೆಂಡಂಗಳುಂ ಸೂಸಿದಪುವಹಿತರಂ ನೋಡಿ ಪಂಕೇಜವಕ್ತ್ರೇ (ಪಂಪಭಾ. ೭-೧೩) ; ತುಱು ಲಾಳ್ಗಳನಿರ್ವರುಮಂ ಕಟ್ಟಿ ಸುಯೋಧನನ ಬಾಬ್ಬುದಂ ನಂಬದಿರೇ (ಗದಾಯು. ೩-೬೫) ; ಅಂಬುಮನೆಱೆವಾಗಳ್ ಪ್ರತಿಬಿಂಬಿಸೆ ಕೆಯ್ಯಾರೊಳವಳ ವದನಂ ಪಥಿಕಂ ನಂಬಿ ನಲಿದೀಂಟಿದಂ (ಗಿರಿಕ. ೨-೨೬) ; ಅವನಿಪಾಲರು ಕಂಗಳಿಂದವೆ ಕಿವಿಗೆ ಕರವೊಳ್ಳಿದರು ಕಂಡುದನವರು ನಂಬರು ಕೋಡೆಯದ ನುಡಿಗೇಳ್ದು ನಂಬುವರು (ಕುಮ್ಯಾದ್ರೋ. ೧೫-೨) ; ತಾ ಕಳ್ಳ ಪರರನ್ನು

ನಂಬ (ಗಾದೆ). ೨. ನೆಮ್ಮು; ಆಧರಿಸು; ಆಶ್ರಯಿಸು: ಪೆಯುಮಂ ನಂಬುವೊಡೆನ್ನ ಪೇಟ್ದ ಸತಿಯಂ ಕೈಕೊಂಡಂ (ಪಂಪಭಾ. ೧-೭೭); ಅಧರ್ಮ ಯುದ್ಧದೆ ನರಂ ಕೊಲ್ವಲ್ಲಿ ಕಂಡುಂತುಪೇಕ್ಷಿಸಿ ನೀಮುಂ ನಡೆ ನೋಡು ತಿರ್ದಿರೆನೆ ಮತ್ತಿನ್ನಾರನಾಂ ನಂಬುವೆಂ (ಪಂಪಭಾ. ೧೧-೯೩); ಜ್ಞಾನಕ್ಕೆ ಲೇಪವಾದವನಿರವು ತುಪ್ಪವ ನಂಬಿದ ಬತ್ತಿಯಂತೆ ಕಾದ ಲೋಹದ ಜಲ ದಿರವಿನಂತೆ (ಪ್ರಭುಲಿಂಗ. ೪-೧೧); ನಂಬದಿರು ಈ ದೇಹ ನಿತ್ಯವಲ್ಲ ಅಂಬು ಜಾಕ್ಷನ ಭಜಿಸಿ ಸುಖಿಯಾಗು ಮನವೆ (ಪುರಂದ. ೧-೨೭ ಪಲ್ಲವಿ).

ನಂಬೆ ನುಡಿ = ನಂಬಿಸು; ವಿಶ್ವಾಸವನ್ನುಂಟುಮಾಡು: ಅನಲ್ಗೆ ಪರ್ಪಿನೆಂ[ದಾ ವಾಣ್ಣ]ನಂ ನಂಬೆ ನುಡಿದು (ಪಂಪಭಾ. ೯-೬೨). ನಂಬೆ ಪಡು = ನಂಬಲ್ಪಡು: ಕೊಲ್ಲದ ಪುರುಷಂ ಎಲ್ಲರಿಂ ನಂಬೆ ಪಡುವನುಂ ಪೂಜ್ಯನುಂ ಅಕ್ಕುಂ (ಚತ್ರಚೂ. ೨೭೧).

[ ದೇ.॥ ತಮಿ. ನಮ್ಬು; ಮಲ. ನಮ್ಬು; ತುಳು. ನಂಬು, ನಮ್ಮು; ಕೊಡ. ನಂಬ್; ತೆಲು. ನಮ್ಮು ]

**ನಂಬುಗೆ**, ನಂಬಿಗೆ (ನಾ). ೧. ನಂಬಿಕೆ; ಶ್ರದ್ಧೆ; ವಿಶ್ವಾಸ: "ವಿಸ್ರಂಭಃ, ವಿಶ್ವಾಸಃ – ಈ ೨ ನಂಬುಗೆ" (ಅಭಿಧಾನ. ೦೨೭-೮೪); ಕನಸುಂಗಂಡುದಂ ತವಗೆ ನೇಸರ್ಮೂಡೆ ಪೇಟ್ದೊಡೆ ನಂಬುಗೆಯಾಗಿ ಉಬ್ಬೆಗಂಬಟ್ಟು (ಪದ್ಮರಾ. ೧೧೦-೯೯); ಆರ್ ಕೆಲಂಬರರಸನನೋಲೈಸುವರ್ ಅವರೈಶ್ವರ್ಯಂ ಪರಾಧೀನವಾಗಿಹುದು ... ಜೀವಿಸುಹುಮಂ ನಂಬುಗೆಯಿಲ್ಲದುದು (ಪಂಚತಂ. ೧೩೩-೪); ತಳ್ವಿಲ್ಲದೆ ಪಿರಿದಾದರದಿಂ ಕೊಲ್ಲದ ಧರ್ಮವನೆ ಪಿಡಿಗೆ ನಂಬುಗೆಯಿಂದಂ (ಧರ್ಮಾಮೃ. ೦-೦೯೬); ಶಂಭುವದಭಕ್ತಿ ನಂಬುಗೆಯ ಹಂಬಲು ಬೇಕು (ದೀಕ್ಷಾಬೋ. ೯೯-೧೧); ಗುರುಗಳಲಿ ನಂಬುಗೆ ನಿರರ್ಥಕವಾಯ್ತೆನುತ ಕುರುರಾಯ ಬಿಸುಸುಯ್ದು (ಕುಮಾರವ್ಯಾ. ೪-೫). ೨. ಭಾಷೆ; ಮಾತುಕೊಡುವಿಕೆ; ಆಣೆ. 'ನಂಬುಗೆಗೊಳ್ಳು' ನೋಡಿ. ನಂಬಿಗೆ: ೧. ಜಂಗಮದೊಳಗೆ ಲಿಂಗಯ್ಯನಿದ್ದಾನೆಂದು ನಂಬಿಯುಳ್ಳರೆ ತೋಱುವ ಕೂಡಲಸಂಗಯ್ಯ (ಬಸವ. ೦೬೭); ಭಾಷೆಗೆಡುಕನಿಗೆ ನಂಬಿಗೆ [ಪಾಠಾಂ. ಟುಗೆ] ಯೇತಕೆ (ಪುರಂದ. ೨-೬೯-೫); ನಂಬಿಗಿಂ ಹುಳಿಯಿಲ್ಲ ತುಂಬೆಗಿಂ ಕಿರಿದಿಲ್ಲ ನಂಬಿಗೆಯಿಂದಧಿಕ ಗುಣವಿಲ್ಲ (ಸರ್ವಜ್ಞ. ೨೩೫); ನನ್ನ ಬೆಂಬಲದ ನಂಬಿಗೆಯು ಮಂದಿರ ನೀನು (ಉದ್ಭಟಕೆ. ೯೦-೦೭); ಗೊಂಬೆಗೆ ಕೈಮುಗಿದರೂ ನಂಬಿಗೆ ಇರಬೇಕು (ಗಾದೆ). [ ನಂಬು + – ಗೆ ]

**ನಂಬುಗೆಗೆಡು** (ಕ್ರಿ). ವಿಶ್ವಾಸವನ್ನು ಕಳೆದುಕೊಳ್ಳು; ಭರವಸೆಯನ್ನು ಕಳೆದುಕೊಳ್ಳು: ತಂಬುಲಿಗರ್ ನಂಬುಗೆಗೆಟ್ಟವರಂತೆ ಪಡಿಸಾರೆ(ಧರ್ಮಾಮೃ. ೨-೩೯). [ ನಂಬುಗೆ + ಕೆಡು$_1$ ]

**ನಂಬುಗೆಯೆಯ್** (ಕ್ರಿ). ನಂಬು; ವಿಶ್ವಾಸವಿಡು: ಬಗೆ ನಿಲುಕದತುಳ ಕೈವಲ್ಯಪರಿವೃತರಜತನಗವೃಷಭವಾಯ್ತೊ ಹೇಳೆಂಬ ಸಂಶಯಕೆ ನಂಬುಗೆಯ್ದು ಪುಂಗವನ ನುತದೇವಪುಂಗವಂ ನಲಿದೇಱ ಕಣ್ಗೆಸೆದನು (ಸೋಮೇಶ. ೪-೯೦). [ ನಂಬುಗೆ + ಕೆಯ್$_1$ ]

**ನಂಬುಗೆಗೇಡು** (ನಾ). ನಂಬಿದವರಿಗೆ ಮೋಸಮಾಡುವಿಕೆ; ವಿಶ್ವಾಸ ದ್ರೋಹ: ಈ ಉಪ್ಪಿಗೆ ನಂಬುಗೇಡನ್ನು ಅಹಿತವನ್ನು ಮನಸ್ಸಿನಲ್ಲಿಯೇ ನಡೆಯಿಸಿದಿರಾದರೂ, ನಿಮ್ಮ ಗತಿಯೇನು (ಚಿಟ್ಟಿಆ. ೫೫-೧).

[ ನಂಬುಗೆ + ಕೇಡು ]

**ನಂಬುಗೆಗೇಳು** (ಕ್ರಿ). ನಂಬಿಕೆಯ ಮಾತನ್ನು ಒಪ್ಪು; ವಿಶ್ವಾಸವಿಡು; ಭರವಸೆಯಿಡು: ಹೇಳದೀ ಕುಱುಹುಗಳು ತಪ್ಪವು ಕೇಳದೈ ಹನುಮಂತ ನಂಬುಗೆಗೇಳದಿರೆ ಮನವೇನಮಾಡುವೆನೆಂದಳಾ ಸೀತೆ (ತೊರವೆರಾ. ೫-೩-೯೯). [ ನಂಬುಗೆ + ಕೇಳು (<ಕೇಳ್) ]

**ನಂಬುಗೆಗೊಡು** (ಕ್ರಿ). ನಂಬಿಕೆಯನ್ನುಂಟುಮಾಡು; ಭರವಸೆಯನ್ನು ಕೊಡು; ವಿಶ್ವಾಸವನ್ನುಂಟುಮಾಡು: ನುಡಿದೊಡೆವಯುಂ ಕೊಡುವೆನೆಂದು ನುಡಿದಂದದಿಂ ನಡೆವೆನೆಂದೊಬ್ಬರೊಬ್ಬರಿಗೆ ನಂಬುಗೆಗೊಟ್ಟು [ಪಾಠಾಂ. ಯಿತ್ತು] (ಹರಿಶ. ೧೧-೨೬); ಸುದತಿ ತಪ್ಪದುಯೆಂದು ನಂಬುಗೆಗೊಡಲಾ ವಿಧುಮುಖಿ ನಲಿದಿರುತಿರ್ದಳ್ (ಜೀವಂಧರಸಾಂ. ೦೭-೫೨); ಇವನ ಪ್ರಾಣಗಳಿಗೆ ತಪ್ಪಿದೆಸಾದರೆ ಶಿವನ ಪಾದಗಳಾಣೆಯೆನುತ ಧವಳಸರೋಜಾಕ್ಷಿಗೆ ನಂಬುಗೆ ಗೊಟ್ಟು ಕುವರನನೊಡಗೊಂಡು ಬಂದ (ಪ್ರಭುಲಿಂ. ೩೫-೫೩); ಶರಣು ಹೊಕ್ಕರಿಗೆ ನಂಬುಗೆಗೊಟ್ಟು ಮುಂದಕ್ಕೆ ತೆರಳಿದನಾ ಖಾಸನಾಗ (ಕಂಠವಿ. ೧೧-೩೬). [ ನಂಬುಗೆ + ಕೊಡು$_1$ ]

**ನಂಬುಗೆಗೊಳ್**, ನಂಬುಗೆಗೊಳ್ಳು (ಕ್ರಿ). ೧. ನಂಬಿಕೆಯನ್ನು ಹೊಂದು; ವಿಶ್ವಾಸವನ್ನು ಪಡೆ; ಭರವಸೆಯನ್ನು ಹೊಂದು: ಬೇಹಡಮ್ಮೊಡನೆ ದಾ ಕೋರ್ವೆನೆ ಹೈ ಬಂದವಂ ತೋಱ ಕೊಡಿರಯ್ಯ ಎಂದು ಪೊಡಮಟ್ಟು ನಂಬುಗೆಗೊಂಡು ಹೋದನಾ ಪರುಷರೊಡನೆ (ಸಿದ್ಧರಾ. ೨-೪೨). ನಂಬುಗೆ ಗೊಳ್ಳು: ೨. ಪ್ರಮಾಣವನ್ನು ಪಡೆ; ಭಾಷೆಯನ್ನು ಪಡೆ: ಕೃಶಾನು ನಂಬುಗೆಗೊಂಡನಾ ನೃಪನ [ಪಾಠಾಂ. ವರವನು ಕೊಟ್ಟನಾ ನೃಪಗೆ] (ಕುಮಾರವ್ಯಾಸ. ೫-೧೫); ರಾಗದ ಮದನನ ಕೈಯ ನಂಬುಗೆಗೊಂಟ ಭೋಗದ ರತಿದೇವಿಯಂತೆ ಭೂಗದೀಶ್ವರ ಕಂಠೀರವೇಂದ್ರಗೆ ಕೈಲಾಗಿತ್ತಳೊರ್ವಬ್ಬ ನೇತ್ರೆ (ಕಂಠವಿ. ೨೯-೭೬); ಇಂತೆಂದು ವೇಳೆ ನಂಬುಗೆಗೊಂಡು ಗುರು ವರ್ಯ ಕಂತುವಿಂ ಬೀಳ್ಕೊಂಡು ಪೊರಮಡಲು (ನವಮೋ. ೫-೦೯). [ ನಂಬುಗೆ + ಕೊಳ್$_1$ ]

**ನಂಬುಗೆಗೊಳ್ಳು** 'ನಂಬುಗೆಗೊಳ್' ನೋ.

**ನಂಬುಗೆದಾಳು** (ಕ್ರಿ). ನಂಬಿಕೆಯನ್ನು ಹೊಂದು; ವಿಶ್ವಾಸವನ್ನು ಇಡು: ಪೇಳ್ದತಿಗುಹ್ಯದಲಿ ನಂಬುಗೆದಾಳಿ ವಾಙ್ಮನಕಾಯಗಳಲದ್ವೈತವನೆ ಬಳಸಿ (ಗಣಸಾ. ೦೭-೨೦). [ ನಂಬುಗೆ + ತಾಳು$_1$ (<ತಾಳ್$_1$) ]

**ನಂಬುಗೆದೋಱು** (ಕ್ರಿ). ವಿಶ್ವಾಸವುಂಟಾಗು; ಒಪ್ಪು: ಮೂಱುಭಾಗದ ಸಂಶಯವು ಕೆಲಸಾರಿತವನೀಸುತೆಗೆ ನಂಬುಗೆದೋಱದಿರೆ ತುದಿಮುಂಶದಲಿ ಹನುಮಂತನಾ ಹದನ ಮಾಱುನುಡಿಯಿರದಿರಲು (ತೊರವೆರಾ. ೫-೩-೯೦). [ ನಂಬುಗೆ + ತೋಱು ]

**ನಂಬುಗೆಯಿ** (ಕ್ರಿ). ಭಾಷೆಯನ್ನು ನೀಡು; ವಚನ ಕೊಡು: ಅರ್ಧರಾತ್ರಿಯ ಹೊತ್ತಿನೊಳಗಾಗಿ ಸುಗುಣನಿರುದ್ಧನ ತಪನೆಂದು ನಗುತ ನಿರ್ಧರವಾಗಿ ನಂಬುಗೆಯಿತ್ತು ಬೀಳುಕೊಂಡಿದ್ದಳು (ಪ್ರಭುಲಿಂ. ೩೦-೧೧). [ ನಂಬುಗೆ + ಈ$_3$ ]

**ನಂಬುಗೆವಂತ** (ನಾ). ನಂಬಿಕೆಗೆ ಪಾತ್ರನಾದವನು; ಭರವಸೆಯಿಡಲು ಅರ್ಹನಾದವನು: ಸಾಷ್ಟಾಂಗವೆಱಗಿ ನಂಬುಗೆವಂತರೆದ್ದು ಸಂತುಷ್ಟದಿ ಬೀಳ್ಕೊಂಡರು (ಭರತೇ. ೩೮-೦೨೩); ಅರಮನೆಗಾಗಿ ನಂಬುಗೆವಂತರತ್ತ ತಮ್ಮರಸಿಯರ್ಕಳನೊಯ್ಯಲಿತ್ತ ಅರುಹನಾಲಯಕೆಯ್ದೆ ತಂದೆಯ ಬಳಿಗಾಗಿ ಬರುತಿರ್ದನಾ ಯುವರಾಜ (ಭರತೇ. ೫೦-೩೮). [ ನಂಬುಗೆ + – ವಂತ ]

**ನಂಬುಗೆವಡೆ** (ಕ್ರಿ). = ನಂಬುಗೆದಾಳು: ಅಂಬುಜಭವ ಭವೇಂದ್ರಾದಿ ದೇವತೆಗಳ ನಂಬುಗೆವಡೆದ ರಕ್ಕಸರ ಕಂಬುಚಕ್ರಾಂಕಿತ ನಿಮ್ಮೊಳು ಮಥನಿಸಿ ಪಂಬರಿದರು ಯಮಪುರಿಗೆ (ಪ್ರಭುಲಿಂ. ೩೭-೩೪). [ ನಂಬುಗೆ + ಪಡೆ$_1$ ]

**ನಂಬುಗೆವಿಡಿ** (ಕ್ರಿ). = ನಂಬುಗೆದಾಳು: ಶಂಭುವದಭಕ್ತಿ ನಂಬುಗೆವಿಡಿದು ಅಗಲದೆ ಇರಬಲ್ಲರೆ ಶರಣ (ಸಿದ್ಧೇಶ. ೯೯-೨೮೬); ಪ್ರಮಿತವಚನದಲುದಿಸಿ ದೊಡೆ ವಿಕ್ರಮದ ಬಗೆ ಬಳಕೆಱಬಹುದೆಂಬವರರಿವಿನ ನುಡಿಗೆ ನಂಬುಗೆವಿಡದನರುಣಸುತ (ತೊರವೆರಾ. ೩-೧೧-೨೪). [ ನಂಬುಗೆ + ಪಿಡಿ$_1$ ]

**ನಂಬುಗೆವೆರೆ** (ಕ್ರಿ). ವಿಶ್ವಾಸ ಹೊಂದು; ಭರವಸೆ ಪಡೆ; ನಂಬು: ಕರಿಯಿದಿರೊಳಗಿರ್ಪಂದದು ಕರಿಯಲ್ಲೆಂದೈದಿದಂದು ಸಂಶಯಿಸುತ್ತುಂ ನಿರುಕಿಸಿ ಪಜ್ಜೆಯ ನಂಬುಗೆವೆರೆದಂತಾಯ್ತೆನ್ನ ಮನದೊಳಾದ ವಿಕಾರಂ (ಶಾಕುಂತ. ೧೦೩-೦೯೪). [ ನಂಬುಗೆ + ಬೆರೆ$_1$ ]

. . . ಪರಿಪರಿಯ ಉೞಿಗದ ನಡತೆಕಾಱರುಗಳಿಂ ಪುರರಕ್ಷಕರ ಮಹಾಹ ಗಾಹರೆಡೆಯಾಟದಿಂದೊಪ್ಪಿತಾ ರಾಜವೀಧಿ (ಗುರುಚಾ. ೧-೩೫).

[ ನಡತೆ + – ಕಾಱ ]

**ನಡತೆಗೆಡು** (ಕ್ರಿ). ೧. ಸರಿಯಾದ ನಡತೆಯಿಲ್ಲದಿರು; ನಡವಳಿಕೆಯನ್ನು ಕೆಡಿಸಿಕೊಳ್ಳು; ಸಂಪ್ರದಾಯವನ್ನು ಬಿಡು: ನಡತೆಗೆಟ್ಟ ವ್ಯಕ್ತಿಗೆ ಎಲ್ಲೂ ಬೆಲೆ ದೊರಕದು (ಜನಪ). ೨. ಶೀಲವನ್ನು ಕೆಡಿಸಿಕೊಳ್ಳು; ನೀತಿಗೆಡು: ಅಯ್ಯೋ ಕೆಟ್ಟ ಹುಡುಗಿ! ನೀನು ನಡತೆಗೆಟ್ಟಿರಲೇಬೇಕು (ನಿಕಉ. ೩೩). [ ನಡತೆ + ಕೆಡು$_1$ ]

**ನಡತೆವಂತ** (ನಾ). ಒಳ್ಳೆಯ ನಡವಳಿಕೆಯುಳ್ಳವನು, ನಡೆನುಡಿಯುಳ್ಳವನು: ನೀನು ವಿದ್ಯಾವಂತ ನಡತೆವಂತ ಗುಣವಂತ; ಇಂಥವನು ಅಸತ್ಕುಲಪ್ರಸೂತರೂ ದುರಾತ್ಮರೂ ಘಾತುಕರೂ ನಾಚಿಕೆಗೆಟ್ಟವರೂ ನಡೆಯುವಂತೆ ನಡೆಯಬಾರದು (ವಕಥಾ. ೨೩೪). [ ನಡತೆ + –ವಂತ ]

**ನಡನಡ** (ನಾ). ಒಂದು ಅನುಕರಣ ಶಬ್ದ. 'ನಡನಡನೆ' ನೋಡಿ.

**ನಡನಡನೆ** (ಅ). ನಡನಡ ಎಂದು: ಪಾಚಿಲಳವಲ್ಲದೆ ನಡನಡನೆ [ಪಾಠಾಂ. ಗಡಗಡನೆ] ನಡುಗಿ ಸಿಡಿಮಿಡಿಗೊಂಡೆಱಕೆಗಳೆಳೆದೆ ಕೊರಲ್ಮುಸಿಯ ಜೋಲ್ದು ನೇಲ್ವ ಪೆರ್ವಕ್ಕಿಗಳಿಂ (ರಾಜಶೇ. ೫-೩೩ ವ). [ ನಡನಡ + – ಅನೆ$_1$ ]

**ನಡಪತಿ** (ನಾ). ವಿವಾಹವಾಗದೆ ಗಂಡನಂತೆ ನಡೆದುಕೊಳ್ಳುವವನು: ಕಲ್ಯಾಣದಲ್ಲಿ ಮೂಳಾದೇವಿಯೆಂಬ ವಾರಾಂಗನೆಯು . . . ಜಂಗಮದೇವರಿಂದಾ ಲಿಂಗವು ಸಾಧ್ಯಮಪ್ಪುದೆಂಬುದ ತನ್ನ ನಡಪತಿಯಾದ ಭಕ್ತರಿಂದ ತಿಳಿದು (ಭೈರಸೂ. ೦೪೭). [ ನಡಪು$_1$ + ಪತಿ$_3$ ]

**ನಡಪಾಡಿಸು** (ಕ್ರಿ). ಅಲೆ; ಚದರಿಹೋಗು; ಓಡು: ಗುರುಸಂಭವನ ಮಂತ್ರದ ಪಾಡಿ ನಡಪಾಡಿಸಿತು ಪಾಂಡವರ (ಕುವ್ಯಾಗ. ೧೦-೨೨).

[ ನಡಪು$_3$ + ಆಡಿಸು ]

**ನಡಪಾಡು**, ನಡೆಪಾಡು (ಕ್ರಿ). ನಡೆದಾಡು; ಸಂಚರಿಸು; ಓಡಾಡು; ಅಡ್ಡಾಡು: ದಾದಿಯುಂ ಸಖೀಜನಂಗಳ್ ಬೆರಸು ನಡಪಾಡುತ್ತಿರ್ದಳ ಮುಂದಾ ಕೆಯ್ಯಂ ಪರ್ದು ತಂದಿಕ್ಕಿದೊಡೆ (ವಡ್ಡಾರಾ. ೦೪೮-೦೩); ಪಾಡುವ ತುಂಬಿ ಕೋಡುವ ಪುಟಾಲ್ ನಡಪಾಡುವ ರಾಜಹಂಸೆ (ಪಂಪಭಾ. ೩-೩೭); ಆ ಚಂದ್ರಿಕೆಯೊಳ್ ನೃಪರೂಪಚಂದ್ರಂ ಕೇಳೀಶೈಲದ ತಪ್ಪಲೊಳ್ನಡಪಾಡುತಿರ್ಪುದುಂ (ಕಾದಂಉ. ೧೯೭); ಪುಡಿಯ ತಡಿವಿಡಿದು ಮೆಲ್ಲನೆ ನಡಪಾಡುವ ಕಳಮಗಾಟಿಕಾಜನದ ಬೆಡಂಗಿಡಿದ ವಿಕಟಾಕ್ಷಬಿಂಬಂ ಪಡೆಗುಂ ಪಗಲೊಳಮವರಲ್ದ ಕುಮುದಶ್ರೀಯಂ (ವರ್ಧಮಾ. ೧೦-೦೪); ನಡಪಾಡುವ ವನದೇವಿಯರಡಿಯೂಡಿದಲಕ್ತಕದ್ರವಂ ಪತ್ತಿದವೋಲ್ ಕಡುಗೆಂಪನಾಳ್ದು ಪೊಂದೊಂದೆಡೆ ವನಚರವಿದ್ಧ ಮೃಗಗಣಾರುಣಜಳದಿಂ (ಕಂದ್ರಪ್ರ. ೩-೪೯); ಕಾರಕಾತ್ಮಜಂ ನೋಡುತಿರ್ದನ್ ಬೆರಗುಬಡಿದು ನಡಪಾಡುತಿರ್ದ ದೈತ್ಯನೃಪನಂ (ಕ್ರೀರಾಮಾ. ೨೨೪-೩೩೭). **ನಡೆಪಾಡು**: ಸಮದಗಜಗಮನೆಯರ್ ಮುಗಿಲ ಮೇಲೆ ನಡೆಪಾಡುವೀವಾಕೆಗಳ್ ತಮಗೆ ಧರಾಗಮನಂ ಪೊಸತಪ್ಪುದಱಿಂದಮರ್ದಿರೆ ನಡನಡದು ನಡೆಯಲಾಱದೆ ಸುಟಾದರ್ (ಪಂಪಭಾ. ೭-೮೪); ನಡೆಪಾಡುತಿರ್ದೆಡಪಿ ಕೆಡೆವ ಜರತ್ತಾಪಸರ ಕೆಯ್ಯಂ ಪಿಡಿದೊಯ್ಯನೆತ್ತುವ ಗೋಲಾಂಗೂಲಜಾಲಮುಮಂ (ಪಂಪಶಾಂ. ೧೧೯-೦೭); ಗಿಳಿ ಪಣ್ಗಳನೀಂಟುವ ಭಂಗಿಯಿಂ ವಿನೋದದೆ ನಡ[ಪಾಡಿ] ಚಂಬನದ [ಚೀತ್ಕೃತಿಯಂ] ಕಲಲಾ ಜನಕ್ಕೆ ಬರ್ಪುದು ಪಿಡಿದುಂ ನುಮತ್ಸಚರಕಿನ್ನರಪನ್ನಗಕನ್ಯಕಾಜನಂ (ಶಾಂತೀಶ್ವ. ೦೩-೦೪೮).

[ ನಡಪು$_2$ + ಆಡು$_1$./ತೆಲು. ನಡಪಾಡು, ನಡುಪಾಡು ]

**ನಡಪಾಡುಹ** (ನಾ). ನಡೆದಾಡುವಿಕೆ; ಓಡಾಡುವಿಕೆ; ಸಂಚರಿಸುವಿಕೆ: "ವಿಹಾರ, ಪರಿಕ್ರಮ = ನಡಪಾಡುಹ" (ನಾಚಿರಾ. ೬).

[ ನಡಪಾಡು + – ಹ$_2$ ]

**ನಡಪು$_1$**, ನಡಹು$_1$, ನಡೆಪು$_1$ (ಕ್ರಿ). ೧. ನಡೆಯುವಂತೆ ಮಾಡು: ನಡೆಸು; ಗಮಿಸುವಂತೆ ಮಾಡು: ನಡುವಗಲಲ್ಲಿ ತಾಂ ನಡಪಿ ದಂತಿಗಳಂ ರವಿತಪ್ತಂ ಪೋಥಪಂ ಬಿಡದತಿಶೀತಲಸ್ಥಲವ ಸೇವಿಸುವಂತೆವೋಲೀ ನರೇಶ್ವರಂ ಇಡಿದನುರಾಗದಿಂ ಪ್ರಜೆಗಳಂ ನಿಜಪುತ್ರರ ಪೋಷಿಪಂದದಿಂ ನಡಪಿ ವಿವಿಕ್ತ ಮಾದೆಡೆಯ ಸೇವಿಸುವಂ ಸಲೆ ಶಾಂತಮಾನಸಂ (ಶಾಕುಂತ. ೬೨-೦೦೩). ೨. ಸಲಹು; ಪೋಷಿಸು; ಪಾಲಿಸು; ಕಾಪಾಡು: ಎರಟಿಪ್ಪತ್ತು ತಿಂಗಳಿಂಗೆ ತಾಯ್ ಕಟ್ಟಿದೊಡೆ ಬಂದ ನಂಟರ್ ನಡಪೆ ಬಳೆದೊಡಾ ನಂಟರುಂ ಕಟ್ಟಿದುಳ್ಳರೆಲ್ಲಂ ಸತ್ತು ಕುಲಕ್ಷಯಮಾದೊಡೆ (ವಡ್ಡಾರಾ. ೬೩-೦೭); ಮುನ್ನ ವೃಷಭನಾಥನ ನಡಪಿದ.ದುಮಂ ತಮ್ಮ ನಣ್ಪುಮಂ ಬರೆದು ಕುರುರಾಜಾದಿಮೂರ್ಧಾಭಿಷಿಕ್ತ ಪಾರ್ಥಿವರ್ . . . ಭರತೇಶ್ವರ ಚಕ್ರವರ್ತಿಯನಾಸ್ಥಾನದೊಳ್ ಬಂದು ಕಂಡು (ಆದಿಪು. ೦೩-೨೦ವ); ನಡಪಿದನಜ್ಜನೆಂದು ವಿಜಯಂ ಕಡುಕೆಯ್ದುಸನನ್ನ ಮಮ್ಮನಾಂ ನಡಪಿದನೆಂದು ಸಿಂಧುತನಯಂ ಕಡುಕೆಯ್ದಿಸಂ (ಪಂಪಭಾ. ೧೧-೧೮); ಪುಡಿಯೊಳ್ ಪೊರಳುತ್ತುಂ ಕಂಠಗತಪ್ರಾಣನಾಗಿರ್ದುದನೀ ಗಿಳಿಯಂ ಕಂಡು ಕರುಣಿಸಿ ತಂದೆ ನಡಪಿ ಗಱಿಮೂಡಿದ ಬಟಿಕ್ಕಂ ಪಾಱೆ ಪೋಕುಂ (ಕಾದಂಪೂ. ೩೬೫)[1]; ವರ್ಷ [೨೭] ನೆಯ ವಿಶ್ವಾವಸು ಸಂವತ್ಸರದ ಫಾಲ್ಗುಣ ದಮಾವಾಸ್ಯೆಯಾದಿತ್ಯವಾರ[ದ]ನ್ದು ನಡಪಿದ ಸತ್ರಿಗಂ ಬಿಸಸೆ (ಎಕ. XI-1, ೩೦-೨; 1006): ತಜ್ಞಗಮನೆ ಪುಟ್ಟಿಪಂ ನಡಪುವಂ ನಡಯಿಪುವಂ ಕಿಡಿಪಂ ಕೃಪಾದಿಂದವಾನೆ (ಸಮಪ. ೧೦-೧೭೪); ಬೇವಿನ ಗಿಡುವಂ ತಂದಿಟ್ಟಾವಿನ ಸೊಜಿಪಾಲನೆಱೆದು ನಡಪಿದೊಡಂ ಕೇಳ್ ಬೇವಿಂಸೆ ಕೈಪೆ ಪಿಂಗದು (ಧರ್ಮಾಮೃ. ೩-೦೩೭); ಆಕೆಯ ನಡಪಿದ ದಾದಿಯ ಮಗಳು ಕಾಮಲತೆಯೆಂಬಳಾಕೆ ರೂಪಸಿ (ಪುಣ್ಯಾಸ್ತ್ರ. ೭-೬೫). **ನಡಹು$_1$**: ೨. ಹೊಸ್ಸದೇವರು ಬೆಸಸಲು ಕಾದಿ ಸುರಲೋಕಪ್ರಾಪ್ತನಾದ ಹಿಂನ್ನಾದನ್ನಹವರಂ ಲೇಸಾಗಿ ನಡಹುವರು (ಮೈಅರಿ. ೦೯೩೨, ೩೦-೪; 1126). **ನಡೆಪು$_1$**: ೨. ಕರಿ ಪೋಗವು ಹರಿ ಪೋಗವು ಪರಿವಾರಂ ಪೋಗವೂಡನೆ ನಡಪಿದ ನಾಲ್ವರ್ ನೆರಮಾಗಿ ಪೋಗರಂತಃಪುರಕ್ಕೆ ಪೋಪೆಡೆಯೊಳ ರಸರೊರ್ವರೆ ಪೋಪರ್ (ಅಜಪು. ೨-೦೨೪); ನೆಗಳ್ದ ಭಾವಶಿವದೇವ ಕ್ರೀಜ್ಞಾಯ ಮಾಣಿಯಂ ಕೈಕೊಣ್ಡು ಪೋಷಿಸಿ ಮದುವಿಯಂ ಮಾಡಿ ನಡೆಪಿದ ಧರ್ಮ್ಮ ಸನ್ತತಿಯ ಬ್ರಾಹ್ಮಣ ಸರ್ವ್ವಧರ್ಮ್ಮಾಧಿಕಾರಿ ಬ್ರಹ್ಮಪುರಿ ಮುಂಖ್ಯಂ (ಎಕ. XI-1, ೬೪-೦೭; 1028); ಮತ್ತಲ್ಲಿ ಜಲಕೇಳಿಯಾಡುವ ಗಾಡಿಕಾರ್ತಿಯರು ಕಾಡಲೆಂದೊಳ್ಳಿಗಳಂ ತಂದು ಬಿಡಿಸಿಯವರ್ಕೆ ಪಾಲನೆಱೆದು ನಡೆಪುತಿರ್ಪನ್ನೆಗಂ (ಪಂಚತಂ. ೦೨೩-೨೦); ಮಗನಂ ನಡಪಿ ಬಾವಿಯೊಳ್ ನೂಂಕುವಂತೆ (ಧರ್ಮಾಮೃ. ೯-೦೫೭); ಎನ್ನ ಮಗಲ್ನಾದ ತನುಜರಂ ಪಿಡಿದು ರಾಜ್ಯದೊಳ್ ನಡೆಪುತ್ತುದುಂದು ನಿಲೆ ನುಡಿಯಿಪಿ (ನೇಮಿಪು. ೩-೨೭ ವ).

[ ನಡೆ$_1$ + – ಪು$_1$./ತಮಿ. ನಟವು; ತುಳು. ನಡಪು; ತೆಲು. ನಡಪು, ನಡುಪು ]

**ನಡಪು$_2$**, ನಡಹು$_2$, ನಡೆಪು$_2$ (ನಾ). ನಡೆಯುವಿಕೆ; ಚಲಿಸುವಿಕೆ; ಓಡಾಟ; ಸಂಚಾರ. 'ನಡಪಾಡು' ನೋಡಿ. **ನಡಹು$_2$**: ಕಡಿತಲೆಯ ಮಿಂಚುಗಳ ಹೊಯ್ಲಿನ ಸಿಡಿಲುಗಳ . . . ಬಿಡುವಿಡುದುಳ ಹೊರಳಿಗಳ ಹಂಸೆಯ ನಡಹುಗಳ ನವಖಡದೊಳು ಹೆಣನಡವಿ ತಳಿತಿರೆ ಮೆಱೆದುದ್ದೈ ಸಂಗ್ರಾಮ ಕಾಗಾಗಾಲ (ಕುಪ್ಯಾಳಿ. ೯-೩೭). **ನಡೆಪು$_2$**: 'ನಡೆಪಾಡು' ನೋಡಿ.

[ ನಡೆ$_1$ + – ಪು$_2$./ತಮಿ. ನಟವು; ಮಲ. ನಡಪ್ಪು; ತುಳು. ನಡಪು; ತೆಲು. ನಡಪು, ನಡುಪು ]

**ನಡಪ್ಪಳ್ಳಿ** 'ನಡುಪಳ್ಳಿ' ನೋ.

**ನಡಪ್ರಾಯ** (ನಾ). ಹುಲ್ಲು, ಜೊಂಡುಗಳಿಂದ ತುಂಬಿರುವಿಕೆ. [ ಸಂ. ]

**ನಡಬಾವಿ** 'ನಡೆಬಾವಿ' ನೋ.

**ನಡಭಾವಿ** 'ನಡೆಬಾವಿ' ನೋ.

**ನಡಮಣ್ಣ** (ನಾ). ಒಂದು ಬಗೆಯ ಜಮೀನು ; ಸಾಗುವಳಿ ಜಮೀನು (?) : ಆತಂಗಂ ನಡಮಣ್ಣ ಪನ್ನಿಮ್ಮತ್ತರ್ನೆಲ್ಲ ಮಣ್ಣ ಖ × × × ವಕ ಸೂಳೆವಳ್ಳ (ಎಕ. XI, ದಾವಣ. ೧೧೯-೭ ; 980). [ ? ]

**ನಡಮಾನ** (ನಾ). ಒಂದು ಬಗೆಯ ವಿಮಾನ. [ ಸಂ. ]

**ನಡಮುರುಕನಬಳ್ಳಿ** (ನಾ). ಒಂದು ಬಗೆಯ ಬಳ್ಳಿ : (೬).
[ ? + ಬಳ್ಳಿ ]

**ನಡಯಿಸು** 'ನಡೆಯಿಸು' ನೋ.

**ನಡಲು** (ನಾ). ಒಂದು ಸ್ಥಳದ ಹೆಸರು : ನೇಱಲೆಯುಂ ಮೂಯೊತ್ತಿಂ ನಡಪ್ಪಳ್ಳಿ ಮೂಟಱಣಂ ನಡಲು ಎಪ್ಪತ್ತಾಳ್ಳದತ್ತಿಟ್ ಕಱಿಯ ಒರಲೆಗ್ಗೋಡು (ಎಕ. VI, ಚಿಕ್ಕಮ. ೯೩-೧೬ ; ಸು. 1026 ?). [ ? ]

**ನಡವಣ** 'ನಡೆವಳಿ₁' ನೋ.

**ನಡವಳಿ** 'ನಡೆವಳಿ₁' ನೋ.

**ನಡವಳಿಕಸ್ತ** (ನಾ). ಒಳ್ಳೆಯ ನಡವಳಿಕೆಯುಳ್ಳವನು,-ನಡತೆಯುಳ್ಳವನು : ಈಶ್ವರರಾಯರು ಒಳ್ಳೆಯ ನಡವಳಿಕಸ್ತರಾದುದರಿಂದ ನ್ಯಕ್ಕಕಲೆಗಳಲ್ಲಿ ಅಪ್ಪಕ್ಕಪ್ಪೆ (ಕಳಾಶಾ. ೩). [ ನಡವಳಿ (< ನಡೆವಳಿ) + – ಸ್ತ ]

**ನಡವಳಿಕಾರ** 'ನಡೆವಳಿಕಾಱ' ನೋ.

**ನಡವಳಿಕಾಱ** 'ನಡೆವಳಿಕಾಱ' ನೋ.

**ನಡವಳಿಕೆ** 'ನಡೆವಳಿಕೆ' ನೋ.

**ನಡವಳಿತ** (ನಾ). ೧. ನಡತೆ; ನಡವಳಿಕೆ; ವರ್ತನೆ: "ನಡವಳಿತ = ನಡತೆ" (ಗಂಗಾಮು. ೧೭೭) ; ನುಡಿದೊಡೇನ್ವೆ ಶ್ರುತಿಸ್ಮೃತಿಗಳಂ ನಡವಳಿತದೊಳು ಶುದ್ಧಮಿಲ್ಲದೆ (ಶಂಕದಾ. ೧೨-೧೦).೨. = ನಡೆವಳಿಕೆ ೩ : ಘಟಿತು ವಡವಳಿತವನ್ನು ಕುರಿತ ಸಿವಿಲ್ ಪ್ರೊಸೀಜರ್ ಕೋಡಿನ . . . ಪ್ರಕರಣದ ಮೇರೆಗೆ ಆರು ತಿಂಗಳು (ಗ್ರಾಮಕ. ೧೬೦). [ ನಡವಳಿ ( < ನಡೆವಳಿ₁) + – ತ₂ ]

**ನಡವೆ** 'ನಡುಮೆ₁' ನೋ.

**ನಡಸಂಹತಿ** (ನಾ). ಹುಲ್ಲು, ಜೊಂಡುಗಳ ಸಮೂಹ,–ಗುಂಪು. [ ಸಂ. ]

**ನಡಸು₁** 'ನಡೆಯಿಸು' ನೋ.

**ನಡಸು₂** 'ನಡಿಸು₂' ನೋ.

**ನಡಹ** 'ನಡೆಹ' ನೋ.

**ನಡಹು** 'ನಡಪು₁' ನೋ.

**ನಡಹು₂** 'ನಡಪು₂' ನೋ.

**ನಡಾವಳಿ** 'ನಡೆವಳಿ₁' ನೋ.

**ನಡಾವಳಿಕೆ** 'ನಡೆವಳಿಕೆ' ನೋ.

**ನಡಾಳ** (ನಾ). ಒಂದು ಬಗೆಯ ಹಗ್ಗ,–ಮಿಣಿ. 'ನಡಾಳಮಿಣಿ' ನೋ. [ ←ಮರಾ. ನಾಡಾ ]

**ನಡಾಳಮಿಣಿ** (ನಾ). ನೊಗವನ್ನು ಮೂಕಿಗೆ ಬಂಧಿಸುವ ಹಗ್ಗ : (೬).
[ ನಡಾಳ + ಮಿಣಿ (< ಮಿಳ್ಳಿ) ]

**ನಡಿ** 'ನಡೆ₁' ನೋ.

**ನಡಿಕೆ** 'ನಡಗೆ' ನೋ.

**ನಡಿಗೆ₁** 'ನಡಗೆ' ನೋ.

**ನಡಿಗೆ₂**, ನೆಡುಗೆ(ನಾ). ೧. ನಡುವಿಕೆ ; ನಾಟುವಿಕೆ ; ಸ್ಥಿರಗೊಳಿಸುವಿಕೆ. ೨. ನಾಟಿ ; ನೇಜಿ. ನೆಡುಗೆ: ೧. "ತಲ-ಪ್ರತಿಷ್ಠಾಯಾಂ, ನಡುಗೆಯೊಳ್" (ಶಾಶಕ್ಕ. ೨೬೧).

ನಡಿಗೆಯ ಹಿತ್ತಿಲು = ನಾಟಿ ಹಾಕಿರುವ ಹಿತ್ತಿಲು ; ಸಸಿಗಳನ್ನು ನಟ್ಟಿರುವ ಸ್ಥಳ : ಬಸವಂತನ ನಡಿಗೆಯ ಹಿತ್ತಿಲು ತೋಟದಲೂ (ಶಾಶಾ. IX-ii, ೪೭೬-೩೦ ; 1606). [ <ನಡು₁ + – ಗೆ ]

**ನಡಿಸು₁** 'ನಡೆಯಿಸು' ನೋ.

**ನಡಿಸು₂**, ನಡಸು₂, ನೆಟಿಸು, ನೆಡಿಸು (ಕ್ರಿ). ೧. (ಗಿಡ, ಸಸಿ ಮೊದಲಾದುವನ್ನು ನೆಲದಲ್ಲಿ) ನಡುವಂತೆ ಮಾಡು ; ನಾಟುವಂತೆ ಮಾಡು : "ಪೀಲತೀತಿ ನಡಿ(ಟ್ಟ)ಸಿದವುದೆಂಬುದು" (ಶಾಶಕ್ಕ. ೯೩) ; ದಿವ್ಯಶಕ್ತಿಪ್ರಭಾವದಿಂದ ಮಾನುಷಾರಣ್ಯಂಗಳ ಮಹಾದ್ರುಮಂಗಳಂ ತರಿಸಿ ನಡಿಸಿ (ಆದಿಪು. ೦೩-೩೨ ವ). ೨. (ಕಲ್ಲು, ಕಂಭ ಮೊದಲಾದುವನ್ನು ನೆಲದಲ್ಲಿ) ಹುಗಿಸು ; ಹೂಳಿಸು ; ಸ್ಥಾಪಿಸು : ಯಾತುಕೂರೊಳ್ ಚಲ್ಲೇಶ್ವರದ ಮುಂದೆ ಕಲ್ಲನ್ನಡಿಸಿ ಪಿರಿಯ ಕೆಱೆಯ ಕೆಟಗೆ ಮಟ್ಟಿಕಾಲುದ್ದಿ ಕೋಳ್ಕಗಂಡುಗಂ ಮಣ್ಣು ಕೊಟ್ಟರ್ (ಎಕ. III, ಮಂಡ್ಯ. ೯೧-೦೨ ; 980); ಕಡಲ ತಡದಡಿಯೊಳಾತಂ ನಡಿಸಿದ ಕಾಂಚನಜಗಜ್ಜಯಸ್ತಂಭಗಳ್ ಕುಡಿನಿಮಿರ್ದು ನಾಕಿನಿಳಯಮನಡರ್ವ ಯಶೋಲತೆಗಡರ್ಪನಿಟ್ಟವೊಲೆಸಗುಂ (ಚಂದ್ರಪು. ೭-೩೧). ೩. (ಕತ್ತಿ ಮೊದಲಾದುವನ್ನು ಮೈಯೊಳಗೆ) ನಾಟಿಸು ; ಚುಚ್ಚುವಂತೆ ಮಾಡು : ತನ್ನ ಕಠಾರಿಯನ್ನು ಪೂರ್ತಿಯಾಗಿ ಅದರ ದೇಹದಲ್ಲಿ ನಡಿಸಿದಳು (ಚುಂದಿಕಾ. ೦೦೯); ಅಡವೀಬೆಕ್ಕುಗಳು ಬೇಟೆಯ ಮೈಯೊಳಗೆ ಹಲ್ಲು ನಡಿಸಿ, ಅದನ್ನು ಕೊಲ್ಲುತ್ತವೆ (ಮುಂಬಯಿ. ೩-೩೧). **ನಡಸು₂** : ೩. ಫಡಫಡನುತ ಬಕಾಸುರನ ಮಗ ನಡಸಿದನು ಕೂರಂಬನು (ಕುಮಾರರಾ. ೦೩-೬೬). **ನೆಟಿಸು** : ೨. ಗುರವನಾಯಂ ಕೊಟು ಕಲ್ಲ ನೆಟಿಸಿದನ್ (ಎಕ. VIII, ಸಾಗರ. ೦೦೦-೦೩ ; 986 ?). **ನೆಡಿಸು** : ೧. ತಡೆಯದೈದಂಗುಲಕೆ ರಥವನು ನೆ[ಪಾಠಾಂ. ನ] ಡಿಸಿದನು ಹರಿ ಧರೆಗೆ ಪಾರ್ಥನ ಮುಡಿಯ ಸರಿಸಕೆ ಬಾಣ ಬಂದುದು ಕೊಲುವ ತವಕದಲಿ (ಕುಮಾರಭ. ೨೩-೨೦). ೨. ಮುಂದೆಸೆಯೊಳುಱೆ ಬಸಿದ ಶೂಲವನೊಂದನಾಗಳೆ ತರಿಸಿ ನೆಡಿ[ಪಾಠಾಂ. ನಡಿ]ಸಿತೆಂದನು (ಬಸವಪು. ೪೦-೯೬) ; ತೊಡೆವೇನೀ ತೋರ್ಪೀ ನಿಶಾಚರವಡೆಯ ಭಾಗ್ಯದ ಭಾಳಲಿಪಿಯನು ನೆಡಿಸುವೆನು ನೈಶಾಟವಿಜಯಸ್ತಂಭದಂಬರವ (ತೊರರಾ. ೩-೬-೯) ; ನೆ [ಪಾಠಾಂ. ನ] ಡಿಸಿದನೆರಡು ಕಂಬವಂ (ಕೃಮಿಳಾ. ೨೬-೩೦).

ನಡನಡಿಸು(ದ್ವಿರುಕ್ತಿ) : ಸಿಡಿಲ ಬೊಬ್ಬೆಯ ಧಾಳಿಯಲಿ ನಡನಡಿಸಿ ತಾಗಿ ನಿದಾಘಭೂಪನ ಹಿಡಿದು ಹೆಕ್ಕಳಿಸಿದನು ಮೇಘಾಗಮ ಮಹೀಪಾಲ (ತೊರರಾ. ೯-೬-೯). [ ನಡು₁ + – ಇಸು₂ ]

**ನಡು₁**, ನೆಟ್ಟು₁, ನೆಡು (ಕ್ರಿ). ನಟ್ಟ₁, ನೆಟ್ಟ (ಭೂತಕೃ), ನಟ್ಟು₁, ನಾಟ್ಟು,ನೆಟ್ಟು (ಭೂತನ್ಯೂ) ೧. (ಕಲ್ಲು, ಕಂಬ ಮೊದಲಾದುವುಗಳ ಕೆಳಭಾಗವನ್ನು ನೆಲದಲ್ಲಿ) ಹೂಳು ; ನಿಲ್ಲಿಸು ; ಸ್ಥಾಪಿಸು ; ಸ್ಥಿರಗೊಳಿಸು : "ನಡು–ಸಂಸ್ಥಾಪನೇ, ಮಧ್ಯೇ ಚ" (ಶಮದ) ; "ಸ್ಥಾಪನ – ಮಧ್ಯದ ಸ್ಥಾನಂಗಳೊಳ್ ನಡು" (ಕಲ್ಯಮಂ. ೯೪) ; ಅಜವರ್ಮ್ಮನ ಕಲ್ಲ ನೊಟವಪ್ಪುಸ್ಸುರ್ಟ್ಟೊಡೆ ಇವ್ವರ್ಗ್ಗೆ ಈ ಕಲ್ಲು ನಟ್ಟುದು (ಎಕ. XI, ಜಗಳೂ. ೧೯-೬ ; 907) ; ಮಹಾದ್ರುಮಂಗಳಂ ತರಿಸಿ ನಡಿಸಿ ನಟ್ಟ ಕಂಭಂಗಳ ಮೇಗೆ ಸಾರದಾರುಗಳನೆಡೆಗಿಱಿದಿರೆ ಪಾಸಿ ಪಸರಿಸಿ (ಆದಿಪು. ೧೩-೩೨ ವ) ; ಮಟ್ಟಿ ಕೆಱೆಯ ತೆಂಕಣ ಕಡೆಯಂ ಪಿರಿಯಯ್ಯ ಪೂಣಾಸೆವರು ನಟ್ಟ ಓಳಗಲ್ಲಿನ್ದಂ ಪಡುವಣ ತೆವರಿಂದೊಳಗೆ ಅಯ್ದು ಕೊಳಗ ಬೆದೆ ಪೂಂಬೊಲನುಂ . . . ಸಲ್ವುದು (ಎಕ. IV, ಹಗ್ಗಡ. ೧೬-೩೦ ; 1021) ; ಕಮ್ಮನೂರ ಬಳಲಿಯೊಳು ಅಧ್ಯಣ್ಣನ್ಗಂ ಬೆಟ್ಟದ ಅಯಂಗಳು ಕಲ್ಲು ನಾಟ್ಟು ಸೋಭೆ ಕೆಯ್ದಂ (ಎಕ. XIV, ಎಡತೊ. ೯೮-೧೦ ; 1078) ; ಮತ್ತುಱಿದವರಂ ದೇವರನವೇಡ ಧರೆಯೊಳ್ ದೇವರೆ ನಟ್ಟರ್ದ ಕಲ್ಲುವೊಟ್ಟದ ಮಣ್ಣುಂ (ಧರ್ಮಾಮೃ. ೮-೩೧) ; ಇದು ವೈರಾಗ್ಯದ ಕೊತ್ತಳದ ಮೇಲೆ ಮನ್ಮಥನು ನಟ್ಟ ವಿಜಯ ಪತಾಕೆಯಂತೆ ಕಾಣಿಸುತ್ತದೆ (ಶಾಪ್ಕಸ. ೩೦). ೨. (ಗಿಡ, ಸಸಿ, ಬೀಜ ಮೊದಲಾದುವನ್ನು ನೆಲದಲ್ಲಿ) ಊರು ; ಹಚ್ಚು ; ನಾಟಿಹಾಕು : ತೆಂಗಿನೆಳನೀರುಮಂ ಕೊಳಲಿಂಬಪ್ಪಂತಿರೆ ಮಾಡಿ ನಟ್ಟ ಕೌಂಗಿನ ತೆಂಗಿನ

ಮರಂಗಳುಮಂ (ಹಂಪಭಾ. ೩-೪೭ ವ); ಒಂದು ದೆಸೆಯೊಳೆರ್ತಡಿವಿಡಿದು ನಟ್ಟ ತಮಾಲದ ತಳಿರ್ಗೊಂಬುಗಳಿಂ ಸಮೆದ ವನಲೇಖೆಗಳುಮಂ (ಕಾದಂಸಂ. ೨೦೪); ಪೂಗಿಡುವೆಂಬ ಪೆಸರಿಂಗೆ ಕೊಳವಳ್ಳಿಯ ಗಿಡುಗಳಂ ನಟ್ಟು ನೀರೆಱೆದು ನಡೆವೆ ಮಲ್ಲಿಗೆಯ ಪೂವಿನಂತಾಗಲಱಿಯದಂತೆ (ಧರ್ಮಾಮೃ. ೬-೬೪); ನೀ ನಟ್ಟ ಸಸಿ ಸುರಕುಜವಲೇ ಕೊಡದೇ ಮನೋರಥವ (ಕುಮಾವ್ಯಾಅ. ೧೨-೫೪); ನಟ್ಟು ಧರ್ಮಾಭಯವನೆದೆಗೆ ಹುಟ್ಟಿಗೊಂದು ಅರ್ಥವಿತ್ತರು (ರಾಮೂವಿ. ೨ ವಿಶೇದನ). ೩. (ಬಾಣ, ಕತ್ತಿ, ಮುಳ್ಳು ಮೊದಲಾದುವು) ಚುಚ್ಚು; ನಾಟು; ಒಳಹೊಗು; ಇರಿ; ಭೇದಿಸು: ನಟ್ಟ ಸರಲ್ಗಳಿಂದಿದಕರಂಕ x ಯಿಂ ಕಿಡಿಕೆಯ್ದು (ಎಕ. II, ೧೩೮-೧೫; ಸು. ೯೪೦); ತಡದಡಿಸುತ್ತುಮಿಱಿಯಲ್ ಪರಿವಾತಂ ವಾಪೀಸೋಪಾನ ಮನಡರುತ್ತುಂ ಜಾಱಿವಱಿದು ಕಿಡೆದೂರದೊಳ್ ನಟ್ಟ ಸುರಂಗೆ ಬೆನ್ನೊಳ್ಮಡೆ (ಆದಿಪು. ೨-೦೪ ವ); ತಡೆಯದೆ ರಾಜರಾಜನಿದಿರಂ ಬರೆ ಭೋರ್ಗರೆದೆಚ್ಚೊಡಂಬುಗಳ್ ನಡದೆ ಸಿಡಿಲ್ದುದಾಂ (ಹಂಪಭಾ. ೧೦-೧೩೯); ವಾಮನನು ದರ್ಭೆಯೊಳೋವದೆ ಕುತ್ತೆ ನಟ್ಟು[ಪಾಠಾಂ. ದರ್ಭೆಯೊಳಾಸಿದೊಡಾರೆ ನಾಂಟ] ಶುಕ್ರನ ಬಲಗಣ್ಣುವಾಗಳೊಡೆದತ್ತು (ಕಮುಹ. ೧೦-೯೭); ಬಾಲಾಭ್ಯಾಸವ ಮಾಡಹೋದರೆ ಎನ್ನ ಸುರಿಗೆ ಎನ್ನ ನಟ್ಟಿತ್ತು (ಬಸವ. ೬೨೪); ನಂಜುಮುಳ್ಳಡಿಯನು ನಟ್ಟು ನಡೆಗೆಟ್ಟನೋ (ಸಿದ್ಧರಾ. ೨-೪೫); ರೋಮಗಳೆಲ್ಲ ಬಾಣಮಯವಾಗೆ ನಟ್ಟವು ಕಣೆಗಳು (ಸಂಛಹ. ೧೭-೦೨); ಎಡೆಬಿಡದಿಡುವ ತುಪಾಕಿಯ ಗುಂಡಿನ ಕಡುಹಿಂದ ನಡುವ ಬಾಣಗಳ ಗಡಣದಬ್ಬರದಿಂದ ಕೂಡಿದ ರಿಪುಬಲ ಕಡಿಖಂಡವಡೆದುದು (ಕಂಸವಿ. ೩-೭೭). ೪. ನೆಲೆಗೊಳ್ಳು; ಸ್ಥಿರವಾಗು; ಕೀಲಿಸು; ಅಲುಗದೆ ನಿಲ್ಲು; ಕೂಡು: ದಿಟ್ಟ ಮನವೆಂಬವು ತೊಟ್ಟನೆ ನಟ್ಟು ನಟ್ಟವೋಲ್ ಘಟಯಿಸೆ (ಆದಿಪು. ೩-೯೦); ಆತನ ವಿಷಮಶರಶಲಾಕೆಗಳಿಂ ಕೀಲಿತಮಾದಂತವಯವಂಗಳ್ ನಟ್ಟು ನಿಂದುವು (ಕಾದಂಸಂ. ೭೩೮); ಅಲಿ ನಿಮ್ಮಲ್ಲಿ ನಟ್ಟವು ನೋಡಯ್ಯ (ಶುಹಾದೇ. ಬ. ೩೮-೯೦); ತನ್ನಯ ಸುಭೋಗಸಮಾಶ್ರಯಭಂಗಶಂಕೆಯಿಂದುನ್ನತ ಚಿಂತೆ ನಟ್ಟು ನಿಲೆ (ಚಾಧಪು. ೩-೮); ಕುಮಂತ್ರಿಗಳ ವಚನವಶಿಗಾಧದಲಿ ನಟ್ಟುದು (ಕುಮಾವ್ಯಾಭೀ. ೦-೨೫). ನೆಟ್ಟು₁: ೧. ಸಿವಾರಗಾವುಣ್ಡರ ಮಗ ಪೊನ್ನಯ್ಯನ ದಣ್ಣಿಗೆ ನಟ್ಟುದ ಕಮ್ಬ (ಎಕ. VI, ಕಡೂರು. ೧೦-೨೩; 1126?). 'ಕಿತ್ತು₁' ಪರಾ. ನೆಡು: ೧. ಆತನ ತಮ್ಮ ರಾಯನು ಅಳಿಯ ಮಾದೆಯ್ಯನುವಿಖಾ ಕಲ್ಲ ನೆಟ್ಟರ್ (ಎಕ. VIII, ಸೊರಬ. ೨೩೪-೧೨; ೯೯೯); ಹುಟ್ಟಿದ ವೀರ ನೆಟ್ಟ ಕಲ್ಲು ಮತ್ತೇತರ ಇಷ್ಟದಲ್ಲಿ ಒತ್ತಿದ ಲಿಂಗಮುದ್ರೆ ಇರಲಿಕೆ ಕಿತ್ತುಕೊಂಡವ ದ್ರೋಹಿ ಎಂಬರು (ಕೊನ್ನಸಂ. ೨೭೩-೧೫); ಜಂಬೂದ್ವೀಪದ ನಡುವೆ ನಿತಂಬದ ಮಣಿಕಾಂತಿ ನಿಮಿರೆ ದೆಸೆದೆಸೆಗೆ ದಿಶಾಸ್ತಂಬೇರಮಕ್ಕೆ ಬಿದಿ ನೆಟ್ಟೆಂಬಿನ [ಪಾಠಾಂ. ಬಿನುದಿನದೆಂಬಿನ]ಪೊಂಗಂಭಮೆನಿಸಿ ಮಂದರಮೆಸೆಗುಂ (ಪಾರ್ಶ್ವಪು. ೧-೧೦೮); ಜಗದ ಜಾಣರು ಸೀಮೆಯಲಿ ಹಳವಿಗೆಯ ನೆಟ್ಟರು (ಕುಮಾವ್ಯಾದ್ರೋ. ಹರಿ. ೨೭೫); ೬೦ ವರಹದ ಭೂಮಿಯಂನು ಕಲ್ಲು ನೆಟ್ಟು ಫಲಿಸಿಕೊಟ್ಟುದರಿಂದ (ಎಕ. VII, ಶಿವಮೊ. ೧೦೮-೨೦; 1566). ೨. ವರ್ಷದ ಯಾವ ಸಮಯದಲ್ಲಿಯೂ ಮೆಣಸಿನ ಗಿಡ ನೆಡಬಹುದು (ಅಡುಸಾ. ೧೨೮); ಒಂದು ದಿನ ಹಿತ್ತಿಲ ಕಡೆ ಒಂದು ತೆಂಗಿನ ಸಸಿಯನ್ನು ನೆಡುವುದಕ್ಕಾಗಿ ಗುದ್ದಲಿಯಿಂದ ಅಗೆಯುತ್ತಿದ್ದೆ (ಪ್ರತಾಪ. ೪೮). ೩. ನಗುತಲಿಱಿದುಕೊಂಡರೆ ಅಲಗು ನೆಡದಿಹುದೆ (ಬಸವ. ೬೬೧); ಅನ್ಯವಿಮಲಾಂಭೋಜಾತಪತ್ರಾಕ್ಷಿ ಮಾಬ್ಬುರು ಬಿಬ್ಬೋಕದಲಂಪಿನಿಂವು ಮನವಂ ತಾಂ ನೆಟ್ಟುದೋ(ಉದ್ಭಟ.೧೧-೨೪); ಇಂತಂಗಾಲ ನೆಟ್ಟು ಕಟ್ಟುಗಿಯಲಾ ನೋವಿನಿಂ ನಡೆಯುಡುಗುತಂದು ನೊಂದು . . . ಈ ಬಲ್ಪಿಸಿಯಂ ತೆಗೆದವೆನೆಂದೊಡೆ (ಉದ್ಭಟ. ೧೧-೦೦೩ ವ); ಬಿರಿಯೆ ಬಲುವಜ್ರಾಂಗಿ ಹಾಯ್ದುವು ಗಱಿಸಹಿತಲುಚ್ಚಳಿಸಿ ನೆಲದಲಿ ಸರಳು ನೆಟ್ಟವು ಕರ್ಣ ನೆನೆದನು ರುಧಿರಧಾರೆಯಲಿ (ಕುಮಾವ್ಯಾಕ. ೧೧-೨೯); ಇಟ್ಟಡೆ ಸೆಲ್ಲೆಹ ಕಂಗಲ ಜೋಡನು ತಟ್ಟುರ್ಚಿ ಮೆಯ್ಯನುಚ್ಚಳಿಸಿ ನೆ[ಪಾಠಾಂ. ನ]ಟ್ಟಹುದವನಿಯನೆನೆ ರಾಮನೀಡಿನ ಘಟ್ಟವಾಳಿಕೆಯನೇನೆಂಬೆ (ಕುರಾಸಾಂ.೧೩-೦೧೭). ೪. ಅಷ್ಟಭೋಗಂಗಳು ಲಿಂಗದಲ್ಲಿ ಮನಮುಟ್ಟ ನೆ[ಪಾಠಾಂ. ನ]ಟ್ಟರಲು ಅದೇ ಅರ್ಪಿತ ಅಂಗಲಿಂಗಾರ್ಪಿತವಾಗಿ (ಅರಪ. ೨೩-೬೨); ನೆಟ್ಟ ನೇಹದಲವಳು ನುಡಿಗೊಡ ಬಟ್ಟಳ್ಕೆ (ಕೊರಠಾ. ೨-೧-೩೭); ಪರರಾಯರ ನಿಯೋಗಿಗಳಿಗೆ ಭಯಾನಕ ರಸವು ನೆಡುವಂತೆ (ಸಾಗಂಧಿ. ೬-೧೭).

ನಟ್ಟ ಕಂಭ=ಸ್ಥಿರವಾಗಿ ನಿಲ್ಲಿಸಿದ ಸ್ತಂಭ: ಮಹಾದ್ರುಮಂಗಳಂ ತರಿಸಿ ನಡಿಸಿ ನಟ್ಟ ಕಂಭಂಗಳ ಮೇಗೆ ಸಾರದಾರುಗಳನೆಡೆಗಿಱಿದಿರೆ ಪಾಸಿ ಪಸಂಸಿ (ಆದಿಪು. ೧೩-೫೨ವ); ನಟ್ಟ ಕಂಭದ ಹಾಗೆ ದಿಟ್ಟವೀರನು ಇರಬೇಕು (ಗಾದೆ). ನಟ್ಟ ಕಲ್ಲು,ನಟ್ಟ ಕಲ್ಲು=(ಗಡಿಯನ್ನು ಸೂಚಿಸಲು, ಶಾಸನವನ್ನು ಕೆತ್ತಲು ಅಥವಾ ಸ್ಮಾರಕಕ್ಕಾಗಲಿ) ನೆಟ್ಟಿರುವ ಕಲ್ಲು; ಸ್ಥಾಪಿಸಿರುವ ಕಲ್ಲು: ಪ್ರಥಮಂ ದುಗ್ಗನ್ಕೆಱೆ ಮೂಡ್ಯಕಡೆ ಗೋಡೆವ ಸಂಗ ಪೋಯರಾ ಕೆಱೆಯಿನ್ತೆಂಕ್ಯ ನಟ್ಟ ಕಲ್ಲೆ ಪೆರ್ಗ್ಗಟನಿಯನ್ ಬಡಗ್ಯೆ ನಟ್ಟ ಕಲ್ಲೆ (ಎಕ. X (8), ಚಿಕ್ಕಬ. ೭೭-೦೭; ೮೬೦); ಸರ್ವರಱಿಯಲು ನಟ್ಟಕಲ್ಲೆ ನಿಸದಿಳೆಯೊಳಗೆ ಸುಳಿವ ಶಾಸನವೆನಿಸಿ ಮೆಳ್ಕನೀ ಸತ್ಕೃತಿಯನು (ಸಿದ್ಧರಾ. ೦-೫); ಸಿಂಹಪೋತನ ಮಗಳು . . . ಮಹಾದೇವಿಯ ಆಳು ಬಸವುನ್ ಎಂಬುವನು ನೆಟ್ಟ ಕಲ್ಲಿಗೆ ಕೆಲವು ದಾನಗಳನ್ನು ಮಾಡಿದ್ದರೆಂದು ತಿಳಿದು ಬರುತ್ತದೆ (ನೊಳಂಬ. ೨೭). ನಟ್ಟಕ್ಷಿ, ನಟ್ಟಕ್ಷಿ = ಚಲಿಸದೆ ಇರುವ ಕಣ್ಣು; ಒಂದೇ ಕಡೆಗೆ ಸ್ಥಿರವಾಗಿ ದೃಷ್ಟಿಯಿಟ್ಟ ಕಣ್ಣು; ಅಚಲವಾದ ನೋಟ: ಆತನಿಗೆ ನಟ್ಟಕ್ಷಿಯಾಗಿ (ಚಿಟ್ಟಅ. ೦೩೯-೦೨); ಚೆಲುವ ಕೃಷ್ಣನ ಮೂರ್ತಿಯನು ಭೂವಳಯದಂಗನೆಯರು ನಿರೀಕ್ಷಿಸಿ ಬಲಿದು ನಟ್ಟಕ್ಷಿಗಳ ತೆಗೆಯದೆ ಯೋಗಿಗಳವೋಲು ಸಲೆ ಸುಖಾಬ್ಧಿಯಲಾಳುವರು (ನಿಧಾಗ. ೦೧-೩೭-೩). ನಟ್ಟಗಣ್ಣು, ನಟ್ಟಗಣ್ಣು = ನಟ್ಟಕ್ಷಿ: ಸ್ವಾಮಿಗೆ ಜರುಗುವ ವಿಶೇಷಪೂಜೆಗಳನ್ನು ಶಾಂತಲಾದೇವಿ ನಿಂತೇ ನಟ್ಟಗಣ್ಣಿನಿಂದ ನೋಡಿದಳು (ಸವತಿ. ೨೦೮); ನೆಟ್ಟಗಣ್ಣಿನಿಂದ ನೋಡಬೇಡ (ರೂಢಿ). ನಟ್ಟಚ್ಚ = ನಟ್ಟಕ್ಷಿ: ನಟ್ಟಚ್ಚಿಯಿಂದ ನಿರ್ವ್ಯಾಣಮಿಕ್ಷಿಸುತ್ತುಂ (ಸಂಸಹ. ೨೨-೨). ನಟ್ಟ ದಿಟ್ಟ, ನಟ್ಟ ದಿಟ್ಟ = ನಟ್ಟಕ್ಷಿ: ತಾಂ ಪಿಂಗದೆ ನಟ್ಟ ದಿಟ್ಟಿಯನವಂ ಕಿಟಲೆಂದನುಗೆಯ್ದು ತೂಗಿದಂ (ಆದಿಪು. ೧೨-೧೩); ಬಗೆ ಬೆಚ್ಚು ನಟ್ಟ ದಿಟ್ಟಿಯನುಗಿಯಲ್ಕಂ ಬಗೆಯ ತಾಱದೆ (ಶಾಂತಿಪು. ೫-೫); ಕಿವಿಯಂ ಕತ್ತರಿಸಿ ಶರೀರವಂ ಸಂಕೋಚಿಸಿ ನಟ್ಟ ದಿಟ್ಟ[ಪಾಠಾಂ. ದಿಟ]ಗಳ್ಪರಸು ನಿನ್ನನೆ ನೋಡುತ್ತುಮಿರ್ಕುಂ (ಹಂಡಕಂ. ೧೭೭-೦೨); ಮಿಡುಕದೆ ಮೆಯ್ಯಿಕ್ಕದೆ ವನಿತಾರತ್ನಮಂ ವಜ್ರಲೇಪದೊಳ್ಪತ್ತಿದಂತೆ ನಟ್ಟ ದಿಟ್ಟಿಯಂ ತೆಗೆಯಲಾಱದೆ ನೋಡಿ ನೋಡಿ (ಧರ್ಮಾಮೃ. ೩-೦೩೮ ಅಡಿಟಪ್ಪ); ಕದಪಿನಲಿ ನೆಲಸಿದ ಕೈ ನೆಟ್ಟ ದಿಟ್ಟಿಯ ಕಾಮಾಕರಲಸದೀಕ್ಷಿಸಿದರಂದವಳ (ಕಂಸವಿ. ೯-೯೪). ನಟ್ಟ ದೃಷ್ಟಿ=ನಟ್ಟಕ್ಷಿ: ನೋಡಬಾರ್ದನಂ ನಟ್ಟದೃಷ್ಟಿಯೊಳೊಗುವ ಜಲದಲಿ ರೋಮಪುಳಕದಲಿ (ಕುಮಾವ್ಯಾಅ. ೬-೬೮). ನಟ್ಟ ಬಡಪ = ನಿರಂತರವಾಗಿ ಸುರಿಯುವ ಮಳೆ; ಜಡಿಮಳೆ: ತುಂತುರ್ ತುಷಾರವಿಡುಕಂಬನಿ ತಂದಲ್ವೋನೆ ನಟ್ಟ ಬಡಪಮನಲ್ ಸುರಿದುವು ಬಿಡದೆ ಮುಗಿಲ್ಗಳಿರುಳುಂ ಪಗಲುಂ (ಜಗವಿ. ೪-೩೨). ನಟ್ಟವನಿ, ನಟ್ಟವನಿ = ನಟ್ಟಬಡಪ: ಅಡಸರಿ ಬಲ್ಸರಿಯಱವಳೆಯಿಡುಕಬನಟ್ಟವನಿ ತುಷಾರಂ . . . ತುಂತುರ್ ಬಿಡದಡಿಯಡಗೊಡದೆ ಕಱದುವಿರುಳುಂ ಪಗಲುಂ(ತ್ರಿಷುವಿ. ೮-೩೯); ಲೋಪವಿಲ್ಲದುಚಿತಾಕ್ಷರಾಗಮಕ್ಕೆ—ನಟ್ಟವಾನ್, ನಟ್ಟವನೆ, ನಟ್ಟಗೆಱಂಬು, ನಟ್ಟವನಿ. ಇಲ್ಲಿ ಎಕಾರಮುಚಿತವರ್ಣಾಗಮಂ (ಶಮದ. ೦೭೭ ಪ್ರಯೋ). ನಟ್ಟಾಲಿ, ನಟ್ಟಾಲಿ = ನೋಟ ಬದಲಾಯಿಸದ ಕಣ್ಣುಗುಡ್ಡೆ; ನೇರವಾಗಿ ನೋಡುವ ಕಣ್ಣು; ನಿಡುನೋಟದ ದೃಷ್ಟಿ: ಪದೆದಾಂ ನೋಡಿದೆನಾತನಿರ್ದ ದೆಸೆಯಂ ನಟ್ಟಾಲಿ ಬೀಳ್ವನ್ನೆಗಂ

(ಕಾದಂಘೂ. ೭೮೯) ; ಬಹುಕದನಮನೊರ್ಡರ್ಲೆಂದು ನಟ್ಟಾಲಿಗೊಂಡು ಮುಟ್ಟಿವರ್ಪನಂ ಕಂಡು (ಜಗವಿ. ೯-೩೯ ವ) ; ನೋಡಿದಳಬ್ಜಾನನೆ ನಿನ್ನ ಚಿತ್ರಪಟಮಂ ನಟ್ಟಾಲಿ ಬೀಳ್ವನ್ನೆಗಂ (ರಠಕು. ೧೨-೩೨) ; ಮಲೆಯಂ ಸಾರ್ದೋಡಿ ಬಾಲಂ ತೊನೆಯೆ ಕುಸಿದ ಗೋಣೆತ್ತಿ ನಟ್ಟಾಲಿಯಿಂ ಹವ್ವಳಿ ಸುತ್ತಂ ನೋಡಿ (ಕ್ರಿಪುವಿ. ೨೭-೭೦) ; ಬಟ್ಟಲೊಳ್ ಎಡಿದ ಮಧುರಸವನಾ ವೇಕ್ಷೆಯಿಂ ನಟ್ಟಾಲಿಯಿಂದೀಕ್ಷಿಸಲ್ (ಚಂಪು. ೧೦-೭೨) ; ಕಟ್ಟಿದಿರೊಳೊಂದು ಚಟಕೆ ನೀಡದೊಳ್ದುಂ ಕಿಱುವಱುಯಂ ತುಟುಂಕಿತ್ತು . . . ಲಲ್ಲೆ ಗೆಯ್ಯುದಂ ನಟ್ಟಾಲಿಯೊಳಭೀಕ್ಷಿಸಿ ಮಕ್ಕಳ ಬಯಕೆಯಂ ಜಾನಕಿ ಸಖಿ ಗಿಂತೆಂದಳ್ (ರಾಮಾಶ್ವ. ೧೮-೩) ; ನೆತ್ತಿ ಮುಸುಕಿನ ಕೈಯ ಗಲ್ಲದ ಕುತ್ತದಲೆ ನೆಟ್ಟಾಲಿಗಳ ಚಲಚಿತ್ತರಿದ್ದುದು ಸಕಲ ನಾಯಕವಾಡಿ ದುಗುಡದಲಿ (ಕುಮಾರರಾ. ೪-೪). ನಟ್ಟು ನಿಲ್ = ಸ್ಥಿರವಾಗಿ ನಿಲ್ಲು: ಅಚಲವಾಗಿ ನಿಲ್ಲು : ಆವೆಡೆಯೊಳು ವಿಕ್ರಮಂ ಕ್ರಮಮೆನಿಸಿದುದಱಿಂ ಪರಾಕ್ರಮಧವಳ ನುಂ ಎಂತಪ್ಪ ಸಂಗ್ರಾಮದೊಳಂ ಪೋಗದೆ ನಟ್ಟು ನಿಲ್ವುದಱಿಂ ಸಮರೈಕ ಘೋರುವುಂ (ಪಂಪಭಾ. ೧೪-೩೭ವ). ನಡೆ ದಿಟ್ಟಿಸು = ನೆಟ್ಟನೋಟದಿಂದ ನೋಡು; ದುರುಗುಟ್ಟಿಕೊಂಡು ನೋಡು : ಪರಸ್ಪರರನ್ನು ನುಂಗಿ ಕೊಳ್ಳಲೆಂಬಂತೆ ಕೆಂಡಗಣ್ಣಿಂದಿವರಂ ನಡೆ ದಿಟ್ಟಿಸುತ್ತಿರುವುದು ಇವಂಗುಳ್ಳ ಪೂರ್ವಪರಿಚಯವನ್ನು ಬಿಟ್ಟಾಡಿ ಕುಡುತ್ತಿದೆ (ಮಂತ್ರಕ. ೨೨-೬). ನೆಟ್ಟಗಣ್ಣು ಬೀಳು = ಗುಂಡ್ರೆ ಅಲುಗಾಡದಿರು ; ಸಾವು ಸವಿಾಪಿಸು.

[ದೇ.೫ ತಮಿ. ನಟು ; ಮಲ. ನಡು ; ಕೊಡ. ನಡಿ ]

**ನಡು₃ (ನಾ).** ೧. ಮಧ್ಯಭಾಗ ; ಕೇಂದ್ರ : "ನಡು–ಸಂಸ್ಥಾನೇ, ಮಧ್ಯೇ ಚ" (ಶಮದಾ) ; "ಮಧ್ಯಮಾಯಮೆನೆ ಮಧ್ಯಮೆನೆ ನಡುವಕ್ಕು" (ಮಂಗರಾ. ೧೩೫-೩೮) ; ಪೂವಿನ ಓವ್ವರಗೆ[ಯ] ನಾಲ್ಕುದೆಸೆಯ ಪೊಲೆಮೇರೆಯಂ ನ[ಡು] ಸರಿಯಾಗಿ ನಡದು[ಂ]ಕೊಟ್ಟರ್ (ಸೌಇಇ. XI-i, ೯-೨೪ ; 862); ಕಡೆವಿಡಿದು ಬಳಸಿ ನೀರಿರೆ ನಡು ಬತ್ತಿದ ಕೆಱೆಯನಿಂತು ಕಂಡುದಱಿಂದಂ ನಡು ನಾಡೊಳೞಿಂ ನೆಲಸದೆ ಕಡೆಯೊಳ್ ನೆರೆಗೊಳ್ಳುಗಂ (ಆದಿಪು. ೧೫-೪೦) ; ಎತ್ತಿತ್ತಂ ನೋಟ್ಟಡೆಂತುಂ ಕಡೆ ನಡು ಮೊದಲೆಂದೀ ವಿಭೇದಂಗಳು ತೋಱು ತ್ತಿಲ್ಲಂತೆಂದೆನಿಪ್ಪಾಗಸದೊಳ್ (ಜಾಥಪು. ೧-೬೦) ; ಕರಗುಸದ ನಡು ಬಡ ವಾದರೆಯು ಕೊಱಿದಿಕ್ಕದೇ ತರುವ (ಸಂಥಪ. ೨೦-೨೯) ; ತುದಿ ಮೊದಲು ನಡುವೆಂಬ ಲಯುದಭ್ಯುದಯವೆಂಬ ವಿಕಾರಗಳು ಸೋಂಕದ ಸನಾತನಗಯ್ಯು ಲೀಲೆ ಮನುಷ್ಯರೂಪಿನಲಿ (ತೊರರಾ. ೦-೮-೬೨). ೨. ಶರೀರದ ಮಧ್ಯ ಭಾಗ : ಸೊಂಟ ; ಟೊಂಕ : "ಅವಲಗ್ನಂ, (ವಿ)ಲಗ್ನಂ, ಮಧ್ಯಂ, ಮಧ್ಯಮಂ – ಈ ೪ ನಡು" (ಹಲಾಯು. ೬೫-೩೭೩) ; ಬಡಿ ಕೊರ್ ಕಟ್ಟಿಱ ಪುಱಿ ಕಡಿ ನಡುವಂ ಕೊಱ . . . ನುಂಗೆಂದು ಮುಸುಱಿ ನಾರಕರಾಗಳ್ (ಮಜ್ಞಾ. ೧೫೭-೧೦) ; ಆಕೆಯ ನಡುವಿನ ಬಡತನಮಂ ವಗೆವರ ಸಿರಿಯು ವೊಡನೊಡನೆ ಕೆಟ್ಟುವು (ಪಂಪಭಾ. ೧-೧೪೧ ವ) ; ನಡುವುಡಿವನ್ನಮೇಱಿ ಬರಿಯಲ್ಬುಡಿವನ್ನಗಮೊತ್ತಿ . . . ಉರಮನಿರ್ಬಗಿಯಾಗಿರೆ ಪೋಟ್ಟು (ಗದಾಯು. ೫-೪) ; ತಡೆಯದೆ ಮಗಳೆಂದಳಿಯನ ನಡುವಂ ತಟ್ಟೈಸಿಕೊಂಡು ಹಿತ್ತಲ ದೆಸೆಯೊಳ್ ಬಿಡದೋಡುವಾಕೆ ಕಾಣದೆ ಕೆಡೆದಳ್ಹಲ್ಲಣದಿನಾಗಳೆಂಜಲ ಕುಱಿಯೊಳ್ (ಧರ್ಮಾಮೃ. ೨-೪೪) ; ಸಿಂಗದ ನಡು ಮುಱಿಯಲಾ ಸಿಂಗ ವೇನು ಬಾತೆ (ಬಸವ. ೬೩೪) ; ಸಡಿಲೆ ಮುಡಿ ಬಳ್ಕೆ ನಡು ದಡದಡಿಸುತ್ತಿರೆ ತೊಡೆಗಳುಣ್ಕೆ ನೂಪುರನಿನದಂ (ಕುಸುಮಾ. ೮-೯) ; ಕಾಲು ಖಂಡಿಸಿ ಬೀಳೆ ಕರುಳಿನ ಮಾಲೆಯೊಳು ತೊಡಕಿದುವು ಹಣದದ ಬಾಳೆದುದದೊಳುಡಿಯೆ ತೊಡೆ ನಡು ಮುಱಿಯೆ ಕಟಿ ಕೆದಱಿ (ಕುಮಾಭಿ. ೪-೩೦) ; ಬೈಗಿನ ಕೆಂಬಿಸಿಲ ಬೆಳಗಿಂಗೆ ದೊರೆವರ್ಪ ಪೀತಾಂಬರದುಡೆ ನಡುವಿನೊಳ್ . ವಿರಾಜಿಸೆ (ರಾಮಾಶ್ವ. ೬೯-೨೦).

ನಡುಕಲ = ಮಧ್ಯದ ; ನಡುವೆಯ : ನಡುಕಲ ಹೆಂಡತಿಯಾದ ಕೈಕೆಯ ಹೊಟ್ಟೆಯಲ್ಲಿ ಭರತ ಹುಟ್ಟಿದನು (ನೀತಿಚಂ. I, ೧೩); ನಾನು ಇನ್ನೂ ಮಗು ವಾಗಿದ್ದಾಗ, ನನ್ನ ನಡುಕಲ ಅಣ್ಣ ಸಿವಿಲಿಯನ್ ಆಗಿ ನಮ್ಮ ದೇಶಕ್ಕೆ ಹಿಂತಿರುಗಿ ಬಂದಿದ್ದನು (ನಿಬಂಧ. II, ೩೪) ; ಹಿರಿಯವನು ಓಬಟ್ಟು, ನಡು ಕಲವನು ಆರು, ಕಿರಿಯವನು ಎರಡು ಆನೆಗಳನ್ನು ಹಂಚಿಕೊಂಡರು (ಕಸಾಕ. ೧-೧೨೯). ನಡುವಣ = ಮಧ್ಯಭಾಗಕ್ಕೆ ಸಂಬಂಧಿಸಿದ ; ಮಧ್ಯ ದಲ್ಲಿರುವ : "ಮಧ್ಯಮಂ, ಮಧ್ಯಮಾಯಂ, ಮಧ್ಯಂದಿನಂ – ಈ ೩ ನಡು ವಣದು" (ಹಲಾಯು. ೧೨೭-೯೦) ; ಸದಭಸ್ತುತಮಪ್ಪೋಕುಂದದ ನಡುವಣ ನಾಡೆ ನಾಡೆ ಕನ್ನಡದ ತಿ ುಳ್ (ಕವಿರಾ. ೧-೩೭) ; ಕೌರವರ್ ಕಡಲ ನಡುವಣ ಪರ್ವತದಂತಳ್ಕಾಡೆ (ಪಂಪಭಾ. ೭-೧೫ ವ) ; ಎರಡುಂ ಕೆಲದೊಳು ಮಿ ರ್ ರು ಮ ರ ಸಿ ಯ ರಿ ರೆ ಸೊಗಯಿಸಿರ್ದನವನಿಪನೆರಡುಂ ಕರಿಣಿಗಳ ನಡು ವ ಣ ದೆ ಯೊ ಳ್ ಕರೀಂದ್ರನೊಪ್ಪುವವೊಲ್ (ಶಾಂತಿಪು. ೧-೭೫); ಪೊಸವಂದರ ನಡುವಣ ಪೂವಿನಸಟ ಪಾಸಿನೊಳಿರ್ದಳ್ (ಕಾದಂಬ. ೨೨೩) ; ಕಡೆಯ ದಳಂಗಳೆ ವಜ್ರಂ ನಡುವಣ ಕರ್ಣಿಕೆಯೆ ಕೇವಣಂ (ಗದಾಯು. ೬-೪೩) ; ನಕ್ಷತ್ರಗಣಂಗಳ ನಡುವಣ ಚಂದ್ರಬಿಂಬದಂತಿರ್ದ ನಂಬಿಯಣ್ಣನಂ ಕಂಡು (ನಂಬಿರ. ೨-೪೪) ; ದಿಗ್ವಾಚಿಯು ಅಣ್ಗೆ . . . ನಡುವಣಂ, ಕಡೆಯಣಂ . . . 'ನಡು' ಎಂಬುದು ಶರೀರಮಧ್ಯಮಂ ಕುಱಿತು ದಿಗ್ವಾಚಕಮಲ್ತು, ಮಧ್ಯಮಂ ಕುಱಿತು ದಿಗ್ವಾಚಕಂ (ಶಮದ. ೧೧೦ ಪ್ರಯೋ) ; ಸುಳಿಯ ಬಹುದಂಬುಧಿಯ ನಡುವಣ ಸುಳಿಯೊಳಗೆ . . . ಕಾಣನು ಗೆಲುವ ಹದನನು ಮಗನೆ ಪದ್ಮವ್ಯೂಹದೊಡ್ಡಣೆಯ (ಕುಮಾರರಾ. ೪-೩೭). ನಡುವಣಂ = ನಡುವೆ ಇರುವವನು; ಮಧ್ಯದವನು : ಪುದಿದಿ ಶ್ವೇತಾತಪತ್ರೋತ್ಕರದ ನಡುವಣಂ ವಜ್ರದಂತಂ ಸಮಂತೆತ್ತಿದ ಪಿಂಛಚ್ಛತ್ರಷಂಡಂಗಳ ನಡುವೆಸೆವಂ ವಜ್ರಬಾಹುಕ್ಷಿತೀಶಂ (ಆದಿಪು. ೪-೨೫) ; ಮೇಗಣಂ, ಕೆಳಗಣಂ, ನಡುವಣಂ (ಶಮದ. ೧೧೧ ಪ್ರಯೋ). ನಡುವಣಕ್ಕರ = [ಛಂದ] ಅಂಶಗಣದ ಒಂದು ಪದ್ಯಜಾತಿಯ ಹೆಸರು ; ಐದು ಬಗೆಯ ಅಕ್ಕರಗಳಲ್ಲಿ ಒಂದು,– ನಡುವಿನದು : ಜಳಜಸಂಭವಗಣಮಕ್ಕೆ ಮೊದಲೊಳೆ . . . ಕಾಮಬಾಣಾ ವಳಿಯ ಪಾಂಗೆಯ್ದೆ ಗಣಮಕ್ಕೆ ನಡುವಣಕ್ಕರಕೆ ಸಖೀ (ಛಂದೋಂಬು. ೫-೨೪೪) ; ನಾಗವರ್ಮನು ೫ ಅಕ್ಕರಗಳನ್ನು ಹೇಳಿರುವನು:– ಪಿರಿಯಕ್ಕರ, ದೊರೆಯಕ್ಕರ, ನಡುವಣಕ್ಕರ, ಎಡೆಯಕ್ಕರ, ಕಿರಿಯಕ್ಕರ (ಕೈಪಿಡಿ. ೧೨೫) ; ನಡಂವಣಕ್ಕರದ ಗಣಯೋಜನೆ . . . ಮೊದಲು ಒಂದು ಬ್ರಹ್ಮ, ನಡುವೆ ಮೂರು ವಿಷ್ಣು, ಕೊನೆಯಲ್ಲಿ ಒಂದು ರುದ್ರಗಣ (ಛಂದೋವಿ. ೧೩೯). ನಡುವಲ, ನಡುವಳ=ಮಧ್ಯದ ; ನಡಂಕಲ : ನಡುವಲವನು ಮಾರಯ್ಯ ಮನೆಯಲ್ಲಿದ್ದಾನೆ (ದಾನಚಂ. ೯೩) ; ಹಿರಿಯ ಮಗನ ಕಾಲ ಮುಱಿದು ನಡುವಳ ಮಗನ ಕಣ್ಣು ಮುಱಿದು ಕಿಱಿಯ ಮಗನ ಬಾಯ ಮುಚ್ಚಿ (ಅಱಿಮಾ. ೧೪೭-೫೫೯).

[ದೇ.೫ ತಮಿ. ನಟು; ಮಲ. ಕೊಡ. ತುಳು. ನಡು; ತೆಲು. ನಡು, ನಡಿ; ಕೊಲಾ. ನಡುಮ್; ನಾಯ್ಕಿ. ನಜುಮ್; ಪರ್ಜಿ. ನಜುಬ್ ]

△ ನಡುಂಗು 'ನಡುಗು₁' ನೋ.

**ನಡುಕ (ನಾ).** ೧. (ಚಳಿ, ಭಯ, ಜ್ವರ ಮುಂತಾದ ಕಾರಣಗಳಿಂದ) ಕಂಪಿಸುವಿಕೆ ; ಅದಿರುವಿಕೆ ; ನಡುಗುವಿಕೆ ; ಕಂಪನ : "ವೇಪಥುಃ, ಕಂಪಃ – ಈ ೨ ನಡುಕಂ" (ಹಲಾಯು. ೯೮-೪೪೩) ; "ವೇಪಥು ಕಂಪಮೆನೆ ನಡುಕಮಪ್ಪುಂ" (ಮಂಗರಾ. ೧೧೩-೨) ; ಆಗಳಾದಿತ್ಯನಾಕೆಯ ಮನದ ಶಂಕೆಯುಮಂ ನಡುಗುವ ಮೆಯ್ಯ ನಡುಕಮುಮಂ ಕಿಡೆ ನುಡಿದಿಂತೆಂದು (ಪಂಪಭಾ. ೧-೯೨ ವ) ; ಶೀತಂ ನಡುಕಂ ಬೆಮರುದ್ಭೂತಂ ತಲೆಬೇನೆ . . . ವಾತಜ್ವರಚೇಷ್ಟೆ ನೋಯೆ ಕಿವಿದೋಳುಗೆಗಳ್ (ಕಲ್ಯಾಕಾ. ೩-೭); ಕಾರೊಳ್ ನಡುಕಂ ಮೆಯ್ವೆರ್ಚೆ ಗುಂಟಲ್ ಕುಸಿದು ಕಿವಿಯೆಬಲ್ಪಂದು ನಿಂದಿರ್ದುದೋ ರೊಂದೆಡೆಯೊಳ್ ತಾಱಲ್ಗಳೆತ್ತಂಬಿಡಿದು ಮೃಗಮ್ಯಗೀವ್ಯಂದಮೋರಂದ

ದಿಂದಂ (ಚಂದ್ರಪು. ೪-೪೬) ; ಭಾವದೊಳ್ ಕ ಪ್ರತ್ಯಯಮುಂಟು–ಉಡುಕಂ, ನಡುಕಂ – ಎಂಬಂತೆ (ಶಮದ. ೨೦೨ ಪ್ರಯೋ) ; ಶಿರದ ಗಂಗೆಯ ತೂಱ್ ತುಹಿನಾಕರನನಂಬರಕಿಟ್ಟು ಹಣೆಗಣ್ಣುರಿಯನೆಬ್ಬಿಸಿ ತನುವನೊಡ್ಡಿದನಭವ ನಡುಕದಲಿ (ಶಿವರಾ. ೩-೨-೩) ; ನಡುಕಂ ಕೈಮಿಗೆ ದಂತಚ್ಛದಮೊಡೆ ದುಹುಹುಧ್ವಾನಮುಂ ಪೊಣ್ಮೆ . . . ಪಾಂಥತೆರ್ಱಡೆ ತೋಳ್ಗಳ್ಕೂಡೆ ಜಾನು ಪ್ರಹಿತಶಿರರದೇನಿರ್ದರೋ ಶೀತಭೀತರ್ (ರಾಜಶೇ. ೯-೨೨). ೨. ಅಂಜಿಕೆ ; ಭಯ ತಲ್ಲಣ ; ಭೀತಿ : ಮೆಲ್ಲಿರ್ದಯ ನಡುಕವುಂ ಮಾಣ ಸಲ್ಸಂಭ್ರಮಿಸುವಂತಿರಾ ಕಾಪಿಪವಯವಂಗಳುಂ (ವರ್ಧಪು. ೩-೧೨ ವ) ; ತುರಗಾಕಾರದ ಶೈಳಮನಿರದಡರ್ದೇಱಿದೊಡ ಬೆಟ್ಟ ನಡುಕದಿನಾಗಳ್ ತುರಗಾಶ್ರಮನುಚ್ಚೈಶ್ರವತುರಗೋಪಮನಿತ್ತು [ತ್ರ] ದೊಂದು ತುರಗಮ ನಿತ್ತಂ (ಬಂಹರಿ. ೮-೩೮) ; ಸೌಂದರನುಂ ತುಂಬುರನುಂ ಬೆಗಡುಗೊಂಡು ಬೆಬ್ಬಳೆವೋಗಿ ನಡುಕದ ಮಳೆ ಕಱಿದು . . . ಕೌತುಕರಸದೊಳವಗಾಹವಿರ್ದು (ಸಂಪಿರ. ೧೮-೪೩) ; ಶ್ರೀಮಂತರ ಮನೆ ಅಂದರೇನೇ ನನಗೆ ನಡುಕ ಬರುತ್ತದೆ (ಪತಿ. ೪) ; ಈ ಮಾಧರಿಯ ಬೈಗುಳಗಳನ್ನು ಎಂದೂ ಕೇಳದ ಜ್ಞಾನಾಂಬೆಗೆ ನಡುಕವುಂಟಾಗಿ ಜ್ವರವೂ ಬಂದು ಗರ್ಭಕ್ಕೆ ಧಕ್ಕೆ ಬರುವಂತಾಗಿ ಬಿಟ್ಟಿತು (ಪ್ರಪಾಪ. ೪೧). ೩. (ಆಲಂ) ಚಂಚಲವಾದುದು ; ಸ್ಥಿರವಲ್ಲದುದು : ಪೊಲಸಿನಂತಶುಚಿಯುಪ್ಪ ವಾತದಂತೆ ನಡುಕವುಪ್ಪ . . . ಕೊಡದ ನೀರಂತೆ ಪೆರ್ಚಿಸಲರಿದಪ್ಪ ಸಂಸಾರಮುಂ ನಂಬಿ ದರ್ಶನಮುಮಂ ವ್ರತಮುಮಂ ಕೆಡಿಸು ವುದೆಗ್ಗಿಕೆ (ಧರ್ಮಾಮೃ. ೩-೧೮೬). ೨, ೩ : ನಡುಕಮುಮಾಱಿಡಿಯುಂ ಚೂತ ಮಂಜರಿಯೊಳ್ (ಎಪ. XIII, ೩೩೨-೪೩ ; ೯೭೯).

[ < ನಡುಗು$_1$./ತಮಿ. ನಟುಕ್ಕ ]

**ನಡುಕಂಗಿಡು** (ಕ್ರಿ). ಕಂಪನ ನಿಲ್ಲು ; ನಡಂಗುವಿಕೆ ಇಲ್ಲದಾಗು : ಪದುಳಿಸ ದುಂಗವೆಬ್ಬಱದ ಕಣ್ಮಲರ್ . . . ನಡುಕಂಗಿಡದೂರು ಗುಂದೆಯೇಱದ ಕರಘಾತಮೊಪ್ಪೆ ಸುಸಿಲಿಂ ತಣಿದೊಯ್ಯನೆ ಜಾರೆ ಜಾಱಿದಳ್ (ಲೀಲಾವ. ೩-೦೫). [ ನಡುಕ + ಕಿಡು ( < ಕೆಡು$_1$ ) ]

**ನಡುಕಂಗೊಳ್** (ಕ್ರಿ). ೧. ಕಂಪಿಸು ; ನಡಂಗು. ೨. ಭಯವನ್ನು ಹೊಂದು ; ಹೆದರು : "ಸಿಡಿದನೆಂದುಂ. ನಡುಕಂಗೊಂಡನೆಂದುಂ . . . ಕೆಮರ್ತನೆಂದುಂ–ಈ ರ ಭಯಂಗೊಂಡಮು" (ಶಶಸಾ. ೫೬-೨೨೫) ; ಇಂದ್ರಂ ವಹ್ನಿ ಧರ್ಮಂ ನಿರುತಿ ಜಲಧಿಪಂ ವಾಯು ವಿತ್ತೇಶನೀಶಂ ನಡುಕಂಗೊಳ್ವಂ ಸುರುಳ್ವಂ ಸುಗಿವಪಗಿವನುಳ್ಳಳ್ಕುವಂ ಬಳ್ಕುವಂ ವಾವದರ್ದಂತಿರ್ಪಂ ಬೆಮರ್ವಂ ಜಯವೊಡೆದ ರವಕ್ಕದ್ಭುತಂ ಕಂಸಚಾಪಂ (ಜಗವಿ. ೬-೩೦).

[ ನಡುಕ + ಕೊಳ್$_1$ ]

**ನಡುಕಂಬೆರು**, ನಡುಕವೆರು (ಕ್ರಿ). ೧. ನಡುಕವನ್ನು ಹೊಂದು ; ಕಂಪಿಸು ; ನಡಂಗು. ೨. ಭೀತಿಯನ್ನು ಹೊಂದು ; ಹೆದರು ; ಭಯಗೊಳ್ಳು : ನಡುಕಂಬೆತ್ತಿರ್ಪಳ್ ಸೋಂಕುವೆಯುಡಿಗಡಿಗಂ (ಶಾಕುಂತ. ೦೦-೨೪). **ನಡುಕವೆರು** : ೧. ನಡುಕವೆತ್ತಿದ ಅವಳ ಕೈಬೆರಳುಗಳು . . . ಬಳೆಗಳನ್ನು ತೆಗೆಯಲೊಲ್ಲದೆ ಹೋದುವು (ಧಾರವೀ. ೩).

[ ನಡುಕ + ಪೆರು$_1$ ( < ಪೆಱು$_1$ ) ]

**ನಡುಕಟ್ಟು$_1$** 'ನಡುಗಟ್ಟು$_1$' ನೋ.

**ನಡುಕಟ್ಟು$_2$** 'ನಡುಗಟ್ಟು$_2$' ನೋ.

**ನಡುಕಡಲು** 'ನಡಂಗಡಲ್' ನೋ.

**ನಡುಕವೆರು** 'ನಡುಕಂಬೆರು' ನೋ.

**ನಡುಕಾನನ** (ನಾ). ಅರಣ್ಯದ ಮಧ್ಯಭಾಗ ; ನಟ್ಟಡವಿ : ನಡದರು ಪುಣ್ಯದ ನಿಜವುತ್ತಳೆಯಂತೆ . . ನಡುಕಾನನವ ಹೊಕ್ಕರು ಉಗ್ರದಡವಿಯ ಮೃಡ ಬಲ್ಲನವರ ದುಃಖಗಳ (ಹರಿಶಾಂ. ೩-೩೮). [ ನಡು$_2$ + ಕಾನನ ]

**ನಡುಕೇರಿ** 'ನಡುಗೇರಿ' ನೋ.

**ನಡುಕೋಣೆ** (ನಾ). ಮನೆಯ ನಡುವಿನಲ್ಲಿರುವ ಕೋಣೆ : ನಡುಮನೆ : ನರ್ಸಿಗೆ ಹೊರಗಿನಿಂದ ಉತ್ತರ ಬಾರದಿರಲು, ಅವಳಾಗಿಯೇ ನಡುಕೋಣೆಗೆ ಬಂದು ನೋಡಿದಳು (ಒಡ್ಡಿಉ. ೪೯). [ ನಡು$_2$ + ಕೋಣೆ$_2$ ( < ಕೋಣ್ ) ]

**ನಡುಕೋಲ್** 'ನಡುಗೋಲ್' ನೋ.

**ನಡುಗಂತಿ** (ನಾ). ಎಳಗಂದಿಯಾಗಿರುವ ಸ್ಥಿತಿಯನ್ನು ದಾಟಿದ ಹಸು ; ಕರುವಿನ ಮಧ್ಯಕಾಲದಲ್ಲಿರುವ ಹಸು : ನಡುಗಂತಿಯಾದ ಹಸಕಿಗೆಯ ಹಸುವಿನ ಮೊಸರು ಕಡೆದ ಹೊಸ ಬೆಣ್ಣೆಯಂ ಸೋದಿಸಿಯೊಲೆಯೊಳೆತ್ತಿ. . . ತುಪ್ಪಮಂ ಹಸಮಾಳ್ಪುದು (ಸೂಪಶಾ. ೨-೧೬). 'ಎಳೆಗಂತಿ' ಪರಾ.

[ ನಡು$_2$ + ಕಂತಿ$_1$ ( < ಕಂದಿ$_1$ ) ]

**ನಡುಗಂಬ** 'ನಡುಗಂಭ' ನೋ.

**ನಡುಗಂಭ**, ನಡುಗಂಬ (ನಾ). ಮಧ್ಯಭಾಗದಲ್ಲಿರುವ ಕಂಭ,–ಸ್ತಂಭ : ಅವಳ ವಿಪರೀತವೇಷಂ ತನಗೆ ರೋಷಮಾನೀಯೆ ಸಾಯೆ ಸದೆಬಡಿದು ಮನೆಯ ನಡುಗಂಭದೊಳಡಸಿ ಕಟ್ಟಿ ಕಳ್ಪಸೊರ್ಕಿನೊಳಮವಳ ಪೊರ್ಕುಳ ಯೊಳಂ ಬಟಲ್ದು ನಿದ್ರಿತನಪ್ಪುದುಂ (ಪಂಚತಂ. ೬೪-೨೧). **ನಡುಗಂಬ** : ಸುತ್ತುಮೆಟ್ಟಿಲು ಹಂತದ ನಡುಗಂಬ (Newel. ಇಂಕನಿ).

[ ನಡು$_2$ + ಕಂಭ ]

**ನಡುಗಟ್ಟು$_1$**, ನಡುಕಟ್ಟು$_1$ (ಕ್ರಿ). ೧. ಸೊಂಟಕ್ಕೆ ಬಟ್ಟೆ ಮುಂತಾದು ವನ್ನು ಸುತ್ತು,–ಕಟ್ಟು : ಎಲೆ ಮರುಳೆ, ನಡುಗಟ್ಟಿ ವೀರಮುಂಡಿಯನಿಕ್ಕಿ ಬಲಗೆಯ್ಯನೆಳೆದು ಕಿವಿಗಾನಿಸುವೆ ಸರಳಂ ! (ಗೀಎಂ. ೨೮-೦೬). ೨. (ಆಲಂ) ಟೊಂಕಕಟ್ಟು ; ಸಿದ್ಧವಾಗು ; ಸಜ್ಜಾಗು : ರಣದಲ್ಲಿ ನಡುಗಟ್ಟಿ ಹಿಮ್ಮೆಟ್ಟ ದೊಡಲೊಡ್ಡಿ ಯತ್ನದಲಿ ಬಲುಬಳಲಿ (ವಿಸೀಗೀ. ೫೩-೦೬). **ನಡುಕಟ್ಟು** : ೨. ಹೆಜ್ಜೆಹೆಜ್ಜೆಗೆ ನಿಧಿಯ ಕೊಪ್ಪರಿಗೆ ಕಾದಿಹುದು ... ಎಡವಿಬೀಳುವ ದೊಂದೆ, ಹಿಡಿದು ಅಗೆದವರಿಲ್ಲ ನಡುಕಟ್ಟಿ ನಿಂತವರ ಪಡೆಯಬಹುದು (ನೆಲಮು. ೨೦-೨೦).

ನಡುಗಟ್ಟಿ ನಿಲ್ಲು, ನಡುಕಟ್ಟಿ ನಿಲ್ಲು = ಟೊಂಕ ಕಟ್ಟಿ ನಿಲ್ಲು ; ಸಿದ್ಧವಾಗಿ ನಿಲ್ಲು ; ಸಜ್ಜಾಗು : ನಾವೀಗ ನಡುಗಟ್ಟಿ ನಿಲ್ಲಬೇಕಾದುದು ನಮ್ಮ ಧರ್ಮ (ಸವತಿ. ೬೩) ; ಅವುಗಳ ಪಕ್ಕದಲ್ಲಿ ನಂಜರಾಜಯ್ಯನ ನಚ್ಚಿನ ಜ್ಯೋತಿಷಿ ಉಪಾಧ್ಯಾಯ ನಡುಕಟ್ಟಿ ನಿಂತಿದ್ದ (ಚಿದೇವ. ೦೩೨).

[ ನಡು$_2$ + ಕಟ್ಟು$_1$ ]

**ನಡುಗಟ್ಟು$_2$**, ನಡುಕಟ್ಟು$_2$ (ನಾ). ಸೊಂಟಕ್ಕೆ ಕಟ್ಟುವ ಬಟ್ಟೆ ಮುಂತಾದ ಪಟ್ಟಿ ; ಸೊಂಟಪಟ್ಟಿ : ತೊಟ್ಟಸೆಮಾ ಕರಿಯ. ನಡುಗ [ಪಾಠಾಂ. ಕ]ಟ್ಟನಂಗಿಗೆವೆರಸಿದ ತಲ್ಲೇಖವಾಹನುನ್ನತದೇಹಂ (ವರ್ಧಪು. ೩-೧೩). **ನಡುಕಟ್ಟು$_2$** : ಬೆಳ್ಳಿಯ ನಡುಕಟ್ಟು–ನೀಲಿಯ ಮೇಲಂಗಿ (ಆಹುರ್ತಿ. ೦) : ಪ್ರತಿಯೊಬ್ಬನೂ ತನ್ನ ನಡುಕಟ್ಟಿನಲ್ಲಿ ಆವಾಗಲೂ ಒಂದು ಚೂರಿಯನ್ನೋ, ಕಠಾರಿಯನ್ನೋ ಇಟ್ಟೇ ಇರುತ್ತಿದ್ದನು (ರಾಜಾಮು. ೨೦) ; ಕಾಡುಕೋಳಿ ಗಳನ್ನೂ, ಕೆಲವು ವೇಳೆ ಬೇರೆ ಪ್ರಾಣಿಗಳನ್ನೂ ಕೊಂದು ನಡುಕಟ್ಟಿನಲ್ಲಿಟ್ಟು ಕೊಂಡು ಬರುತ್ತಿದ್ದನು (ಮಲೆನಾ. ೦೨೮) ; ಅಗದೋನೆ ಭೋಗದೋನೆ ನಾಗರಾ ನಡುಕಟ್ಟನೋನೆ (ಹಳ್ಳಿಪಾ. ೫೬). [ ನಡು$_2$ + ಕಟ್ಟು$_3$ ]

**ನಡುಗಡಲ್**, ನಡುಕಡಲು, ನಡುಗಡಲು (ನಾ). ಸಮುದ್ರದ ಮಧ್ಯ ಭಾಗ ; ನಡುನೀರು : ನಡುಗಡಲೊಳ್ ಪಱುಗೋಲಂ ನಡೆಯಿಸುವಂಬಿಗ ನಂತೆ (ಧರ್ಮಾಮೃ. ೬-೨೦೯); ಇಂತು ನಡುಗಡಲೊಳಾಳುವಂಗೆ ತೆಪ್ಪವಾಗುತ್ತ ಪಿಂಗುವರೆ (ಬಸರ. ೪-೩೦). **ನಡುಕಡಲು** : ನಡುಕಡಲಿನಲ್ಲಿ ಮುಳುಗು ತ್ತಿದ್ದವನಿಗೆ ತೆಪ್ಪವಾಗಿ, ಕೈಬಿಡುವಿರಾ ? (ತುಂಗಭ. ೪೧). **ನಡುಗಡಲು** : ಎಲೆ ವಿಧಾತನೆ ವೃಥಾ ಹೊಳೆಯ ನಡುಗಡಲೊಳಗೆ ಸಾವೆಯಂ ಮುಳುಗಿ ಸಿದೆಲ್ಲೈ (ತುರಂಗ. ೨-೨೬). [ ನಡು$_2$ + ಕಡಲ್$_2$ ]

**ನಡುಗಡಲು** 'ನಡುಗಡಲ್' ನೋ.

**ನಡುಗಡ್ಡೆ** (ನಾ). ಸುತ್ತಲೂ ನೀರಿನಿಂದ ಸುತ್ತುವರಿದ ಭೂಪ್ರದೇಶ; ದ್ವೀಪ: "ಅಂತರೀಪ – ನಡುಗಡ್ಡೆ, ದ್ವೀಪ" (ಗಂಗಾವು. ೨); ದಕ್ಷಿಣ ಮಹಾಸಾಗರದಲ್ಲಿ ಹಲವು ನಡುಗಡ್ಡೆಗಳುಂಟು (ಮುಂಬಯಿ. ೪–೧೧೩); ಆ ನಡುಗಡ್ಡೆಯ ರಾಜಧಾನಿಯಿರಬೇಕು ಆ ಅಪೂರ್ವ ವಿಚಿತ್ರರೂಪಸಿ (ಸಿಡಿಲು. ೩೬); ಒಂದು ಕಾಲಕ್ಕೆ ಹಿಂದೀಉಪಸಾಗರದಲ್ಲಿದ್ದು, ಈಗ ಮುಳುಗಿಹೋದ 'ಲೆಮೂರಿಯಾ' ಎಂಬ ನಡುಗಡ್ಡೆಯಿಂದ ಇವರು ಬಂದವರು (ಭಾಷಾಶಾ. ೬೬); ದೋಣಿಯು . . . ರ್ಝಾಂಝೀಬಾರ ನಡುಗಡ್ಡೆಯ ದಂಡೆಗೆ ಸ್ವಲ್ಪ ಹೊತ್ತಿನ ಮೇಲೆ ಬಂದು ತಲುಪಿತು (ವೀರಬಿಮ. ೦೦೦). [ ನಡು₂ + ಗಡ್ಡೆ ]

**ನಡುಗಣ್** (ನಾ). ೧. ಕಣ್ಣಿನ ಮಧ್ಯಭಾಗ. 'ನಡುಗಣ್ಬೆಳಗು' ಪರಾ. ೨. (ಹಣೆಯ) ಮಧ್ಯದಲ್ಲಿರುವ ಕಣ್ಣು; ಹಣೆಗಣ್ಣು: ಸುರನದಿಯು ಕುಂಡಲದ ನಡುಗಣ್ಣ ಪಂಚಾಸ್ಯದೀರ್ಘಭುಜದ . . . ನಿಜದ ಮೂರ್ತಿಯಂ ತೋರಿಸಿದನು (ಸಿದ್ಧರಾ. ೩–೨೬); ಏಕಲ್ಲಂಜಿ ನಂಜುಂಡಂ . . . ಪಣೆಯ ನಡುಗಣ್ಣ ಕಿಚ್ಚುನುಚ್ಚಳಿಸಿ ಸಜ್ಜನ ಬಂಬೂದಿಯಂ ಮೆಯ್ಗೆ ಪೂಸಿ ದಟ್ಟದೊವಲಂ ಪೊದದಗಜೆವರಸು ಬೆರೆವೊಡಲೊಳೆರ್ದಂ (ರಾಜಶೇ. ೦೦೩–೩). [ ನಡು₂ + ಕಣ್ ]

**ನಡುಗಣ್ಣು, ನೆಡುಗಣ್ಣು** (ನಾ). ಅತ್ತಿತ್ತ ಚಲಿಸದ ಕಣ್ಣು; ಒಂದೇ ಕಡೆಗೆ ಸ್ಥಿರವಾದ ದೃಷ್ಟಿಯುಳ್ಳ ಕಣ್ಣು; ಅಚಲವಾದ ನೋಟ: ನಿಟ್ಟಡಿಯಿಂದ ಹೋಗಿ, ಚೆನ್ನನಿಗೆ ನಿಂತು, ಆತನಿಗೆ ನಡುಗಣ್ಣಾಗಿದ್ದ (ಮಂತ್ರಶ. ೮೨–೬). **ನೆಡುಗಣ್ಣು**: ನರಸಣ್ಣನು ನೆಡುಗಣ್ಣಾಗಿ ನೋಡುತ್ತ ನಿಂತುಬಿಟ್ಟನು (ನಡದಾ. I, ೪೩೬). [ ನಡು₁ + ಕಣ್ಣು (<ಕಣ್) ]

**ನಡುಗಣ್ಬೆಳಗು** (ನಾ). ಕಣ್ಣಿನ ಗುಡ್ಡೆಯ ಕಾಂತಿ; ಅಲಿಯ ಹೊಳಪು: ಸಿರಿಮೊಗಮುಂ ನಸುಬಾಗಿ ಕರಂ ಭೂವರನಂ ಪುರ್ಬೇರಿಸಿ ನಡೆ ನೋಡುವ ತರುಣಿಯ ನಡುಗಣ್ಬೆಳಗಾ ಯವೆಯಾ ಪುರ್ಬಿನೆಡರಿ ಪರಿಯೆ (ಅದುಕಾ. ೪–೦೩). [ ನಡುಗಣ್ + ಬೆಳಗು₂ ]

**ನಡುಗನ್ನಡ** (ನಾ). ಮಧ್ಯಕಾಲದ ಕನ್ನಡ; ಹಳಗನ್ನಡ ಮತ್ತು ಹೊಸಗನ್ನಡಗಳ ನಡುವಿನ ಕಾಲದ ಕನ್ನಡ: ಈಗ ನಾವು ಬಳಸುತ್ತಿರುವ ಭಾಷೆ "ಹೊಸಗನ್ನಡ". ಇದಕ್ಕೆ ಹಿಂದೆ ಇದ್ದ ರೂಪವನ್ನು "ನಡುಗನ್ನಡ" ವೆನ್ನುತ್ತಾರೆ (ಕೃಬಿಡಿ. ೦); ಅನೇಕ ದೃಷ್ಟಿಗಳಿಂದ ಹನ್ನೆರಡನೆಯ ಶತಮಾನದ ಮಧ್ಯಭಾಗವನ್ನು ಒಂದು ಪರ್ವಕಾಲವೆಂದು ಕರೆಯಬಹುದು . . . ಭಾಷೆಯ ದೃಷ್ಟಿಯಿಂದ ನೋಡಿದರೆ ಹಳಗನ್ನಡವು ನಡುಗನ್ನಡವಾಗಿ ಸಂಕ್ರಮಣವಾಗುತ್ತಿದ್ದುದು ಆ ಕಾಲದಲ್ಲಿಯೇ (ಕಶಾಇ. ೬); ನಡುಗನ್ನಡ–ಹೊಸಗನ್ನಡ ಕವಿತೆಗಳಲ್ಲಿ ಮತ್ತು ಆಡುನುಡಿಯಲ್ಲಿ ನೀನು, ನಾನು, ತಾನು ಎಂಬಿವಕ್ಕೆ ನೀ, ನಾ, ತಾ ಎಂಬಿವೂ ಸ್ಥಾನಿಗಳಾಗುತ್ತವೆ (ಸಂಕೋಧ. ೬೩). [ ನಡು₂ + ಕನ್ನಡ₁ ]

**ನಡುಗಲ್** (ನಾ). ನಟ್ಟಿರುವ ಕಲ್ಲು; ನಿಲ್ಲಿಸಿರುವ ಕಲ್ಲು: ಮುಚ್ಚನ್ದಿನ್ನಡುಗಲ್ಗೆ ಪಡುವಯಾಲೆ ತಾಯನ್ದೆಕೆಱೆಯ ವಡಗಾಯ್ನಡುಗಲ್ಗೆ ಕೊತ್ತನ್ದೆಱೆಯ (ಎಕ. X (S), ಚಿಕ್ಕಬ. ೧೦೬–೬೪; 850). [ ನಡು₂ + ಕಲ್₃ ]

**ನಡುಗಾಡು** (ನಾ). ಕಾಡಿನ ಮಧ್ಯಭಾಗ; ಅರಣ್ಯದ ಮಧ್ಯಪ್ರದೇಶ; ಕಾಡಿನ ಒಳಗಿನ ಪ್ರದೇಶ: ಹೊತ್ತಿಹ ಹೊಱೆಯಂ ನಡುಗಾಡಿನಲ್ಲಿ ಮಡುಗುತ್ತೊಡೆಯರೆ ಬರಲಮ್ಮೆವೆಂದು ನುಡಿದರ್ಭಯದಿಂ (ನನ್ನಚಾ. ೨–೯೦); ಪರಮುಕ್ಕಪಾಕರನೆಂಬೀ ಸಿನುದಂ ಬಿಸುಟುಕಟ ಶಂಕರಾ ಶಂಕರನಂ ಹರಸಿ ನಡಗಾಡೊಳಂಧೆಯಾ ಕರದುಂಡಮನೆಳೆದುಕೊಂಡವ್ವೋಲ್ಲಾಡಿದೆಯ್ಕೆ (ರಾಜಶೇ. ೦೩–೦೨೯). [ ನಡು₂ + ಕಾಡು₂ ]

**ನಡುಗಾನಲ್** (ನಾ). = ನಡುಗಾಡು: ಮಿಕ್ಕ ಸರುವಿಂಗೆ ದರುವಿಂಗೆ . . . ನಡುಗಾನಲಿಂಗೆ [ಪಾಠಾಂ. ನಡುವಾನಲಿಂಗೆ, ನಳುನಾನಲಿಂಗೆ] ತೆಕ್ಕೆಗತ್ತಲೆಗೆ . . . ಇಕ್ಕೆವನೆಯಾನೆಂದು ಬೊಬ್ಬಿಟ್ಟು ಪೇಳ್ವಂತೆ ಘೀಳಿಡುತ್ತುಲಿದುದಡವಿ (ಸೋಮಂಡ. ೩–೩). [ ನಡು₂ + ಕಾನಲ್ ]

**ನಡುಗಾಲ** (ನಾ). ೧. ಮಧ್ಯಕಾಲ; ಮಧ್ಯಂತರ ಕಾಲ. ೨. ಸ್ಥಿರವಾದ ತೀರ್ಮಾನ ಕೈಕೊಳ್ಳುವ ಮುಂಚಿನ ಕಾಲ,–ಸಮಯ; ತಾತ್ಕಾಲಿಕವಾಗಿ ನಿರ್ಣಯ ತೆಗೆದುಕೊಳ್ಳುವ ಕಾಲ.

ನಡುಗಾಲದ ವರದಿ=ತಾತ್ಕಾಲಿಕವಾದ ವರದಿ; ಸ್ಥಿರವಲ್ಲದ ಸಂದಿ: (Interim report. ಪತ್ರಿವಿ. ೪೬). ನಡುಗಾಲದ ಸರಕಾರ=ಮಧ್ಯಕಾಲದ ಸರಕಾರ; ತಾತ್ಕಾಲಿಕವಾದ ಆಡಳಿತ: ರಾಜ್ಯದ ಮಂತ್ರಿಮಂಡಲವು ಬಹುಮತವನ್ನು ಕಳೆದುಕೊಂಡಾಗ ರಾಜ್ಯಪಾಲರು ನಡುಗಾಲದ ಸರಕಾರವನ್ನು ನೋಡಿಕೊಳ್ಳುತ್ತಿದ್ದರು (ಊಧಿ). [ ನಡು₂ + ಕಾಲ ]

**ನಡುಗಿಸು** (ಕ್ರಿ). ೧. ನಡುಗುವಂತೆ ಮಾಡು; ಅಲುಗುವಂತೆ ಮಾಡು; ಅಲ್ಲಾಡಿಸು: ಅಂಗವಂ ನಡುಗಿಸುತ ಬಸುಱಂ ಪೊಂಗಿಸುತವಕ್ಕಳಿಸುತಂ ವಾದ್ಯಂಗಳಿಗೆ ಬೆಚ್ಚುತ ಬೆದಱುತಂ (ಬಸಪು. ೧–೯೯); ಮೂಲೋಕಮಂ ಮಾಗಿ ನಡುಗಿಸಿತು ಮೇಣುಡುಗಿಸಿತು ಪೆರ್ಚಿದ್ದೈಕಿಲಿಂದೆ (ಕೃಮಿಧಾ. ೨೮–೨); ಕಾಶೀಮ ಕೈ ನಡುಗಿಸುತ್ತ ಚೀಟಿ ಬರೆಯಹತ್ತಿದ (ಜೀವರಂ. ೩); ಒಳ್ಳಿದರ ನೆಚ್ಚರಿಸಿ ಪಿಡಿದು ನಡುಗಿಸುಗುಂ (ಕಾಲೂರ. ೭೭–೧೯೧). ೨. ಭಯಗೊಳಿಸು; ತಲ್ಲಣಗೊಳಿಸು: ಧುರದೊಳರಿಗಳಂ ನಡುಗಿಸುವುದಾಗಿ ಚತುರಂಗಬಲವೆನಿಸಿತೀ ಛತ್ರವು (ಹರಿಕಾ. ೬–೧೪); ಸಹದೇವ ನಕುಲರ ನಡುಗಿಸಿದನುಡುಗಿಸಿದನಾಟೋಪವನು ಪವನಜನ (ಕುಪ್ರಾಭ. ೩–೧೩).

ನಡನಡುಗಿಸು (ದ್ವಿರುಕ್ತಿ): ನಡನಡುಗಿಸಿ ನಲ್ಲನೆದೆಯ ಧೈರ್ಯವ . . . ಪೊಂಗೊಡವೊಲೆವೆಂಗಳು ಮುಸುಕಿತು ಮೃಡತಪಧ್ವಂಸಿಯ ಪಿತನ (ಮೋಹತ. ೦೯–೩೦). [ ನಡುಗು₁ + – ಇಸು₂ ]

**ನಡುಗು₁, ನಡುಂಗು** (ಕ್ರಿ). ೧. ಅದುರು; ಅಲ್ಲಾಡು; ಕಂಪಿಸು: "ನಡುಗು (ನಡಗು)—ಕಂಪನೇ" (ಶಮದ್ಧ); "ಕಂಪಿಸಿದುದೆನಲ್ಕೆ ನಡುಗಿದುದು" (ಕರ್ಣಾನಿ. ೨೮); ತೆಂಕಣಗಾಳಿಯೊಳಾದ ಸೋಂಕಿನೊಳೆ ನಡುಗುವಶೋಕವಲ್ಲರಿಯಾ ಪಲ್ಲವದೊಳೆ ನವಚೂತವಲ್ಲವಂ ತೊಡರ್ದವೊಲಾಗೆ (ಹಂಪಕಥಾ. ೩–೭೩); ಎಲರಲೆಪದಿಂ ನಡುಂಗುವೆಲೆದುಱುಗಲಿಂ ಕದಳೀವನಂಗಳು ಮೈಕಿಲದರ್ದು ನಡುಗಿದವುವೆಂಬಂತೆಯುಂ (ಕಾದಂಬ. ೨೦೯); ಭಯದಿಂದಂ ನೋಡಿ ನಾಡೆ ನಡುಗುತ್ತಿರ್ದರ್ (ಧರ್ಮಾಮೃ. ೩–೯೩); ನಡುಗುವ ನರದರಲೆಯಿಂ ನರೆತು ಸಡಿಲ್ದ ಸರ್ವಾಂಗದಿಂ (ಸಂಬಿರ. ೬–೨೩); ಸವನಿಸೆ ಹಮ್ಮದಂ ನಡುಪ ಕಾಲ್ ಬೆಮರಂ ಬಿಡುತಿರ್ಪ ಗಲ್ಲಮುಣ್ಮುವ ನವಿರ್ . . . ಇವರೊಳೊಪ್ಪೆ ನೋಡಿದರ್ (ಕಬ್ಬಿಕಾ. ೩೩೨); ಕರ ನಡುಗೆ ಮೈ ಬಲಿಯೆ ಹುಬ್ಬುಗಳಱೆ ಬಿಗಿಯೆ (ಕುಪ್ರಾಭ. ೧೨–೦೦). ೨. ಹೆದರು; ಭಯಪಡು; ಭೀತಿಗೊಳ್ಳು: ನಡುಗುವುದುಂತೆ ಪಾಂಡವಬಲಂ ನಿನಗರ್ಜುನನೆಂಬನೆಂದುಮುರ್ಕುಡುಗಿ ಸುರುಳ್ದನೀಯೆಡೆಗೆ ಪೇೞ್ ಪೆಱರಾರ್ ದೊರೆ . . . ಅಂಗವಾಹೀತಳಾಧಿಪಾ (ಶಂಪಥಾ. ೦೨–೫೧); ಮುಳಿದು ಕೊಲಲಿರ್ದ ಕುಂಭನೆಂಬ ರಕ್ಕಸಂಗೆ ನಡುಗಿ ಚಂಡಕೌಶಿಕಂ ಮುಂಡಕೌಶಿಕನನೊಯ್ದು ದ್ವಿಗುಹಾಂತರದೊಳ್ ಪ್ರಯತ್ನಂ ಬೆರಸಿರಿಸಿ ಕಾವುದುಂ (ಶಾಂತಿಪು. ೬–೩೫೨); ನಡುಗಿ ಮೊಡವಡುವುದುಂ ಮೊಱೆಯಿಡುವುದುಮೇಕಣ್ಣಾ (ಸಮಪ. ೯–೫೦); ಕಳ್ಳರ ಕೊಟ್ಟಮಿದೆಂದೊಡೆ ಬಲ್ಲಿದರುಂ ನಡುಗುತಿರ್ಪರ್ (ಧರ್ಮಾಮೃ. ೦೨–೨೩೬); ಒಡೆಯರಾಡುವ ಮಾತ ಕಡೆವರಿಯಂತರ ಕೇಳಿ ಇದಿರುವೋಗಿ ಕಿಂಕರನಾಗಿ ನಡುಗುತ್ತ ಬಿನ್ನಹವ ಮಾಡುವ ಸದ್ಭಕ್ತರ ತೋರಯ್ಯಾ (ಬಸವ. ಕ. ೦೭೩–೪೪೯); ಸುರನಗರಿ ಪಡುಗಿತ್ತು ಸುರಪತಿ ಹರನ ನೆನೆದನು . . . ಎನೆ ನರನ ಕಡುದುಮ್ಮಾನ ನೆಱೆ ಹದಱೆಸಿತು ಮೂಜಗವ (ಕುಪ್ರಾದ್ರೋ. ೮–೦೦). △ **ನಡುಂಗು**: ೧. "ಝೊಂಪಿಸಿದನೆನೆ ನಡುಂಗಿದನಕ್ಕಂ" (ಕವಿಕಂ. ೧೪೦).

**ನಡಂನಡುಗು, ನಡನಡುಗು, ನಡುನಡುಗು** (ದ್ವಿರುಕ್ತಿ) : ಕಿಡೆಯ ಕೃಪಂ ನಡಂನಡುಗಿ ಶಲ್ಯನುರುಳ್ದರೆ . . . ಗಗನೇಚರರ್ ಒಡಿದು ಕಟ್ಟಿದರಾ ಧೃತರಾಷ್ಟ್ರಪುತ್ರರಂ (ಜಚಜಾನೇ. ೦೦-೯೬) ; ಪರಿಭವಾ[ನ]ಲನಿಂ ಶೋಕಾ ನಲನಿರ್ಮಡಿಸೆ ನಡುನಡುಗಿ ಕಾಯ್ಕುನೊಳ್[ಪ]ಡುಗಿ . . . ಇಂತೆಂದರ್ (ಪಂಪಭಾ. ೮-೭೦ಪ) ; ಬಂದ ಜಂಗಮವುದ ಇಂಗಿತಾಕಾರವನಱಿತು ಇದಿರೆದ್ದು ವಂದಿಸಿ ಕೈಮುಗಿದು ನಡ[ಪಾಠಾಂ. ಡು]ನಡುಗಿ ಕಿಂಕರನಾಗಿ . . . ಇರಬಲ್ಲರೆ ಅದು ವರ್ಮ (ಅವಕಂ. ೨೨೩-೧೦೦೦) ; ನುಡಿಯಲಾಱನು ಮಕ್ಕಳಿರ ನೀರಡಿಸಿದೆನು ಹರಿದಾಗಿಯೆನೆ ನಡನಡುಗಿ ದುರ್ಯೋಧನನು ದೂತರ ಕರೆದು ನೇಮಿಸಿದ (ಕುಭ್ಯಾ.ಗ. ೧೦-೨೪) ; ನೆಲ ಬಿರಿವಂತೆ ನಾನಾ ವಾದ್ಯರಭಸದಿ ಕುಲಗಿರಿ ನಡನಡುಗಿದುವು (ಬೋಧಹ. ೧೯-೮೭) ; ಅಂತು ಶಾಪಂಗುಡಲಾಂ ನಡುನಡುಗಿ ಕಯ್ಗಳಂ ಮುಗಿದು . . . ಏನಾದೊಡ ಮೆನಗೆ ಶಾಪಾಂತಕಾರಣಮಂ ಬೆಸಸೆಂಬುದುಂ (ಕಾದಂಬ. ೬೧೪) ; ಪೆಲವು ನಾಯ್ಗಳ ನಡುವಣ ಪುಲ್ಲೆಯಂತೆ ನಡುನಡುಗಿ (ಧರ್ಮಾಮೃ. ೬-೯೨) ; ವೇದ ವೇಧಿಸಲಱಿಯದ ಅಭೇದ್ಯಲಿಂಗವೆಂದು ನಡುನಡುಗಿತ್ತು (ಬಸವ. ೯೩೨); ಮಡದಿ ತನ್ನಯ ಪತಿಗೆ ತೋಱಲು ನಡುನಡುಗಿಯಾ ವರಕುಮಾರನ ಪೊಡವಿಪತಿಗವನೀಯೆ(ಸಂಭಪ. ೦೩-೬). **ನಡನಡಂ ನಡುಗು, ನಡನಡ ನಡುಗು**= **ನಡಂನಡಗಂ** : ಲುಬ್ಧಕಂ . . . ಬರ್ಪುದಂ ತಡೆಯದೆ ಕಂಡು ನಡನಡಂ ನಡುಗಿ ತಲ್ಲಣಿಸಿ . . . ಪಾಱಲನುವಾಗಿ ತೂಱಲ್ಗೊಂಬನೊರ್ವ ವಿಹಂಗ ಸಂಕುಳದಿಂ (ಗಿರಿಶ. ೧-೧೨೮ಪ) ; ನಡನಡ ನಡುಗುವಿನಮಡಸಿ ತಡೆಯದೆ ಖಳನಂ ಒಡಿದುಡಿಯೆ ಕಟ್ಟು (ವಡ್ಡಾರಾ. ೧೨೭-೬) ; ಗಾಳಿಗೊಡ್ಡಿದ ಸೊಡರಂತೆ ನಡನಡ ನಡುಗುವ ಕುರುಧ್ವಜನಿಯಂ ಕಂಡು . . . ಇಂತೆಂದಂ (ಪಂಪಭಾ. ೮-೦೦೦ಪ) ; ನಡನಡ ನಡುಗಿ ಮಿಡುಮಿಡು ಮಿಡುಕಿ . . . ಪುಯ್ಯಲಿಡುತ್ತುಂ (ಅಜಿಪು. ೧೧-೦೦ಪ).

[ ದೇ.೩ ತಮಿ. ನಟುಕ್ಕು, ನಟುಙ್ಕು ; ಮಲ. ನಡುಙ್ಙು ; ತುಳು. ನಡುಗು ; ತೆಲು. ನಡುಂಗು, ನಡುಂಕು ]

**ನಡುಗು₂** (ನಾ). ೧. (ಚಳಿ ಮುಂತಾದುವುಗಳಿಂದ) ಅದಿರುವಿಕೆ ; ಕಂಪಿಸುವಿಕೆ; ನಡುಕ; ಕಂಪನ : "ನಡುಕ=ನಡುಗು" (ಗಂಗಾಮ. ೦೭೭) ; ಪದಾರ್ಥಗಳ ಕಂಪನವೆಂದರೆ ನಡುಗು (ಮುಂಬಯಿ. ೫-೧೦೦) ; ಅದಕ್ಕೆ ನಾವು ಕಂಪ ಅಥವಾ ನಡುಗು ಎನ್ನುತ್ತೇವೆ (ಮುಂಬಯಿ. ೫-೦೦೨). ೨. ಹೆದರುವಿಕೆ ; ಭಯಂಗೊಳ್ಳುವಿಕೆ ; ಅಂಜಿಕೆ : ಈತನನ್ನು ನೋಡಿ ದರೆ ನನಗೆ ನಡುಗು ಬರುತ್ತದೆ (ಅಆಡ. ೧೦) ; ತಿಳಿಯದ ಮಂತ್ರ ಹೇಳಲಾರಂಭಿಸಿದರೆ ನನಗೆ ನಡುಗು ಬರುತ್ತದೆ (ಹುಚ್ಚಾಟ. ೧೨); ನೀನು ಹೇಳೋದು ಕೇಳಿ ನನಗೆ ನಡುಗು ಹುಟ್ಟಿತು (ಹಂದುಮ. ೬೮).

[ <ನಡುಗು₁./ತಮಿ. ನಟುಕ್ಕು ; ಮಲ ; ನಡುಙ್ಙು; ತೆಲು. ನಡುಂಗು, ನಡುಂಕು ]

**ನಡುಗುಂಪೆಣ** (ನಾ). ಅತ್ಯಂತ ಭಯಗೊಂಡ ವ್ಯಕ್ತಿ : ನಡುಗುಂ ಪೆಣನಾಗಿ, ತನ್ನವರ್ಗೆ ಕಯ್ಮಾಣತಿದೋರುವನು (ಮಂತ್ರಕ. ೮೩-೬).

[ನಡುಗು₁ + ಪೆಣ]

**ನಡುಗುಡ್ಡ** (ನಾ). ಗುಡ್ಡದ ಬುಡಕ್ಕೂ ತುದಿಗೂ ಮಧ್ಯವಿರುವ ಪ್ರದೇಶ : (೩). [ ನಡು₂ + ಗುಡ್ಡ₂ ]

**ನಡುಗುಹೆ** (ನಾ). ಗುಹೆಯ ಮಧ್ಯಭಾಗ ; ಗವಿಯ ನಡುಭಾಗ ; ಗುಹಾಮಧ್ಯ : ಕಡುಗೆರಳಿದ ಮೃಗಾಧಿಪನ ನಡುಗುಹೆಯೊಳಿಹ ಸುಧೆಯ ಘಟವೀ ಪೊಡವಿಯೊಡತನ ಸದರವೇ ಕಡುಬಡವರಿಗೆ ದೊರೆಕೊಂಬುದೇ (ಕುವ್ಯಾಸ. ೧-೬೬). [ ನಡು₂ + ಗುಹೆ ]

**ನಡುಗುಳುವ** (ನಾ). = ನಡುಗಡ್ಡೆ : "ಅಂತರೀಪಂ ನೀರ ನಡು ಗುಳುವಮೆನಿಸಿಕ್ಕುಂ" (ಮಂಗರಾ. ೦೨೩-೦೩). [ ನಡು₂ + ಕುಳುವ₁ ]

**ನಡುಗೆರೆ** (ನಾ). ಕೆರೆಯ ನಡುಭಾಗ ; ಮಧ್ಯದ ಕೆರೆ : ಕೆರೆಯಲ್ಲಿ ಈಜಲು ಹೋಗುತ್ತಿದ್ದೆ . . . ನಡುಗೆರೆಯನ್ನೂ ಮೀರಿ ಹೋಗುತ್ತಿದ್ದೆ (ಧರ್ಮಶ್ರೀ. ೨೦). [ ನಡು₂ + ಕೆರೆ₂ (<ಕೆಱು) ]

**ನಡುಗೇರಿ, ನಡುಕೇರಿ** (ನಾ). ಕೇರಿಯ ಮಧ್ಯಭಾಗ : ಬೀದಿಯ ಮಧ್ಯಭಾಗ : ನಡುಗೇರಿ ಉರಿದು ನಾನಾ ಭಟರು ಮಡಿದಾರು (ಶಿವಗೀ. ೮೦೭) ; ಮಾರನ ಚಾಪಾಗಮಮಿಸ್ಫಾರಮನೀಕ್ಷಿಪ ತವಂಗವಾಂಗನೆಯರ ಶೃಂಗಾರರಸಂ ತೀವಿದ ನಡು[ಪಾಠಾಂ. ಡೆ]ಗೇರಿಯಿದೆನೆ ಸೂಳೆಗೇರಿ ಮಿಗೆ ಸೊಗಯಿಸುಗುಂ (ಪಾರ್ಶ್ವಪು. ೬-೩೬). **ನಡುಕೇರಿ** : ಪೆಡಗಯ್ಯ ಕಟ್ಟಿಸಿ ಪುರವರದ . . . ನಡುಕೇರಿಯೊಳ್ಗಲ್ಲರು ನೋಡುವಂದದಿ ನಡೆಯಿಸಿದನು ಮಂತ್ರಿಯವರ (ಕುರಾಸಾಂ. ೩೬-೬೨) ; ಕಾಣಿಕೆಯನಿತ್ತಾನೆಯ ಸಜ್ಜಾರ ನಡುಕೇರಿಯೊಳಗೊಮ್ಮತಿಹುದು (ಕಂಪಪಿ. ೬-೩೨). [ನಡು + ಕೇರಿ]

**ನಡುಗೊಂಬು** (ನಾ). =ನಟ್ಟಿಗೊಂಬು: "ನಟ್ಟಿಗೊಂಬೆಂದು ನಡುಗೊಂಬು" (ಕಲ್ಪಕೃ. ೦೮) : "ನಡುಗೊಂಬೆಂದು ನಾಡೆ ತಾ ನಟ್ಟಿಗೊಂಬಕ್ಕು" (ಕಲ್ಪಮಂ. ೨೫). [ ನಡು₂ + ಕೊಂಬು₁ ]

**ನಡುಗೊಣ** 'ನಡಂಗೊಳ' ನೋ.

**ನಡುಗೊರಲು, ನಡುಗೊರಳು** (ನಾ). ಕೊರಳಿನ ಮಧ್ಯಭಾಗ; ಕುತ್ತಿಗೆಯ ಮಧ್ಯಭಾಗ : ನಡುಗೊರಲ ಸುಚಿ ದೇವಮಣಿ (ಮಂಗರಾ. ೮೩-೨೦). **ನಡುಗೊರಳು** : ಬರುತಿಹ ಬಾಣವನು ಖಳ ಕಂಡು . . . ಬಲುಹುಶಕ್ತಿಯೊಳಿಟ್ಟೊಡನಿತನು ಮುಳಿದು ನುಂಗಿತು ಕಡಿದುದಮುಮಾ ಖಳನ ನಡುಗೊರಳ (ಕೌಶಿರಾ. ೨೭-೫೫).

[ ನಡು₂ + ಕೊರಲು (<ಕೊರಲ್) ]

**ನಡುಗೊರಳು** 'ನಡುಗೊರಲು' ನೋ.

**ನಡುಗೊಳ, ನಡಂಗೊಣ** (ನಾ). ಪುಷ್ಕರಿಣಿಯ ಮಧ್ಯಭಾಗ ; ಸರೋವರದ ಮಧ್ಯಭಾಗ : ತೊಳೆದು ಚರಣಾನನವ ನಡುಗೊಳದೊಳಗೆ ಹೊಕ್ಕು . . . ಶೀತಳಜಲವ ಕುಡಿದು (ಕುವ್ಯಾಅ. ೧೦-೫೬). **ನಡುಗೊಣ** : ಗುರುತನುಜಂ ಕೃಪನ ಕೃತವರ್ಮನ ನುಡಿಗಳಂ ನಡುಗೊಣದಿ ನುಡಿವ ನವ್ವಿಮರ ಮಾರೆನುಡಿಗಳಮ್ಮರೆಯ ಗಡಬಡೆಗಳಿಂ ಧ್ವನಿಯ ಕಡುಬೆಡಗಿ ನಿಂದರಿದು (ಕುರಂಗ. ೭೪-೩೦). [ ನಡು₂ + ಕೊಳ₂ ]

**ನಡುಗೋಲ್, ನಡುಕೋಲ್** (ನಾ). ಸರಳಿನ ಮಧ್ಯಭಾಗ ; ಬಾಣದ ಮಧ್ಯಭಾಗ : ನಡೆ ನಡುಗೋಲ್ವರಂ ದಶಮುಖಂ ಮನಮಂ ಸುಮನ ಶ್ಶಿಲೀಮುಖಂ . . . ಸತ್ಯಶೌಚಗುಣಸಂಪದಮೇಳಿದನಾದಂ (ಪಂರಾಮಾ. ೯-೮೫). **ನಡುಕೋಲ್** : ಭೋರೆಂದು ಕವಿವ ಬಿಸುನೆತ್ತರ್ ಕಣ್ಣಂ ಕವಿಯೆ ಸೀಂಟ ಕಳೆದು ನಡುಕೋ[ಪಾಠಾಂ. ಕಾ]ಲ್ವರಂ ನಟ್ಟ ಕೂರ್ಗಣೆಗಳಂ ಗಱುವೆರಸು ತೋಱಿದು ಕಳೆದು (ಪಂಪಭಾ. ೦೨-೭೪ ಪ); ಸ್ಮರನ ಸರಲ್ಗಳ್ ನಡುಕೋಲ್ವರೆಗಂ ನಡೆ (ಧರ್ಮಾಮೃ. ೮-೦೬೮). [ ನಡು₂ + ಕೋಲ್₁ ]

**ನಡುಚವುಕಿಗೆ** (ನಾ). ಮೊಗಸಾಲೆಯ ಮಧ್ಯಭಾಗ : ನಡುಚವುಕಿಗೆಗೆ ಬಿಗಿದ ತೊಲೆಯ ಪೊಱವಳಸಿನುಗ್ಗಡದ ನಾನಾ ವರ್ಣಚಿತ್ರಪತ್ರಿಕೆಗಳಂ...ಪೊಗಳ ಲಳವೆ (ಚೀರಮು. ೫-೦೨). [ ನಡು₂ + ಚವುಕಿಗೆ (<ಚೌಕಿಗೆ) ]

**ನಡುಜವ್ವನ** (ನಾ). ತುಂಬುಜವ್ವನ ; ಪೂರ್ಣಯೌವನ : ಒಡಿದ ತುಂಬು ನೀರ ಪೊಂಗೊಡಮನಿಟ್ಟು ಪಡಿಮೊಗದ ನೆರವೀಡ ನಡುಜವ್ವನದ ಕೆಳದಿ ಯೊರ್ವಳಂ ಸನ್ನೆಯಿಂ . . . ಎನೆ (ರಾಮಾಶ್ವ. ೫೦-೧೬).

[ ನಡು₂ + ಜವ್ವನ ]

**ನಡುತರ** (ನಾ). ಮಧ್ಯಮ ಮಟ್ಟ,-ರೀತಿ : ಒಂದು ಅಳಕ ಹಿಟ್ಟು . . . ನಡುತರದ ಚಮಚದಲ್ಲಿ ಒಂದು ಚಮಚ ಸಕ್ಕರೆ (ಅಡುಸಾ. ೯೬).

[ ನಡು₂ + ತರ₂ (<ತರಹ) ]

**ನಡುತಲೆ** 'ನಡುಂದಲೆ' ನೋ.

**ನಡುತೂತು** (ನಾ). ಮಧ್ಯದಲ್ಲಿರುವ ತೂತು,-ರಂಧ್ರ : ನಾಭಿ-ರಥದ ಗಾಲಿಯ ನಡುತೂತು (ಗಂಗಾಪು. ೧೮೧).

[ ನಡು₂ + ತೂತು₂ (<ತೂಂತು₂) ]

**ನಡುತೂಬು** (ನಾ). = ನಡುತೂತು : "ಪಿಂಡಿಕಾ, ನಾಭಿಃ-ಎ ಬಂಡಿಯ ಕಣ್ಣಿನ ನಡುತೂಬಿಗೆ ಹೆಸರು" (ಸಿದ್ಧಾಂತಿ. ೨೫೩).

[ ನಡು₂ + ತೂಬು (<ತೂಂಬು) ]

**ನಡುತೊಟ್ಟಿ** (ನಾ). = ನಡುಂಚವುಕಿಗೆ : "ಕಕ್ಷ್ಯಾ-ಉಪ್ಪರಿಗೆ, ಮನೆಗಳ ನಡುತೊಟ್ಟಿ" (ಸಿದ್ಧಾಂತಿ. ೪೧೧). [ ನಡು₂ + ತೊಟ್ಟಿ₁ ]

**ನಡುದಟ್ಟಿ** (ನಾ). ಸೊಂಟಕ್ಕೆ ಸುತ್ತಿಕೊಳ್ಳುವ ಬಟ್ಟೆ,-ವಸ್ತ್ರ : ನಡುಪಟ್ಟಿ : (ಕ). [ ನಡು₂ + ದಟ್ಟಿ₁ ]

**ನಡುದಲೆ**, ನಡುತಲೆ (ನಾ). ತಲೆಯ ಮೇಲಿನ ಮಧ್ಯಭಾಗ; ನೆತ್ತಿ : ತುಡೆ ಧನ್ವಿ ಸರಲನೊರ್ವಂಗೆಡವುಗೆ ಮತ್ತೊರ್ವನವನನದು ತಱಿವವೊಲೊಳ್ಪುಡುಗದೆ ಯಕ್ಷಪ್ರತಿಮೆಯ ನಡುದಲೆಯೊಳ್ ಜಿಬ್ಬುದಶನ ನುರ್ಗಜ್ಜಿನೆಗಂ (ಶಾಂತಿಪು. ೬-೨೯) ; ನಡುದಲೆ ಗೋಣ್ ನೊಸಲ್ . . . ಪುರ್ಬುಗಳೆಂಬಿವೆಯಂ ಮಹಾಹಿ ಕೊಂಡೊಡೆ ಗರುಡಂಗಮೆತ್ತಲರಿದೆಂದೊಡೆ ಪೇಟಟಿದಂಗೆ ಸಾಧ್ಯಮೇ (ಲೋಕೋಪ. ೧೧-೪). **ನಡುತಲೆ** : ಪಾರ್ವನ ಕಾಲ್ ಮೋದೆ ನಡುತಲೆಯಲಿರ್ಪುದುಮಾಸದುದು ನಿಮಗೆಂದು ನುಡಿದು ಕಾಯ್ಪಿನೊಳೊದೆದ (ಹಂಪಭಾ. ೩-೬೪). [ ನಡು₂ + ತಲೆ₁ ]

**ನಡುದಾರ** (ನಾ). ಸೊಂಟಕ್ಕೆ ಕಟ್ಟುವ ನೂಲಿನ ಅಥವಾ ಚಿನ್ನ, ಬೆಳ್ಳಿಯ ಎಳೆ ; ಉಡಿದಾರ : (ಕ). [ ನಡು₂ + ದಾರ₁ ]

ನಡುದಾರಿ (ನಾ). ಮಾರ್ಗದ ಮಧ್ಯ ; ದಾರಿಯ ಮಧ್ಯ ; ನಡುಮಾರ್ಗ : ಹುಲಿ . . . ಕುದುರೆಯ ಮೇಲೆ ಬೀಳಲು ಸಿದ್ಧವಾಗಿ ನಡುದಾರಿಯಲ್ಲಿ ಕುಳಿತುಬಿಟ್ಟಿತು (ಕಳಹು. ೬). [ ನಡು₂ + ದಾರಿ ]

**ನಡುದೆರಪು** (ನಾ). ನಡುವಿನ ಸ್ಥಳ,-ಅಂತರ : ಎರಡುಂ ಸಗ್ಗಂಗಳ ನಡುದೆರಪಿನೊಳಧಿಯಾದ್ಮಮನ್ನಮಲ್ಲದ ಮ ಧ್ಯಾ ಜಿ ರ ದೊ ಳ್ ಧರ್ಮಗ್ಲಾನಿಯ ನರಕದೊಳಲ್ಲರುವನಕಟ ! ನೆನೆಗೆಮ ! ಕೃಷ್ಣಂ (ಜಟ್ಟಿಅ. ೯-೬). [ ನಡು₂ + ತೆರಪು (<ತೆಱಪು) ]

**ನಡುದೊಱೆ** (ನಾ). ನದಿಯ ಮಧ್ಯಭಾಗ; ನಡುನೀರು: ನಡುದೊಱೆಯಲ್ಲಿ ಹುಟ್ಟುಹಾಕಿದಡೆ ಹಱುಗೋಲು ಮುಳುಗದೆ ಎಱೆದವರು ಸತ್ತರು (ಅವಚಂ. ೮೦-೩೩೦) ; ನಡುದೊ[ಪಾಠಾಂ. ತೊ]ಱೆಯೊಳಗೆ ಹಱುಗೋಲನೀರದಾತಾಯಿತ್ತೆನ್ನ ಭಕ್ತಿ (ಬಸವ. ೯೮-೨೯೩). [ ನಡು₂ + ತೊಱೆ₂ ]

**ನಡುನಾಡು** (ನಾ). ೧. (ದೇಶದ) ಮಧ್ಯಭಾಗ; (ರಾಜ್ಯದ) ಮಧ್ಯಪ್ರದೇಶ : ಕಡೆವಿಡಿದು ಬಳಸಿ ನೀರಿರೆ ನಡು ಬತ್ತಿದ ಕೆಱೆಯನಿಂತು ಕಂಡುದಱಿಂದಂ ನಡುನಾಡೊಳಜಂ ನೆಲಸದೆ ಕಡೆಯೊಳ್ ನೆಲೆಗೊಳ್ವಂ (ಆದಿಪು. ೦೫-೪೦) ; ಕಡೆನಾಡ ಲಿಂಗವ ನಡುನಾಡಿಗೆ ತಂದೆನೆಂಬ ಅಹಂಕಾರವ ಮುಂದುಗೊಂಡಿದ್ದೆಯಲ್ಲಾ . . . ಗೊಹೇಶ್ವರಲಿಂಗವು ನಿನ್ನ ತಪ್ಪಿಸಿ ಹೋದುದ ಮ ಱೆ ದೆ ಯ ಲ್ಲಾ (ಅವಚಂ. ೨೦೯-೯೯೨) ; ಊರೂರ್ದಪ್ಪದೆ ದೇವತಾನಿಳಯದಿಂ ಸದ್ವೃಕ್ಷದಿಂ ಚೆಲ್ವುವೆತ್ತೂರೂರ್ದಪ್ಪದೆ ಬಲ್ಲಕುಂದೆ ನಡುನಾಟ್ ಸಂತಂ ಬಸಂತಂ ಕರಂ (ಶಾಪಪಂ. ೯೬೪) ; (ಎಇ. XIV, ೨೭೦-೦೯ ; 1181 ನೋ). ೨. (ಮೂರು ಲೋಕಗಳಲ್ಲಿ) ಮಧ್ಯದಲ್ಲಿರುವ ಲೋಕ ; ಭೂಲೋಕ ; ಮರ್ತ್ಯಲೋಕ : ನಡುನಾಡರಸದ ಪದ್ಯೋ....ಟ ನಡುಪಳ್ಳಿಯ ಕಾಮಧೇನು[ವಂ]ಗಣದೊಳನಿಪ್ಪದೆ ಪಣ್ತ ಕಲ್ಪತರುವೆಂದಡದೇವಣ್ಣಪುದೊ ರೂಪ ವಿದ್ಯಾಧರಿಯ (ಸೌಇಇ. XX, ೪೯-೩೫ ; ಸು. 1076 ?) ; ನಡುನಾಡು ಮೇಲ್ನಾಡು ಕೀಳುನಾಡೆಂಬ ಮುಪ್ಪೊಡವಿಯೊಡೆಯನ ಹೆಮ್ಮಗೆ ತಡೆಯುಂಟೆ (ಭರತ. ೪೪-೬೬).

ನಡುನಾಡ ತೀರ್ಥ = ೧. ಭೂಲೋಕಕ್ಕೆ ಪೂಜ್ಯವಾದ ಸ್ಥಳ,-ಶ್ರೇಷ್ಠವಾದ ಪ್ರದೇಶ : ನಡುನಾಡ ತೀರ್ಥಮೆನಿಸಲ್ಪಡೆದಿಂದ್ರಪ್ರಣಯಮೆಂಬ ಪರ್ವತಕಟಕಂಬಿಡಿದು ನಿಜಕಟಕಮಂ ತಾಂ ಬಿಡಿಸಿ ಮಗಂಗಿತ್ತು ಕೊಡೆಯುಮಂ ಪಟ್ಟಮುಮಂ (ಅನಂಪು. ೧೩-೨೯). ೨. ಭೂಲೋಕಕ್ಕೆ ಪೂಜ್ಯನಾದವನು ; ಓಂದಂ ಬಿರುದಂ : ಸಕಳಗುಣಸಂಪೂರ್ಣ್ಣಂ ಕಲಿಕಾಲಕರ್ಣ್ಣನಮಳಚರಿತ್ರಂ ನಡುನಾಡ ತೀರ್ತ್ಥಂ ಶ್ರೀಮತ್ಪೊಸಪೂರಾಯ್ಯಗಾವುಣ್ಡಂ (ಸೌಇಇ. XI-1, ೬೫-೨೯ ; 1028) ; ಬಮ್ಮ[೦]ಗಣ್ಡ ಎಲಪ್ಪೊರ್ಗಳಿ ನೆಗಟ್ದನವನೀತಳದೊಳ್ . . . ಕುನ್ದಿಗನೊಳ್ಪಡೆದು ನಡು[ನಾ] [ಡ] ತೀರ್ತ್ಥನೀ ಮಹಿಮಂಗಳಂ (ಸೌಇಇ. XX, ೨೯ ೦೯ ; 1034).

[ನಡು₂ + ನಾಡು ]

**ನಡುನಿದ್ದೆ** (ನಾ). ನಿದ್ರೆಯ ಮಧ್ಯಕಾಲ ; ಗಾಢನಿದ್ರೆ : ಇದು ಬೇರೊಂದು ಕಾಲ ; ನಡುನಿದ್ದೆಯಲ್ಲಿ ಕನಸು ಬಿದ್ದ ಹಾಗೆ ತಣಿವಿಗಾಗಿ ಈ ನಾಡನ್ನು ತೆರೆದಂತಿದೆ (ಕುಸುಸಂ. ೧೫೮). [ ನಡು₂ + ನಿದ್ದೆ ]

**ನಡುನಿಲ್** (ಕ್ರಿ). (ಅಲಂ) ನಿಷ್ಪಕ್ಷಪಾತದಿಂದಿರು : ಎರಡುಂ ಪಕ್ಕಮುಮೊಂದೇ ಸರಿಯನೆ ನಡುನಿಂದು ನೆಗಟ್ಟಿಯಾ ದ್ವಿಜವರನೊಳ್ ಕರಮೊಸೆದು ತನ್ನ ಭಾರಮನಿರಿಸಿದವೊಲ್ ಪೆಂಪುಗೊಳಿವನುತ್ತಮಪುರುಷಂ (ಚಕವಿ. ೧-೪೨). [ ನಡು₂ + ನಿಲ್ ]

ನಡುನೀರ್, ನಡುನೀರು (ನಾ). (ಸರೋವರ, ನದಿ ಮುಂತಾದಂವುಗಳ) ನೀರಿನ ಮಧ್ಯಭಾಗ,-ಜಲಮಧ್ಯ : ಅಂಜದೆ ಪೊಕ್ಕು ನಡುನೀರೊಳಾಡುವ ವನದೇವಿಯರ ಸೋರ್ಮುಡಿಯಿಂ ಪರೆದರಲ ಬೆರಕೆಗಂಪಿನ ಪೊಂಪುಟಿಯೊಳಂ (ಕಾದಂಪೂ. ೧೧೭) ; ಅನ್ಯಾಯದೊಳ್ಪಡೆದರ್ಥಂ ನಡುನೀರಿನೊಳಿಕ್ಕಿದೊಡಂ ಕಿಡುಗುಂ (ಧರ್ಮಾಮೃ. ೬-೧೫೮) ; ಹಿಡಿದುದ ಬಿಡದಿದ್ದರೆ ಕಡೆಗೆ ಚಾಚುವ ಅಲ್ಲದಿದ್ದರೆ ನಡುನೀರಲ್ಲದ್ದುವ ನಮ್ಮ ಕೂಡಲ ಸಂಗಮದೇವ (ಬಸವ. ೩೨೦) ; ಎಲೆ ಭಕ್ತ ನೀನೇಕೆ ನಡುನೀರೊಳಿರ್ದಪೆ (ರುದ್ರಕ. ರೇ. ೨೦೦-೯) ; ನಡುನೀರೊಳೊಗೆದ ನಳಿನಮಂ ಮುಟಿಯಲೆಳಸಿ ಮಗುಳ್ದು ತೆರೆವಿಡಿದೀಸುವೆಳೆವೇಡಿತಿ (ರಾಜಶೇ. ೬-೨೪೮). **ನಡುನೀರು** : ಕೃಪ ಗುರುಸುತರ ನುಡಿಗಳನು ನಡುನೀರಲಿ ನೃಪದ್ವನಿಯ ಅಱಿದರವರಾಲಿಸಿದರು (ಕುಮಾಗ. ೪-೯೩).

ನಡುನೀರಲ್ಲಿ ಕೈಬಿಡು, ನಡುನೀರಲಿ ಕೈಬಿಡು = ೧. ಪ್ರವಾಹದ ಮಧ್ಯದಲ್ಲಿ ಹಿಡಿತದ ಸಹಾಯವನ್ನು ತಪ್ಪಿಸು : ನಡುನೀರಲ್ಲಿ ಕೈಬಿಟ್ಟ ಹಾಗೆ (ಗಾದೆ). ೨. ನಂಬಿಕೊಂಡವರಿಗೆ ಅತ್ಯಗತ್ಯವಾದ ಸಮಯದಲ್ಲಿ ಉದ್ದೇಶಪೂರ್ವಕವಾಗಿ ಸಹಾಯ ನಿಲ್ಲಿಸು; ಕೈಕೊಡು : ಆಕೆಯ ಅಂತಸ್ತಿನ ಭವಿಷ್ಯವೆಲ್ಲ ನನ್ನ ಕೈಯೊಳಗಿರುವಾಗ್ಗೆ ನಾನೀಗ ಆಕೆಯನ್ನು ನಡುನೀರಲಿ ಕೈಬಿಡುವುದೆ ? (ನಡಿರಾ. II, ೯೭೦). [ ನಡು₂ + ನೀರ್₁ ]

ನಡುನೀರು 'ನಡುನೀರ್' ನೋ.

**ನಡುನೆತ್ತಿ** (ನಾ). ತಲೆಯ ಮೇಲಿನ ಮಧ್ಯಭಾಗ; ನಡುದಲೆ : ಮುಡುಮಂ ಬೆನ್ನಂ ಕೊರಲಂ ನಡುನೆತ್ತಿಯನೆತ್ತಿಪೊಯ್ದು ರೊರ್ವರನೊರ್ವರ್ (ಗದಾಯು. ೮-೦೫); ಎರಡುಂ ಬಾಳಕ ಪದ್ಮಕಮೆರಡುಂ ಚಂದನಮೆನಿಪ್ಪುವಂ ತೆಳ್ಗೆಟಿಯಿಂದರೆದು ನಡುನೆತ್ತಿಯೊಳ್ ಪೂಸೆ ರುಜಾರ್ತನ ತೃಷೆಯ ದಾಹದೊದವಂ ಕಳೆಗುಂ (ಲೋಕೋಪ. ೯-೨೮) ; ಅಧಾರ ಸ್ವಾಧಿಷ್ಠಾನ . . . ಆಜ್ಞೆ ಎಂಬ ಷಡಾಧಾರದ ಬಳಿವಿಡಿದು ನೆತ್ತಿಯಿಂದುತ್ತರಕ್ಕೆ ಉಚ್ಚಳಿಸಿ ಹಾಯ್ದು ನಡುನೆತ್ತಿ ತೂತಾದರೂ ಲಿಂಗಸಾಹಿತ್ಯವಿಲ್ಲ (ಅರವ. ೧೧-೨೧) ; ನಿರವಧಿಯಂ ಕುಳಿರ್ಪುದಕಮಂ ನಡುನೆತ್ತಿಯೊಳಾಂತು ತನ್ನ ಕಣ್ಣುರಿಗುಪಶಾಂತಿಯಂ ಪಡೆದನಿಲ್ಲಭವಂ (ದಕಕು. ೧-೫೩) ; ಒಡೆದು ನಡುನೆತ್ತಿಯನು ಝಳಪಿಸಿ ಕಡುವೆಳಗು ಥಳಥಳಿಸಿ ತರಣಿಯ ತಾಡಾಕಿ ಹಾಯ್ದುದು ರಶ್ಮಿ ರಂಜಿಸಿತಖಿಳದಿಗುತಟವ (ಕುಮಾದ್ರೋ. ೧೫-೭೧) ; ನಡುನೆತ್ತಿ ಬಿರಿದು

ಮುತ್ತುಗಳೊಡೆದುಚ್ಚಳಿಸುತ್ತಿ ಪಾಟ್ (ರಾಜಶೇ. ೫-೪೦). [ನಡು₂+ನೆಕ್ಕಿ]

**ನಡುನೆಲ** (ನಾ). ಮಧ್ಯದ ಪ್ರದೇಶ,–ಸ್ಥಳ: ಸನ್ನೆಯ ಭೇರಿಕಾಱರು ನಡುನೆಲದಲ್ಲಿ ಸನ್ನದ್ಧರಾಗಿ ನೆರೆದರು (ಧರಿತ. ೩೦-೫೯). [ನಡು₂ + ನೆಲ]

**ನಡುನೆಲೆ** (ನಾ). ಮಧ್ಯಸ್ಥಿಕೆ; ನಿಷ್ಪಕ್ಷಪಾತತೆ: ನಡುನೆಲೆಯುಳ್ಳವನ ಬದುಕು ಅಱಿವಿಲ್ಲದೆ ಸಂತತಿಗಂ ಕಾವುಳ್ಳುದಕ್ಕುಂ (ಕುಜಳ್. ೧-೧೨-೨). [ನಡು₂ + ನೆಲೆ]

**ನಡುನೇಸಱ್**, ನಡುನೇಸಱು (ನಾ). ನಡುಹಗಲು; ಮಧ್ಯಾಹ್ನ: ಒಡಲಂತ ತನುವೀತನ ನೆವದಿಂದೆಂದು ಕಡುಗಳಲ್ದಾಕಾಶಮೆಂಬ ಮೃದ ನುರಿಗಣ್ಣ ತೆಱೆದವೊಲು ನಡುನೇಸಱೆಸೆದುದೆಂದು ಬಣ್ಣಿಸುವ (ಶ್ರೀಪಾಲ. ೪-೫೪). **ನಡುನೇಸಱು**: ನಡುನೇಸಱಲಿ ತವ ನಿಲಬಲ್ಲದೇ ಜನನಾಥ (ನಿಘಾಗ. ೫-೧೨-೨೭). [ನಡು₂ + ನೇಸಱ್]

**ನಡುನೇಸಱು** 'ನಡುನೇಸಱ್' ನೋ.

**ನಡುನೊಸಲು** (ನಾ). ಹಣೆಯ ಮಧ್ಯಭಾಗ: ಜಡೆಮುಡಿಯುನಳವಡಿಸಿ . . . ಭೂತಲೇಪನದೊಡಲು ನಡುನೊಸಲೊಳು ತ್ರಿಪುಂಡ್ರದ ರೇಖೆಗಳು ಮೆಱೆಯೆ (ಬಸಪು. ೬-೨೬). [ನಡು₂ + ನೊಸಲು (<ನೊಸಲ್)]

**ನಡುನೋಟ** (ನಾ). ಸ್ಥಿರವಾದ ನೋಟ; ನೆಟ್ಟ ದೃಷ್ಟಿ: ಪಸುಳೆಗುಪವಂ ತನ್ನ ಕಟ್ಟಿದಿರ ಪುರ.ಷೋತ್ತಮಮೂರ್ತಿಯನೆಮೆಯಿಕ್ಕದ ನಡುನೋಟದಿಂ ದಿಟ್ಟಿಸುತೆ ಕುಳ್ಳಿರಲ್ (ರಾಮೂಶ್ಕ. ೭೭-೪). [ನಡು₁ + ನೋಟ]

**ನಡುಹಗಲ್** 'ನಡುವಗಲ್' ನೋ.

**ನಡುಪಟ್ಟಿ?** (ನಾ). (?) : ತೊಡೆಯಿಂ ಕಡುಗುದುರೆಗಳು ಮಡದಿಂ ನಡು [...] ಪಟ್ಟ ದಂತಿಯಿಂ ನಿಡುದೋಳಿಂ ಕಡುವಾಳಂ ಕೂರಸಿಯಿಂ ಕಪಂಗಿಡಣೆಯುಂ ಸಮಂತು ಬಸದಾಗಿಸುವಂ (ಕಾವ್ಯಾವ. ೨೪೦); ಚಿತ್ರಭವ ಚಕ್ರವರ್ತಿಯ ನಡುವಟ್ಟ ಪಟ್ಟದಾನೆಯಂತೆ ಪಾಗಮಂಗಿಸುವ ಮದಮದದ ಸೊನೆಸೊನೆಯುಂ ಬಿಡುವ ಬಾಳರಸಾಳಂಗಳಿಂ ಕಾಮದೇವನ ದೀವದ ಪಿಂಡಿನಂತಿರ್ಪ ಕಳಪಂಸೆಗಳಿಂ . . . ಮನಂಗೊಳಿಸಿ (ಅರ್ಧನೇ. ೪-೬೨ ವ). [?]

**ನಡುಪಟ್ಟ** (ನಾ). ೧. ಸೊಂಟಕ್ಕೆ ಕಟ್ಟಿಕೊಳ್ಳುವ ಚರ್ಮ, ವಸ್ತ್ರ, ಲೋಹ ಮುಂತಾದವುಗಳ ಪಟ್ಟ; ಬೆಲ್ಟು: ಅವಳು ಬಿರುಬಿರನೆ ಕೈಚಾಚಿ, ನೋಟನ್ನು ಕಸಿದುಕೊಂಡು ತನ್ನ ನಡುಪಟ್ಟಿಯ ಕೆಳಗೆ ಬಚ್ಚಿಟ್ಟು ಕೊಂಡಳು (ಪುನರು. ೦೯೫); ಕಯ್ಯ ಪಟ್ಟದ ಖಡ್ಗವನ್ನು ನಡುಪಟ್ಟಿಯ ಒರೆಯೊಳಕ್ಕೆ ಸಶಬ್ದವಾಗಿ ನೂಂಕಿಬಿಡುವನು (ಬಿರುಗಂ. ೩೦-೬). ೨. ಸೊಂಟದಲ್ಲಿ ಧರಿಸುವ ಒಂದು ಬಗೆಯ ಆಭರಣ; ಒಡ್ಯಾಣ; ಡಾಬು. [ನಡು₂ + ಪಟ್ಟ₂]

**ನಡುಪಳ್ಳಿ**, ನಡಪ್ಪಳ್ಳಿ (ನಾ). ಒಂದು ಸ್ಥಳದ ಹೆಸರು: ನಡುವಾದ ರಸದ ಪೆರ್ದೊರೆಟ ನಡುಪಳ್ಳಿಯ ಕಾಮಧೇನು[ವಂ] ಗಣದೊಳಿನಿಪ್ಪದೆ ಪಣ್ಣು ಕಲ್ಪತರುಮೆಂದಡದೇವಣ್ಣಿಪುದೊ ರೂಪವಿದ್ಯಾಧರಿಯ (ಶಾಶಾಇ. XX, ೪೮-೩೫; ಸು. 1076 ?). **ನಡಪ್ಪಳ್ಳಿ**: ನೇಱಿಲೆಯುಂ ಪೆರ್ಮೊಶ್ಗಿಂ ನಡಪ್ಪಳ್ಳಿಮೂಟ್ಣಿಣಂ ನಡಲು ಎಪ್ಪಳ್ಳಿ (ಎಕ. VI, ಚಿಕ್ಕಮ. ೯೫-೧೫; ಸು. 1025 ?). [ನಡು₂ + ಪಳ್ಳಿ₁]

**ನಡುಪಾಯ್** 'ನಡುಂಪಾಯ್' ನೋ.

**ನಡುಪ್ರಾಯ** (ನಾ). ಮಧ್ಯವಯಸ್ಸು: ಆವರು ನಡುಪ್ರಾಯದಲ್ಲಿ ತೀರಿ ಹೋದುದರಿಂದ ಸಂಸಾರಕ್ಕೆ ಬಹಳ ಕಷ್ಟವಾಗಿದೆ (ರೂಢಿ). [ನಡು₂ + ಪ್ರಾಯ]

**ನಡುಬನ** (ನಾ). ಕಾಡಿನ ಮಧ್ಯಭಾಗ; ಅರಣ್ಯದ ಒಳಭಾಗ: ಸ್ವರ್ಗಸ್ಥ ರಾದರು ತಂದೆ ಕನ್ನಣಾಗನ ನಡುಬನದೊಳು ಬಿಟ್ಟ ಹಾಗೆ (ಕಂಠೀಪ. ೨೦-೯೫). [ನಡು₂ + ಬನ]

**ನಡುಬಾನು** (ನಾ). ಆಕಾಶದ ಮಧ್ಯಭಾಗ: ನಡುಬಾನೇಱಿದುಷ್ಣಾಂಶು ಮಂಡಲವಲ್ಲಿ ಕಡು ಸೊಗಸಿತು (ಶ್ರೀಪಾಲ. ೪-೪೮). [ನಡು₂ + ಬಾನು (<ಬಾನ್₃)]

**ನಡುಬಾವಿ** (ನಾ). ಬಾವಿಯ ಮಧ್ಯಭಾಗ: ಶ್ರೀವಿಜಯಮುನಿ ಹೋಗಿ ತಾ ನಡುಬಾವಿಯುಲಿ ಬಿದ್ದನು (ಬಸಪು. ೫೦-೧೭). [ನಡು₂ + ಬಾವಿ]

**ನಡುಬೀಡು** (ನಾ). ಸ್ವಲ್ಪ ಬೆಳೆ ಬೆಳೆಯುವ ಹೊಲ ಮುಂತಾದವು: ಕೀಳು ಮೇಲು ನಡುಬೀಡುಬೀಡು ಬಯು ತವುಪೊಪ್ಪ (ಸೌಇಇ. ೧೯೩೬, ಪುತ್ತೂ.ರು. ೧೧೪-೯; 1282). [ನಡು₂ + ಬೀಡು₂]

**ನಡುಬೀದಿ** 'ನಡುವೀದಿ' ನೋ.

**ನಡುಬೆಟ್ಟ** (ನಾ). ಬೆಟ್ಟದ ಮಧ್ಯಭಾಗ: ನಡುಬೆಟ್ಟಕ್ಕೆ ಹತ್ತುವ ವೇಳೆಗೆ ಬಿಸಿಲೇರಿಬಿಟ್ಟಿತು (ರೂಢಿ). [ನಡು₂ + ಬೆಟ್ಟ (<ಬೆಟ್ಟು₂)]

**ನಡುಬೆಟ್ಟು** (ನಾ). = ನಡುಬೆರಳು: (*). [ನಡು₂ + ಬೆಟ್ಟು₃ (<ಬೊಟ್ಟು₁)]

**ನಡುಬೆನ್**, ನಡುಂಬೆನ್ನು (ನಾ). ಬೆನ್ನಿನ ಮಧ್ಯಭಾಗ: ಇಱಿದು ಮರ ದಿಂದಮಾಗಳ್ ಕೆಲಗೆಲ್ಲಂ ಪರೆದು ಬಿರ್ದ ಶುಕಸಂತತಿಯುಂ ಗಟಗಟಿಸಿ ಕಟ್ಟ ನಡುಬೆನ್ನಿಱಿವಿನೆಗಂ ಪೊತ್ತು ಪೋದನಾ ಮುದಃವೇಢಂ (ಕಾದಂಪೂ. ೮೮೬); ನಡುಬೆನ್ನಂ ಸೆಟ್ಟನೆ ಸೀಟಿಯುಂ (ಅಜಿಪು. ೧೦-೧೦ ವ). **ನಡುಬೆನ್ನು**: ಮೂಟೆ ಹೊತ್ತು ನಡುಬೆನ್ನು ಮುರಿದುಹೋಯಿತು (ರೂಢಿ). [ನಡು₂ + ಬೆನ್]

**ನಡುಬೆನ್ನು** 'ನಡುಬೆನ್' ನೋ.

**ನಡುಬೆರಳು** (ನಾ). (ಹಸ್ತದ ಅಥವಾ ಪಾದದ ಐದು ಬೆರಳಂಗಳಲ್ಲಿ) ಮಧ್ಯದ ಬೆಟ್ಟು,–ಬೆರಳು: ಮಗುವಿನ ನಡುಬೆರಳಿನಲ್ಲಿ ಉಂಗುರವಿದೆ (ರೂಢಿ). [ನಡು₂ + ಬೆರಳು (< ಬೆರಲ್)]

**ನಡುಬೊತ್ತು**, ನಡುಹೊತ್ತು (ನಾ). = ನಡುನೇಸಱ್: ಮತ್ತದುಂ ಪೋಗೆ ಹೋದ ತಱಿಗೆಂದದೊಳಗೆ ನಡುಬೊತ್ತಾಗುವನ್ನವರ ವಟು ಚ್ಛ ಳಂ ಮುಚ್ಚಿರಿಸಿ (ಸೂಪಶಾ. ೨-೧). ಅಂಬರಮೆಂಬವನಿಯ ಹೊತ್ತ ಭೂಧರ ಮೆಂಬ ಶೇಷನ ಮಸ್ತಕದ ಕೆಂಬರಲೆನೆ ನಡುಬೊತ್ತಿನೊಳೆಸೆದುದು ಬಿಂಬ ಮಂಭೋರುಹಸಖನ (ಶ್ರೀಪಾಲ. ೭-೪೯). **ನಡುಹೊತ್ತು**: ದೂರದ ಪೊಳಲಿಗೆ ಯಾತ್ರೆ ಹೊರಟದ್ದೇನೆ. ನಡುಹೊತ್ತಿನಲ್ಲಿ ಆಸರೆ ಸಿಕ್ಕೀತೆಂದು ಇಲ್ಲಿಗೆ ನುಗ್ಗಿದೆವು (ಹಾಹುತ್ತ. ೯೦). [ನಡು₂ + ಪೊತ್ತು₃ (< ಪೊಟ್ಟು)]

**ನಡುಭವಗಾವುಂಡ** (ನಾ). ಒಬ್ಬಾತನ ಹೆಸರು: ಅಂಕಗವುಣ್ಣಗೆ ಪಲಮ್ಮಗೆಱಿ ಗಾವಣ್ಣಂ ನಡುಭವಗಾ[ವು]ಣ್ಣಂಗೆ ತೆಲುಂಗರ ಮಾರಿಗಾವುಣ್ಣನೊಳ್ಪಜ್ಜಿಟ (ಎಕ. IV, ಹೆಗ್ಗಡ. ೧೦೪-೧೮; 1037). [? + ಗಾವುಂಡ (< ಗಾಮುಂಡ)]

**ನಡುಭಾಗ** (ನಾ). ಮಧ್ಯಭಾಗ: ನದಿಯ ನಡುಭಾಗದಲ್ಲಿ ಬಹಳ ಆಳವಿದೆ (ರೂಢಿ). [ನಡು₂ + ಭಾಗ]

**ನಡುಮಂಡೆ** (ನಾ). = ನಡುದಲೆ: ಭಂಡರಾದವಲಾಯೆನುತ ನಡುಮಂಡೆ ಯನು ತುಡುಕಿದನು ಮೆಱೆವುದ್ದಂಡಜಡೆಯನು ಕಿತ್ತು ಬೀಸಾಡಿದನು ಭೂತಳಕೆ (ನಿಘಾಗ. ೪-೨-೪); ದೆಡೆ ಕಾಣದು ನಮ್ಮೂರು ನಡುಮಂಡೆ ಸ್ಥಳವೆ ನಮ್ಮೂರು (ಪುರಂದ. ೫-೭೧-೧). [ನಡು₂ + ಮಂಡೆ₁]

**ನಡುಮಟ್ಟ₁** (ನಾ). ನಡುವಿನ ಮಟ್ಟ; ಸೊಂಟದ ಸಮ: ಅವನು ನಡು ಮಟ್ಟದ ನೀರಿನಲ್ಲಿ ನಿಂತಿದ್ದಾನೆ (ರೂಢಿ). [ನಡು₂ + ಮಟ್ಟ₁]

**ನಡುಮಟ್ಟ₂** (ಅ). ಸೊಂಟದ ವರೆಗೆ; ಸೊಂಟದ ತನಕ: ಆ ಕೆರೆಯಲ್ಲಿ ಒಬ್ಬ ಮನುಷ್ಯನ ನಡುಮಟ್ಟ ಬರುವಷ್ಟು ಮಾತ್ರ ನೀರಿದೆ (ರೂಢಿ). [ನಡು₂ + ಮಟ್ಟ₆]

**ನಡುಮಣ್ಣು** (ನಾ). (ತಕ್ಕಮಟ್ಟಿಗೆ ಚೆನ್ನಾಗಿರುವ) ಮಧ್ಯಮವರ್ಗದ ಭೂಮಿ: (ಕಿಸಂಗ್ಗ. ೧೬). [ ನಡು$_{2}$ + ಮಣ್ಣು (<ಮಣ್) ]

**ನಡುಮಧ್ಯ$_{1}$** (ನಾ). ನಡುಭಾಗ ; ಮಧ್ಯಭಾಗ ; ನಟ್ಟನಡು : ನಡುಮಧ್ಯದಲ್ಲಿ ನಕ್ಷತ್ರ ಉದಯವಾಗಲಂ . . . ಕಾಳಲಾದೇವಿ ಕಿಡೆವುಂಚಿ ದೋಡಿದಳು ನೋಡಾ (ಸಿದ್ಧೇಶ. ೪೮-೦೩೩); ಸುತ್ತ ಮೆರದಿಹ ಸೇನೆ ನಡುಮಧ್ಯದೊಳು ಹಿಮಕರನಾ ಚಿತ್ರಧವನವೊಯೆನಲು ರಂಜನೆವೆತ್ತ ನಿಜಬೀಡಿನಲಿ . . . ಎಸೆದನು ಕೇಳು ಕೌರವನು (ಜೈಭಾ. ೩೭-೨); ಬಿಡಾರವಿರುವವನಿಗೆ ನಡುಮಧ್ಯವಾದರೇನು ? (ಗಾದೆ).

[ ನಡು$_{2}$ + ಮಧ್ಯ$_{1}$ ]

**ನಡುಮಧ್ಯ$_{2}$** (ಅ). ಮಧ್ಯಭಾಗದಲ್ಲಿ ; ನಟ್ಟನಡುವೆ : ನಡುಮಧ್ಯ ಇರುವಂಥ ಸೀಮೆಯನ್ನು ಕಟ್ಟಿಕೊಂಡು (ರಾಜೇಂದ್ರ. ೨೭).

[ ನಡು$_{2}$ + ಮಧ್ಯ$_{2}$ ]

**ನಡುಮಧ್ಯೆ** (ಅ). ಮಧ್ಯಭಾಗದಲ್ಲಿ : ನಟ್ಟನಡುವೆ : ಇಬ್ಬರು ದುಷ್ಟರಿಗೆ ಜಗಳವಾಗುತ್ತಿರುವಾಗ ನಡುಮಧ್ಯೆ ಪ್ರವೇಶಿಸುವುದು ಅಪಾಯಕರ (ರೂಢಿ); ನಡುಮಧ್ಯೆ ಇವರ ಕಿತಾಪತಿ ಬೇರೆ (ರೂಢಿ). [ ನಡು$_{2}$ + ಮಧ್ಯೆ$_{2}$ ]

**ನಡುಮನೆ** 'ನಡುಂವನೆ' ನೋ.

**ನಡುಮರ** (ನಾ). ವೃಕ್ಷದ ಮಧ್ಯಭಾಗ : ನಡುಮರ ಹತ್ತಿ ಬುಡ ಕಡಿದ (ಗಾದೆ). [ ನಡು$_{2}$ + ಮರ$_{1}$ ]

**ನಡುಮಾಳ** (ನಾ). ಮೈದಾನದ ಮಧ್ಯಭಾಗ ; ನಡುಬಯಲು ; "ನಟ್ಟನಡುವೆ" (ಕನ್ನಡ. ಶ. ೧೧೭ ಅರ್ಥ): ಊರಾಚೆಗೆ ಕಡುಗುದುರೆ ಕಡು ನಾಗ . . . ನಡುಮಾಳದ, ನಡುಮಾಳದ, ನಟ್ಟಿರುಳ, ನಿಡುನಾಗದ ಮುಂಗೆ ನೀಲಿಮ್ಲಾನವ ಮಿಗುಬಿಟ್ಟದ ಪಿಂದುಂಗೊಂಟು (ಜಪದ. ಸ. ೧೯೩ ಪ್ರಯೋ). 'ನಿಡುಮಾಳ' ಪಠಾ. [ ನಡು$_{2}$ + ಮಾಳ$_{4}$ ]

**ನಡುಮುರಿ$_{1}$** (ಕ್ರಿ). ೧. ಸೊಂಟ ಬಾಗು, – ಬಗ್ಗು : ನಡುಮುಚಿ[ರಿ]ದು ಗುಡುಗೂಜಿ ತಲೆ ನಡುಗಿ . . . ಒಂದನಾಡಹೋಗಿ ಒಂಬತ್ತನಾಡುವ ಅಪ್ಪಾನಿಗಳೆಲ್ಲರೂ ಹಿರಿಯರೆ (ವಚನ. ಶ. ೧೩೭-೩೩೪). ೨. (ಅಲಂ) ಸಂಪೂರ್ಣ ಶಕ್ತಿಗುಂದಂ. [ ನಡು$_{2}$ + ಮುರಿ$_{1}$ ]

**ನಡುಮುರಿ$_{2}$** (ಕ್ರಿ). ೧. ಸೊಂಟವನ್ನು ಮುರಿದಂಹಾಕು. ೨. (ಅಲಂ) ನಾಶಮಾಡು ; ಹಾಳುಮಾಡು : ಬರುತದೆ ! ಮೈತೋರದೆ ಬರುತದೆ ! ಅದೆ – ನಡುಮುರಿಯುತ ನಗನಾವೆಗೆ, ಕೂವೆಗೆ (ಕವಿಪು. ೨೭-೩).

[ ನಡು$_{2}$ + ಮುರಿ$_{2}$ (<ಮುಚಿ$_{1}$) ]

**ನಡುಮೂಗು** (ನಾ). ಮೂಗಿನ ಮಧ್ಯಭಾಗ ; ನಾಸಿಕದ ನಡುಭಾಗ : ನಡುಮೂಗು, ನಾಸಾಸೇತು (Bridge of the nose. ಪಾರಿಸಿ. ೧೦).

[ ನಡು$_{2}$ + ಮೂಗು$_{1}$ ]

**ನಡುರಂಗ** (ನಾ). (ದೇವಸ್ಥಾನದ) ಮಧ್ಯಭಾಗದಲ್ಲಿರುವ ರಂಗಮಂಟಪ, ಸಭಾಮಂಟಪ ; ನವರಂಗ : ಗುಡಿಯ ಬೋದಿಗೆ ಕಲ್ಲು ನಡುರಂಗ ತಾ ಕಲ್ಲು ಕಡೆಮೂಲೆ ಸೆಟಗು ತಾ ಕಲ್ಲು ವರವನು ಕೊಡುವಾತ ಬೇಟ (ಸರ್ವಜ್ಞ. ೨೦೩). [ ನಡು$_{2}$ + ರಂಗ$_{2}$ ]

**ನಡುರಾತ್ರಿ** (ನಾ). ಮಧ್ಯರಾತ್ರಿ ; ಸಮರಾತ್ರಿ : ನಡುರಾತ್ರಿಯಿಂದ ಮುಂಜಾನೆ ನಾಲ್ಕು ಗಂಟೆಯ ತನಕ ವಿಶ್ರಾಂತಿ ತೆಗೆದುಕೊಳ್ಳುವರು (ರಾಜವ. ೭೮). [ ನಡು$_{2}$ + ರಾತ್ರಿ ]

**ನಡುರಾತ್ರೆ** (ನಾ). = ನಡುರಾತ್ರಿ : ಆತನಿಗೆ ಈಗ ನಡುರಾತ್ರಿಗೆ ತನ್ನನ್ನು ಕರೆದು ಪಸೆ ತುಂಬಿದ ಕಣ್ಣುಗಳಿಂದ 'ನನ್ನನ್ನು ರಕ್ಷಿಸು' ಎನ್ನುತ್ತಿದ್ದ ತಂಗಿಯನ್ನು ಇದಿರಿಸುವುದು ಸಾಧ್ಯವಾಗಲಿಲ್ಲ (ವಾತ್ಸಲ್ಯ. ೩೩೭); ಈ ನಡುರಾತ್ರೆಯಲ್ಲಿ ಭೀತಿಯಿಲ್ಲದೆ ನನ್ನ ಬೆಂಬತ್ತಿ ಬಂದವನು ನೀನು ಯಾರು ? (ಬತ್ತೀಸ. ೩೦). [ ನಡು$_{2}$ + ರಾತ್ರೆ ]

**ನಡುವಂತರ** (ನಾ). ೧. ನಡುವೆ ಇರುವ ಸ್ಥಳ. ೨. ಮಧ್ಯದ ಅವಸ್ಥೆ, ಕಾಲ : ಹೀಗೆ ನಡುವಂತರದಲ್ಲಿ ಕೈಬಿಟ್ಟುಬಿಟ್ಟರೆ ಯಾರು ಗತಿ ? (ರೂಢಿ).

[ ನಡು$_{2}$ + ಅಂತರ ]

**ನಡುವಗಲ್, ನಡುಂಪಗಲ್, ನಡುಂವಗಲು, ನಡುಂಹಗಲು** (ನಾ). ಹಗಲಿನ ಮಧ್ಯಭಾಗ; ಮಧ್ಯಾಹ್ನ; ನಡುಂಹೊತ್ತು: "ಮುಂಬಗಲ್, ನಡುವಗಲ್, ನಡೆವಗಲ್ – ಇವು ಪಿ ತ್ರಿಕಾಲಂಗಳ್" (ಶಬ್ದಮ. ೫೭-೨೫೦) ; ನಡುವಗಲ ಬಿಸಿಲ್ಪನ್ನಂ ಸುಡೆ ವನಕರಿ ಕಮಳಬಂಧುವೊಳ್ಗೆನಕರನೋಳ್ ಕಡುಗಾಯ್ಪನೆ ಸರಸಿಜವುಂ ಕಿಡಿಸಲ್ಕಾಂ ಪೊಕ್ಕುದಾಗ ಬಗೆಗಾ ಕೊಳನಂ (ಕವಿರಾ. ೩-೧೧೯); ನರೇಂದ್ರ ನೋಡೀ ನಡುವಗಲೊಳ್ ಚಕ್ರವಾಕವಧು ವಿರಹಿಸುವಳ್ (ಆದಿಪು. ೧೧-೬೩) ; ಕಡುವೊತ್ತಾದುದು ರವಿಯುಂ ನಡುವಗಲೊಳ್ನಿಂದು ಕಿಡಿಚಿದಂ ಕರತತಿಯಿಂ ಕಿಡಿಗಳನೆನೆ ಬಿಟುವಿಸಿಲುಂ ಸುಡುತಿರೆ ನೀರಡಿಕೆ ತಿಣ್ಣಮಾದತ್ತಾಗಳ್ (ಶಾಂತಿಪು. ೧೯೬) ; ನಡುವಗಲಾದಿತ್ಯನಂತೆ ನೋಡಲರಿದು (ಧರ್ಮಾಮೃ. ೩-೧೩೭) ; ಸೊಲ್ಲಿಸಲು ಬಾರದಾನಂದದಿಂದಾಡಿ ಪಾಡಿದನು ನಡುವಗಲ ತನಕ (ಸಿದ್ಧರಾ. ೨-೧೬) ; ನಡುವಗಲೊಳ್ ಕಡುನೀರ ನೊಳೊಡವೆರೆದ ಬಳಲ್ಕೆಗಳಿಯಲೆಳಸಿ ಘಳಿಲನೊಳಪೊಕ್ಕು ಮೈದೊಳೆದು (ರಾಜಶೇ. ೬-೨೪೪); ನಡುವಗಲ ಭಾಸ್ಕರಂ ನಿಶ್ಚಲಂ ಪೊಳೆಯುತಿರ್ದಂ (ರಾಮಾಶ್ವ. ೩೧-೧೩). **ನಡುಪಗಲ್** : ಮರುಸ್ಥಳದ ಪಾಳದೊಳ್ ನಡುಪಗಲ್ವರಂ ಗ್ರೀಷ್ಮದೊಳ್ ಸುರುಳ್ವಿನೆಗವುಚ್ಚಿ ಬೇವವರ್ಗೆ ದೋಂಪಮಿಮ್ಮಾವು ನಿಜ್ಜುರಾಂಬು ದೊರೆಕೊಳ್ವವೊಲ್ (ಆದಿಪು. ೧೩-೫೭) ; ನಡೆಯಲ್ಕೇವೆಂದು ಪೋಗಿ ಬಾಗ್ಗೆ ಜಗದ್ಪೋಲಡಿಮೊದಲಂ ಸಾರ್ದ ನೆಬಲ್ ನಡುಪಗಲಂ ನಿಸದಿಸಿತ್ತು ಸಮಿನೆಸಿನಾಗಲ್ (ಪದ್ಮಪು. ೩-೨). **ನಡುವಗಲು** : ನಡುವಗಲಿನ ಸನ್ನೆಯಾಮದು ವಾದಕರೆದುಬಲಕೊಲೆದು ಸಾಗಿದರು (ಭರತ. ೧೭-೦೨೪) ; ನಡುವಗಲಿನ ಬೇಸಗೆಯ ಮಾರ್ತಂಡನ ಕಡುಝಳದುಬ್ಬರಕಾಗ ಅಡಗುವ ಹಿಮದೊಲಿಪ್ಪತ್ತುಸಾವಿರಬಲ ಮಡಿದುದು (ಕಂನವಿ. ೧೫-೮೯) ; ನಡುವಗಲಲ್ಲಿ ಕಾಂ ನಡಪಿ ದಂತಿಗಳಂ ರವಿತಪ್ತಯೂಥಪಂ ಬಿಡದತಿಶೀತಲಸ್ಥಲವ ಸೇವಿಸುವಂತೆವೊಲ್ (ಶಾಕುಂತ. ೬೨-೧೧೩) ; ಬೆಳಗು ಬೈಗನು ದುಃಖ ಸುಖದ ಸಮಶೀತೋಷ್ಣದೊಳಗದ್ದಿ, ನಡುವಗಲು ಕುದಿಸಿ ಒಣಗಿಸಿ (ನಲಮು. ೬೪-೫). **ನಡುಹಗಲು** : ಕಂಡಿರೇ ಮುರವೈರಿ ದಳಪತಿ ಚಂಡಬಳನಹ ನಡುಹಗಲ ಮಾರ್ತಾಂಡನಂತಿರೆ ತೋಱುತ್ತದನೆ ರಥವ ತಿರುಹೆಂದ (ಕುಮಾರ. ೧೯-೩೬) ; ನಡುಹಗಲ ಸೂರ್ಯನನಳುಕಿಸುವುದೇ ಮಂಜು (ನಿಘಂ. ೧೧-೫೭-೪೮) ; ನಡುಹಗಲ ಸಿರಿಹೊತ್ತು, ಭಾಸ್ಕರನ ಸುಳುವಿಲ್ಲ (ಗೊರೂ.ಘ. ೧೧-೩೭೨) ; ನಡುಹಗಲಿನ ಆಕಾಶವನ್ನು ನೀವು ನೋಡಿರಬಹುದು (ರಾಮಾನ. ೧೦೬) ; ನಡುಹಗಲಲ್ಲಿ ಸೂರ್ಯನ ಸೆಕೆಯಿಂದ ಪಾರಾಗಲು, ತಂಪಾದ ನೆರಳಲ್ಲಿ ಮಲಗಿ ವಿಶ್ರಾಂತಿ ಪಡೆದರು (ಮಂಡಸ. ೭೮).

[ ನಡು$_{2}$ + ಪಗಲ್ ]

**ನಡುವಗಲು** 'ನಡುವಗಲ್' ನೋ.

**ನಡುವಗಲ್ಪಂಜು** (ನಾ). (ದೇವರ ಅಥವಾ ಹಿರಿಯ ವ್ಯಕ್ತಿಗಳ ಗೌರವಾರ್ಥವಾಗಿ) ಮಧ್ಯಾಹ್ನದಲ್ಲಿ ಉರಿಸುವ ಪಂಜು ; ಹಗಲುದೀವಟಿಗೆ : ಪಿಡಿದೆರಳ್ ಸತ್ತಿಗೆಗಳೆರಡೆರಳ್ ಚವರಗಳ ನಡುವಗಲ್ಪಂಜುಗಳ . . . ಗದಾದಿಯಾಯುಧವನುಚಿ ಜಡಿವುತ್ತ ಸಿಡಿಲ ಬಳಗಂಗಳೆನೆ ಬಂದುದು ಪದಾತಿಬಲಮೇನೆಂಬೆನು (ಚಬಸು. ೪೭-೩೭). [ ನಡುವಗಲ್ + ಪಂಜು ]

**ನಡುವಟ್ಟು** (ನಾ). ಬಿಂಬದ ಮಧ್ಯಭಾಗ ; ಮಂಡಲದ ನಡುಭಾಗ : ಒಡಲೊಳ್ ಪುತ್ರಪನಾವ ವಸ್ತುವನಹೀಂದ್ರಂ ಕಂದದೊಳ್ ಶಾರ್ಙ್ಗನುಂ ನಡುವಟ್ಟೊಳ್ ಪಗಲಾಣ್ಮಂ . . . ತೊಡರ್ದಿರ್ಕಾ ಪರವಸ್ತು ವೀರಚಿಕದೇವೇಂದ್ರಕ್ಷಮಾಪಾಲನಂ (ಚಿಕವಿ. ೫-೨) ; ಅಚ್ಚಪೊಚ್ಚಪೊಸ ಸೇವಂತಿಗೆಯೆಸಟ್ಪರದ ಸುತ್ತಿನಿಂದಿನಿಸುಂ ನಡುವಟ್ಟನುಱಿದು ತಲೆಯೆಡೆಯಂ

ಬೆಳರ್ಗಿಸುವೋರೆಸಿಕ್ಕ ತನ್ನ ಕುಲದೇವಿಯ ನಿಟ್ಟಸಲ್ಕಿದಂತೆ ಚಂದಿರನೆಂಬ ಸಂದೆಯಮಂ ಸಮನಿಸುತ್ತಿದೆ (ಚಿಕವಂ. ೮೧-೨೧).

[ ನಡು$_{2}$ + ಬಟ್ಟು$_{1}$ ]

**ನಡುವಟ್ಟೆ** (ನಾ). ಮಧ್ಯದಾರಿ ; ಮಾರ್ಗಮಧ್ಯ : ಪೆಸರ್ವೆತ್ತ ತೀರ್ಥಕ್ಷೇತ್ರಂಗಳೊಳ್ ಸಂಚರಿಸುತಿಪ್ಪನ್ನಂ ನಡುವಟ್ಟೆಯೊಳ್ ಪಲಂಬರಂ ಕರ್ವೇಡರಂ ಕಂಡಂ (ರಾಮಾಶ್ವ. ೭೭-೧೩). [ ನಡು$_{2}$ + ಬಟ್ಟೆ$_{1}$ ]

**ನಡುವನ** (ನಾ). ಕಾಡಿನ ಮಧ್ಯಭಾಗ; ಅರಣ್ಯದ ಮಧ್ಯಭಾಗ: ನೆರಹಿದರದಟಗಂಧರ್ವರು ಭಟವ್ರಜವ ಬಂದುದದು ನಡುವನಕೆ ಕೌರವ ವೃಂದವನು ಕರದರು ವಿನೋದಕೆ ಬಂದಿರ್ದ್ದೆ ನಾರಾಚಸಲಿಲಕ್ರೀಡೆಯಿದೆ ಯೆನುತ (ಕುವ್ಯಾ.ಅ. ೧೯-೩೩). [ ನಡು$_{2}$ + ವನ ]

**ನಡುವನೆ**, ನಡುಮನೆ (ನಾ). ಮನೆಯ ಮಧ್ಯಭಾಗ : "ನೆಟ್ ನಡುವನೆ ನಟ್ಟವನೆಯುಮಕ್ಕು ಬುಧರಿಂ" (ಶಬ್ದಕಂ. ೧೪೪). ನಡುಮನೆ : "ನಟ್ಟವನೆ ಯೆನೆ ನಡುಮನೆಯುಮಕ್ಕು" (ಶಬ್ದಕ್ಕೆ. ೯೩); ಅಸುವೆವೋರಲೊನಕೆ ಗೂಟಂ ಪೊಸತಿಲು ನಡು[ಪಾಠಾಂ. ಮನೆ]ಮನೆಯ ಕಂಭವೊಲೆ ಪಡಿ ಪಾಲುಂ . . . ಸಮಸ್ತಂ ದೆಯ್ವವಿಂತಿವೆಂಬವರೋಥರ್ (ಸಮುಹ. ೯-೮೨) ; ನಡುಮನೆ ಯೊಳಿರ್ದವನ ಕೋಣೆಗೊಡಗೊಂಡೊಯ್ದು ಪಡಿಗದವನಿಕ್ಕಿ ಉಮ್ಮಳಿಸಿ ಸುಜ್ಞನೆ ಸುಯ್ದು ಬಂದ ಭಕ್ತರ್ಗೆ ನೆಟ್ ಬೋನವಂ ಮಾಡುತಿರೆ (ಶಬಕಾ. ೭೭-೦೭) ; ತನ್ನ ಭ್ರಾತ್ರನಪ್ಪ ಯಜ್ಞನಂ ನಡುಮನೆಯ ಜಗಲಿಯಿಂ ತೆರಳಲಾಗದೆಂದು ನಿಯಮವಾಳ್ದೆಯಂ ಕೊಟ್ಟು ಪೋಗೆ (ಧರ್ಮಾಶ. ೩-೦೩೭); ನಡುಮನೆಯೊಳಗೊಂದು ಸಾಲ್ಕು ತೆಂಗಿನ ಮರ . . . ತಲೆ ಮೊದಲಿಲ್ಲದ ಬೆಳದು ಹಣ್ಣಾಯಿತು (ಪುರಂದ. ೨-೧೯೦ ಕಲ್ಲವಿ) ; ಊಟವಾದ ಮೇಲೆ ನಡುಮನೆಯಲ್ಲಿ ಕುಳಿತುಕೊಂಡು ಮೂವರೂ ಲೆಕ್ಕದ ಪರಿಶೀಲನೆ ಮಾಡ ತೊಡಗಿದರು (ಮುಕಳ. ೦೫೮) ; ವೆಂಕಮ್ಮನವರು ನಡುಮನೆಗೆ ಬಂದು ಹುಡುಗರ ಗುಂಪನ್ನು ನೋಡಿ ಸ್ವಲ್ಪ ದಿಗಿಲು ಬಿದ್ದರು (ಕಳಹು. ೧೧).

ನಡುಮನೆ ಕಂಬ = ಮನೆಗೆ ಆಧಾರಸ್ತಂಭದಂತಿರುವವನು ; ಮನೆಯ ಹಿರಿಯ,-ಮುಖ್ಯಸ್ಥ. [ ನಡು$_{2}$ + ಮನೆ ]

**ನಡುವರಿ** (ನಾ). [ನಾಟ್ಯ] ಕರಣಗಳಲ್ಲಿ ಒಂದು ಬಗೆ: ನಡುವರಿ ಮೊಸಳೆವರಿ ಜಲಶಯನಚ್ಯುತಂ ಮತ್ಸ್ಯವುಟಂ ಲಂಕಾದಹನಮೆಂಬ ಪಲವುಂ ತೆಱದ ಕರಣಂಗಳಂ . . . ಎರಡುಂ ತೆಱದ ನೃತ್ಯಭೇದದಿಂದಾಡಿ (ಧರ್ಮಾಶ. ೨-೨೭೫). [ ? ]

**ನಡುವಲೆ** (ನಾ). ಬಲೆಯ ಎರಡು ಬೇರೆ ಬೇರೆ ಕೊನೆಗಳನ್ನು ಭೂಮಿ ಯಲ್ಲಿ ನಾಟಿರುವ ಒಂದು ಬಗೆಯ ಬಲೆ (?) : ತಡಿಕವಲೆ ಕಣ್ಣವಲೆ . . . ನಡುವಲೆ ತಡೆವಲೆ ಸಿಡಿವಲೆ ನಿಡುವಲೆಗಳೊಪ್ಪಿದವು ಲುಬ್ಧಕರೊಳ್ (ಗಿರಿಕ. ೧-೮೦). 'ನಡೆವಲೆ' ಪರಾ. [ ನಡು$_{1}$ + ಬಲೆ$_{1}$ ]

**ನಡುವಳಿ** (ನಾ). ಮಧ್ಯಭಾಗ : ನೀರುಳ್ಳಿ ಹಸಿಯಲ್ಲದ ಹುಡಿಯ ತುಪ್ಪದಿ ಹುರಿದು ಮತ್ತವಾ ಹೋಳುಗಳ ನಡುವಳಿಯ ಕತ್ತಿಯೊಳು ಸೀಳಿಕೊಂಡು . . . ನಾರಿಂದವಂ ಬಿಗಿವುದು (ಸೂಪಶಾ. ೫-೧೩) ; ಆ ಮಧ್ಯದ್ವೀಪದ ನಡುವಳಿಯ ಮಹಾಮೇರುಮಹೀಧರಮೆಸದತ್ತು (ಜಯುಕಾ. ೧-೩೨).

[ ನಡು$_{2}$ + ಬಳಿ$_{3}$ (< ಬಟ್ಟೆ$_{2}$) ]

**ನಡುವಾಯ್**, ನಡುಪಾಯ್ (ಕ್ರಿ). ೧. ನಡುವೆ ಹಾಯಂ ; ಮಧ್ಯೆ ಪ್ರವೇಶಿಸು. 'ನಡುವಾಯಿ' ಪರಾ. ನಡುಪಾಯ್ : ೨. ಕಾಲಕ್ಕೆ ಮುಂಚಿತವಾಗಿ ಹೊರಬೀಳು ; ಮಧ್ಯಕಾಲದಲ್ಲಿ ನೆಗೆ : ಈಂಬ ಸಿಂಹಿಕೆಶೋರಂ ನಡುಸೂಲೊಳ್ಕೆರ್ ಕಣ್ಣಂ ತೆಱದಿಭಪತಿಯಂ ತಾಚಿಲೊಳ್ಕಂಡು ಕಾಯ್ಬಂ ನಡುಪಾಯ್ದಾ ತಾಯ್ಗೆ ದುಃಖಪ್ರಸವಸಮಯ ದೊಳ್ತಂದುದುತೊಂದಲಂಮಾ (ಅನಂತು. ೧೨-೩೨).

[ ನಡು$_{2}$ + ಪಾಯ್$_{1}$ ]

**ನಡುವಾಯಿ** (ನಾ). ಮಧ್ಯೆ ಪ್ರವೇಶಿಸುವವನು ; ನಡುವೆ ತಲೆಹಾಕು ವವನು : ಬಣಗುಗಳು ಭೀಮಾರ್ಜುನರು ಕಾರಣಿಕ ನೀ ನಡುವಾಯಿ ಧರ್ಮದ ಕಣಿ ಯುಧಿಷ್ಠಿರನೆತ್ತ ಬಲ್ಲನು ನಿನ್ನ ಮಾಯೆಗಳ (ಕುವ್ಯಾಗ. ೮-೩೯). [ ನಡುವಾಯ್ + -ಇ$_{2}$ ]

**ನಡುವಾಯು** (ನಾ).ಸೊಂಟದಲ್ಲಿ ಬರುವ ವಾಯುರೋಗ,-ಸಂಧಿವಾತ: (ಕಸಂಗ್ರಾ. ೦೦೮). 'ಕಟಿವಾತ' ಪರಾ. [ ನಡು$_{2}$ + ವಾಯು ]

**ನಡುವಿಡಿ** (ಕ್ರಿ). ನಡುವನ್ನು ಹಿಡಿ ; ಸೊಂಟವನ್ನು ಬಳಸು : ಉಟ್ಟರ್ವ ಬೆಳ್ದಲಂಬಂ ಸುತ್ತಿ ನಡುವಿಡಿದ ಕಟ್ಟನ್ನಗೇಂ ನೇವಳಂ ಬಿಗಿವುದಲ್ತೆ (ಕಾಲಾಐರ. ೧೪೮-೩೨೩). [ ನಡು$_{2}$ + ಪಿಡಿ$_{1}$ ]

**ನಡುವಿರುಳ್$_{1}$**, ನಡುವಿರುಳು$_{1}$ (ನಾ). = ನಡುರಾತ್ರಿ : "ನಿಶೀಥಃ, ಮಹಾನಿಶಾ – ಈ ೨ ನಡುವಿರುಳ್" (ಹಲಾಯು. ೧೪-೧೧೯) ; ಜಿನಮಂದಿರ ದೊಳ್ ನಡುವಿರುಳಿನೊಳ್ ಪೂಜಾವೈಭವಮಂ ನೋಡುತ್ತಿರ್ದು (ಧರ್ಮಾಮೃ. ೨-೨೦೭) ; ನಡುವಿರುಳೊಳದ್ದ ಕುರುಡಂಗೆ ಅಗಸೆಯಲ್ಲಿ ಬೆಳಗಾದಂತೆ (ಬಸವ. ೨೮೭). ನಡುವಿರುಳು$_{1}$: ನಡುವಿರುಳಲ್ಲಿ ಹೊರಟವರಿಗೆ ಹೆಬ್ಬಾಗಿಲಲ್ಲಿ ಬೆಳಗಾಯಿತು (ಗಾದೆ). [ ನಡು$_{2}$ + ಇರುಳ್ ]

**ನಡುವಿರುಳ್$_{2}$**, ನಡುವಿರುಳು$_{2}$ (ಅ).ಮಧ್ಯರಾತ್ರಿಯಲ್ಲಿ; ನಡುರಾತ್ರಿಯ ಸಮಯದಲ್ಲಿ : ನಡುವಿರುಳ್ ಕರ್ಪಟಮಂ ಪಱಿದುಟ್ಟು ನಾಗಪುರಕ್ಕೆ ಪೋಗಿ (ಶಾಂತಿಪು. ೯-೯೦೫) ; ನಡುವಿರುಳವರ್ ನಾಟಕಂ ನಲಿದು ಮಱಿ ದೊಱಗಿರ್ದ ಸಮಯದೊಳ್ (ಹಂಪತಂ. ೭೭೪-೧) ; ನಡುವಿರುಳಾರುಮಿಲ್ಲ ದೆಡೆಯೊಳ್ ಕೊರಲೊಳ್ ವಧು ಕೋದು ಬಳ್ಳಿಯಂ ಮಡಿಯಲೊಡರ್ಚೆ (ಹಂರಾಮಾ. ೮-೦೫) ; ತರುಣಿ ನಡುವಿರುಳೈದಿ ಕರ್ಣನ ಹೊರೆಯೊಳಾ ವಿರ್ಭವಿಸಲು (ಕುವ್ಯಾ.ಅ. ೭೨೩. ೨೩-೪). ನಡುವಿರುಳು$_{2}$ : ನೆಲೆವಟ್ಟಣಕ್ಕೆ ಬರೆ ನಡುವಿರುಳು ನಡೆತಂದು ಊರ ಹೊಱಗಣ ಮಸಣವಟ್ಟಗೆಯೊಳಿರ ಲಂದು (ನಂಬಿರ. ೭-೫೪) ; ನಡುವಿರುಳು ಕಲಿಪಾರ್ಥನರ್ಚಿಸಿದನು ನಿಜಾಯುಧವ (ಕುವ್ಯಾದ್ರೋ. ೯-೩) ; ಪೊಡವಿಪತಿಯೆಡೆಗೊಯ್ಯೆಯಾತನ ಬಿಡಲಿ ಮೇಣಲ್ಲದೊಡೆ ಕೊಲಿಸಲಿ ನಡುವಿರುಳು ರಣದೊಳಗೆ ಕೊಂದುದ ಮಱದುದಿಲ್ಲೆಂದ (ಕಾಶಿರಾ. ೩೪-೯೭) ; ದೀವಿಗೆಯು ಕಡುಬೆಳದು ಸುಟ್ಟುದನಿವ ಶಂಕೆಯ ಬೆಳಸಿ ಕಡುನಡುವಿರುಳದಕೆ ಕಿಚ್ಚಿಕ್ಕಿ ಹೊಱವಂಟ (ಸಾಳ್ವಭಾ. ೩೫-೫); ಬೇಗೆಯೊಳು ಹೋಗದಿರು ಮೂಗರೊಳು ನುಡಿಯದಿರು ಅಗದರ ನಂಬಿ ಕೆಡದಿರು ನಡುವಿರುಳು ಹೋಗದಿರು ಪಯಣ (ಸರ್ವಜ್ಞ. ೦೫೪೫). [ < ನಡುವಿರುಳ್$_{1}$ ]

**ನಡುವಿರುಳು$_{1}$** 'ನಡುವಿರುಳ್$_{1}$' ನೋ.

**ನಡುವಿರುಳು$_{2}$** 'ನಡುವಿರುಳ್$_{2}$' ನೋ.

**ನಡುವೀದಿ**, ನಡುಬೀದಿ (ನಾ). ಬೀದಿಯ ನಡುಭಾಗ ; ದಾರಿಯ ಮಧ್ಯಭಾಗ : ನಿಜಜನನಿ ನೀರ್ಗೆ ಪೋದ ಪೊಲ್ತಿನೊಳಾ ಕಳಕಳಮಂ ಕೇಳ್ದು ನೋಡಲೆಳಸಿ ಸಡಗರಂ ಮಿಗೆ ನಡುವೀದಿಗೆ ತಡೆಯದೆ ಬಂದು (ರಾಜಶೇ. ೧೩-೯೫೭). ನಡುಬೀದಿ : ಪಶು ಮಡುವಿನ ಅಗ್ಗಣಿಯ ಕುಡಿದು ನಡುಬೀದಿ ಯಲ್ಲಿ ಬರುತಿರಲು (ಸಿದ್ದೇವ. ೪೮-೧೩೭) ; ಅವಳನ್ನು ಕುರಿತು ಯೋಚಿಸಲು ನಡುಬೀದಿ ತಕ್ಕ ಸ್ಥಳವಲ್ಲ (ದುಂದಿಳ. ೭) ; ಏನಿಲ್ಲಿ ನಿಂತುಬಿಟ್ಟಿರಿ ಮೂಱಿಗಳ ನಿಳಂಹಿ ನಡುಬೀದಿಯಲ್ಲಿ ? (ಚಂದ್ರಸ. ೪೨).

[ ನಡು$_{2}$ + ಬೀದಿ ]

**ನಡುವು** (ನಾ). ನಡು ; ಮಧ್ಯಭಾಗ : ವಿಮಾನಂಬುಬುವುವುಂ ನೀರಿಲ್ಲದ ಕೆಱಿಯ ನಡುವುಮಂ . . . ಇಂತೀ ಪದಿನಾಱುಂ ಕನಸುಗಳಂ . . . ಕಂಡೆನೆಂದುಱಿ (ವಡ್ಡಾರಾ. ೫೫-೨೭) ; ನಡುವಿನಲ್ಲಿ ಅಧಿಕಾರ ಬಂದರೆ ಅವನನ್ನು ಹಿಡಿಯ ಸಲ್ಲ, ನಡುವಿನಲ್ಲಿ ಸೀರೆ ಹರಿದರೆ ಉಡ ಸಲ್ಲ (ಗಾದೆ).

[ ದೇ.೫ ತಮಿ. ನಟುವು ; ತುಳು. ನಡುವುಲು ; ತೆಲು. ನಡುಮು.]

**ನಡುವೂರು** (ನಾ). ಊರಿನ ಮಧ್ಯಭಾಗ : ಪಟ್ಟಣದ ಮಧ್ಯಸ್ಥಳ,-ಕೇಂದ್ರಪ್ರದೇಶ : ದುರಾಸೆ ಮುಂದುಗೊಂಡು ನಾನಾ ದೇಶವ ತಿರುಗಿ ಹುಸಿಯು ಬೊಗಳ ವ್ಯಾಪಾರದ ಮಾಟಿಯಿಂದ ನಡುವೂರ ಬೀದಿ ನಡುವೆ ಕುಳಿತು (ಮಡಿಮಾ. ೪೭-೬೪).. [ ನಡು$_2$ + ಊರು$_3$ ( < ಊರ್ ) ]

**ನಡುವೆ$_1$**, ನಡವೆ (ನಾ). ಮನೆಯ ಮಧ್ಯದ ಭಾಗ; ನಡುಮನೆ : ಇಷ್ಟರಲ್ಲಿಯೇ ಪುನಃ ನಡುವೆಯ ಬಾಗಿಲಲ್ಲಿ ಅಮ್ಮಯ್ಯ ಬಂದು ನಿಂತಿದ್ದರು (ಜಂಗಾಳ್.-೪); ನಡುವೆಯ ಕಡೆಗೆ ಬಾಗಿಲು ತೆರೆದ ಕೋಣೆಯಿಂದ ತಂಬಾಕು ಹೊಗೆಯನ್ನು . . . ಕುಡಿಯುತ್ತಿದ್ದಂತೆ ಅವಳ ಬಯಕೆ ಕಾವೇರುತ್ತಿತ್ತು (ಪುನರು. ೦೩೭). ನಡವೆ : ಒಡನಾ ಪೂಧತ್ತ್ರಾಟ್ಸ್ವರ್ ನಡವೆಯೊಳಿನಿತೆಡೆಯನೀವುದೆನೆ (ದಿವ್ಯಚ. ೨-೯) ; ಗಣಿಕಾವನಿತಾಲಯಂ ಮೆರೆಗುಮವ್ರುಗಳೊಂದರ ಮುಂಬಾಗಿಲ ನಡವೆಯ ಜಗುಲಿಯ ರತ್ನಪಂಜರದಲ್ಲಿ (ಅಜಾಚಿ. ೨೦-೩೮೫) : ಒಬ್ಬ ಬ್ರಾಹ್ಮಣನ ಮನೇ ನಡವೆಯಲ್ಲಿ ಇಳುಕೊಂಡರು (ಕಥಾವಂ.IV, ೨೮); ಅಂದಣಾವನೇರಿ ಬಂದಳಣ್ಣನ ಮನೆಗೆ ನಿಂದೀರು ಅಕ್ಕ ನಡವೇಲಿ ಒಳಗೀರೊ ರಂಭೇಯ ಕೇಳಿ ಬರತೀನಿ (ಹಳ್ಳಿಪ. ೦೧೨). [ < ನಡು$_3$./ ತೆಲು. ನಡುವ, ನಡವ ]

**ನಡುವೆ$_2$** (ಅ). ಮಧ್ಯೆ ; ಮಧ್ಯಭಾಗದಲ್ಲಿ : ಇತ್ತರಸನುಮಾ ಇರುಳೊಳ್ ಶ್ವೇತವೃಷಭನಂ ಕನಸಿನೊಳ್ ಕಂಡು ಪೊಟ್ಟಟಿನೋಲಗದೊಳ್ ಆಸ್ಥಾನದ ನಡುವೆ ಸಿಂಹಾಸನಮಸ್ತಕಸ್ಥಿತನಾಗಿ ತನ್ನ ಕಂಡ ಕನಸಂ ಮಂತ್ರಿಗೆ ಪೇಟ್ದೊಡೆ (ವಡ್ಡಾರಾ. ೦೦೨-೦೦) ; ರಮಣೀಯಮಪ್ಪ ಗಂಧಿಲವಿಷಯದ ನಡುವೆ . . . ನೂಱ ಪತ್ತುಂ ಪೊಟಲ್ಗಳನೊಳಕೊಂಡು (ಆದಿಪು. ೧-೯೨೫): ಅಂತು ಪೇರಿದಪ್ಪರ್ ಬಗೆದ ಮಾಹಾಸಮುದ್ರಂಗಳೆರಡಱ ನಡುವೆ ಕುಲಗಿರಿಯಿರ್ಪಂತಿರ್ದಶ್ವತ್ಥಾಮನಂ ಕಂಡು (ಪಂಪಭಾ. ೨-೬೩೫) : ಮೂಱುಂ ಬೆಳ್ಗೊಡೆಯ ನಡುವಿರ್ದ ನೀನಿರ್ದೆಡೆಯುಮನೆಮಗಱಿಯದಂತಾಟಾದುದೆ ಮಗನೇ (ಗದಾಯು. ೩-೬೪) ; ದುಷ್ಟರ ನಡುವಿರ್ದ ಶಿಷ್ಟಂಗೇಗೆಯ್ದುಂ ಸುಖವಾಗಲಱಿಯದು (ಪಂಚತಂ. ೧೪೬-೦) ; ಕೂಡಲಸಂಗಮದೇವ ಭಕ್ತನ ನುಡಿಯು ನಡುವೆ ರಾಶಿಯಾಗಿರ್ಪನು (ಬಸವ. ೧೪೫) : ಬಡದ ಬೆಂಡೆದ್ದೇಳ್ವ ತಲೆಗಳ ಗಡಣ ನೀರ್ವಕ್ಕಿಗಳ ಸರಸಿಯ ನಡುವೆ ನಲಿನಲಿದಾಡುತಿರ್ದುದು ಭೀಮವನದಂತಿ (ಕುಮಾರವ್ಯಾ. ೦೨-೨೩) ; ನನ್ನ ಅವರ ನಡುವೆ ಮೊದಲಿನ ಸೌಜನ್ಯವಿರಲಿಲ್ಲ (ನಾಡಿಗೇ. ೦೭).

**ನಡುನಡುವೆ, ನಡನಡುವೆ** (ದ್ವಿರುಕ್ತಿ) : ನಡುನಡುವೆ ಯಮನ ಪಟ್ಟಣವು ಎನ್ನೊಡೆಯ ಪಂಚೇಂದ್ರಿಯ ದೈವಕರು ತಡೆಯದಂತೆ ನೀ ದಯಮಾಡೊ (ಪುರಂದ. ೩-೧೭೭-೩) : ಈ ವನದ ನಡುನಡುವೆ ತೊಳತೊಳಗುತಿರುತಿಹ ಸರೋವರದೊಳ . . . ಮೊರೆಮೊರೆವ ಭೃಂಗಾವಳಿಯ ಗಾವಳಿಯ ಕಳಕಳಂಗಳ ನೋಡು ನೋಡು ರವಿತನಯತನಯ (ಜೈಮಿಭಾ. ೩-೩೭); ತಿಂಗಳಿಗೊಮ್ಮೆ ತರುವ ಮತ್ತು ನಡುನಡುವೆ ತರಬೇಕಾಗುವ ಸಾಮಾನುಗಳನ್ನು ಪಟ್ಟಿಮಾಡಿಟ್ಟುಕೊಳ್ಳಬೇಕು (ಅಡುಶಾ. ೫೩) ; ನಡನಡುವೆ "ಚಾಯ್‌ಗರಮ್" ದವರ ಬಾಯಿ–ಗರಮು ಗದಗವಿಸುತ್ತಿತ್ತು (ದೀಪಕ. II, ೩೪೮). [ < ನಡುವೆ$_1$./ತಮಿ. ನಟುವೆ ; ತುಳು. ನಡುವೆ ]

**ನಡುವೆಟ್ಟು** (ನಾ). ಬೆಟ್ಟದ ನಡು,-ಮಧ್ಯಭಾಗ : ಸಿಡಿಲಾಳ್ ತಡೆಯದೆಡೆಯ ನಡುವೆಟ್ಟುಗಳ್ಗೆ ಕಟ್ಟುಬ್ಬರದಿಂ ಬಂದೆಱಗುಗುಂ (ರಾಮಾಶ್ವ. ೧-೬). [ ನಡು$_2$ + ಬೆಟ್ಟು$_2$ ]

**ನಡುವೊಗು** (ಕ್ರಿ). ನಡುವೆ ಪ್ರವೇಶಿಸು ; ಮಧ್ಯೆ ತಲೆಹಾಕು : ತಗರ್ ಕಾದುವಲ್ಲಿ ನಡುವೊಕ್ಕು ನರಿ ಸತ್ತುದು (ಪಂಚತಂ. ೭೯-೧೮).
[ ನಡು$_2$ + ಪೊಗು(< ಪುಗು) ]

**ನಡುಸಂತೆ** (ನಾ). ೧. ಸಂತೆ ಸೇರಿರುವ ಸ್ಥಳದ ಮಧ್ಯಭಾಗ. ೨. ಸಂತೆಯಲ್ಲಿ ವ್ಯಾಪಾರ ಭರಾಟೆಯಿಂದ ನಡೆಯುವ ಸಮಯ,-ವ್ಯಾಪಾರದ ಸಮಯದ ಮಧ್ಯಕಾಲ : ಈಗ ನಡುಸಂತೆಯ ಹೊತ್ತು. ಜನ ನುಗ್ಗುತ್ತಿದ್ದಾರೆ (ಬೂಧಿ). ೩. ಹೇರಳವಾಗಿರುವಿಕೆ : ಆಧಿಕ್ಯ ; ಯಥೇಚ್ಛವಾಗಿರುವುದು : ಎಡಬಲದೊಳಗೋಲೈಪ ಕೋಮಲೆಯರು ತೊಡೆದ ಲೇಪನವುಟ್ಟ ದುಗುಲ ಮುಡಿಹೂದಂಬುಲಗಂಪಿನ ಕಂಪಿನ ನಡುಸಂತೆಯಾದುದಾಸ್ಥಾನ (ಶ್ರೀಪಾರಿ. ೩-೭) ; ತೆಂಗಿನ ನಡುಸಂತೆಯಲ್ಲಿ ಕಾಯಿಗೆ ಬರವೇ ? (ಬೂಧಿ). [ ನಡು$_2$ + ಸಂತೆ$_1$ ]

**ನಡುಸರಕು** (ನಾ). ವ್ಯವಹಾರದಲ್ಲಿ ವಿನಿಮಯಕ್ಕಾಗಿ ಇಬ್ಬರ ನಡುವೆ ಬಳಸುವ ಸರಕು,-ಪದಾರ್ಥ : ಅಕ್ಕಿ, ಜೋಳ ಒಂದು ಉಪಯುಕ್ತ ಧಾನ್ಯವಿನಿಮಯದ "ನಡು–ಸರಕು" ಆಗಬಹುದು (ಪೂಪಾದ. ೦೦೪).
[ ನಡು$_2$ + ಸರಕು$_3$ ]

**ನಡುಸರು** (ನಾ). ನಡುವಿನ ಉಸಿರು ; ಮಧ್ಯೆ ಮಧ್ಯೆ ತೆಗೆದುಕೊಳ್ಳುವ ಉಸಿರು (?) : ಕಿಡಿನಯನ ಘರ್ಷಣೆಯೊಳುದಾರ್ಪಾರಿಕಲ್ಗಳಂತೊಡನೆ ಸುರನದಿಯ ನಡುಸರು ಬಿರ್ದವಂತಾಗ ಮೃಡ ಪೊಡವಿದಣಿದಮೃತಫಲ ಬತ್ತಿದಂತಾಗ ಕೊಡುತಿರ್ದ ಶರಣಜನಕೆ (ಮುರುಪಾ. ೦-೯).
[ ನಡು$_2$ + ಉಸರು$_3$ ( < ಉಸಿರ್$_3$ ) ]

**ನಡುಸಾಲೆ** (ನಾ).=ನಡುಮನೆ : ಬಾಗಿಲು ದಾಟಿದ ಕೂಡಲೆ ಒಂದು ವಿಶಾಲವಾದ ನಡುಸಾಲೆ ಕಾಣುತ್ತದೆ (ಕವಿಕೋ. I, ೧೯೪) ; ಪಡಸಾಲೇ ಊಟ, ನಡುಸಾಲೇ ನಿದ್ರೆ (ಗಾದೆ). [ ನಡು$_2$ + ಸಾಲೆ$_2$ ]

**ನಡುಸುಳಿ** (ನಾ). ನಡುವೆ ಇರುವ ಸುಳಿ, - ಆವರ್ತ, - ಗರ್ತ : ಹೋಲಿಸುವಡಿದು ಮೃತ್ಯುವಿನ ಗೋನಾಳಿ ಹೊಗುವಡೆ ಕಡಲ ನಡುಸುಳಿ ಕಾಳಮೇಘದ ಮೊತ್ತವೆನೆ ರಂಜಿಸಿದುದಾ ವ್ಯೂಹ (ಕುಮಾರವ್ಯಾ. ೭೦೩. ಪ೦. ೨೭೭). [ ನಡು$_2$ + ಸುಳಿ$_2$ ( < ಸುಟಿ$_2$ ) ]

**ನಡುಸೂಲ್** (ನಾ). ಪ್ರಸವದ ಮಧ್ಯಸಮಯ ; ಹೆರಿಗೆಯ ಮಧ್ಯಭಾಗ : ಬೇನೆಯಿಂ ಧೂಳಿಡುತುಂ ಶೈಲಾಗ್ರದೊಳ್ಮುಕ್ಕುಱಿಸಿ ಮಾಱುಕದಿಂದೀಂಬ ಸಿಂಹಿಕಿಶೋರಂ ನಡುಸೂಲೊಳ್ಸಿರ್ದ ಕಣ್ಣಂ ತೆಱೆದಿಭಪತಿಯಂ ತಾಱಲೊಳ್ಕಂಡು ಕಾಯ್ದುಂ ನಡುಪಾಯ್ದಾ ತಾಯ್ಗೆ ದುಃಖಪ್ರಸವಸಮಯದೊಳ್ಬಂದುದಂತೊಂದಲಂಪಂ (ಅನಂಪು. ೦೨-೬೨).
[ ನಡು$_2$ + ಸೂಲ್ ]

**ನಡುಸೆಱಂಗು** (ನಾ). ಸೆರಗಿನ ಮಧ್ಯಭಾಗ : ಉಡಿ ; ಮಡಿಲು : ಉಕಾರಕ್ಕೆ . . . ನಿಡುದೆಱೆಳ್, ನಿಡುವಯಣಂ, ನಡುಸೆಱಂಗು (ಶಮದ. ೧೫೧ ಪ್ರಯೋ). [ ನಡು$_2$ + ಸೆಱಂಗು ]

**ನಡುಹಗಲು** 'ನಡುವಗಲ್' ನೋ.

**ನಡುಹಣೆ** (ನಾ).=ನಡುನೊಸಲು : ಕೊರಳೊಳು ವಿಷವುಂಟು ತಲೆಯೊಳು ಹಾವುಂಟು ನಡುಹಣೆಯೊಳು ಬೆಂಕಿಯುಂಟು (ಜಂಜಾಪ. ೭೫-೬೦).
[ ನಡು$_2$ + ಹಣೆ$_1$ ( < ಪಣೆ$_2$ ) ]

**ನಡುಹರೆಯ** (ನಾ). ಮಧ್ಯವಯಸ್ಸು ; ಪ್ರಾಯದ ಮಧ್ಯಾವಸ್ಥೆ : ನಡುಹರೆಯದವಳು ಶಿವತ್ಯಾಯನಿಕೆಯಕ್ಕ (ಮಂಗರಾ. ೮೯-೨).
[ ನಡು$_2$ + ಹರೆಯ ( < ಪರಯ ) ]

**ನಡುಹಾದಿ** (ನಾ).=ನಡುದಾರಿ : ನಡುಹಾದಿಯಲ್ಲಿ ವಿಮಾನದ ಮಾಡು ಕಿಟ್ಟುಹೋಯಿತು (ರಾಜಪ. ೫೧) : ಹೊರಬಂದ ಗುಂಡಣ್ಣನಿಗೆ, ಕತ್ತಲೆಯ ನಡುಹಾದಿಯ ಆಚೆ ಅಂಗಳಕ್ಕಿಳಿಯುತ್ತಿದ್ದ ಸಾಮಾನುಗಳು ಗೋಚರಿಸಿದುವು (ರಂಗಪ. ೮೦). [ ನಡು$_2$ + ಹಾದಿ ( < ಪಾದಿ$_1$ ) ]

**ನಡುಹಾಳೆ** (ನಾ). "ಪುಸ್ತಕದ ಹಾಳೆಗಳ ನಡುವೆ ಸೇರಿಸಿದ (ಸಾ., ಬರಿಯ) ಹೆಚ್ಚು ಹಾಳೆ, ನಡಂಹಾಳೆ" (Interleaf. ಇಂಕನಿ).
[ ನಡು$_2$ + ಹಾಳೆ$_1$ ( < ಪಾಳೆ$_1$ ) ]

**ನಡುಹೊತ್ತು** 'ನಡುಬೊತ್ತು' ನೋ.

**ನಡುಹೊಳೆ** (ನಾ). ೧. ನದಿಯ ಮಧ್ಯಭಾಗ ; ನಡುನೀರು : ಇಂದು ನಾನು ಹರಿಗೋಲಲ್ಲಿ ಕುಳ್ಳಿರ್ದು ನಡುಹೊಳೆಯಲ್ಲಿ ಹೋಗಲಿಕೆ ಸಾವು ವೆಂಬ ಕೊಡಜಿ ಅಡ್ಡಬಿದ್ದಿತ್ತು (ಪಡಹು. ೨೪೯-೨೩) ; ನಡುಹೊಳೆಯು ಹರಿಗೋಲ ಮೂಲೆಯು ಕಡಿದಿರ್ದರೆ ನಮ್ಮ ಪುಣ್ಯದ ಬಿಡುಗಡೆಯು ಕಾಲವು ಶಿವಾಯೆಂದರಸ ಬಿಸುಸುಯಿದ (ಶುಭ್ನಾಳ್. ೯-೩). ೨. ಒಂದು ಊರಿನ ಹೆಸರು: ನಂಜೇಗವಡ ವಿರಕ್ತಗವಡಯ ವರ ಕುಲದೇವರು ನಡುಹೊಳ್ಳುವೇಶ್ವರ (ಎಕ್. III. (R), ಗುಂಡ್ಲುಪೇ. ೩೧-೩೨: 1027).

**ನಡುಹೊಳೆಯಲ್ಲಿ ಕೈಬಿಡು** = ೧. ಹೊಳೆಯ ಮಧ್ಯದಲ್ಲಿ ಹಿಡಿತದ ಸಹಾಯವನ್ನು ತಪ್ಪಿಸು : ನಡುಹೊಳೆಯಲ್ಲಿ ಕೈಬಿಟ್ಟ ಹಾಗೆ (ಗಾದೆ). ೨. ನಂಬಿಕೊಂಡವರಿಗೆ ಅತ್ಯಗತ್ಯವಾದ ಸಮಯದಲ್ಲಿ ಉದ್ದೇಶ ಪೂರ್ವಕವಾಗಿ ಸಹಾಯ ನಿಲ್ಲಿಸು ; ನಡುನೀರಲ್ಲಿ ಕೈಬಿಡು : ನನ್ನನ್ನು ನಡುಹೊಳೆಯಲ್ಲಿ ಕೈಬಿಡಬೇಡ (ಮಪಕೊ. ೩೮).

[ನಡು₂ + ಹೊಳೆ₂ ( < ಪೊೞೆ₁ ) ]

**ನಡೆ₁, ನಡಿ, ನಡೆ** (ಕ್ರಿ). ೧. (ಕಾಲುಗಳಿಂದ) ಚಲಿಸು ; ಹೋಗು ; ಗಮಿಸು : "ನಡೆ-ಗಮನೇ" (ಶಮದಾ) ; ಜಯದ್ರಥನಂ ಕೋಡಗಗಟ್ಟು ಗಟ್ಟಿ ಬೆನ್ನಂ ಬಲ್ಲ ಕೊಳ್ಳನೊಳಿಱಿದು ನಡೆಯೆಂದು ನಡೆಯಿಸಿ (ಪಂಪಭಾ. ೭-೩೦ವ) ; ಆ ಧರಿತ್ರೀನಾಥನತ್ಯಂತಹರುಷಾಂತರಂಗನಾಗಿ ಸಿಂಹಾಸನ ದಿಂದಿೞಿದು ಮುಂದನೇಟಡಿಯಂ ನಡೆದು (ಸುಕುಮಾ. ೮-೯೭ವ) ; ನಡೆದೊಡೆ ಕಾಲ್ನೋದಪುದು (ಧರ್ಮಾಮೃ. ೩-೩೫) ; ತಲೆಯಿಲ್ಲದ ಕಾಗೆ ನೆಲದಲ್ಲಿ ನಡೆಯಿತ್ತು (ಆದಿಪ. ೦೩-೩೨) : ನಡೆಯುತ್ತ ನಡೆಯುತ್ತ ಬಳಲು ವರಲ್ಲದೆ ಬಟ್ಟೆ ಬಳಲುವುದೆ (ಬಸವ. ೦೦೩) ; ತಲೆ ಮೇಲಣಗೆ ಚಿಗಿದುದು ಮುಂಡ ನಡೆದುದು ನೂಱು ಹೆಜ್ಜೆಯನು (ಕುಮ್ಮಾಳ್. ೨-೨೦) ; ಭೂತಳ ದೊಳಗಂಬೆಗಾಲಿಟ್ಟು ನಡೆವಂತೆ ಚೇತನವಾದುದಂಗಜಗೆ (ಮೋಹತ. ೦೦-೩೯) ; ಪಾದಗಳಿಂದ ಹೆಚ್ಚು ದೂರ ಮತ್ತು ಜಾಗ್ರತೆಯಾಗಿ ನಡೆಯುವುದು ಕಷ್ಟ (ವಾಡಿಗೇ. ೪೪) ; ನಡೆಯೋದು ಕಾಲ್ನಡೆ ಆಡೋದು ಪಾಲ್ಕಿ ಮೇಲೆ (ಗಾದೆ). ೨. ಮುಂದುವರಿ ; ಮುಂದೆ ಸಾಗು ; ಸಾರೋದ್ಧಾರವಾಗು : ತೊಱೆಯ ತಡಿಯೊಳೋಡಮಂ ನಡೆಯಿಸುವ ಮತ್ಸ್ಯಗಂಧಿಯಂ ಕಂಡಮ್ಮನೀ ತೊಱೆಯಂ ಪಾಯಿಸಂಬುದುಂ ಸಾಸಿರ್ವರೇಱಿದೊಡಲ್ಲದೀ ಯೋಡಂ ನಡೆಯದೆಂಬುದುಂ (ಪಂಪಭಾ. ೧-೩೦ವ) ; ಪನ್ನೆರಡು ಪಳ್ಳಿಗವೀ ಸ್ಥಿತಿಯೊಳ್ ಸಲ್ವುದು ಚನ್ದ್ರಾದಿತ್ಯರ್ಕಳ್ ಉಳ್ಳನ್ನವ್ವರಂ ನಡೆವುದು (ಎಕ್. IV, ಚಾಮರಾ. ೪೮-೦೩ ; 965) ; ಪಿರಿಯಂ ಜಯಕುಮಾರಂಗೆ ಕುಡುವುದು ಕೊಟ್ಟಂದು ಕುರುಕುಲಸಂಬಂಧಮವಿಚ್ಛಿನ್ನಮಾಗಿ ನಡೆಗುಂ (ಚಾಪುಂಪು. ೭೮-೨೬); ಸಮರಾಭಿಮುಖನಾಗಿ ನಡೆವ ಫಣಿರಾಜಕೇತನನಂ ಸಂಜಯನಂಜದೆ ಮಾರ್ಕೊಂಡು (ಗದಾಯು. ೩-೪೯ ವ) ; ಪೆಜ್ಜುಂಕದದಿ ಗೆಯನ್ನವ ಕೋಲಮುಮಕ್ಕೋಣಿಯಾಗಿ ನಡೆವ ಗದ್ಯಾಣ ಆ ಮಾರ್ಗ್ಗದೆ ಪನ್ನಾಯದಿಂದಕ್ಕೋಣಿಯಾಗಿ ನಡೆವ ಗದ್ಯಾ ೧ (ಸೌಇಇ. XX. ೪೩-೨೯ ; 1071) ; ಕೂಡಲಸಂಗನ ಶರಣರು ನಡೆದ [ಪಾಠಾಂ. ಹೋದ] ದಾರಿ ಭಯ ಕಾಣಿರಣ್ಣಾ (ಬಸವ. ೦೯೭) ; ಖಟಿಲೆ ನುಡಿದಟಲೆ ಬಗ್ಗಿಸಿ ಘಟಿಲನೆ ನಡೆಯೆಂದು ಜಡಿದು ಸಾರಥಿಯಂ (ಶಮರ. ೦೯ ಪ್ರಹೋ) : ಅದ್ದುದತಳಕೆ ಅವನಿಯೆನೆ ಹೊದಜಿದ್ದು ನಡೆದುದು ದಂತಿಘಟೆ ಬರುತಿದ್ದುದಗಣಿತ ರಥಪದಾತಿಗಳಾಹವಾಂಗಣಕೆ (ಕುಮ್ಮಾದ್ರೋ. ೯-೦೩) ; ಈಸುದಿನ ನಮ್ಮಗ್ನಿ ಹೋತ್ರಕೆ ವಿಘ್ನಸಲಳಿಯದೆ ನಡೆದುದೀಗ ವಿನಾಶಕರವಾಯ್ತುದಱಿನಾದುದು ಬರವು ನಮಗೆನಲು (ಕೊರಶಾ. ೦-೯-೨೫) ; ಲಿಪಿರಹಿತಭಾಷೆಯನ್ನು ಆಡುವವರ ವ್ಯವಹಾರವೆಲ್ಲಾ ಹೆಚ್ಚಾಗಿ ಸಂಭಾಷಣೆಯಲ್ಲೇ ನಡೆಯು ತ್ತದೆ (ದ್ರಾವಿವಿ. ೪೫) ; ಧರ್ಮಾತ್ಮರಾದ ಮಹೀಶೂರಮಾನಿತನದಲ್ಲಿ ಹುಟ್ಟಿದ . . . ದೇವರಾಜಮ್ಮಣ್ಣಿಯವರಿಗೆ ಪುತ್ರನ ವಂಶವು ನಡೆಯಲಿ (೬ಆಳ್. ೨೦).

೩. ತೆರಳು ; ಹೊರಡು : ಅಂತೆರಡುಂ ಪಡೆಗಳುಂ ಪಣ್ಣಿಪಣ್ಣಿನೆ ಪಣ್ಣಿ ಕಾಳಗಕ್ಕೆ ನಡೆಯಲೊಡರಿಸಿದಾಗಳ್ (ಪಂಪಭಾ. ೧೦-೫೦ವ); ಬೇಡಿದರ್ಗೆ ಬೇಡಿತಂ ಕೊಟ್ಟು ಬಂದಿಱಿವ ಕಿಸವರಗಲಿಗಳುಮಂ ಮತ್ತಮಗ್ಗ ನಡೆದಿಱಿವ ನಡೆಗಲಿಗಳುಮಂ ನೋಡಿ (ಗದಾಯು. ೯-೩೯ವ) ; ನಡೆವೆ ನಾನಿರಲೊಲ್ಲೆ ಕೈಲಾಸಪುರಕೆನುತೆ . . . ಪೊಱಮಟ್ಟಳಮ್ಮಮ್ಮ ಪುರಜನಂ ನೋಡುತಿರೆ (ಶಾರಿಕ. ದೀ. ೨೯೮-೩) ; ಒಡಲನೊಡೆದಾ ಜ್ಯೋತಿ ಗಗನಕೆ ನಡೆದುದಿತ್ತಲು ಸುರರು ಮರ್ತ್ಯರು ಸುಡುಸುಡೆಂದುದು ಸಾತ್ಯಕಿಯ ದುಷ್ಕರ್ಮವಾಸನೆಗೆ (ಕುಮ್ಮಾದ್ರೋ. ೦೪-೨೪) ; ದಶದಿಕ್ಕಿನ ಪುರಾಧಿಪರೆಡೆಗೆ ನಡೆದುದು ದಂಡು ಬಳಿಕೆಂದ (ತೊರಶಾ. ೧-೮-೩೦) ; ನಡೆ ಮಜ್ಜನ ಭೋಜನಕೆ ಶೃಂಗಾರದ ತೊಡವುಗಳಿಡು ನೀ ಬೇಗ (ಕಂಸವಿ. ೯-೦೩೩). ೪. ತೊಲಗು; ದೂರ ಸರಿ : ಉಂಬ ಜಂಗಮ ಬಂದರೆ ನಡೆಯೆಂಬರು ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯಾ (ಬಸವ. ೦೯೪). ೫. ಆಚರಿಸು ; ಆಚರಣೆ ಮಾಡು : ಶ್ರೀಪಾಳು ಮೇಲ್ಸಿವಿ ಮೇರೆ ಸರ್ವ್ವದ ಮಹಾದನ್ನಾಗುದುಳ್ಳಲ್ಲಪೊಳ್ ಸಾಲಾಮ್ಪಾಲ ತಪೋಗ್ರುದಿನ್ನು ನಡದೊಂ ನೂಱಿನ್ನಾಸಂವತ್ಸರಂ (ಎಕ್.II, ೨೨-೨ ; ಸು. 700) ; ನಡೆಯಿಂ ಧರ್ಮದ ಬಟ್ಟೆಯೊಳ್ ಬಿಸುಡಿಯಾದು ಪ್ಪಾಪದು ಮಾರ್ಗಮಂ (ಸುಕುಮಾ. ೦-೪) ; ಪೊಲ್ಲದಂ ಬಿಸುಟ್ಟನುಪಮಜೈನಮಾರ್ಗದೊಳೆ ತಾಂ ನಡೆಗುಂ ಪರಮೋಕ್ಷಕಾಂಕ್ಷೆಯಿಂ (ಸಮುಪ. ೦-೦೮) ; ಜೈನಾಗಮದೋಜೆಯಿಂ ನಡೆ ಬಾಧವ್ರಾತಕೆ ಲೇಸಾಗು (ಧರ್ಮಾಮೃ. ೪-೩೬೦) ; ನುಡಿದಂತೆ ನಡೆಯಲು ಬಾರದಯ್ಯಾ ಕೂಡಲಸಂಗನ ಶರಣರ ಭಕ್ತಿ ಬಾಳ ಬಾಯ ಧಾರೆ (ಬಸವ. ೨೦೦). ೬. ವರ್ತಿಸು ; ನಡೆದುಕೊಳ್ಳು ; ವ್ಯವಹರಿಸು : ಕಡುಗಲಿತನಮುಂ ಚಾಗದ ಪಡೆಮಾತುಂ ವಿದ್ಯೆಯುರ್ಕುಮೊರ್ವನೊಳೆಂತುಂ ನಡೆಯವು ಭುವನಾಂತರದೊಳ್ (ಆದಿಪು. ೦೨-೦೦೪) ; ದಯೆಗೆಯ್ಯೆಂ ಪ್ರಸಾದಮೆಂಬಿವು ಪೆಱರೊಳ್ ನಡೆಗೆಮ್ಮ ನಿನ್ನಯಡೆಯೊಳ್ ನಡೆಯಲ್ವೇಡೆನಗೆ ಕೆಯ್ಯನ್ನೆ ರಾಧೇಯಾ (ಪಂಪಭಾ. ೨-೮೩) ; ನಿಮಗೆ ಕರಿಗಳ್ ದೊರೆಕೊಳ್ವನ್ನಂ ನಿಚ್ಚಲೊಂದೊಂದು ಮೃಗವನಟ್ಟುವೆವದು ಕೈಕೊಂಡಿಂತು ನಡೆವಿರಪ್ಪೊಡೆ ನಿರ್ವಹಿಪೆವಾಗ ದೊಡೋಡಿಪೋಪೆವೆನೆ (ಪಂಚತಂ. ೮೮-೦೦) ; ಒಡೆಯಂಗುತ್ತಮವಾಗೆ . . . ಗಡಿದುರ್ಗಂಗಳು ಭದ್ರಮಾಗೆ ಧನಧಾನ್ಯಂ ತೀವೆ ಭಂಡಾರದೊಳ್ ನಡೆಮ ಮಂತ್ರಿವರೇಣ್ಯನೈ (ಸೋಮೇಶ. ೩೫) ; ಪೊಡವಿಪನೊಲುಮೆಯ ಕಡುನೆಚ್ಚಿ ಗರ್ವದಿ ನಡೆಯದಿರೆಚ್ಚಱಿಕೆ (ಪುರಂಪ. ೨-೪೩-೧) ; ನೃಪ ಹಿಂದಣಳಲನು ನೆನೆಯದೆನ್ನವರೆಂದು ನಡೆ ಕಾಮಂಗೆ ಕೊಡದಾರ್ಗಿತ್ತಪಿರಿ ಸುತೆಯ (ಸಾಕ್ಕಥಾ. ೩೦-೧೦) ; ನಿನಗಿಂತ ಹಿರಿಯರಾದವರು ಹೇಳಿದ ಮೇರೆಗೆ ನಡೆ (ಮುಂಬಯಿ. ೪-೩೯). ೭. ಕೆಲಸ ಮಾಡು ; ಕಾರ್ಯ ಮಾಡು : ಈ ಗಡಿಯಾರ ಸರಿಯಾಗಿ ನಡೆಯುತ್ತಿಲ್ಲ (ರೂಢಿ); ರಜಾದಿನಗಳಲ್ಲಿ ಶಾಲೆಗಳು ನಡೆಯುವುದಿಲ್ಲ (ರೂಢಿ). ೮. ಜರುಗು ; ಘಟಿಸು ; ಉಂಟಾಗು : ದೇಶದ ಮೇಲೆ ನಡೆದ ಸುದ್ದಿ ತಿಳುಕೊಳ್ಳುವುದಕ್ಕಾಗಿ ವರ್ತಮಾನಪತ್ರಗಳನ್ನು ತರಿಸುತ್ತಾರೆ (ಮುಂಬಯಿ. ೪-೯೭) ; ಆ ಊರಿನಲ್ಲಿ ಜಾತ್ರೆ ನಡೆಯುತ್ತದೆ (ರೂಢಿ) ; ಅವರ ಮನೆಯಲ್ಲಿ ಹಬ್ಬ ಹುಣ್ಣಿಮೆಗಳು ವಿಜೃಂಭಣೆಯಿಂದ ನಡೆಯುತ್ತವೆ (ರೂಢಿ). ೯. ಈಡೇರು; ನೆರವೇರು ; ಪಾಲನೆಯಾಗು : ಲೇಸೆನಿಪ ಮಹಿಷಾಕ್ಷಿಧೂಪದ ಭಾಷೆ ನಡೆಯಲು . . . ಅರ್ಥವನೊಸರಿಸ ದಿಂತರ್ಪಿಸುತ್ತಿರೆ (ಬಸಪು. ೨೭-೯). ೧೦. ಚಲಾವಣೆಯಾಗು ; ಚಾಲತಿ ಯನ್ನು ಹೊಂದಿರು ; ಬಳಕೆಯಾಗು : ಹವಳಿ ನಾಣ್ಯ ನಡೆಯುವುದಿಲ್ಲ (ರೂಢಿ) ; ಈಗ ಅವನಿಗೆ ಹದಿನಾಲ್ಕನೆಯ ವರ್ಷ ನಡೆಯುತ್ತಿದೆ (ರೂಢಿ). ೧೧. ಆಕ್ರಮಣ ನಡೆಸು ; ಮುತ್ತು ; ಮೇಲೆ ನುಗ್ಗು : ನಿನಗುತ್ತರಾರ್ಧ ಮೊಂದರ್ಧನಿಮೇಷಮುಹೂರ್ತಮಾತ್ರದಿಂ ಬಾರದೆ ಕೈಗಿನಿತುವರಂ ದೇವರ್ ನಡೆವನಿತುಂ ಮಾಣ್ಬನಿತುಮಂತದಾವುದು ಗಹನಂ (ಆದಿಪು. ೦೩-೨೨).

೧೨. ಸಲ್ಲು ; ಒಳಪಡು : ತುರಗಮೇಧಾಧ್ವರದ ಮೇಲಾರ್ಕೆ ನಡೆದುದು ಪರಮಪಾಶುಪತಾಚಾಲಿಗವಸೀಶ್ವರರ ಮಾನ್ಯತೆಯು ಪರುಟವಣೆ ವಿಜಯಂಗೆ ಸೇರಿತು (ಕೂರಶಾ. ೦-೭-೨೪). ೧೩. ಪ್ರವರ್ತಿಸು ; ತೊಡಗು : ಎನ್ನವರಾದರೆ ಜನ್ನಕ್ಕೆ ನಡೆವರೆ ಎನ್ನವರಲ್ಲ ಕೂಡಲಸಂಗಾ ನಿಮ್ಮಾಣೆ (ಬಸವ. ೭೧೩). ೧೪. ಗದ್ಯ ಅಥವಾ ಪದ್ಯದ ಲಯಕ್ಕೆ ಹೊಂದಿಕೊಳ್ಳು : ಷಟ್ಪದಿ ಈಗ ಮಾತ್ರೆಗಳಿಂದ "ನಡೆ"ದರೂ ಒಮ್ಮೆ ಅಂಶಗಳಿಂದ "ನಡೆ"ಯುತ್ತಿದ್ದಿತೆಂಬುದನ್ನೂ . . . ಮರೆಯಬಾರದು (ಕೃಷಿ. ೧೪೭). ೧೫. ಪ್ರಭಾವಶಾಲಿಯಾಗು ; ಯಶಸ್ವಿಯಾಗು : ನನ್ನ ಮುಂದೆ ನಿನ್ನ ಯಾವ ಆಟವೂ ನಡೆಯುವುದಿಲ್ಲ (ರೂಢಿ). 'ಕೈನಡೆ' ಪರಾ. ೧೬. ನಡಗೆಯಿಂದ ಅಳತೆ ಮಾಡು ; ಹೆಜ್ಜೆಯಿಂದ ಅಳೆ (?): ರಣಾವಳೋಕ ಶ್ರೀಕಮ್ಬಯ್ಯನ್ ಪೃಥುವೀರಾಜ್ಯಂಗೆಯೆ ಬ × × × ರಸರ್ಕ್ಕರ್ಗಟ್ಟವೃ × × × ೪ ಪೆರ್ಗ್ಗರ್ಗಟ್ಟಪ್ಪನಾ ಪೊಲದನ್ನಡದು ಕೊಟ್ಟದು (ಎಕ. II, ೩೫-೪ ; ಸು. 800).

ಠ ಇದು ಅನೇಕ ಕಡೆ ನಾಮಪದದೊಡನೆ ಸೇರಿದಾಗ ಬೇರೆ ಬೇರೆ ಅರ್ಥವನ್ನು ಕೊಡುತ್ತದೆ. ಉದಾಹರಣೆಗೆ-'ಆಟನಡೆ', 'ಜೀವನ ನಡೆ', 'ಮಾತು ನಡೆ', 'ವ್ಯಾಪಾರ ನಡೆ' ಇತ್ಯಾದಿ. ನಡಿ : ೧೦. ಸವಿಗೊಂಡನಹಳ್ಳಿಯೆಂದು ಹೆಸರು ನಡಿಯಬೇಕು (ಎಕ. VII, ಶಿವಮೊ. ೯೩-೩೩ ;?). ನೆಡೆ : ೨. ಸುರ್ಗಚಂದ್ರರುಯಿರೊ ಪರಿಯಂತ್ರ ನೆಡೆಯಬೇಕೆಂಯೆಂದು ಆ ಗ್ರಾಮವನು ಹುಗಿನು ಹೊಯಿಸಿ ಪಲಿಸಿಕೊಟರು (ಎಕ. VII, ಶಿವಮೊ. ೧೧೮-೩೪ ; 1558). ೧೭. ಬಾಳು ; ಬದುಕು : ಜನರು ಕೂಡಿ ನೆಡೆಯಬೇಕೆಂದು ನಾಗಸಮುದ್ರದವೆಂಬೊ ಗ್ರಾಮವನು ಹೆಸರಿಗಿ ಕಟಿಸಿ (ಎಕ. VII, ಶಿವಮೊ. ೧೧೮-೩೨ ; 1558).

ನಡೆನಡೆ (ದ್ವಿರುಕ್ತಿ) : ಸವಡ ಗಜಗಮನೆಯರ್ ಮುಗಿಲ ಮೇಲೆ ನಡೆವಾಡುವಾಕೆಗಳ್ ತವಾಗೆ ಧರಾಗಮನಂ ಪೊಸತಪ್ಪುದೆಂದವರ್ದಿರೆ ನಡೆನಡೆದು ನಡೆಯಲಾಱದೆ ಸುಟಿದರ್ (ಪಂಪಭಾ. ೭-೮೪) ; ನಡೆನಡೆದೊಂಬುವೇಡ ನಿನಗೇಕೆ ತಪಸ್ಸಿನ ಕಾತ್ರವೆಂದು ಪೇರ್ವಡೆ ಜಡಿದಟ್ಟ (ಧರ್ಮಾಮೃ. ೮-೮೪) ; ನಡೆನಡೆದು ನಿಂದಡಿಗಡಿಗೆ ನೆನೆವ (ಸಿದ್ಧರಾ. ೧-೩೬) ; ಕ್ರಿಯಾಸಮಭಿಹಾರಕ್ಕೆ – ನಡೆನಡೆಯೆಂದು ; ಇದಿರ್ಚಿದರ್ಚನೆ ಜಟಾಯು (ಶಮದ. ೧೯೫ ಪ್ರಯೋ) ; ಸಕಳೇಶನ ನಿರೂಪವಿದಕ್ಕೆ ನಡೆನಡೆ ಮಗನೆ ಹೋಹವೆನುತ್ತ (ಬಸಪು. ೪೭-೫೦) ; ತಿರುಹಿ ಗಾಲಿಯ ತೆಗೆದು ಮುಂಗೈಗೊಂಡು ನಡೆನಡೆದು ಅರಿಬಲವನಿಡೆ (ಸುಭ್ಯಾದ್ರೌ. ೬-೫೫). ನಡೆದಾಟ = ಓಡಾಟ ; ಅಲೆತ ; ಸಂಚಾರ : ಅತಿಯಾದ ನಡೆದಾಟದಿಂದ ಮೈಗೆ ಆಲಸ್ಯವಾಗಿದೆ (ರೂಢಿ). ನಡೆದಾಡಿಸು = ೧. ನಡೆಯುವಂತೆ ಮಾಡು ; ಓಡಾಡಿಸು : ಸಣ್ಣ ಮಗುವನ್ನು ಹೆಚ್ಚು ನಡೆದಾಡಿಸಬೇಡ (ರೂಢಿ). ೨. ನಡೆದುಕೊಳ್ಳುವಂತೆ ಮಾಡು : ವ್ಯವಹರಿಸುವಂತೆ ಮಾಡು : ಹುಡುಗರು ಆಸ್ತಿಗೆ ಅಧಿಕಾರಿಗಳಾಗಿ ಬಂದಾಗ ತಾವೇ ತಾವಾಗಿ ಸರ್ವಾಧಿಕಾರವನ್ನೂ ಸ್ವಾಧೀನಪಡಿಸಿಕೊಂಡು ಆ ಹುಡುಗರನ್ನು ಸ್ವೇಚ್ಛೆಯಂತೆ ನಡೆದಾಡಿಸಿಕೊಂಡದ್ದುಂಟು (ಇಪ್ಪಕ. ೩೦೫). ನಡೆದಾಡು = ಓಡಾಡು ; ಅಡ್ಡಾಡು : ಅರಸಂಚಮಬ್ ನಡೆದಾಡುತವೆ ತಾಯೊಡನೆ (ಸಾಳ್ವಭಾ. ೩-೯) ; ಮೇರು ನಡೆದಾಡೆ . . . ದಿನಕರ ಕಾರಿರುಳಾಗೆಸೆಯೆ ಸತಿಯರಂ ನಂಬುವರೇ (ನನ್ನಳ. ೩-೪೨) ; ಕಂಡಿತೆಗಂಗಳ ಭಾವಿನಿಯರು ನಡೆದಾಡುತಿರ್ದರು (ಅನ್ನರೂ. ೩-೧೧೮) ; ಹೆಚ್ಚು ನಡೆದಾಡಿ ಆಯಾಸ ಮಾಡಿಕೊಳ್ಳಬೇಡ (ರೂಢಿ). ನಡೆದುಕೊಳ್ಳು, ನಡಕೊಳ್ಳು = ೧. ವರ್ತಿಸು ; ವ್ಯವಹರಿಸು : ರಾಮನು ಯಾವಾಗಲೂ ಗುರುಹಿರಿಯರಲ್ಲಿ ವಿಧೇಯನಾಗಿಯೆ ನಡೆದುಕೊಳ್ಳುತ್ತಿದ್ದನು (ವಾಲ್ಮೀ. ೫೬) ; ಎಲ್ಲ ಪ್ರಜೆಗಳೂ ಇವರ ಅಪ್ಪಣೆಯ ಮೇರೆಗೆ ನಡಕೊಳ್ಳತಕ್ಕದ್ದು (ಮುಂಬಯು. ೫-೩). ೨. ವ್ರತ, ಪೂಜೆ ಮುಂತಾದುವನ್ನು ಆಚರಿಸಿ ಭಕ್ತಿಯನ್ನು ತೋರಿಸು : ಇವರು ಯಾವತ್ತು ಹಿಂದೂದೇವತೆಗಳಿಗೆ ನಡಕೊಳ್ಳುವರು (ಕಭಾಗ. ೧೦೫) ; ಪಥ್ಯ-ಉಪಚಾರವನ್ನು ಮಾಡಿದ್ದಾಯಿತು. ದೇವರು-ದಿಂಡರಿಗೆ ನಡಕೊಂಡದ್ದಾಯಿತು. ಏನೂ ಉಪಯೋಗವಾಗಲಿಲ್ಲ (ಹೊಸಕ್ಕ. ೧೮೪). ನಡೆದು ಬರು = ಮುಂದುವರಿ ; ಮುಂದೆ ಸಾಗು : ನಾನು ಸ್ಥಾಪಿಸಿರುವ ಧರ್ಮದಾರ್ಢ್ಯವು ಬಹುಕಾಲದವರೆಗೂ ನಡೆದುಬರುವುದು (ಕಗದ್ಯ. II, ೧೦). ನಡೆದೊವಲ ಪಾಪೆ = ಚಲಿಸುವ ತೊಗಲ ಬೊಂಬೆ ; ಶರೀರ ; ದೇಹ : ನಡೆದೊವ[ಪಾಠಾಂ. ಗ]ಲ ಪಾವೆ... ಘನರೋಗದಾಗರಂ ತಾನೆನಿಪೀಯೊಡಲಿದು ಕಾಲನ ತಿಂಗುಟಿ ಜಡವನುಜರ್ ನಿತ್ಯವೆಂದು ಮೆಯ್ಯಾಟಿದಿರ್ಪರ್ (ತ್ರಿಪುವಿ. ೩೩-೧೧೨).

[ ದೇ. ೮ ತಮಿ. ನಟ; ಮಲ. ಕೊಡ. ನಡ; ತೆಲು. ನಡಚು, ನಡುಚು; ಕೊಲಾ. ಅಡ್ಗ್; ನಾಯ್ಕಿ. ಅರ್ಗ್ ]

ನಡೆ$_2$ (ನಾ). ೧. (ಕಾಲಿನಿಂದ) ನಡೆಯುವಿಕೆ ; ನಡಗೆ ; ಚಲನೆ ; ಗಮನ : "ಪಂಕ್ರಮಂ ಪರಿಸರ್ಪವೆನೆ ನಡೆ" (ಮಂಗರಾ. ೧೩೦-೧೬) ; ಒರ್ವ[ನೊರ್ವ]ಳ ನಡೆಯು ನುಡಿಯು ಮುಡಿಯು ಗಾಂಪಿಂಗೆ ಮುಗುಳ್ನಗೆ ನಕ್ಕು ತನ್ನ ಕೆಳೆಯಂಗೆ ತೋಱೆ (ಪಂಪಭಾ. ೪-೯೩ವ) ; ಬಾಳ ಮೊನೆಯಂಬಿನ ತಿಂತಿಣಿಯೊಳ್ ತಗುಳ್ದು ಕಿಕ್ಕಿಱಿಗಿಱಿದರ್ದು ಕೊಳ್ಗುಳದೊಳಂ ನಡೆವೀ ನಡೆಗೆಂತು ನೋಂತೆಯೋ (ಪಂಪಭಾ. ೧೩-೫೨) ; ಕಡುಗೂರ್ಪಿಲ್ಲದ ಕರವಾಳ್ . . . ನಡೆಯಿಲ್ಲದ ಕರ್ತೆ ಮನಕ್ಕೆಡಂಬಡಂ ಮಾಟ್ಬ್ಯಮರ್ತಿಯಂ ಮಾಡುಗುಮೇ (ಆದಿಪು. ೬-೯೬) ; ಆವೆಡೆ ಹಂಸಗೀ ನಡೆಯು ಚೆಲ್ವನೆ ನೂಪುರದಿಂಚರು ಸ್ವರಂ ಜೇವೊಡೆದಂದಮಾಗೆ . . . ಬಂದಳದೊಂದು ಲೀಲೆಯಿಂ (ಮಲ್ಲಿಪು. ೪-೭೩) ; ಮಾರಾಳಂ ನಡೆಯೊಳುರುಪಿಕಂ ನಾದದೊಳ್ . . . ಭೃಂಗಂ ವಿಚಲನ್ನೀಲಾಳಕಾನೀಕದೊಳಮರ್ದೆಸೆಯಲ್ ಶೋಭಿಕುಂ ವಾರನಾರೀನಿಚಯಂ (ಉದ್ಭಟ. ೧೨-೪೩) ; ಬನದೊಳೆಡೆಯಾಡುವ ಸಬರಿಯರ ನಡೆಯನೇಡಿಸುವಂತೆ ಮೆಲ್ಲಡಿಯಿಡುವ ಪೆಣ್ಣಂಚೆಗಳ ಬಳಗಂಗಳ (ಕಬ್ಬಿಗ. ೧೮) ; ಮಾಯೆ ತನ್ನಂತೆ ನಡೆಯ ಕಲಿಸಿದಳಂಚೆವಿಂಡಿಗೆ ನುಡಿಯ ಕಲಿಸಿದಳರಗಿಳಿಗೆ (ಪ್ರಭುಲಿ. ೩-೩೨) ; ಅಂಚೆಯ ನಡೆಯನಿದಂ ತನತನುತುಂ ಮಂಚಲ್ಪಿಡಿವೊಳ್ನಡ (ಜಯುಶಾ. ೨-೨) ; ನಡೆ ಮಂದವಾಯ್ತು ನಡುಗಡಸಿತ್ತು ಬಡತನಂ ನುಡಿ ಮೆಲ್ಲನಾಯ್ತು ಕೆಳವೆಯ ಮಡಿಗಳಂ ಕಾವ ಮಡದಿಯರ್ಗೆ (ಭಾವಜಿಂ. ೨-೯). ೨. ಆಚರಣೆ ; ನಡವಳಿಕೆ ; ಆಚಾರ ; ಚರ್ಯೆ ; ಸಂಪ್ರದಾಯ : ಎನ್ನ ನಡೆಯೊಂದು ಪರಿ ಎನ್ನ ನುಡಿಯೊಂದು ಪರಿ . . . ನುಡಿಯ ತಕ್ಕ ನಡೆಯ ಕಂಡೊಡೆ ಕೂಡಲಸಂಗಮದೇವನೊಳಗಿರ್ಪನಯ್ಯಾ (ಬಸವ. ೩೦) ; ಪೊಡವಿಗಚ್ಚರಿ ನಿಮ್ಮ ಭಕ್ತಿಯ ನಡೆ ಸೊಗಸದೆಮಗೀ ಹಿರಿಯತನಗೆಡದೆ ಹೋಬವಡಿ ಸಾಕು (ಬಸಪು. ೫೫-೧೯) ; ಸಂತೋಷ ಪಾಣಾವ ನುಡಿ(ನಡೆ) ತತ್ವ ನಡೆ(ನುಡಿ) ಪಾವನ ಆತನ ಸುಳುಹು ವಸಂತಗಾಳಿ (ಸಿದ್ಧೇವ. ೧೫೫-೪೭೩) ; ನಿನ್ನ ನಡೆಯು ನಿನ್ನ ನುಡಿಯ ನಿನ್ನೊಳ್ಗೆ ಕಂಡು ನಿನ್ನ ಮುಂದೋದಿದೆನರಸಾ (ಶರಣ. ೨-೩೬) ; ನಡೆಯೊಳಗೆ ನುಡಿ ತುಂಬಿ ನುಡಿಯೊಳಗೆ ನಡೆ ತುಂಬಿ . . . ಲಿಂಗವ ಕೂಡಬಲ್ಲಾತನೇ ಶರಣ ನೋಡಾ (ಅಪಂಡಿ. ೦೪೬-೦೩೯) ; ಸತ್ಯರ ನುಡಿ ತೀರ್ಥ ನಿತ್ಯರ ನಡೆ ತೀರ್ಥ ಉತ್ತಮರ ಸಂಗವದು ತೀರ್ಥ ಹರಿವ ನೀರೆತ್ತಣದು ತೀರ್ಥ (ಸರ್ವಜ್ಞ. ೮೨೧) ; ಪೆತ್ತರಂ ಸೋಲಿಪಾ ನಲ್ಲಮಗನೊಳ್ಪುಗುಣಂಗಳಿಂ ಮಂಗಿಲೊಲ್ವರ್ ನಡೆಯಿಂ ನೀರಿಂ ಲೋಗರು ನಲಮೇರಿಪಂ (ಸೌನಂದ. ೨-೩೦) ; ಅವರ ಕಡೇಲಿ ಏನು ನಡೆ ಇದೆಯೋ ಹಾಗೆಯೇ ಮಾಡಲಿ (ಬೆಳುವ. ೨೦೬) ; ನುಡಿ ಪುರಾತನದು ನಡೆ ಕಿರಾತನದು (ಗಾದೆ). ೩. ಶೀಲ ; ನಡತೆ : ಎನ್ನಲ್ಲಿ ನಡೆಯಿಲ್ಲಾಗಿ ನಾನು ಭಕ್ತನೆಂತಪ್ಪೆನಯ್ಯಾ (ಬಸವ. ೨೯೧) ; ಹುಡುಗಿಯ ಗುಣವನು ಜನರು ನಿರ್ಣಯಿಪರು ತಾಯಿಯ ನಡೆಯನು

ನೋಡಿ (ಇಂದ್ರಾಶ. ೨೦೨-೩೯). ೪. ಮುಂದುವರಿಕೆ; ಮುನ್ನಡೆ; ಪ್ರಗತಿ : ಜ್ಞಾನವಿಜ್ಞಾನಕ್ಷೇತ್ರಗಳಲ್ಲಿ ಹಲವು ಪ್ರಯೋಗಗಳನ್ನು ನಡೆಸಿ ಪಾಶ್ಚಾತ್ಯ ಜಗತ್ತು ಅಣುಬಾಂಬನ್ನು ಕಂಡುಹಿಡಿದಿದೆ. ಇಲ್ಲಿಗೆ ಪಾಶ್ಚಾತ್ಯಜಗತ್ತಿನ ನಡೆ ನಿಂತಿತು (ಭಾರದ. ೩೮೦) ; ನಮ್ಮ ಸಯ್ಪಿನ ಬಿದಿಯು ನಡೆಗೆ ತೊಡ ರೊದಗಡೊಲ್ ಸರ್ವಮಂ ಪುರುಷಪ್ರಯತ್ನಮಂ ಮಾಳ್ಪೆ ನಾವ್ ! (ಚಂದ್ರಸ.೧೩-೨೧). ೫. ಪ್ರಯಾಣ; ಸಂಚಾರ: "ನಡೆ ಸಿದ್ಧಯಾತ್ರಯಕನ್ಯ" (ಬುಂಗರಾ. ೦೨೧-೩). ೬. ಎತ್ತುಗಳು ಒಂದು ಸಲ ಒಟ್ಟಿಗೆ (ಒಂದು ರಾತ್ರಿಯಲ್ಲಿ) ನಡೆಯುವಷ್ಟು ದಾರಿ; ಸುಮಾರು ಮೂವತ್ತು ಮೈಲಿ: ಈ ಊರಿನಿಂದ ಹೊರಟರೆ ನಮ್ಮ ಎತ್ತಿನ ಗಾಡಿಯು ಎರಡು ನಡೆಯಲ್ಲಿ ತುಮಕೂರು ಸೇರಬಹುದು (ರೂಢಿ). ೭. ದಾರಿ; ಹಾದಿ. 'ನಡೆದಾಳಿ'. ಪರಾ. ೮. ದನಕರು, ಕಾಲ್ನಡೆ ಇತ್ಯಾದಿ : ಮಠದ ಧರ್ಮಕೆ ಹೇರುವ ಮಾನ್ಯದ ಎತ್ತು ನಡೆ ೫೦ ಅಯಿವತ್ತುಯೆತ್ತಿನ ಮಾನ್ಯವನೂ ಶಿವಾರ್ಪಿತ ವಾಗಿ ಬಿಟ್ಟಿಧೇವೆ (ಎಕ. VII, ಶಿವಮೊ. ೨೮-೧೩ ; 1670) ; ಭಾರಾವಮಾರ್ಗದ ವೈರ್ರಿಗೆ ಅರವಾನೆ ಕಟ್ಟಲಿ ನಿಂತ್ರ ನಡೆ ೧ ವಂದಕ್ಕೆ ಹಂ (ಎಕ. X (8), ಕೋಲಾರ. ೨೫೮-೧೬ ; 1761) ; ಯಾ ಹುಳಿಯಾರ ಸುಂಕದಲ್ಲಿ ನಾನಾ ದಿನಶಿನ ನಡೆಗಳಿಗೆ ಬದ್ದನೆ ಪ್ರಕಾರಾ ಲೆಕ್ಕಾ ಹಾಕಿಕೊಳುತ್ತಯಿದ್ದಾರೊ ಅದೆ ಪ್ರಕಾರಕ್ಕೆ ಬದ್ದವೆ ನಿಂತ್ರ ನಡೆ ೧ಕ್ಕೆ ಕಂಟಿರಾಯಿ ೮೦೦೦೦ (ಎಕ. XVI, ಚಿಕ್ಕನಾ. ೯೦-೦೬ ; 1802) ; ಒಡಕು ಕೊಟ್ಟಿಗೆ ಹಿಡಿಯಲಾರದು, ನಡೆಗಳಿಪ್ಪತ್ತಾದವು (ಕಏಪು. ೧೮-೦೦). 'ಕಾಲ್ನಡೆ' ಪರಾ. ೯. (ಕೆಲವು ವಿಶೇಷ ಸಂದರ್ಭಗಳಲ್ಲಿ) ನಡೆಯುವ ದಾರಿಗೆ ಹಾಕುವ ಹಾಸು: ನಡೆಮಡಿ ; ಹಡದಿ (ಉಕ) : ವಿಳಸತ್ಕಾಂತಂ ವಸಂತಂ ತಳರದಿರೆ ವನಶ್ರೀ ಮುದಂಬೆತ್ತು ಮುಕ್ತಾಕುಳದಿಂ ನೀಳ್ದುದಿಂದಿಕ್ಕಿದ ನಡೆಗಳೊ ಪೇಟಿಂತಿ ಮೆಂಬಂದದಿಂ ಕಣ್ಗೊಳಿಸುತ್ತಿರ್ದಪ್ಪವಂತಾ ವನದೊಳಗೇವ್ರೋಯ್ಲಿಂದ ಮಲ್ಲಿಕಾ ನವ್ಯಾಮಳಪುಷ್ಪಂಗಳ್ ಜನುಂಗುತ್ತಬಗಿದ [ಮದ]ಭೃಂಗಾವಳೀ ಸಂಗದಿಂದಂ (ಕುಸುಮಾ. ೬-೦೦೪). ೧೦. ಗದ್ಯ ಅಥವಾ ಪದ್ಯದ ಲಯ,-ಓಟ : ಅವರ ಕಾವ್ಯದ ನಡೆ ಇತರರ ಕಾವ್ಯದ ರೀತಿಗಿಂತ ಭಿನ್ನವಾಗಿದೆ (ರೂಢಿ). ೧೧. ಒಂದು ಬಾರಿ ಹೊರುವಷ್ಟು ಪ್ರಮಾಣ; ಒಂದು ಹೊರೆ,-ಹೇರು; ಸಾರಿಗೆ (ಉಕ) : ಕಲಿನಾಥ ದೇವರ ಗಂಧ ಕಸ್ತುರಿಗೆ ಎಲೆಯ ನಡೆಗೆ ತಾರ ೧ ನು ಬಿಟ್ಟರು (ಸೌಇಇ. IX-1, ೩೪೪-೪೭ ; 1292) ; ಎತ್ತಿನ ಮಾನ್ಯ ಹದಿನೈದು ನಡೆಲು ಅಡಕೆ ಮೆಣಸು (ಎಕ. VIII, ತೀರ್ಥಹ. ೭೩-೨೨ ; 1674). ತೆಂಗಿನಕಾಯಿ, ನಡೆ ೧೧೧೦೮ಕ್ಕೆ ವಕ್ಕಾ ಸಾವಿರ ಅಂತ ತಿಳಿದು ಅದರ ಮೇಲೆ ಧಾರಣೆ ಇರುತ್ತದೆ (ಮುಂಬವ್ಯಾ. ೨೮೩) ; ರೈತ ಬೆಳಗಿನಿಂದ ಐದು ನಡೆ ಗೊಬ್ಬರ ಹೇರಿದ್ದಾನೆ. (ರೂಢಿ). ೧೨. [ನಾಟ್ಯ] ತಟ್ಟು, ಮೆಟ್ಟು, ನಾಟು, ತಟ್ಟುಮೆಟ್ಟು, ಕುದಿತ ಮೆಟ್ಟು, ಮೈ, ಮುಡಿ, ಜಾತಿ, ಅರುಧಿ ಮತ್ತು ನಡೆ ಎಂಬ ಹತ್ತು ವಿಧವಾದ ಅಡವುಗಳಲ್ಲಿ ಒಂದು : ಮೊಗದೊಳಿನಗೆದೋಱೆ ಬಿನ್ನಣದ ನಡೆ ಸೋಲಪುಡಿಳಾಯುಧರು ಕಾಲರವೆಯ ಚೆಲ್ವಡರೆ ದೇಶಿಯಮಾಡು ತಿರ್ದಳು ವಿಲಾಸವಿಭ್ರಮಹಾವಭಾವಮೆಸೆಯೆ (ರೇವಣ. ೩೨-೯೯).

**ನಡೆನಡೆ₂** (ದ್ವಿರುಕ್ತಿ) : ನಡೆನಡೆಗೆ ಬಾವುಲಿಯ ಪೊಡೆಯ ಕೊಡರುಗಳು ಫಲಫಲನೆ ಮೊರೆಯಲು ಬಿಡದೆ ತಾಟಪ ಹಲಗೆ ಫಂಫಂಫಲಿಗು ಫಲಿಲೆನಲು (ಭಸಪು. ೦೩-೦೬). **ನಡೆನುಡಿ** = ೧. ನಡಗೆ ಮತ್ತು ಮಾತು : ಕೈಕಾಲ್ ನಡೆನುಡಿಯುಳ್ಳ ಮನುಷ್ಯನಿಂದೆಂತುಂ ಕಾರ್ಯಮುಂಟು (ಪಂಚತಂ. ೩೪-೦೩) ; ನಡೆನುಡಿ ಬಳಲ್ಕೆ ಮುನ್ನಂ ಕಡುಚೆನ್ನೆಯ ರೂಪುಗುಂಡ ಬಳಿಕಂ ನಡೆಯರ್ ನುಡಿಯರ್ ನೀರಂ ಕುಡಿಯರ್ ನಡೆ ನೋಡುತಿರ್ಪರತನುಶಿಥಿಲರ್ ಪಥಿಕರ್ (೧೧೮೪. ೨-೨೩). ಪಾಲಿಸಿದಳಿಂತು ನಡೆನುಡಿಗಳಂ ಕಲಿಪಲ್ಲಿ ಪರಿಯುತಮಾ ಶಿಶುವನು (ಕೃಮಿಭಾ. ೨೮-೦೯). ೨. ನಡತೆ; ನಡವಳಿಕೆ; ಆಚಾರ : ಸಂಪ್ರದಾಯ ; ನಡೆನುಡಿ ಹುಸಿಯುಂಟಾದರೆ ಕೂಡಲಸಂಗನ ತೋಱದ ಚೆನ್ನಬಸವಣ್ಣನಾಣೆ (ಬಸವ. ೭೦೮) ; ಶುಕ್ಲಶೋಣಿತದಿಂದ ತನುಮನ ಜನಿಸಿತ್ತು ತನುಮನದಿಂದ ನಡೆನುಡಿ ಜನಿಸಿತ್ತು (ಅದವ. ೨೬-೮೦) ; ನಡೆನುಡಿಯೊಳಭವನೆಂದೆನಿಸಿರ್ಪನಾ ಪುರಕೆ (ತಿರುಕ. ಚೀ. ೪-೩) : ದೃ ಢ ಭಾ ವ ವೇ ತಕ್ಕವೆದೆಗುಡದೆ ಬಲಿತವನ ನಡೆನುಡಿದು ಬಗೆದ ಸರಿನೂಲಿಮಂತೆ ಮೃಡನೊಳು ತೊಡಂಕಿ ಬಿಡದಡರ್ದುದೆನಲಾಹ ಸಡಿಫಡ ಶರಣನಿರವನಾಮಂ ಬಣ್ಣಿಪಂ (ಸಾಮಂತ. ೧-೬೯) ; ನಡೆನುಡಿ ಭಕ್ತಿ ವಸ್ತುಗಳ ಕೊಳ್ಳಿಡುಮಂಜಕೆ ಕಾಯಶುದ್ಧಿ ಮಾಟ್ಪುಡುಮೆನಿಸಿರ್ಪ ಪಂಚಸವಿತಿಸ್ಥಿತಿಯುಂ ತಳೆದು (ಅನಂಪು. ೪-೦೨) ; ವ್ಯಕ್ತಿಯ ನಡೆನುಡಿಗಳು, ಮನೋಭಾವಗಳು, ದೃಷ್ಟಿಧ್ಯೇಯಗಳು . . . ಇವೆಲ್ಲದರ ಮೇಲೂ ಬುದ್ಧಿಶಕ್ತಿ ತನ್ನ ನಿರ್ದಿಷ್ಟ ಪ್ರಭಾವವನ್ನು ಬೀರುತ್ತದೆ (ಶಿಕ್ಷದ. ೬೧೨). **ನಡೆನುಡಿಮುಗ್ಧ** = ಆಚಾರ, ವಿಚಾರಗಳಲ್ಲಿ ಮುಗ್ಧನಾದವನು,-ನಿಷ್ಕಪಟಿಯಾದವನು; ಶುದ್ಧವಾದ ಚಾರಿತ್ರವುಳ್ಳವನು: ಕಂಗಳ ನೋಟ ಲಿಂಗಕ್ಕೆ ಭಾರ ಅಂಗಜೀವಿಗಳ ಕೂಡೆ ಕೂಡುವನೆ ಶರಣನು ನಡೆನುಡಿಮುಗ್ಧ ಗುಹೇಶ್ವರ ನಿಮ್ಮ ಶರಣನು (ಅವಕಂ. ೮೦-೩೬೪). **ನಡೆಮಾಡು** = ೧. ಚಲಿಸು ; ಸುತ್ತಾಡು ; ಸುತ್ತಲೂ ಹಾಯು : ಕೃತಕದ ಕಲ್ ನಡೆಯಾಡೆ ಲತಾಂಗಿ ಕಂಡಳುಜ್ಜ್ವಳಕಳಶಂಗಳು ಘನರಸಾ ಕಳಿತಂಗಳನುನ್ನತಂಗಳಂ (ಅನಂಪು. ೪-೦೦೮). ೨. ನಡೆದುಕೊಳ್ಳು ; ಆಚರಿಸು ; ವ್ಯವಹರಿಸು : ಮದನಕದಳೀವನಕುಠಾರರುಂ . . . ಪಾಪಾಟವೀಪಾವಕರುಮಪ್ಪ ಶ್ರೀಪದ್ಮಪ್ರಭಮಲಧಾರಿದೇವರು ತಪೋನಿಷ್ಠೆ ನಡೆಯಾಡಿ (ಸೌಇಇ. IX-1, ೨೬೮-೨೯ ; 1185).

[ <ನಡೆ₁/ತಮಿ. ನಟೈ ; ಮಲ. ನಡ ; ತುಳು. ನಡೆ, ನಡಿ ; ತೆಲು. ನಡ ]

**ನಡೆ₂** (ಅ). ಚನ್ನಾಗಿ ; ವಿಶೇಷವಾಗಿ ; ಅತಿಶಯವಾಗಿ : ಎಡೆಯಱದು ತೊಳಗುವಂತಿರೆ ಸಿಡಿಲ್ದು ಪೋಯ್ತುಟ್ಟುದಾಗಳಂಗಜಕಲೆಯೊಳ್ ನಡೆ ಮೊಗ ಮಿಕ್ಕು ಬಯಂಗಿಡದೊಡನುಲಿದುವು ಬೆರಲ ಕೊರಲ ನಾಲಗೆಯುಲಿಗಳ್ (ಕಾವ್ಯಸಾ. ೬೩೮ ಟಿಪ್ಪಣಿ); ತೀಡೆ ತುಷಾರವಾಯು ನಡೆ ಕೋಡಿ ಕಡಂಗಿ ಜಲಕ್ರೀಡೆಯೊಳಂತೆ ಸೇಡುವಡೆದೊಪ್ಪಿದವೊಲ್ (ಲೀಲಾವ. ೧೪-೦೬) ; ತದನಸರದೊಳೆ ನೆಲದ ಪತಿ ಪೊಸಮೆನ್ನಂ ನಡೆ ಬಗ್ಗಿಸುತಂ . . . ಅತಿಶಯ ಚತುರೆಯನಿರದಾರೋಹಣಾಮಂ ವಿಗೆ ಮಾಡುತಿರಲ್ (ಹಾಲಾಸ್ಯ. ೩-೧೨-೩೬); ನಡೆ ವಿಡುಕದ ಚಮರದ ನೀಳ್ದೊಡಲೆತ್ತಿದ ಕಿವಿಯು ತಮ್ಮ ಪದರಜಮುಂ ಪ್ರಾಯ್ದೊಡೆ ಸಿಲ್ಕದಶ್ವಗಳ್ ಧೀಂಕಿಡುವುವು (ಜಗನ್ನಾ. ೪-೮). 'ನಾಡೆ' ಪರಾ.

**ನಡೆ ನೋಟ** = ಚೆನ್ನಾದ ನೋಟ ; ಅತಿಶಯವಾದ ದೃಷ್ಟಿ: ನಡೆನೋಟದಿಂದೆ ಬೆಮರೂ ಪಡೆದು ಮನೋಭವನ ಮಸಮುವಂ ನನೆವಿಲ್ಲಂ ಪಿಡಿದಿಸುವ ಕೆಯ್ಮಮಂ ಕೇಳ್ ನಡುಗಿಸದೊಡೆ ನಿನ್ನ ಕೆಳದಿಯರ್ಕಲ್ಲಂ ಕೆಳದೀ (ಲೀಲಾವ. ೧೧-೮೨). **ನಡೆ ನೋಡು** = ಚೆನ್ನಾಗಿ ನೋಡು ; ನಟ್ಟ ದೃಷ್ಟಿಯಿಂದ ನೋಡು : ನಿಡಿಯಲಗಣ್ಗಳ ಬೆಡಂಗಿಯರ್ಕಳನರ್ಕಂ ನಡೆ ನೋಡಿ ಪೋಗಲಾಱದೆ ತಡೆಯೆ ಪಗಲ್ ಪಿರಿಯವಪ್ಪುವಾ ಪುರವರದೊಳ್ (ಕಾವ್ಯಸಾ. ೦೬೮ ಟಿಪ್ಪಣಿ) ; ಮೆಲ್ಲನೆ ಮೃಗಮೊಂದು ಸಾರ್ದು ನೆಱನಂ ನಡೆ ನೋಡಿ ನರೇಂದ್ರನೆಚ್ಚು ಭೋಂಕನೆ ಮೃಗಚಾರಿಯಂ ತನಗೆ ಮಾಣದೆ ತಂದನದೊಂದು ಮಾರಿಯುಂ (ಪಂಚತಂ. ೦-೭೦೧) ; ಎಳಲೆಂಡಿನ್ನೆಲೆಬಾಡ ದೊಳೆಳಸಿರೆ ನಡೆ ನೋಡಿ ಸೋಲ್ತು ಮೋಲ್ಪಂದ್ರಂ ಮಾರ್ಪೊಳೆವ ನೆವದಿಂ ಪೊರಳ್ದಂ ಬುಳಿಯುಡರಸಚಿತ್ರರತ್ನಕುಟ್ಟಿಮತಳದೊಳ್ (ಕಾದಂಪೂ. ೩೦೪) ; ನಡೆ ನೋಟ್ಟರ ಕಡೆಗಣ್ಣಂ ಕಡುನಲ್ಲರ ಮನವುಮೊಡನೆ ಪೊತ್ತುವು ಪುರದೊಳ್ ಮಡದಿಯರ ಮೊಲೆಯನಲ್ಲದೊಡುಡಿಯುವ ಬಳುವಳಿಕವಡೆದ ಬಡನಡು ಭರದಿಂ (ಅರ್ಜನೀ. ೪-೨೨); ಕೃತಕಗಿರಿಯೊಳ್ ನವಿಲೆಟ್ಟಾಡುವುದೂ

ಪಥಿಕರ್ ನಡೆ ನೋಡುವರಿರ್ದೆ ಥಕ್ಕೆವಾಜಿಸುತ್ತಿರ್ಪಿನೆಗಂ (ವರ್ಧಪು. ೨-೨೨) ; ತೊವಲನುಗಿದು ಕರುಳ ತೊಡಂಕಂ ಬಿಡಿಸಿ ನಡೆ ನೋಟ್ಪನೊಳಗೆಲು ಪಡಗಿರ್ಪುದು ಜೀವನಿರ್ಪೂಡಲ್ಲಿಗೆಪೋದು (ಯಶೋಚ. ೪-೧೯) ; ಕುಸುಮ ಮಾಲೆಯ ಶಿರುಹುತೆತ್ತಿದ ಮುಸುಡಿನರೆನೋಟದಲಿ ಲಜ್ಜೆಯ ಬೆಸುಗೆಯಲಿ ನಡೆ[ಪಾಠಾಂ. ನಡು³, ಎಗೆ]ನೋಡುತಿರ್ದಳು ಸೀತೆ ರಘುಪತಿಯ (ತೊರರಾ. ೧-೦೫-೩೯) ; ನಡೆ ನೋಡಿ ನಲವಿಂದ ಹರಸಿದವರು ಮತ್ತೊಡನೆ ಲಾಲಿಸಿದರಂಬರಕೆ (ಭರತ. ೩-೧೨೯) ; ಜನಪತಿಯ ವದನಮಂ ಕಣ್ಗೊನೆಯಿಂ ನಡೆ ನೋಡಿ ನಾಡೆ ಮುದಮಂ ತಳೆದರ್ (ರಾಜೀ. ೪-೬).

**ನಡೆಕೆಯ್.?** (ಕ್ರಿ). (?) : ಎಡೆಪಱಿಗೀ ನಡೆಕೆಯ್ದು ತಪಂ ಸಯ್ಯಮ ಮಾನ್ಯೊಳತ್ತೂರ ಸಂಘ × × ವಡೆ ಕೊಱದಿನ್ತು ಮಾಟ್ಸುದಿದು (ಎಕ. II, ೯೩-೧ ; ಕು. 700). [ ? ]

**ನಡೆಕೋಲು** 'ನಡೆಗೋಲು' ನೋ.

**ನಡೆಗ** (ನಾ). ೧. ನಡೆಯುವವನು ; ನಡೆಗಾರ : "ಕಸನ್, ಕಸಕ, ಈ ೨ ನಡೆಗಂ" (ಶಾಕಿಕ್ಕ.೦೫೦). ೨. ಒಳ್ಳೆಯ ನಡಗೆಯುಳ್ಳ ಒಂದು ಬಗೆಯ ಕಂದುರೆ ; ನಡೆಗ ನಾಗರ ಮಱ ಮಿಡಿವ ಚನ್ನಿಗರ ಮುಂಗುಡಿಯುಲ್ಲೇಖುವ ಮುದ್ದುಮೊಗದ ಕಡುರಭಸದ ಕಾಡಿಗೆಗಣ್ಣ ತೇಜಿಯ ಪೊಡವಿಪರಂಗೆ ತೋಱಿದರು (ಅಂಜದ. ೬-೮೪) ; ನಡೆಗನನೇಱ ಮೇಳದವಳಂ ಪೆಱಗೇಱಿಸಿ ಕೊಂಡು ಪಕ್ಕದೊಳ್ ಗಡಣಿಸಿ ಮೇಳದೊಳ್ ನಗಸುತಂ ಬರೆವಾದಿಗೆ ಗೆಂಟುವೋಗಿ (ಸೂಕ್ತಿಸು. ೦೨-೩೬). [ ನಡೆ$_1$ + -ಗ$_2$ ]

**ನಡೆಗಲ್,** ನಡೆಗಲಿ$_1$ (ಕ್ರಿ). ನಡಗೆಯನ್ನು ಕಲಿ ; ಓಡಾಡಲು ಕಲಿತುಕೊಳ್ಳು : ಆ ಬಾಲಕಂ ಬಾಲದುಡಿಗೆಗಳಂ ತೊಟ್ಟು ನಡೆಗಲ್ತೊಂದು ದಿವಸಂ ಗೋವ್ರಜಂಗಳೊಳ್ ಸೋಂಕುವುದನಾಂ ಕಂಡು (ಪಂಚತಂ.೦೭೭-೯) ; ನಡೆಗಲ್ವಂದುಂ ಬಿಣ್ಪಂ ಕೊಡೆನೆಗೆದಪುದುರ್ವಿಯೆಂದು ವಾಸುಗಿ ಪಲವುಂ ಪೆಡೆಯುಂ ಶಿಶುನಡೆಪೆಡೆಯೊಳ್ ಪಡೆದಂತು ಸಹಸ್ರಫಣನೆನಲ್ ಪೆಸರ್ವಡೆದುಂ (ಪಂಚಾಮೂ. ೩-೦೨೯) ; ದೃಢಚಿತ್ತಂ ಗುಣನಿಳಯಂ ಕಡುಗಲಿ ಕಿಱಯಂದು ದಿವ್ಯಜಿನಮುನಿಗಳ ಮೆಲ್ಲಡಿಯಂ ಪಿಡಿದು ತಳರ್ನಡೆ ನಡೆಗಲ್ತಂ ಭವ್ಯವನಜ ವನಕಳಹಂಸಂ (ಧರ್ಮಾಮೃ.೭-೦೩) ; ನಡೆಗಲ್ವಲ್ಲಿಯೆ ಧರ್ಮದಲ್ಲಿ ನಡೆಯಲ್ ಕಲ್ತಂ (ಎಕ. V, ಹಾಸನ. ೭೨-೩೩ ; 1160) ; (ಶಾಸಮಂ. ೬೧೦ ನೋ) ; ನಡೆಗಲ್ವಂದೆ ತಳರ್ನಡೆ ನಡೆಯಿಸಿದುಂ ನೃಪಕುಮಾರನೆಳೆಯಂ ಬಿಣ್ಪಂ ನುಡಿಗಲಂದೆ ತೊದಳ್ನುಡಿ ನುಡಿಯಿಸಿದುಂ ತನಗೆ ಸೋಲ್ತ ವಾಕ್ಕನ್ನಿಕೆಯಂ (ಅರ್ಧನೇ. ೨-೩೧) ; ವಿಚಾರಿಪಂತಿದು ನಡೆಗಲ್ತು ಸಂಚರಿಪ ಮೇಚಕಶೈಲಮೊ . . . ಪೇಳೆನೆ ತೋಱದುದಾ ವರಾಹಕಂ (ಕಬ್ಬಿಗ. ೪-೩). **ನಡೆಗಲಿ$_1$** : ಅಂಬೆಗಾಲಿಟ್ಟು ನಡೆಗಲಿತನು ಶ್ರಾವಕರ ಗಡಣಮಾರಣ್ಯದಾವಾನಲ ವೃಢಭಕ್ತ ಪಡೆದರ್ಗತಿಯನೀವೃತಿರ್ದ (ಅಬ್ಬಲೂ. ೨-೫೩).

[ ನಡೆ$_2$ + ಕಲ್$_1$ ]

**ನಡೆಗಲಿ$_1$** 'ನಡೆಗಲ್' ನೋ.

**ನಡೆಗಲಿ$_2$** (ನಾ). ಆಕ್ರಮಣ ನಡೆಸುವ ಶೂರ ; ಮುನ್ನುಗ್ಗುವ ವೀರ : ಬೇಡಿದರ್ಗೆ ಬೇಡಿತಂ ಕೊಟ್ಟು ಬಂದಿಱವ ಕಸವರಗಲಿಗಳುಮಂ ಮತ್ತಮಣ್ಣೆ ನಡೆದಿಱವ ನಡೆಗಲಿಗಳುಮಂ ನೋಡಿ (ಗದಾಯು. ೯-೩೪ ವ).

[ ನಡೆ$_1$ + ಕಲಿ$_2$ ]

**ನಡೆಗಲಿಸು** (ಕ್ರಿ). ನಡಗೆಯನ್ನು ಕಲಿಸು ; ನಡೆಯುವುದನ್ನು ಹೇಳಿ ಕೊಡು : ನಡೆಗಲಿಸುತ್ತುಮಂಚೆಗಳನೋದಿಸುತುಂ ಗಿಳಿಯಂ ಪಿಕಕ್ಕೆ ಮಾವಿಂಡಿಗಳನಿಕ್ಕುತುಂ . . . ನಿರುತರಂ ತೊಲಗದಿರ್ಪುದು ಪೌರವಿಲಾಸಿನೀ ಜನಂ (ಮಲ್ಲಿಪು. ೨-೩೯). [ ನಡೆ$_2$ + ಕಲಿಸು$_1$ ]

**ನಡೆಗಟ್ಟಿ** (ನಾ). ಹೇರನ್ನು ಹೊರುವ ಕತ್ತೆ : ಭಾರವನ್ನು ಹೊತ್ತು ನಡೆಯಂವ ಕತ್ತೆ : ನಡೆಗಟ್ಟಿಗಳನಿರ್ಬರ್ಗೆ ಮೇಱಲ್ ಕೊಟ್ಟು ಪಿರಿದಾಳಂ ನೆರಂಬೇಟ್ದು ಕಿಱದುತರಂ ಕಟ್ಟುಪುತ್ತುಂ ಬಂದು (ಸುಕುಮಾ. ೨-೫೯ ವ).

[ ನಡೆ$_1$ + ಕಟ್ಟಿ ]

**ನಡೆಗಾಣ್** (ಕ್ರಿ). ೧. ನಡಗೆಯನ್ನು ನೋಡು : ನಡೆಗಂಡು ಕವಿವ ಕಳಹಂಸೆಯಂ ಜಡಿವ ಸವಿನುಡಿಗೇಳ್ದು ಮುತ್ತುವರಗಿಳಿಗಳಂ , ಕೊಡಹಿ (ಹದಿಬಾ. ೪-೩೦). ೨. ನಡವಳಿಕೆಯನ್ನು ತಿಳಿ ; ಆಚಾರ ವ್ಯವಹಾರ ಗಳನ್ನು ತಿಳಿದುಕೊಳ್ಳು ; ಸಂಪ್ರದಾಯವನ್ನು ಅರಿತುಕೊಳ್ಳು : ಕಡೆಯ ದಿನದೊಳು ಮೂಱನೆಯ ಜಾವದೊಳೆಲ್ಲ ಕಡೆಯಿಂದ ಕೂಡಿದ ಪ್ರಜೆಗೆ ನಡೆಗಂಡು ಸಂಘಪೂಜೆಯ ಮಾಡಲಾ ಚಕ್ರಿ ತೊಡಗಿದನೇನ ಬಣ್ಣಿಪೆನು (ಭರತ. ೭೧-೧೦೦). [ ನಡೆ$_2$ + ಕಾಣ್ ]

**ನಡೆಗಿಡು** 'ನಡೆಗೆಡು' ನೋ.

**ನಡೆಗುಱ** (ನಾ). (ಗುಂಪಿನಲ್ಲಿ) ಮುಂದಕ್ಕೆ ಹೋಗುವ ಕುರಿ : ಕೊಱದು ತೆಱಡೆಗೊಳ್ ಕಾಯ್ದು ಕೋದ ಸಂಕಲೆಯಿಂದೆ ಕೊಱದು ಕಿವಿಯೊಳ್ ಕೊಱದು ಚಿಬುಕದೊಳ್ ನೇಣಿಂದೆ ನಡೆಗುಱಗಳಂ ಮಾಡಿ ಕೈಯನೆಚ್ಚು ವರಿರದೆ ನಡೆಯಿಸೆಚ್ಚಿದರ್ ಕಾಲ್ಗಳನಂದು ಬಡದಿರದೆ ತಲೆಗಳಂ ತುದಿ ಮೂಗನೆಚ್ಚು ಕಿಡಪುವರಹೋ (ಸಾನಂದ. ೪-೧೮೯ ರಗಳೆ).

[ ನಡೆ$_1$ + ಕುಱ$_2$ ]

**ನಡೆಗೆಡಿಸು** (ಕ್ರಿ). ನಡಗೆಯನ್ನು ನಿಲ್ಲಿಸು ; ಚಲನೆಯನ್ನು ತಪ್ಪಿಸು,- ಅಡ್ಡಿಪಡಿಸು ; ನಿಲ್ಲುವಂತೆ ಮಾಡು : ವಿಟರ ಮೇಳಂಗಳಂ ಚೇಟಿಯರ ಗಡಣದಿಂ . . . ವಾರನಾರೀಜನಂ ಕಟಕದೊಳ್ಕಮುಕರ ನಡೆಗೆಡಿಸು ತೊಗ್ಗಿನಿಂ ಪೊಱಮಟ್ಟು ಬರುತಿರ್ದುದು (ಕ್ರಮಿಥಾ. ೭-೬).

[ ನಡೆ$_2$ + ಕೆಡಿಸು$_1$ ]

**ನಡೆಗೆಡು,** ನಡೆಗಿಡು (ಕ್ರಿ). ೧. ನಡೆಯಲಾರದಾಗು ; ಚಲನೆ ಇಲ್ಲ ವಾಗು; ಮುಂದು ಹೋಗಲು ಆಗದಿರು : ತೊಡೆ ದಡದಡಿಸೆ ನಡೆಗೆಟ್ಟು ಕಟಲುಲಿಗೆ ಬಟಸಲ್ದ ಕಳಹಂಸಮಂಡಲಕ್ಕಯಶಮಂ ಮಾಡಿಸಿಯುಂ. . . ತತ್ಕಾಂತೆ ಒಂದೆರಡಡಿಯನಿಡುವಲ್ಲಿ (ಕಾದಂಬ. ೩೬) ; ನಭಮೆತ್ತವೋದಂದೆ ನಿಸಲ್ನಡೆಗೆಟ್ಟುದು ಗಾಳಿ ರೂಪುಗೆಟ್ಟುದು ದೆಸೆ (ಜಗವಿ. ೭-೮೦) ; ಕಳಹಂಸ ಮಾಲೆ ಕಾಸಾರದೊಳಂಜಿ ಪೊಕ್ಕುವು ರಥಾಂಗರಥಂ ನಡೆಗೆಟ್ಟುವದ್ಭುತಂ (ಗಿರಿಕ. ೮-೦೦) ; ನಂಜುಮುಳ್ಳಡಿಯನು ನಟ್ಟು ನಡೆಗೆಟ್ಟನೋ (ಸಿದ್ಧರಾ. ೨-೪೫) ; ಮೆಲ್ಲಡಿಯ ಇಡಲಱಯದಿನ್ನೆನಿತು ಕಾನನದೆಡೆಯೆನುತ ಬೆಸ ಗೊಂಬಳೀ ವರಿ ನಡೆನಡೆದು ನಡೆಗೆಟ್ಟು ನೆಮ್ಮಿದಳಾತ್ಮವಲ್ಲಭನ (ತೊರರಾ. ೨-೪-೧೭) ; ಆರು ಕರುಣಿಸುವವರು ನಡೆಗೆಟ್ಟಡವಿಯಲಿ ಬೀಳೆ (ಶಿಖಾಗ. ೩-೧೪-೧೨) ; ಜಡೆಗನ ತಪಗೇಡಿಯ ಸೂನು ತನ್ನಯ ಪೊಡೆಯೊಳಗಿರಲು ಬಾಲಕನ ನಿಡಿದೋಳ ಮೊದಲ ಭೂಭಾರವ ನೆಲೆದಾಳ್ದು ನಡೆಗೆಟ್ಟು ಬಿಸುಸುಯ್ದಮಳು (ಸೋಹಕ. ೦೭-೯) ; ೨. ಕ್ರಮಂ ತಪ್ಪು ; ರೀತಿ ತಪ್ಪು : ನಾವು . . . ಮಿತಿಮೀರಿ ಅತಿರೇಕದಿಂದ ಸೊಕ್ಕಿನಿಂದ (Hubris) ನಡೆಯುತ್ತೇವೆ. ಹೀಗೆ ನಡೆಗೆಟ್ಟ ತಪ್ಪಿಗೆ ತಕ್ಕ ಶಿಕ್ಷೆ ನಮ್ಮನ್ನು ಬಡಿಯುತ್ತದೆ (ಬದ್ಧಪ್ರ. XXXV ಅ೧೭) ; ನಡೆಗೆಟ್ಟ ಕಟ್ಟಳೆಯೊಳಿ ಯಚ್ಚು ಪೆರ್ಚಿನಿಂ ಸುಡುವ ನನ್ನಿಯನುಳಿಸೆ ತಿಳಿಯದೆಡೆಗೆಟ್ಟಂ (ಕಾಲೂರ. ೦೬೧-೩೫೭). ೩. (ಸಾಮಾನ್ಯವಾದ) ಆಚರಣೆಗೆ ಅಸಾಧ್ಯವಾಗು ; (ಸಾಧಾರಣವಾದ) ವ್ಯವಹಾರಕ್ಕೆ ಒಳಪಡದಿರು : ತಾ ನಡೆವಡೆ ನಡೆಗೆಟ್ಟ ನಡೆಯ ನಡೆಯಬೇಕು ತಾ ನುಡಿವಡೆ ನುಡಿಗೆಟ್ಟ ನುಡಿಯ ನುಡಿಯಬೇಕು (ಅವಚಂ. ೯೯-೪೯೮). **ನಡೆಗಿಡು :** ೧. ನಡಗಿಡ ಗಾಳಿ ಪೂಟ್ ಗಗನಸ್ಥಳಿ ತೆಕ್ಕನೆ ತೀವೆ ದಿಙ್ಮುಖಂ . . . ದೇವರುಂ ದಿವಿಜಕಾಂತೆ ಯರುಂ ಬೆಱಗಾಗೆ ಪೊಣೆಮೊಕ್ಕೊಡನೊಡನಾರ್ದರಟ್ಟಿಡೆಯ ಬಿಲ್ವಡೆ ಬೀಱದುದಸ್ತ್ರವಿದ್ಯೆಯಂ (ಪಂರಾಮಾ. ೧೩-೪೪) ; ನಡೆಗಿಡೆ ಗಾಳಿ . . . ಘನಾಘನಂ ಕಱಯೆ ಪೆರ್ಮಿಟ್ ಕೊಂಡವು ಸರ್ವಸತ್ತ್ವಮೋಗಡಿಸೆ ತದಭ್ರ

ಕಾಲಮುವನೀವಳಯಕ್ಕಶಿಬಿೞದ್ಯಮಪ್ಪಿನಂ (ಪುಹಾಪೀ. ೬-೫೪) ; ನಡೆಗಿ[ಪಾಠಾಂ ಗೆ]ಡೆ ಚಿತ್ತಂ ಧೃತಿಲತೆ ಕುಡಿಗಿಡೆ ಮನಸಿಜ ವಿಕಾರತತಿ ಮಾನಸ್ತ ದೊಳ್ಪಡೆಗಿಡೆ . . . ವಿರಹವಿಹ್ವಳನಾದಂ (ವೃಷವಿ. ೮-೨೧) ; ಕಾಲಿಡಲ್ಕಾಶಿಲೆಯೊಳಾ ತುರಂಗದ ಖುರಂ ಕೀಲಿಸಿತು ಭಿನ್ನಿಸದೆ ಕೂಡೆ ಬೆಚ್ಚಂದದಿಂ ಮೇಲೆ ನಡೆಗೆಟ್ಟು ನಿಂದುದು (ಕ್ಷಮಿಥಾ. ೧೧-೦೦). [ ನಡೆ$_2$ + ಕೆಡ್ಸು ]

**ನಡೆಗೇಡು** (ನಾ). ನಡಗೆಗೆ ಒದಗುವ ಅಡ್ಡಿ,-ತೊಂದರೆ : ಕಲಕೊಟಿಗಿರ್ದ ಬಲ್ವರವಿಯಂ ಬಲಗೈ ಜಡಿದೊಟ್ಟಿ ತೂಗೆ ನೀಳ್ದಲೆದೆಡಗೈಯೊಳಾವರೆಯ ಪಂದಳಿಗರ್ಗಳ್ನಡೆಗೇಡು ಮಾಡೆ . . . ಒಟ್ಟಿದರ್ ಕೆಲಬಲದೂರ್ಗೆ ಪೋಗಿಯಳಿ ಮಾಡಿ ಮಗುಟ್ಟಿರುತಿರ್ಪ ಗೋಪಿಯರ್ (ರೀಲಾವ. ೫-೧೦೦).

[ ನಡೆ$_2$ + ಕೇಡು ]

**ನಡೆಗೊಳ್, ನಡೆಗೊಳು** (ಕ್ರಿ). ೧. ಚಲಿಸು ; ಹೋಗು ; ಸಾಗು ; ತೆರಳು : ಆಗಳಶ್ವತ್ಥಾಮನುಂ ಕೃಪನುಂ ಸಿಗ್ಗಾಗಿ ಹಿಮವತ್ಪರ್ವತಕ್ಕೆ ನಡೆಗೊಂಡರ್ (ಪಂಪಭಾ. ೧೩-೧೦೭ವ) ; ನಡೆಗೊಂಡತ್ತು ಮದೇಭದಾನ ಜಲಧಾರಾಸಾರದಿಂ ಮಾರ್ಗತಂ ನಡೆಗೆಟ್ಟಿರ್ಪನಂ. . .ರಘುತನೂಜಾಖರ್ವ ಚಾತುರ್ಬಲಂ (ಪಂರಾಮಾ. ೧೨-೩೨) ; ಒಡನೆಯ್ದಿದಃವಲರ್ಗಣ್ಗಳ್ ಬಿಡದೆ ಮನಂ ಪೋಯ್ತು ಮನದ ಹಿಂತನೆ ಧೈರ್ಯಂ ನಡೆಗೊಂಡುದು ಧೈರ್ಯದ ಬೆಂಬಿಡದೊರ್ವಳ ಜೀವವಿರದೆ ಪೋದತ್ತಾಗಳ್ (ಜಗವಿ. ೫-೯೯). ೨. ನಡೆಯಲು ಸಮರ್ಥವಾಗು ; ಗತಿಯನ್ನು ಪಡೆ : ಆಗಳಾಗಳೆ ಪೆಳವಂ ನಡೆಗೊಂಡಂತುಂ ಕುರುಡಂ ಕಣ್ಪಡೆದಂತುಂ ಮೂಡಂ ಪುರುಷನಾದಂತುಂ ಪೆರ್ಚಿದೊಂದು ಸಂತಸದಿಂ . . .ಕರ್ವಟ್ಟಮನೇಱಿ ಪೋದರ್ (ರಾಷೂಶ್ರ. ೮೨-೧೨). ೩. ಹೊರಡು ; ಹೊರಬೀಳು : ಪಡೆಯಂ ನಡೆಯಲ್ಕೆ ಬೇಱಿ ಭೋರೆಂದು ಗಭೀರನಾದದಿನದೇಂ ನಡೆಗೊಂಡುದೊ ಚಕ್ರವರ್ತಿಯಾ (ಶಾಂತಿಪು. ೧೧-೪೬) ; ಅಂತು ನಡೆಗೊಂಡು ಕುಂಡಿನೀಪುರಾಭಿಮುಖನಾಗಿ ಪೋಗುತ್ತುಮಾತ್ಮಗತದೊಳ್ ಗರುತ್ಮನನಾಮಂತ್ರಣಂಗೆಯ್ಯೆ (ಜಗವಿ. ೮-೭೯ವ). ೪. ಬಿಟ್ಟುಹೋಗು ; ತೊಲಗು ; ದೂರಸರಿ : ನಾಣ್ ನುಣ್ಚಿ ಸೋಲದೊದವಿಂ ಕಣ್ ನಸುಮುಗುಳ್ದಿಸೆಯೆ ನಸೆಯನೆಸಗುವ ಪಲವುಂ ನುಣ್ನುಡಿ ಪಸರಿಸೆ ಮನದಿಂ ಜಾಣ್ ನಡೆಗೊಳೆ ತೊಡರ್ದರಿನಿಯಕೂಟ ದೊಳಿನಿಯರ್ (ಚಂದ್ರಪು. ೮-೬೯). ೫. ಮೇಲೆ ನುಗ್ಗು ; ಆಕ್ರಮಣ ನಡೆಸು : ಬಲದಲ್ಮಹೇಶ್ವರನನ್ನರುಮಾಯುದಲ್ವಿಷ್ಣುವಿನನ್ನವ್ರಿಜ್ಞಾನದಲ್ ಬ್ರಹ್ಮನನ್ನಯ್ಯಮ ವರುಣ ವಾಯುವ್ಮ ಚೇರ ಚೋಳ ಪಾಣ್ಡ್ಯರ್ಕಳನ್ನಡೆಗೊಂಡು ಕನ್ನರದೇವನ ಕರುಮಾಂ (ಎಕ. IV, ಹೆಗ್ಗಡ, ೧೬-೧೫ ; 1033). **ನಡೆಗೊಳು** : ೧. ಪೊಳೆವ ಬೆಳ್ಗೊಡೆ ಚಾಮರಂ. . .ಮುಂತಾದ ಸಕಲವಿನಿಯೋಗಸಹಿತಂ ಸೌಂದರಾಧೀಶನು ಒಲಿದು ತಿರುವಾರೂರ್ಗೆ ನಡೆಗೊಂಡ (ಸೌಂದಪು. ೫-೩೪) ; ಜೋಡಿಸಿದ ಕರಿತುರಗರಥವೆಡೆಯಾಡಿದವು ಗುಡಿಮಂಡವಿಗೆಗಳ ಹೊಡೆದೆತ್ತಿನ ಬಂಡಿಗಳು ನಡೆಗೊಂಡವಗಲದಲಿ (ತೊರರಾ. ೨-೬-೯) ; ರಾಜಮರಾಳ ಮತ್ತೇಭಸಂಕುಲಕೆ ಸರೋಜಪಾಂಘ್ರಿ ಯುಗದ ಸದ್ಗತಿಯ ಮಾಜದೆ ಮನಗೊಳಿಸುವವೊಲು ನಡೆಗೊಂಡುದಾ ಜಾಣೆಯ ಸಖೀನಿವಹ (ಮೋಹತ. ೪೧-೩೬) ; ಎಣ್ದೆಸೆಯ ಮೆಟ್ಟಿದುದು ಸಕಲ ವಾದ್ಯಂಗಳ ನಿನದಮಳ್ತಿವಟ್ಟರಚ್ಚರಿಯರುತ್ಸವವನೀಕ್ಷಿಸಲೆಂದು ಪುರಜನಂ ನಡೆಗೊಂಡುದು (ಚಬಪು. ೬-೫೨) ; ಶರಣ್ಗೊಂಡು ಮುನಿಪ ಅತ್ತ ನಡೆಗೊಳಲಿತ್ತ ದನುಜೇಂದ್ರ ತನ್ನನದಿ ಚಿತ್ರಭವನುದಿಪ ದಿನವಂ ಶಂಕಿ ಸುತ್ತಿರಲು (ನವಮೋ. ೧೧-೧೯). [ ನಡೆ$_2$ + ಕೊಳ್$_1$ ]

**ನಡೆಗೊಳಿಸು**(ಕ್ರಿ). ೧. ನಡೆಯುವಂತೆ ಮಾಡು : ನಡೆಸು : ಪಸುರ್ವುಲ್ಲಂ ಮೇವುತಿರ್ದ ಪೊಸವಾಣಿತಿಪ್ಪಲ್ಲೆ . . . ಪಟ್ಟಿರ್ದ ಕೊಣಸುಮಂ ಬಿಟ್ಟು ಬರಲಾಱದೆ . . . ಕೊರೆದ ಮೊಲೆಯಂ ಸಾರ್ಚಿ ತಣಿಯೂಡದೆ ನಡೆಗೊಳಿಸಿ ತವಕದಿಂ ಬರುತ್ತುಂ (ಪುಷ್ಪಪು. ೩-೬೬ವ). ೨. ಹೋಗುವಂತೆ ಮಾಡು; ತಳ್ಳು; ಅಟ್ಟು: ಭೂಪನ ಸೈನ್ಯಸಾಗರವ ಸುದಿಸಿಯೆ ನಿಮಿಷಾರ್ಧದಲಿ ಯಮಮಂದಿರಕೆ ನಡೆಗೊಳಿಸಿ ಮುಖಜರ ಮಂದಿಗಿತ್ತನು ಸಕಲ ಭೂಮಿಯ ಜಾಮದಗ್ನಿಕನು (ಸಂಥಹ. ೨೬-೪೭) ; ರಿಪುಪರಿವಾರವನು ನಡೆಗೊಳಿಸಿದನು ಯಮರಾಜನಾಲಯಕೆ (ಕುವ್ಯಾದ್ರೂ. ೫-೧೦).

[ ನಡೆಗೊಳ್ + – ಇಸು$_3$ ]

**ನಡೆಗೊಳು** 'ನಡೆಗೊಳ್' ನೋ.

**ನಡೆಗೊಳ್ಳಿ** (ನಾ). ನಡೆದಾಡುವ ಕೊಳ್ಳಿ ; ಚಲಿಸುವ ಕೊಳ್ಳಿ : ಅಡೆಪೊತ್ತುವ ಬೇಸಗೆಯೊಳ್ ಪೆಡೆವಣೆ ಬಡೆ ಕಾಯ್ದು ನೆತ್ತಿ ಧಿಟಧಿಟಲೆನುತುಂ ನಡೆಗೊಳ್ಳಿಯಂತೆ ನಡೆದುದು ಗಿಡುಗಳ ನೆಟಲಾಸೆಗಹಿಪನಸುವಿಡುತುಸಿರು (ಸೂಕ್ತಿಸು. ೦೦-೧೧೦). [ ನಡೆ$_1$ + ಕೊಳ್ಳಿ$_1$ ]

**ನಡೆಗೋಂಟೆ, ನಡೆಗೋಟೆ** (ನಾ). ೧. ಯುದ್ಧದಲ್ಲಿ ಶತ್ರುಗಳಿಂದ ರಕ್ಷಿಸಿಕೊಳ್ಳಲು ಉಪಯೋಗಿಸುವ (ಸೈನ್ಯದಿಂದ ರಚಿಸಿರುವ) ರಕ್ಷಣೆಯ ವ್ಯೂಹ : "ಜಂಗಮಃ 'ಪ್ರಾಕಾರಃ – ನಡೆಗೋಂಟೆ" (ನೀತಿವಾ. ೨೦-೬) ; ಸಂಗರಭೂಮಿಯೊಳೊಡ್ಡಿ ನಿಂದೆಡ್ಡಮಾಗಿ ಬಗ್ಗಿಸಿ ಪೊಗ್ಗರಿಸುತ್ತೊಗ್ಗಿಗೆಡದ ನಡೆಗೋಂಟೆಯಂತೆ ನೆಲವೆರ್ಚಿ ನಿಂದು (ಗಿರಿಕ. ೩-೫೫ವ) ; ಕಟ್ಟದಲಗಿನ ಕನ್ನಡಿಯ ತೊಲಗದ ಕಂಬದ ವೀರಘಂಟೆಯ ನಡೆಗೋಂಟೆಯ ಜಾಯಿಲದ ಪೊಂಬಟ್ಟೆಯ . . . ಬೆಳಗುಗಳ್ ಮಾರ್ತಂಡಂಗೆ ಮಾರ್ಪೊಳೆಯೆ (ಮಹಾನೇ. ೧೨-೧೯ವ); ಬಿಡದೆ ನಡೆಗೋಂಟೆಗಳ ಪೊಗ್ಗರಂ ನೂಂಕಿ ದವು ಪುರದ ಪೊಱಬಳಿಸಿನೊಳ್ ಪಡಿಯಟ್ಟಣಿಗಳೆದ್ದುವು (ಚಬಪು. ೪೨-೨೪). ೨. ರಕ್ಷಣೆಯ ಸಾಧನ : ಮಂಟಪದೊಳು ಸುತ್ತಿ ಸುಳಿದರೊಲ್ಮೆಯ ನಡೆಗೋಂಟೆಯೊಯೆಂಬ ರೀತಿಯೊಳು (ಭರಚ. ೧೩-೭೯). **ನಡೆಗೋಟೆ** : ೧. ತಾಟಿಸಿದರೊಡನೊಡನೆ ಕುಲಗಿರಿ ದೂಟ ಬಿದ್ದವು ಚಿತ್ರದಲಿ ನಡೆಗೋಟೆಯೆನೆ ಮಂಡಳಿಸಿ ಬಲಿದರು ತೆಕ್ಕವರಿಗೆಗಳ (ಕುವ್ಯಾಭೀ. ೪-೨೫) ; ಈ 'ನಡೆಗೋಟೆ'ಗಳು 'ತಳಿ' 'ಮುಳುವೇಲಿ'ಗಳಂತೆ ಪಾಳೆಯದ ಸುರಕ್ಷಣೆಗಾಗಿಯೂ ಇದ್ದಿರಬಹುದು (ಕೋಗ್ಗಜ. ೨೯).

**ನಡೆಗೋಂಟೆಮಲ್ಲ, ನಡೆಗೋಟೆಮಲ್ಲ** = ನಡೆಗೋಟೆಯಂತೆ ರಕ್ಷಿಸುವವನು; ಏಕಾಂಗವೀರ; ಮಹಾ ಪರಾಕ್ರಮಿ; ಒಂದು ಬಿರುದು: ಮಹಾಬ್ಬಲಕ್ಕೆ ನಿಜಸೇನೆಗೆ ವಜ್ರದ ಕೋಂಟೆಯಾಗಿ ತೋಱುಗು ನಡೆಗೋಂಟೆಮಲ್ಲನ ಭುಜಾಬಳಮೀ ಅವನೀತಳಾಗ್ರದೊಳೂ (ಎಕ XI, ಚಿತ್ರದು. ೨-೧೬; 1355) ; ಸುಭಟರಾಚಾರ್ಯ (೦) ಸತ್ಯರತ್ನಾಕರಂ ನಡೆಗೋಟೆಮಲ್ಲಂ ಗ (೦) ಣ್ಡರಗೋವಂ ಮಣ್ಡಳೀಕ ನಾರಾಯಣಂ (ಸಾಇಇ. XI-1. ೫೬-೨೦ ; 1019) ; ಶ್ರೀಮತು ಮಹಾಮಂಡಳೇಶ್ವರಂ ಉಭಯದ[ಳ]ಪಿತಾಮಹ ನಡೆಗೋಟೆ ಮಲ್ಲ ಸೆಟ್ಟಿ ಸಾ[ಹಸ]ಧೀಮ ಗುಂಡರಸನು ತಂನಾಳ್ಕೆಯೊಳು ಕಾ[ಳ್ದ]ಗೆಯಲ್ಲಿ ಕೊಟ್ಟ ಮ ೧೨ ಮನೆ ೧ (ಸಾಇಇ. XX, ೨೨೬-೨೪ ; 1306).

[ ನಡೆ$_1$ + ಕೋಂಟೆ ]

**ನಡೆಗೋಟೆ** 'ನಡೆಗೋಂಟೆ' ನೋ.

**ನಡೆಗೋಟೆಕಾಱ** (ನಾ). ಸೈನ್ಯದಿಂದ ರಚಿಸಿರುವ ರಕ್ಷಣೆಯಂ ವ್ಯೂಹದಲ್ಲಿರುವ ಮುಂದಾಳು,-ಪರಾಕ್ರಮಿ : ನಡೆಗೋಟೆಕಾಱರು ಕೆಣಕಿದರು ಕಟಿರಾಜಸೈನಿಕವ (ತೊರರಾ. ೬ ೩೩-೨).

[ ನಡೆಗೋಟೆ (<ನಡೆಗೋಂಟೆ) + – ಕಾಱ ]

**ನಡೆಗೋಲು, ನಡೆಕೋಲು** (ನಾ). ನಡೆಯುವಾಗ ಊರಿಕೊಳ್ಳಲು ಹಿಡಿದುಕೊಳ್ಳುವ ಕೋಲು; ಊರುಗೋಲು ; ಬೆತ್ತ : ಆ ವ್ಯಕ್ತಿ ಮಿರುಮಿರನೆ ಮಿಂಚುತ್ತಿದ್ದ ಹಿಡಿಕೆಯನ್ನುಳ್ಳ ನಡೆಗೋಲನ್ನು . . . ನೆಲದ ಮೇಲೂರುತ್ತ ಹಳ್ಳಿಯ ಬೀದಿಯಲ್ಲಿ ನಡೆದು ಬರುತ್ತಿದ್ದನು (ಪುನರು. ೨೬೩); ಕಡೆಗೆ ಬಾದೇ ಬಂದ ಒಬ್ಬ ಮುದುಕ, ನಡೆಗೋಲು ಅವನೆತ್ತರ (ಶಿರಾಂ. ೮೬-೧೬). ಏ, ನನ್ನ ನಡೆಗೋಲು ಎಲ್ಲಿ ? (ಉದಮ್ಮ. ೫೯). **ನಡೆಕೋಲು** :

ವ್ಯಾಸ್ಫೂರ್ತಿಗೆ ನಡೆಕೋಲಾದನೆ ಮರುಳ್ಗಳ ಹುರುಳೇ ಎಡರಾಳುವನೇ ಎ ಬನದಕ ನನ್ನಡೆಗೈತಂದೆ (ಗಜೇಶ. ೨-೪೭).

[ ನಡೆ$_1$ + ಕೋಲು$_1$ (<ಕೋಲ್$_1$) ]

**ನಡೆಗೋಳ** (ನಾ). (ಅಲಂ) (ಆತ್ಮನಿಗೆ) ನಡೆದಾಡುವ ಬಂಧನ; ದೇಹ: ಕೊಳು ನೀರನ್ನು ಕೊಂಡು ತನುವಿದು ಮೇಲೆವೇಲುಬ್ಬರಿಸಿ ಬೆಳೆವುದು . . . ಬೀಳುವುದು ಕೊಡದಿರ್ದಡೀ ನಡೆಗೋಳದಲ್ಲಿ ನಾ ಸಿಲುಕಿ ಬಳಲದೇ ಬೇಳಗೊಳ್ಳದಿರು (ನಿಜಗ. ೯-೧೮-೦೨). [ ನಡೆ$_1$ + ಕೋಳ$_1$ ]

**ನಡೆಗೌಡ** (ನಾ). (?) : ಮುನಿಭದ್ರಗೌಡರ ಮಕ್ಕಳು . . . ರೇಗರೇವಂತ ನಡೆಗೌಡ ಸುರತಂಣ ಹಿರಿಯತಮ್ಮಗೌಡರು ಮುಖ್ಯವಾದ ಆತನ ಅನುಜ ಪದ್ಮಯನು (ಎಕ. VII, ಶಿವಮೊ. ೧೦೧-೦೫ ; ೫೫೦ ?).

[ P ಇದು 'ನಾಡಗೌಡ' ಎಂಬುದರ ಅಪಲಿಖಿತವಿರಬಹುದೆ ? ]

**ನಡೆಚಪ್ಪರ** (ನಾ). ೧. ದಾರಿಯುದ್ದಕ್ಕೂ ಹಾಕಿರುವ ಚಪ್ಪರ: ಅಂಬರ ಸ್ಥಳವಂ ಮುಸುಕಿದಾಡಂಬರದ ನಡೆಚಪ್ಪರಂಗಳು ಬಿಂದಿಸುವ ಧವಳಾತ ಪತ್ರವು ಚಾಮರಾದಿಗಳು (ಲಸಪು. ೬-೨೨). ೨. ಕೆಲವು ವಿಶೇಷ ಸಂದರ್ಭಗಳಲ್ಲಿ, ಮರ್ಯಾದೆಗಾಗಿ ಜನರು ಹಿಡಿದಂ ತರುವ ನಾಲ್ಕು ಕೋಲುಗಳುಳ್ಳ ಚಪ್ಪರದಾಕಾರದ ವಿತಾನ; ಸಿಂಧೂಪ : ನೃಪತಿಲಕರ ಪಲವು ಕೊಡೆಯಾಗಸವಂ ಪಂದಲಿಸುತ್ತಂ ಪಡೆತರೆ ನನೆವಿಲ್ಲಂ ರಿಪುದುರ್ಗಕೆ ನಡೆಯುವ ಗಡಣದ ನಡೆಚಪ್ಪರಮೆನಲೆಸಕವಡೆದುದಾಗ (ಜಯುಕಾ. ೮-೨೭); ಪಟ್ಟಾವಳಿಯ ನಡೆಚಪ್ಪರದ . . . ಚಾಮರದ ಘನಸಂಕುಳದೊಲವಿನಾಯನಂ ಬರವನೆಡಗಲಿಸಿ ನಡೆದುದು ಕೂಡೆ ಯಮುನಾನದಿಗೆ ಜನನಿವಹ (ನಿಜಗ. ೧೦-೧೦೦-೧೧); ರಾಜಮರ್ಯಾದೆಗಳಾದ ರಾಜದಂಡ ಛತ್ರಿ ಚಾಮರ . . . ನಡೆಚಪ್ಪರ–ಇತ್ಯಾದಿ ಬಿರುದುಗಳು ಬಂದ ಮೇಲೆ . . . ಅತ್ಯಂತ ಗೌರವದಿಂದ ಕರೆದುಕೊಂಡು ಬರುತ್ತಾನೆ (ಶಾಂಗಳ. ೬೦). ೩. ಯುದ್ಧ ಕಾಲದಲ್ಲಿ ಉಪಯೋಗಿಸುತ್ತಿದ್ದ ಒಂದು ಬಗೆಯ ರಕ್ಷಣೆಯ ಸಾಧನ: ಡೆಂಕಣಗಳಂ ಮೇಳೈಸಿ ನಡೆಚಪ್ಪರವನ್ನು ನಡೆಯಿಸಿ . . . ದೂಳಿಗೋಂಟೆಯ ಕೊಳ್ಳಬೇಕೆಂಬ ಪಡಿಯಚಾರ ಕಳಕಲಂ ' ಕರಮೊಪ್ಪಿತು (ಸಮ್ಯಳ. ೮-೩೦) ; ನಡೆಚಪ್ಪರದ ಮರ ಬದ್ದರ ಡೆಂಕಣ ಸುಡುವ ಪಟಲು ಕೋಟೆಯನು ಕೆಡಪುವ ಡೆಗ್ಗೆ ಹತ್ತುವ ನಿಚ್ಚಣಿಗೆಗಳಂದೊಡನೈದಿದ ಪಸಂಖ್ಯಾಕ (ಶುಡಾಶಾಂ. ೩೭-೬೭). [ ನಡೆ$_1$ + ಚಪ್ಪರ ]

**ನಡೆಜಂತ್ರ** (ನಾ). ಚಲಿಸುವ ಯಂತ್ರ; ನಡೆದಾಡುವ ಯಂತ್ರ: ಆದಿತ್ಯ ವಿರಹದೊಳಮಕ್ಷೋದತಮಂ ಪರ್ವುವಂತೆ ಜಗಮಂ ಜೀವಂ ಪೋದೊಡ ಮದಂಗರುಚಿ ಬೀಜಾಂದುದು ನಡೆಜಂತ್ರಮಲ್ತೆ ನರರ ಶರೀರಂ (ಚಾಂತಿಪು. ೬-೯೭) ; ಕುಸುಮಾವಳಿದೇವಿ ಬರುತ್ತುಮಿರ್ದಳಾ ಮನಸಿಜನಾಡಿಪೊಂದು ನಡೆಜಂತ್ರದ ಪುತ್ರಿಕೆಯೆಬ ಭಂಗಿಯಿಂ (ಕುಸುಮ. ೦೨-೦೨೫).

[ ನಡೆ$_1$ + ಜಂತ್ರ ]

**ನಡೆಜಾಣ** (ನಾ). ನಡವಳಿಕೆಯನ್ನು ಚೆನ್ನಾಗಿ ತಿಳಿದವನು ; ರೀತಿನೀತಿಗಳನ್ನು ಬಲ್ಲವನು : ನುಡಿಜಾಣ ನಡೆಜಾಣ ನೆಚ್ಚಣಾ ಕಡುಜಾಣ ಜಗಕೆ ಸುಜಾಣ ಎಡೆಬಿಡದೆನ್ನಂತರಂಗದೊಳಿರು ಜಾಣರೊಡೆಯ ಚಿದಂಬರ ಪುರುಷಾ (ಭರಕ. ೬-೬೬). 'ನುಡಿಜಾಣ' ಪರ್ಯಾ. [ ನಡೆ$_2$ + ಜಾಣ ]

**ನಡೆಜಾಣ್ಮೆ** (ನಾ). ವ್ಯವಹಾರದಲ್ಲಿ ಜಾಣತನ,–ಬುದ್ಧಿವಂತಿಕೆ : ನುಡಿ ಜಾಣ್ಮೆ ನಡೆಜಾಣ್ಮೆ ನನಗೂ ದೇವರಿಗೂ ಸಂಗಡದ ಭೂಪರು ಮೇಳ ಲಂದ (ಭರಕ. ೩೯-೧೦೭). 'ನುಡಿಜಾಣ್ಮೆ' ಪರ್ಯಾ.

[ ನಡೆ$_2$ + ಜಾಣ್ಮೆ ]

**ನಡೆಜೋಡು** (ನಾ). ನಡಿಗೆಗೆ ಹೊಂದಿಕೊಳ್ಳುವ ಜೋಡಿ,–ಜೊತೆ : ಕೂಡೆ ಸಂಜಯನಟ್ಟಿದನು ನಡೆಜೋಡಿನವ್ [ಹಾಕಾಂ. ಪಯವಾಡಿನಲಿ] ವಾನೂಟಿ ಕುದುರೆಯ ಕೂಡಿ ಕೌರವನೃಪನ ಕಾಣದ ಕಳವ ಚೌಕದಲಿ (ಕುಮ್ಯಾಗ. ೨-೩). [ ನಡೆ$_1$ + ಜೋಡು ]

**ನಡೆಡೆಂಕಣ** (ನಾ). ಕೋಟೆಯ ಬುರುಜಿನ ಮೇಲೆ ಚಲಿಸುವಂತೆ ಏರ್ಪಡಿಸಿರುವ ಒಂದು ಬಗೆಯ ಆಯುಧ ; ಚಲಿಸುವ ಡೆಂಕಣ : ನಡೆಡೆಂಕಣ ಸೂಸುಡೆಂಕಣ ಬಲುಗುಂಡನಿಡುವ ಡೆಂಕಣ ಕೋಟೆದೆಡೆಗೆ ಸಿಡಿವ ಡೆಂಕಣ ರಾಯಡೆಂಕಣಗಳ ಸಾಲು ಬಿಡದೊಪ್ಪಿದವು ದುರ್ಗದೊಳು (ಕುಡಾಶಾಂ. ೪೨-೩೯). 'ಡೆಂಕಣ' ಪರ್ಯಾ. [ ನಡೆ$_1$ + ಡೆಂಕಣ ]

**ನಡೆತ** (ನಾ). ನಡೆಯುವಿಕೆ ; ನಡಗೆ. [ ನಡೆ$_1$ +-ತ$_2$ ]

**ನಡೆತರ್, ನಡೆತರು** (ಕ್ರಿ). ಬರು ; ಆಗಮಿಸು : ಕೆಯ್ಯುಕ್ಕು ಕಾದಲ್ ನಡೆತರ್ಪಾವೇಗದೊಳ್ ಮುಮ್ಮುಟಿಸಿದ ಪಲವುಂ ರಾಜಚಿಹ್ನಂಗಳಂ ಬೆಳ್ಗೊಡೆಗಳ್ ತಳ್ಪೊಯ್ದುದೇಂ ಕಣ್ಗೊಳಿಸಿದುದೊ ಚಳಚ್ಚಂದ್ರ ಕಚ್ಛತ್ರ ಪಿಂದಂ (ಶಂಕಥಾ. ೦೩-೩೮) ; ಚೆಲ್ವನಾಳ್ದ ಮೆಲ್ಲನೆ ನಡೆತರ್ಪ ನೀಲಮಣಿ ಪುತ್ರಿಕೆಯಂದದಿನಾದವೊಪ್ಪಿದಳ್ (ಶಾದಂಪೂ. ೩೮): ಸಾಯಂಕಾಲ ಶೃಂಗಾರಸಮಯಮಂದು ಮಧುರಾಪುರಾಧೀಶ್ವರನಲ್ಲಿಗೆ ಪೋಪ ಬಗೆಯಿಂ ಕುಬ್ಜೆಯೆಂಬ ಸ್ಮೆರಂಧ್ರಿ ನಡೆತರೆ (ಜಗಪಿ. ೬-೧೫೭) ; ಉರವಣಿಸಿ ನಡೆತರುತ್ತುಂ ಗಿರಿಶಿಖರಮನೇಱಲಾಱದೆರಡುಂ ದೆಸೆಯೊಳ್ ಬರಲನುವಂ ಕಂಡು ದಿವಾಕರನಂದಿ ದಕ್ಷಿಣೋತ್ತರಾಯಣನಾದಂ (೧೧ಳ. ೧-೫೩) ; ಕಡುಸೊರ್ಕಿದಲರಂಬನಾನೆಯನಿರ್ಪೀ ತಂಗಾಳಿ ತನ್ನಿಚ್ಚೆಯಿಂ ನಡೆತಂದಪ್ಪುದು ಬೇಗದಿಂ ಬಿರಯಿ ನೀಂ ಪೋ ಪೋಗು (ಕಬ್ಬಿಕಾ. ೫೫). **ನಡೆತರು** : ಕಪ್ಪಡಿಯ ಸಂಗಮಮಂ ಪೊಕ್ಕು ಕೇರಿ ಕೇರಿಯೊಳು ನಡೆತಪ್ಪಾಗಳು ಶಂಕರಾಲಯಮಂ ಭೋಂಕನೆ ಕಂಡು (ಬಸರ. ೨-೫೦) ; ಆ ಸಮಯದಲ್ಲಿ ರಾಯವೇದವ್ಯಾಸಮುನಿ ನಡೆತಂದು ಗತಪರಿತೋಷನನು ಸಂತೈಸಿ ಕರಸಿದನಂದು ಸಂಜಯನ (ಕುಮ್ಯಾಶೀ. ೧-೫೫) ; ತೆಗದ ತೊಟ (?) ಕಾಲುವೆಗಳುದ್ಯಾನಗಳ ಕಳವೆ ದ್ರಾಕ್ಷೆ ಧವಳೇಕ್ಷುಗಳ ವನವೀಧಿಗಳನೀಕ್ಷಿಸುತರಸ ನಡೆತಂದ [ಪಾಠಾಂ. ನೈತಂದ] (ಕೊರಚ. ೧-೬-೧೧) ; ಸತಿಯರ ಗಡಣದಲಿ ನಡೆತಂದಳಂದಮುಖಿ (ನಳಕ. ೩-೫೫) ; ಪಂಪರ ಪಾತ್ರವೆಂಗಳು ಸಿಂಗರಿಸಿಯ ಹರುಷದೊಳಗೆ ನಡೆತಂದು (ಕಂಪವಿ. ೬-೧೦೭).

[ ನಡೆ$_1$ + ತರ್ ]

ನಡೆತರು 'ನಡೆತರ್' ನೋ.

ನಡೆತೋರಣ 'ನಡೆದೋರಣ' ನೋ.

**ನಡೆದಾಣ** (ನಾ). ನಡೆದಾಡುವ ಸ್ಥಳ ; ಓಡಾಡುವ ಜಾಗ ; ದಾರಿ : ಪೊಂಬಟ್ಟಂ ಪೊಂಬಿಸಿರಂಗಿಂಬುವಸದಿಯುಮಾಲಪ್ಪೊಡೆಯಂಗೆ ನಡೆದಾಣಮುಂ . . . ಬೋಟಿಯರ್ಗೆ ಮೇಳದೆಡೆಯುಮೆನಿಸಿ ಕಣ್ಗೊಳಿಕುಂ (ರಾಮಾಶ್ವ. ೬-೫). [ ನಡೆ$_1$ + ತಾಣ ]

**ನಡೆದಾರಿ** (ನಾ). ನಡೆದಾಡುವ ದಾರಿ ; ಓಡಾಡುವ ಮಾರ್ಗ : ಆಚೀಚೆ ಹುಡುಕುತ್ತ, ಜಾನೂ ಅಮ್ಮನ ಕೋಣೆಯ ಪಾರ್ಶ್ವಭಾಗದ ಇಕ್ಕಟ್ಟಾದೊಂದು ನಡೆದಾರಿಯನ್ನು ಸೇರಿದನು (ಕಾಲಬುಟ. ೨೫) ; ತೋಟಗಳು ಸಾಮಾನ್ಯವಾಗಿ ಚೌಕ ಇಲ್ಲ. ನಿಡುಚೌಕ ಇದ್ದು . . . ಒಳಗೆ ತಿರುಗಾಡಲು ನಡೆದಾರಿಗಳು ಇದ್ದವು (ಇಜ್ಯಾಂಗಂ. ೦೮೯). [ ನಡೆ$_1$ + ದಾರಿ ]

**ನಡೆದುಳಿ** (ಕ್ರಿ). ದಾರಿಯನ್ನು ತುಳಿ; ದಾರಿ ಸವೆಸು : ಅಡಿಯ ನೆಲದೊಳ್ ಬಿಸಿಲ್ ಕಡೆಸಾಲ ಬರೆಯುತಿರೆ ನಡೆದುಳಿದು ನೆಲ್ಲೂರ ಮನೆಗೆ ನಡೆತಂದು (ಕಾಂಂಶರ. ೧೧೨-೨೩೦). [ ನಡೆ$_2$ + ತುಳಿ$_1$ ( < ತುಟಿ$_1$ ) ]

**ನಡೆದೇಗುಲ** (ನಾ). ಚಲಿಸುವ ದೇವಸ್ಥಾನ ; (ಒಂದೆಡೆ ಸ್ಥಿರವಾಗಿರದೆ) ಉತ್ಸವದಲ್ಲಿ ಎಳೆಯುವ ದೇವರ ವಿಗ್ರಹವಿರುವ ಮಂಟಪ, ತೇರು,–ರಥ : ಪಲರಂ ರಕ್ಷಿಸಿ ಮತ್ತಂ ಪಲವಂ ನಡೆದೇಗುಲಂಗಳಂ ಮಾಡಿಸಿದಂ ನೆಲನೆಲ್ಲಮಱಿಯ ಚಟ್ಟಂ ನೆಲೆದೇಗುಲಮುಮನಿದೊಂದನೊಪ್ಪೆಸಿದಂ (ಎಕ. V, ಬೇಲೂರು. ೧೯೩-೯೯ ; 1160). [ ನಡೆ$_1$ + ದೇಗುಲ ]

**ನಡೆದೋರಣ, ನಡೆತೋರಣ** (ನಾ). ಎರಡು ಕಡೆ ಹಿಡಿದಿರುವ ಕೋಲುಗಳ ತುದಿಗಳಿಗೆ ಕಟ್ಟಿ, ಉತ್ಸವಾದಿಗಳ ಮುಂದೆ ಹಿಡಿದುಕೊಂಡು ಹೋಗುವ ತೋರಣ; ಚಲಿಸುವ ತೋರಣ; ಮಕರ ತೋರಣ : ಸಿರಿವತ್ತ ಕ ನ ಕ ದ ಂ ಡ ದ ಚಾಮರ ಸೀಗುರಿ ನಡೆದೋರಣನಿಚಯ ಪರುಠವಿಸಿರ್ದ ನಾನಾವಿಧ ಟೆಕ್ಕೆಯ ತರಳತು ನಭವನಳ್ಳಿಱಿದು (ಚೋಹಕ. ೧೩-೩೧). ನಡೆತೋರಣ : ನುಡಿವ ನಾನಾವಾದ್ಯಘೋಷಣೆ ಕಲಶ ಕನ್ನಡಿಯ ಪೆಣ್ಗಳ ರಾಗರಚನೆ ಇಡಿಕಿಱಿದುದು ಸೆಟ್ಟಿಸಮಯರುಗಳ ಕೆಯ್ಯ ಗುಡಿ ನಡೆತೋರಣನಿಚಯ (ಮೋಹತ. ೪೦-೩೪); ರಾಜವೀಧಿಯೊಳೆತ್ತಿರ ಪತಾಕೆಗಳ ಸೂಸುವ ಸೀಗುರಿಗಳ ಭೀಸುವ ಚಾಮರಂಗಳ ಸೊಗಯಿಪ ಧವಳ ಪತ್ರಂಗಳ ನವರತ್ನದ-ನಡೆತೋರಣಂಗಳ . . . ಸಿರಿ ಕಂಗೊಳಿಸೆ (ವೃಷಪು. ೩-೪೪ವ). [ ನಡೆ$_1$ + ತೋರಣ ]

**ನಡೆನಿಱಿಗೆ** (ನಾ). ಓಡಾಟದ ರೀತಿ,-ಸೊಗಸು; ನಡಗೆಯ ಸೊಬಗು : ನೆರವನೆಯುಂ ಪೋಪ ಬರ್ಪ ಜವ್ವನಿಗರ ನಡೆನಿಱಿಗೆಯಿನಿಡಿಕಿಱಿದ ಪಂತಿಯಿಂ (ರಾಮಾಶ್ವ. ೨೩-೭). [ ನಡೆ$_3$ + ನಿಱಿಗೆ ]

**ನಡೆಪಾಡಿಸು** (ಕ್ರಿ). ನಡೆದಾಡಿಸು; ನಡೆಯುವಂತೆ ಮಾಡು; ಚಲಿಸುವಂತೆ ಮಾಡು; ಓಡಾಡಿಸು : ಹಂಸಾವಳಿಯಂ ನಡೆಪಾಡಿಸು ಕೋಕಿಳ ನಾದಮನಾಲಿಸುಸಿರದಿರ್ಪರೆ ಮದನಾ (ಗಿರಿಕ. ೮-೭೦); ವಾರುವಮಂ ನಡೆಪಾಡಿಸಲ್ಕೆ ನೋಡುವ ಮಱಿಗಳ್ಗೆ ಪಾಲನೆಱೆವುಜ್ಜುಗವಂ ತಳೆದಿರ್ಪ ನಾವಗಂ (ನಳಚಂ. ೭೪೯). [ ನಡೆಪಾಡು ( <ನಡಪಾಡು) + – ಇಸು$_3$ ]

**ನಡೆಪಾಡು** 'ನಡಪಾಡು' ನೋ.

**ನಡೆಪು$_1$** 'ನಡಪು$_1$' ನೋ.

**ನಡೆಪು$_2$** 'ನಡಪು$_2$' ನೋ.

**ನಡೆಬಾವಿ, ನಡಬಾವಿ, ನಡಭಾವಿ, ನಡೆಭಾವಿ** (ನಾ). ಇಳಿದು ನೀರು ತುಂಬಿಕೊಳ್ಳುವಂತೆ ಸೋಪಾನಗಳಿರುವ ಬಾವಿ,-ಮೆಟ್ಟಿಲುಗಳುಳ್ಳ ಬಾವಿ,-ಕೊಳ : ಪೊಸದುರ್ಗಮಂ ಪಾಟಿಸಿ ಪಿರಿಯ ನಡೆ [ಪಾಠಾಂ. ಡ] ಬಾವಿಗಳನಗುಳಿಸಿದನದಱೊಳಗೆ (ಬಸವಪು. ೧೫-೧೧). ನಡಬಾವಿ : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. ನಡಭಾವಿ : ಅಮೃತರಸ ಪರಿಪೂರ್ಣವಾದಮೃತಸಂಜೀವಿನಿ ಎಂಬ ಹೆಸರುಳ್ಳ ಒಂದು ನಡಭಾವಿಯು ಉಂಟಾಗಬೇಕೆಂದು ದೇವರನ್ನು ಬೇಡಿ (ಕೃವಾಳ. ೩೪). ನಡೆಭಾವಿ : ನೂರು ಸೇದೋ ಭಾವಿ ಕಟ್ಟಿಸುವುದಕ್ಕಿಂತಲೂ ಒಂದು ನಡೆಭಾವಿ ಕಟ್ಟಿಸುವುದುತ್ತಮ (ಕೃವಾಳ. ೧೭೦).

[ ನಡೆ$_1$+ ಬಾವಿ. / ತಮಿ. ನಟ್ಟೆವಾವಿ, ನಟ್ಟೆಬಾವಿ, ನಟಪಾವಿ; ತೆಲು. ನಡಬಾವಿ ]

**ನಡೆಬೆಡಗು** (ನಾ). ನಡಗೆಯ ಸೊಗಸು,-ಒಯ್ಯಾರ : ನಡೆಬೆಡಗೋ ನಿಲುಬಗೆಯೋ ನಗುಮೊಗವೋ ತಹ ಸೊಗವೋ ಕನಸಿಗು ಇಂಥವ ಸುಳಿವೊಲ್ಲ (ಗೋಕುನಿ. ೧೩-೧೧). [ ನಡೆ$_3$ + ಬೆಡಗು ( <ಬೆಡಂಗು ) ]

**ನಡೆಭಾವಿ** 'ನಡೆಬಾವಿ' ನೋ.

**ನಡೆಮಂದಸ** (ನಾ). ಚಲಿಸುವ ಪೆಟ್ಟಿಗೆ : ರಿಪುವೆಚ್ಚಱಿದಿಟ್ಟ ಕೈದುವೆನ್ನುದರದೊಳೆಯ್ದೆ ತಳ್ತಿಡಿದಿರಲ್ ಯುವರಾಜನ ಶ ಸ್ತ್ರ ಕೋ ಟ ಕೀಲಿದ ನಡೆಮಂದಸೆಂಬಿನೆಗಮಿರ್ಪನದೆಂದೊ ಮಹಾಜಿರಂಗದೊಳ್ (ಜಗವಿ. ೦೭-೮೭). [ ನಡೆ$_1$ + ಮಂದಸ ]

**ನಡೆಮಡಿ, ನಡೆಮುಡಿ** (ನಾ). ದೇವರ ಕಾರ್ಯ ಮುಂತಾದ ಶುಭ ಸಂದರ್ಭದಲ್ಲಿ ಉತ್ಸವಗಳು ನಡೆಯುವಾಗ ಉತ್ಸವದ ದಾರಿಯಲ್ಲಿ ಗೌರವಾರ್ಥವಾಗಿ ಹಾಸುವ ಮಡಿಯಾದ ವಸ್ತ್ರ,-ಬಟ್ಟೆ; ಹಡದಿ : ದೇವಾಂಗವಶ್ಯಿಕದ ಸೆಱಗಿನ ಸೆರೆಯಂ ನಡೆಮಡಿಯ ಹಾಸಿ . . . ಧೂಪಾರತಿ ಘಂಟೆ ಸಹವಾಗಿ ಪ್ರಭುದೇವರ ಕರೆಯ ಬಹ ಸಂಭ್ರಮದಿಂದಿರುತ್ತಿರಲು (ಶೂನ್ಯಸಂ. ೯೯-೨೨); ನಡೆಮಡಿ ಗಂಧದಕ್ಷತೆ ಫಲಾವಳಿ ಪೂವಿನ ಮಾಲೆ ಮುತ್ತು ಕನ್ನಡಿ ಕಳಸಂ . . . ಚಾಮರಮೆಂಬಿವೊಪ್ಪಮಂ ಕುಡೆ ಜನದತ್ತೆಯೋಂ ನಡೆದಳೋ (ಅರ್ದನೇ. ೧-೮೪); ಆ ನಗೆಗಣ್ಗಳ ಕಡೆಯ ಬೆಳಂತಿಗೆವೆಳಗು ಹಂದು ಮುಂಗುಡಿಯೊಳ್ ಪಸರಿಸಲೆಸೆದುದು ನಡೆಮಡಿಯಂ ಪಾಸಿದ ತೆಱದಿ (ಜಯನೃ. ೩-೩೬); ಕಟ್ಟಿದ ಗುಡಿ ತೋರಣ ನಡೆಮಡಿ ಮೇಲ್ಕಟ್ಟು ಮೌಕ್ತಿಕರಂಗವಲ್ಲಿಯಿಂ ಅಲಂಕೃತವಾದ ನಿಜಾಲಯದೊಳು . . . ಕುಳ್ಳಿರಿಸಿ (ರಾಂಶೀಚ. ೯-೨೨); ನಡೆಮಡಿಗಳ ಪಾಸುತ್ತುಂ ನಡಗರದಿಂ ಶೋಭನಂಗಳಂ ಪಾಡುತ್ತುಂ ಮಡದಿಯರಿದಿರ್ಗೊಂಡರಲ್ಲಿ ವಿಶ್ವೇಶ್ವರನಂ (ವೀರವಿ ೯-೭೫); ನಡೆಮಡಿ ನಾಲ್ಕೆಂಟುಮಾರ್ಕೆದಲಲ್ಲಲ್ಲಿಗೊಡನೆತ್ತುವಾರತಿ ಸೇಸೆ ಇಡುವ ನಿವಾಳಿ ಢಾಳಿಸುವ ಚಾಮರಗಳಿಂದಡಿಯಿಡಿಸಿದರು ಯೋಗಿಗಳ (ಭರತ. ೩-೮೦); ಸುರರು ಸಮಂತು ಪೊರೆದ ಭವಂಗೀಧರೆ ಪಾಸಿದೆ ನಡೆಮಡಿಯೆನೆ ಕರಮೆಸೆದುದು ವಿಮಳಗಣಾದಿನಾ ನದಿ ಪದಪಿಂ (ಧಾಬಹೀ. ೨-೩); ಹರಿಹರದೇವರು ನಡೆದು ಬರುವ ಹಾದಿಯುದ್ದಕ್ಕೂ ನಡೆಮಡಿಯನ್ನು ಹಾಸಿ ಹೂವುಗಳನ್ನು ಚೆಲ್ಲುತ್ತಿರುವರು (ಶುಂಗಳ. ೭೦). ನಡೆಮುಡಿ: ಬಿಳಿಯ ಚತ್ರಿ ನಡೆಮುಡಿ ಕಲಶ ಕನ್ನಡಿಗಳು ಇಲ್ಲದ ಮೆರವಣಿಗೆಯೇ ಇಲ್ಲ (ಚದೇಪ. ೧೯೩); ಯಾವ ಮೋತೀಬಾಯಿಗಾಗಿ ರಾಜನು ನಡೆಮುಡಿಯನ್ನು ಹಾಸುತ್ತಿದ್ದನೋ ಅವಳು ಪಾಪ, ಬೀದಿ ಬೀದಿ ಅಲೆಯುತ್ತಿದ್ದಾಳೆ (ಘೂರ್ಣಿಚ. ೦೦೩); ಊರಿನ ಅಗಸ "ನಡೆಮುಡಿ" ಹಾಸಿಕೊಂಡು (ದಾರಿಯುದ್ದಕ್ಕೂ ಬಟ್ಟೆ ಹಾಸಿಕೊಂಡು) ಅವರನ್ನು ನಡೆಸಿಕೊಂಡು ಬರುತ್ತಾನೆ (ಸರ್ವಮಂ. ೧೯೨). [ ನಡೆ$_1$ + ಮಡಿ$_4$ ]

**ನಡೆಮಾಡ** (ನಾ). ಚಲಿಸುವಂತೆ ರಚಿಸಿರುವ ಒಂದು ಬಗೆಯ ಮನೆ; ವಿಮಾನ; ವ್ಯೋಮಯಾನ : "ನಡೆಮಾಡಮೆಂದುಂ ವಿಮಾನಂ" (ಕಶಸಾ. ೨೮-೩೮೩); ನಡೆಮಾಡ [ಪಾಠಾಂ. ಡು] ಪಾಱಿನೆ ವ್ಯೋಮಯಾನನಾಮಂ (ಕಲ್ಯಮು. ೦೦); "ನಡೆಮಾಡಮೆನೆ ಸುರವಿಮಾನಂ" (ಕಶರ. ೩೨): ಗಜೇಂದ್ರಂ ತುರಂಗಂ ನಡೆಮಾಡಂ ದಣ್ಣನಾಥೋತ್ತಮಪದವಿ ಮಹಾತೂರ್ಯಮೆಂಬಿಂತಿವಂತುಂ ಪಡೆದಂ ಚೆಲ್ವಿಂದೆ ವೀಸೋತ್ತರವಿದಿತಧರಾದೇವನಿಷ್ಟಪ್ರಭಾವಂ (ಎಇ. XIII, ೩೩೦-೦೩; ೯೨೭); ಅವಱ ಮುಂದೆ ಸಾಹಣೌಘದೊಳಗಿರಿಸುವ ಪಂಚಕಲ್ಯಾಣದ ಸೂಚೀಯಾನೆಗಳ್ಗೆಂದು ನಿಱಿಸಿದ ನಡೆಮಾಡಸಾಲೆಗಳೆಂದು (ಶಾಂತಿಪು. ೦೦-೦೪೭ವ); ನಡೆಮಾಡಂ ನಡೆಗೊಪ್ಪುವಶ್ವತತಿ ಚೆಂಬೊನ್ನಂದಣಂ ವಾಜಿ ಪರ್ವಿಡಿ ವೇರಾನೆ ಸುಖಾಸನಂ ತುಱುಗೆ ಬಂದರ್ಗಾಯಕರ್ವಾದಕರ್ (ಮಲ್ಲಿಪು. ೩-೭೭); ತನತು ವಿಚಿತ್ರಮಪ್ಪ ನಡೆಮಾಡದ ಗಾಡಿಯ ಸದ್ವಿಮಾನಮುಂ ತನತು ಸುರರಮ್ಯಹರ್ಮ್ಯದ ವಿಳಾಸದ ರುಂದ್ರಫಣೀಂದ್ರಗೇಹಮುಂ . . . ಇಂತು ಕನಸು ಪದಿನಾಱು ಮನಂಬುಜವದನೆ ಕಂಡಳ್ (ಪುಷ್ಪಪು. ೯-೧೦೧); ನಡೆಮಾಡದೊಳಗಿರ್ದ ರಾತ್ರಿಂಚರನೆರ್ಗೀಡಿ ಪಿಡಿದು ತಂತಮ್ಮ ಬಲ್ಗೆಳನ್ನೆದೆ ಗರ್ಜಿಸುತೆ (ಶೀಷರಾ. ೧೪-೩೪); ಪಡೆವಳರೆಲ್ಲರ್ . . . ನಡೆಮಾಡಮನಡರ್ದು ಹಯಮನುಯ್ಯಮಾರ್ಬಿಗನುಂ ತಱುಬಿ ಅಱಿವಡೆಯಂ ಬಱಿಕೆಯ್ಯ ಪವಣಾಯನ ಕಟ್ಟಾಣತಿಯಂ ಬಾಱುತಿರ್ಪುದು (ರಾಮಾಶ್ವ. ೦೧೦-೦೭): ಆಕಾಶದೊಳಗಿಂದ ಅಥವಾ ಹವೆಯೊಳಗಿಂದ ಹೋಗುವ ವಾಹನಕ್ಕೆ ವಿಮಾನ ಅಥವಾ ನಡೆಮಾಡೆಂದನ್ನುತ್ತಾರೆ (ಮುಂಲಯ. ೩-೯೨). [ ನಡೆ$_1$ + ಮಾಡ$_2$ ]

**ನಡೆಮುಡಿ** 'ನಡೆಮಡಿ' ನೋ.

**ನಡೆಯಡಿ** (ನಾ). ನಡೆಯುವ ಕಾಲು; ಚಲಿಸುವ ಪಾದ : ಕಂದರ್ಪವಂಗನೆಯು . ಪ್ರಳಾಪಿಸುತ ನಡೆಯಡಿಗಳಿಂದ ಬರವರಲ್ (ನಶಮೋ. ೭-೩). [ ನಡೆ$_1$ + ಅಡಿ$_1$ ]

**ನಡೆಯಿಸು, ನಡಯಿಸು, ನಡಸು$_1$, ನಡಿಸು$_1$, ನಡೆಸು,** (ಕ್ರಿ). ೧. ನಡೆಯುವಂತೆ ಮಾಡು; ಚಲಿಸುವಂತೆ ಮಾಡು : ಜಯದ್ರಥನಂ

ಕೋಡಗಗಟ್ಟುಗಟ್ಟಿ ಬೆನ್ನಂ ಬಿಲ್ಲ ಕೊಟ್ಟಿನೊಳಿಟ್ಟು ನಡೆಯೆಂದು ನಡೆಯಿಸಿ (ಪಂಪಭಾ. ೬-೩೧ ವ) ; ಮ್ಲೇಚ್ಛಖಂಡಮಂ ದಾಯ್ಮೇಳಿಸಿ ಚಕ್ರಪೂಜೆಗೆಯ್ದು ಕಟಕಮಂ ನಡೆಯಿಸಿ (ಚಾವುಂಪು. ೯೧) ; ನಡೆನಡೆಯೆಂದು ನಡೆಯಿಸಿದರ್, ಕೊಯ್ ಕೊಯ್ ಎಂದು ಕೊಯಿಸಿದರ್ (ಛಾಪಾಭೂ. ೨೧೬ ಉದಾ) ; ಪುರವರದ ನಡುಕೇರಿಯೊಳೆಲ್ಲರು ನೋಡುವಂದದಿ ನಡೆಯಿಸಿದನು ಮಂತ್ರಿಯವರ (ಕುಮಾಸಾಂ. ೩೬-೬೨). ೨. ಮುಂದುವರಿಸು ; ಮುಂದೆ ಸಾಗಿಸು ; ಸಾಗಿಸಿಕೊಂಡು ಹೋಗು : ನೆಗಟ್ದೀ ಕ್ರಿಯಾವಿಶೇಷಂಗಳನಿಲ್ಲಿಂದಿತ್ತೆಡೆಯುಡುಗದೆ ನಡೆಯಿಸುವುದು (ಆದಿಪು. ೧೫-೧೬ ವ); ಇದನ್ ತಪ್ಪದೆ ನಡೆಯಿಸಿದಾತಮ್ ಸಾಸಿರಮ್ ಕವಿಲೆಯ ಕೋಡುಮ್ . . . ಸಹಶ್ರ(ಸ್ರ)ಭೋಜನಮ್ ಊಡಿದ ಫಲಮ್ ಅಕ್ಕುಂ (ಇಆ. XII, ೨೫೬-೧೬ ; 951) ; ಇದು ಕಯ್ಕೊಂಡು ನಡೆಯಿಸಿದಾತಂಗೆ ಅನಂತ ಪುಣ್ಯ (ಎಕ. IV, ನಾಗಮಂ. ೫೧-೨೪ ; 972) ; ಇನ್ತೀ ಧರ್ಮ್ಮಮಂ ಕಾದು ನಡೆಯಿಸಿದಂಗೆ ವಾರಣಾಸಿ ಕುರುಕ್ಷೇತ್ರ ಪ್ರಯಾಗೆಯರ್ಗ್ಘತೀರ್ತ್ಥ ಗಂಗೆ ಗಂಗಾಸಾಗರದೊಳ್ ಸಾಸಿರ ಕವಿಲೆಯಂ . . . ಕೊಟ್ಟ ಫಲವಕ್ಕು (ಸೌಇಇ. XI-1, ೪೬-೧೯ ; 994). ೩. ಹೋಗುವಂತೆ ಮಾಡು; ಕಳಿಸು: ಅಡಿದಳಿರ್ಗೆ ಧರಾವಲಯಂ ಕಡುವೆಟ್ಟಿತ್ತಾಗೆ ನಡೆಯಲಿಟ್ಟಿಯದೆ ಮನುಜರ್ ಸೆಡೆಯೆ ಹಯಾದಿಗಳಿಂದಂ ನಡೆಯಿಸಿದು ಕಲಿಸಿ ವಾಹನಾರೋಹಣಮಂ (ಪಂಚಾಮೂ. ೦-೬೬). ೪. (ರಥ ಮೊದಲಾದುವನ್ನು) ಚೋದಿಸು ; ಹೊಡೆ : ದೇವಕೀನಂದನಂ ಸ್ಯಂದನಮಂ ಕಿಟ್ಟು ನಡೆಯಿಸೆ (ಜಗವಿ. ೪-೪೦ ವ). ೫. ಆಚರಿಸು ; ನಿರ್ವಹಿಸು ; ಜರಂಗಿಸು ; ಮಾಡು : ಅವರಿಬ್ಬರೂ ನಡೆಯಿಸಿದ ಜೀವನದ ಅದ್ಭುತರಸಾಯನದ ಪ್ರಯೋಜನವು ಕನ್ನಡನಾಡಿಗೆ ಇನ್ನೂ ಆಗಬೇಕಾಗಿದೆ (ನನಲ್ಲ. ೬ ಕವಿಚರಿತೆಯು). ೬. ಈಡೇರಿಸು ; ನೆರವೇರಿಸು ; ಪಾಲಿಸು: ಚಕ್ರವರ್ತಿಯೇ ತಮ್ಮ ಅಪ್ಪಣೆಯನ್ನು ನಡೆಯಿಸಿರುವೆನು (ಮುಚಿಸ. ೫೬) ; ದಂದುಗಡ ಬಿಡುಗಡೆಗೆ ಮನೆಯೊಡವೆಗಳ ಕೆತ್ತು ಪೊಂದಿದೊಸಗೆಯ ನಡೆಯಿಪುದು ಕೊರಗನೆಣಿಕೆ (ಕಾಲೂರ. ೦೬೯-೩೬೬). ೭. ಪಾಲನೆ ಮಾಡು ; ರಕ್ಷಿಸು ; ಕಾಪಾಡು : ಎಮ್ಮ ಕಾರಣದಿನಿತ್ತಣ ಪಂಬಲನೀಕೆ ಮಾಡದಂತನ್ನಡೆಯಿಪ್ಪುದೊಂದೆ ತೆಱನಪ್ಪುದಿದಂ ಸೆಱಗೊಡ್ಡಿ ಬೇಡಿದೆಂ (ಚಂದ್ರಪು. ೬-೪೬). ೮. (ಆಸಕ್ತಿ ಮುಂತಾದುವನ್ನು) ಉಂಟುಮಾಡು ; ಒದಗಿಸು ; ದೊರಕುವಂತೆ ಮಾಡು : ಕುಡಿದೊಡೆ ಸೊರ್ಕಿಸದವು ನಾಣ್ಗೆಡಿಸದವು ಮನಕ್ಕಲಂಪನೀವುವು ರತಮಂ ನಡೆಯಿಪುವೆನಿಸುವ ಮಧುಗಳನೆಡೆಯುಡುಗದೆ ಕುಡುಗುಮುಚಿತಮದ್ಯಾಂಗಕುಜಂ (ಆದಿಪು. ೫-೩೨) ; ಪ್ರಸಾದಪರಿಮಳಮಂ ಘ್ರಾಣಕ್ಕೆ ನಡೆಯಿಸುವ ಸೊಪಗೆಯ ಮುಗುಳ ನಾವೆಯಂತೆಱಪ್ಪುವ ನಾಸಿಕದ . . ರೂಪು ಸೌಂದರ್ಯದಿಂ (ಬಸಕ. ೨-೨೬). **ನಡಯಿಸು :** ೧. ಮುಂದಕೆ ನಡಯಿಸಿ ಪುಲಿವೊಗವಿಕ್ಕುವ ಬಂದರ ಕೂಡೆ ದೂರದೊಳು ನಿಂದಿಱಿದಾಡುವ ಬಲು ಭದ್ರುವೆಸಗುವರಿಂದ ಕಣ್ಗೆಸೆದುದಾ ದುರ್ಗ (ಕುಮಾಸಾಂ. ೫೬-೬೩). ೨. ಧರ್ಮ್ಮಂಗಳಂ ನಮಸ್ಕಂ ನಡಯಿಸಿ ಬೞಿಯವೊನ್ದು ವರ್ಷಂ ರಾಜ್ಯಮಂ ಪತ್ತುವಿಟ್ಟು (ಎಕ. II, ೫೯-೧೦೯ ; 974). ೯. ವ್ಯವಹರಿಸುವಂತೆ ಮಾಡು ; ವರ್ತಿಸುವಂತೆ ಮಾಡು. ೧, ೯ : ದೇವನುಂ ತನಗೆ ಕುಂಟಣಿಮಾಡಿ ನಡಯಿಸುವ ತೆಱನೀ ತೆಱನೆಂಬುದಂ ತೋಱುವಂತೆ ಮೆಲ್ಲಮೆಲ್ಲನೆ ದಟ್ಟಡಿಯಿಡುತ್ತುಂ (ನಂಬಿರ. ೨-೬). **ನಡಸು**$_1$ : ೧. ಬೈತ್ರಮನೇಱಿಸಿ ನಡಸೆ ಕೆಲವು ದಿನಕ್ಕೆ ತಿಳಕದ್ವೀಪಮನೆಯ್ದೆ (ಪುಣ್ಯಾಸ್ರ. ೮-೫ವ) ; ಹಿಡಿವ ಬಿಡುವೊಬ್ಬುಳಿಗೆ ತಹ ಬಲನೆಡಕೆ ಹಾಯ್ಕುವ ಸೂತ್ರಲೊತ್ತುವ ತಡೆವ ನಡಸುವ ಸೆಳೆವ ತಿರುಹುವ ಹದಿರ ಜೋಕೆಯಲಿ ಗಡಣಿಸಿದನು (ಕುಮಾರವ್ಯಾ. ೩-೧೧); ಮೊಗಕೆ ಮುತ್ತುಗದೆಲೆಯ ಮುಱಿವಿಡಿದಗಲಿದುಮ್ಮಹದಿಂದ ಜನಕನ ಮಗಳ ನಡಸುತ ತಂದರೊಂದು ಮಹಾಸರೋವರಕೆ (ತೊರರಾ. ೨-೪-೧೯) ; ಕರುಣಾಳು, ಬಾ, ಬೆಳಕೆ, ಮುಸುಕಿದೀ ಮಬ್ಬಿನಲಿ, ಕೈಹಿಡಿದು ನಡಸೆನ್ನನು (ಇಂಗೀತ. ೯೬-೨). ೨. ಧರ್ಮ್ಮವಱವರೆಲ್ಲರು ಪೊಡೆಯರಾಗಿ ಪರಿರಕ್ಷಿಗೆಯ್ದು ಸ್ವಧರ್ಮ್ಮದಿವ್ ನಡಸುವ್ರದು (ಇಆ. XVIII, ೩೯-೨೬ ; ೯೯೯) ; ಇದಪ್ ನಡಸಿದರ್ಗ್ಗೆ ಅನನ್ತಪುಣ್ಯ[ಂ] (ಇಆ. XII, ೨೨೫-೦೬ ; ಸು.12ನೆಯ ಶತ) ; ಆಚಂದ್ರಾರ್ಕ್ಕ ನಿತ್ಯಪಡಿಕಿ ಯಮಾನ ಹಲ ನಡಸುವ್ರದು (ಎಕ. II, ೨೪೪-೨೩ ; ಸು.1274) ; ಶಿವಾರ್ಪಿತವಾಗಿ ನಡಸುವ ಅಗ್ರಹಾರದ ಧರ್ಮಕೆ ಉತ್ತಾರವ ಮಾಡಿಸಿಕೊಟ್ಟ ಕಾಶೀನಾಥಪುರದ ಗ್ರಾಮಕ್ಕೆ ಶಿಲಾಸ್ಥಾಪಿತ ಮಾಡಿಸಿ ಅದೆ (ಎಕ. VII, ಶಿವಮೊ. ೦೮-೧೦ ; 1714). ೫. ಸಂಪದಾದಿಗಳು ಭರಿತವಾಗಿಹವಾ ಮುನಿಪನಿಹ ಧರಣಿಯಲಿ ನೀನಾ ಮುನೀಂದ್ರನ ಬರಸಿ ಕ್ರತುವನು ನಡಸಿದರೆ ಸುತರಹರು ನಿನಗೆಂದ (ತೊರರಾ. ೧-೫-೫೯) ; ಎಮ್ಮ ಲಿಂಗವು ಕೊಟ್ಟ ಕಾಯಕವ ನಡುಸುತಿಹೆವಂತಾಗಿಯುಂ ಭವಿಯೊಡನೆ ಮಾತಾಡೆವು (ಬಸಪು. ೪೦-೩೬) ; ನಾನೀಗ ನಡಸಿರುವುದರಲ್ಲಿ ಅವಸರವೇನಾದರೂ ಕಾಣುತ್ತದೆಯೋ ? (ಅಶ್ರುಮ. ೧೨) : ನಮ್ಮ ಪ್ರಾಚೀನ ಕಾವ್ಯಗಳ ಅಭ್ಯಾಸವನ್ನು ಸೂಕ್ಷ್ಮವಾಗಿ ನಡಸಿ ಸರಿಯಾಗಿ ಅವಲೋಕಿಸಿದರೆ ನಮ್ಮ ಹಿಂದಿನ ಕವಿಗಳಿಗೂ ಲಾಕ್ಷಣಿಕರಿಗೂ ಭಾಷೆಯನ್ನು ಕುರಿತು ಪ್ರತ್ಯೇಕವಾಗಿ ವಿಚಾರ ಮಾಡುವ ಪ್ರವೃತ್ತಿ ಇತ್ತೆಂಬುದು ಓದುಗರಿಗೆ ಮನದಟ್ಟಾಗುತ್ತದೆ (ದ್ರಾವಿವಿ. ೧೧ ಹಿನ್ನಲೆ). ೮. ಫಡಫಡಜರ್ಜನ ಹೋಗುಹೋಗೆಳವಡದು ಸೈಂಧವನಳಿವು ಭಾಷೆಯ ನಡಸುಬಲ್ಲರೆ ಬೇಗ ಬೆಳಗಿಸು ಹವ್ಯವಾಹನನ (ಕುಮಾರವ್ಯಾ. ೧೪-೩೧). ೯. ದುರ್ಜನಸ್ವಭಾವಮಂ ಕೇಡು ಯತ್ನದಿಂ ನಡಸುವೊಡಂ ನೈಜಗುಣಂ ಬಿಡದು (ಪಂಚತಂ. ೧೦೫-೧) ; ಮುನ್ನ ಪರಸತಿ ಪಾರ್ವತಿಯೆಂದು ನಡಸಿತ್ತು ನುಡಿಸಿತ್ತು ಗುರುವಚನ (ಸವಚನ. ೮೬-೪೮೦). ೧೦. ಪ್ರಯೋಗಿಸು ; ಬಳಸು ; ಉಪಯೋಗಿಸು : ಮಡದಿ ಪಕ್ಷದಿಯರಿಯದಲೆ ಮದದೊಡಗಿಕಾಣನು ಇನ್ನು ಬುದ್ಧಿಯ ನಡಸು ಸ್ವಾಮಿದ್ರೋಹಿ ಬಸವನೆಯೆಂದನಾ ಮಂತ್ರಿ (ಬಿಜ್ಜಪು. ೬೩-೫೮). ೧೧. ರೂಪಿಸು ; ಹೊಂದಿಸು ; ಸಾಧಿಸು ; ಅಳವಡಿಸು ; ಸಿದ್ಧಪಡಿಸು: ಋಕಾರಾಂತಗಳಾದ ‘ಕರ್ತೃ’ ಮೊದಲಾದುವನ್ನು ‘ಗುರು’ ಎಂಬುದರಂತೆ ನಡಸಬಹುದು (ಮಧ್ಯಮ. ೬೮) **ನಡಿಸು**$_1$ : ೬. ಯಿನ್ನು ತಂನ ಮಾತು ನಡಿಸಬೇಕು (ಎಕ. VII, ಶಿವಮೊ. ೧೦೮-೨೫ ; 1658). ೯. ನಾರಿ ಕೇಳ್ನಿನ್ನ ಮನೋರಥ ನೆಱೆ ಕೈಸಾರಿತು ಚೆಲುವರೆಱೆಯನ ಮೇರೆಯಱಿತು ನಡಿಸೆಂದಾಗ ಸಖಿಯು ಪಚಾರವ ಪೇಳ್ದಳಂಗನೆಗೆ (ಕಂನವಿ. ೦೦-೫೬). **ನಡೆಸು :** ೧. ಹುಟ್ಟುಗುರುಡನ ಕೈಯ ಕೋಲ ಕೊಟ್ಟು ನಡೆಸುವಂತೆ ನಡೆಸಯ್ಯಾ ಎನ್ನ (ಬಸವ. ೨೬೫) : ಪೊಡವಿಯುಲಿ ಕೈಗೊಟ್ಟು ಭೋಗಂ ನಡೆಸಲಡಿಯಿಡ ಕಲಿತನು (ಬಸಪು. ೨೫-೮) ; ಕಾಲಿಲ್ಲದೆ ನಡೆಸುವ ಕೈಯಿಲ್ಲದೆ ಹಿಡಿಸುವ ಹಲ್ಲಿಲ್ಲದೆ ಮೆಲಿಸುವ (ಪುರಂದ. ೩-೧೧೯-೧) ; ದಿವಿಜರು ಪೆತ್ತ ರತ್ನವಿಮಾನಕೋಟಿಯ ಸೂತ್ರಿಸಿದವೊಲು ನಡೆಸಿದರು ಸುರವೇತ್ರಪಾಣಿಗಳು (ಸಾಳ್ವಭಾ. ೩೩-೩೮) ; ಪೊಡೆಸು ಭೇರಿಯ ನಿಂದೆ ನಡೆಸು ಮಾತ್ಸ್ಯನ್ಯಮಂ (ಜಲಪು. ೯೬-೨೨) ; ಆ ಕುದುರೆ . . . ಲೋಕಮಂ ತಣಿಸುತ್ತೈತರಲಖಿಳದೆಸೆಯೊಳದನಾಕೆವಾಳರ್ತಡೆಯೆ ಬಿಡಿಸಬೇಕನಿಬರಿಂ ನೂಕದೊಡೆ ಕರ್ತೃ ತಾನಾದೊಡಂ ಪೋಗಿ ನಡೆಸುವ್ರದು ಬಳಿಕಾ ಹೆಯವನು (ಜೈಮಿಭಾ. ೨-೨೯). ೨. ಈ ಧರ್ಮವ[ಂ] ನಡೆಸಿದವರಿಗಕ್ಷೆ(ಕ್ಷ)ಯಪುಣ್ಯ[ಂ] (ಇಆ. XII, ೨೨೫-೧೯ ; ಸು. 11ನೆಯ ಶತ) ; ಹತ್ತುಮತ್ತರದ ಭೂಮಿ ಬತ್ತುವ ಹಯನು ನಂದಾದೀವಿಗೆಯ ನಡೆಸಿಹವೆಂಬವರ ಮುಖವ ನೋಡಲಾಗದು (ಬಸವ. ೨೨೫) ; ಪೊಡೆಯರು ನಡಸಿ ××× ನಡೆಸುವ ಯೆಂಣೆ ವರುಶ ೧ ಕಂ ಹಾನೆ ೨ ಡನೂ ನಡೆಸುವಂತಾಗಿ (ಸೌಇಇ. IX-II, ೪೦೫-೧೧ : 1367) ; ಅಲ್ಲಿ ಇಂಗ್ಲಿಷ್‌ನಲ್ಲಿ ಪ್ರೌಢವಿದ್ಯಾಭ್ಯಾಸ ಮಾಡಿದವರೂ ಕೂಡ ಮಾತೃಭಾಷೆಯಲ್ಲಿ ಸಂಭಾಷಣೆಯನ್ನು ನಡೆಸುತ್ತಿದ್ದದನು

ನೋಡಿದೆ (ಹಂಗಾಳ್ಕೆ. ೩ ಮುನ್ನುಡಿ). ೫. ಸಕಳಮಂ ಕೌತುಕದಿ ನಡೆಸುತ ಸಕಳ ದೊಳು ನಡೆಯದ ಸುಜಾಣನು ಸಕಳವೆಳೆಯಲು ಸಕಳದೊಳು ಕಾನಳಿಯ;ದಿಹ ನಿತ್ಯ (ಬಸವು. ೫೦-೪೪); ತೊಡಿಗೆಯಿಂದಿರ್ವರು ದೇವಪೂಜೆಯು ಮಾಡಿ ನಡೆಸಿದರಾಗವೊಕ್ಕೆಯಲಿ (ಪ್ರೇಹಕ. ೩೦-೪); ದೇವರನ್ನು ಮೂಲ ದೇವರ ಗುಡಿಯ ಮುಂದೆ ಬೀಳಿಬಟ್ಟೆಯ ಮೇಲೆ ಕುಳ್ಳಿರಿಸಿ ಗುಡಿಯೊಳಗೆ ಪೂಜೆ ನಡೆಸುತ್ತಾರೆ (ನನ್ನೂರು. ೫೧). ೬. ನುಡಿದ ಭಾಷೆಯನಿಂತು ನಡೆಸಲು ಬಸವನೇ ಬಲ್ಲ (ಬಸವು. ೩೭-೫೬); ನಮ್ಮ ಕರ್ತವ್ಯ ಒಡೆಯನ ಅಪ್ಪಣೆಯನ್ನು ತಲೆಬಾಗಿ ನಡೆಸುವುದು (ಹಂಗಾಳ್ಕೆ. ೪೭). ೭. ಪಟಿಯಿಲ್ಲದಂತೆ ಪ್ರಪಂಚವಿಲ್ಲದಂತೆ ವೈಶಿಕವಿಲ್ಲದಂತೆ ನಡೆಸಯ್ಯಾ (ಬಸವ. ೬೧); ನಿಮ್ಮ ನೆಂದೂ ಅಗಲದಂತೆಮಾಡಿ ನಡೆಸಯ್ಯ (ಸುಕಾದೇ. ಬಿ. ೧೫-೧೪); ನಿಚ್ಚಂ ಪ್ರಿಯದಿಂದಂ ನೋಡುವರ್ ಮನ್ನಿಸಿ ನಡೆಸುವರೆಮ್ಮತ್ತೆವಿರ್ ದೇವಕೀ ದೇವಿಯರ್ (ಜಗವಿ. ೧೨-೧೧೬); ಅರಸೊಲಿದು ನಡೆಸಿದರೆ ಹಿರಿಯಕ್ಕೆ ಜಸವಕ್ಕು ಕರಿತುರಗ ಬಲವು ಹಿರಿದಕ್ಕು ಮುನಿದರೆ ಕರ ನಾಶವಕ್ಕು (ಸರ್ವಜ್ಞ. ೬೩೩). ೮. ಘಡ ತೊಲಗು ಕೌರವಕೃತಾಂತನ ಪಡೆಗೆ ವಾರಣೆ ಯೊಗಳೀಗಳೆ ನಡಸುವೆನು(ಕುಮಾರವ್ಯಾಸ. ಶಲ್ಯ. ೫೦೦). ೯. ಸಾಧುತ್ವಮಂ ಕೆಡಿಸಿ ನಡೆ[ಪಾಠಾಂ. ಡ]ಸುವ ದುರಾಚಾರ ಕಪಟನಾಟಕತತಿಗೆ ತಾನೆ ನೆಲೆಯೆನಿಸುವಳ್ (ಶಾರ್ಜಪೂ. ೫೩೩); ಇನಿತುಂ ಮೋಹಂ ಕೇಳೀತನಮೇಲಿಲ್ಲ ಪಿರಿದುವೆನಿಸ್ಸಿಳುಂಟಪ್ಪುದಱಿಂದನಿಮತಿಕೆಯಿಂದೆ ನಡೆಸಲ್ಕಿನಿತಾದುದು ಶಿಕ್ಷೆಗಟ್ಟ ಕಾರಣದಿಂದಂ (ಧರ್ಮಾಮೃ. ೨-೮೦). ೧೦. ಅಟ್ಟು; ತಳ್ಳು: ಹೊಡೆದು ಹೊಡೆಚೆಂಡಾಡಿ ರಿಪುಗಳ ಗಡಣವನು ಯಮರಾಜಧಾನಿಗೆ ನಡೆಸುವೆನು (ಕುಮಾವ್ಯಾ. ೮-೮). ☞ ಈ ಧಾತು ಅನೇಕ ಕಡೆ ನಾಮ ಪದದೊಡನೆ ಸೇರಿ ವಿಶಿಷ್ಟವಾದ ಧಾತುವಾಗಿ ಬೇರೆಬೇರೆ ಅರ್ಥ ಗಳಲ್ಲಿ ಬಳಕೆಯಾಗುತ್ತದೆ. ಉದಾಹರಣೆಗೆ 'ಉತ್ಸವ ನಡೆಸು', 'ಶಾಲೆ ನಡೆಸು' ಇತ್ಯಾದಿ.

**ನಡೆಸಿಕೊಡು, ನಡಸಿಕೊಡು** = ೧. ಮಾಡಿಕೊಡು; ಮಾಡು: ನೀನು ಸೂಚಿಸಿದಂತೆಯೇ ನಡೆಸಿಕೊಡುತ್ತೇನೆ (ವಚಥಾ. ೪). ೨. ಪಾಲಿಸು; ಈಡೇರಿಸು: ನಿನ್ನಲ್ಲಿ ಭರವಸೆಯಿಟ್ಟು ಒಂದು ಮಾತು ಹೇಳುತ್ತೇನೆ. ಅದನ್ನು ನೀನು ನಡಸಿಕೊಡಬೇಕು (ವಚಥಾ. ೬). [ ನಡೆ₁ + – ಇಸು ]

**ನಡೆಯುಡುಗು** (ಕ್ರಿ). ನಡೆಯಲಾರದಾಗು; ಚಲನೆ ಇಲ್ಲದಂತಾಗು: ನಡೆಯುಡುಗಿ ಮುಪ್ಪಾಗಿ ಕಾಂತಿ ಮಸುಳಿಸಿ . . . ಬೇಱೊಂದೆಸೆಯ ಕಡೆಯೊಳಿಳಿವಂತಾದುದೀಗ (ಹರಿಶಾ. ೩-೭೪); ಭಕ್ತಿ ಚಿತ್ರಮನೋವೆ ಕಂಪಿಸುತೆ ನಡೆಯುಡುಗೆ ಮನವಕ್ಕಱಿಂ ಕರಗೆ (ಬಸವ. ೩-೧೦೧); ನಡೆನಡೆದು ಕಡೆಗಡೆಗೆ ನುಡಿಯುಡಗೆ ನಡೆಯುಡುಗಿ (ಶಾಂತಿಪು. ೦೫೦-೩೩೦). [ ನಡೆ₁ + ಉಡುಗು₁ ]

**ನಡೆಯೂಡು** (ಕ್ರಿ). ಚೆನ್ನಾಗಿ ತಿನ್ನಿಸು: ನಡೆಯೂಡಿ ಮದ್ದು ವಿಷವೂಡಲಿಂಗೆ ಹಿತವೆಂಬ ನುಡಿಯಂತೆ ಸುಖವಿಲ್ಲ ಪೂರ್ಣವುಂಟಾಳಿದ ಹಲವೆಡೆಯ ಸುಕ್ಷೇತ್ರಂಗಳೊಳಗೆ (ಹರಿಶಾ. ೦೦-೩೩). [ ನಡೆ₂ + ಊಡು₁ ]

**ನಡೆಲಿಂಗ** (ನಾ). [ವೀಶೈ] ಚಲಿಸುವ ಲಿಂಗವೆಂದು ಭಾವಿಸಲಾದವನು; ಜಂಗಮ: ಬಡವರಂದದಬೇಡಾ ಲಾಂಛನಧಾರಿಯನು ಕಂಡು ಸ್ನೇಹ ದಿಂದವರ ಪೂಜೆಯ ಮಾಡುವುದು ನಿಜವಡಗಿದ ರೂಪು ನಿರ್ವಯಲ ಸ್ಥಾನ ನಡೆಲಿಂಗ ಜಂಗಮ (ಬಸವ. ೪೧೫). [ ನಡೆ₁ + ಲಿಂಗ ]

**ನಡೆವಕ್ಕಿ** (ನಾ). (ಚಿತ್ರಾಕರ್ಷಕವಾಗಿ) ನಡೆಯುವ ಹಕ್ಕಿ: (ಮನೋಹರವಾಗಿ) ಚಲಿಸುವ ಪಕ್ಷಿ; ಹಂಸ: ನಡೆವಕ್ಕಿಯ ನಲ್ಮೆಯ ಪೊಣರ್ವಕ್ಕಿಯ ನುಡಿವಕ್ಕಿಯ . . . ಬಳಗಂ ಬಳಸಿದುದಾ ನೃಪವಸತಿಯಾ (ಅದಿಪು. ೨-೧೪); ನಡೆವಕ್ಕಿ ನುಡಿವಕ್ಕಿ ... ಗಱಿಗಣ್ಣಕ್ಕಿಗಳಾ ನೆಲದೆಡೆಯ ಬನದೊಳಿರುತಿಹವು (ಕುರಾಕಾಂ. ೨-೩೦); ಆ ವನದ ಮಧ್ಯದೊಳು ನಡೆವಕ್ಕಿ ನುಡಿವಕ್ಕಿ ಪಾವನತ್ವವನ್ನೆಯ್ದಿ ಜೀವಿಪ್ಪುವು ಭಯವನುಳಿದು (ಪ್ರಭುಪು. ೩-೧೪). 'ನುಡಿವಕ್ಕಿ' ಪರಾ. [ ನಡೆ₁ + ಹಕ್ಕಿ₁ (<ಪಕ್ಕಿ₁) ]

**ನಡೆವಡು** (ಕ್ರಿ). ಹೋಗು; ಚಲಿಸು; ಗಮಿಸು: ತಾಂ ತನಗೆ ಹಯಂ ತಡೆವಿಟ್ಟ ಪಾವಂತಂತು ನಡೆವಟ್ಟು ತನ್ನಿಟ್ಟೆಯಿಂ ಪೋಗೆ (ಶಾದೂಕ್ತ. ೧೩೯-೦೩). [ ನಡೆ₂ + ಪಡು₁ ]

**ನಡೆವಣಿಗ** (ನಾ). ಪಾದಚಾರಿ; ಕಾಲಾಳು: ನಡೆವಣಿಗ ಘೋಳಾಯ್ಲ್ ಸೂಳಾಯ್ತುಡವವಳ ಬಳಿಗಾಟ ಕಮ್ಮಟ ನುಡಿಗ ಕುಂಬಟ ಕಂಚುಗಾಱರ ಕೇರಿ ಮೆಱೆದಿಹವು (ಶಾಕ್ಕೃಥಾ. ೨-೮). [ ನಡೆ₁ + – ವಣಿಗ ]

**ನಡೆವಳೆ** (ನಾ). ಒಂದು ಬಗೆಯ ಬಳೆ: ಇಡುವಳೆ ಸಿಡಿವಳೆ ಕೀಱುವಳೆ ನಡೆವಳೆ . . . ಬಿಡುವಳೆಗಳೆನಿಪ್ಪುವೆಸೆದುವಾ ಬೇಂಟಗರೊಳ್ (ಶಬಶಂ. ೩-೨೪). [ ನಡೆ ? + ಬಳೆ₁ ]

**ನಡೆವಳಿ₁, ನಡವಣಿ, ನಡವಳಿ, ನಡಾವಳಿ** (ನಾ). ೧. ನಡೆಯುವಿಕೆ; ನಡಿಗೆ: ನಡೆವಳಿಗಳಿಂದೆ ಪೊಡವಿಯನು ನಗ್ಗಿಪ ಹಸ್ತಿಗಡಣ (ನವಪುೂ. ೩೦-೨೬). ೨. ನಡವಳಿಕೆ; ವ್ಯವಹಾರ; ನಡತೆ; ವರ್ತನೆ: ಬಿಕ್ಕೆಯಂ ಬೇಱುವಮನಂಡಡವಿಯೊಳಗಿರ್ಪ ಮುನಿಗಳ ನಡೆವಳಿಯತ್ತೆತ್ತ ದುವತಿ ಜನದನುರಾಗಂ (ಕಾದಂಪೂ. ೮೦೫); ಪಟಿಯಂ ಕೇಳ್ದಿನೊ ಮೇಣ್ಣಡವ ಟಿ[೪]ಯಂ ತಪ್ಪಿದೆನೊ ಕಾಣೆ ಕಣ್ಣಿಂದಂ ಕೂರ್ತಲ್ಲಿ ವರಂ ಬಗೆದನೊ ವಚ್ಚಟಿದೆನೊ ಮೇಟ್ಟೂಡಿ ನಿನ್ನೊಳಂಗಾಧಿಪತೀ (ಗದಾಯು. ೩-೧೪); ☞ ಇದನ್ನು ಪ್ರಾಸಕ್ಕಾಗಿ 'ಟ' ವನ್ನಾಗಿ ತಿದ್ದಿಕೊಂಡಿರಬಹುದು; ಹಗಲಿರುಳು ಉದಯ ಬೈಗುಗಳು ಧರ್ಮವೆ ಎಂಬಿವು ಮನುಷ್ಯರ ನಡೆವಳಿಯನಱಿವುವು (ಪಂಕಶಂ. ೧೭೨-೧೦); ಪರವಧುಗಳಿಪುವುದುವಿಹಂ ಪರವಟಿಗುಂ ನಿನ್ನ ಮಹಿಮೆಗಿದು ನಡೆವಳಿಯೇ (ಪಂರಾಮಾ. ೯. ೦೧೫); ನಡೆವಳಿಯೊಳ್ ತನ್ನ ಸಮಂಬಡೆವಾರುಂ ನಡೆದರಿಲ್ಲ (ಪುಷ್ಪಪು. ೧-೨೯); ಹರಿಯ ಚಕ್ರವ ತುಡುಕಿಸುವೆ ವಾನರಪತಾಕನ ರಥವ ಹಿಂದಕೆ ಮುರಿಯಲಿಸುವೆನು ಮಹಿಮಂಬ್ಬರ ನಡೆವಳಿಯ ಕೆಡಿಸಿ (ಕುವ್ಯಾಭೀ. ೧-೪೧); ನಡೆವಳಿಯ ನೋಡಿದಿರೆ ಲೋಗರ ಮಡದಿಯರು ತನ್ನವರು ಅಕ್ಕನ ಕಡಲು ಕೃಷ್ಣನ ನಂಬಲಿಹಪರವಿಲ್ಲ (ಕುವ್ಯಾದ್ರೋ. ೧೯-೦೫); ನುಡಿಗೆ ನಾಚಿದನರಸ ಹಂಸದ ನಡೆ[ಪಾಠಾಂ. ಡ]ವಳಿಗೆ ಮೆಚ್ಚಿದನು (ನಳಚ. ೨-೨೦). ೩. ಸಂಪ್ರದಾಯ; ಪದ್ಧತಿ; ರೂಢಿ: ಹಿರಿಯರೆಲ್ಲರ್ನಡೆದ ನಡೆ[ಪಾಠಾಂ. ಡ]ವಳಿಯನೊಲ್ಲೆನೆಂಬುದು ಬಲ್ಲತನವಲ್ಲು (ವೃಷವಿ. ೩-೩೨೮.) ೪. (ಸಂಘ, ಸಂಸ್ಥೆ ಮುಂತಾದುವುಗಳ ಅಧಿವೇಶನಗಳಲ್ಲಿ ನಡೆದ) ಕಾರ್ಯಕಲಾಪ, – ಕಾರ್ಯಕ್ರಮ ಮತ್ತು ಅದರ ವರದಿ: "ಕಾರ್ಯ; ವರ್ತನೆ; ನಡವಳಿ" (Proceeding. ಇಂಕನಿ). **ನಡವಣಿ**: ೨. ಧರ್ಮದ ನಡವಣಿಗೆ ಮೆಚ್ಚಿದೆನು ಸತ್ಯವ ಕೆಡದವೊಲು ರಕ್ಷಿಸಿದೆ (ತಿಮ್ಮಭ. ೧-೩೪). **ನಡವಳಿ**: ೨. ಅವರವರ ದಯ್ಯದಿಂದಮನವರ ವರಾಗಮದೊಳವರ ನಡವಳಿಗಳ [ಪಾಠಾಂ. ಕಥೆಗಳೊಳಂ] ನೋಡುವಡವೆ ದೂಷಿಸಿದವುವಿನ್ನವರನ್ನರ್ನುಡಿಯೆ ಮುಳಿವರಾ ಸಮಯದವರ್ (ಸಮಪ. ೮-೨೦೭); ಅಳವಟ್ಟ ಹಿರಿಯ ಸಿರಿ ನಲ್ಲಳ ನಡ [ಪಾಠಾಂ. ಡೆ] ವಳಿಯೊಳ್ಳು . . . ಮನಂಗೊಳ್ಳತಿರೆ ವಲಕಾಲಮರಸುಗೆಯ್ಯುತ್ತಿರ್ದೈ (ವರ್ಧಪು. ೧೦-೬೪); ಕುಲವಧುವಿನ ನಡವಳಿಯೊಳ್ ಕುಲಮುಮಾ ಚಲಮುಮಾ ಪತಿಬ್ರತಾಗುಣದಿಂದಂ ನೆಲಸಿಕ್ಕುಮ್ (ಶಾಸನ. XX, ೨೧೮-೯೯; 1228); ವನಧಿಪನ ಗಾಂಭೀರ್ಯ ರವಿನಂದನನ ನಡವಳಿ ಧರೆಯ ಸ್ಥೈರಣೆಯನಿತು ದಶರಥಸಾರ್ವಭೌಮಂಗಲ್ಲದಿಲ್ಲೆಂದ (ತೊರರಾ. ೧-೩-೨೬). **ನಡಾವಳಿ**: ೨. ನಮ್ಮ ನಡಾವಳಿಗೆ ನಮ್ಮ ಪುರಾತರ ನುಡಿಯೆ ಇಪ್ಪವಯ್ಯಾ (ಸಿದ್ಧವ. ೪. ೫೬೦-೮೫೭); ಜಗತ್ತಿನ ರೀತಿನೀತಿ ನಡತೆ ನಡಾವಳಿಯ ಅನುಭವ ನನಗೆ ಸಾಕಷ್ಟಾಗಿದೆ (ಹರಿಚೇ. ೪೫); ಇದೆಲ್ಲಕ್ಕಿಂತಲೂ ಪ್ರಭಾಕರನ ಮನಸ್ಸನ್ನು

ಗಾಸಿ ಮಾಡಿದುದು ನಿರ್ಮಲೆಯ ನಡಾವಳಿ (ಶೇಮೋಶ. ೧೦೮) ; ಅವರಿಗೆ ಒಳ್ಳೇ ನಡಾವಳಿಯ ಬಯಕೆಯು ಹೆಚ್ಚಾಗುವ ಹಾಗೆ ತಕ್ಕ ಕಾರಣವನ್ನೇ ನೋಡಿ ಕೊಡಬೇಕು (ಮುಂಬಯಿ. ೩-೯೩) ; ಕ್ರಮಶುದ್ಧ ಹೇವವವೂ ನೀತಿ ನಡಾವಳಿಗಳೂ ವೊಳೆಯುವಂತೆ ಪ್ರೋತ್ಸಾಹಿಸಿದರು (ಕಪಾ. ೬-೧೨೦); ೩. ಕುಮ್ರಿ ಕಡಿಯುವ ನಡಾವಳಿಯು ಧಾರವಾಡಜಿಲ್ಲೆಯಲ್ಲಿಲ್ಲ (ಕಥಾಗ. ೩೪) ; ಬೈಲುಸೀಮೆಯಲ್ಲಿ ಮಳೆ ಕಡಿಮೆ ಬೀಳುವದರಿಂದ ವರಾಗೀಮನೆ ಗಳನ್ನು ಕಟ್ಟುವ ನಡಾವಳಿ ವಿಶೇಷವುಂಟು (ಮುಂಬಯಿ. ೪-೧೦೮). ೫. ಧರ್ಮಸ್ಥಳದಲ್ಲಿ ಹನ್ನೆರಡು ವರ್ಷಗಳಿಗೊಮ್ಮೆ ನಡೆಯುವ ಒಂದು ಉತ್ಸವ,-ಹಬ್ಬ : ಉಡುಪಿಯಲ್ಲಿ ಎರಡು ವರ್ಷಗಳಿಗೊಮ್ಮೆ ನಡೆವ ಪರ್ಯಾಯ, ಪಡುಬಿದ್ರೆಯಲ್ಲಿ ಜರಗುವ ಢಕ್ಕೆಬಲಿ, ಧರ್ಮಸ್ಥಳದಲ್ಲಿ ಹದಿನೆರಡುವರ್ಷಗಳಿಗೊಮ್ಮೆ ನಡೆವ 'ನಡಾವಳಿ' ಎಂಬ ಉತ್ಸವ . . . ಇವುಗಳು ಪ್ರಾಮುಖ್ಯವಾದುವುಗಳಾಗಿವೆ (ತುಳುನಾ. ೨೫೩).
[ ನಡೆ₁ + :- ವಳಿ₁. / ತಮಿ. ನಟವಟ, ನಟ್ಟಿವಟಿ; ಮಲ. ತೆಲು. ನಡವಡಿ; ತುಳು. ನಡಾವಳಿ, ನಡುವಡಿ ]

**ನಡೆವಳಿ₂** (ನಾ). ನಡೆಮಡಿ; ನಡೆಯುವ ದಾರಿಗೆ ಹಾಸುವ ಮಡಿಬಟ್ಟೆ : ಸುಗ್ಗಿಯೊಳ್ ಮದುವೆಯನೆ ಕುಳಿರಗಸ ನಡೆವಳಿಯ ಹಿಗ್ಗಿನಿಂ ಬಿಡಿಸುವನು ಕೊಳೆದಡಿಯ ಕೊಳೆಯಂ (ಕಾಲೂಶ. ೭೯-೦೩೪) ; "ನಡೆವಳಿ=ನಡೆಬಟ್ಟೆ (ಮದುವೆಯಲ್ಲಿ ಮಂಟಪದ ಸುತ್ತು ಹಾಕುವ ಬಟ್ಟೆ)" (ಕಾಲೂಶ. ಅಡಿಟಿ).
[ ನಡೆ₁ + ವಳಿ₂ (<ವಟ್ಟಿ₂) ]

**ನಡೆವಳಿಕಾರ** 'ನಡೆವಳಿಕಾಟಿ' ನೋ.

**ನಡೆವಳಿಕಾರ್ತನ** (ನಾ). ನಡತೆ ; ನಡವಳಿಕೆ ; ಸಂಪ್ರದಾಯ : ಶ್ರೀರಾಜ ಒಡೆಯರವರ ಸನ್ನಿಧಾನವು ಒಡ್ಡೋಲಗಕ್ಕೆ ಬಿಜಯಮಾಡಿದೊಡನೆಯೇ ಆಸ್ಥಾನಿಕರೆಲ್ಲ ಇದಿರೆದ್ದು ತಮ್ಮ ತಮ್ಮ ಮಾನಾನುಗುಣವಾಗಿ ನಮಸ್ಕರಿಸಿ ಗೌರವಿಸಿಕೊಳ್ಳಬೇಡವ ? ಓಲಗದ ನಡೆವಳಿಕಾರತನವಿದು (ಪಟ್ಟಾಭಿ.೩೮-೦೬).
[ ನಡೆವಳಿಕಾರ (<ನಡೆವಳಿಕಾಟಿ) + - ತನ ]

**ನಡೆವಳಿಕಾರ್ತಿ** (ನಾ). ನಡವಳಿಕೆಯನ್ನು ತಿಳಿದವಳು ; ಆಚಾರ ವಿಚಾರ ಗಳನ್ನು ಬಲ್ಲವಳು : "ನರೀ, ನಾರೀ, ಈ ೨ ನಡೆವಳಿಕಾರ್ತಿ" (ಕಾಶಬ್ದ. ೨೪೬). [ ನಡೆವಳಿಕಾರ (<ನಡೆವಳಿಕಾಟಿ) + - ತಿ₁ (<- ಇತ್ತಿ) ]

**ನಡೆವಳಿಕಾಟಿ,** ನಡವಳಿಕಾರ, ನಡವಳಿಕಾಟಿ, ನಡೆವಳಿಕಾರ (ನಾ). ೧. ನಡವಳಿಕೆಯನ್ನು ತಿಳಿದವನು ; ಆಚಾರ, ವ್ಯವಹಾರಗಳನ್ನು ಬಲ್ಲವನು ; ನಡತೆವಂತ : ಕಾಟಿಕ್ಕೆ-ನಡೆವಳಿಕಾಟಿಂ, ನುಡಿವಳಿಕಾಟಿಂ . . . ಪಗೆಕಾಟಿಂ, ಬಗೆಕಾಟಿಂ (ಕಮಿದ. ೦೯೯ ಪ್ರಯೋ). **ನಡವಳಿಕಾರ** : ೧. "ನರನ್, ನರ್ತಾ, ನ್ಯಾ, ನರಃ, ಈ ೪ ನಡವಳಿಕಾರಂ" (ಕಾಶಬ್ದ. ೨೪೬). **ನಡವಳಿಕಾಟಿ** : ೨. (ದೇವಸ್ಥಾನ, ಮನೆ ಮೊದಲಾದುವುಗಳ) ವ್ಯವಹಾರಗಳನ್ನು ನೋಡಿಕೊಳ್ಳುವವನು,-ಮೇಲ್ವಿಚಾರಣೆ ನಡೆಸುವವನುಂ : ಪೂಜಾರಿಗ ಪರಿಚಾರಕರೆಳಗಾದ ನಡವಳಿಕಾಟಿರ ಜೀವಿತಕ್ಕಂ . . . ಮಹಾಜನಂಗಳು ಬಿಟ್ಟ ದತ್ತಿ (ಮೈಶಿ. ೦೯೩೨. ೯೬-೩೫ ; 1181) ; ರಾಜಾರ್ತ್ಥವನೂ ತೀಱಿಸಿಕೊಡುವರು ನಡವಳಿಕಾಟಿ ಪ್ರಭುಗಳು (ಸೌಇಇ. IX-11, ೪೩೩-೩೩ ; 1408) : ತಿಂಮಣರಾಯರ ಮನೆಯ ನಡವಳಿಕಾಟಿಂ ಹೊಂನಪ್ಪನಾಯಕರು (ಮೈಶಿ. ೦೯೩೫, ೨೩-೨ ; 1618). **ನಡೆವಳಿಕಾರ** : ೧. "ಸರ್ತಾ, ಸರಕಃ, ಈ ೨ ನಡೆವಳಿಕಾರಂ"(ಕಾಶಬ್ದ. ೭೩).
[ ನಡೆವಳಿ₁ + - ಕಾಟಿ ]

**ನಡೆವಳಿಕೆ,** ನಡವಳಿಕೆ, ನಡಾವಳಿಕೆ (ನಾ). ೧. ನಡತೆ ; ನಡೆನುಡಿ ; ಆಚಾರ, ವ್ಯವಹಾರ ; ವರ್ತನೆ: ಆದರ ಕೃತಿಯು ಏನಾದರೂ ನುಡಿವಳಿಕೆ; ಚಾರಿತ್ರ್ಯವು ನಡೆವಳಿಕೆ. ನುಡಿವಳಿಕೆಯು ಅತ್ಯುಚ್ಚವಾಗಿ ನಡೆವಳಿಕೆಯು ಅದರ ಕನ್ನಡಿಯಂತಿದ್ದರೆ, ಆ ಮನುಷ್ಯನು ಸಾಧುವೆಂದೆನಿಸಿಕೊಳ್ಳುವನು (ಸಾಹಿಸಂ. ೩) ; ಅಂದೆ ನೆಲವು ಪಡೆದೀತು ಅವಿರಜೀವಂತಶಾಂತಿಯನ್ನು ಎಂದು ಸಾಢ ನಡೆವಳಿಕೆಯಲ್ಲಿ ನೆಲೆಗೊಂಬುದೊಂದೆ ನಿಜವು (ಅರಳು.೧೬೩-೨) ; ನಡೆವಳಿಕೆಗಳು ಮತ್ತೂ ಉತ್ಸಾಹಗೊಂಡು (ಮುನಿನಾ. ೭೯). ೨. ರೂಢಿ ; ಪದ್ಧತಿ ; ಸಂಪ್ರದಾಯ : ನಮ್ಮ ಸೀಮೆಯಲ್ಲಿ ನಡೆವಳಿಕೆ ಬಂದಿರುವ ಅಳತೆಯು ಯಾವುದನ್ನು ಅನುಸರಿಸಿರುವುದು (ಭೂಮಿಅ. ೧). ೩. (ಸಂಘ, ಸಂಸ್ಥೆ, ಸಭೆ ಮೊದಲಾದುವುಗಳ ಅಧಿವೇಶನಗಳಲ್ಲಿ ನಡೆದ) ಕಾರ್ಯಕಲಾಪ,-ಕಾರ್ಯಕ್ರಮ ಮತ್ತು ಅದರ ವರದಿ : ರಾಯಲ್ ಸೊಸೈಟಿಯ ನಡೆವಳಿಕೆಗಳು (Proceedings of Royal Society. ಇಂಕಿನಿ). **ನಡವಳಿಕೆ** : ೧. ಅಂದಿನ ತನ್ನ ನಡವಳಿಕೆಯಲ್ಲೇನೋ ಕಳಂಕವಿದೆಯೆಂದು ಮನಸ್ಸು ಹೇಳುತ್ತಿತ್ತು (ಮುಂಬಳು. ೩೭) ; ಆದರೆ ನಿಮ್ಮ ನಡವಳಿಕೆಗಳು ಅರ್ಥವಾಗದೆ ಹೋದರೆ ಅವು ತಪ್ಪುಮಾಡುತ್ತವೆ (ಕಾಲಮ. ೧೯೨) : ಅರ್ಥವಾಗದ ನಡವಳಿಕೆಯ ಕಕ್ಕೆ (ವಾತ್ಸಲ್ಯ. ೯೮) ; ವಿದ್ಯಾರ್ಥಿಗಳು ತಮ್ಮ ನಡವಳಿಕೆಯನ್ನು ಉತ್ತಮಪಡಿಸಿಕೊಳ್ಳಬೇಕೆಂಬ ಹುರುಪಿನಲ್ಲಿರುವಾಗ ಅವರನ್ನು ತಿದ್ದುವುದೂ ಶಿಕ್ಷಕನ ಕರ್ತವ್ಯ (ಕ್ರಿಯಾಶಿ. ೨೮). ೩. ನಡವಳಿಕೆಗಳು (Proceedings. ಪತ್ರಿನಿ. ೬೪). **ನಡಾವಳಿಕೆ** : ೨. ವ್ಯವಸಾಯದಲ್ಲಿ ಹಿಂದಿನ ನಡಾವಳಿಕೆ ಹೋಗಿಲ್ಲ (ಕಥಾ).
[ ನಡೆವಳಿ₁ + - ಕೆ./ತಮಿ.ನಟವಟಕ್ಕೈ ; ತೆಲು. ನಡವಡಿಕ ]

**ನಡೆವಳಿಗ** (ನಾ). (ಅರಮನೆ, ದೇವಸ್ಥಾನ ಮೊದಲಾದುವುಗಳ) ವ್ಯವಹಾರಗಳನ್ನು ನೋಡಿಕೊಳ್ಳುವವನು,-ಮೇಲ್ವಿಚಾರಣೆ ನಡೆಸುವವನು ; ಪಾರುಪತ್ಯಗಾರ : ಪಡೆವಳ್ಳರ ಪರದೇಶಾಧೀಶರ ನಡೆವಳಿಗರ ನಲ್ಮೆಯ ಸಚಿವರ . . . ಪೊಸಪೂವಲಿಗುಡುವ ಮಡದಿಯರ ವೊತ್ತಂ ಕಣ್ಗೊಪ್ಪಿದುದಾವುದಯದೊಳು (ಜಯಶಾ. ೧೨-೦೩). [ ನಡೆವಳಿ₁ + - ಗ₂ ]

**ನಡೆವಳಿದಪ್ಪು** (ನಾ). ನಡೆವಳಿಕೆಯ ತಪ್ಪು ; ನಡತೆ, ಆಚಾರ, ವ್ಯವಹಾರ ಗಳಲ್ಲಿಯ ದೋಷ : ನಡೆವಳಿದಪ್ಪು ಪ್ರಾಪಂಚಿಕರಿಗಿಲ್ಲದೆ ಜ್ಞಾನಮಯ ಗಿರದು (ಗಗಶಾ. ೦೬-೯೬). [ ನಡೆವಳಿ₁ + ತಪ್ಪು₃ ] .

**ನಡೆವೆಣ** (ನಾ). ನಡೆಯುವ ಹೆಣದಂಥವನು ; ಸತ್ತಂತೆ ಇರುವವನು ; ನಿರ್ವೀರ್ಯ ; ಜೀವಚ್ಛವ : ನಡೆವೆಣನ ನುಡಿವೆಣನ ಸಂಸಾರವೇನವನ (ಬಸವ. ೦೫೭) ; ಸಂಸಾರವೆಂಬ ಮಹಾವ್ಯಾಧಿ ಬಾಧಿಸಿ ನಡೆವೆಣನ ಮಾಡಿ ಕಾಡುತ್ತಿದೆ ನೋಡಯ್ಯಾ (ವಚನ. ೯೩-೦೭೧) ; ಕೇಳು ನಡೆವೆಣನೇ ದ್ರುಪದ್ರನು ಸಾಲದೆನಿಸಿದ ದಕ್ಷಿಣೆಯ ಯಜ್ಞಾಗ ನಿಪ್ಫಲವೆಂದು ನುಡಿದನು ರಾಯ ಕೌಂತೇಯ (ಕುವ್ಯಾಅ. ೨೩-೯೩) ; ತೊಡೆಯನೇಱಲು ಬಂದ ಮಗನನು ಮಡದಿ ಪಾತಕಿ ಧೃದು ಭಂಗಿಸಿ ಜಡಿದು ನೂಕಲು ನೋಡುತ್ತಿದ್ದನು ಕಾಣದವನಂತೆ ನಡೆವೆಣನಪಿನ್ನೇನ ಕೇಳುವೆ (ನಿಕಾಗ. ೪-೭-೨೦) ; ಸತ್ತಿದೆ ಯಾಡುವ ನಡೆವಣನೊಲು ಕೈಹೊತ್ತುಕೊಂಡಿದೆ ತೆರಳಿದನು (ಮೋಹಿತ. ೯-೨೦) ; ಗುಣ ಜಪ್ಪನ ಕುಲ ರೂಪುಗುಂದಿದ ನಡೆವೆಣಹೀಯಲಾಗದು ಪೆಣ್ಣ (ಹರಿಬ. ೩-೦೭). 'ನುಡಿವೆಣ' ಪರಾ. [ ನಡೆ₁ + ಪೆಣ ]

**ನಡೆವೆಱು** (ಕ್ರಿ). ನಡಗೆಯನ್ನು ಹೊಂದಂ ; ಚಲನೆಯನ್ನು ಪಡೆ : ಪ್ರಾಯಿಂ ಕೊಸಾದೊಡೇನೀ ಸಾಯಕಂ ಕೊಸಕ್ಕುಮೆ ! ಜಗದೆ ನೀವೆ ಬಲ್ಲಿಳ್ಳೆರ್ ! ಅಂ ನಡೆವತ್ತು ಸೀರ್ಪುಟಾಗವೆ ! (ರಾಮಾಶ್ವ. ೦೩೪-೨೦).
[ ನಡೆ₁ + ಪೆಱು₁ ]

**ನಡೆಸರ** 'ನಡೆಸಾರ' ನೋ.

**ನಡೆಸಾರ,** ನಡೆಸರ (ನಾ). ೧. (ನದಿ, ಕಂದಕ ಮೊದಲಾದುವನ್ನು ದಾಟಲು ಕಟ್ಟುವ) ಕೃತಕವಾದ ಮರ, ಬೊಂಬು ಮುಂತಾದುವು ಗಳಿಂದ ಕಟ್ಟುವ ಸೇತುವೆ: ಕೋಟೆಯನ್ನು ಹತ್ತುವುದಕ್ಕೆ ಈ 'ಸಾರ'ಗಳನ್ನು ಕಟ್ಟುತ್ತಿದ್ದರು . . . ಸಾರ ಕಟ್ಟುವುದನ್ನು ಅನೇಕರು ನೋಡಿರಬಹುದು. 'ನಡೆಸಾರ' ಎಂಬುವು ಅಗಳನ್ನು ದಾಟಿಹೋಗುವುದಕ್ಕಾಗಿ ಉಪಯೋಗವಾಗು

ತ್ತಿದ್ದವು (ಕರ್ಣಾಟ. ೩೮). ೨. ಕೋಟೆ ಮೊದಲಾದುವನ್ನು ಏರಲು ತಯಾರಿಸಿದ ಒಂದು ಸಾಧನ : ದುರ್ಗಕ್ಕೆ ನಿಚ್ಚಣಿ ಸಾರ್ಚುಂದೊಳೆ ವೀರಸೇತು ನಡೆಸಾರಂ ಬದ್ಧರಂ . . . ಪಡಿಗೋಂಟೆಯೆಂಬ ಬಹುಕೋಟಾ ಯಂತ್ರಸಾಮಗ್ರಿ ತಿಂತಿಣಿಗೊಂಡಾಂತಿರೆ (ಅಜಿಂಪು. ೧೧-೮೩); ನಡೆಸಾರಂ ನೆಲವಾಳಿಗೆ ಪೆಡಕೆಡವುವ ಡೆಗ್ಗೆ ಬದ್ದಿರಂಗಳಿನಾರ್ದಂದೆಡೆಗುಡದಧಟಿಂ ಕೋಂಟೆಯನಡದರ್ ರಿಪುಭಟರನಿಕ್ಕಿದುಂ ಕಲಿಕಾವಂಂ (ತ್ರಿಪುವಿ. ೫-೧೧). ನಡೆಸರ : ೨. ಭೈರವ ಬದ್ಧರದ ನಡೆಸ [ಜಾತಂ. ವ]ರದ ಡುಬ್ಬುಕ ಡೊಕಣಿಗಳನು ತೂಱಿದರು ನಭಕೆ (ಕೂರಕಾ. ೬-೦೦-೦೪). 'ನಡೆಸೇತು', 'ಸಾರಮಾರಿ' ಪರ್ಯಾ. [ ನಡೆ₁ + ಸಾರ₁ ]

ನಡೆಸು 'ನಡೆಯಿಸು' ನೋ.

ನಡೆಸೇತು (ನಾ). ನಡೆಯುವ ಸೇತುವೆ; ಚಲಿಸುವ ಸೇತುವೆ : ಕೇತನಾವಳಿಯತ್ತ ವಾದ್ಯ ಘೂರ್ಣಿಸೆ ನಡೆಸೇತುಗಳಂತಾನೆ ನಡೆಯೆ ಭೂತಳ ತುಂಬಿ ಪಾಯ್ದುಳಿ ಬರೆ ಬಂದು ಏನೀಕಪುರದೊಳಾಗ ಹೊಕ್ಕ (ಭರತ. ೫೮-೩೬). 'ನಡೆಸಾರ' ಪರ್ಯಾ. [ ನಡೆ₁ + ಸೇತು ]

ನಡೆಸೊಡರು (ನಾ). (ಯಾರಾದರೂ ಓಡಾಡುವಾಗ ಕೈಯಲ್ಲಿ ಹಿಡಿದು ಮುಂದೆ ದಾರಿ ತೋರಿಸಲು ಉಪಯೋಗಿಸುವ) ದೀವಟಿಗೆ : ನಿನ್ನಂಗಣದಲ್ಲಿ ದೊಗಳುವ ಶ್ವಾನನಯ್ಯಾ ನಿನ್ನ ಮನೆಯ ನಡೆಸೊಡರಯ್ಯಾ (ಪಚಸಂ. ೦೯೬-೪೮). [ ನಡೆ₁ + ಸೊಡರು (<ಸೊಡರ್) ]

ನಡೆಹ, ನಡಹ (ನಾ). ೧. ನಡೆಯುವಿಕೆ ; ಚಲಿಸುವಿಕೆ : "ಗತಿಃ, ವಿಂಖಃ, ವಿಹಾರಃ, ಪರಿಸರ್ಪಃ, ಪರಿಕ್ರಮಃ—ಈ ೫ ನಡೆಹ" (ಹಲಾಯು. ೦೨೦-೪೧). ನಡಹ : ೨. ನಡೆದುಕೊಳ್ಳುವಿಕೆ ; ವ್ಯವಹರಿಸುವಿಕೆ : ಸ್ವತಂತ್ರ ವೃತ್ತಾನಂ ವಿವೃತ್ತಿಯನರೊಲಿದುಂತೆ ನಡಹಮುಕ್ಕುಂ (ಮುಂಗರಾ. ೦೩೩-೩೦). [ ನಡೆ₁ + – ಹ₂ ]

ನಡ್ಡಿಮೂಗು (ನಾ). ಚಪ್ಪಟೆಯಾದ ಮೂಗು; ತಗ್ಗಿದ ನಾಸಿಕ : "ಅವಟೀಟಃ, ಅವನಾಟಃ, ಅವಭ್ರಟಃ, ನತನಾಸಿಕಃ — ೪ ಕೊಳೆಮೂಗಿನವನ ಹೆಸರುಗಳು, ಚಿಕ್ಕಮೂಗುಳ್ಳವನು, ನಡ್ಡಿಮೂಗುಳ್ಳವನು" (ಸಿದ್ಧಾಂತಿ. ೦೫೭). [ ←ತೆಲು. ನಡ್ಡಿಮುಕ್ಕು ]

ನಡ್ಯ (ನಾ). ಜೊಂಡು ಹುಲ್ಲಿನ ರಾಶಿ : "ನಡ್ಯಾ, ನಡಸಂಹತಿಃ — ಹೊಲ ಗದ್ದೆಗಳ ಬಗುವುಗಳಲ್ಲಿಯೂ, ತೋಟದ ಸಾರಿಗೇ ಬದುವುಗಳಲ್ಲಿಯೂ ಗುಂಪಾಗಿ ಬೆಳೆದಿರುವ ಹುಲ್ಲುಗಳ ಸಮೂಹ" (ಸಿದ್ಧಾಂತಿ. ೦೩೩). [ ಸಂ. ನಡ್ಯಾ ]

ನಡ್ವಲ, ನಡ್ವಳ (ನಾ). ಜೊಂಡುಹುಲ್ಲು ಹೆಚ್ಚಾಗಿ ಬೆಳೆದ ಭೂಮಿ : "ನಡ್ವಾನ್, ನಡ್ವಲಃ, ನಡಪ್ರಾಯಃ,—ಕತ್ತಹುಲ್ಲು ಬಹಳವಾಗಿರುವ ದೇಶದ ಹೆಸರು, ಹುಲ್ಲುನೆಲದ ಪ್ರಾಂತ್ಯವು" (ಸಿದ್ಧಾಂತಿ. ೮೪). ನಡ್ವಳ : "ನಡ್ವಳಂ, ನಳಸಂಯುತಂ—ಈ ೨ ನಾ(ಣ)ನಲುಳ್ಳ ಭೂಮಿ" (ಹಲಾಯು. ೨೬-೪); "ನಡ್ವಳಂ ನಳಯುತಂ ನಳ್ಳುವೆಲನಕ್ಕು" (ಮುಂಗರು. ೨೮-೨). [ ಸಂ. ]

ನಡ್ವಳ 'ನಡ್ವಲ' ನೋ.

ನಣ್ಕೆ (ನಾ). ನಂಟತನ; ಬಾಂಧವ್ಯ : ಸಂಸಾರದಪಾಯಮುಮಂ ನಿನ್ನಜೀವಿನ ಬಲ್ಮೆಯುಮಂ ಧೈರ್ಯದೊಳಾದ ಮಾಣ್ಕೆಯುಮಂ ಕಂಡಂ (ಜೀವಸಂ. ೨೩-೪೭೫). [ <ನಣ್ಪು ? ]

ನಣ್ಪು (ನಾ). ೧. ನಂಟು ; ಬಾಂಧವ್ಯ ; ಸಂಬಂಧ : "ನಣ್ಪು ನಂಟು" (ಕರ್ಣಾನಿ. ೨೩); ಕುಲಜನುಮಲ್ಲಂ ನಣ್ಪಿನ ಬಲಮುಂ ತನಗಿಲ್ಲ ಕಣ್ಗಮೋಳಿದನಾರೊಳ್ ನೆಲಸಿರನೆಲ್ಲಿಯುಮ[ವಸ]ಂ ಚಲವೆಂದು ಪತ್ತುವಿಡದದೊಂದಾಂಟು ಗುಣಂ (ಶಬ್ದ. ೩-೬೭೫); ಬೆಳ್ಗಟ್ಟಿಯ ನರಸರ್ಕಳೇಱುವುದಂ ಕಂಡುದಱಿಂದುತ್ತಮಕುಲದವರ್ಗಳ್ಗೆ ಕುಲಜರಲ್ಲದವರೊಡನೆ ಮದುವೆಯೊಳ್ ಕೊಟ್ಟ ಸಣ್ಪುಗಳಕ್ಕುಂ (ಪಡ್ಡಾ. ೭೬-೦೩); ಸುಯೋಧನನೆನಗೊಳ್ಕೆಯ್ದು ಕೃತಮಂ ಪೆಱಗಿಕ್ಕಿ ನೆಗೞ್ತೆ ಪಱಸೆ ಪಣ್ಪಿನ ನೆವದಿಂದೆ ಪಾಂಡವರನಾನೊಳಪೊಕ್ಕೊಡೆ ನೀಮೆ ಪೇಸಿರೇ (ಪಂಪಭಾ. ೯-೬೮); ರಾಗದಿಂದಿನ್ನಿವರ್ಗೆ ಮದುವೆಯುಂ ಮಾಟ್ಟುದೆಂದಟ್ಟಿದಂ ನಿಮ್ಮನುಜನ್ನಂ ನಿಮ್ಮ ನಣ್ಪಂ ಬಯಸಿ ಪದೆಪಿನಿಂದಮ್ಮ ವಿದ್ಯಾಧರೇಂದ್ರಂ (ಪಂಪರಾಮಾ. ೧೦-೧೦೪); ಎನ್ನವರೆಂದು ಪುತ್ರಪಿತೃಮಿತ್ರ ಕಳತ್ರದ ನಣ್ಪು ನಾಡೆ ಸೋವಂ ನಿನಗುಂಟುಮಾಡೆ (ಜೀವಸಂ ೬೮-೦೨); ಪೆಂಪಿನ ಸೊಂಪಿನ ನಣ್ಪನಾಳ್ದು ಪೊಂಗೊಡನನಮಾರ್ಚಿದಂತೆಸೆವುವಾ ಲಲಿತಾಂಗಿಯ ಪೀವರಸ್ತನಂ (ಕಾವ್ಯಸಾ. ೩೦೫); ನಿನ್ನಯ ಮಱುಕಕೆ ಒಡಮುಱುಗಿದೆನಾನ್ ಎಮ್ಮಯ ನಣ್ಪಂದಾನ್ ಸೆಳೆಗೊಂಡೆನ್ (ಲಧ್ವಪ. ೦೭-೩೪೦). ೨. ಸ್ನೇಹ; ಕೆಳೆ : ನೋಡು ನಣ್ಪಂ ನಿಮಗಮೆಮಗಮಾಮ್ನಾಯದಿಂ ಬಂದುದಿಂತೀ ಜನಧರ್ಮಂ (ಆದಿಪು. ೨-೨೦); ಪಗೆಗೆ ಕಣೆಯೊಂದುಂಟೇ ನಣ್ಪಂಗಮಾಗರ ಮುಂಟೆ ನೀಂ ಬಗೆಯ ಪಗೆಯುಂ ನಣ್ಪಂ ಕೆಯ್ಕೊಂಡ ಕಿಚ್ಚುದಿನಲ್ತೆ ಪುಟ್ಟುಗುಮರಸುಗಳ್ಗೆ (ಪಂಪಭಾ. ೧೩-೧೦); ಒರ್ಮೆ ಬಂದೆನಗೆ ಮಾಟ್ಟುದು ಪೆರ್ಮೆಯ ನಿಮ್ಮ ನಣ್ಪನಿಂ ಜವಿಯಿಸಿದೀ ಕದರ್ಥನೆಗೆ ಸೈರಿಪುದು (ಕಾದಂಬ. ೧೯೩); ಪಲಕಾಲದ ರಾಕ್ಷಸವಾನರವಂಶದ ನಣ್ಪನ್ನಿದುಮಱಿದುದೆಂಬುದು ಲೋಕಂ (ಪಂಪರಾಮಾ. ೦೦-೦೬೨); ಮತ್ತೊರ್ವರ್ ನೀನೀಗಳಾಕೆಯ ನಣ್ಪನೇಕೆ ಮಾಣ್ದೆಯೆಂದಾ ಕೆಳೆಯಂಗಿಂತೆಂದು (ಲೀಲಾವ. ೨-೦೦೦೮). ೩. ನಂಬಿಕೆ ; ವಿಶ್ವಾಸ : ಆಗಳಾ ಮಾನವೇಂದ್ರನ ಮದಗಜಮಂ ಸದೆವಂತೆ ಮದಗಜಮಂ ಮಾಱಿವೇವನಾರ್ಪಿಂ ಸದೆಯ ಭಕ್ತಿಪ್ರಿಯಂ ಕಂಡು ನಣ್ಪನೊಳಕೊಂಡು ಕೊಂಡಾಡುತ್ತುಮಿರೆ (ವೃಷವಿ. ೦೨-೩೮೮). ೪. ಪ್ರೀತಿ; ಅನುರಾಗ: "ನಣ್ಪಸಲ್ಗೆಯುಂ ಪ್ರಸರಮೆಂಬುದು" (ಹಲಾಯು. ೦೩೫-೨೪) : ಪಾಂಡುರ ಕೀರ್ತಿಯ ನೆಗಱ್ಗಂ ಪಾಂಡುತನೂಭವರ ನಣ್ಪಂ ನೆಗಱ್ಗಮೆ ಬಱಿಯಂ (ಜಗವಿ. ೦೫-೫೩); ಪಡೆಪುದೆ ಬರ್ಪಮೇ ಸುತನ ವಕ್ತ್ರಮನೀಕ್ಷಿಪ ಲಲ್ಲೆಗೈವ ನಣ್ಪಿಡಿದನುರಾಗದಿಂ ನಗಿಸುವಳ್ಕಱೊಳಪ್ಪುವ . . . ಅಡಿಗಡಿಗಂ ತೊದಳ್ನುಡಿಯನಾಲಿಪ ಸೈಪು ಸರೋರುಹೇಕ್ಷಣೇ (ವೃಷವಿ. ೨-೩೩) : ತಾರೇಶಂ ನಣ್ಪಂ ಮು[ಮ]ತ್ತಾ ರೋಹಿಣಿಯಲ್ಲಿ ಕೂರ್ಪನವಳೇ ಧನ್ಯಳ್ (ಶರಚ. ೫೨-೦೨೦).
[ ನಂಟು₁ + – ಪು₂./ತಮಿ. ನಣ್ಪು; ತೆಲು. ನನ್ಪು, ನನುವು, ನನುವು ]

ನಣ್ಪುಗೆ? (ಕ್ರಿ). (?) : ಅನ್ನೆಗಂ ಮುಱಯ್ತುರಿರ್ವರುಂ ಬಂದದು ಕಾಣದೆ ಮಾಣದೆ ತಮ್ಮೊಳೋರೊರ್ವರು ನಣ್ಪುಗೆ ಕಣ್ಪರಿಗೊಟ್ಟು ಇಱಿಯಱಿದು ತಮ್ಮೊಳೆರ್ವರುಮಱಿಯಮೆಯುಂ ಬಿಟ್ಟಿರಲ್ಕೆ (ನೇಮಿಪು. ೨-೬೦೫). [? ಇದು 'ನಣ್ಪುಗೆಟ್ಟು' ಎಂಬುದರ ಸ್ಖಲಿತ ರೂಪವಿರಬಹುದು ]

ನಣ್ಪುಗೆಯ್ (ಕ್ರಿ). ಸಂಬಂಧವನ್ನುಂಟುಮಾಡು, –ಅಳವಡಿಸು : ಕಳೆಯುಂ ಪತ್ತಿಸಿ ರಾಗಮಂ ನಿಲಿಸಿ ನುಣ್ಪಂ ನಣ್ಪುಗೆಯ್ದುಂಪನಿರ್ಕೆಳಿಗೊಂಡೊಟ್ಟಿದೆಯಂ ನಿಮಿರ್ಚೆ ... . ಗೋವಳರಾಯಂ ಕೊಟಲೂದಿದಂ ನೆಗೞ್ದನಂ ಮಾಧುರ್ಯಶೌರ್ಯಸ್ವನಂ (ಜಗವಿ. ೫-೨).
[ ನಣ್ಪು + ಕೆಯ್₁ ]

ನಣ್ಪುನೆತ್ತರ್ (ನಾ). ನಂಟಿನ ರಕ್ತ ; ಸಂಬಂಧಿಗಳ ನೆತ್ತರುಂ : ನನೆಯೆಮ್ಮ ದುರ್ವಿಧಿಯ ಅಣ್ಣಂದಿರಿರ್ವರನ್ ಸಮಸಾವು ಸತ್ತರ್ ನಣ್ಪುನೆತ್ತರನಸಿಱು, ಓರೊರ್ವರಾ ಕಯ್ಯನೊರ್ಪಗಲ್ ಕೊಲೆಯಿನ್ (ಅಂತಿಗೊ. ೩-೪೭).
[ ನಣ್ಪು + ನೆತ್ತರ್ ]

ನಣ್ಪುವೆಱು (ಕ್ರಿ). ವಿಶ್ವಾಸವನ್ನು ಹೊಂದು; ನಂಬಿಕೆಯನ್ನು ಪಡೆ : ಕುಸುಮ ವಿಲೇಪನಾದಿ ಬಹುವಸ್ತುಗಳಂ ವಿಗೆ ಕೊಟ್ಟು ನಣ್ಪುವೆತ್ತಸೆವನ ನೊರ್ವನಂ ಚರನನೊಲ್ದನುಯಾಯಿಯುನಿತ್ತು . . . ಕಳುಪಿದಂ (ವೃಷವಿ. ೯-೫). [ ನಣ್ಪು + ಪೆಱು₁ ]

**ನತ** (ಗು.) ೧. ಬಾಗಿದ ; ಬಗ್ಗಿದ ; ವಕ್ರವಾದ. 'ನತಚುಂಚು' ಪರಾ. ೨. ಎರಗಿದ ; ನಮಸ್ಕರಿಸಿದ ; ವಂದಿಸಿದ : ಅತಿವಿಶದಯಶೋವೃತ್ತಂ ನತಸಕಳಾರಾತಿಜನವಿತಾನಂ ಮತ್ತಂ ವಿತತಶ್ರೀಸಂಪತ್ತಂ ಶತಮುಖ ಸದೃಶಾನುಭಾವನೊಲವಿಂ ಪೆತ್ತಂ (ಕವಿರಾ. ೨-೪೪) ; ನತನಾನಾಮರಮೌಳಿ ರತ್ನಕಿರಣಂ ನಾನಾಪ್ರಸೂನಶೇಖರದ್ಯುತಿ ನಾನಾಚಮರೀಜವಾಯು ಸಭೆಯಂ ತಳ್ತೊಪ್ಪಿಯ್ಕಲಿರ್ದಂ ಜಗತ್ಪತಿಯೊಡ್ಡೋಲಗದೊಳ್ (ಜಗವಿ. ೧-೨೬) ; ನತನಾನಾವನಿಪಾಲಮೌಳಿಮಣಿಮಾಲಾಸಂಘಸಂಘಟ್ಟನೋದ್ಧತರೇಣುಪ್ರಜ ವರ್ಣಪೂರರಚಿತಂ ರಾಜಾಲಯಪ್ರಾಂಗಣಕ್ಷಿತಿಯಾಗುತ್ತಿರೆ ನಿಚ್ಚವಿಂತರಸು ಗೆಯ್ಯುತ್ತಿರ್ಪಂ . . . ತತ್ಕ್ಷೇಚರಾಧೀಶ್ವರಂ (ಶಾಂತೀಶ್ವ. ೭-೫) ; ನತ ಸಂತತಿಚಿಂತಾಮಣಿ ಭುವನಸ್ತುತಲಿಂಗಂ ತಾನಿದೆಂದು ಪೊಗಳ್ದಂ ಭೂಪಂ (ರಾಜಶೇ. ೧೪-೩೧). ೩. ಕುಗ್ಗಿದ ; ತಗ್ಗಿದ. 'ನತನಾಸಿಕ' ಪರಾ. ೪. ಶರಣಾದ. 'ನತಜನ' ಪರಾ. (ನಾ). ೫. ಬಾಗಿದುದು ; ವಕ್ರವಾದುದು : "ವಕ್ರಂ, ವೃಜಿನಂ, ಭಂಗುರಂ, ಅವಿದ್ಧಂ, ವೇಲ್ಲಿತಂ, ನತಂ, ಜಿಹ್ಮಂ . . . ಊರ್ಮಿಮತ್—ಈ ೧೨ ಕೊಂಕಿದುದು" (ಹಲಾಯು. ೦೦೬-೦೦) ; "ನತಂ, ನಮ್ರಂ, ಬಂಧುರಂ—ಈ ೩ ಎಱಗಿರ್ದುದು" (ಹಲಾಯು. ೦೨೩-೭೫) ; "ನಮ್ರವೆನೆ ನತಮೆನಲ್ಕೆಱಗುವುದು" (ಮಂಗರಾ. ೦೪೯-೬೨). ೬. ನಮಸ್ಕರಿಸಿದವನು ; ನಮಸ್ಕಾರ ಮಾಡಿದವನು : ನತನಾಗಿ ಕೃಷ್ಣನಿರೆ ಕುರುಪತಿಯೆಂದು (ನೇಮಿಪು. ೦೧-೨೩) ; ನತನಾದನಲ್ತೆ ಶಾಣಾತ್ತಿರಾಗದೆ ಚಂದ್ರಭೂತಿ ಕಂದರ್ಪಮಹೀಪತಿಗೆ (ಕುಸುಮಾ. ೮-೩) : ಬೇಡಿದುದಾತ್ತು ಸಲಹುವೆನಂಜಲೇವುದೆನೆ ಕೃತಕೃತ್ಯನಾಗುತಂ ನಂಬಿಯಣ್ಣಂ ನಿಂದು ನತನಾಗಿ ಶಂಭುವಂ ಹಾಡತೊಡಗಿದನೆಂದು (ನಂಬಿರ. ೭-೧೧೬) : ಮಂದರಗಿರಿ ಧೈರ್ಯನೆಂದೆನಿಪ ಪ್ರಭೇಂದುಮುನಿಪಗೆ ನತನಹನೂ (ರತ್ನಕ. ೮) : ಹೆರುಪದಿಂ ಮುಳುಗೆ ಗರ್ಭಾ ಜಾಱಿ ಪುರುಷತ್ವ ತ್ವರಿತದಿಂದ ವರನಾವರಿಸೆ ಸುರಜಾಲತ್ಮ್ಯಂಬಕೆ ನತರಾದರು (ಬಸವೇಶ್ವ. ೦೪-೫೭). ೭. ಒಂದು ಗ್ರಹಕ್ಕೂ ಮತ್ತು ಖಗೋಳ ಮಧ್ಯರೇಖೆಗೂ ಇರುವ ಅಂತರ. 'ನತಕೋನ' ಪರಾ. [ ಸಂ. ]

**ನತಕೋನ** (ನಾ). "(ನಕ್ಷತ್ರ ಮೊ.ಗಳ) ಕ್ಷಿತಿಜದ ಕೆಳಗಿನ ಕೋನದೂರ : ನತಿ ; ಅವನತಿ . . . ನತಕೋನ" (Depression. ಇಂಕೋ).
[ ನತ + ಕೋನ (<ಕೋಣ್) ]

**ನತಚುಂಚು** (ನಾ). ೧. ಬಾಗಿದ ಕೊಕ್ಕು. ೨. ಬಾಗಿದ ಕೊಕ್ಕನ್ನುಳ್ಳದು: ಕುಡಿದಳಿರನು ಗುರ ಮೊನೆಯೊಳ್ ಪಿಡಿದುದು ನತಚುಂಚು ನೀಡಿ ಗಳಕಂದಳಮಂ ಮಡಗೆದಱ ನವಾಮ್ರದ ಪೂಮಿಡಿಯಂ ಕರ್ಚಿದುದು ಪರಭೃತಂ ಪರಭೃತದಿಂ (ಮಲ್ಲಿಪು. ೫-೩೮). [ ನತ + ಚಂಚು ]

**ನತಜನ** (ನಾ). ೧. ನಮಸ್ಕರಿಸಿದ ಜನ : ನತಜನಕಭಿಮತವೀವಪ್ರಕಿಮ ನೆನಿಪ್ಪಭವಸುತನೆ ಚಿತ್ತೈಸು (ತ್ರಿಪುವಿ. ೩೨-೪೬) ; ನತಜನವರದಂ ಶ್ರುತಿನುತಶುಭಗಂ . . . ರತಿಪತಿಹರಣಂ ಜಿತಭವಮರಣಂ ಕ್ಷಿತಿವರನಿದಿರೊಳಿ ನಿಂದಂ (ಹಮ್ಮೀರ. ೨-೦೦). ೨. ಶರಣಾದವನು : ನತಜನಾಶ್ರಯಧೇನು ಭಕ್ತವತ್ಸಲ ಕೃಪಾಕರ ಮಹಾಭಯನಿವಾರಣ ನೃಸಿಂಹ ತ್ರಾಹಿಯೆನುತಿರ್ದನಾ ಸುಧನ್ವಂ ಮಱೆಯದೆ (ಕೃಷಿಭಾ. ೧೦-೩೭). [ ನತ + ಜನ ]

**ನತದೃಷ್ಟ** (ನಾ). ಅದೃಷ್ಟಹೀನ ವ್ಯಕ್ತಿ ; ದುರ್ದೈವಿ ; ದುರದೃಷ್ಟಶಾಲಿ : ಒಟ್ಟನಲ್ಲಿ ನಾವು ಮೂವರು ಅವರ ಕುಟುಂಬದಲ್ಲಿಯ ಮೂರು ನತದೃಷ್ಟ ವ್ಯಕ್ತಿಗಳೆಂದು ಪರಿಗಣಿಸಲ್ಪಟ್ಟೆವು (ಸ್ಮೃತಿಚಿ. ೩೩) ; ನನ್ನಂತಹ ನತದೃಷ್ಟ ಳನ್ನು ಬಿಟ್ಟು ಅವರು ಬೇರೆ ಯಾರನ್ನಾದರೂ ಪ್ರೀತಿಸಿದ್ದರೆ ಎಷ್ಟು ಸುಖವಾಗಿರುತ್ತಿದ್ದರು ! (ದೂರಸ. ೨೯೦) ; ನೀನು ಎಂದೂ ನತದೃಷ್ಟರ ಕೈಹಿಡಿಯುವುದಿಲ್ಲ (ವಚಭಾ. ೭೭) ; ನಾನು ನತದೃಷ್ಟ (ದೀಪರ. ೦೩೨).
[ <ಸಂ. ನತಾದೃಷ್ಟ (ನತ + ಅದೃಷ್ಟ) ]

**ನತದೃಷ್ಟೆ** (ನಾ). ಭಾಗ್ಯಹೀನಳಾದವಳು ; ದುರ್ದೈವಿ : ಆಕೆ ನತದೃಷ್ಟೆಯಾದ್ದರಿಂದಲೇ ಎಲ್ಲವನ್ನೂ ಕಳೆದುಕೊಂಡಳು (ರೂಢಿ).
[ ನತದೃಷ್ಟ + –ಎ ]

**ನತದೇಹ** (ನಾ). ಬಾಗಿರುವ ದೇಹ ; ಬಗ್ಗಿರುವ ಶರೀರ : ನತದೇಹವಂ ಸೀಳಿ ಭಿನ್ನಭಿನ್ನಂ ಮಾಡಿದೊಡೆಯಾತ್ಮರೂಪಿರ್ಪುದೇ (ವೀಶೈಪು. ೪-೭-೩).
[ ನತ + ದೇಹ ]

**ನತನಾಸಿಕ** (ನಾ). ತಗ್ಗಾದ ಮೂಗುಳ್ಳವನು ; ಚಪ್ಪಟೆಯಾದ ನಾಸಿಕವುಳ್ಳವನು ; ನಡ್ಡಿಮೂಗುಳ್ಳವನು : "ಅವಟೀಟಃ, ಅವನಾಟಃ, ಅವಭ್ರಟಃ, ನತನಾಸಿಕಃ—ಇ ಕುಳಿಮೂಗಿನವನ ಹೆಸರುಗಳು, ಚಿಕ್ಕಮೂಗುಳ್ಳವನು, ನಡ್ಡಿಮೂಗುಳ್ಳವನು" (ಸಿದ್ಧಾಂತಿ. ೧೫೭). [ ನತ + ನಾಸಿಕ ]

**ನತಬಂಧು** (ನಾ). ಶರಣು ಬಂದವರಿಗೆ ನಂಟನಾಗಿರುವವನು : ಬಂಧುರದ ವಿದ್ಯೆಯನು ಕಲಿಸಿ ಮದಾಂಧರ ಕೊಲಿಸಿದನಲಾ ನತಬಂಧುವನು ನಾವಗಲಿದುಳಿವೆವದೆಂತು (ವಿರಾಗ. ೧-೧೦-೫೨).
[ ನತ + ಬಂಧು ]

**ನತಭುವನತ್ರಯ** (ನಾ). ಮೂರುಲೋಕದವರಿಂದಲೂ ನಮಸ್ಕರಿಸಲ್ಪಡುವವನು,–ವಂದಿಸಲ್ಪಡುವವನು ; ತ್ರಿಲೋಕಪೂಜ್ಯ : ನತಭುವನತ್ರಯನೀಶ್ವರಸುತನವಿರಳದಾನನಧಿಕಸಿದ್ಧಿ ಸಿಧಾನಂ ಧೃತಪರಶು ಗಣಪನಸ್ಮತ್ಕೃತಿಯಂ ಕೆಯ್ಕೊಂಡು ಮಾಳ್ಕೆ ನಿರ್ವಿಘ್ನತೆಯಂ (ಲೋಕೋಪ. ಪೀಠಿಕೆ ೨). [ ನತ + ಭುವನತ್ರಯ ]

**ನತಮುಖಿ** (ನಾ). ಮುಖವನ್ನು ಬಾಗಿಸಿದವಳು ; ತಲೆಯನ್ನು ತಗ್ಗಿಸಿದವಳು : ನನ್ನ ದೃಷ್ಟಿ ಮತ್ತು ಅವಳ ದೃಷ್ಟಿಗಳು ಒಂದು ಕ್ಷಣ ತಾಕಲಾಡಿದವು. ಅವಳು ಪುನಃ ನತಮುಖಿಯಾದಳು (ಹೇಮಂತ. ೧೯೪).
[ ಸಂ. ನತಮುಖೀ (ನತ+ಮುಖ+–) ]

**ನತರಕ್ಷಾಚತುರ** (ನಾ). ನಮಸ್ಕರಿಸಿದವರನ್ನು ಕಾಪಾಡುವುದರಲ್ಲಿ ಜಾಣನಾದವನು ; ಶರಣು ಬಂದವರನ್ನು ರಕ್ಷಿಸುವುದರಲ್ಲಿ ಕುಶಲನಾದವನು : ಶ್ರೀಚಂಡಿಕಾಮುಖೇಂದುವಿಲೋಚನರುಚಿಚಂದ್ರಿಕಾ ಚಕೋರಂ ನತರಕ್ಷಾಚತುರಂ ಭವಪಾಶವಿಮೋಚಕನೆಮಗೀಗೆ ಸೌಖ್ಯಮಂ ಶಿವಲಿಂಗಂ (ರಾಜಶೇ. ೧೦-೧). [ ಸಂ. ]

**ನತವಾಣಿ** (ನಾ). ಸರಸ್ವತಿಯಿಂದ ನಮಸ್ಕೃತಳಾದವಳು; ವಾಣಿಯಿಂದ ಪೂಜ್ಯಳಾದವಳು : ನತವಾಣಿ ಕನಕಾಚಲಶ್ರೋಣಿ ಕಾಳಾಹಿವೇಣಿ (ಕನಾಕೆ. ೨೨೪). [ ನತ + ವಾಣಿ$_1$ ]

**ನತಾಸ್ಯ** (ನಾ). ಮುಖವನ್ನು ಬಾಗಿಸಿದವನು ; ತಲೆಯನ್ನು ತಗ್ಗಿಸಿದವನು : ನಯದಿಂದೆಳ್ದು ನತಾಸ್ಯನಾಗಿ . . . ದಿಟ್ಟಿಪಾರಿಯ ಧೀರಂ ವೃಷಭೇಂದ್ರನಪ್ರತಿಮಕಾಯಂ ಮುಂದೆ ನಿಂದಿರ್ಪುದಂ (ಗಿರಿಕ. ೦೦-೭೮).
[ ನತ + ಆಸ್ಯ ]

**ನತಿ** (ನಾ). ೧. ಬಾಗಿರುವಿಕೆ ; ವಕ್ರವಾಗಿರುವಿಕೆ. ೨. ನಮಸ್ಕಾರ ; ವಂದನೆ : ಜಿನಚರಣದೊಳಿರೆ ನತಿ ಮತಿ ಜಿನಗುಣಸಂಪತ್ತಿಯೊಳ್ ಪೊದಬ್ದಿರೆ (ಶಾಂತಿಪು. ೭-೮೦) ; ನಿರ್ಮಳಮೌಕ್ತಿಕಾಕ್ಷತೋತ್ಕರದ ನುಪೇಂದ್ರಪಾದದುಪಭೂಮಿಗೆ ಸೂಸಿದನುತ್ಸಹಂ ಪೊದಟ್ದಿರೆ ವನಪಾಳಕಂ ನತಿಚಳಾಳಕ[ವಾಂ. ವಿನತಜಾಲಕ]ನುದ್ಗತರೋಮಜಾಳಕಂ (ಜಗವಿ. ೦೯-೪೩) ; ನತಿ ನುತಿಪೂಜೆಗಳಂ ಸಸ್ಮೃತಿ ಜಿನಪತಿಗಿಂತು ಭಕ್ತಿಯಿಂ ಮೊದಲೊಳ್ ಗೋಪತಿ ಮಾಡಿ ನೋಡಿದಂ ದಶಶತನಯನದ ಸಮವಸೃತಿಯ ಶೋಭೋನ್ನತಿಯಂ (ವರ್ಧಪು. ೧೫-೪೭) ; ನತಿಯಂ ನುತಿಯಂ ಸತ್ಸಂಗತಿಯಂ ಸಂಸ್ತುತಿಯನತಿಶಯಾಸ್ಪದ ಪೂಜಾತತಿಯಂ ಜಿನೇಂದ್ರಪದದೊಳ್ ಮತಿವಂತಂ ಮಾಳ್ಪುದರ್ಥಿಯಿಂ ಸ್ವಾರ್ಥಪರಂ (ಉಪಾಸ. ೫೦) ; ಶ್ರೀಗುರುವಿಗೂಗಿ ತನುಧಾರಿಯಾಗಿ ಬಂದಂಥ ಸದಾಶಿವಗೆ ಅನಂತಾನಂತ

ನತಿಯು ಉಪಕೃತಿಯು ಒಪ್ಪಿಸುವವು ಇವಗೆ (ಅರಅು. ೨೪೩-೨). ೩. "(ನಕ್ಷತ್ರ. ಮೊ. ಗಳ) ಕ್ಷಿತಿಜದ ಕೆಳಗಿನ ಕೋನದೂರ: ನತಿ; ಅವನತಿ . . ನತಕೋನ" (Depression. ಇಂಕನಿ). [ಸಂ.]

**ನತಿಗೆಯ್**, ನತಿಗೈ (ಕ್ರಿ). ನಮಸ್ಕರಿಸು; ಪೊಡಮಡು; ಕೈಮುಗಿ: ಭಯಭಕ್ತಿಯಿಂದಡಿಗಳ್ಗೆ ಲೀಲೆಯಿಂ ದಂಡವನ್ನತಿಗೆಯ್ದು ಮಗುಳ್ದೆಳ್ದು ನಿಂದು ಕರಯುಗಗವ ಮುಗಿದು (ಕುಮಾವ್ಯ. ೨-೫೦). ನತಿಗೈ: ಪ್ರತಿಮೆಯ ರೂಪದ ಪಂಕಜನಾಭಗೆ ನತಿಗೈದು ನಲವೇಱುವಂತೆ ಪತಿಯ ರೂಪದ ತನ್ನ ಪಾಲಿಗೆ ಬಂದ ಶ್ರೀಪತಿಯ ಪಾದವ ಭಜಿಸುವುದು (ಹರಿಬ. ೩-೭). [ನತಿ + ಕೆಯ್$_1$]

**ನತಿಗೈ** 'ನತಿಗೆಯ್' ನೋ.

**ನತೆ** (ನಾ). ನಮಸ್ಕಾರ ಮಾಡಿದವಳು: ನತೆಯಾಗಿ ತತ್ಪಶ್ಚುತ ಯುತಿಯರ ಪಕ್ಕದೊಳಿ ಪರಮನಿಷೆ ಯನರ್ಹನ್ಮತಕಥಿತಸಿಂಹ ನಿಃಕ್ರೀಡಿತಾ ದಿನೋಂಪಿಗಳನಾಂತು ನೋನುತ್ತುಮಿರ್ದಳ್ (ಮುಹಾಪ. ೧೭-೧೩).

[ಸಂ. ನತಾ]

**ನತೋನ್ನತ** (ಗು). ಏರು ತಗ್ಗುಗಳುಳ್ಳ; ಹಳ್ಳತಿಟ್ಟುಗಳಿಂದ ಕೂಡಿದ ಇಳಿದೇರಿ ಮರ ಪೊದೆಯು ಚಿಲ್ಲಿನ ನತೋನ್ನತವನಾದ್ರಿಸೀಮೆಯುನಾ ವಿಭೀಷಣಂ ಮರೆಯಾಗೆ (ಶ್ರೀರಾಮಾ. ೮೦೭-೧೮೩). 'ನಿಮ್ನೋನ್ನತ' ಪರಾ. [ನತ + ಉನ್ನತ]

**ನರ್ಕುಟಕ** (ನಾ). [ಛಂದ] ಪ್ರತಿಯೊಂದು ಚರಣದಲ್ಲಿಯೂ ಹದಿನೇಳು ಅಕ್ಷರಗಳಿರುವ ಒಂದು ಸಮವೃತ್ತದ ಹೆಸರು; ಸಮಂಗಲಿ: ನಜಭಜಜಲಗಂ ಬರೆ ಸುಮಂಗಲಿಯೆಂಬರದು ಇದಕ್ಕೆ ನರ್ಕುಟಕ ಎಂದು ಮತ್ತೊಂದು ಹೆಸರು (ಛ್ಮಬಿ. ೮೩). 'ನರ್ಕುಟಕ' ಪರಾ. [?]

**ನತ್ತ** (ನಾ). (?) : ಪೂರು ನತ್ತದ ಸುತ್ತಲೂ ಮತ್ತು ಇತರ ಕಿಷ್ಕಿಂಧವಾದ ಕುರುಮಂದೆ ಹಿತ್ತಲುಗಳು ಮುಂತಾದ ಸ್ಥಳದಲ್ಲಿ ಬಾಂದುಗಳಿಗೆ ಬದಲು ಕಲ್ಲುಗಳನ್ನು ಹೂಳಬಹುದು (ಭೂಮಿಅ. ೨೪). [?]

**ನತ್ತಿ** 'ನತ್ತು$_2$' ನೋ.

**ನತ್ತು$_1$** (ಕ್ರಿ). (ಸ್ವಾಭಾವಿಕವಾಗಿ ಅಥವಾ ಉದ್ರೇಕದಿಂದ) ಬಿಕ್ಕುತ್ತ ಮಾತನಾಡು; ಉಗ್ಗು; ತೊದಲು.

ನತ್ತಿ ಮಾತಾಡು = "(ಸ್ವಾಭಾವಿಕವಾಗಿ ಅಥವಾ ಉದ್ರೇಕದಿಂದ) ಬಿಕ್ಕುತ್ತ, ಉಗ್ಗುತ್ತ, ನತ್ತಿ,-ಮಾತಾಡು, ಹೇಳು" (Stammer. ಇಂಕನಿ); ನತ್ತಿ ಮಾತಾಡುವವನ ಮಾತು ಸುತ್ತಿ ತೊಳಲಿದರೆ ಪಟ್ಟು ಆದೀತೇ? (ಗಾದೆ). [ದೇ. ॥ ಮಲ. ತೆಲು. ನತ್ತು]

**ನತ್ತು$_2$**, ನತ್ತಿ (ನಾ). ಉಗ್ಗುವಿಕೆ; ಬಿಕ್ಕುತ್ತ ಮಾತನಾಡುವಿಕೆ; ಬಿಕ್ಕಲು: "ಉಗ್ಗು, ಬಿಕ್ಕಲು, ನತ್ತು" (Stammer. ಇಂಕನಿ). ನತ್ತಿ: "ಉಗ್ಗು, ಬಿಕ್ಕಲು, ತೊದಲು, ನತ್ತಿ" (Impediment in one s speech. ಇಂಕನಿ); ಶಾಸ್ತ್ರಿಗಳ . . . ನಾಲಿಗೆಯಲ್ಲಿ ನತ್ತಿ ಇಲ್ಲದೆ ಇದ್ದಿದ್ದರೂ ಬಹುಶಃ ಅವರು ಅದೇ ಶಿಕ್ಷಣಕ್ರಮವನ್ನು ಅನುಸರಿಸುತ್ತಿದ್ದರೆಂದು ತೋರುತ್ತದೆ (ಜ್ಞಾಪಕ. ೦೩೮); ಪಾರಾಯಣಕಾಲದಲ್ಲಿ ಅವರನ್ನು ನೋಡಿ ದವರು ಅವರಿಗೆ ನತ್ತಿ ಇತ್ತೆಂಬುದನ್ನು ನಂಬುತ್ತಿರಲಿಲ್ಲ (ಜ್ಞಾಪಕ. ೦೪೨).

[<ನತ್ತು$_1$./ತೆಲು. ನತ್ತಿ]

**ನತ್ತು$_3$** (ನಾ). ಮೂಗಿನಲ್ಲಿ ಧರಿಸುವ ಆಭರಣ: ಹರಳೋಲೆ ಹೊನ್ನ ಪೂ ಮಾಣಿಕದ ಪೊಸನತ್ತು ಮೋಹನದ ಮಾಳೆ ಬಹುಭೂಷಣಂಗಳ ನಿಡುತ್ತ (ಚತುಭ. ೧-೭-೯); ರಜಪೂತ ಹೆಂಗುಸಿನ ಮುಖ್ಯ ಕುರುಹು ಆಕೆಯ ನತ್ತು (ಕಭಾಗ. ೦೦೪); ಮುತ್ತೈದೆರೆಲ್ಲರೂ ನತ್ತಿಟ್ಟು ನಲಿಯುತ ಮುತ್ತಿನಾರುತಿ ಬೆಳಗುತ ಹಾಡಿದರು (ಸಿದ್ಧಪ್ರ. ೦-೬೪); ಮನವು ಮುತ್ತಾಗಿಹುದು ನತ್ತಾಗಿ ಧರಿಸಿಕೋ ಸಿಪ್ಪೆ ತೆರೆಯುವ ಮುನ್ನ (ಕಲ್ಯಾ೧೮. ೯-೭); ಮೊಗಕ್ಕೊಪ್ಪುವ ಮಾಟಾದ ಮೂಗಿನಲ್ಲಿ ಅಂದವಾದ ನತ್ತು (ಕರಿಹಾ. ೧); ನತ್ತಿಗೆ ಯೋಗ್ಯಳಾದವಳು ಮುತ್ತು ಬಯಸಿದ ಹಾಗೆ (ಗಾದೆ).

ನತ್ತಿನೋರು = ಸೂಳೆಯರು; ವೇಶ್ಯೆಯರು; ℙ ಕೆಲವು ಪ್ರದೇಶ ಗಳಲ್ಲಿ ವೇಶ್ಯಾವೃತ್ತಿಯ ಜನ ಪುರುಷನನ್ನು ತನ್ನವನನ್ನಾಗಿ ಒಪ್ಪಿ ಕೊಳ್ಳುವುದಕ್ಕೆ ಮುಂಚೆ ಅವನಿಂದ ಒಂದು ಮೂಗಿನ ಬಟ್ಟು ಎಂಬ ಒಡವೆಯನ್ನೋ ಅಥವಾ ಒಂದು ಸೀರೆಯನ್ನೋ ಪಡೆದು ಹಿಂದಿ ನಿಂದ ಬಂದ ಸಂಪ್ರದಾಯವನ್ನು ಅನುಸರಿಸುವ ಕ್ರಮವಿದೆ: ಈ ಊರಿನ 'ನತ್ತಿನೋರೆಲ್ಲಾ' ಅವನ ಮನೆಯವರೇ. 'ನತ್ತಿನೋರು ಅಂದರೆ' . . . ಸೂಳೇರು (ಗುಲಾಬಿ. ೦೯).

[←ಅರ. ನತ್ಥ್; ಹಿಂ. ನತ್ಥ್, ನಥ್, ನಾಥ್; ಮರಾ. ನಥ್./ಪ್ರಾ. ಣತ್ಥಾ]

**ನತ್ತು$_4$** (ನಾ). ೧. ಹೇನಿನ ಸಣ್ಣ ಮರಿ; ಸಣ್ಣಹೇನು: ಸೀರು ಸಿರವನು ತಿಂತು ನತ್ತು ನರವನು ತಿಂತು ಚಿಂತೆಯು ಜನುಮವ ತಿಂತು (ಜಾಂಪಪ. ೦೭೦-೪೪); ಅವಳ ತಲೆಯಲ್ಲಿ ತುಂಬ ನತ್ತು, ಹೇನುಗಳಿವೆ (ರೂಢಿ). ೨. ಕೀಟ; ಹುಳು. [ದೇ. ॥ ತಮಿ. ನತ್ತು, ನತ್ತೈ = ಶಂಖದ ಹುಳು; ಮಲ. ನನ್ನ; ತೆಲು. ನತ್ತ = ಶಂಖದ ಹುಳು]

**ನತ್ವ** (ನಾ). ನ ಎಂಬ ಅಕ್ಷರ: ಪರದೊಳ್ ಸ್ವರವಿರೆ ಬಿಂದುಗೆ ದೊರೆ ಕೊಳ್ಗುಂ ನತ್ವಮಾತ್ವಂ (ಶಮದ. ೦೦೪). [ಸಂ.]

**ನದ** (ನಾ). ೧. ಶಬ್ದ ಮಾಡುವಿಕೆ; ಗದ್ದಲ ಮಾಡುವಿಕೆ; ಸಪ್ಪಳ; ಶಬ್ದ. ೨. (ಶಬ್ದದೊಂದಿಗೆ ರಭಸವಾಗಿ ಹರಿಯುವ) ದೊಡ್ಡ ನದಿ; ಗಂಡುತೊರೆ; ಗಂಡುನದಿ; ℙ ಪ್ರಸಿದ್ಧ ಸಂಸ್ಕೃತ ಟೀಕಾಕಾರ ಮಲ್ಲಿನಾಥನ ಅಭಿಪ್ರಾಯದಂತೆ ಪಶ್ಚಿಮಕ್ಕೆ ಹರಿಯುವ ನದಿ: "ಭದ್ರಃ, ಉದ್ಭಃ, ನದಃ – ಈ ೩ ಗಂಡುದೊಱೆ" (ಹಲಾಯು. ೦೦೦-೪೪); "ನದಮುದ್ರ ಮನೆ ಭದ್ರ ಮನೆ ಗಂಡುದೊಱೆಯದು" (ಮಂಗರಾ. ೦೨೨-೧೦); ವೃ ಣ್ಣ ನ ದೀ ನ ದ ನ ಗ[ರಾ]ಮಣ್ಣವಿಭೂಷಣೆಯನೊಲ್ದು ನೋಡುತ್ತುಮಿಳಾಪುಣ್ಯಸ್ತ್ರೀಯಂ ಸಂಚಿತಪುಣ್ಯರ್ ಪಾಂಚಾಲದೇಶಮಂ ಪುಗುತಂದರ್ (ಶಂಪರ. ೩-೬೬); ಪೊಱಮಟ್ಟಭಂ ಬಿನದದಿಂ ನದದಿಂ ನದದಿಂದ್ರವಜ್ರನಿಮ್ನರವೆಣಿಗಿಭಾಪಘನವಂ ಘನವಂ ಘನವಂಶ ಜಾಲವಂ (ಅಗವಿ. ೧೬-೯); ಮದವದಿಭೇಂದ್ರದಾನಸಲಿಲಂ ನದರೂಪಮನೆಯ್ದೆ . . . ರಾಗದೆಯ್ದಿದನಿರದಾ. ಸುಧರ್ಮಮುನಿಪೋತ್ತಮನಾಶ್ರಮಾವಂ ನೃಪೋತ್ತಮಂ (ಕುಸುಮಾ. ೯-೯೪); ಅಲ್ಲಿಗಲ್ಲಿಗೆ ಗವಾಕ್ಷದಗಳಿಂ ನದ ಗಳಿಂದಾ ದೇಶಮೊಪ್ಪಿರ್ದುದು (ಹಂಪ. ೦೦-೪). ೩. ಸಮುದ್ರ; ಸಾಗರ. ೪. ಮೋಡ; ಮೇಘ.

ನದನದಿ = ಗಂಡು ಮತ್ತು ಹೆಣ್ಣು ಹೊಳೆಗಳು: ನದ[ನ] ದ್ಯುದ್ಭೂತಪಾರಿಪ್ರಸರಮೆಸ[ರೆ] ನೀರಂದದಿಂ ಕಾಯ್ದುದಾಕಾಶದೇಶೌಘಂ . . . ಎಂಬ ವೈಶಾಖದೊಳಾ ಯೋಗೀಶ್ವರು ಕಲ್ಮೇಲೆ ನೆಲಸಿ ಓಮಾದ್ರೀಂದ್ರ ಮಿರ್ಪಂತಿರಿರ್ದಂ (ಸುಕುಮಾ. ೯-೧೩); ನದನದೀಕುಳದೊಳ್ ಪರಿ ವರ್ಧಿಕುಂ ಜಗಜ್ಜೀವನಜೀವನಂ ಮಟಿಗಳಿಂ ಮಟಿಯುಂ ಕಱಿವಂ ಹಿತಾರ್ಥಮಿಪಿ ಭೂಮಿಳಯಕ್ಕೆ ಶಕ್ರನದು ಕಾರಣಮರ್ಚಿಪುದಿಂದ್ರಮಂ ಜನಂ (ಅಗವಿ. ೪-೭೭); ನದನದ್ಯೌಘಾಂಬುವಂ ಪೀರ್ದಳಿ ನೆಱಿಯದೆ ಬಾಯ್ಬಿಟ್ಟ ಪೊಲ್ ಬೀಡೆಗಳ್ ಪರ್ವಿದುವು (ಹಂದ್ರಪ್ರ. ೯-೬೭). [ಸಂ.]

**ನದನಿಕಟ** (ನಾ). ಹೊಳೆಯ ತೀರದ ಪ್ರದೇಶ: ಏದಲಿತ ನಲಿನೀಸುಖದಂ ನದನಿಕಟಂ ವಿವಿಧವರ್ಣಮಣಿಗಣಶೋಭಾಸದನಂ ಪರ್ವತನಿಕಟಂ ಮದಗಜ ಮದಸಲಿಲಸದನಮಟವೀನಿಕಟಂ (ಮಲ್ಲಿಪು. ೨-೦೦). [ನದ + ನಿಕಟ]

**ನದರಿಡು**, ನೆದರಿಡು, ನೆದರಿಡು (ಕ್ರಿ). ೧. ಲಕ್ಷಿಸು; ಗಮನವಿಡು

ರಾತ್ರಿವುದಯ ಸಾಯಂಕಾಲ ನದರಿಟ್ಟು ಹಸು ನಿದ್ರೆದೊಳದು ಪದವಿರ್ದ ಲಿಂಗ ಪೂಜಿಸುವಾರುಯನ್ನಂತ ಮುದಿಮೂರ್ತಿಗಾರು ಮನ್ನಿಪರು (ದೀದಕಾ. ೯-೧೫) ; ಸದಮಲಜ್ಞಾನದ ಕುದಿ ಉಕ್ಕಿ ಬರುವಾಗ ನದರಿಟ್ಟು ನಿಷ್ಠೆಗಳು ಸದಮಲ ತತ್ವವಿ ತಿಳಕೋ ಬರಕೋ (ಶಿಶಿಆ. ೭೭ ಶಿವಿಸಾವ್ನ ಪಠಣಯು). ನೆಜರಿಡು : ೧. ಒಂದೀಟು ನೆಜರಿಟ್ಟು ನಡಿ. ನಮ್ಮ ಬಿಚ್ಚು ವಪಘಪ್ಪ . . . ಕೂಡದಲೀಲೆ ಉರುಲು ಹಾಕಾಂವ (ಪಶಿಕೋ. ೬೭). ನೆದರಿಸು : ೧. ಸದ್ಯ ನೆದರಿಟ್ಟು ನೋಡಿಕೋ ಉದಿಸಿದ್ಯಾವಲ್ಲೆ (ಶಶೀಶ. ೩೬-೧೦). ೨. ಬಯಸು ; ಕಾಮಿಸು ; ಅಪೇಕ್ಷಿಪಡು : ವಾಪೀನ ಹಣ್ಣು ಪಾನಿಯಾಗ ಇಟಗೊಂಡು ನೀರಲಕ್ಯಾಕ ನೆದರಿಟ್ಟ (ಗರತಿ. ೦೨೫).

[ ನದರು (<ನಜರು) + ಇಡು$_1$ ]

**ನದರಿಸು** 'ನಜ್ರಿಸು' ನೋ.

**ನದರು** 'ನಜರು' ನೋ.

**ನದರುಕಾಣಿಕೆ** 'ನಜರುಗಾಣಿಕೆ' ನೋ.

**ನದರುಗಾಣಿಕೆ** 'ನಜರುಗಾಣಿಕೆ' ನೋ.

**ನದರುಗೆಡು** (ಕ್ರಿ). ಕಂಗೆಡು ; ದಿಗ್ಭ್ರಮೆಗೊಳ್ಳು : ಮದನಗಂಜುತ ವಾಂದಳಿಂಗಿದಬೆದರುತಳಿವಿಂಡುಗಳ ರಥಚಕೆ ನದರುಗೆಡುತ . . . ಚಂಡ ರಕ್ಕಸ ಬೆದರುತ್ತಿದಿದ ಬನದೊಳಗಡೆಯು ಕಾಬ ತವಕದಲಿ (ಅಂಬಿಕಾ. ೦೮-೪). [ ನದರು (<ನಜರು) + ಕೆಡು$_1$ ]

**ನದಿ** (ನಾ). ಹೊಳೆ ; ತೊರೆ ; ೯ ಎಂಟು ಸಾವಿರ ಧನುಃಪ್ರಮಾಣಕ್ಕೆ ಕಡಮೆಯಿಲ್ಲದಷ್ಟು ದೀರ್ಘವಾಗಿಯೂ ಅಗಲವಾಗಿಯೂ ಹರಿಯುವ ಜಲಪ್ರವಾಹಕ್ಕೆ 'ನದಿ' ಎಂದು ಟೀಕಾಕಾರರು ಸೂಚಿಸುತ್ತಾರೆ : "ಸಿಂಧುಃ, ಸ್ರವಂತೀ, ತಟಿನೀ, ತರಂಗಿಣೀ, ನದೀ, ಧುನೀ . . . ರೋಧೋವಕ್ರಾ – ಈ ೨೧ ಕೊಳ್" (ಹಲಾಯು. ೦೦೦-೯೩) ; "ನದಿ ತರಂಗಿಣಿ ತಟನಿ ಧುನಿ ಸಿಂಧು . . . ದ್ವೀಪವತಿಯಾಪಗೆಯೆನೆ ತೊಳಿಗೆ ನಾಮಂ" (ಚುಂಗರಾ. ೬೨೨-೦೦) ; ಜಂಬೂದ್ವೀಪದ ಮೇರುವಿನ ಮೂಡಣ ವಿದೇಹದ ಸೀತಾನದಿಯ ಬಡಗಣ ತಡಿಯೊಳ್ (ಅದಿಪು ೩-೬೮) ; ಹರಿವ ನದಿಗೆ ಮೈಯೆಲ್ಲ ಕಾಲು ಉರಿವ ಕಿಚ್ಚಿಗೆ ಮೈಯೆಲ್ಲ ಬಾಯಿ (ಅವಕಂ. ೦೭೨-೬೭೫) ; ನದಿಯಂ ನಾದಿಕಸಂತೆ ಪೊಕ್ಕು ಗುಚಿಯಂ ಧಾನುಷ್ಕನೆಂಬಂತೆ ತಪ್ಪದಿದಂ ಕಂಬುಮನೆಚ್ಚುದು (ಪಾಕ್ಕ್ಗಾಪು. ೦೦-೦೫೦) ; ನದಿ ಕಣ್ಕೆಯಿದಂತೆ ಪೊಳಂಕಿದ ಮಾನಂ ಮೊಸಳೆ ಪಾಯ್ವು ನರಪತಿಯು ವಿನೋದದ ಗುಜ್ಜಸಿಕ್ಕಿ ಪಿಡಿದತ್ರದನಧಿಪತಿ ಜಾಲಗಾಜಿಂ ತೆಗೆಯಿಸಿದಂ (ಯಶೋಚ. ೩-೪೮) ; ಮಜುದಿವಸ ಮೇದಾವತಿಯು ಸಾರ್ದರು ಬಳಿಕ್ಕವಹಲ್ಲಿ ರಜನಿಯ ಪರಿಹರಿಸಿ ದಾಂಟಿದರು ನದಿಯನು ಮೂಜನೆಯ ದಿವಸ (ಕೂರರಾ. ೨-೪-೯) ; ನದೀ ದಾಟಿ ಬದೀಲಿ ಬಿದ್ದ ಹಾಗೆ (ಗಾದೆ).

ನದಿನದ, ನದೀನದ = ಹೆಣ್ಣು ಮತ್ತು ಗಂಡು ಹೊಳೆಗಳಂ : ಮಾಣಿಕದ ಗಾಳಂಗಳಿಂ . . . ಸೊಗಡುಗೊಳುಗಳ ಮದ್ದುಗಳ ಮುಸಕದಿಂದಂ ನದಿನದಾಳಿಯೊಳು ಮೀನ್ಗಳಂ ತವಿಸುತಿಹ ಬೇಡರಂ ನೋಡಿದಂ ಧರಾನಾಥನು (ಹಹಕಾ. ೩-೯೪) ; ಅಂತವರಿರ್ವರುಂ ತಾನಾನದೀನದಾಂತರಾಳಸಂಪಷ್ಟನಪದಂಗಳಂ ಕಳಿದು ಕತಿಪಯಪ್ರಯಾಣಂಗಳಿಂ . . . ಬಂದು (ಸುಕುಮಾ. ೨-೯೫) ; ನದೀನದೌಘಮಾಗಳೆ ಬ ಱ ಗ ೦ ತ ಲಾ ಯ್ತು ಕಟುಳಿಯಿಂ ತೆವರಂ ಸಮನಾಯ್ತು ದೆತ್ತಲುಂ (ಪುಣ್ಯಪು. ೩-೯೭) ; ಕಾವಿ ತಾರ್ಥವನೀವವಂದಿನ ಭೂಮಿಬಿತ್ತದೆ ಜನಿಪ ವಸ್ತುಸ್ತೋಮವನು ತಂದೀವುದದ್ರಿನದೀನದಾದಿಗಳು (ಶಿತಾಗೀ. ೦-೬-೪) ; ಅಕ್ಷಯವಾದ ಸರೋವರವೊಂದರಿಂದ ಅನೇಕ ದಿಕ್ಕುಗಳಲ್ಲಿ ಸಹಸ್ರಾಧಿಕ ನದೀನದಗಳು ಹೊರಹೊರಟು ಬರುವಂತೆ (ತತ್ವಪ್ರಾ. ೨೫೯).

ನದಿಯ ಮಗ = (ಗಂಗಾ) ನದಿಯ ಸುತ ; ಗಾಂಗೇಯ ; ಭೀಷ್ಮ : "ನಾದೇಯಃ, ನದೀಸುತಃ– ಈ ೨ ನದಿಯ ಮಗಂ" (ಹಲಾಯು. ೬೨-೩೯೭) ; ಇದು ಮಹಾಮಹಿಮವಿಲ್ಲಿ ಪೂಜ್ಯನು ಯದುಗಳರಸನು ಭಟ್ಟನಿಲ್ಲಿಗೆ ನದಿಯ ಮಗನಿಲ್ಲಿಗೆ ಸದಸ್ಯರು ನಾರದಾದಿಗಳು (ಕುಪ್ಯಾಕ. ೦೦-೩೯) ; ನದಿಯ ಮಗ ಗುರು ಗುರುತನೂಜನು ವಿದುರಧಾರದ್ವಾಜಮುಖ್ಯರು . . . ಬಹಳಾಭ್ಯುದಿತಬಲ ನೆರೆದೆದ್ದು ನಡೆದುದು ಭರದ ಪಯಣದಲಿ (ಕುವ್ಯಾಅ. ೬೦೩. ೨೫-೬).

ನದಿ ಹಾಯು = ಹೊಳೆಯನ್ನು ದಾಟು,–ಕ್ರಮಿಸು : ನದಿ ಹಾಯೋನಿಗೆ ತಿದಿ ಯಾಕೆ ? (ದುರಂಗಾ. ೯೯). [ ಸಂ. ನದೀ ]

**ನದಿಗವುಂಡ** (ನಾ). ಒಬ್ಬಾತನ ಹೆಸರು : ಸದಯನೂರ ನದಿಗವುಣ್ಣನು ತಿಬರ್ೂರ ಮಾರಗವುಣ್ಣ (ಹ್ಯುಅರಿ. ೧೯೦೯, ೦೦-೭೩ ; ೨೦೦). [ ನದಿ + ಗವುಂಡ (<ಗಾವುಂಡ) ]

**ನದಿಜ** (ನಾ). = ನದೀಜ ೩ : ಇದಿರುಗೊಂಡರು ಹಿರಿದು ಮನ್ನಿಸಿ ವಿದುರನನು ಕೊಂಡಾಡಿ ಗುರು ನೃಪ ನದಿಜ ಧೃತರಾಷ್ಟ್ರಾದಿಗಳ ಸುಕ್ಷೇಮ ಕುಶಲಗಳ ವಿದುರನಾಗಮನಪ್ರಪಂಚದ ಹದನನೆಲ್ಲವ ಕೇಳಿದರು (ಕುವ್ಯಾಅ. ೦-೦೫). [ <ಸಂ. ನದೀಜ ]

**ನದಿಪು** (ಕ್ರಿ). (ಬೆಂಕಿ, ದೀಪ, ಉರಿ, ಬೆಳಕು, ತಾಪ ಮೊದಲಾದುವನ್ನು) ನಂದಿಸು ; ಆರಿಸು : ಭರತನ ಮೊಗದೊಳ್ ಪರ್ವಿದ ಖರಕೋಪಾನಲನನೆಯ್ದೆ ನದಿಪುವವೊಲ್ [ಪಾಠಾಂ. ನಂದಿಪವೋಲ್] ತನ್ನರಕತ ಮಣಿವರ್ಣಂ ಕರಪರಿಘದಿನೊಡನೊಡನೆ ತುಳ್ಕಿದಂ ಶಿಳಿನೀರಂ (ಆದಿಪು. ೦೪-೦೦೫) ; ಬಲಿದೇವನ ಮನದೊಳಾದ ಮುಳಿಸೆಂಬ ಕಿಚ್ಚಂ ತನ್ನ ಮೃದುಮಧುರವಚನರಚನಾಜಲಂಗಳಂ ತಳಿದು ನದಿಪಿದಂ (ಪಂಪಭಾ. ೩-೨೨೮) ; ಮದನದಾವಾಗ್ನಿಯಂ ನದಿಪೆ ಮಾಡಿದ ಕಾಮನದಿಯನಿಸುವುವು ದ್ವಿಜದುಂಪತಿಶತದೊದವಿದ ರತದ ಪದನಲ್ಲಿ (ಶಾಂತಿಪು. ೨-೯೩) ; ದವರೌದ್ರಜ್ವಲನಾದ್ಯುತಂ ಹೃದಯದೊಳ್ ಶೋಕಾಗ್ನಿ ಕೈಗಣ್ಮೆ ಪೊಣ್ಮುವ ಕಿಚ್ಚಂ ನದಿಪಲ್ಕೆ ಬರ್ಪ ತೆಱದಿಂದಂ ಕಣ್ಗಳಿಂದುಚ್ಚಿ ಪೊಣ್ಮುವ ನೇತ್ರಾಂಜನವಿಮಿಶ್ರಬಾಷ್ಪಜಲಧಾರಾಬಿಂದುಗಳ್ ಕೂಡೆ (ಅಜಿತಪು. ೦೦-೯೩) ; ಅಳವಿಗಬ್ಬಿದ ಕರ್ವ ಮದನಾನಳನಂ ನದಿಪಲ್ಕೆ ಪಲವುಮಮೃತದ ಪನಿಯುಂ ತಳಿವಂತೆ ದಂತರುಚಿಗಳ್ ತುಳುಂಕೆ ನೃಪಸುತನನಾರ್ಯಸುತನಿಂತೆಂದಂ (ಲೀಲಾವ. ೪-೩೫) ; ಉಂತೆ ಜಗಂಗಳಂ ತಿಗುರಿಗಂ ತರುತಿರ್ಪ ಮನೋಜನೀ ವಸಂತಂ ತಲೆದೋಱುತಿಂ ಹರನ ಕಣ್ಬುರಿಯಂ ನದಿಪಲ್ ಸಮರ್ಥನೋ (ಚಂದ್ರಪ್ರ. ೭-೯೭).

ನದನದಿಪು (ದ್ವಿರುಕ್ತಿ) : ನಿಚ್ಚಂ ಪಗಲಿನಕಾಂತದ ಕಿಚ್ಚನಿರುಳ್ ಚಂದ್ರಕಾಂತದೊಳ್ಪಂ ಪಡೆದಾ ಕಿಚ್ಚ ನದ[ದ]ನದಿಪ [ಪಾಠಾಂ. ನದನದಿಸೆ, ಸದನಡಿಸೆ] ಮಾಡುಗುಮಚ್ಚರಿಯಂ ಪಗಲುಮಿರುಳುಮಾ ವಿಜಯಾರ್ಧಂ (ಅಜಪು. ೯-೨೨). [<ನಂದು ? ]

**ನದಿಮೊಗ** (ನಾ). ಹೊಳೆಯಂಪಾತ್ರ,–ಪ್ರವಾಹ: ಮೂರು ಖಂಡಗಳೇಳು ಸಾಗರಂಗಳನು ಹದಿಮೂರು ನದಿಮೊಗಗಳನು ದಾಟಿ ಬಂದೆಲ್ಲಿ ಭಾರತೀಯರ ಹೃದಯ ದೈವಸಾಮ್ರಾಜ ದರಬಾರ ನಡೆಸಿದನೆಲ್ಲಿ–ನೋಡಿದುವೆ ಇಲ್ಲಿ! (ಕಿಎಪು. ೫೫). [ ನದಿ + ಮೊಗ ]

**ನದಿಯಮರ** (ನಾ). ಒಂದು ಬಗೆಯ ಮರ : "ಬೃಹತ್ಪತೀ, ಬೃಹಸ್ಪತೀಃ ಈಯೆರಡು ನದಿಯಮರ, ನೇಲ್" (ಚ.ಅಭಿ. ೦೦೯).

[ ನದಿ + ಮರ$_1$ ]

**ನದಿವಾಸಿ** (ನಾ). ಹೊಳೆಯ ಬಳಿ ವಾಸಿಸುವವನು : ನದಿವಾಸಿಗಳು ವನವಾಸಿಗಳು ಗಿರಿವಾಸಿಗಳು ಗುಹ್ಯ ಗುಹೆವಾಸಿಗಳು ಇಂದ್ರಿಯಭಯಂಗಳಿಗೆ ಅಂಜಿ ಕಂದಮೂಲಾದಿಗಳ ಭಕ್ಷಿಸುವ ಕಾನನದ ಮರುಳುಗಳೆಲ್ಲಾ ಲಿಂಗ ಪ್ರಾಣಿಗಳಿಗೆ ಪ್ರಾಣಲಿಂಗ ಸಂಬಂಧಿಗಳಾದ ಪರಮಶಿವಯೋಗಿಗಳಿಗೆ ಸರಿಯೇ ಈ ಭ್ರಾಂತರೆಲ್ಲಾ (ಏಕೋದೇವ. ೦೦೩-೩೫೯). [ ನದಿ + ವಾಸಿ$_1$ ]

**ನದೀಚರ** (ನಾ). ಹೊಳೆಯಲ್ಲಿ ಸಂಚರಿಸುವುದು : ಪಿರಿದು ಪೊಲ್ತಿಂ ವನಪ್ರಚಾರದೊಳಲಸಿದ ನದೀಚರನಪ್ಪ ಯೂಥಪತಿಯಂತೆ ವನವಿಹಾರ ದೊಳಲಸಿ ಬಂದು ಕಾವಣಮಂ ಪುಗೆ (ಶಾಂತಿಪು. ೮-೨೩೪). [ ಸಂ. ]

**ನದೀಜ** (ಗು). ೧. ಹೊಳೆಯಲ್ಲಿ ಹುಟ್ಟಿದ. (ನಾ). ೨. ಹೊಳೆಯಲ್ಲಿ ಹುಟ್ಟಿದುದು ; ನೀರಿನಲ್ಲಿ ಹುಟ್ಟಿದುದು. ೩. (ಗಂಗಾ) ನದಿಯ ಮಗ ; ಗಾಂಗೇಯ ; ಭೀಷ್ಮ : ಬಿಲ್ಲೋಳ್ ಮುನ್ನಂ ಪಿನಾಕಾಯುಧನೆ ಸಕಲಚಕ್ರಾಯುಧಂ ಜಾಮದಗ್ನ್ಯಂ ಬಲ್ಲಂ ರಾಮಂ ನದೀಜಂ (ಎಕ. VI, ಕಡೂ, ೭೭-೩೪ ; 1180) : ತತ್ಸೇನೆ ದಾವಾಗ್ನಿಯಿಂ ನೆಲೆವೆರ್ಚರ್ದಟವೀ ಪ್ರತಾನಮುರಿಯುತ್ತಿರ್ದಪ್ಪುದೆಂಬುದಮಂ ಗೆಲೆ ಮಾಡಿತ್ತು ನದೀಜನುಗ್ರಶರ ವಾತೋದ್ಭೂತಜಾತಾದ್ಭುತಂ (ಮಹಾನೀ. ೦೨-೧೬೬) ; ಮುರಹರ ಗುರು ನದೀಜರ ಬೀಳುಕೊಟ್ಟನು ಕೃಪನ ಮನ್ನಿಸಿ ಮನೆಗೆ ಕಳುಹಿದನು (ಕುಮ್ಾ. ಉ. ೮-೧). ೪. ಅರ್ಜುನವೃಕ್ಷ ; ನೀರುಹಲಸಿನ ಮರ ; ಕದಂಬವೃಕ್ಷ : ಕವಿಗಳ ಕೊಂಡಾಟ ವಿವಿಧರೂಪಗಳನ್ನು ತಾಳಿತು. ಮರಕ್ಕೆ ಅವರು ಕೊಟ್ಟಿರುವ ವಿಶೇಷಣಗಳನ್ನು ನೋಡಿ. ಷಟ್ಪದೇಷ್ಟ . . ನದೀಜ, ದಾಸವೃಕ್ಷ (ಹಸುಹೂ. ೪೬). [ ಸಂ. ]

**ನದೀಜಾತ** (ನಾ). = ನದೀಜ ೩ : ವೈರಾಗ್ಯಂ ಭೋಂಕನೆ ಕೆಯ್ಯಾರೆ ಮನಕ್ಕಾಗಲಾ ನದೀಜಾತಂ ಸಂಸಾರಕ್ಕೇವೈಸಿ ದಯಾಧಾರು ಪರಮಾತ್ಮ ತತ್ತ್ವನಿಷ್ಠಿತನಾದಂ (ಮಹಾನೀ. ೦೨-೧೭೩). [ ಸಂ. ]

**ನದೀತನೂಜ** (ನಾ). = ನದೀಜ ೩ : ಆಗಳ್ ನದೀತನೂಜಭಾರದ್ವಾಜ ಕೃಪರವಿರಳ ಬಾಷ್ಪವಾರಿ ದುರ್ದಿನ ದೀನಾನನರಾಗಿರೆ ವಿದುರಂ ತಾನಱಿದುಮಱಿಯದಂತೆ ಶೋಕಾಕ್ರಾಂತನಾಗಿ (ಪಂಪಭಾ. ೩-೮ ವ). [ ಸಂ. ]

**ನದೀತರಣ** (ನಾ). ಹೊಳೆಯನ್ನು ದಾಟುವಿಕೆ : ಹಯಶಾಸ್ತ್ರಂ ಸೂಪ ಶಾಸ್ತ್ರಂ ನದೀತರಣಂ ತಾಪನವಿಂದ್ರಜಾಲಮೆಂಬಿವಂ . . . ಅಖಿಲವ್ಯೂಹೋತ್ಕರ ಮೆಂಬಿನಿತಱೊಳಂ ಬಲ್ಲರಲ್ಲರುಂ ಮೆಚ್ಚೆ ಪಡೆದನತಿಕೌಶಲಮಂ (ಪುಷ್ಪಪು. ೪-೩೯). [ ಸಂ. ]

**ನದೀತೀರ** (ನಾ). ಹೊಳೆಯ ದಂಡೆ,-ತೀರ : ಬಾಳೆಯ ಗರ್ಭದೊಳಿರ್ದ ಬಾಳೆಯಂ ಬಾಳನುಮಂ ಕಂಡೆತ್ತಿಕೊಂಡು ಮತ್ಸ್ಯಗಂಧಿಯುಂ ಮತ್ಸ್ಯ ಗಂಧನುಮೆಂದು ಪೆಸರನಿಟ್ಟು ನಡಪಿ ಯಮುನಾನದೀತೀರದೊಳಿರ್ಪನ್ನೆಗಂ (ಪಂಪಭಾ. ೦-೭೮ ವ) ; ಆ ನದೀತೀರಕ್ಕೆ ಸಮಾಧಿಗುಪ್ತರೆಂಬ ದಿವ್ಯ ಮುನೀಶ್ವರರ್ ಬಂದಸ್ತಮಯಸಮಯದೊಳ್ ರಾತ್ರಿಪ್ರತಿಮೆಯೊಳಿರೆ (ಮಹಾನೀ. ೦೩-೧೦ ವ) ; ನದೀತೀರದ ರಮ್ಯಸ್ಥಾನ (ಜೀನೆಹೊ. ೬೨). [ಸಂ.]

**ನದೀನಂದನ** (ನಾ). = ನದೀಜ ೩ : ನದೀನಂದನಂ ವಾರಣಾಸಿಯಿಂ ಪೊಱಮಟ್ಟೀಕೆ ಬಂದಿರೆಲ್ಲಿರ್ದಿರೆಂದುಂ ಬೆಸಗೊಳ್ವುದುಂ (ಮಹಾನೀ. ೯-೧೦೦ ವ) : ಈ ನದೀನಂದನನ ಬಲದಲಿ ಸೆಣೆಸೆ ಶಿಶುಗಂಜುವುದೆ (ಕುಮ್ಾ. ಭೀ. ೧-೩೩). [ ಸಂ. ]

**ನದೀನಾಥ** (ನಾ). ೧. ಹೊಳೆಗಳ ಒಡೆಯ ; ಸಾಗರ ; ಸಮುದ್ರ. ೨. [ಜೈನ] ಒಂದು ಕಾಲಪ್ರಮಾಣ : ಶತ್ಕಲ್ಪ ಷೋಡಶ ನದಿ[ದೀ]. ನಾಥೋಪಮಾಯುಷ್ಯರುಂ ದಿವ್ಯ ಸುಖಮನುಂಡು (ಮಹಾನೀ. ೦೩-೦೧೬ ವ). [ ಸಂ. ]

**ನದೀನಿಕಟ** (ನಾ). ತೊರೆಯ ತೀರದ ಪ್ರದೇಶ ; ಹೊಳೆಯ ತೀರ : ವಿದಳಿತ ಕಂಜವಿಲ್ಲದ ಕೊಳಂ ಗಜವಿಲ್ಲದ ಕಾಡು ಚೂತವಿಲ್ಲದ ಬನವಂಚೆ ಯಿಲ್ಲದ ನದೀನಿಕಟಂ . . . ಅತ್ಯುದಾತ್ತಗುಣವಿಲ್ಲದ ಮಾನವರಿಲ್ಲದೆಲ್ಲಿಯುಂ (ಪುಷ್ಪಪು. ೨-೧೦೦). [ ಸಂ. ]

**ನದೀಪೂರ** (ನಾ). ಹೊಳೆಯ ಪೂರ್ಣಪ್ರವಾಹ ; ತುಂಬುಹೊಳೆ : ಘನಶೋಕ ಘನಾಗಮಜಳಜನಿತೋತ್ಕರ್ಷಮನನೂನಬಾಂಧವಜನಿತಾಶ್ರು ನದೀಪೂರವನುಡುಗಿಪುದಿನತೇಜವಸಂತದಂತೆ ಬಂದೀ ಕ್ಷಣದೊಳ್ (ಚಂದ್ರಪ್ರ. ೩-೦೪). [ ಸಂ. ]

**ನದೀಪ್ರವಾಹ** (ನಾ). ಹೊಳೆಯ ಪ್ರವಾಹ,-ಹರಿವು : "ಒಟ್ಟು-ನದೀ ಪ್ರವಾಹಂ" (ಕಮದ. ಶಠ. ೧) ;" ತೊಲಗಿರೈ ಮುನಿವರರು- ಒಱದೇ ಹೊಳೆಯೊಳಗೆ ಹೋಗದಿರಿ ದಿವದಿಂದೀಡ ದಿವ್ಯನದೀಪ್ರವಾಹದ ಸತ್ಕಳಕಮವೆನಲು ಅಲಘುಮತಿ ಕೇಳುತ್ತ ಘುಳುಘುಳುಘುಳು ಮಿಗಲು ಬಹ ನದಿಯನೀಕ್ಷಿಸಿ ತೊಲಗದಾಪೋಶನವ ಕೊಂಡನು ಜನ್ಹುಮುನಿ ನಗುತ (ನಿರಂಗ. ೯-೩-೪೬). [ ಸಂ. ]

**ನದೀಬೂಡು** (ಗು). ನದಿಯಲ್ಲಿ ನೆರೆ ಬಂದಾಗ ನೀರಿನಲ್ಲಿ ಮುಳಗುವ ; ಹೊಳೆ ಸಾಲಿನ : ದೇಸಾಯರ 'ನದೀಬೂಡು' ಜಮೀನು, ನಾಡಗೌಡರ 'ಮಡಿಗಟ್ಟೆ', ಕೇಶವರಾಯನ ಮಾವಿನ ಗಿಡಗಳು ನಿನ್ನ ಕಣ್ಣು ತುಂಬಲಾರವೆ? (ಹರ್ಮ್ಯ. ೩೩). [ ←ಮರಾ. ನದೀಬುಡ ]

**ನದೀಮಾತೃಕ** (ನಾ). ೧. ಹೊಳೆಯ ನೀರಿನಿಂದ ಬೆಳೆ ಬೆಳೆಯುವ ಭೂಮಿ ; ನೀರಾವರಿ ಭೂಮಿ : "ತೊಱೆಯ ನೀರಿಂ ಬೆಳೆವ ಭೂಮಿ ನದೀಮಾತೃಕವೆಂಬುದು" (ಅಭಿಾಯು. ೨೭-೬) ; "ಹೊಳೆಯ ನೀರಿಂ ಬೆಳೆವ ಮಹಿ ನದೀಮಾತೃಕಂ" (ಮುಂಗರಾ. ೨೯-೪) ; ಭೂತಲವರ್ತಿಯಪ್ಪ ವಿಷಯಾಳಿ ವಿಚಾರಿಪೊಡಾವಗಂ ನದೀಮಾತೃಕ ದೇವಮಾತೃಕಮೆ (ಚಂದ್ರಪ್ರ. ೦-೪೦) ; ಅದಲ್ಲದೆಯುದೆ ನದೀಮಾತೃಕಮುಂ ದೇವಮಾತೃಕಮುಮೆಂಬ ಭೇದಮಂ ಬೇರ್ಪಡಿಸಿ (ಪುಷ್ಪಪು. ೨-೦೪೮); ನೂತನ ನಾರಿಕೇಳಜಲದಿಂ ಕ್ಷಮೇಕ್ಷುಗಳಾವಗಂ ನದೀಮಾತೃಕ ದೇವಮಾತೃಕದ ಪಂಗುಳಿದೊಪ್ಪಿಳಸಾಗಿ ರಂಜಿಸುಂ (ತ್ರಿಷುವಿ. ೨-೩೬): ಬೆಳೆವುವು ಶಾಲಿ ಪಾಮರಿಯರ ಪೊಗಸಿ ವೆಳಗಿಗೊಸರುವಿಂದುಕಾಂತದ ಜಲದಿಂದೆ ದೇವಮಾತೃಕ ನದೀಮಾತೃ ಕಗಳ ಬಗೆಗೊಳಬ್ಬಾ ನಾಡೊಳು (ತ್ರಿಪುಸಿ. ೨-೧೪). ೨. ಗದ್ದೆ ; ತರೀ ಜಮೀನು. 'ದೇವಮಾತೃಕ' ಪರ್‍ಾ. [ ಸಂ. ]

**ನದೀಮಾತೃಕೆ** (ನಾ). = ನದೀಮಾತೃಕ ೧ : ದೇವಮಾತೃಕೆ ನದೀಮಾತೃಕೆ ಯಾದ ನಾನಾವಿಧ ಬೆಳೆಯ ಭೂಮಿಗಳು ಅವಾಗ ಬೆಳೆದೊಱಗುವ ಧಾನ್ಯ ಸಂದೋಹಕಾವಾಸವಾಗಿರುತಿಹುದು (ನಾಗಕು. ೨-೦೮). [ ಸಂ. ನದೀಮಾತೃಕಾ ]

**ನದೀಮುಖ** (ನಾ). ಹೊಳೆಯು ಸಮುದ್ರಕ್ಕೆ ಸೇರುವ ಸ್ಥಳ; ಅಳಿವೆ: ಸ್ವಯಂಭೂರಮಣ ಸಮುದ್ರದ ಮಹಾಮತ್ಸ್ಯಂಗಳ್ಸಾಸಿರಯೋಜನದೀರ್ಘಂ ನದೀಮುಖದೊಳು ಐನೂಱು ಯೋಜನ ನೀಳಂ (ತ್ರಾವಕಾ. ೦೨೩) ; ನದೀಮುಖ (The mouth) ಅಂದರೆ ನದಿಯು ಸಮುದ್ರಕ್ಕೆ ಸೇರುವ ಸ್ಥಳ (ಭೂಗೋಳ. ೦೨) ; ಗಂಗಾನದಿಯಲ್ಲಿ ನದೀಮುಖದಿಂದ ಎಪ್ಪತ್ತುಮೈಲಿ ಗಳವರೆಗೂ ಜಹಜುಗಳು ಹೋಗುತ್ತವೆ (ಸಚಿದ. ೩೦) ; ಈ ವಲಯದಲ್ಲಿ ನದೀಮುಖಗಳಲ್ಲಿರುವ ಮೆಕ್ಕಲುಮಣ್ಣು ನೀರಾವರಿಗೆ ಅನುಕೂಲವಾಗಿದೆ (ಶಿಲ್ಪಶಾ. ೩೬೧). [ ಸಂ. ]

**ನದೀಮುಖಖಂಡ** (ನಾ). = ನದೀಮುಖಜಭೂಮಿ: "ನದೀಮುಖಖಂಡ ಅಥವ ಡೆಲ್ಟ (Delta)" ಅಂದರೆ ಒಂದು ನದಿಯ ಮುಖಭಾಗದಲ್ಲಿರುವ ತ್ರಿಕೋಣಾಕಾರವಾದ ಭೂಮಿ (ಭೂಗೋಳ. ೦೩). [ನದೀಮುಖ + ಖಂಡ]

**ನದೀಮುಖಜಭೂಮಿ** (ನಾ). ನದಿಯು ಸಮುದ್ರಕ್ಕೆ ಸೇರುವಲ್ಲಿ ನಿರ್ಮಾಣವಾಗುವ, ಮೆಕ್ಕಲುಮಣ್ಣಿನಿಂದ ಕೂಡಿದ ನೆಲ; ಮೆಕ್ಕಲು ಭೂಮಿ; ಜಲಾನಯನ ಭೂಮಿ: "ನದೀಮುಖದಲ್ಲಿ ಇಂತಹ ತ್ರಿಕೋನಾ ಕಾರವಾಗಿ ಏರ್ಪಟ್ಟ ಮೆಕ್ಕಲುಭೂಮಿ : ನದೀಮುಖಜಭೂಮಿ; ಕುದುರು" (Delta. ಇಂಕನಿ) ; ನದಿಗಳು ತಮ್ಮ ಗತಿಗಳನ್ನು ಬದಲಾಯಿಸುವುದು, ನದೀಮುಖಜಭೂಮಿಗಳೆಂದು ಹೊಸ ಪ್ರದೇಶಗಳು ಸಿದ್ಧವಾಗುವುದು . . . ಮುಂತಾದುವು ಪ್ರಕೃತಿಯಲ್ಲಿಯೇ ನಡೆದಿರುವ ಘಟನೆಗಳು

(ಛಾಶಾಪ್ರ. ೬) ; ದಕ್ಷಿಣ ಭಾರತದ ನದಿಗಳು . . . ಸಮುದ್ರ ಸೇರುವ ನದೀಮುಖಜಭೂಮಿಯಲ್ಲಿ ಮಾತ್ರ ಅವು ಭೂಮಟ್ಟದಲ್ಲಿ ಹರಿಯುತ್ತವೆ (ಸಸದಿ. ೩೨). [ ಸಂ. ]

**ನದೀಮೂಲ** (ನಾ). ನದಿಯ ಉಗಮಸ್ಥಾನ ; ನದಿಯು ಹುಟ್ಟುವ ಸ್ಥಳ : "ನದೀಮೂಲ" (Source) ಅಥವ "ಉಗಮ" ಅಂದರೆ ನದಿಯು ಹುಟ್ಟುವ ಸ್ಥಳ (ಭೂಗೋಳ. ೦೨) ; ಋಷಿಮೂಲವನ್ನೂ ನದೀಮೂಲವನ್ನೂ ಗುರುಮೂಲವನ್ನೂ ಹುಡುಕಬಾರದು (ಲೂಪ್ರ). P ಈ ರೀತಿಯಲ್ಲಿ ಮೂಲಗಳನ್ನು ಬೆದಕುತ್ತಾ ಹೋದರೆ ಅಪ್ರಿಯವಾದ ವಿಷಯಗಳೂ, ಅಪಾಯ ಪ್ರಸಂಗಗಳು ಉಂಟಾಗುತವೆ ಎಂಬುದು ರೂಢಿವಾಕ್ಯದ ತಾತ್ಪರ್ಯ. [ ಸಂ. ]

**ನದೀಯೋಜನೆ** (ನಾ). ನದಿಗಳಿಂದ ಉಪಯೋಗ ಪಡೆಯಲು ಅಣೆಕಟ್ಟು ಕಟ್ಟುವ ವ್ಯವಸ್ಥೆ,–ಏರ್ಪಾಡು : ನದೀಯೋಜನೆಗಳು ನಮ್ಮ ದೇಶದ ಇಂಜನಿಯರ್‌ಗಳ . . . ಕೆಲಸಗಾರರ ಪ್ರತಿಭೆಯ ಪ್ರತೀಕಗಳು (ಸಸದಿ. ೩೪). [ ಸಂ. ನದೀಯೋಜನಾ ]

**ನದೀಸರ್ಜ** (ನಾ). ಒಂದು ಬಗೆಯ ಮರ ; ಅರ್ಜುನವೃಕ್ಷ ; ಮತ್ತಿಮರ : "ನದೀಸರ್ಜಃ, ವೀರತರುಃ, ಇಂದ್ರದ್ರುಃ, ಕಕುಭಃ, ಅರ್ಜುನಃ–ಈ ತೋರಮತ್ತೀಗಿಡ, ಕೆಂಪುಮತ್ತೀಗಿಡ, ರಕ್ತಾರ್ಜುನವೃಕ್ಷ" (ಸಿದ್ಧಾಂತಿ. ೦೨೨). [ ಸಂ. ]

**ನದೀಸುತ** (ನಾ). = ನದೀಜ ೩ : "ನಾದೇಯಃ, ನದೀಸುತಃ–ಈ ೨ ನದಿಯ ಮಗಂ" (ಹಲಾಯು. ೮೨-೩೪೭) ; ಗುರು ಗುರುಪುತ್ರ ಶಲ್ಯ ಭಗದತ್ತ ನದೀಸುತರೆಂಬ ಸಂದ ಬೀರರೆ ಮಡುವಕ್ಕಂ (ಪಂಪಭಾ. ೧೦-೧೨); ತ್ರಿದಶನದೀಸುತನಿಂ ತೀರದ ಕಜ್ಜಂ ಮುನ್ನಂ ಕಳಶಸಂಭವನಿಂ ತೀರದ ಕಜ್ಜವಿನಜನಿಂ ತೀರದ ಕಜ್ಜಂ ದ್ರೋಣಪುತ್ರನಿಂ ತೀರ್ದಪುದೇ (ಗದಾಯು. ೩-೬೦) ; ಆ ನದೀಸುತನಡಿಗೆಜಗಿ ರವಿಸೂನು ಕಳುಹಿಸಿಕೊಂಡು ಬಹಳ ಮನೋನುರಾಗದಲ್ಯೆದಿದನು ಕುರುರಾಯನೋಲಗವ (ಕುಮ್ಯಾದ್ರೋ. ೧-೩೨). [ ಸಂ. ]

**ನದೀಸೂನು** (ನಾ). = ನದೀಜ ೩ : ಕಾನೀನಂ ದ್ರೋಣ ನದೀಸೂನುಗಳ ಬಿಡಿಂಬಟುಕ್ಕಿ ಪೆಜರೆನಗಿಲ್ಲೆಂದಾನೆ ಗಳಿತಾಶ್ರುಜಲದಿಂ ಸೇನಾಪತ್ಯಾಭಿಷೇಕಮಂ ಮಾಡಿದಪೆಂ (ಗದಾಯು. ೩-೬೬). [ ಸಂ. ]

**ನದೀಹ್ರದ** (ನಾ). ನದಿಯ ಆಳವಾದ ಭಾಗ ; ಮಡುವು : ಜಳಾವಗಾಹಾಸೆಯಿಂ ವೈತರಣಿಯ ಒರಿಯ ದರಿಯಂ ಮೆಟ್ಟಿ ಸುಣ್ಣಾಲಂ ಮಣಲ್ದಿಂಟಿಗೆತ್ತದಜ ಪರಿತಪ್ತಲೋಹರಜಸ್ಸಿಕತಿಳತಳದೊಳ್ ಮೆಯ್ಯನೀಡಾಡುವುದುಂ . . . ಅಂತಲ್ಲಿಯುಂ ಸ್ಥಿರಿಸದೆ ನದೀಹ್ರದಮಂ ಪುಗುವುದುಂ (ಶಾಂತಿಪು. ೬-೯೨ವ). [ ಸಂ. ]

**ನದುಗು$_1$** (ಕ್ರಿ). ಪರಾಙ್ಮುಖವಾಗು ; ಮುಖ ತಿರುಗಿಸು : ಒದವಿದ ಪುರುಡಿಂದಂ ನೋಡದು ನುಡಿಯದು ಪೊರ್ದದೆನಿತು ಕಾಲ್ಪಿಡಿದೊಡಮೊಲ್ಲದು ಕಿನಿಸಿ ಕಡುಪಿನಿಂದಂ ನದುಗಿದಪುದು ತಿಳಿಯದೆಂತುಮಾರ್ ತಿಳುಪಿದೊಡಂ (ಕಾದಂಕಾ. ೬೬). [ ? ]

**ನದುಗು$_2$** (ನಾ). ಗುನುಗು : ಪಾಪನ ಕಡೆಯಿಂದ ಎಲ್ಲಾ ಬಂದಿದೆ ಅವನಿಗೇನು ನದುಗು ? (ಲೂಪ್ರ). [ ? ]

ನದುರು 'ನಜರು' ನೋ.

ನದರುಗಾಣಿಕೆ 'ನಜರುಗಾಣಿಕೆ' ನೋ.

**ನದುಳು** (ಗು). ೧. ಒಳಗಿರುವ ; ಹುದುಗಿರುವ ; ಮುಚ್ಚಿಟ್ಟಿರುವ : ಕೆದರಿದಾಲಿಯ ಕಿಡಿಯ ಮಾಲೆಯ ವದನದೆಗಹಿನ ದೌಂಷ್ಟ್ರ ಬಿಗುಹಿನ ನದುಳು ಜಿಹ್ವೆಯ ಗಳದ ಹ್ರಂಹೆಯ ಸುಚ್ಚು ಹೊಯ್ಲುಗಳ ಮೆಯ್ಯ ನಾಮದ ಬಡಿಯ ರೋಮದ ತ್ರಿದಳ ಕರ್ಣದ ಕದಳಿಪರ್ಣದ ಪಾದದ ಕೇಸರಿಯುದಿಸಿ ರೋಷದಿ ಕವಿದವರಿಭಟನ (ಅಂಬಿಕಾ. ೩-೩೮). (ನಾ). ೨. ಮುಚ್ಚಿಟ್ಟಿರುವಿಕೆ ; ಹುದುಗಿರುವಿಕೆ : ವಿಷದ ಲಹರಿಯ ಲಳಿಯ ನದುಳಿನ [ಪಾಠಾಂ. ಉಸುರಿನ] ಹಸರಿಕೆಯ ಚೂರಿಸುವ ಜಿಹ್ವಾ ಪ್ರಸರದುರುಘೂತ್ಕಾರದಹಿಪಂಜರದ ಮಧ್ಯದಲಿ ಎಸೆದನೈಲವ (ಕೂರಲಾ. ೬-೦೬-೯). 'ನದುಳುನಗೆ' ಪರಾ. [ ? ]

**ನದುಳುನಗೆ** (ನಾ). ಹೊರತೋರದ ನಗೆ ; ಹತ್ತಿಕ್ಕಿದ ನಗೆ ; ಅಂತರಂಗಿಕವಾದ ನಗೆ : ನೋಡಿದುದಬಿಳಬಳನಿಕರ ನದುಳು [ಪಾಠಾಂ. ಪುದಿದ]ನಗೆಗಳ ಮೊಗದ ಮುರುಹಿನ ವದನದರಮುಸುಕುಗಳಲಿದ್ದುದು (ಕೂರಲಾ. ೩-೬-೦೩) ; ನ[ಪಾಠಾಂ. ನು] ದುಳುನಗೆಗಳಲಿವರು ಮೂವರು ಪುದಿದ ಪರಿತೋಷದಲಿ ರಾಮನ ಪದಪಯೋಜವ ಸಾರಿದರು ಕಪಿಕಟಕ ನಲಿದಾಡೆ (ಕೂರಲಾ. ೬-೨೭-೬೨). [ ನದುಳು + ನಗೆ ]

**ನದ್ಧ** (ಗು). ೧. ಸೇರಿರುವ ; ಕೂಡಿಕೊಂಡಿರುವ ; ಕಟ್ಟಿದ. (ನಾ). ೨. ಬದ್ಧನಾದವನು ; ಒಳಪಟ್ಟವನು ; ಸೇರಿದವನು : "ಬದ್ಧಃ, ನದ್ಧಃ, ಸಂಯುತಃ–ಈ ೩ ಕಟ್ಟುಪಟ್ಟವಂ" (ಹಲಾಯು. ೩೬-೦೯೩) ; ಕರಿಸೇನಾಸಾರಿನದ್ಧೋತ್ತರಳಕದಳಿಕಾಕಾನನೋಚ್ಛುಂಬ್ಯಮಾನಾಂಬರಚಕ್ರಂ (ಆದಿಪು. ೯-೩೪). [ ಸಂ. ]

**ನದ್ಧ್ರಿ** (ನಾ). ಚರ್ಮದ ಪಟ್ಟಿ ; ತೊಗಲಿನ ಹಗ್ಗ : "ನದ್ಧ್ರೀ ವಧ್ರೀ ಸಂಜ್ಞೆಯದು ವರತ್ರೆಯೆನಿಕ್ಕುಂ" (ವಸ್ತುಕೋ. ೫೦-೩೬) ; ನದ್ಧ್ರೀ, ವಧ್ರೀ, ವರತ್ರಾ–೩ ತೊಗಲ ಮಿಣಿಯ ಪೆಸರು, ತೊಗಲ ಹಗ್ಗ" (ಸಿದ್ಧಾಂತಿ. ೨೩೯). [ ಸಂ. ನದ್ಧ್ರೀ ]

**ನದ್ಯಂಬು** (ನಾ). ನದಿಯ ನೀರಿನ ಆಶ್ರಯ. [ ಸಂ. ]

**ನದ್ಯಾಮ್ರ** (ನಾ). ಒಂದು ಬಗೆಯ ಸಸ್ಯ : "ಉಪಕರದಂತಿ–ನದ್ಯಾಮ್ರ" (ಓಷಧಿ. ೦೬). [ <ಸಂ. ನದ್ಯಾಮ್ರ ]

**ನದ್ಯುತ್ತರಣ** (ನಾ). ನದಿಯನ್ನು ಹಾಯುವಿಕೆ,–ದಾಟುವಿಕೆ : ಅಂತುಭಯನದಿಯ ವೈಷಮ್ಯಮುಮನಾಶ್ಚರ್ಯಂಬಟ್ಟು ನೋಡಿ ನದ್ಯುತ್ತರಣೋಪಾಯಮಾವುದೆಂದು ಬಗೆದು (ಆದಿಪು. ೦೩-೩೦ವ). [ ಸಂ. ]

**ನನವತಿ** (ನಾ). ಒಂದು ಸ್ಥಳದ ಹೆಸರು : ನೆಲ್ಲಿ ಕುಡಿಕ್ಕುಜುವಳೆ ನನವತಿ ಸಾಗಲ ತಟಾಕಸ್ಯಾತ್ (ಪ್ರುಅರಿ. ೦೯೩೯, ೩೦-೩೯ ; 670). [ ? ]

ನನವರಿಕೆ 'ನೆನವರಿಕೆ' ನೋ.

**ನನಸು, ನೆನಸು$_1$** (ನಾ). ನಿಜಸ್ಥಿತಿ ; ವಾಸ್ತವಸ್ಥಿತಿ ; ಸತ್ಯ ; ದಿಟ ; ನಿಶ್ಚಯ : "ನನಸು = ದಿಟಂ" (ಕಮುದ. ಶರಿ. ೨) ; "ನನ್ನಿ, ನಿಕ್ಕುವಂ, ನಿಸದಂ, ಸಾಜಂ, ನ.[ಪಾಠಾಂ. ನೆ]ನಸು, ದಿಟಂ–ಈ ೬ ಸತ್ಯಂ" (ಕಕಶಾ. ೦೩-೨೩೪) ; ಪುಳಿನಶರಿಸರಪ್ರದೇಶದೊಳ್ ಮಱದೊಱಗುವೈರಾವತದಂತೆ ಪವಡಿಸಿ ಕಿಱುದಾಸೂಂ ಬೇಗದೊಳ್ ಸುಭದ್ರೆಯುಂ ಕನಸಿನೊಳ್ ಕಂಡು ನನಸೆಂದು ಬಗೆದು (ಪ್ರುಕಥಾ. ೯-೧೦೦ವ) ; ಭೀತಿಯುಂಬಟ್ಟದನೆ ಕನಸು ಗಂಡುಮ್ಮಳಂಗೊಂಡು ಚೋದ್ಯಂ ನನಸೆಂದೆಚ್ಚತ್ತಿರುತ ತಂನೆಯ ತಲೆಯನತಿಭ್ರಾನ್ತನಂದಿಂದು ನೋಳ್ಕುಂ (ಎಕ. VII, ಶಿವಮೊ. ೬೪-೩ ; 1112) ; ಕನಸೆಂದೊಡಂ ನನಸದೆಂದಾಲ್ದಳ್ [ಪಾಠಾಂ. ನೆನಸೆನುತ್ತಾಂತಳ್] ಮಹಾಚಿಂತೆಯುಂ (ಜಗವಿ. ೦೭-೦೦೬) ; ತಮ್ಮ ಕಲ್ಪನೆಯ ಕನಸನೆ ನನಸಿನ ನನ್ನಿ ಎಂಬಂತೆ ಏನೇನೊ ಕಣವೇಳುತಿಹುದವರ ಬಾಳಿ (ಚಂದ್ರಸ. ೦೨-೨೨); ಅವಳು ಕನಸಿನಲ್ಲಿ ಮೈತೋರಿ, ನನಸಿನಲ್ಲಿ ನಿಧಿಯನ್ನು ತೋರಿಸಿಕೊಟ್ಟಳು! (ರಾಹ್ಮೋದ. ೦೯೬). **ನೆನಸು$_1$** : "ನೆನಸೆಂದು ದಿಟಂ" (ಕಪುನಿ. ೬೯೧) ; "ನನ್ನಿ ಸಾಜ ನೆನಸುಂ ದಿಟಮೆಂದುಸಿರಲ್ಕೆ ಸತ್ಯಮಕ್ಕುಂ" (ಕವಿಕಂ. ೧೨೦); "ನೆನಸನಲ್ ನಿಶ್ಚಯಂ" (ಕಚ. ೫೬) ; ಕನಸಂ ಧನದತ್ತಂ ನೆನಸೆಂದು ಭೋಂಕನೆಚ್ಚತ್ತು (ಪಂಚತಂ. ೫೧-೦೦) ; ಕನಸಿಂದಂ ನೆರೆದಪನರ ನೆನಸಿಂ ನೆರೆದಪ್ಪನೆಂದು ತರವೇಟ್ಟಪೆ ಹಂತನಂ ((ಜಗವಿ. ೦೭-೦೧೨); ದನುಜರಟ್ಟಿದ

ಕನಸ ಕಂಡರೆ ನೆನಸಿನಲಿ ನರರಂಜಾತಿಪ್ಪರು (ಶಾಂತಿಲಾ. ೩೩-೮); ಮಾಬಲವಗಲುದಯದೊಳರಸಂ ತುಜಗಿರೆ ಕಡುಹಂಸಮಿರುಳೆ ಕನಸಂ ನೆನಸಂದಜ್ಜಿಪಲಳಿಸಿಂಗ ರಾ ಯ ರ್ಗ ರ ನು ಬ ದಿಂ ದಂ ಕರೆಯಲಟ್ಟಿದಂ ಪಡಿಯುಲಿರಂ (ಚಳವಿ. ೩-೦೧೦).

ನನಸಾಗು, ನೆನಸಾಗು = ಪ್ರತ್ಯಕ್ಷವಾಗಿ ಕಾಣುವಂತಾಗು; ವಾಸ್ತವವಾಗು: ನುಡಿದೊಡಂ ಬರೆಯಿಸಿದೊಡಂ ಕಳಿಪಿದೊಡಂ ನನಸಾಗಿ ತೋಱಲಕ್ಕುಮೆ (ಪದ್ಮರಾ. ೧೦-೦೬೮); ಅವನು ಕಾಣುತ್ತಿದ್ದ ಕನಸುಗಳೆಲ್ಲಾ ನನಸಾದವು (ರೂಢಿ): ಅಂತುದಾರವಮಹೇಶ್ವರನೀಶ್ವರಮರಪ್ರಸಾದವೆಲ್ಲಂ ತನಗೆ ನೆನಸಾಗೆಯುಂ ಕನಸಿನಂದದವಾಗಿ ತೋಱೆ (ಶಂಪಥಾ. ೧೦-೦೩೦ ಪ). [ದೇ.೩ ತಮಿ. ನನವು, ನನಾ]

**ನನಸುಗಿರು** (ಕ್ರಿ). ದಿಟವೆಂದು ಭಾವಿಸು; ನಿಜವೆಂದು ಭ್ರಮಿಸು: ಅಹುದೆ! ಬರಿದೆ ಬೆದರಿದೆ, ಅಜ್ಜ, ಕನಸಂ ನನಸುಗೆತ್ತು! (ಚಂದ್ರಸ. ೨೩-೨೩). [ನನಸು + ಗಿರು (< ಗಿಱು)]

**ನನಾಂದೃ** (ನಾ). ಗಂಡನ ಸೋದರಿ; ನಾದಿನಿ ಅಥವಾ ಅತ್ತಿಗೆ: "ನಾದುನಿ ನನಾಂದೃ ನಂ[ನಾ]ದಿನಿಯೆನಿಕುಂ" (ಪಸು.ಕೋ. ೩೩-೨೮); ಋಕಾರಾಂತಕ್ಕೆ-ಪಿತೃ, ಸವಿತೃ . . . ನನಾಂದೃ, ಯಾತೃ, ಮಾತೃ, ಧಾತೃ (ಶಮದ. ೮೮ ಪ್ರಯೋ). [ಸಂ.]

**ನನೂರು** 'ನಾಲ್ನೂಱು' ನೋ.

**ನನೆ₁, ನೆನೆ₁** (ಕ್ರಿ). ನನೆತು, ನನೆದು, ನೆಂದು, ನೆನೆದು (ಭೂತನ್ಯೂ). ೧. ಆರ್ದ್ರವಾಗು; ಒದ್ದೆಯಾಗು; ತೋಯು: "ನನೆ-ಆರ್ದ್ರಭಾವೇ, ಪುಷ್ಪಕುಟ್ಮಲೇ ಚ (ಮೊಗ್ಗು)" (ಕಮುಧಾ); ಅಂತೆಟ್ಟತ್ತು ನೆತ್ತರ ಪೊನಲೊಳ್ ನಾಂದು ನನೆದ ಮೆಯ್ಯುಮಂ ತೊಯ್ದು ತಳ್ಪೊಯ್ದ ಜಡೆಯುಮಂ ಕಂಡು (ಶಂಪಥಾ. ೧-೦೦೩ ಪ); ನಿರವಧಿಪ್ರೇಯಪ್ರೀತಿವಹನಂ ಪುಳಕದೊಳ್ ನನೆತು ಹರ್ಷದೊಳರಲ್ದು ಆನಂದಾಶ್ರುಭರದೊಳ್ ತುಳುಂಕಿ (ಅಸಂಪು. ೩-೩೩ಪ); ಮೊಮ್ಮಂದಿರುಗಳೆಳಲಿನ ಘನತೆಯನು ಕಿವಿಗೊಟ್ಟು ಕೇಳಿದು ನನೆದುದಂತಃಕರಣ ಕಂಬನಿದುಂಬಿದನು ಭೀಷ್ಮ (ಕುಪ್ಪಾಭೀ. ೭-೨೪); ಎಲೆ ವನಜಾಕ್ಷ ಬೆಟ್ಟವಂ ಕೊಡೆವಿಡಿದು ಪಟ್ಟಿಯಂ ನನೆಯುಲೀಯದವೋಲೀ ಪಾರ್ಥನಂ ರಕ್ಷಿಸುವೆ ನೀಂ ಕೃಪೆಯೊಳು (ಜೈಮಿಥಾ. ೦೩-೩೪). ೨. ನೀರನ್ನು ಹೀರಿ ಮೃದುವಾಗು,-ಮೆತ್ತಗಾಗು: ಕಲ್ಲೆಂತುಂ ನನೆಯದವೋಲ್ ಪೊಲ್ಲಮೆಯೊಳ್ ಕೂಡಿ ರೌರವಕ್ಕಿಟಿವವರುಂ ಸಲ್ಲಲಿತಮಪ್ಪ ಧರ್ಮಕ್ಕಿಲ್ಲಿ ಯುವೋರಂತೆ ಬಾರರಘವಶದಿಂದಂ (ಧರ್ಮಾಮೃ. ೧೦-೦೬೬); ಉತ್ತಮದ ಸೊಜ್ಜಿಗೆಯ ಬಟ್ಟವಾಲೊಳು ನನಹಿ ಮತ್ತೆ ನನೆ [ಪಾಠಾಂ. ಮೆತ್ತನಾ]ದಾಗ ತೆಗೆದದನು ಒಟ್ಟಿಯ ಹಿಟ್ಟನೊತ್ತಿ (ಸೂಪಶಾ. ೧-೦೦). ನೆನೆ₁: ೧. ಎಱೆದರೆ ನೆನೆಯದು ಮಱೆದರೆ ಬಾಡದು ಹುರುಳಿಲ್ಲ ಹುರುಳಿಲ್ಲ ಲಿಂಗಾರ್ಚನೆ (ಬಸವ. ೧೯೬); ಚಿತ್ರದಾಂತಕನೊಂದುದಿನವುದ್ವೃತ್ತತಪೋಧನ ವೇಷದಿಂ ನೆನೆವುತ್ತ ಮಳೆಯೊಳು ನಡುಗುತಂ ನಡುವಿರುಳು ನಡೆತರಲು (ಬಸಪು. ೨೭-೯೭); ಸೂ ಕ್ತಿ ಸು ಧಾ ರ ಸ ದಿ ನೆಱೆ ನೆನೆದುದಾತನ ಮೈ ವಿಲೋಚನವಾರಿಪೂರದಲಿ (ಕುಪ್ಪಾಕ. ೧೭.೨೩); ಮೊದಲೇ ನೀರಮಿಎಣ್ಣೆ ಯಲ್ಲಿ ನೆಂದ ಚಂಡು ಉರಿಯತೊಡಗಿತು (ಗೋಪುರ. ೪೪); ನೆನೆದ ಕಲ್ಲು ಮೆತ್ತಗೆ ಆದೀತೇ? (ಗಾದೆ). ೨. ಕೂಡಲಸಂಗಮದೇವ ಬಱಯುದಕದಲ್ಲಿ ನೆನೆವನೆ (ಬಸವ. ೦೮೪); ಧರಣಿ ನೆನೆದುದು ಗಂಧರಸಕಸ್ತೂರಿಯ ಪನ್ನೀರುಗಳ ಹೊನಲೊಡನೆರಸಿ (ಕುಪ್ಪಾವಿ. ೦೦-೯೩). 'ನೆನೆಗಡಲೆ', 'ನೆನೆಯಕ್ಕಿ₁' ಪರಾ. [ದೇ.೩ ತಮಿ. ನನ್ನೈ; ಮಲ. ನನ, ನನ; ತುಳು. ನನೆ; ಕೊಡ. ನೆಲೆ, ನೆಲ]

**ನನೆ₂** (ಕ್ರಿ). ೧. ಹೂವು ಬಿಡು; ಮೊಗ್ಗಾಗು; ಮುಂಗುಳಾಗು: "ನನೆತು ದೆಂದು ನನೆವೆತ್ತುದು" (ಕಕಸಾ. ೯-೦೮೯); "ನನೆತುದು ನನೆಯೇಱದುದು" (ಕವಿಕಾ. ೭೭); "ನನೆತುದೆನೆ ಮೊಗ್ಗೇರಿದುದು" (ಕಕರ. ೫೩); ತಳಿತೆಳ ಱಗುವಕೋಕಿಗಳುಂ ನನೆತೆಲ್ಲ ಜಾದಿಗಳುಂ ಮುಗುಳ್ತ ಮಂಜಾವ ಮೊಲ್ಲೆಗಳುಂ (ಲೀಲಾವ. ೬-೬೦ ಪ): ಬೆಳಕು ಚೆಂಕಿ ಬೆರೆತುಕೊಂಡು ಭಾವವು ಹೊರದೂಡಿರೆ ಬಾಳು ಮೊಳೆತು ಸುಗ್ಗಿ ನನೆತು ಹೂವಿನಂತೆ ಮಾಡಿರೆ (ಗೊಂಚಲು. ೨೩-೭). ೨. ಚಿಗುರು ಬಿಡು; ಅಂಕುರಿಸು. 'ನನೆವೋಯ್' ಪರಾ. [ದೇ.೩ ತಮಿ. ನನ್ನೈ; ತೆಲು. ನನಯು, ನನಚು, ನನುಚು]

**ನನೆ₃** (ನಾ). ೧. ಅರಳದ ಹೂವು; ಮೊಗ್ಗು; ಕುಟ್ಮಲ: "ನನೆ-ಆರ್ದ್ರಭಾವೇ, ಪುಷ್ಪಕುಟ್ಮಲೇ ಚ" (ಕಮುಧಾ); "ನನೆ ಕುಟ್ಮಲಂ" (ಕಕಸಾ. ೯-೦೫೫); "ನನೆಯೆನಲು ಕುಟ್ಮಳಮಕ್ಕು" (ಕಕರ. ೩೩); ನನೆಯ ಕೊನೆಯ ತಳಿರ ಮುಗುಳ ವನಲತಾನಿಕುಂಜದಿಂ ಪ್ರಸೂನರಜದ ಪುಂಜದಿಂ (ಹಂಪಥಾ. ೦-೩೮ ರಗಳೆ); ಬನದಿಂ ಬನಕ್ಕೆ ನನೆಯಿಂ ನನೆಗಲರಿಂದಲರ್ಗೆ ಪೊರೆದು ಬರಯಗಳೆರ್ದೆ ಪೌವನ ಪಾಱ ಪರಿಬುಗುಂ ಕಾಮನಿಕಾಮಕುಶಲೀಮುಖರಶಿಲೀಮುಖನಿವಹಂ (ಮಲ್ಲಿಪು. ೨-೯೦); ತುಱುಗಿದ ತಳಿರಿಂ ನನೆಯಿಂ ಕಿಱು ಮಿಡಿಯಿಂದೆಸೆದುದಸದಳಂ ಮಾಕಂದಂ (ಶಾಬ್ದಾಕ. ೨೩೨); ಸಣ್ಣ ನನೆಯೊಳಗಣ ಪರಿಮಳವ ಹೊ ಱ ಸೂ ಸಿ ಇದಿರಿಂಗೆಱಹಿಸಲ್ಲುದೇ ವಾಯು (ದೇವಚಂ. ೬೩-೦೨೮); ಸಂಪಗೆಯ ನನೆಗೆಯ್ದ ಬಟ್ಟೆಕೊಯ್ಯಗೆ ಜಾಱುವ ತುಂಬಿ ನಗಿಸಿದುದು ಮಲ್ಲಿಗೆಯಂ (ಕಲ್ಕಿಕಾ. ೩೮); ತನುವುಳಕ ತಲೆದೋಱೆ ರೋಮಾಂಚನದ ಬಿಗುಹಡಗಿತ್ತು ಕಂಗಳ ನನೆಗಳರಳಿದವಾಯ್ತು ಭೀಷ್ಮಂಗಿತ್ತ್ಯಣವಧಾವ (ಕುಪ್ಪಾದ್ರೋ. ೦-೨೨); ಪೂವಳ್ಳಿಗಳ್ ನನೆಕೊನೆ ಮುಗುಳರೆ ಮುಗುಳ್ ಬಿರಿಮುಗುಳಲ್ಪಲರ್ದ ಪೂಸಮಲರ್ಗಳಿಂದೆ ಸೊಗಯಿಸೆಯುಂ ಮನೋಹರಮಾಯ್ತು ಪೊಸಸುಗ್ಗಿ (ರಾಮಾಶ್ವ. ೧೭-೧). ೨. ಹೂವು; ಪುಷ್ಪ; ಕುಸುಮ: ನನೆಯನೆ ಪೇಱ ಕಂದಳಿರೊಳೆಯ್ದೆ ಬಟಲ್ದೆಳಮಾವು (ಅದಿಪು. ೦-೬೪). 'ನನೆಗಣೆ', 'ನನೆವಾಸ್ತು₂' ಪರಾ.

ನನೆಯ ಕೋಲ್=ಹೂಬಾಣ; ಪುಷ್ಪಬಾಣ ನೀಂ ನಾಲ್ಕೆರಡು ಪಗಲೊ ಳವಿನ್ಮಡೆಯನ ಕೈಯ ನನೆಯ ಕೋಲ ಕಾರಾಟಮಂ ಕಾಣ್ಬೆನುತೋಲಗ ಸಾಲೆಯಂ ಪೊಱಮಟ್ಟು (ಕಲ್ಕಿಕಾ. ೧೮೮). ನನೆಯ ಶಿಶು = ಮೊಗ್ಗು; ಮುಗುಳು: ಜ್ಞಾನಿಯ ಸಂಗ ನನೆಯ ಶಿಶುವಿನಂತಿರಬೇಕು ಜ್ಞಾನಿಯ ಸಂಗ ಭಾನುವಿನ ತಾವಿನಂತಿರಬೇಕು (ಪೂಲಸೂ. ೯೭-೩೮೩). ನನೆಯ ಸರ = ಪುಷ್ಪಬಾಣವನ್ನುಳ್ಳವನು; ಕಾಮ; ಮನ್ಮಥ: ನನೆಯ ಸರಂಗೆ ಚಿತ್ರದೆಡೆಯಂ ಕುಡದಿರ್ದನ ಪೆಂಪು ಜಾಣ್ ಜಸಂ . . . ಕೂರ್ಪು ಪೊಡರ್ಪೆಸೆದಿರ್ಪುದು (ಶಾಂತೀಶ್ವ. ೬-೩೨). ನನೆಯ ಸರಲ್=ನನೆಯ ಕೋಲ್: ನನೆಯ ಸರಲ್ಗಳುಮಂ ಕ ರ್ಬಿ ನ ಬಿಲ್ಲುಮನೊಲ್ಲದಿಲ್ಲಿಗವತರಿಸಿದನಂಗನನೆಯ್ದೆ ಕಾಣ್ಬವೋಲ್ ಕಂಡು ನೃಪಕುಮಾರರ್ ಸ್ವಯಂವರಾಸೆಯನುಱೆದರ್ (ಶಾಂತಿಪು. ೩-೯೪); ನನೆಯ ಸರಲ್ಗಳಂತೆ ನೆಱೆ ದಿಂಗಳ ತಣ್ಗದಿರಂತೆ . . . ಲೋಲಲೋ ಚ ನ ರು ಚಿ ಸಂತ್ರಿಮುಕ್ತಿದುದಶೇಷನೃಪಾಲಸಭಾಂತರಾಳಮಂ (ಶಂಶಾಮಾ. ೩-೭೦); ಕೃತ್ರಿಮ ವಿಹಗಾವಳಿ ಶುಕಪಿಕಮೆನಲಾ ಮಂಟಪಮತಿ ಶೋಭಿಸಿದುದು ನನೆಯ ಸ ರ ಲ ನೀ ಟ ನ ಕೇಳೀವನದಂದಮನನುಕರಿಸಿ (ಅಮುಕಥ. ೪-೩೦).

[<ನನೆ₁./ತಮಿ. ನನ್ನೈ, ನಕ್ಕೈ; ಕೊಡ. ಕೊಡ. ನನ್; ತೆಲು. ನನ]

**ನನೆಕೇರ್** (ನಾ). ಮೊಗ್ಗಿನಿಂದ ನಿರ್ಮಿಸಿದ ಗೋಡೆ: ನನೆಕೇರಿಂ ಕಂಪಿನಣ್ಪಂ ಕುಸುಮಿತ ಲತಿಕಾದಂಡಸಂದೋಹದಿಂ . . . ಒಪ್ಪುವ ನವಸುಮನೋ ಮಂಡಪಕ್ಕೆಯ್ದೆ ಮಂದಲ್ (ಲೀಲಾವ. ೦೦-೫೯). [ನನೆ₂ + ಕೇರ್₁]

**ನನೆಕೊನೆ** (ನಾ). ೧. ಚಿಗುರಿದ ಕುಡಿ; ಅಂಕುರ; ಮೊಳಕೆ: ನನೆಕೊನೆಯು ತಳಿರ ಪೂವಿನ ಬನವಾನಿತುಂ ಕಿವಿಗಳೆಳರೆ ಬೆಂಕಿಯ ಪೊಂಪುಱಿಪನೊಳೆ ಕೊರಗಿರ್ದ ಲತೆಗಳ ಕೊನೆಗೊನೆಯನೆ ದಹನನಲುರ್ದ ಕೊನೆಗೊನೆಗೋಡಂ (ಶಂಪಥಾ. ೩-೯೭); ಇಂದೊ ನಾಳೆಯೊ ಮತ್ತೆ ಮೈಯೆಲ್ಲ ನನೆಕೊನೆಯು

ಪ್ರಳಯಾದುದರಿ ನಿಂತರೂ ಒಣಗಿಲ್ಲ ವಡವು (ಕರುಣ್ಯಾ. ೧೦-೨೩). ೨. (ಆಲಂ) ಹಿಗ್ಗು ; ಸಂತೋಷ ; ಆನಂದ : ನೆನಹು ನೆಮ್ಮಿತು ಶಿವವಾಸರದ ನನೆಕೊನೆಯ ತೆರಳಿಕೆಯ ತೊಡಚೆಯ ಮನದ ಸಂಚಲವೀಜುವೋದುದು ಕಲಿಧನಂಜಯನ (ಕುಮ್ಯಾಅ. ೪-೯೨) ; ಒಂದರಿಂದಿನ್ನೊಂದು ಮನೆಗಿಲ್ಲಿ ನಡೆದರೇನೆ ವಿಜಯಯಾತ್ರೆಯ ನನೆಕೊನೆ ! (ಚಂಕವ. ೬೭-೪). 'ನನೆಕೊನೆ ವೋಗು' ಪರಾ.

**ನನೆಕೊನೆಯಾಗು** = ವಿಕಸಿತವಾಗು ; ಅರಳು : ಸಲ್ಲನೆ ನಗುನುಡಿಗಾಣನೆ ಪೆಣ್ಣಲರ್ವಿಲ್ಲನೆ ನುಡಿ ಬಸಂತದೊಳು ಪಲ್ಲವಿಸುತೆ ನನೆಕೊನೆಯಾಯ್ತು ಚಿತ್ರಸಂಘ[ ಪು ]ಲ್ಲವಲ್ಲರಿ ಬಗೆಗಾಣ (ವರ್ಧಕ. ೯-೨) ; ಭರತೇಶ – ಕುಸುಮಮಾಜಯರ ದಿವ್ಯಪ್ರಣಯದ ಸುರತರದಲ್ಲಿ ನನೆಕೊನೆಯಾಗುತ್ತಿದ (ಕನಾಕ. ೩೬೦). [ ನನೆ₂ + ಕೊನೆ₂ ]

**ನನ್ನೆಕೊನೆಯೇರು** 'ನನೆಕೊನೆಯೇಱು' ನೋ.

**ನನೆಕೊನೆಯೇಱು,** ನನೆಕೊನೆಯೇರು (ಕ್ರಿ). ಚಿಗುರು ; ಕೊನರು ; ಮೊಳೆ ; ಅಂಕುರಿಸು : ಜನಕಜೆ ವಕ್ತ್ರದೀಪಕಲಿಕಾಕೃತಿಯಿಂ ಪುಗೆ . . . ವ ರ ೇಂದ್ರನಂದನಗೆ ಮನೋವಿಕಾರದೊಡನಂಗವಿಕಾರವಂದೇಂ ಪೊದಟ್ದುದೋ ನನೆಕೊನೆಯೇಱುವಂತೆ ವನರಾಜಿ ವಂಧುಪ್ರಥಮಪ್ರವೇಶದೊಳ್ (ಪಂಚಾಮಾ. ೩-೩೦). **ನನೆಕೊನೆಯೇರು :** ಇಂತುಚರ ನೆನಹು ನನೆಕೊನೆಯೇರಿ ಪ್ಯಾರಶಿಲ್ಪದಿ ಚಿತ್ರವರಳುತಿರೆ, ಎತ್ತ ಹೊರಳಿದರು ನೂತನ ಸೃಷ್ಟಿ (ಶಿಲಮು. ೭೦-೪). [ ನನೆಕೊನೆ + ಏಱು₁ (<ಏಱ್₁) ]

**ನನೆಕೊನೆವೋಗಿಸು** (ಕ್ರಿ). ೧. ಚಿಗುರು ಮತ್ತು ಹೂವುಗಳಿಂದ ತುಂಬಿರುವಂತೆ ಮಾಡು. ೨. ಸಂತೋಷಗೊಳಿಸು ; ಹರ್ಷಪಡಿಸು : ವನದೊಳು ಚರಿಸಿ ಮಸಂತನಾ ವನವ ಭ್ರೋಂತನೆ ಚಿಗುರೇಱಿಸುವಂತೆ ವನಧಿಮಧ್ಯದ ಧರಣಿಯ ನಿನ್ನ ಸುಳುಹಿಂದ ನನೆಕೊನೆವೋಗಿಸು ನೃಪತಿ (ಧರಚ. ೩೦-೧೩). ೧, ೨ : ಮನಸಿಜಕಲ್ಪಲತಾನಂದನಮನೆ ಬಿಂಕಕ್ಕೆ ಕೊಂಕಿದುಬಾಜನವಂ ನನೆಕೊನವೋಗಿಸುತಿರ್ಪುದು ಮನುಜವನೋಭವ ಭವದ್ವಿಲಾಸವಾಂತಂ (ಯಶೋಚ. ೩-೩). [ ನನೆಕೊನೆವೋಗು + – ಇಸು₂ ]

**ನನೆಕೊನೆವೋಗು** (ಕ್ರಿ). ೧. ಚಿಗುರು ; ಪಲ್ಲವಿಸು ; ಅಂಕುರಿಸು : ನನೆಕೊನೆವೋಯ್ತು ತನ್ನ ನನೆಯಿಂ ಮುದವುರ್ವಿಗೆ ತನ್ನ ಪುಷ್ಪದಿಂ ಮನಸಿಜಯುಂಗೆ ಪುಷ್ಪಶರನೆಂಬ ಪೆಸರ್ ಬೆಳಗಿತ್ತು (ಜಗವಿ. ೧೪-೬೨) : ಮನಸಿಜ ಮತ್ತವಾರಣಮೊ ಕಾಮನ ಕಾರ್ಮುಕಗೇಹಮೋ . . . ನನೆಕೊನೆವೋದ ಮಾಮರನೊ ಪೇಟ್ಟಿನ ರಂಜಿಸಿದತ್ತು ಮಾಮರು (ರಕಳ. ೪-೮೩) ; ಬೀದಿ ಪರಿದುದು ಬಿಂಕ ನನೆಕೊನೆವೋದುದು ದಾಶಾದೀಜ ಲಕ್ಷ್ಮಿಯ ಹೋದ ವಾಱಗೆ ಕದವ ಹೊಯ್ದನು (ಕುಮ್ಯಾಕ. ೦-೨೩) ; ನನೆಕೊನೆವೋದ ನವಾಮ್ರದ ನೆಳಲೊಳ್ ಮನವಂ ತನುವಂ ಬೇರ್ಕೆಯ್ದೊರ್ವಂ ಮುನಿಕುಲತಿಲಕಂ ಯೋಗದೊಳಿರೆ ಕಂಡಂ ಜಯಭ್ರೂವದನು (ಜಯನೃ. ೯-೯೦). ೨. ಉಬ್ಬು ; ಉತ್ಸಾಹಿಸು ; ಹಿಗ್ಗು ; ಸಂತೋಷಗೊಳ್ಳು : ಅಂತು ಮೂರ್ಛಾಪ್ರಸಂಗನಾದ ಪನ್ನಗಪತಾಕಂಗೆ ಶಿಶಿರೋಪಚಾರಕ್ರಿಯೆಗಳು ಮಾಡ್ಸಸಂಜಯನಿರವ ತತ್ಪರಿಜನಂ ಕಂಡು ಪೇಳ್ದೆ ಗಾಂಧಾರಿ ಮನದೊಳ್ಳಿ ಬಳ್ಳಿ ನನೆಕೊನೆವೋಗಿ (ಗದಾಯು. ೩-೭೭ ವ) ; ಪುತ್ರದೋಹಳದಿಂ ಸಮನಿಸಿದುದ್ದೀಪನಧಾರ[ ವ ]ವೆಂಬವಮದಿನ ಮಟ್ಟಿಯ ಮಡಲ್ತು ನನೆಕೊನವೋಗಿ (ಅರ್ಧನೇ. ೧-೯೨ ವ) ; ತನತನಗುರ್ವುತುಂ ಬಿಡದ ಕೊರ್ವುತೆ ಪರ್ವುತುಮುರ್ವಿಯೊಳ್ ಕರಂ ನನೆಕೊನೆವೋಗಿ ಮಾಯ ಕೊಚಚಾಡದೆ ಮಾಣ್ಬುದೆ ಹಂಪೆಯಾರ್ದನೇ (ಹಂಪಾಶ.೬೮); ಅನುಪಮಚಿದ್ವನಾರ್ಯರುಗಳ್ ಪಿರಿದುತ್ಸವದಿಂದೆ ಬಂದು ತಜ್ಜನವತಿಪುತ್ರನಂ ಸಚಿವಪುತ್ರನುಮಂ ವಡೆ ನೋಡಿ ಚಿತ್ತದೊಳ್ ನನೆಕೊನೆವೋಗಿ (ರಾಜಕೆ. ೪-೮೩) ; ನುಡಿಗಬ್ಬದ ಗಬ್ಬ ದುಬ್ಬರದಿಂ ನನೆಕೊನೆವೋಗಿ (ರಾಮಾಶ್ವ. ೧೫೩-೭).
[ ನನೆಕೊನೆ + ಪೋಗು₁ ]

**ನನೆಗಣೆ** (ನಾ). ಹೂವಿನ ಬಾಣ ; ಪುಷ್ಪಬಾಣ ; ಹೂಬಾಣ : ಅಂತು ತಿರುವಿಂ ಬರ್ದುಂಕಿದ ಕಂತುವ ನನೆಗಣೆಗಳಂತೆವೋಲ್ ನಡೆತಂದರ್ ಸಂತಸದೆ (ಪಂಪಭಾ. ೯-೧೨೦) ; ಬಾಲೆಯ ಕಡೆಗಣ್ಣೋಟಮೆ ಸಾಲದೆ ನನೆಗಣೆಗಳೇವುವೆಂದು ಮನೋಜಂ ಶೂಲಿಯ ನೊಸಲುರಿಗಣ್ಣಿಂ ಪೀಲಿಯ ಕಣ್ಣಿಂಬಂ (ಪಂಚಾಮಾ. ೩-೪೪) ; ನನೆಗಣೆಯಂ ಸ್ಮರಂ ಪಡೆದ [ಪೂಗೊ]ಳದಂತೆವೋಲಿರ್ದುದಚ್ಚವಿಂಚಿನ ಸುಲಿಪಲ್ಗಳ್ (ಅರ್ಧನೇ. ೨-೧೪) ; ನನೆಗಣೆ ನೆಡುಗುಂ ಕಾವಿಗಳೆಂಬ ಮಾತಿಲ್ಲಿ ಪುಸಿ ವರಸ್ತ್ರೀರತರಂ ನನೆಯ ಮೊನೆಯುಂಬು ಮಲರಲಗಿನಂಬುಮಾ ಬನದೊಳಂರ್ಕೆ ನೋಯಿಪುದು ದಿಟಂ (ವರ್ಧಪು. ೧೧-೨೩) ; ವಸಂತಂ ವಸಂತನಂ ಕಾಮಂ ಕಾಮನಂ ಇಕ್ಷುಚಾಪಂ ಇಕ್ಷುಚಾಪವಂ ನನೆಗಣೆ ಸಾರ್ವರಂತೆ ಪಾರ್ವತಿಯಂ ನವಯೌವನಂ ಸಾರ್ವಲ್ಲಿ (ಗಿರಿಕ. ೪-೭ ವ) ; ಜಕ್ಕುಲಿಪ ಮನದ ನನೆಗಣೆಯುನರಸಿಗೆ ನೋಡೆ ಸೆಕ್ಕಸ್ವಮವೆನಿಪ ರೂಹಿನ ಮೋಹನಂ ಜನಿಪ ಚಿಕ್ಕಹರೆಯದ ಬೆಟ್ಟದೆರಳೆಗಣ್ಣರಲ ಪೆಣ್ಮಕ್ಕಳೆಯ್ತಂದರೊಸೆದು (ಪದ್ಮರಾ. ೩-೭೭). [ ನನೆ₂ + ಕಣೆ₁ ]

**ನನೆಗಣೆಗೊನೆ** (ನಾ). ಹೂಬಾಣಗಳ ತುದಿ ; ಪುಷ್ಪಬಾಣಗಳ ಮೊನೆ : ಆ ನನೆಗಣೆಗೊನೆಯಿಂದುದಯಿಸಿದುಗ್ರಾನಲನೊಳ್ಪರಿಯೊಳು ತದ್ವಿರಹದ ಮಾನಿನಿ ಕಣ್ಗೆ ವಿರಾಜಿಸಿದಳ್ ಸ್ವಾಹಾವಧುವೆಂಬಂತೆ (ಜಯಳ. ೪-೯೨).
[ ನನೆಗಣೆ + ಕೊನೆ₂ ]

**ನನೆಗಣೆದೊಡು** (ಕ್ರಿ). ಪುಷ್ಪಬಾಣವನ್ನು ತೊಡು ; ಹೂಬಾಣವನ್ನು ಹೂಡು : ತವಿದನ್ನನಿಸಲೆಂದು ತಿರುವಿನೊಳು ನನೆಗಣೆದೊಟ್ಟು ಹದಿವಟ್ಟು ಕಂದರ್ಪನು ಸನ್ನದ್ಧನಾಗಿ ನಿಂದು (ಸೌಂದಪು. ೧೭-೪೩).
[ ನನೆಗಣೆ + ತೊಡು₁ ]

**ನನೆಗಣೆಯ** (ನಾ). ಹೂವಿನ ಬಾಣಗಳನ್ನು ಹೊಂದಿದವನು ; ಕಾಮ ; ಮನ್ಮಥ : ನನೆಗಣೆಯನ ಕಣೆಗಳವೊಲು ಗೋಪರಂಗನೆಯರ ನಯನ ಮರೀಚಿ ತನುವಿನೊಳಗೆ ಪಸರಿಸಲಾ ತಾಪಸ ಮನವನಿತ್ತನು ಮನಸಿಜಗೆ (ಅಂಜನ. ೨-೭೩): ಕಡುಚೆಲ್ವಂ ಪಡೆದನಾವಗಂ ನನೆಗಣೆಯಂ (ಕಬ್ಬಿಗಕಾ. ೧೫೭) ; ನನೆಗಣೆಯನೊಲಿದರ್ಚಿಸುವ ಮೋಹನದ ಸಿರಿಯೋ ಕಬ್ಬುವಿಲು ಗಾಣನ ನಲವಿನಾರಾಧಿಸುವ ಮಂತ್ರಾಧಿದೇವತೆಯೋ (ಶಾಬ್ಭಾ. ೨-೨೩) ; ನನೆಗಣೆಯನ ನೇಹದ ಡಾಳವೊ ಪೇಳನೆ ಗಣಿಕಾಜನವೆಸೆದುದು ಸೌವರ್ಣದ ಸೌಧದ ಮುಂಬಿನೊಳು (ಉದ್ಭಟ. ೪-೧೯). [ ನನೆಗಣೆ + – ಅ₇ ]

**ನನೆಗಪ್ಪಡ** (ನಾ). ತೊಯ್ದ ವಸ್ತ್ರ ; ಒದ್ದೆಯಾದ ಬಟ್ಟೆ : ಮನಂದಣಿಯೆ ಚೊಕ್ಕಳದಿಂ ನೀರೊಳಾಡಿ ಮಿಂದು ಬಂದು ತಡಿಯನಡರ್ದ ನನೆಗಪ್ಪಡ ಮನುಬಿಡದು ಪೊಸಸೀರೆಯುಂ ನಿಱಿಪಿಡಿದಿಟ್ಟು (ರಾಮಾಶ್ವ. ೦೨೪-೨).
[ನನೆ₁ + ಕಪ್ಪಡ]

**ನನೆಗುದಿ,** ನೆನೆಗುದಿ (ನಾ). ೧. ಅರ್ಧ ಬೇಯುವುದು ; ಹೆಚ್ಚಾಗಿ ನೆನೆದು ಪೂರ್ತಿ ಬೇಯದಿರುವುದು : ಹೊತ್ತುವುದು ಸರಿಯಹುದು ನನೆಗುದಿಯಹುದು . . . ಒಣಗಿಹುದು ದೋಷವಶನಕ್ಕಿಂತು ಕೆಣನಪ್ಪುದು (ಸೂಶಶಾ. ೩-೧). 'ನೆನೆಗುದಿಗೊಳ್' ಪರಾ. ನೆನೆಗುದಿ: ೨. (ಆಲಂ) ಪೇಚು ; ತಳಮಳ : ಆತ ಈ ಕೆಲಸ ಮಾಡಬೇಕೋ ಬೇಡವೋ ಎಂದು ನೆನೆಗುದಿಯಿಂದ ಒದ್ದಾಡುತ್ತಿದ್ದ (ರೂಢಿ).

**ನೆನೆಗುದಿಗೆ ಬೀಳು** = ಅನಿಶ್ಚಿತವಾಗಿರು; ಅನಿರ್ಧಾರವಾಗಿರು; ಬಗೆಹರಿಯದಿರು : ಹೀಗೆ ಪ್ರಣಯ ನೆನೆಗುದಿಗೆ ಬಿದ್ದ ಮೂಲಕ ಕಿಟ್ಟಿ ಕಂಗಾಲಾದನು (ಗಂಮಾಯಿ. ೯೯) : ಸದ್ಯದ ಮಟ್ಟಿಗಂತು ಆ ವಿಲಾಸಭವನದ ನಿರ್ಮಾಣಕಾರ್ಯವು ನೆನೆಗುದಿಗೆ ಬಿದ್ದಿತಂ (ಸ್ವಾಲಮಿ. ೩೯) ; ಆಮೇಲೆ ಮಂತ್ರ ಆಂದೋಲನವು ನೆನೆಗುದಿಗೆ ಬಿದ್ದ ಮೇಲೆ ತಂದೆಯ ಒತ್ತಾಯದ ಮೂಲಕ ಕಾಲೇಜು ಸೇರಿದ್ದ (ದಾಸಹು. ೮೪).
[ ನನೆ₁ + ಕುದಿ₂ ]

**ನನೆಗುದಿಗೊಳ್** (ಕ್ರಿ). ತಳಮಳ ಹೊಂದು : ಮನಸಿಜಕರೀಂದ್ರಕಟದೊಳ್ ಸೊನೆ ತೊಟ್ಟನೆ ಪುಟ್ಟುವಂತೆ ಪಳುಳಕ್ಕೆ ಪಸುರ್ತನೆ ಪುಟ್ಟೆ ಬಿರಯಿಯರ್ದೆಗಳ್ ನನೆಗುದಿ[ಪಾಠಾಂ, ಡಿ]ಗೊಂಡವು ಬಸಂತಮಾಸದ ಪುಗಿಲೊಳ್ (ಮಲ್ಲಿಪು. ೫-೧೬). [ ನನೆಗಂದಿ + ಕೊಳ್$_1$ ]

**ನನೆಗೈದುಗಾಜ** (ನಾ). ನನೆಯೆಂಬ ಆಯುಧವನ್ನು ಹಿಡಿದವನು ; ಮನ್ಮಥ : ನನೆಗೈದುಗಾಜನೆಂದೆನಿಪ ಧೀವರ ದಿವಿಜ ದನುಜ ಮನುಜರ ಧೈರ್ಯಮೆಂಬ ಮಾತ್ಸ್ಯಂಗಳಂ ತನಗೆ ವಸವಮಾಡಿಕೊಳಲು (ಶಾಂತಪು. ೦೬-೩೩). [ ನನೆ$_3$ + ಕೈದುಗಾಜ (<ಕೈಯ್ದುಕಾಜ) ]

**ನನೆಗೊಂಬು** (ನಾ). ಹೂವುಗಳಿಂದ ತುಂಬಿದ ರೆಂಬೆ,-ಕೊಂಬೆ : ಬಂದನುಂಡು ನನೆಗೊಂಬುಗಳಂ ಮೊರೆದೆಟ್ಟಿ ಭೃಂಗರಝಂಕಾರವೆ ಪಾಟ್ಟಪಾರ ಬಳಗಂ . . . ಹರ್ಷಭಾರಮಂ (ಹಂರಾಪುಜ. ೦-೧೦೮) ; ನನೆಗೊಂಬಂ ನೀಳ್ಪೆ ಚಂದ್ರಾತಪಮ ಪುದಿದುದೆಂಬನ್ನೆಗಂ ನೋಡಿ ಚಂದ್ರಾನನೆ ಪೂಮಂ ಲೀಲೆಯಿಂದಂ ತಿಱಿಯೆ (ಮಲ್ಲಿಪು. ೭-೭೭) ; ನನೆಗೊಂಬಾಣತಿಮಾಡಿ ಪಾಡುವಪುಳಿರ್ದತ್ತು ಭೃಂಗಾಂಗನಾಧ್ವನಿಯಿಂದಂ (ಸೂಕ್ತಿಸು. ೦೦-೩೧).
[ ನನೆ$_3$ + ಕೊಂಬು$_1$ ]

**ನನೆಗೊಯ್** (ಕ್ರಿ). ಹೂವುಗಳನ್ನು ಕೀಳು,-ಬಿಡಿಸು,-ತಿರಿ : ತಗೆದು ನನೆಗೊಯ್ದು ಬಿಡೆ ಮೇಲೊಗೆವೆಳದಳಿಗೆರ್ಗೊಂಬು ಪೋಲ್ದುದಾ ಪೂವಿನ ಸೊಗ್ಗೆ ಕೊವಲು ಒಡಿದು ಮದಾಳಿಗಳುಲಿಯಿಂ ಪುಯ್ಯಲಿಡುವಶೋಕೆಯು ತೈಯಂ (ಚಂದ್ರಪು. ೭-೦೦೦). [ ನನೆ$_3$ + ಕೊಯ್ ]

**ನನೆಗೋಲ್** (ನಾ) = ನನೆಗಣೆ : ನನೆಗೋಲ್ ನಟ್ಟು ಕೊನರ್ತಪೊಲ್ಲುಳಕ ಮಣ್ಣತ್ರಲ್ಲಿ ರಕ್ತಾಂಬುಗಳ್ ಪನಿವಂತಿರ್ದುವು ಭರ್ಮವಾರಿ (ಲೀಲಾವ. ೩-೮೪) ; ಮಿಸುಪನ್ನಯ ಪುರ್ವಿನ ಕರ್ವಿಲ್ಲಿ ನೋಟದ ನನೆಗೋಲ ಲೀಲೆಯೊಳ್ ಸೋಲಿಸುವಂ ಜತಕನಾಲಶೂಲಿಯಂ (ಗಿರಿಜೆ. ೭-೭೭) ; ನನೆಗೋಲ್ಬಿಲ್ಲಬಿಲ್ದಾಳಿಚಾಲಲೇಪಾವರ್ವಿರ್ಯೆಂಬರ್ಮನೋಜನ ಬಿಲ್ಲಂ (ಅನುಭವ. ೯-೦೧) ; ದೊನ್ನೆದಲಂ ನಿಮಿರ್ಚಿದವಸಗ್ಗಿಯ ಕಣ್ಣದಿರಿಂದ ಮೋಹಿಸೆ ನೀನುನ್ನನೆಗೋಲ್ಗಳಂ ಸಿಡಿಲ್ಗೆ ಸಾಟಿಯುನಾಗಿಪ ಪಂಚಸಾಯಕಾ (ಚಾಕುಂತ. ೩೨-೫೭). [ ನನೆ$_3$ + ಕೋಲ್$_1$ ]

**ನನೆಗೋಲ** (ನಾ). = ನನೆಗಣೆಯ : ನನೆಗೋಲನಂಪಟಳದಲಿ ಭ್ರಾಂತಿಗೊಡಿರ್ದ ವನಚರ ಪೂತ ಸಂಪಗೆಯು ಕೊನೆಗಳ ಮುಱಿದಿಡಲಂಜಿ ತಾಪಸರೆಲವನೆಗಾತಿಯರನಪ್ಪಿದರು (ಮೋಹತ. ೭-೦೫) ; ವಿನಯದಿ ಮಾತಾಡು ಖೆಳರಾಯ ನಿನ್ನಯ ತನಯಳಿಗೋಸುಗ ಬಂದ ಮನೆಯಳಿಯನ ಕೂಡೆ ವಾಚ್ಚಪವೇಕೆಂದು ನನೆಗೋಲನಾತ್ಮಜ ನುಡಿದ (ಮೋಹತ. ೩೫-೨೮).
[ ನನೆಗೋಲ್ + - ಅ$_7$ ]

**ನನೆದಂಡೆ** (ನಾ). ಹೂವಿನ ದಿಂಡಂ,-ಮಾಲೆ : ಗಂಡನಿಂದಲೇ ಗಂಳದಾಳಿ, ಅರಿಷಣ, ಕುಂಕುಮ, ಮಲ್ಲಿಗೆಯ ನನೆದಂಡೆ (ಕನ್ನಕಾ. ೦೩೩).
[ ನನೆ$_3$ + ದಂಡೆ$_1$ ]

**ನನೆದುಱುಗಲ್** (ನಾ). ಹೂವಿನ ಗೊಂಚಲು,-ಗುಚ್ಛ : ನೆಱೆ ಬಸಂತನ ಮದನಶರಕಂದೆಱಕರೋವಿದ ಚೆಂದಿರ ನನೆದುಱುಗಲೊದವಿದಶೋಕೆಗಳು ಬನದೊಳು ವಿರಾಜಿಪವು (ಶಾಳ್ವಭಾ. ೨-೩).
[ ನನೆ$_3$ + ತುಱುಗಲ್ (<ತುಱುಂಗಲ್) ]

**ನನೆದೊಡಿಗೆ** (ನಾ). ಹೂವಿನ ಆಭರಣ,-ಅಲಂಕಾರ : ಇಂತು ಜಲಕ್ರೀಡೆಗೆಂದು ಕೊಳನಂ ಪೊಕ್ಕಲ್ಲಿ ನನೆದೊಡಿಗೆಯ ನಾಯಕಿಯರುಂ ತಿಲಕದಲಲನೆಯರುಂ . . . ಗಿರಿಜೆಯ ಚರಣಕಮಲಕ್ಕೆ ಭರದಿಂದೆಱಗುತ್ತುಂ (ಗಿರಿಜೆ. ೯-೨೦ ವ). [ ನನೆ$_3$ + ತೊಡಿಗೆ (<ತೊಡುಗೆ) ]

**ನನೆದೋಱು** (ಕ್ರಿ). ಮೊಗ್ಗನ್ನು ಹೊಂದು; ಮುಗುಳು ಬಿಡು: ಇದಿರೊಳ್ ನನೆದೋಱೆ ವಸಂತದೂತಿಯೆನೆ ತಾನೆ ನೆಗಟ್ದ ಮಾಧವಿಯೆನೆ ಸಂದದಿಮುರ್ಕ್ತೆಯ ಪೂಗೊಂಚಲ ಪುದುವಿನೊಳೆಱಗಿದ ಮದಾಳಿಗಳ್ ಮಱೆದಪ್ಪುವೇ (ಆದಿಪು. ೧೧-೦೦೮) ; ದೇವಿ ನೀಂ ನಡಪಿದೆಳಲತೆ ನನೆದೋಱಿತೆಂದು ಬಿನ್ನವಿಸಿದ ಬಾಲಕಿಯರನಾಭರಣಪ್ರದಾನಾತಿ ಸನ್ಮಾನಂಗಳಿಂ ಸಂತೋಷಂಬಡಿಸುತಿರ್ದಳ್ (ಕಾದಂಬ. ೨೫) ; ನನೆದೋಱಿತ್ತು ವಸಂತದೂತಿ (ಮಲ್ಲಿಪು. ೫-೭) ; ಕಡವಲರ್ಪೊರ್ತಪ್ಪು ಪೊಲ್ಲೆ ಮುಗುಳ್ತಿತ್ತು ಪೊದಟ್ದು ಪೊಲಂ ಪಸುರ್ತುವಾಸಡಿ ಕುಡಿಯೇಱಿ ಮುತ್ತೆ ನನೆದೋಱಿ (ಕುಸುಮಾ. ೩-೦೫) ; ಮರುಗ ಪೊನೆ ನನೆದೋಱೆ ಸುರಗಿ ಜಾಜಿಯ ಸನೆಗಳರಳಿ ಪರಿಮಳದಲೆಸೆಯಲ್ಕೆ (ಹರಿಕಾ. ೩-೩೨) ; ಎಲೆ ಸಂಪಿಗೆಗಳ [ಕಣ್]ಕಣ್ಗಲೆಯೆಡೆ ಗಂಟೊಡೆದು ಮೊನಸಿ ನನೆದೋಱೆ[ಪಾಠಾಂ. ಕೊನೆದು] ಮುಗುಳ್ಪಲರ್ದು ಮಱೆದುಂಬಿಗಂ ತಂಬೆಲರ್ಗಂ ಮುದ್ದಾದುವಲ್ಲಿ ಪೂಸ ಮಲ್ಲಿಗೆಗಳ್ (ಯಶೋಧ. ೯-೫). [ ನನೆ$_3$ + ತೋಱು ]

**ನನೆನಾಱು** (ಕ್ರಿ). ಹೂವಿನಿಂದ ಗವಗವಿಸು,-ಸಂವಾಸನೆ ಬೀರು : ನನೆಯೆಳಗಂಪನತ್ತಿಯುಮಣಂ ನನೆನಾಱಿದರಲ್ದನೇಕಕೋಕನದ ವನಂಗಳೊಳ್ ಸುಟಿದು ತಣ್ಣಸಮಾಗದೆ . . . ತೀಡಿದುದು ತೆಂಕಣಗಾಳಿ ವಸಂತಮಾಸದೊಳ್ (ಹಂಪಶಾ. ೫-೩೯). [ ನನೆ$_3$ + ನಾಱು$_1$ ]

**ನನೆಬಿಜ್ಜಣಿಗೆ** (ನಾ). ಹೂವಿನಿಂದ ಮಾಡಿದ ಬೀಸಣಿಗೆ : ನನೆಬಿಜ್ಜಣಿಗೆಯ ತಣ್ಣೆಲರಿನಾಱದುಯೆಮ್ಮ ತನುತಾಪ (ಹರಿಕಾ. ಶಿ. ೨೧೦).
[ ನನೆ$_3$ + ಬಿಜ್ಜಣಿಗೆ ]

**ನನೆಮುಗುಳ್** (ನಾ). ಎಳೆಯ ಮೊಗ್ಗು ; ಹೊಸ ಮೊಗ್ಗು : ನನೆಮುಗು[ಪಾಠಾಂ. ಗ]ಳ್ ಕೊನೆಮುಗಳ್ವಿರಿದಿರೆ ಮುಗುಳ್ಗಳಂ ತನಿಗಂಪು ಶೀಷಿರ್ದ ಪೊಚ್ಚಪೊಸಪೂಗಳಂ ಕೊಂಡು ಕುಕಿಲಿಱಿವೃತಂ ನಡೆತಂದು (ಪುಷ್ಪರ. ಹ. ೫೨೩-೨೭) ; ನನೆಮುಗುಳ್ ನನೆಕುಸುಮ ವಸುಗಾಯ್ . . . ಕೊನೆದು ತೂಗುವ ಫಲಭರಂಗಳ ಘನತರದ ಸಹಕಾರ ಸಹ ಸುರವನಕದಂಬಕ ಪೆಸೆದುದಿದಿರಲಿ ಕಟಿಕಂಲೇಶ್ವರನ (ತೊರವ. ೫-೩ ೦೯).
[ ನನೆ$_3$ + ಮುಗುಳ್$_2$ ]

**ನನೆಮೊನೆ** (ನಾ). ಮೊಗ್ಗಿನ ತುದಿ,-ಅಗ್ರಭಾಗ : ತೋಳಿನೊಳೊಱಗಿ ದಿನಿಯಳ ಕರ್ಣಪೂರಕೂಳೆಱಿಯ ಕತ್ತುರಿರಸವ ನನೆಮೊನೆಯಿಂದ ಲೇಖಿಸಿದ (ಸಾಳ್ವಭಾ. ೦೬-೧).

**ನನೆಮೊನೆಯಾಗು** = ಚಿಗುರು : ನನೆಮೊನೆಯಾಗಿ ಬಂದುವೆಳಮಾವೆಳ ಮಾವಿನ ಮುಂಚೆ ಬಂದ ಪೂವಿನ ಪೊಸಗೊಂಚಲೊಪ್ಪಿದುವು (ಶಾಂತಿಪು. ೭-೧೨೫). [ ನನೆ$_3$ + ಮೊನೆ$_1$ ]

**ನನೆಯಂಬ** (ನಾ). = ನನೆಗಣೆಯ : ನನೆಯಂಬಂ ತಾವರೆಪೂವಿನ ಕೈಪೊಡೆಯಿಂ ಮನೋಭವಂ ತೊಡೆವಪೊಲು ಪವಿಶೆಯ ಸಬಾಷ್ಪಲೋಚನ ಮನವನಿವತಿ ಕೋಣಪಾಣಿತಳದಿಂ ಕೊಡೆದಂ (ಮಲ್ಲಿಪು. ೯-೦೬) ; ಹೂವಿನ ಬಿಲ್ಲನೊಲ್ಚ ತಂಗೊಂಡರ್ಚಿಸುತ್ತಿರ್ಪ ನಿಡುಪುರ್ವಿನ ನೀಱೆಯರಿಂ ನನೆಯಂಬಂ ಕೆಯ್ಗೆಯ್ದು ಸವಿನೋಟದ ಸಾಧಾರಣೆಯರಿಂ (ಗಿರಿಜೆ. ೭-೦೦ ವ) ; ನೀನೀ ಪೂವಿನ ಪೊಟಲೊಳ್ ನನೆಯಂಬನೆಂಬರಸಾದ (ಕಬ್ಬಿಗಕಾ. ೩೧೯) ; ಸೊತೆವೆದುರಾಂತು ಕತ್ತುರಿಗಂಧಿ ಬರೆದಳು ನನೆಯಂಬನ ಚಿತ್ರಪಟವ ವಿನಯದಿ ಕೈಕೊಂಡು ಬಂದಳು ಸ್ಮರವರತನಯನ ಕಯನ ಸ್ಮರಣಿ (ಮೋಹತ. ೫೯-೫೩). [ ನನೆಯಂಬು + - ಅ$_7$ ]

**ನನೆಯಂಬು** (ನಾ). = ನನೆಗಣೆ : ಮೊನೆಯಂಬುಗಳೊಳೆ ಪುನ್ನಾಪಕ ನಿಬರುವಂ ಕಿಱಿದು ಬೇಗದಿಂ ಹರಿಗನದರ್ಕಿನಗೆಡೆವೆಟ್ಟುವೆಂ ಎಂಬಪೊಲನಿ ಬರುವಂ ಪುನ್ನಾಗ[ತಪಂ] ನನೆಯಂಬುಗಳಂ (ಹಂಪಶಾ. ೩-೫೩) ; ನವೆಯಂಬಂ ಮಿಗೆ ಕಣ್ಗಲಿಸ್ ಮಕರದ್ವಜಂ ಕ್ರೋಢದ್ಭುಜಂ ಪೋಲೆ (ಗದಾಯು. ೦-೬) ; ಮನೋಜಂ ನನೆಯಂಬಿನಿಂದಿಸೆ ತದಸ್ತ್ರಾಘಾತಜಾತಾನಿಲಂ ನಿಮಿರ್ದೋರಂತಳುರಲ್ಕೆ ಹೃ ತ್ಪ ಟ ಯ ನಾ ಕಂದರ್ಪರಾಜೇಂದ ನಾ

(ಕುಸುಮಾ. ೧೧-೧೧೦); ಧೈರ್ಯದ ಜೋಡ ತೊಟ್ಟದಿರಾಗಿ ನಿಲೆ ನನೆಯಂಬು ನಾಟುವುವೆ (ಕುವ್ಯಾ.ಅ. ೮-೩೩); ಎನ್ನ ನನೆಯಂಬಿನ ಮೊನೆಗೆ ಸಂಗಿದಹಲ್ಯೆಯುಂ ನೀವೆಂ ಶರಣ್ಬೊಕ್ಕುದೇನಱಿಯದುದೇ! (ರಾಮಾಶ್ವ. ೫೬-೦೦). [ ನನೆ$_2$ + ಅಂಬು$_2$ ]

**ನನೆಯಕ್ಕಿ**, ನನೆಯಕ್ಕಿ$_1$ (ನಾ). ೧. ನೆನೆಯಿಸಿದ ಅಕ್ಕಿ; ನೀರಿನಿಂದ ಒದ್ದೆ ಮಾಡಿದ ಅಕ್ಕಿ: ಮನೆಯು ಸಾರಿಸಿ ರಂಗವಲ್ಲಿಯನಿಕ್ಕಿ ... ನನೆಯಕ್ಕಿ ಕಡಲೆ ಪಣ್ಯಾರದಿ[ಪಾಠಾಂ. ನನೆಯರಳ್ಗಳೆಂಬ ಪುಣ್ಯಹರ] ನಿಖಿಲಾರ್ಚನೆಯು ವಸ್ತುಗಳ ಸಾರ್ಚಿದರು (ಪೋಹತ. ೧೮-೮೨). ೨. ಶುಭಕಾರ್ಯಗಳಲ್ಲಿ ಆಶೀರ್ವಾದಕ್ಕಾಗಿ ಉಪಯೋಗಿಸುವ ಅಕ್ಷತೆ: ತೆಳ ತೊಟ್ಟಿಲೊಳಿಟ್ಟು ಸಣ್ಣ ಸನಗಳ ನನೆಯಕ್ಕಿಯನಿಕ್ಕಿ ಪಣ್ಣ ಬಾಯಿನವುನಣ್ಣಾವಳಿಯದ ಕೊಟ್ಟು ಚೂತವಲ್ಲಭನೆಂಬ ಪೆಸರಿಟ್ಟು (೧೦ಳ. ೨-೭೧ ಪ). ನೆನೆಯಕ್ಕಿ$_1$: ೧. ನೆನೆಯಕ್ಕಿ ನೆನಗಡಲಿ ಗೊನೆಯು ಬಾಳೀಹಣ್ಣು ... ತಗೊಂಡು ಗಂಗವ್ವ ಹೊಡೆಗ್ಯೆದಾರ (ಜೋಳಗೀ. ೦೩೨). 'ನೆನಗಡಲೆ' ನೋಡು.

[ ನನೆ$_1$ + ಅಕ್ಕಿ$_1$ ]

**ನನೆಯಿಕ್ಕು**, ನನೆಯಿಂಕ್ಕು (ಕ್ರಿ). ತೋಯಿಸು; ಒದ್ದೆ ಮಾಡು; ನೆನೆಹಾಕು: ನನೆಯಿಕ್ಕಿದ ಕಡಲೆಯ ತುರಗನಿಕಾಯಕ್ಕಱಿದು ಕಟ್ಟುವುದು (ಅಶ್ವಶಾ. ೭-೫೭). ನೆನೆಯಿಕ್ಕು: ಗರುಗದ ಸೊಪ್ಪಿನ ರಸದಲ್ಲಿ ಎರಡು ವರಹ ತೂಕ ಚೂರ್ಣವ ನೆನೆಯಿಕ್ಕಿ ಬೆಲ್ಲವ ಬೆರಸಿ ಕೊಡಲು ಪಾಂಡುರೋಗ, ಕ್ಷಯರೋಗ ಪರಿಹರ (ವೈದ್ಯಸಾ. I, ೩೩೭). [ ನನೆ$_1$ + ಇಕ್ಕು ]

**ನನೆಯಸಲ್** (ನಾ). ೧. ಹೂವಿನ ಎಸಳು, -ದಳ. ೨. ಹೂವಿನ ಚಿತ್ರ, -ಕಸೂತಿ, -ನಕ್ಷೆ: ನನೆಯಸಲಿಂದಮಾದ ಗುಟವುಂ ಪೊಳೆಯುತ್ತಿರೆ ನೀಳ್ಪವೆಶ್ರ ಪೂವಿನ ಪೊಸಟೆಕ್ಕೆಯುಂ ಮಿಳಿರೆ ... ಮೆಲ್ಲನೆ ನಡೆತಂದು ವಂದು ಪೊಸಮಾವಿನಪ್ಪುಗ್ಗಡದಗ್ಗದಾನೆಗಳ್ (ಕಬ್ಬಿಗ. ೨೦೨).

[ ನನೆ$_2$ + ಎಸಲ್ ]

**ನನೆಯೇಱು** (ಕ್ರಿ). ಹೂವು ಬಿಡು; ಹೂವು ತುಂಬು: "ನನೆತುದನೆ ನನೆಯೇಱಿದುದು" (ಶಬ್ದಮಂ. ೨೨); "ನನೆತುದು ನನೆಯೇಱಿದುದೆಂದೆನುತಂ" (ಕವಿಳಂ. ೭೭); ನನೆಯೇಱಿದ ಮಲ್ಲಿಗೆಯಂತೆ ಪೂರ್ಣಚಂದ್ರನ ಸಿರಿಯಂತೆ ... ರುದ್ರಭಟ್ಟನ ಕವಿತಾರಸಂ ಮನಮನಿಕರ್ಷಿಗೊಳ್ಳದು ಸಜ್ಜನರ್ಕಳಾ (ಜಗವಿ. ೧-೧೬); ವಿಸಾಱಿ ಮುಗಿಲಿದಿರೇಱಿ ನಿಶಿ ಹರುಷವೇಱಿ ನನೆಯೇಱ ಕುಂದವ್ರಜಕೆ ಕಡದಲರ ಸಿರಿಯು ಸೊಂಪೇಱ (ಶಾಳ್ಯಧಾ. ೨೬-೧೫); ಪೆಳೆಯೊಲೆಯಕ್ಕಿ ಸಣ್ಣನನೆಯೇಱಿದ ಪಾಟಳಿಪೂವನಾಂತು ಕಂಗೊಳಿಸುವ ಕರ್ಣಪೂರ ಮಲರ್ದಿಱಿದ ಮುತ್ತಮದೆತ್ತ ನೋಳ್ಪೊಡಂ (ರಾಜಶೇ. ೯-೪೭); ಬನಂ ... ನನೆಯೇಱಿದ ಸುರಯಿಯುಂ, ಬಕುಳದಿಂ, ಸಿರಿಸದಿಂ, ಪುನ್ನಾಗದಿಂ, ಸೊಗಯಿಸಿ ತೋರ್ಕುಂ (ರಾಮಾಶ್ವ. ೫೬-೨೨).

[ ನನೆ$_2$ + ಏಱು$_1$ ( < ಏಱು$_1$ ) ]

**ನನೆಯೊತ್ತು** (ಕ್ರಿ). ೧. ಅರಳು; ವಿಕಾಸವಾಗು; ಮೊಗ್ಗು ಹೊರಬರು: ಶಿವಾಚಾರಲತೆ ನನೆಯೊ[ಪಾಠಾಂ. ವ]ತ್ತೆ (ಸೋಮಸ. ೧-೭೩); ನನೆಯೊತ್ತೆ ವಿಸುಪ ಮಲ್ಲಿಗೆ ನನೆಯೊತ್ತುವುದತನುಸತಿಯ ಲಾವಣ್ಯರಸಾಭಿನವನದಿ ಸುರಭಿಗಂಧದಿನೆನಸುಂ ಶೀವಿದೊಡೆ ಶೀವುವುದು ತೊದಳಂಟೇ (ಪಾರ್ಶ್ವಪು. ೯-೫೬). ೨. (ಅಲಂ) ಸಂತಸಗೊಳ್ಳು: ಧರ್ಮಜನು ಸುರಮುನಿ ಸೂಕ್ತಿಸುಧೆಯಭಿಷೇಕದಲಿ ನನೆಯೊತ್ತಿದಂತಃಕರಣನರಮನೆಗಾಗಿ ನಡೆತಂದು (ನಿಭಾಗ. ೧ ೯-೪೫). [ ನನೆ$_2$ + ಒತ್ತು$_1$ ]

**ನನೆಲತೆ** (ನಾ). ಹೂವು ಬಿಟ್ಟ ಬಳ್ಳಿ; ಹೂಬಳ್ಳಿ: ಚಾಮರದಿಂ ಬೀಸುವ ಬೀಸುಗಾಳಿಯ ತಣ್ಪನಿಂ ತೊಯ್ದು ನನೆಲತೆಗಳ ಮೇಳದ ಮನ್ನಣೆಯ ಕನ್ನೆಯರ ಲತಾಂಗಂಗಳೊಳ್ ಲಾವಣ್ಯರಸವಿಸರದ ಬಿಂದುಗಳ್ ತಲೆದೋಱಿದುವು (ಲೀಲಾವ. ೪-೦೭ ವ). [ ನನೆ$_2$ + ಲತೆ ]

**ನನೆವಾಸು$_1$** (ನಾ). ತೊಯ್ದ ಹಾಸಿಗೆ; ಆರ್ದ್ರವಾದ, ತಂಪಾದ ಹಾಸಿಗೆ: ತನುವಲ್ಲದತನುತಾಪಂ ತನುವಂ ಸುಡೆ ನಿಲಿಸಲೆಂತುಮಾಱದೆ ತನುವಂ ತನುಮಧ್ಯೆಯರಲರ್ವಾಸಿನ ನನೆವಾಸಿನ ಮೇಲೆ ಪಾಸಿದರ್ ತನುತನುವಂ (ಮಲ್ಲಿಪು. ೩-೩೩). [ ನನೆ$_1$ + ಪಾಸು$_2$ ]

**ನನೆವಾಸು$_2$** (ನಾ). ಹೂವಿನ ಹಾಸಿಗೆ; ಪುಷ್ಪಶಯ್ಯೆ: ನನೆವಾಸನೆ ಮುತ್ತಿನ ಪಸೆ ಮನಸಿಜನನೆ ಕುವರನಲ್ಲಿ ನೆಲಸಿರೆ ಲಜ್ಜಾವನತಾಂಗಿ ಕೆಲದೊಳಿಳುಪಿದ ನನೆವಿಲ್ಲನ ಸುಗುಣವತಿ ಕರಂ ಮೆಱೆದಿರ್ದಳ್ (ರಾಜಶೇ. ೮-೭೧). [ ನನೆ$_2$ + ಪಾಸು$_2$ ]

**ನನೆವಿಲ್** (ನಾ). ಹೂವಿನ ಬಿಲ್ಲು; ಹೂಬಿಲ್ಲು; ಪುಷ್ಪಚಾಪ: ಪುರಿದಂತಾದುವು ಪೂವಿನಂಬು ನನೆವಿಲ್ ನಿಸ್ಸಾರವಾದತ್ತು (ಮಲ್ಲಿಪು. ೧-೧೯); ನನೆವಿಲ್ಲನೆತ್ತುವಂತೆ ನನೆಯ ನಿಡಿಯ ದಂಡೆಗಳಂ ... ಎತ್ತುವ ಮಾಲೆಗಾರ್ತಿಯರ ಕಟಾಕ್ಷಕುಸುಮವಾಲೆಗಳಂ ಸೌಂದರ್ಯಧನದಿಂ ಮಾಱುಗೊಳುತ್ತರಸಂ ಬರೆವರೆ ಪೂವಿನ ಸಂತೆಯಿಂ ಪೊಱಗೆ (ಲೀಲಾವ. ೨-೨೬ ವ); ನನೆವಿಲ್ಲಂ ಬಿಟ್ಟು ವಿದ್ಯುಲ್ಲತೆಯ ತಿಱುವುವೊಯ್ದೆಂದ್ರ ಕೋದಂಡಮಂ ಕೊಂಡು ... ಮೊಲ್ಲೆಯ ನನಗಣೆಯುಂ ತೂಗುತುಂ ಕಂತುವೀಬಂದಂ (ಜಗವಿ. ೪-೨೦); ನನೆವಿಲ್ಲಿನ್ನಣೆಯೋಪಳೊರ್ವ ಮಧುಮಾಕಾಂತಾಳಕಚಶ್ರೇಣಿಗೊಯ್ಯನೆ ಮುಂದಿಕ್ಕಿದ ಚಂದನಾಂಬುವನಲಂಪಂದೆತ್ತು ತಾಂ ಪಿಂಡಿದಳ್ (ಉದ್ಭಟ. ೮-೨೦); ನನೆವಿಲ್ಗಾಱಿವೆದೆಯೇಱುವ ಪೋಲ್ಕೆ ನಿತಾಮಣಿಯಿಂತೊಪ್ಪುವ ರೂಪಿಗೆ ಮಿನುಗುವ ಮಿಱುಂಡೌವನಮೇಱ ವಿರಾಜಿಸುತಿರ್ದೆ (ಜಯುಕಾ. ೩-೪೪); ನನೆವಾಸನೆ ಮುತ್ತಿನ ಪಸೆ ಮನಸಿಜನನೆ ಕುವರನಲ್ಲಿ ನೆಲಸಿರೆ ಲಜ್ಜಾವನತಾಂಗಿ ಕೆಲದೊಳಿಳುಪಿದ ನನೆವಿಲ್ಲನ ಸುಗುಣವತಿ ಕರಂ ಮೆಱೆದಿರ್ದಳ್ (ರಾಜಶೇ. ೮-೭೧). 'ನನೆವಿಲ್ಲ' ನೋಡು.

**ನನೆವಿಲ್ಲ ಬಲ್ಲಹ** = ಹೂಬಿಲ್ಲಿಗೆ ಒಡೆಯನಾದವನು; ಪುಷ್ಪಬಾಣ ಪ್ರಯೋಗದಲ್ಲಿ ಶೂರನಾದವನು; ಕಾಮ; ಮನ್ಮಥ: "ನನೆವಿಲ್ಲ ಬಲ್ಲಹನೆನಲ್ ಪೂವಿಲ್ಲ ಕಾಮಂ" (ಕರ್ಣಾನಿ. ೮); ಆವನ ಪಜ್ಜಳಿಪ್ಪ ಜಸವೆಣ್ಣೆಸಿಯೊಳ್ ನೆಲಸಿರ್ಪುದಾತನೀಗಾವಗವೆನ್ನ ಜಾಣ್ಣುಡಿಗೆ ಮೆಯ್ಸಿರಿಯುಂ ನನೆವಿಲ್ಲ ಬಲ್ಲಹಂ (ಕಬ್ಬಿಗ. ೦); ಜಗದ್ವಳಯಮನದಟಲೆದು ನುಲಿದು ಕೋಟಲೆಗೊಳಿಸುವ ನನೆವಿಲ್ಲ ಬಲ್ಲಹನ ದಿಗ್ವಿಜಯಕ್ಕಾಗಿ ... ಬೆಳಗುವಚ್ಚಬೆಳ್ದಿಂಗಳ್ ಪಿರಿದುಂ ಪೆರ್ಚಿ ಬಿಚ್ಚದೆ ನಿಬಿಡವಾಗಿ ಬಿಡದದರ್ದು ಕಿದಱಿ ನಾಂದು ಪೊದಱುಗಟ್ಟಿ ಪರಕಲಿಸಿ ಪಸರಿಸುತ್ತುಮಿರೆ (ಕಾಧಪು. ೧೫-೫೦ ವ); ಇದು ಕುಸುಮಾಸ್ತ್ರನಸ್ತ್ರಮಿದು ದರ್ಪಕನಾರ್ಪು ಮನೋಜ ನೋಡೆ ನೋಡಿದು ನನೆವಿಲ್ಲ ಬಲ್ಲಹನ ಬೆಳ್ಪಿದು ... ಎಂದೆನಿಸಿರ್ದುದು ರೂಪು ನೀಱೆಯಾ (ರಾಜಶೇ. ೭-೬೩). **ನನೆವಿಲ್ಲ ಬೀರ** = ನನೆವಿಲ್ಲ ಬಲ್ಲಹ: ಬಂದು ಬಸಂತನೊಲ್ದು ಸಂವರಣೆಯನೆಯ್ದೆ ತೋಱಿ ತಲೆದೂಗಿಱದಂ ನನೆವಿಲ್ಲ ಬೀರನಾ (ಕಬ್ಬಿಗ. ೨೦೦). **ನನೆವಿಲ್ಲಾತ** = ಪುಷ್ಪಧನುಸ್ಸನ್ನುಳ್ಳವನು; ಕಾಮ; ಮನ್ಮಥ: ನನೆವಿಲ್ಲಾತನ ಮುಂಕ್ಕಣ್ಣನ ತಕ್ಕಂ ನೋಡ ವೇಟ್ಕುಮೆಂದೊಲವಿಂದು ತನತನಗೆ ಬಂದು ಮುಗಿಲೊಡ್ಡಿನ ಕೆಲದೊಳ್ ಸಗ್ಗದವರ್ಗಳೆಲ್ಲರ್ ನಿಂದರ್ (ಕಬ್ಬಿಗ. ೨೮೯). [ ನನೆ$_2$ + ಬಿಲ್$_2$ ]

**ನನೆವಿಲ್ಲ** (ನಾ). ೧. ಹೂವಿನ ಬಿಲ್ಲುಳ್ಳವನು; ಕಾಮ; ಮನ್ಮಥ: ನನೆವಿಲ್ಲನೆಸವ ಬಿರಿದಿನ ನಾಟಕವ ಬಿಂಕವನೆ ಕಂಡನೆಂದು ಕಳವಳಿಸಿ ಮಂಗಳೆ ತನ್ನ ತನುಜೆಯುಂ ಪಲ್ಲಕಿಯೊಳಿರಿಸಿ ಶಂಭುವನು ಬೀಳ್ಕೊಂಡು ಮನೆಗೆಯ್ತಂದಳು (ಸೌಂದಪು. ೮-೧೫); ಪೊಸ ಕಮ್ಮಂಗಳವೆಯು ತೆನೆಯು ತುದಿಯ ತನಿಗಂಪಂ ಭುಂಜಿಸಲೆನುತನುರಾಗದಿನವಱೊಳ್ಕೈರ್ದಾಱಿ ಪಸುಳೆಗಳು ಅನುವಂ ಪಡೆದುವು ... ನನೆವಿಲ್ಲನ ಪಸುರ್ಗಾವಿನ ವಿಂಗಸೊಕ್ಕಿನ ಪೊಸಮಿಂಟೆಯೆನೆ (ಜಯುಕಾ. ೧-೩೯); ಖಳನೀ ನನೆವಿಲ್ಲಂ ... ನಲ್ಲಂ ತೊಲಗಿದ ಪದದೊಳಗೆನ್ನೊಡಲಲ್ಲಿ ನಡುವವೊಲೆರಳ್ಕೆಯ್ಯಾಗಣಿಸಿ

ನಿಲ್ಲದೆ ಮನವನೆಸುಳ್ತಿರ್ದಪನೆಂದಳ್ವಿರಹಿಣಿ ಸಖಿಯೊಳ್ (ಉದ್ಭಟೀ. ೪-೩೫). ೨. [ಜೈನ] ಬಾಹುಬಲಿ; ಕಾಮ: ಎತ್ತಿ ನೀನಣ್ಣನೊಡನೆ ಕಾದಿದಾಗ ತೊಂಭತ್ತಾಱುಸಾವಿರ ಹೆಣ್ಣು ಚಿತ್ರ ನೋಯದೆ ನಮಗೆಂಟುಸಾವಿರಕಳ ಲೊತ್ತರಿಹುದೆ ನನೆವಿಲ್ಲಾ (ಭರತ. ೫೦-೪೫). [ ನನೆವಿಲ್ + – ಅ₇ ]

**ನನೆವೂ** (ನಾ). ಬಿರಿದ ಹೂವು; ವಿಕಸಿತ ಕುಸುಮ: ತೋಳ ಮೊದಲ್ಮನೆ ಪೂವನೆತ್ತುವಂತಿರೆ ನನೆಯಂಬುಗಳ್ಗೆ ಬೆರಲೆತ್ತುವರಲ್ಲಿಯ ಮಾರೆಗಾರ್ತಿಯರ್ (ಮಲ್ಲಿಪು. ೨-೫೯). [ ನನೆ₃ + ಪೂ₂ ]

**ನನೆವೂದುಱುಗಲ್** (ನಾ). ಅರಳಿದ ಹೂವುಗಳ ಗೊಂಚಲು,–ಗುಚ್ಛ: ತಳಿರ್ಗಳನೊಂದು ಕೊಂಬು ನನೆವೂದುಱುಗಲ್ಗಳನೊಂದು ಕೊಂಬು . . . ತಳೆದಿಂತು ಮನೋಹರಮಾಯ್ತು ಮಾಮರಂ (ಕುಸುಮಾ. ೧೦-೧೫೫). [ ನನೆವೂ + ತುಱುಗಲ್ (< ತುಱುಂಗಲ್) ]

**ನನೆವೆರಸು₁** (ಕ್ರಿ). ಮೊಗ್ಗುಗಳಿಂದ ಕೂಡಿರು; ಪುಷ್ಪಭರಿತವಾಗಿರು: ನನೆವೆರಸಿದಸುಗೆದಳಿರುಳ್ಳೆಡೆಯ ವೇಣುವಿಂ ಜನಿಸಿದ ನವೀನಮುಕ್ತಾಫಲದ ಮಾಗುತಿಯ . . . ನಿತಂಬಿನಿಯರತಿಹರುಷದಿಂ ರಂಜಿಸಿದರು (ಸೌಂದಪು. ೦೮-೧೯). [ ನನೆ₃ + ಬೆರಸು₁ ]

**ನನೆವೆರಸು₂** (ಅ). ಹೂವುಗಳಿಂದ ಕೂಡಿಕೊಂಡು; ಪುಷ್ಪಸಹಿತವಾಗಿ: ನನೆವೆರಸು ಗುಜ್ಜುಮಾವಿನ ಕೊನರ್ಗಳನುಡಿದುಡಿದು ನೀಡೆ ಬೇಟದ ಒಡಿಯೋಂ ಮನವೊಸೆದು ಮೇವುತಿರ್ದುದೊ ವನಕರಿ ಪರಿದಂತೆ ದಂತಹಸಿತ ಕಟಾಕ್ಷಂ (ಅರ್ಧನೇ. ೫-೯೪); ನನೆವೆರಸುಟ್ಟು ಮಾಂದಳಿರನೊಪ್ಪಿರೆ . . . ಓಪನಿಗೆ ಪುಳಿಂದಿ ಪಾಡಿದಳೊಱಲ್ದು ಗುಣಪ್ರಿಯನಂಕಮಾಲೆಯಂ (ಲೀಲಾವ. ೮-೩೦). [ ನನೆ₃ + ಬೆರಸು₂ ]

**ನನೆವೆಱು** (ಕ್ರಿ). ಮೊಗ್ಗುಗಳನ್ನು ಪಡೆ; ಮುಗುಳು ಬಿಡು: "ನನೆತುದೆಂದು ನನೆವೆತ್ತುದು" (ಕಕಸಾ. ೯-೦೮೯); ಕನಯಂ ಬಂದಾ ವಾರ್ತೆಗೆ ಕನುವುಳಕದ ತೆಕ್ಕೆವೆತ್ತು ಶಿಶಿರದ ಸೋಂಕಿಂ ನನೆವೆತ್ತೊಪ್ಪುವ ಮಾಲತಿಯನೆ ವಿಜಯಾವತಿ ಸಮಂತು ಪೋಲ್ತೆಸೆದಿರ್ದಳ್ (ಕುಸುಮಾ. ೧೫-೯೮). [ ನನೆ₃ + ಪೆಱು₁ ]

**ನನೆವೊಯ್** (ಕ್ರಿ). ೧. ಚಿಗುರು; ಪಲ್ಲವಿಸು: ತನಿಗರ್ಬಿನ ಸೋರ್ವ ರಸ ಪ್ರವಾಹದಿಂದವೆ ನನೆವೊಯ್ದು ಕಾಯ್ತುಱುಗಿ ಪಣ್ತುದು ಮಾಮರಂ (ಲೀಲಾವ. ೬-೧೩೮). ೨. ಉಂಟುಮಾಡು; ಹೊಮ್ಮಿಸು: ಪನಿವುಲ್ಲಂಬು ಕಣಂಗಳಂ ಕೆದಱುತುಂ ಕೋಕಂಗಳೊಳ್ ರಾಗಮಂ ನನೆವೊಯ್ದುಣ್ಮಿಸುತುಂ . . . ತಣ್ಣನೆ ತೀಡಿತ್ತನಸುಂ ಪ್ರಭಾತಸಮಯಪ್ರೋದ್ಭೂತಶೀತಾನಿಲಂ (ಕುಸುಮಾ. ೧-೫೨). [ ನನೆ₃ + ಪೊಯ್₂ ]

**ನನೆವೊಱೆ** (ನಾ). ಹೂವುಗಳ ಭಾರ; ಪುಷ್ಪಭಾರ: ನನೆವೊಱೆಯಿಂ ಬಳ್ಕಿದ ಮಾವಿನ ಕೊಂಬಿನೊಳಳಿಯ ಮಾಲೆ ಮೊರೆಯುತ್ತಂ ಪೂವಿನ ಬಿಲ್ಲನತನು ಜೇವೊಡೆದನುಗೆಯ್ದೇಱಿಸುವ ಬಿಲ್ಮನೇಂ ಬೀಱಿದುದೋ (ಪಾರ್ಶ್ವಪು. ೯-೫೩). [ ನನೆ₃ + ಪೊಱೆ ]

**ನನೆವೋಗು** (ಕ್ರಿ). ಮೊಗ್ಗು ಬಿಡು; ಮೊಗ್ಗಾಗು: ಅಧೀಶವಚನಕದಂಬಕ ಮಂಬೊಂದು ಕೆಂಕಣಲರೊಳ್ ನನೆವೋಯ್ತೆಂಬಿನಮಾಕೆಯ ತನುಲತೆ ತುಂಬಿದುದತಿಬಹಳಪುಲಕವಿಪುಲಶ್ರೀಯಿಂ (ಆದಿಪು. ೬-೩೦). [ ನನೆ₃ + ಪೋಗು₁ ]

**ನನೆಸು, ನೆನಸು₂, ನೆನೆಸು₂** (ಕ್ರಿ). ಒದ್ದೆಯಾಗುವಂತೆ ಮಾಡು; ತೋಯಿಸು; ಆರ್ದ್ರಗೊಳಿಸು: ನಾರದ ಕಲಹತಾತ್ಪರ್ಯದೆ ತರಳ ಕುಮಾರನ ಕೊಂದೆ ನೀನೆನುತೆ ಮಾರಮಾತ್ರಕೆ ರುಕ್ಮಿಣಿ ಸತ್ಯಭಾಮೆ ಕಣ್ಣೀರಿಂದ ನನೆಸಿದರೊಡಲ (ಮೋಹತ. ೩೬-೨೦). **ನೆನಸು₂**: ಆಪ್ಲಾವ., ಆಪ್ಲವ. ಸ್ನಾನಂ–೩ ಸ್ನಾನದ ಹೆಸರು. ತಲೆ ಮುಂತಾದ ಸರ್ವಾಂಗವನ್ನು ನೀರಿನಲ್ಲಿ ನೆನಸಿ ತೊಳೆಯುವಿಕೆ (ಸಿದ್ಧಾಂಶಿ. ೨೦೬). **ನೆನೆಸು₂**: ಭಟ್ಟನಿಯ ಕಣ್ಣುಗಳಲ್ಲಿ ನಾನು ಒಂದು ಅಪೂರ್ವಮಾಧುರಿಯನ್ನು ಕಂಡೆ . . . ಆ ದೃಷ್ಟಿ ನನ್ನನ್ನು ಅಭಿನವರಸದಲ್ಲಿ ನೆನೆಸುತ್ತಾ, . . . ಒಂದು ಅನನುಭೂತ ಜಗತ್ತಿಗೆ ಎಳೆದೊಯ್ಯಿತು (ಬಾಣಭ. ೩೦೪). [ ನನೆ₁ + – ಸು₁ ]

**ನನೆಹ** (ನಾ). ನೆನೆಯುವಿಕೆ; ಒದ್ದೆಯಾಗುವಿಕೆ; ತೇವಗೊಳ್ಳುವಿಕೆ: "ತೇವ ಸ್ತೇಮ ಸಮುಂದನ ಈ ಮೂಱು ನನೆಹದ ಹೆಸರು" (ನಾಚಿರಾ. ೬). [ ನನೆ₁ + – ಹ₂ ]

**ನನ್ನಗ** (ನಾ). ಒಬ್ಬಾತನ ಹೆಸರು: ನ × ಗರಮುಪ್ಪ ಮಯಚಯನ್ ತುರಗ ಗೊಳ್ಳಾಗಿ ದುಗ್ಗದರಸನುಂ ಕೊದಳ್ದು ವೇಳೆಯಾವನಾಳು × ಪಱಿಯುತ್ತಂ ಬಪ್ಪುದ ನನ್ನಗನ್ಸಾದೆ (ಸೌಇಇ. IX-I, ೨೨-೬ : ೯೭೮). [ ? ]

**ನನ್ನಪ** (ನಾ). ಒಬ್ಬಾತನ ಹೆಸರು: ಆಹವಶೌಣ್ಡವೀರನುದಾರಂ ಕಣ್ಣವ ಭಾರದ ನನ್ನಪನ್ನಪಂ ಮಹಸಾಮಂತಂ (ಎಕ. IX, ಚನ್ನಪ. ೧೪೧-೦೮ ; ೯೦೦?). [ <ನನ್ನಿ? + ಅಪ (<ಅಪ್ಪ₁) ]

**ನನ್ನಯ್ಯ** (ನಾ). ಒಬ್ಬಾತನ ಹೆಸರು: ಶ್ರೀಮತ್ಪೆರ್ಮ್ಮಾನಂಗಳ್ಗೆ ವಿದ್ಯಾಧರಯ್ಯಂ ಬಿನ್ನಪಂಗೆಯ್ದು ನಗರಲ ನನ್ನಯ್ಯನ ದೇಗುಲಕ್ಕೆ ಮುಕ್ತ್ರೆಯು ಪಡೆದು ಕೊಟ್ಟಂ (ಎಕ. III, ನಂಜನ. ೧೫೫-೫ ; ೯೭೦). [ <ನನ್ನಿ ? + ಅಯ್ಯ₁ ]

**ನನ್ನಾನನ್ನಿ, ನನ್ನಾನಿನ್ನಿ** (ನಾ). ಸಣ್ಣಸಣ್ಣದು; ಚೂರುಚೂರಾದುದು; ಪುಡಿಪುಡಿ: ಸನ್ನಾಹಭೇರಿಗಳುನ್ನಾದದಿಂ ದೆಸೆ ನನ್ನಾನನ್ನಿಯಾಗೊಡೆಯ ತನ್ನ ಮೋಹರಗೂಡಿ ಚೆನ್ನರಾಮಗ ಶೌರ್ಯದುನ್ನತಿಕೆಯೊಳಿಯ್ದದನು (ಕುಮಾರಾಮ. ೧೨-೨೬); ಚೆನ್ನಯ ನಿಟ್ಟಿಸಿ ಕಾಪನಂಬಿಂ ನನ್ನಾನನ್ನಿಯಾದರು ನೋಟಕರು (ರಾಮವಿ. ೬-೧೪೨). **ನನ್ನಾನಿನ್ನಿ**: ಬನ್ನಣದಿಂದೆಚ್ಚರು ರಿಪುಭಟರೆರ್ದೆ ನನ್ನಾನಿನ್ನಿಯಪ್ಪಂತೆ (ಚಂಪ್ರಸಾಂ. ೮-೩೩). [ ←ಹಿಂ. ನನ್ನಾ, ನನ್ಹಾ ]

**ನನ್ನಾನಿನ್ನಿ** 'ನನ್ನಾನನ್ನಿ' ನೋ.

**ನನ್ನಾರಿ** (ನಾ). ಒಂದು ಬಗೆಯ ಸಸ್ಯ; ಸೊಗದೆ: ಸುಗಂಧೀಬೇರು, ಸೊಗದೇಬೇರು, ನಾಮದ ಬೇರು, ನನ್ನಾರೀಬೇರು (ವೃಕ್ಷಶಿ. ೪೨-೮೪೦). [ ದೇ.॥ ತಮಿ. ಮಲ. ನನ್ನಾರಿ ]

**ನನ್ನಿ** (ನಾ). ೧. ಸಹಜವಾದುದು; ವಾಸ್ತವವಾದುದು; ಸತ್ಯ; ದಿಟ; ನಿಜ; ನಿಶ್ಚಯ: "ಸತ್ಯದೊಳ್ ನನ್ನಿಯಕ್ಕುಂ" (ಕರ್ಣಾನಿ. ೫೧); "ನನ್ನಿ ಸಾಜ ನೆನಸುಂ ದಿಟಮೆಂದುಸಿರಲ್ಕೆ ಸತ್ಯಮಕ್ಕುಂ" (ಕವಿಕಂ. ೦೨೦); "ನಿಶ್ಚಯದೊಳಂ ನನ್ನಿಯೆಂದಕ್ಕು" (ಕಕರ. ೫೩); ನನ್ನಿಯನೀ ಪಲ್ಲವಮೆನೆ ಸನ್ನುತರೂಪಿಂ ವಿಪರ್ಯಯೋಪಮಮಕ್ಕುಂ (ಕವಿರಾ. ೩-೬೨); ಚಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ (ಪಂಪಭಾ. ೧೪-೬೪); ಅನ್ಯತಂ ಲೋಭಂ ಭಯಮೆಂಬಿನಿತುಂ ನೀನಿರ್ದ ನಾಡೊಳಿಲ್ಲಮೆ ರವಿನಂದನ ನನ್ನಿ ಚಾಗಮಣ್ಮೆಂಬಿನಿತರ್ಕಂ ನೀನೆ ಮೊತ್ತಮೊದಲಿಗನಾದೈ (ಗದಾಯು. ೫-೧೬); ಇನ್ನರ ನಂದಿ ಕನಸಿನೊಳಂ ನನ್ನಿಯೆನಲ್ ಕೇಳ ದಿವ್ಯಪುರುಷಂ ಪ್ರತ್ಯಕ್ಷಂ ನಿನ್ನ ಮುಂದೆ ನುಡಿಯಲ್ಕಿನ್ನುಮದೇನೆಂಬೆ ಸಂದೆಗಕ್ಕೆಡೆಯುಂಟೇ (ಕಾದಂಪೂ. ೯೪೫); ಅನ್ನವನು ಇಕ್ಕುವದು ನನ್ನಿಯನು ನುಡಿಯುವದು ತನ್ನಂತೆ ಪರರ ಬಗೆದಡೆ ಕೈಲಾಸ ಬಿನ್ನಾಣವಕ್ಕು (ಸರ್ವಜ್ಞ. ೬೦೩); ಏವಣ್ಣವೆನ್ನ ಮನದ ನನ್ನಿಯ ನೆಲೆಯಂ (ಚಿಕವಿ. ೩-೯೬). ೨. ಸತ್ಯವಂತಿಕೆ; ಸತ್ಯಸಂಧತೆ: ನೆನೆಯದಿರಣ್ಣ ಭಾರತದೊಳಂ ಪೆಱರಾರುಮನೊಂದೆ ಚಿತ್ತದಿಂ ನೆನೆವೊಡೆ ಕರ್ಣನಂ ನೆನೆಯ . . . ಕರ್ಣನ ಕಡುನನ್ನಿ ಕರ್ಣನಳವಂಕದ ಕರ್ಣನ ಚಾಗಮೆಂದು ಕರ್ಣನ ಪಡೆಮಾತಿನೊಳ್ ಪುದಿದು ಕರ್ಣರಸಾಯನಮಲ್ತೆ ಭಾರತಂ (ಪಂಪಭಾ. ೧೨-೨೧೭); ನನ್ನಿ ವಿನಯಂ ನಯಂ ಜಯಮುನ್ನತಧೃತಿ ಸತ್ಯಮೆಂಬ ರಾಜಗುಣಂಗಳ್ ನಿನ್ನೊಳ್ ನೆಲಸಿದುವಿನ್ನುಂ ಮುನ್ನಂ ನಿನ್ನನ್ನರೊಳರೆ ರಾಜಕುಮಾರಾ (ಲೀಲಾವ. ೪-೩೬); ದಿಟಂ ನನ್ನಿಯುಳ್ಳವನೆಂದು ಬಗೆದು ಬೇಡಿದೆನುತ್ತಮದ್ವಿಜರು

ಕೊಂಬುದೆಂದು (ಹರಿಶ. ೧೦-೨೦). ೩. ಅಕ್ಕರೆ; ಪ್ರೀತಿ; ವಿಶ್ವಾಸ: ಎನ್ನ ಭವತಿಮಿರಭಾನುವೇ . . . ಎನ್ನ ನನ್ನಿಯೆಯೆನ್ನ ಚೆನ್ನಿಗನೆಯೆನ್ನ ಗತಿಯೇ ಮತಿಯೇ ಧೃತಿಯೇ ಪತಿಯೇ (ಪದ್ಮರಾ. ೭-೩೯): ತನ್ನರಸಿ ವರಚಂದ್ರಮತಿಗೆ ವಿಭಿನ್ನ ನಾಲಕು ಜಂಬುಫಲವನು ನನ್ನಿಯಿಂದಿತ್ತಾಗ ಸುರಸೆಗೆ ಕೊಟ್ಟನೊಂದುವನು (ಸಂಭವ. ೧೯-೫೦); ನಿನ್ನಂಗಸಂಗಮನ ಗಲ್ದಾಯ್ತು . . . ಎಂತು ಸ್ವೈರಿವರೊ ಕಾಂತನೊಳ್ನನ್ನಿಯುಳ್ಳರಸಿಯರ್ ದ್ರೌಪದಿ ಸುಭದ್ರೆಯರರದೆಂತುಳಿವರಕಟೆಂದರು (ಜೈಮಿಭಾ. ೨೩-೫೯); ಬಲ್ಗಾಲಂಬಡಿದು ನೀನೆ ಗತಿಯೆಂದು ನನ್ನಿಯಿಂ ನಂಬಿದಳಂ ಮಱೆದು ಸವತಿಯೊಂದು ಪಿಸುಣ್ಗೆ ಎಱೆಯಂ ಮಾಡುವೋದಂ (ರಾಮಾಶ್ವ. ೨೨-೮). ೪. ಕೊಟ್ಟಮಾತು; ಭಾಷೆ; ವಚನ; ಪ್ರತಿಜ್ಞೆ: ಕಿಡುಗುಮೆ ರಾಜ್ಯಂ ರಾಜ್ಯದ ತೊಡರ್ವದೇವಾಟ್ಕೆ ಬಾಟ್ಕೆ ನನ್ನಿಯ ನುಡಿಯಂ ಕಿಡೆ ನೆಗಟ್ ನಾನು ಮೆರಡಂ ನುಡಿದೊಡೆ ಹರಿಹರಹಿರಣ್ಯಗರ್ಭರ್ ನಗರೇ (ಪಂಪಭಾ. ೧-೮೨); ಮದುವಯ ದಿವಸದಂದು ಬರವೇಟ್ಟುದು ನೀನೆಂದೆನ್ನನಂದು ನೀಂ ಬದುಗ್ಗಿಡೆ ನುಡಿದೊಡಾಂ ನುಡಿದ ನನ್ನಿಗೆ ವಂದೆಂ (ಸುಕುಮಾ. ೭-೨೨); ನಿನ್ನಂ ಬಿಡಿಸಿದಪೆಂ ನಂಬೆನ್ನಂ ಸಂದೇಹಮಿಲ್ಲವೆಂದೊಲವಿಂದಂ ನನ್ನಿಯನೀಯೆ (ಧರ್ಮಾ. ೮-೨೮೪); ಪುಸಿ ಪೊಂದದ ಪೊಸನುಡಿಯಂ ವಸುಮತಿಯೊಳ್ ನುಡಿಯಲಕ್ಕುಮಿಾ ನೃಪಸುತನಂತಸುವಳಿಗುಮೆಂಬ ಬಗೆಯೊಳೆಮುಸುರುವ ನನ್ನಿಗಳ ನಾಯಕರ್ವೆರಸೊಳರೇ (ರಾಜಶೇ. ೧೪-೨೧). ೫. ಒಳ್ಳೆಯದಂ; ಸರಿಯಾದದಂ; ಸಮಂಜಸವಾದುದಂ: ನಿನ್ನಂ ತನ್ನೊಳ್ ಭೇದಂ ಮಾಡದೆ ನಲ್ಮೆಯನೆಸಗದ ನೀಚನೊಳು ಕಿನ್ನಮಿದಿರನಱಿಯದೆ ಹೋರುವುದಿದು ನನ್ನಿಯೆ (ಜಯಕಾ. ೭-೫೦). ೬. ಚೆಲುವು; ಅಂದ; ಸೌಂದರ್ಯ.

ನನ್ನಿ ಕಂದರ್ಪ = ಚೆಲುವಿನಲ್ಲಿ ಮನ್ಮಥನಂತಿರುವವನಂ; ಒಂದು ಬಿರುದು: ಸ್ವಸ್ತಿಶ್ರೀ ಸಾಮನ್ತರಾಮನ್ನಣ್ಣಕನ್ದರ್ಪ ಸಿರಿವುರದೊಳಣ್ಣಿಗನೊಳ್ ಕಾದಿ ಸತ್ತ ಅರಕಿಲ್ಲನ ಮಗ (ಮ್ಯಆರಿ. ೧೯೬೨, ೩೭-೨; ಸು. 950). ನನ್ನಿಗಾಶ್ರಯಂ = ಸತ್ಯಕ್ಕೆ ಆಶ್ರಯನಾದವನಂ; ಒಂದು ಬಿರುದಂ: ಸ್ವಸ್ತಿ ಸಮಧಿಗತ ಪಞ್ಚಮಹಾಶಬ್ದ ಪಲ್ಲವಾತ್ಮಯಂ ನನ್ನಿಗಾಶ್ರಯಂ ಶ್ರೀಮತು ಅಯ್ಯಪದೇವಂ ರಾಜ್ಯಂಗೆಯ್ಯೆ (ಎಕ. XI, ಚಿತ್ರದು. ೬-೫; 918). ನನ್ನಿ ಚಳುಕಿ = ಸತ್ಯವಂತನಾದ ಚಾಲುಕ್ಯ: ಒಂದು ಬಿರಂದು: ಚಾಳುಕ್ಯಕಣ್ನರಮಹಾರಾಜಂ ಧರಣೀಲೋಕಾಶ್ರಯನಭಿಮಾನಗಳ್ಳನಹಿತರ ಗಣ್ಡಂ ಮಾವನ ಗನ್ಧವಾರಣಂ ನನ್ನಿಚಳುಕಿ ಶ್ರೀಮತ್ ರಾಜಾದಿತ್ಯ (ಮ್ಯಆರಿ. ೧೯೩೫, ೪೦-೫೧; 950?). ನನ್ನಿನಾರಾಯಣ = ಸತ್ಯಕ್ಕೆ ನಾರಾಯಣನಂತಿರುವವನು; ಸತ್ಯರಕ್ಷಕ; ಸತ್ಯಪಾಲಕ; ಒಂದು ಬಿರಂದು: ಇನ್ತು ನನ್ನಿನಾರಾಯಣಂ ಸಮ್ಯಕ್ತ್ವರತ್ನಾಕರಂ . . . ಎನಿಸಿ ಶ್ರೀವತ್ಸಡೆವಳ್ತೈಲಪಯ್ಯಂ ಮಾಸವಾಡಿನೂಱನಾಲ್ವತ್ತುಮಂ ಬೀಳವೃತ್ತಿಯಿನಾಳುತ್ತುಮಿರೆ (ಸೌಇಇ. XI-1, ೫೨-೩೫; 1007). ನನ್ನಿಮಹಾರ್ಣವ = ಸತ್ಯಕ್ಕೆ ಸಾಗರದಂತಿರುವವನಂ; ಒಂದು ಬಿರಂದು: ವೀರಶ್ರೀ ಶ್ರೀನಿತ್ರ ನುಂ ನನ್ನಿಮಹಾರ್ಣವನುಂ ಕನ್ದಕಪುರನ್ದರನುಮೆನಿಸುವ ವೀರಾಗ್ರಣಿಯ ಪರಾಕ್ರಮಮೇದೊರೆ (ಸೌಇಇ. XI-1, ೫೨-೦೪; 1008). ನನ್ನಿ ಮಾಡು = ದಿಟ ಮಾಡು; ಸತ್ಯವನ್ನಾಗಿಸು; ಸಾಬೀತುಗೊಳಿಸು: ಪೊಣನನಿಱಿದು ಪಗೆಗೊಂಡರೆಂಬ ನಾಣ್ನುಡಿಯಂ ನನ್ನಿ ಮಾಡಿ (ಪಂಪಭಾ. ೬-೨೯ಪ); ಅಂತು ಪವಡಿಸಿದ ಪರಮೇಶ್ವರಂಗೆ ಮನೋಗತಮಲ್ಲದ ಕಾಮಿನಿಯಂತೆ ಯಾಮಿನಿ ತನ್ನ ಕ್ಷಣದಾಭಿಧಾನಮಂ ನನ್ನಿ ಮಾಡಿ (ಶಾಂತಿಪು. ೧೦-೦೫೫ ಪ); ಕಳ್ಳಂಗೆ ಬೆಳ್ದಿಂಗಳ್ ಸೊಗಸದೆಂಬ ನಾಣ್ನುಡಿಯಂ ನನ್ನಿ ಮಾಡಿ (ಧರ್ಮಾಮೃ. ೨-೧೨೪); ಪ್ರಾರಬ್ಧಸ್ಯಾಂತಗಮನಂ ಮಹಾಪುರುಷಸ್ಯ ಲಕ್ಷಣವೆಂಬ ನಾಳ್ನುಡಿಯಂ ನನ್ನಿ ಮಾಡಿ (ಸೌಇಇ. IX-;, ೨೭೩-೮೭; 1179); ಪರಮಾತ್ಮನಂ ಧ್ಯಾನಿಸುವೊಡಂತರಾತ್ಮನೊ ಪರಮಾತ ನಕ್ಕುಮೊಯೆಂಬ ಸಮಯತ್ತ್ವಮಂ ನನ್ನಿ ಮಾಟ್ಪೆನೆಂಬಂತೆ ಪಗಲುಮಿರುಳುಂ ವಸುದೇವನನೇ ಧ್ಯಾನಿಸುತ್ತಿರೆ (ನೇಮಿ. ೧-೫೭ ಪ). ನನ್ನಿಮಾರ್ತಂಡ = ಸತ್ಯವನ್ನು ಪ್ರಕಾಶಪಡಿಸುವ ಸೂರ್ಯನಂತಿರುವವನಂ; ಒಂದು ಬಿರಂದಂ: ಶ್ರೀನನ್ನಿಮಾರ್ತ್ತಣ್ಡ ಪಟ್ಟಳಿಗೆಯ ಎಱೆಯಂಗರಸನ ಮಗ ಚಣ್ಣಮ್ಮರಸ (ಮ್ಯಆರಿ. ೧೯೪೩, ೨೭-೧; 1080). ನನ್ನಿಯ ಗಂಗ = ಒಬ್ಬ ಅರಸನ ಹೆಸರು: ಸತ್ಯವಾಕ್ಯ ರಾಚಮಲ್ಲಪೆರ್ಮ್ಮಾನಡಿ ಪೃಥುವೀರಾಜ್ಯಂಗೆಯ್ಯುತ್ತಿರೆ × × × ನನ್ನಿಯ ಗಂಗನ ಪರಿ ಬನ್ದು ಬೆಳ್ಗೆಱೆಯಂ ಕುನೂರ್ದುರುಮನಿಱಿದು ಹೋಗೆ (ಎಕ. XII, ತಿಪಟೂ. ೫೫-೧; ಸು. 880): ಶ್ರೀಮತ್ ಪಿಟ್ದುವಿಪರಿತಸ ಮಗ ನನ್ನಿಯ ಗಂಗನಣ್ಣೆಯೆಂಬ ಗಣ್ಡ ಬೀರನೊಟವ್ಪಂ ತಾಗಿ ಶಾನ್ತರ ನೆಱೆಯುರಟ್ಟದೊಡೆ (ಎಕ. X, ಗೌರಿಬಿ. ೪-ಗಾ, ಸು. 920); [ನ]ನ್ನಿಯ ಗಂಗಂ ಬೂತಯ್ಯಂ ಪುರಿಗೆಱೆ ಮೂನೂಱುಂ ಬೆಳ್ವೊಲ ಮೂನೂಱು ಮನಾಳುತ್ತಿರೆ (ಸೌಇಇ. XI-1, ೩೭-೫; 946); ಜಯಲಕ್ಷ್ಮೀಪತಿ ಮಾರಸಿಂಗನನುಜಂ ಸತ್ಯಪ್ರಿಯಂ ಸನ್ದ ನನ್ನಿಯ ಗಂಗ ಕ್ಷಿತಿಪಾಳಕಂ (ಎಕ. VII, ಶಿವಮೊ. ೪-೭೧; 1122). ನನ್ನಿಯ ಮೇರು = ಒಂದು ಬಿರಂದು: ಸ್ವಸ್ತಿ ಶ್ರೀಮನ್ಮಹಾಪ್ರಭು ನಂನಿಯ ಮೇರು ಕಲಿಕಾಲ ಧರ್ಮ್ಮರಾಜ ಕೆದಾಹು ನಾಡಾಳುವ . . . ಬಾಚೆಯ ಹಳ್ಳಿಯ ಗಂಡನಾರಾಯಣಸೆಟ್ಟಿಯರು (ಎಕ. VI(B), ಕೃಷ್ಣರಾ. ೭೭-೩; 1179). ನನ್ನಿವೆಡಂಗ = ಸತ್ಯದ ಬೆಡಗುಳ್ಳವನಂ; ಒಂದು ಬಿರಂದು: ನನ್ನಿವೆಡಂಗಂ ಕನ್ನಟ್ಟಿಯ ಕೊಟ್ಟು ಕೆಱೆಗೆ ಯಶವಮಂ ಪಡೆದಂ (ಕಇ. II, ೪-೫; 918).

[ದೇ.೫ ತಮಿ. ನನ್ನಿ, ನನ್ನು; ತುಲ. ತೆಲು. ನನ್ನಿ]

ನನಿಕರ್ತಾರ, ನನ್ನಿಕಾರ್ತರ (ನಾ). ಒಬ್ಬಾತನ ಹೆಸರು. ಬಾಧವರಿಹಾರಮ್ ನನ್ನಿಕರ್ತಾರ ಭಟರರ್ಗೆ ಧಾರೆ ಎಱೆದು ಕೊಟ್ಟಮ್ (ಮ್ಯಾಆರಿ. ೧೯೦೭, ೦೩-೦೮; 900). ನನ್ನಿಕಾರ್ತರ: ಸರ್ವ್ವಬಾದಾಪರಿಹಾರ ನನ್ನಿಕಾರ್ತ್ತರ ಭಟರರ್ಗೆ ಎ × × × ಱೆದು ಕೊಟ್ಟ (ಎಕ. III, ಮೈಸೂರು. ೩೭-೫; ಸು. 900 ?). [ನನ್ನಿ + ಕರ್ತಾರ]

ನನ್ನಿಕಾರ್ತರ 'ನನ್ನಿಕರ್ತಾರ' ನೋ.

ನನ್ನಿಕಾಱ (ನಾ). ಸತ್ಯವಂತ; ದಿಟವಂತ; ಸತ್ಯನಿಷ್ಠ; ದಿಟಗಾರ: ಕಾಯಕ್ಲೇಶದಿನಡವಿಯ ಕಾಯಂ ಪಣ್ಣುಮನುದಿರ್ಚಿ ತಿಂದಗಲದೆ ನಿಂದೀಯಮರ್ಗರಾವ ತೆಱದಿಂ ನೋಯಿಸರ್ಪ್ಪೆ ನಿನ್ನ ನನ್ನಿಕಾಱನ ಮನಮಂ (ಪಂಪಭಾ. ೭-೪೮); ಹುಸಿಯಂ ಹುಸಿಮಾತಂ ಸ್ವೈರಿಸನೆಂದುಂ ನಂನಿಕಾಱ ನಂನಿಗೆ ಸಂತಸಮೆಪ್ಪುವನಿಂತಿದು ಭಾವಿಸೆ ಹಚ್ಚೆಯನಾಯಕಂಗೆ ಸಲೆ ಸಹಜಗುಣಂ (ಕಇ. I, ೨೫-೪೮; 1186): ಮುನ್ನೆಲ್ಲರಂ ಸಾಡುವ ಕಾಡಾವುದೆಂದು ನೋಳ್ಪನ್ನೆಗಂ ಹಲವು ಕಲವುರಿಯ ಬಳಗಂ ಕಂಡು ನನ್ನಿಕಾಱಂ ಕಾವ ಕಾಡತ್ತ ನಡೆವಾಗ (ಹರಿಶ. ೧೨-೩೧); ನನ್ನಿಕಾಱರ ದೇವ ಕೇಳ್ದಾತನ್ನೆನಗೆ ಸಾಮ್ರಾಜ್ಯಸುಖಸಂಪನ್ನತೆಯ ಸೌಭಾಗ್ಯ (ತೊರರಾ. ೧-೫-೧೭).

[ನನ್ನಿ + -ಕಾಱ]

ನನ್ನಿಗ (ನಾ). = ನನ್ನಿಕಾಱ: ನಿನ್ನನ್ನೆನೆದಾಪೊನ್ನನ್ನಿಗ ಜಜಾಚಿಲ್ಲದ ದಾಗಿಗಳಾಣ್ಮ ಎನ್ನಯ ಮೊಗ ಮುಂದೇ ಒಸ್ನಂದೆತ್ತನ್ನಯ ಚಿನ್ನಪವಂ ಮನ್ನಿಸು (ಉದ್ಭಟ. ೩-೨೯); ನನ್ನಿಗರಿಂಪುಗಾಱರಿನಿವಾತುಗರ್ . . . ತನ್ನೊಡನಾಡೆ ನಾಡೆ ನಲಿಗುಂ ಚಿಕದೇವನೃಪಂ ಕೃಪಾಕರಂ (ಚಿಕವಿ. ೫-೧೧೦); ಇಂತೊಂದು ಮಾಟ್ಕೆಯುಂ ಪೊಱನಲ್ಮೆಯಂ ಕವಡುಗಾರ್ತಿಯ ಕಲ್ಲೆರ್ದೆಯೊಳ್ ನಾಂಟಿದ ನಾಡಾಡಿ ನನ್ನಿಗ ಚೆನ್ನಿಗನ ಮನೋರಥದೊಂದು ಹಯದ ಕಾಲ್ಗಳಂತಿರೆ ಕಲ್ಲೊಳ್ ಕೀಲಿಸಿರ್ಪುದುಂ ಕಂಡು (ರಾಮಾಶ್ವ. ೧೩೭-೫); ನಿಮ್ಮವರ ನನ್ನಿಗರ ಹಿಂದು ಸಿಖ್ ಮುಸಲ ಹರಿಜನರ, ನಿಮ್ಮೊಲವು ಧೀರ ಮಾನವತೆಯೇ ಅಡಿಗಡಿಗೆ ಕಾಡಿತ್ತು, ಬೆನ್ನಟ್ಟ ಬೇಟೆಯಾಡಿತ್ತು (ಅಮಹಂ. ೨೧-೬).

[ನನ್ನಿ + -ಗ₂]

**ನನ್ನಿಗೆಡು** (ಕ್ರಿ). ಮಾತು ತಪ್ಪು ; ಭಾಷೆ ತಪ್ಪು : ಸುಳ್ಳಾಡು : ನಾಚಿಕ್ಕೆಯಿದು ನನ್ನಿಗೆಟ್ಟೊಗಡಿಸದೆ ವಾನಾವರ್ಣದೆಂಜಲ ತಿಂದು ಬಾಳುವ ಗನ್ನಗತಕದ ವೇಶ್ಯೆಯರ ಸುಡಲಿ (ಶೀವಂಶ. ೬-೩೭) ; ನನ್ನಿಗೆಟ್ಟಂತು ನುಡಿವರ ಸಲ್ಲದಿದು ನೀನು ಖಿನ್ನನಾಗಿರದೆ ಭಜಿಸೈ ಪಾರ್ವತೀಶ್ವರನ (ಸೌಂದಪು. ೬-೩) ; ಎನ್ನ ರಾಜತೇಜಕರಸ ನನ್ನಿಗೆಡಲು ಮೂಱು ತಪ್ಪಿನಿಂ ನರೇಶನೆಡೆಯ ಬಿಡುವೆನೊಪ್ಪಿದಡೆ ಗಡ (ಮಲೇಪು. ೨೨-೫೭). [ ನನ್ನಿ + ಕೆಡು₁ ]

**ನನ್ನಿಗೆಯ್** (ಕ್ರಿ). ನಿಜಗೊಳಿಸು ; ಸಾಬೀತುಗೊಳಿಸು ; ಸತ್ಯವನ್ನಾಗಿಸು : ಬಸಿಯೆಲ್ಲವಂ ಕಿದರೆ ಚಳಿಯದು ಕುದುರೆ ಮೇಣ್ ಬಿಸುಗೆಯೊಳ್ ನೆಲೆ ನಿಲ್ಪುದು ನನ್ನಿಗೆಯ್ವಂ (ಕಾಲೂರ. ೧೨೭-೨೭೪). [ ನನ್ನಿ + ಕೆಯ್₁ ]

**ನನ್ನಿಗೊಡು** (ಕ್ರಿ). ಭಾಷೆ ಕೊಡು ; ಮಾತು ಕೊಡು : ಪಿರಿಯದೊಂದು ಮನೆವಾಟ್ಟೆಯುಂಟೀಗಳೆ ಪೋಗಿ ಬಂದಪ್ಪೆಂ ಬಂದ ಬಟಿಕ್ಕನ್ನಂ ಮೆಚ್ಚಿದಂತೆ ಮಾಡೆಂದು ನನ್ನಿಗೊಟ್ಟು ನಂಬಿಸಿ ಪೋದೊಡೆ (ವಡ್ಡಾರಾ. ೧೭-೯). [ ನನ್ನಿ + ಕೊಡು₁ ]

**ನನ್ನಿಗೊಳ್** (ಕ್ರಿ). ಪ್ರತಿಜ್ಞೆಯನ್ನು ಪಡೆ ; ಭಾಷೆಯನ್ನು ಕೊಡುವಂತೆ ಮಾಡು ; ಮಾತು ಪಡೆ : ಚಾಣಾಕ್ಯಂ ಕೇಳ್ದು ಅರಸನಂ ಕಂಡಾನರಸಿಯಾ ಬಯಕೆಯಂ ನೆಱಪುವೆನಾಯರಸಿಗೆ ಪುಟ್ಟಿದ ಕೂಸನೆನಗೀಯಲಾರ್ಪೊಡೆಂದೊಡರಸನೀವೆನೆಂದೊಡರಸಿಯುಮಂ ನನ್ನಿಗೊಂಡಾರುಮಱಿಯದಂತಿರ (ವಡ್ಡಾರಾ. ೧೯೭-೦೪). [ ನನ್ನಿ + ಕೊಳ್₁ ]

**ನನ್ನಿದಪ್ಪು** (ಕ್ರಿ). ಭಾಷೆ ತಪ್ಪು ; ಮಾತು ತಪ್ಪು : ನನ್ನಿಯಹುದೆ ನಿಮ್ಮ ವಾಕ್ಯ ನನ್ನಿದಪ್ಪುದಮ್ಮಯೆಂದೊಡೆನ್ನದೊಂದು ನುಡಿಯನಾಲಿಸುವುದು (ಮಲೇಪು. ೨೨-೫೭). [ ನನ್ನಿ + ತಪ್ಪು₁ ]

**ನನಿನುಡಿ** (ಕ್ರಿ). ದಿಟವನ್ನು ನುಡಿ ; ಸತ್ಯವನ್ನು ಹೇಳು : ಈಯದೆ ಈಱಿಯದೆ ನನ್ನಿ ನುಡಿಯದೆ ನಣ್ಪಿ ದೇವಂಗಟ್ಟಿಸ್ಸಿ ಮುಯ್ಯಮ್ಪುಡದೊಂಗರ ಅಲಿದೆಂ ಮೂದಲಿಪ್ಪೊಂ (ಎಇ. XXIV, ೨೭-೧೩ ; 886). [ ನನ್ನಿ + ನುಡಿ₁ ]

**ನನ್ನಿನೊಳಂಬ** (ನಾ). ಒಬ್ಬಾತನ ಹೆಸರು : ಅತನ ಮಗಂ ನನ್ನಿನೊಳಂಬನ್ (ಮೃಎರಿ. ೧೯೬೩, ೪೮-೪ ; ಸು. 960) ; ಶ್ರೀಪೃಥ್ವೀವಲ್ಲಭ ಪಲ್ಲವಕುಲತಿಲಕ ಏಕವಾಕ್ಯಮಿಱಿವನೊಳಂಬ ಶ್ರೀಮದಲಿಪಯ್ಯನ ಮಗ ನನ್ನಿನೊಳಂಬನ ಬಿಟ್ಟ ಬ್ರಹ್ಮಾದೇಯಂ (ಎಕ. XI, ಹಿರಿಯೂ.೧-೩ ; 975). [ ನನ್ನಿ + ನೊಳಂಬ ]

**ನನಿಮಟಲೂರ್** (ನಾ). ಒಂದು ಊರಿನ ಹೆಸರು (?) : ಕೌಚವಣಾಲೆಯರುಂ ನನ್ನಿಮಟಲೂರುಂ ಸನ್ನೊನವಾಳ ಕಿಱುವೆಟ್ಟುಗಳಾ ಪನ್ನಿರ್ವರ್ಗ್ಗಂ ರಣಪಾರರಾ ವಱಾಲೆಯರಸರಾ ಸಮಾಧಿಯ ಸಮಾಧಿ (ಎಕ. XIV, ತಿರುಮ. ೨೫೩-೨ ; ಸು. 800). [ ? + ಊರ್ ]

**ನನ್ನಿವಂತ** (ನಾ). ಸತ್ಯವಂತ ; ಧರ್ಮಿಷ್ಠ : ನನ್ನಿವಂತರ ದೇವ ಬಾರೈ ಮನ್ನಣೆಯ ಮದಗಜವೆ ಬಾರೈ (ಕಾಶಿರಾ. ೫೮-೭೦) ; ಯತಿಯು ರತಿಕನೆನಿಸಿ ಪತಿವ್ರತೆಯ ಸಿತಗೆಯೆನಿಸಿ ದಿವ್ಯವ್ರತಿಯ ಗತಿವಿಹೀನವೆನಿಸಿ ನನ್ನಿವಂತರ ಮತಿಗೆ ಸಟೆಯ ದಿಟ್ಟಿದಾಗಿ (ಮಲೇಪು. ೨೨-೨೭). [ ನನ್ನಿ + -ವಂತ ]

**ನನ್ನಿವಾತು** (ನಾ). ಪ್ರತಿಜ್ಞೆಯ ಮಾತು ; ಶಪಥದ ನುಡಿ : ಮಱು ಮಾತಿಂಗೆಡೆಯಿಲ್ಲದಂತಿರೆ ನುಡಿದ ಪಡೆಮೆಚ್ಚೆಗಂಡನ ಗಂಡವಾತುವಂ ನನ್ನಿವಾತುವಂ ಮುರಾಂತಕಂ ಮೆಚ್ಚಿ (ಪಂಪಭಾ. ೫-೭೫ ವ). [ ನನ್ನಿ + ಮಾತು₁ ]

**ನನ್ನಿವೇಟ್** (ಕ್ರಿ). ಸತ್ಯವನ್ನು ನುಡಿ ; ನಿಜವನ್ನು ಹೇಳು : ತನ್ನರಸಿಯ ಉಱುಗಿಲ್ಲದ ನಡೆಗೆ ದೇವರ್ಕಳಂ ಸಾಕ್ಷಿಗೊಟ್ಟು ಅಗಲೆ ತನ್ನತನ್ನೆಯವಂ ಮನ್ನಿಸೆಂದು ನನ್ನಿವೇಟ್ದು ಸಂತವಿಟ್ಟು (ರಾಮಾಶ್ವ. ೧೬೩-೯). [ ನನ್ನಿ + ವೇಟ್ ]

**ನನ್ನು** (ನಾ). ಅರಿಸಿನ, ಕುಂಕುಮ ಮೊದಲಾದುವನ್ನು ತೂಗುವ ಒಂದು ಬಗೆಯ ತೂಕ : ಸುಗಂಧಂಗಳಿಗೆ ಪಚ್ಚಕಪ್ಪುರ ಕೂರು ಒಂದಕ್ಕೆ ಹಾಗ ಪನ್ನೆಕೂರು ಒಂದಕ್ಕೆ ಬೇಳೆ ಕಸ್ತುರಿ ತೊಲೆ ಒಂದಕ್ಕೆ ಬೇಳೆ ಕುಂಕುಮ ನನ್ನು ಒಂದಕ್ಕೆ ಹಾಗ ಅಗಿಲು ತೊಲೆ ಒಂದಕ್ಕೆ ಅಡ್ಡ (ಎಕ. V, ಬೇಲೂರು. ೭೫-೮೨ ; 1382). [ ? ]

**ನನ್ನೂಱು** 'ನಾಲ್ನೂಱು' ನೋ.

**ನಪತ್ತು** 'ನೌಬತ್ತು' ನೋ.

**ನಪರ** 'ನಫರ' ನೋ.

**ನಪಾಸು** 'ನಾಪಾಸು' ನೋ.

**ನಪಿರಿ, ನಪೂರಿ, ನೌಪೂರಿ** (ನಾ). ಒಂದು ಬಗೆಯ ವಾದ್ಯ ; ತುತ್ತೂರಿ : ಚಂಬಕ ಡವುಡೆ ನಪಿರಿ ಬಾರುಗುಗಳುಚ್ ಕೊಂಬಿನ ಕಾಳೆ ಮಾವುರಿಯ ಬೊಂಬುಳಿ ಡೋಳು ನಿಸ್ಸಾಳಗಳಬ್ಬರ ತುಂಬಿತಾಕಾಶಮಂಡಲವ (ಕಂನವಿ. ೧೪-೨) ; ಚಂಬಕ ; ಡವುಡೆ ; ನಪಿರಿ ; ದುಂದುಭಿ . . . ಜಬರುಜಂಗಿ ಇತ್ಯಾದಿ (ಛಾಪಾಶಾ. ೫). **ನಪೂರಿ** : ನಿರ್ಜೀವಿ ಯಾವವೆಂದೊಡೆ... ಲೋಹವಿಡಿದ ಶಬ್ದ ತಾಳ ಕಂಸಾಳ ಗಂಟೆ ಕಹಳೆ ಕರ್ನೆ ನಪೂರಿ ಸ್ವನಾಯಿ (ವಚನ. ೪೦೩-೯೪) ; ನುಡಿವ ಮದ್ದಳೆ ಜೋಡುಶಂಖ ನಪೂರಿಯು ಬಡಿವ ತುಡುಮು ಡಮಾಮಿಗಳು ಹೊಡೆವ ಭೇರಿಯು ದೇವದುಂದುಭಿ ಮೊದಲಾದ ಗಡಣವೆಣ್ಣೆಸೆಯ ವ್ಯಾಪಿಸಿತು (ಅಭ್ಯಂ. ೪-೮೨) ; ಭೇರಿ ಹೆಗ್ಗಾಳೆ ನಪೂರಿ ನಾಗರ ಡೋಳು ಬಾರಿಸುತಿರಲು (ದೀರಶಾ. ೯-೩) ; ಭೇರಿ, ಕಹಳೆ, ಕರ್ನೆ, ನಪೂರಿ, ನಗಾರಿ, ಜಾಗಟೆ, ಕರಡಿ ಸಮ್ಮೇಳ (ಗುರುದ. ೦೦). **ನೌಪೂರಿ** : ಕಹಳಾ ಭೇರಿ ನಗಾರಿ ತಮ್ಮಟೆ ತುತುರೀ ಮೌರಿ ನೌಪೂರಿಗಳ್ ಬಹು ವಾದ್ಯಾದುರು ತಾಂ ಧಳಂಧಳರವಂ ಪರ್ಬುತ್ತಿರಲ್ಕೆತ್ತಲುಂ (ದೀಕವಂ. ೨-೨೭೦). [ ←ಪಾರ. ನಫೀರೀ, ನಫೀರೂ ; ಹಿಂ. ನಫೀರ್, ನಫೀರೀ, ನಫೇರೀ, ನಪ್ಪೇರೀ ; ಮರಾ. ನಫೇರೀ ]

**ನಪುಂಸ** (ನಾ). = ನಪುಂಸಕ ೧ : ಈರ್ವರಿಗೆ ಸೂರ್ಯಸ್ವರ ನಡೆಯಲ ನಪುಂಸನಹನೂ (ನವಮೋ. ೦೪-೪೫). [ ಸಂ. ]

**ನಪುಂಸಕ** (ನಾ). ೧. ಪುರುಷನೂ ಅಲ್ಲದ ಸ್ತ್ರೀಯೂ ಅಲ್ಲದ ವ್ಯಕ್ತಿ : ಗಂಡೂ, ಹೆಣ್ಣೂ ಅಲ್ಲದ ಮನುಷ್ಯ ; ಷಂಡ. ೨. ಖೋಜ ; ಕೊಜ್ಜ : "ಕ್ಲೀಬಃ, ವರ್ಷವರಃ, ಷಂಡಃ, ಷಂಡಕಃ, ನಪುಂಸಕಃ – ಈ ೫ ನಪುಂಸಕಂ" (ಹಲಾಯು. ೭೦-೨೭೭) ; "ಷಂಡಂ ಕ್ಲೀಬನೆನೆ ನಪುಂಸಕನೆನಿಕ್ಕುಂ" (ಮಂಗರಾ. ೮೦-೮) ; ಮೆತ್ತಮಾ ನಾರಕರೆಲ್ಲಂ ಹುಂಡಮುಂಡಸಂಸ್ಥಾನರುಮತಿವಿರೂಕ್ಷ ಕೃಷ್ಣವರ್ಣರುಮತಿದುರ್ಗಂಧರುಂ ನಪುಂಸಕರುಂ (ಸುಕುಮಾ. ೦೦-೪೭ ವ) ; ನಪುಂಸಕ ವ್ಯವಹರಿಸಬಲ್ಲನೇ ಅಯ್ಯ (ಸಿದ್ಧೇವ. ೦೭೨-೫೨೬) ; ಅರ್ಜುನಂಗೀ ಸೂತತನವೆತ್ತಲು ನಪುಂಸಕವೇಷ ವೀಕ್ಷಿಸಲು (ಕುಮ್ಮಾವಿ. ೬-೦೫). ೩. = ನಪುಂಸಕತ್ವ ೧ : ವರುಷ ತನಕ ನಪುಂಸಕದಲಾಚರಿಸಬಲ್ಲೆನೆ ಸಾಕಂ ದೇಹಾಂತರವನಂಗೀಕರಿಸುವೆನಲಾ ತನ್ನ ಸುಡಲೆಂದ (ಕುಮ್ಮಾಭ. ೮-೪೫). ೪. (ಆಲಂ) ನಿರ್ವೀರ್ಯನಾದವನು ; ದುರ್ಬಲ ; ಬಲಹೀನ : ಈ ನಪುಂಸಕರುಗಳ ನಂಬಿದ ನಾನು ನೀತಿಜ್ಞನೆ ಮಹಾದೇವೇನ ಹೇಳುವೆನೆನುತ ಭೀಷ್ಮನ ಹೊರೆಗೆ ನಡೆತಂದ (ಕುಮ್ಮಾಭೀ. ೮-೭೭) ; ನಾನು ದುರ್ಯೋಧನನಿಗೆ ಧನಾಧೀನನಾಗಿ ನಪುಂಸಕನಾದ್ದರಿಂದ (ಕೃಪಾಭೀ. ೨೭). ೫. [ವ್ಯಾಕ] ಮೂರು ಲಿಂಗಗಳಲ್ಲಿ ಒಂದು ; ಪುಲ್ಲಿಂಗ, ಸ್ತ್ರೀಲಿಂಗಗಳಲ್ಲದ ಲಿಂಗ ಮತ್ತು ಅದಕ್ಕೆ ಅಳವಡದ ಶಬ್ದ : ಸ್ವರವಿದಿರೊಳಕಾರಾಂತಕ್ಕಿರೆ . . . ನಪುಂಸಕಕ್ಕೆ ದಾಗಮಮಕ್ಕುಂ (ಶಾಷ್ಟಾಪ. ೦೦೪) ; ಕರ್ಣಾಟಕದೊಳ್ ಪೀಸಂ ಸ್ತ್ರೀಪುಂ ನಪುಂಸಕೋಭಯ ಪುಂಸ್ತ್ರೀ ಸ್ತ್ರೀ ನಪ್ಪಮಸ್ತ ವಾಚ್ಯಾನ್ಯೂನಾವ್ಯಯ ಮೆಂದು ಲಿಂಗವೊಂಬತ್ತು ತೆಱಂ (ಶಮದ. ೬೮) ; ಕೆಲವು ಹಲವು ಎಂಬುವು

ನಪುಂಸಕ ಬಹುವಚನದ ರೂಪಗಳು (ಶುದ್ಧಕು. ೯೪). ೧. ೫ : ಮನವ ನಪುಂಸಕವೆಂಧೆ ನಾನವಳನು ಕರೆತರಲಟ್ಟಿದೆ ಮನವು ರಮಿಸಿತದಲ್ಲಿಯೆ ವಂಚಿತನಾದೆನು ಪಾಣಿನಿಯಂತಹ ಕಿತವ (ಇಂದಾಶ. ೮೩-೧೭).

**ನಪುಂಸಕಪಕ್ಷಿಗ್ರಹ** = ಒಂದು ಬಗೆಯ ಹಕ್ಕಿರೋಗ : ಮಂಡುಹುಗಳಲ್ಲಿಯೂ ಬೆನ್ನಿನಲ್ಲಿಯೂ ಕಳಿ ಬದ್ದಿಹುದು. ವ್ಯ ಉರಿತ, ಕಾರುವಣ, ಉಬ್ಬುವಣ, ಬಾಯಾಟಿಕೆ. ಇವಿಷ್ಟು ಉಂಟಾಗಿದ್ದರೆ ನಪುಂಸಕಪಕ್ಷಿಗ್ರಹ ಹಿಡಿದಿದೆ ಎಂದಱಿವುದು (ವೃಧ್ವಸಾ. II, ೧೩). [ ಸಂ. ]

**ನಪುಂಸಕತನ** (ನಾ).=ನಪುಂಸಕತ್ವ ೧ : ಉತ್ತರಗೋಗ್ರಹಣದ ಸಮಯಕ್ಕೆ ಅರ್ಜುನನ ನಪುಂಸಕತನ ಕೊನೆಗೊಂಡಿತು (ಲೋಕ).

[ ನಪುಂಸಕ + – ತನ ]

**ನಪುಂಸಕತ್ವ** (ನಾ). ೧. ಪುರುಷನೂ ಸ್ತ್ರೀಯೂ ಅಲ್ಲದಿರುವ ಸ್ಥಿತಿ; ಕ್ಲೀಬತ್ವ; ಷಂಡತ್ವನ : ಅರ್ಜುನನು ಊರ್ವಶಿಯ ಶಾಪದಂತೆ ಒಂದು ವರ್ಷಕಾಲ ನಪುಂಸಕತ್ವವನ್ನು ಹೊಂದಿದ್ದನು (ಲೋಕ). ೨. [ವ್ಯಾಕ] ಪುಂ, ಸ್ತ್ರೀಲಿಂಗಗಳಿಗೆ ಸೇರದಿರುವಿಕೆ; ನಪುಂಸಕಲಿಂಗವಾಗಿರುವಿಕೆ : ನಿತ್ಯಂ ನಪುಂಸಕತ್ವಮಪತ್ಯಕಲತ್ರಾದಿ ಶಬ್ದದೊಳ್ ಸ್ತ್ರೀಪುಂಸವ್ಯತ್ಯಯಮಕ್ಕುಂ ಕರಣೋಪಕ್ರಣಿಗಳೊಳಂ ವಧಾಭಿಲಾಷಾದಿಯೊಳಂ (ಕಾವ್ಯಾವ. ೧೬೦).

[ ಸಂ. ]

**ನಪುಂಸಕಲಿಂಗ** (ನಾ). = ನಪುಂಸಕ ೫ : ಪುರುಷರಂ ಪೇಳ ಶಬ್ದಂಗಳ್ ಪುಲ್ಲಿಂಗಂಗಳ್ ; ಸ್ತ್ರೀಯರಂ ಪೇಳ್ವ ಶಬ್ದಂಗಳ್ ಸ್ತ್ರೀಲಿಂಗಂಗಳ್ ; ಉೞಿದುವೆಲ್ಲಂ ನಪುಂಸಕಲಿಂಗಂಗಳ್ (ಶಮದ. ೯೧ ವೃತ್ತಿ) ; ಪುಲ್ಲಿಂಗವೆಂತಲೂ ಸ್ತ್ರೀಲಿಂಗವೆಂತಲೂ ನಪುಂಸಕಲಿಂಗವೆಂತಲೂ ಮೂರು ವಿಧವಾಗಿರುವುದು (ಹೊಸುಗ. ೩೫) ; ಪುಲ್ಲಿಂಗವೂ ಸ್ತ್ರೀಲಿಂಗವೂ ಅಲ್ಲದ ಪದಗಳೆಲ್ಲಾ ನಪುಂಸಕಲಿಂಗ (ಮಧ್ಯಕು. ೩೦). [ ನಪುಂಸಕ + ಲಿಂಗ ]

**ನಪುಂಸಕವೇದ** (ನಾ). [ಜೈನ] ಒಂದು ಬಗೆಯ ನೋಕಷಾಯಂ; ಚಾರಿತ್ರಮೋಹನೀಯದ ಭೇದಗಳಾದ ಮೂರು ಬಗೆಯ ವೇದಗಳಲ್ಲಿ ಒಂದು; P ಆತ್ಮನಿಗೆ ಚೈತನ್ಯರೂಪ ಪರ್ಯಾಯದಲ್ಲಿ ಮೈಥುನರೂಪವಾದ ಚಿತ್ತವಿಕ್ಷೇಪವುಂಟಾಗುತ್ತದೆ. ಇದಕ್ಕೆ ವೇದವೆಂದು ಹೆಸರು. ಇದರಲ್ಲಿ ಪುರುಷವೇದ, ಸ್ತ್ರೀವೇದ, ನಪುಂಸಕವೇದವೆಂದು ಮೂರು ಬಗೆಗಳಿವೆ. ಪುರುಷವೇದದ ಉದಯದಿಂದ ಸ್ತ್ರೀವಿಷಯಕವಾದ ಕಾಮವುಂಟಾಗುತ್ತದೆ. ಸ್ತ್ರೀವೇದದ ಉದಯದಿಂದ ಪುರುಷವಿಷಯಕವಾದ ಕಾಮವುಂಟಾಗುತ್ತದೆ. ನಪುಂಸಕವೇದದ ಉದಯದಿಂದ ಸ್ತ್ರೀಪುರುಷೋಭಯಾತ್ಮಕವಾದ ಕಾಮವುಂಟಾಗುತ್ತದೆ. ನಪುಂಸಕವೇದದಿಂದ ಉಂಟಾಗುವ ಭಾವವು ಆವಿಗೆಯಲ್ಲಿರುವ ಬೆಂಕಿಯಂತೆ ದೀರ್ಘಕಾಲವಿರುತ್ತದೆ. ಆ ಕಾರಣದಿಂದ ವ್ಯಕ್ತಿಯು ಪುರುಷಶಕ್ತಿ, ಸ್ತ್ರೀಶಕ್ತಿ ಎರಡೂ ಇಲ್ಲದವನಾಗುತ್ತಾನೆ. ಹೀಗೆ ಬೇರೆ ಬೇರೆ ವಿವರಣೆಗಳು ಜೈನಗ್ರಂಥಗಳಲ್ಲಿ ನಿರೂಪಿತವಾಗಿವೆ : ಮತ್ತಂ ಕಿಡಿದು ಬೇಗದಿಂ ಕ್ರಮಾಕ್ರಮದೊಳ್ ನಪುಂಸಕವೇದಮುಮಂ ಸ್ತ್ರೀವೇದಮುಮಂ ಪುಂವೇದಮುಮಂ.... ಘಾತಿಸಿ (ಆದಿಪು. ೧೦-೦೪ ವ); ಅಭಿಭವಿಸಿ ನಪುಂಸಕವೇದ ಭಾಮಿನೀವೇದಯುಗಳದೊಡನೊಡನೆ ಜಗದ್ವಿಭು ಹಾಸ್ಯರತ್ಯರತಿಶೋಕಭಯಜುಗುಪ್ಸೆಗಳನಾಱುಮಂ ಬೆಂಕೊಂಡಂ (ಮಲ್ಲಿಪು. ೧೪-೮೪) ; ಮತ್ತಂ ಕತಿಪಯಸಮಯದೊಳನುಕ್ರಮದಿಂ ನಪುಂಸಕವೇದಂ ಸ್ತ್ರೀವೇದವೆಂಬ ಎರಡುಮನದಿರ್ಪ (ಚಂದ್ರಪು. ೧೪-೬೯ ವ) ; ಸ್ತ್ರೀವೇದಂ ಪುರುಷಾಭಿಲಾಷೆಯಂ ಮಾಱ್ಪುದು ಪುರುಷವೇದಂ ಸ್ತ್ರೀಯಭಿಲಾಷೆಯಂ ಮಾಱ್ಪುದು ನಪುಸಂಕವೇದಮುಭಯಾಭಿಲಾಷೆಯಂ ಮಾಱ್ಪುದು (ಷಸಾರ. ೧೨) ; ನಪುಂಸಕವೇದಮನಡಿಯಿಟ್ಟು ಹಾಸ್ಯಾದಿಯಾಱ (ವರ್ಧಚ. ೧೩-೫೦). 'ನೋಕಷಾಯ' ಪರಾ. [ ಸಂ. ]

**ನಪುಂಸಕಶಿಲೆ** (ನಾ). ಮೂರ್ತಿಶಿಲ್ಪಕ್ಕೆ ನಿರುಪಯುಕ್ತವಾದ ಶಿಲೆ; ಮೂರ್ತಿ ಶಿಲ್ಪಕ್ಕೆ ಉಪಯೋಗವಾಗದ ಶಿಲೆ : ಶಿಲೆಯಲ್ಲಿ ಪುಂಶಿಲೆ, ಸ್ತ್ರೀಶಿಲೆ, ನಪುಂಸಕಶಿಲೆಯೆಂದು ಮೂರು ವಿಧ. ಕಂಚಿನ ತಾಳದ ನಾದದಂತೆ ಧ್ವನಿಕೊಡುವ ಶಿಲೆಯು 'ಪುಂಶಿಲೆ' ಯೆಂದೂ, ಘಂಟಾನಾದದಂತೆ ಧ್ವನಿತವಾಗುವ ಶಿಲೆಯು 'ಸ್ತ್ರೀಶಿಲೆ' ಯೆಂದೂ, ತಾಳವಿಹೀನವಾದ ಶಿಲೆಯು 'ನಪುಂಸಕಶಿಲೆ' ಯೆಂದೂ ಉಕ್ತಿ ಇದೆ . .. ಸ್ತ್ರೀದೇವತಾವಿಗ್ರಹಗಳನ್ನು ಸ್ತ್ರೀಶಿಲೆಯಿಂದಲೂ, ಆಧಾರಪೀಠಾದಿಗಳನ್ನು ನಪುಂಸಕಶಿಲೆಯಿಂದಲೂ ಮಾಡಬೇಕೆಂದು ವಿಧಿಸಿದೆ (ಭಾರಶ. ೬೭). [ ನಪುಂಸಕ + ಶಿಲೆ ]

**ನಪುಂಸಕಿ** (ನಾ). ಸ್ವರೂಪದಲ್ಲಿ ಹೆಣ್ಣಾಗಿ ಕಂಡರೂ ಹೆಣ್ಣುತನವಿಲ್ಲದ ವ್ಯಕ್ತಿ : ಪರವಧುವಂ ನಪುಂಸಕಿಯರಂ ಗುರುಭಾರ್ಯೆಯರಂ ಮುನೀಂದ್ರಶೌಂದರಿಯರನಂತ್ಯ ಜಾತಿಯವಳಂ ವ್ರತಮುಳ್ಳಳನಂಗಹೀನೆಯಂ ಕಿರಿವಳಂ ಕುಲಕ್ಷಯೆಯನಾ ಕೊಡಗೂಸುಗಳಂ ವಿದಗ್ಧನಾದರದೊಳ್ ಕೂಡಲುಂ ಬಯಸಿನೋಡಲು ಮಾಗದು ಕೂರ್ತು ಬಂದೊಡಂ (ಮದಶಿ. ೯-೨).

[ ನಪುಂಸಕ + – ಇ₂ ]

**ನಪೂರಿ** 'ನಪಿರಿ' ನೋ.

**ನಫೆ** 'ನಫೆ' ನೋ.

**ನಪ್ತಾರ** (ನಾ). ಮೊಮ್ಮಗ; ನಪ್ತೃ : ಪಿತೃ ಮೊದಲಾದ ಶಬ್ದಗಳನ್ನುಳಿದ ಋಕಾರಾಂತ ಶಬ್ದಗಳ ಋಕಾರಕ್ಕೆ ಆರಾದೇಶ ಬರುತ್ತದೆ . . . ಸ್ವಸೃ – ಸ್ವಸಾರನು ; ನಪ್ತೃ – ನಪ್ತಾರನು ಇತ್ಯಾದಿ (ಹೊಸುಗ. ೧೦೬).

[ ಸಂ. ನಪ್ತೃ ]

**ನಪ್ತೃ** (ನಾ). ಮಗನ ಅಥವಾ ಮಗಳ ಮಗ; ಮೊಮ್ಮಗ : "ದೌಹಿತ್ರಃ, ನಪ್ತಾ–ಈ ೨ (ಮ)ಗಳ ಮಗಂ ; ಪೌತ್ರನುಂ ಅಹಂ" (ಹಲಾಯು. ೮೩-೩೫೧); "ಮಗನ ಮಗಂ ನಪ್ತೃ ಪೌತ್ರನೆನಿಕುಂ" (ಪತ್ರಕೋ. ೫೫-೨೨) ; ಋಕಾರಾಂತಕ್ಕೆ–ಪಿತೃ, ಸವಿತೃ, ನಪ್ತೃ. . . ಧಾತೃ (ಶಮದ. ೮೯ ಪ್ರಯೋ) ; ಮಡದಿಯರಂ ಮಕ್ಕಳಂ ಮೊಮ್ಮಕ್ಕಳಂ ನಪ್ತೃಗಳಂ ನಿಗ್ರಹಾನುಗ್ರಹಪೂರ್ವಕಮಾಗಿ ಸಂರಕ್ಷಣೆಯನೆಸಗು (ಧಾರಶಾಂ. ೬೭-೪೧೩).

[ ಸಂ. ]

**ನಪ್ತ್ರಿ** (ನಾ). ಮಗನ ಅಥವಾ ಮಗಳ ಮಗಳು; ಮೊಮ್ಮಗಳು : "ನಪ್ತ್ರೀ,–ಪೌತ್ರೀ, ಸುತಾತ್ಮಜಾ – ಮಗನ ಮಗಳ ಹೆಸರುಗಳು, ಮಗಳ ಮಗಳಿಗೂ ಹೆಸರು, ಮೊಮ್ಮಗಳು" (ಸಿದ್ಧಾಂಶಿ. ೧೫೨). [ ಸಂ. ನಪ್ತ್ರೀ ]

**ನಪ್ಪು** (ನಾ). [ವ್ಯಾಕ] ನಪುಂಸಕಲಿಂಗ ಎಂಬುದರ ಸಂಕೇತ : ಪುರುಷರೆ ಪುಲ್ಲಿಂಗಂ ಸ್ತ್ರೀಯರೆ ತಾಂ ಸ್ತ್ರೀಲಿಂಗಮುೞಿದುವೆಲ್ಲಂ ನಪ್ಪಾಗಿರೆ ಸಲ್ಗುಂ ಕನ್ನಡದೊಳ್ ಪರಿವರ್ತಿಸವುೞಿದ ಲಿಂಗಮೊಳವಾಗಿರ್ದುಂ (ಶಮದ. ೯೦); ನಪ್ಪಾಗಿರೆ = ನಪುಂಸಕಲಿಂಗವಾಗಿರೆ (ಶಮದ. ೯೧ ಟೀಕೆ).

[ ಸಂ. ನಪ್ ]

**ನಪ್ಪುರಿ₁** (ಕ್ರಿ). ಗಾಡಿ, ನೇಗಿಲು ಮುಂತಾದುವುಗಳ ಚಲಿಸುವ ಎತ್ತುಗಳನ್ನು ನಿಲ್ಲಿಸಲು, ಬಾಯಲ್ಲಿಯ ಶಬ್ದದಿಂದ ಸೂಚನೆ ಕೊಡು : ಎತ್ತುಗಳನ್ನು ಗೌಡರು ನಪ್ಪುರಿದು, ಗಾಡಿಯನ್ನು ಮನೆಯ ಮುಂದೆ ನಿಲ್ಲಿಸಿ, ಮುಖದಲ್ಲಿ ಆ ಗೆಲುವಿನ ನಗೆಯನ್ನು ಸೂಚಿಸಿದಾಗ ಆತನಿಗೆ ಪೂರ್ತಿ ಜೀವ ಬಂತು (ನನ್ನೂರು. ೧೩೪). 'ನಕ್ಕಿಡು', 'ಮಾಪ್ಪುರಿ' ಪರಾ.

**ನಪ್ಪುರಿ₂** (ನಾ). "ನೇಗಿಲಿಗೆ ಅಥವಾ ಗಾಡಿಗೆ ಕಟ್ಟಿದ ಎತ್ತುಗಳನ್ನು ನಿಲ್ಲಿಸಲು ಬಾಯಲ್ಲಿ ಮಾಡುವ ಒಂದು ರೀತಿಯ ಶಬ್ದದ ಸನ್ನೆ" (ನನ್ನೂರು. ಕೋಶ). [ <ನಪ್ಪುರಿ₁ ]

**ನಫರ್** 'ನಫರ' ನೋ.

**ನಫರ್‌ಜಾಮಿಾನು** 'ನಫರಜಾಮಿಾನು' ನೋ.

**ನಫರ, ನಪರ, ನಫರ್** (ನಾ). ೧. (ಕೀಳು ತರಗತಿಯ) ಆಳು ; ದಾಸ ; ಸೇವಕ. ೨. ವ್ಯಕ್ತಿ ; ಮನುಷ್ಯ ; ಇಷವಂ : ನಿಜ, ಅಹುದು ! ಆದರೆ ಈ ಹಳೇ ನಫರನಾದ [ಮನುಷ್ಯನಾದ] ನನ್ನ ದೆಸೆಯೇನಾಗಬೇಕು ? (ಕಪಾಕಂ. ೮೦). 'ನಫರಜಾಮಿನಾನು' ಪರಾ. **ನಪರ** : ೧. ನಪರನ ಹೆಂಡತಿಗೆ ಹರನ ಕಾವಲು (ಗಾದೆ). **ನಫರ್** : ೧. 'ನಫರ್‌ಜಾಮಿನಾನ್' ಪರಾ. [←ಅರ. ಹಿಂ. ನಫರ್ : ಮರಾ. ನಫರ್, ನಪ್ಫರ್ ]

**ನಫರಜಾಮಿನಾನು, ನಫರ್‌ಜಾಮಿನಾನ್** (ನಾ). ಒಬ್ಬ ವ್ಯಕ್ತಿಯು ಒಂದು ಷರತ್ತನ್ನು ಪಾಲಿಸುವುದಕ್ಕೆ ಬದ್ಧನಾಗಿ ನ್ಯಾಯಾಸ್ಥಾನದ ಎದುರಿಗೆ ಒಪ್ಪಿಕೊಳ್ಳುವಿಕೆ ; ಸ್ವಂತಜಾಮಿನಾನು : (+). **ನಫರ್‌ಜಾಮಿನಾನ್** : ನಫರ್‌ಜಾಮೀನ್ ಖತ್ತಿನ (recognisance) ಮೇಲೆ. ಹನ್ನೆರಡು ವರ್ಷಗಳು (ಗ್ರಾಮೂಳ. ೧೬೦). [ ನಫರ + ಜಾಮಿನಾನು ]

**ನಫಾ** 'ನಫೆ' ನೋ.

**ನಫೆ, ನಪೆ, ನಫಾ** (ನಾ). ವ್ಯಾಪಾರದಲ್ಲಿ ಬರುವ ಆದಾಯ ; ಲಾಭ ; ಫಾಯಿದೆ ; **ಕಿಫಾಯಿತ್ತು** : ಈಟಿಗೆ ಒಂದಕ್ಕೆ ಎರಡರಷ್ಟು ನಫೆ, ವ್ಯಾಪಾರದಲ್ಲಿ ಬಂದದ್ದರಿಂದ ಕಾವಾಗಾರಿ ಪ್ರಯತ್ನ ಮಾಡಿದೆವು (ಎಳ. XVI, ಸಂಧ್ಯ ೧. ೦೦೬-೮ ; 1612) ; ಉತ್ತಮವಾದ ರತ್ನಗಳನ್ನು ಹನುಮಂತರಾಯನು ಅಂದಾಜು ನೋಡಿ ತಾನೇ ಕ್ರಯಕ್ಕೆ ತೆಗೆದುಕೊಂಡು ಅವುಗಳನ್ನು ನಫೆಗೆ ಮಾರುತ್ತಿದ್ದನು (ಮುಂಸುಗ. ೬೨) ; ವಾಸ್ತವವಾಗಿ ಬಂದ ನಫೆಯ ಮೇಲೆ ಸೇಕಡ ಹತ್ತರಂತೆ ದಳ್ಳಾಳಿಯನ್ನು ಕೊಡುವ ಪದ್ಧತಿ (ಭಾಗ್ಯಶಿ. ೨೬) ; ಅಂತೂ ಲುಕ್ಸಾನಿಲ್ಲ. ನಫೆಯಾಗಿದೆ (ಧೀಮುಕಾ. ೬). **ನಪೆ** : ಈ ದಿನದ ವ್ಯಾಪಾರದಲ್ಲಿ ಆತನಿಗೆ ಹೆಚ್ಚು ನಪೆಯಾಯಿತು (ರೂಢಿ). **ನಫಾ** : ಯಾವಿಗೆ ಹ್ಯಾಗೆ ಖರೀದಿ ಮಾಡಲ್ಪಟ್ಟದೆಯೋ ಅದರ ಹಾಗೆ ಅವರು ನಫಾ ಕಿಮ್ಮತ್ತಿನಲ್ಲಿ ಸಾಮಿಲಮಾಡಿ ಹೇಳುತ್ತಾರೆ (ಮುಂಬವ್ಯಾ. ೧೯೪).
[←ಅರ. ನಫ್‌ಅ; ಹಿಂ. ನಫಾ : ಮರಾ. ನಫಾ, ನಪ್ಫಾ ]

**ನಬಾಬ** 'ನವಾಬ' ನೋ.

**ನಬೀ** (ನಾ). ದೈವಪ್ರೇರಿತವಾದ ಧರ್ಮೋಪದೇಶಕ ; ಪೈಗಂಬರ ; ಪ್ರವಾದಿ ; ದೇವದೂತ ; "ಧರ್ಮಸ್ಥಾಪಕ" (ಜಾನಕೋ. ೯).
[ ←ಫಾರ. ಅರ. ಹಿಂ. ಮರಾ. ನಬೀ ]

**ನಬ್ಯ** (ನಾ). ಹೊಸತು ; ನವ್ಯ : "ನಬ್ಯ–ನವ್ಯ = ಹೊಸತು" (ಕರ್ನಕೋ. ೨೦) ; ತರಿಸಿಯೊಟ್ಟಿಸಿ ನಬ್ಯ[ಪಾಠಾಂ. ವ್ಯ]ದಿವ್ಯಾಂಬರ ನಿಕರವಂ (ಜಸಪು. ೩೬–೧೮). [ <ಸಂ. ನವ್ಯ ]

**ನಭ** (ನಾ). ೧. ಬಾನು ; ಆಗಸ ; ವ್ಯೋಮ ; ಆಕಾಶ ; ಗಗನ : "ನಭಃ . . . ಗಗನಂ, ದ್ಯುಃ–ಈ ೧೫ ಆಕಾಶಂ" (ಹಲಾಯು. ೨೨–೧೩೬) ; "ತಾರಾಪಥಂ ವ್ಯೋಮಮಂತರಿಕ್ಷಂ ನಭಂ . . . ಅಂಬಕಂ ವಿಷ್ಣುಪದಮೆನಲು ಗಗನಮಕ್ಕುಂ" (ಮಂಗರಾ. ೯–೩೦) ; ಒತ್ತಿ ತಜುಂಬ ಸಿಂದ ರಿಪುಭೂಜ ಸಮಾಜದ ಬೇಗ್ಗಳಂ ನಭಕ್ಕೆತ್ತದೆ ಬಿಡು ತನ್ನ ಮಾಱ್ಪೊಕ್ಕೊಡೆ ಕಾಯದೆ ಚಾಗದೊಳ್ಪಿನಚ್ಚೊತ್ತದೆ ಮಾಣ್ದು ಬಾಳ್ವ ಪುಟುವಾನಸನೆಂಬನಪಂಡ ಮೆಂಬುದೊಂದುತ್ತಿಯು ಪೆರ್ಚೊಳಿವ್ವ ಪುಟುವಲ್ಲದೆ ಮಾನಸನೇ ಮುರಾಂತಕಾ (ಶಂಶಳಾ. ೫–೬೫) ; ನಭದಿಂದುಮಿೞಿದವಂ ರಾಜಭವನವಂ ಪೊಕ್ಕು ಪವನಸುತ ಪಾದನಖಪ್ರಭೆ ಪಸರಿಸಿ ತನಗೆ ಶಿರೋವಿಭೂಷಣಶ್ರೀಯನೀಯೆ ವಿನಮಿತನಾದು (ಶಂರಾಮಾ. ೧೧–೨೬) ; ಭೋರೆನೆ ತೂರ್ಯಮಂಬೆಯನಜಂ ಗಜಮಂ ಬಳವೈರಿ . . . ವಿಮಾನವಂ ಮಾರಹರಪ್ರಿಯಂ ವೃಷಭನಂ ಹರನೇಱಿ ನಭಕ್ಕೆ ಸಲ್ವುದುಂ (ಜಗವಿ. ೧–೩೬) ; ಗ ಗ ನ ರಂ ಧ್ರ ಪೊ ಅಲುಗಗುಡದಂತೆ ಕೀಲಿಸಿದ ವಜ್ರವೊಳೆಗಳೊ ನಭದ ಲತೆ ಹಬ್ಬಿಯೊಗೆದ ನನೆಯೊ ಕಡು ಹಸಿದವೆಂದು ಶಶಿಯೆಲ್ಲಾ ಚಕೋರಕ್ಕೆ ಕೊಡುವ ಸವಿದುತ್ತುಗಳೊ . . . ಎನೆ ತಾರಾಳಿಯೆಸೆದುವಾ ಜಗದ ಜನ ನಲಿಯುತಿರಲು (ಹಹಳಾ. ೩–೮೯) ; ತೊಳಗುವ ನಭದೊಳ್ ಚಿತ್ರಾವಿಳದೃಷ್ಟಿಗವಿದ್ಯಮಾನಮೇಚಕರುಚಿಯೊಂದೆಳಸಿ ಮಿಗೆ ತೋರ್ಪ ತೆಱದಿಂ ಖಳಂಗೆ ಪೊಲನಲ್ತೆ ಕೃತಿಯೆಳ್ಳಲ್ಲದೂ ದೋಷಂ (ಪುಷ್ಪಪು. ೧–೪೮) ; ನಭದಿಂದಿಳಿವ ಗಂಗೆಯ ಧಾರೆ ಮೊಱೆದುದಿದ ಪುರದ ಬಾಹೆಯಲಿ (ಕುಮಾ.ಅ. ೬–೩೨) ; ಶುದ್ಧಿಸದೆ ನಭ ಧರೆಯ ಮರ ಮರಳಿ ಮಳೆಯಿಂ ? (ಮಂಕುಳ. ೪೬೪). ೨. ಮುಗಿಲು ; ಮೋಡ. 'ನಭಪ್ರಸೃತಿ', 'ನಭೋಂಗ' ಪರಾ. ೩. ಚಾಂದ್ರಮಾನ ವರ್ಷದಲ್ಲಿ ಒಂದು ತಿಂಗಳ ಹೆಸರು; ಶ್ರಾವಣಮಾಸ: "ಶ್ರಾವಣಮಾಸಮಂ ನಭವೆಂಬುದು" (ಹಲಾಯು. ೧೯–೦೧೪); "ಶ್ರಾವಣಃ, ನಭಾಃ, ಶ್ರಾವಣಿಕಃ–೩ ಶ್ರಾವಣಮಾಸದ ಹೆಸರುಗಳು" (ಸಿದ್ಧಾಂತಿ. ೩೮). ೪. ಸೊನ್ನೆ ; ಶೂನ್ಯ : "ನಭ ಸೊನ್ನೆ" (ಮಂಗರಾ. ೧೦೪–೮). ೫. [ಛಂದ] ಅಕ್ಷರಗಣಗಳಲ್ಲಿ ಒಂದು; ಆದಿಯಲ್ಲಿ ಎರಡು ಗುರುವಿರುವ ಗಣ; ತಗಣ : (– – ∪): "ಆದಿಗುರುವೆರಡಿರಲು ನಭವಕ್ಕು" (ಮಂಗರಾ. ೧೦೬–೨೦) ; ಇಂದು ನಭಂಗಳ್ಸರವ್ರರಪವನೇಂದುದ್ವಯವಾಗಿರೆ . . . ಧರೆಗಿದು ಪೆಸರಾಯ್ತಲ್ಲಿಯು ಮುದ್ದವಕರವೆನೆ ತನ್ನಿಂ (ಛಂದೋಂಬು. ೨–೧೯೦). ೬. [ಜ್ಯೋತಿ] "ಲಗ್ನದಿಂದ ಹತ್ತನೆಯ ಸ್ಥಾನ" (ಜಾತಕ. ಪರಿ. ೩). [ ಸಂ. ]

**ನಭಃಪಯೋಜ** (ನಾ). (ಅಲಂ) ಅತ್ಯಂತ ಅಸಂಭವವಾದುದು ; ಗಗನಕುಸುಮ : ಅದಱಿಂದೆ ನಂಬಿ ಜಟಿಸಿದೊಡಿದಱಿಂ ದೊರೆಕೊಳ್ಗುಮವಳ ಶಿವಪದಮಿಂತಲ್ಲದೆ ಪೆಱತು ಮಾರ್ಗದಿಂದಪ್ಪುದು ತಾನೆಂಬುದು ನಭಃಪಯೋಜಪ್ರಾಯಂ (ರಾಜಶೇ. ೪–೯೫). [ ಸಂ. ]

**ನಭಃಪ್ರಸೃತಿ** (ನಾ). ಮೋ ಡ ಗ ಳ ಗುಂಪು.–ಸಮೂಹ : ಎಱೆ ವಿಮಾನವಮಂ ಕೃತಕ ಗಾಯಿಕೆಯರ್ . . . ಯಾನಮೇಂ ಕೀೞಿದುದೋ ನಭಃಪ್ರಸೃತಿಗಿಟ್ಟೆಡೆಯಿಟ್ಟೆಡೆಯಾದುದೆಂಬಿನಂ(ಶಾಂತಿಪು. ೨–೮೨). [ ಸಂ. ]

**ನಭಃಫಲ** (ನಾ). (ಅಲಂ) (ಗಗನಕುಸುಮದಂತೆ) ಅತ್ಯಂತ ಅಸಂಭವವಾದುದು : ಅದಱ ಕಾಂಕ್ಷಣಮೆಂಬುದು ಗಾ ವಿ ಲ ಂ ನಭಃಫಲದುಪಭೋಗಮಂ ಬಯಸಿ ಬಾಯ್ದಿಡುವಂದಮನುಂಟುಮಾಡುಗುಂ (ಚಾಧಪು. ೫–೬೩). [ ಸಂ. ]

**ನಭಶ್ಚರ** (ನಾ). ಆಕಾಶದಲ್ಲಿ ಸಂಚರಿಸುವವನು ; ಖೇಚರ ; ವಿದ್ಯಾಧರ : ಸದ್ಯಸ್ತ್ರಭಾಜನನಪ್ಪೆನ್ನೊಳೆ ಮಾಟ್ಪುದಾಕೆಗೆ ವಿವಾಹೋದ್ಯೋಗಮಂ ರಾಗದಿಂ ಎಂದಪನಲ್ತೆ ನಭಶ್ಚರವೃಂದಾರಕಂ (ಚಂದ್ರಪು. ೬–೨೨) : ಕರಮೆಸೆದತ್ತು ದೇವನಗದಿಂ ಬನದಿಂ ಬನದಂಬಡುತ್ತ ಸಂಚರಿಪ ನಭಶ್ಚರ ಪ್ರಕರದಿಂ . . . ಖಗದಿಂ ಮೃಗದಿಂ ನಗದಿಂದೆ ಕಂದರಂ (ಕಾ'ಕಂ. ೨–೩೬). 'ಖಚರ' ಪರಾ. [ ಸಂ. ]

**ನಭಶ್ಚರಪತಿ** (ನಾ). ಆಕಾಶದಲ್ಲಿ ವಿ ಮಾ ನ ದ ಲ್ಲಿ ಸಂಚರಿಸುವ ವಿದ್ಯಾಧರರೇ ಮೊದಲಾದವರ ರಾಜ ; ಖೇಚರರಾಜ : ಅನುಕೂಲ ಮಿತ್ರನನುರಕ್ತ ನಾಯಿಕಾನೀಕನನುಗತ ಪ್ರಕೃತಿ ಚಿರಂತನರೆನಿಪ ಚಕ್ರವರ್ತಿಗಳ ನೆಗಟ್ಟು ನೆಗಟ್ತೆ ತನ್ನಭಶ್ಚರಪತಿಯಾ (ಶಾಂತಿಪು. ೨–೩೦).
[ ನಭಶ್ಚರ × ಪತಿ ]

**ನಭಶ್ಚರಾನ್ವಯ** (ನಾ). ಖೇಚರರ ವಂಶ : ನಿಜದಿಂ ಗೂಢಂಗಳ್ ಗುಲ್ಫಜಾನುಗಳ್ ಮಂತ್ರದಂತೆ ರಕ್ತತರಂಗಳ್ ನಿಜಕರಪಾದತಲಂ ಪ್ರಪ್ರಜೆಯಂತೆ ನಭಶ್ಚರಾನ್ವಯಾಂಬರರವಿಯಾ (ಶಾಂತಿಪು. ೩–೪೫).
[ ನಭಶ್ಚರ + ಅನ್ವಯ ]

**ನಭಶ್ಚರೇಂದ್ರ** (ನಾ). = ನಭಶ್ಚರಪತಿ : ನೆಗಟ್ತೆಯೊಳ್ ತೊಡರ್ದಿರೆ ವೃದ್ಧರಾಜ್ಯಮುಮದೇನೆಸೆದತ್ತೋ ನಭಶ್ಚರೇಂದ್ರನಾ (ಆದಿಪು. ೨–೨೪): ವೈರಿಜಯಶ್ರೀ ಸೆಱೆಯಿರೆ ಭೂ ರಿ ಭು ಜಾ ಂ ತ ರ ದೊ ಳಾ ಕೆ ಕಟ್ಟಿದ ಮುಕ್ತಾಹಾರವನೆ ಪೋಲ್ತು ನವಕೇಯೂರಂ ಸೊಗಸಿತು ನಭಶ್ಚರೇಂದ್ರನ ಕೋಳೊಳ್ (ಶಾಂತಿಪು. ೩–೩೫). [ ನಭಶ್ಚರ + ಇಂದ್ರ ]

**ನಭಶ್ಚಲಿ** (ನಾ).=ನಭಶ್ಚರ : ತಾಣಮಂ ತೀವುದೆ ತಡಂ ವಂಹಾವೀರರಿಂ, ಪರ್ವತೋಪಮಧೀರರಿಂ ನಭಶ್ಚಲಿಗಳಿಂ . . . ಲಂಕೆಯನಿದಂ ದಹಿಸದೇ ನಿರ್ವುದೆ ಧರಾತ್ಮಜಾವಲ್ಲಭನ ರೌದ್ರರೋಷಂ ? (ಶ್ರೀರಾಮಾ. ೫೧೪-೩೬೨): [ ಸಂ. ನಭಶ್ಚಲಿನ್ ]

**ನಭಶ್ಚುಂಬಿ** (ನಾ). ಗಗನವನ್ನು ಮುಟ್ಟುವಂಥದು ; ಅತ್ಯಂತ ಎತ್ತರವಾದುದು ; ಗಗನಚುಂಬಿ : ಜನಮನೋಮಂದಿರದ ಸುಸ್ವಪ್ನ ಗೋಪುರದ ಕಲಶಂ ನಭಶ್ಚುಂಬಿಯಾಗದಿರೆ . . . . ಏನಿರ್ದುಮೇನ್ ಅನಾಗರಿಕತಾ ಶ್ರೀ ದಿಟಂ ಮಸಣಮಾ ಪತ್ತನಮಯೋಧ್ಯೆ ತಾನಾದೊಡಂ! (ಶ್ರೀರಾಮಾ. ೦೭೫-೬೨೭). [ ಸಂ. ನಭಶ್ಚುಂಬಿನ್ ]

**ನಭಸ** (ಗು). ೧. ಮಂಜುಮುಸುಕಿದ; ಮಸುಕಾದ. (ನಾ). ೨. ಆಕಾಶ; ಆಗಸ ; ಬಾಂದಳ. ೩. ಮಳೆಗಾಲ. ೪. ಸಾಗರ ; ಸಮುದ್ರ ; ಕಡಲು. [ ಸಂ. ]

**ನಭಸಂಗಮ** (ನಾ). ಆಕಾಶದಲ್ಲಿ ಸಂಚರಿಸುವುದು ; ಖಗ ; ಪಕ್ಷಿ : "ಖಗಃ, ವಿಹಂಗಃ, ವಿಹಗಃ, ವಿಹಂಗಮಃ . . . ನಭಸಂಗಮಃ–೧೭ ಸಾಮಾನ್ಯವಾಗಿ ನಾನಾ ಬಗೆ ಪಕ್ಷಿಗಳೆಲ್ಲಕ್ಕೂ ಹೆಸರುಗಳು" (ಸಿದ್ಧಾಂತಿ. ೧೪೨). [ ಸಂ. ]

**ನಭಸ್ಥಲ, ನಭಸ್ಥಳ** (ನಾ). ೧. ಬಾಂದಳ ; ಆಕಾಶಭಾಗ ; ಗಗನತಳ : ವಿಸ್ತೀರ್ಣಮೆನಿಪ ನೀಲಪ್ರಸ್ತರದೊಳ್ ಮುನಿಪನಿರ್ದನಪಗತ ಜೀಮೂತ ಸ್ತೋಮಮಪಾಗಿ ವಿಮಳನಭಸ್ಥಲ [ಪಾಠಾಂ. ಳ]ದೊಳ್ ತೊಳಪ ಚಂದ್ರ ನಂದದಿನಾಗಳ್ (ಚಂದ್ರಪ್ರ. ೩-೨) ; ಬಲದೇವಂ ಬರೆ ಕಂಡು ತದ್ವೃಷಭ ಸೇನೋರ್ವೀಶನಿತ್ರಿತ್ರಲಿತ್ರಲೆನುತ್ತುಂ ಪರಿತಂದು ತಾಗಿ ಕಡಿದಂ ಕೂರಂಬಿನಾಸಾರಮಂ . . . ನಭಸ್ಥಲಮೆತ್ತಲ್ ದೆಸೆಯೆತ್ತಲೆಂದೆನಿಸೆ ದಾಣವ್ರಾತಘಾತಂ ತಮಂ (ಮಹಾನೇ. ೦೪-೩೬). ೨. ಶಿವನ ಒಂದು ಹೆಸರು. **ನಭಸ್ಥಳ** : ೧. ತಳರೆ ಮಹೀರಜದಿಂ ಘನವಿಳಾಸ ಗಜಘಟೆ ಯಿನವನಿಯಂ ನಭಕೆ ನಭಸ್ಥಳಮಂ ನೆಲಕ್ಕೆ ತಂದಂತಳುಂಬಮಾದುದು ತದೀಯ ಚತುರಂಗಬಳಂ (ಶಾಂತಿಪು. ೧೦-೧೪೬) ; ಶರನಿಕರಂ ಕರಂ ಬಿಡದೆ ಪಾಟಿ ನಭಸ್ಥಳದೊಳ್ ನಿರಂತರಂ ಬಟಿನೆಟಲಾಯ್ತು ಮುನ್ನಮದಬಿಂದ . . . ರಣಾಗ್ರಭೂತಳಂ (ಬಂಹರಿ. ೦೧-೧೦೯) ; ಮುಸುಕಿ ನಭಸ್ಥಳಂ ನೆಟಿಯೆ ಕೀವ ದಿಶಾತತಿಯರ್ಕಮಂಡಲಂ ಮಸುಳೆ . . . ಕೀವಿದುದಾ ಬಲಪಾದಘಾತದಿಂ ಪಸರಿಪ ಧೂಳಿ (ಮಹಾನೇ. ೦೦-೭೫). [ ಸಂ. ]

**ನಭಸ್ಥಳ** 'ನಭಸ್ಥಲ' ನೋ.

**ನಭಸ್ಫಟಿಕ** (ನಾ). ಪಾರದರ್ಶಕವಾದ ಸ್ಫಟಿಕ ; ಗಗನಸ್ಫಟಿಕ : ಅದಱಿಂ ದೊಳಗೆ ನಭಸ್ಫಟಿಕದ ವೇದಿವಿರಾಜಮಾನ ಮರಕತ ಮಾಣಿಕ್ಯದ ಗೋಪುರಂಗಳಮಱಗ್ರದೊಳೆಂ ಪೂರ್ವೋಕ್ತ ರಚನೆಗಳ್ ಪುದಿದಿರ್ಕುಂ (ಮಹಾನೇ. ೧೫-೬೭): ಮಕರತೋರಣಾದ್ಯಲಂಕಾರಗಳಿಂದಲೂ ದ್ವಾರಸ್ಥಿತ ಶಂಖಾದಿ ನವನಿಧಿಗಳಂ ರಕ್ಷಿಸುತ್ತಿರುವ ದೇವರ್ಕಳಿಂದಲೂ ಪೊಳೆಯುತ್ತಿರುವ ನಭಸ್ಫಟಿಕಮಯ ಪ್ರಾಕಾರವಂ ನಿರ್ಮಿಸೆಂದಾಜ್ಞಾಪಿಸಿದನು (ಪುರುಚ ೧೨೪). [ ಸಂ. ]

**ನಭಸ್ಯ** (ನಾ). ಚಾಂದ್ರಮಾನ ವರ್ಷದ ಆರನೆಯ ತಿಂಗಳಿನ ಹೆಸರು ; ಭಾದ್ರಪದಮಾಸ : "ಭಾದ್ರಪದಮಾಸಮಂ ನಭಸ್ಯವೆಂಬುದು" (ಹಲಾಯು. ೧೯-೧೧೪): "ನಭಸ್ಯಃ, ಪ್ರೌಷ್ಠಪದಃ, ಭಾದ್ರಃ, ಭಾದ್ರಪದಃ–೪ ಭಾದ್ರಪದಮಾಸದ ಹೆಸರುಗಳು" (ಸಿದ್ಧಾಂತಿ. ೩೮). [ ಸಂ. ]

**ನಭಸ್ಸು** (ನಾ). ಆಕಾಶ ; ಆಗಸ ; ಬಾಂದಳ : "ತಾರಕಿತಂ–ನಭಸ್ಸು" (ಕಾಳಕ್ಕ. ೬೮); ಪಯಸ್ಸು, ನಭಸ್ಸು, ರಜಸ್ಸು (ಶಬ್ದಾನು. ೩೯ ಪ್ರಯೋ). [ ಸಂ. ನಭಸ್ ]

**ನಭಿ** (ನಾ). ಚಕ್ರ : "ಗಾಲಿ" (ಗಂಗಾಮ. ೧೬೮). [ ಸಂ. ]

**ನಭೋಂಗ** (ನಾ). ಮೋಡದಂತೆ ಶರೀರವುಳ್ಳವನು ; ನೀಲವರ್ಣ : ವಿಷ್ಣು : ಜಯತು ಜನಾರ್ದನ ಜಯ ಮುರಮರ್ದನ ಜಯಶ್ರೀ ವರಾಂಗ ನಭೋಂಗ (ಕಕಸಾಂ. ೬೯-೨೨). [ ಸಂ. ]

**ನಭೋಂಗಣ** (ನಾ).=ನಭಸ್ಥಲ ೧ : ದೊಣೆಗಳಿನಾರ್ಚುವ ಕಿರುವಾಯ್ಗೊಣರ್ಚೆ ತೆಗೆನೆಟಿವ ಬೇಗಮಂ ಕಾಣದೆ ಕೂರ್ಗಣೆಗಳ ಪಂದರನೆ ನಭೋಂಗಣದೊಳ್ ಕಂಡತ್ತು ದೇವಗಣವಿಮಸುತನಾ (ಜಂಜಧಾ. ೧೨-೧೮೪) : ಇಂದ್ರದಿಗ್ದೇವಿ ನವಾರ್ಕಮಂಡಲಮನಾಂತಿರೆ ತತ್ಪ್ರಥೆಯುಂ ನಭೋಂಗಣ ಶ್ರೀಷಧುವೊಂದೆ ಕಾಲದೊಳೆ ತಾಳ್ದಿ ವಿರಾಜಿಸುವೊಂದು ಮಾಟ್ಕೆಯಿಂ (ಜಗವಿ. ೨-೮೭). [ ಸಂ. ]

**ನಭೋಗ** (ನಾ). ಆಕಾಶದಲ್ಲಿ ಸಂಚರಿಸುವವನು ; ದೇವತೆ ; ಸುರ ; ಅಮರ : ಮಂಜುಮುಹಿಮಾಸ್ಪದಂ ಚಾರುವೃತ್ತಂ ಕಲಾಪುಂಜಂ ಸದಾ ನಭೋಗಂ (ಕೃಮಿಥಾ. ೨೮-೬೨) ; ಸದಾನ ಭೋಗಂ . . . ಸದಾ ನಭೋಗಂ (ಚಂದ್ರಸ. ೪೪). 'ನಭೋಗಪುರ' ಪರಾ. [ ಸಂ. ]

**ನಭೋಗತಿ** (ನಾ). ೧. ಗಗನದಲ್ಲಿ ಸಂಚರಿಸುವಿಕೆ ; ಆಕಾಶಗಮನ : ನಭೋಗತಿಯುಂ ಸಾಧಿಸಲಕ್ಕು ಬೆಟ್ಟಗಳ ಚೂರ್ಣಂ ಮಾಡಲಕ್ಕೀಕ್ಷಿಸಲ್ ಸತಿಯಾ ಚಿತ್ತವಭೇದ್ಯವೈ (ಸೋಮಣ. ೮೦). ೨. ಆಕಾಶದಲ್ಲಿ ಸಂಚರಿಸುವವನು ; ಆಕಾಶಗಾಮಿ ; ಖೇಚರ : ಬೇಗಮುಸಿರ್ ಮುಟ್ಟಗವರೆ ಮೇಗುಸಿಗೊಂಡೊಮ್ಮೆಗೊಮ್ಮೆಗಗಿವೊ[ಮ]ಟ್ಟದೆ ಬಂದಾಗಳೆಱಗಿರ್ದನಂದು ನಭೋಗತಿಯೊರ್ದಂ ನೃಪೇಂದ್ರಪದಸರಸಿಜದೊಳ್ (ಶಾಂತಿಪು. ೯-೮೩). ೩. ಹಕ್ಕಿ ; ಪಕ್ಷಿ. [ ಸಂ. ]

**ನಭೋಗಪುರ** (ನಾ). ಆಕಾಶದಲ್ಲಿ ಸಂಚರಿಸುವ ಪಟ್ಟಣ ; ತ್ರಿಪುರ : ಹರಿಯಿಂದಂ ಹರನಿಂದೆ ಶಕ್ರಧರನಿಂ ನೀರಿಂದೆ ಪಾಳಾದ ದುಷ್ಕರ ಲಂಕಾಪುರಮಂ ನಭೋಗಪುರಮಂ . . . ಸುಸ್ಥಿರೆ ಹಮ್ಮಾರಪುರಕ್ಕೆ ತೋಡಿಸಲೊಡಂ ಮೂಢೋಕ್ತಿ ಮಾಲೋಕದೊಳ್ (ಹಮ್ಮೀರ. ೦-೬೪). [ ನಭೋಗ + ಪುರ೭ ]

**ನಭೋಗಮನ** (ನಾ). ೧.=ನಭೋಗತಿ ೧ : ನಾರದಂ ನಭೋಗಮನ [ಪಾಠಾಂ. ಮಾರ್ಗ]ದಿಂದಿಟಿದು ಬಂದು ಜನಾರ್ದನನ ವದನಾರವಿಂದಮಂ ನೋಟ್ಪುದುಂ (ಮಹಾನೇ. ೭-೧೪೧೩). ೨. = ನಭೋಮಾರ್ಗ : ಆಗಳಾ ದೇಶಪುರುಷಂ ಬಂದನೆಂದು ಅಷ್ಟಶೋಭೆಗೆಯ್ದಿದಿಗೊಳೆ ಮತ್ತಮಂತೆ ನಭೋಗಮನದೊಳು ಬರೆ (ಕಾವ್ಯಂಕು. ೬೭). [ ಸಂ. ]

**ನಭೋಜನ** (ನಾ). ಆಕಾಶದಲ್ಲಿರುವವರು ; ದೇವತೆಗಳು : ಎಲ್ಲರುಂ ಭೋಗಿಗಳ್ಪಾತಾಳಗತರೆನಿಸರೆಲ್ಲರುಂ ವಿದ್ಯಾಧರರ್ನಭೋಜನರೆನಿಸರ್ (ಕೃಮಿಥಾ. ೨-೧೦). [ ಸಂ. ]

**ನಭೋದೇಶ** (ನಾ).=ನಭಸ್ಥಲ ೧: ತುಂಬಿದತ್ತಶರೀರ ಗಂಧರ್ವಗಾಯನಂ ನೀರವನಿಶಾನಭೋದೇಶಮಂ (ಶ್ರೀರಾಮಾ. ೦೬-೪೨೫). [ ಸಂ. ]

**ನಭೋನಗರ** (ನಾ).=ನಭೋಗಪುರ. 'ನಭೋನಗರ ಹರಣ' ಹರಾ. [ ಸಂ. ]

**ನಭೋನಗರಹರಣ** (ನಾ). (ಆಕಾಶದಲ್ಲಿದ್ದ) ತ್ರಿಪುರಗಳನ್ನು ನಾಶಗೊಳಿಸಿದವನು ; ತ್ರಿಪುರಾರಿ ; ಶಿವ : ಜಯಜಯ ನಭೋನಗರಹರಣ ಪಟುನಿಟಲಾಕ್ಷ ಜಯಜಯ ಜಲಂಧರಮದಾಂಧಗಜಹರ್ಯಕ್ಷ (ರಾಜಶೇ. ೧೪-೧೬೯ ರಗಳೆ). [ ನಭೋನಗರ + ಹರಣ೭ ]

**ನಭೋನಿನದ** (ನಾ). ಆಕಾಶದಿಂದ ಹೊಮ್ಮುವ ಮಾತು ; ಆಕಾಶವಾಣಿ ; ಅಶರೀರವಾಣಿ : ಇಲ್ಲಿ ನಿಲ್ಲರ್ಜುನ ತಪೋವನಕಿಲ್ಲಿ ನೆಲೆ ಶ್ರುತಿಯುವತಿ ಸೂಸುವ ಚೆಲ್ಲಗಂಗಳಮೊನೆಗೆ ಮಾಸಲುಗುಡದ ಮೈಸಿರಿಯ . . . ಶಿವನ ಕ್ಷೇತ್ರವಿದೆಯೆಂದುದು ನಭೋನಿನದ (ಕುಮಾರವ್ಯಾ. ೪-೪೦). [ ಸಂ. ]

**ನಭೋನೌಕೆ** (ನಾ). ಅಂತರಿಕ್ಷ ವಿಮಾನ; ಪುಷ್ಪಕ ವಿಮಾನ: ಮತ್ತ ಮತ್ತಪ್ಪಳಿಸಿದನು ಆ ನಭೋನೌಕೆ ವಕ್ಷಸಂಜಾತತರುಖಂಡಖಾವಾತಗರ್ತಕ್ಕೆ ಸಿಲ್ಕಿ ತಿರ್ರನೆ ಪುರ್ಬುಶಿರಗಂ ತಿರುಗುವಂತೆ (ಶ್ರೀರಾಮಾ. ೯೨೫-೩೬೩). [ಸಂ. ನಭೋನೌಕಾ]

**ನಭೋಭಾಗ** (ನಾ). = ನಭಸ್ಥಲ: ೧ ಅಂತು ನಭೋಭಾಗದಿಂ ಭೂಮಿ ಭಾಗಕ್ಕಿಳಿದು ತನ್ನ ಮುಂದೆ ನಿಂದರವಿಂದಬಾಂಧವನಂ ನೋಡಿ (ಕಂಕಥಾ. ೬-೧೦ ವ); ಇಂದ್ರಂ ಬರ್ಪಂತೆ ಬಂದು ಕಂಡೊಡವರೆ ನಭೋಭಾಗದೊಳ್ ಪಯಣಂಬಂದು ಚರಿಪಾಪುರಮನೆಯ್ದಿ ಪುರಬಹಿಃಗೆಯೊಳ್ ಬೀಡಂ ಬಿಟ್ಟರ್ದು (ಬಂಶರಿ. ೪-೧೦ ವ). [ಸಂ.]

**ನಭೋಮಂಡಲ** (ನಾ). = ನಭಸ್ಥಲ ೧: ಆ ನಾರದಂ ನಭೋಮಂಡಲದಿಂ ಸಭಾಮಂಡಲಕ್ಕವತರಿಸೆ (ಪಂಪಭಾ. ೩-೧೯ ವ); ಕೊಂಡುಬಂದೆಳೆನೀರ್ಗಳಂ ಸುರಿಯಲುಬಿ ನಭೋಮಂಡಲವನಪ್ಪಳಿಸೆ (ಕೃಮಿಳಾ. ೧೧-೩೮); ಇನ್ನು ಬರಲಿರುವ ಆರನೆಯ ಕಾಲವಂತೂ ಹಿಂಸೆಯ ಪತಾಕೆಯನ್ನು ನಭೋ ಮಂಡಲಕ್ಕೆ ಹಾರಿಸುವುದೆಂದು ಸರ್ವಜ್ಞರ ವಾಣಿ (ಭಾರಬ. ೧೭೩). [ಸಂ.]

**ನಭೋಮಣಿ** (ನಾ). ಸೂರ್ಯ; ಗಗನಮಣಿ; ಭಾನು: ಆ ಮಣಿ ಮೆಟ್ಟಿದುದು ತರುಣನಭೋಮಣಿ ನಿಜಸುಪುತಾಪವಿಜಿತಂ ಪರಿತಂದಾ ಮಹಿತರಾಜಶೇಖರ ಧೂವಿಜಾಶ್ವರನಂಘ್ರಿಕಮಳಮಂ ಸೇವಿಪವೋಲ್ (ಹರಿಹರ. ೫-೨೬). [ಸಂ.]

**ನಭೋಮಾರ್ಗ** (ನಾ). ಮೇಘಮಾರ್ಗ; ಆಕಾಶ: ಭೋಗಭೂಮಿಜರ ಕನ್ಯಾಗಳ್ ನಭೋಮಾರ್ಗಪರ್ಯಾಟನಂ ಶಿಕ್ಷಿಸಿ ಪೋದರಾತ್ಮಸಿಯಮಕ್ಕ ತ್ತಾರ್ಯರಿತ್ತನ್ನೆಗಂ (ಶಾಂತಿಪು. ೬-೯); ತಾನೈರಾವತಸ್ಕಂಧದೇಶನಿಷಣ್ಣಂ ಸುರರಾಜನಾತ್ಮಶಚೀದೇವೀ ಸಂಯುತಂ... ಮೃದುಮೃದಂಗಧ್ವಾನಮುಂ ಗಾಯಕೀಜನತತುಮಂಗಳಗೇಯಮುಮಂ ಸೊಗಯಿಸಲ್ ಬಂದಂ ನಭೋ ಮಾರ್ಗದೊಳ್ (ಮುಹಾನೇ. ೮-೮೮). [ಸಂ.]

**ನಭೋಮಾಸ** (ನಾ). ಚಾಂದ್ರಮಾನದ ಪ್ರಕಾರ ಬರುವ ಶ್ರಾವಣ ಮಾಸ: "ಮಧು ಮಾಧವಂ ಶುಕ್ರಮಾ ಶುಚಿ ನಭೋಮಾಸಯುದು ನಭಸ್ಯಮಿಷಂವೂರ್ಜಂ ಸಹಂದದಮುಂದದು ಸ ಹ ಸ್ಯ ಂ ತಪಮುದಾ ತಪಸ್ಯಾಖ್ಯಮೆನೆ ಚೈತ್ರಾದಿ ನಾಮಮಂಕ್ಕುಂ" (ಶಬ್ದಗಾ. ೨೦-೧೧). [ಸಂ.]

**ನಭೋಯಾನ** (ನಾ). ಆಕಾಶಗಮನ; ಬಾನಿನಲ್ಲಿ ಹೋಗುವುದು: ಮತ್ತಂ ನಭೋಯಾನದೊಳ್ ಕಿಡಿದು ಪೊಬ್ಬುಗೆಯುಂ . . . ಧರ್ಮೋಪದೇಶಂಗೆಯುತ್ತುಮುತ್ತಮತೀರ್ಥೇಶ್ವರಂ ವಿಹಾರಿಸೆ (ಶಾಂತಿಪು. ೧೨-೨೩ ವ); ನಭೋಯಾನದ ಕಾಲಶಂಬರ ಖಗೇಂದ್ರಂ ಬಂದು (ಮುಹಾನೇ. ೮-೧೭). [ಸಂ.]

**ನಭೋವಚನ** (ನಾ). = ನಭೋನಿನದ: ಮ ರು ಳೆ ನೀ ಕೌಂತೇಯ ಮಾದ್ರೇಯರನು ನೋಡುವುದಿತ್ತ ನನಗುತ್ತರವನಿತ್ತುದಕವನು ಕುಡಿ ಯೆಂದುದು ನಭೋವಚನ (ಕುಭಾಅ. ೨೩-೨೫); ನೊಂದ ನೋವೆಲ್ಲಡಗಿ ರಣದಲಿ ಹೊಂದಿದವರೇಳುವರು ಮಾರುತಿ ಯಿಂದ ಚಿಂತಿಸದೇಡ ಕೇಳೆಂದುದು ನಭೋವಚನ (ಜೈಶಿರಾ. ೨೯-೨೨). [ಸಂ.]

**ನಭೋವಳಯ** (ನಾ). = ನಭಸ್ಥಲ ೧: ಬಂದು ಭವತ್ಪುರಾಗ್ರಿಮ ನಭೋವಳಯಾಂತರದಲ್ಲಿ ನಿಂದು ಪೋಗೆಂದೊಡೆ ಬಂದೆನಾಂ (ಚಂದ್ರಪ್ರ. ೬-೨೦). [ಸಂ. ನಭೋವಲಯ]

**ನಭೋವಾಣಿ** (ನಾ). ಅಶರೀರವಾಣಿ. [ಸಂ.]

**ನಭೋವೀಥಿ** (ನಾ). = ನಭೋಮಾರ್ಗ: ನಭೋವೀಥಿ[ಶಾಕಾಂ. ೧] ಯೊಳುಮಾಕಾಂತಯು ಮಹೇಶ್ವರನು ಮಾನಿತೋನ್ನತದಿವ್ಯರತ್ನವಿಮಾನ ರೂಢಿತಯಾನರಾಗಿ ಸುಮಾನದಿಂ ಗಮನಿಸುತ (ಬಸ. ೫೦-೨). [ಸಂ.]

**ನಮ** (ನಾ). ವಂದನೆ; ನಮಸ್ಕಾರ: "ನಮಂ [ಶಾಕಾಂ. ೩೦] ವಂದನಂ ಪೊಂಗಿ ಪೊಡಮಡುಹ" (ಮಂಗರಾ. ೧೩೬-೩೯); ನಮ ಸ್ವಸ್ತಿ (ಎಕ. II, ೨೩-೧ : 700); ಎಲ್ಲರಿಂಗವಿಗಾಗ ನಮೊ-ಬಂಧುಗಳೆ, ಭಾಗಿಗಳೆ . . . ಕೊಳ್ಳಿರೀ ನಮುವನೆನು (ಮಂಕುಳ. ೯೨೨). [ಸಂ. ನಮಸ್]

**ನಮಃಶಿವಾಯ** (ನಾ). ೧. ಶಿವನಿಗೆ ನಮಸ್ಕಾರ; P ವೀರಶೈವರು ಭಜನೆಯಂತೆ ಈ ಶಬ್ದಗಳನ್ನು ಉಚ್ಚರಿಸುತ್ತಾರೆ. 'ನಮಃಶಿವಾಯ' ಪಂಚಾಕ್ಷರಿಮಂತ್ರವೆಂದು, 'ಓಂ ನಮಃಶಿವಾಯ' ಎಂಬುದು ಷಡ ಕ್ಷರಿಮಂತ್ರವೆಂದು ತಿಳಿಯಲಾಗಿದೆ: ನಮಃಶಿವಾಯ ನಮಃ ಶಿವಾಯ ಶರಣೆಂದಿತ್ತು ಲಲಾಟಲಿಖಿತ ಬರೆದ ಬರೆಹ ಪಲ್ಲಟವ ಮಾಡಬಾರದು (ಬಸವ. ೮೬). ಶಿಥಿಲಾಕ್ಷರಂಗಳಿಂ ನಮಃಶಿವಾಯ ನಮಃಶಿವಾಯಯೆನುತ್ತೆ (ಸಂಬಿರ. ೬-೨೭); ಎನ್ನ ರೇಚಕವೇ ನಮಃಶಿವಾಯ ನಮಃಶಿವಾಯ ನಮಃ ಶಿವಾಯ ಎನ್ನುತಿಪ್ಪುದು ನೋಡಾ (ಸಿದ್ಧೇವ. ೬೨-೨೦೮); ನಮಃ ಶಿವಾಯಾದ್ರಿಸುತಾಪ್ರಿಯಾಯ ತೇ (ವೃಷವಿ. ೬-೧೦). ೨. ಶಿವನಿಗೆ ಅರ್ಪಿತವಾದುದು; ಶಿವಾರ್ಪಣ: ಲೋಗರೇನನೆಂದೊಡಂ ನಮಃ ಶಿವಾಯವಾಗಿ ತನಗೆ ತಾಗಿದಚ್ಚಪರಿಮಳಂ ನಮಃಶಿವಾಯವಾಗೆ (ನಮುರ. ದೀ. ೧೯೮-೧೩). [P ಸಂಸ್ಕೃತದಲ್ಲಿ ಇವು ಭಿನ್ನಪದಗಳು]

**ನಮಃಶಿವಾಯಮಿಡಿ** (ಕ್ರಿ). ನಮಃಶಿವಾಯ ಎಂಬ ಮಂತ್ರವನ್ನು ಬಿಡದೆ ಜಪಿಸು: ಇಂತು ಪಂಚವರ್ಣದಿಂ ಶರೀರವಾಗಿ ಬೀಗಿ ಬೆಳೆದು ಸಂತತಂ ನಮಃಶಿವಾಯಮಿಡಿದು ತೀವಿ ತುಳುಕಿ ತಳೆದು (ಶಮುರ. ದೀ. ೧೯೮-೧೦). [ನಮಃಶಿವಾಯ + ಮಿಡಿ$_1$]

**ನಮಕ್‌ಹರಾಮ್** 'ನಮ್ಕ್‌ಹರಾಮ' ನೋ.

**ನಮಕ** (ನಾ). ರುದ್ರವೆಂಬ ಮಂತ್ರ; P ಯಜುರ್ವೇದದ ಒಂದು ಭಾಗ. ನಮ ಎಂದು ಮುಗಿಯುವ ರುದ್ರಮಂತ್ರ: ಚಮಕದಿಂ ದಖಿಲಾಧಿಪತ್ಯವ ನಮಕದಿಂದಖಿಲಾತ್ಮಭಾವವನಮರ ಮನುಜ ಭುಜಂಗ ಮುಖದೊಳ್ಪೆತ್ತರಿಸುತಿರಲು (ವಿವೇಶ. ೧೨-೯೯); ಪರಮಭಕ್ತಿಲಿ ಹಿಡಿದು ಗದ್ದುಗೆ ಮೇಲೆ ಕುಳ್ಳಿರಿಸಿ ನಮಕಚಮಕಗಳಿಂದ . . . ಸ್ವಾಮಿಗಭಿಷೇಕವನು ಮಾಡಿಸಿ (ಕೊಲ್ಲಮಾ. ೬೦-೪). [ಸಂ.]

**ನಮಕಾನುವಾಕ** (ನಾ). ನಮಃ ಶಬ್ದದ ಆವೃತ್ತಿಯಿಂದ ಕೂಡಿದ ಯಜುರ್ವೇದದ ಒಂದು ಭಾಗ; ರುದ್ರಾಧ್ಯಾಯ: ವೇದಾಂತ ವಾಕ್ಯಗಳ ನಮಕಾನುವಾಕಗಳ . . . ನೀನುತ್ಕ್ರಮಿಸೆ ಸಾಧನವೂ ಮುಕ್ತಿಗದು (ಮಂಕುಳ. ೯೭೦). [ನಮಕ + ಅನುವಾಕ]

**ನಮತ** (ನಾ). ಒಡೆಯ; ಯಜಮಾನ: ನಮತಂ ಚಾತುರ್ವರ್ಗಮಂ ಸಮರಕ್ಕೆನುವಾಗಲೊಡ್ಡಿ ಸೇನೆ ಮುರರಿಪು ದೇವ ಮಹಾಪ್ರಸಾದ ಮೆನುತುಂ . . . ಆಕರ್ಷಿಸಿದಂ (ಮುಹಾನೇ. ೧೨-೧೬). [ಸಂ.]

**ನಮನ** (ನಾ). ೧. ಬಾಗಿಸುವಿಕೆ; ಮಣಿಸುವಿಕೆ. ೨. ಬಾಗು ವುದು; ಮಣಿಯುವುದು; ನಮಸ್ಕರಿಸುವುದು; ನಮಸ್ಕಾರ; ವಂದನೆ: "ಬಳ್ಕು – ನಮನೇ" (ಕವಿರಾ); "ಮೊಟ್ಗು – ನಮನೇ" (ಶಮುರಾ); ದಾರಿದ್ರ್ಯಲಕ್ಷ್ಮಿಯೆ ನೀ ಕೊಟ್ಟ ಅಂಜನವಮೃತ ಕೋಟಿ ಲಕ್ಷ ನಮನ ನಾ ಕಂಡೆನೆಲ್ಲರನಾರು ಕಾಣರು ನನ್ನ ಪರಿಚಯವಿದ್ದರು ಮುನ್ನ (ಅಂಜಾಪ. ೧೧೩-೩೩); ಈ ಗುರುವೃಂದಕ್ಕೆ ಅನಂತ ನ ಮ ನ ಗ ಳು (ದ್ರಾವಿಪಿ. XII ಮೊದಲ ಮಾತು); ಆ ಮರದ ಬದಿಗೊಮ್ಮೆ ಸುಳಿದೆ ಯಾದೊಡೆ, ಪಥಿಕ! ಹೇ! ದೇವಿ! ನಿನಗೊಂದು ನಮನವನ್ನು! (ಚಂತನ. ೧೨-೨೦). ೩. [ಭೌತವಿ] ಬಾಗುವಿಕೆ; ಬಾಗುವ ಕ್ರಿಯೆ; ವಕ್ರ ನಿಯೋಜನ: ಬೆಳಕಿನ ಅಥವಾ ಇತರ ಅಲೆಗಳು ತಡೆಗಳನ್ನು ಸುತ್ತಿ ಕೊಂಡು ಬಂದು ಪ್ರತಿಯೋಗ ಹೊಂದುವುದರಿಂದ ಉಂಟಾದ ಘಟನೆಗೆ ನಮನ (Diffraction) ವೆಂದು ಹೆಸರು (ಭೌತವಿ. ೨೦೦). [ಸಂ.]

**ನಮಲು₁, ನೆಮರು₂** (ಕ್ರಿ). ೧. ದವಡೆಹಲ್ಲುಗಳಿಂದ ಆಹಾರವನ್ನು ನುಣ್ಣಗೆ, ಸಣ್ಣಗೆ ಮಾಡಿ ತಿನ್ನು; ಅಗಿದಗಿದು ತಿನ್ನು; ಅಗಿ; ಚರ್ವಣಮಾಡು; ನುರಿಸು: ರಕ್ಕಸಿಯು ಮಾನುಗಳನ್ನು ನಮಲುತ್ತ ಅವಾಗಲಾದರೊಮ್ಮೆ ಸುರೆಯನ್ನು ಸ್ವಲ್ಪ ಸ್ವಲ್ಪ ಕುಡಿಯುತ್ತಿದ್ದಳು (ಶ್ರೀರಾಪ. ೧೧೭). ೨. ಮೆಲುಕುಹಾಕು; ಮೆಲುಕಾಡಿಸು: (+). **ನೆಮರು₂**: ೧. ನೆಮರಿಕೊಂಡು ಹೋಗುವವ ಬವರಕ್ಕೆ ಬಂದಾನೆ? (ಗಾದೆ). [ದೇ. ॥ ತುಳು. ನವುಂತು, ನವುಂಪು, ನೌಂತು, ನೌಂಪು; ತೆಲು. ನವಲು, ನವುಲು, ನವ್ಲು, ನೆಮರು]

**ನಮಲು₂, ನೆಮರು** (ನಾ). ೧. ಅಗಿಯುವಿಕೆ; ತಿನ್ನುವಿಕೆ. 'ನವಲುಗರೆ' ಪರಾ. ೨. ಮೆಲುಕುಹಾಕುವಿಕೆ; ಮೆಲುಕಾಡಿಸುವಿಕೆ. ನೆಮರು.

ನಮಲು ಹಾಕು, ನೆಮರು ಹಾಕು = ಮೆಲುಕುಹಾಕು; ಮೆಲುಕಾಡಿಸು: (+); ದನಕರುಗಳು ನೆಮರುಹಾಕುವುದು ನಿನ್ನೆ ಮೊನ್ನೆ ಕಲಿತ ಅಭ್ಯಾಸವಲ್ಲ (ಪ್ರಾಕಪ್ರ. ೨೫). [<ನಮಲು₁]

**ನಮಲುಗರೆ** (ಕ್ರಿ). ಕಚ್ಚಿ ತಿನ್ನು; ಅಗಿದು ತಿನ್ನು: ಮಾನುಗಳನ್ನು ನಮಲುಗರೆಯುತ್ತ ಅವ್ವ, ಅಯೋಧ್ಯೆಗೆ ಹೋಗುವುದು ಯಾವಾಗ? ಎಂದನು (ಶ್ರೀರಾಪ. ೧೧೭). [ನಮಲು₂ + ಕರೆ ?]

**ನಮಶ್ಶಿವಾಯ** (ನಾ). = ನಮಃಶಿವಾಯ: ನಮಶಿವಯ ನಮಶ್ಶಿವಾಯಂ ನಮಶಿವಯಂ ನಮಶ್ಶಿವಾಯ ನಮಶಿವಯೆನುತಂ ಮಮತೆಯಲಿ ನೆನೆವುದೆಂದೀಕ್ರಮದಿಂದುಪದೇಶವೆಳ್ದ ಸಾನಂದೇಶಂ (ನನ್ನಚ. ೫-೧೫೫). [ಸಂ.]

**ನಮಸಿತ** (ಗು). ೧. ಪೂಜಿಸಿದ; ಸಮ್ಮಾನಿತ; ನಮಸ್ಕರಿಸಿದ. (ನಾ). ೨. ನಮಸ್ಕರಿಸಿದಂದಂ: "ಅರ್ಹಿತಂ, ನಮಸ್ಯಿತಂ, ನಮಸಿತಂ, ಅಪಚಾಯಿತಂ, ಅರ್ಚಿತಂ, ಅಪಚಿತಂ – ೬ ಪೂಜಿಸಲ್ಪಟ್ಟದ್ದು, ನಮಸ್ಕರಿಸಲ್ಪಟ್ಟದ್ದು" (ಸಿದ್ಧಾಂತಿ. ೩೦೩). [ಸಂ.]

**ನಮಸ್ಕರಣ** (ನಾ). ನಮಸ್ಕಾರ; ವಂದನೆ. 'ನಮಸ್ಕರಣಂಗೆಯ್' ಪರಾ. [ಸಂ.]

**ನಮಸ್ಕರಣಂಗೆಯ್** (ಕ್ರಿ). ನಮಸ್ಕಾರ ಮಾಡು; ವಂದಿಸು: ಶರಣರು ಕಂಡಾಕ್ಷಣಂ ತನ್ನಮಸ್ಕರಣಂಗೆಯ್ಯದೆ ಪೋದೆನೋ (ವೃಷವಿ. ೩೦-೨೦). [ನಮಸ್ಕರಣ + ಕೆಯ್₁]

**ನಮಸ್ಕರಿಸು** (ಕ್ರಿ). ನಮಸ್ಕಾರ ಮಾಡು; ವಂದಿಸು: ವಿಮಲಸ್ವರೂಪೆಗೆ ಭುವನಸ್ತುತ್ಯೆಗೆ ಯೀ ಶಾಸ್ತ್ರಪ್ರಾರಂಭದಲ್ಲಿ ನಮಸ್ಕರಿಸುವಾತನಪ್ಪೆಂ (ಶಮದ. ೧ ವೃತ್ತಿ, ಪೀಠಿಕೆ): ಧಿಕ್ಕನೆ ಭೂಮಿಯೊಳು ಸಾಷ್ಟಾಂಗವೆರಗಿ ನಮಸ್ಕರಿಸುತಿರಲು (ಬಸಪು. ೯೬-೭೭): ತಾಯಿಗೂ ದ್ರೌಪದಿಗೂ ನಮಸ್ಕರಿಸಿ (ಕುಂಗಾಳ್ಮ. ೨೦). [ನಮಸ್ಕರಣ + –ಇಸು₂]

**ನಮಸ್ಕಾರ** (ನಾ). ೧. (ದೇವರು, ಗುರು ಹಿರಿಯರು ಮೊದಲಾದವರಿಗೆ ಗೌರವವನ್ನು ಸೂಚಿಸುವುದಕ್ಕಾಗಿ) ಬಾಗುವಿಕೆ; ವಂದನೆ; ಪ್ರಣಾಮ: "ಪಾದಗ್ರಹಣಂ, ಅಭಿವಾದನಂ ಈ ೨ ನಮಸ್ಕಾರ ಮಾಡುವುದು" (ನಾಚಿರಾ. ೦೯೯); "ತುಳಿಲೆಜಗು ಮೊಟ್ಟುಗ್ಗ ಮಣಿ ಕುಂಬ ಪೊಡಮಡಿಕೆಯು ನಮಸ್ಕಾರಕೆ ತವೆ ಸಂದ ನಾಮ" (ಶಬ್ದಮಂ. ೩೫); ಒಳ್ಳಿತಪ್ಪ ಮುಹೂರ್ತದೊಳ್ ದೀಕ್ಷೆಯಂ ಕೊಟ್ಟು ಪಂಚಮಹಾವ್ರತಂಗಳನೇಱಿಸಿ ಪಡಿಕಮಣಂ ಪೇಳ್ದು ತದನಂತರವಿಂ ಕಲ್ಪಿಸಿವೆಂದೊಡೆ ನಮಸ್ಕಾರಂಗಳುಮಾಲೋಚನೆಗಳುಂ ನಿಯಮಮುಮನೋದಿದೊಡಲ್ಲದೆ ಪೇಟಲಾಗದೆಂದೊಡೆ (ವಡ್ಡಾರಾ. ೬-೪); ಹಾಗದ ಕೆರಹ ಹೊರಗೆ ಕಳೆದು ದೇಗುಲಕ್ಕೆ ಹೋಗಿ ದೇವರಿಗೆ ನಮಸ್ಕಾರವ ಮಾಡುವನಂತೆ ತನ್ನ ಕೆರಹಿನ ಧ್ಯಾನವಲ್ಲದೆ ದೇವರ ಧ್ಯಾನವಿಲ್ಲಾ (ಬಸವ. ೦೯೬); "ನಮಸ್ಕಾರ" ! ಎಂದೆದ್ದು ನಡೆದಿರೆ ವಿಭೀಷಣಂ. ಮೇಲೆಳ್ದಳನಲೆ (ಶ್ರೀರಾಮಾ. ೫೮೨-೨೦೦); ಗುರುತಿನವರನ್ನು ಕಂಡರೆ . . . ಅವರಿಗೆ ನಮಸ್ಕಾರ ಮಾಡಬೇಕು (ಮುಂಬಯಿ. ೪-೩೪). ೨. ನಮಸ್ಕರಿಸುತ್ತೇನೆ ಎಂದು ಆದರ ಸೂಚಿಸುವುದಕ್ಕಾಗಿ ಹೇಳುವ ಮಾತು: ನಮಸ್ಕಾರ, ಬನ್ನಿ ಕುಳಿತುಕೊಳ್ಳಿ (ರೂಢಿ). ೩. ಗ್ರಂಥಗಳ ಆದಿಯಲ್ಲಿ ಬರುವ ದೇವತಾಪ್ರಾರ್ಥನೆ ಎಂಬ ನಾಂದಿಯಲ್ಲಿ ಒಂದು ವಿಧ,–ಬಗೆ.

ನಮಸ್ಕಾರ ಹಾಕು = ೧. ಪ್ರಣಾಮ ಮಾಡು; ವಂದಿಸು: ದೇವರಿಗೆ ನಮಸ್ಕಾರ ಹಾಕಿ ಬರುತ್ತೇನೆ (ರೂಢಿ). ೨. ವಿದಾಯ ಹೇಳು: ಆತ ಈ ಕೆಲಸಕ್ಕೆ ನಮಸ್ಕಾರ ಹಾಕಿ ಹೊರನಡೆದ (ರೂಢಿ). ನಮಸ್ಕಾರ ಹೊಡೆ = ೧. ನಮಸ್ಕರಿಸು; ವಂದಿಸು: ಅವನು ಅವರನ್ನು ನೋಡಿದಾಗಲೆಲ್ಲಾ ನಮಸ್ಕಾರ ಹೊಡೆದು ತನ್ನ ಬಡ್ತಿಯ ಬಗ್ಗೆ ಕೇಳುತ್ತಾನೆ (ರೂಢಿ). ೨. = ನಮಸ್ಕಾರ ಹಾಕು: ೨: ಕೆಲಸ ಮಾಡಲಾರದೆ ಆ ಕೆಲಸಕ್ಕೆ ನಮಸ್ಕಾರ ಹೊಡೆದ ಆತ (ರೂಢಿ). [ಸಂ.]

**ನಮಸ್ಕಾರಂಗೆಯ್** (ಕ್ರಿ). ನಮಿಸು; ವಂದಿಸು: ಅರಸಂ . . . ದೇವರ್ಗೆ ನಮಸ್ಕಾರಂಗೆಯ್ದು ಋಷಿಯರು ಬಂದಿಸಿ ತನ್ನ ಮನೆಗೆವೋದಂ (ವಡ್ಡಾರಾ. ೩೩-೦೨); ನಾರದಂಗೆ ನಮಸ್ಕಾರಂಗೆಯ್ದು ಪೀಠಾಸನದೊಳಿರಿಸುವುದುಂ (ಮಹಾಪೀ. ೦೦-೯೦ ವ). [ನಮಸ್ಕಾರ + ಕೆಯ್₁]

**ನಮಸ್ಕಾರಮಂತ್ರ** (ನಾ). [ಜೈನ] ಣಮೋ ಅರುಹಂತಾಣಂ ಇತ್ಯಾದಿ ಮಂತ್ರ; ಜೈನಧರ್ಮದ ಪಂಚಗುರುಗಳಿಗೆ ಸಲ್ಲುವ ನಮಸ್ಕಾರ: ಣಮೋ ಅರಹಂತಾಣಂ, ಣಮೋ ಸಿದ್ಧಾಣಂ, ಣಮೋ ಆಯಾರಿಯಾಣಂ, ಣಮೋ ಉವಜ್ಝಾಯಾಣಂ, ಣಮೋ ಲೋಏ ಸಬ್ಬ ಸಾಹೂಣಂ (ಅರ್ಹಂತರಿಗೆ ನಮಸ್ಕಾರ, ಸಿದ್ಧರಿಗೆ ನಮಸ್ಕಾರ, ಆಚಾರ್ಯರಿಗೆ ನಮಸ್ಕಾರ, ಉಪಾಧ್ಯಾಯರಿಗೆ ನಮಸ್ಕಾರ, ಲೋಕದಲ್ಲಿರುವ ಸರ್ವಸಾಧುಗಳಿಗೂ ನಮಸ್ಕಾರ) – ಇದು ಪಂಚ(ಪರಮೇಷ್ಠಿಗಳ)ನಮಸ್ಕಾರ ಮಂತ್ರ . . . ಈ ನಮಸ್ಕಾರಮಂತ್ರ ಜೈನರ ಗಾಯತ್ರಿ ಎನ್ನಬಹುದು (ಅದಿಸಂ. XI ಪೀಠಿಕೆ). [ನಮಸ್ಕಾರ + ಮಂತ್ರ]

**ನಮಸ್ಕಾರಮುದ್ರೆ** (ನಾ). ಪೂಜೆ ಮೊದಲಾದ ಸಂದರ್ಭಗಳಲ್ಲಿ ಮಾಡುವ ಒಂದು ಮುದ್ರೆ; ಹಸ್ತದ ಬೆರಳುಗಳನ್ನು ಹೊಂದಿಸುವ ರೀತಿ: ಗಾಯತ್ರೀಮುದ್ರೆ ಕಾಲಕಂಠಮುದ್ರೆ ಶೂಲಮುದ್ರೆ ನಮಸ್ಕಾರ ಮುದ್ರೆ . . . ಸಂಹಾರಮುದ್ರೆಯೆಂಬಾದಿಯಾಗಿ ಸಕಲಮುದ್ರೋಪಮುದ್ರಾಬಂಧಲಕ್ಷಣಗಳಂ ಗುರುಮುಖದಿಂದಱಿತು (ವಿವೇಕ. ೧೧೩). [ನಮಸ್ಕಾರ + ಮುದ್ರೆ]

**ನಮಸ್ಕಾರಿ** (ನಾ). ಮುಟ್ಟಿದರೆ ಎಲೆಗಳನ್ನು ಮುದುರಿಕೊಳ್ಳುವ ಒಂದು ಬಗೆಯ ಸಸ್ಯ; ಮುಟ್ಟಿದರೆ ಮುನಿ; ಮುಟ್ಟಲ ಮುರುಕ: "ನಮಸ್ಕಾರೀ, ಗಂಧಕಾರೀ, ಸಮಂಗಾ, ಖದಿರಾ – ೪ ಮುಟ್ಟಿದರೇ ಮುನಿವನ ಹೆಸರುಗಳು. ಮುಟ್ಟುಮುಡುಗಿಡ" (ಸಿದ್ಧಾಂತಿ. ೦೯೪). [ಸಂ. ನಮಸ್ಕಾರೀ]

**ನಮಸ್ಕಾರ್ಯ** (ನಾ). ನಮಸ್ಕರಿಸಲು ಯೋಗ್ಯನಾದವನು; ಪೂಜ್ಯ: ಆರ್ಯಮಾರ್ಯರಿಂ . . . ಸಜ್ಜನಂ ಶಿವಕಾರ್ಯಧುರ್ಯರಿಂ ಭೂಜನ ನಮಸ್ಕಾರ್ಯನೆನಿಸಿದ (ಬಸಪು. ೩೨-೨೪). [ಸಂ.]

**ನಮಸ್ಕೃತಿ** (ನಾ). ನಮಸ್ಕಾರ ಮಾಡುವಿಕೆ; ವಂದನೆ: ನಮಸ್ಕೃತಿಗಗ್ರಭಾಗದೊಳ್ ಕೂಡುತುಮಿರ್ಪ ಕೆಯ್ಗಳುಮನಿತ್ತೆ (ಚಂದ್ರಪು. ೧೨-೧೩೩). [ಸಂ.]

**ನಮುಸ್ಕ್ರಿಯಾವಿಧಿ** (ನಾ). ನಮಸ್ಕಾರದ ನಿಯಮ, – ಕಟ್ಟಳೆ: ನಂದೀಶ್ವರಾದ್ಯುದಿತದ್ವೀಪ ನಮುಸ್ಕ್ರಿಯಾವಿಧಿಗಳು ನೀಂ ಮಾಡು ದೇವಾಧಿಪಾ (ಶಾಂತಿಪು. ೭-೨೫). [ಸಂ.]

**ನಮಸ್ತೇ** (ನಾ). ೧. ನಿನಗೆ ನಮಸ್ಕಾರ : ಶ್ರೀಮದಜಿತಭಟ್ಟಾರಕಜಿನ ನಮಸ್ತೇ ನಮಸ್ತೇ (ಅಜಿಪು. ೪-೭೯ ಗದ್ಯ); ಭವಿತನವ ಕಳೆದು ಭಸ್ಮನ ಮಾಡಿ . . . ತ್ರಿವಿಧ ಸುಖಸಮರತಿಯನವಿರತಂ ದಯೆಗೆಯ್ದು ಧವಗೇಡಿ ಯೆನಿಸದವರ ಅವಿರಳನೇ ಗುರು ನಮಸ್ತೇ (ಬ್ಯಲಾರ. ೦೮೮-೧) ;ಅನಿಟ್ಟನ್ನು ಬೆಕ್ಕೆ ಮುಗಿದೆಂದೆ ಗುಲಾಬಿಗೆ: "ನಮಸ್‌ತೇ!" (ಅನಿಕೇ. ೩೨-೦೭). ೨. = ನಮಸ್ಕಾರ ೨ : ಹೋಗಿ ಬರುತ್ತೇನೆ ನಮಸ್ತೇ (ಊಥ).

[ P ಇದು ಸಂಸ್ಕೃತದಲ್ಲಿ ನಮಃ ಮತ್ತು ತೇ ಇವು ಸೇರಿ ಆದ ಒಂದು ವಾಕ್ಯ ]

**ನಮಸ್ಯ** (ಗು). ೧. ಪೂಜಿಸಬೇಕಾದ; ಪೂಜ್ಯವಾದ. (ನಾ). ೨. ನಮಸ್ಕಾರವನ್ನು ಪಡೆಯುವವನು; ಪೂಜ್ಯನಾದವನು : ಚತುರಾಸ್ಯನುಮಹೀಂದ್ರ ನಮಸ್ಯನುಂ . . . ಆಗಿ (ಶಾಂತಿಪು. ೦೨-೧ ವ) ; ವರಬುಧೋಪಾಸ್ಯನಂ ಭೂತಳನಮಸ್ಯನಂ ಹರಶರಣಸಿಂಹನಂ (ಅರಾಜ. ೦-೩೩). ೩. ತೆರಿಗೆ ವಿನಾಯಿತಿ : ನೂಱಯ್ವತ್ತು ಮ[ತ್ತ]ರ್ಕೆಯ್ಯುಂ ನಮಸ್ಯವಾಗಿ ಬಿಟ್ಟರ್ (ಸೌಇಇ. XX, ೦೮-೪೨ ; ೬೮೦) : ನಂದಾದೀವಿಗೆಗಂ ಏಕಾದೆಸಿಯಭ್ಯಂಗದೆಣ್ಣೆಗಂ ನಮಸ್ಯವಾಗಿ ಬಿಟ್ಟ ಗಾಣ ೨ (ಸೌಇಇ. XV, ೦೨-೩೯ ; 1128). 'ಸರ್ವನಮಸ್ಯ' ಪರಾ.

ನಮಸ್ಯಂ ಬಿಡು = ತೆರಿಗೆ ವಿನಾಯಿತಿಯೊಂದಿಗೆ ಭೂಮಿ ಮೊದಲಾದುವನ್ನು ಕೊಡು,–ದಾನಮಾಡು : ಶ್ರೀಮತ್ತಿಸುವೊಳಲ ಮೂಲಸ್ಥಾನದ ಮಹಾದೇವರುಪಭೋಗಕ್ಕೆ ಸರ್ವ್ವಬಾಧಾ ಪರಿಹಾರಮಾಗೆ ನಮಸ್ಯಂಬಿಟ್ಟ ಸೆಣ್ಣನ ವಾಹಾಳಿಯ ಕೆಯಿ ಮತ್ತ ೧೨ (ಕೊಲ್ಹಾಶಾ. ೨-೧೪ : 1069). [ ಸಂ. ]

**ನಮಸ್ಕೃತ** (ಗು). ೧. ಪೂಜಿಸಿದ ; ಗೌರವಿಸಿದ. (ನಾ). ೨. ನಮಸ್ಕರಿಸಿದುದು : "ಅರ್ಹಿತಂ, ನಮಸ್ಕೃತಂ, ನಮಸಿತಂ, ಅಪಚಾಯಿತಂ, ಅರ್ಚಿತಂ, ಅಪಚಿತಂ – ೬ ಪೂಜಿಸಲ್ಪಟ್ಟದ್ದು. ನಮಸ್ಕರಿಸಲ್ಪಟ್ಟದ್ದು" (ಸಿದ್ಧಾಂತಿ. ೩೦೩). 'ನಮಸಿತ' ಪರಾ. [ ಸಂ. ]

**ನಮಸ್ಯೆ** (ನಾ). ನಮಸ್ಕಾರ; ವಂದನೆ : "ನಮಸ್ಯಾ, ವಂದನಾ – ಈ ೨ ಪೊಡವಡಿಕೆ" (ಹಲಾಯು. ೧೨೮-೯೦). [ ಸಂ. ನಮಸ್ಯಾ ]

**ನಮಾಜು, ನಿಮಾಜು** (ನಾ). ಮುಸಲ್ಮಾನರ ದೇವತಾಪ್ರಾರ್ಥನೆ : ನಮಾಜು ಮಾಡಲು ಮಸೀದಿಗೆ ಹೋಋನು (ಕೃಗಂಬ. ೧೩೩) : ಇಲ್ಲಿಯವರು ಬಹುಬೇಗ ಪೂಜೆ, ನಮಾಜುಗಳಲ್ಲಿ ಆಸಕ್ತರಾಗುವರು (ಘೂರಾಜ. ೦೧೯) ; ಮಹಮ್ಮದಪೈಗಂಬರರು ಪ್ರತಿನಿತ್ಯ ನಮಾಜು ಮಾಡುವುದೊಂದು ಸ್ವಲ್ಪ ವಿಶ್ರಾಂತೆ (ಸೂಥವ. ೬); ನಮಾಜು ಮಾಡುವುದಕ್ಕೆ ಹೋದಾಗ ಮಸೀದಿ ಮೇಲೆ ಬಿತ್ತು (ಗಾದೆ). ನಿಮಾಜು : ಜಾತಿದೇವರ ಧ್ಯಾನಕೆಸಗಿ ನಿಮಾಜುವೆಂದ್ಮಸೂತಿಯನು ಗೈಸಿ (ಕದಂಪು. ೮೪).

[ ← ಪಾರಸ. ಮಾರ್ಝ್ ; ಹಿಂ. ಮರಾ. ನಮಾಜ್, ನಿಮಾಜ್ ]

**ನಮಿ** (ನಾ). [ಜೈನ] ಇಪ್ಪತ್ತನಾಲ್ಕು ಜನ ತೀರ್ಥಂಕರರಲ್ಲಿ ಒಬ್ಬ ; ಇಪ್ಪತ್ತೊಂದನೆಯ ತೀರ್ಥಂಕರ : ವಿನಮಿಯುಂ ನಮಿಯುಂ ನಯದಾಳ್ದರ್ (ಶಾಂತಿಪು. ೫-೧೪೯) : ಶ್ರೀಪಂಚಮಹಾಕಲ್ಯಾಣೋಪೇತಂ ಕರ್ಮಗಹನದಹನಂ ಮುಕ್ತಿಶ್ರೀಪತಿಸಂಸಾರೋಗ್ರಭ(ಯೊ)ಯೋಪಹರಂ ವರದನಕ್ಕೆ ನಮಿ ತೀರ್ಥಜಿನಂ(ಕರು) (ಜಾವುಂಪು. ೩೦೯); ಮುಚುಕುಂದಂ ತಾಂ ನಮಿಸ್ವಾಮಿಗಳ್ಗೊಲವಿಂಗಾಬ್ಜಕೆ ಸೇವ್ಯಮಾನಮನಲುಂ ಪೂಜಾವಿಧಾನೋತ್ಕರಂ (ಪುಣ್ಯಾಸ್ರ. ೧-೧೦೩). [ ಸಂ. ]

**ನಮಿತ** (ಗು). ೧. ಬಗ್ಗಿದ : ಮಣಿದ : ನಮಿತೋದ್ಯತ್ಕಣಿಶಪ್ರಕೀರ್ಣಕಳಮಪ್ರಸ್ವಾತಕೇದಾರಜಾಲಮಯಂ (ಕುಸುಮಾ. ೧೦-೦೫೪) ; ನಮಿತಕದಳೀಫಲಸ್ತಬಕಂಗಳಂ ತೂಗಿ (ಉದ್ಭಟ. ೧೦-೧೨೩): ಪಾರ್ಥನ ನಮಿತಮಕುಟವ ನೆಗಹಿ ಪುಳಕಾಶ್ರುಗಳ ಪೂರದಲಿ . . . ಬಿಜಯಂಗೈದನಸುರಾರಿ (ಕುಪ್ಪಾಗ. ೧೩-೧೪). ೨. ನಮಸ್ಕರಿಸಿದ ; ವಂದಿಸಿದ : ನಮಿತಲೋಕವೆನಿಪ್ಪವಂ ಸಕಳೇಶ ಮಾದರಸ (ಬಸಪು. ೦೯-೩) ; ನಮಿತಜನ ದುರ್ಮಾರ್ಗತತ್ಪ್ರಯಾಣಕ್ಕೆ ವಿಘ್ನಮಾನೆಸಪ . . . ಶಾಂತಮಲ್ಲೇಶ್ವರಾ (ವೀಕ್ಕಪು. ೬-೩-೧). ೩. [ಭೌತವಿ] ಬಾಗಿದ. 'ನಮಿತಪ್ರತಿಬಿಂಬ' ಪರಾ. (ನಾ). ೪. ನಮಸ್ಕರಿಸಲ್ಪಟ್ಟವನು : ಗುರುದೇವೇಂದ್ರ ಮುನೀಂದ್ರನಿಂದ್ರನಮಿತಂ ದೇವಂ ಕಥಾನಾಯಕಂ ಪುರುದೇವಂ (ಆದಿಪು. ೧-೨೩) : ನಮಿತಂ ಖಚರಾನುಚರಂ ಕ್ರಮದಿಂ ತಿಳಿಪಂತು ತನಗೆ ತನಯನ ವೃತ್ತಾಂತಮನಱಿಪೆ . . . ಪಲವು ಸೂಟ್ಟೆಸಗೊಂಡಂ (ಶಂರಾಮಾ. ೬-೪೪). [ ಸಂ. ]

**ನಮಿತಪರ್ವ** (ನಾ). ಗೆಣ್ಣುಗಳಲ್ಲಿ ಬಾಗನ್ನುಳ್ಳುದು : ಸುರವೃತಕಂಟಕರೆನಿಸಿದ ಸುರರಿಪುಗಳನಿರದೆ ತೂಳ್ದು ವಿವೆರಡೆ ಧರಣೀಶ್ವರ ನಿನ್ನ ಶಿರೀಮುಖಮುಂ ನರಸಿಂಹನ ನಮಿತಪರ್ವವೆನಿಸಿದ ನಖಮುಂ (ಶಾಕುಂತ. ೯೯-೦೬೬). [ ನಮಿತ + ಪರ್ವ ]

**ನಮಿತಪ್ರತಿಬಿಂಬ** (ನಾ). [ಭೌತವಿ] ನಮನಹೊಂದಿದ ಪ್ರತಿಬಿಂಬ : ಕೋನವನ್ನು ಮಾಡುವ ನೇರೆದಲ್ಲಿ ಕಿರಣಗಳೆಲ್ಲಾ ಒಂದೇ ದಶೆಯಲ್ಲಿ ಸೇರುವುದರಿಂದ ಮೊದಲನೆಯ ನಮಿತಪ್ರತಿಬಿಂಬವು (Diffracted Image) ಉಂಟಾಗುವುದು (ಭೌತವಿ. ೨೧೨). [ ನಮಿತ + ಪ್ರತಿಬಿಂಬ ]

**ನಮಿತಶಿರಸ್ಕೆ** (ನಾ). ತಲೆಯನ್ನು ಬಾಗಿಸಿದವಳು; ನಮಸ್ಕರಿಸಿದವಳು: ನಮಿತಶಿರಸ್ಕೆಯಾಗಿ ನಸುಂದೂರದೊಳಂಜಲಿಹಸ್ತದಿಂ ಸಸಂಭ್ರಮೆಯಿರೆ ಯಾಕೆಯುಂ ದಯೆಯಿನೀಕ್ಷಿಸಿ (ದಿವ್ಯಚ. ೭-೨೮).

[ ಸಂ. ನಮಿತಶಿರಸ್ಕಾ ]

**ನಮಿತಾನನೆ** (ನಾ). ಮುಖವನ್ನು ತಗ್ಗಿಸಿದವಳು: ನಮಿತಾನನೆ ಲಜ್ಜಾನಿಪ್ಪಮೋಹಪರವಶತೆಯಿಂದೆ ಮಾಱುತ್ತರಮಂ ಸಮನಿಸದಿರಲ್ (ದಿವ್ಯಚ. ೬-೪೬). [ ಸಂ. ನಮಿತಾನನಾ ]

**ನಮಿತಾರಿ** (ನಾ). ಶರಣಾಗತರಾದ ಶತ್ರುಗಳಂಳ್ಳವನು ; ಶತ್ರುಗಳನ್ನು ಶರಣಾಗಿಸಿಕೊಂಡವನು : ನಮಿತಾರಿಗೆ ದಮಿತಾರಿಗೆ ಸಮಸ್ತ ಧಾತ್ರೀವಿಭಾಗದೊಳ್ ಭಾವಿಸೆ . . . ಪೋಲ್ಕೆಗಾಪಂ ಬರ್ಪಂ (ಕಾವ್ಯಾಪ. ೩೪೬).

[ ನಮಿತ + ಅರಿ ]

**ನಮಿಯಿಸು** 'ನಮಿಸು' ನೋ.

**ನಮಿಸು, ನಮಿಯಿಸು** (ಕ್ರಿ). ಬಾಗು ; ನಮಸ್ಕರಿಸು ; ವಂದಿಸು: ನಮಿಸುತಂ ಕಂಪಿಸುತೆ ಮನವೊಲಿದು ಹೊಗಳುತಂ (ಬಸರ. ೩-೧೦೮) ; ನಮಿಸಿದ ಕಾದಲರಂ ತನ್ನಮಳಕರದೊಳೆತ್ತಿ ಪರಸಿ . . . ಬೀಟ್ಗೊಂಡಂ (ಉದ್ಭಟ. ೮-೭೬); ಕಿನ್ನರಯ್ಯನ ಪಾದಪಂಕಜಕಂ ನಮಿಸುತಾ ಬಸವರಾಜನು (ಬಸಪು. ೨೮-೪೬) : ಗುರುವಿನ ದಳಿವ ಹೊಕ್ಕನು ನಮಿಸಿ ಬಿನಹ ಮಾಡಿದನು ನಗುತ (ಕುಪ್ಪಾದ್ರೋ. ೧೦-೪೨) : ನಮಿಸುತೆ ಪೂಜ್ಯಪಾದುಕೆಪದಕೆ ಬೀಳುಕೊಂಡರು ಮೂವರುಂ ಪಂಚವಟಿಗಾಗಿ (ಶ್ರೀರಾಮಾ. ೧೯೩-೪೭೮). ನಮಿಯಿಸು : ನಮನಮಂ ಮಾಡುವಂ–ನಮಿಸುವಂ, ನಮಿಯಿಸುವಂ (ಶಬ್ದಾನು. ೫೩೪ ಪ್ರಯೋ). [ ನಮನ + –ಇಸು₃ ]

**ನಮೀಕೃತ** (ಗು). ಬಾಗಿಸಿದ; ಪಣಿಸಿದ; ಶರಣಾಗತರನ್ನಾಗಿ ಮಾಡಿದ: ದೃಢೀಕೃತತಳವರ್ಗನುಂ ನಮೀಕೃತಸಾಮಂತವರ್ಗನುಮಾಗಿ (ಚಂದ್ರಪು. ೪-೨೮ ವ). [ ಸಂ. ]

**ನಮೂದಿಸು** (ಕ್ರಿ). ಉಲ್ಲೇಖಿಸು ; ದಾಖಲೆಮಾಡು ; ಬರೆದಿಡು ಏಜೆಂಟ್ ಅಥವಾ ಮುತಾಲಿಕನ ಹೆಸರನ್ನೂ ನಮೂದಿಸಬೇಕು (ಗ್ರಾಮೂಳ. ೬): ಪೋಲೀಸಿನವರು ಸಾಕ್ಷಿಪಟ್ಟಿಯಲ್ಲಿ ಅವನ ಹೆಸರನ್ನು ನಮೂದಿಸಿರಲಿಲ್ಲ (ಪಂಜಪಂ. ೧೦೩) ; ಈ ವಿಷಯ ಕಾಜಿಗಳಿಗೂ ಗೊತ್ತಿಲ್ಲ ; ಗೊತ್ತಿದ್ದರೆ: ಕುರಾನಿನಲ್ಲಿ ನಮೂದಿಸದೆ ಬಿಡುತ್ತಿರಲಿಲ್ಲ (ತತ್ವಶಾ. ೫೬೬).

[ ನಮೂದು + –ಇಸು₃ ]

**ನಮೂದು** (ನಾ). ಉಲ್ಲೇಖ ; ದಾಖಲೆ ; ನೋಂದಣಿ.

ನಮೂದಾಗು = ನೋಂದಣಿ ಆಗು ; ದಾಖಲು ಆಗು : 'ಪ್ರಯಿಲ್ಲು' ಬರೆದು ಸಿದ್ಧವಾಯಿತು. ಇಷ್ಟರಲ್ಲಿ ನಮೂದಾಗುವದಿತ್ತು (ಸಜುಜೀ. ೬೫೦). **ನಮೂದುಮಾಡು** = ಉಲ್ಲೇಖಿಸು ; ಬರೆದು ತಿಳಿಸು : 'ಡಿನ್ನರ್' ಇಷ್ಟು ಹೊತ್ತಿಗೆ ಎಂದು ಲಗ್ನಪತ್ರಿಕೆಯಲ್ಲಿ ನಮೂದುಮಾಡಿದ್ದರು (ನಾಡಿಗೀ. ೦೪೭) ; ಜ್ವರ ಬಂದ ಕಾರಣ ನಮೂದುಮಾಡಿ, ಪರೀಕ್ಷೆಯ ಕತ್ತರಿಯಿಂದ ನುಸುಳಿ (ದೀಪಹ. II, ೦೮).

[ ←ಪಾರ. ಹಿಂ. ನಮೂದ್ ; ಮರಾ. ನಮೂದ್, ನಮೋದ್ ]

**ನಮೂನಿಸುಳಿ** (ನಾ). ದನದ ಮೈಮೇಲಿನ ಸುಳಿಗಳಲ್ಲಿ ಒಂದು ಬಗೆ : ದನಾ ಪರೀಕ್ಷೆ ಮಾಡೋವಾಗ ಹೀನಸುಳಿ, ಪಾತಾಳಸುಳಿ, ದಾವಣಿಸುಳಿ, ಪರಕಲಸುಳಿ, ನಮೂನಿಸುಳಿ, ಸಿಡಕ್ಲಾಲು, ಕೋರಬಗ್ರಿ, ಕ್ಷೌವಹಲ್ಲು ಇವೆಲ್ಲಾನೂ ಚಂದಾಗಿ ನೋಡಿ ಒಳ್ಳೆಸುಳಿ ಇರೋದ ತತ್ಕಾರಾ (ಹುಬ್ಬಿಹ. ೦೬೫). [ <ನಮೂನೆ + ಸುಳಿ₁ (<ಸುಟ್ಟಿ₁) ]

**ನಮೂನೆ** (ನಾ). ೧. ಮಾದರಿ ; ತೆರ ; ಕ್ರಮ ; ಪ್ರಕಾರ ; ರೀತಿ ; ವಿಧ ; ಬಗೆ : ನೋಟದಲ್ಲಿ ಒಂದು ನಮೂನೆಯ ಬಿಂಕ (ಅಂಡಹೂ. ೦೮) ; ಆ ಮಾಸ್ತರ ಹೇಳಿದ ನಮೂನೆ ನೋಡಿದರೆ ಈಗಾಗಲೆ ಏನು ಮಾಡಿ ಕುಳಿತಾಳೊ (ಷುಕುಬಾ. ೩೮) ; ಚೊಕ್ಕ ಬಂಗಾರವೇ ಬೇಕೆಂಬ ಹಟವೇಕೆ ನಿನಗೆ ಈ ಲೋಕದಲ್ಲಿ ನಾನಾ ನಮೂನೆ ಲೋಹವಿರುವಾಗ ? (ನೆಲಕು. ೨೭-೬) ; ಪಾಚಿಯು ವಿವಿಧ ನಮೂನೆಗಳನ್ನು ಬೆಳೆಸಲು ಉದ್ಯುಕ್ತನಾದನು (ಸಸ್ಯಕ. ೮೭). ೨. ರಚನಾಕ್ರಮ ; ನಕ್ಷೆಯ ವಿನ್ಯಾಸ : ಆ ಕೋಟೆ ನಮೂನೆ ಯಾವ ಮೇಳ ಇದೆ (ರಾಜೇಂದ್ರ. ೨೪). ೩. ಚಿತ್ರಾಕೃತಿಯ ಮಾದರಿ : ಎಲ್ಲಿ ಅವನಿಗೆ ಚಿತ್ರಕಲೆಯ ಸುಂದರವಾದ ನಮೂನೆಗಳು ದೊರೆಯುತ್ತಿದ್ದವೋ ಅಲ್ಲಿಗೆ ಅವನು ಹೋಗಿಯೇ ಹೋಗುತ್ತಿದ್ದನು (ಪ್ರಸಿಂ. ೧೮) ; ಅವನ ಚೌಕಳಿ . . . ಮಾಟ ಬೆಂಡೋಲೆಗಳ ನಮೂನೆ ಕಂಡಿತು ನನಗೆ (ಪ್ರನಿ. ೮) ; ಈಗಿನ ದಿನಗಳಲ್ಲಿ ಸುಂದರವಾದ ಹಾಗೂ ಆಕರ್ಷಕವಾದ ಅನೇಕ ನಮೂನೆಯ ಮನೆಕೆಲಸದ ಸಲಕರಣೆಗಳು ಸಿಗುತ್ತವೆ (ಅಡುಸಾ. ೩೨). ೪. ಅರ್ಜಿ, ದಾಖಲೆ ಮೊದಲಾದಂವುಗಳಲ್ಲಿ ಉಲ್ಲೇಖಿಸಬೇಕಾದ ಅಂಶಗಳನ್ನೊಳಗೊಂಡ ಪತ್ರ,-ಕಾಗದ : ಆ ಸರ್ಕಾರದವರಿಂದ ವಿಧಾಯಕವಾಗಿರುವ ನಮೂನೆಯಲ್ಲಿ ಮತ್ತು ರೀತಿಯಲ್ಲಿ ಕೊಟ್ಟಂಥ ಆವೇದನಪತ್ರದ ಮೇಲೆ (ಜಾದಾನ. ೫) ; ಈಗಿದ್ದ ಮರಾಟಿ ನಮೂನೆಗಳು ತೀರಿದ ಬಳಿಕ ಕನ್ನಡ ನಮೂನೆಗಳನ್ನು ಮುದ್ರಿಸಬೇಕು (ಕನ್ನಸು. I, ೨೭). ೫. ಮಾದರಿಗಾಗಿ ಕೊಟ್ಟದ್ದು ; ಮಾಸಲೆ (ಉಕ) : ಹಮೂನೆಗೆ ಸ್ವಲ್ಪ ತೆಗೆದುಕೊಂಡು ಬಾ (ರೂಢಿ) ; ೬. (ಆಲಂ) ವಿಚಿತ್ರವಾದುದು ; ಅಸಮಾಧಾನಕರವಾದುದು : ಅವರ ಮುಖ ಒಂದು ನಮೂನೆಯಾಗಿತ್ತು (ರೂಢಿ).

[ ←ಪಾರ. ನಮೂನಾ, ನಮೂನಹ್ ; ಹಿಂ. ನಮೂನಾ ; ಮರಾ. ನಮೂನಾ, ನಮೋನಾ ]

**ನವ್ಯು₁, ನವೆ₁** (ಕ್ರಿ). ೧. ದಂಡಿಸು ; ನರಳು ; ಕೊರಗು : ಬಳಿಕ ಪಶ್ಚಾತ್ತಮಡೊಳ್ಪಕುವಾಗಿ ನವೆಗುಂ (ಎಕ. VIII, ಸಗರ. ೬೦-೧೧ ; 870) ; ಚಕ್ರದಿಂ ನಾಲ್ಕು ಕಾಲುಮನೊರ್ವೊದರೆ ಪಡುಯುತ್ತಿರ್ದೆ . . . ಆ ಇರುಳೆಲ್ಲಾಮೆ ಘಿರಿದು ವೇದನೆಯಿಂದು ನವೆದು ಸತ್ತು (ವಡ್ಡಾ. ೦೫೦-೨೦) ; ಕೊರದರ್ ನೆಲನನೊಟ್ಟಿಯೆಯಿಂ ಕೊಳೆ ಕೊಟ್ಟು ಮುಟ್ಟು ಗೆಟ್ಟನ್ನುಮಾರಣ್ಯದೊಳ್ ನವೆದಪಂ ಯಮನಂದನಂ (ಪಂಪಭಾ. ೭-೫೫) ; ಎನಿತುಂ ದ್ರೌಪದಿ ಮುಕ್ತಕೇಶಿ ನವೆವಳ್ (ಗದಾಯು. ೬-೨೪). ಎನ್ನ ಮಕ್ಕಳುಮಾನುಂ ದುಃಖಾಗ್ನಿಯೊಳ್ ಪುಡುಪುಡನೆ ಪುರ್ಗಿ ನವೆವ ಪಾಪದ ಫಲವಂ ನೀನವೋಘೆಮುಣ್ಬೆಯೆಂದು ಮೂದಲಿಸಿ (ಸುಕುಮಾ. ೫-೭೮) ; ಮೊಂಟಾಗಿ ಕೈಗಳೆರಡುಂ ಗಂಟಾಗಿರೆ ತನಗೆ ಸಿರಿಯುಂ ಕೂಟುಂ ಕಾಲುಪ ಕುಂಟಾಗಿ ನವೆಯುತಿರ್ಪರ್ಟಿಂಟನಿಸಿ ಮಹಾತಪಂಗಳಂ ಕಿಡಿಸಿದವರ್ (ಧರ್ಮಾಮೃ. ೬-೧೮೦) ; ಅಳಿಯಾಸೆಯಿಂ ನವೆಯದಿರ್ಬೇಡಾಗ್ರಹಂ (ಅನಂತ. ೧೦-೯೨) ; ಬಂದರೇನವರಾಧವೇ ಇನ್ನೆಂದುಮರಿಯಂತವರು ನವೆವರು (ಕುಮಾರಾ. ೧-೨೦) ; ನವೆವ ದೀನಾಂಧಬಧಿರರುಂ ದೀನ ಧರ್ಮಂಗಳಂ ಪಾಲಿಸುತುಂ (ರಾಮಾಶ್ವ. ೦೫-೦೯) ; ಆಗದುದಕೆ ಹೋಗದುದಕೆ ಆಸೆಪಟ್ಟು ಭಂಗಪಡುತೆ ನವೆವುದೇತಕೆ? (ಮಿಣೀಗೀ. ೬೫-೦೦). ೨. ಸೊರಗು ; ಕೃಶವಾಗು ; ಬಡವಾಗು : "ನವೆ-ಗುರುಯಾಪ್ತೇ (ಬಡವಾಗು) ದಾರಿದ್ರ್ಯೇ ಚ" (ಶಮು) ; ಅದೋಧಟೋಧಿತ ತಪೋದಾನವಿಧಾನದು ಮುಧಾಕ್ಲೇಶಾಯಾಸನಿರತರಾಗಿ ನವೆವರ್ (ಅದಿಪು. ೨-೯೮) ; ಉಪವಾಸದೊಳ್ ನವೆದು ನೋಂಪಿಗಳೊಳ್ ನಿಯಮಕ್ರಮಂಗಳಂ ಸಲಿಸಿದರ್ (ಶಂಪಭಾ. ೦-೦೩೬) ; ತೆರ್ಪತ್ತು ಬಿಟ್ಟು ನವೆಯುತ್ತಿರ್ಪರ್ ಪಾರಕರ್ (ಶಾಂತಿಪು. ೭-೯೯) ; ಲೋಕದೊಳಾಂ ಕಾಣದಿರ್ದ್ದೀ ಕುತ್ತಂ ಪೊರ್ದಿ ನವೆವ ಮಾನಿಸರುಂ ಕೇಳೀ ಕಷ್ಟನಂದದಿಂ ಮೆಯ್ಯಾಕಾರಂಗೆಟ್ಟು ನವೆವರಂ ಕಂಡಪೆಯಂ (ಧರ್ಮಾಮೃ. ೪-೯೦). ೩. ಬಡವನಾಗು : "ನವೆ- ಗುರುಯಾಪ್ತೇ (ಬಡವಾಗು), ದಾರಿದ್ರ್ಯೇ ಚ" (ಶಮು). ೪. ಮಹತ್ವವನ್ನು ಕಳೆದುಕೊಳ್ಳು : (?). **ನವೆ₁** : ೧. ಮಹಾನರಕದೊಳ್ ದುಃಖಾಗ್ನಿಯಿಂ ಬೆಯ್ವುದಂ ನವೆಯುತ್ತಿರ್ಪುದಂ (ಧರ್ಮಾಮೃ. ೪-೬೦) ; ಹಲಕಾಲ ನವೆವುತಲ್ಲಿರ್ದ ಹೆಳವಂಗೆ ಕಾಲ್ . . . ಬರಲ್ (ಸೋಮಪಂ. ೯-೬) ; ಕಟಕಟಾ ಪೇರಡವಿಯೊಳಗೆಕ್ಕಟಿಯಿದೇತಕೆ ನವೆವುತಿರ್ದಪೆ (ಬಸಪು. ೦೮-೯) ; ಸತ್ತವ ಕಾದು ಹದಿಮೂಜಿಬುದ ನವೆದಿರಿ ಮುಂದೆ ಲೇಸಹುದು (ಕುಮಾರಾ. ೨-೦೫) ; ಪಾಪದಿ ಪಕದಜಾವಿಳಗೊಳಿದು (ಹರಿಹ. ೪೫) ; ನವೆವುತ್ತಿದೇನೆ ಭವರೋಗದ ನಿಲಿಸಯ್ಯಾ (ಶಂಕಳಂ. ೯೫) ; ತನ್ನ ಗಂಡನು ಎಷ್ಟು ರೀತಿಯಿಂದ ನವೆಯಬೇಕಾಗುತ್ತದಲ್ಲಾ ಎಂದು ಮನಸ್ಸು ಕರಗಿ ಕಂಬನಿ ಹರಿಯತೊಡಗಿದವು (ಗಂಡಭೇ. ೨೩೬). ೨. ನವೆದ ರೋಗಂ ಗಳಿಂದ- (ರಕ್ಷಾಕ. ೨೪) ; ಕಡುಜರದಿಂ ಕರಂ ನವೆದು (ದಶಕು. ೮-೬೦೬) ; ದಾರಿದ್ರ್ಯದಿಂದಂ ನವಡ ನಡುವನಾಶ್ರೈಸಿದೆಂ . . . ಎಂದೈಶರ್ಪ ಬಾಸೆಯಂ (ಭಾವಕಂ. ೩-೯೨). ೫. ಕ್ಷಯಿಸು ; ನಾಶವಾಗು : ಶ್ರವಣದಿಂ ಪಾತಕ ಕುಲಂಗಳು ನವೆದು ಪೋಪವು (ಗಗಪಾ. ೦೭-೫೦).

**ನವೆದು ನಾರು** = ದೇಹದ ಸೆರೆಗಳು ಎದ್ದು ಕಾಣು ; ಸೊರಗಿ ಜರ್ಜರಿತವಾಗು,-ಶಿಥಿಲವಾಗು : ಉಣ್ಣದ ಮಾಯದಂಗ ನಿರ್ಜಿವಪೆವೆತ್ತು ದೆತ್ತ ವಿಫಲದ್ವಯಿದಾನವಿಧಾನಮೆತ್ತ ನಾನಾ ವಿಧದಿಂದಮೇಂ ನವೆದು ನಾರುಗಿದಿರ್ಪರೊ ಜೈನದೀಕ್ಷಿತರ್ (ಶಾಂತಿಪು. ೮-೧೨೯) ; ಅಪವಿದಿದು ದುಃಖದೊಳ್ ನವೆದು ನಾರುಗಿದು ಪೊಗೆದು ಸತ್ತಲ್ಲಿ ನಿಷಾದನ ಮನೆಯೊಳ್ಪೆಣ್ಣಾಯಾಯ್ತು ನೆನೆದೊಡಾಶ್ಚರ್ಯರ್ಮನಲ್ತೆ ಸಂಸೃತಿಚಕ್ರಂ (ಸುಕುಮಾ. ೫-೧೯).

[ ದೇ.೫ ತುಳು. ನವೆ ; ತೆಲು. ನವಯು, ನವಿಯು ]

**ನವ್ಯು₂, ನವೆ₂** (ನಾ). ೧. ಕಾಟ ; ಪೀಡೆ ; ತೊಂದರೆ ; ಕಿರುಕುಳ : ಕಣ್ಣನ್ ಬಿದಡಿತು ಕಟ್ಟಲೆ ಪಾರಯ್ ! ನವೆಯಾ ಭ್ರಮೆಯಾ ಕಟ್ಟಲೆ ಪಾರಯ್ ! (ಅಜ್ಜಿಕಾ. ೨೯-೫೬೩). **ನವೆ₂** : ೨. ತಂಟೆ ; ತಿನಿಸು ; ಕೆರೆತ : ತಕ್ಕು - ತಿರ್ಯಕ್ಕುಂಡೂತಿಲೇಷನೇ (ನವೆಗೆ ನೆಕ್ಕು) (ಶಮು) ; ಆಗವನು ಲೈಲಾಕ್ ಪೊದೆಯ ಹಿಂದೆ ಬಿದ್ದಿದ್ದುದರಿಂದ ತುರುಚಿ ಗಿಡ ಅವನ ಕೈ ಕಚ್ಚಿ ನವೆಹತ್ತಿಕೊಂಡಿತ್ತು (ಪುನರು. ೨೮೩). ೩. ಚಪಲ ; ತವಕ : ಸುನಂದೆಯನ್ನು ಗಂಡ ಬಿಟ್ಟಿರುವನೆಂಬುದು ತಿಳಿದಿತ್ತು. ನಾಲಿಗೆಗೆ ನವೆ, ಮೂದಲಿಸಿ ಲೇವಡಿ ಮಾಡುವ ತವಕ (ಹಳಾಂಗಿ. ೨೦೦). 'ನವೆತ್ತ' ಪಠಾ.

[ ದೇ. ೫ ತಮಿ. ನವ್ವು, ನವ್ವೆಪ್ಪು, ನಮ್ಮೆಚ್ಚಲ್ ; ತುಳು. ನವುಂಟ ; ತೆಲು. ನವ ]

**ನಮೆಯಿಸು**, ನವಸು, ನವೆಸು (ಕ್ರಿ). ೧. ಕೊರಗಿಸು ; ಕಷ್ಟಕ್ಕೆ ಗುರಿಪಡಿಸು : ಪಲಕಾಲಂ ನಮೆಯಿಸಿದ ಪಗೆಯುಮಂ ನೆನೆದು (ವಡ್ಡಾ.ರಾ. ೨೯೦-೨೦); ಲೋಗರೊಡವೆಯುಂ ಋಣಂಗಳುಂಗೊಂಡನವಂ ಪಲವು ದಿವಸಂ ನಮಯಿಸಿ ಕೊಳ್ಳಿಂ (ಸುಕುಮಾ. ೮-೩೬ ವ). ೨. ಸೊರಗಿಸು ; ಕೃಶಗೊಳಿಸು : ತವದೊಳ್ ನಮೆದು ತನ್ನ ಶಿಷ್ಯರ್ಕಳುಮಂ ತಾಂ ಶಿವಗೊರವಿ ಬೆಸಕನುಮಂ ತಿರಿಯಿಪಳೆಂಬ ತಜದ ನೆಟಿ ನವೆಯಿಸುವರ್ (ಶಾಂತಿಪು. ೮-೧೩೦) ; ಬಸಿಱ ಕೂಸು ಕೃತ್ರದಂತೆ ನವೆಯಿಸುವುದು (ಧರ್ಮಾಮೃ. ೪-೧೬೫). ನವಸು : ೩. ನಾಶವಾಗುವಂತೆ ಮಾಡು ; ಕೆಡಿಸು ; ಹಾಳುಮಾಡು : ವಿವಿಧ ರಕ್ಕಸರು . . . ಎನ್ನ ಕಾರ್ಯಮಂ ನವಸಿದಲ್ಲದೆ ಮಾಣರೆಂತಿದಕುಪಾಯಮೇನೆಂದು ಯೋಚನೆಗೈದನು (ವಂಕಾರಾ. ೫-೨-೪೩). 'ನವಸಿಗ' ಪರಾ. ನವೆಸು : ೧. ಈ ಶಿಶುವ ಶಿಶುಕುಮಾರಂ ತಿಳಿಯಲು ಮುಂದೆ ಮಜ್ಜನಭೋಜನಾದಿ ನಾನಾಕ್ರಿಯೆಗಳೊಳಂದಟಿಸೊಳ್ ನರವೇಷ ಕಾಯಮಂ ನವೆಸಬೇಡೆಂದು ಕೈವೆಡೆಗೊಟ್ಟಳ್ (ಚಂಪು. ೩-೩೦) ; ಕುವಲಯ ಪ್ರಿಯಕಾಂತ ನಮ್ಮನೇಂ ಕಾರಣದಿ ನವೆಸುವೆ ಜಗನ್ಮೋಹನನೆ (ವಂಕಾರಾ. ೫-೪-೨೦). [ ನವೆ$_1$ + – ಇಸು$_1$ ]

**ನಮೇರು** (ನಾ). ೧. ಒಂದು ಬಗೆಯ ಮರ ಮತ್ತು ಅದರ ಹೂವು ; ಸುರಹೊನ್ನೆ; ಸುರಗಿ: ನಮೇರು ಮಂದಾರ ಸಂತಾನಕ ಪಾರಿಜಾತಂಗಳೆಂಬ ಪೂಗಳಂ ಸುರಿಯುತ್ತಂ (ವಡ್ಡಾ.ರಾ. ೬೫-೭) ; ಸೂಡಿದ ಪಾರಿಜಾತದ ನಮೇರುವ ಬಾಸಿಗವೊಯ್ಯನೊಯ್ಯನಿಪ್ಪೋಡಿದುದು (ಆದಿಪು. ೩-೭) ; ಎಱಗದೆ ಪೂತ ಚಂಪಕವನಕ್ಕೆ ನಮೇರುಮಹೀರುಹಕ್ಕೆ ಬಂಡೆಱಗುವ ಚಂಚರೀಕದವೊಲಾಕೆಯ ಕೇಕರಮನ್ಯರಾಜಕಕ್ಕೆಱಗದೆ ರಾಘವಂಗೆಱಗೆ (ಪಂಪರಾಮಾ. ೫-೭೦) ; ನಿನಗೆ ಶುಭಮೆಂದ ವಂದಿಯ ಮನೆಯಂಗಣದೊಳಗೆ ಪಣ್ಣು ಪರ್ವಿದ ಮಂದಾರ ನಮೇರು ಪಾರಿಜಾತದ ಬನದೊಳ್ಸಿರಿ ಮೆಱೆವುದಲ್ತೆ ವನಕೇಳಿಗಳಂ (ಯಶೋಧ. ೩-೨) ; ನಮೇರುಸುಮನೋವರ್ಷಂ ಸ್ಫುಟಂ (ಎಕ. II (R), ೩೩೬-೭೦ : 12ನೆಯ ಶತ); ವನಪ್ರದೇಶದೊಳಗಿರ್ಪ ನಮೇರುವಿನಂತೆ (ಪುಷ್ಪಪು. ೯-೨೮) ; ಉದ್ಯಾನದಲ್ಲಿದ್ದ ನಮೇರುವೃಕ್ಷದಡಿಯನ್ನು ಸೇರಿದ (ಧೂಮುರು. ೭೧). ೨. ಒಂದು ಬಗೆಯ ಮರ; ರುದ್ರಾಕ್ಷಿ ಮರ. [ ಸಂ. ]

**ನಮೇರುಕುಜ** (ನಾ). = ನಮೇರು ೧ : ಪಂಕಜಮೇ ನಮೇರುಕುಜಮೇ . . . ಗಿಳಿಯೇ ಕಂಡಿರೆ ಪೇಟಿಮೆನ್ನ ಪತಿಯಂ (ಸುಕುಮಾ. ೦೨-೨೦). [ ನಮೇರು + ಕುಜ ]

**ನಮೇರುಕುಸುಮ** (ನಾ). ಸುರಗಿಹೂವು ; ಸುರಹೊನ್ನೆಯ ಹೂವು : ಕಿವಿ ಸಾರ್ದು ಜಿನಂಗೆ ಸೌರಭಕ್ಕಾಡುವ ತುಂಬಿಗಳ್ಗಿ ವಿಜನಾಥನವರ್ಕೆ ಕನಲ್ದು ಮಾಣದೀಡಾಡುವನಾ ನಮೇರುಕುಸುಮಸ್ತಬಕಂಗಳ ಕರ್ಣಪೂರಮಂ (ಪಂಪರಾಮಾ. ೩-೧೭) : ಸುರಿದುದು ನಮೇರುಕುಸುಮದ ಸರಿ ಮೊಟಗಿದು ದಮರಪಟಹಂ (ಪುಷ್ಪಪು. ೧೪-೪೧) ; ತಾನೆಳಸದಿರ್ದೊಡಂ ಪರಮಾನಿನ ಮೇಲ್ಸಾಯ್ದೊಡಳಿಪ ಮಂದರಶೈಲಂ ಸ್ವಾನನಿವನೆನಿಸಿ ನಿಂದುಭಿಮಾನಿಗೆ ಸುರಿಯದೆ ನಮೇರುಕುಸುಮಾಸಾರಂ (ಉಷಾಹ. ೯೮). [ ನಮೇರು + ಕುಸುಮ ]

**ನಮೇರುಭೂಜ** (ನಾ). = ನಮೇರು ೨ : ನಮೇರುಭೂಜಮಂ ತಳೆದ ಸುಮೇರುಮೇಖಳೆ (ಚಂದ್ರಪು. ೧೨-೨೮). [ ನಮೇರು + ಭೂಜ ]

**ನಮೋ** (ನಾ). ೧. ನಮಸ್ಕಾರ ಮಾಡುತ್ತೇನೆ ಎಂಬರ್ಥದ ಮಾತು.- ಶಬ್ದ : ಪರಮರೂಪನೇ ನಮೋ ಪರತತ್ವನೇ ನಮೋ ಆದಿಯಾರೂಢ ಭಯಂಕರನೇ ನಮೋ . . . ಎಂದು ಶ್ರುತಿಯು ಸಾರುತ್ತಿರಲು (ಬಸವ. ೫೫೭); ಹರಿ ನಮೋ ಜಯ ಭಕ್ತರಘಸಂಹರ ನಮೋ ಜಯಸಕಲ ಭುವನೇಶ್ವರ ನಮೋ ಜಯಕೃಷ್ಣ ಕೇಶವ ವಿಷ್ಣುವಾಮನನೆ(ಕುಮಾವ್ಯಾ.ಆ. ೨೩-೩೩); ಎಲ್ಲಂಗವಿಮಾಗ ನಮೋ–ಬಂಧುಗಳೆ, ಭಾಗಿಗಳೆ (ಮುಂಜಾಳ. ೯೨೨). ೨. ಸಾಕು; ಸಾಕು, ಇನ್ನು ಇದರ ಗೊಡವೆ ಬೇಡ ಎಂಬರ್ಥದಲ್ಲಿ ಹೇಳುವ ಮಾತು : ಪೊಡವಿಯೊಳುದುದೊ ಮೋಹರವನಿದಟಿಒಡನೆ ಕಾದುವನಾವನಾತನ ಮೃಢನು ಶಿವಶಿವ ಕಾದಿ ಗೆಲಿದೆವು ಬಳಿಕ ನಮೋಯೆಂದ (ಕುಮಾವ್ಯಾ.ವಿ. ೬-೬) ; P ಇಲ್ಲಿ 'ನಮೊ' ಎಂಬ ಹ್ರಸ್ವರೂಪ ಛಂದಸ್ಸಿಗಾಗಿ ಮಾಡಿಕೊಂಡುದಂ; ಇದು 'ಲಂಚ' ವಾದರೆ ನಮೋ ಎನುತ್ತೇನೆ (ಗಾಳಿಪ. ೮೦).

ನಮೋನಮೋ (ದ್ವಿರುಕ್ತಿ) : ಕೂಡಲಸಂಗಮದೇವಾ ನಿಮ್ಮ ಸದ್ಭಕ್ತರಿಗೆ ನಮೋ ನಮೋ ಎಂಬೆನು (ಬಸವ. ೪೬೯); ನಾರಾಯಣ ತೇ ನಮೋ ನಮೋ ಭವ ನಾರದಸನ್ನುತ ನಮೋ ನಮೋ (ಪುರಂದ. ೩-೪೦ ಪಲ್ಲವಿ) ; ಎಷ್ಟು ದುಡಿದೆ ನೀನೆಷ್ಟು ಪಡೆದೆ ಹೇ ನಮೋ ನಮೋ ನಿನಗೆ (ಅರಳು. ೨೪೩-೩) ; ಅವನು ನಮೋ ನಮೋ ಎಂದು ದುಡತೆಕ್ಕು ದೈವ ಕೂಡುವನು (ಕನ್ನಡಾ. ೧೯). [ < ಪ್ರಾ. ಣಮೋ. / ಸಂ. ನಮಸ್ ]

**ನಮೋಸ್ತು** (ನಾ). ೧. ನಮಸ್ಕಾರ; ವಂದನೆ: ಅತ್ಯಂತ ರೂಪವತಿಯಪ್ಪ ಬಾಲಕಿಯು ಬರುತ್ತಿರ್ಪುದು ಯತೀಂದ್ರಂ ಕಂಡು ನೋಡುತ್ತಿಪ್ಪನವಾಕೆ ಬಂದು ನಮೋಸ್ತು ಎಂದು ನಿಲಿಸಲು (ಕಗಪಿ. ೯೩; ರಾಜಾವಳೀ ೪೫). 'ನಮೋಸ್ತುಗೆಯ್' ಪರಾ. ೨. [ಜೈನ] ಸಂನ್ಯಾಸಿ; ಸವಣ : ಅರಸಿ ಮಂಚದಿಂದಿಟಿದು ಕೈಗಳಂ ಮುಗಿದು ನಮೋಸ್ತುದೇನೆಂದು ನುಡಿದೊಡೆ (ವಡ್ಡಾ.ರಾ. ೦೭೭-೨೨) ; ನಮೋಸ್ತುಗಳಿಪರ್ವಂದದಿನಿರ್ದಂ(ನಮೋಸ್ತುಗಳೆಂದು ಸವಣರ್ಗೆ ಪೆಸರಾಯ್ತು) (ಕಮಲ. ೭೫ ಪ್ರಯೋ) ; ಜಿನಮುಖಕಮಲದೊಳುದಿಸಿ ನಮೋಸ್ತುಗಳೆನಿಪ್ಪ ನುಡಿಯೊಳು ಬಳೆದು ಜನನುತ ಮುಕ್ತಿಗೆ ಸವಿಯಾದ ಶಾರದೆಗನುನಯದಿಂ ವಂದಿಸುವೆನು (ಶ್ರೀಪಾಲ. ೧-೧೧) : ನೆಟ್ಟನೋರ್ವನೆ ಬೈಗಿನಿಂ ರವಿ ಪುಟ್ಟುವನ್ನೆಗ ಜಾನ ಜಪವಳವಟ್ಟು ನಿಲುವಾ ಪಾಲಕೀರ್ತಿ ನಮೋಸ್ತು[ ಗೆ ]ಗೆಯ್ವೆನು (ಸಾಳ್ವಭಾ. ೦-೨೨). P ಇದಂ ಸಂಸ್ಕೃತದಲ್ಲಿ ಒಂದು ಶಬ್ದವಲ್ಲ ವಾಕ್ಯ.

**ನಮೋಸ್ತುಗೆಯ್**, ನಮೋಸ್ತುಗೈ (ಕ್ರಿ). ನಮಸ್ಕಾರ ಮಾಡು ; ವಂದಿಸು: ತಾನೊಂದು ಬಟ್ಟೆಯೊಳ್ಪೋಗಿ ಯತೀಂದ್ರನಂ ಕಂಡು ನಮೋಸ್ತುಗೆಯ್ದು (ಪುಣ್ಯಾಸ್ರ ೩-೭೫ ವ) ; ವಿಭವದಿಂ ಗುಹೆಯನೆಯ್ದಿ ನಮೋಸ್ತುಗೆಯ್ದು ಬಾವಲಿಯಂ ಪ್ರಾರ್ಥಿಸೆ (ಕಗಪಿ. ೯೨ ರಾಜಾವಳೀ ೪೫). ನಮೋಸ್ತುಗೈ : ಶುದ್ಧಚಿತ್ತದೊಳು ನಮೋಸ್ತುಗೈದರೆ ಧರ್ಮವೃದ್ಧಿಯೆಂದುಱ ಹರಸಿದರು (ಭರತ. ೭೦-೦೦೬). [ ನಮೋಸ್ತು + ಕೆಯ್$_1$ ]

**ನಮೋಸ್ತುಗೈ** 'ನಮೋಸ್ತುಗೆಯ್' ನೋ.

**ನಮ್ಮಕ್‌ಹರಾಮ್** 'ನಮ್ಮಕ್‌ಹರಾಮ' ನೋ.

**ನಮ್ಮಕ್‌ಹರಾಮ**, ನಮಕ್‌ಹರಾಮ್, ನಮ್ಮಕ್‌ಹರಾಮ್, ನಿಮಕ್‌ಹರಾಮ, ನಿಮ್ಮಕ್‌ಹರಾಮ (ನಾ). ಉಪ್ಪಿಟ್ಟವನಿಗೆ ಎರಡು ಬಗೆಯುವವನು; ಉಂಡಮನೆಗೆ ಎರಡು ಬಗೆಯುವವನು; ಸ್ವಾಮಿದ್ರೋಹಿ ; ಕೃತಘ್ನ : ನಾನು ನಮ್ಮಕ್‌ಹರಾಮನೆನಿಸಿಕೊಳ್ಳದೆ, ಇದುವರೆಗೂ ಸ್ವಾಮಿಭಕ್ತಿಯಿಂದಲೇ ಚಾಕರಿಮಾಡಿಕೊಂಡು ಇರುತ್ತಿದ್ದೆನು (ಮಹಾವಂ. I, ೨೬೨) ; ಬಿದ್ದೀ ಬುದ್ದೀ ನಮ್ಮಕ್‌ಹರಾಮನಾ ಬುದ್ಧಿ, ಸುಳ್ಳು ಹೇಳುತ್ತಾನೆ ನನ್ನೊಡೆಯ (ನಮ್ಮಳ್ಳಿ. ೯೬). ನಮಕ್‌ಹರಾಮ್ : (ತ). ನಮ್ಮಕ್‌ಹರಾಮ್ : ಸರ್ಕಾರದ ಉಪ್ಪುತಿಂದು ಸರ್ಕಾರ ಬಯ್ಯುವವರಿಗೆ 'ನಮ್ಮಕ್‌ಹರಾಮ್' ಅಂತಾರೆ (ಹಂಜಹಂ. ೦೭೦). ನಿಮಕ್‌ಹರಾಮ : ನಮ್ಮ ಇಸ್ಲಾಂಮತವು ನಿಮಕ್‌ಹರಾಮರನ್ನು ಎಂದೂ ಹೆರುವುದಿಲ್ಲ ಮಹಾರಾಜ (ರಾಜಯೋ. ೧೩೩). ನಿಮ್ಮಕ್‌ಹರಾಮ: ಆ ನಿಮ್ಮಕ್‌ಹರಾಮ ಹೇಳಿದ್ದು (ರಾಜೇಂದ್ರ. ೪).

[ ← ಪಾರ. ನಮಕ್‌ಹರಾಮ್ ; ಹಿಂ. ನಮಕ್‌ಹರಾಮ್, ನಿಮಕ್‌ಹರಾಮ್ ; ಮರಾ. ನಿಮಕ್‌ಹರಾಮ್ ]

೭೯. ಪಾಂಶುಭೋಜಕುಂಡ–ಒಬ್ಬನಿಗೆ ಮಗಳನ್ನು ಕೊಡುವುದಾಗಿ ಮಾತುಕೊಟ್ಟು ಬೇರೊಬ್ಬನಿಗೆ ಮದುವೆ ಮಾಡುವವನು. ೭೦. ಪಾಶವೇಷ್ಟಕುಂಡ–ದತ್ತಾಪಹಾರಿ. ೭೧. ಶೂಲಪೋತಕುಂಡ–ಭಕ್ತಿಯಿಲ್ಲದೆ ಶಿವಲಿಂಗವನ್ನು ಪೂಜಿಸುವವನು. ೭೨. ಪ್ರಕಂಪನ ಕುಂಡ–ಬ್ರಾಹ್ಮಣರನ್ನು ದಂಡಿಸುವವನು, ಅವರಿಗೆ ಭಯವನ್ನುಂಟು ಮಾಡುವವನು. ೭೩. ಉಲ್ಕಾಮುಖಕುಂಡ–ಗಂಡನ ವಿಷಯದಲ್ಲಿ ಮುಖವನ್ನು ಗಂಟುಹಾಕಿಕೊಂಡು ಕಟುವಾಗಿ ಮಾತನಾಡುವವಳು. ೭೪. ಅಕೂಪಕುಂಡ–ಶೂದ್ರನೊಂದಿಗೆ ಬೆರೆಯುವ ಬ್ರಾಹ್ಮಣಿ. ೭೫. ವೇಧನಕುಂಡ–ಐದಾರು ಮಂದಿಯೊಂದಿಗೆ ಸಂಪರ್ಕವಿಟ್ಟುಕೊಂಡಿರುವವಳು; ವೇಶ್ಯೆ; ಸೂಳೆ. ೭೬. ದಂಡತಾಡನಕುಂಡ–ಏಳೆಂಟು ಮಂದಿಯೊಂದಿಗೆ ಸಂಪರ್ಕವಿಟ್ಟು ಕೊಂಡಿರುವವಳು; ರಂಡೆ. ೭೭. ಜಾಲಬದ್ಧಕುಂಡ–ಎಂಟಕ್ಕಿಂತಲೂ ಹೆಚ್ಚು ಜನರೊಂದಿಗೆ ಸಂಪರ್ಕವಿಟ್ಟುಕೊಂಡಿರುವವಳು: ಮಹಾವೇಶ್ಯೆ. ೭೮. ದೇಹಚೂರ್ಣಕುಂಡ–ಇಬ್ಬರೊಂದಿಗೆ ಸಂಪರ್ಕವಿಟ್ಟುಕೊಂಡಿರುವವಳು; ಕುಲಟೆ. ೭೯. ದಲನಕುಂಡ–ನಾಲ್ವರೊಂದಿಗೆ ಸಂಪರ್ಕವಿಟ್ಟುಕೊಂಡಿರುವವಳು; ಸ್ವೈರಿಣಿ. ೮೦. ಶೋಷಣಕುಂಡ–ಮೂವರೊಂದಿಗೆ ಸಂಪರ್ಕವಿಟ್ಟುಕೊಂಡಿರುವವಳು: ಧೃಷ್ಟೆ; ಪುಂಶ್ಚಲಿ. ೮೧. ಕಷ್ಟಕುಂಡ–ತನ್ನ ಜಾತಿಯ ಪರಸ್ತ್ರೀಯೊಂದಿಗೆ ಬೆರೆಯುವವನು. ೮೨. ಸೂರ್ಪಕುಂಡ–ಬ್ರಾಹ್ಮಣಸ್ತ್ರೀಯೊಂದಿಗೆ ಬೆರೆಯುವ ಕ್ಷತ್ರಿಯ ಮತ್ತು ವೈಶ್ಯ. ೮೩. ಜ್ವಾಲಾಮುಖಕುಂಡ–ಕೈಯಲ್ಲಿ ತುಲಸಿ, ಗಂಗಾಜಲ, ಸಾಲಿಗ್ರಾಮ ಮೊದಲಾದುವನ್ನು ಹಿಡಿದುಕೊಂಡು ಪ್ರಮಾಣಮಾಡಿ ಅದನ್ನು ನಡಸದಿರುವ ಸುಳ್ಳ,-ವಿಶ್ವಾಸಘಾತಕ; ಸುಳ್ಳುಸಾಕ್ಷ್ಯವನ್ನು ಹೇಳುವವನು. ೮೪. ಜಿಹ್ಮಕುಂಡ–ಅವರವರ ಸಂಪ್ರದಾಯದಂತೆ ನಿತ್ಯಕರ್ಮಗಳನ್ನು ಮಾಡದೆ, ದೇವರಸೇವೆಯಲ್ಲಿ ಆಸ್ಥೆಯಿಲ್ಲದೆ ಹುಸಿನಗೆ ನಗುತ್ತಾ ಕಾಲಕಳೆಯುವವನು. ೮೫. ಧೂಮಾಂಧಕುಂಡ–ದೇವಬ್ರಾಹ್ಮಣರ ಹಣವನ್ನು ಕದಿಯುವವನು,-ಕಸಿದುಕೊಳ್ಳುವವನು. ೮೬. ನಾಗವೇಷ್ಟನಕುಂಡ–ವೈದ್ಯರ ಮತ್ತು ಜೋಯಿಸರ ವೃತ್ತಿಯನ್ನು ಕಸಿದುಕೊಳ್ಳುವವನು; ಅರಗು, ಲೋಹ, ಎಣ್ಣೆ ಮೊದಲಾದುವುಗಳನ್ನು ಮಾರಾಟಮಾಡುವ ಬ್ರಾಹ್ಮಣ: ತನ್ನಿಂದಾಗಿ ಮೇರಿ ನರಕೆ ಕುಂಡಕ್ಕೆ ಬೀಳುವುದು ಮಾಸ್ತರಿಗೆ ಬೇಡವಾಗಿತ್ತು (ಅವರಿ. ೧೬೯). [ ನರಕ + ಕುಂಡ$_1$ ]

**ನರಕಕೂಪ** (ನಾ). ೧. = ನರಕಕುಂಡ : ಅಗಮ ತಿಳಿಯದೆ ನರಕಕೂಪದಲ್ಲಿ ಬೀಳುವಿರಲ್ಲ (ಪುರಂದ. ೪–೭೦–೨). ೨. (ಅಲಂ) ಹೊಲಸಿನ ಕುಳಿ; ಅಸಹ್ಯದ ಬಿಲ : ಶುಕ್ಲರಕ್ತೋತ್ಕರ ಕರಂಡಂಗಳು ಸದಾ ಪ್ರತ್ಯಕ್ಷಮಾಗಿರ್ದ ನರಕಕೂಪಂಗಳು (ಬಸವು. ೪೦–೬೦). [ ನರಕ + ಕೂಪ ]

**ನರಕಕೊಂಡ** (ನಾ). = ನರಕಕುಂಡ : ಕಡೆಗೆ ಯಮನ ಕೈಯಲ್ಲಿ ಸಿಲ್ಕಿ ನರಕಕೊಂಡದಲ್ಲಿ ಮುಳುಗೇಳುವುದೇ ನಿಶ್ಚಯ (ವಚಸಂ. ೩೦೮–೬೦).

[ < ನರಕಕುಂಡ ]

**ನರಕಗತಿ** (ನಾ). ೧. ನರಕದಲ್ಲಿರುವುದು; ನರಕಕ್ಕೆ ಹೋಗುವುದು; ನರಕಲೋಕವಾಸ: ರವಿಸುತ ವಿಧುಸುತರಲ್ಲೆ ನರಕಗತಿಯಂ ಕುಡುವರ್ (ಜಾತಕ. ೨೩–೨೪); ಆ ಪಾತಕಂ ನರಕಗತಿಗೆಯ್ದುವ ಧೂರ್ತತನದಿಂ ಕುಟಿಲಮಾರ್ಗಾಂತರ್ಗತನಾಗಿ ಪೋಗೆ (ಶಂಪಶಂ. ೭೧–೦೯); ರಾಮನಿರ್ಪ ಕ್ಷೇಮಭೂಮಿಯನುಳಿಯೆ ಕುಂಭಕರ್ಣನ ಬಾಯ್ಗೆ ಮಿಗಿಲಲಾ ನರಕಗತಿ ನಮಗೆ ? (ತೊರಾಮಾ. ೭೮೪–೧೬೯). ೨. = ನರಕ ೪ : ತೊಡರ್ಪ ನೆ-ಡರಿಸುವ ನರಕಗತಿಯೊಳ್ ತೊಡರ್ವುದೆ ತೊಡರದೆ ಜಿನೇಂದ್ರಮತದೊಳ್ ಹಿತದೊಳ್ (ಅಜಿಪು. ३–೭೦); ನರಕಗತಿಗಿಟ್ಪೊಡಂ ನಿರ್ಜರನಿಳಯಮನೆಯ್ದಿ ಸುಖಮನುಣ್ಬೊಡಮನ್ನರ್ ನೆರಮಲ್ಲರ್ (ಧರ್ಮಾಮೃ. ೯–೧೫೫); ನರಕಗತಿ ಸಮಮ ತಿರ್ಯಙ್ಮರಸುರಗತಿಗಳುಮದಂತೆ ದಲ್ (ಪಾರ್ಶ್ವಪು. ೦೫–೬೩). ೩. [ಜೈನ] ನಿದ್ರಾನಿದ್ರಾ, ಪ್ರಚಲಾಪ್ರಚಲಾ, ಸ್ತ್ಯಾನಗೃದ್ಧಿ, ನರಕಗತಿ, ತಿರ್ಯಗ್ಗತಿ, ಏಕೇಂದ್ರಿಯಜಾತಿ, ದ್ವೀಂದ್ರಿಯಜಾತಿ, ತ್ರೀಂದ್ರಿಯಜಾತಿ, ಚತುರಿಂದ್ರಿಯಜಾತಿ, ನರಕಗತಿ ಪ್ರಾಯೋಗಾನುಪೂರ್ವಿ, ತಿರ್ಯಗ್ಗತಿಪ್ರಾಯೋಗಾನುಪೂರ್ವಿ, ಆತಪ, ಉದ್ಯೋತ, ಸ್ಥಾವರ, ಸೂಕ್ಷ್ಮ ಮತ್ತು ಸಾಧಾರಣ ಎಂಬ ಹದಿನಾರು ಕರ್ಮಪ್ರಕೃತಿಗಳಲ್ಲಿ ಒಂದು ; ಇದರ ಉದಯವಾದಾಗ ನರಕರ್ಪ್ ಹೋಗಿ ನಾರಕೀಯ ಅವಸ್ಥೆ ಪ್ರಾಪ್ತವಾಗುತ್ತದೆ: ಅಂತರ್ಮುಹೂರ್ತದಿಂ ನಿದ್ರಾನಿದ್ರಾಪ್ರಚಳಾಪ ಚಳಾಸ್ತ್ಯಾನಗೃದ್ಧಿನರಕಗತಿ ತತ್ಪ್ರಾಯೋಗ್ಯಾನುಪೂರ್ವತಿರ್ಯಗ್ಗತಿ ತತ್ಪ್ರಾಯೋಗ್ಯಾನುಪೂರ್ವೈ ಕೇಂದ್ರಿಯ ವಿಕಳೇಂದ್ರಿಯ ಜಾತ್ಯಾ ತಪೋದ್ಯೋತ ಸ್ಥಾವರ ಸಾಧಾರಣ ಸೂಕ್ಷ್ಮಂಗಳೆಂಬ ಪದಿನಾಱುಂ ಕರ್ಮ ಪ್ರಕೃತಿಗಳಂ ನಿರವಶೇಷಂ ಕಿಡಿಸಿ (ಅಜಿಪು. ೦೦–೮೪ ವ); ನರಕಗತಿ ತತ್ಪ್ರಾಯೋಗ್ಯಾನುಪೂರ್ವಿತಿರ್ಯಗ್ಗತಿ . . . ಸ್ಥಾವರ ಸಾಧಾರಣಸೂಕ್ಷ್ಮಂ[ಗಳೆಂಬ] ಷೋಡಶಕರ್ಮಪ್ರಕೃತಿಗೆ ವಿಳಯಂ ಮಾಡಿ (ಶಾಂತಿಪು. ೧೧–೧೧೧ ವ). [ ನರಕ + ಗತಿ ]

**ನರಕಗಾಮಿ** (ನಾ). ನರಕಕ್ಕೆ ಹೋಗುವವನು ; ನರಕಕ್ಕೆ ಪಾತ್ರನಾಗುವವನು : ಈ ಧರ್ಮ್ಮವಾನಳಿದ ಮಹಾಪಾತ xxx ನರಕಗಾಮಿಯಕ್ಕು (ಸೌಇಇ. XX, ೩೮–೩೩ : 1058). [ ಸಂ. ನರಕಗಾಮಿನ್ ]

**ನರಕಚತುರ್ದಶಿ** (ನಾ) ಆಶ್ವಯುಜ ಮಾಸದ ಕೃಷ್ಣಪಕ್ಷದ ಚತುರ್ದಶಿ; ಶ್ರೀ ಕೃಷ್ಣನು ನರಕಾಸುರನನ್ನು ಕೊಂದುದರ ನೆನಪಿಗಾಗಿ ಆ ದಿನ ಆಚರಿಸುವ ಹಬ್ಬವೆಂದು ಸಾಮಾನ್ಯವಾಗಿ ನಂಬಲಾಗಿದೆ. ಆದರೆ ಇದಕ್ಕೆ ಪುರಾಣಗಳಲ್ಲಿ ಆಧಾರವಿದ್ದಂತಿಲ್ಲ. ನರಕಚತುರ್ದಶಿಯ ದಿನ ಮಾಡುವ ವ್ರತ ಪೂಜಾಕರ್ಮದಲ್ಲಿ ನರಕಕ್ಕೆ ಬೀಳದಿರುವಂತೆ ಆಗಲೆಂದು ಹಾರೈಕೆಯನ್ನು ಹೇಳುವ ಮಂತ್ರವಿದೆ: ಆಶ ಯುಜ ಬಹುಳ ಹದಿನಾಲ್ಕನೆಯ ತಿಥಿ ನರಕಚತುರ್ದಶಿ (ಧಾಹಬ್ಬ. ೦೪೩). [ ನರಕ + ಚತುರ್ದಶಿ ]

**ನರಕಚೋರ** (ನಾ). ಒಂದು ಬಗೆಯ ಸುಗಂಧ ದ್ರವ್ಯ,-ಕಚೋರ : ನರಕಚೋರ, ನವಸಾಗರ, ನಾಗರ ಮೋಥೆ (ಮುಂಬಮ್ಮಾ. ೧೨೩).

[ ನರ$_2$ + ಕಚೋರ ]

**ನರಕಜೀವಿ** (ನಾ). ನರಕದಲ್ಲಿ ತೊಳಲುವವನು ; ಪಾಪಿ : ಆಕಾರವಿಲ್ಲದ ನಿರಾಕಾರಲಿಂಗವ ಕೈಯಲ್ಲಿ ಹಿಡಿದು ಕೊರಳಲ್ಲಿ ಕಟ್ಟಿದೆವೆಂಬರು ನರಕ[ಪಾಠಾಂ. ಕ]ಜೀವಿಗಳು (ಮಹಾದೇ. ಬ.೧೬೦–೨೯೮).

[ ನರಕ + ಜೀವಿ$_1$ ]

**ನರಕದರ್ಶನ** (ನಾ). ನರಕವನ್ನು ನೋಡುವಿಕೆ ; ನರಕದ ನೋಟ : ದ್ರೋಣನು ನಿನ್ನ ಮಾತಿನಿಂದ ಮೋಸಹೋದನು. ಆ ತಪ್ಪಿನ ಫಲದಿಂದ ನಿನಗೆ ನರಕದರ್ಶನವಾಯಿತು (ಸೀತಿಶಂ. IV, ೩೨) ; ನರಕ ತಪ್ಪಿತು ಧರ್ಮಜಂಗೆ, ದಿಟ, ಅದೊಡೇಂ ? ನರಕದರ್ಶನದುಃಖ ತಪ್ಪದಾಯಿತಲ? (ಮಂಕುಳ. ೫೦೦) ; ಅದಕೆ ತಕ್ಕಂತೆ ನಿನಗೆ ಮತ್ತೊಬ್ಬರ ನೆವದಿಂದ ನರಕದರ್ಶನವಾಯಿತು (ವಚಭಾ. ೩೯೦). [ ನರಕ + ದರ್ಶನ ]

**ನರಕದುಃಖ** (ನಾ). ನರಕದ ಶಿಕ್ಷೆಯಿಂದುಂಟಾಗುವ ದುಃಖ,-ಸಂತಾಪ : ಕೇವಲಮ ನರಕದುಃಖಂ ಕೇವಲವಿಜ್ಞಾನವಿಷಯಮಲ್ಲಶ್ರುತದೊಳ್ ಭಾವಿಪೊಡಾರ್ ನೆಱೆ ನುಡಿವರೊ ದೇವಂ ಸರ್ವಜ್ಞನೊರ್ವನೇ ನೆಱೆ ನುಡಿಗುಂ (ಅಜಿಪು. ೦೦–೧೩) ; ನರಕದುಃಖವ ಮತ್ತೆ ಭೋಗಿಸಬೇಕು ದೇಹಿಗಳು (ತಿಮ್ಮಸ. ೧–೫೦). [ ನರಕ + ದುಃಖ ]

**ನರಕನಿಳಯ** (ನಾ). = ನರಕ ೧ : ಆ ಪಾಪ್ಪೆ . . . ನರಕನಿಳಯಕ್ಕಾ ಪೊತ್ತುಂ ಪೋಪೆನೆಂದು ಮನದಂದಾಗಳ್ (ಪುಣ್ಯಾಸ್ರ. ೫-೩೭).
[ ನರಕ + ನಿಳಯ ( = ನಿಲಯ ) ]

**ನರಕಪಾತ** (ನಾ). ನರಕದಲ್ಲಿ ಬೀಳುವುದು : (Damnation. ಹಾರಿನಿ. ೨೬).
[ ನರಕ + ಪಾತ$_1$ ]

**ನರಕಪಾಲ** (ನಾ). ಮನುಷ್ಯನ ತಲೆಬುರುಡೆ : ನರಕಪಾಲದೊಳು ತೀವಿದ ಹಸಿಯ ಗೋಮಾಂಸವ ಮೆಲುತ (ಹಚಶಾ. ೧೧-೩೧) ; ನರಕಪಾಲದ ಪಾತ್ರೆಗಳ ತಿಲದೊರಳಿಗಳ ಕೇಶೌಘದರ್ಭಾಂಕುರದಲಾಹವಯಜ್ಞದೀಕ್ಷಿತ ನಹೆನು ತಾನೆಂದ (ಕುಮ್ಯಾಆ. ೧೦-೧೯) ; ನರಕಪಾಲದಲ್ಲಿ ಆಸವವು . . . ತುಂಬಿದ್ದಿತು (ಕಹಾಳುಂ. ೨೫). [ ನರ$_3$ + ಕಪಾಲ$_3$ ]

**ನರಕಬಾಧೆ** (ನಾ). ೧. ನರಕದಲ್ಲಿ ಅನುಭವಿಸುವ ನೋವು ; ನರಕದ ದುಃಖ : ಮುರಹರ ನಗಧರ ಮುಕುಂದ ಎನ್ನದೆ ನರಕಬಾಧೆಗೆ ಗುರಿಯಾಗುತಿ (ಪುರಂದ. ೪-೦೨೫-೪) ; ನರಸಮಿತಿ ಕೊಂದರೆಂದಡೆ ಪೆರವಾಗದೆ ನೋಡದೋಡಿದರು ನಿನ್ನವರೆಂದರೆ ನರಕಬಾಧೆಗವರೇಂ ನೆರವಪ್ಪರೆ (ನನ್ನಚಾ. ೫-೪೪) ; ಪರಲೋಕಸಾಧನಗಳಂ ಚರಿಸುವ ಚತುರರಿಂಗೆ ನರಕಬಾಧೆಗಳಿಲ್ಲ (ವಿಶಾಕು. ೮೪-೭). ೨. (ಆಲಂ) ತೀವ್ರವಾದ ಯಾತನೆ.
[ ನರಕ + ಬಾಧೆ ]

**ನರಕಬಿಲ** (ನಾ). [ಜೈನ] ನರಕ : ಅಲ್ಲಿಂದತ್ತಮೇಕರಜ್ಜುಪ್ರಮಾಣಾಂತರದೊಳಮರಿಷ್ಟೆಯೆಂಬವೆಸರನುಳ್ಳ ಧೂಮಪ್ರಭೆಯೆಂಬಯ್ದನೆಯ ನರಕಬಿಲಂಗಳೆಲ್ಲಂ ಮೂಱುಲಕ್ಕಮಕ್ಕುಂ (ಅಜಿಪು. ೦೧-೭ ವ).
[ ನರಕ + ಬಿಲ ]

**ನರಕಭಯ** (ನಾ). ೧. ನರಕಲೋಕಕ್ಕೆ ಹೋಗುವ ಹೆದರಿಕೆ ; ನರಕಗತಿಯುಂಟಾಗುವ ಭಯ,-ಅಂಜಿಕೆ : ನಾಮಕೀರ್ತನೆ ಅನುದಿನ ಮಾಳ್ಪಗೆ ನರಕಭಯಗಳುಂಟೆ (ಪುರಂದ. ೨-೦೦೬ ಪಲ್ಲವಿ). ೨. ನರಕಾಸುರನ ಭಯ. ೧, ೨: ನರಕಭಯಂ ಹರಿಕಥೆಯೊಳ್ . . . ಪಿರಿದುಂ ಮುಖಭಂಗತ್ವಂ ಜರೆಯೊಳ್ಮಿಯ್ದೋರ್ಪುವಲ್ಲದಿಲ್ಲಾ ನಾಡೊಳ್ (ತ್ರಿಪುವಿ. ೨-೩೧).
[ ನರಕ + ಭಯಂ ]

**ನರಕಭಾಜನ** (ನಾ). ೧. ನರಕಕ್ಕೆ ಪಾತ್ರನಾದವನು ; ದುಷ್ಕರ್ಮಿ : ಪುರಹರನ ಪ್ರತಿಬಿಂಬವೆನಿಸಿದ ಶರಣರಂ ಧಿಕ್ಕರಿಸಿ ನಿಂದಿಸಿ ನರಕಭಾಜನರಾದಿರೀಶ್ವರದೂಷಕರು ನೀವು (ಬಸಪು. ೫೭-೪೦); ಹಿಗ್ಗುವೆ ಯಾಕೋ . . . ಪರರ ಸೇವೆಯ ಮಾಡಿ ನರಕಭಾಜನನಾಗಿ ಮರಳಿ ಮರಳಿ ಬಿದ್ದು ಉರುಳುವ ದೇಹಕ್ಕೆ (ಪುರಂದ. ೦-೧೨೨-೩). ೨. ನರಕಕ್ಕೆ ಸಮಾನವಾದುದು ; ಪುಣ್ಯಾಸ್ಪದವಲ್ಲದುದು: ಹರಹರ ತ್ರ್ಯಯಸ್ಕ ಕರುಣಾಕರ ಮಹಾದೇವೀ ದುರಂತದ ನರಕಭಾಜನಮುಚಿತವೇ ನಿಮ್ಮಂಘ್ರಿದರ್ಶನಕೆ (ಕುಮ್ಯಾಆ. ೧೬-೫೭) ; ಶಿರುಕರಿಲ್ಲದ ಊರು ನರಕಭಾಜನಮಕ್ಕು (ಸರ್ವಜ್ಞ. ೫೦೯).
[ ನರಕ + ಭಾಜನ ]

**ನರಕಭೂತಾಳೆ** (ನಾ). ಒಂದು ಬಗೆಯ ಗಿಡ : ಗಬ್ಬುಚಿಕ್ಕ, ನರಕಭೂತಾಳೆ (ಮೃಶಗಿ. ೩೯-೭೭೦). [ ನರಕ + ಭೂತಾಳೆ ]

**ನರಕಭೂಮಿ** (ನಾ). = ನರಕ ೧ : ಅಂತು ರತ್ನಪ್ರಭೆಯಿಂ ತೊಟ್ಟು ನಾಲ್ಕುವರೆ ನರಕಭೂಮಿವರಂ ಉತ್ಕೃಷ್ಟಮುಷ್ಣಮುಂ ಅಲ್ಲಿಂದತ್ತರಡುವರೆ ಭೂಮಿವರಮತಿಶೀತಮಕ್ಕುಂ (ಅಜಿಪು. ೦೧-೬ವ).
[ ನರಕ + ಭೂಮಿ ]

**ನರಕಮರ್ದನ** (ನಾ). ನರಕಾಸುರನನ್ನು ಸಂಹಾರ ಮಾಡಿದವನು ; ಕೃಷ್ಣ : ನರಕಮರ್ದನ ಕೇಳು ಕೌರವನರಿಗಳಿದಿರೆ . . . ತೊಡೆವೆನು ಕೃತಾಂತನ ಥಾಳದಕ್ಕರವ (ಕುಮ್ಯಾಉ. ೬-೨೮).
[ ನರಕ + ಮರ್ದನ ]

**ನರಕಯಾತನೆ** (ನಾ). ೧. ನರಕಬಾಧೆ ೧ : (+). ೨. (ಆಲಂ) ಅತಿಯಾದ ನೋವು ; ಅಸಹನೀಯವಾದ ದುಃಖ : ವಾಸಂತಿಯ ಹೃದಯ ನರಕಯಾತನೆಯನ್ನನುಭವಿಸಿತು (ಶೀಮೋಚ. ೯೨) ; ಸಹಸ್ರಾರು ಮಂದಿ, ಕೇವಲ ಭ್ರಮಯಿಂದಲೇ-ಸಂಶಯದಿಂದಲೇ ನರಕಯಾತನೆ ಅನುಭವಿಸುತ್ತಿದ್ದಾರೆ (ವೀರಯೋ. ೪೯). [ ನರಕ + ಯಾತನೆ ]

**ನರಕರೋಟಿ** (ನಾ). = ನರಕಪಾಲ : ಪ್ರಾತಭಸಿತಸಂ ಪಿಶಿತವನು ನರಕರೋಟಿಯೊಳು ಕೃತಕರ್ಮಭೇದನದಿ ತೀವಿ (ಸಿಂಗಿರಾ. ೦೮-೭).
[ ನರ$_3$ + ಕರೋಟಿ$_3$ ]

**ನರಕಲೋಕ** (ನಾ). = ನರಕ ೧ : ವೈರಿವರ್ಗಮನಡಿಯೊಳಿಟ್ಟಂತೆ ನರಕಲೋಕಮಡಿಯೊಳಿರ್ದುದು (ಜೀವಸಂ. ೩೩-೧). [ ನರಕ + ಲೋಕ ]

**ನರಕವಾಸ** (ನಾ). ೧. ನರಕದಲ್ಲಿ ಇರುವಿಕೆ. ೨. (ಆಲಂ) ಘೋರ ಯಾತನೆ : ಬೇರೆ ನರಕವಿದೆಯೇ ? . . . ನಿತ್ಯ ನರಕವಾಸ ಅನುಭವಿಸುತ್ತಿರುವೆನು (ಕಾವೇರಿ. ೦೦೧). [ ನರಕ + ವಾಸ$_2$ ]

**ನರಕವಾಸಿ** (ನಾ). ನರಕದಲ್ಲಿ ವಾಸಿಸುವವನು : ಹರಿಭಕುತಿ ಉಳ್ಳವರ ಶರೀರವೆ ಕುರುಕ್ಷೇತ್ರ ಅವರು ನರರೆಂದು ಬಗೆವವರೆ ನರಕವಾಸಿಗಳು (ಪುರಂದ. ೧-೧೦೮ ಅನುಪಲ್ಲವಿ). [ ಸಂ. ನರಕವಾಸಿನ್ ]

**ನರಕವಿ** (ನಾ). (ದೈವದತ್ತ ಪ್ರತಿಭೆ ಇಲ್ಲದ) ಸಾಮಾನ್ಯಕವಿ: ವರಕವಿಗಳ ಮುಂದೆ ನರಕವಿಗಳ ವಿದ್ಯೆ ತೋರಬಾರದು (ಕನಕ. ೩೩ ಪಲ್ಲವಿ).
[ ನರ$_3$ + ಕವಿ$_3$ ]

**ನರಕವೇದನೆ** (ನಾ). = ನರಕಬಾಧೆ ೧ : ಅವರು ತಾವು ಮಾಡಿದ ತಪ್ಪಿಗೆ ಬದುಕಿದ್ದಾಗಲೇ ನರಕವೇದನೆ ಅನುಭವಿಸಿದರು (ರೂಢಿ).
[ ನರಕ + ವೇದನೆ ]

**ನರಕಸ್ಥಾನ** (ನಾ). ೧. ನರಕದ ನೆಲೆ; ನರಕಲೋಕ: ನರಕಸ್ಥಾನದೊಳೆಂದು ತಾನೆನಗೆ ಬಂದಾ ದುರ್ಧರಾವಸ್ಥೆಯಂ ಪಿರಿದೇಂ (ಶಾಂತೀಶ್ವ. ೯-೧೪೪). ೨. ಹೇಸಿಗೆಯ ನೆಲೆ : ಕ್ರಿಮಿ ಮೇಣ್ ಭಸ್ಮಂ ಮೇಣ್ಪೆಟ್ಟಿ ಮೇಣ್ ಶರೀರಕ್ಕೆ ನಿಟ್ಟೆಯಿ ದೊರೆಯುದಟಿರೊಳ್ ಕಮನೀಯಮೊಂದುಮಿಲ್ಲಶುಚಿಮಲಾಧಿಷ್ಠಾನಮಿದುವೆ ನರಕಸ್ಥಾನಂ (ಅಜಿಪು. ೨-೫೩).
[ ನರಕ + ಸ್ಥಾನ ]

**ನರಕಾಂತಕ** (ನಾ). ೧. = ನರಕಮರ್ದನ : ಆ ನರಕಾಂತಕನೀಕೆಗಂಡು ಕೊಟ್ಟನೆ ನಿಜಲಕ್ಷ್ಮಿಯಂ ಮಱೆದಂ (ಪಂಪಭಾ. ೪-೮೩). ೨. [ಜೈನ] ವಾಸುದೇವ : ಅಂತಾ ವಿದ್ಯೆಗಳಂ ನರಕಾಂತಕನಲಸದೆ ವಿಷಂ ವಿಷಸ್ಯೌಷಧಮೆಂಬಂತಿರೆ ವಿದ್ಯೆಗಳಿಂ ಗೆಲ್ದಂ (ಶಾಂತಿಪು. ೫-೬೨). [ ನರಕ + ಅಂತಕ ]

**ನರಕಾಗ್ನಿ** (ನಾ). ನರಕದಲ್ಲಿ ಶಿಕ್ಷೆ ಕೊಡಲು ಉಪಯೋಗಿಸುವ ಬೆಂಕಿ : ನರಕಾಗ್ನಿಗಳ್ಕೆ ನಿನ್ನೊಳ್ಕೆರಯದೊಡೀ ಕಾಮವಹ್ನಿ ಸುಟ್ಟಪುದು (ವೃಷವಿ. ೨೮-೦೦೦). [ ನರಕ + ಅಗ್ನಿ ]

**ನರಕಾಧಿಪತಿ** (ನಾ). ನರಕಲೋಕದ ಒಡೆಯ ; ಯಮ.
[ ನರಕ + ಅಧಿಪತಿ ]

**ನರಕಾಯುಷ್ಯ** (ನಾ). [ಜೈನ] ಹದಿನಾರು ಕರ್ಮಪ್ರಕೃತಿಗಳಲ್ಲಿ ಒಂದು; ನರಕದಲ್ಲಿ ವಾಸಮಾಡುವ ಕಾಲ,— ಅವಧಿ ; ಧನ-ಧಾನ್ಯ ಪರಿಗ್ರಹ ಮೊದಲಾದುವುಗಳಲ್ಲಿ ಅತಿಯಾದ ಮೋಹ, ಹಿಂಸೆ ಮೊದಲಾದ ಪಾಪಕರ್ಮಗಳಲ್ಲಿ ಆಸಕ್ತಿ-ಇವುಗಳಿಂದ ಉಂಟಾಗುವ ಕರ್ಮಬಂಧ : ನಿಪತನೂಜರೊಡನೆ ಖೇಚರ ಗೋಚರ ವಿಭವಮನನುಭವಿಸಿ ಬಹ್ವಾರಂಭಸಂರಂಭರೌದ್ರಧ್ಯಾನಪರಿಣತನುಪಾರ್ಜಿತ ನರಕಾಯುಷ್ಯಂ ಪ್ರತ್ಯಾಸನ್ನಮೃತ್ಯುವಾಗಿ (ಆದಿಪು. ೨-೧೧ ವ): ಆ ಸಮಯದೊಳಾತಂಗೇಟನೆಯ ನರಕಾಯುಷ್ಯಂ ನೆಟಿಯೆ (ಪುಣ್ಯಾಸ್ರ. ೩-೫೪ ವ). ‘ ನರಕಗತಿ ’ ಪರಾ.
[ ನರಕ + ಆಯುಷ್ಯ ]

**ನರಕಾರಿ** (ನಾ). ೧. = ನರಕವರ್ಮರ್ದನ : "ಶ್ರೀವತ್ಸಂ ನರಕಾರ್ಯಧೋಕ್ಷಜ ನಜಂ ಪೀತಾಂಬರಂ . . . ಹೃಷೀಕೇಶಂ ಸುಪರ್ಣಧ್ವಜಂ" (ವಸು_ಕೋ. ೯-೩೨). ೨. [ಛಂದ] ವಿಷ್ಣುಗಣದ ಒಂದು ಬಗೆ : ವಿಷ್ಣುಗಣಮೆಂತೆಂದೊಡೆ:–೧. ಗೋವಿಂದಂ . . . ೫. ಕಂಸಾರಿ ೬. ನರಕಾರಿ (ಛಂದೋಂಬು. ೩-೨೧೦ ವ). [ ನರಕ + ಅರಿ$_{2}$ ]

**ನರಕಾವಸ್ಥೆ** (ನಾ). ನರಕಕ್ಕೆ ಬಿದ್ದಿರುವ ಸ್ಥಿತಿ ; ನರಕವಾಸ : ನರಕಾವಸ್ಥೆಯೊಳಿರ್ದುದಂ ನೆನೆ ಬಟಿಕ್ಕಂ ಧರ್ಮದಿಂದೀ ವಿಯಚ್ಚರಸಂಪತ್ತಿಗೆ ಬಂದುದಂ ನೆನೆ (ಶಾಂತೀಶ್ವ. ೯-೧೨೦). [ ನರಕ + ಅವಸ್ಥೆ ]

**ನರಕಾಸುರ** (ನಾ). = ನರಕ ೩ : ನರಕಾಸುರ ಮದಕರಿಪಂಚವದನ ಕುಸುಮಾಯುಧಮಂಗಳಜನ್ಮಸದನ (ಶಂಕಶಂ. ೧೬೨-೩); ಕಾಳಗದಲಿ ನರಕಾಸುರನ ಸೀಳಿ ಬಿಸಾಡಿ . . . ಸುದತಿಯರೆಲ್ಲರ ಆಳಿದ ವಸುದೇವಾತ್ಮಜಗೆ (ಪುರಂದ. ೧-೩೬೬-೨) ; ಆಹಾ ನಿಶಾಚರಿಯರಲ್ಲವೇ ನರಕಾಸುರನಮನೆಯ ಬಾಲಿಕೆಯರು (ಕೃಮಿಥಾ. ೨-೩೯) ; ಶ್ರೀಕೃಷ್ಣ . . . ಸತ್ಯಭಾಮೆಯ ಕಡೆಯಿಂದಲೇ ನರಕಾಸುರನನ್ನು ಕೊಲ್ಲಿಸಿದ (ಭಾಹಲ್ಯ. ೧೯೩). [ ನರಕ + ಅಸುರ ]

**ನರಕಿ** (ನಾ). = ನರಕಭಾಜನ ೧ : ನರಕಿಗಳನೆನಗೊಮ್ಮೆ ತೋಱದಿರಾ ರಾಮನಾಥಾ (ದೇವಾವ. ೩೩-೩೯) ; ಒಡಲ ಗುಣಧರ್ಮಂಗಳು ಬಿಡದೆ ನಡೆವನ್ನಕ್ಕ ಎಡವಟಿಯದ ಪೂಜೆಯು ತೊಡಿಹನೆಂಬ ನರಕಿಗಳವರೆತ್ತ ಬಲ್ಲರೋ (ಚಕ್ಕೃಚ. ೪. ೩೯೩-೧೧೮೨) ; ಕೃತಘ್ನನೆ ನರಕಿ ವಿದ್ಯಾಧಮ ಮದಾಂಧನೆ ಬಾಹಿರನು (ಕುಮ್ಯಾಳ. ೨೩-೪೩) ; ನರಕಿಗಳು ನಾವಮ್ಮ ಜಗದೊಳು ಧರೆಗೆ ಭಾರಕರು (ಕೌಶಿರಾ. ೪-೧೩). [ ಸಂ. ನರಕಿನ್ ]

**ನರಕೀಟ** (ನಾ). ಕೀಟದಂತಿರುವ ಮನುಷ್ಯ ; ಕ್ಷುದ್ರನಾದ ಮನುಷ್ಯ ; ದುರ್ಬಲಮನುಷ್ಯ : ನರಕೀಟದ್ವಯಸಂಗರಕ್ಕೆ ಖಚರೇಂದ್ರಾಧೀಶನಿಂತೇಕೆ ಕಾತರನಪ್ಪಂ ಗಡಂ (ಶಾಂತಿಪು. ೩-೯೮) ; ಕಲಿಕಾಲದ . . ನರಕೀಟಂಗಳು ಜಿನರೂಪಂ ಧರಿಯಿಸುವುದರಿದೆಂದು ಮನದೊಳ್ಪಗೆವುದೆಂತೆನೆ (ಹಸಾರ.೩.೨೨).
[ ನರ$_{2}$ + ಕೀಟ$_{2}$ ]

**ನರಕೀಟಕ** (ನಾ). = ನರಕೀಟ : ಈ ನರಕೀಟಕರ ಮಾತುಗಳವೇತಕೆ ಕೋಟಿಯೇಕೋ ರುದ್ರ ನ ದ್ವಿತಿಯೆಂದು ಶ್ರುತಿ ಮೊರೆಯೆ (ಬಸವು. ೩೪-೧೬).
[ ನರ$_{2}$ + ಕೀಟಕ$_{2}$ ]

**ನರಕು, ನೆರಕು** (ಕ್ರಿ). ಅವ್ಯಕ್ತವಾದ ಧ್ವನಿಯಿಂದ ನೋವನ್ನು ವ್ಯಕ್ತಪಡಿಸು,-ನಿಶ್ಶಕ್ತಿಯನ್ನು ಸೂಚಿಸು; ನರಳು: ಎಂಟು ಸಾರಿಯುಂಬಳು ಕುಂಟಿಯಾಗಿರುವಳು ನಂಟರು ಬಂದರೆ ನರಕುವಳು ಶಿವಶಿವ ನಂಟರು ಬಂಗರೆ ನರಕುವ ಪೋರಿಯ ಸೊಂಟವ ಮುರಿ (ಹಾಸ್ಯಮು. ೩) : ದೊರಕಿದ ಬಟ್ಟೆ ಹಳಕು ಆದರೆ ನರಕೋದು ಯಾಕೆ ? (ಗಾದೆ). **ನೆರಕು** : ಕಾಲಾಳ್ಗಳು ನೆರಕುತಿರ್ದವು ಕಾಲು ಕೈ ಮಱಿದು ಘಾಯದಿಂ ಸುರಿವುತಿರ್ದವು ರಕ್ತ (ಕುರಂಗ. ೩೩-೨೦).

[ ದೇ. ೩ ತುಲ. ನರಣ್ನು, ಞರಣ್ನು , ನರಕ್ಕ = ನರಳುವಿಕೆ : ತುಳು ನರಕು, ನರ್ಕು; ಕೊಡ. ನೆರಕ್; ಮಲ್ತೊ. ನಿರೆ ]

**ನರಕುಟಿ** 'ನರಗುಟಿ' ನೋ.

**ನರಕೇಸರಿ** (ನಾ). = ನರಸಿಂಹ ೧ : ಮುಳಿದ ನರಕೇಸರಿಯ ದಾಡೆಯ ಥಳಥಳತ್ಕಾರವೊ ಮಹಾಸ್ತ್ರದ ಬೆಳಗೊ (ಕುಮ್ಯಾದ್ರೋ. ೧೯-೦೩).
[ ಸಂ. ನರಕೇಸರಿನ್ ]

**ನರಗ$_{1}$** (ನಾ). = ನರಕ ೧ : ಪಞ್ಚಮಹಾಪಾತಕಸಂಯುಕ್ತನಾಗಿ ಪೂಶಿ ಎನ್ನ ನರಗಕ್ಕೆ ಸಲ್ಗೆ (ಎಕ. VI, ಕೊಪ್ಪ. ೩೭-೮ ; ಸು. 676).
[ < ಸಂ. ನರಕ ]

**ನರಗ$_{2}$** (ನಾ). ೧. ಒಬ್ಬಾತನ ಹೆಸರು : ನರಗನಿಱಿಯೆ ತನ್ನಡಿಯನುಂ ತನ್ನ ಮಕ್ಕಳುಂ ತನ್ನೊಕ್ಕಲುಂ . . . ಪೆರ್ಮ್ಮಾಡಿಯ ಬೆಸದೊಳಿಱಿದು (ಎಕ. I, ಕಡೂರು. ೦೪೭-೫ ; 972) ; ಕಾಳೆನೋ ರಾವಣನೋ ಶಿಶುಪಾಳನೋ ತಾನೆನಿಸಿ ನೆಗಟ್ದ ನರಗನ ತಲೆ ಶನ್ನಾಳಾಳ ಕಯ್ಗೆವನ್ದುದು (ಎಕ. II, ೫೯-೯೫; 974). ೨. ಒಬ್ಬಾತನ ಹೆಸರು ; ಚಾಳುಕ್ಯ ವಂಶದ ಅರಿಕೇಸರಿಯ ತಂದೆ : ವಿಟುಂ ಮಾಳವುಮುಮಂ ಪಾಱಿಟೆ ತಗುಳ್ದು ಱಿದು ನರಗನುರಿಪಿದೊಡೆ ಕರಿಂಕೀಟಿಸಿದಾತನ ತೇಜದ ದೀಟಲವನುಕರಿವುವಾದುವೊಗೆದುರಿವುರಿಗಳ್ (ಪಂಪಭಾ. ೧-೩೩). [ < ಸಂ. ನರಸಿಂಹ ? ]

**ನರಗ$_{3}$** (ನಾ). [ಛಂದ] ಪ್ರತಿಸಾಲಿನಲ್ಲಿಯೂ ಏಳು ಅಕ್ಷರಗಳಿರುವ ಉಷ್ಣಿಕ್ ಎಂಬ ನಾಲ್ಕು ಸಾಲಿನ ವರ್ಣಛಂದಸ್ಸಿನ ಒಂದು ವೃತ್ತ ; ಪ್ರತಿಸಾಲಿನಲ್ಲಿಯೂ UUU, -U-, -ಹೀಗೆ ಗಣನಿಯಮವುಳ್ಳ ವೃತ್ತ : ನರಗಮೆಂಬ ವೃತ್ತಾಕ್ಷರಹೊ ಪಾದಮಾಗುತ್ತಿರೆ ಶಶಾಂಕವಕ್ತ್ರೇ ವರಗನಾಮವೃತ್ತಂ (ಛಂದೋಂಬು. ೨-೯೦). P ನಗಣ, ರಗಣ ಮತ್ತು ಒಂದು ಗುರು ಇದು ಈ ವೃತ್ತದ ಲಕ್ಷಣ. ಈ ಲಕ್ಷಣಸಂಕೇತವೇ ಇದರ ಹೆಸರಾಗಿದೆ. [ ಸಂ. ]

**ನರಗಂಡಮಾಲೆ** (ನಾ). ಕೊರಳ ನರಗಳ ಮೇಲೆ ಗಂಟುಗಂಟಾಗಿ ಕಾಣಿಸಿಕೊಳ್ಳುವ ಒಂದು ಬಗೆಯ ರೋಗ : ಮಾವು, ಮಾವಿನ ಒಳನಾರು, ಎಳ್ಳೆಣ್ಣೆ, ಮೆಣಸು ಇವು ನಾಲ್ಕು ಸಹವಾಗಿ ಕೊಳ್ಳಲು ಗಂಡಮಾಲೆ, ನರಗಂಡಮಾಲೆ ಮಾಣ್ಗುಂ (ವಿಶ್ವವಿ. ೭೯).
[ ನರ$_{1}$ (<ನರವು) + ಗಂಡಮಾಲೆ ]

**ನರಗಟ್ಟು** (ನಾ). ನರಮಂಡಲ ; ನರವ್ಯೂಹ : ನರಗಟ್ಟು, ನರಮಾನಿಸಂ, ಬಲವಟ್ಟೆ, ತಱಿವೊನ್, ಬಡನಡು (ಶಬ್ದಾನು. ೩೩೨ ವ್ಯಾಖ್ಯಾ).
[ ನರ$_{1}$ (<ನರವು) + ಕಟ್ಟು$_{3}$ ]

**ನರಗತಿ** (ನಾ). ಮನುಷ್ಯ ಜನ್ಮ : ನರಗತಿಯನಿಂದು ಭೃಗುಜರ್ ತಿರ್ಯಗ್ಗತಿಯುಂ ಕುಜರವಿಗಳ್ . . . ಕುಡುವರ್ (ಜಾತತಿ. ೨೩-೨೪).
[ ನರ$_{2}$ + ಗತಿ ]

**ನರಗಬ್ಬಿಗ** (ನಾ). = ನರಕವಿ : ಜಾಣರಿಗೆ ಸುಕವಿಗಳಿಗುಱುವ ನರಗಬ್ಬಿಗರ ಕುಕವಿಗಳ ಸಂಗಮಂ ಸಂತತಂ ತೊಱೆದು ಮೆಱೆವಾ ಅಱುತ ಸೋಮೇಶ ನೊಲಿದಿತ್ತನಾಹತಮತಿಯ ಕುಱುಹಿನಭಿನವಮಂಗನುಸುರ್ದ ಸತ್ಕೃತಿಯನಿದಱಿವರಾರ್ (ಮುಂಗಣ. ೩-೭). [ ನರ$_{2}$ + ಕಬ್ಬಿಗ ]

**ನರಗು** (ನಾ). ಇಕ್ಕಟ್ಟು ; ಸ್ಥಳ ಸಾಲದಿರುವಿಕೆ (?) : ಹೊರಗಿನ ಕೋಟೆಗೆ ಒಳಗಿನ ಜನ ಸಾಲಲಿಲ್ಲ. ಆ ಕೋಟೆ ನರಗಾಯಿತು, ಪಟ್ಟಣದ ಜನ ಹೊಂಡದ ನೀರಿಗೆ ಹೋಗಲು ಸಾಧ್ಯವಾಗಲಿಲ್ಲ (ಚಿತ್ರಚಾ. ೯೭). [<ನರಕು ? ]

**ನರಗುಂಜಿ** (ನಾ). ಒಂದು ಬಗೆಯ ಸಸ್ಯ : ನರಗುಂಜಿಸೊಪ್ಪು ತಂದು ನೀರ ಬಿಟ್ಟುಕೊಂಡು ತುಳಿದು ಸೊಲ್ಲಗೆ ರಸವ ತೆಗೆದು ಅದನ್ನು ಹಸುವಿನ ಮಜ್ಜಿಗೆ ಬೆರಸಿ ಕೊಳ್ಳೆ ನೀರಕೊಂಬಿನ ವ್ಯಾಧಿ ಮಾಣ್ಗುಂ (ವಿಶ್ವವಿ. ೭೦). 'ನಱುಂವಂಜಿ' ಪರಾ. [ ? ]

**ನರಗುರಿ** 'ನರಗುಟಿ' ನೋ.

**ನರಗುರಿಗ** (ನಾ). = ನರಗುಟಿ : ನರಗುರಿಗನು ನಾನು ಪರಿಪರಿ ವಿಧದಿಂದಾಂತರಯಲಿ ಧ್ಯಾನವಾಚರಿಸಲು ಪುಣ್ಯವೆಂದರಿಯಲು ಮನಸು ನಿಂದಿರದೆ . . . ಪಾಪದ ಕಡಿಗೆ ಪರಮಪ್ರೀತಿಬಡುವುದು (ಮೋಕ್ಷದೀ. ೨೨೨-೨೨) : ನರಗುರಿಗ ನಾನು ಎನ್ನ ಎತ್ನವಲ್ಲಾ ಗುಣಗಳ ದಯಮೆಂತೊ ಅವರಿಗರಹೊ (ವಿಸಾಕು. ೯೪-೩). [ ನರಗುರಿ (<ನರಗುಟಿ) + -ಗ$_{3}$ ]

**ನರಗುಟಿ, ನರಕುಟಿ, ನರಗುರಿ** (ನಾ). ಕುರಿಯಂತಹ ಮನುಷ್ಯ ; ಕ್ಷುಲ್ಲಕನಾದ ಮನುಷ್ಯ ; ವಿವೇಕವಿಲ್ಲದವನು : ನಿಮ್ಮ ಪಾಡೇನೋ ನರಗುಟಿಗಳಿರಾ (ವಚಸಂ. ೦೪೪-೩೩) : ಇದಱ ನೆಲೆಯನಱಿಯದೆ ಈ ಮನವ ಬೆಂಬಳಿಗೊಂಡಾಡಿದವರೆಲ್ಲ ನರಗುಟಿಗಳಾದರಯ್ಯ (ಲಿಂಗವ. ೨೩-೯೩) : ನರಗುಟಿಗಳಿಗೆ ರೋಗ ದಾರಿದ್ರ್ಯ ಅಪಜಯಂಗಳು ಬರುತ್ತಿರಲು

. . . ಎಲ್ಲಿಯುಮೊ ಶಿವಭಕ್ತಿ (ಚನ್ನವ. ಕ. ೩೩೦-೪೯೩) ; ನರಗುಜಿಯ ನಡೆ ಕಾಳಗೆಸುತ ಹಿಡಿದೆಳೆದನುತ್ತರನ (ಕುಮ್ಮಾವಿ. ೬-೨೦) ; ಅಜಿಯನದ ನೇಸುವವನು ಬಾಲಕ ನರಗುಜಿಗಳುಪಚಾರವನು ಮೈಮಜಿದು ಮುನಿ ವಂದಿತನ ಚರಣವನೊಪ್ಪಿ ಮನದೊಳಗೆ . . . ಹರಿಯ ಸ್ತುತಿಸುತ (ನಿಡಾಗ. ೪-೬೪೬). **ನರಕುಜಿ** : ನರಕುರಿ[ಜಿ]ಗಳೆನೆಲ್ಲ ಭರದಿ ರಕ್ಷಿಪುದಕೆ ಪರಮ ಪಾವನನಾವು ಇದು ಸಾಲದೆ (ಪುರಂದ. ೨-೭೬-೧೩) : ಆ ಮಹಾತ್ಮನ ನರಕುಜಿಗಳೆಂತಜಿವರೈ ಶ್ರೀಗಿರಿಯಧೀಶ್ವರನ (ಅದ್ಭುತ. ೨ ೦). **ನರಗುರಿ** : ವಿರಸವಿಲ್ಲದೆ ನಗೆನುಡಿಯುಳ್ಳ ಸತಿಯಳ ಹರಸದವನು ನರಗುರಿಯು (ಕಪೂಕ. ೧೫-೭೧) ; ಓ ಮಂಕು ನರಗುರಿಯೆ, ಭೂಮಿ ಬರಿ ದೋಣ ಕಣೋ! (ಹಾಂಡಕ. ೩೦-೧೪). 'ಕುಜಿವಾನಿಸ' ಪರಾ. [ನರ$_2$+ಕುಜಿ$_3$]

**ನರಗೊರಲ್** (ನಾ). ನರಗಳು ಉಬ್ಬಿ ಹೊರಗೆ ಕಾಣುವಂತಿರುವ ಕೊರಳಂ : ನರಗೊರಲ[ಪಾಠಾಂ. ನರೆಗೊರಳ] ನೊರೆವಾಯ ಹಾವಸವರಿದ ವಲ್ಗ'ಳ ಜೋಲ್ದುಟಿಯ . . . ಕುಟಿಲನು (ಬಸವು. ೫೦-೧೧).

[ನರ$_1$ (<ನರವು) + ಕೊರಲ್]

**ನರಚಲು**, ನರುಚಲು (ನಾ). ಸರಿಯಾದ ಬೆಳವಣಿಗೆ ಇಲ್ಲದುದು; ನರಟಾದುದು ; ಪೀಚು : ಬಿಸಿಲು, ನೀರು ಇಲ್ಲದೆ ಗಿಡ ನರಚಲಾಗಿದೆ (ಬೂಧಿ). **ನರುಚಲು** : ಅವನು ನೀಲದುಟಿಯ ಕಂಡು ಹಳದಿ ಮೋರೆಯ ನರುಚಲಾದ ಪಡ್ಡೆಹುಡುಗ (ಪುನರು. ೪೪೦). 'ನರಟು$_2$' ಪರಾ.

[ದೇ.॥ ತಮಿ. ನರೈಚ್ಚಲ್]

**ನರಜಂತು** (ನಾ). ಮನುಷ್ಯಜೀವಿ ; ಮನುಷ್ಯ : ಪುಣ್ಯಪಾಪದ ಮಿಶ್ರ ನರಜಂತುವು (ಮಂಕುಳ ೩೧೭). [ನರ$_2$ + ಜಂತು]

**ನರಜನ್ಮ** (ನಾ). ಮನುಷ್ಯನ ಹುಟ್ಟು ; ಮಾನವಜನ್ಮ : ನರಜನ್ಮದಲ್ಲಿ ಹುಟ್ಟಿ ಲಿಂಗಮುಖವನಜಿಯದೆ ಉದಮದ ಸೊಕ್ಕಿ ತಲೆಗೇಜಿತ್ತ್ರೆ (ಬಸವ. ೫೮೫) ; ನರಜನ್ಮವ ತೊಡೆದು ಹರಜನ್ಮವ ಮಾಡಿದ ಗುರುವೇ (ಮಹಾದೇ. ಬ. ೨೩-೪೩) ; ಎನ್ನ ನರಜನ್ಮಮಂ ಪಿಂಗಿಸಲ್ ಬಂದಿರೋ (ಅಶಿಜಂ. ೩೬-೧೯) ; ನರಜನ್ಮ ಬಂದಾಗ ನಾಲಿಗೆ ಇರುವಾಗ ಕೃಷ್ಣ ಎನಬಾರದೆ (ಪುರಂದ. ೧-೭೦ ಅನುಬಲ್ಲವಿ). [ನರ$_2$ + ಜನ್ಮ]

**ನರಜೀವ** (ನಾ). ಮನುಷ್ಯ : ಮೆರುಗನೊಂದುವುದು ಪೊನ್ ಪುಟಕಾದ ಬಳಿಕ ನರಜೀವವಂತು ಶುಚಿಯಹುದು ದುಃಖಾಶ್ರುವಿಂ (ಮಂಕುಳ. ೮೬೫).

[ನರ$_2$ + ಜೀವ]

**ನರಜೀವಿ** (ನಾ). ಮನುಷ್ಯಜನ್ಮ ಪಡೆದವನು ; ಮಾನವ ; ಮಾಯೆಗೆ ಮರುಳಾದ ನರಜೀವಿಗಳ ಬಹಿರಂಗದ ಬಣ್ಣಯ ಸಂಸ್ಕಾರಮಾತ್ರದಿಂದ ಭವಿ ಭಕ್ತನಪ್ಪನೆ (ಚನ್ನವ. ಕ. ೨೦೯-೪೬೬); ಯಾವತ್ತು ಪ್ರಕಾರ ದಳವರಾಧಗಳಿಗೆ ಪಾತ್ರರಾದ ನರಜೀವಿಗಳು ನಾವು ಒಬ್ಬರನೊಬ್ಬರು ಕ್ಷಮಿಸದೆ ಇರುವುದು ಕೇವಲ ನೀಚತನವು (ಮುಂಬಯಿ. ೪-೮೬). [ನರ$_2$ + ಜೀವಿ$_1$]

**ನರಟಿಸು** (ಕ್ರಿ). ೧. ಬೆಳವಣಿಗೆ ನಿಂತುಹೋಗುವಂತೆ ಮಾಡು ; ಬೆಳವಣಿಗೆಯನ್ನು ಕುಂಠಿತಗೊಳಿಸು. ೨. ಹೆಚ್ಚದಂತೆ ತಡೆ ; ಮೊಟಕುಗೊಳಿಸು : ಯತಿಜನರ ಧೈರ್ಯಮಂ ಮುರುಟಿಪರ್ಸುರುಟಿಪರ್ನರಟಿಪರ್ ಸತಿಯರನಘಾ (ಷಡಿಂ. ೨-೬೯). [ನರಟು$_1$ + -ಇಸು$_1$]

**ನರಟು$_1$** (ಕ್ರಿ). ಬೆಳವಣಿಗೆ ಹೊಂದದಿರು ; ಪೀಚಾಗು : ಕೇಶವನ ಧಾತುಪಾಠದಲ್ಲಿ ಮಾತ್ರವಲ್ಲ, ದರ್ಪಣದ ಇತರ ಭಾಗಗಳಲ್ಲಿಯೂ ಇಲ್ಲವೆಂದು ಕಿಟ್ಟೆಲ್‌ರ ನಿಘಂಟಿನಿಂದ ಎಣಿಸಬಹುದಾದ ಕೆಲವು ಸಿದ್ಧಧಾತುಗಳನ್ನು ಕೆಳಗೆ ಕಾಣಿಸಿದ್ದೇನೆ — ಇನಿಕು, ಕುಲಕು, ಬೆದಕು . . . ಜಜ್ಜು, ಪುಟ, ನರಟು, ಗಿಟ್ಟು, ಅಂಟು (ಕಸಾಪ. I, ೨೪೦).

[ದೇ.॥ ತಮಿ. ನೆರುಟು=ಒರಟಾಗಿರುವುದು ; ತುಳು. ನರಡ್= ಬೆಳವಣಿಗೆ ಕುಂಠಿತವಾಗಿರುವಿಕೆ , ಒರಟುತನ]

**ನರಟು$_2$**, ನರುಟು, ನರಡು$_1$ (ನಾ). ೧. (ಮಕ್ಕಳು, ಗಿಡಗಳು, ಹಣ್ಣು ಮೊದಲಾದುವುಗಳ ವಿಷಯದಲ್ಲಿ) ಸರಿಯಾಗಿ ಬೆಳವಣಿಗೆ ಹೊಂದದಿರುವಿಕೆ ; ಪೀಚುಪೀಚಾಗಿರುವಿಕೆ : ಹುಡುಗ ನರಟು, ಹತ್ತುವರ್ಷದವನಾದರೂ ಐದುವರ್ಷದ ಹುಡುಗನಷ್ಟೇ ಕಾಣುತ್ತಾನೆ (ಬೂಧಿ). **ನರುಟು** : ೧. "ಹ್ಲಸಿತಂ, ಹ್ಲಸಃ, ಹ್ಲಸೀಃ, ಹ್ಲಸಃ, ಹ್ಲಸ್ ಈ ಶಿ ನರಟು" (ಕಾಶ್ಕ. ೬೨). 'ನರಂಟುಗೊಳ್' ಪರಾ. **ನರಡು$_1$** : ೨. ಒರಟುತನ ; ಹುಂಬತನ. 'ನರಡ' ಪರಾ. [< ನರಟು$_1$]

**ನರಟು$_3$** (ನಾ). ಗೊಣಗುಟ್ಟುವಿಕೆ ; ಗೊಣಗಾಟ. 'ನರಟುಗಾರ' ಪರಾ. [ದೇ.॥ ತುಳು. ನರಟು = ಗೊಣಗು]

**ನರಟುಗಾರ** (ನಾ). ಗೊಣಗುವವನು ; ತೃಪ್ತಿಯಿಲ್ಲದವನು : ನರಟುಗಾರ ಒರಟಾಡುತ್ತಾನೆ (ಗಾದೆ). [ನರಟು$_3$ + -ಕಾರ$_1$ (<-ಕಾಱ)]

**ನರಡ** (ನಾ). ಒರಟ; ಹುಂಬ ; ಅನಾಗರಿಕ : ನರಡನಿಗೆ ಕೊರಡು ಕುರುಡನಿಗೆ ಕೋಲು (ಗಾದೆ). [ನರಡು$_1$ (<ನರಟು$_2$) + -ಅ$_7$]

**ನರಡಿ** 'ನರಡು$_2$' ನೋ.

**ನರಡಿರೋಗ** 'ನರಡುರೋಗ' ನೋ.

**ನರಡು$_1$** 'ನರಟು$_2$' ನೋ.

**ನರಡು$_2$**, ನರಡಿ, ನೆರಡಿ (ನಾ). ದನ, ಆಡು, ಕುರಿ ಮೊದಲಾದುವುಗಳಿಗೆ ಬರುವ ಒಂದು ಬಗೆಯ ರೋಗ : ನರಡುರೋಗಕ್ಕೆ — ಭರದಿಂ ಸುಟ್ಟನೆ ಸುಯ್ಕೆ ಸೂಗುರಿಸೆ ಕಣ್ಣಕ್ಕಾಲಿಗಳ್ ಬೀಟ್ ಮೆಯ್ ಮರವಟ್ಟಂತಿರೆ ನೋ(ಡಿ)ಡೆ ಪೇಟ್ ನರಡಿ[ಪಾಠಾಂ. ಪೇಟಿರಡಿ]ದಾಯ್ತೆಂದುದು ನಿಶ್ಚಯಿಸಿ (ಲೋಕೋಪ. ೪-೨೦೭) ; ನರಡಾದಿಕ್ರಿಮಿನಂತೆ ನಾಲಗೆಯನುರ್ಚುವ ಪರಿಜನವುಮಂ (ಧರ್ಮಾಮೃ. ೩-೨೦೬). **ನರಡಿ** : ದನಕರುಗಳಿಗೆ ದೊಡ್ಡಜಾಡ್ಯ ಚಪ್ಪೆಜಾಡ್ಯ ನರಡಿ ಶಿರೆ ವಗೈರೆ ಅಂಟುಜಾಡ್ಯಗಳು ವ್ಯಾಪಿಸಿರುವದುಂಟು (ಗ್ರಾಮೂಕ. ೧೦೫) ; ಹುಚ್ಚುನಾಯಿಯ ಹುಚ್ಚು ; ಕೋಳಿ ಜಡ್ಡು ; ದನಗಳ ನರಡಿ . . . ಇತ್ಯಾದಿ (ವಿಕಾಸ. I, ನಿವೇದನ). **ನೆರಡಿ** : ದನ, ಕುರಿ, ಮೇಕೆ, ಕುದುರೆಗಳಿಗೆ ಬರುವ ರೋಗ ನೆರಡಿ. ಈ ರೋಗದ ಪ್ರಾಣಿಯ ಜೊಲ್ಲು, ಸಗಣಿಗಳಲ್ಲಿ ರೋಗಾಣುಗಳು ಇರುವುವು. ಕಟುಕರು, ಚರ್ಮಹದ ಕಾರರು, ತೊಗಲು ತುಪ್ಪಟಗಳನ್ನು ಕೂಡಹಾಕಿ ಕೆಲಸಮಾಡುವವರಿಗೂ ನೆರಡಿ ಅಂಟಬಹುದು (ಕವಿಕೋ. I, ೩೬೫). [ದೇ.॥ ತೆಲು. ನರಿಡಿ]

**ನರಡುರೋಗ**, ನರಡಿರೋಗ (ನಾ). = ನರಡು$_2$ : ನರಡುರೋಗಕ್ಕೆ . . . ಸಿಂಧುರುರುಹಂ ಸಾಸಿವೆ . . . ಎಂಬಿವಂ ಕುಡುಗೆ/ ಸೈತಕ್ಕುಂ ಮನೋವೇಗದಿಂ (ಲೋಕೋಪ. ೪-೨೦೭). **ನರಡಿರೋಗ** : ಆಡುಗಳಿಗೆ ಬರುವ ಅಂಟುರೋಗಗಳಲ್ಲಿ ಬೊಬ್ಬೆರೋಗ, ದೊಡ್ಡರೋಗ, ನರಡಿರೋಗ ಮೊದಲಾದುವು ಮುಖ್ಯವಾದುವು (ಕವಿಕೋ. I, ೮೪೯). [ನರಡು$_2$ + ರೋಗ]

**ನರತತಿ** (ನಾ). ಜನರ ಗುಂಪು; ಜನಸ್ತೋಮ ; ಜನಸಮೂಹ ; ನರ[ಪಾಠಾಂ. ಸುರ]ತತಿ ನೊಂದಲಲ್ದು ಮೊಟಿಯೋ ಮೊಟಿಯೋ . . . ಎನುತುಂ ಸುರುಳ್ದು ಸೂಗುರಿಸಿ (೧೧ಕ. ೬-೬). [ನರ$_2$ + ತತಿ$_2$]

**ನರತಿ** (ನಾ). ೧. ಕೊರದಲು ನರೆತವಳು ; ಮುದುಕಿ : ಪೊಲತಿ, ನರತಿ, ಎಡತಿ — ಎಂಬ ಮೂಱು ಶಬ್ದದೆತ್ತಕ್ಕೆ ಸಮಾಸದಂತಿರಿತ್ತಂ (ಶಮದ. ೨೦೫ ಪ್ರಯೋ). ೨. ಬಿಳಿಯ ಚುಕ್ಕೆಗಳಿರುವ ಹಸು: ಆವನಾದೊಡಂ ಆಳಿಪಿದವನು ಗಂಗೆಯ ತಡಿಯಲು ಕವಿಲೆಯಂ ಕೊಂದ ಪಾಪದಲು ಹೋಹನು ನರತಿಯ ಕೊಂದ ಪಾಪದಲು ಹೋಹನು (ಶಾಇಕ. IX-1, ೩೬೬-೨೨; 1226). [<ನರೆ$_2$ + -ತಿ$_1$ (<-ಇತ್ತಿ)./ತುಳು. ನರತಿ]

**ನರತೆ** (ನಾ). ಗಂಡಸಿನ ಸ್ವಭಾವ ; ಪುರುಷಸ್ವಭಾವ : ನರತೆಯನು ನಾರಿಯಲಿ ನಾರೀತ್ವ ನರನೊಳಣು ತಿರಿಚುತಿರುವುದು ಮನವ (ಮಂಕುಳ. ೪೦೩). [ನರ$_2$ + -ತೆ$_3$]

**ನರತ್ವ** (ನಾ). ಮನುಷ್ಯನಾಗಿರುವಿಕೆ : ನಿರ್ಜರನಾಗಿದ್ದು ನ[ಹಾಕಾಂ. ರ್ದವು]ರತ್ವಮಂ ಪಡೆದು [ತಿಂ] ಸುಗ್ರೀವನಾಯ್ತಾ ವಸುಂಧರೆಯೊಳ್ತಾನೆನೆ (ಪುಣ್ಯಸ್ರ. ೪-೨). [ ಸಂ. ]

**ನರದೇವ** (ನಾ). ಅರಸ ; ರಾಜ : "ರಾಜಾ, ರಾಜನ್ಯಃ, ರಾಟ್ . . . ಪಾರ್ಥಿವಃ, ನರದೇವಃ, ಲೋಕಪಾಲಃ – ಈ ೧೨ ಅರಸು" (ಹಲಾಯು. ೬೪-೨೬೭) : ನರದೇವಕುರುಪತಿ ಮತ್ತೆ ನುಡಿದನು ನಗುತ ಸೈಂಧವಗೆ (ಕುಮಾವ್ಯದ್ರೋ. ೮-೩೩). [ ನರ$_2$ + ದೇವ ]

**ನರಧರ್ಮ** (ನಾ). ಮನುಷ್ಯಧರ್ಮ ; ಮಾನವಸ್ವಭಾವ : ಪಂತಪಿಸುವುದು ಜೀವ ಜೀವಸರಸವನೆಳಸಿ ನರಧರ್ಮಸೂಕ್ಷ್ಮವಿದು (ಮುಂಕುಕ. ೪೨೫). [ ನರ$_3$ + ಧರ್ಮ ]

**ನರನಂದನ** (ನಾ). ಅರ್ಜುನನ ಮಗ; ಅಭಿಮನ್ಯು : ನರನುಂ ನರನಂದನನುಂ ಗುರುವುಂ ಗುರುಸುತನ.ಮಾದ್ರ್ಯಭೂರಿಶ್ರವನುಂ ಸುರಸಿಂಧುಸುತನು ಮಿಂತಱುವರುಮತಿರಥರಲ್ತೆ (ಗದಾಯು. ೩-೫೦); ನರನಂದನನಾ ಸರಲಂ ಸರಭಸ[ದಿನೆ]ಚ್ಚು ನಿಜಶರದಿಂ ಭೀಕರಮಪ್ಪ ರಾಶಿಯಾದವು ಸರಲ್ಗಳಿಕ್ಕಡಿಸಿ ಬಿಟ್ಟು ಧರ್ಾಧಾರಿಣಿಯೊಳ್ (ಮುಹಾನೇ. ೧೨-೧೨೦) ; ನರನಂದನನ ರಥವನು ತಱುಬಿ ನಿನ್ನಯ ತನಯನಡ್ಡೈಸಿದನು ಕೌರವರಾಯ ಖಾತಿಯಲಿ (ಕುಮಾವ್ಯದ್ರೋ. ೫-೧೯). [ ನರ$_3$ + ನಂದನ ]

**ನರನರ** (ನಾ). ಒಂದು ಅನುಕರಣಶಬ್ದ : ತರುಗಳನು ಕೀಳುತ್ತೆ ಬುಡದೊಡನುರುಳಿಸುತ್ತಪ್ಪಳಿಸಿ ನೆಲದೊಳು ನರನರೆನ್ನಲು ರೆಂಬೆಗಳ ಮುರಿ ಮುರಿಯುತೆಸೆಯುತ್ತೆ (ರಾಮಾಸಂ. ೫-೩-೬೦).

**ನರನಾಟಕ** (ನಾ). ಮನುಷ್ಯನ ನಡೆವಳಿಕೆ : ನರನಾಟಕದ ಸಂಪಾದನೆಗೆ ಕಂಡನಿತ ದೇವರ ಪಾದಕುಸುರುವೆನು (ಕೊರಟಾ. ೬-೪-೧೭). [ ನರ$_3$ + ನಾಟಕ ]

**ನರನಾಥ** (ನಾ). ಅರಸ ; ರಾಜ : ಘನರಥ ನರನಾಥನ ಬವಣೆಯೊಳ್ ತಾವುಬೊಳಂಗಳಾಗಿ ಪೋರುತ್ತುಮಾವಿರೆ (ಶಾಂತಿಪು. ೯-೭೦ ವ) : ನರನಾಥಂಗಿತ್ತು ತನ್ನಂ ನೆನೆದ ಸಮಯದೊಳ್ ಬರ್ಪನಾನೆಂದು ಮೆಚ್ಚಂ ಚರಿತಾರ್ಥಂ ಭಕ್ತಿಭಾರಾನತಮಣಿಮಕುಟಂ ಹರ್ಷಬಾಷ್ಪಾಂಬುವರ್ಷಂ ಗರುಡಂ . . . ತನ್ನ ಲೋಕಕ್ಕೆ ಪೋದಂ (ಶಂಖಾನು. ೮-೭೬) ; ನರನಾಥರ್ ಬೆಸಕೆಯ್ದು ಪೆಂಡಿರೆಳಸಿರ್ಪ ರೂಢಿಯ.ಂ ಗಾಡಿಯುಂ . . . ಈ ಶೌರ್ಯಮುಂ ಧೈರ್ಯಮುಂ ಹರಿಯೊಳ್ ಕಾದಿ ಕೃತಾರ್ಥಮಕ್ಕುಂ (ಜಗವಿ. ೭-೩೮). [ ನರ$_3$ + ನಾಥ ]

**ನರನಾಥಾಗ್ರಣಿ** (ನಾ). ರಾಜರಲ್ಲಿ ಶ್ರೇಷ್ಠನಾದವನು : ನರನಾಥಾಗ್ರಣಿ ನೀಂ ಮೊಗಕ್ಕೆ ಮುಳಿಸಂ ತರ್ಪನ್ನಮೇನುಂಟೆ ಸಂಗರಂ ಜಗವಿ. ೭-೪೬) : ನರನಾಥಾಗ್ರಣಿ ತನ್ಮಧುಪ್ರಭುನುತಂ ತೀವ್ರಪ್ರತಾಪಂ ವಸುಂಧರೆಯಂ ರಕ್ಷಿಸುತಿರ್ಪನಂ (ನೇಮಿಪು. ೮-೨೮). [ ನರನಾಥ + ಅಗ್ರಣಿ ]

**ನರನಾಯಕ** (ನಾ).=ನರದೇವ: ನರನಾಯಕನಂ ನಿಂದಾನಿರದೀಗಳೆ ಕಾಂತನಂ ನೆರೆದೇನದಱಿಂದಿಲ್ಲಾ ನೆರೆದಿರ್ದಾಗೆನಾಗೆನೆ (ಕವಿರಾ. ೨-೦೨೩). [ ನರ$_3$+ ನಾಯಕ ]

**ನರನಾರಾಯಣಾಶ್ರಮ** (ನಾ). ಹಿಮಾಲಯಪ್ರದೇಶದಲ್ಲಿ ನರನಾರಾಯಣರು ತಪಸ್ಸು ಮಾಡಿದ ಆಶ್ರಮ, – ಪುಣ್ಯಕ್ಷೇತ್ರ; ಬದರಿಕಾಶ್ರಮ ; P ಸಹಸ್ರಕವಚನೆಂಬ ರಾಕ್ಷಸನು ಲೋಕಕಂಟಕನಾಗಿರಲು. ಅವನ ಸಂಹಾರಕ್ಕಾಗಿ ವಿಷ್ಣು, ನರ ಮತ್ತು ನಾರಾಯಣ ಎಂಬ ಇಬ್ಬರು ಋಷಿಗಳಾಗಿ ಅವತರಿಸಿದನು. ಆ ರಾಕ್ಷಸನು ಪಡೆದು ಕೊಂಡಿದ್ದ ವರಕ್ಕೆ ಅನುಸಾರವಾಗಿಯೇ ಇಬ್ಬರು ಋಷಿಗಳೂ ಸಾವಿರ ಸಾವಿರ ವರ್ಷಗಳು ತಪಸ್ಸು ಮಾಡುತ್ತಾ ಒಂದೊಂದಾಗಿ ಅವನ ಕವಚಗಳನ್ನು ಭೇದಿಸುತ್ತಿದ್ದರು. ಕೊನೆಗೆ ಇನ್ನೊಂದು ಕವಚ ಉಳಿದಿದ್ದಾಗ ಅವನು ಕಾರಣಾಂತರದಿಂದ ಸತ್ತು ಕವಚದೊಂದಿಗೆ ಕರ್ಣನಾಗಿ ಹುಟ್ಟಿದನು. ವಿಷ್ಣುವಿನ ಅಂಶವಾದ ನರನು ಅರ್ಜುನನಾಗಿ ಹುಟ್ಟಿ ಕರ್ಣನನ್ನು ಕೊಂದನು. ನಾರಾಯಣನ ಅಂಶವಾದ ಕೃಷ್ಣನು ಅವನಿಗೆ ಸಹಾಯ ಮಾಡಿದನು ಎಂಬ ಕಥೆ ಪ್ರಚಾರದಲ್ಲಿದೆ. 'ನರ$_3$' ಪರಾ. [ ನರ$_3$ + ನಾರಾಯಣ + ಆಶ್ರಮ ]

**ನರಪ** (ನಾ). ದೊರೆ ; ರಾಜ : ಅರಿನರಪಶಿರೋದಳನಪರಿಣತೋಗ್ರಾಸಿ ಭಯಂಕರಕರರ್ (ಪಂಪಭಾ. ೦-೨೨) ; ನರಪ ನೀಂ ಮನಿದಂದು ಕೊಂದಪೆಯೆಲ್ಲರು (ಧರ್ಮಾಮೃ. ೯-೨೦೪) : ನರಪರೊಳಗೊಂದು ಕೋಟಿಯುಮರೆ ಚಾಪಬಲಕ್ಕಧೀಶನಂ ದುಂದುಭಿಯಂ ಬರಿಸಿ (ಕಾವ್ಯಾವ. ೧೪೨). [ ಸಂ. ]

**ನರಪತಿ** (ನಾ).=ನರಪ : ನರಪತಿಯಾ ಕಪಿವೃತನಾಪರಿವೃತನಂ ಜಲಧಿತಟದೊಳಣಾವಂ ಕಂಡಂ (ಕವಿರಾ. ೨-೮೯) : ನರಪತಿ ಬೆನ್ನೊಳಿಟ್ಟೊನಿದಿರಾನ್ತುದು ವೈರಿಸಮೂಹವಿಲ್ಲಿ ಮಚ್ಚರಿಸುವರೆಲ್ಲರು (ಎಕ. III, ಮುಂಡ. ೪೦-೦೭ ; 950) ; ನರಪತಿ ತೈಲಪಂ ಬೆಸಸೆ ಘೂರ್ಜರಸೇನೆಗೆ ಸೂಚಿಯಾನೆಯಂ ಪರಿಯಿಸಿ ಗೆಲ್ದಂ (ಗದಾಯು. ೨-೪೭) : ಗಜಪತಿ ಹಯಪತಿ ನರಪತಿಯೆನಿಪ ಮಹೀಪಾಲರಾಸ್ತಾನದಲ್ (ಎಕ. VI, ೨೦೬-೯ : 1057) ; ನರಪತಿ ಬರ್ದಿನನೆಂದಾದರದಿಂ ಗೃಹಲಕ್ಷ್ಮಿ ಬೋನಮೆತ್ತಿದುದೆಂಬಂತಿರೆ ಚೊದ್ಯಮಪ್ಪಿನಂ ಬಿತ್ತರದೆತ್ತಿದ ಬೋನದಿರವು ಚೆಲ್ವಾಯ್ತಾಗಳ್ (ಸುಕುಮಾ. ೧೦-೨೩) ; ನರಪತಿ ತಾನೆ ತನ್ನ ಚತುರಂಗಬಲಂ ಬೆರಸೆತ್ತಿ ಬರ್ಪುದಂ . . . ಕಂಡು (ಪುಣ್ಯಾಸ್ರ. ೫-೬೩). [ ನರ$_2$ + ಪತಿ$_2$ ]

**ನರಪತಿತನಯ** (ನಾ). ಅರಸನ ಮಗ ; ರಾಜಕುಮಾರ : ನರಪತಿತನಯನಾಯತತರಳಾಪಾಂಗದೊಳೆ ನೋಡಿ (ಕವಿರಾ. ೧-೬೦). [ ನರಪತಿ + ತನಯ ]

**ನರಪತಿಸೇನೆ** (ನಾ). ಅರಸನ ಸೈನ್ಯ : ನರಪತಿಸೇನೆಯೊಳೆ ಪಲರ್ ರೊಳಂ ಮುಖ್ಯಂಗೆ ಗುಣದೊಳತ್ಯಧಿಕಂಗೊರ್ವರೊಳಾನುಮಿಲ್ಲದೊರ್ವನೆ ಬರೆ ತನಗೆಂದಱಿತುಕೊಳ್ಗೆ ಕಟನದ ಮತಮಂ (ಲೋಕೋಪ. ೧೨-೨). [ ನರಪತಿ + ಸೇನೆ ]

**ನರಪಶು** (ನಾ) ಪಶುವಿಗೆ ಸಮಾನವಾದ ಮನುಷ್ಯ ; ಪಶುವಿನಂತೆ ವರ್ತಿಸುವವನು; ಅವಿವೇಕಿ: ವಿದ್ಯೆಯಿಲ್ಲದ ನರನು ನರಪಶುವವನ ಜನ್ಮ ನಿರರ್ಥಕರ (ಕುಮಾವ್ಯಉ. ೩-೦೧೫) ; ಇರುಳು ಹಗಲು ನರಹರಿಯನು ತುತಿಸದೆ ನರಪಶುಗಳ ಕೊಂಡಾಡುತಿ (ಪುರಂದ. ೪-೧೨೫-೪) ; ಅವನ ಮಾತೆತ್ತಬೇಡಿರಿ ನನ್ನೆದುರು ! ನರಪಶು (ಕಮಸಿ. ೧೧). [ ನರ$_3$ + ಪಶು ]

**ನರಪಾಲ, ನರಪಾಳ** (ನಾ). = ನರಪ : ನರಪಾಲವ್ರಜವರ್ಮಜಾಲವಿಲಸನ್ಮಾಣಿಕ್ಯಮಾಲಾಂಶುಪಿಂಜರಿತಂ (ಆದಿಪು. ೧೪-೯೨) : ನರಪಾಲಂ ಮೇಘರಥಂ ಪರಿಪಾಲಿಸುತಿರ್ಪಂ (ಮುಹಾನೇ. ೧೬-೪). **ನರಪಾಳ**: ನರಪಾಳಮೌಳಿಮಾಳಾಪರಸ್ಪರಪ್ರೋತರತ್ನರುಗ್ಜಾಳದಿನಂಬರವಿದಪೂರ್ವಂ ದಿವ್ಯಾಂಬರಮಾದುದು ಭವನಲಕ್ಷ್ಮಿಗೇಪೊಗಟ್ಟಿನಿದುಂ (ವರ್ಧಪು. ೫-೩) ; ನರಪಾಳಪುತ್ರಿಯೊರ್ವಳ್ ಸುರಪತಿಗಂ ರಮಣಿಯಾಗಿ ಸುಖದಿಂದಿರ್ದಳ್ (ಪುಣ್ಯಾಸ್ರ. ೩-೮). [ ಸಂ. ]

**ನರಪಾಳ** 'ನರಪಾಲ' ನೋ.

**ನರಪಿಶಾಚಿ** (ನಾ). ಮನುಷ್ಯಸ್ವರೂಪದಲ್ಲಿರುವ ಪಿಶಾಚಿ,–ದೆವ್ವ : ಎಲೆ ನರಪಿಶಾಚಿ! ನನ್ನನ್ನು ನನ್ನಿದಿರಿನಲ್ಲಿಯೇ ನಾಯಿಯೆಂದು ಕರೆಯುವಷ್ಟು ದಿಟ್ಟತನವು ನಿನಗುಂಟಾದುದೇ ? (ಪಿಶಾಪ. ೨೭). [ ನರ$_3$ + ಪಿಶಾಚಿ ]

**ನರಪಿಳ್ಳೆ** (ನಾ). ೧. ಚಿಕ್ಕ ಹುಡುಗ. ೨. (ಅಲಂ) ಸಾಧಾರಣ ವ್ಯಕ್ತಿ; ಮನುಷ್ಯ ಮಾತ್ರ; ಸಾಮಾನ್ಯ ಮನುಷ್ಯ: ಅವರು ಅಲ್ಲಿಗೆ ಬಂದಿದ್ದದ್ದು ಒಂದು ನರಪಿಳ್ಳೆಗೂ ಗೊತ್ತಾಗಲಿಲ್ಲ (ವಡಭಾ. ೫೦) : ಒಂದು ನರಪಿಳ್ಳೆಯ ಧ್ವನಿಯೂ ಎಲ್ಲಿಯೂ ಕೇಳಿಸುತ್ತಿಲ್ಲ (ವಾರಾಕ್ಕ. ೪೩) ; ನಾರಣಪ್ಪನ

ಸಾವನ್ನು ಕೇಳಿ . . . ಅಗ್ರಹಾರದ ಒಂದು ನರಪಿಳ್ಳೆಗೂ ವ್ಯಥೆಯಾಗದಿದ್ದರೂ ಕೂಡ ಎಲ್ಲರ ಹೃದಯದಲ್ಲು . . . ಕಳವಳ ಹುಟ್ಟಿತು (ಸಂಸ್ಕಾರ. ೩). [ ನರ₂+ಪಿಳ್ಳೆ ]

**ನರಪುಂಗವ** (ನಾ). ಮನುಷ್ಯರಲ್ಲಿ ಶ್ರೇಷ್ಠನಾದವನು; ಉತ್ತಮ. [ ನರ₂ + ಪುಂಗವ ]

**ನರಪೇತ, ನರಪೇತು** (ನಾ). ಬದುಕಿದ್ದೂ ಹೆಣದಂತಿರುವವನು; ತೀರ ಕೃಶನಾದವನು; ಜೀವಚ್ಛವ; ಕೈಲಾಗದವನು; ಅಶಕ್ತ; ದುರ್ಬಲ: ನರಪೇತರ ನರಕದಲ್ಲಿ ಹೊಸೆಯದಿರೀ ಕಗ್ಗ (ಅಕಳು. ೧೧೩-೦೪); ಬರಿಯ ಎಮಕೆ; ನರಪೇತ, ಕದಿರುಕಡ್ಡಿ (Bag of Bones. ಇಂಕನ). **ನರಪೇತು**: ಬೀತ ನರಪೇತುಗಳಿರಾ ಬಾತಂಥ ಪ್ರೇತಗಳಿರಾ! (ಗರಿ. ೩೦-೪).

[ ನರ₂ + ಪೇತ ]

**ನರಪೇತಲ, ನರಪೇತಲು** (ನಾ). ೧.=ನರಪೇತ: ಹಲವಾರು ರೋಗಿಗಳು ನರಪೇತಲರಾಗಿರುತ್ತಾರೆ (ಮನೋವಿಸಂ. ೩೧೧); ಕಾಲುಬಲವಿಲ್ಲದ ಶಿಖಂಡಿ ನರಪೇತಲ ಗೊರಸುತುಳಿತಕ್ಕೆ ಸಿಕ್ಕಿಬಿದ್ದ (ಚಂಡಮು. ೩೦-೦೩); ಅವನು ಮೂಳೆ ಚಕ್ಕಳಗಳ ಉದ್ದನೆಯ ನರಪೇತಲ (ಪುನರು. ೧೦೩); ಬಿಸಿಲು ಮತ್ತು ಹಸಿವಿನಿಂದ ಇನ್ನಷ್ಟು ನರಪೇತಲನಾಗಿ ಮನೆಗೆ ಬಂದು (ಸಂಸ್ಕಾರ. ೩೩). ೨. ಕೃಶವಾದುದು; ಸೊರಗಿದುದು: ಹುರಿದ ಹೆಸರು ನೆನಪಿಗೂ ಬಾರದ ಹಾಗೆ ಬತ್ತಲೆ ನಿಂತ ನರಪೇತಲ ಮರಗಳು (ಹೊಸಕ. ೫೭೪). **ನರಪೇತಲು**: ೧. ಹೆಸರು ಭೀಮಸೇನ, ನೋಡುವುದಕ್ಕೆ ನರಪೇತಲು (ಹೊಸಳೆ. ೧೯).

ನರಪೇತಲ ನಾರಾಯಣ = ಕೃಶನಾಗಿರುವವನು; ನರಪೇತ: ಎಷ್ಟೇ ತಿಂದರೂ ಅವನು ನರಪೇತಲ ನಾರಾಯಣನಾಗಿದ್ದಾನೆ (ರೂಢಿ).

[ <ನರಪೇತ ]

**ನರಪೇತಲು** 'ನರಪೇತಲ' ನೋ.

**ನರಪೇತು** 'ನರಪೇತ' ನೋ.

**ನರಪೋತ** (ನಾ). ಅಲ್ಪನಾದ ಮನುಷ್ಯ: ಆ ನರಪೋತಂಗಳ್ಗೆಲ್ಲ ನಾನಂಜಲುಂಟೆ (ಪಾರ್ಶ್ವನಾ. ೬.೨). [ ನರ₂ + ಪೋತ₂ ]

**ನರಪ್ರಾಣಿ** (ನಾ). = ನರಜಂತು: ಸೊಗಸು ಬೇಡದ ನರಪ್ರಾಣಿಯಲ್ಲಿ ಹುದಯ್ಯ? (ಮಂಕುತಿ. ೫೫೩). [ ನರ₂ + ಪ್ರಾಣಿ ]

**ನರಪ್ರೇತ** (ನಾ). ೧. ಮನುಷ್ಯನ ಹೆಣ. ೨. (ಅಲಂ) ಜೀವಚ್ಛವ; ಹೇಡಿ: ಉದಾರಹೃದಯಿಗಳಾಗಿರಬೇಕಾದಂಥ ತರುಣರು ಕೂಡ ನರಪ್ರೇತರೇ ಆಗಿದ್ದಾರೆ (ಶ್ರಾಮಣ. ೨೩). [ ನರ₂ + ಪ್ರೇತ ]

**ನರಬಲ** (ನಾ). ಪದಾತಿ ಸೈನ್ಯ; ಕಾಲಾಳುಗಳ ಪಡೆ: ನರಬಲದೊಳ್ ತುರಂಗಬಲದೊಳ್ ರಥಸಂಕುಲದೊಳ್ ಮದಾಂಧಕುಂಜರಕುಲದೊಳ್ ಸಿರಂ ಸಿಡಿಯೆ ಸೀಳೆ ಬಸುರ್ಕಡಿಯೋಗಿ ನಾಳೆ ಕೀಲ್ ಸುರಿತರೆ ಮಸ್ತಕಸ್ಥಾನದ ಮೌಕ್ತಿಕಮುಣ್ಮುವಸೃಗ್ಜಲಂಗಳೊಳ್ ಬೆರಸಿ ಸರಲ್ ಸಪತ್ರಮನೆ ಸಂದುವು ಸಂಗರರಂಗಭೂಮಿಯೊಳ್ (ಪಂಪಭಾ. ೮-೧೯). [ ನರ₂ + ಬಲ₂ ]

**ನರಬಲಿ** (ನಾ). ಭೂತ, ಪ್ರೇತಗಳ ಅಥವಾ ದೇವತೆಗಳ ಪ್ರೀತ್ಯರ್ಥವಾಗಿ ಕೊಡುವ ಮನುಷ್ಯನ ಬಲಿ; ಮನುಷ್ಯನನ್ನು ಕ್ಷುದ್ರದೇವತೆಗಳ ಮೊಂದೆ ಪ್ರಾಣಿಗಳನ್ನು ಕೊಲ್ಲುವಂತೆ ಕೊಲ್ಲುವುದು: ನರಬಲಿಯನಿತ್ತ ಬಳಿಕಾ ಬಿಸಿಯ ನೆತ್ತರಿಂ ಪೊರೆದ ಮಣ್ಣಿಂದಲ್ಲದೀ ಕೋಟೆ ನಿಲ್ಲದೆನೆ (ಸಮ್ಯ್ಗಿಶ್ರೀ. ೨-೫೪); ಬಲಗಾಲ್ ಬುಡದಿಂ ಬಿಡುಗಡೆ ಬಿಡಿಸಲು ನರಬಲಿಯೇ ಬೇಕು! (ಗರಿ.೭೭-೦೩); ಖೊಂಡರು – ಎಂಬ ಜನರು ಪೂರ್ವದಲ್ಲಿ ನರಬಲಿ ಕೊಡುತ್ತಿದ್ದರು (ಭೂಗೋಳ. ೬೧); ನಿನ್ನ ಮಕ್ಕಳಲ್ಲಿ ಒಬ್ಬನನ್ನು ನರಬಲಿ ಗೋಸ್ಕರ ಕೊಡು (ಸೀತಿಕಂ. XIV, ೦೩). [ ನರ₂ + ಬಲಿ₂ ]

**ನರಭಕ್ಷಕ** (ನಾ). ೧. ಮನುಷ್ಯನನ್ನು ತಿನ್ನುವ ಪ್ರಾಣಿ; ಹುಲಿ, ಸಿಂಹ ಇತ್ಯಾದಿ: ಬಾದು ಸಿಂಹವು ಮನೆ ಮಾಡಿಕೊಂಡು, ಗಂಡಾಂತರವನ್ನುಂಟು ಮಾಡುತ್ತಿದೆ . . . ಆ ನರಭಕ್ಷಕನ ಹಾವಳಿಯನ್ನು ತಡೆಗಟ್ಟು (ಪಾಜಿಸ.೮೮). ೨. ಮನುಷ್ಯನ ಮಾಂಸವನ್ನು ತಿನ್ನುವ ವ್ಯಕ್ತಿ. ೩. ರಾಕ್ಷಸ: (ಕ). [ ನರ₂ + ಭಕ್ಷಕ ]

**ನರಭಕ್ಷಕಿ** (ನಾ). ಮನುಷ್ಯರ ಮಾಂಸವನ್ನು ತಿನ್ನುವ ಹೆಂಗಸು: ನನ್ನನ್ನೇಕೆ ತಿಂದುಬಿಡುವಂತೆ ನೋಡುತ್ತೀಯ. ನೀನೇನು ನರಭಕ್ಷಕಿಯಾ? (ಹಸುಹೊ. ೨೦೩). [ ನರಭಕ್ಷಕ+ –ಇ₂ ]

**ನರಭಕ್ಷಣ** (ನಾ). ೧. ಮನುಷ್ಯನನ್ನು ತಿನ್ನುವುದು: ಮನುಷ್ಯನನ್ನು ತಿನ್ನುವಿಕೆ; ನರಭಕ್ಷಣ (Anthropophagy. ಇಂಕನ). ೨. (ಅಲಂ) ಜನರಿಗೆ ಮೋಸ ಮಾಡುವುದು: ಮಂತ್ರಿಮಂಡಲ ಮತ್ತು ಸರ್ಕಾರದ ಇಲಾಖೆಗಳಲ್ಲಿ ನರಭಕ್ಷಣಪ್ರವೃತ್ತಿಯ ಅಂಕುರಾರ್ಪಣೆಯಾಗುತ್ತಿತ್ತೇ ಹೊರತು, ಸೈಬೀರಿಯಾದ ಹೌಗುನೆಲದಲ್ಲಲ್ಲ (ಪುನರು. ೩೩೪).

[ ನರ₂ + ಭಕ್ಷಣ ]

**ನರಭಾಲಪಟ್ಟ** (ನಾ). ಮನುಷ್ಯನ ಹಣೆ: ಸಾಧ್ಯಪಡದಾರಿಂ ನರಭಾಲ ಪಟ್ಟವನು ಶುದ್ಧಪಡಿಸಲು ತೊಡೆದು ಪೂರ್ವದಲ್ಲವನು (ಮಂಕುಳ. ೬೩೩). [ ನರ₂ + ಭಾಲಪಟ್ಟ ]

**ನರಭೋಗ** (ನಾ). ಮಾನವನಾಗಿ ಪಡೆಯುವ ಅನುಭವ: ಚರಮವೃತ್ತಿಯೊಳಗಾವ ಭಾವವು ಸ್ಫುರಿಸುವುದೋ ಅಂತಾ ಜನ್ಮಪ್ರಾಪ್ತಿಯಹುದೆಂದು ನರಭೋಗ ಶಿಲಾಭೋಗ ಪ್ರತಿಮಾಭೋಗ ದ್ರವ್ಯಭೋಗಾದಿಗಳ ವೈಚಿತ್ರ್ಯಮುಳ್ಳ ಲೋಕದ ಪ್ಯಾಂತಗಳಂ ನಂದಿ ನಾರದ ಭರತ ದೇವಲಾದಿ ಪುರಾವೃತ್ತಗಳಂ ಸಮನ್ವಯಗೊಂಡು (ವಿವೇಚ. ೧೯೪).

[ ನರ₂ + ಭೋಗ ]

**ನರಮ್, ನರಂ, ನರಮು, ನರ್ಮ₂** (ಗು). ೧. ಕೋಪ ಮೊದಲಾದುವುಗಳ ಆವೇಶ ಇಲ್ಲದ; ಮೆತ್ತಗಾದ; ತಣ್ಣಗಾದ: ತನಗ ಪ್ರತಿಕಾರನ ಇಲ್ಲಾ ಅಂತ ತ್ಯಾಮರಾಯಗ ಅನಿಸಿದರ ತಾನ ನರಮ್ ಆಗತಾನ (ದೀಕಹ. II, ೧೦೬). **ನರಂ**: ೧. ಗರುಡಮರಿಯನ್ನು ಕಂಡ ಹಾವಿನಂತೆ "ನರಂ" (ಮೆತ್ತಗೆ) ಆಗುತ್ತಾನೆ (ಬಸ್ಸಳ. ೦೮); ಮರುಮಾತಾಡದೆ ನರಂ ಆದ ನರಿಯಂತೆ ಈ ನರೋತ್ತಮ ತೊಲಗಿದ (ಮೂಮನ. ೧೦೬). **ನರಮು**: ೨. ಮೃದುವಾದ; ಕೋಮಲವಾದ; ಮೆತ್ತನೆಯ: "ನರಮು = ಮೆತ್ತನ್ನ" (ಜಾನಕೋ. ೯). ೩. ನಮ್ರನಾದ; ವಿಧೇಯನಾದ. **ನರ್ಮ₂**: ೨."ನರ್ಮ = ಮೆತ್ತನ್ನ" (ಜಾನಕೋ. ೯). (ನಾ). ೪. ದುರ್ಬಲತೆ; ನಿಶ್ಶಕ್ತಿ: ಅಧರ್ಮಿಗಳ . . . ಮೋಹಿಸುವ ಕಾಮಾಂಧರಬ್ಬುಳಿಯನು ಒರ್ಮೆಯಾಂ ಪೊರಲಾರೆನೆಂದಿಳಾಭಾಮಿನಿಯು ನರ್ಮದಿಂ ಕರಗಿ ಕಂದುತ್ತ ಮಿಡುಕುವಳು (ದುರಪು. ೨-೦೮).

**ನರಮುಗೊಳಿಸು** = ಮೆತ್ತಗೆಮಾಡು; ಬಗ್ಗುಬಡಿ: ಸತ್ಯಪ್ರತಿಜ್ಞರಾದ ರಜಪೂತರನ್ನು ಕುಟಿಲನೀತಿಯಿಂದ . . . ಸ್ವಾಧೀನಪಡಿಸಿಕೊಂಡು ನರಮುಗೊಳಿಸುತ್ತ ತನ್ನ ನೇತೃತ್ವದ ಕೆಳಗೆ ಇಟ್ಟುಕೊಳ್ಳಲುಪಕ್ರಮಿಸಿದನು (ಮಾತೃಭೂ. ೩). [ ←ಹಿಂ. ಮರಾ. ಗುಜ. ನರಮ್; ಪಾರ. ನರ್ಮ್ ]

**ನರಮಂಡಲ** (ನಾ). = ನರವ್ಯೂಹ: ಯಾವುದೋ ಒಂದು ತೇಜೋವಾಹಿಯು ನರಮಂಡಲವನ್ನೆಲ್ಲಾ ಆಕ್ರಮಿಸಿ ಕೌಶಿಕನನ್ನುವ ತನ್ನನ್ನು ಕಬಳಿಸುವಂತೆ ತೋರುತ್ತಿದೆ (ಮಹಾಕ್ಷ. ೩೭); 'ಥಿಯಾಮಿನ್' ಮನಸ್ಥಿತಿಯ ಜೀವಾತು. ನರಮಂಡಲದ ಮತ್ತು ಹೃದಯದ ಕ್ರಿಯೆಗಳು ನಡೆಯಬೇಕಾದರೆ ಇದು ಅಗತ್ಯ (ಆಹುಸ್ವಾ. ೬೦); ಶರ್ಕರಪಿಷ್ಟಾದಿಗಳಿಂದ ದೇಹಕ್ಕುಂಟಾಗುವ ಪ್ರಯೋಜನಗಳು . . . ಹೃದಯ, ನರಮಂಡಲ ಮತ್ತು ಪಿತ್ತಜನಕಾಂಗಗಳ ಆರೋಗ್ಯಕ್ಕೆ ನೆರವಾಗುವುದು (ಗೃಹವಿ. ೧೮).

[ ನರ₁ (<ನರವು) + ಮಂಡಲ ]

**ನರಮನುಷ್ಯ** (ನಾ). ಸಾಮಾನ್ಯಮನುಷ್ಯ ; ಮನುಷ್ಯಮಾತ್ರ : ನೀರು ಜಲಚರದೆಂಜಲು ಮೃಗಪಕ್ಷಿಗಳೆಂಜಲು ಬಳಸಹೋದಲ್ಲಿ ಕೈಕಾಲ ತೊಳೆದು ಬಾಯ ಮುಕ್ಕುಳಿಸುವಲ್ಲಿ ನರಮನುಷ್ಯರೆಂಜಲು (ವಚಸಂ. ೩೭೮-೪೩). [ ನರ್₂ + ಮನುಷ್ಯ ]

**ನರಮಹಿತ** (ನಾ). ಜನರಿಂದ ಗೌರವಿಸಲ್ಪಟ್ಟವನು ; ಜನರ ಆದರಕ್ಕೆ ಪಾತ್ರನಾದವನು : ನರಮಹಿತಾ [ಪಾಠಾಂ. ಪಾ] ನಿನಗೇನಹಿತರು ಮೊಳರೇ ಸತತ ಪರಹಿತಾಚಾರಪರಾ (ಕವಿರಾ. ೧-೮೦).
[ ನರ್₂ + ಮಹಿತ ]

**ನರಮಾಂಸ** (ನಾ). ಮನುಷ್ಯನ ಮಾಂಸ : ಹಿರಿಯರು ನರಮಾಂಸವ ಭುಂಜಿಸುವರೆ (ಬಸವ. ೨೫೦) ; ಕುಂಭಂ ನರಮಾಂಸದ ಸವಿಯಿಂ ಮನುಜರೆಲ್ಲರಂ ಗುಪ್ತದೆ ಕೊಲ್ಲುದನಜಾದು (ಚಾಂತೀಶ್ವ. ೩-೭೪) ; ಮಾಂಸವಾಗಲೆ ವೇಳ್ಕುವಕ್ಕಂ ಮಾಂಸಮುಂ ನರಮಾಂಸಂ (ಬಸವು. ೨೪-೭) : ರಕ್ತದ ಜಲಪಾತ ! ನರಮಾಂಸದ ನಾತ ! (ಪಾಂಚಜ. ೬೯-೯). [ ನರ್₂ + ಮಾಂಸ ]

**ನರಮಾಂಸಭಕ್ಷಕ** (ನಾ). ಮನುಷ್ಯನ ಮಾಂಸವನ್ನು ತಿನ್ನುವವನು ; ನರಭಕ್ಷಕ: ಈ ಮರ್ಯಾದವಜಾಯದ ಹಿರಿಯರು ನರಮಾಂಸಭಕ್ಷಕರಯ್ಯಾ (ಚನ್ನವ. ೫. ೩೯೦-೭೦೩). [ ನರಮಾಂಸ + ಭಕ್ಷಕ ]

**ನರಮಾಂಸಭುಂಜಕ** (ನಾ). = ನರಮಾಂಸಭಕ್ಷಕ : ಅವನು ಗುರುದ್ರೋಹಿ ಆಚಾರಭ್ರಷ್ಟ ವ್ರತಗೇಡಿ ನರಮಾಂಸಭುಂಜಕ (ಚನ್ನವ. ೫. ೨೨೭-೩೦೦).
[ ನರಮಾಂಸ +ಭುಂಜಕ ]

**ನರಮಾಲೆ** (ನಾ). ಒಂದು ಬಗೆಯ ರೋಗ : ಯವಕ್ಷಾರವನ್ನು, ಇಂಗನ್ನು, ಸುಣ್ಣವನ್ನೂ ಲೇಪವಮಾಡೆ ನರಮಾಲೆ ಕರಗಿಹೋಗುವುದು . . . ಪುಣುಗನನ್ನೂ ಬೆಣ್ಣೆಯನ್ನೂ ಕೊಡಲು ಗಂಡಮಾಲೆ ಹೋಗುವುದು. ನರಮಾಲೆ ಕರಗಿಹೋಗುವುದು (ವಿಶ್ವವಿ. ೬೯). 'ನರಮಲಿ' ಪರಾ. [ ? ]

**ನರಮು** 'ನರಮ್' ನೋ.

**ನರಮೃಗ** (ನಾ). ೧. = ನರಪಶು : ದ್ಯೂತ ಮೃಗಯಾ ಸ್ತ್ರೀವ್ಯಸನ ನೃಪ ಜಾತಿಗೋಸುಗರಾದವಿದಜ ರಸಾತಿಶಯಾವಜಾಯದವ ನರಮೃಗ (ಶುಬ್ಬಾ.ಸ. ೦೩-೩೮) ; ನರಮೃಗಾಧಮನೆತ್ತಲುನ್ನತಪರಮತತ್ತ್ವವಿದೆತ್ತಲು (ಶುಬ್ಬಾಛೀ. ೩-೭೦). ೨. = ನರಸಿಂಹ ೧ : ಗಿರಿಯ ನೆಗಹಿ ಧರಣಿಯ ತಂದು ನರಮೃಗ ಬಲಿಬಂಧ . . . ಪುರಂದರವಿಠಲ ಮನೆಗೆ ತಾ ಬಂದ (ಪುರಂದ. ೦-೬೩-೩).

**ನರಮೃಗರೂಪ** = ಮನುಷ್ಯನ ದೇಹ ಹಾಗು ಸಿಂಹದ ಮುಖವುಳ್ಳ ರೂಪ ; ನರಸಿಂಹ :- ತರಳ ಕರೆಯಲು ನೀ ತ್ವರಿತದಿ ಕಂಭದಿ ಬಂದು ನರಮೃಗರೂಪದಿಂದವನ ಕಾಯ್ದೆ (ಪುರಂದ. ೩-೦೭೦-೫). **ನರಮೃಗಶರೀರ**= ನರಮೃಗರೂಪ : ಪರಮಪುರುಷ ಭವಭಂಜನಕೇಶವ ನರಮೃಗಶರೀರ ನಮೋ ನಮೋ (ಪುರಂದ. ೩-೪೧-೦). [ ನರ್₂ + ಮೃಗ ]

**ನರಮೇಧ** (ನಾ). ೧. ಮನುಷ್ಯರನ್ನು ಬಲಿಕೊಡುವ ಯಜ್ಞ : ರಾಕ್ಷಸೋತ್ತಮರೊರಾರ್ಪಿಂತೆ ನರಮೇಧಮಖದೀಕ್ಷೆಯಂ ಕೈಕೊಂಡರಿದಕೆ ಋತ್ವಿಜರಾರು (ಜೈಮಿಭಾ. ೧೩-೨೭) ; ನಿನ್ನ ನರಮೇಧಕಾರ್ತ್ತಿಗ್ವರ್ಜ್ಯಮಂ ಮಾಳ್ಪರಿದಕೆನ್ನನಾಚಾರ್ಯನಾಗಿಯೆ ವರಿಸು ತದ್ಯಾಗಮಂ ನೆಗಳ್ಚು (ಜೈಮಿಭಾ. ೦೩-೨೯) ; ನರಬಲಿ ನರಮೇಧವು ಕೇಳು ಅಶ್ವಮೇಧಕೂ ಸರಿಮೇಲು (ಗಠ. ೬೯-೦೩). ೨. (ಆಲಂ) (ಹಿಂದೆ ಮುಂದೆ ನೋಡದೆ) ಮನುಷ್ಯರನ್ನು ಕೊಲ್ಲುವುದು : ಎಲ್ಲೆಲ್ಲೂ ಗೋಲೀಬಾರ್, ಮಕ್ಕಳು ಮಂಗಳೆನ್ನದ ಗುಂಡಿಕ್ಕಿ ಕೊಲ್ಲುವ ನರಮೇಧ (ವಿದ್ಯಾಕಿ. ೦೨೭) ; ಶಕ್ತಿ ಹಿರಿದಾಗ ಎಲ್ಲವನ್ನೂ ಮರೆತು ನರಮೇಧವನ್ನಾಚರಿಸುವೆನು (ದಾನಚಿಂ. ೦೪೫) ; ಅವನೆಸಗಿದ ಕ್ರೂರ ನರಮೇಧದ ಪ್ರತಿಫಲವಾಗಿ ಪಡೆದಿದ್ದ ಬಿಳಿಯ ಶಿಲುಬೆ (ಪುನರು. ೩೫೭). [ ನರ್₂ + ಮೇಧ ]

**ನರಯಜ್ಞ** (ನಾ).= ನರಮೇಧ ೨ : ಈ ನರಯಜ್ಞ ಎಂಥಾ ಜಿತನ ಅವರಿಗೆ ! (ವೀರಯೋ. ೩೦). [ ನರ್₂ + ಯಜ್ಞ ]

**ನರಯಣ** 'ನಾರಾಯಣ' ನೋ.

**ನರಯುಗ್ಮ** (ನಾ). ೧. ಇಬ್ಬರು ಮನುಷ್ಯರು. ೨. [ಜ್ಯೋತಿ] ಮಿಥುನ ರಾಶಿ : ಶನಿ ಮಕರಲಗ್ನದೊಳ್ . . . ದನುಜೇಜ್ಯಂ ತೂಲೆಯೊಳ್ ಸೌಮ್ಯನಿರಲ್ ನರಯುಗ್ಮದೊಳ್ ನರಾಧಿಪನಕ್ಕುಂ (ಜಾತಕ. ೦೨-೫).
[ ನರ್₂ + ಯುಗ್ಮ ]

**ನರರಾಕ್ಷಸ** (ನಾ). ರಾಕ್ಷಸನಂತೆ ನಿರ್ದಯನಾದ ಮನುಷ್ಯ : ಆ ನಿಸರ್ಗವನ್ನು ನರರಾಕ್ಷಸನಂಥ ಅಥವಾ ಅಧಿಕಾರಿಗಳು ಹೇಗೆ ಕಲುಷಿತಪಡಿಸಿ ದುರಂತಕ್ಕೆ ಬಡಜನರನ್ನು ದೂಡುವರೆಂಬುದು . . . ವರ್ಣಿತವಾಗಿದೆ (ಕಾಲಚಕ. ೧ ಮುನ್ನುಡಿ) ; ಹೆಂಡತಿಯ ವಿಕೃತಕೋಪವು ಅವರನ್ನು ನರರಾಕ್ಷಸನನ್ನಾಗಿ ಮಾಡಿಸಿತ್ತು (ಕಾವೇರಿ. ೯೪). [ ನರ್₂ + ರಾಕ್ಷಸ ]

**ನರರಾಶಿ** (ನಾ). = ನರಲಗ್ನ : ಕನ್ಯಾ ತುಲಾ ಮಿಥುನ ಧನುಸ್ಸು (ಪೂರ್ವಾರ್ಧ) ಕುಂಭ ಇವು ನರರಾಶಿಗಳು (ಜಾತಕ. ೦-೩೦ ಟೀಕೆ) ; ಮಿಥುನ ಕನ್ಯಾ ತುಲಾ ಧನುಸ್ಸಿನ ಪೂರ್ವಾರ್ಧ ಕುಂಭ ಇವು ನರರಾಶಿಗಳು (ಜಾತಕ. ೪-೦೯ ಟೀಕೆ). [ ನರ್₂ + ರಾಶಿ ]

**ನರರೋಗ** (ನಾ). ನರಗಳ ದೌರ್ಬಲ್ಯದಿಂದ ಉಂಟಾಗುವ ಒಂದು ಬಗೆಯ ರೋಗ ; ನರವ್ಯೂಹದ ಅಸ್ವಸ್ಥತೆಯಿಂದ ಉಂಟಾಗುವ ಮನೋವೈಕಲ್ಯ : ಇವೆರಡೂ ಲಕ್ಷಣಗಳು ಮಂದ ಅಥವಾ ತೀರ ಕಡಿಮೆ ಪ್ರಮಾಣದಲ್ಲಿದ್ದರೆ, ಸಾಮಾನ್ಯವಾಗಿ ಅಂತಹ ಮನೋವೈಕಲ್ಯಗಳನ್ನು ನರರೋಗ(Neurosis)ಗಳೆಂದು ಕರೆಯುತ್ತಾರೆ (ಮನೋರೋ. ೨೦) ; ನರರೋಗ ಪ್ರವೃತ್ತಿಗೂ (ನ್ಯೂರೋಟಿಸಿಸಂ) ಶರಣಾಗತಿಗೂ ನೇರವಾದ ಸಹಸಂಬಂಧವಿದೆಯೆಂದು . . . ಸಿದ್ಧಪಡಿಸಿದ್ದಾನೆ (ಕವಿಕೋ. I, ೭೩೫).
[ ನರ್₁ (<ನರವು) + ರೋಗ ]

**ನರರೋಗಿ** (ನಾ). ನರರೋಗವುಳ್ಳವನು ; ಸೌಮ್ಯರೂಪದ ಮನೋವೈಕಲ್ಯದಿಂದ ಕೂಡಿದವನು: ನರವ್ಯಾಧಿಯುಳ್ಳ(ವನು) ; ನರರೋಗಿ: ವಿಪರೀತಸೂಕ್ಷ್ಮವೇದಿಯಾದ (Neurotic. ಇಂಕನಿ) ; ನರರೋಗಿಯಲ್ಲಿ ಸಮಾಜಭಾವನೆಯು ಚೆನ್ನಾಗಿಯೇ ಇರುತ್ತದೆ (ಮನೋರೋ. ೨೦).
[ ನರ್₁ (< ನರವು) + ರೋಗಿ ]

**ನರಲ್₁**, ನರಲು, ನರಳ್, ನರಳು₁, ನೆರಳ್₁, ನೆರಳಂ₁ (ಕ್ರಿ). ೧. ನೋವಿನಿಂದ ಧ್ವನಿಮಾಡು ; ಮುಲುಕು ; ಒರಲು : "ನರಲ್ – ವೇದನಧ್ವನೌ" (ಶಮದ) ; ಸೂಲದೊಳ್ ನೊಂದು ನರಳ್ವ[ಲ್ವ] ಕಳ್ಳರಿಂ (ಕಾವ್ಯಸಾ. ೩೩೯ ಕೊಡ್ರಳ) ; ಎನ್ನ ಭಯಂಕರದುಂಡರತ್ನಹತಿಯಿಂ ಗಿರಿ ನೊಂದು ನರಲ್ವ [ ಪಾಠಾಂ. ಳ್ವ ] ಮಾಟ್ಕೆಯಿಂತಾಯ್ತಾಗಳ್ (ಅರಿಪು. ೦೩-೩೭) ; ಸುರಿವ ಸರಲ್ ನರಲ್ವ ಭಟರೆತ್ತಮುರುಳ್ವ ದಟಂ (ಪಂಪಭಾ. ೯-೩೭) ; ಸೂತಸುತನೊಂದುಗ್ರೋಮವಿಂ ತಿಣ್ಣಂಬೆಂಬ್ಬೊಡನಾರ್ದಂ ನಸು ಮೂರ್ಛೆವೋಗಿ ರಥದೊಳ್ ಭೀಮಂ ನರಲ್ವನ್ನೆಗಂ (ಪಂಪಭಾ. ೦೦-೦೪೩); ಕುರುರಾಜಂ ತೊಡೆವೇನೆಗೆ ನರಳ್[ಲ]ನೆ ಕುಜುವಾದ ತೊಡೆಯ ಬೇನೆಗೆ ಕಂಡರ್ ನರಳ್ವಂತೆ (ಗದಾಯು. ೯-೦೯) ; ಬೆರಲೆರಲೊರಲ್ಕೊರಲ್ಸರಲ್ . . . ನರಲುಂ ಮುಂಗೈ ಸರಲುಂ ಲಾಂತವಿಂ ಗ್ರಾಮ್ಯರಜಾಯದುಚ್ಚರಿಸುವರ್ ಕುಳಾಂತ್ಯರುಮೆಯಿಂ (ಶಮದ. ೨೪) ; ಅದೊ ಕೇಳಿಂ, ಆ ನರಲ್ವ ನರಲ್ಗಳನ್ ! (ಅಶ್ವತ್ಥಾ. ೦೯-೨೪). **ನರಲು** : ೧. ಅರೆನುಡಿವ ಸರಸವಾಡುವ ನರಲುವ ಪೊಯ್ಯುಲಿಡುವ . . . ಪಲುಂಬುವ ನುಡಿ ವಿರಸಮುಪಶ್ರುತಿಯೊಳೀಯುವೆಂತುಂ ಫಲಮಂ (ಲೋಕೋಪ. ೦೨-೫೪). **ನರಳ್** : ೧. ನರಳುತ್ತುಂ ಸುಯ್ಯುತ್ತುಂ . . . ಸೇದೆಯ ನೇಣಂ ಕರಗಮುನೊಲ್ದಿಕ್ಕುತ್ತುಂ ಸೇದಿ ನೀರ್ಗುಡಿಯೆಂದರ್ (ದಶಕು. ೦೦-೫೦) ; ನರಳ್ವ ಮಹಾಸ್ಪತಾಳ

ಹತ್ತಿಯಿಂ ತಲೆ ತುಂಡಿಸಿ ಬಿರ್ದು ಧಾತ್ರಿಯೊಳ್ ಪೊರಳ್ವ . . . ಅತಿಭೀತರಂ ಜಱಿದು ಝಂಕಿಸುತಿರ್ದುವು ಭೂತಸಂಕುಳಂ (ತ್ರಿಪುರ. ३೯-೩೫೯); ನಿಲ್ಲದೆ ನರಳ್ವ ಪಸುಳೆಯ ನಿರ್ವಾಲಾಸ್ಯಮಂ ಪುಲ್ಲಿಗಳ್ಕಂಡು (ಕ್ರಮಿಧಾ. ३೪-೬೭).

**ನರಳು$_1$** : ೧. ರುಜೆ ರೋಗಂಗಳು ಲಿಂಗದೇಹಿಗಳೆಂಬವರ ಸೋಂಕಿದಲ್ಲಿ ರೋಗದ ಇಚ್ಚೆಯನಱಿದು ನರಳಿದಲ್ಲಿ ಲಿಂಗದ ಚಿತ್ತವೆತ್ತಹೋಯಿತ್ತು (ಸರ್ವವ. ೧೨೦-೭೧೯); ಕಾಲು ನೊಂದಂತೆ ನೀಡಿ ನರಳುತುಂ (ಸಂಬಿರ. ೬-೧೦೩): ಬಿದ್ದು ಹೊರಳುತ್ತ್ತಾ ನರಳುತೊಱಲುತ್ತ ಬಾಯ್ಬಿಟ್ಟಳೆದಳು ತ್ರಿರಲು (ಬಸವು. ೪೩-೫೦); ನರಳುವಾರೋಹಕರ ರಾವ್ತರ . . . ಭಂಗವ ನೇಸನೆಂಬೆನು ವೈರಿಸೇನೆಯಲಿ (ಕುಮ್ಮಾದ್ವಾ.೭. ೧೫-೩೪); ನರಳುತ್ತಂ ತನುತಾಪದಿಪೊರಳುತ್ತಂ . . . ಪಾಂಡ್ಯಾವನಿಪಂ ಕರೆಕರೆ ವೈದ್ಯರನೆನುತ್ತ ಲೊಱಲುತ್ತಿರ್ದಂ (ತ್ರಿಪುವಿ. ४४-४४); ಹಾಡುವ ಸಭೆಯಲ್ಲಿ ನರಳುವದುಂಟೆ? (ಗದಿ. ೭೦-೧೦); ಒಡಲ ತೀಯಬೇಹುದಿಲ್ಲಿ . . . ನರಳುವವರ ಮಧ್ಯದಲ್ಲಿ (ವಿಷೀಗೀ.೪೨-೪). ೨. ಪರಿತಪಿಸು ; ಸಂಕಟಪಡು : ಪ್ರಜೆಗಳು ತೆರಿಗೆಯ ಭಾರದಿಂದ ನರಳುತ್ತಿದ್ದಾರೆ (ರೂಢಿ). **ನೆರಳ್$_1$** : ೧. ದಿಂಡುರುಳ್ದು ಪೊರಳ್ವ ನೆರಳ್ವ ಪರಾಕ್ರಮಿಗಳಂ . . . ತದ್ರಣಾಂಕಣಮೆಸೆದುದು (ಜಬಪು. ೧೬-೨೦).

**ನೆರಳು$_1$** : ೧. ನೆರಳುವ ಕರಿತುರಗದಾಲಿಗಳ ಚುಚುಗೀಂದಲಿಂದಿರದು ಹರಿದು ತೀದವು ಘೂಳಚಯ (ಕೊೞಗಡು. ३४-೬).

ನರನರಳು (ದ್ವಿರುಕ್ತಿ) : ಹೊಟ್ಟೆನೋವಿನಿಂದ ನರನರಳಿ ಬೇಸತ್ತನು (ಮಧ್ಯಮ. ೦೯४,.

[ ದೇ. ॥ ತಮಿ. ನರಲ್; ಮಲ. ನರಣ್ಣು, ಞರಣ್ಣು; ತುಳು. ನರಲು, ನರಲು. ನರ್ಲುರ್ ; ಕುರುಖ್. ನರ್ಯಾನಾ = ಅಳು; ಮಲ್ತೊ. ನಿರೆ ]

**ನರಲ್$_2$**, ನರಳು$_2$ (ನಾ). ನರಳುವಿಕೆ ; ಸಂಕಟದ ಧ್ವನಿ ; ನರಳಾಟ : ಅದೊ ಕೇಳಿಂ, ಆ ನರಲ್ವ ನರಲ್ಗಳನ್ (ಅಕ್ಷತ್ಪಾ. ೧೪-೨೭೪): ಒಂದೆ ಕೊರಲ ನರಲನೆತ್ತಿ ಅಟ್ಟುದಲ್ಲ ನೆಲನ್ ತಾನ್ (ಬದ್ರಪ್ರ. ३३-೪೬೭).

**ನರಳು$_2$** : ಖಂಡಿಸಿದ ಕೊರಳಿನಿಂ ಕೊರೆವೆಣದ ನರಳಿನಿಂ (ಶರಕು. ३೯-३೫). [< ನರಲ್$_1$ ]

**ನರಲಗ್ನ** (ನಾ). [ಜ್ಯೋತಿ] ನಿರ್ದಿಷ್ಟವಾದ ಕೆಲವು ಲಗ್ನ(ರಾಶಿ) ಗಳಿಗೆ ಜ್ಯೋತಿಶ್ಶಾಸ್ತ್ರದಲ್ಲಿ ಹೇಳಿರುವ ಒಂದು ಸಂಜ್ಞೆ : ನರಲಗ್ನ ಮನೀಕ್ಷಿಸೆ ರವಿ ಸುರ ನೃಪ ಗೋಗೃಹದೊಳಗ್ನಿಹೋತ್ರಾಲಯದೊಳ್ ಗುರು ವೀಕ್ಷಿಸೆ ಶಿಲ್ಪಗೃಹಾಂತರದೊಳ್ ವೀಕ್ಷಿಸೆ ಬುಧಂ ನರಂ ಜನಿಯಿ ಸುಗುಂ (ಜಾತತಿ. ೪-೧೯); "ಮಿಥುನ ಕನ್ಯಾ ತುಲಾ ಧನುಸ್ಸಿನ ಪೂರ್ವಾರ್ಧ ಕುಂಭ ಇವು ನರರಾಶಿಗಳು. ಈ ರಾಶಿಗಳಲ್ಲೊಂದು ಲಗ್ನವಾದರೆ ನರಲಗ್ನವೆನಿಸಿಕೊಳ್ಳುತ್ತದೆ" (ಜಾತತಿ.೪-೧೯ ಟೀಕೆ). P ಮೇಲಿನ 'ಜಾತತಿ' ಪ್ರಯೋಗವು ಬೃಹಜ್ಜಾತಕದ ವ್ಯಾಖ್ಯಾನಕ್ಕೆ ಅನುಸಾರವಾಗಿದೆ. ಆದರೆ ಇದರಲ್ಲಿ ಭಿನ್ನಾಭಿಪ್ರಾಯಗಳಿವೆ. ಉದಾಹರಣೆಗೆ 'ಜಾತಕ ತಿಲಕದ ೧-೨೨'ರಲ್ಲಿ ಪುರುಷರಾಶಿಗಳು ಮೇಷ, ಮಿಥುನ, ಸಿಂಹ ತುಲಾ, ಧನುಸ್ಸು ಮತ್ತು ಕುಂಭ ಎಂದಿದೆ. ಇದು ಎಲ್ಲಾ ಗ್ರಂಥ ಗಳಲ್ಲಿಯೂ ಹೇಳಿರುವ ಸಂಜ್ಞೆ. ಆದರೆ ಭಟ್ಟೋತ್ಪಲನು ತುಲಾ, ಕನ್ಯಾ, ಮಿಥುನ ಮತ್ತು ಕುಂಭ ಈ ನಾಲ್ಕು ಪುರುಷಲಗ್ನವೆಂದು ಹೇಳಿದ್ದಾನೆ. [ ನರ$_2$ + ಲಗ್ನ ]

**ನರಲಿಸು**, ನರಳಿಸು (ಕ್ರಿ). ನರಳುವಂತೆ ಮಾಡು ; ಸಂಕಟಕ್ಕೆ ಗುರಿಪಡಿಸು : (ಕ). **ನರಳಿಸು** : ಉರಗ ವರ ಕಿಂಪುರುಷ ಕಿನ್ನರ ತರುಣಿಯರ ವ್ರತಗೆಡಿಸಿ ಭೋಗಿಸಿ ನರಳಿಸುವವರು (ಅಂಬಿಕಾ. ४೪-४೬); ಸಾಯೋತನಕ 'ಕಿರಿಸಳ್ಳು' ನರಳಿಸಿ ಬಿಟ್ಟೇನು (ಬಿಳುಮ. ೦೪೬).

[ ನರಲ್$_1$ + ಇಸು$_3$ ]

**ನರಲು** 'ನರಲ್$_1$' ನೋ.

**ನರಲುಲಿ** (ನಾ). ನರಳುವ ಸದ್ದು ; ನರಳಾಟ : ಪರಿಪರಿಯಿಾ ನರಲುಲಿ ಯೊಳ್ ಪಾರ್ಶ್ವಿಕರಾ ಪಾಂಗನೊಳೇ ಪ್ರಾರ್ಥನೆಯನ್ ಕೂಗಿ (ಪಾರಸಿ. ३೯-೮). [ ನರಲ್$_1$ + ಉಲಿ$_2$ ]

**ನರಲೇಬಳ್ಳಿ** (ನಾ). ಒಂದು ಬಗೆಯ ಬಳ್ಳಿ : (ಮೈಜಿಗ. ೦೯-४೪೭) 'ನರಳೆ' ಪರಾ. [ ನರಲೆ$_0$ + ಬಳ್ಳಿ ]

**ನರಲೋಕ** (ನಾ). ೧. ಮನುಷ್ಯರು ವಾಸಿಸುವ ಲೋಕ ; ಮರ್ತ್ಯ ಲೋಕ : ನರಲೋಕವನಟ್ಟಿ ಗೀಟಿಸಿ ನರಲೋಕದ ಸುಖಮನಾತ್ಮವಿಭವದೆ ಪೊತ್ತಂ ಕುರುಪತಿ ವೈಶಂಪಾಯನಸರವಂ ಪುಗುವಂತೆ ನಾಗಲೋಕ ಮನಾಗಳ್ (ಗದಾಯು. ೬-೧೪); ನರಲೋಕದಲ್ಪಸೌಖ್ಯಂ ಸ್ಥಿರಮಲ್ಲದು (ಧರ್ಮಾಮೃ. ೭-३३೭); ನರಲೋಕದ ನರಗುಱಿಗಳೆಲ್ಲ ನರಸಂಸಾರಕ್ಕೊಳ ಗಾದರು (ಅನಿಜಂ. ३೭೭-೧३೭३): ಪುಷ್ಪದತ್ತಂ ನರಲೋಕದೊಳ್ ಪುಟ್ಟಿ . . . ಕೆಟ್ಟು ಪೋಗಲನುವಾಗಿರ್ದಪಂ (ಸಂಬಿರ. ೬-४ ವ); ನರಲೋಕಂ ನಡೆ ನೋಡಲಾತ್ಮಪುರಮಂ ಕೊಂಡೀಶಲೋಕಕ್ಕೆ ಬಾಧುರಮೋದಂ ಬಡೆದಂದು ಪರ್ವ ನೆಗಬ್ದುದೃದ್ಯೂರ್ಜರಾಧೀಶನಂ ಪಿರಿದಾಲೋಕಿಸಿ (ಉದ್ಭಟ.೧३-೧३३); ಪರಲೋಕಕ್ಕೆ ಹೋದವಗೆ ನರಲೋಕದ ಗೊಡವೆಯೇ? (ಗಾದೆ). ೨. ಮರ್ತ್ಯಸಮೂಹ ; ಮನುಷ್ಯಕೋಟಿ ; ಮಾನವಕುಲ : ನರಲೋಕವೊಂದೆ ಮುನ್ನಿನ ಚರಣಾಬ್ಜಕ್ಕೆಱಗೆ ನೆಗಬ್ದ ಕೇವಲಬೋಧಂ ದೊರೆಕೊಳೆ ಸುರನರಲೋಕಂ ಚರಣಾಬ್ಜಕ್ಕೆಱಗೆ ಭರತಯತಿಪತಿ ನೆಗಟ್ದಂ (ಆದಿಪು. ೧೬-೭೪); ಪೆಣಪೊಗೆಸುತ್ತಿ ನರಲೋಕಮೆಲ್ಲಮಂತಕದಾಮರ ದೊಳೆ ಬೆಂದು ಧೂಮಮಯಮಾದ ದಿಶಾಧೂಮಂ ಕವಿದಂತಾಭೀಳವಾಗೆ (ಶಾಂತಿಪು. ೭-೯೮ವ); ನರಲೋಕಶ್ರೀಕಾಂತಾವಿರಕ್ತಮಾದತ್ತು ಪರಮ ನಿರ್ವೇಗವನಂಪರೆ ನೆಗೞ್ ಮುಕ್ತಿಕಾಂತಾನುರಕ್ತಮಾದತ್ತು ವಿಮಲ ವಾಹನನ ಮನಂ (ಅಜಿಪು. ३-೧೦೩).

ನರಲೋಕದಲ್ಲಟ, ನರಲೋಕದಲ್ಲಣ = ಮನುಷ್ಯರಿಗೆ ಹೆದರಿಕೆ ಯನ್ನುಂಟು ಮಾಡುವವನು ; ಒಂದು ಬಿರುದು : ಬಿರುದಿಂಗೆ – ಗಜಮಳಿ, ಗಜವಾಱು, ನರಲೋಕದಲ್ಲಟ[ಪಾಠಾಂ.ಣಂ] (ಕಮರ. ೧೭४ ಪ್ರಯೋ); ನರಲೋಕದಲ್ಲಣಾ, ಗಜವೇಂಟೆಕಾಱಂ, ರಾಯಕೋಲಾಹಲಂ (ಕಲ್ಯಾಮ. ३९೫ ಪ್ರಯೋ). [ ನರ$_2$ + ಲೋಕ ]

**ನರಲೋಕಚಂದ್ರ** (ನಾ). ಭೂಲೋಕಕ್ಕೆ ಚಂದ್ರನಂತೆ ಆಹ್ಲಾದಕಾರಿ ಯಾದವನು : ಪರಚಕ್ರಭೂಪರಟ್ಟದ ಕರಿಗಳ್ ಬಿಡುತಪ್ಪ ಮದದ ಪೊನಲಿಂದೆತ್ತಂ ನರಲೋಕಚಂದ್ರನಾ ಮಂದಿರದೊಳಗೊಳಗೆಲ್ಲ ಕಾಲಮುಂ ಕೆಸಱಕ್ಕುಂ (ಕವಿರಾ. ४-೦೮೦). [ ನರಲೋಕ + ಚಂದ್ರ$_2$ ]

**ನರಲೋಕಚರ** (ನಾ). ಮನುಷ್ಯಲೋಕದಲ್ಲಿರುವವನು ; ಭೂಲೋಕ ವಾಸಿ : ನೀ ನರಲೋಕಚರನಿನ್ನುಸುರಲೀಂ ಹರಲೋಕಚರನೋಹಿಲನು (ಬಸವು. ४४-೫೫). [ ನರಲೋಕ + ಚರ ]

**ನರವಂಟಿಗೆ** (ನಾ). ಒಂದು ಬಗೆಯ ಸಸ್ಯ : ನರವಂಟಿಗೆಯ ಬೇರುಂ ಗೋರೋಚನಮಂ ಸಮನಾಗಿ ಕೂಡಿ ಅರೆದು (ಕಾಮಜಾ. ೧೦-३೬೭).

[ ?./ತೆಲು. ನರವೆಂಡು ]

**ನರವಕ್ತ್ರ** (ನಾ). ಮನುಷ್ಯನ ಮುಖವುಳ್ಳ, ಶಿವಪ್ರಮಥರಲ್ಲಿ ಒಬ್ಬ : ಹಂಸವಕ್ತ್ರಂ ಕರಿವಕ್ತ್ರನಶ್ವವರವಕ್ತ್ರಂ ಮೇಷವಕ್ತ್ರಂ ಫಣೀಶ್ವರವಕ್ತ್ರಂ ನರವಕ್ತ್ರನುಷ್ಟ್ರಪತಿವಕ್ತ್ರಂ . . . ಎಂಬರೆಸೆವರ್ವಿಶ್ವೇಶ್ವರಾಸ್ಥಾನದೊಳ್ (ರಾಜಶೇ. ೦೯-೦३४). [ ನರ$_2$ + ವಕ್ತ್ರ ]

**ನರವರ** (ನಾ). ಮನುಷ್ಯರಲ್ಲಿ ಉತ್ತಮನಾದವನು ; ಅರಸ : ಕೃಪಮದಿ ನೊರ್ವರೊಳೊರ್ವರ ಕಾದುವಂ ಎಂದು ರಣಧೀರನರವರಸಂದೋಹಂ ನುಡಿದು ನಿದ್ರೆಯ ತಳೆದಿರಲ್ (ನೇಮಿಪು. ೦३-४) ; ನರವರರು [ಪಾಠಾಂ. ರವರು]ರ್ವಿಯೊಳ್ ಧರೆ ಜಗತ್ತ್ರಯದೊಳ್ ಜಗಮಂ ತ್ರಿವಾಯುಗಳ್

ಧರಿಯಿಸಿ ನಿಂದುವು (ಜೀವಸಂ. ೦೪೬-೩೪) ; ವಾನರ ಕುಲಂ, ನರವರಂ, ವಾಲಿಯ ಸಹೋದರಂ ಸುಗ್ರೀವನಲ್ತೆ ಆ ಓಜೋನ್ವಿತಂ ? (ಶ್ರೀರಾಮಾ. ೨೭೮-೦೧). [ ನರ$_2$ + ವರ$_3$ ]

**ನರವರ್ಯ** (ನಾ). ಶ್ರೇಷ್ಠನಾದ ಮನುಷ್ಯ ; ಉತ್ತಮಮಾನವ : ನರವರ್ಯ ಭೀಮಸೇನ ನಾರಿಗೆ ಕುಸುಮ ತರುವೆನೆನುತ ಬೇಗ ತೆರಳಿದಸು (ಪುರಂದ. ೩-೨೧೦-೧). [ ಸಂ. ]

**ನರವಲಿ** 'ನರವುಲಿ' ನೋ.

**ನರವಲು** 'ನಱುವಲ್' ನೋ.

**ನರವಾನರ** (ನಾ). ಮನುಷ್ಯನ ಆಕಾರವನ್ನು ಹೋಲುವ ಒಂದು ಬಗೆಯ ವಾನರ : ಪಾಮರ ಹರಿದಾಸನು ಅವನಲ್ಲ ನರವಾನರ ಕಾಣೊ (ಪುರಂದ. ಧಾ. ೨-೭೨-೪); ಉದ್ದತೋಳುಗಳ, ದೊಡ್ಡ ನರವಾನರ ; ಒರಾಂಗೊಟಾಂಗ್ ( = ಕಾಡುಮನುಷ್ಯ) (Orang-outang. ಇಂಕನಿ). [ ನರ$_2$ + ವಾನರ ]

**ನರವಾಹ** (ನಾ). ಮನುಷ್ಯನನ್ನು ವಾಹನವನ್ನಾಗಿ ಉಳ್ಳವನು ; ಕುಬೇರ : ನರವಾಹಂ ಬಳ್ಕೆ ಶಕ್ರಂ ಸೆಡೆಯೆ ಹುತವಹಂ ಕಂದೆ ಕಾಲಂ ಕರಂ ಕುಂದೆ (ಶಬಶಂ. ೨-೧೧). [ ನರ$_2$ + ವಾಹ ]

**ನರವಾಹನ** (ನಾ). ೧. = ನರವಾಹ : ಐಳಬಿಳಃ . . . ಕುಬೇರಃ, ನರವಾಹನಃ, ಗುಹ್ಯಕಃ . . . ಈ ೧೭ ಕುಬೇರನ ಪೆಸರ್" (ಹಲಾಯು. ೦೪-೬೪). ೨. (ಮನುಷ್ಯರು ಹೊರುವ) ದಂಡಿಗೆಯಲ್ಲಿ ಪ್ರಯಾಣ ಮಾಡುವವನು : "ದಂಡಿಗೆಯನೇಱುವಂ ನರವಾಹನಂ" (ಮಂಗರಾ. ೭೩-೨೭). [ ನರ$_2$ + ವಾಹನ ]

**ನರವಿಂದು** (ನಾ). ಮನುಷ್ಯರ ಗುಂಪು ; ಜನಸಮೂಹ : ಆ ಪರಿಯಿಂದ ಕೂಡಿದ ಇಂದ್ರಿಯವಿಕಾರದ ನರವಿಂದುಗಳು ಕೂಡಿರ್ದು ಫಲವೇನು (ದಶಸಂ. ೪೨೪-೦೨೫). [ ನರ$_2$ + ಪಿಂದು$_2$ ]

**ನರವಿಂಧ್ಯ** (ನಾ). "(ಪಶುಗಳಂತಹ) ಜನರು ವಾಸಿಸುವ (ಗುಡ್ಡಗಾಡಿನಂತಹ ವಾಸಕ್ಕೆ ಕಷ್ಟಕರವಾದ) ಸ್ಥಾನ" (ಬಸವ. ಕೋಶ) : ನರವಿಂಧ್ಯದೊಳಗೆನ್ನ ಹುಲುಗಿರಿಯ ಮಾಡಿ ಸಲಹುತ್ತ ಶಿವಶಿವಾ ಎಂದೋದಿಸಯ್ಯಾ (ಬಸವ. ೫೩) ; ಒಱಲುವ ಬಳ್ಳುವಿನಂತಿಪ್ಪರಯ್ಯಾ ಮನುಜರು ನರವಿಂಧ್ಯದೊಳಗೆ (ಬಸವ. ೨೦೭). [ ನರ$_2$ + ವಿಂಧ್ಯ ]

**ನರವು, ನರ$_1$** (ನಾ). ೧. ಶರೀರದಲ್ಲಿ ಸ್ನಾಯುವನ್ನು ಎಲುಬಿಗೆ ಸೇರಿಸುವ ಗಟ್ಟಿಯಾದ, ತಂತುಮಯವಾದ ಅಂಗಾಂಶ ; ಸ್ನಾಯುರಜ್ಜು : ನರವುಮಂ ಬರಿಯುಮಂ ಪತ್ತಿ ತಗೆದು ಪೆಡಸಾರ್ಪ ನರಗಳುಮಂ ತಾನೆ ಸೋದು ( ಪಂಪಭಾ. ೦೩-೫೬ ). ೨. ಅವಯವಗಳಿಂದ ಮೆದುಳಿಗೆ ಸಂವೇದನಗಳನ್ನೂ ಮೆದುಳಿನಿಂದ ಅವಯವಗಳಿಗೆ ಸೂಚನೆಗಳನ್ನೂ ಒಯ್ಯುವ ತಂತು,-ಸೆರೆ: ತಾನುಂ ಹಿಡಿಂಬೆಯುಮವನ ಬರಿಯ ನರವಿನಡಗಿನಿಸುವಿನಸೆಯು ಕೆನ್ನೆತ್ತರೊಳೊರ್ವರೊರ್ವರಂ ತಳ್ಕಿಱಿದುಂ ಬೊಬ್ಬಿಱಿದುಂ . . . ಆಡುವಾಗಳ್ (ಪಂಪಭಾ. ೦೨-೦೫೮ ವ) ; ನರವಿನ ಪುತ್ತಮೇಧ್ಯದ ತವರ್ಮನೆ . . . ಕಡುಗೆಷ್ಟಮನಿಪ್ಪ ದುಃಕಳೇವರಮಿದನೊಳ್ಳಿತೆಂಬರಱಿವಿಲ್ಲದವರ್ (ಕಮಚ. ೬-೩೪) ; ನರವುಗಳ್ ತೆಗೆದು ಕೋಲ್ ತನಗೆ ತಾನೆ ನೆಗೆವುದುಂ (ಧರ್ಮಾಮೃ. ೦೨-೪೦ವ) ; ನರವುಂ ನೆರವುಂ ದೇವರ ಬರವುಂ ತೆರವುಂ . . . ತಾಮರೆಬರ ಮತದಿಂದಂತ್ಯವರ್ಣಲೋಪಮನಾಳ್ಗುಂ (ಶಮದ. ೪೬) ; ಕೆಸಱಿಡುವ ರಕುತಾಂಬುಗಳ ನರವಿನ ನಾಳದೇಳಿಗೆಯ ಕೆಡುವುದದ ಕಾಡಾನೆ ಹೊಕ್ಕೊಡನೊಡನೆ ಕಲಕಿದ ಕೊಳನವೊಲು ಭಯವಡಸುತಿದೆ ಪವನಜನ ರಣಪಥವು (ಕುಮ್ಮಾದ್ರೋ. ೦೩-೪) : ಮಾಂಸದ ಗೋಡೆ ಚರ್ಮದ ಹೊದಿಕೆ ನರವಿನ ಕೂಡೆ ಹಿಂದಿಗೆ ಗಿದ ಮನೆಯೊಳಗಾತ್ಮನಿರುತಿರಲು (ಹರಿಸಾ. ೮೩).

**ನರ$_1$** : ೨: "ಪಸ್ನಸಾ, ಸ್ನಾಯುಃ – ಇವು ನರದ ಪೆಸರು" (ನಾಚಿರಾ. ೦೨೧) : ನರವನುಗಿವ ನರಿಗಳುಮಂ (ಗದಾಯು. ೩-೩ ವ) ; ಸಂದುಗಳುಟಿದೊಡೆ ನರವೊಂದು ದೆಸೆಗೆ ಚಱುಸಂದೊಡೆ ಶೀತಳಜಳಮಿಶ್ರಿತ ವಸ್ತ್ರವನಳವಟ್ಟರೆ ಸುತ್ತಲಿನಿಸು ಬೇನೆಗಳಟಿಗುಂ (ಲೋಕೋಪ. ೯-೧೬೬); ಎನ್ನ ಕಾಯವ ದಂಡಿಗೆಯ ಮಾಡಯ್ಯಾ . . . ಎನ್ನ ನರವ ತಂತಿಯ ಮಾಡಯ್ಯಾ (ಬಸವ. ೫೦೦) ; ತನುವೆಂಬ ಮನೆಗೆ ಅಸ್ಥಿಗಳು ಚರ್ಮದ ಹಂಜರ ನರದ ಭೀಮಗಟ್ಟು (ಅದವ. ೧೫-೩೩) ; ಒಂದು ದಸಿಯಂಗಿಯ ನಟ್ಟಡೆ ನೊಂದು ನರಗಳು ಸುಕ್ಕ ತೆಗೆಯಲು (ಬಸಪು. ೪೩-೮೪) ; ನರಗಳೆಲ್ಲವೂ ನಿರನಿರನೆ ಎದ್ದುನಿಂತವು (ಕಾಡಿಅ. ೦೩೧). ೩. ತಂತಿ : ಬೀಣೆಯಂತೆ ನರದೊಳ್ ಕೂಡಿದುದು (ಧರ್ಮಾಮೃ. ೪-೦೭೩). ೪. ಶಕ್ತಿ ; ಸಾಮರ್ಥ್ಯ. ೫. (ಆಲಂ) ಧೈರ್ಯ.

[ ದೇ. ೬ ತಮಿ. ನರಮ್ಬು ; ಮಲ. ನರಮ್ಬು, ಞರಮ್ಬು ; ತುಳು. ನರ, ನರಂಬು ; ತೆಲು. ನರಮು; ಕೊಲಾ. ನರವ್ ; ಪರ್ಜಿ. ನೆರುಬ್ ; ಕೂಇ.ಡ್ರಾಂಬು ; ಕುವಿ. ನರೊಮಿ ; ಕುರುಖ್. ನರೀ ; ಮಲ್ತೊ. ನಾರು ]

**ನರವುಲಿ, ನರವಲಿ, ನರಹುಲಿ, ನರುಲಿ, ನರುಳ್ಳೆ, ನರೂಲಿ** (ನಾ). ಚರ್ಮದ ಮೇಲೆ ಏಳುವ ಸಣ್ಣಗಂಟು,-ಗಂತಿ : ಇನವಾರದಂದು ಬಸುರಿಯ ಕೊನೆಯಂ ಕೊಂಡೆಡದ ಬಟಿದು(ಳಸಿ) ಕೆಸಱೊಳದಂ ಪೂಸ್ದನಿತಱೊಳಾ ನರವುಲಿಯನಿತನಿತಾಮವಿರ್ದಡೆಯನಱಿಯದಂತಿರೆ ಪೋಕುಂ (ಲೋಕೋಪ. ೯-೦೩೧) ; ಬಿಡದ ಭಗಂದರಮಂಸೆ ಕುಷ್ಠ ತದ್ರುಂ ನರವುಲಿ ದುಷ್ಟವ್ರಣಂಗಳೆಂದಱುವುದಿವಂ (ಅಶ್ವಶಾ. ೦೨-೧) ; ನರವು [ಹಾಕಾಂ. ವ] ಲಿ ಪೊಡವಿ ಬಂಗು ನೆರೆದಾನನದ ಚಿಬ್ಬುವೆರಸಿರ್ದ ಕಂಕಳಿನ ನಿಡಿಯೊಡಲಿನ. . . ಪೆಣ್ಗಳಂ ತರಲಾಗದು (ಜನವ. ೧೧-೧೧). **ನರವಲಿ :** ನರವಲಿ ಉದುರಿ ಹೋಯಿತು (ರೂಢಿ). **ನರಹುಲಿ :** (+). **ನರುಲಿ :** "ನರುಲಿ = ಸಣ್ಣಸಣ್ಣ ವಾಳ" (ಹಾನಕೋ. ೯). **ನರುಳ್ಳೆ:** ಕೈಮೇಲೆ ಒಂದು ನರುಳ್ಳೆ ಎದ್ದಿದೆ (ರೂಢಿ). **ನರೂಲಿ :** "ನರೂಲಿ ; ಗಂಟು ; ತಂತಿ" (Pustle. ಇಂಕನಿ). [ < ನರವು ? ]

**ನರವೆ** (ನಾ). ಒಂದು ಬಗೆಯ ಗಿಡ : ನರುವಲು, ನಾರಲೆ, ನರವೆ, ಮುನ್ನು, ಮಡಿಕೆ (ವೃಕ್ಷಿಗಿ. ೭೪-೦೫೦೦). [ ? ]

**ನರವೆಣ್** (ನಾ). ಮನುಷ್ಯಲೋಕದ ಹೆಣ್ಣು ; ಮಾನವ ಸ್ತ್ರೀ : ನಿಖಿಳಾಪ್ಸರವಧು ನರವೆಣ್ಗಳೆಸೆಯೆ ದೇವಕಿಯ ನಂದನನೆಡಬಲದಿ (ಚೋಹಕ. ೦೯-೦೪). [ ನರ$_2$ + ಪೆಣ್ ]

**ನರವೇಷ** (ನಾ). ಮನುಷ್ಯನ ವೇಷ ; ಮಾನವ ರೂಪ : ಮಜ್ಜನ ಭೋಜನಾದಿ ನಾನಾಕ್ರಿಯೆಗಳೊಂದರೊಳ್ ನರವೇಷಕಾಯಮಂ ನವೆಸಬೇಡೆಂದು ಕೈವಿಡೆಗೊಟ್ಟೆಲೆಂ ವಿಶೇಷಮೊ ಪುತ್ರಮೋಹಮಿ ಲೋಕದೊಳಗೆ (ಚಿಬಪು. ೩-೩೦). [ ನರ$_2$ + ವೇಷ ]

**ನರವೈದ್ಯ** (ನಾ). ಮಾನವರಿಗೆ ಮಾಡುವ ರೋಗಚಿಕಿತ್ಸೆ ; ಮನುಷ್ಯರಿಗೆ ಸಂಬಂಧಿಸಿದ ವೈದ್ಯಶಾಸ್ತ್ರ : ಚಾಣಕ್ಯಂ ಸಾಮುದ್ರಿಕಂ ಶಾಲಿಹೋತ್ರಂ . . . ಕ್ಷಾರಪಾನೀಯಂ ಮೊದಲಾಗೊಡೆಯ ನರವೈದ್ಯಂಗಳುಂ ಜ್ಯೋತಿಷಮುಂತ್ರವಾದಂ ಮೊದಲಾಗೊಡೆಯ ಶಾಸ್ತ್ರಂಗಳೆಲ್ಲಮಂ ನೆಱೆಯೆ ಕಲ್ಪಿಸಿ ಯೋಗ್ಯರ್ ಮಾಡಿದೊಡೆ (ಪಡ್ಮಾರಾ. ೯-೨).

[ ನರ$_2$ + ವೈದ್ಯ ]

**ನರವ್ಯಾಧಿ** (ನಾ). "ನರವ್ಯೂಹದ ಅಸ್ವಸ್ಥತೆಯಿಂದ ದೇಹಸ್ಥಿತಿ ಕೆಟ್ಟುಹೋಗಿರುವುದು : ನರವ್ಯಾಧಿ (Neurosis. ಇಂಕನಿ)" : ಪ್ರಬಲ ಮನೋರೋಗ (ಸೈಕೋಸಿಸ್), ನರವ್ಯಾಧಿ (ನ್ಯೂರೋಸಿಸ್) ಮುಂತಾದ ವಿಕಾರಗಳು ದುರ್ನಡತೆಗೆ ಕಾರಣಗಳೆಂಬ ಬಹುಜನರ ನಂಬಿಕೆಗೆ ಯಾವ ಆಧಾರವೂ ಇಲ್ಲ (ಕವಿಕೋ. I, ೩೫೦). [ ನರ$_1$ (< ನರವು ) + ವ್ಯಾಧಿ ]

**ನರವ್ಯೂಹ** (ನಾ). ದೇಹದೊಳಗಿನ ನರಗಳ ರಚನೆ,-ನರಮಂಡಲ: ಮುಖ್ಯವಾಗಿ ಮಿದುಳಿನ ಅಥವಾ ನರವ್ಯೂಹದ ರಚನೆಯೊಳಗೆ ಯಾವುದಾದರೂ ತೊಂದರೆಯುಂಟಾದೊಡನೆ ಅದನ್ನು ನಾವು ಮನೋರೋಗವೆಂದು ಹೇಳುತ್ತೇವೆ (ಮನೋರೋ. ೮) ; ಮೆದುಳು ಗಾತ್ರದಲ್ಲಿ ದೊಡ್ಡದಾಗುವಂತಿದ್ದು, ನರವ್ಯೂಹದ ರಚನೆ ಕ್ರಮಾಕ್ರಮವಾಗಿ ಸಂಕೀರ್ಣತೆಗೇರುವಂತಿದ್ದು ಸಂಕೀರ್ಣಸಮಾಜಕ್ಕೆ ಅನುಗೊಳಿಸುವ ಸಂಸ್ಕರಣವನ್ನು ಪಡೆಯಲು ಅನುಕೂಲಿಸುವಂತಿವೆ (ಶಿಕ್ಷದ. ೮೬).

[ ನರ$_1$ (< ನರವು) + ವ್ಯೂಹ ]

**ನರಶಾರ್ದೂಲ** (ನಾ). ಮನುಷ್ಯರಲ್ಲಿ (ಹುಲಿಯಂತೆ) ಪರಾಕ್ರಮಿಯಾದವನು ; ಶೂರ : (ಶ). [ ನರ$_2$ + ಶಾರ್ದೂಲ ]

**ನರಶಾಸನ** (ನಾ). ಜೀವಂತವಾಗಿ ಮನುಷ್ಯರೂಪವಾಗಿರುವ ಶಾಸನ,-ಸನದು ; ಪ್ರತ್ಯಕ್ಷಸಾಕ್ಷಿ : ಬಿರುದಿನ ಬೀರದ ಪೆಸರಕ್ಕರಮಂ ಪರನೃಪರ ಮೆಯ್ಯ ಪುಣ್ಗಳೆಗಳ್ ಪೋಲ್ತಿರೆ ತೋಳ್ವಲಕ್ಕೆ ಪಡೆದಂ ನರಶಾಸನಮಂ ನರೇಂದ್ರಚೂಡಾರತ್ನಂ (ಮಲ್ಲಿಪು. ೩-೧೪) ; ಕವಿತತಿ ಬಲ್ಮೆಗೋಲಗಿಸೆ ಕಾಮಿನಿಯುರ್ಸೊರ್ಬಗಿಂಗೆ ಸೋಲೆ ಬೇಟ್ಟುವರ್ಗಳುದಾರವೃತ್ತಿಗೊಲವಿಂ ನರಶಾಸನವಾಗೆ ರಾಜ್ಯಮುದ್ಧವದಿನೊಡರ್ಚೆ ರೇಚಿರಾಜನೆಸೆದಂ ಜಸದಿಂ ವಸುಧೈಕಬಾನ್ಧವಂ (ಎಕ. VII, ಶಿಕಾರಿ. ೦೯೭-೩೨ ; 1182) ; ಕರದಿಂ ಮೆಯ್ಯೊಳ್ ಪನಿತಕ್ಕರದಂತಿರೆ ಸಾಂಜನಾಂಬುಕಣತತಿ ಕಾಮಂ ಬರೆದ ನೃಪಸುತನ ಸೊಬಗಿನ ನರಶಾಸನದಂತೆ ವಿರಹವಿಹ್ವಲೆಯಿರ್ಪಳ್ (ಚಂದ್ರಪು. ೫-೦೨೬). [ ನರ$_2$ + ಶಾಸನ ]

**ನರಶಿರಮಾಲೆ** (ನಾ). ಮನುಷ್ಯನ ತಲೆಬುರುಡೆಗಳ ಸರ ; ಕರೋಟಿ ಮಾಲೆ : ಕಂಠದೊಳಂಜಿಪ ನರಶಿರಮಾಲೆ (ಶಾಂಕಜ. ೦೯-೭).

[ ನರ$_2$ + ಶಿರ$_2$ + ಮಾಲೆ ]

**ನರಶೂಲೆ** (ನಾ). ದೇಹದ ನರಗಳಲ್ಲಿ ಉಂಟಾಗುವ ನೋವು : ಆವಾವ ಠಾವಿನ ನರಶೂಲೆಗೆ, ಕಪಾಲಶೂಲೆಯ ಠಾವಿಗೆ ಶ... ಕಿ ಆ ಔಷಧಿಯ ನಿಕ್ಕಲು ಶೂಲೆ ಮಾಣ್ಗುಂ (ವಿವ್ಯವಿ. ೫೧). [ನರ$_1$ (< ... + ಶೂಲೆ$_1$]

**ನರಸ** (ನಾ). = ನರಸಿಂಹ ೧. 'ನರಸಯ್ಯ' ಪರಾ. [ < ನರಸಿಂಹ ]

**ನರಸಣ್ಣ** (ನಾ). (ಕರಾ) ಬುಡುಬುಡಿಕೆಯವನು ; ಶಕುನ ಹೇಳುವವನು : ನಸುಬೆಳಕು ಹರಿಯುತ್ತಿತ್ತು . . . ಹಗಲ್ಹಾಡಿಯ ಹುಂಗನಕೇರಿಯಲ್ಲಿ ನರಸಣ್ಣರಿಬ್ಬರು ಹರಿಯುತ್ತಿದ್ದರು (ನಡದಾ. I, ೪೩೩) ; ಹಾಡುವ ಪಲ್ಲವಿಗೂಡಿಸುವ ನರಸಣ್ಣರಿಬ್ಬರೂ ಹಾಲುಮನೆಯ ಅಂಗಳದೊಳಗಾದರು (ನಡದಾ. I, ೪೩೪) ; ನರಸಣ್ಣ ಬಂದರೆ ನಮಗೆ ಹೆದರಿಕೆಯಾಗುತ್ತದೆ (ಶರಾವ. ೨೬). [ ನರಸ$_3$ + ಅಣ್ಣ$_1$ ]

**ನರಸತ್ವ** (ನಾ). [ಕಾಮಶಾ] ಹನ್ನೆರಡು ಬಗೆಯ ಸ್ತ್ರೀಸತ್ತ್ವಗಳಲ್ಲಿ ಒಂದು : ದೇವಸತ್ವ ಯಕ್ಷಸತ್ವ ಗಂಧರ್ವಸತ್ವ ನರಸತ್ವ ನಾಗಸತ್ವ ಕಾಕಸತ್ವ ವಾನರಸತ್ವ ಮುನಿಸತ್ವ ಪಿಶಾಚಸತ್ವ ರಾಕ್ಷಸಸತ್ವ ಕಿನ್ನರಸತ್ವ ಖರಸತ್ವವೆಂಬ ದ್ವಾದಶಸತ್ವದ ಸತಿಯರಿಂ (ವಿವೇಕ. ೨೩೯).
ನರಸತ್ವದವಳು=ನರಸತ್ವದ ಸ್ತ್ರೀ: ಋಜುಚಿತ್ತದಿಷ್ಟರ್ಗೆ ನಿಜದೊಳೊಲಿದಿರ್ಪ ನೀರಜನೇತ್ರೆಯವಳ್ ನರಸತ್ವದವಳು (ಜನವ. ೫-೨೯). ನರಸತ್ವದ ಸ್ತ್ರೀ="ಋಜುವಾದ ಚಿತ್ತದವಳು ಸಮರ್ಥಳುಂ ಅವುತಣ ಪ್ರೀತಿಯುಳ್ಳವಳುಂ ಉಪವಾಸದಿಂದಂಜಳು ಸ್ವಲ್ಪ ಉಂಬುವಳು ಇವಳು ನರಸತ್ವದ ಸ್ತ್ರೀ" (ಕಾಮಶಾ. ೪-೬೦). [ ನರ$_2$ + ಸತ್ವ$_1$ ]

**ನರಸಮಿತಿ** (ನಾ). ಜನಸಮೂಹ; ಮಾನವಕೋಟಿ: ನರಸಮಿತಿಗೆ ಬೇಡಿದುದಂ ನಿರಂತರಂ ಕೊಟ್ಟು ಕಲ್ಪವೃಕ್ಷಂ ಪೋಗಲ್ (ಆದಿಪು. ೧೬-೪೩) ; ನರಸಮಿತಿ ಕೊಂದರೆಂದಡೆ ನೆರವಾಗದೆ ನೋಡದೊಡಿದರು ನಿನ್ನವರು (ನನ್ನಜಾ. ೫-೪೪). [ ನರ$_2$ + ಸಮಿತಿ ]

**ನರಸಮ್ಮ** (ನಾ). ರೋಗಿಗಳಿಗೆ ಆರೈಕೆಮಾಡುವ ದಾದಿ ; ನರ್ಸ್ : ಬೇಯುತಲಿರುವೆನು ಬಳಿ ಬಾರೆ ನರಸಮ್ಮ ವೈದ್ಯರ ಕರೆಸದಿರಮ್ಮ (ಚಂದ್ರವೀ. ೫೨-೬). [ ನರಸು (<ನರ್ಸ್) + ಅಮ್ಮ$_2$ ]

**ನರಸಯ್ಯ** (ನಾ). ಒಬ್ಬಾತನ ಹೆಸರು : ಪ್ರತಿವೆಂಗಳಿಲ್ಲಮಂ ನರಸಯ್ಯ ಮ್ಪಸಗೆಯ್ದುವರ್ (ಎಕ. VI, ಚಿಕ್ಕಮ. ೧೩೩-೦೦ ; 893 ?). 'ನಚ್ಚಯು' ಪರಾ. [ ನರಸ + ಅಯ್ಯ$_1$ ]

**ನರಸಿಂಗ** (ನಾ). ೧. = ನರಸಿಂಹ ೧ : ಇದು ಏನಂಗ ಮೋಹನಾಂಗ ಮದನಜನಕ ತೊರವೆಯ ನರಸಿಂಗ (ಪುರಂದ. ೧-೯೯ ಅನುಪಲ್ಲವಿ) ; ಕೆಂಗಿಡಿಗಣ್ಣ ಕೇಸರಿಯ ಮಸ್ತಕದ ಬಾಣಂಗಳಿಂದೆಳಹಿ ತಾಳ್ದವರು ಕಂಗೊಳಿಸಿದರು ಕಾಂತಾರದೆ ಸಿರಿನರಸಿಂಗನ ಲೆಂಕರೆಂಬಂತೆ (ಮೋಹತ. ೧೯-೩೦). ೨. ವೇಮುಲವಾಡದ ಚಾಳುಕ್ಯರ ಒಬ್ಬ ರಾಜನ ಹೆಸರು ; P ಅರಿಕೇಸರಿಯ ತಂದೆ : ನರಸಿಂಗಂಗಂ ಜಾಕಬ್ಬೆರಸಿಗಮುಳಪೊದಮೆ ಪುಟ್ಟಿಪುಟ್ಟಿಯುಮರಿಕೇಸರಿಯೆನೆ ನೆಗಟ್ದುಮರಾತಿಯ ಸರಿದೊರೆಗಂ ಬಂದೆನಪ್ಪೊಡಾಗಳ್ ನಗಿರೇ (ಪಂಪಭಾ. ೧೨-೧೬). ೩. ಒಬ್ಬಾತನ ಹೆಸರು : ಬೆಳ್ಮಣಿಯ ಪದುಮಣ್ಣನ್ ಕಬ್ಬರ ಸೋಮದಿ ಏಟ್ಟಸೆಯ ನರಸಿಂಗನ್ ಸಿಮ್ಮನೂರ ಕಿಳ್ಪುಮ್ಮನ್ (ಎಕ. VIII, ಸೊರಬ. ೦೦-೧೨ ; 800).

[<ಸಂ. ನರಸಿಂಹ ]

**ನರಸಿಂಗಪಟ್ಟಸು** (ನಾ). ಜಟ್ಟಿಕಾಳಗದಲ್ಲಿ ಒಂದು ವರಸೆ : ಅಂತರಿಪ ನರಸಿಂಗಪಟ್ಟಸು ಮುಂತಡರೆ ತಳಹತ್ತ ಗಳಹತ್ತಂ ತುಳಿಲ ವಿಂದಾಣದಲಿ ಹರಿ ಕಾದಿ ಬಳಲಿಸಿದ (ಸಾಳ್ವಭಾ. ೨೨-೬೩).

[ ನರಸಿಂಗ + ಪಟ್ಟಸು (<ಪಟ್ಟಸ$_1$) ]

**ನರಸಿಂಗಯ್ಯ** (ನಾ). ಒಬ್ಬಾತನ ಹೆಸರು : ಜನ್ನಯ್ಯ × × × ಮಗ ನರಸಿಂಗಯ್ಯಂಗೆ ಕೊಟ್ಟ ಸಾಸನ (ಎಕ. IV, ಗುಂಡ್ಲುಪೇ. ೫೭-೬ ; ಸು. 900) ; ಅಕಳಂಕ ಮಹೇಶ್ವರಂ ದಣ್ಣಂ ಮುತ್ತಿಯಿಪ್ಪೊಂ ಶ್ರೀಮತ್ ನರಸಿಂಗಯ್ಯ ನರಸಿಂಗೇಶ್ವರಮ್ಮಾಡಿಸಿ ಮಣಲೆವಾಡಿಯನಭ್ಯನ್ತರಸಿದ್ಧಿಯಾಗೆ ಬಿಟ್ಟಂ (ಎಕ. XIV, ಮೈಸೂರು. ೦೨೭-೫ ; ಸು. 900).

[ ನರಸಿಂಗ + ಅಯ್ಯ$_1$ ]

**ನರಸಿಂಹ** (ನಾ). ೧. ಮನುಷ್ಯನ ದೇಹ ಹಾಗು ಸಿಂಹದ ಮುಖವುಳ್ಳ ರೂಪವನ್ನು ಹೊಂದಿದ ವಿಷ್ಣುವಿನ ಹತ್ತುಅವತಾರಗಳಲ್ಲಿ ನಾಲ್ಕನೆಯದು ; P ಹಿರಣ್ಯಕಶಿಪುವೆಂಬ ರಾಕ್ಷಸನನ್ನು ಕೊಲ್ಲಲು ಈ ರೂಪ ತಾಳಿ ಕಂಭದಿಂದ ಉದ್ಭವಿಸಿದ ಅವತಾರವೆಂದು ನಂಬಲಾಗಿದೆ : ಬಲಿಯಂ ಕಟ್ಟಿದನಾವನೀ ಧರಣಿಯಂ ವಿಕ್ರಾಂತದಿಂದಂ ರಸಾತಲದಿಂದೆತ್ತಿದನಾವನಂದು ನರಸಿಂಹಾಕಾರದಿಂ ದೈತ್ಯನಂ ಚಲದಿಂ ಸೀಳ್ದವನಾವನಬ್ಧಿಮಥನಪ್ರಾರಂಭದೊಳ್ ಮಂದರಾಚಲಮಂ ತಂದವನಾವನಾತನೆ ವಲಂ ತಕ್ಕಂ ಪೆಱರ್ ತಕ್ಕರೇ (ಪಂಪಭಾ. ೬-೪೦) ; ಆಗಳಲ್ಲಿಂ ಮಗುಳೆ ನೆಲಸಿದ ಬೇಗದಲು ಸಿರಿವೊಳಲ ನರಹರಿ ಬೇಗ ಮನುಜರ ಪ್ರಾರ್ಥನಂಗಳ ಕೊಂಬ ನರಸಿಂಹ (ಸಂಕ್ಷಪ. ೮-೦೨೮): ಗಾನವಿನೋದಿ ನಮ್ಮ ತೊರವೆಯ ನರಸಿಂಹ (ಪುರಂದ. ೦-೦೨೩ ಅನುಪಲ್ಲವಿ); ನಿಂದಲ್ಲಿ ನಿಲ್ಲದಾ ನರಸಿಂಹನಾದಿರೊಳ್ಳೆ ತಂದು ನಿಂದು... ಇಂತೆಂದನು (ಚಲಪು. ೩೩-೯). ೨.=ನರಸಿಂಗ ೨ : ಚಲದ ಬಲದ ಕಲಿ ನರಸಿಂಹಂ (ಪಂಪಭಾ. ೦-೩೩). ೩. ಹೊಯ್ಸಳ ರಾಜನಾದ ಒಂದನೆಯ ನಾರಸಿಂಹನ ಹೆಸರು : ನರಸಿಂಹಭೂಮಿಪಾಳನ ಕರಾಸಿ ಮಚ್ಚರಿಪರೆದೆಯ ಗೂಂಟಂ ವಿದ್ಯಾಭರಣಂ ತಾನೆನೆ ರಂಜಿಪಂ . . . ಗಳಗಂ (ಎಕ. V, ಬೇಲೂರು. ೧೧೪-೪೮ ; 1173). ೧, ೩ : ನರಸಿಂಹಂ ನರಸಿಂಹನನ್ತೆ ಮುನಿಸಿಂ ಮಾಜಿಾಂತ ವೀರಾರಿ ಭೂಪರನಣ್ಮುಟ್ಟಿನೊಳಿಂತು ಕಂಡೊಡೆ ಬಳಿಕ್ಕಮ್ಮುಮ್ಮ ಪೋಟ್ದಿಕ್ಕಿ (ಎಕ. VI, ತರೀಕೆ. ೪೨-೦೮ ; 1206).

[ ನರ$_2$ + ಸಿಂಹ ]

**ನರಸಿಂಹಕ್ಷೇತ್ರ** (ನಾ). ನರಸಿಂಹದೇವರು ನೆಲೆಸಿರುವ ಪುಣ್ಯಸ್ಥಳ : ಪರಮಭಕ್ತಪ್ರಹ್ಲಾದಗೊಲಿದು ಬಂದು ನರಸಿಂಹಕ್ಷೇತ್ರವೆಂದೆನಿಸಿ ಮೆರೆದೆ (ಪುರಂದ. ೪-೯೦-೩) ; ಮಹಾನರಸಿಂಹಕ್ಷೇತ್ರಮನಾ ಹಿರಣ್ಯಕಸುತ ಪ್ರತಿಷ್ಠಿತಮನೀಕ್ಷಿಸಿದಂ (ಯಾದವಂ. ೦೬-೧೬೭).
[ ನರಸಿಂಹ + ಕ್ಷೇತ್ರ ]

**ನರಸಿಂಹಜಯಂತಿ** (ನಾ). ನರಸಿಂಹನು ಅವತಾರಮಾಡಿದ ದಿನ ; ವೈಶಾಖಶುದ್ಧಚತುರ್ದಶಿಯಂದು ಆಚರಿಸುವ ಹಬ್ಬ : ನೃಸಿಂಹ ಅಥವಾ ನರಸಿಂಹಜಯಂತಿಯನ್ನು ವೈಶಾಖಶುಕ್ಲ ೧೪ನೆಯ ದಿನದಂದು ಆಚರಿಸುತ್ತಾರೆ (ಭಾಹಬ್ಬ. ೮೪). [ ನರಸಿಂಹ + ಜಯಂತಿ ]

**ನರಸಿಂಹಾಡಂಬರ** (ನಾ). ನರಸಿಂಹನ ಆಟೋಪ,-ಅಬ್ಬರ : ಅರಿಗಳ್ ಪೆಸರ್ಗೇಳ್ದೆರ್ದೆಪೊಡೆವರೆಂಬ ಶೂದ್ರಕನ ವಿಕ್ರಮಾಡಂಬರಮಂದರೆವಾನಿಸಿಕೆ ಯೊಳೊಂದಿದ ನರಸಿಂಹಾಡಂಬರಕ್ಕೆ ನಸುನಗುತಿರ್ಕುಂ (ಕಾದಂಸಂ. ೦೦).
[ ನರಸಿಂಹ + ಆಡಂಬರ ]

**ನರಸಿಂಹಾವತಾರ** (ನಾ). ೧. ನರಸಿಂಹನ ಅವತಾರ. ೨. (ಆಲಂ) (ನರಸಿಂಹನಂತೆ) ಕೋಪಾವೇಶದಿಂದ ಕೂಡಿದ ಉಗ್ರರೂಪ : ಅವರ ನರಸಿಂಹಾವತಾರವೆಲ್ಲಾ ಇಳಿದು, ಒಮ್ಮೆ ಹೋಗಿ ಬಿದ್ದುಕೊಂಡರೆ ಸಾಕು ಎಂದೆನಿಸಿತ್ತು (ಮರಳು. ೬೭) ; ಅವರು ನರಸಿಂಹಾವತಾರ ತಾಳಿಬಿಟ್ಟಿದ್ದರು, ನಾನು ಮಾತಾಡದೆ ಬಂದುಬಿಟ್ಟೆ (ರೂಢಿ). [ ನರಸಿಂಹ + ಅವತಾರ ]

**ನರಸಿಕ್ಕು** (ನಾ). ದೇಹದಲ್ಲಿ ನರಗಳು ತೊಡಕಿಕೊಂಡಿರುವಿಕೆ: ನರಸಿಕ್ಕು, ಕವಾಲಶೂಲೆಗೆ-ಕಡಲನಾರಿಗೆ, ತುತ್ತ, ಸೈಂಧವಲವಣ . . . ಇವೆಲ್ಲಮಂ ಕೂಡಿ ವೇದನೆಯಾದ ಠಾವಿಗೆ ಶಸ್ತ್ರವನ್ನಿಕ್ಕಿ ಆ ಔಷಧಿಯಂ ಲೇಪಂ ಮಾಡೆ ವೇದನೆ ತೀರ್ಗುಂ (ವಿಶ್ವವಿ. ೦೬೨).
[ ನರ$_1$ (<ನರವು) + ಸಿಕ್ಕು$_3$ (<ಸಿಲ್ಕು$_2$) ]

**ನರಸಿಗಮಂಗಲ** (ನಾ). ಒಂದು ಊರಿನ ಹೆಸರು: ಪೊಜ್ಜುನ್ನ ಬೆಳ್ಮಾದಙ್ಗಂ ಶ್ರೀಕಣ್ಟಶಾಯಿ ನರಸಿಗಮಙ್ಗಲದ ತೊಱುಗೊಳೊಳ್ ಸತ್ತಂ (ಎಕ. X, ಬಾಗೇಂಪ. ೭೨-೪ ; ಸು. 920).
[P ಇದು 'ನರಸಿಂಗಮಂಗಲ' ಎಂಬುದರ ಅಪಲಿಖಿತವಿರಬಹುದು.]

**ನರಸೀಗೆಱೆ** (ನಾ). ಒಂದು ಊರಿನ ಹೆಸರು.
ನರಸೀಗೆಱೆ ಅಪ್ಪೊರ್ =ನರಸೀಗೆರೆಯೆಂಬ ಊರಿನವರು: ಸ್ವಸ್ತಿಶ್ರೀ ನರಸೀಗೆಱೆ ಅಪ್ಪೊರ್ ದುಗ್ಗಮಾರ ಕೊಯಿಲ್ಪಸದಿಗೆ ಅಱುಗಣ್ಣುಗಟ್ಟದೆ ಮಣ್ಣೊಟ್ಟರ್ (ಮ್ಯಆರಿ. ೦೯೭೨, ೩೮-೦ ; ಸು. 825). [ ? ]

ನರಸು 'ನರ್ಸ್' ನೋ.

**ನರಸುಕ್ಕು** (ನಾ). ನರ ಉಡುಗುವಿಕೆ ; ನರ ಮುದುರಿಕೊಳ್ಳುವಿಕೆ (?): ಇಕ್ಕಡಿಯ ಬಸುಱುಚ್ಚುಗಳ ನರಸು[ಪಾಠಾಂ. ಸೊ]ಕ್ಕು ದೊಲ್ಸಾಸದ ಮಹಾ ಭಯವಕ್ಕಸರದಲಿ ಕಾಣಲಾದುದು ವೈರಿಬಲದೊಳಗೆ (ಕುಮ್ಯಾಭಾ. ೦೭-೨೬) ; ಇಕ್ಕಡಿಯ ಬಸುಱುಚ್ಚುಗಳ ನರಸುಕ್ಕುಗಳ ನಾಟಕದವೊಲು ಕೈಯಿಕ್ಕಿದಾನೆಯ ಹಿಂಡು ಮುಱಿದುದು ನಿಮಿಷಮಾತ್ರದಲಿ (ಕುಮ್ಯಾಗ. ೨-೩೪).
ನರಸುಕ್ಕನಿಕ್ಕು=ನರಗಳು ಮುದುರಿಕೊಳ್ಳುವಂತೆ ಮಾಡು; ನರಗಳು ಉಡುಗಿಹೋಗುವಂತೆ ಮಾಡು : ಬಾಳ ಚಾಚಿದಳವಳಿಗೆ ಗೋಣಾಳ ಗೊಡ್ಡಿದ ಬಂದಿಯಲಿ ತುದಿನಾಲಗೆಗೆ ನರಸುಕ್ಕನಿಕ್ಕಿದಳವಳು ತನಗೆಂದ (ಕೂಶರಂ. ೨-೨-೩೮). [ ನರ$_1$ (<ನರವು) + ಸುಕ್ಕು$_2$ (<ಸುರ್ಕು$_2$) ]

**ನರಸುತ** (ನಾ). = ನರನಂದನ : ರಣಾಜಿರದೊಳರಿನೃಪರನಿಕ್ಕಿದ ನರಸುತ ನಿನ್ನೊರೆಗೆ ದೊರೆಗೆ ಗಂಡರುಮೊಳರೇ (ಗದಾಯು. ೪-೩೩) ; ಸೈಂಧವ ನೆಟ ಒಂದು ತಾಗಿದಂ ನರಸುತನೊಳ್ (ಬಂಹರಿ. ೦೨-೨೨).
[ ನರ$_2$ + ಸುತ ]

**ನರಸೇನೆ** (ನಾ). ಮಾನವ ಸೈನ್ಯ : ನರಸೇನೆಗರಿದು ಲಂಕಾಪುರದ ಬಹಿರ್ಜಲಧಿ ದಾಂಟಲೀತಿದು ದೇವಾಸುರರ್ಗಮರಿದೆನಿಸಿ ನರಕನ ಪುರವಂ ಬಳಸಿರ್ದುದೊಂದು ಮೌರವಪಾಶಂ (ಜಗವಿ. ೦೨-೩). [ ನರ$_2$ + ಸೇನೆ ]

**ನರಸೊಬ್ಬ** (ನಾ). ಒಬ್ಬಾತನ ಹೆಸರು : ಸ್ವಸ್ತಿಜಂಬೂದ್ವೀಪಾಂತರೇ ಕಶ್ಚಿತ್ ವಾಸ್ತು ಪ್ರಾಸಾದ ತದ್ಗತಃ ನರಸೊಬ್ಬಸಮೋ ವಿದ್ವಾನ್ ನ ಭೂತೋ ನ ಭವಿಷ್ಯತಿ (ಎಕ. IX, ೭೪-೩ ; ಸು. 7-8ನೆಯ ಶತ).
[<ನರಸ ? ]

**ನರಸ್ಫೋಟ** (ನಾ). "ನರದ ಮೇಲಿನ ಅಥವಾ ನರಪದಾರ್ಥದ ಮೇಲಿನ ಗಂತಿ" (Neuroma. ಇಂಕನಿ). [ ನರ$_1$ (<ನರವು) + ಸ್ಫೋಟ ]

**ನರಹತಿ** (ನಾ). = ನರಹತ್ಯೆ : ದೇಶ ದೇಶಗಳ ನಡುವೆ ಆಗುವ ಯುದ್ಧದಲ್ಲಿ ನರಹತಿ ಅಪಾರವಾಗಿರುತ್ತದೆ (ರೂಢಿ). [ ನರ$_2$ + ಹತಿ ]

**ನರಹತ್ಯ** (ನಾ). ಮನುಷ್ಯನ್ನು ಕೊಲ್ಲುವುದು ; ಕೊಲೆ : ನರಹತ್ಯಕ್ಕೆ ಹೆದರದವ ಕುರಿಹತ್ಯಕ್ಕೆ ಹೆದರ್ಯಾನೆ? (ಗಾದೆ). [ ನರ$_2$ + ಹತ್ಯ ]

**ನರಹತ್ಯೆ** (ನಾ).=ನರಹತ್ಯ : "ಮನುಷ್ಯನನ್ನು ಕೊಲ್ಲುವುದು ; ನರಹತ್ಯೆ" (Homicide. ಇಂಕನಿ) ; ನರಹತ್ಯೆ ನಡೆದರೆ . . . ಅವನಿಗೆ ಗಲ್ಲಾಗುವುದೇ ಖಂಡಿತ ! (ಮರಳು. ೮೧೯). [ ನರ$_2$ + ಹತ್ಯೆ ]

**ನರಹರಿ** (ನಾ).= ನರಸಿಂಹ ೧ : ಹಿರಣ್ಯಕ ಕೇಡುಗಾಲಕೆ ಮಗನ ಕೊಲಲಿರೆ ಗೂಢ ನಖದಲಿ ಸೀಳ್ದ ನರಹರಿಯಾಗಿ ದಾನವನ (ಕಾಶಿರಾ. ೧೯-೨೮) ; ಹರಿಯನ್ನು . . . ಹರಿಯೆನ್ನದಿದ್ದರೆ ನರಹರಿಯಾಣೆ (ಪುರಂದ. ೩-೦೩೩ ಅನುಪಲ್ಲವಿ) ; ಕೂಗಿದರು ಧ್ವನಿ ಕೇಳಲಿಲ್ಲವೇ ನರಹರಿಯೆ (ಕನಕ. ೦೩೬ ಅನುಪಲ್ಲವಿ). [ ನರ$_2$ + ಹರಿ$_7$ ]

**ನರಹರ್ಯಕ್ಷ** (ನಾ).=ನರಸಿಂಹ ೧ : ನರಹರ್ಯಕ್ಷ ಪಾಲಿಸು ಮೋಕ್ಷಪದದಕ್ಷ (ಉತ್ತರಾ. ೩೦-೨೩) ; ಹರನುತ ಹಲಧರನನುಜ ನರಹರ್ಯಕ್ಷ ಹರುಷದಿ ಸಲಹೆನ್ನನೊಲಿದು (ಕಶತಾಂ. ೭೪-೬೩). [ ನರ$_2$ + ಹರ್ಯಕ್ಷ ]

**ನರಹುರಿ** (ನಾ). ಹೊಸೆದುಕೊಂಡಿರುವ ನರ : Nerve Cord ನರಹುರಿ (ಕೀಟವಿ. ೨೬). [ ನರ$_1$ (<ನರವು) + ಹುರಿ$_3$ (<ಪುರಿ$_3$) ]

ನರಹುಲಿ 'ನರವುಲಿ' ನೋ.

**ನರಹುಳು** (ನಾ). ೧. ನರಪಿಳ್ಳೆ ; ಮನುಷ್ಯ : ಆದರೆ ಅಜಸ್ತ್ರಿಯಾಗುವ ತನಕ ಸುದ್ದಿ ನರಹುಳುವಿಗೆ ಸಿಗಕೂಡದು (ಮರಳು. ೧೬೦). ೨. (ಆಲಂ) ಕೈಲಾಗದವನು ; ದುರ್ಬಲ : ಎಲೆ ಯುಧಿಷ್ಠಿರ ಬಿಲ್ಲ ಹಿಡಿ ನರಹುಳುಗಳವದಿರ ಕವಿಸಿ ಕಾಲವ ಕೊಲುವುದೇ (ಕುಮ್ಯಾದ್ರೋ. ೨-೪೩).
[ ನರ$_2$ + ಹುಳು (<ಪುೞು) ]

ನರಳ್ 'ನರಲ್$_1$' ನೋ.

**ನರಳಾಟ** (ನಾ). ನರಳುವಿಕೆ ; ಸಂಕಟಪಡುವಿಕೆ ; ವೇದನೆಯ ಧ್ವನಿ : ಅದರಿಂದುಂಟಾಗುವ ನರಳಾಟವೂ ಆಶಾಭಂಗವೂ ತೀರದು ಬರುತ್ತವೆ (ಕಕ್ಕಪ್ರಾ. ೩೯೦) ; ಈ ನರಳಾಟದಲ್ಲಿಯೇ ಮಾರುದಿನ ನಸುಕಿನಲ್ಲಿ ಅವನ ಆಯುಷ್ಯವು ಮುಗಿದುಹೋಯಿತು (ಸಮುಜೀ. ೯೪೨).
[ ನರಳು$_1$ (<ನರಲ್$_1$) + ಆಟ ]

**ನರಳಾಡು** (ಕ್ರಿ). ನರಳು ; ಸಂಕಟಪಡು : ಮಗು ನೋವಿನಿಂದ ನರಳಾಡುತ್ತಿದೆ (ರೂಢಿ). [ ನರಳು$_1$ (<ನರಲ್$_1$) + ಆಡು$_1$ ]

**ನರಳಿಕೆ** (ನಾ). = ನರಳಾಟ : ನಿಶಿತಖಡ್ಗನಿಘಾತವೇದನೆಯು ನರಳಿಕೆಯ ರಘುರಾಮ ನಾಮಸ್ಮರಣೆಯರುಣಕುಮಾರಕನ . . . ಕಂಡನು (ತೊಕರಾ. ೩-೦೨-೪) ; ಆ ನರಳಿಕೆ, ಆ ಸಂಕಟದ ಕೂಗು ಮತ್ತಾರದೂ ಅಲ್ಲ (ಲವಸಿ. ೩೩) ; ನನ್ನ ಧ್ವನಿ ನೆಗಡಿಯ ಹಿಡಿತದಿಂದ ತುಸ ಬಿಡಿಸಿಕೊಂಡು . . . ಗುಹೆಯೊಳಗಿನ ನರಳಿಕೆಯಂತೆ ಹೊರಕ್ಕೆ ಬಂದಿತ್ತು (ನಂಟರು. ೩೯).
[ ನರಳು$_1$ (<ನರಲ್$_1$) + – ಇಕೆ ]

**ನರಳಿಸು** 'ನರಲಿಸು' ನೋ.

**ನರಳು$_1$** 'ನರಲ್$_1$' ನೋ.

**ನರಳು$_2$** 'ನರಲ್$_2$' ನೋ.

**ನರಳುದನಿ** (ನಾ). ನರಳುವ ಧ್ವನಿ ; ನರಳಾಟ : "ಓ ಓ, ಅಯ್ಯೋ . . ." ಎಂಬ ಹೆಂಗಸಿನ ನರಳುದನಿ ಅವನ ಕಿವಿದೆರೆಯನ್ನು ಮುಟ್ಟಿತು (ಪುನರು. ೯೩೪). [ ನರಳು$_2$ (<ನರಲ್$_2$) + ದನಿ$_1$ ]

**ನರಳಿ** (ನಾ). ಒಂದು ಬಗೆಯ ಬಳ್ಳಿ ; ಮಂಗರವಳ್ಳಿ : ಈ ದಿನ ನಮ್ಮ ಮನೆಯಲ್ಲಿ ನರಳಿ ಚಟ್ನಿ ಮಾಡಿದ್ದರು (ರೂಢಿ). 'ನರಳೀಬಳ್ಳಿ' ಪರ್ಯಾ. [ ದೇ.॥ ತಮಿ. ನರಳೈ ]

**ನರಾಂಗ** (ನಾ). ೧. ಮನುಷ್ಯದೇಹ : ಉಜ್ಜ್ವಲ ಬಡಬಾಬ್ಧಿವಹ್ನಿ ಯುಗಮೂಂತು ನರಾಂಗಮನಣ್ಮಿ ಕಾದುವಂತೆ (ಕಲಕಂ. ೪-೬೨). ೨. ಪುರುಷನ ಜನನೇಂದ್ರಿಯಂ. [ ನರ$_2$ + ಅಂಗ$_2$ ]

**ನರಾಕೃತಿ** (ನಾ). ಮನುಷ್ಯನ ಆಕಾರ,-ರೂಪ : ಆಗಳ್ ನರಾಕೃತಿ ಗಕ್ಕನೆ ಪೋಗಿ ರಾಜಕೀರಾಂಚಿತಜನ್ಮಮನ್ನಮರ್ದಪ್ಪುದುದು (ಉದ್ಭಟ. ೬-೧೧೩) ; ನರಾಕೃತಿಯ ಪರಬೊಮ್ಮರೂಪನು ತಿರುಹಿದನು ರಥವ (ಕುಮಾ.ದ್ರೋ. ೧೪-೩೧). [ ನರ$_2$ + ಆಕೃತಿ ]

**ನರಾದಿ** (ನಾ). ಒಂದು ಬಗೆಯ ಆಯುಧ : ಬಲ್ಲೆಹ ಬಂಕು ಬಾಣನೆದೆ ನರಾದಿ ಶೂಲ ಶಿರಾದಿ ಚೂರಿ ಚಿಕ್ಕತಾರಿ . . . ಜವದಾಡೆಗಳೆಂಬ ಬತ್ತೀಸಾಯುಧಗಳಿಂ (ವಿವೇಕ. ೨೬೨). [ ? ]

**ನರಾಧಮ** (ನಾ). ಕೀಳುಮನುಷ್ಯ ; ನೀಚ ; ಹೀನ ಮಾನವ : ನರಾಧಮರೆಮಗೆ ಪಾಡೇ ಪಥವ ಬಿಡು ಬೇಡೆನುತ ತೆಗೆದೆಚ್ಚ (ಕೃಕರಾ. ೬-೨೧-೩೨) ; 'ನೀನು ಹೇಡಿ' ಎಂದು ಹೇಳಿದರೆ ಕೋಪಿಸಿಕೊಳ್ಳದ ನರಾಧಮನೂ 'ನೀನು ಧೀರ' ಎಂದರೆ ಹಿಗ್ಗದ ನರನೂ ಈ ಪ್ರಪಂಚದಲ್ಲಿ ಇಲ್ಲವೆಂದೇ ನನ್ನ ಅಭಿಪ್ರಾಯ (ಷಂಯೂಕೃ. ೪೨) ; ಏಳ್, ಸರ್ವಶಕ್ತಿ ಸ್ವರೂಪಿಣಿಯೆ . . . ನರಾಧಮ ಕಪಿಪ್ರಾಣಾಪಹಾರಕ್ಕೆ ! (ಶ್ರೀರಾಮಾ. ೭೮೪-೯೦) ; ಈ ನರಾಧಮನ ಬೆದರಿಕೆಗೆ ಅಪ್ಪ ಹೆದರಿದಿರಾ ? (ಹಂಗೀತ. ೨೦೨). [ ನರ$_2$ + ಅಧಮ ]

**ನರಾಧಿಪ** (ನಾ). ಅರಸ ; ರಾಜ : ಶನಿ ಮಕರಲಗ್ನದೊಳ್ . . . ದಸುತೇಜ್ಯಂ ತೊಲೆಯೊಳ್ ಸೌಮ್ಯಸಿತರ್ ನರಯುಗ್ಮದೊಳ್ ನರಾಧಿಪನಕ್ಕುಂ (ಜಾತಕ. ೧೨-೫) ; ಪೊಲ್ಲಮಪ್ಪ ಕನಸಂ ಪರಿವೀಕ್ಷಿಸಿದಂ ನರಾಧಿಪಂ (ಬಂಹರಿ. ೬-೮) ; ಉನ್ನತಚಿತ್ತನಾದನನಿತೊಂದುಪಸರ್ಗದೊಳಾ(ಳಂ) ನರಾಧಿಪಂ (ಜೀವಸಂ. ೫೭-೩೭) ; ಖಳತನೂಭವನಿಳೆಯ ನಾಡಾಡಿಯ ನರಾಧಿಪನ್ನೆಸರೇಯೆಂಬ ಬಳಕೆಯಲಿ ಬೊಬ್ಬಿರಿದು . . . ನಿಡುದನಿದೋಜಲೆಚ್ಚನು ರಾಘವೇಶ್ವರನ (ತೊರರಾ. ೬-೪೧-೩೫). [ ನರ$_2$ + ಅಧಿಪ ]

**ನರಾಧೀಶ** (ನಾ). = ನರಾಧಿಪ : ತ್ರಿದಶಲೋಕಕ್ಕೇರುತಿರ್ದ ತ್ರಿಶಂಕು ನರಾಧಿಶನ ಲಕ್ಷ್ಮಿ ಶಕ್ರನ ಮಹಾ ಹುಂಕಾರದಿಂ ಬಿರ್ದಳೆಂಬಿನೆಗಂ . . . ಓರ್ವಳ್ ಕನ್ನೆ ಚಂಡಾಲಿ ದರ್ಶನತಾತ್ಪರ್ಯದೆ ರಾಜಕೀರಸಹಿತಂ ಬಂದಿರ್ದಪಳ್ ಬಾಗಿಲೊಳ್ (ಕಾದಂಪೂ. ೨೪). [ ನರ$_2$ + ಅಧೀಶ ]

**ನರಾಮರ** (ನಾ). = ನರಾಧಿಪ : "ನೃಪತಿ ರಾಟ್ ರಾಜಂ ನರಾಮರಂ ಪಾರ್ಥಿವಂ. . .ಎನಲ್ಕರಸಕ್ಕು" (ಕುಂಗರಾ. ೭೮-೦). [ ನರ$_2$+ಅಮರ$_3$ ]

**ನರಾಯುಷ್ಯ** (ನಾ). ಮನುಷ್ಯನ ಆಯುಸ್ಸು ; ನೂರು ವರ್ಷ: ಜನನಂ ಸಂಭವಿಸಿರ್ದ ಲಗ್ನಗೃಹದೊಳ್ ಪಾಪಗ್ರಹಂ ನಿಂದೊಡರ್ಧ ನವಾಂಶಂಗಳನಾಯುವನ್ನಳಿದು ಭಾಗಂಗೊಂಡು ನೂರ್ಬಿಟ್ಟಬಿಂದೆ ನರಾಯುಷ್ಯದೊಳಲ್ತೆ ಕುಂದಿಪುದು ಪೆತ್ತು ಲಬ್ಧಮಂ (ಜಾತಕ. ೯-೮). [ ನರ$_2$ + ಆಯುಷ್ಯ ]

**ನರಾವರಣ** (ನಾ). ನರಗಳ ಆವರಣ,-ಆಚ್ಛಾದನ : ನಶ್ವರಪಕ್ಷೀಯಗಳಲ್ಲಿ ನರಗಳ ಹುರಿಯ ಮೇಲೆ, ನರಾವರಣದ (Perineural Sinus) ಕೆಳಕುಹರವಾಗಿದೆ (ಕೀಲಶಿ. ೩೨). [ ನರ$_1$ (<ನರವು) + ಆವರಣ ]

**ನರಾಶ್ವ** (ನಾ). ಕುದುರೆಯ ತಲೆ ಹಾಗು ಮನುಷ್ಯನ ಶರೀರ ಅಥವಾ ಮನುಷ್ಯನ ಮುಖ ಹಾಗು ಕುದುರೆಯ ಶರೀರವುಳ್ಳ ಒಂದು ವಿಧದ ದೇವತೆ ; ಕಿನ್ನರ ; ಕಿಂಪುರುಷ : ಹಲವು ಅಸಮಂಜಸ ಭಾಗಗಳು ಸೇರಿ ಆದ ಯಾವುದಾದರೂ ಕಾಲ್ಪನಿಕ ಪ್ರಾಣಿ (ನರಾಶ್ವ, ಕಿಂಪುರುಷ, ಮೊ. ವು) (Monster. ಇಂಕಿನಿ). [ ನರ$_2$ + ಅಶ್ವ ]

**ನರಿ** (ನಾ). ೧. ಉದ್ದವಾದ ಮೂತಿ ಮತ್ತು ಕುಚ್ಚಾಗಿರುವ ಬಾಲವನ್ನುಳ್ಳ (ನಾಯಿ ಜಾತಿಗೆ ಸೇರಿದ) ಮಾಂಸಾಹಾರಿಯಾದ ಒಂದು ಬಗೆಯ ಕಾಡುಪ್ರಾಣಿ ; ಜಂಬುಕ ; ℙ ಇದು ಬಹಳ ತಂತ್ರಗಾರ ಎಂದು ನಂಬಲಾಗಿದೆ : ಆಕಾಶಕ್ಕೆ ಬಾಯಂ ತೆರೆದೊಳ್ಪ ಬಳ್ಳಗಳುಮಂ ನರವುಮಂ ಬರಿಯುಮಂ ಪತ್ತಿ ತೆಗೆದು ಪೆಡಸಾರ್ವ ನರಿಗಳುಮಂ (ಶಂಪಭಾ. ೧೩-೫೬ ವ): ಹರಿ ಕರಿಗೆ ಮುನಿಗುಮಲ್ಲದೆ ನರಿಗಂ ಕೋಟಿಗಮೇಂ ಮುಳಿಗುಮೆ (ಶಾಂತಿಪು. ೩-೬೨) ; ಉತ್ತುಂಗಮತ್ತಮಾತಂಗಮಂ ಕೊಂದು ತಿಂಬ ಸಿಂಹನೊಂದು ನರಿಯಂ ತಿಂದುದೆಂದು ಲೋಕಮುಪಹಾಸ್ಯಂಗೆಯ್ಗುಂ (ಶಂಕತಂ. ೧೪೫-೯) ; ಕಬ್ಬಿನ ತೋಂಟಮಂ ನರಿ ಪೊಕ್ಕಂತೆ (ಧರ್ಮಾಮೃ. ೨-೭೦) ; ಇಟ್ಟಿಯ ಹಣ್ಣ ನರಿ ತಿಂದು ಸೃಷ್ಟಿ ತಿರುಗಿತ್ತೆಂಬಂತೆ (ಬಸವ. ೫೭೮) ; ಕೊಬ್ಬಿ ನರಿ ಹೆಬ್ಬುಲಿಯ ಕೂಸನು ಬೇಡುವಂದದಿ ಅಳವನರಿಯದೆ ಅಧಮ ರಥಿಕರ ಕೂಡೆ ತೊಡಕುವರೆ (ಕುಮಾ.ದ್ರೋ. ೫-೪೨) ; ಕರಿಗಳನು ಮುರಿದಿಡುವ ಸಿಂಹಕೆ ನರಿಗಳಿದಿರೇ ತಾನು ನಿನಗಂ ತರವೆ (ನಳಚ. ೨-೧೮). 'ಕರಟಕ' ಪರ್ಯಾ. ೨. ಹುಲಿ. 'ನರಿಬೇಂಟೆ', 'ನರಿಮಂಗಲ' ಪರ್ಯಾ. ೩. (ಆಲಂ) ವಂಚಕ ; ಮೋಸಮಾಡುವವನು ; ತನ್ನ ಠಕ್ಕುತನವನ್ನು ಸುಳಿವು ಕೊಡದವನು : ತಾನು ಮಾಡುತ್ತಿರುವುದು ಕೇವಲ ಮುಖ್ಯವಾಗಿ ಸ್ವಾರ್ಥ ; ಅದರೊಡನೆ ಸ್ವಲ್ಪ ಪರೋಪಕಾರವೂ ಘಟಿಸುವುದಲ್ಲ, ಅಷ್ಟಾದರೂ ಕಡಿಮೆಯೆ ? ಎಂಬ ನರಿಗಳುಂಟು (ಯಕ್ಷತ್ರ. ೧೭೧).

**ನರಿಕೂಗು** = ಅಲ್ಪರ ಪ್ರಾರ್ಥನೆ, - ಅಹವಾಲು, - ಕೂಗು : ನರಿಕೂಗು ಗಿರಿ ಮುಟ್ಟೀತೆ ? (ಗಾದೆ). **ನರಿಮದುವೆ** : ಬಿಸಿಲಿದ್ದೂ ಮಳೆ ಬೀಳುವಿಕೆ ; ℙ ಬಿಸಿಲಿದ್ದು ಮಳೆ ಬೀಳುವಾಗ ನರಿಗೂ ನಾಯಿಗೂ ಮದುವೆ ನಡೆಯುತ್ತದೆಂದು ಜನಸಾಮಾನ್ಯರು ಹೇಳುವ ವಾಡಿಕೆ : ನರಿಮದುವೆಯಲ್ಲಿ ಕತ್ತೆಪೌರೋಹಿತ್ಯ (ಗಾದೆ). **ನರಿಯ ಬುದ್ಧಿ** = ಮೋಸಮಾಡುವ ಬುದ್ಧಿ ; ವಂಚಕತನ : ನನ್ನ ರಾಯಭಾರ ಅಯಶಸ್ವಿಯಾದುದನ್ನು ಕಂಡು ರಾಜ ನನ್ನ ಮೇಲೆ ಮುನಿದುಕೊಳ್ಳುವನೆಂದೇ ಈ ನರಿಯ ಬುದ್ಧಿಯ ಮುರಾರಿ ನನ್ನನ್ನು ಕಳಿಸಿರಲು ಸಾಕು (ಗಿರಿನ. ೧೦೯). **ನರಿಯ ಮುಖ ನೋಡು** = ಒಳ್ಳೆಯ ಶಕುನವನ್ನು ಹೊಂದು ; ಅದೃಷ್ಟವಂತನಾಗು : ಬೆಳಿಗ್ಗೆ ಎದ್ದು ನರಿಯ ಮುಖ ನೋಡಿದ್ದ ಅಂತ ಕಾಣುತ್ತೆ. ಬಡ್ತಿ ಸಿಕ್ಕಿತು (ರೂಢಿ). [ ದೇ.॥ ತಮಿ. ಮಲ. ತುಳು. ಕೊಡ. ನರಿ ; ತೆಲು. ಕೊಲಾ. ಕುವಿ. ನಕ್ಕ ]

**ನರಿಕು** 'ನಜುಂಕು' ನೋ.

**ನರಿಕೊಂತ** (ನಾ). ಒಂದು ಬಗೆಯ ಆಟ : ನರಿಕೊಂತನ ಆಟ : ಇಲ್ಲಿಯೂ ಕೈತಾಳ ಹಾಕುವುದರ ಮೂಲಕ ಪಕ್ಷ ನಿರ್ಧಾರವಾಗುತ್ತದೆ. ನೆಲಕ್ಕೆ ಸುಮಾರು ಕಡ್ಡಿಗಳನ್ನು ನೆಟ್ಟಿರುತ್ತಾರೆ. ಅವುಗಳನ್ನು ಕಾಯುವವನು ಒಬ್ಬ, ಉಳಿದವರೆಲ್ಲ ಕಡ್ಡಿಗಳನ್ನು ಕೀಳಲಿಕ್ಕೆ ಪ್ರಯತ್ನಿಸುವರು. ಹೀಗೆ ಕಡ್ಡಿಗಳನ್ನು ಕೀಳಲು ಬಂದಾಗ, ಕಾಯುವವನು ಅವರನ್ನು ಹಿಡಿಸಿಕೊಂಡವರೇ ಕಡ್ಡಿಗಳನ್ನೂ ಕಾಯಬೇಕಾಗುತ್ತದೆ. ಕಾಯುವವನು ಹಿಡಿಯಲಿ

ಹೋದಾಗ, ಉಳಿದವರು ಸುಮ್ಮನಿರದೆ ಬೇಲಿಕಡೆಯಿಂದ ಬಂದು ಕಡ್ಡಿಯನ್ನು ಕೀಳುವರು. ಅಷ್ಟು ಜನರನ್ನೂ ಹೆದರಿಸಿ ಕಡ್ಡಿಗಳನ್ನು ಕಾಯಬೇಕಾಗುತ್ತದೆ (ಕವಿಕೋ. I. ೭೦೯). [ ? ]

**ನರಿಕೊಂಬು** 'ನರಿಗೊಂಬು' ನೋ.

**ನರಿಗಣ್ಣು** (ನಾ). (ಅಲಂ) ತೀಕ್ಷ್ಣವಾದ ಕಣ್ಣು ; ಚುರುಕುಗಣ್ಣು : ನರ್ಸಿಯು ಕೊರಳಲ್ಲಿ ಎರಡೆಳೆಯ ಸರ ಹೇಗೆ ಬಂದುವು ಎಂಬುದೇ ಕೆಲವು ನರಿಗಣ್ಣಿನ ಕುಹಕಿಗಳ ಪ್ರಶ್ನೆಯಾಗಿತ್ತು (ಒಡ್ಡಿ.ಅಾ. ೪೭).

[ ನರಿ + ಕಣ್ಣು (<ಕಣ್) ]

**ನರಿಗನಗಟ್ಟ** (ನಾ). ಒಂದು ಪ್ರದೇಶದ ಹೆಸರು : ಹೊನ್ನೆದೆಜಿ ಅಳಗನಹಳ್ಳ ಎತ್ತರುಳಿ ನರಿಗನಗಟ್ಟ ಮತ್ತರನಜಿ ನಿಜುಯಿಂಗಲು ಏರಿಯುಮ × ಡಿಗರ ಪಳ್ಳ ಪಂಪುಳಿಯ ಕೆಜಿ (ಎಕ. VI. ತರೀಕ. ೭೭-೧೨ ; 898). [ ? ]

**ನರಿಗೊಂಬು**, ನರಿಕೊಂಬು (ನಾ). (ಅಲಂ) ಅಪರೂಪದ ವಸ್ತು : ℗ ನರಿಯ ತಲೆಯ ಮೇಲೆ ಅತ್ಯಂತ ಅಪರೂಪವಾಗಿ ಕೆಲವು ವೇಳೆ ಕೊಂಬು ಮೂಡುವುದೆಂದು ನಂಬಿಕೆಯಿದೆ : ಕರಿಯ ರಘುಲ್ಲರಿಗಳು ಬೆಳ್ಳವ್ವಾದಿ ಕತ್ತುರಿಯೇಣ ಪುಣುಗಿನ ಚಿಟ್ಟು ಹರಿಣ ಗೋರೋಚನ ಕೃಷ್ಣಾಜಿನ ಪುಲಿಚರ್ಮ ನರಿಗೊಂಬುಗಳನಿತ್ತರೊಲಿದು (ಕೋಹಕ. ೦೯-೭೫). **ನರಿಕೊಂಬು** : ನರಿಕೊಂಬಿದ್ದರೂ ನರನಿಗೆ ಹೆದರಬೇಕು (ಗಾದೆ) ; ನರಿಕೊಂಬಿದ್ದರೂ ಹುರಿಯೋದು ತಪ್ಪೀತೆ ? (ಗಾದೆ).

[ ನರಿ + ಕೊಂಬು$_1$ ]

**ನರಿಚೆಂಡು** (ನಾ). ಒಂದು ಬಗೆಯ ಸಸ್ಯ : (೬).

[ ನರಿ + ಚೆಂಡು (<ಸೆಂಡು) ]

**ನರಿದಾವಿಳೆನಾಡು** (ನಾ). ಒಂದು ಪ್ರಾಂತದ ಹೆಸರು : ಕಲಭೋರ [ನಾ] ಅರಿ ಕಕುಸ್ಥಭಟ್ಟೋರನಾಳೆ ನರಿದಾವಿ[ಳೆ]ನಾಡುಳ್ (ಮ್ಯಆರಿ. ೦೯೭೭, ೧೭-೩ ; ಸು. 450). [ ನರಿದಾವಿಳೆ$_0$ + ನಾಡು ]

**ನರಿಬಲೆ** (ನಾ). ಒಂದು ಬಗೆಯ ಬಲೆ (?) : ಊರ ಹೊಲಗೊಂದು ಗಿಡುಮಾರ. ಅದಟಿಗೀಗೆ ಅಡಗಿರ್ಪವರು ಕಳ್ಳರು ಒಬ್ಬ ನರಿಬಲೆಯವ ಒಬ್ಬ ಹುಲಿಬಲೆಯವ (ಕರ್ಣ್ಯಾಶಾ. ೧೭-೦೯೯). [ ನರಿ + ಬಲೆ$_1$ ]

**ನರಿಬಾಲ** 'ನರಿವಾಲ' ನೋ.

**ನರಿಬಾಲದಗಂಡುಹುಲ್ಲು** (ನಾ). ಒಂದು ಬಗೆಯ ಸಸ್ಯ : ನರಿಬಾಲದ ಗಂಡುಹುಲ್ಲು, ನರಿಬಾಲಹುಲ್ಲು (ಮ್ಯಕಿಗಿ. ೩೦-೩೯೦).

[ ನರಿಬಾಲ (<ನರಿವಾಲ) + ಗಂಡು + ಹುಲ್ಲು (<ಪುಲ್) ]

**ನರಿಬಾಲದಹುಲ್ಲು** (ನಾ). ೧. ಒಂದು ಬಗೆಯ ಸಸ್ಯ : "ಕ್ರೋಷ್ಟು ವಿನ್ನಾ, ಸಿಂಹಪುಚ್ಛೀ, ಕಲಶೀ, ಧಾವನೀ, ಗುಹಾ – ೫ ನರಿಬಾಲದ ಹುಲ್ಲು, ನರಿಬಾಲದ ಹೊನ್ನೆ" (ಸಿದ್ಧಾಂಕಿ. ೦೦೭). ೨. ಬಿಳಿ ಕೊರ್ಲೆ ಹುಲ್ಲು : (೬). [ ನರಿಬಾಲ (<ನರಿವಾಲ) + ಹುಲ್ಲು (<ಪುಲ್) ]

**ನರಿಬಾಲದಹೆಣ್ಣುಹುಲ್ಲು** (ನಾ). ಒಂದು ಬಗೆಯ ಸಸ್ಯ : (ಮ್ಯಕಿಗಿ. ೭೨-೧೪೭೮).

[ ನರಿಬಾಲ (<ನರಿವಾಲ) + ಹೆಣ್ಣು (<ಪೆಣ್) + ಹುಲ್ಲು (<ಪುಲ್) ]

**ನರಿಬಾಲದಹೊನ್ನೆ** (ನಾ). = ನರಿಬಾಲದಹುಲ್ಲು ೧ : ಕ್ರೋಷ್ಟುವಿನ್ನಾ, ಸಿಂಹಪುಚ್ಛೀ, ಕಲಶೀ, ಧಾವನೀ, ಗುಹಾ – ೫ ನರಿಬಾಲದ ಹುಲ್ಲು, ನರಿಬಾಲದ ಹೊನ್ನೆ (ಸಿದ್ಧಾಂಕಿ. ೧೦೭).

[ ನರಿಬಾಲ (<ನರಿವಾಲ) + ಹೊನ್ನೆ (<ಪೊನ್ನೆ) ]

**ನರಿಬಾಲಹುಲ್ಲು** (ನಾ). = ನರಿಬಾಲದ ಗಂಡುಹುಲ್ಲು : "ನರಿಬಾಲದ ಗಂಡುಹುಲ್ಲು, ನರಿಬಾಲಹುಲ್ಲು" (ಮ್ಯಕಿಗಿ. ೩೦-೩೯೦).

[೮ [ ನರಿಬಾಲ + ಹುಲ್ಲು (<ಪುಲ್) ]

**ನರಿಬಿಕ್ಕಿ** (ನಾ). ಒಂದು ಬಗೆಯ ಬಿಕ್ಕೆಯ ಮರ : ಕಲ್‌ಬಿಕ್ಕಿ, ನರಿಬಿಕ್ಕಿ (ಮ್ಯಕಿಗಿ. ೩೩-೭೩೩). [ ನರಿ + ಬಿಕ್ಕಿ$_1$ (<ಬಿಟ್ಕಿ) ]

**ನರಿಬೇಂಟೆ**, ನರಿಬೇಟೆ (ನಾ). ಹುಲಿಯ ಶಿಕಾರಿ. 'ನರಿಬೇಂಟೆಗಾರ' ಪರಾ. **ನರಿಬೇಟೆ** : ನೀನೊಬ್ಬನೇ ನರಿಬೇಟೆಗೆ ಹೋಗುವುದು ಬೇಡ (ಹುಂಶಾ. ೦೭).

ನರಿಬೇಟೆಯಾಡು = ಹುಲಿಯ ಶಿಕಾರಿಯನ್ನು ಮಾಡು : ಗ್ರಾಮಕ್ಕ ನರಿಬೇಟೆಯಾಡಲು ಬರಬೇಕೆಂದು ಮಾದಪ್ಪನಿಗೆ ಹೇಳಿ ಕಳುಹಿದ (ಹುಂಶಾ. ೦೭). [ ನರಿ + ಬೇಂಟೆ ]

**ನರಿಬೇಂಟೆಗಾರ**, ನರಿಬೇಟೆಗಾರ (ನಾ). ಹುಲಿಯ ಶಿಕಾರಿಯನ್ನು ಮಾಡುವವನು : ಸ್ನೇಹಿತರು ನರಿಬೇಂಟೆಗಾರನನ್ನು ಎಚ್ಚರಿಸಿದರು (ಹುಂಶಾ. ೦೭). **ನರಿಬೇಟೆಗಾರ** : ನಾಡವರು ಅವನಿಗೆ ನರಿಬೇಟೆಗಾರ ಮಾದಪ್ಪ ಎಂದು ಗೌರವಸಂಬೋಧನೆಯನ್ನು ಬಳಸುತ್ತಿದ್ದರು (ಹುಂಶಾ. ೦೭). [ ನರಿಬೇಂಟೆ + – ಗಾರ (< –ಕಾಱ) ]

**ನರಿಬೇಟೆ** 'ನರಿಬೇಂಟೆ' ನೋ.

**ನರಿಬೇಟೆಗಾರ** 'ನರಿಬೇಂಟೆಗಾರ' ನೋ.

**ನರಿಮಂಗಲ** (ನಾ). "ಹುಲಿಮದುವೆ ; ಬೇಟೆಗಾರನು ಹುಲಿಯನ್ನು ಹೊಡೆದ ವಿಜಯಸಮಾರಂಭದ ಉತ್ಸವ" (ಹುಂಶಾ. ಕೋಶ) : ℗ ಕೊಡಗರಲ್ಲಿ ರೂಢಿಯಲ್ಲಿರುವ ಒಂದು ಪದ್ಧತಿ.–ಸಮಾರಂಭ : ಚೆಂಗುವಾಣಿ ಮೂರು ಸಲ ನರಿಮಂಗಲ ಮಾಡಿಸಿಕೊಂಡ ಕೆಚ್ಚೆದೆಯ ಕಲಿಯ ಮಗ (ಹುಂಶಾ. ೦೭). [ ನರಿ + ಮಂಗಲ ]

**ನರಿಮಾನಿ** (ನಾ). (?) : ನಾವಿಲರಿಗೆ ಖ ೬೦ ದನವ ಕಾವ × × × ೪೦ ಅಂತೂ ಖ ೨೨೦ ಕೆ ಕಂಮುಗಾಳಿ ಖ ೧೨೦ ನರಿಮಾನಿ ಖ ೫ ಯೋಗೀಯ ದೀದ ಖ ೧೧ ಹಾರುವ ಬಳ್ಳಿ ಖ ೪೫ (ಎಕ. VIII, ತೀರ್ಥಹ. ೦೯-೧೦೯ ; 1578). [ ? ]

**ನರಿಮೀಸೆಹುಲ್ಲು** (ನಾ). ಒಂದು ಬಗೆಯ ಸಸ್ಯ : ನರಿಮೀಸೆಹುಲ್ಲು, ಜಬ್ಬುರುಕೊರ್ಲೆ ಹುಲ್ಲು (ಮ್ಯಕಿಗಿ. ೬೦-೧೩೦೮).

[ ನರಿ + ಮೀಸೆ + ಹುಲ್ಲು (<ಪುಲ್) ]

**ನರಿಮೊಗ** (ನಾ). ೧. ನರಿಯ ಮುಖ. ೨. (ಅಲಂ) ಮೋಸದ ಸುಳಿವನ್ನು ತೋರಗೊಡದ ಮುಖ : ನರಿಮೊಗದ ನಗೆಯ ಕುಡುಗೋಲ್ ಕೊಂಕು ನೆರವಿಂದು ತುಟಿಗಳೆರ್ಕಲದಲ್ಲಿ ಸುಳಿಯುತಿರ್ದುದನಿರುಳ್ ಮರೆಸಿದುದು ಜೊನ್ನಾಯಿಯಿಂ (ಶ್ರೀರಾಮಾ. ೩೭೨-೨೮೯).

[ ನರಿ + ಮೊಗ ]

**ನರಿಯುಂಬೊಳೆ** (ನಾ). ಒಂದು ಊರಿನ ಹೆಸರು: ಶ್ರೀಮತ್ ಜಿಷ್ಣುನರಾಶಿ ಪಂಡಿತರ್ಗ್ಗೆ ಧಾರಾಪೂರ್ವ್ವಕಂ ಮಾಡಿಕೊಟ್ಟ ನರಿಯುಂಬೊಳೆಯರ್ಪ್ಪತ್ತಱ (ಎಕ. VIII, ೫೦-೧ ; 1077) ; ನರಿಯುಂಬೊಳೆಯೆಪ್ಪತ್ತಱ ಬಳಿಯ ಕಿಱುಯ ಬೆಳ್ವೊಂಬಟ್ಟಿಯ ಪೊಲದೊಳಗೆ (ಎಕ. XII, ೨೮೩-೨೨೯ ; 1077).

[ ? ]

**ನರಿಯುಳ್ಳಿಗೆಡ್ಡೆ** (ನಾ). ಒಂದು ಬಗೆಯ ಉಳ್ಳಿಗಡ್ಡೆ, –ಈರುಳ್ಳಿ.

[ ನರಿ + ಉಳ್ಳಿಗೆಡ್ಡೆ ]

**ನರಿವಾಲ**, ನರಿಬಾಲ (ನಾ). ಒಂದು ಬಗೆಯ ಸಸ್ಯ ; ನರಿಹೊನ್ನೆಗಿಡ : "ಪೃಶ್ನಿಪರ್ಣೀ – ನರಿವಾಲ" (ಚಾಹಟೀ. ೨-೨-೬೦ ಪ) ; "ಪೃಥಕ್ಪರ್ಣೀ – ನರಿವಾಲ, ಹೊನ್ನೆ, ಹೆಗ್ಗುರುಟಿಗೆ, ಒಂದೆಲೆಹೊನ್ನೆ, ಮೂಜೆಲೆಹೊನ್ನೆ" (೭೫ಧಿ. ೧೦೨). **ನರಿಬಾಲ** : ಆನೆಜೊಂಡು, ಆವು, ನರಿಬಾಲ (ಮ್ಯಕಿಗಿ. ೭೭-೦೫೩೭). [ ನರಿ + ಬಾಲ$_1$ ]

**ನರಿವಾಲವೊನ್ನೆ**, ನರಿವಾಲಹೊನ್ನೆ (ನಾ). = ನರಿವಾಲ : "ಪೃಶ್ನಿಪರ್ಣೀ, ಪೃಥಕ್ಪರ್ಣೀ, ಚಿತ್ರಪರ್ಣೀ, ಅಂಘ್ರಿಪರ್ಣಿಕಾ, ಕ್ರೋಷ್ಟುವಿನ್ನಾ, ಸಿಂಹ

ಪುಚ್ಛೀ, ಕಲಶೀ, ಧಾವನೀ, ಗುಹಾ–ಈ ೯ ನರಿವಾಲಪೊನ್ನೆ" (ನಾಚಿರಾ. ೦೦೯): "ಕ್ರೋಷ್ಟುವಿನ್ನಾ–ನರಿವಾಲಪೊನ್ನೆ" (ಒಷಧಿ. ೪೨).

**ನರಿವಾಲಹೊನ್ನೆ**: "ಕ್ರೋಷ್ಟುವಿನ್ನೆ, ಸಿಂಹಪುಚ್ಛಿ, ಕಲಶಿ, ಧಾವನಿ, ಗುಹೆ" (ನಾಚಿರಾ. ೬); "ದೀರ್ಘವಾಲಾ–ನರಿವಾಲಹೊನ್ನೆ" (ಒಷಧಿ. ೭೭). [ನರಿವಾಲ + ಪೊನ್ನೆ]

**ನರಿವಾಲಹೊನ್ನೆ** 'ನರಿವಾಲಪೊನ್ನೆ' ನೋ.

**ನರಿಹೆಸರು** (ನಾ). ಒಂದು ಬಗೆಯ ಸಸ್ಯ: ನರಿಹೆಸರು, ಒಲ್ಲಿಪೆಸರ (ವೃಕ್ಷಿಗಿ. ೬೦–೦೨೨೬). [ನರಿ + ಹೆಸರು₂ (<ಪೆಸಱ್)]

**ನರಿಹೊನ್ನೆ** (ನಾ). = ನರಿವಾಲ: "ಪೃಶ್ನಿಪರ್ಣೀ, ಪೃಥಕ್ಪರ್ಣೀ, ಚಿತ್ರಪರ್ಣೀ, ಅಂಘ್ರಿಪರ್ಣಿಕಾ . . . ೪ ಕೋಲಪೊನ್ನ ಎಂಬುವದು, ನರಿಹೊನ್ನೇಗಿಡ, ನಕ್ಕಚಿಕ್ಕನಾಕು" (ಸಿದ್ಧಾಂತಿ. ೧೩೩). [ನರಿ + ಹೊನ್ನೆ (<ಪೊನ್ನೆ)]

**ನರು** 'ನಱು' ನೋ.

**ನರುಂಕು** 'ನಱುಂಕು' ನೋ.

**ನರುಗಂಪು** 'ನಱುಗಂಪು' ನೋ.

**ನರುಗಳ್ಳು** (ನಾ). ಕಬ್ಬಿನೆಯ ಹೆಂಡ; ಕಂಪುಳ್ಳ ಮದ್ಯ: ಸೇಸನಾಯ್ಕನ ಹುಳಿಗಂಪಿನ ನರುಗಳ್ಳನ್ನು ಕರಟ ತುಳುಕುವಷ್ಟರ ಮಟ್ಟಿಗೆ ಬೊಗ್ಗಿಸಿ (ಹುಲಿಮ. ೦೩). [ನರು (<ನಱು) + ಕಳ್ಳು (<ಕಳ್₃)]

**ನರುಗಾಳಿ** (ನಾ). ಕಂಪುಳ್ಳ ಗಾಳಿ; ಪರಿಮಳ ಭರಿತವಾದ ವಾಯು: ಸಂದರ್ಭಾನುಸಾರವಾಗಿ ಸೂಸುವ ಕಾವ್ಯದ ನರುಗಾಳಿಯನ್ನು ವಾಚಕರು ಸೇವಿಸಬಹುದು (ನಾಡೋಜ. ೩೯೯); ಕೆಚ್ಚಿದೆಯ ದಂಡಾಳುಗಳೇ, ನಮ್ಮ ದಾಳಿಯ ನರುಗಾಳಿಯಿಂದ ಕಂಪಣ್ಣನನ್ನು ಮುತ್ತಿ ಮುಸುರಿಸಿದ ಚೆಂದುಂಬಿಗಳೇ ಕಿವಿಗೊಟ್ಟು ಕೇಳಿರಿ (ನಡಿರಾ. I, ೪೯೦). [ನರು (<ನಱು) + ಗಾಳಿ₁]

**ನರುಗು** (ನಾ). ಕಂಪು; ಸುವಾಸನೆ: ಇಂಪು, ಸೊಂಪು, ಕಂಪು, ಸೌಸವ, ಅಲಂಪು, ನರುಗು, ಸೊವಡು, ಮಗಮಗ (ಘಮಘಮ) (ಕಂನುಹು. ೭೯). [<ನಱು]

**ನರುಗುಗಂಬಳಿ** (ನಾ). ಕಪ್ಪು ಮತ್ತು ಬಿಳಿ ಪಟ್ಟಿಗಳನ್ನುಳ್ಳ ಕಂಬಳಿ: (೬). [ನರುಗು₂ + ಕಂಬಳಿ]

**ನರುಚಲು** 'ನರಚಲು' ನೋ.

**ನರುಟು** 'ನರಟು₂' ನೋ.

**ನರುಟುಗೊಳ್** (ಕ್ರಿ). ಬೆಳವಣಿಗೆ ಕುಂಠಿತವಾಗು; ನರಚಲಾಗು; ಪೀಚಾಗು: "ಹ್ರಸತಿ–ನರುಟುಗೊಂಡಪುದು" (ಶಾಕಳ್ಕ. ೬೨). [ನರುಟು (<ನರಟು₂) + ಕೊಳ್₁]

**ನರುನೆಯ್ಯಿ** 'ನಱುನೆಯ್' ನೋ.

**ನರುಮಲ್ಲಿಗೆ** (ನಾ). ಸುವಾಸನೆಯಿಂದ ಕೂಡಿರುವ ಮಲ್ಲಿಗೆ: ಇದು ಮಣ್ಣಿನ ನರುಮಲ್ಲಿಗೆ, ಇದು ನೆಲದ ನಿಧಾನ (ಅರಳು. ೨೫೦–೫). [ನರು (<ನಱು) + ಮಲ್ಲಿಗೆ]

**ನರುಲಿ** 'ನರವುಲಿ' ನೋ.

**ನರುವಂಜಿ** 'ನಱುಪಂಜಿ' ನೋ.

**ನರುವಲ** 'ನಱುಪಲ್' ನೋ.

**ನರುವಲು** 'ನಱುಪಲ್' ನೋ.

**ನರುವಾಯು** (ನಾ). ಒಂದು ಬಗೆಯ ಬಾಣ (?): ನೆಱೆದು ನಿರ್ವಾಯಂ ನರುವಾಯುಮುಂ ಮೊನೆ ನೆರೆ ನಾರಾಚಂ . . . ಕಣಕಣೆ ಪೋಪಂ[ಬು] ಕವಲ[ಂಬುವೆಂ]ಬಾಕದಂಬೆತ್ತ[ಲುಂ] ತುಱುಗಿ ನಡುವಿನಂ ಸಾರ್ದು ಸಾರ್ದೆಚ್ಚೆಚ್ಚು ಕಾದಿದರತಿರಥರೊಂದು ಜಾವಂ (ಶಂಪರಿಥಾ. ೦೩–೭೯). [?]

**ನರುಳ್ಳಿ** 'ನರವುಲಿ' ನೋ.

**ನರೂಲಿ** 'ನರವುಲಿ' ನೋ.

**ನರೆ₁, ನೆರೆ₄** (ಕ್ರಿ). ೧. ಕೂದಲು ಬೆಳ್ಳಗಾಗು; ಪಲಿತವಾಗು: ತೊಗಲು ಸಡಿಲಿದ ಗಲ್ಲ ಬತ್ತಿದ ಹೆಗಲು ನರುಚಿದ ನರೆತ ಮೀಸೆಯು . . . ಮುಪ್ಪಿನ ಮುಗುದನೀತನು (ಕುಮಾವ್ಯಾ. ೦–೩೩); ನರೆತ ಮಂಡೆಯು ನೀರೊಗುವ ಕಂಗಳು . . . ಪತ್ತಿದ ಗಲ್ಲದ ನೆಱೆ ವೃದ್ಧನಡಿಯಿಟ್ಟನೊಲಿದು (ಜೀವಂಸಾಂ. ೧೭–೩೦); ನ[ಪಾಠಾಂ. ನೆ]ರೆತ ಮಂಡೆಯ ಕುಸಿದ ತೊಗಲಿನ ಜೋಲ್ವ ಹುಬ್ಬಿನ . . . ಶಬರಿಯು ಸುಪ್ರಸಿದ್ಧೆಯ ಸಾರ್ದರೊಲವಿನಲಿ (ತೊರರಾ. ೩–೦೨–೨೯); ನಮಗೇನು ನರೆತ ಹುಬ್ಬುಗಳಿವೆಯೇ? (ಕವಿಕಾವ್ಯ. ೮೯–೨೦). ೨. ಮುಪ್ಪಾಗು; ವೃದ್ಧಾಪ್ಯವನ್ನು ಹೊಂದು: "ಜರಯತಿ–ನರೆತಪಂ" (ಶಾಕಳ್ಕ. ೦೯೩): ಬೆಳ್ನಗದ್ದದಿಂ ನಡುಗುವ ನರದಲೆಯಿಂ ನರೆತು ಸಡಿಲ್ದ ಸರ್ವಾಂಗದಿಂ . . . ಮೆಲ್ಲಮೆಲ್ಲನೆ ಚಪ್ಪರದ ಬಾಗಿಲ್ಗೆ ಬಂದೊಡೆ (ಸಂಬಿರ.೬–೨೫); ಅಂದಿನೀಶ್ವರನಿಂದು ನರೆತನೆಯುಂದಿನ ಚಲಿತಭಕ್ತಿಮಹಿಮೆಯದಿಂದು ನವೆಯಿತೆ (ಬಸಪು. ೫೨–೩೦); ತನ್ನ ನರೆತ ಅಜ್ಜಾನದಲ್ಲಿ ತಾ ನೆರೆತ ಒಂದು ಪ್ರಾಣಿ ನೆರಳು ಬೆಳಕು ಅರ್ಥಾರ್ಥವಿರುವ ಮನ; ಬದುಕಿನೊಂದು ಕಾಣಿ (ಅರಳು. ೮೯೩–೫). **ನೆರೆ₄**: ೧. ಪಲಿತಂ . . . ಕೂದಲು ನೆರೆತುಹೋಗುವಿಕೆ (ಸಿದ್ಧಾಂತಿ. ೦೫೭); ಅವರ ಗಡ್ಡ ಮೀಸೆಗಳು ನೆರೆತು ಹೋಗಿದ್ದವು (ಕೇಳಡು. ೧).

[ದೇ.೩ ತಮಿ. ನರೈ; ಮಲ. ನರೆ; ತುಳು. ನರೆವು, ನರೆ; ತೆಲು. ನರಯು, ನರಿಯು]

**ನರೆ₂, ನೆರೆ₅** (ನಾ). ೧. ಬೆಳ್ಳಗಾದ ಕೂದಲು; ನೆರೆಗೂದಲು: "ಪಲಿತಮೆಂಬುದು ನರೆ" (ಹಲಾಯು. ೮೮–೩೭೫); ಕಚ್ಚು–ಕಿರಕಂ, ಜರ–ನರೆಯುಂ, ಖಾಸ–ಕೆಮ್ಮುಂ (ವಡ್ಡಾರಾ. ೫೩–೪); ತೀವಿದ ನರೆಯುಂ ಡೊಳ್ಳುಂ ದೇವವ್ರತನೆನಿಸಿ ನೆಗೞ್ದ ಯಶಮುಂ ಬೆರಸಿನ್ನೀವುದು ಹರಿಗರ್ಘಮನೆಂದಾವನುಮಿಾ ಭೀಷ್ಮರಂತು ನುಡಿದರುಮೊಳರೇ (ಪಂಪಭಾ. ೬–೪೩); ಎನ್ನಟ್ಟಿಡುಗೆಯನುಂಡೊಡೆ ಬನ್ನಣಮೇನರಸ ನರೆಗಳಾಗವು (ಪಂಪಭಾ. ೮–೫೪): ನರಪತಿ ನಿನ್ನಂಗಾಲೊಳ್ ನರೆ ಬರ್ಪನಮುತ್ತರೋತ್ತರಂ ಪುದುವಾಟಾ (ಶಾಂತಿಪು. ೯–೫೨); ಅಂಜಿಸಿದುವು ಜವನಾಳ್ಗಳ ತೆಱದಿನನ್ನ ಕೆನ್ನೆಯ ನರೆಗಳ್ (ಅಜಿಪು. ೨–೬೪); ನರೆ ಬಂದನಿತಱೊಳ್ ನರರ್ ಪಿರಿಯರೆ (ಧರ್ಮಾಮೃ. ೩–೦೯೮); ನಿಮ್ಮ ನಿಜವನಱಿಯದ ಮನುಜಂಗೆ ನರೆ ಹಿಂದಾದಡೇನು ಮನದವಗುಣ ಬಿಡದು (ಸಮೂವ. ೫–೦೭); ನರೆಯೆಂಬ ಹೋಜಸು ಮೊಗವೆಂಬರಮನೆಯಂ ಪೊಕ್ಕೊಡೆ (ಯಶೋಚ. ೨–೦೨); ಮನದ ಶುದ್ಧಿಕೆ ತಲೆದೋರ್ಪವೊಲು ನರೆ ಮೊಳೆತುದು (ಸಿದ್ಧರಾ. ೧–೩೪); ಪಟವು (ಪಟವು)–ನರೆಗಿಕ್ಕುವ ಕರ್ಪೂ (ಶಮದ. ೫೭. ೦); ನರೆ ಶಿರದೊಳೊಗೆದುವು (ಕುಮುರಾ.೫–೦೯); ನಾಯಿಗೆ ನರೆ ಬಂದರೆ ಅಜ್ಜ ಅನಿಸಿಕೊಂಡೀತೇ? (ಗಾದೆ). ೨. ಮುಪ್ಪು; ವಾರ್ಧಕ್ಯ: "ಜರೆಯುಕ್ಕು ನರೆ" (ಪುಂಗರಾ. ೯೦–೦೦); "ನರೆಯನೆಲ್ ಜರೆ" (ಕಕಿರ. ೫೩). **ನೆರೆ₆**: ೧. ಭರತಂ ಕಂಡಂ ಕೆನ್ನೆಯ ನೆ[ಪಾಠಾಂ. ನ]ರೆಯಂ ದಳದಳಿಸಿ ಪೊಳೆವ ಮಣಿದರ್ಪಣದೊಳ್ (ಆದಿಪು. ೦೭–೬೦); ನೆ[ಪಾಠಾಂ. ನ]ರೆ ಕೆನ್ನೆಗೆ ತೆರೆ ಗಲ್ಲಕೆ ಶರೀರ ಗೂಡು ಹೋಗದ ಮುನ್ನ . . . ಪೂಜಿಸು ನಮ್ಮ ಕೂಡಲಸಂಗಮದೇವನ (ಬಸವ. ೦೬೦); ಎಡೆಗೊಂಡೀ ಮುಪ್ಪುದೋಱಲ್ ನೆರೆ ನೆಗೆದು ಸಿರಂದೂಗಿ ಬೆನ್ ಬಾಗಿ (ರತ್ನಾಶ. ೩೮); ತೆರೆಯಿಲ್ಲದೆ ನೆರೆಯಿಲ್ಲದೆ ಸೆರೆಯಿಲ್ಲದೆ ಕಿಱಿದುಮಾಗಿ ತಳ್ಳಗೆ ಮೊನೆಯಾಗಿರೆ ಕಿವಿಗಳೊಳಂ ನುಣ್ಪಾಗಿರೆ ಕಟಮುಂ ವಿಕಟಮಾಗದಿರೆ [ಹರಿ] ಶುಭದು (ಅಶ್ವಶಾ. ೦–೨೮); ಬಾಧಿಸುವುದೀ ದೇಹಮಂ ನೆ[ಪಾಠಾಂ. ನ]ರೆ ತೆರೆಗಳನ್ನು ಸಾಧಿಸುವುದೇನು (ಕೃಮಿಥಾ. ೦೦–೩೮); ತಲೆಯೊಳೊಂದು ನೆರೆಯಿಲ್ಲ (ಸಾಂದರ್ಶ. ೩–೫೨).

[<ನರೆ₁./ತಮಿ. ನರೈ; ಮಲ. ನರ; ಕೊಡ. ನರೆ; ತುಳು. ನರ; ತೆಲು. ನರ]

**ನರೆಕೂದಲ್** 'ನರೆಗೂದಲ್' ನೋ.

**ನರೆಕೂದಲು** 'ನರೆಗೂದಲ್' ನೋ.

**ನರೆಗಡ್ಡ** (ನಾ). ನೆರೆತ ಗಡ್ಡ ; ಬಿಳಿಯ ಗಡ್ಡ : ತೋರದ ದೇಹ ಕುಂಡಲವೆದೆ ನರೆಗಡ್ಡ ಸೇರಿದ ಬೆಂದಿ ಕುಲ್ಲಾಯಿ . . . ರತ್ನಹಾರ ದೊಳಿದ್ದನಾ ಮಂತ್ರಿ (ಭರತ. ೧೩-೯) ; ನರೆಗಡ್ಡ ನೆಲಕೆಳಲುವ ಧೋತ್ರ ಭಸಿತಾಂಗ ಧರಿಸಿದ ರುದ್ರಾಕ್ಷಿಗಳಿಂದೆ . . . ವಿಪ್ರರ ಮಧ್ಯಕೆಳ್ತಂದ (ಶ್ರೀಖುಶಿ. ೯-೨೪) ; ನರೆಗಡ್ಡದ ವಿಸಾಸೆಯು ಮೇಲೆ ಕೈಯನಂತೆ ಕೋರಣದಿಂದೆ ಪಾಯುತೆ ಪರಾಕ್ರಮಮಂ ಸಲೆ ತೋರ್ದಂ (ಹಾಲಾಸ್ಯ ೨-೦೧-೦೯).

[ ನರ್$_{2}$ + ಗಡ್ಡ$_{1}$ ]

**ನರೆಗೂದಲ್**, ನರೆಕೂದಲ್, ನರೆಕೂದಲು, ನರೆಗೂದಲು (ನಾ). ನೆರೆತ ಕೂದಲು ; ಬಿಳಿಕೂದಲು : ನರೆಗೂದಲ್ಗಿಕ್ಕಿ ಸುಣ್ಣಂ ಮುಡಿಯುವಳ ವಡಲ್ಸಿಕ್ಕಿ . . . ಮುಸುಕನಿಟ್ಟಿರ್ದಿದಲ್ ವೃದ್ಧೆ (ದಶಕು. ೬-೧೯೭) : ಒಂದು ನರೆಗೂದಲುಂ ಪಱಿದು ತೋಱಿದಾಗಳೆ ವೈರಾಗ್ಯಂ ಪುಟ್ಟೆ (ಪುಣ್ಯಾಸ್ರ. ೧೧.೦೦ ವ). **ನರೆಕೂದಲ್** : ಹೊತ್ತು ಬೆಳ್ನರೆಕೂದಲಾ ಮುದಿ ಸೂಳೆಯಾರ ಪೊತ್ತುಪೊಪ್ಪದುದಾಗಲ್ಲಿ (ಕಂನವಿ. ೬-೧೯೦) **ನರೆಕೂದಲು** : ಇಂದಿರೆಯು ಯಜಮಾನಿಯು ತಲೆಯ ನರೆಕೂದಲು ತೆಗೆಯುವುದೇ ಮೊದಲಾದ ಕೆಲಸಗಳಿಂದ ಅವಳಿಗೂ ಅಚ್ಚುಮೆಚ್ಚಾದಳು (ಬಂಕಿರು. ೦೦೯). **ನರೆಗೂದಲು** : ಪಲಿಕ್ನ-ನರೆಗೂದಲುಳ್ಳ ಮುದುಕಿ (ಗಂಗಾಮು. ೨೦೧) : ನರೆಗೂದಲ ತಲೆಯನ್ನು ಬೋಳಿಸಿಕೊಂಡಿದ್ದ ಮನುಷ್ಯನನ್ನವಳು ಅದೆ ತಾನೆ ಮೊದಲ ಬಾರಿಗೆ ಕಂಡಿದ್ದಳು (ಪುನರು. ೧೮೬).

[ ನರ್$_{2}$ + ಕೂದಲ್ (<ಕೂಂದಲ್) ]

**ನರೆಗೂದಲು** 'ನರೆಗೂದಲ್' ನೋ.

**ನರೆತನ** (ನಾ). ಮುದಿತನ; ಮುಪ್ಪು. ಎಳೆತನಕ್ಕೂ ನರೆತನಕ್ಕೂ ಸಂಬಂಧವೇ ಇಲ್ಲ . . . ನರೆತನದ ಎಲೆಗಳ ಅಂಚು ನೀಟಾಗಿರುತ್ತದೆ (ಹಸುಹೊ. ೩೭).

[ ನರ್$_{2}$ + – ತನ ]

**ನರೆದಲೆ**, ನೆರೆದಲೆ (ನಾ). ೧. ಕೂದಲು ನರೆತ ತಲೆ : ನಡುಗುವ ನರೆದಲೆಯಿಂ ನರೆತು ಸಡಿಲ್ದ ಸರ್ವಾಂಗದಿಂ . . . ಮೆಲ್ಲಮೆಲ್ಲನೆ ಚಪ್ಪರದ ಬಾಗಿಲ್ಗೆ ಬಂದೊಡೆ (ನಂಚಿಶ. ೬-೩೫) ; ನರೆದಲೆ ಬೇರ್ಬಟಲ್ದ ಪಟವರ್ . . . ಮಹೋದರಮೆಸೆಯಲ್ಕೆ ಕೋಕಿಸುತೆ ಬಂದನೆ ಬಂದಳ್ (ದಶಕು. ೯-೧೨) ; ನರೆದಲೆ ಜೋಲ್ದ ಪುರ್ಬು ಕಳಿದಕ್ಷಿಯುಗಂ (ಧರ್ಮಾಶ. ೩-೨೬) : ಸರಡುಪತ್ರದಗಾಳಗೊಂಬ ಗಡ ನಮ್ಮನೀ ನರೆದಲೆಯು ಚಾಳಕನೆನುತ್ತ ಕೋಪಿಸಿದ ಸೌಂದರಕುವರನಾ ವಿಪ್ರನ (ಸೌಂದಪು. ೫-೯). ೨. ಮುಪ್ಪಾದವಳು ; ಮುದುಕಿ : ತಾಯಿಲ್ಲದನನ್ ಸಾಕಿದ ಮುದಿಯಳ್, ಕಂದನ ಕೇಡನ್ ನೋಡಲೊ ಬಟ್ಟಳ್ ? ನರೆದಲೆ, ದುಃಖದ ಮಡುವೊಳ್ ಬಿಟ್ಟಳ್ (ಅಶ್ವತ್ಥಾ. ೨೫-೫೦೩). **ನೆರೆದಲೆ** : ೧. ನರೆದಲೆಗೆ ಮಸಿದೊಡೆದು . . . ಬಾ ಜಾಣೆಯೆಂಬಾ ಹಣ್ಣುಮುದುಕಿ ಸೂಳೆಯರೆಸೆದರೇನೆಂಬೆನು (ಚಬಪು. ೧೦-೭೬). [ ನರ್$_{1}$ + ತಲೆ$_{1}$ ]

**ನರೆದಲೆಗ** (ನಾ). ೧. ಕೂದಲು ಬೆಳ್ಳಗಾದವನು ; ನರೆತ ಮಂಡೆಯಂವನಂ. ೨. ರಾಗಿ : ನರೆದಲೆಗನಿದು ನೆಲ್ಲು ಹಾರಕ ಬರಗು ಜೋಳವು ಕಂಬು ಉದ್ದುತರದ ರವೆ ಯವೆ ನವಣೆಯಿದೂ ನವಧಾನ್ಯವೆಂದೆನಲು(ರಾಮುಆ. ೦೧-೬೨) ; ಕೆಲರು ಗೋಧಿಯ ಸಾಮೆಯನು ಕೆಲಕೆಲರು ನವಣೆಯ . . . ಕೆಲರು ನರೆದಲೆಗನನು ಪತಿಕರಿಸಿರಲು (ರಾಮುಆ.೧೦-೩೩); ನರೆದಲೆಗ (ರಾಗಿ), ನೆಲ್ಲು, ಹಾರಕ, ಬರಗು, ಜೋಳ, ಕಂಬು, ಸಾಮೆ, ನವಣೆ, ಗೋಧಿ ಈ ನವಧಾನ್ಯಗಳನ್ನು ತಂದು ಸುರಿದರು (ನಾಡುಡಿ. ೩೧); ರೀಹಿ (ವ್ರೀಹಿ—ಬತ್ತ) ಹೆಚ್ಚೋ ನರೆದಲೆಗ (ರಾಗಿ) ಹೆಚ್ಚೋ ಎಂಬ ವಾದ ಹುಟ್ಟಿತು (ನನ್ನೂರು. ೩೫). [ ನರೆದಲೆ + – ಗ$_{2}$ ]

**ನರೆದೊಡು** (ಕ್ರಿ). ಬಿಳಿಯಂ ಕೂದಲನ್ನು ಹೊಂದಂ,-ಪಡೆ ; ಕೂದಲು ಬೆಳ್ಳಗಾಗು : ಕೆನ್ನೆ ನರೆದೊಟ್ಟು ಶಿಥಿಲತ್ವವಳವಟ್ಟು ನೆಱೆ ಮುನ್ನಿನಂಗ ವಿಕಾರಮಂ ಬಿಟ್ಟು ಹೋಗಿ ಧಾತಂಗಳು ಪಲ್ಲಟವಾದವು (ಸಿದ್ಧರಾ. ೦-೪೦).

[ ನರ್$_{2}$ + ತೊಡು$_{1}$ ]

**ನರೆದೋಱು** (ಕ್ರಿ). ೧. ಬಿಳಿಕೂದಲು ಕಾಣಿಸಿಕೊಳ್ಳು. ೨. ಮುಪ್ಪಾಗಂ; ವೃದ್ಧಾಪ್ಯವನ್ನು ಹೊಂದು.

**ನರೆದೋಱದರ್** = ಮುಪ್ಪಿಲ್ಲದವರಂ; ದೇವತೆಗಳು : "ಅಮರ್ದುಣಿಸುಗಳ್, ಕನಸಿಲ್ಲದರ್, ನರೆದೋಱದರ್, ಎವೆಯಿಕ್ಕದರ್ . . . ಅಚ್ಚರರ್ (ಬೋಳಿಯರ್)–ಈ ೯ ದೇವರ್ಕಳ ಪೆಸರ್" (ಕಶಸಾ. ೨-೦೯). [ ನರ್$_{2}$ + ತೋಱು ]

**ನರೆನವಿರ್** (ನಾ). ನರೆತ ಕೂದಲು ; ಬೆಳ್ಳಗಾದ ಕೂದಲು; ಬಿಳಿಯ ಕೂದಲು : ನರೆನವಿರ ಹೊತ್ತು ನಡುಗುವ ಮಂಡೆ ಬಿಳ್ದ ಮೊಲೆ ತೆರೆ ಮುಸುಂಕಿದ ಮುಖಂ . . . ಜೋಲ್ದ ಗಲ್ಲಂ ಮಿಸುಪ ವೃದ್ಧವನಚರಿಯೊರ್ವಳಾವಣ್ಣಗಳಂ ಸವಿದು . . . ಏಱುಂಜವ್ವನಂಬಡೆದಳು (ಸಮ್ಯಕ್ತ್ವ. ೦೦-೪೩). [ ನರ್$_{2}$ + ನವಿರ್ ]

**ನರೆಪ** (ನಾ). ಕೂದಲು ನರೆತವನು,-ಬೆಳ್ಳಗಾದವನು : ಮುದುಕ : ಕೆಮ್ಮಿ ಕುಮ್ಮಿದೊಡೆ ತೋಳೊಳೆ ಜೀವವಿಯೋಗಮಪ್ಪುದೆಂದಿರದೆರ್ದೆಗವ್ವುದತ್ತಳಗಮಾ ನರೆಪಂ ನೆರೆವಂದು [ಪಾಠಾಂ. ನರೆಬಂದ] ಪೊಂಗಳಂ ಸುರಿವೊಡ ಮಾರೊ ಸ್ವೈರಿಸುವರಾತನ ಪಲ್ಲಿಲಿವಾಯು ನಾತಮಂ (ಪಂಪಭಾ. ೪-೦೦೦).

[ ನರೆಪು + –ಅ$_{7}$ ]

**ನರೆಪು** (ನಾ). ಕೂದಲು ನರೆಯುವಿಕೆ,-ಬೆಳ್ಳಗಾಗುವಿಕೆ. 'ನರೆಪ' ಪರಾ. [ ನರ್$_{1}$ + – ಪು$_{2}$./ತಮಿ. ನರ್ಪ್ಪು; ತೆಲು. ನರವು ]

**ನರೆಯಂಗಲ್** (ನಾ). ಒಂದಂ ಊರಿನ ಹೆಸರಂ; P ಈಗಿನ ಧಾರವಾಡ ಜಿಲ್ಲೆಯ ನರೇಗಲ್ಲು: ಸ್ವಸ್ತಿ ವಿಕ್ರ(ಕ್ರ)ಮಾದಿತ್ಯ ಪ್ರಿಥು(ಥು)ವಿವಲ್ಲಭ ಲೋಕಮಹಾದೇವಿಯರಾ ಲೋಕೇಶ್ವರದಾ ನರೆಯಙ್ಗಲ್ಲ ಪನ್ನಾಸುಗಳಾನಿತ್ತ (ಇಅ. X, ೦೬೭-೨ : 7ನೆಯ ಶತ) ; ನರೆಯಂಗಲ್ಲ ಸಾಸಿರ್ವ್ವರ ತುಱುಪಿನ ಪುಯ್ಯಲೊಳ್ (ಎಇ. VI, ೧೬೩-೨ ; 780) ; ಆಚಾರ್ಯ ರಾಜಗುರು ವಿಮಳಶಕ್ತಿದೇವರುಂ ನರೆಯಂಗಲ್ಲ ಮಹಾಜನಂಗಳುಂ . . . ಇನ್ನಿವರ ಸಮಕ್ಷದಲ್ಲಿ (ಕಕುಂಶಿ. ೧೭-೦೦ ; 10ನೆಯ ಶತ).

ನರೆಯಂಗಲ್ ಪನ್ನೆರಡು=ಒಂದು ಪ್ರಾಂತದ ಹೆಸರು : ನರೆಯಂಗಲ್ ಪನ್ನೆರಡಱೊಳಗಣ ಉಮ್ಮಚಿಗೆಯಂ ಸರ್ವ್ವಾಭ್ಯಂತರಸಿದ್ಧಿಯಾಗಿ . . . ಕುಡೆ (ಎಇ. XX, ೬-೦೧ ; 1012).

**ನರೆಯೇಱು** (ಕ್ರಿ). ೧. ಕೂದಲು ಬೆಳ್ಳಗಾಗು. ೨. ಮುಪ್ಪಾಗಂ ; ಮುದಿಯಾಗು. ೧, ೨ : ವಾರ್ಧಿಯಂತೆ ತೆರೆಯೇಱದೆ ಕೋಡಗದಂತೆ ಶಾಖೆಯೊಳ್ ನಡೆಯದೆ ಪುಟ್ಟಿ [ ಪಾಠಾಂ. ಪೋದೆ]ಪೋದ ಮರದಂತೆ ಕರಂ ನರೆಯೇಱದಿಟ್ಟು ಮುಪ್ಪಡಸದ ಮುನ್ನಮೇಕೆ ಮನುಜರ್ಮಱಿದಿಕ್ಕರೊ ಮೋಹಮಲ್ಲನಂ (ಪುಲ್ಲಪು. ೧೩-೯೪) ; (ಕಾವ್ಯಸಾ. ೦೦೩೧ ನೋ).

[ ನರ್$_{2}$ + ಏಱು$_{1}$ (< ಏಱ್$_{1}$) ]

**ನರೆವೆಣ್** (ನಾ). ಕೂದಲು ನರೆತ ಹೆಣ್ಣು ; ಮುದುಕಿ : ನರವೆಣ್ಗಳೊಡನಾಡೆ ಮುಪ್ಪುಹುದ್ಯಸೆ (ಭರತ. ೭೩-೦೨). [ ನರ್$_{1}$ + ಪೆಣ್ ]

**ನರೇಂದ್ರ** (ನಾ). ೧. ಅರಸ ; ದೊರೆ : ರುಂದ್ರಾಂಭೋಧಿಪರೀತ ಮಹೀಂದ್ರರದಾರಿನ್ನರೀ ನರೇಂದ್ರಂ ಸಾಕ್ಷಾದಿಂದ್ರಂ ತಾನೆನೆ ಸಲೆ ನೆಗಟ್ದಂ ದ್ರೇಂದ್ರನ ತೋಳೆ ತೊಟ್ಟಿಲಾಗಿರೆ ಬಳೆದಂ (ಪಂಪಭಾ. ೦-೪೪) ; ಉದ್ವೃತ್ತ ನರೇಂದ್ರಕಂಠಕದಳೀಚ್ಛೇದೈಕದಕ್ಷಾಸಿ (ಶಾಂತಿಪು. ೨-೨೦) : ಚತುಷ್ಪಾದಿ ತದ್ಭೇದದೊಳ್ ತಾನಿದು ಶುಂಡಾಳಂ ನರೇಂದ್ರಂ ನಿಮಗೆ ಕುಡುವ ನಾಗಿರ್ದಪಂ ನೋಡೆ ದೃಷ್ಟಂ (ಸುಕುಮಾ. ೩-೭). ೨. ವಿಷಚಿಕಿತ್ಸಕ ;

ವಿಷವೈದ್ಯ; ಗಾರುಡಿಗ. ೩. ಮಾಂತ್ರಿಕ; ಮಂತ್ರವಾದಿ: "ನರೇಂದ್ರ [ನೆನಲಾಹಿತುಂಡಿತಂ] ಪಾರ್ಥಿವನುಂ" (ವಸು.ಕೋ. ೦೩೦-೦೭); "ನೃಪನಲ್ಲಿ ವಾದಿಯಲಿ ನರೇಂದ್ರನೆಂದೆನಿಕು" (ವಂಗರಾ. ೦೧೧-೨೭).
[ ನರ$_2$ + ಇಂದ್ರ ]

**ನರೇಂದ್ರಚಂದ್ರ** (ನಾ). ರಾಜರಲ್ಲಿ ಚಂದ್ರನಂತೆ ಹೊಳೆಯುವವನು; ಶ್ರೇಷ್ಠನಾದ ರಾಜ: ಕೃತಿಪತಿ ನರೇಂದ್ರಚಂದ್ರಂ ಕೃತಿಯಂ ಪೇಟ್ಟಂ ಬುಧಾಬ್ಜವನಕಳಹಂಸಂ (ಕಾದಂಪೂ. ೭); ರವಿಕುಲನರೇಂದ್ರಚಂದ್ರಂ, ತನ್ನ ಕಿರುಪೆಂಡಿತಿಯು ಮನವನುನತಾದೊಡಂ ತನ್ನಾಸೆಗೇಳಲ್ಕೆ ತರಿಸಂದು ಹೊರಟನವೇಳೆಗೆ (ಶ್ರೀರಾಮಾ. ೬೬-೩೩೭). [ ನರೇಂದ್ರ + ಚಂದ್ರ$_2$ ]

**ನರೇಂದ್ರನಿಕಾಯ** (ನಾ). ರಾಜರ ಸಮೂಹ, -ಗುಂಪು: ಶಿವ ಎನುತಾ ನರೇಂದ್ರನಿಕಾಯ ನಡುಗಿತು (ಕುಮಾರಮ್ಯಾ. ೮-೪೨).
[ ನರೇಂದ್ರ + ನಿಕಾಯ ]

**ನರೇಂದ್ರವಧು** (ನಾ). ಅರಸಿ; ರಾಣಿ: ಬಾಣಸಿಗಂ ಮಾಡಮನಾ ನರೇಂದ್ರವಧುವಂ ತಕ್ಕಯ್ಯಿಕೊಂಡೆ:ಱಿದಂ (ಬಂಹರಿ. ೯-೩೦).
[ ನರೇಂದ್ರ + ವಧು ]

**ನರೇಂದ್ರಾಸನ** (ನಾ). ರಾಜನ ಪೀಠ; ಸಿಂಹಾಸನ: "ಗದ್ದುಗೆ ಪಟ್ಟವಣೆ ನರೇಂದ್ರಾಸನಂ" (ಚತುನಿ. ೫೦). [ ನರೇಂದ್ರ + ಆಸನ ]

**ನರೇಯಣ** 'ನಾರಯಣ' ನೋ.

**ನರೇಶ್ವರ** (ನಾ). ಅರಸ; ದೊರೆ: ಸ್ವಸ್ತಿಸಮಸ್ತನರೇಶ್ವರಮಸ್ತಕವಿನ್ಯಸ್ತ ಶಾಸನಂ (ಆದಿಪು. ೦೩-೭೩); ಸಕಲಮೇದಿನೀತಳವನೇಕಚ್ಛತ್ರದಿಂ ಪಾಲಿಸುವ ನರೇಶ್ವರನವಂಗಚ್ಛಿದ್ರವಾಗಿ ನಡೆವುದು (ಕೃಮಿಭಾ. ೨-೨೭).
[ ನರ$_2$ + ಈಶ್ವರ ]

**ನರ್ಕುಟಕ** (ನಾ). [ಛಂದ] ಪ್ರತಿಯೊಂದು ಪಾದದಲ್ಲಿಯೂ ಹದಿನೇಳು ಅಕ್ಷರಗಳಿರುವ ಒಂದು ವೃತ್ತ; P ನಜಭಜಜಲಗ-ಹೀಗೆ ಗಣ ನಿಯಮವಿರುವ ವೃತ್ತ. ಇದಕ್ಕೆ 'ಕನಕಾಬ್ಜನೀಯ' ಎಂಬ ಹೆಸರೂ ಇದೆ. 'ಕನಕಾಬ್ಜನೀಯ', 'ನರ್ಕುಟಕ' ಪರಾ. [ ಸಂ. ]

△ **ನರ್ಚು**$_1$ 'ನಚ್ಚು$_1$' ನೋ.

△ **ನರ್ಚು**$_2$ 'ನಚ್ಚು$_2$' ನೋ.

**ನರ್ತಕ** (ನಾ). ೧. ನೃತ್ಯ ಮಾಡುವವನು; ರಂಗದ ಮೇಲೆ ಕುಣಿಯುವವನು; ನಟ: ಧರೆ ರಂಗಂ ಗಗನಂ ಮನೋಹರತರಂ ನಾಟ್ಯಾಲಯಂ ನರ್ತಕಂ ಸುರರಾಜಂ ಸಭೆ ದೇವಮರ್ತ್ಯಸಭೆ (ಆದಿಪು. ೭-೧೩೭); ವಾಣಿನಿಯು ತನ್ನ ಅಷ್ಟಾಧ್ಯಾಯಿಯಲ್ಲಿ . . . ನಾಟ್ಯಗಾರನಿಗೆ ನರ್ತಕ ಎಂಬ ಹೆಸರಿದ್ದುದನ್ನು ತಿಳಿಸುತ್ತಾನೆ (ಭಾರಚ. ೫೫೦). ೨. [ಜೈನ] ಸೈನ್ಯದ ಏಳು ವಿಭಾಗಗಳಲ್ಲಿ ಒಂದು. 'ನರ್ತಕಿ' ಪರಾ. [ ಸಂ. ]

**ನರ್ತಕಾಳಿ** (ನಾ). ನರ್ತಕರ ತಂಡ, -ಸಮೂಹ: ಪ್ರಕಟಿಸಿದತ್ತು ಪದ್ಮಜನ ವಕ್ತ್ರದೊಳ್ . . . ಗಾಯಕಪ್ರತತಿ ವಾದಕಮಂಡಳಿ ನರ್ತಕಾಳಿ (ಪುಷ್ಪಪು. ೫-೨೦). [ ನರ್ತಕ + ಆಳಿ$_4$ ( = ಆಲಿ$_4$ ) ]

**ನರ್ತಕಿ** (ನಾ). ೧. ನೃತ್ಯ ಮಾಡುವವಳು; ನಟಿ: ಕುಡುವುಂ ಕಯ್ಯುಂ ಜತಿಯೊಳ್ ತಡತಡವರೆ ಪಾಡಕಂಗೆ ಪುರ್ವಿಂ ಜತಿಯಂ ತೊಡರದೆ ನಡೆಯಿಸಿ ಪುರ್ವದೆ ಕುಡುಪೆನೆ ನರ್ತಕಿಯೆ ಸಭೆಗೆ ವಾದಕಿಯಾದಳ್ (ಆದಿಪು. ೯-೩೩); ನರ್ತಕಿಯರಾಟಗಳ ನೋಡಲು ಮುತ್ತುತಿಹ ಮಂತರರ ಜಡಿಕೈದತ್ತ ಕೊಲಗಿಸಿ . . . ಓಜೆಗೊಳಿಸಿದರಪಾರವಡಿಯಬರು (ಶಾಶ್ವಲಾ. ೩೩-೩೭); ಕಡುತೋರವಾಲ್ಗದಗ್ಗದ ನಿಡಿದಲ್ಲದ ಕಿಱಿದುಮಲ್ಲದತಿಬಡವಲ್ಲದ ಮುಡುಬುಜ್ಜ ದವಯವಂಗಳನೊಡರಿಸುವಂಗನೆಯು ಲಲಿತನರ್ತಕಿಯೆನಿಪಳ್ (ರಾಸ್ವರಂ. ೧-೪೪); ರಂಭೆ ಮೊದಲಾದ ಅಪ್ಸರಸ್ತ್ರೀಯರೇ ಇವನ ನರ್ತಕಿಯರು (ವಿಠಿತಿಕಾ. IV, ೮). ೨. [ಜೈನ] ಸೌಧರ್ಮೇಂದ್ರನ ಏಳು ಬಗೆಯ ಸೇನಾಂಗಗಳಲ್ಲಿ ಒಂದು; P ಮರ್ತ್ಯಲೋಕದಲ್ಲಿರುವಂತೆ ದೇವಲೋಕದಲ್ಲೂ ರಾಜ್ಯಾಂಗವ್ಯವಸ್ಥೆ ಇದೆ. ಸೌಧರ್ಮೇಂದ್ರಾದಿ ಇಂದ್ರರಿಗೂ ಸೈನ್ಯವಿದೆ. ಆ ಸೈನ್ಯವನ್ನು ಅನೀಕವೆಂದು ಕರೆಯುತ್ತಾರೆ. ಆ ಸೈನಿಕರಿಗೆ ಅನೀಕದೇವತೆಗಳೆಂದು ಹೆಸರು. ಇವರಿಗೆ ವೈಕ್ರಿಯಿಕ (ನಾನಾರೂಪವನ್ನು ತಾಳಬಲ್ಲ) ಶಕ್ತಿಯಿದೆ. ಇವರು ಏಳು ಬಗೆಯ ರೂಪವನ್ನು ತಾಳಿ ಇಂದ್ರನನ್ನು ಸೇವಿಸುವ ಸೇನಾಂಗವೆನಿಸುತ್ತಾರೆ. ಅವು ಯಾವುವೆಂದರೆ ೧. ವೃಷಭ = ಎತ್ತು. ೨. ರಥ = ತೇರು. ೩. ತುರಗ = ಕುದುರೆ. ೪. ಮದಗಜ = ಆನೆ. ೫. ಪದಾತಿ ಅಥವಾ ಭೃತ್ಯವರ್ಗ=ಕಾಲುಬಲ. ೬. ನರ್ತಕ ಅಥವಾ ನರ್ತಕಿ = ನಾಟ್ಯವಾಡುವವರು. ೭. ಗಂಧರ್ವ = ಸಂಗೀತಗಾರರು. ಈ ವಿವರಗಳು ಸರ್ವಾರ್ಥಸಿದ್ಧಿ ಮೊದಲಾದ ಜೈನಗ್ರಂಥಗಳಲ್ಲಿ ದೊರಕುತ್ತದೆ: ಹಸ್ತ್ಯಶ್ವರಥಪದಾತಿವೃಷಭಗಂಧರ್ವನರ್ತಕೀಪ್ರಮುಖ ಸಪ್ತಾನೀಕಸಮೇತನುಂ (ಆದಿಪು. ೬-೦೩ ವ); ಗಜತುರಗಸ್ಯಂದನಪದಾತಿ ಗವೇಂದ್ರ ಗಂಧರ್ವ ನರ್ತಕೀಪ್ರಮುಖ ಪ್ರಥಿತಸಪ್ತಾನೀಕಸಂಯುತನುಂ (ನೇಮಿಪು. ೨-೩೨ವ); ಗಜತುರಗಪದಾತಿರಥಗಂಧರ್ವನರ್ತಕೀವೃಷಭವಿಕಲ್ಪದಿಂ ಸಪ್ತವಿಧಮಂಗರಕ್ಷಕರ್ ಪದಿನಾಱುಸಾಸಿರಂ (ಶತ್ರ್ಯಪ್ರ. ೦೧೪); ಸಿಂಧುರಘಟಾಸಂದೋಹದಿಂ . . . ನವನರ್ತಕೀನಿವಹದಿಂ ಗಂಧರ್ವಸಂದೋಹದಿಂದಿದು ಸಪ್ತಾಬ್ಧಿಯೆನಲ್ಕೆ ಸಪ್ತವಿಧಸೇನಾಚಕ್ರಮೇನೊಪ್ಪಿತೋ (ಪುಷ್ಪಪು. ೦೪-೯೭). ೩. [ಸಂಗೀತ] ಒಂದು ರಾಗದ ಹೆಸರು: ನರ್ತಕಿ ಕಕುಭ ಷಡ್ಜ ಕೌಶಿಕ ಭ್ರಮಾಳ ಪಂಚಮಭ್ರಮಾಳ ಪಂಚಮಗಾಂಧಾರ ರೂಪಸಾಧಾರಣವೆಂಬೇಳುರಾಗಂಗಳಂ ಸಪ್ತಸಾಧಾರಣಜಾತೀಯ ಂಗಳು (ವಿವೇಕ. ೨೩೩). [ ಸಂ. ನರ್ತಕೀ ]

**ನರ್ತನ** (ನಾ). ರಂಗದ ಮೇಲೆ ನಡೆಯುವ ನಾಟ್ಯಾಭಿನಯ; ನೃತ್ಯ; ನಾಟ್ಯವಾಡುವುದು; ಕುಣಿತ: ಬೇಡನನರ್ತನ ಹಾಸ್ಯವನಾಡಂಬರ ನಟನವೇಣುವಾದನಗೇಯಕ್ರೀಡೆಗಳಿಂ. . . ರಾಮಕೃಷ್ಣರಿರ್ದಪಸರದೊಳ್ (ಜಗವಿ. ೪-೪೮); ಗಣನಾಥವಕ್ತ್ರಸರಸೀರುಹಕೇಳಿನಿವಾಸದಲ್ಲಿ ನರ್ತನಮನೊಡರ್ಚಿ . . . ಇನಿಸು ಬಟಬ್ಬ ವಾಗ್ವನಿತೆ ವಿಶ್ರಮಿಸಿರ್ಕೆ ಪದಾಸನಾಬ್ಜದೊಳ್ (ಪುಷ್ಪಪು. ೧-೭); ನರ್ತನದಿಂ ನವಶಕ್ತಿಯು ಹೊಮ್ಮಿ . . . ತೋರ್ಪುದು ಸುಖದುಃಖಗಳನು! (ಪಾಂಡಚ. ೧೯ ೧೩); ಸರಳಾ ವೈದ್ಯನಾಥರಲ್ಲಿ ನರ್ತನವನ್ನು ಕಲಿಯುತ್ತಿದ್ದಳು (ಕರಾಸ. ೨೦). [ ಸಂ. ]

**ನರ್ತನಗಾತಿ** 'ನರ್ತನಗಾರ್ತಿ' ನೋ.

**ನರ್ತನಗಾರ್ತಿ, ನರ್ತನಗಾತಿ** (ನಾ). ನೃತ್ಯಮಾಡುವವಳು; ನರ್ತಕಿ: ಸುರನರ್ತಕಿಯರೊಳು ಮತ್ಸರವಾಂತರೋ ನರನರ್ತನಗಾರ್ತಿಯರ ಪರ ಮೋತ್ಸವದೆ ನೋಡುತ ಬಂದ (ಮೋಹತ. ೪೨ ೩೪). ನರ್ತನಗಾತಿ: ಗುಡಿಗುಡಿಗಳ ನರ್ತನಗಾತಿಯರೊಳು ಪೆರ್ಚಿಡಿಸುವ ಗೀತಪ್ರಬಂಧಗಳ ಪದಿ ತಪ್ಪದೆ ಕೋಲಚಾರಿಗಳೆಂದ ಜಕ್ಕಡಿ ಮೆಱೆದಾವು ದೇವಾಲಯದಿ (ಮೋಹತ. ೧೮ ೭); ತಾಳಮದ್ದಳೆಗೀತ ನರ್ತನಗಾತಿಯ ಮೇಳ ವಿದ್ವತ್ಸಭೆ ಸುರರ ಜಾಲಕ್ಕೆ ಹಸೆಯಿತ್ತು ಜೀಲೈಯಿಟ್ಟು (ಮೋಹತ. ೪೨ ೩೭).
[ ನರ್ತನಗಾರ + -ತಿ$_1$ ( < -ಇತ್ತಿ ) ]

**ನರ್ತನಗಾರ** (ನಾ). ನೃತ್ಯ ಮಾಡುವವನು; ನರ್ತಕ. 'ನರ್ತನಗಾರ್ತಿ', ಪರಾ. [ ನರ್ತನ + -ಗಾರ ( < -ಕಾರ ) ].

**ನರ್ತನಗೃಹ** (ನಾ). ನೃತ್ಯಮಂದಿರ; ನಾಟ್ಯಶಾಲೆ: ಜಗದೊಳ್ ನಾಟ್ಯಪ್ರಭುಶಾಂತಿಪರ್ಮನೆನಿಸಂ . . . ಸಾಹಿತ್ಯಲೀಲಾಗೃಹಂ ಭಗವಜ್ಜೈನಮತಿಂಗೆ ನರ್ತನಗೃಹಂ (ಪುಷ್ಪಪು. ೧-೭೬). [ ನರ್ತನ + ಗೃಹ ]

**ನರ್ತನವಿದ್ಯೆ** (ನಾ). ನಾಟ್ಯ; ನೃತ್ಯಕಲೆ: ಮಕ್ಕಳು ನರ್ತನವಿದ್ಯೆಯ ಕಲಿಕರು (ಇಂದಾಪ. ೪೭ ೨೦). [ ನರ್ತನ + ವಿದ್ಯೆ ]

**ನರ್ತನಶಾಲೆ** (ನಾ). = ನರ್ತನಗೃಹ : ಮತ್ತಮಾ ವನಂಗಳಲ್ಲಿ ಚಿತ್ರಶಾಲೆ . . . ನರ್ತನಶಾಲೆ ಗಾನಶಾಲೆ ಕ್ರೀಡಾಶಾಲೆ . . . ತುರುವಾಟಿಗಳ ತಣ್ಣೆಳಲ್ಗಳೊಳಗೆಯುಂ (ವಿವೇಕ. ೨೨೮). [ನರ್ತನ + ಶಾಲೆ₂]

**ನರ್ತನಸ್ಥಳ** (ನಾ). = ನರ್ತನಸ್ಥಾನ : ರಂಗಃ – ನರ್ತನಸ್ಥಳವುಂ. ರಂಗವಲ್ಲಿಯುಂ (ಕಾಕಶ. ೨೦೪). [ನರ್ತನ + ಸ್ಥಳ (= ಸ್ಥಲ)]

**ನರ್ತನಸ್ಥಾನ** (ನಾ). ರಂಗಮಂಟಪ ; ರಂಗಸ್ಥಳ : "ನರ್ತನಸ್ಥಾನಮೆಂದು ರಂಗಮಕ್ಕು" (ಮಂಗರಾ. ೨೪-೬). [ನರ್ತನ + ಸ್ಥಾನ]

**ನರ್ತನೋತ್ಸವ** (ನಾ). (ಒಂದು ದಿನ ಅಥವಾ ಅನೇಕ ದಿನಗಳು ನಡೆಯುವ) ನಾಟ್ಯಕ್ಕೆ ಸಂಬಂಧಿಸಿದ ಸಂತೋಷಸಮಾರಂಭ,–ಉತ್ಸವ: ಲ್ಚನೆಯ ಪ್ರಕರಣದ ನರ್ತನೋತ್ಸವದಲ್ಲಿ ಎಲ್ಲ ನವೀನ ಪಾತ್ರಗಳು ಸಾಮುದಾಯಿಕವಾಗಿ ನಮ್ಮ ಚಿತ್ರದಲ್ಲಿ ನೆಲಸುತ್ತವೆ (ಕಮಜೀ. ೨೪ ಟೀ೩೪). [ನರ್ತನ + ಉತ್ಸವ]

**ನರ್ತಿಣಿ** (ನಾ). ನರ್ತಕಿ : ನಾಟ್ಯ ಮಾಡುವವಳು : ನರ್ತಿಣಿಯು ತೆರದೊಳಗೆ ಲೋಕವಿದೊರ್ತಿಪುದು ತ್ರ್ಯವಾಯು ಬಿಗಿಯೊಳು ಸುತ್ತಿಹುವು (ಹಬುಧಾ. ೧-೦೪) ; ಸಿಡಿಲ ಮುರಜಂಬರವೆ ತೆರೆ ಅರಲ್ಬಿಡಿವ ಪುಷ್ಪಾಂಜಲಿಯು ಮಳೆ ಬೆಮರೊಡೆದ ತೆರದಿಂ ನಟಿಸೆ ಕುಡಿಮಿಂಚೆಂಬ ನರ್ತಿಣಿಯು (ಆರಾಮಾ. ೧೧೦-೪೬). 'ನಟ್ಟಣಿ' ಪರಾ. [< ಸಂ. ನರ್ತಿನೀ]

**ನರ್ತಿಸು** (ಕ್ರಿ). ೧. ಕುಣಿ ; ನಾಟ್ಯಮಾಡು : ಕುಡುಮಿಂಚಿನಂತೆ ಮೇಗೊಗೆದು ನಾರದಂ ನರ್ತಿಸಿದಂ (ಪಂಪಭಾ. ೧೨-೧೮೯) : ಭೂತಗಣಂ ಪೆರ್ಬಾನೆಯ ನೆಣನಂ ತಿಂದೆರ್ದ್ದಾರ್ನನಂದದೆ ಕೂಡೆ ನಲಿದು ನರ್ತ್ತಿಸುತಿರ್ಕ್ಕುಂ (ಎಕ. VIII. ಸಾಗರ. ೧೧೯-೩೯ : 1042) ; ಶಾರದೆಯ ನರ್ತಿಸುಗೆ ನಲಿದೊಲಿದೆನ್ನ ಜಿಹ್ವೆಯಲಿ (ಕುವ್ಯಾಆ. ೧-೫) : ನರ್ತಿಸು, ತಾಯೆ, ಅಜಜಾಯೆ, ಮಮ ಮಸ್ತಕ ನೀರೇಜದಲಿ! (ಅನಿಕೇ. ೧-೧). ೨. ಆಡು ; ಚಲಿಸು : ಭೂಭೃತ್ತಿಲಕನ ಸಿತಾತಪತ್ರದ ಕೆಲದೊಳ್ ನರ್ತಿಸಿತು ಧವಳಚಾಮರಯುಗಳಂ (ಕಾದಂಪೂ. ೪೬೨). [ನರ್ತನ + –ಇಸು₃]

**ನರ್ದನ** (ನಾ). (ದನಗಳ) ಗುಟುರು : ಗರ್ಜನೆ : ಜನಾರ್ದನ ನಾಡುತ್ತುಮಿರ್ದ ಪದದೊಳ್ ದೆಸೆಗಳ್ ಪಾರ್ವನಾಮಿತಲಮ್ಮುಕ್ತವೃಷನರ್ದನ ಘೂರ್ಣಿದುದದೊಂದು ವಜ್ರಪ್ರಶನಿಪ್ರೋಲ್ (ಜಗಪಿ. ೫-೩೪). [ಸಂ.]

**ನರ್ಮ₁** (ನಾ). ೧. ಆಟ ; ಲೀಲೆ ; ಕ್ರೀಡೆ ; ವಿನೋದ. ೨. (ಶೃಂಗಾರ ವಲ್ಲಿಸ) ಪರಿಹಾಸ; ನಗೆ: "ಸ್ತ್ರೀ ಪುರುಷರ ಪರಿಹಾಸ" (ಅಮರ. ಟೀಕ). ೩. ಚೆಲುವು ; ಸೊಗಸು : ಕೂರ್ಮೋನ್ನತಮೆನಿಸಿರ್ದ ಪದಂಗಳ್ ನರ್ಮಮನಾದರಿಸಿದವು ಮಡಂಗಳ್ (ಸುಕುಮಾ. ೫-೫೦ ರಗಳೆ). ೪. ಸಂತೋಷ : ಉಲ್ಲಾಸ : ಧರ್ಮಮೆ ದೇಹಿಗ(ಮಿ)ಹಪರ ಶರ್ಮಕ್ಕೆ ಸಿದಾನಂ . . . ನರ್ಮದಿನೆಸಗುತ್ಕಟಸತ್ಕರ್ಮಂ ಪ್ರತ್ಯಕ್ಷಫಲಮನೀವುದು ಪುಸಿಯೇ (ಪುಷ್ಪವೃ. ೩-೧೦೮). [ಸಂ. ನರ್ಮನ್]

**ನರ್ಮ₂** 'ನರಮ್' ನೋ.

**ನರ್ಮಕಥೆ** (ನಾ). ವಿನೋದದ ಪ್ರಸಂಗ,–ಘಟನೆ : ಈ ನರ್ಮಕಥೆಯನ್ನು ತನ್ನ ಚಿತ್ತದಲ್ಲಿ ಬಚ್ಚಿಟ್ಟು ಜೋಪಾನವಾಗಿ ಕಾಪಾಡಿಕೊಂಡು ಬಂದಿದ್ದಳು (ಕಾವ್ಯಸ. ೪೯). [ನರ್ಮ₁ + ಕಥೆ]

**ನರ್ಮಕುಂಡ** (ನಾ). ವಿನೋದವಾಗಿ ಕ್ರೀಡಿಸುವ ಲತಾಮಂಟಪ : ಕ್ರೀಡಾಸ್ಥಾನ ; ಕೇಳೀಸದನ : ಕವಿಯ ಹೃದಯವೆ ನರ್ಮಕುಂಜ ಕವಿತಾಸತಿಗೆ (ಗೀವಿಂ. ೨೧-೧೮). [ನರ್ಮ₁ + ಕುಂಜ]

**ನರ್ಮಗೋಷ್ಠಿ** (ನಾ). ವಿನೋದದ ಗೋಷ್ಠಿ ; ಸಂತೋಷಕೂಟ : ನಯಸಂಪನ್ನನತೀವಯುವ್ವನಯುತಂ ರೂಪಾನ್ವಿತಂ ನರ್ಮಗೋಷ್ಠಿಯ ನಾಳ್ವಂ . . . ಉತ್ಸಾಹಿಯೆನಿಪ್ಪನೊಳ್ಕಿರದ ಪೆಣ್ಗಾ ರಂಭೆಯೇಂ ಸಾಟಿಯೇ (ರಾಜಶೇ. ೮೧-೧೫೦). [ನರ್ಮ₁ + ಗೋಷ್ಠಿ]

**ನರ್ಮದೆ** (ನಾ). ೧. ಸಂತೋಷಪಡಿಸುವವಳು : ನಗಿಸುವವಳು. ೨. ಒಂದು ನದಿಯ ಹೆಸರು ; ಭರತಖಂಡದಲ್ಲಿ ಬಹಳ ಪವಿತ್ರವಾದುದೆಂದು ಭಾವಿಸುವ ಗಂಗೆ, ಯಮುನೆ, ಗೋದಾವರಿ, ಸರಸ್ವತಿ, ನರ್ಮದೆ, ಸಿಂಧು ಮತ್ತು ಕಾವೇರಿ ಎಂಬ ಏಳು ಮಹಾನದಿಗಳಲ್ಲಿ ಒಂದು : "ಮೇಖಲಕನ್ಯಾ, ನರ್ಮದಾ, ರೇವಾ – ಈ ೩ ನರ್ಮದೆ" (ಹನಾಯು. ೧೧೧-೫೨) : ನರ್ಮದೆಗೆ ಹೋದರೆ ಕರ್ಮ ತಪ್ಪೀತೇ? (ಗಾದೆ). [ಸಂ. ನರ್ಮದಾ]

**ನರ್ಮದ್ಯುತಿ** (ನಾ). ೧. ಸಂತೋಷಕರವಾದ ಬೆಳಕು : ನಿರ್ಮಲಜಲಕಲನಾದಾಹ್ಲಾದಿನಿ ನವಶಶಿನರ್ಮದ್ಯುತಿಸಂವಾದಿನಿ ಗಂಗೆ ತರಂಗಿಣಿ ಮಂಗಳಪೆರಮೆ (ಗಹೀಶ. ೧೫-೩೮೦). ೨. [ಕಾವ್ಯವಿ] ನಾಟಕವೇ ಮೊದಲಾದ ರೂಪಕಗಳಲ್ಲಿ ಇರಬೇಕಾದ ಅರುವತ್ತುನಾಲ್ಕು ಸಂಧ್ಯಂಗಗಳಲ್ಲಿ ಒಂದು ; ಪ್ರತಿಮುಖಸಂಧಿಯಲ್ಲಿ ಆರನೆಯ ಅಂಗ ; ಪರಿಹಾಸದಿಂದ ಹುಟ್ಟಿದ ಧೈರ್ಯ ಅಥವಾ ಸಮಾಧಾನ, ದೋಷವನ್ನು ಮುಚ್ಚಲು ಬಳಸುವ ಹಾಸ್ಯ. [ಸಂ.]

**ನರ್ಮಲಿ** (ನಾ). ಒಂದು ಬಗೆಯ ಗಿಡ : ಇಬ್ಬದಿಯ ಆಡಸೋಗೆ, ನರ್ಮಲೀ ಗಿಡಗಳ ಬೇಲಿಗಳಿಂದ ಬೆಳ್ಳಗೆದ್ದು ಯ ಬಾಳಕ ಸುಟ್ಟ ವಾಸನೆ ಮೂಗಿಗೆ ಬಡಿಯಿತು (ಮೂರುದಾ. ೯೦). [?]

**ನರ್ಮವಚನ** (ನಾ). ವಿನೋದದ ಮಾತು,–ನುಡಿ : ನಾರಿಯರ ನರ್ಮವಚನಕ್ಕೆ ನಂದನದ ಮಂದಾರದಂದದಿ ಕಾಡ ದೇವು ಹೂವಪ್ಪುದೇ (ಸಮ್ಯಕೌ. ೫-೬೬). [ನರ್ಮ₁ + ವಚನ]

**ನರ್ಮಸಖ** (ನಾ).=ನರ್ಮಸಚಿವ : (ಶ). [ಸಂ. (ನರ್ಮ + ಸಖಿ + –)]

**ನರ್ಮಸಚಿವ** (ನಾ). ಅರಸನ ಶೃಂಗಾರ ಮತ್ತು ವಿನೋದದ ಕ್ರೀಡೆಗಳಲ್ಲಿ ಜೊತೆಯಲ್ಲಿರುವವನು,–ಸಹಾಯಕ; ವಿದೂಷಕ ಮೊದಲಾದವರು ; ಆಪ್ತಸಚಿವ ; ಅಂತರಂಗದ ಸಹಾಯಕ : ಭೀಮಸೇನನುಮತದೊಳ್ ನರ್ಮಸಚಿವನುಂ ಪರಿಹಾಸಕೇಳೀಶೀಲನುಮೆನಿಸಿದ ವಿದೂಷಕನೆಂದಂ (ಗದಾಯು. ೨-೮ ವ): ಅವನಿಪತಿ ದಿನಪ್ರಥಮಯಾಮದೊಳ್ ನರ್ಮಸಚಿವಸಮನ್ವಿತಂ . . . ಮಂಗಳಗಾಯನೀಮಧುರಗೀತಮನಾಲಿಸುತ್ತುಮಿರ್ಪಿನಂ (ಮಲ್ಲಿಪು. ೫-೨೮) : ಅಂತವರ್ ನರ್ಮಸಚಿವರಂತಿಚ್ಛೆಯಂ ಪ್ರತಿಪಾಲಿಸಿ ನುಡಿವುದುಂ (ಚಂರಾಮಾ. ೮-೫೦ ವ) : ನರ್ಮಸಚಿವಪ್ರಕೋಷ್ಠನಿವೇಶಿತ ಸವ್ಯಪಾಣಿಪಲ್ಲವನುಂ (ಚಂದ್ರಪ್ರ. ೬-೮೩ ವ) ; ನರ್ಮಸಚಿವಪ್ರಸಾರಿತ ಕರಪಲ್ಲವನ್ಯಸ್ತಹಸ್ತಕಮಳನುಂ . . . ಆಗಿ ನಡೆತರ್ಪಾಗಳ್ (ರಾಜಶೇ. ೧೦-೧೫ ವ) : ಅವನು ನಯಾಟನ ಅಂತರಂಗದ ಮಿತ್ರನೂ ನರ್ಮ ಸಚಿವನೂ ಆಗಿದ್ದನು (ರಾಜ್ಯೋತ. ೧೯೩) ; ಗೋವಿಂದಭಟ್ಟ, ಗೌಡರ ನರ್ಮಸಚಿವ. ಗೌಡರ ಯೋಜನೆ – ಹಂಚಿಕೆಯ ಅಲಿಖಿತ ರೆಕಾರ್ಡ್‌ಕೀಪರ್ (ದೀಪದ 11, ೯೫). [ಸಂ.]

**ನರ್ಮಸಹಾಯ** (ನಾ).=ನರ್ಮಸಚಿವ : ಅತನುವನತಿಶಯದಿಂ ಖತುತತಿಗಳ್ ಬಳಸುವವೊಲೆಳಸಿ ಬಳಸಿದರಂತಾ ಕ್ಷಿತಿಪತಿಸುತನಂ ವಿಟಪಂಡಿತ ನಟಪರಿಹಾಸಕಾದಿ ನರ್ಮಸಹಾಯರ್ (ಅರ್ಜನೇ. ೪-೦೩೩). [ನರ್ಮ₁ + ಸಹಾಯ]

**ನರ್ಮಾಲಾಪ** (ನಾ). ವಿನೋದದ ಮಾತು ; ನಗೆನುಡಿ : ಪಲವುಂ ನರ್ಮಾಲಾಪಂಗಳಿಂದವೆ ಸುಖಸುಮಾನಸ್ವಾಂತನಾಗಿ ರಾಜಾಧಿರಾಜಂ . . . ಪೋಷಿಪಂ (ಕಾದಂಬ. ೪೧೭). [ಸಂ.]

**ನರ್ಮೋಕ್ತಿ** (ನಾ).=ನರ್ಮಾಲಾಪ: ಪರಿಪರಿಯ ನರ್ಮೋಕ್ತಿಗಳ ಬಂಧುರ ವಿಹಾರಂಗಳನು ನೆನೆನೆಂದುಸುಮಸುಖಿಸಿರು ತಾಳಿದರು ಕೃಷ್ಣಾತ್ಮಭಾವನೆಯ (ಶಿಭಾಗ. ೧೨-೨೭-೨೪). [ಸಂ.]

**ನರ್ವಲ್** 'ನಚುವಲ್' ನೋ.

**ನರ್ವಾಳಿ** (ನಾ). ಒಂದು ಬಗೆಯ ಗಿಡ : ಸರ್ವಾಳಿ, ಕಿರಿಚಳ್ಳಿ (ಪ್ರಾಶಿಗಾ. ೨೪-೪೩೪). [ ? ]

**ನರ್ಸ್**, ನರಸು, ನರ್ಸು (ನಾ). ರೋಗಿಗಳಿಗೆ ಆರೈಕೆಮಾಡುವ ದಾದಿ ; ದಾಯಿ : ನಮ್ಮ ಆಫೀಸಿನಲ್ಲಿ ಕಂಪೌಂಡರ್, ಅಕೌಂಟೆಂಟ್ . . . ನರ್ಸ್ ಕೂಡಾ ನಾನೇ ನಾನು (ಸೀತಾರ. ೯೩) ; ಗುಲಾಬಿಯಂಥ ಚಂದದ ನರ್ಸ್ ಇದ್ದಾಳಾದರೆ ಅವಳನ್ನಾದರೂ ನೋಡಿ ಕಾಯಿಲೆಯ ಜನ ಬಂದಾರಲ್ಲ ? (ಹಾರುದಾ. ೧೬೦). ನರಸು: 'ನರಸಮ್ಮ' ಪರಾ. ನರ್ಸು: ಓರ್ವ ನರ್ಸಿನ ಸಹಾಯದಿಂದ ಪರೀಕ್ಷೆ ನಡೆಯಿಸಿದ ಡಾಕ್ಟರು .... ಗಾಬರಿಯ ಧ್ವನಿಯ ಲ್ಲಿಯೇ ಹೇಳಿದರು (ಸಮುಜೀ. ೧೧೦೪). [ ← ಇಂ. Nurse ]

**ನರ್ಸು** 'ನರ್ಸ್' ನೋ.

**ನಲ್** (ಗು). ೧. ಒಳ್ಳೆಯ ; ಉತ್ತಮವಾದ ; ಶ್ರೇಷ್ಠವಾದ : "ನಲ್ಲೆಂದೊಳ್ಳಿತು"(ಶಬ್ದಾನಿ. ೦೦೦). 'ನಲ್ಗಣ', 'ನಲ್ಗುದುರೆ', 'ನಲ್ತಪ' ಪರಾ. ೨. ಅಂದವಾದ ; ಸೊಗಸಾದ ; ಮನಸೆಳೆಯುವ : "ನಲ್ ನಯಕ್ಕೆಸಕವುದು" (ಶಶಿರ. ೧೨೫). 'ನಲ್ಗಾಡಿ', ನಲ್ತಪ್ಪನೆ', 'ನಲ್ಬೆಟಿ' ಪರಾ. ೩. ಹಿತವಾದ ; ಪ್ರಿಯವಾದ ; ಪ್ರೀತಿಯ. 'ನಲ್ನುಡಿ$_2$', 'ನಲ್ವರಕೆ', 'ನಲ್ವಾತು' ಪರಾ. ೪. ಸವಿಯಾದ ; ಮಧುರವಾದ. 'ನಲ್ಗಂಪು', 'ನಲ್ಗಳಲ್', 'ನಲ್ಗುಟುಕು', 'ನಲ್ದಂಬುಲ', 'ನಲ್ಲುಣಿಸು' ಪರಾ. ೫. ಹರಿತವಾದ ; ತೀಕ್ಷ್ಣವಾದ. 'ನಲ್ಲಂಬು' ಪರಾ. ೬. ಅತಿಶಯವಾದ ; ಹೆಚ್ಚಾದ. 'ನಲ್ಸೊಗ' ಪರಾ.

ನಲ್ಲದು = ಒಳ್ಳೆಯದು : ನಲ್ಲದು ನನ್ನುಮನ್ ನನ್ನಿಗ್ಗತನಮುಮನ್ ಬಿಟ್ಟು ಕಳಿಯೀಗಳ್ (ಅಂಕಿಗೂ. ೫-೮೦). ನಲ್ಲವರ್ = ಒಲಿದವರು ; ನಲ್ಲರು : ಅಂತೆ ಮಾತಾಡುವ ರಾಜಕೀರ ಒಲವಟ್ಟಿಸಲಾಟಿದಗಲ್ದು ಪೂವಿನಂಬಾಡೆ ಲತಾವನಂಬುಗುವ ನಲ್ಲವರಲ್ಲಿಯ ನಂದನಂಗಳೊಳ್ (ಎಕ. XIII, ೪೪-೪೬ ; 1112 ; ಶಾಶಮುಂ. ೨೦೬ ನೋ). ನಲ್ಲವಳ್ = ಪ್ರಿಯೆ ; ನಲ್ಲೆ : ಅಖರ್ವಕನುಸಂತಾಪಕ್ಕಳ್ಳಲ್ಕೆ ನಲ್ಲವಳಿಂಬುಕಯ್ಯೆಳೆವಸಲೆಯಂ ಕೇಳೀಶೈಳಂಗಳಂ . . . ಸೆಱೆಗೆಯ್ದನಾಕುಳಮನೆ ಕುಳಿರ್ಕೋಡಿತ್ತಾಗಳ್ ಮನಂ ಮನುಜೇಂದ್ರನಾ (ಪರ್ವಪು. ೪-೭೩). ನಲ್ಲಾತ = ಸ್ವಾಮಿ; ಒಡೆಯ: ನಲ್ಲಾತಂ ಶ್ರೀಮತ್ ಸೋವಯ್ಯ (ಎಕ. XI, ಚಿತ್ರದು. ೪೯-೬೦ ; 947); ಅನೆವೆಡೆ(ಡ)ಲ್ಗಂ ಮದಗಜಮಲ್ಲಂ ಥಾಲಕೆ ನಲ್ಲಾತಂ ಶ್ರೀ ಕನ್ನರದೇವನ ರಾಜ್ಯಂ (ಎಕ. XII, ೨೫೭-೨; 951); ಯಸಕ್ಕೆ ನಲ್ಲಾತಂ ಶ್ರೀಕೊಟ್ಟಿಗದೇವನ ರಾಜ್ಯಂ (ಸಾಇಇ. XI-I, ೪೩-೪; 970) ; ವರಬಲಧರೊತ್ತ್ರಂ ಕೃತಯುಗ ಚರಿತನಾಳ್ದ ನಲ್ಲಾತಂ (ಸಾಇಇ. XI-1, ೯೨-೭ ; 1064).

[ ದೇ.ಶ ತಮಿ. ಮಲ. ನಲ್; ತುಳು. ನಲ್, ನಲು ; ಕೊಡ. ನಲ್ಲ; ಗೊಂಡಿ. ನಲಾ ]

**ನಲ$_1$** (ನಾ). ೧. ನಲಿವು ; ಸಂತೋಷ. 'ನಲಂದಳೆ', 'ನಲವೆಚ್ಚು' ಪರಾ. ೨. ಪ್ರೀತಿ ; ಮಮತೆ. 'ನಲವರಕೆ' ಪರಾ.

[ ದೇ.ಶ ತಮಿ. ನಲ; ಮಲ. ನಲ = ಒಳ್ಳೆಯತನ, ಸೌಂದರ್ಯ; ತುಳು. ನಲ = ಒಳ್ಳೆಯ ]

**ನಲ$_2$**, ನಳ$_1$ (ನಾ). ೧. ಒಂದು ಬಗೆಯ ಜೊಂಡು,- ಹುಲ್ಲು ; ಲಾಳದ ಕಡ್ಡಿ ಹುಲ್ಲು. ೨. ಕಂಪು; ವಾಸನೆ. ೩. ನಿಷಧದೇಶದ ಒಬ್ಬ ಪ್ರಸಿದ್ಧ ರಾಜ; ವೀರಸೇನನ ಮಗ; ದಮಯಂತಿಯ ಗಂಡ. ೪. ರಾಮಾಯಣ ದಲ್ಲಿ ಒಬ್ಬ ಕಪಿನಾಯಕನ ಹೆಸರು ; ಸುಗ್ರೀವನ ಸೇನಾಪತಿ. ೫. ಅರುವತ್ತು ಸಂವತ್ಸರಗಳಲ್ಲಿ ಐವತ್ತನೆಯದು. ನಳ$_1$ : ೩. ಹರಿಶ್ಚಂದ್ರ ನಳ ಪುರು . . . ಚಕ್ರವರ್ತಿಗಳಕ್ಕರ್ವರ್ಗೆ ಪುಣ್ಯಶ್ಲೋಕರೆಂಬ ನಾಮಂ (ಮುಂಗರಾ. ೭೮-೩); ನಳನ ನಹುಷನ ಶಾಲಿಹೋತ್ರನ ಬಲುಮೆಗಳು ಕಿಱಿದೆಂಬ . . . ಹಯವೌಢಪ್ರತಾಪರು ಹೊಳೆವ ಮಕುಟದ ಸಾಲುಗಳ ಲೊಪ್ಪಿದರು ರಾವುತರು (ಕುಮಾವ್ಯಾ. ಉ. ೮-೪೧) ; ಏತಱಾಯಾಸವಿವು ಜಗದ್ವಿಖ್ಯಾತನಲ್ಲಾ ರಾಯರಲ್ಲಿ ನಳನಾತಗಾದಾವತ್ತ ಬಲ್ಲೆ ಕೇಳಿ ಪೂರ್ವದಲಿ (ಕರಾರಾ. ೩-೨-೦೩). ೪. ಒದೆದ ಕೆಡಹಿದ ನಳನ ಮೈಂದನ ಸದೆದ ನೀಲನ ತುಳಿದ (ತೊರಿರಾ. ೨೫-೨೨); ಇಟ್ಟ ಗಿರಿಗಳ ಹಿಡಿಹಿಡಿದು ನಳನೊಟ್ಟಿದನು ಮೆಟ್ಟಿದನು ಕಟ್ಟಿದನಿಟ್ಟಣಿಸಿ ಬಹ ಗಿರಿಯನಾ ಬಳಸಲಿಸಿ ಬಹ ಗಿರಿಯ (ಕರಾರಾ. ೬-೫-೨೨) ; ನಳ ನೀಲ ಅಂಗದ ಜಾಂಬವಂತ ದಳಪತಿಯಧಿಕ ಸುಗ್ರೀವ ಬಲವಂತ (ಪುರಂದ. ೩-೮೭-೫). ೫. ಮತ್ತಮಾ ವರುಷವೇ ಪ್ರಭವ . . . ನಳ . . . ಅಕ್ಷಯವೆಂದಱುವತ್ತು ತೆಱನಾಗಿಹುದು (ವಿವೇಕ. ೩೨೧). ೬. ಒಂದು ಬಗೆಯ ವಿಮಾನು ; ಕಿರುವಿಮಾನು : ಬಕ ಮರಾಳ ರಥಾಂಗ ಸಾರಸನಿಕರ ಪುಳಿನಸ್ಥಳದೊಳಿರೆ ನಳಮಾಕರನಕ್ರಜಳೂಕ ಮಡುಗಡಲೊಳಗೆ ಸಂಚರಿಸೆ (ಅಕ್ಕಾಕ. ೫-೨೬). 'ನಳವಿಮಾನ' ಪರಾ. ೭. [ ಜ್ಯೋತಿ] ಒಂದು ಬಗೆಯ ಯೋಗ. 'ನಳಯೋಗ' ಪರಾ. [ ಸಂ. ]

**ನಲಂದಳೆ** (ಕ್ರಿ). ಸಂತೋಷಪಡು ; ಸಡಗರಿಸು ; ಸಂಭ್ರಮಿಸು : ಆಕಂಪನ್ನಪಂ ಅಲಘುಪ್ರಿಯದಿಂದಿದಿರ್ವಂದು ನಲಂದಳೆದು ಪೊಳಲನಯ್ದಿಸಿ . . . ಸಕಲಸನ್ಮಾನಂ ಮಾಡಿದನು (ಆದುಕಾ. ೪-೪೬). [ ನಲ$_1$ + ತಳೆ$_1$]

**ನಲಕ**, ನಳಕ (ನಾ). ೧. ದೇಹದ ಉದ್ದವಾದ ಎಲುಬು,- ಮೂಳೆ. ೨. ಕೈಯ ಅಥವಾ ಕಾಲಿನ ಎಲುಬು ; ಶಾಖಾಸ್ಥಿ. ನಳಕ : ೨. "ಕೆಯ್ಯ ಕಾಲ ಎಲ್ವು ನಳಕಯೆಂಬುದು" (ಹಲಾಯು. ೦೦೪-೦೩) ; "ನಳಕಮೆನೆ ಶಾಖಾಸ್ಥಿಯೆಂದನಲು ಕೈಕಾಲ ಯೆಲುವು" (ಮಂಗರಾ. ೦೦೭-೭). [ ಸಂ. ]

**ನಲಕುಪ್ಪ** (ನಾ). (?) : ಮೃಗಶಿರೆ ನಲಕುಪ್ಪನ ಹಾಗೆ ೩ ಆದ್ರ ಹವಳದ ಹಾಗೆ೧ (ಭಾಸ್ಕರ. ೬೦-೩). [ ? ]

**ನಲಕೂಬರ**, ನಳಕೂಬರ (ನಾ). ಕುಬೇರನ ಮಗ. ನಳಕೂಬರ: ಪೆಜತೇನುಪಂ ಒಗೆಯದೆ ನಳಕೂಬರನೊಳ್ ಕೂಡಿ ಸುಖವಿರೆಂದಾಕೆಯ ದುಷ್ಪರಿಣಾಮಮಂ ಪೆತ್ತುವಿಡಿಸಿ (ಪಂರಾಮಾ. ೦೦-೧೯೫ ವ) ; ಸುರರಮಣ ನಳಕೂಬರಾಧಿಕಸರಸಕಾಮುಕರಂ ಸಮಸ್ತಾಮರರನೆಲ್ಲರ ಬಗೆಯದನಿಮಿಷ ಸತಿಯರು ಸಹಸ್ರ ನೆರೆದು ನಿನ್ನಂ . . . ಮನಸಿಜಸುಖಾಮೃತಶರನಿಧಿ ಯೊಳೋಲಾಡಿಸುತ್ತಿರಲ್ (ಬಸಪು. ೪೧-೧೮) ; ಉರ್ವ ನಳಕೂಬರ ಜಯಂತಾದಿ ಸುರತನುಜರುರ್ವರೆಗದೇಕೆ ಬಹರು (ಕೃಮಿಥಾ. ೩೦-೨೧).

[ ಸಂ. ]

**ನಲಕೆ** (ನಾ). ಒಂದು ಬಗೆಯ ಸುಗಂಧದ್ರವ್ಯ: (೩). [<ಸಂ. ನಲಿಕಾ]

**ನಲಗು** 'ನಲುಗು$_1$' ನೋ.

**ನಲದ** (ನಾ). ಲಾವಂಚ ; ಉಶೀರ. [ ಸಂ. ]

**ನಲಭರಿತ** (ನಾ). ನಲಿವಿನಿಂದ ಕೂಡಿದುದು ; ಸಂತೋಷಭರಿತ ವಾದುದು ; ಸುಖಮಯವಾದುದು : ಅರರೆ ನಲ ನಲಭರಿತವಮೃತದ ಶರಧಿ ಸಾವಿರವಪ್ಪುವಂಗಡಿ ಮೆಱೆವ ಗಣೇಶಭವನ ಕೋಟೆಯ ಸುತ್ತ ಉದ್ಯಾನ (ತೊರಿರಾ. ೦-೨೫). [ ನಲ$_1$ + ಭರಿತ ]

**ನಲಮಾನ**, ನಳಮಾನ (ನಾ). ಒಂದು ಬಗೆಯ ಮೀನು ; ಚಿಲಿಚಿಮ : "ನಲಮಾನ ಚಿಲಿಚಿಮ ಎಂದೊಡೆ ಸಿಸಿಲು, ಚಿಳಿಯ ಮೀನೆಂದು ಎಂಬರು" (ನಾಚಿರಾ. ೬). ನಳಮಾನ: "ನಳಮಾನಃ ಚಿಳಿಚಿಮಃ –ಈ ೨ ಕಿಱುಮೀನ್" (ಹಲಾಯು. ೧೦೦-೩೬) ; "ಚಿಳಿಚಿಮವೆನಲು ನಳಮಾನವೆನೆ ಕಿಱುಮೀನ ಪೆಸರಿನಿಸ್ತುಂ" (ಮಂಗರಾ. ೦೨೦-೬). [ ಸಂ. ]

**ನಲವತ್ತು** 'ನಾಲ್ವತ್ತು' ನೋ.

**ನಲವರಕೆ** (ನಾ). ಪ್ರೀತಿಯಿಂದ ಮಾಡಿದ ಆಶೀರ್ವಾದ : ಅರಸಿ ನಲ ವರಕೆಯಿಂದಂ ಪರಸುತ್ತಿಂದೆನ್ನ ತಂದೆ ಬಂದನನುತ್ತಂ (ಶಾರಂಪೂ. ೪೯೯೩); ಕುಮಾರನನಜಿತಸೇನಮಹಾದೇವಿ ನಲವ[ಪಾಠಾಂ. ನಲ್ವ]ರಕೆಯಿಂ ಪರಸಿ

ಮೋಹರಸಪರವಶತೆಯಿಂ . . . ಅಭ್ಸ (ಚಂದ್ರಪು. ೬-೯೦ ವ) : ನಿಜಾಂಘ್ರಿಗಳನರ್ಚಿಸುವ ಕನ್ಯಾರತ್ನಮಂ ನಿಜಕುಲಲಕ್ಷ್ಮಿದುವೆ ಚೂಡಾರತ್ನಮೆಂದು ನೋಡಿ ಪಾರಿಯಾಸ್ಸ ಪಲವು ನಲವ[ಪಾಠಾಂ. ಪಲವಂ ನಲ್ವ]ರಕೆಯಂ ಪರಸಿ (ವರ್ಧಪು. ೫-೯೬ವ) : ನಿಜಜನನೀಜನಕರಿರ್ವೆಡೆಗೆ ರಮಣಿವೆರಸೇಳ್ತಂದು ಪೊಡವಟ್ಟು ನಿಂದಾಗಳ್ . . . ಇರ್ವರುಂ ನಲವರಕೆಯಿತ್ತು ಪರಿತೋಷದಿಂ ಬರಿಸಿ ಕುಳ್ಳಿರಿಸಿ (ರಾಜಶೇ. ೯-೪೩ ವ) ; ನಲವರಕೆಯಿತ್ತು ಸಂತೋಷದಿಂ ನಡೆ ನೋಡಿ ನಲಿದು (ಕುಮಾರಾ. ೭-೩೦೪). [ ನಲ್$_1$ + ಪರಕೆ$_1$ ]

**ನಲವರಿ** (ಕ್ರಿ). ಸಂತೋಷಗೊಳ್ಳು ; ಆನಂದಿಸು : ಭರದಿಂ ತಲೆಯೆತ್ತಿ ಯುರ್ಬಿ ನಭಮಂ ನುಂಗಲೊಡರ್ಚಿದಂತೆ ಮೇಘವಂ ನೋಡಿ ದೆಸೆದೆಸೆಯಂ ಪಾಸಿಸಿ ನಲವರಿದು ಪ್ರಾಣಿಗಳೊಳ್ ತನಗದಿರದದಿರಾಂಪರೊರ್ವರುಮಂ ಕಾಣದೆ (ಪಂಪಶಂ. ೯೭-೭). 'ನಲಿವರಿ' ಪಾಠ.

[ ನಲ್$_1$ + ಪರಿ$_2$ ]

**ನಲವರಿಕೆ** (ನಾ). ಅಭಿನಂದನೆ: "ಅಭಿನಂದಿಸುವುದು . . . ನಲವರಿಕೆ" (Congratulation. ತಂಕನಿ) ; ಈಗ್ಗಲರೂ ನಲವರಿಕೆ ಸಲ್ಲಿಪರು (ಮೂರುನಾ. ೧೧೮-೬೫೦). [ ನಲವು + ಅರಿಕೆ (<ಅಱಿಕೆ) ]

**ನಲವಾನ್** (ಕ್ರಿ). ಸಂತೋಷವನ್ನು ತಳೆ ; ಆನಂದಿಸು ; ಪ್ರಸನ್ನಚಿತ್ತನಾಗಿರು : ಏಂ ತಾಳ್ದುದೋ ಚೆಲ್ವನೀ ದೇಶವೆಂದು ನಲವಾಂತು ಮುಂದೆಳೆಯುತಿರೆ (ಕ್ರಮಿಘಾ. ೩-೧೩). [ ನಲವು + ಆನ್$_1$ ]

**ನಲವು** (ನಾ). ೧. ಹಿಗ್ಗು ; ಸಂತೋಷ ; ಸಡಗರ : "ನಲವೆಂದನೆ ಸಂತೋಷಂ" (ಛಾರಿನಿ. ೩೩); ನಲವಿಂ ಕೃತಾರ್ಥಭಾವವನೆಯ್ದುತಿರೆ ಕಂಡು ಚಲಿಸದದಿರದೆ ಬೆನ್ನನೊಡ್ಡಿಕೊಂಡಿರೆ ಕಂಡು (ಸೀದಿರ. ದೇ. ೬೪-೧೩) ; ಕೊಬ್ಬಿ ನಲವಿಂದೆ ಮಡಲಿಱಿದಡಸಿ ಬೆಳೆದು (ಸಿದ್ಧರಾ. ೨-೨೩) : ನಲವಿಂ ವಂದಿಯ ಬೇಂಟೆಯಾಡಿ (ಉದ್ಭಟ. ೨-೬೯) ; ನೆರೆದೋಲಗಂ ನಲವು ಕೈಮಿಗೆ ತನ್ನನೆ ನೋಡುತಿರ್ಪಿನಂ (ಕಬ್ಬಿಗಕಾ. ೮೨) ; ಫಲವ ತಲೆಯಲಿ ಹೊತ್ತು ಬೇಗದಿ ನಲವು ಮಿಗೆ ನಡೆತಂದು (ಕುಮಾರಾ. ೬೭೯. ೪-೧೬) : ಪರಿಮಳದಲರ ಪನ್ನೀರಿನಲಿ ತವಕದಿ ನಲವು ಇಂಗಿದ ಸತಿಯನುಪಚರಿಸಿದರು ಪಲತೆಱದಿ (ನಳಚ. ೦-೩೯) ; ಅರ್ಥಲಾಲಿತ್ಯವೆನುವ ಸತೀತ್ವವಿರದೊಡನು ಗೊಳಿಸುವಳೆ ಕವಿತಾರವಣಿ ರಸಿಕನಿಗೆ ನಲವು ? (ಗಿರಿಪಿಂ. ೨೨-೨೪). ೨. ಪ್ರೀತಿ ; ಆದರ : ಸಿರಿ ನಲವಿಂದಮಿರ್ಪ ನೆಲೆ ಕಣ್ಣಳ ಪರ್ವಮೆನಿಪ್ಪ ಪಂಕಜೋತ್ಕರಮುಮನಿಂದುಮಂಡಲಮುಮಂ ಮೊದಲೊಳ್ ಸಮೆದ ಬ್ಜಜಂ ಮನೋಹರಮೆನೆ ಮಾಡಿದೀ ಮೊಗದ ಪೋಲ್ಕೆಗೆ ಮುನ್ನೆಗಟಲ್ ತಗುಳ್ಚಿ ಬಿತ್ತರಿಸಿದುದು (ಶಾಂತಿಪು. ೭೪೩) ; ಸಕಲಬುಧಸಮಿತಿ ನೆಱೆ ಕೊಂಡುಕೊನೆವ ನಲವಿಂದೆ ಕೀರ್ತಿಸುತ್ತಿರೆ ಮುದದಿಂ . . . ಕಾವ್ಯಾವಲೋಕವಂ ವಿರಚಿಸುವೆಂ (ಕಾವ್ಯಾವ. ೩) ; ಯತಿಪಸಮಂತಭದ್ರನನಿಳಾ (ವಳಯಂ) ನಲವಿಂದೆ ಕೀರ್ತಿಕುಂ (ವರ್ಧಪು. ೧-೧೨) ; ನಲ್ಲನ ನಲವಿಂ ನಡೆ ನೋಡಿ (ಉದ್ಭಟ. ೨-೭೭) : ಕಂದುಮೋಱಿಯ ರಾಯನನು . . . ಆಲಿಂಗಿಸುತ ನಲವಿಂದ ಮನ್ನಿಸಿ ತಂದನರಮನೆಗುಚಿತವಚನದಲಿ(ಕುಮಾರಾ. ೧-೧೭). ೩. ಚೆಲುವು; ಸೌಂದರ್ಯ ; ಮನೋಹರತೆ : ಸುಲಲಿತವಹ ನಾನಾವರ್ಣಾಜ್ವರ ಪಲವಿಧಮಾಂತ ಕೇರಿಗಳು ನಲವಿಂದ ಮೆಱೆದಿಹುವು (ಕೀನವಿ. ೨-೭೪). [ ನಲ್$_1$ + – ವು./ತಮಿ. ನಲವು; ತೆಲು. ನಲವು ]

**ನಲವುಗೆಡು** (ಕ್ರಿ). ಸಂತೋಷಗುಂದು ; ಹಿಗ್ಗು ಇಲ್ಲವಾಗು : ಎನ್ನೋಪಳಾ ಕಂದಿದೊಂದಿರವಾ ಚಿಂತಿಸುವಂದವಾ ನಲವುಗೆಟ್ಟಾಕಾರವಾ ಬಾಷ್ಪದೊಳ್ ಪೊರೆದಾಲೋಕನವಾ ಬಟಲ್ದಧರವಾ ಸುಯ್ಯೊಂದು ಪಾಂಗಾಸ್ಮರಾತುರವಂ ತಾಳ್ದುವ ಭಂಗಿ ಪಿಂಗಿರದದೇಂ ಬೆಚ್ಚತ್ತೊ ಮಚ್ಚಿತ್ತದೊಳ್ (ಜಗಪಿ. ೦೬-೧೩೦) ; ಮುಂದುಗೆಟ್ಟೆರ್ದೆಯ ಗುಂಡಿಗೆಗಳೊಡೆದರಬರಾಜರಿಸಿದರ್ ನಡುಗಿದರ್ ನಲವುಗೆಟ್ಟಸಬರು (ಹಲಪು. ೩೦-೩೭). [ನಲವು+ಕೆಡು$_1$]

**ನಲವುದಾಳು** (ಕ್ರಿ). ಸಂತೋಷವನ್ನು ತಾಳು ; ಪ್ರಸನ್ನತೆಯನ್ನು ಹೊಂದು : ಭೂಸುರರಿಗೆ ನಿತ್ಯದಾನವ ಮಾಡಿ ನಲವುದಾಳಿದ ಭೂಮಿಪಾಲ (ಕೆಂನವಿ. ೨೨-೭೭). [ ನಲವು + ತಾಳು$_1$ (<ತಾಳ್$_1$) ]

**ನಲವುಮತ್ತು** (ನಾ). ಆನಂದದ ಅಮಲು ; ಸಂತೋಷದ ಗುಂಗು : ವರಪನಿತ್ತು ನಲವುಮತ್ತು ನಮಗೆಂದಿಗು ಇರೆ ಹರಸೈ ಗೋಕುಲಾನಂದನಾ (ಗೋಕುನಿ. ೩೨). [ ನಲವು + ಮತ್ತು$_1$ ]

**ನಲವೆ** (ನಾ). ಸಂತೋಷಚಿತ್ತೆ ; ಹರ್ಷಿತೆ : ನುಣ್ದನಿಯ ನೂತನ ಭಾಳದ ಭಾಮಿನಿ . . . ನಗೆಗಣ್ಗಳ ನಲವೆ ನಾಸಿಕದ ನೀಱೆ (ಉದ್ಭಟ. ೫-೩೩ ವ).

[ ನಲವು + – ಎ$_3$ ]

**ನಲವೆಚ್ಚು** (ಕ್ರಿ). ಹಿಗ್ಗು ಹೆಚ್ಚು ; ಸಂತೋಷವು ಅಧಿಕವಾಗು ; ಶಬರಿ ಮುದದಿಂ ಗಾಢಪರಿರಂಭಣಂಗೆಯ್ದು . . . ಬೇಂಟೆಯಂ ನೋಡುತ್ತ ನಲವೆಚ್ಚುತಂ ಪೋದಳು (ರಾಘಚ. ೧೭-೭೦).

[ ನಲ್$_1$ + ಪೆಚ್ಚು$_1$ (<ಪೆರ್ಚು$_1$) ]

**ನಲವೆರೆ** (ಕ್ರಿ). ಪ್ರೀತಿಯನ್ನು ಸುರಿಸು ; ಮಮತೆಯನ್ನು ತೋರು : ಶಿವದ ನೆರೆಯನು ಬಲ್ಲ ವಿಪುಲಮತಿಗಳ ತಡೆದ ಧ್ಯಾನಬಿಂಬ, ನೆನೆದೊಡನೆ ಕೊಳೆ ತೊಳೆದು ನಲವೆರೆದು ನಿಲ್ಲಿನ್ನ ಮನದ ತುಂಬ (ಮಂಕಡೀ. ೪೦-೧೦).

[ ನಲವು + ಎರೆ$_1$ (<ಎಱೆ$_1$) ]

**ನಲವೇರು** 'ನಲವೇಱು' ನೋ.

**ನಲವೇಱಿಸು** (ಕ್ರಿ). ಸಂತೋಷವನ್ನು ಹೆಚ್ಚಿಸು ; ಹರ್ಷಗೊಳಿಸು : ಕಂದಾಮರೆಗಳ ಮುಗಿಸುತ ಚಾಳಕವ್ರಿಂದವ ನಲವೇರಿ[ಱಿ]ಸುತ ಚಂದ್ರಕಾಂತವ ಕರಗಿಸುತಾಗ ಪರಿಪೂರ್ಣೇಂದುವದನೆಯರ್ಯೆದಿದರು (ಕೆಂನವಿ. ೨೦-೭೭). [ ನಲವು + ಏಱಿಸು ]

**ನಲವೇಱು, ನಲವೇರು**(ಕ್ರಿ). ಅಧಿಕವಾದ ಸಂತೋಷವನ್ನು ಹೊಂದು : ಉದಯಗಿರೀಂದ್ರಮಣಿನನೇಱಿ ಸರೋಜಸಮಿತಿ ನಲ[ಪಾಠಾಂ. ಯ]ವೇಱುವ ಪೊಲ್ (ಚಂದ್ರಪು. ೭-೨) ; ಹೊಸಪರಿಯ ಬಿರಿಮುಗುಳ್ಗಳೆರೆ ಬೀಗಿ ನಲವೇಱೆ ಮಲ್ಲಿಗೆಯರಳ್ಗಳಿಂ ಮನವಾರೆ ಶಿಱಿಯಾತಂ (ಪುಷ್ಪರ. ಹ. ೫೨೪-೧೮); ಅಗಲದೆ ನೋಡಿನೋಡಿ ನಲವೇಱುವ ದೇವಿಯ ಭೂಪಚಕ್ರಿಯಾಸೊಗಯಿಪ ದೃಕ್ಚಕೋರಚಯಸೇವೆಗೆ ಮೆಚ್ಚಿ (ಕುಸುಮಾ. ೬-೧೫೬) ; ದೇಗುಲಕೆ ನಲವೇಱಿ ನಡೆತಪ್ಪಾಗ (ಬಸವು. ೨೭-೬) ; ದಶರಥನಂದನರ ನಿರೀಕ್ಷಿಸುತ ನಲವೇಱಿದನು ಕಲಿಹನುಮ (ತೊರರಾ. ೬-೩೦-೧೬). ನಲವೇರು : ತಂಗಿನ ಗರಿ ತಲೆದೂಗಲಿ ಬಾಗಲಿ ಗಿಡಮರಗಳು ಸಹ ನಲವೇರಿ (ಕಪಪು. ೬-೦೯೯). [ ನಲವು + ಏಱು$_1$ (<ಏಱ್$_1$) ]

**ನಲಾವು** 'ನಲ್ಲಾವು' ನೋ.

**ನಲಿ$_1$** (ಕ್ರಿ). ೧. ಕುಣಿ ; ನೃತ್ಯ ಮಾಡು : ಸುತ್ತಲುಂ ಪರಿವ ಜರಿವೊನಲ್ಗಳಿಂದೆತ್ತಲುಂ ನಲಿವ ಪೊಸನವಿಲ್ಗಳಿಂ (ಪಂಪಭಾ. ೩-೨೨) ; ನಡುವಿರುಳವರ್ ನಾಟಕಂ ನಲಿದು ಮಱೆದೊಱಗಿರ್ದ ಸಮಯದೊಳ್ (ಪಂಪಶಂ. ೨೭೪-೦) ; ಸರ್ವಾಂಗಸುಂದರಿ ವಿದ್ಯಾನಟಿ ನಾಟಕಂ ನಲಿಗೆ ಮತ್ಕಾವ್ಯಸ್ಥಲೀರಂಗದೊಳ್ (ಪಂಪರಾಮಾ. ೧-೬). ೨. ಹಿಗ್ಗು ; ಸಂತೋಷಪಡು ; ಆನಂದಿಸು ; ಉಲ್ಲಾಸಗೊಳ್ಳು : ತಾಮರೆಯರಲೊಳ್ ಸರಸನಿಜಾಮೋದದೊಳೊಂದಿ ನಲಿದು ಮಕರಂದರಜೋವ್ಯಾಮುಗ್ಧದೊಳೇ ಮುಂಗುಳೊಳಮಾ ಮಾಟಕ್ಕೆಯನಱಿಸಿ ಸುಱಿವುದಳಿ ಕಲಕಲದೊಳ್ (ಕವಿರಾ. ೩-೧೭೭) ; ಮೆಯ್ಸರ್ಚಿತನ್ನಿನಿಯಂ ಬಂದೊಡೆ ನಲ್ಲಳೇಂ ನಲಿದಳೊ ನಾನಾವಿಳಾಸಂಗಳಿಂ (ಆದಿಪು. ೧೨-೯೩) : ಗಗನತಳಮಂ ಪಱಿದು ಬಿಟ್ಟುದೆನಿಪ ಬಹುತಟಾಕದಿಂ ಕುಕಿಲ್ವ ನಲಿವ ಕೋಕದಿಂ (ಪಂಪಭಾ. ೦-೫೦); ದೀನವೃದ್ಧದ್ವಿಜನಟಭಟಸಚ್ಚಕ್ರಯುಗ್ಮಂ ಸರುಗ್ಮಂ ನಲಿಯುತ್ತುಂ ನೋಡೆ ತನ್ನಂ ಬೆಳಗುವನೆಳೆಯೊಳ್ಪೆಳ್ವರಾದಿತ್ಯದೇವಂ (ಶಾಶಾಅ. XI-i, ೪೩-೦೭ ; ೨೮೦) ; ಅರರೆ ಇಂದ್ರಾಣಿಯರು ನಲಿದು

ಸೀಗುರಿಯಿಕ್ಕೆ (ಬಸವ. ೧-೧೨) ; ನಗುತ ನಲಿಯುತ್ತ ಹಾಡುತ್ತಾಡುತಾನಂದ ವೊಗೆಯುತಿರಲು (ಹಹಳ. ೬-೪೪) ; ಮರುಳ್ಗಳ ತಂಡಂ ನಲಿವಂತೆ ಕೊಂದಂ (ಉದ್ಭಟ. ೪-೮೪) ; ದುಶ್ಶಾಸನಂಗುಬ್ಬರಿಸೆ ರೋಷಾವೇಶಕರ್ಣಾದಿಗಳ ಮಾನ ನಲಿಯೆ (ಕುಮಾ.ಭ. ೦-೩೦). ೩. ಸಂತೋಷದಿಂದ ಸುಳಿದಾಡು ; ಲೀಲೆಯಿಂದ ಓಡಾಡು : ಖಚರೀಜನಾನನ ನವಾಂಭೋಜಂಗಳೊಳ್ ಕಂಪನೀಂಟ್ಕೊಳುತುಂ ನಂದನರಾಜಿಯೊಳ್ನಲಿಯುತುಂ ತದಬ್ಜಹಂಸಂ ನಿರಾಕುಳವಿಹಾ ಪಾಟ್ಕಿಗಳಿಂದೆ ಪೊಟ್ಟುಗಳೆವಂ ಸಂಸಾರ ಸಾರೋದಯಂ (ಆದಿಪು. ೧-೮೪) ; ಪೊಸಕೊಳಂಗಳ್ಗೊಳ್ಗೊಲಿದು ನಲಿವಂಚೆಯಿಕ್ಕೆಯಿಂ (ತಿರುಕ. ದೇ. ೧-೧೪) ; ಶಾರದೆಯ ನರ್ತಿಸುಗೆ ನಲಿದೊಲಿದೆನ್ನ ಜಿಹ್ವೆಯಲಿ (ಕುಮಾ.ಅ. ೧-೩) ; ಪೊಱವೊಳಲ ರಮ್ಯೋದ್ಯಾನವೆಸೆದುದು . . . ನಲಿವ ಕಿನ್ನರಮಿಥುನದಲಿ ಮಿಗೆ ಗಳಹುವರಗಿಳಿವಿಂಡಿನಲಿ ಹೆಕ್ಕಳಿಪ ಕೋಗಿಲೆಗಳಲಿ (ತೊರವೆ. ೦-೯-೧೧) : ತಾಯ . . . ನಲಿದೊಲಿದು ನರ್ತನಂಗೈಯೆನ್ನ ಜಿಹ್ವೆಯಲಿ (ಚಿತ್ರಾಂಗ. ೧-೯). ೪. ಮೆಚ್ಚು ; ಇಷ್ಟಪಡು ; ಒಲಿ : ದರ್ಪ್ಪ ವಿಷಯಂಗಳನೇಳಿಸಿ ಕಾಡಿಯಾಡಿ ಕಾಮಾರಿಯನಟ್ಟಿರ್ಸಲ್ಕೆ ನಲಿದಿರ್ಪ್ಪ ಮುನೀಶ್ವರನೀ ಧ್ರುವೇಶ್ವರ (ಎಪಿಕ. XI-i, ೯೬-೩೪ ; 1062) ; ಸಕಲಸೂರಿಗಳ ಪಾದಾರವಿಂದವ ನೆನೆದೀ ಕೃತಿಯನು ಮೇದಿನಿ ನಲಿಯೆ ಪೇಳುವೆನು (ಕಂನವಿ. ೧-೧೨) ; ಪೊಲಸಿಯಕೆಸಿನ ಪೆಣಮನ್ ಮಣ್ ಮಾಡದಿರ್ಕ್ಕಾರುಮಪ್, ಅಬದಿರ್ಕೆ, ಅಬದೆ, ಪೊಬದೆ, ಬಯಸಿ ಪಾರ್ದ್ದು, ನಲಿದೆಱಪ ಪರ್ದಿಂಗೆ ಸವಿಯೊರೆಯ ನಿಧಿಯಾಗೆ ಬಿಸುಟರ್ಕೆ ಬಯಲೊಳ್ (ಅಂತಿಗೂ. ೨-೨೩). ೫. ತೂಗು ; ಅಲ್ಲಾಡು ; ಸಂಚಲವಾಗು : ಅಲಗರ್ಣ್ಗಳಮದುರ್ಗಂ ತೊದಳ್ನುಡಿಯು ತಪಕಗಂ ನಲಿವ ಮೂಗಾಯ ನವನರ್ತನದ ಹಸನಿಗಂ (ಬಸವ. ೧-೧೫೦) ; ಶ್ರೀವಧು ಮುತ್ತಿನೆಕ್ಕಸರದಂತುರದೊಳ್ ನಲಿವಂತು ವಿಕ್ರಮಶ್ರೀವಧು ಬಾಹುಪೂರಕದ ಪೊಲ್ ಭುಜದೊಳ್ ನಲಿವಂತು . . . ಪಾಳಿಸಿದನುರ್ವ್ವರೆಯಂ ನರಸಿಂಹ ಭೂಭುಜಂ (ಎಕ. III, ಮುಂಡ್ಯ. ೦೨೧-೦ ; 1235). ೬. ಸಂತೋಷದಿಂದ ಕೂಗು ; ಕುಕಿಲು : ಘಣಿಯುಂ ನವಿಲ್ಗಳುಂ ಪುರುಡಿಪ ಕಾಗೆಯುಂ ನಲಿವ ಕೋಗಿಲೆಯುಂ ತೊಱೆದೆಯ್ದೆ ವೈರಮಂ ನೆರೆದೊಡನಿರ್ದವು (ಧರ್ಮಾಮೃ. ೩-೯೦).

ನಲಿನಲಿ (ದ್ವಿರುಕ್ತಿ) : ಮಲರು ನಲಿನಲಿದಾಟಂದು ಕೊಂದವಂ ಯುವರಾಜಂ (ಅಜಿಪು. ೫೦-೨೬); ಕೆಲದ ಕೇರಿಯ ಸಕ್ಕಜದ ಮಕ್ಕಳೊಡನೊಕ್ಕಲಿಕ್ಕಿ ನಲಿನಲಿದು ನರ್ತಿಸುತ್ತಿರಲ್ (ನಂಬಿಶ. ೨-೧೪) ; ನಲಿನಲಿದು ಹೆಚ್ಚಿ ಮೆಚ್ಚುತ್ತ . . . ಲಲನೆಯರು ನೃಪನ ಪದಯುಗಜಲರುಹದೊಳ್ ಮೆಯ್ಯನಿಕ್ಕಿ (ನನ್ನಭಾ. ೪-೨೧೫). ನಲಿದಾಟ = ಹಿಗ್ಗುವಿಕೆ ; ಸಂತೋಷಪಡುವಿಕೆ. ನಲಿದಾಡಿಸು = ಸಂತೋಷದಿಂದ ಕುಣಿದಾಡುವಂತೆಮಾಡು : ನಿಮ್ಮವರ ಮಾರ್ಗಣೆಗಳುಬ್ಬರಿಸಿದವು ಗಗನಾಂಗಣವ. . . ನಲಿದಾಡಿಸಿದವು ನಾರದಾದಿಗಳ (ತೊರವೆ. ೦-೧೧-೦೦) ; ಸೊಗಯಿಸುವ ಪರಶಿವ ನಲಿದಾಡಿಸುವ ರೂಢಿಯಲ್ಲೆಂದು ನೆಱೆ ನೊಂದು ಮಱುಗುವಳಜಸ್ರುಮುವಳು (ಕೃಮಿಭಾ. ೨೮-೦೮). ನಲಿದಾಡು = ೧. ಸಂತೋಷದಿಂದ ಆಟವಾಡು : ತಮ್ಮೊಡನೆ ನಲಿದಾಡುವ ಕಿಶೋರಕೇಸರಿಗಳಂ ಪಿಡಿದು ತೆಗೆವ ಕರಿಕಳಭಂಗಳುಮಂ (ಹಂಪಭಾ. ೧-೧೧೫ ವ) ; ಹರಿಣಂಗಳ್ ನಲಿದಾಡುತಿರ್ದುವು ಕರಂ ವ್ಯಾಘ್ರಂಗಳಂ ಪೊರ್ದಿ (ಸುಕುಮಾ. ೮-೬೦) ; ಜಳನಿಧಿಯಲ್ಲಿ ಪುಟ್ಟಿ ಜಲಜಾಕ್ಷನ ಪೇರುರಮೆಂಬ ತೊಟ್ಟಿಲೊಳ್ ಬಳೆದು ವಿಲಾಸದಿಂ ಜಲಜದೊಳ್ ನಲಿದಾಡಿ ಬಟೆಕ್ಕ ಯೌವನಂ ಮೊಳೆವುದುಮಾರುಮಾ ಜಗಯುದಾ ನೃಪನೊಳ್ ಸಿರಿ ಕೂರ್ತು ಬಂದು ಕೋಮಳೆ ನೆರೆದಿರ್ದಳ್ (ಶಾಕ್ತಸಾ. ೨೦೬). ೨. ಬಹಳ ಹಿಗ್ಗು ; ತುಂಬ ಸಂತೋಷಪಡು : ನೆರೆ ಶುದ್ಧಾಂತ ಕಾಂತೆಯರ್ ನೆರೆದೊಸಗೆಯಂ ಮಾಡೆ ವೃದ್ಧಕಂಚುಕಿಗಳೆಂದವರೊಡನೆ ನಲಿದಾಡೆ (ಅಜಿಪು. ೪-೬೧೧೪) ; ತಿರಿಕಂ ನಿಧಿವಡೆದೊಡೆಂತು ನಲಿದಾಡುಗುಮಂತಿರೆ ಜನಪದಾಬ್ಜಸೇವನೆ ದೊರೆಕೊಳೆ ಸಂಸಾರಿ ನಲಿವುದೊಲುವಡೆ ಸುಖಮಂ (ಸಮಾಶ. ೧-೧೦೨) ; ಶರಣರ ಸಂಗದಲ್ಲಿ ನಲಿದಾಡು ಕಂಡೆಯಾ ಎಲೆ ಮನವೇ (ಮಹಾದೇ. ಬ. ೬೯-೧೯೨) ; ಭೋಗದಿಂದಾಗಲರಸಂಚೆಗಳುಮಳಿವಿಂಡುಗಳು ನಲಿದಾಡೆ (ನಳಚ. ೧-೩೬). ೩. ಸಂತೋಷದಿಂದ ಕುಣಿದಾಡು,-ನೃತ್ಯಮಾಡು : ನಭದೊಳ್ ನಲಿದಾಡುವ ಸೋಗೆನವಿಲ್ಗಳ ಪಿಂಡುಗಳುಮಂ (ಹಂಪಶಂ. ೦೦೮-೧೦) ; ಆಡುವ ನಲಿದಾಡುವ ನಡೆ ನೋಡುವ ಕೊರಲಪ್ಪಿಕೊಳ್ವ . . . ಬಾಳಕ್ರೀಡೆಗಳಂ ನೋಡುತಿರ್ಪುದೊಂದಿರವಲ್ತೆ (ಸುಕುಮಾ. ೯-೧೦೦) ; ಹುಲಿ ನಲಿದು ನಿಲುಗಿಸಿ ಗೆಜ್ಜೆಗಟ್ಟಿ ನಲಿದಾಡಿತ್ತು (ಆದವ. ೧೫-೩೩) ; ನಾರದನು ನಲಿದಾಡಿದನು ಗಗನದಲಿ (ತೊರವೆ. ೪-೧೨-೩೬) ; ನಲಿದಾಡೆ ಎನ್ನ ನಾಲಿಗೆ ಮೇಲೆ ಸರಸ್ವತಿದೇವಿ (ಪುರಂದ. ೦-೧೯೧ ಪಲ್ಲವಿ) ; ಲಕ್ಷ್ಮಿ ನನ್ನ ಮನೆಯಲ್ಲಿ ನಲಿದಾಡುತ್ತಿದ್ದಾಳೆ (ಕಂಬಹು. ೧೩೪); ಅವಳ ತಲೆಯಲ್ಲಿ ಹಿಂದಿನ ಎಷ್ಟೋ ಘಟನೆಗಳು ನಲಿದಾಡಿದವು (ಹಳ್ಳಿಹಾ. ೧೧೬). ನಲಿನಲಿದಾಡು = ೧. ಚಲಿಸಿ ಸುತ್ತು : ಆತನ ಮನೆಯ ಮುಂದೆ ನಭದೊಳ್ ನಲಿನಲಿದಾಡುವ ಜಂತ್ರದ ವಿಮಾನನೆಚ್ಚನುಮಾಕೆಗೆ ಗಂಡನಕ್ಕುಂ (ಹಂಪಭಾ. ೩-೩೨ ವ). ೨. ಬಹಳ ಸಂತೋಷಪಡು,-ಹಿಗ್ಗು : ಜಾಲಗಾಱನೊಬ್ಬ ಜಲವ ಹೊಕ್ಕು ಶೋಧಿಸಿ ಹಲವು ಪ್ರಾಣಿಯ ಕೊಂದು ನಲಿನಲಿದಾಡುವ (ಮಹಾದೇ. ಬ. ೪೬-೧೦೯) ; ಆನಂದದಿಂದ ನಲಿನಲಿದಾಡುವೆ (ಬಸವ. ೩೬೬).

[ ದೇ.॥ ತುಳು. ಕೊಡ. ನಲಿ; ಕುರುಖ್. ನಲ್ನಾ ]

ನಲಿ₂, ನಳಿ₄ (ನಾ). ಒಂದು ಬಗೆಯ ಸುಗಂಧ ದ್ರವ್ಯ : "ನಳಿಯೆಂಬ ಗಂಧ-ನಟಿ, ನಲಿ" (ನಾಚಿರಾ. ೬) ; "ಸುಷಿರಾ, ವಿದ್ರುಮಲತಾ, ಕಪೋತಾಂಘ್ರಿಃ, ನಟೀ, ನಲೀ, ಧಮನೀ, ಅಂಜನಕೇಶೀ – ೭ ನಳಿ ಎಂಬುವ ಗಂಧದ್ರವ್ಯದ ಹೆಸರುಗಳು ; ಗೂಪಗುತ್ತಿಗೆ" (ಸಿದ್ಧಾಂತಿ. ೦೨೪). ನಳಿ₄ : ಮೇಲಿನ ಪ್ರಯೋಗಗಳನ್ನು ನೋಡಿ. [ ಸಂ. ನಲೀ ]

ನಲಿಗಚ್ಚು 'ನಲಿಗರ್ಚು₂' ನೋ.

ನಲಿಗರ್ಚು₁ (ಕ್ರಿ). ಪ್ರೀತಿಯಿಂದ ಕಚ್ಚು : ಆ ಶುಕಶಿಶುಪ್ರಕರಚಂಚೂಪುಟ ಸಂಚಯಮಂ ಚೂತಕಳಿಕಾಕುಳಮೆಂದು ನಲಿಗರ್ಚಲೆಂದವ್ವಳಿಪ ಕಲಕಂಠಬಾಲಕಂಗಳುಂ (ಕುಸುಮಾ. ೨-೬೧ ವ) ; ಕಳಿಕೆಗಳಂ ಪಿಕಾಳಿ ನಲಿವಿಂ ನಲಿಗರ್ಚುತುಮುನ್ಮದಾಳಿಸಂಕುಳಮಲಗೆರ್ಚಲಂ ತು ಡು ಕು ತ ಂ ತನುವಣ್ಣಳ ಸಾರಮಂ ಶುಕಾವಳಿ . . . ಪೀರುತುಂ ವಿಳಸಿತ ಚುಂಬನಾಭಿನಯಮುಂ ನೆಱೆ ತೋರ್ಪುವೊಲಿರ್ದುದಾವನ್ರುದೊಳ್ (ಕುಸುಮಾ. ೩-೮೯). [ ನಲಿ₁ + ಕರ್ಚು₁ ]

ನಲಿಗರ್ಚು₂, ನಲಿಗಚ್ಚು (ನಾ). ಪ್ರೀತಿಯಿಂದ ಕಚ್ಚಿದುದು ; ದಂತಕ್ಷತ : ನಲಿಗರ್ಚಿನ ನಖರೇಖೆಯುಂ . . . ಮೆಯ್ವೋಱೆ ರತಾಲಯಾಂಗಣದೊಳೊರ್ವಳ್ ಪೋಱೆ . . . ಸಂದಿರ್ದಳ್ (ಸೂಕ್ತಿಸು. ೧೪-೬೪). ನಲಿಗಚ್ಚು : ನಲಿಗಚ್ಚು ಕಚ್ಚಿ ಕಡಿಯಾಗದೆಯೊಳನೆ ಸೀಳ್ದು ಸಿಱುಂಬಳಾದದಂಟದೆ ನೆಜನೆಂದು ಭಾವದೊಳೆ ಬಳ್ಳುವ ನೋಂಬೆಯನಿಕ್ಕಿ ಕಿಚ್ಚಿನೊಳ್ (ಸೂಕ್ತಿಸು. ೮-೪೩೪). [ < ನಲಿಗರ್ಚು₁ ]

ನಲಿಗಱಿ (ನಾ). ಪ್ರೀತಿಯಿಂದ ಕಚ್ಚಿದುದರ ಕಲೆ ; ದಂತಕ್ಷತದ ಗುರುತು : ನುಂಗಿಯುಗುಟ್ಟಒಲಿಯುರ ದಶನಂಗಳ ನಲಿಗಱಿಗಳಲ್ಲದೆಳ್ಳಕ್ಕಿಲ್ಲಂಗವೆನೆ ಸಂದ ಸೊಬಗಿನ ಜಂಗಮಶಾಸನವೆನಿಪ್ಪ ಸುರತವಿಳಾಸಂ (ಅನಂಪು. ೦-೫೯). 'ನಲಿಗರ್ಚು₂' ಪರಾ. [ ನಲಿ₁ + ಕಱಿ₂ ]

ನಲಿಗೆದಱು (ಕ್ರಿ). ಸಂತೋಷದಿಂದ ಕೆದಕು,-ಬೆದಕು : ಕದಳೆಗದಿರನುರ ದಿನುರವಣಿಸಿ ನೆತ್ತಿಯಿಂ ಪೊಕ್ಕು ನೆಗೆದು ಚಂಚುಪುಂ ಚಲ್ಲಿಪೊಯ್ದು ನಖದಿಂ ನಲಿಗೆದಱಿ ಕೋಡುಗಱಿದುಸಿಡಿಱಿದು (ಅನಂಪು. ೬-೮೦ ವ).

[ ನಲಿ₁ + ಕೆದಱು₁ ( < ಕೆದಱು₁ ) ]

**ನಲಿತ** (ನಾ). ನಲಿಯುವಿಕೆ ; ಕುಣಿದಾಟ : ಒಲಿತ. ಅಲಿತ. ನಲಿತವೊ ! ಎಲ್ಲಿ ಇದನು ಕಲಿತವೊ ? (ಸೂರ್ಯಶಾ. ೧೧೨-೧೧). [ ನಲಿ₁ + - ತ್ವ₂ ]

**ನಲಿನ**, ನಳಿನ (ನಾ). ೧. ತಾವರೆ; ಕಮಲ. ೨. ನೀರು ಹೂವು; ಆವಲು. ೩. [ಜೈನ] ಕಾಲವನ್ನು ಅಳೆಯುವ ಒಂದು ಪ್ರಮಾಣ : ಇದೇ ರೀತಿ ಎಂಬತ್ತನಾಲ್ಕು ಮತ್ತು ಎಂಬತ್ತುನಾಲ್ಕುಲಕ್ಷ ಗುಣಿತ ಕ್ರಮದಿಂದ ಕುಮುದಾಂಗ ಮತ್ತು ಕುಮುದ, ಪದ್ಮಾಂಗ ಮತ್ತು ಪದ್ಮ, ನಲಿನಾಂಗ ಮತ್ತು ನಲಿನ . . . ಎಂಬಿವು ಕ್ರಮದಿಂದ ಆಗುತ್ತವೆ (ಜೈನಪ. ೩೦೬). **ನಳಿನ :** ೧. "ಸಹಸ್ರಪತ್ರಂ. ಶತಪತ್ರಂ . . . ಅಬ್ಜಂ. ನಳಿನಂ. ಪುಷ್ಕರಂ. ರಾಜೀವಂ. ಅರವಿಂದಂ. ಪದ್ಮಂ. ಪಂಕಜಂ–ಈ ೧೭ ತಾವರೆ" (ಹಲಾಯು. ೧೧೨-೫೭) ; ವಿಜೃಂಭಮಾಣ ನವನಳಿನಪರಿಮಳ್ಳಾಸ್ವಮಧುಕರ ರವರಮಣೀಯ. . . ಧರಾತಳಮುಮುತ್ಫುಲ್ಲ ಪಲ್ಲವ ಲೀಲಾಯಮಾನ ಮತ್ತ ಕೋಕಿಲೋಲ್ಲಾಸಿತ ಶೀಕರೋದ್ಭಾಮ ದುರ್ದಿನ ವನಮುಮೆಯ್ದುವುದು (ಶಂಪರಾ. ೫-೧೦ ವ) ; ಅವನತಾರಾತಿನೃಪ ಮಣಿಮಯ ಕಿರೀಟಪ್ರಭಾಲೀಢ ಚರಣನಳಿನಯುಗ್ಮಂ (ಸುಕುಮಾ. ೧-೬೯ ವ) ; ನಳಿನದ ಕರ್ಣಿಕೆಯೊತ್ತಿನೊಳ ಳವಡೆ ಕಣ್ಮುಚ್ಚಿ . . . ನಿದ್ರಾಸುಖದಿಂ ಕಳಹಂಸೆಯು ಮುಗಿಳ್ಗೆಳರ್ದುವು (೧೦೪. ೨-೫೫) ; ನಳಿನಂ ಕುಂದೆ . . . ಮೂಡಿದುದು ತೇಜೋಮಯದಿಂ ಚಂದಿರಂ (ರಾಜಶೇ. ೧೧-೪೩). [ ಸಂ. ]

**ನಲಿನಗರ್ಭ**, ನಳಿನಗರ್ಭ (ನಾ). ಕಮಲದಲ್ಲಿ ಹುಟ್ಟಿದವನು ; ಬ್ರಹ್ಮ. 'ನಲಿನಗರ್ಭಾಂಡ' ಪರಾ. **ನಳಿನಗರ್ಭ :** 'ನಳಿನಗರ್ಭಾಂಡ' ಪರಾ. [ ನಲಿನ + ಗರ್ಭ ]

**ನಲಿನಗರ್ಭಾಂಡ**, ನಳಿನಗರ್ಭಾಂಡ (ನಾ). ಬ್ರಹ್ಮಾಂಡ; ವಿಶ್ವ : ನಲಿ[ಪಾಠಾಂ. ಳಿ]ನಗರ್ಭಾಂಡಂಗಳಂಬಗ್ಗಳದ ಘಟಾಳಿಕಾದಿಗಳೊಳಗೆವಲತೆಡಪ ಪಕ್ವಾನ್ನ ದಿವ್ಯಾನ್ನಂಗಳಂ ತೀವಿ (ಬಸವು. ೮-೩೭). **ನಳಿನಗರ್ಭಾಂಡ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ನಲಿನಗರ್ಭ + ಅಂಡ₂ ]

**ನಲಿನಜ**. ನಳಿನಜ (ನಾ). = ನಲಿನಗರ್ಭ. **ನಳಿನಜ :** ನಳಿನಜ ಹರಿ ವಾಸವ ನತಪದಪಂಕರುಹ ನವಿ ತ ಶುಭವಾಸಂ . . . ಗಳಲನೆ ಜಗದುಂ ಸಲಹುಗೆ ಸಲೆ ತೋಂಟದ ಗುರು ನಿರುತವಿಲಾಸಂ (ಪಾರಾಕ್ಷ. ೨-೧-೨). [ ಸಂ. ]

**ನಲಿನದಲ**, ನಳಿನದಳ (ನಾ). ೧. ತಾವರೆಯ ಎಸಳು ; ಕಮಲದ ದಳ. 'ನಲಿನದಲಲೋಚನ' ಪರಾ. **ನಳಿನದಳ :** ೧. 'ನಳಿನದಳಲೋಚನ' ಪರಾ. ೨. ಕಮಲದ ಎಲೆ: ನಳಿನದಳದೊಳ್ ತೀವಿರ್ದಬ್ಬಿಂದು ತಳ್ಪಿಲ್ದಿರ್ಪಸು . . . ಪೂಗುವು ರಾಗದಲಂಪನಗ್ಗಳಿಸೆ (ಪುಷ್ಪಪು. ೨-೪೩). 'ನಳಿನದಳಪುಟ' ಪರಾ. [ ನಲಿನ + ದಲ ]

**ನಲಿನದಲಲೋಚನ**, ನಳಿನದಳಲೋಚನ (ನಾ). ತಾವರೆಯ ಎಸಳ ಆಕಾರದ ಕಣ್ಣುಳ್ಳವನು ; ವಿಶಾಲಾಕ್ಷ ; ಕೃಷ್ಣ : ಸುಧನ್ವನ ಶಿರವ ನೆರದುಕ್ಕಿಗಲಿ ನಲಿನದಲ[ಪಾಠಾಂ. ನಳಿನದಳ]ಲೋಚನಂ ಪಿಡಿದೆತ್ತಿಕೊಂಡು ನೋಡಿನು (ಜೈಮಿಭಾ. ೧೩ ೫೦). **ನಳಿನದಳಲೋಚನ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ನಲಿನದಲ + ಲೋಚನ ]

**ನಲಿನನಾಭ**, ನಳಿನನಾಭ (ನಾ). ಹೊಕ್ಕುಳಲ್ಲಿ ತಾವರೆಯುಳ್ಳವನು; ಪದ್ಮನಾಭ ; ವಿಷ್ಣು : ನಲಿ[ಪಾಠಾಂ. ಳಿ]ನನಾಭನ ಮಗನ ಕರ್ಣಗಳ ನನುಬಿಳಿ ತೋಳತೊಳಗಾಪವು . . . ವಿಶಾಲವಿಲೋಚನದ್ವಯವು (ಬಸವು. ೪ ೨೩). **ನಳಿನನಾಭ :** ನಳಿನನಾಭನ ಮಧುರವಾಣೀಲುಳಿತಪರ ಮಾಶೀರ್ವಚನಪರಿಕಲಿತ ಕಪಟಿಕರುಣಾ ಪಾಂಡವರಾಯ ಹೊಲಿಮಂಟ (ಕುಮಾರವ್ಯಾ. ೮ ೩) ; ನಳಿನನಾಭನ ನೀನು ಪಾದೂ ಬೇಗ ಒಳಕಣ್ಣಿಂದ ಅವನ ಕಂಡು ನಲಿದಾಡೊ (ಪುರಂದ. ೨-೩೨೯ ಪಲ್ಲವಿ). [ ಸಂ. (ನಲಿನ + ನಾಭ + –) ]

**ನಲಿನಬಾಂಧವ** (ನಾ). ತಾವರೆಯ ಮಿತ್ರ ; ಸೂರ್ಯ. [ ನಲಿನ + ಬಾಂಧವ ]

**ನಲಿನಭವ**, ನಳಿನಭವ (ನಾ). = ನಲಿನಗರ್ಭ. 'ನಲಿನಭವಾಂಡ' ಪರಾ. **ನಳಿನಭವ:** ಆಕ್ಷಣ ನಳಿನಭವ ತಾನಂದು ಕೊಟ್ಟನು ಕಶ್ಯಪಾತ್ಮಜನೆಂದ ವರಗಳ (ಸಂಭಾ. ೮-೧೧) ; ಆ ನಳಿನಭವ ಶಂಕರರ ಸುಮ್ಮಾನವಾಯ್ತು ಸಕಲ ವಾನರಸೇನೆಗಿಂದ್ರಾದಿಗಳು ಸೇವಕರಾಯ್ತು ಪಯಣದಲಿ (ತೊರರಾ. ೬-೬-೯): ಹರಿಹರ ನಳಿನಭವರಾರಾಜ್ಞೆಯಿಂ ಲಯ ಸೃಷ್ಟಿಗೈಯುವರು (ಗಗಚಾ. ೧೨-೬೯). [ ಸಂ. ]

**ನಲಿನಭವಾಂಡ**, ನಳಿನಭವಾಂಡ (ನಾ) = ನಲಿನಗರ್ಭಾಂಡ : ಅವಿಭಳವಿಸಿ ನಲಿ[ಪಾಠಾಂ. ಳಿ]ನಭವಾಂಡನಿಚಯಮುಮನುರುಪುತುರವಣಿಸಿ ಕವಿದ ವಿಷಮಂ ನುಂಗಿದನು ಮಾಪ್ರವರನೆನಲು (ಬಸವು. ೧೩-೨). **ನಳಿನಭವಾಂಡ :** ರಾಘವನನುಜನಗ್ಗದ ಚಾಪಪೌರ್ವೀಣಿನದವನು ನೆಗಹಿದನು ನಳಿನಭವಾಂಡ ಗುಮ್ಮಿಡಲು (ತೊರರಾ. ೬-೪೩-೯). [ ನಲಿನಭವ + ಅಂಡ₂ ]

**ನಲಿನಮಿತ್ರ** (ನಾ). = ನಲಿನಬಾಂಧವ. [ ನಲಿನ + ಮಿತ್ರ ]

**ನಲಿನಮುಖಿ**, ನಳಿನಮುಖಿ (ನಾ). ಕಮಲದಂತೆ ಮುಖವುಳ್ಳವಳು ; ಚೆಲುವೆ : ತನ್ನಿನಿಯನಂ ನೋಡಿ ನಲಿ[ಪಾಠಾಂ. ಳಿ]ನಮುಖಿ ನಗುತಂ (ಬಸವು. ೪೭-೨೩). **ನಳಿನಮುಖಿ :** ನಳಿನಮುಖಿಯರ ಸಕಲ ಸೃಷ್ಟಿಗೆ ಕಳಸವಿದು (ಕುಮಾರವ್ಯಾ. ೧೩-೨೩) ; ಚೆಲುವೆಯೋರ್ವಳು ಬಂದು ಹೊಳೆಯೊಳಗೆ ಈಜಾಡಿ ನಲಿವುದನು ನೋಡಿ ನಳಿನಮುಖಿಯನು ಮೇಲೆ ಕರೆಸಲು (ಪುರಂದ. ೩-೦೫೦-೩). [ ಸಂ. ನಲಿನಮುಖೀ ]

**ನಲಿನಲೋಚನೆ**, ನಳಿನಲೋಚನೆ (ನಾ). ತಾವರೆಯೆಸಳಿನಂತೆ ಕಣ್ಣುಳ್ಳವಳು ; ಸುಂದರಿ : ನಲಿ[ಪಾಠಾಂ. ಳಿ]ನಲೋಚನೆಯನೊರ್ವಳನೊಸೆದು ವಿಂಗೆ ಕೊಟ್ಟು (ಬಸವು. ೨೫-೯). **ನಳಿನಲೋಚನೆ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಸಂ. ನಲಿನಲೋಚನಾ ]

**ನಲಿನವೈರಿ**, ನಳಿನವೈರಿ (ನಾ). ತಾವರೆಯ ಶತ್ರು ; ಚಂದ್ರ : (೬). **ನಳಿನವೈರಿ :** ನಳಿನವೈರಿಯ ಸುಳಿವು ತನ್ನಯ ಕೊಳಗೆ ಒಂದುದು (ಕುಮಾರವ್ಯಾ. ೨-೫೨). [ ನಲಿನ + ವೈರಿ ]

**ನಲಿನಸಂಭವ**, ನಳಿನಸಂಭವ (ನಾ). = ನಲಿನಗರ್ಭ : ನಲಿ[ಪಾಠಾಂ. ಳಿ]ನ ಸಂಭವರವಿತದುರ್ಲಿಪಿಗಳನೊರಸಿ (ಬಸವು. ೪೯-೬೨). **ನಳಿನಸಂಭವ :** ಕೃಪಾಳುವನೊಲಿದು ಹೂಗಳಿದನಜನು ವೇದಸಹಸ್ರಸೂಕ್ತದಲಿ ಬಳಿಕ ಕಾರುಣ್ಯದಲಿ ನಾಭೀನಳಿನದಲಿ ತೆಗೆದನು ವಿರಿಂಚಿಗೆ ನಳಿನಸಂಭವನೆಂಬ ಹೆಸರಾಯ್ತೆಂದು ಮೊದಲಾಗಿ (ಕುಮಾರವ್ಯಾ. ೦೯-೫೦). [ ನಲಿನ + ಸಂಭವ ]

**ನಲಿನಸಖ**, ನಳಿನಸಖ (ನಾ). = ನಲಿನಬಾಂಧವ : ಘನಜಿನಭವನವದು ನಲಿ[ಪಾಠಾಂ. ಳಿ]ನಸಖನುದಯಕ್ಕೆ ಮುನ್ನವೆ ಗೋಡೆಗಳುವೆರಸಿ ನೆಲನ ಸರಿಸಕೆ ಬಿದ್ದು (ಬಸವು. ೩೫-೩೨). **ನಳಿನಸಖ :** ನಳಿನಸಖಕೋಟಿತೇಜವ ಮಿಜಿಕೇಬವನ ಚರಣಾಂಬುಜಕ್ಕೆ ಶರಣು (ಲಕಿಶಂ. ೧೧-೬) ; ನಳಿನಸಖ ನವರಾಂಬುರಾಶಿಯ ನಿಲುಕುತೈದನೆ ಹಸಿದುದೀ ಮಾನಿಬಳಗವಾರೋಗಣೆಗೆ ಚಿತ್ತವಿಸೆಂದ ಯಮಸೂನು (ಕುಮಾರವ್ಯಾ. ೦೬-೪೭) . [ ಸಂ. (ನಲಿನ + ಸಖಿ + – ) ]

**ನಲಿನಾಂಗ** (ನಾ). [ಜೈನ] ಕಾಲವನ್ನು ಅಳೆಯುವ ಒಂದು ಪ್ರಮಾಣ : ಇದೇ ರೀತಿ ಎಂಬತ್ತನಾಲ್ಕು ಮತ್ತು ಎಂಬತ್ತುನಾಲ್ಕುಲಕ್ಷ ಗುಣಿತ ಕ್ರಮದಿಂದ ಕುಮುದಾಂಗ ಮತ್ತು ಕುಮುದ, ಪದ್ಮಾಂಗ ಮತ್ತು ಪದ್ಮ, ನಲಿನಾಂಗ ಮತ್ತು ನಲಿನ . . . ಎಂಬಿವು ಕ್ರಮದಿಂದ ಆಗುತ್ತವೆ (ಜೈನಪ. ೩೦೬). [ ನಲಿನ + ಅಂಗ₂ ]

**ನಲಿನಾಕ್ಷ**, ನಳಿನಾಕ್ಷ (ನಾ). ೧. ತಾವರೆಯ ಎಸಳಿನಂಥ ಕಣ್ಣುಳ್ಳವನು ; ಚೆಲುವ ; ಸುಂದರ. ೨. ವಿಷ್ಣು ; ಕೃಷ್ಣ : (೬). **ನಳಿನಾಕ್ಷ :**

೨. ನಳಿನಾಕ್ಷನ ಪದಪದ್ಮಕಿಗಳ ಬಟ್ಟೆಯೊಳಲಕ್ತಕಾಂಕ ಪದಪದ್ಮಕಿಗಳ್ ಪೊಳೆವುವು (ಜಗವಿ. ೩-೨೬) ; ನಳಿನಾಕ್ಷ ನಿನ್ನ ಮಾಜೆಯ ಹೊಕ್ಕು ತಪಿಸಲು ಒಲಿದು ಧ್ರುವಗೆ ನಿಜಲೋಕವಿತ್ತವನು (ಪುರಂದ. ೩-೦೦೯-೩) ; ನಳಿನಾಕ್ಷನಿಲ್ಲ ದಧ್ವರಕುವಳ್ವಿಮಿಸೆ ನಡೆಯದು (ಕೃಮಿಶಾ. ೨-೯೫).

[ಸಂ. (ನಲಿನ + ಅಕ್ಷಿ + –) ]

ನಲಿನಿ, ನಳಿನಿ (ನಾ). ೧. ತಾವರೆ ; ಕಮಲ. ೨. ತಾವರೆಗಳಿಂದ ತುಂಬಿರುವ ಕೊಳ ; ಕಮಲಗಳು ಹೆಚ್ಚಾಗಿ ಇರುವ ಸ್ಥಳ. ೩. ತಾವರೆಯ ದಂಟು.–ನಾಳ. ನಳಿನಿ : ೧. ನಳಿನಿಯ ಬಿರಿಮುಗುಳೊಳ್ಪುಯ್ಯಲಿಕಳಭಂ ಬೆಂಡು ನೆಗೆದು ಬಂಡುಣ್ಣುವುಲ್ . . . ಯಶೋದೆಯ ಮೊಲೆಯುಂಡಂ ನವತಮಾಲಕೃಷ್ಣಂ ಕೃಷ್ಣಂ (ಅರ್ಧನೇ. ೬-೩೩); ನಳಿನಿಯನಪ್ಪಿ ತುಂಬಿಗುರುಳಿಂ ನೆಜಿ ನೇರ್ಪಡೆ ತಿರ್ದಿ . . . ಅದೇಂ ಸುಳಿದುದೊ ಮೆಲ್ಲನಾಳ್ದಪೊಲತಿ ಶ್ರಮಮಂ ವನಮಂದಮಾರುತಂ (ಕಬಕಂ. ೧-೫೩). ೨. ನಳಿನೀಶೀರ ಲತಾಗೃಹಂಗಳ ನೆಟರ್ ನೇರ್ಪಟ್ಟಿರಲ್ ಪಟ್ಟು . . ಪಥಾರ್ತರಿರ್ವರ್ (ಜಗವಿ. ೯-೬೮). ೩. ನಳಿನಿಯ ನಳಿನವಮನಿನನಾಳಪಂಕಿರೆ ಕರದೆ ಪಧುವ ಕರವಮಂ ಕರದಿಂ ತಳೆದಂ ಕುಮಾರನಾದ್ರ್ಯಾಂಗುಳಿದಳಕಂಟಕಿತಬಾಹು ನಾಳಾನ್ವಿತವಮಂ (ಚಂದ್ರಪ್ರ. ೬-೬೪). ೪. ತಾವರೆಯ ಗಡ್ಡೆ : "ಕಂದಃ, ಬಿಸಿನೀ, ನಳಿನೀ – ಈ ೩ ಅವಜ ಗಡ್ಡೆ" (ಹೆಲಾಯು. ೦೦೨-೬೦).

[ಸಂ. ನಲಿನೀ ]

ನಲಿನೀಮಿತ್ರ, ನಳಿನೀಮಿತ್ರ (ನಾ).=ನಲಿನಬಾಂಧವ: ಸರೋಜಾಸನಂ ನಲಿ[ಜಾತಂ. ೯]ನೀಮಿತ್ರ ಸುವರ್ಣರೇಬವು ವಿವಸ್ವಂತಾಹ್ವಯಂ (ಷಾವಾರ. ೦೦೦) . ನಳಿನೀಮಿತ್ರ : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಸಂ. ]

ನಲಿಪ (ನಾ). ಸಂತೋಷ ; ಆನಂದ ; ಉಲ್ಲಾಸ : ಕುಟುಕಿನಿಂದಾಹಾರಮಂ ಸ್ನಾನದಿಂ ನೆಲೆಯಂ ಕೂಟಮಂ ನಲಿಪದಿಂದಂ ನಲ್ಮೆಯಂ ಗಲ್ಲದಿಂ ಗೆಲವಂ . . . ಪೇಟ್ಲಿಲ್ಲಿಯುಂ ತಲ್ಪಿದಂ (ಲೋಕೋಪ. ೧೨-೬). [ ನಲಿ$_1$ + –ಪ$_2$ ]

ನಲಿಬಾಳು (ನಾ). ಸುಖಮಯವಾದ ಜೀವನ ; ಸಂತೋಷದ ಬದುಕು : ಕಂಡೊರೆ ನುಂಗುವ ಜವನನ್ ಕಂಡರ್, ಈ ನಲಿಬಾಳನ್ ಕಡೆ ಬೀಳ್ಕೊಂಡರ್, ಬಯಲಾದರ್ (ಪಾಠಸಿ. ೩೬-೬೫೮).

[ ನಲಿ$_2$ + ಬಾಳು$_2$ (<ಬಾಟ್$_1$) ]

ನಲಿಯಿಸು, ನಲಿಸು (ಕ್ರಿ). ೧. ಸಂತೋಷಗೊಳಿಸು ; ಉಲ್ಲಾಸಗೊಳಿಸು : ಆ ವಿಶ್ವೇಶ್ವರನ ಮನೋಮಧುಕರಮಂ ತಮ್ಮ ಮುಖಾರವಿಂದದೊಳ್ ನಲಿಯಿಸುಸಿಯುಂ (ಅಂಕಪು. ೮-೨೪ ವ) ; ಶ್ರೀಯೆರ್ದೆಗೊಂಡಿರೆ ಮಲ್ನಿಸಿದಾ ಯೆಳೆಯ ನೆಗಳಿ ದಾಡೆಯಿಂ ನಲಿಯಿಸಿದಾ ಮಾಯಾವರಾಹನಖಿಲಶ್ರೀಯುಮ ನೊಲ್ದೀಗೆ ವೀರನರಪತಿಗೀಗಳ್ (ಚಳವಿ. ೪-೧) ; ಈ ವರದ ಕರಮ . . . ನಮುಮಲರ್ದ ಲಜ್ಜೀವನಜಾತದ ಗರ್ಭದ ಭಾವನೆಯಂ ಬಗೆಗೆ ತಂದು ನಲಿಯಿಸುವುಮ್ಮಂ (ಪಕ್ಷಪಂ. ೮). ೨. ಅರಳಿಸು ; ಪ್ರಫುಲ್ಲಗೊಳಿಸು : ನಲಿಯಿಸುಗೆಯ್ದು ಮತ್ಕ್ರೂತಿಕುಮುದ್ವತಿಯಂ ಕಳೆಗುಂದದಾವಗಂ ನಲುಗದ . . . ಕಂದನಾನದೀ ಬಲಮುರಿಸುಕುಮುಯ್ಯುವಾರೆ ಮ್ಯವೆಯವಾಂತ ನವೀನಚಂದ್ರಮಂ (ಚಳವಿ. ೦-೬). ನಲಿಸು : ೧. ಮಿತ್ರಂ ಮದಯತಿ ಗೆಳೆಯನಂ ನಲಿಸಿದಪಂ(ಶಬ್ದಶ. ೧-೫೩). [ ನಲಿ$_1$ + – ಇಸು$_3$ ]

ನಲಿವರಿ (ಕ್ರಿ). ಹಿಗ್ಗಿನಿಂದ ಓಡಾಡು ; ಸಂತೋಷದಿಂದ ಓಡಾಡು ; ನಡೆಗರಿಸು : ಪಲದಿವಸಕ್ಕೊಡಾನುಂ ಕಲಹಂ ದೊರೆಕೊಂಡುದೆಂದು ಕೆಲಬರ್ ಬಿಲ್ಲಂ ಗೋಲೆಗೊತ್ತಿ ತೀವಿ ತೆಗೆದೇಂ ನಲಿವರಿದುದೊ ಜವನ ದೂತರೆನಿಸಿ ಕಿರಾತರ್ (ಹಂಠಾಮಾ. ೯-೫೭) ; ಸಿರಿಸದ ಬಾಸಿಗದೊಳ್ ನಲಿವರಿದಾಡುವ ತುಂಬಿಯಂತೆ ಪಾಣ್ಬನ ಕಣ್ಗಳ್ ಪರಿಮಳಿಯುಡಿದುವು ತನೂದರಿಯ . . . ದೋರ್ವಲ್ಲರಿಯೊಳ್ (ಹಂಠಾಮಾ. ೯-೬೦) ; ನಲಿವರಿದು ನವೀನವೆನಲ್ ಜಲಜಾಕ್ಷನ ಮುಂದೆ ಕಂಡದು (ಕುಮಾರಸೇ. ೬-೩೪) : ಮೆಲ್ಪು(ಳ್ಪು)ವಡೆದಕಿವ್ಯಾಲತೆಯಿಂದೋದಿ ನಲಿವರಿದು ಬಲವರ್ಣಂದಾ ಮಾಜೆಗೆರಡು ತಿಂಗಳ್ (ಅಕ್ಕಶಾ. ೩-೪). 'ನಲವರಿ' ಪರಾ. [ ನಲಿ$_1$ + ಪರಿ$_2$ ]

ನಲಿವಾಜಿಸು (ಕ್ರಿ). ಸಂತೋಷದಿಂದ ಹಾರಾಡುವಂತೆ ಮಾಡು : ಮದನದವಾಗ್ನಿತಪ್ತಯರ ಸುಯ್ಯ ನಮಿಂಪಜವಾಗಿ ಬರ್ಪ ತಣ್ಣಿದಿರನೆಲರ್ಚ ಚಂಚುವಿನೊಳ್. . .ಉತ್ಪಲಾಗ್ರಪತ್ರದ ವೊಗೆದೂಡಿವಾಡಿ ನಲಿವಾಜಿಸಿ ತೋಜಿಸಿ ಸೋಂಕಿ ನೂಂಕಿ ಕೌಮುದಿಯೆಂಗಳದೇಂ ಚಕೋರಿ ಹಿಳ ಗಾಡಿಸಿದತ್ತೊ ನಿಜಾಗ್ರಶಾಬಮಂ (ಅನಂಪು. ೬-೮೦).

[ನಲಿವಾಜು$_1$ + – ಇಸು$_3$]

ನಲಿವಾಜು$_1$ (ಕ್ರಿ). ಹಿಗ್ಗಿನಿಂದ ಮೇಲಕ್ಕೆ ಹಾರು ; ಸಂತೋಷದಿಂದ ಹಾರಾಡು ; ಆನಂದದಿಂದ ಏರು : ಇರ್ಪೋಡಿದ ಚಂಚುವಂ ತಜಿದೆಜಂಕೆ ನೆಜಿಲ್ದಿರೆ ಕಂಠನಾಳಮಂ ನೀಡಿ ವಿಯತ್ತಳಕ್ಕೊಗೆದು ಕಾರ ಮುಗಿಲ್ಗನಿಯಂ ಮನಂ ಕುಳಿರ್ಗೋಡುವಿನಂ ಕರ್ದುಂಕಿ ನಲಿವಾಜಿದುವಾಜಿ ದುವಂದುಚಾತಕಂ (ಹಂಠಾಮಾ. ೬-೧೪೭) : ಇಂತಿದು ಗಗನಕ್ಕೆ ನಾಡೆ ನಲಿವಾಜಿದದೊಂದು ಕಪೋತವಂತುಮಲ್ತಿದು ಪರಿದಿರ್ದ ಪಾವಸೆ ಮುಗಿಲ್ಮುಜಿಯಿಂಬಿನಿಮಿಂಬುಗೆಟ್ಟು ಕಂದಿದ ಪಟಗಂಚುಗನ್ನಡಿವೊಲೇನಿಬಿದಾದುದೊ ಚಂದ್ರಮಂಡಲಂ (ಚಂದ್ರಪ್ರ. ೯-೩) : ಚಕೋರಮಯೂರ ರಥಾಂಗ ಭೃಂಗಮುಂಡಳಿ ನಲಿವಾಜಿದವ್ಪುವು ತರಂತರದಿಂದೆನಿಸಿತ್ತು ಕಣ್ಗೆ (ಪರ್ವಪು. ೩-೨೮). [ ನಲಿ$_1$ + ಪಾಜು$_1$ ]

ನಲಿವಾಜು$_2$ (ನಾ). (ಹಕ್ಕಿಗಳ) ಸಂತೋಷದ ಹಾರಾಟ ; ಸಂಭ್ರಮದ ಹಾರಾಟ. 'ನಲಿವಾಜುವಾಜು' ಪರಾ. [ ನಲಿ$_1$ + ಪಾಜು$_2$ ]

ನಲಿವಾಜುವಾಜು (ಕ್ರಿ). ಸಂತೋಷದಿಂದ ಹಾರಾಡು ; ಉಲ್ಲಾಸದಿಂದ ಹಾರಾಡು: ಒಸಗೆಗಳೆಂದು ಬಿಟ್ಟ ಶುಕಶಾರಿಕೆಗಳ್ ನಲಿವಾಜುವಾಜಿ ರಾಗಿಸಿದವಿ ತಾರಿನಾಮ ಪರಿವಾಜಿಯನೋಳಿಯನೋದೆ ಕೇಲ್ದು (ಶಾಂತಿಪು. ೨-೪೮). [ ನಲಿವಾಜು$_2$ + ಪಾಜು$_1$ ]

ನಲಿವು (ನಾ). ಹಿಗ್ಗು ; ಸಂತೋಷ ; ಆನಂದ : ನಿನ್ನ ಸುಖವೇ ಸುಖಂ ನಿನ್ನ ನಲಿವೇ ನಲಿವು (ಹಂಠಿರ. ೦-೭೧); ವ್ಯಾಗೀಬಾಳಕಜಾಲದೊಳ್ ನಲಿವಿನಿಂ ನೆಗೆದಾಡುತುಂ (ಪುಷ್ಪಪು. ೩-೯೭) ; ಪಲವುದಿನಂ ಮನಂ ಬಯಸಿ ಕಯ್ಯೊಡಿದಂಗನೆಯಂಗಸಂಗದಿಂ ನಲಿವನನಾರತಂ ಪಡೆದು ರಾಜ್ಯಸುಖಂ ಸತತಂ ಸಲುತ್ತಿರಲ್ (ಪಳಕಂ. ೪೬೮) ; ನಲಿವು ಮಿಗೆ ತಾನವರಡಿಗಳಂ ತೊಳೆದು ಮಂದಿಸುವೆಡೆಯೊಳು (ಬಸಪು. ೫೭-೩೩); ನಲಿವು ಹಿಂಗಿದ ತಾಯ ಕಂಗಳ ಜಲವ ಸೆಜಗಿನೊಳೊರಸಿದನು (ಕುವ್ಯಾದ್ರೋ. ಓರಿಅ. ಪರಿ. ೨೭೮) ; ನೋವು, ನಲಿವುಗಳು ಪರಮಾತ್ಮನ ಇಷ್ಟವೆಂದು ತಿಳಿಯುತ್ತದೆ (ಧರ್ಮಶಾ. ೮೬). 'ನಲವು' ಪರಾ. [ ನಲಿ$_1$ + – ವು ]

ನಲಿಸು 'ನಲಿಯಿಸು' ನೋ.

ನಲುಗಂಟೆ (ನಾ). ಜಾನುವಾರಂಗಳ ಮೇಲೆ ಹಾಕುವ ಒಂದು ಬಗೆಯ ಸಣ್ಣ ತೆರಿಗೆ : ಉಗ್ರಾಣ ಪಂಧಾನ ಬೆಡುಂಗೊಳು ಚಳಾಯ ದಾಯದೆಜಿಹಡುವರ ಬೀರವಣ ನಲ್ಲೆತ್ತು ನಲುಗಂಟೆ ನಲ್ಲಾವು ದಣ್ಣಾಯ ತವುಡೆಯೊಳಗಾದ ಸಮಸ್ತ ಕಿಱುಕುಳಂಗಳುವೆಲ್ಲಮ . . . ಧಾರಾಪೂರ್ವಕಂ ಮಾಡಿ (ಎಳ್. V, ಬೇಲೂರು. ೫೯-೮೭ ; 1117). [<ನಲ್ + ಗಂಟೆ$_1$ ]

ನಲುಗಿಡು (ಕ್ರಿ). ಅರಿಸಿನ, ಕುಂಕುಮ ಮುಂತಾದುವುಗಳಿಂದ ಪಾದದ ಮೇಲೆ ಚಿತ್ರವನ್ನು ರೇಖಿಸು : ದಿನಾಂತದಲಿ ನದಿಯ ದಂಡೆಯನ್ನು ನಾವ್ ಸೇರಿ ಬಳಿಮಳಲಮಧ್ಯದಲಿ ನಲುಗಿಟ್ಟುದನ್ನು ತಿಳಿನೀರ ವಾಹಿನಿಯು ಹರಿವುದೊ ನಿಂದಿಹುದೊ ಬಳಿ ಸೇರಿ ಪರಿಕಿಸುವೆವೆಂದು ಹೋದುದನು (ಮಿಸೀಗೀ. ೭೯-೧೨). [←ತಮಿ. ನಲಙ್ಙು ]

**ನಲುಗಿಸು** (ಕ್ರಿ). ೧. ಸುಕ್ಕುಗೊಳಿಸು; ಮುದುರಿಸು; ಮುದುಡಿಸು: ಹೂವನ್ನು ಅಷ್ಟು ಗಟ್ಟಿಯಾಗಿ ಹಿಡಿದು ನಲುಗಿಸಬೇಡ (ಕೂಡಿ). ೨. ಸೊರಗುವಂತೆ ಮಾಡು; ಕೊರಗಿಸು; ಶೋಷಿಸು: ಈ ರೀತಿಯಲ್ಲಿ ಮಱುಗುತಲನುದಿನವು ತತ್ಪಾಂಡುನೃಪನಂದನರು ದುಃಖದಿ ರಾಜಭೋಗಂಗಳನು ನೆಱೆ ಬಿಟ್ಟು ತನುವ ನಲ[ಲು]ಗಿಸಿಕೊಂಬರು (ಶಿವ್ಯ್ಕೃ. ೩-೧೪); ಒಕ್ಕಲನು ನಲುಗಿಸದೆ ಲೆಕ್ಕವನು ಸಿಕ್ಕಿಸದೆ ಕಕ್ಕುಲತೆಯಿಂದ ನಡೆಯಿಸುವ ಅರಸು ತಾ ಚಕ್ಕಂದವಿರುವ (ಸರ್ವಜ್ಞ. ೭೩೭); ಹೊಟ್ಟೆಗೆ ಹಾಕದೆ ನಲುಗಿಸಿದ್ದಾಳೆ ಅಂತಾ ಸಾರಿಕೊಂಡು ಬಂದಾರು! (ನೀಚನ. ೪೮).

[ನಲುಗು$_1$ +–ಇಸು$_3$]

**ನಲುಗು$_1$** (ಕ್ರಿ). ೧. ಸುಕ್ಕುಸುಕ್ಕಾಗು; ಮುದುರು: ಬಟ್ಟೆಯ ಮಡಿ ನಲುಗದಂತೆ ತೆಗೆದುಕೊಂಡು ಬಾ (ಕೂಡಿ). ೨. ಅಲ್ಲಾಡು; ಅಲುಗು; ಸ್ಪಂದಿಸು: ಆವೇಶ ಅಂಗಾಂಗ ತುಂಬಿ ನರನರ ನಲುಗಿ ಅಲುಗಿ ಗೊಂಡಣ ತಾಂಡವರಾಸ್ಯ ನೃತ್ಯದಲ್ಲೀ (ಸೂರ್ಯಪಾ. ೪-೧); ಬೇಗ ಬೇಗ ಹೆಜ್ಜೆಹಾಕಿದಾಗ ಎದೆ ನಲುಗಿ ನಲುಗಿ ಕುಬುಸದ ಮಧ್ಯೆಯ ಗುಬ್ಬಿ ಕಳಚಿಹೋಗಿದ್ದಕ್ಕೆ ... 'ಪಿನ್ನ'ನ್ನು ಹಾಕಿ 'ಫಿಟ್' ಮಾಡಿದಳು (ಹೊಸಕ್ಷ. ೪೭). ೩. ಒಯ್ಯಾರ ಮಾಡು; ಬಳುಕು: ಕುಟ್ಟುವ ನೆವದಿಂದ ರಟ್ಟೆಯನು ಕಿರುಹುವಳು ನಿಟ್ಟಿಸಿ ನಲುಗಿ ಹಾಡುವಳು ಹಾದರದ ಮೊಟ್ಟೆ ಕಾಣಯ್ಯ (ಸರ್ವಜ್ಞ. ೦೮೪೧); ರತ್ನಾ ಮತ್ತ ನಾಚುತ್ತ ನಲುಗುತ್ತ ಎರಡು ಎಡಾ ತಂದಿಟ್ಟು ಹೋದಳು (ಗಂಡುಖಾಯಿ. ೬೭). ೪. ಕಷ್ಟಕ್ಕೆ ಗುರಿಯಾಗು; ಬಾಡು; ಕುಂದು: ಕಾಕಸಂಘಾತದೊಳ್ ಸಿಕ್ಕಿರ್ದ ಕೋಗಿಲೆಯ ಮಱಿಯಂತೆ ನಲುಗಿ ಕತ್ತಲೆಯೊಳಿರ್ದ ಶೀತಳಮರೀಚಿಲಾಂಛನದಂತೆ ... ಬಾಲಕನಿರ್ದನವರೆಡೆಯೊಳಂಜುತಳುತ (ಜೈಮಿಭಾ. ೨೮-೩೦); ಕಳೆಗುಂದದಾವಗಂ ನಲುಗದ ವಾಮದೇವನುರಿಗಣ್ಣೆಡೆವಾವುಗಳಿಂ ... ಕಂದನಾನದೀ ಬಲಮುರಿಸಂಕುಮೆಯ್ಯುಮರೆ ಮೈಮೆಯನಾಂತ ನವೀನಚಂದ್ರಮಂ (ಚಿಕವಿ. ೦-೬); ಒಣಿದ ಕೊಳಲ ಪಾಡ ನೋಡು ಇನ್ನೆಲ್ಲಿದೆ ಸುಗ್ಗಿ ಎಂದು ... ಮುಗ್ಗಿ ಮುರುಟಿ ನಲುಗಿತು (ನಡಬಂ. ೩೭-೮); ಕಾಯಿ, ತಾಯಿ ... ನಲುಗಿ, ನಿನ್ನ ನೆರಳ ಸೇರಿ ನಲಿವ ಹೆಣ್ಣಾನು (ಹೂಂಗಳು. ೦೨-೩). ೫. ಸೊರಗು; ಕೊರಗು; ಕೃಶವಾಗು: ನಲುಗಿದಿರಿ ಹಿರಿದಾಗಿ ಜಡೆ ವಲ್ಕಲ ಫಲಾಶನದಿಂದ ... ತನ್ನಿಂದಾದುದೀಯಾಪತ್ತು ನಿಮಗೆ (ಕುರಶಾ. ೬-೩೩-೬); ನಿರ್ಬಂಧಕಿಕ್ಕಲುರೆ ಕಿರಿದುಂಡು ನಲುಗಿದು (ಶರಕು. ೧೪-೨೩); ಒಲಿದವರು ಬೇರಾಗಿ ... ಕೆಲಕಾಲ ನೂಕುವರು. ನಲುಗದೆಯೆ ಕಾಣುವರು (ಇಂಗೀತ. ೩೦-೧೭); ಬಡತನದ ಬವಣೆಯಿಂದ ನಲುಗಿದ್ದ ಬಳಗದ ಗೆಳೆಯರಾರೂ ಹಣ ಕೊಡುವ ಸ್ಥಿತಿಯಲ್ಲಿರಲಿಲ್ಲ (ಜೀವನ. ೨ ಅರಿಳ). ೬. ಬಾಗು; ನಮಸ್ಕರಿಸು: ನಾನೇನಾಡಿದೆ ನಾ ನಿನ್ನ ಪಾಡಿದೆ ನಾ ನಿನ್ನ ನೋಡಿ ನಲುಗಿದೆ ಭೈರೂವಾಸ್ವಾಮಿಾ ದೊಡ್ಡವನೆಂದು ಮಾರೀ ಬಿದ್ದ (ಹುಟ್ಟಿಹ. ೦೦೦).

[ದೇ.॥ ತಮಿ. ನಲುಙ್ಕು, ನಲಕ್ಕು =ಮುದುಡಿಸು; ತುಳು. ನಲಗು; ತೆಲು. ನಲುಗು, ನಲಗು, ನಲಿಯು, ]

**ನಲುಗು$_2$** (ನಾ). ಹಾಡುವಾಗ ಧ್ವನಿಯನ್ನು ನಡುಗಿಸುವುದು; ಕಂಪನ; ಪಲುಕು: ಚಿಕ್ಕಪುಟ್ಟ ಕಲಹಗಳು ಬಾಳಿನ ಏಕತಾನಕ್ಕೆ ನಡುನಡುವೆ ನಲುಗಾಗಿ ಬಂದು ಸೊಗಸನ್ನು ಹೆಚ್ಚಿಸುತ್ತಿದ್ದವು (ಗಂಡುಖಾಯಿ. ೬).

[<ನಲುಗು$_1$]

**ನಲುಮೆ** 'ನಲ್ಮೆ' ನೋ.

**ನಲುಮೆಕೂಟ** (ನಾ). ಪ್ರೀತಿಯ ಮೇಳ; ಸ್ನೇಹದ ಗೋಷ್ಠಿ: ಮಧುರ ಹೆಣ್ಣ ಬೇಟವುಳಿದು ಮರಳಿ ಬರುವೆಯಾ ನಲುಮೆಕೂಟ ಕುಣಿತಗಳಲಿ ನವ್ಮ ನಲಿವೆಯಾ (ಗೋಕುನಿ. ೩೪-೨).

[ನಲುಮೆ (<ನಲ್ಮೆ) + ಕೂಟ$_1$]

**ನಲುಮೆಯೋಲೆ** (ನಾ). ಪ್ರೇಮಪತ್ರ: ನೀಳವಾದ ನಲುಮೆಯೋಲೆಗಳನ್ನು ಅವನು ಸುಶೀಲಾನಿಗೆ ಬರೆಯುತ್ತಿದ್ದ (ಸಮಚೀ. ೬೬೪).

[ನಲುಮೆ (<ನಲ್ಮೆ) + ಓಲೆ]

**ನಲುವು** (ನಾ). ಬಲಹೀನತೆ; ಅಶಕ್ತತೆ: (೩).

[<ನಲುಗು$_1$./ತಮಿ. ನಲಿವು=ತೊಂದರೆ, ನಾಶ]

**ನಲ್ಕಳೆ** (ನಾ). ಒಳ್ಳೆಯ ಶೋಭೆ,–ಚೆಲುವು,–ಸೊಗಸು: ಕವಿ ಗಂಗಾ ಶೀತನ ಸ್ವರಕ್ಕೆ ಏರಿದಾಗ ಮಾತ್ರ ಆತನ ಕೃತಿ ನಲ್ಕಳೆಯಿಂದ ಮೆರೆಯುತ್ತದೆ (ಕಾವ್ಯಕು. ೨೦). [ನಲ್ + ಕಳೆ (=ಕಲೆ$_2$)]

**ನಲ್ಕುಂಚ** (ನಾ). ಸುಂದರವಾದ ಚವರ,–ಚಾಮರ: ನೆಗಳ ಸೊಂಡಿಲ ಚಿನ್ನದಣಸಿನ ಪಲ್ಲಕ್ಕಿ ಸೊಗಯಿಪ ರತ್ನವಿಮಾನ ವಿಂಗೆ ನಲ್ಕುಂಚ ಕಾಳಾಂಜಿ ಮುಂತಾದ ವಸ್ತುಗಳನಿತ್ತನು ಕೃಷ್ಣ ಮಗಗೆ (ಮೋಹತ. ೦೫-೩೦).

[ನಲ್ + ಕುಂಚ]

**ನಲ್ಕೆ** (ನಾ). ನಲ್ಮೆ; ಅನುರಾಗ: ಮನ ಮೆಚ್ಚಿ ನಚ್ಚಿನ ನಲ್ಕೆಯಲಿ ಮನದನ್ನಳೆನಿಸಿದಳು (ಸಾಳ್ವಭಾ. ೦೪-೩೬). [ನಲ್ +–ಕೆ]

**ನಲ್ಗಂಪು** (ನಾ). ಸುವಾಸನೆ; ನರುಗಂಪು: ಧೂಪವುಂ ನಲ್ಗಂಪುಣ್ಮುತಿರಲಾಗಳರ್ಪಿಸಿದನಾ ಗಂಗಾಧರಂಗಟ್ಟುಜುಂ (ಉದ್ಭಟ. ೦೦-೬೪); ಚಂದನಂಗಳ ಧೂಪಧೂಮದಾಮೋದಮುಂ ಮೂಗಿಂಗೆ ನಲ್ಗಂಪನೀಯದಿಹುದಿತ್ತಣ್ಣ (ಶ್ರೀರಾಮಾ. ೦೦೫-೦೫೭). [ನಲ್ + ಕಂಪು]

**ನಲ್ಗಂಪುವೀಱು** (ಕ್ರಿ). ಸುವಾಸನೆಯನ್ನು ಬೀರು; ನರುಗಂಪು ಸೂಸು: ನಲ್ಗಂಪುವೀಱೆ ಮೋಹಿಸುವ ಚೆಂಗಣಗಿಲೆಯರಲ್ಗೊಳಂ ... ತಣ್ಗೊಳಂ ಮೆಱೆದುವು (ಪದ್ಮರಾ. ೮-೩೪). [ನಲ್ಗಂಪು + ಬೀಱು]

**ನಲ್ಗಡಲು** (ನಾ). ಸಿಹಿಯಾದ ಕಡಲು; ಇಂಗಡಲು: ಈ ಹಿಗ್ಗು ನನ್ನೆದೆಯ ನಲ್ಗಡಲನ್ನು ತುಂಬಿ ತುಳುಕುತ್ತಿದೆ (ಫಲಸಂ. ೪೮).

[ನಲ್ + ಕಡಲು (<ಕಡಲ್$_2$)]

**ನಲ್ಗತೆ** (ನಾ). ಒಳ್ಳೆಯ ಕಥೆ; ಸ್ವಾರಸ್ಯವಾದ ಕಥೆ: ಏನಾನುಮೊಂದು ನಲ್ಗತೆಯಂ ಪೇೞ ? (ರಾಮಾಶ್ವ. ೪-೦೭). ಮೇಣಾವ ನಲ್ಗತೆಯುಂ ಪೇೞ್ವನೋ (ರಾಮಾಶ್ವ. ೩-೧). [ನಲ್ + ಕತೆ]

**ನಲ್ಗಬ್ಬಿಗ** (ನಾ). ಒಳ್ಳೆಯ ಕವಿ; ಸತ್ಕವಿ: ಅನಿಬರ್ನಲ್ಗಬ್ಬಿಗರೊಳಮನಿತರ ಸಾಧಾರಣಾಭಿಮಾನಂ ... ಬಳೆಯಿಕುಂ (ಅಪ್ರತಿ. ೩-೩).

[ನಲ್ + ಕಬ್ಬಿಗ]

**ನಲ್ಗಳಲ್** (ನಾ). ರುಚಿಕರವಾದ ಮಜ್ಜಿಗೆ: ಎಳನೀರ್ಗಳ ಕನಿಗರ್ಬಿನ ತಿಳಿರಸದ ರಸಾಲಪಕ್ವ ಫಳಸಾರದ ನಲ್ಗಳಲ ಬಹುವಿಧದ ಪಾನಂಗಳನಲ್ಲಲ್ಲೆ ಬೀವರಾ ಪ್ರಪಾಪಾಲಿಕೆಯರ್ (ವೃಷವಿ. ೪-೩೦).

[ನಲ್ + ಕಳಲ್$_0$ (<ಕಟಲ್$_3$)]

**ನಲ್ಗಳವು** (ನಾ). ಲಾಭ ತರುವ ಕಳ್ಳತನ; ಹೆಚ್ಚು ಧನ ಸಿಗುವ ಚೌರ್ಯ: ತಾನುಂ ತತ್ಸಖನುಂ ಭೃತ್ಯಾನೀಕಂಬೆರಸು ಪೋಗಿ ನಲ್ಗಳವಿಂದಂ ತಾನಧಿಕ ಲಾಭಮಾದೊಡನೂನಗುಣರ್ ಮಗುಟ್ದು ಲಾಭದಿಂದಂ ಬರುತುಂ (ಧರ್ಮಾಮೃ. ೨-೦೯೦). [ನಲ್ + ಕಳವು]

**ನಲ್ಗಾಡಿ** (ನಾ). ಮನಸೆಳೆವ ಚೆಲುವು; ಮೋಹಕವಾದ ಸೌಂದರ್ಯ: ತಾಟಂಕಂಗಳ್ಕಪೋಲಸ್ಥಲಮನಲೆಯೆ ಮಧ್ಯಂ ಕರಂ ಬಳ್ಕೆ ತೋಳ್ಪೊಲ್ಪೋಟಂ ನಲ್ಗಾಡಿಯಿಂ ಪುಟ್ಟಿಸೆ ... ಕಾಂತಾಮಣಿಯುಗುರಿಸಿದರ್ ತ್ತೈಲಮಂ ಬಾಲೆಗಾಗಳ್ (ಉದ್ಭಟ. ೮-೧೫). [ನಲ್ + ಗಾಡಿ$_1$]

**ನಲ್ಗಾದೆ** (ನಾ). ಉತ್ತಮವಾದ ನಾಣ್ಣುಡಿ,–ಜಾಣ್ಣುಡಿ. 'ನಲ್ಗಾದೆಗಾಱ' ಪರಾ. [ನಲ್ + ಗಾದೆ]

**ನಲ್ಗಾದೆಗಾಱ** (ನಾ). ಉತ್ತಮವಾದ ನಾಣ್ಣುಡಿಗಳನ್ನು ಬಲ್ಲವನು,–ಕಟ್ಟಬಲ್ಲವನು: (ಚತುನಿ. ೬. I, ೪೪). [ನಲ್ಗಾದೆ + –ಕಾಱ]

**ನಲ್ಗಾಪು** (ನಾ). ಉತ್ತಮವಾದ ರಕ್ಷಣೆ ; ಭದ್ರವಾದ ಕಾವಲು: ಅಗುಟಿ ಮದಿಲ್ ಬಾಗಿಲ್ ಬಿಯ್ಯಗವೆಂಬಿವಱಿಂದೆ ಕಾವ ಕಾಪೇವುದೊ ಪೆಣ್ ಮಿಗೆ ಪಾತಿವ್ರತ್ಯದೆ ನೆಟ್ಟಗೆ ತನ್ನಂ ಕಾವ ಕಾಪೆ ನಲ್ಗಾಪಕ್ಕುಂ (ನೀತಿಮಂ. II, ೨೭). [ ನಲ್ + ಕಾಪು ]

**ನಲ್ಗಿರಿ** (ನಾ). ಶ್ರೇಷ್ಠವಾದ ಪರ್ವತ ; ಪವಿತ್ರವಾದ ಗಿರಿ : ವಿಪುಲ ಶ್ರೀಕಟವಪ್ರ ನಲ್ಗಿರಿಯ ಮೇಲ್ಗೊನ್ನೊಂದು ಸನ್ಮಾರ್ಗ್ಗದಿನ್ ಉವ ಮಾಲ್ಪಾ ಸುರಲೋಕಸೌಖ್ಯದೆಡೆಯಾನ್ಪಾವೆಯ್ದಿ ಇಟ್ಪಾರ್ಳ್ ಮನವರ್ (ಎಕ. II, ೯೮-೩ ; ಶು. 700). [ ನಲ್ + ಗಿರಿ₁ ]

**ನಲ್ಗುಟುಕು** (ನಾ). ಸವಿಯಾದ ಗುಟುಕು ; ರುಚಿಯಾದ ತುತ್ತು : ಸುಂದರಿ ಬಾರ ಸಾರಸಕಳಾಯತಲೋಚನೆ ನೋಡದಿರ್ಪುದೇ ನಿಂದೆಲೆ ರಾಜಪಕ್ಷಿ ಪೊಸಪಣ್ಗಳ ನಲ್ಗುಟು[ಪಾಠಾಂ. ಟ]ಕೆಕ್ಕು . . . ಎಂದು ಸಾರಿಕಾಬ್ಯಂದಮರಾತಿಮುಂದಿರದೊಳೆಬುದು ಬಂದ ಪುಳಿಂದಿಯರ್ಕಳಂ (ರಾಜಶೇ. ೫-೧೨). [ ನಲ್ + ಕುಟುಕು₂ ]

**ನಲ್ಗುಣ** (ನಾ). ಒಳ್ಳೆಯ ಗುಣ ; ಸದ್ಗುಣ : ಕೃತಿಪತಿಯ ನಲ್ಗುಣಂಗಳ್ ಕೃತಿವೇಟ್ಟನ ಮನಮನಲೆದು ನಲಿಯಿಸೆ ಪೇಟ್ದಾ ಕೃತಿಯ ಕೃತಿ (ಚಳಪಿ. ೧-೫೧). [ ನಲ್ + ಗುಣ ]

**ನಲ್ಗುದುರೆ** (ನಾ). ಒಳ್ಳೆಯ (ಲಕ್ಷಣಗಳಿಂದ ಕೂಡಿದ) ಕುದುರೆ; ಶ್ರೇಷ್ಠವಾದ ಅಶ್ವ : ಅಧ್ವರದ ನಲ್ಗುದುರೆ ಬಂದು ವಾಲ್ಮೀಕಿಯ ನಿಜಾಶ್ರಮದ ವಿನಿಯೋಗದುಪವನದೊಳು . . . ಪೊಕ್ಕೊಡೆ (ಕೃಮಿಧಾ. ೨೦-೫). [ ನಲ್ + ಕುದುರೆ ]

**ನಲ್ಗುನಿಗುಂಜಿ** (ನಾ). ಒಳ್ಳೆಯ ಗುಲಗಂಜಿ : ನಲ್ಗುನಿಗುಂಜಿಯೊರ್ಚರ ಮನೊಯ್ಯನೆ ನೇವಡಿಸುತ್ತುಮೆತ್ತಲುಂ ಪಲ್ಗಳ ಕಾಂತಿಯಂ ಪರಪುತುಂ ನಗುತ್ತ್ಂ ನಡೆದರ್ ಪುಳಿಂದಿಯರ್ (ಉತ್ಕಲ. ೨-೭೦).

[ ನಲ್ + ಗುನಿಗುಂಜಿ ( < ಗುರುಗುಂಜಿ) ]

**ನಲ್ಗೆಯ್** (ಕ್ರಿ). ಶುದ್ಧಗೊಳಿಸು ; ಶುಭ್ರಗೊಳಿಸು : ಪಾಲ್ಗಡಲ ಚೆಲ್ವ ಬಂಬಲ್ವೆರೆಯನೀಲ್ಗೊಂಡು ನಲ್ಗೆಯ್ದ ತನರಾಜಿಡೊಡವೆರಸಿದಿನಿದದೇಂ ಸಾಲ್ಗೆ ಜ್ಯೋನ್ಸ್ನೆ ಕಂದಲ್ ಸೊಗಸು ಸಾಟಿಯೋ (ಶಾಪಿಸಿಂ. ೬-೮) ; "ಒಳ್ಳೆಯದನ್ನು ಮಾಡು. ಉತ್ತಮವಾಗಿ ತಯಾರಿಸು, ಹಿತವನ್ನು ಮಾಡು" (ಶ್ರಬಂ₁). [ ನಲ್ + ಕೆಯ್₁ ]

**ನಲ್ಗೆಳದಿ** (ನಾ). ಪ್ರೀತಿಯ ಗೆಳತಿ ; ಪ್ರಿಯಸಖಿ : ಹಾ ನಲ್ಗೆಳದಿ . . . ವಾಗುಟೆ ನಿನ್ನನಾವೆಡೆಯೊಳ್ ಕಾಣ್ಬೆಂ (ಮಿತ್ರಗೋ. ೫೦) : ತಾನುಂ ನಲ್ಗೆಳದಿ ಚಂದ್ರವತಿಯುಂ ಸಲ್ಲಾಪಮಗೊಳುತಿರೆಯರೆ (ರಾಮಾಶ್ವ. ೧೭-೫೦).

[ ನಲ್ + ಕೆಳದಿ ]

**ನಲ್ಗೆಳೆಯ** (ನಾ). ಪ್ರೀತಿಯ ಗೆಳೆಯ ; ಪ್ರಿಯಸಖ : ಸಿರಿಯಾಳ್ವನ ಸೂನುವಿಂಗೆ ನಲ್ಗೆಳೆಯನೊ ಸೌಂದರಾಧಿಪನ ದೂತನೊ (ಪ್ರಭುಲಿ. ೩೨-೩೩).

[ ನಲ್ + ಕೆಳೆಯ ]

**ನಲ್ಗೆಱೆ** (ನಾ). (ಕೈಗಳಲ್ಲಿರುವ) ಒಳ್ಳೆಯ ಲಕ್ಷಣವನ್ನು ಸೂಚಿಸುವ ರೇಖೆ ; ಶುಭರೇಖೆ : ನೀಲ್ದಿಸವೆಳಗ್ಗೆ ಕಾಲ್ಗಳ್ ತಾಳ್ದಿರ್ಪುವು ಕೆಂದಳಂಗಳೊಳ್ ನಲ್ಗೆಱೆಯಂ (ಚಳಪಿ. ೪-೭೨). [ ನಲ್ + ಗೆಱೆ ]

**ನಲ್ಗೊಣಸು** (ನಾ). ಮುದ್ದಾದ ಮರಿಹುಲ್ಲೆ, - ಜಿಂಕೆಯ ಮರಿ : ನಸು ಮುಗುಳ್ದ ಕಣ್ ಪಡೆವಾಯ ದೂರ್ವೆ . . . ನೆಱೆಯೊಪ್ಪ ನಲ್ಗೊಣಸು ಪಟ್ಟಿಸದಿರ್ದದನೊಂದು ತಾಣದೊಳ್ (ಶಬಶಂ. ೨-೪೦).

[ ನಲ್ + ಕೊಣಸು₁ ]

**ನಲ್ಜವ್ವನೆ** (ನಾ). ಚೆಲುವೆಯಾದ ಯುವತಿ ; ಸುಂದರ ತರುಣಿ : ಬಂದರಂದು ಬಲೆಸ್ವೀಕವಡೆದು . . . ನಲ್ಜವ್ವನೆಯರ ಮಾನ್ಗಣ್ಣ ಬೆಳ್ವರ್ಣ್ಣ ಮೂವಣ್ಣಗೊಳಸಲ್ಪತಿಗಳ (ಉದ್ಭರೇ. ೫-೨೬). [ ನಲ್ + ಜವ್ವನೆ ]

**ನಲ್ಜೋಡು** (ನಾ). ಒಳ್ಳೆಯ ಜೊತೆ : ಇದು ಕಣಾ ಧರ್ಮಾರ್ಜನ ಸತಾಭ್ಯುದಯಕೋಸುಗಪೂರ್ವಶಿಯ ಶಾಪದಲಿ ಬಂದುದು ಹೊತ್ತು ನೂಕಿದೆ ನೊಂದುವತ್ಸರವ ಇದಕೆ ನಲ್ಜೋಡಾಯ್ತು ನಿರ್ವಿಘ್ನದಲಿ ದಾಂಟಿದೆವವಧಿಯಾನು (ಕುಮ್ವಾವಿ. ೭೦ಠ. ೭-೩೩). [ ನಲ್ + ಜೋಡು ]

**ನಲ್ತದ** (ನಾ). (?) : ನವಿಲೂರಾ ಸಿರಿಸಂಘದಾಚಿಗಣದಾ ರಾಜ್ಞೀಮತೀ ಗನ್ತಿಯಾರ್ ಅವಲಂ ನಲ್ತದ ಶೀಲದಿಂ ಗುಣದಿನಾವಿಕ್ಕೋತ್ತಮ ಮಿರ್ಕ್ಕೆಡೊರ್ ಸವುಗಿನ್ನೊಟ್ಟಿದುಯೆನ್ದು ಏಱಿ ಗಿರಿಯಾನ್ಸನ್ಯಾಸನಂ ಯೋಗದೊಳ್ (ಎಕ. II, ೯೭-೨ ; ಶು. 700).

[ P ಇದು 'ನಲ್ತಪ' ಎಂಬುದರ ಅಪಲಿಖಿತ ]

**ನಲ್ತಪ** (ನಾ). ಉತ್ತಮವಾದ ತಪ ; ಶ್ರೇಷ್ಠವಾದ ತಪಸ್ಸು : ನೆಱೆದಾದ ವ್ರತಶೀಲ ನೋನ್ಪಿ ಗುಣದಿಂ ಸ್ವಾಧ್ಯಾಯಸಮ್ಪತ್ತಿನಿಮ್ ಕಱಿ ಇಲ್ಲಲ್ತಪ ಧರ್ಮ್ಮದಾ ಸಸಿಮತಿ ಶ್ರೀಗನ್ತಿಯಾರ್ (ಎಕ. II, ೬೬-೨ ; ಶು. 700). [ ನಲ್ + ತಪ₂ ]

**ನಲ್ತೆತ್ತು** (ನಾ). ಒಂದು ಬಗೆಯ ಸಣ್ಣ ತೆರಿಗೆ : ಉಗ್ರಾಣ ಪರಿಧಾನ ಬೆಡುಂಗೋಲು ಚಳಾಯ ದಾಯದೆಱೆ ಹಡುವರ ಬೀರವಣ ನಲ್ತೆತ್ತು ನಲುಗಂಟ ನಲ್ಲಾವು ದಣ್ಣಾಯ ತಪ್ಪುತೆಯೊಳಗಾದ ಸಮಸ್ತ ಕಿಱುಕುಳ ವೆಲ್ಲವಂ . . . ಧಾರಾಪೂರ್ವ್ವಕಂ ಮಾಡಿ (ಎಕ. V, ಬೇಲೂರು. ೫೯-೮೭ ; 1117). [ P ಇದು 'ನಲ್ಲೆತ್ತು' ಎಂಬುದರ ಅಪಲಿಖಿತವಿರಬಹುದೆ ? ]

**ನಲ್ದಂಬುಲ** (ನಾ). ಸವಿಯಾದ ವೀಳೆಯ ; ರುಚಿಯಾದ ತಾಂಬೂಲ ; ನರುದಂಬುಲ : ಪೆರ್ಚುಗೊಯ್ಯಗೆ ನಲ್ದಂಬುಲಮಿಾವಳೊತ್ತಿ ಸೊಗಸುಣ್ಬಲ್ಟಿಂಬಿವಳ್ . . . ಕಾತರು ಮಿಗೆ ತಾಂ ಕೂಡುವಳೆಂದು ಸೌಂದರಿ ಲಸತ್ಸಂಭಾವದಿಂ ಕಾಂತನಂ (ಉದ್ಭಟ. ೮-೧೨೩). [ ನಲ್ + ತಂಬುಲ ]

**ನಲ್ದಾಣ** (ನಾ). ಒಳ್ಳೆಯ ನೆಲೆ, - ಆಶ್ರಯಂ : ಮುಂದಣವಧಿಯ ವನದ ವಾಸಮಂ ಕಳೆಯೆ ನೆಮ್ಮದಿಯ ನಲ್ದಾಣವೊಂದು ಕೃಪೆಯಿಂ ಬೆಸಸಿಂ (ಶ್ರೀರಾಮಾ ೧೯೨-೪೪೭). [ ನಲ್ + ತಾಣ ]

**ನಲ್ದಾಯಿ** (ನಾ). ಅಕ್ಕರೆಯ ತಾಯಿ ; ಪ್ರೀತಿಯ ಜನನಿ : ಶ್ರೀಯ ವಾಗ್ದೇವಿಯ ಸೌಭಾಗ್ಯದಾಯಿಯೆ . . . ಅಕ್ಕರೆಯ ನಲ್ದಾಯಿಯ ಕೃತಿಗೆ ಉನ್ನತಿಯನು ಈಯೆ (ಅಂಜಾಶ. ೩-೧).

[ ನಲ್ + ತಾಯಿ ( <ತಾಯ್) ]

**ನಲ್ದೊಟ್ಟಲು** (ನಾ). ಅಂದವಾದ ತೊಟ್ಟಿಲು : ತಾಯ್ವಸಿರ್ ನೀನಾದ ಪುಟ್ಟುವಾಗಳ್ ಮತ್ತೆ ನಲ್ದೊಟ್ಟಲಾದೆ. ಜೋಗುಳವಾದೆಯೆಳೆಯಂಗೆ (ಶ್ರೀರಾಮಾ. ೩೦೬-೪೧೦). [ ನಲ್ + ತೊಟ್ಟಲು₁ ( <ತೊಟ್ಟಿಲ್₁) ]

**ನಲ್ದೊಡವು** (ನಾ). ಅಂದವಾದ ಆಭರಣ : ಮುಡಿಯಿಂದಡಿವರೆಗಂ ನಲ್ದೊಡವುಗಳಂ ತುಡಿಸಲೆಂದು ದಾದಿ . . . ಸುಡಿದಲಂತಚ್ಯುತನಂ (ನೇಕಗಿಶೀ. ೭-೧೭). [ನಲ್ + ತೊಡವು ]

**ನಲ್ನಯ** (ನಾ). ಒಳ್ಳೆಯ ರೀತಿ ; ಸರಿಯಾದ ಕ್ರಮ : ಕರಂ ರಸಿಕರಿನೆಯ್ದೆ ತಿರ್ದಿಸದೊಡಲ್ಲದೆ ನಲ್ಲದು ಚಿತ್ರಮಂತೆ ತಿರ್ದಿಸುವುದೆ ನಲ್ನಯಂ (ಅಗಪ. ೧-೧೫). [ ನಲ್ + ನಯ₂ ]

**ನಲ್ನಿಶೆ** (ನಾ). ಸರಿರಾತ್ರಿ ; ಮಧ್ಯರಾತ್ರಿ : ನಲ್ನಿಶೆಯೊಳ್, ಆಱು ತಿರೆ ಸಂಜೆಯುಂ, ಇರ್ಬಾಯ, ಖಡ್ಗಮನ್ ತುಡುಕಿ ಗುಹೆಯಿಲ್ಲನೆತ್ತಲೋ ತೆರಳ್ವನನ್ ನಾನ್ ತಡೆದು (ಅಕ್ಕತಾ. ೧೨-೨೪೯). [ ನಲ್ + ನಿಶೆ₁ ]

**ನಲ್ನುಡಿ₁** (ಕ್ರಿ). ಹಿತವಾದುದನ್ನು ಹೇಳು ; ಹಿತವನ್ನು ನುಡಿ : ಆಗಳಾನ್ ನೆಲ ಮುಗಿಲ ಮಕ್ಕಳಾ ದೈತ್ಯರನ್ ನಲ್ನುಡಿದು ನಡವಲ್ಕೆ ನೆಗಟ್ಟಿನ್ (ಬದ್ದಕ್ಷ. ೧೫-೨೩೭). [ ನಲ್ + ನುಡಿ₁ ]

**ನಲ್ನುಡಿ₂** (ನಾ). ೧. ಹಿತವಾದ ಮಾತು ; ಸವಿನುಡಿ : ಸುಧರ್ಮ ಭೂಮಿಪನಂ ನಲ್ನುಡಿಯಿಂ ಬೀಳ್ಕೊಂಡು (ಉದ್ಭಟ. ೭-೭೦) ; ಅವನ

ನಲ್ನುಡಿ ತಾನುಪದೇಶಮಾಗೆ (ರಾಜಶೇ. ೧೪-೫೯) : ಕಾಲವಶದಿಂ ಪಲತೆಱನಾದ ದುಃಖಂಗಳ್ಗೆ ಭಾಜನರಾಗಿರ್ಪ ಸೋದರರ್ಗೆ ನಲ್ನುಡಿಗಳಂ ನುಡಿದು (ಭಾರಕಾಂ. ೧೪) ; ನಲ್ನುಡಿ. ಅದುತಿರ್ಕೆ ಉಡಿದೆಯ್ದ–ವೇೞೆನಗೆ ಪಾಂಡವರ ದಬದ ಬಿಸುನೆತ್ತರಿನ್ ಖಡ್ಗಮನ್? (ಅಶ್ವತ್ಥಾ. ೫-೯೦) ; ಒಂದುದಿನ ವಾದರೂ ಪ್ರೀತಿಯಿಂದ ನಲ್ನುಡಿಗಳನ್ನಾಡಿದವನು ನಾನಲ್ಲ (ಕುರುಕ್ಷೇ. ೧೦೩). ೨. ಅಂದವಾದ ಮಾತು ; ಚೆಲುವಾದ ನುಡಿ : ಎಡೆಯೆಡೆಯೊಳ್ ಸಕ್ಕದದ ನಲ್ನುಡಿ ಮೆಱೆಯೆ ತಿರುಳ್ಗನ್ನಡದೊಳೆ ಕತೆಯನುಸಿರ್ವೆಂ (ರಾಮಾಶ್ವ. ೬-೧೭) ; ನಲ್ನುಡಿಗಳನ್ನು ಛಂದಸ್ಸಿನ ನೂಲಿನಲ್ಲಿ ಸುರಿದು ಮಾಲೆಗೊಳಿಸಬಲ್ಲವನೇ . . . 'ಜಾಣ'ನು (ನಾಡೋಜ. ೩೪೭) ; ಕನ್ನಡದ ನಲ್ನುಡಿಗಳು ಮೂಲೆಪಾಲಾಗುತ್ತಿರುವ ಈ ದಿನಗಳಲ್ಲಿ . . . ಕನ್ನಡಿಗರ ತಿಳಿನುಡಿಯಾಗಿ ಬೆಳೆಯಿಸಲು ಈ ಕೃತಿಯು ಸಹಾಯಕ (ಕಾಡೂರ. ೦೦ ಮುನ್ನುಡಿ). [ ನಲ್ + ನುಡಿ₂ ]

**ನಲ್ನೆಟಲ್** (ನಾ). ೧. ಹಿತವಾದ ನೆರಳು ; ತಂಪಾದ ಛಾಯೆ. ೨. (ಅಲಂ) ಪ್ರೀತಿಯ ಆಶ್ರಯ. ೧, ೨ : ಎಸೆವೈ ಕಲ್ಪಮಹೀಜದಂತೆ . . . ಬಣ್ಣಿಸೆ ಪುಷ್ಪಸ್ತಬಕಂಗಳಂ ನಱುರುಚಿವ್ರಾತಂ ನತರ್ಗೊಲ್ದು ಸರ್ವಸಮಂ ನಲ್ನೆಟಲಿತ್ತು ಕಾವ (ವರ್ಧ.ಪು. ೮೫). [ ನಲ್ + ನೆಟಲ್₁ ]

**ನಲ್ನೋಟ** (ನಾ). ಪ್ರೀತಿಯ ನೋಟ : ಕೋಟ ಮೂಱಿನಿಪ್ಪ ಲೆಕ್ಕದರ್ಥ ದಾಣ್ಮನಾಗಿ ನಲ್ನೋಟಕೊಳ್ಳವಿದ ಯೌವನಾತಿರೇಕ ಮಲ್ಲಣಂ (ಉದ್ಭಟ. ೧೨-೩೫). [ ನಲ್ + ನೋಟ ]

**ನಲ್ಪರಕೆ** 'ನಲ್ವರಕೆ' ನೋ.

**ನಲ್ಪರಕೆವೆಱು** (ಕ್ರಿ). ಪ್ರೀತಿಯ ಆಶೀರ್ವಾದವನ್ನು ಪಡೆ : ಭೂದಿವಿಜರ ನಲ್ಪರಕೆವೆತ್ತು ಜೇರಿಗೆಬೆಲ್ಲದೊಪ್ಪಮೆಸೆಯಲ್ . . . ಅವನ ಕೈಗೆ ಧಾರೆಯನೆಱೆದನು (ಜೈಮಿಭಾ. ೩೧-೦೬).

[ ನಲ್ಪರಕೆ (< ನಲ್ವರಕೆ) + ಪೆಱು₁ ]

**ನಲ್ಪು** (ನಾ). ಸುಂದರವಾದುದು ; ಅಂದವಾದುದು : ಇವರ ನಲ್ಪಿನ ದೇಹ ಉತ್ತಮರ ದಾಹ (ವೀರಶೈ.ಪು. ೨-೩-೨೬). [ ನಲ್ + –ಪು₂ ]

**ನಲ್ಬರ** 'ನಲ್ಬರವು' ನೋ.

**ನಲ್ಬರವು, ನಲ್ಬರ** (ನಾ). ಸುಖಾಗಮನ ; ಸುಸ್ವಾಗತ : ಬಾ, ಕೃಷ್ಣ, ನಲ್ಬರವು, ನಮ್ಮೊಳಗೆ ಸೇರು (ಹೊಂಗಳು. ೩೨-೦). ನಲ್ಬರ : ನಮ್ಮ ಕೌರೀ ಮಾಲೆಗೆ ಸಿಮಗಕ್ಕೆ ನಲ್ಬರಂ (ಶ್ರೀರಾಮಾ. ೨೮೯-೧೦೦).

[ ನಲ್ + ಬರವು ]

**ನಲ್ಮಗು** (ನಾ). ಸುಂದರವಾದ ಮಗು ; ಅಂದವಾದ ಶಿಶು. ನಲ್ಮಕ್ಕಳು (ಬಹುವ) : ಅಯೋಧ್ಯೆ . . . ಕೊರಳಿಂಚರದಿ ಪಕ್ಕಿಗಳನಣ ಕಿಸುವ ನಲ್ಮಕ್ಕಳಿಂದಮಾ ಸಗ್ಗದೂರನೆ ಸೂರೆಗೊಂಡಂತೆ ಮೆರೆದುದಯ್ (ಶ್ರೀರಾಮಾ. ೭-೧೬೪). [ ನಲ್ + ಮಗು ]

**ನಲ್ಮಿಸುನಿ** (ನಾ). ಒಳ್ಳೆಯ ಬಂಗಾರ ; ಅಪ್ಪಟ ಚಿನ್ನ : ವಿಶ್ವಕಥೀಶ ನೊರ್ವನೆನಿಸಿದನುಮೇಶನೆಂದು ಬಿದಿ ಶಾಸನಮಂ ಬರೆದಿಟ್ಟು ನಟ್ಟ ನಲ್ಮಿಸುನಿಯ ಕಂಬದಂತೆಸೆದುದಾ ಗಿರಿ (ಕಲಕಾಂ. ೧-೩೬).

[ ನಲ್ + ಮಿಸುನಿ ]

**ನಲ್ಮೆ, ನಲುಮೆ** (ನಾ). ೧. ಪ್ರೀತಿ ; ಅನುರಾಗ ; ಒಲುಮೆ : "ತಕ್ಕು, ಅಟ್ಮಱು, ಒಱಲ್, ಕಾದಲ್ಮೆ, ನಲ್ಮೆ, ಕೂರ್ಮೆ, ಎಱಕಂ, ಒಪು – ಈ ೮ ಸ್ನೇಹಕ್ಕೆ ಪೆಸರ್" (ಶಕಶಾ. ೦೯-೩೯೦) ; ಚಲಂಗಳಾದಂ ವಿಲಾಸಿನೀಜನದ ನಲ್ಮೆಯುಂ ಸಂಗಮಮುಮಂ (ಶವಿರಾ. ೩ ೯೭) ; ತೆತ್ತುತನಕ್ಕೆ ತೆತ್ತುತನಮಂ ಪುಸಿನಲ್ಮೆಗೆ ಮೋದಿ ನಲ್ಮೆಯಂ . . . ಉಕ್ಕೆವಱುಕ್ಕೆವಗೆಯ್ಯುಮಂ ಪೊಣರ್ಚುತ್ತುಮುಪಾಯದಿಂ ಕಳಿಯೆ ಕೂಡುವನಂ ವಿಭು ಕಂಡು ಮೆಚ್ಚಿದಂ (ಕಾವ್ಯಸಾ. ೯೮೫ ಹೂರ್ವಳ) : ಬೆಂಬೆನ್ನನೆ ಬಾರದಂದು ಲಲಿತಾಂಗಿಯಂ ನಲ್ಮೆಗೆ ಬನ್ನಮಾಗದೇ (ಅದಿಪು. ೩-೧೭) ; ಕೈದವಮಿಲ್ಲದ ನಲ್ಮೆಯಿಂ ನಾಲಗೆಯ ತುದಿಗೆ ತಂದು ನುಡಿದರ್ ಮಂತ್ರೋರ್ವರ್ಗಳ್ ತನ್ನಾಣ್ಮನ ದೋರ್ವಲದಗುರ್ವಂ ನಚ್ಚಿ (ಸಂಪಳಾ. ೦೦-೪೫ ಪ) ; ಅತ್ಮಭವಂಗೆ ನಲ್ಮೆಯಿಂದುಟಿಪೆ ನಿಜಾತಪತ್ರ ಹರಿವಿಷ್ಟರ ಚಾಮರಮೆಂಬಿವಂ ಬೞಿಕ್ಕುೞಿದುದಾತ್ಮಂ (ಚಂದ್ರಪು. ೩-೧೧೨) : ಕಡುಪಿಂದಾತನೊಳಾಂತರೋಡಿ ಬನಮಂ ಪೊಕ್ಕಂ ಪೊಡವಾರ್ದುಕಾಲ್ವಿಡಿದುಂ . . . ನಲ್ಮೆಯಂ ನುಡಿದುಂ ಮೆಯ್ಪುರಿಗೆಟ್ಟುವಿಂತು ನೆಲದೊಳ್ ನಾಣ್ಗುಂದಿ ನಿಂದಿರ್ದರ್ (ಕಲ್ಯಕಾ. ೦೬೩) ; ತಳುವದಡವಿಯೊಳು ತನ್ನ ತಪ್ಪಿಸಿ ಪೋದ ನಳನೊಳು ನಲ್ಮೆಯನೆಸಗಿ . . . ಕೀರ್ತಿಯ ತಳೆದೆಸೆದಳು ದಮಯಂತಿ (ಹರಿಬ. ೩-೯೬). ೨. ಅನುಗ್ರಹ ; ಕೃಪೆ ; ದಯೆ : ವಿಶ ನಾಥು ಕುಡುಗವಿಳಜನಾನಂದಮಂ ನಲ್ಮೆಯಿಂದು (ಕುಸುಮಾ. ೦-೦) ; ಪುತ್ರನನೀಶನಿಂ ನಲ್ಮೆಯಂ ಪಡೆದುಂ ಮಹೀಪತಿ ರಾಜ್ಯಮಾಳುತವಿರ್ಪಿನಂ (ಹಾರಾಸ. ೪-೦೩-೪೩) ; ಅವಳ ನಲ್ಮೆಯಿಂ ಪಡೆವನಾಯ್ಕುಳಿಯುಂ ತ್ರಿಜಗತ್ಪ್ರಭುತ್ವಮಂ . . . ಆ ಮಾದೇವಿ ನಿರೀಕ್ಷಿಕನ್ನನತಿವೇಲದಯಾ ರಸಪೂರ್ಣದೃಷ್ಟಿಯಿಂ (ಮುರಾಜ. ೧-೨). ೩. ಒಳ್ಳೆಯತನ ; ಒಳಿತು ; ಒಳ್ಳೆಯದು ; ಒಳ್ಪು : "ನಲ್ಮೆಯ ಶುಭವೊಳ್ಪು ಲೇಸು" (ಕಹುನಿ. ೮೫) ; ಉಮೆ ಸೌಭಾಗ್ಯದೊಳೊಳ್ಪವೆತ್ತ ರತಿ ರೂಪಾಶ್ಚರ್ಯದೊಳು ಲಕ್ಷ್ಮಿವಕ್ಷಮ ನಂಗೀಕರಿಸಿ x x ನಲ್ಮೆಯೊಳತಿಪ್ರಾಗಲ್ಭ್ಯದೊಳು ಸೂಕ್ತಿಲಕ್ಷ್ಮಿ (ಎಕ. VIII, ಸೊರಬ. ೦೩೯-೪೫ ; ಸು. 1145) : ಮಗನೆಂದು ನಿಮ್ಮನಾಂ ಪೊರೆದ ಪೊಲ್ಲಮೆಯು ನಲ್ಮೆಯ ಮಾಡಿ ಕೈಕೊಂಡು ರಕ್ಷಿಸೆನೆ (ಸೌಂದಪು. ೫-೪೪) ; ಕಿಱಿದಾಸೆಯಿಂದೆ ಜನರು ನಲ್ಮೆ ಪೊಲ್ಮೆಯನಱಿಯದೆ ನೆನೆದುದನೆಸಗಿ ಬಱಿದೆ ಯೌವನವನೆಲ್ಲವನು ಕಳೆವರು (ಕರ್ಣಾವ. ೧೧-೩೦) ; ಈ ಜಾಣ್ಮೆಯಾ ನಲ್ಮೆಯಾ ಗಾಡಿಯಾ ಮೋಡಿ . . . ಅರಿಗಳವಡದು ಕೇಳೀ ಜಗತ್ರಯ ದೊಳೀ ಚೆಲುವ ವ್ಯರ್ಥಂಗೈಯದಿರು (ವೆಂಕಾರಾ. ೫-೯-೧೦) ; ನುಣ್ಣನಪ್ಪ ಜಾಣ್ಮೆಯಿನ್ ಕಡಕಿಗೂರ್ಮೆ ನಡೆದವನ್ ನಲ್ಮೆಗೂರ್ಮೆ ನಡೆದವನ್ (ಅಂಚಿಗೊ. ೦೭-೩೫೨). ನಲುಮೆ : ೧. ಆ ಪುರಕೆ ಬಂದನೊರ್ವಂ ಭಕ್ತನೊಲುಮೆಯಿಂ ಕಾಪಾಲಿವೊಲಿವ ಶರಣಂ ತನ್ನ ನಲುಮೆಯಿಂ (ಜಹಾರ. ದೇ. ೦೦೩-೦೦) ; ನಿನ್ನ ಸಸಿನೆದೆಯೊಲೋರೆಮೆಯು ನಲುಮೆಯ ನೀಡ ! (ಗೀವಿಂ. ೨೮-೨೭) ; ಎಳನೆಲೆಯಲ್ಲಿ ನೆಲಸಿಪುದು ನಿಲುವಿನ ನಲುಮೆ (ಅರಳು. ೪೦೦-೧೭). ೪. ಸಂತೋಷ : ನಲುಮೆಯಲಿ ಮಾಡಿ ದಾಸೋಹ ಹರಸೇವೆ (ಕನ್ನಜಾ. ೨೦೭).

ನಲ್ಮೆಗೆ ದಿಬ್ಯಂಬಿಡಿ, ನಲ್ಮೆಗೆ ದಿವ್ಯಂಬಿಡಿ = ಪ್ರೇಮಕ್ಕೆ ಸಾಕ್ಷಿಯಾಗಿ ದಿವ್ಯವೆಂಬ ಪರೀಕ್ಷೆಗೆ ಒಳಗಾಗು : ಶಂತನು . . . ತನ್ನ ಗಶಾಬ್ಜಾಕ್ಷಿಯ ಕಂಪು ತಟ್ಟ ಮಧುಪಂಬೋಲ್ ಸೋಲ್ತು ಕಂಡೊಲ್ದು ನಲ್ಮೆಗೆ ದಿಬ್ಯಂಬಿಡಿ ಪಂತೆಪೋಲ್ ಪಿಡಿದು (ಸಂಪಳಾ. ೧-೭೦) ; ಅಂಬುಜದ[ಲ]ಮನಮರ್ಚಿ ನಿತಂಬಿನಿ ಪಿಡಿದಿರ್ದ ಕುಚಮೆ ತಪ್ಪಾಯುಃಪಿಂಡಂದೋಲ್ಪಿರೆ ನಲ್ಮೆಗೆ ದಿವ್ಯಂ ಬಿಡದಳೋ ಪೇೞೆನಿಪಳಾ ವ್ಯತಿಕರದೊಳ್ (ಚಂದ್ರಪು. ೫-೦೩೦).

[ ನಲ್ + –ಮೆ₁/ತಮಿ. ನನ್ಮೈ, ನಲುಮೈ ]

**ನಲ್ಮೆಕಾಱ** 'ನಲ್ಮೆಗಾಱ' ನೋ.

**ನಲ್ಮೆಕಾಱಿಕೆ** (ನಾ). ನಲ್ಮೆಗಾರನ ಭಾವ ; ಪ್ರೀತಿ ; ಒಲುಮೆ : ಬೇಱರ ಮನೆಯುತ್ತು ತಂಗಿಯುರನು ನಲ್ಮೆಕಾಱಿಕೆವೆತ್ತ ಪ್ರೈದುನರಾ ಮೂಱು ಹೊತ್ತಾರೆಯುಸ್ತಿಕೊಲಿದು ಮನ್ನಿಸಿದನು (ಭರತ. ೩೨-೮೫).

[ ನಲ್ಮೆಕಾಱ (< ನಲ್ಮೆಗಾಱ) + –ಇಕೆ ]

**ನಲ್ಮೆಗಾರ್ತಿ** (ನಾ). ಪ್ರೀತಿಯನ್ನು ಹೊಂದಿರುವವಳು ; ಒಲವಿನವಳು ; ನಲ್ಲೆ ; ಪ್ರಿಯೆ : ಇದು ಮನಂಬಂದೊಡೆ ಕುರುಳಂ ಬೆರಲಂ ಬೇಡಿತ್ತಪಂ ತೊಡಲಿಲ್ಲೆಂದು ನುಡಿದ ನಲ್ಮೆಗಾರ್ತಿಯ ನುಣ್ಣಾತಂ ಕೇಳ್ದು ಹರ್ಷಂದಾಳ್ದು (ರಾಜಶೇ. ೧೧-೦೫೭ ಪ). [ ನಲ್ಮೆಗಾಱ + –ತಿ₁ (< –ಇತ್ತಿ) ]

**ನಲ್ಮೆಗಾಱ, ನಲ್ಮೆಕಾಱ** (ನಾ). ಪ್ರೀತಿಯನ್ನು ಹೊಂದಿರುವವನು; ನಲ್ಲ; ಪ್ರಿಯ ; ಕಾದಲ ; ಓಪ. 'ನಲ್ಮೆಗಾರ್ತಿ' ಪರಾ. ನಲ್ಮೆಕಾಱ : 'ನಲ್ಮೆಕಾಱಿಕೆ' ಪರಾ. [ ನಲ್ಮೆ + – ಕಾಱ ]

**ನಲ್ಮೆವಾತು** (ನಾ). ಪ್ರೀತಿಯ ಮಾತು : ಏನು ಕಲಿತರೇನು ಫಲವು . . . ಕಲಿಯಲಿಲ್ಲ ನಲ್ಮೆವಾತು ದೇವಯಾನಿ ಕಲಿವಳು (ಕವಿಸೋ. ೨೩-೧೦). [ ನಲ್ಮೆ + ಮಾತು₁ ]

**ನಲ್ಮೊಗ** (ನಾ). ಅಂದವಾದ ಮುಖ : ಅವರ ನಲ್ಮೊಗಗಳನ್ನು ಅಂಗಡಿಯೊಳಗಿನ ಹೊಗೆಯು 'ಪಾಲಿಸ್' ಮಾಡಿಬಿಟ್ಟತ್ತು (ಮುಂಗಾಪು. ೫೪). [ ನಲ್ + ಮೊಗ ]

**ನಲ್ಮೊರೆ** (ನಾ). ಒಳ್ಳೆಯ ಪ್ರಾರ್ಥನೆ : ಮಾನವ ಮಡಿಯಾಗಿಡಲು ದಮ್ಮಡಿಯು ತಮಡಿ ನಮಗೆ ಬೇಕೇನನಗಿಗೊ ನಲ್ಮೊರೆಯು ತಮಡಿ (ಗಣೇಶ. ೭೦-೬). [ ನಲ್ + ಮೊ ₂ ]

**ನಲ್ಲ₁** (ನಾ). ೧. ಪ್ರೀತಿಗೆ ಪಾತ್ರನಾದವನು ; ಪ್ರಿಯ : "ಕಾದಲಂ, ನಲ್ಲಂ, ಇನಿಯಂ, ಓಪಂ, ಮನದನ್ನಂ — ಈ ೫ ಪ್ರಿಯಂಗೆ ಪೆಸರ್" (ಕಶಸಾ. ೧೯-೩೮೪); ಅನುಪಮನಂ ಬರಿಪ್ಪೆನನಂರಾಗದೆ ನಲ್ಲನನೀಂದು (ಕವಿರಾ. ೨-೦೦೬); ನಿನ್ನ ನಾಣನನುಪಿವೆನೆನ್ನ ಮೆಯ್ಪಡವೊ ನಲ್ಲನ ಮೆಯ್ಪಡವೋ ನಿಶಾಕರಾ (ಆದಿಪು. ೦೨-೯೦) : ನಲ್ಲಳ್ ನಲ್ಲನಂ ವ್ಯವಹಾರಿ ಪಡಪಂ . . . ನೆನೆಪಂತು (ಧರ್ಮಾಮೃ. ೬-೦೯೦) : ಒಡಲಿಲ್ಲದ ನುಡಿಯಿಲ್ಲದ ಕಡೆಯಿಲ್ಲದ ನಲ್ಲನ ಒಡಗೂಡಿ ಸುಖಿಯಾದೆ ಕೇಳಿರಯ್ಯ (ಮಹಾದೇ. ಬ. ೩೧-೬೭); ಎಲ್ಲರ ವರ್ಣಸಬಹುದು ಎನ್ನ ನಲ್ಲ ಗುರುದೇವನ ವರ್ಣಿಸಬಾರದು (ಸಿದ್ಧವ. ೧೦೦೬-೬೭೮) : ಬಿಡದೆ ಸಿಂಗರಿಸಿ ನಲ್ಲರ ಗೋಷ್ಠಿಯೊಳಗಿಪ್ಪ ಮಾದದಿಯರನೀಕ್ಷಿಸುತ (ಹಡಕಾ. ೪-೯) ; ಪೊಲ್ಲಮೆಯ ಲೇಸು ನಲ್ಲರ ಮೆಯ್ಯೊಳ್ (ಜಾಕೋಜ. ೨-೪೨) ; ಕೆಳದೀ ನೀಂ ಬಲ್ಲೆಯಂತೆಂದನುವಿಸಿದವೆ ಬೇಸತ್ತು ನಾಂ ನಲ್ಲನೇಕಿನ್ನೊಳಗಪ್ಪಂ ನೀನುಪಮಾನಂ ಸುಟೀವ ಮದನನುಂ ಬಲ್ಲಿರಾವೆತ್ತ ಬಲ್ಲೆಂ (ಅಪಂಪು. ೮-೦೨) ; ನಲ್ಲರ ಕಂಡು ನಗುವಳ ತನ್ನ ಬಲ್ಲಿದ ಗಂಡನ ಬೈದು ಕರೆವಳ . . . ಜಿಹ್ವೆ ಸೀಳಬೇಕು (ಪುರಂದ. ೨-೦೪-೪); ನಲ್ಲನಗಲಿಕೆಯಾಗ ಮನಕೆ ಕುಗ್ಗು (ನನಲ್ಲ. ೪-೦೦) ; ನಲ್ಲ ಮುಟ್ಟದ ಗಲ್ಲ, ನಲ್ಲೆಯ ಮೈಯೆಲ್ಲ ಹಿಗ್ಗಿನ ಮುಳ್ಳಿಗೆ ಸಿಕ್ಕ್ಯಾಂಗ (ಸಖೀಗೀ. ೫೦-೧೧). ೨. ಗಂಡ ; ಪತಿ : "ಕಾದಲನುಂ ನಲ್ಲನುಮೆಂದೀ ಧರೆಯೊಳಗಿನಿಯ ನೋಪನಾ ಮನದನ್ನಂ ಸಾದರದೆ ಪತಿಯ ಪೆಸರುಗಳ್" (ಕವಿಕಂ. ೦೭೦) ; ಎಲ್ಲರ ಗಂಡರ ಪರಿಯಂತಲ್ಲ ನೋಡವ್ವಾ ನಮ್ಮ ನಲ್ಲ ಸುಳಿಯಲಿಲ್ಲ ಸುಳಿದು ಸಿಂಗಾರವ ಮಾಡಲಿಲ್ಲ (ಬಸವ. ೮೯೪). ೩. ಒಡೆಯ; ಸ್ವಾಮಿ: ಧಾತ್ರೀಶ್ವರ ಚೂಡಾಮಣಿ ವಿಜಯಕ್ಕೆ ನಲ್ಲನಾಹವಮಲ್ಲ ಅವನೀಮಣ್ಣಳಮಂ . . . ಪಾಳಿಸಿದಂ (ಸೌಇಇ. IX-1, ೦೨೬-೦ ; 1064) ; ದಕ್ಷಿಣದಿಶಾವಿಷಯ ಗಡಿಯಂಕಮಲ್ಲಂ ವಿಬುಧಸಂದೋಹಕ್ಕೆ ನಲ್ಲಂ (ಎಕ. XI, ಚಿತ್ರದು. ೩೪-೦೩; 1123) ; ವೀರದ ಬಾಗದ ಕಾವ ಪೆರ್ಮೆಗಾವಂ ತೊಣೆಯೆಂದು ಬಣ್ಣಿಪರು ಮಲ್ಲನನುದಘಯಾಶಕೆ ನಲ್ಲನಾ (ಎಕ. VI, ಕಡೂರು. ೩೦-೨೬ ; 1170) ; ಗುಣಕ್ಕೆ ನಲ್ಲ ಗಣೇಶಂ (ಕಮುದ. ೭೫ ಪ್ರಯೋ). ೪. ಒಳ್ಳೆಯವನು : (ಕ). ೫. ಒಳ್ಳೆಯತನ ; ಶ್ರೇಷ್ಠತೆ : "ಒಳಿತು, ನಲ್ಲ, ಲೇಸು, ಚೆನ್ನ" (ಕಂನುಹು. ೬೦). ೬. ಅಂದ ; ಚೆಲುವು : (ಕ).

ನಲ್ಲರ್ (ಬಹುವ) ೧. ಪ್ರೀತಿಗೆ ಪಾತ್ರರಾದವರು : ಎರೆದರ್ ಸಂತುಷ್ಟರಾದರ್ . . . ಬರ್ದುಗೊಂಡಾಡುವ ಮದನಮದೋನ್ಮತ್ತೆಯರ್ ನಲ್ಲರಾದರ್ ನರರಾರ್ ನಿನ್ನನ್ನರಿನ್ನೀ ಭುವನಭವನದೊಳ್ ಗಂಗಚಕ್ರಾಯುಧಾಂಕಾ (ಕಾವ್ಯಸಾ. ೨೧೫ ಕೂದ್ರಕ). ೨. ಹಿತವರು : ಪೊಡೆವಡುವಪ್ಪಿಕೊಳ್ವ ನೆನೆಯುತ್ತಿರಿವೆಂಬ . . . ಕೈಯೆಡೆ ನಿಮಗೆಂದೊಡಂಬಡಿಪ ನಲ್ಲರಗಲ್ಕೆಗೆ ಕಣ್ಣನೀರ್ಗಳಂ ಮಿಡಿವ ಬಹುಪ್ರಕಾರಜನಸಂಕಟವೊಟ್ಟಿದುದಾ ಪ್ರಯಾಣದೊಳ್ (ಆದಿಪು. ೯-೫೭): ನಂಟರುಂ ಶಂಭುವೇ ನಲ್ಲರುಂ ಶಂಭುವೇ (ಅರಿರ. ದೇ. ೦೭೩-೦೫). ೩. ಪ್ರಿಯಪ್ರೇಯಸಿಯರು ; ಪರಸ್ಪರ ಒಲಿದವರು : ಮಲ್ಲಿಗೆಗಳ್ ವಸಂತದೊಳ್ ಬಿರಿದೊಡೆ ನಲ್ಲರುಂ ನೆನೆದು ನಲ್ಲರ ಮೆಲ್ಲೆರ್ದೆಗಳ್ ನಿರಂತರಂ ಬಿರಿವುವದೆಂತೊ ಮಲ್ಲಿಗೆಗೆ ನಲ್ಲರ ಮೆಲ್ಲೆರ್ದೆ ಪೇಳೆಗೊಂಡುದೋ (ಆದಿಪು. ೦೦-೦೦೦) ; ನಲ್ಲರೊಳ್ಮೊಗಂ ನಗೆವೊಗದೊಳ್ ಪಳಂಚಲೆಯೆ ಕೂಡುವ ನಲ್ಲರೆ ನೋಟಗೊಡಾವ ಬೆಟ್ಟುಗಳೊಳಮಾವ ನಂದನವನಂಗಳೊಳಂ ಬನವಾಸಿದೇಶದೊಳ್ (ಪಂಪಭಾ. ೪-೨೮) : ನಲ್ಲರ ಕೂಡುವಾಸೆಯೆ ಬರ್ದುಂಕುವುದರ್ಕೆ ನಿಮಿತ್ತವಾಗದೇ (ಕಾದಂಬ. ೩೨೮) ; ಬೇಱೂರ್ಗೆ ಪೋದ ನಲ್ಲರ ನೆನೆದು ದೂಱಿಸುವ ನೀಱೆಯರ ನಿಡುಸುಯ್ಯ ಗಡಣದಿಂ ಜೌವನವೇೞಿಯುಂ (ಕಬ್ಬಿಗಾ. ೫೪). ನಲ್ಲರ ಮರುಳ = ಒಂದು ಬಿರುದು : ಮಹಾರಾಜಾ[ಧಿ]ರಾ[ಜನೆ (ನ)]ಲ್ಲರ ಮರುಳನಾನೆ[ಪೆಡೆ]ಙ್ಗಂ (ಎಇ. XIX, ೨೦೯-೪ ; ೯೬೨). ನಲ್ಲಳ್ = ೧. ಪ್ರಿಯೆ ; ಪ್ರೇಯಸಿ : "ಮನದನ್ನಳ್ ಕಾದಲೆಯಂದಿನಿಯಳ್ ತಾನೋಪಳೆಂದು ನಲ್ಲಳೆನಲ್ಕಂದನುನಯದಿಂ ಪ್ರಿಯೆ ತಾಂ" (ಕವಿಕಂ. ೦೭೨) ; ಕೆಲದೊಳ್ ನಿಲೆಯುಂ ಜ್ಯೋತ್ಸ್ನಾವಿಲಾಸದೊಳ್ ಬಗೆದನಿಲ್ಲ ನಲ್ಲಳನಿನಿಸಂ (ಕವಿರಾ. ೩-೯೪) ; ಅಗಲ್ಕೆ ಮುಳಿಸೆಂಬೆರಡುಂ ಗಡ ಕಾಳಕೂಟವಾಗಮರ್ದಿನ ಕಾಳಕೂಟದೊಡವುಟ್ಟಿದಳೆಂದವೆನ್ನ ನಲ್ಲಳಂ (ಆದಿಪು. ೦೨-೨೮) ; ನಲ್ಲಳೊಲುಮೆಗಾಗಿ ಸಖಿ ಸಖಿ ದೂತಿಯರೆಲ್ಲರ ಮನ್ನಿಪನಂತೆ (ಧರಹ. ೨-೪೫). ೨. ಹೆಂಡತಿ ; ಪತ್ನಿ : ಎನ್ನ ನಲ್ಲಳೆಯೆಂದು ಪ್ರಳಾಪಂಗೆಯ್ದು (ವದ್ದಾರಾ. ೦೯೦-೫) : ಅಂತು ಕಂಡು ಮನಂಗೊಂಡೆತ್ತಿಕೊಂಡು ಮನೆಗೆ ತಂದು ರಾಧೆಯೆಂಬ ತನ್ನ ನಲ್ಲಳ ಸೋಂಕಿಲೊಳ್ ಕೂಸನಿಟ್ಟೊಡೆ (ಪಂಪಭಾ. ೦-೯೭ ವ). ನಲ್ಲಿರ್ = (ಸಂಬೋಧನಾ ರೂಪದಲ್ಲಿ) ಒಳ್ಳೆಯವರು : ನಿಲ್ಲದಿರಿಂ, ಅಣ್ಣಂದಿರ್, ಓಡಿಂ. ತಡೆಯ ಪೊಟ್ರಲ್ಲು, ಓ ನಲ್ಲಿರ್ (ಅಶ್ವತ್ಥಾ. ೩೩-೬೩೭). ☞ ತಮಿಳಿನಲ್ಲಿ ವಂಧ್ಯಮಪುರುಷವಾಚಕ ಪ್ರತ್ಯಯವು ಗಣವಚನಾದಿಗಳಿಗೆ ಹತ್ತಿ ಸಂಬೋಧನಾರ್ಥವನ್ನೂ ಕೊಡುತ್ತದೆ. ಉದಾ—"ನಲ್ಲೀರ್=ಒಳ್ಳೆಯವರೇ!" "ಪೆರಿಯಾಯ್= ಹಿರಿಯಂವನೇ (ಳೇ)!" (ಸಹಾದೋ. ೨೫೨). [ ನಲ್ + – ಅ₇ ]

**ನಲ್ಲ₂** (ಗು). ೧. ಒಳ್ಳೆಯ ; ಚೆನ್ನಾದ ; ಶ್ರೇಷ್ಠವಾದ. 'ನಲ್ಲಗುಣ', 'ನಲ್ಲಪಾಲ್' ಪರಾ. ೨. ಅಂದವಾದ; ಸುಂದರವಾದ. 'ನಲ್ಲವೆಣ್' ಪರಾ. ೩. ಶುದ್ಧವಾದ ; ನಿರ್ಮಲವಾದ. 'ನಲ್ಲತ್ಯೆಲ', 'ನಲ್ಲಭಕ್ತಿ' ಪರಾ. ೪. ಶುಭಕರವಾದ ; ಮಂಗಳಕರವಾದ. 'ನಲ್ಲವರಕೆ' ಪರಾ. [ ದೇ.೫ ತಮಿ. ಮಲ. ನಲ್ಲ, ತುಳು. ನಲ್, ನಲ ; ಕೊಡ.ನಲ್ಲೇ ; ತೆಲು. ನಲುವು ; ಗೊಂಡಿ. ನೆಲಾ ]

**ನಲ್ಲ₃** 'ನೆಲ್ಲ' ನೋ.

**ನಲ್ಲಂಬು** (ನಾ). ೧. ಮೋಹವನ್ನುಂಟುಮಾಡುವ ಬಾಣ : ನಲ್ಲಂಬಿಂದಿಸೆ ಪುಷ್ಪಬಾಣನೆರ್ದೆಯಂ ಪೆಂಬಿಟ್ಟು ಬೆಳ್ಕಾಗಿ ತಕ್ಕೆಲ್ಲಂ ಕೆಟ್ಟೆರ್ದೆಗೆಟ್ಟು (ಕಾವ್ಯಸಾ. ೫೫೦ ಕೂದ್ರಕ) ; ಪೂಲ್ಲಶರಂಗಿಸುಮೆಡಗಿವೆ ನಲ್ಲಂಬುಗಳೆನಿಸಿ ತುಱುಗಿ ಮಾಲರ್ದಲರ್ದೆಸೆವೀ ಮೊಲ್ಲೆಯುಮೊಲಿಸಿದ ನಲ್ಲರ ಲಲ್ಲೆಯುಂ ಮಾರಾರ ಮನಮುಮಂ ಸೋಲಿಸದೇ (ಆದಿಪು. ೦೦-೦೦೪) ; ಅಂಗಜಂ ಪೆಲ್ಲಗೆ ಪಾರ್ದಾರ್ದಾಗಳುಂ ಕಿನ್ನರಯುವತಿ ಮೃಗೀವ್ರಾತಮಂ ತನ್ನ ನಲ್ಲಂಬುಗಳಿಂದೆಚ್ಚೆಚ್ಚು ಮೆಚ್ಚಂ ಸಲಿಸುವಂ (ಪಂಪಭಾ. ೪-೨೩). ೨. ತೀಕ್ಷ್ಣವಾದ ಬಾಣ ; ಹರಿತವಾದ ಬಾಣ : ತನ್ನ ನಲ್ಲಂಬುಗಳಿಂದವಾರ್ದಿರದಡುರ್ತಿಸೆ ಭೂಭುಜರೆಲ್ಲಮಲ್ಲಿ ಬಿಲ್ಲುಂಬೆಚಗಾಗೆ (ಪಂಪಭಾ. ೦೦-೪೨) ; ಅವರ ಪಿಡಿವ ಬಿಲ್ ಬಿಲ್ಲೆಮ್ಮಂಬುಗಳುಮವರಿತ್ತ ನಲ್ಲಂಬುಗಳೆನೆ ಬಟಿಗಾಯದಂತು ಚಲಮನೆ ಕಾಮಂ (ಪಂಪಭಾ. ೦೨-೩೯). [ ನಲ್ + ಅಂಬು₂ ]

**ನಲ್ಲಗನ್ನೆ** (ನಾ). ಒಂದು ಬಗೆಯ ಗಿಡ : ಕೊರ್ಮ, ಗನಜಿಲೆ, ಈಚಿಮುಳ್ಳು, ಕೊಂಚಿ, ನಲ್ಲಗನ್ನೆ (ಮೃಜಿಗ. ೦೫-೨೭೦). [ ? ]

**ನಲ್ಲಗುಣ** (ನಾ). ಒಳ್ಳೆಯ ಗುಣ ; ಸದ್ಗುಣ : ಬಳಿಯಂ ಬೆಳಗಿಪ್ಪಂ ತಾಂ ತನ್ನ ನಲ್ಲಗುಣಂಗಳಿಂ (ಶಾಂನಂದ. ೨-೩೯). [ ನಲ್ಲ$_2$ + ಗುಣ ]

**ನಲ್ಲತನ** (ನಾ). ಒಳ್ಳೆಯತನ ; ಸಜ್ಜನಿಕೆ : ನಲ್ಲತನಕೆ ಬಲ್ಲತನಕೆ ಲೋಕದೊಳು ನೀನಲ್ಲದುಂಟೆ ನಿನ್ನ ನಡೆಗೆ ನಲ್ಲರು ನಾರಿಯರೊಲಿವರು (ಭರತ. ೬೬-೩೯). [ ನಲ್ಲ$_2$ + – ತನ ]

**ನಲ್ಲತೈಲ** (ನಾ). ಒಳ್ಳೆಣ್ಣೆ ; ಶುದ್ಧವಾದ ಎಣ್ಣೆ ; ಅಚ್ಚ ಎಣ್ಣೆ : ನಲ್ಲತೈಲದೊಳದರ್ವ ಸೊಡರಾ ಎಳ್ಳಿನಿಂದಲರುವುದೆ (ಬಸವು. ೩೧-೩೭). [ ನಲ್ಲ$_2$ + ತೈಲ$_1$ ]

**ನಲ್ಲತ್ತೂರ್** (ನಾ). ಒಂದು ಊರಿನ ಹೆಸರು : ಪುತತ್ತೂರುಡೆ ಶಿವಮಾರವ್ಮಂ ದುಣ್ಣಗಿಗ್ಗಂ ನಲ್ಲತ್ತೂರೊಡೆ ಬಗ್ಗಮನೆ ಬಳಿಗವುಂ ಅಯ್ದೂವುಪ್ಪು . . . ಕೊಟ್ಟೊಪ್ಪುದು (ಎಕ. X, ಕೋಲಾರ. ೨೩೧-೩ ; ಸು. ೫೦೨ ?). [ ? + ಊರ್ ]

**ನಲ್ಲಪಾಲ್** (ನಾ). "ಒಳ್ಳೆಯ ಅದೃಷ್ಟ, ಸೌಭಾಗ್ಯ" (ಅಂಶಿಗೊ. ಕೋಶ) : ಈಯೊಂದು ನಲ್ಲಪಾಲೆನಗೆ ತಾನ್ ಬಂದತ್ತು (ಅಂಶಿಗೊ. ೧೯-೩೮೪). [ ನಲ್ಲ$_2$ + ಪಾಲ್$_2$ ]

**ನಲ್ಲಭಕ್ತಿ** (ನಾ). ಶುದ್ಧವಾದ ಭಕ್ತಿ : ನಲ್ಲಭಕ್ತಿಯೊಳಿರ್ದು ಏಣಾದಿನಾಥ ಭೂವಲ್ಲಭನ ಭಕ್ತಿಗಾನಂದಿಸಿ (ಗುರುಚಾ. ೩-೪೩). [ ನಲ್ಲ$_2$ + ಭಕ್ತಿ ]

**ನಲ್ಲಮನ** (ನಾ). ೧. ಒಳ್ಳೆಯ ಮನಸ್ಸು. ೨. ಅನುರಾಗದಿಂದ ಕೂಡಿದ ಮನಸ್ಸು. 'ನಲ್ಲಮನಂದೋಱು' ಪರಾ. [ನಲ್ಲ$_2$ + ಮನ$_1$ ]

**ನಲ್ಲಮನಂದೋಱು** (ಕ್ರಿ). ೧. ಒಳ್ಳೆಯ ಮನಸ್ಸನ್ನು ತೋರಿಸು. ೨. ಒಲವನ್ನು ತೋರಿಸು ; ಅನುರಾಗವನ್ನು ವ್ಯಕ್ತಪಡಿಸು : ಈಕೆಯು ಮೆನಗೆರಡಱಿಯದ ನಲ್ಲಮನಂದೋಱುವುದು ಸಲ್ಗೆದೋಱುವುದುಮಾವುದು ದೋಸಂ (ಶಂಪರಾ. ೫-೧೭ ವ). [ ನಲ್ಲಮನ + ತೋಱು ]

**ನಲ್ಲಮುದ್ದು** (ನಾ). ಪ್ರೀತಿಯ ಮುದ್ದು,–ಲಲ್ಲೆ : ನಲ್ಲಮುದ್ದಿಗೆ ಬಯಸುವಂ ಮನದಲ್ಲಿ ಕೀಳ್ಪನು ನಸುತೊಡಲಿಸುವ (ಬಸವು. ೯೭-೩೨). [ ನಲ್ಲ$_2$ + ಮುದ್ದು ]

**ನಲ್ಲಯ್ಯ** (ನಾ). ಒಬ್ಬಾತನ ಹೆಸರು : ದಾತಾರಂ ದೇಯಿಮಯ್ಯಸೆಟ್ಟಿಯರಗುಮುಟ್ಟಿಂ [ನ]ಲ್ಲಯ್ಯನುಂ ಮಾರಳಯ್ಯನುಂ (ಸೌಇಇ. XX, ೧೯-೭೦ ; 1015). [ ನಲ್ಲ$_2$ + ಅಯ್ಯ$_1$ ]

**ನಲ್ಲರಿವು** (ನಾ). ಒಳಿತು ಕೆಡುಕುಗಳ ತಿಳಿವಳಿಕೆ ; ಸದಸದ್ವಿವೇಕ : "ಒಪ್ಪುತಪ್ಪುಗಳ ಪ್ರಜ್ಞೆ ; ಸದಸದ್ವಿವೇಚನೆ . . . ಒಳುಪಿನರಿವು ; ನಲ್ಲರಿವು" (Conscience. ಇಂಕನಿ). [ ನಲ್ + ಅರಿವು (<ಅಱಿವು) ]

**ನಲ್ಲರೂಪು** (ನಾ). ಅಂದವಾದ ರೂಪ ; ಸುಂದರವಾದ ರೂಪ : ನಲ್ಲರೂಪಿಲ್ಲೆಂದೊಡೀಕ್ಷಿಸು ಚೆಲ್ಲೆಗಂಗಳಿಂ (ಬಸವು. ೪೦-೧೯). [ ನಲ್ಲ$_2$ + ರೂಪು ]

**ನಲ್ಲಲರ್** (ನಾ). ಅಂದವಾದ ಹೂವು ; ಸುಗಂಧಭರಿತವಾದ ಪುಷ್ಪ : ನಲ್ಲಲರ ಕಂಪು ಪೀನಸದಲ್ಲೊಂದಿದವಂಗೆ ಸೊಗಸದಿರೆ ಕೆಟ್ಟಪುದೇ (ಉದ್ಭಟ. ೦-೧೭). [ ನಲ್ + ಅಲರ್$_2$ ]

**ನಲ್ಲಲೋಹ** (ನಾ). ಉತ್ತಮವಾದ ಧಾತು,–ಲೋಹ ; ಚಿನ್ನ : ಬೆಳ್ಳಿ ಮೊದಲಾದ ಮುರುಹು ತಾಂಬ್ರಂ ನಲ್ಲಲೋಹಂ ಕಂಚು ಮೊದಲಾದೆಲ್ಲಮಂ ಒಟ್ಟೈಸಿ ತರಿಸಿ (ಬಸವು. ೧೩-೮). [ ನಲ್ಲ$_2$ + ಲೋಹ ]

**ನಲ್ಲವರಕೆ** (ನಾ). ಮಂಗಳಕರವಾದ ಹರಕೆ ; ಶುಭಾಶೀರ್ವಾದ : ಅವರ್ ನಲ್ಲವರಕೆಯುಂ ಪರಸುವುದುಂ (ನೇಮಿಪು. ೯-೮೭ ವ). 'ನಲ್ವರಕೆ' ಪರಾ. [ ನಲ್ಲ$_2$ + ಪರಕೆ$_1$ ]

**ನಲ್ಲವಸ್ತು** (ನಾ). ಪ್ರಿಯವಾದ ವಸ್ತು : ಗೌರೀವಲ್ಲಭಂ . . . ನಲ್ಲವಸ್ತುಗಳಂ ಬಯಸುವಂ (ಬಸವು. ೨೫-೧೮). [ ನಲ್ಲ$_2$ + ವಸ್ತು ]

**ನಲ್ಲವೂ** (ನಾ). = ನಲ್ಲಲರ್ : ಅವಿರಳಮಾಗಿ ಝೇಂಕರಿಸುತುಂ ವನವಲ್ಲಿಯ ನಲ್ಲವೂಗೆ ಪಾಱುವ ಮದಭೃಂಗಸಂಚಯ (ಕುಸುಮಾ. ೦೪-೨೩). [ ನಲ್ಲ$_2$ + ಪೂ$_2$ ]

**ನಲ್ಲವೆಣ್** (ನಾ). ಅಂದವಾದ ಹೆಣ್ಣು ; ಸುಂದರಸ್ತ್ರೀ : ನಲ್ಲವೆಂಗಳ ಪೆತ್ತವರು ಪೆಣ್ಣು ತಂದರದಿಲ್ಲದಿದ್ದವರು ಭೂಷಣವ ಝಲ್ಲಿಪಟ್ಟಿಗಳು ಮುಂತಾದವ ತಂದಿದ್ದರೆಲ್ಲರ ಕರಿಸಬೇಕೆಂದ (ಭರತ. ೩೧-೦೩). [ ನಲ್ಲ$_2$+ ಪೆಣ್ ]

**ನಲ್ಲವೊಣರ್** (ನಾ). ನಲ್ಲರ ಜೋಡಿ ; ಪ್ರಿಯ ಪ್ರೇಯಸಿಯರ ಜೊತೆ : ಕಂದದೊಳ್ ಭುಜಲತಾವಳಿ ತಳ್ತಿರೆ ಬಾಯೊಳಗೊಂದಿ ಬಾಯ್ ತೊಡರ್ದಿರೆ ಕೂಡಿ ನಿದ್ದೆತಿಳಿದಿರ್ದುವು ನಲ್ಲವೊಣರ್ ನಿಶಾಂತ್ಯದೊಳ್ (ಸೂಕ್ತಿಸು. ೯-೬೦). [ ನಲ್ಲ$_2$ + ಪೊಣರ್$_2$ ]

**ನಲ್ಲವೋಗಂಡಿಕೆ** (ನಾ). ತನ್ನ ಸಮಾನರಿಲ್ಲವೆಂದು ಭಾವಿಸುವಿಕೆ ; ಅತಿಶಯವಾದ ಒಣಜಂಬ ; ಅಧಿಕವಾದ ದುರಹಂಕಾರ : "ಅಹೋ ಪುರುಷಾ ಎಂಬುದು ನಲ್ಲವೋಗಂಡಿಕೆ[ಒಣಜಂಬ, ವೃಥಾದರ್ಪ]" (ಹರಾಯು. ೦೨೯-೯೯). [ ನಲ್ಲ$_2$ + ಪೋಗಂಡಿಕೆ ]

**ನಲ್ಲಳಿ** (ನಾ). (?) : ಮಿಸುಗುತುವಿರ್ಪ ಬಲ್ಲೊನೆಯ ಸನ್ನೆಗೆ ಕಾಂಚನಕೇತಕೀ ದಳಪ್ರಸವದಳಂಗಳೋಲಿಗೆಡೆ ನಲ್ಲಳಿಗಪ್ಪುವು ನಂದನಂಗಳೊಳ್ (ಸೂಕ್ತಿಸು. ೪-೩೯). [ ? ]

**ನಲ್ಲಾಉ** 'ನಲ್ಲಾವು' ನೋ.

**ನಲ್ಲಾಟ** (ನಾ). ಉಲ್ಲಾಸಕರವಾದ ಆಟ ; ಚೆಲ್ಲಾಟ ; ವಿನೋದ : "ಆಟ, ಕೇಳಿ, ಚಿಣ್ಣಾಟ (ಕೂಸಾಟ), ಹುಡುಗಾಟ, ನಲ್ಲಾಟ" (ಕಂನುಹು. ೬೮) : ಪುಲ್ಲೆಗಂಗಳ[ಳೆಳ]ಯರ ಚಲ್ಲಿಕೆಗಳ ಕಂಡು ನಲ್ಲಾಟವಾಡುವೆ ಖುಲ್ಲಮನವೆ (ಪ್ರಭುರಾ. ೧೯೩-೮). [ ನಲ್ + ಆಟ ]

**ನಲ್ಲಾಮ** (ನಾ). ಒಂದು ಬಗೆಯ ತೆರಿಗೆ : ಚಳಾಯಿ ದಾಯದಱ ಹಡುವರ ಬೀರವಣ ನಲ್ಲೆತ್ತು ನಲುಗಂಟಿ ನಲ್ಲಾಮ ದಣ್ಣಾಯ ತವುಡೆಯೊಳಗಾದ ಸಮಸ್ತ ಕಿಱುಕುಱವೆಲ್ಲವಂ (ಎಕ. V, ಬೇಲೂರು. ೩೯-೮೭ ; 1117). 'ನಲ್ಲಾವು' ಪರಾ.

[ ☞ಇದು 'ನಲ್ಲಾವು' ಎಂಬುದರ ಅಪಲಿಖಿತವಿರಬಹುದು ]

**ನಲ್ಲಾಲ** (ನಾ). ಒಂದು ಊರಿನ ಹೆಸರು : ಕೊಱಕುಂಡವಿಷಯೇ ನಲ್ಲಾಲನ್ನಾಮಗ್ರಾಮಃ (ಪ್ರಾಆಶಿ. ೦೯೨೪, ೭೯-೩೪ ; ಸು. ೬ನೆಯ ಶತ). [ ? ]

**ನಲ್ಲಾವು,ನಲಾವು, ನಲ್ಲಾಉ, ನಾಲ್ಲಾವು** (ನಾ). ಒಳ್ಳೆಯ ಹಸುಗಳ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ : ಎಳ್ಳು ಜೋಳ ನಲ್ಲಾವು ನಲ್ಲೆತ್ತು ಕಳುಕು ಕಂಡಿಕೆವಣ . . . ಅಗಾಮ್ಯಕವುಳಗಾಗಿ ಸರ್ವಾಯ ಶುದ್ಧಿ (ಎಕ. VI, ಕಡೂರು. ೨೦-೨೮ ; 1188) : ಮಾನಿಬ್ಬರುಂ ಮಹಾಜನಂಗಳ ಭೋಜನಕ್ಕಂ ಬಿಟ್ಟ ನಲ್ಲಿಂಮೆ ನಲ್ಲಾವು . . . ಧಾರಾಪೂರ್ವ್ವಕಂ ಮಾಡಿ ಕೊಟ್ಟರು (ಸೌಇಇ. IX-1, ೩೯೯-೭ ; 1282). **ನಲಾವು** : ಶ್ರೀಕರಣ ಸುಂಕ ಪಂಣಾಯ ಅಡಕೆಯ ಸುಂಕ ಹಣವೋದಱ ಸೇಸೆ ವೀರಸೇಸೆ ತೊಡರು ನಲಾವು ನಲ್ಲೆತ್ತು ಕಳಕು ಕಂಡಿಕೆವಣ . . . ಧಾರಾಪೂರ್ವಕಂ ಮಾಡಿ ತಾಂಮ್ರಶಾಸನವಂ ಕೊಟ್ಟರು (ಪ್ರಾಆಶಿ. ೦೯೪೦, ೩-೨೩ ; 1215). **ನಲ್ಲಾಉ** : ಗ್ರಾಮಗದ್ಯಾಣ ನಲ್ಲಾಉ ಸುಂಕ ತಳವಾರಿಕೆ (ಎಕ. VIII, ತೀರ್ಥಹ. ೧೩೮-೨೭ ; 1420). **ನಾಲ್ಲಾವು** : ನಾಲ್ಲಾವು ನಲ್ಲೆತ್ತು ಗ್ಗವಿ (ಎಕ. V, ಹಾಸನ. ೫೪-೬೩ ; 1280). 'ನಲ್ಲೆತ್ತು' ಪರಾ. ☞ ಇಲ್ಲಿ ಮುಖ್ಯೋಲ್ಲೇಖವನ್ನುಳಿದು ಮಿಕ್ಕವು ಅಪಲಿಖಿತ. [ ನಲ್ + ಆವು ]

**ನಲ್ಲಿ$_1$, ನಳ್ಳಿ$_1$, ನಳ್ಳಿ$_2$** (ನಾ). ೧. ನಾಳ ; ಕೊಳವೆ : "ನಲ್ಲಿ – ನಾಲೀ = ನಳ್ಳಿ" (ತದ್ಭಕೋ. ೨೦). ೨. ನೀರನ್ನು ಪೂರೈಸುವ ಕೊಳವೆ ;

ಕೊಳಾಯಿ ; ನಳ : ನನ್ನ ವಾಗ್ವಾಹಿನಿ ಬೇಸಗೆ ದಿನದ ನಲ್ಲಿಯ ನೀರಿನಂತೆ ತೊಟತೊಟ ಎಂದು ಕ್ಷೀಣವಾಗಿ ಜಿನುಗುತ್ತಿತ್ತು (ನಂಟರು. ೩೯) ; ಎಲ್ಲಿ ತಿರುಗಿದರಲ್ಲಿ ಅಮೃತ ಸೂಸುವ ನಲ್ಲಿ (ಹಂಡಕು. ೮-೧೧೦) ; ಬೆಳಿಗ್ಗೆ ಆಕೆ ಎಂದಿನಂತೆ ನೀರಿನ ನಲ್ಲಿಯನ್ನು ತೆರೆದಿದ್ದು ಕೇಳಿಸಿತು (ಒಂಟಿದ. ೬೪). ನಳಿ₃ : ೨. ಶರೀರದಲ್ಲಿರುವ ಯಾವುದೇ ನಾಳ,–ತಂತು : ಬೆನ್ನ ನಳಿಯಬೇಂದಂಗೆ ವಂನ್ನಣೆಯುಂ ಒಂದಕ್ಕು ಉನ್ನತವಕ್ಕು ಸಿರಿಯಂಕ್ಕು (ಸರ್ವಜ್ಞ. ೫೪೭). ೩. ಕೊಳವೆ ಅಥವಾ ನಾಳದಂಥ ಸಾಧನ : ಅವನು ಟೆಲಿಫೋನಿನ ನಳಿಗಳನ್ನು ಕಿಳಗಿಟ್ಟು, ಕಳ್ಳನ ಈ ಕಿವಿಮಾತುಗಳನ್ನು ಯೋಚಿಸುತ್ತ ಕುಳಿತುಕೊಂಡನು (ಕಳ್ಳಕಾ. ೧೮) ; ರಾವಣೇಶ್ವರನ ಜೋಡುನಳಿಯ ಬಂದೂಕಿನಿಂದ ಅಗ್ನಿ ಕಿಡಿ ಸಿಡಿಯಬೇಕು (ದೀಪಜ. II. ೨೨೨). ನಳ್ಳಿ₃ : ೧. ಕೆಲವು ಮನೆಗಳಲ್ಲಿ ಕೊಳಚೆ ನೀರು ಹೋಗಲು ನಳ್ಳಿಗಳಿರುತ್ತವೆ (ಅಡುಕಾ. ೪೦).

ನಲ್ಲಿ ನಿಲ್ಲು = ನೀರು (ಕೊಳಾಯಿಯಲ್ಲಿ) ನಿಂತುಹೋಗು : ನೀರು ತುಂಬಿಟ್ಟುಕೊಳ್ಳುವಷ್ಟರಲ್ಲಿ ನಲ್ಲಿ ನಿಂತುಹೋಯಿತು (ಜೂ೦). ನಲ್ಲಿ ಬರು = (ಕೊಳಾಯಿಯಲ್ಲಿ) ನೀರು ಬರು : ಕಾಲಕ್ಕೆ ಸರಿಯಾಗಿ ಈಚೀಚೆಗೆ ನಲ್ಲಿ ಬರದೆ ತುಂಬಾ ಕಷ್ಟವಾಗಿದೆ (ಜೂ೦). [ < ಸಂ. ನಾಲಿ, ನಾಲೀ ]

**ನಲ್ಲಿ₃** (ನಾ). ಒಂದು ಬಗೆಯ ಭೂಮಿ (?) : ಮೂವತ್ತೆರಡು ಹೊಂನಿಗೆ ಕ್ರಯವ ಕೊಂಡ ಮಾನಿಯ ಬೈಲ ಒಳಗೆ ನಲ್ಲಿ ಹುಲ್ಲಿ ಸಹ ಬೀಜವರಿ ಖಂಡಕ್ಕಂ(ಎಕ. VI. ಕೊಪ್ಪ. ೩೨-೧೩ : 1448). [ ? ]

**ನಲ್ಲಿತಿರುಪು** (ನಾ). ಕೊಳಾಯಿಯಿಂದ ಬೇಕಾದಾಗ ನೀರನ್ನು ಹರಿಬಿಡಲೂ ಬೇಡವಾದಾಗ ತಡೆಯಲೂ ಅನುಕೂಲವಾಗುವಂತೆ ಅಳವಡಿಸಿರುವ ತಿರುಪು : ನಲ್ಲಿತಿರುಪು ಸಡಿಲವಾಗಿ ನೀರು ವ್ಯರ್ಥವಾಗಿ ಸುರಿಯುತ್ತಿದೆ (ಜೂ೦). [ ನಲ್ಲಿ₁ + ತಿರುಪು₂ ( < ತಿರಿಪು₂ ) ]

**ನಲ್ಲಿಜುಂಪೆ** (ನಾ). ೧. ಇರುವೆಗಳಲ್ಲಿ ಒಂದು ಬಗೆ. ೨. ಕರಿ ಇರುವೆ ; ಕಟ್ಟಿರುವೆ : ಧರೆಯೊಳ್ ಸಂಜಲಿ ನಲ್ಲಿಜುಂಪೆ ಮೊದಲಾದೆಲ್ಲಂ ವಿಷಗ್ರಾಹಿಗಳ್ (ಖಸುರ. ೧-೬೯).

[ ನಲ್ಲ₀ + ಇಜುಂಪೆ. / ತಮಿ. ತೆಲು. ನಲ್ಲ = ಕಪ್ಪು ]

**ನಲ್ಲುಗುಳು** (ನಾ). (ಮಕ್ಕಳ) ಆಕರ್ಷಕವಾಗಿರುವ ಉಗುಳು : ಉಸುರಿನಿಂದುಣ್ಮುತಿಪ ಸೊಲ್ಲುಗಳ ಗಲ್ಲುಗಳ ಏಸರದಿಬುಬಿನೊಳೀವ ಜೊಲ್ಲುಗಳ ನಲ್ಲುಗ[ಗು]ಳ ವಸರಿಸುವ ಕೂಸಾಟದಾಟಗಳ ನೋಟಗಳ ವಸುಳೆ ವರಿಶೋಭಿಸಿದಳು (ಮದೀಶು. ೧೭-೧೧).

[ ನಲ್ + ಉಗುಳು₃ ( < ಉಗುೞ್₃ ) ]

**ನಲ್ಲುಣಿಸಿಕ್ಕು** (ಕ್ರಿ). ಸವಿಯಾದ ಊಟವನ್ನು ಬಡಿಸು ; ರುಚಿಯಾದ ತಿನಿಸುಗಳನ್ನು ನೀಡು : ಮಿಂದು ಲವಾರಿಯಿಂ ಜಳಕವಾಗಿವ ನಲ್ಲುಣಿಸಿಕ್ಕುವ . . . ಬೆಳ್ಳಿಲೆಯುಂ ಮಡಿದೀವ ದಿವ್ಯಚಾಮರಮನೆ ಬೀಸುವಗ್ಗದ ಏಡಗ್ಡ ಯರೊಪ್ಪಿರೆ ದೇವಿ ರಂಜಿಪಳ್ (ರಾಜಶೇ. ೪-೪೧).

[ ನಲ್ಲುಣಿಸು + ಇಕ್ಕು ]

**ನಲ್ಲುಣಿಸು** (ನಾ). ಸವಿಯಾದ ಊಟ ; ರುಚಿಕರವಾದ ಆಹಾರ : ಒಳ್ಳೆಯ ತಿನಿಸು : ಅಜುತರ್ದೆಯಾಟ್ ಪೀರ್ದುಂ . . . ಗೆಳೆವಕ್ಕಿಯೆಲ್ಲಮಂ ನೆಳ್ ಬಟ್ಟಿಯಟ್ಟಿ ನಲ್ಲುಣಸನೂಡಿಯುಮಾತ್ರದ ತೋರವಣ್ಣೊಳೊಂದಟ ರಸದಂತುಗಾಣದೆ ದಲೊಂದು ಶುಕಂ ಮಧುಸಮ್ಮದೋತ್ಸುಕಂ (ಚಂದ್ರಪ್ರ. ೭-೪೭) ; ನಸು ಬಿಸಿಯಪ್ಪ ನಲ್ಲುಣಿಸಿನಿಂ . . . ಏಸಕದ ಶೋಣ ವರ್ಣಿಪಸನಾವೃತದಿಂ ಜನಮಾಗಳಂತು ಜೀವಿಸಿತಿನಿತಲ್ಲದುದುಟ್ಪುದೇ ಹಿಮದಾಗರವಾದ ಮಾಗೆಯೊಳ್ (ಕಾಸುಮಾ. ೭-೨೩) ; ಮಜ್ಜನವ ಮಾಡಿಸಿ ನಲ್ಲುಣಿಸನಿಟ್ಟನುವಮಸ್ನೇಹದಲಿ ಸಂತುಷ್ಟತೆಯ ಮಾಡಿದಳು (ಸಾಳ್ವಭಾ. ೧೭-೩೬) : ನಲ್ಲುಣಿಸುಗಳನಟ್ಟು ತಂದಿಪನ್ (ಶ್ರೀರಾಮಾ. ೧೨೫-೮೫). [ ನಲ್ + ಉಣಿಸು₂ ]

**ನಲ್ಲುಲಿ** (ನಾ). ೧. ಹಿತವಾದ ಮಾತು ; ಒಳ್ಳೆಯ ನುಡಿ : ಗಾನದ ಮಲ್ಲುಲಿ ಶ್ರುತಿಶಾಸ್ತ್ರವ್ಯಾಖ್ಯಾನದ ನಲ್ಲುಲಿ . . . . ಎಸೆಗಾ ಹುರದೆಲ್ಲೆಡೆಯರ ಬೀದಿಯೊಳು (ಉದ್ಭಟೀ. ೨-೩೭). ೨. ಮಧುರವಾದ ಧ್ವನಿ ; ಇಂಪಾದ ಉಲಿ : ಹಲಸರಿನ್ ಮೊದಲೆದ್ದುದೊಂದಾರ್ಪು – ಬಲ್ಲುಲಿಯ, ನಲ್ಲುಲಿಯ ಪಾಡು, ದೀವಿಕೆರೆಯರೆಗಳಿನ್ ಮೊಳಗೆ ಮಾರುಲಿಗಳ್ (ಶಾರಿಸಿ. ೧೫-೩೩೩).

[ ನಲ್ + ಉಲಿ₂ ]

**ನಲ್ಲೂರ್**, **ನಲ್ಲೂರು** (ನಾ). ಒಂದು ಊರಿನ ಹೆಸರು : ತತಃ ಗ್ರಾಮ ತ್ರಯ ಸೀಮಾ ಅಶ(ಶ್ವ)ತ್ಥ ತತ ನಲ್ಲೂರ್ತಟಾಕಸ್ಯ ದಕ್ಷಿಣಾನ್ತಭಾಗ (ಮ್ಯಾಆರಿ. ೧೯೯೨, ೭೫-೧೦೮ : 810). ನಲ್ಲೂರು : ಪೂವಿನ ಪುಲ್ಲಿಮಜ್ಜಿಲ ಕೂತನಿಡುನಲ್ಲೂರು ನಲ್ಲೂರು ಕೊಮರಜ್ಜನ್ನು ಇಗ್ಗಲೂರು (ಎಕ. IX. ಬೆಂಗಳೂ. ೮೩-೬ ; ಸು. 890) ; ಇದಕ್ಕೆ ಸಾಕ್ಷಿ . . . ಕಿಱಿಯ ಮುಗುಳಿ ಮುಟಟ್ವಳ್ಳಿ ನಲ್ಲೂರು ಪಾಗಣ್ಣ ತೇಗುರು (ಎಕ. VI, ಚಿಕ್ಕಮ. ೪೨-೨೨ ; 959) : × × × ಟ ಗಾವುಣ್ಣನುಂ ನಲ್ಲೂರೆಱಿಯಂಗ ಗಾವುಣ್ಣ × × × (ಎಕ. I (R), ೩೫-೧೨ ; 11ನೆಯ ಶತ). [ ನಲ್ಲ₂ + ಊರ್ ]

ನಲ್ಲೂರು 'ನಲ್ಲೂರ್' ನೋ.

**ನಲ್ಲೆ** (ನಾ). ೧. ಪ್ರಿಯೆ ; ಕಾದಲೆ : ನಕ್ಕನು ಕೃಷ್ಣ ನಲ್ಲೆಯ ಮಾತ ಕೇಳ್ದು (ಮೋಹತ. ೪-೨೨) : ನಲ್ಲೆಯಂ ನೆನೆಯುತ್ತ ಬಿಕ್ಕಿದಂ (ಸಾನಂದ. ೭-೩) ; ಬದುಕಿನೊಳವಂ ಕಡೆಗಣ್ಣ ಕೂಡಲಿಂದರಿವಂತೆ ನಲ್ಲೆ, ನಿನ್ನೊಳವನೇತರಿಂ ನಾನರಿಯ ಬಲ್ಲೆ ? (ಗೀವಿಂ. ೨೮-೩೫); ನಲ್ಲೆ ವರಿಸಿದಳೆನ್ನ (ಅನಿಕೇ. ೯-೭). ೨. ಹೆಂಡತಿ : ನಲ್ಲೆ ಲಕ್ಷ್ಮೀಮತಿಯು ಸಹ ತಾನುಲ್ಲಸದಿ ಕುಳ್ಳಿರಲು (ನಾಗಜ. ೩೦-೫೪). [ನಲ್ಲ₁ + – ಎ₂ ]

**ನಲ್ಲೆಣ್ಣೆ** (ನಾ). ಅಡುಗೆಗೆ ಉಪಯೋಗಿಸುವ ಎಣ್ಣೆ ; ಒಳ್ಳೆಯ ಎಣ್ಣೆ : ಎಳೆಯ ಬಾಳೆಯ ಹೂವಿನೆಸಳ ಕಾಯ್ಗಳನು ಸಂಬಳಿಸಿವಾ ಮುಡಿಗೆ ನಲ್ಲೆಣ್ಣೆ ಸುಣ್ಣವನಿಕ್ಕಿ ತಿಳಿಯಕ್ಕಿಗಟ್ಟಿನಿಂದುತ್ತರಿಸಿ (ಸೂಪಶಾ. ೪-೩೪).

[ ನಲ್ + ಎಣ್ಣೆ ]

**ನಲ್ಲೆತ್ತು** (ನಾ). ೧. ಒಳ್ಳೆಯ ಎತ್ತು ; ಉತ್ತಮವಾದ ವೃಷಭ : ನಲ್ಲೆತ್ತುವಿಡಿದು ನಾಡೊಳಗೆಲ್ಲಂ ಪೆಸರ್ವೆತ್ತ ಜೀವದನವಂ ಕೊಂಡೊಯ್ವಲ್ಲಿ ವೀರವುರ್ಣಾಂ ನಿಲ್ಲದೆ (ಪುಣ್ಯಾಸ್ರ. ೬-೧೮) ; ನಲ್ಲೆತ್ತು ಬಂಡಿ ಬಲವಿಲ್ಲದ ಆರಂಬ ಕಲ್ಲು ಕಸಗಳನು ಬಿಟ್ಟಾತ ಹೊಲದೊಳಗೆ ಹುಲ್ಲನೇ ಬೆಳೆವ (ಸರ್ವಜ್ಞ. ೧೩೩೦). ೨. ಒಳ್ಳೆಯ ಎತ್ತುಗಳ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ : ನಲ್ಲಾವು ನಲ್ಲೆತ್ತು ಕಳುಕು (ಎಕ. VI, ತರೀಕೆ. ೩೦-೨೮ ; 1185) ; ನಲಾವು ನಲ್ಲೆತ್ತು ಕಳುಕು ಕಂಡಿಕೆವಣ (ಮ್ಯಾಆರಿ. ೧೯೪೦, ೬-೨೫ ; 1215) ; ನಲ್ಲೆತ್ತು ನಲ್ಲವಿಡ್ಡಾಯಗೋಣಿ ಕವಡಿಯಿಲ್ಲ (ಎಕ. IV (R), ಕೊಳ್ಳೇಗಾ. ೩೭-೩೦ ; 1304) ; ಕ್ರಯ ಕಡ್ಡಾಯ ನಲ್ಲೆತ್ತು ನಲ್ಲೆಮ್ಮೆ ಪೊಂಬಳಿ × × × (ಮ್ಯಾಆರಿ. ೧೯೩೯, ೫೩-೧೧ ; 1406) ; ಕ್ರಯ ಕಡಾಯ ಭಿಟ್ಟ ಕೊಟ್ಟ ನಲ್ಲೆತ್ತು ನಲ್ಲೆಮ್ಮೆ (ಮ್ಯಾಆರಿ. ೧೯೩೯, ೫೭-೩೦ ; 1480).

[ ನಲ್ + ಎತ್ತು₂ ( < ಎಱ್ತು₁ ) ]

**ನಲ್ಲೆಮ್ಮೆ** (ನಾ). ೧. ಒಳ್ಳೆಯ ಜಾತಿಯ ಎಮ್ಮೆ. ೨. ಒಳ್ಳೆಯ ಎಮ್ಮೆಗಳ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ : ಈಂತಿ ಅಧಿಕಾರವ ಅವಸಗಿ ಹಡದು ಬಂದಾತ ತುನ ಧರ್ಮ್ಮವಾಗಿಯ ಪ್ರತಿವಾಳಿಸುದು ನಲ್ಲೆಂಮೆಯ [ವ]ರಣವ್ನ ಶ್ರೀಮತು ಮಾರ್ಕಂಡೇಸರ (ಸಾಇಇ. IX-1, ೩೨೮-೧೪ ; 1197) : ನಲ್ಲೆಂಮೆಯು ಉಗ್ರಾಣ ನಾರಣವೆಗ್ಗಡೆಯ ಗಿರಿಪಯ್ಯ ಪಿರಿಯಣಾಂಗಳು (ಸಾಇಇ. IX-1, ೩೪೯. ೪ ; 1232) : ಗಡುಗೆ ನಿವೇದ್ಯ ನಂದಾದೀವಿಗೆ ಮಂನಿರ್ಬ್ಬರು ಮಹಾಜನಂಗಳ ಭೋಜನಕ್ಕಂ ಬಿಟ್ಟ ನಲ್ಲೆಂಮೆ ನಲ್ಲಾವು . . . ಧಾರಾಪೂರ್ವ್ವಕಂ ಮಾಡಿಕೊಟ್ಟರು ನಲ್ಲೆಮ್ಮೆಯ ಪದಿಕೆಯನೆತ್ತುವ ಹೆಗ್ಗಡೆಗಳಾರು ಬಂದಡಂ ತಂಮ ಧರ್ಮವಾಗಿ ಪ್ರತಿ

ಪಾಳಿಸುವರು (ಸೌಇಇ. IX-1, ೩೪೯-೭; 1285); ತುಪ್ಪ ನಲ್ಲೇರು ನಲ್ಲೆಮ್ಮೆ ಹೊಡಕೆ ತಿರುಪು ವಗ್ಗ ಮುದ್ರೆ ಕ್ರಯ . . . ( ಧಿಕವಾಸ ಮುಂತಾಗಿ ಯೇನುಳ ಸರ್ವಸ್ವಾಮ್ಯವನೂ ನೀಲು ಆಗುಮಾಡಿಕೊಂಡು . . . ಭೋಗಿಸಿ ಬಹುದು (ಸೌಇಇ. IX-11, ೪೪೦-೨೫; 1419); ಕ್ರಯ ಕಡಾಯಭಟ್ಟಕೊಟ್ಟ ನಲ್ಲೆತ್ತು ನಲ್ಲೆಮ್ಮೆ ಮಾವಿನ ಬಟ್ಟ . . . ನಿವಾಗೆ ಧಾರೆಯೆರದು ಕೊಟ್ಟು (ಮೈಆರಿ. ೧೯೩೪, ೨೭-೩೦; 1430).

[ ನಲ್ + ಎಮ್ಮೆ (<ಎರ್ಮೆ) ]

**ನಲ್ಲೆವೆಣ್** (ನಾ). ಪ್ರೀತಿಯ ಹೆಣ್ಣು; ಪ್ರಿಯೆ: ಒಳ್ಳಿತಾಯ್ತುದ ಪೇಳ್ವೆ ವೆಮ್ಮಣ್ಣಗೆಂದರು ನಲ್ಲೆವೆಣ್ಣದೆ ನಾಟಿ ಬಿದಱಿ (ಧರಕ. ೪೦-೭೭).

[ ನಲ್ಲೆ + ಪೆಣ್ ]

**ನಲ್ಲೇರು** (ನಾ). ಒಳ್ಳೆಯ ನೇಗಿಲಿನ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ: ತುಪ್ಪ ನಲ್ಲೇರು ನಲ್ಲೆಮ್ಮೆ ಹೊಡಕೆ ತಿರುಪು ವಗ್ಗ ಮುದ್ರೆ ಕ್ರಯ ಕಡ್ಡಾಯ . . . ಮುಂತಾಗಿ ಯೇನುಳ ಸರ್ವಸ್ವಾಮ್ಯ ವನೂ ನೀಲು ಆಗುಮಾಡಿಕೊಂಡು . . ಭೋಗಿಸಿ ಬಹುದು (ಸೌಇಇ. IX-11, ೪೪೦-೨೫; 1419). [ ನಲ್ + ಏರು₂ (<ಏರ್) ]

**ನಲ್ಲೈವರು** (?) (ನಾ). (?): ತಗೂಡರ ಕುರುಳ ಕೊಗೂಣ್ಣೆ ಎಡತಲೆಯ ಕೊತದ ಪುಳ್ಳಿಗನುಂ ಕಂನ್ನೆಲ್ಲೆಯ ಬದ್ರುಹೆ ಐಯನೂಂ ನಿಟ್ಟರೆಯ ಬೋಕರ ಅಚ್ಚಗಣ್ಣನುಂ ನಲ್ಲೈವರು ಸಕ್ಷಿ (ಎಕ. III, ನಂಜನ. ೦೬೯-೦೯; 972 ?).

[ P ಇದು 'ನಾಲ್ವರು' ಎಂಬುದರ ಅಪಲಿಖಿತವಿರಬಹುದೆ? ]

**ನಲ್ವ** (ನಾ). ದೂರವನ್ನು ಅಳೆಯುವ ಒಂದು ಪ್ರಮಾಣ; ನಾನೂರು ಹಸ್ತಗಳ ಅಳತೆ; ಫರ್ಲಾಂಗು: ಆ ಸುಧನ್ವಂ ಬಳಿಕ ಮೇದಿನಿಯದರ್ದಿವನ ತೆಗೆದೆಚ್ಚ ನರ್ಜುನನ ತೇರೊಂದು ನಲ್ವಮಾತ್ರಂ ತೊಲಗಲು (ಜೈಮಿಭಾ. ೦೩-೩೦). [ ಸಂ. ]

**ನಲ್ವಗಲ್** (ನಾ). ೧. ಒಳ್ಳೆಯ ಹಗಲು. ೨. ಒಳ್ಳೆಯ ದಿವಸ; ಶುಭ ದಿನ: ಬಟಾಕ್ಕ ಮೌಹೂರ್ತಿಕರ್ ಕೂರ್ತು ವೇಟ್ಟ ನಲ್ವಗಲೊಳ್ . . . ನಾಮಕರಣಮಂ ನಿರ್ವರ್ತಿಸುತ್ತ (ಚಳಪ. ೪-೮೩). [ ನಲ್ + ಪಗಲ್ ]

**ನಲ್ವಗೆ** (ನಾ). ೧. ಒಳ್ಳೆಯ ಮನಸ್ಸು; ಸ್ನೇಹಪರವಾದ ಮನಸ್ಸು. 'ನಲ್ವಗೆಗೊಳ್' ಪರಾ. ೨. ಉಲ್ಲಾಸದಿಂದ ಕೂಡಿದ ಮನಸ್ಸು; ಪ್ರಸನ್ನಚಿತ್ತ. 'ನಲ್ವಗೆವೆಱು' ಪರಾ. [ ನಲ್ + ಬಗೆ₁ ]

**ನಲ್ವಗೆಗೊಳ್** (ಕ್ರಿ). ಒಳ್ಳೆಯ ಮನಸ್ಸನ್ನು ಹೊಂದು; ಪ್ರಸನ್ನವಾಗು: ನಿನ್ನಯ ಚಾಗಮುಂ ಸಿರಿಯುಂ . . . ನಿನ್ನಿಯುಮಾರ್ಗಮಚ್ಚರಿಯನಿತ್ತ ಪುವವ್ಮೊಡೆಯಂಗಮಿಾ ತೆಱಂ ಪೊನ್ನದು ಕಮ್ಮಿತಾದ ತೆಱನಲ್ಲವೆ ನಲ್ವಗೆ ಗೊಂಡೊಡಿರ್ದರುಂ (ಕಬ್ಬಿಕಾ. ೦೭೬) [ ನಲ್ವಗೆ + ಕೊಳ್₁ ]

**ನಲ್ವಗೆವೆಱು** (ಕ್ರಿ). ಸಂತೋಷಗೊಳ್ಳು; ಉಲ್ಲಾಸದಿಂದ ಕೂಡು: ತಾವರೆಮೊಗದವರ್ಮುದ್ದುಮೊಗದ ಏಗೆ ಚೆಲುವಿನ ಬಟ್ಟಮೊಗದವರು ನಲ್ವಗೆವೆತ್ತು ನಡೆದರೊಗ್ಗಿನಲಿ (ಮೋಹತ. ೨೪-೦೩). [ ನಲ್ವಗೆ + ಪೆಱು₁ ]

**ನಲ್ವಚ್ಚ** (ನಾ). ಅಂದವಾದ ಒಡವೆ-ಆಭರಣ: ಚಲಧಮ್ಮಿಲ್ಲಕ್ಕೆ ಚಾಂಪೇಯದ ಬಿರಿಮುಗುಳಂ . . . ಉರುಕುಚಂಗಳ್ಗೆ ಸನ್ನಾಧವೇ ಕುಟ್ಟಲವಂ ನಲ್ವಚ್ಚವಂ ಗೈದುಱಿ ತೊಡಿಸಿದರಾ ಕಾಂತೆಯರ್ಕಾಂತೆ ನಾಗಳ್ (ಉದ್ಭಟ. ೯ ೭೩). [ ನಲ್ + ಪಚ್ಚ₃ ]

**ನಲ್ವಡಿಗ** (ನಾ). ಸುಂದರವಾದ ಪೀಕದಾನಿ: ಒಮ್ಮೆ ವೀಳೆಯವೀಯು ತೊಮ್ಮೆ ಪನ್ನೀರ್ಗುಡುತೊಮ್ಮೆ ನಲ್ವಡಿಗಪನೊದಪಿಸ ತ ಒಮ್ಮೆ . . . ನಡೆಪ್ಪೆ (ನೇಕಗೂ. ೫೭-೨). [ ನಲ್ + ಪಡಿಗ ]

**ನಲ್ವಣ್ಣ** (ನಾ). ಅಂದವಾದ ಬಣ್ಣ; ಸುಂದರವಾದ ವರ್ಣ: ನಸುದೋಲ್ವ ಮೇಲುದಸಿಸು ಮುಸುಕತಲರ್ಗಣ್ಣ ಬಂಬಲ್ವೆಳಗುಗಳ ಸೂಸುತೆ ನಲ್ವಣ್ಣದಿಸ್ವಳ [ಬಾಪಾಂ. ೧೧೧೯]ಯಸುಱಿ ಮೇಳೆಯುಸಿಕೊಂಡು

. . . ಕಾಂತೆಯೊರ್ವಳ್ ವಿಲಾಸದಿಂ ಚೆಲ್ವಮರೆ ಪದ್ಮರಾಜಾಂಕವಾಲೆಯ ಬಾಜಿಸುತ್ತಿಸೆದಳ್ (ಪದ್ಮರಾ. ೮-೨೦). [ ನಲ್ + ಬಣ್ಣ ]

**ನಲ್ವತ್ತ** (ನಾ). ಒಳ್ಳೆಯ ಬತ್ತ; ಶ್ರೇಷ್ಠ ದರ್ಜೆಯ ನೆಲ್ಲು (?): ಸ್ವಸ್ತಿಶ್ರೀ ಅಪ್ಪೋರಯ್ಯದಿವಕ್ಕರ್ಮ ಪದಿಕ್ಕಣ್ಣಾಗ ನಲ್ವತ್ತ × × × ಮರವಾಸುಕೆಯ (ಎಕ. VI, ಚಿಕ್ಕನಾ. ೫೦-೭; ಕು. 450 ?).

[ ನಲ್ + ಬತ್ತ₁ ]

**ನಲ್ವಯಕೆ** (ನಾ). ಪ್ರಿಯವಾದ ಬಯಕೆ; ಹಾರೈಕೆ: ಸ್ಕೂಲ್ ಅಧಿಕಾರ ಪದದಿಂದ ಉರುಳಬೇಕೆನ್ನುವುದು ಅವಳ ನಲ್ವಯಕೆ (ಬಡ್ಡಪ್ರ. II ೩೬೦೪).

[ ನಲ್ + ಬಯಕೆ₂ ]

**ನಲ್ವರಕೆ, ನಲ್ಪರಕೆ** (ನಾ). ಪ್ರೀತಿಯ ಆಶೀರ್ವಾದ; ಶುಭಾಶೀರ್ವಾದ: ಅವುಳರುಮಟ್ಟಜಿನೊಱಲ್ದು ತೆಗೆದಟ್ಟ ಪರ[ಸ] ನಲ್ವರಕೆಗಳಿಂ (ಪಂಪಭಾ. ೯-೩); ಕಾರ್ಯಸಿದ್ಧಿಯಕ್ಕೆಂದು ಪರಸೆ ನಲ್ವರಕೆಗಳಿಂ (ಸುಕುಮಾ. ೨-೪೫); ಮಾತುಳಂಗಂ ಮಾತುಳಾನಿಗಂ ತುಟಾಲ್ಗೆಯ್ಯುದುವವರನೇಕ ನಲ್ವರಕೆ ಗಳ್ವೆರಸು ಪರವೋತ್ಸವಪರಂಪರೆಯನೆಯ್ದಿ (ಪುಷ್ಪಪು. ೮-೪೯ ವ); ಪುರೋಹಿತರ್ ನಾಮಕರಣಂಗೆಯ್ದು, ನುಡಿದು ನಲ್ವರಕೆಯಂ (ಶ್ರೀರಾಮಾ. ೦೭-೪೫೦). **ನಲ್ಪರಕೆ**: 'ನಲ್ಪರಕೆವೆಱು' ಪರಾ. [ ನಲ್ + ಪರಕೆ₁ ]

**ನಲ್ವಳಿ** (ನಾ). ೧. ಒಳ್ಳೆಯ ದಾರಿ; ಸನ್ಮಾರ್ಗ: ಅರ್ಗೆ ನಲ್ವಳಿ ತಪ್ಪಿತ್ತೋ ತಪ್ಪಿತ್ತಾತಂಗೆ ಮುಕ್ತಿಯುಂ (ಸೌನಂದ. ೦೪-೪೪). ೨. ಒಳ್ಳೆಯ ವಂಶ; ಸತ್ಕುಲ. 'ನಲ್ವಳಿಗ' ಪರಾ. [ ನಲ್ + ಬಳಿ₁ (<ಬಟ್ಟಿ₂) ]

**ನಲ್ವಳಿಗ** (ನಾ). ಒಳ್ಳೆಯ ವಂಶದಲ್ಲಿ ಹುಟ್ಟಿದವನು; ಸತ್ಕುಲಪ್ರಸೂತ; ಕುಲೀನ: ಜವ ನಿಗನುಂ ಸೊಬಗನುಂ ನಲ್ವಳಿಗನುಮ್ಮೆಸಿರಿವಂತನುಂ ಚೆಲ್ವನುಮವನಾಗಿರ್ದೊಡಂ ವಿಚಾರನೆಂದುಂ ನಿನ್ನಂ (ಸೌನಂದ. ೬-೨೦).

[ ನಲ್ವಳಿ + - ಗ₂ ]

**ನಲ್ವಾಡು** (ನಾ). ಪ್ರೇಮಗೀತೆ; ಪ್ರಣಯಗೀತೆ: ತರುಣವರ್ಗದ ನಲ್ವಾಡುಗಳನ್ನು ಕೇಳಬೇಕು: ತಾಳವಿಲ್ಲ; ತಂತಿಯಿಲ್ಲ (ಪಂಲಿ. ೨೪); ನೀವು ಇಷ್ಟೊಂದು ನಲ್ವಾಡುಗಳನ್ನು ಬರೆದಿದ್ದೀರಿ. ಈ ಸ್ಫೂರ್ತಿಯ ನೆಲೆ ಯಾವುದು ಹೇಳಬಲ್ಲಿರಾ ? (ಕಮಚೀ. ೩೫೪). [ ನಲ್ + ಪಾಡು₃ ]

**ನಲ್ವಾತು** (ನಾ). ಒಳ್ಳೆಯ ಮಾತು; ಹಿತವಾದ ನುಡಿ. 'ನಲ್ವಾತುಗುಟ್ಟು' ಪರಾ. [ ನಲ್ + ಮಾತು₁ ]

**ನಲ್ವಾತುಗ** (ನಾ). ಹಿತವಾದ ಮಾತುಗಳನ್ನಾಡುವವನು; ಸವಿಮಾತುಗಳನ್ನಾಡುವವನು: ಪ್ರಜೆಗಳ್ ವೀರರೆನಿಸಿಯುಂ ವಿನಯವಂತರುಂ ನಲ್ವಾತುಗರಾಗಿಯುಂ ಸನ್ನಿಗರುಂ (ಚಳಪು. ೦೪೩-೦೭).

[ ನಲ್ವಾತು + - ಗ₂ ]

**ನಲ್ವಾತುಗುಟ್ಟು** (ಕ್ರಿ). ಒಳ್ಳೆಯ ಮಾತುಗಳನ್ನಾಡು: ಮುದದಿಂದೋ ಸಱಗೇಳಲೆಂದು ನಿಲೆ ಮೋನಂಗೊಂಡು ನಲ್ವಾತುಗುಟ್ಟದೆ ಮಾಣ್ದೊಡೆ ಸಿಪ್ಪಲಂ (ಕೋಳಕೋಟ. ೦೨-೫೬). [ ನಲ್ವಾತು + ಕುಟ್ಟು₁ ]

**ನಲ್ವಾಸು** (ನಾ). ಮೃದುವಾದ ಶಯ್ಯೆ; ಮೆತ್ತನೆಯ ಹಾಸುಗೆ: ಆ ಚಂದ್ರನಕಿ . . . ದಶರಥನ ಸೊಸೆಯನಿರಿಸಿದಳಂಚೆತುಪ್ಪುಳಿಂ ಸಮದ ನಲ್ವಾಸಿನೊಳ್ (ಶ್ರೀರಾಮಾ. ೩೩೦ ೪೪). [ ನಲ್ + ಪಾಸು₂ ]

**ನಲ್ವಾಟವಣ್** (ನಾ). ಸವಿಯಾದ ಬಾಳೆಯ ಹಣ್ಣು; ರುಚಿಯಾದ ಬಾಳೆಹಣ್ಣು: ಉರುಕರ್ಣಿಕಾರದಲರಂ ನಲ್ವಾಟವಣ್ಣಂ ಮಹೀಶಂಗಿ ತ್ತಳ್ಪಸವಾಲಿಕಾಂಗನೆ (ಉದ್ಭಟ. ೯ ೦೨); ನಲ್ವಾಟವಣ್ಣಂ . . . ತೋಂಟಿಗಂ ಕೊಟ್ಟನೊರ್ವಂ (ಕಬ್ಬಿಕಾ. ೮೮). [ ನಲ್ + ಬಾಟವಣ್ ]

**ನಲ್ವಿಡಿ** (ನಾ). ಒಂದು ಊರಿನ ಹೆಸರು; P ಈಗಿನ ಬಳ್ಳಾರಿಜಿಲ್ಲೆಯ ಕುರುಗೋಡು ತಾಲ್ಲೂಕಿನ ನಲವಡಿ: ನೊಳಂಬಮಹಾದೇವಿಯ ರಂಗಮುಂ ಗಂಗೆಯೊಳಿಕ್ಕಿ ಬಂದ ಬ್ರಾಹ್ಮಣ ಪಾದಪೊಸೆನಂಗಿಯರ್ಗೆ

ಕೃಷ್ಣಯ್ಯಂಗಂ ತುಪ್ಪದ ದೇವಯ್ಯಂಗಂ ನಲ್ವಿಡಿ ೧೨ ಐ ಕಂಪಣಂ ಒರ್ವಾಯಂ ಕುಡೆ (ಸೌಇಇ. IX-1, ೯೨-೧೬ ; 1036). [ ? ]

**ನಲ್ವು** (ನಾ). ನಲಿವು; ಸಂತೋಷ : ಬಿಲ್ವಪತ್ರೆಯನೆಯ್ದೆ ಕೊಯ್ದಾತಿ ನಲ್ವಿನಿಂ ಶಿವಲಿಂಗಪೂಜೆಗೆ ಸಲ್ವ ವಸ್ತುವಿದೆಂದು ಶೋಧಿಸಿ ಸಜ್ಜೆಯೊಳು ತುಂಬಿ (ಬಸಪು. ೪೩-೨೬). 'ನಲವು$_1$', 'ನಲಿವು' ಪರಾ.

[ ನಲ್ + - ವು ]

**ನಲ್ವೆಣ್** (ನಾ). ಒಳ್ಳೆಯ ಹೆಂಗಸು ; ಪತಿವ್ರತೆ.

ನಲ್ವೆಂಡಿರ್ (ಬಹುವ) : ಪಲನೀರ ಮುಳುಗಿ ಮುಂಗೆಡದೆ ನಲಿದೆಸಗುವ ನಲ್ವೆಂಡಿರ ನಡತೆಗೆ ಪಲನೇಮಂಗಳು ಪಾಸಟಿಯೆ (ಹರಿಬ. ೨-೨೩) ; ಮೂವರಂ ನಲ್ವೆಂಡಿರು ಕಾಮದಿಂ ಪ್ರೇಮದಿಂ ಮದುವೆನಿಂದಿರ್ದೊಡಂ (ಶ್ರೀರಾಮಾ. ೮-೧೯೦). [ ನಲ್ + ಪೆಣ್ ]

**ನಲ್ವೆಸ** (ನಾ). ಒಳ್ಳೆಯ ಕೆಲಸ ; ಉತ್ತಮ ಕಾರ್ಯ,-ಕರ್ತವ್ಯ : ಈ ಎಡರಿನೊಳ್ ನಿಮ್ಮ ನಲ್ವೆಸನ್, ಜನವುಂಡದಂತೊಳ್ಪು ನುಡಿದು, ನಂಬುಗೆಯನುಳಿಸುವುದು (ಪಾರಸಿ. ೦೯-೪೪೦). [ ನಲ್ + ಬೆಸ$_1$ ]

**ನಲ್ವೆಸರ್** (ನಾ). ಉತ್ತಮವಾದ ಹೆಸರು ; ಚೆನ್ನಾದ ಹೆಸರು : ದೇವರಾಜರಸರೆಂದುಂ ಚೆನ್ನರಾಜರಸರೆಂದುಮನ್ವರ್ಥಂಗಳಾದ ನಲ್ವೆಸರ್ಗಳನಿಟ್ಟು (ಚಿಕವಿ. ೨-೨೪). [ ನಲ್ + ಪೆಸರ್ ]

**ನಲ್ವೆಟ್$^3$** (ನಾ). ಸುಂದರವಾದ ಚಂದ್ರ : ಸುರನಿಮ್ನಗೆ ನಲ್ವೆಟ್ ಕೆಂಜೆಡೆ ತಳ್ತುರಿಗಣ್ಣೆಸುಳಂ ಗರಳಂ ಭಸಿತಂ . . . ಫಣಾಧರನೊಪ್ಪಿರೆ ರಂಜಿಸಿದಂ ಗಿರಿಶಂ (ವೃಷವಿ. ೪೨-೩೪). [ ನಲ್ + ಪೆಟ್$^3$ ]

**ನಲ್ವೊಟ್ತು** (ನಾ). ಒಳ್ಳೆಯ ಗಳಿಗೆ ; ಶುಭಮುಹೂರ್ತ : ಬಟಿಕ್ಕೆ ರಾಜನೃಪಂ . . . ಜೋಯಿಸಿಗನಿತ್ತ ನಲ್ವೊಟ್ತಿನೊಳೋಲಗವಿರ್ದು . . . ಅರಸುಗೆಯ್ಯುತ್ತಿರೆ (ಚಿಕವಂ. ೪೯-೦೬). [ ನಲ್ + ಪೊಟ್ತು ]

**ನಲ್ಸೊಗ** (ನಾ). ಅತಿ ಸುಖ ; ಅತ್ಯಾನಂದ : ಒಡರ್ಚಿ ನಲ್ಸೊಗವುನಗ್ಗಿ ವೊಗರ್ಗೆ ಸಮಂತು ಬೆಳ್ಪಸಂದಳೆದೆಸೆದಿರ್ದ ಬಾನ್ನವಿರನೊಳ್ಪರಿಜಂ ತಳೆದೊಪ್ಪಿ ತೋಱಿದಂ (ಕಬಕಂ. ೩-೯). [ ನಲ್ + ಸೊಗ ]

**ನವ$_1$** (ನಾ). ಒಂದು ಸಂಖ್ಯಾವಾಚಕ ; ಒಂಬತ್ತು : "ನವ. ಪದಾರ್ಥ. ರಂಧ್ರ . . . ನಾಟ್ಯಾಂಗ, ಇಂತಿನಿತುಂ ೯ಕ್ಕೆ ಪೆಸರು" (ವ್ಯವಹಾ. ೦೦-೩) ; ನವ ನಿಧಿ ಶರ ಶಶಿ ಸಂಖ್ಯಾಪ್ರವಿಲಸಿತಂ ಶಾಲಿವಾಹನ ಶಕಾಬ್ದಂಗಳ್ (ಯಾದಕಂ. ೦೬-೦೯೬). 'ನವನಿಧಿ', 'ನವರತ್ನ' ಪರಾ. [ ಸಂ. ನವನ್ ]

**ನವ$_2$** (ಗು). ೧. ಹೊಸತಾದ ; ನವೀನವಾದ : "ನವಮಭಿನವಂ ನವೀನಂ ನೂತನಂ ನವ್ಯಮಿವು ಪೊಸತೆನಿಕು" (ಮಂಗರಾ. ೦೨೯-೦೩) ; ಅದೊರ್ಮೆ ನವಕಾವ್ಯಬಂಧರಚನಾವಿಶೇಷಂಗಳಿಂದಂ . . . ಕಳೆವನಿಂತು ಪೊಟ್ತುಂ ನೃಪಂ (ಕಾದಂಪೂ. ೨೨) ; ತನ್ನ ಬಾಟಿಕೆಯನ್ನೇತಬಿದೆಂಬ ಮೆಯ್ಮಱಕದಿಂ ನವಚಿತ್ರಪಟಂಬೊಲಿರ್ಪನಾ ಭೂತಳವಲ್ಲಭಂ (ನಳಚಂ. ೬೩) : ಐತಂದುಮೆಡೆಬಿಡದೆ ಕ್ರೌಂಚಸಾರಸಪಂಕ್ತಿ . . . ನವವರ್ಷಹರ್ಷದುನ್ಮಾದಕಲನಾದದಿಂ (ಶ್ರೀರಾಮಾ. ೦೩-೩೯೯). ೨. ಎಳೆಯ ; ತರುಣ ; ತಾಜಾ : ನವ ಕಂಕೇಲುದ್ಗಮಮುಂ ತವೆ ಕೊಯ್ಕಲ್ಕೆಯ್ಯನಿಕ್ಕಿ (ಅದ್ಭುಟ. ೯-೬೬) ; ಶೋಳ ನವಗುಂಜಿಯುಂ ಕಿಸಲಯದ ನಿಱಿಗಳಿಂ ಭಾಳತಟದೆಡೆಯ ಕತ್ತುರಿಯ ನವತಿಲಕದಿಂ (ರಂಗಪು. ೬-೨೦). 'ನವಕನ್ನೆ', 'ನವಪಲ್ಲವ' ಪರಾ. ☞ 'ನವ' ಎಂಬುದನ್ನು ಇತರ ಅನೇಕ ನಾಮಪದಗಳೊಡನೆ ಸೇರಿಸಿ ಸಮಾಸ ಗಳನ್ನು ಮಾಡುತ್ತಾರೆ.

ನವನವ (ದ್ವಿರುಕ್ತಿ) : ಮತಿಯು ತಾಂ ಸತ್ಯಶುಭಗಳ ನವನವಾಂಶಗಳ ಗತಿಯನರಸುತ ನಡೆಯೆ ಪೌರುಷಪ್ರಗತಿ ಮತನೀತಿ ಶಾಸ್ತ್ರಗಳು ರಾಜ್ಯ ಸಂಧಾನಗಳು ಮತಿಯ ಕಿಂಚಿದ್ವಿಜಯ (ಮಂಕುಳ. ೨೨೮).

[ ಸಂ. ]

**ನವಕ$_1$** (ಗು). ೧. ಒಂಬತ್ತರಿಂದ ಕೂಡಿದ. (ನಾ). ೨. ಒಂಬತ್ತರ ಗುಂಪು : ಬಟಿಯಂ ಸಂಜ್ವಳನಕಷಾಯಚತುಷ್ಕನೋಕಷಾಯ ನವಕ ನಾಮ ತ್ರಯೋದಶಪ್ರಕೃತಿಗಳನರೆದು (ಶಾಂತಿಪು. ೦೦-೦೦೦ ವ) ; ಇಂತು ಸೂತ್ರ ನವಕದಿಂ . . . ಪೀಠಿಕಾಕಥನಂ ಸಮಾಪ್ತಂ (ತತ್ತ್ವಸೂ. ೦೮೩) ; ಬಳಿಕ್ಕಂ ದ್ವಿವಿಧಪೂರ್ವದಶಂಗಳ್ ತಾವಿರೆ ಸದ್ದಿವಸಂಗಳ್ ಕೋವಿದ ಕೇಳ್ ನವಕಂಗಳ್ (ಜಾತಾಸ್ಕ. ೪-೧೧-೯೯). ಕ್ರಮದಿ ಮೂಱಿಂ ಬಿಟ್ಟುದು ಪರಿದುತ್ತಮವನ್ನೆದಂ ಮೇಲೆ ನವಕವ ಸುಮುಖನಾಗಿಯೆ ನಡಿಸುವವನಾವವನಿವಂ ಧನ್ಯ (ವಿವೇಧ. ೮-೨೪). [ ಸಂ. ]

**ನವಕ$_2$** (ನಾ). ೧. ಹೊಸತನ ; ನವೀನತೆ ; ಅಪೂರ್ವತೆ : ಗುಲ್ಪಂಗಳೆಸೆವವು ವೃತ್ತವೆತ್ತತಿ ನವಕದಲಿ ಸತಿಯು (ಬಸಪು. ೪-೦೬) ; ನವಕವಿಲ್ಲದ ಕಳಿದ ಮುನ್ನಿನ ದಿವದ ತೊಟ್ಟಂ ಕಳೆಯದರಳಂ ವಿವರದಲಿ ಶೋಧಿಸದೆ (ಬಸಪು. ೪೭-೦೩). ೨. ಹೊಸಬ ; ಅಪರಿಚಿತ : ನವಕನಿವಂ ಬಂದಂ ಮಾಣವಕಂ ತಾನೆತ್ತಣಂದಮೆಂದಾ ವಿಪ್ರಪ್ರವರನ ಸಭೆ . . . ಇನಿತು ಬೇಗವಿಾಕ್ಷಿಸುತಾಗಳ್ (ವರ್ಧಪು. ೦೬-೬). [ ಸಂ. ]

**ನವಕಂಟಕ** (ನಾ). ಹೊಸದಾಗಿರುವ ಮುಳ್ಳು ; ಎಳೆಯ ಮುಳ್ಳು : ನವಕಂಟಕವಾಡಿಯುಂ ನಡೆ ಸವತಿಯುನಪ್ಪುದುದನಱಿದು ಪತಿ ಪೆಗಲಿಂ ಪೊತ್ತವಳಗಿದಳ್ (ಲೀಲಾವ. ೦೩-೯೦). [ ನವ$_2$ + ಕಂಟಕ ]

**ನವಕಂಡ** (ನಾ). (?) : ಅ[ ಸು ]ವಟ್ಟಗವೊನ್ದು ದೇಗುಲಕ್ಕೆ ನವಕಣ್ಣದ ಪಲಗೆಯುವ ಕೊಳನುಂ ಬೀಕೆಸ್ವರಕೆ ಕೊಟ್ಟ (ಸೌಇಇ. XI-1, ೩೩-೦೨ ; ೨೨೨). [ ? ]

**ನವಕಂಬಡೆ** (ಕ್ರಿ). ಹೊಸತನವನ್ನು ಪಡೆ ; ನವೀನವಾಗು : ಥವಿವಡೆದು ನವಕಂಬಡೆದ ನವ್ಯಸಹಸ್ರದಳಶತದಳಮನರ್ಚಿಸುತ (ಬಸಪು. ೩೩-೦೩).

[ ನವಕ$_2$ + ಪಡೆ$_1$ ]

**ನವಕನ್ನೆ** (ನಾ). ಎಳೆಹರಯದ ಕನ್ಯೆ ; ಹೊಸಪ್ರಾಯಂದ ಹಂಡಂಗಿ : ಎಸಳೆಸಳಿನ ಸಿರಸಲ ಚವುರಿಸುವದು ಮೈಯನ್ನೆ ಬೀಸಲು ಮೈನವಿರೇರಿದ ನೇರಿಳೆ ನವಕನ್ನೆ (ಮುಕ್ತಕಂ. ೪೪-೮). [ ನವ$_2$ + ಕನ್ನೆ$_1$ ]

**ನವಕಮಲ, ನವಕಮಳ** (ನಾ). ಆಗ ತಾನೇ ಅರಳಿದ ತಾವರೆ ; ಹೊಸದಾಗಿ ಅರಳಿದ ಕಮಲ : ನವಕಮಲೋದ್ಗಮದಿಂದುತ್ಸವಮಂ ತಾಂ ಗಂಧಗಜಕೆ ಕಮಲಿನಿ ಮಾಟ್ಪಂತೆವೊಲರಸ ನಿನಗೆ ಪರಮೋತ್ಸವಮಂ ಮಾದೇವಿ ಮಾಟ್ಕುಮಿಾ ಕನಸಿಂದಂ (ಕಾದಂಪೂ. ೩೬೩). ನವಕಮಳ : ನವಕಮಳದಳಂಗಳ್ ಭೀಕರಂ ಬಲ್ಪುಮಾಗಿರ್ಪುವೆ ತಳಕೆ ತಳಂಗಳ್ ನೋಯವೇ ಮೆಟ್ಟಿದಂದೆಂದವಱಿಸಟನವಳ್ದಿರ್ ಮೆಟ್ಟಿದರ್ ಮೆಟ್ಟರೆಂಬಂತ ವಯವದೊಳೆ ಲೀಲಾನೃತ್ಯದಿಂ ಕಣ್ಗೆವಂದರ್ (ಆದಿಪು. ೭-೩೩).

[ ನವ$_2$ + ಕಮಲ ]

**ನವಕಮಳ** 'ನವಕಮಲ' ನೋ.

**ನವಕರಿ** 'ನೌಕರಿ' ನೋ.

**ನವಕರ್ಮ** (ನಾ). ೧. ಜೀರ್ಣೋದ್ಧಾರದ ಕೆಲಸ ; ಮುರಿದುದನ್ನು ಅಥವಾ ಜೀರ್ಣವಾದುದನ್ನು ಮತ್ತೆ ಕಟ್ಟುವ ಕೆಲಸ : ತಪೋಧನರ ವಿದ್ಯಾರ್ಥಿಮಾಣಿಗಳಾಹಾರದಾನಕ್ಕಂ ಪಾವುಳಪರಿವಾರದ ಜೀವಿತಕ್ಕಂ ದೇಗುಲದ ಖಣ್ಡಸ್ಫುಟಿತ ನವಕರ್ಮ್ಮಕ್ಕವೆಂದು ಕೊಟ್ಟ ಅಲ್ಲಿಯ ಘಳೆಯ ಮತ್ತರು ೫೦ (ನಾಂದೇಡ್. ೩-೨೨ ವ ; 1047). ೨. ನವೀನವಾಗಿ ಮಾಡಿದುದು ; ಹೊಸರಚನೆ : ವಿಶ್ವಕರ್ಮನಿರ್ಮಿತ ನವಕರ್ಮಜಾಳಾಂತರಂಗಳೊಳ್ . . . ಅಕಳಂಕಾಚಾರಸಾರನನೆ ಲಕ್ಷ್ಯಂ ಮಾಡಿ ನೋಡುವಲ್ಲಿ (ಶಾಂತಿಪು. ೬-೩ ವ). [ ನವ$_2$ + ಕರ್ಮ ]

**ನವಕರ್ಮಿಕ** (ನಾ). (?) : ನವಕರ್ಮಿಕ ಮಾಡಿರಿಪುತ ಸಿರಿವೀರ ಪುರಿಸದತ (ಮ್ಯಾಎಶಿ. ೦೯೩೪ : ೨೯). [ ? ]

**ನವಕವಿ** (ನಾ). ಹೊಸಕವಿ ; ಆಧುನಿಕ ಕವಿ : ಕನ್ನಡಿಸುವ ನವಕವಿಯುವ ನಾವನು ವಿರಹಿಣಿಯರ ಬಪಣೆಯನು (ಇಂಚಾಹ. ೨೦೦-೮೭). [ ನವ$_{2}$ + ಕವಿ$_{6}$ ]

**ನವಕವಿತ್ವ** (ನಾ). ಹೊಸಕಾವ್ಯ ; ನೂತನ ಕಾವ್ಯ : ಈ ನುಡಿಯ ಪಾಯುಂಗಳನೆನಗೆ ಪೇಟ್ಟುದುಂ ನಿನ್ನೆಯ್ದುದ ನವಕವಿತ್ವಮುಂ ನೀನಭಿನಯಿಸಿ ದಂತಾಗಿರ್ದಪುದು (ಶಾಂತಿಪು. ೩-೯೩ ವ). [ ನವ$_{2}$ + ಕವಿತ್ವ ]

**ನವಕಳೆ** (ನಾ). ಒಂಬತ್ತು ಅಂಶಗಳು : ಬಿಂದುವೆ ಶಿವಾಂಶಿಕಂ ರಕ್ತ ಶಕ್ತ್ಯಂಶಿಕವು ಚಂದ್ರಾಂಶು ಶುಕ್ಲಶೋಣಿತಮೆ ಸೂರ್ಯಾಂಶುವಿವು ದ್ವಂದ್ವ ಸಮ್ಮಿಳಿತದಿಂ ಪಿಂಡವೆನಿಸಿತ್ತು ರುಧಿರಮ್ಮಾಂಸ ಚರ್ಮತ್ರಿವಿಧಾ ಸಂದು ಮಾತಾಂಶ್ಸಸ್ಥಿ ನಾಡಿ ರೋಮಮಜ್ಜರು ತಂದೆಯಂಶಗ್ನಿ ವಾಯುವು ಯಾತ್ಮಯಿಾ ತ್ರಿತಯ ಬಾಧುರ ಶಿವಾಂಶುಗಳಿಂದೆ ನವಕಳೆಯು ಸಂಯೋಗ್ಯದಿಂ ಪಿಂಡವಹುದು (ನಿಜಮೋ. ೦೪-೪೦). [ ನವ$_{1}$ + ಕಳೆ$_{6}$ (= ಕಲೆ$_{3}$ ) ]

**ನವಕಾಂಡ** (ನಾ). (?) : ನವರತ್ನದ ಸೌಧಂಗಳ ಸುವಿವೆಳಗಾ ಪುರಮನೆಲ್ಲ ಮಾವರಿಸೆ ಜಸರ್ ನವರತ್ನಪುತ್ಥಳಿಗಳೆನೆ ನವಕಾಂಡದರೆಯ್ದೆ ನೋಡ ಬಂದಂತಪ್ಪರ್ (ಹಾಲಾಸ್ಯ. ೧-೪-೭೨). [ ? ]

**ನವಕಾರಮಂತ್ರ** (ನಾ). [ಜೈನ] ಶಾಸ್ತ್ರದಲ್ಲಿ ಪ್ರಸಿದ್ಧವಾದ ಒಂದು ಸೂತ್ರ,-ಮಂತ್ರ ವಿಶೇಷ : ಜೈನಸಾಧುಗಳು ಘನಗಂಭೀರವಾಗಿ ನವ ಕಾರಮಂತ್ರವನ್ನು ಹಾಡಿದರು (ಸವಕಿ. ೨೭೮). [ ನವಕಾರ$_{0}$ (P ← ಪ್ರಾ. ಣವಕಾರ) + ಮಂತ್ರ ]

**ನವಕುರುಜು** (ನಾ). ಹೊಸದಾಗಿ ನಿರ್ಮಿಸಿದ ಮಂಟಪ : ರಂಗವಾಲಿ ಯಿಂದನುಪಮದ ಕಸ್ತುರಿ ಚಳೆಯ ನವಕುರುಜಿನಿಂ ಜನಿತ ಹರುಷದೊಳಸಗಿ ಶರಣ ಸಹ ಬರುತಿರ್ದ ಘನಮಹಿಮ ನಂದೀಶನು (ಲಿಂಗಪು. ೬-೪೦). [ ನವ$_{2}$ + ಕುರುಜು ]

**ನವಕೇಶವ** (ನಾ).=ನವನಾರಾಯಣ ೨: ನವಕೇಶವರುರ್ವರೆಯೊಳಗವರುಂ ಮುನ್ನಾಗಿ ಪೋದರ್ (ಧರ್ಮಾಮೃ. ೫-೨೨೨). [ ನವ$_{1}$ + ಕೇಶವ ]

**ನವಕೋಟಿ** (ನಾ). ಒಂದುಂ ಸಂಖ್ಯೆ ; ಒಂಬತ್ತು ಕೋಟಿ: ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ ನವಕೋಟಿಬ್ರಹ್ಮರಿಗೆ ಪ್ರಳಯವ ಮಾಡುವದ ನಾ ಬಲ್ಲೆನಾಗಿ (ಬಸವ. ೩೯೦). [ ನವ$_{1}$ + ಕೋಟಿ$_{1}$ ]

**ನವಕೋಟಿನಾರಾಯಣ** (ನಾ). ೧. ನವಕೋಟಿಹೊನ್ನಿಗೆ ಒಡೆಯ ನಾದವನಂ ; ಒಂದುಂ ಬಿರುದು ; P ಚಿಕ್ಕದೇವರಾಜರ ಬಿರುದು ೧ ತಮ್ಮಲ್ಲಿದ್ದ ವಸ್ತ್ರಾಭರಣ ದ್ರವ್ಯಗಳನ್ನು ಲೆಕ್ಕಮಾಡಿಸಿ ನೋಡಲು, ನವ ಕೋಟಿ ದ್ರವ್ಯವಾಗಿದ್ದುದರಿಂದ . . . ಉತ್ಸವಕಾಲದಲ್ಲಿ ನವಕೋಟಿ ನಾರಾಯಣ ಎಂಬದಾಗಿ ಹೊಗಳಿಸಿಕೊಳ್ಳುತ್ತ (ಮಹಾವಂ. I, ೧೫೧). ೨. ಪುರಂದರದಾಸರ (ಶ್ರೀನಿವಾಸನಾಯಕನಾಗಿದ್ದಾಗ ಇದ್ದ) ಬಿರುದುಂ: ಬೆಳ್ಳಿ ಭಂಗಾರ ರತ್ನಪಡಿ ವ್ಯಾಪಾರಗಳಿಂದ ಕೋಟ್ಯಾವಧಿ ಧನಾರ್ಜನೆ ಮಾಡಿ ನವಕೋಟಿನಾರಾಯಣನೆಂದು ಹೊಗಳಿಸಿಕೊಂಡನು (ಕಥವಿ. ೦೭೯). ೩. ತುಂಬ ಶ್ರೀಮಂತ,-ಧನಿಕ: ನಮ್ಮ ಶೀನು ನವ ಕೋಟಿನಾರಾಯಣನಾಗ್ತಾನೆ, ನೋಡ್ತಿರಿ (ಹೇಮುಕೂ. ೧೦). ೪. (ಆಲಂ) ಒಂಬತ್ತುಕೋಟಿ ಮಕ್ಕಳನ್ನುಳ್ಳವನು ; ಕೃಷ್ಣ : (ಬ). ೫. ಹೆಚ್ಚು ಮಕ್ಕಳಿರುವವನಂ : (ಬ). [ ನವಕೋಟಿ + ನಾರಾಯಣ ]

**ನವಖಂಡ$_{1}$** (ನಾ). ೧. ಭೂಮಿಯ ಒಂಬತ್ತು ವಿಭಾಗಗಳು : ಜಂಬೂ ದ್ವೀಪ ನವಖಂಡ ಪೃಥ್ವಿಯೊಳಗೆ ಕೇಳಿರಯ್ಯ ಎರಡಾಳಿನ ಭಾಷೆಯ (ಬಸವ. ೬೭೭) : ನವಖಂಡ ಪೃಥ್ವಿ ಚತುರ್ದಶಭುವನ ಗ್ರಾಮದಿಂದತ್ತತ್ತ ಮುನ್ನ ಅನಾದಿಯಲ್ಲಿ ಜಂಗಮವೆ ಲಿಂಗವೆಂಬಿರಿ (ಅವಚಂ. ೪. ೭೨೩-೮೮೩). ೨. ಒಂಬತ್ತು ಚೂರುಂ : ಚೂರು ಚೂರುಂ ; ಛಿದ್ರಛಿದ್ರ : ಭವ ಬದ್ಧವೈರಮುಂ ತಿಳಿದು ವಿಭಂಗಜ್ಞಾನದಿಂದೆ ಪರಿಕ್ರುದ್ಧಮನರ್ ನವಖಂಡ ಮಾಗೆ ಮಾಟ್ಪರ್ ನವನಾರಕರಂ ಪುರಾಣನಾರಕರಾಗಳ್ (ಮಲ್ಲಿಪು. ೧೩-೧೩೫): ಹುಟ್ಟಿದ ಮಕ್ಕಳ ನವಖಂಡವ ಮಾಡಿ ಕಡಿಯುತ್ತಿರಲಿ (ಬಸವ. ೬೦೬). ೩. [ಜೈನ] ಇಂದ್ರಖಂಡ, ಶ್ವೇತಖಂಡ, ತಾಮ್ರಖಂಡ, ಗಭಸ್ತಿ ಖಂಡ, ನಾಗಖಂಡ, ಸೌಮ್ಯಖಂಡ, ಗಂಧರ್ವಖಂಡ, ಚಾರಣ ಖಂಡ ಮತ್ತು ಭರತಖಂಡ ಎಂಬ ಭೂಮಿಯ ಒಂಬತ್ತು ಭಾಗ ಗಳು : ನವಖಂಡಾವನಿಯೊಳಗಿರ್ಪವನೀಶರ ಹೃದಯಮೆಯ್ದೆ ಶತಖಂಡ ಮೆನಿಪ್ಪವೊಲೊಡೆಯ ಭೂರಿಭೇರೀರವಮೊಗೆದುದು ಚಕ್ರಿವಿಜಯಯಾತ್ರೋ ತ್ಸವದೊಳ್ (ಪಾರ್ಶ್ವಪು. ೮-೩೦). [ ನವ$_{1}$ + ಖಂಡ ]

**ನವಖಂಡ$_{2}$** (ನಾ). ಹೊಸ ಮಾಂಸ : ಕರುಳ ಹೂಗೊಂಚಲಿನ ಮಾಳೆಯ ಬಿರಿಮುಗುಳ ನವಖಂಡದಿಂಡೆಯ ಕರತಳದ ತಳಿರೆಲೆಯ ಕಡಿದೋಳುಗಳ ಕೊಂಬುಗಳ . . . ರಣವನವೆಸೆದುದೀತನ ಖಡ್ಗಚೈತ್ರದಲಿ (ಕುಮಾ್ಯದ್ರೋ. ೬-೪೨). [ ನವ$_{2}$ + ಖಂಡ ]

**ನವಗರ** (ನಾ). = ನವಗ್ರಹ : ಕುಟಿಲತೆ ಬಾಲಕೀವ್ರಜದ ಕುಂತಳದಲ್ಲಿ . . . ಪಟುತರವಕ್ರಮಾ ನವಗರಂಗಳೊಳಲ್ಲದೆಯಿಲ್ಲ ನಾಡಿನೊಳ್ (ದಶಾವ. ೫-೦೨). [ ನವ$_{1}$ + ಗರ$_{3}$ ]

**ನವಗಾಯ** (ನಾ).(ಆಲಂ) ದೇಹದ ಒಂಬತ್ತು ದ್ವಾರಗಳು; ನವದ್ವಾರ: ಓಹೊ ಎನ ಜೀವಾ ಮೈಯೆಲ್ಲಾ ನವಗಾಯ (ಕನಕ. ೨೨೦ ಅಮಶಲ್ಲವಿ). [ ನವ$_{1}$ + ಗಾಯ ]

**ನವಗುಣ** (ನಾ). ಸುಖ, ದುಃಖ, ರಾಗ, ದ್ವೇಷ, ಬುದ್ಧಿ, ಭಾವನೆ, ಪ್ರಯತ್ನ, ಧರ್ಮ ಮತ್ತು ಅಧರ್ಮ ಎಂಬ ಆತ್ಮನ ಒಂಬತ್ತು ಗುಣಗಳು : ತೇಜದ ಮಣಿಯ ನವಗುಣದ ಹೊಳಹಿನಂತೆ ವಾಯುವಿನ ಮಣಿಯ ನಾನಾ ಸುಳುಹಿನಂತೆ . . . ಇಂತಿಹ ತದ್ರೂಪು ತದ್ರೂಪಂಗಳ ಹೊದ್ದಿಹವಾದ ಕಾರಣ ಇಂತೀ ಆತ್ಮತತ್ತ್ವಭೇದದಲ್ಲಿ ಆಗುಚೇಗೆಯನರಿಯ ಬೇಕು (ಷೋಳಮಾ. ೧೦-೪೦) : ಬುದ್ಧಿ ಸುಖ ದುಃಖ ರಾಗ ದ್ವೇಷ ಪ್ರಯತ್ನ ಧರ್ಮ ಅಧರ್ಮ ಭಾವನೆಯೆಂಬ ನವಗುಣಗಳಿಂ ವ್ಯವಹರಿಸಿ (ವಿವೇಕ. ೨೪೬). P 'ಬ್ರಹ್ಮಸೂತ್ರಭಾಷ್ಯ'ದ ಪ್ರಕಾರ: ಜ್ಞಾನ, ಸುಖ, ದುಃಖ, ಇಚ್ಛೆ, ದೋಷ, ಪ್ರಯತ್ನ, ಧರ್ಮ, ಅಧರ್ಮ, ಸಂಸ್ಕಾರ ಎಂಬುವು ಆತ್ಮನ ನವಗುಣಗಳಂ. [ ನವ$_{1}$ + ಗುಣ ]

**ನವಗ್ರಹ** (ನಾ). (ಭಾರತೀಯಂ ಸಂಪ್ರದಾಯಂದಂತೆ) ಸೂರ್ಯ, ಸೋಮ, ಮಂಗಳ, ಬುಧ, ಗುರು, ಶುಕ್ರ, ಶನಿ, ರಾಹು ಮತ್ತು ಕೇತು ಎಂಬ ಒಂಬತ್ತು ಗ್ರಹಗಳಂ: ಇಪ್ಪತ್ತೇಳು ನಕ್ಷತ್ರ . . . ರಾಹು ಕೇತು ನವಗ್ರಹ ಇಂತಿವರೆಲ್ಲರು ಆ ಮೇರುಮಂದಿರದ ಹೊಱ ಪ್ರದಕ್ಷಿಣವ ದಿವರಾತ್ರಿಯಲ್ಲಿ ತಿರುಗುತ್ತಿಹರು (ಚನ್ನವ. ೪. ೫೯೨-೧೩೨೮) ; ನವಗ್ರಹದ ನಡುವೆ ಚಂದ್ರಾದಿತ್ಯರ್ . . . ಎಸೆವ ತೆಱದಿ . . . ಮುನಿ ಕುಲದ ನಡುವಿರ್ದರಧಿಕ ವಿಶ್ವಾಮಿತ್ರ ವಾಸಿಷ್ಠರು (ಹರಿಶ್ಚ. ೨-೫) : ಮಂಗಳ ಬುಧ ಬೃಹಸ್ಪತ್ಯಾದಿ ನವಗ್ರಹಂಗಳೆಲ್ಲಂ ಪುಂ ನಪುಂಸಕಲಿಂಗಂಗಳ್ (ಶಮದ. ೮೮ ಪ್ರಯೋ). [ ನವ$_{1}$ + ಗ್ರಹ ]

**ನವಗ್ರಹಜಪ** (ನಾ). ಸೂರ್ಯನೇ ಮೊದಲಾದ ಗ್ರಹಗಳ ಅನುಗ್ರಹ ಕ್ಕಾಗಿ ಶಾಸ್ತ್ರೋಕ್ತವಾದ ವಿಧಾನದಿಂದ ಮಾಡುವ ಆಯಾಯ ಗ್ರಹಗಳ ಮಂತ್ರ ಪುರಶ್ಚರಣೆ : ನವಗ್ರಹಜಪ ಮಾಡಿ. ಪೀಡೆ ಪರಿಹಾರ ವಾಗುತ್ತದೆ (ರೂಢಿ). [ ನವಗ್ರಹ + ಜಪ ]

**ನವಗ್ರಹದಾನ** (ನಾ). ನವಗ್ರಹಗಳನ್ನು ಪ್ರಸನ್ನಗೊಳಿಸುವುದಕ್ಕಾಗಿ ಮಾಡುವ ನವಧಾನ್ಯಗಳ ದಾನ : (ಬ). P ಸೂರ್ಯನ ಪ್ರೀತ್ಯರ್ಥ ವಾಗಿ ಗೋದಿ, ಚಂದ್ರನಿಗೆ ಬತ್ತ, ಕುಜನಿಗೆ ತೊಗರಿ, ಬುಧನಿಗೆ ಹೆಸರು, ಗುರುವಿಗೆ ಕಡಲೆ, ಶುಕ್ರನಿಗೆ ಅವರೆ, ಶನಿಗೆ ಎಳ್ಳು,

ರಾಹುವಿಗೆ ಉದ್ದು ಮತ್ತು ಕೇತುವಿಗೆ ಹುರುಳಿಯನ್ನು ದಾನ ಮಾಡಬೇಕೆಂಬ ವಿಧಿಯಿದೆ. [ ನವಗ್ರಹ + ದಾನ ]

**ನವಗ್ರಹಶಾಂತಿ** (ನಾ). ಜಪ, ದಾನ, ಹೋಮಗಳಿಂದ ನವಗ್ರಹಗಳನ್ನು ಪ್ರಸನ್ನಗೊಳಿಸುವ ಪುಣ್ಯಕರ್ಮ : (*). [ ನವಗ್ರಹ+ ಶಾಂತಿ ]

**ನವಗ್ರಹಹೋಮ** (ನಾ). ನವಗ್ರಹಗಳ ಸಂಪ್ರೀತಿಗಾಗಿ ಸಮಿತ್ತು, ಚರು, ಆಜ್ಯಗಳಿಂದ ಯಥೋಕ್ತಸಂಖ್ಯೆಯಿಂದ ವಿಧಿಪೂರ್ವಕವಾಗಿ ಮಾಡುವ ಮಂತ್ರಪೂರ್ವಕವಾದ ಹೋಮ: (*).

[ ನವಗ್ರಹ + ಹೋಮ ]

**ನವಗ್ರಾಹಕರಿಣಿ** (ನಾ). ಹೊಸದಾಗಿ ಹಿಡಿದ ಹೆಣ್ಣಾನೆ : ಗಂಟನೊಳ್ ಬರುತಿರ್ದ ಯುವರಾಜನಂ ಭೋಂಕನೆ ಕಂಡು ನವಗ್ರಾಹಕರಿಣಿಯಂದದಿ ನೂರುಸ್ತಂಭವಿಧೃತೆಯಾಗಿ (ಕಾದಂಬ. ೨೩೩). [ ಸಂ. ನವಗ್ರಾಹ+ಕರಿಣೀ]

**ನವಗ್ರೈವೇಯಕ** (ನಾ). [ಜೈನ] ಹದಿನಾರು ಸ್ವರ್ಗಗಳ ಮೇಲೆ ಇರುವ ಸುದರ್ಶನ, ಅಮೋಘ, ಸುಪ್ರಬುದ್ಧ, ಯಶೋಧರ, ಸುಭದ್ರ, ಸುವಿಶಾಲ, ಸುಮನಸ, ಸೌಮನಸ ಮತ್ತು ಪ್ರೀತಿಂಕರ ಎಂಬ ಒಂಬತ್ತು ಕಲಾತೀತವಾದ ಸ್ವರ್ಗಗಳು : ಆ ಪದಿನಾಱು ಕಲ್ಪಂಗಳ ಮೇಲೆ ನವಗ್ರೈವೇಯಕಂಗಳಿರ್ದುವು (ಆಪು. ೧೦-೨೯ ವ); ಬಟಿಯ ಮಗ್ರಿಮನವಗ್ರೈವೇಯಕಮಧ್ಯನಾಯಕನಾದಂ (ಶಾಂತಿಪು. ೬-೫೭ ವ) : ಇರ್ವತುಮೂಱಬ್ಧಿ ಮೊದಲೆನಲ್ಕಾ ವಕ್ರೊಂದುವರಮಾಯುಃಕ್ರಮದ ನವಗ್ರೈವೇಯಕದಮರರುಮಂ ನೋಡೆವನೀಂ ಜವಂ ನಿರ್ಗುಣನೋ (ಮಲ್ಲಿಪು. ೧೩-೧೦೮). [ ನವ$_1$ + ಗ್ರೈವೇಯಕ ]

**ನವಚಕೋರಿ** (ನಾ). ಎಳೆಯ ಪ್ರಾಯದ ಹೆಣ್ಣುಚಕೋರಪಕ್ಷಿ: ಹೊನ್ನ ವಟ್ಟಗೆಗಳಂ ನಲವಿಂದೆ ಬಗೆವೆಟ್ಟಿಕೊಂಡು ಬರುತಿರ್ದನುತ್ಸವದಿಂದೆ ನವ ಚಕೋರಿಗೆ ಚಂದ್ರಿಕೆಯ ಕುಟುಕುದಪ್ಪಂತೆ (ನಂಬಿರ. ೦೦-೦೨೫).

[ ನವ$_2$ + ಚಕೋರಿ ]

**ನವಚಕ್ರ** (ನಾ). [ಯೋಗ] ಕುಂಡಲಿನಿಯು ಏರುವ ಒಂಬತ್ತು ಬೇರೆ ಬೇರೆ ಸ್ಥಾನಗಳು ; ಆಧಾರಚಕ್ರ, ಸ್ವಾಧಿಷ್ಠಾನಚಕ್ರ, ಮಣಿಪೂರಕ ಚಕ್ರ, ಅನಾಹತಚಕ , ವಿಶುದ್ಧಿಚಕ್ರ, ಆಜ್ಞಾಚಕ್ರ, ಬ್ರಹ್ಮ ಚಕ್ರ, ಶಿಖಾಚಕ್ರ ಮತ್ತು ಪಶ್ಚಿಮಚಕ್ರ ಎಂಬ ಒಂಬತ್ತು ಚಕ್ರಗಳಂ : ಕರಣಾದಿ ಗುಣಂಗಳಿಂದು ನವಚಕ್ರಂಗಳು ಭಿನ್ನವಾದ ಬಳಿಕ ಇನ್ನೇನೋ ಇನ್ನೇನೋ (ಅವಿಚಾ. ೮೭-೩೮೮) ; ನವಚಕ್ರಾಂಬುಜಂಗಳ ದಳ ಕುಳವರ್ಣಾದಿ ದೇವತೆಗಳ ತೋಱಿಕೆ ಏನೇನೂ ಇಲ್ಲದ ನಿತ್ಯನಿರಂಜನ ನಿರಾಮಯನಾದ ಶರಣಂಗೆ ನಮೋ ನಮೋ ಎಂದೆನು (ಸಿದ್ಧೇವ. ೦೫೯-೪೭೫) ; ನವಚಕ್ರಂ ಗಳಲ್ಲಿ ನವಬ್ರಹ್ಮಂಗಳ ಮೂರ್ತಿಗೊಳಿಸಿ ಕಾಯದ ಕಣ್ಣಿಂದ ಕರತಲಾಮಲಕವ ನೋಡುವಂತೆ ಮನದ ಕಣ್ಣಿಂದ ನವಬ್ರಹ್ಮಸ್ವರೂಪವ ಮನದಣಿವಂತೆ ನೋಡಿ (ಘನವ. ೨೩-೦೯). 'ಷಟ್ಚಕ್ರ' ನೋಡಿ. [ನವ$_1$ + ಚಕ್ರ$_1$ ]

**ನವಚೂಟ** (ನಾ). ಅಪೂರ್ವವಾದ ಚುರುಕುತನ,-ಚಟುವಟಿಕೆ : ನವ ಚೂಟಿಯಲಿ ಕಾಯ ನಡಸಿ ಹಳದಿ ಜೋಡ ಬವರಕ್ಕೆ ನಿಲಿಸಿಯಾಡಿದರು (ಸೌಂದರ. ೪-೯೯). [ ನವ$_2$ + ಚೂಟಿ$_1$ (<ಸೂಟಿ$_1$) ]

**ನವಜವಾನ** (ನಾ). ತುಂಬುಹರೆಯದವನು ; ನವಯುವಕ ; ತರುಣ : ಅವರಿಗೆ ೭೫ ವರ್ಷ ಪ್ರಾಯ, ಮುದುಕರು. ಹುರುಪು ಮಾತ್ರ ನವ ಜವಾನರದು (ಕರವೀ. ೦೦೫) ; ಹರಕು ಅಂಗಿಯ ಒಬ್ಬ ದೃಢಕಾಯನಾದ ನವಜವಾನನು ಶೀಳು ಹಾಕುತ್ತಿದ್ದನು (ಕಶ್ಯಪ. ೧೬೨).

[ ←ಪಾರ. ಹಿಂ. ನೌಜವಾನ್ ]

**ನವಜ್ವರ** (ನಾ). ಒಂದು ಬಗೆಯ ಜ್ವರ; ಒಂಬತ್ತು ದಿನಗಳವರೆಗೆ ತೀಕ್ಷ್ಣವಾಗಿ ಕಾಡುವ ಜ್ವರ: ತಿಗಡೆ, ರಸ, ಗಂಧಕ . . . ಇವಂ ಕಲ್ವದಲ್ಲಿ ಕಳ್ಳಿಯ ಹಾಲಲ್ಲೂ ಎರಡುಜಾವ ಮರ್ದಿಸಿ ರಸಶುದ್ಧಿ ಮಾಡಿ ಕೊಂಡು ಎರಡು ಗುಂಜಿಯ ತೂಕವನ್ನು ಅಲ್ಲದ ರಸ ಸಕ್ಕರ ಬೆರಸಿಕೊಡಲು ನವಜ್ವರ ಹರ (ವಿಷ್ಣುವಿ. ೩೩) ; ನವಜ್ವರದಲ್ಲಿಯೂ, ಸನ್ನಿಪಾತದಲ್ಲಿಯೂ, ಗರ್ಭಿಣಿಯರಲ್ಲಿಯೂ . . . ವಿರೇಚನ ಮಾಡಲಾಗದು (ಸಕವ್ಯ. ೨೬) ; ಸೌಭಾಗ್ಯವತಿ ನವಜ್ವರದಿಂದ ತೀರಿಕೊಂಡಳೆಂದು ತಿಳಿದುಬಂತು (ಸ್ವಾತಿಚ. ೩೦). [ ನವ$_1$ + ಜ್ವರ ]

**ನವಟಾಕು** (ನಾ). ತೂಕದಲ್ಲಿ ಒಂದು ಸೇರಿನ ಎಂಟನೆಯ ಭಾಗ ; ತೂಕ ದಲ್ಲಿ ಎಂಟನೆಯ ಒಂದು ಭಾಗ ; ಅರಪಾವು : ನನ್ನವಳು ಒಂದು ಸಿಂಗಲ್ ಅಥವಾ ಒಂದು ನವಟಾಕು ಸಜ್ಜಿಗೆ ಮಾಡಿದರೆ ಸೇರುತುಪ್ಪ ಅಷ್ಟೇರು ದೀಪಪ್ರಾಕ್ಸೆ ಖರ್ಚುಮಾಡುತ್ತಾಳೆ (ಮುಂಗಾರು.೩೭). 'ಚಟಾಕು' ನೋಡಿ. [ ←ಮರಾ. ನವಟಾಂಕ ]

**ನವತಾಣ** (ನಾ). [ಸಂಗೀತ] ಒಂಬತ್ತು ಸ್ವರಗಳಂ (?) : ಗಾನವೊಪ್ಪುವ ದಂಡಿಗೆಯುನವಧಾನಿಸುತ ಏಗೆ ಮೇಳಚಾಳವನೊಡನೆ ಯಾಣಾಣವಮಾನಿತಂ ನವತಾಣವುಂ . . . ಅನೂನಪತ್ರಂ ಪೊಟ್ಟವಣ ಸಾರಣಮಲರ್ದಿರಲು (ಲಕಪು. ೦೯-೮). [ ನವ$_1$ + ತಾಣ ? ]

**ನವಣಕ್ಕಿ** 'ನವಣೆಯಕ್ಕಿ' ನೋ.

**ನವಣೆ** 'ಲವಣಿ' ನೋ.

**ನವಣಿವಡೆ** (ಕ್ರಿ). ಸೊಗಸಾಗು ; ಅಂದವನ್ನು ಪಡೆ : ಬಿಂಕಂ ಲುಳಿವಡೆಯ ಲುಳಿ ನವಣಿವಡೆಯೆ ನವಣಿ ಬಹುವಿಕೆವಡೆಯೆ ಬಹುವಿಧದ ವಹಣಿಯ ಮಾರ ಚಿತ್ರದ ಗತಿಗಳೊಳ್ ಮೆಟೆದು (ಆಪು. ೨-೨೮ ವ).

[ ನವಣಿ (<ಲವಣಿ) + ಪಡೆ$_1$ ]

**ನವಣೆ** (ನಾ). ಒಂದು ಬಗೆಯ ಧಾನ್ಯ ; ಕಂಗು : "ಪ್ರಿಯಂಗುಃ, ಕಂಗುಃ- ಈ ೨ ನವಣೆ" (ಹಲಾಯು. ೯೫-೪೨೮) ; ನವಣೆಯ ಪಿಟ್ಟಂ ನೆಲದಾಟುವ ನೊಡವೊಯ್ಯಟ್ಟು ಘೃತಸಮೇತಂ ಮೇಣ್ ದುಗ್ಧವಿಃಶ್ರಂ ಸೇವಿಸೆ ವೀರ್ಯವೃದ್ಧಿಯುಂ ಮೆಯ್ಯ ಪುಷ್ಟಿಯುಂ ಸವನಿಸುಗುಂ (ಲೋಕೋಪ. ೯-೪೫) : ಮರ್ದಂ ನವಣೆಯ ಪಿಟ್ಟನೊಳ್ ಕೂಡಿ ಕಿಱಿಯಪಪ್ಪುಂಡೆಗಳಂ ಮಾಡಿ (ರ್ಧಮಾಮೃ. ೧೨-೮೮) ; ನವಣೆ ಹಾರಕ ಬರಗು ಸಾವೆ ಮಾಸಿಗಳೆಂಬ ಧಾನ್ಯ ಐವತ್ತುಲಕ್ಷ ಖಂಡುಗ (ಚೆನ್ನಸಂ. ೩೩೪-೦೪) ; ನವಣೆಯ ಹಾಳಲು ಬೆದ್ದತಿ ಮತ್ತರೊಂದು (ಎಕ. VI, ಕಡೂರು. ೩೭-೬೩ ; 1197 ?) ; ಬಾಗಿ ಬಳುಕುವ ತೆನೆಗಳಿಂದೆಸೆವ ತಮ್ಮ ನವಣೆಯ ಕೆಯ್ಯ ಬಳಿಯೊಳ್ (ಸಿದ್ಧರಾ. ೨-೨೩) ; ಬಲು ರಾಯರೊಲ್ಮೆ ಗಡಯುಂಬುದಲ್ಲಂ ನವಣೆಯೊಳು ಗಂಜಿ (ಹರಿಪು. ೦೦-೬೦) ; ನವಣೆಯ ಬೋನಕ್ಕೆ ಹವಣಾದ ತೊಗೆಯಾಗಿ ಕವಣೆಗಲ್ಲಪ್ಪು ಬೆಣ್ಣೆಯಿಡಲೂಟದ ಹವಣ ನೋಡು (ಸರ್ವಜ್ಞ. ೦೬೦೮).

**ನವಣೆಯ ಪಾಯಸ** = ನವಣೆ ಅಕ್ಕಿಯನ್ನು ತುಪ್ಪದಲ್ಲಿ ಹುರಿದಂ, ಬೇಯಿಸಿ ಮಾಡುವ ಪಾಯಸ : ಅವರು ಮಾಡಿದ ನವಣೆಯ ಪಾಯಸ ಬಹಳ ರುಚಿಯಾಗಿತ್ತು (ರೂಢಿ).

[ದೇ.॥ ತಮಿ. ನವರೈ = ಒಂದು ಬಗೆಯ ಬತ್ತ ; ಮಲ. ನವಿರ, ನವಿರಿ = ಒಂದು ಬಗೆಯ ಅಕ್ಕಿ ; ತುಳು. ನವರ, ನವರೆ ; ತೆಲು. ನಿವರಿ ]

**ನವಣೆಅಕ್ಕಿ** 'ನವಣೆಯಕ್ಕಿ' ನೋ.

**ನವಣೆಯಕ್ಕಿ, ನವಣಕ್ಕಿ, ನವಣೆಅಕ್ಕಿ** (ನಾ). ಹೊಟ್ಟು ತೆಗೆದ ನವಣೆ : ಚಾಬೇಸೊಪ್ಪನು ನವಣೆಯಕ್ಕಿಯನ್ನು ಕೂಡ ಕುಟ್ಟಿ ಹಿಟ್ಟು ತೊಳಸಿ . . . ಸಪ್ಪೆ ತುಪ್ಪದಿಂ ಮೆಲ್ಲಲು ಪನ್ನೆತ್ತರು ಮಾಣ್ಗುಂ (ಸಕವ್ಯ. ೦೯೫). **ನವಣಕ್ಕಿ:** ನವಣಕ್ಕಿಯ ಹಿಟ್ಟುಕುಟ್ಟಿ ತುಪ್ಪದಲ್ಲಿ ಮೆಲ್ಲೆ ಗರ್ಭವಕ್ಕುಂ (ವಿಷ್ಣುವಿ. ೮). **ನವಣೆಅಕ್ಕಿ** : ಹೊನ್ನುಗೊನ್ನೆಸೊಪ್ಪು ಸಹಮೂಲವನ್ನು ನವಣೆಅಕ್ಕಿ ಗಂಜಿಯಲ್ಲಿ ಅರೆದು ಮೂರುದಿನ ಕೊಟ್ಟರೆ ಕಲ್ಲುಸರಗಿ ಬೀಳುವುದು (ಸಕವ್ಯ. ೫೦. ೪೯೬). [ ನವಣೆ + ಅಕ್ಕಿ$_1$ ]

**ನವತ** (ನಾ). ೧. ಹೊದಿಕೆ ; ಆಚ್ಛಾದನೆ. ೨. ಉಣ್ಣೆಯ ಹೊದಿಕೆ ; ಕಂಬಳಿ : ಸ್ನಾನಂಗೆಯ್ವೆಡೆಯೊೞ್ ಮೇಣ್ ದಾನಂ ಕೊಳ್ವೆಡೆಯೊಳ್ ನವತಮಂ ಪೋಲ್ವೆಡೆಯೋ ನೀನಿ ಸಂಗ್ರಾಮಾವನಿಗೇನೆಂದಟ್ಟುವೆ ವಿಪ್ರ ಪೆರ್ಮಟ್ಟಿ ಸುತಮಂ (ಮಹಾಸೀ. ೧೨-೩೦೦). [ ಸಂ. ]

**ನವತಯಾರುಮಾಡಿಸು** (ಕ್ರಿ). ಹೊಸದಾಗಿ ಸಿದ್ಧಪಡಿಸು : ಒಂದು ಹೂವನ್ನು ಅರ್ಧಚಂದ್ರನೋಪಾದಿ ಚಿನ್ನದಲ್ಲು ಮಾಡಿಸಿ, ಅದಕ್ಕೆ ವಜ್ರಕೆತ್ತಿಸಿ, ಹೊಳೆಯುವಂಥಾದ್ದು ಒಂದು ನವತಯಾರುಮಾಡಿಸಿ, ತಮ್ಮ ಬಳಿಯು ಮಾಡಗಿದ್ದರು (ರಾಜೇಂದ್ರ. ೩೩೩). [ ನವ₂ + ತಯಾರು + ಮಾಡಿಸು ]

**ನವತರುಣ** (ನಾ).=ನವಯೌವನ ೨ : ಈಗ ಮಾತ್ರ ನಾನೊಬ್ಬ ನವತರುಣನಂತೆ ಹುರುಪಿನಿಂದ ಆಕಾಶಕ್ಕೇರುವಷ್ಟು ಪ್ರಫುಲ್ಲನಾಗಿದ್ದ (ಗಂಗಾವ. ೧೧೧). [ ನವ₂ + ತರುಣ ]

**ನವತರುಣಿ** (ನಾ). = ನವಯುವ್ವನೆ : ಈಗಿನ ನವತರುಣರಿಗಿಂತ ನವತರುಣಿಯರಲ್ಲಿ ಓದಿನ ಬಗೆಗೆ ಒಲವು ಹೆಚ್ಚು (ರೂಪಿ). [ ನವ₂ + ತರುಣಿ ]

**ನವತಾರುಣ್ಯ** (ನಾ). ಹೊಸಹರೆಯ ; ನವಯೌವನ : ಮಕ್ಕಳು ನವತಾರುಣ್ಯವನ್ನು ಹತ್ತುವಾಗ ಆರಂಭವಾಗುವ ಪ್ರೌಢಶಿಕ್ಷಣ ಉತ್ತಮವೆಂದು ಹಲವರು ಭಾವಿಸುವರು (ಶಿಕ್ಷಣ. ೯೦). [ ನವ₂ + ತಾರುಣ್ಯ ]

**ನವತಾಲ** (ನಾ). [ಶಿಲ್ಪಶಾ] ಮೂರ್ತಿಶಿಲ್ಪದಲ್ಲಿ ಬಳಸುವ ಒಂಬತ್ತು ತಾಳಪ್ರಮಾಣದ ಒಂದು ಅಳತೆ : ಮಾನಾಂಗುಲ, ಮಾತ್ರಾಂಗುಲ, ದೇಹಲಬ್ಧಾಂಗುಲವೆಂಬ ಅಳತೆಗಳಿಂದ ಪಂಚತಾಲ, ನವತಾಲಾದಿ ವಿವೇಚನೆಯಿಂದ ಮೂರ್ತಿಗಳನ್ನು ರಚಿಸುವ ವಿಧಾನಗಳನ್ನೂ . . . ಶಿಲ್ಪಶಾಸ್ತ್ರ ಮತ್ತು ಆಗಮಶಾಸ್ತ್ರಗಳು ತಿಳಿಸುತ್ತವೆ (ಭಾರತ. ೮೦). [ ನವ₁ + ತಾಲ ]

**ನವತಿ** (ನಾ). ಒಂದು ಸಂಖ್ಯೆ ; ತೊಂಬತ್ತು : ಭರತಕ್ಷೇತ್ರದ ವಿಷ್ಕಂಭಂ ಜಂಬೂದ್ವೀಪದ ನವತಿಶತಭಾಗಪ್ರಮಾಣಮಕ್ಕುಂ (ಸುಕುಮಾ. ೧೧-೫೦೭); ಬಾಹುಕ್ಷೇಪದಿಂದಂ ನವತಿ ನಯನಭೇದಂಗಳಿಂ ರಂಜಿಸುತ್ತಿರ್ದುದು ಸರ್ವಾಶಾಪ್ರದೇಶಂ ಸುರಪತಿನಟನಂ ವಿಸ್ಮಯಂಬೆತ್ತುದಾದಂ (ಭಾರತಪು. ೯-೧೪). [ಸಂ.]

**ನವತುಷ್ಟಿ** (ನಾ). [ಸಾಂಖ್ಯ] ಅಂಭಸ್ಸು, ಸಲಿಲ, ಓಘ, ವೃಷ್ಟಿ, ಪಾರ, ಸುಪಾರ, ಪಾರಾಪಾರ, ಅನಂತ್ತಮಾಂಭ ಮತ್ತು ಉತ್ತಮಾಂಭ ಎಂಬ ಬುದ್ಧಿಗೆ ಸೇರಿದ ಒಂಬತ್ತು ಬಗೆಯ ತುಷ್ಟಿಗಳು : ನವತುಷ್ಟಿಗಳು-ವಿವೇಕಸಾಕ್ಷಾತ್ಕಾರವನ್ನು ಪ್ರಕೃತಿಯೇ ಮಾಡುತ್ತದೆ. ನಾವೇಕೆ ಶ್ರಮಪಡಬೇಕೆಂಬ ತೃಪ್ತಿಯೊಂದು. ಇದಕ್ಕೆ ಅಂಭಸ್ಸೆಂದು ಹೆಸರು . . . ಉತ್ತಮಾಂಭ ಎಂದರೆ ಪ್ರಾಣಿಹಿಂಸೆಯಿಲ್ಲದ ಸುಖವಿಲ್ಲವೆಂದು ತಿಳಿದು ವೈರಾಗ್ಯವನ್ನು ಪಡೆಯುವುದು ಒಂಬತ್ತನೆಯದು. ಈ ನವತುಷ್ಟಿಗಳು ಬುದ್ಧಿಗೆ ಸೇರಿದುವು (ಹಿಂದಣಾ. ೬೪). [ ನವ₁ + ತುಷ್ಟಿ ]

**ನವತೆ** (ನಾ). ಹೊಸತನ ; ನವೀನತೆ : ಮುಂದುಕತೊರೆಗೆ ಹೋಗಬೇಕಾದರೆ ದೋಣಿಯಲ್ಲೇ ಪ್ರಯಾಣಮಾಡುತ್ತಿದ್ದೆವು. ಅದರ ನವತೆ ಸಮಿದರೂ ನಿರ್ಮಜನಕತ್ವ ಸಮೆಯಲಿಲ್ಲ (ಕಲಶ. ೩೩೪) ; ಹಳೆಯ ಕರ್ಮವ ಹೊಸದು ಕೊಟ್ಟಿ ಪೌರುಷನದಿಯ ಬೆಳೆಯಿವುದು ನವತೆಯಲಿ (ಮಂಕುಕ. ೦೬೪).

[ ಸಂ. ನವತಾ ]

**ನವತೇಜ** (ನಾ). ಹೊಸಕಾಂತಿ ; ನವೀನಶೋಭೆ : ನನ್ನಂತೆ ಲಾಂಗೂಲಯಜ್ಞದಿಂ ನವತೇಜಪುಣ್ಯಗಳ ಗಳಿಸಿ ಜೀವನ್ಮುಕ್ತರಾಗಿ ! (ಕವಿಪು. ೪೩-೧೧).

[ ನವ₂ + ತೇಜ₁ ]

**ನವತ್ವ** (ನಾ). = ನವತೆ : ಮಾತೂ ಕೂಡ ನವತ್ವವನ್ನು ಪಡೆಯುತ್ತದೆ (ಧ್ವನ್ಯಾಲೋ. ೩೪೦). [ ಸಂ. ]

**ನವದಂಪತಿ** (ನಾ). ನೂತನ ದಂಪತಿ ; ಅದೇ ತಾನೇ ಮದುವೆಯಾದ ಗಂಡಹೆಂಡಿರು: ತಾನುಂ ಪತಿಯುಂ ಮಹಾ[ವಿಭವ]ತೀಕರವೊಪ್ಪಿರೆ ಮಾಡಿ ಕಾಮದೇವಂ ಪಸೆಯೊಳ್ ಸುರೇಂದ್ರ ನವದಂಪತಿಯಿರ್ದಪೊಲಿರ್ದರ್ (ಬಂಕಾಪಿ. ೯-೮೬) ; ಅಮ್ಮ ಅಪ್ಪ ನವದಂಪತಿಗಳಂತೆ ಇನ್ನೂ ಸುಖವನ್ನು ಅರಸಿ ಹೊರಟಾಗಿದೆ (ನವಿರಾ. II. ೯೬೩). [ ನವ₂ + ದಂಪತಿ ]

**ನವದರ್ಶನಾವರಣ** (ನಾ). [ಜೈನ] ಚಕ್ಷುಸ್ಸು, ಅಚಕ್ಷುಸ್ಸು, ಅವಧಿ, ಕೇವಲ, ನಿದ್ರಾ, ನಿದ್ರಾನಿದ್ರಾ, ಪ್ರಚಲಾ, ಪ್ರಚಲಾಪ್ರಚಲಾ ಮತ್ತು ಸ್ತ್ಯಾನವೃದ್ಧಿ ಎಂಬ ಒಂಬತ್ತು ಬಗೆಯ ದರ್ಶನಜ್ಞಾನಾವರಣೀಯ ಕರ್ಮಪ್ರಕೃತಿಗಳು : ಪಂಚಜ್ಞಾನಾವರಣಂಗಳುಂ ನವದರ್ಶನಾವರಣಂಗಳುಂ ದ್ವಿವೇದನೀಯಂಗಳುಮಷ್ಟಾವಿಂಶತಿಮೋಹನೀಯಂಗಳುಮೇಕಂದೊಡೆ (ಗೊಮ್ಮಸಾ. ೬-೪) [ ನವ₁ + ದರ್ಶನಾವರಣ ]

**ನವದುರ್ಗಿ** (ನಾ). ಶೈಲಪುತ್ರೀ, ಬ್ರಹ್ಮಚಾರಿಣೀ, ಚಂದ್ರಘಂಟಾ, ಕೂಷ್ಮಾಂಡಾ, ಸ್ಕಂದಮಾತಾ, ಕಾತ್ಯಾಯನೀ, ಕಾಲರಾತ್ರೀ, ಮಹಾಗೌರೀ ಮತ್ತು ಸಿದ್ಧಿಧಾತ್ರೀ ಎಂಬ ದುರ್ಗಾದೇವಿಯ ಒಂಬತ್ತು ರೂಪಗಳು : ಸಪ್ತಮಾತೃಕೆಯರುಂ ಉರಗಿಯರ್ ನವದುರ್ಗಿಯಂಬಿಕೆಯರನಿಬರುಂ ಧರಿಸಿದರು ಶಾಬರವನು (ಲಕಿಹಂ. ೨೩-೧೩); ವಿಷ್ಣುವಿನ ದಶಾವತಾರ . . . ಶಕ್ತಿಯ ನವದುರ್ಗಿಯರು, ಸಪ್ತಮಾತೃಕೆಯರು (ಭಾರತ. ೮೦). [ ನವ₁ + ದುರ್ಗಿ ]

**ನವದ್ವಾರ** (ನಾ). ೧. ಒಂಬತ್ತು ಬಾಗಿಲುಗಳು : ನರಕಕ್ಕೆ ನವದ್ವಾರ, ನಾಕಕ್ಕೆ ಒಂದೇ ದ್ವಾರ (ಗಾದೆ). ೨. ಕಣ್ಣುಗಳು, ಕಿವಿಗಳು, ಮೂಗಿನ ಹೊಳ್ಳೆಗಳು, ಬಾಯಿ, ಮೂತ್ರದ್ವಾರ ಮತ್ತು ಗುದದ್ವಾರ ಎಂಬ ದೇಹದ ಒಂಬತ್ತು ದ್ವಾರಗಳು : ಪರಿಮಳದಿಂದೆಯು ಕಟ್ಟಿ ಪೂಜಿಸುತ್ತಿರ್ದುದೋ ನವದ್ವಾರ ಶಿವಾಲಯದಾದಿ ಮಧ್ಯಸ್ಥಾನದಲ್ಲಿ (ಅವಕಂ. ೪೩-೧೯೩) ; ಬಿಸುಗುದಿಯ ನರರುಧಿರಜಲ ಜಾಳಿಸೆ ನವದ್ವಾರದಲಿ ದೈತ್ಯನ ಕುಸುಕಿರಿದು ತಿವಿತಿವಿದು ಕೊಂದನು ಕಲಿ ಜಟಾಸುರನ (ಕುಮ್ಯಾ.ಅ. ೧೦-೧೧); ನೆಲೆಗೊಂಡ ನವದ್ವಾರದ ಹೊಲೆಯೊಳು ನರಳುತ ನೀ ಬಿದ್ದೆ ಬಿಕನಾಸಿ (ಪುರಂದ. ೧-೧೦೫-೧) ; ಐದುತಿಂಗಳಿಗೆ ಕಿವಿ ಮೂಗು ಕಂಗಳುಂ ಜನಿಸಿ ನವದ್ವಾರಂಗಳಂ ತೋರ್ಪವು (ನವಮೋ. ೦೪-೫೧); ಸುರಲೋಕಕ್ಕೆ ತೆರಳುವ ತವಕದಿಂದ ಅವಳು ನವದ್ವಾರಗಳ ವಾಯುವನ್ನು ಬಲಿದು, ಪ್ರಾಣತ್ಯಾಗ ಮಾಡಿದಳು (ನಂಜುಂಡ. ೫೦). [ ನವ₁ + ದ್ವಾರ ]

**ನವದ್ವೀಪ** (ನಾ). = ನವಚಕ್ರ : ಚಿದ್ಬ್ರಹ್ಮಾಂಡದೊಳಗಣ ಏಳುತಾವರೆಯ ಮೇಲಿಪ್ಪ ನಿಷ್ಕಲಚಿದ್ಬಿಂದುಲಿಂಗಕ್ಕೆ ಪ್ರಾಣಪೂಜೆಯಂ[ಮಾಡೆ] ಮಹಾಜ್ಞಾನಬಲದಿಂದ ನವದ್ವೀಪಂಗಳ ಲಿಂಗಂಗಳ ಬೆಳಗು ಪಿಂಡಾಂಡದಲ್ಲಿ ಪ್ರಭಾವಿಸಿ ತೋಱುತಿರ್ಪುದಾಗಿ ನಾನು ಸರ್ವಾಂಗಲಿಂಗಿಯಾದೆನಯ್ಯ (ಘನವ. ೩೯-೩೨); "ಆಚಾರಾದಿಯಾಗಿ ನಿರಂಜನಲಿಂಗಾಂತ್ಯವಾದ ಒಂಬತ್ತು ಲಿಂಗಗಳಿರುವ ಆಧಾರಾದಿಯಾಗಿ ಪಶ್ಚಿಮಾಂತ್ಯವಾದ ಒಂಬತ್ತು ಚಕ್ರಗಳು" (ಘನವ. ಕೋಶ). P ಇಲ್ಲಿ 'ಚಕ್ರ'ವೆಂಬ ಸ್ಥಾನವನ್ನು 'ದ್ವೀಪ'ವೆಂದು ರೂಪಕ ಮಾಡಿದೆ. [ ನವ₁ + ದ್ವೀಪ ]

**ನವಧಾನ್ಯ** (ನಾ). ಗೋದಿ, ಭತ್ತ, ಉದ್ದು, ಹೆಸರು, ಕಡಲೆ, ತೊಗರಿ, ಹುರುಳಿ, ಅವರೆ ಮತ್ತು ಎಳ್ಳು ಎಂಬ ಒಂಬತ್ತು ಬಗೆಯ ಧಾನ್ಯಗಳು : ನವಧಾನ್ಯ ಬೆಳೆದವನಿಗೆ ವ್ಯವಧಾನವಿಲ್ಲ (ಗಾದೆ). P ಪಿತೃಶ್ರಾದ್ಧದಲ್ಲಿ ಉಪಯೋಗಿಸಲು ಪ್ರಶಸ್ತವಾದುವು : ಭತ್ತ, ಯವೆ, ಎಳ್ಳು, ಉದ್ದು, ಗೋದಿ, ಸಾವೆ, ನವಣೆ, ಹೆಸರು ಮತ್ತು ಸಾಸುವೆ.

[ ನವ₁ + ಧಾನ್ಯ ]

**ನವಧಾಭಕ್ತಿ** (ನಾ). [ಜೈನ] ಶ್ರಾವಕನು ಸಾಧುಗಳ ಬಗ್ಗೆ ಭಕ್ತಿಯನ್ನು ತೋರಿಸುವ ಸಂಗ್ರಹ, ಉಚ್ಚಸ್ಥಾನ, ಪಾದಪ್ರಕ್ಷಾಲನ, ಪೂಜನ, ಪ್ರಣಾಮ, ಮನಃಶುದ್ಧಿ, ವಚನಶುದ್ಧಿ, ಕಾಯಶುದ್ಧಿ ಹಾಗು ಆಹಾರಶುದ್ಧಿಗಳೆಂಬ ಒಂಬತ್ತು ವಿಧಾನಗಳು : ನಿಜವಾದ ಶ್ರಾವಕ ಊಟದ ಹೊತ್ತಿನಲ್ಲಿ ಬಾಗಿಲುದೊಳಗೆ ನಿಂತು ಸಾಧುಗಳ ಬರವನ್ನು

**ನಸುಗೋಪ** (ನಾ). ತುಸು ಕೋಪ: ಅರ ಸಂಪ್ರುವ:ವಿದಾರ ಮರುಳ್ನವೆಂದು ನಂದಿಕೇಶ್ವರ ನಸುಗೋಪ [ಪಾಠಾಂ. ನಶಿಕೋಪ]ದಿಂ ಮದನನೇನೆಯು ನೀಕ್ಷಿಸಿದಾ ಕ್ಷಣಾರ್ಧದೊಳ್ (ಗಿರಿಕ. ೮-೯) ; ಕುಮುದಳೆ ಮೊಗದ ಮೇಲೆ ನಸುಗೋಪ ಮೂಡಿತು (ಹಾಡುಹು. ೧೦೦). [ ನಸು$_1$ + ಕೋಪ ]

**ನಸುಜೋಲ್** (ಕ್ರಿ). ಸ್ವಲ್ಪ ಜಾರು : ನಸುಜೋಲ್ದಳ್ಕೈದೆಯುಂ ತೆಜಿಂಬೊಳೆದು ಪಾಟುತ್ತಿರ್ಪ ಸಂವ್ಯಾನಮುಂ ... ಪೊಸತೊಂದೊಪ್ಪಮ ನೀಯೆ ವಿಹ್ವಳತೆಯಿಂ ಬಂದತ್ತು ಗೋಪೀಜನಂ (ಜಗವಿ. ೩-೮೯) ; ಪೂಗಳಿಂ ಸಮೆದ ಮಾಲೆಯುಂ ಧರಿಸಿ ನಸುಜೋಲ್ದ ಮೇಲುದನಿನಿಸು ಮುಸುಕುತ (ಶರ್ಮ್ಮರಾ. ೮-೩೦). [ ನಸು$_2$ + ಜೋಲ್$_1$ ]

**ನಸುತೂಕಡಿಕೆ** (ನಾ). ಸ್ವಲ್ಪ ತೂಕಡಿಕೆ,–ಜೋಂಪು: ಔಕುವುದು ಬಲುನಿದ್ರೆ ನಿದ್ರೆಯು ನೂಕುವನು ಕಣ್ಣೆವೆಗಳಲಿ ನಸುತೂಕಡಿಕೆ ಕೋಟಿದೊಡೆ ವೈಗೆದಟುವನು ಕೈಯೊಡನೆ (ಕುವ್ಯಾ.ಅ. ೯-೮).

[ ನಸು$_1$ + ತೂಕಡಿಕೆ (<ತೂಂಕಡಿಕೆ) ]

**ನಸುತೇಂಕು** (ನಾ). ಮೆಲ್ಲನೆ ತೇಲುವಿಕೆ. 'ನಸುತೇಂಕುದೇಂಕು' ಪರಾ. [ ನಸು$_1$ + ತೇಂಕು$_1$ ]

**ನಸುತೇಂಕುದೇಂಕು** (ಕ್ರಿ). ಮೆಲ್ಲನೆ ತೇಲು ; ನಿಧಾನವಾಗಿ ತೇಲು : ಬೆಳಗುವ ತಾರಕಾನಿಕರಮಾ ಕಡಲೊಳ್ ನಸುತೇಂಕುದೇಂಕಿ ಬೊಬ್ಬುಳಿಕೆಗಳಂತೆ ತೋಱಿದುವು (ಅಜಿಪು. ೭-೯೮). [ ನಸುತೇಂಕು + ತೇಂಕು$_1$ ]

**ನಸುದಗ್ಗು** (ಕ್ರಿ). ಸ್ವಲ್ಪ ಕೆಳಕ್ಕೆಬರು ; ತುಸು ಕೆಳಗಿರು : ಅದಱಿಂ ಕೆಲದೊಳ್ ನಸುದಗ್ಗಿ ದಲಿರೆ ಭದ್ರಾಸನಂಗಳುಮ್ಮಲ್ಲಿಯುಚಿಗಳ್ ಮುದದಿಂ ನೆಲಸಿದರದಱೊಳ್ ಪದುಳಂ ಪ್ರಥಮ ದ್ವಿತೀಯ ಕಲ್ಪಾಧೀಶರ್ (ಪುಷ್ಪಪು. ೧೧-೭೯). [ ನಸು$_2$ + ತಗ್ಗು$_1$ (<ತಙ್ಗು) ]

**ನಸುದಱಿ** (ನಾ). ಸಣ್ಣ ತುಂಡು ; ಚಿಕ್ಕ ಚೂರು.

**ನಸುದಱಿಮಾಡು** = ಸಣ್ಣ ತುಂಡುಗಳಾಗಿ ಮಾಡು ; ಚೂರಾಗಿಸು : ಮಸೆಗಟ್ಟ ಕೊಡಲಿಯ ಹೊಯಿಲಂತೆ ಕರ್ಮವ ನಸುದಱಿ ಮಾಳ್ಪುದು ಧರ್ಮ ಮಸೆಯುಳ್ಳ ಕೊಡಲಿಯ ಹೊಯಿಲಂತೆ ಕರ್ಮವ ಕುಸುರಿದಱಿವ್ದ ದೀಗ ಶುಕ್ಲ (ಭರತ. ೬೯-೪೪). [ ನಸು$_1$ + ತಱಿ$_2$ ]

**ನಸುದಿಟ್ಟಿ** (ನಾ). ಅರೆದೆರೆದ ಕಣ್ಣಿನ ನೋಟ ; ಓರೆನೋಟ : ಬಟ್ಟ ಮೊಲೆಗಳ ತುದಿಯೊಳಿಟ್ಟುದುಱ ನಸುದಿಟ್ಟಿಯಿಂದೀಕ್ಷಿಸುತಾಗ ಕಟ್ಟಿಱಿಕ ದೊಳಾತನ ಚರಣಕೆ ಪೊಡಮಟ್ಟು ಕೂಡೆಂಬಳಂದೊಲಿದು (ಕಂಸವಿ. ೯-೧೭೮). [ ನಸು$_1$ + ದಿಟ್ಟಿ ]

**ನಸುದೆಱಹು** (ನಾ). ಸ್ವಲ್ಪ ಅವಕಾಶ; ಕೊಂಚ ತೆರಪು,–ಎಡೆ : ಮಱವೆಗೆ ನಸುದೆಱಹುಗೊಡದಾತ್ಮನಲಿ ಚೇಷ್ಟಿಸುವ ಕರಣಂಗಳಿಗೆ ರವಿಯುಂತಿದ್ದನವನೀಶ (ನಿಭಾಗ. ೪-೧೫-೩೩). [ ನಸು$_1$ + ತೆಱಹು (<ತೆಱಪು) ]

**ನಸುದೆಱೆ** (ಕ್ರಿ). ಸ್ವಲ್ಪ ತೆಗೆ ; ಕೊಂಚ ಬಿರಿ : ನಸುದೆಱೆಯುತ್ತುಮಿರ್ದ ಪೊಸಮುತ್ತಿನ ಸಿಂಪಿನ ಸಂಪುಟಂಗಳಿಂ ನುಸುಳ್ದು ಸುಪಾಣಿಯಾಗಿ ಪೊಱ ಪೊಣ್ಮುವ ಮುತ್ತಿನ ಮಾಲೆಯಂದದಿಂ ಮಿಸುಗಿ . . . ಪಸರಿಸಿ ನೀಳ್ದು ಪೊಣ್ಮಿದುವು ಕಣ್ಬನಿಗಳ್ ತರಳಾಯತೇಕ್ಷಣೇ (ಕಾದಂಪೂ. ೩೩೦) ; ನಸುದೆಱೆದಿರ್ದ ಬಾಯ್ ನಿಮಿರ್ದ ಗೋಣೆಮೆಯುಯ್ಕದ ದಿಟ್ಟಿ . . . ಕಣ್ಗೆಸೆದಿರ ಸುಯ್ಕೆ ಪೆಂಪಟಿದು ಚಿತ್ರದ ಪೆಣ್ಣುಪೊಲಾಗಿ ಬಾಗಿಲೊಳ್ ಸಸಿಮುಖಿ ನಿಂದು ನೋಟ್ಪಳಿನಿಯಂ ತಡೆದೊಯ್ಯನೆ ಬರ್ಪ ಬಟ್ಟೆಯಂ (ರಸರ. ೪-೨೬೩) ; ನೊಸಲ ತಿಲಕದ ಕೆದಱಿದಳಕದ ನಸುದೆಱೆದ ಲೋಚನದ . . . ಮುನಿಪತಿ (ನಿಭಾಗ. ೧-೩-೧೨). [ ನಸು$_2$ + ತೆಱೆ$_1$ ]

**ನಸುದೆಱೆಬಾಯ್** (ನಾ). ಅರೆದೆರೆದ ಬಾಯಿ : ನಟ್ಟ ಕಣ್ ನಿಮಿರ್ದ ಕೊರಲು ನಸುದೆಱೆಬಾಯ್ ಬಿಟ್ಟ ಮೇಲುದು ಬೀಳ್ದ ಕೇಶ (ಶ್ರೀಪಾಲ. ೦೪-೩೭). [ ನಸುದೆಱೆ + ಬಾಯ್ ]

**ನಸುದೇಲ್** (ಕ್ರಿ). ಸ್ವಲ್ಪ ತೇಲು; ನಸುವೆ ಮೇಲಕ್ಕೆ ಏಳು : ನಸುದೇಲ್ವಕ್ಷಿ ವಿಲುಪ್ತವರ್ಣವಚನಂ ರೋಮಾಂಚನಂ . . . ಕರಂ ಶೋಭಿಸಲ್ ಕುಸುಮಾಸ್ತ್ರೋನ್ನತಕೇಳಿಯೊಳ್ಪಡದೆ ತಾಂ ಬೆಚ್ಚಿರ್ದರಾ ಕಾದಲರ್ (ಉದ್ಭಟ. ೮-೧೧೯). [ ನಸು$_2$ + ತೇಲ್ ]

**ನಸುದೋಯಲು** (ನಾ). (?) : ಈ ಹೆಬ್ಬಟ್ಟೆಗಳಲ್ಲಿ ಹೋದರೆ ಎಂಬತ್ತು ನಾಲ್ಕುಲಕ್ಷ ಪ್ರಕಾರದ ಪರಮಂಡಲದಲ್ಲಿ ಸುಳಿವುದು ತಪ್ಪದೆಂದು ಅದಕ್ಕೆ ಹೇಹವಂ ಮಾಡಿ ತಮ್ಮವರು ಹೋದ ನಸುದೋಯ [ಪಾಠಾಂ. ತೋಯಿಲ] ಬೆಂಬಳಿವಿಡಿದು ಹೋಗಿ ಭಕ್ತಿಪುರವಂ ಕಂಡು (ಭುವನ. ೪೯-೪೫) ; "ನಸುದೋಯಲು–ಅಸ್ಪಷ್ಟವಾದ ಜಾಡು ?" (ಭುವನ. ಕೋಶ).

[ ? ]

**ನಸುದೋರೆ** (ನಾ). ಸ್ವಲ್ಪ ಹಣ್ಣಿಗೆ ಬರುತ್ತಿರುವ ಕಾಯಿ ; ಪಾಡು ಗಾಯಿ : ಅಲರ್ ಮಿಡಿಕಾಯ್ ನಸುದೋರೆ ದೋರೆವಣ್ ಬಳಸಿರಲಾಗ ಳಾವ ಪರಿಯಿಂ ನಡೆ ನೋಟ್ಕೊಡಮಂತೆ ತಾನೆ ಕಣ್ಗಳ ಸಿರಿ . . ಅದುದು ಬಂದ ಮಾವಿನ ಮರಂ (ಜಗವಿ. ೧೯-೨೭) ; ತಳಿರಲರುಳ್ಳಲರ್ಮಿಡಿ ಪೂದಳ್ಗಳಗಾಯ್ನಸುದೋರೆ ದೋರೆವಣ್ಣಾಳಿತನೆವಚ್ಚಪಣ್ಣಿಡಿದು ಬೀಗಿದ ಬಿಙ್ಕೊನೆ (ಧಲಕಂ. ೧-೫೦). [ ನಸು$_1$ + ದೋರೆ$_1$ ]

**ನಸುದೋರೆವಣ್** (ನಾ). ಸ್ವಲ್ಪ ದೋರೆಯಾದ ಹಣ್ಣು : ಸಣ್ಣಗಾಯಿ ಬಲುಗಾಯಿ ಪೊಂಬಲ್ ನಸುದೋರೆವಣ್ಣ ತಾಯ್ಮನೆ ಪೊಸವಣ್ಣ ಗೊತ್ತಿದೆನೆ ಕಣ್ಗೆಸೆದಿರ್ದುದೊಂದು ಮಾಮರಂ (ಕಬ್ಬಿಗಕಾ. ೧೦೦).

[ ನಸುದೋರೆ + ಪಣ್$_3$ ]

**ನಸುದೋಱು** (ಕ್ರಿ). ೧. ಸ್ವಲ್ಪ ಕಾಣಿಸು,–ಕಾಣು ; ತುಸುವೆ ವ್ಯಕ್ತವಾಗು : ನಸುದೋಱುತ್ತಿರ್ದ ನುಣ್ಮೀಸೆಗಳುಮತಿಮೃದುಸ್ನಿಗ್ಧ ಕೇಶಂಗಳುಂ ಕಣ್ಗೆಸೆಯುಲ್ (ಕಾದಂಬ. ೩೪೭); ಎತ್ತಾನುಮೊರ್ಮೆ ನಸುದೋಱುತ್ತುಂ ಜನಭಕ್ತಿ ಮಾಣ್ದುದುದೊಡಮಾಭಪ್ಯೋತ್ತಮನಘಮುರಿತಾಗಿದ ಬತ್ತಿಂಗೆಣೆಯುಕ್ಕುಂ (ವರ್ಧಪು. ೧೨-೧೭) ; ಕುಚಂಗಳೊತ್ತರಿಸೆ ಕಕ್ಷಪುಟಂ ನಸುದೋಱೆ . . . ಕರ್ಣಪೂರಿತೋತ್ಪಳಮೊಲೆದಾಡೆ ಗಟ್ಟಿಗಳ ನಂದು ಮಗುಳ್ಚಿದರಿಂದುವಕ್ತ್ರೆಯರ್ (ಗಿರಿಕ. ೨-೯೦) ; ನಸುದೋಱುವ ಕಿಱುನಗೆಯು ಕದಪುಗಳ ಕುಂಡಲದ ಚೆಲ್ವಿನಿಂ ಮೆಱೆವ ಸದ್ವದನನಂ . . . ಕಂಡನವನೀಪಾಲನು (ಕೃಮಿಭಾ. ೨-೪೮). ೨. ತುಸುವೆ ತೋರಿಸು : ಕುಂಚಿತಕುಂತಳಾಳಿಗಳನೊಯ್ಯನೆ ನೇರ್ಪಡಿಪೊಂದು ಲಕ್ಷ್ಯದಿಂ ಕಾಂಚನಕುಂಭಮಂ ಪಱಿವ ಪೆರ್ಮೊಲೆಯಂ ನಸುದೋಱುತುಂ (ಉದ್ಭಟ. ೧೦-೬೮).

[ ನಸು$_2$ + ತೋಱು ]

**ನಸುನಗು$_1$** (ಕ್ರಿ). ೧. ಸ್ವಲ್ಪ ನಗು ; ಮುಂಗುಳುನಗೆ ನಗು ; ಮಂದಹಾಸವನ್ನು ಬೀರು : ಆವರ್ತನಾಭಿ ನಸುನಕ್ಕಾ ವರನಿಂದತ್ತ ಪೋದಳ್ (ಶಾಂತಿಪು. ೫-೧೪೭) ; ಬಹ ಭೃಂಗಿಯುಂ ಕಂಡು ನಸುನಕ್ಕರು (ಸಿದ್ಧರಾ. ೧-೨೪) ; ಸತಿ ನಸುನಗುತ್ತಕ್ಕಕ್ಕ . . . ನಾನಱಿದನಱಿದೆನು ನಿನ್ನ ಮಾಯವನು (ಬಸಪು. ೨೪-೬೩) ; ಧುರದ ಜಯವಹುದೊಂದು ಪರಿಯಲಿ ನಿರುತವಲ್ಲದ ನುಡಿಯ ನುಡಿದರೆ ಪರಿಹರಿಸಬಹುದೆಂದನಸುರಾರಾತಿ ನಸುನಗುತ (ಕುವ್ಯಾದ್ರೋ. ೧೮-೩೯) ; ಮುಖದಲ್ಲಿ ಕಿಱುಬೆವರಿಟ್ಟಿದೆ ಹೊಸ ಹೊಸ ಪರಿ ಸುದ್ದಿ ಹುಟ್ಟಿದೆ ನಸುನಗುವೆಲ್ಲ ನಿನ್ನ ಕೀರ್ತಿ ಹೆಚ್ಚಿದೆ (ಪುರಂದ. ೫-೧೭-೧) ; ಅಪ್ಪಾಜಿಯು ನಸುನಗುತ್ತ ಕೇಳಿದರು (ಚದೇವ. ೧೭೦) ; ಹುಸಿ ನಗುತ ಬಂದೇವ ನಸುನಗುತ ಬಾಳೋಣ ತುಸುನಗುತ ತೆರಳೋಣ (ಗರಿ. ೧೦೩-೯). ೨. ಹೀಯಾಳಿಸು ; ಜರೆ ; ತಿರಸ್ಕರಿಸು : ಅರಿಗಳ್ ಪೆಸರ್ಗೇಳ್ದೆ ದೆರ್ಪೊಡೆವರೆಂಬ ಕೂದ್ರಕನ ವಿಕ್ರಮಾಡಂಬರಮಂದರೆವಾನಿಸಿಕೆ ಯೊಳೊಂದಿದ ನರಸಿಂಹಾಡಂಬರಕ್ಕೆ ನಸುನಗುತಿರ್ಕುಂ (ಕಾದಂಪೂ. ೧೧) ; ಪಗೆಗೊಂಡ ತುಂಬಿಯಂ ನಸುನಗುವವೊಲುಳ್ಳಲರ್ದು ಪೊಂಗಿ ಕಂಪಾದು

ದೆನಲ್ ಸೊಗಯಿಸಿ ಕಾವಾನ ಪಗೆಯುಂ ಬಗೆಯುಂ ತೀರ್ಚಿದುವು ಸುಗ್ಗಿಯೊಳ್ ಸಂಪಗೆಗಳ್ (ಮಲ್ಲಿಪು. ೫-೧೯) ; ತಾರೆಗಳತಿಶುಭ್ರವಿಡಿದಿರ್ದರಮ್ಮಂತೆ ಸೌರಭ್ಯವಿಲ್ಲೆಂದು ಜಜಿದು ಸೇರದೆ ನಸುನಗುವೊಲು ಬಿರಿಮುಗುಳ ಶೃಂಗಾರದ ವಲ್ಲಿಗೆಯಹುವು (ಕಂಸವಿ. ೭-೫೦). ೩. (ಅಲಂ). ಅರೆ ಬಿರಿ ; ತುಂಸು ಅರಳು : ವಿಸುಪ ಕುವಲಯಚಲತ್ಪತ್ರಂಗಳೊಳ್ಸುಟಿದು ನಸುನಗುವ ನವನೀರಜಾತಂಗಳಂ ತುಟಿದು (ಉದ್ಭಟ. ೧೦-೧೨೩).

[ ನಸು₁ + ನಗು₁ ]

**ನಸುನಗು₂** (ನಾ). ತಿಳಿಯಾದ ನಗು ; ಮುಗುಳುನಗೆ; ಮಂದಹಾಸ : ಸುಖಾರುವಿನ ಮುಖದಲ್ಲಿ ನಸುನಗು ತೋರಿತು (ಮಹಸ. ೫೭).

[ ನಸು₁ + ನಗು₂ ]

**ನಸುನಗೆ** (ನಾ).=ನಸುನಗು₂ : ನಸುನಗೆ ದಶನಪ್ರಭೆಯಿಂದ ಕೂಡಲಾ ದೆಸೆ ಧವಳಿಸಿದವೊಲಾಯ್ತು (ಶಾಂತಪು. ೪೮೩ ರಗಳೆ); ನಸುನಗೆ ಕಮಳದ ಸಿರಿಯುಂ ನಸುನಗೆ ಜನಿಯಿಸುವ ಲೋಚನಭ್ರಮರಂಗಳ್ ಮುಸುಜಿದುವು ಮೋಹ ವಲ್ಲರಿ ಪಸರಿಸಿ ಪರ್ವಿದುದು ಸುತರ ಲಾವಣ್ಯಜಲದಿಂ (ಹಂಪಾಪು. ೩-೧೩೯) : ಶ್ರೀಮುಖದೊಳ್ ನಸುನಗೆ ಬೆಳ್ದಾವರೆಯೊಳಲರ್ಕೆಯುಂಬಪ್ಪೊಲ್ ಪಸರಿಸೆ (ಚಂದ್ರಪ್ರ. ೧೩-೧) ; ಒಸೆದರಳ್ದ ನಸುನಗೆಯು ಶಶಿವಳೆಯೊಪ್ಪಿದು (ವಾಗೀಶ. ದೇ. ೨೧೦-೧೫) ; ಎಸೆವ ನಸುನಗೆ ದಶನರುಚಿ ದೆಸೆದೆಸೆಗೆ ಪಸರಿಸೆ ವೀಣೆಯಂ ಬಾಜಿಸುತ (ಬಸವು. ೧-೫೩) ; ನಸುನಗೆ ಮೊಳೆಯೆ ನುಡಿದನು ಧರ್ಮನಂದನನು (ಕುಮ್ಯಾಭಾ. ೨೩-೪೮) ; ಮೆಲ್ನಗೆ, ಮುಗುಳ್ನಗೆ, ನಸುನಗೆ ಇತ್ಯಾದಿ ನೂರುಬಗೆಯ ನಗೆಯನ್ನು ಮೊಗದ ಮೇಲೆ ನಲಿಸುತ್ತಲೇ ಇರಬಹುದು (ಶರಹ. ೪೮೫). [ ನಸು₁ + ನಗೆ ]

**ನಸುನಗೆಮೊಗ** (ನಾ). ಮುಗುಳುನಗೆಯಿಂದ ಕೂಡಿದ ಮುಖ : ನಸುನಗೆಮೊಗದ ಸೊಂಪಿನಲಾಹವಕ್ಕನುವಾದನಭಿಮನ್ಯು(ಕುಮ್ಯಾದ್ರೋ. ೪-೪೯).

[ ನಸುನಗೆ + ಮೊಗ ]

**ನಸುನಡುಗು** (ಕ್ರಿ). ಸ್ವಲ್ಪ ಕಂಪಿಸು : ನಿಡುಸುಯ್ಯಿನ್ಮಾರೋಡುವ ವದನಂ ನಸುನಡುಗುವ ಮೆಯ್ (ಜಯುಕಾ ೩-೦೪). [ ನಸು₁+ನಡುಗು₁ ]

**ನಸುನನೆ** (ನಾ). ಸಣ್ಣ ಮೊಗ್ಗು ; ಎಳೆಮೊಗ್ಗು ; ಕಸುಕಾದ ಮೊಗ್ಗು ; ಕರಲುಮೊಗ್ಗು : ನಸುನನೆಯೊಳಡಗಿರ್ದ ನವಸುಗಂಧದ ತೆಜದಿ ಉಸಿರೊಳಡಗಿರ್ದ ಚೈತನ್ಯದಂತೆ (ಶಿವಗೀ. ೧-೩) ; ನಸುನನೆಯನಪ್ಪಿದಳಿ ಕುಳದಂತೆ ಕಡುಹಸಿದು ಕಸುಗಾಯನಗಿದ ಗಿಳಿಗಳ ಬಳಗದಂತೆ (ಹಡಿಕಾ. ೮-೭೦). [ ನಸು₁ + ನನೆ₃ ]

**ನಸುನಳಿ** (ಕ್ರಿ). ಸ್ವಲ್ಪ ಬಾಗು : ನಸುನಳಿದು ನಿಮಿರೆ ತೋಳ್ಗಳ್ ಲಸಿತ ತ್ರಿಪತಾಕದಿಂ ಲತಾಕರಮೆಸೆಯಲ್ ಪೊಸದಳಿರಂ ಪೊತ್ತೆಳಲತೆ ಮಿಸುಗುವ ಕುಡಿಯರಡನೆಬಲೆ ಬಿಟ್ಟವೊಲೆಸೆದಳ್ (ಲೀಲಾವ. ೪-೧೦೮).

[ ನಸು₂ + ನಳಿ₁ ]

**ನಸುನಾಚಿಕೆ** (ನಾ). ತುಸು ಲಜ್ಜೆ : ಮುಂಜೆಱಗ ಸಂವರಿಸುತ್ತ ನಸುನಾಚಿಕೆಯ ಭಾರದಲಿ . . . ಮುಖಾಂಕ ಮಿಗೆ ಕಾಣಿಸುತ ಬಂದಳು ರಾವಣನಿದ್ದೆಡೆಗೆ (ಕೊರಶಾ. ೩-೪-೮). [ ನಸು₁ + ನಾಚಿಕೆ (< ನಾಣ್ಚಿಕೆ) ]

**ನಸುನಾಚು** 'ನಸುನಾಣ್ಚು' ನೋ.

**ನಸುನಾಣ್ಚು**, ನಸುನಾಚು (ಕ್ರಿ). ಸ್ವಲ್ಪ ಲಜ್ಜೆಪಡು : ಎಂದೊಡಾ ಮಾತಿಂಗೆ ನಸುನಾಣ್ಚಿ ಹೃದಯಾರವಿಂದದುಲ್ಲಾಸ ಪೂರಯಿಸಿ ಚಂದನ ಸೌರಭ್ಯವಡೆದ ವಿಗ್ರಹಜಾತ ಸಂದೋಹ ಗುಡಿಗಟ್ಟಿತವಳ(ಪ್ರೋಹಚ. ೨೭-೩೮); ನಸುನಾಣ್ಚುತ ನಲವಿನೊಳು ಒಸೆದೊಲವಱಿತೊಯ್ಯನುಚಿತೋಪಚಾರ ವನೆಸಗುವುದೇಕಚಿತ್ತದೊಳು (ಹಬಿಲ. ೩-೦೭). ನಸುನಾಚು : ಮಾಯಾ– (ನಸುನಾಚಿ) ನಾನು . . . ನಾನು . . . ನಾನೊಬ್ಬ ನರ್ತಕಿ (ತುಂಗಭ. ೮೪). [ ನಸು₂ + ನಾಣ್ಚು₁ ]

**ನಸುನಿದ್ದೆ** (ನಾ). ಗಾಢವಲ್ಲದ ನಿದ್ದೆ : ಲಘುನಿದ್ರೆ ; ಜೋಂಪು : ಎಸಟ್ಟಡಿಗೆತ್ತ ತಾವರೆಗಳೋವರಿಯೊಳ್ ನಸುನಿದ್ದೆ [ಪಾಠಾಂ. ಸುಖನಿದ್ರೆ] ಯಿಂದೆ ಜೋಂಪಿಸುವಳಿಯಂ . . . ಪ್ರಚಾರಿಸಿದುದು ಕಾಲಭೂಪನ ನಿಯೋಗದ ಸೂಳೆವಳಂಬೊಲೋದೆಲರ್ (ವರ್ಧಪು. ೮-೩೩).

[ ನಸು₁ + ನಿದ್ದೆ ]

**ನಸುನಿದ್ರೆ** (ನಾ).=ನಸುನಿದ್ದೆ : ಸಸಿಗಲ್ಲ ಬಟ್ಟಲಿಗಳ ಮೇಲೆರಳೆಗಳು ನಸುನಿದ್ರೆಯಿಂದೊಱಗಿರಲು (ಕುಠಾಸಾಂ. ೪-೧೬). [ ನಸು₁ + ನಿದ್ರೆ ]

**ನಸುನೀಡು** (ಕ್ರಿ). ತುಸುವೆ ಮುಂದಕ್ಕೆ ಚಾಚು : ಪಕ್ಕಿಗಳ ಸದ್ರುಸಬಿಂದು ವೃಂದವಮಂ ... ತಂದಿದಿರೊಳ್ ನಸುನೀಡಿ ಗೋಣನಾಗಳೆ ನೆಜೆ ಚಂಚುವಂ ತೆಜೆದು ಮೆಲ್ಲನೆ ಲಲ್ಲೆಯೊಳಂತು ತನ್ನ ಪೆಣ್ಗೆಳಗೆಱೆಯುತ್ತುಮಿರ್ದುದೆನಸುಂ ನಲವಿಂ ಸುರತೋತ್ಸುಕಂ ಶುಕಂ (ಕುಸುಮಾ. ೫-೮೩). [ನಸು₁ + ನೀಡು₁]

**ನಸುನೆನೆ** (ಕ್ರಿ). ಸ್ವಲ್ಪ ತೋಯು; ತುಸುವೆ ಒದ್ದೆಯಾಗು: ನಸುನೆನೆ ದೊಯ್ಯುನುಳ್ಳಲರೆ ಪೋಟ್ಟಿಲೆ ಕಂದದೆ ಕೂಡೆ ಕೆಂಪಿನಿಂ ರಸವೊಸರ್ವಂತಿರೊಕ್ಕ ನಱುದಂಬುಲಕಂ . . . ಮದಾಳಿ ಮೊರೆದರ್ದಱುಗುತ್ತಿರೆ ಬೀದಿಗಳ್ ಜನಕ್ಕಸತಿಯರೆರ್ದು ಪೋದುದನೆ ಪೇಟ್ಟವೊಲಿರ್ದುವು ಸುಪ್ರಭಾತದೊಳ್ (ಲೀಲಾವ. ೩-೧೭). [ ನಸು₂ + ನೆನೆ₂ (< ನನೆ₁) ]

**ನಸುನೆಮ್ಮು** (ಕ್ರಿ). ತುಸು ಒರಗು,–ಆಶ್ರಯಿಸು: ನಡುಗಿ ಬೆಮರ್ವ ಪೆಟ್ಟಳೆಸಿ ನೋಟ್ಪಿರ್ದೆ ಕಂಪಿವ ತಲ್ಲಣಿಪ್ಪ ಕಾಲ್ ತಡತಡಮಾಗೆ ಕೆಯ್ಯುಡಿವಳಂ ನಸುನೆಮ್ಮು [ಪಾಠಾಂ. ಮರ್ಗ]ವ ಮೇಲುದು ಕುಚಕ್ಕಡಿಗಡಿಗೇಱಿ ಸಾರ್ಚುವ . . . ವಿಕಾರಮಾಕೆಗಿದಿರೊಳ್ ಕರೆಗಣ್ಮದುದಂಬುಜಾಕ್ಷಸಾ (ವರ್ಧಪು. ೭-೧೪). [ ನಸು₂ + ನೆಮ್ಮು₁ ]

**ನಸುನೋ** (ಕ್ರಿ). ಸ್ವಲ್ಪ ವ್ಯಥೆಪಡು,–ನೋಯು : ಉರಃಪ್ರದೇಶಮನಿಸೆ ನೆತ್ತರೊಕ್ಕು ಪತಿ ಮುಚ್ಚೆಯೊಳಿಚ್ಚೆಯಗೆಟ್ಟು ಜೋಲ್ದೊಡಾದಮೆ ನಸುನೊಂದು ನಂದಿಸದೆ ತನ್ನನೆ ನಿಂದಿಸಿದಂ ದಿನೇಶಜಂ (ಪಂಪಭಾ. ೦೨-೦೦೭).

[ ನಸು₂ + ನೋ₁ ]

**ನಸುನೋಟ** (ನಾ). ಕಡೆಗಣ್ಣೋಟ ; ಕುಡಿನೋಟ ;ಓರೆನೋಟ : ನಸುನೋಟಂ ಜನವಶ್ಯಮಾಕೃತಿ ಗತಿಸ್ತಂಭಂ ವಚಃಪ್ರೌಢಿ ಭಾವಿಸೆ ಸಮ್ಮೋಹನ ಮಂತ್ರಂ (ಸೂಕ್ತಿಸು. ೮-೪೬೦) ; ಅಜ್ಞಾನದ ತಿಮಿರವಮಂ ಕೆಡಿಸುವುದು ಗುರುವರ್ಯ ನಿನ್ನ ನಸುನೋಟ (ಅನುಸಾ. ೫-೪-೧) ; ತಾಳಿ ನಸುವರೆಯ ನಸುನೋಟ ನಸುಲಜ್ಜೆಯಿಂ ಬಾಲಕಿಯರಿರ್ವರು ವಿರಾಜಿಸಲು (ನವಮೋ. ೨೨-೩೪). [ ನಸು₁ + ನೋಟ ]

**ನಸುಬಳಲ್ಕೆ** (ನಾ). ಸ್ವಲ್ಪ ಆಯಾಸ ; ತುಸು ದಣಿವು : ನೋಟಂ ತವೆ ತಳೆದುವು ನಸುಬಳಲ್ಕೆಯಂ ಮೇನಕೆಯಾ (ಗಿರಿಕ. ೩-೩೭).

[ ನಸು₁ + ಬಳಲ್ಕೆ (<ಬಟಲ್ಕೆ) ]

**ನಸುಬಾಗು** 'ನಸುವಾಗು' ನೋ.

**ನಸುಬಾಡು** 'ನಸುವಾಡು' ನೋ.

**ನಸುಬಾನಲ್** (ನಾ). ತುಸು ಮಸುಕಾದುದು; ಸ್ವಲ್ಪ ಬಣ್ಣವಳಿದುದು: ಚುಂಬಿಸಿ ಬೀಗಿ ಬೆಳ್ಪಡರ್ದ ಬಾಯ್ದೆಱೆ . . . ಉಣ್ಮೆ ಬೆಮರ್ ನಸುಬಾಲನಾ [ನಲು]ದ ಬೊಟ್ಟೆಂಬಿವು ಕೂಟದೊಂದು ಸವಿಯಂ ಪಿಸುಣಾಡುವುವೀ ಲತಾಂಗಿಯಾ (ಚಂದ್ರಪ್ರ. ೮-೭೨). [ ನಸು₁ + ಬಾಸಲ್ ]

**ನಸುಬಿರಿ** 'ನಸುವಿರಿ' ನೋ.

**ನಸುಬಿಸಿ** (ಗು). ೧. ಸ್ವಲ್ಪ ಬಿಸಿಯಾದ ; ಬೆಚ್ಚನೆಯ : ನಸುಬಿಸಿಯಪ್ಪ ನಲ್ಲುಣಿಸಿನಿಂ ಘಸೃಣಾರ್ದ್ರವಿಲೇಪದಿಂ ವಿರಾಜಿಸುವ ಕದಂಬದಂಬುಲದಿಂ . . . ಜನಮಾಗಳಂತು ಜೀವಿಸಿತಿನಿತಲ್ಲದುದುಟಿವುದೇ ಹಿಮದಾಗರಮಾದ ಮಾಗೆಯೊಳ್ (ಕುಸುಮಾ. ೭-೨೩) ; ಬೆಳುನೊರೆ ಮಸಗಿ ನಸುಬಿಸಿರಕುತ ಹೊನಲಿಡಲು(ಕುಮ್ಯಾದ್ರೋ. ೦೦-೬). (ನಾ). ೨. ಸ್ವಲ್ಪ ಬೆಚ್ಚಗಾದುದು

ಗಾಂಧಾರಿಸೊಪ್ಪಿನ ರಸವಂ ನಸುಬಿಸಿಯಂ ಮಾಡಿ ನೆತ್ತಿಗೊತ್ತೆ ವಾತಜ್ವರ ಪರಿಹಾರವಾಗುವುದು (ಸಕವೈ. ೭೦). [ ನಸು$_1$ + ಬಿಸಿ ]

**ನಸುಬಿಸುಪೇಟು** (ಕ್ರಿ). ಸ್ವಲ್ಪ ಬೆಚ್ಚಗಾಗು: ನಸುಬಿಸುಪೇಟ್ ಮೆಯ್ಮಗುಟ್ ಕೆತ್ತುವ ತಣಿಮ ಕೆತ್ತೆ . . . ಜಾನಕೀಂಬಿನುತ್ತುಸಿರ್ದುಸಿರ್ದಬ್ದನಾ ರಘು ಕುಲಾಂಬರಚಂಡಮರೀಚಿ ಮೂರ್ಛೆಯಿಂ (ಶಂರಾಮಾ. ೯-೧೧೬). [ ನಸು$_2$ + ಬಿಸುಪು + ಏಟು$_1$ (< ಏಟ್$_1$) ]

**ನಸುಬಿಳಿದು** (ನಾ). ತಿಳಿಯಾದ ಬಿಳಿ ; ಮಾಸಲು ಬಿಳಿ ; ಬೂದುಬಣ್ಣ; ಧೂಸರ : "ಧೂಸರಂ=ದೂಸರು, ದೂಸರಮೆಂದು ನಸುಬಿಳಿದು" (ಶಮದ. ೬. ೨೩೫ ಪ್ರಯೋ) : ಕೋಠ = ನಸುಬಿಳಿದಾಗಿ ಮಿಂಚುಹ ಬಟ್ಟೆಹ ತೊನ್ನು (ನಾಜಶಾ. ೬). [ ನಸು$_1$ + ಬಿಳಿದು ]

**ನಸುಬಿಳುಪು** 'ನಸುವೆಳ್ಪು' ನೋ.

**ನಸುಬೆಡಗು** (ನಾ). ತುಸು ಒಯ್ಯಾರ : ನಡಿಗೆಯಲ್ಲಿ ಕಂಡೂ ಕಾಣದಂತಹ ನಸುಬೆಡಗು (ಅಲಕೂ. ೦೮). [ ನಸು$_1$ + ಬೆಡಗು (< ಬೆಡಂಗು) ]

**ನಸುಬೆಳಕು** 'ನಸುವೆಳಗು' ನೋ.

**ನಸುಬೆಳಗು** (ಕ್ರಿ). ಮಂದವಾಗಿ ಉರಿಸು : ನಸುಬೆಳಗುಗೆ ಸೊಡರಂ (ಮುದತಿ. ೮-೨೮). [ ನಸು$_2$ + ಬೆಳಗು$_1$ ]

**ನಸುಬೆಳರ್** (ಕ್ರಿ). ಸ್ವಲ್ಪ ಬಿಳಿದಾಗು ; ಮಾಸಲುಬಿಳಿ ಬಣ್ಣವನ್ನು ತಾಳು: ಮಂದೈಸಿದ ಸಿಂಧುವಾರ ವನರಾಜಿಯಿಂ ನಸುಬೆಳರ್ತ ತಡಿಗಳುಮಂ . . . ಪಥಿಕರಬಿಲ್ಗೊಂಡು ತೋಡಿದಬುಂಬುನೀರ ಬಗರಗೆಗಳುಮನೊಳಕೆಯ್ದು ಬತ್ತಿದ ಪಳ್ಳಂಗಳೊಳಮತಿರೌದ್ರಮಾದ ಪೇರಡವಿಯೊಳಗೆ ಬರ್ಪಾಗಳ್ (ಕಾವಂಉ. ೨೬೬). [ ನಸು$_2$ + ಬೆಳರ್$_1$ ]

**ನಸುಬೇನೆ** (ನಾ). ಅಲ್ಪವಾದ ಬೇನೆ ; ಘನವಲ್ಲದ ನೋವು : ಗರ್ಭಿಣಿಗೆ ನವಮಾಸ ಪೂರ್ಣಮಾದುದು ತದ್ವಿಲಾಸಿನಿಯ ಸಂತಸದ ಮುಂದೆ ನಸು ಬೇನೆಯುಂ ಪೇಳಲಹುದೇ (ಭಾವಚಿಂ. ೩-೫೬). [ ನಸು$_1$ + ಬೇನೆ ]

**ನಸುಬೇ** (ಕ್ರಿ). ಸ್ವಲ್ಪ ಬೇಯು ; ಅರ್ಧ ಬೇಯು : ಹುರಿದ ತೆಂಗಾಯ ನಸುದಂದ ಬೇಳೆಯ ಹಸರು ಹುರಿದು ಬೇಯಿಸಿದ ಸೊಜ್ಜಿಗೆಯಿವನು ಕೂಡಿ ಸಕ್ಕರೆಯಿಕ್ಕಿ ಕರ್ಪೂರವನು ತಳಿದು (ಸೂಶಲಾ. ೦-೩೪). [ ನಸು$_2$ + ಬೇ$_1$ ]

**ನಸುಭಯ** (ನಾ). ತುಸು ಅಂಜಿಕೆ ; ಸ್ವಲ್ಪ ಹೆದರಿಕೆ : ಬಾಣಧಿಯೋನ್ನ ಬರಡಗಿರೆಂದಸುರಾರಿ ನೇಮಿಸೆ ನುಡಿದನತ್ತಲು ರಾವಣಾಸು ನಸುಭಯದ ಬೆಡಗಿನಲಿ (ತೊರರಾ. ೭-೯-೦೪). [ ನಸು$_1$ + ಭಯ ]

**ನಸುಮರ್ಬು** (ನಾ).=ನಸುಗತ್ತಲೆ : ಉಳಿವೆಳಗು ಸಂಜೆ ವಸುಮರ್ಬು ಳುರ್ದಂಬರದಂತೆ ತಿಳಿವು ರಾಗಂ ನೆಗಳ್ದವ್ಮಳಮನೊಳಕೊಂಡ ಬಗೆಯಿಂ ತಳವೆಳಗಾಗುತ್ತೆ ಪಾರ್ಥನಂದಿಂತೆಂದಂ (ಕಬಕಂ. ೪-೦೦೪). [ ನಸು$_1$ + ಮರ್ಬು (<ಮರ್ವು) ]

**ನಸುಮಸಿ** (ನಾ). ಸ್ವಲ್ಪ ಕಪ್ಪು ; ತುಸು ಕಪ್ಪು : ನಸುಮಸಿಯಾದ ಕರ್ಪಡಪನುಟ್ಟು (ಕಂಕಳಂ. ೦೭). [ ನಸು$_1$ + ಮಸಿ ]

**ನಸುಮಸುಳ್** (ಕ್ರಿ). ಸ್ವಲ್ಪ ಕಳೆಗುಂದು ; ಮಂಕಾಗು ; ಮಸುಕಾಗು : ಪೊಸತಲರ್ದ ಬಿಳಿಯ ತಾವರೆಯಸಟ್ಟಳ ನಡುವಿರ್ಪ ಸಿರಿಯುಮಾಕೆಯ ಕೆಲದೊಳ್ ನಸುಮಸುಳ್ದು ತೋರ್ಪಳ್ (ಶಂಪಥಾ. ೦-೪೦) ; ಒರ್ಮೆ ದಲೆಲಗಿ ದೆಸೆಗಳೆಲ್ಲಮನೊಡನಾವರಿಸಿ ತರತರದೆ ನಸುಮಸುಳ್ದಿರೆ ಪುದಿದುವು ನಭವನಭವನಂಬುಗಳೆತ್ತಂ (ಕಾವ್ಯಾವ. ೧೯೪) ; ನಸುಮಸುಳ್ದಂಗಲೇಖೆ ಪೊಜಮಟ್ಟೆಡಗಾಲ್ . . . ಕಣ್ಗೆಸದಿರೆ ಪಾಱಿದಳ್ ಪೊಳೆದು ಖೇಚರಿ ಮಿಂಚಿನ ಬೊಂಬೆಯುಂಬಿನಂ (ಅರ್ಧನೇ. ೩-೦೭).[ ನಸು$_2$+ಮಸುಳ್ ]

**ನಸುಮಾತು** (ನಾ). ಸಣ್ಣ ಮಾತು : ವಿಷಯಾತುರಗೆ ವಿವೇಕವಿಲ್ಲೆಂಬುದು ಪುಸಿಯಲ್ಲ ಮಾಯಾವಿ ನುಡಿದ ನಸುಮಾತಿಗೆ ನಿಶ್ಚಯಿಸಿದ ಪಯಣವನುಪೆಯ ತಾತ್ಪರ್ಯದುಬ್ಬಿನಲಿ (ಪೋಹಶ. ೩೦-೨೫). [ ನಸು$_1$ + ಮಾತು$_1$ ]

**ನಸುಮಾಸು** (ಕ್ರಿ). = ನಸುಮಸುಳ್ : ನಸುಮಾಸಿ ಪಾಡಟಿದ ರೂಪಿನೊಳುಣ್ಮುವ ಗಾಡಿ ನಾಡೆ ಕಣ್ಗೆಡಟ್ (ಶಂಪಥಾ. ೦೩-೯೯) : ನಸುಮಾಸಿ ದೆಱಂಕೆಗಳಿಂ ಕಲಹಂಸೆಗಳೆಂಬುದು (ಹರಾಯು. ೪೨-೯೯) ; ಎಸೆದುದು ಧರಿತ್ರಿ ಪೊಗೆ ಪುಗೆ ನಸುಮಾಸಿದ ಪೊಗೆಯ ಚಿತ್ರಭಿತ್ತಿಯ ತೆಱದಿಂ (ಪುಷ್ಪಪು. ೩-೪೦). [ ನಸು$_2$ + ಮಾಸು$_1$ ]

**ನಸುಮುಗಿ** (ಕ್ರಿ). ಸ್ವಲ್ಪ ಮುಚ್ಚು ; ಅರೆಮುಚ್ಚು ; ಅರ್ಧ ನಿಮೀಲಿತವಾಗು : ನಸುಮುಗಿದಕ್ಷಿ ನಾಸಿಕದೊಳೊಂದಿರೆ (ರೀಕು. ೨-೬೩). [ ನಸು$_2$ + ಮುಗಿ ]

**ನಸುಮುಚ್ಚು** (ಕ್ರಿ). ಅರ್ಧ ಮುಚ್ಚು ; ಅರೆಮುಗಿ : ನಸುಮುಚ್ಚುವ ಬಿಚ್ಚುವ ಪೊಳೆವ ಸುಟಿವ ಬಳಸುವ ಬಟಲ್ವ ತೆರೆಮಸಗಿ ಮರಲ್ದಿಸವ ರಸಭಾವದೃಷ್ಟಿಗಳಸದಳಮೆನಿಸಿದುವು ನೃತ್ಯದೊಳ್ ನರ್ತಕಿಯಾ (ರೀಲಾವ. ೪-೧೨೬) ; ಬಿಗಿಯುಟ್ಟ ಮೊಗವನಿಟ್ಟಾಲಿಗಳಂ ನಸುಮುಚ್ಚಿ (ಗಿರಿಕ. ೨-೩೯). [ ನಸು$_2$ + ಮುಚ್ಚು$_1$ ]

**ನಸುಮುಚ್ಚಿಪೋಗು** (ಕ್ರಿ). ಸ್ವಲ್ಪ ಮೈಮರೆ,-ಎಚ್ಚರ ತಪ್ಪು ; ಮೂರ್ಛೆಹೋಗು : ತನ್ನ ಚಿತ್ತದೊಳ್ ನೆಲಸಿದ ರಾಮನಂ ಬಯಸಿ ನೋಡಲಪೇಕ್ಷಿಸಿ ಬಾಹ್ಯದರ್ಶನಕ್ಕಲಸಿದಳೆಂಬಿನಂ ಮುಗಿಯೆ ಕಣ್ಮಲರ್ಗಳ್ ನಸುಮುಚ್ಚಿಪೋಗಿ ತಣ್ಣಲರ್ಲೆಖಿಂದೆ ಮೂರ್ಛೆದಿಳಿದಳ್ (ಶಂರಾಮಾ. ೯-೧೧೧). [ ನಸು$_2$ + ಮುಚ್ಚಿ$_2$ + ಪೋಗು$_1$ ]

**ನಸುಮುಟ್ಟು** (ಕ್ರಿ). ಸ್ವಲ್ಪ ತಾಗು ; ಮೃದುವಾಗಿ ಸ್ಪರ್ಶಿಸು : ಮೃಗಧರನಂಶುಮಾಲೆ ನಸುಮುಟ್ಟುವುದುಂ ಜಲಸೂಕ್ಷ್ಮಬಿಂದುಗಳ್ನಿಗೆದಪು ಮಿಂದುಕಾಂತಮಣಿಪುತ್ರಿಕೆಯಿಂದೆನೆ (ಮಲ್ಲಿಪು. ೪-೨೯). [ ನಸು$_2$ + ಮುಟ್ಟು$_1$ ]

**ನಸುಮುತ್ತು** (ನಾ). ಹಗುರವಾದ ಚುಂಬನ; ಲಘುವಾದ ಚುಂಬನ : ನಸುಮುತ್ತ ಕೊಡುವಾಗ ಮೂರ್ಛೆ ಸಂಧಿಸಿತು ಸಾಹಸದಿ ಬೀಳದೆ ನಿಂದೆ ನಾನು (ಭರಚ. ೯-೦೦೧). [ ನಸು$_1$ + ಮುತ್ತು$_4$ ]

**ನಸುಮುರಿ** (ಕ್ರಿ). ಸ್ವಲ್ಪ ತಿರುಗು ; ತುಸುವೆ ಹೊರಳು : ಪರಿದ ತಲೆ ಬಿಟ್ಟ ಬಾಯ ನಸುಮುರಿದ ಕೊರಲ್ಮಗುಟ್ದ ಕಣ್ಗಳ್ (ಗದಾಯು. ೪-೨೫). [ ನಸು$_2$ + ಮುರಿ$_1$ ]

**ನಸುಮುರುಟು** (ಕ್ರಿ). ತುಸು ಮುದುಡು,-ಬಾಗು,-ತಿರಿಚಿಕೊಳ್ಳು, 'ನಸುಮುರುಟುಗಿವಿ' ಪರಾ. [ ನಸು$_2$ + ಮುರುಟು$_1$ (<ಮುರುಂಟು$_1$ ) ]

**ನಸುಮುರುಟುಗಿವಿ** (ನಾ). ತುಸು ಮುದುಡಿದ ಕಿವಿ : ನೊರೆವಾಯ ಹಾವಸೆವರಿದ ಪಲ್ಗಳ ಜೋಲ್ದುಟಿಯ ನಸುಮುರುಟುಗಿವಿಗಳ ಹಱಿಕಗಡ್ಡದ ಕೆಂಪುಮೀಸೆಗಳ . . . ತೋರ ಕಾರೊಡಲ ಉಱುಬನು (ಬಸಪು ೨೦-೧೧). [ ನಸುಮುರುಟು + ಕಿವಿ$_3$ ]

**ನಸುಮುಸುಂಕು** (ನಾ). ತೆಳುವಾದ ಮುಸುಕು,-ತೆರೆ : ಎಸೆವ ಸಭೆಯೊಳ್ ನಸುಮುಸುಂಕು ನಾಡೆ ಮಱೆಯ ಮಱೆಗೊಂಡು ಕುಳ್ಳಿರ್ಪಲ್ಲಿ (ಗಿರಿಕ. ೨-೧೦೫ ವ). [ ನಸು$_1$ + ಮುಸುಂಕು$_2$ ]

**ನಸುಮೆಲ್** (ಕ್ರಿ). ಸ್ವಲ್ಪ ಜಗಿ; ತುಸು ಅಗಿ : ನಸುಮೆಲ್ದಬ್ಬಗಱುಕೆ ಸೂಸುತಿದೆ ಪೋದತ್ತಿಲ್ಲಿ ನಾನಾಮೃಗಂ (ಕಾದಂಪೂ. ೧೫೮). [ ನಸು$_2$ + ಮೆಲ್$_1$ ]

**ನಸುಮೊಳೆ** (ಕ್ರಿ). ತುಸು ಅಂಕುರಿಸು ; ಸ್ವಲ್ಪವೆ ಕಾಣಿಸಿಕೊಳ್ಳು : ಮುಗುಳುನಗೆ ನಸುಮೊ[ಪಾಠಾಂ. ಹೊ]ಳೆಯ ಭೀಮಾದಿಗಳಿಗೆಂದನು ಕೃಷ್ಣನು (ಕುವ್ಯಾಭೀ. ೭-೦೨). [ ನಸು$_2$ + ಮೊಳೆ$_1$ ]

**ನಸುಲಜ್ಜೆ** (ನಾ).=ನಸುನಾಚಿಕೆ : ನಗೆ ನಸುಲಜ್ಜೆಯೊಳ್ ತೊಡರಲಿರ್ದುದೆ ಬಲ್ನಡೆ ಮಾಂದ್ಯಭಾವದೊಳ್ ಪುಗಲಿದೆ . . . ಯೌವನೋದಯವೊ

ಬಾಲ್ಯವಿಮೋಚನವೋ . . . ಭವಾನಿಯಾ (ಗಿರಿಕ. ೪-೫) : ನಸುಲಜ್ಜೆ ನಗೆಮೊಗದೊಳಂಬರಿಸೆ (ಕೃಮಿಥಾ. ೫೯-೨೮). [ ನಸು₁ + ಲಜ್ಜೆ ]

**ನಸುವಕ್ಕೆ** (ನಾ). ತುಸು ಒರಗುವಿಕೆ; ಸ್ವಲ್ಪ ಬಾಗುವಿಕೆ: ಹರವಸಮೊಯ್ಯ ನಾಜಿ ಮುಗುಳ್ವಕ್ಕಿಗಳಟ್ಟಜಿ ಕೂಡೆ ಮೆಯ್ಯೊಳುಬ್ಬರಿಸಿದ ರೋಮರಾಜಿ ನಸುವಕ್ಕೆಗೆ ಸಾಜಿ ಬಜಲ್ದ ಮೆಯ್ಗೆ ಚೀತರಣೆಯಲರ್ಚೆ(ಚಂದ್ರಪು. ೬-೭೦). [ ನಸು₁ + ಪಕ್ಕೆ₁ (<ಪಟ್ಕೆ) ]

**ನಸುವರೆ** (ಕ್ರಿ). (ಸಂದಣಿ) ಸ್ವಲ್ಪ ಚೆದರು : ನೂತನತಾಪಂ ನಿರವಿಸಿ ಕಿಜಿದುಂ ಪೊಟ್ಟು ನೀಂದು ಅಲ್ಲಿಯ ಸಂದಣ ನಸುವ[ಪಾಠಾಂ. ಪ]ರೆವುದುಂ . . . ಪೋಂಬಾಗಿಲನೊಳಪೊಕ್ಕು (ಚಿಕವಂ. ೧೨೧-೩೩); "ಸ್ವಲ್ಪ ಹರಿ, ತುಸು ಕವ್ವಿಯಾಗು" (ಪ್ರಭಶ್ಶ.). [ ನಸು₂ + ಪರೆ₁ ]

**ನಸುವರೆಯ** (ನಾ). ಎಳೆಯ ಪ್ರಾಯ ; ಹರೆಯದ ಪ್ರಾರಂಭ ; ಏರುಂಜವ್ವನ : ತಾಳಿ ನಸುವರೆಯ ನಸುನೋಟ ನಸುಲಜ್ಜೆಯಿಂ ಬಾಲಕಿಯರೀವರ್ಗರು ವಿರಾಜಿಸಲು (ನವಪುಶೀ. ೨೩-೩೪). 'ಎಳವರೆಯ' ಪರಾ. [ ನಸು₁+ ಪರೆಯ₂ (< ಪರಯ) ]

**ನಸುವಾಗು**, ನಸುಬಾಗು (ಕ್ರಿ). ೧. ತುಸು ಬಾಗಂ; ಕೊಂಚ ಬಳುಕಂ,- ಬಗ್ಗು : ಮೇಲುದಿನೊಳ್ಪೊದರ್ದ ಕುಚಭಾರದಿಂ ನಸುವಾಗಿದುಗಲತೆ (ಕೃಮಿಥಾ. ೬-೪೬). **ನಸುಬಾಗು** : ೧. ನಸುಬಾಗಿ ಕೊಂಬಿನೊಳ್ ಪೊಳೆವಳ ಗಾಯ ನುಣ್ಪೊಗರಿಯಿಂ ಸುಟಿತರ್ಪಲರಿಂದೆ ಬಿಟ್ಟ ಪೂಗಳ ಪುಡಿಯಿಂ ಕರು ಸೊಗಯಿಪೋಲಗಸಾಲೆಯೋರ್ದರೊಪ್ಪದಿಂ (ಕಬ್ಬಿಗಕಾ. ೧೨೬). ೨. ತುಸು ತಗ್ಗಿಸು,-ಬಾಗಿಸು : ಪರರು ಪತಿಕರಿಸಿದೊಡೆ ಲಜ್ಜೆಗೆ ಶಿರವ ನಸುಬಾಗು ವರು ಗರುವರು (ಕುಮಾವ್ಯಾವಿ. ೭-೧೮). [ ನಸು₂ + ಬಾಗು₁ ]

**ನಸುವಾಡು**, ನಸುಬಾಡಂ (ಕ್ರಿ). ತುಸು ಬಾಡು : ನಸುಗಂದು : ಮಿಸುಗುವ ಬಣ್ಣವಾಸಿಗದೆಸಟಿ ನಸುವಾ[ಪಾಠಾಂ. ಬಾ]ಡೆ ವಿಭೂಷಣಾಂಶು ಗಳ್ ಮಸುಳೆ (ಸುಕುಮಾ. ೧೧-೫) ; ನೀರ್ಗುಡಿಯಲ್ ಗಡಣದಿಂ ಬಂದು ಬಟಲ್ದು ಕುಳ್ಳಿರ್ದ ಪಾಮರಿಯರ ಪೆರ್ಮುಡಿಯಿನತ್ತೊಕ್ಕು ನಸುವಾಡಿದ ಸೆಲ್ಲ ನಿಡುಪೊಡೆಯಿಂ (ಲೀಲಾವ. ೫-೭೭ ಪ). **ನಸುಬಾಡು** : ಮೇಲಿನ 'ಸುಕುಮಾ' ಪ್ರಯೋಗದ ಪಾಠಾಂತರವನ್ನು ನೋಡಿ. [ ನಸು₂ + ಬಾಡು₁ ]

**ನಸುವಿರಿ**, ನಸುಬಿರಿ (ಕ್ರಿ). ತುಸು ಅರಳು ; ಅರೆಬಿರಿ : ನಸುವಿರಿದ ಸೇವಂತಿಗೆಯ ಕೇವಣದಂಗುರಂಗಳುಮಂ. . .ನೋಡಿ (ಜಗವಿ. ೬-೧೬೮) ; ನಸುವಿರಿದಿರ್ದ ಪವ್ಮವನದೊಳ್ ನಲಿವಂಚೆಗಳಿಂ . . ರಸಾಲದೊಳ್ ಪೊಸತನಿವಣ್ಗಳಿಂ ಸವಿದು ರಾಗಿಪ ರಾಜಶುಕಂಗಳಿಂ ನಿರೀಕ್ಷಿಸೆ ಸೆಜಿಗೆಯ್ವು ದೊರ್ಮೊದಲೊಳಾ ವನಮಾ ವನಲೋಚನಂಗಳಿಂ (ಧರ್ಮನಾ. ೨-೫೪). **ನಸುಬಿರಿ** : ಕುಸುಮಸುಳಕ್ಕೆ ನಿನ್ನರಸೆ ನಿನ್ನ ವಿಳಾಸಮೆ ನಿನ್ನ ಚೆಲ್ವೆ . . . ಎಂದಭಿಷೇಕಪುರಸ್ಸರಂ ಸ್ಮರಂ ನಸುಬಿರಿದಿರ್ದ ಮಲ್ಲಿಗೆಗೆ ಕಟ್ಟಿದನಂಕದ ರಾಜ್ಯ ಪಟ್ಟಮಂ (ಶಾಂತಿಪು. ೭-೧೪೨); ನಸುಬಿರಿವ ಕಮಲಮುಕುಳದ ನಸುಬಿರಿವು ತ್ಪಲದ ಮುಗ್ಧ ಪರಿಮಳಗಂಧಂ (ಅಜಪು. ೬-೬೫) ; ನಸ ಬಿರಿವ ಕುಸುಮಕೆ ಸುಗಂಧ ರನ್ನಕೆ ರಂಗು ದೊರೆಕೊಂಡ ಮಾಳ್ಕೆಯಿಂ (ಸೌಂದಪು ೬-೨). [ ನಸು₂ + ಬಿರಿ₁ ]

**ನಸುವಿರಿದು** (ನಾ). ಸ್ವಲ್ಪ ದೊಡ್ಡದು : ಎಳದು + ಪೆಜಿ = ಎಳವೆಜಿ ಏಮಂ ಬೆಳೆಪೊಲಂ, ಮೂವಣ್ಣಂ, ನಸುವಿರಿದು, ಮರವಣಿ (ಶಬ್ದಾನು. ೯೦ ಪ್ರಯೋ). [ ನಸು₁ + ಪಿರಿದು ]

**ನಸುವೆಸೆ** (ಕ್ರಿ). ಸ್ವಲ್ಪ ಬಿಂಕವನ್ನು ತೋರು,-ಬೀಗು : ಪಸರಿಸಿದ ಕುಸುಮದೆಸಟ್ಗಳ ಮಸುಳಗೆಯಂ ಪಳುಚುವೆಸವ ಸೆಗೆಸಪಸದಿಂ ಸಸಿಮಸು ಯಿಸಿದವೊಲೆಸೆದುದನಸಿಯಳ್ ನಸುವೆಸೆದು ಪಸುಗೆ ಕುಡೆ ಕುಳ್ಳಿರ್ದಂ (ಅನಂಪು. ೮-೩೫). [ ನಸು₂ + ಬೆಸೆ₁ ]

**ನಸುವೆಳಗು**, ನಸುಬೆಳಕು (ನಾ). ಮಂದವಾದ ಕಾಂತಿ: ಸ್ವಲ್ಪ ಬೆಳಕು ; ಮಬ್ಬು ಬೆಳಕು : ಕುಸುಮಮರಜದಿಂದೆ ಸೊಗಯಿಪ ಪಸಂತವನರಾಜಿಯಂತೆ ಚಂದ್ರೋದಯವಿನ್ನೆಸೆದಪುದೆನೆ ನಸುವೆಳಗಿಂ ಮಸಗಿದುದಿನಿಸಿಂದ್ರದಿಗ್ವ ಧೂಮುಖಬಿಂಬಂ (ಕಾದಂಪೂ. ೬೭೮). **ನಸುಬೆಳಕು** : ಇನ್ನೂ ನಸುಬೆಳಕು ಹರಿಯುತ್ತಿತ್ತಷ್ಟೆ (ರೂಪಸಂ. ೧೭). [ ನಸು₁ + ಬೆಳಗು₂ ]

**ನಸುವೆಳ್ದಿಂಗಳ್** (ನಾ). ತಿಳಿಯಾದ ಬೆಳದಿಂಗಳು : ನಸುವೆಳ್ದಿಂಗಳ ತಣ್ಗದಿರ್ಗೊನರ್ಗಳಂ ದಂತಾಂಶುಗಳ್ ಬೀಜಿ (ಮಹಾನೀ. ೮-೦೩). [ ನಸು₁ + ಬೆಳ್ದಿಂಗಳ್ ]

**ನಸುವೆಳ್ಪು**, ನಸುಬಿಳುಪು (ನಾ). ಸ್ವಲ್ಪ ಬಿಳುಪು ; ನಸುಕಾಂತಿ : ಒಸರ್ದಪುದು ನುಡಿಯೊಳೊಲವಿನ ರಸವೆನೆ ನಸುವೆಳ್ಪು ಮಂದಮಂದ ಸ್ಮಿತದಿಂ ಪಸರಿಸುತಿರೆ (ಕಾದಂಊ. ೦೮೬). **ನಸುಬಿಳುಪು** : "ಈಷತ್ಪಾಂಡು, ಧೂಸರ = ನಸುಬಿಳುಪು " (ನಾಚಿರಾ. ೬). [ ನಸು₁ + ಬೆಳ್ಪು ]

**ನಸುಸಂಜೆ** (ನಾ). ಸೂರ್ಯ ಮುಳುಗುವ ಸಮಯ ; (ರಾತ್ರಿಯಾಗಲು) ಸ್ವಲ್ಪ ಕಾಲವೆ ಉಳಿದಿರುವ ಸಂಜೆ ; ಗೋಧೂಳಿಕಾಲ : ನಸುಸಂಜೆಯಾಗಲುದ್ಭಟನೊಸೆದರ್ಘ್ಯಮನಿತ್ತು ಚಂದ್ರಭೂಷಣನಂ ಪೂಜಿಸಿ ಮೆಲ್ಲನೆ ಮಗುಟ್ದಾರೋಗಿಸಿದಂ ಶಿವಭಕ್ತವೆರಸು ಮುದದಿಂದಾಗಳ್ (ಉದ್ಭಟ. ೮-೮೬). [ ನಸು₁ + ಸಂಜೆ ]

**ನಸುಸವಿ** (ಕ್ರಿ). ಸ್ವಲ್ಪ ರುಚಿ ನೋಡು ; ತುಸು ತಿನ್ನು : ನಸುಸವಿದಿತ್ತ ಪೊಚ್ಚಪೊಸಗಂಪಮರ್ದಿಂಪಿನ ತಂಬುಲಂ (ಉದ್ಭಟ. ೪-೩೮). [ ನಸು₂ + ಸವಿ₁ ]

**ನಸುಸುಯ್** (ಕ್ರಿ). ಸ್ವಲ್ಪ ಉಸಿರುಬಿಡು : ಸುರಭಿಪರಿಮಳಸುಗಂಧೋತ್ಕರಮಂ ಪನ್ನೊಂದು ತಿಂಗಳಗೊರ್ಮೆ ಮನೋಹರಮಾಗಿರೆ ನಸುಸುಯ್ವುಂ ನಿರುಪಮಮಹಿಮಾಪ್ರಭಾವನಂತಾ ದೇಪಂ (ಸುಕುಮಾ. ೯-೩೪). 'ಬಿಸುಸುಯ್' ಪರಾ. [ ನಸು₂ + ಸುಯ್₁ ]

**ನಸುಸುರ್ಕು** (ಕ್ರಿ). ಸ್ವಲ್ಪ ಕುಗ್ಗು : ಸುರ್ಕುಟಿದುರುಳಿಗುರುಳ ನಸುಸುರ್ಕಿದ ಕುಚಚೂಚುಕಂ (ಆದಿಪು. ೦೦-೦೪೫). [ ನಸು₂ + ಸುರ್ಕು₁ ]

**ನಸುಸುಳಿವು** (ನಾ). ಮಂದವಾದ ಚಲನೆ : ಲಲಿತಮೃದುತರ ಹಂಸತೂಲದ ತಳಿತ ಮಂಚದ ತಂಬೆಲರ ನಸುಸುಳಿವಿನಲಿ ಥಳಥಳಿಪ ಜಾಳಕಪಂಕ್ತಿ ರಂಜಿಸಲು (ಬಸಪು. ೧೧-೧೪). [ ನಸು₁ + ಸುಳಿವು ( < ಸುಟಿವು ) ]

**ನಸುಸೇಕ** (ನಾ). ಸ್ವಲ್ಪ ಶಾಖ ; ಸುಖೋಷ್ಣ : ದಿಟ್ಟ ಪಾರ್ವಂ ಕಾಸಿ ತೆಗೆವುತ ಪೊಟ್ಟಣವನಂಗೈಯೊಳೊಯ್ಯನೆ ಮುಟ್ಟಿಮುಟ್ಟಿ ಶರೀರದೊಳು ನಸುಸೇಕವಂ ಮಾಡಿ ಅಟ್ಟ ವಾತದ ತೈಲವಂ ತಾಂ ಬೊಟ್ಟಡಿಸಿ ಲೇಪಿಸುತ ಪಥ್ಯಂಗೊಟ್ಟದಕೆ ತಕ್ಕನಿತು ಜೋಪಾಸನವನಾಚರಿಸಿ (ಬಸಪು. ೧೭-೮). [ ನಸು₁ + ಸೇಕ₁ ]

**ನಸುಸ್ಥೈರಣೆ** (ನಾ). ಸ್ವಲ್ಪ ತಾಳ್ಮೆ,-ಸಹಿಷ್ಣುತೆ: ಪ್ರಣಯಕಲಹವನೊದರ್ಚೆ ನಸುಸ್ಥೈರಣೆಯ ಗೆಲವಂ ಕೊಟ್ಟು ಮೆಲ್ಲನೆ ಸೆಣಸಿ ಮುನಿದಡೆ ಸೋಲ್ತು ಮನವಲುಸುತೊಡನೆ ಸಾರ್ದು . . . ಮೋಳ್ಕೆಸಿ (ಬಸಪು. ೪೨-೦೪). [ ನಸು₁ + ಸ್ಥೈರಣೆ ]

**ನಸುಸೋಂಕು₁** (ಕ್ರಿ). ಸ್ವಲ್ಪ ತಗುಲು,-ತಾಗು : ಪೊಸ ಪೂವಿನ ಕಂಪಿನೊಳಟ್ಟು ಚಿತ್ರಜೋತ್ಸವವಿಳಾಸಮಂ ವಿರಹಿಗಿರ್ಮಡಿಪಮಾಡಿ ಶರದ್ಭವಂ ಸಮೀರ[ನ್ನ]ನುಸೋಂಕಿ ಘರ್ಮಜಲಬಿಂದುವನಾಜಿಸಿದತ್ತು ನಲ್ಲರಾ (ಶಾಂತಿಪು. ೧೦-೧೩೨) ; ಅರಗಿಳಿವಿಂದು ಪಾಜಿ ನಸುಸೋಂಕಿದೆಜಂಕೆಯ ಗಾಳಗೊಂದನೊಂದೊರಸೆ ನಿರಂತರಂ ಸುರಿವ ನುಣ್ದನೆಪಾಲ್ಗಳ ಧಾರೆಗೊಡ್ಡಿ ಚಂಚುರ ನಿಜಚಂಚುವಿಂ ಸವಿದು (ಕಾವ್ಯಸಾ. ೦೦೪) ; ತಕ್ಕೆಯೊಳ್ಪರಿದು ನಸುಸೋಂಕಿ ಏಟರಿಂ ಫಣಂದೆಗೆಯೆಂದು ಮುಂದಿಸೂಳೆ ಮಗುಳುಸುರ್ದಳು (ಸಂದಿವಾ. ೨೩-೪೩). [ ನಸು₂ + ಸೋಂಕಂ₁ ]

**ನಸುಸೋಂಕು₂** (ನಾ). ಮೃದುವಾದ ಸ್ಪರ್ಶ : ಎನ್ನ ಕದಂಬಿನ ನಸುಸೋಂಕಿನೊಂದು ಸುಖದಿಂದಾದಂ ಕುಚಿಸುತಿರೆ ಕರತಳದಿಂದಂ ಪೋದತ್ತಕ್ಷವಾಳಿ ನಾಣ್ಚೆರಸಾಗಳ್ (ಕಾದಂಪೂ. ೭೭೦). [ ನಸು₁ + ಸೋಂಕು₂ ]

**ನಸುಹೊಳೆ** (ಕ್ರಿ). ಸ್ವಲ್ಪಕಾಣು.–ತೋರು : ನಗೆಯ ವೊಳೆ ನಸುಹೊಳೆಯೆ ಬೊಮ್ಮನ ಮೊಗವ ನೋಡಿದನಭವ (ಉಪ್ಪಾಳ. ೬-೨೩).
[ ನಸು₂ + ಹೊಳೆ₁ ( < ಪೊಳೆ₁ ) ]

**ನಸೆ₁, ನಸ್ಕಿ, ನೆಸೆ₃** (ನಾ). ೧. ಕಾಮಾತುರ ; ಕಾಮವಿಕಾರ ; ಬೆದೆ : "ನಸೆ ಕಾಮವಿಕಾರ ವೃದ್ಧಿಯೊಳ್" (ಕರ್ಣಾನಿ. ೯೦) ; ಪೊಸವುದದಾನೆಯುಂ ನಸೆಯು ಪೆರ್ಚಿಡಿ ಜಂಗಮಕಲ್ಪವೃಕ್ಷಮಂ ಬಿಸುಗುವನಲ್ಪಕಲ್ಪಲತೆ ನೀರದಮಂ ಕುಡುಮಿಂಚು ಪೊರ್ದಿ ಶೋಭಿಸುವವೊಲಾ ಸುರಾಧಿಪನ ನಾಪರಮೇಶ್ವರಿ ಪೊರ್ದಿ ನಾಡೆ ಕಣ್ಗೆಸೆದಳ್ (ಶಾಂತಿಪು. ೬-೨೯) ; ನಸೆಗನುವಶಮಾಗಿರ್ದುದದೇದೊಂದಿಭೇಂದ್ರಂ (ಜಗನ್ನಿ. ೧೬-೧೦) ; ಹಸಿವಿಲ್ಲದೆ ಮುನ್ನ ಉಂಡೂಟವ ನಸೆಯಿಲ್ಲದೆ ಅಪ್ಪಾಯನವನಜೀಯರು (ಸರ್ಪವ. ೩೨-೧೬೦) ; ಮಣಿಕದ ನಸೆಗಸವಸದಿಂದಣಯುಂರಪೂಡುವ ಗವೇಂದ್ರನಂ ಸತಿ ಕಂಡಳ್ (ಅನಂಪು. ೪-೧೧೧) ; ಹಿಂಡಗಲಿದ ಹುಲ್ಲೆಯು ನಸೆಯೊಳಗಿಪ್ಪ ಗಂಡೇಣ ತನ್ನ ವಲ್ಲಭನ ಕಂಡುದುಂಟಾದಡೆ ತೋಟು ತೋರ್ಪೆನುತಲಿ ಪುಂಡರೀಕಾಕ್ಷಿ ಕೇಳಿದಳಾ (ಪ್ರಭುಲಿ. ೯-೭೪) ; ಆಕಳು ನಸೆಗೆ (ಬೆದೆಗೆ) ಬಂದಾಗ ಇಂದ್ರಿಯದಿಂದ ಸಣ್ಣಗೆ ಸ್ರಾವ ಜಿನುಗುವುದು (ಗೋರಕ್ಷಾಕ. ೨೪). **ನಸ್ಕಿ** : ೧. ಆ ಗಳಪ್ಪುಗೆ ಸಿಂಗವಿರ್ಜಿಗಳ ಚೆಲ್ಲಾಟ ಕಳಹಂಸಗಳ ಬಾಯ್ದೂಟ ತೊಳಗುವ ಹರಿಣಹುಲ್ಲೆಯ ನಸಿಯವರ್ಗ ನೆಲೆಗೊಂಡು ಮೆರೆದಿರ್ದುವನೆಂಬೆ (ಶಂಕವಿ. ೦೦-೪೪) ; ಕಡುಹಸಿದ ತೋಳನು ಮಾಂಸದ ಪಿಂಡವನ್ನು ನೋಡುವಂತೆ ನಸಿಯನ್ನೆಲ್ಲ ಕಣ್ಣಿಗೆ ತಂದು, ಇಳಿದು ಬರುತ್ತಿರುವ ಗೃಹಿಣಿಯನ್ನು . . . ನೋಡುತ್ತ ನಿಂತಿದ್ದಾರೆ (ಬೆಳುವಾ. ೧೬೪). **ನೆಸೆ₃** : ೨. (ಕರಾ) ಸಲಿಗೆ ; ಸದರ : ಮಕ್ಕಳಿಗೆ ನೆಸೆ ಕೊಡಬಾರದು (ಪಾಠವು. ೧೮೦) ; ನೆಸೆ ಕೊಟ್ಟವ ಹಸ ಕದ್ದುಕೋಡುಹೋದ (ಗಾದೆ).

**ನಸೆ ಮಾಡು** = ಕಾಮಚೇಷ್ಟೆಗಳನ್ನು ಮಾಡು ; ರತಿಕ್ರೀಡೆಯಾಡು : ತನ್ನ ಹರೆಯದ ನಲ್ಲರೊಡನೆ ನಕ್ಕು ನಸೆ ಮಾಡುತಂ ಸಿಂಗರಕ್ಕೆ ಮನಮೆಳಸಿ . . . ಲೋಲೆಯರ್ ಮೆರೆದರು (ಹಂಪು. ೧೦-೭೫).
[ ದೇ. ! ತಮಿ. ನಚ್ಚೆ ; ತೆಲು. ನಸ ; ಕೊಲಾ. ನಸವ್ = ತುರಿಕೆಯಾಗು, ನವೆಯಾಗು ]

**ನಸೆ₂** (ನಾ). ಒಂದು ಬಗೆಯ ಸಸ್ಯ : ಕಬ್ಬು, ನಸೇ, ಲಾವಂಚಿ, ಕಾಶಿ . . . , ಜೊಂಡು, ಬಿದಿರು (ನಮ್ಮಸು. ೨೪೯). [ ? ]

**ನಸೆಗಾರ** 'ನಸೆಗಾಟಿ' ನೋ.

**ನಸೆಗಾರ್ತಿ** (ನಾ). ಕಾಮೋದ್ರೇಕವನ್ನುಂಟುಮಾಡುವವಳು ; ಬೆದೆಗಾತಿ : ನಸೆಗಾರ್ತಿ! ಇಂತು ದಮನಂ ಹಯಮಾ ಸೆಟೆವಿಡಿದು ನಿಜಪುರಕೆ ಕಳಿಪಲ್ (ರಾಮಾಶ್ವ. ೮೭-೧೦). [ ನಸೆಗಾಱ + –ತಿ₁ (<–ಇತ್ತಿ) ]

**ನಸೆಗಾಱ, ನಸೆಗಾರ** (ನಾ). ೧. ಕಾಮೋದ್ರೇಕವನ್ನುಂಟುಮಾಡುವವನು. ೨. ಕಾಮ ; ಮದನ ; ಮನ್ಮಥ : "ಕುಡುವಿಲ್ಲ ಪೂಪುಣಂಬು . . . ಕಾವ ಕೊಂಕುವಿಲ್ಲಂ ಒಡಲಿಲ್ಲಂ ನಸೆಗಾಱ ಕಮ್ಮಂಗಣೆಯ ಜೊನ್ನೊಡಲನೆಳೆಯಂ ದಪ್ಪಕಂ ಮೆಯ್ಯಣನೆಂಬಿವಿಂತೊಡನೆ ಮನ್ಮಥ ನಾಮವು" (ಚಬ್ಬಮಂ. ೮) ; ತನಗೆ ಬಿರಯಿಮಿಗಂಗಳ ಬೇಂಟೆಗೆ ಬೇಚೆವೇಚೆವಿಲ್ಲಳ್ ದೊರೆಕೊಳ್ವಂತು ನಸೆಗಾಱನೊಸೆದು ಬೆಳೆಯಿಸಿದನೆನಲ್ಕೆಸೆವ ಕರ್ಬಿನ ತೋಟ (ರಾಮಾಶ್ವ. ೦೦೦-೨೦). **ನಸೆಗಾರ** : ೧. "ನಸೆಗಾರ – ಬೆದೆಗಾರ, ಕಾಮ" (ಗಂಗಾಮ. ೦೬೪) ; ಸೈರಿಪನೆಂತು ಚೆನ್ನ ನಸೆಗಾರನ ರೂಪಮ ನೀನೆಯಲ್ತೆ ಪೇಳ್ಮಾರಸಮಾನರೂಪ ನಸೆಗಾರನೆ ಸುತ್ತಿಹಳೇಕೆ ಬಾರಲೊ (ಚಕವಿ. ೩೮).
[ ನಸೆ₁ + –ಗಾಱ ( < –ಕಾಱ ) ]

**ನಸೆಗೆಡು** (ಕ್ರಿ). ಕಾಮೋದ್ರೇಕವಿಲ್ಲದಾಗು ; ಕಾಮಾತುರವನ್ನು ಕಳೆದುಕೊಳ್ಳು ; ನೀರಸವಾಗು : ಅಲ್ಲಿಯೋಡುವ ಶುಕಾವಳಿ ಮೂಗುವಟ್ಟಿರ್ದುವಲ್ಲಿ ಸಲಹಿದ ಹಂಸಮಾಲೆ ನಸೆಗೆಟ್ಟಿರ್ದುವು (ವೀರಶ. ಹ. ೪೯೦-೬).
[ ನಸೆ₁ + ಕೆಡು₁ ]

**ನಸೆದಿಟ್ಟಿ** (ನಾ). ಕಾಮಾತುರತೆಯಿಂದ ಕೂಡಿದ ದೃಷ್ಟಿ ; ಕಾಮುಕನೋಟ : ಸಿಂಗಾರವ್ವಾ . . . ನಸೆದಿಟ್ಟಿಯು ಬಿತ್ತುಂದನಿಯಿಂದ (ಚಟ್ಟಿಳ. ೯೬-೨೦). [ ನಸೆ₁ + ದಿಟ್ಟಿ ]

**ನಸೆನಸೆ, ನಶನಶೆ, ನಸನಸೆ** (ನಾ). ಸಂಶಯ ; ಅನುಮಾನ ; ಅಪನಂಬಿಕೆ : ನಸೆನಸೆಯುಳ್ಳವನು ಹಸಿಯಿನೇ? (ಗಾದೆ). **ನಶನಶೆ** : ಆಡುವ ಮಾತನ್ನೆಲ್ಲಾ ಖಂಡಿತವಾಗಿ ಆಡುವುದು. ನಶನಶೆ ಇಲ್ಲ (ಮುಸುಗ. ೩೩). **ನಸನಸೆ** : (ಕ).
**ನಸೆನಸೆ ಪಡು** = ಅನುಮಾನ ಪಡು ; ಸಂಶಯಂಹೊಂದು : ಜೋಕೆಯಿಂದ ಆಯು ; ಆಯ್ಕೆಯಲ್ಲಿ ( ಸುಲಭವಾಗಿ ಒಪ್ಪದೆ ) ನಸೆನಸೆ ಪಡು (Pick and Choose. ಇಂಕನಿ). **ನಸೆನಸೆ ಮಾಡು** = ನಸೆನಸೆ ಪಡು : ನಮ್ಮ ದೇಶದ ಕಥಕರು . . . ಕೊಟ್ಟದ್ದಕ್ಕೆ ತಕ್ಕಷ್ಟು ತೀವು ಬಂತೇ ಇಲ್ಲವೇ ಎಂದು ತುಂಬ ನಸೆನಸೆ ಮಾಡಿ ನೋಡುವರು (ನಿಬಂಧ. II, ೫೯).
[ ದೇ. ! ತಮಿ. ನಚ್ಚುನಚು = ( ಮಾತು ಅಥವಾ ಕೃತಿಗಳಲ್ಲಿ ) ನಿರ್ಧಾರಕ್ಕೆ ಬರದಿರು, ಹೊಯ್ದಾಡು ]

**ನಸೆನೋಟ** (ನಾ). ಕಾಮೋದ್ರೇಕವನ್ನುಂಟುಮಾಡುವ ನೋಟ ; ಕಾಮಾತುರದಿಂದ ಕೂಡಿದ ದೃಷ್ಟಿ : ಬೆಸುಗೆವಾತಿನ ವಿಟರಸುಗುಬ್ಬುಸವಮಾಳ್ಪ ನಸೆನೋಟದೊಳು ಶಂಕಿನಿಯರು (ಭೃರಸೂ. ೨೬೪).
[ನಸೆ₁ + ನೋಟ ]

**ನಸೆಮಸಪು** (ನಾ). ವಿರಹದ ಹೆಚ್ಚಳ : ನಸೆಮಸಪೊಂದೆ ನುಣ್ಪಸಲೆಯೊಳ್ ಸುಸಿಲಾಂತಿಸೆವೇಣನಂ ವಿಲಂಬಿಸದಿಸಲೆಂದು ಬಂದನ ಪುಳಿಂದನ ವಕ್ಷಮನುದ್ಗಮಾಸ್ತ್ರದಿಂದಿಸೆ ಕುಸುಮಾಸ್ತ್ರಂ (ರಾಜಶೇ. ೫-೧೧೫). [ ನಸೆ₁ + ಮಸಪು ]

**ನಸೆಮಸೆ₁** (ನಾ). ಕಾಮೋದ್ರೇಕವನ್ನುಂಟುಮಾಡುವಂಥದು ; ಬಯಕೆಯನ್ನು ಹೆಚ್ಚಿಸುವಂಥದು : ಬೆಸುಗೆವಾತಿನ ವಿಟರಸುಗುಬ್ಬುಸವ ಮಾಳ್ಪ ನಸೆಮಸೆಯ ನೋಟದ ಶಂಖಿನಿಯರು (ಭೃರವೇ. ೨-೧೬); ರಸಿಕದಂಪತಿಗಳು ಕೂಡಿದರೆನೆ ಸಾಕು ನಸೆಮಸೆ ಲಲ್ಲೆ ಕೊಲ್ಲಿಯೊಳು ಬೆಸುಗೆವಡೆದ ರಂತುಟಂತುಟಾಡಿದರೆಂದು ಹಸರವಿಕ್ಕುವುದಾವ ಜಾಣ್ಕೆ (ಭರತ. ೧೦-೧೦೩).
[ ನಸೆ₁ + ಮಸೆ₂ ]

**ನಸೆಮಸೆ₂** (ನಾ). ಹರಿತವಾಗುವಂತೆ ಮಸೆಯುವಿಕೆ; ತೀಕ್ಷ್ಣವಾಗುವಂತೆ ತೀಡುವಿಕೆ (?) : ಕದಡಿದವು ಬಲವೆರಡು ಕಲ್ಪದೊಳುದಧಿಯುದಧಿಯ ನೊದೆವವೊಲು ತಾಗಿದರು ನೀಗಿದರಸುವ ನಸೆಮಸೆಗೆಣ್ಡಿಸಿದವರು (ಕುಮಾರರಾ. ೧೬-೨೦) ; ಕಾಲನೇಮಿಯುಂ ಜಡಿದುಂ ಬಡಿದುಂ ಸಂದ ತನ್ನ ಪನ್ನತಿಕೆಯಿಂ ಪೊಣರ್ದ ರಾಮಭೃತ್ಯಂ ನಸೆಮಸೆಯ ತಿಸುಳಂ ಬೆಳಬೆಳಗೆ ಉರಿಗಣ್ಣ ಜಾಲ ದಳ್ಳಿಸೆ ... ಮಾರುತಿಗ್ಗಿಮೊಗಂ ಮುಮ್ಮೊಗನಾಗಿ ಜಡಿದಂ (ರಾಮಾಶ್ವ. ೧೩೩-೬) [ ನಸೆ₀ + ಮಸೆ₂ ]

**ನಸೆಯಳಿಪು** (ನಾ). = ನಸೆಯಿಚ್ಚೆ : ನಸೆಯ [ಪಾಠಾಂ. ಮಸಪ, ಮಸುಪ] ಳಿಪಿಂ ಪ್ರಿಯಾನನಮನೀಕ್ಷಿಸಲುದ್ಯತೆಯಾಗಿ ತಾನೆ ಲಜ್ಜಿಸಿ ತಲೆವಾಗಿ (ಸೂಕ್ತಿಸು. ೬-೮೩) ; (ಚಂದ್ರಪು. ೬-೭೭ ನೋ). [ ನಸೆ₁ + ಅಳಿಪು₂ ]

**ನಸೆಯಿಚ್ಚೆ** (ನಾ). ಕಾಮಾತುರ ; ಕಾಮೇಚ್ಛೆ ; ಸಂಭೋಗಾಪೇಕ್ಷೆ .
**ನಸೆಯಿಚ್ಚೆಯಾಗು** = ಕಾಮಾಪೇಕ್ಷೆಯುಂಟಾಗು ; ರತಿಯ ಬಯಕೆಯುಂಟಾಗು : ಪಸಿದೊಡೆ ಸಲ್ಲಕೀಕಿಸಲಯಂಗಳನೊಯ್ಯನೆ ನೀಡಿ . . . ನಸೆಯಿಚ್ಚೆಯಾದೊಡಗೂಡಿ ಬಟಲ್ದೊಡೆ ಕರ್ಣವಾತಮಂ ಪಸರಿಸಿ ತನ್ನ ಕೈಪಿಡಿಯವೊಲ್ ಪಿಡಿಯಂ ಪಿಡಿದಿರ್ದುದೊಂದಿಭಂ (ಚಂದ್ರಪು. ೫-೭೪).
[ ನಸೆ₁ + ಇಚ್ಚೆ ]

**ನಸೆಯೇಱಿಸು** (ಕ್ರಿ). ಉದ್ರೇಕಿಸು : ತಗರ ತಲೆಗೆ ಜಂಬೀರದ ಪುಳಿಯಿಟ್ಟು ವಿಾಗೆ ನಸೆಯೇಱಿಸಿ ನಗುತ ಜಗಳವ ಕಾದಿಸುತಿಹ ರಾಜಪುತ್ರರು ಸೊಗಸಿದರಾ ಬೀದಿಯೊಳಗೆ (ಕಂಸವಿ. ೭-೧೧). [ ನಸೆ$_1$ + ಏಱಿಸು ]

**ನಸೆವಣಕ** 'ನಸೆವಣಿಕ' ನೋ.

**ನಸೆವಣಿಕ, ನಸೆವಣಕ** (ನಾ). ಕಾಮೇಚ್ಛೆಯುಳ್ಳ ಪಶು ; ಬೆದೆಗೆ ಬಂದಿರುವ ಮಣಕ,-ಪಡ್ಡೆ : ನಸೆವಣಿ[ಪಾಠಾಂ. ಣ]ಕದೆ ಬೆಸ್ನಂ ಸಂಧಿಸುವುದುಮಸವಸದಿನೆಡೆಗೆ ಪುಗಲೊಡನಂತಾ ಬಸವಂ ಪಾಯ್ದೊಡೆ ಕಿಸಱಿಸೊಳ್ ಬಸವಟಿದಿರ್ದೊಂದು ಗೊಂದೆ ಪೊದಿತ್ತಾಗಳ್ (ಚಂದ್ರಪ್ರ. ೩-೨೯). ನಸೆವಣಕಃ ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ನಸೆ$_1$ + ವಣಿಕ ]

**ನಸೆಹಚ್ಚು** (ಕ್ರಿ). ಕಾಮದ ಬಯಕೆಯನ್ನುಂಟುಮಾಡು, – ಆಸೆ ತೋರಿಸು : ನಸೆಹಚ್ಚಿ, ಪುಸಲಾಯಿಸಿ, ಹೊತ್ತುಗೊತ್ತುಗಳ ನೆವ ಹೇಳಿ, ತುಸುತುಸು ಎಳೆದುಕೊಳ್ಳಬೇಕು ... ಸ್ವಲ್ಪ ಸಹನೆಯಿಂದಿರು (ಕೃಹಿಆ. ೯೦). [ ನಸೆ$_1$ + ಹಚ್ಚು$_1$ (< ಪಚ್ಚು$_3$) ]

**ನಸ್ತ** (ನಾ). ಮೂಗು ; ನಾಸಿಕ. [ ಸಂ. ]

**ನಸ್ತಿತ** (ನಾ). ಮೂಗಿನಲ್ಲಿ ರಂಧ್ರವನ್ನು ಮಾಡಲ್ಪಟ್ಟುದು ; ಮೂಗು ದಾರವನ್ನು ಹಾಕಿರುವ ಎತ್ತು, ಹಸು, ಮೊದಲಾದುವು "ನಸ್ಯೋತಃ, ನಸ್ತಿತಃ–ಈ ೨ ಮೂಗಿಟ್ಟುದು" (ಹಲಾಯು. ೪೪-೧೨೨) ; "ಒತ್ತಿ ಮೂಗಂ ಚುರ್ಚಿ ನಸ್ತಿತಂ [ಪಾಠಾಂ. ಮೂಗುರ್ರಿ ಬೊಚ್ಚಿ] ನಸ್ಯಿರಂ" (ಮಂಗರಾ. ೩೩-೨). [ ಸಂ. ]

**ನಸ್ಯ** (ನಾ). ೧. ಮೂಗಿಗೆ ಸಂಬಂಧಿಸಿದುದು. ೨. (ಔಷಧದ್ರವ್ಯ ಮೊದಲಾದುವನ್ನು)ಮೂಗಿಗೇರಿಸುವಿಕೆ; ಮೂಗಿನಿಂದ ಸೇವಿಸುವಿಕೆ; P ಆಯುರ್ವೇದದಲ್ಲಿ ರೋಗಗಳನ್ನು ಗುಣಪಡಿಸಲು ೧. ನಸ್ಯ= ಪುಡಿಯನ್ನು ಮೂಗಿಗೇರಿಸುವುದು. ೨. ಪಾನ=ನೀರಾಗಿರುವ ಔಷಧಿಯನ್ನು ಕುಡಿಸುವುದು. ೩. ಅಂಜನ=ಲೇಪನ ದ್ರವ್ಯವನ್ನು ಬಳಿಯುವುದು ಎಂಬ ಮೂರು ವಿಧದಲ್ಲಿ ಚಿಕಿತ್ಸೆಯನ್ನು ನಡೆಸುತ್ತಾರೆ: ನರಮೂತ್ರದಿಂದೆ ನಸ್ಯಮನಿರದಾಗಿಸೆ ಕಣ್ಗೆ ತೀದೆಸಲ್ ತದ್ವಿಷಮುಂ ಪರಿಗುಂ (ಖಮದ. ೭-೭); ಒಳ್ಳಿತ್ತಾಗಿ ಹಣ್ಣಾದ ಗದುಗಿನ ತಿರುಳಂ ಶುಂಠಿಯುಮನ ದಕದಲ್ಲರದು ನಸ್ಯಮಂ ಮಾಡಲ್ ಮಂಕಿನಂತೆ ಇರ್ಪುದಾಂ, ಬಾಹುಗಂಟುಗಳುಂ ಮಾಣ್ಬುವು (ಲೋಕೋಪ. ೯-೧೦೦ ಟೀಕೆ) ; ಮಹಾಷಟ್ಪಲ ಘೃತವನಾದರೂ ... ಹಾಕಿ ಕಾಸಿ ಪಾಕದಲ್ಲಿ ಇಳುಹಿ ಹಿಂಡಿಕೊಂಡು ಪಾನ, ಅಭ್ಯಂಗ, ನಸ್ಯ ಮೊದಲಾದ ಕ್ರಿಯೆಗಳನು ಮಾಡಿಸಲು ಸಕಲ ನಾಸಿಕರೋಗಂಗಳು ಶಮನವಹವು (ವೈದ್ಯಸಾ. II. ೧೦೯). ೩. ಮೂಗಿಗೇರಿಸುವ ಔಷಧದ್ರವ್ಯ : ನಸ್ಯಂಗಳಿಂದೆ ತನುಸಾರಸ್ಯಂ ಪಿರಿದಕ್ಕುಂ (ಖಮದ. ೭-೨) ; ರಜನಿ ಬರಿವದಣೆ ಕಟುಕವ್ರಜಮಿನಿತುಮನರೆವುದಾದಪಾಲೊಳ್ ತುರಗವ್ರಜಕೆ ಕುಡೆ ನಸ್ಯಮು ವಾತಜ ಪಿತ್ತಜ ಕಫಜಮೆನಿಪ ಸಿಂ(ಘಾ)ಹಾಣಹರಂ (ಅಶ್ವಶಾ. ೧೧-೩೦); ಮದ್ದುಗಳನಿಡಿವ ಉರಿವ ಸೀಕದ ನಸ್ಯದೊಳು ಹದನಱಿವ ತುರಗದ ವೈಸ್ನತಕಿಯುಚ್ಚಱಿಕೆಯಲಿ ಸಂತೈಸಿದರು ವಾಜಿಗಳ ವೇದನೆಯ (ಕುಮ್ಯಾಭೀ. ೩-೪೯). ೪. ಹೊಗೆಸೊಪ್ಪಿನಿಂದ ತಯಾರಿಸಿದ, ಮೂಗಿಗೇರಿಸುವ ಪುಡಿ ; ನಾಸೀಪುಡಿ ; ತಂಬಾಕುಪುಡಿ ; ನಶ್ಯ : ಈ ಅರಸು ಬಾಲ್ಯದಿಂದಲೂ ನಸ್ಯವನ್ನು ಹಾಕಿಕೊಳ್ಳುತ್ತಾ ಇದ್ದನು (ನೀತಿಚಿಂ. II. ೨೦) ; ನೆರೆಮನೆ ಮಲ್ಲವ್ವ ಮುದುಕಿ ಕಲ್ಲವ್ವನ ಹತ್ತಿರ ನಸ್ಯ ಬೇಡಲು ಬಂದವಳು ...ಕೇಳಿದಳು (ಚಿನ್ನುಹಿಂ. ೭೧); ನಸ್ಯ ನೆತ್ತಿಗೆ ಮೂಲ ಗುಡಿಗುಡಿ ಗುಂಡಿಗೆಗೆ ಮೂಲ (ರೂಢಿ).

ನಸ್ಯಂಮಾಡು, ನಸ್ಯ ಮಾಡು=೧.ನಸ್ಯಂಗೆಯ್ ೧: ಶುಂಠಿಯುಂ.ಬೆಲ್ಲಮುಂ ಉದಕದಲ್ಲಿ ತೇದು ನಸ್ಯಂಮಾಡಲ್ ತಲೆತಿರುಗುಹ ... ಶ್ಲೇಷ್ಮವಾತಂ, ಈ ರೋಗಂಗಳ್ ಕಿಡುವುವು (ಲೋಕೋಪ. ೯-೧೩ ಟೀಕೆ) : ಬಿಳಿಯ ಉಗನಿಯ ಬೇರಂ ಮೊಲೆಹಾಲಲ್ಲಿ ನಸ್ಯಂ ಮಾಡೆ ಮುಖರೋಗ ಮಾಣ್ಗುಂ (ವಿಷ್ವವಿ. ೦೫೧) ; ತಾಳಕದ ಹಣ್ಣಂ ಪೊಲೆಹಾಲಲ್ಲಿ ತೇದು ನಸ್ಯ ಮಾಡೆ ಅರೆದಲೆಬೇನೆ ಮಾಣ್ಗುಂ (ವಿಷ್ವವಿ. ೭೨). ೨. ಮೂಗಿಗೇರಿಸುವ ಔಷಧವನ್ನು ತಯಾರಿಸು,-ಸಿದ್ಧಮಾಡು. ೩. ಹೊಗೆಸೊಪ್ಪಿನಿಂದ ನಶ್ಯದ ಪುಡಿಯನ್ನು ಮಾಡು. ನಸ್ಯ ಮಾಡಿಸು = ಮೂಗಿಗೇರಿಸುವ ಔಷಧ ಮೊದಲಾದುವನ್ನು ತಯಾರುಮಾಡಿಸು,—ಸಿದ್ಧಗೊಳಿಸುವಂತೆ ಮಾಡು : ನಸ್ಯ ಮಾಡಿಸುವುದಕ್ಕೆ ತೈಲವನ್ನಾಗಲೀ ಘೃತವನ್ನಾಗಲೀ ಮೃದುಪಾಕದಲ್ಲಿ ಇಳಿಸಬೇಕು (ಸಕಪ್ರ. XIII ಪ್ರಸ್ತಾವನೆ). ನಸ್ಯ ಹಾಕು = ನಶ್ಯವನ್ನು ಮೂಗಿಗೇರಿಸು,-ಸೇದು : ವಿಲಾಯಿತಿಯಲ್ಲಿಯೂ ನಸ್ಯ ಹಾಕುವ ರೂಢಿಯಿತ್ತು (ಸಪಾಜೀ. ೬೧೭) : ಪುಷ್ಪಮಾಸವಾದರೆ ನಸ್ಯ ಹಾಕಿಕೊಳ್ಳಬಾರದೆ? (ಗಾದೆ). [ ಸಂ. ]

**ನಸ್ಯಂಗುಡು** (ಕ್ರಿ). (ಔಷಧವನ್ನು) ಮೂಗಿನ ಮೂಲಕ ಏರಿಸು,-ಸೇವಿಸುವಂತೆ ಮಾಡು : ನರಮೂತ್ರದೆ ನಸ್ಯಂಗುಡು ಗುರುಗುಂಜಿಯ ಬಕುಳವುರಿಚಯುಗ್ಮದ ಬಿತ್ತಂ ಪರಿಹರಿಕುಂ ಗರಳಭಯಂ ನಿರುತಂ (ಖಮದ. ೭-೪೭). [ ನಸ್ಯ + ಕುಡು$_1$ (<ಕೊಡು$_1$) ]

**ನಸ್ಯಂಗೆಯ್** (ಕ್ರಿ). ೧. (ಔಷಧ ಮೊದಲಾದುವನ್ನು) ಮೂಗಿಗೇರಿಸು,-ಸೇದು : ಬವಣಿ ತಲೆಬೇನೆಗಳ್ . . . ಕಫ ವಾತವಿಕಾರಂ ಪಿಂಗುಗು ವಾದವೆ ನಸ್ಯಂಗೆಯ್ಕೆ ಶುಂಠಿಯುಂ ಬೆಲ್ಲಮುಮಂ (ಲೋಕೋಪ. ೯-೧೩) ; ಅರಿಸಿನಮುಂ ನೀಲಿಯುಮಂ ಬೆರಸಲ್ಲವ ರಸದೊಳರೆದು ನಸ್ಯಂಗೆಯ್ಕಲ್ಯುರಗೋಗ್ರವಿಷಂ ಕಿಡುಗುಂ (ಖಮದ. ೭-೧೪); ಅರದಗಸೆಯೆಲೆಗಳಂ ವಿಸ್ತರದಿಂ ಗಾಳಿಸಿ ಕಟುತ್ರಿಕಂ ತ್ರಿಫಲೆಗಳಂ ಬೆರಸಿ ತನಿರಸದೊಳೀಬಾಗಿರೆ ನಸ್ಯಂಗೆಯ್ದೊಡದುವೆ ಸಿಂಘಾ(ಹಾ)ಣಹರಂ (ಅಶ್ವಶಾ. ೧೧-೩೧) ; ಯಷ್ಟಿ ಮಧುಕ, ಇಂಗು, ಇಪ್ಪೆಮರದ ಕೆಚ್ಚು ಇವಂ ನೀರಿಂ ತೇದು ನಸ್ಯಂಗೆಯ್ಯೆ ಭಗ್ನನೇತ್ರ, ಸನ್ನಿ ಗುಣಮಕ್ಕುಂ (ಸಕಪ್ರ. ೧೬೩). ೨. (ಔಷಧ ಮೊದಲಾದುವನ್ನು) ಮೂಗಿನ ಮೂಲಕ ಏರಿಸುವಂತೆ ಮಾಡು.-ಸೇವಿಸುವಂತೆ ಮಾಡು : ಹಾಮೆಕ್ಕೆಯ ಹಣ್ಣೊಳತಿಕ್ಷೀಮದೊಳಿರಿಸಿಟ್ಟ ಸುಂಟಿ ಹಿಪ್ಪಲಿ ಮೆಣಸೆಂಬೀ ಮೂಱನಾತ್ಮಜಲದಿಂ ಪ್ರೇಮದಿನಾತಂಗೆ. ನಲಿದು ನಸ್ಯಂಗೆಯ್ದುಂ (ದಶಕು. ೯-೧೦೦). [ ನಸ್ಯ + ಕೆಯ್$_1$ ]

**ನಸ್ಯಕರ್ಮ** (ನಾ). (ಔಷಧ ಮೊದಲಾದುವನ್ನು) ಮೂಗಿನ ಮೂಲಕ ಸೇವಿಸುವ ಕ್ರಿಯೆ,-ಮೂಗಿಗೇರಿಸುವ ಕ್ರಿಯೆ : ಸಿರಿಸದ ಪೂವಂ ಹುಲಿಗಿಲ ಪರಫಲ ಮಡುವಾಗಲಿಲೆ(ಳ)ಯ ಫಲಮಂ ಮೂತ್ರಂಬೆರಸರದು ನಸ್ಯಕರ್ಮಕ್ಕಿರದೊಡರಿಸಲಹಿಕುಲೋಗ್ರವಿಷಮಂ ಕಳೆಗುಂ (ಖಮದ.೭-೩೬). [ ನಸ್ಯ + ಕರ್ಮ ]

**ನಸ್ಯಮಿಾ** (ಕ್ರಿ). =ನಸ್ಯಂಗೆಯ್ ೨ : ಏಱಿಸದಲುಮಿಚ್ಚಿಯ ಹುಳಿಬೇಟಿಯ ದಳ ಲಶುನ ಮರಿಚಮೆಂಬಿವನಿಂಬಿಂ ಮೇಳಯ್ಸಿ ನಸ್ಯಮಿಾಯಲ್ [ಪಾಠಾಂ. ನಸ್ಯನಾಳಿಸು] ಜಾಳಿಸುಗುಂ ಸರ್ಪವಿಷಮಂ (ಖಮದ. ೭-೧೭).

[ ನಸ್ಯ + ಈ$_2$ ]

**ನಸ್ಯವಿಧಿ** (ನಾ). (ಔಷಧವನ್ನು)ಮೂಗಿನ ಮೂಲಕ ಸೇವಿಸುವ ಕ್ರಮ,-ರೀತಿ,-ಪದ್ಧತಿ : ಶ್ಲೇಷ್ಮ ರೋಗದಲ್ಲಿ ವಮನವಿಧಿಯನ್ನು ಪ್ರಯೋಗಿಸುವುದು. ಸನ್ನಿಪಾತರೋಗಗಳಲ್ಲಿ ನಸ್ಯವಿಧಿಯನ್ನು ಪ್ರಯೋಗಿಸುವುದು (ಸಕಪ್ರ. ೨೫). [ ನಸ್ಯ + ವಿಧಿ ]

**ನಸ್ಯವೆಱ್[3]** (ಕ್ರಿ). (ಔಷಧವನ್ನು) ಮೂಗಿನ ಮೂಲಕ ಏರಿಸು,-ಸೇವಿಸು : ಸಮಭಾಗೆಯಾಗಿ ಪೊಸ ಸಾಸಿವೆಯುಮನಂಕೊಲೆಯ ಬೀಜಮಂ ಕೂಡಿ ಬಟ್ಟಿಕ್ಕವನೆಣ್ಣೆಗೊಂಡು ಸಲೆ ನಸ್ಯವೆಱದೊಡಾಯುಷ್ಯವರ್ಧನಂ (ಲೋಕೋಪ. ೯-೯೦). [ ನಸ್ಯ + ಎಱ್$_1$ ]

**ನಸ್ಯಸೇದು** (ಕ್ರಿ). ನಶ್ಯಹಾಕು; ನಶ್ಯವನ್ನು ಮೂಗಿಗೇರಿಸು: ಅವನಿಗೆ ನಸ್ಯ ಸೇದುವ ಅಭ್ಯಾಸವಿದೆ (ಬೂಧಿ). [ ನಸ್ಯ + ಸೇದು$_1$ (<ಸೇಂದು) ]

**ನಸ್ಯಾಂಗ** (ನಾ). = ನಸ್ಯ ೨: ಪಂಧ್ಯಾ ಕರ್ಕೋಟಕೀ ಕಂದದೊಳಿಟ್ಟುದಜು ಮಾತ್ರದಿಃ . . . ದೇಚೀಂ ಧ್ಯಾನಂ ತದ್ವಿಷಸ್ಯಾಂಗೆ ವಿಷಧರದಷ್ಟಂಗೆ ನಸ್ಯಾಂಗ [ಪಾಠಾಂ. ನಸ್ಯಗ]ಮಾಗಲ್ ಸಂಧ್ಯಾಭ್ರಾರಕ್ತದಂತಾಗಳೆ ವಿಷ ಮಟಿಗುಂ (ಖಮದ. ೭-೯೦). [ ಸಂ. ]

**ನಸ್ಯೋತ** (ನಾ).=ನಸ್ತಿತ: "ನಸ್ಯೋತಃ, ನಸ್ತಿತಃ–ಈ ೨ ಮೂಗಿಟ್ಟುದು" (ಅಭಿಧಾನ. ೪೪-೧೦೨). [ ಸಂ. ]

**ನಸ್ರಾಣಿ, ನಸರಾಣಿ** (ನಾ). ೧. ಕ್ಷುದ್ರವ್ಯಕ್ತಿ; ತುಚ್ಛನಾದ ಮನುಷ್ಯ; ಅಲ್ಪಜೀವಿ: ಅವನಿಗೆ ಈಗ ಸಾರಥಿಯಾದ ಆ ನಸ್ರಾಣಿ ಸುಬ್ಬಭಟ್ಟ, ಆ ಗಾಣಿಗ ಸಂಕ . . . ಇವರೆಲ್ಲರ ದೆಸೆಯಿಂದ ಏನು ಹೇಳಿದರೂ ಗೋರ್ಕಲ್ಲ ಮೇಲೆ ಮಳೆ ಕರೆದಂತೆ ಸರ್ವಜ್ಞ ಎಂಬ ಹಾಗೆ ಆಗಿದೆ (ಹತಸ. ೩೭). ೨. ನಯವಾಗಿ ಮಾತನಾಡಿ ಮೋಸ ಮಾಡುವವನು; ಚಾಣಾಕ್ಷ; ಚಾಲಾಕಿ; ಬೆರಕಿ: "ನಸರಾಣಿ=ಪಕ್ಕಾ, ಚಾಲಾಕು" (ಜಾನಕೋ. ೧೧). [ ←ಅರ. ನಸ್ರಾನೀ; ಮರಾ. ನಸರಾಣೀ./ತುಳು. ನಸ್ರಾಣಿ, ನಸರಾಣಿ ]

**ನಹಿ** (ಅ). ನಿಷೇಧಾರ್ಥವನ್ನು ಸೂಚಿಸುವ ಸಂಸ್ಕೃತದ ಒಂದು ಅವ್ಯಯ; ಇಲ್ಲ; ನಾಸ್ತಿ: "ನಹಿ ನೋನ ಅ–ಈ ೪ ಅವ್ಯಯಗಳೂ . . . ಅಭಾವದಲ್ಲಿಯೂ ನಿಷೇಧದಲ್ಲಿಯೂ ಭೇದದಲ್ಲಿಯೂ ವರ್ತಿಸುವವು" (ಸಿದ್ಧಾಂತಿ. ೩೭೭); ವಿಶಾಲಮತಿಯೆ ನಿನ್ನ ಪೋಲುವ ಸತಿಯರು ಮಾಲೋಕದಿ ನಹಿ (ಯಾದವಾ. ೧೭).

ನಹಿನಹಿ (ದ್ವಿರುಕ್ತಿ): ನಹಿನಹೀ ಎಂಬವ ಮಹಿಗೆ ಹೊರೆ (ಗಾದೆ). [ P ಇದು ಸಂಸ್ಕೃತದ ಎರಡು ಅವ್ಯಯಗಳು ಸೇರಿ ಆಗಿರುವ ಕೂಡುನುಡಿ ]

**ನಳ$_1$** 'ನಲ$_2$' ನೋ.

**ನಳ$_2$** (ನಾ). (ಉಕ) ೧. ನಾಳ; ಕೊಳವೆ: ಮನೆಯ ಕೊಳಚೆನೀರು ಹೋಗಲು ನಳಗಳಿರುತ್ತವೆ (ಬೂಧಿ). ೨. ನಲ್ಲಿ; ಕೊಳಾಯಿ: ಸಮಾಜಸುಧಾರಕರೆಂಬುವರೆಲ್ಲ ಮೊದಲು ಬೀದಿಯ ನಳಕ್ಕೆ ಬಂದು ಅಲ್ಲಿ ನಡೆಯುವ ಕಾರ್ಯಕಲಾಪಗಳನ್ನು ನೋಡುವುದು ಒಳ್ಳೇದು! (ಗಾಳಿಗು. ೭೦); ಚಾಳಿನ ಕೊನೆಗೆ ಇದ್ದ ನಳದಿಂದ ನೀರು ತರುವದೆಂದರೆ ಜೀವದ ಮೇಲೆ ಬರುತ್ತಿತ್ತು (ಕೃತಿಜ. ೫೦); ಅತ್ತಿಕೊಳ್ಳದಲ್ಲಿ ದೊಡ್ಡದೊಂದು ಕೆರೆ ಕಟ್ಟಿ ಊರೊಳಗೆ ನಳ ತರುವ ಆಲೋಚನೆಯು ನಡೆದದೆ (ಕಥಾಗ. ೪೩೫). [ ←ಮರಾ. ನಳ./ ಸಂ. ನಾಲ ]

**ನಳಕ** 'ನಲಕ' ನೋ.

**ನಳಕೂಬರ** 'ನಲಕೂಬರ' ನೋ.

**ನಳದ್ವಯ** (ನಾ). ಒಂದು ಬಗೆಯ ಸಸ್ಯ,-ಜೊಂಡು (?): "ನಳಕಃ–ನಳದ್ವಯ, ಕಪ್ಪಲಿ" (ಒಷಧಿ. ೮೩). [ ಸಂ. ನಲದ್ವಯ ]

**ನಳನಳ** (ನಾ). ಕೋಮಲತೆ, ಮೃದುತ್ವ, ಸೌಂದರ್ಯ, ಕಾಂತಿಗಳನ್ನು ಸೂಚಿಸುವ ಒಂದು ಶಬ್ದ. 'ನಳನಳಿಕೆ', 'ನಳನಳಿಸು' ಪರಾ.

**ನಳನಳನೆ** (ಅ). ಮನೋಹರವಾಗಿ: ನಲ ಗಿರಿಯಲ್ಲವು ಕಂಪಾಗೆ ಗಗನ ಕುಚ್ಚಳಿಪ ಸುಗಂಧಕರ್ತಿಸುತ ನಳನಳನೀತಂದು ಗಿರಿಯ ಸಾರ್ದಾನೆಯಿಂದಿ ಅದನಂಗನೆಗೂಡಿ ಪಜ್ರಿ (ಭರತ. ೭೩-೧೩೭). [ ನಳನಳ + –ಅನೆ$_1$ ]

**ನಳನಳಿಕೆ** (ನಾ). ಕೋಮಲತೆ; ಮೃದುತ್ವ: "ನಳನಳಿಕೆಯೆಂದು ಕೋಮಲಂ" (ಶಶಸಾ. ೭೦-೬೦೩); "ನಳನಳಿಕೆಯನೆ ಕೋಮಲಂ" (ಶಶರ. ೫೩); ತುಂಬುರದಾಡನಾಥಂ ನಂಬಿಯುಣ್ಣಾನೇಜುಂಜಪ್ಪನದುರವಣೆ ಯುಮಂ ಸ್ವರೂಪಸೌಂದರ್ಯದ ನಳನಳಿಕೆಯುಮಂ . . . ದೃಷ್ಟಿಯ ದೈನ್ಯಮುಮನಚಿದು (ನಂಬಿರ. ೪-೧೧); ಸುಕುಮಾರಚೂಡಾಮಣಿಗೆ ಶೈಶವಂ ಕ್ರಮದೆ ಜಾಱೆ ಓತೆಸೆವ ಕೋಮಲಾಂಗದ ನಳನಳಿಕೆ . . . ಪೊಸಜವ್ವನಮನದೇಂ ಸೂಚಿಸಿದುವೊ (ಪದ್ಮರಾ. ೩-೨); ನಳನಳಿಕೆ ಯೊಳೊಡಗೂಡಿದರೆನೆ ಸಾಕು ಕೊಳರ್ವಕ್ಕಿಗಳ ಕೊರಳಂತೆ ಗಳರವ ತಾಡನ ಸೀತ್ಕಾರ ಭೂಷಣದುಲುಹು ಪೆರ್ಚಿಹಃದೆನಲೇಕೆ (ಭರತ. ೧೦-೧೦೪). [ ನಳನಳ + –ಇಕೆ ]

**ನಳನಳಿಕೆವೆಱು** (ಕ್ರಿ). ಕೋಮಲತೆಯನ್ನು ಹೊಂದು; ಮೃದುತ್ವವನ್ನು ಪಡೆ: ಪರಿಕಾಲ್ಗಳಿಂ ಬಳಸಿದ ಪವಮಕ್ಕಿವಲ್ಲಿಕಲ್ಪತರುವೆಂಬಂತೆಸೆದು ನಳನಳಿಕೆವೆತ್ತ ವಿನುಳಿಕೋಮಳದಳತ್ರಯವಿಳಸಿತ ಸರಳಶಾಖಾನಿಕಾಯಾ ಕಲಿತಬಿಲ್ವವೃಕ್ಷ (ಶಬಶಂ. ೩-೬೮೫). [ ನಳನಳಿಕೆ + ವೆಱು$_1$ ]

**ನಳನಳಿಸು** (ಕ್ರಿ). ೧. ಕೋಮಲವಾಗಿರು; ಮೃದುವಾಗಿರು; ನವುರಾಗಿರು: ವಿಳಸಿತಫಳಮಂಜರಿಯಿಂ ತಳೆದೊಪ್ಪುವ ಕಲ್ಪಲತೆಗೆ ವಾಸಟಿಯಾದರ್ ನಳನಳಿಸುವ ಜನಶಿಶುವಂ ತಳೆದು ತಳತ್ತಳಿಪ ಹರಿಯ ವರವಧುವಾಗಳ್ (ವರ್ಧಕು. ೧೩-೯೭); ನಳನಳಿಪಶೋಕೆಯ ತರುವಿನ ತಳಿರ ತೊಂಗಲು (ಹತಕಾ. ೩-೧೬). ೨. ಕಾಂತಿಯುಕ್ತವಾಗು; ಪ್ರಕಾಶಮಾನವಾಗು; ತೇಜೋಮಯವಾಗು: ನಳನಳಿಸಿ ಬೆಳೆದು ವಿರಹಾನಳ ನಳಂಗುಗುಮಾ ವಿಳಾಸರಸದ ತರಂಗಾವಳಿಗಳನಿಟಿಸುವ ಮಧ್ಯದ ವಳಿಗಳ ನೀಕ್ಷಿಸಿದ ನೀಱರಂ ರುಕ್ಮಿಣಿಯಾ (ಜಗವಿ. ೧೦-೨೭); ಓರಂತೆ ನಳನಳಿಸಿ ತೊಳಗುತ್ತಿರ್ಪನೋರ್ವನೇ ರುದ್ರಂ (ಪದ್ಮರಾ. ೧೦-೪೭). ೩. ಸುಂದರವಾಗು; ಚೆಲುವಾಗು; ಸೊಂಪಾಗು: ನೆಱೆ ಬಣ್ಣಸಲ್ಬುಭವಂ ನೆಱೆಯಂ ಪೆಱರಳವೆ ಪೊಸೆವ ತರುಗಳಿಂ ಪಣ್ಣೊಱೆಗಳ ನೆಱಿವೀಂದು ಬಗೆಗಱೆಪೋಲ್ ನಳನಳಿಸುತೊಱಗಿ ತಾಱಗಿದ ಬನಮಂ (ಲೋಕೋಪ. ೬-೩೦); ತಿಳಿಗೊಳನ ಬಳಸಿ ನಳನಳಿಸಿ ಬೆಳೆದೆಳಮಾವುಗಳ ತಳದ ವಲ್ಲಿಕಾ ಮಂಟಪದ . . . ಅಶೋಕೆಯ ತಳಿರ ತೊಂಗಲ ಗದ್ದುಗೆಯೊಳು . . . ಪಶುಪತಿಯಂತಿರಿರ್ದ ಮುನಿನಾಥ ಕಣ್ಗೆಸೆದಿರ್ದನು (ಹಕಲಾ. ೩-೬೬); ಮುತ್ತದಱ ವಲಯದೊಳೋಣದಿಂ ಕೀಲಿಸಿ ಪಜ್ಜಳಿಸುವ ಪಸುರ್ವಣೆಯಂಬ ತೆಱದಿ ನಳನಳಿಸುತೆ ತುಱುಗಿ ಬೆಳೆದ ಬಹಿರುದ್ಯಾನಂ ಕಣ್ಗೊಳಿಸಿದುದು (ಜಯುಕಾ. ೦-೯೫). ೪. ಸೊಗಸಾಗು; ರುಚಿಕರವಾಗು: ನಳನಳಿಪ ಬಹುವಿಧದ ಭಕ್ಷ್ಯಾವಳಿಯ ಹಡೆಗೆಗಳೋರಣಿಸಿ ಮುಂದಳಿಸಿ ಕೂಡಿದ . . . ಕೂಳ ರಾಶಿಯ ಬಂಡಿ ಜೋಡಿಸಿತು (ಕುಮಾ.ಭ. ೦೦-೨೫). [ ನಳನಳ + –ಇಸು$_3$ ]

**ನಳಪಾಕ** (ನಾ). (ಅಲಂ) ಅತ್ಯಂತ ರುಚಿಕರವಾದ ಅಡುಗೆ; P ನಳನು ರುಚಿಕರವಾದ ಅಡುಗೆ ಮಾಡುವುದರಲ್ಲಿ ತುಂಬಾ ಸಮರ್ಥನಾಗಿದ್ದನೆಂದು ಇತಿಹಾಸಪ್ರಸಿದ್ಧವಾಗಿದೆ: ಷಡ್ರಸಗಳನ್ನು ಸೇರಿಸಿ ನಳಪಾಕ–ಭೀಮಪಾಕಗಳನ್ನು ಇಳಿಸುವವರೇ ಪಾಕಕಲಾನಿಪುಣರು (ಜೀವಾಕ್ಷ. ೦೭೨); ಚಂದ್ರಿಯ ಅಡಿಗೆ ಎಂದರೆ ನಳಪಾಕ (ನಿಶಲು. ೪೦); ಸೀತೆಯ ನಳಪಾಕದಿಂದ ಹೊಟ್ಟೆಯಲ್ಲಿನ ವೈಶ್ವಾನರವನ್ನು ತಣಿಸೋಣ (ಸೀತಾರ. ೨೯). 'ಭೀಮಪಾಕ' ಪರಾ. [ ನಳ$_1$ (=ನಲ$_2$) + ಪಾಕ$_1$ ]

**ನಳಮಾನ** 'ನಲವಿಮಾನ' ನೋ.

**ನಳಯೋಗ** (ನಾ). [ಜ್ಯೋತಿ] ಜಾತಕನ ಜನ್ಮಕಾಲದಲ್ಲಿ ಏಳುಗ್ರಹಗಳು ದ್ವಿಸ್ವಭಾವ ರಾಶಿಯಲ್ಲಿರುವುದು; P ಈ ನಳಯೋಗದಲ್ಲಿ ಹುಟ್ಟಿದ ವ್ಯಕ್ತಿ ಸಿರಿವಂತನಾಗಿ, ಸುಖಿಯಾಗಿ, ಚತುರನಾಗಿರುತ್ತಾನೆಯಾದರೂ ಅಂಗವಿಕಲನಾಗುತ್ತಾನೆಂದು ನಂಬಿಕೆಯಿದೆ: ಏಱುಗ್ರಹಂ . . . ದ್ವ್ಯಂಗರಾಶಿಯೊಳ್ ಕೂಡಿ ನಿಂದೊಡದು ನಳಯೋಗಂ (ಜಾತತಿ. ೦೩-೧); ದ್ವಿಸ್ವಭಾವರಾಶಿ (ಮಿಥುನ ಕನ್ಯಾ ಧನುಸ್ಸು ಮೀನ)ಗಳಲ್ಲಿ ಏಳುಗ್ರಹಗಳೂ ಇದ್ದರೆ ನಳಯೋಗ (ಜಾತತಿ. ೦೩-೧ ಟೀಕೆ).

[ ನಳ$_1$ (=ನಲ$_2$) + ಯೋಗ ]

**ನಳಸಂಯುತ** (ನಾ). ಜೊಂಡುಹುಲ್ಲಿನಿಂದ ತುಂಬಿದುದು: "ನಡ್ವಳಂ. ನಳಸಂಯುತಂ – ಈ ೨ ನಾ(ಣ)ನಲುಳ್ಳ ಭೂಮಿ." (ಹರಾಯು. ೨೬-೪). [ ನಳ$_1$ (=ನಲ್ಲ$_2$) + ಸಂಯುತ ]

**ನಳಸಂವತ್ಸರ** (ನಾ). ಅರುವತ್ತು ಸಂವತ್ಸರಗಳಲ್ಲಿ ಐವತ್ತನೆಯದು: ನಳಸಂವತ್ಸರದೊಳ್ ಮ.೦ ಘಟಿಲಿನೆ ಮನುಜರ್ಗಮಧಿಕತ್ವಷೆ ತಾನಕ್ಕುಂ (ಅಟ್ಟಮ. ೬-೨೩). [ ನಳ$_1$ (=ನಲ್ಲ$_2$) + ಸಂವತ್ಸರ ]

**ನಳಸಮುದ್ಭವ** (ನಾ). [ಜ್ಯೋತಿ] ನಳಯೋಗದಲ್ಲಿ ಹುಟ್ಟಿದವನು: ಧನಪತಿ ಪದುಳಿದನೂನಾಂಗಿ ನಿಪುಣಮತಿ ನಳಸಮುದ್ಭವಂ (ಜಾತಕ. ೦೩-೦೨). [ ನಳ$_1$ ( = ನಲ್ಲ$_2$ ) + ಸಮುದ್ಭವ ]

**ನಳಿ$_1$** (ಕ್ರಿ). ೧. ಬಾಗು; ಬಗ್ಗು; ಡೊಂಕಾಗು: "ನಳಿ–ನಮನೇ" (ಶಮಧಾ); ಪದುಳಂ ನಿಂದೆಡಗಯ್ಯೊಳೊತ್ತಿ ಘುಜಂ ಕೊಪ್ಪಂ ಪಪಾಂಗುಷ್ಟ ಮೂಲದೊಳೊಟ್ಟೇಚಿಸೆ ಕಾಲದಂಡನಿಭಮಂ ಕೋದಂಡಮಂ . . . ಕೂರ್ಮೋನ್ನತ ಕರ್ಪರಂ ನಳಿದು ಬೆನ್ನಂ ಪತ್ರದೇಂ ಮಾಣ್ದುದೇ (ಶಂರಾಮಾ. ೩-೬೭); ಶಿರದ ನರೆ ಮೆಯ್ಯ ತೆರೆ ಕಯ್ಯ ಕೋಲಿಂದೆಸೆಯೆ ಸುರುಳ್ದ ತನು ನಳಿತ ಬೆನು ಜೋಲ್ವ ಪುರ್ಪಿಂದೆಸೆಯೆ (ಇಳಿರ. ದೇ. ೩೦-೦೬); ಕಿಬುಗೊಂಬು ನಳಿದ ಬೆನ್ನಂ ಕಿಟುಕಿದ ಕೊಡೆಗೆಚ್ಚಲೆಲೆವ ಬಾಲಂ ತಳುಮ್ಮೆ ಮೆಟಿಯ ಬಿಳಿದಾಗಿ ಮಣಣದೆ ಕಟಿವೆಮ್ಮೆಯ ಹಿಂಡು ಪಳ್ಳಿಪಳ್ಳಿಯೊಳೆಸೆಯಂ (ಸೂಕ್ತಿಸು. ೪-೬೦); ಕವಿದು ಹಳಚಿದುದುಭಯಬಲ ಶಿವಶಿವ ಮಹಾ ದೇವಮಮ ಪದರಜ ರವಿಯ ಶಿವಿದುದು ದಿವಪಳಿದುದು ನಳಿದನಹಿರಾಯ (ಕುಪ್ಯಾಘೀ. ೯ ಸೂಚನೆ). ೨. ಮಣಿ; ನಮಸ್ಕರಿಸು; ಶರಣಾಗು: "ನಳಿಯೆಂಬ ನುಡಿ ನಮಸ್ಕಾರಾರ್ಥದಲ್ಲಿ ಕಾಡಿನ ಸರದಿನಲ್ಲಿ ಸಲ್ಗುಂ" (ಶಂಜೀವ. ೨೮); ಕದನದೊಳಂದು ನಿನ್ನ ತರವಾರಿಯ ಬಾರಿಗೆ ಮೆಯ್ಯ ನೊಡ್ಡಲಾಜಿದೆ ನಳಿದಿನ್ನುವಂತದನೆ ಜಾನಿಸಿ ಜಾನಿಸಿ ಗಂಗ ತನ್ನ ನಂಬಿದ ಸುದತೀಕದಂಬದೆರ್ದೆ ಪೌವನೆವೋಗಿರೆ ಪುಲ್ಲೆವೆಚ್ಚುವೆಚ್ಚದಪನಹನ್ನಿಂಶಂ ಕಿಗುಳ ದಾಮನರಣ್ಯಶರಣ್ಯವೃತ್ತಿಯಿಂ (ಎಕ. II, ೨೧೦-೨೩; 1176). ೩. ಬಳುಕು; ತೊನೆದಾಡು: ಕಾಲ್ ಬಲೆಯ ನಡು ನಳಿಯೆ ಕಳಲುತುಂ ಬಟಲುತುಂ . . . ಬಾದರತಿವೇಗದಿಂ (ಲೀಲಾವ. ೧೦-೯); ಮುಡಿ ಜಡಿಯೆ ಕುಂತಳಂ ಕುಣಿಯೆ ಕಡೆಗಣು ಹೊಳೆಯೆ ನಡು ನಳಿ[ಪಾಠಾಂ. ಮಣಿ]ಯೆ . . . ನೇವುರ ಝುಣಂ ಝುಣಮೆನಲು ವನಿತೆಯರ ನಡುವೆ ಚೆಂಡಂ ಹೊಯ್ಯುತಿರ್ದಳೊಬ್ಬಳು ಕಾಮನಂಕಮಾಲೆಯ ಮಾಡುತ (ಹಕಕಾ. ೪-೦೩).

ನಳಿನಳಿ (ದ್ವಿರುಕ್ತಿ): ಮದಸಿಂಧುರಭಾರಮಣಾನಲಾಜದೇಲಿಂ ಬೆನ್ನಂ ನಳಿನಳಿದು ನಡೆವ ಹಯದಟಾಯಳವಂ ಕಂಡು (ಆದಿಪು. ೦೩-೩೦).

[ ದೇ.೫ ತಮಿ. ನೆಳಿ; ಮಲ. ಇಳಿ; ತೊದ. ನೊಳ್ಗ ]

**ನಳಿ$_2$** (ನಾ). ೧. ಸೊಬಗು; ಚೆಲುವು: ತೊಳಗುತಿವ ತೋಟದಲಿ ತೆರ ತೆರ ಗುಲಾಬಿಹೂ . . . ಎಳೆಬಿಸಿಲು, ತಿಳಿಗಾಳಿ; ನೋಡಿಕೊಳ್ಳಲು ಮಾಲಿ; ಏಳೆ ಹೇಳುವುದು ಆ ನಳಿಯ ? (ಸುಪೀತ. ೬-೮). (ಗು). ೨. ಕೋಮಲ ವಾದ; ಮೃದುವಾದ. ೩. ಕಾಂತಿಯುಕ್ತವಾದ. 'ನಳಿದೊಳ್', 'ನಳಿಮೊಗ' ಪರಾ.

**ನಳಿ$_3$** 'ನಲ್ಲಿ$_1$' ನೋ.

**ನಳಿ$_4$** 'ನಲ್ಲಿ$_2$' ನೋ.

**ನಳಿಕೆ** (ನಾ). ೧. ಸಣ್ಣ ಕೊಳವೆಯಂಥ ಟೊಳ್ಳಾದ ಸಾಧನ; ನಾಳ: ವಿವಿಧ ಬಗೆಯ ಉದ್ದೀಪನಕಾಲಕ್ಕೆ ಸಸ್ಯಗಳ ನಳಿಕೆಗಳು ವ್ಯಕ್ತಪಡಿಸುವ ಪ್ರತಿಕ್ರಿಯೆಯು ಪ್ರಾಣಿಗಳ ನರಗಳ ಪ್ರತಿಕ್ರಿಯೆಯಂತೆಯೇ ಇರುವುದೆಂಬು ದನ್ನು ಅವರು ಯಶಸ್ವಿಯಾಗಿ ತೋರಿಸಿದರು (ಜಸ್ಮಕ. ೦೦೩). ೨. ಕೊಳವೆ ಗಳಿಂದ ತಯಾರಿಸಿದ ಪಂಜರ: ಬಲಪಂತರಲ್ಲ ನಳಿಕೆಯ ಕೀರನಂತೆ ಅವರು ದಿಕ್ಕಾಗಲಜಾಯರು (ವೋಕೀಮೂ. ೩೬-೨೬೯). [ ಸಂ. ನಲಿಕಾ ]

**ನಳಿಗೆ, ಲಳಗಿ, ಲಳಿಗೆ** (ನಾ). ೧.=ನಳಿಕೆ ೧: "ನಳಿಗ (ಲಳಿಗ) – ನಾಲಿಕಾ (ನಲಕ) = ಕೊಳವೆ" (ತದ್ಭಕೋ. ೨೦); ನಳಿಗೆಯೊಳ್ ನಾಯ ಬಾಲವನು ಕಟ್ಟಲ್ಲನ್ನ ನಳುಹ ಬಿಡದು (ಸಮ್ಮಕಾ. ೧೦-೦೨); ನಾಯ ಬಾಲ ನಳಿಗೆಯಲ್ಲಿ ಹಾಕಿದ ಹಾಗೆ ಅವನ ಬುದ್ಧಿ ಎಂದಿಗಾದರೂ ಸರಿದಾರಿಗೆ ಬರುವುದಿದೆಯೇ ? (ತ್ಯಾಗಮ. ೧೨೦); ಪಿಸ್ತೂಲಿನ ನಳಿಗೆಯೊಂದು ಗಂಗಾರಾಮನ ಎದೆಯ ಕಡೆಗೆ ಗುರಿ ನೋಡುತ್ತಿತ್ತು (ಎಡಿವ್ಯ. ೦೦೪); ಇಬ್ಬರೂ ಹುಕ್ಕೆಯ ನಳಿಗೆ ಗಳನ್ನು ಬಾಯಲ್ಲಿಟ್ಟುಕೊಂಡು ತುಸುಹೊತ್ತು ಸುಮ್ಮನೆ ಈಚಿಚಿಯರು ಗಳಲ್ಲಿ ಒರಗಿದರು (ನಿಷ್ಕಾಮ. ೧); ನಾಯಿಯ ಬಾಲ ನಳಿಗೆಯಲ್ಲಿ ಹಾಕಿದರೆ ಡೊಂಕು ಬಿಟ್ಟೀತೆ ? (ಗಾದೆ). ೨. ನೆಯ್ಗೆಯಲ್ಲಿ ಉಪಯೋಗಿಸುವ ಸಾಧನ; ಲಾಳಿ: ಊಕೆಯ ಮಾಡುವಾತನ ಕಯ್ಯ ಕುಂಚಿಗೆಯ ತುಂತುಱು ನುಂಗಿತ್ತು ನೆಯ್ವ ಅಣ್ಣನ ಕಣ್ಣ ಕಯ್ಯ ಸ[ಪಾಠಾಂ. ಲ]ಳಿಗೆ ನುಂಗಿತ್ತು (ಗುಪ್ತಮಂ. ೪). ೩. ಬಲಿತ ಬಿದಿರು; ಬೊಂಬು. ೪. ಬೊಂಬಿನಿಂದ ತಯಾರಿಸಿದ ಪಾತ್ರೆಯಂಥ ಸಾಧನ; ಅಂಡೆ: ಉಗ್ರಪಾತಂಗ ದಂತಗಳಂ ಚಮರಿವಿನಲಂ ಜೇನ ನಳಿಗೆಯಂ ಪೂತಿಬೆಕ್ಕಂ ಹರಿಶ್ಚಂದ್ರ ರಾಯಂಗೆ ಕಾಣಿಕೆಯನಿತ್ತಡಿಗೆಜಗುತಿರ್ದರಗ್ಗದ ಬೇಡವಡೆಯೊಡೆಯರು (ಹಚಕಾ. ೩-೩); ತೈಲವನೊಂದು ನಳಿಗೆಯೊಳು ತುಂಬಿ (ವೀಶೈಪು. ೬-೮-೪೦); ಪುಲಿದೊವಲೆತಲೆಯ ಮಾಜಿ ಪೀಲಿಪೊಜಿ ಜೇನ ನಳಿಗೆ ಬಲ್ಪಂದಿದಾಡೆಗಳ ಒಲಿದಿತ್ತು ಕಾಣಿಕೆಯನು ಕೈಮುಗಿದರಾ ಬಲದ ನಾಯಕರು ಕಂಪಿಲಗೆ (ಕುರಾಸಾಂ. ೨೬-೩೮); ಪುಲಿದೊಗಲ ಪೊಜಿ ಜೇನುತುಪ್ಪದ ನಳಿಗೆ ಮೇಣದ ಮುದ್ದೆ (ಸಾಳ್ವಭಾ. ೦೬-೬). ೫. ಒಂದು ಬಗೆಯ ಸುಗಂಧದ್ರವ್ಯ: "ನಾಳಿಕಾ – ನಳಿಕೆ, ಒಳ್ಳಿ, ತೆಂಗು, ಸೂರ್ಯಭಕ್ತ" (ಒಷಧಿ. ೮೫). **ಲಳಗಿ:** ೧. ಶ್ವಾನನ ತಂದು ಬಾಲ ನೀವಿ ಲಳಗಿಯೊಳು ತಾನಿಡಲದರಿಂದ ಮೇಣ್ನು ಸರಳಾಗುವದೇ (ವಿಶಾಸು. ೪೦-೧); ನಾಯಿಯ ಬಾಲವನ್ನು ಲಳಗಿಯಲ್ಲಿ ಹಾಕಿದರೂ ಅದರ ಡೊಂಕು ಹ್ಯಾಗೆ ಹೋದೀತು ? (ವೋಹಿನೀ. ೪೯). **ಲಳಿಗೆ:** ೧. "ನಾಳಃ = ಲಳಿಗೆ" (ಕಾಶಕ್ಯ. ೩೦); ಬಳಿಯಕ್ಕಿವಿಟ್ಟ ಸೋದಿಸಿ ಮತ್ತೆ ಹರಿಯಣಕೆ ತಳಿದುಕೊಂಡು . . . ಲ[ಪಾಠಾಂ. ನ]ಳಿಗೆಯಂದದಿ ತಿರಿಹಿ ತಿರಿಹಿ ಮುಖಗೆಡದೆ ಹಪ್ಪಳವನೊತ್ತುವ ಹಾಗೆಯೊತ್ತಿ (ಸೂಪಶಾ. ೦-೪೮); ಹೊರಗೆ ಬಂದೂಕಿನ ಲಳಿಗೆಗಳು ಹಾಯ್ದಿವೆ (ಪ್ರಜಸ. ೧೮); ಶ್ವಾನದ ಬಾಲವ ಲಳಿಗೆಯೊಳಿಟ್ಟರೆ ಮಾಣದೆ ಸರಳವದಾಗೀತೆ ? (ಜನನಾ. ೦೦೨); ನಾಯಿಯ ಮನಸ್ಸು ಲಳಿಗೆಯಲ್ಲಿ ಹಾಕಿದ ನಾಯಿಯ ಬಾಲದಂತೆ ಇದ್ದಿತು (ನಾಡಿಗೇ. ೦೦೬). ೩. ಕಳಲೆಯ ನಟುವಲ್ಲಿ ಚಿವುಟಲಹುದು ಮುಂದೆ ಲಳಿಗೆ ಕೂರುಗುರಿಗಂಜುವುದೇ (ವೋಚಕ. ೦೦-೦೩); ಕಳಲೆಯನ್ನಖದಿ ಚಿವುಟಲು ಸುಲಭವದು ಬಲಿದು ಲಳಿಗೆಯಾದೊಡೆಯ [ಯಂ೨] ಗುಗರ್ಗಳಿಗೆ ಸಾಧ್ಯಮೆ (ನವಮೋ. ೧೦-೦೬). ೪. ಧಾರುಣಿಯೊಳಗೆ ಹೇಚಿನಿಕ್ಕ ಲಳಿಗೆಯ ಎಣ್ಣೆ ಹೂವು ಕಾಯಿ ಹಣ್ಣು ಮೊದಲಾದುದ ತಪ್ಪ ಸಾಧಿಸಿ ತರಿಸಿಕೊಂಡುಬು ಚಿಕ್ಕಮಕ್ಕಳಿಗೆಲ್ಲಿಯದೋ ನೆಟ್ಟನೆಯ ದೇವತ್ವ (ವೋಕೀಮೂ. ೧೦೪-೪೦೬); ತುಡುವೆಯ ಜೇನು ಕೋಲುಜೇನು ಹುತ್ತಜೇನು ಹೆಜ್ಜೇನು ಸಕ್ಕರೆಜೇನು ಯಿಂತಿವು ಮೊದಲಾದ ಜೇನುತುಪ್ಪದ ಲಳಿಗೆಗಳ ಸಾಲುಪೊಜಿಯಿಂ . . . ಕಾಣಿಕೆಯನಿಕ್ಕಿ (ನನ್ನಚಾ. ೪-೦೪ ವ). [ <ಸಂ. ನಲಿಕಾ. / ತುಳು. ನಳಿಗೆ ]

**ನಳಿಗೊಂಬು** (ನಾ). ಕೋಮಲವಾದ ಕೊಂಬೆ; ಎಳೆಸುದಾದ ರೆಂಬೆ: ಕವಲ್ತ ಕೊಂಬಿನ ಮಡವಡ್ಡಪಂದ ನಳಿಗೊಂಬಿನ ಪತ್ತುಗೆ ಜೋಲ್ವ ಬಳ್ಳಿಗೊಂಬಿನ ಬಳೆ ತೋರಗೊಂಬಿನ ನೊಗಂ ನಿಡುಗೊಂಬಿನ ಮೂಂಕು ಕಣ್ಣೆ ಚೆಲ್ವಿನೆ ನಡೆತಂದುದುವಂದಸುಗೆಯೆಂಬ ನೆಗಟ್ಟೆಯ ತೇರ್ಗಳೆತ್ತಲುಂ (ಕದ್ವಿಕಾ. ೨೦೩). [ ನಳಿ$_2$ + ಕೊಂಬು$_1$ ]

**ನಳಿತೋಳ್** 'ನಳಿದೋಳ್' ನೋ.

**ನಳಿತೋಳು** 'ನಳಿದೋಳ್' ನೋ.

**ನಳಿದು** (ನಾ). ಬಾಗಿದುದು ; ಡೊಂಕಾದುದು ; ವಕ್ರವಾದುದು. 'ಕಡುನಳಿದು' ಪರ್ಯಾ. [<ನಳಿ₁]

**ನಳಿದೋಳ್, ನಳಿತೋಳ್, ನಳಿತೋಳು** (ನಾ). ಕೋಮಲವಾದ ತೋಳು ; ಮೃದುವಾದ ಬಾಹು : ನಳಿದೋಳ್ಗಳ್ ಶಾಖೆಯಂ ಕಿಂದಳ ವೆಳವೞಿರಂ . . . ಸುಯ್ಗಳ ಗಂಪು ಕಂಪಂ ಮಿಗೆ ಸೊಗಯಿಸಿತಂಗೋದ್ಭವ ಶ್ರೀ ಜಗನ್ಮಂಗಳಶೃಂಗಾರಾಬ್ಧಿವೇಳಾವನಲತೆಯೆನೆ ಶುದ್ಧಾಂತಕಾಂತಾಜಿದಂಬಂ (ಪುಷ್ಪಪು. ೬-೩೯). **ನಳಿತೋಳ್** : ಕುಂತಿ . . . ನಿಧಾನಮನೀಡಾಡು ವಂತೆ ಕೂಸಂ ಗಂಗೆಯೊಳೀಡಾಡಿ ಬಂದಳಿತ್ತ ಗಂಗಾದೇವಿಯುಮಾ ಕೂಸಂ ಮುಟ್ಟುಗಲೀಯದೆ ತನ್ನ ತೆರೆಗಳೆಂಬ ನಳಿತೋಳ್ಗಳಿನೊಯ್ಯನೊಯ್ಯನೆ ತಟ್ಟಿಕ್ಕಿಸಿ ತರೆ (ಪಂಪಭಾ. ೧-೯೩ ವ) ; ಮುಗುಳ್ಗಳಂ ಮಿಸುಗುವ ದಂತ ಪಂಕ್ತಿ ಲತೆಯಂ ನಳಿತೋಳ್ಗಳಿಚ್ ಪೋಲ್ತು ನಾಡೆ ರಂಜಿಸುವ ವಿಳಾಸಿನೀ ನಿಕರದಿಂ ಪೊಸಸುಗ್ಗಿ ಪೊಲಿರ್ದುದೋಲಗಂ (ಧರ್ಮಾಮೃ. ೪-೧೪೦) ; ತಾಮರಸವಮುಖಿಯ ನಳಿತೋಳ್ ತಾವರೆಸಬೆಡಂಗುವೆತ್ತು ಸಿರಿಸದ ಸುಮನೋದಾಮಕಮಂ ಗೆಲೆವಂದೆಸೆದು ಮಕರಧ್ವಜನ ಪಾಶಮನೆ ಸೊಗಯಿಸುಗುಂ (ಅಗವಿ. ೧೧-೩೨) ; ನಿಱಿಗುರುಳ್ ಸೋರ್ಮುಡಿ . . . ನಳಿತೋಳ್ ಕಿಂದಳಂ . . . ಸೊರ್ಕುಂಗೋಗಿಲೆ – ಇವು ಉಪಸರ್ಗಂ ಬೆರಸಿದ ಶಬ್ದಂಗಳ್ (ಶಶಮ. ೬೩-೧೧೬) ; ಕಂದನಾಡುವ ಬಾಲಲೀಲೆಯಂ ನೋಡಿ ತೊದಲೊಂದಿದಿನಿವಾತನುಱ್ ಕೇಳ್ದು ಮುದ್ದಿನ ಮುದ್ದೆಯಂದ ದಂಗವನೆತ್ತಿಕೊಂಡು ನಳಿತೋಳ್ಗಳಿಂದಪ್ಪಿ . . ಪಂಚೇಂದ್ರಿಯ ಪ್ರೀತಿಯಂ ಪಡೆವರಿನ್ನಾವ ಕೃತರೊ (ಕೃಮಿಭಾ. ೧೮-೩೦) ; ಮಲ್ಲಸಾಧನೆಯಂತೆ ನಳಿ ತೋಳ್ಗಳಿಂದಪ್ಪಿಯುಲ್ಲಾಸವನು ತೋಱಿ ವಿಟಗೆ (ಕಂಸವಿ. ೬-೦೩೨). **ನಳಿತೋಳು**: ವನಿತೆ ಹೊರಳಿದಳು ಶೋಕವ ತಾಳ್ದು . . . ನಳಿತೋಳನು ಕಿದಱಿದಳವನಿಯಲಿ ಹಲುಬಿದಳಭಿಮನ್ಯುವಿನಳಲಿನಲಿ (ಕುಮಾವ್ಯಾ.ದ್ರೋ. ೬೦೪. ಪರಿ ೩೪೪) ; ಶೂರ್ಪಣಖಿ . . . ಹೊಳಹೊಳೆವ ನಿಡುಗಂಗಳಿನ ಕೋಮಲದ ಕದಪಿನ . . . ನಳಿತೋಳುಗಳ ಮಾನವವಿಲಸಿತಾಂಗದ ರೂಪ ಕೈಕೊಂಡೆಸೆದಳದಿರಿನಲಿ (ತೊರರಾ. ೩-೪-೩) ; ಮಿಸುವ ನದೀನಾರಿಯ ನಳಿತೋಳನಲಿಸೆವಿರ್ತಡಿಗಾಲುವೆ (ಜಯುಕಾ. ೦-೩೮) ; ಕಂದರ್ಪ ನಗುತ ನಾಲಿಸುತ ಸಂತಸದೊಳಂ ಚಂದದೆ ಪಿಡಿದು ರಾಜಿಸುವ ಇಂದೀವರಕಾಂತ ಲತೆಯನೆ ತತ್ಕರದಿಂದೊಪ್ಪಿದುವು ನಳಿತೋಳು (ಕಂಸವಿ. ೯-೩೯); ನಳಿತೋಳ ತಲೆಗಿಂಬ ಮಾಡಿ ಪದಗಳ ನೀಡಿ ಸುಳಿಗುರುಳ ಚದರಿ ಕೆದರಿದ ಲಲಾಮಂಗಳಿಂ ಲಲನೆಯರಿರಲು (ಪಂಶಾರಾ. ೫-೪-೦೩). [ನಳಿ₂ + ತೋಳ್]

**ನಳಿನ** 'ನಲಿನ' ನೋ.

**ನಳಿನಕೋರಕ** (ನಾ). ತಾವರೆಯ ಮೊಗ್ಗು : ತರಿಕ ಕಕ್ಕಡದರುತ್ಪಳದ ತೋಮರದವರ್ ನಳಿನಕೋರಕದಿಟ್ಟಿಯವರು . . . ಬಳಸಿ ಕೈಮಾಡಿದರ್ ನೃಪನ (ಛರವೇ. ೨-೪೮). [ಸಂ. ನಲಿನಕೋರಕ]

**ನಳಿನಗರ್ಭ** 'ನಲಿನಗರ್ಭ' ನೋ.

**ನಳಿನಗರ್ಭಾಂಡ** 'ನಲಿನಗರ್ಭಾಂಡ' ನೋ.

**ನಳಿನಜ** 'ನಲಿನಜ' ನೋ.

**ನಳಿನಜಾಂಡ** (ನಾ). ಬ್ರಹ್ಮಾಂಡ ; ಪ್ರಪಂಚ : ನಳಿನಜಾಂಡ ತಲೆಯ ತೂಗಿ ಮೋಹಿಸುತಿರಲು ಕೊಳಲನೂದಿ ಭ್ರಾಜಿಸುವ ಚೆಲುವ ಕೃಷ್ಣರಾಯನ ನೋಡಿ (ಪುರಂದ. ೫-೪೬ ಪಲ್ಲವಿ). [ಸಂ. ನಲಿನಜಾಂಡ]

**ನಳಿನದಳ** 'ನಲಿನದಲ' ನೋ.

**ನಳಿನದಳನಯನೆ** (ನಾ). ಕಮಲದ ಎಸಳಿನಂತೆ ಕಣ್ಣುಳ್ಳವಳು ; ಕಮಲಾಕ್ಷಿ : ನಳಿನದಳನಯನೆ ತನಗಾಗುಟಿವರೆ ಕರತಳದೆ ವದನಮಂ ಮುಚ್ಚುತವಗ್ಗಲಿಸಿ ಪೊಱಪಡುವ ಗೋತ್ರಸ್ಖಲನೆಯ ಭಯದಿಂದೆ ಮುಚ್ಚಿದಂತೆಪೊಲಿರ್ದಳ್ (ಕಾದಂಅ. ೧೨೪). [ಸಂ. ನಲಿನದಲನಯನಾ]

**ನಳಿನದಳಪುಟ** (ನಾ). ಕಮಲದ ಎಲೆಯಿಂದ ಮಾಡಿದ ದೊನ್ನೆ : ನಳಿನದಳಪುಟದೆ ನೀರು ನಳಿನಿಗಳವು ರೂಪುಗೊಂಡು ಸುರಿದಪುವೆನೆ ಕಂಗೊಳಿಪ ಮರಕತದ ಕಳಶಂಗಳ ಜಲವಂ ಸುರಿದರವಃಳಕವಳಾನನ ಯರ್ (ಕಾದಂಪೂ. ೬೩). [ನಳಿನದಳ (= ನಲಿನದಲ) + ಪುಟ₂]

**ನಳಿನದಳಲೋಚನ** 'ನಲಿನದಲಲೋಚನ' ನೋ.

**ನಳಿನದಳಾಕ್ಷ** (ನಾ). ೧. ಕಮಲದ ಎಸಳಿನಂತೆ ಕಣ್ಣುಳ್ಳವನು. ೨. ಕೃಷ್ಣ : ನಳಿನದಳಾಕ್ಷಂ ರುಕ್ಮಿಣಿ ಸಲೆ ಭಾಗ್ಯಸಂಪಾನುಭಾವದಿಂದಂ ದಿನವಂ ಕಳೆಯುತ್ತಿರೆ (ದಶಾವ. ೯-೧೬೮). [ಸಂ. ನಲಿನದಲಾಕ್ಷ (ನಲಿನದಲ + ಅಕ್ಷಿ + –)]

**ನಳಿನದಳಾಯತಾಕ್ಷ** (ನಾ). ಕಮಲದ ಎಸಳಿನಂತೆ ವಿಶಾಲವಾದ ಕಣ್ಣುಳ್ಳವನು : ನಳಿನದಳಾಯತಾಕ್ಷನುರುವಕ್ಷನಿಭಾಹಿತವಃಧ್ಮನಕ್ಷರಾಜ್ಞಳ ನಳಮಾಲಿಕಾಪ್ರಭನಹಿಪ್ರಭುಸನ್ನಿಭಬಾಹುಯುಗ್ಮಂ . . . ನಿಟ್ಟದಿರಾಗಿ ನಿಲ್ಸುದಂ (ಮಹಾನೇ. ೬-೩೮). [ಸಂ. ನಲಿನದಲಾಯತಾಕ್ಷ (ನಲಿನದಲ + ಆಯತ + ಅಕ್ಷಿ + –)]

**ನಳಿನದಳಾಯತಾಕ್ಷಿ** (ನಾ). ಕಮಲದ ಎಸಳಿನಂತೆ ವಿಶಾಲವಾದ ಕಣ್ಣುಳ್ಳವಳು: ನಳಿನದಳಾಯತಾಕ್ಷಿ . . . ಪೊಳೆವವತಂಸಪುಷ ರಜದಿಂ ಪೊರೆ ದಿರ್ದ ಕಪೋಲಪಟ್ಟಮಂ ತೊಳೆದಳನಾರತಂ ಸುರಿವ ಚಂದನಶೀತಲ ಹರ್ಷ ವಾರಿಯಿಂ (ಕಾದಂಅ. ೨೩೬). [ನಳಿನದಳ (=ನಲಿನದಲ) + ಆಯತಾಕ್ಷಿ]

**ನಳಿನದೃಶ** (ನಾ). ೧ ಕಮಲದಂತೆ ಕಣ್ಣುಳ್ಳವನು. ೨ ಕೃಷ್ಣ : ಜಲಧಿಯಲಿ ನಿಜಯೋಗ ನಿದ್ರಾಲಲನೆಗಭಿಮುಖನಾಗಿ ಪವಡಿಸಿ ನಳಿನದೃಶನಿರೆ ನಾಭಿನಳಿನ ದಲುದಯಿಸಿದನಜನು (ನಿಶಾಗ. ೧-೨-೨). [ಸಂ. ನಲಿನದೃಶ್]

**ನಳಿನದೃಶೆ** (ನಾ). ಕಮಲದಂತೆ ಕಣ್ಣುಳ್ಳವಳು : ಎಳೆಯ ಮಿಂಚಿನ ಕುಡಿಯ ಸೂಸುವ ನಳಿನದೃಶೆಯರು [ಪಾಠಾಂ. ನಯನದ] ಶಶಿಯ ಬಿಂಬವ ಹಳಿವ ಹುರುಡಿಸುವಬುಜಮುಖಿಯರು . . . ಕುರುರಾಯ ನೆಡವಂಕದಲಿ ಮೋಹಿದರು (ಕುಮಾವ್ಯಾ.ಉ. ೮-೪೪). [ನಳಿನದೃಶ + – ಎ₃]

**ನಳಿನನಯನ** (ನಾ). ೧. ಕಮಲದಂತೆ ಇರುವ ಕಣ್ಣು : ಎಳೆಯ ಮಿಂಚಿನ ಕುಡಿಯ ಸೂಸುವ ನಳಿನನಯನದ [ಪಾಠಾಂ. ದೃಶೆಯರು] ಶಶಿಯ ಬಿಂಬವ ಹಳಿವ ಹುರುಡಿಸುವಬುಜಮುಖಿಯರು (ಕುಮಾವ್ಯಾ.ಉ. ೮-೪೪). ೨. ಕಮಲ ದಂತೆ ಕಣ್ಣುಳ್ಳವನು : ಶ್ಯಾಮಸುಂದರನೂ ಮಹಾಬಾಹುವೂ ನಳಿನ ನಯನನೂ ಆದ ಈತನು ನನಗೆ ತಕ್ಕ ಗಂಡ (ಬಕಥಾ. ೩೭). ೩. ವಿಷ್ಣು. [ನಳಿನ (= ನಲಿನ) + ನಯನ]

**ನಳಿನನಾಭ** 'ನಲಿನನಾಭ' ನೋ.

**ನಳಿನನಾಳ** (ನಾ). ತಾವರೆಯ ದಂಟು ; ಕಮಲದ ಕಾಂಡ,–ದೇಟು : ನಳಿನನಾಳವು ಗಜದ ಕೈಯೊಡನಳವಿಗೊಡಲಂತರವೆ (ಕುಮಾವ್ಯಾ.ದ್ರೋ. ೪-೪) : ಬಳಿಕ ನೋಡುವೆ ದನುಜಗಿನಂಜರ ಬಲುಹನೆನುತಾ ವೀರ ಲಂಕೆಯ ನಳಿನನಾಳವ ಭದ್ರಗಜ ಕೀಳ್ವಂತೆ ಕೀಳ್ಪಗೆದ (ಛಾಶಿಅ. ೧೦-೪೮) ; ಜಲವೆಲ್ಲ ಹರಿಮಯ ಶಿಲೆಯೆಲ್ಲ ಶಿವಮಯ ಮಳಲುವಿಟ್ಟಿಗೆಗಳೆಲ್ಲ ಮಣಿಯ ಮಯವು ಬೆಳೆದಿಪ್ಪ ದರ್ಭೆಗಳು ಸಾಕ್ಷಾತ್ತು ಬ್ರಹ್ಮಮಯ ನಳಿನನಾಳವು ಸರ್ವ ವಿಷ್ಣು ಮಯವು (ಪುರಂದ. ೪-೪೦-೨). [ನಳಿನ (= ನಲಿನ) + ನಾಳ₁ (= ನಾಲ₁)]

**ನಳಿನನಿಭ** (ನಾ). ತಾವರೆಯಂತಿರುವುದು ; ಕಮಲಕ್ಕೆ ಸದೃಶವಾದುದು: ಕಾಂಚನಭಾಜನರತಮಭಿಕಾಂಚನಭಾಜನವೆನಿಪ್ಪ ಸುಪುಟಿರಚಿರುವಿಂ ಸಂಚಿತ ಗುಣನಡಿಗಳನಿನಸಂಚಿತಗುಣ ನಳಿನನಿಭಮನೊಸೆದರ್ಚಿಸಿದಂ (ಪುಷ್ಪಪು.೧೪-೬). [ಸಂ. ನಲಿನನಿಭ]

**ನಳಿನಪತ್ರ** (ನಾ). ತಾವರೆಯ ಎಲೆ : ದಿವಿಜಕುಲವಿಳಯಕಾಲಾನಲಂ ಬಪ್ಪಂತೆ ಹಾಲಾಹಳ ಸುಡುತ ಬರಲು . . . ಶಂಕರನು ಕರತಳದೊಳದ

ತಳೆದು ನೋಡಲು ನಳಿನಪತ್ರದೊಳು ಜಲಬಿಂದುವಂತೆ ತಲ್ಲಣಗೊಳಲು (ಲಕಿಚಂ. ೧೩-೧೪). [ ನಳಿನ(= ನಲಿನ) + ಪತ್ರ ]

**ನಳಿನಭವ** 'ನಲಿನಭವ' ನೋ.

**ನಳಿನಭವಾಂಗ** (ನಾ). ಬ್ರಹ್ಮನ ದೇಹ,-ಶರೀರ : ಮತ್ತಮಾ ಘನಸಮಯಂ ಗದಾಧರಮೂರ್ತಿಯಂತೆ ಘನಶ್ರೀಮನೋಜ್ಞಮುಂ ನಳಿನಭವಾಂಗದಂತೆ ಕಾದಂಬವಿತತಾವೋದವಾಹಮುಂ . . . ಎನಿಸಿರ್ದುದು (ರಾಜಶೇ. ೮-೧೧೮ ವ). [ ನಳಿನಭವ ( = ನಲಿನಭವ) + ಅಂಗ₂ ]

**ನಳಿನಭವಾಂಡ** 'ನಲಿನಭವಾಂಡ' ನೋ.

**ನಳಿನಮುಖಿ** 'ನಲಿನಮುಖಿ' ನೋ.

**ನಳಿನರಿಪು** (ನಾ). ಕಮಲದ ವೈರಿ ; ಚಂದ್ರ : ಬೆಳೆವುತಿರ್ದರು ಹರಿಣಪಕ್ಷದ ನಳಿನರಿಪುವಿನವೊಲ್ ಕುಮಾರರು (ಕುವ್ಯಾ.ಆ. ೩-೧೧) ; ಎಲೆ ಭಗೀರಥವಂಶ ವಾರುಧಿ ನಳಿನರಿಪು[ಪಾಠಾಂ. ಸಖಿ]ಸುತ ಕೇಳು ಕರುಣಾಜಲಧಿಯಲ್ಲಾ ಕಾಯ್ದನನ್ವಯನಾಮಧಾರಕನ (ತೊರರಾ. ೬-೩-೧).
[ ನಳಿನ ( = ನಲಿನ) + ರಿಪು ]

**ನಳಿನಲೋಚನ** (ನಾ). ೧. ಕಮಲದಂಥ ಕಣ್ಣುಳ್ಳವನು. ೨. ವಿಷ್ಣು : ನಳಿನಲೋಚನನಾರ್ದು ಶಾರ್ಙ್ಗವ ಬಲಿದು ಜೇವೊಡೆಗೆಯ್ಯೆ ಲೋಕವನಳರಿಸುವ ದನಿ ಮಾಯುವಾದುದು (ಶಾಲ್ಯಧಾ. ೩೦-೬೩).
[ ನಳಿನ (= ನಲಿನ) + ಲೋಚನ ]

**ನಳಿನಲೋಚನೆ** 'ನಲಿನಲೋಚನೆ' ನೋ.

**ನಳಿನವದನೆ** (ನಾ). ಕಮಲದಂತೆ ಮುಖವುಳ್ಳವಳು ; ಸುಂದರಿ : ಕಳಸಕನ್ನಡಿ ಸಹಿತ ನಡೆಯಲಿ ನಳಿನವದನೆಯರೆಂದು ನೇಮಿಸಿದನುಪಹೀಪಾಲ (ಕುವ್ಯಾ.ಉ. ೬-೧೭). [ ಸಂ. ನಲಿನವದನಾ ]

**ನಳಿನವನ** (ನಾ). ಕಮಲಗಳ ಸಮೂಹ ; ತಾವರೆಗಳ ಗುಂಪು : ನಳಿನವನಶ್ರೀನಿವಹಂ ಕಳಹಂಸಂಬೆರಸು ಬಂದುದೆನೆ ಲತಿಕಾಕೋಮಳೆಯರ ನಡುವೊರ್ವಂ ನಿರ್ಮಳರೂಪಂ ದ್ವಿಜಕುಲೋತ್ತಮಂ ಬರುತಿರ್ದಂ (ಅನಂಪು. ೨-೩೯). [ ನಳಿನ (= ನಲಿನ) + ವನ ]

**ನಳಿನವೈರಿ** 'ನಲಿನವೈರಿ' ನೋ.

**ನಳಿನಶರ** (ನಾ). ಮನ್ಮಥ ; ಅನಂಗ : ದೇವರಾಜೇಂದ್ರಭೂಪತಿಚಂದ್ರನು ನಳಿನಶರನಧಟ ಹರಪಾದಸರಸಿಜಭೃಂಗನೆಳೆಕೀರವಾಣಿ . . . ಶಚಿದೇವಿಯೆಂದೆಂಬ ಸತಿಸಹಿತ ರಾಜ್ಯವನಾಳುತ (ಪ್ರಾಭರಾ. ೯-೩೭).
[ ನಳಿನ (= ನಲಿನ)+ ಶರ ]

**ನಳಿನಸಂಭವ** 'ನಲಿನಸಂಭವ' ನೋ.

**ನಳಿನಸಖ** 'ನಲಿನಸಖ' ನೋ.

**ನಳಿನಸಖನೇತ್ರ** (ನಾ). ಸೂರ್ಯನನ್ನು ಕಣ್ಣಾಗಿ ಉಳ್ಳವನು ; ಶಿವ : ನಳಿನಸಖನೇತ್ರನಿಹನುಮೆಯೊಳುಂ ಕ್ರೀಡಿಸುತ (ಲಕಿಚಂ. ೦೬-೦೩).
[ ನಳಿನಸಖ (= ನಲಿನಸಖ) + ನೇತ್ರ ]

**ನಳಿನಸಖಸುತ** (ನಾ). ಕಮಲದ ಗೆಳೆಯನ ಮಗ ; ಸೂರ್ಯನ ಮಗ ; ಯಮ : ನಳಿನಸಖಸುತ ಕೋಪದಿಂದೆ ಸೇನಾಧಿಪತಿಗಳನೆಲ್ಲ ಬೇಗದಿಂ ಬಲಗೂಡಿ ಕಳುಹಲ್ಕೆ ತಳುವದವನ್ಯತಂದು ಕಾದಿ ಮುರಿದೋಡಲಾ ಯಮರಾಜ ತಾನೆ ಬಂದು ಮಲಹರನ ದೂತರೊಳು ಮಲಕಾಲ ಕಾದುತಿರೆ (ಪ್ರಾಭರಾ. ೦೬-೩). [ ನಳಿನಸಖ(= ನಲಿನಸಖ) + ಸುತ ]

**ನಳಿನಸಮಾಜ** (ನಾ). = ನಳಿನವನ : ನಳಿನಸಮಾಜಮುಳ್ಳಲರೆ ತಣ್ಣೆಲರೊಯ್ಯನೆ ತೀಡೆ ಚಕ್ರಸಂಕುಳಮುರುಲೀಲೆಯಿಂ ನೆರೆಯೆ ಮೆಲ್ಲನೆ ವಾಜಿವಿಹಂಗರಾಜಿ ಕಿಂಬೆಳಗಮೊಳಿಲೋಃಪ್ರಿಯಂ ಪರಿದು ತಕ್ಕನೆ ತೀವೆ ನಿಳಿಂಪರಾಟ್ ದಿಶಾಚಳಶಿಖರಾಗ್ರದೊಳ್ಪೆಳಗುತೊಪ್ಪಿದನಂದು ಕರಂ ದಿವಾಕರಂ (ಉದ್ಭಟ. ೦೦-೭). [ ನಳಿನ (= ನಲಿನ) + ಸಮಾಜ ]

**ನಳಿನಳಿನಬಾಣ** (ನಾ). ಕೋಮಲವಾದ ಕಮಲಪುಷ್ಪದ ಬಾಣವನ್ನುಳ್ಳವನು ; ಪುಷ್ಪಬಾಣ ; ಕಾಮ ; ಮನ್ಮಥ : ನಳಿನಳಿನಬಾಣಂಗೆ ಕೂರ್ಸರಲಾಗಿ ತಾಗಿಯಾ ಲಲನೆಯರ ವಿರಹದಿಂ ನೋಯಿಸಲು ಮುನಿದವರು ಬಲುಗೋಪ್ಪದಿಂದೆ ಶಾಪಿಸಲು (ನವಮೋ. ೨೪-೦೫).
[ ನಳಿ₂ + ನಳಿನ (= ನಲಿನ) + ಬಾಣ ]

**ನಳಿನಾಂಬಕೆ** (ನಾ). ಕಮಲದಂತೆ ಕಣ್ಣುಳ್ಳವಳು ; ಸುಂದರಿ : ಉಳಿದು ಸುಮಶಯನಮಂ ಮೇಣ್ ನಳಿನೀದಳದಿಂದೆ ರಚಿಸಿದೆದೆಗುಪ್ಪಸಮಂ ಬಳಲಿಕೆಯಂ ತಳೆದಂಗದೆ ನಳಿನಾಂಬಕೆ ನೀನದೆಂತು ಪೋದಪೆ ಬಿಸಿಲೊಳ್ (ರಾಕುಂತ. ೪೧-೭೩). [ ಸಂ. ನಲಿನಾಂಬಕಾ ]

**ನಳಿನಾಕರ** (ನಾ). ಕಮಲಗಳ ಆವಾಸಸ್ಥಾನ ; ಕೊಳ ; ಸರೋವರ : ನಳಿನಾಕರಮುಂ ರವಿಯುಂ ಜಳನಿಧಿಯುಂ ನಿರ್ಮಳೋರ್ವಿಯುಂ ಚಂದ್ರಮನುಂ ಕಳೆಯುಂ ಮೆಸೆವಂತೆ ಸಮಸಂದಿಳೇಶನುಂ ಕಾಂತೆಯುಂ ಕರಂ ಸೊಗಯಿಸುವರ್ (ಚಂದ್ರಪು. ೧೧-೧೧೪) ; ನಳಿನಾಕರಕ್ಕೆ ಬಂದು ಕೊಳದೊಳಲರ್ದಬ್ಜದಲರಂ ನಳಿನೇಕ್ಷಣೆ ಮುಖಶ್ರೀವನೇದು ಪುಗೆ . . . ಕಣ್ಗದೇಂ ರಂಜಿಸಿತೊ (ರಾಜಶೇ. ೧೦-೪೫ ವ). [ ನಳಿನ (= ನಲಿನ) + ಆಕರ₃ ]

**ನಳಿನಾಕ್ಷ** 'ನಲಿನಾಕ್ಷ' ನೋ.

**ನಳಿನಾಕ್ಷಿ** (ನಾ). ಕಮಲದಂತೆ ಕಣ್ಣುಳ್ಳವಳು ; ಕಮಲಾಕ್ಷಿ : ಹಾ ತರುಣಿ ನಳಿನಾಕ್ಷಿ ನಯಸುಪ್ರೀತಿಪೂರ್ವಕದಿಂದ ಕನಸಲಿ ಮಾತುದೋಱದೆ ಬಂದು ನನ್ನಲಿ ಕರುಣದಿಂ ನೀನು (ನಳಚ. ೭-೯) ; ಕೆಳಗಣ ಪೇಗಣ ವಲ್ಲಂ ಘಳಿಲನೆ ತಾಗಲ್ಕೆ ಕುಟ್ಟನಾಖ್ಯಂ ಮತ್ತಂ ನಳಿನಾಕ್ಷಿ ಪಲವು ಸೋಂದಳಿಯುಳೆ ಸೋಂಕುತ್ತಮಾಗಲೆ ಖಾದನಮಕ್ಕುಂ (ಶಾಸ್ತ್ರಸಂ. ೩-೮೯). [ ಸಂ. ನಲಿನಾಕ್ಷೀ ]

**ನಳಿನಾನನೆ** (ನಾ). ಕಮಲದಂತೆ ಮುಖವುಳ್ಳವಳು: ಗಳಯಿಸುತಿರೆ ನಯನವಾರಿ ನಿನ್ನಾನನದಿಂ ನಳಿನಾನನೆ ನೀನಿರೆ ಕುರುಕುಳಕಾಂತಕಂ ಗಳಿತಕೋಪನೇ [ ಕಲಿ ]ಭೀಮಂ (ಗದಾಯು. ೦-೭೩). [ ಸಂ. ನಲಿನಾನನಾ ]

**ನಳಿನಾಭಿನಳಿನ** (ನಾ). ಕೋಮಲವಾದ ನಾಭಿಯಲ್ಲಿರುವ ಕಮಲ ; ವಿಷ್ಣುವಿನ ಹೊಕ್ಕುಳಿನಲ್ಲಿರುವ ತಾವರೆ : ಹರಿಯ ನಳಿನಾಭಿನಳಿನಂ ವಿರಂಚಿಯುಂ ಪಡೆಮುದರ್ಕೆ ಪುರುಡಿಸಿ ತಾನಾ ಪರಿಯನೆ ಪಡೆದವೊಲೆಸೆದುದು ಸರೋವರಾವರ್ತನಳಿನಮೊಂದಳಿಗರ್ಭಂ (ಅರ್ಥನೇ. ೩-೧೦೩).
[ ನಳಿ₂ + ನಾಭಿ + ನಳಿನ (= ನಲಿನ) ]

**ನಳಿನಾರಿ** (ನಾ). = ನಳಿನರಿಪು. 'ನಳಿನಾರಿಧರ' ಪರಾ.
[ ನಳಿನ (= ನಲಿನ) + ಅರಿ₂ ]

**ನಳಿನಾರಿಧರ** (ನಾ). ಚಂದ್ರನನ್ನು ಧರಿಸಿದವನು ; ಶಿವ : ನಳಿನಾರಿಧರನಿಪ್ಪ ಕೈಲಾಸಗಿರಿಯಲ್ಲಿ . . . ಚೆಳವೆಟ್ಟಮಾಗಳರಸನಂ ಕೂರ್ತು ತಪದಿ ಮುನಿಗಳ ಶ್ರೇಷ್ಠ ಮಾರ್ಕಂಡ್ಯನಿರೆ (ಪ್ರಾಭರಾ. ೦೦-೦೮).
[ ಸಂ. ನಲಿನಾರಿಧರ ]

**ನಳಿನಿ** 'ನಲಿನಿ' ನೋ.

**ನಳಿನೀಗರ್ಭ** (ನಾ). ಕಮಲದಲ್ಲಿ ಹುಟ್ಟಿದವನು ; ಬ್ರಹ್ಮ. 'ನಳಿನೀಗರ್ಭಾಂಡ' ಪರಾ. [ ಸಂ. ನಲಿನೀಗರ್ಭ ]

**ನಳಿನೀಗರ್ಭಾಂಡ** (ನಾ). ಬ್ರಹ್ಮಾಂಡ ; ವಿಶ್ವ : ನಳಿನೀಗರ್ಭಾಂಡಮಮಾ ಫಲಿತಮೆನಿಪ ಪೃಥ್ವೀಮಹಾವಲ್ಲಿಯಿಂ ತಾಂ ಬಳಸಿರ್ದಾವಾಲದಂತಿರ್ಪುದು ಜಲಚರಸಂಭೂತಸಂಪದ್ವಿಧಾನಂ . . . ಪ್ರಬಳಘುಳುಘುಳುಧ್ವಾನಮಂಭೋನಿಧಾನಂ (ಜಗವಿ. ೦-೨೩). [ ಸಂ. ನಲಿನೀಗರ್ಭಾಂಡ ]

**ನಳಿನೀತೀರ** (ನಾ). ಕಮಲಗಳಿಂದ ಕೂಡಿದ ಸರೋವರದ ತೀರ,-ದಡ: ನಳಿನೀತೀರಲತಾಗೃಹಂಗಳ ನೆಬಲ್ ನೇರ್ಪಟ್ಟಿರಲ್ . . . ಎಳನೀರಿಂಟಿ ಪಥಾರ್ತರಿರ್ಪರಳಿಕೇರಧ್ವಾನದುದ್ಯಾನದೊಳ್ (ಜಗವಿ. ೯-೮೮).
[ ಸಂ. ನಲಿನೀತೀರ ]

**ನಳಿನೀದಳ** (ನಾ). ೧. ಕಮಲದಳ; ತಾವರೆಯ ಎಸಳು: ಉಱಿದು ಸುಮಶಯನಮಂ ಮೇಣ್ ನಳಿನೀದಳದಿಂದೆ ರಚಿಱಿದೆಡಗುಪ್ಪಸಮಂ ಬಳಲಿಕೆಯಂ ತಳೆದಂಗದ ನಳಿನಾಂಬಕಿ ನೀನದೆಂತು ಪೋದಪೆ ಬಿಸಿಲೊಳ್ (ಶಾಕುಂತ. ೪೧-೭೩). ೨. ಕಮಲಪತ್ರ; ತಾವರೆಯ ಎಲೆ. 'ನಳಿನೀದಳತಾಳವೃಂತ' ಪರಾ. [ ಸಂ. ನಲಿನೀದಲ ]

**ನಳಿನೀದಳತಾಳವೃಂತ** (ನಾ). ಕಮಲಪತ್ರಗಳಿಂದ ತಯಾರಿಸಿದ ಬೀಸಣಿಗೆ: ಬಳಲಿಕೆ ಪಿಂಗುವಂತೆ ನಿನಗಾಂ ನಳಿನೀದಳತಾಳವೃಂತದಿಂ ಸುಳಿಯಿಪೆನೇಂ ಕುಳಿರ್ವಸಾಸವ ತಂಬೆಲರಂ (ಶಾಕುಂತ. ೪೧-೭೨).
[ ನಳಿನೀದಳ + ತಾಳವೃಂತ (= ತಾಲವೃಂತ) ]

**ನಳಿನೀಪತ್ರ** (ನಾ). = ನಳಿನೀದಳ ೨: ನಳಿನೀಪತ್ರಾಂಶುಕಾಚ್ಛಾದಿತಕುಚಯುಗಳಂ ಚಂದನಾಪಾಂಡುಗಂಡಸ್ಥಳಯುಗ್ಮಂ . . . ಭೋಂಕನೆ ಪೊಱಮಡುತಿರ್ದತ್ತು ಕಾಂತಾಕದಂಬಂ (ಕಾದಂಬ. ೩೦೦): ನಳಿನೀಪತ್ರಗತಾಂಬುವೋಲ್ ನಡುಗಿತೀ ವಿಶ್ವಾವನೀಮಂಡಲಂ . . . ಭೂಭಾಗಮಂ ಬಳಸಿತ್ತು ವಿಜಯಪ್ರಯಾಣಜನಿತಂ ಪ್ರಸ್ಥಾನಭೇರೀರವಂ (ಸೂಕ್ತಿಸು. ೧೮-೧೩).
[ ಸಂ. ನಲಿನೀಪತ್ರ ]

**ನಳಿನೀಮಿತ್ರ** 'ನಲಿನೀಮಿತ್ರ' ನೋ.

**ನಳಿನೀರೇಣು** (ನಾ). ಕಮಲದ ಹೂವಿನ ಪರಾಗ,-ಧೂಳಿ: ನಳಿನೀರೇಣುಗಳಂ ಒಟ್ಟಿಲ್ವರ್ಗಳಂ ಕೀರಾಳಿ ನಾದಂಗಳಂ ತಳೆದತ್ತಂ ಪಟವಾಸಮಂ ಕಿದಱುತುಂ . . . ಇದಿರ್ವಂದತ್ತೊಂದು ಮಂದಾನಿಳಂ (ಜಗನ್ನಾ. ೦೪-೫೩).
[ ಸಂ. ನಲಿನೀರೇಣು ]

**ನಳಿನೇಕ್ಷಣೆ** (ನಾ).=ನಳಿನದೃಶೆ: ರಜನಿಗಳ್ಯಂದವಬಿಂಬುತ್ತಜದಿಂ ಜ್ಯೋತ್ಸ್ನಾಪ್ರವಾಹಮಂ ಪಸರಿಪವೋಲ್ ರಜತಕಳಶಂಗಳಿಂ ಮಳಯಜಜಳಮಂ ಸುರಿದರಸಿತನಳಿನೇಕ್ಷಣೆಯರ್ (ಕಾದಂಪೂ. ೭೪).
[ ಸಂ. ನಲಿನೇಕ್ಷಣಾ ]

**ನಳಿನೋದರ** (ನಾ). ಹೊಟ್ಟೆಯಲ್ಲಿ ತಾವರೆಯನ್ನು ಉಳ್ಳವನು; ವಿಷ್ಣು: ಜಲಧಿಶಯನ ರವಿಚಂದ್ರವಿಲೋಚನ ಜಲರುಹಭವನುತ ಚರಣಯುಗ ಬಲಿಬಂಧನ ಗೋವರ್ಧನೋದ್ಧಾರ ನಳಿನೋದರ ತೇ ನಮೋ ನಮೋ (ಪುರಂದ. ೩-೪೧-೨).
[ ನಳಿನ (= ನಲಿನ) + ಉದರ ]

**ನಳಿಮೊಗ** (ನಾ). ಕಾಂತಿಯುಕ್ತವಾದ ಮುಖ: ಎಳವಿದಿರ ಬಣ್ಣವೊಳ್ನಡುಕಳಶಮನಪ್ಪಳಿಪ ಮೊಲೆ ಪೊದಟಿಸುವ ಬಾಯ್ ಬಳಸುವ ಕಣ್ ವಿಳಿರ್ವ ಕುರುಳ್ ನಳಿಮೊಗವೆನೆ ಸೊಬಗಿವಲ್ಗ ನಾಟ್ಯತ್ತನವೋ (ಆದಿಪು. ४-४४).
[ ನಳಿ₂ + ಮೊಗ ]

**ನಳು** (ನಾ). ತಗ್ಗಾದ ಪ್ರದೇಶ; ಹಳ್ಳ: ಇಡುಕುಱಿಯೊಳು ಕುಸಿದು ಹೊದಱಿನೊಳು ನುಸುಳಿ ನಳುವಿ[ಪಾಠಾಂ. ಕಪ್ಪಿ]ನೊಳಡಗಿ ನಾಳಲೊಳು ಪೊಕ್ಕು . . . ಅದಟುಗಟ್ಟು ಬೆಂಡಾದಸುಖಿಗಳನುಗ್ರದಳಲ ಬೇಸಱ ಬೇಗೆ ಗಿಚ್ಚು ವಿಶ್ವಾಮಿತ್ರಮುನಿಯನೆಯ್ದದೆ ಮಾಣದು (ಹರಿಶ್ಚ. ೯-೩೩).
[ <ನಳಿ₁ ]

**ನಳುರವಾಡಿ** (ನಾ). ಒಂದು ಊರಿನ ಹೆಸರು: ನಳುರವಾಡಿಯ ಬಯಲೊಳ್ ಕೀರ್ತಿನಾರಾಯಣದೇವರಿಗೆ ಪಡುವಣಬದಿಯಿಂ ತೆಂಕಣ ತೆಂಬಡಗಣ ತೆವರಿಂ ಮೂಡಲ್ವಿವತ್ತೆರಡು ಗೇಣ ಗಳೆಯಲೊಂದು ಮತ್ತರುಮನ್ . . . ಸರ್ವ್ವನಮಸ್ಯಂ ಮಾಡಿ ಕೊಟ್ಟನ್ (ಎಕ. VIII, ಸಾಗರ. ೧೦೯-೬೨; 1042). [ ? + ವಾಡಿ₁ (<ವಾಡಿ₂) ]

**ನಳುಹು** (ನಾ). ಬಾಗಿರುವಿಕೆ; ಡೊಂಕು; ವಕ್ರತೆ: ನಳಿಗೆಯೊಳ್ ನಾಯ ಬಾಲವನು ಕಟ್ಟಲ್ಕನ್ನ ನಳುಹ ಬಿಡದಂತೆ (ಸಮ್ಯಕ್ತ್ವ. ೦೦-೧೨).
[ <ನಳಿ₁ + -ಹು₂ ]

**ನಳಿಯಿಸು** (ಕ್ರಿ). ನಡೆಸು; ಮುಂದುವರಿಸು: ಈ ಶ್ರೀಧರ್ಮಂ ನಳಿಯಿಸಿದಾತಂ ತುಳಾಪುರುಷವಿಟ್ಟು ಅಸ್ವಮೇಧಂಗೆಯ್ದ ಫಲಮನ್ನೆಯ್ದುವಂ (ಎಕ. XI, ಚಿತ್ರದು. ೭೪-೩೨; 968).
[ P ಇದು 'ನಡೆಯಿಸು' ಎಂಬುದರ ಅಪಲಿಖಿತವಿರಬಹುದು ]

**ನಳ್ಗಿಸು** 'ನೆಗ್ಗಿಸು' ನೋ.

**ನಳ್ಗು** 'ನಱುಂಕು' ನೋ.

**ನಳ್ಳಿ**₁ (ನಾ). ಹತ್ತುಕಾಲಿನ, ಗಡಸುಚರ್ಮದ ಒಂದು ಬಗೆಯ ಸಣ್ಣ ಜಲಚರ ಪ್ರಾಣಿ; ಏಸಡು; ಏಡಿ: "ಊರ್ಧ್ವದೃಕ್-ನಳ್ಳಿ" (ಚಿಷಡಿ. ೧೭): ಲಿಂಗನಿಷ್ಠಾಂಗಿ ವಚನವ ಹಾಡಿದರೆ ಒಪ್ಪುವರಲ್ಲದೆ ಲಿಂಗನಿಷ್ಠಾಹೀನರು ಓದಿ ಹಾಡಿದರೆ ನಳ್ಳಿ ಗುಳ್ಳೆಯ ತಿಂದ ನರಿ ಹಳ್ಳದ ತಡಿಯಲ್ಲಿ ಬಳ್ಳಿಟ್ಟು ಬಗುಳಿದಂತೆ ಎನೆಂದೂ ಪಾಟಮಾಡರಯ್ಯಾ (ಸಿದ್ಧೇಶ. ೬೩-೨೦೧): ಭೂಸುತ ಭುಜಬಲರಿದ್ದು ಗೆಲಲು ಬಾರದೀ ನಳ್ಳಿ ಗುಳ್ಳಿ ವಿಹಾರಿಗಳ ಸೇನೆ ಏಡಿದು ಗೆಲ್ವೆನೆಂದು ಹೊಕ್ಕೆಯಲಾ ಈ ನೀರ ನಡುಮಡುವಿನೊಳು (ನೇಮಿಸಂ. ೩೦-೮೩); ತಾಯಿನಳ್ಳಿಯ ಒಡಲನ್ನು ಅದರ ಮರಿಗಳು ಸೀಳುವುದರ ಹಾಗೆ ಈ ಅಂಬುಗಳು ನನ್ನ ಪ್ರಾಣವನ್ನು ಸಂಕಟಪಡಿಸುತ್ತಿವೆ (ವ್ಯಾಸಪ. ೩೬೨); ಶೀಗಡಿ, ನಳ್ಳಿ, ಏಡಿ ಮತ್ತು ಅವುಗಳ ಸಂಬಂಧಿಗಳಿಗೆ ೫ ಜೊತೆ ಕಾಲುಗಳು (ಕೀಟಜ. ೦೫); ಸಮುದ್ರದ ನಳ್ಳಿಯ ಪಲ್ಯ . . . ಬೆಣ್ಣೆ – ರುಚಿರುಚಿಯಾದ ಈ ಭಕ್ಷ್ಯಗಳು ಭೋಜನ ಮೇಲಿದ್ದುವು (ಪುನರು. ೦೦೪); ದೂರದರ್ಶಕದಲ್ಲಿ ನೋಡಿದರೆ ಈ ಗುಚ್ಛಗಳು ಅನೇಕ ವೇಳೆ ಕಿರೀಟಗಳಂತೆಯೂ ಮೀನುಗಳಂತೆಯೂ ನಳ್ಳಿಗಳಂತೆಯೂ . . . ಮೆರೆಯುತ್ತಿರುವುವು (ಜ್ಯೋತಿವಿ. ೭೪); ನಳ್ಳೀ ರಾಗಕ್ಕೆ ನರಿ ತಲೆ ತೂಗಿದ ಹಾಗೆ (ಗಾದೆ).
[ ದೇ.ಶ ತಮಿ. ನಳ್ಳಿ, ನಳಿರ್, ಞಣ್ಣು, ಞಣ್ಣು, ನಣ್ಣು;
ಮಲ. ಞಣ್ಣು, ನಣ್ಣು ]

**ನಳ್ಳಿ**₂ 'ನಲ್ಲಿ₁' ನೋ.

**ನಳ್ಳಿಕೈವಾರ** (ನಾ). ಬಾಗಿರುವ ಕೈವಾರ; ಬಗ್ಗಿರುವ ವೃತ್ತರೇಖಕ: "ಕೀಲು ಹಾಕಿ ಅಳವಡಿಸಿರುವ ತೋಳುಗಳುಳ್ಳ ಕೈವಾರ; ಬಿಲ್ಲು ಕೈವಾರ; ನಳ್ಳಿಕೈವಾರ" (Bows, Bow-Compass(es). ಇಂಕನಿ).
[ <ನಳ್ಳಿ₁ + ಕೈವಾರ₂ (<ಕೆಯ್ವಾರ₂) ]

**ನಳ್ಳಿಮೂಗು** (ನಾ). ಡೊಂಕಾದ ಮೂಗು; ವಕ್ರವಾದ ನಾಸಿಕ: ಬಾತಕಕ್ಕೆಯ ಬಲುಮುಕ್ಕಿರಿಹೊಟ್ಟೆಯ ಓತಿದಲೆಯ ಕೀನದನಿಯ ನಾತಪಡದ ತನುವಿನ ನಳ್ಳಿಮೂಗಿನ ಭೂತವೆ ನಡೆತಪ್ಪಂತೆ ಮನೆಗೆ ಬರಲು (ನೇಮಿಸಂ. ೬-೦೦೫). [<ನಳ್ಳಿ₁ + ಮೂಗು₁ ]

**ನಳ್ಳಿಸು** (ಕ್ರಿ). ತಗ್ಗು; ಬಗ್ಗು; ಬಾಗು: ಪಡೆಯ ಭಾರವ ತಾಳಲಾಱದೆ ಫಣಿಪತಿ ಪೆಡೆಯ ಪಲ್ಲಟಿಸಿ ಕಮಠನ ನಡುಬೆನ್ನು ನಳ್ಳಿಸೆ ನಲವಿಂದ ಕುವರನಂದೊಡನಿಕ್ಕಿದನು ಧಾಳಿಯನು (ಕುರಾಸಾಂ. ೦೦-೩೦).
[ <ನಳ್ಳಿ₁ + -ಇಸು₂ ]

**ನಳ್ಳು** (ನಾ). ಒಂದು ಬಗೆಯ ಜೊಂಡು; ನಾಣಲು. 'ನಳ್ಳುನೆಲ', 'ನಾನಲ್' ಪರಾ.

**ನಳ್ಳುನೆಲ** (ನಾ). ಜೊಂಡು ಬೆಳೆದಿರುವ ಪ್ರದೇಶ; ನಡ್ವಲ: "ನಡ್ವಳಂ ನಳಯುತಂ ನಳ್ಳುನೆಲನಕ್ಕು" (ಮಂಗರಾ. ೨೯-೨). [ ನಳ್ಳು + ನೆಲ ]

**ನಳ್ಳುಶಿಲೆ** (ನಾ). (?) : ಅಲ್ಲಿಂದಂ ದಕ್ಷಿಣವಾಗಿ ಹೊಕ್ಕ ಓಲೇಹಳ್ಳಿ ಬೇವಿನ ಹಳ್ಳಿ ಪೊಂಪಾಪುರ ಮುಗ್ಗಡ್ಡಿಯಲ್ಲಿ ವಾಮನಸಮುದ್ರ ನಳ್ಳುಶಿಲೆ (ಎಇ. XIV, ೨೨೯-೨೯೬; 1551). [ ? + ಶಿಲೆ ]

**ನಱಕು** 'ನಱುಂಕು' ನೋ.

**ನಱವಾಡಿ** (ನಾ). ಒಂದು ನಾಡಿನ ಹೆಸರು: ಶ್ರೀಮನ್ಮಹಾಮಂಡಳೇಸ್ವರ ಬದ್ದಣಚೋಳಮಹಾರಾಜರು ಕನ್ನೆಮೂನೂಱುಂ ಪೆಡಕಲ್ಲೇಟುನೂಱು

ನಱವಾಡಿಯುಯುನ್ನೂಱಮುಮಜೆ ಮುನಱೂಱುವಿನ್ನು ನಾಲ್ಕುಂ ನಾಡುಮಂ ದುಷ್ಟನಿಗ್ರಹಂ ಶಿಷ್ಟಪ್ರತಿಪಾಳನಂ ಗೆಯ್ದು ಬಿಡವಿಶ್ರಿಯಿಂ ನಾಳುತ್ತುಂ (ಕಇಳ. ೧೧೭-೨೨-೦೮ : 1072). [ ? + ವಾಡಿ₁ (<ಪಾಡಿ₂) ]

**ನಱುಬ್ಬೆಗವುಂಡಿ** (ನಾ). ಒಬ್ಬಾಕೆಯ ಹೆಸರು : ತವುದಟ್ಟಿಗೆ ನಱುಬ್ಬೆಗವುಣ್ಡಿಯ ಮಗ ಅಮ್ಮನ್ನಗವುಣ್ಡ ತನ್ನೂರಱ ಕಂಡು ಕಱಿವಳಿ ತಱಸಂನ್ದು ಸ್ವರ್ಗ್ಗಕ್ಕೆ ಸಂದನ್ (ಎಕ VIII, ಸೊರಬ. ೨೩೪-೯ ; ೯೯೯). [ ? + ಗವುಂಡಿ (<ಗಾವುಂಡಿ) ]

**ನಱುಲಕೆಱೆ** (ನಾ). ಒಂದು ಕೆರೆಯ ಹೆಸರು : ಅಪ್ಪಣಭಟ್ಟರು ಪಾದ ಪೂಜೆಗೊಟ್ಟ ದೇಸಿಗ ಪ್ರವಾಸಿನರಾಹಾರಸತ್ರಕ್ಕೆ ದೆವಸಲುಂ ಬ್ರಾಹ್ಮಣರಣ್ಣಂತಾಗಿ ನಱುಲಕೆಱೆಯ ಕೆಳಗೆ ಕಚ್ಚವಿಸು ಗಡಿಂಬದಲು ಬಿಟ್ಟ ಗಟ್ಟಿ ಕಮ್ಮ ಅಯ್ವತ್ತು ೫೦ (ಎಕ. VII, ಶಿಕಾರಿ. ೧೬-೨೨ ; 1085). [ ? + ಕೆಱೆ ]

**ನಱು**, ನರು (ನಾ). ೧. ಕಂಪು ; ಪರಿಮಳ ; ಸುವಾಸನೆ ; ಸೌರಭ. "ನಱು ಸೊವಡು ಕಂಪು ನಾತಂ . . . ಸೌರಭ್ಯಮಕ್ಕು" (ಕವಿಕಂ. ೯೬) ; "ಸೌಸವಂ, ನಱು, ಕಮ್ಮಿತು, ಸೊವಡು, ಕಂಪು, ನಾತಂ, ಮಗಮಗಿಸು – ಈ ೭ ಪರಿಮಳಕ್ಕೆ ಪೆಸರ್" (ಕಶಸಾ. ೫೪-೧೭೭). 'ನಱುಮಂಡು', 'ನಱುಸುಯ್ಯ್' ಪರಾ. (ಗು). ೨. ಕಂಪಿನಿಂದ ಕೂಡಿದ ; ಪರಿಮಳಯುಕ್ತವಾದ : ಸುರಗಿ ಸುರಹೊನ್ನೆ . . . ಸರಸಿರುಹ ಕುಮುದ ಪಾದರ ನಱುಸೇವಂತಿಗೆಯ ಹೂವಿನಂಗಡಿಯೆಸೆಗುಂ (ದಣಾವ. ೫-೩೨). ೩. ರಸವತ್ತಾದ ; ರಸಪೂರ್ಣವಾದ. 'ನಱುಂಗಬ್ಬ' ಪರಾ. ನರು : ೧. "ನರು ಯೆನಲ್ಕೆ ಪರಿಮಳ" (ಕಶರ. ೫೩). ೨. 'ನರುಂಗಂಪು' ಪರಾ.

[ ದೇ.೫ ತಮಿ. ನಱ, ನಱವು, ನಱಾ, ನಱ್ಱೈ; ಮಲ. ನಱು ]

**ನಱುಂಕು**, ನಗ್ಗು₁, ನರಿಕು, ನರುಕು, ನಳ್ಗು, ನಱಿಕು, ನಱುಂಕು, ನೆಕ್ಕು₂, ನೆಗ್ಗು₁, ನೆರ್ಗು, ನೆಳ್ಗು, ನೆಟ್ಗು (ಕ್ರಿ). ೧. ಬೆಳವಣಿಗೆ ಕುಂಠಿತವಾಗು ; ನರಚಲಾಗು : ತುಱುಗಿ ತಳೆರ್ತ ಪೂತು ಫಲಮಾದೆಲೆಯಿಕ್ಕಿ(ಕ್ಕ)ದ ಕೊಂಬುಗಳ್ ನೆಲಕ್ಕೊಱಗಿದ ನುಣ್ಬುವೆತ್ತ ಮರನುಳ್ಳೆಡೆಯೊಳ್ ಜಳಮಕ್ಕುಮಲ್ಲಿಯೆಂದಱವುದು ತಾಱದಂಕದ ನಱುಂಕಿದ ಕೊಂಟೆಣಗಿರ್ದ ಪೊಟ್ಟೆಪೋದೊಱಗಿದ ವೃಕ್ಷದಿಂದಱವುದಾಯೆಡೆಯೊಳ್ ಜಳಮಾಗದೆಂಬುದಂ (ಲೋಕೋಪ. ೫-೪). ನಗ್ಗು₁ : ೨. ಕುಗ್ಗು ; ಕುಸಿ : ಅಗ್ಗಿಸಿದೊಡೆ ದಿಟಮೆಂದೆಗ್ಗಱಯದ ನಗ್ಗದ ಹೆಗ್ಗರು ನುಗ್ಗುಗಳಂ ಬಗ್ಗಿಸಿ (ವೀರೇಶ. ೨-೨೭) ; ನಗ್ಗಿದವು ದಿಗ್ಗಜಂ ಜರ್ಜದುದು ಕಚ್ಛಪಾಂಗಂ (ಜಬಪು. ೨೮-೧೧). ೩. (ಪಾತ್ರೆ ಮುಂತಾದುವು) ಜಜ್ಜಿ ತಗ್ಗಾಗು,–ತಗ್ಗು ಬೀಳು : ನಗ್ಗಿಹೋಗಿರುವ ಪಾತ್ರೆಗಳನ್ನೆಲ್ಲಾ ಸರಿಮಾಡಿಸಬೇಕು (ರೂಢಿ). ೪. ಪೆಟ್ಟುಬೀಳು : "ನಗ್ಗು = ಪೆಟ್ಟು ಹತ್ತು ; ಹೊಡತ ಬೀಳು" (ಜಾನಕೋಶ. ೯). ೫. ಕೆಳಕ್ಕೆ ಹಾರು : "ಧುಮುಕು, ಬೀಳು, ನೆಗೆ, ನಗ್ಗು, ಹಾರು, ಜಿಗಿ, ಎಗರು, ಎರಗು" (ಕಂನುಹು. ೮೬). ನರಿಕು : ೬. ಅರೆ ; ಜಜ್ಜು ; ಕುಟ್ಟು ; ಚೆಚ್ಚು : ಯಾರೋ ತಿಪ್ಪಾರೆಡ್ಡಿ ಯೆಂಬುವವನನ್ನು ಆ ಹಿಂದಿನ ದಿನ ಅಲ್ಲಿ ಹೇಗೆ 'ನರಿಕಿ' ಹಾಕಿದರೆಂಬ ಪ್ರಸಂಗಕ್ಕೆ ಮೊದಲಾಗುವುದರೊಳಗಾಗಿ ಮಳೆಯ ಜೋರು ಸ್ವಲ್ಪ ಕಡಿಮೆಯಾಯಿತು(ಹಂಯಾತ್ರೆ.-೪೩). ನರುಕು : ೭. ಅಗಿ ; ಜಗಿ ; ನುಣ್ಣಗೆ ಮಾಡು ; ಮೆಲುಕಾಡಿಸು : ಕೆಲವರು ಸೂರ್ಯಕಾಂತಿಯ ಬೀಜಗಳನ್ನು ನರುಕಿ ತಿನ್ನುತ್ತಿದ್ದರು (ಪುನರು. ೪೬೯). ೮. ಕತ್ತರಿಸು ; ಚೂರುಮಾಡು : ಅಡಕೆಯನ್ನು ನರುಕು (ರೂಢಿ). ನಳ್ಗು : ೯. ಇಲ್ಲವಾಗು ; ಕಾಣದಂತಾಗು. 'ನಳ್ಗಿಸು' ಪರಾ. ನಱಿಕು : ೧೦. ಒತ್ತು ; ಅದುಮು : ತೊರೆದ ಮೊಲೆಯ ನಱಿಕುತಿ ಚೆಲ್ಲಕಣ್ಣೊಳು ಸುರಿವ ಸಂತಸಗಂಬನಿಗಳ ಒರಸುತೆ. . . ತರಳನ ಬಿಗಿಯುಪ್ಪಿದಳು ಮಾತೆ (ಕ್ರಿಘುತಿ. ೨೭-೩೦). ನಱುಂಕು : ೨. ತೊಗಲು ಸಡಲಿದ ಗಲ್ಲ ಬತ್ತಿದ ಪೆಗಲು ನಱುಕಿದ [ಪಾಠಾಂ. ನಲುಗಿದ] ನರೆತ ಮಾಸೆಯ ಜಗುಳ್ದ ಹಲುಗಳ . . . ಮುಪ್ಪಿನ ಮುಗುದನೀತನ ಕಾದ ಹೇಳಿದು ನಗೆಯ ಸುರಿದೈ ರಾಯ (ಕುಮ್ವಾಭೀ. ೧-೩೩). ೭. ಅಱುಚುವ ಮೇಕೆಗಳಂಬೆಗರೆವ ಗೋವು ನಱುಕುತೆಯ್ದುವ ಮಹಿಷಿಗಳು (ನಾಗಕು. ೦೫-೩೩). ನೆಕ್ಕು₂ : ೧೧. ಒಳಸೇರು ; ಗುಳಿಬೀಳು ; ಹಳ್ಳವಾಗು ; ತಗ್ಗಾಗು : ಮಕರಂ ಬಾಯ್ದೆಱೆದಂದದಿಂ ತೆಱೆದ ಬಾಯ್ ಪೇಟೆರ್ದ ಕೊರ್ದಾಡೆ ನೆಕ್ಕ ಕದಂಪೆತ್ತಿದ ಪುರ್ವು . . . ಭಯದಮಾಯಾ ರಾಕ್ಷಸೀರೂಪಕಂ (ಕಾವ್ಯಾವ. ೮೨೨) ; ಪೆಱ ನೊಸಲಾಗೆ ನೆ[ಪಾಠಾಂ. ನೊ]ಕ್ಕ ನೊಸಲೊಳ್ಳಿಲೆಯುಪ್ಪುಡಲಾಗೆ ನಿಟ್ಟೊಡಲ್ನಿಱದಲೆಯಾಗೆಯೊಪ್ಪುದಲೆ. . . ಪೂತನಿ ಗೋಪಿಪೊಲಾಗೆ ಬೇಗದಿಂ ಬಂದು (ಅರ್ಧನೇ. ೬-೬೦); ನೆಕ್ಕ ಕದಂಪು ಕಂಪಿಪಧರಂ ಮಿಗೆ ಕೆಂಪಡರ್ದಕ್ಷಿ . . . ಮರುಳ್ವಕ್ಕದ ನಿಟ್ಟೊಡಲ್ ಮಸಿದ ಕತ್ತಿಗೆ ಕಣ್ಣೊಲನಾದುವೆತ್ತಲುಂ (ವರ್ಧಪು. ೦೫-೩೮). ನೆಗ್ಗು₁ : ೨. ಬಲಭಾರಕ್ಕೆ ನೆಗ್ಗಿದುದಾ ರಣಭೂಮಿ (ತ್ರಿಪುಸಾಂ. ೨೦೫) ; ಕಚ್ಛಪಂ ನೆಗ್ಗಿದನುರಗಪತಿ ಕುಗ್ಗಿತು (ಬಸವು. ೨೮-೫೭) ; ಅಳುಕಿತೀ ನಮ್ಮವರ ಭೀಮನ ಸುಳಿವಿನಲಿ ಸೊಪ್ಪಾದವರ್ಜುನನೆಳತಟಕೆ ನಿಲವೆಂತನುತ ನೆಗ್ಗಿದುದು ದುಗುಡದಲಿ (ಕುಮ್ವಾಕ. ೦೮-೨೫) ; ವೆಗ್ಗಳವಾಗಿ ಸೇನೆಯ ಕೊಂಡು ಹೋಹುದು ಮೊಗ್ಗಾಗಿ ನಡೆದು ಗೆಲ್ಲುವುದು ನೆಗ್ಗಿಹುದವರಿಗಾಗಳೆ ಕಿಚ್ಚ ಕಂಡೆದೆ ಭೊಗ್ಗನಿನ್ನೆಯ್ದು ನೀವೆಂದ (ಭರತ. ೩೦-೫) ; ಕರಿಘಟೆಯ ಮೊಗ್ಗರಂ ವರ ಸರೋವರ ಸಲಿಲವಾನಕಿಳಿ ನಗ್ಗಿದಲ್ಲದ ಮಾಣದೆಂಬನಂ ಪೊಳಲ ಪೊಱಮಟ್ಟು ಬಂದವುದು (ಜೈಮಿಭಾ. ೩-೩೮) ; ನೆವವಿಲ್ಲದೆ ನೆಗ್ಗಿ ನೆಲಕೀಳದೊಱಲದೆ ಸವನಿಸುವುದು ಸಂತಸವನು (ಹದಬ. ೩-೨೪) ; ನಾಗೇಂದ್ರ ಕೂರ್ಮರ ಹೆಗಲುಗಳು ನೆಗ್ಗಿದವು (ಉತ್ತಕ. ೬-೪೭). ೩. ಬಂಗಾರದ ಪಾತ್ರೆಯನ್ನು ಒಮ್ಮೆ ಸುಟ್ಟನಿಂದ ಎತ್ತಿ ಹಾಕಿದರೂ ಅದು ಒಡೆದು ಹೋಗುವದಿಲ್ಲ ; ಸ್ವಲ್ಪ ನೆಗ್ಗುವದು(ನೀಗಟ್ಟು. ೧೦೭). ೬. ಒಡೆದೊತ್ತಿಯೊದೆದೆಲುವ ನೆಗ್ಗಲಾ ಕಾಲದೊಳು (ವೀಕ್ಷೈಪು. ೩-೦೪-೩೦) ; ನೆಗ್ಗಲೋ ಬ್ರಹ್ಮಾಂಡವಂ ಬ್ರಹ್ಮನೆಲುಗಳಂ ನುಗ್ಗಮಾಡಲೋ (ಜಬಪು. ೩೦-೧೧) : ಆ ಆನೆ ಭೀಮಸೇನನ ಮೇಲೆ ಹಾಯ್ದು ಅವನ ರಥವನ್ನು ಕುದುರೆಗಳನ್ನು ನೆಗ್ಗಿ ಪುಡಿ ಮಾಡಿಬಿಟ್ಟಿತು (ವ್ಯಾಸಭಿ. ೩೯೧) ; ಹಿಡಿಂಬಾಸುತನು ಅವರನ್ನು ಲೆಕ್ಕಕ್ಕೆ ತಾರದೆ ನುಚ್ಚುನುರಿಯಾಗಿ ನೆಗ್ಗಿ ನಾಶಮಾಡಿದನು (ಭಾಸುಕ. ೦೮). ೯. ಕೃತಾಂತನ ದಾಳಿಗೆತ್ತಣ ವೀರವೋ ನೆಗ್ಗಿದವುನೆ ನಹುಗಳು (ಕುಮ್ವಾದ್ರೋ. ೨-೩೨) ; ಮನದ ಮದದಕ್ಕಱನ ವಿಷಯದ ನೆನಹು ನೆಗ್ಗಿತು . . . ಉದಿಸಿತವಳಾನನದಲಧಿಕಕ್ರೋಧಶಿಖಿ ಸಿಡಿದೊಗುವ ಕಿಡಿಗಳಲಿ (ತೊರವ. ೩-೪-೨೪) : ಎಱದನೊಡನೆ ಮುಂ ದ ರ ತಿ ಶೋ ಕಾ ದಿ ಯಾ ದಾ ಱ ಕಷಾಯ ನೆಗ್ಗಿದುವು (ಭರತ. ೭೭-೬೬). ೧೧. ಬಿಡೆ ಬಾದುಗೆಯ್ದೊಡರಿಸುವ ತಮ್ಮ ಕಡುಹಿಂದೆ ಒರೋರ್ವರಂ ತಿವಿಯೆ ನೆಗ್ಗಿರ್ದ ಕದಪಿಂದೆ ಹಾಸ್ಯ ಬೀಭತ್ಸಾದಿ ನಾನಾರಸಂಗಳಿಂದೊಂದಿದ ಜರದ್ದ್ರಾವಿಳ ಧಾರ್ಮಿಕ ಜನಂಗಳಿಂ (ಕಾದಂಸಾ. ೨೬೧) ; ದೌಡೆಗಳು ನೆಗ್ಗಿರೆ ದಂತಗಳುದುರಿವೊಡದು ರಕ್ತವು ತೋರುತಿರೆ (ಕೂಲ್ಲಿಮೂ. ೬೭-೧) ; ಮುಗ್ಗಿ ಬೀಳುತ ಮತ್ತೆ ನೆಲ ತಾಂ ನೆಗ್ಗಲೋಡುತ (ದೇವಪು. ೦೪-೧೦೦) : ೧೨. ಪುಡಿಯಾಗು ; ಚೂರಾಗು : ಮೊದಲ ಲಗ್ಗೆಗೆ ಮೂಱುಸಾವಿರ ತೇರು ನೆಗ್ಗಿದವೊಂದು ನಿಮಿಷದಲಿ (ಕುಮ್ವಾಭೀ. ೮-೪೮) ; ಸೀಸಕ ಸಿಡಿಯಲು ವಜ್ರಕವಚ ನೆಗ್ಗಲು ವಾಹಕರು ಬವರದೊಳಿಱದಾಡಿ ಮಡಿದರು (ಕುರಾಸಾಂ. ೦೨-೨೦೦) ; ಸಿಡಿದ ಹುಬ್ಬಿನ ಕಡಿದ ತೋಳ್ಗಳ ನೆಗ್ಗಿದೆಲುಗಳ . . . ಒಡೆದ ನೆತ್ತಿಗಳಿಂದ ರಕುತದ ಮಡು ಹರಿಯೆ (ನಳಚ. ೯-೨೭) ; ಮಗ್ಗಿದುದು ಕುದುರೆ ಸಾರಥಿ ಮಡಿದನಾ ರಥಂ ನೆಗ್ಗಿದುದು (ಜೈಮಿಭಾ. ೭-೪೭). ೧೩. ಕುಂದು ; ಕಡಿಮೆಯಾಗು ; ಕ್ಷೀಣಿಸು : ನೆಗ್ಗಿದಾಳ್ಗಳನೆಸಕದೊಣಗಿಲ ಬಾಯ ಭವನ ಕಂಡನಾ ದ್ರೋಣ (ಕುಮ್ವಾದ್ರೋ. ೫-೨೦):

ಕಾಮುಂಕತ್ವದ ನೆನಹು ನೆಗ್ಗದೆ ಪ್ರಾಣದೇಂದಸುರೇಂದ್ರನಳವಳಿದ (ತೊರಾ. ೬-೫೬-೯) ; ಸೆರೆ ಬಿಗಿದು ಗಂಟಲು ಗದುಗದಿಸಿ ನುಡಿ ನೆಗ್ಗಿ ತನು ನಡುಗಿ . . . ಕಣ್ಣಾಲಿ ನುಂಗುವಂತಿರಲಗನಿವಾಸಿಯನೀಕ್ಷಿಸುತ್ತಿಂತೆಂದನಾ ದಕ್ಷ (ನಿಭಾಗ. ೪-೯-೪) ; ಬಗ್ಗಿದ ತಲೆಯ . . . ನೆಗ್ಗಿದ ಧೈರ್ಯದ ನಿಜತನಯನ ಕಂಡು ಕುಗ್ಗಿದಳೆದೆಯೊಳು ಕುಂತಿ (ಕರ್ಣಾವ್ಯ. ೬-೨) ; ಅಂದವುಳ್ಳವನೆ ನಿನ್ನಧಟು ನೆಗ್ಗಿದವು (ಕಂಳ. ೮೨-೭). ೧೪. ಮುದುರಿಕೊಳ್ಳು ; ಸಂಕುಚಿಸು : ತಳತ ಚಿಂತೆಯ ಬಾಡಿಪಾಸ್ಯದ . . . ನೆಗ್ಗಿದಂಗದ ನಟ್ಟ ದೃಷ್ಟಿಗಳ ಬಲಿದ ಭೀತಿಯ ಕುತ್ತುದಲೆಗಳಲಿಳಿಯ ಪತಿಗಳು ಸತಿಯ ಬಯ್ಯುತ ಮುಳಿಯುತಿರ್ದರು ತತ್ಕ್ಷಮಾರನಿಗಧಿಕ ರೋಷದಲಿ (ಜೀವಂಚ. ೯-೦೮) ; ನೆಗ್ಗಿದವಯವದ ಅಗಿಯಲಲುಗುವ ತಲೆಯ ಮುಪ್ಪಿನ ಮುಗುದ ನೀತನ ಕಾದ ಹೇಳದು ನಗೆಯ ಸುರಿದ್ದೈ ರಾಯ ಕಟಕದೊಳೆಂದನಾ ದ್ರೋಣ (ಕುವ್ಯಾ.ಛೀ. ೧-೩೩) : ಶಿವನ ವೆಲ್ಲದಿ ಸೋಂಕಲೊಡನೆ ಕೌಂತೇಯ ನವಯವವೆಲ್ಲ ನೆಗ್ಗಿ ಮೈಮುಱಿದು ಚೀತರಿಸಿ ಕಣ್ದೆಱೆದು ನೋಡಿ (ಜಬಖ. ೩೩-೩೭). ೧೫. ಕಡಿಮೆಮಾಡು ; ತಗ್ಗಿಸು : ಬ್ರಿಟಿಷರ ಆಡಳಿತವು ಪ್ರಾರಂಭವಾದ ಮೇಲೆ ಗ್ರಾಮಪಂಚಾಯಿತಿಗಳ ಪ್ರಾಬಲ್ಯವನ್ನು ಆಗಲೇ ಸೂಚಿತವಾದಂತೆ – ನೆಗ್ಗಿದರು (ಕೃಷೂಶಿ. ೦೦೭) ; ಬನ್ನಿ ಕನ್ನಡ ನಾಡ ಗಡಿಮೂಲೆಯಿಂದ, ಹಳ್ಳಿಪಟ್ಟಣಗಳಿಂದ, ಸುಗ್ಗಿಗಾಳಿಗೆ ಹಿಗ್ಗಿ ಬೆಳ್ಗೊಡೆಗಳನ್ನು ನೆಗ್ಗಿ ನುಗ್ಗಿ ಬಹ ಬೂರಲದ ಮಾಲೆಯಂದ (ವಡಬಂ. ೬೨-೮). ೧೬. ಇಲ್ಲವಾಗಿಸು ; ಇಲ್ಲದಂತೆ ಮಾಡು : ಮೃದ್ವಧುವಿತ್ತ ದಾಸಿಗಳ ನೆಗ್ಗಿದುದೆ ವೈರಾಗ್ಯಮೆಂಬರು (ಗಗಹಾ. ೦೩-೨೮). ೧೭. ಹಳ್ಳವಾಗಿಸು; ತಗ್ಗುಮಾಡು : ತುಳಿದರೆ ಭೂಮಿ ನೆಗ್ಗುವ ದಂತಿ ಹೊಸ ವಜ್ರ ಹಳವತ್ತ ರಥವಾಜಿನಿಚಯ ತಳತ ಕೋರಿತದ ಪೊಂಬಳಗಿನ ಭಟರು ಸಂದಳಿಸಿತು ಖಳರಾಯನೊಡನೆ (ವೀರಹತ. ೪೦-೬). ೧೮. ಬಾಗು ; ಬಗ್ಗು : ಮೊರೆದೆರಗುವ ಭೃಂಗಾವಳಿಯಡಿಯಿಂ ನೆಗ್ಗಿದ ಮಾವಿನ ಕೊನರಿದನೆ ಖತುಗೆ ಮಂಗಳಮೆಂಬಂ (ಶಾಕುಂತ. ೭೯-೦೩೩). ೧೯. ನಾಶಮಾಡು ; ಧ್ವಂಸಮಾಡು ; ಹಾಳುಮಾಡು : ಇಪ್ಪತ್ತೈದು ಸಾವಿರ ಬಾರ್ವಾಕರಂ ನೆಗ್ಗಲೊತ್ತಿ ಅಪ್ರತಿಮ ಶಿವಗಣಂಗಳ ಮಹಾತ್ಮ್ಯೆಯಿಂ ಮೆಱೆದಾತ ನಮ್ಮ ಬಸವಯ್ಯನು (ಸೀಲಂವ. ೭-೯) ; ಮುಗ್ಗದಿರು ಮಾಯೆಯುಲಿ ಮದದಲಿ ನೆಗ್ಗದಿರು . . . ಹಿಗ್ಗದಿರು ಹೊಗಳಿಕೆಗೆ ಮನದಲಿ ಪಾರ್ಥ ಕೇಳೆಂದ (ಕುವ್ಯಾ.ಅ. ೪-೨೨); ದಾನವರ ಘಟ್ಟಣೆಯ ಕೀಲಣದಾ ನಗರಿಯನು ನೆಗ್ಗಿ [ಪಾಠಾಂ. ನುಂಗಿ] ದಂತಿರಲೀ ನಿಘಾತದ ಸೇನೆ ಮುಱಿದುದು ಭಟನ ಭಾರಣೆಗೆ (ಕುವ್ಯಾ.ಕ. ೦೩-೦೩) : ಪೊಯ್ದಾಡಿ ರಿಪುಸೈನ್ಯಕಾನನವನು ನೆಗ್ಗಿದ ನೆಲೆಗೆಡಿಸಿ (ಜೈಮಿಭಾ. ೮-೩೨) ; ಆದು ಸಕಲ ಸಚರಾಚರವನು ನೆಗ್ಗುತ್ತ ಬರಲ್ಪೆದರಿಯಾಲೋಕ ಶಿವಶಿವಯೆಂದು ಮೊರೆಯಿಡಲ್ (ಚತುಪು. ೩-೩-೦೯) ; ಅವನನ್ನು ನೆಗ್ಗಬೇಕೆಂದು ದೃಢಸಂಕಲ್ಪ ಮಾಡಿದರು (ಕೃಮು.ಹ. ೪೮). ೨೦. ಒಡೆ ; ಮುರಿ : ಬಳಿಕ ಬಳೆಗಳನ್ನು ನೆಗ್ಗಿ ಹೆಣ್ಣಾಡೆಯನ್ನು ತೊರೆದು (ಕಷಾಚಿ. ೪೦). ೨೧. ಪುಡಿಯಾಗು ; ಚೂರಾಗು: ಪಳುಕಿನಜ್ ನೆಗ್ಗಿದವು ವಜ್ರದ ಹಳಿಯ ಹೊಯ್ಲಿಗೆ (ತೊರಾ. ೫-೭-೦೭) ; ತಾಳಿದೊಡೆದ ಮಣ್ಣ ಕಪ್ಪರದಂತೆ ನೆಗ್ಗಿದುದು ಕೂರ್ಪ ಖರ್ಪರಂ (ಜಬಖ. ೪೮-೫). ೨೨. ಮುಱಿದು ಬೀಳು ; ಕತ್ತರಿಸಿಹೋಗು: ಸವಡಿಮರ ನೆಗ್ಗಿದುವು ಗಡ (ಕುವ್ಯಾ.ಸ. ೦೦-೦೩) ; ಭರದ ಬವರದಲಚ್ಚು ನೆಗ್ಗಲು ಕರವ ಸಲಿಸಿಯ ಕೇರ ನಡೆಸಿದಳರಸಿ (ಕಾಶಿರಾ. ೧-೨೬) ; ನೆಲೆವಾಡಗಳು ನೆಗ್ಗಿದವು ಮಾಳಿಗೆಗಳೆಂದೊಲೆದವು . . . ರಿಪುಭವನದೊಳಾ ವಾಜಿ ಪೊಲಿದು ರಾಮಗೆ ಕೈಸೇರೆ (ಕುರಾಸಾಂ. ೯-೦೦೮). ೨೩. ಹಾಳಾಗು ; ನಾಶವಾಗು: ದ್ಯೂತವ್ಯಗಯಾವ್ಯಸನ ಪಾರ್ಥಿವಜಾತಿಗಿವು ದುರ್ವಿಷಯ ವಿದಲಿ ನೆಗ್ಗಿದರು ನಳ ದಶರಥಾದಿಗಳು (ಕುವ್ಯಾ.ಸ. ೦೦-೦೮).

೨೪. ಕೊಲ್ಲು ; ಸಾಯಿಸು : ನೆಗ್ಗಿದನೋದು ಹಲಗೆಯಲೇಱಿದವರನು (ಕುವ್ಯಾ.ಕ. ೦೩-೨೪). ೨೫. (?) : ಅಗ್ಗಳೆಯನೆಮ್ಮರಸ ಸಂಪ್ರತಿ ನೆಗ್ಗಿ ಕೆಟ್ಟರಿ ನೀವು ನಿಮಗೀ ಹುಗ್ಗಿಗರು ಹುರಿಗೂಡಿ ಗೆಲಿದಿನ್ನಿಳೆಯ ಕೊಡಿಸುವರ (ಕುವ್ಯಾ.ಛೀ. ೧-೩೮). ನೆರ್ಗು : ೨. ಭೂಮಿ ದಳಭಾರಣೆಯಿಂ ನಸುನೆರ್ಗೆ ವೈರಿ ಮುಂಗೆಟ್ಟಿರೆ ಚಂಡವರ್ಮನರಪಂ ನಡೆಗೊಂಡನತೀವಕೋಪದಿಂ (ದಶಕು. ೬-೬೭) ; ದುರ್ಗದಿಂ ಕಂಪಿಲನೃಪತಿ ನಿರ್ಗಮಿಸಿದನು ಭೂಮಿಗೆ ಬಲಭಾರದಿಂ ನೆರ್ಗೆ ಪಡೆಗಳು ಫಣಿಪನ (ಕುರಾಸಾಂ. ೨೭-೫೨). ೧೯. ಕೆತ್ತು ಪೊಡೆ ಸೀಳ್ಕಡಿ ಖಂಡಿಸು ನೆರ್ಗು ನುರ್ಗು ಕೊಯ್ ಕೊಱೆ ಮುಱಿ ಯೆಂದು ನಿನ್ನ ಭಟರಬ್ಬರಿಸಲ್ (ಅಪ್ರತಿ. ೫೬-೨೦) ; ಪುರದಿಂದು ಪೊಱ ಮಟ್ಟು ಪೊಕ್ಕುದಟಮಂ ನೆರ್ಗುತ್ತೆ ನುರ್ಗುತ್ತೆಯೊತ್ತರದೊಳ್ ಮತ್ತಿದಿರಾಗೆ ಮೂಗಱಿದು (ಚಕವಿ. ೫-೨೨) : ೨೬. ಬಗ್ಗಿಸು ; ಜಗ್ಗು : ನೆಗಟ್ಟುದ್ದಂಡದ ಪುಷ್ಪಕೊದಂಡನಲರಂಬಂ ನೆರ್ಗಿ ಕೋದಂಡಮಂ ತೆಗೆದಾರ್ಪಿಂ ಮುಳಿದಿಕ್ಕೆ (ಧರ್ಮನಾ. ೦-೫). ನೆಳ್ಗು : ೧೧. ಸುಗ್ಗಿದ ಪಲ್ಗಳಿಂದೊಡೆದ ಮಂಡೆಗಳಿಂ ಮುಱಿದಿರ್ದ ಕಾಲ್ಗಳಿಂ ನೆಳ್ಗಿದ ಬಾಯ್ಗಳಿಂ . . . ಬಂದೆಱಗಿ ಕೀರ್ತಿಸುತಿರ್ದುದು ದೇವಸಂಕುಳಂ (ವೀರವಿ. ೧೨-೦೦೦). ೧೨. "ನವೆ, ಸವೆ, ತವಿ (ತವು), ಸೊರಗು, ಕೊರಗು, ನೆಳ್ಗು (ನೆಗ್ಗು)" (ಕಂನುಹು. ೦೬). △ ನೆಟ್ಗು : ಶಿ. "ನೆಟ್ಗು[ಪಾಠಾಂ. ನೆರ್ಗು] ಅಂತರ್ಲೀನೇ (ಅಡಗಿ ಹೋಗು)" (ಕವಿಂದ್ರಾ) ; ಮೂಗು ನೆಟ್ಗಿ ಬಿಕ್ಕೆರೆಯೊಡೆ ದುರ್ಕಿ ಪಾಯ್ದು ಪೊನಲಿಟ್ಟುದು ಮಲ್ಲನ ನೆತ್ತರೆತ್ತಲುಂ (ಚಕವಿ.೪-೦೪೨).

ನೆಗ್ಗುನೆಗ್ಗು (ದ್ವಿರುಕ್ತಿ): ಅಗ್ಗಳೆಯಳೆತನದಿ ನಿಜದ ಹಗ್ಗದಿಂದ ಬಿಗಿದು ಕಟ್ಟಿ ನೆಗ್ಗನೆಗ್ಗಿ ಮಾಱಿವೆ ಜಡವ ನುಗ್ಗುಮಾಡಿ ಒಡಿಸುವೆನು (ಶಿವಗೀ.೭೪೪). 'ನಱುಂಗು', 'ನೊರಕು' ಪರಾ.

[ದೇ.೫ ತಮಿ. ನಱುಕ್ಕು, ನರುಕ್ಕು, ನೆರುಕ್ಕು ; ಮಲ. ನಱುಕ್ಕು, ಞೆರುಣ್ಣು ; ತುಳು. ನಗ್ಗು ; ತೆಲ. ನಱುಕು, ನಱಕು, ನರ್ಕು; ಹರ್ಜಿ. ಗಡಬ. ನೆನ್ಕ್ ]

ನಱುಂಬು (ಕ್ರಿ). ಒತ್ತು ; ಇರುಕಿಸು : ರಸೆಯೊಳ್ ಕಾರಸೆಗೊಂಡವೊಲ್ ತಳಮಳಂ[ತಿ]ರ್ವನ್ನೆಗಂ ತುಂಗಕೂಟಸಹಸ್ರಂ ದಿವಮಂ ನಱುಂಬಿದವೊಲಂ ತಿರ್ವನ್ನೆಗಂ ಸುತ್ತಲುಂ ದೆಸೆಗಳ್ ಪೊಂಗಳಸಂಗಳಿಂ ತೊಳಗುಗುಂ ತೋರ್ಪನ್ನೆಗಂ ಮಾಡೆ ಮಾಡಿಸಿದಂ ಚೈತ್ಯನಿಕೇತನಾವಳಿಗಳಂ ತನ್ಮಾಳವಾಧೀಶ್ವರಂ (ವರ್ಧಮಾ. ೭-೫೮). 'ನಱುಂಕಂ' ಪರಾ. [ ? ]

ನಱುಕು 'ನಱುಂಕು' ನೋ.

ನಱುಗಂಪು, ನರುಗಂಪು (ನಾ). ಒಳ್ಳೆಯ ವಾಸನೆ; ಸುವಾಸನೆ; ಪರಿಮಳ: ನೆಱದಾತನ ಪುಣ್ಯಮೆ ಕಣ್ದೆಱೆದಂತಿರೆ ತೆಱೆದುವಾ ವಿಮಾನದ ಪಡಿಗಳ್ ನಱುಗಂಪು ಪೊಣ್ಮೆ ಸಗ್ಗದ ಮಿಱುಪಿನಿಯರ ಮನವುಮೊಡನೆ ಪಡಿದೆಱೆವಿನೆಗಂ (ಚಂದ್ರಪು. ೪-೬೨) ; ಮುಗುಳ್ಗಳ ಮಾಲೆ ಸುಯ್ಯ ನಱುಗಂಪಿನೊಳ್ ಮರ್ಡಿ ಗಮ್ಮನಾಗೆ . . . ಕಾಮಿಗಳ ಮನಂಗಳೊಳ್ ಗಡಣದಿಂದಲಗಟ್ಟುವುದಂಗನಾಜನಂ (ವರ್ಧಪು. ೦-೬೪) ; ಅರ್ಕಮಂಡಲಮಂ ಕಂಡ ಮರಾಳನಂತೆ ನಱುಗಂಪಂ ಕಂಡ ಮಱಿದುಂಬಿಯಂತೆ (ಉದ್ಭಟ. ೧೧-೫೫ ವ); ಕಣ್ಮಲರ್ಗೆ ಕಡುರಯ್ಯಮಾಗಿ ನಱಿಗಂಪು ನೆಱಪೊಣ್ಮಲರೆವಿರಿದ ಪೊಂದಾವರೆಯ ಬಂಡ ನುಂಡುಣ್ಮುವಾನಂದದಿಂ ಮೈಮಱೆದು ಜಿನುಗುವಾಱಡಿವಱಿಯ ಲೀಲೆಯಂತೆ (ಹರ್ನರಾ. ೧-೪೦) ; ನಱುಗಂಪನೆಸ್ಟಸಿಗೆ ಬೀಱುವಲರ್ವಂಡುಣ್ಬಪಱವೆಗಳು (ಭಾವಚಿಂ. ೬-೩೦); ಕಿಱುಜವ್ವನದ ಬಾಲೆಯರ್ ..., ಸುಯ್ಯಲರ ನಱುಗಂಪನೊಡಿ, ತಣ್ಣೀರಂ ಬಿದುಗಲ್ಗಂದಲೊಳೊಸರ್ವ ಪನಿನೀರನೆ ನೀರಡಿಸಿದರ್ಗೆಱೆದಪರ್ (ಕಾಮಾಕ್ಷಿ. ೯-೦೬). ನರುಗಂಪು: ಅರೆವಿರಿದ ಕುಸುಮ ನರುಗಂಪಿನಿಂ ಯಿಂಪಿನಿಂ ತಣ್ಣೆಳಲ ತಂಪಿನಿಂದೆ . . . ಇಂತೊಪ್ಪುವಾ ಬನ (ನವಮೋ. ೮-೨೮) ; ದಿನದಿನದ ಬೆಳಗು ಹೊಂಗಿರಣದ

ಕಿರೀಟ ನೂರುಬಣ್ಣದ ಹೂವ ನರುಗಂಪನೊಮ್ಮೆಲೇ ಚಿಮ್ಮುಸುವ ತೋಟ (ನಿಂಕು. ೩-೯); ಹೂಗಳು ನರುಗಂಪು ಸೂಸುತ್ತವೆ (ಧರ್ಮಸಾ. ೭); ನರುಗಂಪು ಬೀರುತ್ತಿರುವ ನವಕುಸುಮ (ಸುವಸಂ. ೦೭). [ ನಱು + ಕಂಪು ]

**ನಱುಗಂಪುವೊರೆ** (ಕ್ರಿ). ಸುವಾಸನೆಯಿಂದ ಕೂಡಿರು; ಸುಗಂಧವನ್ನು ಹೊಂದಿರು: ತುಱುಗಿದ ತಾರಾಪುಂಜದ ವಿಱುಗುತಿರ್ದವುದೊ ಪಶ್ಚಿಮಾದ್ರೀಂದ್ರವೆನಲ್ ನಱುಗಂಪುವೊರೆದ ಜಾದಿಯ ತುಱುಬು ಕಣ್ಗೊಳಿಸೆ ಶೂದ್ರಕಂ ಕರಮೆಸೆದಂ (ಶಾದಂಪೂ. ೩೨). [ ನಱುಗಂಪು + ಪೊರ್೨ ]

**ನಱುಗಬ್ಬು** (ನಾ). ರಸವತ್ತಾದ ಕಬ್ಬು,-ಇಕ್ಷು: ನಱುಗಬ್ಬಿನೊಳಗಣ ರಸವ ಕಾಣದೆ ಪಶು ಹೊಱಗಣೆಲೆಯ ಸವಿವಂತೆ ಅಱಿದೊಳಗಾತ್ಮಸುಖ ವನುಣಲಱಿಯದೆ ಹೊಱಗೆಳಸುವರುಗಸುಖಕೆ (ಭಂಕ. ೧-೧೦೩). [ ನಱು + ಕಬ್ಬು೨ (<ಕರ್ಬು೧) ]

**ನಱುಗೋಲ** (ನಾ). ೧. ಪುಷ್ಪಬಾಣವನ್ನು ಉಳ್ಳವನು; ಕಾಮ; ಮನ್ಮಥ: ನಱುಗೋಲನೊಲಿದು ತನ್ನಖಿಲರಾಣಿಯರೊಡವೆರಸಿ ಬನದವ ಮಾಳ್ಪವೊಲು ಸರಸಸಲ್ಲಾಪವಿನೋದದೀದರಸ ತನ್ನರಸಿಯರೊಡನಿರುತಿರಲು (ನಾಗಕು. ೩೨-೭೪). ೨. [ಜೈನ] ಬಾಹುಬಲಿ: ನಱುಗೋಲನೊತ್ತಿಂದ ದಕ್ಷಿಣಗಿದಿರಾಗಿ ಮಱಿಯರಳಗಳೋಡಿ ಬಂದು ದುಱುಮುಱನೀಕ್ಷಿಸಿ ಹೊಸ ಗವಲಿಗೆ ಬೆಟ್ಟ ಬಿರಿತೋಡಿದುವು ಕಂಡ ಕಡೆಗೆ (ಭರತ. ೯೭-೭೨); ಒಱಗು ಮೂಡೆಯು ನೆಮ್ಮಿ ಕುಳಿತನು ಚಕ್ರೇಶ ನಱುಗೋಲ ನಿಲೆ ಬಿಸಿಲಲ್ಲಿ ಮಱಿಸನ್ನೆಗೈದು ಸತ್ತಿಗೆವಿಡಿಸಿದನೇನು ಮಱುಕವೊ ತಮ್ಮನ ಮೇಲೆ (ಭರತ. ೩೦-೦೨೯). [ ನಱುಗೋಲು + -ಅ೭ ]

**ನಱುಗೋಲು** (ನಾ). ಪುಷ್ಪಬಾಣ: ನಱುಗೋಲ ತುಱುಗೆವೆಮುಂಬಿದಿರುವ ಹೊಡಿಯುಱುವ ಕಬ್ಬಿನ ಬಿಲ್ಲುಗಳೆನು (ಕಂಪ್ರಸಾಂ. ೨೩-೭೨). [ ನಱು + ಕೋಲು೧ (<ಕೋಲ್೧) ]

**ನಱುಜವ್ವನ, ನಱುಜೌವನ** (ನಾ). ಪೂರ್ಣಯೌವನ; ತುಂಬಿದ ಹರಯ: ಈ ಸಿರಿಯಿಾ ನಱುಜವ್ವನಮಿಾ ಸುಭಗತೆಯಿಾ ವಿಳಾಸವಿಾ ಸಕಳಕಳಾಭ್ಯಾಸಂ ಸುತನಂ ಪಡೆಯದ ದೂಸಱನಿನಿತುಂ ನಿರರ್ಥಮಲ್ತೆ ಮೃಗಾಕ್ಷಿ (ವೃಷವಿ. ೨-೩೪). **ನಱುಜೌವನ**: ಅಂತೃಡಿದ ನಱುಜೌವನದ ಸಿರಿಯಂ ಮೈಸಿರಿ ಯೊಡನೆ ಕೇಳಿಯಿಾ ಕೆಳೆಗೊಳಿಸಿ . . . ನರೇಂದ್ರಸೂನು ತಳೆದಂ ತಾರುಣ್ಯ ಲಾವಣ್ಯಮಂ (ರಾಜಶೇ. ೪-೧೦೬ ವ). [ ನಱು + ಜವ್ವನ ]

**ನಱುಜೌವನ** 'ನಱುಜವ್ವನ' ನೋ.

**ನಱುದಂಬುಲ** (ನಾ). ಸುಗಂಧಭರಿತವಾದ ತಾಂಬೂಲ; ಪರಿಮಳ ಯುಕ್ತವಾದ ತಾಂಬೂಲ: ಬಾಯೊಳೆ ಬಾಯನಿಟ್ಟು ನಱುದಂಬುಲ ವಿಕ್ಕುವ ಮುಗ್ಧೆಯೊಂದುವೊಟ್ಟಾಯತದಿಂದಮಾನಱಿದೆನಾಕೆಯ ವಲ್ಲಭ ನಾತನೆಂಬುದಂ (ಲೀಲಾವ. ೨-೯೩); ವೊಱೆಯನುಳಿದ ಮೆಲ್ಲುಡಿ ವೊನೆ ಮುಸೆವಕ್ಕಱು ಬಾಯ್ದೆಱೆಗಿಡವಿಡದೆಡೆಯಾಡುವ ನಱುದಂಬುಲ . . . ನೆಱೆ ಸೊಗಯಿಸಿದುವು ನವಸುರತಕ್ರೀಡೆಯೊಳಾ ದಂಪತಿಗೆ (ಜಯುಕಾ. ೮-೩೩); ಸಸಿಯುದಯಂ ಮುಗಿಲ್ಗೊಱಗು . . . ನಱುದಂಬುಲಂ ಸುಗೀತಸರಸ ದೂತಿವಾಕ್ಪ್ರಭೃತಿ ಮುಂ ಪೆಸರ್ಗೊಂಡ ತಟಸ್ಥಮಲ್ಲದೇ (ರಸರ. ೧-೭೨); ಅತ್ಯವಿತ್ತ ಚೆಲ್ವಿಂಗೆಡೆಯಾಗಿ ಸೂಸಿದಲರುಂ ನಱುದಂಬುಲಮುಂ ಮೃಗೋದ್ಭವಂ ಸಂಗಳಿಸಿರ್ದ ಕುಂಕುಮಪರಾಗಮುಮಾರ್ದೆಱಪುಷ್ಪ ದಾಳಿಯಂ ಪಿಂಗದೆ ದೇವದಂಪತಿಯ ಕೂಟಮನೇಂ ಪಿಸುಣಾಡಲಾರ್ತವೋ (ಶಬಶಂ. ೦-೩೦); ಈವುವಚಾರದಿನಾತನ ಪಸಿವುಂ ಬಟಲ್ಕೆಯುಂ ಮುಡಿಯೆ ಕೆಳದಿ ನಱುದಂಬುಲಮಂ ಸವಿಯಲ್ಕೆಂದು ಮಡಿದೀಯುತುಮಿರೆ (ರಾಮಾಶ್ವ. ೪-೧೨). [ ನಱು + ತಂಬುಲ ]

**ನಱುನಾಣು** (ನಾ). ಆಕರ್ಷಕವಾದ ಲಜ್ಜೆ; ಮೋಹಕವಾದ ನಾಚಿಕೆ: ನಸುನಗೆ ನಱುನಾಣು ನೆರೆಮೊಲೆ ನಳಿತೋಳು ಮಿಸುಪ ಕಣ್ಣೆಗಹಿದ ಕಳಸ ಪೊಸದೆಸಿಪಡೆಯೆ ನೀರೆಱೆವ ನೀಱೆಯರು ಕಣ್ಣೆಸೆದಿಹರಲ್ಲಿ ಪಥಿಕರ (ಕುರಾಸಾಂ. ೨-೪೨). [ ನಱು + ನಾಣು೧ (<ನಾಣ್೧) ]

**ನಱುನೆಯ್**, **ನರುನೆಯ್ಯಿ** (ನಾ). ಸುವಾಸನೆಯಿಂದ ಕೂಡಿದ ತುಪ್ಪ; ಪರಿಮಳಭರಿತವಾದ ಘೃತ: ಕುಱಿಯುಂ ಕಳ್ಳಂ ಕೂಟಂ ನಱುನೆಯ್ಯುಂ ಬೇಡಿ ತಿಂಬ ಪಿರುತಿನಿ ಬರವಂ ಪೆಱರ್ಗೆ ಕುಡಲಱಿಯಳೆಂಬುದನಱಿಯದ ಪಶು ಮನುಜನಲ್ಲ ಕುಱಿಗಳ ಭಾವಂ (ಸಮಹ. ೯-೧೧೧); ನಾಯಿ ನಱುನೆಯ್ಯಟ್ಟದೆಂಬುತೆನ್ನ ಪೇಟ್ಟ ಧರ್ಮಶ್ರವಣಮನೊಲ್ಲದೆ ಸುದಂತಿಯನೆ ಮನದೊಳ್ಳನೆಯುತಿರ್ಪ (ಧರ್ಮಾಮೃ. ೭-೨೨೭ ವ); ನಱುನೆಯ್ಯಾಱಿದ ಸಿರಿಯಂ ಮೆಱೆಯಲೆ ಪೊಂಗಳನೆ ಗೋಪಿಯರ್ ಕೆದಱಿದಪೋಲ್ ತಾಱುವೆಯ ನೆಗ್ಗಿಲ ಪೂಗಳ್ ತುಱುಪಟ್ಟಿಯ ಪೊಱಗೆ ತುಱುಗಿ ಕರಮೆಸೆ ದಿರ್ಕುಂ (ಲೀಲಾವ. ೩-೯೯); ಪೊಸಸಕ್ಕರೆಯಂ ನವಮಧುರಸಮಂ ನಱು ನೆಯ್ಯನೆಸೆವ ಕದಳೀಫಲಮಂ ರಸನೆಯಳಸಿದುದನೆನ್ನೊಳ್ಳೆಸೀಗಳೆ ನಿನಗೆ ತಂದಪೇಂ ಶಶಿಮೌಳಿ (ವೃಷವಿ. ೯-೭೭); ನಱುನೆಯ್ಯುಂ ಪಾಲನುಣಾತ ಬ್ಬಾಟ್ಟರೊಳಧಮರ್ ತುಱುಗಿದ ಕಱುಂಬಿನಿಂದಂ ಪೊಱಿಸಲ್ ಪಾರ್ದಿರ್ಪರ ಕೃಟಿಲ್ಲದ ದೂಱು (ನೀತಿಮಂ. II, ೩೭೯). **ನರುನೆಯ್ಯಿ**: ನರುನೆಯ್ಯಿ, ಬಾಳೆಹಣ್ಣು . . . ಇವೆಲ್ಲ ಇವೆ ನಮ್ಮ ಮನೆಯಲ್ಲಿ (ಕಸಾಶ. ೦೧೬). [ ನಱು + ನೆಯ್೩ ]

**ನಱುಮುಡಿ** (ನಾ). ಸುವಾಸನೆಯಿಂದ ಕೂಡಿದ ಮುಡಿ; ಪರಿಮಳ ಯುಕ್ತವಾದ ಕೇಶ: ನಱುಮುಡಿಗೆ ಮುಡಿವೆನು ಕುಸುಮಮಾಲೆಯನು (ಸಾಳ್ವಭಾ. ೧೦-೩೩). [ ನಱು + ಮುಡಿ೨ ]

**ನಱುವಂಜಿ, ನರುವಂಜಿ** (ನಾ). ಒಂದು ಬಗೆಯ ಹುಲ್ಲು: "ಶಂಖಿನೀ, ಚೋರಪುಷ್ಪೀ, ಕೇಶಿನೀ, ಹಗಱಿ = ನಱುವಂಜಿ" (ನಾಚಿರಾ. ೬); ನಱು ವಂಜಿ [ಪಾಠಾಂ. ನಱುವಲ್ಲಿ] ನೆರಾ[ ವಲ್ಲಿಲಾ ]ವರಗಳ್ ತುಱುಱಿಯ ಕರಿಯಂ ಜಲಾನ್ವಿತಂ ಪೂಸುಗೆ ಮೇಣ್ ಪಱಿಗುಂ ಪಂಕದ ಲೇಪದಿನಱಿ ನಸುಗುನ್ನಿಯ ವಿಷಂ ಭಿಷಗ್ವರಮತದಿಂ (ಖಮದ. ೨-೯೯); ಮೂತ್ರ ರೋಗಕ್ಕೆ . . . ನರು[ಱು]ವಂಜಿ, ಕಳ್ಳಂಗಡಲೆ ಇವಂ ಅರೆದು ಬಹಿಗೆ ಪೂಸಿಳಿಯ ತೊಡೆಯುವುದು (ವಿಕ್ಕವಿ. ೧೩೨); ನಱುವಂಜಿಯ ಬೇರು, ನೆಲಾವರೆಯ ಬೇರು, ಬಳ್ಳಿದುಱುಚಿಯ ಬೇರು ಇವಿಷ್ಟನು ಸುಟ್ಟು ಕರಿಯ ಮಾಡಿ ನೀರಲ್ಲಿ ಅರೆದು ಪೂಸಲು ನಸುಗುನ್ನಿಯ ವಿಷ ಶಮನವಹುದು (ಬೃದ್ಯಸಾ. II, ೨೩೪). **ನರುವಂಜಿ**: "ಅಲಕ್ಷ್ಮಿ-ನರುವಂಜ" (ಅಕಾನಿ. ೨-೦೭). [ ? ]

**ನಱುವಂಡು** (ನಾ). ಸುವಾಸನೆಯಿಂದ ಕೂಡಿದ ಬಂಡು,-ಮಧು: ಸೊಪ್ಪುಸೊಪಡಾಗದೆಸಱಿಸಟ್ಟವೃದೆ ವೊಗಮಿಱಿದು ಕಾರ್ದು ಚಪ್ಪಲರ್ವಿನೆಗಂ ಸಿಪ್ಪಿಟ್ಟು ಕಱಿದು ಕೊಂಡುವು ಸಪ್ಪದಮುಷ್ಪಳದಿನೊಱಿವ ನಱುವಂಡುಗಳು (ಲೀಲಾವ. ೯-೭೬). [ ನಱು + ಬಂಡು೨ ]

**ನಱುವಲ್**, **ನರವಲು, ನರುವಲ, ನರುವಲು, ನರ್ವಲ್, ನಱುವಲ, ನಱುವಲು** (ನಾ). ೧. ಒಂದು ಬಗೆಯ ಮರ; ನೆಲ್ಲಿಗಿಡದಲ್ಲಿ ಒಂದು ಬಗೆ: "ಅಗ್ನಿಮಂಥನ ನಱುವಲ್" (ವಸ್ತುಕೋ. ೩೭-೨೭); "ಅಗ್ನಿ ಮಂಥವೆನೆ ನರು[ಱು]ವಲೆನಿಸಿಕ್ಕು" (ಮಂಗರಾ. ೩೬-೦೬); ಲವಣಂ ನಱುವಲಬೇರ್ ಗುಳ್ಳವನಣ ಬರಿವದಣ ಲೊಕ್ಕಿ ಕಿಱುಮೆಕ್ಕೆಗಳಂ ಬಿವನಱಿದು ತಕ್ರದೊಳ್ ಪೂಸುವುದು (ಲೋಕೋಪ. ೯-೦೯೭); ನಱುವಲ್ ಪಾಗ್ಗಾರೆಯ ಕಾಯ್ . . . ಇವನಱಿಯಲ್ ಜಲದಿಂದೆ ಫಣಿಯ ವಿಷ ನಿರ್ಹರಣಂ (ಖಮದ. ೩-೧೦೪); ಬರಿವದಣ ಸುಣ್ಣಗೊಂದಿಗೆ ನಱುವಲ್ಗುಳ್ಳಂ ಮಣಿಸಿದ ಸೀವನ್ನಿ (ಅಶ್ವಶಾ. ೧೦-೬೦). ೨. ಸೀಗೆಮರ:

ನರವಲು : (೬). ನರುವಲ : ೧. ನೆಲಬೇವು, ಭದ್ರಮುಸ್ತೆ, ಅಮರವವಳ್ಳಿ, ನರುವಲದ ಬೇರು . . . ಶುಂಠಿ ಇವುಗಳ ಕಷಾಯವಿಕ್ಕಿ ಸೇವಿಸಿದರೆ ವಾತಜ್ವರಂ ಕೆಡುಗುಂ (ಸಕವೈ. ೬೫); ನರುವಲದ ಸೊಪ್ಪು, ಪುಳ್ಳಂಪುರಚಿ, ಒಂದೆಲಗ . . . ಈರುಳ್ಳಿ ಇವುಗಳೆಲ್ಲವೂ ಜ್ವರದವರಿಗೆ ಪಥ್ಯದ್ರವ್ಯಗಳು (ಸಕವೈ. ೧೦೩). ನರುವಲು : "ಟಾನಲ–ನರುವಲು" (ಅಕಾನಿ. ೧೦-೨೨). ನರ್ವಲ್ : ೧. (ನಾಟಿರಾ. ೬). ನಱುವಲ : ೧. "ಅರಿಣಕೇತುಃ – ನಱುವಲ" (ಓಷಧಿ. ೯). ನಱುವಲು : ೧. "ಶ್ರೀಪರ್ಣಂ, ಅಗ್ನಿಮಂಥಃ ಕಣಿಕಾ, ಗಣಿಕಾರಿಕಾ, ಜಯಃ – ಈ ೫ ನಱುವಲು" (ನಾಚಿರಾ. ೧೦೮) ; ೩. ಒಂದು ಬಗೆಯ ಸೊಪ್ಪು : ಕೀರೆ ನಱುವಲು ಚಕ್ಕವತ್ತ ಸೋರೆ ಸಬ್ಬಸೀಗೆ ಮೊದಲಾದ ಸೊಪ್ಪುಗಳ ಬೇಱಬೇಱುಕ್ಕರಿಸಿ (ಸೂಪಶಾ. ೪-೧೬) ; ಹಾಕೆಯ ಸೊಪ್ಪು, ಚಕ್ಕೋತ, ಕೀರೆಸೊಪ್ಪು, ಕೆಂಪಿನ ಚಕ್ಕೊತ್ತ, ನರು[ಱು]ವಲ ಸೊಪ್ಪು . . . ಸೂರಣದ ಗೆಡ್ಡೆ– ಇವು ಜ್ವರ ಬಂದವರಿಗೆ ಪಥ್ಯ (ವೈದ್ಯಸಾ. I, ೫೫) ; ಬಜೆ. ಓಮು, ಔಡಲದ ಬೇರು, ನರು[ಱು]ವಲಬೇರು, ಹಿಪ್ಪಲಿ. ಚಿತ್ರಮೂಲ ಇವಿಷ್ಟನು ಸಮಾಂಶವಾಗಿ ಕೂಡಿಸಿ ನೀರಿಂದ ಅರೆದು ಕುಡಿಯ ಕೊಡಿಸಲು ಒಂಟೆಯ ವಿಷಗಳೆಲ್ಲವೂ ಪರಿಹರವಹವು (ವೈದ್ಯಸಾ. II, ೨೦೮). ೪. (?) : ನಱುವಲ ಮೊನೆಯ.ಲ್ಲಿ ಸಟ್ಟ ಕಲ್ (ಎಕ XIII, ೩೦-೩೦ : 1204). [ ದೇ.೫ ತುಳು. ನರುವೊಲು, ನರ್ವೊಲು ]

ನಱುವಲ 'ನಱುವಲ್' ನೋ.

ನಱುವಲರು (ನಾ). ಸುಗಂಧಯುಕ್ತವಾದ ಪುಷ್ಪ ; ಸುವಾಸನೆಯ ಹೂವು : ತರುಣಿ . . . ಶಿವನಿರ್ಮಾಲ್ಯವೆನಿಪ ನಱುವಲರನೆಯ್ದೆ ಶಿರದೊಳ್ತುಱುಬಿ . . . ಶಿವವೇಷದಿಂ ತಣಿದು (ಶಾಸೋಪು. ೨-೩೦) : ನಱುವಲರುಗಳ ಪಿಡಿದು ಪುಷ್ಪಾಂಜಲಿಯನೆಸಗಿ . . . ಹರ್ಷದಿಂದಖಿಳ ಪುರಜನ ಪರಿಜನಂಗಳೆಲ್ಲಂ ತುಱುಗಿ ಬರುತಿರೆ (ಸಿರ್ಯೇಪು. ೧೯-೨೦).

[ ನಱು + ಅಲರು$_2$ (<ಅಲರ್$_2$) ]

ನಱುವಲು 'ನಱುವಲ್' ನೋ.

ನಱುವೂವಲಿ (ನಾ). ಸುವಾಸನೆಯ ಹೂವುಗಳನ್ನು ಹರಡುವಿಕೆ ; ಹೂವಿನ ಹಸೆ : ರಂಗವಲ್ಲಿಯಿಂದ್ಯೆದು ರನ್ನದ ರಂಗಿಸಿದ ಪುಡಿಗಳ ಚದುರಿನಿಂ ಪಿಂಗದಾ ನಱುವೂವಲಿಗಳಿಂ ಚಿನ್ನಬೆಳ್ಳಿಗಳಾ ತುಂಗಘಟದೊಳ್ಪಹಿಪ ಚೆಲ್ವದಶಾಂಗಮುಖ್ಯದ ನಱುವೊಗೆಗಳಿಂ ತೊಂಗಲಿಪ ಸುರಘಂಟೆಯಿಂ ಮೆಱೆವುದನರಸ ಕಂಡ (ಸಾಳ್ವಭಾ. ೪-೪೦). [ ನಱು + ಪೂವಲಿ ]

ನಱುವೊಗೆ (ನಾ). ಸುವಾಸನೆಯ ಹೊಗೆ; ಧೂಪ : ಚಿನ್ನಬೆಳ್ಳಿಗಳಾ ತುಂಗಘಟದೊಳ್ಪಹಿಪ ಚೆಲ್ವದಶಾಂಗಮುಖ್ಯದ ನಱುವೊಗೆಗಳಿಂ ತೊಂಗಲಿಪ ಸುರಘಂಟೆಯಿಂ ಮೆಱೆವುದನರಸ ಕಂಡ (ಸಾಳ್ವಭಾ. ೪-೪೦).

[ ನಱು + ಪೊಗೆ$_3$ ]

ನಱುಸುಯ್ (ನಾ). ಸುವಾಸನೆಯಿಂದ ಕೂಡಿದ ಉಸಿರು ; ಸುಗಂಧಪೂರಿತವಾದ ಶ್ವಾಸ : ಪೋಪ ಸಪ್ತಸಪ್ತಿಯ ವಿರಹಕ್ಕಿದಲ್ತು ಬಿಸುಸುಯ್ ಪುಸಿಸುಯ್ಯೆನೆ ಸುಯ್ಯುದ್ದ ದಕ್ಷಿಣಾಶೆಯ ನಱುಸುಯ್ಯ ಗಾಳಿಯನೆ ಪೋಲ್ತುದು ಗಂಧವಹಂ ವಸಂತದೊಳ್ (ಶಾಂತಿಪು. ೭-೦೫೬) : ನಱುಸುಯ್ಗಂ ಮಾಱಿಗಂ ಸೋಲ್ಬಿರ್ದೆಱಗುವಿನಂ ತುಂಬಿಗಳ್ ನೋಡಿದರ್ಮೆಯ್ಯಱವನ್ನಂ (ಪಂಪಾಮಾ. ೧-೧೩೦) ; ಭರದಿಂದಂ ನವಕುಸುಮಾಭರಣಂಗಳನಭವನಂಗದೊಳ್ ಸಿಂಗರಿಸುತ್ತರಳುತ್ತುಬರ್ಪತೆ ಕೊರ್ಬರ್ಪತೆ ಗಿರಿಸುತೆ ನಱುಸುಯ್ಯ ಧೂಪಮಂ ಪಡೆದಿತ್ತಳ್ (ಗಿರಿಕ. ೫-೮೩) : ಮಗಮಗಿಸುತ್ತುಮಿರ್ಪ ನಱುಸುಯ್ ಪೊಸಪೂಗಳ ಕಂಪನೆತ್ತಿ . . . ಸುತ್ತಲುಂ ಸೊಗಯಿಸುತಿರ್ಪ ಬಾಸಿಗಮನೆತ್ತಿ ಪರಗ್ಗದ ಮಾಲೆಗಾರ್ತಿಯರ್ (ಕಬ್ಬಿಗಕಾ. ೪೦) ; ಮಾಲೆಗಟ್ಟುತೆ ನೋಟಕರ ಕಣ್ ಮಾಲೆಗಟ್ಟುವರೊರ್ಮೆ ತುಂಬಿಯ ಮಾಲೆಮಾಲೆಯ ಕಾಣಗುಡದಿರೆ ತಮ್ಮ ನಱುಸುಯ್ಯಾ ಮಾಲೆಮಾಲೆಯ ತೋಱೆ ಕಟ್ಟಿದ ಮಾಲೆಯನೆ ವಿಟಮಾಲೆಗತಿಸಲ್ಲೀಲೆಯಿಂ ಮಾಱುವರದಲ್ಲಿಯ ಮಾಲೆಗಾರ್ತಿಯರು (ಸಾಳ್ವಭಾ. ೨-೦೨). [ ನಱು + ಸುಯ್$_2$ ]

ನಱುಸುಯ್ಯೆಲರ್ (ನಾ). ಸುವಾಸನೆಯಿಂದ ಕೂಡಿದ ಉಸಿರಿನ ಗಾಳಿ; ಒಳ್ಳೆಯ ಕಂಪುಳ್ಳ ಶ್ವಾಸವಾಯು: ನಱುಸುಯ್ಯೆಲರ್ಗೆಱಗುವ ಮೞದುಂಬಿಗಳಂ ಸೞಂಗಿನಿಂ ಸೋವುತುಮಾ ತೆಱದೊಳೆ ಯುವರಾಜನನಟ್ಟಿಱಿಂದೆಡಿಗಡಿಗೆ ಕಾಂತೆ ಕರೆವಂತಿರ್ದಳ್ (ಕಾದಂಉ. ೧೨೯) ; ಎಲೆ ತೀಡುವ ತೆಂಗಾಳಿಯೆ ನಲವಿಂ ಕಾಲ್ವಿಡಿದು ತಿಳಿಪಿ ತಳ್ವಿಲ್ಲದೆ ಕಾದಲನಂ ತಂದೊಡೆ ನಱುಸುಯ್ಯೆಲರಿಂದಂ ನಿನ್ನನಾಗಳುಂ ನೆಱೆ ಪೊರೆವೆಂ (ಕಬ್ಬಿಗಕಾ. ೭೧) : ಕುರುಳೊಳ್ತೀವಿದ ಕತ್ತುರಿಯ ರಜಂ ಮೊಗರಸದೊಳುದಿರ್ದು ನಱುಸುಯ್ಯೆಲರಿಂ ಪಱೆದು ತೆರೆಮುಸಗಿ ನಿಂದುತಿರೆ ಕೊಂಕಿಂ ಭ್ರೂಯುಗಂ ವಿರಾಜಿಪುದವಳಾ (ರಾಜಶೇ. ೭-೫೬). [ ನಱುಸುಯ್ + ಎಲರ್ ]

ನಱುಸುಯ್ಯು (ನಾ). = ನಱುಸುಯ್ : ನಱುಸುಯ್ಯ[ಪಾಠಾಂ. ಯ್ಯು] ಗಾಳಿಗೆ ತೇಲ್ವ ದುಕೂಲದ ಸೆಱಗು ಸೇರುವೆ ದೂರೆ ಹೊದೆದು ತೆಱಪಿನೆದೆಯ ಹೊನ್ನ ಜನ್ನಿವಾರದ ರ ಚೆ ಮೆಱೆಯೆ ರಾಜೇಂದ್ರ ಮೆಱೆದನು (ಭರತ. ೧-೩೩). [ ನಱು + ಸುಯ್ಯು ]

ನಱುಹರೆಯ (ನಾ). ತುಂಬಿದ ಪ್ರಾಯ ; ಪೂರ್ಣಯೌವನ : ಹಿಂದಣಾಗರಿಲ್ಲದಾಯುಸವಟ್ಟು ಗುರುಕರುಣದಿಂದೆನ್ನ ಪೆತ್ತು ಬಾಲ್ಯದ ಮುದ್ದು ನಱು[ಪಾಠಾಂ. ಡು] ಹರೆಯದಿಂದೆಸೆವ ಸಿರಿಯ ನಡೆನೋಡಿ ದಣ್ಣನೆ ದಣಿವ ಕಾಲದೊಳು ನುಡಿದಪ್ಪಿಗೆ ತಂದೆ ತಾನೇ ಕೊರಲೊಗ್ಗಿಯಸಿದವನು (ಭಾವಚಿಂ. ೯-೦೫) : ಪುಟ್ಟ ಲಾವಣ್ಯಲತೆ ಬೆಳೆವಂತೆ ನಱುಹರೆಯಮಿಟ್ಟಣಿಸಿ ದಿನದಿನಕೆ ಬಳೆದು ವಿಗೆ ಸುತಸಂಬಟ್ಟು (ಕೊಟ್ಯಬ. ೪-೦೧೨).

[ ನಱು + ಹರೆಯ (<ಪರೆಯ ) ]

ನಱ$^3$ (ನಾ). ಒಗ್ಗರಣೆ. 'ನಱ$^3$ಗೊಡು' ಪರಾ.

ನಱ$^3$ಯುಂ ಕೊಡು, ನಱ$^3$ಯ ಕೊಡು = ನಱ$^3$ಗೊಡು : ಪುಡೆಯಮಂ ಮಾಡಿ . . . ಹುರುಳಿಯ ಹಾಲಿನೊಳಗಿಳಿಯಬಿಡುತ ಪೊಗ್ಗರಿಸಿ ನರ[ಱ$^3$]ಯುಂ ಕೊಟ್ಟು ನಸುಹುಳಿಯನಿಕ್ಕಿ ಪರಿಮಳವಿಡುವುದು (ಸೂಪಶಾ. ೫-೫೦); ಮೆತ್ತನುಕ್ಕರಿಸಿಕೊಂಡೆಳೆಯ ಕಳಲೆಯ ಕುಡಿಯನು ... ಪೊಡ್ಡಣಿಗೆಯಿತ್ತು ನರ[ಱ$^3$]ಯುಂ ಕೊಟ್ಟು ಪರಿಮಳವನಿಕ್ಕಲದು ಚುಚ್ಚುಗಳಿಲೆ[ವೆಸರು] (ಸೂಪಶಾ. ೬-೨); ಹುಸಿಯ ಕರಿಬೇವು ಕೊತ್ತುಂಬರಿಯನಿಕ್ಕಿ ತಾಳಿಸಿ ನರ[ಱ$^3$]ಯ [ಪಾಠಾಂ. ಯುಂ] ಕೊಟ್ಟು . . . ಮುದ್ಗರಂಭಾಕುಸುಮಪಾಕವೆಂದೆಂಬ ಹೆಸರಂ ಕರೆವುದು (ಸೂಪಶಾ. ೪-೫೩).

[ ← ತಮಿ. ನಱ್ಯ = ಮಸಾಲೆಪದಾರ್ಥ, ಸಂಬಾರದ್ರವ್ಯ ]

ನಱ$^3$ಗೊಡು (ಕ್ರಿ). ಒಗ್ಗರಣೆಯನ್ನು ಕೊಡು,–ಹಾಕು ; ಒಗ್ಗರಿಸು : ಅಟ್ಟಿರಡು ಭಾಗೆಯಂ ಮಾಡುಳ್ಳಿ ಸಕ್ಕರೆಯನಿಟ್ಟು ಪಸರಿಸಿದ ಹೋಳೊಳು ತುಂಬಿ ತುಪ್ಪದೊಳಗಟ್ಟು ಕೆಂಪಂ ಮಾಡಿ ನರ[ಱ$^3$] [ಪಾಠಾಂ. ರೆಯುಂ] ಗೊಡಲು ಗೌರಬದನೆಯಕಾಯಿಮೆಸರಾದವು (ಸೂಪಶಾ. ೪-೨೪).

[ ನಱ$^3$ + ಕೊಡು$_1$ ]

ನಱ$^3$ಯಿಕ್ಕು (ಕ್ರಿ).=ನಱ$^3$ಗೊಡು : ಶೋಧಿಸಿದ ಕೊಣಬಿನೊಳು [ಬಾಳೆಯ] ಹೂವನು ಇಟ್ಟು . . . ಒಗ್ಗರಣೆಗೊಟ್ಟು ನರ[ಱ$^3$]ಯಿಕ್ಕಿ ಪರಿಮಳಗೊಡಲು ತಕ್ರರಂಭಾಕುಸುಮಪಾಕಮಾಯ್ತು (ಸೂಪಶಾ. ೪-೩೬).

[ ನಱ$^3$ + ಇಕ್ಕು ]

ನಱ$^3$ಯಿಸು (ಕ್ರಿ). = ನಱ$^3$ಗೊಡು : ಮತ್ತೊಂದು ಬೆಸಳಿಗೆಯ ತೊಳೆದುಕೊಂಡದಕೆ ನ[ಪಾಠಾಂ. ನೆ]ರೆ[ಱ$^3$]ಯಿತ್ತದು ಪೊಯ್ದು ಕರಿಬೇವು ಮೊದಲವಿಕ್ಕಿ (ಸೂಪಶಾ. ೫-೧೦); ಕೊತ್ತುಂಬರಿಯನಿಕ್ಕಿ ಚೆನ್ನಾಗಿ ನ[ಪಾಠಾಂ. ನೆ, ಲ]ರೆ[ಱ$^3$]ಯಿತ್ತು [ಜಡಿದುಕೊಂಡು] (ಸೂಪಶಾ. ೫-೦೪). [ನಱ$^3$ + ಈ$_2$]

**ನಟೀಣ್ಣಗ** (?) (ನಾ). (?) : ಕಾಲ್ನಾಡಿಂ ನಟೀಣ್ಣಗರಾರೆನ್ನೊಡೆ ತೊರೆ ಕಾವಗಾದನುಂ ಬೀವಗದನುಂ . . . ಇಲ್ಲಿಯ ಪುರದ ಒಕ್ಕಲಿವರು (ಎಕ. III, ಸಂಜನ. ೧೩೯-೫ : 915 ?). [ ? ]

**ನಟುಳ್ಗುಂದ** (ನಾ). ಒಂದು ಸ್ಥಳದ ಹೆಸರು : ಸ್ವಸ್ತಿಶ್ರೀ ನಟುಳ್ಗುಂದ ಬಾತವ್ಮನ್ ತೊಱುಗೊಳ ಇರ್ವ್ವ ವೇಡರಾ ಕೊನ್ದು ತೊಱುವ ಇಕ್ಕಿಸಿ ಸುರಲೋಕಮ್ ಪುಕ್ಕ (ಎಕ. X, ಚಿಂತಾಮ. ೦೨೨-೧ ; ಸು. 1000). [P ಇದು 'ನವಿಲ್ಗುಂದ' ಎಂಬುದರ ಅಪಲಿಖಿತವಿರಬಹುದು]

**ನಟ್ಗವುಂಡು** 'ನಾಟ್ಗಾವುಂಡು₂' ನೋ.

**ನಟ್ಗವುಂಡುಗೆಯ್** 'ನಾಟ್ಗಾವುಂಡುಗೆಯ್' ನೋ.

**ನಾ₁** 'ನಾನ್₂' ನೋ.

**ನಾ₂** 'ನಾಲ್' ನೋ.

**ನಾಱೂದ** (ನಾ) (?) : ಮುಡೆ ೧ ನಾಱೂದನ ಬಗುಳ ಗದೆ ಮೇಲೆ ಮುಡೆ ೨ (ಶಾಇಎ. ೧೯೩೨, ಉಡುಟಿ. ೩೦೭-೬ : ?). [ ? ]

**ನಾಂ** 'ನಾನ್₃' ನೋ.

**ನಾಂಗರು, ನಂಗರಿ, ನಾಕರ** (ನಾ). ನೇಗಿಲು ; ಹಲ ; ಲಾಂಗಲ : ದರ ನಾಂಗರು ೧ಕ್ಕೆ ಗು ೪ ನಾಲ್ಕು ವರಹಾದ ಪ್ರಕಾರ (ಮಹಾವಂ. II, ೬೨). **ನಂಗರಿ** : ನಂಗರಿ ಹೊಡೆಯುವುದರಿಂದ ನೆಲ ಪೊಳ್ಳಾಗಿದೆ (ರೂಢಿ). **ನಾಕರ** : 'ನಾಕರಕಂಟೆ' ಪರಾ.

[ ←ಮರಾ. ನಾಂಗರ್, ನಾಗರ್. / ಪ್ರಾ. ಣಂಗಲ. / ಸಂ. ಲಾಂಗಲ ]

**ನಾಂಗಲಿಕ** 'ನಾಂಗುಲಿಕ₁' ನೋ.

**ನಾಂಗುರಿಕ** 'ನಾಂಗುಲಿಕ₁' ನೋ.

**ನಾಂಗುಲಿಕ₁, ನಾಂಗಲಿಕ, ನಾಂಗುರಿಕ, ನಾಂಗುಲೀಕ, ನಾಗುಲಿಕ** (ನಾ). ಒಂದು ಬಗೆಯ ಗಿಡ ; ಕೋಳಿಕುಟುಮನ ಗಿಡ : ಜಲರುಹ ಕಂದಾನ್ವಿತಮಿರುಳೆಲೆಯೊಳ್ ಸಲೆ ಕಟ್ಟಿಗಿರಿಯ ಬೂದಿಯ ತಳಿದೂಱಿ ಲೊಳಿಂಬಿನೆ ಕುದಿಯಿಸೆ ನಾಂಗುಲಿಕಮನಡುಗಾಜ್ಯದಿಂ ರಸಾಯನಮಕ್ಕುಂ (ಲೋಕೋಪ. ೮-೨೯) ; ದೃಷ್ಟಿ ದ್ರಾವಣಕ್ಕೆ – ಬಿದುರೆಲೆ . . . ನಾಂಗುಲಿಕ ಇವನ್ನು ಕೂಡಿ ಮರ್ದಿಸಿ ತಿಲಕವಿಡಲು ದೃಷ್ಟಿದ್ರಾವಣ ಮಾಣ್ಗುಂ (ವಿಶ್ವವಿ. ೨೦೦) : ವಿಷಮುಷ್ಟಿ ನಾಂಗುಲಿಕ ಶಶನಯನ ಪಿತ್ತವರರಸವು ತಾಂಬೂಲ ದೊಡಗೂಡೆ ಸ್ತ್ರೀವಶವು ಹುಸಿಯಲ್ಲ ನೋಡ (ಸರ್ವಜ್ಞ. ೦೯೬೯) **ನಾಂಗಲಿಕ** : ಮೂಲವ್ಯಾಧಿಗೆ–ನಾಂಗಲಿಕ, ಮೊಗನ ಹರುವೆ, ಚಿತ್ರಮೂಲ . . . ಕಲಸಿ ಗುದದಲ್ಲಿ ಪೂಸೆ ಎಲ್ಲಾ ಮೂಲವ್ಯಾಧಿ ಕೆಡುಗುಂ (ವಿಶ್ವವಿ. ೦೬೬). **ನಾಂಗುರಿಕ** : ವಿಷಮುಂಗುರಿಯುಂ ಗುರು ನಾಂಗುರಿಕಂ ಬಜೆಯುವನರೆದಿಂಬಿಂ ಪೂಸೆ ಕಂಟಕೋಗ್ರವಿಷಘ್ನಂ (ಖಮುದ. ೨-೨೦೩). **ನಾಂಗುಲೀಕ** : ಬಯಸಿ ಚುಂಬಿಸಿದರ್ ಸ್ಮರನಿರ್ದು ನಾಂಗುಲೀಕದ ಕುಸುಮಂಗಳಂ ಪಱಿದು ಪತ್ತಿಸಿದಂತೆವೊಲೊಪ್ಪೆ ತೋರ್ಪಿನಂ (ಕಾವ್ಯಸಾ. ೬೬೬ ಚೂದ್ರ೪). **ನಾಗುಲಿಕ** : "ಲಾಂಗಳೀ, ಅಗ್ನಿಶಿಖಾ ಈ ೨ ನಾಗುಲಿಕಂ" (ನಾಚಿರಾ. ೧೦೦).

[ <ಸಂ. ಲಾಂಗಲಿಕ ]

**ನಾಂಗುಲಿಕ₂** (ನಾ). ಒಂದು ಬಗೆಯ ಗಿಡ; ಸರ್ಪಾಕ್ಷಿ ಗಿಡ; ನಾಗದಾಳಿ; ಮುಂಗುಸಿಮೇವುಗಿಡ ; ನಾಗಸುಗಂಧ : "ವ್ಯಾಳಗಂಧಿಯೆನೆ ನಾಂಗುಲಿಕವಕ್ಕು" (ಮಂಗರಾ. ೪೦-೩೦). [< ಸಂ. ನಾಕುಲಿಕ ]

**ನಾಂಗುಲಿಕಬಳ್ಳಿ** (ನಾ). ನಾಂಗುಲಿಕದ ಬಳ್ಳಿ,–ಲತೆ; ಕೆಂಪು,ಹಳದಿ ಹೂವು ಬಿಡುವ ಸುಂದರವಾದ ಹಾಗೂ ಮೇಲಕ್ಕೆ ಹಬ್ಬಿಕೊಂಡು ಹೋಗುವ ಒಂದು ಬಗೆಯ ಬಳ್ಳಿ : (ಶ). [ ನಾಂಗುಲಿಕ₁ + ಬಳ್ಳಿ ]

**ನಾಂಗುಲೀಕ** 'ನಾಂಗುಲಿಕ₁' ನೋ.

**ನಾಂಚಿಕೆ** 'ನಾಣ್ಚಿಕೆ' ನೋ.

**ನಾಂಚು** 'ನಾಣ್ಚು₁' ನೋ.

**ನಾಂಟಿಸು, ನಾಟಿಸ** (ಕ್ರಿ). ೧. ಚುಚ್ಚುವಂತೆ ಮಾಡು ; ನಾಟಿಕೊಳ್ಳುವಂತೆ ಮಾಡು : ಚಿಗುರುದೋಱಿದ ತಳಿರ ತಱಿತಱಿದಗಲದಲಿ ಪಸರಿಸುತ ಪದಕಂಟಕವ ನಾಂಟಿಸದೆ [ಪಾಠಾಂ. ಪಂಟಿಸುತ] . . . ಜನಕನ ಮಗಳ ನಡೆಸುತ ತಂದರೊಂದು ಮಹಾಸರೋವರಕೆ (ತೊರರಾ. ೨-೪-೦೯); ಕಾಂಟಣೆಯುರೆಳಿವ ಕುಲಟೆಯುರಂತೆ ಖುರಪುಟವ ನಾಂಟಿಸಂಗವನೆಳೆದು ಕಾಲಮಹಿಷಿಯು (ಜಿನಮು. ೫-೫೦). ೨. [ಗಣಿತ] ಗುಣಿಸು : ಒತ್ತಿಱಿ ನಾಂಟಿಸಪ್ಪು ? ಬಳಸೊತ್ತು . . . ಗುಣಿಸು ವರ್ಗಿಸೆನಲಿವು ಗುಣಕಾರ ಭಾಷೆಗಳ್ ಪೇೞ್ ಗಣಕಾ (ವ್ಯವಹಾ. ೧೦-೧೨). **ನಾಟಿಸು** : ೩. ಉಂಟುಮಾಡು; ನೆಲೆಗೊಳಿಸು : ಮನದ ಬೆಚ್ಚು ಬಱಿಯಱಿವು ಬಱಿದು ಬೆಱಗನೆ ನೋಟದೊಳ್ ನಾಟಿಸೆ [ಪಾಠಾಂ. ನಾಂಟಿಸಿ] (ಅರ್ಜನೀ. ೨-೬೦ ವ); ಬೇಟದ ಸೊಗಸಂ ಪ್ರಿಯರೊಳ್ ನಾಟಿಸುತುಂ . . . ಶಬರಿಯರ್ ನಡೆತಂದರ್ (ಉದ್ಯಟ. ೨-೬೨) : ನಾಟಿಸುವೆನವರೞಿವಿಗೞಿವನು ಮಾಟವೆಲ್ಲವ ಮಾಣಿಸುವೆನೆನುತಿರ್ದ ಪ್ರಭುರಾಯ (ಪ್ರಭುಲಿ. ೨೦-೩೪) ; ಕೂಟದೊಳಗೆ ದಣಿವನು ಪೊರ್ದದಾ ಸತಿ ನಾಟಿಸಿದಳು ತನ್ನೊಳವನ (ನೇಮಿಸಂ. ೧೦-೯೨) : ನಾಟ್ಯರಸದಲಸಿಕೆಯು ಪ್ರೇಕ್ಷಕರ ಕಣ್ಣು ಕಿವಿಗಳ ಮೂಲಕ ಹೃದಯದಲ್ಲಿ ನಾಟಿಸಲಾಗುವುದು (ಪ್ರಬಂಧ. ೨೫). ೪. ಊರು ; ಆಧಾರ ಕೊಡು : ಮಡದಿಯ ಪೀನ ಪಯೋಧರಭಾರಕೆ ನಡು ಮುಱಿದಪುದೆಂದಜನು ನಡುಗೆ ನಾಟಿಸಿ ಸಟ್ಟ ಕಂಭವೆನಲು ಬಾಸೆ ಕಡುಚೆಲುವಾಗೊಪ್ಪುತಿಹವು (ಅಂಜನ. ೫-೧೨೩) : ಅವರುಗಳ ಪೊಡೆಯೊಳಗೊಂದಕೆಂಟೆಂಟ ನಾಟಿಸಿ ಬಂದ ಪಡೆಯನಿಕ್ಕಿದ ರಣಬಲಿಯ (ಮೋಹತ. ೩೫-೧೩). ೫. "ಸ್ಪೃಷ್ಟಿಸು" (ತೊರರಾ. ಕೋಶ) : ನಾಟಿಸುವ ಜಗದವನನಣುವಿಗೆ ಪಾಟಮಾಡದ ಸುಪ್ರಸಿದ್ಧನ ಘಾಟ ರಣಸುಖವಲ್ಲೆನುತಲೊದಱಿದವು ಕಹಳೆಗಳು (ತೊರರಾ. ೬-೪೬-೩೫). ೬. (ಅಲಂ) ನಿರೂಪಿಸು ; ಹೇಳು : ಬೇಟೆಯ ನೆವದಿಂದರಸನ ಕೂಟದ ನಾಯಕರ್ ಬಂದುಮಿಾ ತಮನಂ ನಿರ್ದಾಟಿಸಿ ಕೊಂದರೆನುತ್ತಂ ನಾಟಿಸು ನೀನಿವನ ಪೆಂಡಿರೊಳ್ ಮಕ್ಕಳೊಳಂ (ನನ್ನಚಾ. ೨-೦೨೨) ; ರತಿಯ ಪ್ರಸಂಗವ ನಾಟಿಸಿದನು ಕಿವಿಯೊಳಗೆ (ಮೋಹತ. ೯-೪೬). ೭. ಚೆನ್ನಾಗಿ ಸೇರಿಕೊಳ್ಳು ; ಅಂಟಿಕೊಳ್ಳು ; ಗಂಟುಬೀಳು : ಕೂಟದಲಿ ಕೋಪ ಕೊನರಿಸುತ ಶಂಖಿನಿಯು ನಾಟಿಸದೆ ಬಿಡಳು (ಸರ್ವಜ್ಞ. ೦೬೪೩) : ನೋಟಕ್ಕೆ ಬಲು ಚೆಂದ ಕೂಟಕ್ಕೆ ಕಡುನರಕ ನಾಟಿಸಿ[ಸ]ಲು ಪ್ರಾಣಧನ ಹಾನಿ ಸೂಳೆಯೊಱೂಟವೇ ಬೇಡ(ಸರ್ವಜ್ಞ. ೧೯೫೫). [ ನಾಂಟು + – ಇಸು₃ ]

**ನಾಂಟು, ನಾಟು₁** (ಕ್ರಿ). ೧. (ಮುಳ್ಳು, ಬಾಣ ಮೊದಲಾದುವು) ಒಳಹೊಗು ; ಒಳಕ್ಕೆ ಚುಚ್ಚು : "ನಾಂಟು–ಅಂತರ್ಭೇದೇ (ನಾಟಿಕೊಳ್ಳು)" (ಶಮಧಾ) ; ಕಪೋಲಕಂಟಕನಿಕಾಯಾಗ್ರಂಗಳಂ ಕೂಡೆ ನಾಂಟಿದುದೋ ಮೇಣ್ ಸುಭಗತ್ವಮೆಂಬ ಗುಣದಿಂ ಪೊಲ್ದತ್ತೊ ಮೇಣೆಂಬಿನಂ ಪದಪಿಂ ನಟ್ಟಿರೆ ದಿಟ್ಟಿಯಂ ತೆಗೆದೆನೆಂತೆಂತಾನುಮುದ್ವೇಗದಿಂ (ಕಾದಂಪೂ. ೬೬೩) ; ಜವನಾಳಂತಪ್ಪ ಕಣೆ ರೋಮರೋಮಂದಪ್ಪದೆ ನಾಂಟಿದುವು (ಶಂಕಾಮೂ. ೦೩-೬೧) : ನಾಂಟಿದುವರಿಭಟರಂಗಮಂ . . . ಶರಂಗಳ್ (ಜಗವಿ. ೮-೫೩); ಕಂಟಕಂಗಳ್ ನಾಂಟ ಬಿದ್ದು ಕಾಲೊಡೆದು ಬಾಯ್ ಗಂಟಲ್ಗಳೊಣಗಿ ಗತಿಗೆಟ್ಟು (ಚಲಪು. ೨೧-೨೧) : ಸಲೆ ಪಜ್ಜೆಯನಿಡೆ ನಾಂಟುವ ಮೊಮುಳ್ಳಿನಿಂದೊಳುಗಾಡೆಸೆದುದೇನೆಂಬೆ (ಶಂಸವಿ. ೧೮-೪೩). ೨. ತಗುಲು ; ಸಂಪರ್ಕ ಹೊಂದು; ಸೇರು ; ಕೂಡು ; ಅಂಟು : ಬೆಂಗ ನೀರ ಧಾರೆಗಳುಱಿ ನಾಂಟಲಿಂಟಿದುದು ನೇಹದೆ . . . ಚಾತಕಂ (ಗಿರಿಳ. ೯-೪೮) ; ಪಾಪಂಗಳಾಟಂ ನಾಂ[ಪಾಠಾಂ. ನಾ]ಟವನ್ಯಾಯದ ಕಳೆಗೆ ತೆಕ್ಕವು . . . ಮುಕ್ತಿಯ ಮೂಲವೆನಿಸುವವು ಕಾಶಿ ಹಂಪೆಗಳು (ಹಕಶಾ. ೮-೫೯) ; ಗುರುಕುಚಂಗಳಂ ನೋಳ್ಪ ಕಾಮುಕನಿಕರದ ದಿಟ್ಟಿ ನಾಂಟದ ತೆಱದಿ ಮಱಿಮಾಡಿದಂದದಿ (ಶಾಂದಪು. ೬-೨೮). ೩. (ಗಿಡ ಮೊದಲಾದುವನ್ನು) ಭೂಮಿ

ಯಲ್ಲಿ ನೆಡು. –ಊರು, –ಹಚ್ಚು : ಬಗೆ ಮುಟ್ಟಿರ್ದೆಡೆಯೊಳ್ ತಳರ್ದ ಮರಸಂ ಹೇಮಂತದೊಳ್ ಕಿಟ್ಟು ನಾಂಟುಗೆ (ಶೋಕೋಪ ೬-೧೭) ; ಪಾಂಥರೀಂಟೆ ವಿಕಸತ್ತೃಷ್ಣಾತುರರ್ ಚಿತ್ತಭೂತಲದೊಳ್ ನಾಂಟದ ಬೇಂಟವೇಂ[ ಮೆಂ ] ಬಗೆಗೆ ನೀರ್ಪೊಯ್ವಂತೆ ಭೃಂಗಾರಶೀತಲತೋಯಂ ಗಳನಾಂತು ಮಾಣಿತಳದೊಳ್ ಪೊಯ್ವರ್ ಪ್ರಮಾಕಾಂತೆಯರ್ (ಲೀಲಾವ. ೬-೧೨೯). ೪. ಮೊಳೆ ; ಮೊಳಕೆಯಾಗು : ಬಿತ್ತಿದಾಗಳಲ್ಲಿಗವ್ವನಿತೆ ಮಟಿ ಕೊಂಡು ಕಿಸಱಾಗಿ ನಾಂಟ ಬೆಳೆದೆಱಗಿರ್ದಡಾಗಳ್ (ಬಂಹರಿ. ೯-೩೩ ವ). ನಾಟು$_1$ : ೧. ನಾಟುವ ನರ್ಗಿಣೆ ಚಿತ್ತಮನಾಟವಿಟಂಬರಿಸಿ ನನೆಹದಿಂ ಪೊಸವೇಟಂ ಕೋಟ ತೆಱನಾಗೆ (ಲೀಲಾವ. ೯-೧೨೦) ; ಉದ್ವೃತ್ತೇಂದ್ರನಿಟ್ಟ ಶೂಲವೈದೆ ಮುಂ ಕೊಂಡು ನಾಟ ವಕ್ಷಮಂ (ಉದ್ಭಟ. ೪-೧೦೮) ; ನೋಟ ದರಿ ಮದನಾಸ್ತ್ರವೆದೆಯಲಿ ನಾಟಿದವು (ತೊರೆರಾ. ೧-೧೪-೨೪) ; ಹೊಂಗಳಸ ಚಂಡವೃತ್ತರದಕ್ಷಿಣವೀಧಿಗೊಟ್ಟು ಬ್ರಹ್ಮಾಂಡವ ತುಡುಕಿ ನಾಟಿದುವು (ಮೋಹತ. ೨೦-೨೯) ; ಕೊರುಗಿುರು ನಾಟದೊಲ್ಪಿಡಿ ಕುಚಂಗಳ (ವಂಶಾರಾ. ೧-೩-೪೦) ; ರಣರಂಗದ ಮತ್ತೊಂದು ಕಡೆ ಭಾಮನು ಖಡ್ಗ ನಾಟ ಬಿದ್ದಿದ್ದಾನೆ (ಸಂಸಳ. ೧೦೦). ೩. ಪುಣ್ಯಾರ್ತ್ಥ ಕಲ್ನಾಟ ಬಿಟ್ಟ ದತ್ತಿ (ಎಕ. XIV, ಮೈಸೂರು. ೧೨೭-೧೦ ; ೪೦೦) ; ನಾಟರ್ದ ಪಸುರ್ಗಿಡು ಪುಷ್ಪಲತೆಮ ವೃಕ್ಷ ವಾಟಿಯೊಳ್ ಕುಸುಮಸೌರಭಕೆ ಊಟಿವರಿವ ತುಂಬಿಗಳ ದೋಟಿ . . . ಒಪ್ಪಿದುವು (ಮೋಹತ. ೫-೨೩) ; ನೀರ ಕಡೆಗೆ ನಾಟದ ಮರ ಚಿಗುರದೆ ಬಿಟ್ಟೀತೆ ? (ಗಾದೆ). ೫. (ಮಾನಸ್ಸಿಗೆ) ಹತ್ತು ; ಹಿಡಿ ; ತಟ್ಟು : ಬಗೆ ಯೊಳ್ ನಾಟುವಿನಮಮರಿ ಸಂಸ್ಕೃತಿನಾಟಕಮುಮನೆನಗೆ ನೆಟಿಯ ಕೋಡಿಡಲೀಗಳ್ (ಆದಿಪು. ೯-೪೩) ; ಭಯಂ ನಾಟ ಚಿತ್ತದೊಳ್ ದೂತ ರೈತಂದಾ ಕೃತಾಂತನೊಡನಿಂತೆಂದರು (ಜಲಪು. ೫೦-೨೪) ; ಈ ವಿಚಾರಗಳು ಶಂಕರಭಟ್ಟರ ಮನಸ್ಸಿಗೆ ನಾಟದವು (ಗಂಗಾಸಾ. ೩೦) ; ಅವಕಾಶವುಟಾದಾಗ . . . ಅವುಗಳ ಗುಣದೋಷಗಳನ್ನೂ ನಾಟುವಂತೆ ಬೋಧಿಸಬೇಕು (ಸಾಹಿಜೀ. ೭೮). ೬. ತೋರು ; ಉಂಟಾಗು : ಬೇಟಕ್ಕೆ ತವದ ಕೂಟಂ ಕೂಟಕ್ಕೆ ತನೂಜಜಾತ ತನೂಜಕೆಳು ಮುದ್ದಾಟಂ ಫಲಮದೆ ತಮ್ಮೊಳ್ ನಾಟದು ಗಡ ಪೆಱವು ಪುಷ್ಪಂದಾಗಿಸೊಳೀನೋ (ಚಂದ್ರಪು. ೩-೪೨) ; ಕಿಡಿ ನಾ[ಪಾಠಾಂ. ದಾ]ಟದವು ಕಂಗಳಲಿ ಕಾಲಕರೋಟ ಮೂರ್ಧರನವೊಲು ಮುಳಿದೆದ್ದನಸುರೇಂದ್ರ (ತೊರೆರಾ. ೬-೧೭-೭). ೭. ಒಗ್ಗು ; ಹೊಂದಿಕೆಯಾಗು : ಈ ಔಷಧಿ ಅವರ ಮೈಗೆ ನಾಟುವುದಿಲ್ಲ (ರೂಢಿ). ೮. (ಅಲಂ) ಶಕ್ತವಾಗು ; ಸಮರ್ಥವಾಗು : ಫಣಿಪತಿಗೆ ನಾಲಗೆ ನಾಟದೆಣಿಸಲು ಗಣನೆಯಿಲ್ಲದ ರಾಮಸ್ಸನಿಕವ (ತೊರೆರಾ. ೪-೭-೨೩).

[ ದೇ.೫ ತಮಿ. ಮಲ. ನಾಟ್ಟು ; ತುಳು. ತೆಲು. ನಾಟು ]

**ನಾಂಟುಗೊಳ್** (ಕ್ರಿ). ಬೇರೂರು ; ನಾಟಿಕೊಳ್ಳು ; ನೆಲಸು ; ಸ್ಥಿರವಾಗು : ಸಿರಿ [ಅಸೊಪ್ಪು]ಗೊಂಡುದು ನಯಂ ನೆಲೆಗೊಂಡು ನನ್ನಿ ನಾಂಟುಗೊಂಡುದು (ಶಾಶಿಜ XV, ೨೧೭-೧೪ ; 1205). [ ನಾಂಟು + ಕೊಳ್$_1$ ]

**ನಾಂಟ್ಯ** (ನಾ). ನಾಟ್ಯ ; ನರ್ತನ : ನಂದಿಕೇಶ್ವರ ಭೃಂಗಿ ನಾಂಟ್ಯ ಸವ್ವಲೀಂಗದ ಮುಂದೆ (ಬಸವ. ೫೬೩) ; ಬಂದ ಬಹುರೂಪಿ ನಿಂದ ಕೈಯೊಳು ಸಂದ ಪುರಾತನರು ಕೇಳಿ ಕಂದರ್ಪನ ಕೊಂದು ನಿಂದು ನಾಂಟ್ಯವನಾಡಿ ದಂದಂದಿನ ಬಹುರೂಪನಾಹೋ (ಶಿವನೀ. ೧೭೯-೮೮೩) : ನಾಂಟ್ಯ[ಪಾಠಾಂ. ನಾಟ್ಯ]ವಾಡುವ ಭೃಂಗಿಪನ ಕಂಡು ಪರಶಿವಂ ನಸುನಗುತಿರೆ (ಪ್ರಭುಪು. ೨-೬೯) ; ತಾಂಡವ ನಾಂಟ್ಯ ನೃತ್ಯ ಲಾಸ್ಯ ಗುಂಡಿಲ ಪೆಕ್ಕಣ ಲಚ್ಚಣ ಅಪರಿಪಾತ್ರ ಸುಪಾತ್ರ ಸರ್ವತೋಭದ್ರಯೆಂಬ ದಶಪಾತ್ರಂಗಳ ತೋಱಿ (ಭೈರವು. ೧-೭೦ ವ). [ <ಸಂ. ನಾಟ್ಯ ]

**ನಾಂಡರಸ** 'ನಾಡರಸು' ನೋ.

**ನಾಂಡು** 'ನಾಡು' ನೋ.

**ನಾಂಡೆಱಿಯ** 'ನಾಡೆಱಿಯ' ನೋ.

**ನಾಂತ** (ಗು). ೧. ನಕಾರವು ಕೊನೆಯಲ್ಲಿರುವ: ನಾಂತಾವ್ಯಯಪದಕ್ಕಮನು ಕೃತಿಪದಕಂ (ಶಮದ. ೧೯೩). (ನಾ). ೨. ನಕಾರವು ಕೊನೆಯಲ್ಲಿರುವ ಪದ : ನೆಗಳ್ದಿರ್ದ ರೇಫ ಱಟ ನಾಂತ ಗಾಂತ ಸಾಂತಕೊತ್ವದಿದಿರ ವತ್ವಂ ವತ್ವಂ (ಶಮದ. ೨೫೨). [ ನ + ಅಂತ$_3$ ]

**ನಾಂದ** 'ನಾನ್$_1$' ವರಾ.

**ನಾಂದಿ$_1$** 'ನಾಂದ್ಯ$_1$' ವರಾ.

**ನಾಂದಿ$_2$** (ನಾ). ೧. ವಿವಾಹ ಮೊದಲಾದ ಶುಭಕಾರ್ಯಗಳ ಅಂಗವಾಗಿ ಅವುಗಳ ಪ್ರಾರಂಭದಲ್ಲಿ ಪಿತೃದೇವತೆಗಳ ಪ್ರೀತ್ಯರ್ಥವಾಗಿ ಮಾಡುವ ಒಂದು ಸಾಂಪ್ರದಾಯಿಕ ವಿಧಿ : ನಾಂದಿಗೆ ಕೂಡಿದ ಮಂದಿ ಪ್ರಸ್ತಕ್ಕೆ ಕೂಡೀತೇ ? (ಗಾದೆ) ; ಕಟ್ಟಿದ ಲಗ್ನದಲ್ಲಿ ಧಾರೆಯಾಗಬೇಕು. ನಾಂದಿ, ನವಗ್ರಹ ಎಲ್ಲ ಬೇಗ ಆಗಿಬಿಡಬೇಕು ಗುರುಗಳೇ (ರೂಢಿ). ೨. [ಕಾವ್ಯವಿ] ನಾಟಕ, ಕಾವ್ಯ ಮೊದಲಾದುವುಗಳ ಪ್ರಾರಂಭದಲ್ಲಿ ಬರುವ ಮಂಗಳ ಪದ್ಯ; "ನಾಂದಿ ದೇವತಾಸ್ತೋತ್ರರೂಪವಾಗಿಯೂ ರಾಜನ ಪ್ರಜೆ ಮುಂತಾದವರಿಗೆ ಆಶೀರ್ವಾದರೂಪವಾಗಿಯೂ ಇರತಕ್ಕ ವಚನ" (ಕೈಬಿ. ೨೧೨); P ಕಾವ್ಯಮೀಮಾಂಸೆಯಲ್ಲಿ ಈ ಬಗೆಗೆ ಅನೇಕ ಚರ್ಚೆಗಳು ನಡೆದಿವೆ. ನಾಂದೀಶ್ಲೋಕದ ಕಥಾಂಶ, ಪದನಿಯಮ ಇತ್ಯಾದಿಗಳಲ್ಲಿ ಭಿನ್ನಾಭಿಪ್ರಾಯವುಂಟು. ನಾಂದಿಯಲ್ಲಿ ಆಶೀರ್ವಚನ, ನಮಸ್ಕಾರ ಮತ್ತು ವಸ್ತುನಿರ್ದೇಶವೆಂಬ ಮೂರು ವಿಧಗಳಿವೆ : ನಾಂದಿಯನನಂತರಂ . . . ಬಲ್ಲಾಳದೇವನನ್ವಯಕಥನಂ (ಯಶೋಚ. ೧-೬); ತಾಳಮಾರ್ಗಗಳನ್ನನುಸರಿಸಿ ವಿಧಿಸಲ್ಪಟ್ಟ ನಾಂದಿಯನ್ನು ಕೂಡ ಸಂಸ್ಕೃತ ನಾಟಕಕರ್ತರು ಒಂದು ವೃತ್ತವಾಗಿ ಬದಲಾಯಿಸಿಕೊಂಡರು (ಸಾಹಿಜೀ. ೧೮). ೩. ಸಂತೋಷ; ಆನಂದ; ಸಂತೃಪ್ತಿ. ೪. (ಅಲಂ) (ಶುಭಕಾರ್ಯದ) ಆರಂಭ; ಮೊದಲು; ಪ್ರಾರಂಭ: ವಿಜಯಪ್ರಸ್ಥಾನನಾಂದೀನಿನದಾನಂದಿತ ದಿಕ್ಪಾಲಚಕ್ರನುಂ . . . ಮೇದಿನೀಚಕ್ರನುಂ (ಆದಿಪು. ೧೪-೯೧ ವ) ; ಭರತವಾಕ್ಯಮಿ ಐಹಿಕದ ನಾಟಕಕೆ ತಾನಾದೊಡೆ ಮೃತ್ಯು ತಾಂ ನಾಂದಿಯ್ಯಸಲೆ ವೇಳ್ ಅಲೌಕಿಕಕೆ ? (ಶ್ರೀರಾಮಾ. ೧೧೯-೨೦೬); ಜತೀಂದ್ರನ ಬಲಿದಾನವೇ ಭಾರತದ ಸ್ವಾತಂತ್ರ್ಯಘೋಷಣೆಗೆ ನಾಂದಿಯಾಯಿತು (ಆತ್ಮಾರ್ಪ. ೧೫೦) ; ಅನಾಗರಿಕ ದಾಸ್ಯಪದ್ಧತಿಯ ಅವನತಿಗೆ ಅದು ನಾಂದಿಯಾಗಿತ್ತು (ಪುನರು. ೨೬೨). [ ಸಂ. ನಾಂದೀ ]

**ನಾಂದಿಸು, ನಾದಿಸು$_1$** (ಕ್ರಿ). ನೆನೆಸು ; ಒದ್ದೆಮಾಡು ; ತೋಯಿಸು : ಪ್ರೇಮಪೀಯೂಷದಿಂ ಪಿರಿದುಂ ನಾಂದಿಸುವಂತೆ ಮಾಣ[ದೊಲವಿಂದಾ ದೇವಿ] ಪೊಯ್ದಳ್ ಮಹೀವರಶೋಭಾಂಗದ ಮೇಲೆ ಲೀಲೆಯೊದವಿಂ ಕರ್ಪೂರಪೂರಾಂಬುವಂ (ಕುಸುಮಾ. ೫-೦೪೬). ನಾದಿಸು$_1$ : ಎಲೆ ಮರುಳೆ ನಿನ್ನೊಡಲ ಸೀಳಿಯ ತೀರಕಂತದಲಿ ತಾಯ ತುಱುಬನು ನಾದಿಸುವೆನೆಂದ (ಕುಮಾರರಾ. ೫-೪೪). [ ನಾಂದು$_1$ + –ಇಸು$_3$ ]

**ನಾಂದೀಕರ** (ನಾ). ಮಂಗಳಪದ್ಯಗಳನ್ನು ಹಾಡುವವನು ; ಮಂಗಳ ಪಾಠಕ : "ನಾಂದೀವಾದೀ, ನಾಂದೀಕರಃ – ೨ ಆಶೀರ್ವಾದದಿಂದ ಕೂಡಿದ ದೇವತಾದಿಗಳ ಸ್ತೋತ್ರವನ್ನು ಮಾಡುವ ಪಾಠಕರು" (ಸಿದ್ಧಾಂತ. ೨೮೮).

[ ಸಂ. ]

**ನಾಂದೀದೇವತೆ** (ನಾ). ನಾಂದಿ ಎಂಬ ಶುಭಕಾರ್ಯದ ಪ್ರಾರಂಭದಲ್ಲಿ ಉದ್ದಿಷ್ಟರಾದ ಪಿತೃದೇವತೆಗಳ ವರ್ಗ; P ಪ್ರಪಿತಾಮಹ, ಪಿತಾಮಹ, ಮಾತೃ-ಪ್ರಪಿತಾಮಹ, ಪಿತಾಮಹ, ಪಿತೃ-ಮಾತೃ ಸಪತ್ನೀಕರಾದ ಮಾತಾಮಹವರ್ಗ–ಇವರೆಲ್ಲ ಈ ವರ್ಗಕ್ಕೆ ಸೇರುತ್ತಾರೆ : ನಾಂದೀದೇವತೆಗಳು ಮೊದಲು ತೃಪ್ತರಾದರೆ ಮುಂದಿನ ಕರ್ಮಕ್ಕೆ ಮಾರ್ಗವಾಗುತ್ತದೆ (ರೂಢಿ). [ ಸಂ. ನಾಂದೀದೇವತಾ ]

**ನಾಂದೀಪದ** (ನಾ). ಮಂಗಳಗೀತ; ಗ್ರಂಥಾರಂಭದಲ್ಲಿ ಬರುವ ಮಂಗಳ : ರಸಮುಂ ಭಾವಮನರ್ಥಮುಂ ರಚನೆಯುಂ ಕಾವ್ಯಜ್ಞರಾರಯ್ದು ಭಾವಿಸಿ ನಾಂದೀಪದ ನಾಯಕಾಭ್ಯುದಯಪರ್ಯಂತಂಬರಂ ಕೂಡೆ ಶೋಧಿಸಿ ನೋಟ್ಟೀ ರಘುವಂಶರಾಮಕೃತಿಯೊಳ್ ಪತ್ತೆಂಟು ಪದ್ಯಂಗಳಂ (ಶಂರಾಮಾ. ೧-೩೬); ನಾಂದೀಪದವ ಪಾಡಿದನು ನಂಬಿ ಶಂಭುವಿನಿದಿರೊಳು (ಸಾಂಡವ. ೫-೨೬). [ಸಂ.]

**ನಾಂದೀಪದ್ಯ** (ನಾ). = ನಾಂದೀಪದ : ನಾಟಕದ ಪ್ರಾರಂಭದಲ್ಲಿ ನಾಂದೀ ಪದ್ಯವನ್ನು ಹಾಡಿದರು (ರೂಢಿ). [ಸಂ.]

**ನಾಂದೀಮುಖ** (ನಾ). ೧. ವಿವಾಹವೇ ಮೊದಲಾದ ಶುಭಕಾರ್ಯಕ್ಕೆ ಮೊದಲು ಮಾಡುವ ನಾಂದೀಕರ್ಮದಲ್ಲಿ ಆವಾಹಿಸಲ್ಪಡುವ ಪಿತೃಗಳ ವರ್ಗ; ನಾಂದೀಶ್ರಾದ್ಧದಲ್ಲಿ ಉದ್ದಿಷ್ಟರಾದ ಪಿತೃಗಳು. ೨. = ನಾಂದೀಶ್ರಾದ್ಧ : ನಾಂದೀಮುಖಮಂ ನಿರ್ವರ್ತಿಸಿ ಶುಭಲಕ್ಷಣಲಕ್ಷಿತನುಂ ಸನ್ನಾಹಕರ್ಮನಿರ್ಮಿತನುಂ . . . ಭದ್ರಮನನುಮಪ್ಪ ವಿಜಯಗಜಮುಮಂ . . . ಅರ್ಚಿಸಿ (ಪಂಪಭಾ. ೧೦-೪೬ ವ) ಆಕೆಗೀ ಜನಕಥಾನಾಂದೀಮುಖಂ ಮುಖ್ಯಮಂಗಳಮರ್ಹತ್ಸ್ತುತಿ ಮಂಗಳಂ . . . ಧರ್ಮಂ ಮಹಾಮಂಗಳಂ (ಅರ್ಧನೇ. ೧-೨೧); ಗೋವಿಂದ ನಾಂದೀಮುಖವನು ವಿರಚಿಸಿ ವಿಪ್ರರಿಂದ ತನುಜೆಯ ಶೃಂಗರಿಸುವುದೆಂದು ಕೆಳದಿ ಜನಕೆ ಪೇಳಲು (ಜೀವಸಾಂ. ೧೭-೩೧). [ಸಂ.]

**ನಾಂದೀವಾದಿ** (ನಾ). = ನಾಂದೀಕರ : "ನಾಂದೀವಾದೀ, ನಾಂದೀಕರಃ – ೨ ಆಶೀರ್ವಾದದಿಂದ ಕೂಡಿದ ದೇವತಾದಿಗಳ ಸ್ತೋತ್ರವನ್ನು ಮಾಡುವ ಪಾಠಕರು" (ಸಿದ್ಧಾಂತಿ. ೨೮೮). [ಸಂ. ನಾಂದೀವಾದಿನ್]

**ನಾಂದೀವಿಧಿ** (ನಾ). ೧. = ನಾಂದಿ₂. ೨. [ಕಾವ್ಯವಿಮಾ] ಅಭಿನಯಕ್ಕೆ ಪೂರ್ವಭಾವಿಯಾಗಿ ಮಾಡುವ ಮಂಗಳಾಚರಣೆಗೆ ಸಂಬಂಧಪಟ್ಟ ಕಾರ್ಯಕಲಾಪ : ಶುದ್ಧಚಿತ್ರಮೆಂಬ ಪೂರ್ವರಂಗಪ್ರಸಂಗದೊಳ್ ಜರ್ಜರ ಪೂಜಾಮಂಗಳ ಪದೋಚ್ಚಾರಣಪುಷ್ಪಾಂಜಲಿ ವಿಕ್ಷೇಪಣಾದಿ ನಾಂದೀವಿಧಿಯಂ ನಿರ್ವರ್ತಿಸಿ (ಆದಿಪು. ೭-೧೧೪ ವ). [ಸಂ.]

**ನಾಂದೀಶ್ರಾದ್ಧ** (ನಾ). ಮಂಗಳಕಾರ್ಯಗಳಿಗೆ ಪೂರ್ವಭಾವಿಯಾಗಿ ನೆರವೇರಿಸುವ ಪಿತೃಕ್ರಿಯೆ : ಆಮೇಲೆ ನಾಂದೀಶ್ರಾದ್ಧವನ್ನು ಮಾಡಿ ಯಾವತ್ತು ಜಾತಕರ್ಮವಿಧಿಯನ್ನು ಮುಗಿಸಿದರು (ತುಳಸೀ. ೫೬). [ಸಂ.]

**ನಾಂದೀಸ್ಥಾಪನೆ** (ನಾ). ನಾಂದೀಕರ್ಮದಲ್ಲಿ ಮಾಡುವ ಪಿತೃದೇವತೆಗಳ ಆವಾಹನೆ : ಮುಂಜಿವಿಯ ನಾಂದೀಸ್ಥಾಪನೆಯ ಕಾಲಕ್ಕೆ ಟಳಕರಿಂದ ಮಾರುವ್ವದ ನಾಲ್ಕು ಪತ್ರಗಳು ಬಂದು ಸೇರಿದವು (ಸ್ವತ್ಸಾಚ. ೨೨೫).
[ಸಂ. ನಾಂದೀಸ್ಥಾಪನಾ]

**ನಾಂದು**₁, **ನಾದು**₂ (ಕ್ರಿ). ನಾಂದಿ₁ (ಭೂತಸ್ಥ). ೧. ಒದ್ದೆಮಾಡು; ತೋಯಿಸು; ನೆನೆಸು : ಅತಿವಿಶದವಿಶಾಲೋರುಕ್ಷತದಿಂದೊಱದನಿತು ಜಡೆಯುಮಂ ನಾಂದಿ ಮನಕ್ಷತದೊಡನೆಟ್ಟಿಱಸಿದುದು . . . ಗಂಧಂ (ಪಂಪಭಾ. ೧-೧೦೫); ಪೊರೆದ ಪುಡಿಯನೊಡನೊಡನೆ ಬೆಮರ ಬಿಂದುಗಳ್ ನಾಂದೆ(ವರ್ಧಪು.೯-೬೦ ವ); ವಹ್ನಿಸಖ ನಾನಂಬೊಂದಹಂಕಾರಮಂ ತಳೆದಾ ಮಾರುತನಂ ಕರಂ ಪಿಡಿದು ತನ್ನೈಕಿಲ್ಗಳಿಂ ನಾಂದಿ ಸಂಚಳನಂ ಮಾಡಿ ತದಾಪ್ರನುರ್ಮ ಮುಱದೇಂ ಪರ್ಬಿತ್ತೊ ಹೈಮಾಗಮಂ (ಕಾಜಶೀ. ೯-೭). ೨. ಒದ್ದೆಯಾಗಂ; ತೋಯಂ; ನೆನೆ : ಬಿಸಿಲಿಂ ಕಂದದ ಬೆಂಕಿಯಿಂ ಸುಡದ ನೀರಿಂ ನಾಂದದುಗ್ರಾಸಿ ಭೇದಿಸಲುಂ ಬಾರದ ಚಿನ್ಮಯಂ (ರಕ್ಷಾಶ. ೮). ೩. ಕರಗು; ದ್ರವರೂಪ ತಾಳು; ನೀರಾಗು: "ನಾಂದು–ದ್ರವೀಕರಣೇ" (ಶಮಧಾ); ನಿತ್ಯಬಿಂದುಗಳ್–ನಾಂದು. ಕಡುಂಬು (ಶಮದ. ೩೬ ಪ್ರಯೋ). ೪. (ಅಲಂ) ಆರ್ದ್ರಗೊಳಿಸು; ಮೃದುಗೊಳಿಸು : ಅರಸನ ಕಣ್ಣುಗಳಿಂದ ಚಿಮ್ಮಿದ ಅಶ್ರುಗಳು ವೀರಣ್ಣನ ಎದೆಯನ್ನು ನಾಂದಿದುವು (ಹಾಹುತ್. ೧೦೦). **ನಾದು**₂: ೧. ಇನನಂದನನು . . . ಸರಳಮಂಚವ ಹೊದ್ದಿ ಭೀಷ್ಮನ ಚರಣಕಮಲವ ಹಿಡಿದು ನೊಸಲಿನೊಳೊರಸಿಕೊಂಡನು ನಾದಿದನು ಕಂಬನಿಯೊಳಂಘ್ರಿಗಳ (ಕುಮಾರವ್ಯಾ. ೧-೨೧); ಕಡಲಿಡುವ ನಯನಾಮೃತಾನಂದಾಶ್ರುಪೂರದಲಿ ಅಡಿಗಳನು ನಾದಿದನು (ನಿಭಾಗ. ೭-೧೫-೬); ರುಧಿರದಿಂ ನಾದಿದಂ ಧರೆಯನುಸಿಗರ್ಾಳಿಯಿಂದಂ ವಾಜಿಲೂದಿದಂ ರಣದೊಳ್ಪಿಣದ ರಾಶಿ ಮಾಡಿದಂ ಪರಬಲದೊಳಾ ಭೀಮನು (ಜೈಮಿಭಾ ೭-೪೭). ೫. ತೊಡೆ; ಪೂಸು; ಬಳಿ; ಲೇಪಿಸು : ಚಂದನಸೌರಭ ದೇಹಿಯ ಪದನಾರವಿಂದಕೆ ಪನ್ನೀರ ನಾದಿ (ಮೋಹತ. ೯-೩೦).
[< ನಾನ್₁]

**ನಾಂದು**₂ 'ನಾನ್₁' ಪರಾ.

**ನಾಂದೂರ್** (ನಾ). ಒಂದು ಊರಿನ ಹೆಸರು : ಖಣ್ಡಸ್ಫುಟಿತ ನವಕರ್ಮ್ಮ ದೇವಾರ್ಚ್ಚನಾಸತ್ರ ವೃತ್ತಿಗೆ ಸೀರೆನಾಡ ನಾನ್ದೂರನಿತ್ತಂ (ಎಕ. XII, ಶಿರಾ. ೩೮-೩೦ ; 878). [? + ಊರ್]

**ನಾಂಬ**₁ (ನಾ). ಆಲಸ್ಯಸ್ವಭಾವದವನು; ಸೋಮಾರಿ; ಅಲಸ : "ಸೋಂಬನೆಂದುಂ ನಾಂಬನೆಂದುಂ ಅಲಸಂಗೆಕಾಱಂ" (ಕಕಸಾ. ೧೮-೩೬೦); "ನಾಂಬಂ ಸೋಂಬನುಮೆನಲ್ಕುಮಲಸಂಗಾಱಂ" (ಕವಿಕಂ. ೦೩೫); "ನಾಂಬನೆನೆ ಮೃಗಳ್ಳ" (ಕಕರ. ೫೩); ಕೆಲಸಮನೇನುಮನೊಡರಿಸದಲಸತೆಯಂ ಬಯಸಿ ಬಾಟ್ವ ನಾಂಬರ್ . . . ವಿಗರ್ಹಣಮನಾಲಿಪರ್ ಪ್ರಿಯಸಖರಿಂ (ನೀತಿಮಂ. II, ೩೨೭). [ನಾಂಬು + – ಅ₂]

**ನಾಂಬ**₂ 'ನಾನ್₁' ಪರಾ.

**ನಾಂಬು** (ಕ್ರಿ). ಸೋಮಾರಿಯಾಗು; ಜಡನಾಗು; ಅಲಸನಾಗು : "ನಾಂಬು– ಆಲಸ್ಯೇ" (ಶಮಧಾ); ಇರುಳ್ ಕ್ರಿಯಾಮುಮದರ ಮೊದಲಂ ಕಳೆ ಯೋಗದೊಳ್ ಮತ್ತಂ ಮಯ್ದುಣುವಾರಲ್ಕೆ ಮಲಂಗಾದೊಡೆ ನಾಂಬದಿರ್ (ಶಾನಂದ. ೧೪-೩೨); "ನಿದ್ರಿಸು" (ಶಾನಂದ. ಕೋಶ).; ಕುಡು ನೀಂ ನಾಂಬದೆ ಹೇ ವಿಧಾತ್ರ (ಸಂಕಪ. ೦೭-೯).
[ದೇ.೫ ತಮಿ. ನಾಮ್ಪು = ತಳ್ಳಿಗಾಗು]

**ನಾಕ** (ನಾ). ೧. ದೇವತೆಗಳು ವಾಸಿಸುವ ಲೋಕ; ಸ್ವರ್ಗ; ೨ ಪುಣ್ಯವಂತರು ಸತ್ತ ವೇಲೆ ಪಡೆಯಂವರೆಂದು ನಂಬಲಾದ ಊರ್ಧ್ವಲೋಕ : "ನಾಕಂ ತ್ರಿವಿಷ್ಟಪಂ ದಿವಮೆಂದಿಂತಿದು ತಾನಮತ್ರ್ತ್ಯಭವನಂ" (ವಸ್ತುಕೋ. ೬-೩೦); ನಾಕದಿನಿಳಿತಂದುದೊ ಫಣಿಲೋಕದಿನೊಗೆತಂದುದೊ ವಸುಂಧರೆಗಾಗೀ ಲೋಕ ಬಣ್ಣಿಸೆ ತಾರಕ ಶ್ರೀಕಣ್ಣ × × × ಮನ್ ಎಸೆವಿನಂ ಮಾಡಿಸಿದಂ (ಎಕ. VIII, ಸೊರಬ. ೨೮೬-೪೬ ; 1168); ನಾಕಮಂ ನಗುವ ನಗರಂಗಳಪ್ಪೋಜೆಯಿಂ ಎಮೆಯಿಕ್ಕಲಿಂಬಿಲ್ಲದಿರ್ಪ ಶಿವಭವನದಿಂ (ಶಿಕುಕ. ದೇ. ೨-೪); ಯಶೋಧರಂ ಸುಖದಿಂದಿರ್ಪ ನಾಕದೊಳೆಂದೂರ್ಧ್ವಪರ್ (ಯಶೋಚ. ೩-೫೨); ತಂದೆಯೆಂದುದೆ ವೇದಸಮ್ಮತವೆಂದು ರಣದಲಿ ಕಾದಿ ಮಡಿದನು ಇಂದ್ರಜಿತು ನಾಕವನು ಹೊಕ್ಕನು ಸಕಲದಳ ಸಹಿತ (ಕೌಶಿರಾ. ೩೬ ಸೂಚನೆ); ಕಮಲದಂದದಿ ಶ್ರೀನಿಳಯ ನಾಕದವೊಲು ಸುಮನಸ ಮಾಲಾಭರಿತ ಕುಮುದವ ತಳೆದುದು ನಿರುತಿಯ ದೆಸೆಯೊಲು (ಜೀವಂಸಾಂ. ೯-೮೧); ನಾಕ ನರಕಂಗಳಂ ಏಕವೆನಿಪುವು ನಿನಗೆ (ಮಂಕುಳ. ೩೧೦); ಲೋಕ ಹಾಳಾದರೆ ನಾಕ ಹಾಳಾದೀತೆ? (ಗಾದೆ). ೨. ಬಾನು; ಆಕಾಶ. ೩. ಭೂಮಿ : "ನಭದಲ್ಲಿ ಅನಿಮಿಷಾಲಯದಲ್ಲಿ ಧರೆಯಲ್ಲಿ ನಾಕಮೆಂದೆನಿಸುವುದು" (ಮಂಗರಾ.೦೩೯-೭). ೪. ವಾಯುಮಂಡಲ; ವಾತಾವರಣ: (ಈ). ೫. [ಛಂದ] ಮೂರಂ ಲಘುಗಳಿಂದ ಕೂಡಿರುವ ಒಂದು ಅಕ್ಷರ ಗಣ; ನಗಣ (U U U): ಮೂಱು ಲಘುವಿಂ ನಾಕಂ (ಛಂದೋಂಬು. ೧-೩೮).
[ಸಂ.]

**ನಾಕಚಾಪು** 'ನ್ಯಾಪ್‌ಚಾಕ್' ನೋ.

**ನಾಕಚಿಕುರ** (ನಾ). ಆಕಾಶವೇ ತಲೆಗೂದಲಾಗಿರುವವನು ; ವ್ಯೋಮಕೇಶ ; ಶಿವ : ಶ್ರೀಗುರು ಶಂಕರ ಶುಭಕರ ನಾಗಾಲಂಕಾರ ನಾಕಚಿಕುರ ಮಹೇಶಂ . . . ಇರ್ಕೆಮ್ಮ ಚಿತ್ತನಾಕದೊಳನಿಶಂ (ಹಮ್ಮೀರ. ೪-೧). [ ನಾಕ + ಚಿಕುರ ]

**ನಾಕಚ್ಯುತ** (ನಾ). ಸ್ವರ್ಗಲೋಕದಿಂದ ಹೊರಕ್ಕೆ ಬಂದವನು ; ಸ್ವರ್ಗಲೋಕದ ವಾಸ ಮುಗಿದ ಮೇಲೆ ಭೂಮಿಯಲ್ಲಿ ಹುಟ್ಟಿದವನು : ನಾಕಚ್ಯುತಂ ಶ್ರೀಕಂಠನಾಗಿ ತದಚ್ಯುತೇಂದ್ರದರ್ಶನಜನಿತಜಾತಿಸ್ಮರಂ (ಶಂಕಾವತಾ. ೧೦-೧೧೬ ವ). [ ನಾಕ + ಚ್ಯುತ ]

**ನಾಕಜ** (ನಾ). ಸ್ವರ್ಗಲೋಕದಲ್ಲಿ ಹುಟ್ಟಿದವನು ; ದೇವತೆ : ಸುಂದರದ ಮನದ ನಾಕಜಸಂದೋಹದ ಬಗೆಯನಪಹರುಂ ಕಳೆಯಲ್ (ಶಾಂತಿಪು. ೧೦-೭೩) ; ನಾಕಜರ್ ಜನಿರ್ಕೆಲಂ ಬಿಡಿದದೇಂ ನಡೆಗೊಂಡರೊ ಮೇಘಮಾರ್ಗದೊಳ್ (ಜಗವಿ. ೧-೯೦). [ ಸಂ. ]

**ನಾಕಜನಾಥ** (ನಾ). ದೇವತೆಗಳ ಒಡೆಯ ; ಇಂದ್ರ : ಸ್ಫಟಿಕಕಳಶಮಂ ತೀವಿ ದಿವ್ಯಾಂಬುವಿಂ ನಾಕಜನಾಥಂ ವಜ್ರನಕ್ಕೆತ್ತಿದ ಕೆಚಿದ ಸುಧಾಸೂತಿ ಕಣ್ಗೆಡ್ಡ ಮಾದಂ (ಆದಿಪು. ೧೨-೮). [ ನಾಕಜ + ನಾಥ ]

**ನಾಕಜಮಂತ್ರಿ** (ನಾ). ದೇವತೆಗಳ ಮಂತ್ರಿ ; ಬೃಹಸ್ಪತಿ ; ಗುರು : ನಾಕಜಮಂತ್ರಿ ಪ್ರಾಟೋದಯಂ ನೆಗಟ್ವಿನಂ ತನ್ನುಚ್ಚದೊಳ್ ಪುಟ್ಟದಳ್ (ಅಜಿಪು. ೧೨-೩೨). [ ನಾಕಜ + ಮಂತ್ರಿ ]

**ನಾಕಜಾಪಗೆ** (ನಾ). ದೇವಲೋಕದಲ್ಲಿ ಹುಟ್ಟಿದ ನದಿ ; ಗಂಗಾನದಿ : ಹಿಮವತ್ಕುಕ್ಕಿಲದಿಂ ನಾಕಜಾಪಗೆಯಂ ತಾಪಿನಮಾಳ್ಗಂ (ಅಭ್ಯಂಚು. ೮-೧). [ ಸಂ. ನಾಕಜಾಪಗಾ ]

**ನಾಕಡಿ** 'ನಾಲ್ಕಡಿ' ನೋ.

**ನಾಕತರಂಗಿಣಿ** (ನಾ). = ನಾಕಜಾಪಗೆ : ನಾಕತರಂಗಿಣೀಪ್ರವಾಹದೊಳ್ . . . ಪೊಳೆಯುತಿರ್ಪುದು ಚಂಡಮರೀಚಿಮಂಡಲಂ (ಜಗವಿ. ೪-೭೦). [ ನಾಕ + ತರಂಗಿಣಿ ]

**ನಾಕನಾಯಕ** (ನಾ). ಸ್ವರ್ಗಲೋಕದ ಅಧಿಪತಿ ; ಇಂದ್ರ : ಆ ಜಂಬೂದ್ವೀಪದ ನಟ್ಟನಡುವೆ . . . ಅನೇಕ ನಾಕನಾಯಕಲೋಕಪಾಲಲೀಲಾ ಭವನಾಧ್ಯಾಸಿತಮುಂ (ಆದಿಪು. ೧-೯೪ ವ) ; ನಾಕನಾಯಕಂ ತ್ರಿಲೋಕಗುರು ಸವಿತ್ರಿಗೆ ಸೀಯನಪ್ಪ ಗೇಯದಿಂ ಪೊಟ್ಟುಗಳೆಯರ್ ನಿಯಮಿಸಿದಂ (ಶಾಂತಿಪು. ೯-೦೭೮ ವ). [ ನಾಕ + ನಾಯಕ ]

**ನಾಕನಾರಿ** (ನಾ). ಒಂದು ಬಗೆಯ ಗಿಡ ; ಸಹದೇವಿ : "ನಾಕನಾರಿ [ಪಾಠಾಂ. ನಾಕರಿ]ಯೆನೆ ಸಹದೇವಿಯಕ್ಕು" (ಮಂಗರಾ. ೩೯-೨೩). [ ? ]

**ನಾಕನಿತಂಬಿನಿ** (ನಾ). ಸ್ವರ್ಗಲೋಕದ ಮಹಿಳೆ; ದೇವತಾಸ್ತ್ರೀ; ಅಮರಿ: ಝೊಂಬಿಸಲಿ ಕೌರವರು ನಾಕನಿತಂಬಿನಿಯರಳಕವನು (ಕುಮಾ.ಗ. ೧೦-೩೦). [ ನಾಕ + ನಿತಂಬಿನಿ ]

**ನಾಕನಿವಾಸಿ** (ಗು). ಸ್ವರ್ಗಲೋಕದಲ್ಲಿ ವಾಸಿಸುವ : ಆ ಸುರಾರಿಪ್ರಮುಖ ರಕ್ಷರಿಗಾಸೆ ಕರ್ಣನ ಮೇಲೆ ನಾಕನಿವಾಸಿನಿರ್ಜರನಿಕರವಾದುದು ನರನ ಕೈವಾರ (ಕುಮಾ.ಭಾ. ೨೨-೪). [ ಸಂ. ನಾಕನಿವಾಸಿನ್ ]

**ನಾಕನಿಳಯ** (ನಾ). ಸ್ವರ್ಗವೇ ಮನೆಯಾಗಿರುವವನು ; ಸ್ವರ್ಗಲೋಕದಲ್ಲಿ ವಾಸಿಸುವವನು ; ದೇವತೆ : ನಾಕನಿಳಯರಿಗರಿದು ನಿನಗೆ ವಿವೇಕವೆಳ್ಳನಿತಿಲ್ಲ ತೆಗೆತಗೆ ಸಾಕು ವಾಘೆಯ ಮರಳಿ ಹಿಡಿ ತೇಜಗಳ ತಿರುಹೆಂದ (ಕುಮಾ.ವಿ. ೬-೧೧) : ಏಕೆ ಸಹಜವ ಬಿಸುಟು ತಾಳಿದೆ ಸೂತರಾಕಾರವನು ಕೊಲ್ಲೆನು ನಾಕನಿಳಯರ ಪಕ್ಷಪಾತವನುಳಿದು ಮಚಿಯೊಗಲು (ನಿಘಾಗ. ೩-೮-೯೧). [ ನಾಕ + ನಿಳಯ (= ನಿಲಯ) ]

**ನಾಕಪತಿ** (ನಾ). ಸ್ವರ್ಗಲೋಕದ ಒಡೆಯ ; ಸ್ವರ್ಗದ ಅಧಿಪತಿ ; ಇಂದ್ರ: ಅಪರಾಜಿತ . . . ವೈಜಯಂತೆಯೆಂಬಿವರಂ ನಾಕಪತಿ ನಿಯೋಜಿಸಿದಂ ವಿಷ್ಣುಪತ್ರಯಾಧೀಶಜನನಿಗಿಸುವೆಸಗೆಯ್ಕಲ್ (ಶಾಂತಿಪು. ೯-೧೭೩) ; ಎಂತು ನಾಕಪತಿಗಂ ಪೌಲೋಮಿಗಂ ಪುಟ್ಟಿದೊಂ ವರಸೌಂದರ್ಯ್ಯಜಯಂತನಂತೆ . . . ಪುಟ್ಟಿದೊಂ ಸ್ಥಿರವೀ ಪಟ್ಟಣಸಾಮಿ ವಿಶ್ವವಿನುತಂ ಶ್ರೀಮಲ್ಲಿದೇವಾಹ್ವಂ (ಎಕ. II(R). ೪೩೭-೪೦ ; 1195) ; ಲೋಕಹಿತಮಪ್ಪ ಕಥೆಯನುತ ನಂದೀಶ್ವರ ಏಕಪಾದದ ಮೂರ್ತಿಯಾದ ಶಿವನಂದವಂ ನಾಕನಿಳಯರ್ ಮೆಚ್ಚೆ ವೇಳಿದಂ ಬ್ರಹ್ಮಜಗೆ ಹರನ ಕಥನಾಮೃತವನು (ಅಶಿಚಂ. ೨೫-೯). [ ನಾಕ + ಪತಿ₂ ]

**ನಾಕಪ್ರಭವ** (ಗು). ೧. ಸ್ವರ್ಗಲೋಕದಲ್ಲಿ ಹುಟ್ಟಿದ,-ಉತ್ಪನ್ನವಾದ : ನಾಕಪ್ರಭವೋದ್ಯನ್ಮಾಲೆಯಂ ಭೂಪತಿಯನೊಸೆದೊಡಬಿಲ್ದರ್ಚಿಸಿರ್ದಂ ಸುರೇಂದ್ರಂ (ಶಾಂತಿಪು. ೯-೯೩). (ನಾ). ೨. ಸ್ವರ್ಗಲೋಕದಲ್ಲಿ ಹುಟ್ಟಿದವನಂ. [ ನಾಕ + ಪ್ರಭವ ]

**ನಾಕಬಲಿ** (ನಾ). ವಿವಾಹದ ಅಂಗವಾಗಿ ಮಾಡುವ ಒಂದು ವಿಧಿ; ನಾಗೋಲಿ. [ ನಾಕ + ಬಲಿ₂ ]

**ನಾಕಬೋವ** (ನಾ). ಒಬ್ಬಾತನ ಹೆಸರು : ಕಂಚಗೌಡ ನಾಕಬೋವಂಗೆ ಕೊಟ್ಟ ಉಂಬಳಿ ಕಂಬ ೪೦ ಕೆಯಿ (ಕಅ. IV, ೧೬-೧ ; ?). [ ? ]

**ನಾಕಭೂರುಹ** (ನಾ). ೧. ಸ್ವರ್ಗದಲ್ಲಿರುವ ಮರ; ಕಲ್ಪವೃಕ್ಷ. ೨. (ಅಲಂ) ಉದಾರಿ ; ದಾನಿ : ಅಂಬುಜಪ್ರಿಯಕುಲಲಲಾಮನು ನಂಬಿದವರಿಗೆ ನಾಕಭೂರುಹ (ಕಾಶಿರಾ. ೨೫ ಸೂಚನೆ). [ ನಾಕ + ಭೂರುಹ ]

**ನಾಕಯ್ಯ** (ನಾ). ಒಬ್ಬಾತನ ಹೆಸರು : ಸೇನಬೋವ ನಾಕಯ್ಯಂ ಬರೆದೊಂ (ಎಕ. VIII, ಸೊರಬ. ೪೭೪-೨೭ ; 954) ; ಪಡುವ ಬಸದಿಯ ಕೆಯ್ಯ[ಿ] ನಾಕಯ್ಯನ ಕೆಯಿ (ಇಅ. XXVIII, ೩೯-೨೯ ; 1077). [ <ನಾಕ + ಅಯ್ಯ₁ ]

**ನಾಕರ** 'ನಾಂಗರು' ನೋ.

**ನಾಕರಕುಂಟೆ** (ನಾ). (ಉಕ) ಒಂದು ಬಗೆಯ ವ್ಯವಸಾಯದ ಉಪಕರಣ : (ಈ). [ ನಾಕರ (<ನಾಂಗರು) + ಕುಂಟೆ₁./ಮರಾ.ನಾಂಗರಖುಂಟಾ ]

**ನಾಕರಿಪು** (ನಾ). ದೈತ್ಯ ; ರಾಕ್ಷಸ : ಭೀಕರಾಂಗವನಾಂತು ನಭದಲಿ ನಾಕರಿಪು ಕೊಂಡೊಯ್ಯುತಿರೆ . . . ಕೃಪಾಕರನು ದೈತ್ಯಾಪಹರಣಕೆ ಮಾಡಿದನು ಮನವ (ನಿಘಾಗ. ೧೧-೭-೧೧). [ ನಾಕ + ರಿಪು ]

**ನಾಕಲೋಕ** (ನಾ). ಸ್ವರ್ಗಲೋಕ : ತನಗೆ ತಾನೆ ಪೊಣ್ಮುವ ಭಯಮುಮಂ ಭೋಂಕೆನೆ ಕಂಡು ನಾಕಲೋಕಚ್ಯುತಿಯನಾಗಳರಿದು ಮನದೊಳಕ್ಕೆ (ಆದಿಪು. ೩-೩ ವ) ; ದಿಗಂತಪರ್ಯಂತಮಾ ನಾಕಲೋಕಮೆಲ್ಲಂ ಕಿಟ್ಕಿಟ್ಟು ಬರೆ (ಶಾಂತಿಪು. ೧೦-೨೧ ವ) ; ನಾಕಲೋಕಸುಖಮಂ ಕೈಕೊಂಡಳೊ . . . ಎನುತ್ತೆ ಪದಪಿಂದಾನಾಕೆಯಂ ನೋಡಿದಂ (ಕಾದಂಪೂ. ೮೦೪) ; ಆ ಮಹಾರ್ಣವಂ . . . ನಾಕಲೋಕದಂತೆ ಅನಿಮಿಷಪ್ರಕೀರ್ಣಕಮುಂ (ಜಗವಿ. ೦-೪೪ ವ). [ ನಾಕ + ಲೋಕ ]

**ನಾಕಲೋಕೇಶ** (ನಾ). ಸ್ವರ್ಗಲೋಕದ ದೊರೆ,-ರಾಜ ; ಇಂದ್ರ : ನಾಕಲೋಕೇಶನೆನಿಸಿದ ಗಂಡು ಮನೋಭವನೆನಿಸಿದ ಸೊಬಗು ರೇಚ ಭೂಪಾಲಕನ (ಮುದತಿ. ೦-೨೯). [ ನಾಕಲೋಕ + ಈಶ ]

**ನಾಕವಿಭವ** (ನಾ). ಸ್ವರ್ಗಲೋಕದ ಸಂಪತ್ತು : ದೇವರ್ ಪೊಯ್ಕ ದೋರಂತೆ ಪೊಣ್ಮುವ ಭೇರೀನಿನಾದಕ್ಕೆ ನಾಕವಿಭವಶ್ರೀ ವಿಸ್ಮಯಂಬಟ್ಟು (ಮಲ್ಲಿಪು. ೦೨-೦೪). [ ನಾಕ + ವಿಭವ ]

**ನಾಕಸದನ** (ನಾ). ಸ್ವರ್ಗವಾಸಿ ; ದೇವತೆ : "ಸುಪರ್ವ ನಾಕಸದನರ್ ನಿಳಿಂಪ ವಿಬುಧರು ಸುಮನಸರು ಲೇಖರೆನಲು ವಿಬುಧರ್ಗೆ ನಾಮಂ" (ಮಂಗರಾ. ೩-೮). [ ನಾಕ + ಸದನ ]

**ನಾಕಸದ್ಮ** (ನಾ). = ನಾಕಸದನ : ತರಳಲುದ್ಮುಕ್ತರಾದರ್ ಸಭೂಭಾರ ವಿಷಾದರ್ ದೈತ್ಯಪೀಡಾಕುಪಿತನಿಜವಮನಃಪದ್ಮರಾ ನಾಕಸದ್ಮರ್ (ಜಗವಿ ೧-೩೫). [ ನಾಕ + ಸದ್ಮ ]

**ನಾಕಸುಖ** (ನಾ). ಸ್ವರ್ಗಲೋಕದ ಸುಖ ; ಸ್ವರ್ಗಸೌಖ್ಯ : ನಾಕಸುಖ ಶೇಷಮಂ ನಾ ಕೌ ಕ ರ್ ಬಂದದಱಿೞಳನುಭವಿಪ್ಪುದಱಿಂದೇಕಾಕೃತಿ ಕುರುಜಾಂಗಲಮಂ ನಾಕಮುಮದು ಕಿಱುಕುಳಂಗೆ ಬಣ್ಣಿಸಲರಿದೇ (ಶಾಂತಿಪು. ೯-೧೩೭). [ ನಾಕ + ಸುಖ ]

**ನಾಕಸ್ತ್ರೀ** (ನಾ). ಸ್ವರ್ಗಲೋಕದ ಮಹಿಳೆ ; ಅಪ್ಸರೆ ; ರಂಭೆ, ಊರ್ವಶಿ ಮೊದಲಾದವರು : ನುಡಿಯಿಸಿದತ್ತಾ ನಾಕಸ್ತ್ರೀಯು ಗೇಯಮಸ್ತಾಯಿಕೆ ಯೊಳ್ (ಆದಿಪು. ೭-೧೭). [ ನಾಕ + ಸ್ತ್ರೀ ]

**ನಾಕಾಘದೂರ** (ನಾ). ಭೂಲೋಕದ ಪಾಪವನ್ನು ನಾಶಮಾಡುವವನು ; ಲೋಕಪಾಪನಾಶಕ : ನಾಕಾಘದೂರ ಷಡ್ಲಿಂಗಾವರಣ ಸಚ್ಚಿದಾಕಾರ ವೇದಾಗಮಾದಿಬಹುಶಾಸ್ತ್ರಜ್ಞ (ಏಕೋಪು. ೧-೧).

[ ನಾಕ + ಅಘ + ದೂರ ]

**ನಾಕಾಣೆ** 'ನಾಲ್ಕಾಣೆ' ನೋ.

**ನಾಕಾಧಿನಾಥ** (ನಾ). = ನಾಕಲೋಕೇಶ : ಶ್ರೀಮನ್ನಾಕಾಧಿನಾಥಾನತ ಮಕುಟವಣಿದ್ಯೋತಿತಾಂಘ್ರಿದ್ವಯಂ ... ಕುಡುಗೆಮಗವ್ಯುತಾವಾಸಮಂ ವೀರನಾಥಂ (ಸುಕುಮಾ. ೧-೧). [ ನಾಕ + ಅಧಿನಾಥ ]

**ನಾಕಾಧಿಪ** (ನಾ). = ನಾಕಲೋಕೇಶ : ಆ ನಾಕಾಧಿಪನ ಸಿರಿಯ ಜಱಿದು ದಂದವರ ವಾಹಿನಿ ಸಕಲಜನಮೋಹಿನಿ (ಭಾವಚಿಂ. ೮-೦೫). [ನಾಕ+ಅಧಿಪ]

**ನಾಕಾನೀಕ** (ನಾ). ದೇವತೆಗಳ ಸೈನ್ಯ ; ಅಮರರ ಸೇನೆ : ನಿಜವಾಹನವಿಹೀನ ವಿಸ್ಮಯಸ್ಮೇರವದನಸರಸಿರುಹದ್ವಾತ್ರಿಂಶನ್ನಾಕಾನೀಕಮುಂ ಕರಮೊಪ್ಪೆ ... ಜಿನಚಂದ್ರನಘೌಘಶೇಷದೈನ್ಯದನಾದಂ (ಶಾಂತಿಪು. ೧೨-೧೯ ವ). [ ನಾಕ + ಅನೀಕ ]

**ನಾಕಾನೋಕಹ** (ನಾ). ದೇವಲೋಕದ ಮರ ; ಕಲ್ಪವೃಕ್ಷ ಮೊದಲಾದವು : ನಾಕಾನೋಕಹಸುಮನಶ್ಶ್ರೀಕಂಠಾಭರಣಮಾಗೆ (ಪಂಚಾಮೃ. ೧೧-೧೧೫) ; ಅದು ಮುಕ್ತಿಪುರಕ್ಕೆ ಗೋಪುರಮದು ನಾಕಾನೋಕಹಕ್ಕೆ ಫಳಮಂಜರಿ (ಚಂದ್ರಪ್ರ. ೧೧-೩೯). [ ನಾಕ + ಅನೋಕಹ ]

**ನಾಕಾಪಗಾಜೂಟ** (ನಾ). ಜಟೆಯಲ್ಲಿ ಗಂಗಾನದಿಯನ್ನುಳ್ಳವನು ; ಗಂಗಾಧರ ; ಶಿವ : ನಾಕಾಪಗಾಜೂಟನಾಜ್ಞೆಯಿಂ ಬಂದಿಸುವ ಲೋಕೈಕಪೂಜ್ಯರು ಕೆಡದು (ದುರುಪು. ೩-೨೮). [ ಸಂ. ]

**ನಾಕಾಪಗಾಧರ** (ನಾ). ಗಂಗಾನದಿಯನ್ನು ತಲೆಯಲ್ಲಿ ಧರಿಸಿರುವವನು ; ಗಂಗಾಧರ ; ಶಿವ : ಹೃದಯಾಬ್ಜದೊಳಗೆ ನೆಲಸಿರ್ಪನೆನೆ ನಾಕಾಪಗಾಧರನ ತೋರ್ಪುದು (ದುರುಪು. ೨-೨೪). [ ಸಂ. ]

**ನಾಕಾರಿಸು** (ಕ್ರಿ). ನಿರಾಕರಿಸು ; ಸಾಧ್ಯವಿಲ್ಲವೆಂದು ಹೇಳು : ಅವನಿಗೆ ಪರವಾನೇ ಕೊಡುವುದನ್ನು ನಾಕಾರಿಸಿದ್ದರೆ . . . ಅವನಿಗೆ ಅವಶ್ಯವಾಗದಂತೆ ಮಾಡಬಹುದು (ಕಧಾಗೆ. ೧೮ ಪರಿ).

[ ನಾಕಾರ್$_0$ (P ←ಮರಾ. ನಾಕಾರಣೇ) + – ಇಸು$_3$ ]

**ನಾಕಾವಾಸ** (ನಾ). ಸ್ವರ್ಗದಲ್ಲಿ ವಾಸಿಸುವವನು ; ದೇವತೆ : ನಾಕಾವಾಸರಿಧಂ ಬಲಿಹಕಕುಜಂ ವೃಂದಾರಕಾಖ್ಯಂ (ನಾನಾರ. ೦೫೪).

[ ನಾಕ + ಆವಾಸ ]

**ನಾಕಿ** (ನಾ). ಸ್ವರ್ಗದಲ್ಲಿರುವವನು ; ದೇವತೆ ; ಅಮರ : ನಾಕಿಗ ಳಿಂದ್ರಾದ್ಯರ್ ಪರಮಾಕೃತಿರುರ್ಬಕ್ಷಮೆಂದೆನಲ್ ನಿನ್ನವತಾರಾಕೃತಿಯ ನರ್ಚಿಪರ್ (ಜಗವಿ. ೩-೧೦೭) ; ನಾಕಿಗಳನು ಕೂಡಿ ತ್ರಿಪುರಕೆ ನಡೆದೀ ಕಾಕುಮಾತ ಕೇಳಬಹುದೆ (ತ್ರಿಪುರಾಂ. ೨೯) ; ನಾಕಿಗಳು ನಲಿದಾಡುತಿರಲಾ ಲೋಕಪಾಲರು ತುಷ್ಟಿವಡೆದರು (ಚಾಕಿರಾ. ೨-೩೦). [ ಸಂ. ನಾಕಿನ್ ]

**ನಾಕಿಗ** (ನಾ). = ನಾಕಿ : ಸಾಕುಸಾಕೈ ಸುರವ ಕೇಳ್ ಸುಧಾಕಲಶವಿದಾ ನಾಕಿಗರ ಜೀವನಾಧಾರಂ (ಚಿಬಿಪು. ೨೦-೧೦೧). [ ನಾಕ + – ಇಗ ]

**ನಾಕಿಗಣ** (ನಾ). ದೇವತೆಗಳ ಗುಂಪು,–ಸಮೂಹ : ವಗನೊರ್ವಂ ಪುಟ್ಟ ದೋಷಾಕರನೆನಿಸಿದಂ . . . ನಾಕಿಗಣಂ ಸರ್ವಸ್ವಮಂ ಮೇಣ್ಮಿವರ್ದುದಕಟ ಭಂಗಕ್ಕೆ ಪಕ್ಕಾದೆನೆಂದಾತ್ಮಗತೌರ್ವಾಗ್ನಿಪ್ರಲಂಬಿತ್ತಳುರಿಯೊಳಕೊಂಡಂತೆ ತೋರ್ಕುಂ ಸಮುದ್ರಂ (ಕಬಕಂ. ೧-೩೨). [ ನಾಕಿ + ಗಣ ]

**ನಾಕಿತಿ** (ನಾ). ಹೆಣ್ಣುದೇವತೆ : ದೇವಿ : ನಾಗರಿಗೆ ಮದ್ದ ಹೇಳಬಂದ ಅಯ್ಯಗಳು ನಾಕಿತಿಯ ನಟಣೆಯಲ್ಲಿ ಸಿಲುಕಿದರು (ಸಿದ್ಧೇವ. ೧೯೨-೫೮೪).

[ ನಾಕ + – ಇತಿ$_1$ (< – ಇತ್ತಿ) ]

**ನಾಕಿನಾಯಕ** (ನಾ).=ನಾಕಪತಿ : ಸಕಳೋರ್ವೀಶ್ವರ ನಾಕಿನಾಯಕ ಚಮೂ ಪರ್ಯುಕ್ತಿಪಾತ್ರಂ (ಶಾಂತಿಪು. ೮-೧೨೩). [ ನಾಕಿ + ನಾಯಕ ]

**ನಾಕಿನಿಕರ** (ನಾ). ದೇವತೆಗಳ ಗುಂಪು,–ಸಮೂಹ: ಒಲಗಸಾಲೆಯೊಳನೇಕ ನಾಕಿನಿಕರಪರಿವೃತನಾಗಿರ್ಪಲ್ಲಿ (ಚಂದ್ರಪ್ರ. ೪-೭೪ ವ). [ ನಾಕಿ + ನಿಕರ$_1$ ]

**ನಾಕಿನಿಕಾಯ** (ನಾ). = ನಾಕಿನಿಕರ : ಅಂತು ಗಗನತಲದಿ ನವನೀತ ಲಕ್ಕವ ತರಿಸಿ ವಿವಿಧವಣಿನಿಕೇತನಾಗ್ರಾವಲಗ್ನಕೇತುಮಾಲಾವಿಲಸಿತಸಾಕೇತಮುಂ ಬಳಸಿ ನಾಕಿ[ಪಾಠಾಂ. ದೇವ]ನಿಕಾಯಮಿರೆ (ಆದಿಪು.೭-೯೩ ವ) ; ನುಡಿಯುದೆ ಮೋನಗೊಂಡಿನಿಸಿರ್ದಧಿಪತಿಗೆ ನಿಚ್ಚಂ [ಮೆಚ್ಚಂ] ಪಡೆದು ನಚ್ಚಿನ ನಾಕಿನಿಕಾಯ ಮುವುಗಲದಹೋರಾತ್ರಮೋಲಗಿಸಿಂ (ಶಾಂತಿಪು. ೧೧-೮೭).

[ ನಾಕಿ + ನಿಕಾಯ ]

**ನಾಕಿನಿಳಯ** (ನಾ). ದೇವತೆಗಳ ವಾಸಸ್ಥಾನ ; ಸ್ವರ್ಗ : ನಾಕಿನಿಳಯದಂತೆ ಅನೂನಾಪ್ಸರೋಗಣಪ್ರಣೂತಮುಮತರ್ಕ್ಯಗೋಚರಮುಂ (ಚಂದ್ರಪ್ರ. ೫-೫೩ ವ). [ ನಾಕಿ + ನಿಳಯ (= ನಿಲಯ) ]

**ನಾಕಿಯಚಟ್ಟಯ್ಯ** (ನಾ). ಒಬ್ಬಾತನ ಹೆಸರು : ಕ್ರಮಾಗತ ಪೆರ್ಗ್ಗಡೆ ನಾಕಿಯ-ಚಟ್ಟಯ್ಯಂ ಚಿತ್ರಲಟಹಳ್ಳಿ ಓಟೂರ್ಗ್ಗೆ ಮೂಲಿಗನ್ (ಎಕ. VIII, ಸೊರಬ. ೭೦-೦೦ ; ೨೩೮). [ ? ]

**ನಾಕಿವರ** (ನಾ). ದೇವತೆಗಳಲ್ಲಿ ಶ್ರೇಷ್ಠನಾದವನು ; ಇಂದ್ರ : ಪವಣಂ ಸೌರಭ್ಯಮಂ . . . ಅಮಲಮಂದಾರಮಾಲಾಳಿಯಿಂ ನಾಕಿವರಂ ಕೆಯ್ಗಾಣ್ಕೆಗೆಯ್ದಂಘ್ರಿಗೆ ಮಣಿದೊಲವಿಂ ಕೀರ್ತನಂಗೆಯ್ಯುತಿರ್ದರ್ (ಕಬಕಂ. ೦-೯೪). [ ನಾಕಿ + ವರ$_3$ ]

**ನಾಕು$_1$** 'ನಾಲ್ಕು' ನೋ.

**ನಾಕು$_2$** (ನಾ). ಹಾವಿನ ಹುತ್ತ,–ಬಿಲ : "ನಾಕು ವಾಮಲೂರಾಹ್ವಮಹಿಗೃಹಂ ವಲ್ಮೀಕಂ" (ವಸ್ತುಕೋ. ೦೯-೬) ; "ವಾಮಲೂರು ನಾಕು ವಲ್ಮೀಕ ಮೆನಲು ಹುತ್ತಿಂಗೆ ನಾಮಂ" (ಮಂಗರಾ ೧೧೯-೩). [ ಸಂ. ]

**ನಾಕುಮ್ಮೆ** (ನಾ). ನಾಲ್ಕುದಿಕ್ಕು ; ಸುತ್ತಮುತ್ತ : ಆಕರಿಸಿ ಬೆಸಗೊಂಡು ಬಟ್ಟರನೇಕ ನೃಪರನು ಬೇಹು ಹರಿದುದು ನಾಕುಮ್ಮೆಯಲಿ ತುಬ್ಬು ಕಾಹಿಂಗಿತ್ತು ಬಹುಧನವ (ತೊರರಾ. ೪-೯-೦೦).

[ ನಾಕು$_1$ (<ನಾಲ್ಕು) + ಮ್ಮೆ (<ಮೆಯ್) ]

**ನಾಕುಲಿ** (ನಾ). ಒಂದು ಬಗೆಯ ಗಿಡ ; ಮುಂಗುಸಿಯ ಮೇವಿನ ಗಿಡ ; ಸರ್ಪಾಕ್ಷಿ : "ನಾಕುಲೀ . . . ಸುವಹಾ ಕ ಸರ್ಪಾಕ್ಷಿಗಿಡದ ಹೆಸರು . . . ಮುಂಗೀಮೇವು ಗಿಡ" (ಸಿದ್ಧಾಂತಿ. ೧೩೮). [ ಸಂ. ನಾಕುಲೀ ]

**ನಾಕೆ** (ನಾ). ಸುಂಕವನ್ನು ವಸೂಲು ಮಾಡುವ ಸ್ಥಳ ; ಪರವಾನಿಗೆ ಕೊಡುವ ಕಚೇರಿ ; ಸುಂಕದ ಕಟ್ಟೆ ; ಉಕ್ಕಡ ; ಜಕಾತಿಕಟ್ಟೆ (ಉಕ) : ಗೊತ್ತುಮಾಡಿದ ಸರಹದ್ದಿನ ನಾಕೆಯಲ್ಲಿ ಅದನ್ನು ಕೊಟ್ಟು ಅಂಥದೇ ಬಿಳೇ ಕಾಗದದ ಪಾಸನ್ನು ತಕ್ಕೊಳ್ಳಬೇಕು (ಕಧಾಗೆ. ೧೭ ಪರಿ); ನಾಕೇದ ಮೇಲಿನ ಕಾರಕೂನನದು ಕೆಲಸ ಅದ (ಎತ್ತಿಕ್ಕ. ೫).

[ ←ಹಿಂ. ನಾಕಾ ; ಮರಾ. ನಾಕೇ ]

**ನಾಕೆಬಂದಿ** (ನಾ). ಮಾರ್ಗವನ್ನು ಜನಸಂಚಾರಕ್ಕೆ ಅವಕಾಶವಿಲ್ಲದಂತೆ ಮಾಡುವುದು; ರಸ್ತೆಗಳಲ್ಲಿ ಸಂಚಾರವನ್ನು ನಿಷೇಧಿಸುವುದು: ಎರಡು ತಾಲೂಕುಗಳಲ್ಲಿ ನಾಕೆಬಂದಿ ಮಾಡಲಾಯಿತು (ಕರವೀ. ೧೨೨). [ ←ಮರಾ. ನಾಕೇಬಂದೀ ]

**ನಾಕೇಂದ್ರ** (ನಾ). ದೇವಲೋಕದ ದೊರೆ; ದೇವೇಂದ್ರ: ಪುಟ್ಟಿತ್ತಾ ನಾಕೇಂದ್ರಂಗೆ ನಿರ್ವಾಕುಲಮಮಳಭವಪ್ರತ್ಯಯಜ್ಞಾನಮಾಗಳ್ (ಸುಕುಮಚ. ೯-೨೩). [ ನಾಕ + ಇಂದ್ರ ]

**ನಾಕೇಶ$_1$** (ನಾ).=ನಾಕೇಂದ್ರ: ಲೋಕಾಪವಾದಕ್ಕೆ ಅಂಜ ನಡೆವುದು ವಿವೇಕ ಕೇಳಿಚ್ಚರಿಕೆ ನಾಕೇಶನಾದರೂ ಬಿಡದಪವಾದ ಪರಾಕು ಕೇಳಿಚ್ಚರಿಕೆ (ನೀತಿಚಿಂ. XI, ೧೯). [ ನಾಕ + ಈಶ ]

**ನಾಕೇಶ$_2$** (ನಾ). ಕೂದಲು ಇಲ್ಲದವನು; ಲುಂಚನ ಮಾಡಿಕೊಂಡವನು; ಸವಣ: ನಾಕೇಶನಾಗಲೊಡನೊಡನಾ ಕೇಶಮನಾಂತ ಶೋಣ ಮಣಿಪಟಳಕಮಾಲೋಕನದ ತಣಿವನಿತ್ತುದು (ಪುಷ್ಪಪು. ೧೩-೧೧೧). [ ಸಂ. (ನಾ + ಕೇಶ) ]

**ನಾಕೌಕ** (ನಾ).=ನಾಕನಿಳಯ: ನಾಕಸುಖಶೇಷಮಂ ನಾಕೌಕರ್ ಬಂದದಱೊಳನುಭವಿಪ್ಪುದಱಿಂದ (ಶಾಂತಿಪು. ೯-೧೩೭). [ ನಾಕ + ಓಕ$_1$ ]

**ನಾಕ್ಸಾಚ್** 'ನ್ಯಾಪ್‌ಚಾಕ್' ನೋ.

**ನಾಕ್ಷತ್ರ** (ಗು). ೧. ನಕ್ಷತ್ರಕ್ಕೆ ಸಂಬಂಧಪಟ್ಟ: ನಾಕ್ಷತ್ರ (Sidereal) ಪಂಚಾಂಗವನ್ನು ನಿರ್ಮಿಸಿ ಹಳೆಯ ಪಂಚಾಂಗವನ್ನು ತಿದ್ದಿದರು (ಶಿಲ್ಪಶಾ. ೩೫). ೨.=ನಾಕ್ಷತ್ರಮಾನ: ಆ ಸಂವತ್ಸರವೇ ಸೌರ ಚಾಂದ್ರ ಬಾರ್ಹಸ್ಪತ್ಯ ನಾಕ್ಷತ್ರ ಸಾವನ ಭೇದದಿಂದೈದುತೆಱನಾಗಿರ್ಪುದು (ವಿವೇಕ. ೩೪೨); ಶ್ರೀಪರಮಾತ್ಮನು ಮೇಲೆ ಹೇಳಿದ ಪ್ರಕಾರ, ಬಾರ್ಹಸ್ಪತ್ಯ, ಸೌರ, ಅನುಸೌರ, ನಾಕ್ಷತ್ರ, ಚಾಂದ್ರಮಾನಗಳೆಂಬ ಐದು ಬಗೆಯಾಗಿ ಗಣಿಸುವ ಪರಿವತ್ಸರಾದಿ ೫ ಹೆಸರುಗಳನ್ನು ಧರಿಸಿರುವನು (ಹಸಾರ. ೫-೪೦ ಟೀಕು). [ ಸಂ. ]

**ನಾಕ್ಷತ್ರಮಾನ** (ನಾ). ನಕ್ಷತ್ರಗಳ ಗತಿಯನ್ನು ಅನುಸರಿಸಿ ಮಾಸ, ವರ್ಷಗಳನ್ನು ಗಣಿಸುವ ಕಾಲಮಾನ; P ಈ ಕಾಲಮಾನದಂತೆ ನಕ್ಷತ್ರಗಳು ಒಂದು ಸುತ್ತು ತಿರುಗುವುದಕ್ಕೆ ೨೭ ದಿನಗಳುಗುವುದರಿಂದ, ೨೭ ದಿನಗಳಿಗೆ ಒಂದು ತಿಂಗಳಾಗುತ್ತದೆ. [ ನಾಕ್ಷತ್ರ + ಮಾನ ]

**ನಾಖುಷಿ** (ನಾ). ಸಂತೋಷವಿಲ್ಲದಿರುವುದು; ಅಸಂತೋಷ; ಅತೃಪ್ತಿ: ಅರಶಿನವರು ತಮ್ಮ ಮಾತ ಕೇಳಲಿಲ್ಲವೆಂದು ನಾಖುಷಿಯಿಂದ ಬರಕ್ಕೆ ಶ್ರೀನಿವಾಸರಾಯರು ಹೊರಟುಹೋಗಿ ಪಟ್ಟಣಕ್ಕೆ ದಾಖಲಾದರು (ಹೈದರ. ೧೧೭); ತುಸು ನಾಖುಷಿ ತೋರಿದರೂ ಹೇಳಿ ಒಪ್ಪಿಸಬಹುದು ಬಿಡು ಅದರಾಗೇನು (ಭಾಗ್ಯಶ್ರೀ. ೨೨). [ ← ಪಾರ. ಹಿಂ. ನಾಖುಶೀ ]

**ನಾಗ** (ನಾ). ೧. ಹಾವು; ಸರ್ಪ: "ಅಹಿ ನಾಗಂ ವ್ಯಾಳನಾಶೀವಿಷಂ" (ವಸ್ತುಕೋ. ೦೯-೭); "ಉರಗಂ ಸರೀಸೃಪಂ . . . ನಾಗನಾಶೀವಿಷಂ . . . ವ್ಯಾಳನೆನಲು ಸರ್ಪಂಗೆ ನಾಮಂ" (ಮಂಗರಾ. ೧೧೮-೧). ೨. ನಾಗರ ಹಾವು: ನಾಗರ ನಾಗರಕನ್ನೆಯರ ರೂಪುಗಳಟ್ಟಳವಾಗೆ ಭೋಗಿಗಳ್ ಭೋಗಿಗಳೆಂಬ ಭೋಗಿಗಳೆ ಭೋಗಿಗಳಲ್ಲಿಯ ಭೋಗನಾಯಕರ್ (ಪಂಪಭಾ. ೪-೧೬); ನಾಗ ಬಂದರೆ ಕೋಲ ಕಳೆದುಕೊಂಬರು (ಬಸವ. ೧೯೫); ನವಿಲು ನಾಗಂಗಳಡಸಿ ನಿಜವೈರವಂ ಮಱೆದಿಪ್ಪವೆನೆ ಮುನಿಯ ಮಹಿಮೆಯಂ ಪೊಗಳ್ವರಾರು (ಹರಿಶ್ಚ. ೫-೫೭); ತಾನಲ್ಲಿ ಮೊಸಳೆಯಾದತ್ತಾ ನಾಗನುಮಾಗಿ ಬಳೆಯೆ (ಯಶೋಚ. ೩-೪೭); ಹಳದಿಯ ಹೆಡೆಯುನು ಬಿಚ್ಚೋ ಬೇಗಾ ಹೊಳಹಿನ ಹೊಂದಲೆ ತೂಗೋ ನಾಗಾ! (ಕನ್ನಡಾ. ೦೨೨-೨೦). ೩. ಕಶ್ಯಪನ ಪತ್ನಿಯಾದ ಕದ್ರು ಎಂಬುವಳಲ್ಲಿ ಜನಿಸಿದ (ಪುರಾಣೋಕ್ತವಾದ) ಒಂದು ದೇವಸಂತತಿ; ಮನುಷ್ಯನ ಮುಖವೂ ಸರ್ಪದ ದೇಹವೂ ಇರುವ ಪಾತಾಳನಿವಾಸಿಯಾದ (ಅರ್ಧ ದೇವತಾಸ್ವರೂಪದ) ಜೀವ: ದೇವ ನಾಗ ನರ ಸುರ ಸೇವ್ಯ . . . ರಕ್ಷಿಪುದೆನ್ನ (ಪ್ರಾಥರಾ. ೨೦-೧). 'ಅಷ್ಟನಾಗ', 'ಅಷ್ಟಫಣಿ' ಪರಾ. ೪. ಆನೆ; ಗಜ: "ಆನೆಯಲ್ಲಿಯುಂ ನಾಗಮೆಂಬುದು" (ಹಲಾಯು. ೧೩೨-೧೧); ಮನವಜಾದು ನಗೆಯೊಳಾ ನೃಪತನಯೆಯು ರಥಮಂ ನೃಪಾಂತರಕ್ಕುಯ್ವುದೋ ಪೇಟ್ ಎನೆ ನೊಂದು ನಿಷಾದಿಗೆ ಮುಳಿದನಂಗ ನೃಪಯಾನನಾಗಮಂ ವಧು ಪೋಲ್ವಳ್ (ಶಾಂತಿಪು. ೫-೧೫೯); ನಾಗಮ ನಾಗದಂತಿರೆ ಪಡಲ್ವಡೆ . . . ನಡುಗಿತ್ತು ಚಂಚಲಾಂಭೋಗತಚಂದ್ರ ಮಂಡಲದವೋಲ್ ಜಿತಶತ್ರುಗೆ ಶತ್ರುಮಂಡಲಂ (ಅಜಿಪು. ೨-೪೮). 'ನಾಗಮುಖ' ಪರಾ. ೫. ಮೋಡ; ಮೇಘ: ನಾಗಮ ನಾಗದಂತಿರೆ ಪಡಲ್ವಡೆ . . . ನಡುಗಿತ್ತು ಚಂಚಲಾಂಭೋಗತಚಂದ್ರಮಂಡಲದವೋಲ್ ಜಿತಶತ್ರುಗೆ ಶತ್ರುಮಂಡಲಂ (ಅಜಿಪು. ೨-೪೮). 'ನಾಗಭೂಷಣ' ಪರಾ. ೬. ಮುಖಂಡ; ಮೊದಲಿಗ; ಪ್ರಧಾನ; ಸಚಿವ: "ನಾಗಂ ಪ್ರಧಾನಭೂತಂ" (ವಸ್ತುಕೋ. ೧೩೦-೮೩). ೭. ಶರೀರದಲ್ಲಿರುವ ಉಪವಾಯುಗಳಲ್ಲಿ ಒಂದು; ತೇಗು, ವಾಂತಿ, ಉದ್ಗಾರಗಳನ್ನು ಉಂಟುಮಾಡುವ ವಾಯು: "ದೇಹಮಂ ತಾಳ್ದಿಹುದು ನಾಗಮುಕ್ಕುಂ" (ಮಂಗರಾ. ೧೫-೧೨); ಉದ್ಗಾರವೆಂಬ ಕ್ರಿಯೆಯಂ ಮಾಡುವದ್ದರಿಂದ ಆ ಅಂತರವಾಯು ನಾಗಸಂಜ್ಞೆಯನ್ನೂ . . . ಪಡೆದುಕೊಂಡಿರುವುದು (ಮುಮುಕ್ಷು. ೩). ೮. ಒಂದು ಲೋಹ; ಸೀಸ: "ಅನುಗೊಳಿಸೆ ನಾಗವಾ ಸೀಸಪತ್ರಂ ಸೀಸಮೆನಿಕು" (ಮಂಗರಾ. ೩೦-೫); "ಫಣಿಯೊಳು ಸೀಸದೊಳು ಸಚಿವನೊಳು ಗಜದೊಳು ಸಲೆ ನಾಗಮುಕ್ಕು" (ಮಂಗರಾ. ೦೪೮-೪೦). ೯. ಒಂದು ಬಗೆಯ ಸುವಾಸನೆಯ ಹೂಬಿಡುವ ಮರ; ಸುರಗಿ; ಸುರಹೊನ್ನೆ: "ನಾಗಂ ಪ್ರಧಾನಭೂತಂ ನಾಗಂ ಭೂರುಹವಿಶೇಷಮುಂ ಕುಂಜರಮುಂ" (ವಸ್ತುಕೋ. ೧೩೦-೭೩); "ನಾಗಮೆನೆ ಸುರಗಿಯೆನಿಸಿಕ್ಕು" (ಮಂಗರಾ. ೩೮-೨೪); "ನಾಗಃ – ವತ್ಸನಾಭ, ಆನೆ, ಸರ್ಪ, ನಾಗದಂತಿ, ಸುರಹೊನ್ನೆ, ಮಗ್ಗಾರೆ" (ಓಷಧಿ. ೮೫). ೧೦. ಒಂದು ಬಗೆಯ ಹೂಬಿಡುವ ಮರ; ನಾಗಸಂಪಿಗೆ; ನಾಗಕೇಸರ: "ನಾಗಂ ಗಜಕೇಸರಂ" (ವಸ್ತುಕೋ. ೩೯-೭); ಷಷ್ಠೋಪವಾಸದಿಂ ಪುಷ್ಪಕೋದ್ಯಾನದೊಳ್ ನಾಗವೃಕ್ಷದಡಿಯೊಳ್ . . . ಕೇವಲಜ್ಞಾನ ಮಹಾಕಲ್ಯಾಣ ಮಹಾಪೂಜೆಯನೆಯ್ದಿ (ಚಾವುಂಪು. ೧೨೮); ಕೇದಗೆ ಸಂಪಗೆ ನಾಗಂ ಹಾದರಿ ಯದಿರ್ಗುಂತೆ ಸುರಯಿ ವಕುಳ ಲವಂಗಂ (ಎಕ. VIII, ಸಾಗರ. ೧೧೯-೫೦; 1042); ಕುರವಕ [ಚಂಪ]ಕಾರ್ಜು[ನ] ತಮಾಳ ಕುಚಂದನ ಚಂದ ನಾಗ ಜಂಬಿರ ಪನಸಾಮ್ರ ನಿಂಬ ಕುಟಜಾದಿ ಮಹಾಕುಜಸಂಕುಲಂಗಳಿಂ (ಬಂಹರಿ. ೭-೭). ೧೧. ಬೆಂಕಿ; ಅಗ್ನಿ. ೧೨. ಕತ್ತಲೆ; ತಮಸ್ಸು. ೧೩. ನೀರು; ಜಲ: "ಸಿಂಧೂರಕುಜಾಹಿ ಮುಖ್ಯ ತಮ ಸೀಸ ಜಲಾನಲ ನಾಗವಾಚಕಂ" (ನಾನಾರ. ೨೭). ೧೪. ಶಂಖ: "ಮತ್ತಗಜಂ ಮರ ಸರ್ಪಂ ಕತ್ತಲೆಯುದಕಾಗ್ನಿ ಸೀಸ ಮುಖ್ಯಂ ಶಂಖಂ ಬಿತ್ತರಮಾಗಿಹ ಪೆಸರೊಂಭತ್ತುಂ ನಾಗಾಭಿಧಾನಮೆನಿಕುಂ ಜಗದೊಳ್" (ನಾನಾಕಂ. ೭). ೧೫. ಒಂದು ಜಾತಿಯ ವಿಮಾನ; ಪಾರ್ಕ್‌ವಿಮಾನ. ೧೬. ಕ್ರೂರಿ; ದುಷ್ಟ. ೧೭. ದೀಪ ಮೊದಲಾದುವನ್ನು ತೂಗುಹಾಕಲು ಬಡಿದಿರುವ ಕೊಕ್ಕೆ. ೧೮. ನಾಗರಹಾವಿನ ವಿಗ್ರಹ,-ಪ್ರತಿಮೆ: ಈ ರಾಜನ ಮಗಳು . . . ನಾಗವನ್ನೂ, ಕೆರೆಯನ್ನೂ ಒಂದು ವಿಹಾರವನ್ನೂ ದಾನಮಾಡಿ ದಳೆಂದು ತಿಳಿದು ಬಂದಿದೆ (ಕರ್ಣಾಕ. ೩). 'ನಾಗಪ್ರತಿಷ್ಠೆ' ಪರಾ. ೧೯. ಒಬ್ಬಾತನ ಹೆಸರು: ಶ್ರೀ ಅಪ್ಪಿಆಚಾರಿಯರ ಮಗನ್ನಾಗನ್ ಮಾಡಿದ (ಎಕ. IX, ಬೆಂಗಳೂ. ೩೭-೫; 750); ಮಾಧವಯ್ಯಂ ಬರೆದಂ

ನಾಗಂ ಬೆಸೆಗೆಯ್ದಂ (ಎಕ್. VIII, ಸೊರಬ. ೫೩೦-೧೩ ; 979). ೨೧. ಭಾರತದ ನಾಗಾಲ್ಯಾಂಡ್ ಮತ್ತು ಅಸ್ಸಾಂ ಪ್ರಾಂತಗಳಲ್ಲಿ ನೆಲೆಸಿರುವ ಒಂದು ಜನಾಂಗ : ಇಷ್ಟೆಲ್ಲ ನಾಗರಿಕತೆಯುಳ್ಳ ಜನರ ಎಡೆಯಲ್ಲಿರುವ ನೀಲಗಿರಿಯ ತೋಡರೂ, ಅಸ್ಸಾಮಿನ 'ನಾಗ'ರೂ . . . ಹೊಸಸಂಸ್ಕೃತಿಗಳಿಗೆ ಸಿಗದವರು (ಶಾಲಂಶ್ರ. I, ೪೯೯). ೨೧.= ನಾಗವ : ಕರಣವೇಕಾದಶಗಳಲಿ ಚರಕರಣ ಶಕುನಿ ಚತುಷ್ಕ ವಣಿಜೆಯು ನಾಗ ಕಿಂಸ್ತುಘ್ನ (ಗಗಣಿ. ೪-೭೦). 'ನಾಗವ' ಪರಾ. ೨೨. [ಛಂದ] ಒಂದು ಅರ್ಧಸಮವೃತ್ತ : ನಾಗ – ಒಂದು ಮೂರನೆಯ ಪಾದಗಳಲ್ಲಿ ಒಂದು ತಗಣವೂ ಒಂದೊಂದು ಗುರು ಲಘುಗಳೂ, ಎರಡು ನಾಲ್ಕನೆಯ ಪಾದಗಳಲ್ಲಿ ಒಂದು ತಗಣವೂ ಒಂದು ಗುರುವೂ ಇರುವುವು (ಕ್ಕಬಿ. ೮೯). ೨೩. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ : "ಕಂ ನಾಗ ವಸುವೆಂಟು" (ಮಂಗರಾ. ೧೦೪-೮) ; ಯುಗ ಋತು ಗಜ ನಾಗಾಂಬರ ಮೃಗಧರವಗ ಷಟ್ಕಮೆನಿಪ ವೃತ್ತದ ಲೆಕ್ಕಂ ಸೊಗಯಿಸಿ ತೋರ್ಕುಂ ಗಣಿಯಿವುದಗಣಿತ ಗುಣನಿಲಯ ನಾಗವರ್ಮನ ಮತದಿಂ (ಛಂದೋಂಬು.೨-೨೦೦). ೨೪. [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ : "ನಾಗ ಶೈಲ ಸಪ್ತಂ" (ಭಾಸ್ಕರ.೪೪-೫).

ನಾಗನ ಹುಲ್ಲು = ಒಂದು ಬಗೆಯ ಹುಲ್ಲು ; ಶತ್ರೆಹುಲ್ಲು ; ದೇವ ನಾಳ : "ದೇವನಾಳಂ ಪಿರಿದಾಗಿರ್ಪ ಭೂಮಿ–ನಡ್ಯತ್, ನಡ್ವಲ, ಒಷ್ಟಿಲೆ, ನಾಗನ ಹುಲ್ಲಿಂ[ಪಾಠಾಂ. ಟ್ಟಿಂ]ದೂ ಎಂಬರು" (ನಾಚಿರಾ. ೩). ನಾಗಪ್ಪ = ನಾಗರಹಾವು : ನಾಗಪ್ಪಗ್ಗಾಲ ಎರಿಯೋಣ (ಜನಗೀ. ೩) ; ನಾಗಪ್ಪನಿಗೆ ತನಿ ಎರೀತೀನಿ ಅಂತ ಹರಕೆ ಕಟ್ಟಿಕೊ (ರೂಢಿ). [ ಸಂ. ]

ನಾಗಂಡುಗ 'ನಾಲ್ಗಂಡುಗ' ನೋ.

ನಾಗಂದ (ನಾ). ಒಬ್ಬಾತನ ಹೆಸರು : ಶ್ರೀಗೋವಿನ್ದರ ವಲ್ಲಹನ್ಪೃಥಿವೀ ರಾಜ್ಯಂಗೆಯೆ ಮೆಡ ನಾಗನ್ದನ್ × × × ನಾಡಾಳೆ (ಎಕ್. VIII, ಸೊರಬ. ೫೪೨-೧ ; ಸು. 800). [ ? ]

ನಾಗಂದಿ 'ನಾಗಂದಿಗೆ' ನೋ.

ನಾಗಂದಿಗೆ, ನಾಗಂದಿ, ನಾಗವಂದಿ, ನಾಗವಂದಿಗೆ, ನಾಗೊಂದಿ, ನಾಗೊಂದಿಗೆ (ನಾ). ೧. ಮನೆಗಳಲ್ಲಿ ಸಾಮಾನುಗಳನ್ನು ಇಡಲು ಅನುಕೂಲವಾಗುವಂತೆ ಗೋಡೆಗಳಿಗೆ ಎತ್ತರದಲ್ಲಿ ಜೋಡಿಸಿರುವ ಮರದ ಹಲಗೆ ; ಬಡು. ೨. ಬಾಗಿಲುವಾಡದ ಮೇಲೆ ಅಥವಾ ಕಂಬದ ಸುತ್ತ ಇರುವ, ಸಾಮಾನಿಡುವ ಸ್ಥಳ : ಜಾನಕಿಯು ಪಸೂಲುವಡಾಡಿ ತಂದ ರೂಪಾಯಿಗಳನ್ನು ನಾಗಂದಿಗೆಯ ಮೇಲೆ ಇರಿಸಿ ಸ್ನಾನಕ್ಕೆ ಹೋಗಿದ್ದಳು (ಸಂಸ. ೩) ; ನಾಗಂದಿಗೆ ಮೇಲಕೆ ಫೇಣಿಯನಿರಿಸಿ ಮರತೇ ಬಂದಿಹೆನು (ನಡಿದಾ. I, ೪೦೦) : ನಾಗಂದಿಗೆಯಿಂದ ನಾಗಂದಿಗೆಗೆ ಅಡ್ಡಲಾಗಿ ಹಾಕಿದ್ದ ಬಿದಿರ ಗಳುವಿಗೆ ತೂಗುಹಾಕಿದ್ದ (ಮರಳಮ. ೨೩೮). ನಾಗಂದಿ : ೨. ಕುಡುಗೋಲುಗಳು ನಾಗಂದಿಯ ಮೇಲೆ ; ಜಂಗು ತಿನ್ನುತ್ತ ಬಿದ್ದಿದ್ದವು (ಜೀನಬಾ. ೨೩೦). ನಾಗವಂದಿ : ೧. ಹುಳಿತ ನಾಗವಂದಿಗಳೂ ಗೂಟಗಳೂ ಬೇಕಾದಷ್ಟಿವೆ (ಮೋಜೀವ. ೮). ನಾಗವಂದಿಗೆ : ೧. "ನಿರ್ವ್ಯೂಹ . . . ನಾಗವಂದಿಗೆ" (ಗಂಗಾಮು. ೦೦೫) ; ಈ ಪುಸ್ತಕಗಳನ್ನು ಕಟ್ಟಿ ನಾಗವಂದಿಗೆಯ ಮೇಲಿಟ್ಟುಬಿಡು (ರೂಢಿ). ನಾಗೊಂದಿ: ೨. ಗೋದಾವರಿ ಮಾತನಾಡಲಿಲ್ಲ. ಕೈಯನ್ನೆತ್ತಿ ಪಡಸಾಲೆಯ ನಾಗೊಂದಿಯಲ್ಲಿಯ ಒಂದು ಕಾಗದವನ್ನು ಎತ್ತಿ ಬಾಬೂನ ಕೈಯಲ್ಲಿರಿಸಿದಳು (ರಕ್ತರ್ಕ. ೨೭೨). ನಾಗೊಂದಿಗೆ : ೧. ಸಾಬೂನು, ಬ್ರಶ್ ಮತ್ತು ಇತರ ತೊಳೆಯುವ ಸಾಧನಗಳನ್ನಿರಿಸಲು ಸಿಂಕಿನ ಮೇಲುಗಡೆಯಲ್ಲಿ ಒಂದು ಕಪಾಟು ಅಥವಾ ನಾಗೊಂದಿಗೆ (Shelf) ಇರಬೇಕು (ಅಡುಶಾ. ೦೩). ಪಕ್ಕದ ನಾಗೋದಿಗೆಯ ಮೇಲಿದ್ದ ಹಲ್ಲುಪುಡಿಯ ಡಬ್ಬವನ್ನು ತೆಗೆದು ಆಕೆಯ ಕೈಗಿತ್ತ (ವಾತ್ಸಲ್ಯ. ೧೭). [ < ಸಂ. ನಾಗದಂತಕ ]

ನಾಗಕಂಕಣ (ನಾ). ಹಾವುಗಳೇ ಕೈಕಡಗವಾಗಿರುವವನು ; ಸರ್ಪಗಳನ್ನು ಕಡಗದಂತೆ ಕೈಗೆ ಸುತ್ತಿಕೊಂಡಿರುವವನು ; ಶಿವ : ನಾಗಕಂಕಣಗೆ ಯತಿವರ ಮರುಳಾರ್ಯಂಗೆ ರಾಗದಿಂದೊಪ್ಪಿ ಶರಣೆಂಬೆ (ಅಕ್ಕಶ್ರೀ. ೧) ; ನಾಗಾಂಕನ ಅಱದು ತಾನಾಗದೆ ನಾಗಕಂಕಣನಾದ ನಾಗಾಯಿ ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ (ಸಿದ್ಧವ. ೪೨೨-೧೩೩೦) ; ಗಿರಿಜೆ ತಪವಟ್ಟು ಮೆಚ್ಚಿಸಿ ರಜತಾದ್ರಿಯಲಿ ನಾಗಕಂಕಣನಿಂ ಪಡೆದಳನುರಾಗದಿಂದೀ ಲಾಂಛನವನು (ಬಸವು. ೧೨-೨೫) : ದಕ್ಷನಂ ಕೊಲಲೆಂದು ನಾಗಕಂಕಣನೆನ್ನನಟ್ಟಿದಂ (ವೀರಭ್ರಪು. ೩-೪-೨೫) ; ನಾಗಕಂಕಣ ಕರಯ ಎಗದಿಂದೆ ಪಿಡಿದೆತ್ತಿ ಪೂಗೋಲ ನಿರ್ಧಾರಗಿಗಾಗ ರಾಗದಿ ವಸ್ತ್ರಭೂಷಣವಿತ್ತು (ಮೋಹಕ. ೮-೪೫).

[ ನಾಗ + ಕಂಕಣ ]

ನಾಗಕಟಕ (ನಾ) = ನಾಗಕಂಕಣ : ನಾಗಕಟಕಂಗಿತ್ತು ವಿಷಮಂ ರಾಂದಿಂ ನೀವುಂಡು ಸಾಯದಡಾ ಪ್ರಸಾದವನು ನೀವು ಕೈಕೊಂಡನುಭವಿಸುತಿರೆ ನಾವು ಬೇಡೆವು (ಬಸವು. ೫೮-೪೩) ; ನಾಗಯಜ್ಞೋಪವೀತಂ ನಾಗಕುಂಡಲಂ ನಾಗಕಟಕಂ . . . ನಾಗವಿಷಧರನೊಪ್ಪುತಿರ್ದಂ (ಲಕಿಜಿಂ. ೨೭-೨೯).

[ ನಾಗ + ಕಟಕ ]

ನಾಗಕನ್ನಿಕೆ (ನಾ).= ನಾಗಕನ್ನೆ : ನಾಗಕನ್ನಿಕೆಯರು ನಾಥನ ಬೇಡಲು ನಾನಾ ವಿಧದಿ ಸ್ತುತಿಮಾಡಲು (ಪುರಂದ. ೨-೦೦೩-೩). [ ನಾಗ + ಕನ್ನಿಕೆ ]

ನಾಗಕನ್ನೆ (ನಾ). ನಾಗಲೋಕದ ಹೆಣ್ಣು : ವಡಮೆಚ್ಚಿಗಂಡನ ಗಂಡ ಗಾಡಿಯಂ ಕಂಡು ಫಣೀಂದ್ರನ ಕನ್ನೆ ಮದನಲತೆಯೆಂಬ ನಾಗಕನ್ನೆ ಕಣ್ಬೇಟಂಗೊಂಡು ತನ್ನ ಲೋಕಕ್ಕೊಡಗೊಂಡು ಪೋಗಲ್ (ಪಂಪಭಾ. ೪-೧೫ ವ). [ ನಾಗ + ಕನ್ನೆ ]

ನಾಗಕನ್ಯೆ (ನಾ). = ನಾಗಕನ್ನೆ : ಮಧ್ಯಮಪಾಂಡವ ಅರ್ಜುನ ಉಲೂಪಿ, ಚಿತ್ರಾಂಗದೆ ಎಂಬ ನಾಗಕನ್ಯೆಯರ ಕೈಹಿಡಿದ ಕಥೆ ಪ್ರಸಿದ್ಧವಾಗಿಯೇ ಇವೆ (ಭಾಹಲ್ಯ. ೧೦೦). [ ನಾಗ + ಕನ್ಯೆ ]

ನಾಗಕರಣ (ನಾ). ೧. = ನಾಗ ೨೧. ೨. [ಕಾಮಶಾ] ಸಂಭೋಗದಲ್ಲಿ ಒಂದು ಬಂಧ : ಆ ಕಾರಣಮಂ ಪುರುಷನ ಪುರುಷನ ತಿಪ್ಪದಿಂ ಪೊರದೆ ಯೆರಡು ತೊಡೆಗಳನಿಕ್ಕಿದರೆ ನಾಗಕರಣ (ಕಾಮಶಾ. ೬-೦೩೬).

[ ನಾಗ + ಕರಣ ]

ನಾಗಕುಂಡಲ (ನಾ). ೧. ಸರ್ಪದ ಕರ್ಣಾಭರಣ ; ಹಾವಿನ ಕುಂಡಲ : ನಾಗಕುಂಡಲಂ ಪೊನ್ನೋಲೆಯೆಸೆವ ಕಟಿ ರನ್ನದಾಳಿ (ಹರಿಕಾ. ೦-೬) ; ಬಲಗಿವಿಯಲ್ಲಿ ನಾಗಕುಂಡಲ ಎಡಗಿವಿಯಲ್ಲಿ ಮಕರಕುಂಡಲವೂ ಇವೆ (ಹೊಯ್ಸಳಶಿ. ೯೭). ೨. ಸರ್ಪವೇ ಕುಂಡಲವಾಗಿರುವವನು ; ಶಿವ : ನಾಗಕುಂಡಲನಱದೆವೆಂಬರು ನಾಗದೇವತೆಗಳಾದರು ನಾಗಾಯಿ (ಸಿದ್ಧವ. ೪೨೨-೧೩೩೦) ; ನಾಗಯಜ್ಞೋಪವೀತಂ ನಾಗಕುಂಡಲಂ ನಾಗಕಟಕಂ . . . ನಾಗವಿಷಧರನೊಪ್ಪುತಿರ್ದಂ (ಲಕಿಜಿಂ.೨೭-೨೯) : ನಾಗಕುಂಡಲ ನಾಗದನುಜ ಚರ್ಮಾಂಬರನೆ ನಾಗನರಲೋಕಕಧಿಕನೆ ರಕ್ಷಿಸುವುದೆಂದು ನುತಿಸೆ (ಪ್ರಾರ್ಥನಾ. ೨-೪೦). [ ನಾಗ + ಕುಂಡಲ ]

ನಾಗಕುಷ್ಠ (ನಾ). ಒಂದು ಬಗೆಯ ಕುಷ್ಠರೋಗ ; ಹಾವಿನ ಮೈಮೇಲೆ ಚುಕ್ಕೆಗಳು ಇರುವಂತೆ ಮೈಮೇಲೆ ಚುಕ್ಕೆಗಳುಂಟಾಗುವ ಕುಷ್ಠ ರೋಗ : (ಶ). [ ನಾಗ + ಕುಷ್ಠ ]

ನಾಗಕೆ (ನಾ). = ನಾಗ ೭ : ಅವುಗಳ್ಗನ್ನು ಕರ್ಮಾದಿಗಳವೆಂತೆಂದೆನ್ನಲಿಕೆ ನಾಗಕೆಯು ಉದ್ದಾರಾದಿ ಗುಣವಹುವು (ಗಗಣಿ. ೯-೬೩). [ಸಂ. ನಾಗಕ]

ನಾಗಕೇಶರ (ನಾ). = ನಾಗಕೇಸರಿ ೧ : ಮುಂಬಯಿ ೨೧ ಮಣದ ಖಂಡಗದ ಮೇಲೆ ತಿಮ್ಮತ್ತು ಆಗತಕ್ಕ ಜೀನಸಗಳು. ೧. ಬಾಕ್ಕಿಟ್ಟು (ಅಬೀರ) ; ೨. ಅಂಬೆಹಳದಿ (ಗಂಟು ಅರಶಿನ) . . . ೧೩. ನಾಗಕೇಶರ ಕೇಂದು; ೧೪ ಪತಂಗ, ಮಲಬಾರಿ (ಮುಂಬವ್ಯಾ. ೧೨೦). [ ಸಂ. ]

ಸಾಧಾರಣ ವ್ಯಕ್ತಿ; ಅರಿಕೇಸರಿ ತೆಂಕನಾಡಂ ನಾಡಾಡಿಯಲ್ಲದೆ ಮೆಚ್ಚುತ್ತಂ (ಪಂಪಭಾ. ೪-೩೦ ವ); ಪುರುಹೂತನಬೀದಿಯೋಧ್ಯಾಪುರಮಂ ನಾಡಾಡಿಯಲ್ಲ ದಂತಿರೆ ಪಡೆದಂ (ಪಂರಾಮಾ. ೧-೪೯); ನಾಡಾಡಿಗಳಿಗೆ ನಾಡಾಡಿಗಳನು ಸರಿಮಾಡಬಹುದು ಕೂಡಬಹುದು (ಭರತ. ೯-೯೧); ಆಕೆ ನಾಡಾಡಿಯಲ್ಲ (ನವಮೋ. ೯-೧೩). ೩. ಸ್ವಲ್ಪವೂ ಗಣನೆಗೆ ಬಾರದ ವ್ಯಕ್ತಿ; ಅಲ್ಪ; ಕ್ಷುದ್ರ: ನಾಡಾಡಿಗಳ ಒಡಿದು ಫಲವೇನೆಂದು ಕೂಡಿದ ತನ್ನೊಡೆಯ ನೊಳು (ಅಂಜಿಕ. ೪-೯೧); ಪುಣ್ಯವುಳ್ಳ ಮಗನಂ ಪೋಗಾಡಿ ವಪ್ರಹೃದಯರಾಗಿ ಬದುಕಿರ್ದವರ್ ನೋಡಿರೆಯೆಂಬ ನಾಡಾಡಿಯ ಮಾತ ಕೇಳುತಂ (ಪುಣ್ಯಾಸ್ರ. ೧೨-೨೭ ವ); ನಾಡಾಡಿಗಳ ನಾಟಕದ ಫಣಿಯಲ್ಲಾರು ನೀನೆಂದ (ಕುಮ್ಮಾಳ. ೧೩-೯೧); ಎನ್ನ ನಾಡಾಡಿ ಯಂತೆ ನೋಡಿದನು (ಜಾಂಜಟ. ೬೩-೨೦). ೪. ದೇಶದಿಂದ ದೇಶಕ್ಕೆ ಹೋಗಿ ಬರುವವನು; ದೇಶಸಂಚಾರಿ; ಯಾತ್ರಿಕ. ೫. ಹಳ್ಳಿಗಾಡಿನಲ್ಲಿ ವಾಸಿಸುವವನು; ಹಳ್ಳಿಗ; ಗ್ರಾಮೀಣ: (೬). (ಗು). ೬. ಸಾಮಾನ್ಯ ಗುಣವುಳ್ಳ; ಸಾಧಾರಣವಾದ: ಅಳುತ್ತಳುತಲಂಜದವೊಲಾನನಕೊರಸಿ ಕೈವೆರಳ ಮಜಿಯಲಿ ಜನನಿಯನು ನೋಡುತ್ತಲಾ ನಾಡಾಡಿ ಶಿಶುವಂತೆ ತನು ನಡುಗೆ ಕಾಡಿಗೆ ಸಹಿತ ಕಂಬನಿ ಮುಖೇಂದು ಕಳಂಕವಾಗಲು ಮುನಿಗಳನು ನಗಿಸಿದನು ನರಶಿಶುತನದ ನಟನೆಯಲಿ (ವಿಭಾಗ. ೧೦-೯-೩೭); ನಾಡಾಡಿ ದ್ವಿಜರಿಂಗೆ ವಿತ್ತಮ ಮುತ್ತಮಂ ಬೇಡಿದಂತಿತ್ತು ಬೀಳ್ಕೊಟ್ಟು (ಮೋಹತ. ೨೨-೫೨); ಇರ್ವರುಂ ಬೇದಬಿಜ್ಜೆಗಂಗೆ ಸರಿಮಿಗಿಲೆನಿಪರ್ . . . ನಾಡಾಡಿ ಕಿತ್ತಡಿಗಳಲ್ತು (ಅದ್ಭುತ. ೧೧-೧೭); ಆ ನಾಡಾಡಿ ಬೀದಿ ಬಾಲಕ ನೆಮ್ಮ ನಾಡಿಂಗೆ ದೊರೆಯಪ್ಪನೆಂದು? (ಚಂದ್ರಸ. ೧೩-೧೭). ೭. ದೇಶದಿಂದ ದೇಶಕ್ಕೆ ಹೋಗಿ ಬರುವ; ದೇಶಸಂಚಾರಿಯಾದ: ಚೀಣಾವು ಬೌದ್ಧಮತವನ್ನು ಅದೇ ನಾಡಾಡಿ ಜನಗಳ ಮೂಲಕ ಕ್ರಿ.ಪೂ. ಒಂದನೆಯ ಶತಮಾನದ ಅಂತ್ಯದಲ್ಲಿ ಪಡೆಯಿತು (ಕನ್ನಡಾ. ೬೨೭).

**ನಾಡಾಡಿ ದೈವ** = ಸಾಮಾನ್ಯ ದೇವತೆ; ಕ್ಷುದ್ರದೇವತೆ: ನಾಡಾಡಿ ದೈವವನೋಲಡೆ ಕೇಡಲ್ಲದೆ ಸುಖವಿಲ್ಲವಮ್ಮ (ಶಿವಗೀ. ೦೬೦-೮೦೦); ನಾಡಾಡಿ ದೈವವೇ ನೀನು ದೇವರ್ಗೆಲ್ಲ ಚೂಡಾಮಣಿ (ಸೌಂದಪು. ೦೪-೩೦); ನಾಡಾಡಿ ದೈವಗಳ ಚಿನ್ನಬೆಳ್ಳಿಗಳಿಂದ ಮಾಡಿಕೊಂಡದಟಿ ಪೂಜೆಯನು ಮಾಡಿ ಕಾಡ ಕಳ್ಳರು ಬಂದು ಅವುಗಳನು ಕೊಂಡೊಯ್ಯೆ ಮಾಡಿಕೊಂಡಿರ್ದುದಕೆ ಬಾಯ ಬಡಕೊಳ್ಳುವೆಯೊ (ಪುರಂದ. ೧-೪೪-೩). **ನಾಡಾಡಿ ನರ**=ಸಾಮಾನ್ಯ ಮನುಷ್ಯ; ಅನಾಮಧೇಯ: ಇವ ನಾಡಾಡಿ ನರನಲ್ಲ ನಾರಿ ಚಿತ್ತೈಸು (ಕಂಸವಿ. ೯-೧೩೦). **ನಾಡಾಡಿಯವ** = ಸಾಮಾನ್ಯಮನುಷ್ಯ: ಓಡು ಮಾಡಿದಳೆನ್ನ ನೀ ನಾಡಾಡಿಯವನೆಂದೇ ವಿಭಾಡಿಸಿ (ವಿಭಾಗ. ೭-೯-೨೪).

[ನಾಡು + – ಆಡಿ1]

**ನಾಡಾಡಿಕೆ** (ನಾ). ೧. ಸಾಮಾನ್ಯವಾಗಿರುವಿಕೆ; ಸಾಧಾರಣವಾಗಿರುವಿಕೆ: ಹನುಮನ ಮೊಗದ ಮೋಡಿಯು ಧೂರ್ತವಚನದ ಬಗೆಯು ಭಂಗಿಯನಾ ಪ್ರಹಸ್ತ ವಿವೇಕದಿಂದರಿದು ವಿಗಡಭಟನಿವ ಕುಟಿಲಶಾಖಾಮೃಗವಿವನು ನಾಡಾಡಿಕೆಯ ವನಮೃಗದ ಪರಿಯಲ್ಲಿವನ ನುಡಿಸಿದು ನೋಡಬೇಕೆಂದ (ತೊರಣ. ೫-೭-೨೩). ೨. ಒಂದು ದೇಶದಲ್ಲಿ ಹಿಂದಿನಿಂದ ಬಂದ ವ್ಯವಹಾರ,–ರೂಢಿ,–ಸಂಪ್ರದಾಯ: ಅವರು ಚಿಕ್ಕಂದಿನಲ್ಲಿ ಬಹಳ ಕ್ಷೀಣವಾಗಿದ್ದು . . . ಹಿರಿಯರು ಕೈಕೊಂಡ ಒಂದು ನಾಡಾಡಿಕೆಯ ವಿಧಿಯಿಂದಾಗಿ ಹೀಗೆ ಹೆಸರಿಡುವುದಕ್ಕೆ ಕಾರಣವಾಯಿತೆಂದು ತಿಳಿಯಿತು (ಕನ್ನಮ. ೧-೩೪೨). [ನಾಡು + ಆಡು1 + – ಇಕೆ]

**ನಾಡಾಡಿಗ** (ನಾ). ೧. = ನಾಡಾಡಿ ೧: ಈ ಶ್ರೀರತ್ನಸಿಂಹಾಸನವನ್ನು ನಾಡಾಡಿಗ ಹುಂಗುಳಿಯೆಂದೆನ್ನ, ಉದಾಸೀನಭಾವಕ್ಕೆಡೆಗೊಟ್ಟು, ಕಯ್ಯೊಂಕು ವಪ್ಪ ಅನಾಚಾರಕ್ಕೆ ಎರ್ದೆಮಾಡಿ ಉರವಣಿಸಿದರೆ . . . ದಣ್ಣ ಸದಿರವು (ಬಿಟ್ಟಿಳ. ೧೦೭-೦೮). ೨. = ನಾಡಾಡಿ ೩: ಚಿತ್ರಮಂ ಚೆನ್ನಾಗಿ ಬಂಧಿಸಿ ಬಳಿಕ್ಕ ದೇವೋತ್ಸವಸಂಗಮಂ ನೆಟಿ ಕೆಡಿಸಿಲ್ಲವೇ ಚಿತ್ರಭವನಂಳಿದ ನಾಡಾಡಿಗರನೇನ ಮಾಡುವನೆಂದು ಕಂದರಾರು (ಸಮ್ಮಳಿ. ೫-೨೪); ವಿಗಡನಹನರ್ಜುನನು ನಾಡಾಡಿಗರ ಬಗೆಯನು ಸಾಕು ನಗಿಸದಿರು (ಕೋಗದು. ೧೭-೮೧). [ನಾಡಾಡಿ + – ಗ2]

**ನಾಡಾಡಿಗಟ್** (ಕ್ರಿ). ನಾಡಾಡಿತನವನ್ನು ಬಿಡು; ಸಾಮಾನ್ಯತೆಯನ್ನು ಬಿಡು; ಲೋಕೋತ್ತರವಾಗು: ನಾಡಾಡಿಗಟಿದ ರೂಪುಂ ಗಾಡಿಯು ಮಸೆದೊಪ್ಪೆ (ಅಜಪು. ೫-೨೨). [ನಾಡಾಡಿ + ಕಟ್1]

**ನಾಡಾಡು** (ಗು). ಅಲ್ಪವಾದ; ಕ್ಷುದ್ರವಾದ: ಯಾ ಗಜವು ಸಾಮಾನ್ಯವಾದ ನಾಡಾಡು ಗಜವಲ್ಲ (ಸೌಗಂಧಿ. ೫೩೦-೧೮). [<ನಾಡಾಡಿ]

**ನಾಡಿ1** (ನಾ). ೧. ಸಸ್ಯಗಳ ಟೊಳ್ಳಾದ ಕಾಂಡ. ೨. ತಾವರೆಯ ದಂಟು,–ನಾಳ. ೩. ಶರೀರದಲ್ಲಿ ರಕ್ತಚಲನೆಗಾಗಿ ಇರುವ ಕೊಳವೆಯಾಕಾರದ ರಚನೆ; ರಕ್ತವಾಹಿನಿ; ಧಮನಿ: "ನಾಡೀ, ಧಮನೀ, ಸಿರಾ ಸಾಮಾನ್ಯವಾಗಿ ನರಗಳ ಹೆಸರು" (ಸಿದ್ಧಾಂತಿ. ೦೬೩); ನಾಡಿಯೊಳಂ ಕೆಬಗೊತ್ತಿ ಸೋಂಕಿ ಮಧ್ಯದೊಳೆಸಗುತ್ತುಮಿರ್ದೊಡೆ ಶುಭಾವಹಂ (ಶೋಕಿತಂ. ೧೦-೭); ಎನಿತು ನಾಡಿಗಳವಕೆ ಸ್ಥಾನಗಳೆನಿತು (ಗಗಕಾ. ೯-೫). ೪. ಕೈಯ ಮಣಿಕಟ್ಟು, ಎದೆ, ಕಪೋಲ ಮೊದಲಾದೆಡೆಗಳಲ್ಲಿ ಕಂಡುಬರುವ, ಬೆರಳಿಗೆ ತೋರುವ ಲಯಬದ್ಧವಾದ ರಕ್ತಚಲನೆಯ ಮಿಡಿತ,–ಸ್ಪಂದನ: ನಾ ಮುಟ್ಟಲು ನಾಡಿಯ ಬಲ್ಲೆ (ಸರ್ವಜ್ಞ. ೨೦-೮); ಬಿಸಿಯಂ ಸಂಹನನದಿ ಮೇಗುಸುರಂ ನಾಸಿಕದಿ ನಾಡಿಗಳನಾಗಳ್ಬೆಣಸುತಂ ಗಳೊಳಂ ನಖದೊಳ್ ನಸುಗೆಂಪು ನೋಡಿ ಕಾಣದಳವಳಿದಳಿಲಿಂ (ನನ್ನಚಾ. ೬-೦೫೪); ಪುರುಷರ ಬಲದ ಕೈಯ ಹೆಬ್ಬೆರಳ ಮೂಲದಲ್ಲಿ . . . ಒಡಿದು ನಾಡಿಯನ್ನು ನಿದಾನಿಸಬೇಕು (ಸಳವ್ಯ. ೧೧); ರಕ್ತದ ಪ್ರಮಾಣ ಕಡಿಮೆಯಾಗಿ, ನಾಡಿಯಲ್ಲಿ (pulse) ರಕ್ತದ ಒತ್ತಡ ಕಡಿಮೆಯಾಗುತ್ತದೆ (ಕಲರೋ. ೦೭). ೫. (ಯಾವುದಾದರೂ) ನೀಳವಾದ ಕೊಳವೆ; ನಾಳ. ೬. ಒಂದು ಬಗೆಯ ಕೊಳವೆಯಂತೆ ಉದ್ದವಾದ ವ್ರಣ; ನಾಳವ್ರಣ; ಭಗಂದರ. ೭. ಒಂದು ದಿನದ ಅರುವತ್ತನೆಯ ಒಂದು ಭಾಗ; ಒಂದು ಗಳಿಗೆ; ಅರ್ಧ ಮುಹೂರ್ತ; ಇಪ್ಪತ್ತುನಾಲ್ಕು ನಿಮಿಷ: ನಾಡಿಯರುವತ್ತಕ್ಕೆ ಒಂದು ತಿಥಿಯಕ್ಕು (ಮಂಗರಾ. ೨೦-೯); "ನಾಳಿಯೆನೆ ನಾಡಿಯೆನೆ ಗಳಿಗೆಯೆಂದಕ್ಕು" (ಕರಿರ. ೫೪); ಅನುರಾಧ ನಕ್ಷತ್ರದೊಡನೆ ಚಂದ್ರನ ಸಂಬಂಧ ೧೧ ನಾಡಿ ೪೧ ವಿನಾಡಿಗಳಲ್ಲಿ . . . ಬೆಳೆಯುತ್ತದೆ (ಆಕಾಶ. ೯೦). ೮. ಒಂದು ಬಗೆಯ ಬಾಗಿದ ಹುಲ್ಲು. ೯. ಸಂಚು; ಮೋಸ. ೧೦. [ಯೋಗ] ಶರೀರದಲ್ಲಿ ವಾಯು ಸಂಚಾರವಾಗುವ ನಾಳ; P ನಾಡಿಗಳ ಸಂಖ್ಯೆಗಳನ್ನು ಒಂದೊಂದು ಗ್ರಂಥದಲ್ಲಿ ಒಂದೊಂದು ಬಗೆಯಾಗಿ ಹೇಳಿದ್ದಾರೆ. ಕಾಠಕೋಪನಿಷತ್ತಿನಲ್ಲಿ ನೂರೊಂದು ನಾಡಿಗಳಿವೆಯೆಂದೂ ಅವಕ್ಕೆಲ್ಲ ಹೃದಯವು ಮೂಲಸ್ಥಾನವೆಂದೂ ಹೇಳಿದೆ. 'ನಾಡೀಪ್ರಕಾಶ'ವೆಂಬ ಗ್ರಂಥದಲ್ಲಿ ನಾಡಿಗಳು ಮೂರೂವರೆಕೋಟಿಗಳಿವೆಯೆಂದು ಹೇಳಿದ್ದು, ಅವುಗಳಲ್ಲಿ ಹದಿನಾರು ನಾಡಿಗಳನ್ನು ಪ್ರಧಾನವಾಗಿ ಗಣನೆಮಾಡಿದೆ. ಅವುಗಳು ಯಾವುವೆಂದರೆ–೧. ಇಡಾ. ೨. ಪಿಂಗಲಾ. ೩. ಸುಷುಮ್ನಾ. ೪. ಗಾಂಧಾರೀ. ೫. ಹಸ್ತಿಜಿಹ್ವಾ. ೬. ಪೂಷಾ. ೭. ವಸುವಶಾ. ೮. ಅಲಂಬುಷಾ. ೯. ಕುಹೂ. ೧೦. ಶಂಖಿನೀ. ೧೧. ತಾಲಜಿಹ್ವಾ. ೧೨. ಇಭಜಿಹ್ವಾ. ೧೩. ವಿಜಯಾ. ೧೪. ಕಾಮದಾ. ೧೫. ಅಮೃತಾ. ೧೬. ಬಹುಲಾ ಎಂಬುವು. ೧೧. (ಅಲಂ) ಪರಿಸ್ಥಿತಿ; ಆಗುಹೋಗು: ನೋಡಿ ಬಂದೊರೆ ರಣಸ್ಥಿತಿಯ ನಾಡಿಯಂ (ಶ್ರೀರಾಮಾ. ೬೫೦-೨೨೪).

**ನಾಡಿ ಆಡು** = ನಾಡಿ ಸ್ಪಂದಿಸು,-ಮಿಡಿ : ನಾಡಿ ಆಡದವ ಓಡಿ ಬಂದಾನೇ ? (ಗಾದೆ). **ನಾಡಿ ನಿಲ್ಲು** = ನಾಡಿ ಮಿಡಿಯುವುದು ನಿಂತು ಹೋಗು : ನಾಡಿ ನಿಂತ ಮೇಲೆ ಕಾಡ ಪಾಲು (ಗಾದೆ). **ನಾಡಿ ನೋಡು**= ನಾಡಿಯ ಮಿಡಿತವನ್ನು ಪರೀಕ್ಷಿಸು: ನಾಡಿ ನೋಡದೆ ಮದ್ದು ಕೊಟ್ಟರೆ ಕಾಡುರೋಗ ಬರುವುದು (ಗಾದೆ). **ನಾಡಿ ಮಿಡಿ**=ನಾಡಿಯು ಸ್ಪಂದಿಸು : ಆಯಾಸದಿಂದ ಅವನಿಗೆ ಜೋರಾಗಿ ನಾಡಿ ಮಿಡಿಯುತ್ತಿದೆ (ರೂಢಿ). **ನಾಡಿ ಮಿಡಿತ**=ನಾಡಿಯ ಸ್ಪಂದನ: ಅವರಿಗೆ ಉದ್ವೇಗದಿಂದ ನಾಡಿ ಮಿಡಿತ ಏರಿದೆ (ರೂಢಿ). **ನಾಡೀ ಹುಣ್ಣು** = ನಾಡೀವ್ರಣ : ನಾಡೀಷು ಚ=ನಾಡೀ ಹುಣ್ಣುಗಳೊಳು (ವಿವ್ಯ.ವಿ. ೧೬೩). [ ಸಂ. ]

**ನಾಡಿ₂** (ನಾ). ಒಂದು ಬಗೆಯ ವಾದ್ಯ : ವೇದಗಳ ಕಾಲದಲ್ಲಿ ಉಪಯೋಗದಲ್ಲಿದ್ದ ಬಕುರ, ನಾಡಿ, ತುರುವ . . ಮೊದಲಾದ ವಾದ್ಯಗಳ ರೂಪರಚನೆಗಳನ್ನೂ . . . ಶಿಲ್ಪಕಲಾಭಿತ್ತಿಗಳಿಂದ ನಾವು ಗ್ರಹಿಸಬಹುದು (ಸಂಗೀತಂ. ೦೯೩). [ ? ]

**ನಾಡಿಂಧಮ** (ನಾ). ಊದುಗೊಳವೆಯ ಮೂಲಕ ಊದುವವನು ; ಅಕ್ಕಸಾಲಿ : "ನಾಡಿಂಧಮಃ, ಸ್ವರ್ಣಕಾರಃ, ಕಲಾದಃ, ರುಕ್ಮಕಾರಕಃ–ಇ ಅಗಸಾಲಿಗನ ಪೆಸರು" (ಸಿದ್ಧಾಂತಿ. ೩೦೦). [ ಸಂ. ]

**ನಾಡಿಕೆ** (ನಾ). ೧. ಒಂದು ಘಳಿಗೆ ; ಇಪ್ಪತ್ತುನಾಲ್ಕು ನಿಮಿಷಗಳ ಕಾಲ : "ನಾಡಿಕೆಗೆ ನಾಟಿಗೆಯನಿಪ್ಪುದು" (ಸಂಜೀವ. ೩೨) ; ಸಮಯಾವಳಿ ಕೋಟಿಷ್ಟಸಸ್ರೋಕನಿಮೇಷನಾಡಿಕಾಮುಹೂರ್ತ . . .ಗಣನಾನುಕ್ರಮದಿಂದಂ ಪೆರ್ಚಿದೆಣಿಕೆಯೊಳ್ (ಆದಿಪು. ೬-೯೮ ವ). ೨. ಜಾಗಟೆ, ಗಂಟೆ ಮೊದಲಾದುವು. ೩. [ಕಾಮಶಾ] ಒಂದು ನಾಡಿಯ ಹೆಸರು : ಒಂದು ನಾಡಿ ಅದು . . . ಕಾಮಾಂದೋಳಿಕೆಯೆಂಬುವದು ಮತ್ತೊಂದು ಚಿರಕಾಲಂ ಮುಟ್ಟಿಸಿದೊಡಂ ನಾಡಿಕೆಯಂ ಮುಖಂ ಬಿರಿದು ಕಾಮಜಲಂ ಸ್ರವಿಸುವದು (ಕಾಮಶಾ. ೬-೧೦೯). [ ಸಂ. ನಾಡಿಕಾ ]

**ನಾಡಿಗ** (ನಾ). ೧. ಒಂದು ದೇಶದಲ್ಲಿ ಹುಟ್ಟಿ ಬೆಳೆದು ವಾಸಮಾಡಿಕೊಂಡಿರುವವನು; ಒಂದು ದೇಶದ ಪ್ರಜೆ: ಮೃಗನಿಭವಂ ಮೃಗಾವತಿಯ ನಂದನನೊರ್ವನೆ ನಿಂದು ಕೊಂದು ನಾಡಿಗರ ಮನಕ್ಕೆ ಮಿಕ್ಕ ಪರಿತೋಷಮನಿತ್ತು (ವರ್ಧಪು. ೩-೯೬) ; ನಾಡಿಗರೆಲ್ಲರುಂ ಭೋಗಿಗಳ್ ಕುಟಿಲಗಾಮಿಗಳಲ್ತು (ರಾಮಾಶ್ವ. ೭-೨೩) ; ನಮ್ಮ ನಾಡಿಗರು ತಮ್ಮ ತಮ್ಮ ಜಾತಿ, ಧರ್ಮ, ಮತಗಳ ಅನುಷ್ಠಾನದಿಂದ ಮೋಕ್ಷಸಂಪಾದನಕಾರ್ಯದಲ್ಲಿ ಆಸಕ್ತರಾಗಿದ್ದಾಗ (ಉತ್ಕಷ್ಟ. ೩೦). ೨. ಗ್ರಾಮಾಧಿಕಾರಿ : ನಾಡಿಗ ಯಂಕವನು ಅಡಬಿದ್ದು ವೇಡಿಕೊಂಡಾಗ (ಎಕ.VII, ಶಿವಮೊ. ೧೦೭-೩೬; 15767); ಶಾನುಬೋಗರು ನಾಡಿಗರು ಹನ್ನೆರಡು ಮಂದಿ ಆಯಗಾರು (ಎಕ. XI, ಮೊಳಕಾ. ೨೩-೬೩ ; 1665) ; ಪಟೇಲನ ಕೆಲಸಕ್ಕಾಗಲಿ ಶ್ಯಾನುಭೋಗ ನಾಡಿಗ ಕರಣೀಕನ ಕೆಲಸಕ್ಕಾಗಲಿ . . . ವಹಿಸುವುದು ಅವಶ್ಯಕವಾಗಿ ಕಂಡು ಬರುವದಿಲ್ಲವು (ಗ್ರಾಮಾಳಿ. ೫). [ ನಾಡು + –ಇಗ ]

**ನಾಡಿಗತನ** (ನಾ). ನಾಡಿಗನ ಅಧಿಕಾರ ; ಗ್ರಾಮಾಧಿಕಾರ : ವಂಶಪಾರಂಪರ್ಯವಾಗಿ ನಮ್ಮ ಪರಗಣಿಯಲ್ಲಿ ಪ್ರತಿಗ್ರಾಮದಲ್ಲಿ ಭೂಮಿ, ಮನೆ, ಕಣ, ನಾಡಿಗತನ . . . ಇಷ್ಟನ್ನೂ ಮಾಡಿಕೊಡಬೇಕೆಂದು ಕೇಳಿದನು (ಕಥವಿ. II, ೩೦೫). [ ನಾಡಿಗ + –ತನ ]

**ನಾಡಿಗವರ್ಯ** (ನಾ). ಗ್ರಾಮಾಧಿಕಾರಿಗಳಲ್ಲಿ ಶ್ರೇಷ್ಠನಾದವನು : ನೀವು ಕುಳಿತುಕೊಳ್ಳಬೇಕು ನಾಡಿಗವರ್ಯ . . . ನಿಮ್ಮನ್ನು ಅವಜ್ಞೆ ಮಾಡುವುದು ಆಊರ ಎಲ್ಲ ನಾಡಿಗರನ್ನೂ ಅವಜ್ಞೆಗೈದಂತೆ (ಸವತಿ. ೧೬೨).
[ ನಾಡಿಗ + ವರ್ಯ ]

**ನಾಡಿಗಿತ್ತಿ** (ನಾ). ೧. ಒಂದು ದೇಶದ ಸಾಮಾನ್ಯ ಸ್ತ್ರೀ. ೨. ಗ್ರಾಮಾಧಿಕಾರಿಯ ಹೆಂಡತಿ : (ಕ). [ ನಾಡಿಗ + –ಇತ್ತಿ ]

**ನಾಡಿದು** 'ನಾಳಿದು' ನೋ.

**ನಾಡಿದ್ದು** 'ನಾಳಿದು' ನೋ.

**ನಾಡಿಪರೀಕ್ಷೆ** (ನಾ). ರೋಗವನ್ನು ಕಂಡುಹಿಡಿಯುವುದಕ್ಕಾಗಿ ನಾಡಿಯನ್ನು ಹಿಡಿದು ಮಿಡಿತವನ್ನು ತಿಳಿದುಕೊಳ್ಳುವಿಕೆ : ನಾಡಿಪರೀಕ್ಷೆ . . . ಆ ನಾಡಿಯನ್ನು ಪರೀಕ್ಷಿಸುವ ಪ್ರಕಾರವೆಂತೆಂದೊಡೆ (ಸಕವೈ. ೦೦).
[ ನಾಡಿ₁ + ಪರೀಕ್ಷೆ ]

**ನಾಡಿಮೂಲ**(ನಾ). ರಕ್ತಧಮನಿಯು ಪ್ರಾರಂಭವಾಗುವ ಸ್ಥಳ; ನಾಡಿಯ ನೆಲೆ : ಮೊಲೆ ಬದಿ ತಿಗ ಬೆನ್ನು ತಲೆಯೊಳುದಿಸಿ ತೋರ್ಪ ಸಲೆ ನಾಡಿ ಮೂಲವ ತಿಳಿದು ಗೆಲವಿತ್ತು ಸುಸಿಲಿಂಪುಗಲಿಸಿ ಕಾಣಿಪರು ಪೂವಿಲುಗಾಜಿ ನಾಗವಾರ್ಥವನು (ಛಂದಸಾ. ೨೯೭). [ ನಾಡಿ₁ + ಮೂಲ ]

**ನಾಡೀಕೂಟ** (ನಾ). [ಜ್ಯೋತಿ] ವಿವಾಹಕ್ಕೆ ಮೊದಲು ವಧೂವರರ ಜಾತಕದ ಆಧಾರದ ಮೇಲೆ ನೋಡುವ ಹನ್ನೆರಡು ಕೂಟಗಳಲ್ಲಿ ಒಂದು : ನಾಡೀಕೂಟವೇ ಕೂಡದಿದ್ದರೆ ಮದುವೆಯ ಮಾತು ಮುಂದುವರಿಸುವುದು ಬೇಡ (ರೂಢಿ). P ನಕ್ಷತ್ರಗಳನ್ನು ಮೂರುವರ್ಗಗಳಾಗಿ ವಿಂಗಡಿಸಿದೆ. ವಧೂವರರ ನಕ್ಷತ್ರಗಳು ಒಂದೇ ವರ್ಗಕ್ಕೆ ಸೇರದೆ ಹೋದರೆ ನಾಡೀಕೂಟವಿದೆ ಎಂದು ತಿಳಿಯಬೇಕು. 'ದ್ವಾದಶ ಕೂಟ' ಪರಾ. [ ಸಂ. ]

**ನಾಡೀಚಕ್ರ** (ನಾ). ದೇಹದಲ್ಲಿರುವ ಎಲ್ಲ ನಾಡಿಗಳ ಸಮೂಹ: ಗಗನ ತುರ್ಯಾರೂಢ ಮಗನಿಗೆ ಮಿಗಿಲು ಪೇಳಿಯೆ ಬೋಧಿಸಿದನಾ ನಿಗಮ ಸಮ್ಮತಿಯಿಂದೆ ನಾಡೀಚಕ್ರ ವಿವರಣೆಯ (ಗಗಶಾ. ೯ ಸೂಚನ).
[ ಸಂ. ]

**ನಾಡೀಪರೀಕ್ಷೆ** (ನಾ). ನಾಡಿಯ ಮಿಡಿತವನ್ನು ಕಂಡುಹಿಡಿಯುವಿಕೆ : ನಾಡೀಪರೀಕ್ಷೆ ಆಡು ಬಲ್ಲುದೇ ? (ಗಾದೆ). [ ಸಂ. ನಾಡೀಪರೀಕ್ಷಾ ]

**ನಾಡೀಯಂತ್ರ** (ನಾ). ಗಳಿಗೆಯನ್ನು ಕಂಡುಹಿಡಿಯುವ ಸಾಧನ; ಸಮಯವನ್ನು ಕಂಡುಹಿಡಿಯುವ ಉಪಕರಣ : ಅವರು ಉಪಯೋಗಿಸುತ್ತಿದ್ದ ಉಪಕರಣಗಳು ಇವು. (೧) ನಾಡೀಯಂತ್ರ (Sun-dial). (೨) ಗೋಳಯಂತ್ರ (Sphere) (ಶಿಲ್ಪಶಾ. ೦೦೩). [ ಸಂ. ]

**ನಾಡೀವ್ರಣ** (ನಾ). ಗುದದ್ವಾರದಲ್ಲುಂಟಾಗುವ ಒಂದು ಬಗೆಯ ಹುಣ್ಣು ; ಭಗಂದರ ; ನಾರುಹುಣ್ಣು : ಹಾವುಮೆಕ್ಕೆಬೇರಂ ನೀರಲ್ಲಿ ಅರೆದು ಪೂಸೆ ನಾಡೀವ್ರಣ ಮೊದಲಾದುವು ಮಾಣ್ಗುಂ (ವಿವ್ಯ.ವಿ. ೦೦೫). 'ನಾಳಿವುಣ್' ಪರಾ. [ ಸಂ. ]

**ನಾಡೀಶೋಧನ** (ನಾ). [ಯೋಗ] ನಾಡಿಯ ಪರಿಶುದ್ಧಿ,-ಸ್ವಚ್ಛತೆ : ಸಾಧಕನು ಈ ಕ್ರಮವನ್ನು ಅನುಸರಿಸಿದರೆ ಉತ್ತಮಾಧಿಕಾರಿಯಾಗಿದ್ದ ಪಕ್ಷದಲ್ಲಿ ಮೂರುತಿಂಗಳಿಗೆ ಪ್ರಾಣಾಯಾಮಸಿದ್ಧಿಯಾಗಿ ನಾಡೀಶೋಧನವಾಗುತ್ತದೆ (ಭಾರದ. ೦೬೨). [ ಸಂ. ]

**ನಾಡು, ನಾಂಡು** (ನಾ). ೧. (ಕಾಡಲ್ಲದ) ಜನವಸತಿಯುಳ್ಳ ಪ್ರದೇಶ,-ಭೂಭಾಗ: "ನೀವೃತ್, ಜನಪದಃ, ದೇಶಃ, ಉಪವರ್ತನಂ–ಈ ೪ ನಾಡು" (ಹಲಾಯು. ೯೭-೦೨೯); "ಎಸೆವ ನೀವೃಜ್ಜನವದಂ ದೇಶಮೆನೆ ನಾಡ ಪೆಸರಕ್ಕು" (ಮಂಗರಾ. ೫೭-೨) ; ನಾಡ ಕಾಡ ಬೆಳಸಿಂಬೆಳಸಾ ವಿಷಯಾಂತರಾಳದೊಳ್ (ಪಂಪಭಾ. ೧-೫೪) ; ನಾಡುಗಳೆರಸನಿದೆಂಬೊಂದಾಡಂಬರದಿಂದೆ ಸತ್ತಿಗೆತ್ತಿದುವೆನೆ ಕಣ್ಗಾಡುಂಬೊಲನಾದುವು ಬೆಳ್ಗಾಡಿನೊಳಲರ್ದೆಸೆವ ಬಯಲ ಬೆಳ್ದಾವರೆಗಳ್ (ಚಂದ್ರಪ. ೧-೯೯) ; ಮುನ್ನಿರ್ದ ಕಾಡೆಲ್ಲಮೆಸೆವ ನಾಡಾಗಿರಲ್ಕೆ ಮನದೊಳ್ಕೊಂಬಬನಾಂತಂ (ಶ್ರಮಿಛಾ. ೨೯-೩೨). ೨. ದೇಶ; ರಾಜ್ಯ ; ರಾಷ್ಟ್ರ : ಕಾವೇರಿಯಿಂದಮಾ ಗೋದಾವರಿವರಮಿರ್ದ ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ (ಕವಿರಾ. ೧-೩೬) ; ಪನ್ನೆರಡು ವರ್ಷಂಬರೆಗಮಾ ನಾಡೆ..ಳನಾವೃಷ್ಟಿಯಾಗಿ ಮಹಾರೌದ್ರಪಸವಮಕ್ಕುಂ

(ವಡ್ಡಾರಾ. ೪೮-೯) : ಆ ನಾಡೊಳಗ್ರಹಾರಂ ಧೂನಾರೀಕುಚತಟಾಗ್ರಹಾರಂ ವಿಪುಳಶ್ರೀನಿಲಯಮೆನಿಸಿ (ಪಂಪಶಂ. ೮-೧೫) : ನಾಡುಂ ನಂಟರ್ಕಳುಂ ನಮ್ಮಯ ಪರಿಜನಮುಂ ನಾಮುಮೀ ಬುದ್ಧಿ ನಿಮ್ಮೊಳ್ ಕೂಡಲ್ ಸೈತಿರ್ಪ ಸೈಪಿನ್ನೊಡರಿಸದು (ಮುಹಾನೇ. ೧೧-೮೩) : ನಾಡಾಡಿಯಂತೆಯೇ ಮಾಡಿಬಿಟ್ಟರು ಇವಗೆ ನಾಡೆಲ್ಲ ಹುಡುಕಿದರು ಈಡಾರ ಕಾಣೆ (ಪುರಂದ. ೧-೨೦೫-೬) : ಚೆನ್ನಾಗಿ ಒಣಗಿದ ಮೇಲೆ . . . ದೂರದೂರದ ನಾಡುಗಳಿಗೆ ಮಾರಾಟದ ಸಲುವಾಗಿ ಕಳುಹುತ್ತಾರೆ (ಮುಂಬಯಿ. ೯-೫೫); ಬಡವಗೆ ನಾಡ ಮಾತ್ಯಾಕೆ ? (ಗಾದೆ). ೩. ಗ್ರಾಮಾಂತರ ಪ್ರದೇಶ; ಹಳ್ಳಿಗಾಡು. ೪. ಭೂಮಿ ; ನೆಲ : ನಗಿಸಿದರು ನಾಡನು, ಕಡಿದು ಕಗ್ಗಾಡನು (ಕನ್ನಬಾ. viii ಪ್ರಸ್ತಾವನೆ). ೫. ಆಡಳಿತ ಸೌಕರ್ಯಕ್ಕಾಗಿ ಮಾಡಿರುವ ದೇಶದ ವಿಭಾಗ : ನರಿದಾವಿ[ಳ]ನಾಡುಳ್ ಮೃಗೇಶನಾಗೇನ್ದ್ರಭೀಳಭ್ರೂಟಹರ ಪೊರ್ (ಮೈಅರಿ. ೦೯೩೬, ೦೬-೩ ; ಕು. 460) : ಇನ್ದ್ರಾಪಾಯ್ಯಂ ನಾಡಾ ನಾಳುತ್ತಿರೆ ಪುರಿಗೆಱೆನಾಡ ಸರಟಪುರದಾಯ್ದುದಿಮ್ಬುರುಮಿಟ್ಟು ನಾಡಯಿಸೆ (ಎಇ. XXI, ೩೫-೪ ; 883) ; ಚೇರ ಮತ್ತು ಪಾಂಡಿಯ ರಾಜ್ಯಗಳು ನಾಡು ಎಂದರೆ ಪ್ರಾಂತ್ಯವಾಗಿ. . .ವಿಭಾಗಿಸಲ್ಪಟ್ಟದ್ದುವು(ದಭಾಇ. ೦೦೬) : ನಾಡಿನೊಡೆಯ ಭರಮಹೆಗ್ಗಡೆ ರಾಜ್ಯದ ಮಹಾದಣಾಯಕನಿಗಾಗಿ ಸರ್ವ ಸಿದ್ಧತೆಗಳನ್ನೂ ಮಾಡಿದ್ದನು (ಸವತಿ. ೬೫). ೬. ಒಂದು ದೇಶದ ಆಡಳಿತ; ಸರ್ಕಾರ : ಆಹಾರ ವ್ಯವಸ್ಥೆ ಮುಂತಾದವುಗಳಿಗೆ ನಾಡು ಎಷ್ಟು ವ್ಯಯ ಮಾಡಿದರೂ ವ್ಯರ್ಥವಲ್ಲ(ಶ್ರೀದ. ೩೮೨). ೭. ಸಾಮಾನ್ಯಜನ: ನಾಡ ಹಿಡಿದಾಡುವ ಕೇಡಿಗದೈವವ ಬಗೆಯದಿರಮ್ಮ (ಶಿವಗೀ. ೦೬೦-೮೦೦) : ನಾಡ ಹಂತಿಯಲಳುಕುವರ್ಜುನನೆ (ಕುವ್ಯಾಕ. ೪-೨೨); ನಾಲಿಗೆ ಒಳ್ಳೇದಾದರೆ ನಾಡೆಲ್ಲ ಒಳ್ಳೇದು (ಗಾದೆ). ನಾಂಡು : ೫. ವೆಂಗೀನಾಣ್ಡುವಿಷಯ ನಿವಾಸಿನೋ ರಾಷ್ಟ್ರ(ಷ್ಟ್ರ) ಕು(ಕೂ)ಟಪ್ರಮುಖಾನ್ (ಇಅ. XIII, ೨೪೯-೨೦ : ?). ೭. ನಾಂಡು ಬರದು ನಟ್ಟ ಸಿಲಾಸಾಸನ (ಸಾಇಇ. IX_ii, ೪೦೮-೪೦ : 1864).

ನಾಡುನಾಡು(ದ್ವಿರುಕ್ತಿ) : ತಿಳಿವಡೆದು ಸುಕುಮಾರವೈವಾಹಮಂ ಬೀಱೆ ನಾಡುನಾಡೊಳಗೆಲ್ಲಮಿಾಯುತ್ಸವಂ ನೋಡೆ (ನಂಚಿರ. ೫-೯). ನಾಡ ಕಥೆ = ಒಂದು ದೇಶದಲ್ಲಿ ಪ್ರಚಲಿತವಾದ ಕಥೆ ; ಇತಿಹಾಸದ ಆಧಾರವಿಲ್ಲದಿದ್ದರೂ ಜನರು ಹಿಂದಿನಿಂದಲೂ ಹೇಳುತ್ತಾ ಬಂದಿರುವ ಕಥೆ ; ಜಾನಪದ ಕಥೆ : ಇಂಥ ಅಲ್ಪ ಸ್ವಲ್ಪ ಸಾಮಾಗ್ರಿಯಿಂದ ಅಷ್ಟೇನೂ ಪರಿಣಾಮಕಾರಿಯಲ್ಲದ ನಾಡ ಕಥೆಯಿಂದ ಈಸ್ಕಿಲಸ್ ಏನು ಮಾಡಲು ಸಾಧ್ಯ ? (ಬದ್ಯಪ್ರ. vi ೬೬೩೪). ನಾಡ ಕಬು = ಒಂದು ಬಗೆಯ ತೆರಿಗೆ (?) : ಎಲಗೂಡಿ ನಾಡ ಕಬು ಕಲವೆ ಕುವರಿ ಕೋಹು ಮಕ್ಕ ಹಕ್ಕಲು ಬಾಲದೆರೆ (ಮೈಅರಿ. ೧೬೩೪, ೫೮-೨೦ ; 1434). ನಾಡಕರಣ, ನಾಡಕರಣೆ, ನಾಡಕರ್ಣ, ನಾಡಕರ್ಣೆ, ನಾಡ್ಕರ್ಣ = ೧. ಮುಖಂಡ ; ಮುಂದಾಳು : ದೇಶವಿಟಾರಿಗಳುಂ ನಾಡಕರಣಂಗಳುಂ (ಬೆಂಕಳಾ. ೦೯೨೯, ಹುವಿಲಾಗುಂದ ೨೦೦-೫೫ ; 1167) ; (ಲೋಕಸ. ೪೪); ದೇಶಕುಲಕರ್ಣಿ ನಾಡಕರ್ಣಿ ಬಾಳಪ್ಪನ ಭಕ್ತಿ (ಇಎ. ೦೯೫೦, ಹಾನಗಲ್, ೧೨೬-೭ ; 1735). ೨. ಒಂದು ಮನೆತನದ ಹೆಸರು ; ಕುಲನಾಮ : ಕರಣಿ (ನಾಡ ಕರಣಿ), ಶ್ಯಾನುಭಾಗ . . . ಮೇಲಿತ್ತ ಹೆಸರುಗಳನ್ನು ಜಾತಿಗೆ . . . ಗೌರವಕ್ಕೆ ಸಂಬಂಧಿಸಿದವುಗಳೆಂದು ಮೂರು ವಿಭಾಗಗಳಾಗಿ ವಿಂಗಡಿಸಬಹುದು (ತುಳುನಾ. ೧೮೪) ; ನಾಡ್ಕರ್ಣಿ ರಾಮರಾಯರ ಹಿರಿಯ ಮಗಳು ಸುಮಿತ್ರೆಗೆ ನಾಳೆ ಮದುವೆ (ಮೂಕುದಾ. ೨೧೫). ನಾಡ ಕಾಲುವೆ = ಜನರಿಗೆ ಉಪಯೋಗವಾಗದ ಕಾಲುವೆ,- ನಾಲೆ: ಮೂಢರಂದದೊಳೂರ ಗುಪ್ಪಲಿಯನ್ನು ಕೊಂಡು ನಾಡ ಕಾಲುವೆಯ ತಿದ್ದುವರೆ (ಮೋಹತ. ೬-೮). ನಾಡ ಕುದುರೆ,ನಾಡ ಗುದುರೆ = ನಾಡಿನಲ್ಲಿ ಹುಟ್ಟಿದ ಕುದುರೆ ; ದೇಶೀಯಾಶ್ವ ; ನಾಟಿ ಕುದುರೆ : ಹೊಲೆಯ ಕುದುರೆ ಪಡಿಲೆಯ ಕುದುರೆ ನಾಡ ಕುದುರೆಗೆ ಪ್ರತಿ ಗದ್ಯಾಣಂ ಒಂದಕ್ಕಂ ಬೇಳೆ (ಎಕ. V, ಬೇಲೂರು. ೬೫-೧೧೧ ; 1382) : ಜಾತಿತುರಂಗಮಾವಳಿವ ಹೊಳೆಗಳೆಮ್ಮ ನೀತಿನಿಪುಣ ನರಪತಿಯ ಮಾಕಿನೊಳಹವನೆ ನಾಡಗುದುರೆಯಾಳ್ವ ಭೂತಳಾಧಿಪರವರ್ಗಣೆಯೆ (ಕುರಾಪಾಂ. ೧೦-೧೯). ನಾಡ ಪೋಡಿ= ನಾಡಿಗೇ ತಿಳಿದ ಕೆಡುಕ ; ಮಹಾದುರುಳ ; ಎಲ್ಲರಿಗೂ ತಿಳಿದಂಥ ದುಷ್ಟ : ನಾಡ ಪೋಡಿಗಳು ವ್ಯಾಸನ ವಚನ ನಂಬದೆ ಮೂಢಗರ್ವರು ಗುರುವೆನಿಪ (ವ್ಯಕುಂವ. ೧-೬೦). ನಾಡ ಗಾದೆ = ದೇಶದಲ್ಲಿ ಪ್ರಚಲಿತವಾದ ಗಾದೆ; ನಾಣ್ನುಡಿ : ವಸುಧೆಯೊಳು ಪೊಡಮಡಲು ದೇಗುಲಂ ಜರ್ದ ನುಡಿ ಪಸರಿಸುವ ನಾಡ ಗಾದೆಯ ತೆಱದಿ ನಿಮ್ಮ ಸೇವಿಸ ಬಂದ ನಮಗಾಯ್ತು ನರಕವು (ಸಿದ್ಧರಾ. ೧-೨೭). ನಾಡಗಾರ = ದೇಶದ ಪ್ರಜೆ : ಬಳ್ಳಿ ನೀ ನಾಡಗಾರರಿಗೆ ನೆರವಾಗಿ (ಹಳ್ಳಿಯ. ೬೧). ನಾಡ ಗಾವುಂಡ = ನಾಡಿನ ಒಡೆಯ,-ಪ್ರಭು : ಇದಾಗವಱೆ ಗಲ್ಪಸೆಗುತ್ತನಾಡ ಗಾವುಣ್ಡನು ಎತ್ತಿಕೊಳ್ಳ (ಮೈಅರಿ. ೧೯೪೬, ೩೦ : 1067). ನಾಡ ಗಾವುಂಡಿ = ಒಬ್ಬಾತನ ಹೆಸರು : ಚಿನ್ನಗಾವುಣ್ಡರ ಮಗ ನಾಡಗಾವುಣ್ಡ ಗಾವುಣ್ಡಗೆಯ್ವನ್ದು (ಎಕ. X, ಮಾಲೂರು. ೯೪-೮ ; ಕು. 950). ನಾಡ ಗೀತೆ = ೧. ನಾಡಿನ ಹಿರಿಮೆಯನ್ನು ಸಾರುವ ಹಾಡು, - ಪದ : ಅಂದಿನ ಕಾರ್ಯಕ್ರಮವು 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' ಎಂಬ ನಾಡ ಗೀತೆಯೊಂದಿಗೆ ಆರಂಭವಾಯಿತು (ರೂಢಿ). ೨. ದೇಶಭಕ್ತಿಗೀತೆ : 'ಜನಗಣಮನ' ಎಂಬ ನಾಡಗೀತೆಯ ನಂತರ ಅಂದಿನ ಸಭೆ ಮುಕ್ತಾಯವಾಯಿತು (ರೂಢಿ). ನಾಡ ಗುಡಿ = ರಾಷ್ಟ್ರಧ್ವಜ : ನಮ್ಮ ನಾಡ ಗುಡಿಯ ನೋಡ ನೋಡಿರಣ್ಣ ಹೇಗಿದೆ ! (ಕಪಪು. ೨-೩೬). ನಾಡ ಚಲ್ಲವತ್ತ= ಸುಳ್ಳುಗಾರನಾದ ವಂಚಕ; ನಂಬಿಸಿ ಮೋಸಮಾಡುವವನು : ಕೆಮ್ಮಗೆ ನಾಡ ಚಲ್ಲವತ್ತರ ನುಡಿಗೊಳ್ಳದಿರ್ (ಪಂಪಭಾ. ೯-೪೨). ನಾಡ ಜಂಬುಕ = ತುಚ್ಛ ವ್ಯಕ್ತಿ ; ದಡ್ಡ ; ಕೀಳು ಮನುಷ್ಯ : ಕಣ್ಣೀರವನನ್ನರಿಯಲಾರದ ನಾಡ ಜಂಬುಕ (ಚಟ್ಯಅ. ೦೯೫-೨೨). ನಾಡ ಜನ = ಸಾಮಾನ್ಯ ಜನ : ಹರಿಭಕ್ತರನ್ನು ಕುರಿತು ಕನಕದಾಸರು ನಾಡ ಜನರುಗಳಂತೆ ನಡೆಯರು, ನುಡಿಯರು . . ಎಂದಿದ್ದಾರೆ (ಧಾರದ. ೪೦೨). ನಾಡ ಜೂದು = ೧. ತುಚ್ಛವಾದ ಜೂಜು, - ಪಗಡೆಯಾಟ. ೨. ಮೋಸದ ಜೂಜು : ಇದು ಲಾಕ್ಷಾಗೇಹದಾಹಕ್ಕಿದು ವಿಷಮವಿಷಾನ್ನಕ್ಕಿದಾ ನಾಡ ಜೂದಿಂಗೆ . . . ಎಂದೋವದೆ ಪೊಯ್ದಂ (ಗದಾಯು. ೮-೧೯). ನಾಡಡವಿಗೋಡಗ = ಸಾಮಾನ್ಯವಾದ ಕಾಡುಕಪಿ : ಕಡಲ ಮಧ್ಯದ ಖಳನೊಡನೆ ಕೈಹೊಡೆದುದಲ್ಲಿಗೆ ತೆತ್ತಿಗರು ನಾಡಡವಿಗೋಡಗ ವಾಳು ಕುದುರೆಗಳಸುರವಿಗ್ರಹಕೆ (ಕುವ್ಯಾಅ. ೨೨-೫೧). ನಾಡ ತಂದೆ = ದೇಶಕ್ಕೆ ತಂದೆಯಂತೆ ಇರುವವನು ; ರಾಷ್ಟ್ರಪಿತ : ಹರಿಜನರ ಬಳಗ ಉಳಿದವರ ಒಳಗೆ ಬಳಸಿದೆಯೊ ನಾಡ ತಂದೆ (ಸೂರ್ಯಪಾ. ೧೪-೩). ನಾಡ ತಕ್ಕ = ದೇಶಭಾಗದ ಮುಖಂಡ ; ಸುತ್ತುಮುತ್ತಿನ ಪ್ರದೇಶದ ಜನಕ್ಕೆ ಮುಖಂಡ : ನಾಡ ತಕ್ಕ ಸುಬ್ಬಯ್ಯಮೋಲಿಗೆ ಕುಲದ ಅಭಿಮಾನ ಹೆಚ್ಚು (ಹುಲಿಪಾ. ೬೮). ನಾಡ ತಕ್ಕಾಮೆ = ನಾಡಿನ ಮುಖಂಡ ಪದವಿ,-ಅಧಿಕಾರ : ಹಾಲೇರಿವಂಶದ ಅರಸರ ಆಡಳಿತ ಪ್ರಾರಂಭವಾಗುವ ಮುನ್ನ ರೂಢಿಯಲ್ಲಿದ್ದ ನಾಡ ತಕ್ಕಾಮೆ ಮತ್ತು ಗ್ರಾಮ ತಕ್ಕಾಮೆಗಳನ್ನು ಊರ್ಜಿತಕ್ಕೆ ತಂದರು (ಹುಲಿಪಾ. ೮೪). ನಾಡ ತೊತ್ತು = ದೇಶದ ಸೇವಕ ಸರ್ವರ ಕರುಣದ ಶಿಶು ನಾನು, ನಾಡ ತೊತ್ತು (ಕಒಸಾ. ೧೪೬). ನಾಡ ದೇವಿ = ೧. ನಾಡಿನ ಅಧಿದೇವತೆ. ೨. ಕನ್ನಡ ಭಾಷೆಯ ಅಭಿಮಾನಿ ದೇವತೆ ; ಭುವನೇಶ್ವರಿ : ಮುಂಜಾನೆ ನಾಡ ದೇವಿಯ ಮೆರವಣಿಗೆಯು ವೈಭವದಿಂದ ನಡೆಯುವುದು (ಕಪಪು. ೫-೧೨). ನಾಡ ದೈವ=ಕ್ಷುದ್ರದೇವತೆ: ದೆಸೆಗೆಟ್ಟು ನಾಡ ದೈವಂಗಳಿಗೆ ಹಲುಬಿದಡೆ ನೊಸಲ ಬರಹವ ತೊಡೆದು ತಿದ್ದಲಳವೆ (ಕನಕ. ೫೪-೩). ನಾಡ ಧಡ್ಡಿ = ಏನೂ ತಿಳಿಯದ ಮೂಢ ;

ಮಹಾಮೂರ್ಖಹೆಂಗಸಂ : ಕಣ್ಣೀರು ಸುರಿಸಲಿಕ್ಕೆ ಈಗೇನು ಆಗೇದೆ ಧಡ್ಡಿ – ನಾಡ ಧಡ್ಡಿ (ದಾಸಕೃ. ೦೦೩). ನಾಡ ನರಿ = ಬಡನರಿ ; ಹೇಡಿ ನರಿ : ರಿಪುವಾಹಿನಿಯನಿಱಿಯದೆ ನಾಡ ನರಿಯವೊಲೆನಗೆ ನೀ ಹಲುಗಿರಿಯೆ ಬಿಡುವೆನೆ (ಕುಮಾವ್ಯಾ. ೬-೧೯). ನಾಡ ನಾಲಗೆ = (?) : ಪಟ್ಟಣಸಾಮಿ ಮಹ ದೇವಸೆಟ್ಟಿ ನಾಡ ನಾಲಗೆ ಬಮ್ಮಿಸೆಟ್ಟಿಯೊಳಗಾದ ಸಮಸ್ತ ನಖರಂಗಳುಂ ಸಂತೆಯ ಆಯಮಂ ಸಲಿಸುವರು (ಎಕ. XII, ತಿಪಟೂ. ೪೮-೫೦ ; 1214). ನಾಡ ನಾಲಗೆಗೆಳೆಯ = ಸಾಮಾನ್ಯವಾಗಿ ಮಾತಿನಲ್ಲಿ ಮಾತ್ರ ಸ್ನೇಹಿತ ನಾಗಿರುವವನು ; ಕೆಲಸಕ್ಕೆ ಹಿಂದೆಗೆಯುವವನು : ಸವಿಮಾತುಗಳ ನಿನ ಗಾಡುವವರಿಗೆ ಚಿತ್ತಗೊಡದಿರು ಹಿಸುಣ ಹೊಗಿಸಱಿರು ನಾಡ ನಾಲಗೆಗೆಳೆಯ ರೆಂಬುದ ಮಾಡದಿರು (ಕುಮಾವ್ಯಾ. ೯-೧೪). ನಾಡ ನುಡಿ = ೧. ಗಾದೆ ; ಲೋಕೋಕ್ತಿ ; ನಾಣ್ಣುಡಿ : ಹಾಡಿ ಹಡದಾಡಿ ಹೋಗಾಡಿದಂ ಕಡೆಗೆಂಬ ನಾಡ ನುಡಿಯಂತೆ (ಸೋಮಶ. ೦-೭೭). ೨. ಕೀಳುಮಾತು : ಪೊಂದುವ ಸಂಧಿಯ ನುಡಿಗಳನಾಡದೆ ಸಲ್ಲದ ನಿಲ್ಲದ ನಾಡ ನುಡಿಗಳನೆಮ್ಮವರ್ ನೋವಂ ತಿರೆ ನುಡುವಾತುಗಳಂ ಗಲಪುವಯ್! (ರಾಮಾಶ್ವ. ೦೪೩-೩೯). ನಾಡ ಪದ = ನಾಡಿನಲ್ಲಿ ಪ್ರಚಲಿತವಾಗಿರುವ ಹಾಡು,–ಗೀತೆ ; ಜನಪದಗೀತೆ : ವಾಲ್ಮೀಕಿಯ ಕಾಲಕ್ಕೆ ರಾಮಾಯಣದ ಕಥೆಯು ದೇಶದಲ್ಲೆಲ್ಲ ನಾಡ ಪದಗಳ ರೂಪದಲ್ಲಿ ಹಬ್ಬಿ ಹರಡಿರಬೇಕೆಂದು ಪಾಶ್ಚಾತ್ಯವಿದ್ವಾಂಸರು ಊಹಿಸುತ್ತಾರೆ (ಭಾರದ. ೪೭). ನಾಡ ಪಾಲ = ನಾಡಿನ ಪ್ರಭು,–ಮುಖಂಡ: ಬೆಳ್ಳರೆಶೀಮೆ ಹೊಸೂರ ನಾಡ ಪಾಲ ಮೂಡಲ ದೈಲ ಗ್ರಾಮದಲ್ಲೂ . . . ಭೂಮಿ ಯಂನ್ನು ಮೂಲಕ್ಕೆ ಮಾಡಿಕೊಂಡು (ಮೈಆರಿ. ೦೯೩೪, ೯-೩ ; 1690). ನಾಡ ಪೆರ್ಗಡೆ, ನಾಡ ಹೆಗ್ಗಡೆ = ನಾಡ ಪಾಲ : ತೊಳೆಕಲೆಯ ಸಿರಿಯಮ ಸೆಟ್ಟಿಯುಂ ನಾಡ ಪೆರ್ಗಡೆ ಹಮ್ಮೆಸೆಟ್ಟಿ [ ಯುಂ ] (ಎಇ. XIX, ೩೭-೦೫ ; 1144) ; ನಾಡ ಹೆಗ್ಗಡೆ ತಡಮಾಡದೆ ಕುದುರೆಯನ್ನೇರಿ ಹೋದನು (ಸಿಪತಿ. ೫೭). ನಾಡ ಪ್ರಭು = ನಾಡ ಪಾಲ : ನಾಡ ಪ್ರಭುಗಳ ಸನ್ನಿಧಾನದಲು . . . ಧಾರಾಪೂರ್ವ್ವಕಂ ಮಾಡಿ ಬಿಟ್ಟರು (ಎಕ. VII, ಶಿವಮೊ. ೯೭-೪೮ ; 1118) ; ನಾಡ ಪ್ರಭುಗಳು ಸ್ಥಾನಮಾನ್ಯವೊಳಗಾದ ಸಮಸ್ತಪ್ರಜೆಗಳ ಪುರಸ್ಸರದಿಂದವೂ . . . ಸಾಕಲ್ಯೇನ ಹಸ್ತಸ್ಥವಾಗಿ ಕೊಟ್ಟು (ಎಕ. XI, ಚಿತ್ರದು. ೧೨-೦೭ ; 1286). ನಾಡ ಬಾವುಟ = ನಾಡ ಗುಡಿ : ಸ್ವಾತಂತ್ರ್ಯ ದಿನದಂದು ಸರ್ಕಾರಿ ಕಟ್ಟಡಗಳ ಮೇಲೆ ನಾಡ ಬಾವುಟವನ್ನು ಏರಿಸುತ್ತಾರೆ (ರೂಢಿ). ನಾಡ ಬೇಂಟೆ = ಸುತ್ತುಮುತ್ತಿನ ಗ್ರಾಮಸ್ಥರು ಒಟ್ಟುಗೂಡಿ ಆಡುವ ಬೇಟೆ : ನಾಡ ಕಟ್ಟಳೆ ನಾಡ ಬೇಂಟೆಯಂ ಕೊರಲೊಂಕೆ (ಕಾಲೂರ. ೪೯-೭೨). ನಾಡ ಮದ್ದು = ಸ್ವದೇಶೀ ಔಷಧಿ ; ಜನರು ತಮ್ಮ ಅನುಭವ ದಿಂದ ಪ್ರಯೋಗಿಸುವ ಔಷಧ ; ನಾಟಿ ಮದ್ದು : ನಾಡ ಮದ್ದಂ ತಿಂದು ಕುತ್ತ ಕೆಡದಿರಬಹುದೆ (ಹಹಕಾ. ೧೦-೨೪). ನಾಡ ಮಾತು = ೧. ದೇಶದ ವೃತ್ತಾಂತ ; ರಾಜಕೀಯಕ್ಕೆ ಸಂಬಂಧಪಟ್ಟ ಮಾತು : ನಾಡ ಮಾತುಗಳೇತಕೋ ಸಂಗೀತವ ಪಾಡುವ ಸಮಯವೇನೊ ಗಾಡಿಗಾಱ ಶ್ರೀಪುರಂದರವಿಠಲನ ಪಾಡಿ ಪಂಥಗಳೊಡಗೂಡುವ ಸಮಯಕ್ಕೆ (ಪುರಂದ. ೩-೩೩-೩) ; ಆಡಿಗಟ್ಟಣವೇಕೆ ಬೋಡಂಗೆ ಕಬ್ಬೇಕೆ ಕೋಡಗಗ ಕೈಗೆ ಬಳೆ ಯೇಕೆ ಬಡವಂಗೆ ನಾಡ ಮಾತೇಕೆ (ಸರ್ವಜ್ಞ. ೦೩೭೪). ೨. ಗಾದೆ ; ನಾಣ್ಣುಡಿ : (ಕ). ೩. ಜನಸಾಮಾನ್ಯರ ಮಾತು ; ಯೋಚನೆ ಮಾಡದೆ ಆಡುವ ಮಾತು ; ಅಪಲಾಪ : ನಾಡ ಮಾತು ಬೇಡ ಸೆಱಗೊಡ್ಡಿ ಬೇಡು ಕೂಡಲ ಸಂಗನ ಶರಣರ (ಬಸವ. ೨೭೮) ; ನಾಡ ಮಾತೇನೊಲಿದೊಡಂ ಕೊಂಡಾಡು ಮೇಣಲ್ಲದಡೆ ಲಘುವಂ ಮಾಡಿ ನುಡಿಯದಿರು (ಬಸಪು. ೪೪-೫೭) ; ಮತ್ತೆ ಮಾಣದ ನಾಡ ಮಾತನು ಕಲಿತು ನಮ್ಮೊಡನಾಡುತಿಹರೆ (ಪ್ರಭುಲೀ. ೦೩-೦೨) ; ನಾಡ ಮಾತು ಬೇಡ ನಾಲಿಗೆ ನಿನ್ನ ಬೇಡಿಕೊಂಬೆನು ಕಂಡ್ಯ ನಾಲಿಗೆ (ಪುರಂದ. ೫-೪೮ ಪಲ್ಲವಿ) ; ಕೇಡು ಬರಲದಕಂಜೆನೆಂದೆನು ನಾಡ ಮಾತು ಗಳೇಕೆ (ನಿಜಾಗ. ೬-೭ ೨೦) ; ಬಹುಜನದ ಮುಂದೆ ಸುಳಿವಳ್ನಾಡ ಮಾತಂ ಗಳಹುವವಳ್ . . . ನಿಲ್ವಳೀ ಶಿಕ್ಷಿಸಿದೊಡೆ (ಚೆನ್ನಬ. ೫-೫೭) ; ನಾಡ ಮಾತೇಕೆ ! ಎನಗೆಂತೋ ಮೇಣುಂ ಮೇಣ್ ಕೇಳ್ವೆನೆಂಬೊಂದಾಸೆ ಪುಟ್ಟುಗುಂ (ರಾಮಾಶ್ವ. ೦೩೪-೦೭). ನಾಡ ಮಾನಸ = ಸಾಮಾನ್ಯಮನುಷ್ಯ ; ಅಲ್ಪ : ಮಱಿಪೆ ನಾಡಮಾನಸರದೇಂ ನೆರೆ ಪೋಲ್ವರೆ ಜಕ್ಕಿಸೆಟ್ಟಿಯ (ಕಇ. IV, ೦೨-೩೯ ; 1121). ನಾಡ ಮುಖ = ದೇಶದ ಮುಖಂಡ, – ಮುಖ್ಯಸ್ಥ : ತಳಗೆಯ ನಾಡಾಳುವ ನಾಡ ಮುಖಗಳು ರಣಪಟುವಗವುಡನ ಮಗ ದಾಳಿ ಗವುಡ (ಎಕ. XIV, ತಿರುಮ. ೭೮-೫೦ ; 1277). ನಾಡವರ್, ನಾಡವರು = ೧. ದೇಶದ ಜನರು ; ಪ್ರಜೆಗಳು : ಪದನಱಿದು ನುಡಿಯಲುಂ ನುಡಿದು ದನಱಿದಾರಯಲುಮಾರ್ಪರ್ಕಳ್ ನಾಡವರ್ಗಳ್ (ಕವಿರಾ. ೦-೩೮) ; ಮುನ್ನಿನ ದಿವಸಂ ನಾಡವರೆಲ್ಲಂ ಪೂಜಿಸಿ ಪೋದ ಪಟ್ಟಸತ್ತುಮಂ ಬಂಡಿಯುಮಂ ತಂದು ತೋಱಿ (ಧರ್ಮಾಮೃ. ೨-೦೯೦). ೨. ಸಾಮಾನ್ಯಜನ ; ಜನ ಸಾಮಾನ್ಯ : ಪೇರೆಯುಂ ತಪ್ಪಿಪ ಮಾನಿಸರಂ ಕಂಡೊಡೆ ಪಂಚಮಹಾ ಪಾತಕರೆಂದು ಬೈವ ನಾಡವರ ಬೈಗುಳ್ಗಳಿಂದವಿಂ (ಧರ್ಮಾಮೃ. ೯-೬೪) ; ನಾಡವರು ಅವರಿಗೆ ನರಬೇಟೆಗಾರರಾದರೂ ಎಂದು ಗೌರವಸಂಬೋಧನೆ ಯನ್ನು ಬಳಸುತ್ತಿದ್ದರು (ಹುಂಚಾ. ೦೭). ೩. ನಾಡಿನ ಮುಖಂಡರು : ಮುಂದೆ ನಾಡವರು ಆ ಹಂಡೆ ಮುಂದಕೆ ಸಾಗಿ ಹೋಗುವಾಗ (ಎಕ. VII, ಶಿವಮೊ. ೦೦೭-೨೫ ; 1576 ?). ೪. (ಕರಾ) ಒಂದು ಜನಾಂಗದ ಹೆಸರು: ಕರಾವಳಿ ಪ್ರದೇಶದಲ್ಲಿ ವಾಸಿಸುವ ಜನರಲ್ಲಿ ನಾಡವರು, ಹಾಲಕ್ಕಿ ಒಕ್ಕಲರು . . . ಒಕ್ಕಲತನದಿಂದ ಜೀವಿಸುವವರು (ಕರಪೀ. ೭) ; ನಾಡವರು ಯಾ ನಾಡ ಬಂಟರು – ಜಿಲ್ಲೆಯ ಉತ್ತರ ಭಾಗದಲ್ಲಿದ್ದು ಕನ್ನಡ ಮಾತನಾಡುವ ವರು (ತುಳುನಾ. ೫೦). ನಾಡ ವಾರ್ತೆ = ನಾಡಿನ ಮಾತು ; ಲೋಕಾಭಿ ರಾಮವಾದ ಮಾತು ; ಲೌಕಿಕವಾದ ಮಾತು : ರೂಢಿಯೊಳಗೆ ನಮ್ಮ ಪುರಂದರವಿಠಲನ್ನ ಪಾಡಿ ಪೊಗಳದೆ ನಾಡ ವಾರ್ತೆಯಾಡುವರು (ಅಗದಾ. ೦೦೦). ನಾಡವೊಪ್ಪ = ನಾಡಿನ ಪರವಾಗಿ ಹಾಕುವ, ಒಬ್ಬ ಅಧಿಕೃತ ವ್ಯಕ್ತಿಯ ಸಹಿ,–ಹಸ್ತಾಂಕನ : ಸ್ವರುಚಿಯಿಂದ ಧಾರಾಪೂರ್ವ್ವಕವಾಗಿ ಬಿಟ್ಟ ಧರ್ಮ್ಮ ನಾಡವೊಪ್ಪ ಶ್ರೀಭೀಮನಾಥ ಮಲಪರೊಳು ಗಂಡ (ಎಕ. VII, ಶಿವಮೊ. ೦೯-೦೪ ; 1309). ನಾಡ ಸೇನಬೋವ = ನಾಡಿನ ಶಾನು ಭೋಗ ; ನಾಡಕರಣಿ : ನಾಡ ಸೇನಬೋವ ಬಾಚಣ್ಣ (ಎಕ. XI, ಚಿತ್ರದು. ೧೨-೩೪ ; 1286). ನಾಡ ಸ್ವಾಮಿ = ನಾಡ ಪಾಲ : ನಾಡ ಸ್ವಾಮಿ ಶಂಕರೈಯ್ಯನು ಸೇನಬೋವ ಶಂಕರೈಯ್ಯನು (ಎಕ. VII, ಶಿಕಾರಿ. ೯೪-೦೫ ; 1094) : ನಾಡ ಹಬ್ಬ = ಏಕೀಕರಣದ ದೃಷ್ಟಿಯಿಂದ ಪ್ರಾರಂಭಿಸಿದ ದಸರಾ ಮೊದಲಾದ ಹಬ್ಬ : ತಾವು ಮಾಡಿಕೊಂಡ ನಾಡ ಹಬ್ಬದ ಯೋಜನೆಯನ್ನು ಅವರಿಗೆ ತಿಳಿಸಲು ಆತುರಗೊಂಡಿದ್ದರು (ಕಹಪು. ೫-೦೨) ; ಅವರ ಭೆಟ್ಟಿಯ ಎರಡನೆಯ ಪ್ರಸಂಗವು ಕೂಡಿ ಬಂದುದು ಎಂದರೆ . . . ನಾಡ ಹಬ್ಬದ ಕಾಲಕ್ಕೆ (ಪ್ರಬಂಧ. ೯೪) : ಅಂದು ಅಲ್ಲಿ ನಾಡ ಹಬ್ಬವನ್ನು ವಿಜೃಂಭಣೆಯಿಂದ ಆಚರಿಸಲಾಯಿತು (ಆರೋಗ್ಯ. ೦೬೦). ನಾಡ ಹಲವರು, ನಾಡಿನ ಹಲವರು = ದೇಶದ ಮುಖಂಡರು ; ದೇಶದ ಪಂಚಾಯಿತಿಯ ವರು: ಶ್ರೀಮತು × × × ನಾಡ ಹಲವರು ಸ್ವಾಮಿತನವನು ಸೋಮೋಜರ ಸೆಟ್ಟಿಯ ಮಕ್ಕಳು ಮಂಗಟಸೆಟ್ಟಿಗೆ . . . ಕೊಟ್ಟ ಸರ್ವಮಾನ್ಯ ಹೊಲ ಏ ೧ ಗದ್ದೆ (ಮೈಆರಿ. ೦೯೩೫, ೦೦೦-೨ ; ?) ; (ದೋಕಸ. ೭೦). ನಾಡ ಹಾಡು = ನಾಡಗೀತೆ ೧ : ಕಾರ್ಯಕ್ರಮದ ಮೊದಲಿನಲ್ಲಿ ನಾಡ ಹಾಡು ಹಾಡುವುದು ವಾಡಿಕೆ (ರೂಢಿ). ೨.=ನಾಡಗೀತೆ ೨ : ನಾಡ ಹಾಡು ಹೇಳುವಾಗ ಎದ್ದು ನಿಲ್ಲಬೇಕು ಎಂದು ಮಕ್ಕಳಿಗೆ ಹೇಳಿಕೊಡಬೇಕು (ರೂಢಿ). ನಾಡ ಹಾದಿ = ಹಳ್ಳಿಯಿಂದ ಹಳ್ಳಿಗೆ ತಿರುಗಾಡಲು ಮಾಡಿಕೊಂಡಿರುವ ಕಾಲುದಾರಿ; ಹಳ್ಳಿಗಾಡಿನ ದಾರಿ ; ನರ್ತನ ಮಾಡುವ ಕಾಲು ನಾಡ ಹಾದಿಯನ್ನು

ಮೆಟ್ಟೀತೆ! (ಶಾಂತಲಾ. ೧೨೨). **ನಾಡ ಹಾನೆ** = ಒಂದು ಅಳತೆ : ಶಾಸನಗಳಲ್ಲಿ ಬರುವ ನಾಣ್ಯಗಳೂ ಅಳತೆಗಳೂ:- ಗದ್ಯಾಣ (ಗದ್ಯಾಣ) . . . ಹಾನೆ, ನಾಡ ಹಾನೆ, ಕಂಚಿನ ಹಾನೆ (ತುಳುನಾ. ೨೬೧). **ನಾಡ ಹುಚ್ಚ** = ಏನೇನೂ ತಿಳಿಯದವನು ; ಬಹಳ ದಡ್ಡ : ಹಾಗೆ ಕೇಳೋ ಹುಚ್ಚಾ, ನಾಡ ಹುಚ್ಚಾ (ಹನ್ನೊಂದ. ೧೬). **ನಾಡ ಹೆಣ್ಣು** = ಹಳ್ಳಿಯ ಹೆಂಗಸು : ಆವ ತಿಳಿಬಗೆಯಿರ್ಪ ನಾಡ ಹೆಣ್ಣಲ್ಲಿ (ಕಾಂಚೀರ. ೨೬-೧೫). **ನಾಡಾಳ್ವೋನ್**= ದೇಶವನ್ನು ಆಳುವವನು ; ನಾಡ ಪ್ರಭು : ಇದಾ ನಾಡಾಳ್ವೋನಾನುಂ ಊರಾಳ್ವೋನಾನುಂ ಊರಾ ಒಕ್ಕಲನುಂ ಅಟ್ದೋರ್ ಪಂಚಮಹಾಪಾತಕ ... ಅಕ್ಕುಂ (ಎಕ. VI, ಚಿಕ್ಕಮ. ೯೨-೬; ಸು. 750 ?). **ನಾಡುಗಳ್**=ನಾಡಿನ ಅಧಿಕಾರ ನಡೆಸುವ ಮಹಾಜನರು: ಶ್ರೀವರಾಣಕೇಶ್ವರದೇವರ ಶ್ರೀಕಾರ್ಯ ನಡೆವಂತಾಗಿ ನಾಡುಗಳ್ ಕೊಟ್ಟ ಆಯದಾಯವಾವುದೆಂದಡೆ (ಮುಂಬಲಾ. X, ೨೪೯-೬೩ ; 1219). **ನಾಡು ಬೀಡು** = ದೇಶ ಮತ್ತು ವಾಸಸ್ಥಳ ; ಅಖಂಡ ದೇಶ : ಸಂಪ್ರೀತಿಯಾನು ಸುಜನರಲಿ ನಿರ್ಮಳನೀತಿಯನು ಪರಿವಾರಪುರಜನ ನಾಡುಬೀಡಿನಲಿ . . . ಅಖಿಳಜ್ಞಾತಿಗಳಲೆಚ್ಚ ಟಿಕೆಯೊಳಗಿಹುದು (ಕುಮ್ಯಾಸ. ೧೦-೧೯) ; ನಾಡುಬೀಡೆನಗಾಯ್ತು ವಶ ಖಯುಖೋಡಿಯಿಲ್ಲದೆ ಶಕ್ರಪದದಲಿ ಜಾಡಿಸುವೆನದನೇನ ಹೇಳುವೆನೆನುತ ಬಿಸುಸುಯ್ದ (ಕುಮ್ಯಾಅ. ೦೩-೬೪) : ಎಲ್ಲಗಳಿದಬ್ಧಿಯೆನಲ್ ಪಡೆಯೇಂ ಕಡಂಗಿತೋ ನಡೆದುದು ನಾಡುಬೀಡು ಗುಡಿಗೋಹುರಗಳ್ ಪುಡಿಯೇಟ್ ಭೋರೆನಲ್ (ಚಿಕವಿ. ೨-೧೦೫). **ನಾಡುಬೀಡುಗ** = ದೇಶದಲ್ಲಿ ವಾಸಮಾಡುವವನು; ದೇಶದ ಸಾಮಾನ್ಯ ಪ್ರಜೆ ; ನಾಡುಗ : ಕಾಣ್ಕೆ ಕೊಂಡು ಭಕ್ತಿಭರದಿಂ ಪುಗುವ ನಾಡುಬೀಡುಗರುಂ (ಚಿಕವಂ. ೧೨೧-೧೬).

[ ದೇ.II ತಮಿ. ಮಲ. ನಾಟು; ತುಳು. ನಾಡ್, ನಾಡು: ತೆಲು. ನಾಡು; ಗೊಂಡಿ. ನಾರ್; ಕುಇ. ನಾಟೊ ]

**ನಾಡುಅಕ್ರೋಟು** (ನಾ). ಒಂದು ಬಗೆಯ ಮರ : ನಾಡುಅಕ್ರೋಟು, ಅಲ್ಯೂರೈಟಸ್ ಗಿಡ (ವ್ಯಶಿಗಿ. ೪-೬೮).

[ ನಾಡು + ಅಕ್ರೋಟು (< ಅಕ್ರೋಡ) ]

**ನಾಡುಗ, ನಾಡಗ** (ನಾ). ೧. ಸಾಮಾನ್ಯ ಮನುಷ್ಯ ; ಸಾಧಾರಣ ವ್ಯಕ್ತಿ : ಆಡಿಸ ಹಿಂಡಾನೆಯ ಹಿಡಿವಂತಾ ರೂಢಿವಡೆದ ಬಲಯುತನಂ ನಾಡುಗರೆಯ್ದಿ ಹಿಡಿಯೆ (ಪ್ರಭಂಚಿ. ೨-೧೫೦) ; ಎಂದನಾ ಫಣಿಭೂಷಣನು ಶೂಲವೇಱನೇ ಲೋಕರಕ್ಷಣದಕ್ಷ ಲಕ್ಷ್ಮಿಯಧಿಪತಿಯುೞಿದ ನಾಡುಗರ ಪಾಡೇನು ಕೇಳ್ಕೆಂದನ (ಸಮ್ಯಕೌ. ೪-೩೧). ೨. ನಾಡನ್ನಾಳುವವನು ; ದೊರೆ : ನಾಡುಗರಿಗೆ ಸೇನೆದೋಱಿ ಗೆಲ್ದನು ಯುದ್ಧ ಮಾಡುವರಾವಗಿದಿರುಂಟೆ (ಭರತ. ೪೯-೧೩೬). ೩. ದಡ್ಡ; ಮೂಢ; ಅಜ್ಞ : ನಾಡುಗರೊಳು ವರ್ತಿಸದಿರು (ಯೋಗಾಂವಿ. ೫-೩). **ನಾಡಗ** : ೩. ಕೇಳು ನಾಡಗರೊಲಿದು ಗಾಜಿನ ಮಾಲೆಯನು ಕೊಳ್ವಂತೆ (ಸ್ವರೂಪಾ. ೨-೧೬). [ ನಾಡು + –ಗ₂ ]

**ನಾಡುಗವುಡ, ನಾಡಗೌಡ** (ನಾ). ಗ್ರಾಮದ ವ್ಯವಹಾರಗಳಲ್ಲಿ ತೀರ್ಪು ನೀಡುವ ಮುಖಂಡ ; ಹಳ್ಳಿಯ ಮುಖ್ಯಸ್ಥ ; ಪಟೇಲ : (ಜ). **ನಾಡುಗೌಡ** : ನಾಡುಗೌಡನ ಪಂಚಾಯ್ತಿಯಲ್ಲಿ ಫಿರ್ಯಾದಿ ಅಪರಾಧಿಗಳಿಬ್ಬರೂ ತಮ್ಮ ತಮ್ಮ ಪರವಾಗಿ ವಾದಿಸುವವರನ್ನು ನೇಮಿಸಿಕೊಳ್ಳುವ ಅಧಿಕಾರವಿತ್ತು (ಹುಟ್ಟಿಹ. ೧೬) ; ಪಟೇಲನಿಗೆ–ಪಟೇಲ, ಗೌಡ, ನಾಡುಗೌಡ ಎಜಮಾನ, ರಡ್ಡಿ, ಪೆದ್ದಕಾಪು, ಮಾನ್ಯಕರಣಂ, ಮಣಿಗಾರ ಅಥವಾ ಅಡಿಗಾರ, ನಾಯಿಡು ವಗೈರೆ ಹೆಸರುಗಳುಂಟು (ಗ್ರಾಮೂಕ. ೧).

[ ನಾಡು +ಗವುಡ₁ (< ಗಾಮುಂಡ) ]

**ನಾಡುಗಾಣೆ** (ನಾ). ಒಂದು ಊರಿನ ಹೆಸರು : ಸೂಟ್ಟೋರುವ್ ನಾಡುಗಾಣೆಮ್ ಪ್ರಥುತರ ಮಿಡಿಗೇ ಸೂಳಿಶ್ರೈಲೇಂದ್ರ ದುಗ್ಗೇನನ್ನಾಮ್ (ಮ್ಯಅರಿ. ೧೪೨೧, ೧೦-೬೭ ; 967). [ ? ]

**ನಾಡುಗಾದೆ** (ನಾ). ಒಂದು ದೇಶದಲ್ಲಿ ಪ್ರಚಲಿತವಾಗಿರುವ ಮಾತು ; ಲೋಕೋಕ್ತಿ ; ನಾಣ್ಣುಡಿ : (ಕತುನಿ. ೫. I, ೬೫).

[ ನಾಡು + ಗಾದೆ ]

**ನಾಡುಗೌಡ** 'ನಾಡುಗವುಡ' ನೋ.

**ನಾಡುತಟ್ಟು** (ನಾ). ಸಾಮಾನ್ಯವಾದ ಕುದುರೆ ; ಗಿಡ್ಡಕುದುರೆ : ಅವನು ತನ್ನ ಹೊಲದ ಹತ್ತಿರ ಮೇದುಕೊಂಡಿದ್ದ ನಾಡುತಟ್ಟಾದ ಒಂದು ಕುದುರೆಯನ್ನು ಹಿಡಿದುಕೊಂಡು ಬಂದು . . . ಕಾಣಿಕೆಯಾಗಿ ಒಪ್ಪಿಸಿದನು (ನಗೆಗ. ೫೦). [ ನಾಡು + ತಟ್ಟು₂ ]

**ನಾಡುನುಡಿ** (ನಾ). ಜನಸಾಮಾನ್ಯರಲ್ಲಿ ಬಳಕೆಯಲ್ಲಿರುವ ಮಾತು : ಆಳ್ವಾರರ ಹಾಡುಗಳು ನಾಡುನುಡಿಯಲ್ಲಿದ್ದುದರಿಂದ ಇವು ಜನಸಾಮಾನ್ಯರಲ್ಲಿ ಹರಡುವುದಕ್ಕೆ ಅವಕಾಶವಾಯಿತು (ಶಾರದ. ೩೯೯).

[ ನಾಡು + ನುಡಿ₂ ]

**ನಾಡುನೇಗಿಲು** (ನಾ). ಹಳ್ಳಿಗರು ಉಪಯೋಗಿಸುತ್ತಿದ್ದ ನೇಗಿಲು : ಈಗ ಸಾಮಾನ್ಯವಾಗಿ ಉಪಯೋಗದಲ್ಲಿರುವ ನಾಡುನೇಗಿಲು ಎಷ್ಟೋ ಶತಮಾನಗಳಿಂದ ಬಳಕೆಯಲ್ಲಿದೆ (ವ್ಯವಮ. ೮).

[ ನಾಡು + ನೇಗಿಲು (<ನೇಗಿಲ್) ]

**ನಾಡುಪ್ಪು** (ನಾ). ಸಾಮಾನ್ಯವಾದ ಉಪ್ಪು,–ಲವಣ : ಸಾವಿರಪಾಲಿಗೆ ಸಾಧಾರಣವಾಗಿ ಇರುವ ೩೪–೩೫ ಪಾಲು ಉಪ್ಪಿನಲ್ಲಿ ಕಲ್ಲುಪ್ಪು ಅಥವಾ ನಾಡುಪ್ಪು (ಸೋಡಿಯಂ ಕ್ಲೋರೈಡ್) ೨೭ ಭಾಗದಷ್ಟಿದೆ (ಭೂವಿವ. ೮೬).

[ ನಾಡು + ಉಪ್ಪು₁ ]

**ನಾಡುಬಾದಾಮಿ** (ನಾ). ಒಂದು ಬಗೆಯ ಮರ : (ವ್ಯಶಿಗಿ. ೬೪-೦೫೦೨).

[ ನಾಡು + ಬಾದಾಮಿ ]

**ನಾಡುಮಿಂಡ** (ನಾ). ದುರಾಚಾರಿಯಾದ ವಿಟ ; ದುಷ್ಟವಿಟ ; ಅನೀತಿವಂತ : ತೊಂಡಿಲ ಮುಡಿದುಕೊಂಡು ತಮ್ಮ ತಮ್ಮ ಗಂಡರ ಹಿಂದುಗೊಂಡು ನಾಡುಮಿಂಡರ ನೋಡುತ್ತಲಿ ಇಂದು ನಮ್ಮ ಹುಲಿ ಹೋಯಿತ್ತು (ಬಸಹ. ೬೦-೧೬೭). [ ನಾಡು + ಮಿಂಡ₁ ]

**ನಾಡುವಟ್ಟ** (ನಾ). ಒಂದು ಬಗೆಯ ತೆರಿಗೆ : ನಾಡೊಳಗಳ ಹಲವ × × × ಇಂತಹ × × ನಾಡುವಟ್ಟವಾಗಿ ನಾಳು (ಎಕ. XIV, ಮುಂಡ್ಯ. ೧೩೭-೨೦ ; 1278). [ ನಾಡು + ವಟ್ಟ₂ ]

**ನಾಡುವಡೆ** (ಕ್ರಿ). ನಾಡನ್ನು ಹೊಂದು ; ನಾಡಿನ ಒಡೆತನವನ್ನು ಪಡೆ : ಸಿರಿವಂತನ ಕಯ್ಯಂ ಪಿಡಿದ ಬಡವೆಯಂತೆ ನಾಡುವಡೆದ ಪಸಾಯಿತನಂತೆ (ಧರ್ಮಾಮ್ಯ. ೫-೮೫). [ ನಾಡು + ಪಡೆ₁ ]

**ನಾಡುವಿಡಿ** (ಕ್ರಿ). (ಆಕ್ರಮಣದಿಂದ) ದೇಶವನ್ನು ಸ್ವಾಧೀನಕ್ಕೆ ತೆಗೆದುಕೊಳ್ಳು,–ವಶದಲ್ಲಿಟ್ಟುಕೊಳ್ಳು : ನಾಡುವಿಡಿಯದರಸುಗೆಯ್ದನೆಂಬಂತೆ ಭೃತ್ಯವಿಲ್ಲದೂರನೂಡುವೆನೆಂಬಂತೆ ಮದವಣಿಗನಿಲ್ಲದೆ ದಿಬ್ಬಣಂಬೋಪೆನೆಂಬಂತೆ (ಧರ್ಮಾಮ್ಯ. ೪-೫೦). [ ನಾಡು + ಪಿಡಿ₁ ]

**ನಾಡುಶಾನಭೋಗ** (ನಾ). ಹಲವಾರು ಹಳ್ಳಿಗಳ ಶಾನುಭೋಗ,–ಕರಣಿಕ : (ಜ). [ ನಾಡು + ಶಾನಭೋಗ (<ಸೇನಬೋವ) ]

**ನಾಡೂರ್** (ನಾ). ನಾಡಿನಲ್ಲಿರುವ ಊರು,–ಗ್ರಾಮ : ಮುಂಚದೆ ಪಿಂಚದೆ ಬಳೆದು ಪಿರಿಂಚಿಸು ಕೆಯ್ಪಡಿವೊಲಾದುವಾ ನಾಡೂರ್ಗಳ್ (ಪಂಪಭಾ. ೮-೫೧) : ಚೆಲ್ವಿಂಗಾವಾಸಮೆನಿಪ್ಪವೊಪ್ಪುವಾ ನಾಡೂರ್ಗಳ್ (ಮಲ್ಲಿಪು. ೨-೨೬) ; ಕಾಣಿಕೆಯಂ ತಂನಾಳ್ವ ನಾಡೂರ್ಗ್ಗಳೊಳು . . . ಕೊಟ್ಟರ್ (ಎಕ. VII, ಶಿಕಪು. ೪-೯೨ ; 1123). [ ನಾಡು + ಊರ್ ]

**ನಾಡೆ** (ಅ). ಹೆಚ್ಚಾಗಿ ; ಚೆನ್ನಾಗಿ ; ಬಹಳವಾಗಿ ; ವಿಶೇಷವಾಗಿ ; ಅತಿಶಯವಾಗಿ : "ನಾಡೆಯೆಡೆಯಾವಗಂ ನೆಱೆ ನೀಡುಂ . . . ಇವಪ್ಪಯದೊಳಧಿಕಾರ್ಥಂ" (ಕಮುದ. ೩೦೪) : ಸದಭಿಸ್ತುತಮಪ್ಪೊಂಕಂದದ

ನಡುವಣ ನಾಡೆ ನಾಡೆ ಕನ್ನಡದ ತಿರುಳ್ (ಕವಿರಾ. ೧-೩೭) : ವಿಶ್ವಸೇನ ಮಹಾರಾಜನ ಮಹಾಸಾಮಂತರ್ಕಳುಂ ಪರಿವಾರಮುಮೆಲ್ಲಂ ಕುದುರೆ ವಡಿವಣ್ಣಿಯಂ ನೋಡಿ ನಾಡೆಗೆಟ್ಟುಪೋಗಿ (ಚಂದ್ರಾ. ೫೩-೨೫) ; ಮಾಡುವ ಕಿಡಿಸುವ ಗಸಣಿಗೆ ನಾಡೆಯುಮದು ಪೊಣಗು (ಅದಿಪು. ೧-೪೫) ; ಚಿಂತಿಪ ಪಾರ್ವನ ಶೋಕದೊಂದು ಪೊಂಪುಳಿಯನೆ ನೋಡಿ ನಾಡೆ ಕರುಣಂ ತನಗಾಗಿರೆ (ಪಂಪಭಾ. ೩-೨೫) ; ಕರುಮಾಡಂ ನಾಡೆ ಚೆಲ್ವಂ ತಳೆದುದು ಪಲವುಂ ಬಳ್ಳಿಮಾಡಂಗಳಿಂದೆ (ಕಾದಂಪೂ. ೪೮೭) ; ನಾಡೆ ಸೊಗಯಿಪ್ಪ ಕಿಯ್ಯಿಂ . . . ಸುರದಂತಿಯಂತೆ ನಿಂದತ್ಯಾಗಿಗಳ್ (ನೇಮಿಪು. ೧೧-೫೩) ; ಬೇಡು ವರವನು ವಾಗನೆ ನುಡಿನುಡಿ ನಾಡೆ ಮೆಚ್ಚಿದೆನೆಂಬ ಹರಿಯನು ನೋಡಿ ನಕ್ಕನು (ನಿಭಾಗ. ೭-೮-೪೭) ; ಇಂತು ಭೂಜಾತೆ ಗರ್ಭಿಣಿಯಾದ ಳಾಗೆ, ನಾಡೆ ನಾಡೆ ಸಂತಸಗಡಲೊಳೋಲಾಡುತಿರ್ದುದು (ರಾಮಾಶ್ವ. ೨೧-೦೭).

ನಾಡೆಯುಂ = ನಾಡೆ : ಕೌರವರ್ಗಿದು ನಾಡೆಯುಂ ತಿಣುಕನಾಗಿಸದೇಂ ಗಳ ಸಯ್ಯು ಪೋಕುಮೇ (ಪಂಪಭಾ. ೨-೯೭) ; ಇರುಳೆಲ್ಲಂ ಜಾಗರಮಿರ್ದು ನೇಸಱ್ ಮೂಡೆ ನಾಡೆಯುಂ ಪೊಱ್ಱಿರ್ದುರ್ ಎಂತುಂ ಬರವಂ ಕಾಣದೆ (ಪಂಚತಂ. ೨೫೦-೧೯) ; ಬಾನೆಡೆ ನಾಡೆಯುಂ ಪೊಡವಿಯಂತಿರೆ (ಕಬ್ಬಿಗಾ. ೨೫೧). 'ನಡ್ಕೆ' ಪರಾ. [P ತಮಿಳಿನಲ್ಲಿ 'ನಾಡಂ' ಎಂಬುದಕ್ಕೆ 'ಪರೀಕ್ಷಿಸು, ಆಲೋಚಿಸು, ಹುಡುಕು' ಎಂಬರ್ಥವಿದೆ]

**ನಾಡೆಯ** (ನಾ). (?) : ಆವಿನಹಳಿಯ ಬಲೆನಾಡವೆರಡುನಾಡನೂ ಕೂಡೆ ಕೊಂಡು ಅಂಕಿಯನಾಯಕನ ನಾಡೆಯನ ತೊಳಲೊಳಗೆ ಕೊಂಡುದುನಾ ದೇವಿ ತಂಮರಸ (ಎಕ. VIII, ಸಾಗರ. ೭೦-೨೨ ; 1278 ?). [ ? ]

**ನಾಡೆಱೆಯ, ನಾಂಡೆಱೆಯ** (ನಾ). ನಾಡಿನ ಒಡೆಯ : ನಾಡೆಱೆಯಂ ಭರತಂ ಬೆಸಸಿದ ತಱಿನಂ ಕೇಳ್ (ಪಂಪರಾಮಾ. ೭-೪೯) ; ಎಱಗಿಸಿ ತನ್ನ ಚಾರು ಚರಣಾಂಬುರುಹದ್ವಿತಯಕ್ಕೆ ಮಿಕ್ಕ ನಾಡೆಱೆಯರನೆಲ್ಲರಂ (ವರ್ಧಮಪು. ೧-೦೦೪) ; ನಾಡೆಱೆಯನ ಕೆಲದೊಳ್ ತೀಡಿದತ್ತು ತಂಬೆಲರಾಗಳ್ (ಕಬ್ಬಿಗಾ. ೮೭) ; ಬೇಡುವರನು ಮನ್ನಿಪ ಬಿಡುಗಣ್ಣರ ನಾಡೆಱೆಯನ ಮಗನಂತೆ ಗಾಡಿವಡೆದ ರೂಪಿನ ಗರುವನ ನೀ ನೋಡು ಕಳಿಂಗನನಬಲೆ (ಜೀವಂಸಾಂ. ೦೦-೮೪) : ಭುವನೇಶನೆಂಬೊರ್ವಂ ನಾಡೆಱೆಯರ . . . ಅರಸುಗೆಯ್ಯುತಿರ್ದಂ (ಅದ್ಭುತ. ೨೨-೦೭). **ನಾಂಡೆಱೆಯ** : ಸ್ವಸ್ತಿಶ್ರೀ ನಾಣ್ಡೆಱೆಯರಾ ಏರ್ವೆಕೊಳ್ವಲ್ಲಿ ಸತ್ಯೊನ್ ಕಾಸೂರನ್ (ಎಕ. X (S), ಚಿಂತಾಮ. ೩೪-೦ : ಕಿನಿಯ ಕತ).
[ ನಾಡು + ಎಱೆಯ ]

**ನಾಡೊಡೆಯ** (ನಾ). ೧. = ನಾಡೆಱೆಯ : ಜನಪತಿಗೆ ನೀಡಲೆರದುವಂಗೀಸಿ ಕೊಂಡಾ ನಾಡೊಡೆಯನುರಿವುರಿಯೊಳಗೆ ಪತ್ರಂಗಳಂ ಹಾಯ್ಕಿ (ಬಸವು. ೫೦-೩೭) ; ಮಾಡಿತಿಲ್ಲವರಾಧವನು ಹರಿ ಕ್ರೋಡ ಖಡ್ಗಿ ಕುರಂಗಿಗಳಿರೆ ನಾಡೊಡೆಯ ರಾಮಂಗೆ ಹೇಳುವುದೆಂದಳಾ ಸೀತೆ (ತೊರರಾ. ೩-೦೦-೭) ; ಬಿಡುವರಲ್ಲ ಕುಮಾರಿಸುನು ನಾಡೊಡೆಯರೆಂಬಾ ದೂತನಾ ಬಿಲುನುಡಿಗೆ ಕವಡದೆ (ಸಾಳ್ವಭಾ. ೧೮-೬೩) ; ನಾಡೊಡೆಯನಂಗನೆಯು ಕಾಣದೆ ಬಳಲುತ (ಅನಂರಾ. ೩-೬-೮) ; ಧರಣಿಸುತೆಯಂ ಕಂಡು ನಾಡೊಡೆಯನೆಡೆಗೆ ಪೋದವೆಂ (ವೆಂಕರಾ. ೫-೫-೬) ; ನಿನ್ನ ನಾಡೊಡೆಯ ನೀನ್ ; ವೈರಿಯನು ತೊರೆಯೈ (ಕೋಗಿಲೆ. ೪೮-೩). ೨. ದೇಶವಿಭಾಗದ ಅಧಿಕಾರಿ ; ಪ್ರಾಂತಾಧಿಕಾರಿ : ಕನ್ನರದೇವನ ನಾಡೊಡಯಪ್ಪರಿಣತ[ರಾ]ಕ್ಕರ್ಣನ್ನುಕ[ಕ್ಕೆ] (ಸೌಇಇ. XI-1, ೪೫೮-೦೯ ; 960). [ ನಾಡು + ಒಡೆಯ$_1$ ]

**ನಾಡೊವಜ, ನಾಡೋಜ** (ನಾ). ದೇಶದ ಗುರು ; ನಾಡಿನ ಜನರ ಮನ್ನಣೆಗೆ ಪಾತ್ರನಾದವನು ; ಲೋಕಮಾನ್ಯ : ಪುರಾಣಕವಿಯುಂ ಧರೆಗಾಗಿರೆಯುಣ್ಮೆ ಪೊಣ್ಮುವೀ ದೇಸಿಗಳುಂತೆ ನಾಡೊವಜನಾದನೊ ಪೇೞ್ ಕವಿತಾಗುಣಾರ್ಣವಂ (ಪಂಪಭಾ. ೧೪-೬೨). **ನಾಡೋಜ** : ರಾಜ್ಯಚಿಹ್ನಂ ಗಳ್ದೆರಸಿಂತು ನಡೆತಂದು ರಾಜ್ಯಲಕ್ಷ್ಮಿ ಬಳೆದ ಸಂತೋಷದಂತವುನೆಯ್ದೆ ಪತ್ತಿದಳ್ ಸಹಜಮನೋಜನಂ ನಾಡೋಜನಂ (ಪಂಪಭಾ. ೧೩-೧೦೮) ; 'ಸಕಳಾವನೀತಳಜನ'ವನ್ನು ಮೆಚ್ಚಿಸುವ 'ನಾಡೋಜ' ನವನು (ನಾಡೋಜ. ೩೩೭) ; ನಾಡೋಜನ ಮುಂದೆ ನಾನು ತಪ್ಪಾಡೇನೆ ? (ದಾನಚಿಂ. ೬೩).
[ ನಾಡು + ಒವಜ (<ಒವರು) ]

**ನಾಡೊಳ್ಪು** (ನಾ). ದೇಶದ ಹಿತ-ಮೇಲ್ಮೆ ; ಪ್ರಜೆಗಳ ಕ್ಷೇಮ : (ಪೂರ್ವಕಾಲದಲ್ಲಿ) ಪ್ರಜಾಕ್ಷೇಮ ; ಲೋಕಹಿತ ; ನಾಡೊಳ್ಪು (Common-Wealth. ಇಂಕಸಿ). [ ನಾಡು + ಒಳ್ಪು ]

**ನಾಡೋಜ** 'ನಾಡೊವಜ' ನೋ.

**ನಾಡೋರ** (ನಾ). (ಉಕ)ಉಪ್ಪುಮಾಡುವ ಕಸಬನ್ನು ಅವಲಂಬಿಸಿರುವ ಒಂದು ಜನಾಂಗ : ಉಪ್ಪುಮಾಡುವ ನಾಡೋರರು ಮುಂತಾದ ಜಾತಿ ಯವರು . . . ಎಕರೆಗೆ ಸುಮಾರು ೩ ರೂಪಾಯಿಯಂತೆ ತೆರಿಗೆಯನ್ನು ಕೊಡುತ್ತಾರೆ (ಕಭಾಗ. ೫೮೨). [ ? ]

**ನಾಡ್ಯರ್ಣಿ** 'ನಾಡು' ಪರಾ.

**ನಾಣ್$_1$, ನಾಣು** (ನಾ). ೧. (ಹೆಂಗಸಿಗೆ ಗಂಡಸಿನ ಎದುರಿನಲ್ಲಿ ಒದಗುವ) ನಾಚಿಕೆ ; ಸಿಗ್ಗು ; ಲಜ್ಜೆ : "ಲಜ್ಜೆ ನಾಣ್" (ಕರ್ಣಾನಿ. ೬೨) ; ಲಲಿತಾಂಗಿಯ ಶಂಕೆಯಂ ಭಯಂ ಬೆರಸಿದ ನಾಣುಮಂ ಕ್ರಮದೆ ಪಿಂಗಿಸು ಬೇಸಱಿದಿರ್ ಗುಣಾರ್ಣವಾ (ಪಂಪಭಾ. ೩-೭೭) ; ಚುಂಬಿಸುವಾಗಳ್ ಶಬ್ದವಿಲ್ಲ ವ್ರಣ ನಖ ಮುಖದಂತಕ್ಷತಂ ನಾಣ್ಗೆ ಪಕ್ಕಾಗಿಸದು . . . ಸಂಕಲ್ಪಸಮಾಯೋಗಂ ವಿಯೋಗಾಕುಲ ಕುಲಲಲನಾಜೀವನಾಧಾರಮಲ್ತೇ (ಕಾದಂಉ. ೩೦೯) ; ಜಡ ಜಾಂಬಕೆ ಮಂಡಿಸಿದಳ್ ನಡೆತಂದೆಡದಲ್ಲಿ ನವ್ರಮುಖಿ ನಾಣಿಂದಂ (ಉದ್ಭಟ. ೮-೦೦೦) ; ನಾಣಂ ತೂಂಗಿಸಿ ಮುಗ್ಧೆಗೆ ಜಾಣಂ ಕೈಗೋಳಿಸುವಂತೆ (ಕಮಿದ. ೬೯ ಪ್ರಯೋ) ; ನುಣ್ಮುಡಿ ಬಣ್ಣಾಱುದು ಮೆಲ್ಲೆರ್ದೆಯೊಳ್ ನಾಣ್ಮೊಳೆತುದು (ಜಯನಗಾ.೩-೨೫). ೨. ಅವಮಾನ ; ಸಂಕೋಚ. 'ನಾಣ್ಗೆಯ್' ಪರಾ. ೩. ಸ್ತ್ರೀಪುರುಷರ ಗುಹ್ಯೇಂದ್ರಿಯ : "ಗುಹ್ಯಂ=ಸ್ತ್ರೀ ಪುರುಷರ ನಾಣ್" (ಶಾಶಕ್ಕ. ೬೬) ; ಎಡೆವಿಡದ ದೆಯ್ಮುದ್ರ್ವಾಲದೊಳಿದದಪುವಂ ತಮ್ಮ ಮತ ದೊಳಂ ಕಂಡುಮದಂ ಕಡೆಗಣಿಸುವರಂತದೆ ದಲ್ಮಡೆಗಣಿಸರೆ ತಮ್ಮ ಕಾಯ ನಾಣಂ ಕಂಡರ್ (ಸಮಪ. ೮-೨೨೭) ; ನಾಣ ಮಱೆಯ ನೂಲು ಸಡಿಲೆ ನಾಚುವರು ನೋಡಾ ಗಂಡು ಹೆಣ್ಣೆಂಬ ಜಾತಿ (ಮುಖಾದೇ. ಬ. ೭೪-೧೮೪) ; ಜುಗುಪ್ಸೆಯಾಂತ ನಾಣಡಿಗಡಿಗೆಲ್ಲರುಂ ಪೊರಳ್ವ ಮುಚ್ಚುಗೆವಾಸುಗುಟ್ಟಿಪ್ಪ ಯಾದ ಮೆಯ್ ಬಿಡದಿರಪಂತು ಸೂಳೆಯರ ಸಂಗಮನೊಲ್ವರೊ ಖೂಳ ಮಾನವರ್ (ಕಾವ್ಯಸಾ. ೧೦೦೪). **ನಾಣು** : ೧. "ನಾಣು, ನಾಚಿಕೆ, ಸಿಗ್ಗು, ಎವ(ಹೇವ), ಎಗ್ಗು" (ಕಂನುಡಿ. ೮೭) ; ನಾಣೆಂಬುದು ನಾರಿಯರಿಗಾಭರಣವು (ಕುಂಠಸಾಂ. ೩೭-೦೭) ; ಜಾಣೆ ಮಗುವನೆತ್ತಿಕೊಂಡು ನಾಣ ಮರೆತು ಓಡಿಬಂದು (ಹಲುಪು. ೧೯-೦೨) ; ಹೊಸನಾಣು ಹೊಸಮುನಿಸು ಹೊಸದಾಗೆ ಸತಿಯು . . . ಹೊಸದೊಂದು ರತಿಯು (ಗಹಿ. ೩೮-೭). 'ನಾಣುಗೆಡು' ಪರಾ. ೩. ಗಲ್ಲ ವಲ್ಲು ಬಂಧುರದಧರ ನಾಣು ನಖ ವಸುರುತೆಳು ಪಾರು ಕಂಗಳು . . . ಮೆರೆದವು (ನವಮೋ. ೨೨-೩೩).

**ನಾಣ ದಾಣ** = ಯೋನಿ ; ಭಗ : "ವಚ್ಚೀ – ನಾಣ ದಾಣು" (ಶಾಶಕ್ಕ. ೨೫೦). **ನಾಣ ನುಡಿ** = ಅವಮಾನಕರವಾದ ಮಾತು : ಈಗಳೋ ಇಂತಪ್ಪ ನಿಲ್ಲಮಂದೇ ಆದೆನ್ ! ಪುಡಿಯೊಳಗೆ ಪುಡಿಯ ಪುಡಿಯಾದೆನ್ – ನಾಣ ನುಡಿಯಾದೆನ್ (ಅಕ್ಕತ್ತಾ. ೧೭-೩೭೮). **ನಾಣನೊಗು** = ನಾಚಿಕೆಯನ್ನು ಬಿಡು : ನಾಣನೊಕ್ಕು ಗತಭೀತಿಯನಪ್ಪುವ . . . ಅಸಿಯಳದೇಂ ಮನಂ ಬಿಡದಳೋ ಚದುರಿಂ ಸುದತೀಮನೋಜನ (ರಸರ. ೧-೩೫). **ನಾಣ ಪುತ್ತು** = ಲಜ್ಜಾಸ್ಪದವಾಗಿರುವಿಕೆ : ಪೇಸುಗೆಟ್ಟೀ ನಾಣ ಪುತ್ತಪ್ಪುಟಿಜಗಳದೊಳೇ ನಮ್ಮ ತರ್ಕ್ಕಾಮೆರ್ಯಿಯುಂತೇ (ಪಾಂತಿಪು. ೭-೮೭) ; **ಅಱೆಕಮುಳ್ಳರ್**

ಕಲ್ಲೊಲ್ ಕಡೆದರ್ಪವರೇಘುಚಿತಮೆ ಮೃಡಾನಿಯಂ ಕರವೆ ನಾಣ ಪುತ್ರಿನ ರೂಪಮ (ಸಮಪ. ೧೦-೭೪); ದುರ್ಗಂಧಕ್ಕಿರಲಾಱದೆ ಲೆಂಕರ್ ದಂಡಂ ಗೊಂಡರಂತೆ ತಂತಿಸುತ್ತುಂ ಪೆಜಿಂಗೆ . . . ಬಾಣಸಿಗರಿದೇನ್ನಾಣ ಪುತ್ರೆಂದು ಪೋಗೆ (ಧರ್ಮಾಮೃ. ೪-೦೩೯); ಕೇಣಕಾಱನದೇಕೆಗ ಕಾವ್ಯೆ ನಾಣ ಪುತ್ರ ನೆಗೆಯಂ ನೀಂ ಬಗೆಯ್ಯ (ಶಾಬ್ದಾ.ವ. ೪೪೯). ನಾಣಿಕ ವಲಯ = ನಾಚಿಕೆಯ ಭಾಗ; ಯೋನಿ: ತನು ಕಲಿಕ್ಕೆ ಒಸರಿಸಿದ್ದ ಕಂಬಳಿಯನ್ನು ಆವಳಿಗೆ ಸರಿಯಾಗಿ ಹೊದಿಸಿ, ಇಣುಕುವಂತಿದ್ದ ನಾಣನ ವಲಯವನ್ನು ಮುಚ್ಚಿದನು (ಮಳರು. ೬೮೩). ನಾಣೊಕ್ಕ = ನಾಚಿಕೆಗೇಡಿ; ಲಜ್ಜಾಹೀನ; ನಾಚಿಕೆ ಬಿಟ್ಟವನಂ: ವಿಕಳರಂ ನಾಣೊಕ್ಕರಂ ಮಿಕ್ಕರು ಪಡೆದಾ ದೋಷನಿವಾರಣಕ್ಕೆ (ಎಕ. VI, ತರೀಕೆ. ೪೫-೬೫; 1106).

[ ದೇ.॥ ತಮಿ. ನಾಣ್, ನಾಣ; ಮಲ. ನಾಣ; ತುಳು. ನಾಣ್, ನಾಣ, ವಾಣು = ಬೆತ್ತಲೆ; ಕೊಡ. ನಾಣ; ತೆಲು. ನಾನ ]

ನಾಟ್₄ 'ನಾಟ್' ನೋ.

ನಾಣ₁ (ನಾ). ಸ್ನಾನ. 'ನಾಣಿಗೆ' ಪರಾ.

[ <ಪ್ರಾ. ಣ್ಹಾಣ. / ಸಂ. ಸ್ನಾನ ]

ನಾಣ₂ (ನಾ). ತಿಳಿವಳಿಕೆ; ಜ್ಞಾನ; ಬುದ್ಧಿ: ಏನು ಬರುವದೂ ದೇವ, ನಾಣ ನಮಗೇಟಲ್ಲ ಹಾನಿ ತಟ್ಟುವದು ಹೇಳೆನಗೆ ನಾಡೊಳಗೆ ಏನು ಶಾಂತಿ ಯನು ಮಾಡಿಸಲಿ (ಕನ್ನ.ಜಾ. ೨); ಬಾಣ ಬಿಡು ಅಣ್ಣನ ನಾಣ ನಾಸ್ತೀಲಾರೆ ರಾಗಿಯು ಕಾಳಟು ಕಸರಿಲ್ಲ ನಮ್ಮಾವರು ಈಷ್ವಾಡಿ ಬಾಣ ಬಿಡತಾರ (ಲೋಕಗೀ. ೬೬). [<ಪ್ರಾ. ಣಾಣ. / ಸಂ. ಜ್ಞಾನ ]

ನಾಣಕ (ನಾ). ೧. ಮುದ್ರೆ; ಅಚ್ಚು: "ನಾಣಕ = ಪಲವು ಬಣ್ಣದಚ್ಚುಗಳುಂ . . . ವ್ಯಾವಹಾರಿಕ ನಾಣಕವಂಗಳೋಹವಾನ್ . . . ಕೋಶಗುಣಾಃ" (ನೀತಿವಾ. ೨೫-೨). ೨. ನಾಣ್ಯ. 'ನಾಣಕಪ್ರಚಾರ' ಪರಾ. [ ಸಂ. ]

ನಾಣಕಪ್ರಚಾರ (ನಾ). ನಾಣ್ಯವನ್ನು ಚಲಾವಣೆಗೆ ಕೊಡುವುದಂ: ಇಂದಿತ ಶ್ರೀನೃಸಿಂಹಜಯಂತಿಯ ಶ್ರೀಮನ್ಮಹಾರಾಜರ ವರ್ಷವರ್ಧಂತ್ಯುತ್ಸವದ ಶ್ರೀನಾಣಕಪ್ರಚಾರದ ಸವಾರಂಭದ ಈ ಮುಮ್ಮಡಿಹಬ್ಬದ ದಿವಸ (ಸಂಸಳ. ೦೨೨). [ ನಾಣಕ + ಪ್ರಚಾರ ]

ನಾಣಯ, ನಾಣೆಯ, ನಾಣ್ಯ, ನಾಣ್ಯ (ನಾ). ೧. ಚಲಾವಣೆಗಾಗಿ ಆಡಳಿತದ ಮುದ್ರೆಯೊತ್ತಿ ತಯಾರಿಸಿದ ಚಿನ್ನ, ಬೆಳ್ಳಿ ಮೊದಲಾದ ಲೋಹದ ಬಿಲ್ಲೆ; ಕಾಸು, ರೂಪಾಯಿ ಮೊದಲಾದುವು; ಹಣ: ಅಱುವತ್ತು ಬಂದಿಗೆಯೊಳು ನಾಣಯ[ಪಾಠಾಂ. ನಾಣ್ಯ]ವನು ಕುಱುಹಿನ ಭಂಗಾರಗಳವು . . . ಮಗಗೆ ಕಳುಹಿದನು (ಕುಮಾರರಾಮ. ೪೨-೩೪); ಬೊಕ್ಕಸ ಭಂಡಾರದಿಕ್ಕೆಲದಲ್ಲಿ ಚೊಕ್ಕನಾಣಾಯ ವಸ್ತುಗಳನು ಚೆಕ್ಕನೆ ಓಡಿದಿರ್ದರರಸು ಮೆಚ್ಚಿದೊಡಾಗ ದೊಕ್ಕನೆ ಕೊಡಲೆಂದಾಗ (ಅಕ್ಕೂರ. ೨-೩೪). ೨. ಅರ್ಥವತ್ತಾದ ನುಡಿ: ವೈದಿಕಬೌದ್ಧರಿಂದಾಗಿ ಸಂಸ್ಕೃತ ಪಾಲಿಗಳ ನಾಣ್ಯಗಳು ಕನ್ನಡದಲ್ಲಿ ಬಳಕೆಗೆ ಬರತೊಡಗಿರಬೇಕು (ಕನ್ನ.ಇ. ೦೩೫). ನಾಣೆಯ: ೧. "ಉಳಿಯಬಿಳಮಾನ ನಾಣೆಯಗಳೆಂಬವು ಟಂಕಮೆನಿಕ್ಕು" (ಶಾಸಾಹ. ೧೫೦); ಪರಿಪುರಜನಗಳುತ್ರಮನಾಣ[ಪಾಠಾಂ. ಣೆ]ಯುವ ನೀಡಿದರು ದರುಶನ ಕವನಿದೇಶ್ವರನ (ಕೊರಲಾ. ೬-೩೫-೧೯). ೩. ಶ್ರೇಷ್ಠವಾದುದಂ; ಬೆಲೆಯುಳ್ಳುದು; ಸೊಗಸಾದುದಂ: ನಾಣೆಯದ ಮಟ್ಟಿ ಹಚ್ಚಡ ೧೦ ಪಟ್ಟಿ ಸೀರೆ ೧೧ (ಸೌಇಇ. IX-II, ೩೧೬-೩ ; 1532). ನಾಣೆಯ: ೧. ಬಳಿಯ ನಾಣೆಯಮಾಣ ಬಳಿಯಾಪ್ರವರ್ಗಮಂ . . . ಪದಮೂದವಳೋಕಿಸುತ್ತೆ . . . ನಡತಂದನೀಶ್ವರಂ (ಗಿರಿಕ. ೦೦-೯೯); ತೆಗೆದನು ಬಳಿಕನಕುಲದ ಪೀಳಿಗೆಯ ನೃಪರಾರ್ಜಿಸಿದ ನಾನಾಯುಗಯುಗಂಗಳ ವಾಣೆಯಂಗಳನಖಿಳವಸ್ತುಗಳ (ಕೊರಲಾ. ೦-೬-೪); ತನ್ನಯದು ನಾಣೆಯುವೆಂದು ಜಗವಱಿಯೆ (ನಿಭಾಗ. ೧೦-೨೫-೨೫); ಚಪ್ಪನ್ನದೇಶದ ನಾಣೆಯಂಗಳ ನೋಟ ತಪ್ಪದ ಚಪಲ ಸೆಟ್ಟಿಗಳು ಒಪ್ಪವಡೆದು ಕುಳಿತಿರ್ದರು (ಲೋಹಕ. ೩-೨೬); ಬಿಡಲುಪಟ್ಟ ಬೇಂಟೆಯನುಳ್ಳ ಪುರುಷನು ಪಂಚರಂಗದ ವಸ್ತ್ರ ನಾಣೆಯ ಶಿಲೆ ಲೆಪ್ಪ ಕಾಷ್ಟ ಮೊದಲಾದವರಲ್ಲಿ ಸ್ಥಾಪಿಸಲ್ಪಟ್ಟ ಜೀವಂಗಳ ಭೇದ ಮೊದಲಾದವನು ಮಾಡಲಾಗದು (ಶಾಗಾಧ. ೩೪). ೩. ಬಂಧುಗಳಾನಂದದಿಯೊಂದೀತ ಮಾಯಣಸೆಟ್ಟಿ ಎಂದು ಕರೆಯಲಾ ಪಸರೀ ಧರೆಯೊಳು ಸಂದುದು ನಾಣೆಯವಾಗಿ (ತ್ರಿಪುರಾಂ. ೨೪-೩೭೮). ನಾಣ್ಯ: ೧. ಬಾಹಿರವ ಕಳೆದು ಎಡೆನಾಣ್ಯವನುಳಿದು ಹಲವು ನಾಣ್ಯವ ಕಳೆದು ಸಲುವ ನಾಣ್ಯವ ಹಿಡಿದು ನೋಡುವ ನಯ್ಯ (ಅದಕ. ೨೭-೭೭); ಹೀಗೆ ವಿಶಾಲ ವ್ಯಾಪಾರ ನಡೆಯುತ್ತಿದ್ದರೂ ನಾಣ್ಯಗಳೇ ಕಂಡಬಂದಿಲ್ಲ (ಭಾರತ. ೦೫); ಸಹನಿಯು ೧೯೪೫ರಲ್ಲಿ ಪ್ರಾಚೀನ ಭಾರತದಲ್ಲಿ ನಾಣ್ಯಗಳನ್ನು ಎಸಗುವ ಒಂದು ಪದ್ಧತಿಯನ್ನು ಬೆಳಕಿಗೆ ತಂದು ಅದಕ್ಕೆ ಒಂದು ಪದಕವನ್ನು ಪಡೆದಿದ್ದನು (ಸತ್ಯ.ಕ. ೦೨೮). ೪. ಘನತೆ; ಗೌರವ: ಇಂಥ ಅಂಗಡಿಯ ನಾಣ್ಯವನ್ನು ಕೆಡಿಸಿ ನಾನು ಬದುಕಿರಲೆ? (ಅದೂಟ. ೮). ೫. ಸತ್ಯ; ಪ್ರಾಮಾಣಿಕತೆ: (೬). ೬. ನಯ; ಮೃದುತ್ವ: ಮಾನಿತಮಾದ ವಸ್ತ್ರದ ನಾಣ್ಯವಣಿಬದನೇನೆಂದು ಬಣ್ಣಿಸಬಹುದು (ಅನಂತ. ೧-೦೩೪); ಪೂರ್ಣಗುಣಸಂಪನ್ನೆ ಬಾರೆಂದು ನಾಣ್ಯದಿಂ ಗೊಲ್ಲ ಕರೆದನು (ಗೋಪಾಲು. ೮-೩೬). ೭. ನವಿರಾದ ಬಟ್ಟೆ; ಬೆಲೆ ಬಾಳುವ ವಸ್ತ್ರ; ತೊಡೆತ್ತು ಲಕ್ಷಣವಿರಲು ನಾಣ್ಯವನುಡಿಸಿ ನವರತ್ನಾಭರಣಂಗಳ ತೊಡಿಸಿ (ಜನ್ನವ. ೮. ೧೬೮-೩೭೭).

[ ದೇ.॥ ತಮಿ. ನಾಣಯ, ನಾಣೆಯ; ಮಲ. ನಾಣೆಯ; ತುಳು. ನಾಣ್ಯೊ; ತೆಲು. ನಾಣೆ, ನಾಣ್ಯ. / ಪ್ರಾ. ಣಾಣಕ. / ಸಂ. ನಾಣಕ./ ಮರಾ. ನಾಣೇ; ಗುಜ. ನಾಣುಂ; ಸಿಂಧಿ. ನಾಣು ]

ನಾಣಲ್ 'ನಾನಲ್' ನೋ.

ನಾಣಲು 'ನಾನಲ್' ನೋ.

ನಾಣಳ್ಕು (ನಾ). ನಾಚಿಕೆಯಿಂದ ಉಂಟಾದ ಭಯ; ಲಜ್ಜೆಯಿಂದುಂಟಾದ ಹೆದರಿಕೆ: ಮಜ್ಜನೆಬುಗದಾರೋಗಿಸಲೊಲ್ಲದಿರ್ಪರವಿವೇಂ ನಾಣಳ್ಕಿದೇಂ (ಪಂಪಭಾ. ೪-೬೩). [ ನಾಟ್₁ + ಅಳ್ಕು₃ ]

ನಾಣಟು (ಕ್ರಿ). ನಾಚಿಕೆಯಿಲ್ಲದಂತಾಗು; ಲಜ್ಜೆಯನ್ನು ಕಳೆದುಕೊಳ್ಳು: ಬಟಲದ ಪುಷ್ಪಬಾಣಹತಿಯಿಂ ಪುಳಕಂಗಳನಾನದುಣ್ಣ ನಾಣಟುಯದೆ ಜಾಣನಿಕ್ಕದ ಚಮರ್ತಱುಕಾಱದೆ ತೀರ್ದುದ ತಾನೆ ಮಯ್ಯುಟಲೆ ಕಡಂಗಿ ಮುಕ್ತಿಯೊಡಗೂಡಿದ ಪೆಂಪಿನ ಸೌಖ್ಯದಿಂಪು ಪೊಂಪುಟುಯೆನಿಸಿರ್ದ ಸಿದ್ದರವಂಗೀಗೆ ವಿಶುದ್ಧರಭೀಷ್ಟಸಿದ್ಧಿಯಂ (ಅೀಚಾವ. ೧-೪); ಕಾಣದ ಜನಂ ಬೈದು ನಾಣಟುದು ಬಿಸುಸುಯ್ದು (ಅಗಪು. ೦೭-೦೦೮ ರಗಳೆ); ಬಂದಳೊರ್ವಳ್ ನಡೆ ನೋಡಿದಲಾಗಳಂತೆ ನಾಣಟುವಿನೆಗಂ (ಕಬ್ಬಿಗ. ೩೩೩); ನಾಣಟುಯಲ್ ಮನಂ ಬೆಜಗಿನಿ ಮರವಟ್ಟಿರೆ (ಧರ್ಮ. ೬-೧೯೯).

[ ನಾಟ್₁ + ಅಟು₁ ]

ನಾಣಿ (ನಾ). ತಿಳಿವಳಿಕೆಯುಳ್ಳವನು; ಜ್ಞಾನಿ: ದುಡುಕು ಮಾಡುವರ ಬಸವೇಶ ನಾಣಿಗಳು ಹುಡುಕುವರೆ ಕದವ ಜಗದೊಳಗೆ (ಅನ್ನಜಾ. ೨೩೯).

[ <ಪ್ರಾ. ಣಾಣಿ. / ಸಂ. ಜ್ಞಾನಿನ್ ]

ನಾಣಿಗೆ (ನಾ). (ಕರಾ) ಸ್ನಾನ ಮಾಡುವ ಮನೆ; ಬಚ್ಚಲುಮನೆ; ಸ್ನಾನಗೃಹ: ಶಾಂತಾ ಹಾಗೂ ಅವಳ ನೆರೆಮನೆಯ ಆನಂದಿ ನಾಣಿಗೆಯ ಹಂಡೆಗೆ ನೀರು ತುಂಬಲೆಂದು ಹಿತ್ತಿಲದ ಬಾವಿಗೆ ಬಂದಿದ್ದರು (ಮೂರುದಾ. ೧೬೬); ನಾಣಿಗೆಯಲ್ಲಿ ನೀರು ಕಾದಿದೆ. ಏಂದು ಊಟಮಾಡಿ ಹೋಗಿರಿ (೮೦೦).

ನಾಣಿಗೆ ಮನೆ = ಬಚ್ಚಲುಮನೆ: ಯಾರೇ ಅವನು-ನಾಣಿಗೆಮನೆಯಲ್ಲಿ ಹಾಗೆ ಕಾರಿಕೊಳ್ಳುವವನು? (ಮೂರುದಾ. ೦೮೩). [ ನಾಣ₁ + -ಇಗೆ₀ ]

ನಾಣೆಯ 'ನಾಣಯ' ನೋ.

**ನಾಣಿಲ್** (ನಾ). ಒಂದು ಬಗೆಯ ಮರ; ಆಲಿವ್ ಜಾತಿಗೆ ಸೇರಿದ ವೃಕ್ಷ: ಪಂಚಾದುಂಬರ ಜಂಬ್ವಾವ್ರ ಗುಡಪುಷ್ಪಸಮನ್ವಿತಕಷಾಯದ್ರವ್ಯ ಕುಂಭಾಸ್ಯ ಜಂಬೂನೇಯುಲ ಆಮ್ರಮಾವು ಗುಡಪುಷ್ಪ ನಾಣಿಲ ಹೂವು (ಪ್ರಕಟಿ. ೪೦-೧); ನಾಣರಾಯನೆಂಬವನು 'ನಾಣಿಲ್' ಮರದಡಿಯಲ್ಲಿ ವಾಸಿಸುತ್ತಿದ್ದಿರಬಹುದು (ತುಳುನಾ. ೧೫೫). [←ತುಳು. ನಾಣಿಲ್]

**ನಾಣಿಲಿ** (ನಾ). ೧. ನಾಚಿಕೆಯಿಲ್ಲದ ವ್ಯಕ್ತಿ; ಲಜ್ಜೆಗೇಡಿ: "ನಾಣಿಲಿಯೆಂದು ಲಜ್ಜಾಹೀನಂ" (ಶಬ್ದಸಾ. ೧೮-೩೬೨); ನಾಣಿಲಿ ಪಣ್ಯಂ ಪಂದೆ ... ನಿತ್ಯರೋಗಾಕುಳನೆಂಬೀ ನಾಮ ನಾಮಾವಳಿಗೆ ನಿಳಯನಕ್ಕುಂ ವ್ರತಪ್ರಾಶಹೀನಂ (ವಡ್ಡಾ. ೧೧-೩೦); ಪಿಗೆ ನಾಣಿಲಿಯೆನಿಸಿದ ವಧು ನಗೆಗೆಡೆಯಕ್ಕುಂ ಸಮಸ್ತಜಗತೀತಳದೊಳ್ (ಕಾವ್ಯಾವ. ೨೫೭); ನಾಣಿಲಿ ಪಿಟ್ಟುರಂ ಸಿತಗನಾಟವಿಟಂ ತುದಿಗೋಡ ಪಾಟು ನಿನ್ನಾಣೆ ಗಡಾಗಡುಂ ನಿನಗೆ ಕೂರದರೊಳ್ ಬೆರಸಿರ್ಪನಾತಂ (ಲೀಲಾವ. ೨-೧೨೨); ತಲೆಗೆ ಪದರಕ್ಷೆಯುಂ ನಾಣಿಲಿ ಕಟ್ಟಿಸಿಕೊಂಡ ತೆಱದೆ ಲೋಕವಿರುದ್ಧಂ ದಲದೆನಿಸಿ ಪಡೆದ ಕೀರ್ತಿಗೆ ನೆಲೆಯಾದಂ ವಾಹಕರ್ಮಾಕರ್ಮಂ ಕಮಠಂ (ಪಾರ್ಶ್ವಪು. ೩-೬೪); ನಾಣಿಲಿಯೊಳ್ ನಿಷ್ಠುರನೊಳ್ ... ಸದ್ಗುಣಹೀನನೊಳ್ ನೆರೆವ ಕೂಟಂ ನಂಜಿನೂಟಂ (ರಾಜಶೇ. ೧೧-೦೫೦); ನಾಣಿಲಿಗಳ ತಲೆವಣ ಮಾಣ್ಕಾತಲವೋ (ಚಿಕವಿ. ೬-೨೬೭). (ಗು). ೨. ನಾಚಿಕೆಯಿಲ್ಲದ; ಲಜ್ಜೆಯಿಲ್ಲದ: ಈ ನಾಣಿಲಿ ಪಾರ್ವನನೆಟ್ಟಿದು ಕಳೆಯಿಂ (ಶಂಬರಭಾ. ೨-೪೮ ಪ); ಮುಳಿದು ಪಿಡಿದೆಟ್ಟಿದು ನಿನ್ನಾಣ್ಮನೆಪ್ಪ ನಾಣಿಲಿ ಸವಣನನೊಡಗೊಂಡು ಬಾ ಪೋಗು (ಸುಕುಮಾ. ೫-೭ ವ). 'ನಾಣಿಲಿವಾನಸ', 'ನಾಣಿಲಿವೆಣ್' ಪರಾ. [ನಾಣ್$_1$ + -ಇಲಿ$_3$]

**ನಾಣಿಲಿಗ** (ನಾ). =ನಾಣಿಲಿ ೧: ಮಹೀಪತಿಗಂ ದ್ವಿಜವಂಶಜಂಗಮೇತಱ ಕೆಳೆಯುಂತು ನಾಣಿಲಿಗರಪ್ಪರೆ ಮಾನಸರ್ (ಹಂಪಭಾ. ೨-೪೮).

[ನಾಣಿಲಿ + -ಗ$_2$]

**ನಾಣಿಲಿಗತನ** (ನಾ). ನಾಚಿಗೇಗೇಡಿತನ; ಲಜ್ಜಾಹೀನತೆ: ಒಳ್ಪನದಿ ನೀ ಪಿಡಿದ ಪಂಜು ನಿನ್ನ ನಾಣಿಲಿಗತನವನೆ ಸಾರುತಿಹುದೋ ಮರುಳೆ! (ಕಗದ್ವ. ೭೫). [ನಾಣಿಲಿಗ + -ತನ]

**ನಾಣಿಲಿತನ** (ನಾ). =ನಾಣಿಲಿಗತನ: ಶಾಂಗಿಗಟಲ್ಲ ನಾಣಿಲಿತನಂ ಬೆಂಡೇಟ್ಟ ಕಣ್ (ಚಂದ್ರಪ್ರ. ೮-೬೪); ಪಡೆವೊಡಿಂತಪ್ಪನಂ ಕೂಸನುಱೆ ಪಡೆಯದೊಡೆ ಪೊಡವಿಯೊಳ್ನಾಣಿಲಿತನಕ್ಕೆ ಪಕ್ಕಾಗರೇ (ಅರಾಚ. ೨-೫೭); ಸುಡು ನಾಣಿಲಿ ತನವಿದೆನುತೆ ವಹಾನನಿಧಾನಂ ಮನದನ್ನೆಯೊಳು ಮಾಣದೆ ಮಾಱುತ್ತರವಿತ್ತಂ (ಅದ್ಭರಾ. ೩-೭೨); ಆಗಳಿಂತು ವಿಚಾರಿಸಿ ನಂಬುಗೆವೆತ್ತು ನಾಣಿಲಿತನಂ ಮಿಕ್ಕು (ವೃಷವಿ. ೫೫-೭೦ ಪ). [ನಾಣಿಲಿ + -ತನ]

**ನಾಣಿಲಿವಾನಸ** (ನಾ). ನಾಚಿಕೆಯಿಲ್ಲದ ಮನುಷ್ಯ: ನಾಣಿಲಿವಾ[ಪಾಠಾಂ. ವನಾ]ನಸಂ, ಪಲ್ಲಿಲಿವಾಯಂ (ಭಾಷಾಭೂ. ೬-೧೫೦ ಉದಾ).

[ನಾಣಿಲಿ + ಮಾನಸ$_1$]

**ನಾಣಿಲಿವೆಣ್** (ನಾ). ನಾಚಿಕೆಯಿಲ್ಲದ ಹೆಂಗಸು: ಕೂರಿಲಿ, ಕುಡುಗೋಲ್, ಬೆಳಗಿಲಿಗಱ್, ನಾಣಿಲಿವೆಣ್ (ಶಮದ. ೧೮೬ ಪ್ರಯೋ).

[ನಾಣಿಲಿ + ಪೆಣ್]

**ನಾಣಿಸು** (ಕ್ರಿ). ನಾಚುವಂತೆ ಮಾಡು; ನಾಚಿಸು: ಆತನ ದಾದಿ ಏನಯ ಮತಿಯೆಂಬೊಳ್ ... ನೋಡಿದ ಜನಕ್ಕೆ ಭಯಮಂ ಪಡೆವೊಲ್ ನಾಣಿಸೆ [ಪಾಠಾಂ. ನಾಣ್ಚೆ, ನಾಣ್ಚಿ] ಪಡುವೊಲ್ (ವಡ್ಡಾ. ೧೦೬-೨೩); ತಮುವರೞಿಯದರ ನಾಣಿಸಿಯನ್ನ ಮೊಮ್ಮಗೆ ತಕ್ಕ ಸತಿ ಕಟ್ಟಾಣಿರತ್ನವ ತಂದೆ ಜೀಯ (ಮೋಹತ. ೪೨-೫೫). [ನಾಣ್$_1$ + -ಇಸು$_3$]

**ನಾಣು** 'ನಾಣ್$_1$' ನೋ.

**ನಾಣುಗೆಡಿಸು** 'ನಾಣ್ಗೆಡಿಸು' ನೋ.

**ನಾಣುಗೆಡು** 'ನಾಣ್ಗೆಡು' ನೋ.

**ನಾಣುಗೇಡಿಗ** (ನಾ). ಲಜ್ಜೆಗೇಡಿ; ನಾಚಿಕೆಗೆಟ್ಟವನು: ನಾಣುಗೇಡಿಗರಸುರರುಱೆ ಕಟ್ಟಾಣಿ ನೀನವರೊಳಗೆ (ತೊರವೆರಾ. ೬-೨೨-೨೬).

[ನಾಣು (<ನಾಣ್$_1$) + ಕೇಡಿಗ]

**ನಾಣುದಾಣ** 'ನಾಣ್ದಾಣ' ನೋ.

**ನಾಣುಸುಕ** (ನಾ). ಅವಮಾನಕ್ಕೆ ಅಂಜುವವನು: ಭಂಡನಾವನೀ ಖಳನು ಲೋಕದ ಭಂಡರಿಗೆ ಗುರು ನಾಣುಸುಕರ ಚಂಡಿಯಿವನಲೆ ಖೂಳನೇ ಸಾಕಿನ್ನು ಬೆಳೆಯದಿರು (ತೊರವೆರಾ. ೫-೬-೨೩).

[ನಾಣು (<ನಾಣ್$_1$) + ಸುಕ]

**ನಾಣುನುಡಿ$_1$** (ಕ್ರಿ). ನಾಚಿಕೆಯನ್ನುಂಟು ಮಾಡುವಂತೆ ಮಾತನಾಡು; ಲಜ್ಜಾಹೀನವಾದ ಮಾತನಾಡು: ನಾಣುನುಡಿದು ಕಗೆಗೆಡೆಯಾದನೆಂಬುದ ಕಾಣದೆ (ಅಂಚಕ. ೭-೪೦). [ನಾಣು (<ನಾಣ್$_1$) + ನುಡಿ$_1$]

**ನಾಣುನುಡಿ$_2$** (ನಾ). ನಾಚಿಕೆಯನ್ನುಂಟುಮಾಡುವ ಮಾತು; ಲಜ್ಜಾರಹಿತವಾದ ಮಾತು: ಹೆಣ್ಣಿಯ ನೆರವಿಗೆ ನಾಣುನುಡಿಯಿಲ್ಲದಿಹುದೆ (ಬಸವ. ೮೫). [ನಾಣು (<ನಾಣ್$_1$) + ನುಡಿ$_2$]

**ನಾಣೆಡೆ** (ನಾ). ನಾಚಿಕೆಯನ್ನುಂಟುಮಾಡುವ ಸ್ಥಳ; ಗುಹ್ಯಾಂಗ: ತಲೆ ರೋಮದಂತು ನಾಣೆಡೆ ಕುಚಮಧ್ಯಮಂ ... ಮಹಾಹಿ ಕೊಂಡೊಡೆ ಗರುಡಂಗಮುತ್ತ(ಕ್ರ)ಲಂದೆಂದೊಡೆ ಪೇಟುಟಿದರ್ಗೆ ಸಾಧ್ಯಮೇ (ಖಮದ. ೩-೪೨); ಸರಸದಿಂ ನಾಣೆಡೆಗೆಯೆರಡೊಂದೆನಿಸಲಪ್ಪ (ಜಸವ. ೧೦-೬೦); ನಾಣೆಡೆ ದ್ರವಿಸುತಿದ್ದುದು ಮಾಱೆ ಹೆಗಯ ತಾನೊಱಗಿ ದಳವಳು (ಭರತ. ೪೦-೬೦); ಸವಿಲಲ್ಲೆನುಡಿಗೆ ಲವಲವಿಪ ಕಾಲಗೆ ಕೂಟಕೆ ಕಾತರಿಸಿ ಮಿಡುಮಿಡುಕಲೊಸರ್ವ ನಾಣೆಡೆ ... ಎಸೆಯಲೆಸೆದಲ್ ಶಿವನ ಬೆಂಕೊಂಡು ಸುರಸತಿಯರು (ಚಿಬಪು. ೧೯-೩೨); ಉಟ್ಟುದು ಸರಿದು ಮದವಜಲ ನೆಱೆ ಪೊಱಮಟ್ಟುದು ನಾಣೆಡೆಯಿಂದ (ಕಂಪವಿ. ೯-೧೯೬).

[ನಾಣ್$_1$ + ಎಡೆ$_3$]

**ನಾಣೆಯ** 'ನಾಣಯ' ನೋ.

**ನಾಣೆಱಕ** (ನಾ). ಲಜ್ಜಾಭಾರ; ನಾಚಿಕೆಯ ಆಧಿಕ್ಯ: ಅಂತಃಕರಿಂದ್ರಿಯ ಸೌಖ್ಯಪರಮಕೋಟಿಯನಿಯ್ದು ನಾಣೆಱಕದಿಂದನಿತರ್ಬೇಗಂ ತಲೆಯಂ ಬಾಗಿರಲ್ (ಶಾಂತಿಪು. ೫೬೫). [ನಾಣ್$_1$ + ಎಱಕ$_1$]

**ನಾಣೊಡೆಯ** (ನಾ). ವಿಂಡ; ಜಾರ; ವಿಟ; ರಸಿಕ: ಪದನಱೆದೀವ ನಿತ್ಯ ಮಱವಂ ಕಡುಬಚ್ಚಡಮೆಂಬುದಿ[ಲ್ಲದಿ]ಲ್ಲದನಭವಾನಿ ನಾಣೊಡೆಯನಿಂಬಱೆವಂ ಸುಭಗಂ ಪ್ರಿಯಂವದಂ (ವರ್ಧಮಾ. ೮-೪೫); ಕೀಱದಿಂ ನಾಣೊಡೆಯನವೆಡೆಯೊಳ್ ನಿರ್ಧನಂ ಮಾಣ್ಬಳ್ (ಲೀಲಾವ. ೨-೯೭). [ನಾಣ್$_1$ + ಒಡೆಯ$_1$]

**ನಾಣ್ಗರೆ** (ಕ್ರಿ). ನಾಚಿಕೆಯನ್ನು ಪಡೆ; ಲಜ್ಜೆಹೊಂದು; ನಾಚಿಕೆಯನ್ನು ತೋರಿಸು: ಕಾಯ್ದು ಬಯ್ದು ನಾಣ್ಗರೆವರೆಂಬುಕೆಯ್ಯುವ್ವೊಳಪೊಯ್ಯು ವನೇಕವಿಚಿತ್ರಚೇಷ್ಟೆಗಳ್ (ಪುಷ್ಪಪು. ೨-೫೭). [ನಾಣ್$_1$ + ಕರೆ$_1$]

**ನಾಣ್ಗಾದೆ** 'ನಾಟ್ಗಾದೆ' ನೋ.

**ನಾಣ್ಗಾಪು** (ನಾ). ಅವಮಾನವಾಗದಂತೆ ನೋಡಿಕೊಳ್ಳುವುದು; ಮಾನರಕ್ಷಣೆ: ತನ್ನ ಹಾಣ್ಗಾಪನೆ ಬಗೆದಕನುಖರಿಕಾಪಿತಶರೀರನುವಾಗಿ ಶಂತನು ಕರಂಗಿರ್ದಗಿಡೆ (ಹಂಪಭಾ. ೧-೬೦ ವ). [ನಾಣ್$_1$ + ಕಾಪು]

**ನಾಣ್ಗೆಡಿಸು** 'ನಾಣ್ಗೆಡಿಸು' ನೋ.

**ನಾಣ್ಗೆಡು** 'ನಾಣ್ಗೆಡು' ನೋ.

**ನಾಣ್ಗುಂದು** (ಕ್ರಿ). ನಾಚಿಕೆಯಿಂದ ಕುಗ್ಗು: ನುಡಿದುಂ ಮಯ್ಸುರಿಗೆಟ್ಟು ವಿಂತು ನೆಲದೊಳ್ ನಾಣ್ಗುಂದಿ ನಿಂದಿರ್ದರ್ (ಚಿಕ್ಕೆರಾ. ೧೭೨).

[ನಾಣ್$_1$ + ಕುಂದು$_1$]

**ನಾಣ್ಗೆಡಿಕ** (ನಾ). ಅವಮಾನ ಮಾಡುವವನು ; ನಿಂದಕ : ದುರ್ನೀತರಂ ನಾಣ್ಗೆಡಿಕರಂ ಸುಜನಾಹಿತರನಾಚಾರದೂರರನು . . . ವ್ಯಾಕುಳರನತಿ ಕೃಪೆವೆತ್ತು ಕಾಯ್ವಾಯಿತ್ (ಬಸವು. ೩೮-೭೦). [ ನಾಣ್$_1$ + ಕೆಡಿಕ ]

**ನಾಣ್ಗೆಡಿಸು**, ನಾಣುಗೆಡಿಸು, ನಾಣ್ಗೆಡಿಸಂ (ಕ್ರಿ). ೧. ನಾಚಿಕೆಯನ್ನುಂಟು ಮಾಡಂ ; ಲಜ್ಜಿತರು : ಏ ಸೊಬಗನೋ ರೂಪವಮಾತ್ರದಿಂ ರಂಭಾದಿ ಭಾಸುರಸ್ತ್ರೀಯರಂ ನಾಣ್ಗೆಡಿಪನಿವನೆಂದು ಪುರಜನಂ ಬೆಬಗಾದುದು (ಜಬಪು. ೧೯-೪೫). ೨. ಅವಮಾನಗೊಳಿಸು ; ಅವಮಾನವನ್ನುಂಟು ಮಾಡು : ಅನನಾಂಬುಜಂ ತಣ್ಗದಿರಂಗೆ ಸೋಲವುನೊಡರ್ಚೆ ವಿಭೂಷಣ ಕಾಂತಿ ಭಾನುವಂ ನಾಣ್ಗೆಡಿಪಂತೆ ಪರ್ಬಿರೆ . . . ಬಂದನವಮಾತ್ಯನಂದನಂ (ರಾಜಶೇ. ೦೩-೬೧). **ನಾಣುಗೆಡಿಸು :** ೨. ಬಲ್ಲಿದನೆಂಬವನ ಕೆಡಿಸಿತ್ತು ವಿಧಿ . . . ದೇವೇಂದ್ರನ ಮೆಯ್ಯ ನಾಣುಗೆಡಿಸಿತ್ತು (ಬಸಷ. ೩೭-೯೫); ತ್ರಾಣಿಗಳು ನಾನಾವಿಧದಲತಿ ನಾಣುಗೆಡಿಸಲು ಹರಿಯ ನರರೊಳು ಕಾಣುತಲೆ ಲಕ್ಷ್ಮೀರವಣನಾಜ್ಞೆಯಲ್ಲಿ ವರ್ತಿಸುತ (ನಿಭಾಗ. ೧೧-೦೩-೨೨). **ನಾಣ್ಗೆಡಿಸು:** ೧. ಕುಡಿದೊಡೆ ಸೊರ್ಕಿಸದವು ನಾಣ್ಗೆಡಿಸದವು ಮನಕ್ಕಲಂಪನೀವುವು . . . ಮಧುಗಳನೆಡೆಯುಡುಗದೆ ಕುಡುಗುವುಚಿತವುದ್ಯಾಂಗಕುಜಂ (ಅದಿಪು. ೫-೩೨); ಕುವರನ ರೂಪೊಳ್ಪಿನ್ಗಳನೀಕ್ಷಣಮಾತ್ರದೆ ನಾಣ್ಗೆಡಿಸಿದುದಾದವೆಂಸೆವ ಪೊಸಜವ್ವನದೊಳ್ (ಚಂದ್ರಪು. ೪-೮) ; ನೃಪನ ಮನಮಾರ್ದಿಸುತಂ ನಾಣ್ಗೆಡಿಸಿ ಪಿಡಿದಸಂಗಜಚೋರಂ (ವರ್ಧಪು. ೬-೮).

[ ನಾಣ್$_1$ + ಕೆಡಿಸು$_1$ ]

**ನಾಣ್ಗೆಡು**, ನಾಣುಗೆಡಂ, ನಾಣ್ಗೆಡು (ಕ್ರಿ). ೧. ನಾಚಿಕೆಯನ್ನು ಬಿಡು ; ಲಜ್ಜೆಯಿಲ್ಲದಿರು : ಕೀಚಕಂ ಕಾಮದೇವಂ ಮಾಡಿದ ಯಾಚಕನಂತೆ ಕರಮೆ ನಾಣ್ಗೆಟ್ಟು ಮನಂಗಾವಬ್ದಳಿಪಿ ನೋಡಿ ತನ್ನ ಮನದೊಳೀಂತೆಂದು ಬಗೆದಂ (ಪಂಪಭಾ. ೮-೫೯ ವ) : ತಾನಿತರ ಕನ್ಯಕೆಯಂತೆ ನಾಣ್ಗೆಟ್ಟು (ಕಾದಂಪೂ. ೮೭೪) ; ಮನ್ಮಥನ ಪಟ್ಟದಾನೆಯೊಲೆಸೆವ ನಳಿನವದನೆಯ ಕಂಡು ನಾಣ್ಗೆಟ್ಟನಾ ಪ್ರಮುಖ ನನೆಯಂಬನುಪಟಲದಲಿ (ಸನತ್ಕು. ೧೦-೨೩) ; ಕಣ್ಗೆಟ್ಟ ದಿಗ್ಪಾಲಪಾಲರಂ ಭೀತಿಯಿಂ ನಾಣ್ಗೆಟ್ಟ ಸರ್ವ ಗಂಧರ್ವರಂ ಪರಿದೆಯ್ದಿ (ಜಬಪು. ೩೦-೨೯). ೨. ಅಭಿಮಾನ ಕಳೆದಂ ಕೊಳ್ಳು ; ಅವಮಾನಕ್ಕೊಳಗಾಗು : ಇಲ್ಲದಿರೆ, ಎಂತಕ್ಕುಮಪ್ ಈ ಪೊಲ್ಲಗಯ್ಮೆ ? ಎಲ್ಲರುಂ ಕೂಗುವೀ ನಾಣ್ಗೆಟ್ಟ ಗೆಯ್ಮೆ ? (ಅಶ್ವತ್ಥಾ. ೮-೦೫೫). **ನಾಣುಗೆಡು :** ೨. ಕಾಯದ ಕರದಲ್ಲಿ ಲಿಂಗವ ಪಿಡಿದು ಜಾಯಾಜೀ ಭವಗಟ್ಟು ನಾ ಣು ಗೆ ಟ್ಟು ನಾನಾರಂಬುದನಜಿಯದೆ (ಮೋಹಿಪಿಮ. ೨೪-೯೫) ; ಲಜ್ಜೆಗೆಟ್ಟಾದರೂ ಲಿಂಗವನೊಲಿಸುವೆ ನಾಣು ಗೆಟ್ಟಾದರೂ ಲಿಂಗವನೊಲಿಸುವೆ (ಬಸವ. ೯೯೮) ; ಈರ್ವರು ಮುನಿಗಳು . . . ನಾಣುಗೆಡುತ ಬಂದರೇಣಾಕ್ಷಿಯೆಡೆಗವಸರದಿ (ಅಮುನಾಂ. ೭-೯೫). **ನಾಣ್ಗೆಡು :** ೧. ನಾಣ್ಗೆಡುವಿನಮಿ ತೆಜದಿಂದೆನ್ನಂ ವಿಡಂಬಿಸಲ್ಬೊಡರಿಕುಮೆ (ಕಾದಂಬ. ೬೦). ೨. ಅವಂ ಗಡ ವಾರುಣಿಯಂ ಸೇವಿಸಿ ನಾಣ್ಗೆಡದಂ (ಶಂಪಾಮಾ. ೧೦-೦೭೯). [ ನಾಣ್$_1$ + ಕೆಡು$_1$ ]

**ನಾಣ್ಗೆಯ್** (ಕ್ರಿ). ಅವಮಾನಪಡಿಸು ; ಅಗೌರವವನ್ನುಂಟುಮಾಡು : ಪೊಡದೆಯು ದೇಹಮನ್ ನಾಯ್ಗಳ್ಗೆ ಪರ್ದುಗಳ್ಗೆರೆಯಾಗಿ, ನೋಟಕ್ಕೆ ಬಲ್ ಘೋರವಾಗಿ, ನಾಣ್ಗೆಯ್ದು ತಾವ್ ಬಿಸುಡುಗೆ (ಅಂತಿಗೆ. ೧೦-೦೮೯) ; ಅಪರಾಧದಿನ್ ಸ್ಕ್ಯೂಸ್ ನಿನ್ನನೀ ಬಗೆಯಲ್ಲಿ ನಾಣ್ಗೆಯ್ದು . . . ಗೋಟಿಡಿಸುತಿರ್ಪನ್ ? (ಬದ್ಧಪ್ರ. ೦೨-೨೩೬). [ ನಾಣ್$_1$ + ಕೆಯ್$_1$ ]

**ನಾಣ್ಗೇಡಿ** (ಗುಂ). ನಾಚಿಕೆಯಿಲ್ಲದ ; ಲಜ್ಜೆಯಿಲ್ಲದ : ನೀನು ಬಹಳ ನಾಣ್ಗೇಡಿ ಹೆಣ್ಣಾದೆ ಎಂದಳು (ಕೋಹಿನೂ. ೦೦೮) ; ಸೂರಣ, ನೀನು ಬಹಳ ನಾಣ್ಗೇಡಿ ಬ್ರಾಹ್ಮಣನಾದೆ (ಸುಗುಗಿಂ. ೩೩-೭).

[ ನಾಣ್$_1$ + ಕೇಡಿ$_1$ ]

**ನಾಣ್ಗೇಡು** (ನಾ). ಅವಮಾನ : ಸ್ಕ್ಯೂಸ್ಗೆ ಕೀಟ್ಟಟ್ಟ ನಾಣ್ಗೇಡು ನೋಟ ಮಾಡೆನ್ (ಬದ್ಧಪ್ರ. ೦೯-೨೦೫). [ ನಾಣ್$_1$ + ಕೇಡು ]

**ನಾಣ್ಗೊಳ್** (ಕ್ರಿ). ನಾಚಿಕೊಳ್ಳು ; ಸಿಗ್ಗಾಗು : ನೀವಿ ಜಾಜಿದೆ ಸುಸಿಲ್ ಗೈವಲ್ಲಿ ನಾಣ್ಗೊಂಡೊಡಾತ್ಸುಳಕಂ ಮಾಡದೆ (ರಾಜಶೇ. ೧೧-೦೫೪).

[ ನಾಣ್$_1$ + ಕೊಳ್$_1$ ]

**ನಾಣ್ಚಿಕೆ**, ನಾಂಚಿಕೆ, ನಾಚಿಕೆ, ನಾಚಿಗೆ (ನಾ). ೧. ಲಜ್ಜೆ ; ಸಿಗ್ಗು : ರಾಗದಿನಗಸುತೆಯೊಳ್ಸಂಭೋಗಿಸುತಿಪ್ಪಲ್ಲಿಗಗ್ನಿ ಬರೆ ನಾಣ್ಚಿಕೆಯಿಂದಾ ಗಿರಿಜೆ ಪೋಗಿ (ಸಮಪ. ೮-೫೪) : ತಲೆವಾಗಿ ನಾಣ್ಚುತಿಪ್ಪಳುಕುತಿದ್ದವರ ನಾಣ್ಚಿಕೆ ಭಯಮನೊಯ್ಯನೆ ಕಳೆದನು ಮುಟ್ಟಿ ನುಣ್ಚರದೋಜ್ ಮಾತಾಡಿ (ಭರಶ. ೩೦-೦೦೩). ೨. ಅವಮಾನ : ಪೊಯ್ವಳ್ಗಳ ಪೊತ್ತ ನಾಣ್ಚಿಕೆಯು ಸರ್ವ ದಿಕ್ಪಾಲರೋಟಂಗಾಣುತಜನಾಗ್ರಹಂದಾಳ್ದನಾ ಕ್ಷಣದೊಳು (ಜಬಪು. ೯೯-೨೪). **ನಾಂಚಿಕೆ :** ೨. ಪರಿಕಿಸುವೊಡವಂಗಮರವೆಸರಿನ ಕರಕರೆಯ ನಾಂಚಿಕೆಯವೊಳಗಿದು ಶರಣ ನೀವಜೀಯದುದೆಯವ್ವಯ ನಿತ್ಯತೆಯ ಹದನಂ (ಸಾನಂಕ. ೬-೨೫). **ನಾಚಿಕೆ :** ೧. ನುಡಿವೊಡೆ ನಾಚಿಕೆ ಗಡ ನಿನ ಗುಡಿನೂಲ್ ಬಗಿವಿನೆಗವಿಸಿ ವಳಿತ್ರಯಮಿಗಳ್ ಕಿಡುತಿರ್ಪುದು (ಕಾದಂಪೂ. ೯೦೫) ; ಮೊಲೆದುದಿ ಮೃದಿಲ ಮೆಜೆಯೊಳಿರುವುದೆಂದು ಸಲೆ ನಾಚಿಕೆಯನು ತೊಜೆದು (ಕಂನವಿ. ೬-೦೫೪). ೨. ಬೈತು ಬಿತ್ತನೊಲವಿಂ ಬೆಳೆಗೆಯ್ವಾ ವುದುಮಂ ಸತ್ಪಾತ್ರಕ್ಕೀವುದುಮಂ ದಾನಮೆಂಬ ನಾಚಿ[ಪಾಠಾಂ. ಣ್ಚಿ] ಕೆಯುಂಟೇ (ಅರ್ಧನೇ. ೪-೪೮) ; ನುಸುಳಿದರು ನಾಚಿಕೆಯಲಾತನ ವಿಶಿಖ ಜಲದಲಿ ತೊಳೆದರತಿರಥರಸಮಸಂಗರವಾಯ್ತು (ಕುಮಾರವ್ಯಾ. ೬-೪). **ನಾಚಿಗೆ :** ೧. ಮಾತೀಗು ಅಟಗೆ ಮಿಶಾರಿದ್ದ ನಾಚಿಗೆ ಮುಸುಕ್ಯಾವ ಹೂವಿಗೆ (ಗಂಗಾತ. ೩೨-೦೬) ; ಅಪೂರ್ವನಿಗೆ ತುಂಬ ನಾಚಿಗೆಯಾಯಿತು (ಧಾರಣಿ. ೦೦).

ನಾಚಿಕೆಯ ಗೊತ್ತು = ನಾಣ್ದಾಣ : ಬ ಡ ವ ಲ್ಲ ದು ಬ್ಬ ಲ್ಲ ದೊ ಡ ಲು ಕಿಜುದೊಡೆಯಯೆಡೆವಿಡದ ರೋಮದ ನಾಚಿಕೆಯ ಗೊತ್ತಿನ . . . ಅತಿ ಚದುರಿನವಳೆ ಶಂಖಿಣಿಯೆನಿಪಳು (ಜನವ. ೨-೦೪).

[ ನಾಣ್ಚು$_1$ + – ಇಕೆ. / ತುಳು. ನಾಚಿಕೆ, ನಾಚಿಗೆ ]

**ನಾಣ್ಚಿಸು**, ನಾಚಿಸು (ಕ್ರಿ). ೧. ನಾಚುವಂತೆ ಮಾಡು ; ಲಜ್ಜೆಯನ್ನುಂಟು ಮಾಡು : ನಿಜಾಕಾರವಂ ತೋಜೆ ನಾಣ್ಚಿಸಿ ಶಾಂತಿದಾಂತಿಯನುವಂ ಬೋಧಿಸಿ (ಪದ್ಮರಾ. ೨-೨೩) : ಎಂದವಳಂ ನಾಣ್ಚಿಸಿದಂ (ರಾಜಶೇ. ೧೦-೧೬೦೪) ; ಕಾಂಚನಸುಕಾಶ್ಮೀರಕರ್ನಿಕಾರಪ್ರಭೆಯ ನಾ ಣ್ಚಿ ಸು ವ ತತ್ತುರಮುಖದೊತ್ತಿನೊಳ್ಮೀರಕಾಂಚನಾದ್ರಿಯ ಪೊಲ್ವ ತನುಕಾಂತಿ (ಚಕುಪು. ೦-೨-೯೧). ೨. ಅವಮಾನಮಾಡಂ. **ನಾಚಿಸು :** ೧. ಮಲ್ಲೆಯಂ ಸರವಿದೆ ಕೊಳ್ಳೆಂದು ಬೆರೆಗೊಂಡು ನಿಲ್ಲದವನ ನಾಚಿಸಿದಳು (ಕಂನವಿ. ೬-೪೪). ೨. ಓಡಿ ನಾಚಿಸುವವರು ನಿಲಿ ರಣಶೇಡರೀಗಳ ಮರಳಿ (ಕುಮಾರ. ೮-೩೦) ; ನಿಮ್ಮ ಶಿಕ್ಷಣ ಶಿಕ್ಷಕರನ್ನೂ ನಾಚಿಸುತ್ತದೆ (ರಂಗಿರೋ. ೮೭).

[ ನಾಣ್ಚು$_1$ + – ಇಸು$_3$ ]

**ನಾಣ್ಚು$_1$**, ನಾಂಚು, ನಾಚು$_1$ (ಕ್ರಿ). ೧. ನಾಚಿಕೆಪಡು ; ಲಜ್ಜೆಯನ್ನು ಹೊಂದಂ ; ಸಿಗ್ಗಾಗು : "ನಾಣ್ಚು-ಲಜ್ಜಾಯಾಂ" (ಶಮುಧಾ) ; ನೀಂ ಬಾ ಪೋಪಮೆಂದಂಗೆ ಮೆಲ್ಲಗೆ ತತ್ಕನ್ಯಕೆ ನಾಣ್ಚಿ ಬೇಡುವೊಡೆ ನೀವೆಮ್ಮಯ್ಯನಂ ಬೇಡಿರೇ ಎಂಬುದುಂ (ಪಂಪಭಾ. ೦-೭೦) ; ಅನಕ್ಕ ನಾಣ್ಚುವೆಂ ಪಿಡಿ ನೀನೆ ನೃಪಂಗಿಕ್ಕು ತಂಬುಲವಂ (ಕಾದಂಬ. ೫೫) ; ಗಾಡಿಯಿಂದವಳು ನಾಣ್ಚಿರಲು ಬಿನ್ನಹವನು ಮಾಡಿದಳಾ ಚಿತ್ರಲೇಖೆ (ಮೋಹತ. ೨೫-೩) ; ಒಡೆಯ ನಿನ್ನೊತ್ತಿನೊಳಿರಲು ನಾಣ್ಚುವಳು (ಭರಶ. ೬-೨೩); ಅಲಸದೆ ನಾಣ್ಚದಂಜದೆ ಯಳುಕದೆ ಪೇಳು (ಹದಿಬ. ೧-೨೯). ೨. ಅವಮಾನ ಹೊಂದು ; ಅವಮರ್ಯಾದೆಗೊಳಗಾಗುಂ : ಪಾಮರಿಗನಂತೆ ಪಲರ ಮುಂದೆ ನಾಣ್ಚದೆ ಲೋಭಿಯಪ್ಪರಸಿನಂತವಿಚಾರಿಯಾಗದೆ (ಧರ್ಮಾಮೃ. ೪-೪೬). **ನಾಂಚು :**

೧. ಮಹಾದೇವಿಸೆಟ್ಟಿಯವರು ನಾಂಚಿ ತಲೆವಾಗಿರ್ದುದನರಿದು (ಬಸವ. ೧೨–೫೬); ಕರ ನಾಂಚಿ ಶರನಿಧಿಯ ಮುಳುಗಿದನೊಯುಂಬ ತತ್ಪರಿಯೊಳಂ ಚಂದ್ರ ಪಶ್ಚಿಮಗಿರಿಯ ಮರೆಗೊಳಲು (ನವಮೋ. ೧೪–೨೫). ನಾಚು$_1$ : ೧. ಆ ಮಾಡುವ ರುದ್ದದೊಳ್ ಕಿಡಿದು ನಾಚುಗುವೋ ವಧು (ಅರಂಉ. ೬೮೩). ೨. ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದಡೆಂತಯ್ಯ (ಮಹಾದೇ.ಬ.ಳ೪೫–೦೦೬); ನಚ್ಚಿದಾಳಿನ ಬಿನ್ನಹಕೆ ಹರಿ ಮೆಚ್ಚಿ ಮನದಲಿ ನಾಚಿ ಚಕ್ರವ ಮುಟ್ಟಿದನು (ಕುದ್ರಾಭೀ. ೬–೪೬) : ನುಡಿಗೆ ನಾಚಿದನರಸ ಹಂಸದ ನಡವಳಿಗೆ ಮೆಚ್ಚಿದನು (ನಳಚ. ೨–೨೦); ನನಗೆ ಬೇಕಾದದ್ದು ಬಿಡುಗಡೆ; ಅದನ್ನು ಕೋರುವುದಕ್ಕೆ ನಾಚುತ್ತೇನೆ (ಧರ್ಮಸಾ. ೮೩). [ ನಾಣ್$_1$ + –ಚು$_1$ ]

ನಾಣ್ಚು$_2$ (ನಾ). = ನಾಣ್ಚಿಕೆ ೧ : ಅರಳಿಯಲಿ ರಸವಿಲ್ಲ ಕರುಳಿಗೆ ನಾಣ್ಚಿಲ್ಲ ಮರುಳನಿಗಾರು ಇದಿರಿಲ್ಲ ಸೂಳೆಯಲಿ ಸರಲವೆ ಇಲ್ಲ (ಸರ್ವಜ್ಞ. ೧೪೮೬).

[ <ನಾಣ್ಚು$_1$ ]

ನಾಣ್ಣುಡಿ 'ನಾಟ್ನುಡಿ' ನೋ.

ನಾಣ್ದಂಡ (ನಾ). ಪುರುಷನ ಗುಹ್ಯಾಂಗ; ಶಿಶ್ನ : ಬಾಳೆಯೊಳು ಬಾಳೆ ನಾಣ್ದಾಣದೊಳು ನಾಣ್ದಂಡ . . . ಮತ್ತೆ ನಾಳಕಾವೈರಿಶಕಲದೊಳು ಶಕಲಗಳಮರ್ದು ಸ್ತ್ರೀಪುರುಷರಿರೆ ಕಂಡರು (ಪ್ರಭುಪು. ೯–೦೨೯).

[ ನಾಣ್$_1$ + ದಂಡ ]

ನಾಣ್ದಳೆ (ಕ್ರಿ). ನಾಚಿಕೆಯನ್ನು ಹೊಂದು; ನಾಚು : ಸಂಕ್ರಂದನಂ ಸದ್ಗುಣೋಜ್ವಳಸತ್ಯೇಂದ್ರನರೇಂದ್ರರುಂದ್ರಯಶಮಂ ಗಂಧರ್ವರಿಂ ಕೇಳ್ದು ನಾಣ್ದಳೆದು (ರಾಜಶೇ. ೩–೪). [ ನಾಣ್$_1$ + ತಳೆ$_1$ ]

ನಾಣ್ದಾಣ, ನಾಣುದಾಣ (ನಾ). = ನಾಣ್$_1$ ೩: "ಭಗದೊಳ್ ನಾಣ್ದಾಣ ಮೆಂದುಂಟು" (ಶಬ್ದಸಾ. ೮೪); ಮೊಲೆಯಂ ಮಾಣುವ ಮಾತು ಕೆಂದೆಸವ ನಾಣ್ದಾಣಂ (ಚಂದ್ರಪ್ರ. ೮–೬೫); ಪಳ್ಳಿಯೊಳಿಕ್ಕಸರು ಪೊಂಗುತ್ತಿರೆ ನಾಣ್ದಾಣಂ ಸೂಳ್ಪಡದಿಂಗೂಟಂ ಗಡಿಗೆಟ್ಟರಲ್ (ಉದ್ಭಟೀ. ೪–೨೧); ಲಜ್ಜಿಸುವ ತಿಣ್ಣಮಂ ಬಿಡಿಸಿ ನಾಣ್ದಾಣಮಂ ತಡವಿ (ಚಂಪು. ೦೦–೫೯). ನಾಣುದಾಣ : ಹದನಾದ ನಾಣುದಾಣಕೆ ಲಿಂಗಯೋಗವ ಪಡುಳಿಸುವಾಗ ಸ್ವರ್ಗವನು ಮಿದಿಯದೆ ಗೇಣು ಚೋಟಿನ ತೋಟುತಿದ್ದುದು (ಭರತ. ೪೧–೬೨).

[ ನಾಣ್$_1$ + ತಾಣ ]

ನಾಣ್ದುಡುಕು (ಕ್ರಿ). ಗುಹ್ಯೇಂದ್ರಿಯವನ್ನು ಹಿಡಿದುಕೊಳ್ಳು; ಶಿಶ್ನವನ್ನು ಹಿಡಿ: ಚೆಲ್ಲದೊಳಾಕೆ ನಾಣ್ದುಡುಕಿ ನುಣ್ಗೊಗರಲಿಂ ದನಿ ಪೊಣ್ಮೆ ಚುಂಬಿಸುತ್ತಲ್ಲ ಸುಖಕ್ಕೆ ಸೀಮೆಯನಲಂಗಜಕೇಳಿಯನುಂಟುಮಾಡಿದಲ್ (ರಸಕು. ೮–೫೨).

[ ನಾಣ್$_1$ + ತುಡುಕು$_1$(<ತೊಡಂಕು$_1$) ]

ನಾಣ್ನುಡಿ 'ನಾಟ್ನುಡಿ' ನೋ.

ನಾಣ್ಪು (ನಾ). = ನಾಣ್ಚಿಕೆ ೧ : ಈಕೆಯ ಸಲ್ವ ಜಾಣ್ನುಡಿಗಳಿಂಪಿನಿವಿಲ್ಲನ ಪೆಂಪಲಂಪು ಮೇಣೀಕೆಯ ನೋಟದೊಳ್ಪು ಮುನಿಜಾಲಮನಕ್ಕೆ ಬೆಗಟ್ಪು ನಾಣ್ಪು ತಾನೀಕೆಯ ಸುಯ್ಯ ಗಾಳಿ ಮಲಯಾನಿಲನೊಳ್ ಸರಿ ಜೋಳಿವಾಳಿ (ಉದ್ಭಟ. ೮–೪೪). [ ನಾಣ್$_1$ + –ಪು$_2$ ]

ನಾಣ್ಪೋಗು (ನಾ). (ಪ್ರಾಣಿಗಳ) ಸಂಭೋಗ : ಮೂಱು ಕೊಂಬುಮ ನಾಱು ನಾಣ್ಪೋಗುಮನೆರಲ್ಬಲ್ಪಯುಮಂ . . . ಬಲ್ಲನಾಗಿ (ಪಂಪಭಾ. ೫–೪೩ ವ). [ ನಾಣ್$_1$ + ಪೋಗು$_2$ ]

ನಾಣ್ಬಟ್ಟೆ 'ನಾಟ್ಬಟ್ಟೆ' ನೋ.

ನಾಣ್ಬಟ್ಟೆವೆಣ್ (ನಾ). ನಾಡಿನ ರಸ್ತೆಯಲ್ಲಿ ತಿರುಗಾಡುವ ಹೆಂಗಸು; ನಾಡ ದಾರಿಯಲ್ಲಿ ಓಡಾಡುವ ಹೆಣ್ಣು : ಪತ್ತನ ದ್ರೋಣಾಮುಖಂಗಳ್ಗೆ ಮಾಣದೆ ನಡೆವ ನಾಣ್ಬಟ್ಟೆವೆಣ್ಣ ಕಣ್ಣಪೂರವನಲಂಕರಿಸಿದ ಪಾನೀಯ ಕಾಯಮಾನನಿಕಾಯಾಭ್ಯಂತರಾಳದಲ್ಲಿ ಪಱಿಪಡೆ ಸೇದೆ (ಅನಂಪು. ೧–೮೨ ವ).

[ ನಾಣ್ಬಟ್ಟೆ (<ನಾಟ್ಬಟ್ಟೆ) + ಪೆಣ್ ]

ನಾಣ್ಬದ (ನಾ). ಕಾಮಜಲ; ಯೋನಿದ್ರವ : ಊರುಯುಗಂಗಳಿಂದಿಳಿವ ನಾಣ್ಬದನಂ ನಿಱಿಯಿಂದಮೊತ್ತುತುಂ ಜಾರೆಯರೆಯ್ದುತಿರ್ದರ್ (ಕುಸುಮಾ. ೪–೩೫); ನೀವಿ ಸಡಿಲ್ದೊಡೆ ನಾಣ್ಬದನಂಗಜೌಕದಿಂದಿಳಿತರೆ ಘರ್ಮವಾಃಕಣಗಣಂ ನೆಱಯುತ್ತಿರೆ ನೋಡುತಿರ್ದಳಾಕುಳತೆಯಿನೊರ್ವ ಚಂದ್ರಮುಖಿ ಮೆಯ್ಮಱಿದಾ ನರನಾಥಪುತ್ರನಂ (ಶಾಂತೀಶ್ವ. ೩–೩೦).

[ ನಾಣ್$_1$ + ಪದ$_1$ ]

ನಾಣ್ಬಿಡು (ಕ್ರಿ). ನಾಚಿಕೆಯನ್ನು ಬಿಡು, –ತ್ಯಜಿಸು: ಮೊಗಂಗುಡೆ ಪದಮೆತ್ತು ಚುಂಬಿಸಿ ಭಯಂಗೆಯೆ ಬಲ್ಪಿಣಿಸಂ ಪೊದಟ್ಪು ನಾಣ್ಬಿಡೆ ನೆರೆದೂಳ್ಪೆಯುಂ ಪ್ರಥಮಸಂಗಮದೊಳ್ ಕುವರಂ ಮರುಳ್ಚಿದಂ (ಚಂದ್ರಪ್ರ. ೬–೮೨); ತೋಳ್ಗೆಂ ಬಿಗಿದು ತಳ್ಕಿಸಿ ನಾಣ್ಬಿಡೆ ಜಾಣ್ಕೆದೋಱಿ . . . ತನ್ನಳ ಮನಮಂ ಮರಳ್ಚಿದನದೇಂ ರತಿಕೋವಿದನೋ ಕುಮಾರಕಂ (ರಾಜಶೇ. ೮–೮೫). [ ನಾಣ್$_1$ + ಬಿಡು$_1$ ]

ನಾಣ್ಬೆದರು (ಕ್ರಿ). ಲಜ್ಜೆಯಿಂದ ಬೆದರು: ಭರದಿ ಪರಿತರುದು, ಮಹೇಂದ್ರ ಶಿಖರಂಗಳುಂ ನಾಣ್ಬೆದರಿ ಗೋಣ್ಗಳ್ಸ್ವೋಲ್ (ಶ್ರೀರಾಮಾ. ೫೦೬–೬೬).

[ ನಾಣ್$_1$ + ಬೆದರು$_1$ (<ಬೆದಱು$_1$) ]

ನಾಣ್ಬೆರಸು 'ನಾಣ್ಬೆರಸು' ನೋ.

ನಾಣ್ಬೆಳ್ಪೇರು (ಕ್ರಿ). ನಾಚಿಕೆಯಿಂದ ಬಿಳಿಚಿಕೊಳ್ಳು: ಮೇಘಸಂಧಿಗಳಿಂದೆ, ಮುಸುಕಿತ್ತಿ, ನಸುನಾಣ್ಚಿ, ಮೊಗಕೆ ನಾಣ್ಬೆಳ್ಪೇರಿದಪರಿಚಿತಲಂತೆವೋಲ್ ಇಣಿಕಿತು ಗತೋಷ್ಣಾತಪಂ (ಶ್ರೀರಾಮಾ. ೩೪೫–೦೫೦).

[ ನಾಣ್$_1$ + ಬೆಳ್ಪು + ಏರು$_1$ (<ಏಱು$_1$) ]

ನಾಣ್ಮಸಗು (ಕ್ರಿ). ಅವಮಾನ ಹೆಚ್ಚಾಗು: (ನಾಣ್ಮಸಗಿ, ಅವನತವಕ್ತ್ರನಾಗಿ) (ಮಂತ್ರಶ. ೩೯–೨). [ ನಾಣ್$_1$ + ಮಸಗು$_1$ ]

ನಾಣ್ಮಾತು 'ನಾಟ್ಮಾತು' ನೋ.

ನಾಣ್ಮೀಸಲು (ನಾ). ನಾಚಿಕೆಯಲ್ಲಿ ತೋರುವ ಪವಿತ್ರತೆ; ಪರಿಶುದ್ಧತೆಯುಳ್ಳ ನಾಚಿಕೆ : ನಾಣ್ಮೀಸಲಳಿಯದವಯವದ ಭೇದಮಂ ಮಱೆದು ಜಾಣ್ಮೆಗಳ ಬಂಧಂಗಳೊಳ್ಪಳಿಸಿ . . . ಲಲ್ಲೆಗೈದೊಲವನಾಣ್ಮಂಗೆ ಕಾಣಿಸಿದಳವಳ್ (ಕೃಮಿಭಾ. ೦೦–೨೨). [ ನಾಣ್$_1$ + ಮೀಸಲು (<ಮೀಸಲ್) ]

ನಾಣ್ಮುಚ್ಚು (ಕ್ರಿ). ಮಾನವನ್ನು ರಕ್ಷಿಸು: ಉಡೆ ನಾಣ್ಮುಚ್ಚದ ನಾಗವಟ್ಟಣಿಗೆ (ಮಲ್ಲಿಕಾ. ೮–೩೦೯). [ ನಾಣ್$_1$ + ಮುಚ್ಚು$_1$ ]

ನಾಣ್ಮೆ (ನಾ). ನಾಚಿಕೆ; ಲಜ್ಜೆ : ಆದೊಡದನಾಡುತಿರ್ಪಾಗಳೇ ನಾಣ್ಮೆಯೊತ್ತಿ ಬರ್ಪುದು ಎನಗೆ (ಅದ್ಭುತ. ೩೪–೬೨೬); ಆಳವನ್ ಜ್ಞಾನಿಯಾಗಿರ್ದೊಡಂ, ತಾನ್ ಕಲ್ತುದದು ನಾಣ್ಮೆಯಲ್ಲಂ (ಅಂತಿಗೂ. ೬೨–೬೫೪). [ ನಾಣ್$_1$ + –ಮೆ$_1$./ತಮಿ. ನಾಣ್ಮೈ ]

ನಾಣ್ಮೊಗ (ನಾ). ನಾಚಿಕೆಯನ್ನು ತೋರ್ಪಡಿಸುವ ಮುಖ : ಬಲವಂತರಲ್ಲ ನಳಕೆಯ ಕೀರನಂತೆ ಅವರು ದಿಕ್ಕಾಗಲಱಿಯರು ನಾಣ್ಮೊಗದಪ್ಪವರ ಒಪ್ಪವಿಟ್ಟುಕೊಳ್ಳೆ (ಮೋಹನಮ. ೬೬–೨೬೯). [ ನಾಣ್$_1$ + ಮೊಗ ]

ನಾಣ್ಯ 'ನಾಣಯ' ನೋ.

ನಾಣ್ಯಗಾರ (ನಾ). ಗಣ್ಯ; ಗೌರವಸ್ಥ; ಮಾನ್ಯ : (ಕ).

[ ನಾಣ್ಯ (<ನಾಣಯ) + –ಕಾರ$_1$ (<–ಕಾಱ) ]

ನಾಣ್ಯಪದ್ಧತಿ (ನಾ). ನಾಣ್ಯಗಳನ್ನು ಚಲಾವಣೆ ಮಾಡುವ ವ್ಯವಸ್ಥೆ, –ನಿಯಮ : ಈ ಹದ ಬಹುಕಾಲದವರೆಗೆ ನಿಲ್ಲುವಂತೆಯೂ ಸಮಧಾತುವಾಗಿರುವಂತೆಯೂ ಏರ್ಪಡಿಸಬೇಕು–ಎಂಬುದೇ ಎಲ್ಲ ನಾಣ್ಯಪದ್ಧತಿಗಳ ಗುರಿ (ಹಣಶ್ರ. ೨೯). [ ನಾಣ್ಯ (<ನಾಣಯ) + ಪದ್ಧತಿ ]

ನಾಣ್ಯಪರೀಕ್ಷೆ (ನಾ). ನಾಣ್ಯಗಳ ಗುಣಾವಗುಣಗಳ ಪರಿಶೀಲನೆ: ಅವನು ನಾಣ್ಯಪರೀಕ್ಷೆಯಲ್ಲಿ ಖದೀಮ (ರೂಢಿ).

[ ನಾಣ್ಯ (<ನಾಣಯ) + ಪರೀಕ್ಷೆ ]

**ನಾಣ್ಯವಂತ** (ನಾ). = ನಾಣ್ಯಗಾರ : ಇಡೀ ಹಳ್ಳಿಯಲ್ಲೇ ಅವನು ನಾಣ್ಯವಂತನೆಂದು ಹೆಸರು ಗಳಿಸಿದ್ದಾನೆ (ರೂಢಿ).
[ ನಾಣ್ಯ (<ನಾಣಯ)+-ವಂತ ]

**ನಾಣ್ಯವಟ್ಟ** (ನಾ). ನಾಣ್ಯವಿನಿಮಯದ ಸಂದರ್ಭದಲ್ಲಿ ತೆರಬೇಕಾದ ಶುಲ್ಕ ; ಒಂದು ನಾಣ್ಯವನ್ನು ಮತ್ತೊಂದು ನಾಣ್ಯಕ್ಕೆ ಬದಲಾಯಿಸಿಕೊಳ್ಳುವಾಗ ಕೊಡಬೇಕಾದ ಹಣ,-ಶುಲ್ಕ : (೩).
[ ನಾಣ್ಯ (<ನಾಣಯ) + ವಟ್ಟ₂ ]

**ನಾಣ್ಯವಾರು** (ನಾ). ಬೇರೆ ಬೇರೆಯಾದ ನಾಣ್ಯಗಳ ವಿವರವಾದ ಲೆಕ್ಕ ; ಬೇರೆ ಬೇರೆ ಬೆಲೆಯ, ಆಕಾರದ ನಾಣ್ಯಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ವಿಂಗಡಿಸುವುದು : ತಿರುಪತಿಬೆಟ್ಟದಲ್ಲಿ ಪ್ರತಿನಿತ್ಯ ಹುಂಡಿಯ ಹಣವನ್ನು ನಾಣ್ಯವಾರಾಗಿ ವಿಂಗಡಿಸುತ್ತಾರೆ (ರೂಢಿ).
[ ನಾಣ್ಯ (<ನಾಣಯ) + ವಾರು₂ (<ವಾರ್) ]

**ನಾಣ್ಯವಿದ್ಯೆ** (ನಾ). ನಾಣ್ಯದ ವಿಷಯವನ್ನು ತಿಳಿಸುವ ವಿದ್ಯೆ; ನಾಣ್ಯಕ್ಕೆ ಸಂಬಂಧಪಟ್ಟ ವಿಷಯಗಳನ್ನು ವಿವರಿಸುವ ಶಾಸ್ತ್ರ: "ನಾಣ್ಯ(ಪರಿಚಯ) ವಿದ್ಯೆ" (Numismatics. ಜಂಕನಿ). [ ನಾಣ್ಯ(<ನಾಣಯ)+ವಿದ್ಯೆ ]

**ನಾಣ್ಬೆರಸು, ನಾಣ್ಬೆರಸು** (ಕ್ರಿ). ನಾಚಿಕೆಯಿಂದ ಕೂಡಿರು; ಲಜ್ಜೆಯನ್ನು ಹೊಂದು : ಆಕೆಯ . . . ಗಾಡಿವೆರಸಿದ ಹಾವಕ್ಕಂ ನಾಣ್ಬೆರಸಿದ ಭಾವಕ್ಕ ವೊಲ್ದು ಮೊಅಲ್ದು ಮಿರೆಯಿರೆ (ಶಂಪುರಾ. ೪-೦೭ ವ). **ನಾಣ್ಬೆರಸು** : ಕಂಪಿಸುತಿರೆ ಕರತಳದಿಂದು ಪೋದತ್ತಕ್ಷಮಾಲೆ ನಾಣ್ಬೆರಸಾಗಳ್ (ಕಾದಂಪೂ. ೭೭೦). [ ನಾಣ್₁ + ಬೆರಸು₁ ]

**ನಾತ,** ನಾತಂ (ನಾ). ೧. ಮೂಗಿನಿಂದ ಕಂಡುಹಿಡಿಯುವ ಒಂದು ದ್ರವ್ಯಗುಣ ; ವಾಸನೆ ; ಗಂಧ ; ಪರಿಮಳ : ಸವಿ ಬೆಳಗು ತಮವು ಬನಿ ನಾತಮೆಂಬೈದೆಜ ಬಗೆ ತಿಳಿವನೆಡೆಯದೇ ಲೋಕಂ (ಕಾಜಾಲ್. ೦-೩-೭) ಅವನ ಸುತ್ತ ಕ್ಯಾದಿಗೀ ಹೂಡಿವಾಸ, ಪಲ್ಲೇದ ಕಂಪಾ. ಎಲಿಬಳ್ಳೀ ನಾತ (ಬಾಬಲ. ೩೩). ೨. ಸುವಾಸನೆ ; ಸುಗಂಧ : "ಸೌಸಮ . . . ನಾತಂ. ವಂಗಮಗಿಸು- ಈ ೭ ಪರಿಮಳಕ್ಕೆ ಪೆಸರ್" (ಕಕಸಾ. ೯-೦೭೭); "ನಾತಂ ನೆಜ ಸೌಸವ ಕಮ್ಮಿತೆಂದು ಮಗಮಗಿಸಿದುದೆಂದಿಕದೆ . . . ಸೌರಭ್ಯಮಕ್ಕುಂ" (ಕವಿಕಂ. ೯೭) ; ಕಸವು ಹೊಡೆದ ಕೈಯು ಕಸ್ತೂರಿ ನಾತಾವ ಬಸವಣ್ಣ ನಿನ್ನ ಸೆಗಣೀಯ ಬಳಿದ ಕೈ ಎಸಳ ಯಾಲಕ್ಕಿ ಗೊನಿ ನಾತ (ಗಜಿ. ೪೨). ೩. ದುರ್ವಾಸನೆ ; ದುರ್ಗಂಧ : "ನಾತವೆನೆ ದುರ್ಗಂಧದೋಳ್" (ಕಶರ. ೫೪) ; ಪೊಂಗಳಂ ಸುರಿವೊಡಮಾರೊ ಸ್ವೈರಿಸುವರಾಜನ ವಲ್ಲಿಲಿವಾಯ ನಾತಮಂ (ಶಂಪುರಾ. ೪-೦೦೦) ; ಕೊಲಿ ಹೊಲಸಿನ ನಾತದೊಳಗೆ ನಿಂದ್ಯೆ ತಂದೆ (ಇಹರ. ದೇ. ೪೯-೨೨) ; ನಾತವಧಿಕ ಭಯಂಕರವು (ಬಸಪು. ೪೭-೫೯); ಇಡಿದ ಹೊಲಸಿನ ನಾತದುಬ್ಬರದೆಡಬಲದ ತಿನಿಸುಗಳ . . . ಕಂಡು ಹೇಸುತ ಹನುಮ ಹೊಱವಂಟ (ತೊರರಾ. ೫-೨-೩೭) ; ನಷ್ಟ ಬೀಳುವುದಲ್ಲ ನಾತ ಹುಟ್ಟುವುದಲ್ಲ (ಪುರಂದ. ೧-೨೦೭-೨) ; ನಡುಮನೇಲಿ ಹೇತು ನಾತ ಬರುತ್ತೆ ಎಂದ (ಗಾದೆ). ೪. ಕಟುವಾಸನೆ ; ಉಗ್ರಗಂಧ; ಸಹಿಸಲಾಗದ ವಾಸನೆ : "ಹೆಸಲುನಾತಂ ಸೊವಡು ಸೊಗಡುದುಂದುಲಿಗ ಕೂರಿಕ್ಕಾದ ಗಂಧಕ್ಕೆ" (ಕಬ್ಬಿಮು. ೨೪) ; ಇಂಗಿನೊಳು ನಾತವನು ತೆಂಗಿನೊಳಗೆಳನೀರ ಭೃಂಗಕೋಕಿಲೆಯು ಕಾಳದೊಳು ಗಾಯನವ ತುಂಬಿದವರಾರು (ಸರ್ವಜ್ಞ. ೧೯೩). ೫. (ಆಲಂ) ಸುಳಿವು ; ಮುನ್ಸೂಚನೆ : ನೀಲವ್ವ ಮೊದಲ ಸಲ ಗರ್ಭಿಣಿಯಾದಳು, ಆ 'ನಾತ'ವನ್ನು ಮೊದಲು ಕಂಡುಹಿಡಿದವಳೂ ಬಸವ್ವನೇ (ಬರಹಾ. ೧೭) ; ನಯನ ನಿಗಿನಿಗಿ ಎದೆಯ ದೃಢವದೆ ಏನೊ ನಾತವ ಹಿಡಿದಿದೆ (ಕೃಶ್ಯಾಅ. ೨೮-೩). **ನಾತು** : ೧. ನಾತು ಖಿವಟ ಇರದೆ ಬಣ್ಣ ಕೆಂಪದಿದ್ದು ತೇಜವುಳ್ಳದ್ದಿರಬೇಕು (ಮುಂಬಾ. ೩೭).
[ ದೇ.॥ ತಮಿ. ಮಲ. ನಾಱು; ತುಳು. ಕೊಡ. ನಾತ ]

**ನಾತಂಬಿಡಿ,** ನಾತಹಿಡಿ (ಕ್ರಿ). ೧. ವಾಸನೆ ಹಿಡಿ ; ವಾಸನೆಯಿಂದ ಪತ್ತೆಹಚ್ಚು : ನೆತ್ತರ ಧಾರೆಯೊಳ್ ನಾದು ನನೆದಡಿವಜ್ಜೆಯನು ನಾತಂಬಿಡಿದು ಬಂದು (ಸುಕುಮಾ. ೧೨-೨೯ ವ). **ನಾತಹಿಡಿ** : ೨. ಕೆಟ್ಟ ವಾಸನೆ ಇಡುಗು ; ದುರ್ಗಂಧವಾಗು : ತಲೆ ನಾತಹಿಡಿದಿದೆ, ಸ್ನಾನ ಮಾಡಬೇಕು (ರೂಢಿ). [ ನಾತ + ಪಿಡಿ₁ ]

**ನಾತವಡೆ** (ಕ್ರಿ). = ನಾತಂಬಿಡಿ ೨: ನಾತವಡೆದ ತನಂವಿನ ನಳ್ಳಿಮೂಗಿನ ಭೂತವೆ ನಡೆತಪ್ಪಂತೆ ಮನೆಗೆ ಬರಲು (ಸೀಮಿಸಂ. ೭-೧೦೫).
[ ನಾತ + ಪಡೆ₁ ]

**ನಾತಹಿಡಿ** 'ನಾತಂಬಿಡಿ' ನೋ.

**ನಾತಹೂ,** ನಾತಹೂವು (ನಾ). ಒಂದು ಬಗೆಯ ಗಿಡ ಮತ್ತು ಅದರ ಹೂವು : (೩). **ನಾತಹೂವು** : ಈ ಮಕರಗ್ರಂಥಿಗಳನ್ನು ನಾವು ತುಂಬೆ, ನಾತಹೂವು (Lantana) ಈ ಹೂವುಗಳಲ್ಲಿ ನೋಡಬಹುದು (ಸಸ್ಯಶಾ. ೫೩).
[ ನಾತ + ಹೂ₂ (<ಪೂ₂) ]

**ನಾತಹೂವು** 'ನಾತಹೂ' ನೋ.

**ನಾತಾಳಿ** (ನಾ). ಕ್ರಿಸ್‌ಮಸ್ ಹಬ್ಬ ; ಏಸುಕ್ರಿಸ್ತನ ಜನ್ಮದಿವಸ : ದತ್ತೂನ ಮದುವೆಯಾದ ಮೇಲೆ ಬಂದುದು ಅದೇ ಮೊದಲ ನಾತಾಳಿ (ಸ್ವೃತಿಚಿ. ೪೩೪).

**ನಾತಾಳಿ ದಿನ** = ಕ್ರಿಸ್‌ಮಸ್ ಹಬ್ಬವನ್ನು ಆಚರಿಸುವ ದಿವಸ : ನಾತಾಳಿ ದಿನಗಳು, ಹತ್ತು ಗಂಟೆಯ ಹೊತ್ತು. ನಾನು ಮಲಗಿದ್ದೆ (ಸ್ವೃತಿಚಿ. ೩೭೨). **ನಾತಾಳಿಯ ರಜೆ** = ಕ್ರಿಸ್‌ಮಸ್ ಹಬ್ಬದ ಬಿಡುವು,-ರಜೆ : ಇನ್ನೆರಡು ದಿನಗಳಲ್ಲಿ ಹೇಗಾದರೂ ನಿನ್ನ ನಾತಾಳಿಯ ರಜೆ ಸುರು (ಮೂಕರುದಾ. ೦೨೩). **ನಾತಾಳಿ ಸೂಟಿ**=ನಾತಾಳಿಯ ರಜೆ : ಉಮೇಶನಿಗೆ ನಾತಾಳಿ ಸೂಟಿ (ದಾಕೂಟ. ೧೧) ; ಈ ದುಡಿತದಲ್ಲಿ ನುಗ್ಗಾದ ಹುಡುಗರಿಗೆ ಹತ್ತುದಿನದ ನಾತಾಳಿ ಸೂಟಿಯೂ ಹಿಗ್ಗಿನ ಹುತ್ತವಾಯಿತು (ಅನ್ನ. ೧೧).
[ ←ಮರಾ. ನಾತಾಳ್, ನಾಥಾಳ್. /ಇಂ. Natal./ಪೋರ್ಚ್. ನಾತಾಲ್ ]

**ನಾತಿದೂರ** (ನಾ). ಬಹಳ ದೂರವಲ್ಲದುದು ; ಹತ್ತಿರ ; ಸಮೀಪ : ನಾತಿದೂರಂ ಶ್ಲಾಘನೀಯಮಾ ಪಂಚವಟಿ (ಶ್ರೀರಾಮಾ. ೧೯೩-೯೩೩) ; ನಾತಿದೂರದೊಳೊಂದು ಪೊಣ್ಮಿದುದು ಸೀಳ್ವೊಲ್ ವಸ್ಸನಿಶ್ಯಬ್ದಮಂ ದೀರ್ಘಶ್ರುತಿಯ ಸೀಳ್ ! (ಶ್ರೀರಾಮಾ. ೨೯೦-೧೭೮). [ ಸಂ. ]

**ನಾತಿನಿಕಟ** (ನಾ). ಬಹಳ ಹತ್ತಿರವಲ್ಲದುದು ; ಸ್ವಲ್ಪದೂರ : ನಾತಿದೂರಂ ನಾತಿನಿಕಟಮದೊ ಕಾಳ್ಗಿಗಂ ಸುಳಿಯುತಿವೆ ಮನಮೋಹಕಂ (ಶ್ರೀರಾಮಾ. ೧೯೭-೫೪). [ ಸಂ. ]

**ನಾತಿಮಾನಿತೆ** (ನಾ). ಹೆಚ್ಚು ಅಹಂಕಾರವಿಲ್ಲದಿರುವಿಕೆ : ನಾತಿಮಾನಿತಾ ಎಂದರೆ ಅಹಂಕಾರರಾಹಿತ್ಯ (ಭಾತತ್ತ್ವ. ೧೪೦). [ ಸಂ. ನಾತಿಮಾನಿತಾ ]

**ನಾತು** 'ನಾತ' ನೋ.

**ನಾತೆ** (ನಾ). ೧. ನಂಟುತನ, ಅಧಿಕಾರ ಮೊದಲಾದಂವುಗಳಿಂದ ಉಂಟಾದ ಸಂಬಂಧ,-ಬಾಂಧವ್ಯ : ನಮ್ಮ ಉಪೇಂದ್ರನ ಮಗನೆಂಬ ನಾತೆಯಿಂದಾದರೂ ನಿಜವಾದ ಸಂಗತಿಯನ್ನು ಇವರಿಗೆ ತಿಳಿಸಬೇಡವೆ ? (ಮೂಕರುದಾ. ೧೪೮). ೨. ಕಾರಣ ; ನಿಮಿತ್ತ : ಗಜೇಂದ್ರಸಿಂಹನಿಗೆ, ಕಿಶೋರಿಗೆ ಗೊತ್ತುಮಾಡಿದ ಸಂಬಂಧವನ್ನು ಚಿಕ್ಕಪ್ಪ ಈ ನಾತೆಯಿಂದ ಒಪ್ಪಲಿ (ಜಮಿನ್ದಾ. ೧೪೭) ; ಅದು ತಮಗೆ ಹಿರಿಯರಿಂದ ಬಂದ ವಿಶ್ವಸ್ಥರೆಂಬ ನಾತೆಯಿಂದ ತಾವು ಶಿರೋಧಾರಣ ಮಾಡಿದ ಶ್ರೀಮಂತರ ಘನ ಪೇಶ್ವೆಯರ ಅಮೂಲ್ಯ ದತ್ತಿ (ದೀಪಹ. I, ೧೭) ; ತಾವು ದೇವಸ್ಥಾನದ 'ಅರ್ಚಕ' ಎಂಬ 'ನಾತೆ'ಯಿಂದ ಮೇಲಿನವರಿಗೆ ಅರ್ಜಿ ಮಾಡುವ ಪ್ರಸಂಗ ಬರಬಹುದೆಂದೂ ಅವರಿಗೆ ತಿಳಿಸಿದರು (ಗಂಗಾಸಾ. ೧೧೯).
[ ←ಮರಾ. ನಾತೇ ; ಹಿಂ. ನಾತಾ ]

